॥ಪೂತನಾಸಂಹಾರಸೂಚನಂ॥

ಶ್ರೀಶುಕಃ ॥ ನನ್ದಃ ಪಥಿವಚಃ ಶೌರೇರ್ನಮೃಷೇತಿವಿಚಿನ್ತಯನ್ । ಹರಿಂಜಗಾಮಶರಣಮುತ್ಪಾತಾಗಮಶಙ್ಕಿತಃ ೧॥ ಕಂಸೇನಪ್ರಹಿತಾಘೋರಾಪೂತನಾಬಾಲಘಾತಿನೀ।ಶಿಶೂಂಶ್ಚಚಾರನಿಘ್ನನ್ತೀಪುರಗ್ರಾಮವ್ರಜಾದಿಷು॥೨॥ ನಯತ್ರಶ್ರವಣಾದೀನಿರಕ್ಷೋಘ್ನಾನಿಸ್ವಕರ್ಮಸು।ಕುರ್ವನ್ತಿಸಾತ್ತ್ವತಾಂಪತ್ಯುರ್ಯಾತುಧಾನ್ಯಶ್ಚತತ್ರಹಿ॥೩॥ ಸಾಖೇಚರ್ಯೇಕದೋಪೇತ್ಯಪೂತನಾನನ್ದಗೋಕುಲಮ್।ಯೋಷಿತ್ವಾಮಾಯಯಾತ್ಮಾನಂಪ್ರಾವಿಶತ್ಕಾಮಚಾರಿಣೀ ೪॥ ತಾಂಕೇಶಬನ್ಧವ್ಯತಿಷಕ್ತಮಲ್ಲಿಕಾಂಬೃಹನ್ನಿತಮ್ಬಸ್ತನಕೃಚ್ಛ್ರಮಧ್ಯಮಾಮ್।ಸುವಾಸಸಂಕಮ್ಪಿ

---

(ಶ್ರೀಶುಕವಚನವು)ನಂದಃ- ನಂದಗೋಪನು, ಪಥಿ-ದಾರಿಯಲ್ಲಿ, ಶೌರೇಃ-ವಸುದೇವನ, ವಚಃ-ಮಾತು, ನಮೃಷೇತಿ-- ಸುಳ್ಳಲ್ಲವೆಂದು, ವಿಚಿಂತಯನ್-ಆಲೋಚಿಸುವನಾಗಿ, ಉತ್ಪಾತಾಗಮಶಂಕಿತಃ-ಅನಿಷ್ಟನಿಮಿತ್ತಗಳು ಬರುವವೆಂಬ ಹೆದರಿಕೆಯುಂಟಾದವನಾದ್ದರಿಂದಲೇ, ಹರಿಂ-ವಿಷ್ಣುವನ್ನು, ಶರಣಂಜಗಾಮ-ರಕ್ಷಕನಾಗೆಂದು ಮರೆಹೊಕ್ಕನು॥೧॥ಕಂಸೇನ- ಕಂಸನಿಂದ, ಪ್ರಹಿತಾ-ಕಳುಹಿಸಲ್ಪಟ್ಟ,ಬಾಲಘಾತಿನೀ-ಮಕ್ಕಳನ್ನು ಕೊಲ್ಲುವವಳಾದ, ಘೋರಾ-ಭಯಂಕರಳಾದ, ಪೂತನಾ-ಪೂತನೆಯೆಂಬ ರಕ್ಕಸಿಯು, ಶಿಶೂನ್-ಮಕ್ಕಳನ್ನು,ನಿಘ್ನಂತೀಸತೀ-ಕೊಲ್ಲುತ್ತಿರುವವಳಾಗಿ, ಪುರಗ್ರಾಮವ್ರಜಾದಿಷು-ಪುರ-ಪಟ್ಟಣ, ಗ್ರಾಮ-ಹಳ್ಳಿ, ವ್ರಜ-ಗೊಲ್ಲರಪಾಳ್ಯ,ಆದಿಷು-ಮೊದಲಾದವುಗಳಲ್ಲಿ, ಚಚಾರ-ತಿರುಗಾಡಿದಳು॥೨।ಯತ್ರ-ಯಾವಸ್ಥಳದಲ್ಲಿ,ಸ್ವಕರ್ಮಸು-ತಮ್ಮ ಕೆಲಸಗಳೊಳಗೆ, ಸಾತ್ವತಾಂಪತ್ಯುಃ-ಯಾದವಪತಿಗೊಡೆಯನಾದ ವಿಷ್ಣುವಿನ, ಶ್ರವಣಾದೀನಿ- ಗುಣಕ್ರಿಯಾನಾಮಗಳನ್ನು ಕೇಳುವಿಕೆ ಪಠಿಸುವಿಕೆಮೊದಲಾದ, ರಕ್ಷೋಘ್ನಾನಿ-ರಕ್ಕಸರನ್ನು ಕೊಲ್ಲುವಕರ್ಮಗಳನ್ನು ನಕುರ್ವಂತಿ – ಮಾಡುವುದಿಲ್ಲವೋ, ಯಾತುಧಾನ್ಯಶ್ಚ - ರಕ್ಕಸಿಯರೂಕೂಡ, ತತ್ರಹಿ-ಅಲ್ಲಿತಾನೆಬರುವರು ॥೩॥ ಏಕದಾ- ಒಂದುಕಾಲದಲ್ಲಿ, ಖೇಚರೀ-ಆಕಾಶದಲ್ಲಿತಿರುಗುವ, ಪೂತನಾ-ಪೂತನೆಯೆಂಬರಕ್ಕಸಿಯು. ನಂದಗೋಕುಲಂ-ನಂದನವ್ರಜವನ್ನು ಕುರಿತು, ಉಪೇತ್ಯ-ಹತ್ತಿರಕ್ಕೆ ಬಂದು, ಕಾಮಚಾರಿಣೀ-ಬೇಕಾದಂತೆ ತಿರುಗುವಳಾದ್ದರಿಂದ, ಆತ್ಮಾನಂ-ತನ್ನ ದೇಹವನ್ನು, ಮಾಯಯಾ-ಮಾಯಾವಿದ್ಯೆಯಿಂದ ಯೋಷಿತ್ವಾ-ಚೆಲುವಾದ ಹೆಂಗಸನ್ನಾಗಿ ಮಾಡಿಕೊಂಡು, ಪ್ರಾವಿಶತ್-ಒಳಹೊಕ್ಕಳು.(ಅಥವಾ ಪಾಠಾಂತರ, ಗೋಪಿತ್ವಾ-ತನ್ನ ರೂಪವನ್ನು ಮರೆಮಾಚಿಕೊಂಡು ಹೊಕ್ಕಳು) ॥೪॥ ತಾಂ-ಆಹೆಂಗಸನ್ನು, ಕೇಶಬಂಧವ್ಯತಿಷಕ್ತಮಲ್ಲಿ

---

ಶ್ರೀಧರೀಯಶ್ಲೋಕ ॥ ಷಷ್ಠೇಸಖ್ಯುರ್ಗಿರಾನಂದೋವ್ರಜಂಗಚ್ಛನ್ಮೃತಾಂಪಥಿ । ದೃಷ್ಟ್ವಾತುರಾಕ್ಷಸೀಂತಸ್ಯಾಮೃತ್ಯುಂಶ್ರುತ್ವಾತುವಿಸ್ಮಿತಃ ॥

೬ನೆಯ ಅಧ್ಯಾಯದಲ್ಲಿ ನಂದಗೋಪನು ತನ್ನಮಿತ್ರನಾದ ವಸುದೇವನ ವಚನದಿಂದ ಗೋಕುಲಕ್ಕೆ ಹೊರಟವನಾಗಿ ದಾರಿಯಲ್ಲಿ ಸತ್ತುಬಿದ್ದಿರುವ ರಾಕ್ಷಸಿಯನ್ನು ನೋಡಿ, ಅವಳಮರಣವನ್ನು ಕೇಳಿ, ಆಶ್ಚರ್ಯಗೊಂಡವನಾದನು.* ಪೂರ್ವಾಧ್ಯಾಯದಲ್ಲಿ ಶುಕಾಚಾರ್ಯನು ಪರೀಕ್ಷಿದ್ರಾಯನನ್ನು ಕುರಿತು ನಂದಗೋಪನು ಮಥುರಾಪುರವನೈದಿ ಕಂಸನಿಗೆ ಕೊಡತಕ್ಕ ಕಪ್ಪವಂ ಕೊಟ್ಟು, ವಸುದೇವನಂ ಕಂಡು, ಯೋಗಕ್ಷೇಮಂಗಳಂ ವಿಚಾರಿಸಿಕೊಂಡು ಪುನಶ್ಚ ನಂದವ್ರಜಮಂ ಕುರಿತು ಬಂದನೆಂದುನುಡಿದು ಅನಂತರದಲ್ಲಿ ನಿರೂಪಿಸುವನದೆಂತೆನೆ



ಎಲೈ, ಪರೀಕ್ಷಿದ್ರಾಯನೇ! ನಂದಗೋಪನು ಗೋಕುಲಕ್ಕೆ ಮಥುರಾಪುರದಿಂದ ಬರುವಮಾರ್ಗದಲ್ಲಿ ವಸುದೇವನವಚನವು ಸುಳ್ಳಲ್ಲವೆಂದು ಚಿಂತಿಸುವನಾಗಿ ಗೋಕುಲದಲ್ಲಿ ಯಾವ ಉತ್ಪಾತಂಗಳು ಪ್ರಾಪ್ತಗಳಾಗುವವೋ ಎಂದು ಶಂಕೆಯುಳ್ಳವನಾಗಿ ಶ್ರೀಹರಿಯಂ ಶರಣುಹೊಂದಿದನು.॥೧॥ ಅನಂತರದಲ್ಲಿ ಕಂಸನಿಂದ ಕಳುಹಿಸಲ್ಪಟ್ಟ ಘೋರರೂಪಳಾದ ಬಾಲಕರಂ ಸಂಹರಿಸುವ ಪೂತನೆಯೆಂಬ ಹೆಸರುಳ್ಳ ರಾಕ್ಷಸಿಯು ಪುರಗ್ರಾಮಾದಿಗಳಲ್ಲಿ ಶಿಶುಗಳಂ ಸಂಹರಿಸುವಳಾಗಿ, ಅಲ್ಲಲ್ಲಿ ಸಂಚರಿಸುತಿದ್ದಳು. ॥೨॥ ಎಲೈ, ಅರಸೇ! ಯಾವಬಳಿಯಲ್ಲಿ ಸಾತ್ವತರೆಂಬ ಯಾದವರಿಗೆ ಸ್ವಾಮಿಯಾದ ಶ್ರೀಕೃಷ್ಣದೇವನ ಕಥಾಶ್ರವಣಾದಿಗಳು ಇಲ್ಲವೋ, ಮತ್ತು ಯಾವಸ್ಥಳಗಳಲ್ಲಿ ಕರ್ಮಾನುಷ್ಠಾನ ಕಾಲಂಗಳೊಳು ರಕ್ಷೋಘ್ನಮಂತ್ರಂಗಳು ಪಠಿಸಲ್ಪಡುವುದಿಲ್ಲವೋ, ಅಂತಾಸ್ಥಳಗಳಲ್ಲಿ ರಾಕ್ಷಸಿಯರು ತಮ್ಮ ಶಕ್ತಿಯಂ ತೋರಿಸುವರು॥೩॥ ಆಮೇಲೆ ಆಕಾಶದಲ್ಲಿ ತಿರುಗುವ ಆಪೂತನೆಯು ಒಂದುಸಮಯದಲ್ಲಿ ತನ್ನ ಮಾಯೆಯಿಂದ ದಿವ್ಯಸುಂದರಸ್ತ್ರೀಯಾಗಿ, ಸ್ವೇಚ್ಛೆಯಿಂದ ಸಂಚರಿಸುವಳಾಗಿ,ನಂದಗೋಕುಲಮಂ ಪ್ರವೇಶಂಗೆಯ್ದಳು.॥೪॥ ಕೇಶಭಾರದಲ್ಲಿ ಧರಿಸಲ್ಪಟ್ಟ ಮಲ್ಲಿ

ತಕರ್ಣಭೂಷಣತ್ವಿಷೋಲ್ಲಸತ್ಕುಂಡಲಮಂಡಿತಾನನಾಮ್ ॥೫॥ ವಲ್ಗುಸ್ಮಿತಾಪಾಂಗವಿಸರ್ಗವೀಕ್ಷಿತೈರ್ಮನೋ
ಹರಂತೀಂ ವನಿತಾಂ ವ್ರಜೌಕಸಾಮ್। ಅಮಂಸತಾಂಭೋಜಕರೇಣ ರೂಪಿಣೀಂ ಗೋಪ್ಯಃ ಶ್ರಿಯಂ ದ್ರಷ್ಟುಮಿ
ವಾಗತಾಂ ಪತಿಮ್ ।೬॥ ಬಾಲಗ್ರಹಸ್ತತ್ರ ವಿಚಿನ್ವತೀ ಶಿಶೂನ್ ಯದೃಚ್ಛಯಾ ನಂದಗೃಹೇಸದಂತಕಮ್ ।
ಬಾಲಂ ಪ್ರತಿಚ್ಛನ್ನನಿಜೋರುತೇಜಸಂ ದದರ್ಶ ತಲ್ಪೇಗ್ನಿಮಿವಾಹಿತಂ ಭಸಿ ॥ ೭ ॥ ವಿಬುಧ್ಯ ತಾಂ ಬಾಲಕಮಾರಿ
ಕಾಗ್ರಹಂ ಚರಾಚರಾತ್ಮಾ ಸ ನಿಮೀಲಿತೇಕ್ಷಣಃ। ಆಜ್ಞಾಯಮಾನೋಥ ಹರಿರ್ನಿಶಾಚರೀಂ ನಿಸರ್ಗವಿಜ್ಞಾತಜಗದ್ವಿಚೇ
ಷ್ಟಿತಃ ॥೮॥ ಮಹೇಶ್ವರತ್ವೇಪಿ ಚ ಬಾಲಭಾವಂ ವಿಭಾವಯನ್ ಕಿಂಚಿದುಮಾಜನಪ್ರಭುಃ। ಅನಂತಮಾರೋಪಯದ

---

ಕಾಂ-ಕೇಶಬಂಧ-ತುರುಬಿನಲ್ಲಿ, ವ್ಯತಿಷಿಕ್ತ-ಇಡಲ್ಪಟ್ಟ, ಮಲ್ಲಿಕಾಂ-ಮಲ್ಲಿಗೆಯ ಹೂಗಳುಳ್ಳ, ಬೃಹನ್ನಿತಂಬಸ್ತನಕೃಚ್ಛ್ರಮಧ್ಯಮಾಂ-ಬೃಹತ್-ದೊಡ್ಡವಾದ, ನಿತಂಬ-ಅಂಡುಗಳಿಂದಲೂ, ಸ್ತನ-ಮೊಲೆಗಳಿಂದಲೂ, ಕೃಚ್ಛ್ರ-ಕೃಶವಾಗಿರುವ, ಮಧ್ಯಮಾಂ-ಟೊಂಕವುಳ್ಳ, ಸುವಾಸಸಾ-ಸಮೀಚೀನವಾದ ವಸ್ತ್ರಗಳುಳ್ಳ, ಕಂಪಿತಕರ್ಣಭೂಷಣತ್ವಿಷಾ-ಕಂಪಿತ, ಚಲಿಸುತ್ತಿರುವ, ಕರ್ಣಭೂಷಣ-ಕಿವಿದೊಡವುಗಳ, ತ್ವಿಷಾ-ಕಾಂತಿಯಿಂದ, ಉಲ್ಲಸತ್ಕುಂಡಲಮಂಡಿತಾನನಾಂ-ಉಲ್ಲಸತ್-ಹೆಚ್ಚಾಗಿ ಬೆಳಗುತ್ತಿರುವ, ಕುಂಡಲ-ಓಲೆಯ ಜುಮುಕಿಗಳಿಂದ, ಮಂಡಿತ-ಅಲಂಕರಿಸಲ್ಪಟ್ಟ, ಆನನಾಂ-ಮುಖವುಳ್ಳ, ॥೫॥ ವಲ್ಗುಸ್ಮಿತಾಪಾಂಗವಿಸರ್ಗವೀಕ್ಷಿತೈಃ-ವಲ್ಗು-ರಮ್ಯವಾದ, ಸ್ಮಿತ-ಕಿರುನಗೆಯುಳ್ಳ, ಅಪಾಂಗವಿಸರ್ಗ-ಕುಡಿನೋಟಗಳ ಹರಡಿಕೆಯುಳ್ಳ, ವೀಕ್ಷಿತೈಃ-ದೃಷ್ಟಿಗಳಿಂದ, ವ್ರಜೌಕಸಾಂ – ಗೋಕುಲವಾಸಿಗಳ, ಮನಃ- ಹೃದಯವನ್ನು, ಹರಂತೀಂ-ಅಪಹರಿಸುತ್ತಿರುವವಳಾದ್ದರಿಂದಲೇ, ವನಿತಾಂ-ಆಹೆಂಣನ್ನು, ಅಂಭೋಜಕರೇಣ-ತಾವರೆಯಂ ಪಿಡಿದ ಕೈಯಿಂದ, ರೂಪಿಣೀಂ-ಚೆಲುವಿಕೆಯುಳ್ಳ. ಅಥವಾ ಸಾಕಾರಳಾದ, ಪತಿಂ ದ್ರಷ್ಟುಂ-ಗಂಡನಾದ ವಿಷ್ಣುವನ್ನು ನೋಡುವುದಕ್ಕೆ, ಆಗತಾಂ ಶ್ರಿಯಮಿವ-ಬಂದಿರುವ ಲಕ್ಷ್ಮೀದೇವಿಯನ್ನಂತೆ, ಗೋಪ್ಯಃ-ಗೊಲ್ಲತಿಯರು, ಅಮಂಸತ-ತಿಳಿದರು ॥೬॥ ಬಾಲಗ್ರಹಃ-ಮಕ್ಕಳನ್ನು ಹಿಡಿಯುವ ಪೂತನೆಯು, ತತ್ರ-ಆ ಗೋಕುಲದಲ್ಲಿ, ಶಿಶೂನ್-ಮಕ್ಕಳನ್ನು, ವಿಚಿನ್ವತೀಸತೀ-ಹುಡುಕುತ್ತಿರುವವಳಾಗಿ, ಯದೃಚ್ಛಯಾ ಸ್ವೇಚ್ಛೆಯಿಂದ, ನಂದಗೃಹೇ-ನಂದನ ಮನೆಯಲ್ಲಿ, ಅಸದಂತಕಂ-ದುಷ್ಟರಿಗೆ ನಾಶಕನಾದ, ಪ್ರತಿಚ್ಛನ್ನನಿಜೋರುತೇಜಸಂ-ಪ್ರತಿಚ್ಛನ್ನ-ಮುಚ್ಚಲ್ಪಟ್ಟ, ನಿಜ- ತನ್ನ, ಉರುತೇಜಸಂ-ದೊಡ್ಡ ಬೆಳಕುಳ್ಳ, ಅಥವಾ ಮಹಾಸಾಮರ್ಥ್ಯವುಳ್ಳವನಾದ್ದರಿಂದಲೇ, ಭಸಿ-ಬೂದಿಯಲ್ಲಿ, ಆಹಿತಂ-ಮುಚ್ಚಲ್ಪಟ್ಟಿರುವ, ಅಗ್ನಿಮಿವ-ಬೆಂಕಿಯ ಹಾಗಿರುವ, ತಂ ಬಾಲಂ ಚ-ಆ ಬಾಲಕೃಷ್ಣನನ್ನೂ, ದದರ್ಶ-ನೋಡಿದಳು ॥೭॥ ಚರಾಚರಾತ್ಮಾ-ಸ್ಥಾವರ ಜಂಗಮ ಪ್ರಪಂಚಕ್ಕೆ ಚೈತನ್ಯವಾಗಿರುವ, ಸಃ-ಆ ಶ್ರೀಕೃಷ್ಣನು, ತಾಂ-ಆ ಹೆಂಗಸನ್ನು, ಬಾಲಕಮಾರಿಕಾಗ್ರಹಂ ಮಕ್ಕಳನ್ನು ಕೊಲ್ಲ ವ ರಕ್ಕಸಿಯನ್ನಾಗಿ, ವಿಬುದ್ಧ್ಯ-ತಿಳಿದು, ನಿಮೀಲಿತೇಕ್ಷಣಃ-ನಿಮೀಲಿತ-ಮುಚ್ಚಿಕೊಂಡ, ಈಕ್ಷಣಃ- ಕಂಗಳುಳ್ಳವನಾದನು. ನಿಸರ್ಗವಿಜ್ಞಾತಜಗದ್ವಿಚೇಷ್ಟಿತಃ-ನಿಸರ್ಗ-ಸಹಜವಾಗಿ, ವಿಜ್ಞಾತ-ತಿಳಿಯಲ್ಪಟ್ಟ, ಜಗದ್ವಿಚೇಷ್ಟಿತಃ-ಪ್ರಪಂಚವ್ಯಾಪಾರಗಳುಳ್ಳ, ಹರಿಃ-ಕೃಷ್ಣನು, ನಿಶಾಚರೀಂ-ರಕ್ಕಸಿಯನ್ನು, ಆಜ್ಞಾಯಮಾನಃ-ಪೂರ್ಣವಾಗಿ ತಿಳಿದವನಾಗಿ, ಅಥ-ಆ ಮೇಲೆ, ॥೮॥ ಮಹೇಶ್ವರತ್ವೇಪಿ- ದೊಡ್ಡ ನಿಯಾಮಕನಾಗಿರುವತನದಲ್ಲಿಯೂ ಕೂಡ, ಬಾಲಭಾವಂ - ಮಗುವಿನತನವನ್ನು, ವಿಭಾವಯನ್-ನಟಿಸುತ್ತಿರುವನಾಗಿ, ಪ್ರಭುರಪಿ- ಸಮರ್ಥ

---

ಗೆಯ ಹುವ್ವಿನ ಸರಗಳುಳ್ಳವಳಾಗಿ, ವಿಸ್ತಾರವಾದ ನಿತಂಬಪ್ರದೇಶದಿಂದಲೂ ತೋರಮೊಲೆಗಳ ಭಾರದ ಶ್ರಮದಿಂದಲೂ ಬಳುಕುವ ಬಡನಡುವುಳ್ಳವಳಾಗಿ, ರಮಣೀಯವಾದ ದಿವ್ಯದುಕೂಲವ ಧರಿಸಿದವಳಾಗಿ, ಕದಲುತ್ತಿರುವ ಕಿವಿದೊಡವುಗಳ ಕಾಂತಿಯಿಂ ಶೋಭಿಸುತ್ತಿರುವ ಮುಂಗುರುಳುಗಳಿಂದ ಅಲಂಕರಿಸಲ್ಪಟ್ಟ ಮನೋಹರವಾದ ಮುಖವುಳ್ಳವಳಾಗಿ,॥ ರಮ್ಯವಾದ ಮುಗುಳುನಗೆಯೊಡನೆ ಕೂಡಿದ ಕಡೆಗಂಣ ನೋಟಂಗಳಿಂ ನಂದವ್ರಜದಲ್ಲಿ ವಾಸಂಗೆಯ್ವ ಸರ್ವಜನರ ಮನಸ್ಸನ್ನು ಅಪಹರಿಸುವಳಾಗಿ, ಕಮಲವಂ ಕೈಯಲ್ಲಿ ಪಿಡಿದು ದಿವ್ಯಮಂಗಳರೂಪವಂ ಧರಿಸಿರುವ ಆಸ್ತ್ರೀಯಂ ನೋಡಿ ಗೋಪಸ್ತ್ರೀಯರು ಪತಿಯಾದ ಶ್ರೀಹರಿಯಂ ನೋಡಲೋಸುಗ ಅರಸಿಕೊಂಡು ಬಂದ ಸಾಕ್ಷಾಲ್ಲಕ್ಷ್ಮೀದೇವಿಯೆಂದು ತಿಳಿದರು.॥೬ ಅನಂತರದಲ್ಲಿ ಬಾಲಗ್ರಹವಾದ ಆಪೂತನೆಯು ನಂದಗೋಕುಲದಲ್ಲಿ ಶಿಶುಗಳಂ ಹುಡುಕುತ್ತಿರುವಳಾಗಿ; ನಂದಗೋಪನ ಗೃಹದಲ್ಲಿ ದುಷ್ಟಸಂಹಾರಕನಾದ, ಬಾಲಕನಾದ, ಭಸ್ಮದಿಂದ ಮುಚ್ಚಲ್ಪಟ್ಟ ಬೆಂಕಿಯ ಹಾಗೆ ಅನ್ಯರಿಗೆ ಅಗೋಚರವಾದ ಪರಾಕ್ರಮವುಳ್ಳ, ಹಾಸಿಗೆಯಲ್ಲಿ ಮಲಗಿರುವ, ಶ್ರೀಹರಿಯಂ ಸ್ವೇಚ್ಛೆಯಿಂದ ಕಂಡಳು.॥೭॥ ಆಮೇಲೆ ಚರಾಚರಾತ್ಮಕವಾದ ಸಮಸ್ತಪ್ರಾಣಿ ಸಮೂಹಕ್ಕೂ ಅಂತರಾತ್ಮನಾದ ಶ್ರೀಹರಿಯು ಆಸ್ತ್ರೀಯಂ ಬಾಲಕರಿಗೆ ಮಾರಕವಾಗಿರುವ ಗ್ರಹವೆಂದು ತಿಳಿದವನಾದರೂ ಅರಿಯದವನಂತೆ ಕಂಣುಗಳಂ ಮುಚ್ಚಿಕೊಂಡನು.॥ ಅನಂತರದಲ್ಲಿ ಪೂತನೆಯು ನಿದ್ದೆಗೆಯ್ವ ಸರ್ಪವನ್ನು ಬುದ್ಧಿಯಿಲ್ಲದ ಮನುಷ್ಯನು ಹಗ್ಗವೆಂದು ತಿಳಿದು ಎತ್ತಿಕೊಳ್ಳುವ

ಙ್ಕಮನ್ತಕಂ ಯಥೋರಗಂಸುಪ್ತಮಬುದ್ಧಿರಜ್ಜುಧೀಃ ॥ ೯ ॥ ತಾಂತೀಕ್ಷ್ಣಚಿತ್ತಾಮತಿವಾಮಚೇಷ್ಟಿ
ತಾಂವೀಕ್ಷ್ಯಾನ್ತರಾಕೋಶಪರಿಚ್ಛದಾಸಿವತ್ | ವರಸ್ತ್ರಿಯಂತತ್ಪ್ರಭಯಾಚಧರ್ಷಿತೇನಿರೀಕ್ಷಮಾಣೇಜನ
ನೀಅತಿಷ್ಠತಾಮ್ ॥ ೧೦ ॥ ತಸ್ಮಿನ್ಸ್ತನಂದುರ್ಜರವೀರ್ಯಮುಲ್ಬಣಂ ಘೋರಾತಮಾದಾಯಶಿಶೋರ್ದದಾ

---

ನಾಪರೂಕೊಡ, ಕಿಂಚಿತ್- ಕೊಂಚವನ್ನಾದರೂ, ನೋವಾಚ - ಹೇಳಲಿಲ್ಲವು . (ಸಾ-ಆಪೂತನೆಯು)ಅಬುದ್ಧಿರಜ್ಜುಧೀಃ- ಅಬುದ್ಧಿ-ವಿವೇಕವಿಲ್ಲದವನಾಗಿಯೂ , ರಜ್ಜುಧೀಃ - ಇದುಹಗ್ಗವೆಂಬ ಬುದ್ಧಿಯುಳ್ಳವನಾಗಿಯೂ ಇರುವನು , ಸುಪ್ತಂ - ಮಲಗಿರುವ, ಉರಗಂ-ಸರ್ಪವನ್ನು, ಯಥಾ-ಹೇಗೋ, ತಥಾ-ಹಾಗೆ, ಅನ್ತಕಂ-ನಾಶಕನಾದ, ಅನಂತಂ-ನಾಶವಿಲ್ಲದಕೃಷ್ಣನನ್ನು, ಅಂಕಮಾರೋಪಯತ್-ತನ್ನ ತೊಡೆಯಮೇಲೆಯೇರಿಸಿಕೊಂಡಳು ॥೯॥ ಕೋಶಪರಿಚ್ಛದಾಸಿವತ್-ಕೋಶ-ಮೃದುವಾದಚಿತ್ರಚರ್ಮದೊರೆಯೇ, ಪರಿಚ್ಛದ-ಆವರಣವಾದ, ಅಸಿವತ್-ಕತ್ತಿಯಹಾಗೆ, ಅತಿವಾಮಚೇಷ್ಟಿತಾಂ-ಅತ್ಯಂತರಮಣೀಯವಾದಚೇಷ್ಟೆಯುಳ್ಳ, ತೀಕ್ಷ್ಣಚಿತ್ತಾಂ- ಕ್ರೂರವಾದ ಬುದ್ಧಿಯುಳ್ಳ, ತಾಂವರಸ್ತ್ರಿಯಂ-ಆಶ್ರೇಷ್ಠಳಾದಹೆಂಣನ್ನು, ಅಂತರಾ-ಮನೆಯೊಳಗೆ, ವೀಕ್ಷ್ಯ-ನೋಡಿ. ತತ್ಪ್ರಭಯಾಚ-ತತ್- ಅವಳ, ಪ್ರಭಯಾಚ-ಕಾಂತಿಯಿಂದಲೂ, ಧರ್ಷಿತೇ-ತಿರಸ್ಕರಿಸಲ್ಪಟ್ಟ, ಜನನೀ-ತಾಯಿಯರು(ರೋಹಿಣೀಯಶೋದೆಯರು)ನಿರೀಕ್ಷಮಾಣೇ-(ಸುಮ್ಮನೆ)ನೋಡುತ್ತಿರುವರಾಗಿ, ಅತಿಷ್ಠತಾಂ- ಕುಳಿತಿದ್ದರು.॥೧೦॥ ತಸ್ಮಿನ್- ಆಸ್ಥಲದಲ್ಲಿ, ಘೋರಾ-ಕ್ರೂರಳಾದಪೂತನೆಯು ತಂ-ಆಮಗುವನ್ನು, ಆದಾಯ-ಎತ್ತಿಕೊಂಡು, ಅಥ-ಆಮೇಲೆ, ಉಲ್ಬಣಂ-ಹೆಚ್ಚಾದ, ದುರ್ಜರವೀರ್ಯಂ-ದುರ್ಜರ- ದುಃಖದಿಂದಲೂ ಜೀರ್ಣಿಸಿಕೊಳ್ಳುವುದಕ್ಕಾಗದ, ವೀರ್ಯಂ-ವಿಷಸಾಮರ್ಥ್ಯವುಳ್ಳ, ಸ್ತನಂ-ಮೊಲೆಯನ್ನು, ಶಿಶೋಃ-ಮಗುವಿಗೆ, ದದೌ-ಕೊಟ್ಟಳು. ಭಗವಾನ್-ಸರ್ವಜ್ಞನಾದಕೃಷ್ಣನು, ಕರಾಭ್ಯಾಂ-ಕೈಗಳಿಂದ, ಪ್ರಪೀಡ್ಯ-ಗಟ್ಟಿಯಾಗಿಹಿಡಿದು, ರೋಷಸಮನ್ವಿತಃ-ಸಿಟ್ಟಿ

---



ಪೂತನೆಯು ಮಗುವನ್ನು ಯೆತ್ತಿಕೊಂಡದ್ದು

ಹಾಗೆ ದುಷ್ಟರನ್ನು ಶಿಕ್ಷಿಸುವ ಅನಂತಮೂರ್ತಿಯಾದ ಶ್ರೀಕೃಷ್ಣನಂ ಪ್ರಾಕೃತಬಾಲಕನೆಂದು ತಿಳಿದು, ತನ್ನ ತೊಡೆಯಮೇಲಕ್ಕೆ ಎತ್ತಿಕೊಂಡವಳಾದಳು. ॥೯॥ ಆಸಮಯದಲ್ಲಿ ಮೃದುವಾದ ವಿಚಿತ್ರವಾದ ಚರ್ಮಮಯವಾದ ಒರೆಯುಳ್ಳ ಕತ್ತಿಯಂತೆ ತೀಕ್ಷ್ಣವಾದ ಚಿತ್ತವುಳ್ಳವಳಾಗಿ, ಮೃದುವಾದ ಮನೋಹರವಾದ ಹಾವಭಾವವಿಲಾಸಂಗಳುಳ್ಳ ಆದಿವ್ಯಸ್ತ್ರೀಯಂ ಕಂಡು ಅವಳ ದೇಹಕಾಂತಿಯಿಂದ ತಿರಸ್ಕರಿಸಲ್ಪಟ್ಟವರಾಗಿ, ಯಶೋದಾದೇವಿಯೂ ರೋಹಿಣೀದೇವಿಯೂ ಈಶಿಶುವಿಗೆ ಇವಳೇತಾಯಿಯೋ! ನಾವೇತಾಯಿಯರೋ ಎಂದು ಅರಿಯದೆ ಬೆರಗಾಗಿ ನೋಡುತ ನಿಂತಿದ್ದರು. ॥೧೦॥ ಆಸಮಯದಲ್ಲಿ ಆಬಳಿಯೊಳು ಕ್ರೂರವ್ಯಾಪಾರವುಳ್ಳ ಪೂತನೆಯು ಆಶಿಶುವನ್ನು ಎತ್ತಿಕೊಂಡು ಜೀರ್ಣಿ

ವೆಥ | ಗಾಢಂಕರಾಭ್ಯಾಂಭಗವಾನ್ಪ್ರಪೀಡ್ಯತತ್ಪ್ರಾಣೈಸ್ಸಮಂರೋಷಸಮನ್ವಿತೋಽಪಿಬತ್ ‖ ೧೧ ‖
ಸಾಮುಞ್ಚಮುಞ್ಚಾಲಮಿತಿಪ್ರಭಾಷಿಣೀನಿಷ್ಪೀಡ್ಯಮಾನಾಖಿಲಜೀವಮರ್ಮಣಿ | ವಿವೃತ್ಯನೇತ್ರೇಚರಣೌ
ಭುಜೌಮುಹುಃಪ್ರಸ್ವಿನ್ನಗಾತ್ರಾಕ್ಷಿಪತೀರುರೋದಹ ‖ ೧೨ ‖ ತಸ್ಯಾಸ್ಸ್ವನೇನಾತಿಗಭೀರರಂಹಸಾ
ಸಾದ್ರಿರ್ಮಹೀದ್ಯೌಶ್ಚಚಚಾಲಸಗ್ರಹಾ | ರಸಾದಿಶಶ್ಚಪ್ರತಿನೇದಿರೇಜನಾಃಪೇತುಃಕ್ಷಿತೌವಜ್ರನಿಪಾತಶಙ್ಕ

---

ಸಿಂದಕೂಡಿದವನಾಗಿ, ತತ್ಪ್ರಾಣೈಸ್ಸಮಂ- ಅವಳಪ್ರಾಣಗಳೊಂದಿಗೆ, ಅಪಿಬತ್- ಕುಡಿದನು ‖೧೧‖ ಸಾ- ಆಪೂತನೆಯು, ಮುಂಚ ಮುಂಚ-ಬಿಡುಬಿಡು, ಅಲಂ-ಸಾಕು, ಇತಿ-ಹೀಗೆ, ಪ್ರಭಾಷಿಣೀ- ಗಟ್ಟಿಯಾಗಿಕೂಗುವವಳಾಗಿ, ಅಖಿಲಜೀವಮರ್ಮಣಿ- ಸಕಲಪ್ರಾಣ ಸಂಧಿಸ್ಥಾನದಲ್ಲಿಯೂ, ನಿಷ್ಪೀಡ್ಯಮಾನಾ-ಚನ್ನಾಗಿಬಾಧಿಸಲ್ಪಡುವವಳಾಗಿ, ನೇತ್ರೇ-ಕಣ್ಣುಗಳನ್ನು,ವಿವೃತ್ಯ-ತೆರೆದುಕೊಂಡು, ಚರಣೌ ಕಾಲುಗಳನ್ನು, ಭುಜೌ-ತೋಳುಗಳನ್ನೂ, ಮುಹುಃ-ಬಾರಿಬಾರಿಗೂ, ಕ್ಷಿಪಂತೀ-ಹಾರಿಸಿಕೊಳ್ಳುವವಳಾಗಿ, ಪ್ರಸ್ವಿನ್ನಗಾತ್ರಾ-ಹೆಚ್ಚಾಗಿಬೆವರುತ್ತಿರುವಮೈಯುಳ್ಳವಳಾಗಿ, ರುರೋದಹ-ಅತ್ತಳು ‖೧೨‖ ತಸ್ಯಾಃ-ಆಪೂತನೆಯ, ಅತಿಗಭೀರರಂಹಸಾ-ಬಹಳಆಳವಾದವೇಗವುಳ್ಳ, ಸ್ವನೇನ- ಶಬ್ದದಿಂದ, ಸಾದ್ರಿಃ - ಬೆಟ್ಟಗಳೊಡನೆ ಕೂಡಿದ, ಮಹೀ - ಭೂಮಿಯೂ, ಸಗ್ರಹಾ - ಗ್ರಹಗಳೊಡನೆ ಕೂಡಿದ- ದ್ಯೌಶ್ಚ - ಸ್ವರ್ಗವೂ, ಚಚಾಲ- ಅಲ್ಲಾಡಿತು. ರಸಾ-ಭೂಮಿಯೂ, ದಿಶಶ್ಚ-ದಿಕ್ಕುಗಳೂ, ಪ್ರತಿನೇದಿರೇ - ಪ್ರತಿಧ್ವನಿಗೊಟ್ಟವು. ಜನಾಃ- ಜನರುಗಳು, ವಜ್ರನಿಪಾತಶಂಕಯಾ - ಸಿಡಿಲು ಬೀಳುವುದೆಂಬ ಭಯದಿಂದ, ಕ್ಷಿತೌ - ಭೂಮಿಯಲ್ಲಿ, ಪೇತುಃ - ಬಿದ್ದ

---



ಪೂತನೆಯು ಮಗುವಿಗೆ ಮೊಲೆಯನ್ನು ಕೊಡುವಿಕೆ

ಸಿಕೊಳ್ಳುವುದಕೆ ಅಶಕ್ಯವಾದ ಹೆಚ್ಚಾದ ವಿಷದಬಲವುಳ್ಳ ತನ್ನ ಮೊಲೆಯನ್ನು ಆಮಗುವಿಗೆ ಕೊಟ್ಟಳು. ಅನಂತರದಲ್ಲಿ ಬಾಲಕನಾದಶ್ರೀಕೃಷ್ಣನು ವಿಷವನ್ನೇ ಪಥ್ಯವನ್ನಾಗಿ ತಿಳಿದು ಎರಡುಕೈಗಳಿಂದಲೂ ಘಟ್ಟಿಯಾಗಿ ಆನಂಜಿನ ಮೊಲೆಯುಹಿಡಿದು ಆಪೂತನೆಯ ಪ್ರಾಣಗಳನ್ನೂ ಕೂಡ ರೋಷದೊಡನೆ ಕೂಡಿದವನಾಗಿ ಕುಡಿದು ಬಿಟ್ಟನು. ‖ ೧೧ ‖ ಆಗ ಆಪೂತನೆಯು ಪೀಡಿಸಲ್ಪಟ್ಟ ತನ್ನ ಸಮಸ್ತಜೀವನಾಡಿಗಳ ಮರ್ಮಗಳುಳ್ಳವಳಾಗಿ; ಎಲೈ ಬಾಲಕನೇ! “ ಮೊಲೆಯುಣ್ಣುವುದುಸಾಕು, ಬಿಡುಬಿಡು ” ಎಂದು ನುಡಿಯುವವಳಾಗಿ ಕಣ್ಣುಗಳನ್ನು ಚನ್ನಾಗಿ ತೆರೆದುಕೊಂಡು ಕೈಕಾಲುಗಳನ್ನು ಬಾರಿಬಾರಿಗೂ ಒದರಿಕೊಳ್ಳುತ್ತ ಶ್ರಮದಿಂದ ಬೆವರಿದ ಅಂಗಗಳುಳ್ಳವಳಾಗಿ ಅತ್ತಳು. ‖೧೨‖ ಆಪೂತನೆಯು ಭಯಂಕರವಾದವೇಗವುಳ್ಳ ಶಬ್ದದೊಡನೆ ರೋದನಂಗೆಯ್ಯುತ್ತಿರಲು, ಆಕೂಗನ್ನು

ಯೌ ‖ ೧೩ ‖ ನಿಶಾಚರೀತ್ಥಂವ್ಯಥಿತಾವ್ಯಸುಃಕ್ಷಿತೌವ್ಯಾದಾಯಕೇಶಾಂಶ್ಚರಣೌಭುಜಾವಪಿ । ಪ್ರಸಾರ್ಯ ಗೋಷ್ಠೇನಿಜರೂಪಮಾಸ್ಥಿತಾವಜ್ರಾಹತೋವೃತ್ರಇವಾಪತನ್ನೃಪ ‖ ೧೪ ‖ ಪತಮಾನೋಽಪಿತದ್ದೇಹಸ್ತ್ರಿಗವ್ಯೂತ್ಯನ್ತರದ್ರುಮಾನ್ । ಚೂರ್ಣಯಾಮಾಸರಾಜೇನ್ದ್ರಮಹದಾಸೀತ್ತದದ್ಭುತಮ್ ‖ ೧೫ ‖ ಈಷಾಮಾತ್ರೋಗ್ರದಂಷ್ಟ್ರಾಸ್ಯಂಗಿರಿಕನ್ದರನಾಸಿಕಮ್ । ಗಣ್ಡಶೈಲಸ್ತನಂರೌದ್ರಂಪ್ರಕೀರ್ಣಾರುಣ ಮೂರ್ಧಜಮ್ ‖ ೧೬ ‖ ಅನ್ಧಕೂಪಗಭೀರಾಕ್ಷಂಪುಲಿನಾರೋಹಭೀಷಣಮ್ ।ಬದ್ಧಸೇತುಭುಜೋರ್ವ

---

ರು॥೧೩॥ಹೇನೃಪ- ಎಲೈಅರಸಾದಪರೀಕ್ಷಿತ್ತುವೇ, ಗೋಷ್ಠೇ-ಗೊಲ್ಲರಹಳ್ಳಿಯಲ್ಲಿ, ಇತ್ಥಂ-ಹೀಗೆ, ವ್ಯಥಿತಾ-ಬಾಧೆಗೊಳಿಸಲ್ಪಟ್ಟಂಥಾ, ನಿಶಾಚರೀ-ರಕ್ಕಸಿಯು,ಕೇಶಾನ್-ಕೂದಲುಗಳನ್ನು. ವ್ಯಾದಾಯ-ಸವರಿಕೊಂಡು, ಚರಣೌ-ಕಾಲುಗಳನ್ನು, ಭುಜಾವಪಿ-ತೋಳುಗಳನ್ನೂ ಪ್ರಸಾರ್ಯ-ಚಾಚಿಕೊಂಡು, ನಿಜರೂಪಮಾಸ್ಥಿತಾ-ತನ್ನ ಆಕಾರವನ್ನು ಹೊಂದಿದವಳಾಗಿ, ವಜ್ರಾಹತಃ-ಸಿಡಿಲಿನಿಂದಬಡಿಯಲ್ಪಟ್ಟ(ವಜ್ರಾಯುಧದಿಂದಕೊಲ್ಲಲ್ಪಟ್ಟ) ವೃತ್ರಇವ-ವೃತ್ರಾಸುರನಂತೆ, ವ್ಯಸುಃ-ಪ್ರಾಣವಿಲ್ಲದವಳಾಗಿ, ಅಪತತ್-ಬಿದ್ದಳು ॥೧೪॥ರಾಜೇಂದ್ರ- ಅರಸರೊಡೆಯನೇ! ತದ್ದೇಹಃ-ಆರಕ್ಕಸಿಯಶರೀರವು, ಪತಮಾನೋಽಪಿ- ಬೀಳುತ್ತಿರುವುದಾದರೂ, ತ್ರಿಗವ್ಯೂತ್ಯಂತರದ್ರುಮಾನ್- ತ್ರಿಗವ್ಯೂತಿ-ಆರುಹರಿದಾರಿಗಳ, ಅಂತರ- ಒಳಗಿರುವ, ದ್ರುಮಾನ್- ಗಿಡಗಳನ್ನು, ಚೂರ್ಣಯಾಮಾಸ- ಪುಡಿಮಾಡಿತು. ತತ್-ಆ ಕೆಲಸವು, ಮಹದದ್ಭುತಂ-ದೊಡ್ಡಆಶ್ಚರ್ಯವು, ಆಸೀತ್-ಆಯಿತು. ॥೧೫॥ಈಷಾಮಾತ್ರೋಗ್ರದಂಷ್ಟ್ರಾಸ್ಯಂ-ಈಷಾಮಾತ್ರ- ನೇಗಿಲಮರದಷ್ಟು ಪ್ರಮಾಣದ, ಉಗ್ರ- ಭಯಂಕರವಾದ, ದಂಷ್ಟ್ರಾ-ದಾಡೆಗಳುಳ್ಳಂಥಾ, ಆಸ್ಯಂ-ಮುಖವುಳ್ಳ, ಗಿರಿಕಂದರನಾಸಿಕಂ-ಗಿರಿಕಂದರ-ಬೆಟ್ಟದಗವಿಯಹಾಗಿರುವ, ನಾಸಿಕಂ-ಮೂಗುವುಳ್ಳ, ಗಂಡಶೈಲಸ್ತನಂ-ಗಂಡಶೈಲ-ಬೆಟ್ಟದಿಂದುರುಳಿದದೊಡ್ಡಗುಂಡುಕಲ್ಲಿನಹಾಗಿರುವ, ಸ್ತನಂ-ಮೊಲೆಗಳುಳ್ಳ-ರೌದ್ರಂ-ಭಯಂಕರವಾದ- ಪ್ರಕೀರ್ಣಾರುಣಮೂರ್ಧಜಂ- ಪ್ರಕೀರ್ಣ-ಕೆದರಿದ, ಅರುಣ- ಕೆಂಪಾದ, ಮೂರ್ಧಜಂ-ತಲೆಕೂದಲುಳ್ಳ ॥೧೬॥ ಅಂಧಕೂಪಗಭೀರಾಕ್ಷಂ-ಅಂಧಕೂಪ-ಕತ್ತಲಗುಂಡಿಯಂತೆ, ಗಭೀರ-ಆಳವಾದ, ಅಕ್ಷಂ-ಕಂಣುಗಳುಳ್ಳ-ಪುಳಿನಾರೋಹಭೀಷಣಂ-ಪುಳಿನ-ಮರಳತಿಟ್ಟೆಗಳಹಾಗಿರುವ, ಆರೋಹ-ನಿತಂಬಗಳಿಂದ, ಭೀಷಣಂ-ಭಯಂಕರವಾದ-ಬದ್ಧಸೇತುಭುಜೋರ್ವಂಘ್ರಿ-ಬದ್ಧ- ಕಟ್ಟಲ್ಪಟ್ಟ, ಸೇತು-ಕಟ್ಟೆಯಹಾಗಿರುವ, ಭುಜ- ತೋಳುಗಳೂ, ಊರು-ತೊಡಗಳೂ

---



ಮೊಲೆಕೊಡುತ್ತಿರುವ ಪೂತನಿ

ಕೇಳಿ ಪರ್ವತಂಗಳೂ ಭೂಮಿಯೂ ಮನೆಗಳೂ ಆಕಾಶವೂ ನಡುಗಿದಂತಾದವು. ಜನರೆಲ್ಲರೂ ಸಿಡಿಲುಬಿತ್ತೇನೋ! ಎಂಬಶಂಕೆಯಿಂದ ನೆಲದಮೇಲೆ ಉರುಳಿಬಿದ್ದರು. ‖೧೩‖ ಎಲೈ, ಪರೀಕ್ಷಿದ್ರಾಯನೇ! ಅಪೂತನೆಯೆಂಬ ರಾಕ್ಷಸಿಯು ಈರೀತಿಯಲ್ಲಿ ತೆರೆಯಲ್ಪಟ್ಟ ಸ್ತನಂಗಳುಳ್ಳವಳಾಗಿ ತಲೆಗೂದಲನ್ನು ಚದರಿಸಿಕೊಂಡು, ಕಾಲುಗಳನ್ನೂ ಕೈಗಳನ್ನೂ ನೀಡಿಕೊಂಡು, ಬಾಯಂತೆರೆಕೊಂಡವಳಾಗಿ ಗೋಕುಲದಲ್ಲಿ ಘೋರವಾದ ತನ್ನ ರಾಕ್ಷಸೀರೂಪವು ತೋರಿ ನಿರ್ಜೀವಳಾಗಿ ವಜ್ರಾಯುಧದಿಂದ ಹೊಡೆಯಲ್ಪಟ್ಟ ವೃತ್ರಾಸುರನ ಹಾಗೆ ಬಿದ್ದಳು ‖೧೪‖ ಎಲೈ, ಪರೀಕ್ಷಿದ್ರಾಯನೇ! ಆಪೂತನೆಯ ದೇಹವುಬೀಳುವ ಸಮಯದಲ್ಲಿ ಆರುಹರಿದಾರಿಗಳ ಮಧ್ಯದಲ್ಲಿರುವ ವೃಕ್ಷಗಳಂ ಚೂರ್ಣವನ್ನಾಗಿ ಮಾಡುತ್ತ ಬಿದ್ದುದು.ಆದುದರಿಂದ ಅದು ಮಹದಾಶ್ಚರ್ಯವನ್ನು ಉಂಟುಮಾಡಿತು. ‖೧೫‖ ಆಪೂತನೆಯ ಶರೀರವು- ನೇಗಿಲುಗಳಂತೆ ಭಯಂಕರಗಳಾದ ಕೋರೆದಾಡೆಗಳುಳ್ಳ ಮುಖದಿಂದಲೂ, ಬೆಟ್ಟದಗವಿಗಳಹಾಗಿರುವ ಮೂಗಿನಹೊಳ್ಳೆಗಳಿಂದಲೂ, ಬೆಟ್ಟದ ಮೇಲಿರುವ ಗುಂಡುಕಲ್ಲುಗಳಹಾಗೆ ಭಯಂಕರಗಳಾದ ಸ್ತನಗಳಿಂದಲೂ, ಚದರಿದ ಕೆಂಪಾದ ಕೇಶಗಳಿಂದಲೂಕೂಡಿದುದಾಗಿ ‖೧೬‖ ಮತ್ತು, ಕತ್ತಲೆಯಗುಂಡಿಯಂತೆ ಬಹಳಗುಳಿಯಾದ ಕಂಣುಗಳುಳ್ಳದ್ದಾಗಿಯೂ,ಮಳಲರಾಶಿಗಳಂತೆಅಂಡುಗಳಿಂದ ಭೀಕರವಾಗಿಯೂ, ಸೇತುಗಳಂತೆ ಭುಜಗಳೂ ತೊಡೆಗಳೂ ಕಾಲುಗಳೂ ಉ

ಙ್ಘ್ರಿ ಶೂನ್ಯತೋಯಹ್ರದೋದರಮ್ ‖ ೧೭ ‖ ಸಂತತ್ರಸುಸ್ತದುದ್ವೀಕ್ಷ್ಯ ಗೋಪಾಗೋಪ್ಯಃ ಕಳೇಬರಮ್ ‖ ಪೂರ್ವಂ ತು ತನ್ನಿಸ್ವನಿತಭಿನ್ನಹೃತ್ಕರ್ಣಮಸ್ತಕಾಃ ‖೧೮‖ ಬಾಲಞ್ಚ ತಸ್ಯಾ ಉರಸಿ ಕ್ರೀಡನ್ತಮಕುತೋ ಭಯಮ್ ‖ ಗೋಪ್ಯಸ್ತೂರ್ಣಂ ಸಮುತ್ಪತ್ಯ ಜಗೃಹುರ್ಜಾತಸಂಭ್ರಮಾಃ ‖೧೯‖ ಯಶೋದಾರೋಹಿಣೀಭ್ಯಾಂ ತಾಸ್ಸಮಂ ಬಾಲಸ್ಯ ಸರ್ವತಃ ‖ ರಕ್ಷಾಂ ವಿದಧಿರೇ ತಸ್ಯ ಗೋಪುಚ್ಛಭ್ರಮಣಾದಿಭಿಃ ‖೨೦‖ ಗೋಮೂತ್ರೇಣ ಸ್ನಾಪಯಿತ್ವಾ ಪುನರ್ಗೋರಜಸಾರ್ಭಕಮ್ ‖ ರಕ್ಷಾಂ ಚಕ್ರುಶ್ಚ ಶಕೃತಾ ದ್ವಾದಶಾಙ್ಗೇಷು ನಾಮಭಿಃ ‖೨೧‖ ಗೋ

---

ಅಂಘ್ರಿ-ಕಾಲುಗಳುಳ್ಳ-ಶೂನ್ಯತೋಯಹ್ರದೋದರಂ- ಶೂನ್ಯತೋಯ-ನೀರಿಲ್ಲದ, ಹ್ರದ-ಮಡುವಿನಂತಿರುವ, ಉದರಂ-ಹೊಟ್ಟೆಯುಳ್ಳ ‖೧೭‖ ತತ್ಕಳೇಬರಂ-(ಆ ರಾಕ್ಷಸಿಯ) ದೇಹವನ್ನು, ಉದ್ವೀಕ್ಷ್ಯ-ನೋಡಿ, ಪೂರ್ವಂ-ಮುಂಚೆಯೇ, ತನ್ನಿಸ್ವನಿತಭಿನ್ನಹೃತ್ಕರ್ಣಮಸ್ತಕಾಃ ತತ್-ಆ ಪೂತನೆಯ, ನಿಸ್ವನಿತ-ಶಬ್ದದಿಂದ, ಭಿನ್ನ, ಒಡೆದ, ಹೃತ್-ಗುಂಡಿಗೆಯೂ, ಕರ್ಣ-ಕಿವಿಗಳೂ, ಮಸ್ತಕಾಃ-ತಲೆಗಳೂ ಉಳ್ಳಂಥಾವರಾದ, ಗೋಪಾಃ-ಗೊಲ್ಲರೂ, ಗೋಪ್ಯಶ್ಚ ತು-ಗೊಲ್ಲತಿಯರೂ ಕೂಡ, ಸಂತತ್ರಸುಃ-ಭಯಪಟ್ಟರು ‖೧೮‖ ತಸ್ಯಾಃ-ಆ ಪೂತನೆಯ, ಉರಸಿ-ಮೇಲೆ, ಕ್ರೀಡಂತಂ-ಆಡುತ್ತಿರುವ, ಅಕುತೋಭಯಂ- ಯಾವದರಿಂದಲೂ ಭಯವಿಲ್ಲದ, ಬಾಲಂಚ-ಮಗುವನ್ನೂ. ಜಾತಸಂಭ್ರಮಾಃ-ಹುಟ್ಟಿದ ಸಂತೋಷಯುಕ್ತವಾದ ವೇಗವುಳ್ಳವರಾದ, ಗೋಪ್ಯಃ-ಗೊಲ್ಲತಿಯರು, ತೂರ್ಣಂ ಬೇಗನೆ, ಸಮುತ್ಪತ್ಯ-ಎದ್ದು, ಜಗೃಹುಃ- ಎಳಕೊಂಡರು. ‖೧೯‖ ತಾಃ- ಆ ಗೋಪಿಯರು, ಯಶೋದಾರೋಹಿಣೀಭ್ಯಾಂ ಸಮಂ-ಯಶೋದಾರೋಹಿಣಿಯರೊಡನೆ, ತಸ್ಯ ಬಾಲಸ್ಯ-ಆ ಹುಡುಗನಿಗೆ, ಗೋಪುಚ್ಛಭ್ರಮಣಾದಿಭಿಃ-ಆಕಳ ಬಾಲವನ್ನು ಇಳಿಯತೆಗಿಯುವದು ಮೊದಲಾದ ತಂತ್ರಗಳಿಂದ, ರಕ್ಷಾಂ-ರಕ್ಷಣಕ್ರಿಯೆಯನ್ನು, ವಿದಧಿರೇ-ಮಾಡಿದರು ‖೨೦‖ ಅರ್ಭಕಂ- ಹುಡುಗನನ್ನೂ, ಗೋಮೂತ್ರೇಣ-ಆಕಳ ಗಂಜಳದಿಂದ, ಸ್ನಾಪಯಿತ್ವಾ-ಮಿಾಯಿಸಿ, ಪುನಃ-ಮರಳಿ, ಗೋರಜಸಾ-ಆಕಳ ಧೂಳಿಯಿಂದ, ಸ್ನಾಪಯಿತ್ವಾ- ಮಿಾಯಿಸಿ ದ್ವಾದಶಾಂಗೇಷು- ೧೨ ಅವಯವಸ್ಥಾನಗಳಲ್ಲಿ, ನಾಮಭಿಃ-ವಿಷ್ಣುವಿನ ಹೆಸರುಗಳಿಂದ, ಗೋಶಕೃತಾ-ಆಕಳ ಸಗಣಿಯಿಂದ, ರಕ್ಷಾಂ-ರಕ್ಷಾತಂತ್ರವನ್ನು, ಚಕ್ರುಃ-ಮಾಡಿದರಂತೆ ‖೨೧‖ ಗೋಪ್ಯಃ-ಗೊಲ್ಲತಿಯರು, ಸಂಸ್ಪೃಷ್ಟಸಲಿಲಾಃ-ಚನ್ನಾಗಿ ಸೋಂಕಲ್ಪಟ್ಟ ನೀರು

---



ಳ್ಳದ್ದಾಗಿಯೂ, ನೀರಿಲ್ಲದ ಮಡುವಿನಂತೆ ಹಳ್ಳವಾದ ಹೊಟ್ಟೆಯುಳ್ಳದ್ದಾಗಿಯೂ, ಇರುವ ‖೧೭‖ ಆ ಪೂತನೆಯ ದೇಹವ ಕಂಡು ಪೂರ್ವದಲ್ಲಿಯೇ ಅವಳ ಶಬ್ದದಿಂದ ಭೇದಿಸಲ್ಪಟ್ಟ ಹೃದಯವೂ ಕಿವಿಗಳೂ ತಲೆಯೂ ಉಳ್ಳವರಾದ ಗೋಪಸ್ತ್ರೀಯರೂ ಗೋಪರೂ ಭಯವನೆಯ್ದಿದರು. ‖ ಆ ಪೂತನೆಯ ದೇಹದ ಮೇಲೆ ನಿರ್ಭಯನಾಗಿ ಆಡುತ್ತಿರುವ ಮಗುವಾದ ಶ್ರೀಕೃಷ್ಣನಂ ಕಂಡು ಗೋಪಿಕಾಸ್ತ್ರೀಯರು ಸಂಭ್ರಾಂತರಾಗಿ ಶೀಘ್ರದಲ್ಲಿ ದೇಹದ ಮೇಲೆ ಹತ್ತಿ ಬಾಲಕನಂ ಎತ್ತಿಕೊಂಡು ಬಂದರು ‖೧೯‖ ಅನಂತರದಲ್ಲಿ ಗೋಪಿಯರೂ ಯಶೋದಾರೋಹಿಣಿಯರೂ ಆ ಬಾಲಕನ ಅವಯವಂಗಳಲ್ಲಿ ಗೋವಿನ ಬಾಲಂಗಳಿಂ ಪ್ರಾಮುತ್ರಿಸಿ ರಕ್ಷೆಯಂಗೆಯ್ದರು. ‖೨೦‖ ಮತ್ತೂ ಗೋಮೂತ್ರದಿಂದ ಬಾಲಕನಿಗೆ ಸ್ನಾನವಂ ಮಾಡಿಸಿ ಪುನಃ ಗೋವುಗಳ ಕಾಲಧೂಳುಗಳಿಂದಲೂ ಗೋಮಯದಿಂದಲೂ ಹನ್ನೆರಡು ಅಂಗಗಳಲ್ಲಿಯೂ ಭಗವಂತನ ಕೇಶವಾದಿನಾಮಗಳಿಂದ ರಕ್ಷೆಯಂಗೆಯ್ದರು. ‖೨೧‖ ಮೊದಲು ಅತಿಸಂಭ್ರಮದಿಂದ ಆಚಮನವಂ ಮಾಡದೆ ಶಿಶುವಿಗೆ ರಕ್ಷೆಯನಿಟ್ಟು

ಪ್ಯಸ್ಸಂಸ್ಪೃಷ್ಟಸಲಿಲಾಅಙ್ಗೇಷುಕರಯೋಃಪೃಥಕ್।ನ್ಯಸ್ಯಾತ್ಮನ್ಯಥಬಾಲಸ್ಯಬೀಜನ್ಯಾಸಮಕುರ್ವತ॥೨೧॥
ಅವ್ಯಾದಜೋಙ್ಘ್ರಿಮಣಿಮಾಂಸ್ತವಜಾನ್ವಥೋರೂಯಜ್ಞೋಚ್ಯುತಃಕಟಿತಟಂಜಠರಂಹಯಾಸ್ಯಃ। ಹೃತ್ಕೇಶ
ವಸ್ತ್ವದುರಈಶಇನಸ್ತುಕಣ್ಠಂವಿಷ್ಣುರ್ಭುಜಂಮುಖಮುರುಕ್ರಮಈಶ್ವರಃಕಮ್॥೨೨॥ ಚಕ್ರ್ಯಗ್ರತ
ಸ್ಸಹಗದೋಹರಿರಸ್ತುಪಶ್ಚಾತ್ತ್ವತ್ಪಾರ್ಶ್ವಯೋರ್ಧನುರಸೀಮಧುಹಾಜನಶ್ಚ। ಕೋಣೇಷುಶಙ್ಖಉರುಗಾ
ಯಉಪರ್ಯುಪೇನ್ದ್ರಸ್ತಾರ್ಕ್ಷ್ಯಃಕ್ಷಿತೌಹಲಧರಃಪುರುಷಸ್ಸಮನ್ತಾತ್॥೨೩॥ಇನ್ದ್ರಿಯಾಣಿಹೃಷೀಕೇಶಃಪ್ರಾ

---

ಕ್ಷವರಾಗಿ, (ಮಿಂದುಮಡಿಯುಟ್ಟುಶುದ್ಧಾಚಮನವಂಮಾಡಿ)ಆತ್ಮನಿ-ತಮ್ಮದೇಹದಲ್ಲಿ, ಅಂಗೇಷು- ಹೃದಯಾದ್ಯಂಗಗಳಲ್ಲಿಯೂ, ಕರಯೋಃ-ಹಸ್ತಗಳಲ್ಲಿಯೂ, ಪೃಥಕ್-ಬೇರೆಯಾಗಿ, ನ್ಯಸ್ಯ-ಮಂತ್ರನ್ಯಾಸಮಾಡಿಕೊಂಡು, ಅಥ-ಆಮೇಲೆ, ಬಾಲಸ್ಯ-ಹುಡುಗನ, ಆತ್ಮನಿ-ದೇಹದಲ್ಲಿ, ಬೀಜನ್ಯಾಸಂ-ಮಂತ್ರಾಕ್ಷರವಿನ್ಯಾಸವನ್ನು, ಅಕುರ್ವತ-ಮಾಡಿದರು ॥೨೧॥ ಅಜಃ- ಹುಟ್ಟುವವನಲ್ಲದಪರಮಾತ್ಮನು, ತವ-ನಿನ್ನ, ಅಂಘ್ರಿಂ-ಪಾದಗಳನ್ನು, ಅವ್ಯಾತ್-ರಕ್ಷಿಸುವನು. ಜಾನು-ಮೊಣಕಾಲುಗಳನ್ನು, ಅಣಿಮಾ-ಅತಿಸೂಕ್ಷ್ಮರೂಪವಾಗುವಶಕ್ತ್ಯಾತ್ಮಕನು, ಅವ್ಯಾತ್-ರಕ್ಷಿಸಲಿ ಅಥ-ಆಮೇಲೆ, ಯಜ್ಞಃ-ಯಜ್ಞಪುರುಷನು, ಊರೂ-ತೊಡೆಗಳನ್ನೂ, ಅಚ್ಯುತಃ-ಪದಭ್ರಂಶವಿಲ್ಲದವನು, ಕಟಿತಟಂ-ಮಧ್ಯಪ್ರದೇಶವನ್ನೂ, ಹಯಾಸ್ಯಃ-ಅಶ್ವಮುಖನು, ಜಠರಂ-ಹೊಟ್ಟೆಯನ್ನೂ, ಕೇಶವಃ-ಕೇಶವಮೂರ್ತಿಯಾದವಿಷ್ಣುವು, ಹೃತ್-ಗುಂಡಿಗೆಯನ್ನೂ ಈಶಃ-ನಿಯಾಮಕನು, ತ್ವದುರಃ-ನಿನ್ನಎದೆಯನ್ನೂ, ಇನಸ್ತು- ಸೂರ್ಯಮೂರ್ತಿಯಾದವರೋ-ಕಂಠಂ-ಕೊರಳನ್ನೂ, ವಿಷ್ಣುಃ-ವ್ಯಾಪಕರೂಪನು, ಭುಜಂ-ತೋಳುಗಳನ್ನೂ, ಉರುಕ್ರಮಃ-ಅಧಿಕವಾದಪಾದವಿನ್ಯಾಸವುಳ್ಳವನು, ಮುಖಂ ಮೋರೆಯನ್ನೂ, ಈಶಃ-ಒಡೆಯನು, ಕಂ-ತಲೆಯನ್ನೂ ಅವ್ಯಾತ್-ರಕ್ಷಿಸಲಿ ॥೨೨॥ ಚಕ್ರೀ-ಚಕ್ರವುಳ್ಳವಿಷ್ಣುವು, ಅಗ್ರತಃ-ಮುಂಗಡೆಯೊಳಗೂ, ಸಹಗದಃ-ಗದಾಯುಧಸಹಿತನಾದ, ಹರಿಃ-ವಿಷ್ಣುವು, ಪಶ್ಚಾತ್- ಹಿಂಗಡೆಯಲ್ಲಿಯೂ, ಧನುರಸೀ-ಕ್ರಮವಾಗಿಬಿಲ್ಲನ್ನೂಕತ್ತಿಯನ್ನೂಧರಿಸಿದ, ಮಧುಹಾ-ಮಧುಸೂದನಮೂರ್ತಿಯು, ಅಜನಶ್ಚ- ಅಮಾನುಷದೇಹಮೂರ್ತಿಯೂ, ತ್ವತ್ಪಾರ್ಶ್ವಯೋಃ-ನಿನ್ನಪಕ್ಕಗಳಲ್ಲಿಯೂ, ಶಂಖಂ-ಶಂಖವನ್ನು, (ಬಿಭ್ರತ್-ಧರಿಸಿದ)ಉರುಗಾಯಃ-ದೊಡ್ಡವರಿಂದಗಾನಮಾಡಲ್ಪಟ್ಟ, ಅಥವಾ-ದೊಡ್ಡವನೆಂದುವೇದದಲ್ಲಿಗೀತನಾದವಿಷ್ಣುವು, ಕೋಣೇಷು-ಮೂಲೆಗಳಲ್ಲಿಯೂ, ಉಪೇಂದ್ರಃ- ಇಂದ್ರನ ತಮ್ಮನಾದವಾಮನಮೂರ್ತಿಯು, ಉಪರಿ-ಮೇಲ್ಗಡೆಯಲ್ಲಿಯೂ, ತಾರ್ಕ್ಷ್ಯಃ- ಗರುಡಾತ್ಮಕನು, ಕ್ಷಿತೌ- ನೆಲದಲ್ಲಿಯೂ, ಹಲಧರಃ-ನೇಗಿಲನ್ನುವಹಿಸಿದ, ಪುರುಷಃ-ಸಂಕರ್ಷಣನು, ಸಮಂತಾತ್-ಸರ್ವದಿಕ್ಕುಗಳಲ್ಲಿಯೂ, ಅಸ್ತು-ರಕ್ಷಕನಾಗಿರಲಿ ॥೨೩॥ಹೃಷೀಕೇಶಃ- ಇಂದ್ರಿಯಗಳಿಗೊಡೆಯನಾದವಿಷ್ಣುವು, ಇಂದ್ರಿಯಾಣಿ-ಕಿವಿಮೊದಲಾದಕರಣಗಳನ್ನೂ, ನಾರಾಯಣಃ- ಜಲವೇಸ್ಥಾನವಾದ, ಅಥ

---

ಆಮೇಲೆ ಕೊಂಚಸಾವಧಾನವಾದ ಮನಸ್ಸುಳ್ಳವರಾಗಿ ಯೋಚಿಸಿಕೊಂಡು ಆಚಮನವಂಮಾಡಿ ತಮ್ಮದೇಹದಲ್ಲಿ ಅವಯವಗಳಲ್ಲಿ ಹಸ್ತಗಳಲ್ಲಿಯೂ ಪ್ರತ್ಯೇಕವಾಗಿ ಅಜಾದಿ ಹನ್ನೊಂದು ಬೀಜಂಗಳಲ್ಲಿ,ಹಸ್ತಶುದ್ಧಿಯಲ್ಲಿ ಮೂರು,ಬೆರಳುಗಳಸಂಧಿಯಲ್ಲಿ ನಾಲ್ಕುನಾಲ್ಕು, ಪಾದಾದಿಗಳಲ್ಲಿ ಒಂದೊಂದು, ಹೀಗೆ ಬೀಜಾಕ್ಷರವನಿಟ್ಟು ಮಂತ್ರನ್ಯಾಸವಂ ಮಾಡಿಕೊಂಡು ತಾವುಪರಿಶುದ್ಧರಾಗಿ ಅನಂತರದಲ್ಲಿ ಅದೇರೀತಿಯಿಂದ ಬಾಲಕನಿಗೆ ರಕ್ಷೆಯನಿಟ್ಟರು. ॥೨೧॥ ಅದೆಂತೆಂದರೆ-ಅಜನು ನಿನ್ನಪಾದಂಗಳಂರಕ್ಷಿಸಲಿ, ಸೂಕ್ಷ್ಮರೂಪನಾದ ದೇವನು ನಿನ್ನ ಮೊಣಕಾಲುಗಳಂ ರಕ್ಷಿಸಲಿ; ಯಜ್ಞನಾಮಕನಾದ ಭಗವಂತನು ನಿನ್ನ ತೊಡೆಗಳಂ ರಕ್ಷಿಸಲಿ, ಅಚ್ಯುತನು ನಿನ್ನ ನಡುವಂ ರಕ್ಷಿಸಲಿ,ಹಯಗ್ರೀವಮೂರ್ತಿಯುನಿನ್ನಹೊಟ್ಟೆಯಂರಕ್ಷಿಸಲಿ; ಕೇಶವನು ನಿನ್ನ ಹೃದಯವಂ ರಕ್ಷಿಸಲಿ; ಈಶ್ವರನು ನಿನ್ನವಕ್ಷಸ್ಥಲವಂ ರಕ್ಷಿಸಲಿ ಇನನು ನಿನ್ನ ಕಂಠವಂ ರಕ್ಷಿಸಲಿ; ವಿಷ್ಣುವು ನಿನ್ನಭುಜಂಗಳಂ ರಕ್ಷಿಸಲಿ; ತ್ರಿವಿಕ್ರಮನು ನಿನ್ನಮುಖವಂ ರಕ್ಷಿಸಲಿ; ಪರಮೇಶ್ವರನು ನಿನ್ನ ತಲೆಯಂರಕ್ಷಿಸಲಿ;॥೨೨॥ಚಕ್ರಾಯುಧವಂ ಪಿಡಿದಿರುವದೇವನು ನಿನ್ನ ಮುಂಭಾಗದಲ್ಲಿ ನೆಲಸಿರಲಿ; ಗದೆಯಂಧರಿಸುವ ಹರಿಯು ನಿನ್ನಹಿಂಭಾಗದಲ್ಲಿರಲಿ; ಧನುರ್ಧಾರಿಯಾದ ಮಧುಸೂದನನು ಖಡ್ಗಧಾರಿಯಾದ ಅಜನೂ ನಿನ್ನ ಉಭಯಪಾರ್ಶ್ವಗಳಲ್ಲಿಯೂನೆಲಸಿರಲಿ; ನಿನ್ನ ನಾಲ್ಕುಮೂಲೆಗಳಲ್ಲಿಯೂ ಶಂಖವಂಧರಿಸಿರುವ ತ್ರಿವಿಕ್ರಮನುನೆಲಸಿರಲಿ; ಮೇಲಣಕಡೆಯಲ್ಲಿ ಉಪೇಂದ್ರನು ವಾಸುಗೆಯ್ಯಲಿ; ಕೆಳಗಡೆಯಲ್ಲಿ ತಾರ್ಕ್ಷ್ಯನು ನೆಲಸಿರಲಿ; ಹಲಾಯುಧವ ಧರಿಸಿರುವ ಪುರುಷನು ಎಲ್ಲಕಡೆಗಳಲ್ಲಿಯೂ ಇರಲಿ; ॥೨೩॥ (ಈರೀತಿಯಲ್ಲಿ ಗೋಪಿಕಾಸ್ತ್ರೀಯರು ಬಾಧ್ಯತ

ಣೋ ನಾರಾಯಣೋಽವತು | ಶ್ವೇತದ್ವೀಪಪತಿಶ್ಚಿತ್ತಂ ಮನೋ ಯೋಗೇಶ್ವರೋಽವತು ||೨೪|| ಪೃಶ್ನಿಗರ್ಭಸ್ತು ತೇ ಬುದ್ಧಿಮಾತ್ಮಾನಂ ಭಗವಾನ್ಪರಃ | ಕ್ರೀಡಂತಂ ಪಾತು ಗೋವಿಂದಃ ಶಯಾನಂ ಪಾತು ಮಾಧವಃ ||೨೫|| ವ್ರಜಂತಮವ್ಯಾದ್ವೈಕುಂಠ ಆಸೀನಂ ತ್ವಾಂ ಶ್ರಿಯಃಪತಿಃ | ಭುಂಜಾನಂ ಯಜ್ಞಭುಕ್ಪಾತು ಸರ್ವಗ್ರಹಭಯಂಕರಃ ||೨೬|| ಡಾಕಿನ್ಯೋ ಯಾತುಧಾನ್ಯಶ್ಚ ಕೂಶ್ಮಾಂಡಾ ಯೇಽರ್ಭಕಗ್ರಹಾಃ | ಭೂತಪ್ರೇತಪಿಶಾಚಾಶ್ಚ ಯಕ್ಷರಕ್ಷೋವಿನಾಯಕಾಃ ||೨೭|| ಕೋಟರಾ ರೇವತೀ ಜ್ಯೇಷ್ಠಾ ಪೂತನಾ ಮಾತೃಕಾದಯಃ | ಉನ್ಮಾದಾ ಯೇ ಹ್ಯಪಸ್ಮಾರಾ ದೇಹಪ್ರಾಣೇಂದ್ರಿಯದ್ರುಹಃ ||೨೮|| ಸ್ವಪ್ನದೃಷ್ಟಾ ಮಹೋತ್ಪಾತಾ ವೃದ್ಧಬಾಲಗ್ರಹಾಶ್ಚ ಯೇ | ಸರ್ವೇ

---

ಣಃ-ನರಸಮೂಹವೇ ಸ್ಥಾನವಾದ ವಿಷ್ಣುವು, ಪ್ರಾಣಾನ್-ಅಂತರವಾಯುಗಳನ್ನೂ, ಅವತು-ರಕ್ಷಿಸಲಿ ಶ್ವೇತದ್ವೀಪಪತಿಃ-ಬಿಳುದೀವಿಗೊಡೆಯನಾದ ವಿಷ್ಣುವು, ಚಿತ್ತಂ- ಸಂಕಲ್ಪವಿಕಲ್ಪಾತ್ಮಕವಾದ ಅಂತಃಕರಣವನ್ನೂ, ಯೋಗೇಶ್ವರಃ- ಪ್ರಾಣಮನಸ್ಸಂಬಂಧಕ್ಕೊಡೆಯನಾದ ವಿಷ್ಣುವು, ಮನಃ-ಸಂಶಯಾತ್ಮಕವಾದ ಅಂತಃಕರಣವನ್ನು, ಅವತು-ರಕ್ಷಿಸಲಿ ||೨೪|| ಪೃಶ್ನಿಗರ್ಭಸ್ತು-ಅದಿತಿಪುತ್ರನಾದ ಸೂರ್ಯರೂಪನಾದರೋ, ತೇ-ನಿನ್ನ, ಬುದ್ಧಿಂ-ಬುದ್ಧಿಯನ್ನೂ, ಭಗವಾನ್-ಭಗವಂತನಾದ, ಪರಃ-ಉತ್ತಮಪುರುಷನು, ಆತ್ಮಾನಂ-ಅಹಂಕಾರವನ್ನೂ, (ಅವತು-ರಕ್ಷಿಸಲಿ) ಗೋವಿಂದಃ-ಇಂದ್ರಿಯಾರ್ಥಗಳನ್ನು ಬಲ್ಲ ಅಥವಾ ವೇದಾಂತವೇದ್ಯನಾದ ವಿಷ್ಣುವು, ಕ್ರೀಡಂತಂ-ಆಡುತಲಿರುವ ನಿನ್ನನ್ನು, ಪಾತು-ರಕ್ಷಿಸಲಿ-ಮಾಧವಃ-ಲಕ್ಷ್ಮೀಪತಿಯು, ಶಯಾನಂ-ಮಲಗಿರುವ ನಿನ್ನನ್ನು, ಪಾತು-ರಕ್ಷಿಸಲಿ ||೨೫|| ವೈಕುಂಠಃ-ವಿಕುಂಠಪುತ್ರನಾದ ವಿಷ್ಣುವು, ಅಥವಾ ಕೆಲಸಗಳಲ್ಲಿ ಜಾಗರೂಕನಾದ ದೇವರು, ವ್ರಜಂತಂ- ನಡೆಯುತಲಿರುವ ನಿನ್ನನ್ನು, ಅವ್ಯಾತ್-ಸಲಹುವನು ಶ್ರಿಯಃಪತಿಃ-ಸಂಪತ್ತಿಗೊಡೆಯನು, ಆಸೀನಂ-ಕುಳಿತಿರುವ, ತ್ವಾಂ-ನಿನ್ನನ್ನು, ಯಜ್ಞಭುಕ್- ಕ್ರತುಗಳಲ್ಲಿ ಹವಿರ್ದ್ರವ್ಯವನ್ನು ಭಕ್ಷಿಸುವ ಅಗ್ನಿಯು, ಅಥವಾ ಕರ್ಮಫಲಭೋಕ್ತನಾದ ವಿಷ್ಣುವು, ಭುಂಜಾನಂ-ಉಣುತಿರುವ ನಿನ್ನನ್ನೂ, ಪಾತು-ರಕ್ಷಿಸಲಿ ಸರ್ವಗ್ರಹಭಯಂಕರಃ-ವಿಷ್ಣುವು ಸಕಲಗ್ರಹಗಳಿಗೂ ಹೆದರಿಕೆಯನ್ನುಂಟುಮಾಡುವನಾದ್ದರಿಂದಲೇ, ತ್ವಾಂ-ನಿನ್ನನ್ನು, ಪಾತು-ರಕ್ಷಿಸಲಿ ||೨೬|| ಡಾಕಿನ್ಯಃ-ಡಾಕಿನೀಗ್ರಹಗಳು, ಯಾತುಧಾನ್ಯಃ-ಯಾತುಧಾನೀಗ್ರಹಗಳು, ಕೂಶ್ಮಾಂಡಾಶ್ಚ- ಕುಂಬಳಕಾಯಿದೆವ್ವಗಳೂ, ಅರ್ಭಕಗ್ರಹಾಃ-ಬಾಲಗ್ರಹಗಳೂ, ಭೂತಪ್ರೇತಪಿಶಾಚಾಶ್ಚ-ಭೂತ-ಸರ್ಪಾದಿಭೂತರೂಪಗಳೂ, ಪ್ರೇತ-ಸತ್ತು ಸಂಸ್ಕಾರವಿಲ್ಲದ ದೇಹಿಗಳೂ, ಪಿಶಾಚಾಶ್ಚ-ಪಿಶಾಚರೂಪಗಳೂ, ಯಕ್ಷರಕ್ಷೋವಿನಾಯಕಾಃ-ಯಕ್ಷಗ್ರಹಗಳೂ ಹೋಳಿಕೆಯುಂಕಾವಿರುವ ಪುರಕ್ಷಸರು, ವಿಘ್ನಕಾರಿಗ್ರಹಗಳೂ, ಯೇ-ಯಾರೋ, ||೨೭|| ಕೋಟರೆ, ರೇವತಿ, ಜ್ಯೇಷ್ಠೆಯರೂ; ಪೂತನೆ, ಮಾತೃಕೆ, ಆದಯಃ-ಮುಂತಾದವರೂ; ಉನ್ಮಾದಾಃ-ಹುಚ್ಚು ಹಿಡಿಸುವಗ್ರಹಗಳೂ, ಅಪಸ್ಮಾರಾಃ-ಮರುಳಾಗಿಸಿ ನೆನಪು ತಪ್ಪಿಸುವಗ್ರಹಗಳೂ, ಪ್ರಾಣೇಂದ್ರಿಯದ್ರುಹಃ-ಪ್ರಾಣಗಳಿಗೂ ಇಂದ್ರಿಯಗಳಿಗೂ ದ್ರೋಹವಂ ಮಾಡುವವೂ, ಯೇ-ಯಾವವೋ ||೨೮|| ಸ್ವಪ್ನದೃಷ್ಟಾಃ- ಕನಸಿನಲ್ಲಿ ಕಾಣಲ್ಪಟ್ಟವುಗಳೂ, ಮಹೋತ್ಪಾತಾಃ-ದೊಡ್ಡ ಅನಿಷ್ಟಸೂಚನಗಳೂ, (ಬಾಲದ ಚುಕ್ಕೆ, ಧೂಮಕೇತು, ಉರಿಗಾಳಿ, ರಕ್ತದ ಮಳೆ, ಕೊಳ್ಳಿಬೀಳುವಿಕೆ, ಹಗಲು ಚುಕ್ಕೆ ಕಾಣುವಿಕೆ, ನೆಲಗುಡುಗು ಬಿರಿಯುವಿಕೆ, ಮೊದಲಾದವುಗಳೂ) ವೃದ್ಧಬಾಲಗ್ರಹಾಶ್ಚ-ಮುದುಕರನ್ನೂ, ಹು

---

ಕ್ಷೆಯುಂಗೆಯ್ದು ಬಳಿಕ ಅಂತರಂಗ ರಕ್ಷೆಯುಂಗೈಯ್ದರದೆಂತೆನೆ-) ಹೃಷೀಕೇಶನು ನಿನ್ನ ಕಣ್ಣುಮೊದಲಾದ ಇಂದ್ರಿಯಗಳಂ ರಕ್ಷಿಸಲಿ; ಶ್ರೀಮನ್ನಾರಾಯಣನು ನಿನ್ನ ಪ್ರಾಣಂಗಳಂ ರಕ್ಷಿಸಲಿ; ಶ್ವೇತದ್ವೀಪಕೊಡೆಯನಾದ ಅನಿರುದ್ಧನು ನಿನ್ನ ಚಿತ್ತಮಂ ರಕ್ಷಿಸಲಿ; ಯೋಗೀಶ್ವರನಾದ ವಾಸುದೇವನು ನಿನ್ನ ಮನವಂ ರಕ್ಷಿಸಲಿ; ||೨೪|| ಪೃಶ್ನಿಗರ್ಭನಾದ ಶ್ರೀಹರಿಯು ನಿನ್ನ ಬುದ್ಧಿಯಂ ರಕ್ಷಿಸಲಿ; ಭಗವಂತನಾಗಿಯೂ ಪರಮೇಶ್ವರನಾಗಿಯೂ ಇರುವ ಸಂಕರ್ಷಣಮೂರ್ತಿಯು ನಿನ್ನ ಅಹಂಕಾರವ ರಕ್ಷಿಸಲಿ; ಗೋವಿಂದನು ಆಡುತಲಿರುವ ನಿನ್ನಂ ರಕ್ಷಿಸಲಿ; ಮಾಧವನು ಪವಡಿಸಿರುವ ನಿನ್ನಂ ರಕ್ಷಿಸಲಿ, ||೨೫|| ವೈಕುಂಠನು ನಡೆಯುತ್ತಿರುವ ನಿನ್ನಂ ರಕ್ಷಿಸಲಿ, ಲಕ್ಷ್ಮೀಪತಿಯು ಕುಳಿತಿರುವ ನಿನ್ನಂ ರಕ್ಷಿಸಲಿ, ಸರ್ವಗ್ರಹಗಳಿಗೂ ಭಯಂಕರನಾದ ಯಜ್ಞಭೋಕ್ತೃವಾದ ಯಜ್ಞೇಶ್ವರನು ಭೋಜನಂಗೆಯ್ವ ನಿನ್ನಂ ರಕ್ಷಿಸಲಿ, ||೨೬|| ಮತ್ತು ಶಾಕಿನೀ ಡಾಕಿನೀ ಯಾತುಧಾನೀ ಕೂಶ್ಮಾಂಡಗ್ರಹಗಳು ಮೊದಲಾದ ಬಾಲಗ್ರಹಗಳೂ ಭೂತಪ್ರೇತಪಿಶಾಚಂಗಳೂ, ಯಕ್ಷರಾಕ್ಷಸವೈನಾಯಕಗ್ರಹಗಳೂ, ||೨೭|| ಕೋಟರೆ ರೇವತೀ, ಜ್ಯೇಷ್ಠೆ ಪೂತನೆ ಮಾತೃಕೆ ಮೊದಲಾದ ಗ್ರಹಗಳೂ, ಹುಚ್ಚುಮಾಡುವ ಮರುಳಾಗಿಸುವ ಉನ್ಮಾದಾಪಸ್ಮಾರಗ್ರಹಗಳೂ ದೇಹಪ್ರಾಣೇಂದ್ರಿಯಂಗಳಿಗೆ ದ್ರೋಹವಂ ಮಾಡುವ ಗ್ರಹಂಗಳು ಯಾವವೋ ಅವೂ ||೨೮|| ಕನಸಿನಲ್ಲಿ ಕಾಣಲ್ಪಡುವ ದುಷ್ಟಗ್ರಹಂಗಳೂ, ದೊಡ್ಡ ಉತ್ಪಾತಂಗಳೂ, ವೃದ್ಧಗ್ರಹಂಗಳೂ ಬಾಲಗ್ರಹಂಗಳೂ, ಯಾವವೋ ಅವೂ, ಶ್ರೀವಿಷ್ಣುವಿನ ಹೆಸರು

ನಶ್ಯಂತ್ವತ್ರವಿಷ್ಣೋರ್ನಾಮಗ್ರಹಣಭೀರವಃ ||೩೦|| ಇತಿಪ್ರಣಯಬದ್ಧಾಭಿರ್ಗೋಪೀಭಿಃಕೃತರಕ್ಷಣಮ್ |ಪಾಯಯಿತ್ವಾಸ್ತನಂಮಾತಾಪರ್ಯಂಕೆಸನ್ನ್ಯವೇಶಯತ್ ||೩೧|| ತಾವನ್ನಂದಾದಯೋಗೋಪಾಮಥುರಾಯಾವ್ರಜಂಗತಾಃ | ವಿಲೋಕ್ಯಪೂತನಾದೇಹಂಬಭೂವುರತಿವಿಸ್ಮಿತಾಃ ||೩೨|| ನೂನಮ್ಬತರ್ಷಿಸ್ಸಂಜಾತೋಯೋಗೀಶೋವಾಸಮಾಸಸಃ | ಸಏವದೃಷ್ಟೋಹ್ಯುತ್ಪಾತೋಯದಾಹಾನಕದುಂದುಭಿಃ ||೩೩|| ಕಳೇಬರಮ್ಪರಶು

---

ಹುಗರನ್ನು ಹಿಡಿಯುವವೂ,ಯೇ-ಯಾವವೋ, ತೇಸರ್ವೇ-ಅವೆಲ್ಲವೂ, ವಿಷ್ಣೋಃ-ನಾರಾಯಣನ, ನಾಮಗ್ರಹಣಭೀರವಃ-ನಾಮಗ್ರಹಣ-ಹೆಸರುಹೇಳುವುದರಿಂದ, ಭೀರವಃ ಹೆದರುವವಾದ್ದರಿಂದಲೇ, ನಶ್ಯಂತು-ನಾಶವಾಗಿಹೋಗಲಿ||೩೦||ಇತಿ-ಹೀಗೆ, ಪ್ರಣಯಬದ್ಧಾಭಿಃ-ಸ್ನೇಹದಿಂದಸಂಬಂಧಿಸಲ್ಪಟ್ಟ, ಗೋಪೀಭಿಃ-ಗೊಲ್ಲತಿಯರಿಂದ, ಕೃತರಕ್ಷಣಂ-ಮಾಡಲ್ಪಟ್ಟರಕ್ಷಾತಂತ್ರವುಳ್ಳಶಿಶುವನ್ನು,ಮಾತಾ-ತಾಯಿಯಾದಯಶೋದೆಯು, ಸ್ತನಂಪಾಯಯಿತ್ವಾ-ಮೊಲೆಯೂಡಿಸಿ, ಪರ್ಯಂಕೇ-ಮಂಚದಲ್ಲಿ, ಸನ್ನ್ಯವೇಶಯತ್- ಮಲಗಿಸಿದಳು.||೩೧|| ತಾವತ್-ಅಷ್ಟರೊಳಗಾಗಿ, ಮಥುರಾಯಾಃ-ಮಥುರಾನಗರದದೆಸೆಯಿಂದ, ವ್ರಜಂ-ಗೋಕುಲವನ್ನು ಕುರಿತು, ಗತಾಃ-ಬಂದಂಥಾ, ನಂದಾದಯೋಗೋಪಾಃ-ನಂದನುಮೊದಲಾದಗೊಲ್ಲರು, ಪೂತನಾದೇಹಂ- ಪೂತನೆಯೆಂಬವಳಶರೀರವನ್ನು, ವಿಲೋಕ್ಯ-ನೋಡಿ, ಅತಿವಿಸ್ಮಿತಾಃ-ಬಹಳಆಶ್ಚರ್ಯಗೊಂಡವರು, ಬಭೂವುಃ-ಆದರು. ||೩೨|| ಆನಕದುಂದುಭಿಃ-ವಸುದೇವನು, ಯಂ- ಯಾವುದರನ್ನು, ಪ್ರಹ-ನಿಷ್ಕರ್ಷವಾಗಿಹೇಳಿದನೋ, ಸಏವಾಯಂ-ಅದೇಯಿದು, ಉತ್ಪಾತಃ-ಭಯಸೂಚಕವು, ದೃಷ್ಟೋಹಿ- ನೋಡಲ್ಪಟ್ಟಿತಲ್ಲವೇ? ಸಃ-ಆವಸುದೇವನು, ಋಷಿಃ-ಋಷಿಯು(ತ್ರಿಕಾಲಜ್ಞನು)ಜ್ಞಾನೀವಾ-ಅಪರೋಕ್ಷಜ್ಞಾನಿಯೋ, ಯೋಗೀಶೋವಾ- ಯೋಗಿಗಳಿಗೊಡೆಯನೋ-ಸಮಾಸ-ಆದನು ನೂನಂ-ನಿಶ್ಚಯವು. ಬತ-ಆಶ್ಚರ್ಯವು. ||೩೩|| ವ್ರಜೌಕಸಃ-ಗೋಕುಲವಾಸಿಗಳಾದಗೊಲ್ಲರು, ತತ್ರ-ಅಲ್ಲಿ, ಕಳೇಬರಂ-ಪೂತನೆಯದೊಡ್ಡಹೆಣವನ್ನು, ಪರಶುಭಿಃ-ಕಂದಕೊಡಲಿಗಳಿಂದ, ಛಿತ್ವಾ-ಕಡಿದು, ದೂರೇ-ದೂರದಲ್ಲಿ, ಕ್ಷಿಪ್ತ್ವಾ-ಹಾಕಿ,ಅ

---

ಹೇಳಿದಮಾತ್ರದಿಂದಲೇ ಭಯಪಡುತ್ತಲಿರುವ ಅವೆಲ್ಲವೂನಿನ್ನ ಕ್ಷೇಮಕ್ಕೋಸುಗ ನಾಶವಂ ಹೊಂದಲಿ.||೩೦||ಎಂದು ಈ





ರೀತಿಯಲ್ಲಿ ಬಾಲಕನೊಳು ಪ್ರೇಮದಿಂದ ಬದ್ಧರಾದ ಗೋಪಸ್ತ್ರೀಯರಿಂದಮಾಡಲ್ಪಟ್ಟ ರಕ್ಷೆಗಳುಳ್ಳ ಆಶಿಶುವನ್ನು ತಾಯಿಯಾದ ಯಶೋದಾದೇವಿ ಮೊಲೆಯುಣಿಸಿ ಮಂಚದಲ್ಲಿ ಮಲಗಿಸಿದಳು. ||೩೧|| ಅಷ್ಟರೊಳಗೆ ನಂದಗೋಪನೇ ಮೊದಲಾದಗೋಪಾಲಕರು ಮಥುರಾಪುರದಿಂದ ಗೋಕುಲಕ್ಕೆಬಂದು ಪೂತನೆಯ ದೇಹವನ್ನು ಕಂಡುಅತ್ಯಾಶ್ಚರ್ಯಪಟ್ಟರು.||೩೨||ಅದೆಂತೆನೆ- ವಸುದೇವನು ಯಾವಅರ್ಥವಂಹೇಳಿದನೋ ಅದೇಅರ್ಥವು ಸತ್ಯವಾಯಿತು. ಉತ್ಪಾತವುಹಾಗೆಯೇ ಕಾಣಲ್ಪಟ್ಟದ್ದರಿಂದ ಆವಸುದೇವನು ತಪಃಪ್ರಭಾವವುಳ್ಳಋಷಿಯೋ ಅಥವಾಮಹಾಜ್ಞಾನಿಯೋ ಆಗಿರುವನು. ನಿಶ್ಚಯವು ||೩೩||ಹೀಗೆಂದುಕೊಂಡು ಆಮೇಲೆ ವ್ರಜದಲ್ಲಿರುವ ಗೋಪಾಲಕರುಆಪೂತನೆಯದೇಹವಂ ಕೊ

ಛಿತ್ತ್ವಾತತ್ರವ್ರಜೌಕಸಃ | ದೂರೇಕ್ಷಿಪ್ತ್ವಾವಯವಶೋದದಹುಃಕಾಷ್ಠವೇಷ್ಟಿತಮ್ ||೩೪|| ದಹ್ಯಮಾನ
ಸ್ಯದೇಹಸ್ಯಧೂಮಶ್ಚಾಗರುಸೌರಭಃ | ಉತ್ಥಿತಃಕೃಷ್ಣನಿರ್ಭುಕ್ತಸ್ಸಪದ್ಯಾಹತಪಾಪ್ಮನಃ ||೩೫|| ಪೂತ
ನಾಲೋಕಬಾಲಘ್ನೀರಾಕ್ಷಸೀರುಧಿರಾಶನಾ | ಜಿಘಾಂಸಯಾಪಿಹರಯೇಸ್ತನನ್ದತ್ತ್ವಾಪಸದ್ಗತಿಮ್ ||೩೬|| ಕಿ
ಮ್ಪುನಃಶ್ರದ್ಧಯಾಭಕ್ತ್ಯಾಕೃಷ್ಣಾಯಪರಮಾತ್ಮನೇ |ಯಚ್ಛನ್ಪ್ರಿಯತರಙ್ಕಿನ್ನುರಕ್ತಾಸ್ತನ್ಮಾತರೋ
ಯಥಾ ||೩೭||ಪದ್ಭ್ಯಾಮ್ಭಕ್ತಹೃದಿಸ್ಥಾಭ್ಯಾಂವನ್ದ್ಯಾಭ್ಯಾಂಲೋಕವನ್ದಿತೈಃ | ಅಙ್ಗಂಯಸ್ಯಾಸ್ಸಮಾ
ಕ್ರಮ್ಯಭಗವಾನಪಿಬತ್ಸ್ತನಮ್ ||೩೮|| ಯಾತುಧಾನ್ಯಪಿಸಾಸ್ವರ್ಗಮವಾಪಜನನೀಗತಿಮ್ | ಕೃಷ್ಣ

---

ಅವಯವಶಃ-ಒಂದೊಂದಂಗವಾಗಿವಿಂಗಡಿಸಿ, ಕಾಷ್ಠವೇಷ್ಟಿತಂ-ಸೌದೆಯಿಂದಮುಚ್ಚಲ್ಪಟ್ಟದ್ದನ್ನು, ದದಹುಃ- ಸುಟ್ಟರು ||೩೪||ದೇಹ
ಸ್ಯ-ಪೂತನಾಶರೀರವು, ದಹ್ಯಮಾನಸ್ಯಸತಃ-ಸುಡಲ್ಪಡುವುದಾಗುತ್ತಿರಲು, ಕೃಷ್ಣನಿರ್ಭುಕ್ತೇಃ-ಕೃಷ್ಣನುಮೊಲೆಯುಂಡು ಬಿಟ್ಟದ್ದರ
ದೆಸೆಯಿಂದ, ಸಪದಿ-ಆಗಲೇ, ಆಹತಪಾಪ್ಮನಃ-ಪರಿಹರಿಸಲ್ಪಟ್ಟಪಾಪವುಳ್ಳದ್ದಾದ್ದರಿಂದಲೇ, ಅಗರುಸೌರಭಃ-ಅಗಿಲುಚಕ್ಕೆಯಹಾಗೆ,ಪ
ರಿಮಳವುಳ್ಳ, ಧೂಮಃ-ಹೊಗೆಯು, ಉತ್ಥಿತಃ-ಎದ್ದದ್ದಾಯಿತು ||೩೫|| ಲೋಕಬಾಲಘ್ನೀ-ಜನರಮಕ್ಕಳನ್ನು ಕೊಲ್ಲುವಳಾಗಿಯೂ,ರಾ
ಕ್ಷಸೀ-ದೈತ್ಯಳಾಗಿಯೂ, ರುಧಿರಾಶನಾ-ರಕ್ತವೇ ಆಹಾರವುಳ್ಳವಳೂ, ಆದ, ಪೂತನಾ-ಪೂತನೆಯು, ಜಿಘಾಂಸಯಾಪಿ-ಕೊಲ್ಲಬೇಕೆಂ
ಬಯಿಚ್ಛೆಯಿಂದಲಾದರೂಕೂಡ, ಹರಯೇ-ವಿಷ್ಣುವಿಗೋಸ್ಕರ, ಸ್ತನಂದತ್ತ್ವಾ- ಮೊಲೆಯನ್ನುಕೊಟ್ಟು, ಸದ್ಗತಿಂ- ಉತ್ತಮಪದವಿ
ಯನ್ನು, ಆಪ-ಹೊಂದಿದಳು. ||೩೬|| ಶ್ರದ್ಧಯಾ-ವಿಶ್ವಾಸದಿಂದಲೂ, ಭಕ್ತ್ಯಾ-ಪ್ರೀತಿಯಿಂದಲೂ, ಪರಮಾತ್ಮನೇ-ಪುರುಷೋತ್ತಮ
ನಾದ, ಕೃಷ್ಣಾಯ-ವಿಷ್ಣುವಿಗೋಸ್ಕರ, ಪ್ರಿಯತರಂ-ಬಹಳಯಿಷ್ಟವಾದವಸ್ತುವನ್ನು, ಯಚ್ಛನ್-ಕೊಟ್ಟಪುರುಷನು, ಕಿಂಪುನಃ-
ಏನುಹೇಳತಕ್ಕದ್ದು? ರಕ್ತಾಃ-ಕೃಷ್ಣನಲ್ಲಿ ಆಸಕ್ತರಾದವರು, ತನ್ಮಾತರೋಯಥಾ-ಆಕೃಷ್ಣನತಾಯಿಯರಾದ ದೇವಕಿ ಯಶೋದೆ ರೋ
ಹಿಣಿಯರುಹೇಗೋಹಾಗೆ, ಕಿನ್ನು-ಏನುಹೇಳತಕ್ಕದ್ದು? (ದುಷ್ಟಳಾದಪೂತನೆಯೂಕೂಡ ಸದ್ಗತಿಯನ್ನೊಂದಿದಳು ಎಂಬಲ್ಲಿ ಭಕ್ತಿಶ್ರ
ದ್ಧಾನುರಾಗಯುಕ್ತರು ಅತಿಶಯಸದ್ಗತಿಯಂಪಡೆಯುವುದು ಏನಾಶ್ಚರ್ಯವು;) ||೩೭||ಭಕ್ತಹೃದಿಸ್ಥಾಭ್ಯಾಂ-ಭಕ್ತರಮನಸ್ಸಿನಲ್ಲಿಧ್ಯಾ
ನಿಸಲ್ಪಡುತ್ತಲಿರುವಂತಾ; ಲೋಕವಂದಿತೈಃ ಜನಗಳಿಂದನಮಸ್ಕರಿಸಲ್ಪಟ್ಟ ರಾಜರಿಂದಲೂ ದೇವತೆಗಳಿಂದಲೂ ಕೂಡ, ವಂದ್ಯಾ
ಭ್ಯಾಂ-ನಮಸ್ಕರಿಸಲ್ಪಡತಕ್ಕಂತಾ; ಪದ್ಭ್ಯಾಂ-ಪಾದಗಳಿಂದ, ಯಸ್ಯಾಃ- ಯಾವಪೂತನೆಯ, ಅಂಗಂ- ದೇಹವನ್ನು, ಸಮಾಕ್ರ
ಮ್ಯ-ತುಳಿದು, ಭಗವಾನ್-ಷಡ್ಗುಣೈಶ್ವರ್ಯಮುಳ್ಳಕೃಷ್ಣನು, ಸ್ತನಂ-ಮೊಲೆಯನ್ನು, ಅಪಿಬತ್-ಕುಡಿದನೋ ||೩೮|| ಸಾ- ಆಪೂತ
ನೆಯು, ಯಾತುಧಾನ್ಯಪಿ-ರಕ್ಕಸಿಯಾದರೂಕೂಡ, ಜನನೀಗತಿಂ-ತಾಯಿಯರುಹೊಂದತಕ್ಕ, ಸ್ವರ್ಗಂ - ಪುಣ್ಯಲೋಕವನ್ನು, ಅ
ವಾಪ-ಸೇರಿದಳು. ಕೃಷ್ಣಭುಕ್ತಸ್ತನಕ್ಷೀರಾಃ-ಕೃಷ್ಣನಿಂದಉಣ್ಣಲ್ಪಟ್ಟಮೊಲೆಹಾಲುಳ್ಳ, ಗಾವಃ ಆಕಳೂ, ಅನುಮಾತರಃ-ಸಾಕುವದಾದಿ

---

ದಳಿಗಳಿಂದ ಅಂಗಗಳು ಬೇರೆಬೇರೆ ಕತ್ತರಿಸಿ ದೂರಕ್ಕೆ ತೆಗೆದುಕೊಂಡುಹೋಗಿ ಸೌದೆಹಾಕಿ ಸುಟ್ಟರು. ||೩೪|| ಸು
ಡಲ್ಪಡುವ ಪೂತನೆಯದೇಹವು ಶ್ರೀಕೃಷ್ಣನುಸ್ತನ್ಯಪಾನಗೆಯ್ದಾಗಲೇ ಪಾಪವಿಲ್ಲದೆ ಪರಿಶುದ್ಧವಾದುದರಿಂದ ಅ
ದರಗಂಧವು ಅಗರು ಚಕ್ಕೆಗಳುಸುಡಲ್ಪಟ್ಟಂತೆ ಪರಿಮಳಿಸುತ ಹೊರಟಿತು. ||೩೫||ಲೋಕದಲ್ಲಿರುವ ಬಾಲಕರನ್ನು
ಸುಹರಿಸಿ ಅವರ ರಕ್ತವೇ ಆಹಾರವಾಗಿಕೊಳ್ಳುವ ರಾಕ್ಷಸಿಯಾದ ಪೂತನೆಯು ಶ್ರೀಕೃಷ್ಣನನ್ನು ಕೊಲ್ಲಬೇಕೆಂ
ಬಹಾರೈಕೆಯಿಂದ ದ್ರೋಹಬುದ್ಧಿಯಾಗಿಸ್ತನ್ಯವಂ ಕೊಟ್ಟವಳಾದರೂ ಉತ್ತಮಗತಿಯನ್ನೇ ಪಡೆದಳು. ||೩೬||
ಹೀಗಿರುವಲ್ಲಿ ವಿಶ್ವಾಸಯುಕ್ತನಾಗಿ ಭಕ್ತಿಯಿಂದ ಪರಮಾತ್ಮನಾದ ಶ್ರೀಕೃಷ್ಣನಿಗೆ ಪ್ರಿಯವಸ್ತುವ ಸಮರ್ಪಿ
ಸುವ ಪುರುಷನು ಕೃಷ್ಣನಲ್ಲಿ ಸ್ನೇಹವುಳ್ಳ ತಾಯಿಯರಹಾಗೆ ಸದ್ಗತಿಯನ್ನು ಹೊಂದುವನೆಂದು ಹೇಳತಕ್ಕದ್ದೇನಿ
ದೆ? ||೩೭|| ಅದೆಂತೆನೆ- ಭಕ್ತರ ಹೃದಯಕಮಲದಲ್ಲಿರುವ ಲೋಕವಂದಿತರಾದ ಬ್ರಹ್ಮಾದಿದೇವತೆಗಳಿಂದ ನಮಸ್ಕರಿ
ಸಲ್ಪಡುವ ಪಾದಗಳಿಂದ ಯಾವಪೂತನೆಯ ಅಂಗವನ್ನು ಆಕ್ರಮಿಸಿ ಭಗವಂತನಾದಕೃಷ್ಣನು ಅವಳ ಮೊಲೆ
ಯುಂಡನೋ, ||೩೮|| ಆಪೂತನೆಯು ರಾಕ್ಷಸಿಯಾದರೂ ಆಕೃಷ್ಣನತಾಯಿಗೆ ಯೋಗ್ಯವಾದ ಸದ್ಗತಿಯಂ ಪ
ಡೆದಳು. ಆದುದರಿಂದ ಶ್ರೀಕೃಷ್ಣನಿಂದ ಕುಡಿಯಲ್ಪಟ್ಟ ಮೊಲೆಹಾಲುಳ್ಳ ಗೋವುಗಳುಕೂಡ ಮುಕ್ತಿಯಂ ಪಡೆ

ಬುಕ್ತಸ್ತನಕ್ಷೀರಾಃ ಕಿಮು ಗಾವೋಽನುಮಾತರಃ ॥೩೯॥ ಪಯಾಂಸಿ ಯಾಸಾಮಪಿಬತ್ಪುತ್ರಸ್ನೇಹಸ್ನುತಾನ್ಯ
ಲಮ್ । ಭಗವಾನ್ದೇವಕೀಪುತ್ರಃ ಕೈವಲ್ಯಾದ್ಯಖಿಲಾರ್ಥದಃ ॥೪೦॥ ತಾಸಾಮವಿರತಂ ಕೃಷ್ಣೇ ಕುರ್ವತೀ
ನಾಂ ಸುತೇಕ್ಷಣಮ್ । ನ ಪುನಃ ಕಲ್ಪತೇ ರಾಜನ್ ಸಂಸಾರೋಽಜ್ಞಾನಸಮ್ಭವಃ ॥೪೧॥ ಕಟಧೂಮಸ್ಯ ಸೌರಭ್ಯ
ಮವಘ್ರಾಯ ವ್ರಜೌಕಸಃ । ಕಿಮಿದಂ ಕುತ ಏವೇತಿ ವದನ್ತೋ ವ್ರಜಮಾಯಯುಃ ॥೪೨॥ ತೇ ತತ್ರ ವರ್ಣಿತಂ ಗೋಪೈಃ
ಪೂತನಾಗಮನಾದಿಕಮ್ । ಶ್ರುತ್ವಾ ತನ್ನಿಧನಂ ಸ್ವಸ್ತಿ ಶಿಶೋಶ್ಚಾಸಂಸ್ತು ವಿಸ್ಮಿತಾಃ ॥೪೩॥ ನನ್ದಸ್ಸ್ವಪುತ್ರಮಾ
ದಾಯ ಪ್ರೇತ್ಯಾಗತಮುದಾರಧೀಃ । ಮೂರ್ಧ್ನ್ಯುಪಾಘ್ರಾಯ ಪರಮಾಂ ಮುದಂ ಲೇಭೇ ಕುರೂದ್ವಹ ॥೪೪॥

---

ಯರು, ಕಿಮು-(ಸ್ವರ್ಗವಂ ಪಡೆದರೆಂದು) ಏನು ಹೇಳತಕ್ಕದ್ದು ॥೩೯॥ ಕೈವಲ್ಯಾದ್ಯಖಿಲಾರ್ಥದಃ-ಮೋಕ್ಷವೇ ಮೊದಲಾದ ಸಕಲ ಪುರುಷಾರ್ಥಗಳನ್ನು ಕೊಡುವ, ಭಗವಾನ್-ಭಗವಂತನಾದ, ದೇವಕೀಪುತ್ರಃ-ದೇವಕಿಯ ಮಗನು, ಪುತ್ರಸ್ನೇಹಸ್ನುತಾನಿ-ಮಗನೆಂಬ ಅನುರಾಗದಿಂದ ಸೋಗಿದಂತಾ, ಯಾಸಾಂ ಪಯಾಂಸಿ-ಯಾವ ಸ್ತ್ರೀಯರ ಮೊಲೆಹಾಲನ್ನು, ಅಥವಾ ಯಾವ ಆಕಳ ಹಾಲನ್ನು, ಅಲಂ-ಅಧಿಕವಾಗಿ, ಅಪಿಬತ್-ಕುಡಿದನೋ ॥೪೦॥ ರಾಜನ್-ಅರಸಾದ ಪರೀಕ್ಷಿತನೇ! ಕೃಷ್ಣೇ-ಕೃಷ್ಣನಲ್ಲಿ, ಸುತೇಕ್ಷಣಂ-ಮಗನೆಂಬ ಬುದ್ಧಿಯನ್ನು, (ಮಗನಂ ಕಂಡಂತೆ ನೋಡುವಿಕೆಯನ್ನು) ಅವಿರತಂ-ನಿರಂತರವೂ, ಕುರ್ವಂತೀನಾಂ-ಮಾಡುತಲಿರುವ, ತಾಸಾಂ-ಆ ಸ್ತ್ರೀಯರಿಗೆ, (ಗೋವುಗಳಿಗೂ) ಅಜ್ಞಾನಸಂಭವಃ-ಅವಿವೇಕದಿಂದುಂಟಾದ (ಸ್ವರೂಪಾಜ್ಞಾನದಿಂ ಹುಟ್ಟಿದ) ಸಂಸಾರಃ-ಜನನಮರಣಗತಿಯು, ಪುನಃ-ಮರಳಿಯೂ, ನ ಕಲ್ಪತೇ-ಆಗುವುದಿಲ್ಲ. ॥೪೧॥ ವ್ರಜೌಕಸಃ-ಗೋಕುಲವಾಸಿಗಳಾದ ಗೊಲ್ಲರು, ಕಟಧೂಮಸ್ಯ-ಹೆಣದ ಹೊಗೆಯ, ಸೌರಭ್ಯಂ-ಸುಗಂಧವನ್ನು, ಅವಘ್ರಾಯ-ಮೂಸಿನೋಡಿ, ಕಿಮಿದಂ-ಏನಿದು; ಕುತ ಏವ-ಎಲ್ಲಿಂದ ಬಂತು? ಇತಿ-ಹೀಗೆ, ವದಂತಃ-ಹೇಳಿಕೊಳ್ಳುವವರಾಗಿ, ವ್ರಜಂ-ಗೋಕುಲವಂ ಕುರಿತು, ಆಯಯುಃ-ಬಂದರು ॥೪೨॥ ತೇ-ಆ ನಂದಾದಿಗಳು, ತತ್ರ-ಆ ಗೋಕುಲದಲ್ಲಿ, ಗೋಪೈಃ-ದನಗಳಂ ಕಾಯುವವರಿಂದ, ವರ್ಣಿತಂ-ಬಣ್ಣಿಸಲ್ಪಟ್ಟ, ಪೂತನಾಗಮನಾದಿಕಂ-ಪೂತನೆಯು ಬಂದದ್ದು ಮೊದಲಾದ್ದನ್ನೂ, ತನ್ನಿಧನಂ-ಅವಳ ಮರಣವನ್ನೂ, ಶಿಶೋಃ ಸ್ವಸ್ತಿ ಚ-ಮಗುವಿನ ಕ್ಷೇಮವನ್ನೂ, ಶ್ರುತ್ವಾ-ಕೇಳಿ, ಸುವಿಸ್ಮಿತಾಃ-ಬಹಳ ಅಚ್ಚರಿಗೊಂಡವರು, ಆಸನ್-ಆದರು ॥೪೩॥ ಕುರೂದ್ವಹ-ಪರೀಕ್ಷಿತನೇ! ಪ್ರೇತ್ಯ-ಪರಸ್ಥಲದಲ್ಲಿದ್ದು, ಆಗತಃ-ಬಂದ, ಉದಾರಧೀಃ-ಧಾರಾಳವಾದ ಬುದ್ಧಿಯುಳ್ಳ, ನಂದಃ ನಂದನು ಸ್ವಪುತ್ರಂ-ತನ್ನ ಮಗನನ್ನು, ಆದಾಯ-ಎತ್ತಿಕೊಂಡು, ಮೂರ್ಧ್ನಿ-ತಲೆಯಲ್ಲಿ, ಉಪಾಘ್ರಾಯ-ಮೂಸಿಕೊಂಡು, ಪರಮಾಂ ಮುದಂ-ಹೆಚ್ಚಿದ ಸಂತೋಷವನ್ನು (ಉತ್ತಮಾನಂದವನ್ನು) ಲೇಭೇ-ಪಡೆದನು ॥೪೪॥ ಯಃ-ಯಾವ ಪುರುಷನು, ಕೃಷ್ಣಸ್ಯ-ಕೃಷ್ಣ

---

ಯಾವನೆಂದು ಹೇಳತಕ್ಕದ್ದೇನು? ॥೩೯॥ ಮುಕ್ತಿಯೇ ಮೊದಲಾದ ಇಷ್ಟಾರ್ಥಗಳೆಲ್ಲವನ್ನೂ ಕೊಡುವ ದೇವಕೀಪುತ್ರನಾದ ಭಗವಂತನು ಪುತ್ರಸ್ನೇಹದಿಂದ ಉಕ್ಕಿ ಸುರಿಯುತ್ತಿರುವ ಗೋಪಸ್ತ್ರೀಯರ ಮತ್ತು ಗೋವುಗಳ ಮೊಲೆಹಾಲನ್ನು ಕುಡಿದದ್ದರಿಂದ ॥೪೦॥ ಎಲೈ, ಅರಸೇ! ನಿರಂತರದಲ್ಲಿಯೂ ಶ್ರೀಕೃಷ್ಣನಲ್ಲಿ ಪುತ್ರದೃಷ್ಟಿಯಂಗೆಯ್ವ ಆ ಗೋಪಸ್ತ್ರೀಯರಿಗೂ ಗೋವುಗಳಿಗೂ ಅಜ್ಞಾನದಿಂದುಂಟಾಗುವ ಸಂಸಾರವು ಪುನಃ ಉಂಟಾಗುವುದಿಲ್ಲವು. ॥೪೧॥ ಆಮೇಲೆ ಕಾಷ್ಠಗಳಲ್ಲಿ ದಹಿಸಲ್ಪಡುವ ಪೂತನೆಯ ಹೆಣದ ಹೊಗೆಯನ್ನು ಮೂಸಿನೋಡಿ ಈ ಪರಿಮಳವು ಎಲ್ಲಿ ಬಂದುದೆಂದು ನುಡಿಯುವವರಾಗಿ ಗೋಪಾಲಕರು ವ್ರಜವನ್ನು ಕುರಿತು ಬಂದರು. ॥೪೨॥ ಆಮೇಲೆ ನಂದಗೋಪನೇ ಮೊದಲಾದ ಗೋಪಾಲಕರು ಆ ಗೋಪರಿಂದ ನುಡಿಯಲ್ಪಟ್ಟ ವೃತ್ತಾಂತವನ್ನೂ, ಶಿಶುವಿನ ಕ್ಷೇಮವನ್ನೂ, ಆ ರಾಕ್ಷಸಿಯ ನಾಶವನ್ನೂ, ಕೇಳಿ ಆಶ್ಚರ್ಯಗೊಂಡವರಾದರು. ॥೪೩॥ ಎಲೈ, ಕುರುವಂಶೋತ್ಪನ್ನನಾದ ಅರಸೇ! ಪರಸ್ಥಲವಾಸಂಗೆಯ್ದು ಬಂದ ಧಾರಾಳವಾದ ಮನಸ್ಸುಳ್ಳ ನಂದಗೋಪನು ತನ್ನ ಮಗನನ್ನು ಎತ್ತಿಕೊಂಡು ಸ್ನೇಹದಿಂದ ತಲೆಯನ್ನು ಮೂಸಿನೋಡಿ ಮಹಾಸಂತೋಷವನೈದಿದನು. ॥೪೪॥ ಯಾವ ಪುರುಷನು ಆಶ್ಚರ್ಯ



ಮಗನನ್ನು ಎತ್ತಿಕೊಂಡಿರುವ ನಂದನು

ಯಏತತ್ಪೂತನಾಮೋಕ್ಷಂಕೃಷ್ಣಸ್ಯಾದ್ಭುತಮಾರ್ಭಕಮ್ । ಶೃಣುಯಾಚ್ಛ್ರದ್ಧಯಾಮರ್ತ್ಯೋಗೋವಿಂದೇ
ಲಭತೇರತಿಮ್ ॥ ೪೪ ॥ ........................ ........... ........................ .. .........

ಇತಿಶ್ರೀಮದ್ಭಾಗವತೆ ದಶಮಸ್ಕಂಧೆ ಷಷ್ಠೋಽಧ್ಯಾಯಃ

---

ನ, ಅರ್ಭಕಂ-ಶಿಶುತ್ವಕೃತ್ಯವಾದ, ಅದ್ಭುತಂ-ಆಶ್ಚರ್ಯಕರವಾದ, ಏತತ್-ಈ, ಪೂತನಾಮೋಕ್ಷಂ- ಪೂತನೆಯಮೋಕ್ಷಕಥೆಯ ನ್ನು, ಶೃಣುಯಾತ್-ಕೇಳಿ, ಶ್ರದ್ಧಯಾ-ವಿಶ್ವಾಸದೊಡನೆ, (ವರ್ತತೇ)-ಇರುವನೋ, ಸಮರ್ತ್ಯಃ- ಆಮನುಷ್ಯನು, ಗೋವಿಂದೇ-ಕೃಷ್ಣ ನಲ್ಲಿ, ರತಿಂ- ಅವ್ಯಭಿಚರಿತಾನುರಾಗವನ್ನು, ಲಭತೇ- ಸಂಪಾದಿಸಿಕೊಳ್ಳುವನು (ಅಥವಾಶೃಣುಯಾತ್-ಶೃಣುಯಾತ್- ಕೇಳುವನೋ)॥೪೪॥

ಇತಿ ಶ್ರೀಮದ್ಭಾಗವತ ಪ್ರತಿಶಬ್ದಾರ್ಥಬೋಧಿನ್ಯಾಂ ದಶಮಸ್ಕಂಧೇಷಷ್ಠೋಽಧ್ಯಾಯಃ

---

ಕರವಾದಶ್ರೀಕೃಷ್ಣನ ಬಾಲಚರಿತೆವೆನಿಸುವ ಪೂತನೆಯ ಮುಕ್ತಿಯನ್ನು ವಿಶ್ವಾಸದಿಂದ ಕೇಳಿದವನಾಗುವನೋ ಆಪುರುಷನು ಗೋವಿಂದನಲ್ಲಿ ಭಕ್ತಿಯಂಪಡೆಯುವನು. ... ... ... .. ॥೪೪॥

ಇಂತು ಶುಕಮುನಿಯು ಪರೀಕ್ಷಿದ್ರಾಯನಿಗೆ ನಿರೂಪಿಸಿದನೆಂದು ಸೂತಪೌರಾಣಿಕನು ನೈಮಿಶಾರಣ್ಯವಾಸಿ ಗಳಾದ ಶೌನಕಾದಿಮಹರ್ಷಿಗಳಿಗೆ ಹೇಳಿದನೆಂಬಲ್ಲಿಗೆ- ಶ್ರೀಮನ್ಮಹೀಶೂರಪುರವರಾಧೀಶ ಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜ ವಿರಚಿತಮಪ್ಪ ಶ್ರೀಭಾಗವತದ" ಶ್ರೀಕೃಷ್ಣರಾಜವಾಣೀವಿಲಾಸವ್ರು ಎಂಬಕರ್ಣಾಟಭಾಷಾ ವ್ಯಾಖ್ಯಾನದಲ್ಲಿ ದಶಮಸ್ಕಂಧದೊಳು ಷಷ್ಠಾಧ್ಯಾಯವು ಸಂಪೂರ್ಣವಾದುದು.......................... *

ಮಂಗಳಮಸ್ತು



ವಿಷ್ಣುರಾತಃ ‖ ಯೇನಯೇನಾವತಾರೇಣಭಗವಾನ್ ಹರಿರೀಶ್ವರಃ । ಕರೋತಿಕರ್ಣರಂಸ್ಯಾನಿಮನೋಜ್ಞಾನಿಚ ನಃಪ್ರಭೋ ‖ ೧ ‖ ಯಚ್ಛೃಣ್ವತೋಽಪೈತ್ಯರತಿರ್ವಿತೃಷ್ಣಾಸತ್ತ್ವಂಚಶುಧ್ಯತ್ಯಚಿರೇಣಪುಂಸಃ । ಭಕ್ತಿರ್ಹರೌತತ್ಪುರುಷೇಷುಸಖ್ಯಂತದೇವಹಾರಂವದಮನ್ಯಸೇಚೇತ್ ‖ ೨ ‖ ಅಥಾನ್ಯದಪಿಕೃಷ್ಣಸ್ಯತೋಕಾಚರಿತಮದ್ಭುತಮ್ । ಮಾನುಷಂಲೋಕಮಾಸಾದ್ಯತಜ್ಜಾತಿಮನುರುನ್ಧತಃ ‖ ೩ ‖ ಶ್ರೀಶುಕಃ ‖ ಕದಾಚಿದೌತ್ಥಾ

---

॥ ಏನೆಯ ಅಧ್ಯಾಯದ ಪ್ರತಿಪದಟೀಕೆ ॥

[ಪರೀಕ್ಷಿತ್ಪ್ರಶ್ನವು.] ಪ್ರಭೋ-ಸಮರ್ಥನಾದಶುಕನೇ! ಭಗವಾನ್-ಭಗವಂತನಾದ, ಈಶ್ವರಃ- ಒಡೆಯನಾದ, ಹರಿಃ-ವಿಷ್ಣುವು, ಯೇನಯೇನ-ಯಾವಯಾವ, ಅವತಾರೇಣ-ಜನ್ಮದಿಂದ, ನಃ-ನಮಗೆ, ಕರ್ಣರಂಸ್ಯಾನಿ- ಕಿವಿಗಳುಸಂತೋಷಿಸತಕ್ಕವಾಗಿಯೂ, ಮನೋಜ್ಞಾನಿಚ-ಮನೋಹರಗಳಾಗಿಯೂಇರುವಕೆಲಸಗಳನ್ನು, ಕರೋತಿ-ಮಾಡುತ್ತಿರುವನೋ ॥೧॥ಯತ್-ಯಾವಅವತಾರವ ಚರಿತ್ರವನ್ನು, ಶೃಣ್ವತಃ-ಕೇಳುತ್ತಿರುವ, ಪುಂಸಃ-ಪುರುಷನಿಗೆ, ಅರತಿಃ-ಅಕ್ಕರೆಯಿಲ್ಲದಿರುವಿಕೆಯೂ, ವಿತೃಷ್ಣಾ-ವಿವಿಧವಾದಅತ್ಯಾಶೆಯೂ, ಅಪೈತಿ-ಬಿಟ್ಟುಹೋಗುವುದೋ, ಸತ್ವಂ-ಸಾತ್ವಿಕವಾದಅಂತಃಕರಣವು, ಅಚಿರೇಣ ಬೇಗನೆ, ವಿಶುಧ್ಯತಿ-ನಿರ್ಮಲವಾಗುವುದೋ, ಹರೌ-ವಿಷ್ಣುವಿನಲ್ಲಿ, ಭಕ್ತಿಃ-ಪ್ರೀತಿಯೂ, ತತ್ಪುರುಷೇಷು-ತತ್-ಆವಿಷ್ಣುವಿನ, ಪುರುಷೇಷು-ಆತ್ಮರಲ್ಲಿ( ಭಾಗವತರಲ್ಲಿ)ಸಖ್ಯಂಚ-ಸ್ನೇಹವೂ, (ಭವತಿ-ಉಂಟಾಗುವುದೋ)ಹಾರಂ-ರಮಣೀಯವಾದ, ತದೇವ-ಆಕೃಷ್ಣಚರಿತ್ರವನ್ನೇ, ಮನ್ಯಸೇಚೇತ್-(ನಾನುಕೇಳುವುದಕ್ಕೆಯೋಗ್ಯನೆಂದು)ತಿಳಿದಿರುವಿಯಾದರೆ, ವದ-ಹೇಳು ॥೨॥ ಅಥ-ಅನಂತರದಲ್ಲಿ, ಮಾನುಷಂ-ಮನುಷ್ಯಸಂಬಂಧವಾದ, ದೇಹಂ-ಶರೀರವನ್ನು, ಆಸಾದ್ಯ-ಸೇರಿ, ತಜ್ಜಾತಿಂ- ಆಮನುಷ್ಯಜಾತಿಯನ್ನು, ಅನುರುಂಧತಃ- ಅನುಕರಿಸುತ್ತಿರುವ, ಕೃಷ್ಣಸ್ಯ-ಕೃಷ್ಣನ, ಅದ್ಭುತಂ-ಆಶ್ಚರ್ಯಕರವಾದ, ಅನ್ಯತ್-ಇತರವಾದ, ತೋಕಾಚರಿತಮಪಿ-ಶಿಶುಚರಿತ್ರವನ್ನೂ ವದ-ಹೇಳು॥೩॥

---

ಶ್ರೀಧರೀಯಶ್ಲೋಕ ‖ ಉತ್ಕ್ಷಿಪ್ತಶ್ಶಕಟಂಪ್ರೋವಿಷ್ಣಿ ತೃಣಾವರ್ತಮಧಿಕ್ಷಿಪನ್ ।ದರ್ಶಯನ್ವಿಶ್ವಮಾಸ್ಯೇಚ ಕೃಷ್ಣಃಕ್ರೀಡತಿಸಪ್ತಮೆ ‖

ಟೀ ‖ ಏಳನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ಬಂಡಿಯನ್ನು ಹಾರಿಸಿದವನಾಗಿ, ಆಕಾಶದಲ್ಲಿ ತೃಣಾವರ್ತನೆಂಬ ಅಸುರನನ್ನು ಕೆಡಹಿದವನಾಗಿ, ಯಶೋದೆಗೆ ತನ್ನಬಾಯಿಯಲ್ಲಿ ಪ್ರಪಂಚವನ್ನು ತೋರಿಸಿದವನಾಗಿ, ಕ್ರೀಡಿಸಿದನೆಂಬ ಕಥೆಯು ಹೇಳಲ್ಪಡುತ್ತೆ‖ ಪೂರ್ವಾಧ್ಯಾಯದಲ್ಲಿ ಶ್ರೀಶುಕಮುನಿಯು ಪರೀಕ್ಷಿದ್ರಾಯನುಕುರಿತು ಪೂತನೆಯೆಂಬರಾಕ್ಷಸಿಯು ಯಶೋದಾದೇವಿಯ ಶಿಶುವಿಗೆ ನಂಜಿನ ಮೊಲೆಯನ್ನೂಡಿಸಲುಬಂದು ತಾನೇನಾಶನವನೆಯ್ದಿದಳೆಂಬ ವೃತ್ತಾಂತವಂ ನಿರೂಪಿಸಲು' ಪರೀಕ್ಷಿದ್ರಾಯನು ಆಶ್ರೀಕೃಷ್ಣನ ಕಥೆಯಂಕೇಳಿ ಆನಂದಭಕ್ತಿಭರಿತನಾಗಿ ಪುನಶ್ಚ ಶ್ರೀಕೃಷ್ಣನ ಬಾಲಚರಿತ್ರಮಂ ಕೇಳಲಿಚ್ಛೆಯುಳ್ಳವನಾಗಿ ಪ್ರಶ್ನೆಗೆಯ್ದನೆಂತೆನೆ-

ಎಲೈ, ಸಮರ್ಥನಾದ ಶ್ರೀಶುಕಾಚಾರ್ಯನೆ, ಭಗವಂತನಾಗಿಯೂ ಪರಮೇಶ್ವರನಾಗಿಯೂ ಇರುವ ಶ್ರೀಹರಿಯು ಮತ್ಸ್ಯಾವತಾರವೊದಲಾದಯಾವಯಾವ ಅವತಾರಂಗಳಿಂದ ಮನೋಹರಂಗಳಾದ ಯಾವಯಾವ ಚರಿತ್ರಗಳಂ ಮಾಡಿದನೋ ಆಯಾಚರಿತ್ರಗಳು ಕರ್ಣಂಗಳಿಗೆ ಸುಖಾವಹಂಗಳು, ಮನಸ್ಸಿಗೆಪ್ರೀತಿಕರಂಗಳೂಆಗುವವು.‖೧‖ಅದಲ್ಲದೆ ಯಾವಚರಿತ್ರಗಳಂ ಶ್ರವಣಂಗೆಯ್ವ ಪುರುಷಮಾತ್ರನಿಗೆ ಮನಸ್ಸಿನ ಬಳಲಿಕೆಗಳು, ಅದಕ್ಕೆ ಕಾರಣವಾದ ನಾನಾರೂಪವಾದ ಅಭಿಲಾಷವು ಶಾಂತವಾಗುವುದೋ ಮತ್ತು ಶೀಘ್ರದಲ್ಲಿ ಚಿತ್ತ ಶುದ್ಧಿಯುಂಟಾಗಿ ಶ್ರೀಹರಿ ಭಕ್ತಿಯೂ ಹರಿದಾಸರಮಿತ್ರತ್ವವೂ ಉಂಟಾಗುವುದೋ' ಆಚರಿತ್ರಂಗಳನ್ನು ನೀನು ನನ್ನಲ್ಲಿ ಅನುಗ್ರಹಂಗೆಯ್ವವನಾದರೆ ನಿರೂಪಿಸು. ‖ ೨ ‖ ಮನುಷ್ಯಾವತಾರಂಗೆಯ್ದು ಮನುಷ್ಯಜಾತಿಯ ನಟನೆಯನ್ನ ಅನುವರ್ತಿಸುವಶ್ರೀಕೃಷ್ಣದೇವನ ಆಶ್ಚರ್ಯಕರಂಗಳಾದ ಮಿಕ್ಕಾದಬಾಲ ಚರಿತ್ರಗಳನ್ನು ನಿರೂಪಿಸೆಂದು ನುಡಿದ ಪರೀಕ್ಷಿದ್ರಾಯನ ವಾಕ್ಯಮಂಕೇಳಿ ಶ್ರೀಶುಕಾಚಾರ್ಯನು ವಿವರಿಸುವನವೆಂತನೆ. ‖೩‖ ಎಲೈ, ಪರೀಕ್ಷಿದ್ರಾಯನೇ! ಒಂದಾನೊಂದು

ನಿಕಕೌತುಕಾಪ್ಲವೇಜನ್ಮರ್ಕ್ಷಯೋಗೇಸಮವೇತಯೋಷಿತಾಮ್ | ವಾದಿತ್ರಗೀತದ್ವಿಜಮಂತ್ರವಾಚನೈಶ್ಚ ಕಾರಸೂನೋರಭಿಷೇಚನಂಸತೀ ||೪|| ನಂದಸ್ಯಪತ್ನೀಕೃತಮಜ್ಜನಾದಿಕಂವಿಪ್ರೈಃಕೃತಸ್ವಸ್ತ್ಯಯನಂ ಸುಪೂಜಿತೈಃ | ಅನ್ನಾದಿವಾಸಸ್ಸ್ರಗಭೀಷ್ಟಧೇನುಭಿಸ್ಸಂಜಾತನಿದ್ರಾಕ್ಷಮಶೀಶಯಚ್ಛನೈಃ||೫|| ಔ ತ್ಥಾನಿಕೌತ್ಸುಕ್ಯಮನಾಮನಸ್ವಿನೀಸಮಾಗತಾನ್ಪೂಜಯತೀವ್ರಜೌಕಸಃ | ನೈವಾಶೃಣೋದ್ವೈರುದಿತಂ

ಶಕಟಭಂಜನಸ್ಟ್ಯಃ

---

(ಶುಕವಚನವು)ಕದಾಚಿತ್-ಒಂದಾನೊಂದುಕಾಲದಲ್ಲಿ, ಔತ್ಥಾನಿಕಕೌತುಕಾಪ್ಲವೇ-ಔತ್ಥಾನಿಕ- ಕೃಷ್ಣನ ಎದ್ದುನಿಂತನೆಂಬನಿಮಿತ್ತದಿಂದಾದ, ಕೌತುಕಾಪ್ಲವೇ ಉತ್ಸವಾಭಿಷೇಕದಿನದಲ್ಲಿ, ಜನ್ಮರ್ಕ್ಷಯೋಗೇಸತಿ-ಕೃಷ್ಣನುಹುಟ್ಟಿದರೋಹಿಣೀನಕ್ಷತ್ರದಸೇರಿಕೆಯುಂಟಾಗುತ್ತಿರಲು, ಸಮವೇತಯೋಷಿತಾಂ-ಸೇರಿದಸ್ತ್ರೀಯರಮಧ್ಯದಲ್ಲಿ, ಸತೀ-ಪತಿವ್ರತೆಯಾದಯಶೋದೆಯು, ವಾದಿತ್ರಗೀತದ್ವಿಜಮಂತ್ರವಾಚನೈಃ-ವಾದಿತ್ರ-ವಾದ್ಯಗಳಿಂದಲೂ, ಗೀತ-ಹಾಡುಗಳಿಂದಲೂ, ದ್ವಿಜಮಂತ್ರವಾಚನೈಃ- ಬ್ರಾಹ್ಮಣರುಮಂತ್ರಗಳಂಪಠಿಸುವುದರಿಂದಲೂ, ಸೂನೋಃ-ಮಗನಾದಕೃಷ್ಣನಿಗೆ, ಅಭಿಷೇಚನಂ-ನೀರೆರೆಯುವಿಕೆಯನ್ನು, ಚಕಾರ,ಮಾಡಿದಳು ||೪|| ನಂದಸ್ಯ-ನಂದಗೋಪನ, ಪತ್ನೀ-ಮಡದಿಯು, ಕೃತಮಜ್ಜನಾದಿಕಂ-ಮಾಡಲ್ಪಟ್ಟಮಂಗಳಸ್ನಾನಾದಿಗಳುಳ್ಳಂತಹಾಲೂ, ಅನ್ನಾದಿವಾಸಸ್ಸ್ರಗಭೀಷ್ಟಧೇನುಭಿಃ-ಅನ್ನಾದಿ-ಅನ್ನವೇಮೊದಲಾದಪದಾರ್ಥಗಳಿಂದಲೂ, ವಾಸಸ್-ವಸ್ತ್ರಗಳಿಂದಲೂ, ಸ್ರಕ್-ಪುಷ್ಪಹಾರಗಳಿಂದಲೂ, ಅಭೀಷ್ಟ-ಬೇಕಾದ, ಧೇನುಭಿಃ-ಕರೆಯುವಹಸುಗಳಿಂದಲೂ, ಸುಪೂಜಿತೈಃ-ಚನ್ನಾಗಿಅರ್ಚಿಸಲ್ಪಟ್ಟ, ವಿಪ್ರೈಃ- ಬ್ರಾಹ್ಮಣರಿಂದ, ಕೃತಸ್ವಸ್ತ್ಯಯನಂ-ಕೃತ-ಮಾಡಲ್ಪಟ್ಟ, ಸ್ವಸ್ತ್ಯಯನಂ-ಕ್ಷೇಮಮಾರ್ಗವಾದಪುಣ್ಯಾಹವಾಚನವುಳ್ಳಂತಹಾಲೂ, ಸಂಜಾತನಿದ್ರಾಕ್ಷಂ-ಸಂಜಾತನಿದ್ರ-ಉಂಟಾದನಿದ್ರೆಯುಳ್ಳ, ಅಕ್ಷಂ-ಕಂಣುಗಳುಳ್ಳಶಿಶುವನ್ನು, ಶನೈಃ-ಮೆಲ್ಲಗೆ, ಅಶೀಶಯತ್-ಮಲಗಿಸಿದಳು||೫||ಔತ್ಥಾನಿಕೌತ್ಸುಕ್ಯಮನಾಃ-ಔತ್ಥಾನಿಕ-ಮಗನೆದ್ದುನಿಂತನೆಂಬನಿಮಿತ್ತದಿಂದಾದ, ಉತ್ಸವದಲ್ಲಿ, ಔತ್ಸುಕ್ಯ-ಅತ್ಯಾಸಕ್ತವಾದ, ಮನಾಃ- ಮನಸ್ಸುಳ್ಳವಳಾದ್ದರಿಂದಲೇ, ಮನಸ್ವಿನೀ-ಧಾರಾಳವಾದಮನಸ್ಸುಳ್ಳವಳೂ, ಸಮಾಗತಾನ್-ತನ್ನಮನೆಗೆಬಂದ, ವ್ರಜೌಕಸಃ ಗೋಕುಲವಾಸಿಗಳನ್ನು, ಪೂಜಯತೀ-ಉಪಚರಿಸುತ್ತಿರುವವಳೂಆದ, ಸಾ-ಆಯಶೋದೆಯು, ಸುತಸ್ಯ-ಮಗನ, ರುದಿತಂ-ಅಳುವನ್ನು, ನಾಶೃಣೋತ್-ಚನ್ನಾಗಿಕೇಳಲಿಲ್ಲವು. (ಬಂಡಿಯಕೆಳಭಾಗದಲ್ಲಿಉಯ್ಯಾಲೆಯೊಳಗೆ) ಸ್ತನಾರ್ಥೀ-ಮೊಲೆಯುಂಬಯಸಿದವನಾದ್ದರಿಂದಲೇ, ರುದನ್-

---

ದಲ್ಲಿ ಪತಿವ್ರತೆಯಾದ ಯಶೋದಾದೇವಿಯು ತನ್ನ ಶಿಶುವು ಮಗ್ಗುಲಾದುದರಿಂದ ಮಾಡತಕ್ಕ ಔತ್ಥಾನಿಕಮಹೋತ್ಸವದ ಮಂಗಳಾಭಿಷೇಕದಲ್ಲಿ ಆದಿವಸವೇ ಶ್ರೀಕೃಷ್ಣನ ಜನ್ಮನಕ್ಷತ್ರವಾದ ರೋಹಿಣಿಯೂ ಕೂಡಿದ್ದರಿಂದ ಆಮಹೋತ್ಸವದಲ್ಲಿಕೂಡಿದ ಗೋಪಸ್ತ್ರೀಯರುಮೊದಲಾದವರ ಮಧ್ಯದಲ್ಲಿವಾದ್ಯಗಳಿಂದಲೂ, ಗೀತಗಳಿಂದಲೂ ಬ್ರಾಹ್ಮಣರ ಮಂತ್ರಘೋಷಗಳಿಂದಲೂ, ಸ್ವಸ್ತಿವಾಚನಗಳಿಂದಲೂ, ಶುಭಕರವಾಗಿ ಶೋಭಿಸುಮತೆ ಮಜ್ಜನಮಾಡೆರೆಯುಸುತ್ತಿದ್ದಳು.||೪||ಅನುತರದಲ್ಲಿ ಆನಂದಗೋಪನಪತ್ನಿಯು ಶಿಶುವಿಗೆ ಮಂಗಳಸ್ನಾನವಂ ಮಾಡಿಸಿ ಅನ್ನಾದಿಗಳಿಂದಲೂ, ವಸ್ತ್ರಮಾಲ್ಯಗಳಿಂದಲೂ ಗೋದಾನಗಳಿಂದಲೂ ಪೂಜಿಸಲ್ಪಟ್ಟಬ್ರಾಹ್ಮಣರಿಂದ ಆಶೀರ್ವಾದವಂಮಾಡಿಸಿ ನಿದ್ರೆಯಿಂದ ಕಂಣುಗಳಂ ಮುಚ್ಚುತ್ತಿರುವ ತನ್ನ ಶಿಶುವಂಹಾಸಿಗೆಯಲ್ಲಿ ಮೆಲ್ಲಗೆಮಲಗಿಸಿದಳು.||೫||ಅನಂತರದಲ್ಲಿ ತನ್ನ ಶಿಶುವ ಮಗ್ಗುಲಾದಮಹೋತ್ಸವವಂ ಮಾಡುವುದರಲ್ಲಿ ಕುತೂಹಲಯುಕ್ತವಾದ ಮನಸ್ಸುಳ್ಳವಳಾಗಿ, ಮತ್ತು ಧಾರಾಳವಾದ ಮನಸ್ಸುಳ್ಳವಳಾಗಿ, ಯಶೋದಾದೇವಿಯು ಉತ್ಸವಕ್ಕೆ ಬಂದಿರುವ ಗೋಕುಲದ ಸಮಸ್ತಜನರಂ ಪೂಜಿಸುವವಳಾಗಿ ಆ ಸಂತೋಷದಲ್ಲಿ ತನ್ನ ಶಿಶುವಿನ ಅಳುವ ಕೇಳದೆಯಿದ್ದಳು. ಆಬಾಲಕನು ಸ್ತನ್ಯಪಾನವಂ ಬಯಸಿದವನಾಗಿ ಅಳುತ್ತ (ಬಂಡಿಯ

ಮಗುವಿಗೆನೀರುಯೆರೆಯುವ ಗೋಪಿಯರು

ಸ್ತನಾರ್ಥೀ ಚರಣಾವುದಕ್ಷಿಪತ್॥ ೬॥ ಅಧಶ್ಶಯಾನಸ್ಯ ಶಿಶೋರನೋಽಲ್ಪಕಪ್ರವಾಳಮೃದ್ವಂಘ್ರಿಹತಂ ವ್ಯವರ್ತತ। ವಿಧ್ವಸ್ತನಾನಾರಸಕುಪ್ಯಭಾಜನಂ ವ್ಯತ್ಯಸ್ತಚಕ್ರಾಕ್ಷವಿಭಿನ್ನಕೂಬರಮ್ ॥ ೭॥ ದೃಷ್ಟ್ವಾ ಯಶೋದಾಪ್ರಮುಖಾ ವ್ರಜಸ್ತ್ರಿಯ ಔತ್ಥಾನಿಕೇ ಕರ್ಮಣಿ ಯಾಸ್ಸಮಾಗತಾಃ । ನಂದಾದಯಶ್ಚಾದ್ಭುತದರ್ಶನಾಕುಲಾಃ ಕಥಂ ಸ್ವಯಂ ವೈ ಶಕಟಂ ವಿಪರ್ಯಗಾತ್॥ ೮॥ ಇತಿ ಬ್ರುವನ್ತೋಽತಿವಿಷಾದಮೋಹಿತಾ ಜನಾಸ್ಸಮನ್ತಾತ್ಪರಿವವ್ರುರಾರ್ತವತ್ ॥೯॥ ಊಚುರವ್ಯವಸಿತಮತೀನ್ಗೋಪಾನ್ಗೋಪೀಶ್ಚ ಬಾಲಕಾಃ। ರುದತಾ

---

ಅಳುತ್ತಿರುವ ಕೃಷ್ಣನು, ಚರಣೌ-ಕಾಲುಗಳನ್ನು, ಉದಕ್ಷಿಪತ್-ಹಾರಿಸಿಹೊಡೆದನು. ॥೬॥ ಅಧಃ- ಕೆಳಗಡೆಯಲ್ಲಿ, ಶಯಾನಸ್ಯ- ಮಲಗಿರುವ, ಶಿಶೋಃ-ಮಗುವಾದ ಕೃಷ್ಣನ, ಅಲ್ಪಕಪ್ರವಾಳಮೃದ್ವಂಘ್ರಿಹತಂ-ಅಲ್ಪಕಪ್ರವಾಳ_ಸಣ್ಣಚಿಗುರಿನಂತೆ, ಮೃದು-ಮೆತ್ತಗಿರುವ, ಅಂಘ್ರಿ-ಕಾಲಿನಿಂದ, ಹತಂ-ಹೊಡೆಯಲ್ಪಟ್ಟ, ಅನಃ-ಬಂಡಿಯು, ವಿಧ್ವಸ್ತನಾನಾರಸಕುಪ್ಯಭಾಜನಂ-ವಿಧ್ವಸ್ತ-ಧ್ವಂಸಮಾಡಲ್ಪಟ್ಟ, ನಾನಾರಸ-ಹಲವುರಸಗಳುಳ್ಳ (ಹಾಲುಮೊಸರುತುಪ್ಪಗಳುಳ್ಳ) ಕುಪ್ಯಭಾಜನಂ-ಕಂಚುಮಣ್ಣುಪಾತ್ರೆಗಳುಂಟಾಗುವಂತೆಯೂ, ವ್ಯತ್ಯಸ್ತಚಕ್ರಾಕ್ಷವಿಭಿನ್ನಕೂಬರಂ-ವ್ಯತ್ಯಸ್ತ-ವಿಪರೀತವಾದ, (ತಾರುಮಾರಾದ-ಹಿಂದುಮುಂದಾದ) ಚಕ್ರ-ಗಾಲಿಗಳು, ಅಕ್ಷ-ಅಚ್ಚುಗಳು, ವಿಭಿನ್ನ-ಮುರಿದುಹೋದ, ಕೂಬರಂ_ನೊಗವೂ ವುಳ್ಳದ್ದಾಗುವಂತೆ। ವ್ಯವರ್ತತ-ತಲೆಕೆಳಗಾಗಿಬಿದ್ದುದು. (ವಿಪರೀತವಾಗಿ ಉರುಳಿಕೊಂಡಿತು.) ॥೭॥ ಯಶೋದಾಪ್ರಮುಖಾಃ-ಯಶೋದೆ ಮೊದಲಾದವರೂ, ಔತ್ಥಾನಿಕೇ ಕರ್ಮಣಿ-ಮಗುವೆದ್ದ ಉತ್ಸವದಲ್ಲಿ, ಯಾಸ್ಸಮಾಗತಾಃ-ಯಾರು ಬಂದಿದ್ದರೋ, ತಾಃ ವ್ರಜಸ್ತ್ರಿಯಃ-ಆ ಗೋಕುಲದ ಹೆಂಗಳೂ, ನಂದಾದಯಶ್ಚ-ನಂದನು ಮೊದಲಾದವರೂ, ದೃಷ್ಟ್ವಾ-ಬಂಡಿಬಿದ್ದುದಂ ಕಂಡು, ಅದ್ಭುತದರ್ಶನ-ಆಶ್ಚರ್ಯವನ್ನು ನೋಡುವುದರಿಂದ, ಆಕುಲಾಃ-ಕದಡಿದ ಮನಸ್ಸುಳ್ಳವರಾಗಿ,'' ಶಕಟಂ-ಬಂಡಿಯು, ಸ್ವಯಂ-ತಾನಾಗಿ, ಕಥಂ ವೈ-ಹೇಗೆ ತಾನೆ, ವಿಪರ್ಯಗಾತ್-ವಿಪರೀತವಾಗಿಬಿತ್ತು.''॥೮॥ ಇತಿ-ಹೀಗೆ, ಬ್ರುವಂತಃ- ಹೇಳುತ್ತಿರುವರಾಗಿ, ಜನಾಃ-ಜನಗಳು, ಅತಿವಿಷಾದಮೋಹಿತಾಃ-ಅತಿವಿಷಾದ-ಹೆಚ್ಚು ದುಃಖದಿಂದ, ಮೋಹಿತಾಃ-ಮೋರ್ಛೆಗೊಂಡವರಾಗಿ, ಆರ್ತವತ್-ಪೀಡಿತರಾದಂತೆ, ಸಮಂತಾತ್-ಎಲ್ಲಕಡೆಗಳಲ್ಲಿಯೂ, ಪರಿವವ್ರುಃ-ಮುತ್ತಿಕೊಂಡರು ॥೯॥ ಬಾಲಕಾಃ-ಅಲ್ಲಿದ್ದ ಹುಡುಗರು, ಅವ್ಯವಸಿತಮತೀನ್-ವ್ಯವಸಾಯಗೊಳ್ಳದಬುದ್ಧಿಯುಳ್ಳ, (ವಿಚಾರನಿರ್ಣಯವಿಲ್ಲದ) ಗೋಪಾನ್-ಗೊಲ್ಲರನ್ನೂ, ಗೋಪೀಶ್ಚ-ಗೊಲ್ಲತಿಯರನ್ನೂ ಕುರಿತು'' ರುದತಾ-ಅಳುತ್ತಿರುವ, ಅನೇನ-ಈ ಮಗುವಿನಿಂದ, ಪಾದೇನ-ಕಾಲಿನಿಂದ, ಏತತ್-ಈ ಬಂಡಿಯು, ಕ್ಷಿಪ್ತಂ-ಹಾರಿಸ

---

ತಳದಲ್ಲಿರುವ ತೊಟ್ಟಿಲನಲ್ಲಿ) ತನ್ನ ಚರಣಂಗಳನ್ನು ಊರ್ಧ್ವಮುಖವಾಗಿ ಚಿಮ್ಮಿದನು. ॥೬॥ ಕೆಳಗೆ ಮಲಗಿರುವ ಬಾಲಕನ ಪುಟ್ಟದಾಗಿಯೂ ಚಿಗುರಿನಂತೆ ಮೃದುವಾಗಿಯೂ ಇರುವ ಪಾದದಿಂದ ಒದೆಯಲ್ಪಟ್ಟ ಶಕಟವು ಒಡೆಯಲ್ಪಟ್ಟ ನಾನಾರಸಗಳುಳ್ಳ ಗಾಜಿನ ಮಡಿಕೆಗಳೂ ಕಂಚಿನ ಪಾತ್ರೆಗಳೂ ಉಳ್ಳದ್ದಾಗಿ, ವ್ಯತ್ಯಸ್ತಗಳಾದ ಚಕ್ರಗಳೂ ಅಚ್ಚಿನ ಮರವೂ ಉಳ್ಳದ್ದಾಗಿ, ಮುರಿದುಹೋದ ಹೆಮ್ಮರವುಳ್ಳದ್ದಾಗಿ, ವಿಪರೀತವಾಗಿಬಿದ್ದುದು. ॥೭॥ ಆ ಸಮಯದಲ್ಲಿ ಯಶೋದಾದೇವಿಯೇ ಮೊದಲಾದವರು ಉತ್ಸವಕ್ಕೆ ಬಂದಿರುವ ಗೊಲ್ಲತಿಯರೂ ಕೂಡ ಅದಂ ಕಂಡು ಅದೇ ರೀತಿಯಲ್ಲಿ ನಂದಗೋಪ ಮೊದಲಾದ ಗೋಪಾಲಕರೂ ನೋಡಿ ಆಶ್ಚರ್ಯದಿಂದ ಈ ಬಂಡಿಯು ಹೇಗೆ ವಿಪರೀತವಾಗಿ ಮುರಿದುಬಿದ್ದುದೆಂದು ಅತ್ಯಂತವ್ಯಸನದಿಂದ ಮೋಹಿತರಾಗಿ ಆರ್ತರಂತೆ ಸುತ್ತಿಕೊಂಡು ನೋಡುತ್ತಿರಲು, ॥೯॥ ಆ ಸಮಯದಲ್ಲಿ ಶಿಶುವಿನ ಸಮೀಪದಲ್ಲಿದ್ದ ಗೋಪಾಲಕರು- ನಿಶ್ಚಯವನೆಯ್ದದೆ ಇರುವ ನಂದಗೋಪ ಮೊದಲಾದ ಗೋಪಾ



ತಾನೇನಪಾದೇನಕ್ಷಿಪ್ತ್ತಮೇತನ್ನ ಸಂಶಯಃ॥೯॥ ನತೇಶ್ರದ್ದಧಿರೇಗೋಪಾ ಬಾಲಭಾಷಿತಮಿತ್ಯುತ । ಅಪ್ರಮೇಯಂ ಬಲಂತಸ್ಯಬಾಲಕಸ್ಯನತೇವಿದುಃ॥೧೦॥ ರುದಂತಂಸುತಮಾದಾಯಯಶೋದಾಗ್ರಹಶಂಕಿತಾ। ಕೃತ್ವಾಸ್ವಸ್ತ್ಯಯನಂವಿಪ್ರೈಸ್ಸೂಕ್ತೈಃಸ್ತ್ತನಮಪಾಯಯತ್ ॥ ೧೧ ॥ ಪೂರ್ವವತ್ಸ್ಥಾಪಿತಂಗೋಪೈರ್ಬಲಿಭಿಸ್ಸಪರಿಚ್ಛದಮ್ । ವಿಪ್ರಾಹುತ್ವಾರ್ಚಯಾಂಚಕ್ರುರ್ದಧ್ಯಕ್ಷತಕುಶಾಮ್ಬುಭಿಃ ॥೧೨॥ ಯೇಽಸೂಯಾನೃತದಮ್ಭ

ಲ್ಪಟ್ಟದ್ದಾಗಿದೆ-(ಎತ್ತಿಹೊಡೆಯಲ್ಪಟ್ಟಿದೆ, ಚಿಮ್ಮಲ್ಪಟ್ಟಿತು), ನಸಂಶಯಃ-ಸಂದೇಹವಿಲ್ಲವು. ” ಎಂದು, ಊಚುಃ ಹೇಳಿದರು. ॥೯॥ ತೇಗೋಪಾಃ-ಆಗೊಲ್ಲರು, ಬಾಲಭಾಷಿತಮಿತಿ-ಹುಡುಗಮಾತೆಂದು, ನಶ್ರದ್ದಧಿರೇ-ನಂಬಲಿಲ್ಲವು. ತೇ-ಅವರು, ತಸ್ಯಬಾಲಕಸ್ಯ-ಆ ಮಗುವಿನ, ಅಪ್ರಮೇಯಂ-ದಿಟವಾಗಿತಿಳಿಯಲಶಕ್ಯವಾದ, ಬಲಂ-ಸಾಮರ್ಥ್ಯವನ್ನು, ನವಿದುಃ- ತಿಳಿಯಲಿಲ್ಲ. ॥೧೦॥ ಯಶೋದಾ-ಯಶೋದೆಯು, ರುದಂತಂ-ಅಳುತಿರುವ, ಸುತಂ-ಮಗನನ್ನು, ಆದಾಯ-ಎತ್ತಿಕೊಂಡು, ಗ್ರಹಶಂಕಿತಾಸತೀ- ಗ್ರಹದಭಯವುಳ್ಳವಳಾಗಿ, ವಿಪ್ರೈಃ-ಬ್ರಾಹ್ಮಣರಿಂದ, ಸೂಕ್ತೈಃ-ವೇದಮಂತ್ರಗಳಿಂದ, ಸ್ವಸ್ತ್ಯಯನಂ- ಪುಣ್ಯಾಹವನ್ನು, ಕೃತ್ವಾ- ಮಾಡಿ, ಸ್ತನಂ-ಮೊಲೆಯನ್ನು, ಅಪಾಯಯತ್-ಕುಡಿಸಿದಳು. ॥೧೧॥ ವಿಪ್ರಾಃ-ಬ್ರಾಹ್ಮಣರು, ಬಲಿಭಿಃ-ಬಲವಂತರಾದ, ಗೋಪೈಃ-ಗೊಲ್ಲರಿಂದ ಸಪರಿಚ್ಛದಂಯಥಾತಥಾ-ಪರಿಕರಗಳಿಂದಕೂಡಿದ್ದಾಗುವಂತೆ, ಪೂರ್ವವತ್-ಮುಂಚೆಯಿದ್ದಹಾಗೆ, ಸ್ಥಾಪಿತಂ- ಇರಿಸಲ್ಪಟ್ಟಬಂಡಿಯನ್ನುಕುರಿತು, ಹುತ್ವಾ-ಗ್ರಹಹೋಮವನ್ನುಮಾಡಿ, ದಧ್ಯಕ್ಷತಕುಶಾಂಬುಭಿಃ-ಮೊಸರುಅಕ್ಷತೆದರ್ಭೆನೀರುಗಳಿಂದ, ಅರ್ಚಯಾಂಚಕ್ರುಃ-ಪೂಜಿಸಿದರು. ॥೧೨॥ಯೇ-ಯಾವವಿಪ್ರರು, ಅಸೂಯಾ-ಹೊಟ್ಟೆಕಿಚ್ಚಿನಿಂದಲೂ, ಅನೃತ-ಸಟೆಯಿಂದಲೂ, ಡಂಭ-ಬಡಾಯಿಯಿಂದಲೂ, ಈರ್ಷ್ಯಾ-ಸೈರಣೆಯಿಲ್ಲದ್ದರಿಂದಲೂ, ಹಿಂಸಾ-ಪೀಡನದಿಂದಲೂ, ಮಾನ-ಹೆಮ್ಮೆಯಿಂದಲೂ, ವರ್ಜಿತಾಃ- ಬಿಡಲ್ಪಟ್ಟವರೋ. ಸತ್ಯಶೀಲಾನಾಂ, ದಿಟವಾದಸ್ವಭಾವವುಳ್ಳ, ತೇಷಾಂ-ಅವರ, ಆಶಿಷಃ-ಹರಕೆಗಳು, ವಿಫಲಾಃ- ವ್ಯರ್ಥಗಳಾಗಿ, ನ

ಲಕರಂ ಗೋಪಸ್ತ್ರೀಯರುಗಳಂಕುರಿತು“ರೋದನಂಗೆಯ್ವ ಈಶಿಶುವಿನ ಪಾದಪ್ರಹಾರದಿಂದ ಈಶಕಟವು ವ್ಯತ್ಯಸ್ತವಾಗಿ ಬಿದ್ದುದು. ಈಯರ್ಥದಲ್ಲಿ ಸಂಶಯವಿಲ್ಲವು. ಎಂದುನುಡಿದರು. ॥೯॥ ಆಬಾಲಕರ ವಾಕ್ಯಮಂಕೇಳಿದ ಗೋಪಾಲಕರು ಆಶಿಶುವಿನ ಊಹಿಸಲಶಕ್ಯವಾದ ಬಲವನ್ನು ಅರಿಯದೇ ಇರುವರಾದುದರಿಂದ “ಈಶಿಶುವು ಈಬಂಡಿಯಂ ಕೆಡಹಿತು” ಎಂಬವಾಕ್ಯವುಸಂಗತವಲ್ಲವು. ಈಗೋಪಬಾಲಕರು ಏನುಬಲ್ಲರೆಂದು ಬಾಲಕರವಾಕ್ಯದಲ್ಲಿ ವಿಶ್ವಾಸಮಂ ಮಾಡಲಿಲ್ಲವು. ॥ ಆಮೇಲೆ ಯಶೋದಾದೇವಿಯು ರೋದನಂಗೆಯ್ವ ಶಿಶುವನ್ನು ಎತ್ತಿಕೊಂಡು ಗ್ರಹಭೀತಿಶಂಕೆಯಿಂ ಬ್ರಾಹ್ಮಣರಿಂದ ರಕ್ಷೋಘ್ನಸೂಕ್ತಗಳಂ ಪಠನಂಗೆಯಿಸಿ ಸ್ವಸ್ಥಚಿತ್ತವಾದ ಆ ಶಿಶುವಂ ಸ್ತನ್ಯಪಾನಂಗೆಯಿಸಿದಳು. ॥೧೧॥ ಆ ಸಮದಲ್ಲಿ ಬ್ರಾಹ್ಮಣರುಗಳು ಬಲಿಷ್ಠರಾದ ಗೋಪಾಲಕರಿಂದ ಸೇರಿಸಲ್ಪಟ್ಟ ಬಂಡಿಯಂ



ಕುರಿತು ಸಾಮಗ್ರಿಗಳಂ ಯಥಾಶಾಸ್ತ್ರವಾಗಿ ವಿನಿಯೋಗಿಸಿ, ದಧ್ಯಕ್ಷತಕುಶಾದಿಗಳಿಂದ ಶಾಂತಿದೇವತೆಗಳಂ ಪೂಜಿಸಿ, ನವಗ್ರಹಹೋಮಮಂ ಮಾಡಿದರು. ॥೧೨॥ ಪರರಗುಣಂಗಳಲ್ಲಿ ದೋಷವನ್ನಾರೋಪಿಸುವ ಅಸೂಯೆಯಿಂದಲೂ, ಪರರಸಂಪತ್ತುಗಳಂನೋಡಿ ಸಹಿಸದೆಯಿರುವಿಕೆಯೆಂಬ ಈರ್ಷ್ಯೆಯಿಂದಲೂ, ಅನೃತವಚನಗಳಿಂದಲೂ, ದಂಭದಿಂದಲೂ, ಹಿಂಸೆ ಯಿಂದಲೂ, ಅಹಂಕಾರದಿಂದಲೂ, ಬಿಡಲ್ಪಟ್ಟಿರುವರಾದ ಸತ್ಯಶೀಲರಾದ ಆಬ್ರಾಹ್ಮಣರ ಆಶೀ

ಷ್ವಾರ್ಹಿಂಸಾಮಾನವಿವರ್ಜಿತಾಃ । ನತೇಷಾಂಸತ್ಯಶೀಲಾನಾಮಾಶಿಷೋವಿಫಲಾಃಕೃತಾಃ ॥ ೧೩ ॥ ಇತಿಬಾಲಕಮಾನೀಯಸಾಮರ್ಗ್ಯಜುರುಪಾಕೃತೈಃ । ಜಲೈಃಪವಿತ್ರೌಷಧಿಭಿರಭಿಷಿಚ್ಯದ್ವಿಜೋತ್ತಮೈಃ॥ವಾಚಯಿತ್ವಾಸ್ವಸ್ತ್ಯಯನಂನನ್ದಗೋಪಸ್ಸಮಾಹಿತಃ। ಹುತ್ವಾಚಾಗ್ನಿಂದ್ವಿಜಾತಿಭ್ಯಃಪ್ರಾದಾದನ್ನಂ ಮಹಾಗುಣಮ್ ॥ ೧೪ ॥ ಗಾಶ್ಚಸರ್ವಗುಣೋಪೇತಾ ವಾಸಸ್ಸ್ರುಗ್ರುಕ್ಮಮಾಲಿನೀಃ। ಆತ್ಮಜಾಭ್ಯುದಯಾರ್ಥಾಯಪ್ರಾದಾತ್ತೇಚಾನ್ವಯುಞ್ಜತ ॥ ೧೬ ॥ ವಿಪ್ರಾಮಂತ್ರವಿದೋಯುಕ್ತಾಸ್ತೈರ್ಯಾಃಪ್ರೋಕ್ತಾಸ್ತದಾಶಿಷಃ । ತಾನಿಷ್ಫಲಾಭವಿಷ್ಯನ್ತಿನಕದಾಚಿದಪಿಧ್ರುವಮ್ ॥ ೧೭ ॥ ಏಕದಾರೋಹಮಾರೂಢಂಲಾಲಯನ್ತೀ

ತೃಣಾವರ್ತಾಖ್ಯಾಸುರಸಂಹಾರಘಟ್ಟಃ

ಸತೀಸುತಮ್ । ಗರಿಮಾಣಂಶಿಶೋರ್ವೋಢುಂನಸೇಹೇಗಿರಿಕೂಟವತ್ ॥ ೧೮ ॥ ಭೂಮೌನಿಧಾಯತಙ್ಗೋಪೀ

ಕೃತಾಃ-ಮಾಡಲ್ಪಡಲಿಲ್ಲವು ॥೧೩॥ ಇತಿ-ಹೀಗೆಂದುಕೊಂಡು, ಬಾಲಕಂ-ಮಗುವನ್ನು, ಆನೀಯ-ತಂದು, ಸಾಮರ್ಗ್ಯಜುರುಪಾಕೃತೈಃ-ಸಾಮವೇದಋಗ್ವೇದಯಜುರ್ವೇದಗಳಿಂದಮಂತ್ರಿಸಲ್ಪಟ್ಟ, ಪವಿತ್ರೌಷಧಿಭಿಃ- ಪರಿಶುದ್ಧಗಳಾದಮೂಲಿಕೆಗಳುಳ್ಳ, ಜಲೈಃ- ತೀರ್ಥಗಳಿಂದ, ದ್ವಿಜೋತ್ತಮೈಃ-ಬ್ರಾಹ್ಮಣಶ್ರೇಷ್ಠರಿಂದ, ಅಭಿಷಿಚ್ಯ-ಸ್ನಾನಮಾಡಿಸಿ ॥೧೪॥ಸಮಾಹಿತಃ- ಸಮಾಧಾನಗೊಂಡ, ನಂದಗೋಪಃ-ನಂದಗೋಪನು, ಸ್ವಸ್ತ್ಯಯನಂ-ಪುಣ್ಯಾಹವನ್ನು, ವಾಚಯಿತ್ವಾ-ಓದಿಸಿ, ಅಗ್ನಿಂಚ-ಅಗ್ನಿಯನ್ನೂ, ಹುತ್ವಾ-ಹೋಮಮಾಡಿ, ದ್ವಿಜಾತಿಭ್ಯಃ-ಬ್ರಾಹ್ಮಣರಿಗೆ, ಮಹಾಗುಣಂ-ಹೆಚ್ಚಾದಗುಣವುಳ್ಳ, ಅನ್ನಂ-ಆಹಾರವನ್ನು, ಪ್ರಾದಾತ್- ಕೊಟ್ಟನು. ॥೧೫॥ ಸರ್ವಗುಣೋಪೇತಾಃ-.ಸಕಲಗುಣಗಳಿಂದಲೂಕೂಡಿದ, ವಾಸಸ್ರುಗ್ರುಕ್ಮಮಾಲಿನೀಃ- ವಾಸಃ-ವಸ್ತ್ರ, ಸ್ರಕ್-ಪುಷ್ಪಹಾರ, ರುಕ್ಮಮಾಲಿನೀಃ-ಭಂಗಾರದಸರಗಳೊಳ್ಳ, ಗಾಶ್ಚ-ಗೋವುಗಳನ್ನೂ, ಆತ್ಮಜಾಭ್ಯುದಯಾರ್ಥಾಯ- ಆತ್ಮಜ-ಮಗನ, ಅಭ್ಯುದಯಾರ್ಥಾಯ-ಶ್ರೇಯಸ್ಸೋಸುಗ, ಪ್ರಾದಾತ್-ದಾನಮಾಡಿದನು. ತೇಚ- ಆಬ್ರಾಹ್ಮಣರೂ, ಅನ್ವಯುಂಜತ- ಹರಕೆಗಳನ್ನುಕೊಡಿಸಿದರು. ॥೧೬॥ ಮಂತ್ರವಿದಃ-ಮಂತ್ರಗಳನ್ನುಬಲ್ಲ, ಯುಕ್ತಾಃ-ಯೋಗ್ಯರಾದ, ವಿಪ್ರಾಃ-ಬ್ರಾಹ್ಮಣರು, ಯೇ-ಯಾರೋ, ತೈಃ-ಅವರಿಂದ, ಪ್ರೋಕ್ತಾಃ-ಹೇಳಲ್ಪಟ್ಟವು, ಯಾಃ-ಯಾವವೋ, ತಾಃತದಾಶಿಷಃ-ಆಯಾಶೀರ್ವಾದಗಳು, ಕದಾಚಿದಪಿ-ಒಂದುಸಮಯದಲ್ಲಿಯೂಕೂಡ, ನಿಷ್ಫಲಾಃ-ವ್ಯರ್ಥಗಳು, ನಭವಿಷ್ಯಂತಿ-ಆಗುವುದಿಲ್ಲ. ಧ್ರುವಂ-ನಿಶ್ಚಯವು. ॥೧೭॥ ಏಕದಾ- ಒಂದುಕಾಲದಲ್ಲಿ, ಆರೋಹಂ- ತೊಡೆಯನ್ನು, ಆರೂಢಂ-ಏರಿದ, ಸುತಂ-ಮಗನನ್ನು, ಲಾಲಯಂತೀ-ಪ್ರೀತಿಸುತ್ತಿರುವ, ಸತೀ- ಸಾಧ್ವಿಯಾದಯಶೋದೆಯು, ಶಿಶೋಃ-ಮಗುವಿನ, ಗಿರಿಕೂಟವತ್-ಬೆಟ್ಟದಕೊಡುಗಲ್ಲಿನಂತಿರ್ಪ, ಗರಿಮಾಣಂ-ಭಾರವನ್ನು, ವೋಢುಂ-ಹೊರುವದಕ್ಕೆ, ನಸೇಹೇ- ಸೈರಿಸಲಾರದೆಹೋದಳು ॥೧೮॥ಗೋಪೀ-ಯಶೋದೆಯು, ಭಾರಪೀಡಿತಾ-ಹೊರೆಯಿಂದಬಾಧಿಸಲ್ಪಟ್ಟವಳಾದ್ದರಿಂದಲೇ, ವಿಸ್ಮಿತಾ-ಆಶ್ಚರಿ

ರ್ವಾದವು ವ್ಯರ್ಥವಾಗುವುದಿಲ್ಲವು. ॥೧೩॥ ಎಂದುತಿಳಿದು ನಂದಗೋಪನು ಪವಿತ್ರಕರಗಳಾದ ಮಾವಿನ ಚಿಗುರುಮೊದಲಾದಔಷಧಿಗಳಿಂ ಪರಿಶುದ್ಧಿಯಂಗೆಯ್ಯಲ್ಪಟ್ಟ ಋಗ್ಯಜುಸ್ಸಾಮಮಂತ್ರಂಗಳಿಂದ ಅಭಿಮಂತ್ರಿತಂಗಳಾದ ಜಲಗಳಿಂ ಬ್ರಾಹ್ಮಣೋತ್ತಮರಿಂ ಅಭಿಷೇಕಂಗೆಯಿಸಿ. ॥೧೪॥ ಮತ್ತುಸಾವಧಾನವಾದ ಮನಸ್ಸುಳ್ಳವನಾಗಿ ಆ ಬ್ರಾಹ್ಮಣರಿಂದ ಸ್ವಸ್ತಿವಾಚನಂಗೆಯಿಸಿ, ಅಗ್ನಿಯಲ್ಲಿ ಹೋಮವಂಮಾಡಿಸಿ, ಬ್ರಾಹ್ಮಣರುಗಳಿಗೆ ದಿವ್ಯಾನ್ನದಾನವಂ ಮಾಡಿದನು. ॥೧೫॥ ಮತ್ತು ಸಮಸ್ತಸದ್ಗುಣಗಳಿಂದ ಯುಕ್ತಗಳಾದ ವಸ್ತ್ರ ಪುಷ್ಪಮಾಲಿಕಾ ಸುವರ್ಣರಜಿತಾಭರಣಾದಿಗಳಿಂದ ಅಲಂಕೃತಂಗಳಾದ ಗೋವುಗಳಂ ತನ್ನ ಪುತ್ರನಿಗೆಅಭ್ಯುದಯವಾಗಲೋಸುಗ ಬ್ರಾಹ್ಮಣೋತ್ತಮರಿಗೆ ದಾನವಂಮಾಡಿದನು ಬ್ರಾಹ್ಮಣರೂ ಆಶೀರ್ವಾದವಂ ಮಾಡಿದರು.॥೧೬॥ ಮಂತ್ರಜ್ಞರಾದ ಸತ್ಯದಯಾದಿಯುಕ್ತರಾದ ಆಬ್ರಾಹ್ಮಣರಿಂದ ಯಾವ ಆಶೀರ್ವಾದಂಗಳು ಮಾಡಲ್ಪಟ್ಟವೋ ಅವು- ಒಂದು ಕಾಲದಲ್ಲಿಯೂ ವ್ಯರ್ಥಂಗಳಾಗುವುದಿಲ್ಲವು. ಇದು ನಿಶ್ಚಯವು.॥ ಅನಂತರದಲ್ಲಿ ಯಶೋದಾದೇವಿಯು ಒಂದು ಸಮಯದಲ್ಲಿ ತೊಡೆಯಮೇಲೆ ಕುಳಿತಿರುವ ಪುತ್ರನಂ ಲಾಲಿಸುತ್ತಿರುವಳಾಗಿ ಪರ್ವತಶಿಖರದಂತೆ ಅತ್ಯಂತಭಾರವುಳ್ಳ ಆಶಿಶುವಂ ಧರಿಸಲು ಸಹಿಸಲಾರದೆ ಇದ್ದಳು. ॥ ೧೮ ॥ ಬಳಿಕ ಯಶೋದಾದೇವಿಯು ಆಶಿಶುವಿನ ಮಹಾಭಾರದಿಂ ಪೀಡಿತಳಾಗಿ ಆಶ್ಚರ್ಯಪಟ್ಟವಳಾ

ಹೀ ವಿಸ್ಮಿತಾಭಾರಪೀಡಿತಾ । ಮಹಾಪುರುಷಮಾದಧ್ಯೌಜಗತಾಮಾಸಕರ್ಮಸು ॥ ೧೯ ॥ ದೈತ್ಯೋನಾಮ್ನಾ
ತೃಣಾವರ್ತಃಕಂಸಭೃತ್ಯಃಪ್ರಚೋದಿತಃ । ಚಕ್ರವಾತಸ್ವರೂಪೇಣಜಹಾರಾಸೀನಮರ್ಭಕಮ್ ॥ ೨೦ ॥
ಗೋಕುಲಂಸರ್ವಮಾವೃಣ್ವನ್ಮುಷ್ಣಂಶ್ಚಕ್ಷೂಂಷಿರೇಣುಭಿಃ । ಈರಯನ್ಸುಮಹಾಘೋರಶಬ್ದೇನಪ್ರದಿಶೋ
ದಶ ॥ ೨೧ ॥ ಮುಹೂರ್ತಮಭವದ್ಗೋಷ್ಠಂರಜಸಾತಮಸಾವೃತಮ್ । ಸುತಂಯಶೋದಾನಾಪಶ್ಯತ್ತ

---

ಗೊಂಡವಳಾಗಿ, ತಂ-ಆಮಗುವನ್ನು, ಭೂಮೌ-ನೆಲದಲ್ಲಿ, ನಿಧಾಯ-ಇರಿಸಿ, ಮಹಾಪುರುಷಂ-ವಿಷ್ಣುವನ್ನು. ಆದಧ್ಯೌ-ಧ್ಯಾನಮಾಡಿದಳು. ಜಗತಾಂ-ಪ್ರಪಂಚಗಳ, ಕರ್ಮಸು-ಕೆಲಸಗಳಲ್ಲಿ, ಆಸ-ಇದ್ದಳು. (ಅಥವಾ ಕೃಷ್ಣನಹೊಟ್ಟೆಯಲ್ಲಿರುವ ಜಗತ್ತುಗಳಭಾರದಿಂದ ಪೀಡಿಸಲ್ಪಟ್ಟವಳಾಗಿ, ಆಶಿಶುವನ್ನು ಮಹಾಪುರುಷನೆಂದುಭಾವಿಸಿದಳು.) ॥೧೯॥ನಾಮ್ನಾ-ಹೆಸರಿನಿಂದ, ತೃಣಾವರ್ತಃ-ತೃಣಾವರ್ತನೆಂಬ, ದೈತ್ಯಃ-ದಿತಿಪುತ್ರನಾದರಾಕ್ಷಸನು, ಕಂಸಭೃತ್ಯಃ- ಕಂಸನಸೇವಕನಾದ್ದರಿಂದ,ಪ್ರಚೋದಿತಃ-ಕಂಸನಿಂದಪ್ರೇರಿಸಲ್ಪಟ್ಟವನಾಗಿ, ಚಕ್ರವಾತಸ್ವರೂಪೇಣ-ಸುಳಿಗಾಳಿಯರೂಪದಿಂದ, ಆಸೀನಮರ್ಭಕಂ-ಕುಳಿತಿರ್ದಮಗುವನ್ನು, ಜಹಾರ-ಅಪಹರಿಸಿದನು.॥೨೦॥ಗೋಕುಲಂಸರ್ವಂ-ಗೊಲ್ಲರಪಾಳ್ಯವೆಲ್ಲವನ್ನೂ, ಆವೃಣ್ವನ್- ಸುತ್ತಿಕೊಂಡವನಾಗಿ, ರೇಣುಭಿಃ-ಧೂಳುಗಳಿಂದ, ಚಕ್ಷೂಂಷಿ- ಕಂಗಳನ್ನು,ಮುಷ್ಣನ್-ಅಪಹರಿಸುವವನಾಗಿ, ಸುಮಹಾಘೋರಶಬ್ದೇನ-ದೊಡ್ಡಭಯಂಕರವಾದಸಪ್ಪಳಿಸಿಂದ, ದಶಪ್ರದಿಶಃ-ಹತ್ತುದಿಕ್ಕುಗಳನ್ನೂ,ಈರಯನ್-ಪ್ರೇರಿಸುವನಾಗಿ, ಅಥವಾಪೂರಯನ್-ತುಂಬುವವನಾದನು.॥೨೧॥ಮುಹೂರ್ತಂ-ತಾಸುಹೊತ್ತು, ಗೋಷ್ಠಂ-ಗೊಲ್ಲರಹಟ್ಟಿಯು, ರಜಸಾ-ಮಂಣಿನಧೂಳಿಯಿಂದಲೂ, ತಮಸಾ-ಕತ್ತಲೆಯಿಂದಲೂ, ಆವೃತಂ-ಮುಚ್ಚಲ್ಪಟ್ಟದ್ದು, ಅಭವತ್-ಆದುದು. ತತ್ರ-ಅಲ್ಲಿ, ಯತಃ-ಯಾವಕಾರಣದಿಂದ, ನ್ಯಸ್ತವತೀ-ಇರಿಸಿದವಳಾದಳೋ, ತತಃ-ಆಕಾರಣದಿಂದ, ಯಶೋದಾ- ಯಶೋದೆಯು,

---



ಮೊಗುವಿಗೆಮಲೆಯುಂಕೊಡುವಯಶೋದೆಯು



ಭಾರದಿಂಕೆಳಕ್ಕೆಯಿಳಿಸಲ್ಪಟ್ಟಮಗುವು

ಗಿ ಆಶಿಶುವಂ ಕೆಳಕ್ಕೆಯಿಳಿಸಿ ಜಗತ್ತುಗಳಂ ತನ್ನಹೊಟ್ಟೆಯಲ್ಲಿ ಧರಿಸಿರುವ ಆಭಗವಂತನ ಭಾರವೆಂಬುವುದಂ ಅರಿಯದೆ ಪ್ರಾಕೃತಬುದ್ಧಿಯಿಂದ ಇದೇನುತ್ಪಾತವೋ ಎಂದು ಶಂಕಿಸಿ, ಮಹಾಪುರುಷನಾದ ಶ್ರೀವಿಷ್ಣುವಂ ಧ್ಯಾನಂಗೆಯ್ದಳು. ॥ ೧೯ ॥ ಅನಂತರದಲ್ಲಿ ಕಂಸನಿಗೆ ಭೃತ್ಯನಾದತೃಣಾವರ್ತನೆಂಬ ಹೆಸರುಳ್ಳದೈತ್ಯನು ಕಂಸನಿಂದ ಕಳುಹಿಸಲ್ಪಟ್ಟವನಾಗಿ ಸುಂಟುರುಗಾಳಿಯ ಸ್ವರೂಪದಿಂದ ಬಂದು ಮಲಗಿರುವ ಬಾಲಕನಂ ಅಪಹರಿಸಿದನು ॥೨೦॥ ಅದೆಂತೆನೆ- ಆದೈತ್ಯನು ಧೂಳಿಗಳಿಂದ ಗೋಕುಲವನೆಲ್ಲವಂ ತುಂಬಿಸುವನಾಗಿ, ಎಲ್ಲರ ಕಂಣುಗಳಂ ಮುಚ್ಚಿಸುವನಾಗಿ, ಮಹಾಶಬ್ದದಿಂ ದಿಕ್ಕುವಿದಿಕ್ಕುಗಳನೆಲ್ಲವಂ ಪ್ರತಿಧ್ವನಿಗೆಯಿಸುವನಾಗಿ,॥೨೧॥ಆಬಾಲಕನಂ ಅಪಹರಿಸುವಕಾಲದಲ್ಲಿ ಒಂದುಮುಹೂರ್ತದೊಳಗೆ ಆಗೋಕುಲವುಧೂಳುಗಳಿಂದಲೂ ಕತ್ತಲೆಯಿಂದಲೂ ಮುಚ್ಚಲ್ಪಟ್ಟದ್ದಾಯಿತು.

ತ್ರ್ಯಸ್ತಮತೀಯತಃ ॥ ೨೦ ॥ ನಾಪಶ್ಯತ್ಕಶ್ಚಿದಾತ್ಮಾನಮ್ಪರಂಚಾಪಿವಿಮೋಹಿತಃ । ತೃಣಾವರ್ತವಿ
ಸೃಷ್ಟಾಭಿಶ್ಶರ್ಕರಾಭಿರುಪದ್ರುತಃ ॥ ೨೧ ॥ ಇತಿಖರಪವನಚಕ್ರಪಾಂಸುವರ್ಷೆಸುತಪದವೀಮಬಲಾವಿಲ
ಕ್ಷ್ಯಮಾತಾ।ಅತಿಕರುಣಮನುಸ್ಮರನ್ತ್ಯಶೋಚದ್ಭುವಿಪತಿತಾಮೃತವತ್ಸಕಾಯಥಾಗೌಃ॥ ೨೨ ॥ರುದಿತಮನು
ನಿಶಮ್ಯತತ್ರಗೋಪ್ಯೋಭೃಶಮನುತಪ್ತಧಿಯೋಽಶ್ರುಪೂರ್ಣಮುಖ್ಯಃ । ರುರುದುರನುಪಲಭ್ಯನನ್ದಸೂನಮ್ಪವ
ನಉಪಾರತಪಾಂಸುವರ್ಷವೇಗೇ ॥ ೨೩ ॥ತೃಣಾವರ್ತಶ್ಶಾನ್ತ ರಯೋವಾತ್ಯಾರೂಪಧರೋಹರನ್ ।ಕೃಷ್ಣಂನ

---

ಸುತಂ-ಮಗನನ್ನು, ನಾಪಶ್ಯತ್-ನೋಡಲಿಲ್ಲವು ॥ ೨೦ ॥ಕಶ್ಚಿದಪಿ-ಒಬ್ಬನಾದರೂ, ತೃಣಾವರ್ತವಿಸೃಷ್ಟಾಭಿಃ- ಸುಳಿಗಾಳಿಯಿಂದಬಿ ಟ್ಟಲ್ಪಟ್ಟ, ಶರ್ಕರಾಭಿಃ-ಮರಳುಗಳಿಂದ, ಉಪದ್ರುತಃ-ಉಪದ್ರವಗೊಳಿಸಲ್ಪಟ್ಟವನಾದ್ದರಿಂದಲೇ, ವಿಮೋಹಿತಃ- ಮೋಹಗೊಳಿ ಸಲ್ಪಟ್ಟವನಾಗಿ, ಆತ್ಮಾನಂ-ತನ್ನನ್ನೂ, ಪರಂಚಾಪಿ-ಹೆರವನನ್ನೂಕೂಡ, ನಾಪಶ್ಯತ್-ಕಾಣಲಿಲ್ಲವು ॥ ೨೧ ॥ಇತಿ-ಹೀಗೆ, ಖರ-ತೀ ಕ್ಷ್ಣವಾದ, ಪವನಚಕ್ರ-ಗಾಳಿಯಸುಳಿಯ, ಪಾಂಸುವರ್ಷೇ- ಧೂಳಿಯಮಳೆಯಲ್ಲಿ, ಸುತಪದವೀಂ-ಮಗನದಾರಿಯನ್ನು ಅವಿಲಕ್ಷ್ಯ- ಕಾಣದೆ, ಅಬಲಾ-ದುರ್ಬಲಳಾದ, ಮಾತಾ-ತಾಯಿಯಾದಯಶೋದೆಯು, ಅತಿಕರುಣಂ-ಕಡುಶೋಕವಾಗಿ, ಅನುಸ್ಮರಂತೀ-ನೆನಪುಗೊ ಳ್ಳುತ್ತಿರುವಳಾಗಿ, ಭುವಿ-ನೆಲದಲ್ಲಿ, ಪತಿತಾಸತೀ-ಬಿದ್ದವಳಾಗಿ, ಮೃತವತ್ಸಕಾ-ಸತ್ತಕರುವುಳ್ಳ, ಗೌರ್ಯಥಾ-ಆಕಳುಹೇಗೋಹಾಗೆ, ಅಶೋಚತ್-ದುಃಖಿಸಿದಳು ॥ ೨೨ ॥ ಪವನೇ-ಗಾಳಿಯು, ಉಪಾರತಪಾಂಸುವರ್ಷವೇಗೇಸತಿ-ಉಪಾರತ-ಶಾಂತವಾದ, ಪಾಂಸುವರ್ಷ- ಧೂಳಿನಮಳೆಯ, ವೇಗೇಸತಿ-ತ್ವರಿತವುಳ್ಳದ್ದಾಗುತ್ತಿರಲು, ತತ್ರ-ಅಲ್ಲಿ, ರುದಿತಂ-ಅವಳಅಳುವನ್ನು, ಅನುನಿಶಮ್ಯ- ಅನುಸರಿಸಿಕೇ ಳಿ, ಗೋಪ್ಯಃ-ಗೊಲ್ಲತಿಯರು, ಭೃಶಂ-ಅಧಿಕವಾಗಿ, ಅನುತಪ್ತಧಿಯಃ-ಅನುತಾಪಗೊಂಡಬುದ್ಧಿಯುಳ್ಳವರಾದ್ದರಿಂದಲೇ, ಅಶ್ರುಪೂ ರ್ಣಮುಖ್ಯಃ- ಕಂಣೀರ್ಗಳಿಂದತುಂಬಿದಮೋರೆಯುಳ್ಳವರಾಗಿ, ನಂದಸೂನುಂ-ನಂದಗೋಪನಮಗನಾದಕೃಷ್ಣನನ್ನು, ಅನುಪಲಭ್ಯ- ಕಾಣದೆ, ರುರುದುಃ-ಅತ್ತರು ॥ ೨೩ ॥ವಾತ್ಯಾರೂಪಧರಃ-ಗಾಳಿಯಗುಂಪಿನ ಆಕಾರವನ್ನುವಹಿಸಿದ, ತೃಣಾವರ್ತಃ-ತೃಣಾವರ್ತನೆಂಬ ದೈತ್ಯನು, ಕೃಷ್ಣಂ-ಕೃಷ್ಣನನ್ನು, ಹರನ್-ಕದ್ದವನಾಗಿ, ನಭೋಗತಃ-ಆಕಾಶವನ್ನುಸೇರಿದವನಾಗಿ, ಶಾಂತರಯಃ-ಅಣಗಿದವೇಗ ವುಳ್ಳವನಾಗಿ, ಭೂರಿಭಾರಭೃತ್-ಹೆಚ್ಚುಹೊರೆಯನ್ನುಹೊತ್ತವನಾದ್ದರಿಂದಲೇ, ಗಂತುಂ-ಹೋಗುವದಕ್ಕೆ, ನಾಶಕ್ನೋತ್-ಶಕ್ತನಾ

---

ತೃಣಾವರ್ತನು ಕೃಷ್ಣನನ್ನು ಅಪಹರಿಸಿದ್ದು

ಮತ್ತು ಆಸಮಯದಲ್ಲಿ ಯಶೋದಾದೇವಿಯು ಯಾವ ಸ್ಥಳದಲ್ಲಿ ತನ್ನಪುತ್ರನು ಮಲಗಿಸಿದ್ದಳೋ ಆಸ್ಥಳದ ಲ್ಲಿ ಆಬಾಲಕನಂ ಕಾಣಲಿಲ್ಲವು ॥ ೨೦ ॥ ತೃಣಾವರ್ತನಿಂದ ಎರಚಲ್ಪಟ್ಟ ಹರಳುಗಲ್ಲುಗಳಿಂದ ಉಪದ್ರವಪಟ್ಟ ಯಾರೊಬ್ಬನಾದರೂ ಮೋಹಿತನಾಗಿ ತನ್ನನ್ನೂ ಹೆರವನ ನ್ನೂ ಕಾಣಲಿಲ್ಲ.॥ ೨೧ ॥ ಈರೀತಿಯಲ್ಲಿ ಕ್ರೂರವಾದ ಚಕ್ರಾಕಾರವಾದ ಚಂಡಮಾರುತದಿಂದ ವರ್ಷಿಸಲ್ಪ ಟ್ಟ ಧೂಳುಗಳಲ್ಲಿ ಮಾತೃವಾದ ಯಶೋದಾದೇವಿ ಯು ಬಾಲಕನಮಾರ್ಗವುಕಾಣದೆ ತನ್ನಬಾಲಕನನ್ನೇ ಸ್ಮರಿಸುವಳಾಗಿ ಅತ್ಯಂತ ದೈನ್ಯದಿಂದ ರೋದನಂಗೆ ಯ್ಯುವಳಾಗಿ ಕರುವುಕಾಣದೆ ವ್ಯಸನಪಡುತಿರುವ ಗೋವಿನಂತೆ ಭೂಮಿಯಲ್ಲಿ ಬಿದ್ದಳು. ॥ ೨೨ ॥ ಅನಂ ತರದಲ್ಲಿ ಆಸುಳಿಗಾಳಿಯಿಂಪುಟ್ಟಿದ ಧೂಳಿಗಳ ಮಳೆಯು ಶಾಂತವಾಗುತ್ತಿರಲು ಅಲ್ಲಿರುವ ಗೋಪಸ್ತ್ರೀಯರು ಆಯಶೋದಾದೇವಿಯ ರೋದನಧ್ವನಿಯಂಕೇಳಿ, ಅತ್ಯಂತಸಂತಾಪವನೆಯ್ದಿದ ಬುದ್ಧಿಯುಳ್ಳವರಾಗಿ ಬಾಷ್ಪಪೂ ರ್ಣಂಗಳಾದ ನೇತ್ರಂಗಳಿಂದ ಕೂಡಿದ ಮುಖಗಳುಳ್ಳವರಾಗಿ, ನಂದಗೋಪನಪುತ್ರನಂಕಾಣದೆ ಅವರೂ ರೋ ದನಂಗೆಯ್ದರು. ॥ ೨೩ ॥ ಆಮೇಲೆ ಸುಳಿಗಾಳಿಯಾಗಿದ್ದ ತೃಣಾವರ್ತನೆಂಬ ದೈತ್ಯನು ಶ್ರೀಕೃಷ್ಣನಂಅಪಹರಿಸಿದನಾ

ಭೋಗತೋಗನ್ತುಂನಾಶಕನ್ನೋದ್ಭೂರಿಭಾರಭೃತಿ॥೨೬॥ತಮಶ್ಮಾನಂಮನ್ಯಮಾನಆತ್ಮಾನಜ್ಗುರುಮತ್ತಯಾ।
ಗಳೇಗೃಹೀತಉತ್ಸ್ರಷ್ಟುಂನಾಶಕನ್ನೋದದ್ಭುತಾರ್ಭಕಮ್॥೨೭॥ಗಳಗ್ರಹಣನಿಶ್ಚೇಷ್ಟೋದೈತ್ಯೋನಿರ್ಗತಲೋಚ
ನಃ। ಅವ್ಯಕ್ತರಾವೋನ್ಯಪತತ್ಸಹಬಾಲೋವ್ಯಸುರ್ವ್ರಜೇ ॥೨೮॥ ತಮನ್ತರಿಕ್ಷಾತ್ಪತಿತಜ್ಕರಾಳಂವಿಶೀರ್ಣಸ
ರ್ವಾವಯವಂಶಿಲಾಯಾಮ್।ಪುರಂಯಥಾರುದ್ರಶರೇಣವಿದ್ಧಂಸ್ತ್ರಿಯೋರುದನ್ತ್ಯೋದದೃಶುಸ್ಸಮೇತಾಃ॥೨೯॥
ಕೃಷ್ಣಞ್ಚತಸ್ಯೋರಸಿಲಮ್ಬಮಾನಮಾದಾಯಮಾತ್ರೇಪ್ರತಿಹೃತ್ಯವಿಸ್ಮಿತಾಃ।ತಂಸ್ವಸ್ತಿಮನ್ತಂಪುರುಷಾದ
ನೀತಂವಿಹಾಯಸಾಮೃತ್ಯುಮುಖಾತ್ಪ್ರಮುಕ್ತಮ್॥೩೦॥ಗೋಪ್ಯಶ್ಚಗೋಪಾಃಕಿಲನನ್ದಮುಖ್ಯಾಲಬ್ಧ್ವಾಪು

ಗಲಿಲ್ಲವು ॥೨೬॥ಗುರುಮತ್ತಯಾ-ಭಾರವುಳ್ಳವನಹತನದಿಂದ, ತಂ-ಆಕೃಷ್ಣನನ್ನು, ಅಶ್ಮಾನಂ-ಕಲ್ಲನ್ನಾಗಿ, ಮನ್ಯಮಾನಃ-ತಿಳಿಯು
ತ್ತಿರುವನಾಗಿ, ಆತ್ಮನಃ-ತನ್ನ, ಗಳೇ-ಕತ್ತಿನಲ್ಲಿ, ಗೃಹೀತಃ-ಆಬಾಲಕನಿಂದಹಿಡಿಯಲ್ಪಟ್ಟವನಾಗಿ, ಅದ್ಭುತಾರ್ಭಕಂ- ಆಶ್ಚರ್ಯ
ಕರನಾದಮಗುವನ್ನು. ಉತ್ಸ್ರಷ್ಟುಂ-ಬಿಡುವದಕ್ಕೆ, ನಾಶಕನ್ನೋತ್-ಶಕ್ತನಾಗಲಿಲ್ಲವು॥೨೭॥ಗಳಗ್ರಹಣನಿಶ್ಚೇಷ್ಟಃ-ಗಳಗ್ರಹಣ-ಕೃ
ಷ್ಣನುತನ್ನ ಕತ್ತುಕಿವಿಚುವುದರಿಂದ, ನಿಶ್ಚೇಷ್ಟಃ-ಚಲನವಿಲ್ಲದವನಾದ, ದೈತ್ಯಃ-ದಿತಿಪುತ್ರನಾದತೃಣಾವರ್ತನು, ನಿರ್ಗತಲೋಚನಃ-
ನಿರ್ಗತ-ತೆರಕೊಂಡ, ಲೋಚನಃ-ಕಂಗಳುಳ್ಳವನಾಗಿಯೂ, ಅವ್ಯಕ್ತರಾವಃ-ಸ್ಪಷ್ಟವಾಗದಕೂಗುಳ್ಳವನಾಗಿಯೂ, ವ್ಯಸುಃ- ಪ್ರಾಣ
ಹೋದವನಾಗಿ, ಸಹಬಾಲಃ-ಹುಡುಗನೊಡಕೂಡಿದವನಾಗಿ, ವ್ರಜೇ-ಗೋಕುಲದಲ್ಲಿ, ನ್ಯಪತತ್-ಬಿದ್ದನು॥೨೮॥ಅಂತರಿಕ್ಷಾತ್-ಆಕಾ
ಶದಿಂದ, ಶಿಲಾಯಾಂ-ಕಲ್ಲಿನಲ್ಲಿ, ಪತಿತಂ-ಬಿದ್ದವನಾದ್ದರಿಂದಲೇ, ವಿಶೀರ್ಣಸರ್ವಾವಯವಂ-ವಿಶೀರ್ಣ-ಶಿಥಿಲವಾದ, ಸರ್ವಾವಯವಂ-
ಸಕಲಾಂಗಗಳುಳ್ಳ, ಕರಾಳಂ-ಕ್ರೂರನಾದ, ತಂ-ಆತೃಣಾವರ್ತನನ್ನು, ರುದ್ರಶರೇಣ-ಈಶ್ವರನಬಾಣದಿಂದ, ವಿದ್ಧಂ- ಹೊಡೆಯ
ಲ್ಪಟ್ಟ, ಪುರಂಯಥಾ-ತ್ರಿಪುರವನ್ನು ಹೇಗೋಹಾಗೆ, ಸಮೇತಾಃ-ಕೂಡಿದ, ರುದನ್ತ್ಯಃಸ್ತ್ರಿಯಃ-ಅಳುತಿರುವಹೆಂಗಳು, ದದೃಶುಃ-
ನೋಡಿದರು ॥೨೯॥ ಪುರುಷಾದನೀತಂ-ಪುರುಷಾದ-ರಾಕ್ಷಸನಿಂದ, ನೀತಂ-ಒಯ್ಯಲ್ಪಟ್ಟವನೂ, ವಿಹಾಯಸಾ-ಆಕಾಶದಿಂದ, ಮೃ
ತ್ಯುಮುಖಾತ್-ಯಮನಬಾಯಿಯದೆಸೆಯಿಂದ, ಪ್ರಮುಕ್ತಂ-ಬಿಡಲ್ಪಟ್ಟವನೂ, ತಸ್ಯ-ಆತೃಣಾವರ್ತನ, ಉರಸಿ- ಎದೆಯಲ್ಲಿ, ಲಂ
ಬಮಾನಂ-ಜೋಲಾಡುತ್ತಿರುವನೂ, ಸ್ವಸ್ತಿಮಂತಂ-ಕ್ಷೇಮವುಳ್ಳವನೂಆದ, ತಂಕೃಷ್ಣಂಚ-ಆಕೃಷ್ಣನನ್ನೂ, ಮಾತ್ರೇ-ತಾಯಿಯಾ
ದಯಶೋದೆಗೆ, ಪ್ರತಿಹೃತ್ಯ-ತಂದುಕೊಟ್ಟು, ವಿಸ್ಮಿತಾಃ-ಆಶ್ಚರ್ಯಗೊಂಡವರಾದ ॥೩೦॥ಗೋಪ್ಯಶ್ಚ-ಗೊಲ್ಲತಿಯರೂ, ನಂದಮು
ಖ್ಯಾಃ-ನಂದನೇಪ್ರಧಾನನಾಗಿಉಳ್ಳ, ಗೋಪಾಃ-ಗೊಲ್ಲರೂ, ಪುನಃ-ಮರಳಿ--ಲಬ್ಧ್ವಾ-ಕೃಷ್ಣನನ್ನು ಪಡೆದು, ಅತೀವ-ಬಹಳವಾಗಿ, ಮೋ
ದಂ-ಸಂತೋಷವನ್ನು, ಆಪುಃಕಿಲ-ಹೊಂದಿದರಲ್ಲವೆ; ಅಹೋ-ಆಶ್ಚರ್ಯವು. ಬತ-ಖೇದವು. ಅತ್ಯದ್ಭುತಂ-ಅತಿವಿಸ್ಮಿತವು. ಏಷಬಾ
ಲಃ-ಈಹುಡುಗನು, ರಕ್ಷಸಾ-ರಾಕ್ಷಸನಿಂದ, ನಿವೃತ್ತಿಂ-ನಾಶವನ್ನು, ಗಮಿತಃ-ಹೊಂದಿಸಲ್ಪಟ್ಟವನಾಗಿ, ಪುನಃ-ಮರಳಿ, ಅಭ್ಯಾಗಾ

ನಾಗಿ ಆಕಾಶವನೆಯ್ದಿ ಕೃಷ್ಣನ ಅತಿಭಾರದಿಂಪೀಡಿತನಾದುದರಿಂದ ವೇಗವುಡುಗಿದವನಾಗಿ ಮುಂದೆತೆಗದುಕೊಂ
ಡುಹೋಗಲು ಅಶಕ್ತನಾದನು. ॥೨೬॥ ಮತ್ತು ಅತ್ಯಂತಭಾರದಿಂದ ಆಶಿಶುವಂ ಪರ್ವತಪ್ರಾಯವಾಗಿತಿಳಿದುಕೃಷ್ಣ
ನಿಂದಲೇ ಕೊರಳುಹಿಡಿಯಲ್ಪಟ್ಟವನಾಗಿ ಅದ್ಭುತಮಹಿಮನಾದ ಆಬಾಲಕನಂ ಕಿತ್ತುಬಿಸುಡಲು ಸಮರ್ಥನಲ್ಲ
ದೇಹೋದನು.॥೨೭॥ ಬಳಿಕ ಕೃಷ್ಣನಿಂದ ಕಿವುಚಲ್ಪಟ್ಟ ಕತ್ತುಳ್ಳವನಾಗಿ, ಆದೈತ್ಯನು ಹೊರಕ್ಕೆಹೊರಟ ಕಣ್ಣು
ಗುಡ್ಡೆಗಳುಳ್ಳವನಾಗಿ, ಚೇಷ್ಟೆಯುಡುಗಿನಿಸ್ತೇಜಸ್ಕನಾಗಿ, ನಿರ್ವಿಣ್ಣನಾಗಿ, ಆಗೋಕುಲದಲ್ಲಿ . ಆಶಿಶುವಿನೊಂದಿಗೆ
ಕೆಳಕ್ಕೆಬಿದ್ದನು. ॥೨೮॥ ಆಕಾಶದಿಂದ ಮಹಾಶಿಲೆಯಮೇಲೆಬಿದ್ದು ಚೂರ್ಣಿತಗಳಾದ ಸರ್ವಾಂಗಗಳುಳ್ಳ ಭಯಂ
ಕರನಾದ, ಶ್ರೀಪರಮೇಶ್ವರನ ಬಾಣದಿಂ ಪೆಟ್ಟುಬಿದ್ದ ತ್ರಿಪುರದಂತಿರುವ ಆದೈತ್ಯನಂ ಗುಂಪುಗೂಡಿ ರೋದನಂಗೆ
ಯ್ಯುತ್ತಲಿರುವ ಗೋಪಸ್ತ್ರೀಯರೆಲ್ಲರೂ ಕಂಡರು. ॥೨೯॥ಅನಂತರದಲ್ಲಿ ದೈತ್ಯನಿಂದ ಒಯ್ಯಲ್ಪಟ್ಟವನಾಗಿ ಆ
ಮೃತ್ಯುವಿನದೆಸೆಯಿಂದ ಬಿಡಲ್ಪಟ್ಟು, ಆದೈತ್ಯನ ಕಂಠದಲ್ಲಿ ಜೋಲಾಡುತ್ತ ಕ್ಷೇಮಯುಕ್ತನಾಗಿರುವ ಆಬಾಲಕ
ನಂನೋಡಿ ಗೋಪಸ್ತ್ರೀಯರು ಎತ್ತಿಕೊಂಡುಬಂದು ತಾಯಿಯಾದ ಯಶೋದಾದೇವಿಗೆ ಒಪ್ಪಿಸಿ ಆಶ್ಚರ್ಯ
ಪಟ್ಟರು. ॥೩೦॥ ಆಮೇಲೆಗೋಪಿಕಾಸ್ತ್ರೀಯರೂ ನಂದಾದಿಗೋಪಾಲಕರೂ ಪುನಶ್ಚಕೃಷ್ಣನಂಪಡದು ಬಹಳ
ಸಂತೋಷವನೆಯ್ದಿದರು. “ ಈಬಾಲಕನು ದೈತ್ಯನಿಂದ ಮೃತ್ಯುವನೆಯ್ದಿಸಲ್ಪಟ್ಟವನಾಗಿ ಪುನಶ್ಚಕ್ಷೇಮವಾಗಿ

ಸ್ಸ್ವಪಾ ಪ್ರುರತೀವಮೋದಮ್ ।ಅಹೋಬತಾತ್ಯದ್ಭುತಮೇಷರಕ್ಷಸಾ ಬಾಲೋನಿವೃತ್ತಿಂಗಮಿತೋಭ್ಯಗಾತ್ಪುನಃ ॥೨೧॥
ಹಿಂಸ್ರಸ್ಸ್ವಪಾಪೇನವಿಹಿಂಸಿತಃಖಲಸ್ಸಾಧುಸ್ಸಮತ್ವೇನಭಯಾದ್ವಿಮುಚ್ಯತೇ । ಕಿನ್ನಸ್ತಪಶ್ಚೀರ್ಣಮಧೋಕ್ಷಜಾ
ರ್ಚನಮ್ಪೂರ್ತೇಷ್ಟದತ್ತಮುತಭೂತಸೌಹೃದಮ್ ॥ ೨೨ ॥ * ಯತ್ಸಂಪರೇತಃಪುನರೇಷಬಾಲಕೋದಿಷ್ಟ್ಯಾಸ್ವಬ
ನ್ಧೂನ್ಪ್ರಣಯನ್ನುಪಸ್ಥಿತಃ ॥೨೩॥ ದೃಷ್ಟ್ವಾದ್ಭುತಾನಿಬಹುಶೋನನ್ದಗೋಪೋಬೃಹದ್ವನೇ । ವಸುದೇವವಚೋಭೂ
ಸ್ತನ್ಯಪಾನಸಮಯೇಜೃಂಭಣವ್ಯಾಜೇನವಪಾತ್ರೇ ವಿಶ್ವರೂಪದರ್ಶನಘಟ್ಟಃ-
ಯೋಮಾನಯಾಮಾಸವಿಸ್ಮಿತಃ॥೨೪॥ಏಕದಾರ್ಭಕಮಾದಾಯಸ್ವಾಂಕಮಾರೋಪ್ಯಭಾಮಿನೀ ।ಪ್ರಸ್ನುತಂಪಾ
ಯಯಾಮಾಸಸ್ತನಂಸ್ನೇಹಪರಿಪ್ಲುತಾ॥೨೫॥ಪೀತಪ್ರಾಯಸ್ಯಜನನೀಸುತಸ್ಯರುಚಿರಸ್ಮಿತಮ್ ।ಮುಖಂಲಾಲ

---

ತ್ರ-ಎದುರಿಗೆಬಂದನು. ॥೨೧॥ಹಿಂಸ್ರಃ-ಪರಹಿಂಸಕಸ್ವಭಾವನಾದ, ಖಲಃ- ದುಷ್ಟನು, ಸ್ವಪಾಪೇನ- ತನ್ನಪಾಪದಿಂದಲೇ, ವಿಹಿಂಸಿತಃ-ವಿಶೇಷವಾಗಿಹಿಂಸೆಗೊಳಿಸಲ್ಪಟ್ಟನು. ಸಮತ್ವೇನ- ಸಮದೃಷ್ಟಿಯಿಂದ, ಸಾಧುಃ-ಸತ್ಪುರುಷನಾದವನು, ಭಯಾತ್-ಹೆದರಿಕೆಯುದೆಸೆಯಿಂದ, ವಿಮುಚ್ಯತೇ-ಬಿಡಲ್ಪಡುವನು. ಅಧೋಕ್ಷಜಾರ್ಚನಂ-ಅಧೋಕ್ಷಜ-ಇಂದ್ರಿಯದೋಷಗಳನ್ನು ತಿರಸ್ಕರಿಸಿದವಿಷ್ಣುವಿನ, ಅರ್ಚನಂ-ಪೂಜೆಯೋ, ಪೂರ್ತೇಷ್ಟದತ್ತಂ-ಪೂರ್ತ-ಕಾಮ್ಯಕರ್ಮದಲ್ಲಿ, ಇಷ್ಟ-ಪ್ರಿಯವಾಗಿ, ದತ್ತಂ-ಕೊಡಲ್ಪಟ್ಟದಾನವೋ, ಉತ-ಅಥವಾ, ಭೂತಸೌಹೃದಂ-ಪ್ರಾಣಿಗಳಲ್ಲಿಸ್ನೇಹವೋ(ದಯೆಯೋ)ಕಿಂತಪಃ-ಯಾವತಪಸ್ಸು, ನಃ-ನಮ್ಮಿಂದ, ಚೀರ್ಣಂ- ಆಚರಿಸಲ್ಪಟ್ಟಿತೋ, (ಕೆರೆಕುಂಟೆಮುಂತಾದ್ದನ್ನು ಕಟ್ಟಿಸುವಿಕೆಪೂರ್ತಕರ್ಮವು. ಪಂಚಾಗ್ನಿಹೋತ್ರಮೊದಲಾದ್ದು ಇಷ್ಟಕರ್ಮವು. ಅನ್ನದಾನಮೊದಲಾದ್ದು ದತ್ತಕರ್ಮವು.) ॥೨೨॥ ಯತ್-ಯಾವತಪದದೆಸೆಯಿಂದ, ಸಂಪರೇತಃ- ಸತ್ತುಹೋದವನಂತಾಗಿದ್ದ, ಏಷಬಾಲಕಃ-ಈಹುಡುಗನು, ದಿಷ್ಟ್ಯಾ-ದೈವಯೋಗದಿಂದ, ಸ್ವಬಂಧೂನ್-ತನ್ನನೆಂಟರನ್ನು, ಪ್ರಣಯನ್-ಸಂತೋಷಗೊಳಿಸುವನಾಗಿ, ಪುನರುಪಸ್ಥಿತಃ-ಮರಳಿಹತ್ತಿರಕ್ಕೆ ಬಂದವನಾದನೋ ॥೨೩॥ನಂದಗೋಪಃ-ನಂದನು, ಬೃಹದ್ವನೇ-ಗೋಕುಲದಲ್ಲಿ, ಬಹುಶಃ-ಹಲವುಬಗೆಯಾದ, ಉತ್ಪಾತಾನಿ-ಭಯಸೂಚಕನಗಳನ್ನು, ದೃಷ್ಟ್ವಾ-ನೋಡಿ, ಸಸ್ಮಿತಂ-ಕಿರುನಗೆಯಿಂದಕೂಡಿದವನಾಗಿ, ವಸುದೇವವಚಃ- ವಸುದೇವನಮಾತನ್ನು, ಭೂಯಃ-ಮರಳಿಯೂ, ಮಾನಯಾಮಾಸ-ಸನ್ಮಾನಿಸಿದನು. ॥೨೪॥ಏಕದಾ-ಒಂದುಕಾಲದಲ್ಲಿ, ಭಾಮಿನೀ-ಯಶೋದೆಯು, ಅರ್ಭಕಂ-ಶಿಶುವನ್ನು, ಆದಾಯ-ಎತ್ತಿಕೊಂಡು, ಸ್ವಾಂಕಂ-ತನ್ನ ತೊಡೆಯನ್ನು, ಆರೋಪ್ಯ-ಏರಿಸಿಕೊಂಡು, ಸ್ನೇಹಪರಿಪ್ಲುತಾ-ಸ್ನೇಹ-ಅನುರಾಗದಿಂದ, ಪರಿಪ್ಲುತಾ-ತೊಯ್ದವಳಾಗಿ, ಪ್ರಸ್ನುತಂ-ಹೆಚ್ಚಾಗಿಜನಿಯುತ್ತಿರುವ, ಸ್ತನಂ-ಮೊಲೆಯನ್ನು, ಪಾಯಯಾಮಾಸ-ಕುಡಿಸಿದಳು. ॥೨೫॥ ಜನನೀ-ತಾಯಿಯಾದಯಶೋದೆಯು, ಪೀತಪ್ರಾಯಸ್ಯ- ಮೊಲೆಕುಡಿದಾದಂತವನಾದ, ಅಥವಾ ಕುಡಿಯಲ್ಪಟ್ಟಂತಾದಮೊಲೆಯುಳ್ಳವನಾದ, ಸುತಸ್ಯ-ಮಗನ, ರುಚಿರಸ್ಮಿತಂ-ಮನೋಹರವಾದಕಿರುನಗೆಯುಳ್ಳ, ಮುಖಂ-ಮೋರೆಯನ್ನು, ಲಾಲಯತೀ-ಮುದ್ದಿಸುತ್ತಿರುವಳಾಗಿ, ಜೃಂಭತಸ್ಸತಃ-ಆಕಳಿಸಿದವನಾಗುತ್ತಿರಲು, ಜಗತ್-ಪ್ರಪಂಚವನ್ನೇ, ದದೃಶೇ-(ಅವ

---

ಬಂದುಸೇರಿದನು." ಎಂದು ವಿಷಾದವನ್ನೂ ವಿಸ್ಮಯವನ್ನೂ ಪಡೆದರು. ॥೨೧॥ (ಮತ್ತು ಗೋಪರಲ್ಲಿ ಕೆಲವರು ಇದೇನಾಶ್ಚರ್ಯವು. ಯುಕ್ತವೇಸರಿ." ಎಂದುನುಡಿದರು.) ಅದೆಂತೆನೆ- ಹಿಂಸಕನಾದ ತೃಣಾವರ್ತನೆಂಬ ದೈತ್ಯನು ದುಷ್ಟನಾದುದರಿಂದ ತನ್ನಪಾಪದಿಂದ ತಾನೇಹಿಂಸೆಯಂ ಪಡೆದನು. ಸರ್ವರಲ್ಲಿಯೂ ಸಮನಾಗಿರುವ ಸಾಧುವಾದಪುರುಷನು ಭಯದಿಂದತಾನೇಬಿಡಲ್ಪಡುವನು. ಆದರೂ ನಮ್ಮಿಂದ ಪೂರ್ವದಲ್ಲಿ ಯಾವ ತಪಸ್ಸು ಮಾಡಲ್ಪಟ್ಟಿತ್ತೋ? ಅಥವಾ ಅಧೋಕ್ಷಜನಪೂಜೆಮಾಡಲ್ಪಟ್ಟಿತ್ತೋ; ಅಥವಾ ವಾಪೀಕೂಪಾದಿ ನಿರ್ಮಾಣವೂ, ಪಂಚಮಹಾಯಜ್ಞಗಳೂ, ಅಗ್ನಿಹೋತ್ರಾದಿಗಳೂ, ದಾನಧರ್ಮಗಳೂ, ಯಾವಸತ್ಕರ್ಮಂಗಳು ಮಾಡಲ್ಪಟ್ಟದ್ದವೋ? ॥೨೨॥ ಆಪುಣ್ಯಪ್ರಭಾವದಿಂದಲೂ ತನ್ನ ಅದೃಷ್ಟವಶದಿಂದಲೂ ಈಶಿಶುವು ಕ್ಷೇಮದಿಂ ಬಂದುಸೇರಿ ಬಂಧುಗಳಾದ ನಮ್ಮಂ ಸಂತೋಷಪಡಿಸುವನಾದನು. ॥೨೩॥ ಹೀಗೆಂದು ನಂದಗೋಪನು ಬೃಹದ್ವನದಲ್ಲಿ ಸಂತುಷ್ಟನಾಗಿ ಗೋಕುಲದೊಳಗೆ ಬಹಳವಾಗಿಉಂಟಾದ ಉತ್ಪಾತಂಗಳಂಕಂಡು ಆಶ್ಚರ್ಯವಂಪಡೆದವನಾಗಿ ವಸುದೇವನವಚನವಂ ಬ್ಬಾರಿಬಾರಿಗೂ ಬಹುಮಾನಿಸಿದನು ॥೨೪॥ಅನಂತರದಲ್ಲಿ ಯಶೋದಾದೇವಿಯು ಒಂದುಸಮಯದಲ್ಲಿ ತನ್ನ ಬಾಲಕನಂ ಎತ್ತಿಕೊಂಡುಮೇಲೆ ಕುಳ್ಳಿರಿಸಿಕೊಂಡು ಸ್ನೇಹಭರಿತಳಾಗಿ ಮೋಹದಿಂದ ಉಕ್ಕಿಬರುವಸ್ತನ್ಯಕ್ಷೀರವಂ ಪಾನವಂಗೆಯಿಸಿದಳು. ॥೨೫॥ ಎಲೈ, ಅರಸೇ; ಆಗ ತಾಯಿಯಾದ ಯಶೋದೆಯು ಸ್ತನ್ಯಪಾನಂಗೆ

ಯತೀರಾಜನ್ಜೃಂಭತೋದದೃಶೆಜಗತ್ ‖೩೬‖ ಖಂರೋದಸೀಜ್ಯೋತಿರನೀಕಮಾಶಾಸ್ಸೂರ್ಯೇನ್ದುವಹ್ನಿಶ್ವಸ
ನಾಮ್ಬುಧೀಂಶ್ಚ|ದ್ವೀಪಾನ್ನಗಾಂಸ್ತದ್ದುಹಿತೄರ್ವನಾನಿಭೂತಾನಿಯಾನಿಸ್ಥಿರಜಙ್ಗಮಾನಿ‖೩೭‖ಸಾವೀಕ್ಷ್ಯ
ವಿಶ್ವಂಸಹಸಾರಾಜಾ ತ್ಸಂಜಾತವೇಪಥುಃ|ಸಮ್ಮೀಲ್ಯಮೃಗಶಾಬಾಕ್ಷೀನೇತ್ರೇಚಾಸೀತ್ಸುವಿಸ್ಮಿತಾ.. ...‖೩೮‖
ಇತಿಶ್ರೀಮದ್ಭಾಗವತೆ- ದಶಮಸ್ಕನ್ಧೇ- ಸಪ್ತಮೋಽಧ್ಯಾಯಃ-

---

ನಬಾಯಲ್ಲಿ)ಕಂಡಳು ‖೩೬‖ ಖಂ-ಆಕಾಶವನ್ನೂ, ರೋದಸೀ-ಭೂಸ್ವರ್ಗಲೋಕಗಳನ್ನೂ, ಜ್ಯೋತಿರನೀಕಂ-ನಕ್ಷತ್ರಾದಿ ಪ್ರಕಾಶಗಣವನ್ನೂ, ಆಶಾಃ-ದಿಕ್ಕುಗಳನ್ನೂ, ಸೂರ್ಯ-ಸೂರ್ಯನನ್ನೂ, ಇಂದು-ಚಂದ್ರನನ್ನೂ, ವಹ್ನಿ-ಅಗ್ನಿಯನ್ನೂ, ಶ್ವಸನ-ಗಾಳಿಯನ್ನೂ, ಅಂಬುಧೀಂಶ್ಚ-ಸಮುದ್ರಗಳನ್ನೂ, ದ್ವೀಪಾನ್-ಜಲಮಧ್ಯಭೂಮಿಗಳನ್ನೂ, ನಗಾನ್-ಬೆಟ್ಟಗಳನ್ನೂ, ತದ್ದುಹಿತೄಃ-ಅದ್ರಿಗಳಪುತ್ರಿಯರಾದ ಹೊಳೆಗಳನ್ನೂ, ವನಾನಿ-ಕಾಡುಗಳನ್ನೂ, ಭೂತಾನಿ-ಪ್ರಾಣಿಗಳನ್ನೂ, ಸ್ಥಿರಜಂಗಮಾನಿ- ಅಚರಚರವಸ್ತುಗಳು, ಯಾನಿ-ಯಾವವೋ, ತಾನಿ-ಅವುಗಳನ್ನೂ, ‖೩೭‖ ರಾಜನ್-ಅರಸೇ; ಸಾ-ಆಯಶೋದೆಯು, ವಿಶ್ವಂ-ಪ್ರಪಂಚವನ್ನು, ವೀಕ್ಷ್ಯ-ನೋಡಿ, ಸಂಜಾತವೇಪಥುಃ-ಹುಟ್ಟಿಪನಡುಗುವುಳ್ಳವಳಾಗಿ, ಮೃಗಶಾಬಾಕ್ಷೀ-ಮೃಗಶಾಬ-ಹುಲ್ಲೆಯಮರಿಗೆಹೇಗೋಹಾಗೆ, ಅಕ್ಷೀ-ಕಂಗಳುಳ್ಳವಳಾದ್ದರಿಂದಲೇ, ನೇತ್ರೇಚ-ಕಂಗಳನ್ನು, ಸಮ್ಮೀಲ್ಯ-ಮುಚ್ಚಿಕೊಂಡು, ಸುವಿಸ್ಮಿತಾ-ಚನ್ನಾಗಿಅಚ್ಚರಿಗೊಂಡವಳು ಆಸೀತ್-ಆದಳು‖೩೮‖
ಇತಿಶ್ರೀಮದ್ಭಾಗವತ ಪ್ರತಿಶಬ್ದಾರ್ಥಬೋಧಿನ್ಯಾಂ ದಶಮಸ್ಕಂಧೇ
ಸಪ್ತಮೋಽಧ್ಯಾಯಃ-

---

ಯ್ಯಾಬಾಲಕನ ಮನೋಹರವಾದ ಮುಗುಳುನಗೆಯುಳ್ಳ ಮುದ್ದುಮುಖವಂನೋಡಿ ಲಾಲನಂಗೆಯ್ಯಲಾಗಿ ಆಕಳಿಸಿದ ಆಮಗುವಿನ ಬಾಯಿಯೊಳಗೆ ಜಗವೆಲ್ಲವಂಕಂಡಳು.‖೩೬‖ ಅದೆಂತೆನೆ- ಆಕಾಶ, ದ್ಯಾವಾಭೂಮಿಗಳು, ಜ್ಯೋತಿಶ್ಚಕ್ರವು, ದಿಕ್ಕುಗಳು, ಸೂರ್ಯ ಚಂದ್ರ ಅಗ್ನಿಗಳು, ಗಾಳಿ, ಸಮುದ್ರಗಳು, ಸ್ಥಾವರಜಂಗಮಪ್ರಾಣಿಗಳು ದ್ವೀಪಗಳು, ಬೆಟ್ಟಗಳು, ಹೊಳೆಗಳು, ವನಗಳು ಇವೆಲ್ಲವಂ ಕಂಡಳು. ‖೩೭‖ ಎಲೈ, ರಾಜೇಂದ್ರನೇ? ಹುಲ್ಲೆಯಮರಿಯ ಕಣ್ಣುಗಳಂತಿರುವ ಕಣ್ಣುಗಳುಳ್ಳ ಯಶೋದಾದೇವಿಯು ಈರೀತಿಯಲ್ಲಿ ಆಬಾಲಕನ ಮುಖದಲ್ಲಿ ಜಗತ್ತಂಕಂಡು, ತತ್ಕ್ಷಣದಲ್ಲಿ ಗಡಗಡನೆ ನಡುಗುವಳಾಗಿ ಕಣ್ಣುಗಳು ಮುಚ್ಚಿಕೊಂಡು ಅತ್ಯಂತಾಶ್ಚರ್ಯವನೆಯ್ದಿದಳು... ... .. ... .. ‖೩೮‖



ಇಂತು ಶುಕಮುನಿಯು ಪರೀಕ್ಷಿದ್ರಾಯನಿಗೆ ನಿರೂಪಿಸಿದನೆಂದು ಸೂತಪೌರಾಣಿಕನು ನೈಮಿಶಾರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಹೇಳಿದನೆಂಬಲ್ಲಿಗೆ- ಶ್ರೀಮನ್ಮಹೀಶೂರಪುರವರಾಧೀಶ ಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜ ವಿರಚಿತಮಪ್ಪ ಶ್ರೀಭಾಗವತದ ಶ್ರೀಕೃಷ್ಣರಾಜವಾಣೀವಿಳಾಸವು, ಎಂಬಕರ್ಣಾಟಭಾಷಾ ವ್ಯಾಖ್ಯಾನದಲ್ಲಿ ದಶಮಸ್ಕಂಧದೊಳು ಸಪ್ತಮಾಧ್ಯಾಯವು ಸಂಪೂರ್ಣವಾದುದು.....................

ಮಂಗಳಮಸ್ತು

ಶ್ರೀಬಾದರಾಯಣಿಃ ॥ ಗರ್ಗಃಪುರೋಹಿತೋರಾಜನ್ಯದೂನಾಂಸುಮಹಾತಪಾಃ । ವ್ರಜಜ್ಞಾಗಾಮನನ್ದಸ್ಯವಸುದೇವಪ್ರಚೋದಿತಃ ॥೧॥ ತಂದೃಷ್ಟ್ವಾಪರಮಪ್ರೀತಃಪ್ರತ್ಯುತ್ಥಾಯಕೃತಾಂಜಲಿಃ । ಆನರ್ಚಾಧೋಕ್ಷಜಧಿಯಾಪ್ರಣಿಪಾತಪುರಸ್ಸರಮ್ ॥೨॥ ಸೂಪವಿಷ್ಟಂಕೃತಾತಿಥ್ಯಂಗಿರಾಸೂನೃತಯಾಮುನಿಮ್

---

೮ನೆಯಅಧ್ಯಾಯ- ಪ್ರತಿಪದಟೀಕೆ.

[ ಶುಕವಾಕ್ಯವು.] ರಾಜನ್-ಅರಸಾದಪರೀಕ್ಷಿತನೇ! ಸುಮಹಾತಪಾಃ-ಸಮೀಚೀನವಾದದೊಡ್ಡತಪಸ್ಸುಳ್ಳ, ಯದೂನಾಂ-ಯಾದವರ, ಪುರೋಹಿತಃ-ಯಾಜಕನಾದ, ಗರ್ಗಃ-ಗರ್ಗಮುನಿಯು, ವಸುದೇವಪ್ರಚೋದಿತಸ್ಸನ್-ವಸುದೇವನಿಂದಪ್ರೇರಿಸಲ್ಪಟ್ಟವನಾಗಿ, ನಂದಸ್ಯ-ನಂದಗೋಪನ, ವ್ರಜಂ-ಗೋಕುಲವಂಕುರಿತು, ಜಗಾಮ-ಹೋದನು ॥೧॥ತಂ-ಆಮುನಿಯನ್ನು, ದೃಷ್ಟ್ವಾ-ನೋಡಿ, ಪರಮಪ್ರೀತಃ-ಉತ್ತಮವಾದಪ್ರೀತಿಯುಳ್ಳವನಾಗಿ, ಪ್ರತ್ಯುತ್ಥಾಯ- ಎದುರಿಗೆಎದ್ದುಹೋಗಿ, ಕೃತಾಂಜಲಿಃ-ಮಾಡಲ್ಪಟ್ಟಬಾಗುಸಯುವನಾಗಿ, (ಕೈಜೋಡಿಸಿಕೊಂಡು) ಪ್ರಣಿಪಾತಪುರಸ್ಸರಂ-ಸಾಷ್ಟಾಂಗನಮಸ್ಕಾರಪೂರ್ವಕವಾಗಿ, ಅಧೋಕ್ಷಜಧಿಯಾ-ವಿಷ್ಣುವೆಂಬ ಬುದ್ಧಿಯಿಂದ, ಆನರ್ಚ-ಪೂಜಿಸಿದನು ॥೨॥ ಸೂಪವಿಷ್ಟಂ- ಚೆನ್ನಾಗಿಕುಳಿತಂಥಾ, ಕೃತಾತಿಥ್ಯಂ- ಮಾಡಲ್ಪಟ್ಟಅತಿಥಿಸತ್ಕಾರವುಳ್ಳ ಮುನಿಂ-ಗರ್ಗಮುನಿಯನ್ನು, ಸೂನೃತಯಾ-ಸತ್ಯವಾದ, ಗಿರಾ-ವಚನದಿಂದ, ನಂದಯಿತ್ವಾ-ಸಂತೋಷಪಡಿಸಿ, ಅಬ್ರವೀತ್-ಹೇಳಿದನು. ಬ್ರಹ್ಮನ್-ಬ್ರಾಹ್ಮಣನೇ, ಪೂರ್ಣಸ್ಯ- ತುಂಬಿದವನಾದ, (ಕೃತಾರ್ಥನಾದ)ತೇ-ನಿನಗೆ, ಕಿಂಕರವಾಮ- ಯಾವಸತ್ಕಾರವ

---

ಶ್ರೀಧರೀಯಶ್ಲೋಕ॥ ಅಷ್ಟಮೇನಾಮಕರ್ಮಾಸ್ಯ ಬಾಲಕ್ರೀಡಾಕುತೂಹಲೇ। ಮೃದ್ಭಕ್ಷಣಾದಿಯೋಗೇಚ ವಿಶ್ವರೂಪಂನಿರೂಪ್ಯತೇ॥ ಟೀ ॥ಎಂಟನೆಯ ಅಧ್ಯಾಯದಲ್ಲಿ ಬಾಲಕನಾದಸ್ವಾಮಿಗೆ ನಾಮಕರಣವೂ ಬಾಲಲೀಲೆಯಲ್ಲಿ ಮಣ್ಣನ್ನು ಭಕ್ಷಿಸಿದಾಗ ಬಾಯಂತೆರದು ವಿಶ್ವರೂಪಂತೋರಿದಮಹಿಮೆಯೂ ನಿರೂಪಿಸಲ್ಪಡುತ್ತೆ.*ಪೂರ್ವಾಧ್ಯಾಯದಲ್ಲಿ ಶ್ರೀಶುಕಾಚಾರ್ಯನು ಪರೀಕ್ಷಿದ್ರಾಯನಂಕುರಿತು ಶ್ರೀಕೃಷ್ಣದೇವನು ಶಕಟ ತೃಣಾವರ್ತರಂ ಸಂಹಾರಗೆಯ್ದುದಂ ನಿರೂಪಿಸಿ ಅನಂತರದಲ್ಲಿ ನುಡಿಯುವನದೆಂತೆನೆ-

ಎಲೈ, ಅರಸಾದ ಪರೀಕ್ಷಿದ್ರಾಯನೇ! ಯದುಕುಲಕ್ಕೆ ಪುರೋಹಿತನಾಗಿಯೂ ಮಹಾತಪೋವಂತನಾಗಿಯೂ ಇರುವ ಗರ್ಗಾಚಾರ್ಯನು ವಸುದೇವನಿಂದ ಕಳುಹಿಸಲ್ಪಟ್ಟವನಾಗಿ ನಂದಗೋಕುಲಕ್ಕೆ ಬಂದನು.॥೧॥ ಆಗರ್ಗಮುನಿಯಂಕಂಡು ನಂದಗೋಪನು ಅತ್ಯಂತಪ್ರೀತಿಯುಳ್ಳವನಾಗಿ ಮೇಲಕ್ಕೆದ್ದು ಕೈಜೋಡಿಸಿಕೊಂಡು ನಮಸ್ಕಾರಮಾಡಿ ಈತನೇದೇವರೆಂಬಬುದ್ಧಿಯಿಂದ ಪೂಜೆಮಾಡಿದನು.॥೨॥ ಬಳಿಕ ಭೋಜನಮಾಡಿಬಂದು ಗದ್ದುಗೆಯಲ್ಲಿಕುಳಿತಿರುವ ಗರ್ಗಮುನಿಯಂ ಸತ್ಯಪ್ರಿಯವಚನಗಳಿಂದ ಸಂತೋಷಪಡಿಸಿ ,, ಎಲೈ ಬ್ರಹ್ಮಜ್ಞಾನಿಯಾದ


ನಂದಗೋಪನು


ಗರ್ಗಮುನಿಯು

ನನ್ವಯಿತ್ವಾಬ್ರಹ್ಮವಿದ್ಬ್ರಹ್ಮನ್ಪೂರ್ಣಸ್ಯಕರವಾಮಕಿಮ್ ॥ ೩ ॥ ಮಹದ್ವಿಚಲನಂನೃಣಾಂಗೃಹಿಣಾ
ನ್ದೀನಚೇತಸಾಮ್ । ನಿಶ್ಶ್ರೇಯಸಾಯಭಗವನ್ನಾನ್ಯಥಾಕಲ್ಪತೇಕ್ವಚಿತ್ ॥ ೪ ॥ ಜ್ಯೋತಿಷಾಮಯನಂಸಾ
ಕ್ಷಾದ್ಯತ್ತದ್ಜ್ಞಾನಮತೀನ್ದ್ರಿಯಮ್ । ಪ್ರಣೀತಮ್ಭವತಾಯೇನಪುಮಾನ್ವೇದಪರಾಪರಮ್ ॥೫॥ ತ್ವಂಹಿಬ್ರ
ಹ್ಮವಿದಾಂಶ್ರೇಷ್ಠಸ್ಸಂಸ್ಕಾರಾನ್ಕರ್ತುಮರ್ಹಸಿ । ಬಾಲಯೋರನಯೋರ್ನೃಣಾಂಜನ್ಮನಾಬ್ರಾಹ್ಮಣೋಗು
ರುಃ ॥೬॥ ಗರ್ಗಾಚಾರ್ಯಃ॥ ಯದೂನಾಮಹಮಾಚಾರ್ಯಃಖ್ಯಾತಶ್ಚಭುವಿಸರ್ವತಃ। ಸುತಂಮಯಾಸಂಸ್ಕೃ
ತಂತೇಮನ್ಯತೇದೇವಕೀಸುತಮ್ ॥೭॥ ಕಂಸಃಪಾಪಮತಿಸ್ಸಖ್ಯಂತವಚಾನಕದುನ್ದುಭೇಃ । ದೇವಕ್ಯಾಅಷ್ಟಮೋ

---

ನ್ನು ಮಾಡುವೆವು ॥೩॥ಭಗವನ್- ಸರ್ವಜ್ಞನಾದ ಮುನಿಯೇ; ಮಹದ್ವಿಚಲನಂ- ಮಹತ್- ದೊಡ್ಡವರ, ವಿಚಲನಂ- ತಮ್ಮ ಆಶ್ರಮವಂಬಿ
ಟ್ಟು ಅನ್ಯತ್ರ ಬರುವಿಕೆಯು, ದೀನಚೇತಸಾಂ-ಬಡಬುದ್ಧಿಯುಳ್ಳ, ಗೃಹಿಣಾಂ-ಗೃಹಸ್ಥರಾದ, ನೃಣಾಂ- ಮನುಷ್ಯರ, ನಿಶ್ಶ್ರೇಯಸಾ
ಯ-ಮಂಗಳಾರ್ಥವಾಗಿಯೇ. ಅನ್ಯಥಾ-ಹಾಗಲ್ಲದಿದ್ದರೆ, ಕ್ವಚಿತ್-ಎಲ್ಲಿಯೂ, ನಕಲ್ಪತೇ- ( ಬಡಗೃಹಸ್ಥರಿಗೆ ಮಹಾತ್ಮರ ದರ್ಶನವು)
ಆಗಲಾರದು ॥೪॥ಯೇನ-ಯಾವಶಾಸ್ತ್ರದಿಂದ, ಪುಮಾನ್-ಪುರುಷನು, ಪರಾಪರಂ-ಪರ-ಪೂರ್ವಜನ್ಮಕರ್ಮಫಲವನ್ನೂ, ಅಪರಂ-ಭವಿ
ಷ್ಯತ್ಕಾಲಫಲವನ್ನೂ, ವೇದ- ತಿಳಿಯುವನೋ, ಜ್ಯೋತಿಷಾಂ- ಸೂರ್ಯಚಂದ್ರಗ್ರಹನಕ್ಷತ್ರಗಳಿಗೆ, ಅಯನಂ-ಗತಿಜ್ಞಾಪಕವಾದ
ಸಾಕ್ಷಾತ್-ಪ್ರತ್ಯಕ್ಷನಿದರ್ಶನವಾದ, ಅತೀಂದ್ರಿಯಂಜ್ಞಾನಂ-ಇಂದ್ರಿಯಗಳಿಗೆ ಗೋಚರವಾಗದ ತಿಳುವಳಿಕೆಯು, ಯತ್-ಯಾವುದೋ
ತತ್-ಆಜ್ಯೋತಿಶ್ಶಾಸ್ತ್ರವು, ಭವತಾ-ನಿನ್ನಿಂದ, ಪ್ರಣೀತಂ-ಹೇಳಲ್ಪಟ್ಟದ್ದು ॥೫॥ ಬ್ರಹ್ಮವಿದಾಂ-ವೇದವನ್ನು ಬಲ್ಲವರೊಳಗೆ, ಶ್ರೇಷ್ಠಃ
ಉತ್ತಮನಾದವನು, ತ್ವಂಹಿ-ನೀನಷ್ಟೆ, ತತ್-ಆಕಾರಣದಿಂದ, ಅನಯೋರ್ಬಾಲಯೋಃ-ಈಹುಡುಗರಿಗೆ, ಸಂಸ್ಕಾರಾನ್- ನಾಮಕ
ರಣಾದಿಸ್ಮಾರ್ತಕರ್ಮಗಳನ್ನು, ಕರ್ತುಂ- ಮಾಡುವುದಕ್ಕೆ, ಅರ್ಹಸಿ- ಯೋಗ್ಯನಾಗುವಿ, ನೃಣಾಂ-ಮನುಷ್ಯರಿಗೆ, ಬ್ರಾಹ್ಮಣಃ-
ಬ್ರಾಹ್ಮಣನು, ಜನ್ಮನಾ-ಹುಟ್ಟುವಿಕೆಯಿಂದಲೇ, ಗುರುಃ-ಆಚಾರ್ಯನಾಗಿರುವನು ॥೬॥(ಗರ್ಗವಚನವು)ಅಹಂ-ನಾನು, ಯದೂನಾಂ-
ಯಾದವರಿಗೆ, ಆಚಾರ್ಯಃ-ಪುರೋಹಿತನಾದವನು ಭುವಿ-ಭೂಲೋಕದಲ್ಲಿ, ಸರ್ವತಃ-ಎಲ್ಲಕಡೆಗಳಲ್ಲಿಯೂ, ಖ್ಯಾತಶ್ಚ-ಪ್ರಸಿದ್ಧನೂ
ಆಗಿರುವೆನು. ಮಯಾ-ನನ್ನಿಂದ, ಸಂಸ್ಕೃತಂ- ನಾಮಕರಣಾದಿಸಂಸ್ಕಾರಗೊಳಿಸಲ್ಪಟ್ಟ, ತೇ-ನಿನ್ನ, ಸುತಂ-ಮಗನನ್ನು, ದೇವ
ಕೀಸುತಂ-ದೇವಕಿಯಮಗನನ್ನಾಗಿ, ಮನ್ಯತೇ-(ಕಂಸನು)ತಿಳಿಯುವನು ॥೭॥ ಕಂಸಃ-ಕಂಸನು, ಪಾಪಮತಿಃ-ದುರಿತಬುದ್ಧಿಯುಳ್ಳವ

---

ಬ್ರಾಹ್ಮಣೋತ್ತಮನೇ, ಪೂರ್ಣಕಾಮನಾದ (ಆಶೆಯಿಲ್ಲದ)ನಿನಗೆನಾನು ಏನುಸತ್ಕಾರವಂ ಮಾಡಲಾಪುವೆನು? , ಎಂ
ದುನುಡಿದನು. ॥೩॥ ಎಲೈ, ಜ್ಞಾನಾದಿಗುಣಸಂಪನ್ನನಾದ ಗರ್ಗಮುನಿಯೇ! ನಿಮ್ಮಂತಾ ಮಹಾತ್ಮರ ಸಂಚಾರವು
ನಿಮ್ಮ ಯಿಷ್ಟಾರ್ಥಕ್ಕೋಸುಗವಲ್ಲವು. ಮತ್ತೇನೆಂದರೆ- ಕ್ಷಣಮಾತ್ರವಾದರೂ ಮನೆಯಂಬಿಟ್ಟು ಹೊರಗೆಹೋ
ಗುವುದಕ್ಕೆ ಅನುಕೂಲವಿಲ್ಲದ ಗೃಹಕೃತ್ಯದಲ್ಲಿ ಶ್ರಮಪಟ್ಟುಕೊಂಡು ಕೃಪಣರಾಗಿರುವ ಪುರುಷರ ಕ್ಷೇಮಕ್ಕೋ
ಸುಗವೇ. ॥೪॥ಯಾವಶಾಸ್ತ್ರದಿಂದ ಅನ್ಯನಾದಪುರುಷನೂಕೂಡ ಅನ್ಯನ ಪೂರ್ವಜನ್ಮದ ಕರ್ಮವನ್ನು ಅದಕ್ಕೆ
ಕಾರ್ಯವಾದ ಈಜನ್ಮದಫಲವನ್ನೂ ಮುಂದೆಅನುಭವಿಸತಕ್ಕಫಲವನ್ನೂ ತಿಳಿದುಕೊಳ್ಳಲಾಪುವನೋ ಅಂಥಾ ಇಂ
ದ್ರಿಯಗೋಚರವಲ್ಲದ ಜ್ಞಾನಕ್ಕೆ ಸಾಧನವಾದ ಜ್ಯೋತಿಶ್ಶಾಸ್ತ್ರವು ಪ್ರತ್ಯಕ್ಷವಾಗಿ ನಿನ್ನಿಂದ ನಿರೂಪಿಸಲ್ಪಟ್ಟಿದೆ.
[ ಗರ್ಗಮುನಿಯಿಂದ ರಚಿಸಲ್ಪಟ್ಟಿರುವ ಹೋರಾಸಂಹಿತೆಯೆಂಬ ಜ್ಯೋತಿಶ್ಶಾಸ್ತ್ರಗ್ರಂಥದಿಂದ ಜಾತಕಫಲಗಳ
ನ್ನೂ ಜಾತಕನ ಜನ್ಮಾಂತರಫಲಗಳನ್ನೂ ಭವಿಷ್ಯದ್ಗತಿಯನ್ನೂ ತಿಳಿಯಬಹುದಾಗಿದೆ. ] ॥೫॥ಮತ್ತು ನೀನು ಬ್ರಾ
ಹ್ಮಣನು, ಬ್ರಹ್ಮಜಾತಿಯಲ್ಲಿ ಹುಟ್ಟಿದಮಾತ್ರದಿಂದಲೇ ಜನರಿಗೆ ಗುರುವಾಗಿರುವಿ, ಮತ್ತು ಬ್ರಹ್ಮಜ್ಞಾನಿಗಳಲ್ಲಿ ಶ್ರೇ
ಷ್ಠನಾಗಿಯೂ ಇರುವಿ, ಆದ್ದರಿಂದ ಈಹುಡುಗರಿಬ್ಬರಿಗೂ ನಾಮಕರಣಾದಿಸಂಸ್ಕಾರಗಳನ್ನು ಮಾಡುವನಾಗು ॥೬॥
(ಇಂತೆಂಬ ನಂದವಚನವಂಕೇಳಿ ಗರ್ಗಮುನಿಯು ಅವನಂಕುರಿತು ಈಕಾರ್ಯವು ರಹಸ್ಯವಾಗಿಮಾಡತಕ್ಕದೆಂ
ಬ ಅಭಿಪ್ರಾಯವಂ ಸಮ್ಮತಿಸದೇ ಇರುವವನಹಾಗೆ ನುಡಿದನು. )ಹೇಗೆಂದರೆ-" ನಾನು ಯಾದವರಿಗೆ ಪುರೋಹಿತ
ನಾದ ಆಚಾರ್ಯನೆಂದು ಭೂಮಿಯಲ್ಲಿ ಸರ್ವದಾಪ್ರಖ್ಯಾತಿಯಂಪಡೆದಿರುವೆನು. ಅಂತಾನಾನು ಈಬಾಲಕರಿಗೆ ನಾ
ಮಕರಣಾದಿಗಳನ್ನು ಮಾಡಿಸಿದರೆ ನಿನ್ನ ಮಗನನ್ನು ಕಂಸನುದೇವಕೀದೇವಿಯಮಗನೆಂದು ತಿಳಿದುಕೊಳ್ಳುವ
ನು. ॥೭॥(" ನೀನು ಯದುಕುಲಕ್ಕೆ ಆಚಾರ್ಯನಾಗಿ ಇಲ್ಲಿಬಂದುನಾಮಕರಣಮಾಡಿದರೆ ಈಶಿಶುವನ್ನು ಕಂಸ

ಅರಾಜಕೇ ರಕ್ಷ್ಯಮಾಣಾ ಜಘ್ನುರ್ದಸ್ಯೂನ್ ಸಮೇಧಿತಾಃ ॥೧೮॥ ಯ ಏತಸ್ಮಿನ್ಮಹಾಭಾಗಾಃ ಪ್ರೀತಿಂ ಕುರ್ವನ್ತಿ ಮಾನವಾಃ। ನಾರಯೋಽಭಿಭವನ್ತ್ಯೇತಾನ್ ವಿಷ್ಣುಪಕ್ಷಾನಿವಾಸುರಾಃ ॥೧೯॥ ತಸ್ಮಾನ್ನನ್ದಾತ್ಮಜೋಽಯಂ ತೇ ನಾರಾಯಣಸಮೋ ಗುಣೈಃ। ಶ್ರಿಯಾ ಕೀರ್ತ್ಯಾನುಭಾವೇನ ಗೋಪಾಯಸ್ವ ಸಮಾಹಿತಃ ॥೨೦॥ ಇತ್ಯಾತ್ಮಾನಂ ಸಮಾದಿಶ್ಯ ಗರ್ಗೇ ಚ ಸ್ವಗೃಹಂ ಗತೇ। ನಂದಃ ಪ್ರಮುದಿತೋ ಮೇನೇ ಹ್ಯಾತ್ಮಾನಂ ಪೂರ್ಣಮಾಶಿಷಾಮ್ ॥೨೧॥ ಕಾಲೇ

*-ಬಾಲಕ್ರೀಡಾ ಪ್ರಾರಮ್ಭಃ-*

ನ ವ್ರಜತಾ ತಾತ ಗೋಕುಲೇ ರಾಮಕೇಶವೌ। ಜಾನುಭ್ಯಾಂ ಸಹ ಪಾಣಿಭ್ಯಾಂ ರಿಂಗಮಾಣೌ ವಿಜಹ್ರತುಃ ॥೨೨॥ ತಾವಂಘ್ರಿಯುಗ್ಮಮನುಕೃಷ್ಯ ಸರೀಸೃಪನ್ತೌ ಘೋಷಪ್ರಘೋಷರುಚಿರಂ ವ್ರಜಕರ್ದಮೇಷು। ತನ್ನಾದಹೃ

---

ರಾ-ಪೂರ್ವಕಾಲದಲ್ಲಿ, ದಸ್ಯುಪೀಡಿತಾಃ-ಕಳ್ಳರಿಂದ ಬಾಧಿಸಲ್ಪಟ್ಟ, ಸಾಧವಃ-ಸತ್ಪುರುಷರು, ಅನೇನ-ಈ ಪುರುಷನಿಂದ, ರಕ್ಷ್ಯಮಾಣಾಃ-ಪಾಲಿಸಲ್ಪಡುವರಾಗಿಯೂ, ಸಮೇಧಿತಾಃ-ವೃದ್ಧಿಹೊಂದಿಸಲ್ಪಟ್ಟವರೂ ಆಗಿ, ದಸ್ಯೂನ್-ಕಳ್ಳರನ್ನು, ಜಘ್ನುಃ-ಹೊಡೆದರು ॥೧೮॥ ಮಹಾಭಾಗಾಃ- ಹೆಚ್ಚಾದ ಪೂಜ್ಯತೆಯುಳ್ಳ. ಏತಸ್ಮಿನ್-ಈ ಕೃಷ್ಣನಲ್ಲಿ, ಯೇ ಮಾನವಾಃ-ಯಾವ ಮನುಷ್ಯರು, ಪ್ರೀತಿಂ-ಪ್ರಿಯಬುದ್ಧಿಯನ್ನು, ಕುರ್ವಂತಿ-ಮಾಡುತ್ತಿರುವರೋ ತಾನೇತಾನ್-ಆಯಾ ಮನುಷ್ಯರನ್ನು, ಅಸುರಾಃ-ದೈತ್ಯರು, ವಿಷ್ಣುಪಕ್ಷಾನಿವ-ವೈಷ್ಣವರನ್ನು ಹೇಗೋ ಹಾಗೆ, ಅರಯಃ-ಶತ್ರುಗಳು, ನಾಭಿಭವಂತಿ-ತಿರಸ್ಕರಿಸುವುದಿಲ್ಲವು ॥೧೯॥ ತಸ್ಮಾತ್-ಆ ಕಾರಣದಿಂದ, ಅಯಂ ನಂದಾತ್ಮಜಸ್ತು-ಈ ನಂದಗೋಪನ ಪುತ್ರನಾದರೋ, ಶ್ರಿಯಾ-ಸಂಪತ್ತಿನಿಂದಲೂ, ಕೀರ್ತ್ಯಾ- ಹೆಸರುವಾಸಿಯಿಂದಲೂ, ಅನುಭಾವೇನ- ಸಾಮರ್ಥ್ಯದಿಂದಲೂ. ಗುಣೈಃ-ದಯೆ ದಾಕ್ಷಿಣ್ಯಾದಿ ಸುಗುಣಗಳಿಂದಲೂ, ನಾರಾಯಣಸಮಃ- ವಿಷ್ಣುವಿನೊಡನೆ ಸರಿಯಾದವನು, (ಇವನನ್ನು) ಸಮಾಹಿತಃ-ಸಮಾಧಾನಗೊಂಡ (ಜಾಗರೂಕನಾದ) ನೀನು, ಗೋಪಾಯಸ್ವ-ರಕ್ಷಿಸಿಕೋ ॥೨೦॥ ಇತಿ-ಹೀಗೆ, ಆತ್ಮಾನಂ-ತನ್ನನ್ನು ಕುರಿತು, ಸಮಾದಿಶ್ಯ-ಹೇಳಿ, (ಆಜ್ಞಾಪಿಸಿ) ಗರ್ಗೇ(ಚ)-ಗರ್ಗಮುನಿಯೂ, ಸ್ವಗೃಹಂ- ತನ್ನ ಮನೆಯನ್ನು ಕುರಿತು, ಗತೇಸತಿ- ಹೋದವನಾಗುತ್ತಿರಲು, ನಂದಃ-ನಂದಗೋಪನು, ಪ್ರಮುದಿತಃಸನ್- ಸಂತೋಷಗೊಂಡವನಾಗಿ, ಆತ್ಮಾನಂ, ತನ್ನನ್ನು, ಆಶಿಷಾಂ,-ಹರಕೆಗಳಿಂದ, ಪೂರ್ಣಂ-ತುಂಬಿದವನನ್ನಾಗಿ, ಮೇನೇ-ತಿಳಿದನು ॥ ಅಥವಾ- ಆತ್ಮಾನಂ-ಕೃಷ್ಣನನ್ನು, ಪೂರ್ಣಂ- ವಿಷ್ಣುವನ್ನಾಗಿ, ಮೇನೇ-ತಿಳಿದನು ॥೨೧॥ ಹೇತಾತ-ಅಯ್ಯಾ ಪರೀಕ್ಷಿತನೇ, ವ್ರಜತಾ ಕಳೆದುಹೋದ, ಕಾಲೇನ-ತಕ್ಕ ವಯಸ್ಸಿನಿಂದ, ಗೋಕುಲೇ-ನಂದವ್ರಜದಲ್ಲಿ, ರಾಮಕೇಶವೌ-ಆ ರಾಮಕೃಷ್ಣರು, ಜಾನುಭ್ಯಾಂ-ಮೊಣಕಾಲುಗಳಿಂದಲೂ, ಪಾಣಿಭ್ಯಾಂಸಹ- ಅಂಗೈಗಳಿಂದಲೂ ಕೂಡ, ರಿಂಗಮಾಣೌ ಸಂತೌ-ಅಂಬೆಗಾಲಿಟ್ಟು ಸಂತೋಷಗೊಳಿಸುವವರಾಗಿ, ವಿಜಹ್ರತುಃ-ವಿಹರಿಸಿದರು ॥೨೨॥ ಅಂಘ್ರಿಯುಗ್ಮಂ- ಕಾಲುಗಳನ್ನೂ, ಅನುಕೃಷ್ಯ-ಮುಂದಕ್ಕೆಳೆಕೊಂಡು, ಘೋಷಪ್ರಘೋಷರುಚಿರಂ ಯಥಾ ತಥಾ-ಘೋಷ-ಉಡಿಗಂಟೆಗಳ ಅಥವಾ ಕಾಲಗೆಜ್ಜೆಗಳ, ಪ್ರಘೋಷ-ಹೆಚ್ಚು ಶಬ್ದದಿಂದ, ರುಚಿರಂ-ಮನೋಹರವಾಗುವಂತೆ, ವ್ರಜಕರ್ದಮೇಷು- ವ್ರಜ-ಗೋಕುಲದ, ಕರ್ದಮೇಷು- ಕೆಸರು ನೆಲಗಳಲ್ಲಿ, ಸರೀಸೃಪಂತೌ-ಅರಿದಾಡಿಕೊಂಡು ಹೋಗುತ್ತಿರುವ, ತೌ-ಆ ರಾಮಕೃಷ್ಣರು, ತನ್ನಾದಹೃಷ್ಟಮನಸೌ ಸಂತೌ- ತತ್-ಆ ಕಿರುಗಂಟೆ

---

ರಾಗಿ ಈ ಬಾಲಕನಿಂದಲೇ ರಕ್ಷಿಸಲ್ಪಟ್ಟು ಅಭಿವೃದ್ಧಿಯನ್ನು ಹೊಂದಿದವರಾಗಿ ಆದುಷ್ಟರಂ ಗೆದ್ದರು. ॥೧೮॥ ಯಾವ ಪುರುಷರು ಭಾಗ್ಯವಂತರಾದ ನಿನ್ನ ಈ ಬಾಲಕನಲ್ಲಿ ಪ್ರೀತಿಯಂಗೆಯ್ವರೋ ಅವರನ್ನು ಶತ್ರುಗಳು, ವಿಷ್ಣುಭಕ್ತರಂ ಅಸುರರು ಬಾಧಿಸಲಾರದೆ ಹೋಗುವಂತೆ ತಿರಸ್ಕಾರಮಂಗೆಯ್ಯಲಾರರು. ॥೧೯॥ ಎಲೈ, ನಂದಗೋಪನೇ ಆದುದರಿಂದ ನಿನ್ನ ಈ ಬಾಲಕನು ಸಂಪತ್ತಿನಿಂದಲೂ, ಕೀರ್ತಿಯಿಂದಲೂ, ಪ್ರಭಾವದಿಂದಲೂ, ಸಮಸ್ತಗುಣಗಳಿಂದಲೂ, ಕೂಡಿ ಶ್ರೀಮನ್ನಾರಾಯಣನಿಗೆ ಸಮಾನನಾಗಿರುವನು. ಆದರೂ ನೀನು ಜಾಗರೂಕನಾಗಿ ಈ ಬಾಲಕನಂ ಸಲಹುತ್ತಿರು" ॥೨೦॥ ಇಂತೆಂದು ಈ ರೀತಿಯಲ್ಲಿ ಗರ್ಗಮುನಿಯು ಆಜ್ಞಾಪಿಸಿ ತನ್ನ ಮನೆಗೆ ಹೋಗುತಲೂ, ನಂದಗೋಪನು ಬಹಳ ಸಂತುಷ್ಟನಾಗಿ ತನ್ನ ಇಷ್ಟಾರ್ಥಗಳೆಲ್ಲವನ್ನೂ ಪೂರ್ಣವಾದುವೆಂದು ತಿಳಿದನು. ॥೨೧॥ ಎಲೈ, ಪರೀಕ್ಷಿದ್ರಾಯನೆ! ಆಮೇಲೆ ಕೆಲವು ಕಾಲವು ಕಳೆಯುತ್ತಿರಲು, ರಾಮಕೃಷ್ಣರೀರ್ವರೂ ಗೋಕುಲದಲ್ಲಿ ಎರಡು ಮೊಣಕಾಲ್ಗಳಿಂದಲೂ ಎರಡು ಹಸ್ತಗಳಿಂದಲೂ ಸಹ ಸಂಚಾರಂಗೆಯ್ವರಾಗಿ ಆಡುತ್ತಿದ್ದರು ॥೨೨॥ ಅದೆಂತೆನೆ-ರಾಮಕೃಷ್ಣರೀರ್ವರೂ ನಡುವಿನಲ್ಲಿಯೂ ಪಾದಗಳಲ್ಲಿಯೂ ಅಲಂಕರಿಸಲ್ಪಟ್ಟ ಆಭರಣಂಗಳ ಗೆಜ್ಜೆ ಕಿರುಗಂಟೆಗಳ ಧ್ವನಿಗಳಿಂದ ಚಿತ್ತೋಲ್ಲಾಸವುಂಟಾಗುವಂತೆ ಗೋಕುಲದ ಕೆಸರಿನಲ್ಲಿ ಪಾದಯುಗ್ಮಂಗಳಂ ಬಾರಿಬಾರಿಗೂ ಸೆಳೆದು

ಮಕ್ಕಳನ್ನು ತಬ್ಬಿರುವ ರೋಹಿಣೀ ಯಶೋದೆ



ಬಲರಾಮ ಕೃಷ್ಣ



ಕುಣಿದಾಡುತ್ತಿರುವರಾಮಕೃಷ್ಣರು







ರೋಹಿಣಿ ಯಶೋದೆಯು ಮಕ್ಕಳಿಗೆ ಮೊಲೆಯೂಣಿಸುವಿಕೆ





ಅಂಬೆಗಾಲಿಡುವ ರಾಮಕೃಷ್ಣರು

ಪರಾವತಿಚಲೌ ಸ್ವಸುತೌ ನಿಷೇದ್ಧುಮ್ । ಗೃಹ್ಯಾಣಿ ಕರ್ತುಮಪಿ ಯತ್ರ ನ ತಜ್ಜನನ್ಯೌ ಶೇಕಾತ ಆಪತುರಲಂ
ಮನಸೋಽನವಸ್ಥಾಮ್ ॥೨೬॥ ಕಾಲೇನಾಲ್ಪೇನ ರಾಜರ್ಷೇ ರಾಮಃ ಕೃಷ್ಣಶ್ಚ ಗೋವ್ರಜೇ । ಅಘೃಷ್ಟಜಾನುಭಿಃ ಪದ್ಭಿ
ರ್ವಿಚಕ್ರಮತುರಂಜಸಾ ॥೨೭॥ ತತಸ್ತು ಭಗವಾನ್ ಕೃಷ್ಣೋ ವಯಸ್ಯೈರ್ವ್ರಜಬಾಲಕೈಃ । ಸಹರಾಮೋವ್ರ

---

ಬಹಳ ಚಪಲರಾಗಿಯೂ, ಕ್ರೀಡಾಪರೌ-ಆಟಗಳಲ್ಲಿ ಆಸಕ್ತರಾಗಿಯೂ ಇರುವ, ಸ್ವಸುತೌ-ತಮ್ಮ ಕುಮಾರರನ್ನು, ಶೃಂಗಿ- ಕೊಂಬುಗಳಿಂದ ಹಾಯುವ ಪಶುಗಳ ದೆಸೆಯಿಂದಲೂ, ಅಗ್ನಿ-ಬೆಂಕಿಯ ದೆಸೆಯಿಂದಲೂ, ದಂಷ್ಟ್ರಿ-ಕೋರೆದಾಡೆಗಳುಳ್ಳ ಕಚ್ಚುವ ಜಂತುಗಳ ದೆಸೆಯಿಂದಲೂ, ಅಹಿ-ಹಾವುಗಳ ದೆಸೆಯಿಂದಲೂ, ಜಲ-ನೀರಿನ ದೆಸೆಯಿಂದಲೂ, ದ್ವಿಜ-ನವಿಲು ಮುಂತಾದ ಹಕ್ಕಿಗಳ ದೆಸೆಯಿಂದಲೂ, ಕಂಟಕೇಭ್ಯಃ-ಮುಳ್ಳುಗಳ ದೆಸೆಯಿಂದಲೂ, ನಿಷೇದ್ಧುಂ-ತಪ್ಪಿಸುವುದಕ್ಕೂ, ಗೃಹ್ಯಾಣಿ- ಮನೆಯ ಕೆಲಸಗಳನ್ನು, ಕರ್ತುಮಪಿ- ಮಾಡುವುದಕ್ಕೂ, ಯತ್ರ- ಯಾವ ಕಾಲದಲ್ಲಿ, ನಶೇಕಾತೇ-ಶಕ್ತರಾಗಲಿಲ್ಲವೋ, ತತ್ರ-ಆ ಕಾಲದಲ್ಲಿ, ಮನಸಃ-ಮನಸ್ಸಿನ, ಅನವಸ್ಥಾಂ-ಆಕುಲತೆಯನ್ನು, ಅಲಂ-ಅಧಿಕವಾಗಿ, ಆಪತುಃ-ಹೊಂದಿದರು ॥೨೬॥ ರಾಜರ್ಷೇ-ರಾಜನಾಗಿಯೂ ಋಷಿಯಾಗಿಯೂ ಇರುವ ಪರೀಕ್ಷಿತನೇ, ಅಲ್ಪೇನಕಾಲೇನ-ಕೊಂಚ ಕಾಲದಿಂದಲೇ, ರಾಮಃ ಕೃಷ್ಣಶ್ಚ- ರಾಮನೂ ಕೃಷ್ಣನೂ, ಗೋವ್ರಜೇ-ಗೊಲ್ಲರಹಳ್ಳಿಯಲ್ಲಿ, ಅಘೃಷ್ಟಜಾನುಭಿಃ-ಎಳೆಯಲ್ಪಟ್ಟ ಮೊಣಕಾಲುಗಳುಳ್ಳ, ಪದ್ಭಿಃ-ಕಾಲುಗಳಿಂದ, ಅಂಜಸಾ-ಬೇಗನೆ, ವಿಚಕ್ರಮತುಃ-ತಿರುಗಾಡಿದರು ॥೨೭॥ ತತಃ-ಆಮೇಲೆ, ಭಗವಾನ್-ಭಗವಂತನಾದ, ಸಕೃಷ್ಣಃ-ಆ ಕೃಷ್ಣನು, ಸಹರಾಮಃ-ರಾಮನಿಂದ ಕೂಡಿದವನಾಗಿ, ವ್ರಜಬಾಲಕೈಃ-ಗೋಕು

---

ಯರು, ಆಟಗಳಲ್ಲಿ ಆಸಕ್ತಿಗೊಂಡು ಅತಿ ಚಪಲರಾದ ತಮ್ಮ ಪುತ್ರರಂ ಕೊಂಬುಗಳುಳ್ಳ ಪಶುಗಳಿಂದಲೂ, ಕೋರೆದಾಡೆಗಳುಳ್ಳ ಮೃಗಗಳಿಂದಲೂ, ದೀಪ ಮೊದಲಾದ ಬೆಂಕಿಗಳಿಂದಲೂ, ಸರ್ಪಗಳಿಂದಲೂ ನೀರು ತುಂಬಿದ ಭಾವಿ ಮೊದಲಾದವುಗಳಿಂದಲೂ ನವಿಲು ಮುಂತಾದ ಹಕ್ಕಿಗಳಿಂದಲೂ, (ಚೇಳು ಮುಂತಾದ ಕೀಟಕ್ರಿಮಿಗಳಿಂದಲೂ) ಉಂಟಾಗುವ ಉಪದ್ರವಗಳಿಂದ ತಪ್ಪಿಸಿ ಸುರಕ್ಷಿಸಲೋಸುಗವೂ; ಗೃಹಕೃತ್ಯಂಗಳಂ ಮಾಡಲೋಸುಗವೂ , ಯಾವ ಸಮಯದಲ್ಲಿ ತೊಂದರೆಪಟ್ಟರೋ ಆಗ ಚಿತ್ತಸ್ವಾಸ್ಥ್ಯವಿಲ್ಲದೆ ವ್ಯಾಕುಲರಾದರು.॥೨೬॥ ಎಲೈ, ರಾಜರ್ಷಿಯಾದ ಪರೀಕ್ಷಿದ್ರಾ









ಯನೇ! ಸ್ವಲ್ಪಕಾಲದಿಂದ ಆ ರಾಮಕೃಷ್ಣರೀರ್ವರೂ ನಂದಗೋಕುಲದಲ್ಲಿ ಅಂಬೆಗಾಲಿಡುವುದಂ ಬಿಟ್ಟು ಅನಾಯಾಸವಲ್ಲಿ ಮೆಲ್ಲಮೆಲ್ಲನೆ ಹೆಜ್ಜೆಗಳನಿಟ್ಟು ನಡೆಯುವವರಾದರು. ॥೨೭॥ ಅನಂತರದಲ್ಲಿ ಭಗವಂತನಾದ ಶ್ರೀಕೃಷ್ಣನು ಬ

ಷ್ಟಮನಸಾವನುಸೃತ್ಯಲೋಕಂಮುಗ್ಧಪ್ರಭೀತವದುಪೇಯತುರನ್ತಿಮಾತ್ರೋಃ ‖೨೩‖ ತನ್ಮಾತರೌನಿಜಸು
ತೌಘೃಣಯಾಸ್ನುವನ್ತ್ಯೌ ಪಂಕಾಂಗರಾಗರುಚಿರಾವುಪಗೂಹ್ಯದೋರ್ಭ್ಯಾಂ । ದತ್ವಾಸ್ತನಂಪ್ರಪಿಬತೋ
ಸ್ಮಮುಖಂನಿರೀಕ್ಷ್ಯಮುಗ್ಧಸ್ಮಿತಾಲ್ಪದಶನಂಯಯತುಃಪ್ರಮೋದಂ‖೨೪‖ಯರ್ಹ್ಯಂಗನಾದರ್ಶನೀಯ
ಕುಮಾರಲೀಲಾವನ್ತರ್ವ್ರಜೇತದಬಲಾಃಪ್ರಗೃಹೀತಪುಚ್ಛೈಃ ವತ್ಸೈರಿತಸ್ತತಉಭಾವನುಕೃಷ್ಯಮಾಣೌಪ್ರೇ
ಕ್ಷನ್ತ್ಯಉಜ್ಝಿತಗೃಹಾಜಹೃಷುರ್ಹಸನ್ತ್ಯಃ‖೨೫‖ ಶೃಙ್ಗ್ಯಗ್ನಿದಂಷ್ಟ್ರ್ಯಸಿಜಲದ್ವಿಜಕಣ್ಟಕೇಭ್ಯಃ ಕ್ರೀಡಾ

ಗಳ, ನಾದ-ಶಬ್ದದಿಂದ, ಹೃಷ್ಟ-ಸಂತಸಗೊಂಡ, ಮನಸಾ-ಮನಸ್ಸು-ಚಿತ್ತವುಳ್ಳವರಾಗಿ, ಲೋಕಂ-ಇತ್ತತ್ತತಿರುಗುವಜನವನ್ನು, ಅನು ಸೃತ್ಯ-ಅನುಸರಿಸಿಮೂರುನಾಲ್ಕಡಿಗಳನಿಟ್ಟು, ಮುಗ್ಧಪ್ರಭೀತವತ್-ಮೂಢರಂತೆಯೂ ಹೆದರಿದವರಂತೆಯೂ, ಮಾತ್ರೋಃ-ತಾಯಿ ಯರಾದರೋಹಿಣೀಯಶೋದೆಯರ, ಅಂತಿ-ಸಮೀಪದಲ್ಲಿ, ಉಪೇಯತುಃ-ಸೇರಿದರು.(ಬಳಿಗೆಹೋದರು)‖೨೩‖ ತನ್ಮಾತರೌ-ಆತಾಯಿ ಯರೀರ್ವರೂ, ಘೃಣಯಾ-ದಯೆಯಿಂದ, (ಪುತ್ರಪ್ರೇಮದಿಂದ)ಸ್ನುವಂತ್ಯೌ-ಹಾಲನ್ನುಸುರಿಸುವಮೊಲೆಯುಳ್ಳವರಾಗಿ, ಪಂಕಾಂಗ ರಾಗರುಚಿರೌ-ಪಂಕ-ಕೆಸರಿನಿಂದಲೂ, ಅಂಗರಾಗ-ಅರಿಸಿನಗಂಧಮೊದಲಾದಅನುಲೇಪನದಿಂದಲೂ, ರುಚಿರೌ-ಚನ್ನಾದ, ನಿಜಸುತೌ- ತಮ್ಮಮಕ್ಕಳನ್ನು, ದೋರ್ಭ್ಯಾಂ-ತಮ್ಮತೋಳುಗಳಿಂದ, ಉಪಗೂಹ್ಯ-ಅಪ್ಪಿಕೊಂಡು, ಸ್ತನಂ-ಮೊಲೆಯನ್ನು, ದತ್ವಾ-ಕೊಟ್ಟು, ಪ್ರಪಿಬತೋಃ-ಚನ್ನಾಗಿಹಾಲುಕುಡಿಯುತ್ತಿರುವ, ಪುತ್ರರ, ಮುಗ್ಧಸ್ಮಿತಾಲ್ಪದಶನಂ-ಮುಗ್ಧಸ್ಮಿತ- ಚಲುವಾದ ನಗೆಯುಳ್ಳ, ಅ ಲ್ಪದಶನಂ-ಕಿರುಹಲ್ಲುಗಳುಳ್ಳ, ಸುಮುಖಂ- ಸೊಗಸಾದಮೋರೆಯನ್ನು, ನಿರೀಕ್ಷ್ಯ-ಚನ್ನಾಗಿನೋಡಿ, ಪ್ರಮೋದಂ-ಹೆಚ್ಚುಸಂತೋ ಷವನ್ನು, ಯಯತುಃ-ಹೊಂದಿದರು ‖೨೪‖ ಯರ್ಹಿ-ಯಾವಾಗ. ಅಂಗನಾದರ್ಶನೀಯಕುಮಾರಲೀಲೌ-ಅಂಗನಾ-ಹೆಂಗಳಿಂದ, ದರ್ಶ ನೀಯ-ನೋಡಲ್ಪಡತಕ್ಕ-ಕುಮಾರಲೀಲೌ-ಬಾಲಕ್ರೀಡೆಗಳುಳ್ಳವರಾದರೋ, ತತ್-ಆಗ, ಅಬಲಾಃ-ಗೊಲ್ಲತಿಯರು, ಅಂತರ್ವ್ರಜೇ- ಗೋಕುಲದೊಳಗೆ, ಪ್ರಗೃಹೀತಪುಚ್ಛೈಃ- ಹಿಡಿದೆಳೆಯಲ್ಪಟ್ಟಬಾಲಗಳುಳ್ಳ, ವತ್ಸೈಃ-ಕರುಗಳಿಂದ, ಇತಸ್ತತಃ-ಇಲ್ಲಿಂದಲ್ಲಿಗೆ ಅಲ್ಲಿಂ ದಿಲ್ಲಿಗೆ, ಅನುಕೃಷ್ಯಮಾಣೌ-ಎಳೆದಾಡಲ್ಪಡುತ್ತಿರುವ, ಉಭೌ-ರಾಮಕೃಷ್ಣರೀರ್ವರನ್ನೂ, ಪ್ರೇಕ್ಷಂತ್ಯಃ-ಚನ್ನಾಗಿನೋಡುತ್ತಿರುವ ರಾದ್ದರಿಂದಲೇ, ಉಜ್ಝಿತಗೃಹಾಃ-ಉಜ್ಝಿತ- ಬಿಡಲ್ಪಟ್ಟ, ಗೃಹಾಃ-*ಮನೆಯಕೆಲಸಗಳುಳ್ಳವರಾಗಿಯೂ, ಹಸಂತ್ಯಃ-ನಗುತ್ತಿರುವರಾ ಗಿಯೂ, ಜಹೃಷುಃ-ಸಂತೋಷಿಸಿದರು ‖೨೫‖ತಜ್ಜನನ್ಯೌ-ಆರಾಮಕೃಷ್ಣರ ತಾಯಿಯರಾದ ರೋಹಿಣೀಯಶೋದೆಯರು, ಅತಿಚಲಾ

---

ಕೊಂಡು ಅಂಬೆಗಾಲಿಡುವರಾಗಿ, ಆಗೆಜ್ಜೆಕಿರುಗಂಟೆಗಳ ನಾದಂಗಳಿಂದ ಹರ್ಷವನೆಯ್ದಿದ ಮನಸ್ಸುಳ್ಳವರಾಗಿ ಎಡಬ ಲದಲ್ಲಿ ನಡೆಯುವವರನ್ನು ಅನುಸರಿಸಿ ಮೂರುನಾಲ್ಕುಹೆಜ್ಜೆಗಳನ್ನು ಇಟ್ಟುಕೊಂಡುಹೋಗಿ ಮುಗ್ಧರಂತೆಯೂ ಹೆ ದರಿದವರಂತೆಯೂ ತಮ್ಮ ತಾಯಿಗಳ ಹತ್ತಿರಕ್ಕೆ ಓಡಬರುತ್ತಿದ್ದರು. ‖೨೩‖ ಆಸಮಯದಲ್ಲಿ ರಾಮಕೃಷ್ಣರ ತಾಯಿ ಯರಾದ ರೋಹಿಣೀಯಶೋದೆಯರು ಪುತ್ರಪ್ರೇಮದಿಂದ ಪೂರಯಿಸಿಸುರಿಯುವ ಹಾಲುಳ್ಳ ಸ್ತನಗಳುಳ್ಳವರಾಗಿ ಗಂಧಾದ್ಯನುಲೇಪನದಿಂದ ರಮಣೀಯರಾಗಿ, ಕೆಸರಂಮೆತ್ತಿಕೊಂಡುಬಂದ ತಮ್ಮ ಬಾಲಕರನ್ನು ಎತ್ತಿ,ತೋಳುಗ ಳಿಂತಬ್ಬಿಕೊಂಡು ಸ್ತನ್ಯವಂಕೊಟ್ಟು ಪಾನಂಗೆಯ್ಯುತ್ತಿರುವ ಪುತ್ರರ ಮುಗುಳುನಗೆಯೂ ಸಣ್ಣಹಲ್ಲುಗಳೂ ಉಳ್ಳ ಚಲುವಾದ ಮುಖಗಳಂನೋಡಿ ಹರ್ಷವನೆಯ್ದಿದರು. ‖೨೪‖ ಯಾವಸಮಯದಲ್ಲಿ ಸ್ತ್ರೀಯರಿಗೆ ನೋಡಲುಯೋ ಗ್ಯವಾದ ಬಾಲಲೀಲೆಯುಳ್ಳವರಾಗಿ ಹಿಡಿಯಲ್ಪಟ್ಟ ಬಾಲಗಳುಳ್ಳಕರುಗಳಿಂ ಅಲ್ಲಲ್ಲಿ ಎಳೆದಾಡಿಸಿಕೊಳ್ಳಲ್ಪಟ್ಟವರಾಗಿ ರಾ ಮಕೃಷ್ಣರು ವಿಹರಿಸಿದರು. ಆಗ ಆಬಾಲಕರಂ ನೋಡುತ್ತಿರುವ ನಂದವ್ರಜದ ಗೋಪಿಯರು ತಮ್ಮ ಮನೆಯ ಕೆಲಸಮಂಬಿಟ್ಟು ನಗುವರಾಗಿ ಸಂತೋಷಿಸಿದರು. ‖೨೫‖ ಆರಾಮಕೃಷ್ಣರ ತಾಯಿಯರಾದ ರೋಹಿಣೀಯಶೋದೆ






**ಜಸ್ತ್ರೀಣಾಞ್ಚಿಕ್ರೀಡೇಜನಯನ್ಮುದಂ ॥೨೮॥ಕೃಷ್ಣಸ್ಯಗೋಪ್ಯೋರುಚಿರಂವೀಕ್ಷ್ಯಕೌಮಾರಚಾಪಲಂ। ಶೃಣ್ವಂತ್ಯಾಃಕಿಲತನ್ಮಾತುರಿತಿಹೋಚುಸ್ಸಮಾಗತಾಃ॥೨೯॥ವತ್ಸಾನ್ಮುಂಚನ್ಕ್ವಚಿದಸಮಯೇಕ್ರೋಶಸಂ ಜಾತಹಾಸಃಸ್ತೇಯಂಸ್ವಾದ್ವತ್ತ್ಯಥದಧಿಪಯಃಕಲ್ಪಿತೈಃಸ್ತೇಯಯೋಗೈಃ । ಮರ್ಕಾನ್ಭೋಕ್ಷ್ಯನ್ವಿಭಜತಿಸ**

---

ಲದಹುಡುಗರಾದ, ವಯಸ್ಯೈಸ್ಸಹ-ಸಂಗಾತಿಗಳೊಂದಿಗೆ, ವ್ರಜಸ್ತ್ರೀಣಾಂ-ಗೊಲ್ಲತಿಯರಿಗೆ, ಮುದಂ-ಸಂತೋಷವನ್ನು, ಜನಯನ್-ಹುಟ್ಟಿಸುವನಾಗಿ, ಚಿಕ್ರೀಡೇ-ಆಡಿದನು॥೨೮॥ಗೋಪ್ಯಃ-ಗೊಲ್ಲತಿಯರು, ಕೃಷ್ಣಸ್ಯ-ಕೃಷ್ಣನ, ರುಚಿರಂ-ಮನೋಹರವಾದ,ಕೌಮಾರ ಚಾಪಲಂ-ಹುಡುಗಾಟಿಕೆಯಚಾಂಚಲ್ಯವನ್ನು, ವೀಕ್ಷ್ಯ-ನೋಡಿ, ಸಮಾಗತಾಃ-ಬಂದವರಾಗಿ, ತನ್ಮಾತುಃ-ಆಕೃಷ್ಣನತಾಯಿಯಾದಯ ಶೋದೆಯು, ಶೃಣ್ವಂತ್ಯಾಸ್ಸತ್ಯಾಃ-ಕೇಳುವವಳಾಗುತ್ತಿರಲು, ಇತಿ-ಹೀಗೆ, ಊಚುರ್ಹ ಕಿಲ-ಹೇಳಿದರಲ್ಲವೇ?॥೨೯॥ಸಃ-ಆಕೃಷ್ಣನು, ಕ್ವ ಚಿತ್-ಒಂದುಸ್ಥಲದಲ್ಲಿ, ಅಸಮಯೇ-ಹಾಲಕರೆಯುವಹೊತ್ತಲ್ಲದವೇಳೆಯೊಳು, ವತ್ಸಾನ್-ಕರುಗಳನ್ನು, ಮುಂಚನ್-ಬಿಚ್ಚಿಬಿಡುವನಾಗಿ, ಕ್ರೋಶಸಂಜಾತಹಾಸಃ-ಕ್ರೋಶ-ಮನೆಯವರುಅತ್ತುಕೂಗುವುದರಿಂದ, ಸಂಜಾತ-ಉಂಟಾದ, ಹಾಸಃ-ನಗೆಯುಳ್ಳವನಾಗಿ, ಸ್ತೇಯಂ-ಕದಿಯಲ್ಪಟ್ಟ, ಸ್ವಾದು-ರುಚಿಯಾದ, ದಧಿ-ಮೊಸರನ್ನೂ, ಪಯಃ-ಹಾಲನ್ನೂ, ಅತ್ತಿ-ಭಕ್ಷಿಸುವನು. ಅಥ-ಆಮೇಲೆ, ಸ್ತೇಯ ಯೋಗೈಃ-ಕಳ್ಳತನದಉಪಾಯಗಳಿಂದ, ಕಲ್ಪಿತೈಃ-ಸಂಪಾದಿಸಲ್ಪಟ್ಟದ್ರವ್ಯಗಳಿಂದ, ಭೋಕ್ಷ್ಯನ್-ತಾನುಂಣುವನಾಗಿ, ಮರ್ಕಾನ್-ಮಂ ಗಗಳನ್ನು ಕುರಿತು, ವಿಭಜತಿ-ಹಂಚಿಡುವನು. ಸಃ-ಆಕಪಿಯು, ನಾತ್ತಿಚೇತ್-ತಿನ್ನದೇಹೋದರೆಅಥವಾ ನಾಸ್ತಿಚೇತ್-ಇಲ್ಲದೇಹೋದರೆ, ಭಾಂಡಂ-ತಾನುತಿಂದುಮಿಕ್ಕಪಾಲ್ಮೊಸರಗಡಿಗೆಯನ್ನು, ಭಿನತ್ತಿ- ಒಡೆದುಹಾಕುವನು. ದ್ರವ್ಯಾಲಾಭೇ- ದ್ರವ್ಯ-ಬೆಂಣೆಮುಂತಾದಪ ದಾರ್ಥವು, ಅಲಾಭೇ- ದೊರೆಯದೆಯಿರುವಲ್ಲಿ, ಗೃಹಕುಪಿತಃ-ಆಮನೆಗೋಸುಗವೇಸಿಟ್ಟುಗೊಳ್ಳುವನಾಗಿ, (ಈಮನೆಯಂನುಟ್ಟುಬಿಡು

---



ಲರಾಮನೊಡನೆಯೂ ಸಮವಯಸ್ಕರಾದ ಗೋಪಾಲ ಬಾಲಕರೊಡನೆಯೂ ಕೂಡಿದವನಾಗಿ ನಂದಗೋಕುಲ ದಲ್ಲಿರುವ ಗೋಪಸ್ತ್ರೀಯರ್ಗಳಿಗೆ ಸಂತೋಷವನುಂ ಟುಮಾಡುವವನಾಗಿ ವಿಹರಿಸಿದನು. ॥ ೨೮ ॥ ಆಕಾಲ ದಲ್ಲಿ ಗೋಪಾಂಗನೆಯರು ಶ್ರೀಕೃಷ್ಣನ ಮನೋಹ ರವಾದ ಕೌಮಾರ ಚರಿತ್ರೆಯಂಕಂಡು ಗುಂಪಾಗಿಬಂದು ಆ ಕೃಷ್ಣನಿಗೆ ತಾಯಿಯಾದ ಯಶೋದಾ ದೇವಿಯು ಕೇಳುವಂತೆ ವಿಜ್ಞಾಪನಂಗೆಯ್ದರು. ॥ ೨೯ ॥ ಎಲೈ, ಯಶೋದಾದೇವಿಯೇ! ನಿನ್ನಮಗನಾದ ಶ್ರೀಕೃಷ್ಣನು ಗೋವುಗಳು ಕ್ಷೀರವಂಕರೆಯದೆ ಇರುವಸಮಯದಲ್ಲಿ ಕ



ರುಗಳಂ ಬಿಚ್ಚಿಬಿಡುವನಾಗಿ ಆಗ ಆಹಸುಕರುಗಳಂ ಕಟ್ಟಿ ಲೋಸುಗ ಮನೆಯಲ್ಲಿರುವ ಜನರು ಹೊರಗೆಬಂದು ಕೂ ಗುತಲಿರಲು ನಸುನಗುತ ಇದೇಸಮಯವೆಂದು ಮನೆಗಳಂ ಹೊಕ್ಕು ಒಬ್ಬರಿಂದಲೂ ಕೊಡಲ್ಪಡದಿದ್ದರೂ ತನ್ನಿಂದ ಕದ್ದುಸಂಪಾದಿಸಲ್ಪಟ್ಟ ಪಾಲ್ಬೆಂಣೆಮೊದಲಾದ ಸ್ವಾದುವ ಸ್ತುವಂ ಭಕ್ಷಿಸುವನು. ಅನಂತರದಲ್ಲಿ ಕಲ್ಪಿಸಲ್ಪಟ್ಟ ಚೌ ರ್ಯೋಪಾಯಗಳಿಂದ ಅಪಹರಿಸಲ್ಪಟ್ಟ ದಧಿಕ್ಷೀರಂಗಳ ನ್ನು ಭಕ್ಷಿಸುವನು.ಮತ್ತು ತಾನು ಭಕ್ಷಿಸಿದವನಾಗಿ ಆಪದಾರ್ಥಂಗಳಂ ಮರ್ಕಟಂಗಳಿಗೆ ಹಂಚಿಕೊಡುವನು.ಬಾಲಕರೂ ಮರ್ಕಟಂಗಳೂ ತೃಪ್ತಿಹೊಂದಿದಾಗ ಅವರಮಧ್ಯದಲ್ಲಿ ಒಬ್ಬನು ಭಕ್ಷಿಸದೆಯಿದ್ದರೆ ಆದಧಿಕ್ಷೀರಭಾಂಡಗಳನ್ನು ಒಡೆ

ಚೇನ್ನಾತ್ತಿಭಾಣ್ಡಂಭಿನತ್ತಿದ್ರವ್ಯಾಲಾಭೇಸಗೃಹಕುಪಿತೋಯಾತ್ಯುಪಕ್ರೋಶ್ಯತೋಕಾನ್ ॥೩೦॥ ಹಸ್ತಾಗ್ರಾ
ಹ್ಯೇರಚಯತಿವಿಧಿಂಪೀಠಕೋಲೂಖಲಾದ್ಯೈಶ್ಛಿದ್ರಂಹ್ಯನ್ತರ್ನಿಹಿತವಯುನಶ್ಶಿಕ್ಯಭಾಣ್ಡೇಷುತದ್ವಿತ್ । ಧ್ವಾಂ
ತಾಗಾರೇಧೃತಮಣಿಗಣಂಸ್ವಾಂಗಮರ್ಥಪ್ರದೀಪಂಕಾಲೇಗೋಪ್ಯೋಯರ್ಹಿ ಗೃಹಕೃತ್ಯೇಷುಸುವ್ಯಗ್ರಚಿ

---

ವೆನೆಂದು)ಅಥವಾ, ಸಗೃಹ-ಆಗೃಹಸ್ಥರಿಗಾಗಿ, ಕುಪಿತಃ- ಕೋಪಗೊಂಡವನಾಗಿ, ತೋಕಾನ್-ಮಕ್ಕಳನ್ನು (ತೊಟ್ಟಿಲುಮಂಚಗಳಲ್ಲಿಮಲಗಿರುವವರನ್ನು)ಉಪಕ್ರೋಶ್ಯ-ಅಳಿಸಿ(ಜಿಗುಟಿಚುಚ್ಚಿಎಳೆದುಅಳುವಂತೆಮಾಡಿ) ಯಾತಿ-ಹೋಗುತ್ತಿದ್ದಾನೆ॥೩೦॥ಯರ್ಹಿ-ಯಾವಾಗ, ಗೋಪ್ಯಃ-ಗೊಲ್ಲತಿಯರು, ಗೃಹಕೃತ್ಯೇಷು-ಮನೆಯಕೆಲಸಗಳಲ್ಲಿ, ಸುವ್ಯಗ್ರಚಿತ್ತಾಃ-ಚನ್ನಾಗಿತ್ವರೆಗೊಂಡಮನಸ್ಸುಳ್ಳವರಾಗಿರುವರೋ, ಕಾಲೇ-ಆಹೊತ್ತಿನಲ್ಲಿ, ಹಸ್ತಾಗ್ರಾಹ್ಯೇ-ಕೈಗಳಿಗೆಟುಕದೇಮೇಲೆಯಿರುವ ದ್ರವ್ಯದವಿಷಯದಲ್ಲಿ, ಪೀಠಕೋಲೂಖಲಾದ್ಯೈಃ-ಪೀಠಕೆ- ಗದ್ದುಗೆಯಕಾಲುಮಣೆಗಳಿಂದಲೂ, ಉಲೂಖಲಾದ್ಯೈಃ-ಒರಳುಮುಂತಾದವುಗಳಿಂದಲೂ, ವಿಧಿಂ-ಎತ್ತರವಾದಉಪಾಯವನ್ನು, ರಚಯತಿ-ಎಟುಕಿಸಿಕೊಳ್ಳುವುದಕ್ಕೆತಕ್ಕಂತೆಮಾಡುವನು. ಶಿಕ್ಯಭಾಂಡೇಷು-ನೆಲುವಿನಲ್ಲಿಡಲ್ಪಟ್ಟಗಡಿಗೆಗಳಲ್ಲಿ, ಅಂತರ್ನಿಹಿತವಯುನಃ-ಅಂತರ್ನಿಹಿತ-ಅವರೊಳಗೆಮುಚ್ಚಿಡಲ್ಪಟ್ಟಹಾಲ್ಮೊಸರುಮೊದಲಾದವುಗಳಲ್ಲಿ, ವಯುನಃ- ಅರಿಕೆಯುಳ್ಳವನಾದ್ದರಿಂದಲೇ, ತದ್ವಿತ್-ಅವರನ್ನುತೆಗೆದುಕೊಳ್ಳುವಉಪಾಯವಂಬಲ್ಲವನಾಗಿ, ಛಿದ್ರಂ-ಆಗಡಿಗೆಗೆತೂತನ್ನು, ರಚಯತಿಹಿ-ಮಾಡುತ್ತಿರುವನಷ್ಟೆ; ಧ್ವಾಂತಾಗಾ

---



ಯುವನು. ಮತ್ತು ಒಂದುಸ್ಥಳದಲ್ಲಿ ಹಾಲುಬೆಣ್ಣೆಮೊದಲಾದದ್ರವ್ಯವು ದೊರೆಯದಿದ್ದಲ್ಲಿ ಆಮನೆಗಳಂ ದಹಿಸುವನೆಂದು ಕೋಪಯುಕ್ತನಾಗಿ ಆಯಾಗೃಹಂಗಳೊಳಗೆ ಮಂಚಾದಿಗಳಲ್ಲಿ ಮಲಗಿನಿದ್ರೆಗೆಯ್ವ ಮಕ್ಕಳಂಎಬ್ಬಿಸಿ ನುಲಿದು ರೋದನಂಗೆಯ್ಸಿ ಹೊರಟುಹೋಗುವನು. ॥೩೦॥ ಮತ್ತು, ಯಾವಾಗ ಗೋಪಿಯರು ಮನೆಯಕೆಲಸದಲ್ಲಿ ಮನಸ್ಸುಳ್ಳವರಾಗಿರುವರೋ ಆಗ ನಿನ್ನಮಗನಾದಕೃಷ್ಣನು ಅವರಮನೆಗಳಂಹೊಕ್ಕು ಕೈಯ್ಗೆಸಿಲುಕದಂತೆ ಮೇಲೆಕಟ್ಟಲ್ಪಟ್ಟ ನೆಲುವಿನಲ್ಲಿರುವ ಮಡಿಕೆಗೆ ಪೀಠಗಳನ್ನು ಮರದೊರಳುಗಳನ್ನೂ ಒಂದರಮೇಲೊಂದನ್ನಿಟ್ಟು ಸಿಲುಕುವಂತೆ ಉಪಾಯಮಂರಚಿಸಿ ಆಗಡಿಗೆಯಲ್ಲಿರುವ ಹಾಲುಮೊಸರುಮುಂತಾದವುಗಳಂ ತೆಗದುಕೊಳ್ಳುವನು. ಮತ್ತೊಂದುಕಡೆಯಲ್ಲಿ ಪೀಠಗಳೂ ಒರಳುಗಳೂ ದೊರೆಯದಿದ್ದರೆ ಮೇಲಿರುವ ಹಾಲುಮೊಸರಂಬಯಸಿ ನೆಲುವಿನಗಡಿಗೆಗೆ ತೂ





ತ್ತಾಃ ‖ ೩೧ ‖ ಏವಂಧಾರ್ಷ್ಟ್ಯಾನ್ಯುಶತಿಕುರುತೇಮೋಹನಾದೀನಿವಾಸ್ತ್ವಸ್ತೇಯೋಪಾಯೈರ್ವಿರಚಿತ
ಕೃತಿಸ್ಸುಪ್ರತೀಕೋಯಥಾಸ್ತೇ । ಇತ್ಥಂಸ್ತ್ರೀಭಿಸ್ಸಭಯನಯನಶ್ರೀಮುಖಾಲೋಕಿನೀಭಿರ್ವ್ಯಾಖ್ಯಾ

---

ರೇ-ಕತ್ತಲೆಮನೆಯಲ್ಲಿ, ಧೃತಮಣಿಗಣಂ-ಧೃತ-ಧರಿಸಲ್ಪಟ್ಟ, ಮಣಿಗಣಂ-ದಿವ್ಯರತ್ನಪುಂಜವುಳ್ಳ, ಸ್ವಾಂಗಂ-ತನ್ನ ಶರೀರವನ್ನೇ, ಅ ರ್ಥಪ್ರದೀಪಂ-ಪದಾರ್ಥಗಳನ್ನು ಕಾಣಿಸುವಂತೆಬೆಳಗುತ್ತಿರುವನಾಗಿ, ರಚಯತಿ-ಮಾಡುತ್ತಿರುವನು‖೩೧‖ ಏವಂ-ಹೀಗೆ, ಧಾರ್ಷ್ಟ್ಯಾ ನಿ-ದಿಟ್ಟತನದಮಾತುಗಳನ್ನು, ಉಶತಿ-ಹೇಳುವನು, ವಾಸ್ತೌ-ಸಾರಿಸಿದಮನೆಯಲ್ಲಿ, ಮೋಹನಾದೀನಿ-ಹೇಲುಮೂತ್ರ ಮೊದಲಾದವುಗಳ ನ್ನು, ಕುರುತೇ-ಮಾಡುತ್ತಿರುವನು, ಸ್ತೇಯೋಪಾಯೈಃ-ಕಳ್ಳತನದಉಪಾಯಗಳಿಂದ, ವಿರಚಿತಕೃತಿಃ-ಮಾಡಲ್ಪಟ್ಟ ಕೆಟ್ಟ ಕೆಲಸವುಳ್ಳ ವನಾದರೂ (ನಿನ್ನ ಬಳಿಯಲ್ಲಿ) ಸುಪ್ರತೀಕೋಯಥಾ-ಸಾಧುವಿನಹಾಗೆ ಅಥವಾ ಸುಪ್ರತೀಕವೆಂಬ ಮದದಆನೆಯಹಾಗೆ, ಆಸ್ತೇ-ಕುಳಿತಿರು ವನು. ಇತ್ಥಂ-ಹೀಗೆ, ಸಭಯನಯನಶ್ರೀಮುಖಾಲೋಕಿನೀಭಿಃ-ಸಭಯ-ಹೆದರಿಕೆಯಿಂಕೂಡಿದ, ನಯನ-ಕಂಗಳುಳ್ಳ, ಶ್ರೀ-ಸಂಪದ್ಯು ಕ್ತವಾದ, ಮುಖ-ಕೃಷ್ಣನಮೋರೆಯನ್ನು, ಆಲೋಕಿನೀಭಿಃ-ನೋಡುತ್ತಿರುವ, ಸ್ತ್ರೀಭಿಃ-ಗೊಲ್ಲರಹೆಂಗಳಿಂದ, ವ್ಯಾಖ್ಯಾತಾರ್ಥಾ- ವ್ಯಾಖ್ಯಾತ-ವಿವರಿಸಲ್ಪಟ್ಟ, ಅರ್ಥಾ-ಕೃಷ್ಣಚೇಷ್ಟೆಗಳುಳ್ಳವಳಾದರೂ (ಯಶೋದೆಯು) ಪ್ರಹಸಿತಮುಖೀ-ಹೆಚ್ಚಾದನಗೆಯುಳ್ಳಮುಖ

---

ತು ಹಾಕುವಬಗೆಯಂ ಬಲ್ಲವನಾದುದರಿಂದ ಹಾಗೆಮಾಡಿ ಕ್ಷೀರಾದಿಗಳಂ ಗ್ರಹಿಸುವನು. ಮತ್ತು, ಕತ್ತಲೆಯಮನೆಯ ಲ್ಲಿ ವಿಶೇಷವಾಗಿಧರಿಸಲ್ಪಟ್ಟ ನವರತ್ನಸಮೂಹದಿಂಕೂಡಿದ ಒಡವೆಗಳುಳ್ಳತನ್ನ ದಿವ್ಯದೇಹವನ್ನೇ ದೀಪದಂತೆ ಪ್ರಕಾ ಶಕವನ್ನಾಗಿ ಮಾಡಿಕೊಂಡು ಆಪದಾರ್ಥಗಳಂ ಭಕ್ಷಿಸುವನು. ‖೩೧‖ ಎಲೈಯಶೋದಾದೇವಿಯೇ! ಈರೀತಿಯಲ್ಲಿ ನಿನ್ನ ಮಗನಾದಕೃಷ್ಣನು ಕಳ್ಳತನವಂಮಾಡುತ್ತ ಆಮನೆಯವರಿಂದ "ಎಲೋ, ಕೃಷ್ಣನೆ! ಎಲೋ, ಚೋರನೇ" ಎಂ ದುಕರೆಯಲ್ಪಡುವನಾಗಿ ಅವರಂಕುರಿತು "ನೀನೇಚೋರನು. ನಾನೇಗೃಹಸ್ವಾಮಿಯು" ಎಂದುಪ್ರೌಢವಚನಗ ಳಂನುಡಿಯುವನು. ಮತ್ತು ರಂಗವಲ್ಲಿ ಮೊದಲಾದುದರಿಂದ ಅಲಂಕರಿಸಲ್ಪಟ್ಟಿರುವ ಮನೆಯಲ್ಲಿಯೂ ಮಲಮೂ ತ್ರವಿಸರ್ಜನಂಗಳಂಗೆಯ್ವನು. ಈರೀತಿಯಾಗಿ ದುಷ್ಟತನವುಮಾಡಿದರೂ ನಿನ್ನಬಳಿಯಲ್ಲಿ ಒಂದನೂ ಅರಿಯದ



ವನಂತೆಸಾಧುವಾಗಿ ಸುಮ್ಮನಿರುವನು." ಎಂದು ಬಿನ್ನವಿಸಿ ಭೀತಿಯೊಡಗೂಡಿರುವ ಕಂಣುಗಳುಳ್ಳ ಶ್ರೀಕೃಷ್ಣನ ಚೆಲುವಾದಮುಖಮಂ ನೋಡುತ್ತಲಿರುವ ಗೋಪಸ್ತ್ರೀಯರಿಂದ ಪ್ರಕಟಿಸಲ್ಪಟ್ಟ ಕರ್ಮಫಲವುಳ್ಳವಳಾದ ಯ ಶೋದಾದೇವಿಯು ಮುಗುಳುನಗೆಯೊಡಗೂಡಿದಮುಖವುಳ್ಳವಳಾಗಿ ಬಾಲಕನು ಭಯಪಡುವನೆಂದು ಅವನಂ ನಿಂ

ತಾರ್ಹ್ಯೇವ ಪ್ರಹಸಿತಮುಖೀ ನ ಹ್ಯುಪಾಲಬ್ಧುಮೈಚ್ಛತ್ ॥ ೩೦ ॥ ಗೋಪ್ಯಃ ಕದಾಚನ ಪೃಥಕ್ಪೃಥಗೂಹ್ಯ ಕೃಷ್ಣಮೇತ್ಯೈಕದೈವ ಗದಿತುಂ ಪ್ರಸೃತಾಸ್ತದಾಗಃ । ದೃಷ್ಟ್ವಾಥ ತದನ್ತ್ಯಥ ತಮೇವ ನಿಜಾನದೃಷ್ಟ್ವಾ ಸ್ವ ಮೃದಭ್ಭಕ್ಷಣಾತ್ತರ್ಜಯನ್ತೀಂ ಮಾತರಂ ಪ್ರತಿ ಆಸ್ಯದರ್ಶನಾದ್ವಿಶ್ವರೂಪದರ್ಶನಘಟ್ಟಃ

ಸರ್ವಾಶ್ಚ ತಾ ನಿವವೃತುಃ ಸ್ವಗೃಹಾನ್ ತ್ಸಲಜ್ಜಾಃ ॥ ೩೩ ॥ ಏಕದಾ ಕ್ರೀಡಮಾನಾಸ್ತೇ ರಾಮಾದ್ಯಾ ಗೋಪದಾರಕಾಃ । ಕೃಷ್ಣೋ ಮೃದಂ ಭಕ್ಷಿತವಾನಿತಿ ಮಾತ್ರೇ ನ್ಯವೇದಯನ್ ॥ ೩೪ ॥ ಸಾ ಗೃಹೀತ್ವಾ ಕರೇ ಪುತ್ರಮುಪಾಲಭ್ಯ ಹಿತೈಷಿಣೀ । ಯಶೋದಾ ಭಯಸಂಭ್ರಾಂತಪ್ರೇಕ್ಷಣಾಕ್ಷಮಭಾಷತ ॥ ೩೫ ॥ ಯಶೋದಾ ॥

---

ವುಳ್ಳವಳಾಗಿ, ಉಪಾಲಬ್ಧುಂ-ಮಗನನ್ನು ಪಳಿದಾಡುವುದಕ್ಕೆ ಅಥವಾ ಹೆದರಿಸುವುದಕ್ಕೆ; ನೈಚ್ಛದ್ಧಿ-ಬಯಸಲಿಲ್ಲವಷ್ಟೆ, ॥೩೦॥ ಕದಾಚನ-ಒಂದಾನೊಂದು ಕಾಲದಲ್ಲಿ, ಗೋಪ್ಯಃ-ಗೊಲ್ಲತಿಯರು, ಪೃಥಕ್ಪೃಥಕ್-ಬೇರೆಬೇರೆ, ಕೃಷ್ಣಂ-ಕೃಷ್ಣನನ್ನು, ಊಹ್ಯ-ಎತ್ತಿಕೊಂಡು, ಏತ್ಯ-ಬಂದು, ತದಾಗಃ-ತತ್-ಆ ಕೃಷ್ಣನ, ಆಗಃ-ಅಪರಾಧವನ್ನು, ಏಕದೈವ-ಒಂದೇ ಹೊತ್ತಿನಲ್ಲಿ, ಗದಿತುಂ-ಹೇಳಲೋಸುಗ, ಪ್ರಸೃತಾಸ್ಸತ್ಯಃ-ಪ್ರವರ್ತಿಸಿದವರಾಗಿ, ಅಥ-ಆ ಮೇಲೆ, ತದಂತಿ-ತತ್-ಆ ಯಶೋದೆಯ, ಅಂತಿ-ಹತ್ತಿರದಲ್ಲಿ, ತಮೇವ-ಆ ಕೃಷ್ಣನನ್ನೇ, ದೃಷ್ಟ್ವಾ-ಕಂಡು, ನಿಜಾನ್-ತಾವೆತ್ತಿಕೊಂಡು ಬಂದ ಕೃಷ್ಣರನ್ನು, ಅದೃಷ್ಟ್ವಾ-ಕಾಣದೆ, ಸಲಜ್ಜಾಃ-ನಾಚಿಕೆಯಿಂದ ಕೂಡಿದವರಾದ್ದರಿಂದಲೇ, ತಾಸ್ಸರ್ವಾಶ್ಚ-ಅವರೆಲ್ಲರೂ, ಸ್ವಗೃಹಾನ್-ತಮ್ಮ ಮನೆಗಳನ್ನು ಕುರಿತು, ನಿವವೃತುಃ-ಹಿಂದಕ್ಕೆ ತಿರುಗಿದರು ॥೩೩॥ ಏಕದಾ-ಒಂದು ಕಾಲದಲ್ಲಿ, ಕ್ರೀಡಮಾನಾಃ-ಆಡುತ್ತಿರುವ, ರಾಮಾದ್ಯಾಃ- ಬಲರಾಮನು ಮೊದಲಾದ, ತೇ-ಆ, ಗೋಪದಾರಕಾಃ-ಗೊಲ್ಲರ ಹುಡುಗರು, ಕೃಷ್ಣಃ-ಕೃಷ್ಣನು, ಮೃದಂ-ಮಣ್ಣನ್ನು, ಭಕ್ಷಿತವಾನ್ ಇತಿ-ತಿಂದನೆಂದು, ಮಾತ್ರೇ-ತಾಯಿಯಾದ ಯಶೋದೆಗೆ, ನ್ಯವೇದಯನ್-ಅರಿಕೆಮಾಡಿದರು ॥೩೪॥ ಸಾ ಯಶೋದಾ-ಆ ಯಶೋದೆಯು, ಪುತ್ರಂ-ಮಗನನ್ನು, ಕರೇ-ಕೈಯಲ್ಲಿ, ಗೃಹೀತ್ವಾ-ಹಿಡಿದುಕೊಂಡು, ಉಪಾಲಭ್ಯ-ಪಳಿದು ಬೆದರಿಸಿ, ಹಿತೈಷಿಣೀ-ಮಗನಿಗೆ ಪ್ರಿಯವನ್ನು ಬಯಸುವಳಾದ್ದರಿಂದಲೇ, ಭಯಸಂಭ್ರಾಂತಪ್ರೇಕ್ಷಣಾಕ್ಷಂ-ಭಯ-ಹೆದರಿಕೆಯಿಂದ, ಸಂಭ್ರಾಂತ-ಚಲಿಸುತ್ತಿರುವ, ಪ್ರೇಕ್ಷಣ-ದೃಷ್ಟಿಯುಳ್ಳ, ಅಕ್ಷಂ-ಕಂಗಳುಳ್ಳ, ಕೃಷ್ಣನನ್ನು ಕುರಿತು, ಅಭಾಷತ-ನುಡಿದಳು ॥೩೫॥ (ಯಶೋದಾವಾಕ್ಯವು) ಅದಾಂತಾತ್ಮನ್-ಉದ್ಧತಸ್ವಭಾವನೇ, ಭವಾನ್-ನೀನು, ರಹಃ ಏಕಾಂತಸ್ಥಲದಲ್ಲಿ, ಮೃದಂ-ಮಣ್ಣನ್ನು, ಕಸ್ಮಾತ್-ಯಾವ ಕಾರಣದಿಂದ, ಭಕ್ಷಿತವಾನ್-ತಿಂದವನಾದೆ. ತಾವಕಾಃ- ನಿನ್ನವರಾದ ಏತೇ ಕುಮಾರಾಃ- ಈ

---



ದಿಸಲಿಚ್ಛೈಯಿಸಿದವಳು ಆಗಲಿಲ್ಲ. ॥೩೦॥%॥(ಬಳಿಕ ಒಂದೇ ರೂಪದಿಂದ ಹಲವು ಮನೆಗಳಂ ಹೊಕ್ಕು ಏಕಕಾಲದಲ್ಲಿ ಹಲವು ರೂಪವಂತೋರಿದ ಕೃಷ್ಣನ ಅದ್ಭುತಕೃತ್ಯವನ್ನು ಹೇಳುವನು:-) ಒಂದೇ ಹೊತ್ತಿನಲ್ಲಿ ಬೆಣ್ಣೆ ಮೊದಲಾದವುಗಳಂ ಕದಿಯುವದಕ್ಕೆ ಕೃಷ್ಣನು ತಮ್ಮ ತಮ್ಮ ಮನೆಗಳಿಗೆ ಬರುತಲೂ ಅವರವರು ಆ ಯಾ ಕೃಷ್ಣನಂ ಹಿಡಿದು ಎತ್ತಿಕೊಂಡು ದೂರು ಹೇಳುವದಕ್ಕೆ ಯಶೋದೆಯ ಬಳಿಗೆ ಎಲ್ಲರೂ ಒಂದೇ ಹೊತ್ತಿನಲ್ಲಿ ಬಂದರು. ಯಶೋದೆಯ ಬಳಿಯಲ್ಲಿ ಸುಮ್ಮನೆ ಕುಳಿತಿರುವ ಕೃಷ್ಣನನ್ನು ನೋಡಿ ತಾವು ತಂದ ಕೃಷ್ಣರನ್ನು ಕಾಣದೆ ದೂರು ಹೇಳುವದಕ್ಕೆ ಆಸ್ಪದವಿಲ್ಲದವರಾಗಿ ಆಶ್ಚರ್ಯಪಟ್ಟು ತಾವೇ ನಾಚಿಕೊಂಡು ಸುಮ್ಮನೆ ತಮ್ಮ ಮನೆಗಳಿಗೆ ತಿರುಗಿ ಹೊರಟು ಹೋದರು ॥%॥೩೩॥ ಎಲೈ ಪರೀಕ್ಷಿದ್ರಾಯನೇ; ಒಂದು ಸಮಯದಲ್ಲಿ ಕ್ರೀಡಿಸುತ್ತಿರುವ ಬಲರಾಮನು ಮೊದಲಾದ ಗೋಪಾಲಕರೊಂ ಕೂಡಿ ಕೃಷ್ಣನು ಮಣ್ಣು ಮೆದ್ದನೆಂದು ತಾಯಿಯಾದ ಯಶೋದೆಗೆ ತಿಳುಹಿದರು. ॥೩೪॥ ಆಗ ಯಶೋದೆಯು ಪುತ್ರನ ಹಿತವಂ ನಿಶ್ಚಯಿಸುವವಳಾಗಿ ಕೈಯಂ ಪಿಡಿದುಕೊಂಡು ಭಯದಿಂ ಚಪಲವಾದ ನೋಟವುಳ್ಳ ಕಂಣುಗಳಿಂ ಶೋಭಿಸುವ ಕೃಷ್ಣನಂ ಜರಿದು ಈ ರೀತಿಯಿಂ ನುಡಿದಳು. ಅದೆಂತೆನೆ,-॥೩೫॥ "ಎಲೋ ನಡುಗುತ್ತಿರುವ ಮೈಯುಳ್ಳ ಕೃಷ್ಣನೇ! ನೀನು ಏಕಾಂತಸ್ಥಳದಲ್ಲಿ ಮಣ್ಣು ಮೆದ್ದವನಾದೆ? ನಿನ್ನೊಡನಾಡಿಗಳಾದ ಬಾಲಕರೂ ನಿನ್ನಂಣನಾ

ಕಸ್ಮಾನ್ಮೃದಮದಾಂತಾತ್ಮನ್ಭವಾನ್ಭಕ್ಷಿತವಾನ್ರಹಃ । ವದಂತಿ ತಾವಕಾಹ್ಯೇತೇಕುಮಾರಾಸ್ತೇಗ್ರಜೋಽಪ್ಯಯಮ್ ॥೩೬॥ ಶ್ರೀಕೃಷ್ಣಃ॥ ನಾಹಂ ಭಕ್ಷಿತವಾನಮ್ಬ ಸರ್ವೇ ಮಿಥ್ಯಾಭಿಶಂಸಿನಃ । ಯದಿಸತ್ಯಂಗಿರಸ್ತರ್ಹಿಸಮಕ್ಷಂಪಶ್ಯಮೇಮುಖಮ್ ॥೩೭॥ ಯದ್ಯೇವಂತರ್ಹಿವ್ಯಾದೇಹೀತ್ಯುಕ್ತಸ್ಸಭಗವಾನ್ಹರಿಃ । ವ್ಯಾದತ್ತಾವ್ಯಾಹತೈಶ್ವರ್ಯಃಕ್ರೀಡಾಮನುಜಬಾಲಕಃ ॥೩೮॥ ಸಾತತ್ರದದೃಶೇವಿಶ್ವಂಜಗತ್ಸ್ಥಾಸ್ನುಚಖಂದಿಶಃ। ಸಾದ್ರಿದ್ವೀಪಾಬ್ಧಿಭೂಗೋಳಂಸವಾಯ್ವಗ್ನೀನ್ದುತಾರಕಮ್ ॥೩೯॥ ಜ್ಯೋತಿಶ್ಚಕ್ರಂಜ್ವಲತ್ತೇಜೋವಿವರಾಣಿರಸಾತಲಮ್ । ವೈಕಾರಿಕಾಣೀನ್ದ್ರಿಯಾಣಿಮನೋಮಾತ್ರಾಗುಣಾಸ್ತ್ರಯಃ ॥೪೦॥ ಏತದ್ವಿಚಿತ್ರಂಸಹಜೀ

---

ಹುಡುಗರೂ, ತೇ-ನಿನ್ನ. ಅಗ್ರಜಃ- ಅಂಣನಾದ, ಅಯಮಪಿ- ಈಬಲರಾಮನೂಕೂಡ, ವದಂತಿಹಿ- ಹೇಳುತ್ತಿರುವರಷ್ಟೆ, ॥೩೬॥ ಅಂಬ-ಅಮ್ಮ! ಅಹಂ-ನಾನು, ನಭಕ್ಷಿತವಾನ್-ತಿಂದವನಲ್ಲವು. ಸರ್ವೇ-ಎಲ್ಲರೂ, ಮಿಥ್ಯಾಭಿಶಂಸಿನಃ-ಮಿಥ್ಯಾ-ಸಟೆಯನ್ನು, ಅಭಿಶಂಸಿನಃ_ಹೇಳುವವರು. ಗಿರಃ- ಇವರಮಾತುಗಳು ಸತ್ಯಂಯದಿ-ದಿಟವಾದರೆ, ತರ್ಹಿ-ಆಪಕ್ಷದಲ್ಲಿ, ಸಮಕ್ಷಂ-ಪ್ರತ್ಯಕ್ಷವಾಗಿ, ಮೇ-ನನ್ನ, ಮುಖಂ-ಬಾಯಿಯನ್ನು, ಪಶ್ಯ-ನೋಡು॥೩೭॥ಯದ್ಯೇವಂತರ್ಹಿ-ಹೀಗಾದದ್ದಾದರೆ, ವ್ಯಾದೇಹಿ-ಬಾಯಿತೆರಿ, ಇತಿ-ಹೀಗೆ, ಉಕ್ತಃ-ಹೇಳಲ್ಪಟ್ಟ, ಭಗವಾನ್-ಭಗವಂತನಾದ, ಅವ್ಯಾಹತೈಶ್ವರ್ಯಃ-ಅವ್ಯಾಹತ-ಅಭಂಗವಾದ, ಐಶ್ವರ್ಯಃ-ಸಾಮರ್ಥ್ಯವುಳ್ಳ, ಕ್ರೀಡಾಮನುಜಬಾಲಕಃ-ಲೀಲಾಮನುಷ್ಯಬಾಲನಾದ, ಹರಿಃ-ಕೃಷ್ಣನು, ವ್ಯಾದತ್ತ- ಬಾಯಿತೆರೆದನು ॥೩೮॥ ಸಾ- ಆಗೋಪಿಯು, ತತ್ರ-ಆಕೃಷ್ಣನಬಾಯಿಯಲ್ಲಿ, ಸ್ಥಾಸ್ನು-ಸ್ಥಾವರವನ್ನೂ, ಚ-ಜಂಗಮವನ್ನೂ, ಖಂ-ಆಕಾಶವನ್ನೂ, ದಿಶಃ-ದಿಕ್ಕುಗಳನ್ನೂ, ಸಾದ್ರಿದ್ವೀಪಾಬ್ಧಿಭೂಗೋಳಂ-ಸಾದ್ರಿ-ಬೆಟ್ಟಗಳೊಡನೆಕೂಡಿದ, ದ್ವೀಪ-ದೀವಿಗಳಿಂದಕೂಡಿದ, ಅಬ್ಧಿ-ಸಮುದ್ರಗಳಿಂದಕೂಡಿದ, ಭೂಗೋಳಂ-ಉಂಡೆಯಾಗಿರುವಭೂಮಿಯುಳ್ಳಂಥಾ, ಸವಾಯ್ವಗ್ನೀಂದುತಾರಕಂ-ಗಾಳಿಯಿಂದಲೂ ಬೆಂಕಿಯಿಂದಲೂ ಚಂದ್ರನಿಂದಲೂ ನಕ್ಷತ್ರಗಳಿಂದಲೂ ಕೂಡಿದ, ವಿಶ್ವಂ-ಸಮಸ್ತವಾದ, ಜಗತ್-ಪ್ರಪಂಚವನ್ನು, ದದೃಶೇ-ಕಂಡಳು॥೩೯॥ಜ್ಯೋತಿಶ್ಚಕ್ರಂ-ಸ್ವರ್ಗಲೋಕವನ್ನೂ, ಜ್ವಲತ್ತೇಜೋವಿವರಾಣಿ-ಜ್ವಲತ್-ಪ್ರಕಾಶಿಸುವ, ತೇಜಃ-ಬೆಳಕಿನ, ವಿವರಾಣಿ-ತೂತುಗಳನ್ನೂ, ರಸಾತಲಂ-ಪಾತಾಳಲೋಕವನ್ನೂ, ವೈಕಾರಿಕಾಣಿ-ಅಧಿಷ್ಠಾನದೇವತೆಗಳಿಂಕೂಡಿದ, ಇಂದ್ರಿಯಾಣಿ-ದಶೇಂದ್ರಿಯಗಳನ್ನೂ, ಮನಃ-ಚಿತ್ತವನ್ನೂ, ಮಾತ್ರಾಃ-ಶಬ್ದಾದಿಪಂಚತನ್ಮಾತ್ರುಗಳನ್ನೂ, ಗುಣಾಸ್ತ್ರಯಃ- ಸತ್ವರಜಸ್ತಮಸ್ಸುಗಳೆಂಬಮೂರುಗುಣಗಳನ್ನೂ, (ಪ್ರಥಮೆಗೆದ್ವಿತೀಯಾರ್ಥ)॥೪೦॥ ಜೀವಕಾಲಸ್ವಭಾವಕರ್ಮಾಶಯಲಿಂಗಭೇದಂ-ಜೀವ-ಚಿದಾಭಾಸರಾದಜೀವಾತ್ಮರು, ಕಾಲ-ಗುಣಕ್ಷೋಭಕವಾದಸಮಯ

---

ದರಾಮನೂ ನೀನು ಮಂಣುತಿಂದಿಯೆಂದು ಹೇಳುವರು ॥೩೬॥(ಇಂತೆಂಬ ಯಶೋದೆಯಮಾತಂಕೇಳಿ ಶ್ರೀಕೃಷ್ಣನು ಪ್ರತ್ಯುತ್ತರವನಿತ್ತನು. ಅದೆಂತೆನೆ-,"ಎಲೈ, ತಾಯೇ' ನಾನು ಮಂಣಂ ಭಕ್ಷಿಸಲಿಲ್ಲ ಸಂಗಾತಿಗಳೆಲ್ಲರೂ ಸುಳ್ಳುಹೇಳುವರು. ಇವರಮಾತುಗಳೇದಿಟವಾದರೆ ಈಗ ನನ್ನ ಬಾಯಂ ನೀನುಪ್ರತ್ಯಕ್ಷವಾಗಿನೋಡು."॥೩೭॥"ಎಲೈ,



ಪರೀಕ್ಷಿದ್ರಾಯನೇ' ಬಳಿಕ ಯಶೋದೆಯು ಹೀಗೆಹೇಳಲ್ಪಟ್ಟ ಕೃಷ್ಣನವಾಕ್ಯವಂಕೇಳಿ, "ಕೃಷ್ಣನೇ; ನೀನು ಮಂಣುತಿನ್ನದಿದ್ದರೆ ನಿನ್ನ ಬಾಯಂ ತೆರದುತೋರಿಸು." ಎಂದಳು. ಲೀಲಾಬಾಲಕನಾದ ಭಗವಂತನಾದ ಅಷ್ಟೈಶ್ವರ್ಯಗಳುಳ್ಳ ಶ್ರೀಕೃಷ್ಣನು ತನ್ನ ಬಾಯಂತೆರೆದನು. ॥೩೮॥ ಆಮೇಲೆ ಯಶೋದೆಯು ಕೃಷ್ಣನಬಾಯಿಯಲ್ಲಿ ಚರಾಚರಪ್ರಪಂಚಮಂ, ದಿಕ್ಕುಗಳಂ, ಅಂತರಿಕ್ಷಮಂ, ಪರ್ವತದ್ವೀಪ ಸಮುದ್ರಗಳಿಂ ಕೂಡಿದ ಭೂಗೋಳಮಂ, ಪ್ರವಹಾದಿ ವಾಯುಗಳು ಮಿಂಚು ಅಗ್ನಿ ಚಂದ್ರ ನಕ್ಷತ್ರ ಇವುಗಳಿಂಕೂಡಿದ ॥೩೯॥ ಸ್ವರ್ಗಲೋಕ ನೀರು ಭೌಮಾಗ್ನಿ ಬಿಲಂಗಳು ರಸಾತಲ ಇಂದ್ರಿಯದೇವತೆಗಳು ಇಂದ್ರಿಯಗಳು ಮನಸ್ಸುಶಬ್ದಾದಿವಿಷಯಗಳು ಸತ್ವರಜಸ್ತಮೋಗುಣಗಳು ಮೊದಲಾದ್ದುಳ್ಳಪ್ರಪಂಚವೆಲ್ಲಮಂ, ಕಂಡಳು. ॥೪೦॥ ಮತ್ತು ಯಶೋದೆಯು ಜೀವಸಮೂಹವು, ಗು

ಪಕಾಲಸ್ವಭಾವಕರ್ಮಾಶಯಲಿಙ್ಗಭೇದಮ್ । ಸೂನೋಸ್ತನೌ ವೀಕ್ಷ್ಯ ವಿದಾರಿತಾಸ್ಯೇ ವ್ರಜಂ ಸಹಾತ್ಮಾನಮ
ವಾಪಶಙ್ಕಾಮ್ ‖೪೧‖ ಕಿಂಸ್ವಪ್ನ ಏತದುತ ದೇವಮಾಯಾ ಕಿಂವಾ ಮದೀಯೋ ಬತ ಬುದ್ಧಿಮೋಹಃ । ಅಥೋ ಅಮು
ಷ್ಯೈವ ಮಮಾರ್ಭಕಸ್ಯ ಯಃ ಕಶ್ಚನೌತ್ಪತ್ತಿಕ ಆತ್ಮಯೋಗಃ ‖೪೨‖ ಅಥೋ ಯಥಾವನ್ನ ವಿತರ್ಕಗೋಚರಂ
ಚೇತೋಮನಃಕರ್ಮವಚೋಭಿರಞ್ಜಸಾ । ಯದಾಶ್ರಯಂ ಯೇನ ಯತಃ ಪ್ರತೀಯತೇ ಸುದುರ್ವಿಭಾವ್ಯಂ ಪ್ರಣತಾ
ಸ್ಮಿ ತತ್ಪದಮ್ ‖೪೩‖ ಅಹಂ ಮಮಾಸೌ ಪತಿರೇಷ ಮೇ ಸುತೋ ವ್ರಜೇಶ್ವರಸ್ಯಾಖಿಲವಿತ್ತಪಾ ಸತೀ । ಗೋಪ್ಯಶ್ಚ

---

ವು, ಸ್ವಭಾವ-ಪರಿಣಾಮಕ್ಕೆ ಕಾರಣವಾದ ಸ್ವಭಾವವು, ಕರ್ಮ-ಜನ್ಮಕ್ಕೆ ಕಾರಣವಾದ ಪುಣ್ಯಪಾಪಗಳು, ಆಶಯ-ಅದರ ಸಂಸ್ಕಾರವು ಎಂಬವುಗಳಿಂದ, ಲಿಂಗ-ಚರಾಚರಶರೀರಗಳ, ಭೇದಂ-ವಿಭಾಗವುಳ್ಳ, ವಿಚಿತ್ರಂ-ಆಶ್ಚರ್ಯಕರವಾದ, ಏತದ್ವಿಶ್ವಂ-ಈಪ್ರಪಂಚವನ್ನೂ, ಸಹಾತ್ಮಾನಂ-ತನ್ನೊಡನೆಕೂಡಿದ, ವ್ರಜಂ-ಗೋಕುಲವನ್ನೂ, ವಿದಾರಿತಾಸ್ಯೇ-ತೆರೆಯಲ್ಪಟ್ಟಬಾಯಿಯುಳ್ಳ, ಸೂನೋಃ-ಮಗನ, ತನೌ-ಶರೀರದಲ್ಲಿ, ಸಹ-ಏಕಕಾಲದಲ್ಲಿ, ವೀಕ್ಷ್ಯ-ನೋಡಿ, ಶಂಕಾಂ-ಸಂದೇಹವನ್ನು, ಅವಾಪ-ಹೊಂದಿದಳು ‖೪೧‖ ಏತತ್-ಇದು, ಸ್ವಪ್ನಃಕಿಂ-ಕನಸೇನು, ಉತ-ಅಲ್ಲದಿದ್ದರೆ, ದೇವಮಾಯಾಕಿಂ-ದೇವತೆಗಳಮಾಯೆಯೋ ಏನು, ಕಿಂವಾ-ಏನಾದರೂ, ಮದೀಯಃ-ನನ್ನಸಂಬಂಧವಾದ, ಬುದ್ಧಿಮೋಹೋಬತ-ಭ್ರಾಂತಿಯೋ ಏನು, ಅಥೋ-ಅಥವಾ, ಅಮುಷ್ಯ-ಈ, ಮಮಾರ್ಭಕಸ್ಯೈವ-ನನ್ನ ಮಗುವಿನದೇ, ಯಃಕಶ್ಚನ-ಯಾವುದೋ ಒಂದಾದ, ಔತ್ಪತ್ತಿಕಃ-ಸ್ವಾಭಾವಿಕವಾದ, ಆತ್ಮಯೋಗಃಕಿಂ-ಅಣಿಮಾದಿಸಿದ್ಧಿಸಂಬಂಧವೋ ಏನು ‖೪೨‖ ಅಥೊ-ಅನಂತರದಲ್ಲಿ, ಚೇತೋಮನಃಕರ್ಮವಚೋಭಿಃ- ಚೇತಃ-ಬುದ್ಧಿಯಿಂದಲೂ, ಮನಃ-ಮನಸ್ಸಿನಿಂದಲೂ-ಕರ್ಮ-ಅಂತಃಕರಣವಿಚಾರದಿಂದಲೂ, ವಚೋಭಿಃ-ವಾಕ್ಕುಗಳಿಂದಲೂ, ಯತ್-ಯಾವಜಗತ್ತು, ಯಥಾವತ್-ಯಥಾರ್ಥವಾಗಿ, ವಿತರ್ಕಗೋಚರಂ-ವಿಚಾರವಿಷಯವು, (ನಿರ್ವಚನೀಯವು) ನ-ಅಲ್ಲವೋ, ತತ್-ಆ, ಅನಿರ್ವಚನೀಯಜಗತ್ತು, ಯದಾಶ್ರಯಂ-ಯಾವ ಬ್ರಹ್ಮವಸ್ತುವೇ ಅಧಿಷ್ಠಾನವಾಗಿವುಳ್ಳದ್ದೋ, ಯೇನ-ಯಾವ ಸತ್ಯವಸ್ತುವಿನಿಂದ (ಸತ್ಯವಾಗಿರುವಂತೆತೋರುವುದೋ) ಯತಃ-ಯಾವ ಬ್ರಹ್ಮವಸ್ತುವಿನದೆಸೆಯಿಂದ, ಪ್ರತೀಯತೇ-ಪ್ರಾತಿಭಾಸಿಕದಂತೆ ಉಂಟಾಗಿ ವ್ಯಾವಹಾರಿಕವಾಗಿ ತೋರುವುದೋ, ತತ್-ಅಂತಾ, ಜಗಜ್ಜನ್ಮಾದಿಕಾರಣವಾದ, ಸುದುರ್ವಿಭಾವ್ಯಂ-ಮನೋವಾಕ್ಕುಗಳಿಂದ ಭಾವಿಸಲಶಕ್ಯವಾದ, ಪದಂ-ಆತ್ಮಸ್ವರೂಪವನ್ನು, ಪ್ರಣತಾ-ಐಕ್ಯಾನುಸಂಧಾನದಿಂದ ನಮಸ್ಕರಿಸಿದವಳು, ಅಸ್ಮಿ-ಆಗುತ್ತಿರುವೆನು ‖೪೩‖ ಅಹಂ-ಯಶೋದೆಯೆಂಬ ಹೆಸರಿನವಳು, ಅಸೌ-ಈನಂದಗೋಪನು, ಮಮ-ನನಗೆ, ಪತಿಃ-ಗಂಡನು, ಏಷಃ-ಈಕೃಷ್ಣನು, ಮೇ-ನನಗೆ, ಸುತಃ-ಮಗನು, ವ್ರಜೇಶ್ವರಸ್ಯ-ಗೋಕುಲಕ್ಕೊಡೆಯನಾದ ನಂದನಿಗೆ, ಅಖಿಲವಿತ್ತಪಾ- ಸಕಲಧನಗಳಿಗೊಡತಿಯಾದ, ಸತೀ-ಪತಿವ್ರತೆಯಾದ ಹೆಂಡತಿಯಾಗಿರುವೆನು, ಗೋಪ್ಯಃ-ಗೊಲ್ಲತಿಯರೂ, ಸಹಗೋಧನಾಃ-ಗೋವುಗಳೆಂಬ ಧನಗಳಿಂದ ಕೂಡಿದವರಾದ, ಗೋಪಾಶ್ಚ-ಗೊಲ್ಲರೂಕೂಡ, (ನನ್ನವರಾಗಿರುವರು.) ಇತ್ಥಂ ಹೀಗೆ. ಯನ್ಮಾಯಯಾ-ಯಾವವಸ್ತುಸ್ವರೂಪದ ಅಜ್ಞಾನದಿಂದ, ಅಥವಾ ಯಾವ ಈಶ್ವರನ ಮಾಯೆಯಿಂದ, (ಮೋಹಕಶಕ್ತಿಯಿಂದ) ಅಸಂ-

---

ಕ್ಷೋಭಿತವಾದ ಕಾಲವು, ಪರಿಣಾಮಕಾರಣವಾದ ಸ್ವಭಾವವು, ಜೀವಾತ್ಮರ ಜನ್ಮಕ್ಕೆ ಕಾರಣವಾದ ಕರ್ಮಸಂಸ್ಕಾರವೆನಿಸುವ ಅಂತಃಕರಣವು; ಇವುಗಳಿಂದುಂಟಾದ ಸ್ಥಾವರ ಜಂಗಮ ಶರೀರಭೇದಗಳುಳ್ಳ ವಿಚಿತ್ರವಾದ ಪ್ರಪಂಚವನ್ನೂ ಅದರಲ್ಲಿ ನಂದಗೋಕುಲವನ್ನೂ ತನ್ನನ್ನೂ ಕೂಡ ಕೃಷ್ಣನ ದೇಹದಲ್ಲಿ ಸ್ವಲ್ಪವಾಗಿ ತೆರೆಯಲ್ಪಟ್ಟ ಬಾಯೊಳಗೆ ಒಂದೇ ಕಾಲದಲ್ಲಿ ಕಂಡು ಸಂಶಯವನೆಯ್ದಿದಳು, ‖೪೧‖ ಅದೆಂತೆನೆ- ಇದು ಸ್ವಪ್ನವೋ. ಅಲ್ಲದಿದ್ದರೆ ದೈವಮಾಯೆಯೋ!, ಅಥವಾ ನನ ಬುದ್ಧಿಮೋಹವೋ, ಅಲ್ಲದಿದ್ದರೆ ಈ ನನ್ನ ಬಾಲಕನ ಸ್ವಾಭಾವಿಕವಾದ ಸಾಮರ್ಥ್ಯವಿಶೇಷವೋ, ‖೪೨‖ (ಎಂದು ಈ ರೀತಿಯಲ್ಲಿ ಯಶೋದೆಯು ಹಲವು ಬಗೆಯಾಗಿ ವಿಕಲ್ಪಿಸಿಕೊಂಡು ಕಡೆಗೆ ತನ್ನ ಪುತ್ರನ ಯೋಗಶಕ್ತಿಯೇ ಸರಿಯೆಂದು ನಿಶ್ಚಯಿಸಿ ನುಡಿಯುವಳು. ಅದೆಂತೆನೆ-) ಚಿತ್ತ ಮನಸ್ಸು ಕರ್ಮ ವಾಕ್ಕು ಇವುಗಳಿಂದ ಸಾಕಲ್ಯವಾಗಿಯೂ ಯಥಾರ್ಥವಾಗಿಯೂ ಊಹಿಸಿ ತಿಳಿಯುವದಕ್ಕೆ ಅಶಕ್ಯವಾದ ಈ ಜಗತ್ತು-ಯಾವವನ ಆಶ್ರಯಿಸಿರುವುದೋ, ಯಾವವನಿಂ ನಿರ್ಮಿಸಲ್ಪಟ್ಟಿರುವುದೋ, ಮತ್ತು ಯಾವವನ ದೆಸೆಯಿಂದ ಅಭಿವ್ಯಕ್ತವಾಗಿ ತೋರುವುದೋ, ಅಂತಾ ಭಗವಂತನ ಭಾವಿಸಲಶಕ್ಯವಾದ ಪಾದಾರವಿಂದವಂ ನಮಸ್ಕರಿಸುವೆನು. ‖೪೩‖

ಗೋಪಾಸ್ಸಹಗೋಧನಾಶ್ಚ ಯಸ್ಮಾಯಯೇತ್ಥಂಕುಮತಿಸ್ಸಮೇಗತಿಃ ॥೪೪॥ ಇತ್ಥಂವಿದಿತತತ್ತ್ವಾಯಾಂಗೋಪಿಕಾಯಾಂಸಈಶ್ವರಃ । ವೈಷ್ಣವೀಂವ್ಯತನೋನ್ಮಾಯಾಂಪುತ್ರಸ್ನೇಹಮಯೀಂವಿಭುಃ ॥೪೫॥ ಸದ್ಯೋನಷ್ಟಮತಿರ್ಗೋಪೀಸಾರೋಪ್ಯಾರೋಹಮಾತ್ಮಜಮ್ । ಪ್ರವೃದ್ಧಸ್ನೇಹಕಲಿಲಹೃದಯಾಸೀತ್ಪುರಾಯಥಾ ॥೪೬॥ ತ್ರಯ್ಯಾಚೋಪನಿಷದ್ಭಿಶ್ಚ ಸಾಂಖ್ಯಯೋಗೈಶ್ಚ ಸಾತ್ವತೈಃ । ಉಪ*ಗೀಯಮಾನಮಾಹಾತ್ಮ್ಯಂಹರಿಂಸಾಮನ್ಯತಾತ್ಮಜಮ್ ॥೪೭॥ ರಾಜಾ ॥ ನನ್ದಃಕಿಮಕರೋದ್ಬ್ರಹ್ಮಂಶ್ರೇಯಏವಂಮಹೋದಯಮ್ । ಯಶೋದಾಚಮ

---

ನಾನು, ಕುಮತಿಃ-ಕುತ್ಸಿತವಾದಭೇದಬುದ್ಧಿಯುಳ್ಳವಳಾಗಿರುವೆನೋ, ಸಃ-ಆಪರಮಾತ್ಮನು, ಮೇ-ನನಗೆ, ಗತಿಃ-ಪ್ರಾಪ್ಯನಾಗಿರುವನು ॥೪೪॥ ಗೋಪಿಕಾಯಾಂ-ಯಶೋದೆಯು, ಇತ್ಥಂ-ಹೀಗೆ, ವಿದಿತತತ್ತ್ವಾಯಾಂಸತ್ಯಾಂ-ವಿದಿತ-ತಿಳಿಯಲ್ಪಟ್ಟ, ತತ್ತ್ವಾಯಾಂ-ಆತ್ಮಯಾಥಾರ್ಥ್ಯಮುಳ್ಳವಳಾಗುತ್ತಿರಲು, ವಿಭುಃ-ವ್ಯಾಪಕನಾದ, ಸಈಶ್ವರಃ-ಆಪರಮೇಶ್ವರನು, ಪುತ್ರಸ್ನೇಹಮಯೀಂ- ಪುತ್ರಾಭಿಮಾನಸ್ವರೂಪವಾದ, ವೈಷ್ಣವೀಂಮಾಯಾಂ-ವಿಷ್ಣುಸಂಬಂಧವಾದಮೋಹವನ್ನು, ವ್ಯತನೋತ್-ವಿಶೇಷವಾಗಿಮಾಡಿದನು.( ಹರಡಿಮುಚ್ಚಿದನು ) ॥೪೫॥ ನಷ್ಟಃ-ಆಗಲೇ, ನಷ್ಟಮತಿಃ-ನಷ್ಟ-ನಾಶವಾಗಿಹೋದ, ಮತಿಃ ಆತ್ಮಸ್ವರೂಪಜ್ಞಾನವುಳ್ಳವಳಾದ, ಸಾಗೋಪೀ-ಆಯಶೋದೆಯು, ಆತ್ಮಜಂ-ಮಗನಾದಕೃಷ್ಣನನ್ನು, ಆರೋಹಂ-ತೊಡೆಯನ್ನು, ಆರೋಪ್ಯ-ಏರಿಸಿಕೊಂಡು, ಪುರಾ-ಪೂರ್ವದೊಳಗೆ, ಯಥಾ-ಹೇಗೋ, ತಥಾ-ಹಾಗೆ, ಪ್ರವೃದ್ಧಸ್ನೇಹಕಲಿತಹೃದಯಾ-ಪ್ರವೃದ್ಧ-ಬೆಳೆದ, ಸ್ನೇಹ- ಪ್ರೀತಿಯಿಂದ, ಅಥವಾಮಮಕಾರದಿಂದ, ಕಲಿತ-ವ್ಯಾಪ್ತವಾದ, ಹೃದಯಾ-ಮನಸ್ಸುಳ್ಳವಳು, ಆಸೀತ್-ಆದಳು ॥೪೬॥ ಸಾ-ಆಯಶೋದೆಯು, ತ್ರಯ್ಯಾಚ-ಋಗ್ಯಜುಸ್ಸಾಮವೇದಗಳಿಂದಲೂ, ಉಪನಿಷದ್ಭಿಶ್ಚ-ವೇದಾಂತಗಳಿಂದಲೂ, ಸಾಂಖ್ಯಯೋಗೈಶ್ಚ-ಸಾಂಖ್ಯಶಾಸ್ತ್ರಗಳಿಂದಲೂ ಯೋಗಶಾಸ್ತ್ರಗಳಿಂದಲೂ, ಸಾತ್ವತೈಃ-ಪಾಂಚರಾತ್ರಾದಿತಂತ್ರಗಳಿಂದಲೂ, ಅಥವಾಸತ್ಪುರುಷರಿಂದಲೂ, ಉಪಗೀಯಮಾನಮಾಹಾತ್ಮ್ಯಂ-ಉಪಗೀಯಮಾನ-ಹಾಡಿಕೊಂಡಾಡಲ್ಪಡುವ, ಮಾಹಾತ್ಮ್ಯಂ-ಆಧಿಕ್ಯವೂಘನತೆಯೂಉಳ್ಳ, ಹರಿಂ-ವಿಷ್ಣುವಾದಕೃಷ್ಣನನ್ನು, ಆತ್ಮಜಂ-ತನ್ನಮಗನನ್ನಾಗಿ, ಅಮನ್ಯತ-ನೆಚ್ಚಿದಳು ॥೪೭॥( ಪರೀಕ್ಷಿತ್ಪ್ರಶ್ನವು.) ಬ್ರಹ್ಮನ್-ಬ್ರಾಹ್ಮಣನಾದಶುಕನೇ। ನಂದಃ-ನಂದಗೋ

---

ಪನು ಯಶೋದೆಯೆನುತಲೂ, ಈನಂದಗೋಪನು ನನ್ನಪತಿಯೆನುತಲೂ, ಈಗೋಕುಲಕ್ಕೊಡೆಯನಾದ ನಂದಗೋಪನ ಸಮಸ್ತ ದ್ರವ್ಯಗಳಿಗೂ ನಾನೇ ಸ್ವತಂತ್ರಳೆನುತಲೂ, ಕೃಷ್ಣನು ನನ್ನಪುತ್ರನೆನುತಲೂ, ಗೋಪಸ್ತ್ರೀಯರೂ, ಗೋಪಾಲಕರೂ ನಮ್ಮವರೆನುತಲೂ , ಈಗೋವುಗಳೆಲ್ಲವೂ ನನ್ನವೆನುತಲೂ, ಈದುಷ್ಟಬುದ್ಧಿಯು ನನಗೆಯಾವವನ ಮಾಯೆಯಿಂದ ಉಂಟಾಯಿತೋ ಆಶ್ರೀಕೃಷ್ಣನೇನನಗೆಗತಿಯೆಂದು ಮರೆಹೊಕ್ಕಳು.॥೪೪॥ಯಶೋದಾದೇವಿಯು ಈರೀತಿಯಲ್ಲಿತತ್ತ್ವವ ಯಥಾವತ್ತಾಗಿ ತಿಳಿಯುತ್ತಿರಲು, ಪರಮೇಶ್ವರನಾದ ಪ್ರಭುವಾದ ಶ್ರೀಕೃಷ್ಣನು ಪುತ್ರಸ್ನೇಹಮಯವಾದ ತನ್ನವೈಷ್ಣವಮಾಯೆಯಂ ಬೀಸಿದನು.॥೪೫॥ಆಮೇಲೆ ತತ್ಕ್ಷಣವಲ್ಲಿಯೇ ನಷ್ಟವಾದ



ತತ್ತ್ವದನೆನವುಳ್ಳ ಯಶೋದೆಯು ಯಥಾಪ್ರಕಾರ ತನ್ನಪುತ್ರನಂ ತೊಡೆಯಮೇಲೆ ಕುಳ್ಳಿರಿಸಿಕೊಂಡು ಹೆಚ್ಚಿದಪುತ್ರಸ್ನೇಹದಿಂ ಹರಡಲ್ಪಟ್ಟಹೃದಯವುಳ್ಳವಳಾದಳು ॥೪೬॥ಬಳಿಕ ಮೂರು ವೇದಗಳಿಂದ ಇಂದ್ರಾದಿರೂಪನೆನುತಲೂ, ಉಪನಿಷತ್ತುಗಳೆಂಬ ವೇದಾಂತಗಳಿಂ ಪರಬ್ರಹ್ಮವೆನುತಲೂ, ಸಾಂಖ್ಯಶಾಸ್ತ್ರದಿಂಪುರುಷನೆನುತಲೂ, ಯೋಗಶಾಸ್ತ್ರಂಗಳಿಂಪರಮಾತ್ಮನೆನುತಲೂ,ಪಾಂಚರಾತ್ರಾಗಮಗಳಿಂ ಭಗವಂತನೆನುತಲೂ, ಹೊಗಳಲ್ಪಟ್ಟ ಮಾಹಾತ್ಮ್ಯವುಳ್ಳ ಪರಮೇಶ್ವರನಂ ಯಶೋದೆಯು ತನ್ನಪುತ್ರನೆಂದುತಿಳಿದಳು. ॥೪೭॥ (ಇಂತೆಂಬ ಶುಕಾಚಾರ್ಯನ ವಾಕ್ಯಮಂಕೇಳಿ

ಹಾಭಾಗಾಪಪೌಯಸ್ಯಾಸ್ತನಂಹರಿಃ ॥೪೮॥ ಪಿತರೌನಾನ್ವವಿಂದೇತಾಂ ಕೃಷ್ಣೋದಾರಾರ್ಭಕೇಹಿತಮ್। ಗಾಯಂತ್ಯದ್ಯಾಪಿಕವಯೋಯಲ್ಲೋಕಶಮಲಾಪಹಮ್ ॥೪೯॥ ಶ್ರೀಶುಕಃ॥ ದ್ರೋಣೋವಸೂನಾಂಪ್ರವರೋಧರಯಾಸಹಭಾರ್ಯಯಾ। ಕರಿಷ್ಯಮಾಣಆದೇಶಾನ್ ಬ್ರಹ್ಮಣಸ್ತಮುವಾಚಹ ॥೫೦॥ ಜಾತಯೋರ್ನೌಮಹಾದೇವೇ ಭುವಿವಿಶ್ವೇಶ್ವರೇಹರೌ। ಭಕ್ತಿಸ್ಸ್ಯಾತ್ಪರಮಾಲೋಕೇಯಯಾಂಜೋದುರ್ಗತಿಂತರೇತ್ ॥೫೧॥ ಅಸ್ತ್ವಿತ್ಯುಕ್ತಸ್ಸಏವೇಹವ್ರಜೇದ್ರೋಣೋಮಹಾಯಶಾಃ। ಜಜ್ಞೇನಂದಇತಿಖ್ಯಾತೋಯಶೋದಾಸಾಧರಾಭವತ್ ॥೫೨॥

---

ಪನು, ಮಹೋದಯಂ-ಶ್ಲಾಘ್ಯವಾದ ಹುಟ್ಟುವಿಕೆಯುಳ್ಳ, ಕಿಂಶ್ರೇಯಃ-ಯಾವಶ್ರೇಷ್ಠವಾದಪುಣ್ಯವನ್ನು, ಅಕರೋತ್- ಮಾಡಿದನು. ಹರಿಃ-ಸರ್ವಪಾಪಹರನಾದಕೃಷ್ಣನು, ಯಸ್ಯಾಃ-ಯಾವವಳ, ಸ್ತನಂ-ಮೊಲೆಯನ್ನು, ಪಪೌ-ಕುಡಿದನೋ, ಮಹಾಭಾಗಾ-ಹೆಚ್ಚುಪೂಜ್ಯತೆಯುಳ್ಳ, ಸಾಯಶೋದಾಚ-ಆಯಶೋದಾದೇವಿಯೂ, ಕಿಂಶ್ರೇಯಅಕರೋತ್-ಯಾವಪುಣ್ಯವನ್ನು ಮಾಡಿಯಿದ್ದಳು, ॥೪೮॥ ಕವಯಃ-ವಿದ್ವಾಂಸರು, ಲೋಕಶಮಲಾಪಹಂ-ಲೋಕ-ಜನರ, ಶಮಲ-ಪಾಪವನ್ನು, ಅಪಹಂ- ಪರಿಹರಿಸುವ, ಯತ್- ಯಾವದರನ್ನು, ಅದ್ಯಾಪಿ-ಈಗಲೂಕೂಡ, ಗಾಯಂತಿ-ಹಾಡುತ್ತಿರುವರೋ, ತತ್-ಅಂತಾ, ಕೃಷ್ಣಸ್ಯ-ಕೃಷ್ಣನ, ಉದಾರಾರ್ಭಕೇಹಿತಂ-ಉದಾರ-ಧಾರಾಳವಾದ, ಅರ್ಭಕೇಹಿತಂ-ಬಾಲಲೀಲೆಯನ್ನು, ಪಿತರೌ- ತಾಯಿತಂದ್ರಗಳಾದದೇವಕೀವಸುದೇವರು, ನಾನ್ವವಿಂದೇತಾಂ-ಅರಿತುಅನುಭವಿಸದೆಹೋದರೋ॥೪೯॥(ಶುಕವಚನವು)ವಸೂನಾಂ- ವಸುದೇವತೆಗಳೊಳಗೆ, ಪ್ರವರಃ-ಶ್ರೇಷ್ಠನಾದ, ದ್ರೋಣಃ-ದ್ರೋಣನೆಂಬವನು, ಧರಯಾ-ಧರೆಯೆಂಬ, ಭಾರ್ಯಯಾಸಹ-ಹೆಂಡತಿಯೊಂದಿಗೆ, ಬ್ರಹ್ಮಣಃ-ಚತುರ್ಮುಖಬ್ರಹ್ಮನ, ಆದೇಶಾನ್-ಆಜ್ಞೆಗಳನ್ನು, (ಗೋರಕ್ಷಣಾದಿಗಳನ್ನು) ಕರಿಷ್ಯಮಾಣಃ-ಮಾಡಹೋಗುವವನಾಗಿ, ತಂ-ಆಬ್ರಹ್ಮನನ್ನು ಕುರಿತು; ಉವಾಚಹ-ಹೇಳಿದನು, (ಬೇಡಿಕೊಂಡನು.)॥೫೦॥ಭುವಿ-ಭೂಮಿಯಲ್ಲಿ, ಜಾತಯೋಃ-ಗೋಪೀಗೋಪರಾಗಿಹುಟ್ಟುವ, ನೌ-ನಮಗೆ, ಲೋಕೇ-ಲೋಕದಲ್ಲಿ, ಯಯಾ-ಯಾವುದರಿಂದ, ಅಜ್ಞಃ-ಮೂಢನೂಕೂಡ, ದುರ್ಗತಿಂ-ನರಕವನ್ನು, ತರೇತ್-ಕಡೆಹಾಯುವನೋ, ಸಾ-ಅಂತಾ-ವಿಶ್ವೇಶ್ವರೇ-ಪ್ರಪಂಚಕ್ಕೊಡೆಯನಾದ, ಮಹಾದೇವೆ-ದೊಡ್ಡದೇವರಾದ, ಹರೌ-ವಿಷ್ಣುವಿನಲ್ಲಿ, ಪರಮಾ-ಉತ್ಕೃಷ್ಟವಾದ, ಭಕ್ತಿಃ-ಸೇವನಪ್ರೀತಿಯು, ಸ್ಯಾತ್-ಆಗಲಿ, ॥೫೧॥ಅಸ್ತು-ಆಗಲಿ, ಇತ್ಯುಕ್ತಃ-ಹೀಗೆಬ್ರಹ್ಮನಿಂದಹೇಳಲ್ಪಟ್ಟ; ಮಹಾಯಶಾಃ- ಮಹಾಕೀರ್ತಿಯುಳ್ಳ, ಸದ್ರೋಣಏವ-ಆದ್ರೋಣನೆಂಬವನೇ, ಇಹ-ಈಲೋಕದಲ್ಲಿ, ವ್ರಜೇ-ಗೋಕುಲದೊಳಗೆ, ಖ್ಯಾತಃ-ಪ್ರಸಿದ್ಧನಾದ, ನಂದಇತಿ-ನಂದಗೋಪನೆಂದು, ಜಜ್ಞೇ-ಹುಟ್ಟಿದನು, ಸಾಧರಾ-ಆಧರಾದೇವಿಯೇ, ಯಶೋದಾ-ಯಶೋದೆಯು, ಅಭವತ್-ಆದಳು ॥೫೨॥ ಹೇಭಾರತ-ಎ

---

ಅರಸಾದ ಪರೀಕ್ಷಿದ್ರಾಯನು ಆಶ್ಚರ್ಯದಿಂ ವಿಜ್ಞಾಪನಂಗೆಯ್ದನು.) "ಎಲೈ, ಬ್ರಹ್ಮವಿತ್ತಾದಶುಕಾಚಾರ್ಯನೆ! ನಂದಗೋಪನು ಇಂತಾಮಹಾಭಾಗ್ಯವನುಂಟುಮಾಡುವ ಯಾವಶ್ರೇಯಸ್ಸನ್ನು ಮಾಡಿಕೊಂಡಿದ್ದನು; ಯಾವಯಶೋದೆಯಮೊಲೆಹಾಲನ್ನು ಕೃಷ್ಣನುಕುಡಿದನೋ ಮಹಾಭಾಗ್ಯವತಿಯಾದ ಆಯಶೋದೆಯುಏನುಪುಣ್ಯವಂ ಮಾಡಿದ್ದಳು?॥ ಮತ್ತು ಸಮಸ್ತಪಾಪಂಗಳಂ ಪರಿಹರಿಸುವಉತ್ಕೃಷ್ಟವಾದ ಶ್ರೀಕೃಷ್ಣನಬಾಲಲೀಲೆಯಾವುದೋ ಅದರನ್ನು ಕವಿಗಳುಈಗಲೂ ಹಾಡುತ್ತಿರುವರು. ಭಗವಂತನು ಯಾರಿಗೆಪ್ರಸನ್ನನಾಗಿ ಅವತಾರಂಗೆಯ್ದನೋ' ತಾಯಿತಂದೆಗಳಾದಆದೇವಕೀವಸುದೇವರು ಆಬಾಲಲೀಲೆಗಳಂನೋಡಿ ಸಂತೋಷಪಡಲಿಲ್ಲ ಅವುಗಳಂಯಶೋದಾನಂದಗೋಪರು ಅನುಭವಿಸಿದ್ದರಿಂದ ಏನುಪುಣ್ಯವಂಮಾಡಿದವರೊ? ॥೪೯॥ (ಇಂತೆಂಬ ರಾಜವಾಕ್ಯವಂಕೇಳಿಶುಕಾಚಾರ್ಯನು ನಿರೂಪಿಸುವನು.) ಅದೆಂತೆನೆ,-"ಎಲೈ; ಅರಸೇ! ಅಷ್ಟವಸುದೇವತೆಗಳೊಳಗೆ ಶ್ರೇಷ್ಠನಾದದ್ರೋಣನೆಂಬ ವಸುವೂ ಆತನಪತ್ನಿಯಾದ ಧರಾದೇವಿಯೂ ನಂದಗೋಪ ಗೋಪಿಯರಾಗಿ ಗೋಕುಲದಲ್ಲಿ ಜನಿಸುವಂತೆ ಬ್ರಹ್ಮದೇವನಿಂದ ಆಜ್ಞಾಪಿಸಲ್ಪಟ್ಟು ಬ್ರಹ್ಮನಂಕುರಿತು ವಸುವು ವಿಜ್ಞಾಪನಂಗೆಯ್ದನು. ॥೫೦॥ ಎಲೈ,ಬ್ರಹ್ಮದೇವನೇ! ನಿನ್ನಆಜ್ಞಾನುಸಾರವಾಗಿ ಭೂಮಿಯಲ್ಲಿ ಜನಿಸುವ ನಮ್ಮಿರ್ವರಿಗೂ ಜಗದೀಶ್ವರನಾದ ಶ್ರೀಹರಿಯಲ್ಲಿ ಯಾವಭಕ್ತಿಯಿಂದ ಲೋಕದಲ್ಲಿ ಮೂಢನಾದವನೂಕೂಡ ದುರ್ಗತಿಯಂದಾಂಟುವನೋ, ಅಂತಾ ಸರ್ವೋತ್ತಮವಾದ ಭಕ್ತಿಯುಉಂಟಾಗಲಿ ॥೫೧॥ ಎಂದುವಿಜ್ಞಾಪಿಸಲು, ಹಾಗೆಯೇಆಗಲಿ, ಯೆಂದು ಬ್ರಹ್ಮದೇವನಿಂದ ಹೇಳಲ್ಪಟ್ಟ ಮಹಾಯಶಸ್ವಿಯಾದ ಆದ್ರೋಣನೆಂಬವಸುವು ಗೋಕುಲದಲ್ಲಿ ನಂದಗೋಪನೆಂಬ ಖ್ಯಾತಿಯಂಪಡೆದವನಾಗಿ ಜನಿಸಿದನು. ಆಧರಾದೇವಿಯೇ ಯಶೋದಾದೇವಿಯಾಗಿಜನಿಸಿದಳು. ॥೫೨॥ ಅದರಿಂ ಗೋಪಗೋಪಸ್ತ್ರೀಯರಲ್ಲಿ ಪ್ರಶಸ್ತರೆನಿಸಿದ ದಂಪತಿಗಳಾದನಂದಗೋ

ತತೋಭಕ್ತಿರ್ಭಗವತಿಪುತ್ರೀಭೂತೇಜನಾರ್ದನೇ।ದಂಪತ್ಯೋರ್ನಿತರಾಮಾಸೀದ್ಗೋಪಗೋಪೀಷುಭಾರತ॥೫೧॥ಕೃ
ಷ್ಣೋಬ್ರಹ್ಮಣಆದೇಶಂಸತ್ಯಂಕರ್ತುಂವ್ರಜೇವಿಭುಃ।ಸಹರಾಮೋವಸಞ್ಚಕ್ರೇತೇಷಾಂಪ್ರೀತಿಂಸ್ವಲೀಲಯಾ॥೫೨॥

ಇತಿಶ್ರೀಮದ್ಭಾಗವತೇ ದಶಮಸ್ಕನ್ಧೇಅಷ್ಟಮೋಽಧ್ಯಾಯಃ-

---

ಲೈ ಭರತವಂಶಜನಾಪಪರೀಕ್ಷಿತನೆ, ತತಃ-ಆಕಾರಣದಿಂದ, ಗೋಪಗೋಪೀಷು-ಗೊಲ್ಲರಲ್ಲಿಯೂ ಗೊಲ್ಲತಿಯರಲ್ಲಿಯೂ, ದಂಪತ್ಯೋಃ-ಯಶೋದಾನಂದಗೋಪರಿಗೆ, ಪುತ್ರೀಭೂತೇ-ಮಗನಲ್ಲದಿದ್ದರೂ ಮಗನಾಗಿರುವ, ಜನಾರ್ದನೇ- ಲೋಕಶಿಕ್ಷಕನಾದ, ಭಗವತಿ-ಭಗವಂತನಾದಕೃಷ್ಣನಲ್ಲಿ, ಭಕ್ತಿಃ-ಸೇವನಪ್ರೀತಿಯು, ನಿತರಾಂ-ಅತಿಶಯವಾಗಿ, ಆಸೀತ್-ಆಯಿತು॥೫೧॥ವಿಭುಃ-ವ್ಯಾಪಕನಾದವಿಷ್ಣುವು, ಬ್ರಹ್ಮಣಃ-ಚತುರ್ಮುಖಬ್ರಹ್ಮನ, ಆದೇಶಂ-ಆಜ್ಞೆಯನ್ನು, ಸತ್ಯಂಕರ್ತುಂ-ದಿಟವನ್ನಾಗಿಮಾಡಲೋಸುಗ, ಸಹರಾಮಃ- ರಾಮನಿಂದಕೂಡಿದ, ಕೃಷ್ಣಃ-ಕೃಷ್ಣನಾಗಿ, ವ್ರಜೇ-ಗೋಕುಲದಲ್ಲಿ,ವಸನ್-ಇರುವವನಾಗಿ, ಸ್ವಲೀಲಯಾ- ತನ್ನವಿನೋದದಿಂದ, ತೇಷಾಂ-ಆಯಶೋದಾನಂದಾದಿಗಳಿಗೆ, ಪ್ರೀತಿಂ- ಪ್ರಿಯವನ್ನು, ಚಕ್ರೇ- ಮಾಡಿದನಂತೆ ॥೫೨॥

ಇತಿಶ್ರೀಮದ್ಭಾಗವತ ಪ್ರತಿಶಬ್ದಾರ್ಥಬೋಧಿನ್ಯಾಂ ದಶಮಸ್ಕಂಧೇ
ಅಷ್ಟಮೋಽಧ್ಯಾಯಃ-

---

ಪ ಯಶೋದಾದೇವಿಯರಿಗೆ ಪುತ್ರರೂಪನಾದ ಶ್ರೀಕೃಷ್ಣಭಗವಂತನಲ್ಲಿ ಅತ್ಯಂತಭಕ್ತಿಯುಂಟಾಯಿತು.॥೫೧॥ ಆಕಾರಣದಿಂದ, ಭರತವಂಶೋತ್ಪನ್ನನಾದಪರೀಕ್ಷಿದ್ರಾಯನೇ! ಬ್ರಹ್ಮದೇವನಿಂದ ನಂದಗೋಪಯಶೋದೆಯರಿಗೆಶ್ರೀಹರಿಯಲ್ಲಿ ಭಕ್ತಿಯುಂಟಾಗಲಿಯೆಂದು ನುಡಿಯಲ್ಪಟ್ಟ ಅರ್ಥವಂ ಸತ್ಯವಂಮಾಡಲೋಸುಗ ವಿಭುವಾದ ಶ್ರೀಕೃಷ್ಣನುಗೋಕುಲವಲ್ಲಿ ರಾಮನೊಡಗೂಡಿವಾಸಂಗೆಯ್ವವನಾಗಿ ಅವರಿಗೆ ತನ್ನಬಾಲಲೀಲೆಗಳಿಂ ಪ್ರೀತಿಯನುಂಟುಮಾಡಿದಂ ॥೫೨॥

ಇಂತು ಶುಕಮುನಿಯು ಪರೀಕ್ಷಿದ್ರಾಯನಿಗೆ ನಿರೂಪಿಸಿದನೆಂದು ಸೂತಪೌರಾಣಿಕನು ನೈಮಿಶಾ
ರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಹೇಳಿದನೆಂಬಲ್ಲಿಗೆ- ಶ್ರೀಮನ್ಮಹೀ
ಶೂರಪುರವರಾಧೀಶ ಶ್ರೀಚಾಮರಾಜತನುಜಶ್ರೀಮತ್ಕೃಷ್ಣರಾಜ ವಿರ
ಚಿತಮಪ್ಪ, ಶ್ರೀಭಾಗವತದ "ಶ್ರೀಕೃಷ್ಣರಾಜವಾಣೀ
ವಿಳಾಸವು" ಎಂಬಕರ್ಣಾಟಭಾಷಾವ್ಯಾಖ್ಯಾ
ನದಲ್ಲಿ ದಶಮಸ್ಕಂಧದೊಳು ದಶಮಾ
ಧ್ಯಾಯವು ಸಂಪೂರ್ಣವಾದುದು.

ಮಂಗಳಮಸ್ತು.

——:*:——

ಬಾದರಾಯಣಿಃ॥ಏಕದಾಗೃಹದಾಸೀಷುಯಶೋದಾನನ್ದಗೇಹಿನೀ ! ಕರ್ಮಾನ್ತರನಿಯುಕ್ತಾಸುನಿರ್ಮಮನ್ಥ
ಸ್ವಯಂದಧಿ॥೧॥ ಯಾನಿಯಾನೀಹಗೀತಾನಿತದ್ಬಾಲಚರಿತಾನಿಚ|ದಧಿನಿರ್ಮನ್ಥನೇಕಾಲೇಸ್ಮರನ್ತೀತಾನ್ಯಗಾಯ
ತ॥೨॥ಕ್ಷೌಮಂವಾಸಃಪೃಥುಕಟಿತಟೇಬಿಭ್ರತೀಸೂತ್ರನದ್ಧಂ ಪುತ್ರಸ್ನೇಹಸ್ನುತಕುಚಯುಗಂಜಾತಕಮ್ಪಂ
ಚಸುಭ್ರೂಃ| ರಜ್ಜ್ವಾಕರ್ಷಶ್ರಮಭುಜಚಲತ್ಕಙ್ಕಣೌಕುಂಡಲೇಚಸ್ವಿನ್ನಂವಕ್ತ್ರಂಕಬರವಿಗಳನ್ಮಾಲತೀ
ನಿರ್ಮಮನ್ಥ॥೩॥ತಾಂಸ್ತನ್ಯಕಾಮಆಸಾದ್ಯಮಥ್ನಂತೀಂಜನನೀಂಹರಿಃ| ಗೃಹೀತ್ವಾದಧಿಮನ್ಥಾನಂನ್ಯಷೇಧ

---

[ ಶುಕವಾಕ್ಯವು ] ಏಕದಾ- ಒಂದುಸಮಯದಲ್ಲಿ, ಗೃಹದಾಸೀಷು- ಮನೆಯದಾಸಿಯರು, ಕರ್ಮಾಂತರನಿಯುಕ್ತಾಸುಸತೀಷು-ಕರ್ಮಾಂತರ- ಬೇರೆಕೆಲಸಗಳಲ್ಲಿ, ನಿಯುಕ್ತಾಸು- ನಿಯಮಿಸಲ್ಪಟ್ಟವರಾಗುತ್ತಿರಲು, ನಂದಗೇಹಿನೀ-ನಂದಗೋಪನಹೆಂಡತಿಯಾದ, ಯಶೋದಾ-ಯಶೋದೆಯು, ದಧಿ-ಮೊಸರನ್ನು, ಸ್ವಯಂ-ತಾನೇ, ನಿರ್ಮಮಂಥ-ಕಡೆದಳು ॥೧॥ತದ್ಬಾಲಚರಿತಾನಿ-ಆ ಬಾಲಕೃಷ್ಣನಚರಿತ್ರೆಗಳುಳ್ಳ, ಗೀತಾನಿ- ಹಾಡುಗಳು, ಯಾನಿಯಾನಿ- ಆವಾವುಗಳುಂಟೋ, ತಾನಿತಾನಿ- ಅವವುಗಳನ್ನು, ಇಹ-ಈ, ದಧಿನಿರ್ಮಂಥನೇ-ಮೊಸರನ್ನು ಕಡೆಯುವ, ಕಾಲೇ- ಹೊತ್ತಿನಲ್ಲಿ, ಸ್ಮರಂತೀಸತೀ- ನೆನಪುಗೊಳ್ಳುವಳಾಗಿ, ಅಗಾಯತಚ-ಹಾಡಲೂಹಾಡಿದಳು ॥೨॥ಸೂತ್ರನದ್ಧಂ-ಸೂತ್ರ-ಉಡಿನೂಲುಡಾಬಿನಿಂದ, ನದ್ಧಂ-ಬಿಗಿದುಕಟ್ಟಲ್ಪಟ್ಟ, ಕ್ಷೌಮಂವಾಸಃ-ಪಟ್ಟೆಯಸೀರೆಯನ್ನು, ಪೃಥುಕಟಿತಟೇ-ಪೃಥು-ದೊಡ್ಡದಾದ, ಕಟಿ- ಟೊಂಕದ, ತಟೇ-ನಿತಂಬದಲ್ಲಿ, ಬಿಭ್ರತೀ- ಧರಿಸಿದವಳಾಗಿಯೂ, ಜಾತಕಂಪಂ-ಹುಟ್ಟಿದಚಲನವುಳ್ಳ, ಪುತ್ರಸ್ನೇಹಸ್ನುತಕುಚಯುಗಂ-ಪುತ್ರ-ಮಗನಲ್ಲಿ, ಸ್ನೇಹ- ಪ್ರೀತಿಯಿಂದ, ಸ್ನುತ- ಜನಿಯುವ, ಕುಚಯುಗಂ-ಸ್ತನದ್ವಯವನ್ನೂ, ರಜ್ಜ್ವಾಕರ್ಷಶ್ರಮಚಲತ್ಕಂಕಣೌ-ರಜ್ಜು-ಕಡೆಯುವನೇಣನ್ನು, ಆಕರ್ಷ- ಎಳೆಯುವ, ಶ್ರಮ-ಪ್ರಯಾಸವುಳ್ಳ, ಭುಜ-ತೋಳುಗಳಲ್ಲಿ, ಚಲತ್-ಅಲುಗಾಡುತ್ತಿರುವ, ಕಂಕಣೌ-ಕಡಗಗಳನ್ನೂ, ಕುಂಡಲೇಚ-ಕರ್ಣಭೂಷಣಗಳನ್ನೂ, ಸ್ವಿನ್ನಂ-ಬೆವರಿದ, ವಕ್ತ್ರಂ-ಮುಖವನ್ನೂ, ಬಿಭ್ರತೀ-ಧರಿಸಿದವಳಾಗಿಯೂ, ಕಬರವಿಗಳನ್ಮಾಲತೀ- ಕಬರ-ತುರುಬಿನದೆಸೆಯಿಂದ, ವಿಗಳತ್-ಜಾರಿದ, ಮಾಲತೀ-ಜಾಜಿಹುವ್ವುಗಳುಳ್ಳವಳೂಅದ, ಸುಭ್ರೂಃ-ಹೆಂಗಸು(ಯಶೋದೆಯು)ನಿರ್ಮಮಂಥ- ಮೊಸರನ್ನುಕಡೆದಳು ॥೩॥ಸ್ತನ್ಯಕಾಮಃ-

---

ಶ್ರೀಧರೀಯಶ್ಲೋಕ॥ ನವಮೇಪಯಉತ್ಸಿಕ್ತೇಗತ್ವಾಗೋಪ್ಯಥತತ್ಕೃತಂ | ವಿಲೋಕ್ಯಭಾಂಡಭಂಗಾದಿಕೃಷ್ಣಂದಾಮ್ನಾಬಬಂಧತಂ ॥ಟೀ॥ಒಂಭತ್ತನೆಯ ಅಧ್ಯಾಯದಲ್ಲಿ ಹಾಲುಉಕ್ಕುತಲೂ ಗೋಪಿಯು ಅಲ್ಲಿಗೆಹೋಗಿ ಬಳಿಕ ಕೃಷ್ಣನಿಂದಮಾಡಲ್ಪಟ್ಟ ದಧಿಭಾಂಡ ಭಂಗಾದಿಗಳಂನೋಡಿ ಅವನನ್ನು ಹಗ್ಗದಿಂದ ಕಟ್ಟಿದಳೆಂದು ಹೇಳಲ್ಪಡುವುದು.% ಪೂರ್ವಾಧ್ಯಾಯದಲ್ಲಿ ಶ್ರೀಶುಕಾಚಾರ್ಯನು ಪರೀಕ್ಷಿದ್ರಾಯನುಕುರಿತು ಶ್ರೀಕೃಷ್ಣನು ತಾಯಿಯಾದ ಯಶೋದಾದೇವಿಗೆ ತನ್ನಹೊಟ್ಟೆಯಲ್ಲಿರುವ ಜಗತ್ತಂ ತೋರಿಸಿದುದೇಮೊದಲಾದ ವ್ಯಾಪಾರಂಗಳಂ ವಿವರಿಸಿ ಅನಂತರದಲ್ಲಿ ನಿರೂಪಿಸುವನವೆಂತೆನೆ ,

ಎಲೈಪರೀಕ್ಷಿದ್ರಾಯನೇ!, ಒಂದುಸಮಯದಲ್ಲಿ ನಂದಗೋಪನಪತ್ನಿಯಾದ ಯಶೋದಾದೇವಿಯು ತನ್ನ ಮನೆಯ ದಾಸಿಯರೆಲ್ಲರೂ ಬೇರೆಕೆಲಸಗಳಲ್ಲಿ ಸಂಬಂಧಿಸಿರಲು, ತಾನೇ ಮೊಸರನ್ನು ಕಡೆಯುತ್ತಿದ್ದಳು. ॥ ೧ ॥ಆ ಸಮಯದಲ್ಲಿ ಲೋಕದೊಳಗೆ ಶ್ರೀಕೃಷ್ಣನ ಯಾವ ಯಾವಲೀಲೆಗಳು ಗಾನಂಗೆಯ್ಯಲ್ಪಡುವವೋ ಆಯಾಬಾಲಲೀಲೆಗಳಂ ಸ್ಮರಿಸುವಳಾಗಿ ಯಶೋದೆಯು ಹಾಡಿದಳು॥೨॥(ದಧಿಮಥನಮಾಡಿದಬಗೆಯೆಂತೆನೆ-) ವಿಸ್ತೀರ್ಣವಾದಕಟಿಪ್ರದೇಶದಲ್ಲಿ ಪ್ರಕಾಶಿಸುವ ನವರತ್ನಖಚಿತವಾದ ಒಡ್ಡಿಯಾಣದಿಂದ ಕಟ್ಟಲ್ಪಟ್ಟ ಉತ್ತಮವಾದ ಬಿಳಿಯಸೀರೆಯಂ ಧರಿಸಿದವಳಾಗಿ, ಪುತ್ರಸ್ನೇಹದಿಂದ ಸುರಿಯುವ ಹಾಲುಳ್ಳದ್ದಾಗಿ ಕಾಲುಕಾತಲಿರುವ ಕುಚದ್ವಯವುಳ್ಳವಳಾಗಿ, ಕಡಗೋಲಿನಹಗ್ಗವಂ ಸೆಳೆಯುವುದರಿಂದುಂಟಾದ ಶ್ರಮದಿಂಕೂಡಿದವಳಾಗಿ, ಕದಲುತ್ತಿರುವ ತೋಳುಗಳಲ್ಲಿ ಧ್ವನಿಗೆಯ್ಯುತ್ತಿರುವ ಹಸ್ತಾಭರಣಗಳನ್ನೂ ಜೋಲುತಲಿರುವ ಕುಂಡಲಂಗಳನ್ನೂ ಧರಿಸಿದವಳಾಗಿ, ಸ್ವಲ್ಪಬೆವರಿದ ಮುಖವುಳ್ಳವಳಾಗಿ, ಕೇಶಭಾರದದೆಸೆಯಿಂದ ಉದುರುವ ಜಾಜಿಯಹುವ್ವುಗಳುಳ್ಳವಳಾಗಿ ಶೋಭಾಯಮಾನಗಳಾದಹುಬ್ಬುಗಳುಳ್ಳ ಯಶೋದಾದೇವಿಯು ಮೊಸರಂ ಕಡೆದಳು ॥೩॥ ಆಸಮಯದಲ್ಲಿ ಮೊಲೆಯುಣ್ಣಬೇಕೆಂ

ಪ್ರೀತಿಮಾವಹನ್ ||೪|| ತಮಂಕಮಾರೂಢಮಪಾಯಯತ್ಸ್ತನಂಸ್ನೇಹಸ್ನುತಂಸಸ್ಮಿತಮೀಕ್ಷತೀಮುಖಮ್ |
ಅತೃಪ್ತಮುತ್ಸೃಜ್ಯಜವೇನಸಾಯಯಾವುತ್ಸಿಚ್ಯಮಾನೇಪಯಸಿತ್ವಧಿಶ್ರಿತೇ ||೫|| ಸಂಜಾತಕೋಪಸ್ಫುರಿತಾರು
ಣಾಧರಂಸಂದಶ್ಯದದ್ಭಿರ್ದಧಿಮಂಥಭಾಜನಮ್ | ಭಿತ್ತ್ವಾಮೃಷಾಶ್ರುರ್ದೃಷದಶ್ಮನಾರಹೋಜಘಾಸಹಯ್ಯಂ
ಗವಮಂತರಂಗತಃ ||೬|| ಉತ್ತಾರ್ಯಗೋಪೀಸುಶ್ರುತಂಪಯಃಪುನಃಪ್ರವಿಶ್ಯಸಂದೃಶ್ಯಚದಧ್ಯಮತ್ರಕಮ್ | ಭ
ಗ್ನಂವಿಲೋಕ್ಯಸ್ವಸುತಸ್ಯಕರ್ಮತಜ್ಜಹಾಸತಂಚಾಪಿನತತ್ರಪಶ್ಯತೀ ||೭|| ಉಲೂಖಲಾಂಘ್ರೇರುಪರಿವ್ಯವಸ್ಥಿ

---

ಮೇಲೆಹಾಲನ್ನುಬಯಸುವವನಾದ, ಹರಿಃ- ಕೃಷ್ಣನು, ಮಥ್ನಂತೀಂ- ಕಡೆಯುತಲಿರುವ, ತಾಂಜನನೀಂ-ಆತಾಯಿಯನ್ನು, ಆಸಾದ್ಯ-ಸೇರಿ, ಪ್ರೀತಿಮಾವಹನ್ಸನ್-ಪ್ರಿಯವನ್ನುಂಟುಮಾಡುವವನಾಗಿ, ದಧಿಮಂಥಾನಂ- ಮೊಸರಿನಕಡಗೋಲನ್ನು, ಗೃಹೀತ್ವಾ- ಹಿಡಿದು, ನ್ಯಷೇಧತ್-ತಡೆದನು(ನಿಲ್ಲಿಸಿದನು) ||೪|| ಅಂಕಂ-ತೊಡೆಯನ್ನು, ಆರೂಢಂ-ಏರಿದ, ತಂ-ಆಕೃಷ್ಣನನ್ನು, ಸ್ನೇಹಸ್ನುತಂ-ಪ್ರಣಯಭಾವದಿಂದಹಾಲನ್ನುಜನಿಸುವ, ಸ್ತನಂ- ಮೊಲೆಯನ್ನು; ಅಪಾಯಯತೀ- ಕುಡಿಸುತ್ತಿರುವಳೂ, ಸಸ್ಮಿತಂ- ಕಿರುನಗೆಯಿಂಮೆರೆಸಿದ, ಮುಖಂ- ಕೃಷ್ಣನಮೋರೆಯನ್ನು, ಈಕ್ಷತೀ-ನೋಡುವವಳೂಆದ, ಸಾ-ಆಯಶೋದೆಯು, ಅಧಿಶ್ರಿತೇಪಯಸಿ-ಕಾಯಲಿಟ್ಟಿದ್ದಹಾಲು, ಉತ್ಸಿಚ್ಯಮಾನೇಸತಿ-ಉಕ್ಕಿಹೋಗುವುದಾಗುತ್ತಿರಲಾಗಿ, ಅತೃಪ್ತಂ-ಮೊಲೆಯುಂಡುತೃಪ್ತಿಗೊಳ್ಳದಕೃಷ್ಣನನ್ನು, ಉತ್ಸೃಜ್ಯ-ನೆಲದಮೇಲೆಬಿಟ್ಟು, ಜವೇನ-ವೇಗದಿಂದ, ಯಯೌ-ಹೋದಳು ||೫|| ಸಃ-ಆಕೃಷ್ಣನು, ಜಾತಕೋಪಸ್ಫುರಿತಾರುಣಾಧರಂ- ಜಾತ-ಹುಟ್ಟಿದ, ಕೋಪ-ಸಿಟ್ಟಿನಿಂದ, ಸ್ಫುರಿತ-ಚಲಿಸುವ, ಅರುಣ-ಕೆಂಪಾದ, ಅಧರಂಯಥಾತಥಾ-ತುಟಿಯುಂಟಾಗುವಂತೆ, ದದ್ಭಿಃ-ಹಲ್ಲುಗಳಿಂದ, ದಧಿಮಂಥಭಾಜನಂ-ಮೊಸರುಕಡೆಯುವಗಡಿಗೆಯನ್ನು, ಸಂದಶ್ಯ-ಕಚ್ಚಿ, ದೃಷದಶ್ಮನಾ-ಅರೆಯುವಗುಂಡುಕಲ್ಲಿನಿಂದ, ಭಿತ್ತ್ವಾ-ಒಡೆದುಹಾಕಿ, ಮೃಷಾಶ್ರುಃ-ಸಟೆಯಕಂಣೀರುಳ್ಳವನಾಗಿ, ಅಂತರಂ- ಮನೆಯೊಳಭಾಗವನ್ನು, ಗತಃ-ಹೊಂದಿದವನಾಗಿ, ರಹಃ-ರಹಸ್ಯವಾಗಿ, (ಏಕಾಂತಸ್ಥಲದಲ್ಲಿ)ಹಯ್ಯಂಗವಂ- ಹೊಸಬೆಂಣೆಯನ್ನು, ಜಘಾಸ- ಅಪಹರಿಸಿದನು(ತಿಂದನು) ||೬|| ಗೋಪೀ-ಯಶೋದೆಯು, ಸುಶ್ರುತಂ-ಕಾಯಿಸಲ್ಪಟ್ಟ, ಪಯಃ-ಹಾಲನ್ನು, ಉತ್ತಾರ್ಯ-ಒಲೆಯಿಂದಿಳಿಸಿ, ಪುನಃ-ಮರಳಿಯೂ, ಪ್ರವಿಶ್ಯ-ಮೊಸರುಕಡೆಯುವಮನೆಯಂಹೊಕ್ಕು, ಭಗ್ನಂ-ಒಡೆದುಹೋದ, ದಧ್ಯಮತ್ರಕಂಚ-ಮೊಸರಗಡಿಗೆಯನ್ನೂ, ಸಂದೃಶ್ಯ-ಚನ್ನಾಗಿನೋಡಿ, ಸ್ವಸುತಸ್ಯ-ತನ್ನಮಗನ, ತತ್ಕರ್ಮ-ಆಕೆಲಸವನ್ನು, ವಿಲೋಕ್ಯ-ನೋಡಿ, ತತ್ರ-ಅಲ್ಲಿ, ತಂಚಾಪಿ- ಆಕೃಷ್ಣನನ್ನೂ, ನಪಶ್ಯತೀಸತೀ-ಕಾಣದವಳಾಗಿ, ಜಹಾಸ-ನಕ್ಕಳು ||೭|| ಉಲೂಖಲಾಂಘ್ರೇಃ-ಹೊರಳಿಸಲ್ಪಟ್ಟಿದ್ದೊರಳಡಿಯ, ಉಪರಿ-ಮೇಲೆ, ವ್ಯವಸ್ಥಿತಂ-ಕುಳಿ

---



ದು ಕೃಷ್ಣನು ಮೊಸರಂ ಕಡೆಯುತ್ತಿರುವ ತಾಯಿಯ ಬಳಿಗೆಯ್ದಿ ಪ್ರೀತಿಯನ್ನುಂಟುಮಾಡುವವನಾಗಿ ಕಡಗೋಲಂತನ್ನ ಕೈಯಿಂಪಿಡಿದು ಕಡೆಯುವಕೆಲಸವನ್ನು ತಡೆದನು ||೪|| ಆಮೇಲೆ ಯಶೋದೆಯು ಮುಗುಳುನಗೆಯಿಂ ಕೂಡಿದನೋಟದಿಂ ಬಾಲಕನಮುಖವಂ ನೋಡುವವಳಾಗಿ ಬಾಲಕನಂ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಸ್ನೇಹದಿಂ ಸ್ರವಿಸುವಕ್ಷೀರವುಳ್ಳ ಸ್ತನವಂ ಕುಡಿಸಿದಳು. ಆಗ ಒಲೆಯಮೇಲೆ ಭಾಂಡದಲ್ಲಿರುವ ಹಾಲು ಬೆಂಕಿಯ ಉರಿಹೆಚ್ಚಿದ್ದರಿಂದ ಉಕ್ಕಿಸುರಿಯುತ್ತಿರಲು ಸ್ತನ್ಯಪಾನದಿಂ ತೃಪ್ತಿಯನಯ್ದದೇ ಇರುವ ಕೃಷ್ಣಮೂರ್ತಿಯಂ ತೊಡೆಯಿಂದ ಕೆಳಕ್ಕೆಯಿಳಿಸಿ ಆಕ್ಷೀರಭಾಂಡದ ಸಮೀಪವಂಕುರಿತು ತ್ವರೆಯಿಂದಯ್ದಿದಳು. ||೫|| ಅವೇಳೆಯಲ್ಲಿ ಕೋಪವುಳ್ಳವನಾಗಿ ಶ್ರೀಕೃಷ್ಣನು ನಡುಗುತ್ತಿರುವಕೆಂಪಾದ ತನ್ನತುಟಿಯಂ ಕಚ್ಚಿಕೊಂಡವನಾಗಿ ಕಲ್ಪಿತವಾದ ಕಂಣೀರುಳ್ಳವನಾಗಿ ಆದಧಿಭಾಂಡವ ಗುಂಡುಕಲ್ಲಿನಿಂದ ಒಡೆದುಬೆಂಣೆಯಂತೆಗೆದುಕೊಂಡುಹೋಗಿ ಒಳಮನೆಯಂಪೊಕ್ಕು, ರಹಸ್ಯಸ್ಥಳದಲ್ಲಿ ಆಬೆಂಣೆಯಂ ಭಕ್ಷಿಸಿದನು. || ೬ || ಆಯಶೋದಾದೇವಿಯು ಒಲೆಯಮೇಲೆ ಉಕ್ಕುತ್ತಿರುವ ಹಾಲಿನಭಾಂಡವಂ ಕೆಳಕ್ಕೆ ಇಳಿಸಿ ಪುನಶ್ಚ ದಧಿಮಥನಸ್ಥಳಕ್ಕೆ ಬಂದು ಒಡೆದಿರುವ ದಧಿಭಾಂಡವಂಕಂಡು ತನ್ನ ಪುತ್ರನಕೆಲಸವಂನೋಡಿ ನಗುವವಳಾಗಿ, ಆಶ್ರೀಕೃಷ್ಣನಂಅಲ್ಲಿಕಾಣದೆ ||೭|| ಅರಸಿನೋಡುತಬಂದುಮಗುಚಿಇರಿಸಿರುವಮರದ

ತಂಮರ್ಕಾಯಕಾಮಂದದತಂಶುಚಿಸ್ಮಿತಮ್। ಹಯ್ಯಂಗವಂಚೌರ್ಯವಿಶಂಕಿತೇಕ್ಷಣಂನಿರೀಕ್ಷ್ಯಪಶ್ಚಾತ್ಸುತ
ಮಾಗಮಚ್ಛನೈಃ॥೮॥ತಾಮಾತ್ತಯಷ್ಟಿಂಪ್ರಸಮೀಕ್ಷ್ಯಸತ್ವರಸ್ತತೋವರುಹ್ಯಾಪಸಸಾರಭೀತವತ್।ಗೋಪ್ಯ
ನ್ವಧಾವನ್ನಯಮಾಪಯೋಗಿನಾಂಕ್ಷಮಂಪ್ರವೇಷ್ಟುಂತಪಸೇರಿತಂಮನಃ॥೯॥ ಅನ್ವಂಚಮಾನಾಜನನೀಬೃಹ

ತಿರುವಂಥಾ, ಮರ್ಕಾಯ-ಮಂಗನಿಗೆ, ಕಾಮಂ-ಬೇಕಾದಷ್ಟು, ಹಯ್ಯಂಗವಂ-ಬೆಂಣೆಯನ್ನು, ದದತಂ-ಕೊಡುತ್ತಿರುವಂಥಾ, ಶುಚಿಸ್ಮಿತಂ-ಬಿಳುಪಾದಕಿರುನಗೆಯುಳ್ಳಂಥಾ-ಚೌರ್ಯವಿಶಂಕಿತೇಕ್ಷಣಂ- ಚೌರ್ಯ-ಕಳ್ಳತನದಿಂದ, ವಿಶಂಕಿತ- ಹೆದರಿದ, ಈಕ್ಷಣಂ- ಕಂಣುಳ್ಳಂತಾ, ಸುತಂ-ಮಗನನ್ನು, ನಿರೀಕ್ಷ್ಯ-ನೋಡಿ, ಪಶ್ಚಾತ್-ಹಿಂದೆ, ಶನೈಃ-ಮೆಲ್ಲಗೆ, ಆಗಮತ್- ಬಂದಳು ॥೮॥ ಆತ್ತಯಷ್ಟಿಂ-ಹಿಡಿಯಲ್ಪಟ್ಟಕೋಲುಳ್ಳ, ತಾಂ-ಆಯಶೋದೆಯನ್ನು, ಪ್ರಸಮೀಕ್ಷ್ಯ-ಚೆನ್ನಾಗಿನೋಡಿ, ಸತ್ವರಃ- ವೇಗದಿಂಕೂಡಿದವನಾಗಿ, ತತಃ-ಆಯೊರಳಡಿಯಮೇಲಿನಿಂದ, ಅವರುಹ್ಯ-ಇಳಿದು, ಭೀತವತ್-ಹೆದರಿದವನಂತೆ, ಅಪಸಸಾರ-ಹಿಂಪಕ್ಕೆನಡೆದನು, ತಪಸಾ- ಏಕಾಗ್ರತೆಯಿಂದ, ಈರಿತಂ-ತದಾಕಾರವಾಗಿರುವಂತೆಪ್ರೇರಿಸಲ್ಪಟ್ಟದ್ದಾದ್ದರಿಂದಲೇ: ಪ್ರವೇಷ್ಟುಂ-ಹೊಕ್ಕಿರುವದಕ್ಕೆ, ಕ್ಷಮಂ-ಸಮರ್ಥವಾದ, ಯೋಗಿನಾಂ-ಯೋಗಿಗಳ, ಮನಃ-ಹೃದಯವುಕೂಡ, ಯಂ-ಯಾವವಿಷ್ಣುವನ್ನು, ನಾಪ-ಹೊಂದಲಿಲ್ಲವೋ, ತಂ-ಆಪರಮಾತ್ಮನಾದಕೃಷ್ಣನನ್ನು, ಗೋಪೀ-ಯಶೋದೆಯು, ಅನ್ವಧಾವತ್-ಅಟ್ಟಿಕೊಂಡುಹೋದಳು॥೯॥ಅನ್ವಂಚಮಾನಾ- ಅನುಸರಿಸಿನಡೆಯುತ್ತಿರುವ, ಜನನೀ-ತಾಯಿಯಾದಯಶೋದೆಯು, ಬೃಹಚ್ಚಲಚ್ಛ್ರೋಣೀಭರಾಕ್ರಾಂತಗತಿಃ-ಬೃಹತ್-ದೊಡ್ಡದಾದ, ಚಲತ್- ಕದಲುತ್ತಿರುವ, ಶ್ರೋಣಿ- ಅಂಡುಗಳ, ಭರ- ಅತಿಶಯದಿಂದ, ಆಕ್ರಾಂತ- ಆಕ್ರಮಿಸಲ್ಪಟ್ಟ(ಸ್ತಬ್ಧವಾದ)ಗತಿಃ- ನಡೆಯುಳ್ಳಂತಾ, ಸುಮಧ್ಯಮಾ-ಸಮೀಚೀನಮಧ್ಯಭಾಗವುಳ್ಳಂತಾ, ವಿಸ್ರಂಸಿತಕೇಶಬಂಧನಚ್ಯುತಪ್ರಸೂನಾನುಗತಿಃ- ವಿಸ್ರಂಸಿತ-ಬಿಚ್ಚಲ್ಪಟ್ಟ,ಕೇಶಬಂ







ವರಳಿನಮೇಲೆ ಕುಳಿತಿರುವವನಾಗಿ ಮತ್ತುನೆಲುವಿನಮೇಲಿರುವ ಬೆಂಣೆಯಂ ಮಂಗನಿಗೀಯುವ ಬೇಕಾದಷ್ಟು ಕೊಡುತ ಚೌರ್ಯವಂಮಾಡಿದುದರಿಂದ ತಾಯಿಯೆಲ್ಲಿಬರುವಳೋ ಎಂಬ ಭಯದಿಂದ ಚಂಚಲಗಳಾದ ನೋಟಗಳುಳ್ಳ ತನ್ನ ಪುತ್ರನಂಕಂಡು ಹಿಂದುಗಡೆಯಿಂದಮೆಲ್ಲನೆ ಹಿಡಿಯುವದಕ್ಕೆಬಂದಳು॥೮॥ಆವೇಳೆಯಲ್ಲಿ ಶ್ರೀಕೃಷ್ಣನು ಕೈಯಲ್ಲಿಕಡಗೋಲುಹಿಡಿದು ಹೊಡೆಯಲೋಸುಗ ಬರುವ ಆಯಶೋದೆಯಂಕಂಡು ಅತಿತ್ವರೆಯಿಂದ ಆವರಳಿನಿಂದಿಳಿದು ಭಯಪಟ್ಟವನಂತೆಓಡತೊಡಗಿದನು.ಏಕಾಗ್ರತೆಯಿಂದ ತದಾಕಾರವಾಗಿರುವ ಮಹಾಯೋಗಿಗಳ ಮನಸ್ಸುಕೂಡಯಾವದೇವನನ್ನು ಎಯ್ದಲಿಲ್ಲವೋ, ಆಶ್ರೀಕೃಷ್ಣನಂ ಯಶೋದಾದೇವಿಯು ಹಿಡಿಯಲೋಸುಗ ಓಡಿಬಂದಳು॥೯॥ ಈ ರೀತಿಯಲ್ಲಿ ಶ್ರೀಕೃಷ್ಣನು ಅನುಸರಿಸಿ ಓಡಿಬರುವ ಸೂಕ್ಷ್ಮಮಧ್ಯಳಾದ ತಾಯಿಯಾದ ಯಶೋದಾದೇವಿಯು ತೋರವಾಗಿ ಕದಲುತ್ತಿರುವ ನಿತಂಬಗಳ ಭಾರದಿಂದ ಮಂದವಾದ ಗಮನವುಳ್ಳವಳಾಗಿ ವೇಗದಿಂದ ಬಿಚ್ಚಲ್ಪಟ್ಟ ತುರುಬಿನಿಂದ

ಚ್ಚಲಚ್ಛ್ರೋಣೀಭರಾಕ್ರಾಂತಗತಿಸ್ಸುಮಧ್ಯಮಾ। ಜವೇನವಿಸ್ರಂಸಿತಕೇಶಬನ್ಧನಚ್ಯುತಪ್ರಸೂನಾನುಗ
ತಿಃಪರಾಮೃಶತ್॥೧೦॥ಕೃತಾಗಸನ್ತಂಪ್ರರುದನ್ತಮಕ್ಷಿಣೀಕರ್ಷನ್ತಮಂಜನ್ಮಷಿಣೀಸ್ವಪಾಣಿನಾ। ಉದ್ವೀ
ಕ್ಷಮಾಣಂಭಯವಿಹ್ವಲೇಕ್ಷಣಂಹಸ್ತೇಗೃಹೀತ್ವಾಭಿ*ಷಯನ್ತ್ಯವಾಗುರತ್॥೧೧॥ತ್ಯಕ್ತ್ವಾಯಷ್ಟಿಂಸುತಂಭೀ
ತಂವಿಜ್ಞಾಯಾರ್ಭಕವತ್ಸಲಾ।ಇಯೇಷಕಿಲತಂಬದ್ಧುಂದಾಮ್ನಾಽತದ್ವೀರ್ಯಕೋವಿದಾ॥೧೨॥ನಚಾಂತರ್ನಬಹಿ
ರ್ಯಸ್ಯನಪೂರ್ವಂನಾಪಿಚಾಪರಮ್।ಪೂರ್ವಾಪರಂಬಹಿಶ್ಚಾಂತರ್ಜಗತೋಯೋಜಗಚ್ಚಯಃ॥೧೩॥ ತಂಮತ್ವಾ
ತ್ಮಜಮವ್ಯಕ್ತಂಮರ್ತ್ಯಲಿಂಗಮಧೋಕ್ಷಜಮ್.ಗೋಪಿಕೋಲೂಖಲೇದಾಮ್ನಾಬಬನ್ಧಪ್ರಾಕೃತಂಯಥಾ॥೧೪॥

---

ಧನ-ತುರುಬುಗಂಟಿನಿಂದ, ಚ್ಯುತ-ಜಾರಿದ, ಪ್ರಸೂನ-ಪೂಗಳ, ಅನುಗತಿಃ- ಅನುಗಮನವುಳ್ಳಂತಾವಳೂಆಗಿ, (ಆಕೃಷ್ಣನನ್ನು)ಜ
ವೇನ-ವೇಗದಿಂದ, ಪರಾಮೃಶತ್-ಹಿಡಿದಳು॥೧೦॥ಕೃತಾಗಸಂ- ಮಾಡಲ್ಪಟ್ಟಅಪರಾಧವುಳ್ಳಂತಾ, ಪ್ರರುದಂತಂ- ಹೆಚ್ಚಾಗಿಅಳುವ
ನಾದ, ಅಂಜನ್ಮಷಿಣೀ-ಸೋರುತ್ತಿರುವಕಾಡಿಗೆಯುಳ್ಳ(ಪಾಠಾಂತರ-ಅಂತರ್ಮಷಿಣೀ-ಒಳಗೆಕಾಡಿಗೆಯುಳ್ಳ,) ಅಕ್ಷಿಣೀ-ಕಣ್ಣುಗಳನ್ನು,
ಸ್ವಪಾಣಿನಾ-ತನ್ನಕೈಯಿಂದ, ಕರ್ಷಂತಂ-ಉಜ್ಜಿಕೊಳ್ಳುತ್ತಿರುವನಾದ, ಉದ್ವೀಕ್ಷಮಾಣಂ- ಮೇಲೆನೋಡುವನಾದ, ಭಯವಿಹ್ವಲೇ
ಕ್ಷಣಂ-ಭಯ-ಅಂಜಿಕೆಯಿಂದ, ವಿಹ್ವಲ-ಚಂಚಲವಾಗಿಕಲುಷಗೊಂಡ, ಈಕ್ಷಣಂ-ಕಣ್ಣುಗಳುಳ್ಳ, ತಂ-ಆಕೃಷ್ಣನನ್ನು, ಹಸ್ತೇ-ಕೈಯ
ಲ್ಲಿ, ಗೃಹೀತ್ವಾ-ಹಿಡಿದು, ಭಿಷಯಂತೀ-ಹೆದರಿಸುವವಳಾಗಿ, ಅವಾಗುರತ್-ಗದರಿಸಿದಳು (ಪಾಠಾಂತರ, ಅಪಾಗುರತ್- ಮನಸಿನೊಳು
ದ್ರೋಹಚಿಂತನವಂಗೆಯ್ದಳು)॥೧೧॥ಸುತಂ-ಮಗನನ್ನು, ಭೀತಂ-ಹೆದರಿದವನನ್ನಾಗಿ, ವಿಜ್ಞಾಯ-ತಿಳಿದು, ಅರ್ಭಕವತ್ಸಲಾ-ಮಗು
ವಿನಲ್ಲಿ ಮಮತೆಯುಳ್ಳವಳಾದ್ದರಿಂದಲೇ, ಯಷ್ಟಿಂ-ಕೋಲನ್ನು, ತ್ಯಕ್ತ್ವಾ- ಬಿಸುಟು, ಅತದ್ವೀರ್ಯಕೋವಿದಾ-ಅವನಸಾಮರ್ಥ್ಯವ
ನ್ನುತಿಳಿದವಳಲ್ಲದ್ದರಿಂದಲೇ, ತಂ-ಆಕೃಷ್ಣನನ್ನು, ದಾಮ್ನಾ-ಕಡೆಯುವಹಗ್ಗದಿಂದ, ಬದ್ಧುಂ-ಕಟ್ಟುವುದಕ್ಕೆ, ಇಯೇಷಕಿಲ-ಬಯಸಿ
ದಳಲ್ಲವೆ,॥೧೨॥ಯಸ್ಯ-ಯಾವವಿಷ್ಣುವಿಗೆ, ಅಂತಃ-ಒಳಗೆಂತಲೂ, ನ-ಇಲ್ಲವೋ, ಬಹಿಃ-ಹೊರಗೆಂತಲೂ, ನ-ಯಿಲ್ಲವೋ, ಪೂರ್ವ
ಮಪಿ-ಮುಂಗಡೆಯೂ, ನ-ಇಲ್ಲವೋ, ಅಪರಂಚ- ಹಿಂಗಡೆಯೂ, ನ-ಇಲ್ಲವೋ, ಯಃ-ಯಾವವಿಷ್ಣುವು, ಜಗತಃ-ಪ್ರಪಂಚಕ್ಕೆ,
ಪೂರ್ವಾಪರಂ-ಹಿಂದೆಯೂಮುಂದೆಯೂ, ಬಹಿಶ್ಚಾಂತಃ-ಹೊರಗೂಒಳಗೂ, ಆಗಿರುವನೋ,ಜಗಚ್ಚ-ಪ್ರಪಂಚವೂ, ಯಃ-ಯಾವವಿ
ಷ್ಣುವೇಯೋ,॥೧೩॥ಗೋಪಿಕಾ-ಯಶೋದೆ, ಅವ್ಯಕ್ತಂ- ಗುಣಗಳಿಂದವ್ಯಕ್ತನಾಗದವನಾದರೂ, ಮರ್ತ್ಯಲಿಂಗಂ- ಮನುಷ್ಯಚಿ
ಹ್ನವುಳ್ಳ, ಅಧೋಕ್ಷಜಂ-ಇಂದ್ರಿಯವಿಕಾರಗಳನ್ನು ಜಯಿಸಿದವಿಷ್ಣುವಾದ, ತಂ- ಆಕೃಷ್ಣನನ್ನು, ಆತ್ಮಜಂ- ತನ್ನ ಮಗನನ್ನಾಗಿ, ಮ
ತ್ವಾ-ತಿಳಿದು, ಪ್ರಾಕೃತಂ-ಪಾಮರನಾದಹುಡುಗನನ್ನು, ಯಥಾ-ಹ್ಯಾಗೋ, ತಥಾ-ಹಾಗೆ, ದಾಮ್ನಾ-ಹಗ್ಗದಿಂದ, ಉಲೂಖಲೇ-ಒ
ರಳಿನಲ್ಲಿ, ಬಬಂಧ-ಕಟ್ಟಿದಳು॥೧೪॥ಗೋಪಿಕಾ-ಯಶೋದೆಯು, ಕೃತಾಗಸಃ-ಮಾಡಲ್ಪಟ್ಟತಪ್ಪುಳ್ಳ, ಸ್ವಾರ್ಭಕಸ್ಯ-ತನ್ನಮಗನನ್ನು,

---

ಉದುರಿದ ಕುಸುಮಂಗಳುಳ್ಳವಳಾಗಿ ಪುತ್ರನಂ ಪಿಡಿದಳು. ಆಮಾತೃವಿನ ಶ್ರಮವಂನೋಡಿ ದಯೆಯಿಂ ತಾ
ನೇ ಸಿಕ್ಕಿದನು. ॥ ೧೦ ॥ ಅನಂತರವಲ್ಲಿ ಅಪರಾಧಂ ಗೆಯ್ದಿರುವನಾದುದರಿಂದ ರೋದನಂಗೆಯ್ಯುತ್ತ ಎಲ್ಲಾಕಡೆ
ಯಲ್ಲಿಯೂ ಹರಡಿಕೊಳ್ಳುತ್ತಿರುವ ಕಾಡಿಗೆಯುಳ್ಳ ಕಣ್ಣುಗಳಂ ತನ್ನ ಕೈಗಳಿಂದ ಉಜ್ಜಿಕೊಳ್ಳುತ ಮುಖವ
ನ್ನು ಮೇಲಕ್ಕೆ ಎತ್ತಿನೋಡುತ ಅಂಜಿಕೆಯಿಂದ ಬೆದರು ನೋಟಗಳುಳ್ಳವನಾದ ತನ್ನಬಾಲಕನಂ ಹಸ್ತಗಳಲ್ಲಿ
ಪಿಡಿದುಕೊಂಡು ಹೆದರಿಸುವವಳಾಗಿ ಆ ಯಶೋದೆಯು ಗದರಿಸಿದಳು ॥ ೧೧ ॥ ಆಗ ಬಾಲಕನಲ್ಲಿ ವಾತ್ಸಲ್ಯವುಳ್ಳ
ಯಶೋದೆಯು ತನ್ನಪುತ್ರನಂ ಹೆದರಿದವನನ್ನಾಗಿ ತಿಳಿದು, ಕಡಗೋಲಂಬಿಸುಟು ಆಪುತ್ರನಪ್ರಭಾವವನ್ನು ಅರಿ
ಯದವಳಾದುದರಿಂದ ಅವನಂ ಹಗ್ಗದಿಂದ ಕಟ್ಟಬೇಕೆಂದುಬಯಸಿದಳು. ॥೧೨॥(ಮತ್ತು ಯಶೋದೆಯು ಕೃಷ್ಣ
ನ ಸಾಮರ್ಥ್ಯಾತಿಶಯವನ್ನು ಅರಿಯಳೆಂಬ ಅರ್ಥವನ್ನೇ ನಿರೂಪಿಸುವನೆಂತೆನೆ-) ಅಪರಿಚ್ಛಿನ್ನನಾದ ಕಾರಣದಿಂದ
ಯಾವವನಿಗೆ ಒಳಗೆನುತಲೂ ಹೊರಗೆನುತಲೂ ಪೂರ್ವವೆನುತಲೂ ಪಶ್ಚಿಮವೆನುತಲೂ ಸಹ ವಿಭಾಗವುಂಟಾಗಲಾ
ರದೋ, ಮತ್ತು ಯಾವವನುವ್ಯಾಪಕನಾದುದರಿಂದ ವ್ಯಾಪ್ಯವಾದಜಗತ್ತಿಗೆ ಪೂರ್ವದಲ್ಲಿಯೂ ಪಶ್ಚಿಮದಲ್ಲಿಯೂ
ಅದರೊಳಗೂ ಹೊರಗೂಕೂಡ ಪರಿಪೂರ್ಣನಾಗಿರುವನೋ, ಮತ್ತು ಯಾವವನು ಸ್ವವ್ಯತಿರಿಕ್ತವಾಗಿ ಒಂದೂ
ಇಲ್ಲವಾದುದರಿಂದ ಆಜಗತ್ಸ್ವರೂಪನಾಗಿಯು ಇರುವನೋ ॥೧೩॥ ಯಾವರೀತಿಯಿಂದಲೂ ಬಂಧನಂಗೆಯ್ಯಲು ಅಶ
ಕ್ಯನಾದ, ಅಪ್ರಕಟನಾದ, ಮಾಯೆಯಿಂ ಮನುಷ್ಯದೇಹವಂ ಧರಿಸಿರುವ, ಅಂತಾಶ್ರೀಕೃಷ್ಣನಂ ಯಶೋದ ಮೋ ವಿ
ಯುತನ್ನ ಪುತ್ರನನ್ನಾಗಿತಿಳಿದು ಹಗ್ಗದಿಂದ ಮರದವರಳಿಗೆ ಪ್ರಾಕೃತಬಾಲಕನಂ ಕಟ್ಟುವಂತೆ ಬಂಧಿಸಿದಳು ॥೧೪॥

ತದ್ದಾಮಬಧ್ಯಮಾನಸ್ಯಸ್ವಾರ್ಭಕಸ್ಯಕೃತಾಗಸಃ । ದ್ವ್ಯಂಗುಳೋನಮಭೂತ್ತೇನಸನ್ದಧೇಽನ್ಯಚ್ಚಗೋಪಿ
ಕಾ॥೧೫॥ಯದಾಸೀತ್ತದಪಿನ್ಯೂನಂತೇನಾನ್ಯದಪಿಸನ್ದಧೇ।ತದಪಿದ್ವ್ಯಂಗುಳಂನ್ಯೂನಂಯದ್ಯದಾದತ್ತಬನ್ಧ
ನಮ್॥೧೬॥ಏವಂಸ್ವಗೇಹದಾಮಾನಿಯಶೋದಾಸನ್ಧಧತ್ಯಪಿ।ಗೋಪೀನಾಂವಿಸ್ಮಯಂತೀನಾಂಸ್ಮಯಂತೀವಿಸ್ಮಿ
ತಾಭವತ್॥೧೭॥ಸಮಾತುಸ್ಸ್ವಿನ್ನಗಾತ್ರಾಯಾವಿಸ್ರಸ್ತಕಬರಸ್ರಜಃ । ದೃಷ್ಟ್ವಾಪರಿಶ್ರಮಂಕೃಷ್ಣಃ
ಕೃಪಯಾಸೀತ್ಸ್ವಬಂಧನೆ ॥೧೮॥ ಏವಂಸಂದರ್ಶಿತಾಹ್ಯಂಗಹರಿಣಾಭಕ್ತವಶ್ಯತಾ । ಸ್ವವಶೇನಾಪಿಕೃಷ್ಣೇ
ನಯಸ್ಯೇದಂಸೇಶ್ವರಂವಶೆ ॥೧೯॥ ನೇಮಂವಿರಿಂಚೋನಭವೋನಶ್ರೀರಪ್ಯಂಗಸಂಶ್ರಯಾ । ಪ್ರಸಾದಂಲೇಭಿರೆ

---

ಬಧ್ಯಮಾನಸ್ಯಸತಃ-ಕಟ್ಟಲ್ಪಡುವನಾಗುತ್ತಿರಲು, ತದ್ದಾಮ-ಆಹಗ್ಗವು, ದ್ವ್ಯಂಗುಳೋನಂ-ಎರಡುಬೆರಳಷ್ಟುಕಡಮೆಯಾದ್ದು, ಅಭೂತ್-ಆಯಿತು. ತೇನ-ಆಹಗ್ಗದೊಂದಿಗೆ, ಅನ್ಯಚ್ಚ-ಮತ್ತೊಂದುಹಗ್ಗವನ್ನು, ಸಂದಧೇ-ಜೋಡಿಸಿದಳು ॥೧೫॥ ಯದಾಸೀತ್ ಯಾವಹಗ್ಗವುಕಟ್ಟಲ್ಪಟ್ಟದ್ದಾಯಿತೋ, ತದಪಿ- ಅದೂಕೂಡ, ನ್ಯೂನಂ- ಸಾಲದ್ದುಆಯಿತು, ತೇನ- ಅದರೊಂದಿಗೆ, ಅನ್ಯದಪಿ-ಮತ್ತೊಂದನ್ನೂ, ಸಂದಧೇ-ಜೋಡಿಸಿದಳು, ಯದ್ಯದ್ಬಂಧನಂ-ಯಾವಯಾವಕಟ್ಟುಹಗ್ಗವನ್ನು, ಆದತ್ತ-ತೆಗೆದುಕೊಂಡಳೋ, ತದಪಿ- ಅದೂಕೂಡ, ದ್ವ್ಯಂಗುಳಂ- ಎರಡುಬೆರಳಷ್ಟು, ನ್ಯೂನಂ- ಕೊರತೆಗೊಂಡದ್ದು, ಆಸೀತ್- ಆಯಿತು ॥೧೬॥ ಏವಂ-ಹೀಗೆ, ಯಶೋದಾ-ಯಶೋದೆಯು, ಸ್ವಗೇಹದಾಮಾನಿ, ಸ್ವ-ತನ್ನ, ಗೇಹ-ಮನೆಯ, ದಾಮಾನಿ-ಹಗ್ಗಗಳನ್ನು, ಸಂದಧತ್ಯಪಿ-ಜೋಡಿಸಿದವಳಾದರೂಕೂಡ, ಗೋಪೀನಾಂ-ಗೊಲ್ಲತಿಯರು, ವಿಸ್ಮಯಂತೀನಾಂಸತೀನಾಂ-ವಿಶೇಷವಾಗಿನಗುವವರಾಗುತ್ತಿರಲು, ಸ್ಮಯಂತೀ-ತಾನೂನಗುತ್ತಿರುವಳಾಗಿ, ವಿಸ್ಮಿತಾ-ಆಶ್ಚರ್ಯಗೊಂಡವಳು, ಅಭವತ್-ಆದಳು ॥೧೭॥ಸಕೃಷ್ಣಃ- ಆಕೃಷ್ಣನು, ಸ್ವಿನ್ನಗಾತ್ರಾಯಾಃ-ಸ್ವಿನ್ನ-ಬೆವರಿದ, ಗಾತ್ರಾಯಾಃ-ಮೈಯುಳ್ಳವಳಾದ, ವಿಸ್ರಸ್ತಕಬರಸ್ರಜಃ-ವಿಸ್ರಸ್ತ-ಜಾರಿಬಿದ್ದುಹೋದ, ಕಬರ-ತುರುಬಿನಲ್ಲಿದ್ದ, ಸ್ರಜಃ-ಪುಷ್ಪಮಾಲಿಕೆಗಳುಳ್ಳ, ಮಾತುಃ-ತಾಯಿಯ, ಪರಿಶ್ರಮಂ-ಆಯಾಸವನ್ನು, ದೃಷ್ಟ್ವಾ-ನೋಡಿ, ಕೃಪಯಾ-ದಯೆಯಿಂದ, ಸ್ವಬಂಧನೇ-ತನ್ನಕಟ್ಟಿನೊಳಗೆ. ಆಸೀತ್-ಆದನು (ಕಟ್ಟಿಗೊಳಗಾದನು) ॥೧೮॥ಹೇಅಂಗ-ಎಲೈಪರೀಕ್ಷಿದ್ರಾಯನೆ! ಸೇಶ್ವರಂ- ಬ್ರಹ್ಮರುದ್ರೇಂದ್ರಾದಿಪ್ರಭುಗಳಿಂಕೂಡಿದ, ಇದಂ- ಈಪ್ರಪಂಚವು, ಯಸ್ಯ- ಯಾರ, ವಶೆ- ಅಧೀನದಲ್ಲಿರುವುದೋ, ತೇನ-ಅಂಥವನಾದ, ಹರಿಣಾ-ವಿಷ್ಣುವಾದ, ಕೃಷ್ಣೇನ-ಕೃಷ್ಣನಿಂದ, ಸ್ವವಶೇನಾಪಿ-ಸ್ವತಂತ್ರನಾದರೂಕೂಡ, ಭಕ್ತವಶ್ಯತಾ- ಭಕ್ತರಿಗೆವಶನಾಗಿರುವಿಕೆಯು, ಏವಂ-ಹೀಗೆ, ಸಂದರ್ಶಿತಾ-ತೋರಿಸಲ್ಪಟ್ಟಿತು ॥೧೯॥ಯಂಪ್ರಸಾದಂ-ಯಾವಅನುಗ್ರಹವನ್ನು, ವಿರಿಂಚಃ-ಬ್ರಹ್ಮನು, ನಲೇ

---

ಆಹಗ್ಗದಿಂದ ಕಟ್ಟಲ್ಪಡುತ್ತಲಿರುವ ಅಪರಾಧಿಯಾದ ತನ್ನಪುತ್ರನಿಗೆ ಆಹಗ್ಗವು ಎರಡುಬೆರಳುದ್ದ ಸಾಲದೇಹೋದುದರಿಂದ ಆಹಗ್ಗದೊಡನೆ ಮತ್ತೊಂದುಹಗ್ಗವಂ ಜೋಡಿಸಿಕಟ್ಟಿದಳು. ॥೧೫॥ ಆಹಗ್ಗವೂಸಾಲದೇಹೋದುದರಿಂದ ಅದಕ್ಕೆಮತ್ತೊಂದು ಹಗ್ಗವನ್ನು ಗಂಟುಹಾಕಿದಳು ಯಾವಯಾವಹಗ್ಗವನ್ನು ತಂದರೂ ಎರಡಂಗುಳ ಸಾಲದೇಹೋಯಿತು. ॥೧೬॥ ಈರೀತಿಯಲ್ಲಿ ಯಶೋದೆಯು ತನ್ನ ಮನೆಯಲ್ಲಿರುವ ಹಗ್ಗಗಳನ್ನು ಕೂಡಿಸುತ್ತಿರುವಾಗ ನೋಡುತ್ತಿರುವ ಗೋಪಿಯರು ಆಶ್ಚರ್ಯ ಪಡುತ್ತಿರಲಾಗಿ ಅದರ ಮಧ್ಯದಲ್ಲಿ ತಾನೂ ನಗುತ್ತಿರುವಳಾಗಿ ಆಶ್ಚರ್ಯವನೈದಿದಳು ॥೧೭॥ ಅನಂತರದಲ್ಲಿ ಶ್ರಮದಿಂ ಬೆಮರಿರುವದೇಹವುಳ್ಳ, ತುರುಬಿನಗಂಟಳಿದು ಉದುರುವ ಕುಸುಮಮಾಲಿಕೆಗಳುಳ್ಳ ತನ್ನತಾಯಿಯ ಬಳಲಿಕೆಯಂಕಂಡು ಶ್ರೀಕೃಷ್ಣನು ದಯೆಯಿಂದ ಬಂಧನಕ್ಕೊಳಗಾದನು. ॥೧೮॥ ಎಲೈ, ಪರೀಕ್ಷಿದ್ರಾಯನೇ! ಈಶ್ವರಸಹಿತವಾದ ಈಜಗತ್ತು ಯಾವ ಶ್ರೀಕೃಷ್ಣನ ವಶದಲ್ಲಿರುವುದೋ, ಅಂಥಾ ಶ್ರೀಕೃಷ್ಣನು ಸ್ವತಂತ್ರನಾದರೂ ಈಪ್ರಕಾರವಾಗಿ ಬಂಧನಕ್ಕೊಳಗಾಗಿ ಭಕ್ತರಿಗೆತಾನು ವಶನಾಗಿರುವೆನೆಂಬ ಅರ್ಥವಂತೋರಿಸಿದನು ॥೧೯॥ ಗೋಪಸ್ತ್ರೀಯರು ಮುಕ್ತಿಯನ್ನು ಕೊಡುವ ಕೃಷ್ಣನದೆಸೆಯಿಂದ ಯಾವ ಅನುಗ್ರಹವನೈದಿದ



ಗೋಪೀ ಯಂತತ್ಪ್ರಾಪ ವಿಮುಕ್ತಿದಾತ್ ॥೨೦॥ ನಾಯಂ ಸುಖಾಪೋ ಭಗವಾನ್ದೇಹಿನಾಂ ಗೋಪಿಕಾಸುತಃ ।
ಜ್ಞಾನಿನಾಂ ಚಾತ್ಮಭೂತಾನಾಂ ಯಥಾ ಭಕ್ತಿಮತಾಮಿಹ ॥ ೨೧ ॥ ಕೃಷ್ಣಸ್ತು ಗೃಹಕೃತ್ಯೇಷು ವ್ಯಗ್ರಾ
ಯಾಂ ಮಾತರಿ ಪ್ರಭುಃ । ಅದ್ರಾಕ್ಷೀದರ್ಜುನೌ ಪೂರ್ವಂ ಗುಹ್ಯಕೌ ಧನದಾತ್ಮಜೌ ॥೨೨॥ ಪುರಾ ನಾರದಶಾಪೇ
ನ ವೃಕ್ಷತಾಂ ಪ್ರಾಪಿತೌ ಮದಾತ್ । ನಲಕೂಬರ*ಮಣಿಗ್ರೀವಾವಿತಿ ಖ್ಯಾತೌ ಶ್ರಿಯಾನ್ವಿತೌ ॥೨೩॥
ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ನವಮೋಽಧ್ಯಾಯಃ

---

ಭೇ- ಪಡೆಯಲಿಲ್ಲವೋ, ಭವಃ- ರುದ್ರನು, ನಲೇಭೇ- ಪಡೆಯಲಿಲ್ಲವೋ, ಅಂಗಸಂಶ್ರಯಾ- ವಕ್ಷಸ್ಥಲವೇ ಆಶ್ರಯವಾಗಿಉಳ್ಳ, ಶ್ರೀರಪಿ- ಲಕ್ಷ್ಮಿಯೂ ಕೂಡ, ನಲೇಭೇ-ಪಡೆಯಲಿಲ್ಲವೋ, (ಅನ್ಯೇಪಿ) ಇತರರೂ, ನಲೇಭಿರೇ- ಪಡೆಯಲಿಲ್ಲವೋ; ಗೋಪಿ-ಯಶೋದೆಯು, ತ ಮಿಮಂ-ಆ ಈ ಅನುಗ್ರಹವನ್ನು, ವಿಮುಕ್ತಿದಾತ್-ಮೋಕ್ಷವನ್ನು ಕೊಡುವ ಕೃಷ್ಣನ ದೆಸೆಯಿಂದ, ಪ್ರಾಪ-ಪಡೆದಳು (ಎಂಬುವುದತಿಶಯೋ ಕ್ತಿಯು ವಿಷ್ಣುವಿಗೆ ಪುತ್ರನಾದ ಬ್ರಹ್ಮನೂ, ಸ್ವಾತ್ಮನಾದ ಶಿವನೂ, ಪತ್ನಿಯಾದ ಲಕ್ಷ್ಮಿಯೂ, ಮುಕುಂದನ ಪ್ರಸಾದವಂ ಪಡೆಯಲಿಲ್ಲವೆಂ ಬುವುದಿಲ್ಲ ಅವರವರಿಗೆ ತಕ್ಕ ಪ್ರಸಾದವಂ ಪಡೆದರು ಆದರೆ ಗೋಪಿಯು ಯಾವ ಪ್ರಸಾದವನ್ನು ಪಡೆದಳೋ ಅದರನ್ನು ಪಡೆಯಲಿಲ್ಲವೆಂಬ ಭಾವವು.) ॥೨೦॥ ಭಗವಾನ್-ಭಗವಂತನಾದ, ಅಯಂ ಗೋಪಿಕಾಸುತಃ-ಈ ಕೃಷ್ಣನು, ಇಹ-ಈ ಲೋಕದಲ್ಲಿ, ಭಕ್ತಿಮತಾಂ-ಭಕ್ತಿಯುಳ್ಳ ವರಿಗೆ, ಯಥಾ-ಹ್ಯಾಗೋ, ತಥಾ-ಹಾಗೆ, ಆತ್ಮಭೂತಾನಾಂ- ತಾನೇ ತೆಪ್ಪವಾಗಿವುಳ್ಳ, ಅಥವಾ ತನ್ನ ಮಕ್ಕಳಂತೆ ಪಯನೀಯರಾದ, ಜ್ಞಾನಿನಾಂ- ದೇಹಾಭಿಮಾನವಿಲ್ಲದ ಜ್ಞಾನಿಗಳಿಗೂ, ದೇಹಿನಾಂ ಚ-ದೇಹಾಭಿಮಾನವುಳ್ಳ ತಾಪಸರಿಗೂ ಕೂಡ; ಸುಖಾಪಃ- ಸುಖದಿಂದ ತಿಳಿ ಯಲು ಶಕ್ಯನಾದವನು, ನ-ಅಲ್ಲವು. ॥೨೧॥ ಪ್ರಭುಃ-ಸಮರ್ಥನಾದ, ಕೃಷ್ಣಸ್ತು-ಕೃಷ್ಣನಾದರೋ, ಮಾತರಿ-ತಾಯಿಯಾದ ಯಶೋದೆ ಯು, ಗೃಹಕೃತ್ಯೇಷು-ಮನೆಯ ಕೆಲಸಗಳಲ್ಲಿ ವ್ಯಗ್ರಾಯಾಂ ಸತ್ಯಾಂ-ಆಸಕ್ತಳಾಗಿ ತ್ವರೆಗೊಂಡವಳಾಗುತ್ತಿರಲು, ಪೂರ್ವಂ- ಪೂರ್ವ ಕಾಲದೊಳಗೆ, ಧನದಾತ್ಮಜೌ-ಕುಬೇರನ ಮಕ್ಕಳಾದ, ಗುಹ್ಯಕೌ- ದೇವಯೋನಿ ವಿಶೇಷಗಳಾಗಿದ್ದ, ಅರ್ಜುನೌ- ಅವಳಿ ಮತ್ತೀ ಮರಗ ಳನ್ನು, ಅದ್ರಾಕ್ಷೀತ್-ಕಂಡನು ॥೨೨॥ ಪುರಾ-ಪೂರ್ವಕಾಲದಲ್ಲಿ, ಶ್ರಿಯಾ-ಸಂಪತ್ತಿನಿಂದ, ಅನ್ವಿತೌ-ಕೂಡಿದಂತಾ, ನಳಕೂಬರಮಣಿ ಗ್ರೀವಾವಿತಿ-ನಳಕೂಬರನೂ ಮಣಿಗ್ರೀವನೂ ಎಂದು, ಆಖ್ಯಾತೌ-ಪ್ರಸಿದ್ಧರಾದವರು, ಮದಾತ್-ಧನರೂಪಾದಿ ಗರ್ವದ ನಿಮಿತ್ತದಿಂದ, ನಾ ರದ ಶಾಪೇನ- ನಾರದನ ನಿಗ್ರಹದ ವಚನದಿಂದ, ವೃಕ್ಷತಾಂ- ಮರಗಳಾಗಿರುವಿಕೆಯನ್ನು, ಪ್ರಾಪಿತೌ- ಹೊಂದಿಸಲ್ಪಟ್ಟವರಾದರು ॥೨೩॥
ಇತಿ ಶ್ರೀಮದ್ಭಾಗವತ ಪ್ರತಿಶಬ್ದಾರ್ಥಬೋಧಿನ್ಯಾಂ ದಶಮಸ್ಕಂಧೇ ನವಮೋಽಧ್ಯಾಯಃ-

---

ರೂ ಅಂತಾ ಅನುಗ್ರಹವಂ ಆ ಶ್ರೀಕೃಷ್ಣನಿಗೆ ಪುತ್ರನಾದರೂ ಬ್ರಹ್ಮನು ಪಡೆಯಲಿಲ್ಲವು. ಆತ್ಮಸ್ವರೂಪನಾದರೂ ರುದ್ರ ನು ಪಡೆಯಲಿಲ್ಲವು. ವಕ್ಷಸ್ಥಳದಲ್ಲಿ ವಾಸವಂಗೆಯ್ವ ಪತ್ನಿಯಾದರೂ ಲಕ್ಷ್ಮಿಯು ಪಡೆಯಲಿಲ್ಲವು. ಬ್ರಹ್ಮನು ಸೃಷ್ಟಿಕರ್ತನಾ ದರೂ ವಿಷ್ಣುವಿನ ಪ್ರಿಯ ಪುತ್ರನಾದರೂ ಈಶ್ವರನು ವಿಷ್ಣುವಿಗೆ ಆತ್ಮನೇ ಆದರೂ ರಾಮ ತಾರಕವನುಪದೇಶಿಸುವ ನಾದರೂ, ಲಕ್ಷ್ಮಿಯು ನಿತ್ಯಾನಪಾಯಿನಿಯಾಗಿ ಭಗವಂತನ ಸರ್ವವೈಭವಗಳಿಗೂ ಕಾರಣಭೂತಳಾದರೂ, ಗೋ ಪಸ್ತ್ರೀಯರು ಪಡೆದಂಥಾ ವಿಷ್ಣುಪ್ರಸಾದವನ್ನು ಪಡೆಯಲಿಲ್ಲವು. ಎಂದರೆ ಬ್ರಹ್ಮೇಶ್ವರಲಕ್ಷ್ಮಿಯರಿಗೂ ದುರ್ಲಭ ವಾದ ವಿಷ್ಣುವಿನ ಅತ್ಯರ್ಥಪ್ರಸಾದವನ್ನು ಗೋಪಿಯರು ಪಡೆದರು. ಭಗವಂತನು ಅವರಿಗೆ ಅಷ್ಟು ವಶ್ಯನಾಗಿ ತಾ ನೇ ಅವರನನುಗ್ರಹಿಸಿದನೆಂದು ಅವರ ಭಕ್ತ್ಯತಿಶಯವು ಸ್ತುತಿಸಲ್ಪಟ್ಟಿಧೆ.] ॥೨೦॥ ಷಡ್ಗುಣೈಶ್ವರ್ಯಸಂಪನ್ನನಾದ ಯಶೋದಾ ಪುತ್ರನಾದ ಈ ಕೃಷ್ಣನು ಭಕ್ತಿಯುಳ್ಳ ಮಹಾತ್ಮರಿಗೆ ಎಂತು ಸುಖದಿಂ ಲಭ್ಯನಾಗುವನೋ- ಹಾಗೆ ದೇಹಾ ಭಿಮಾನವುಳ್ಳ ತಪಸ್ವಿಗಳಿಗಾದಲಾದರೂ, ಸಂಸಾರವಂ ದಾಂಟಲೋಸುಗ ತಮ್ಮ ಬುದ್ಧಿಯೇ ನಾವೆಯಾಗಿವುಳ್ಳ ದೇಹಾಭಿಮಾನವಂ ಬಿಟ್ಟಿರುವ ಜ್ಞಾನಿಗಳಿಗೂ, ಸುಖದಿಂ ಲಭ್ಯನಾಗನು. ॥೨೧॥ ಜಗದೀಶ್ವರನಾದ ಶ್ರೀಕೃಷ್ಣನು- ತ ನ್ನ ತಾಯಿಯಾದ ಯಶೋದಾದೇವಿಯು ತನ್ನಂ ಒರಳಲ್ಲಿ ಕಟ್ಟಿ ಗೃಹಕೃತ್ಯದಲ್ಲಿ ಆಸಕ್ತಳಾಗಿರಲು, ಪೂರ್ವದಲ್ಲಿ ಯ ಕ್ಷರೆಂಬ ದೇವಯೋನಿಯೊಳು ಕುಬೇರನಿಗೆ ಪುತ್ರರಾದ ॥೨೨॥ ಐಶ್ವರ್ಯದಿಂ ಮದಿಸಿದವರಾದುದರಿಂದ ನಾರದನ ಶಾಪ ದಿಂ ಮತ್ತಿಯ ಮರಗಳಾಗಿ ಹುಟ್ಟಿರುವ ನಳಕೂಬರ ಮಣಿಗ್ರೀವರೆಂಬವರಂ ಕಂಡನು. ॥೨೩॥ ............ ..॥%॥
ನವಮಾಧ್ಯಾಯವು ಸಂಪೂರ್ಣವಾದುದು ಮಂಗಳಮಸ್ತು

ರಾಜಾ ॥ ಕಥ್ಯತಾಂಭಗವನ್ನೆತತ್ತಯೋಶ್ಶಾಪಸ್ಯಕಾರಣಮ್ । ಯತ್ತದ್ವಿಗರ್ಹಿತಂಕರ್ಮದೇವರ್ಷಿರ್ಯೇನವಾ
ತಮಃ ॥೧॥ ಶ್ರೀಶುಕಃ ॥ ರುದ್ರಸ್ಯಾನುಚರೌಭೂತ್ವಾಸುದೃಪ್ತೌಧನದಾತ್ಮಜೌ । ಕೈಲಾಸೋಪವನೇರ
ಮ್ಯೇಮಂದಾಕಿನ್ಯಾಂಮದೋತ್ಕಟೌ ॥೨॥ ವಾರುಣೀಂಮದಿರಾಂಪೀತ್ವಾಮದಾಘೂರ್ಣಿತಲೋಚನೌ ।
ಸ್ತ್ರೀಜನೈರನುಗಾಯದ್ಭಿಶ್ಚೇರತುಃಪುಷ್ಪಿತೇವನೇ ॥ ೩ ॥ ಅನ್ತಃಪ್ರವಿಶ್ಯಗಙ್ಗಾಯಾಮಮ್ಭೋಜವನರಾ
ಜಿನಿ।ಚಿಕ್ರೀಡತುರ್ಯುವತಿಭಿರ್ಗಜಾವಿವಕರೇಣುಭಿಃ ॥೪॥ಯದೃಚ್ಛಯಾಚದೇವರ್ಷಿರ್ಭಗವಾಂಸ್ತತ್ರನಾರದಃ।

---

[ಪರೀಕ್ಷಿತ್ಪ್ರಶ್ನವು] ಭಗವನ್-ತ್ರಿಕಾಲಜ್ಞನಾದಶುಕನೇ! ಯತ್ಕರ್ಮ-ಯಾವಕೆಲಸವು, ವಿಗರ್ಹಿತಂ-ನಿಂದಿತವಾದ್ದೋ, ಯೇನ-ಯಾವುದರಿಂದ, ದೇವರ್ಷೇಃ-ಭಾಗವತೋತ್ತಮನಾದನಾರದನಿಗೂಕೂಡ, ತಮಃ-ಸಿಟ್ಟುಂಟಾಯಿತೋ, ತದೇತ್- ಆಯಾ, ತಯೋಃ-ಆನಳಕೂಬರಮಣಿಗ್ರೀವರನ್ನುಕುರಿತ, ಶಾಪಸ್ಯ-ನಿಗ್ರಹಕ್ಕೆ, ಕಾರಣಂ-ನಿಮಿತ್ತವು, ಕಥ್ಯತಾಂ-ಹೇಳಲ್ಪಡಲಿ ॥೧॥(ಶುಕೋತ್ತರವು)ಧನದಾತ್ಮಜೌ-ಧನದ-ಕುಬೇರನ, ಆತ್ಮಜೌ- ಪುತ್ರರು, ರುದ್ರಸ್ಯ- ಈಶಾನನ, ಅನುಚರೌ- ಸೇವಕರು, ಭೂತ್ವಾ-ಆಗಿ, ಸುದೃಪ್ತೌ-ಚೆನ್ನಾಗಿಗರ್ವಿಸಿದವರಾದ್ದರಿಂದಲೇ, ಮಂದಾಕಿನ್ಯಾಂ-ಗಂಗೆಯಲ್ಲಿಯೂ, ಕೈಲಾಸೋಪವನೇ- ಕೈಲಾಸಪರ್ವತದಬಳಿಯಣತೋಟದಲ್ಲಿ, ಮದೋತ್ಕಟೌ-ಸೊಕ್ಕಿನಿಂದಹೆಚ್ಚಿದವರಾಗಿ,॥೨॥ವಾರುಣೀಂ-ವಾರುಣಿಯೆಂಬ, ಮದಿರಾಂ-ಹೆಂಡವನ್ನು,ಪೀತ್ವಾ-ಕುಡಿದು, ಮದಾಘೂರ್ಣಿತಲೋಚನೌ-ಮದ-ಕೈಪಿನಿಂದ, ಆಘೂರ್ಣಿತ-ತಿರುಗಿಸಲ್ಪಟ್ಟ, ಲೋಚನೌ-ಕಂಗಳುಳ್ಳವರಾಗಿ, ಅನುಗಾಯದ್ಭಿಃ-ಸಂಗಡಹಾಡುತಲಿರುವ, ಸ್ತ್ರೀಜನೈಸ್ಸಹ-ಹೆಂಗಳಿನೊಂದಿಗೆ, ಪುಷ್ಪಿತೇ-ಹೂವುಗಳುಂಟಾದ,ವನೇ-ತೋಟದಲ್ಲಿ, ಚೇರತುಃ-ತಿರುಗಿದರು ॥೩॥ಅಂಭೋಜವನರಾಜಿನಿ-ತಾವರೆಗಳಹಿಂಡುಗಳಸಾಲುಗಳುಳ್ಳ, ಗಂಗಾಯಾಂ-ಮಂದಾಕಿನಿಯಲ್ಲಿ ಅಂತಃ-ಒಳಗೆ, ಪ್ರವಿಶ್ಯ-ಹೊಕ್ಕು, ಕರೇಣುಭಿಃ-ಹೆಂಣಾನೆಗಳೊಡನೆ, ಗಜಾವಿವ-ಎರಡುಗಂಡಾನೆಗಳಹಾಗೆ, ಯುವತಿಭಿಃ- ಪ್ರಾಯದಹುಡುಗಿಯರಕೂಡೆ, ಚಿಕ್ರೀಡತುಃ-ಆಡಿದರು ॥೪॥ದೇವರ್ಷಿಃ-ದೇವತೆಗಳಲ್ಲಿಋಷಿಯಾದ, ನಾರದಶ್ಚ-ನಾರದನೂ, ಯದೃಚ್ಛಯಾ-ಸ್ವೇಚ್ಛೆಯಿಂದ, ತತ್ರ-

---

ಶ್ರೀಧರೀಯಶ್ಲೋಕ॥ದಶಮೇಪಾತಯದ್ರಾಜನ್ನಂತರಾಯಮಳಾರ್ಜುನೌ। ತತ್ರತಾಭ್ಯಾಂಚದೇವಾಭ್ಯಾಂಕೃಷ್ಣಸ್ತುತಇತೀರ್ಯತೇ ॥ಟೀ॥ಹತ್ತನೆಯ ಅಧ್ಯಾಯದಲ್ಲಿ ಜೋಡಿಯಮತ್ತಿಯಮರಗಳನಡುವೆ ತೂರಿಯೆಳೆದವನಾಗಿ ಅವುಗಳನ್ನುಕೆಡಹಿದಕೃಷ್ಣನು ಆಮರಗಳಲ್ಲಿದ್ದ ನಳಕೂಬರ ಮಣಿಗ್ರೀವರೆಂಬದೇವತೆಗಳಿಂದ ಸ್ತುತಿಮಾಡಲ್ಪಟ್ಟನೆಂಬಕಥೆಯು ಹೇಳಲ್ಪಡುತ್ತೆ. ‡ ಪೂರ್ವಾಧ್ಯಾಯದಲ್ಲಿ ಶ್ರೀಶುಕಾಚಾರ್ಯನು ಪರೀಕ್ಷಿದ್ರಾಯನಂಕುರಿತು ಯಶೋದಾದೇವಿಯಿಂದ ವರಳಿನಲ್ಲಿಕಟ್ಟಲ್ಪಟ್ಟ ಶ್ರೀಕೃಷ್ಣನು ಎರಡುಮತ್ತಿಯಮರಗಳಂನೋಡಿದನೆಂದು ನಿರೂಪಿಸಲೂ ಆವಾಕ್ಯವಂಕೇಳಿದ ಪರೀಕ್ಷಿದ್ರಾಯನು ಶುಕಮುನಿಯಂಕುರಿತು ಪ್ರಶ್ನೆಗೆಯ್ವನದೆಂತೆನೆ,-

ಎಲೈ ಶ್ರೀಶುಕಮುನಿಯೇ! ಆನಳಕೂಬರಮಣಿಗ್ರೀವರ ಯಾವನಿಂದಿತವಾದ ಕರ್ಮದಿಂದ ಭಾಗವತೋತ್ತಮನಾದ ನಾರದಮುನಿಗೂಕೂಡ ಕ್ರೋಧವುಂಟಾಯಿತೋ, ಅಂತಾ ಶಾಪಕಾರಣವಾದ ಅವರಕರ್ಮವನ್ನು ನೀನು ನಿರೂಪಿಸುವನಾಗು. ॥೧॥ (ಇಂತೆಂಬ ರಾಜವಾಕ್ಯವಂಕೇಳಿ ಶುಕಮುನಿಯು ನಿರೂಪಿಸುವನದಂತೆನೆ.) ಎಲೈಪರೀಕ್ಷಿದ್ರಾಯನೇ! ಪೂರ್ವದಲ್ಲಿ ಪರಮೇಶ್ವರಸೇವಕರಾದ ಕುಬೇರಪುತ್ರರಾದ ನಳಕೂಬರಮಣಿಗ್ರೀವರೆಂಬ ಯಕ್ಷರೀರ್ವರು ಐಶ್ವರ್ಯಮದದಿಂದ ಕೊಬ್ಬಿದವರಾಗಿ ಕೈಲಾಸಪರ್ವತದ ಉಪವನಪ್ರದೇಶದಲ್ಲಿ ಮದದಿಂ ಮೇಳೆದಪ್ಪಿದವರಾಗಿ ॥೨॥ ವಾರುಣಿಯೆಂಬಮದ್ಯವಂ ಪಾನಂಗೆಯ್ದು ಅದರಮದದಿಂದ ಅತ್ಯಂತವ್ಯಾಕುಲಗಳಾದ ನೇತ್ರಗಳುಳ್ಳವರಾಗಿ, ತಮ್ಮಸಮೀಪದಲ್ಲಿ ಗಾನಂಗೆಯ್ವುತಲಿರುವ ದೇವತಾಸ್ತ್ರೀಯರೊಡನೆ ಯುಕ್ತರಾಗಿ, ಪುಷ್ಪಭರಿತವಾದ ಆ ಉಪವನದಲ್ಲಿ ವಿಹರಿಸಿದರು ।೩। ಮತ್ತು, ಆಗಂಗಾನದಿಯ ಜಲಮಧ್ಯವಂ ಪ್ರವೇಶಂಗೆಯ್ದು ಪದ್ಮವನಂಗಳ ಮಧ್ಯದಲ್ಲಿ ಮದಿಸಿರುವ ಎರಡುಗಜಂಗಳು ಹೆಂಣಾನೆಗಳೊಡನೆ ಕ್ರೀಡಿಸುವಂತೆ ಯೌವನಯುಕ್ತರಾದ ಆದೇವತಾಸ್ತ್ರೀಯರೊಡಗೂಡಿ ವಿಹರಿಸಿದರು.॥೪॥ಎಲೈಅರಸೇ! ಆಸಮಯದಲ್ಲಿ ಜ್ಞಾನಾದಿಗುಣಸಂಪನ್ನನಾದ ದೇವರ್ಷಿಯಾದ

ಅಪಶ್ಯದ್ಗುಹ್ಯಕೌದೃಷ್ಟ್ವಾಕ್ಷೀಬಾಣೌಸಮಬುಧ್ಯತ॥೫॥ ತಂದೃಷ್ಟ್ವಾವ್ರೀಡಿತಾದೇವ್ಯೋವಿವಸ್ತ್ರಾಃಶಾಪಶಂಕಿತಾಃ। ವಾಸಾಂಸಿಪರ್ಯಧುಶ್ಶೀಘ್ರಂವಿವಸ್ತ್ರೌನೈವಗುಹ್ಯಕೌ॥೬॥ತೌದೃಷ್ಟ್ವಾಮದಿರಾಮತ್ತೌ ಶ್ರೀಮದಾನ್ಧೌಸುರಾತ್ಮಜೌ।ತಯೋರನುಗ್ರಹಾರ್ಥಾಯಶಾಪಂದಾಸ್ಯನ್ನಿದಂಜಗೌ॥೭॥ ನಹ್ಯನ್ಯೋಜುಷತೋಜೋಷ್ಯಾನ್ಬುದ್ಧಿಭ್ರಂಶೋರಜೋಗುಣಃ।ಶ್ರೀಮದಾನ್ಧಾಭಿಜಾತ್ಯಾದಿರ್ಯತ್ರಸ್ತ್ರೀದ್ಯೂತಮಾಸವಃ॥೮॥

---

ಅಲ್ಲಿ, ಗತವಾನ್-ಬಂದವನಾಗಿ, ಅಪಶ್ಯತ್-ನೋಡಿದನು, ಗುಹ್ಯಕೌ- ನಳಕೂಬರಮಣಿಗ್ರೀವರನ್ನು, ದೃಷ್ಟ್ವಾ-ನೋಡಿ, ಕ್ಷೀಬಾಣೌ-ಮದಿಸಿದವರನ್ನಾಗಿ, ಸಮಬುಧ್ಯತ- ತಿಳಿದನು॥೫॥ದೇವ್ಯಃ-ದೇವಸ್ತ್ರೀಯರು,ವಿವಸ್ತ್ರಾಃ- ವಸ್ತ್ರವಿಲ್ಲದವರಾದ್ದರಿಂದಲೇ, ತಂ-ಆನಾರದನನ್ನು, ದೃಷ್ಟ್ವಾ-ನೋಡಿ,ವ್ರೀಡಿತಾಃ-ನಾಚಿಕೆಗೊಂಡವರಾಗಿ, ಶಾಪಶಂಕಿತಾಃ-ಶಾಪಕ್ಕೆಹೆದರುವವರಾದ್ದರಿಂದಲೇ,ಶೀಘ್ರಂ-ಬೇಗನೇ,ವಾಸಾಂಸಿ-ಸೀರೆಗಳನ್ನು,ಪರ್ಯಧುಃ-ಉಟ್ಟುಕೊಂಡರೂ,ವಿವಸ್ತ್ರೌ-ವಸ್ತ್ರವಿಲ್ಲದ,ಗುಹ್ಯಕೌ-ಗುಹ್ಯಕರು,ನ-ವಸ್ತ್ರವನ್ನು ಧರಿಸಲಿಲ್ಲವು॥೬॥ಮದಿರಾಮತ್ತೌ_ಮದಿರಾ - ಹೆಂಡದಿಂದ,ಮತ್ತೌ-ಕೈಮೀರಿದ,ಶ್ರೀಮದಾಂಧೌ-ಶ್ರೀ- ಸಂಪತ್ತಿನ,ಮದ- ಗರ್ವದಿಂದ, ಅಂಧೌ-ಕುರುಡರಾದ,ಸುರಾತ್ಮಜೌ- ದೇವಪುತ್ರರಾದ, ತೌ-ಆನಳಕೂಬರಮಣಿಗ್ರೀವರನ್ನು, ದೃಷ್ಟ್ವಾ - ನೋಡಿ, ಯಯೋಃ-ಅವರ, ಅನುಗ್ರಹಾರ್ಥಾಯ-ಕ್ಷೇಮಕ್ಕೋಸ್ಕರ, ಶಾಪಂ-ನಿಗ್ರಹವಚನವನ್ನು, ದಾಸ್ಯನ್ _ ಕೊಡುತಲಿರುವನಾಗಿ, ಇದಂ - ವಕ್ಷ್ಯಮಾಣವಚನವನ್ನು, ಜಗೌ -ನುಡಿದನು ॥ ೭ ॥ ಜೋಷ್ಯಾನ್- ಪ್ರಿಯವಿಷಯಗಳನ್ನು,ಜುಷತಃ- ಸೇವಿಸುತಲಿರುವ, ಪುರುಷನಿಗೆ,ಯತ್ರ- ಯಾವವಿಷಯದಲ್ಲಿ, ಸ್ತ್ರೀ-ಹೆಂಗಸು, ದ್ಯೂತಂ-ಜೂಜು, ಆಸವಃ-ಹೆಂಡವೂ, ಇರುವುದೋ, ತಸ್ಮಾತ್ - ಆವಿಷಯಕಿಂತಲೂ, ಅನ್ಯಃ-ಇತರವಾದ, ಶ್ರೀಮದಾಂಧಾಭಿಜಾತ್ಯಾದಿಃ-ಶ್ರೀ-ಸಂಪತ್ತಿನ, ಮದ ಗರ್ವದಿಂದ, ಅಂಧ-ಕುರುಡನಾದವನ, ಅಭಿಜಾತ್ಯ-ಸತ್ಕುಲವಿದ್ಯಾದಿಗಳೇ, ಆದಿಃ-ಮೊದಲಾಗಿವುಳ್ಳ, ರಜೋಗುಣಃ-ರಜಃ-ಕಾರ್ಯವಾದ, ಹಾಸ್ಯಾದಿಕವು, ಬುದ್ಧಿಭ್ರಂಶಃ-ಸ್ತ್ರೀದ್ಯೂತಮದ್ಯಗಳಹಾಗೆ, ಬುದ್ಧಿಯನ್ನು, ಭ್ರಮಗೊಳಿಸುವುದು, ನಹಿ- ಅಲ್ಲವಷ್ಟೆ, ॥೮॥ ಯತ್ರ-ಯಾವಮದದಲ್ಲಿ, ನಶ್ವರಂ-ಅನಿತ್ಯವಾದ, ಇ

---



ದನಾರದನು ಸ್ವೇಚ್ಛೆಯಿಂದ ಆಸ್ಥಳಕ್ಕೆ ಬಂದವನಾಗಿ ಆಯಕ್ಷರೀರ್ವರಂ ಕಂಡು ಇವರು ಮತ್ತರಾಗಿರುವರೆಂತಿಳಿದನು.॥೫॥ ಅದೆಂತೆನೆ--ಆಗಂಗೆಯಲ್ಲಿ ವಸ್ತ್ರವಿಲ್ಲದೆ ಕ್ರೀಡಿಸುತ್ತಿದ್ದ ಆದೇವತಾಸ್ತ್ರೀಯರು ಆನಾರದಮುನಿಯಂ ಕಂಡು ಲಜ್ಜಾಯುಕ್ತರಾಗಿ, ಶಾಪವಂಕೊಡುವನೆಂಬ ಭಯದಿಂದಲೂ ಶಂಕಿತರಾಗಿ, ಅತಿತ್ವರೆಯಿಂದ ತಮ್ಮ ತಮ್ಮವಸ್ತ್ರಂಗಳನ್ನುಉಟ್ಟರು. ಆಯಕ್ಷರೀರ್ವರುಮಾತ್ರ ಕಾಮಾತುರರಾದುದರಿಂದ ಲಜ್ಜೆಯೂ ಭಯವೂ ಅಲ್ಲದವರಾಗಿ ವಸ್ತ್ರಂಗಳನ್ನು ಉಟ್ಟವರಾಗಲಿಲ್ಲ.॥೬॥ ಅನಂತರದಲ್ಲಿ ನಾರದಮುನಿ ಐಶ್ವರ್ಯಮದಾಂಧರಾದ ಮದ್ಯಪಾನದಿಂದಲೂಮತ್ತರಾದ ಕುಬೇರನಪುತ್ರರಾದ ಆನಳಕೂಬರಮಣಿಗ್ರೀವರನ್ನು ನೋಡಿ, ಅವರಿಗೆ ಆಮದವು ಪರಿಹರಿಸಲೋಸುಗ ಶ್ರೀಕೃಷ್ಣನ ದರ್ಶನವುಂಟಾಗುವದಕ್ಕೋಸುಗ ಅನುಗ್ರಹಬುದ್ಧಿಯಿಂದ ಶಾಪವಂಕೊಡುವವನಾಗಿ ಈವಚನವಂ ನುಡಿದನದೆಂತೆನೆ ॥೭॥ ಯಾವ ಐಶ್ವರ್ಯಮದಾವಸ್ಥೆಯಲ್ಲಿ ಸ್ತ್ರೀಯರೂ ಜೂಜೂ ಮದ್ಯಪಾನವೂಸಹ ಉಂಟಾಗಿರುವವೋ ಅಂತಾ ಐಶ್ವರ್ಯಮದಕ್ಕಿಂತಲೂ ಅನ್ಯವಾದ ಸತ್ಕುಲವಿದ್ಯಾದಿಗಳಿಂದುಂಟಾಗುವ ಮದವು, ಅಥವಾ ಅನ್ಯವಾದ ರಜೋಗುಣಕಾರ್ಯವಾದ ಹಾಸ್ಯಹರ್ಷಾದಿರೂಪವಾದ ಮದವೂ, ಸಹ ಪ್ರಿಯವಚನಗಳಂ ಸೇವಿಸುವ ಪುರುಷನಿಗೆ ಬುದ್ಧಿಭ್ರಂಶವಂಮಾಡಲಾರದು. ಐಶ್ವರ್ಯಮದವೊಂದೇ ಬುದ್ಧಿಭ್ರಂಶವನ್ನು ಉಂಟುಮಾಡುವುದು. ॥೮॥ ಮತ್ತು ಯಾವ ಐಶ್ವರ್ಯಮದದಲ್ಲಿ ನಶ್ವರವಾದ ಈದೇಹವಂ ಜರಾಷ್ಟು

ಹನ್ಯಂತೆಪಶವೊಯತ್ರನಿರ್ದಯೈರಜಿತಾತ್ಮಭಿಃ । ಮನ್ಯಮಾನೈರಿಮಂದೇಹಮಜರಾಮೃತ್ಯುನಶ್ವರಮ್ ॥೯॥
ದೆವಸಂಜ್ಞಿತಮಪ್ಯಂತೆಕ್ರಿಮಿವಿಡ್ಭಸ್ಮಸಂಜ್ಞಿತಮ್ । ಭೂತಧ್ರುಕ್ತತ್ಕೃತೆಸ್ವಾರ್ಥಂಕಿಂವೆದನಿರಯೊ
ಯತಃ ॥೧೦॥ ದೆಹಃಕಿಮನ್ನದಾತುಸ್ಸ್ವಂನಿಷೆಕ್ತುರ್ಮಾತುರೆವವಾ ॥ ಮಾತಃಪಿತುರ್ವಾಕ್ರೆತುರ್ವಾಬಲಿನೊ
ಗ್ನೆಶ್ಶುನೊಪಿವಾ ॥೧೧॥ ಏವಂಸಾಧಾರಣಂದೆಹಮವ್ಯಕ್ತಪ್ರಭವಾಪ್ಯಯಮ್ । ಕೊವಿದ್ವಾನಾತ್ಮಸಾ

---

ಮಂದೇಹಂ–ಈಶರೀರವನ್ನು, ಅಜರಾಮೃತ್ಯು-ಅಜರ-ಮುದಿತನವಿಲ್ಲದಂತೆಯೂ, ಅಮೃತ್ಯು-ಮರಣವಿಲ್ಲದಂತೆಯೂ, ಮನ್ಯಮಾನೈಃ -ತಿಳಿಯುತ್ತಲಿರುವರಾದ್ದರಿಂದಲೆ, ಅಜಿತಾತ್ಮಭಿಃ-ಅಜಿತ-ನಿಗ್ರಹಿಸಲ್ಪಡದ, ಆತ್ಮಭಿಃ- ಅಂತಃಕರಣವುಳ್ಳ, ನಿರ್ದಯೈಃ- ಕರುಣಾಶೂನ್ಯರಾದಪುರುಷರಿಂದ, ಪಶವಃ-ಜಂತುಗಳು, ಹನ್ಯಂತೇ-ಕೊಲ್ಲಲ್ಪಡುವವೋ ॥೯॥ದೇವಸಂಜ್ಞಿತಮಪಿ- ನರದೇವನೂಭೂದೇವನೂಎಂಬಹೆಸರುಳ್ಳದೇಹವಾದರೂ, ಅಂತೇ-ಕಡೆಯಲ್ಲಿ, ಕ್ರಿಮಿವಿಡ್ಭಸ್ಮಸಂಜ್ಞಿತಂ-ಕ್ರಿಮಿ-ಹುಳಲ್ಪಟ್ಟಹುಳವೆಂಬ, ವಿಟ್-ಹುಳಲ್ಪಡದೆಪಕ್ಕಿಗಳಿಂದತಿನ್ನಲ್ಪಡುವುದೆಂಬ, ಭಸ್ಮ-ಸುಡಲ್ಪಟ್ಟಬೂದಿಯೆಂಬ, ಸಂಜ್ಞಿತಂ-ಹೆಸರುಳ್ಳದ್ದಾಗುವುದು. ತತ್ಕೃತೇ-ಅಂತಾಅನಿತ್ಯದೇಹಕ್ಕೋಸುಗ, ಭೂತಧ್ರುಕ್-ಇತರಪ್ರಾಣಿಗಳಿಗೆದ್ರೋಹವಮಾಡಿದವನು, ಯತಃ-ಯಾವಕಾರಣದಿಂದ, ನಿರಯಃ-ನರಕಬರುವುದೋ, ತತಃ-ಆಕಾರಣದಿಂದ, ಸಃ-ಆಪುರುಷನು, ಸ್ವಾರ್ಥಂ-ತನ್ನಸದ್ಗತಿರೂಪವಾದಪ್ರಯೋಜನವನ್ನು, ಕಿಂವೇದ-ಏನುಬಲ್ಲನು, (ಅರಿಯನು) ॥೧೦॥ದೇಹಃ-ಶರೀರವು, ಅನ್ನದಾತುಃ-ಅನ್ನವಿಟ್ಟುಬೆಳೆಸಿದವನ, ಸ್ವಂಕಿಂ-ಸ್ವತ್ವವೋಏನು, (ಅವನದೇಅಲ್ಲವು) ನಿಷೇಕ್ತುಃ-ಬೀಜಾವಾಪಮಾಡಿದತಂದೆಯ, (ಸ್ವತ್ವವೋಏನು,) ಮಾತುರೇವವಾ,- ತಾಯಿಯದೋಏನು, ಮಾತುಃಪಿತುರ್ವಾ-ತಾಯಿಯತಂದೆಯಾದಮಾತಾಮಹನದೋಏನು, ಕ್ರೇತುರ್ವಾ-ಕ್ರಯಕ್ಕೆಕೊಂಡುಕೊಂಡವನದೋಏನು, ಬಲಿನಃ- ಬಲವಂತನದೋಏನು, ಅಗ್ನೇಃ-ಬೆಂಕಿಯದೋಏನು, ಶುನೋಽಪಿವಾ-ನಾಯಿಯದೋಏನು, ಶರೀರವುಯಾರಪಾಲಾಗಿಹೋಗುತ್ತೆ, ಇದುಯೋಚಿಸೋಣ,) ॥೧೧॥ ಏವಂ-ಹೀಗೆ,ಸಾಧಾರಣಂ-ಎಲ್ಲರಿಗೂಸ್ವತ್ವವಾಗಿರುವ, ಅವ್ಯಕ್ತಪ್ರಭವಾಪ್ಯಯಂ-ಅವ್ಯಕ್ತ-ಅವ್ಯಕ್ತತತ್ವದಿಂದ, ಪ್ರಭವ- ಉತ್ಪತ್ತಿಯೂ, ಅಪ್ಯಯಂ-ಅವ್ಯಕ್ತತತ್ವದಲ್ಲಿಯೇಲಯವೂ, ಉಳ್ಳ, ದೇಹಂ-ಶರೀರವನ್ನು, ಆತ್ಮಸಾತ್ಕೃತ್ವಾ-ತನ್ನದಾಗಿಮಾಡಿ, (ತನ್ನ

---

ತ್ಯುರಹಿತವಾದುದೆನಾಗಿ ತಿಳಿಯುತಲಿರುವ ಜಿತಮನಸ್ಕರಲ್ಲದೆಯಿರುವ ನಿರ್ದಯರಾದ ಪುರುಷರಿಂದ ಪಶುಪ್ರಾಣಿಗಳು ಕೊಲ್ಲಲ್ಪಡುತ್ತವೋ ಅಂತಾ ಐಶ್ವರ್ಯಮದವೊಂದೇ ಬುದ್ಧಿಭ್ರಂಶಕರವಾದದ್ದು. ॥೯॥ ಮತ್ತು, ಯಾವದೇಹವು ನರದೇವನೆನುತಲೂ ಭೂದೇವನೆನುತಲೂ ಸಹ ನಾಮಧೇಯವುಳ್ಳದುದಾದರೂ ಪ್ರಾಣವಿಯೋಗಾನಂತರದಲ್ಲಿ ನಾಯಿನರಿಗಳಿಂ ಭಕ್ಷಿಸಲ್ಪಟ್ಟುದುದಾಗಿ ಅಮೇಧ್ಯವೆಂದು ಹೇಳಲ್ಪಡುವುದೋ, ಹಾಗಲ್ಲವೆ ದಹಿಸಲ್ಪಟ್ಟಲ್ಲಿ ಭಸ್ಮವೆಂದು ಹೇಳಲ್ಪಡುವುದೋ, ಆ ಉಭಯಪಕ್ಷವೂ ಇದ್ದಲ್ಲಿ ಕ್ರಿಮಿಗಳೆಂದು ಸಹ ಹೇಳಲ್ಪಡುವುದೋ, ಅಂತಾದೇಹದ ಪೋಷಣಕ್ಕೋಸುಗ ಯಾವವನು ಪ್ರಾಣಿಗಳಿಗೆ ದ್ರೋಹವಂಗೆಯ್ವನೋ, ಅಂತಾ ನರಕಪ್ರಾಪ್ತಿಸಾಧನವಾದ ಪ್ರಾಣಿದ್ರೋಹವುಳ್ಳ ಪುರುಷನು ತನ್ನ ಶ್ರೇಯಸ್ಸನ್ನು ಏನುಬಲ್ಲನು? [ಎಷ್ಟುದೊಡ್ಡ ಮನುಷ್ಯನಾದರೂ ಸತ್ತಮೇಲೆ ಬೂದಿಯಾಗುವನು, ಅಥವಾ ಮಣ್ಣಾಗಿ ಹುಳಗಳಾಗುವನು, ಅಲ್ಲವೇ ನರಿನಾಯಿ ಗಳಿಂದ ತಿನ್ನಲ್ಪಡುವನು. ಹೀಗೆಹೋಗುವ ಅಸ್ಥಿರದೇಹವನ್ನು ಪೋಷಿಸಿಕೊಳ್ಳುವುದಕೆ ಪ್ರಾಣಿಹಿಂಸೆಮಾಡಿ ನರಕವನ್ನು ಸಂಪಾದಿಸಿಕೊಳ್ಳುವವರಿಗೆ ತಮ್ಮಗತಿಯೇನುತಿಳಿಯುವುದು?] ॥೧೦॥ಮತ್ತು ಶರೀರಾಭಿಮಾನಿಯಾದ ಪುರುಷನದೇಹವು, ಅನ್ನವನಿತ್ತು ಪಾಲಿಸುವ ಸ್ವಾಮಿಯ ಸ್ವತ್ವವಾಗುವುದೋ? ಅಲ್ಲದೆ ಗರ್ಭಾಧಾನಾದಿಗಳಿಂ ಪುಟ್ಟಿಸುವ ತಂದೆಯ ಸ್ವತ್ವವಾಗುವುದೋ? ಅಲ್ಲದೆ ನವಮಾಸಗಳುಗರ್ಭದಲ್ಲಿ ಧರಿಸಿ ಪ್ರಸವಿಸುವ ತಾಯಿಗೆಸ್ವತ್ವವಾಗುವುದೋ? ಅಲ್ಲದೆ ಮಾತಾಮಹನು ಅಪುತ್ರನಾದಲ್ಲಿ ಅವನ ಸ್ವತ್ವವಾಗುವುದೋ? ಅಲ್ಲದೆ ಬಲವಂತನ ಸ್ವತ್ವವಾಗುವುದೋ? ಅಲ್ಲದೆ ಕ್ರಯದ್ರವ್ಯವನಿತ್ತು ಕೊಂಡವನ ಸ್ವತ್ವವಾಗುವುದೋ? ಅಥವಾ ಅಗ್ನಿಯಸ್ವತ್ವವಾಗುವುದೋ? ಅಲ್ಲದೆ ನಾಯಿ ಮೊದಲಾದವರ ಸ್ವತ್ವವಾಗುವುದೋ? ॥೧೧॥ಎಂದು ಈರೀತಿಯಲ್ಲಿ ನಿಶ್ಚಯವಿಲ್ಲದೆ ಇರುವುದರಿಂದ ಸಮಸ್ತರಿಗೂ ಸಾಧಾರಣವಾಗಿರುವುದು. ಮತ್ತು ಮಾಯೆಯಿಂದ ಹುಟ್ಟಿ ಆಮಾಯೆಯಲ್ಲಿಯೇ ಲಯವನೆಯ್ದುವ ಇಂತಾ ವ್ಯರ್ಥ

ತೃತ್ವಾಹನ್ತಿಜಂತೂನ್ಕೃತೆಽಸತಃ॥೧೦॥ ಅಸತಶ್ಶ್ರೀಮದಾಂಧಸ್ಯದಾರಿದ್ರ್ಯಂಪರಮಾಂಜನಂ ।ಆತ್ಮೌ ಪಮ್ಯೇನಭೂತಾನಿದರಿದ್ರಃಪರಮೀಕ್ಷತೆ॥೧೩॥ಯಥಾಕಂಟಕವಿದ್ಧಾಂಗೋಜಂತೋರ್ನೇಚ್ಛತಿತಾಂವ್ಯಥಾಂ। ಜೀವಸಾಮ್ಯಂಗತೋಲಿಂಗೈರ್ನತಥಾವಿದ್ಧಕಂಟಕಃ ॥೧೪॥ ದರಿದ್ರೋನಿರಹಂಸ್ತಂಭೋಮುಕ್ತಸ್ಸರ್ವಮದೈರಿಹ। ಕೃಛ್ರಂಯದೃಚ್ಛಯಾಪ್ನೋತಿತದ್ಧಿತಸ್ಯಪರಂತಪಃ ॥೧೫॥ನಿತ್ಯಂಕ್ಷುತ್ಕ್ಷಾಮದೇಹಸ್ಯದರಿದ್ರಸ್ಯಾನ್ನ ಕಾಂಕ್ಷಿಣಃ। ಇಂದ್ರಿಯಾಣ್ಯನುಶುಷ್ಯಂತಿಹಿಂಸಾಪಿಚನಿವರ್ತತೆ॥೧೬॥ದರಿದ್ರಸ್ಯೈವಯುಜ್ಯಂತೆಸಾಧವಸ್ಸ

---

ಬೆಂದು ತಿಳಿವ)ಅಸತಃಋತೇ-ಅಸತ್ಪುರುಷನಾದಮೂಢನನ್ನುಹೊರತು, ಕೋವಿದ್ವಾನ್-ಯಾವಪಂಡಿತನು, ಜಂತೂನ್-ಪ್ರಾಣಿಗಳ ನ್ನು; ಹಂತಿ-ಕೊಲ್ಲುವನು? ॥೧೦॥ ಶ್ರೀಮದಾಂಧಸ್ಯ-ಸಂಪತ್ತಿನಗರ್ವದಿಂದಕುರುಡನಾದ, ಅಸತಃ-ದುಷ್ಟನಿಗೆ, ದಾರಿದ್ರ್ಯಂ-ಬಡತ ನವು, ಪರಮಾಂಜನಂ-ಹೆಚ್ಚಾದಅಂಜನವಾಗಿರುವುದು. ದರಿದ್ರಃಪರಂ-ಬಡವನುಮಾತ್ರ, ಭೂತಾನಿ-ಇತರಪ್ರಾಣಿಗಳನ್ನು, ಆತ್ಮೌ ಪಮ್ಯೇನ-ತನ್ನ ಹೋಲಿಕೆಯಿಂದ, ಈಕ್ಷತೇ-ನೋಡುವನು॥೧೩॥ಕಂಟಕವಿದ್ಧಾಂಗಃ-ಕಂಟಕ-ಮುಳ್ಳುಗಳಿಂದ, ವಿದ್ಧ-ವೇಧಿಸಲ್ಪಟ್ಟ, ಅಂಗಃ-ಮೈಯುಳ್ಳವನು, ಲಿಂಗೈಃ-ಮುಖವುಬಾಡಿರುವುದುಮೊದಲಾದಗುರುತುಗಳಿಂದ, ಜೀವಸಾಮ್ಯಂ-ಜೀವಾತ್ಮರೆಲ್ಲರಿಗೂಸುಖದುಃ ಖಗಳುಸಮಾನವಾಗಿರುವವೆಂಬಭಾವವನ್ನು, ಗತಃ-ತಿಳಿದವನಾದ್ದರಿಂದಲೇ, ಜಂತೋಃ-ಇತರಪ್ರಾಣಿಗೆ, ತಾಂವ್ಯಥಾಂ- ಆಮುಳ್ಳಿನ ಬಾಧೆಯನ್ನು, ಯಥಾ-ಹ್ಯಾಗೆ, ನೇಚ್ಛತಿ-ಬಯಸುವುದಿಲ್ಲವೋ, ತಥಾ- ಹಾಗೆ, ಅವಿದ್ಧಕಂಟಕಃ-ವೇಧಿಸದಮುಳ್ಳುಳ್ಳವನು, ನ-ಅಲ್ಲ ವು ॥೧೪॥ದರಿದ್ರಃ-ಬಡವನು, ನಿರಹಂಸ್ತಂಭಃ-ಅಹಂಕಾರದಜಾಡ್ಯವಿಲ್ಲದವನಾದ್ದರಿಂದ, ಇಹ-ಈಲೋಕದಲ್ಲಿಯೇ, ಸರ್ವಮದೈಃ- ಸಕಲಗರ್ವಗಳಿಂದಲೂ, ಮುಕ್ತಸ್ಸನ್-ಬಿಡಲ್ಪಟ್ಟವನಾಗಿ, ಯದೃಚ್ಛಯಾ-ಸ್ವೇಚ್ಛೆಯಿಂದ, ಕೃಛ್ರಂ-ಕಷ್ಟಸಾಧ್ಯವಾದಮೋ ಕ್ಷವನ್ನೂ ಕೂಡ, ಆಪ್ನೋತಿ-ಹೊಂದುವನು-ತಸ್ಯ-ಅವನಿಗೆ, ಪರಂತಪಃ-ಹೆಚ್ಚಾದತಪಸ್ಸು, ತದ್ಧಿ-ಆನಿರಹಂಕಾರವೇಅಲ್ಲವೆ ॥೧೫॥ ನಿತ್ಯಂ-ಯಾವಾಗಲೂ, ಕ್ಷುತ್ಕ್ಷಾಮದೇಹಸ್ಯ-ಕ್ಷುತ್-ಹಸಿವಿನಿಂದ, ಕ್ಷಾಮ-ಕ್ಷೀಣವಾದ, ದೇಹಸ್ಯ-ಮೈಯುಳ್ಳ, ಅನ್ನಕಾಂಕ್ಷಿಣಃ-ಅ ನ್ನವನ್ನು ಬಯಸುತ್ತಿರುವ, ದರಿದ್ರಸ್ಯ-ಬಡವನ, ಇಂದ್ರಿಯಾಣಿ-ಅವಯವಗಳು, ಅನುಶುಷ್ಯಂತಿ-ಶಿಕ್ಷಿಸಲ್ಪಡುವವು. ಹಿಂಸಾಪಿಚ- ಪರದ್ರೋಹವ್ಯಾಪಾರವೂ, ನಿವರ್ತತೇ-ಬಿಟ್ಟುಹೋಗುವುದು॥೧೬॥ಸಮದರ್ಶಿನಃ-ಸರ್ವಭೂತಗಳಲ್ಲಿಯೂ ಸಮದೃಷ್ಟಿಯುಳ್ಳ,ಸಾ

---

ದೇಹವಂ ಮೂಢರುಹೊರತು ವಿದ್ವಾಂಸನಾದ ಯಾವಪುರುಷನೂ ಇದೇಆತ್ಮನೆಂದು ತಿಳಿದುಅದಕ್ಕಾಗಿ ಅನ್ಯ ಪ್ರಾಣಿಗಳಂ ಹಿಂಸೆಪಡಿಸುವನು? ॥೧೦॥[ಈರೀತಿಯಲ್ಲಿ ಐಶ್ವರ್ಯಮದದಿಂದುಂಟಾಗುವ ವ್ಯಾಪಾರಂಗಳಂ ನಿರೂ ಪಿಸಿ ಐಶ್ವರ್ಯಮದಕ್ಕೆ ಪ್ರತೀಕಾರವಂ ನಿಶ್ಚಯಿಸುವನು. ಅದೆಂತೆನೆ-]ದುಷ್ಟನಾದುದರಿಂದ ಐಶ್ವರ್ಯಮದ ದಿಂದ್ಲೇ ಕುರುಡನಾಗಿರುವ ಪುರುಷನಿಗೆ ಬಡತನವೆಂಬುದೇ ಪರಮಾಂಜನವಾಗುವುದು. ಅಂತಾ ಅಂಜನವು ಪ್ರಾ ಪ್ತವಾದಲ್ಲಿ ದರಿದ್ರನಾದಪುರುಷನು ಪ್ರಾಣಿಗಳಂ ತನ್ನಂತೆನೋಡುವನಾದುದರಿಂದ ಅನ್ಯರಿಗೆ ದ್ರೋಹವಂ ಮಾಡಲಾ ರನು. ॥೧೩॥(ಈ ಅರ್ಥದಲ್ಲಿ ದೃಷ್ಟಾಂತವಂ ನಿರೂಪಿಸುವನು. ಎಂತೆನೆ-) ಮುಳ್ಳುಗಳಿಂದ ಚುಚ್ಚಲ್ಪಟ್ಟ ಪಾದಗಳು ಳ್ಳ ಪುರುಷನು ಮುಖದಬಳಲಿಕೆ ಮೊದಲಾದ ಗುರ್ತುಗಳಿಂದ ಎಲ್ಲರಿಗೂ ಸುಖದುಃಖಗಳುಹೀಗೆಯೇ ಸಮಾ ನಗಳಾಗಿರುವವೆಂದು ಭಾವಿಸುವನಾಗಿ ಎಂತು ಅನ್ಯಪ್ರಾಣಿಗಳಿಗೆ ಆ ಮುಳ್ಳುಮೊದಲಾದವುಗಳ ಉಪದ್ರವವನ್ನು ಮಾಡುವುದಕ್ಕೆ ನಿಶ್ಚಯಿಸಲಾರನೋ, ಹಾಗೆಯೇ ಮುಳ್ಳಿನಬಾಧೆಯನ್ನು ಅರಿಯದ ಪುರುಷನು ಹೆರವರ ದುಃಖ ವನ್ನು ಅರಿಯನು. ॥೧೪॥ (ಮತ್ತು ಪ್ರಾಣಿಗಳಿಗೆ ದರಿದ್ರತನವೇ ಮೋಕ್ಷವನ್ನು ಸಾಧಿಸುವುದಕ್ಕೆ ಸಾಧನವಾಗಿ ರುವುದೆಂದು ನುಡಿಯುವನು. ಎಂತೆನೆ-) ಬಡತನವುಳ್ಳ ಪುರುಷನು ಅಹಂಕಾರವಿಲ್ಲದವನಾಗಿ ಸಮಸ್ತಮದಗಳಿಂದ ಲೂ ಬಿಡಲ್ಪಟ್ಟವನಾಗಿ ಈಮನುಷ್ಯದೇಹದಲ್ಲಿ ತಾನಾಗಿಬಂದ ಮಹಾಕಷ್ಟವನ್ನು ಅನುಭವಿಸಿದರೂ ಆಕಷ್ಟವೇ ತನಗೆ ತಪಸ್ಸೆಂದುತಿಳಿದಿರುವನು. ॥೧೫॥ಅದೆಂತೆನೆ- ನಿತ್ಯದಲ್ಲಿಯೂ ಕೃಶವಾದ ದೇಹವುಳ್ಳವನಾಗಿ ಅನ್ನವನ್ನೇ ಅ ಪೇಕ್ಷಿಸುತಲಿರುವ ದಾರಿದ್ರ್ಯಪೀಡಿತನಾದ ಪುರುಷನಿಗೆ ಚಕ್ಷುರಾದೀಂದ್ರಿಯಗಳು ಸೊಕ್ಕದೆ ಶುಷ್ಕಗಳಾಗುವವು. ಮತ್ತು ಆಪುರುಷನಿಗೆ ಪರಹಿಂಸಾವ್ಯಾಪಾರಂಗಳು ಶಾಂತವಾಗುವವು. ॥೧೬॥ ಆದುದರಿಂದ ಸರ್ವತ್ರಸಮದೃಷ್ಟಿ

ಮದರ್ಶನಃ।ಸದ್ಭಿಃಕ್ಷಿಣೋತಿತತ್ತರ್ಷಂತತೋಽರಾದ್ವಿನಶ್ಯತಿ ॥೧೭॥ಸಾಧೂನಾಂಸಮಚಿತ್ತಾನಾಂಮುಕುಂದಚರಣೈಷಿಣಾಮ್। ದರ್ಶನಾಂತೋಭವೇದ್ಬಂಧಃಪುಂಸೋಽಕ್ಷ್ಣೋಸ್ಸವಿತುರ್ಯಥಾ ॥೧೮॥ ಉಪೇಕ್ಷ್ಯೈಃಕಿಂಧನಸ್ತಂಭೈರಸದ್ಭಿರಸದಾಶ್ರಯೈಃ ‡ ॥೧೯॥ ತದಹಂಮತ್ತಯೋರ್ಮಾಧ್ವ್ಯಾವಾರುಣ್ಯಾಶ್ರೀಮದಾಂಧಯೋಃ।ತಮೋಮದಂಹನಿಷ್ಯಾಮಿಸ್ತ್ರೈಣಯೋರಜಿತಾತ್ಮನೋಃ ॥೨೦॥ಯದಿಮೌಲೋಕಪಾಲಸ್ಯಪುತ್ರೌಭೂತ್ವಾತಮಃಪ್ಲುತೌ।ನವಿವಾಸಸಮಾತ್ಮಾನಂವಿಜಾನೀತಸ್ಸುದುರ್ಮದೌ ॥೨೧॥ಅತೋರ್ಹತಃಸ್ಥಾವರತಾಂಸ್ಯಾತಾಂನೈ

---

ಧವಃ-ಸತ್ಪುರುಷರು, ದರಿದ್ರಸ್ಯೈವ-ಬಡವನಬಳಿಗೇ, ಯುಜ್ಯಂತೇ-ಸೇರುವರು ಸದ್ಭಿಃ-ಅಸತ್ಪುರುಷರಿಂದ, ತತ್-ತತ್ತರ್ಷಂ-ಅವನ, ಆದುರಾಶೆಯು, ಕ್ಷಿಣೋತಿ-ಕೊರತೆಗೊಳ್ಳುತ್ತೆ, ತಮಃ- ಕ್ರೋಧಾದಿರೂಪವಾದಅಜ್ಞಾನವು, ಆರಾತ್-ಬೇಗನೆ, ವಿನಶ್ಯತಿ-ನಾಶವಾಗುವುದು ॥೧೭॥ ಪುಂಸಃ-ಪುರುಷನ, ಬಂಧಃ-ಸಂಸಾರದಕಟ್ಟು, ಅಕ್ಷ್ಣೋಃ-ಕಂಣುಗಳ, ಬಂಧವು, ಸವಿತುರ್ಯಥಾ-ಸೂರ್ಯನದರ್ಶನದಿಂದ ಹ್ಯಾಗೋಹಾಗೆ, ಸಮಚಿತ್ತಾನಾಂ - ಸಮಬುದ್ಧಿಯುಳ್ಳ, ಮುಕುಂದಚರಣೈಷಿಣಾಂ- ಮುಕುಂದ- ಮೋಕ್ಷವನ್ನು ಕೊಡುವ ವಿಷ್ಣುವಿನ, ಚರಣೈಷಿಣಾಂ-ಪಾದವನ್ನು ಬಯಸುವ, ಸಾಧೂನಾಂ-ಸತ್ಪುರುಷರ, ದರ್ಶನಾಂತಃ_ದರ್ಶನವೇಕೊನೆಯಾಗಿಉಳ್ಳದ್ದು, ಭವೇತ್-ಆದೀತು ॥೧೮॥ ಧನಸ್ತಂಭೈಃ- ಧನದಿಂದುಂಟಾದಗರ್ವಜಾಡ್ಯವುಳ್ಳವರಾದ್ದರಿಂದಲೇ, ಅಸದಾಶ್ರಯೈಃ-ಕೆಟ್ಟಕೆಲಸಗಳಿಗೆಆಧಾರವಾಗಿರುವ, ಉಪೇಕ್ಷ್ಯೈಃ-ಅಲಕ್ಷ್ಯಮಾಡಲ್ಪಡತಕ್ಕ, ಅಸದ್ಭಿಃ- ಸತ್ಪುರುಷರಲ್ಲದದುಷ್ಟರಿಂದ, ಕಿಂ- ಏನಾಗತಕ್ಕದ್ದು, (ಏನೂಯಿಲ್ಲ) ॥೧೯॥ ತತ್-ಆಕಾರಣದಿಂದ, ಅಹಂ-ನಾನು, ವಾರುಣ್ಯಾ-ವಾರುಣಿಯೆಂಬ, ಮಾಧ್ವ್ಯಾ-ಮದ್ಯದಿಂದ, ಮತ್ತಯೋಃ- ಮದಿಸಿದವರಾಗಿಯೂ, ಶ್ರೀಮದಾಂಧಯೋಃ- ಸಂಪತ್ತಿನಗರ್ವದಿಂದಕುರುಡರಾಗಿಯೂ, ಸ್ತ್ರೈಣಯೋಃ- ಸ್ತ್ರೀಲೋಲರಾಗಿಯೂ, ಅಜಿತಾತ್ಮನೋಃ-ನಿಗ್ರಹಿಸಲ್ಪಡದ ಬುದ್ಧಿಯುಳ್ಳವರಾಗಿಯೂ, ಇರುವನಳಕೂಬರಮಣಿಗ್ರೀವರ, ತಮೋಮದಂ- ತಾಮಸಾಹಂಕಾರವನ್ನು, ಹನಿಷ್ಯಾಮಿ-ಹೋಗಲಾಡಿಸುವೆನು ॥ ೨೦ ॥ ಯತ್- ಯಾವಕಾರಣದಿಂದ,ಇಮೌ- ಇವರು, ಲೋಕಪಾಲಸ್ಯ- ಲೋಕವನ್ನು ಪಾಲಿಸುವಕುಬೇರನ, ಪುತ್ರೌಭೂತ್ವಾ-ಕುಮಾರರಾಗಿಯೂ, ತಮಃಪ್ಲುತೌ-ಅಜ್ಞಾನದಿಂದವ್ಯಾಪ್ತರಾದ್ದರಿಂದಲೇ, ಸುದುರ್ಮದೌ-ಸುತರಾಂಮದಾಹಂಕಾರವುಳ್ಳವರಾಗಿ, ವಿವಾಸಸಂ-ವಸ್ತ್ರವಿಲ್ಲದ, ಆತ್ಮಾನಂ- ದೇಹವನ್ನು, ನವಿಜಾನೀತಃ-ತಿಳಿದುಕೊಳ್ಳದೆಹೋದರೋ ॥೨೧॥ ಅತಃ-ಆಕಾರಣದಿಂದ, ಸ್ಥಾವರತಾಂ-ವೃಕ್ಷರೂಪವಾದಸ್ಥಿರಭಾವವನ್ನು, ಅರ್ಹತಃ- ಪಡೆಯಲುಯೋಗ್ಯರಾಗುವರು, ಪುನಃ-ಮರಳಿಯೂ, ಏವಂಯಥಾ_ಈಗನಂತೆ, ನಸ್ಯಾತಾಂ- ಆಗದೆಹೋಗಲಿ ತತ್ರಾಪಿ - ಆವೃಕ್ಷಜನ್ಮದಲ್ಲಿಯೂ, ಮತ್ಪ್ರ

---

ದೆಯುಳ್ಳ ಸಾಧುಗಳು ಬಡತನವುಳ್ಳ ಪುರುಷನೊಡನೆಯೇ ಸಹವಾಸಂಗೆಯ್ವರು. ಅನಂತರದಲ್ಲಿ ಆಪುರುಷನಿಗೆ ಸಾಧುಗಳಸಂಗತಿಯಿಂದ ಅನಾದಿಯಾದ ಅಪೇಕ್ಷೆಯು ಶಾಂತವಾಗುವುದು. ಶೀಘ್ರದಲ್ಲಿ ಸಿದ್ಧಿಯೂ ಉಂಟಾಗುವದು. ॥೧೭॥ ಶ್ರೀಮುಕುಂದನ ಚರಣಾರವಿಂದಗಳಲ್ಲಿ ದೃಢಭಕ್ತಿಯುಳ್ಳ ಸರ್ವತ್ರಸಮಚಿತ್ತರಾದ ಸಾಧುಗಳಿಗೆ‡ ಧನಗರ್ವಿತರಾದ ದುಷ್ಟರಿಂದಲೂ ದುಷ್ಟರ ಆಶ್ರಯದಿಂದಲೂ ಸಹ ಆಗತಕ್ಕಫಲವೇನು?॥೧೮॥೧೯॥ಯಾವಕಾರಣದಿಂದ ಈಯಕ್ಷೇಶ್ವರರು ಲೋಕಪಾಲಕನಾದ ಕುಬೇರನಪುತ್ರರಾದುದರಿಂದ ಅಜ್ಞಾನಾವೃತರಾಗಿರುವರೋ ಆ ಕಾರಣದಿಂದ ಐಶ್ವರ್ಯಮದಾಂಧರಾಗಿ, ಮತ್ತು ವಾರುಣಿಯೆಂಬ ಮದ್ಯದಿಂದಲೂ ಮತ್ತರಾಗಿ, ಅವಶವಾಗಿಮಾಡಲ್ಪಟ್ಟ ಅಂತಃಕರಣವುಳ್ಳವರಾಗಿ, ಸ್ತ್ರೀಕಾಮುಕರಾಗಿರುವ, ಈ ನಳಕೂಬರಮಣಿಗ್ರೀವರ ಅಜ್ಞಾನದಿಂದುಂಟಾದಮದವನ್ನು ನಾನು ಪರಿಹರಿಸುವೆನು. ॥೨೦॥ ಈಗ ಮತ್ತು ದುಷ್ಟವಾದಮದವುಳ್ಳಈವರರೂ ವಸ್ತ್ರರಹಿತವಾದ ತಮ್ಮಂ ತಾವೇ ಮರೆತಿರುವರು. ಆದುದರಿಂದ ಪುನಶ್ಚ ಈರೀತಿಯಲ್ಲಿ ಎಂತು ಮೈಮರೆಯದೆಇರುವರೋ ಅಂತು ಶಿಕ್ಷಿಸಲ್ಪಡುವುದಕೆ ವೃಕ್ಷಭಾವವನೆಯ್ದಲುಯೋಗ್ಯರಾಗಲಿ. ಎಂದು ಶಪಿಸಿದನು ॥೨೧॥* (ಈರೀತಿಯಲ್ಲಿ ಶಪಿಸಿ ಅನುಗ್ರಹವಂಮಾಡುವನದೆಂತೆನೆ -) ಇವರೀರ್ವರೂನಂನ ಆನುಗ್ರಹದಿಂದ, ತಮ್ಮಮದದಿಂ ಈಶಾಪಂ ಬಂದುದೆಂಬ ಸ್ಮರಣೆಯೂ ಶ್ರೀವಾಸುದೇವಸ್ಮೃತಿಯೂ ಸಹ ಉಳ್ಳವರಾಗಿ ದೇವಮಾನದಲ್ಲಿ ನೂರುವರುಷಗಳಪರ್ಯಂತವು ವೃ

ವಂ ಯಥಾಪುನಃ|ಸ್ಮೃತಿಸ್ಸ್ಯಾನ್ಮತ್ಪ್ರಸಾದೇನತತ್ರಾಪಿಮದನುಗ್ರಹಾತ್||೨೨||ವಾಸುದೇವಸ್ಯಸಾನ್ನಿಧ್ಯಂ ಲಬ್ಧ್ವಾದಿವ್ಯಶರಚ್ಛತೇ|ವೃತ್ತೇಸ್ವರ್ಲೋಕತಾಂಭೂಯೋಲಬ್ಧ್ವಾಭಕ್ತೌಭವಿಷ್ಯತಃ||೨೩||ಸಏವಮುಕ್ತ್ವಾದೆವರ್ಷಿರ್ಗತೋನಾರಾಯಣಾಶ್ರಮಮ್ | ನಳಕೂಬರಮ*ಣಿಗ್ರೀವಾವಾಸತುರ್ಯಮಳಾರ್ಜುನೌ ||೨೪|| ಋಷೇರ್ಭಾಗ*ವತಮುಖ್ಯಸ್ಯಸತ್ಯಂಕರ್ತುಂವಚೋಹರಿಃ | ಜಗಾಮಶನಕೈಸ್ತತ್ರಯತ್ರಾಸ್ತಾಂಯಮಳಾರ್ಜುನೌ ||೨೫|| ದೇವರ್ಷಿರ್ಮೆಪ್ರಿಯತಮೋಯದಿಮೌಧನದಾತ್ಮಜೌ | ತತ್ತಥಾಸಾಧಯಿಷ್ಯಾಮಿಯದ್ಗೀತಂ ತನ್ಮಹಾತ್ಮನಾ||೨೬||ಇತ್ಯನ್ತರೇಣಾರ್ಜುನಯೋಃಕೃಷ್ಣಸ್ತುಯಮಯೋರ್ಯಯೌ |ಆತ್ಮನಿರ್ವೇಶಮಾತ್ರೇಣತಿರ್ಯ

---

ಸಾದೇನ-ನನ್ನ ಅನುಗ್ರಹದಿಂದ,ಸ್ಮೃತಿಃ-ಪೂರ್ವಜನ್ಮಸ್ಮರಣವು,ಸ್ಯಾತ್-ಆದೀತು.ಮದನುಗ್ರಹಾತ್-ನನ್ನ ಪ್ರಸಾದದದೆಸೆಯಿಂದ||೨೨|| ದಿವ್ಯಶರಚ್ಛತೇ- ದೇವಸಂವತ್ಸರಗಳನೂಱು, ವೃತ್ತೇಸತಿ- ಕಳೆದದ್ದಾಗುತಿರಲು, ವಾಸುದೇವಸ್ಯ- ವಸುದೇವಪುತ್ರನಾದಕೃಷ್ಣನ, ಸಾನ್ನಿಧ್ಯಂ- ಸಾಮೀಪ್ಯವನ್ನು, ಲಬ್ಧ್ವಾ -ಪಡೆದು,ಭೂಯಃ- ಮರಳಿಯೂ, ಸ್ವರ್ಲೋಕತಾಂ- ದೇವಲೋಕವುಳ್ಳವರಹತನವನ್ನು, ಲಬ್ಧ್ವಾ-ಪಡೆದು, ಭಕ್ತೌ -ವಿಷ್ಣುಭಕ್ತರು, ಭವಿಷ್ಯತಃ- ಆಗಹೋಗುವರು ||೨೩|| ಸದೇವರ್ಷಿಃ-ಆನಾರದನು, ಏವಮುಕ್ತ್ವಾ-ಹೀಗೆ ಹೇಳಿ, ನಾರಾಯಣಾಶ್ರಮಂ- ನಾರಾಯಣಋಷಿಯ ಆಶ್ರಮವಾದ ಬದರೀವನವನ್ನು ಕುರಿತು, ಗತಃ-ಹೋದವನಾದನು. ನಳಕೂಬರ ಮಣಿಗ್ರೀವಾ -ಕುಬೇರನಪುತ್ರರು, ಯಮಳಾರ್ಜುನೌ- ಅವಳಿಯಮತ್ತೀಮರಗಳು, ಆಸತುಃ -ಆದರು ||೨೪|| ಹರಿಃ- ಕೃಷ್ಣನು, ಭಾಗವತಮುಖ್ಯಸ್ಯ- ಭಗದ್ಭಕ್ತರಲ್ಲಿ ಶ್ರೇಷ್ಟನಾದ, ಋಷೇಃ_ನಾರದಮುನಿಯ, ವಚಃ- ಮಾತನ್ನು, ಸತ್ಯಂಕರ್ತುಂ- ದಿಟವನ್ನಾಗಿ ಮಾಡಲೋಸುಗ,ಯತ್ರ- ಯಾವಸ್ಥಳದಲ್ಲಿ, ಯಮಳಾರ್ಜುನೌ- ಅವುಳಿಮತ್ತೀಮರಗಳು, ಆಸ್ತಾಂ-ಇದ್ದವೋ,ತತ್ರ-ಅಲ್ಲಿಗೆ, ಶನಕೈಃ- ಮೆಲ್ಲನೆ, ಜಗಾಮ-ನಡೆದನು || ೨೫ || ಯತ್-ಯಾವಕಾರಣದಿಂದ, ದೇವರ್ಷಿಃ- ನಾರದನು, ಮೇ-ನನಗೆ, ಪ್ರಿಯತಮಃ- ಬಹು ಪ್ರಿಯನಾದವನೋ, ಇಮೌ-ಈಮತ್ತೀಮರಗಳು, ಧನದಾತ್ಮಜೌ- ಕುಬೇರನಪುತ್ರರಾಗಿರುವರೋ, ತತ್_ ಆಕಾರಣದಿಂದ, ತನ್ಮಹಾತ್ಮನಾ- ಆನಾರದನಿಂದ,ಯದ್ಗೀತಂ- ಯಾವಶಾಪವಚನವುಹಾಡಲ್ಪಟ್ಟಿತೋ, ತತ್- ಆವಚನವನ್ನು, ತಥಾ-ಹಾಗೆಯೇ, ಸಾಧಯಿಷ್ಯಾಮಿ-ಸಾಧಿಸುವೆನು||೨೬|| ಕೃಷ್ಣಸ್ತು- ಕೃಷ್ಣನಾದರೋ, ಇತಿ-ಹೀಗೆಂದುಕೊಂಡು,ಯಮಯೋಃ_ಅವುಳಿಗಳಾದ,ಅರ್ಜು

---

ಕ್ಷಂಗಳಾಗಿದ್ದು ಅನಂತರದಲ್ಲಿ ನನ್ನಪ್ರಸಾದದಿಂದಲೇ ಶ್ರೀವಾಸುದೇವನ ಸಾನ್ನಿಧ್ಯವಂ ಪಡೆದು* ||೨೨|| ಪುನಶ್ಚ ತಮ್ಮಲೋಕವನೆಯ್ದಿದವರಾಗಿ ಶ್ರೀವಾಸುದೇವನಲ್ಲಿ ಭಕ್ತಿಯುಳ್ಳವರಾಗಲಿ||೨೩|| ಎಂದು ದೇವಮುನಿಯಾದ ಶ್ರೀನಾರದನು ಈರೀತಿಯಲ್ಲಿ ನುಡಿದು ನರನಾರಾಯಣಾಶ್ರಮವಂಕುರಿತು ತೆರಳಿದನು. ಅನಂತರದಲ್ಲಿ ನಳಕೂಬರ ಮಣಿಗ್ರೀವರೀರ್ವರೂ ಅವಳಿ ಯರ್ಜುನವೃಕ್ಷಂಗಳಾಗಿ ಜನಿಸಿದರು. ||೨೪|| ಎಲೈ, ಪರೀಕ್ಷಿದ್ರಾಯನೇ! ಭಾಗವತರಲ್ಲಿ ಶ್ರೇಷ್ಠನಾದ ನಾರದಮುನಿಯ ವಾಕ್ಯವನ್ನು ಯಥಾರ್ಥಂಗೆಯ್ಯಲೋಸುಗ ಶ್ರೀಕೃಷ್ಣನು ಮೆಲ್ಲಮೆಲ್ಲನೆ ನಡುವಿಗೆ ಕಟ್ಟಿರುವ ವರಳಂ ಸೆಳೆಕೊಂಡು ಯಾವಸ್ಥಳದಲ್ಲಿ ಯಮಳಾರ್ಜುನವೃಕ್ಷಂಗಳಿರುವವೋ ಆಸ್ಥಳವಂಕುರಿತೈದಿದನು.| (ಆಗಶ್ರೀಕೃಷ್ಣನು ಈರೀತಿಯಲ್ಲಿ ಚಿಂತಿಸಿದನು.ಅದೆಂತೆನೆ-)ಋಷಿಯಾದನಾರದನು ನನಗೆಅಂತ್ಯಂತಪ್ರಿಯನು.ಮತ್ತಿಯಮರಗಳಾಗಿರುವ ಇವರೀರ್ವರೂ ಕುಬೇರನಪುತ್ರರಾದುದರಿಂದ ಮಹಾತ್ಮನಾದ ನಾರದಮುನಿಯಿಂದ ಇವರಂ ಕುರಿತು ಯಾವ ಅರ್ಥವುನುಡಿಯಲ್ಪಟ್ಟಿತೋ ಅದೇಅರ್ಥವನ್ನು ಆದೇರೀತಿಯಲ್ಲಿ ಸಾಧಿಸುವೆನು. ||೨೬||ಎಂದು ಶ್ರೀಕೃಷ್ಣನು ಆಲೋಚಿಸಿ ಜೋಡಾಗಿ ಹುಟ್ಟಿರುವ ಮತ್ತಿಯಮರಗಳ ನಡುವೆ ತೂರಿದನು. ಅನಂತರದಲ್ಲಿ ಶ್ರೀಕೃಷ್ಣನು ವೃಕ್ಷಗಳ ಮಧ್ಯದಲ್ಲಿ ಪ್ರವೇಶಂಗೆಯ್ದಮಾತ್ರದಿಂದಲೇ ನಡುವಿಗೆ ಕಟ್ಟಿರುವ ಮರದವರಳು ಆ ವೃಕ್ಷಂಗಳ ಮಧ್ಯದಲ್ಲಿ ಅಡ್ಡಲಾಗಿ



ಗ್ಗತಮುಲೂಖಲಮ್॥೨೭॥ ಬಾಲೇನನಿಷ್ಕರ್ಷಯತಾನ್ವಗುಲೂಖಲಂತದ್ದಾಮೋದರೇಣತರಸೋತ್ಕಲಿತಾಙ್ಘ್ರಿಬಂಧೌ।ನಿಷ್ಪೇತತುಃಪರಮವಿಕ್ರಮಿತಾತಿವೇಪಸ್ಕಂಧಪ್ರವಾಳವಿಟಪೌಕೃತಚಂಡಶಬ್ದೌ ॥೨೮॥ತತ್ರಶ್ರಿಯಾಪರಮಯಾಕಕುಭಃಸ್ಫುರಂತೌಸಿದ್ಧಾವುಪೇತ್ಯಕುಜಯೋರಿವಜಾತವೇದಾಃ । ಕೃಷ್ಣಂಪ್ರಣಮ್ಯಶಿರಸಾಖಿಲಲೋಕನಾಥಂಬದ್ಧಾಙ್ಜಲೀವಿರಜಸಾವಿದಮೂಚತುಸ್ಸ್ಮ ॥೨೯॥

-*ಶಾಪವಿನಿರ್ಮುಕ್ತನಳಕೂಬರಮಣಿಗ್ರೀವಕೃತಶ್ರೀಕೃಷ್ಣಸ್ತುತಿಃ-*-

ಗುಹ್ಯಕೌ । ಕೃಷ್ಣಕೃಷ್ಣಮಹಾಯೋಗಿಂಸ್ತ್ವಮಾದ್ಯಃಪುರುಷಃಪರಃ । ವ್ಯಕ್ತಾವ್ಯಕ್ತಮಿದಂವಿಶ್ವಂರೂಪಂತೇಬ್ರಾಹ್ಮಣಾವಿದುಃ ॥೩೦॥ ತ್ವಮೇಕಸ್ಸರ್ವಭೂತಾನಾಂದೇಹಸ್ವಾತ್ಮೇಂದ್ರಿಯೇಶ್ವರಃ।ತ್ವಮೇವಕಾಲೋ

---

ನಯೋಃ- ಮತ್ತೀಮರಗಳ, ಅಂತರೇಣ- ನಡುವೆ, ಯಯೌ- ತೆರಳಿದನು, ಆತ್ಮನಿರ್ವೇಶಮಾತ್ರೇಣ- ಆತ್ಮ-ಕೃಷ್ಣನು, ನಿರ್ವೇಶಮಾತ್ರೇಣ- ಪ್ರವೇಶಿಸಿದ್ದರಿಂದಲೇ, ಉಲೂಖಲಂ- ಒರಳು, ತಿರ್ಯಗ್ಗತಂ - ಅಡ್ಡವಾಗಿಸಿಕ್ಕಿಕೊಂಡದ್ದಾಯಿತು॥೨೭॥ ತತ್-ಆ, ಉಲೂಖಲಂ- ಮರದೊರಳನ್ನು, ಅನ್ವಕ್- ಅಡ್ಡವಾಗಿ, ನಿಷ್ಕರ್ಷಯತಾ - ಎಳೆಯುತ್ತಿರುವ, ದಾಮೋದರೇಣ-ಹಗ್ಗವು ಹೊಟ್ಟೆಯಮೇಲುಳ್ಳ, ಬಾಲೇನ- ಹುಡುಗನಾದಕೃಷ್ಣನಿಂದ, ತರಸಾ-ಬೇಗನೆ, ಉತ್ಕಲಿತಾಂಘ್ರಿಬಂಧೌ- ಉತ್ಕಲಿತ- ಹೆಗಲಿಸಲ್ಪಟ್ಟ, ಅಂಘ್ರಿಬಂಧೌ ಅಡಿಕಟ್ಟುಳ್ಳವಾಗಿಯೂ,,ಪರಮವಿಕ್ರಮಿತಾತಿವೇಪಸ್ಕಂಧಪ್ರವಾಳವಿಟಪೌ-ಪರಮ-ಪರಮಾತ್ಮನಾದಕೃಷ್ಣನ,ವಿಕ್ರಮಿತ-ನಡೆಯಿಂದ, ಅತಿವೇಪ-ಹೆಚ್ಚುನಡುಕವುಳ್ಳ,ಸ್ಕಂಧ-ದೊಡ್ಡಶಾಖೆಗಳೂ,ಪ್ರವಾಳವಿಟಪೌ- ಚಿಗುರುಕೊಂಬೆಗಳೂವುಳ್ಳ, ಕೃತಚಂಡಶಬ್ದೌ-ಕೃತ-ಮಾಡಲ್ಪಟ್ಟ, ಚಂಡಶಬ್ದೌ-ಘೋರಧ್ವನಿಯುಳ್ಳ, ಯಮಳಾರ್ಜುನವೃಕ್ಷಗಳು,ನಿಷ್ಪೇತತುಃ-ಒರೆಕೊಂಡುಬಿದ್ದವು॥೨೮॥ಕುಜಯೋಃ-ವೃಕ್ಷಗಳದೆಸೆಯಿಂದ, ಜಾತವೇದಾಇವ- ಮಥಿಸಲ್ಪಟ್ಟುಹುಟ್ಟಿದಹಗ್ನಿಯಹಾಗೆ, ಪರಮಯಾ-ಉತ್ಕೃಷ್ಟವಾದ,ಶ್ರಿಯಾ-ಕಾಂತಿಯಿಂದ, ಕಕುಭಃ-ದೆಸೆಗಳನ್ನು, ಸ್ಫುರಂತೌ_ಬೆಳಗುತ್ತಿರುವ,ಸಿದ್ಧೌ-ಸಿದ್ಧಪುರುಷರೀರ್ವರಾದ; ತೌ-ಆನಳಕೂಬರಮಣಿಗ್ರೀವರು, ತತ್ರ - ಅಲ್ಲಿ, ಉಪೇತ್ಯ-ಬಂದು, ಅಖಿಲಲೋಕನಾಥಂ-ಸಕಲಲೋಕಗಳಿಗೂಒಡೆಯನಾದ,ಕೃಷ್ಣಂ- ಕೃಷ್ಣನನ್ನು,ಶಿರಸಾಪ್ರಣಮ್ಯ-ಮಂಡೆಯಿಂದಮಣಿದು, ವಿರಜಸೌ-ರಜೋಗುಣವಿಲ್ಲದವರಾಗಿ,ಬದ್ಧಾಂಜಲೀ-ಕೈಕಟ್ಟಿಕೊಂಡವರಾಗಿ,ಇದಂ-ಈವಕ್ಷ್ಯಮಾಣಸ್ತೋತ್ರವನ್ನು, ಊಚತುಃ-ನುಡಿದರು॥೨೯॥(ಗುಹ್ಯಕಸ್ತುತಿ)ಕೃಷ್ಣ-ವಿಷ್ಣುವಾದ,ಕೃಷ್ಣ-ಕೃಷ್ಣನೇ! ಮಹಾಯೋಗಿನ್-ಅಚಿಂತ್ಯವೈಭವನೇ! ತ್ವಂ_ನೀನು,ಆದ್ಯಃ - ಪ್ರಧಾನತತ್ವಕ್ಕೆಕಾರಣವಾದವೊದಲನೆಯವನು, ಪರಃಪುರುಷಃ- ಪರಮಾತ್ಮನು, ಬ್ರಾಹ್ಮಣಾಃ-ಪರಬ್ರಹ್ಮವಾದ,ತೇ-ನಿನ್ನ, ರೂಪಂ-ವಿರಾಡ್ರೂಪವನ್ನು, ವ್ಯಕ್ತಾವ್ಯಕ್ತಂ- ಸ್ಥೂಲಸೂಕ್ಷ್ಮವಾಗಿರುವ, ಇದಂವಿಶ್ವಂ- ಈಪ್ರಪಂಚವನ್ನಾಗಿ, (ಅಥವಾ-ಇದಂವಿಶ್ವಂ- ಈಪ್ರಪಂಚವನ್ನು, ವ್ಯಕ್ತಾವ್ಯಕ್ತಂತೆರೂಪಂ-ಸ್ಥೂಲಸೂಕ್ಷ್ಮವಾದನಿನ್ನರೂಪವನ್ನಾಗಿ) ವಿದುಃ-ತತ್ವಜ್ಞರುತಿಳಿಯುವರು. (ಪಾಠಾಂತರ-ಬ್ರಾಹ್ಮಣಾವಿದುಃ ಬ್ರಹ್ಮಜ್ಞಾನಿಗಳುಬಲ್ಲರು) ॥೩೦॥ ತ್ವಮೇಕಃ-ನೀನೊಬ್ಬನೇ,ಸರ್ವಭೂತಾನಾಂ-ಸಕಲಪ್ರಾ

---

ಸಿಕ್ಕಿಕೊಂಡಿತು. ॥೨೭॥ಬಾಲಕನಾದ ದಾಮೋದರನಾದ ಶ್ರೀಕೃಷ್ಣನು ತನ್ನಮಹಾಬಲದಿಂದ ಆವೃಕ್ಷಂಗಳ ಮಧ್ಯದಲ್ಲಿರುವ ಒರಳಂ ಘಟ್ಟಿಯಾಗಿ ಸೆಳೆಯುತಲಿರಲಾಗಿ ಆವೇಗದಿಂದ ಸಮೂಲವಾಗಿ ಕೀಳಲ್ಪಟ್ಟ ಬೇರುಗಳುಳ್ಳವಾಗಿ ಅತ್ಯಂತವಾಗಿ ಚಲಿಸುತಲಿರುವ ಕೊಂಬುಗಳೂ ಕೊನೆಗಳೂ ಪತ್ರಗಳೂ ಉಳ್ಳವಾಗಿ ಅರ್ಜುನವೃಕ್ಷಂಗಳೆರಡೂ ಪ್ರಚಂಡಶಬ್ದಂಗೆಯ್ಯುತಬಿದ್ದವು.[ಕೃಷ್ಣನಮಹಿಮೆಯಿಂದ ಕಡೆಯುವಹಗ್ಗಕ್ಕೂ ಮರದವರಳಿಗೂ ಅಷ್ಟುಬಲವುಂಟಾಯಿತು.] ॥೨೮॥ ಅನಂತರದಲ್ಲಿ ತಮ್ಮ ಪರಮೋತ್ಕೃಷ್ಟವಾದ ದೇಹಕಾಂತಿಯಿಂದಲೇ ದಶದಿಕ್ಕುಗಳಂ ಪ್ರಕಾಶಗೊಳಿಸುವರಾಗಿ, ವೃಕ್ಷಂಗಳಲ್ಲಿರುವ ಅಗ್ನಿಯೇ ಮೂರ್ತಿಮತ್ತಾಗಿ ಹೊರಟಂತೆ ಆಯಕ್ಷರೀರ್ವರೂ ಅರ್ಜುನವೃಕ್ಷಗಳಿಂದ ಹೊರಟು, ಸರ್ವಲೋಕಪತಿಯಾದ ಶ್ರೀಕೃಷ್ಣನಂ ಶಿರಸಾನಮಸ್ಕಾರಂಗೆಯ್ದು,ನಿರ್ಮಲಾಂತಃಕರಣರಾಗಿ, ಅಂಜಲಿಯಂಕಟ್ಟಿಕೊಂಡು ಈವಾಕ್ಯವಂನುಡಿದರು.॥೨೯॥ಅದೆಂತೆಂದಡೆ:-ಎಲೈಅಚಿಂತ್ಯಪ್ರಭಾವವುಳ್ಳ ಶ್ರೀಕೃಷ್ಣನೇ! ನೀವಬಾಲಕನಲ್ಲವು.ಪರಮಪುರುಷನು ಜಗತ್ತಿಗೆ ನಿಮಿತ್ತಕಾರಣರೂಪನೂ ಉಪಾದಾನಕಾರಣರೂಪನೂ ನೀನೇ ಸರಿ.ಸ್ಥೂಲಸೂಕ್ಷ್ಮರೂಪವಾದ ಈಜಗತ್ತು, ಬ್ರಹ್ಮಸ್ವರೂಪನಾದ ನಿನ್ನರೂಪವೆಂದು ಪ್ರಾಜ್ಞರುತಿಳಿಯುವರು॥೩೦॥

ಭಗವಾನ್ವಿಷ್ಣುರವ್ಯಯಈಶ್ವರಃ॥೩೧॥ತ್ವಂಮಹಾನ್ಪ್ರಕೃತಿಸ್ಸೂಕ್ಷ್ಮಾರಜಸ್ಸತ್ತ್ವತಮೋಮಯೀ।ತ್ವಮೇವ
ಪುರುಷೋಧ್ಯಕ್ಷಸ್ಸರ್ವಕ್ಷೇತ್ರವಿಕಾರಕೃತ್ ॥೩೨॥ಗೃಹ್ಯಮಾಣೈಸ್ತ್ವಮಗ್ರಾಹ್ಯೋವಿಕಾರೈಃಪ್ರಾಕೃತೈರ್ಗುಣೈ

---

ಣಿಗಳಿಗೂ, ದೇಹಸ್ವಾತ್ಮೇಂದ್ರಿಯೇಶ್ವರಃ-ದೇಹ-ಶರೀರಕ್ಕೂ,ಅಸು-ಪ್ರಾಣಕ್ಕೂ,ಆತ್ಮಾ- ಅಹಂಕಾರಕ್ಕೂ,ಇಂದ್ರಿಯ-ಜ್ಞಾನೇಂದ್ರಿಯಗಳಿಗೂಕರ್ಮೇಂದ್ರಿಯಗಳಿಗೂ,ಈಶ್ವರಃ_ಒಡೆಯನಾದವನು, ತ್ವಮೇವ_ನೀನೇ,ಕಾಲಃ- ಅತೀತಾದಿವ್ಯವಹಾರಗಳಿಗೆಕಾರಣವಾಗಿಸರ್ವಾಧಾರವೆನಿಸಿದಕಾಲತತ್ವವು,ಭಗವಾನ್-ಷಡ್ಗುಣೈಶ್ವರ್ಯಸಂಪನ್ನನಾದ,ಅವ್ಯಯಃ-ನಾಶರಹಿತನಾದ ,ವಿಷ್ಣುಃ-ವ್ಯಾಪಕನಾದ,ಈಶ್ವರಃ-ನಿಯಾಮಕನು॥೩೧॥ತ್ವಂ-ನೀನು,ಮಹಾನ್-ಮಹತ್ತತ್ವವು, ರಜಸ್ಸತ್ವತಮೋಮಯೀ-ತ್ರಿಗುಣವಿಕಾರವಾದ, ಸೂಕ್ಷ್ಮಾ-ಅಗೋಚರವಾದ, ಪ್ರಕೃತಿಃ-ಮಾಯೆಯೂ,ಆಗಿರುವಿ.ಸರ್ವಕ್ಷೇತ್ರವಿಕಾರಕೃತ್-ಸರ್ವಕ್ಷೇತ್ರ- ಸಕಲಶರೀರಗಳ,ವಿಕಾರಕೃತ್-ಉತ್ಪತ್ತಿಪರಿಣಾಮಾದಿವಿಕಾರಗಳನ್ನುಂಟುಮಾಡುವ, ಅಧ್ಯಕ್ಷಃಪುರುಷಃ- ಅಧಿಷ್ಠಾತನಾದನಿಮಿತ್ತಕಾರಣವೂ, ಅಥವಾಭೂತಭೌತಿಕಪ್ರಪಂಚದ ಅಧ್ಯಾಸಕ್ಕೆಅಧಿಷ್ಠಾನವಾದವನೂ, ತ್ವಮೇವ-ನೀನೇ॥೩೨॥ ತ್ವಂ-ನೀನು, ಗೃಹ್ಯಮಾಣೈಃ- ಜ್ಞಾನವಿಷಯಗಳಾದ್ದರಿಂದದೃಶ್ಯಗಳಾಗಿರುವ, ವಿಕಾರೈಃ- ಪ್ರಕೃತಿಗೆವಿಕೃತಿಗಳಾದ, ಅಥವಾಗ್ರಹಿಸಲ್ಪಡುವಬುದ್ಧ್ಯಹಂಕಾರಗಳೊಡನೆಯೂ, ವಿಕಾರೈಃ-ಅವುಗಳಿಗೆವಿಕೃತಿಗಳಾದಇಂದ್ರಿಯಾದಿಗಳೊಡನೆಯೂ, ಪ್ರಾಕೃತೈಃ_ಪ್ರಕೃತಿಸಂಬಂಧಿಗಳಾದ, ಗುಣೈಃ-ಗುಣಗಳೊಡನೆಯೂ,ಅಗ್ರಾಹ್ಯಃ- ಗ್ರಹಿಸಲ್ಪಡುವನಲ್ಲವು. ಪ್ರಾಕ್-ಮುಂಚೆಯೇ, ಸಿದ್ಧಂ- ಸ್ವಪ್ರಕಾಶವಾಗಿರುವ,ನಿನ್ನನ್ನು, ಗುಣಸಂವೃತಃ-ಪ್ರಕೃತಿಗುಣಗಳಿಂದಮುಚ್ಚಲ್ಪಟ್ಟ,

---

ಸರ್ವಪ್ರಾಣಿಗಳೊದೇಹಗಳೂ, ಪ್ರಾಣಂಗಳೂ, ಅಹಂಕಾರಂಗಳೂ, ಇಂದ್ರಿಯಂಗಳೂ,ಇವುಗಳೆಲ್ಲಕ್ಕು ಈಶ್ವರನು ನೀನೊಬ್ಬನೇಸರಿ ಷಡ್ಗುಣೈಶ್ವರ್ಯಸಂಪನ್ನನಾದವಿಷ್ಣುವು, ಕಾಲವು ಪ್ರಧಾನವು, ಈಶ್ವರನೂ, ಸಹನೀನೊಬ್ಬನೇಸರಿ.ಆದುದರಿಂದಕಾಲವೆಂಬುದು ನಿಂನಲೀಲೆಯು. ॥೩೧॥ಮತ್ತು ಸತ್ವರಜಸ್ತಮೋಗುಣಮಯಳಾದ ಸೂಕ್ಷ್ಮರೂಪೆಯಾದ ಪ್ರಕೃತಿಯೆಂಬ ಶಕ್ತಿಯು, ಸರ್ವಾಧ್ಯಕ್ಷನಾದ ಅಂಶರೂಪನಾದ ಸಮಸ್ತಕ್ಷೇತ್ರಂಗಳವಿಕಾರವಂ ತಿಳಿದಿರುವ ಪುರುಷನು, ಮಹತ್ತತ್ವರೂಪನಾದ ಕಾರ್ಯವೂ, ಸಹನೀನೇಆದುದರಿಂದ ಸರ್ವಸ್ವರೂಪನೂ ನೀನೇಸರಿ.॥೩೨॥(ನಾನೇಸರ್ವರೂಪನಾದಲ್ಲಿ ಘಟಪಟಾದಿವಿಷಯಕವಾದ ಜ್ಞಾನದಿಂದ ನನ್ನಸ್ವರೂಪವಿಷಯಕವಾದ ಜ್ಞಾನವು ಏಕೆಉಂಟಾಗುವುದಿಲ್ಲ? ಉಂಟಾದಲ್ಲಿ ಎಲ್ಲರೂ ಬ್ರಹ್ಮಜ್ಞಾನಿಗಳೇ ಆಗುವರು. ಎಂದುಶಂಕಿಸಿದರೆ ನುಡಿಯುವರು ಅದೆಂತೆನೆ-)ಪ್ರಕೃತಿಗುಣವಿಕಾರಂಗಳಾದ, ಮತ್ತು ದೃಶ್ಯಸ್ವರೂಪದಿಂದಿರುವವಾದುದರಿಂದ ಗ್ರಹಿಸಲ್ಪಡುತ್ತಲಿರುವ, ವಿಷಯಂಗಳೊಡನೆ-ದ್ರಷ್ಟೃವಾದನೀನು ದೃಶ್ಯಗಳಾದ ಗುಣವಿಕಾರಗಳಾದ ಇಂದ್ರಿಯಾದಿಗಳಿಂದ ಗ್ರಹಿಸಲ್ಪಡುವನಾಗುವುದಿಲ್ಲ. (ದೃಶ್ಯಗಳಾದ ಇಂದ್ರಿಯಗಳೂ ಮನವೂ- ದೃಶ್ಯಗಳಾದ ವಿಷಯಗಳನ್ನು ಗ್ರಹಿಸುವವೇಹೊರತು ದ್ರಷ್ಟೃವಾಗಿಯೂ ಅದೃಶ್ಯನಾಗಿಯೂ ಇರುವನಿಂನನ್ನು ಅವುಗಳೊಡನೆ ಗ್ರಹಿಸಲಾರವು.] (ಆದರೆ, ಚೇತನನಾದ ಜೀವನುಚೇತನನಾದ ಪರಮಾತ್ಮನಾದ ನನ್ನಂ ತಿಳಿಯಲಿ ಎಂದಲ್ಲಿನುಡಿಯುವರು) ಜೀವಾದಿಗಳಉತ್ಪತ್ತಿಗಿಂತಲೂ ಪೂರ್ವದಲ್ಲಿಯೇ ಸ್ವಪ್ರಕಾಶರೂಪದಿಂ ಸಿದ್ಧನಾಗಿರುವನಿನ್ನಂ ದೇಹಾದಿಗಳಿಂದ ಆವೃತನಾದ ಯಾವಜೀವನು ತಿಳಿಯುವನು,]ಗುಣಗಳಿಂದ ಬಳಸಲ್ಪಟ್ಟಿರುವ , ಚೇತನನಾದಜೀವನು ಗುಣಗಳಿಂದಬಳಸಲ್ಪಡದೆ ಮುಂಚೆಯೂಈಗಲೂ ಯಾವಾಗಲೂ ಶುದ್ಧನಾಗಿ ಸ್ವಯಂಪ್ರಕಾಶನಾದ ಪರಮಾತ್ಮನಂ ತಿಳಿಯಲಾರನೆಂದು ಭಾವವು.] ಪ್ರಾಕ್ಸಿದ್ಧಂಯೆಂಬಲ್ಲಿ ಜೀವಾದ್ಯುತ್ಪತ್ತೇಃ-ಪ್ರಾಗೇವಸ್ವಪ್ರಕಾಶತಯಾಸಿದ್ಧಂ,ಎಂಬವ್ಯಾಖ್ಯಾನಕ್ಕೆ ಅಭಿಪ್ರಾಯವೇನೆಂದರೆ- ಕಾರಣೋಪಾಧಿಯು ಅನಾದಿಯಾದರೂ ಕಾರ್ಯೋಪಾಧಿಯಾದ ಅಂತಃಕರಣವು ಸಾದಿಯಾದುದರಿಂದ ಅದರಲ್ಲಿಪ್ರತಿಫಲಿಸಿದ ಶುದ್ಧಚೈತನ್ಯವೇ ಚಿದಾಭಾಸವೆನಿಸಿ ಗುಣಸಂವೃತನಾದ ಜೀವಾತ್ಮನೆನಿಸಿದ್ದರಿಂದ ಉಪಾಧಿಯಉತ್ಪತ್ತಿಯು ಜೀವಾತ್ಮನಲ್ಲಿ ಔಪಚಾರಿಕವಾಗಿ ಹೇಳಲ್ಪಡುವುದೇಹೊರತು ಜೀವಾತ್ಮನಿಗೆ ಉತ್ಪತ್ತಿಯಿಲ್ಲವು ಆದುದರಿಂದಲೇ ಉತ್ಪತ್ತ್ಯಸಂಭವಾತ್ ಎಂಬ ಬ್ರಹ್ಮಸೂತ್ರದಿಂದ ಪಾಂಚರಾತ್ರಮತಸಿದ್ಧವಾದ ಜೀವೋತ್ಪತ್ತಿಯು ನಿಷೇಧಿಸಲ್ಪಟ್ಟಿದೇ "ಅಜೋನಿತ್ಯಶ್ಶಾಶ್ವತೋಽಯಂಪುರಾಣೋನಹನ್ಯತೇಹನ್ಯಮಾನೇಶರೀರೇ" । ಎಂದುಉತ್ಪತ್ತಿವಿನಾಶಗಳು ದೇಹಕ್ಕೇಹೊರತು ದೇಹಿಯಾದ ಅತ್ಮಂಗಿಲ್ಲವೆಂದು ಗೀತೋಪನಿಷದಾದಿಗಳಲ್ಲಿ ಹೇಳಲ್ಪಟ್ಟಿದೆ. ಆದುದರಿಂದ"ಪ್ರಾಕ

ಣ್ಯೈಃ। ಕೋನ್ವಿಹಾರ್ಹತಿವಿಜ್ಞಾತುಂಪ್ರಾಕ್ಸಿದ್ಧಂಗುಣಸಂವೃತಃ ॥೩೩॥ ತಸ್ಮೈತುಭ್ಯಂಭಗವತೇವಾಸುದೇವಾ
ಯವೇಧಸೇ।ಆತ್ಮದ್ಯೋತಗುಣಚ್ಛನ್ನಮಹಿಮ್ನೇಬ್ರಹ್ಮಣೇನಮಃ ॥೩೪॥ಯಸ್ಯಾವತಾರಾಜ್ಞಾಯಂತೇಶರೀರಿಷ್ವ
ಶರೀರಿಣಃ । ತೈಸ್ತೈರತುಲ್ಯಾತಿಶಯೈರ್ವೀರ್ಯೈರ್ದೇಹಿಷ್ವಸಙ್ಗತೈಃ ॥೩೫॥ ಸಭವಾನ್ಸರ್ವಲೋಕಸ್ಯಭವಾ
ಯವಿಭವಾಯಚ।ಅವತೀರ್ಣೋಂಶಭಾಗೇನಸಾಮ್ಪ್ರತಂಪತಿರಾಶಿಷಾಮ್ ॥೩೬॥ ನಮಃಪರಮಕಲ್ಯಾಣನಮ
ಸ್ತೆವಿಶ್ವಮಙ್ಗಳ।ವಾಸುದೇವಾಯಶಾನ್ತಾಯಯದೂನಾಂಪತಯೇನಮಃ॥೩೭॥ಅನುಜಾನೀಹಿನೌಭೂಮಂ

---

ಕೋನು-ಯಾವಜೀವಾತ್ಮನುತಾನೆ, ವಿಜ್ಞಾತುಂ-ತಿಳಿಯುವುದಕ್ಕೆ, ಇಹ-ಈಪ್ರಪಂಚದಲ್ಲಿ, ಅರ್ಹತಿ-ಯೋಗ್ಯನಾಗುವನು? ॥೩೩॥ವಾಸುದೇವಾಯ-ವಸುದೇವಪುತ್ರನಾಗಿತೋರುವ, ವೇಧಸೇ-ಜಗಜ್ಜನ್ಮಾದಿಕಾರಣನಾದ, ಆತ್ಮದ್ಯೋತಗುಣಚ್ಛನ್ನಮಹಿಮ್ನೇ-ಆತ್ಮ-ನಿನ್ನಿಂದ, ದ್ಯೋತ-ಪ್ರಕಾಶಿಸುವ, ಗುಣ-ಸತ್ವಾದಿಗುಣಗಳಿಂದ, ಛನ್ನ-ಮುಚ್ಚಲ್ಪಟ್ಟ, ಮಹಿಮ್ನೇ-ಮಾಹಾತ್ಮ್ಯವುಳ್ಳ, ಬ್ರಹ್ಮಣೇ-ದೊಡ್ಡವನಾದ. ಅಥವಾವಿಭುವಾದ; ಭಗವತೇ-ಭಗವಂತನಾದ, ತಸ್ಮೈತುಭ್ಯಂ-ಆನಿನಗೆ, ನಮಃ-ನಮಸ್ಕಾರವು ॥೩೪॥ ಅಶರೀರಿಣಃ-ಶರೀರವಿಲ್ಲದ, ಯಸ್ಯ-ಯಾವನಿನ್ನ, ದೇಹೇಷ್ವಸಂಗತೈಃ-ದೇಹಗಳಲ್ಲಿಸಂಬಂಧಿಸದೇಯಿರುವ, ಅತುಲ್ಯಾತಿಶಯೈಃ-ಅತುಲ್ಯ-ಸಮಾನವಿಲ್ಲದ, ಅತಿಶಯೈಃ-ಹೆಚ್ಚಿಕೆಯುಳ್ಳ, ತೈಸ್ತೈಃ-ಆಯಾ, ವೀರ್ಯೈಃ-ಸಾಮರ್ಥ್ಯಗಳಿಂದ, ಅವತಾರಾಃ-ಆವಿರ್ಭಾವಗಳು, ಶರೀರಿಷು-ದೇಹಧಾರಿಗಳಲ್ಲಿ, ಜ್ಞಾಯಂತೇ-ತಿಳಿಯಲ್ಪಡುವವೋ, ಅಥವಾ-ದೇಹಿಗಳಲ್ಲಿ ದೇಹವಿಲ್ಲದನಿನ್ನ ಅವತಾರಗಳುದೇಹಗಳಲ್ಲಿ ಸಂಬಂಧಿಸದಅಸದೃಶವೀರ್ಯಗಳಿಂದ ತಿಳಿಯಲ್ಪಡುವವೋ॥೩೫॥ ಆಶಿಷಾಂ-ಆಶೀರ್ವಾದಗಳಿಗೆ, (ಕ್ಷೇಮಗಳಿಗೆಅಥವಾಶ್ರೇಯಸ್ಸುಗಳಿಗೇ) ಪತಿಃ-ಒಡೆಯನಾದ, ಸಭವಾನ್-ಆನೀನು,ಸರ್ವಲೋಕಸ್ಯ-ಸಮಸ್ತಲೋಕದ, ಭವಾಯ-ಉತ್ಪತ್ತಿಗೂ, ವಿಭವಾಯಚ-ಕೈವಲ್ಯಕ್ಕೋಸುಗವೂ, ಅಂಶಭಾಗೇನ-ಕಲಾಲೇಶದಿಂದ, ಸಾಂಪ್ರತಂ-ಈಗ, ಅವತೀರ್ಣಃ- ಆವಿರ್ಭವಿಸಿದವನಾಗಿರುವಿ. ಅಥವಾ-ಅಂಶಭಾಗೇನ-ಗುಣಪೂರ್ಣತ್ವದೊಡನೆಹುಟ್ಟಿರುವಿ ॥೩೬॥ಹೇಪರಮಕಲ್ಯಾಣ-ಎಲೈಉತ್ಕೃಷ್ಟಮಂಗಳಸ್ವರೂಪನೇ!ನಮಃ- ನಿನಗೆನಮಸ್ಕಾರವು, ಹೇವಿಶ್ವಮಂಗಳ- ಎಲೈಪ್ರಪಂಚಕ್ಕೆಮಂಗಳಸ್ವರೂಪನಾದವನೇ! ತೇ-ನಿನಗೋಸುಗ, ನಮಃ-ನಮಸ್ಕಾರವಾಗಲಿ, ವಾಸುದೇವಾಯ-ವಸುದೇವನಪುತ್ರನಾದ, ಶಾಂತಾಯ- ದೋಷಗಳಿಲ್ಲದೆಸಮಾಹಿತನಾದ, ಯದೂನಾಂಪತಯೇ- ಯಾದವರಿಗೊಡೆಯನಾದನಿನಗೆ, ನಮಃ-ನಮಸ್ಕಾರವು ॥೩೭॥ಭೂಮನ್- ಮಹಿಮಾಸ್ವರೂಪನೇ! ತವ-ನಿನ್ನ, ಅನುಚರಕಿಂಕರೌ- ಅನುಚರ-ಸೇವಕರಾದನಾರದಕುಬೇರರಿಗೆ, ಕಿಂಕರೌ-ನಿಯಾಮ್ಯರಾಗಿರುವ, ನೌ- ನಮ್ಮಿಬ್ಬರನ್ನೂ, ಅನುಜಾನೀಹಿ- ಹೊರಟುಹೋಗುವದಕ್ಕೆಅಪ್ಪಣೆಕೊಡು. ಭಗವತಃ-ಸರ್ವಜ್ಞನಾದ, ಋಷೇಃ- ನಾರದನ, ಅನುಗ್ರಹಾತ್-ಪ್ರಸಾದಪಡೆಸೆಯಿಂದ, ನೌ-ನಮಗೆ, ದರ್ಶನಂ_ ನಿನ್ನಸಾಕ್ಷಾತ್ಕಾರವು (ಸೋ

---

ಎಂಬ ಭಾಗವತ ಶ್ಲೋಕೋಕ್ತಪದಕ್ಕೆ ಜೀವೋಪಾಧಿಯಾದ ಅಂತಃ ಕರಣಾದಿಗಳು ಹುಟ್ಟುವದಕ್ಕಿಂತಲೂ ಮುಂಚೆಯೆಂಬ ಅಭಿಪ್ರಾಯವೇ ಹೇಳತಕ್ಕುದಾಗಿದೆ.) ॥೩೩॥ (ಆಕಾರಣದಿಂದ ಭಗವಂತನು ಇಂದ್ರಿಯಾದಿಗಳಿಗೂ ಗೋಚರನಲ್ಲದೇ ಇರುವಲ್ಲಿ ನಮಸ್ಕಾರಮಾತ್ರವಂ ಗೆಯ್ವರು.) ಎಲೈ ಶ್ರೀಕೃಷ್ಣಮೂರ್ತಿಯೇ! ಷಡ್ಗುಣೈಶ್ವರ್ಯ ಸಂಪನ್ನನಾದ, ಪ್ರಾಣಾದಿಗಳಂ ಪ್ರಕಾಶಂಗೆಯ್ವನಾದುದರಿಂದ ವಾಸುದೇವನಾದ, ಪುರುಷಸ್ವರೂಪನಾದ, ಸೃಷ್ಟ್ಯಾದಿಗಳಿಗೆ ಆದಿಕರ್ತ್ರುವಾದ, ಮತ್ತು ನಿನ್ನಿಂದ ಪ್ರಕಾಶಿಸುವ ಗುಣಂಗಳಿಂ ಮೇಘಂಗಳಿಂ ಸೂರ್ಯನಂತೆ ಮರೆಮಾಡಲ್ಪಟ್ಟಮಹಿಮೆಯುಳ್ಳ, ಪರಮಾತ್ಮಸ್ವರೂಪನಾದ, ನಿನಗೋಸುಗ ನಮಸ್ಕಾರವು. ॥೩೪॥ (ನಾನು ಈಶ್ವರನೆಂದು ಎಂತು ನಿಂಮಿಂದ ತಿಳಿಯಲ್ಪಟ್ಟೆನೆಂದರೆ ವಿಜ್ಞಾಪನಂಗೆಯ್ವರು.) ಶರೀರಂಗಳಲ್ಲಿ ಶರೀರವಿಲ್ಲದವನಾಗಿರುವ ಯಾವನಿನ್ನ ಅವತಾರಂಗಳು, ಸಮಾನಗಳೂ ಅಧಿಕಗಳೂ ಸಹ ಇಲ್ಲದೆಯಿರುವವೋ-ಮತ್ತು ದೇಹವಂಧರಿಸಿ ಇರುವವರಲ್ಲಿ ಅಸಂಭಾವಿತಗಳಾದ ಆಯಾ ಪ್ರಭಾವಂಗಳಿಂ ಸ್ಪಷ್ಟವಾಗಿ ತಿಳಿಯಲ್ಪಡುತಲಿಹವೋ. ॥೩೫॥ ಸರ್ವಾಭೀಷ್ಟಗಳನಿತ್ತು ಪಾಲನಂಗೆಯ್ವ ಆನೀನುಸಮಸ್ತಲೋಕಂಗಳ ಕ್ಷೇಮಕ್ಕೋಸುಗ ಈಗ ಅಂಶದಿಂದ ಅವತರಿಸಿದವನಾಗಿರುವಿ. ॥೩೬॥ ಎಲೈ ಪರಮಮಂಗಳರೂಪನಾದ ಕೃಷ್ಣನೇ! ನಿನಗೆ ನಮಸ್ಕಾರವು. ವಸುದೇವಪುತ್ರನಾದ ಪರಮಶಾಂತನಾದ ಸಾತ್ವತರೆಂಬ ಯಾದವರಿಗೆ ಪತಿಯಾದ ನಿನಗೆ ನಮಸ್ಕಾರವು ॥೩೭॥ ಎಲೈ ಪರಿಪೂರ್ಣನಾದ ಶ್ರೀಕೃಷ್ಣನೇ!ನಿನ್ನಸೇವೆ

ಸ್ತವಾನುಚರಕಿಙ್ಕರೌ।ದರ್ಶನಂನೌಭಗವತಋಷೇರಾಸೀದನುಗ್ರಹಾತ್॥೩೮॥ವಾಣೀಗುಣಾನುಕಥನೇಶ್ರವಣೌ
ಕಥಾಯಾಂಹಸ್ತೌಚಕರ್ಮಸುಮನಸ್ತವಪಾದಯೋರ್ನಃ।ಸ್ಮೃತ್ಯಾಂಶಿರಸ್ತವನಿವಾಸಜಗತ್ಪ್ರಣಾಮೇದೃಷ್ಟಿ
ಸ್ಸತಾಂದರ್ಶನೇಸ್ತುಭವತ್ತನೂನಾಮ್॥೩೯॥ಶ್ರೀಶುಕಃ॥ಇತ್ಥಂಸಂಕೀರ್ತಿತಸ್ತಾಭ್ಯಾಂಭಗವಾನ್ಗೋಕುಲೇ
ಶ್ವರಃ। ದಾಮ್ನಾಚೋಲೂಖಲೇಬದ್ಧಃಪ್ರಹಸನ್ನಾಹಗುಹ್ಯಕೌ॥೪೦॥ಶ್ರೀಭಗವಾನ್॥ಜ್ಞಾತಂಮಯಾಪುರೈವೈ
ತದೃಷಿಣಾಕರುಣಾತ್ಮನಾ।ಯಚ್ಛ್ರೀಮದಾಂಧಯೋರ್ವಾಗ್ಭಿರ್ವಿಭ್ರಂಶೋನುಗ್ರಹಃಕೃತಃ॥೪೧॥ಸಾಧೂನಾಂ
ಸಮಚಿತ್ತಾನಾಂಸುತರಾಂಮತ್ಕೃತಾತ್ಮನಾಮ್ । ದರ್ಶನಾಂತೋಭವೇದ್ಬನ್ಧಃಪುಂಸೋಕ್ಷ್ಣೋಸ್ಸವಿತುರ್ಯ

---

ಡುವಿಕೆಯು)ಆಸೀತ್-ಉಂಟಾಯಿತು ॥೩೮॥ ನಃ-ನಮ್ಮಾರ್ವರಿಗೂ(ಬಹುವಚನಸ್ವಾರಸ್ಯದಿಂದ ನಮ್ಮಸಂಬಂಧವುಳ್ಳವರಿಗೂ)ವಾಣೀ-ವಾಗಿಂದ್ರಿಯವು, ತವ-ನಿನ್ನ, ಗುಣಾನುಕಥನೇ-ಗುಣ-ದಯಾದಿಸುಗುಣಗಳ, ಅನುಕಥನೇ-ವರ್ಣನದಲ್ಲಿಯೂ, ಶ್ರವಣಂ-ಶ್ರೋತ್ರೇಂದ್ರಿಯವು, ಕಥಾಯಾಂ-ನಿನ್ನಚರಿತ್ರವನ್ನು ಕೇಳುವುದರಲ್ಲಿಯೂ, ಹಸ್ತೌಚ-ಕೈಗಳೂ, ಕರ್ಮಸು-ನಿನ್ನಆರಾಧನಕರ್ಮಗಳಲ್ಲಿಯೂ, ಮನಃ-ಚಿತ್ತವು, ಪಾದಯೋಃ-ನಿನ್ನಚರಣಗಳ, ಸ್ಮೃತ್ಯಾಂ-ನೆನಪಿನಲ್ಲಿಯೂ, ಶಿರಃ-ತಲೆಯು, ತವ-ನಿನಗೆ, ನಿವಾಸ-ಆಶ್ರಯವಾಗಿರುವ, ಜಗತ್-ಪ್ರಪಂಚವ, ಪ್ರಣಾಮೇ-ನಮಸ್ಕಾರದಲ್ಲಿಯೂ, ದೃಷ್ಟಿಃ-ನೋಟವು(ಚಕ್ಷುರಿಂದ್ರಿಯವು)ಭವತ್ತನೂನಾಂ-ನಿನಗೆದೇಹಗಳಾಗಿರುವ, ಸತಾಂ-ಸತ್ಪುರುಷರನ್ನು, ದರ್ಶನೇ-ನೋಡುವುದರಲ್ಲಿಯೂ, ಅಸ್ತು-ಆಗಲಿ ॥೩೯॥ (ಶುಕವಾಕ್ಯವು)ಇತ್ಥಂ-ಹೀಗೆ, ತಾಭ್ಯಾಂ-ಅವರೀರ್ವರಿಂದ, ಸಂಕೀರ್ತಿತಃ-ಸ್ತುತಿಸಲ್ಪಟ್ಟವನಾಗಿಯೂ, ದಾಮ್ನಾ-ಹಗ್ಗದಿಂದ, ಉಲೂಖಲೇ- ಒರಳಿನಲ್ಲಿ, ಬದ್ಧಶ್ಚ-ಕಟ್ಟಲ್ಪಟ್ಟವನೂಆದ, ಭಗವಾನ್-ಭಗವಂತನಾದ, ಗೋಕುಲೇಶ್ವರಃ-ಗೋಕುಲದೊಡೆಯನಾದಕೃಷ್ಣನು, ಗುಹ್ಯಕೌ-ನಳಕೂಬರಮಣಿಗ್ರೀವರಂಕುರಿತು, ಪ್ರಹಸನ್-ಹೆಚ್ಚುನಗುವವನಾಗಿ, ಆಹ-ಹೇಳಿದನು ॥೪೦॥ (ಭಗವದ್ವಚನವು) ಶ್ರೀಮದಾಂಧಯೋಃ-ಸಂಪತ್ತಿನಗರ್ವದಿಂದಕುರುಡರಾಗಿರುವ, ನಿಮ್ಮ, ವಿಭ್ರಂಶಃ-ದೇವತ್ವದಿಂದತಪ್ಪಿವೃಕ್ಷತ್ವಂಬಂದುದು, ಕರುಣಾತ್ಮನಾ-ದಯಾಶೀಲನಾದ, ಋಷಿಣಾ-ನಾರದಮುನಿಯಿಂದ, ವಾಗ್ಭಿಃ- ಶಾಪಮೋಚನವಚನಗಳಿಂದ, ಅನುಗ್ರಹಃ-ರಕ್ಷಣವಾಗಿ, ಕೃತಇತಿಯತ್-ಮಾಡಲ್ಪಟ್ಟಿತೆಂಬುವುದಾವುದುಂಟೋ, ತದೇತತ್-ಆಯಿಾವಿಷಯವು, ಪುರೈವ- ಮುಂಚೆಯೇ, ಮಯಾ-ನನ್ನಿಂದ, ಜ್ಞಾತಂ- ತಿಳಿಯಲ್ಪಟ್ಟದ್ದಾಯಿತು ॥೪೧॥ಅಕ್ಷ್ಣೋಃ-ಕಂಣುಗಳ, ಬಂಧಃ-ಕತ್ತಲೆಯನಿರೋಧವು, ಸವಿತುಃ-ಸೂರ್ಯನನ್ನು, ದರ್ಶನಾಂತಃ-ನೋಡುವುದೇಕೊನೆಯಾಗಿವುಳ್ಳದ್ದು, ಯಥಾ-ಹೇಗೆ, ಭವೇತ್-ಆಗುವುದೋ, ತಥಾ-ಹಾಗೆ, ಪುಂಸಃ-ಪುರುಷನ, ಬಂಧಃ-ಸಂಸಾರನಿರೋಧವು, ಸಮಚಿತ್ತಾನಾಂ-ಸರ್ವಸಮತ್ವಬುದ್ಧಿಯುಳ್ಳ, ಸುತರಾಂ-ಅಧಿಕವಾಗಿ, ಮತ್ಕೃತಾತ್ಮನಾಂ-ನನ್ನಲ್ಲಿಮಾಡಲ್ಪಟ್ಟಬುದ್ಧಿಯುಳ್ಳ, ಸಾ

---

ಕನಾದ ಕುಬೇರನಿಗೆ ಕಿಂಕರರಾದನಮಗೆ ಅನುಜ್ಞೆಯನಿತ್ತು ಕಳುಹಿಸುವನಾಗು. ಷಡ್ಗುಣೈಶ್ವರ್ಯ ಸಂಪನ್ನನಾದ ನಿನ್ನ ದರ್ಶನವು ನಮಗೆ ನಾರದಮುನಿಯಅನುಗ್ರಹದಿಂದ ಉಂಟಾಯಿತು.॥೩೮॥ (ಆದ್ದರಿಂದ ನಮ್ಮಲೋಕವನೈದ್ದಿದ ನಮಗೆ ಪೂರ್ವದಂತೆ ದುಷ್ಟತನವಾಗಬೇಡ, ಮತ್ತೇನೆಂದರೆ,-) ನಮ್ಮ ವಾಕ್ಕು ನಿನ್ನಚರಿತ್ರೆಯಗಾನಗೆಯ್ಯುವುದರಲ್ಲಿ ಇರಲಿ. ನಮ್ಮಶ್ರೋತ್ರಂಗಳು ನಿನ್ನಕಥಾ ಶ್ರವಣಂಗೆಯ್ಯುವುದರಲ್ಲಿ ಇರಲಿ. ನಮ್ಮಹಸ್ತಂಗಳು ನಿನ್ನ ಪೂಜೆಯಂಗೆಯ್ಯುವುದರಲ್ಲಿ ಇರಲಿ, ನಮ್ಮಮನಸ್ಸು ನಿನ್ನಪದಾಂಬುಜಧ್ಯಾನದಲ್ಲಿ ಇರಲಿ. ನಮ್ಮಶಿರಸ್ಸು ನಿನಗೆ ಆವಾಸಭೂತವಾದಜಗತ್ತನ್ನು ನಮಸ್ಕರಿಸುವುದರೊಳಗಿರಲಿ. ನಮ್ಮದೃಷ್ಟಿಗಳು ನಿನ್ನದಿವ್ಯಮೂರ್ತಿಗಳದರ್ಶನದಲ್ಲಿಯೂ ನಿನ್ನಭಕ್ತರದರ್ಶನದಲ್ಲಿಯೂ ಇರಲಿ. ॥೩೯॥ ಎಲೈಪರಿಕ್ಷಿದ್ರಾಯನೇ! ಈರೀತಿಯಲ್ಲಿ ಆನಳಕೂಬರಮಣಿಗ್ರೀವರಿಂ ಸ್ತೋತ್ರಂಗೆಯ್ಯಲ್ಪಟ್ಟ ಭಗವಂತನಾದ, ಗೋಕುಲಕ್ಕೆ ಈಶ್ವರನಾದ, ಮತ್ತು ಒರಳಿನಲ್ಲಿ ಹಗ್ಗದಿಂಕಟ್ಟಲ್ಪಟ್ಟ ಶ್ರೀಕೃಷ್ಣನು, ಮುಗುಳುನಗೆಯುಳ್ಳವನಾಗಿ, ಆಯಕ್ಷರಂಕುರಿತು ಈರೀತಿಯಿಂದನುಡಿದನು ॥೪೦॥ಐಶ್ವರ್ಯಮದದಿಂದ ಕುರುಡರಾದನಿಮಗೆ ಕರುಣಾಶಾಲಿಯಾದನಾರದಮುನಿಯಿಂ ಐಶ್ವರ್ಯ ಭ್ರಂಶವು ಅನುಗ್ರಹವಾಗಿ ಮಾಡಲ್ಪಟ್ಟಿತೆಂಬರ್ಥವು ಯಾವುದುಂಟೋ ಅದು ನನ್ನಿಂದ ಪೂರ್ವದಲ್ಲಿಯೇ ತಿಳಿಯಲ್ಪಟ್ಟಿತು.॥ ೪೧॥ ಎಲೈ ಯಕ್ಷರುಗಳಿರಾ! ಕೇಳಿರಿ ಸ್ವಧರ್ಮಾನುವರ್ತಿಗಳಾದ ಆತ್ಮಸ್ವರೂಪಜ್ಞರಾದ ಅತ್ಯಂತವಾಗಿ ನನ್ನಲ್ಲಿ ಸಮರ್ಪಿಸಲ್ಪ

ಥಾ॥೪೦॥ತದ್ಗಚ್ಛತಂಮತ್ಪರಮೌನಳಕೂಬರಸಾದನಮ್।ಸಂಜಾತೋಮಯಿಭಾವೋವಾಮೀಪ್ಸಿತಃಪರಮೋ
ಽಭವಃ॥೪೧॥ಇತ್ಯುಕ್ತೌತುಪರಿಕ್ರಮ್ಯಪ್ರಣಮ್ಯಚಪುನಃಪುನಃ।ಬದ್ಧೋಲೂಖಲಮಾಮನ್ತ್ರ್ಯಜಗ್ಮತುರ್ದಿಶ
ಮುತ್ತರಾಮ್॥೪೨॥

ಇತಿಶ್ರೀಮದ್ಭಾಗವತೇ ದಶಮಸ್ಕನ್ಧೇದಶಮೋಽಧ್ಯಾಯಃ-

---

ಘೂನಾಂ-ಸತ್ಪುರುಷರ, ದರ್ಶನಾಂತಃ-ನೋಟವೇಕಡೆಯಾಗಿವುಳ್ಳದ್ದು, ಭವೇತ್-ಆಗುವುದು ॥೪೦॥ಹೇನಳಕೂಬರ-ಎಲಾನಳಕೂಬರನೇ, ತತ್-ಆದ್ದರಿಂದ, ಮತ್ಪರಮೌ-ನಾನೇಉತ್ತಮನಾಗಿವುಳ್ಳ, ನೀವು,(ನನ್ನಭಕ್ತರಾಗಿ)ಸಾದನಂ-ಮನೆಯನ್ನುಕುರಿತು, ಗಚ್ಛತಂ-ಹೋಗಿರಿ, ವಾಂ-ನಿಮಗೆ, ಈಪ್ಸಿತಃ-ಅಪೇಕ್ಷಿತವಾದ, ಅಭವಃ-ಪುನರ್ಜನ್ಮವಿಲ್ಲದ, ಪರಮಃ-ಉತ್ಕೃಷ್ಟವಾದ, ಭಾವಃ-ಬುದ್ಧಿಯು, ಮಯಿ-ನನ್ನಲ್ಲಿ, ಸಂಜಾತಃ-ಉಂಟಾಗಿರುವುದು ॥೪೧॥(ಶುಕವಚನವು.)ಇತಿ-ಹೀಗೆ, ಉಕ್ತೌತು-ಹೇಳಲ್ಪಟ್ಟವರಾದರೋ, ಬದ್ಧೋಲೂಖಲಂ-ಕಟ್ಟಲ್ಪಟ್ಟಒರಳುಳ್ಳಕೃಷ್ಣನನ್ನುಕುರಿತು, ಪರಿಕ್ರಮ್ಯ-ಪ್ರದಕ್ಷಿಣಮಾಡಿ,"ಪುನಃಪುನಃ-ಮರಳಿಮರಳಿಯೂ, ಪ್ರಣಮ್ಯ-ಪೊಡಮಟ್ಟು, ಆಮಂತ್ರ್ಯಚ-ಅಪ್ಪಣೆಯನ್ನೂಬೇಡಿಕೊಂಡು, ಉತ್ತರಾಂದಿಶಂ-ಬಡಕಲಕಡೆಯನ್ನುಕುರಿತು, ಜಗ್ಮತುಃ-ತೆರಳಿದರು.॥೪೨॥

ಇತಿಶ್ರೀಮದ್ಭಾಗವತಪ್ರತಿಶಬ್ದಾರ್ಥಬೋಧಿನ್ಯಾಂ ದಶಮಸ್ಕಂಧೆ
ದಶಮೋಽಧ್ಯಾಯಃ-

---

ಟ್ಟ ಚಿತ್ತವುಳ್ಳವರಾದ ನನ್ನಭಕ್ತರ ದರ್ಶನಮಾತ್ರದಿಂದ ಪುರುಷನಿಗೆ ಸಂಸಾರಬಂಧವು ಸೂರ್ಯನದರ್ಶನದಿಂದ ನೇತ್ರಂಗಳಿಗೆ ಅಂಧಕಾರವು ಪರಿಹರಿಸಲ್ಪಡುವಂತೆ ಪರಿಹರಿಸಲ್ಪಡುವುದು ॥೪೦॥ಎಲೈ, ನಳಕೂಬರಮಣಿಗ್ರೀವರೇ! ಅದರಿಂದ ನೀವುನನ್ನಲ್ಲಿ ಪರಮಭಕ್ತಿಯುಳ್ಳವರಾಗಿ ನಿಮ್ಮ ಸ್ಥಾನವನೆಯ್ದುವರಾಗಿ, ಸಂಸಾರನಿವರ್ತಕವಾದ ನಿಮ್ಮಿಂದ ಅಪೇಕ್ಷಿಸಲ್ಪಟ್ಟ ನನ್ನವಿಷಯವಾದ ಭಾವವು ಉಂಟಾದವರಾಗಿ ಇಹುದು.॥೪೧॥ ಎಲೈ, ಪರೀಕ್ಷಿದ್ರಾಯನೇ! ಈರೀತಿಯಲ್ಲಿ ಭಗವಂತನಿಂದ ಆಜ್ಞಾಪಿಸಲ್ಪಟ್ಟ ಆ ನಳಕೂಬರ ಮಣಿಗ್ರೀವರೀರ್ವರೂ ವರಳಿನಲ್ಲಿ ಕಟ್ಟಲ್ಪಟ್ಟಿರುವ ಕೃಷ್ಣನಿಗೆ ಬಾರಿಬಾರಿಗೂ ಪ್ರದಕ್ಷಿಣಂಗೆಯ್ದು ನಮಸ್ಕಾರಮಂಮಾಡಿ ಆಶ್ರೀಕೃಷ್ಣನ ಆಜ್ಞೆಯಂ ಪರಿಗ್ರಹಿಸಿ ಬಡಕಲದೆಸೆಯಂಕುರಿತು ತೆರಳಿದರು. ॥೪೨॥ ... ... ... ... ... ǂ

ಇಂತು ಶುಕಮುನಿಯು ಪರೀಕ್ಷಿದ್ರಾಯನಿಗೆ ನಿರೂಪಿಸಿದನೆಂದು ಸೂತಪೌರಾಣಿಕನು ನೈಮಿಶಾ
ರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಹೇಳಿದನೆಂಬಲ್ಲಿಗೆ- ಶ್ರೀಮನ್ಮಹೀ
ಶೂರಪುರವರಾಧೀಶ ಶ್ರೀಚಾಮರಾಜತನುಜಶ್ರೀಮತ್ಕೃಷ್ಣರಾಜ ವಿರ
ಚಿತಮಪ್ಪ, ಶ್ರೀಭಾಗವತದ "ಶ್ರೀಕೃಷ್ಣರಾಜವಾಣೀ
ವಿಲಾಸವು" ಎಂಬಕರ್ಣಾಟಭಾಷಾವ್ಯಾಖ್ಯಾ
ನದಲ್ಲಿ ದಶಮಸ್ಕಂಧದೊಳು ದಶಮಾ
ಧ್ಯಾಯವು ಸಂಪೂರ್ಣವಾದುದು.

ಮಂಗಳಮಸ್ತು.

———ಃ*ಃ———

ಶ್ರೀಬಾದರಾಯಣಿಃ॥ ಗೋಪಾನಂದಾದಯಶ್ಶ್ರುತ್ವಾದ್ರುಮಯೋಃಪತತೋರವಮ್।ತತ್ರಾಜಗ್ಮುಃಕುರುಶ್ರೇಷ್ಠನಿರ್ಘಾತಭಯಶಙ್ಕಿತಾಃ॥೧॥ಭೂಮ್ಯಾಂನಿಪತಿತೌತತ್ರದದೃಶುರ್ಯಮಳಾರ್ಜುನೌ। ಬಭ್ರಮುಸ್ತದವಿಜ್ಞಾಯಲಕ್ಷ್ಯಂಪತನಕಾರಣಮ್॥೨॥ಉಲೂಖಲಂವಿಕರ್ಷನ್ತಂದಾಮ್ನಾಬದ್ಧಂಚಬಾಲಕಮ್।ಕಸ್ಯೇದಂಕುತಆಶ್ಚರ್ಯಮುತ್ಪಾತಇತಿಕಾತರಾಃ॥೩॥ಬಾಲಾಊಚುರನೇನೇತಿತಿರಶ್ಚೀನಮುಲೂಖಲಮ್। ವಿಕರ್ಷತಾಮಧ್ಯಗೇನನಿಹತೌಯಮಳಾರ್ಜುನೌ।ವೃಕ್ಷಾಭ್ಯಾಂನಿರ್ಗತೌದಿವ್ಯೌಪುರುಷಾವಪ್ಯಚಕ್ಷ್ಮಹಿ ॥೪॥ನತೇತದುಕ್ತಂಜಗೃಹುರ್ನ

(ಶುಕವಾಕ್ಯವು.) ಕುರುಶ್ರೇಷ್ಠ-ಪರೀಕ್ಷಿತನೇ, ನಂದಾದಯಃ-ನಂದನುಮೊದಲಾದ, ಗೋಪಾಃ-ಗೊಲ್ಲರು, ಪತತೋಃ-ಬೀಳುತ್ತಿರುವ, ದ್ರುಮಯೋಃ-ಅರ್ಜುನವೃಕ್ಷಗಳ, ರವಂ-ಶಬ್ದವನ್ನು, ಶ್ರುತ್ವಾ-ಕೇಳಿ, ನಿರ್ಘಾತಭಯಶಂಕಿತಾಃ-ಸಿಡಿಲಿನಹೆದರಿಕೆಯಿಂದಸಂಶಯಗೊಂಡವರಾಗಿ, ತತ್ರ-ಅಲ್ಲಿಗೆ, ಆಜಗ್ಮುಃ-ಬಂದರು ॥೧॥ತತ್ರ-ಅಲ್ಲಿ, ಭೂಮ್ಯಾಂ- ನೆಲದಲ್ಲಿ, ನಿಪತಿತೌ-ಉರುಳಿಬಿದ್ದಿರುವ, ಯಮಳಾರ್ಜುನೌ- ಅವಳಿಮತ್ತೀಮರಗಳನ್ನು, ದದೃಶುಃ-ಕಂಡರು. ಪತನಕಾರಣಂ- ಬೀಳುವುದಕ್ಕೆನಿಮಿತ್ತವಾದ, ಲಕ್ಷ್ಯಂ-ಆವಿಷಯವನ್ನು, ಅವಿಜ್ಞಾಯ-ತಿಳಿಯದೆ, ಬಭ್ರಮುಃ-ಭ್ರಾಂತಿಗೊಂಡರು. ॥೨॥ ದಾಮ್ನಾ-ಹಗ್ಗದಿಂದ, ಒದ್ಧಂ, ಕಟ್ಟಲ್ಪಟ್ಟಿರುವ, ಉಲೂಖಲಂ-ಒರಳನ್ನು, ವಿಕರ್ಷಂತಂ-ಎಳೆಯುತಲಿರುವ, ಬಾಲಕಂಚ-ಹುಡುಗನಾದಕೃಷ್ಣನನ್ನೂ, ದೃಷ್ಟ್ವಾ-ನೋಡಿ, ಇದಮಾಶ್ಚರ್ಯಂ-ಈಯಾಶ್ಚರ್ಯದಕೆಲಸವು, ಕಸ್ಯ-ಯಾರದ್ದೋ? ಕುತಃ-ಯಾವಕಾರಣದಿಂದಾದ್ದು? ಉತ್ಪಾತಇತಿ-ಇದೇನೋದುರ್ಲಕ್ಷಣವೆಂದು, ಕಾತರಾಃ-ಹೆದರಿದವರಾದರು. ॥೩॥ ತಿರಶ್ಚೀನಂ-ಅಡ್ಡಲಾಗಿರುವ, ಉಲೂಖಲಂ-ಒರಳನ್ನು, ವಿಕರ್ಷತಾ-ಎಳೆಯುತಲಿರುವ, ಮಧ್ಯಗೇನ-ಮಧ್ಯಭಾಗವನ್ನಿಹೋದ, ಅನೇನ-ಈಕೃಷ್ಣನಿಂದ, ಯಮಳಾರ್ಜುನೌ-ಅವಳಿಮತ್ತೀಮರಗಳು, ನಿಹತೌ-ಮುರಿಯಲ್ಪಟ್ಟವು. ವೃಕ್ಷಾಭ್ಯಾಂ-ಮರಗಳವೆಸೆಯಿಂದ, ನಿರ್ಗತೌ-ಹೊರಹೊರಟುಬಂದ, ದಿವ್ಯೌ- ಬೆಳಗುತಲಿರುವ, ಪುರುಷಾವಪಿ- ಗಂಡುಸರೀರ್ವರನ್ನೂ, ಅಚಕ್ಷ್ಮಹಿ-ಹೇಳುವೆವು. (ಕಂಡೆವು) ಇತಿ-ಹೀಗೆ, ಬಾಲಾಃ-ಹುಡುಗರು, ಊಚುಃ-ಹೇಳಿದರು ॥೪॥ಕೇಚಿತ್-ಕೆಲವರು, ತಸ್ಯ

---

ಶ್ರೀಧರೀಯಶ್ಲೋಕವು ॥ ಏಕಾದಶೇಸಮಾಗತ್ಯಬೃಂದಾವನಮುಪಾರ್ಭಕೈಃ । ವತ್ಸಾನ್ಪಾಲಯತಾನೇನಹತೌವತ್ಸಬಕಾಸುರೌ ॥

ಟೀಕು॥ ಹನ್ನೊಂದನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ಗೋಪಾಲಬಾಲಕರೊಡಗೂಡಿ ಬೃಂದಾವನವನೈದ್ದಿ ಕರುಗಳಂ ಪಾಲಿಸುತಲಿರುವನಾಗಿ ವತ್ಸಬಕರೆಂಬ ಈರ್ವರಸುರರು ಸಂಹರಿಸಿದನೆಂಬರ್ಥವು ಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸುವನದೆಂತೆನೆ,-

ಎಲೈ ಪರೀಕ್ಷಿದ್ರಾಯನೇ! ಅನಂತರದಲ್ಲಿ ನಂದಗೋಪಮೊದಲಾದ ಗೋಪಾಲಕರು ಬೀಳುತಲಿರುವ ಮತ್ತೀಮರಗಳ ಶಬ್ದಮಂಕೇಳಿ ಸಿಡಿಲೆರಗಿತ್ತೇನೋ ಎಂಬೀಭಯದಿಂ ಶಂಕಿತರಾಗಿ ಆಶ್ರೀಕೃಷ್ಣನಿರುವ ಸ್ಥಳಕ್ಕೆಬಂದರು.॥೧॥ ಆಭೂಮಿಯಲ್ಲಿಬಿದ್ದಿರುವ ಅವಳಿಯ ಮತ್ತಿಯಮರಂಗಳಂಕಂಡು ಆವೃಕ್ಷಂಗಳಪತನಕ್ಕೆ ಕಾರಣವು ಪ್ರತ್ಯಕ್ಷವಾಗಿ ಮುಂದುಗಡೆಯಲ್ಲಿಯೇ ಕಾಣಲ್ಪಡುತಲಿದ್ದರೂ ಅದನರಿಯದೆ ಭ್ರಾಂತಿಯನೈದ್ದಿದರು. ॥ ೨ ॥ಮತ್ತು ಆ ನಂದಾದಿಗಳು, ಸೊಂಟದಲ್ಲಿಹಗ್ಗದಿಂಕಟ್ಟಲ್ಪಟ್ಟ ಒರಳಂ ಸೆಳೆಯುತಲಿರುವ ಬಾಲಕನಾದಕೃಷ್ಣನು ಕಂಡರು.ಇವನೇ ಈವೃಕ್ಷಪತನಕ್ಕೆ ನಿಮಿತ್ತವೆಂಬರ್ಥವನ್ನು ಅರಿಯದೆ “ಈವೃಕ್ಷಭಂಗವು ಯಾವರಾಕ್ಷಸಾದಿಗಳಕೆಲಸವೋ, ಏನುಕಾರಣದಿಂದುಂಟಾಯಿತೋ, ಇದೇನಾಶ್ಚರ್ಯವು”? ಎಂದು ಭ್ರಾಂತಿಯನೈದ್ದಿ ಇದೇನೋದೊಡ್ಡ ಉತ್ಪಾತವೆನುತಲೂ ಭಯವನೈದ್ದಿದರು. ॥೩॥ (ಆಗ ಈಕೃಷ್ಣನಬಳಿಯಲ್ಲಿ ಆಡುತಲಿರುವ ಗೊಲ್ಲರ ಹುಡುಗರು ನಂದಾದಿಗಳಂಕುರಿತು ಈರೀತಿಯಿಂ ನುಡಿದರದೆಂತೆನೆ-) ಎಲೈ, ನಂದಾದಿಗಳಿರಾ! ಅಡ್ಡಲಾಗಿರುವ ಒರಳನ್ನು ಸೆಳೆಯುತ್ತ ಮರಗಳನಡುವೆ ತೂರಿಯಿರುವ ಈಕೃಷ್ಣನಿಂದಲೇ ಈ ಅವಳಿಯಮರಗಳು ಕೆಡಹಲ್ಪಟ್ಟವು. ‡ ಇಷ್ಟುಮಾತ್ರವೇ ಅಲ್ಲವು. ಮತ್ತು ಈವೃಕ್ಷಂಗಳದೆಸೆಯಿಂದ ಹೊರಕ್ಕೆಹೊರಟ ದಿವ್ಯಪುರುಷರೀರ್ವರನ್ನೂ ನಾವುಕಂಡೆವು. ॥೪॥ ಎಂದು ಬಾಲಕರಿಂಪೇಳಲ್ಪಟ್ಟವಚನಮಂ ಕೇಳಿ ನಂದಾದಿಗಳಲ್ಲಿ ಕೆಲವರು ಆಬಾಲಕನಾದ ಕೃಷ್ಣನಿಂದ ಆಮಹಾ

ಘಟೇತೇತಿತಸ್ಯತತ್। ಬಾಲಸ್ಯೋತ್ಪಾಟನಂತರ್ಯೋಃಕೇಚಿತ್ಸಂದಿಗ್ಧಚೇತಸಃ ॥೫॥ ಉಲೂಖಲಂವಿಕರ್ಷಂತಂದಾ
ಮ್ನಾಬದ್ಧಂಸ್ವಮಾತ್ಮಜಂ। ವಿಲೋಕ್ಯನಂದಃಪ್ರಹಸನ್ಬಂಧನಾದ್ವಿಮುಮೋಚಹ ॥೬॥ಗೋಪೀಭಿಃಸ್ತೋಭಿ
ತೋನೃತ್ಯಂಭಗವಾನ್ಬಾಲವತ್ಕ್ವಚಿತ್ । ಉದ್ಗಾಯತಿಕ್ವಚಿನ್ಮುಗ್ಧಸ್ತದ್ವಶೋದಾರುಯಂತ್ರವತ್ ॥೭॥
ಬಿಭರ್ತಿಕ್ವಚಿದಾಜ್ಞಪ್ತಃಪೀಠಕೋನ್ಮಾನದಾರುಕಾನ್ । ಬಾಹುಕ್ಷೇಪಂಚಕುರುತೇಸ್ವಾನಾಂಚಪ್ರೀತಿಮಾವ

---

ಬಾಲಸ್ಯ-ಆಹುಡುಗನಿಗೆ, ತರ್ವೋಃ-ಗಿಡಗಳನ್ನು, ಉತ್ಪಾಟನಂ-ಕೀಳುವಿಕೆಯೆಂಬ, ತತ್-ಆಕೆಲಸವು, ನಘಟೇತ-ಕೂಡಲಾರದು, ಇತಿ-ಹೀಗೆ, ಸಂದಿಗ್ಧಚೇತಸಃ- ಸಂಶಯಗೊಂಡಮನಸ್ಸುಳ್ಳವರಾದ್ದರಿಂದಲೇ, ತೇ-ಅವರು, ತದುಕ್ತಂ-ಆಹುಡುಗರಿಂದಹೇಳಲ್ಪಟ್ಟದ್ದನ್ನು, ನಜಗೃಹುಃ-ಗ್ರಹಿಸಲಿಲ್ಲವು. ॥೫॥ ನಂದಃ-ನಂದಗೋಪನು, ಉಲೂಖಲಂ-ಒರಳನ್ನು, ವಿಕರ್ಷಂತಂ-ಎಳೆಯುತಲಿರುವ, ದಾಮ್ನಾಬದ್ಧಂಚ-ಹಗ್ಗದಿಂದಕಟ್ಟಲ್ಪಟ್ಟೂ ಇರುವ, ಸ್ವಮಾತ್ಮಜಂ-ತನ್ನವನಾದಮಗನನ್ನು, ವಿಲೋಕ್ಯ-ನೋಡಿ, ಪ್ರಹಸನ್-ಗಟ್ಟಿಯಾಗಿನಗುತಲಿರುವನಾಗಿ, ಬಂಧನಾತ್-ಕಟ್ಟಿನದೆಸೆಯಿಂದ, ವಿಮುಮೋಚಹ-ಬಿಡಿಸಿದನಂತೆ ॥೬॥ಗೋಪೀಭಿಃ- ಗೊಲ್ಲತಿಯರಿಂದ, ಸ್ತೋಭಿತಃ-ಉತ್ಸಾಹಗೊಳಿಸಲ್ಪಟ್ಟು, ಭಗವಾನ್-ಕೃಷ್ಣನು, ಕ್ವಚಿತ್-ಒಂದುಕಡೆಯಲ್ಲಿ, ಬಾಲವತ್-ಹುಡುಗನಂತೆ, ನೃತ್ಯನ್-ಕುಣಿಯುತಲಿರುವನಾಗಿ, ತದ್ವಶಃ-ತತ್-ಆಗೋಪಿಯರಿಗೆ, ವಶಃ-ಅಧೀನನಾಗಿ, ದಾರುಯಂತ್ರವತ್- ಮರದಗೊಂಬೆಯಹಾಗೆ, ಮುಗ್ಧಃ-ಮೂಢನಾಗಿ, ಕ್ವಚಿತ್-ಒಂದುಕಡೆ, ಉದ್ಗಾಯತಿ-ಗಟ್ಟಿಯಾಗಿಹಾಡುತ್ತಿರುವನು ॥೭॥ಕ್ವಚಿತ್-ಒಂದುಕಡೆ, ಆಜ್ಞಪ್ತಃ-ನಿಯಮಿಸಲ್ಪಟ್ಟವನಾಗಿ, ಪೀಠಕೋನ್ಮಾನದಾರುಕಾನ್-ಪೀಠಕ-ಗದ್ದುಗೆಯು, ಉನ್ಮಾನ-ಅಳೆಯುವಪಾತ್ರಗಳ, ದಾರುಕಾನ್- ಮರಗಳನ್ನು, ಬಿಭರ್ತಿ-ಹೊರುತಿರುವನು. ಸ್ವಾನಾಂ-ತನ್ನವರಿಗೆ, ಪ್ರೀತಿಂ-ಪ್ರಿಯವನ್ನು, ಆವಹನ್-ಮಾಡುವವನಾಗಿ, ಬಾಹುಕ್ಷೇಪಂಚ-ಕೈ

---

ವೃಕ್ಷಗಳು ಮುರಿದು ಬೀಳುವಿಕೆ ಘಟಿಸಲಾರದೆಂಬ ಊಹೆಯಿಂದ ಆಹುಡುಗರಮಾತಿನಲ್ಲಿ ನಂಬಿಕೆಇಡಲಿಲ್ಲವು.ಮತ್ತು ಕೆಲವರು ಬಾಲಕರವಚನದಲ್ಲಿ ಸಂದೇಹಯುಕ್ತವಾದ ಮನಸ್ಸುಳ್ಳವರಾದರು. ॥೫॥ ಬಳಿಕ ನಂದಗೋಪನು ನಡುವಿನಲ್ಲಿ. ಹಗ್ಗದಿಂಕಟ್ಟದ ವರಳನ್ನು ಸೆಳೆಯುತ್ತಿರುವ ತನ್ನಮಗನಾದ ಕೃಷ್ಣನಂಕಂಡು, ನಗುತ ಅವನಂ ಹಗ್ಗದಕಟ್ಟಿನಿಂದ ಬಿಡಿಸಿಧನು. ॥೬॥ ಶ್ರೀಕೃಷ್ಣನುತನ್ನಂ ಭಗವಂತನೆಂದು ತಿಳಿದುಕೊಳ್ಳುವರೆಂಬ ಶಂಕೆಯಿಂ ಅತ್ಯಂತಬಾಲವ್ಯಾಪಾರವನ್ನೇ ನಟಿಸುವನವೆಂತೆನೆ-) ಅನಂತರದಲ್ಲಿ ಭಗವಂತನಾದ ಶ್ರೀಕೃಷ್ಣನು ಒಂದುಸಮಯದಲ್ಲಿಗೋಪಸ್ತ್ರೀಯರಿಂದ ಹಸ್ತತಾಳಂಗಳಿಂ ಪ್ರೇರಿಸಲ್ಪಟ್ಟವನಾಗಿ ಬಾಲಕನಂತೆ ನರ್ತನಂಗೆಯ್ದನು. ಮತ್ತು ಸುಂದರನಾದ ಕೃಷ್ಣನು ಒಂದುಕಡೆಯಲ್ಲಿ ಸೂತ್ರದಗೊಂಬೆಯಂತೆ ಗೋಪಸ್ತ್ರೀಯರಿಗೆ ವಶನಾಗಿ ಹೆಚ್ಚುಧ್ವನಿಯಿಂದ ಹಾಡಿದನು. ॥೭॥ ಮತ್ತು ಕೃಷ್ಣನು ಒಂದುಸಮಯದಲ್ಲಿ ಗೋಪಸ್ತ್ರೀಯರಿಂದ ಇದಂತೆಗದುಕೊಂಡು ಬರುವನಾಗೆಂದು ಆಜ್ಞಾಪಿಸಲ್ಪಟ್ಟವನಾಗಿ ಅದಂತರಲು ಸಾಮರ್ಥ್ಯವಿಲ್ಲದವನಂತೆ ಪೀಠ ಪಾತ್ರ ಪಾದುಕೆಗಳಂ ಪ್ರಯತ್ನದಿಂದ ಹೊತ್ತುತರುವನು. ಮತ್ತೊಂದುಸಮಯದಲ್ಲಿ ತನ್ನವರಾದ ಗೋಪಸ್ತ್ರೀಯರಿಗೆ ಪ್ರೀತಿಯನುಂಟುಮಾಡು



ಹರ್ಷ ‖೮‖ದರ್ಶಯಂಸ್ತದ್ವಿದಾಂಲೋಕೆಹ್ಯತ್ಮನೋಭೃತ್ಯವಶ್ಯತಾಮ್। ವ್ರಜಸ್ಯೋವಾಹವೈಹರ್ಷಂಭಗನ್ಬಾಲಚೇಷ್ಟಿತೈಃ‖೯‖ಗೋಪೀನಾಮಂತಿಕೆಕ್ರೀಡನ್ಭಗವಾನ್ಲೋಕಭಾವನಃ।ಕ್ರೀಣೀಧ್ವಂಭೋಫಲಾನೀತಿವಚಶ್ಶ್ರುತ್ವಾತುಸತ್ವರಃ ‖೧೦‖ ಕರಾಭ್ಯಾಂಧಾನ್ಯಮಾದಾಯಯಯೌಸರ್ವಫಲಪ್ರದಃ। ಫಲವತ್ಯೇಹಿಧಾನ್ಯಾನಿಮಯಾನಿತಾನಿಭೂರಿಶಃ‖೧೧‖ಗೃಹ್ಣೀಷ್ವತವಮಾನೇನಮಾನಯತ್ವಂಫಲಾನಿಮೆ।ಫಲವಿಕ್ರಯಿಣೀತಸ್ಯವಚಶ್ಶ್ರುತ್ವಾಮಹಾತ್ಮನಃ ‖೧೨‖ಆಯಾಂತಮರವಿಂದಾಕ್ಷಂಕರಿಪೋತಮಿವಾಗತಮ್। ಪ್ರೇಕ್ಷಮಾಣಾಮುಹುಃಫುಲ್ಲೈರ್ನ

---

ಯಾಡಿಸುವಿಕೆಯನ್ನೂ, ಅಥವಾ ತೋಳನೆಗೆಪುವಿಕೆಯನ್ನೂ, ಕುರುತೇ- ಮಾಡುತ್ತಿರುವನು ‖೮‖ತದ್ವಿದಾಂ-ತತ್-ಆಭಗವಲ್ಲೀಲಾತತ್ವವನ್ನು, ವಿದಾಂ-ತಿಳಿದಜ್ಞಾನಿಗಳಿಗೆ, ಲೋಕೇ-ಪ್ರಪಂಚದೊಳು, ಆತ್ಮನಃ-ತನ್ನ, ಭೃತ್ಯವಶ್ಯತಾಂ-ಭಕ್ತಾಧೀನತೆಯನ್ನು, ದರ್ಶಯನ್-ತೋರಿಸುತಲಿರುವ, ಭಗವಾನ್-ಭಗವಂತನು, ಬಾಲಚೇಷ್ಟಿತೈಃ-ಮಕ್ಕಳಾಟಿಗೆಗಳಿಂದ, ವೈ-ಪ್ರಸಿದ್ಧವಾಗಿ, ವ್ರಜಸ್ಯ-ಗೋಕುಲಕ್ಕೆ, ಹರ್ಷಂ-ಸಂತೋಷವನ್ನು, ಉವಾಹ-ವಹಿಸಿದ್ದನು ‖೯‖ಗೋಪೀನಾಂ-ಗೊಲ್ಲತಿಯರ, ಅಂತಿಕೇ-ಬಳಿಯಲ್ಲಿ, ಕ್ರೀಡನ್-ಆಡುತಲಿರುವ, ಭಗವಾನ್-ಭಗವಂತನಾದಕೃಷ್ಣನು, ಲೋಕಭಾವನಃ-ಲೋಕವನ್ನು ಅನುವರ್ತಿಸುತಲಿರುವನಾದ್ದರಿಂದ, ಭೋ-ಜನಗಳಿರಾ, ಫಲಾನಿ-ಹಂಣುಗಳನ್ನು, ಕ್ರೀಣೀಧ್ವಂ-ಕೊಂಡುಕೊಳ್ಳಿರಿ, ಇತಿವಚಃ-ಇಂತೆಂಬಮಾತನ್ನು, ಶ್ರುತ್ವಾತು-ಕೇಳಿಆದರೋ, ಸತ್ವರಃ-ವೇಗದಿಂಕೂಡಿದವನಾಗಿ ‖೧೦‖ ಸರ್ವಪ್ರದಃ-ಎಲ್ಲರಿಗೂಬೇಕಾದಫಲಗಳನ್ನುಕೊಡುವಕೃಷ್ಣನು, ಕರಾಭ್ಯಾಂ- ಕೈಗಳಿಂದ, ಧಾನ್ಯಂ-ಕಾಳನ್ನು, ಆದಾಯ-ತೆಗದುಕೊಂಡು, ಯಯೌ-ಹೋದನು. ಫಲವತಿ-ಎಲೆಹಂಣುಳ್ಳವಳೇ! ಏಹಿ-ಬಾ! ಮಯಾ-ನನ್ನಿಂದ, ಭೂರಿಶಃ-ಬಹುವಾಗಿ, ಧಾನ್ಯಾನಿ-ಕಾಳುಗಳು, ಆನೀತಾನಿ-ತರಲ್ಪಟ್ಟಿವೆ. ‖೧೧‖ತವ-ನಿನ್ನ, ಮಾನೇನ- ಅಳೆಯುವಪಡಿಯಿಂದ, ಗೃಹ್ಣೀಷ್ವ-ತಕೊ. ತ್ವಂ-ನೀನು, ಮೇ-ನಗೆ, ಫಲಾನಿ-ಹಂಣುಗಳನ್ನು, ಮಾನಯ-ಅಳೆದುಕೊಡು. ಫಲವಿಕ್ರಯಿಣೀ-ಹಂಣುಮಾರುವವಳು, ಮಹಾತ್ಮನಃ-ಮಹಾಮನಸ್ಸುಳ್ಳ, ತಸ್ಯ-ಆಕೃಷ್ಣನ, ವಚಃ-ಮಾತನ್ನು, ಶ್ರುತ್ವಾ-ಕೇಳಿ, ‖೧೨‖ಆಯಾಂತಂ-ಬರುತಲಿರುವ, ಅರವಿಂದಾಕ್ಷಂ-ಅರವಿಂದಂ-ಹೆಬ್ಬಲಿಯಹೂವಿನಂತಿರುವ, ಅಕ್ಷಂ-ಕಂಗಳುಳ್ಳ, ಅಚ್ಯುತಂ-ಕೃಷ್ಣನನ್ನು, ಆಗತಂಕರಿಪೋತಮಿವ- ಬರುತಲಿರುವ ಮರಿಯಾನೆಯನ್ನಹೇಗೋಹಾಗೆ,ತದಾ-ಆಗ, ಫುಲ್ಲೈಃ-ಅರಳಿದ, ನಯನೈಃ-ಕಂಗಳಿಂದ, ಮುಹುಃ-ಬಾರಿಬಾರಿಗೂ, ಪ್ರೇಕ್ಷಮಾಣಾ-

---

ಪನಾಗಿ ತೋಳುಗಳನಾಡಿಸಿದನು ‖೮‖ ಬಗವಂತನಾದ ಶ್ರೀಕೃಷ್ಣನುಲೋಕದಲ್ಲಿ ಭಗವಂತನ ಮಹಿಮೆಯುಂಬಲ್ಲವರಿಗೆ ತನ್ನ ಭಕ್ತಪರಾಧೀನತ್ವವಂ ತೋರಿಸುವನಾಗಿ ನಾನಾಪ್ರಕಾರಂಗಳಾದ ಬಾಲಕ್ರೀಡೆಗಳಿಂ ಗೋಕುಲಕ್ಕೆ ಅತ್ಯಂತ ಸಂತೋಷವನ್ನು ಉಂಟುಮಾಡಿದನು. ‖೯‖ ಸರ್ವಪ್ರಾಣಿಗಳಂ ಹುಟ್ಟಿಸುವ ಭಗವಂತನೇ ಈರೀತಿಯಲ್ಲಿ ಗೋಪಸ್ತ್ರೀಯರ ಹತ್ತಿರದೊಳಗೆ ಹುಡುಗಾಟವನ್ನು ಆಡುತ್ತಿರುವನಾಗಿ ಅಷ್ಟರಲ್ಲಿಯೇ "ಎಲ್ರೈ, ಹಂಣುಗಳಂಕೊಳ್ಳುವರಾಗಿ," ಎಂದು ಬೀದಿಯಲ್ಲಿ ಹಣು ಗಳಂ ಮಾರುವವಳ ಧ್ವನಿಯಂಕೇಳಿ ಅತಿತ್ವರೆಯಿಂದ ‖೧೦‖ ತನ್ನ ಬಗಸೆಯಿಂದ ಧಾನ್ಯವಂತೆಗದುಕೊಂಡುಹೋಗಿ ತಾನೇಸರ್ವರಿಗೂ ಸರ್ವಫಲಪ್ರದನಾದರೂ "ಎಲೆ, ಹಂಣುಮಾರುವವಳೆ! ಇಲ್ಲಿಬಾ; ನನ್ನಿಂದ ಬಹಳವಾಗಿ ತರಲ್ಪಟ್ಟ ಧಾನ್ಯಂಗಳಂ ‖ ೧೧ ‖ ನಿನ್ನ ಸೊಲಿಗೆಯಿಂದ ಅಳದುಕೊಂಡು ಆಸೊಲಿಗೆಯಿಂದಲೇ ನನಗೆ ಹಂಣುಗಳನ್ನು ಅಳೆದುಕೊಡು " ಎಂದು ನುಡಿದನು. ಅನಂತರದಲ್ಲಿ ಹಂಣುಮಾರುವವಳು



ಹುಡುಗನಾಗಿಯೂ ಮಹಾತ್ಮನಾಗಿಯೂ ಇರುವ ಕೃಷ್ಣನ ವಾಕ್ಯವಂಕೇಳಿ‖೧೨‖ ಅಲ್ಲಿನಿಂತವಳಾಗಿ ಮರಿಯಾನೆಯಂತೆ ನಡೆದುಬರುತಲಿರುವ ಅರವಿಂದಲೋಚನನಾದ ಶ್ರೀಕೃಷ್ಣನಂ ಆಗ ಬಾರಿಬಾರಿಗೂ ತನ್ನ ಅಗಲವಾದ

ಯೆನ್ನೈರಚ್ಯುತಂತದಾ॥೧೩॥ಫಲವಿಕ್ರಯಿಣೀತಸ್ಯಚ್ಯುತಧಾನ್ಯಂಕರದ್ವಯಮ್।ಫಲೈರಪೂರಯದ್ರತ್ನೈಃ
ಫಲಭಾಂಡಮಪೂರಿತಮ್ ॥೧೪॥ ಫಲಾನಿಮಾನಿಸರ್ವಾಣಿಗೋಪಿಭ್ಯೋಭ್ಯದದಾತ್ಪ್ರಭುಃ। ವಯಸ್ಯೈರ್ವ್ರಜ
ವೀಥ್ಯಾಂಸಕ್ರೀಡಂತ್ಸರ್ವಫಲಪ್ರದಃ॥೧೫॥ಉತ್ತಿಷ್ಠಂತೌ ಪ್ರಸ್ಖಲಂತೌ ಚರಂತೌ ರಾಮಕೇಶವೌ।ಪದಾಭ್ಯಾಂಗಂ
ತುಂಶಕ್ತವಂತೌ ಕಥಂಚಿತ್ತದ್ವ್ರಜಾಂಗಣೆ ॥೧೬॥ ಸರಿತ್ತೀರಗತಂಕೃಷ್ಣಂಭಗ್ನಾರ್ಜುನಮಥಾಹ್ವಯತ್।
ರಾಮಂಚರೋಹಿಣೀದೇವಿಚರಂತೌಬಾಲಕೈರ್ಭೃಶಮ್॥೧೭॥ ನೋಪಯಾತಾಂಯದಾಹೂತೌಲೀಲಾಸಂಗೇನ

---

ಚನ್ನಾಗಿನೋಡುತಲಿರುವ॥೧೩॥ಫಲವಿಕ್ರಯಿಣೀ-ಹಂಣುಮಾರುವವಳು, ಚ್ಯುತಧಾನ್ಯಂ-ಜಾರಿಬೀಳುವಕಾಳುಳ್ಳ, ತಸ್ಯ-ಆಕೃಷ್ಣನ, ಕರ
ದ್ವಯಂ-ಎರಡುಕೈಗಳನ್ನು, ಫಲೈಃ-ಹಂಣುಗಳಿಂದ,ಅಪೂರಯತ್-ತುಂಬಿದಳು ಫಲಭಾಂಡಂ-ಹಂಣಿನಹೆಡಿಗೆಯು,ರತ್ನೈಃ-ಮಣಿಗಳಿಂ
ದ,ಅಪೂರಿತಂ-ತುಂಬಲ್ಪಟ್ಟದ್ದಾಯಿತು॥೧೪॥ಪ್ರಭುಃ-ಸಮರ್ಥನಾದ, ಸಃ-ಆಶ್ರೀಕೃಷ್ಣನು,ವಯಸ್ಯೈಃ-ಸರಿಪ್ರಾಯದಹುಡಗರೊಂ
ದಿಗೆ, ವ್ರಜವೀಥ್ಯಾಂ-ಗೋಕುಲದಬೀದಿಯಲ್ಲಿ,ಕ್ರೀಡನ್-ಆಡುತಲಿರುವನಾಗಿ, ಸರ್ವಫಲಪ್ರದಃ-ಸಕಲರಿಗೂ ಇಷ್ಟಾರ್ಥಗಳನ್ನು ಕೊಡು
ವವನಾದ್ದರಿಂದ,ಇಮಾನಿಸರ್ವಾಣಿಫಲಾನಿ-ಈಹಂಣುಗಳೆಲ್ಲವನ್ನೂ, ಗೋಪೀಭ್ಯಃ-ಗೊಲ್ಲತಿಯರಿಗೆ,ಅಭ್ಯದದಾತ್-ಸರ್ವತ್ರಕೊಟ್ಟನು॥
ಉತ್ತಿಷ್ಠಂತೌ-ಏಳುತಲಿರುವರಾಗಿಯೂ,ಪ್ರಸ್ಖಲಂತೌ-ಜಾರಿಬೀಳುತಲಿರುವರಾಗಿಯೂ, ಚಲಂತೌ-ತಿರುಗುತಲಿರುವ,ರಾಮಕೇಶವೌ-
ಬಲಭದ್ರಕೃಷ್ಣರು, ವ್ರಜಾಂಗಣೇ-ಗೋಕುಲದಅಂಗಳದಲ್ಲಿ,ಕಥಂಚಿತ್-ಪ್ರಯಾಸದಿಂದ,ಅಥವಾ-ಹೇಗೋ,ಪದಾಭ್ಯಾಂ-ಕಾಲುಗಳಿಂದ
ಗೆನ್ತುಂ-ನಡೆಯುವದಕ್ಕೆ, ಶಕ್ತವಂತೌ-ಸಮರ್ಥರಾದರು ॥೧೬॥ಅಥ-ಆಮೇಲೆ,ರೋಹಿಣೀದೇವಿ-ವಸುದೇವನಹೆಂಡತಿಯು, ಸರಿತ್ತೀರ
ಗತಂ-ಸರಿತ್-ಯಮುನಾನದಿಯ, ತೀರ-ತಡಿಯನ್ನು, ಗತಂ-ಸೇರಿದ, ಭಗ್ನಾರ್ಜುನಂ-ಮುರಿಯಲ್ಪಟ್ಟಮತ್ತಿಯಮರಗಳುಳ್ಳ, ಕೃಷ್ಣಂ-
ಕೃಷ್ಣನನ್ನೂ, ರಾಮಂಚ-ಬಲಭದ್ರನನ್ನೂ, ಬಾಲಕೈಃ-ಹುಡುಗರೊಡನೆ, ಭೃಶಂ-ಅತಿಶಯವಾಗಿ, ಚರಂತೌ-ಆಡುತಲಿರುವರನ್ನೂ,
ಆಹ್ವಯತ್-ಕರೆದಳು॥೧೭॥ಯದಾ-ಯಾವಾಗ, ಆಹೂತಾವಪಿ-ಕರೆಯಲ್ಪಟ್ಟವರಾದರೂ, ಪುತ್ರಕೌ-ಕುಮಾರರು, ಲೀಲಾಸಂಗೇನ-ಆ
ಟಗಳಸಂಬಂಧದಿಂದ, ನೋಪಯಾತಾಂ-ಬಂದವರಾಗಲಿಲ್ಲವೋ, ತದಾ-ಆವಾಗ, ಪುತ್ರವತ್ಸಲಾ-ಮಕ್ಕಳಲ್ಲಿಪ್ರೇಮವುಳ್ಳ, ರೋಹಿ

---

ಕಂಣುಗಳಿಂದ ನೋಡುತ್ತ ॥೧೩॥ ಸುರಿಯಲ್ಪಟ್ಟಧಾನ್ಯವುಳ್ಳ ಶ್ರೀಕೃಷ್ಣನಬಗಸೆಯಲ್ಲಿ ಹಂಣುಗಳಂತುಂಬಿದಳು.
(ಆಹಾ) ಆಕ್ಷಣದಲ್ಲಿಯೇ ಅವಳ ಹಂಣುಗಳಹೆಡಿಗೆಯು ಅನರ್ಘ್ಯಗಳಾದರತ್ನಗಳಿಂದತುಂಬಲ್ಪಟ್ಟದ್ದಾಯಿತು.॥೧೪॥
ಅನಂತರದಲ್ಲಿ ಸರ್ವಫಲಪ್ರದನಾಗಿಯೂ ಪ್ರಭುವಾಗಿಯೂ ಇರುವಶ್ರೀಕೃಷ್ಣನು ಸರಿಪ್ರಾಯದ ಹುಡುಗರೊಡನೆ
ಆಗೋಕುಲದಬೀದಿಯಲ್ಲಿ ಹಾಡುತ್ತ ಆಹಂಣುಗಳನ್ನೆಲ್ಲವಂ ಗೋಪಸ್ತ್ರೀಯರಿಗೆ ಕೊಟ್ಟವನಾದನೂ. ॥೧೫॥ ‡
ಏಳುತಲೂ ಜಾರಿಬೀಳುತಲೂ ನಡೆಯುತಲೂ ಇರುವ ರಾಮಕೃಷ್ಣರು ಗೋಕುಲದನಡುವೆ ಪ್ರಯಾಸದಿಂದ
ಧಾರಾಳವಾಗಿ ಓಡಿಯಾಡುವುದಕೆ ಶಕ್ತಿಯುಳ್ಳವರಾದರು. ॥೧೬॥ ಆಮೇಲೆ ಮತ್ತಿಯಮರಗಳಂಮುರಿದು ನದೀತೀ
ರವನೆಯ್ದಿರುವ ಶ್ರೀಕೃಷ್ಣನಂ ರಾಮನಂ ಆನೇಕಬಾಲಕರೊಡನೆ ಅತ್ಯಂತವಾಗಿ ಆಡಿಕೊಳ್ಳುತ್ತಿರುವ ಅವರೀರ್ವ
ರಂ ರೋಹಿಣಿದೇವಿಯು ನೋಡಿ, ಎಲೈಬಾಲಕರೇ! ಮನೆಗೆಬಂನ್ನಿರೆಂದು ಕರದಳು. ॥೧೭॥ಪುತ್ರರಾದ ರಾಮಕೃಷ್ಣ





ಪುತ್ರಕೌ|ಯಶೋದಾಂಪ್ರೇಷಯಾಮಾಸರೋಹಿಣೀಪುತ್ರವತ್ಸಲಾ||೧೮|| ಕ್ರೀಡಂತಂಸಾಸುತಂಬಾಲೈರತಿವೇಗಂ ಸಹಾಗ್ರಜಮ್| ಯಶೋದಾಚಾಹ್ವಯದ್ವೀಕ್ಷ್ಯಪುತ್ರಸ್ನೇಹಸ್ನುತಸ್ತನಿ ||೧೯|| ಕೃಷ್ಣಕೃಷ್ಣಾರವಿಂದಾಕ್ಷತಾತಏಹಿಸ್ತನಂಪಿಬ| ಅಲಂವಿಹಾರೈಃಕ್ಷುಚ್ಛ್ರಾಂತಸ್ತದ್ಭವಾನ್ಭೋಕ್ತುಮರ್ಹತಿ ||೨೦|| ಹೇರಾಮಾಗಚ್ಛತಾತಾಶುಸಾನುಜಃಕುಲನಂದನ| ಪ್ರಾತರೇವಕೃತಾಹಾರಃಕ್ರೀಡಾಶ್ರಾಂತೋಸಿಪುತ್ರಕ||೨೧||ಪ್ರತೀಕ್ಷತೇತ್ವಂದಾಶಾರ್ಹಭೋಕ್ಷ್ಯಮಾಣೋವ್ರಜಾಧಿಪಃ|ಏಹ್ಯಾವಯೋಃಪ್ರಿಯಂದೇಹಿಸ್ವಗೃಹಾನ್ಯಾತಬಾಲಕಾಃ||೨೨|| ಧೂಳಿಧೂಸರಿತಾಂಗಸ್ತ್ವಂತಾತಮಜ್ಜನಮಾವಹ|ತಿಂತ್ರಿಣೀಫಲಸಂಯುಕ್ತಂಸ್ನಾನೀಯಂತೈಲಸಂಯುತ

---

ಣೀ-ರೋಹಿಣೀದೇವಿಯು, ಯಶೋದಾಂ-ಯಶೋದಾದೇವಿಯನ್ನು, ಪ್ರೇಷಯಾಮಾಸ-ಕಳುಹಿಸಿದಳು||೧೮||ಸಾಯಶೋದಾಚ-ಆಯಶೋದಾದೇವಿಯೂ, ಬಾಲೈಃ-ಹುಡುಗರೊಡನೆ, ಕ್ರೀಡಂತಂ-ಆಡುತಲಿರುವ, ಅತಿವೇಗಂ-ಅಧಿಕವೇಗವುಳ್ಳ, ಸಹಾಗ್ರಜಂ-ಅಣ್ಣನೊಡನೆಕೂಡಿದ, ಸುತಂ-ಮಗನಾದಕೃಷ್ಣನನ್ನು, ವೀಕ್ಷ್ಯ-ನೋಡಿ, ಪುತ್ರಸ್ನೇಹಸ್ನುತಸ್ತನಿ-ಪುತ್ರ-ಮಗನಲ್ಲಿ, ಸ್ನೇಹ-ಪ್ರೇಮದಿಂದ, ಸ್ನುತ-ಹಾಲಂಜನಿಯುವ, ಸ್ತನೀ-ಮೊಲೆಯುಳ್ಳವಳಾಗಿ, ಆಹ್ವಯತ್-ಕರೆದಳು||೧೯||ಅರವಿಂದಾಕ್ಷ-ಮಹೋತ್ಪಲಪುಷ್ಪದಂತಿರುವಕಣ್ಣುಗಳುಳ್ಳವನೇ, ತಾತ-ಅಪ್ಪ, ಕೃಷ್ಣಕೃಷ್ಣ-ಕೃಷ್ಣನೇಕೃಷ್ಣನೇ ಏಹಿ-ಬಾ, ಸ್ತನಂಪಿಬ-ಮೊಲೆಯುಣ್ಣು, ವಿಹಾರೈಃ-ಆಟಗಳಿಂದ, ಅಲಂ-ಸಾಕು, ಯತ್-ಯಾವಕಾರಣದಿಂದ, ಕ್ಷುತ್ಶ್ರಾಂತಃ-ಹಸಿವಿನಿಂದಬಳಲಿದವನಾಗಿರುವೆಯೋ, ತತ್-ಆಕಾರಣದಿಂದ, ಭವಾನ್-ನೀನು, ಭೋಕ್ತುಂ-ಊಟಮಾಡುವುದಕ್ಕೆ, ಅರ್ಹತಿ-ಯೋಗ್ಯನಾಗುವಿ||೨೦||ಹೇರಾಮ-ಎಲೈರಾಮನೇ, ಕುಲನಂದನ-ವಂಶವನ್ನುಸಂತೋಷಗೊಳಿಸುವವನೇ,ತಾತ-ಅಪ್ಪಾ,ಸಾನುಜಃ-ತಮ್ಮನೊಡನೆಕೂಡಿದವನಾಗಿ, ಆಶು-ಬೇಗನೆ, ಆಗಚ್ಛ-ಬಾ; ಹೇಪುತ್ರಕ-ಎಲೈಮಗನೆ, ಪ್ರಾತರೇವ- ಬೆಳಿಗ್ಗೆವೇ, ಕೃತಾಹಾರಃ-ಮಾಡಲ್ಪಟ್ಟಭೋಜನವುಳ್ಳವನಾದ್ದರಿಂದ, ಕ್ರೀಡಾಶ್ರಾಂತಃ-ಆಟಗಳಿಂದಬಳಲಿದವನು ಅಸಿ-ಆಗಿರುವಿ ||೨೧|| ಹೇದಾಶಾರ್ಹ-ಎಲೈದಾಶಾರ್ಹರೆಂಬಯಾದವರಕುಲದಲ್ಲಿಹುಟ್ಟಿದವನೇ, ಭೋಕ್ಷ್ಯಮಾಣಃ-ಊಟಮಾಡಲ್ಪೋಗುತ್ತಿರುವ, ವ್ರಜಾಧಿಪಃ- ಗೋಕುಲವೊಡೆಯನಾದನಂದನು, ತ್ವಾಂ-ನಿನ್ನನ್ನು, ಪ್ರತೀಕ್ಷತೇ-ನಿರೀಕ್ಷಿಸುತ್ತಿರುವನು, ಏಹಿ-ಬಾ. ಆವಯೋಃ-ನಮ್ಮಿರ್ವರಿಗೂ, ಪ್ರಿಯಂ-ಇಷ್ಟವನ್ನು,ದೇಹಿ-ಕೊಡು, ಹೇಬಾಲಕಾಃ-ಎಲೈಹುಡುಗರಿರಾ, ಸ್ವಗೃಹಾನ್-ನಿಮ್ಮಮನೆಗಳನ್ನುಕುರಿತು,ಯಾತ-ಹೋಗಿರಿ||೨೨||ತಾತ-ಅಪ್ಪಾ, ಧೂಳಿಧೂಸರಿತಾಂಗಃ-ಧೂಳಿ-ಮಣ್ಣುಪುಡಿಯಿಂದ, ಧೂಸರಿತ-ಮಾಸಿದ, ಅಂಗಃ-ಮೈಯುಳ್ಳ, ತ್ವಂ-ನೀನು, ತಿಂತ್ರಿಣೀಫಲಸಂಯುಕ್ತಂ-ಹುಣಸೇಹಣ್ಣಿನಿಂದಕೂಡಿದ, ಅಥವಾ ನೆಲ್ಲಿಯಹಣ್ಣುಗಳಿಂದಕೂಡಿದ, ತೈಲಸಂಯುತಂ-ಎಣ್ಣೆಯಿಂದಕೂಡಿದ, ಸ್ನಾನೀಯಂ- ಸ್ನಾನಯೋಗ್ಯವಾದ, ಮಜ್ಜನಂ- ಅಭ್ಯಂಜನವನ್ನು, ಆವಹ-ಮಾಡಿಕೊ; ಅಥವಾ-ಮಜ್ಜನ

---

ರೀವರ್ಗರೂ ಕರೆಯಲ್ಪಟ್ಟವರಾದರೂ ಯಾವಾಗ ಬಹಳವಾದ ಆಟದಕೆಲಸದಿಂದ ಬಾರದೆಯಿದ್ದರೋ ಆಗ ಪುತ್ರರಲ್ಲಿ ವಾತ್ಸಲ್ಯವುಳ್ಳ ರೋಹಿಣೀದೇವಿಯು ಪುತ್ರರಂಕರೆಯಲೋಸುಗ ಯಶೋದಾದೇವಿಯಂ ಕಳುಹಿದಳು.||೧೮|| ಆಮೇಲೆ ಯಶೋದೆಯು ಹುಡುಗರೊಡನೆಯೂ ಅಣ್ಣನಾದ ಬಲರಾಮನೊಡನೆಯೂ ಕೂಡಿ ಅತ್ಯಂತವಾಗಿ ಆಡುತಲಿರುವ ಶ್ರೀಕೃಷ್ಣನಂ ನೋಡಿ ಪುತ್ರಸ್ನೇಹದಿಂ ಸೋರುವಹಾಲಿನಮೊಲೆಯುಳ್ಳವಳಾಗಿ ಕರೆದಳು. ||೧೯||ಅದೆಂತೆನೆ- ಕಮಲಲೋಚನನಾದ ಮಗುವಾದ ಕೃಷ್ಣನೇ! ಎಲೊ, ಅಪ್ಪಾ! ಬೇಗಬಂದು ಮೊಲೆಯುಣ್ಣುವನಾಗು; ನೀನುಹಸಿವಿನಿಂದ ಬಳಲಿರುವೆಯಾದುದರಿಂದ ಆಟಗಳಂಬಿಟ್ಟುಬಂದು ಊಟವಂಮಾಡುವನಾಗು; ||೨೦|| ಕುಲಕ್ಕೆ ಸಂತೋಷಕನಾದ ಪುತ್ರನಾದ ಎಲೈ, ರಾಮನೇ! ಪ್ರಾತಃಕಾಲದಲ್ಲಿಯೇ ಭೋಜನಂಗೆಯ್ದವನಾಗಿ ಕ್ರೀಡೆಗಳಲ್ಲಿ ಆಸಕ್ತನಾಗಿ ಬಳಲಿರುವೆಯಾದುದರಿಂದ ಶೀಘ್ರದಿಂ ತಮ್ಮನಾದ ಕೃಷ್ಣನೊಡಗೂಡಿ ಮನೆಗೆ ಬರುವನಾಗು.||೨೧|| ಎಲೈ, ಯದುಕುಲೋತ್ಪನ್ನನಾದ ರಾಮನೇ! ಗೋಕುಲಕ್ಕೊಡೆಯನಾದನಂದಗೋಪನು ಭೋಜನಂಗೆಯ್ಯಲಿಚ್ಛೆಯುಳ್ಳವನಾಗಿ ನಿನ್ನಂ ಕಾದುಕೊಂಡಿರುವನಾದುದರಿಂದ ನೀನೂ ಬಂದು ಭೋಜನಂಗೆಯ್ದು ನಮ್ಮಿರ್ವರಿಗೂ ಸಂತೋಷವನುಂಟುಮಾಡುವನಾಗು; ಎಲೈ, ಗೋಪಾಲಬಾಲಕರಿರಾ! ನೀವೂ ನಿಂಮ ಮನೆಗಳ ನೆಯ್ದುವರಾಗಿರಿ;||೨೨ (ಎಂದು ಯಶೋದಾದೇವಿಯು ರಾಮನಂಕುರಿತು ಹೇಳಿ, ಮತ್ತು ಕೃಷ್ಣನಂಕುರಿತು ಹೇಳುವಳದಂತೆನೆ-) ಎಲೈ, ಕೃಷ್ಣಾ! ಅಪ್ಪಾ! ನೀನು ಧೂಳಿನಿಂದ ಮಲಿನವಾದ ಮೈಯುಳ್ಳವನಾಗಿರುವೆ, ಆದುದರಿಂದ ಮಜ್ಜನವಂಮಾಡು.- ಹುಣಸೆಯಚಿಗರು, ಹುಣಸೆಯಗೊಜ್ಜು, ನೆಲ್ಲಿಯಹಿಟ್ಟು,ಸಿಗೆ, ಎಳ್ಳೆಂಣೆ, ಮುಂತಾದ್ದು ಸಿದ್ಧವಾಗಿದೆ. ಮಂಗಳಸ್ನಾ

ಮ್ ‖೨೩‖ ಕಲ್ಪಯಿತ್ವಾಪ್ರತೀಕ್ಷೇಹಂಚಿರಂಚಂಚಲಚೇಷ್ಟಿತಃ । ಜನ್ಮರ್ಕ್ಷಂತೇದ್ಯಭವತಿವಿಪ್ರೇಭ್ಯೋದೇಹಿಗಾಶ್ಶುಚಿಃ‖೨೪‖ಪಶ್ಯಪಶ್ಯವಯಸ್ಯಾಂಸ್ತೇಮಾತೃಮೃಷ್ಟಾನ್ಸ್ವಲಂಕೃತಾನ್। ತ್ವಂಚಸ್ನಾತಃಕೃತಾಹಾರೋವಿಹರಸ್ವಸ್ವಲಂಕೃತಃ ‖೨೫‖ಇತ್ಥಂಯಶೋದಾತಮಶೇಷನಾಥಂಮತ್ವಾಸುತಂಸ್ನೇಹನಿಬದ್ಧಧೀರ್ನೃಪ।ಹಸ್ತೇಗೃಹೀತ್ವಾಸಹರಾಮಮಚ್ಯುತಂನೀತ್ವಾಸ್ವವಾಟಂಕೃತವತ್ಯಥೋದಯಮ್‖೨೬‖ಶ್ರೀಶುಕಃ ಗೋಪವೃದ್ಧಾಮಹೋತ್ಪಾತಾನನುಭೂಯಬೃಹದ್ವನೇ । ನಂದಾದಯಸ್ಸಮಾಗಮ್ಯವ್ರಜಕಾರ್ಯಮಮಂತ್ರಯನ್‖೨೭‖

---

ವನ್ನು ಮಾಡಿಕೋ,ಸೀಗೆಯಕಾಯಿನೀರುಎಂಣೆಗಳನ್ನು‖೨೩‖ಕಲ್ಪಯಿತ್ವಾ-ಸಿದ್ಧಪಡಿಸಿಕೊಂಡು, ಅಹಂ-ನಾನು, ಚಿರಂ-ಬಹಳಹೊತ್ತು, ಪ್ರತೀಕ್ಷೇ-ಕಾದಿರುವೆನು. ಹೇಚಂಚಲಚೇಷ್ಟಿತ-ಎಲೈಚಪಲವಾದಆಟಗಳುಳ್ಳವನೇ, ಅದ್ಯ-ಈದಿನದಲ್ಲಿ, ತೇ-ನಿನಗೆ, ಜನ್ಮರ್ಕ್ಷಂ-ಹುಟ್ಟಿದನಕ್ಷತ್ರವಾದರೋಹಿಣಿಯು, ಭವತಿ-ಆಗುತ್ತಿದೆ. ಶುಚಿಃಸನ್-ಪರಿಶುದ್ಧನಾಗಿ, ವಿಪ್ರೇಭ್ಯಃ-ಬ್ರಾಹ್ಮಣರಿಗೆ, ಗಾಃ-ಗೋವುಗಳನ್ನು, ದೇಹಿ-ಕೊಡು‖೨೪‖ಮಾತೃಮೃಷ್ಟಾನ್-ಮಾತೃ-ತಾಯಿಯರಿಂದ,ಮೃಷ್ಟಾನ್-ಚನ್ನಾಗಿಪ್ರೋಕ್ಷಿಸಲ್ಪಟ್ಟ, ಸ್ವಲಂಕೃತಾನ್-ಚನ್ನಾಗಿಸಿಂಗರಿಸಲ್ಪಟ್ಟ, ತೇ-ನಿನ್ನ, ವಯಸ್ಯಾನ್-ಸಂಗಾತಿಗಳನ್ನು, ಪಶ್ಯಪಶ್ಯ-ನೋಡನೋಡು; ತ್ವಂಚ-ನೀನೂಕೂಡ, ಸ್ನಾತಃ-ಮಿಂದವನಾಗಿ, ಕೃತಾಹಾರಃ-ಮಾಡಲ್ಪಟ್ಟಭೋಜನವುಳ್ಳವನಾಗಿ, ಸ್ವಲಂಕೃತಃ-ಚನ್ನಾಗಿಸಿಂಗರಿಸಲ್ಪಟ್ಟವನಾಗಿ, ವಿಹರಸ್ವ-ಆಡಿಕೋ‖೨೫‖ಹೇನೃಪ-ಎಲೈಪರೀಕ್ಷಿದ್ರಾಯನೇ, ಯಶೋದಾ-ಯಶೋದಾದೇವಿಯು, ಅಶೇಷನಾಥಂ-ಎಲ್ಲರಿಗೂ ಒಡೆಯನಾದ, ತಂ-ಆಕೃಷ್ಣನನ್ನು, ಸುತಂಮತ್ವಾ-ತನ್ನಮಗನನ್ನಾಗಿತಿಳಿದುಕೊಂಡು, ಇತ್ಥಂ-ಹೀಗೆ, ಸ್ನೇಹನಿಬದ್ಧಧೀಃ- ಪ್ರೇಮದಿಂದಕಟ್ಟಲ್ಪಟ್ಟಬುದ್ಧಿಯುಳ್ಳವಳಾಗಿ, ಸಹರಾಮಂ-ರಾಮನೊಡನೆಸಹಿತನಾದ, ಅಚ್ಯುತಂ-ಕೃಷ್ಣನನ್ನು, ಹಸ್ತೇ-ಕೈಯಲ್ಲಿ, ಗೃಹೀತ್ವಾ-ಹಿಡಿದುಕೊಂಡು, ಸ್ವವಾಟಂ-ತನ್ನಮನೆಯನ್ನು, ನೀತ್ವಾ-ಸೇರಿಸಿ, ಅಥ-ಆಮೇಲೆ, ಉದಯಂ-ಮಾಂಗಳಿಕಮಜ್ಜನಾದಿಕವನ್ನು, ಕೃತವತೀ- ಮಾಡಿದವಳಾದಳು ‖೨೬‖ಗೋಪವೃದ್ಧಾಃ-ಗೊಲ್ಲರಲ್ಲಿಮುದುಕರಾದ, ನಂದಾದಯಃ-ನಂದನುಮೊದಲಾದವರು, ಬೃಹದ್ವನೇ-ಗೋಕುಲದದೊಡ್ಡಕಾಡಿನಲ್ಲಿ, ಮಹೋತ್ಪಾತಾನ್- ದೊಡ್ಡಅನಿಷ್ಟಸೂಚನೆಗಳನ್ನು, (ಪೂತನಾಶಕಟಯಮಳಾರ್ಜುನಾದಿಭಂಜನಗಳನ್ನು)ಅನುಭೂಯ-ಪ್ರತ್ಯಕ್ಷವಾಗಿನೋಡಿ, ಸಮಾಗಮ್ಯ-ಬಂದುಸೇರಿ, ವ್ರಜಕಾರ್ಯಂ-ಗೋಕುಲದಕೆಲಸವನ್ನು,ಅಮಂತ್ರಯನ್-ಆಲೋಚಿಸಿದರು‖೨೭‖ ತತ್ರ-ಅವರೊಳಗೆ, ಜ್ಞಾನವಯೋಧಿಕಃ-ಜ್ಞಾನ-ತಿಳುವಳಿಕೆಯಿಂದಲೂ, ವಯಃ-ಪ್ರಾಯದಿಂದಲೂ, ಅಧಿಕಃ- ದೊಡ್ಡವನಾದ್ದರಿಂದಲೇ, ದೇಶಕಾಲಾರ್ಥತತ್ವಜ್ಞಃ-ದೇಶ-ಸ್ಥಳದ, ಕಾಲ-ಹೊತ್ತಿನ, ಅರ್ಥ-ಪ್ರಯೋಜನದ, ತತ್ವ-ಯಥಾರ್ಥವನ್ನು, ಜ್ಞಃ-ಬಲ್ಲವ

---

ನವಂಮಾಡು‖೨೩‖ ಈದಿವಸದಲ್ಲಿ ನಿನ್ನ ಜನ್ಮನಕ್ಷತ್ರವೂ ಕೂಡಿಯಿರುವುದರಿಂದ ನೀನುಮಡಿಯುಟ್ಟು ಬ್ರಾಹ್ಮಣರಿಗೆ ಗೋದಾನಗಳಂ ಮಾಡುವನಾಗು. ‖೨೪‖ ಅವರವರ ತಾಯಿಯರಿಂದ ಸ್ನಾನಾಲಂಕಾರ ಭೋಜನ ಗಳಂ ಗೆಯ್ಯಲ್ಪಟ್ಟಿರುವ ನಿನ್ನಸಂಗಾತಿಗಳಾದ ಗೋಪಾಲಬಾಲಕರಂ ನೋಡು; ನೀನು ಅದೇರೀತಿಯಲ್ಲಿ ಸ್ನಾನವಂಮಾಡಿ ಚನ್ನಾಗಿ ಅಲಂಕರಿಸಲ್ಪಟ್ಟು ಭೋಜನವಂಮಾಡಿ ಬಳಿಕಸುಖದಿಂದ ಆಡಿಕೊಳ್ಳುವನಾಗು. ‖೨೫‖ ಎಲೈ, ಪರಿಕ್ಷಿದ್ರಾಯನೇ! ಅನಂತರದಲ್ಲಿ ಯಶೋದಾದೇವಿಯು ಈ ರೀತಿಯಿಂದ ಸ್ನೇಹವೆಂಬಹಗ್ಗದಿಂ ಬಿಗಿಯಲ್ಪಟ್ಟ ಬುದ್ಧಿಯುಳ್ಳವರಾಗಿ ಸಮಸ್ತ ಜಗತ್ತಿಗೂ ಸ್ವಾಮಿಯಾದ ಕೃಷ್ಣನಂ ತನ್ನ ಪುತ್ರನೆಂದು ತಿಳಿದು, ಆರಾಮಕೃಷ್ಣರೀರ್ವರಂ ಕೈಗಳೆಂಪಿಡಿದು ತನ್ನ ಗೃಹವನೆಯ್ದಿಸಿ ಅನಂತರದಲ್ಲಿ ಶುಭಕರ್ಮವನಾಚರಿಸಿದಳು.‖೨೬‖ ಹೀಗಿರಲು ಒಂದು ಸಮಯದಲ್ಲಿ ಗೋಪಾಲಕರೊಳಗೆ ವೃದ್ಧರಾದ ನಂದಾದಿಗಳುತಮಗೆ ವಾಸಸ್ಥಾನವಾದ ಬೃಹದ್ವನದಲ್ಲಿ ಮಹೋತ್ಪಾತಂಗಳನ್ನು ಅನುಭವಿಸಿ ಎಲ್ಲರೂ ಒಂದುಕಡೆಯಲ್ಲಿಕೂಡಿ ಗೋಕುಲಕ್ಕೆಹಿತವಾದ ಕಾರ್ಯವನ್ನು ಆಲೋಚಿಸಿದರು ‖೨೭‖ ಆಗನಂದಾದಿಗಳಲ್ಲಿ ಬುದ್ಧಿಯಿಂದಲೂ ವಯಸ್ಸಿನಿಂದಲೂ ದೊಡ್ಡವನಾಗಿಯೂ ದೇಶಕಾಲಾರ್ಥಗಳ ಸ್ವರೂಪವನ್ನು



ತತ್ರೋಪನಂದನಾಮಾಹ ಗೋಪೋ ಜ್ಞಾನವಯೋಽಧಿಕಃ ॥ ದೇಶಕಾಲಾರ್ಥತತ್ತ್ವಜ್ಞಃ ಪ್ರಿಯಕೃದ್ರಾಮಕೃಷ್ಣ
ಯೋಃ ॥ ೨೮ ॥ ಉತ್ಥಾತವ್ಯಮಿತೋಽಸ್ಮಾಭಿರ್ಗೋಕುಲಸ್ಯ ಹಿತೈಷಿಭಿಃ । ಆಯಾಂತ್ಯತ್ರ ಮಹೋತ್ಪಾತಾ ವ್ರ
ಜಾನಾಂ ನಾಶಹೇತವಃ ॥ ೨೯ ॥ ಮುಕ್ತಃ ಕಥಂಚಿದ್ರಾಕ್ಷಸ್ಯಾ ಬಾಲಘ್ನ್ಯಾ ಬಾಲಕೋಽಪ್ಯಸೌ । ಹರೇರನುಗ್ರಹಾ
ನ್ನೂನಮನಶ್ಚೋಪರಿ ನಾಪತತ್ ॥ ೩೦ ॥ ಚಕ್ರವಾತೇನ ನೀತೋಽಯಂ ದೈತ್ಯೇನ ವಿಪದಂ ವಿಯತ್ । ಶಿಲಾಯಾಂ ಪತಿತ
ಸ್ತತ್ರ ಪರಿತ್ರಾತಃ ಸುರೇಶ್ವರೈಃ ॥ ೩೧ ॥ ಯನ್ನ ಮ್ರಿಯೇತ ದ್ರುಮಯೋರಂತರಂ ಪ್ರಾಪ್ಯ ಬಾಲಕಃ । ಅಸಾವ

ನಾದ, ಉಪನಂದನಾಮಾ-ಉಪನಂದನೆಂಬ ಹೆಸರುಳ್ಳ, ಗೋಪಃ-ಗೊಲ್ಲನು, ರಾಮಕೃಷ್ಣಯೋಃ-ಬಲರಾಮಕೇಶವರಿಗೆ, ಪ್ರಿಯಕೃತ್-ಹಿತವನ್ನು ಮಾಡುವವನಾಗಿ, ಆಹ-ಹೇಳಿದನು ॥ ೨೮ ॥ ಗೋಕುಲಸ್ಯ-ಗೊಲ್ಲರಹಳ್ಳಿಗೆ, ಹಿತೈಷಿಭಿಃ-ಹಿತವನ್ನು ಬಯಸುತ್ತಿರುವ, ಅಸ್ಮಾಭಿಃ-ನಮ್ಮಿಂದ, ಇತಃ-ಈಸ್ಥಲವದೆಸೆಯಿಂದ, ಉತ್ಥಾತವ್ಯಂ-ಎದ್ದು ಹೋಗತಕ್ಕದ್ದು. ಅತ್ರ-ಈಸ್ಥಲದಲ್ಲಿ, ವ್ರಜಾನಾಂ-ಗೊಲ್ಲರ ಹಳ್ಳಿಗಳಿಗೆ, ನಾಶಹೇತವಃ-ಕ್ಷಯನಿಮಿತ್ತಗಳಾದ, ಮಹೋತ್ಪಾತಾಃ-ದೊಡ್ಡ ದುರ್ಲಕ್ಷಣಗಳು, ಆಯಾಂತಿ-ಬರುತಲಿವೆ ॥ ೨೯ ॥ ಅಸೌ ಬಾಲಕೋಽಪಿ-ಈಹುಡುಗನಾದ ಕೃಷ್ಣನು ಕೂಡ, ಬಾಲಘ್ನ್ಯಾಃ-ಹುಡುಗರನ್ನು ಕೊಲ್ಲುವ, ರಾಕ್ಷಸ್ಯಾ-ರಕ್ಕಸಿಯಿಂದ, ಕಥಂಚಿತ್-ಹೇಗೋ ಮುಕ್ತಃ-ಬಿಡಲ್ಪಟ್ಟನು. ಹರೇಃ-ವಿಷ್ಣುವಿನ, ಅನುಗ್ರಹಾತ್-ಪ್ರಸಾದವದೆಸೆಯಿಂದ, ಅನಃ-ಬಂಡಿಯೂ ಕೂಡ, ಉಪರಿ-ಮೇಲೆ, ನಾಪತತ್-ಬೀಳಲಿಲ್ಲವು ನೂನಂ-ನಿಶ್ಚಯವು ॥ ೩೦ ॥ ಅಯಂ-ಈಕೃಷ್ಣನು, ಚಕ್ರವಾತೇನ-ಸುಳಿಗಾಳಿಯಾದ, ದೈತ್ಯೇನ-ರಾಕ್ಷಸನಿಂದ, ವಿಪದಂ-ವಿ-ಪಕ್ಷಿಗಳಿಗೆ, ಪದಂ-ಸ್ಥಾನವಾದ, ವಿಯತ್-ಆಕಾಶವನ್ನು, ನೀತಸ್ಸನ್-ಹೊಂದಿಸಲ್ಪಟ್ಟವನಾಗಿ, ಶಿಲಾಯಾಂ-ಬಂಡೆಯಲ್ಲಿ, ಪತಿತಃ-ಬಿದ್ದವನಾದರೂ, ತತ್ರ-ಅಲ್ಲಿ, ಸುರೇಶ್ವರೈಃ-ದೇವಪತಿಗಳಿಂದ, ಪರಿತ್ರಾತಃ-ರಕ್ಷಿಸಲ್ಪಟ್ಟವನಾದನು ॥ ೩೧ ॥ ಅಸೌ ಬಾಲಕಃ-ಈಹುಡುಗನು, ಅನ್ಯತಮೋ ವಾಪಿ-ನಮ್ಮಲ್ಲಿಯಾರೊಬ್ಬನೇ ಆದರೂ, ದ್ರುಮಯೋಃ-ಮರಗಳ, ಅಂತರಂ-ಮಧ್ಯಭಾಗವನ್ನು, ಪ್ರಾಪ್ಯ-





ಬಲ್ಲವನಾಗಿಯೂ ರಾಮಕೃಷ್ಣರಿಗೆ ಹಿತಕರನಾಗಿಯೂ ಇರುವ ಉಪನಂದನೆಂಬ ಗೋಪಾಲಕನು ಈರೀತಿಯು ಲ್ಲಿ ನುಡಿದನು. ಅದೆಂತೆನೆ- ॥ ೨೮ ॥ ಈ ಬೃಹದ್ವನದಲ್ಲಿ ಪ್ರಜೆಗಳಿಗೆ ವಿನಾಶಕಾರಣಗಳಾದ ಮಹೋತ್ಪಾತಂಗಳು ಸಂಭವಿಸುತಲಿವೆ. ಅದರಿಂದ ಗೋಕುಲಕೆ ಹಿತವನಪೇಕ್ಷಿಸುತಿರುವ ನಮ್ಮಿಂದ ಈಸ್ಥಳದಿಂ ಹೊರಟು ಹೋಗತಕ್ಕದ್ದು ॥ ೨೯ ॥ ಅದಂತೆನೆ- ಬಾಲಕನಾದ ಈಕೃಷ್ಣನು ಶ್ರೀಹರಿಯ ಅನುಗ್ರಹದಿಂ ಬಾಲಘಾತುಕಿಯಾದ ಪೂತನೆಯಿಂ ಅತಿಪ್ರಯಾಸದಿಂ ಬಿಡಲ್ಪಟ್ಟನು. ಮತ್ತು ಭಗವದನುಗ್ರಹದಿಂದಲೇ ಬಂಡಿಯೂ ಕೂಡ ಕೃಷ್ಣನ ಮೇಲೆ ಬೀಳಲಿಲ್ಲ. ಇದು ನಿಶ್ಚಯವು. ॥ ೩೦ ॥ ಸುಳಿಗಾಳಿಯಾಗಿ ಬಂದ ತೃಣಾವರ್ತನೆಂಬ ದೈತ್ಯನಿಂದ ಹಕ್ಕಿಗಳ ಹಾರಾಡುವ ಸ್ಥಾನವಾದ ಗಗನವನೆಯ್ದಿಸಲ್ಪಟ್ಟ ಬಾಲಕನಾದ ಈಕೃಷ್ಣನು ಹಾಸುಗಲ್ಲಿನಲ್ಲಿ ಬೀಳಿಸಲ್ಪಟ್ಟವನಾಗಿ ಆಗ ದೇವಶ್ರೇಷ್ಠರಿಂದ ರಕ್ಷಿಸಲ್ಪಟ್ಟನು. ॥ ೩೧ ॥ ಮತ್ತು ಬಾಲಕನಾದ ಈಕೃಷ್ಣನೂ ಮತ್ತೊಬ್ಬ ಬಾಲಕನೂ ಆದರೂ ಅವ್ವಳಿ

ನ್ಯತಮೋಪಾಪತೇಚ್ಚಾಪ್ಯಚ್ಯುತರಕ್ಷಣಮ್ ॥೩೨॥ ಯಾವದೌತ್ಪಾತಿಕೋರಿಷ್ಟೋವ್ರಜಂನಾಭಿಭವೇದಿತಃ। ತಾವದ್ಬಾಲಾನುಪಾದಾಯಯಾಸ್ಯಾಮೋನ್ಯತ್ರಸಾನುಗಾಃ ॥೩೩॥ ವನಂಬೃಂದಾವನಂನಾಮಪಶವ್ಯಂನವಕಾನನಮ್ । ಗೋಪಗೋಪೀಗವಾಂಸೇವ್ಯಂಪುಣ್ಯಾದ್ರಿತೃಣವೀರುಧಮ್ ॥೩೪॥ ತತ್ತತ್ರಾದ್ಯೈವಯಾಸ್ಯಾಮಃಶಕಟಾನ್ಯುಙ್ಕ್ತಮಾಚಿರಮ್ । ಗೋಧನಾನ್ಯಗ್ರತೋಯಾಂತುಭವತಾಂಯದಿರೋಚತೆ ॥೩೫॥ ಶ್ರೀಶುಕಃ॥ ತಚ್ಛ್ರುತ್ವೈಕಧಿಯೋಗೋಪಾಸ್ಸಾಧುಸಾಧ್ವಿತಿವಾದಿನಃ । ವ್ರಜಾನ್‌ಸ್ವಾನ್‌ಸ್ವಾನ್‌ಸಮಾಯೋಜ್ಯಯಯುಃರೂಢಪರಿಚ್ಛದಾಃ ॥೩೬॥ ವೃದ್ಧಾನ್ಬಾಲಾನ್‌ಸ್ತ್ರಿಯೋರಾಜನ್‌ಸರ್ವೋಪಕರಣಾನಿಚ । ಅನಸ್ಸ್ವಾರೋಪ್ಯ

---

ಹೊಂದಿ, ನಮ್ರಿಯೇತಯತ್-ಸಾಯುವೇಯಿರುವನೆಂಬುವುದಾವುದುಂಟೋ, ತಚ್ಚಾಪಿ-ಅದೂಕೂಡ, ಅಚ್ಯುತರಕ್ಷಣಂ-ವಿಷ್ಣುವಿನ ಸಂರಕ್ಷಣವೆ ॥೩೨॥ಔತ್ಪಾತಿಕಃ-ದುರ್ಲಕ್ಷಣನಿಮಿತ್ತಕವಾದ, ಅರಿಷ್ಟಃ-ಕಷ್ಟವು, ಯಾವತ್-ಯಾವವರೆಗೂ, ವ್ರಜಂ-ಗೋಕುಲವನ್ನು, ನಾಭಿಭವೇತ್-ತಿರಸ್ಕರಿಸುವುದಿಲ್ಲವೋ, ತಾವತ್-ಅವ್ರೊಳಗಾಗಿ, ಇತಃ-ಇಲ್ಲಿಂದ, ಬಾಲಾನ್-ಮಕ್ಕಳನ್ನು, ಉಪಾದಾಯ-ಎತ್ತಿಕೊಂಡು, ಸಾನುಗಾಃ-ಅನುಸರಿಸಿಬರುವವರೊಡಗೂಡಿದವರಾಗಿ, ಅನ್ಯತ್ರ-ಮತ್ತೊಂದುಕಡೆಗೆ, ಯಾಸ್ಯಾಮಃ-ಹೋಗುವೆವು ॥೩೩॥ಬೃಂದಾವನಂನಾಮ-ಬೃಂದಾವನವೆಂಬಹೆಸರಿನಿಂಪ್ರಸಿದ್ಧವಾದ, ವನಂ-ಅರಣ್ಯವು, ಪಶವ್ಯಂ-ಪಶುಹಿತಕರವಾದ್ದು, ನವಕಾನನಂ-ಹೊಸಕಾಡುಗಳುಳ್ಳದ್ದು, ಗೋಪಗೋಪೀಗವಾಂ-ಗೋಪ-ಗೊಲ್ಲರಿಗೂ, ಗೋಪೀ-ಗೊಲ್ಲತಿಯರಿಗೂ, ಗವಾಂ-ಗೋವುಗಳಿಗೂ, ಸೇವ್ಯಂ-ಸೇವಿಸಲ್ಪಡತಕ್ಕದ್ದು. ಪುಣ್ಯಾದ್ರಿತೃಣವೀರುಧಂ-ಪುಣ್ಯ-ಶ್ರೇಯಸ್ಸುಳ್ಳ, ಅದ್ರಿ-ಬೆಟ್ಟವು, ತೃಣ-ಹುಲ್ಲು, ವೀರುಧಂ-ಬಳ್ಳಿಗಳೂಉಳ್ಳದ್ದು. ॥೩೪॥ತತ್-ಆಕಾರಣದಿಂದ, ಅದ್ಯೈವ-ಈಗಲೇ, ತತ್ರ-ಅಲ್ಲಿಗೆ. ಯಾಸ್ಯಾಮಃ-ಹೋಗುವ, ಶಕಟಾನ್-ಬಂಡಿಗಳನ್ನು, ಯುಙ್ಕ್ತ-ಹೂಡಿರಿ ಚಿರಂ-ಕಾಲಹರಣವು, ಮಾ-ಬೇಡ, ಭವತಾಂ-ನಿಮಗೆ, ರೋಚತೇಯದಿ-ಇಷ್ಟವಾದರೆ, ಗೋಧನಾನಿ-ಗೋವುಗಳೆಂಬಧನಗಳು,ಅಗ್ರತಃ-ಮುಂದುಗಡೆಯಲ್ಲಿ, ಯಾಂತು-ನಡೆಯಲಿ॥೩೫॥(ಶುಕವಚನವು)ತತ್-ಆಮಾತನ್ನು, ಶ್ರುತ್ವಾ-ಕೇಳಿ, ಏಕಧಿಯಃ-ಒಂದೇಬುದ್ಧಿಯುಳ್ಳ, ಗೋಪಾಃ-ಗೊಲ್ಲರು, ಸಾಧುಸಾಧ್ವಿತಿ-ಸರಿಸರಿಯೆಂದು, ವಾದಿನಃ-ಹೇಳುತ್ತಿರುವರಾಗಿ, ಸ್ವಾನ್‌ಸ್ವಾನ್-ತಮ್ಮತಮ್ಮ, ವ್ರಜಾನ್-ಬಂಡಿಗಳಗುಂಪುಗಳನ್ನು, ಸಮಾಯೋಜ್ಯ-ಹೂಡಿ, ರೂಢಪರಿಚ್ಛದಾಃ-ರೂಢ-ಬಂಡಿಗಳಲ್ಲಿಹೇರಲ್ಪಟ್ಟ, ಪರಿಚ್ಛದಾಃ-ಗೃಹೋಪಕರಣಸಾಮಗ್ರಿಗಳುಳ್ಳವರಾಗಿ, ಯಯುಃ-ತೆರಳಿದರು ॥೩೬॥ರಾಜನ್-ಅರಸನೇ! ಗೋಪಾಲಾಃ-ಗೊಲ್ಲರು, ವೃದ್ಧಾನ್-ಮುದುಕರನ್ನೂ, ಬಾಲಾನ್-ಹುಡುಗರನ್ನೂ, ಸ್ತ್ರಿಯಃ-ಹೆಂಗಳನ್ನೂ, ಸರ್ವೋಪಕರಣಾನಿಚ-ಸಕಲಸಂಭಾ

---

ಗಳಾದ ಮತ್ತೀಮರಗಳ ಮಧ್ಯವನೆಯ್ದಿ ವಿಲಯುವನೆಯ್ದಲಿಲ್ಲವೆಂಬುವುದು ಯಾವುದುಂಟೋ ಅದುಸಹ ಶ್ರೀಹರಿಯುಸಂರಕ್ಷಣವೇಸರಿ. ॥೩೨॥ ಎಲೈ, ಗೋಪರೇ! ಯಾವವರೆಗೆ ಈಮಹೋತ್ಪಾತಗಳಿಂದಾದ ಅನರ್ಥವು ವಿಶೇಷದಿಂದ ಈಗೋಕುಲವಂಪೀಡಿಸುವುದೋ, ಅಷ್ಟರೊಳಗೆ ನಾವು ಈಬಾಲಕರಂ ಕರೆದುಕೊಂಡು ಪರಿವಾರಜನರೊಡಗೂಡಿ ಈಬೃಹದ್ವನದವಸೆಯಿಂದ ಮತ್ತೊಂದುಸ್ಥಾನವಂಕುರಿತು ಹೋಗಬೇಕು. ॥೩೩॥ ಎಲ್ಲಿಗೆಹೋಗಬೇಕೆಂದರೆ_ ಗೋವುಗಳಿಗೆ ಹಿತಕರವಾದ ಮತ್ತು ಹೊಸಹೊಸ ವನಂಗಳುಳ್ಳ, ಗೋವುಗಳಿಂದಲೂ ಗೋಪಸ್ತ್ರೀಯರಿಂದಲೂ ವಾಸುಗೆಯ್ಯಲ್ಪಡತಕ್ಕ, ಪುಣ್ಯಕರವಾದ ನದೀ ಜಲವೂ ಹುಲ್ಲೂ ಬಳ್ಳಿಗಳುಮೊದಲಾದವುಗಳುಳ್ಳ, ಬೃಂದಾವನವೆಂಬಹೆಸರುಳ್ಳ, ಒಂದುವನವಿರುವುದು. ॥೩೪॥ ನಾವು ಆಬೃಂದಾವನಕ್ಕೆ ಈಗಲೇಹೋಗುವ. ಬಂಡಿಗಳಿಗೆ ಎತ್ತುಗಳಂಕಟ್ಟಿರಿ. ಈಕೆಲಸದಲ್ಲಿ ಹೊತ್ತುಕಳೆಯಬೇಡಿ. ಮತ್ತು ನಿಮಗೆ ಸಮ್ಮತವಾದರೆ ನಮ್ಮ ಗೋಧನಗಳು ಮುಂದಾಗಿ ಅಲ್ಲಿಗೆಹೋಗಲಿ. ॥೩೫॥ಎಲೈ, ಅರಸೇ, ಈರೀತಿಯಲ್ಲಿ ಉಪನಂದನಿಂದ ನುಡಿಯಲ್ಪಟ್ಟ ವಾಕ್ಯವಂ ಕೇಳಿ ನಂದನೇಮೊದಲಾದ ಗೋಪಾಲಕರೆಲ್ಲರೂ ಯುಕ್ತವೇಸರಿಯೆಂದುನುಡಿದು, ಏಕಪ್ರಕಾರವಾದ ಬುದ್ಧಿಯುಳ್ಳವರಾಗಿ ತಮ್ಮತಮ್ಮಬಂಡಿಗಳ ಗುಂಪುಗಳನ್ನು ತೆಗದುಕೊಂಡು ಅವುಗಳಲ್ಲಿ ತಮ್ಮ ಗೃಹೋಪಕರಣಂಗಳಂ ತುಂಬಿಕೊಂಡು ಅಲ್ಲಿಂದತೆರಳಿದರು. ॥೩೬॥ಮತ್ತು ಕೆಲವುಬಂಡಿಗಳಮೇಲೆ ಗೋಪಾಲಕರು ಮುದುಕರನ್ನೂ ಹೆಂಗಳನ್ನೂ ಕುಳ್ಳಿರಿಸಿಕೊಂಡು, ಮತ್ತು ಸಮಸ್ತಗಳಾದ ಗೃಹೋಪಕರಣಗಳನ್ನೂ ಇರಿಸಿಕೊಂ



ನಂದನು









ಗೋಪಾಲಕರು

ಗೋವುಗಳು



ರೋಹಿಣಿ ಯಶೋದೆ ಬಲರಾಮ ಕೃಷ್ಣರು



ವಾದ್ಯಗಾರರು

ಗೋಪಾಲಾಯತ್ತಾ ಆತ್ತಶರಾಸನಾಃ ‖೨೭‖ ಗೋಧನಾನಿ ಪುರಸ್ಕೃತ್ಯ ಶೃಂಗಾಣ್ಯಾಪೂರ್ಯ ಸರ್ವತಃ । ತೂರ್ಯಘೋಷೇಣ ಮಹತಾ ತೇ ಯಯುಸ್ಸಪುರೋಹಿತಾಃ ‖೨೮‖ ಗೋಪ್ಯೋ ರೂಢರಥಾ ನೂತ್ನಕುಚಕುಂಕುಮಕಾಂತಯಃ । ಕೃಷ್ಣಲೀಲಾಂ ಜಗುಃ ಪ್ರೀತ್ಯಾ ನಿಷ್ಕಕಣ್ಠ್ಯಸ್ಸುವಾಸಸಃ ‖೨೯‖ ತದಾ ಯಶೋದಾರೋಹಿಣ್ಯಾವೇಕಂ ಶಕಟಮಾಸ್ಥಿತೇ । ರೇಜತುಃ ಕೃಷ್ಣರಾಮಾಭ್ಯಾಂ ತತ್ಕಥಾಶ್ರವಣೋತ್ಸುಕೇ ‖೩೦‖ ಬೃಂದಾವನಂ ಸಂಪ್ರವಿ

---

ರಗಳನ್ನೂ, ಅನಸ್ಸು-ಬಂಡಿಗಳಲ್ಲಿ, ಆರೋಪ್ಯ-ಏರಿಸಿ, ಆತ್ತಶರಾಸನಾಃ-ಹಿಡಿಯಲ್ಪಟ್ಟ ಬಿಲ್ಲುಗಳುಳ್ಳವರಾಗಿ, ಯತ್ತಾಃ-ಯತ್ನಶೀಲರಾಗಿ. ‖೨೭‖ ಗೋಧನಾನಿ-ಗೋರೂಪಗಳಾದ ಧನಗಳನ್ನು, ಪುರಸ್ಕೃತ್ಯ- ಮುಂದಿಟ್ಟುಕೊಂಡು, ಸರ್ವತಃ- ಎಲ್ಲಕಡೆಗಳಲ್ಲಿಯೂ, ಶೃಂಗಾಣಿ-ಕೊಂಬುಗಳನ್ನು, ಆಪೂರ್ಯ-ಊದಿ, ತೇ-ಅವರು, ಸಪುರೋಹಿತಾಸ್ಸಂತಃ- ಪುರೋಹಿತರೊಡನೆ ಕೂಡಿದವರಾಗಿ, ಮಹತಾ-ದೊಡ್ಡದಾದ, ತೂರ್ಯಘೋಷೇಣ-ತಮಟೆಗಳ ಧ್ವನಿಯೊಡನೆ, ಯಯುಃ-ತೆರಳಿದರು ‖೨೮‖ ರೂಢರಥಾಃ- ಏರಿದ ಬಂಡಿಗಳುಳ್ಳ, ನೂತ್ನಕುಚಕುಂಕುಮಕಾಂತಯಃ- ನೂತ್ನ-ಹೊಸತಾದ, ಕುಚಕುಂಕುಮ- ಮೊಲೆಗಳಿಗೆ ಬಳಿದ ಕಂಧೂಳನ, ಕಾಂತಯಃ-ಹೊಳಪುಳ್ಳವರಾದ, ನಿಷ್ಕಕಂಠ್ಯಃ-ಚಿನ್ನದ ವರಹಾಗಳ ಸರಗಳುಳ್ಳವರಾದ, ಸುವಾಸಸಃ- ಒಳ್ಳಿತಾದ ವಸ್ತ್ರಗಳುಳ್ಳವರಾದ, ಗೋಪ್ಯಃ-ಗೊಲ್ಲತಿಯರು, ಪ್ರೀತ್ಯಾ-ಪ್ರಿಯದಿಂದ, ಕೃಷ್ಣಲೀಲಾಂ-ಕೃಷ್ಣನ ವಿನೋದವನ್ನು, ಜಗುಃ-ಹಾಡಿದರು ‖೨೯‖ ತದಾ-ಆಗ, ಯಶೋದಾರೋಹಿಣ್ಯೌ- ಯಶೋದೆಯೂ ರೋಹಿಣಿಯೂ, ಏಕಂ ಶಕಟಂ-ಒಂದು ಬಂಡಿಯನ್ನು, ಕೃಷ್ಣರಾಮಾಭ್ಯಾಂ ಸಹ- ಕೃಷ್ಣರಾಮರೊಡನೆ, ಆಸ್ಥಿತೇ-ಏರಿದವರೂ, ತತ್ಕಥಾಶ್ರವಣೋತ್ಸುಕೇ- ತತ್-ಆ ಕೃಷ್ಣರಾಮರ, ಕಥಾ-ಚರಿತ್ರಗಳನ್ನು, ಶ್ರವಣ-ಕೇಳುವುದರಲ್ಲಿ, ಉತ್ಸುಕೇ-ಕುತೂಹಲಗೊಂಡವರೂ ಆಗಿ, ರೇಜತುಃ-ಪ್ರಕಾಶಿಸಿದರು ‖೩೦‖ ಸರ್ವಕಾಲಸುಖಾವಹಂ- ಸಕಲ ಋತುಗಳಲ್ಲಿಯೂ ಸೌಖ್ಯವನ್ನು ಮಾಡುವ

---

ಡು ಪ್ರಯತ್ನದಿಂದ ಬಿಲ್ಲುಗಳಂ ಪಿಡಿದವರಾಗಿ ಹೊರಟರು. ‖೨೭‖ ಮತ್ತು ಗೋಪಾಲಕರು ತತ್ಪುರಿಯೊಡಗೂಡಿ ಗೋಧನಂಗಳಂ ಮುಂಭಾಗದಲ್ಲಿ ಇರಿಸಿಕೊಂಡು ಕೊಂಬುಗಳಂ ಧ್ವನಿಗೆಯ್ದು ದೊಡ್ಡದಾದ ವಾದ್ಯಧ್ವನಿಯೊಡನೆ ಪುರೋಹಿತಸಮೇತರಾಗಿ ಅಲ್ಲಿಂದ ತೆರಳಿದರು. ‖೨೮‖ ಆ ಸಮಯದಲ್ಲಿ ಹೊಸತಾಗಿ ಕುಚದಲ್ಲಿ ಧರಿಸಲ್ಪಟ್ಟ ಕುಂಕುಮದಿಂ ಪಳಿಯುತ್ತಿರುವ, ಮತ್ತು ದಿವ್ಯದುಕೂಲಂಗಳನ್ನು ಉಟ್ಟಿರುವ, ಹಾರಪದಕಂಗಳಿಂ ಶೋಭಿಸುವ ಕಂಠಗಳುಳ್ಳ, ಗೋಪಸ್ತ್ರೀಯರು ರಥಾರೂಢರಾಗಿ ಅತಿಪ್ರೀತಿಯಿಂದ ಶ್ರೀಕೃಷ್ಣಚರಿತ್ರೆಯಂ ಗಾನಂಗೆಯ್ದರು. ‖೨೯‖ ಅದೇ ರೀತಿಯಲ್ಲಿ ಯಶೋದಾರೋಹಿಣೀದೇವಿಯರು ಈರ್ವರೂ ಒಂದೇ ರಥದಲ್ಲಿ ಕುಳಿತವರಾಗಿ ಗೋಪಸ್ತ್ರೀಯರಿಂದ ಹಾಡಲ್ಪಡುತ್ತಲಿರುವ ರಾಮಕೃಷ್ಣರ ಕಥೆಯನ್ನು ಕೇಳುವುದರಲ್ಲಿ ಕುತೂಹಲಮುಳ್ಳವರಾಗಿ ಪುತ್ರರೊಡನೆ ಪ್ರಕಾಶಿಸಿದರು. ‖೩೦‖ ಅನಂತರದಲ್ಲಿ ಗೋಪಾಲಕರು ಸರ್ವಕಾಲದಲ್ಲಿಯೂ ಸುಖಕರವಾದ ಬೃಂದಾವನವೆಂಬ ಸ್ಥಾ



ನವಿಶೇಷಮಂ ಪ್ರವೇಶಂಗೆಯ್ದು ಅಲ್ಲಿ ಶಕಟಂಗಳಿಂದ ಅರ್ಧಚಂದ್ರಾಕಾರವಾಗಿ ಗೋಪಸಮೂಹಕ್ಕೆ ವಾಸಸ್ಥಾನಮಂ ರಚಿಸಿದರು ‖೩೧‖ ಎಲೈ ಅರಸೇ, ಆಗ ಬೃಂದಾವನವನ್ನೂ ಗೋವರ್ಧನಗಿರಿಯನ್ನೂ ಯಮುನಾನದಿಯ ಮ

ಶ್ಯಸರ್ವಕಾಲಸುಖಾವಹಮ್ | ತತ್ರಚಕ್ರುರ್ವ್ರಜಾವಾಸಂ ಶಕಟೈರರ್ಧಚಂದ್ರವತ್ ||೩೧|| ಬೃಂದಾವನಂ ಗೋವರ್ಧನಂ ಯಮುನಾಪುಲಿನಾನಿಚ | ವೀಕ್ಷ್ಯಾಸೀದುತ್ತಮಾಪ್ರೀತೀ ರಾಮಮಾಧವಯೋರ್ನೃಪ ||೩೬|| ಏವಂ ವ್ರಜೌಕಸಾಂ ಪ್ರೀತಿಂ ಯಚ್ಛಂತೌ ಬಾಲಚೇಷ್ಟಿತೈಃ | ಕಲವಾಕ್ಯೈಸ್ಸ್ವಕಾಲೇನ ವತ್ಸಪಾಲೌ ಬಭೂವತುಃ | ಅವಿದೂರೇ ವ್ರಜಭುವಸ್ಸಹಗೋಪಾಲಬಾಲಕೈಃ | ಚಾರಯಾಮಾಸತುರ್ವತ್ಸಾನ್ನಾನಾಕ್ರೀಡಾಪರಿಚ್ಛದೌ | ಕ್ವಚಿದ್ವಾದಯತೋ ವೇಣುಂ ಕ್ಷೇಪಣೈಃ ಕ್ಷಿಪತೌ ಕ್ವಚಿತ್ | ಕ್ವಚಿತ್ಪಾದೈಃ ಕಿಂಕಿಣೀಭಿಃ ಕ್ಷಿಪತಶ್ಚ ಕ್ವಚಿತ್ತು

---

ಬೃಂದಾವನಂ-ಬೃಂದಾವನವೆಂಬ ಕಾಡನ್ನು, ಸಂಪ್ರವಿಶ್ಯ-ಸೇರಿ, ತತ್ರ-ಅಲ್ಲಿ, ಶಕಟೈಃ-ಬಂಡಿಗಳಿಂದ, ಅರ್ಧಚಂದ್ರವತ್-ಅರ್ಧಚಂದ್ರನಹಾಗೆ, ವ್ರಜಾವಾಸಂ-ಗೊಲ್ಲರಪಾಳ್ಯವನ್ನು, ಚಕ್ರುಃ-ಮಾಡಿದರು ||೩೧|| ನೃಪ-ಪರೀಕ್ಷಿದ್ರಾಯನೇ! ಬೃಂದಾವನಂ- ಬೃಂದಾವನವೆಂಬ ಕಾಡನ್ನೂ, ಗೋವರ್ಧನಂ-ಗೋವರ್ಧನವೆಂಬ ಬೆಟ್ಟವನ್ನೂ, ಯಮುನಾಪುಲಿನಾನಿಚ-ಯಮುನಾ ನದಿಯ ಮರಳತಿಟ್ಟೆಗಳನ್ನೂ, ವೀಕ್ಷ್ಯ-ನೋಡಿ, ರಾಮಮಾಧವಯೋಃ-ಬಲಭದ್ರಕೃಷ್ಣರಿಗೆ, ಉತ್ತಮಾ-ಶ್ರೇಷ್ಠವಾದ, ಪ್ರೀತಿಃ-ಅನುರಾಗವು, ಆಸೀತ್-ಉಂಟಾಯಿತು ||೩೬|| ಏವಂ-ಹೀಗೆ, ಕಲವಾಕ್ಯೈಃ-ಕಲ-ಅವ್ಯಕ್ತಮಧುರಗಳಾದ, ವಾಕ್ಯೈಃ-ಮುದ್ದುನುಡಿಗಳುಳ್ಳ, ಬಾಲಚೇಷ್ಟಿತೈಃ-ಹುಡುಗಾಟಗಳಿಂದ, ವ್ರಜೌಕಸಾಂ-ಗೊಲ್ಲರಪಾಳ್ಯವೇಸ್ಥಾನವಾಗಿಉಳ್ಳವರಿಗೆ, ಪ್ರೀತಿಂ- ಪ್ರಿಯಭಾವವನ್ನು, ಯಚ್ಛಂತೌ-ಕೊಡುತಲಿರುವ ರಾಮಕೃಷ್ಣರು, ಸ್ವಕಾಲೇನ-ತಮ್ಮ ವಯಸ್ಸಿನಿಂದ, ವತ್ಸಪಾಲೌ-ಕರುಗಳನ್ನು ಪಾಲಿಸುವವರು, ಬಭೂವತುಃ-ಆದರಂತೆ ||೩೩|| ನಾನಾಕ್ರೀಡಾಪರಿಚ್ಛದೌ-ನಾನಾ-ಹಲವುಬಗೆಯಾದ, ಕ್ರೀಡಾ-ಆಟಗಳ, ಪರಿಚ್ಛದೌ- ಉಪಕರಣಸಾಮಗ್ರಿಗಳುಳ್ಳ ರಾಮಕೃಷ್ಣರು, ವ್ರಜಭುವಃ-ಗೊಲ್ಲರಹಳ್ಳಿಯಭೂಮಿಗೆ, ಅವಿದೂರೇ-ಹತ್ತಿರದಲ್ಲಿ, ಗೋಪಾಲಬಾಲಕೈಸ್ಸಹ-ಗೊಲ್ಲರಹುಡುಗರೊಡನೆ, ವತ್ಸಾನ್-ಕರುಗಳನ್ನು, ಚಾರಯಾಮಾಸತುಃ-ತಿರುಗಾಡಿಸಿದರು. ಅಥವಾ ಮೇಯಿಸಿದರು ||೩೪|| ಕ್ವಚಿತ್-ಒಂದುಕಡೆ, ವೇಣುಂ-ಕೊಳಲನ್ನು, ವಾದಯತಃ-ಊದುವರು. ಕ್ವಚಿತ್-ಒಂದುಕಡೆ, ಕ್ಷೇಪಣೈಃ-ಬೆಲ್ಲವತ್ತನೆಲ್ಲಿಮೊದಲಾದಕಾಯಿಗಳಿಂದ, ಕ್ಷಿಪಂತೌ-ಎತ್ತಿಹೊಡೆಯುವರಾಗುವರು ಕ್ವಚಿತ್-ಒಂದುಕಡೆಯಲ್ಲಿ, ಕಿಂಕಿಣೀಭಿಃ-ಗೆಜ್ಜೆಗಳುಳ್ಳ, ಪದೈಃ-ಕಾಲುಗಳಿಂದ, ಕ್ಷಿಪತಶ್ಚ- ಒದೆಯುತ್ತಲೂಯಿರು

---

ರಳತಿಟ್ಟೆಗಳನ್ನೂ ನೋಡಿ ರಾಮಕೃಷ್ಣರೀರ್ವರಿಗೂ ಅತ್ಯುತ್ತಮವಾದ ಪ್ರೀತಿಯುಂಟಾಯಿತು. ||೩೬|| ಈರೀತಿಯಲ್ಲಿ ಗೋಪಗೋಪಿಯರಿಗೆ ತಮ್ಮ ಬಾಲಕ್ರೀಡೆಗಳಿಂದಲೂ ಮನೋಹರವಾದ ಮುದ್ದುಮಾತುಗಳಿಂದಲೂ ಪ್ರೀತಿಯನುಂಟುಮಾಡುತಲಿರುವ ರಾಮಕೃಷ್ಣರೀರ್ವರು ಸಂಭಾಷಣೆಗೆಯೋಗ್ಯವಾದ ವಯಸ್ಸನೆಯ್ದಿ ಕರುಗಳನ್ನು ಪಾಲಿಸುವರಾದರು. ||೩೩|| (ಶ್ರೀರಾಮ ಕೃಷ್ಣರ ಕೌಮಾರಲೀಲೆಯಂ ವರ್ಣಿಸುವನೆಂತೆನೆ-) ಅನಂತರದಲ್ಲಿ ರಾಮಕೃಷ್ಣರೀರ್ವರೂ ಗೋಪಾಲಬಾಲರಿಂ ಕೂಡಿ ನಾನಾವಿಧಗಳಾದ ಕ್ರೀಡಾಸಾಮಗ್ರಿಗಳುಳ್ಳವರಾಗಿ ಗೋಕುಲಕ್ಕೆ ಸಮೀಪಭೂಮಿಯಲ್ಲಿ ಕರುಗಳಂ ಮೇಯಿಸುತಲಿದ್ದರು. ||೩೪|| ಅದೆಂತೆನೆ- ರಾಮಕೃಷ್ಣರೀರ್ವರೂ ಒಂದುವೇಳೆಯ



ಲ್ಲಿ ವೇಣುಗಾನಂ ಗೆಯ್ಯುತ್ತಿರುವರಾಗಿ, ಮತ್ತೊಂದುಸಮಯದಲ್ಲಿ ಕವಣೆಗಳಿಂದ ತ್ರಿಜಿಲ್ವಾದಿಫಲಗಳಂ ಎಸೆಯುತ್ತಲಿರುವರಾಗಿ, ಮತ್ತೊಂದು ಕಾಲದಲ್ಲಿ ಕಿರುಗೆಜ್ಜೆಗಳಿಂ ಕೂಡಿದ ಪಾದಗಳಿಂದ ಕುಣಿಯುತಲಿರುವರಾಗಿ ವಿಹರಿ

ನಃ ||೩೯|| ವೃಷಾಯಮಾಣೌನರ್ದಂತೌಕ್ವಚಿತ್ಕೃತ್ರಿಮಗೋವೃಷೈಃ| ಗೋಪೈರುದ್ದಾಮಚರಿತೌಯುಯು
ಧಾತೇಪರಸ್ಪರಮ್ ||೪೦|| ಚಕೋರಕ್ರೌಂಚಚಕ್ರಾಂಗಭಾರದ್ವಾಜಾಂಶ್ಚಬರ್ಹಿಣಃ| ಅನುರೌದಿತಿಸತ್ವಾಂ
ಶ್ಚಭೀತವದ್ವ್ಯಾಘ್ರಸಿಂಹಯೋಃ || ಅನುಕೃತ್ಯರುತೈರ್ಜಂತೂಂಶ್ಚೇರತುಃಪ್ರಾಕೃತೌಯಥಾ ||೪೧|| ಕದಾ
ಚಿದ್ಯಮುನಾತೀರೇವತ್ಸಾಂಶ್ಚಾರಯತೋಃಸ್ವಕೈಃ | ವಯಸ್ಯೈಃಕೃಷ್ಣಬಲಯೋರ್ಜಿಘಾಂಸುರ್ದೈತ್ಯಆಗಮ
ತ್ ||೪೨|| ತಂವತ್ಸರೂಪಿಣಂವೀಕ್ಷ್ಯವತ್ಸಯೂಥಗತಂಹರಿಃ |ದರ್ಶಯನ್ಬಲದೇವಾಯಶನೈರ್ಮುಗ್ಧಇವಾಸ

---

ವರು. ಕ್ವಚಿತ್ಪುನಃ-ಮತ್ತೊಂದುಕಡೆಯೊಳಗಾದರೋ||೩೯|| ವೃಷಾಯಮಾಣೌ-ಎತ್ತುಗಳಾಗಿಂತವರಾಗಿ, ನರ್ದಂತೌ- ಕೂಗುತ್ತಲಿರುವರೂ, ಉದ್ದಾಮಚರಿತೌ-ಅತಿಶಯವಾದಚರಿತ್ರವುಳ್ಳವರೂಆದರಾಮಕೃಷ್ಣರು, ಕ್ವಚಿತ್- ಒಂದುಕಡೆಯಲ್ಲಿ, ಕೃತ್ರಿಮಗೋವೃಷೈಃ-ಕೃತ್ರಿಮ-ಕಲ್ಪಿತವಾದ, ಗೋವೃಷೈಃ-ಆಕಳಯೆತ್ತುಗಳಆಕಾರಗಳುಳ್ಳವರಾದ, ಗೋಪೈಃ-ದನಗಳಂಕಾಯುವಹುಡುಗರೊಡನೆ, ಪರಸ್ಪರಂ-ಅನ್ಯೋನ್ಯವಾಗಿ, ಯುಯುಧಾತೇ-ಜಗಳವಾಡಿದರಂತೆ ||೪೦|| ಸಃ-ಆಕೃಷ್ಣನು, ಬರ್ಹಿಣಃ- ನವಿಲುಗಳನ್ನೂ, ಚಕೋರಕ್ರೌಂಚಚಕ್ರಾಂಗಭಾರದ್ವಾಜಾನ್- ಚಕೋರ-ತಿಂಗಳಹಕ್ಕಿ, ಕ್ರೌಂಚ-ಕೊಕ್ಕರಿ-ಚಕ್ರಾಂಗ-ಚಕ್ರವಾಕಪಕ್ಷಿ, ಭಾರದ್ವಾಜಾನ್-ಕಬ್ಬುಲಹಕ್ಕಿಗಳನ್ನೂ, ಅನುರೌದಿತಿ-ಅನುಸರಿಸಿಕೂಗುವನು. ಸತ್ವಾನ್-ಹಲವುಜಂತುಗಳನ್ನು, ಅನುರೌತಿ-ಅನುಸರಿಸಿಅಣಕಿಸಿಕೂಗುವನು. ವ್ಯಾಘ್ರಸಿಂಹಯೋಃ-ಹುಲಿಗೂಸಿಂಹಕ್ಕೂ, ಭೀತವತ್- ಹೆದರಿದವನಂತೆ, ವೈ-ಪ್ರಸಿದ್ಧವಾಗಿರುವನು. (ಆರಾಮಕೃಷ್ಣರು)ರುತೈಃ-ಶಬ್ದಗಳಿಂದ, ಜಂತೂನ್-ಅಂಚೆನವಿಲುಮೊದಲಾದವುಗಳನ್ನು, ಅನುಕೃತ್ಯ- ಅಣಕಿಸಿಕೂಗಿ, ಪ್ರಾಕೃತೌಯಥಾ-ಪಾಮರರುಹೇಗೋಹಾಗೆ, ಚೇರತುಃ-ತಿರುಗಾಡಿದರು ||೪೧||ಕದಾಚಿತ್-ಒಂದಾನೊಂದುಕಾಲದಲ್ಲಿ, ಕೃಷ್ಣಬಲಯೋಃ-ಕೃಷ್ಣನೂಬಲರಾಮನೂ, ವಯಸ್ಯೈಃ-ಗೆಳೆಯರಾದ, ಅರ್ಭಕೈಸ್ಸಹ-ಹುಡುಗರೊಂದಿಗೆ, ಯಮುನಾತೀರೇ-ಯಮುನಾನದಿಯದಡಿಯಲ್ಲಿ, ವತ್ಸಾನ್-ಕರುಗಳನ್ನು, ಚಾರಯತೋಸ್ಸತೋಃ- ಮೇಯಿಸುತಿರುವರಾಗುತ್ತಿರಲು, ಜಿಘಾಂಸುಃ- ಕೊಲ್ಲಲೆಳಸಿದ, ದೈತ್ಯಃ-ಅಸುರನು, ಆಗಮತ್-ಬಂದನು ||೪೨||ಹರಿಃ-ಕೃಷ್ಣನು, ವತ್ಸಯೂಥಗತಂ- ಕರುಗಳಹಿಂಡಿನಲ್ಲಿಸೇರಿರುವ, ವತ್ಸರೂಪಿಣಂ- ಕರುವಿನರೂಪವುಳ್ಳ

---



ಸಿದರು. ||೩೯||ಮತ್ತೊಂದುಸಮಯದಲ್ಲಿ ಉತ್ಕೃಷ್ಟಗಳಾದ ಕಂಬಳಾದಿಗಳಂ ತುಂಬಕವಿಚಿಕೊಂಡು ಕಪಟದಿಂದ ಗೋವೃಷಭ ವೇಷಗಳಂಧರಿಸಿರುವ ಮತ್ತು ಗೋವೃಷಭಗಳಂತೆ ಧ್ವನಿಗೆಯ್ಯುತಲಿರುವ ಗೋಪಾಲಬಾಲಕರೊಡನೆ ತಾವೂ ಅದೇವೇಷದಿಂದ ಹಾಗೆಧ್ವನಿಗೆಯ್ಯುವರಾಗಿ, ಪರಸ್ಪರವಾಗಿಯುದ್ಧಂಗೆಯ್ದರು. ||೪೦||ಮತ್ತು ರಾಮಕೃಷ್ಣರು ಹುಲಿ ಮೊದಲಾದವುಗಳಡೆಸೆಯಿಂದ ಹದರಿದವರಂತೆಯು ತಿಂಗಳಹಕ್ಕಿ ಕೊಕ್ಕರಿ ಚಕ್ಕಪಕ್ಕಿ ಕಬ್ಬುಲಹಕ್ಕಿನವಿಲುಇವುಗಳನನುಸರಿಸಿ ಹಾಗೆಯೇ ಧ್ವನಿಗೆಯ್ದರು. * ಮತ್ತು ಮಿಕ್ಕಪ್ರಾಣಿಗಳಹಾಗೂ ಧ್ವನಿಮಾಡುತ್ತ ಅಣಕಿಸುತ್ತ ಲೋಕಸಾಧಾರಣರಾದ ಬಾಲಕರಂತೆ ತಾವೂ ಸಂಚರಿಸಿದರು. * ||೪೧||ಹೀಗೆ ಕ್ರೀಡಿಸುತಲಿರುವ ಒಂದುಸಮಯದಲ್ಲಿ ತಮ್ಮ ಸ್ನೇಹಿತರಾದ ಗೋಪಾಲರಿಂಕೂಡಿ ಯಮುನಾತೀರದಲ್ಲಿ ಕರುಗಳಂ ಮೇಯಿಸುತಲಿರುವ ರಾಮಕೃಷ್ಣರನ್ನು ಕೊಲ್ಲಬೇಕೆಂದು ವತ್ಸನೆಂಬ ದೈತ್ಯನು ಬಂದನು||೪೨||ಆಗ ಕೃಷ್ಣನು ಕರುವಿನರೂಪವಂಥ

ದತ್ ||೩೯|| ಗೃಹೀತ್ವಾಪರಪಾದಾಭ್ಯಾಂಸಹಲಾಂಗೂಲಮಚ್ಯುತಃ | ಭ್ರಾಮಯಿತ್ವಾಕಪಿತ್ಥಾಗ್ರೇಪ್ರಾಹಿಣೋದ್ಗತಜೀವಿತಮ್ ||೪೦|| ಸಕಪಿತ್ಥೈರ್ಮಹಾಕಾಯಃಪಾತ್ಯಮಾನೈಃಪಪಾತಹ| ತಂವೀಕ್ಷ್ಯವಿಸ್ಮಿತಾಬಾಲಾಶ್ಶಶಂಸುಸ್ಸಾಧುಸಾಧ್ವಿತಿ ||೪೧|| ದೇವಾಶ್ಚಪರಿಸಂತುಷ್ಟಾಬಭೂವುಃಪುಷ್ಪವರ್ಷಿಣಃ| ತೌವತ್ಸಪಾಲಕೌಭೂತ್ವಾಸರ್ವಲೋಕೈಕಪಾಲಕೌ || ಸಪ್ರಾತರಾಶೌಗೋವತ್ಸಾಂಶ್ಚಾರಯಂತೌವಿಚೇರತುಃ ||೪೨||

ತಂ-ಆವತ್ಸಾಸುರನನ್ನು, ವೀಕ್ಷ್ಯ-ನೋಡಿ, ಬಲದೇವಾಯ-ಬಲರಾಮನಿಗೆ, ದರ್ಶಯನ್-ತೋರಿಸುತಲಿರುವನಾಗಿ, ಶನೈಃ-ಮೆಲ್ಲಗೆ, ಮುಗ್ಧಇವ-ಅರಿಯದವನಹಾಗೆ, ಆಸದತ್-ಹತ್ತಿರಕ್ಕೆಹೋದನು ||೩೯||ಅಚ್ಯುತಃ-ಕೃಷ್ಣನು, ಅಪರಪಾದಾಭ್ಯಾಂಸಹ-ಹಿಂಗಾಲುಗಳೊಂದಿಗೆ, ಲಾಂಗೂಲಂ-ಬಾಲವನ್ನು, ಗೃಹೀತ್ವಾ-ಹಿಡಿದುಕೊಂಡು, ಭ್ರಾಮಯಿತ್ವಾ-ಸುತ್ತಿತಿರುಗಿಸಿ, ಗತಜೀವಿತಂ-ಕಳೆದುಹೋದಪ್ರಾಣವುಳ್ಳವತ್ಸಾಸುರನನ್ನು, ಕಪಿತ್ಥಾಗ್ರೇ-ಬೇಲದಗಿಡಗಳಮೇಲೆ, ಪ್ರಾಹಿಣೋತ್-ಬಿಸುಟನು||೪೦|| ಮಹಾಕಾಯಃ-ದೊಡ್ಡಮೈಯುಳ್ಳ, ಸಃ-ಆವತ್ಸಾಸುರನು, ಪಾತ್ಯಮಾನೈಃ-ಕೆಡಹಲ್ಪಡುತಲಿರುವ, ಕಪಿತ್ಥೈಸ್ಸಹ-ಬೇಲದಮರಗಳೊಡನೆ, ಪಪಾತಹ-ಬಿದ್ದನಷ್ಟೆ? ಬಾಲಾಃ-ಹುಡುಗರು, ತಂ-ಬಿದ್ದವತ್ಸಾಸುರನನ್ನು, ವೀಕ್ಷ್ಯ-ಕಂಡು, ವಿಸ್ಮಿತಾಸ್ಸಂತಃ-ಆಶ್ಚರ್ಯಗೊಂಡವರಾಗಿ, ಸಾಧುಸಾಧ್ವಿತಿ-ಚನ್ನಾಯಿತುಚನ್ನಾಯಿತೆಂದು, ಶಶಂಸುಃ-ಹೊಗಳಿದರು ||೪೧||ಉಪರಿ-ಮೇಲೆ, ಸಂತುಷ್ಟಾಃ- ಸಂತಸಗೊಂಡ, ದೇವಾಶ್ಚ-ದೇವತೆಗಳೂಕೂಡ, ಪುಷ್ಪವರ್ಷಣಂ-ಹೂವಿನಮಳೆಯನ್ನು, ವವರ್ಷುಃ- ಸುರಿದರು. ಸರ್ವಲೋಕೈಕಪಾಲಕೌ-ಸರ್ವಲೋಕ-ಸಕಲಲೋಕಗಳಿಗೂ, ಏಕಪಾಲಕೌ-ಮುಖ್ಯರಕ್ಷಕರಾದ, ತೌ-ಆರಾಮಕೃಷ್ಣರು, ವತ್ಸಪಾಲಕೌಭೂತ್ವಾ-ಕರುಗಳನ್ನುಕಾಯುವವರಾಗಿ, ಸಪ್ರಾತರಾಶೌ-ಪ್ರಾತಃಕಾಲದಆಹಾರದಬುತ್ತಿಯೊಡನೆಕೂಡಿದವರಾಗಿ, ಗೋವತ್ಸಾನ್-- ಗೋವುಗಳನ್ನೂ ಕರುಗಳನ್ನೂ, ಚಾರಯಂತೌಸಂತೌ-ಮೇಯಿಸುತತಿರುಗಾಡಿಸುತಲಿರುವರಾಗಿ, ವಿಚೇರತುಃ-ಸಂಚರಿಸಿದರು ||೪೨||ಏಕದಾ-ಒಂದುಸಮಯ





ರಿಸಿ ಕರುಗಳ ಗುಂಪಿನೊಳು ಹೊಕ್ಕಿರುವ ಆದೈತ್ಯನಂಕಂಡು ಅವನಂ ಬಲರಾಮನಿಗೆತೋರಿಸುತ ತಾನರಿಯದವನಂತೆಮೆಲ್ಲನೆ ಅವನ ಸಮೀಪವನೈದಿದನು.||೩೯||ಅನಂತರದಲ್ಲಿ ಶ್ರೀಕೃಷ್ಣನು ಬಾಲಕೊಡಗೂಡುವನಂತೆ ಅವನ ಹಿಂದಣಕಾಲ್ಗಳಂ ಪಿಡಿದು ಮೇಲೆತ್ತಿ ವೇಗದಿಂತಿರುಗಿಸಿ ಅಷ್ಟುಮಾತ್ರದಿಂದಲೇ ಪ್ರಾಣಗಳಂ ಬಿಟ್ಟಿರುವ ಆದೈತ್ಯನಂ ಬೇಲದ ಮರದಮೇಲೆ ಬೀಸಿಯಿಟ್ಟನು. ||೪೦|| ಮಹತ್ತಾದ ದೇಹವುಳ್ಳ ಆವತ್ಸಾಸುರನು ತನ್ನ ದೇಹವನ್ನು ಎಸೆಯುವಿಕೆಯಿಂದ ಬೀಳುತಲಿರುವ ಬೇಲದಹಣ್ಣುಗಳೊಡನೆ ತಾನೂ ಭೂಮಿಯಲ್ಲಿ ಬಿದ್ದನು. ಆಗ ಗೋಪಾಲಕರೆಲ್ಲರೂ ಆವತ್ಸಾಸುರನಂ ನೋಡಿ "ಚೆನ್ನಾಯಿತು ಚನ್ನಾಯಿತು." ಎಂದು ಶ್ರೀಕೃಷ್ಣನಂ ಶ್ಲಾಘಿಸಿದರು. ||೪೧|| ಅದೇರೀತಿಯಾಗಿ ಆಕಾಶದಲ್ಲಿ ವತ್ಸಾಸುರನ ಸಂಹಾರದಿಂ ಸಂತೋಷಯುಕ್ತರಾದ ದೇವತೆಗಳು ಶ್ರೀ. ಕೃಷ್ಣನಮೇಲೆ ಪುಷ್ಪಂಗಳಂ ವರ್ಷಿಸಿದರು.* ಸರ್ವಲೋಕಂಗಳಿಗೂ ಮುಖ್ಯಬಾಲಕರಾದ ಆರಾಮಕೃಷ್ಣರೀರ್ವರೂ ವತ್ಸಬಾಲಕರಾಗಿ ಒಂದುಸಮಯದಲ್ಲಿ ಪ್ರಾತಃಕಾಲದೊಳು ಭೋಜನಂಗೆಯ್ಯತಕ್ಕ ಅನ್ನದಬುತ್ತಿಯೊಡನೆ ಕೂಡಿದವರಾಗಿ ಅಲ್ಲಲ್ಲಿ ಕರುಗಳಂ ಮೇಯಿಸುತ ಸಂಚರಿಸಿದರು.||೪೨||ಆಗ ಗೋಪಾಲಬಾಲಕರೆಲ್ಲರೂ ತಮ್ಮ ತಮ್ಮ ಕರುಗಳಹಿಂಡುಗಳಂ ಪಾಲಿಸುತ

ಸ್ವಂಸ್ವಂವತ್ಸಕುಲಂಸರ್ವೇಪಾಯಯಿಷ್ಯಂತಏಕದಾ । ಗತ್ವಾಜಲಾಶಯಾಭ್ಯಾಶಂಪಾಯಯಿತ್ವಾಪಪುರ್ಜ
ಲಮ್ ॥೫೩॥ ತೇತತ್ರದದೃಶುರ್ಬಾಲಾಮಹಾಸತ್ವಮವಸ್ಥಿತಮ್। ತತ್ರಸುರ್ವಜ್ರಭಿನ್ನಸ್ಯಗಿರೇಶ್ಶೃಂಗಮಿವ
ಚ್ಯುತಮ್॥೫೪॥ ಸವೈಬಕೋನಾಮಮಹಾನಸುರೋಬಕರೂಪಧೃತ್ ।ಆಗತ್ಯಸಹಸಾಕೃಷ್ಣಂತೀಕ್ಷ್ಣತುಂ
ಡೋಗ್ರಸೀದ್ಬಲೀ ॥೫೫॥ ಕೃಷ್ಣಂಮಹಾಬಕಗ್ರಸ್ತಂದೃಷ್ಟ್ವಾರಾಮಾದಯೋರ್ಭಕಾಃ। ಬಭೂವುರಿಂದ್ರಿ
ಯಾಣೀವವಿನಾಪ್ರಾಣೈರ್ವಿಚೇತಸಃ ॥೫೬॥ ತಂತಾಲುಮೂಲಂಪ್ರದಹನ್ತಮಗ್ನಿವದ್ಗೋಪಾಲಸೂನುಂಪಿತ
ರಂಜಗದ್ಗುರೋಃ । ಚಚರ್ದಸದ್ಯೋತಿರುಷಾಕ್ಷತಂಬಕಸ್ತುಂಡೇನಹಂತುಂಪುನರಭ್ಯಪದ್ಯತ ॥೫೭॥ ತಮಾ

---

ದಲ್ಲಿ, ಸರ್ವೇ-ಎಲ್ಲರೂ, ಸ್ವಂಸ್ವಂ-ತಮ್ಮತಮ್ಮದಾದ, ವತ್ಸಕುಲಂ-ಕರುಗಳಹಿಂಡನ್ನು, ಪಾಯಯಿಷ್ಯಂತಸ್ಸಂತಃ-ನೀರುಕುಡಿಸಲೆ ಳಸಿದವರಾಗಿ, ಜಲಾಶಯಾಭ್ಯಾಶಂ-ಜಲಾಧಾರದಬಳಿಯನ್ನು ಕುರಿತು, ಗತ್ವಾ- ಹೋಗಿ, ಪಾಯಯಿತ್ವಾ-ಕರುಗಳನ್ನು ಕುಡಿಯಿಸಿ, ಜಲಂ-ನೀರನ್ನು, ಪಪುಃ-ಕುಡಿದರು ॥೫೩॥ ತೇಬಾಲಾಃ-ಆಹುಡುಗರು, ತತ್ರ-ಅಲ್ಲಿ, ವಜ್ರಭಿನ್ನಸ್ಯ-ಸಿಡಿಲಿನಿಂದಸೀಳಿದ, ಗಿರೇಃ-ಬೆಟ್ಟದ, ಚ್ಯುತಂ-ಜಾರಿಬಿದ್ದ, ಶೃಂಗಮಿವ-ಕೋಡುಗಲ್ಲಿನಹಾಗೆ, ಅವಸ್ಥಿತಂ-ಕುಳಿತಿರುವ, ಮಹಾಸತ್ವಂ-ದೊಡ್ಡಜಂತುವನ್ನು, ದದೃಶುಃ-ಕಂಡರು. ತತ್ರಸುಃ-ಹೆದರಿದರು ॥೫೪॥ಬಲೀ-ಬಲವಂತನಾದ, ತೀಕ್ಷ್ಣತುಂಡಃ-ಹರಿತವಾದಬಾಯಿಕೊಕ್ಕುಗಳುಳ್ಳ, ಬಕರೂಪಧೃತ್-ಕೊಕ್ಕರಿಯರೂಪವನ್ನು ಧರಿಸಿದ, ಮಹಾನ್ ಅಸುರಃ-ದೊಡ್ಡದೈತ್ಯನಾದ, ಬಕೋನಾಮ-ಬಕನೆಂದುಪ್ರಸಿದ್ಧನಾದ, ಸವೈ-ಅವನಾದರೋ, ಸಹಸಾ-ಬೇಗನೆ, ಆಗತ್ಯ-ಬಂದು, ಕೃಷ್ಣಂ-ಕೃಷ್ಣನನ್ನು, ಅಗ್ರಸೀತ್-ನುಂಗಿದನು ॥೫೫॥ರಾಮಾದಯಃ-ರಾಮನೇ ಮೊದಲಾಗಿವುಳ್ಳ, ಅರ್ಭಕಾಃ-ಹುಡುಗರು(ರಾಮನನ್ನು ವಿನಾಮಿಕ್ಕಹುಡುಗರು) ಕೃಷ್ಣನನ್ನು, ಮಹಾಬಕಗ್ರಸ್ತಂ- ದೊಡ್ಡಕೊಕ್ಕರಿಯಿಂದನುಂಗಲ್ಪಟ್ಟವನನ್ನಾಗಿ, ದೃಷ್ಟ್ವಾ-ನೋಡಿ, ಪ್ರಾಣೈರ್ವಿನಾ-ಪ್ರಾಣಗಳಿಲ್ಲದ, ಇಂದ್ರಿಯಾಣೀವ-ಇಂದ್ರಿಯಗಳಹಾಗೆ, ವಿಚೇತಸಃ-ಚೈತನ್ಯವಿಲ್ಲದವರು, ಬಭೂವುಃ-ಆದರಂತೆ ॥೫೬॥ಬಕಃ-ಬಕಾಸುರನು, ಜಗದ್ಗುರೋಃ-ಪ್ರಪಂಚಕ್ಕೆತಂದೆಯಾದಬ್ರಹ್ಮನಿಗೂ, ಪಿತರಂ-ತಂದೆಯಾದ, ಗೋಪಾಲಸೂನುಂ-ನಂದಗೋಪನಮಗನಾಗಿರುವ, ತಾಲುಮೂಲಂ-ಕೆನ್ನೆಗಳಬುಡವನ್ನು, ಅಗ್ನಿವತ್-ಬೆಂಕಿಯಹಾಗೆ, ಪ್ರದಹಂತಂ-ಹೆಚ್ಚಾಗಿಸುಡುತಲಿರುವ, ಅಕ್ಷತಂ-ಗಾಯಗೊಳ್ಳದೆಯಿರುವ, ತಂ-ಆಕೃಷ್ಣನನ್ನು, ಸದ್ಯಃ-ಆಗಲೇ, ಚಚರ್ದ-ಕಕ್ಕಿದನು. ಅತಿರುಷಾ-ಬಹಳಸಿಟ್ಟಿನಿಂದ, ತುಂಡೇನ-ಬಾಯಿಕೊಕ್ಕಿನಿಂದ, ಹಂತುಂ-ಕೊಲ್ಲಲೋಸುಗ, ಪುನಃ- ಮರಳಿಯೂ, ಅಭ್ಯಪದ್ಯತ-ಬಂದನು ॥೫೭॥ಸತಾಂ-ಸತ್ಪುರುಷರಿಗೆ, ಗತಿಃ-ಪ್ರಾಪ್ಯನಾದ, ಸಃ-ಆಕೃಷ್ಣನು, ಕಂಸಸಖಂ-ಕಂಸಾಸುರನಿಗೆಮಿತ್ರನಾಗಿ,

---



ನದೀಸಮೀಪವನೆಯ್ದಿ ಕರುಗಳಿಗೆ ಜಲಪಾನವಂಗೆಯಿಸಿ ತಾವೂ ಜಲಪಾನಂಗೆಯ್ದರು.॥೫೩॥ ಅಲ್ಲಿ ಆಗೋಪಾಲಕರು ಇಂದ್ರನ ವಜ್ರಾಯುಧದಿಂ ಭೇದಿಸಲ್ಪಟ್ಟ ಪರ್ವತದ ಮೇಲಿಯಿಂದ ಜಾರಿಬಿದ್ದಿರುವ ಶಿಖರದಂತೆ ಅತ್ಯುನ್ನತವಾಗಿ ಕುಳಿತಿರುವ ಮಹತ್ತಾದ ಪ್ರಾಣಿಯಂ ಕಂಡು ಭಯವನೆಯ್ದಿದರು. ॥೫೪॥ ಆಪ್ರಾಣಿಯಾರೆಂದರೆ-ಬಕನೆಂಬ ಹೆಸರುಳ್ಳ ಬಲಶಾಲಿಯಾದ ಮಹಾದೈತ್ಯನು ಕ್ರೌಂಚಪಕ್ಕಿಯ ರೂಪದಿಂಬಂದುತೀಕ್ಷ್ಣಗಳಾದ ಕೊಕ್ಕುಗಳುಳ್ಳವನಾಗಿ ತ್ವರೆಯಿಂದಕೃಷ್ಣನಂ ಗ್ರಹಿಸಿದನು. ॥ ೫೫ ॥ ಆಗ ಮಹಾಬಕಪಕ್ಷಿಯಿಂದ ಗ್ರಾಸಂಗೆಯ್ಯಲ್ಪಟ್ಟ ಶ್ರೀಕೃಷ್ಣನಂನೋಡಿ ಬಲರಾಮ ಮೊದಲಾದ ಗೋಪಾಲಕರಲ್ಲಿ ಬಲರಾಮನಂ ಹೊರತು ಮಿಕ್ಕವರೆಲ್ಲರೂ ಪ್ರಾಣವಂ ತೊರೆದಿರುವ ಚಕ್ಷುರಾದೀಂದ್ರಿಯಗಳಂತೆ ಅಚೇತನ ಪ್ರಾಯರಾದರು. ॥ ೫೬ ॥ ಅನಂತರದಲ್ಲಿ ಆ ಬಕಾಸುರನು ತನ್ನ ದವಡೆಗಳನ್ನು ಅಗ್ನಿಯಂತೆ ದಹಿಸುತಲಿರುವ ಗೋಪಾಲ ಪುತ್ರನಾದ ಮತ್ತು ಬ್ರಹ್ಮದೇವನಿಗೂ ತಂದೆಯಾದ ಆ ಕೃಷ್ಣನಂ ಆಕ್ಷಣದಲ್ಲಿಯೇ ಕಕ್ಕಿದನು. ಮತ್ತು ಆಗ ಲೇಶವಾದರೂ ಗಾಯವಿಲ್ಲದ ಆಕೃಷ್ಣನಂಕುರಿತು ಅತಿಕೋಪದಿಂ ತನ್ನಕೊಕ್ಕಿನಿಂದ ಕೊಲ್ಲಲೋಸುಗ ಅಭಿಮುಖನಾಗಿ ಆಕೃಷ್ಣನಂ ಅಟ್ಟಿಕೊಂಡುಬಂದನು. ॥೫೭॥ ಸತ್ಪುರುಷರಿಗೆ ಮುಕ್ತಿರೂಪನಾ

ಪತಂತಂಸನಿಗೃಹ್ಯತುಂಡಯೋರ್ದೋರ್ಭ್ಯಾಂಬಕಂಕಂಸಸಖಂಸತಾಂಗತಿಃ । ಪಶ್ಯತ್ಸುಬಾಲೇಷುದದಾರಲೀ
ಲಯಾಮುದಾವಹೋವೀರಣವದ್ದಿವೌಕಸಾಮ್ ॥೫೮॥ ತದಾಬಕಾರಿಂಸುರಲೋಕವಾಸಿನಸ್ಸಮಾಕಿರನ್ನಂ
ದನಮಲ್ಲಿಕಾದಿಭಿಃ । ಸಮೀಡಿರೇಚಾನಕಶಂಖಸಂಸ್ತವೈಸ್ತದ್ವೀಕ್ಷ್ಯಗೋಪಾಲಸುತಾವಿಸಿಸ್ಮಿರೇ ॥೫೯॥ ಮು
ಕ್ತಂಬಕಾಸ್ಯಾದುಪಲಭ್ಯಬಾಲಕಂರಾಮಾದಯಃಪ್ರಾಣಮಿವೇಂದ್ರಿಯೋಗಣಃ । ಸ್ಥಾನಾಗತಂತಂಪರಿರಭ್ಯ
ನಿರ್ವೃತಾಃಪ್ರಣೀಯವತ್ಸಾನ್ವ್ರಜಮೇತ್ಯತಜ್ಜಗುಃ ॥೬೦॥ ಶ್ರುತ್ವಾತದ್ವಿಸ್ಮಿತಾಗೋಪಾಗೋಪ್ಯಶ್ಚಾತಿಪ್ರಿ

---

ಆಪತಂತಂ-ಬರುತಲಿರ್ದ, ತಂ-ಏಕಂ-ಆಬಕಾಸುರನನ್ನು, ದೋರ್ಭ್ಯಾಂ-ತೋಳುಗಳಿಂದ, ನಿಗೃಹ್ಯ-ತಡೆದುಹಿಡಿದು, ಬಾಲೇಷು-ಹು
ಡುಗರು, ಪಶ್ಯತ್ಸು-ನೋಡುತ್ತಿರುವರಾಗುತ್ತಿರಲು, ದಿವೌಕಸಾಂ-ದೇವತೆಗಳಿಗೆ, ಮುದಾವಹಸ್ಸನ್- ಸಂತೋಷವನ್ನುಮಾಡು
ವವನಾಗಿ, ವೀರಣವತ್-ಗಂಟಿಲ್ಲದಬಂದಾಬಗೆಯಹುಲ್ಲನ್ನುಹೇಗೋಹಾಗೆ, ಲೀಲಯಾ-ವಿಲಾಸದಿಂದ, ದದಾರ-ಸೀಳಿದನು॥೫೮॥ ತದಾ-
ಆಗ, ಸುರಲೋಕವಾಸಿನಃ-ದೇವಲೋಕದಲ್ಲಿರುವವರು, ಬಕಾರಿಂ-ಬಕಾಸುರನಿಗೆಶತ್ರುವಾದಕೃಷ್ಣನನ್ನು, ನಂದನಮಲ್ಲಿಕಾದಿಭಿಃ-ನಂದ
ನವನದ ಮಲ್ಲಿಗೆಮೊದಲಾದಪುಷ್ಪಗಳಿಂದ,ಸಮಾಕಿರನ್-ಚಲ್ಲಿಪೂಜಿಸಿದರು. ಆನಕಶಂಖಸಂಸ್ತವೈಃ-ಆನಕ-ತಮಟೆ,ಶಂಖ-ಶಂಖದಿಂದಲೂ,
ಸಂಸ್ತವೈಃ-ಸ್ತೋತ್ರಗಳಿಂದಲೂ, ಸಮೀಡಿರೇ-ಕೊಂಡಾಡಿದರು. ಗೋಪಾಲಸುತಾಃ-ದನಗಳಂಕಾಯುವವರಮಕ್ಕಳು, ತ
ತ್-ಆದೇವತೆಗಳುಮಾಡಿದ ಪೂಜೆಯನ್ನು, ವೀಕ್ಷ್ಯ-ನೋಡಿ, ವಿಸಿಸ್ಮಿರೇ-ಆಶ್ಚರ್ಯಪಟ್ಟರು॥೫೯॥ ರಾಮಾದಯಃ-ಬಲಭದ್ರನುಮೊದಲಾ
ದವರು, ಬಕಾಸ್ಯಾತ್-ಒಕನಬಾಯಿಯೆಡೆಯಿಂದ, ಮುಕ್ತಂ-ಬಿಡಲ್ಪಟ್ಟ, ಬಾಲಕಂ-ಕೃಷ್ಣನನ್ನು, ಉಪಲಭ್ಯ-ನೋಡಿ, ಇಂದ್ರಿಯಃ-
ಇಂದ್ರಿಯಸಂಬಂಧವಾದ, ಗಣಃ-ಗುಂಪು, ಪ್ರಾಣಮಿವ-ಪ್ರಾಣವನ್ನುಹೇಗೋಹಾಗೆ, ಸ್ಥಾನಾಗತಂ-ತಮ್ಮಸ್ಥಳಕ್ಕೆಬಂದ, ತಂ-
ಆಕೃಷ್ಣನನ್ನು, ಪರಿರಭ್ಯ-ಅಪ್ಪಿಕೊಂಡು, ನಿರ್ವೃತಾಃ-ದುಃಖನಿವೃತ್ತಿರೂಪವಾದಸುಖವುಳ್ಳವರಾಗಿ, ವತ್ಸಾನ್-ಕರುಗಳನ್ನು, ಪ್ರಣೀ
ಯ-ಗುಂಪುಸೇರಿಸಿಕೊಂಡ, ವ್ರಜಂ-ಗೊಲ್ಲರಹಳ್ಳಿಯನ್ನುಕುರಿತು, ಏತ್ಯ-ಬಂದು, ತತ್- ಆಕೃಷ್ಣಚರಿತ್ರವನ್ನು, ಜಗುಃ- ಹೇಳಿದ
ರು॥೬೦॥ ತತ್-ಆವೃತ್ತಾಂತವನ್ನು, ಶ್ರುತ್ವಾ-ಕೇಳಿ, ವಿಸ್ಮಿತಾಃ-ಅಚ್ಚರಿಗೊಂಡವರಾದ, ಗೋಪಾಃ-ಗೊಲ್ಲರೂ, ಗೋಪ್ಯಶ್ಚ-ಗೊಲ್ಲತಿ
ಯರೂ, ಅತಿಪ್ರಿಯಾದೃತಾಃ-ಅತಿಪ್ರಿಯ-ಹೆಚ್ಚುಮೆಚ್ಚಿಕೆಯಿಂದ, ಆದೃತಾಃ- ಬಂದವರಾಗಿ, ಅಥವಾ ಅಕ್ಕರೆಗೊಂಡವರಾಗಿ,
ತೃಷಿತೇಕ್ಷಣಾಃ-ತೃಷಿತ-ಅಕ್ಕರೆಗೊಂಡ, ಈಕ್ಷಣಾಃ- ಕಂಗಳುಳ್ಳವರಾಗಿ, ಪ್ರೇತ್ಯಾಗತಮಿವ- ಸತ್ತುಬಂದವನನ್ನುಹೇಗೋಹಾಗೆ,

---



ದ ದೇವತೆಗಳಿಗೆ ಸಂತೋಷವನ್ನುಂಟುಮಾಡುವ ಶ್ರೀಕೃ
ಷ್ಣನು ಗೋಪಾಲಬಾಲಕರೆಲ್ಲರೂ ನೋಡುತ್ತಿರಲುತನ್ನನಟ್ಟಿ
ಕೊಂಡುಬರುವ ಕಂಸನಿಗೆಮಿತ್ರನಾದ ಒಕಾಸುರನ ಎರಡು
ಕೊಕ್ಕುಗಳಂ ತನ್ನ ಎರಡುಕೈಗಳಿಂಪಿಡಿದು ವಿಲಾಸಮಾತ್ರ
ದಿಂದ ಹೊಡಕೆಹುಲ್ಲು (ಲಾಮಂಚದಹುಲ್ಲನ್ನು - ಅಥವಾ ಮುದಗ
ಬ್ಬನ್ನು.) ಸೀಳುವಂತೆ ಆ ಅಸುರನಂಸೀಳಿದನು.॥೫೮॥ಆಸಮ
ಯದಲ್ಲಿ ಬಕಾಸುರನಿಗೆ ಶತ್ರುವಾದ ಶ್ರೀಕೃಷ್ಣನಮೇಲೆ ಸ್ವರ್ಗ
ಲೋಕ ವಾಸಿಗಳಾದ ಇಂದ್ರಾದಿ ದೇವತೆಗಳು ನಂದನ ವನದಲ್ಲಿ
ಹುಟ್ಟಿದ । ಮಲ್ಲಿಗೆ ಪಾರಿಜಾತ ಮೊದಲಾದ ಪೂಗಳಂ ಮಳೆಸುರಿಸಿದರು
ಮತ್ತು ಪಟಹ ಶಂಖ ಮೊದಲಾದ ವಾದ್ಯಧ್ವನಿಗಳಂ ಗೆಯ್ದು, ಸ್ತೋತ್ರಂಗಳಿಂದ ಶ್ರೀಕೃಷ್ಣನಂ ಚೆನ್ನಾಗಿ
ಸ್ತುತಿಸಿದರು ಆವೆಲ್ಲವಂನೋಡಿ ಗೋಪಾಲಬಾಲಕರೆಲ್ಲರೂ ಆಶ್ಚರ್ಯವನ್ನೈದಿದರು. ॥೫೯॥ ಆಗ ಬಲರಾಮ
ನುಮೊದಲಾದ ಗೋಪಾಲಕರು- ಇಂದ್ರಿಯಸಮೂಹವು ಮರಳಿತನ್ನಸ್ಥಳಕ್ಕೆಬಂದುಸೇರಿದ ಪ್ರಾಣವನ್ನು ಹೇ
ಗೋಹಾಗೆ, ಬಕಾಸುರನ, ಬಾಯಿಯಿಂದ ಮುಕ್ತನಾಗಿ ಬದುಕಿರುವ ಶ್ರೀಕೃಷ್ಣನುಪಡದು ಅವನಂ ಆಲಿಂಗನಂ
ಗೆಯ್ದು ಪರಮಾನಂದಭರಿತರಾಗಿ ತಮ್ಮತಮ್ಮಕರುಗಳಂ ಗುಂಪುಗೂಡಿಸಿಕೊಂಡು ಗೋಕುಲವನೆಯ್ದಿ ಅಲ್ಲಿರುವ
ಸಮಸ್ತರಿಗೂ ಆವೃತ್ತಾಂತವಂತಿಳುಹಿದರು. ॥೬೦॥ ಆಗ ನಂದಗೋಪಮೊದಲಾದ ಗೋಪಾಲಕರೂ ಗೋಪಸ್ತ್ರೀ

ಯಶೋದ್ಯತಾಃ | ಪ್ರತ್ಯಾಗತಮಿವೌತ್ಸುಕ್ಯಾದೈಕ್ಷಂತತೃಷಿತೇಕ್ಷಣಾಃ ||೨೧|| ಅಹೋಬತಾಸ್ಯಬಾಲಸ್ಯಬಹವೋ
ಮೃತ್ಯವೋಽಭವನ್ | ಅಪ್ಯಾಸೀದ್ವಿಪ್ರಿಯಂತೇಷಾಂಕೃತಂಪೂರ್ವಂಯತೋಭಯಮ್ ||೨೨|| ಅಥಾಪ್ಯಭಿಭವಂ
ತ್ಯೇನಂನೈವತೇಘೋರದರ್ಶನಾಃ | ಜಿಘಾಂಸಯೈನಮಾಸಾದ್ಯನಶ್ಯಂತ್ಯಗ್ನೌಪತಂಗವತ್ ||೨೩|| ಅಹೋಬ್ರ
ಹ್ಮವಿದಾಂವಾಚೋನಾಸತ್ಯಾಸ್ಸಂತಿಕರ್ಹಿಚಿತ್ | ಗರ್ಗೋಯದಾಹಭಗವಾನನ್ವಭಾವಿತಥೈವತತ್ ||೨೪|| ಇತಿ

---

ಔತ್ಸುಕ್ಯಾತ್-ಅತಿಕುತೂಹಲದಿಂದ, ಐಕ್ಷಂತ-ನೋಡಿದರು ||೨೧||(ನಂದಾದಿವಚನವು)ಅಹೋ-ಆಶ್ಚರ್ಯವು, ಅಸ್ಯಬಾಲಸ್ಯ-ಈಹುಡುಗನಿಗೆ, ಮೃತ್ಯವಃ-ಮರಣನಿಮಿತ್ತಗಳು, ಬಹವಃ-ಹಲವು, ಅಭವನ್-ಆದವು, ಬತ-ಅಯ್ಯೋ, ಅಪಿ-ಹೀಗಾದರೂ, ತೇಷಾಂ-ಈಕೃಷ್ಣನಿಗೆಬಾಧಕರಾಗಿಬಂದವರಿಗೇನೇ, ವಿಪ್ರಿಯಂ-ಅನಿಷ್ಟವು, ಆಸೀತ್-ಆಯಿತು. ಯತಃ- ಯಾವಕಾರಣದಿಂದ, ಪೂರ್ವಂ-ಮುಂಚೆ, ಭಯಂಕೃತಂ-ಅವರಿಂದಕೃಷ್ಣನಿಗೆಭಯವುಮಾಡಲ್ಪಟ್ಟಿತೋ (ಆಕಾರಣದಿಂದಅವರಿಗೆ ಕೇಡುಂಟಾಯಿತು) ||೨೨||ಅಥ-ಇನ್ನೂ, ಘೋರದರ್ಶನಾಃ-ಭಯಂಕರವಾದನೋಟವುಳ್ಳ, ಏತೇ-ಈಘಾತುಕರಾದದೈತ್ಯರು, ಏನಂ-ಈಕೃಷ್ಣನನ್ನು, ನಾಭಿಭವಂತ್ಯೇವ-ತಿರಸ್ಕರಿಸುವುದೇಇಲ್ಲವು. ಜಿಘಾಂಸಯಾ-ಕೊಲ್ಲಬೇಕೆಂಬಬಯಕೆಯಿಂದ, ಏನಂ-ಈಕೃಷ್ಣನನ್ನು, ಆಸಾದ್ಯ-ಸೇರಿ, ಅಗ್ನೌ-ಬೆಂಕಿಯಲ್ಲಿ, ಪತಂಗವತ್-ಈಶಳೆಯಹುಳದಂತೆ, ನಶ್ಯಂತಿ-ನಾಶವಾಗುವರು ||೨೩||ಬ್ರಹ್ಮವಿದಾಂ-ವೇದವನ್ನುಬಲ್ಲವರ-ಅಥವಾ-ಆತ್ಮಜ್ಞರ. ವಾಚಃ-ಮಾತುಗಳು, ಕರ್ಹಿಚಿತ್-ಯಾವಾಗಲೂ, ಅಸತ್ಯಾಃ-ಸುಳ್ಳಾದವುಗಳಾಗಿ, ನಸಂತಿ-ಯಿರುವುದಿಲ್ಲ. ಭಗವಾನ್-ತ್ರಿಕಾಲಜ್ಞನಾದ, ಗರ್ಗಃ-ಗರ್ಗಮುನಿಯು, ಯದಾಹ- ಯಾವಮಾತನ್ನುಹೇಳಿಯಿದ್ದನೋ, ತತ್-ಆಮಾತು, ತಥೈವ- ಹಾಗೆಯೇ, ಅನ್ವಭಾವಿ-ಅನುಭವಿಸಲ್ಪಟ್ಟಿತು. ಅಹೋ-ಆಶ್ಚರ್ಯವು ||೨೪|| (ಶುಕವಾಕ್ಯವು) ಇತಿ-ಹೀಗೆ, ನಂದಾದಯಃ-ನಂದನುಮೊದಲಾದ, ಗೋಪಾಃ-ಗೊಲ್ಲರು, ಮುದಾ-ಸಂತೋಷದಿಂದ, ರಾಮಕೃಷ್ಣಕಥಾಃ-ರಾಮಕೃಷ್ಣರ ಗುಣವರ್ಣನೆಗಳನ್ನು, ಕುರ್ವಂತಃ-ಮಾಡು

---





ಯರೂ ಕೂಡ ಆಸುದ್ದಿಯಂಕೇಳಿ ಅಚ್ಚರಿಗೊಂಡು ಆ ಶ್ರೀಕೃಷ್ಣನು ಅತಿಪ್ರೀತಿಯಿಂದ ಆದರಿಸುತಿರುವವರಾಗಿ, ಲೋಕಾಂತರಕ್ಕೆಹೋಗಿ ಮರಳಿಬಂದವನನ್ನು ಹೇಗೋಹಾಗೆ, ಶ್ರೀಕೃಷ್ಣನನ್ನು, ಅತಿಕುತೂಹಲದಿಂದ ಎಲ್ಲಿಗೂತೃಪ್ತಿಯಂಪಡೆಯದೆ ಅಮೃತಪಾನಂಗೆಯ್ವವಂತೆ ಶೋಭಿಸುವನೇತ್ರಗಳುಳ್ಳವರಾಗಿ ನೋಡಿದರು ||೨೧||( ಆಸಮಯದಲ್ಲಿ ನಂದಾದಿಗಳು ಪುನಃ ಆಶ್ರೀಕೃಷ್ಣನಂಪಡೆದು ಈರೀತಿಯಾಗಿ ಹೇಳುವರದೆಂತೆನೆ-) ಕಟಕಟಾ!! ಈಬಾಲಕನಿಗೆ ಅನೇಕಗಳಾದಮೃತ್ಯುಗಳು ಉಂಟಾದವು. ಆದರೂ ಯಾವಕಾರಣದಿಂ ಪೂರ್ವದೊಳಗೆ, ಆದೈತ್ಯರಿಂ ಪ್ರಾಣಿಗಳಿಗೆ ಭಯವು ಮಾಡಲ್ಪಟ್ಟಿತೋ, ಆಕಾರಣದಿಂ ಆದೈತ್ಯರಿಗೆಯೇ ಅನಿಷ್ಟವುಂಟಾಯಿತು. ||೨೨|| ಭಯಂಕರವಾದ ದರ್ಶನವುಳ್ಳದೈತ್ಯರಾದರೂ ಈಕೃಷ್ಣನಂ ತಿರಸ್ಕರಿಸಲಾರರು. ಮತ್ತೆಯೇನೆಂದರೆ- ಈಕೃಷ್ಣನಂ ಕೊಲ್ಲಲೋಸುಗಬಂದು, ಪತಂಗದಹುಳಗಳು (ಛಲಬುದ್ಧಿಯಿಂ )ಅಗ್ನಿಯಲ್ಲಿಬಿದ್ದು ದಹಿಸಿಹೋಗುವಂತೆ, ತಾವೇವಿಲಯಮನೈದಿದರು. ೨೩|| ಬ್ರಹ್ಮಜ್ಞೋತ್ತಮರಾದ ಮಹಾತ್ಮರವಚನಂಗಳು ಒಂದುಕಾಲದಲ್ಲಿಯಾದರೂ ಅಸತ್ಯಂಗಳಾಗವು. ಅದೆಂತೆನೆ- ಜ್ಞಾನಾದಿಗುಣಸಂಪನ್ನನಾದ ಗರ್ಗಾಚಾರ್ಯನು ಯಾವವಚನವಂ ನುಡಿದನೋ ಅದು ಅದೇರೀತಿಯಲ್ಲಿ ಅನುಭವಯೋಗ್ಯವಾಗುವುದು ||೨೪||ಎಂದುಈರೀತಿಯಲ್ಲಿ ನಂದಗೋಪಮೊದಲಾದ ಗೋಪಾಲಕರು

ನುದಾವಯೋಗೋಪಾಃಕೃಷ್ಣರಾಮಕಥಾಂಮುದಾ |ಕುರ್ವಂತೋರಮಮಾಣಾಶ್ಚನಾವಿಂದನ್ಭವವೇದನಾಂ॥
ಏವಂವಿಹಾರೈಃಕೌಮಾರೈಃಕೌಮಾರಂಜಹತುರ್ವ್ರಜೆ । ನಿಲಾಯನೈಸ್ಸೇತುಬಂಧೈರ್ಮರ್ಕಟೋತ್ಪ್ಲವನಾ
ದಿಭಿಃ॥ ... ... ... ... ... ... ... ॥೬೬॥

ಇತಿಶ್ರೀಮದ್ಭಾಗವತೇ--ದಶಮಸ್ಕಂಧೇ--ಏಕಾದಶೋಧ್ಯಾಯಃ.

---

ತಿರುವರೂ, ರಮಮಾಣಾಶ್ಚ-ಆಡುತಿಲಿರುವರೂ ಆಗಿ, ಭವವೇದನಾಂ- ಸಂಸಾರದುಃಖವನ್ನು, ನಾವಿಂದರ್- ತಿಳಿಯಲಿಲ್ಲವು. (ಮರೆತರು) ॥೬೫॥ನಿಲಾಯನೈಃ-ಅವಿತುಕೊಳ್ಳ-ವಆಟಗಳಿಂದಲೂ, ಸೇತುಬಂಧೈಃ-ನೀರಿಗೆಕಟ್ಟೆಯಂಕಟ್ಟುವಆಟಗಳಿಂದಲೂ, ಮರ್ಕಟೋತ್ಪ್ಲವನಾದಿಭಿಃ- ಕಪಿಗಳಹಾಗೆ ಹಾರುವುದೇಮೊದಲಾದ ಆಟಗಳಿಂದಲೂ, ಏವಂವಿಹಾರೈಃ-ಹೀಗೆವಿನೋದಗಳುಳ್ಳ ಕೌಮಾರೈಃ-ಹುಡುಗಾಟಗಳಿಂದ, ವ್ರಜೇ-ಗೊಲ್ಲರಹಳ್ಳಿಯಲ್ಲಿ,ಕೌಮಾರಂ-ಬಾಲ್ಯವನ್ನು, ಜಹತುಃ-ಕಳೆದರು॥೬೬॥

ಇತಿ ಶ್ರೀಮದ್ಭಾಗವತ ಪ್ರತಿಶಬ್ದಾರ್ಥಬೋಧಿನ್ಯಾಂ ದಶಮಸ್ಕಂಧೇ ಏಕಾದಶೋಧ್ಯಾಯಃ.

---

ರಾಮಕೃಷ್ಣರಕಥೆಗಳಂ ಸಂತೋಷದಿಂನುಡಿಯುತಲೂ ರಮಿಸುತಲೂ ಸಂಸಾರದುಃಖಮಂ ಹೊಂದಿದವರಾಗಲಿಲ್ಲ. ॥೬೫॥ ಮತ್ತು ರಾಮಕೃಷ್ಣರು ಕೌಮಾರಕ್ರೀಡೆಯಿಂದ ಗೋಕುಲದಲ್ಲಿ ಬಾಲಕರ ಕಣ್ಣುಗಳಮುಚ್ಚಿ ಆಡುವುದರಿಂದಲೂ, ಮಳೆಬಂದುಹರಿಯುವ ನೀರಿಗೆ ಸೇತುವೆಯಂಕಟ್ಟಿ ಆಡುವುದರಿಂದಲೂ, ಒಂದುವೃಕ್ಷದಿಂದ ಮತ್ತೊಂದುವೃಕ್ಷಕ್ಕೆ ಮರ್ಕಟಗಳಂತೆ ನೆಗೆಯುವ ಆಟಂಗಳಿಂದಲೂ, ಕೂಡ ಈರೀತಿಯಲ್ಲಿ ವಯಸ್ಸಂ ಕಳೆದರು. ... ... ... ... ... ... ... ... ...॥೬೬॥

ಇಂತು ಶುಕಮುನಿಯು ಪರೀಕ್ಷಿದ್ರಾಯನಿಗೆ ನಿರೂಪಿಸಿದನೆಂದು ಸೂತಪೌರಾಣಿಕನು ನೈಮಿಶಾ
ರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಹೇಳಿದನೆಂಬಲ್ಲಿಗೆ- ಶ್ರೀಮನ್ಮಹೀ
ಶೂರಪುರವರಾಧೀಶ ಶ್ರೀಚಾಮರಾಜತನುಜಶ್ರೀಮತ್ಕೃಷ್ಣರಾಜ ವಿರ
ಚಿತವಪ್ಪ, ಶ್ರೀಭಾಗವತದ "ಶ್ರೀಕೃಷ್ಣರಾಜವಾಣೀವಿ
ಲಾಸವು" ಎಂಬಕರ್ಣಾಟಭಾಷಾವ್ಯಾಖ್ಯಾನ
ದಲ್ಲಿ ದಶಮಸ್ಕಂಧದೊಳು ಏಕಾದಶಾ
ಧ್ಯಾಯವು ಸಂಪೂರ್ಣವಾದುದು.

ಮಂಗಳಮಸ್ತು.

ಶ್ರೀಶುಕಃ ‖ ಕ್ವಚಿದ್ವನಾಶಾಯಮನೋದಧದ್ವ್ರಜಾತ್ಪ್ರಾತಸ್ಸಮುತ್ಥಾಯವಯಸ್ಯವತ್ಸಪಾನ್ | ಪ್ರಬೋಧಯಂಛೃಂಗರವೇಣಚಾರುಣಾವಿನಿರ್ಗತೋವತ್ಸಪುರಸ್ಸರೋಹರಿಃ ‖೧‖ ತೇನೈವಸಾಕಂಪೃಥುಕಾಸ್ಸಹಸ್ರಶಸ್ಸ್ನಿಗ್ಧಾಸ್ಸುಶಿಗ್ವೇತ್ರವಿಷಾಣವೇಣವಃ | ಸ್ವಾನ್ಸ್ವಾನ್ಸಹಸ್ರೋಪರಿಸಂಖ್ಯಯಾನ್ವಿತಾನ್ವತ್ಸಾನ್ಪುರಸ್ಕೃತ್ಯವಿನಿರ್ಯಯುರ್ಮುದಾ ‖೨‖ ಕೃಷ್ಣವತ್ಸೈರಸಂಖ್ಯಾತೈರ್ಯೂಥೀಕೃತ್ಯಸ್ವವತ್ಸಕಾನ್ | ಚಾರಯನ್ತೋರ್ಭಲೀಲಾಭಿರ್ವಿಜಹ್ರುಸ್ತತ್ರತತ್ರಹ ‖ ೩ ‖ ಫಲಪ್ರವಾಳಸ್ತಬಕಸುಮನಃಪಿಂಛಧಾತುಭಿಃ | ಕಾ

೧೨ನೆಯ ಅಧ್ಯಾಯವು.

[ಶುಕವಾಕ್ಯವು.] ಕ್ವಚಿತ್-ಒಂದಾನೊಂದುಸಮಯದಲ್ಲಿ, ವನಾಶಾಯ-ವನಭೋಜನಕ್ಕೋಸುಗ, ಮನೋದಧತ್-ಮನಸ್ಸಂಧರಿಸಿದ(ಸಂಕಲ್ಪಿಸಿದ) ಹರಿಃ-ಕೃಷ್ಣನು, ಪ್ರಾತಃ ಬೆಳಗಿನಹೊತ್ತಿನಲ್ಲಿ, ಸಮುತ್ಥಾಯ-ಎದ್ದು, ಚಾರುಣಾ-ಮನೋಹರವಾದ, ಶೃಂಗರವೇಣ-ಕೊಂಬಿನಕೂಗಿನಿಂದ, ವಯಸ್ಯವತ್ಸಪಾನ್-ಗೆಳೆಯರಾದಕರುಗಾಯ್ವಹುಡುಗರನ್ನು, ಪ್ರಬೋಧಯನ್-ಎಚ್ಚರಗೊಳಿಸುತಲಿರುವನಾಗಿ, ವತ್ಸಪುರಸ್ಸರಃ-ಕರುಗಳುಮುಂದೆನಡೆಯುತಲಿರುವವನಾಗಿ, ವ್ರಜಾತ್-ಗೋಕುಲದಮನೆಯಿಂದ, ವಿನಿರ್ಗತಃ-ಹೊರಟವನಾದನು ‖೧‖ ತೇನಸಾಕಮೇವ-ಅವನೊಡನೆಯೇ, ಪೃಥುಕಾಃ-ಹುಡುಗರು, ಸಹಸ್ರಶಃ-ಸಾವಿರಾರುಮಂದಿಯಾಗಿ, ಸ್ನಿಗ್ಧಾಸ್ಸುಶಿಗ್ವೇತ್ರವಿಷಾಣವೇಣವಃ-ಸ್ನಿಗ್ಧ-ತುಪ್ಪವುಳ್ಳ, ಅನ್ನ-ಬುತ್ತಿಯು, ಶಿಕ್-ನೆಲುವು, ವೇತ್ರ-ಬೆತ್ತವು, ವಿಷಾಣ-ಕೊಂಬು, ವೇಣವಃ-ಕೊಳಲೂವುಳ್ಳವರಾಗಿ, ಸಹಸ್ರೋಪರಿಸಂಖ್ಯಯಾ-ಸಾವಿರಕ್ಕೆಮೇಲ್ಪಟ್ಟಲೆಕ್ಕದಿಂದ, ಅನ್ವಿತಾನ್-ಕೂಡಿದ, ಸ್ವಾನ್ಸ್ವಾನ್ವತ್ಸಾನ್-ತಮ್ಮತಮ್ಮಕರುಗಳನ್ನು, ಪುರಸ್ಕೃತ್ಯ-ಮುಂದೆಬಿಟ್ಟುಕೊಂಡು, ಮುದಾ-ಸಂತೋಷದಿಂದ, ವಿನಿರ್ಯಯುಃ-ಹೊರಟರು‖೨‖ ಅಸಂಖ್ಯಾತೈಃ-ಲೆಕ್ಕವಿಲ್ಲದ, ಕೃಷ್ಣವತ್ಸೈಸ್ಸಹ-ಕೃಷ್ಣನಕರುಗಳೊಂದಿಗೆ, ಸ್ವವತ್ಸಕಾನ್-ತಮ್ಮತಮ್ಮಕರುಗಳನ್ನು, ಯೂಥೀಕೃತ್ಯ-ಮಂದೆಗೊಳಿಸಿ, ಚಾರಯಂತಃ-ಮೇಯಿಸುತಲಿರುವಗೋಪಾಲಬಾಲರು, ಅರ್ಭಲೀಲಾಭಿಃ-ಹುಡುಗಾಟಗಳಿಂದ, ತತ್ರತತ್ರ-ಅಲ್ಲಲ್ಲಿ, ವಿಜಹ್ರುರ್ಹಿ-ವಿಹರಿಸಿದರಲ್ಲವೆ ‖೩‖ ಕಾಚಗುಂಜಾಮಣಿಸ್ವರ್ಣಭೂಷಿತಾಅಪಿ-ಕಾಚಗುಂಜಾಮಣಿ-ಗಾಜಿನಮಣಿಗಳಿಂದಲೂ, ಗುಲುಗಂಜಿಯಮಣಿಗಳಿಂದಲೂ, ಸ್ವರ್ಣ-ಭಂಗಾರದಿಂದಲೂ, ಭೂಷಿತಾಅಪಿ-ಮೊದಲುತಾಯಿಯರಿಂದಅಲಂಕರಿಸಲ್ಪಟ್ಟಿದ್ದವರಾಗಿದ್ದರೂಕೂಡ, ಫಲಪ್ರವಾಳಸ್ತಬಕಸುಮನಃಪಿಂಛಧಾತುಭಿಃ-ಫಲ-ಹಣ್ಣುಗಳ, ಪ್ರವಾಳ-ಚಿಗುರುಗಳ, ಸ್ತಬಕ-ಗೊಂಚಲ್ಗಳ, ಸು

೧೨ನೆಯ ಅಧ್ಯಾಯವು.

ಶ್ರೀಧರೀಯಶ್ಲೋಕವು‖ ದ್ವಾದಶೇತುಮಹಾಸರ್ಪವಪುರ್ಧರಮಘಾಸುರಂ | ವತ್ಸಪಾಲಗಿಳೀಕ್ರುದ್ಧೋಗಳೇಹನ್ತಿವರ್ಣ್ಯತೇ ‖ಟೀಕೆ‖ ಹನ್ನೆರಡನೆಯ ಅಧ್ಯಾಯದಲ್ಲಿ ಶುಕಮುನಿಯು, ಹೆಬ್ಬಾವಿನ ರೂಪವಂ ಧರಿಸಿರುವ ಗೋಪಾಲಕರಂ ಗ್ರಸಂಗೆಯ್ದು ಸಹ ಇರುವ ಅಘಾಸುರನಂ ಶ್ರೀಕೃಷ್ಣನು ಅವನಲ್ಲಿ ಪ್ರವೇಶಿಸಿ ಕಂಠಸ್ಥಾನದಲ್ಲಿ ಸಂಹರಿಸಿದನೆಂಬ ಅರ್ಥವು ಪರೀಕ್ಷಿದ್ರಾಯನು ಕುರಿತು ನಿರೂಪಿಸುವನದಂತೆನೆ॥

ಒಂದು ಸಮಯದಲ್ಲಿ ಶ್ರೀಕೃಷ್ಣನು ವನದಲ್ಲಿ ಪ್ರಥಮ ಭೋಜನವು ಮಾಡಲೋಸುಗ ಮನವುಳ್ಳವನಾಗಿ ಪ್ರಾತಃ ಕಾಲದಲೆದ್ದು ಸ್ನೇಹಿತರಾದ ಆ ಗೋಪಬಾಲಕರಂ ಮನೋಹರವಾದ ಕೊಂಬಿನಧ್ವನಿಯಿಂದ ಎಚ್ಚರಗೊಳಿಸುವವನಾಗಿ ಗೋಕುಲವ ಮನೆಯಿಂದ ಕರುಗಳಂ ಮುಂದು ಮಾಡಿಕೊಂಡು ಹೊರಟನು ‖೧‖ ಆಗ ಸ್ನೇಹಯುಕ್ತರಾದ ಸಹಸ್ರಸಂಖ್ಯೆಯುಳ್ಳ ಗೋಪಬಾಲಕರು ರಮಣೀಯವಾದ ಕಲ್ಲಿಗಳು, ಬೆತ್ತಗಳು, ಕೊಂಬುಗಳು, ಕೊಳಲುಗಳು, ಸಹ ಉಳ್ಳವರಾಗಿ ಆ ಕೃಷ್ಣನೊಡಗೂಡಿಯು, ಅನೇಕ ಸಹಸ್ರಸಂಖ್ಯೆಯುಳ್ಳ ತಮ್ಮತಮ್ಮ ಕರುಗಳುಂ ಮುಂದು ಮಾಡಿಕೊಂಡವರಾಗಿ ಸಂತೋಷದಿಂ ತೆರಳಿದರು.‖೨‖ ಅನಂತರದಲ್ಲಿ ಗೋಪಬಾಲಕರು ಶ್ರೀಕೃಷ್ಣದೇವನ ಅಸಂಖ್ಯಾತಗಳಾದ ಕರುಗಳೊಡನೆ ತಮ್ಮತಮ್ಮ ಕರುಗಳು ಗುಂಪುಗೂಡಿಸಿ ಮೇಯಿಸುತ್ತ ಆಯಾಸ್ಥಳಗಳಲ್ಲಿ ಬಾಲಕ್ರೀಡೆಗಳಿಂದ ವಿಹರಿಸಿದರು.‖೩‖ ಮತ್ತು ಆಗೋಪಾಲಬಾಲಕರು ಪೂರ್ವದಲ್ಲಿ ತಮ್ಮ ತಮ್ಮ ತಾಯಿಗಳಿಂದ ಗಾಜಿನಮಣಿಗಳಿಂ, ಗುಲಗಿಂಜಿಗಳಿಂ, ಸುವರ್ಣಮಣಿಸಮೂಹಗಳಿಂ ಸಹ ಅಲಂಕರಿಸಲ್ಪಟ್ಟವರಾದರೂ ಪುನಃ ಫಲಂಗಳಿಂ

ಚಗುಂಜಾಮಣಿಸ್ವರ್ಣಭೂಷಿತಾಅಪ್ಯಭೂಷಯನ್ ॥೪॥ ಮುಷ್ಣಂತೋನ್ಯೋನ್ಯಶಿಕ್ಯಾದೀನ್ ಜ್ಞಾತಾನಾರಾ
ಚ್ಚಚಿಕ್ಷಿಪುಃ । ತತ್ರತ್ಯಾಂಶ್ಚ ತತೋದೂರಾದ್ಧಸಂತಃ ಪುನರಾದದುಃ ॥೫॥ ಯದಿದೂರಗತಃ ಕೃಷ್ಣೋ ವನಶೋದ್ದೇ
ಶೇಕ್ಷಣಾಯತಮ್ । ಅಹಂಪೂರ್ವಮಹಂಪೂರ್ವಮಿತಿಸಂಸ್ಪೃಶ್ಯರೇಮಿರೆ ॥೬॥ ಕೇಚಿದ್ವೇಣೂನ್ವಾದಯಂತೋ
ಧ್ಮಾಂತಃಶೃಂಗಾಣಿಕೇಚನ । ಕೇಚಿದ್ಭೃಂಗೈಃಪ್ರಗಾಯಂತಃ ಕೂಜಂತಃ ಕೋಕಿಲೈಃಪರೇ ॥೭॥ ವಿಚ್ಛಾಯಾಭಿಃ

---

ಪುಷ್ಪೈಃ-ಪುಷ್ಪಗಳ, ಪಿಂಛ-ನವಿಲಗರಿಗಳ, ದಾಮಭಿಃ-ಸರಗಳಿಂದ, ಅಭೂಷಯನ್- ಅಲಂಕರಿಸಿಕೊಂಡರು ॥೪॥ ಅನ್ಯೋನ್ಯಶಿಕ್ಯಾದೀನ್-ಬುತ್ತಿಯನೆಲುವುಮೊದಲಾದವುಗಳನ್ನು, ಮುಷ್ಣಂತಃ-ಕದಿಯುವವರಾಗಿ, ಜ್ಞಾತಾನ್-ಕಳ್ಳಮಾಡಿತಿಳಿಯಲ್ಪಟ್ಟವರನ್ನು, ಆರಾತ್-ಬೇಗನೆ, ಚಿಕ್ಷಿಪುಃ-ಎತ್ತಿಹೊಡದರು ತತ್ರತ್ಯಾಂಶ್ಚ-ಅಲ್ಲಿರುವವರನ್ನು, ಹಸಂತಃ-ನಗುತಲಿರುವರಾಗಿ, ತತಃ-ಅಲ್ಲಿಂದ, ಚಿಕ್ಷಿಪುಃ-ಎತ್ತಿಹಾಕಿದರು. ಪುನಃ-ಮರಳಿಯೂ, ದೂರಾತ್-ದೂರದಿಂದ, ದದುಃ-ಹಿಡಿದುತೆಕ್ಕೊಂಡರು ॥೫॥ ಕೃಷ್ಣಃ-ಕೃಷ್ಣನು, ವನೋದ್ದೇಶೇಕ್ಷಣಾಯ-ವನ-ವನದ, ಉದ್ದೇಶ-ಉತ್ತಮಪ್ರದೇಶದ, ಈಕ್ಷಣಾಯ-ದರ್ಶನಕ್ಕೋಸುಗ, ದೂರಗತೋಯದಿ-ದೂರಸ್ಥಲವನ್ನು ಹೊಂದಿದವನಾದರೆ, ತಂ-ಶ್ರೀಕೃಷ್ಣನನ್ನು, ಅಹಂಪೂರ್ವಮಹಂಪೂರ್ವಮಿತಿ-ನಾನುಮುಂಚೆ ನಾನುಮುಂಚೆಯೆಂದು, ಸಂಸ್ಪೃಶ್ಯ-ಹಿಡಿಹೋಗಿಮುಟ್ಟಿ, ರೇಮಿರೇ-ಆಡಿದರು ॥೬॥ ಕೇಚಿತ್-ಕೆಲವರು, ವೇಣೂನ್-ಕೊಳಲುಗಳನ್ನು. ನಾದಯಂತಃ-ಧ್ವನಿಗೊಳಿಸುವವರು, ಕೇಚನ-ಕೆಲವರು, ಶೃಂಗಾಣಿ-ಕೊಂಬುಗಳನ್ನು, ಧ್ಮಾಂತಃ-ಊದುವವರು, ಕೇಚಿತ್-ಕೆಲವರು, ಭೃಂಗೈಃ- ತುಂಬಿಗಳೊಡನೆ, ಪ್ರಗಾಯಂತಃ-ಹಾಡುವವರು, ಪರೇ-ಇತರರು, ಕೋಕಿಲೈಃ-ಕೋಗಿಲೆಗಳೊಡನೆ, ಕೂಜಂತಃ-ಕೂಗುವವರು, ॥೭॥ ಅನ್ಯೇ-ಇ

---



ಚಿಗುರುಗಳ ಗೊಂಚಲುಗಳಿಂ, ಕುಸುಮಗಳಿಂ, ನವಿಲುಗರಿಗಳಿಂ, ಗೈರಿಕಾದಿಧಾತುಗಳಿಂ, ಸಹ ತಮ್ಮ ದೇಹಗಳನಲಂಕರಿಸಿ ಕೊಂಡರು. ॥೪॥ (ಆಗೋಪಬಾಲಕರವಿಹಾರಮು ವರ್ಣಿಸುವನವೆಂತೆನೆ- ) ಆಗೋಪಬಾಲಕರು ಕಲ್ಲಿ ಕೊಂಬು ಕೊಳಲು ಮೊದಲಾದುವು ಪರಸ್ಪರಚೌರ್ಯಂಗೆಯ್ಯುತ್ತಿರುವವರಾಗಿ ಅವುಗಳಲ್ಲಿ ಅನ್ಯರಿಂಕಾಣಲ್ಪಟ್ಟವಂ ದೂರದಲ್ಲಿಯೇ ಬೀಸಿಬಿಸುಟರು. ಅವರೂ ಅಲ್ಲಿಯೇ ಇರುವ ಬಾಲಕರಂಕುರಿತು ನಗುತ ದೂರದಿಂದ ತಾವೇ ಪುನಶ್ಚ ಅವಂ ತುದುಕೊಟ್ಟರು ॥೫॥ ಒಂದುಸಮಯದಲ್ಲಿ ಶ್ರೀಕೃಷ್ಣಮೂರ್ತಿಯು ವನಗಳಕಾಂತಿಯಂನೋಡಲೋಸುಗ ದೂರವನೆಯ್ದಿದವನಾದರೆ ಆಗ ಗೋಪಾಲಬಾಲಕರು 'ನಾನು ಮೊದಲು 'ನಾನೇ ಮೊದಲು,' ಎಂದೋಡಿಪೋಗಿ ಆಕೃಷ್ಣನಂ ಮುಟ್ಟಿ ವಿಹಾರಂಗೆಯ್ದರು. ॥೬॥ ಮತ್ತು ಆಸಮಯದಲ್ಲಿ ಕೆಲರು ಗೋಪಬಾಲಕರು ವೇಣುಗಾನಂಗೆಯ್ದರು. ಮತ್ತೆ ಕೆಲವರು ಕೋಕಿಲಪಕ್ಷಿಗಳೊಡನೆ ಕೂಡೆಕೂಗಿದರು ॥೭॥ ಕೆಲವರು ಅಂತರಿಕ್ಷದಲ್ಲಿ ಚರಿಸುವ ಪಕ್ಷಿಗಳ ಛಾಯೆಗಳಂ ನೋಡಿ ಅವುಗಳೊಡನೆ ಕೂಡಿಯೋಡುವರು. ಕೆಲವರು ಹಂಸಪಕ್ಷಿಗಳೊಡನೆ ಕೂಡಿತಾವು.

ಧಾವನ್ತೋಗಚ್ಛಂತಸ್ಸಾಧುಹಂಸಕೈಃ|ಬಕೈರುಪವಿಶಂತೋನೃತ್ಯನ್ತಶ್ಚಕಲಾಪಿಭಿಃ॥೮॥ ವಿಕರ್ಷನ್ತಃ
ಕೀಶವಾಲಾನಾರೋಹನ್ತಶ್ಚತೈರ್ದ್ರುಮಾನ್ | ವಿಕುರ್ವನ್ತಶ್ಚತೈಸ್ಸಾರ್ಧಂಪ್ಲವನ್ತಶ್ಚಪಲಾಶಿಷು ॥೯॥
ಸಾಕಂಭೇಕೈರ್ವಿಲಂಘಂತಸ್ಸರಿತ್ತೋಯಪರಿಪ್ಲುತಾಃ|ಹಸನ್ತಶ್ಚಪ್ರತಿಚ್ಛಾಯಾಶ್ಶಪನ್ತಶ್ಚಪ್ರತಿಸ್ವನಾನ್ ॥
ಇತ್ಥಂಸತಾಂಬ್ರಹ್ಮಸುಖಾನುಭೂತ್ಯಾದಾಸ್ಯಂಗತಾನಾಂಪರದೈವತೇನ | ಮಾಯಾಶ್ರಿತಾನಾಂನರದಾರಕೇ
ಣಸಾರ್ಧಂವಿಜಹ್ರುಃಕೃತಪುಣ್ಯಪುಂಜಾಃ॥೧೧॥ ಯತ್ಪಾದಪಾಂಸುರ್ಬಹುಜನ್ಮಕೃಚ್ಛ್ರತೋಧೃತಾತ್ಮಭಿರ್ಯೋ

---

ತರರು, ವಿಚ್ಛಾಯಾಭಿಃ-ಹಕ್ಕಿಗಳನೆಳಲುಗಳೊಂದಿಗೆ, ಪ್ರಧಾವಂತಃ-ಓಡಿಹೋಗುವವರು. ಹಂಸಕೈಃ-ಅಂಚೆಪಕ್ಕಿಗಳೊಡನೆ, ಸಾಧು-ಚೆನ್ನಾಗಿ, ಗಚ್ಛಂತಃ-ನಡೆಯುತಲಿರುವವರು. ಬಕೈಃ-ಕೊಕ್ಕರೆಗಳಸಂಗಡ, ಉಪವಿಶಂತಃ-ಕುಳಿತಿರುವವರು. ಕಲಾಪಿಭಿಃ-ನವಿಲುಗಳೊಂದಿಗೆ, ನೃತ್ಯಂತಶ್ಚ-ಕುಣಿಯುತಲೂಇರುವವರು. ॥೮॥ಕೀಶವಾಲಾನ್-ಕಪಿಗಳಬಾಲವನ್ನು, ವಿಕರ್ಷಂತಃ-ಎಳೆಯುತಲಿರುವವರು. ತೈಸ್ಸಹ-ಆಕಪಿಗಳೊಡನೆ, ದ್ರುಮಾನ್-ಮರಗಳನ್ನು, ಆರೋಹಂತಶ್ಚ- ಏರುತಲೂಯಿರುವವರು, ತೈಸ್ಸಾರ್ಧಂ-ಅವುಗಳಕೂಡೆ, ವಿಕುರ್ವಂತಶ್ಚ-ವಿಕಾರಚೇಷ್ಟೆಗಳನ್ನೂಮಾಡುವವರು. ಪಲಾಶಿಷು- ಎಲೆಗಳುಳ್ಳಗಿಡಗಳಲ್ಲಿ, ಪ್ಲವಂತಶ್ಚ-ಹಾರುತಲೂಇರುವರು ॥೯॥ ಭೇಕೈಸ್ಸಾಕಂ-ಕಪ್ಪೆಗಳೊಂದಿಗೆ, ಸರಿತ್ತೋಯಪರಿಪ್ಲುತಾಃ-ಸರಿತ್-ಹೊಳೆಯ, ತೋಯ-ನೀರಿನಲ್ಲಿ, ಪರಿಪ್ಲುತಾಃ-ತೊಯ್ದವರಾಗಿ, ವಿಲಘಂತಃ-ಹಾರುತಲಿರುವರು. ಪ್ರತಿಚ್ಛಾಯಾಃ- ಪಡಿನೆಳಲುಗಳನ್ನು, ಹಸಂತಶ್ಚ- ನಗುತಲೂಇರುವವರು, ಪ್ರತಿಸ್ವನಾನ್-ಪ್ರತಿಧ್ವನಿಗಳಂ, ಸೆಳೆಸಪ್ಪುಳುಗಳನ್ನು, ಶಪಂತಶ್ಚ-ಬಯ್ಯುತಲೂಇರುವವರು ॥೧೦॥ ಕೃತಪುಣ್ಯಪುಂಜಾಃ-ಕೃತ-ಮಾಡಲ್ಪಟ್ಟ, ಪುಣ್ಯಪುಂಜಾಃ-ಸುಕೃತರಾಶಿಗಳುಳ್ಳ. ಗೋಪಾಲಬಾಲಕರು- ಬ್ರಹ್ಮಸುಖಾನುಭೂತ್ಯಾ-ಬ್ರಹ್ಮ-ಪರಮಾತ್ಮನ, ಸುಖ-ಆನಂದದ, ಅನುಭೂತ್ಯಾ-ಅನುಭವದಿಂದ, ಅಥವಾಬ್ರಹ್ಮವು ಸುಖವು ಎಂಬ ಅನುಭವದಿಂದ, ದಾಸ್ಯಂ-ಭಕ್ತಭಾವವನ್ನು, ಗತಾನಾಂ-ಹೊಂದಿದ, ಸತಾಂ-ಸತ್ಪುರುಷರಿಗೆ, ಪರದೈವತೇನ- ಉತ್ಕೃಷ್ಟದೇವತೆಯಾಗಿರುವಂತಾ, ಮಾಯಾಶ್ರಿತಾನಾಂ-ಮಾಯಾ-ಅಜ್ಞಾನದಿಂದ, ಆಶ್ರಿತಾನಾಂ-ಆವರಿಸಲ್ಪಟ್ಟವರಿಗೆ, ನರದಾರಕೇಣ-ಮನುಷ್ಯಬಾಲಕನಾಗಿರುವಂತಾ, ಕೃಷ್ಣನ, ಸಾರ್ಧಂ- ಒಡನೆ, ಇತ್ಥಂ-ಹೀಗೆ, ವಿಜಹ್ರುಃ-ವಿನೋದವಾಗಿದ್ದರು ॥೧೧॥ಯತ್ಪಾದಪಾಂಸುಃ-ಯತ್- ಯಾವಕೃಷ್ಣನ, ಪಾದಪಾಂಸುಃ- ಚರಣಧೂಳಿ

---

ಚೆನ್ನಾಗಿನಡೆವರು. ಕೆಲವರು ಅಲ್ಲಲ್ಲಿ ಕುಳಿತಿರುವ ಬಕಪಕ್ಷಿಗಳಂನೋಡಿ ಅವುಗಳೊಡನೆ ತಾವೂಕುಳಿತಿರುವರು ಕೆಲವರು ನವಿಲುಗಳ ನರ್ತನಂಗಳಂನೋಡಿ ಆನವಿಲುಗಳೊಡನೆ ಕೂಡಿ ತಾವೂ ನರ್ತನಂಗೆಯ್ವರು.॥೮॥ ಕೆಲವರು ವೃಕ್ಷಂಗಳ ಕೊಂಬುಗಳಲ್ಲಿ ಕುಳಿತಿರುವ ಕಪಿಗಳಕೆಳಗೆ ಜೋಲುತಲಿರುವ ಬಾಲಗಳಂಪಿಡಿದು ಸೆಳೆಯುವರು ಮತ್ತೆಕೆಲವರು ವೃಕ್ಷಂಗಳನೇರುವ ಕಪಿಗಳೊಡನೆ ಕೂಡಿ ತಾವೂ ಶೀಘ್ರದಿಂಹತ್ತುವರು. ಆಕಪಿಗಳು ಕೋಪದಿಂ ಮುಖಂಗಳಂ ವಿಕಾರಂಗೆಯ್ದುನೋಡುವಲ್ಲಿ ಅವುಗಳೊಡನೆ ಕೂಡಿ ತಾವೂ ಅದೇರೀತಿಯಿಂ ಹುಬ್ಬುಗಳಂಗಂಟುಕಟ್ಟಿಕೊಂಡು ಹಲ್ಲುಗಳಕಿರಿದು ವಿಕಾರಂಗಳಂ ಗೆಯ್ವರು. ಮತ್ತೆಕೆಲವರು ಆಕಪಿಗಳೊಡನೆ ಕೂಡಿ ಒಂದು ವೃಕ್ಷದ ಕೊಂಬುಗಳದೆಸೆಯಿಂದ ಮತ್ತೊಂದು ವೃಕ್ಷದಕೊಂಬುಗಳಿಗೆ ಹಾರುವರು ॥೯॥ಕೆಲರು ಗೋಪಬಾಲಕರು ನದಿಗಳನೀರಲ್ಲಿ ಮುಳುಗಿ, ಕಪ್ಪೆಗಳೊಡನೆ ತಾವೂ ಕುಪ್ಪುವರು. ಕೆಲವರು ಜಲಾದಿಗಳಲ್ಲಿ ತಮ್ಮಪ್ರತಿಬಿಂಬಂಗಳು ನೋಡಿ ಹಾಸ್ಯಂಗೆಯ್ವರು. ಕೆಲವರು ಪ್ರತಿಧ್ವನಿಯಂಗೆಯ್ವ ಪರ್ವತಶಿಲಾದಿಗಳಂಕಂಡು ಶಪಿಸುತ ತಾವೂ ಅವುಗಳಿಂ ಶಪಿಸಲ್ಪಡುವರು. ॥೧೦॥ (ಶ್ರೀಕೃಷ್ಣನೊಡನೆ ಕೂಡಿ ಆರೀತಿಯಲ್ಲಿ ವಿಹರಿಸುವ ಗೋಪಾಲ ಬಾಲಕರನುದ್ದೇಶಿಸಿ ಶುಕಮುನಿಯು ಆಶ್ಚರ್ಯವನೆಯ್ದಿ ಸಂತೋಷದಿಂ ನಿರೂಪಿಸುವನದೆಂತೆನೆ- ) ಎಲೈ, ಪರೀಕ್ಷಿದ್ರಾಯನೇ! ಜ್ಞಾನಿಗಳಿಗೆ ಸ್ವಪ್ರಕಾಶ ಪರಮಾನಂದ ರೂಪನಾಗಿಯೂ, ಭಕ್ತರಿಗೆ ಆತ್ಮಪ್ರದನಾಗಿ ನಾಥನಾಗಿಯೂ, ಇರುವ, ಮಾಯೆಯಿಂ ಮೋಹಿತರಾದ ಜನರಿಗೆ ಮನುಷ್ಯಬಾಲಕನಂತೆ ತೋರುತ್ತಲಿರುವ ಇಂತಾ ಶ್ರೀಕೃಷ್ಣದೇವನೊಡನೆ_ಕೂಡೆ ಮಿತ್ರ ಭಾವದಿಂದ ಬಹಳ ಪುಣ್ಯಶಾಲಿಗಳಾದ ಗೋಪಬಾಲಕರು ಈ ರೀತಿಯಿಂದ ಆ ವನದಲ್ಲಿ ವಿಹರಿಸಿದರು. ಆ ಕಾರಣದಿಂದ ಅವರ ಭಾಗ್ಯವು ಎಂತಿಯದೋ ಗೋಚರವಲ್ಲ ॥೧೧॥ ಮತ್ತು ಯಾವ ಭಗವಂತನ

ಗಿಭಿರಪ್ಯಲಭ್ಯಃ । ಸಏವಯದ್ದೃಗ್ವಿಷಯಸ್ಸ್ವಯಂಸ್ಥಿತಃಕಿಂವರ್ಣ್ಯತೇದಿಷ್ಟಮಹೋವ್ರಜೌಕಸಾಮ್ ॥೧೨॥

ಅಘಾಸುರಸಂಹಾರಪಟ್ಟಃ.

ಅಥಾಘನಾಮಾಭ್ಯಪತನ್ಮಹಾಸುರಸ್ತೇಷಾಂಸುಖಕ್ರೀಡನವೀಕ್ಷಣಾಕ್ಷಮಃ । ನಿತ್ಯಂಯದಂತೋನಿಜಜೀವಿತೇಪ್ಸುಭಿಃಪೀತಾಮೃತೈರಪ್ಯಮರೈಃಪ್ರತೀಕ್ಷ್ಯತೇ ॥೧೩॥ ದೃಷ್ಟ್ವಾರ್ಭಕಾನ್ಕೃಷ್ಣಮುಖಾನಘಾಸುರಃಕಂಸಾನುಶಿಷ್ಟಸ್ಸಬಕೀಬಕಾನುಜಃ । ಅಯಂತುಮೇಸೋದರ್ಯವಿನಾಶಕೃತ್ತಯೋರ್ದ್ವಯೋರ್ಮಮೈನಂಸಬಲಂಹನಿಷ್ಯೇ ॥೧೪॥ ಏತೇಯದಾಮತ್ಸುಹೃದೋಸ್ತಿಲಾಪಃಕೃತಾಸ್ತದಾನಷ್ಟಸಮಾವ್ರಜೌಕಸಃ । ಪ್ರಾಣೇಗತೇ

ಯು, ಬಹುಜನ್ಮಕೃಚ್ಛ್ರಧೃತಾತ್ಮಭಿಃ-ಬಹುಜನ್ಮ-ಹಲವುಶರೀರಗಳಲ್ಲಿ, ಕೃಚ್ಛ್ರ-ಕಷ್ಟದಿಂದ, ಧೃತಾತ್ಮಭಿಃ-ನಿಗ್ರಹಿಸಲ್ಪಟ್ಟಚಿತ್ತವುಳ್ಳ, ಯೋಗಿಭಿರಪಿ-ಧ್ಯಾನವುಳ್ಳವರಿಂದಲೂಕೂಡ, ಅಲಭ್ಯಃ-ಹೊಂದಲ್ಪಡತಕ್ಕದ್ದಲ್ಲವೋ, ಸಏವ-ಆಕೃಷ್ಣನೇ, ಯದ್ದೃಗ್ವಿಷಯಃ-ಯತ್-ಯಾವ ಗೋಪಾಲರ, ದೃಗ್ವಿಷಯಃ-ಕಣ್ಣಮುಂದೆ, ಸ್ವಯಂಸ್ಥಿತಃ-ತಾನಾಗಿಬಂದಿರುವನೋ, ತೇಷಾಂ-ಆ, ವ್ರಜೌಕಸಾಂ-ಗೋಕುಲವಾಸಿಗಳ, ದಿಷ್ಟಂ-ಭಾಗ್ಯವು, ಕಿಂವರ್ಣ್ಯತೇ-ಏನುಬಣ್ಣಿಸಲ್ಪಡುವುದು; ಅಹೋ-ಆಶ್ಚರ್ಯವು ॥೧೨॥ ಅಥ-ಅನಂತರದಲ್ಲಿ, ಪೀತಾಮೃತೈಃ-ಕುಡಿಯಲ್ಪಟ್ಟಅಮೃತವುಳ್ಳವರಾದ್ದರಿಂದಲೇ, ಅಮರೈರಪಿ-ಮರಣವಿಲ್ಲದ ದೇವತೆಗಳಿಂದಲೂಕೂಡ, ನಿಜಜೀವಿತೇಪ್ಸುಭಿಃ-ತಮ್ಮಪ್ರಾಣವನ್ನುಬಯಸುತಲಿರುವವರಿಂದ, ನಿತ್ಯಂ-ಸರ್ವಕಾಲಗಳಲ್ಲಿಯೂ, ಯದಂತಃ-ಯತ್-ಯಾವ ದೈತ್ಯನ, ಅಂತಃ-ನಾಶವು, ಪ್ರತೀಕ್ಷ್ಯತೇ-ಎದುರುನೋಡಲ್ಪಡುವುದೋ, ಸಃ-ಆ, ಅಘನಾಮಾ-ಅಘನೆಂಬಹೆಸರುಳ್ಳ, ಮಹಾಸುರಃ- ದೊಡ್ಡದೈತ್ಯನು, ತೇಷಾಂ-ಆಗೋಪಾಲಕರ, ಸುಖಕ್ರೀಡನವೀಕ್ಷಣಾಕ್ಷಮಃ-ಸುಖಕ್ರೀಡನ-ಸಂತೋಷವಾದ ಆಟವನ್ನು, ವೀಕ್ಷಣ-ನೋಡುವುದರಲ್ಲಿ, ಅಕ್ಷಮಸ್ಸನ್-ಸೈರಣೆಯಿಲ್ಲದವನಾಗಿ, ಅಭ್ಯಪತತ್-ಎದುರಿಗೆಬಿದ್ದನು॥೧೩॥ಕಂಸಾನುಶಿಷ್ಟಃ-ಕಂಸನಿಂದಕಳುಹಿಸಲ್ಪಟ್ಟವನೂ, ಬಕೀಬಕಾನುಜಃ-ಬಕೀ-ಪೂತನೆಗೂ, ಬಕ-ಬಕನೆಂಬದೈತ್ಯನಿಗೂ, ಅನುಜಃ-ತಮ್ಮನಾಗಿರುವ, ಸಅಘಾಸುರಃ-ಆಅಘನೆಂಬದೈತ್ಯನು, ಕೃಷ್ಣಮುಖಾನ್-ಕೃಷ್ಣನುಮೊದಲಾದ, ಅರ್ಭಕಾನ್-ಹುಡುಗರನ್ನು, ದೃಷ್ಟ್ವಾ-ನೋಡಿ, ಅಯಂತು-ಈಕೃಷ್ಣನಾದರೋ, ಮಮ-ನನ್ನ, ಸೋದರ್ಯವಿನಾಶಕೃತ್-ಸೋದರ್ಯ-ಒಡಹುಟ್ಟಿದವರ, ವಿನಾಶ-ಮರಣವನ್ನು, ಕೃತ್-ಮಾಡಿದವನು, ತಯೋರ್ದ್ವಯೋಃ-ಆಪೂತನಾಬಕರಿಬ್ಬರಸ್ಥಾನದಲ್ಲಿ (ಅವರಿಗೆಬದಲಾಗಿ) ಸಬಲಂ-ಬಲರಾಮನಿಂದಕೂಡಿದ, ಅಥವಾ ಗೋಪಾಲಗೋಕುಲಸಹಿತನಾದ, ಏನಂ - ಈ ಕೃಷ್ಣನನ್ನು, ಹನಿಷ್ಯೇ - ಕೊಲ್ಲುವೆನು ॥ ೧೪ ॥ ಯದಾ - ಯಾವಾಗ, ಮತ್ಸುಹೃದೋಃ - ನನ್ನಮಿತ್ರ

ಪಾದಾರವಿಂದದ ಪರಾಗವು ಬಹು ಜನ್ಮಂಗಳಿಂ ಅತ್ಯಂತ ಕಷ್ಟದಿಂ ನಿಗ್ರಹಿಸಿ ಸ್ಥಿರೀಕರಿಸಲ್ಪಟ್ಟ ಮನಸ್ಸುಳ್ಳ ಮಹಾಯೋಗಿಗಳಿಗೂ ಕೂಡ ಲಭ್ಯವಾಗಲಾರದೋ; ಅಂತಾ ಶ್ರೀಕೃಷ್ಣನೇ ಅಂತಾ ಗೋಕುಲ ವಾಸಿಗಳಾದ ಸ್ತ್ರೀಪುರುಷ ಬಾಲಕರ ನೇತ್ರಂಗಳಿಗೆ ಗೋಚರನಾಗಿ ಸಾಕ್ಷಾತ್ ತಾನೇ ನಿಂತಿರುವನೋ, ಅಂತಾ ಗೋಕುಲ ವಾಸಿಗಳಾದ ಜನರ ಸುಕೃತವಂ ಯೆಂತು ವರ್ಣಿಸ ಬಹುದು. ॥ ೧೨ ॥ ಈ ರೀತಿಯಲ್ಲಿರಲು, ಅನಂತರದಲ್ಲಿ- ಅಮೃತಪಾನವಂಗೈಯ್ದವರಾದುದರಿಂ ಜರಾಮರಣಗಳಿಲ್ಲದ ದೇವತೆಗಳು ಕೂಡ ಮೃತ್ಯುವಿನದೆಸೆಯಿಂ ಭೀತರಾಗಿ "ಈದುಷ್ಟನು ಯಾವಕಾಲದಲ್ಲಿ ಎಂತು ಮೃತಿಯನೆಯ್ದುವನೋ" ಎಂದು ಯಾವವನ ಪಿಲಯವನ್ನೇ ನಿರಂತರದಲ್ಲಿಯೂ ನಿರೀಕ್ಷಿಸುತಲಿಹರೋ, ಅಂತಾ ದುಷ್ಟನಾದ ಅಘನೆಂಬ ಹೆಸರುಳ್ಳ ಮಹಾಸುರನು- ವನದಲ್ಲಿ ಆಗೋಪಾಲ ಬಾಲಕರ ಸುಖವಿಹಾರವಂ ನೋಡಿ, ಸಹಿಸಲಾರದೆ ಆ ವನಕೆ ಬಂದನು. ॥೧೩॥ ಅನಂತರದಲ್ಲಿ ಪೂತನೆಗೂ ಬಕಾಸುರನಿಗೂ ತಮ್ಮನಾದ ಆ ಅಘಾಸುರನು ಶ್ರೀ ಕೃಷ್ಣನಂ ಸಂಹರಿಸಲೋಸುಗ ಕಂಸನಿಂದ ಕಳುಹಿಸಲ್ಪಟ್ಟವನಾಗಿ ಬಂದು ಕೃಷ್ಣನೇ ಮುಖರಾಗಿವುಳ್ಳ ಆ ಗೋಪಬಾಲಕರಂ ಕಂಡು, (ಮನಸಿನಲಿ ಈರೀತಿಯಾಗಿ ನಿಶ್ಚಯಿಸುವನು. ಅದೆಂತೆನೆ-)" ಎಲೈ, ಈಬಾಲಕನಲ್ಲವೆ ನನ್ನ ಸಹೋದರರಾದ ಪೂತನಾ ಬಕಾಸುರ ರೀರ್ವರಂ ಸಂಹರಿಸಿದನು? ಆದುದರಿಂದ ಒಡನೆಪುಟ್ಟಿದ ಅವರೀರ್ವರ ಸ್ಥಾನದಲ್ಲಿ ಕರುಗಳೊಡನೆ, ಅವುಗಳಂಕಾಯುವ ಗೋಪಾಲ ಬಾಲಕರೊಡನೆ, ಸಹ ಈಕೃಷ್ಣನಂ ಸಂಹರಿಸುವೆನು. ॥೧೪॥ (ಆದರೂ ಗೋಕುಲದಲ್ಲಿರುವವರು ಉಳಿಯುವರು ಎಂದಲ್ಲಿ ಅವರುಳಿಯರು ಎಂದು ನಿಶ್ಚಯಿಸುವನು.) ಶ್ರೀಕೃಷ್ಣನೊಡಗೂಡಿರುವ ಈ ಗೋಪಾಲ ಬಾಲಕರು. ನನ್ನಿಂದ

ವರ್ಷ್ಮಸು ಕಾನುಚಿಂತಾ ಪ್ರಜಾಸವಃ ಪ್ರಾಣಭೃತೋ ಹಿ ಲೋಕೇ ॥೧೫॥ ಇತಿ ವ್ಯವಸ್ಯಾಜಗರಂ ಬೃಹದ್ವಪುಃ ಸ
ಯೋಜನಾಯಾಮಮಹಾದ್ರಿಪೀವರಮ್ । ಧೃತ್ವಾದ್ಭುತಂ ವ್ಯಾತ್ತಗುಹಾನನಂ ತದಾ ಪಥಿ ವ್ಯಶೇತ ಗ್ರಸನಾಶ
ಯಾ ಖಲಃ ॥೧೬॥ ಧರಾಧರೋಷ್ಠೋ ಜಲದೋತ್ತರೋಷ್ಠೋ ದರ್ಯಾನನಾಂತೋ ಗಿರಿಶೃಂಗದಂಷ್ಟ್ರಃ । ಧ್ವಾಂತಾಂ

---

ರಾವ, (ಪೂತನಾ ಬಕರಿಗೆ) ತಿಲಾಪಃ ಕೃತಾಃ - ಎಳ್ಳುನೀರು ಕೊಡಲ್ಪಟ್ಟವೋ, ತದಾ - ಆಗಲೇ, ವ್ರಜೌಕಸಃ - ಗೋಕುಲವಾಸಿಗಳು, ನಷ್ಟಸಮಾಃ- ಸತ್ತವರಿಗೆ ಸಮಾನರು ಪ್ರಾಣೇ - ಜೀವವಾಯುವು, ಸತೇ(ಸತಿ- ಹೊರಟು ಹೋಗುವುದಾಗುತಿರಲು, ವರ್ಷ್ಮಸು-ದೇಹಗಳಲ್ಲಿ, ಕಾನುಚಿಂತಾ-ಯೋಚನೆಯೇನು; ಲೋಕೇ-ಪ್ರಪಂಚದಲ್ಲಿ, ಪ್ರಾಣಭೃತಃ- ದೇಹಿಗಳು, ಪ್ರಜಾಸವೋಹಿ- ಪ್ರಜಾ-ಮಕ್ಕಳೇ, ಅಸವೋಹಿ - ಪ್ರಾಣಗಳಾಗಿ ಉಳ್ಳವರಷ್ಟೆ, (ಪೂತನೆಯೂ ಬಕನೂ ಸತ್ತಾಗಲೇ, ಗೋಕುಲವಾಸಿಗಳನ್ನು ಕೊಲ್ಲುವನಿಶ್ಚಯಮಾಡಿದ್ದೇನೆ. ಅವರಮಕ್ಕಳನ್ನು ಕೊಂದರೆ ಅವರು ತಾವಾಗಿ ಸತ್ತುಹೋಗುವರು.) ॥೧೫॥ ಖಲಃ- ದುಷ್ಟನಾದ, ಸಃ-ಆ ಅಘಾಸುರನು, ಇತಿ-ಹೀಗೆ, ವ್ಯವಸ್ಯ-ವಿಚಾರಮಾಡಿಕೊಂಡು, ಯೋಜನಾಯಾಮಮಹಾದ್ರಿಪೀವರಂ- ಯೋಜನ- ಗಾವುದದ, ಆಯಾಮ-ಉದ್ದವುಳ್ಳ, ಮಹಾದ್ರಿ- ಬೆಟ್ಟದಹಾಗೆ, ಪೀವರಂ-ಬಲಿತಿರುವಂಥಾ, ವ್ಯಾತ್ತಗುಹಾನನಂ-ವ್ಯಾತ್ತ-ತೆರೆಯಲ್ಪಟ್ಟ, ಗುಹಾ-ಗವಿಯಂತಿರುವ, ಆನನಂ-ಮುಖವುಳ್ಳಂಥಾ, ಅದ್ಭುತಂ-ಆಶ್ಚರ್ಯಕರವಾದ, ಅಜಗರಂ-ಅಜಗರಸಂಬಂಧವಾದ, (ಬೆಟ್ಟಸೆಲೆಯಹಾವಿನ) ಬೃಹದ್ವಪುಃ-ದೊಡ್ಡ ಮೈಯ್ಯನ್ನು, ಧೃತ್ವಾ-ಧರಿಸಿಕೊಂಡು. ಗ್ರಸನಾಶಯಾ-ನುಂಗುವ ಅಪೇಕ್ಷೆಯಿಂದ, ತದಾ-ಆಗ-ಪಥಿ-ದಾರಿಯಲ್ಲಿ, ವ್ಯಶೇತ-ಮಲಗಿರುವನು ॥೧೬॥ ಧರಾಧರೋಷ್ಠಃ-ಧರಾ- ಭೂಮಿಯುಕ್ತವಾಗಿರುವ, ಅಧರೋಷ್ಠಃ- ಕೆಳಗಣತುಟಿಯುಳ್ಳದ್ದು. ಜಲದೋತ್ತರೋಷ್ಠಃ-ಜಲದ-ಮೇಘದಹಾಗೆ, ಉತ್ತರೋಷ್ಠಃ-ಮೇಲಣತುಟಿಯುಳ್ಳದ್ದು. ದರ್ಯಾನನಾಂತಃ-ದರೀ-ಗುಹೆಯಹಾಗೆ, ಆನನಾಂತಃ-

---

ಯಾವಾಗ ಒಡಹುಟ್ಟಿದ ಪೂತನೆ ಬಕಾಸುರ ಎಂಬೀರ್ವರಿಗೂ ತಿಲೋದಕಗಳಾಗಿ ಕಲ್ಪಿಸಲ್ಪಡುವವೋ? ಆಕ್ಷಣದಲ್ಲಿಯೇ ಗೋಕುಲದಲ್ಲಿರುವ ಸರ್ವರೂ ಮೃತಪ್ರಾಯರಾಗುವರು. (ಅದಕ್ಕೆ ದೃಷ್ಟಾಂತವಾಗಿ ಲೋಕನ್ಯಾಯವಂ ಪೇಳುವನು.) ಅದೆಂತೆನೆ- ಯಾವಕಾರಣದಿಂದ ಲೋಕದಲ್ಲಿರುವ ಪ್ರಾಣಿಗಳಿಗೆ ಪುತ್ರರೇ ಪ್ರಾಣಂಗಳಾಗಿ ಉಳ್ಳವರೆನಿಸಿರುವರೋ, ಆಕಾರಣದಿಂದ 'ಪ್ರಾಣಂಪೋಗಲು ದೇಹುಗಳುಳಿಯುವವು,' ಎಂಬ ಆಶೆಯಿಲ್ಲಿಯದು? " ॥೧೫॥ ಎಲೈ, ಅರಸೇ! ಅಘಾಸುರನು ಈರೀತಿಯಲ್ಲಿ ಮನಸಿನೊಳು ನಿಶ್ಚಯಂಗೆಯ್ದು ಆಸಮಯದಲ್ಲಿ ಒಂದುಯೋಜನಪ್ರಮಾಣವುಳ್ಳ, ಮಹಾಪರ್ವತದಂತೆ ಅತ್ಯಂತವಾಗಿ ದಪ್ಪವೆನಿಸಿರುವ, ಮತ್ತು ಅಗಲವಾಗಿರುವ, ಗುಹೆಗೆಸಮಾನವಾದ ಬಾಯಿಯುಳ್ಳ, ಆಶ್ಚರ್ಯಕರವಾದ, ಮಹತ್ತಾದ, ಅಜಗರಶರೀರವಂಧರಿಸಿ- ಕೃಷ್ಣಮೊದಲಾದ ಗೋಪಬಾಲಕರಂ ಗ್ರಸಂಗೆಯ್ಯಲಿಚ್ಛೆಯಿಂದ ಅವರು ಸಂಚರಿಸುವ ಮಾರ್ಗದಲ್ಲಿ ಮಲಗಿದನು. ॥೧೬॥ (ಆ ಯಜಗರಶರೀರವು ಆಶ್ಚರ್ಯಕರವಾಗಿರುವುದೆಂಬರ್ಥವನ್ನೇ ವರ್ಣಿಸುವನದೆಂತೆನೆ-) ಅಜಗರರೂಪಿಯಾದ ಅಘಾಸುರನು ಭೂಮಿಯಲ್ಲಿ ಕೆಳಗಿನತುಟಿಯು ಮೇಘಮಂಡಲದಲ್ಲಿ ಮೇಲಿನತುಟಿಯು ಸಹ ಉಳ್ಳವನಾಗಿ, ಗಿರಿಯದರಿಗಳಂತೆ ಕಟವಾಯಿಗಳುಳ್ಳವನಾಗಿ, ಪರ್ವತದ ಶಿಖರದಂತೆ ಕೋರೆದಾಡೆಗಳುಳ್ಳವನಾಗಿ, ಗಾಢಾಂಧಕಾರದಂತೆ ಒಳಬಾಯಿ



ತರಾಸ್ಯೋ ವಿತತಾಧ್ವಜಿಹ್ವಃ ಪರುಷಾನಿಲಶ್ವಾಸದವೇಕ್ಷಣೋಷ್ಣಃ ‖೧೭‖ ದೃಷ್ಟ್ವಾ ತಂ ತಾದೃಶಂ ಸರ್ವೇ ಮತ್ವಾ ಬೃಂದಾವನಶ್ರಿಯಮ್ । ವ್ಯಾತ್ತಾಜಗರತುಂಡೇನ ಹ್ಯುತ್ಪ್ರೇಕ್ಷಂತೇ ಸ್ಮ ಲೀಲಯಾ ‖೧೮‖ ಅಹೋ ಮಿತ್ರಾಣಿ ಗದತ ಸತ್ವಕೂಟಂ ಪುರಃಸ್ಥಿತಮ್ । ಅಸ್ಮತ್ಸಂಗ್ರಸನವ್ಯಾತ್ತವ್ಯಾಳತುಂಡಾಯತೇ ನ ವಾ ‖೧೯‖ ಸತ್ಯಮರ್ಕಕರಾರಕ್ತಮುತ್ತರಾಹನುವದ್ಘನಮ್ । ಅಧರಾಹನುವದ್ರೋಧಸ್ತತ್ಪ್ರತಿಚ್ಛಾಯಯಾರುಣಮ್ ‖೨೦‖ ಪ್ರತಿಸ್ಪರ್ಧೇತೇ ಸೃಕ್ವಿಭ್ಯಾಂ ಸವ್ಯಾಸವ್ಯೇ ನಗೋದರೇ । ತುಂಗಶೃಂಗಾಲಯೋಽಪ್ಯೇತಾಸ್ತದ್ದಂಷ್ಟ್ರಾಭಿಶ್ಚ ಪಶ್ಯ

---

ಬಾಯಿಯೊಳಭಾಗವುಳ್ಳದ್ದು. ಗಿರಿಶೃಂಗದಂಷ್ಟ್ರಃ-ಗಿರಿಶೃಂಗ- ಬೆಟ್ಟದಕೋಡುಗಳ್ಳಿನಂತೆ, ದಂಷ್ಟ್ರಃ- ದಾಡೆಹಲ್ಲುಳ್ಳದ್ದು. ಧ್ವಾಂತಾಂತರಾಸ್ಯಃ-ಧ್ವಾಂತ-ಕಗ್ಗತ್ತಲೆಯಹಾಗೆ, ಅಂತರಾಸ್ಯಃ-ಮುಖದವೊಳಭಾಗವುಳ್ಳದ್ದು. ವಿತತಾಧ್ವಜಿಹ್ವಃ-ವಿತತ- ವಿಸ್ತಾರವಾದ, ಅಧ್ವ-ಮಾರ್ಗದಂತೆ, ಜಿಹ್ವಃ-ನಾಲಿಗೆಗಳುಳ್ಳದ್ದು. ಪರುಷಾನಿಲಶ್ವಾಸದವೇಕ್ಷಣೋಷ್ಣಃ-ಪರುಷಾನಿಲ- ಕಠಿನವಾತದಂತೆ, ಶ್ವಾಸ-ಉಸುರೂ, ದವ-ಕಾಡುಕಿಚ್ಚಿನಂತೆ, ಈಕ್ಷಣೋಷ್ಣಃ-ಕಂಣಬಿಸಿಯುಳ್ಳದ್ದು ‖೧೭‖ ಸರ್ವೇ-ಎಲ್ಲರೂ, ತಾದೃಶಂ-ಅಂತಾದ್ದಾಗಿರುವ, ತಂ-ಆಸರ್ಪವನ್ನು, ದೃಷ್ಟ್ವಾ-ನೋಡಿ, ಬೃಂದಾವನಶ್ರಿಯಂ- ಬೃಂದಾವನವೆಂಬ ಕಾಡಿನಸಂಪದವನ್ನಾಗಿ, ಮತ್ವಾ-ತಿಳಿದು, ವ್ಯಾತ್ತಾಜಗರತುಂಡೇನ-ವ್ಯಾತ್ತ-ತೆರೆಯಲ್ಪಟ್ಟ, ಅಜಗರ- ಬೆಟ್ಟಸೆಲೆಯಹಾವಿನ, ತುಂಡೇನ- ಮುಖವೆಂಬ ಕಾರಣದಿಂದ ಲೀಲಯಾ-ವಿಲಾಸದೊಡನೆ, ಉತ್ಪ್ರೇಕ್ಷಂತೇ ಸ್ಮ-ಊಹಿಸುತಲಿದ್ದರು ‖೧೮‖ ಅಹೋ-ಆಶ್ಚರ್ಯವು. ಮಿತ್ರಾಣಿ- ಸ್ನೇಹಿತರೇ! ಗದತ-ಹೇಳಿರಿ ಪುರಃಸ್ಥಿತಂ-ಮುಂದೆಯಿರುವುದು, ಸತ್ವಕೂಟಂ ನ ವಾ-ಜಂತುವಿನಹಾಗೆ ತೋರುತ್ತಿರುವುದಲ್ಲವೇ, ಅಸ್ಮತ್ಸಂಗ್ರಸನವ್ಯಾತ್ತವ್ಯಾಳತುಂಡಾಯತೇ ನ ವಾ- ಅಸ್ಮತ್-ನಮ್ಮನ್ನು, ಸಂಗ್ರಸನ-ನುಂಗುವದಕ್ಕೆ, ವ್ಯಾತ್ತ-ತೆರೆಯಲ್ಪಟ್ಟ, ವ್ಯಾಳತುಂಡಾಯತೇ-ಸರ್ಪಮುಖದಹಾಗಿರುವುದೋ, ನ ವಾ-ಅಲ್ಲವೋ, ‖೧೯‖ ಸತ್ಯಂ-ಸರ್ಪದಹಾಗಿರುವುದೇದಿಟವು. ಅರ್ಕಕರಾರಕ್ತಂ-ಅರ್ಕಕರ-ಸೂರ್ಯಕಿರಣಗಳಿಂದ, ಆರಕ್ತಂ-ಕೊಂಚಕೆಂಪಾದ, ಘನಂ-ಮೇಘವು, ಉತ್ತರಾಹನುವತ್-ಮೇಗಣಕೆನ್ನೆಯಹಾಗಿರುವುದು. ತತ್ಪ್ರತಿಛಾಯಯಾ-ತತ್-ಆಮೇಘದ, ಪ್ರತಿಚ್ಛಾಯಯಾ- ಪಡಿನೆಳಲಿನಿಂದ, ಅರುಣಂ- ಕೆಂಪಾದ, ರೋಧಃ- ತಡಿಯನೆಲವು, ಅಧರಾಹನುವತ್-ಕೆಳಗಣಕೆನ್ನೆಯಂತೆಯೂ, ಇದೆ ‖೨೦‖ ಸವ್ಯಾಸವ್ಯೇ-ಎಡಬಲದ, ನಗೋದರೇ - ಬೆಟ್ಟದಗವಿಗಳು, ಸೃಕ್ವಿಭ್ಯಾಂ-ಕಟವಾಯಿಗಳೊಡನೆ, ಪ್ರತಿಸ್ಪರ್ಧೇತೇ-ಪ್ರತಿವಾದವಂಗೆಯ್ವವು (ಕಟವಾಯಿಗಳಂತಿವೆ) ಏತಾಃ-ಈ, ತುಂಗಶೃಂಗಾಲಯಃ- ಎತ್ತರವಾದ ಶಿಖರ

---

ಮುಳ್ಳವನಾಗಿ ವಿಸ್ತೃತವಾದ ಮಾರ್ಗದಂತೆ ನಾಲಿಗೆಯುಳ್ಳವನಾಗಿ, ತೀಕ್ಷ್ಣವಾದ ವಾಯುವಿನಂತೆ ಶ್ವಾಸವುಳ್ಳವನಾಗಿ, ಕಾಡುಗಿಚ್ಚುಗಳಂತೆ ಕಂಗಳುಳ್ಳವನಾಗಿ, ಸಹ ಆ ಮಾರ್ಗದಲ್ಲಿ ಮಲಗಿದ್ದನು. ‖೧೭‖ ಆಗೋಪಾಲ ಬಾಲಕರೆಲ್ಲರೂ ಈರೀತಿಯಾಗಿ ಅಜಗರರೂಪದಿಂ ಮಲಗಿರುವ ಆ ಅಘಾಸುರನಂ ಕಂಡು ವಸ್ತುತಃ ಅದು ಅಜಗರಮುಖವಾದರೂ ಇದು ಬೃಂದಾವನದ ಸಂಪತ್ತೆಂಬದಾಗಿ ವಿಪರೀತವಾಗಿ ತಿಳಿದು, ಆಬೃಂದಾವನ ಪ್ರದೇಶದಲ್ಲಿ ವಿಶೇಷವನ್ನೇ ಆಟದಿಂದ ತೆರೆಯಲ್ಪಟ್ಟ ಅಜಗರಮುಖದ ಸಾದೃಶ್ಯದಿಂದ ಉತ್ಪ್ರೇಕ್ಷೆಯಂ ಗೆಯ್ವವರಾಗಿ, ಪರಸ್ಪರ ಪ್ರಶ್ನೋತ್ತರಗಳಿಂ ಪೇಳುವರು. [ಅಜಗರಮುಖವನ್ನೇ ಬೃಂದಾವನದದಾರಿಯೆಂದು ಭ್ರಾಂತಿಪಟ್ಟರು. ] ‖೧೮‖ ಅದೆಂತೆನೆ-ಎಲೈ, ಮಿತ್ರರೇ! ಈ ಮುಂದೆಯಿರುವುದು ಪ್ರಾಣಿಯಂತೆ ತೋರುವುದು, ಇದೇನು, ಅದಹುದೋ ಅಲ್ಲವೋ, ನೀವು ಪೇಳುವರಾಗಿ, ಅದರಲ್ಲಿಯುಂ ನಮ್ಮೆಲ್ಲರಂ ಗ್ರಾಸಂ ಗೆಯ್ಯಲೋಸುಗ ತೆರೆಯಲ್ಪಟ್ಟ ಬಾಯಿಯುಳ್ಳ ಹಾವಿನ ಮುಖದಂತೆ ಆಚರಿಸುವುದು, ಏನು, ಸತ್ಯವೊ, ಅನೃತವೋ, ಹೇಳಿ, ‖೧೯‖ (ನಿಶ್ಚಯವಾಗಿ ಅಜಗರವೇ ಸರಿ, ಎಂದು ನುಡಿಯುವರು.) ಸೂರ್ಯ ಕಿರಣಗಳಿಂದ ಕೆಂಪಾಗಿರುವ ಮೇಘವಂ ನೋಡುವರಾಗಿ, ಯಥಾರ್ಥವಾಗಿ ಅಜಗರದ ಉತ್ತರೋಷ್ಠದಂತೆ ಇದೆ. ಮತ್ತು ಮೇಘದ ಪ್ರತಿಬಿಂಬದಿಂದ ಕೆಂಪಾಗಿರುವ ಸ್ಥಳವಂ ನೋಡುವರಾಗಿ. ಯಥಾರ್ಥವಾಗಿ ಅಧರೋಷ್ಠದಂತೆ ತೋರುತಲಿದೆ ‖೨೦‖ ಮತ್ತು, ಎಲೈ ಸ್ನೇಹಿತರೇ ! ಈ ಯಡಬಲದಲ್ಲಿರುವ ಪರ್ವತದ ದರಿಗಳೆರಡೂ ಅಜಗರದ ಕಟವಾಯಿಯೊಡನೆ ಸಹ ಸ್ಪರ್ಧೆಯಂ ಗೆಯ್ಯುತಲಿದೆ. ಮತ್ತು, ಉನ್ನತಗಳಾದ ಪರ್ವ

ತ ‖೧೧‖ ಆಸ್ತೃತಾಯಾಮಮಾರ್ಗೋಯಂ ರಸನಾಂ ಪ್ರತಿಗರ್ಜತಿ। ಏಷಾಮಂತರ್ಗತಧ್ವಾಂತಮೇತದಪ್ಯಂ
ತರಾನನಮ್ ‖೧೨‖ ದಾವೋಷ್ಣಖರವಾತೋಯಂ ಶ್ವಾಸವದ್ಭಾತಿ ಪಶ್ಯತ । ತದ್ದಗ್ಧಸತ್ವದುರ್ಗಂಧೋ
ಽಪ್ಯಂತರಾಮಿಷಗಂಧವತ್ ‖೧೩‖ ಅಸ್ಮಾನ್ ನಿವಿಷ್ಟಾನ್ ಗ್ರಸಿತಾ ಕಿಮೇತದ್ಯತಥಾ ಚೇದ್ಬಕವದ್ವಿನಂಕ್ಷ್ಯತಿ।
ಕ್ಷಣಾದನೇನೇತಿ ಬಕಾರ್ಯುಶನ್ಮುಖಂ ವೀಕ್ಷ್ಯೋದ್ಧಸಂತಃ ಕರತಾಡನೈರ್ಯಯುಃ ‖೧೪‖ ಇತ್ಥಂ ಮಿಥೋತಥ್ಯಮ
ತಜ್ಞಭಾಷಿತಂ ಶ್ರುತ್ವಾ ವಿಚಿಂತ್ಯೇತ್ಯಮೃಷಾ ಮೃಷಾಯತೇ। ರಕ್ಷೋ ವಿದಿತ್ವಾಖಿಲಲೋಕಹೃತ್ಸ್ಥಿತಃ ಸ್ವಾ

---

ಗಳಸಾಲುಗಳು, ತದ್ದಂಷ್ಟ್ರಾಭಿಃ-ಅದರದಾಡೆಕಲ್ಲುಗಳೊಂದಿಗೂ, ಪ್ರತಿಸ್ಪರ್ಧಂತೇ-ಪ್ರತಿಚರ್ಚೆಗೆಯ್ವುವು. (ಗಿರಿಶಿಖರಗಳು ದಾಡೆಗಳಹಾಗಿವೆ) ಪಶ್ಯತ-ನೋಡಿರಿ ‖೧೧‖ ಅಯಂ-ಈ, ಆಸ್ತೃತಾಯಾಮಮಾರ್ಗಃ-ಆಸ್ತೃತ-ಅಗಲವಾದ, ಆಯಾಮ-ಉದ್ದವಾದ, ಮಾರ್ಗಃ-ದಾರಿಯು, ರಸನಾಂ ಪ್ರತಿ-ನಾಲಗೆಯನ್ನು ಕುರಿತು, ಗರ್ಜತಿ-ಗದರಿಸುತ್ತೆ. (ನಾಲಿಗೆಯಹಾಗಿದೆ) ಏಷಾಂ-ಈಶಿಖರಗಳ, ಏತತ್-ಈ, ಅಂತರ್ಗತಧ್ವಾಂತಮಪಿ-ಅಂತರ್ಗತ-ಒಳಗೆಇರುವ, ಧ್ವಾಂತಮಪಿ-ಕಗ್ಗತ್ತಲೆಯೂಕೂಡ, ಅಂತರಾನನಂ-ಮುಖದಮಧ್ಯಭಾಗವನ್ನು. ಪ್ರತಿಗರ್ಜತಿ-ಪ್ರತಿಸ್ಪರ್ಧಿಸುವುದು ‖೧೨‖ ಅಯಂ-ಈ, ದಾವೋಷ್ಣಖರವಾತಃ-ದಾವ-ಕಾಡುಕಿಚ್ಚಿನ, ಉಷ್ಣ-ಬಿಸಿಯಿಂದ, ಖರ-ತೀಕ್ಷ್ಣವಾದ, ವಾತಃ-ಗಾಳಿಯು, ಶ್ವಾಸವತ್-ಉಸುರಿನಹಾಗೆ, ಭಾತಿ- ತೋರುತ್ತಿದೆ ಪಶ್ಯತ-ನೋಡಿರಿ. ತದ್ದಗ್ಧಸತ್ವದುರ್ಗಂಧಃ-ತತ್-ಆಕಾಡುಕಿಚ್ಚಿನಿಂದ, ದಗ್ಧ-ಸುಡಲ್ಪಟ್ಟ, ಸತ್ವ-ಜಂತುಗಳ, ದುರ್ಗಂಧಃ- ಕೆಟ್ಟನಾತವು, ಅಂತರಾಮಿಷಗಂಧವತ್-ಅಂತಃ-ಒಳಗಣ, ಆಮಿಷ-ಮಾಂಸದ, ಗಂಧವತ್-ಕಂಪಿನಹಾಗಿದೆ ‖೧೩‖ ಅಯಂ-ಈಸರ್ಪವು, ನಿವಿಷ್ಟಾನ್- ಒಳಹೊಕ್ಕ, ಅಸ್ಮಾನ್ ಏತಾನ್-ಈ ನಮ್ಮನ್ನು, ಗ್ರಸಿತಾ ಕಿಂ- ನುಂಗುವುದೋ ಏನು, ತಥಾಚೇತ್-ಹಾಗಾದರೆ, ಬಕವತ್-ಕೊಕ್ಕರಿಯಹಾಗೆ, ಅನೇನ-ಈಕೃಷ್ಣನಿಂದ, ಕ್ಷಣಾತ್-ನಿಮಿಷದಲ್ಲಿ, ವಿನಂಕ್ಷ್ಯತಿ-ವಿನಾಶವನ್ನು ಹೊಂದುತ್ತೆ. ಇತಿ-ಹೀಗೆಂದು, ಬಕಾರ್ಯುಶನ್ಮುಖಂ-ಬಕಾರಿ- ಬಕಾಸುರನನ್ನು ಕೊಂದಕೃಷ್ಣನ, ಉಶತ್- ಚೆಲುವಾದ, ಮುಖಂ- ಮೋರೆಯನ್ನು, ವೀಕ್ಷ್ಯ-ನೋಡಿ, ಉದ್ಧಸಂತಸ್ಸಂತಃ-ಹೆಚ್ಚಾಗಿನಗುತಲಿರುವರಾಗಿ, ಕರತಾಡನೈಃ-ಚಪ್ಪಾಳಿಗಳೊಡನೆ, ಯಯುಃ-ಹೋದರು ‖೧೪‖ ಅಖಿಲಲೋಕಹೃತ್ಸ್ಥಿತಃ- ಅಖಿಲಲೋಕ-ಸಕಲಪ್ರಾಣಿಗಳ, ಹೃತ್-ಹೃದಯದಲ್ಲಿ, ಸ್ಥಿತಃ-ಇರುವ, ಭಗವಾನ್-ಸರ್ವಜ್ಞನಾದಕೃಷ್ಣನು, ಇತ್ಥಂ-ಹೀಗೆ, ಮಿಥಃ- ಪರಸ್ಪರವಾಗಿ, ಅತಥ್ಯಂ-ಸುಳ್ಳಾದ, ಅತದ್ಜ್ಞಭಾಷಿತಂ-ಅದರನ್ನರಿಯದವರ ಮಾತನ್ನು, ಶ್ರುತ್ವಾ-ಕೇಳಿ, ಸ್ವಾನಾಂ- ತನ್ನವರಿಗೆ, ಮೃಷಾರಕ್ಷಃ-ಸಟೆಯಾದ ಸರ್ಪರೂಪವನ್ನು ಧರಿಸಿದ ಅಸುರನು, ಮೃಷಾಯತೇ-ಸುಳ್ಳಿನಂತೆ ಆಗುವನು (ಸರ್ಪವಾಗಿತೋರುತ್ತಿದ್ದರೂ ನನ್ನವರಿಗೆಸರ್ಪದಹಾಗೆತೋರುತ್ತಿರುವನು) ಇತಿ-ಹೀಗೆ, ವಿಚಿಂತ್ಯ- ಆಲೋಚಿಸಿ, ವಿದಿತ್ವಾ-ತಿಳಿದು, ನಿಷೇದ್ಧುಂ- ತಡೆಯುವದ

---

ತಂಗಳ ಶಿಖರಗಳ ಪಂತಿಗಳು ಅಜಗರದ ಕೋರೆ ದಾಡೆಗಳೊಡನೆ ಸಹ ಸಂವಾದಂಗೆಯ್ಯುತಲಿದೆ. ನೋಡುವರಾಗಿ ‖೧೧‖ ಮತ್ತು, ವಿಸ್ತೃತವಾದ ದೀರ್ಘವಾದ ಈ ವನಮಾರ್ಗವು- ಅಜಗರದ ನಾಲಿಗೆಯಂತೆ ತೋರುತಲಿದೆ. ಈ ಪರ್ವತದ ಶಿಖರಗಳ ಮಧ್ಯದಲಿರುವ ಗಾಢಾಂಧಕಾರವು ಒಳಬಾಯಿಯಂತೆ ತೋರುತಲಿದೆ. ನೋಡುವರಾಗಿ ‖೧೨‖ ಎಲೈ, ಮಿತ್ರರೇ! ಕಾಡುಗಿಚ್ಚಿನಂತೆ ಉಷ್ಣವಾಗಿಯೂ ತೀಕ್ಷ್ಣವಾಗಿಯೂ ಬೀಸುವವಾಯು ಆಯಜಗರದ ಶ್ವಾಸವಾಯುವಿನಂತೆ ತೋರುತಲಿದೆ ನೋಡಿದವರಾಗಿ. ಮತ್ತು, ಆಕಾಡುಗಿಚ್ಚಿನಿಂದ ದಹಿಸಲ್ಪಟ್ಟ ಪ್ರಾಣಿಗಳ ಈದುರ್ಗಂಧವೇ ಈ ಅಜಗರದ ಬಾಯಲ್ಲಿಸೇರಿರುವ ಮಾಂಸಗಂಧದಂತೆ ತೋರುತಲಿದೆ ಅಹುದೋ ಅಲ್ಲವೋ ನೋಡುವರಾಗಿ ‖೧೩‖ (ಎಲೈ, ಪರೀಕ್ಷಿದ್ರಾಯನೇ! ಆಗೋಪಾಲ ಬಾಲಕರು ಈ ರೀತಿಯಿಂದ ಸತ್ಯವಾಗಿರುವ ಅಜಗರವನ್ನೇ ಪ್ರಕಾರಾಂತರವಾಗಿ ಉತ್ಪ್ರೇಕ್ಷೆಯಂಗೆಯ್ದು, ನಿರ್ಭೀತರಾಗಿ ನಡೆದರೆಂದು ನಿರೂಪಿಸುವನು. ಅವೆಂತೆನೆ-) ಎಲೈ, ಮಿತ್ರರೇ! ಈ ಭಯಂಕರವಾದ ಈ ಅಜಗರವು ಈ ವನವಂ ಪ್ರವೇಶಿಸಿರುವ ನಮ್ಮೆಲ್ಲರಂ ಗ್ರಾಸಂಗೆಯ್ವುದೋ ಏನೋ! ಹಾಗಾದ ಪಕ್ಷದಲ್ಲಿ ಆಕ್ಷಣದಲ್ಲಿಯೇ ಈ ಅಜಗರವು ಶ್ರೀಕೃಷ್ಣನಿಂದ ಬಕಾಸುರನಂತೆ ವಿಲಯವನೆಯ್ದುವುದು, ಎಂದು ಈರೀತಿಯಾಗಿ ಆಗೋಪಾಲ ಬಾಲಕರು ನುಡಿದು, ಬಕವೈರಿಯಾದ ಆಕೃಷ್ಣನ ಮನೋಹರವಾದ ಮುಖವಂ ನೋಡಿ ಹಸ್ತತಾಳಂಗಳಂಗೆಯ್ಯುತ್ತ ಗಟ್ಟಿಯಾಗಿ ನಗುತಲಿರುವವರಾಗಿಯೂ ಆಗಿ, ಮುಂದಕ್ಕೆನಡೆದರು ‖೧೪‖ ಸರ್ವಪ್ರಾಣಿಗಳ ಹೃದಯದಲ್ಲಿ ವಾಸಂಗೆಯ್ವ ಭಗವಂತನಾದ ಶ್ರೀಕೃಷ್ಣನು - ಆಸಮಯದಲ್ಲಿ ಈರೀತಿಯಿಂದ ಪರಸ್ಪರವಾಗಿ

ನಾಂನಿಷೇದ್ಧುಂಭಗವಾನ್ಮನೋದಧೇ ॥೧೫॥ ತಾವತ್ಪ್ರವಿಷ್ಟಾಸ್ತ್ವಸುರಾಂತರೋದರಂಪರಂನಗೀರ್ಣಾಶ್ಶಿಶವಸ್ಸವತ್ಸಕಾಃ । ಪ್ರತೀಕ್ಷಮಾಣೇನಬಕಾರಿವೇಶನಂಹತಸ್ವಕಾನ್ತಸ್ಸ್ಮರಣೇನರಕ್ಷಸಾ ॥೧೬॥ ತಾನ್ವೀಕ್ಷ್ಯಕೃಷ್ಣಸ್ಸಕಲಾಭಯಪ್ರದಸ್ಹ್ಯನನ್ಯನಾಥಾನ್ಸ್ವಕರಾದಪಚ್ಯುತಾನ್ । ದೀನಾಂಶ್ಚಮೃತ್ಯೋರ್ಜಠರಾಗ್ನಿಘಾಸಾನ್ಘೃಣಾರ್ದಿತೋದಿಷ್ಟಕೃತೇನವಿಸ್ಮಿತಃ ॥೧೭॥ ಕೃತ್ಯಂಕಿಮತ್ರಾಸ್ಯಖಲಸ್ಯಜೀವನಂನೋವಾಅಮೀಷಾಂಚಸತಾಂವಿನಾಶನಮ್ । ದ್ವಯಂಕಥಂಸ್ಯಾದಿತಿಸಂವಿಚಿನ್ತ್ಯತದ್ಜ್ಞಾತ್ವಾವಿಶತ್ತುಣ್ಡಮಶೇಷದೃಗ್ಘರಿಃ ॥೧೮॥ ತದಾಘನಚ್ಛದಾದೇವಾಭಯಾದ್ಧಾಹೇತಿಚುಕ್ರುಶುಃ । ಜಹೃಷುರ್ಯೇಚಕಂಸಾದ್ಯಾಃ

---

ಕ್ಕೆ, (ಅದರಬಾಯೊಳಕ್ಕೆ ಹೋಗದಂತೆಮಾಡುವುದಕ್ಕೆ, ಯಾವತ್- ಎಷ್ಟರೊಳಗೆ, ಮನಃದಧೇ-ಮನಸ್ಸನ್ನು ಧರಿಸಿದನೋ (ಸಂಕಲ್ಪಿಸಿದನೋ) ॥೧೫॥ತಾವತ್-ಅಷ್ಟರಲ್ಲಿ, ಅಸುರಾಂತರೋದರಂ-ಅಸುರ-ದೈತ್ಯನ, ಅಂತರ-ಒಳಗಣ, ಉದರಂ-ಹೊಟ್ಟೆಯನ್ನು, ಪ್ರವಿಷ್ಟಾಃ-ಹೊಕ್ಕಂಥಾ, ಸವತ್ಸಕಾಃ-ಕರುಗಳಿಂದಸಹಿತರಾದ, ಶಿಶವಃ-ಹುಡುಗರು, ಹತಸ್ವಕಾಂತಃಸ್ಮರಣೇನ-ಹತ-ಕೊಲ್ಲಲ್ಪಟ್ಟ, ಸ್ವಕ-ತನ್ನವರಾದಪೂತನಾಬಕರ, ಅಂತಸ್ಸ್ಮರಣೇನ-ಒಳನೆನಪುಳ್ಳವನಾದ್ದರಿಂದಲೇ, ಬಕಾರಿವೇಶನಂ-ಬಕಾರಿ-ಬಕವೈರಿಯಾದಕೃಷ್ಣನು, ವೇಶನಂ-ಪ್ರವೇಶಿಸುವುದನ್ನು, ಪ್ರತೀಕ್ಷಮಾಣೇನ-ಎದುರುನೋಡುತಲಿರುವ, ರಕ್ಷಸಾ-ಅಘಾಸುರನಿಂದ, ಪರಂ-ಅಧಿಕವಾಗಿ, ನಗೀರ್ಣಾಃ-ನುಂಗಲ್ಪಡಲಿಲ್ಲವು ॥೧೬॥ಸಕಲಾಭಯಪ್ರದಃ-ಸಕಲ-ಎಲ್ಲರಿಗೂ, ಅಭಯ-ಅಭಯವನ್ನು, ಪ್ರದಃ-ಕೊಡುತಲಿರುವನಾದ, ಕೃಷ್ಣಃ-ಕೃಷ್ಣನು, ಅನನ್ಯನಾಥಾನ್-ತನಗಿಂತಲೂಬೇರೆರಕ್ಷಕರಿಲ್ಲದವರಾದ, ಸ್ವಕರಾತ್-ತನ್ನಕೈಯಿಂದ, ಅಪಚ್ಯುತಾನ್-ತಪ್ಪಿಹೋದವರಾದ, ದೀನಾಂಶ್ಚ-ದುರ್ಗತಿಯಂಪಡೆದವರಾದ, ಮೃತ್ಯೋಃ-ಯಮನ, ಜಠರಾಗ್ನಿಘಾಸಾನ್-ಜಠರ-ಹೊಟ್ಟೆಯೊಳಗಣ, ಅಗ್ನಿ-ಬೆಂಕಿಗೆ, ಘಾಸಾನ್-ಹುಲ್ಲಾಗಿರುವರಾದ, ತಾನ್-ಆಕರುಗಳನ್ನೂ ಹುಡುಗರನ್ನೂ, ವೀಕ್ಷ್ಯ-ನೋಡಿ, ಘೃಣಾರ್ದಿತಃ-ಘೃಣಾ-ದಯೆಯಿಂದ, ಅರ್ದಿತಃ-ಪೀಡಿತನಾಗಿ, ದಿಷ್ಟಕೃತೇನ-ಅವರ ಅದೃಷ್ಟದಿಂದ ಮಾಡಲ್ಪಟ್ಟಕೆಲಸದಿಂದ, ವಿಸ್ಮಿತಃ-ಅಚ್ಚರಿಗೊಂಡವನಾದನು॥ ಅತ್ರ-ಇಲ್ಲಿ, ಕೃತ್ಯಂ-ಮಾಡತಕ್ಕಕೆಲಸವು, ಕಿಂ-ಏನುಂಟು, ಅಸ್ಯ-ಈ, ಖಲಸ್ಯ-ದುಷ್ಟದೈತ್ಯನ, ಜೀವನಂ-ಪ್ರಾಣರಕ್ಷಣವು, ನೋವಾ-ಇಲ್ಲದಿದ್ದರೆ, ಅಮೀಷಾಂ-ಈ, ಸತಾಂ-ಸಾಧುಗಳಾದ, ಕರುಗಳ ಹುಡುಗರ, ವಿನಾಶಂಚ-ಮರಣವು). ದ್ವಯಂ-ಇವೆರಡೂ, ಕಥಂಸ್ಯಾತ್-ಹೇಗಾದೀತು; (ಅವನುಸತ್ತರೆಇವರುಸಾಯುವರು.) ಇತಿ-ಹೀಗೆ, ಸಂವಿಚಿತ್ಯ-ಆಲೋಚಿಸಿ, ಅಶೇಷದೃಕ್-ಸರ್ವವನ್ನೂನೋಡುತಲಿರುವ, ಹರಿಃ-ಕೃಷ್ಣನು, ತತ್-ಅದರ ಉಪಾಯವನ್ನು, ಜ್ಞಾತ್ವಾ-ತಿಳಿದು, ತುಂಡಂ-ಸರ್ಪದಮುಖವನ್ನು, ಅವಿಶತ್-ಹೊಕ್ಕನು॥೧೮॥

---

ಯಥಾರ್ಥವನರಿಯದಿರುವ ಗೋಪಬಾಲಕರ ಅಸತ್ಯವಾದ ವಚನವಂಕೇಳಿ, ಮನಸ್ಸಿನಲ್ಲಿ "ಎಲೈ! ವಸ್ತುತಃ ಅಜಗರಶರೀರವಂ ಧರಿಸಿರುವ ಅಘಾಸುರನೇ, ನಮ್ಮ ಗೋಪಾಲ ಬಾಲಕರಿಗೆ ಅಜಗರ ಸಾದೃಶ್ಯದಿಂದ ತೋರುತಲಿರುವನು. ನೋಡಿದೆಯಾ ?" ಎಂದು ಆಲೋಚಿಸಿ ಇವನು ಅಸುರನೆಂದು ತಿಳಿದು ಯಾವವರೆಗೆ ಆ ಗೋಪಾಲ ಬಾಲಕರಂ ಮುಂದೆ ಪ್ರವೇಶಂಗೆಯ್ಯದಂತೆ ಅಡ್ಡಗೆಯ್ಯಲು ಸಂಕಲ್ಪಿಸಿದನೊ. ॥೧೫॥ ಅಷ್ಟರೊಳಗೆ ಗೋಪಾಲ ಬಾಲಕರು ಕರುಗಳೊಡನೆ ಅಘಾಸುರನ ಉದರಮಧ್ಯದಲಿ ಪ್ರವೇಶಮಾತ್ರಂಗೆಯ್ದರೇ ಹೊರತು, ಆಗ ಹತರಾದ ತನಗೆ ಸಹೋದರರಾದ ಪೂತನಾ ಬಕಾಸುರರ ವಿಲಯವನ್ನೇ ಸ್ಮರಿಸುತಲಿರುವವನಾದುದರಿಂ ಬಕವೈರಿಯಾದ ಆಕೃಷ್ಣನ ಪ್ರವೇಶವಂ ನಿರೀಕ್ಷಿಸುತಲಿರುವ ಆ ಅಘಾಸುರನಿಂದ ಆಗೋಪ ಬಾಲಕರು ಕರುಗಳೂ ಸಹ ಗ್ರಾಸಂ ಗೆಯ್ಯಲ್ಪಟ್ಟವರಾಗಲಿಲ್ಲವು. ॥೧೬॥ ಆಸಮಯದಲ್ಲಿ ಸಮಸ್ತರಿಗೂ ಅಭಯಪ್ರದನಾದ ಕೃಷ್ಣಸ್ವಾಮಿಯು ತನ್ನಂ ಹೊರತು ಮತ್ತೊಬ್ಬ ಪಾಲಕನಿಲ್ಲದೇ ಇರುವ ತನ್ನ ಕೈಯ್ಯಿಂದ ತಪ್ಪಿರುವ ದೀನರಾದ, ಮತ್ತು ಅಘಾಸುರನ ಜಠರಾಗ್ನಿಗೆ ಗ್ರಾಸಭೂತರಾದ, ಆಗೋಪ ಬಾಲಕರಂನೋಡಿ ದಯೆಯಿಂದ ನೆನಸಲ್ಪಟ್ಟ ಹೃದಯವುಳ್ಳವನಾಗಿ, ದೈವವ್ಯಾಪಾರದಿಂದಲೂ ಆಶ್ಚರ್ಯವನೆಯ್ದಿ. ॥೧೭॥ "ಈಗ ನನ್ನಿಂದ ಮಾಡಲ್ತಕ್ಕುದೇನು ; ದುಷ್ಟನಾದ ಈಯಘಾಸುರನು ಜೀವಿಸಬಾರದು. ಸಾಧುಗಳಾದ ಈ ಗೋಪಾಲ ಬಾಲಕರು ವಿಲಯವ ನೆಯ್ದುವರಾಗ ಬಾರದು. ಈ ಉಭಯವೂ ಎಂತುಸಿದ್ಧಿಸುವುದು" ಎಂದು ಮನಸಿನಲಿ ಯೋಚಿಸಿ ಅನಂತರದಲ್ಲಿ ಸರ್ವಜ್ಞನಾದುದರಿಂ ಈ ಉಪಾಯವಂ ತಿಳಿದು ಅಜಗರ ಮುಖದಲ್ಲಿ ಪ್ರವೇಶಿಸಿದನು ॥೧೮॥ ಆಸಮಯದಲ್ಲಿ ಅಘಾಸುರನ ದೆಸೆಯಿಂದುಂಟಾದ ಭಯದಿಂ ಮೇಘಗಳಲ್ಲಿ ಮರೆಯಾಗಿರುವ

ಕ್ಷೌಣಪಾಸ್ತ್ವಘಬಾಂಧವಾಃ ‖ ೨೯ ‖ ತಚ್ಛ್ರುತ್ವಾಭಗವಾನ್ಕೃಷ್ಣಸ್ತ್ವವ್ಯಯಸ್ಸಾರ್ಭವತ್ಸಕ
ಮ್ | ಚೂರ್ಣೀಚಿಕೀರ್ಷೋರೇವಾದೌತರಸಾವವೃಧೇಗಳೇ ‖ ೩೦ ‖ ತತೋತಿಕಾಯಸ್ಯನಿರುದ್ಧಮಾರ್ಗಿ
ಣೋಹ್ಯುದ್ಗೀರ್ಣದೃಷ್ಟೇರ್ಭ್ರಮತಸ್ತ್ವಿತಸ್ತತಃ | ಪೂರ್ಣೋಂತರಂಗೇಪವನೋನಿರುದ್ಧೋಮೂರ್ಧನ್* ವಿ
ನಿರ್ಭಿದ್ಯವಿನಿರ್ಗತೋಬಹಿಃ ‖ ೩೧ ‖ ತೇನೈವಸರ್ವೇಷುಬಹಿರ್ಗತೇಷುಪ್ರಾಣೇಷುಸರ್ವಾಂತ್ಸುಹೃದಃಪರೇತಾನ್|
ದೃಷ್ಟ್ವಾಸ್ವಯೋತ್ಥಾಪ್ಯತದನ್ವಿತಃಪುನಃಕೃಚ್ಛ್ರಾನ್ಮುಕುಂದೋಭಗವಾನ್ವಿನಿರ್ಯಯೌ ‖ ೩೨ ‖ ಪೀನಾ

ತದಾ-ಆಗ, ಘನಚ್ಛದಾಃ-ಮೇಘವೇಮುಸುಕಾಗಿವುಳ್ಳ, ದೇವಾಃ-ದೇವತೆಗಳು, ಭಯಾತ್-ಹೆದರಿಕೆಯಿಂದ, ಹಾಹೇತಿ-ಹಾಹಾಯೆಂದು, ಚುಕ್ರುಶುಃ-ಕೂಗಿದರು ಕಂಸಾದ್ಯಾಃ-ಕಂಸನೇಮೊದಲನೆಯವನಾಗಿವುಳ್ಳ, ಅಘಬಾಂಧವಾಃ-ಅಘಾಸುರನನೆಂಟರಾದ, ಕೌಣಪಾಃ-ರಾಕ್ಷಸರು, ಯೇಚ-ಯಾರುಂಟೋ, ತೇತು-ಅವರಾದರೋ, ಜಹೃಷುಃ-ಸಂತೋಷಿಸಿದರು ‖೨೯‖ ಭಗವಾನ್-ಸರ್ವಜ್ಞನಾದ, ಅವ್ಯಯಃ-ನಾಶರಹಿತನಾದ, ಕೃಷ್ಣಸ್ತು - ಕೃಷ್ಣನಾದರೋ, ತತ್- ಅದರನ್ನು, ಶ್ರುತ್ವಾ-ಕೇಳಿ, ಸಾರ್ಭವತ್ಸಕಂ - ಹುಡುಗರಿಂದಸಹಿತ ವಾದಕರುಗಳಹಿಂಡನ್ನು, ಚೂರ್ಣೀಚಿಕೀರ್ಷೋಃ-ಪುಡಿಯಾಗಿಮಾಡಲೆಳಸಿದಅಜಗರದ, ಗಲೇ-ಗಂಟಲಿನಲ್ಲಿ, ಆದೌ-ಮುಂಚೆ, ತರಸಾ-ವೇಗದಿಂದ, ವವೃಧೇ-ಬೆಳೆದನು ‖೩೦‖ ತತಃ-ಆಬಳಿಕ, ಅತಿಕಾಯಸ್ಯ-ದೊಡ್ಡಮೈಯುಳ್ಳ, ನಿರುದ್ಧಮಾರ್ಗಿಣಃ-ತಡೆಯಲ್ಪಟ್ಟದಾರಿಗಳುಳ್ಳ, ಇತಸ್ತತಃ-ಇಲ್ಲಲ್ಲಿ, ಭ್ರಮತಃ-ತಿರುಗುತಲಿರುವ, ಉದ್ಗೀರ್ಣದೃಷ್ಟೇಃ-ಹೊರಟುಕೊಂಡಕಂಣುಗಳುಳ್ಳ, ಅಘಾಸುರನ, ಅಂತರಂಗೇ-ಶರೀರದೊಳಗೆ, ನಿರುದ್ಧಃ-ತಡೆಯಲ್ಪಟ್ಟ, ಪವನಃ-ಗಾಳಿಯು, ಪೂರ್ಣಃ-ತುಂಬಿದ್ದಾಗಿ, ಮೂರ್ಧನ್-ತಲೆಯಲ್ಲಿ, ವಿನಿರ್ಭಿದ್ಯ-ಭೇದಿಸಿಕೊಂಡು, ಬಹಿಃ-ಹೊರಗೆ, ವಿನಿರ್ಗತಃ-ಹೊರಟುಹೋದದ್ದಾಯಿತು ‖೩೧‖ ತೇನೈವಸಹ-ಅದರೊಂದಿಗೇವೇ, ಸರ್ವೇಷುಪ್ರಾಣೇಷು-ಸಕಲಪ್ರಾಣಗಳೂ, ಬಹಿರ್ಗತೇಷುಸತ್ಸು-ಹೊರಕ್ಕೆಹೋದವಾಗುತ್ತಿರಲು, ಭಗವಾನ್-ಸರ್ವಜ್ಞನಾದ, ಮುಕುಂದಃ-ಮೋಕ್ಷದಾಯಕನಾದಕೃಷ್ಣನು, ಪರೇತಾನ್-ಸತ್ತುಹೋಗಿದ್ದ, ಸರ್ವಾನ್-ಸಮಸ್ತರಾದ, ಸುಹೃದಃ-ಮಿತ್ರರನ್ನು, ಸ್ವಯಾ-ತನ್ನಯ, ದೃಷ್ಟ್ಯಾ-ನೋಟದಿಂದ, ಉತ್ಥಾಪ್ಯ-ಎಬ್ಬಿಸಿ, ತದನ್ವಿತಃ-ಅವರೊಡಗೂಡಿದವನಾಗಿ, ಕೃಚ್ಛ್ರಾತ್- ಪ್ರಯಾಸದಿಂದ, ಪುನಃ-ಮರಳಿಯೂ, ವಿನಿರ್ಯಯೌ-ಹೊರಕ್ಕೆಬಂದನು ‖೩೨‖ ಪೀನಾಹಿಭೋಗೋತ್ಥಿತಂ-ಪೀನ-ಬಲತ, ಅಹಿ-ಸರ್ಪದ, ಭೋಗ-ಶರೀರದಿಂ,

---

ದೇವತೆಗಳು ಶ್ರೀಕೃಷ್ಣನು ವಿಲಯವನೆಯ್ದುವನೆಂಬ ಶಂಕೆಯಿಂ ಹಿಂದಕ್ಕೆಹೊರಟುಬಾರೆಂದು ಕರೆದರು. ಮತ್ತು ಕಂಸನೇಮೊದಲಾದ ಅಘಾಸುರನ ಬಂಧುಗಳಾದ ಅಸುರರೆಲ್ಲರೂ ಸಂತೋಷವನೆಯ್ದಿನಕ್ಕರು.‖೨೯‖ ಆಗ ಚ್ಯುತಿರಹಿತನಾಗಿಯೂ ಭಗವಂತನಾಗಿಯೂ ಇರುವ ಶ್ರೀಕೃಷ್ಣನು ಆದೇವತೆಗಳವಚನವಂಕೇಳಿ, ಆಕಂಸಾದಿಗಳಸಂತೋಷವಂ ನೋಡಿ, ಆಗೋಪಾಲಬಾಲಕರಂ ಕರುಗಳಂ ಸಹ ಚೂರ್ಣಂಗೆಯ್ಯಲಿಚ್ಛೆಯುಳ್ಳ ಅಘಾಸುರನ ಕಂಠದಲ್ಲಿ ಅತಿತ್ವರೆಯಿಂ ಗ್ರಾಸಂಗೆಯ್ಯುವದರೊಳಗೆ ಬೆಳೆದನು. ‖೩೦‖ ಆಸಮಯದಲ್ಲಿ ಮಹತ್ತಾದ ದೇಹವುಳ್ಳ ಅಡ್ಡಗೆಯ್ಯಲ್ಪಟ್ಟ ಮುಖಾದಿಗಳಿಗೆ ಮಾರ್ಗಭೂತವಾದ ಕಂಠವುಳ್ಳ, ಹೊರಕ್ಕೆಹೊರಟಿರುವ ನೇತ್ರಂಗಳುಳ್ಳ, ಅಲ್ಲಲ್ಲಿಹೊರಳುತಲಿರುವ, ಅಘಾಸುರನ ದೇಹ ಮಧ್ಯದಲಿ ನಿರೋಧಂಗೆಯ್ಯಲ್ಪಟ್ಟ ವಾಯುವು ಪರಿಪೂರ್ಣವಾಗಿ ಒಳಗೆಹಿಡಿಯಲಾರದೆ ಆಯಸುರನ ಬ್ರಹ್ಮರಂಧ್ರಮಾರ್ಗವ ಭೇದಿಸಿಕೊಂಡು ಹೊರಕ್ಕೆಹೊರಟಿತು. ‖೩೧‖ ಅನಂತರಲ್ಲಿ ಭಗವಂತನಾದ ಶ್ರೀಕೃಷ್ಣನು ಆ ಮಾರ್ಗದಿಂದಲೇ ಅವನ ಸಮಸ್ತಪ್ರಾಣಂಗಳೂ ಹೊರಗೆ ಹೊರಟಂತೆಯವುಗಳಾಗುತಿರಲು ಮೃತಿಯನೆಯ್ದಿರುವ ಆ ಗೋಪಾಲ ಬಾಲಕರು ಆಕರುಗಳಂ ಸಹ ಅಮೃತವಂವರ್ಷಿಸುವ ದೃಷ್ಟಿಯಿಂದಲೇ ಬದುಕಿಸಿ, ಪುನಃ ಅವರೊಡಗೂಡಿ ಆ ಅಘಾಸುರನ ಮುಖದೆಸೆಯಿಂದ ಹೊರಕ್ಕೆ ಹೊರಟುಬಂದನು.‖೩೨‖



ಹಿಭೋಗೋತ್ಥಿತಮದ್ಭುತಂಮಹಜ್ಜ್ಯೋತಿಸ್ಸ್ವಧಾಮ್ನಾಜ್ವಲಯದ್ದಿಶೋದಶ | ಪ್ರತೀಕ್ಷ್ಯಖೇವಸ್ಥಿತಮೀಶನಿರ್ಗಮಂವಿವೇಶತಸ್ಮಿನ್ಮಿಷತಾಂದಿವೌಕಸಾಮ್ ॥ ೩೩ ॥ ತತೋಽತಿಹೃಷ್ಟಾಸ್ಸ್ವಕೃತೋಽಕೃತಾರ್ಹಣಂಪುಷ್ಪೈಸ್ಸುರಾಅಪ್ಸರಸಶ್ಚನರ್ತನೈಃ | ಗೀತೈಸ್ಸುಗಾವಾದ್ಯಧರಾಶ್ಚವಾದ್ಯಕೈಸ್ಸ್ತವೈಶ್ಚವಿಪ್ರಾಜಯನಿಸ್ಸ್ವನೈರ್ಗಣಾಃ ॥ ೩೪ ॥ ತದದ್ಭುತಸ್ತೋತ್ರಸುವಾದ್ಯಗೀತಿಕಾಜಯಾದ್ಯನೇಕೋತ್ಸವಮಂಗಳಸ್ವನಾನ್ । ಶ್ರುತ್ವಾಸ್ವಧಾಮ್ನೋನ್ತ್ಯಜಆಗತೋಽಚಿರಾದ್ದೃಷ್ಟ್ವಾಮಹೇಶಸ್ಯಜಗಾಮವಿಸ್ಮಯಮ್ ॥ ೩೫ ॥

---

ಉತ್ಥಿತಂ-ಎದ್ದ, ಅದ್ಭುತಂ- ಆಶ್ಚರ್ಯಕರವಾದ, ಸ್ವಧಾಮ್ನಾ, ತನ್ನ ಬೆಳಕಿನಿಂದ, ದಶದಿಶಃ- ಹತ್ತು ದಿಕ್ಕುಗಳನ್ನೂ, ಉಜ್ವಲಯತ್-ಬೆಳಗುತಲಿರುವ, ಮಹತ್-ದೊಡ್ಡದಾದ, ಜ್ಯೋತಿಃ-ಬೆಳಕು, ಖೇ-ಆಕಾಶದಲ್ಲಿ, ಅವಸ್ಥಿತಂಸತ್- ಇರುವುದಾಗಿ, ಈಶನಿರ್ಗಮಂ-ಈಶ-ಕೃಷ್ಣನು, ನಿರ್ಗಮಂ-ಸರ್ಪಶರೀರದಿಂದ ಹೊರಕ್ಕೆ ಬರೋಣವನ್ನು, ಪ್ರತೀಕ್ಷ್ಯ-ನೋಡಿ, ದಿವೌಕಸಾಂ-ದೇವತೆಗಳು, ಮಿಷತಾಂಸತಾಂ- ನೋಡುತ್ತಿರುವರಾಗುತ್ತಿರಲು, ತಸ್ಮಿನ್-ಆ ಕೃಷ್ಣನಲ್ಲಿ, ವಿವೇಶ-ಹೊಕ್ಕಿತು ॥ ೩೩ ॥ ತತಃ-ಆಮೇಲೆ, ಅತಿಹೃಷ್ಟಾಃ-ಬಹಳ ಸಂತೋಷಿಸಿದ, ಸುರಾಃ-ದೇವತೆಗಳು, ಸ್ವಕೃತಃ-ತಮ್ಮ ಕೆಲಸವನ್ನು ಮಾಡಿದ ಕೃಷ್ಣನಿಗೆ,- ಪುಷ್ಪೈಃ-ಹೂವುಗಳಿಂದ, ಅರ್ಹಣಂ-ಪೂಜೆಯನ್ನು, ಅಕೃತ- ಮಾಡಿದರು ಅಪ್ಸರಸಶ್ಚ ಅಪ್ಸರಸಿಯರೂ, ನರ್ತನೈಃ-ನಾಟ್ಯಗಳಿಂದಲೂ, ಸುಗಾಃ-ಚನ್ನಾಗಿ ಹಾಡುವ ಗಂಧರ್ವರು, ಗೀತೈಃ-ಗಾನಗಳಿಂದಲೂ, ವಾದ್ಯಧರಾಶ್ಚ-ವಾದ್ಯಗಳನ್ನು ಧರಿಸಿದವರು, ವಾದ್ಯಕೈಃ-ವಾದ್ಯಗಳಿಂದಲೂ, ವಿಪ್ರಾಃ-ಬ್ರಾಹ್ಮಣರು, ಸ್ತವೈಶ್ಚ-ಸ್ತೋತ್ರಗಳಿಂದಲೂ, ಗಣಾಃ-ದೇವಗಣಗಳು, ಜಯನಿಸ್ವನೈಃ-ಜಯಜಯಶಬ್ದಗಳಿಂದಲೂ, ಅರ್ಹಣಂ-ಪೂಜೆಯನ್ನು, ಅಕೃತ-ಮಾಡಿದರು ॥ ೩೪ ॥ ಅಜಃ-ಬ್ರಹ್ಮನು, ಸ್ವಧಾಮ್ನಃ- ತನ್ನ ಸ್ಥಾನದ, ಅಂತಿ- ಸಮೀಪದಲ್ಲಿ, ಮಹೇಶಸ್ಯ-ಕೃಷ್ಣನ, ತತ್-ಆ, ಅದ್ಭುತ-ಆಶ್ಚರ್ಯಕರವಾದ, ಸ್ತೋತ್ರ-ಸ್ತುತಿಗಳ, ಸುವಾದ್ಯ- ಮಂಗಳವಾದ್ಯಗಳ, ಗೀತಿಕಾ-ಹಾಡುಗಳ, ಜಯಾದಿ-ಜಯಶಬ್ದವೇ ಮೊದಲಾದ, ಅನೇಕ-ಹಲವಾದ, ಉತ್ಸವ-ಸಂತೋಷದ, ಮಂಗಳಸ್ವನಾನ್-ಕುಶಲಧ್ವನಿಗಳನ್ನು, ಶ್ರುತ್ವಾ-ಕೇಳಿ, ಅಚಿರಾತ್-ಬೇಗನೆ, ಆಗತಸ್ಸನ್-ಬಂದವನಾಗಿ, ದೃಷ್ಟ್ವಾ-ನೋಡಿ, ವಿಸ್ಮಯಂ-ಆಶ್ಚರ್ಯವನ್ನು ಜಗಾಮ-ಹೊಂದಿದನು ॥ ೩೫ ॥ ರಾಜನ್-ಅರಸೇ! ಅದ್ಭುತಂ - ಆಶ್ಚರ್ಯಕರವಾದ, ಆಜಗರಂ - ಅಜಗರಸಂಬಂಧವಾದ, ಚರ್ಮ- ತೊಗಲು, ಬೃಂ

---

ಆ ಸಮಯದಲ್ಲಿ ಮಹತ್ತಾದ ಅಜಗರದೇಹದದೆಸೆಯಿಂ ಮೇಲಕ್ಕೆ ಹೊರಟಿರುವ ಶುದ್ಧಸತ್ವಮಯವಾದ ಮಹತ್ತಾದ ಆಶ್ಚರ್ಯಕರವಾದ ಜ್ಯೋತಿಸ್ಸು- ಆಕಾಶದಲ್ಲಿ ನಿಂತಿರುವುದಾಗಿ ತನ್ನ ಕಾಂತಿಯಿಂ ದಶದಿಕ್ಕುಗಳಂ ಪ್ರಕಾಶಂಗೆಯ್ಯುತ ಆ ಕೃಷ್ಣನ ನಿರ್ಗಮನವಂ ನಿರೀಕ್ಷಿಸಿಕೊಂಡು ಅನಂತರದಲ್ಲಿ ಸಕಲದೇವತೆಗಳೂ ನೋಡುತಲಿರಲು ಆ ಶ್ರೀಕೃಷ್ಣನಲ್ಲಿ ಪ್ರವೇಶಿಸಿತು. ॥ ೩೩ ॥ ಅನಂತರದಲ್ಲಿ ದೇವತೆಗಳು ಸಂತೋಷಯುಕ್ತರಾಗಿ ತಮಗೆ ಇಷ್ಟವಾದ ಕಾರ್ಯಂಗೆಯ್ದಿರುವ ಶ್ರೀಕೃಷ್ಣನಂ ಪುಷ್ಪಂಗಳಿಂದ ಪೂಜಿಸಿದರು. ಅಪ್ಸರಸ್ತ್ರೀಯರುಗಳು ನರ್ತನಂಗೆಯ್ದರು. ಗಂಧರ್ವರು ಗಾನಂಗೆಯ್ದರು.. ಮೇಘಂಗಳು ದಿವ್ಯವಾದ್ಯಂಗೆಯ್ದುವು. ಸಮಸ್ತ ಋಷಿಗಳೂ ಸ್ತೋತ್ರಂಗೆಯ್ದರು. ಮತ್ತು ಸಿದ್ಧಚಾರಣ ವಿದ್ಯಾಧರಾದಿ ದೇವಗಣಂಗಳು ಜಯಶಬ್ದಂಗಳಂ ನುಡಿದವು. ॥ ೩೪ ॥ ಅನಂತರವಲ್ಲಿ ಬ್ರಹ್ಮದೇವನು ತನ್ನ ಸತ್ಯಲೋಕದ ಸಮೀಪವಂ ವ್ಯಾಪಿಸಿರುವ ಅತ್ಯಾಶ್ಚರ್ಯಕರಗಳಾದ ಸ್ತೋತ್ರ, ವಾದ್ಯ ಗಾನ ಜಯ ಶಬ್ದಂಗಳು ಮೊದಲಾದ ಅನೇಕೋತ್ಸವ ಮಂಗಳಧ್ವನಿಗಳಂ ಕೇಳಿ, ಶೀಘ್ರದಿಂ ಬಂದು ಶ್ರೀಕೃಷ್ಣನ ಮಹಿಮೆಯಂ ನೋಡಿ ಆಶ್ಚರ್ಯವನೆಯ್ದಿದನು. ॥ ೩೫ ॥ ಎಲೈ ಅರಸೇ! ಬೃಂದಾವನದಲ್ಲಿರುವ ಆಶ್ಚರ್ಯಕರ



ಶ್ರೀಶುಕಃ ॥ ರಾಜನ್ನಾಜಗರಂ ಚರ್ಮ ಶುಷ್ಕಂ ಬೃಂದಾವನೇಽದ್ಭುತಮ್ । ವ್ರಜೌಕಸಾಂ ಬಹುತಿಥಂ ಬಭೂ
ವಾಕ್ರೀಡಗಹ್ವರಮ್ ॥೩೬॥ ಏತತ್ಕೌಮಾರಕಂ ಕರ್ಮ ಹರೇರಾತ್ಮಾಹಿಮೋಕ್ಷಣಮ್ । ಮೃತ್ಯೋಃ ಪೌಗಂಡಕೇ
ಬಾಲಾ ದೃಷ್ಟ್ವೋಚುರ್ವಿಸ್ಮಿತಾ ವ್ರಜೇ ॥೩೭॥ ನೈತದ್ವಿಚಿತ್ರಂ ಮನುಜಾರ್ಭಮಾಯಿನಃ ಪರಾವರಾಣಾಂ ಪರ
ಮಸ್ಯ ವೇಧಸಃ । ಅಘೋಽಪಿ ಯತ್ಸ್ಪರ್ಶನಧೌತಪಾತಕಃ ಪ್ರಾಪಾತ್ಮಸಾಮ್ಯಂ ತ್ವಸತಾಂ ಸುದುರ್ಲಭಮ್ ॥೩೮॥
ಸಕೃದ್ಯದಂಗಪ್ರತಿಮಾಂತರಾಹಿತಾ ಮನೋಮಯೀ ಭಾಗವತೀಂ ದದೌ ಗತಿಮ್ । ಸ ಏವ ನಿತ್ಯಾತ್ಮಸುಖಾನು

---

ವನೇ-ಬೃಂದಾವನದಲ್ಲಿ, ಶುಷ್ಕಂ-ಒಣಗಿದ್ದಾಗಿ, ವ್ರಜೌಕಸಾಂ-ಗೋಕುಲದಲ್ಲಿರುವವರಿಗೆ, ಬಹುತಿಥಂ-ಬಹುದಿನಗಳು, ಆಕ್ರೀಡಗಹ್ವರಂ-ಆಕ್ರೀಡ-ಆಟಕ್ಕೆ, ಗಹ್ವರಂ-ಗವಿಯು, ಬಭೂವ-ಆಯಿತು॥೩೬॥ ಹರೇಃ-ಕೃಷ್ಣನ, ಏತತ್-ಈ, ಕೌಮಾರಕಂ-೫ವರುಷ ತುಂಬುವತನಕ ಕುಮಾರವಯಸ್ಸಿನಲ್ಲಿ ಮಾಡಲ್ಪಟ್ಟ, ಕರ್ಮ- ಕೆಲಸವನ್ನೂ, ಮೃತ್ಯೋಃ- ಮೃತ್ಯುವಿನದೆಸೆಯಿಂದ, ಆತ್ಮಾ-ಆತ್ಮರಿಗೆ, ಅಹಿ-ಸರ್ಪಕ್ಕೆ, ಮೋಕ್ಷಣಂ-ಮುಕ್ತಿಯನ್ನೂ ಅಥವಾ-ಮೃತ್ಯೋಃ-ಮೃತ್ಯುಸ್ವರೂಪವಾದ, ಆತ್ಮಾಹಿ-ಆತ್ಮರಿಗೆ ಸಂಸಾರಲಕ್ಷಣವಾದ ಸರ್ಪದದೆಸೆಯಿಂದ, ಮೋಕ್ಷಣಂ-ಮುಕ್ತಿಯನ್ನೂ, ಅಥವಾ- ಮೃತ್ಯೋಃ- ಸಂಸಾರರೂಪವಾದ ಮೃತ್ಯುವಿನದೆಸೆಯಿಂದ, ಆತ್ಮಾ-ಕೃಷ್ಣನಲ್ಲಿ, ಅಹಿ-ಅಘಾಸುರನಿಗೆ, ಮೋಕ್ಷಣಂ- ಐಕ್ಯವುಂಟಾದ ಮುಕ್ತಿಯನ್ನೂ, ಪೌಗಂಡಕೇ- ೬ನೆಯವರುಷದಿಂ ಹತ್ತನೆಯವರುಷದತನಕ ಯಿರತಕ್ಕ ಪೌಗಂಡವಯಸ್ಸಿಗೆ ಸೇರಿದ ೬ನೆಯವರುಷದಲ್ಲಿ, ಬಾಲಾಃ- ಹುಡುಗರು, ದೃಷ್ಟ್ವಾ-ಕಂಡು, ವಿಸ್ಮಿತಾಸ್ಸಂತಃ-ಆಶ್ಚರ್ಯಪಟ್ಟವರಾಗಿ, ವ್ರಜೇ-ಗೋಕುಲದಲ್ಲಿ, ಊಚುಃ-ಹೇಳಿದರು ॥೩೭॥ ಮನುಜಾರ್ಭಮಾಯಿನಃ-ಮನುಜಾರ್ಭ-ಮನುಷ್ಯಬಾಲಕನೆಂಬ, ಮಾಯಿನಃ-ಮೋಹಕಾಜ್ಞಾನವುಳ್ಳಂತಾ, ಪರಾವರಾಣಾಂ-ಮೇಲಾದವರಿಗೂ ಕೀಳಾದವರಿಗೂ, ಪರಮಸ್ಯ- ಮೇಲಾದವನೇಆದಂತಾ, ವೇಧಸಃ-ಕರ್ತನಾದ, ಕೃಷ್ಣನ. ಏತತ್-ಈಚರಿತ್ರವು, ನವಿಚಿತ್ರಂ, ಆಶ್ಚರ್ಯವಲ್ಲವು. ಅಘೋಽಪಿ-ಅಘಾಸುರನೂಕೂಡ, ತತ್ಸ್ಪರ್ಶನಧೌತಪಾತಕಸ್ಸನ್-ತತ್-ಆಕೃಷ್ಣನ, ಸ್ಪರ್ಶನ-ಸೋಂಕುವಿಕೆಯಿಂದ, ಧೌತ-ಕೊಡಹಲ್ಪಟ್ಟ, ಪಾತಕಃ-ಪಾಪವುಳ್ಳವನಾಗಿ, ಅಸತಾಂ-ದುಷ್ಟರಿಗೆ, ಸುದುರ್ಲಭಂ-ದೊರೆಯತಕ್ಕದ್ದಲ್ಲದ, ಆತ್ಮಸಾಮ್ಯಂ- ವಿಷ್ಣುಸಾರೂಪ್ಯವನ್ನು, ಪ್ರಾಪ-ಹೊಂದಿದನು ॥೩೮॥ ಅಂಗ-ಅಯ್ಯಾಪರೀಕ್ಷಿತನೇ! ಸಕೃತ್-ಒಂದುಸಲ, ಅಂತರಾಹಿತಾ-ಒಳಗಿರಿಸಿಕೊಳ್ಳಲ್ಪಟ್ಟ, ಮನೋಮಯೀ-ಸಂಕಲ್ಪಮಾತ್ರವಾದ, ಅಥವಾ ಇಚ್ಛಾಪರಿಣಾಮವಾದ, ಯದಂಗಪ್ರತಿಮಾ-ಯತ್-ಯಾವವಿಷ್ಣುವಿನ, ಅಂಗ-ಮೂರ್ತಿಯ, ಪ್ರ

---

ವಾದ ಆ ಅಜಗರಚರ್ಮವು ಬಹುಕಾಲವು ಆಗೋಕುಲ ವಾಸಿಗಳಾದ ಜನರಿಗೆ ವಿಹರಿಸುವದಕ್ಕೆ ಮಹಾಬಿಲವಾಯಿತು. ॥೩೬॥ (ಮತ್ತೊಂದಾಶ್ಚರ್ಯವಂ ಶುಕಮುನಿಯು ನಿರೂಪಿಸುವನದೆಂತೆನೆ-)ಎಲೈ, ಅರಸೇ! ಗೋಪಬಾಲಕರು-ಕೌಮಾರವಯಸ್ಸಾದ ೫ನೆಯವರುಷದಲ್ಲಿ ಶ್ರೀಕೃಷ್ಣನು ಅಘಾಸುರನಂ ಸಂಹರಿಸಿ ತಮ್ಮಂ ಮೃತ್ಯುವಿನದೆಸೆಯಿಂ ರಕ್ಷಿಸಿದವ್ಯಾಪಾರವಂ, ಸಂಸಾರರೂಪವಾದ ಮೃತ್ಯುವಿನದೆಸೆಯಿಂದ ಅಜಗರರೂಪಿಯಾದ ಅಘಾಸುರನಿಗೆ ಮೋಕ್ಷವನಿತ್ತು ರಕ್ಷಿಸಿದ ವ್ಯಾಪಾರವನ್ನೂ, ಮತ್ತು ಅಘಾಸುರನ ದೇಹದಿಂ ಹೊರಟಿರುವ ಜ್ಯೋತಿಸ್ಸು ಕೃಷ್ಣನಲ್ಲಿ ಪ್ರವೇಶಂಗೆಯ್ದವ್ಯಾಪಾರವನ್ನೂ, ಕಂಡು ಪೌಗಂಡವಯಸ್ಸಾದ ಆರನೆಯವರುಷದಲ್ಲಿ ಗೋಕುಲದಲ್ಲಿ ಆಶ್ಚರ್ಯಯುಕ್ತರಾಗಿ ಈಗಲೇ ಈ ಸಮಸ್ತವ್ಯಾಪಾರವೂ ನಡೆಯಿತೆಂದು ತಿಳಿದು ಹೇಳಿದರು. ॥೩೭॥ ಎಲೈ ಅರಸೇ! ಪಾಪಿಷ್ಠನಾದ ಅಘಾಸುರನೂ ಕೂಡ ಆ ಭಗವಂತನ ಸ್ಪರ್ಶಮಾತ್ರದಿಂದಲೇ ಕೊಡಹಲ್ಪಟ್ಟ ಪಾಪಂಗಳುಳ್ಳವನಾಗಿ, ದುಷ್ಟರಿಗೆ ದುರ್ಲಭನಾದ ಶ್ರೀಹರಿಯ ಸಾರೂಪ್ಯಮುಕ್ತಿಯಂ ಪಡೆದನೆಂಬ ವ್ಯಾಪಾರವು ಯಾವುದುಂಟೋ ಇದು ಮಾಯೆಯಿಂ ಮನುಷ್ಯಬಾಲಕನಂತೆ ನಟಿಸುವ, ಪರರಾದ ಬ್ರಹ್ಮಾದಿಗಳಿಗೂ ಅಪರರಾದ ದೇವತೆಗಳು ಮೊದಲಾದವರಿಗೂ ನಿಯಾಮಕನಾದ, ಆದಿಸೃಷ್ಟಿಕರ್ತನಾದ, ಶ್ರೀವಾಸುದೇವನಲ್ಲಿ ಆಶ್ಚರ್ಯಕರವಲ್ಲ. ॥೩೮॥ ಅದೆಂತೆನೆ- ಎಲೈ, ಅರಸೇ! ಒಂದು ಬಾರಿಯಾದರೂ ಹೃದಯದಲ್ಲಿ ಭಾವನಾಮಾತ್ರದಿಂ ಕಲ್ಪಿತವಾಗಿ ನಿಲ್ಲಿಸಲ್ಪಟ್ಟ ಶ್ರೀಹರಿಯ ಮೂರ್ತಿಯು ಪ್ರಹ್ಲಾದಮೊದಲಾದ ಮಹಾಯೋಗಿಗಳಿಗೆ ಮೋಕ್ಷಸಾಮ್ರಾಜ್ಯವಂ ಕೊಟ್ಟದ್ದಾದುದೋ,

ಭೂತ್ಯಭಿವ್ಯುದಸ್ತಮಾಯಃಪರಮೋಽಸ್ಯ ಕಿಂಪುನಃ ॥೩೯॥ ಶ್ರೀಸೂತಃ॥ ಇತ್ಥಂದ್ವಿಜಾಗ್ರ್ಯಾದಥದೇವದತ್ತಃ ಶ್ರುತ್ವಾಸ್ವಭರ್ತುಶ್ಚರಿತಂವಿಚಿತ್ರಮ್। ಪಪ್ರಚ್ಛಭೂಯೋಪಿತದೇವಪುಣ್ಯಂವೈಯಾಸಕಿಂಯನ್ನಿಗೃಹೀತ ಚೇತಾಃ ೪೦॥ವಿಷ್ಣುರಾತಃ॥ಬ್ರಹ್ಮನ್ಕಾಲಾಂತರಕೃತಂತತ್ಕಾಲೀನಂಕಥಂಭವೇತ್। ಯತ್ಕೌಮಾರೇಹರಿಕೃತಂ ವಿದುಃಪೌಗಣ್ಡಕೇಽರ್ಭಕಾಃ॥೪೧॥ ತದ್ಬ್ರೂಹಿಮೇಮಹಾಯೋಗಿನ್ಪರಂಕೌತೂಹಲಂಗುರೋ । ನೂನಮೇತ ದ್ಧರೇರೇವಮಾಯಾಭವತಿನಾನ್ಯಥಾ ॥೪೨॥ ವಯಂಧನ್ಯತಮಾಲೋಕೇಗುರೋಽಪಿಕ್ಷತ್ರಬನ್ಧವಃ । ಯತ್ಪಿಬಾ

---

ತಿಮಾ-ಪ್ರತಿಕೃತಿಯು, ಭಾಗವತೀಂ- ಭಗವತ್ಸಂಬಂಧವಾದ, ಗತಿಂ-ಪದವಿಯನ್ನು, ದದೌ - ಕೊಟ್ಟಿತೋ; ನಿತ್ಯಾತ್ಮಸುಖಾನು ಭೂತ್ಯಭಿವ್ಯುದಸ್ತಮಾಯಃ-ನಿತ್ಯ-ಶಾಶ್ವತವಾದ, ಆತ್ಮಸುಖಾನುಭೂತಿ-ಸ್ವರೂಪಾನಂದಾನುಭವದಿಂದ, ಅಭಿವ್ಯುದಸ್ತ- ಹೊದ್ದವಾಗಿ ಕಳೆಯಲ್ಪಟ್ಟ, ಮಾಯಃ- ಅಜ್ಞಾನಾವರಣವುಳ್ಳ, ಪರಮಃ-ಉತ್ಕೃಷ್ಟನಾದ, ಸಏವ-ಆವಿಷ್ಣುವೇ, (ಪ್ರಹ್ಲಾದಾದಿಗಳಿಗೆ ಪ್ರತ್ಯಕ್ಷ ವಾಗಿ ತಾನೇ ಅಂತರ್ಗತನಾಗಿರುವ ವಿಷ್ಣುವೇ) ಕಿಂಪುನಃ-ಸದ್ಗತಿಯಂ ಕೊಡುವನೆಂಬುವುದನ್ನು ಏನುಹೇಳತಕ್ಕದು, ॥೩೯॥ (ಸೂ ತವಚನವು. ಅಥ-ಆಮೇಲೆ, ದೇವದತ್ತಃ-ಪರೀಕ್ಷಿತನು, ದ್ವಿಜಾಗ್ರ್ಯಾತ್- ಬ್ರಾಹ್ಮಣಶ್ರೇಷ್ಠನಾದ ಶುಕನ ದೆಸೆಯಿಂದ, ಸ್ವಭರ್ತುಃ- ತನ್ನೊಡೆಯನಾದ ಕೃಷ್ಣನ, ವಿಚಿತ್ರಂ-ಆಶ್ಚರ್ಯಕರವಾದ, ಚರಿತಂ-ನಡತೆಯನ್ನು, ಶ್ರುತ್ವಾ-ಕೇಳಿ, ಯನ್ನಿಗೃಹೀತಚೇತಾಃ- ಯ ತ್-ಯಾವಚರಿತ್ರದಿಂದ, ನಿಗೃಹೀತ-ನಿಗ್ರಹಿಸಲ್ಪಟ್ಟ, ಚೇತಾಃ- ಮನಸುಳ್ಳವನಾದನೋ, ಪುಣ್ಯಂ- ಪವಿತ್ರವಾದ, ತದೇವ- ಆಕ ಥೆಯನ್ನೇ, ಭೂಯೋಪಿ- ಮರಳಿಯೂ, ವೈಯಾಸಕಿಂ- ವ್ಯಾಸಪುತ್ರನಾದ ಶುಕನನ್ನು ಕುರಿತು, ಪಪ್ರಚ್ಛ- ಬೆಸಗೊಂಡನು ॥೪೦॥ (ಪರೀಕ್ಷಿತನ ಪ್ರಶ್ನವು) ಯತ್-ಯಾವಕಾರಣದಿಂದ, ಕೌಮಾರೇ- ಕುಮಾರವಯಸ್ಸಿನಲ್ಲಿ, ಹರಿಕೃತಂ-ಕೃಷ್ಣನಿಂದಮಾಡಲ್ಪಟ್ಟಚರಿ ತವನ್ನು, ಅರ್ಭಕಾಃ-ಹುಡುಗರು, ಪೌಗಂಡಕೇ- ಪೌಗಂಡಕವಯಸ್ಸಿನಲ್ಲಿ, ವಿದುಃ-ತಿಳಿದರೋ, ತತ್-ಆಕಾರಣದಿಂದ, ಬ್ರಹ್ಮನ್- ಬ್ರಾಹ್ಮಣನೇ! ಕಾಲಾಂತರಕೃತಂ – ಬೇರೇಕಾಲದಲ್ಲಿ ಮಾಡಲ್ಪಟ್ಟದ್ದು, ತತ್ಕಾಲೀನಂ – ಆಗಲೇನಡೆದದ್ದು, ಕಥಂಭವೇತ್-ಹೇ ಗಾದೀತು ॥೪೧॥ ಮಹಾಯೋಗಿನ್- ಮಹಾಜ್ಞಾನವುಳ್ಳ, ಗುರೋ- ಅಜ್ಞಾನನಿವಾರಕನಾದಶುಕನೇ; ತತ್-ಆರಹಸ್ಯವನ್ನು, ಮೇ-ನನಗೆ, ಬ್ರೂಹಿ-ಹೇಳು, ಕೌತೂಹಲಂ-ಕೇಳುವಆಶೆಯು, ಪರಂ-ಹೆಚ್ಚಾಗಿರುವುದು, ಏತತ್- ಇದು, ಹರೇಃ-ಕೃಷ್ಣನ, ಮಾಯೈವ-ಮೋಹ ಕಶಕ್ತಿಯೇ, ಭವತಿ-ಆಗಿರುವುದು, ಅನ್ಯಥಾ-ಬೇರೆಬಗೆಯು, ನ-ಅಲ್ಲವು, ನೂನಂ-ನಿಶ್ಚಯವು ॥೪೨॥ ಗುರೋ-ಗುರುವೇ, ವಯಂ-

---

ಅಂತಹ ನಿತ್ಯವಾದ ಆತ್ಮಾನುಭವದಿಂ ನಿರಾಕರಿಸಲ್ಪಟ್ಟ ಮಾಯೆಯುಳ್ಳ ಪರಮಪುರುಷನಾದ ಶ್ರೀವಾಸುದೇವನೇ ಪ್ರತ್ಯಕ್ಷವಾಗಿ ಅಘಾಸುರನ ಶರೀರವಂ ಪ್ರವೇಶಿಸಿ ಅವನಿಗೆ ಮುಕ್ತಿಯನಿತ್ತನೆಂಬುವುದು ಆಶ್ಚರ್ಯವೆಂದು ಏನುಹೇಳತಕ್ಕದ್ದು? ॥೩೯॥ ಎಲೈ, ಶೌನಕಾದಿಮಹರ್ಷಿಗಳಿರಾ! ಕೇಳಿ- ಅನಂತರದಲ್ಲಿ ಪರೀಕ್ಷಿದ್ರಾಯನು ಹೀಗೆ ತನ್ನಂ ರಕ್ಷಿಸಿದ ಶ್ರೀಕೃಷ್ಣಮೂರ್ತಿಯ ಚಿತ್ರವಿಚಿತ್ರವಾದ ದಿವ್ಯಚರಿತ್ರೆಯಂ ಶುಕಾಚಾರ್ಯನಿಂದ ಕೇಳಿ, ಯಾ ವಚರಿತ್ರೆಯ ಶ್ರವಣದಿಂದ ಅತಿಶಯದಿಂ ವಶವಾಗಿಮಾಡಲ್ಪಟ್ಟ ಮನಸ್ಸುಳ್ಳವನಾದನೋ, ಪುಣ್ಯಕರವಾದ ಆಶ್ರೀ ಕೃಷ್ಣಚರಿತ್ರವನ್ನೇ ಪುನಃ ಹೇಳಬೇಕೆಂದು ಶುಕಮುನಿಯಂ ಕುರಿತು ಪ್ರಶ್ನೆಗೆಯ್ದನದೆಂತೆನೆ- ॥೪೦॥ ಎಲೈ, ಗು ರುವಾದ ಶುಕಮುನಿಯೇ! ಗೋಪಾಲಕರು, ಕೌಮಾರವಯಸ್ಸಿನಲ್ಲಿ ಕೃಷ್ಣನಿಂದಮಾಡಲ್ಪಟ್ಟ ಅಘಾಸುರಸಂಹಾ ರಾದಿವ್ಯಾಪಾರವಂ, ಪೌಗಂಡವಯಸ್ಸಾದ ಆರನೆಯವರುಷದಲ್ಲಿ ಎಂತು ತಿಳಿದು ಹೇಳಿದರು? ॥೪೧॥ ಎಲೈ, ಮಹಾಯೋ ಗಿಯಾದ ಶುಕಮುನಿಯೇ! ಆವೃತ್ತಾಂತವಂ ನನಗೆ ನಿರೂಪಿಸುವನಾಗು. ಅದರ ಶ್ರವಣದಲ್ಲಿ ನನಗೆ ಕುತೂಹ ಲವು ವಿಶೇಷವಾಗಿದೆ. ‡ ಒಂದುಕಾಲದಲ್ಲಿ ನಡೆದವ್ಯಾಪಾರವು ಮತ್ತೊಂದುಕಾಲದಲ್ಲಿ ತಿಳಿದರೆಂಬರ್ಥವು ಭಗ ವನ್ಮಾಯೆಯೇ ಹೊರತು ಬೇರೆಯಲ್ಲವು. ಇದು ನಿಶ್ಚಯವೇಸರಿ. ॥೪೨॥ ಎಲೈ, ಶುಕಮುನಿಯೇ! ಯಾವಕಾರಣ

ಮೊಮುಂಹುಸ್ತ್ವತ್ತಃಪುಣ್ಯಂಕೃಷ್ಣ ಕಥಾಮೃತಮ್॥೪೩॥ಶ್ರೀಸೂತಃ॥ಇತ್ಥಂಸ್ಮಪೃಷ್ಟಸ್ಸತುಬಾದರಾಯ
ಣಿಸ್ಸಂಸ್ಮಾರಿತಾನನ್ತಹೃತಾಖಿಲೇನ್ದ್ರಿಯಃ। ಕೃಛ್ರಾತ್ಪುನರ್ಲಬ್ಧಬಹಿರ್ದೃಶಶ್ಶನೈಃಪ್ರತ್ಯಾಹತಂಭಾಗ
ವತೋತ್ತಮೋತ್ತಮ ॥೪೪॥

ಇತಿಶ್ರೀಮದ್ಭಾಗವತೇ ದಶಮಸ್ಕನ್ಧೇ ದ್ವಾದಶೋಽಧ್ಯಾಯಃ

---

ನಾವು, ಕ್ಷತ್ರಬಂಧವೋಽಪಿ-ಕ್ಷತ್ರಿಯರಸಂಬಂಧರಾದವರೂ, ಲೋಕೇ-ಲೋಕದಲ್ಲಿ, ಯತ್-ಯಾವಕಾರಣದಿಂದ, ತ್ವತ್ತಃ--ನಿನ್ನ ದೆಸೆಯಿಂದ, ಪುಣ್ಯಂ- ಪವಿತ್ರವಾದ, ಕೃಷ್ಣ ಕಥಾಮೃತಂ-ಕೃಷ್ಣನಚರಿತ್ರವೆಂಬ ಅಮೃತವನ್ನು, ಮುಹುಃ - ಬಾರಿಬಾರಿಗೂ, ಪಿಬಾಮಃ--ಕುಡಿಯುತಲಿರುವೆವೋ, ತತ್-ಆಕಾರಣದಿಂದ, ಧನ್ಯತಮಾಃ-ಬಹಳಕೃತಾರ್ಥರಾಗಿರುವೆವು ॥೪೩॥ (ಸೂತವಚನವು) ಭಾಗವತೋತ್ತಮೋತ್ತಮ, -ಭಗವದ್ಭಕ್ತರಲ್ಲಿ ಉತ್ತಮರೊಳಗೆ ಉತ್ತಮನಾದ ಶೌನಕನೇ, ಇತ್ಥಂ-ಹೀಗೆ, ಪೃಷ್ಟಃ-ಕೇಳಲ್ಪಟ್ಟ, ಸಬಾದರಾಯಣಿಸ್ತು-ಆಶುಕನಾದರೋ, ಸಂಸ್ಮಾರಿತಾನಂತಹೃತಾಖಿಲೇಂದ್ರಿಯಃ-ಸಂಸ್ಮಾರಿತ- ನೆನಪುಗೊಳಿಸಲ್ಪಟ್ಟ, ಅನಂತ-ಅವ್ಯಯನಾದ ಕೃಷ್ಣನಿಂದ, ಹೃತ-ಅಪಹರಿಸಲ್ಪಟ್ಟ, ಅಖಿಲೇಂದ್ರಿಯಃ-ಸರ್ವೇಂದ್ರಿಯವ್ಯಾಪಾರಗಳುಳ್ಳವನಾಗಿದ್ದು, ಕೃಛ್ರಾತ್-ಪ್ರಯಾಸದಿಂದ, ಶನೈಃ-ಮೆಲ್ಲಗೆ, ಪುನಃ-ಮರಳಿಯೂ, ಲಬ್ಧಬಹಿರ್ದೃಶಃ-ಲಬ್ಧ-ಹೊಂದಲ್ಪಟ್ಟ, ಬಹಿರ್ದೃಶಃ-ಬಾಹ್ಯಲಕ್ಷಣಗಳುಳ್ಳವನಾಗಿ, ತಂ-ಆಪರೀಕ್ಷಿದ್ರಾಯನನ್ನು ಕುರಿತು, ಪ್ರತ್ಯಾಹ-ಪ್ರತ್ಯುತ್ತರವಂ ಪೇಳಿದನು ॥೪೪॥

ಇತಿ ಶ್ರೀಭಾಗವತ ಪ್ರತಿಶಬ್ದಾರ್ಥ ಬೋಧಿನ್ಯಾಂ
ದಶಮಸ್ಕಂಧೆ ದ್ವಾದಶೋಽಧ್ಯಾಯಃ.

---

ದಿಂ ನಿನ್ನ ದೆಸೆಯಿಂದ ಬಾರಿಬಾರಿಗೂ ಪುಣ್ಯಕರವಾದ ಶ್ರೀಕೃಷ್ಣ ಕಥಾಮೃತವಂ ನಾವು ಪಾನಂಗೆಯ್ಯುತಲಿರುವೆವೋ, ಆಕಾರಣದಿಂ ಲೋಕದಲ್ಲಿ ನಾವು ಕ್ಷತ್ರಬಂಧುಗಳಾದರೂ ಅತ್ಯಂತಧನ್ಯರು. ॥೪೩॥ ಎಲೈ, ಭಾಗವತೋತ್ತಮೋತ್ತಮನಾದ ಶೌನಕಮುನಿಯೇ! ಹೀಗೆ ಪರೀಕ್ಷಿದ್ರಾಯನಿಂ ಪ್ರಶ್ನೆಗೆಯ್ಯಲ್ಪಟ್ಟ ಶ್ರೀಶುಕಮುನಿಯು- ನೆನಪುಗೊಳ್ಳಲ್ಪಟ್ಟ ಶ್ರೀಕೃಷ್ಣಮೂರ್ತಿಯಿಂದ ಅಪಹರಿಸಲ್ಪಟ್ಟ ಸಕಲೇಂದ್ರಿಯ ವ್ಯಾಪಾರವುಳ್ಳವನಾಗಿ ಕ್ಷಣಮಾತ್ರವು ಸಮಾಧಿಯಲ್ಲಿ ನಿಂತು ಮೆಲ್ಲಮೆಲ್ಲನೆ ಅನಂತರದಲ್ಲಿ] ಅತಿಪ್ರಯಾಸದಿಂದ ಪಡೆಯಲ್ಪಟ್ಟ ಬಾಹ್ಯದೃಷ್ಟಿಯುಳ್ಳವನಾಗಿ] ಪರೀಕ್ಷಿದ್ರಾಯನಂ ಕುರಿತು ಪ್ರತ್ಯುತ್ತರವನಿತ್ತನು ... ... ... ‡ ॥೪೪॥

ಇಂತು ಶುಕಮುನಿಯು ಪರೀಕ್ಷಿದ್ರಾಯನಿಗೆ ನಿರೂಪಿಸಿದನೆಂದು ಸೂತಪೌರಾಣಿಕನು ನೈಮಿಶಾ
ರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಹೇಳಿದನೆಂಬಲ್ಲಿಗೆ- ಶ್ರೀಮನ್ಮಹೀ
ಶೂರಪುರವರಾಧೀಶ ಶ್ರೀಚಾಮರಾಜತನುಜಶ್ರೀಮತ್ಕೃಷ್ಣರಾಜ ವಿರ
ಚಿತಮಪ್ಪ, ಶ್ರೀಭಾಗವತದ "ಶ್ರೀಕೃಷ್ಣರಾಜವಾಣೀವಿ
ಲಾಸವು" ಎಂಬ ಕರ್ಣಾಟಭಾಷಾವ್ಯಾಖ್ಯಾನ
ದಲ್ಲಿ ದಶಮಸ್ಕಂಧದೊಳು ದ್ವಾದಶೋ
ಧ್ಯಾಯವು ಸಂಪೂರ್ಣವಾದುದು.

ಶ್ರೀಶುಕಃ ॥ ಸಾಧುಪೃಷ್ಟಂಮಹಾಭಾಗತ್ವಯಾಭಾಗವತೋತ್ತಮ । ಯನ್ನೂತನಯಸೀಶಸ್ಯಶೃಣ್ವನ್ನಪಿಕಥಾಂಮುಹುಃ ॥೧॥ ಸತಾಮಯಂಸಾರಭೃತಾಂನಿಸರ್ಗೋಯದರ್ಥವಾಣೀಶ್ರುತಿಚೇತಸಾಮಪಿ । ಪ್ರತಿಕ್ಷಣಂನವ್ಯವದಚ್ಯುತಸ್ಯಯತ್ಸ್ತ್ರಿಯಾವಿಟಾನಾಮಿವಸಾಧುವಾರ್ತಾ ॥೨॥ ಶೃಣುಷ್ವಾವಹಿತೋರಾಜನ್ನಪಿಗುಹ್ಯಂವದಾಮಿತೇ । ಬ್ರೂಯುಃಸ್ನಿಗ್ಧಸ್ಯಶಿಷ್ಯಸ್ಯಗುರವೋಗುಹ್ಯಮಪ್ಯುತ ॥೩॥ ತದಾಘವದ

---

೧೩ ನೆಯ ಅಧ್ಯಾಯದ ಪ್ರತಿಪದಟೀಕೆ.

[ಶುಕವಚನವು.] ಮಹಾಭಾಗ-ಹೆಚ್ಚು ಪುಣ್ಯವುಳ್ಳ, ಹೇಭಾಗವತೋತ್ತಮ-ಎಲೈಭಾಗವತಶ್ರೇಷ್ಠನಾದಪರೀಕ್ಷಿತನೇ, ಸಾಧು-ಚನ್ನಾಗಿ, ತ್ವಯಾ-ನಿನ್ನಿಂದ, ಪೃಷ್ಟಂ-ಕೇಳಲ್ಪಟ್ಟಿತು, ಯತ್-ಯಾವಕಾರಣದಿಂದ, ಈಶಸ್ಯ-ಪರಮೇಶ್ವರನಾದಕೃಷ್ಣನ, ಕಥಾಂ-ಗುಣವರ್ಣನವನ್ನು, ಮುಹುಃ-ಬಾರಿಬಾರಿಗೂ, ಶೃಣ್ವನ್ನಪಿ-ಕೇಳುತ್ತಿರುವನಾದರೂ, ನೂತನಯಸಿ-ಹೊಸತಾಗಿಮಾಡುವೆಯೋ, ತತ್-ಆಕಾರಣದಿಂದ, ॥೧॥ ಯದರ್ಥವಾಣೀಶ್ರುತಿಚೇತಸಾಮಪಿ-ಯತ್-ಯಾವಕೃಷ್ಣವಾರ್ತೆಯೇ, ಅರ್ಥ- ಪ್ರಯೋಜನವಾಗಿವುಳ್ಳ, ವಾಣೀ-ವಾಗಿಂದ್ರಿಯ, ಶ್ರುತಿ-ಶ್ರೋತ್ರೇಂದ್ರಿಯ, ಚೇತಸಾಮಪಿ-ಹೃದಯವುಳ್ಳವರಾದರೂ, ಸಾರಭೃತಾಂ- ಸಾರ-ಸ್ಥಿರಾಂಶವನ್ನು, (ಸರ್ವದಾಹರಿಕಥೆಯೇವಾಙ್ಮನಶ್ರೋತ್ರವು ಚಿಂತ್ಯವೆಂಬವೇದಸಾರವನ್ನು) ಭೃತಾಂ-ಗ್ರಹಿಸಿದವರಾದ, ಸತಾಂ- ಸತ್ಪುರುಷರಿಗೆ, ಅಚ್ಯುತಸ್ಯವಾರ್ತಾ-ಕೃಷ್ಣನಕಥೆಯು, ವಿಟಾನಾಂ- ಸ್ತ್ರೀಲಂಪಟರಾದಕಾಮುಕರುಗಳಿಗೆ, ಸ್ತ್ರಿಯಾವಾರ್ತೇವ- ಹೆಂಗಸಿನವೃತ್ತಾಂತದಹಾಗೆ, ಪ್ರತಿಕ್ಷಣಂ-ಪ್ರತಿನಿಮಿಷದಲ್ಲಿಯೂ, ನವ್ಯವದಿತಿಯತ್-ಹೊಸತಾದ್ದರಹಾಗೆಯೆಂಬುವುದಾವುದೋ, ತದಯಂ-ಆಯಿದಾಗುಣವು, ನಿಸರ್ಗಃ-ಸ್ವಾಭಾವಿಕವು ॥೨॥ ಹೇರಾಜನ್-ಎಲೈಅರಸೆ, ಗುಹ್ಯಮಪಿ-ರಹಸ್ಯವನ್ನಾದರೂ, ತೇ-ನಿನಗೆ, ವದಾಮಿ-ಹೇಳುತ್ತಿದೇನೆ, ಅವಹಿತಃ-ಜಾಗರೂಕನಾಗಿ, ಶೃಣುಷ್ವ-ಕೇಳು, ಗುರವಃ- ಜ್ಞಾನೋಪದೇಶಿಕರು, ಸ್ನಿಗ್ಧಸ್ಯ-ಪ್ರಿಯನಾದ, ಶಿಷ್ಯಸ್ಯ-ಸೇವಕನಿಗೆ, ಗುಹ್ಯಮಪಿ-ರಹಸ್ಯವನ್ನಾದರೂ, ಬ್ರೂಯುರುತ-ಹೇಳುವರಲ್ಲವೇ? ॥೩॥ ತದಾ-ಆಗ, ಭಗವಾನ್-ಸರ್ವಜ್ಞನಾದಕೃಷ್ಣನು,

---

* ೧೩ನೆಯ ಅಧ್ಯಾಯದ ತಾತ್ಪರ್ಯವು. *

ಶ್ರೀಧರೀಯಶ್ಲೋಕ ॥ ತ್ರಯೋದಶೇಹರದ್ಬ್ರಹ್ಮಾವತ್ಸಾನ್ಪಾಲಾಂಶ್ಚಮಾಯಯಾ । ತತ್ರತತ್ಸರ್ವರೂಪೋಽಬ್ದಂ ಕೃಷ್ಣಃಪೂರ್ವವದಾಚರತ್ ॥ಟೀಕೆ॥ ಹದಿಮೂರನೆಯಅಧ್ಯಾಯದಲ್ಲಿ ಬ್ರಹ್ಮದೇವನು ಶ್ರೀಕೃಷ್ಣನ ಪ್ರಭಾವವಂ ನೋಡಲಪೇಕ್ಷೆಯಿಂದ ಬೃಂದಾವನದಲ್ಲಿ ಸಂಚರಿಸುವ ಗೋಪಾಲ ಬಾಲಕರನ್ನೂ ಕರುಗಳನ್ನೂ ಕೂಡ ತನ್ನ ಮಾಯೆಯಿಂದ ಅಪಹರಿಸಿದಂತವನಾಗುತ್ತಿರಲು ಆಸಮಯದಲ್ಲಿ ಶ್ರೀಕೃಷ್ಣಮೂರ್ತಿಯು ಗೋಪಾಲಬಾಲಕರ ರೂಪಗಳನ್ನೂ ಕರುಗಳರೂಪಂಗಳನ್ನೂ ಕೂಡ ತಾನೇಧರಿಸಿದವನಾಗಿ ಗೋಕುಲದಲ್ಲಿ ಪೂರ್ವದಂತೆ ಸಮಸ್ತ ವ್ಯಾಪಾರಂಗಳನ್ನೂ ಆಚರಿಸುತಲಿದ್ದನೆಂಬ ಅರ್ಥವಂ ಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸುವನದಂತೆನೆ?-

ಎಲೈ, ಭಾಗ್ಯವಂತನಾದ ಭಾಗವತೋತ್ತಮನಾದ ಪರೀಕ್ಷಿದ್ರಾಯನೇ! ನೀನು ಯಾವಕಾರಣದಿಂ ಸರ್ವೇಶ್ವರನಾದ ಶ್ರೀಕೃಷ್ಣಮೂರ್ತಿಯ ದಿವ್ಯಕಥೆಯ ಶ್ರವಣಂ ಗೆಯ್ಯುತಲಿರುವನಾದರೂ ಆಕಥೆಯಂ ಬಾರಿಬಾರಿಗೂ ನೂತನವನ್ನಾಗಿ ಮಾಡುತಲಿರುವೆಯೋ, ಆಕಾರಣದಿಂ ನಿನ್ನಿಂದಮಾಡಲ್ಪಟ್ಟಪ್ರಶ್ನವು ಬಹುಚನ್ನಾಯಿತು. ॥೧॥ (ಇದು ಸತ್ಪುರುಷರಸ್ವಭಾವವೆಂದು ನುಡಿಯುವನದಂತೆನೆ-) ಸ್ತ್ರೀಯರಲ್ಲಿ ಅತ್ಯಂತಾಸಕ್ತರಾದ ವಿಟಪುರುಷರಿಗೆ ಆಸ್ತ್ರೀವಿಷಯಕವಾದ ವೃತ್ತಾಂತವು ಎಂತು ನೂತನವಾಗಿ ತೋರುವುದೋ, ಅಂತು ಶ್ರೀವಾಸುದೇವನಕಥೆಯೇಫಲವಾಗಿವುಳ್ಳ ವಾಙ್ಮನಃಶ್ರೋತ್ರಗಳುಳ್ಳವರಾದರೂ ಸಾರಗ್ರಾಹಿಗಳಾದ ಪುರುಷರಿಗೆ ಶ್ರೀವಾಸುದೇವನ ಕಥೆಯು ಪ್ರತಿಕ್ಷಣದಲ್ಲಿಯೂ ನೂತನವಾಗಿ ತೋರುವುದೆಂಬುದು ಯಾವುದುಂಟೋ, ಅದು ಸತ್ಪುರುಷರಿಗೆ ಸ್ವಭಾವವು. ॥೨॥ ಎಲೈ, ಅರಸೇ! ಲೋಕದಲ್ಲಿ ಗುರುಗಳು ರಹಸ್ಯವಾದ ಅರ್ಥವನ್ನೂ ಕೂಡ ಅತ್ಯಂತಭಕ್ತಿಯುಳ್ಳ ಶಿಷ್ಯರಿಗೆ ನಿರೂಪಿಸುವರಾದುದರಿಂದ ಕೇವಲ ರಹಸ್ಯಾರ್ಥವನ್ನಾದರೂ ನಿನಗೆ ಹೇಳುವನಾಗುತ್ತೇನೆ. ॥೩॥

ನಾನ್ಮೃತ್ಯೋರಕ್ಷಿತ್ವಾಸ್ವಾರ್ಭವತ್ಸಕಾನ್ । ಸರಃಪುಲಿನಮಾನೀಯಭಗವಾನಿದಮಬ್ರವೀತ್ ॥೪॥ ಶ್ರೀಭಗವಾನ್ ॥ ಅಹೋತಿರಮ್ಯಂಪುಲಿನಂವಯಸ್ಯಾಸ್ಸ್ವಕೇಳಿಸಮ್ಪನ್ಮೃದುಲಾಚ್ಛವಾಲುಕಮ್ । ಸ್ಫುಟತ್ಸರೋಗನ್ಧಹೃತಾಳಿಪತ್ರಿಕಧ್ವನಿಪ್ರತಿಧ್ವಾನಲಸದ್ದ್ರುಮಾಕುಲಮ್ ॥೫॥ ಅತ್ರಭೋಕ್ತವ್ಯಮಸ್ಮಾಭಿರ್ದಿವಾರೂಢಂಕ್ಷುಧಾರ್ದಿತಾಃ । ವತ್ಸಾಸ್ಸಮೀಪೇಪಃಪೀತ್ವಾಚರನ್ತುಶನಕೈಸ್ತೃಣಮ್ ॥೬॥ ತಥೇತಿಪಾಯಯಿ

---

ಸ್ವಾರ್ಭವತ್ಸಕಾನ್-ಸ್ವ-ತನ್ನವರಾದ, ಅರ್ಭ-ಹುಡುಗರನ್ನೂ, ವತ್ಸಕಾನ್-ಕರುಗಳನ್ನೂ, ಮೃತ್ಯೋಃ- ಮೃತ್ಯುಸ್ವರೂಪವಾದ, ಅಘವದನಾತ್-ಅಘಾಸುರನಬಾಯಿಯುಡಸೆಯಿಂದ, ರಕ್ಷಿತ್ವಾ-ಸಲಹಿ, ಸರಃಪುಲಿನಂ-ಸರಃ-ಕುಂಟೆಯ, ಪುಳಿನಂ-ಮರಳತಿಟ್ಟೆಯನ್ನು ಕುರಿತು, ಆನೀಯ-ಕರೆದುತಂದು, ಇದಂ-ಮುಂದೆಹೇಳುವಮಾತನ್ನು, ಅಬ್ರವೀತ್--ನುಡಿದನು. ॥೪॥ (ಭಗವದ್ವಚನವು) ಹೇವಯಸ್ಯಾಃ-ಎಲೈಸರಿಪ್ರಾಯದಸಂಗಾತಿಗಳಿರಾ! ಸ್ವಕೇಳಿಸಂಪತ್-ಸ್ವಕೇಳಿ-ನಮ್ಮಆಟಗಳೆಂಬ, ಸಂಪತ್-ಭಾಗ್ಯವುಳ್ಳದ್ದೂ, ಮೃದುಲಾಚ್ಛವಾಲುಕಂ- ಮೃದುಲ-ಮೆತ್ತಗಿರುವ, ಅಚ್ಛ-ಬಿಳುಪಾದ, ವಾಲುಕಂ- ಸಣ್ಣಮರಳುಳ್ಳದ್ದೂ, ಸ್ಫುಟತ್ ... ... ದ್ರುಮಾಕುಲಂ-ಸ್ಫುಟತ್-ಅರಳಿದ, ಸರಃ-ಕೊಳದ(ತಾವರೆಮೊದಲಾದಪುಷ್ಪಗಳ) ಗನ್ಧ-ಪರಿಮಳದಿಂದ, ಹೃತ-ಎಳೆಯಲ್ಪಟ್ಟ, ಅಳಿ-ತುಂಬಿಗಳ, ಪತ್ರಿ-ಹಕ್ಕಿಗಳ, ಕ-ನೀರಿನಲ್ಲಿ, ಧ್ವನಿ-ಶಬ್ದಗಳ, ಪ್ರತಿಧ್ವಾನ-ಪಡಿಸಪ್ಪುಳುಗಳಿಂದ, ಲಸತ್-ಶೋಭಿಸುವ, ದ್ರುಮ-ಮರಗಳಿಂದ, ಆಕುಲಂ-ವ್ಯಾಪ್ತವಾದ್ದೂ ಆದ, ಪುಳಿನಂ-ಮರಳತಿಟ್ಟೆಯು, ಅತಿರಮ್ಯಂ- ಬಹಳಮನೋಹರವಾಗಿದೆ. ಅಹೋ-ಆಶ್ಚರ್ಯವು ॥೫॥ ದಿವಾ-ಹಗಲು, ಆರೂಢಂ-ಬೆಳೆದುದು (ಊಟದಹೊತ್ತುಮಿಂಚಿತು) ಕ್ಷುಧಾ-ಹಸಿವಿನಿಂದ, ಅರ್ದಿತಾಃ- ಪೀಡಿಸಲ್ಪಟ್ಟವರಾಗಿರುವೆವು. ಅತ್ರ-ಈಸ್ಥಳದಲ್ಲಿ, ಅಸ್ಮಾಭಿಃ-ನಮ್ಮಿಂದ, ಭೋಕ್ತವ್ಯಂ-ಭೋಜನಮಾಡಲ್ಪಡತಕ್ಕದ್ದು. ವತ್ಸಾಃ-ಕರುಗಳು, ಸಮೀಪೇ-ಹತ್ತಿರದಲ್ಲಿ, ಅಪಃ-ನೀರನ್ನು, ಪೀತ್ವಾ-ಕುಡಿದು, ಶನಕೈಃ-ಮೆಲ್ಲಗೆ, ತೃಣಂ-ಹುಲ್ಲನ್ನು, ಚರಂತು-ಮೆಲ್ಲಲಿ ॥೬॥ ಅರ್ಭಾಃ-ಹುಡುಗರು, ತಥೇತಿ- ಹಾಗೆಯೇ ಎಂದು, ವತ್ಸಾನ್-ಕರುಗಳನ್ನು, ಪಾಯಯಿತ್ವಾ-ನೀರುಕುಡಿಯಿಸಿ, ಶಾದ್ವಲೇ-ಹಸುರುಹುಲ್ಲುಳ್ಳನೆಲ

---

ಎಲೈಅರಸೇ! ಆರೀತಿಯಾಗಿ ಭಗವಂತನಾದ ಕೃಷ್ಣನು ಮೃತ್ಯುರೂಪನಾದ ಅಘಾಸುರನಮುಖದಡಸೆಯಿಂದ ಕರುಗಳನ್ನೂ ಪಾಲಿಸುವಗೋಪಾಲರನ್ನೂ ರಕ್ಷಿಸಿ, ಅನಂತರದಲ್ಲಿ ಒಂದುಸರಸ್ಸಿನ ಮರಳದಿಣ್ಣೆಗೆ ಕರೆದುಕೊಂಡು ಬಂದು ಹೀಗೆನುಡಿದನು. ಅದೆಂತೆನೆ- ॥೪॥ ಆಮರಳದಿಣ್ಣೆಯಂ ವರ್ಣಿಸುವನು- "ಎಲೈ, ಸ್ನೇಹಿತರೇ! ಗೋಪಾಲಬಾಲಕರೇ! ನಮ್ಮಕ್ರೀಡಾಸಂಪತ್ತಿಗೆ ಅನುಕೂಲರೂಪವಾಗಿಯೂ ಮೃದುವಾಗಿಯೂ ಶುಭ್ರವಾಗಿಯೂ ಇರುವ ಮರಳುಳ್ಳ ಮತ್ತು ವಿಕಸಿತಂಗಳಾದ ಕಮಲಕಲ್ಹಾರಾದಿಪುಷ್ಪಗಳ ದಿವ್ಯಪರಿಮಳಗಳಿಂ ಸೆಳೆಯಲ್ಪಟ್ಟರುವ ಕೊಂಬೆಗಳೂ, ಪಕ್ಷಿಗಳೂ, ನೀರಲ್ಲಿರುವವುಗಳಧ್ವನಿಗಳೂ, ಅವುಗಳಪ್ರತಿಧ್ವನಿಗಳಿಂ ಪ್ರಕಾಶಮಾನಗಳಾದ ವೃಕ್ಷಗಳೂ, ವ್ಯಾಪ್ತವಾಗಿರುವ ಈಮರಳದಿಣ್ಣೆಯು ಅತಿರಮಣೀಯವಾಗಿದೆ. ನೋಡುವವರಾಗಿ. ॥೫॥ ಎಲೈ ಸ್ನೇಹಿತರೇ! ನಮಗೆ ಭೋಜನಕಾಲವು ಅತಿಕ್ರಮಿಸಿತು. ನೀವೆಲ್ಲರೂ ಹಸಿವಿನಿಂದ ಬಳಲಿದಿರಿ. ಆದುದರಿಂದ ಈ ಮರಳದಿಣ್ಣೆಯಲ್ಲಿ ಭೋಜನಂಗೆಯ್ಯುವ. ಈಕರುಗಳೆಲ್ಲವೂ ನೀರಂಕುಡಿದು ಹತ್ತಿರದಲ್ಲಿ ಮೆಲ್ಲಮೆಲ್ಲನೆ ಹುಲ್ಲಂ ಮೇಯುತಲಿರಲಿ. ॥೬॥ " ಎಂದು ಶ್ರೀಕೃಷ್ಣನಿಂದ ಹೇಳಲ್ಪಟ್ಟ ಮಾತಂಕೇಳಿ ಗೊಲ್ಲರಹುಡುಗರು, ಹಾಗೆಯೇ





ತ್ವಾರ್ಭಾನ್ವತ್ಸಾನಾರುಧ್ಯಶಾಡ್ವಲೇ । ಮುಕ್ತ್ವಾಶಿಕ್ಯಾನಿಬುಭುಜುಸ್ಸಮಂಭಗವತಾತದಾ ॥೭॥ ಕೃಷ್ಣಸ್ಯವಿಷ್ವಕ್ಪುರುರಾಜಿಮಂಡಲೈರಭ್ಯಾನನಾಃಫುಲ್ಲದೃಶೋವ್ರಜಾರ್ಭಕಾಃ । ಸಹೋಪವಿಷ್ಟಾಃಪುಲಿನೇವಿರೇಜುಶ್ಛದಾಯಥಾಂಭೋರುಹಕರ್ಣಿಕಾಯಾಃ ॥೮॥ ಕೇಚಿತ್ಪುಷ್ಪೈರ್ದಳೈಃಕೇಚಿತ್ಪಲ್ಲವೈರಂಕುರೈಃಫಲೈಃ । ಶಿಗ್ಭಿಸ್ತ್ವಗ್ಭಿರ್ದೃಷದ್ಭಿಶ್ಚಬುಭುಜುಃಕೃತಭಾಜನಾಃ ॥೯॥ ಸರ್ವೇಮಿಥೋದರ್ಶಯಂತಸ್ಸ್ವಂಸ್ವಂಭೋಜ್ಯರುಚಿಂಪೃಥಕ್ । ಹಸಂತೋಹಾಸಯಂತಶ್ಚಾಭ್ಯವಜಹ್ರುಸ್ಸಹೇಶ್ವರಾಃ ॥೧೦॥ ಬಿಭ್ರದ್ವೇಣುಂಜಠರಪಟಯೋಶ್ಶೃಂಗವೇತ್ರೇಚಕಕ್ಷೇವಾಮೇಪಾಣೌಮಸೃಣಕಬಳಂತತ್ಫಲಾನ್ಯಂಗುಳೀಷು । ತಿಷ್ಠನ್ಮಧ್ಯೇಸ್ವಪರಿ

---

ಪಲ್ಲಿ, ಆರುಧ್ಯ-ಕಟ್ಟಿಹಾಕಿ, ಶಿಕ್ಯಾನಿ-ಬುತ್ತಿಯಕಲ್ಲಿಗಳನ್ನು, ಮುಕ್ತ್ವಾ-ಬಿಚ್ಚಿ, ತದಾ-ಆಗ, ಭಗವತಾಸಮಂ ಭಗವಂತನಾದಕೃಷ್ಣನೊಂದಿಗೆ, ಬುಭುಜುಃ-ಉಂಡರು ॥೭॥ ಕೃಷ್ಣಸ್ಯ-ಕೃಷ್ಣನ, ವಿಷ್ವಕ್-ಸುತ್ತಲೂ, ಪುರುರಾಜಿಮಂಡಲೈಃ- ಪುರು-ಬಹುವಾದ, ರಾಜಿಮಂಡಲೈಃ-ಸಾಲುಸುತ್ತುಗಳಿಂದ, ಅಭ್ಯಾನನಾಃ- ಎದುರಿಗಿರುವಮುಖವುಳ್ಳವರಾಗಿಯೂ, ಫುಲ್ಲದೃಶಃ- ಅರಳಿದಕಂಗಳುಳ್ಳವರಾಗಿಯೂ, ಪುಲಿನೇ-ಮರಳತಿಟ್ಟೆಯಲ್ಲಿ, ಸಹೋಪವಿಷ್ಟಾಃ-ಸಂಗಡ ಸಂಗಡ ಕುಳಿತವರಾಗಿಯೂ, ಇರುವ, ವ್ರಜಾರ್ಭಕಾಃ-ಗೋಕುಲವಹುಡುಗರು, ಅಂಭೋರುಹಕರ್ಣಿಕಾಯಾಃ-ಅಂಭೋರುಹ-ತಾವರೆಯ, ಕರ್ಣಿಕಾಯಾಃ-ನಡುವಣಗೊಂಡೆಯ, ಛದಾಯಥಾ-ಎಸಳ್ಗಳುಹೇಗೋ, ತಥಾ-ಹಾಗೆ, ವಿರೇಜುಃ-ವಿಶೇಷವಾಗಿಬೆಳಗಿದರು ॥೮॥ ಕೇಚಿತ್-ಕೆಲವರು, ಪುಷ್ಪೈಃ-ಹೂವಿನಎಸಳ್ಗಳಿಂದಲೂ, ದಳೈಃ-ಎಲೆಗಳಿಂದಲೂ, ಕೇಚಿತ್ -ಕೆಲವರು, ಪಲ್ಲವೈಃ- ಚಿಗುರುಗಳಿಂದಲೂ, ಅಂಕುರೈಃ - ಕೊನರುಗಳಿಂದಲೂ, ಫಲೈಃ-ಹಣ್ಣಿನಸಿಪ್ಪೆಗಳಿಂದಲೂ, ಶಿಗ್ಭಿಃ-ಸಿಪ್ಪುಗಳಿಂದಲೂ, ತ್ವಗ್ಭಿಃ-ನಾರುಪಟ್ಟೆಗಳಿಂದಲೂ, ದೃಷದ್ಭಿಶ್ಚ-ಕಲ್ಲುಗಳಿಂದಲೂ, ಕೃತಭಾಜನಾಸ್ಸಂತಃ-ಮಾಡಿಕೊಳ್ಳಲ್ಪಟ್ಟಪಾತ್ರೆಗಳುಳ್ಳವರಾಗಿ, ಬುಭುಜುಃ-ಉಂಡರು ॥೯॥ ಸ್ವಾಂಸ್ವಾಂ-ತಮ್ಮತಮ್ಮ, ಭೋಜ್ಯರುಚಿಂ- ಆಹಾರದಸವಿಯನ್ನು, ಪೃಥಕ್ಪೃಥಕ್-ಬೇರೆಬೇರೇ-ಮಿಥಃ-ಪರಸ್ಪರವಾಗಿ, ದರ್ಶಯಂತಃ-ತೋರಿಸುತಲಿರುವರೂ, ಹಸಂತಃ- ನಗುತಲಿರುವರೂ, ಹಾಸಯಂತಶ್ಚ-ನಗಿಸುತಲಿರುವರೂಆದ, ಸರ್ವೇ- ಎಲ್ಲರೂ, ಸಹೇಶ್ವರಾಃ- ಒಡೆಯನಾದಕೃಷ್ಣನಿಂಸಹಿತರಾಗಿ, ಅಭ್ಯವಜಹ್ರುಃ-ಊಟವಂಮಾಡಿದರು ॥೧೦॥ ಯಜ್ಞಭುಕ್-ಯಜ್ಞ-ಸರ್ವಕ್ರತುಗಳಫಲವನ್ನು, ಭುಕ್-ಅನುಭವಿಸುವ ಪರಮೇಶ್ವರನಾದರೂ, ಬಾಲಕೇಳಿಃ-ಬಾಲ-ಹುಡುಗರಹಾಗೆ, ಕೇಳಿಃ- ಆಟಗಳುಳ್ಳವನಾದ್ದರಿಂದಲೇ, ಜಠರಪಟಯೋರ್ಮಧ್ಯೇ- ಜಠರ-ಹೊಟ್ಟೆಗೂ, ಪಟಯೋಃ-ಬಟ್ಟೆಗೂ, ಮಧ್ಯೇ-ನಡುವೆ, ವೇಣುಂ-ಕೊಳಲನ್ನು, ಬಿಭ್ರತ್- ವಹಿಸಿದವನಾಗಿಯೂ, ವಾಮೇಕಕ್ಷೇ- ಎಡಬಗಲಲ್ಲಿ, ಶೃಂಗವೇತ್ರೇ-ಕೊಂಬನ್ನೂ ಬೆತ್ತವನ್ನೂ, ಬಿಭ್ರತ್-ಧರಿಸಿದವನಾಗಿಯೂ, ವಾಮೇಪಾಣೌ-ಎಡಗೈಯ್ಯಲ್ಲಿ, ಮಸೃಣಕಬಳಂ- ಬಿಡ್ಡುಳ್ಳಮೊಸರನ್ನ

---

ಆಗಲಿ' ಯೆಂದು ಕರುಗಳಿಗೆ ನೀರಂ ಕುಡಿಯಿಸಿ ಮೇಯಿಸಲೋಸುಗ ಹುಲ್ಲುಗಳಿಂದ ಹಸುರಾಗಿರುವನೆಲದಲ್ಲಿ ಆಕರುಗಳಂ ತಡಹು ತಮ್ಮತಮ್ಮ ಬುತ್ತಿಗಳ ಕಲ್ಲಿಗಳಂಬಿಚ್ಚಿ ಭಗವಂತನಾದ ಕೃಷ್ಣನೊಡನೆ ಆಗ ಸಂತೋಷದಿಂದ ಉಂಡರು. ॥೭॥ ಆವನದಲ್ಲಿ ಕೃಷ್ಣನಿಗೆ ಸುತ್ತಲೂ ಮಂಡಲಾಕಾರವಾಗಿರುವ ಅನೇಕಗಳಾದ ಪಙ್ತಿಗಳಲ್ಲಿ ಎಡೆಬಿಡದೆ ಕುಳಿತಿರುವ ಮತ್ತು ಶ್ರೀಕೃಷ್ಣನಿಗೆ ಅಭಿಮುಖಗಳಾಗಿರುವ ತಮ್ಮ ಮುಖಂಗಳುಳ್ಳ ವಿಲಾಸಯುಕ್ತವಾದ ನೇತ್ರಂಗಳುಳ್ಳ ಆಗೋಪಾಲಕರು ಆಗ ಭೋಜನಕಾಲದಲ್ಲಿ ಕಮಲಕರ್ಣಿಕೆಗೆ ಸುತ್ತಲೂ ಪಂತಿಪಂತಿಗಳಾಗಿರುವ ಎಸಳುಗಳಂತೆ ಪ್ರಕಾಶಿಸಿದರು. ॥೮॥ ಆಗೋಪಾಲಬಾಲಕರು ಪುಷ್ಪಂಗಳಿಂದಲೂ, ಪತ್ರಂಗಳಿಂದಲೂ, ತಳಿರುಗಳಿಂದಲೂ, ಅಂಕುರಂಗಳಿಂದಲೂ, ತೃಣಂಗಳಿಂದಲೂ, ಕಲ್ಲಿಗಳಿಂದಲೂ, ಮರದಪಟ್ಟೆಗಳಿಂದಲೂ, ಕಲ್ಲುಗಳಿಂದಲೂ, ಅವರವರ ಇಚ್ಛಾನುಸಾರವಾಗಿ ಕಲ್ಪಿಸಲ್ಪಟ್ಟ ಭೋಜನ ಪಾತ್ರಗಳುಳ್ಳವರಾಗಿ ಅನ್ನವಂ ಭುಂಜಿಸಿದರು. ॥೯॥ ಮತ್ತು ಆಗೋಪಾಲ ಬಾಲಕರೆಲ್ಲರೂ ಆಸಮಯದಲ್ಲಿ ಪರಸ್ಪರವಾಗಿ ಭೋಜ್ಯದ್ರವ್ಯಂಗಳಲ್ಲಿ ತಮ್ಮತಮ್ಮ ರುಚಿವಿಶೇಷಂಗಳಂ ಪ್ರತ್ಯೇಕ ಪ್ರತ್ಯೇಕವಾಗಿ ತಿಳಿಸುತಲೂ, ನಗುತಲೂ, ಅನ್ಯರಂ ನಗುವಂತೆ ಮಾಡುತಲೂ, ಹೀಗೇ ಕೃಷ್ಣನೊಡನೆ ಭೋಜನಂಗೆಯ್ದರು. ॥೧೦॥ ಆಸಮಯದಲ್ಲಿ ಯಜ್ಞಭೋಕ್ತೃವಾದ ಶ್ರೀಕೃಷ್ಣನು ಉಟ್ಟಿರುವ ವಸ್ತ್ರಕ್ಕೂ ಉದರಕ್ಕೂ ಮಧ್ಯದಲ್ಲಿ ಕೊಳಲನ್ನಿರಿಸಿಕೊಂಡು ಶೃಂಗವಂ ವೇತ್ರದಂಡವಂ ಸಹ ಎಡದಕಂಕುಳಲ್ಲಿ ಇಟ್ಟುಕೊಂ

ಸುಹೃದೋಹಾಸಯನ್ನರ್ಮಭಿಸ್ಸ್ವೈಸ್ಸ್ವರ್ಗೇಲೋಕೇಮಿಷತಿಬುಭುಜೇಯಜ್ಞಭುಗ್ಬಾಲಕೇಳಿಃ ॥೧೧॥ ಭಾರ
ತೈವಂವತ್ಸಪೇಷುಭುಂಜಾನೇಷ್ವಚ್ಯುತಾತ್ಮಸು । ವತ್ಸಾಸ್ತ್ವಂತರ್ವನೇದೂರಂವಿವಿಶುಸ್ತೃಣಲೋಭಿತಾಃ ॥
ತಾನದೃಷ್ಟ್ವಾಭಯತ್ರಸ್ತಾನೂಚೇಕೃಷ್ಣೋಸ್ಯಭೀಭಯಮ್ । ಮಿತ್ರಾಣ್ಯಾಶಾನ್ಮಾವಿರಮತೇಹಾನೇ

---

ದಮುದ್ದೆಯನ್ನೂ, ಅಂಗುಳೀಷು-ಬೆರಳಸಂದುಗಳಲ್ಲಿ, ತತ್ಫಲಾನಿ-ತತ್-ಅದಕ್ಕೆತಕ್ಕ, ಫಲಾನಿ-ಬೆಲ್ಲವತ್ತ ನೆಲ್ಲಿ ಮಾವು ಮೆಣಸು ಮುಂತಾದ ಉಪ್ಪಿನಕಾಯಿ ಹಣ್ಣುಗಳನ್ನೂ, ಬಿಭ್ರತ್-ಧರಿಸಿದವನಾಗಿಯೂ, ಮಧ್ಯೇ- ಕಮಲಾಕಾರವಾಗಿ ಕುಳಿತಿರುವಗೋಪಾಲಬಾಲಕರ ನಡುವೆ, ತಿಷ್ಠನ್-ಕರ್ಣಿಕೆಯಹಾಗೆ ಕುಳಿತಿರುವನಾಗಿಯೂ, ಸ್ವಾಪರಿ-ತನ್ನ ಸುತ್ತಲೂಯಿರುವ, ಸುಹೃದಃ- ಗೆಳೆಯರನ್ನು, ಸ್ವೈಃ-ತನ್ನ, ನರ್ಮಭಿಃ-ನಗೆಸರಸವಾತುಗಳಿಂದ, ಹಾಸಯನ್-ನಗಿಸುತಲಿರುವನೂಆದ, ಕೃಷ್ಣನು, ಸ್ವರ್ಗೇಲೋಕೇ-ದೇವಲೋಕವು, ಮಿಷತಿಸತಿ-ನೋಡುತ್ತಿರಲು (ದೇವತೆಗಳುನೋಡುತ್ತಿರುವಲ್ಲಿ) ಬುಭುಜೇ-ಊಟಮಾಡಿದನು ॥೧೧॥ ಹೇಭಾರತ- ಎಲೈಭರತವಂಶೋತ್ಪನ್ನನಾದಪರೀಕ್ಷಿತನೇ; ಏವಂ ಹೀಗೆ, ಅಚ್ಯುತಾತ್ಮಸು-ಕೃಷ್ಣನಲ್ಲಿಮನಸ್ಸುಳ್ಳವರಾದ, ವತ್ಸಪೇಷು- ಕರುಗಾಯಿಗಳಾದಹುಡುಗರು, ಭುಂಜಾನೇಷುಸತ್ಸು- ಉಣ್ಣುವರಾಗುತಿರಲು, ವತ್ಸಾಸ್ತು-ಕರುಗಳೂಕೂಡ, ತೃಣಲೋಭಿತಾಸ್ಸಂತಃ-ತೃಣ-ಎಳೆಹುಲ್ಲಿನಿಂದ, ಲೋಭಿತಾಸ್ಸಂತಃ-ಆಶೆಗೊಳಿಸಲ್ಪಟ್ಟವಾಗಿ, ತದ್ವನೇ-ಅಕಾಡಿನಲ್ಲಿ, ದೂರಂವಿವಿಶುಃ-ದೂರಪ್ರದೇಶವನ್ನು ಹೊಕ್ಕವು ॥೧೨॥ ತಾನ್-ಆಕರುಗಳನ್ನು, ಅದೃಷ್ಟ್ವಾ-ಕಾಣದ, ಭಯತ್ರಸ್ತಾನ್-ಭಯ-ಭಯಕಾರಣದಿಂದ, ತ್ರಸ್ತಾನ್-ಹೆದರಿದವರಾದಹುಡುಗರಂಕುರಿತು,ಕೃಷ್ಣಃ-ಕೃಷ್ಣನು, ಭೀಭಯಂ-ಭಯಕಾರಣಗಳಿಂದುಂಟಾದಭಯವನ್ನು, ಅಸ್ಯ-ಹೋಗಲಾಡಿಸಿ, ಊಚೇ-ನುಡಿದನು, ಅಥವಾ-ಭೀಭಯಂ-ಭಯಕ್ಕೆಭಯವಾಗಿರುವ, (ಭಯಹಾರಕನಾದಕೃಷ್ಣನು)ತಾನದೃಷ್ಟ್ವಾ-ಆಕರುಗಳನ್ನು ಕಾಣದೆ, ಭಯತ್ರಸ್ತಾನ್- ಅವುಗಳಿಗೇನುಭಯವಾದೀತೋ ಎಂದುಹೆದರಿದಹುಡುಗರಂಕುರಿತು, ಅಸ್ಯ-ನಿಟ್ಟುಸುರಿಕ್ಕಿ, ಊಚೇ-ಹೇಳಿದನು, ಹೇಮಿತ್ರಾಣಿ- ಎಲೈಗೆಳೆಯರಿರಾ, ಆಶಾತ್ ಭೋಜನವದೆಸೆಯಿಂದ, ಮಾವಿರಮತ-ವಿರಾಮವನ್ನು ಹೊಂದಬೇಡಿರಿ. (ಊಟವಂಬಿಡಬೇಡಿರಿ)ಅಹಂ-ನಾನು,ವತ್ಸಕಾನ್-ಕರುಗಳನ್ನು,

---

ಡು ಎಡಕೈಯಲ್ಲಿ ರಮಣೀಯವಾದ ಮೊಸರನ್ನದ ಮುದ್ದೆಯನ್ನು ಇರಿಸಿಕೊಂಡು ಆ ಅನ್ನಕ್ಕೆಯೋಗ್ಯವಾದ ಬೆಲ್ಲವತ್ತದಮಿಡಿಗಾಯಿ ನೆಲ್ಲಿಕಾಯಿ ಮುಂತಾದ ಉಪ್ಪಿನಕಾಯಿಗಳನ್ನು ಬೆರಳಸಂದುಗಳಲ್ಲಿ ಇಟ್ಟುಕೊಂಡು ಕಮಲಕರ್ಣಿಕೆಯಂತೆ ಸರ್ವರಿಗೂ ಅಭಿಮುಖನಾಗಿ ಮಧ್ಯದಲ್ಲಿ ಕುಳಿತು ತನಗೆ ಸುತ್ತಲೂ ಕುಳಿತಿರುವ ಸ್ನೇಹಿತರಾದ ಗೋಪಾಲ ಬಾಲಕರಂ ತನ್ನ ಪರಿಹಾಸವಾಕ್ಯಂಗಳಿಂ ನಗುವಂತೆಮಾಡುವವನಾಗಿ ಸ್ವರ್ಗದಲ್ಲಿರುವ ಸಮಸ್ತದೇವತೆಗಳೂ ಆಶ್ಚರ್ಯದಿಂ ನೋಡುತಲಿರಲು ಈರೀತಿಯಾಗಿ ಬಾಲಕರಂತೆ ಕ್ರೀಡಿಸುತ್ತ ಭೋಜನಗೆಯ್ದನು. ॥೧೧॥ ಎಲೈ ಪರೀಕ್ಷಿದ್ರಾಜನೇ! ಕೇಳು- ಈರೀತಿಯಾಗಿ ಶ್ರೀಕೃಷ್ಣನಲ್ಲಿಯೇ ಸಕ್ತವಾದಚಿತ್ತವೃತ್ತಿ ಆಗೋಪಾಲಕರು ಭೋಜನಗೆಯ್ಯುತಲಿರಲು ಆಸಮಯದೊಳಗೆ ಸಮೀಪದಲ್ಲಿ ಮೇಯುತಲಿದ್ದ ಕರುಗಳೆಲ್ಲವೂ ಹುಲ್ಲಿನಲ್ಲಿ ಆಸಕ್ತಿಯುಳ್ಳವಾಗಿ ಆ ವನಗಳಮಧ್ಯದಲ್ಲಿ ದೂರಪ್ರದೇಶಕ್ಕೆ ಪ್ರವೇಶಗೆಯ್ದವು. ॥೧೨॥ ಆಗ ಶ್ರೀಕೃಷ್ಣನು ಕರುಗಳು ಕಾಣದ ಭಯಗ್ರಸ್ತರಾದ ತನ್ನಗೆಳೆಯರಾದ ಗೋಪಾಲ ಬಾಲಕರಂ ಕುರಿತು "ಎಲೈ, ಮಿತ್ರರೇ! ನೀವು ದುಷ್ಟವ್ಯಾಘ್ರಗಳ ಭಯವಂಪಟ್ಟು ಭೋಜನಗೆಯ್ಯರಾಗಿ' ಆಕರುಗಳಂ ನಾನು ಕರೆತರುವನಾಗುವೆನು." ಎಂದು ನುಡಿದ





ಷ್ವೈವತ್ಸಕಾನಹಮ್ ॥೧೩॥ ಇತ್ಯುಕ್ತ್ವಾದ್ರಿದರೀಕುಂಜಗಹ್ವರೇಷ್ವಾತ್ಮವತ್ಸಕಾನ್ ।ವಿಚಿನ್ವನ್ಭಗವಾನ್
ಕೃಷ್ಣಸ್ಸಪಾಣಿಕಬಲೋಯಯೌ ॥೧೪॥ ಅಂಭೋಜಜನ್ಮಜನಿಸ್ತದಂತರಗತೋಮಾಯಾರ್ಭಕಸ್ಯೇಶಿತುರ್ದ್ರ

। ವತ್ಸಾಪಹಾರಘಟ್ಟಃ ।

ಷ್ಟುಂಮಂಜುಮಹಿತ್ವಮನ್ಯದಪಿತದ್ವತ್ಸಾನಿತೋವತ್ಸಪಾನ್ । ನೀತ್ವಾನ್ಯತ್ರಕುರೂದ್ವಹಾಂತರದಧಾ
ತ್ಖೇವಸ್ಥಿತೋಯಃಪುರಾದೃಷ್ಟ್ವಾಘಾಸುರಮೋಕ್ಷಣಂಭಗವತಃಪ್ರಾಪ್ತಃಪರಂವಿಸ್ಮಯಮ್ ॥೧೫॥ ತತೋ

---

ಅನೇಷ್ಯೇಹಿ-ತರುವೆನಷ್ಟೆ॥೧೩॥ಇತ್ಯುಕ್ತ್ವಾ-ಹೀಗೆಹೇಳಿ, ಅದ್ರಿದರೀಕುಂಜಗಹ್ವರೇಷು ಅದ್ರಿ-ಬೆಟ್ಟ,ದರೀ-ಗವಿ, ಕುಂಜ-ಹೊದರು ಮನೆ, ಗಹ್ವರೇಷು-ಗಹನವಾದಕಾಡುಗಳಲ್ಲಿ, ಆತ್ಮವತ್ಸಕಾನ್-ತನ್ನಕರುಗಳನ್ನು, ವಿಚಿನ್ವನ್-ಹುಡುಕುತಲಿರುವನಾಗಿ, ಸಪಾಣಿಕಬಳಃ-ಕೈಯೊಳಗಿನ ಆಹಾರದ ತುತ್ತಿನಿಂಕೂಡಿದವನಾದ, ಭಗವಾನ್‌ಕೃಷ್ಣಃ- ಭಗವಂತನಾದಕೃಷ್ಣನು,ಯಯೌ-ತೆರಳಿದನು ॥೧೪॥ಹೇಕುರೂದ್ವಹ-ಎಲೈಕುರುವಂಶೋದ್ಧಾರಕನಾದಪರೀಕ್ಷಿತನೇ! ಯಃ-ಯಾವಬ್ರಹ್ಮನು, ಪುರಾ-ಪೂರ್ವದಲ್ಲಿ, ಖೇ-ಆಕಾಶದೊಳಗೆ, ಅವಸ್ಥಿತಸ್ಸನ್-ಇರುವನಾಗಿ, ಭಗವತಃ- ಭಗವಂತನಾದಕೃಷ್ಣನಿಂದಾದ, ಅಘಾಸುರಮೋಕ್ಷಣಂ- ಅಘಾಸುರನಮುಕ್ತಿಯನ್ನು, ದೃಷ್ಟ್ವಾ-ನೋಡಿ, ಪರಂವಿಸ್ಮಯಂ-ಉತ್ತಮವಾದಆಶ್ಚರ್ಯವನ್ನು, ಪ್ರಾಪ್ತಃ- ಹೊಂದಿದವನಾದನೋ; ಸಃ-ಆ, ಅಂಭೋಜನ್ಮಜನಿಃ- ಅಂಭೋಜನ್ಮ - ತಾವರೆಯಿಂದ, ( ನಾರಾಯಣನ ನಾಭೀಕಮಲದಿಂದ, ) ಜನಿಃ-ಉತ್ಪತ್ತಿಯುಳ್ಳಬ್ರಹ್ಮನು, ತದಂತರಗತಃ-ಆಮಧ್ಯಕಾಲದಲ್ಲಿಬಂದವನಾಗಿ, ಮಾಯಾರ್ಭಕಸ್ಯ-ಮಾಯೆಯಿಂದಬಾಲಕನಾಗಿತೋರುತ್ತಿರುವ, ಈಶಿತುಃ-ಪರಮೇಶ್ವರನಾದ ಕೃಷ್ಣನ, ಮಂಜು-ಮನೋಹರವಾದ, ಅನ್ಯನ್ಮಹಿತ್ವಮಪಿ-ಬೇರೆಬಗೆಯಾದಮಹಿಮೆಯನ್ನೂಕೂಡ, ದ್ರಷ್ಟುಂ- ನೋಡಲೋಸುಗ, ತದ್ವತ್ಸಾನ್-ಆಕೃಷ್ಣನಕರುಗಳನ್ನೂ,ವತ್ಸಪಾಂಶ್ಚ-ಕರುಗಾಯಿಗಳಾದಹುಡುಗರನ್ನೂ, ಇತಃ-ಈಸ್ಥಲದಿಂದ, ಅನ್ಯತ್ರ-ಮತ್ತೊಂದುಕಡೆಗೆ, ನೀತ್ವಾ-ತೆಗೆದುಕೊಂಡುಹೋಗಿ, ಅಂತರಧಾತ್-ತಾನೂಕಾಣಿಸದೆಹೋದನು ॥೧೫॥ ತತಃ-ಆಮೇಲೆ, ಕೃಷ್ಣಃ-ಕೃಷ್ಣ

---

ನು ॥೧೩॥ ಶ್ರೀಕೃಷ್ಣನು ಈರೀತಿಯಾಗಿ ಗೋಪಾಲ ಬಾಲಕರಂ ಕುರಿತು ನುಡಿದು, ಅನಂತರದಲ್ಲಿ ವಾಮಹಸ್ತದೊಳು ಆದಧ್ಯನ್ನ ಕಬಳವ ನಿರಿಸಿಕೊಂಡವನಾಗಿಯೇ ಪರ್ವತಗಳಲ್ಲಿಯೂ, ಲತಾಗೃಹಗಳಲ್ಲಿಯೂ, ಪ್ರವೇಶಂಗೆಯ್ಯಲಶಕ್ಯವಾದ ವನಪ್ರವೇಶಂಗಳಲ್ಲಿಯೂ, ತಮ್ಮ ಕರುಗಳಂ ಹುಡುಕುತ ತೆರಳಿದನು. ॥೧೪॥ಎಲೈ, ಪರೀಕ್ಷಿದ್ರಾಯನೇ! ಪೂರ್ವದಲ್ಲಿ ಯಾವವನು ಸತ್ಯಲೋಕದಿಂ ಬಂದು ಅಘಾಸುರನಿಗೆ ಶ್ರೀಕೃಷ್ಣನಿಂದ ಕಲ್ಪಿಸಲ್ಪಟ್ಟ ಮೋಕ್ಷವ ನೋಡಿ, ಅತ್ಯಂತ ವಿಸ್ಮಯವನೆಯ್ದಿದವನಾಗಿ, ಆಕಾಶದಲ್ಲಿ ನಿಂತಿರ್ದನೋ ಅಂತಾ ಬ್ರಹ್ಮದೇವನು ಮಾಯೆಯಿಂಥ ಮನುಷ್ಯಬಾಲಕನಾದ ಪರಮೇಶ್ವರನಾದ ಶ್ರೀಕೃಷ್ಣನ ಮನೋಹರವಾದ ಮತ್ತೊಂದು ಮಹಿಮೆಯನ್ನೂ ನೋಡ





ಲಿಚ್ಛೆಯನ್ನುಳ್ಳವನಾಗಿ ಬಂದು, ಶ್ರೀಕೃಷ್ಣನಲ್ಲಿರುವ ಕರುಗಳೆಲ್ಲವನ್ನೂ ಅಪಹರಿಸಿ, ಅವಂ ಹುಡುಕಲೋಸುಗ ಶ್ರೀಕೃಷ್ಣನು ಪೋಗಲು-ಇಲ್ಲಿರುವ ಗೋಪಾಲಕರನ್ನೂ ಸಹ ತನ್ನ ಮಾಯೆಯಿಂದ ಮತ್ತೊಂದು ಪ್ರದೇಶವನೆಯ್ದಿಸಿ ಅಂತರ್ಧಾನಂಗೆಯ್ದನು. ॥೧೫॥ಆಮೇಲೆ ಶ್ರೀಕೃಷ್ಣನು ಬೆಟ್ಟಮೊದಲಾದ ತಾಣಗಳಲ್ಲಿ ಹುಡುಕಿದವನಾದರೂ ಆ ಕರುಗಂಳ

ವತ್ಸಾನದೃಷ್ಟ್ವೈತ್ಯಪುಲಿನೇಪಿಚವತ್ಸಪಾನ್ | ಉಭಾವಪಿವನೇಕೃಷ್ಣೋವಿಚಿಕಾಯಸಮನ್ತತಃ||೧೬|| ಕ್ವಾಪ್ಯದೃಷ್ಟ್ವಾನ್ತರ್ವಿಪಿನೇವತ್ಸಾನ್ಪಾಲಾಂಶ್ಚವಿಶ್ವದೃಕ್ | ಸರ್ವಂವಿಧಿಕೃತಂಜ್ಞಾತ್ವಾಸಹಸಾಭಿಜಗಾಮಹ||೧೭|| ತತಃಕೃಷ್ಣೋಮುದಂಕರ್ತುಂತನ್ಮಾತೄಣಾಂಚಕಸ್ಯಚ | ಉಭಯಾಯಿತಮಾತ್ಮಾನಂಚಕ್ರೇ ವಿಶ್ವದೃಗೀಶ್ವರಃ||೧೮||ಯಾವದ್ವತ್ಸಪವತ್ಸಕಾಲ್ಪಕವಪುರ್ಯಾವತ್ಕರಾಂಘ್ರ್ಯಾದಿಕಂಯಾವದ್ದೃಷ್ಟಿವಿಷಾಣವೇಣುದಳಶಿಗ್ಯಾವದ್ವಿಭೂಷಾಮ್ಬರಮ್ | ಯಾವಚ್ಛೀಲಗುಣಾಭಿಧಾಕೃತಿವಯೋಯಾವದ್ವಿಹಾರಾದಿಕಂ ಸ

---

ಮ್ನು, ವತ್ಸಾನ್-ಕರುಗಳನ್ನು, ಅದೃಷ್ಟ್ವಾ-ಕಾಣದೆ, ಏತ್ಯ-ಮರಳಿಬಂದು, ಪುಲಿನೇಪಿ-ಮರಳತಿಟ್ಟಿಯಲ್ಲಿಯೂ, ವತ್ಸಪಾಂಶ್ಚ-ಕರುಗಾಯಿಗಳಾದಹುಡುಗರನ್ನೂ, ಅದೃಷ್ಟ್ವಾ-ಕಾಣದೆ, ವನೇ-ಕಾಡಿನಲ್ಲಿ, ಉಭಾವಪಿ-ಕರುಗಳನ್ನೂ ಹುಡುಗರನ್ನೂ ಕೂಡ, ಸಮಂತತಃ-ಎಲ್ಲಕಡೆಗಳಲ್ಲಿಯೂ, ವಿಚಿಕಾಯ-ಹುಡುಕಿದನು ||೧೬|| ಅಂತರ್ವಿಪಿನೇ-ಒಳಕಾಡಿನಲ್ಲಿ, ಕ್ವಾಪಿ-ಎಲ್ಲಿಯೂ, ವತ್ಸಾನ್ ಪಾಲಾಂಶ್ಚ-ಕರುಗಳನ್ನೂ ಕರುಗಾಯಿಗಳನ್ನೂ, ಅದೃಷ್ಟ್ವಾ-ಕಾಣದೆ, ವಿಶ್ವದೃಕ್-ಎಲ್ಲವನ್ನೂ ನೋಡುವವನಾದ್ದರಿಂದಲೇ, ಸರ್ವಂ-ಅವೆಲ್ಲವನ್ನೂ, ವಿಧಿಕೃತಂ-ಬ್ರಹ್ಮನಿಂದಮಾಡಲ್ಪಟ್ಟದ್ದನ್ನಾಗಿ, ಜ್ಞಾತ್ವಾ-ತಿಳಿದು, ಸಹಸಾ-ಬೇಗನೆ, ಅಭಿಜಗಾಮಹ-ಬಂದನಯ್ಯಾ ||೧೭|| ತತಃ-ಅಮೇಲೆ, ವಿಶ್ವದೃಕ್-ಸರ್ವಸಾಕ್ಷಿಯಾದ, ಈಶ್ವರಃ-ಒಡೆಯನಾದ, ಕೃಷ್ಣಃ-ವಿಷ್ಣುವು, ತನ್ಮಾತೄಣಾಂಚ-ತತ್-ಆಗೋಪಾಲಕರ, ಮತ್ತು ಕರುಗಳ, ಮಾತೄಣಾಂಚ-ತಾಯಿಯರಾದಗೊಲ್ಲತಿಯರಿಗೂ ಗೋವುಗಳಿಗೂ, ಕಸ್ಯಚ-ಬ್ರಹ್ಮನಿಗೂ, ಮುದಂ-ಸಂತೋಷವನ್ನು, ಕರ್ತುಂ-ಮಾಡಲೋಸುಗ, ಆತ್ಮಾನಂ-ತನ್ನನ್ನು, ಉಭಯಾಯಿತಂ-ವತ್ಸರೂಪನಾಗಿಯೂ ವತ್ಸಪಾಲರೂಪನಾಗಿಯೂ ಎರಡುಬಗೆಯಾದವನನ್ನಾಗಿ, ಚಕ್ರೇ-ಮಾಡಿಕೊಂಡನಂತೆ ||೧೮||ವತ್ಸಪವತ್ಸಕಾಲ್ಪಕವಪುಃ-ವತ್ಸಪ- ಕರುಗಾಯಿಗಳ, ವತ್ಸಕ-ಕರುಗಳ, ಅಲ್ಪಕ-ಸಣ್ಣದಾದ, ವಪುಃ-ಶರೀರವು, ಯಾವತ್-ಎಷ್ಟುರದೋ? ಕರಾಂಘ್ರ್ಯಾದಿಕಂ-ಕೈಕಾಲುಮೊದಲಾದಅಂಗವು, ಯಾವತ್-ಎಷ್ಟುರಅಳತೆಯುಳ್ಳದೋ; ದೃಷ್ಟಿ .. ... ಶಿಕ್-ದೃಷ್ಟಿ, ನೋಟವು, ವಿಷಾಣ-ಊದುವಕೊಂಬು, ವೇಣು-ಕೊಳಲು, ದಳ-ಎಲೆ, ಶಿಕ್-ನೆಲುವು, ಯಾವತ್-ಎಷ್ಟುರದೋ! ವಿಭೂಷಾಂಬರಂ-ವಿಭೂಷ-ಆಭರಣವು, ಅಂಬರಂ-ವಸ್ತ್ರವು, ಯಾವತ್-ಎಷ್ಟುರದೋ, ಶೀಲ... .. ವಯಃ-ಶೀಲ ಸ್ವಭಾವವು, ಗುಣ-ಸತ್ವಾದಿಗುಣಗಳು, ಅಭಿಧಾ-ಹೆಸರು, ಆಕೃತಿ-ಆಕಾರವೂ, ವಯಃ-ಪ್ರಾಯವೂ, ಯಾವತ್-ಎಷ್ಟುರದೋ! ವಿಹಾರಾದಿಕಂ-ವಿನೋದಚೇಷ್ಟೆಮೊದಲಾದದ್ದು, ಯಾವತ್-ಎಷ್ಟುರದೋ, ತಾವತ್-ಅಷ್ಟೇ ಆದ, ಸರ್ವಸ್ವರೂಪಃ- ಎಲ್ಲವೂತನ್ನರೂಪವೇಆದ ಅಥವಾ ಎಲ್ಲಕ್ಕೂತಾನೇರೂಪವಾದ, ಅಜಃ-ಉತ್ಪತ್ತಿಯಿಲ್ಲದಪರಮಾತ್ಮನು (ಕೃಷ್ಣನು)ಸರ್ವಂವಿಷ್ಣುಮಯಂಗಿರೋಂಗವತ್-ಸರ್ವಂ-ಎಲ್ಲವು, ವಿಷ್ಣುಮಯಂ- ಆತ್ಮಮಾಯಾಪರಿಣಾಮವು. ಅಥವಾ ವ್ಯಾಪಕಚೈತನ್ಯವಿವರ್ತವು, ಅಥವಾ ವಿಷ್ಣುಮಾಯಾವಿಕಾರವು- ಎಂಬ, ಗಿರಃ-ಮಾತಿನ, ಅಂಗವತ್-ಶರೀರದಂತೆ (ಆವಾಕ್ಯೇಅರ್ಥಸ್ವರೂ

---

ಕಾಣದೆ ತಿರುಗಿಬಂದು, ಆಮರಳದಿಣ್ಣೆಯಲ್ಲಿ ಭೋಜನಂಗೆಯ್ಯುತಲಿದ್ದ ಗೋಪಾಲ ಬಾಲರನ್ನೂ ಕಾಣದೆ ಪುನಶ್ಚ ಗೋಪಾಲಕರನ್ನೂ ಕರುಗಳನ್ನೂ ಸಹ ಸರ್ವತ್ರ ಹುಡುಕಿದನು ||೧೬|| ಬಳಿಕ ಸರ್ವಪ್ರಪಂಚಕ್ಕು ಸೃಷ್ಟಿಕರ್ತನಾದ ಶ್ರೀಕೃಷ್ಣನು ಎಲ್ಲಿಯೂ ಕರುಗಳನ್ನೂ ಹುಡುಗರನ್ನೂ ಕಾಣದೆ "ಈಗ ಈಕೆಲಸವು ಬ್ರಹ್ಮನಿಂದ ಮಾಡಲ್ಪಟ್ಟಿತು." ಎಂದು ತಿಳಿದು, ಬೇಗನೆ ಅಲ್ಲಿಂದ ಹೊರಟು ಬಂದನು |೧೭| ಅನಂತರದಲ್ಲಿ ಜಗತ್ತಿನ ಸೃಷ್ಟಿಕರ್ತನೂ ಜಗದೀಶ್ವರನೂ ತಾನೇ ಆದ ಶ್ರೀಕೃಷ್ಣನು ಆ ಕರುಗಳ ತಾಯಿಗಳಾದ ಗೋವುಗಳಿಗೂ, ಆ ಬಾಲಕರ ತಾಯಿಯರಾದ ಗೋಪಿಯರಿಗೂ, ಆ ಬ್ರಹ್ಮದೇವನಿಗೂ, ಸಹ ಸಂತೋಷಂಗೆಯ್ಯಲೋಸುಗ ತಾನೇ ಆ ಕರುಗಳ ರೂಪಂಗಳನ್ನೂ ಗೋಪಬಾಲಕರ ರೂಪಂಗಳನ್ನೂ ಸಹ ತಾಳಿದನು |೧೮| ಹೇಗೆಂದರೆ-ಆಗ ಸೃಷ್ಟಿಕರ್ತನಾದ ಶ್ರೀಕೃಷ್ಣನು ಆಕರುಗಳ, ಮತ್ತು ಗೋಪಾಲ ಬಾಲಕರ, ಪುಟ್ಟಪುಟ್ಟದೇಹಂಗಳು ಎಷ್ಟೆಷ್ಟು ಪರಿಮಾಣವುಳ್ಳವಾಗಿರುವವೋ ಆಯಾದೇಹಂಗಳ ಪರಿಮಾಣವನ್ನು ಅತಿಕ್ರಮಿಸದೆಯೂ, ಅದೇರೀತಿಯಲ್ಲಿ ಕೈಕಾಲು ಮೊದಲಾದವು ಎಷ್ಟು ಅಳತೆಯುಳ್ಳವಾಗಿರುವವೋ ಅಷ್ಟು ಅಳತೆಯನ್ನು ಅತಿಕ್ರಮಿಸದೆಯೂ, ಮತ್ತು ಆ ಗೋಪಾಲಕರ ಜತ್ತದ ಕೋಲುಗಳು, ಕೊಂಬುಗಳು, ಕೊಳಲುಗಳು, ಭೋಜನಪಾತ್ರಗಳು, ಕಳ್ಳಿಗಳು, ಸಹ ಎಷ್ಟೆಷ್ಟು ಪ್ರಮಾಣಂಗಳಾಗಿ ಎಂತಾ ಆಕೃತಿಗಳುಳ್ಳ

ರ್ವಂವಿಷ್ಣುಮಯಂಗಿರೋಂಗವದಜಸ್ಸರ್ವಸ್ವರೂಪೋಬಭೌ ||೧೯|| ಸ್ವಯಮಾತ್ಮಾತ್ಮಗೋವತ್ಸಾನ್ಪ್ರತಿ
ವಾರ್ಯಾತ್ಮವತ್ಸಪೈಃ | ಕ್ರೀಡನ್ನಾತ್ಮವಿಹಾರೈಶ್ಚಸರ್ವಾತ್ಮಾಪ್ರಾವಿಶದ್ವ್ರಜಂ ||೨೦|| ತತ್ತದ್ವತ್ಸಾನ್
ಪೃಥಗ್ಜ್ಞಾತ್ವಾತತ್ತದ್ಗೋಷ್ಠೇಪ್ರವೇಶ್ಯಸಃ | ತತ್ತದಾತ್ಮಾಭವದ್ರಾಜಂಸ್ತತ್ತತ್ಸದ್ಮಪ್ರವಿಷ್ಟವಾನ್ ||೨೧||
ತನ್ಮಾತರೋವೇಣುರವತ್ವರೋತ್ಥಿತಾಉತ್ಥಾಪ್ಯದೋರ್ಭಿಃಪರಿರಭ್ಯನಿರ್ಭರಂ | ಸ್ನೇಹಸ್ನುತಸ್ತನ್ಯಪಯಸ್ಸು
ಧಾಸವಂಮತ್ವಾಪರಂಬ್ರಹ್ಮಸುತಾನಪಾಯಯನ್ ||೨೨|| ತತೋನೃಪೋನ್ಮರ್ದನಗನ್ಧಲೇಪನಾಲಂಕಾರರಕ್ಷಾ

---

ಪದಿಂದಪ್ರತ್ಯಕ್ಷವಾದಂತೆ) ಬಭೌ-ಆದನು, ಬೆಳಗಿದನು ||೧೯|| ಸ್ವಯಮಾತ್ಮಾ- ತಾನೇಕರ್ತನಾಗಿ, ಆತ್ಮಗೋವತ್ಸಾನ್-ತಾನಾಗಿರುವಕರುಗಳನ್ನೂ, ಆತ್ಮವತ್ಸಪೈಃ-ತಾನಾಗಿರುವ ಕರುಗಾಯಿಹುಡುಗರಿಂದ, ಪ್ರತಿವಾರ್ಯ-ಸುತ್ತಿಕೊಂಡು, ಆತ್ಮವಿಹಾರೈಃ-ತಾನಾಗಿರುವ ವಿನೋದಗಳಿಂದಲೇ, ಕ್ರೀಡನ್-ಆಡುತಲಿರುವನಾದ, ಸರ್ವಾತ್ಮಾ-ಸರ್ವನಾಗಿತೋರುತ್ತಿರುವನು, ತಾನೇಆದಕೃಷ್ಣನು, ವ್ರಜಂ-ಗೋಕುಲವನ್ನು, ಪ್ರಾವಿಶತ್-ಹೊಕ್ಕನು ||೨೦|| ರಾಜನ್-ಧೊರೆಯೇ, ಸಃ-ಆಕೃಷ್ಣನು, ತತ್ತದ್ವತ್ಸಾನ್-ಆಯಾಕರುಗಳನ್ನು, ಪೃಥಕ್-ಬೇರೆ, ಜ್ಞಾತ್ವಾ-ತಿಳಿದುತತ್ತದ್ಗೋಷ್ಠೇ- ಅದರದರಕೊಟ್ಟಿಗೆಯಲ್ಲಿ, ಪ್ರವೇಶ್ಯ-ಹುಗಿಸಿ, ತತ್ತದಾತ್ಮಾ-ಅದರದರಸ್ವರೂಪವುಳ್ಳವನೂ, ತತ್ತತ್ಸದ್ಮ-ಆಯಾಮನೆಯನ್ನು, ಪ್ರವಿಷ್ಟವಾನ್-ಹೊಕ್ಕವನೂ, ಅಭವತ-ಆದನು ||೨೧|| ತನ್ಮಾತರಃ-ಆಹುಡುಗರತಾಯಿಯರು, ವೇಣುರವತ್ವರೋತ್ಥಿತಾಸ್ಸತ್ಯಃ-ವೇಣು-ಕೊಳಲಿನ, ರವ-ಶಬ್ದದಿಂದ, ತ್ವರ-ವೇಗದೊಡನೆ, ಉತ್ಥಿತಾಃ-ಎದ್ದವರಾಗಿ, ಪರಂಬ್ರಹ್ಮ-ಪರಮಾತ್ಮನಾದಕೃಷ್ಣನನ್ನು, ಸುತಾನ್‌ಮತ್ವಾ-ತಮ್ಮಮಕ್ಕಳನ್ನಾಗಿತಿಳಿದುಕೊಂಡು, ಉತ್ಥಾಪ್ಯ-ಎತ್ತಿಕೊಂಡು, ದೋರ್ಭಿಃ-ತೋಳುಗಳಿಂದ, ನಿರ್ಭರಂ- ಗಟ್ಟಿಯಾಗಿ, ಪರಿರಭ್ಯ- ಅಪ್ಪಿಕೊಂಡು, ಸ್ನೇಹಸ್ನುತಸ್ತನ್ಯಪಯಸ್ಸುಧಾಸವಂ-ಸ್ನೇಹ-ಅನುರಾಗದಿಂದ, ಸ್ನುತ-ಸೋರುವ, ಸ್ತನ್ಯಪಯಃ-ಮೊಲೆಹಾಲಂಬ, ಸುಧಾ-ರುಚ್ಯವಾದ್ದರಿಂದಅಮೃತವನ್ನೂ, ಆಸವಂ-ಮದಕರವಾದ್ದರಿಂದಮದ್ಯವನ್ನೂ, ಅಪಾಯಯನ್-ಕುಡಿಸಿದರು ||೨೨||ಹೇನೃಪ-ಎಲೈರಾಜನೇ! ತತಃ-ಆಮೇಲೆ, ಯಾಮಯಾಮೇಸಆಗಿನಆಟದನಿಯಮದಿಂದ, ಸಾಯಂ-ಸಾಯಂಕಾಲದಲ್ಲಿ, ಗತಃ-ಬಂದಂತಾ. ಮಾಧವಃ-ಕೃಷ್ಣನು, ಸ್ವಾಚರಿತೈಃ-ಸ್ವ-ತನ್ನ, ಆ

---

ವಾಗಿರುವವೋ ಅದರದರ ಪರಿಮಾಣವನ್ನೂ ಆಕೃತಿಯನ್ನೂಕೂಡ ಅತಿಕ್ರಮಿಸದೆಯೂ-ಮತ್ತು ಭೂಷಣ ವಸ್ತ್ರ ಅವರವರಸ್ವಭಾವ ಗುಣ ಹೆಸರು ಆಕಾರ ವಯಸ್ಸು ಆಟಗಳು ಮೊದಲಾದವು ಯಾವಯಾವ ಪ್ರಕಾರವಾಗಿರುವವೋ ಆಯಾಪ್ರಕಾರವಂ ಸಹ ಅತಿಕ್ರಮಿಸದೆಯೂ-ಸರ್ವವೂ ವಿಷ್ಣುಮಯವೆಂದು ಪ್ರಸಿದ್ಧಂಗಳಾದ ಯಾವ ಪುರಾಣ ವಚನಂಗಳುಂಟೋ ಅವುಗಳ ಅರ್ಥವಂ ಪ್ರತ್ಯಕ್ಷದಿಂ ಕಾಣುವಂತೆಯೂ- ಹೀಗೆ ಸರ್ವರೂಪನಾಗಿ ಪ್ರಕಾಶಿಸಿದನು||೧೯|| ಬಳಿಕ ಶ್ರೀಕೃಷ್ಣನು ತಾನೇ ಪ್ರೇರಕನಾಗಿ ತನ್ನ ಸ್ವರೂಪಗಳಾದ ಕ್ರೀಡೆಗಳಿಂ ಕ್ರೀಡಿಸುತ ಈರೀತಿಯಾಗಿ ಪ್ರೇರಕರೂಪನೂ, ಕರ್ತೃರೂಪನೂ, ಕಾರಕಸ್ವರೂಪನೂ, ಸರ್ವಸ್ವರೂಪನೂ, ತಾನೇ ಆಗಿ- ಗೋಕುಲವಂ ಪ್ರವೇಶಿಸಿದನು||೨೦||ಆ ಮೇಲೆ ಶ್ರೀಕೃಷ್ಣನು ಆ ಗೋಕುಲದಲ್ಲಿ ಆ ಕರುಗಳಂ ಪ್ರತ್ಯೇಕಪ್ರತ್ಯೇಕವಾಗಿ ಕರೆದು ಕೊಂಡುಹೋಗಿ ಆಯಾಕೊಟ್ಟಂಗಳಲ್ಲಿ ಪ್ರವೇಶಂಗೈಸಿತಾನುಆಯಾ ಗೋಪಾಲರೂಪನಾಗಿ ಆಯಾ ಗೋಪಾಲಕರ ಮನೆಗಳನ್ನೂಪ್ರವೇಶಿಸಿದನು||೨೧|| (ಆಗೋಪಸ್ತ್ರೀಯರಿಗೆ ಮೋಹವನ್ನುಂಟು ಮಾಡುವ ಬಗೆಯಂ ನಿರೂಪಿಸುವನು-) ಆಗ ಆಯಾ ಗೋಪಾಲಕರ ತಾಯಿಗಳು ತಮ್ಮಪುತ್ರರಿಂದ ಊದಲ್ಪಟ್ಟ ಕೊಳಲುಗಳ ಧ್ವನಿಯಂ ಕೇಳಿ ತ್ವರೆಯಿಂದೆದ್ದವರಾಗಿ ತಮ್ಮತಮ್ಮ ಪುತ್ರರಂ ಭುಜಗಳಿಂದ ಎತ್ತಿಕೊಂಡವರಾಗಿ ಗಟ್ಟಿಯಾಗಿ ಅಪ್ಪಿಕೊಂಡು ಪರಬ್ರಹ್ಮ ಸ್ವರೂಪನಾದ ಶ್ರೀಕೃಷ್ಣನನ್ನೇ ತಮ್ಮತಮ್ಮಪುತ್ರರೆಂದು ತಿಳಿದು ವಾತ್ಸಲ್ಯದಿಂ ತುಂಬಿಸುರಿವ, ಅಮೃತದಂತೆ ಸ್ವಾದುವಾದ, ಮದ್ಯದಂತೆ ಮದಕರವಾಗಿಯೂ ಇರುವ ಮೊಲೆಹಾಲಂ ಅವರಿಗೆ ಪಾನಂಗೈಸಿದರು||೨೨||ಎಲೈ, ಅರಸನೇ! ಅನಂತರದಲ್ಲಿ ಸರ್ವಸ್ವರೂಪನಾದ, ಶ್ರೀಕೃಷ್ಣನು ಇವೇರೀತಿಯಾಗಿ ಆಯಾಕಾಲಗಳಲ್ಲಿಮಾಡತಕ್ಕ ವ್ಯಾಪಾರಗಳ ನಿಯಮದಿಂ ಸಾಯಂಕಾಲವಾ

ತಿಲಕಾಶನಾದಿಭಿಃ | ಸುಲಾಲಿತಸ್ಸ್ವಚರಿತ್ರೈಃ ಪ್ರಹರ್ಷಯನ್ ಸಾಯಂಗತೋಯಾಮಯಮೇನ ಮಾಧವಃ ||
ಗಾವಸ್ತತೋಗೋಷ್ಠಮುಪೇತ್ಯ ಸತ್ವರಂ ಹುಂಕಾರಘೋಷೈಃ ಪರಿಹೂತಸಂಗತಾನ್ | ಸ್ವಕಾನ್ ಸ್ವಕಾನ್ ವತ್ಸತ
ರಾನಪಾಯಯನ್ ಮುಹುರ್ಲಿಹಂತ್ಯಸ್ಸ್ರವದೌಧಸಂ ಪಯಃ ||೨೪|| ಗೋಗೋಪೀನಾಂ ಮಾತೃತಾಸ್ಮಿನ್ನಾ
ಸ್ನೇಹರ್ಧಿಕಾಂ ವಿನಾ | ಪುರೋವದಾಸ್ವಪಿ ಹರೇಸ್ತೋಕತಾ ಮಾಯಯಾ ವಿನಾ ||೨೫|| ವ್ರಜೌಕಸಾಂ ಸ್ವ

---

ಚರಿತ್ರೈಃ-ನಡತೆಗಳಿಂದ, ಅಥವಾ- ಶುಭಾಚರಣಗಳಿಂದ, ಪ್ರಹರ್ಷಯನ್- ಅವರತಾಯಿಯರನ್ನು ಸಂತೋಷಗೊಳಿಸುವವನಾಗಿ-(ಅವರಿಂದ) ಉನ್ಮರ್ದನ ಗಂಧ ಲೇಪನಾಲಂಕಾರರಕ್ಷಾತಿಲಕಾಶನಾದಿಭಿಃ-ಉನ್ಮರ್ದನ- ಕೈಕಾಲುಗಳನ್ನು ಹಿಸುಕುವಿಕೆ, ಗಂಧಲೇಪನ-ಅಂಗರಾಗವಂತೀಡುವಿಕೆ, ಅಲಂಕಾರ-ವಸ್ತ್ರಾಭರಣಾದಿಗಳಿಂಸಿಂಗರಿಸುವಿಕೆ, ರಕ್ಷಾ-ರಕ್ಷಣತಂತ್ರವಂಗಯ್ಯುವಿಕೆ, ತಿಲಕ-ಹಣೆಬೊಟ್ಟಿಡುವಿಕೆ, ಅಶನ-ಆಹಾರವಿಡುವಿಕೆ, ಆದಿಭಿಃ-ಮೊದಲಾದವುಗಳಿಂದ, ಸುಲಾಲಿತಃ-ಚೆನ್ನಾಗಿಉಪಚರಿಸಲ್ಪಟ್ಟವನಾದನು||೨೩|| ತತಃ-ಆಮೇಲೆ, ಗಾವಃ-ಗೋವುಗಳು, ಗೋಷ್ಠಂ-ಕೊಟ್ಟಿಗೆಯನ್ನು, ಸತ್ವರಂ-ಬೇಗನೆ, ಉಪೇತ್ಯ-ಸೇರಿ, ಹುಂಕಾರಘೋಷೈಃ-ಹುಂಭಾರವಗಳಿಂದ, ಪರಿಭೂತಸಂಗತಾನ್-ಪರಿಭೂತ- ಕರೆಯಲ್ಪಟ್ಟವಾಗಿ, ಸಂಗತಾನ್- ಬಂದುಸೇರಿದ, ಸ್ವಕಾನ್ ಸ್ವಕಾನ್-ತಮ್ಮತಮ್ಮ, ವತ್ಸತರಾನ್-ಸಣ್ಣಕರುಗಳನ್ನು, ಮುಹುಃ- ಮರಳಿಮರಳಿಯೂ, ಲಿಹಂತ್ಯಸ್ಸತ್ಯಃ- ನೆಕ್ಕುತಲಿರುವವಾಗಿ, ಸ್ರವತ್-ಸೋರುತಲಿರುವ, ಔಧಸಂಪಯಃ-ಕೆಚ್ಚಲಹಾಲನ್ನು, ಅಪಾಯಯನ್-ಕುಡಿಸಿದವು ||೨೪|| ಗೋಗೋಪೀನಾಂ-ಟಕರುಗಳಿಗೂ, ಗೋಪಿಯರಿಗೂ, ಅಸ್ಮಿನ್-ಈಕೃಷ್ಣನಲ್ಲಿ, ಮಾತೃತಾ-ನಾವುತಾಯಿಯರೆಂಬಭಾವವು, ಸ್ನೇಹರ್ಧಿಕಾಂ ವಿನಾ-ಅನುರಾಗದಅತಿಶಯವನ್ನು ಹೊರತು, ಪುರೋವತ್-ಮುನ್ನಿನಂತೆಯೇ, ಆಸೀತ್-ಆಯಿತು. (ಮಾತೃಭಾವವುಮುನ್ನಿನಂತೆಯೇಆಯಿತು. ಸ್ನೇಹವುಮಾತ್ರಹೆಚ್ಚಿತು.) ಆಸ್ವಪಿ-ಆಗೋವುಗಳಲ್ಲಿಯೂ ಗೋಪಿಯರಲ್ಲಿಯೂ, ಹರೇಃ-ಕೃಷ್ಣನ, ಸ್ತೋಕತಾಪಿ- ನಾನುಮಗುವೆಂಬಭಾವವು, ಮಾಯಯಾ ವಿನಾ-ಅಜ್ಞಾನಮೋಹವನ್ನು ಹೊರತು, ಪುರೋವತ್-ಮುನ್ನಿನಂತಯೇ, ಆಸೀತ್-ಆಯಿತು (ಮುನ್ನಿನಂತೆ ಬಾಲಭಾವವಂ ವಹಿಸಿದರೂ ತನನಿವರಶಿಶುವೆಂಬ ಅಜ್ಞಾನವು ಕೃಷ್ಣಂಗಿರಲಿಲ್ಲ.) ಇದೇವಿಶೇಷವು ||೨೫|| ವ್ರಜೌಕಸಾಂ-ಗೋಕುಲದಲ್ಲಿರುವವರಿಗೆ, ಕೃಷ್ಣೇ-ಯಶೋದಾಪುತ್ರನಲ್ಲಿ, ಯಥಾ- ಹೇಗೆ, ತಮ್ಮಮಕ್ಕಳಿಗಿಂತಲೂ ಅತಿಶಯವಾಗಿ ಪ್ರೀತಿಯುಂಟಾಗಿತ್ತೋ, ತಥಾ- ಹಾಗೆ, ಪೂರ್ಣ

---

ಗುತ್ತಿರಲು ಆಗ ಗೃಹವನೆಯ್ದಿ ಮನೋಹರಗಳಾದ ತನ್ನ ಚರಿತ್ರಂಗಳಿಂದ ತಾಯಿಗಳಂ ಅತ್ಯಂತಸಂತೋಷಪಡಿಸಿ, ಅನಂತರದಲ್ಲಿ ಆತಾಯಿಗಳಿಂ ಮೈಸೇವೆ, ಮಜ್ಜನ, ಅಂಗಾನುಲೇಪನ, ಅಲಂಕಾರ, ರಕ್ಷೆ, ತಿಲಕ, ಭೋಜನ, ಮೊದಲಾದ, ಉಪಚಾರಂಗಳಿಂದ ಲಾಲಿಸಲ್ಪಟ್ಟವನಾದನು. ||೨೩ (ಗೋವುಗಳಿಗೆ ಮೋಹವನುಂಟುಮಾಡಿದ ರೀತಿಯನುನಿರೂಪಿಸುವನು-) ಅನಂತರದಲ್ಲಿ ಗೋವುಗಳು ಸಾಯಂಕಾಲವಾಗಲು ಶೀಘ್ರದಿಂ ತಮ್ಮತಮ್ಮ ಬಂಧನಸ್ಥಾನಂಗಳನೆಯ್ದಿ ತಮ್ಮ ಹುಂಕಾರಶಬ್ದಂಗಳಿಂ ಕರೆಯಲ್ಪಟ್ಟು ಬಂದು ಕೂಡಿರುವ ತಮ್ಮ ತಮ್ಮಯಳೆಗರುಗಳಂ ಬಾರಿಬಾರಿಗೂ ನೆಕ್ಕುತಲಿರುವವಾಗಿ ಆಕರುಗಳಲ್ಲಿ ವಾತ್ಸಲ್ಯದಿಂ ಸುರಿಯುತಲಿರುವ ಕೆಚ್ಚಲುಗಳಲ್ಲಿರುವ ಕ್ಷೀರವಂ ಅವುಗಳಿಗೆ ಪಾನಂಗೆಯ್ಸಿದವು ||೨೪|| (ಇಷ್ಟುಮಟ್ಟಿಗೆ ವೈಷಮ್ಯವು ಶ್ರೀ ಕೃಷ್ಣನಿಂದಲೂ ಪರಿಹರಿಸಲಶಕ್ಯವಾಯಿತೆಂದು ನಿರೂಪಿಸುವನು-) ಗೋವುಗಳಿಗೂ ಗೋಪಸ್ತ್ರೀಯರಿಗೂ ಕರುಗಳಸ್ವರೂಪನೂ ಗೋಪಾಲಬಾಲರೂಪನೂ ಆಗಿರುವ ಶ್ರೀಕೃಷ್ಣನಲ್ಲಿ ಲಾಲನಾದಿ ಸಮಸ್ತವ್ಯಾಪಾರಗಳು ಪೂರ್ವದಲ್ಲಿ ಹೇಗಿದ್ದವೋ ಹಾಗೆಯೇಇದ್ದವು. ಆದರೆ ಈಗ ವಾತ್ಸಲ್ಯವುಮಾತ್ರ ಪೂರ್ವಕ್ಕಿಂತಲೂ ಅಧಿಕವಾಯಿತೆಂಬುವುದೊಂದೇ ವಿಶೇಷವು. ಅದೇರೀತಿಯಾಗಿ ಗೋವುಗಳಲ್ಲಿಯೂ ಗೋಪಸ್ತ್ರೀಯರಲ್ಲಿಯೂ ಈಶ್ರೀಕೃಷ್ಣನಿಗೆ ಬಾಲಭಾವವು ಪೂರ್ವದಲ್ಲಿ ಹೇಗೆಯಿತ್ತೋ ಈಗಲೂ ಹಾಗೆಯೇಇತ್ತು. ಆದರೆ ಈಗ ಇವಳು ತನ್ನತಾಯಿ ನಾನಿವಳಿಗೆ ಪುತ್ರನೆಂಬಮೋಹವು ಮಾತ್ರ ವಿಲ್ಲವೆಂಬುವುದೊಂದೇ ವಿಶೇಷವು. [ವತ್ಸಗೋಪಾಲರೂಪನಾದ ಶ್ರೀಕೃಷ್ಣನು ಗೋಗೋಪಿಯರಿಗೆ ಮೋಹವನುಂಟುಮಾಡಿದನೇ ಹೊರತು ತಾನುಮೂಢನಾಗಿರಲಿಲ್ಲ. ಮೂಢನಂತೆನಟಿಸುತ್ತಿದ್ದನು. ಪೂರ್ವಸ್ಥಿತಿಗೂ ಈಗ್ಗೂ ಇಷ್ಟೇವಿಶೇಷವು.] ||೨೫|| (ಆಗೋವುಗಳಿಗೂ ಗೋಪಗೋಪಸ್ತ್ರೀಯರಿಗೂ ಉಂಟಾದಸ್ನೇಹಾಧಿಕ್ಯವನ್ನೇ

ತೋಕೇಷು ಸ್ನೇಹವಲ್ಲ್ಯಾಬ್ದಮನ್ವಹಂ | ಶನೈರ್ನಿಸ್ಸೀಮವವೃಧೇಯಥಾಕೃಷ್ಣೇತ್ವಪೂರ್ವವತ್ ||೨೫|| ಇತ್ಥಮಾತ್ಮಾತ್ಮನಾತ್ಮಾನಂವತ್ಸಪಾಲಮಿಷೇಣಸಃ | ಪಾಲಯನ್ವತ್ಸಪೋ ವರ್ಷಂಚಿಕ್ರೀಡೇವನಗೋಷ್ಠಯೋಃ ||೨೬|| ಏಕದಾಚಾರಯನ್ವತ್ಸಾನ್ಸರಾಮೋವನಮಾವಿಶತ್ | ಪಂಚಷಟ್ಸು ತ್ರಿಯಾಮಾಸು ಹಾಯನಾಪೂರಣೀಷ್ವಜಃ ||೨೭|| ತತೋತಿದೂರಾಚ್ಚರತೋಗಾವೋವತ್ಸಾನುಪವ್ರಜಮ್ | ಗೋವರ್ಧನಾದ್ರಿಶಿಖರೇಚರನ್ತ್ಯೋದದೃಶುಸ್ತೃಣಮ್ ||೨೮|| ದೃಷ್ಟ್ವಾಥತತ್ಸ್ನೇಹವಶೋಸ್ಮೃತಾತ್ಮಾಸ ಗೋವ್ರಜೋತ್ಯಾತ್ಮಪದುರ್ಗಮಾರ್ಗಃ | ದ್ವಿಪಾತ್ಕಕುದ್ಗ್ರೀವಉದಾಸ್ಯಪುಚ್ಛೋಗಾದ್ಧುಂಕೃತೈರಾ

---

ವತ್-ಮುನ್ನಿನಂತೆಯೇ, ಸ್ವತೋಕೇಷು-ತಮ್ಮಶಿಶುಗಳಲ್ಲಿ, ಸ್ನೇಹವಲ್ಲೀ-ಅನುರಾಗವೆಂಬಬಳ್ಳಿಯು, ಆಬ್ದಂ-೧ಸಂವತ್ಸರದವರೆಗೂ, ಅನ್ವಹಂ-ಪ್ರತಿದಿನದಲ್ಲಿಯೂ, ಶನೈಃ-ಮೆಲ್ಲಗೆ, ನಿಸ್ಸೀಮ-ಅವಧಿಯಿಲ್ಲದ್ದಾಗಿ, ವವೃಧೇ-ಬೆಳೆದುದು||೨೫||ಭಗವಾನ್-ಭಗವಂತನಾದ, ಸಆತ್ಮಾ-ಆಪರಮಾತ್ಮನು, ಇತ್ಥಂ-ಹೀಗೆ, ಆತ್ಮಾನಂ-ತನ್ನನ್ನು, ಆತ್ಮನಾಂ-ತನ್ನಿಂದಲೇ, ವತ್ಸಬಾಲಮಿಷೇಣ-ಕರುಗಳೂ ಹುಡುಗರೂ ಎಂಬನೆವದಿಂದ, ಪಾಲಯನ್‌ಸನ್-ಸಲಹಿಕೊಳ್ಳುತಲಿರುವನಾಗಿ, ವನಗೋಷ್ಠಯೋಃ-ಕಾಡಿನಲ್ಲಿಯೂ ಕೊಟ್ಟಿಗೆಯಲ್ಲಿಯೂ, ವರ್ಷಂ-ಸಂವತ್ಸರಕಾಲದಲ್ಲಿ, ಚಿಕ್ರೀಡೇ-ಆಡಿದನು ||೨೬|| ಪಂಚಷಟ್ಸು-ಐದಾರು, ತ್ರಿಯಾಮಾಸು-ರಾತ್ರಿಗಳು, ಹಾಯನಾಪೂರಣೀಷುಸತೀಷು-ವರುಷವನ್ನು ತುಂಬಿನವೇಯಿರುವನಾಗುತ್ತಿರಲು, ಏಕದಾ-ಒಂದುಕಾಲದಲ್ಲಿ, ಅಜಃ-ಪರಮಾತ್ಮನಾದಕೃಷ್ಣನು, ಸರಾಮಃ-ರಾಮನೊಡಗೂಡಿದವನಾಗಿ, ವತ್ಸಾನ್-ಕರುಗಳನ್ನು, ಚಾರಯನ್-ಮೇಯಿಸುತಲಿರುವನಾಗಿ, ವನಂ-ಕಾಡನ್ನು, ಆವಿಶತ್-ಹೊಕ್ಕನು ||೨೭|| ತತಃ-ಆಬಳಿಕ, ಅತಿದೂರಾತ್-ಬಹಳದೂರದಲ್ಲಿ, ಗೋವರ್ಧನಾದ್ರಿಶಿಖರೇ-ಗೋವರ್ಧನಾದ್ರಿ-ಗೋವರ್ಧನಪರ್ವತದ, ಶಿಖರೇ-ಕೋಡುಗಲ್ಲಿನಮೇಲಣಭೂಮಿಯಲ್ಲಿ, ತೃಣಂ-ಹುಲ್ಲನ್ನು, ಚರಂತಃ-ಮೇಯುತಲಿರುವ, ಗಾವಃ-ಆಕಳು. ಉಪವ್ರಜಂ-ಗೋಕುಲದಸಮೀಪದಲ್ಲಿ, ಚರತಃ-ಹುಲ್ಲಂಮೆಲ್ಲುತಲಿರುವ, ವತ್ಸಾನ್-ಕರುಗಳನ್ನು, ದದೃಶುಃ-ಕಂಡವು||೨೮||ದೃಷ್ಟ್ವಾ-ನೋಡಿ, ಅಥ-ಆಮೇಲೆ, ತತ್ಸ್ನೇಹವಶಃ-ತತ್-ಆಕರುಗಳಲ್ಲಿ, ಸ್ನೇಹ-ಅನುರಾಗಕ್ಕೆ, ವಶಃ- ಆಧೀನವಾದ್ದರಿಂದಲೇ, ಅಸ್ಮೃತಾತ್ಮಾ-ನೆನಪುಗೊಳ್ಳದಮೈಯುಳ್ಳ, (ಮೈಮರೆತ)! ಸಗೋವ್ರಜಃ-ಆಗೋವೃಷಭಸಂಗವು, ಅತ್ಯಾತ್ಮಪದುರ್ಗಮಾರ್ಗಃ-ಗೋಪಾಲರನ್ನೂ ಕಷ್ಟವಾದದಾರಿಯನ್ನೂ ದಾಂಟಿಬಂದುದಾಗಿ, ದ್ವಿಪಾತ್-೨ಕಾಲುಳ್ಳಹಾಗೆ ತೋರುತಲಿರುವುದಾಗಿ,(ಓಡುವಾಗಮುಂಗಾಲ್ಗಳೂ ಪಿಂಗಾಲ್ಗ

---

ನಿರೂಪಿಸುವನು-) ಆಗೋಕುಲದಲ್ಲಿರುವ ಗೋಪರಿಗೂ ಗೋಪಿಕಾಸ್ತ್ರೀಯರಿಗೂ ಗೋವುಗಳಿಗೂ ಸಹ ಪೂರ್ವದಲ್ಲಿಹೇಗೆ ಯಶೋದಾಪುತ್ರನಾದ ಶ್ರೀಕೃಷ್ಣನಲ್ಲಿ ತಮ್ಮ ಪುತ್ರರಿಗಿಂತಲೂ ಸ್ನೇಹವು ಅಧಿಕವಾಗಿತ್ತೋ, ಹಾಗೆಯೇ ಈಗ ತಮ್ಮಬಾಲಕರಲ್ಲಿಯೂ ಮುಂಚೆಗಿಂತಲೂ ಸ್ನೇಹವು ಒಂದುಸಂವತ್ಸರದವರೆಗೂ ಪ್ರತಿದಿನದಲ್ಲಿಯೂ ಮೆಲ್ಲಮೆಲ್ಲನೆ ಅವಧಿಯಿಲ್ಲದಂತೆ ವೃದ್ಧಿಹೊಂದಿದಂತಿಯದಾಯಿತು. ||೨೫|| ಈರೀತಿಯಾಗಿ ಆಕೃಷ್ಣನು ಕರುಗಳಂ ಪಾಲಿಸುವನಾಗಿ ಕರುಗಳನೆವದಿಂದಲೂ, ಅವಂ ಪಾಲಿಸುವ ಗೋಪಬಾಲಕರನೆವದಿಂದಲೂ, ತನ್ನಂ ತನ್ನಿಂದಲೇ ಪಾಲಿಸಿಕೊಳ್ಳುತ ಒಂದುವರುಷದವರೆಗೂ ವನದಲ್ಲಿಯೂ ಗೋಕುಲದಲ್ಲಿಯೂ ಕ್ರೀಡಿಸಿದನು. ||೨೬|| ಹೀಗೆ ಸರ್ವಸ್ವರೂಪನಾಗಿ ಗೋಕುಲ ವನಗಳಲ್ಲಿ ಕ್ರೀಡಿಸುವ ಶ್ರೀಕೃಷ್ಣನಿಗೆ ಒಂದುಸಂವತ್ಸರವು ಐದಾರುರಾತ್ರಿಗಳು ಕಡಮೆಯಾಗಿ ಪೂರ್ತಿಯಾಗುತಿರಲು ಒಂದುದಿವಸದಲ್ಲಿ ಸೃಷ್ಟಿಕರ್ತನಾದ ಬಲರಾಮನು ಕರುಗಳಂಮೇಯಿಸುವನಾಗಿ ವನವಂ ಪ್ರವೇಶಿಸಿದನು. ||೨೭|| ಅನಂತರದಲ್ಲಿ ದೂರವಾಗಿ ಗೋವರ್ಧನಪರ್ವತದ ಮೇಲುಗಡೆಯಲ್ಲಿ ಹುಲ್ಲುಗಳಂ ಮೇಯುತಲಿರುವ ಗೋವುಗಳು ಗೋಕುಲದ ಸಮೀಪದಲ್ಲಿ ಮೇಯುತಲಿರುವ ಕರುಗಳಂಕಂಡವು. ||೨೮|| ಆಗ ಗೋವುಗಳ ಸಮೂಹವು ಆಕರುಗಳಂಕಂಡು ಆ ಕರುಗಳಲ್ಲಿರುವ ವಾತ್ಸಲ್ಯದಿಂ ಸೆಳೆಯಲ್ಪಟ್ಟಂತಾದ್ದಾದ ಕಾರಣದಿಂ ಮೈಮರೆತದ್ದಾಗಿ, ತಮ್ಮಂ ಪಾಲಿಸುವ ಗೋಪಾಲಕರಿಂದಲೂ ಪ್ರವೇಶಿಸಲಶಕ್ಯವಾದ ಮಾರ್ಗವಂ ಅತಿಕ್ರಮಿಸಿ ಓಡಿಬರುವುದಾದುದರಿಂದ ಎರಡು ಕಾಲುಗಳಿಂದೋಡಿಬರುವ ಮನುಷ್ಯನ ಹಾಗೆ ತೋರುತಲಿರುವದಾಗಿ,

ಸ್ನುಪಯೋಜವೇನ ॥ ೩೦ ॥ ಸಮೇತ್ಯಗಾವೋಽಧೋವತ್ಸಾನ್ವತ್ಸವಂತ್ಯೋಽಪ್ಯಪಾಯಯನ್ । ಗಿಳಂತ್ಯ
ಇವಚಾಂಗಾನಿಲಿಹಂತ್ಯಃಸ್ವೌಧಸಂಪಯಃ ॥ ೩೧ ॥ ಗೋಪಾಸ್ತದ್ರೋಧನಾಯಾಸಮೌಘ್ಯಲಜ್ಜೋರು
ಮನ್ಯುನಾ । ದುರ್ಗಾಧ್ವಕೃಚ್ಛ್ರತೋಽಭ್ಯೇತ್ಯಗೋವತ್ಸೈರ್ದದೃಶುಸ್ಸುತಾನ್ ॥ ೩೨ ॥ ತದೀಕ್ಷಣೋತ್ಪ್ರೇಮ
ರಸಾಪ್ಲುತಾಶಯಾಜಾತಾನುರಾಗಾಗತಮನ್ಯವೋಽರ್ಭಕಾನ್ । ಉದೂಹ್ಯದೋರ್ಭಿಃಪರಿರಭ್ಯಮೂರ್ಧ್ನಿ
ಘ್ರಾಣೈರವಾಪುಃಪರಮಾಂಮುದಂತೇ ॥ ೩೩ ॥ ಏವಂಸಪಶವೋಗೋಪಾಸ್ತತ್ಕಾಶ್ಲೇಷನಿರ್ವೃತಾಃ । ಕೃ

ಳೂ ಒಂದಾಗಿತೋರುವವು) ಕಕುದ್ಗ್ರೀವಃ-ಕಕುತ್-ಹಿಣಿಲಿನಲ್ಲಿ, ಗ್ರೀವಃ-ಕತ್ತುಳ್ಳದ್ದಾಗಿ, ಉದಾಸ್ಯಪುಚ್ಛಃ-ಉತ್-ಉದ್ಧವಾಗಿಯೆತ್ತಲ್ಪಟ್ಟ, ಆಸ್ಯಪುಚ್ಛಃ-ಬಾಯಿಯೂಬಾಲವೂ ಉಳ್ಳದ್ದಾಗಿ, ಆಸ್ನುಪಯಾಃ-ಸೋರುತಲಿರುವಹಾಲುಳ್ಳದ್ದಾಗಿ, ಹುಂಕೃತೈಃ-ಹುಂಕಾರವಗಳೊಡನೆ, ಜವೇನ-ವೇಗದಿಂದ, ಅಗಾತ್-ಬಂದುದು ॥೩೦॥ ಗಾವಃ- ಆಕಳುಗಳು, ಸಮೇತ್ಯ- ಬಂದು, ವತ್ಸವಂತ್ಯೋಪಿ-ಹೊಸಕರುಗಳುಳ್ಳವಾದರೂ, ಗೋವತ್ಸಾನ್-ಬಲಿತಹೋರುಕರುಗಳನ್ನು, ಗಿಳಂತ್ಯಇವ- ನುಂಗುತಲಿರುವವೋ ಎಂಬಹಾಗೆ, ಅಂಗಾನಿ-ಅವಯವಗಳನ್ನು, ಲಿಹಂತ್ಯಸ್ಸತ್ಯಃ-ನೆಕ್ಕುತಲಿರುವವಾಗಿ, ಸ್ವೌಧಸಂ-ತಮ್ಮಕೆಚ್ಚಲಿನಲ್ಲಿರುವ, ಪಯಃ- ಹಾಲನ್ನು, ಅಪಾಯಯನ್-ಕುಡಿಯಿಸಿದವು ॥೩೧॥ ಗೋಪಾಃ- ದನಗಳಂಕಾಯುವಗೊಲ್ಲರು, ತದ್ರೋಧನಾಯಾಸಮೌಘ್ಯಲಜ್ಜೋರುಮನ್ಯುನಾ-ತತ್-ಆ ಗೋವುಗಳನ್ನು, ರೋಧನ-ತಡೆಯುವದರಲ್ಲಿ, ಆಯಾಸ-ಶ್ರಮದ, ಮೌಘ್ಯ- ವ್ಯರ್ಥತೆಯಿಂದುಂಟಾದ, ಲಜ್ಜಾ- ನಾಚಿಕೆಯಿಂಕೂಡಿದ, ಉರುಮನ್ಯುನಾ-ಹೆಚ್ಚುಸಿಟ್ಟಿನಿಂದ, ದುರ್ಗಾಧ್ವ-ಕಷ್ಟದಿಂದಲೂನಡೆಯಲಶಕ್ಯವಾದದಾರಿಯ, ಕೃಚ್ಛ್ರತಃ-ಶ್ರಮದೊಡನೆ, ಅಭ್ಯೇತ್ಯ-ಬಂದು, ಗೋವತ್ಸೈಸ್ಸಹ-ತುರುಕರುಗಳೊಂದಿಗಿರುವ, ಸುತಾನ್-ತಮ್ಮಮಕ್ಕಳನ್ನು, ದದೃಶುಃ- ನೋಡಿದರು ॥೩೨॥ ತೇ-ಆ ದೊಡ್ಡಗೋಪಾಲಕರು, ತದೀಕ್ಷಣೋತ್ಪ್ರೇಮರಸಾಪ್ಲುತಾಶಯಾಃ- ತತ್-ಆಹುಡುಗರನ್ನು, ಕರುಗಳನ್ನೂ, ಈಕ್ಷಣ-ನೋಡುವುದರಲ್ಲಿ ಉತ್ಪ್ರೇಮರಸ-ಹುಟ್ಟಿದಅನುರಾಗರಸದಲ್ಲಿ, ಆಪ್ಲುತ-ಮುಳುಗಿದ, ಆಶಯಾಃ-ಅಭಿಪ್ರಾಯವುಳ್ಳವರಾದ್ದರಿಂದಲೇ, ಜಾತಾನುರಾಗಾಃ-ಹುಟ್ಟಿದಪ್ರೇಮವುಳ್ಳವರಾಗಿ, ಗತಮನ್ಯವಃ-ಕಳೆದುಹೋದಸಿಟ್ಟುಳ್ಳವರಾಗಿ, ಅರ್ಭಕಾನ್- ಹುಡುಗರನ್ನು, ಉದೂಹ್ಯ- ಎತ್ತಿಕೊಂಡು, ದೋರ್ಭಿಃ-ತೋಳುಗಳಿಂದ, ಪರಿರಭ್ಯ-ಅಪ್ಪಿಕೊಂಡು, ಮೂರ್ಧ್ನಿಘ್ರಾಣೈಃ-ತಲೆಯಲ್ಲಿಮೂಸಿನೋಡುವಿಕಗಳಿಂದ, ಪರಮಾಂ-ಉತ್ಕೃಷ್ಟವಾದ, ಮುದಂ-ಸಂತೋಷವನ್ನು, ಅವಾಪುಃ-ಹೊಂದಿದರು ॥೩೩॥ ಏವಂ-ಹೀಗೆ, ಸಪಶವಃ-ಪಶುಗಳಿಂದಕೂಡಿದ, ಗೋ

ಮತ್ತು ಹಿರಳಿನಲ್ಲಿ ಬಗ್ಗಿಸಲ್ಪಟ್ಟಕಂಠವುಳ್ಳದ್ದಾಗಿ, ಮತ್ತು ಮೇಲಕ್ಕೆ ಎತ್ತಲ್ಪಟ್ಟಮುಖಗಳೂ ಬಾಲಗಳೂ ಉಳ್ಳದ್ದಾಗಿ, ಮತ್ತು ಎಲ್ಲಕಡೆಗಳಲ್ಲಿಯೂ ಸೋರುತಲಿರುವ ಮೊಲೆಹಾಲುಳ್ಳದ್ದಾಗಿಯೂ, ಹೂಂಕರಿಸುತ ಅತ್ಯಂತವೇಗದಿಂದ ಗೋಕುಲ ಸಮೀಪವನೆಯ್ದಿದಂತಿಯವಾಯಿತು. ॥೩೦॥ ಅನಂತರದಲ್ಲಿ ಆಗೋವುಗಳು ವೇಗದಿಂ ಆಗೋವರ್ಧನಪರ್ವತದಿಂದ ಕೆಳಕ್ಕೆಬಂದು ತಾವು ಈಚೆಗೆ ಹೊಸತಾಗಿ ಕರುಗಳಂ ಹೆತ್ತಂತಾಪಾದರೂ ಆಗೋಕುಲ ಸಮೀಪದಲ್ಲಿ ಮೇಯುತಲಿರುವ ಬಲಿತಕರುಗಳ ಅಂಗಂಗಳಂ ಮೋಹದಿಂ ಕಬಳಿಸುತಲಿರುವಂತೆ ನೆಕ್ಕುತ್ತ ಅವಕ್ಕೆ ತಮ್ಮಕೆಚ್ಚಲುಗಳಲ್ಲಿ ಹೆಚ್ಚಿರುವ ಹಾಲನ್ನು ಕುಡಿಸಿದವು. ॥೩೧॥ (ಈಪ್ರಕಾರ ವನದಲ್ಲಿರುವ ಬಲರಾಮನಿಂದ ನೋಡಲ್ಪಟ್ಟ ಕರುಗಳಲ್ಲಿ ಆಗೋವುಗಳಿಗಿರುವ ಸ್ನೇಹಾತಿಶಯವಂ ನಿರೂಪಿಸಿ, ಆಗೋಪಾಲಕರಿಗಿರುವ ಸ್ನೇಹಾತಿಶಯವಂ ಪೇಳುವನಂತೆನೆ-) ಅನಂತರದಲ್ಲಿಗೋಪಾಲಕರು ಗೋವುಗಳಂ ತಡೆಯಲೋಸುಗ ತಮಗುಂಟಾದಪ್ರಯಾಸವು ವ್ಯರ್ಥವಾದ್ದುದರಿಂದ ನಾಚಿಕೆಯಿಂದಾದ ಕೋಪದೊಡನೆಕೂಡಿ ಕಷ್ಟವಾದಮಾರ್ಗಶ್ರಮದಿಂಬಂದು ಗೋಕುಲದಸಮೀಪದಲ್ಲಿ ಆಗೋವುಗಳೊಡನೆಯೂ ಕರುಗಳೊಡನೆಯೂ ಕೂಡಿರುವ ತಮ್ಮಸುತರಂಕಂಡರು. ॥೩೨॥ ಆಮೇಲೆ ಗೋಪಾಲಕರು ತಮ್ಮಪುತ್ರರಂನೋಡಿದ್ದರಿಂದ ತಮಗುಂಟಾದ ಪ್ರೇಮರಸದಲ್ಲಿ ಮುಳುಗಿದ ಅಂತಃಕರಣಂಗಳುಳ್ಳವರಾಗಿ ನಾಚಿಕೆಯಿಂದಲೂ ಸಿಟ್ಟಿನಿಂದಲೂ. ಅತ್ಯಂತಮಾರ್ಗಶ್ರಮದಿಂದಲೂ ಪೀಡಿತರಾದುದರಿಂದ ಗೋವುಗಳ ಎದುರಿಗೆ ಕರುಗಳಂ ತಂದರಲ್ಲಾ ಎಂಬ ಸಿಟ್ಟಿನಿಂದ ಆಬಾಲಕರಂ ಹೊಡೆಯುವದಕ್ಕೆ ಬಂದಿರುವರಾದರೂ ಅಂತಾಕೋಪವಂಬಿಟ್ಟು ಆಬಾಲಕರಲ್ಲಿ ಅತಿಪ್ರಿಯದಿಂ ಯುಕ್ತರಾಗಿ ಅವರಂ ಎತ್ತಿಕೊಂಡು, ತೋಳುಗಳಿಂದ ತಬ್ಬಿಕೊಂಡು, ತಮ್ಮಮೂಗುಗಳಿಂದ ಅವರತಲೆಗಳಲ್ಲಿ ಮೂಸಿನೋಡಿ, ಪರಮಸಂತೋಷವನೆಯ್ದಿದರು. ॥೩೩॥ ಬಳಿಕ ಗೋಪಾಲಕರೆಲ್ಲರೂ

ಚ್ಛ್ರಾಚ್ಛನೈರಪಗತಾಸ್ತದನುಸ್ಮೃತ್ಯುದಶ್ರವಃ ॥ ೩೪ ॥ ವ್ರಜಸ್ಯ ರಾಮಃ ಪ್ರೇಮರ್ದ್ಧೇರ್ವೀಕ್ಷ್ಯೌತ್ಕಂ
ಣ್ಠ್ಯಮನುಕ್ಷಣಮ್ । ಮುಕ್ತಸ್ತನೇಷ್ವಪತ್ಯೇಷ್ವಪ್ಯಹೇತುವಿದಚಿನ್ತಯತ ॥ ೩೫ ॥ ಕಿಮೇತದದ್ಭುತಮಿವ ವಾ
ಸುದೇವೇಽಖಿಲಾತ್ಮನಿ । ವ್ರಜಸ್ಯ ಸಾತ್ಮನಸ್ತೋಕೇಷ್ವಪೂರ್ವಂ ಪ್ರೇಮ ವರ್ಧತೇ ॥ ೩೬ ॥ ಕೇಯಂ ವಾ ಕುತ ಆಯಾ
ತಾ ದೈವೀ ವಾ ನಾರ್ಯುತಾಸುರೀ । ಪ್ರಾಯೋ ಮಾಯಾಸ್ತು ಮೇ ಭರ್ತುರ್ನಾನ್ಯಾ ಮೇಽಪಿ ವಿಮೋಹಿನೀ ॥ ೩೭ ॥ ಇತಿ
ಸಂಚಿನ್ತ್ಯ ದಾಶಾರ್ಹೋ ವತ್ಸಾನ್ ಸವಯಸಾನಪಿ । ಸರ್ವಾನಾಚಷ್ಟ ವೈಕುಣ್ಠಂ ಚಕ್ಷುಷಾ ವಯುನೇನ ಸಃ ॥

---

ಪಾಃ-ಗೊಲ್ಲರು, ತೋಕಾಶ್ಲೇಷಸುನಿರ್ವೃತಾಃ-ತೋಕ-ಶಿಶುಗಳ, ಆಶ್ಲೇಷ-ಆಲಿಂಗನದಿಂದ, ಸುನಿರ್ವೃತಾಃ- ಸಂತಸಗೊಂಡವ, ರಾಗಿ, ಕೃಚ್ಛ್ರಾತ್-ಪ್ರಯಾಸದಿಂದ, ಶನೈಃ-ಮೆಲ್ಲನೆ, ಅಪಗತಾಃ-ಬಿಟ್ಟುಬಂದವರಾದರೂ, ತದನುಸ್ಮೃತ್ಯುದಶ್ರವಃ-ತತ್-ಆಮಕ್ಕಳ, ಅನುಸ್ಮೃತಿ-ನೆನಪಿನಿಂದ, ಉದಶ್ರವಃ-ಉಕ್ಕಿಬರುವ ಕಂಣೀರುಳ್ಳವರಾದರು ॥೩೪॥ ರಾಮಃ-ಬಲರಾಮನು, ಮುಕ್ತಸ್ತನೇಷು-ಬಿಡಲ್ಪಟ್ಟಮೊಲೆಯುಳ್ಳ, ಅಪತ್ಯೇಷ್ವಪಿ-ಬಲಿತಮಕ್ಕಳಲ್ಲಿಯೂ ಕೂಡ, ವ್ರಜಸ್ಯ- ಗೋಕುಲದಲ್ಲಿರುವ ಗೋಗೋಪಾಲಕರ, ಅನುಕ್ಷಣಂ-ಪ್ರತಿನಿಮಿಷದಲ್ಲಿಯೂ, ಪ್ರೇಮರ್ಧೇಃ-ಪ್ರೇಮಾಭಿವೃದ್ಧಿಯ, ಔತ್ಕಂಠ್ಯಂ-ಅತಿಶಯವನ್ನು, ವೀಕ್ಷ್ಯ-ನೋಡಿ, ಅಹೇತುವಿತ್-ಕಾರಣವನ್ನರಿಯದವನಾಗಿ, ೩- ನಿಶ್ಚಯಿಸಲೋಸುವ, ಅಚಿಂತಯತ್-ಯೋಚಿಸಿದನು ॥೩೫॥ ಅಖಿಲಾತ್ಮನಿ-ಸರ್ವಪ್ರಾಣಿಗಳಿಗೂ ಆತ್ಮನಾಗಿರುವ, ವಾಸುದೇವೇಇವ-ಕೃಷ್ಣನಲ್ಲಿದ್ದಂತೆ, ಸಾತ್ಮನಃ-ತನ್ನಿಂ ಸಹಿತವಾದ, ವ್ರಜಸ್ಯ-ಗೋಕುಲದ, ಅಪೂರ್ವಂ-ಪೂರ್ವದೊಳಿಲ್ಲದ, ಪ್ರೇಮ-ಅನುರಾಗವು; ತೋಕೇಷ್ವಪಿ- ಮಕ್ಕಳಲ್ಲಿಯೂ, ವರ್ಧತೇ-ಬೆಳೆಯುತಲಿದೆ ಏತತ್- ಇದು, ಕಿಮದ್ಭುತಂ-ಏನು ಆಶ್ಚರ್ಯವು; ॥೩೬॥ ಕೇಯಂ-ಇದುಯಾವುದು, ಕುತಆಯಾತಾವಾ-ಎಲ್ಲಿಂದಬಂದದ್ದೊ! ದೈವೀವಾ- ದೇವಸಂಬಂಧವಾದ್ದೋ, ಉತ-ಅಲ್ಲದಿದ್ದರೆ, ನಾರೀವಾ-ನರಸಂಬಂಧವಾದ್ದೋ, ಉತ-ಹಾಗಲ್ಲದಿದ್ದರೆ, ಆಸುರೀವಾ-ಅಸುರಸಂಬಂಧವಾದ್ದೋ, ಪ್ರಾಯಃ-ಬಹುಶಃ-ಮೇ-ನನ್ನ, ಭರ್ತುಃ-ಒಡೆಯನಾದ ಕೃಷ್ಣನ, ಮಾಯಾ-ಮೋಹಕಶಕ್ತಿಯು, ಇಯಂ-ಇದು, ಅಸ್ತು-ಆಗಲಿ, ಅನ್ಯಾ-ಇತರವಾದ್ದು, ಮೇಽಪಿ-ನನಗೂ, ವಿಮೋಹಿನೀ-ಮೋಹಕವಾದ್ದು, ನ-ಅಲ್ಲವು ॥೩೭॥ ದಾಶಾರ್ಹಃ-ಆಬಲರಾಮನು, ಇತಿ-ಹೀಗೆ, ಸಂಚಿಂತ್ಯ-ಯೋಚಿಸಿಕೊಂಡು, ವತ್ಸಾನ್-ಕರುಗಳನ್ನೂ, ಸವಯಸಾನಪಿ-ಸರಿಪ್ರಾಯದ ಹುಡುಗರನ್ನೂ ಕೂಡ, ಸರ್ವಾನ್-ಎಲ್ಲರನ್ನೂ, ವಯುನೇನ-ಜ್ಞಾನಮಯವಾದ, ಚಕ್ಷುಷಾ-ದೃಷ್ಟಿಯಿಂದ, ವೈಕುಂಠಂ-ಕೃಷ್ಣನನ್ನಾಗಿ, ಆಚಷ್ಟ-ನೋಡಿದನು ॥೩೮॥ ಏತೇ-ಈಕರುಗಳು, ಮ

---

ಈರೀತಿಯಾಗಿ ತಮ್ಮತಮ್ಮ ಪುತ್ರರಂ ಅಪ್ಪಿಕೊಂಡು ಪರಮಾನಂದಭರಿತರಾಗಿ ಬಿಟ್ಟುಬರಲಾರದೆ ಆಸುತರಂ ಸ್ಮರಿಸುವುದರಿಂದ ಉಬ್ಬಿಹೊರಕ್ಕೆಹೊರಟು ಬರುತಲಿರುವ ಕಂಣನೀರುಳ್ಳವರಾಗಿ ಅತಿಕಷ್ಟದಿಂ ಮೆಲ್ಲಮೆಲ್ಲನೆ ಅಲ್ಲಿಂದ ಆಗೋವುಗಳೊಡನೆಕೂಡಿ ಹಿಂದಕ್ಕೆ ಬಂದವರಾದರು ॥೩೪॥ ಅನಂತರದಲ್ಲಿ ಬಲರಾಮನು- ಆಬಾಲಕರೂ ಆಕರುಗಳೂ, ತಮ್ಮತಮ್ಮ ತಾಯಿಗಳು ಮರಳಿ ಕರುಗಳಂ ಹೆತ್ತಿರುವವಾದ್ದರಿಂದ ಸ್ತನ್ಯಪಾನವಂ ಬಿಟ್ಟಿರುವವಾದರೂ, ಗೋಕುಲವಾಸಿಗಳಾದ ಗೋಪಾಲರಿಗೂ ಗೋಪಾಂಗನೆಯರಿಗೂ ಆಗೋವುಗಳಿಗೂ ಆಪುತ್ರರಲ್ಲಿಯೂ ಆಕರುಗಳಲ್ಲಿಯೂ ಸಹ- ಪ್ರತಿಕ್ಷಣದಲ್ಲಿಯೂ ಅತಿಶಯವಾಗಿರುವ ಪ್ರೇಮಸಮೃದ್ಧಿಯಂ ಕಂಡು, ಅದರನಿಮಿತ್ತವನರಿಯದವನಾಗಿ ಈರೀತಿಯಿಂ ಚಿಂತಿಸಿದನು.॥೩೫॥ ಅದೆಂತೆನೆ- ನನ್ನ ಒಡಗೂಡಿರುವ ಈಗೋಕುಲದಜನರಿಗೆ ಪೂರ್ವದಲ್ಲಿ ಯಾವರೀತಿಯಿಂ ಸರ್ವಾತ್ಮಕನಾದ ಶ್ರೀವಾಸುದೇವನಲ್ಲಿಯೇ ಅತ್ಯಂತಪ್ರೀತಿಯುಂಟಾಗಿತ್ತೋ ಅದೇರೀತಿಯಿಂ ಈಗ ಅವರಿಗೂ ನನಗೂ ಸಹ ಈಬಾಲಕರಲ್ಲಿಯೂ ಕೂಡ ಅಪೂರ್ವವಾದ ಪ್ರೀತಿಯು ವೃದ್ಧಿಯನೈದ್ದಿತೆಂಬಲ್ಲಿ ಇದೇನೋ ಆಶ್ಚರ್ಯಕರವಾಗಿದೆ. ॥೩೬॥ ಈಮಾಯೆ ಯಾವುದೋ; ಇದುದೇವತೆಗಳ ಮಾಯೆಯೋ, ಅಸುರರಮಾಯೆಯೋ, ಅಲ್ಲದೆ ಮನುಷ್ಯರ ಮಾಯೆಯೋ, ಇದು ಯಾವಕಾರಣದಿಂದ ಆಕಸ್ಮಿಕವಾಗಿ* ಪ್ರಯೋಗಿಸಲ್ಪಟ್ಟಿತೋ ತಿಳಿಯಲಿಲ್ಲವು. ಆದರೂ ಯಾವಕಾರಣದಿಂದ ಈಮಾಯೆಯು ನನಗೂಕೂಡ ಮೋಹವನ್ನುಂಟುಮಾಡುತಲಿದೆಯೋ ಆ ಕಾರಣದಿಂದ ಇದು ಬಹುತರವಾಗಿ ನನಗೂಸ್ವಾಮಿಯಾದ ಶ್ರೀಕೃಷ್ಣನ ಮಾಯೆಯೇ ಆಗಿರುವುದು॥೩೭॥ಎಂದು ಈ ರೀತಿಯಾಗಿ ಮನಸಿನಲ್ಲಿಭಾವಿಸಿ ಬಲರಾಮನು ತನ್ನ ಮಿತ್ರರಾದ ಗೋಪಾಲಬಾಲಕರನ್ನು ಎಲ್ಲರನ್ನೂ ಆಕರುಗಳನ್ನೂ ಸಹ ತನ್ನ ಜ್ಞಾನ ದೃಷ್ಟಿಯಿಂದ ಶ್ರೀಕೃಷ್ಣನನ್ನಾಗಿ ನೋಡಿದನು.॥ ಅನಂತರದಲ್ಲಿ ಬಲರಾಮನು ಶ್ರೀಕೃಷ್ಣನಂ ಕು

ನೈತೇಸುರೇಶಾಋಷಯೋನಚೈತೇತ್ವಮೇವಭಾಸೀಶಭಿದಾಶ್ರಯೇಸ್ಮಿನ್ | ಸರ್ವಂಪೃಥಕ್ತ್ವಂನಿಗಮಾತ್ಕಥಂ ವದೇತ್ಯುಕ್ತೇನವೃತ್ತಂಪ್ರಭುಣಾಬಲೋವೈತ್ ||೩೯|| ತಾವದೇವಾತ್ಮಭೂರಾತ್ಮಮಾನೇನತ್ರುಟ್ಯನೇಹಸಾ | ಪು ನಸ್ಮಾರೇತ್ಯವದಾಬ್ದಂಕ್ರೀಡಂತಂದದೃಶೇಸಕಲಂಹರಿಮ್||೪೦||ಬ್ರಹ್ಮಾ|| ಯಾವಂತೋಗೋಕುಲೇಬಾಲಾಸ್ಸವತ್ಸಾ ಸ್ಸರ್ವಏವಹಿ|ಮಾಯಾಶಯೇಶಯಾನಾಯೇನಾದ್ಯಾಪಿಪುನರುತ್ಥಿತಾಃ||೪೧||ಇತಏತೇತ್ರಕುತ್ರತ್ಯಾಮನ್ಮಾಯಾಮೋ ಹಿತೇತರೇ | ತಾವಂತಏವಯಾವದಬ್ದಂಕ್ರೀಡಂತೋವಿಷ್ಣುನಾಸಹ ||೪೨|| ಏವಮೇತೇಷುಭೇದೇಷುಚಿರಂಧ್ಯಾ

---

ಸುರೇಶಾಃ-ನನ್ನ ಅಂಶಗಳು, ನ-ಅಲ್ಲವು, ಋಷಯಃ-ಋಷಿಗಳಾಗಿರುವರು, ಏತೇಚ-ಈಗೋಪಾಲಕರೂಕೂಡ, ಸುರಾಂಶಾಃ-ವಿಷ್ಣ್ವಂ ಶಗಳು. ನ-ಅಲ್ಲವು.ದೇವತೆಗಳಾಗಿರುವರು, (ಇಷ್ಟುಬಲ್ಲೆನು )ಭಿದಾಶ್ರಯೇ-ಹೀಗೆಭೇದಕ್ಕಆಧಾರವಾಗಿರುವ, ಅಸ್ಮಿನ್- ಈಗೋಗೋ ಪಾಲಕಬೃಂದದಲ್ಲಿ, ತ್ವಮೇವ-ನೀನೇ, ಭಾಸಿ-ತೋರುತಲಿರುವಿ, ಈಶ-ಒಡೆಯನಾದಕೃಷ್ಣನೇ! ತ್ವಂ-ನೀನು, ಸರ್ವಂ-ಎಲ್ಲವನ್ನು, ಪೃಥಕ್-ಬೇರ್ಪಡಿಸಿ, ವದ-ಹೇಳು, ಕಥಂ-ಅದುಹೇಗೆ, ಇತ್ಯುಕ್ತೇನ-ಹೀಗೆಬಲರಾಮನಿಂದ ಬೆಸಗೊಳ್ಳಲ್ಪಟ್ಟ, ಪ್ರಭುಣಾ-ಸಮರ್ಥ ನಾದಕೃಷ್ಣನಿಂದ, ನಿಗಮಾತ್-ಸಂಕ್ಷೇಪವಾಗಿಹೇಳಲ್ಪಟ್ಟ, ವೃತ್ತಂ- ಸಮಾಚಾರವನ್ನು, ಬಲಃ- ಬಲರಾಮನು, ಅವೈತ್-ತಿಳಿದು ಕೊಂಡನು ||೩೯||ತಾವದೇವ- ಅಷ್ಟರೊಳಗೇವೇ, ಆತ್ಮಭೂಃ-ಬ್ರಹ್ಮನು, ಆತ್ಮಮಾನೇನ- ತನ್ನ ಪರಿಮಾಣದಿಂದ, ತ್ರುಟ್ಯನೇಹಸಾ- ತ್ರುಟಿಕಾಲದಿಂದ, (ತ್ರುಟಿ-ನಿಮಿಷದಲ್ಲಿ ೩೦೦೦ಭಾಗಗಳೊಳಗೊಂದು ಭಾಗವಕಾಲವು)ಪುರೋವತ್-ಮುನ್ನಿನಂತೆ,ಅಬ್ದಂ-ಸಂವತ್ಸ ರದವರೆಗೂ, ಕ್ರೀಡಂತಂ-ಆಡುತಲಿರುವ, ಸಕಲಂ-ಸಪರಿವಾರನಾದ, ಹರಿಂ-ಕೃಷ್ಣನನ್ನು, ದದೃಶೇ-ಕಂಡನು (ನಮ್ಮವರುಷವುಬ್ರಹ್ಮ ನಿಗೊಂದುತ್ರುಟಿಕಾಲ)||೪೦||[ಬ್ರಹ್ಮನಯೋಚನೆ]ಗೋಕುಲೇ-ಗೊಲ್ಲರಪಾಳ್ಯದಲ್ಲಿ, ಸವತ್ಸಾಃ- ಕರುಗಳಿಂಕೂಡಿದ, ಬಾಲಾಃ-ಹುಡುಗ ರು, ಯಾವಂತಃ-ಎಷ್ಟುಮಂದಿಯುಂಟೋ, ಸರ್ವಏವ-ಅವರೆಲ್ಲರೂ, ಮಾಯಾಶಯೇ-ನನ್ನಮಾಯೆಂಬಹಾಸಿಗೆಯಲ್ಲಿ, ಶಯಾನಾಃ-ಮ ಲಗಿದವಗಾಗಿ, ಯೇ-ಯಾರಿದ್ದರೋ, ತೇ-ಅವರು, ಅದ್ಯಾಪಿ-ಈಗಲೂಕೂಡ, ಪುನಃ-ಮರಳಿ, ನೋತ್ಥಿತಾಃ-ಎದ್ದವರಾಗಲಿಲ್ಲವ ಷ್ಟೇ!||೪೧||ಏತೇ-ಇವರು, ಇತಃ-ಇತ್ತಕಾಣುವರು, ಅದ್ಯ-ಈಗ, ಅಬ್ದಂ-ಸಂವತ್ಸರದವರೆಗೂ, ವಿಷ್ಣುನಾಸಹ-ಕೃಷ್ಣನೊಡನೆ, ಕ್ರೀ ಡಂತಃ-ಆಡುತಲಿರುವ, ಮನ್ಮಾಯಾಮೋಹಿತೇತರೇ-ಮನ್ಮಾಯಾ-ನನ್ನಮಾಯೆಯಿಂದ, ಮೋಹಿತ-ಮರೆಯಿಸಲ್ಪಟ್ಟವರಿಗಿಂತಲೂ, ಇತರೇ-ಅನ್ಯರಾದ, ತಾವಂತೋಯಾವತ್-ಅಷ್ಟುಮಂದಿಯೆಲ್ಲರೂ, ಅತ್ರಕುತ್ರತ್ಯಾಃ- ಇಲ್ಲಿಯೆಲ್ಲಿರುವರು ||೪೨||( ಶುಕವಚನವು )

---

ರಿತು, ಎಲೈ ಜಗದೀಶ್ವರನೇ! ಪೂರ್ವದಲ್ಲಿ ನಾನು, ಈಕರುಗಳೆಲ್ಲವೂ ಋಷಿಗಳಂಶವೆನುತಲೂ ಇವಂಪಾಲಿಸುವ ಗೋ ಪಾಲಕರೆಲ್ಲರೂ ದೇವತೆಗಳ ಅಂಶವೆನುತಲೂ ತಿಳಿದವನಾಗಿದ್ದೆನು. ಈಗಲಾದರೋ ನನಗೆ ಹಾಗೆತೋರುವುದಿಲ್ಲ; ಮತ್ತೆ ಯೇನೆಂದರೆ- ಭೇದಕ್ಕೆ ಆಶ್ರಯಗಳಾದ ಈಸ್ಥಾನಗಳಲ್ಲಿಯೂ ಕೂಡ ನನಗೆ ನೀನಾಗಿ ತೋರುತ್ತಲಿರುವೆ ಯಾದುದ ರಿಂದ ನೀನೇ ಈಸಮಸ್ತವಂ ಪ್ರತ್ಯೇಕವಾಗಿ ಯೋಚಿಸಿ, ಎಂತು ಈರೀತಿಯುಂಟಾಯಿತೋ ಅದಂ ನನಗೆಪೇಳುವ ನಾಗೆಂದು ತನ್ನಿಂದಪ್ರಶ್ನೆಗೆಯ್ಯಲ್ಪಟ್ಟ ಶ್ರೀಕೃಷ್ಣನಿಂ ಸಂಕ್ಷೇಪದಿಂದಲೇ ಹೇಳಲ್ಪಟ್ಟ ವೃತ್ತಾಂತವಂಕೇಳಿ, ಆಸಮ ಸ್ತವಂ ತಿಳಿದನು. ||೩೯|| ಈಪ್ರಕಾರ ಒಂದು ವರುಷವು ತುಂಬಲು ಅಷ್ಟರಲ್ಲಿಯೇ ಬ್ರಹ್ಮದೇವನು ಆಗೋಕುಲದ ಸಮೀಪಕ್ಕೆಬಂದು, ತನ್ನ ಕಾಲಮಾನದಿಂದ ತ್ರುಟಿಮಾತ್ರವಾದ ಮನುಷ್ಯಮಾನದ ಒಂದುಸವತ್ಸರದಲ್ಲಿ ಪೂರ್ವದಂತೆ ಸರ್ವಸ್ವರೂಪನಾಗಿ ಕ್ರೀಡಿಸುತಲಿರುವ ಶ್ರೀಹರಿಯಂ ಕಂಡು ಈರೀತಿಯಾಗಿ ಮನಸ್ಸಿನಲ್ಲಿ ಊಹಿಸುವನಹಂತೆ ನೆ- ||೪೦|| ಗೋಕುಲದಲ್ಲಿ ಎಷ್ಟುಮಂದಿ ಬಾಲಕರುಂಟೋ, ಎಷ್ಟುಕರುಗಳುಂಟೋ, ಆಕರುಗಳಿಂ ಕೂಡಿದ ಆಬಾಲ ಕರೆಲ್ಲರೂ ನನ್ನಮಾಯೆಯೆಂಬ ಹಾಸಿಗೆಯಲ್ಲಿ ಮಲಗಿರುವವ ರಾಗಿಯೂಕೂಡ ಪುನಃ ಎದ್ದವರಾಗಲಿಲ್ಲ.||೪೧||ನನ್ನ ಮಾಯೆಯಿಂದ ಮೋಹಿತರಾದ ಆಕರುಗಳೊಡಗೂಡಿದ ಬಾಲಕರಿಗಿಂತಲೂ ಅನ್ಯರಾದ, ಅಷ್ಟುಮಂದಿಯೂ ಆದ ಈಗಲೊಂದು ವರುಷದತನಕ ಶ್ರೀಕೃಷ್ಣನೊಡನೆ ಈಪ್ರದೇಶದಲ್ಲಿಯೇ ಕ್ರೀಡಿಸುತಲಿರುವ, ಈಬಾಲಕರೆಲ್ಲ ರೂ ಎಲ್ಲಿರುವರೋ; ಯಾರಿಂದಬಂದರೋ ಎಂದು ಊಹಿಸಿದನು. ||೪೨|| ಎಲೈ, ಅರಸೇ! ಕೇಳು- ಆಬ್ರಹ್ಮದೇ ವನು ಹೀಗೆ ಬಹುಕಾಲ ಧ್ಯಾನಿಸಿನೋಡಿದರೂ ಈಗೋಪಬಾಲಕರಲ್ಲಿಯೂ ಈಕರುಗಳಲ್ಲಿಯೂ ಯಾರು ಯಥಾರ್ಥ

# ದಶಮಸ್ಕಂಧೇ ತ್ರಯೋದಶೋಽಧ್ಯಾಯಃ.

ತ್ಯೇಸದಾತ್ಮಭೂಃ । ಸದಾಶ್ರಯಾಏತಇತಿಜ್ಞಾತುಂನೇಶೇಕಥಂಚನ ॥ ೪೩ ॥ ಏವಂವಿಮೋಹಯನ್ವಿಷ್ಣುಂವಿಮೋಹಂವಿಶ್ವಮೋಹನಮ್ । ಸ್ವಯೈವಮಾಯಯಾಜೋಽಪಿಸ್ವಯಮೇವವಿಮೋಹಿತಃ ॥೪೪॥ ತಮ್ಯಾಂತಮೋವನ್ನೈಹಾರಂ*ಖದ್ಯೋತಾರ್ಚಿರಿವಾಹನಿ । ಮಹತೀತರಮಾಯೈಶ್ಯಂನಿಹಂತ್ಯಾತ್ಮನಿಯುಂಜತಃ ॥೪೫॥ತಾವತ್ಸರ್ವೇವತ್ಸಪಾಲಾಃಪಶ್ಯತೋಽಜಸ್ಯತತ್ಕ್ಷಣಾತ್ । ವ್ಯದೃಶ್ಯಂತಘನಶ್ಯಾಮಾಃಪೀತಕೌಶೇಯವಾಸಸಃ॥ ಚತುರ್ಭುಜಾಶ್ಶಂಖಚಕ್ರಗದಾರಾಜೀವಪಾಣಯಃ।ಕಿರೀಟಿನಃಕುಣ್ಡಲಿನೋಹಾರಿಣೋವನಮಾಲಿನಃ ॥೪೭॥

---

ಆತ್ಮಭೂಃ-ಬ್ರಹ್ಮನು, ಏತೇಷುಭೇದೇಷು-ಈಭೇದಗಳಲ್ಲಿ, (ಬೇರೆಬೇರೆಕಾಣುವಯಿವರಲ್ಲಿ) ಏವಂ-ಹೀಗೆ, ಚಿರಂ-ಬಹಳಹೊತ್ತು, ಧ್ಯಾತ್ವಾ-ಚಿಂತಿಸಿ, ಏತೇ-ಇವರು, ಸದಾ-ಯಾವಾಗಲೂ, ಸದಾಶ್ರಯಾಃ-ಸತ್-ಸತ್ಯಸ್ವರೂಪನಾದಕೃಷ್ಣನೇ, ಆಶ್ರಯಾಃ-ಆಧಾರವಾಗಿವುಳ್ಳವರು, (ಸತ್ಯಾಧಿಷ್ಠಾನವಾದಕೃಷ್ಣನಲ್ಲಿ, ಮೂಲಾಜ್ಞಾನದಿಂದಅಧ್ಯಸ್ತರಾಗಿರುವರು)ಇತಿ-ಹೀಗೆ, ಜ್ಞಾತುಂ- ತಿಳಿಯಲೋಸುಗ, ಕಥಂಚನ-ಹೇಗೂ, ನೇಶೇ-ಶಕ್ತನಾಗಲಿಲ್ಲವು ॥೪೩॥ ಅಜೋಽಪಿ-ಉತ್ಪತ್ತಿಯಿಲ್ಲದಬ್ರಹ್ಮನೂಕೂಡ, ವಿಮೋಹಂ- ಅಜ್ಞಾನವಿಲ್ಲವಂತಾ, ವಿಶ್ವಮೋಹನಂ-ಲೋಕವನ್ನುಮೋಹಗೊಳಿಸುವಂತಾ,ವಿಷ್ಣುಂ-ಕೃಷ್ಣನನ್ನು, ಸ್ವಯೈವಮಾಯಯಾ-ತನ್ನಮಾಯೆಯಿಂದಲೇ,ಏವಂ-ಹೀಗೆ, ವಿಮೋಹಯನ್-ಮೋಹಗೊಳಿಸತೊಡಗಿದವನಾಗಿ, ಸ್ವಯಮೇವ-ತಾನೇ, ವಿಮೋಹಿತಃ-ಮೋಹಗೊಳಿಸಲ್ಪಟ್ಟವನಾದನು ॥೪೪॥ತಮ್ಯಾಂ-ರಾತ್ರಿಯಲ್ಲಿ, ನೈಹಾರಂ-ಮಂಜಿನ, ತಮೋವತ್-ಕತ್ತಲೆಯಹಾಗೂ, ಅಹನಿ-ಹಗಲಿನಲ್ಲಿ, ಖದ್ಯೋತಾರ್ಚಿರಿವ-ಮಿಂಚುಹುಳವಿನಬೆಳಕಿನಹಾಗೂ, ಮಹತಿ-ಮಹಾಪುರುಷನಲ್ಲಿ, ಯುಂಜತಃ- ಮೋಹವಂಸೇರಿಸತೊಡಗಿದಪುರುಷನ ಇತರಮಾಯಾ-ನೀಚಮಾಯೆಯು, ಆತ್ಮನಿ-ತನ್ನಲ್ಲಿ, ಐಶ್ಯಂ-ಸಾಮರ್ಥ್ಯವನ್ನು, ನಿಹಂತಿ-ನಾಶಮಾಡುವುದು ॥೪೫॥ತಾವತ್-ಅಷ್ಟರೊಳಗೆ, ಪಶ್ಯತಃ-ನೋಡುತ್ತಿರುವ, ಅಜಸ್ಯ-ಬ್ರಹ್ಮನಿಗೆ, ತತ್ಕ್ಷಣಾತ್-ಅದೇನಿಮಿಷದಲ್ಲಿ, ಸರ್ವೇವತ್ಸಪಾಲಾಃ-ಕರುಗಾಯಿಗಳೆಲ್ಲರೂ, ಘನಶ್ಯಾಮಾಃ-ಘನ-ಮೇಘದಂತೆ, ಶ್ಯಾಮಾಃ-ಕಪ್ಪಾದವರಾಗಿಯೂ, ಪೀತಕೌಶೇಯವಾಸಸಃ-ಪೀತ-ಹಸುರುಬಣ್ಣವಾದ, ಕೌಶೇಯವಾಸಸಃ-ಪಟ್ಟೆಯವಸ್ತ್ರವುಳ್ಳವರಾಗಿಯೂ, ವ್ಯದೃಶ್ಯಂತ-ಕಾಣಿಸಿದರು ॥೪೬॥ ಚತುರ್ಭುಜಾಃ-ನಾಲ್ಕುತೋಳುಳ್ಳವರು, ಶಂಖವೂ ಚಕ್ರವೂ ಗದೆಯೂ, ರಾಜೀವ-ಕಮಲವೂ-ಪಾಣಯಃ-ಕೈಗಳಲ್ಲಿ ವುಳ್ಳವರು ಕಿರೀಟಿನಃ-ಕಿರೀಟಂಗಳುಳ್ಳವರು. ಕುಂಡಲಿನಃ-ಕುಂಡಲಂಗಳುಳ್ಳವರು ಹಾರಿಣಃ-ಹಾರಂಗಳುಳ್ಳವರು ವನಮಾಲಿನಃ-ವನಮಾಲೆಯುಳ್ಳವರು ॥೪೭॥ ಶ್ರೀವತ್ಸಾಂಗದದೋರತ್ನಕಂಬುಕಂಕಣಪಾಣಯಃ-

---

ರಾಗಿರುವರೋ ತಿಳಿಯಲೋಸುಗ ಯಾವತೆರದಿಂದಲೂ ಸಮರ್ಥನಾಗಲಿಲ್ಲವು. ॥೪೩॥ ಮತ್ತೇನೆಂದರೆ- ಬ್ರಹ್ಮನು ಕೂಡ, ಮೋಹರಹಿತನಾಗಿ ಪ್ರಪಂಚವನ್ನು ಮೋಹಗೊಳಿಸುತಲಿರುವ ಶ್ರೀಹರಿಗೆ ಹೀಗೆ ಮೋಹಗೊಳಿಸತೊಡಗಿ ತನ್ನಮಾಯೆಯಿಂ ತಾನೇ ಮೋಹಗೊಳಿಸಲ್ಪಟ್ಟನು ॥೪೪॥ (ಮಾಯೆಗೂ ಕೂಡ ಆಶ್ರಯನಾದ ಬ್ರಹ್ಮದೇವನಿಗೆ ಎಂತು ಮೋಹವುಂಟಾಯಿತೆಂದಲ್ಲಿ ನುಡಿದನದೆಂತೆನೆ-) ಕತ್ತಲೆಯಿಂದ ಬಹಳ ತುಂಬಲ್ಪಟ್ಟ ಇರುಳಿನಲ್ಲಿ ಹಿಮಕಿರಣಂಗಳಿಂದ ಉಂಟಾದ ಕತ್ತಲೆಯೂ ಎಂತು ತಾನು ಮತ್ತೊಂದಕ್ಕೆ ಆವರಣಗೆಯ್ಯಲಾರದೆ ಅಂತಾರಾತ್ರಿಯಲ್ಲಿಯೇ ಲಯವಾಗುವುದೋ, ಮತ್ತು ಹಗಲಿನಲ್ಲಿ ಮಿಂಚುಹುಳವಿನಬೆಳಕು ತಾನು ಪ್ರತ್ಯೇಕವಾಗಿ ಬೆಳಗಿಸಲಾರದೆ ಸೂರ್ಯನಬೆಳಕಿನಲ್ಲಿಯೇ ಅಡಗುವುದೋ, ಹಾಗೆ ಮಹಾಮಾಯೆಗೆ ಆಶ್ರಯನಾಗಿಯೂ ಮಹಾಪುರುಷನಾಗಿಯೂ ಇರುವ ಶ್ರೀಹರಿಯಲ್ಲಿ, ಮತ್ತೊಬ್ಬಪುರುಷನಲ್ಲಿ ಪ್ರಯೋಗಿಸಲ್ಪಡತಕ್ಕ ನೀಚವಾದವನ ಮಾಯೆಯು ಸ್ವಲ್ಪವಾದರೂ ತನ್ನವ್ಯಾಪಾರವಂ ಮಾಡಲರಿಯದು. ಮತ್ತೇನೆಂದರೆ- ಆಮಾಯೆಯು ಪ್ರಯೋಗಿಸಿದ ಪುರುಷನಲ್ಲಿರುವ ಸಾಮರ್ಥ್ಯವಂ ನಾಶಂಗೆಯ್ವುದು. ॥೪೫॥ಎಲೈ, ಅರಸೇ! ಅಷ್ಟರಲ್ಲಿಯೇ ಆಕರುಗಳೆಲ್ಲವೂ ಬೆತ್ತದಕೋಲುಗಳೂ ಕೊಂಬುಗಳೂ ಕೊಳಲುಗಳೂ ಗೋಪಬಾಲಕರೂ ಎಲ್ಲರೂ ಆಕ್ಷಣದಲ್ಲಿಯೇ ಬ್ರಹ್ಮದೇವನು ನೋಡುತಲಿರಲಾಗಿ- ನೀಲಮೇಘಶ್ಯಾಮರಾಗಿ, ಪೀತಾಂಬರವನುಟ್ಟಿರುವರಾಗಿ, ॥೪೬॥ ಚತುರ್ಭುಜಯುಕ್ತರಾಗಿ, ಶಂಖ ಚಕ್ರ ಗದಾ ಪದ್ಮಂಗಳಂಹಸ್ತಂಗಳಲ್ಲಿ ಧರಿಸಿಯಿರುವರಾಗಿ, ಕಿರೀಟಂಗಳುಳ್ಳವರಾಗಿ, ಹಾರಗಳೂ ವನಮಾಲಿಕೆಗಳೂ ಉಳ್ಳವರಾಗಿ, ॥೪೭॥ ಮತ್ತು ಶ್ರೀವತ್ಸವೆಂಬ ಮಾಣಿಕ್ಯದ ಕಾಂತಿಯೊಡನೆ ಯುಕ್ತವಾದ ತೋಳುಬಂದಿಗಳುಳ್ಳವರಾಗಿ,

ಶ್ರೀವತ್ಸಾಂಗದದೋರತ್ನ ಕಮ್ಬುಕಂಕಣಪಾಣಯಃ । ನೂಪುರೈಃಕಟಕೈರ್ಭ್ರಾಜತ್ಕಟಿಸೂತ್ರಾಂಗುಲೀ
ಯಕೈಃ ॥೪೭॥ ಅಂಘ್ರಿಮಸ್ತಕಮಾಪೂರ್ಣ ತುಲಸೀನವದಾಮಭಿಃ । ಕೋಮಲೈಸ್ಸರ್ವಗಾತ್ರೇಷುಭೂರಿಪು
ಣ್ಯವದರ್ಪಿತೈಃ ॥ ೪೮ ॥ ಚಂದ್ರಿಕಾವಿಶದಸ್ಮೇರೈಸ್ಸಾರುಣಾಪಾಂಗವೀಕ್ಷಿತೈಃ । ಸ್ವಕಾರ್ಥಾನಾಮಿವರ
ಜಸ್ಸತ್ತ್ವಾಭ್ಯಾಂಸ್ರಷ್ಟೃಪಾಲಕಾಃ॥೪೯॥ ಆತ್ಮಾದಿಸ್ತಮ್ಬಪರ್ಯನ್ತೈರ್ಮೂರ್ತಿಮದ್ಭಿಶ್ಚರಾಚರೈಃ। ನೃತ್ತ
ಗೀತಾದ್ಯನೇಕಾರ್ಹೈಃಪೃಥಕ್ಪೃಥಗುಪಾಸಿತಾಃ॥೫೦॥ಅಣಿಮಾದ್ಯೈರ್ಮಹಿಮಭಿರಜಾದ್ಯಾಭಿರ್ವಿಭೂತಿಭಿಃ।
ಚತುರ್ವಿಂಶತಿಭಿಸ್ತತ್ತ್ವೈಃಪರೀತಾಮಹದಾದಿಭಿಃ॥೫೧॥ಕಾಲಸ್ವಭಾವಸಂಸ್ಕಾರಕಾಮಕರ್ಮಗುಣೈರಪಿ।ಸ್ವ

---

ಶ್ರೀವತ್ಸ-ಶ್ರೀವತ್ಸವೆಂಬಮಚ್ಚೆಯ(ಪ್ರಭೆಯಿಂಕೂಡಿದ) ಅಂಗದ- ತೋಳುಬಂದಿಯುಳ್ಳ, ದೋಃ-ತೋಳುಗಳೂ, ರತ್ನ-ಮಣಿಗಳು ಳ್ಳ, ಕಂಬು-ಶಂಖದಹಾಗೆ ಮೂರುರೇಖೆಗಳುಳ್ಳ, ಕಂಕಣ-ಕಡಗಗಳೇ, ಪಾಣಯಃ-ಕೈಗಳಲ್ಲಿವುಳ್ಳವರು. ನೂಪುರೈಃ-ಕಾಲಂದಿಗೆಗಳಿಂ ದಲೂ, ಕಟಕೈಃ-ಕಡಗಗಳಿಂದಲೂ, ಭ್ರಾಜತ್ಕಟಿಸೂತ್ರಾಂಗುಲೀಯಕೈಃ- ಭ್ರಾಜತ್-ಹೊಳೆಯುತ್ತಿರುವ, ಕಟಿಸೂತ್ರ-ಉಡಿದಾ ರಗಳಿಂದಲೂ, ಅಂಗುಲೀಯಕೈಃ-ಉಂಗುರಗಳಿಂದಲೂ, ಕೂಡಿದವರು ॥೪೭॥ ಸರ್ವಗಾತ್ರೇಷು-ಸಕಲಾವಯವಗಳಲ್ಲಿಯೂ, ಭೂ ರಿಪುಣ್ಯವದರ್ಪಿತೈಃ-ಬಹಳಪುಣ್ಯವಂತರಿಂದಸಮರ್ಪಿಸಲ್ಪಟ್ಟ, ಕೋಮಲೈಃ-ಮೃದುವಾದ, ಅಂಘ್ರಿಮಸ್ತಕಂ- ತಲೆಯಿಂದಕಾಲವರೆ ಗೂ, ಆಪೂರ್ಣತುಲಸೀನವದಾಮಭಿಃ-ಆಪೂರ್ಣ-ಕೊಂಚತುಂಬಿದ, ತುಲಸೀ-ತುಲಸಿಯೆಲೆಗಳ, ನವ- ಹೊಸತಾದ, ದಾಮಭಿಃ-ಸ ರಗಳಿಂದಲೂ, ಕೂಡಿದವರು ॥೪೮॥ ಚಂದ್ರಿಕಾವಿಶದಸ್ಮೇರೈಃ-ಚಂದ್ರಿಕಾ- ಬೆಳದಿಂಗಳಹಾಗೆ, ವಿಶದ-ನಿರ್ಮಲವಾದ, ಸ್ಮೇರೈಃ-ಕಿರು ನಗೆಗಳಿಂದಲೂ, ಸಾರುಣಾಪಾಂಗವೀಕ್ಷಿತೈಃ-ಸಾರುಣ- ಕೆಂಪುಬಣ್ಣದಿಂದಸಹಿತವಾದ, ಅಪಾಂಗವೀಕ್ಷಿತೈಃ - ಕುಡಿನೋಟಗಳಿಂ ದಲೂ, ಸ್ವಕಾರ್ಥಾನಾಂ-ಸ್ವಕ-ತನ್ನಭಕ್ತರ, ಅರ್ಥಾನಾಂ-ಬಯಕೆಗಳಿಗೆ, ರಜಸ್ಸತ್ತ್ವಾಭ್ಯಾಂ-ರಜೋಗುಣಸತ್ವಗುಣಗಳಿಂದ, ಸ್ರ ಷ್ಟೃಪಾಲಕಾಇವ-ಸೃಷ್ಟಿಕರ್ತರಂತೆಯೂ ಪಾಲಸಕರ್ತರಂತೆಯೂ, ಇರುವರು ॥೪೯॥ಆತ್ಮಾದಿಸ್ತಂಬಪರ್ಯಂತೈಃ-ಆತ್ಮ-ಬ್ರಹ್ಮನೇ, ಆದಿ-ಮೊದಲಾಗಿವುಳ್ಳ, ಸ್ತಂಬಪರ್ಯಂತೈಃ-ಹುಲ್ಲದೊಂದೆಯೇಕಡೆಯಾಗಿವುಳ್ಳ, ಮೂರ್ತಿಮದ್ಭಿಃ- ದೇಹಧಾರಿಗಳಾದ, ನೃತ್ತಗೀತಾ ದ್ಯನೇಕಾರ್ಹೈಃ-ನೃತ್ತ-ನಾಟ್ಯವೂ, ಗೀತ-ಗಾನವೂ, ಆದಿ-ಮೊದಲಾದ,-ನೈಕಾರ್ಹೈಃ-ಅನೇಕಸಮ್ಮಾನಗಳುಳ್ಳ, ಚರಾಚರೈಃ-ಸ್ಥಾ ವರಜಂಗಮವಸ್ತುಗಳಿಂದ, ಪೃಥಕ್ಪೃಥಕ್-ಬೇರೆಬೇರೆ,ಉಪಾಸಿತಾಃ-ಓಲೈಸಲ್ಪಟ್ಟವರು॥೫೦॥ಅಣಿಮಾದ್ಯೈಃ-ಅಣಿಮೆಯೇ ಮೊದಲಾ ದ, ಮಹಿಮಭಿಃ-ಅಷ್ಟಸಿದ್ಧಿಗಳಿಂದಲೂ, ಅಜಾದ್ಯಾಭಿಃ-ಮಾಯೆಯೇಮೊದಲಾದ, ವಿಭೂತಿಭಿಃ-ಶಕ್ತಿಗಳಿಂದಲೂ, ಮಹದಾದಿಭಿಃ-ಮಹ ತ್ತತ್ತ್ವವೇಮೊದಲಾದ, ಚತುರ್ವಿಂಶತಿಭಿಃ-೨೪-ಆದ, ತತ್ತ್ವೈಃ-ಪ್ರಕೃತಿಗಳಿಂದಲೂ, ಪರೀತಾಃ-ಕೂಡಿದಂತಾ॥೫೧॥ಕಾಲಸ್ವಭಾವಸಂ ಸ್ಕಾರಕಾಮಕರ್ಮಗುಣೈರಪಿ-ಕಾಲ-ಸಮಯ, ಸ್ವಭಾವ-ಪ್ರಕೃತಿಶೀಲ, ಸಂಸ್ಕಾರ-ಉದ್ಬೋಧಕವಾಸನೆ, ಕಾಮ-ಸಂಕಲ್ಪ,ಕರ್ಮ-

---

ರತ್ನ ಮಯಂಗಳಾಗಿಯೂ ಶಂಖದಂತೆ ಮೂರು ರೇಖೆಗಳುಳ್ಳ ಕಂಕಣಂಗಳಂ ಹಸ್ತಗಳಲ್ಲಿ ಧರಿಸಿದವರಾಗಿ, ಮತ್ತು ಕಾಲಕಡಗಗಳಿಂದಲೂ ಕಾಲಂದಿಗೆಗಳಿಂದಲೂ ಉಡುದಾರಂಗಳಿಂದಲೂ ಉಂಗುರಂಗಳಿಂದಲೂ ಶೋಭಿತ ರಾಗಿ, ॥೪೭॥ ಮತ್ತು ಪಾದಾದಿ ಶಿರಃಪರ್ಯಂತವೂ ಸಕಲಾವಯವಂಗಳಲ್ಲಿಯೂ ಬಹು ಜನ್ಮಂಗಳಿಂ ಸಂಪಾದಿಸಲ್ಪ ಟ್ಟ ಪುಣ್ಯದಂತೆ ಸಮರ್ಪಿಸಲ್ಪಟ್ಟ ಸಂಪೂರ್ಣಗಳಾದ ಕೋಮಲಗಳಾದ ತುಲಸೀವನ ಮಾಲಿಕೆಗಳಿಂ ಪ್ರಕಾಶಮಾನ ರಾಗಿ, ॥೪೮॥ ಮತ್ತು ಬೆಳದಿಂಗಳಂತೆ ಬಹಳಬಿಳುಪಾದ ಮುಗುಳುನಗೆಯೊಡನೆ ಯುಕ್ತಂಗಳಾಗಿರುವ ಕಡೆಗಂಣು ಗಳಿಂ ನೋಡುವುದರಿಂದ ತಮ್ಮಭಕ್ತರ ಮನೋರಥಂಗಳಂ ಸತ್ವಗುಣದಿಂ ಪಾಲಿಸುವರಂತೆಯೂ ಪ್ರಕಾಶಿಸುವ ರಾಗಿ, ಕಾಣಲ್ಪಟ್ಟರು.॥೪೯॥ ಮತ್ತು ಆಗೋಪಬಾಲಾದಿಗಳು ಬ್ರಹ್ಮಾದಿಸ್ತಂಬಪರ್ಯಂತಗಳಾದ ಶರೀರಯುಕ್ತ ಗಳಾದ ಸ್ಥಾವರಜಂಗಮಾತ್ಮಕಂಗಳಾದ ಪ್ರಾಣಿಗಳಿಂ ನೃತ್ತಗೀತಂಗಳು ಮೊದಲಾದ ಅನೇಕಪೂಜೆಗಳಿಂ ಪ್ರತ್ಯೇ ಕ ಪ್ರತ್ಯೇಕಂಗಳಾಗಿ ಉಪಾಸನಂಗೆಯ್ಯಲ್ಪಟ್ಟವರಾಗಿ, ॥೫೦॥ ಮತ್ತು ಅಣಿಮಾದ್ಯಷ್ಟಸಿದ್ಧಿಗಳಿಂದಲೂ ಮಾಯಾವಿ ದ್ಯೆಗಳೆಂಬ ಶಕ್ತಿಗಳಿಂ ಜಗತ್ಕಾರಣಂಗಳಾದ ಇಪ್ಪತ್ತುನಾಲ್ಕು ಮಹದಾದಿ ತತ್ವಂಗಳಿಂದಲೂ ಪರಿವೃತರಾಗಿ॥೫೧॥ ಮತ್ತು ಆ ತತ್ವಗಳಿಗೆ ಸಹಕಾರಿಯಾದ ಕಾಲದಿಂದಲೂ ಪರಿಣಾಮ ಕಾರಣವಾದ ಸ್ವಭಾವದಿಂದಲೂ ಜೀವಾದೃಷ್ಟ ಗಳಿಗೂ ಉದ್ಬೋಧಕವಾದ ಸಂಸ್ಕಾರದಿಂದಲೂ ಕಾಮಕರ್ಮಂಗಳಿಂದಲೂ ಗುಣಂಗಳಿಂದಲೂ ಈ ರೀತಿಯಾಗಿ

ಮಹಿಧ್ವಸ್ತಮಹಿಭಿರ್ಮೂರ್ತಿಮದ್ಭಿರುಪಾಸಿತಾಃ ‖೫೩‖ ಸತ್ಯಜ್ಞಾನಾನನ್ತಾನನ್ದಮಾತ್ರೈಕರಸಮೂರ್ತಯಃ ।
ಅಸ್ಪೃಷ್ಟಭೂರಿಮಾಹಾತ್ಮ್ಯಾ ಅಪಿಹ್ಯುಪನಿಷದ್ದೃಶಾಮ್ ‖೫೪‖ ಏವಂ ಸಕೃದ್ದದರ್ಶಾಜಃ ಪರಬ್ರಹ್ಮಾತ್ಮ
ನೋಖಿಲಾನ್ । ಯಸ್ಯ ಭಾಸಾ ಸರ್ವಮಿದಂ ವಿಭಾತಿ ಸಚರಾಚರಮ್ ‖೫೫‖ ತತೋತಿಕುತುಕೋ*ದ್ವೃತ್ಯ
ಸ್ತಿಮಿತ್ತೈಕಾದಶೇನ್ದ್ರಿಯಃ । ತದ್ಧಾಮ್ನಾಭೂದಜಸ್ತೂಷ್ಣೀಂ ಪೂರ್ದೇವ್ಯನ್ತೀವ ಪುತ್ರಿಕಾ ‖೫೬‖ ಇತೀರೇ
ಶೇತರ್ಕ್ಯ ನಿಜಮಹಿಮನಿ ಸ್ವಪ್ರಮಿತಿಕೇ ಪರತ್ರಾಜಾತೋತನ್ನಿರಸನಮುಖಬ್ರಹ್ಮಕಮಿತೌ । ಅನೀಶೇಪಿದ್ರ

ಕ್ರಿಯೆ, ಗುಣೈಃ-ಕರಣಧರ್ಮಗಳಿಂದಲೂ, ಸ್ವಮಹಿಧ್ವಸ್ತಮಹಿಭಿಃ-ಸ್ವ-ಭಗವಂತನ, ಮಹಿ-ಮಾಹಾತ್ಮ್ಯದಿಂದ, ಧ್ವಸ್ತ-ತಿರಸ್ಕರಿಸ ಲ್ಪಟ್ಟ, ಮಹಿಭಿಃ-ಸ್ವಾತಂತ್ರ್ಯವುಳ್ಳ, ಮೂರ್ತಿಮದ್ಭಿಃ- ಆಕಾರವುಳ್ಳ, (ಅವುಗಳಿಂದ) ಉಪಾಸಿತಾಃ- ಸೇವಿಸಲ್ಪಟ್ಟವರು ‖೫೩‖ ಸತ್ಯ......ಮೂರ್ತಯಃ-ಸತ್ಯ-ದಿಟವಾದ, ಜ್ಞಾನ-ಅರುಹಾದ, ಅನಂತ-ಅಳಿವಿಲ್ಲದ, ಆನಂದಮಾತ್ರ-ಸುಖವೇ ಆಗಿರುವ, ಏಕರಸ-ಅದ್ವೈತಭಾವವೇ, ಮೂರ್ತಯಃ-ಆಕೃತಿಯಾಗಿವುಳ್ಳವರು, ಉಪನಿಷದ್ದೃಶಾಮಪಿ-ಆತ್ಮಜ್ಞಾನವೇ ಕಂಣಾಗಿವುಳ್ಳವರಿಗೂ ಕೂಡ, ಹು-ನಿಶ್ಚಯವಾಗಿ, ಅಸ್ಪೃಷ್ಟಭೂರಿಮಾಹಾತ್ಮ್ಯಾಃ-ಅಸ್ಪೃಷ್ಟ-ಸೋಂಕಲ್ಪಡದ, ಭೂರಿ-ಬಹುವಾದ, ಮಾಹಾತ್ಮ್ಯಾಃ-ಮಹಿಮೆಗಳುಳ್ಳವರೂ, ಆಗಿ, ವ್ಯದೃಶ್ಯನ್ತ-ಕಾಣಿಸಿದರು ‖೫೪‖ ಅಜಃ-ಬ್ರಹ್ಮನು, ಅಖಿಲಾನ್-ಎಲ್ಲರನ್ನೂ, ಯಸ್ಯ-ಯಾವಪರಮಾತ್ಮನ, ಭಾಸಾ-ಕಾಂತಿಯಿಂದ, ಸಚರಾಚರಂ-ಜಂಗಮಸ್ಥಾವರಸಹಿತವಾದ, ಇದಂ ಸರ್ವಂ-ಈ ಸಕಲಪ್ರಪಂಚವೂ, ವಿಭಾತಿ- ಬೆಳಗುತ್ತಿದೆಯೋ, ತಾನ್-ಆ, ಪರಬ್ರಹ್ಮಾತ್ಮನಃ-ಪರಬ್ರಹ್ಮಸ್ವಭಾವರನ್ನಾಗಿ, ಏವಂ-ಹೀಗೆ, ಸಕೃತ್-ಒಂದೇಸಲ, ದದರ್ಶ-ಕಂಡನು ‖೫೫‖ ತತಃ-ಆ ಮೇಲೆ, ಅತಿಕುತುಕೋದ್ವೃತ್ಯ-ಅತಿಕುತುಕ- ಅತ್ಯಾಶ್ಚರ್ಯದಿಂದ, ಉದ್ವೃತ್ಯ- ದೃಷ್ಟಿಯನ್ನು ಹಿಂತಿರುಗಿಸಿಕೊಂಡು, ಅಥವಾ ಹಂಸದಮೇಲೆ ಹಿಂದಿರುಗಿಕುಳಿತು, (ಪಾಠಾಂತರ-ಉದ್ವೃತ್ತಃ-ಕ್ಷುಭಿತನಾಗಿಬಳಿಕ) ಸ್ತಿಮಿತ್ತೈಕಾದಶೇಂದ್ರಿಯಃ-ಸ್ತಿಮಿತ- ಸಮಾಧಾನವಾಗಿನಿಂತ, ಏಕಾದಶ-ಹನ್ನೊಂದಾದ, ಇಂದ್ರಿಯಃ-ಕರಣಂಗಳುಳ್ಳ, ಅಜಃ-ಬ್ರಹ್ಮನು, ತಾದ್ಧಾಮ್ನಾ-ತತ್-ಅವರ, ಧಾಮ್ನಾ-ತೇಜಸ್ಸಿನಿಂದ, ಪೂರ್ದೇವ್ಯಂತಿ-ಪೂರ್ದೇವೀ-ವ್ರಜಗ್ರಾಮದೇವತೆಯ, ಅಂತಿ-ಬಳಿಯಲ್ಲಿ, ಪುತ್ರಿಕೇವ-ನಾಲ್ಕುಮೊಗದ ಚಿನ್ನದ ಗೊಂಬೆಯಂತೆ, ತೂಷ್ಣೀಮಭೂತ್-ಸುಮ್ಮಗಾದನು ‖೫೬‖ ಇರೇಶೇ-ಇರಾ-ಸರಸ್ವತಿಗೆ, ಈಶೇ- ಪತಿಯಾದ ಬ್ರಹ್ಮನು, ಅತರ್ಕ್ಯೇ-ಊಹಿಸಲಳವಲ್ಲದ, ನಿಜಮಹಿಮನಿ-ಅಸಾಧಾರಣಮಾಹಾತ್ಮ್ಯಮುಳ್ಳ, ಸ್ವಪ್ರಮಿತಿಕೇ- ಸ್ವಪ್ರಕಾಶವೂ ಸುಖವೂ ಉಳ್ಳ, ಅಜಾತಃಪರತ್ರ-ಮಾಯೆಗಿಂತಲೂ ಮೇಲ್ಗಡೆಯಿರುವ, ಅತನ್ನಿರಸನಮುಖಬ್ರಹ್ಮಕಮಿತೌ-ಅತನ್ನಿರಸನಮುಖ-ಇತರವ್ಯಾವೃತ್ತಿಪೂರ್ವಕವಾದ, ಬ್ರಹ್ಮ

ಮೂರ್ತಿಮತ್ತುಗಳಾಗಿ ಭಗವಂತನ ಮಹಿಮೆಯಿಂದ ತಿರಸ್ಕರಿಸಲ್ಪಟ್ಟ ಸ್ವಾತಂತ್ರ್ಯವುಳ್ಳವಾಗಿಯೂ ಯಿರುವ ಈ ಸಮಸ್ತಂಗಳಾದ ಅಣಿಮಾದಿಗಳಿಂದಲೂ ಕೂಡ ಸೇವಿಸಲ್ಪಟ್ಟವರಾಗಿಯೂ, ಸಹ ಕಾಣಲ್ಪಟ್ಟರು. ‖೫೩‖ ಮತ್ತು ಅವರು ಸತ್ಯಸ್ವರೂಪರಾಗಿಯೂ, ಜ್ಞಾನಸ್ವರೂಪರಾಗಿಯೂ, ಆನಂದಸ್ವರೂಪರಾಗಿಯೂ, ಅಪರಿಚ್ಛಿನ್ನರಾಗಿಯೂ, ವಿಜಾತೀಯ ಭೇದರಹಿತರಾಗಿಯೂ, ನಿರಂತರದಲ್ಲಿಯೂ ಏಕರೂಪರಾಗಿಯೂ, ಇರುವರಾದ ಕಾರಣದಿಂದ ಬ್ರಹ್ಮಜ್ಞಾನವೇ ನೇತ್ರವಾಗಿಯುಳ್ಳ ಜ್ಞಾನಿಗಳಿಗೂ ಕೂಡ ಅಜ್ಞಾನದೃಷ್ಟಿಯಿಂ ನಿಶ್ಚಯದಿಂ ಸ್ಪರ್ಶನಂಗೆಯ್ಯಲು ಯೋಗ್ಯವಲ್ಲದೆಯಿರುವ ಅಮಿತವಾದ ಮಾಹಾತ್ಮ್ಯ ವುಳ್ಳವರಾಗಿಯೂ, ಕೂಡ ಆ ಬ್ರಹ್ಮನಿಂದ ಕಾಣಲ್ಪಟ್ಟರು. ‖೫೪‖ ಎಲೈ ಅರಸೇ! ಆ ಬ್ರಹ್ಮದೇವನು ಚರಾಚರಾತ್ಮಕವಾದ ಈ ಸಮಸ್ತ ಪ್ರಪಂಚವು ಯಾವವನ ತೇಜಸ್ಸಿನಿಂದ ಪ್ರಕಾಶಿಸುವುದೋ, ಗೋಪಾಲ ಬಾಲಕಾದಿಗಳಿಂ ಅಂತಾ ಪರಬ್ರಹ್ಮ ಸ್ವರೂಪವನ್ನಾಗಿ ಹೀಗೆ ಒಂದೇಕಾಲದಲ್ಲಿ ಕಂಡನು. ‖೫೫‖ ಅನಂತರದಲ್ಲಿ ಬ್ರಹ್ಮನು ಅತ್ಯಾಶ್ಚರ್ಯದಿಂ ತನ್ನ ದೃಷ್ಟಿಯಂ ಹಿಂತಿರುಗಿಸಿ ಸರ್ವ ಪ್ರಜೆಗಳಿಗೂ ಅಧೀಶ್ವರಿಯಾದ ಒಂದಾನೊಂದು ದೇವತೆಯು ಸಮೀಪದಲ್ಲಿ ನಾಲ್ಕು ಮುಖಂಗಳುಳ್ಳ ಚಿನ್ನದ ಗೊಂಬೆಯು ನಿಂತಿರುವಂತೆ, ಆ ಪರಬ್ರಹ್ಮ ಸ್ವರೂಪರಾಗಿರುವ ಆ ಗೋಪಾಲ ಬಾಲಕರ ತೇಜಸ್ಸಿನಿಂದ ನಿರ್ವ್ಯಾಪಾರಂಗಳಾಗಿರುವ ಸಮಸ್ತೇಂದ್ರಿಯಗಳುಳ್ಳವನಾಗಿಯೂ, ನಿಶ್ಚಲನಾಗಿಯೂ ಸುಮ್ಮನೆ ಯಿದ್ದನು. ‖೫೬‖ ಎಲೈ, ಅರಸೇ! ಸರಸ್ವತೀದೇವಿಗೆ ಪತಿಯಾದ ಬ್ರಹ್ಮದೇವನು- ಯುಕ್ತಿಯಿಂದ ಊಹಿಸಲಶಕ್ಯವಾದ, ಅಸಾಧಾರಣವಾದ,

ಷ್ಟ್ವಂಕಿಮಿದಮಿತಿವಾಮುಹ್ಯತಿಸತಿಚಛಾದಾಜೋಜ್ಞಾತ್ವಾಸಪದಿಪರಮೋಽಜಾಯವನಿಕಾಂ ॥೫೭॥ ತತೋ ರ್ವಾಕ್ಪ್ರತಿಲಬ್ಧಾಕ್ಷಃಕಃಪರೇತವದುತ್ಥಿತಃ । ಕೃಛ್ರಾಚ್ಛನೈರುನ್ಮೀಲ್ಯ*ದೃಷ್ಟೀರಾಚಷ್ಟೇದಂಸಹಾತ್ಮನಾ ॥ ಸಪದ್ಯೇವಾಭಿತಃಪಶ್ಯನ್ದಿಶೋಽಪಶ್ಯತ್ಪುರಃಸ್ಥಿತಂ । ಬೃಂದಾವನಂಜನಾಜೀವ್ಯದ್ರುಮಾಕೀರ್ಣಂಸಮಾ

---

ಹಕ-ಉಪೋದ್ಬಲಕವೇದಾಂತಗಳಿಂದ, ("ನೇತಿನೇತಿ" ಇತ್ಯಾದ್ಯುಪನಿಷತ್ತುಗಳಿಂದ ಅತದ್ವ್ಯಾವೃತ್ತಿ ಲಕ್ಷಣವಾಗಿ-ವ್ಯಾವಹಾರಿಕವನ್ನು ಪಾರಮಾರ್ಥಿಕವಲ್ಲವೆಂದು ನಿಷೇಧಿಸುವ) ಮಿತೌ-ಜ್ಞಾನವುಳ್ಳ (ಆತ್ಮಸ್ವರೂಪವಿಷಯದಲ್ಲಿ,) ವಸ್ತುವಿನಲ್ಲಿ, ಕಿಮಿದಮಿತಿ-ಏನಿದೆವದು, ಮುಹ್ಯತಿಸತಿ-ಮೋಹಗೊಂಡವನಾಗುತ್ತಿರಲು, (ಅರಿಯದೇ ಭ್ರಾಂತಿಗೊಂಡವನಾಗುತ್ತಿರಲು) ದ್ರಷ್ಟುಂವಾ-ನೋಡುವುದಕ್ಕಾದರೂ, ಅನೀಶೇಪಿಸತಿ-ಅಸಮರ್ಥನೂ ಆಗುತ್ತಿರಲು, ಅಜಃಪರಮಃ-ಉತ್ಪತ್ತಿಯಿಲ್ಲದ ಪರಮಾತ್ಮನು, ಜ್ಞಾತ್ವಾ-ತಿಳಿದು, ಸಪದಿ- ಆಗಲೇ, ಅಜಾಯವನಿಕಾಂ-ಅಜಾ-ಮಾಯೆಯೆಂಬ, ಯವನಿಕಾಂ-ತೆರೆಬಟ್ಟೆಯನ್ನು, ಚಛಾದ-ದಯೆಯಿಂದ ತೆಗದು ಮುಚ್ಚಿರಿಸಿವನು (ತೆಗದು ಬಿಟ್ಟನು) ಅಥವಾ-ಚಛಾದ-ಲೋಕಾಭಿಮಾನಿಯಾದ ಇವನು ನನ್ನ ಐಶ್ವರ್ಯವನ್ನು ನೋಡಲು ಅಯೋಗ್ಯನೆಂದು ಬ್ರಹ್ಮನ ಮೇಲೆ ಹೊದ್ದಿಸಿದನು. (ಗೋಚರವಾದ ವಿಷ್ಣುಸ್ವರೂಪವು ಮರಳಿ ಕಾಣಿಸದೆ ಹೋಯಿತು) ॥೫೭॥ ತತಃ-ಆಮೇಲೆ, ಅರ್ವಾಕ್-ಹೊರಗೆ, ಪ್ರತಿಲಬ್ಧಾಕ್ಷಃ-ಪಡೆಯಲ್ಪಟ್ಟ ಕಣ್ಣುಗಳುಳ್ಳವನಾದ, ಕಃ-ಬ್ರಹ್ಮನು, ಪರೇತವತ್-ಸತ್ತವನ ಹಾಗಿದ್ದು, ಉತ್ಥಿತಃ-ಹೇಗೊ ಮರಳಿ ಎದ್ದವನಾಗಿ, ಕೃಛ್ರಾತ್- ಕಷ್ಟದಿಂದ, ಶನೈಃ-ಮೆಲ್ಲಗೆ, ದೃಷ್ಟೀಃ - ಕಣ್ಣುಗಳನ್ನು, ಉನ್ಮೀಲ್ಯ-ತೆರದು, ಇದಂ- ಈಜಗವನ್ನು, ಆತ್ಮನಾಸಹ-ಕೃಷ್ಣನೊಂದಿಗೆ, ಆಚಷ್ಟ-ನೋಡಿದನು ॥೫೮॥ ಸಪದ್ಯೇವ- ಆಗಲೇ, ಅಭಿತಃ- ಎಲ್ಲಕಡೆಗಳಲ್ಲಿಯೂ, ದಿಶಃ-ದಿಕ್ಕುಗಳನ್ನು, ಪಶ್ಯನ್-ನೋಡುತಲಿರುವನಾಗಿ, ಪುರಃಸ್ಥಿತಂ-ಮುಂದೆಯಿರುವ, ಜನಾಜೀವ್ಯದ್ರುಮಾಕೀರ್ಣಂ-ಜನ-ಜನಗಳಿಂದ, ಆಜೀವ್ಯ-ಉಪಜೀವಿಸಲ್ಪಡು

---



ಸ್ವಪ್ರಕಾಶ ಸುಖರೂಪವಾದುದರಿಂದ ಪ್ರಕೃತಿಗೆ ಪರವಾದುದರಿಂದಲೇ ಅತತ್ವ ನಿರಾಕರಣ ಮುಖದಿಂ ಶ್ರುತಿಗಳಿಂದ ನಿಶ್ಚಯಿಸಲ್ಪಟ್ಟ ಜ್ಞಾನವುಳ್ಳ, ಬ್ರಹ್ಮಸ್ವರೂಪ ಭೂತವಾದ, ಆ ಮಹಿಮೆಯಲ್ಲಿ 'ಇದೇನೋ' ಎಂದು ಅತ್ಯಾಶ್ಚರ್ಯದಿಂ ಮೋಹವನೆಯ್ದಿ ಅನಂತರದಲ್ಲಿ ಆ ಮಹಿಮೆಯಂ ನೋಡಲೋಸುಗವೂ ಸಹ ಸಮರ್ಥನಾಗದೇ ಇರಲು ಅದಂ ತಿಳಿದು ಶ್ರೀಕೃಷ್ಣದೇವನು ಆಕ್ಷಣದಲ್ಲಿ ಯಾವ ತನ್ನ ಮಾಯೆಯಿಂದವನಿಗೆ ಆಶ್ಚರ್ಯವು ತೋರಿಸಲ್ಪಟ್ಟಿತೋ, ಅಂತಾ ಮಾಯಾ ರೂಪವಾದ ತೆರೆಯನ್ನು ತೆಗದನು ॥೫೭॥ ಅನಂತರದಲ್ಲಿ ನಿರ್ವ್ಯಾಪಾರನಾಗಿರುವ ಬ್ರಹ್ಮದೇವನು ಆ ಕೃಷ್ಣಾನುಗ್ರಹದಿಂ ಪುನಃ ಹೊರಗೆ ಪಡೆಯಲ್ಪಟ್ಟ ಇಂದ್ರಿಯ ವ್ಯಾಪಾರವುಳ್ಳವನಾಗಿ ಮೃತನಾದ ಪುರುಷನು ಒಂದಾನೊಂದು ಸಮಯದಲ್ಲಿ ಎಂತು ಪ್ರಾಣಂಗಳೊಡಗೂಡಿ ಮೇಲಕ್ಕೆ ಏಳುವನೋ ಆರೀತಿಯಲ್ಲಿ ಪುನಃ ಎಚ್ಚರುಗೊಂಡು ಅತಿಪ್ರಯಾಸದಿಂದೆದ್ದು ಮೆಲ್ಲನೆ ಕಂಗಳಂ ತೆರದು ತನ್ನೊಡಗೂಡಿರುವ ಈ ಜಗತ್ತಂ ಕಂಡನು. ॥೫೮॥ ಆಮೇಲೆ ಬ್ರಹ್ಮದೇವನು ಆಸಮಯದಲ್ಲಿ ಸರ್ವದಿಕ್ಕುಗಳಂ ನೋಡುತ್ತಿರುವನಾಗಿ ಸ

ಪ್ರಿಯಮ್ ॥೫೯॥ ಯತ್ರನೈಸರ್ಗದುರ್ವೈರಾಸ್ಸಹಾಸನ್ನೃಮೃಗಾದಯಃ । ಮಿತ್ರಾಣೀವಾಜಿತಾವಾಸಾತ್ದ್ರುತರುಟ್ತರ್ಷಕಾದಿಕಮ್ ॥೬೦॥ ತತ್ರೋದ್ವಹತ್ಪಶುಪವಂಶಶಿಶುತ್ವನಾಟ್ಯಂಬ್ರಹ್ಮಾದ್ವಯಂಪರಮನನ್ತಮಗಾಧಬೋಧಮ್ । ವತ್ಸಾನ್ಸಖೀನಿವಪುರಾಪರಿತೋವಿಚಿನ್ವದೇಕಂಸಪಾಣಿಕಬಳಂಪರಮೇಷ್ಠ್ಯಚಷ್ಟ ॥೬೧॥ ದೃಷ್ಟ್ವಾತ್ವರೇಣನಿಜಧೋರಣತೋವತೀರ್ಯಪೃಥ್ವ್ಯಾಂವಪುಃಕನಕದಣ್ಡಮಿವಾಭಿಪಾತ್ಯ। ಸ್ಪೃಷ್ಟ್ವಾಚತುರ್ಮುಕುಟಕೋಟಿಭಿರಙ್ಘ್ರಿಯುಗ್ಮಂನತ್ವಾಮುದಶ್ರುಸುಜಲೈರಕೃತಾಭಿಷೇಕಮ್ ॥೬೨॥ ಉತ್ಥಾಯೋತ್ಥಾಯಕೃಷ್ಣಸ್ಯಚಿರಸ್ಯಪದಯೋಃಪತನ್ । ಆಸ್ತೇಮಹಿತ್ವಂಪ್ರಾಗ್ದೃಷ್ಟಂಸ್ಮೃತ್ವಾಸ್ಮೃತ್ವಾಪು

---

ತಕ್ಕ, (ಜೀವನಾರ್ಥವಾಗಿ ಆಶ್ರಯಿಸಲ್ಪಡತಕ್ಕ )ದ್ರುಮ-ಮರಗಳಿಂದ, ಆಕೀರ್ಣಂ-ವ್ಯಾಪ್ತವಾಗಿಯೂ, ಸಮಾಪ್ರಿಯಂ-ಸಂ-ಚೆನ್ನಾಗಿ, ಆಪ್ರಿಯಂ-ಸರ್ವತ್ರಪ್ರಿಯವಸ್ತುಗಳುಳ್ಳ, ಬೃಂದಾವನಂ-ಬೃಂದಾವನವೆಂಬಕಾಡನ್ನು, ಅಪಶ್ಯತ್-ಕಂಡನು ॥೫೯॥ ಯತ್ರ-ಯಾವಬೃಂದಾವನದಲ್ಲಿ, ನೈಸರ್ಗದುರ್ವೈರಾಃ- ನೈಸರ್ಗ- ಸ್ವಾಭಾವಿಕವಾದ, ದುರ್ವೈರಾಃ- ಪ್ರತೀಕಾರವಿಲ್ಲದವಿರೋಧವುಳ್ಳ, ನೃಮೃಗಾದಯಃ-ನೃ-ಮನುಷ್ಯರು, ಮೃಗ-ಸಿಂಹಾದಿಮೃಗಗಳು, ಆದಯಃ-ಮೊದಲಾದವರು, ಮಿತ್ರಾಣೀವ-ಸ್ನೇಹಿತರಹಾಗೆ, ಸಹ ಆಸನ್-ಒಂದಿಗೆಯಿದ್ದರೋ, ಯತ್-ಯಾವಬೃಂದಾವನವು, ಅಜಿತಾವಾಸಾತ್-ಅಜಿತ-ಯಾರಿಂದಲೂಗೆಲ್ಲಲ್ಪಡದ ಪರಮಾತ್ಮನಾದ ಕೃಷ್ಣನ, ಆವಾಸಾತ್-ಇರ್ವೆಯದೆಸೆಯಿಂದ, ದ್ರುತರುಟ್ತರ್ಷಾದಿಕಂ-ದ್ರುತ-ಓಡಿಹೋದ, ರುಟ್-ಕೋಪವೂ, ತರುಷತರ್ಷ-ಲೋಭವೂ, ಆದಿಕಂ-ಮೊದಲಾದದುರ್ಗುಣಗಳುಳ್ಳದ್ದೋ ॥೬೦॥ ತತ್ರ-ಅಲ್ಲಿ, ಪರಮೇಷ್ಠೀ-ಬ್ರಹ್ಮನು, ಪಶುಪವಂಶಶಿಶುತ್ವನಾಟ್ಯಂ-ಪಶುಪ- ಗೋಪಾಲಕರ, ವಂಶ-ಕುಲದ, ಶಿಶುತ್ವ-ಹುಡುಗತನವೆಂಬ, ನಾಟ್ಯಂ-ನೃತ್ತವನ್ನು, ಉದ್ವಹತ್-ವಹಿಸಿಯಿರುವಂತಾ, ವತ್ಸಾನ್-ಕರುಗಳನ್ನು, ಸಖೀನ್-ಗೆಳೆಯರನ್ನೂ, ಪುರೇವ-ಮುನ್ನಿನಂತೆ, ಪರಿತಃ-ಸರ್ವತ್ರ, ವಿಚಿನ್ವತ್-ಹುಡುಕುತಲಿರುವಂತಾ, ಏಕಂ-ಒಬ್ಬನೇಆದಂತಾ, ಸಪಾಣಿಕಬಳಂ-ಕೈಯತುತ್ತಿನಿಂದ ಸಹಿತನಾದಂತಾ, ಅಗಾಧಬೋಧಂ-ಆಳವಾದತಿಳುವಳಿಕೆಯುಳ್ಳಂತಾ, ಅನಂತಂ-ನಾಶವಿಲ್ಲದಂತಾ, ಪರಂ-ಉತ್ಕೃಷ್ಟವಾದಂತಾ, ಅದ್ವಯಂ-ದ್ವೈತವಾಸಿಖವಿಲ್ಲದಂತಾ, ಬ್ರಹ್ಮ-ಪರಮಾತ್ಮನಾದಕೃಷ್ಣನನ್ನು, ಅಚಷ್ಟ-ನೋಡಿದನು ॥೬೧॥ ದೃಷ್ಟ್ವಾ-ನೋಡಿ, ತ್ವರೇಣ-ವೇಗದಿಂದ, ನಿಜಧೋರಣತಃ-ತನ್ನವಾಹನದದೆಸೆಯಿಂದ, ಅವತೀರ್ಯ-ಇಳಿದು ವಪುಃ-ಶರೀರವನ್ನು, ಕನಕದಂಡಮಿವ-ಚಿನ್ನದಕೋಲಿನಂತೆ, ಅಭಿಪಾತ್ಯ-ಅಡ್ಡಬೀಳಿಸಿ, ಚತುರ್ಮುಕುಟಕೋಟಿಭಿಃ-ಚತುಃ-ನಾಲ್ಕಾ

---

ರ್ವಜನರಿಗೂ ಜೀವನಾಧಾರಂಗಳಾದ ಸಮಸ್ತವೃಕ್ಷಂಗಳಿಂ ನಿಬಿಡವಾಗಿರುವ ಮತ್ತು ಪ್ರೀತಿಕರವಾದ ಇದಿರಾಗಿರುವ ಬೃಂದಾವನವಂ ಕಂಡನು. ॥೫೯॥ ನರರೂ ಸಿಂಹಾದಿ ಮೃಗಂಗಳೂ ಸಹ ಪ್ರತಿಕ್ರಿಯೆಯಿಲ್ಲದ ಸ್ವಾಭಾವಿಕವಾಗಿರುವ ಪರಸ್ಪರ ವೈರದೊಡನೆ ಕೂಡಿರುವರಾದರೂ ಯಾವಪ್ರದೇಶದಲ್ಲಿ ಅತ್ಯಂತ ಮಿತ್ರರಂತೆ ಅನ್ಯೋನ್ಯವಾಗಿ ಕೂಡಲೆ ಯಿರುವರೋ, ಶ್ರೀಕೃಷ್ಣಮೂರ್ತಿಯು ವಾಸಂಗೆಯ್ವುದರಿಂದ ಪರಿಹರಿಸಲ್ಪಟ್ಟ ಕ್ರೋಧಾದಿಗಳುಳ್ಳ ಅಂತಾಬೃಂದಾವನವಂ ಕಂಡನು. ॥೬೦॥ ಆಬೃಂದಾವನದಲ್ಲಿ ಬ್ರಹ್ಮದೇವನು ಅದ್ವಿತೀಯವಾದ ವಸ್ತುವಂ, ಕರುಗಳಂ ಅರಸುವುದನ್ನಾಗಿಯೂ; ಒಂದಾದವಸ್ತುವು, ಬಾಲಕರಂ ಹುಡುಕುವದನ್ನಾಗಿಯೂ; ಪರವಾದವಸ್ತುವಂ, ಗೋಪಾಲಕರವಂಶದಲ್ಲಿ ಶಿಶುತ್ವವಂಪಡೆದ ನಾಟ್ಯವಂ ಗೆಯ್ಯುತ್ತಿರುವುದನ್ನಾಗಿಯೂ; ಪರಬ್ರಹ್ಮರೂಪವಾದವಸ್ತುವಂ, ಹಸ್ತದಲ್ಲಿ ಅನ್ನದ ಕಬಳದೊಡನೆ ಯುಕ್ತವಾದುದನಾಗಿಯೂ; ಕಂಡು- ಅನಂತರದಲ್ಲಿ ಈರೀತಿಯಾದ ಮಾಯೆಯಿಂದ ಮನುಷ್ಯ ಬಾಲಕತ್ವವಂ ನಟಿಸುತಲಿರುವ ಶ್ರೀಕೃಷ್ಣನಂ ಕಂಡನು. ತಾನು ಕರುಗಳನ್ನು ಅಪಹರಿಸುವುದಕ್ಕಿಂತಲೂ ಪೂರ್ವದಲ್ಲಿ ಎಂತುಕಂಡನೋ ಅದೇರೀತಿಯಲ್ಲಿ ಈಗಲೂ ಕಂಡನು. ॥೬೧॥ ಆಗ ಬ್ರಹ್ಮನು ತನ್ನ ವಾಹನವಾದ ಹಂಸಪಕ್ಷಿಯಿಂದ ಅತಿವೇಗವಾಗಿಳಿದು ಭೂಮಿಯಲ್ಲಿ ತನ್ನದೇಹವಂ ಸುವರ್ಣದಂಡವನಂತೆ ಕೆಡಹಿ ತನ್ನ ನಾಲ್ಕುಕಿರೀಟಂಗಳಿಂದಲೂ ಶ್ರೀಕೃಷ್ಣದೇವನ ಚರಣಾರವಿಂದಯುಗಳವಂ ಸ್ಪರ್ಶನಂಗೆಯ್ದು ನಮಸ್ಕರಿಸಿ ಆನಂದ ಬಾಷ್ಪರೂಪಂಗಳಾದ ಜಗಂಗಳಿಂ ಅಭಿಷೇಕಂಗೆಯ್ದನು. ॥೬೨॥ ಮತ್ತು

ನಃಪುನಃ ||೬೩|| ಶನೈರಥೋತ್ಥಾಯವಿಮೃಜ್ಯಲೋಚನೇಮುಕುನ್ದಮುದ್ವೀಕ್ಷ್ಯವಿನಮ್ರಕನ್ಧರಃ | ಕೃತಾಂಜಲಿಃಪ್ರಶ್ರಯವಾನ್ಸಮಾಹಿತಸ್ಸವೇಪಥುರ್ಗದ್ಗದಯೈಡತೇಳಯಾ ... ... ... ||೬೪||

ಇತಿ ಶ್ರೀಮದ್ಭಾಗವತೇ ದಶಮಸ್ಕನ್ಧೇ ತ್ರಯೋದಶೋಽಧ್ಯಾಯಃ

---

ದ, ಮಕುಟ-ಕಿರೀಟಗಳ, ಕೋಟಿಭಿಃ-ಕೊನೆಗಳಿಂದ, ಅಂಘ್ರಿಯುಗ್ಮಂ-ಅಡಿಗಳೆರಡನ್ನು, ಸ್ಪೃಷ್ಟ್ವಾ-ಸೋಂಕಿ, ನತ್ವಾ-ನಮಸ್ಕಾರಮಾಡಿ, ಮುದಶ್ರುಸಲಿಲೈಃ-ಮುತ್-ಸಂತೋಷದ, ಅಶ್ರು-ಕಂಣೀರೆಂಬ, ಸಲಿಲೈಃ- ತೀರ್ಥಗಳಿಂದ, ಅಭಿಷೇಕಂ- ಸ್ನಪನವನ್ನು, ಅಕೃತ-ಮಾಡಿದನು ||೬೨||ಉತ್ಥಾಯೋತ್ಥಾಯ-ಎದ್ದುಯೆದ್ದು, ಕೃಷ್ಣಸ್ಯ-ಕೃಷ್ಣನ, ಪದಯೋಃ-ಪಾದಗಳಲ್ಲಿ, ಪತಿತಃ-ಬೀಳುತಲಿರುವನಾಗಿ, ಪ್ರಾಕ್-ಪೂರ್ವದಲ್ಲಿ, ದೃಷ್ಟಂ-ನೋಡಲ್ಪಟ್ಟ, ಮಹತ್ವಂ-ಮಹಿಮೆಯನ್ನು, ಪುನಃಪುನಃ-ಮರಳಿಮರಳಿಯೂ, ಸ್ಮೃತ್ವಾಸ್ಮೃತ್ವಾ-ನೆನವುನೆನದು, ಚಿರಸ್ಯ-ಬಹುಕಾಲವು, ಆಸ್ತೇ-ಇರುವನು ||೬೩|| ಅಥ-ಆಮೇಲೆ, ಶನೈಃ-ಮೆಲ್ಲಗೆ, ಉತ್ಥಾಯ-ಎದ್ದು, ಲೋಚನೇ-ಕಂಗಳನ್ನು, ವಿಮೃಜ್ಯ-ಒರಸಿಕೊಂಡು, ಮುಕುಂದ-ಮೋಕ್ಷವನ್ನು ಕೊಡುವಕೃಷ್ಣನನ್ನು, ಉದ್ವೀಕ್ಷ್ಯ-ತಲೆಯೆತ್ತಿನೋಡಿ, ವಿನಮ್ರಕಂಧರಃ-ವಿನಮ್ರ-ಬಗ್ಗಿದ, ಕಂಧರಃ-ಕತ್ತುಳ್ಳವನಾಗಿ, ಕೃತಾಂಜಲಿಃ-ಜೋಡಿಸಲ್ಪಟ್ಟಕೈಗಳುಳ್ಳವನಾಗಿ, ಪ್ರಶ್ರಯವಾನ್-ವಿನಯವುಳ್ಳವನಾಗಿ, ಸಮಾಹಿತಃ-ಸಮಾಧಾನವುಂಟಾದವನಾಗಿ, ಸವೇಪಥುಃ-ನಡುಕದಿಂದೊಡಗೂಡಿದವನಾಗಿ, ಗದ್ಗದಯಾ-ಗಂಟಲಿನಲ್ಲಿ ಅಣಗಿ ಬಿಕ್ಕುಲಾದ, ಇರಯಾ-ವಾಕ್ಕಿನಿಂದ, ಐಡತ-ಸ್ತುತಿಮಾಡಿದನು ||೬೪||

ಇತಿಶ್ರೀಮದ್ಭಾಗವತ ಪ್ರತಿಶಬ್ದಾರ್ಥ ಬೋಧಿನ್ಯಾಂ ದಶಮಸ್ಕಂಧೇ ತ್ರಯೋದಶೋಽಧ್ಯಾಯಃ-

---

ಶ್ರೀಕೃಷ್ಣದೇವನ ಪಾದಪದ್ಮಂಗಳಿಗೆ ಬಾರಿಬಾರಿಗೂ ಎದ್ದೆದ್ದು ನಮಸ್ಕಾರಂಗೆಯ್ವನಾಗಿ ಪೂರ್ವದಲ್ಲಿ ತನ್ನಿಂ ದಕಾಣಲ್ಪಟ್ಟ ಶ್ರೀಕೃಷ್ಣದೇವನ ಮಹಿಮೆಯಂ ಬಾರಿಬಾರಿಗೂ ಸ್ಮರಿಸಿ ಸ್ಮರಿಸಿ ಬಹುಕಾಲದವರೆಗೂ ನಮಸ್ಕಾರಂಗೆಯ್ಯುತಲಿದ್ದನು. ||೬೩|| ಅನಂತರದಲ್ಲಿ ಬ್ರಹ್ಮದೇವನು ಮೆಲ್ಲನೆ ಎದ್ದು ತನ್ನಕಂಣುಗಳಂ ತನ್ನಹಸ್ತಗಳಿಂ ದೊರಸುವವನಾಗಿ ಶ್ರೀಮುಕುಂದನಂ ಮುಖವನೆತ್ತಿ ಚೆನ್ನಾಗಿನೋಡಿ, ಹಾಗೆ ನಮ್ರವಾದ ಕಂಠವುಳ್ಳವನಾಗಿ ಅಂಜಲಿಬಂಧಮಂ ಗೆಯ್ದವನಾಗಿ ವಿನಯಯುಕ್ತನೂ ಆಗಿ ಸಾವಧಾನವಾದ ಮನಸ್ಸುಳ್ಳವನೂ ಆಗಿ ತಾನು ಮಾಡಿದ ಅಪರಾಧಮಂ ಸ್ಮರಿಸಿ ಗಡಗಡನೆ ನಡುಗುತ್ತ ತನ್ನಲ್ಲಿಯೇ ದಯೆಗೆಯ್ವನೆಂದು ತಿಳಿದು ಸಂತೋಷದಿಂದ ಉಂಟಾದ ಗದ್ಗದ ವಾಕ್ಯದಿಂದ ಸ್ತೋತ್ರಂಗೆಯ್ದನು ... ... ... ... ||೬೪

ಇಂತು ಶುಕಮುನಿಯು ಪರೀಕ್ಷಿದ್ರಾಯನಿಗೆ ನಿರೂಪಿಸಿದನೆಂದು ಸೂತಪೌರಾಣಿಕನು ನೈಮಿಶಾ
ರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಹೇಳಿದನೆಂಬಲ್ಲಿಗೆ- ಶ್ರೀಮನ್ಮಹೀ
ಶೂರಪುರವರಾಧೀಶ ಶ್ರೀಚಾಮರಾಜತನುಜಶ್ರೀಮತ್ಕೃಷ್ಣರಾಜ ವಿರ
ಚಿತಮಪ್ಪ, ಶ್ರೀಭಾಗವತದ "ಶ್ರೀಕೃಷ್ಣರಾಜವಾಣೀವಿ
ಲಾಸವು" ಎಂಬಕರ್ಣಾಟಭಾಷಾವ್ಯಾಖ್ಯಾನ
ದಲ್ಲಿ ದಶಮಸ್ಕಂಧದೊಳು ತ್ರಯೋದಶಾ
ಧ್ಯಾಯವು ಸಂಪೂರ್ಣವಾದುದು.
ಮಂಗಳ ಮಸ್ತು

——⁂——

-*ವತ್ಸಾಪಹರಣೆ ಭಗವನ್ಮಹಿಮಾ ಭಿಜ್ಞೇನಬ್ರಹ್ಮಣಾಕೃತಸ್ತುತಿಃ.*-

ಬ್ರಹ್ಮಾ! ನೌಮೀಡ್ಯತೇಭ್ರವಪುಷೇತಟಿದಂಬರಾಯಗುಂಜಾವತಂಸಪರಿಪಿಞ್ಛಲಸನ್ಮುಖಾಯ|ವನ್ಯಸ್ರ
ಜೇಕಬಳವೇತ್ರವಿಷಾಣವೇಣುಲಕ್ಷ್ಮಶ್ರಿಯೇಮೃದುಪದೇಪಶುಪಾಙ್ಗಜಾಯ |೧|ಅಸ್ಯಾಪಿದೇವವಪುಷೋಮದನು

---

೧೪ನೆಯ ಅಧ್ಯಾಯದ ಪ್ರತಿಪದಟೀಕೆ.

[ಬ್ರಹ್ಮಸ್ತುತಿ] ಹೇಈಡ್ಯ-ಎಲೈಸ್ತುತಿಸಲ್ಪಡತಕ್ಕ ಕೃಷ್ಣನೇ, ಅಭ್ರವಪುಷೇ-ಅಭ್ರ-ಮೇಘದಂತಿರುವ, ವಪುಷೇ-ಮೈಯುಳ್ಳವನಾದ, ತಟಿದಂಬರಾಯ-ತಟಿತ್-ಮಿಂಚುಗಳಂತಿರುವ, ಅಂಬರಾಯ-ವಸ್ತ್ರಗಳುಳ್ಳವನಾದ, ಗುಂಜಾ ..... ಮುಖಾಯ-ಗುಂಜಾ-ಗುಲುಗಂಜಿಗಳಿಂದ, ಅವತಂಸ-ಕಿವಿಯೊಡವುಗಳೂ, ಪರಿ-ಸುತ್ತಲೂ, ಪಿಂಛ-ನವಿಲುಗರಿಯಿಂದಲೂ, ಲಸತ್-ಶೋಭಿಸುವ, ಮುಖಾಯ-ಮೋರೆಯುಳ್ಳವನಾದ, ವನ್ಯಸ್ರಜೇ-ವನ್ಯ-ತುಲಸಿವನದಲ್ಲಿಹುಟ್ಟಿದ, ಸ್ರಜೇ-ಹಾರಗಳುಳ್ಳವನಾದ, ಕಬಳ ..... ಶ್ರಿಯೇ-ಕಬಳ-ಆಹಾರದತುತ್ತು, ವೇತ್ರ-ಬೆತ್ತ, ವಿಷಾಣ-ಕೊಂಬಿನವಾದ್ಯ, ವೇಣು-ಕೊಳಲ್ಗಳೆಂಬ, ಲಕ್ಷ್ಮ-ಗುರ್ತುಗಳಿಂದ, ಶ್ರಿಯೇ-ಕಾಂತಿಯುಳ್ಳವನಾದ, ಮೃದುಪದೇ-ಮೆತ್ತಗಿರುವಕಾಲುಗಳುಳ್ಳವನಾದ, ಪಶುಪಾಂಗಜಾಯ-ಪಶುಪ-ಗೋಪಾಲನ, ಅಂಗಜಾಯ-ಮಗನಾದ, ಅಥವಾಪಶು-ಇಂದ್ರಿಯಗಳನ್ನು, ಪ-ಪಾಲಿಸುವದೇವತೆಗಳೇ, ಅಂಗಜಾಯ-ಮಕ್ಕಳಾಗಿವುಳ್ಳವನಾದ ಅಥವಾ ರೋಮಗಳಾಗಿವುಳ್ಳವನಾದ, ತೇ-ನಿನಗೆ, ನೌಮಿ-ನಮಸ್ಕಾರಂಮಾಡುವೆನು॥೧॥ಹೇದೇವ-ಎಲೆದೇವನೇ! ಮದನುಗ್ರಹಸ್ಯ-ನನ್ನಲ್ಲಿಪ್ರಸಾದವುಳ್ಳಂತಾ,

---



* ೧೪ನೆಯ ಅಧ್ಯಾಯವು. *

ಶ್ರೀಧರೀಯೆಶ್ಲೋಕ॥ ಚತುರ್ದಶೇದ್ಭುತಂ ದೃಷ್ಟ್ವಾಪೂರ್ವಾಗನ್ತುಕನಿಶ್ಚಯಂ । ಅನೀಶಃಕರ್ತುಮಪ್ಯೇಷ ಸ್ತೌತಿ ಕೃಷ್ಣಂ ಬ್ರಹ್ಮಾತಿಮೋಹಿತಃ॥ಟೀಕೆ॥ಹದಿನಾಲ್ಕನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನ ಆಶ್ಚರ್ಯಕರವಾದ ಆವ್ಯಾಪಾರವಂ ನೋಡಿ ಅತ್ಯಂತಮೋಹಿತನಾದುದರಿಂದ, ಆಗೋಪಬಾಲಕರಲ್ಲಿಯೂ ಆಕರುಗಳಲ್ಲಿಯೂ "ಇವರು ಪೂರ್ವದಲ್ಲಿ ಇದ್ದವರು. ಇವರು ನೂತನವಾಗಿ ಬಂದವರು." ಎಂದು ನಿಶ್ಚಯಿಸಲು ಅಸಮರ್ಥನಾಗಿ ಶ್ರೀಕೃಷ್ಣನಂ ಸ್ತುತಿಸಿದನು. ಇಂತೆಂಬರ್ಥವಂ ಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸುವನದೆಂತೆನೆ ;-

ಎಲೈ, ಸ್ತುತಿಸಲು ಯೋಗ್ಯನಾದ ಶ್ರೀಕೃಷ್ಣಮೂರ್ತಿಯೇ! ಮೇಘದಂತೆ ಶ್ಯಾಮಲವರ್ಣವಾದ ದೇಹವುಳ್ಳ, ಮಿಂಚಿನಂತೆಪೊಳೆವ ಪೀತಾಂಬರವುಳ್ಳ, ಗುಲಗಂಜಿಗಳಿಂದಲೂ ಕಿವಿಯೊಡವುಗಳಿಂದಲೂ ನವಿಲಗರಿಗಳಿಂದಲೂ ಶೋಭಿಸುವ ಮುಖವುಳ್ಳ, ವನದಲ್ಲಿಹುಟ್ಟಿದ ಪುಷ್ಪಗಳಮಾಲಿಕೆಗಳುಳ್ಳ, ಕರದಲ್ಲಿ ದಧ್ಯನ್ನ ಕಬಳದಿಂದಲೂ ಕಂಕುಳಲ್ಲಿರುವ ಕೊಂಬು ಬೆತ್ತದ ಕೋಲುಗಳಿಂದಲೂ ಉಡಿಯಲ್ಲಿರುವ ಕೊಳಲಿನಿಂದಲೂ ಇವುಮೊದಲಾದ ಅನೇಕ ಚಿಹ್ನಗಳಿಂದಲೂ ಶೋಭಿಸುತಲಿರುವ, ಕೋಮಲಂಗಳಾದ ಪಾದಂಗಳುಳ್ಳ, ನಂದಗೋಪನಿಗೆ ಪುತ್ರನಾದ, ನಿನಗೋಸುಗ ನಮಸ್ಕಾರವಂ ಗೆಯ್ವೆನು. ।೧। ಎಲೈ, ದೇವೋತ್ತಮನಾದ ಶ್ರೀಕೃಷ್ಣದೇವನೇ

ಗೃಹಸ್ಯಸ್ವೇಚ್ಛಾಮಯಸ್ಯನತುಭೂತಮಯಸ್ಯಕೋಪಿ । ನೇಶೇಮಹಿತ್ವವಸಿತುಂಮನಸಾನ್ತರೇಣಸಾಕ್ಷಾತ್ತ
ವೈವಕಿಮುತಾತ್ಮಸುಖಾನುಭೂತೇಃ‖೬‖ ಜ್ಞಾನೇಪ್ರಯಾಸಮುದಪಾಸ್ಯನಮನ್ತ ಏವಜೀವನ್ತಿಸನ್ಮುಖರಿತಾಂ
ಭವದೀಯವಾರ್ತಾಮ್। ಸ್ಥಾನೇಸ್ಥಿತಾಃಶ್ರುತಿಗತಾಂತನುವಾಙ್ಮನೋಭಿರ್ಯೇಪ್ರಾಯಶೋಽಜಿತಜಿತೋಪ್ಯಸಿತೈ
ಸ್ತ್ರಿಲೋಕ್ಯಾಮ್ ‖೭‖ ಶ್ರೇಯಸ್ಸ್ರುತಿಂಭಕ್ತಿಮುದಸ್ಯತೇವಿಭೋಕ್ಲಿಶ್ಯನ್ತಿಯೇಕೇವಲಬೋಧಲಬ್ಧಯೇ ।

ಸ್ವೇಚ್ಛಾಮಯಸ್ಯ-ಸ್ವ-ತನ್ನವರ, ಇಚ್ಛಾಮಯಸ್ಯ-ಪ್ರಾರ್ಥನಾನುಸಾರಆವಿರ್ಭಾವಿಸುವ ತಾ, ನತುಭೂತಮಯಸ್ಯ-ಪಾಂಚಭೌತಿಕವಲ್ಲದ, (ಶುದ್ಧಸತ್ವಾತ್ಮಕವಾದ)ಅಸ್ಯವಪುಃ ಸುಲಭವಾದ ಈನಿನ್ನ ಅವತಾರದ, ಮಹ್ಯಪಿ-ಮಹಿಮೆಯನ್ನೂ ಕೂಡ, ಅವಸಿತುಂ-ತಿಳಿಯುವದಕ್ಕೆ, ಕೋಪಿ-ಬ್ರಹ್ಮನಾದನಾನೂ ಕೂಡ, ನೇಶೇ-ಸಮರ್ಥನಾಗಲಾರೆನು. ಅಥವಾ ಕೋಪಿ-ಯಾವವನಾದರೂ, ನೇಶೇ-ಶಕ್ತನಾಗಲಿಲ್ಲವು. ಆತ್ಮಸುಖಾನುಭೂತೇಃ-ಆತ್ಮ-ನಿನ್ನ, ಸುಖಾನುಭೂತೇಃ- ಆನಂದಾನುಭವಮಾತ್ರನಾದ, ತವ-ಕೇವಲನಾದನಿನ್ನ, ಮಹಿತು-ಮಹಿಮೆಯನ್ನು ಆದರೋ, ಅಂತರೇಣ-ತಡೆಯುಳ್ಳ, ಮನಸಾ-ಅಂತಃಕರಣದಿಂದ, ಸಾಕ್ಷಾತ್- ಪ್ರತ್ಯಕ್ಷವಾಗಿ, ಅವಸಿತುಂ-ತಿಳಿಯುವದಕ್ಕೆ,ಕಿಮುತ-ಏನುಹೇಳಲ್ತಕ್ಕದ್ದು?‖೬‖ಹೇಅಜಿತ-ಎಲ್ಲ್ಯ ಯಾರಿಂದಲೂ ಗೆಲ್ಲಲ್ಪಡದ ವಿಷ್ಣುವೇ! ಯೇ-ಯಾರು, ಜ್ಞಾನೇ-ಆತ್ಮಜ್ಞಾನವಿಷಯದಲ್ಲಿ, ಪ್ರಯಾಸಂ-ಶ್ರಮವನ್ನು, ಉದಪಾಸ್ಯ-ಬಿಟ್ಟು, ಸ್ಥಾನೇ-ತಮ್ಮ ಸ್ಥಲದಲ್ಲಿಯೇ, ಸ್ಥಿತಾಸ್ಸಂತಃ- ಇರುವರಾಗಿ, ಸನ್ಮುಖರಿತಾಂ-ಸತ್-ಸತ್ಪುಷರಿಂದ, ಮುಖರಿತಾಂ-ಪ್ರಕಟಿಸಲ್ಪಟ್ಟದ್ದಾಗಿ, ಶ್ರುತಿಗತಾಂ- ತಮ್ಮ ಕಿವಿಗೆಬಿದ್ದ, ಭವದೀಯವಾರ್ತಾಂ-ನಿನ್ನ ವೃತಾಂತವನ್ನು, ತನುವಾಙ್ಮನೋಭಿಃ-ಶರೀರವಾಗ್ಬುದ್ಧಿಗಳಿಂದ, ನಮಂತಏವ- ನಮಸ್ಕರಿಸುವರಾಗಿಯೇ, ಜೀವಂತಿ-ಬದುಕುವರೋ, ತೈಃ-ಅವರಿಂದ, ತ್ರಿಲೋಕ್ಯಾಂ-ಮೂರುಲೋಕಗಳಲ್ಲಿಯೂ, ಪ್ರಾಯಶಃ-ಬಹುಶಃ-ಅಥವಾಪ್ರಸಿದ್ಧವಾಗಿ, ಜಿತೋಪ್ಯಸಿ-ಗೆಲ್ಲಲ್ಪಟ್ಟವನೂಆಗಿರುವಿ. (ಗುಣಶ್ರವಣನಮಸ್ಕಾರಗಳೇ ಸಾಕು-ಜ್ಞಾನವೇಕೆ?) ‖೭‖ ವಿಭೋ-ವ್ಯಾಪಕನಾದಕೃಷ್ಣನೇ!

ನಿನ್ನಲ್ಲಿ ಅನುಗ್ರಹಂಗೆಯ್ಯು, ಭಕ್ತರ ಅಪೇಕ್ಷೆಯಿದ್ದಂತೆ ಆವಿರ್ಭವಿಸುತಲಿರುವುದರಿಂದ, ಸುಲಭವಾಗಿ ಪ್ರಕಾಶಿಸಲ್ಪಟ್ಟದ್ದಾದರೂ ಭೂತಮಯವಲ್ಲದ, ಚಿಂತಿಸಲಶಕ್ಯವಾಗಿ ಶುದ್ಧಸತ್ವಾತ್ಮಕವಾಗಿಯೂ ಇರುವುದರಿಂದ, ಜ್ಞಾನಕ್ಕೆ ವಿಷಯವಲ್ಲದೇ ಇರುವ, ನಿನ್ನ ಅವತಾರದ ಮಹಿಮೆಯನ್ನೇ ತಿಳಿಯಲು ಬ್ರಹ್ಮದೇವನಾದ ನಾನೂ ಕೂಡಸಮರ್ಥನಲ್ಲವು. ಹೀಗಿರುವಲ್ಲಿ ಕೇವಲನಾದ, ಅವತಾರರಹಿತನಾದ, ಗುಣಾತೀತನಾದ, ನಿಜಾನಂದಾನುಭವಮಾತ್ರಸ್ವರೂಪನಾದ, ಸಾಕ್ಷಾತ್, ನಿನ್ನ ಮಹಿಮೆಯಂ ನಿರೋಧಂಗೆಯ್ಯಲ್ಪಟ್ಟ ಮನಸ್ಸಿನಿಂದ ಯಾವಪುರುಷನೂ ತಿಳಿಯಲು ಸಮರ್ಥನಲ್ಲವೆಂದು ಏನುಹೇಳತಕ್ಕದ್ದು? (ಪ್ರಾಣಿಗಳಲ್ಲಿ ಜ್ಞಾನಾಧಿಕನೆನಿಸಿರುವ ನಾನೂ ಸಹ ಭಕ್ತರಿಗೆ ಸುಲಭವಾಗಿ ಅವತರಿಸಿಯಿರುವ ನಿನ್ನ ಅವತಾರ ರೂಪವನ್ನೇ ತಿಳಿಯಲಾರದೆ ಇರುವಲ್ಲಿ- ನಿರ್ಗುಣವಾದ ನಿನ್ನ ಚಿನ್ಮಾತ್ರ ಸ್ವರೂಪವನ್ನು ಮನಸ್ಸಿನಿಂದ ಯಾರುತಾನೇ ತಿಳಿಯಲಾಪುವರು; ನಿನ್ನ ಶುದ್ಧಸ್ವರೂಪವು ಎಲ್ಲರಿಗೂ ಸ್ವರೂಪವಾಗಿರುವುದೇ ಹೊರತು ಬೇರೆಯಾಗಿ ತಿಳಿಯಬರುವದಲ್ಲವೆಂದು ಭಾವವು.) ‖೬‖ ("ಆದರೆ ಅಜ್ಞರು ಎಂತು ಸಂಸಾರವಂ ದಾಂಟುವರು" ಎಂಬಲ್ಲಿ ನುಡಿಯುವನು-) ಎಲೈ, ಶ್ರೀಕೃಷ್ಣನೇ! ಯಾವಪುರುಷರು-ಜ್ಞಾನವಿಷಯದಲ್ಲಿ ಸ್ವಲ್ಪವಾದರೂ ಪ್ರಯಾಸ ಪಡುವುದಂ ಬಿಟ್ಟು ಸ್ವಸ್ಥಾನದಲ್ಲಿ ಯಿರುವರಾಗಿಯೇ- ಸತ್ಪುರುಷರಿಂದ ನಿತ್ಯದಲ್ಲಿಯೂ ಸ್ವತಃ ಪ್ರಕಟಂಗೆಯ್ಯಲ್ಪಟ್ಟ, ಮತ್ತು ಅಸತ್ಪುರುಷರ ಸನ್ನಿಧಾನಮಾತ್ರದಿಂದಲೇ ಸ್ವತಏವ ಶ್ರೋತ್ರಮಾರ್ಗವನೆಯ್ದಿರುವ, ನಿನ್ನ ದಿವ್ಯಕಥೆಯಂ ದೇಹದಿಂದಲೂ ವಾಕ್ಯದಿಂದಲೂ ಮನಸ್ಸಿನಿಂದಲೂ ಸಹ ಸತ್ಕಾರಂ ಗೆಯ್ಯುತಲಿರುವವರಾಗಿ- ಮತ್ತೊಂದುಕರ್ಮವನ್ನು ಆಚರಿಸದೆ ಜೀವಿಸುವರೋ' ಅವರಿಂ ನೀನು ಮೂರುಲೋಕದಲ್ಲಿಯೂ ಬಹುತರವಾಗಿ ಮಿಕ್ಕಾದ ಜನರಿಂದ ಜಯಿಸಲಶಕ್ಯನಾಗಿದ್ದರೂ ಜಯಿಸಲ್ಪಡುವೆ. ಆಕಾರಣದಿಂದ ಕಥಾಶ್ರವಣ ಮಾತ್ರದಿಂದಲೇ ನೀನು ಲಭ್ಯನಾಗುತ್ತಿರಲು ಜ್ಞಾನವಿಷಯಕವಾದ ಪ್ರಯಾಸದಿಂದ ಪ್ರಕೃತವೇನು, ‖೭‖ (ಭಕ್ತಿಯಿಂದಹೊರತು ಕೇವಲಜ್ಞಾನವು ಪ್ರಾಪ್ತವಾಗದೆಂದು ನುಡಿಯುವನು,) ಎಲೈ ವಿಭುವಾ

ತೇಷಾಮಸೌ ಕ್ಲೇಶಲ ಏವ ಶಿಷ್ಯತೇ ನಾನ್ಯದ್ಯಥಾ ಸ್ಥೂಲತುಷಾವಘಾತಿನಾಮ್ ‖ ೪ ‖ ಪುರೇಹ ಭೂಮನ್ ಬಹವೋಽಪಿ ಯೋಗಿನಸ್ತ್ವದರ್ಪಿತೇಹಾ ನಿಜಕರ್ಮಲಬ್ಧಯಾ । ವಿಬುಧ್ಯ ಭಕ್ತ್ಯೈವ ಕಥೋಪನೀತಯಾ ಪ್ರಪೇದಿರೇಽಞ್ಜೋಽಚ್ಯುತ ತೇ ಗತಿಂ ಪರಾಮ್ ।‖೫‖ ತಥಾಪಿ ಭೂಮನ್ ಮಹಿಮಾಗುಣಸ್ಯ ತೇ ವಿಬೋದ್ಧುಮರ್ಹತ್ಯಮಲಾಂತರಾತ್ಮಭಿಃ । ಅ

---

ಶ್ರೇಯಸ್ಸೃತಿಂ-ಶ್ರೇಯಃ-ಅಭ್ಯುದಯಸ್ವರ್ಗಮೋಕ್ಷಗಳ, ಸ್ರುತಿಂ-ಸೋರುಕೆಯುಳ್ಳ, ತೇ-ನಿನ್ನ, ಭಕ್ತಿಂ- ಭಜನವನ್ನು, ಉದಸ್ಯ-ಬಿಟ್ಟು, ಯೇ-ಯಾರು, ಕೇವಲಬೋಧಲಬ್ಧಯೇ-ಕೇವಲಬೋಧ-ಜ್ಞಾನವೊಂದರ, ಲಬ್ಧಯೇ- ಲಾಭಕ್ಕೋಸುಗ, ಕ್ಲಿಶ್ಯಂತಿ-ಶ್ರಮಪಡುವರೋ, ತೇಷಾಂ-ಅವರಿಗೆ, ಸ್ಥೂಲತುಷಾವಘಾತಿನಾಂ-ಸ್ಥೂಲತುಷಾ-ದೊಡ್ಡಹೊಟ್ಟನ್ನು (ಜಳ್ಳುಕಾಳನ್ನು) ಅವಘಾತಿನಾಂ-ಕುಟ್ಟುವವರಿಗೆ, ಯಥಾ-ಹೇಗೋ, ತಥಾ-ಹಾಗೆ, ಅಸೌ ಕ್ಲೇಶಲ ಏವ-ಈ ಪ್ರಯಾಸಮಾತ್ರವೇ, ಶಿಷ್ಯತೇ-ಮಿಗುವುದು. ಅನ್ಯತ್-ಬೇರೆಫಲವು, ನ-ಇಲ್ಲ, ‖೪‖ ಭೂಮನ್-ವ್ಯಾಪಕನಾದ, ಅಥವಾ ದೊಡ್ಡವನಾದ, ಅಚ್ಯುತ-ವಿಷ್ಣುವೇ, ಇಹ-ಈ ಲೋಕದಲ್ಲಿ, ಪುರಾ-ಪೂರ್ವಕಾಲದೊಳಗೆ, ಬಹವಃ-ಹಲವರು, ಯೋಗಿನೋಽಪಿ-ಅಷ್ಟಾಂಗ ಯೋಗವುಳ್ಳವರಾದರೂ (ಜ್ಞಾನವಂ ಪಡೆಯಲಾರದೆ) ತ್ವದರ್ಪಿತೇಹಾಃ ಸ್ವಂತಃ-ತ್ವತ್-ನಿನ್ನಲ್ಲಿ, ಅರ್ಪಿತ-ಇಡಲ್ಪಟ್ಟ, ಈಹಾಃ-ಇಚ್ಛೆಯುಳ್ಳವರಾಗಿ, ಕಥೋಪನೀತಯಾ- ಕಥಾ-ಗುಣವರ್ಣನದಿಂದ, ಉಪನೀತಯಾ-ಹತ್ತಿರಕ್ಕೆ ತರಲ್ಪಟ್ಟ, ನಿಜಕರ್ಮಲಬ್ಧಯಾ- ತಮ್ಮ ಪುಣ್ಯದಿಂದ ಹೊಂದಲ್ಪಟ್ಟ, ಭಕ್ತ್ಯೈವ- ಪ್ರೀತಿಸೇವನದಿಂದಲೇ, ತೇ-ನಿನ್ನ, ಪರಾಂ-ಉತ್ಕೃಷ್ಟವಾದ, ಗತಿಂ-ಪದವಿಯನ್ನು, ಅಂಜಃ-ಬೇಗನೆ, ಪ್ರಪೇದಿರೇ-ಪಡೆದರು ‖೫‖ ಭೂಮನ್- ಕೊನೆಯಾದವನೇ! ತಥಾಪಿ-ಹಾಗಾದರೂ, ಅಗುಣಸ್ಯ-ಗುಣರಹಿತನಾದ, ತೇ- ನಿನ್ನ, ಮಹಿಮಾ- ಮಾಹಾತ್ಮ್ಯವು, ಅಮಲಾಂತರಾತ್ಮಭಿಃ-ಅಮಲ-ಶುದ್ಧವಾದ, ಅಂತರಾತ್ಮಭಿಃ-ಅಂತಃಕರಣವುಳ್ಳವರಿಂದ, ಅವಿಕ್ರಿಯಾತ್-ವಿಕಾರವಿಲ್ಲದ್ದರಿಂದಲೂ, ಸ್ವಾನುಭವಾತ್-ಸ್ವಪ್ರಕಾಶದಿಂದಲೂ, ಅರೂಪತಃ-ವಿಷಯಾಕಾರವಿಲ್ಲದ್ದರಿಂದಲೂ, ಅನನ್ಯಬೋಧ್ಯಾತ್ಮತಯಾ- ಇತರವಾಗಿ ತಿಳಿಯಲ್ಪಡತಕ್ಕದ್ದಲ್ಲದ,

---

ದ ಕೃಷ್ಣದೇವನೇ! ಭೋಗಮೋಕ್ಷರೂಪವಾದ ಶ್ರೇಯಸ್ಸನ್ನು ಪ್ರವಾಹವಾಗಿ ಹರಿಯುವಂತೆ ಮಾಡುವ ನಿನ್ನ ಭಕ್ತಿಯೆಂಬುವುದಂ ಬಿಟ್ಟು ಯಾವ ಜನರು ಕೇವಲಾತ್ಮಜ್ಞಾನದ ಸಿದ್ಧಿಗೋಸುಗ ಅತ್ಯಂತ ಪ್ರಯತ್ನಂಗೆಯ್ವರೋ ಆ ಜನರಿಗೆ ಆ ಕ್ಲೇಶವೇ ಫಲವಾಗಿ ಉಳಿಯುವುದೇ ಹೊರತು ಮತ್ತೊಂದು ಫಲವಿಲ್ಲವು. ಅದೆಂತೆನೆ- ಅಲ್ಪಪ್ರಮಾಣವುಳ್ಳ ಧಾನ್ಯವಂ ಬಿಟ್ಟು ಒಳಗೆ ಕಾಳಿಲ್ಲದ ಸ್ಥೂಲಧಾನ್ಯದಂತೆ ತೋರುವ ಜಳ್ಳುಗಳನ್ನು ಯಾರು ಕುಟ್ಟುವರೋ; ಅವರಿಗೆ ಸ್ವಲ್ಪವಾದರೂ ಫಲವುಂಟಾಗಲಾರದು. ಅದರ ಹಾಗೆಯೆ. [ಯಾರು ನಿನ್ನ ಭಕ್ತಿಯಂ ತುಚ್ಛೀಕರಿಸಿ ಕೇವಲ ಜ್ಞಾನಕ್ಕೆ ಪ್ರಯತ್ನವಂ ಮಾಡುವರೋ, ಅವರಿಗೆ ಪ್ರಯಾಸಮಾತ್ರವೇ ಹೊರತು ಫಲವೇನೂ ಉಂಟಾಗಲಾರದು.] ‖೪‖ (ಭಕ್ತಿಯಿಂದಲೇ ಜ್ಞಾನಸಿದ್ಧಿಯುಂಟಾಗುವುದೇ ಹೊರತು ಮತ್ತೊಂದರಿಂದ ಉಂಟಾಗದೆಂಬ ಅರ್ಥದಲ್ಲಿ ಸತ್ಪುರುಷರ ಆಚಾರವಂ ಪ್ರಮಾಣವನ್ನಾಗಿ ತೋರಿಸುತ ನುಡಿಯುವನದೆಂತೆನೆ-) ಎಲೈ, ಪರಿಪೂರ್ಣನಾದ ಸ್ವಾಮಿಯೇ! ಈ ಲೋಕದಲ್ಲಿ ಮಹಾಯೋಗಿಗಳು ಕೂಡ ಪೂರ್ವದಲ್ಲಿ ಅಂತಾ ಅಷ್ಟಾಂಗಯೋಗಗಳಿಂದಲೂ ಜ್ಞಾನವಂ ಪಡೆಯದೆ ಅನಂತರವಲ್ಲಿ ನಿನ್ನಲ್ಲಿಯೇ ಸಮರ್ಪಿಸಲ್ಪಟ್ಟ ಸಮಸ್ತ ಲೌಕಿಕ ವ್ಯಾಪಾರವುಳ್ಳವರಾಗಿ ತಮ್ಮ ಸತ್ಕರ್ಮಗಳಿಂದ ಪಡೆಯಲ್ಪಟ್ಟದ್ದಾಗಿಯೂ, ನಿನ್ನ ಸತ್ಕಥೆಯಿಂದ ನಿನ್ನ ಸಾನ್ನಿಧ್ಯವನ್ನು ಎಬ್ಬಿಸಲ್ಪಟ್ಟದ್ದಾಗಿಯೂ, ಇರುವ ಭಕ್ತಿಯಿಂದಲೇ ಆತ್ಮಸ್ವರೂಪವನ್ನು ತಿಳಿದು- ಅನಾಯಾಸದಿಂದಲೇ ಸರ್ವೋತ್ತಮವಾದ ನಿನ್ನ ಗತಿಯನ್ನು ಪಡೆದರು. ‖೫‖ (ಭಗವಂತನಾದ ನಿನ್ನ ಸಗುಣಸ್ವರೂಪವು ನಿರ್ಗುಣಸ್ವರೂಪವು ಕೂಡ ತಿಳಿಯಲಶಕ್ಯಗಳಾದರೂ ನಿರ್ಗುಣವಾದ ನಿನ್ನ ಸ್ವರೂಪವು ಅತಿಪ್ರಯಾಸದಿಂದ ತಿಳಿಯಲು ಒಂದುವೇಳೆ ಯೋಗ್ಯವಾದೀತು. ನಿನ್ನ ಸಗುಣಸ್ವರೂಪವಾದರೋ ಚಿಂತಿಸಲಯೋಗ್ಯಂಗಳಾದ ಅನಂತಗುಣಗಳುಳ್ಳದ್ದಾದ್ದರಿಂದ ತಿಳಿಯಲಶಕ್ಯವೆಂದು ನಿರೂಪಿಸುವನದೆಂತೆನೆ-) ಎಲೈ, ಪರಿಚ್ಛಿನ್ನನಾದ ಶ್ರೀಕೃಷ್ಣಮೂರ್ತಿಯೇ! ನಿರ್ಗುಣನಾದ ನಿನ್ನ ಮಹಿಮೆಯು ಇಂದ್ರಿಯಗಳನ್ನು ನಿಗ್ರಹಿಸಿರುವ ಮಹಾತ್ಮರಿಂದ ವಿಶೇಷಾಕಾರರಹಿತವಾಗಿಯೂ, ನಿರ್ವಿಷಯ

ವಿಕ್ರಿಯಾತ್ಸ್ವಾನುಭವಾದರೂಪತೋಹ್ಯನನ್ಯಬೋಧ್ಯಾತ್ಮತಯಾನಚಾನ್ಯಥಾ ||೬||ಗುಣಾತ್ಮನಸ್ತೇಽಪಿಗು
ಣಾನ್ವಿಮಾತುಂಹಿತಾವತೀರ್ಣಸ್ಯಕಈಶಿರೇಸ್ಯ | ಕಾಲೇನಯೈರ್ವಾವಿಮಿತಾಸ್ಸುಕಲ್ಪೈರ್ಭೂಪಾಂಸವಃಖೇ
ಮಿಹಿಕಾದ್ಯುಭಾಸಃ||೭|| ತತ್ತೇನುಕಂಪಾಂಸುಸಮೀಕ್ಷಮಾಣೋಭುಂಜಾನಏವಾತ್ಮಕೃತಂವಿಪಾಕಂ | ಹೃ
ದ್ವಾಗ್ವಪುರ್ಭಿರ್ವಿದಧನ್ನಮಸ್ತೇ ಜೀವೇತಯೋಮುಕ್ತಿಪದೇಸದಾಯಭಾಕ್ ||೮||ಪಶ್ಯೇಶಮೇನಾರ್ಯಮನಂತ
ಆದ್ಯೇಪರಾತ್ಮನಿತ್ವಯ್ಯಪಿಮಾಯಿಮಾಯಿನಿ | ಮಾಯಾಂವಿತತ್ಯೇಕ್ಷಿತುಮಾತ್ಮವೈಭವಂಹ್ಯಹಂಕಿಯಾನೈಚ್ಛ

---

ಆತ್ಮವಾಗಿರುವಿಕೆಯಿಂದಲೂ, (ಜ್ಞಾತೃವಿನಸ್ವರೂಪವೇ ಆದ್ದರಿಂದ) ಅನ್ಯಥಾ-ಬೇರೆ ಬಗೆಯಾಗಿ, (ಭಿನ್ನವಾಗಿ) ವಿಬೋದ್ಧುಂ-ತಿಳಿಯುವವಕ್ಕೆ, ನಾರ್ಹತಿ-ಶಕ್ಯವಾಗುವುದಿಲ್ಲ ||೬|| ಸುಕಲ್ಪೈಃ-ಚೆನ್ನಾಗಿ ಸಮರ್ಥರಾದ, ಯೈಃ-ಯಾರಿಂದ, ಕಾಲೇನ-ಬಹುಜನ್ಮಕಾಲದಿಂದ, ಭೂಪಾಂಸವಃ-ಮಣ್ಣಿನರೇಣುಗಳು, ಖೇ-ಅಂತರಿಕ್ಷದಲ್ಲಿ, ಮಿಹಿಕಾ-ಮಂಜು, ದ್ಯುಭಾಸಃ-ನಕ್ಷತ್ರಾದಿಗಳ ಕಾಂತಿಗಳು ಕೂಡಾ, ಯಾಃ-ಎಷ್ಟುಂಟೋ, ಯಾವವೋ, ತಾಃ-ಅವು, ವಿಮಿತಾಃ-ವಿಶೇಷವಾಗಿ ಲೆಕ್ಕಿಸಿ ಅಳೆಯಲ್ಪಟ್ಟಿರುವವೋ, ತೇಽಪಿ-ಅಷ್ಟು ಸಾಮರ್ಥ್ಯವುಳ್ಳ ಅವರೂ ಕೂಡ, ಅಸ್ಯ-ಈ ಪ್ರಪಂಚಕ್ಕೆ, ಹಿತಾವತೀರ್ಣಸ್ಯ-ಪಾಲನಕ್ಕೋಸುಗ ಆವಿರ್ಭವಿಸಿರುವ, ಗುಣಾತ್ಮನಃ-ಗುಣಗಳಿಗೆ ಅಧಿಷ್ಠಾನನಾದ, ತೇ-ನಿನ್ನ, ಗುಣಾನ್-ಅನಂತ ಕಲ್ಯಾಣಗುಣಗಳನ್ನು, ವಿಮಾತುಂ-ವಿಶೇಷವಾಗಿ ಗಣಿಸುವದಕ್ಕೆ, ಕಈಶಿರೇ-ಯಾರುಸಮರ್ಥರಾದವರಂತೆ, (ಅಂತವರು ಯಾರೂಯಿಲ್ಲವು) ||೭|| ತತ್-ಆಕಾರಣದಿಂದ, ಯಃ-ಯಾವಮನುಷ್ಯನು, ತೇ-ನಿನ್ನ ಅನುಕಂಪಾಂ-ದಯೆಯನ್ನು, ಸುಸಮೀಕ್ಷಮಾಣಃ-ಯಾವಾಗ ಉಂಟಾದೀತೆಂದು ಚೆನ್ನಾಗಿನಿರೀಕ್ಷಿಸುತ್ತಿರುವನಾಗಿಯೂ, ಆತ್ಮಕೃತಂ-ತನ್ನಿಂದ ಮಾಡಲ್ಪಟ್ಟ, ವಿಪಾಕಂ-ವಿಶೇಷಪಕ್ವವಾಗಿ ಪ್ರಾರಬ್ಧವೆನಲು ಪರಿಣಮಿಸಿಹ ಪಾಪಪುಣ್ಯಕರ್ಮವನ್ನು, ಭುಂಜಾನಏವ-ಅನುಭವಿಸುವವನೇ ಆಗಿಯೂ, ಹೃದ್ವಾಗ್ವಪುರ್ಭಿಃ-ಮನಸ್ಸಿನಿಂದಲೂ ಮಾತಿನಿಂದಲೂ ಶರೀರದಿಂದಲೂ ಹೀಗೆ ತ್ರಿಕರಣಗಳಿಂದ, ತೇ-ನಿನಗೆ, ನಮಃ-ನಮಸ್ಕಾರವನ್ನು, ವಿದಧತ್-ಮಾಡುವನಾಗಿಯೂ, ಜೀವೇತ-ತಪಃಕ್ಲಿಷ್ಟನಾಗಿ ಬದುಕುವನೋ, ಸಃ-ಅವನು, ಮುಕ್ತಿಪದೇ-ಮೋಕ್ಷಸ್ಥಾನದಲ್ಲಿ, ದಾಯಭಾಕ್-ಬರಬೇಕಿರುವ ಅಂಶವನ್ನು ಹೊಂದುವವನು (ಮುಕ್ತಿಯಲ್ಲಿ ಜೀವನಕ್ಕಿಂತಲೂ ಇತರವು ಅನುಪಯುಕ್ತವೆಂದು ಭಾವವು) ||೮|| ಹೇಈಶ- ಎಲೈನಿಯಾಮಕನೇ, ಮೇ-ನನ್ನ, ಅನಾರ್ಯಂ-ದೌರ್ಜನ್ಯವನ್ನು, ಪಶ್ಯ-ನೋಡು, ಯತ್-ಯಾವಕಾರಣದಿಂದ, ಅಹಂ-ನಾನು, ಅನಂತೇ-ತ್ರಿವಿಧಪರಿಚ್ಛೇದವಿಲ್ಲದ, ಆದ್ಯೇ - ಸರ್ವಪ್ರಪಂಚಕ್ಕೂ, ಉಪಾದಾನಕಾರಣವಾದ, ಮಾಯಿಮಾಯಿನಿ-ಮೋಹಕರಿಗೂ ಮೋಹಕನಾದ, ತ್ವಯ್ಯಪಿ-ನಿನ್ನಲ್ಲಿಯೂ ಕೂಡ, ಮಾಯಾಂ-ಮೋಹಕ ಶಕ್ತಿಯನ್ನು, ವಿತತ್ಯ-ಹರ

---

ವಾಗಿಯೂ, ಆತ್ಮಾಕಾರವಾಗಿಯೂ, ಸಹ ಇರುವ ಅಂತಃಕರಣಸಾಕ್ಷಾತ್ಕಾರದಿಂದ ಸ್ವಪ್ರಕಾಶರೂಪವಾಗಿ ತಿಳಿಯಲು ಯೋಗ್ಯವಾಗುವುದು. ಮತ್ತು ಇದೇ ಅದೆಂದು ವಿಷಯರೂಪದಿಂ ತಿಳಿಯಲು ಯೋಗ್ಯವಾಗಲಾರದು||೬|| ಎಲೈ ಹರಿಯೇ! ಒಂದುವೇಳೆ, ಎಲ್ಲಿ ಅತಿನಿಪುಣರಾದ ಯಾವಪುರುಷರಿಂದಲಾದರೂ ಬಹುಜನ್ಮರೂಪವಾದ ಕಾದಿಂಭೂಮಿಯ ಪರಮಾಣುಗಳುಕೂಡ ವಿಶೇಷವಾಗಿ ಎಣಿಸಲ್ಪಡುವವು. ಅಂತರಿಕ್ಷದಲ್ಲಿರುವ ಹಿಮದ ತುಂತುರುಗಳೂ ಮತ್ತೂ ನಕ್ಷತ್ರಾದಿಗಳ ಕಿರಣಂಗಳ ಪರಮಾಣುಗಳೂ ಸಹ ಎಣಿಸಲ್ಪಡುವವು. ಹಾಗಾದರೂ ಸತ್ವರಜಸ್ತಮೋಗುಣಂಗಳಿಗೆ ನಿಯಾಮಕನಾದ ಈಜಗತ್ತಂ ಪಾಲನಂಗೆಯ್ಯಲು ಬಹುಪ್ರಕಾರವಾಗಿ ಬಹುಗುಣಂಗಳ ಆವಿರ್ಭಾವದಿಂ ಅವತರಿಸಿರುವ ನಿನ್ನ ಅನೇಕಕಲ್ಯಾಣಗುಣಂಗಳಂ ಇವು ಇಷ್ಟೆಂದು ಎಣಿಸಲು ಯಾರೂಸಮರ್ಥರಾಗುವುದಿಲ್ಲ ||೭|| ಆದಕಾರಣದಿಂ ನಿನ್ನಭಕ್ತಿಯೇ! ಮುಕ್ತಿಸಾಧನವೆಂದು ನುಡಿಯುವದಂತೆನೆ- ಎಲೈ, ಸ್ವಾಮಿಯೇ! ಅದರಿಂದ ಯಾವಪುರುಷನು ನಿನ್ನದಯೆಯು ಯಾವಾಗ ಉಂಟಾದೀತೆಂದು ಅದಂ ಬಹುಮಾನಂಗೆಯ್ವನಾಗಿ ತನ್ನಿಂದ ಆರ್ಜಿಸಲ್ಪಟ್ಟ ಕರ್ಮಫಲವ ಆಸಕ್ತನಲ್ಲದೆ ಅನುಭವಿಸುತಲಿರುವವನಾಗಿ ಮನೋವಾಕ್ಕಾಯಕರ್ಮಂಗಳೆಂಬ ಮೂರುಕರಣುಗಳಿಂದಲೂ ನಿನಗೆ ನಮಸ್ಕಾರಂಗೆಯ್ವುತಲಿರುವನಾಗಿ ಮತ್ತು ತಪಸ್ಸುಮೊದಲಾದ್ದರಲ್ಲಿ ಅತ್ಯಂತಕ್ಲೇಶವನ್ನುಪಡದೆ ಯಿರುವವನೂ ಆಗಿ ಜೀವಿಸುವನೋ ಅಂಥಾ ಭಕ್ತನೇ ಮುಕ್ತಿಯಲ್ಲಿ ಭಾಗವಂಪಡೆಯಲು ಯೋಗ್ಯನಾಗುವನು ೮|| [ಈರೀತಿಯಿಂದ ಸ್ತೋತ್ರಂಗೆಯ್ದು ಕ್ಷಮೆ ಗೆಯ್ಯಲೋಸುಗ ಶ್ರೀಕೃಷ್ಣಮೂರ್ತಿಯಂಕುರಿತು ತನ್ನಅಪರಾಧವ ವಿಜ್ಞಾಪನಂ ಗೆಯ್ವನದೆಂತೆನೆ?-] ಎಲೈಜಗದೀಶ್ವರನೇ! ಆದಿಪುರುಷನಾದ, ಅಪರಿಚ್ಛಿನ್ನನಾದ, ಪರಮಾತ್ಮನಾದ, ಮಾಯಾಶಕ್ತಿಗಳುಳ್ಳ, ಮಹಾತ್ಮರಿಗೂ ಮೋಹಕನಾದ, ನಿನ್ನನ್ನೂ ನಾನು ನನ್ನಮಾ

ಮಿವಾರ್ಚಿರಗ್ನೌ ॥೯॥ ಅತಃ ಕ್ಷಮಸ್ವಾಚ್ಯುತಮೇರಜೋಭುವೋಹ್ಯಜಾನತಸ್ತ್ವತ್ಪೃಥಗೀಶಮಾನಿನಃ । ಅ
ಜಾವಲೇಪಾಂಧತಮೋಂಧಚಕ್ಷುಷಏಷೋನುಕಂಪ್ಯೋಮಯಿನಾಥವಾನಿತಿ ॥೧೦॥ ಕ್ವಾಹಂತಮೋಮಹದಹಂಖ
ಚರಾಗ್ನಿವಾರ್ಭೂಸಂವೇಷ್ಟಿತಾಂಡಘಟಸಪ್ತವಿತಸ್ತಿಕಾಯಃ । ಕ್ವೇದೃಗ್ವಿಧಾವಿಗಣಿತಾಂಡಪರಾಣುಚರ್ಯಾ
ವಾತಾಧ್ವರೋಮವಿವರಸ್ಯಚತೇಮಹಿತ್ವಂ ॥೧೧॥ ಉತ್ಕ್ಷೇಪಣಂಗರ್ಭಗತಸ್ಯಪಾದಯೋಃಕಿಂಕಲ್ಪತೇಮಾತುರ

---

ಡಿಸಿ, ಆತ್ಮವೈಭವಂ-ನಿನ್ನ ಐಶ್ವರ್ಯವನ್ನು, ಈಕ್ಷಿತುಂ-ನೋಡುವುದಕ್ಕೆ ಐಚ್ಛಂ-ಬಯಸಿದೆನೋ, ತತ್-ಆಕಾರಣದಿಂದ, ಅಹಂ-ನಾನು ಅಗ್ನೌ-ಬೆಂಕಿಯಲ್ಲಿ, ಅರ್ಚಿರಿವ-ಉರಿಯಹಾಗೆ, ಕಿಯಾನ್-ಎಷ್ಟರವನಾಗಿರುವೆನು. ॥೯॥ ಹೇಅಚ್ಯುತ-ಎಲೈಚ್ಯುತಿಯಿಲ್ಲದ ಭಗವಂತನೇ ಅತಃ-ಆಕಾರಣದ ದೆಸೆಯಿಂದ, ರಜೋಭುವಃ-ರಜೋಗುಣದಿಂದ ಉಟ್ಟಿದವನಾದ್ದರಿಂದಲೇ, ಅಜಾನತಃ-ಅರಿಯದೇಯಿರುವ,ತ್ವತ್ಪೃಥಕ್-ನಿನಗಿಂತಲೂ ಬೇರೆಯಾಗಿ, ಈಶಮಾನಿನಃ-ನಾನು ಒಡೆಯನೆಂಬ ಅಭಿಮಾನವುಳ್ಳ, ಅಜಾವಲೇಪಾಂಧತಮೋಂಧಚಕ್ಷುಷಃ-ಅಜಾ-ವಲೇಪ-ನಾನು ಸೃಷ್ಟಿಕರ್ತನಾದ ಬ್ರಹ್ಮನೆಂಬುವಗರ್ವವೆಂಬ,ಅಂಧತಮಃ-ಕುರುಡುಕತ್ತಲೆಯಿಂದ, ಅಂಧಚಕ್ಷುಷಃ- ಕುರುಡಾದಕಣ್ಣುಳ್ಳ ನನ್ನ ವಿಷಯದಲ್ಲಿ, "ಮಯಿ-ನಾನು ನಾಥನಾಗಿರುವಲ್ಲಿ, ಏಷಃ-ಇವನು, ನಾಥವಾನ್-ನಾಧನುಳ್ಳವನು, (ನಾನೇ ಪ್ರಭುವಾದ್ದರಿಂದ ಇವನೇ ನನ್ನ ಭೃತ್ಯನು)" ಇತಿ-ಹೀಗೆಂದು, ಅನುಕಂಪ್ಯಃ-ದಯೆಗೆಯ್ಯಲ್ಪಡತಕ್ಕವನಾಗಿರುವೆನು ॥೧೦॥ ತಮೋಮಹದಹಂ- ... ... ಕಾಯಃ--ತಮಃ-ಮೂಲಪ್ರಕೃತಿ ಯಿಂದಲೂ ಮಹತ್- ಮಹತ್ತತ್ವದಿಂದಲೂ, ಅಹಂ-ಅಹಂಕಾರದಿಂದಲೂ, ಖಂ-ಆಕಾಶದಿಂದಲೂ ಚರ-ವಾಯುವಿನಿಂದಲೂ, ಅಗ್ನಿ-ತೇಜಸ್ಸಿನಿಂದಲೂ, ವಾಃ-ಜಲದಿಂದಲೂ, ಭೂ-ಭೂಮಿಯಿಂದಲೂ, (ಅವ್ಯಕ್ತಾದಷ್ಟಾವರಣಗಳಿಂದ) ಸಂವೇಷ್ಟಿತ-ಸುತ್ತಲ್ಪಟ್ಟ, ಅಂಡಘಟ-ಬ್ರಹ್ಮಾಂಡವಮಡಿಕೆ ಯೆಂಬ, ಸಪ್ತವಿತಸ್ತಿ- ನನ್ನ ಪರಿಮಾಣದಿಂದ ಏಳುಗೇಣು ಅಳತೆಯುಳ್ಳ, ಕಾಯಃ-ಬ್ರಹ್ಮಾಂಡ ವಿಗ್ರಹನಾದ, ಅಹಂ-ನಾನು, ಕ್ವ-ಎಲ್ಲಿ, ಈದೃಗ್ವಿಧಾ - - - - ವಿವರಸ್ಯ-ಈದೃಗ್ವಿಧಾ-ಹೀಗೆಯೇ, ಅಷ್ಟಾವರಣಗಳಿಂದ ಸುತ್ತಲ್ಪಟ್ಟವಾದ, ಅವಿಗಣಿತ-ವಿಶೇಷವಾಗಿ ಲೆಕ್ಕಿಸಲ್ಪಡದ, (ಅನೇಕಕೋಟಿ)ಅಂಡ-ಬ್ರಹ್ಮಾಂಡಗಳೆಂಬ, ಪರಾಣು- ಪರಮಾಣುಗಳ, ಚರ್ಯಾ-ತಿರುಗಾಟಕ್ಕೆ, ವಾತಾಧ್ವ-ಗವಾಕ್ಷಗಳಾಗಿರುವ, ರೋಮವಿವರಸ್ಯ, ಕೂದಲಕುಳಿಗಳುಳ್ಳ, ತೇ-ನಿನ್ನ, ಮಹಿತ್ವಂಚ-ದೊಡ್ಡಸ್ತಿಯೂ ಕೂಡ, ಕ್ವ-ಎಲ್ಲಿ, (ನನಗಿಂತಲೂಬಹಳ ದೊಡ್ಡವನು, ಆದ್ದರಿಂದ ಅತಿತುಚ್ಛನಾದ ನಾನು ನಿನ್ನಿಂದ ಕರುಣಿಸಲ್ಪಡತಕ್ಕವನಾಗಿರುವೆನು )॥೧೧॥ ಹೇಅಧೋಕ್ಷಜ-ಎಲೈ ಇಂದ್ರಿಯ ದೋಷಗಳನ್ನು ತಿರಸ್ಕರಿಸಿದ ವಿಷ್ಣುವೇ, ಮಾತುಃ-ತಾಯಿಯ, ಗರ್ಭಗತಸ್ಯ-ಬಸುರಲ್ಲಿರುವ ಮಗುವಿನ, ಪಾದಯೋಃ- ಕಾಲುಗಳ, ಉತ್ಕ್ಷೇಪಣಂ-ಹಾರಾಡಿಸುವಕರ್ಮವು, ಆಗಸೇ-ಅಪ

---

ಯೆಯುಂ ಪ್ರಸರಣಾಂಗೆಯ್ದು ನಿನ್ನ ಐಶ್ವರ್ಯಮ ನೋಡಲಿಚ್ಛೈಸಿದೆನೆಂಬುದು ಯಾವುದುಂಟೋ ಅಂತಾ ನನ ದುಷ್ಟವ್ಯಾಪಾರವಂ ನೋಡು. ಯಾವರೀತಿಯಿಂ ಅಗ್ನಿಯ ದೆಸೆಯಿಂದುದ್ಭವಿಸಿದ ಜ್ವಾಲೆಯು ಅಗ್ನಿಯಲ್ಲಿ ತನ್ನ ವ್ಯಾಪಾರವಂ ಸ್ವಲ್ಪ ವ್ಯಾಪಾರವಂ ಸ್ವಲ್ಪವನ್ನಾದರೂ ಮಾಡಲು ಸಮರ್ಥವಲ್ಲವೋ ಅದೇ ರೀತಿಯಿಂದ ನಿನ್ನಲ್ಲಿ ಈಪ್ರಕಾರವಾಗಿ ಇಂಥಾ ದೌರ್ಜನ್ಯಮಂ ಮಾಡಲು ನಾನು ಎಷ್ಟು ಮಾತ್ರದವನು? ನಿನ್ನಿಂದ ಆಗತಕ್ಕದ್ದೇ ನಿದೆ ॥೯॥ ಎಲೈಅಚ್ಯುತನೆ! ರಜೋಗುಣದದೆಸೆಯಿಂದುತ್ಪನ್ನನಾದ ಕಾರಣದಿಂ ಅಜ್ಞಾನಾದ, ಮತ್ತು ನಾನೇ ಸೃಷ್ಟಿಕರ್ತನೆಂಬ ಗಾಢಾಂಧಕಾರದಂಥಾ ಮದದಿಂದ ಕುರುಡಾದನೇತ್ರಗಳುಳ್ಳವನಾದ ಕಾರಣದಿಂ ಸರ್ವೇಶ್ವರನಾದ ನಿನ್ನ ಹೊರತು ಪ್ರತ್ಯೇಕವಾಗಿ ನಾನೇಜಗದೀಶ್ವರನೆಂಬ ಅಹಂಕಾರವುಳ್ಳ, ಇಂತಾನನ್ನ ಅಪರಾಧವಂ "ಇವನು ಅನ್ಯತ್ರಪ್ರಭುವಾಗಿರುವನಾದರೂ ಸರ್ವರಿಗೂ ಸ್ವಾಮಿಯಾಗಿರುವ ನಾನುಯಿರುತಿರಲು ಇವನು ನನ್ನಭೃತ್ಯನೇಸರಿ" ಎಂದು ದಯೆಗೆಯ್ಯಲು ನನ್ನಂ ಯೋಗ್ಯನೆಂದುತಿಳಿದು ಕ್ಷಮಿಸುವನಾಗು ॥೧೦॥ (ನೀನುಬ್ರಹ್ಮಾಂಡರೂಪವಾದ ದೇಹವುಳ್ಳವನಾದ್ದರಿಂದ ಈಶ್ವರನೂ ಎನ್ನುವೆಯೋ?] ಎಲೈಸ್ವಾಮಿಯೇ! ಪ್ರಕೃತಿ, ಮಹತ್ತತ್ವ, ಅಹಂಕಾರ, ಆಕಾಶ, ವಾಯು, ಅಗ್ನಿ, ಜಲ, ಪೃಥ್ವಿ, ಇವುಗಳೆಂಬ ಆವರಣಗಳಿಂ ಸುತ್ತಲ್ಪಟ್ಟಿರುವ ಒಂದುಬ್ರಹ್ಮಾಂಡಘಟದ ನನ್ನ ಪರಿಮಾಣದಿಂದ ೭ಗೇಣುದ್ದವಾದದೇಹವುಳ್ಳ ಈನಾನೆಲ್ಲಿ? ಇದೇಪ್ರಕಾರವಾಗಿ ಅಪರಿಮಿತಂಗಳಾದ ಬ್ರಹ್ಮಾಂಡಂಗಳೆಂಬ ಪರಮಾಣುಗಳ ಪರಿಭ್ರಮಣಾರ್ಥವಾಗಿ ರಚಿಸಲ್ಪಟ್ಟ ಗವಾಕ್ಷಂಗಳಂತಿರುವ ರೋಮಕೂಪಂಗಳುಳ್ಳ ನಿನ್ನ ಮಹಿಮೆಯೆಲ್ಲಿ? ಆದ್ದರಿಂದ ಅತಿತುಚ್ಛನಾದನಾನು ನಿನ್ನಿಂದ ದಯೆಗೆಯ್ಯಲ್ಪಡಲು ಯೋಗ್ಯನು ॥೧೧॥ ಎಲೈಕೃಷ್ಣದೇವನೇ? ಲೋಕದಲ್ಲಿಅಸ್ತಿನಾಸ್ತಿಯೆಂಬ ಭಾವಭಾವ ಬೋಧಕಂಗಳಾದ ಶಬ್ದಂಗಳಿಂ ಅಥವಾ-ಸ್ಥೂಲಸೂಕ್ಷ್ಮಕಾರ್ಯಕರಣಂಗಳೆಂಬ ಶಬ್ದಗಳಿಂ

ಧೋಕ್ಷಜಾಗಸೆ । ಕಿಮಸ್ತಿನಾಸ್ತಿವ್ಯಪದೇಶಭೂಷಿತಂತವಾಸ್ತಿಕುಕ್ಷೇಃಕಿಯದಪ್ಯನಂತಃ ‖ ೧೦ ‖ ಜಗತ್ತ್ರಯಾಂತೋದಧಿಸಂಪ್ಲವೋದೇನಾರಾಯಣಸ್ಯೋದರನಾಭಿನಾಳಾತ । ವಿನಿರ್ಗತೋಜಸ್ತ್ವಿತಿವಾಙ್ನವೈಮೃಷಾಕಿಂತ್ವೀಶ್ವರತ್ವನ್ನವಿನಿರ್ಗತೋಸ್ಮಿ ‖ ೧೧ ‖ ನಾರಾಯಣಸ್ತ್ವಂನಹಿಸರ್ವದೇಹಿನಾಮಾತ್ಮಾಸ್ಯಧೀಶೋಖಿಲಲೋಕಸಾಕ್ಷೀ । ನಾರಾಯಣೋಂಗಂನರಭೂಜಲಾಯನಾತ್ತಚ್ಚಾಪಿಸತ್ಯಂನತವೈವಮಾಯಾ

ರಾಧಕೆನ್ನಿಸುಗ, ಕಲ್ಪತೇಃಕಿಂ-ಆಗುವುದೊ ಏನು, ಅಸ್ತಿನಾಸ್ತಿವ್ಯಪದೇಶಭೂಷಿತಂ- ಅಸ್ತಿ-ಉಂಟು, ನಾಸ್ತಿ-ಯಿಲ್ಲ, ಎಂಬ, ವ್ಯಪದೇಶ-ನೆವದಿಂದ, ಭೂಷಿತಂ-ಅಲಂಕೃತವಾದ, ಕಿಯದಪಿ - ಕೊಂಚವಾದರೂ, ತವ-ನಿನ್ನ, ಕುಕ್ಷೇಃ-ಹೊಟ್ಟೆಯ, ಅನಂತಃ ಹೊರಗೆ, ಅಸ್ತಿಕಿಂ-ಉಂಟೋ ಏನು; (ಇಲ್ಲ) ‖೧೦‖ ಜಗ-. . . . . . ಪ್ಲವೋದೇ-ಜಗತ್ತ್ರಯ-ಮೂರುಲೋಕದ, ಅಂತ-ನಾಶಕಾಲದಲ್ಲಿ, ಉದಧಿ-ಸಮುದ್ರಗಳ, ಸಂಪ್ಲವ-ಸೇರಿಕೆಯ, ಉದೇ-ನೀರಿನಲ್ಲಿ, ನಾರಾಯಣಸ್ಯ-ನಾರಾಯಣನ, ನೀರಿನ ಮೇಲೆ ಮಲಗಿರುವ ವಿಷ್ಣುವಿನ, ಉದರನಾಭಿನಾಳಾತ್-ಉದರ-ಹೊಟ್ಟೆಯಲ್ಲಿ, ನಾಭಿ-ಹೊಕ್ಕಳಿನ, ನಾಳಾತ್- ದಂಟಿನದೆಸೆಯಿಂದ, ಅಜಃ-ಬ್ರಹ್ಮನು, ವಿನಿರ್ಗತಃ-ಹೊರಗೆಬಂದವನು ಇತಿವಾಕ್ತು-ಇಂತೆಂಬ ಮಾತಾದರೋ, ನಮೃಷಾ-ಸುಳ್ಳಲ್ಲವು, ವೈ- ಪ್ರಸಿದ್ಧವು, ಕಿಂತು-ಮತ್ತೇನಂದರೆ, ಈಶ್ವರ-ನಿಯಾಮಕನೇ! ತ್ವತ್-ನಿನ್ನ ದೆಸೆಯಿಂದ, ಅಹಂ-ನಾನು, ವಿನಿರ್ಗತಃ ಹುಟ್ಟಿದವನು, ನಾಸ್ಮಿಕಿಂ- ಆಗೆನೋ ಏನು, (ನಿನ್ನಿಂದಲೇ ಹುಟ್ಟಿದವನಾಗಿರುವೆನು) ‖೧೧‖ ಸರ್ವದೇಹಿನಾಂ-ಸಕಲ ಪ್ರಾಣಿಗಳಿಗೂ, ಆತ್ಮಾ-ಚೈತನ್ಯವು, ಅಸಿ-ಆಗಿರುವಿ. ಅಖಿಲಲೋಕಸಾಕ್ಷೀ-ಅಖಿಲಲೋಕ-ಎಲ್ಲ ಲೋಕಗಳನ್ನೂ, ಸಾಕ್ಷೀ-ಪ್ರತ್ಯಕ್ಷವಾಗಿ ಕಾಣುವವನು, ಅಸಿ-ಆಗಿರುವಿ. ಹಾಗಾದರೆ,ತ್ವಂ-ನೀನು, ನಾರಾಯಣಃ-ನಾರಾಯಣನು,ನಹಿ-ಅಲ್ಲವೋ,(ಅಹುದು)ಅಧೀಶ-ಒಡೆಯನೇ, ನರಭೂಜಲಾಯನಾತ್-ನರಭೂ-ನರನಿಂದಹುಟ್ಟಿದ ಚತುರ್ವಿಂಶತಿತತ್ತ್ವಗಳೂ, ಜಲ-ನೀರೂ ಎಂಬ, ಅಯನಾತ್-ಆಶ್ರಯದಿಂದ, ನಾರಾಯಣಃ-ನಾರಾಯಣನು, ತವ-ನಿನ್ನ, ಅಂಗಮೇವ-ಮೂರ್ತಿಯೇ ಆಗಿರುವನು ತಚ್ಚಾಪಿ-ಪರಿಚ್ಛಿನ್ನವಾದ ಜಲವೇ ಆಧಾರವಾಗಿವುಳ್ಳ,ಆನಾರಾಯಣ ಶರೀರವೂಕೂಡ, ಸತ್ಯಂ- ದಿಟವಾದ್ದು,ನ-ಅಲ್ಲವು, ಕಿಂತು-ಮತ್ತೇನೆಂದರೆ, ತವ-ನಿನ್ನ, ಮಾಯೈವ- ಸ್ವರೂಪಾಜ್ಞಾನದಿಂದಲೇ ಕಲ್ಪಿತವಾದ್ದು. (ಅಪರಿಚ್ಛಿನ್ನವಾದ್ದರಿಂದ ಪರಿಚ್ಛಿನ್ನವನ್ನು

ದಾದರೂ' ಹೇಳಲ್ಪಡುವ ಸಮಸ್ತವಾದ ವಸ್ತುವು-ನಿನ್ನ ಹೊಟ್ಟೆಗಿಂತಲೂ ಹೊರಗೆ ಕೊಂಚವಾದರೂ ಇಲ್ಲದುದರಿಂದ ಬಸುರಲ್ಲಿ ಹೊತ್ತಿರುವಮಗುವಿನ ಪಾದಪ್ರಹಾರಗಳು ತಾಯಿಗೇನು ಅಪರಾಧವಾಗುವುದಿಲ್ಲವೋ' ಹಾಗೆ ನನ್ನ ಅಪರಾಧವನ್ನು ಕ್ಷಮಿಸುವವನು ನೀನಾಗಬೇಕು. [ನನ್ನನ್ನೂ ಪ್ರಪಂಚವನ್ನೂ ಹೊಟ್ಟೆಯಲ್ಲಿರಿಸಿ ಕೊಂಡಿರುವ ನೀನು ತಾಯಿಯು ಹಾಗೆ ನನ್ನನ್ನು ರಕ್ಷಿಸು.] ‖೧೦‖ ಮತ್ತು ಸ್ವರ್ಗಮರ್ತ್ಯಪಾತಾಳಂಗಳೆಂಬ ಮೂರುಲೋಕಂಗಳ ಪ್ರಳಯಕಾಲದಲ್ಲಿ ಪರಸ್ಪರವಾಗಿ ಕೂಡಿಯಿರುವ ಸಮಸ್ತಸಮುದ್ರಗಳ ಮಹಾಜಲದಲ್ಲಿ ಶ್ರೀನಾರಾಯಣನ ಉದರದಲ್ಲಿರುವ ನಾಭೀಪದ್ಮದದೆಸೆಯಿಂದ ಬ್ರಹ್ಮನುಹುಟ್ಟಿದನೆಂಬ ಲೋಕವಾರ್ತೆಯು ಸುಳ್ಳಾಗಲಾರದು. ಹಾಗಾದರೂ- ಎಲೈ, ಪರಮೇಶ್ವರನೆ! ನಾನು ನಿನ್ನದೆಸೆಯಿಂದಲೇ ಹುಟ್ಟಿದವನಾಗಿರುವೆನು. ‖೧೧‖ ( ನೀನು ನಾರಾಯಣನಿಗೆ ಪುತ್ರನಾದರೆ ನನಗೇನು, ಎಂದಲ್ಲಿ ಆನಾರಾಯಣನೇ ನೀನೆಂದು ಸಾಧಿಸುವನು- ಅದೆಂತೆನೆ-)ಎಲೈ, ಹರಿಯೇ! ನಾರವೆಂಬಶಬ್ದಕ್ಕೆ ಅರ್ಥವಾದ ಜೀವಸಮೂಹವೇ ಆಶ್ರಯವಾಗಿ ಉಳ್ಳವನಾಗಿ ಇರುವೆ. ಅನ್ನು ಸಮಸ್ತಪ್ರಾಣಿಗಳಿಗೂ ಆತ್ಮನಾದುದರಿಂದ ನೀನೇ ನಾರಾಯಣನಲ್ಲವೆ, ಮತ್ತು ನಾರಶಬ್ದಾರ್ಥವಾದ ಜೀವಸಮೂಹಕ್ಕೆ ನಿನ್ನದೆಸೆಯಿಂದಲೇ ಪ್ರವೃತ್ತಿಯುಂಟಾಗುತ್ತಿದೆಯಾಗಿ ಅದಕ್ಕೆ ಪ್ರವರ್ತಕನಾದ್ದರಿಂದಲೂ ನೀನೇ ನಾರಾಯಣನಲ್ಲವೆ, ನಾರಶಬ್ದಾರ್ಥವಾದ ಸರ್ವಜೀವಸಮೂಹವ ತಿಳಿಯುತಲಿದ್ದೀಯೆ. ಸಮಸ್ತಲೋಕಂಗಳಂ ಸಾಕ್ಷಿರೂಪದಿಂದ ನೋಡುವಿ- ಆದುದರಿಂದಲೂ ನೀನೇ ನಾರಾಯಣನಲ್ಲವೆ, (ನಾರಾಯಣಶಬ್ದದ ಸ್ವರೂಪ ವಿಚಾರದಲ್ಲಿ ನಾನೇ ನಾರಾಯಣಶಬ್ದಕ್ಕೆ ಅರ್ಥವೆಂದು ಕಲ್ಪಿಸಬಹುದಾಗಿದ್ದರೂ ಆನಾರಾಯಣ ಶಬ್ದಕ್ಕೆಪ್ರಸಿದ್ಧವಾದ ಅರ್ಥವು ಪ್ರತ್ಯೇಕವಾಗಿದೆಯೆಂದಲ್ಲಿ ಅದೂ ನೀನೇ ಸರಿಯೆಂದುಹೇಳುವನು-) ಎಲೈ, ಸ್ವಾಮಿಯೇ! ಎಲ್ಲವೂ ನೀರಿನಿಂದ ಹುಟ್ಟಿದವಾದಕಾರಣದಿಂದ ನಾರ ಶಬ್ದಾರ್ಥಂಗಳಾದ ಜಲಗಳೇ ಪೂರ್ವದೊಳಗೆ ಆಶ್ರಯವಾಗಿ ಉಳ್ಳವನಾಗಿ ನಾರಾಯಣನೆಂದು

ಯಾ ‖ ೧೪ ‖ ತಚ್ಚೇಜ್ಜಲಸ್ಥಂತವಸಜ್ಜಗದ್ವಪುಃಕಿಂಮೇನದೃಷ್ಟಂಭಗವಂಸ್ತದೈವ ‖ ಕಿಂವಾಸುದೃ
ಷ್ಟಂಹೃದಿಮೇತದೈವಕಿಂನೋಸಪದ್ಯೇವಪುನರ್ವ್ಯದರ್ಶಿ ‖೧೫‖ ಅತ್ರೈವಮಾಯಾದಮನಾವತಾರೇಹ್ಯಸ್ಯಪ್ರಪಂ
ಚಸ್ಯಬಹಿಃಸ್ಫುಟಸ್ಯ । ಕೃತ್ಸ್ನಸ್ಯಚಾಂತರ್ಜಠರೇಜನನ್ಯಾಮಾಯಾತ್ವಮೇವಪ್ರಕಟೀಕೃತಂತೇ ‖೧೬‖ ಯ
ಸ್ಯಕುಕ್ಷಾವಿದಂಸರ್ವಂಸಾತ್ಮಂಭಾತಿಯಥಾತಥಾ । ತತ್ತ್ವಯ್ಯಪೀಹತತ್ಸರ್ವಂಕಿಮಿದಂಮಾಯಯಾವಿ

---

ಆಶ್ರಯಿಸಿ ಇರುವುದಲ್ಲವೆಂಬ ಭಾವವು ‖೧೪‖ ಹೇಭಗವನ್-ಎಲೈ ಅಚಿಂತ್ಯೈಶ್ವರ್ಯನೇ, ತವ-ನಿನ್ನ, ತತ್-ಆ, ಜಗದ್ವಪುಃ-ಜಗದಾಶ್ರಯವಾದ ನಾರಾಯಣ ಶರೀರವು, ಜಲಸ್ಥಮೇವ-ನೀರಲ್ಲಿರುವುದೇ, ಸಚ್ಚೇತ್-ಸತ್ಯವಾದರೆ, ತದೈವ-ಆಗಲೇ, ಮೇ-ನನ್ನಿಂದ, ಕಿಂನದೃಷ್ಟಂ-ಏಕೆ ನೋಡಲ್ಪಡಲಿಲ್ಲ. ಹೃದಿ-ಹೃದಯದಲ್ಲಿ,ಕಿಂವಾ-ಏಕತಾನೆ, ಸುದೃಷ್ಟಂ-ಚನ್ನಾಗಿ ನೋಡಲ್ಪಟ್ಟದ್ದಾಯಿತು, ತದೈವ-ಆಗಲೇ, ಮೇ-ನನ್ನಿಂದ, ಕಿಂನೋ-ಯಾಕೆ ನೋಡಲ್ಪಡಲಿಲ್ಲ, ಪುನಃ-ಮರಳಿಯು, ಸಪದ್ಯೇವ-ಈಗಲೇ, ಕಿಂವ್ಯದರ್ಶಿ-ಏನು ತೋರಿಸಲ್ಪಟ್ಟಿತು, (ಆದ್ದರಿಂದ ಅದೂ ಮಾಯೆಯೇ)‖೧೫‖ ಹೇಮಾಯಾದಮನ-ಎಲೈ, ಮಾಯೆಯನ್ನು ನಿಗ್ರಹಿಸುವ ವಿಷ್ಣುವೇ, ಅತ್ರೈವಾವತಾರೇ-ಈ ಕೃಷ್ಣಾವತಾರದಲ್ಲಿಯೇ, ಬಹಿಃ-ಹೊರಗೆ, ಸ್ಫುಟಸ್ಯ-ವ್ಯಕ್ತವಾಗಿ ಕಾಣಿಸುತಲಿರುವ, ಕೃತ್ಸ್ನಸ್ಯ-ಸಮಸ್ತವಾದ, ಅಸ್ಯಪ್ರಪಂಚಸ್ಯ-ಈಜಗತ್ತಿಗೆ, ಜನನ್ಯಾಃ-ತಾಯಿಯಾದ ಯಶೋದೆಯ, ಅಂತರ್ಜಠರೇ-ಹೊಟ್ಟೆಯೊಳಗೆ, ಮಾಯಾತ್ವಮೇವ-ಸ್ವರೂಪದ ಅಜ್ಞಾನದಿಂದ ಕಲ್ಪಿತವಾದ ತೋರ್ಕೆಯೇ, ತೇ-ನಿನ್ನಿಂದ, ಪ್ರಕಟೀಕೃತಂ-ವ್ಯಕ್ತಗೊಳಿಸಲ್ಪಟ್ಟಿತು.‖೧೬‖ ಯಸ್ಯ-ಯಾವ ನಿನ್ನ, ಕುಕ್ಷೌ-ಬಸುರಿನಲ್ಲಿ, ಇದಂಸರ್ವಂ-ಈ ಜಗತ್ತೆಲ್ಲವೂ, ಯಥಾಭಾತಿ-ಹೇಗೆ ತೋರುವುದೋ, ಇಹಾಪಿ-ಹೊರಗೂ ಕೂಡ, ತತ್ಸರ್ವಂ-

---

ಪ್ರಸಿದ್ಧನಾದ ಆಪುರುಷನೂ ಕೂಡ ನಿನ್ನ ಮೂರ್ತಿಯೇ ಅಲ್ಲವೆ? ("ಅಪರಿಚ್ಛಿನ್ನವಾದ ನನ್ನ ಮೂರ್ತಿಯು ಪೂರ್ವದಲ್ಲಿ ಎಂತು ಮಹಾಜಲವ ನಾಶ್ರಯಿಸಿ ಕೊಂಡಿರುವದು?" ಎಂದಲ್ಲಿ ಹೇಳುವನು-) ಎಲೈ, ಈಶ್ವರನೇ! ಆನಾರಾಯಣನು ಜಲವನಾಶ್ರಯಿಸಿರುವದು ಸಹ ನಿನ್ನ ಮಾಯೆಯಿಂದಲೇ ಹೊರತು ಸತ್ಯವಲ್ಲವು. ‖೧೪‖ (ಅಂತಪ್ಪ ಅಪರಿಚ್ಛಿನ್ನತ್ವವನ್ನೇ ಪ್ರತಿಪಾದಿಸುವನು-)ಎಲೈ, ಅಚಿಂತ್ಯೈಶ್ವರ್ಯನಾದ ಶ್ರೀಕೃಷ್ಣನೇ! ಜನರಿಗೆ ಆಶ್ರಯಭೂತವಾದ ನಿನ್ನ ಆ ದೇಹವು ಜಲದಲ್ಲಿರುವುದೆಂಬ ಅರ್ಥವೇ ಸತ್ಯವಾದುದಾದರೆ ಪ್ರಳಯೋದಕದಲ್ಲಿರುವ ನಿನ್ನ ನಾಭೀಕಮಲದಲ್ಲಿ ವಾಸಂಗೆಯ್ದನಾನು ಆಸಮಯದಲ್ಲಿ ಆ ಕಮಲನಾಳಮಾರ್ಗದಿಂದ ಜಲದೊಳಗೆ ಪ್ರವೇಶಂಗೆಯ್ದು ನೂರುಸಂವತ್ಸರಗಳವರೆಗೂ ಅರಸಿದವನಾದರೂ ಜಲದಲ್ಲಿ ಯಾವಕಾರಣದಿಂದ ನಿನ್ನದೇಹವು ನನ್ನಿಂದ ಕಾಣಲ್ಪಡಲಿಲ್ಲ, ಆದರೆ ಹೊರಗೆಕಾಣಲ್ಪಟ್ಟ ದೇಹವು ಸತ್ಯವಲ್ಲ- ಒಳಗೆ ಅಂತಃಕರಣದಿಂ ಕಾಣಲ್ಪಡಲು ಯೋಗ್ಯವಾದ ದೇಹವೇ ಸತ್ಯವೆಂದೀಯೋ, ಹಾಗಾದರೆ ಆಗ ಯಾವಕಾರಣದಿಂದ ಹೃದಯದಲ್ಲಿಯೂ ನನ್ನಿಂದ ಆ ದೇಹವು ಕಾಣಲ್ಪಡಲಿಲ್ಲ, ಅನಂತರದಲ್ಲಿ ಆಜಲದದೆಸೆಯಿಂದ ಹೊರಗೆ ಬಂದು ಪುನಃ ಸ್ವಸ್ಥಾನದಲ್ಲಿರುವ ನನ್ನಿಂದ ನೂರುಸಂವತ್ಸರಗಳವರೆಗೂ ತಪಸ್ಸುಮಾಡಲ್ಪಡುತ್ತಿರುವಲ್ಲಿ, ಆಗಲೇ ಹೃದಯದೊಳಗೆ ಆದೇಹವು ಏನು ಕಾರಣದಿಂದ ಚನ್ನಾಗಿ ಕಾಣಲ್ಪಟ್ಟಿತು, ಮತ್ತು ಆಗಲೆ ಹೃದಯದಲ್ಲಿಯೂ ಕೂಡ ನಿನ್ನದೇಹವು ಯಾವಕಾರಣದಿಂದ ಕಾಣಲ್ಪಡಲಿಲ್ಲವೋ ಆಕಾರಣದಿಂದ ಅದೂ ನಿನ್ನ ಮಾಯೆಯೇಸರಿ. ಆದ್ದರಿಂದ ಆನಿನ್ನ ನಾರಾಯಣರೂಪಕ್ಕೆ ದೇಶವಿಶೇಷದ ಪರಿಚ್ಛೇದವೂ ಸತ್ಯವಾಗಲಾರದು. ‖೧೫‖ ಎಲೈ, ಮಾಯಾಪರಿಹಾರಕನಾದ ಶ್ರೀವಾಸುದೇವನೇ! ನಿನ್ನ ಈ ಅವತಾರದಲ್ಲಿಯೇ ಸಮಸ್ತವಾದ ಈ ಪ್ರಪಂಚವು ಹೊರಗೆ ಪ್ರಕಟವಾಗಿರುವದಾದರೂ, ನಿನ್ನ ಉದರಮಧ್ಯದಲ್ಲಿಯೇ ಅಂತಾಪ್ರಪಂಚವ ತಾಯಿಯಾದ ಯಶೋದಾದೇವಿಗೆ ತೋರಿಸಿದ್ದರಿಂದ ನಿನ್ನಿಂದಲೇ ಈ ಪ್ರಪಂಚವು ಮಾಯಾಮಯವೆಂದು ಪ್ರಕಟಂಗೆಯ್ಯಲ್ಪಟ್ಟಿತು. ‖ ೧೬ ‖ (ಹೊರಗೆ ಸತ್ಯವಾಗಿರುವ ಪ್ರಪಂಚವೇ ನನ್ನ ಉದರಮಧ್ಯದಲ್ಲಿ ಪ್ರತಿಬಿಂಬರೂಪದಿಂದ ತೋರುವುದೇ ಹೊರತು ಸರ್ವಪ್ರಕಾರದಲ್ಲಿಯೂ ಮಾಯಾಕಲ್ಪಿತವು ಹೇಗಾದೀತೆಂದರೆ ನುಡಿಯುವನು) ಯಾವ ನಿನ್ನ ಹೊಟ್ಟೆಯಲ್ಲಿ ನಿನ್ನೊಡಗೂಡಿದ ಈ ಸಮಸ್ತಪ್ರಪಂ

ಚ೦ ||೧೭|| ಅದ್ಯೈವತ್ವದೃತೇಸ್ಯಕಿಂಮಮನತೇಮಾಯಾತ್ವಮಾದರ್ಶಿತಂಮೇಕೋಸಿಪ್ರಥಮಂತತೋವ್ರಜ
ಸುಹೃದ್ವತ್ಸಾಸ್ಸಮಸ್ತಾಅಸಿ । ತಾವಂತೋಸಿಚತುರ್ಭುಜಾಸ್ತದಖಿಲೈಸ್ಸಾಕಂಮಯೋಪಾಸಿತಾಸ್ತಾವ
ನ್ತ್ಯೇವಜಗನ್ತ್ಯಭೂಸ್ತತಮಿದಂಬ್ರಹ್ಮಾದ್ವಯಂಶಿಷ್ಯತೇ ||೧೮|| ಅಜಾನತಾಂತ್ವತ್ಪದವೀಮನಾತ್ಮನ್ಯಾ
ತ್ಮಾತ್ಮನಾಭಾಸಿವಿತತ್ಯಮಾಯಾಮ್ । ಸೃಷ್ಟಾವಿವಾಹಂಜಗತೋವಿಧಾನಇವತ್ವಮೇಷೋನ್ತಇವತ್ರಿನೇತ್ರಃ||

ಅದೆಲ್ಲವೂ, ತಥಾಭಾತಿ-ಹಾಗೆಯೇ ಕಾಣಿಸುವುದು. ಸಾತ್ಮಂ-ಆತ್ಮನಾದ ನಿನ್ನಿಂದ ಸಹಿತವಾದ, ತದಿದಂ-ಆ ಈಜಗತ್ತು, ತ್ವಯಿ-ನಿನ್ನಲ್ಲಿ, ಮಾಯಯಾವಿನಾ-ಅಜ್ಞಾನದ ತೋರ್ಕೆಯನ್ನು ಹೊರತು, ಕಿಂ-ಏನಿದೆ, (ಜಗತ್ತುಮಿಥ್ಯೆಯೇ ಸರಿ) ||೧೭|| ಅದ್ಯೈವ-ಈಗಲೇ, ತ್ವದೃತೇ-ನಿನ್ನನ್ನು ಹೊರತು, ಅಸ್ಯ-ಈಪ್ರಪಂಚಕ್ಕೆ, ಮಾಯಾತ್ವಂ ಅಜ್ಞಾನಕಲ್ಪಿತತ್ವವು, ಮಮ-ನನಗೆ, ತೇ-ನಿನ್ನಿಂದ, ನದರ್ಶಿತಂಕಿಂ-ತೋರಿಸಲಿಲ್ಲವೇನು. (ತೋರಿಸಲ್ಪಟ್ಟಿತು ಹೇಗೆಂದರೆ,-) ಪ್ರಥಮಂ-ಮೊದಲು, ಏಕೋಸಿ-ಒಬ್ಬನಾದೆ, ತತಃ-ಆಮೇಲೆ, ವ್ರಜಸುಹೃತ್-ಗೋಕುಲಕ್ಕೆಮಿತ್ರನಾಗಿ, ವತ್ಸಾಸ್ಸಮಸ್ತಾಃ- ಕರುಗಳೆಲ್ಲವೂ, ಅಸಿ-ಆದೆ, ಮಯಾಸಾಕಂ - ನನ್ನೊಡನೆ, ತದಖಿಲೈಃ-ಆತತ್ತ್ವಾದಿಗಳೆಲ್ಲವುಗಳಿಂದಲೂ, ಉಪಾಸಿತಾಃ -ಸೇವಿಸಲ್ಪಟ್ಟ, ತಾವಂತಃ-ಅಷ್ಟುಮಂದಿಯೂ, ಚತುರ್ಭುಜಾಃ-ನಾಲ್ಕುತೋಳುಗಳುಳ್ಳವಿಷ್ಣುಮೂರ್ತಿಗಳಾಗಿ, ಅಸಿ-ಆದೆ, ಜಗಂತಿ-ಬ್ರಹ್ಮಾಂಡಗಳು, ತಾವಂತ್ಯೇವ-ಅಷ್ಟೇ, ಅಭೂಃ-ನೀನೇಆದೆ. ತತಂ-ನಿನ್ನಿಂದವ್ಯಾಪ್ತವಾದ, ಇದಂ-ಈವಿಶ್ವವು, ಬ್ರಹ್ಮಾದ್ವಯಂ-ಬ್ರಹ್ಮಕ್ಕಿಂತಲೂ ಎರಡನೆಯದಿಲ್ಲದ್ದಾಗಿ, ಶಿಷ್ಯತೇ-ಮಿಗುವುದು ||೧೮|| ತ್ವತ್ಪದವೀಂ-ನಿನ್ನ ಸ್ವರೂಪವನ್ನು, ಅಜಾನತಾಂ-ತಿಳಿಯದೆಯಿರುವವರಿಗೆ, ಅನಾತ್ಮನಿ-ಮೂಲಪ್ರಕೃತಿಯಲ್ಲಿ, ಅಧಿಷ್ಠಿಸಿರುವ, ಆತ್ಮಾ-ಪರಮಾತ್ಮನಾದನೀನು, ಆತ್ಮನಾ-ಸ್ವತಂತ್ರತೆಯಿಂದ, ಮಾಯಾಂ-ಭ್ರಾಂತಿಯನ್ನು, ವಿತತ್ಯ-ವಿಸ್ತರಿಸಿ, ಸೃಷ್ಟೌ-ಪ್ರಪಂಚದಸೃಷ್ಟಿಯಲ್ಲಿ, ಅಹಮಿವ-ನನ್ನಹಾಗೂ, ಜಗತಃ-ಪ್ರಪಂಚದ, ವಿಧಾನೇ-ಪಾಲನದಲ್ಲಿ, ತ್ವಮಿವ- ನಿನ್ನಹಾಗೂ, ಅಂತೇ-ನಾಶನದಲ್ಲಿ, ತ್ರಿಣೇತ್ರಇವ-ಮುಕ್ಕಣ್ಣನಾದಶಿವನಹಾಗೂ, ಭಾಸಿ-ನೀನೇತೋರುತ್ತಿರುವೆ, ||೧೯|| ಈಶ-ಒಡೆಯನಾದವಿಷ್ಣುವೇ। ಅ

ಚವು ಯಾವರೀತಿಯಿಂದ ತೋರುತಲಿದೆಯೋ ಅದೇರೀತಿಯಿಂದ ಆ ಸಮಸ್ತಪ್ರಪಂಚವೂ ಹೊರಗೆ ಕೂಡತೋರುತಲಿದೆ. ಆದ್ದರಿಂದ ಇದು ನಿನ್ನಲ್ಲಿರುವ ಮಾಯೆಯೇ ಹೊರತು ಸತ್ಯವಾಗಿ ಘಟಿಸಲಾರದು. ಈ ಪ್ರಪಂಚವು ನಿನ್ನಲ್ಲಿ ಪ್ರತಿಬಿಂಬ ರೂಪವಾದುದೇ ಆದರೆ ಆಗ ಹೊರಗಿರುವ ಪ್ರಪಂಚಕ್ಕಿಂತಲೂ ವ್ಯತ್ಯಸ್ತವಾಗಿ ಕಾಣಲ್ಪಡುವುದು. ಹಾಗೆ ತೋರುವುದಿಲ್ಲ. ಮತ್ತು ನೀನೂ ದರ್ಪಣಸ್ಥಾನೀಯನೇ ಆದರೆ ನಿನ್ನಲ್ಲಿ ಪ್ರಪಂಚವಿದೆಯೆಂಬ ಜ್ಞಾನವು ಇಲ್ಲದೇ ಹೋಗುವುದು. ಆದುದರಿಂದ ಸರ್ವಪ್ರಕಾರದಿಂದ ಈ ಪ್ರಪಂಚವು ಅಸತ್ಯವೇಸರಿ. ||೧೭|| ಎಲೈ, ಕೃಷ್ಣನೇ! ಸತ್ಯಸ್ವರೂಪನಾದ ನಿನ್ನಂ ಹೊರತು ಈ ಪ್ರಪಂಚವು ಮಾಯಾಕಲ್ಪಿತವೆಂದು ಈಗ ನಿನ್ನಿಂದ ತೋರಿಸಲ್ಪಟ್ಟಂತಾದ್ದೇ ಆಯಿತು. ಅದು ಹೇಗೆಂದರೆ-ಮೊದಲು ನೀನೊಬ್ಬನಾಗಿಯೇ ಇದ್ದು ಅನಂತರದಲ್ಲಿ ನೀನೇ ಅನೇಕ ಗೋಪಾಲಕರಾಗಿಯೂ, ಕರುಗಳಾಗಿಯೂ, ಕೊಳಲುಗಳಾಗಿಯೂ, ಕೊಂಬುಗಳಾಗಿಯೂ, ಬೆತ್ತದ ಕೋಲುಗಳಾಗಿಯೂ, ಕಾಣಿಸುತ್ತಿದ್ದಿ; ಅನಂತರದಲ್ಲಿ ಆ ಗೋಪಾಲ ಬಾಲಕರೂ, ಆ ಕರುಗಳೂ, ಕೊಳಲುಮೊದಲಾದ ಆ ಸಮಸ್ತವಸ್ತುಗಳೂ, ಸಹ ಚತುರ್ಭುಜರಾಗಿ ಪೀತಾಂಬರಧಾರಿಗಳಾಗಿ ಸರ್ವಾಲಂಕಾರಯುಕ್ತರಾಗಿ ಚತುರ್ವಿಂಶತಿ ತತ್ವಗಳಿಂದೊಡಗೂಡಿ ಯಿರುವ ನನ್ನಿಂದ ಸೇವಿಸಲ್ಪಟ್ಟಂತೆ ನೀನೇ ಆಸಮಸ್ತರೂಪನಾಗಿ ಇದ್ದೆ; ಅನಂತರದಲ್ಲಿ ನೀನೂ ಸಮಸ್ತಬ್ರಹ್ಮಾಂಡವಾಗಿ ಕಾಣಲ್ಪಟ್ಟೆ; ಅನಂತರದಲ್ಲಿ ನೀನು ಅಪರಿಚ್ಛಿನ್ನವಾದ ಅದ್ವಿತೀಯವಾದ ಬ್ರಹ್ಮಸ್ವರೂಪದಿಂದ ನಿಂತಿರುವನಾದಿ. ||೧೮|| ಎಲೈ, ಹರಿಯೇ! ಮತ್ತು ಪ್ರಪಂಚದ ಸೃಷ್ಟಿಯಲ್ಲಿ ರಜೋಗುಣದಿಂದ ಬ್ರಹ್ಮನಾದ ನನ್ನಂತೆಯೂ, ಅದರನ್ನು ರಕ್ಷಿಸುವುದರಲ್ಲಿ ಸತ್ವಗುಣದಿಂದ ವಿಷ್ಣುರೂಪನಾದ ನಿನ್ನಂತೆಯೂ, ಅದರನ್ನು ಸಂಹರಿಸುವುದರಲ್ಲಿ ತಮೋಗುಣದಿಂದ ರುದ್ರನಂತೆಯೂ, ಶುದ್ಧ ಚೈತನ್ಯ ಸ್ವರೂಪನಾದ ನೀನೆ ಸ್ವಾತಂತ್ರ್ಯದಿಂದ ಮಾಯೆಯಂ ವಿಸ್ತರಿಸಿ ನಿನ್ನ ಸ್ವರೂಪವನರಿಯದ ಮೂಢರಿಗೆ ಅನಾತ್ಮ ರೂಪವಾದ ಪ್ರಕೃತಿಯಲ್ಲಿರುವವನಂತೆ ತೋರುತಲಿರುವಿ. ||೧೯|| ಎಲೈ, ಈಶ್ವರನೇ! ಮತ್ತು ಜನ್ಮರಹಿತವಾದ ನಿನಗೆ ದೇವತೆಗಳ

ಸುರೇಷ್ವೃಷಿಷ್ವೀಶ ತಥೈವ ನೃಷ್ವಪಿ ತಿರ್ಯಕ್ಷು ಯಾದಸ್ಸ್ವಪಿ ತೇಜನಸ್ಯ । ಜನ್ಮಾಸತಾಂ ದುರ್ಮದನಿಗ್ರಹಾಯ ಪ್ರಭೋ ವಿಧಾತಸ್ಸದನುಗ್ರಹಾಯ ಚ ‖೨೦‖ ಕೋ ವೇತ್ತಿ ಭೂಮನ್ಭಗವನ್ಪರಾತ್ಮನ್ಯೋಗೇಶ್ವರೋತೀರ್ಭವತಸ್ತ್ರಿಲೋಕ್ಯಾಮ್ । ಕ್ವ ವಾ ಕಥಂ ವಾ ಕತಿ ವಾ ಕದೇತಿ ವಿಸ್ತಾರಯನ್ ಕ್ರೀಡಸಿ ಯೋಗಮಾಯಾಮ್ ‖೨೧‖ ತಸ್ಮಾದಿದಂ ಜಗದಶೇಷಮಸತ್ಸ್ವರೂಪಂ ಸ್ವಪ್ನಾಭಮಸ್ತಧಿಷಣಂ ಪುರುದುಃಖದುಃಖಮ್ । ತ್ವಯ್ಯೇವ ನಿ

---

ಜನಸ್ಯ-ಜನ್ಮವಿಲ್ಲದವನಾದ, ತೇ-ನಿನ್ನ, ಸುರೇಷು ಜನ್ಮ-ದೇವತೆಗಳಲ್ಲಿ ವಾಮನಜನ್ಮವೂ, ಋಷಿಷು-ಋಷಿಗಳಲ್ಲಿ, ಜನ್ಮ-ನಾರದಾದಿಜನ್ಮವೂ, ತಥೈವ-ಹಾಗೆಯೇ, ನೃಷ್ವಪಿ-ಮನುಷ್ಯರಲ್ಲಿಯೂ, ಜನ್ಮ-ರಾಮಾದಿಜನ್ಮವೂ, ತಿರ್ಯಕ್ಷು-ತಿರ್ಯಗ್ಜಂತುಗಳಾದವ್ಯಾಘ್ರಾದಿಗಳಲ್ಲಿ, ಜನ್ಮ-ನೃಸಿಂಹಾದಿಜನ್ಮವೂ, ಯಾದಸ್ಸ್ವಪಿ-ಜಲಜಂತುಗಳಲ್ಲಿಯೂ, ಜನ್ಮ-ಮತ್ಸ್ಯಕೂರ್ಮಾದಿಜನ್ಮವೂ, ಅಸತಾಂ-ದುಷ್ಟರಾದವರ, ದುರ್ಮದನಿಗ್ರಹಾಯ-ದುರಹಂಕಾರವನ್ನು ಕೆಡಿಸಲೋಸುಗವೇ. ಪ್ರಭೋ-ಸಮರ್ಥನಾದ, ವಿಧಾತಃ-ಕರ್ತನೇ! ಸದನುಗ್ರಹಾಯ ಚ-ಸತ್ಪುರುಷರ ಅನುಗ್ರಹಕ್ಕೋಸುಗವೂ, ಆಗುವುದು.‖೨೦‖ ಭೂಮನ್-ದೊಡ್ಡವನೇ, ಭಗವನ್-ಸರ್ವಜ್ಞನೇ, ಪರಾತ್ಮನ್-ಪರಮಾತ್ಮನೇ, ಯೋಗೇಶ್ವರ-ಅದ್ಭುತಶಕ್ತಿಗಳುಳ್ಳವರಿಗೊಡೆಯನೇ ಭವತಃ-ನಿನ್ನ, ಊತೀಃ-ಲೀಲೆಗಳನ್ನು, ತ್ರಿಲೋಕ್ಯಾಂ-ಮೂರುಲೋಕಗಳಲ್ಲಿ, ಕೋ ವೇತ್ತಿ-ಯಾವವನು ಬಲ್ಲನು, ಕ್ವ ವಾ-ಎಲ್ಲಿಯೋ, ಕಥಂ ವಾ-ಹೇಗೋ, ಕತಿ ವಾ-ಎಷ್ಟೋ, ಕದಾ ವಾ-ಯಾವಾಗಲೋ, ಇತಿ-ಹೀಗೆ, ಯೋಗಮಾಯಾಂ-ಇಚ್ಛಾಮಯವಾದ ಮೋಸವನ್ನು, ವಿಸ್ತಾರಯನ್-ಹರಡುತಲಿರುವವನಾಗಿ, ಕ್ರೀಡಸಿ-ಅವತಾರರೂಪಗಳಿಂದಾಡುತಲಿರುವಿ, ‖೨೧‖ ಯತ್-ಯಾವ ಜಗತ್ತು, ಸ್ವಪ್ನಾಭಂ-ಕನಸಿಗೆ ಸಮಾನವೂ ಅಸ್ತಧಿಷಣಂ-ಶಾಂತವಾದ ತೋರ್ಕೆಯುಳ್ಳದ್ದೂ, ಪುರುದುಃಖದುಃಖಂ-ಹೆಚ್ಚಾದ ಬಹುದುಃಖಗಳುಳ್ಳದ್ದು, ಅದ್ದರಿಂದ- ನಿತ್ಯಸುಖಬೋಧತನೌ- ನಿತ್ಯ-ನಾಶವಿಲ್ಲದ, ಸುಖಬೋಧ_ಆನಂದಚಿನ್ಮಾತ್ರವಾದ, ತನೌ-ಶರೀರವುಳ್ಳ, ಅನಂತೇ-ಅಪರಿಮಿತನಾದ, ತ್ವಯ್ಯೇವ-ನಿನ್ನಲ್ಲಿಯೇ, ಮಾಯಾತಃ-ಸ್ವರೂಪವನ್ನರಿಯದ ಅನಾದಿಭಾವಾಜ್ಞಾನದಿಂದ, ಉದ್ಯದಪಿ-ಹುಟ್ಟಿದ್ದಾದರೂ, ಸದಿವ- ಸತ್ಯವಾಗಿರುವಂತೆ, ಅವಭಾತಿ-ತೋ

---

ಳ್ಳುಂಟಾದ ವಾಮನಾದಿಜನ್ಮವೂ, ಋಷಿಗಳಲ್ಲುಂಟಾದ ನಾರದಾದಿಜನ್ಮವೂ, ಮನುಷ್ಯರಲ್ಲುಂಟಾದ ರಾಮಕೃಷ್ಣಾದಿಜನ್ಮವೂ, ತಿರ್ಯಗ್ಜಂತುಗಳಲ್ಲುಂಟಾದ ನರಸಿಂಹಾದಿಜನ್ಮವೂ, ಜಲಜಂತುಗಳಲ್ಲಿ ಉಂಟಾದ ಮತ್ಸ್ಯಕೂರ್ಮಾದಿಜನ್ಮವೂ, ಸಹ-ಅತಿಮತ್ತರಾದ ದುರ್ಜನರಂ ನಿಗ್ರಹಂಗೆಯ್ಯಲೋಸುಗವೂ, ಸಜ್ಜನರಂ ಅನುಗ್ರಹಿಸಲೋಸುಗವೂ ಉಂಟಾದವು. [ಆ ಕಾರಣದಿಂದ ಅದ್ವಿತೀಯನಾದ ನಿನ್ನಲ್ಲಿ ತೋರುವ ಈ ನಾನಾವಿಧರೂಪಂಗಳು ಒಂದೊಂದು ಕಾರ್ಯನಿಮಿತ್ತವಾಗಿ ಸ್ವಾಧೀನವಾದ ಮಾಯೆಯಿಂದ ಕಲ್ಪಿಸಲ್ಪಟ್ಟವೇ ಹೊರತು ಸತ್ಯವಾದವುಗಳಲ್ಲವು. ಆದ್ದರಿಂದಲೇ ಸ್ವತಂತ್ರನಾದ ನಿನ್ನಲ್ಲಿ ವಾಮನಾದ್ಯವತಾರದೊಳು ಯಾಚ್ಞಾದಿಕಾರ್ಪಣ್ಯವೂ, ರಾಮಾದ್ಯವತಾರಗಳಲ್ಲಿ ಶೋಕಾದಿಗಳೂ, ಮಾಯಿಕವಾಗಿ ಆರೋಪಿತಗಳೇ ಹೊರತು ದಿಟವಲ್ಲವೆಂದು ಭಾವವು.] ‖೨೦‖ ಮತ್ತು ಅಪರಿಚ್ಛಿನ್ನನಾದ ಷಡ್ಗುಣೈಶ್ವರ್ಯಸಂಪನ್ನನಾದ ಪ್ರಕೃತಿ ಪುರುಷರಿಗೆ ನಿಯಾಮಕನಾದ ಯೋಗೀಶ್ವರನಾದ ಶ್ರೀಕೃಷ್ಣದೇವನೇ! ನೀನು ಸ್ವಕೀಯವಾದ ಮಾಯೆಯಿಂದ ವಿಸ್ತಾರಂಗೆಯ್ದು ಕ್ರೀಡಿಸುವೆ ಯಾದ್ದರಿಂದ ಅಂತಾ ನಿನ್ನ ಲೀಲೆಗಳನ್ನು ಲೋಕದಲ್ಲಿ ಎಲ್ಲಿರುವವೆಂದೂ, ಯಾವರೀತಿ ಯಿಂದಿರುವವೆಂದೂ, ಎಷ್ಟೆಂದೂ, ಯಾವ ಸಮಯದೊಳೆಗೆಂದೂ, ಸಹ ಯಾವ ಪುರುಷನು ತಾನೇ ತಿಳಿಯುವನು. [ನಿನ್ನ ಯೋಗ ಮಾಯಾ ವೈಭವವು ಚಿಂತಿಸಲಶಕ್ಯವಾದ್ದರಿಂದ ಯಾವನೂ ತಿಳಿಯಲಾರನು.] ‖೨೧‖ ("ಆದರೆ ಅವತಾರಂಗಳ ಮಹಿಮೆಯೂ ಕೂಡ ಚಿಂತಿಸಲಶಕ್ಯವಾಗಲಿ. ಪ್ರಪಂಚವು ಅಸತ್ಯವಾದರೆ ಹೇಗೆ ಸತ್ಯವಾಗಿ ತೋರುತ್ತದೆ" ಎಂಬ ಈ ಸಂಶಯಮಂ ಪರಿಹರಿಸಿ ಪ್ರಪಂಚವು ಅಸತ್ಯವೇ ಸರಿಯೆಂದು ನಿಶ್ಚಯಿಸುವನು. ಅದೆಂತೆನೆ-) ಎಲೈ, ಸ್ವಾಮಿಯೇ, ನಿತ್ಯಜ್ಞಾನಾನಂದಾತ್ಮಕವಾದ ಶರೀರವುಳ್ಳ ಅಪರಿಚ್ಛಿನ್ನನಾದ ನಿನ್ನಲ್ಲಿಯೇ ಯಾವ ಜಗತ್ತು ಮಾಯೆಯಿಂದ ಉತ್ಪತ್ತಿ ಲಯಂಗಳನೆಯ್ದುತ ಲಿರುವದಾದರೂ ನಿತ್ಯಜ್ಞಾನಾನಂದಾತ್ಮಕವಾದ ಅಧಿಷ್ಠಾನದ ಬಲದಿಂದ ನಿತ್ಯವಾದಂತೆಯೂ, ಸುಖಸ್ವರೂಪವಾದಂತೆಯೂ, ಚೇತನಸ್ವರೂಪವಾದಂತೆಯೂ, ತೋರುತ್ತಲಿದೆಯೋ, ಆ ಈ ಜಗತ್ತು ದೃಶ್ಯವಾದುದರಿಂದ ಕನಸಿಗೆ ಸಮಾನವಾದುದಾಗಿ, ಸ್ವತಃ ತೋ

ತ್ಯಸುಖಬೋಧತನಾವನನ್ತೇಮಾಯಾತಉದ್ಯದಪಿಯತ್ಸದಿವಾವಿಭಾತಿ ‖೨೨‖ ಏಕಸ್ತ್ವಮಾತ್ಮಾಪುರುಷಃ ಪುರಾಣಸ್ಸತ್ಯಸ್ಸ್ವಯಂಜ್ಯೋತಿರನನ್ತಆದ್ಯಃ।ನಿತ್ಯೋಽಕ್ಷರೋಽಜಸ್ರಸುಖೋನಿರಂಜನಃಪೂರ್ಣೋಽದ್ವಯೋ ಮುಕ್ತಉಪಾಧಿತೋಽಮೃತಃ ‖೨೩‖ಏವಂವಿಧಂತ್ವಾಂಸಕಲಾತ್ಮನಾಮಪಿಸ್ವಾತ್ಮಾನಮಾತ್ಮಾತ್ಮತಯಾವಿಚ

---

ರುತಲಿದೆಯೋ, ಅಶೇಷಂ-ಸಮಸ್ತವಾದ, ತದಿದಂಜಗತ್-ಈಯೀಪ್ರಪಂಚವು, ತಸ್ಮಾತ್-ಆಕಾರಣದಿಂದ, ಅಸತ್ಸ್ವರೂಪಂ-ಸತ್ಯವಲ್ಲವು ‖೨೨‖ತ್ವಂ-ನೀನು, ಏಕಃ-ವಿಭಾಗವಿಲ್ಲದವನು, ಆತ್ಮಾ-ಜಡತ್ವವಿಲ್ಲದವನು, ಪುರುಷಃ-ಪ್ರಕೃತಿಯನ್ನು ಮೀರಿದವನು, ಪುರಾಣಃ-ಅನಾದಿಯಾದವನು, ಸತ್ಯಃ-ತ್ರಿಕಾಲಾಬಾಧ್ಯನು, ಸ್ವಯಂಜ್ಯೋತಿಃ- ಸ್ವಪ್ರಕಾಶನು, ಅನಂತಃ- ನಾಶವಿಲ್ಲದವನು, ಆದ್ಯಃ-ಕಾರಣವಿಲ್ಲದವನು. ನಿತ್ಯಃ-ಉತ್ಪತ್ತಿಯಿಲ್ಲದವನು, ಅಕ್ಷರಃ-ಕ್ಷಯಾದಿವಿಕಾರವಿಲ್ಲದವನು, ಅಜಸ್ರಸುಖಃ- ಕಾಲೋಪಾಧಿಯಿಲ್ಲದ ಸುಖರೂಪನು, ನಿರಂಜನಃ-ನಿರ್ಲಿಪ್ತನು, ಪೂರ್ಣಃ- ಕೊರತೆಯಿಲ್ಲದವನು, ಅದ್ವಯಃ- ಎರಡನೆಯವಸ್ತುವಿಲ್ಲದವನು, ಉಪಾಧಿತಃ-ಕಾರ್ಯಕಾರಣೋಪಾಧಿಗಳೆಂಬ ಅವಿದ್ಯಾವಸ್ಥೆಗಳಿಂದ, ಮುಕ್ತಃ-ಬಿಡಲ್ಪಟ್ಟವನು, ಅಮೃತಃ-ಮೋಕ್ಷಸ್ವರೂಪನು‖೨೩‖ ಯೇ-ಯಾವಪುರುಷರು, ಗುರ್ವರ್ಕ ..... ಚಕ್ಷುಷಾ-ಗುರು-ಅಜ್ಞಾನಪರಿಹಾರಕನೆಂಬ, ಅರ್ಕ-ಸೂರ್ಯ-ಸೂರ್ಯನಿಂದ ಅಥವಾ ಸೂರ್ಯನಹಾಗಿರುವಗುರುವಿನಿಂದ, ಲಬ್ಧ-ಹೊಂದಲ್ಪಟ್ಟ, ಉಪನಿಷತ್-ವೇದಾಂತಮಹಾವಾಕ್ಯಜ್ಞಾನವೆಂಬ, ಸುಚಕ್ಷುಷಾ-ಶುದ್ಧದೃಷ್ಟಿಯಿಂದ ಏವಂವಿಧಂ-ಈರೀತಿಯಾಗಿರುವ, ತ್ವಾಂ-ನಿನ್ನನ್ನು, ಆತ್ಮಾತ್ಮತಯಾ-ಪ್ರತಿಜೀವಸ್ವರೂಪ ವಹತನದಿಂದ, ಅಥವಾ ಪ್ರತಿಕ್ಷೇತ್ರದಲ್ಲಿಯೂ ಕ್ಷೇತ್ರಜ್ಞನಾಗಿರುವಿಕೆಯಿಂದ, ಅಥವಾ ಜೀವಸಾಕ್ಷಿಯಹತನದಿಂದ, ಸಕಲಾತ್ಮನಾಮಪಿ-ಸಕಲಜೀವರಿಗೂ, ಸ್ವಾತ್ಮಾನಂ-

---

ಕರ್ತೃಯಿಲ್ಲದುದಾಗಿ, ಅನೇಕ ವಿಧದದುಃಖ ಪರಂಪರೆಯುಳ್ಳದುದಾಗಿ, ಇರುವುದರಿಂದ ಅಸತ್ಯವೇಸರಿ. ‖೨೨‖ ಎಲೈ, ಕೃಷ್ಣನೇ, ಲೋಕದಲ್ಲಿ ಯಾವುದು ದೃಶ್ಯವೋ ಅದೆಲ್ಲವೂ ಅಸತ್ಯವಾಗಿ ಕಾಣಲ್ಪಟ್ಟಿದೆ. ಆತ್ಮನಾದ ನೀನು ದೃಗ್ರೂಪನಾದುದರಿಂದ ದೃಶ್ಯವಲ್ಲವು. ಆದ್ದರಿಂದ ನೀನೊರ್ವನೇ ಸತ್ಯಸ್ವರೂಪನು. ಮತ್ತು, ಯಾವುದು ವಿಕಾರಯುಕ್ತವಾದುದೋ ಅದೆಲ್ಲವೂ ಅಸತ್ಯವಾಗಿರುವುದು, ಹಾಗೆ ನಿನ್ನಲ್ಲಿ ಜನ್ಮಾದಿಷಡ್ವಿಕಾರಗಳು ಇಲ್ಲವು. ಅದೆಂತೆಂದರೆ- ನೀನು ಪುರುಷನಾದುದರಿಂದ ಪ್ರಪಂಚರೂಪ ಕಾರ್ಯಕ್ಕಿಂತಲೂ ಪೂರ್ವದಲ್ಲಿಯೂ ಇರುವವನು. ಅದರಿಂದ ಆದಿಕಾರಣನಾದ ನಿನ್ನಲ್ಲಿ ಜನ್ಮವೆಂಬ ವಿಕಾರವಿಲ್ಲವು. ಮತ್ತು ನೀನು ನಿತ್ಯನಾದುದರಿಂದ ಹುಟ್ಟಿದ ಮೇಲೆ ಉಂಟಾಗುವ ಅಸ್ತಿತ್ವಾದಿ ವಿಕಾರವು ನಿನ್ನಲ್ಲಿ ಇಲ್ಲವು. ಮತ್ತು, ನೀನು ಅನಂತನೂ ಅದ್ವಯನೂ ಆದುದರಿಂದ ದೇಶಪರಿಚ್ಛೇದವೂ ಕಾಲಪರಿಚ್ಛೇದವೂ ವಸ್ತುಪರಿಚ್ಛೇದವು ಇಲ್ಲದೆ ಪೂರ್ಣವಾಗಿರುವಿ. ಇಂತಾನಿನ್ನಲ್ಲಿ ವೃದ್ಧಿಯೆಂಬವಿಕಾರ ವಿಲ್ಲವು. ಸರ್ವದಾಸುಖ ಸ್ವರೂಪನಾದುದರಿಂದ ನಿನ್ನಲ್ಲಿ 'ಅಪಕ್ಷಯವೆಂಬ ವಿಕಾರವಿಲ್ಲವು ಮುಕ್ತಿಸ್ವರೂಪನಾದುದರಿಂದ ನಿನ್ನಲ್ಲಿ ನಾಶವೆಂಬ ವಿಕಾರವಿಲ್ಲವು. ಹೀಗೆ "ಅಸ್ತಿ, ಜಾಯತೇ, ವರ್ಧತೇ, ಪರಿಣಮತೇ, ಅಪಕ್ಷೀಯತೇ, ವಿನಶ್ಯತಿ-ಉಂಟು, ಹುಟ್ಟುತ್ತೆ, ಬೆಳೆಯುತ್ತೆ, ಹಣ್ಣಾಗುತ್ತೆ, ಕ್ಷೀಣಿಸುತ್ತೆ, ನಾಶವಾಗುತ್ತೆ," ಎಂಬ ಷಡ್ಭಾವವಿಕಾರಗಳು ನಿನಗಿಲ್ಲವಾದುದರಿಂದ ನೀನೊಬ್ಬನೇ ಸತ್ಯಸ್ವರೂಪನು. [ನೀನು ಮುಕ್ತಿಸ್ವರೂಪನು ಹೇಗೆಂದರೆ-ಉತ್ಪತ್ತಿ, ಪ್ರಾಪ್ತಿ, ವಿಕೃತಿ, ಸಂಸ್ಕಾರಗಳೆಂಬ ಈ ನಾಲ್ಕು ಕ್ರಿಯೆಗಳಿಗೂ ನೀನು ವಿಷಯರೂಪನಲ್ಲವು. ಅದೆಂತನೆ-ನೀನು ಆದಿಕಾರಣನಾದುದರಿಂದ ನಿನಗೆ ಉತ್ಪತ್ತಿಯಿಲ್ಲವಾಯಿತು. ಆತ್ಮನಾದುದರಿಂದ ಕ್ರಿಯೆಯಿಂದಲೂ ಸ್ವಪ್ರಕಾಶನಾದುದರಿಂದ ಜ್ಞಾನದಿಂದಲೂ ಸಹ ಪ್ರಾಪ್ಯನಲ್ಲವಾಯಿತು. ಮತ್ತು ನೀನು ಸ್ವತಏವ ಉಪಾಧಿಯ ವಸೆಯಿಂದ ಮುಕ್ತನಾಗಿರುವಿ, ಕುಟ್ಟಿ ಹೊಟ್ಟು ತೆಗೆಯುವುದರಿಂದ ಧಾನ್ಯಗಳಿಗೆ ಎಂತು ವಿಕೃತಿಯುಂಟಾಗುವುದೋ ಅಂತು ಉಪಾಧಿಯಂ ಪರಿಹರಿಸುವುದರಿಂದ ನಿನಗೆ ವಿಕೃತಿಯುಂಟಾಗಲಾರದು, ಆದ್ದರಿಂದ ನೀನು ವಿಕಾರ್ಯನಲ್ಲವಾಯಿತು. ಮತ್ತು ನೀನು ಪೂರ್ಣನಾದುದರಿಂದಲೂ, ಅತಿಶಯವನುಂಟುಮಾಡುವುದರಿಂದಲೂ, ನಿರ್ಮಲನಾದುದರಿಂದಲೂ, ಕಲ್ಮಷವು ಪರಿಹರಿಸುವ ನಾದುದರಿಂದಲೂ, ಕೂಡ ನೀನು ಸಂಸ್ಕಾರ್ಯನಲ್ಲವಾಯಿತು. ಹೀಗೆ ನಾಲ್ಕು ಕ್ರಿಯೆಗಳಿಗೂ ನೀನು ವಿಷಯನಲ್ಲದುದರಿಂದ ನೀನೇ ಮುಕ್ತಿಸ್ವರೂಪನೆಂದು ಭಾವವು. ‖೨೩‖ ಆದುದರಿಂದ

ಕ್ಷತೇ| ಗುರ್ವರ್ಕಲಬ್ಧೋಪನಿಷತ್ಸುಚಕ್ಷುಷಾಯೇತೇತರಂತೀವಭವಾನೃತಾಂಬುಧಿಮ್||೨೪|| ಆತ್ಮಾನಮೇವಾತ್ಮತಯಾವಿಜಾನತಾಂತೇನೈವಜಾತಂನಿಖಿಲಂಪ್ರಪಂಚಿತಮ್| ಜ್ಞಾನೇನಭೂಯೋಪಿಚತತ್ಪ್ರಲೀಯತೇರಜ್ಜ್ವಾಮಹೇರ್ಭೋಗಭವಾಭವೌಯಥಾ ||೨೫|| ಅಜ್ಞಾನಸಂಜ್ಞೌಭವಬನ್ಧಮೋಕ್ಷೌದ್ವೌನಾಮನಾನ್ಯೌಸ್ತಋತಜ್ಞಭಾವಾತ್ | ಅಜಸ್ರನಿತ್ಯಾತ್ಮನಿಕೇವಲೇಪರೇವಿಚಾರ್ಯಮಾಣೇತರಣಾವಿವಾಹನೀ||೨೬||ತ್ವಾಮಾತ್ಮಾನಂಪ

---

ಸ್ವರೂಪವನ್ನಾಗಿ, (ಅಹಂಬ್ರಹ್ಮಾಸ್ಮಿಯೆಂಬ) ವಿಚಕ್ಷತೇ-ತಿಳಿಯುವರೋ, ತೇ-ಅವರು, ಭವಾನೃತಾಂಬುಧಿಂ-ಭವ-ಜನನಮರಣ ದುಃಖಪ್ರವಾಹರೂಪವಾದ ಸಂಸಾರವೆಂಬ, ಅನೃತ-ಬ್ರಹ್ಮಜ್ಞಾನನಿವರ್ತ್ಯವಾದ್ದರಿಂದ ಮಿಥ್ಯಾರೂಪವಾದ, ಅಂಬುಧಿಂ-ಕಡಲನ್ನು, ತರಂತೀವ ದಾಂಟುವರೆಂಬಂತಿರುವರು (ಬಂಧವೆಂಬುವುದು ಸತ್ಯವಾಗಿಯಿಲ್ಲದ್ದರಿಂದ "ದಾಂಟುವರಹಾಗೆ" ಎಂದು ಹೇಳಲ್ಪಟ್ಟಿದೆ) ||೨೪|| ಆತ್ಮಾನಮೇವ-ಪ್ರತ್ಯಗಾತ್ಮನನ್ನೇ, ಆತ್ಮತಯಾ-ಬ್ರಹ್ಮತ್ವದಿಂದ, ವಿಜಾನತಾಂ-(ಬ್ರಹ್ಮೈವಾಹಮಸ್ಮಿ ಎಂದು) ತಿಳಿದವರಿಗೆ, ನಿಖಿಲಂಪ್ರಪಂಚಿತಂ-ಸಕಲಜಗತ್ತೂ, ತೇನೈವ ಆಯಾತ್ಮಸ್ವರೂಪದಅಜ್ಞಾನದಿಂದಲೇ, ಜಾತಂ-ಕಲ್ಪಿತವಾಗಿರವುದು. ತತ್ ಚ-ಅಜ್ಞಾನಕಲ್ಪಿತಪ್ರಪಂಚವೂ, ರಜ್ಜ್ವಾಂ-ವ್ಯಾವಹಾರಿಕವಾದನೇಣಿನಲ್ಲಿ, ಅಹೇಃ- ರಜ್ಜುಸ್ವರೂಪಾಜ್ಞಾನದಿಂದ ಆರೋಪಿತವಾದ ಪ್ರಾತಿಭಾಸಿಕಸರ್ಪದ, ಭೋಗ-ಶರೀರದ, ಭವಾಭವೌ-ಉತ್ಪತ್ತಿವಿನಾಶಗಳು, ಯಥಾ-ಹೇಗೋ, ತಥಾ- ಹಾಗೆ, ಭೂಯೋಪಿ- ಮರಳಿಯೂ, ಜ್ಞಾನೇನ-ಜಗತ್ತಿಗೆಅಧಿಷ್ಠಾನವಾದ ಬ್ರಹ್ಮಸ್ವರೂಪದ ಜ್ಞಾನದಿಂದ, ಪ್ರಲೀಯತೇ-ಬ್ರಹ್ಮದಲ್ಲಿಯೇಲಯವಾಗುವುದು) ಅಥ್ಯಾರೋಪಾಪವಾದಗಳಿಂದ ತತ್ವನಿರ್ಣಯವಾಗುವುದು) ||೨೫|| ಪರೇ-ಸರ್ವೋತ್ತಮನಾದ, ಕೇವಲೇ-ನಿರ್ವಿಶೇಷಚಿನ್ಮಾತ್ರನಾದ, ಅಜಸ್ರನಿತ್ಯಾತ್ಮನಿ-ಅಜಸ್ರ-ತ್ರಿಕಾಲಗಳಲ್ಲಿಯೂ, ನಿತ್ಯ-ಅಬಾಧ್ಯವಾಗಿರುವ, ಆತ್ಮನಿ-ವಸ್ತುವು, ವಿಚಾರ್ಯಮಾಣೇಸತಿ-ವಿಚಾರಿಸಲ್ಪಡುತ್ತಿರುವಲ್ಲಿ, ತರಣೌ-ಸೂರ್ಯನಲ್ಲಿ ಅಹನೀಇವ- ರಾತ್ರಿಹಗಲುಗಳುಹೇಗೋ ಹಾಗೆ, ಅಜ್ಞಾನಸಂಜ್ಞೌ-ಅಜ್ಞಾನದಿಂದವ್ಯವಹಾರವುಳ್ಳ ಭವಬಂಧಮೋಕ್ಷೌ-ಸಂಸಾರದಿಂದಬಂಧವೂ ಅವರವೆಸೆಯಿಂದಮುಕ್ತಿಯೂ, ದ್ವೌನಾಮ-ಹೀಗೆಪ್ರಸಿದ್ಧವಾದವೆರಡೂ, ಋತಜ್ಞಭಾವಾತ್-ಸತ್ಯಜ್ಞಾನಸ್ವಭಾವನಾದಆತ್ಮನಿಗಿಂತಲೂ, ಅನ್ಯೌ-ಇತರಗಳಾಗಿ, ನಸ್ತಃ-ಇರುವುದಿಲ್ಲವು|| ೨೬ ||ಆತ್ಮಾನಂ-ಆತ್ಮವಾದ, ತ್ವಾಂ-

---

ಯಾವಮಹಾತ್ಮರು ಸಮಸ್ತ ಜೀವಾತ್ಮರಿಗೂ ಸಹ ಮುಖ್ಯಾತ್ಮ ರೂಪನಾಗಿಯೂ ಇಂತಾ ಸತ್ಯಸ್ವರೂಪನಾಗಿಯೂ ಇರುವ ನಿನ್ನನ್ನು ಪ್ರತ್ಯಗಾತ್ಮರೂಪದಿಂ ಗುರುವೆಂಬ ಸೂರ್ಯನದೆಸೆಯಿಂ ಪಡೆಯಲ್ಪಟ್ಟ ಉಪಷದರ್ಥಜ್ಞಾನವೆಂಬ ಕಂಣಿನಿಂದ ಚೆನ್ನಾಗಿನೋಡುತಲಿಹ್ದಾರೆಯೋ, ಆಮಹಾತ್ಮರು ಸಂಸಾರವೆಂಬ ಅನೃತ ಸಮುದ್ರವಂ ದಾಂಟುವರು. ||೨೪||(ಜ್ಞಾನದಿಂದ ಎಂತು ಸಂಸಾರಸಮುದ್ರವಂ ದಾಂಟುವರೆಂದರೆ ಆಸಂಸಾರಕ್ಕೆ ಅಜ್ಞಾನವೇ ಕಾರಣವೆಂದು ನುಡಿಯುವನು-) ರಜ್ಜುವಿನಲ್ಲಿ ಸರ್ಪವು ಎಂತು ಆರಜ್ಜುವಿನ ಅಜ್ಞಾನದಿಂದ ತೋರಿ, ಪುನಶ್ಚ ರಜ್ಜುವಿನಜ್ಞಾನದಿಂದಲೇ ಅಳಿವುದೊ, ಆರೀತಿಯಲ್ಲಿ ಅಜ್ಞಾನದಿಂದುಂಟಾದ ದೇಹಾಭಿಮಾನದಿಂ ದೇಹವನ್ನೇ ಆತ್ಮವೆಂದು ತಿಳಿಯುತಲಿರುವ ಮೂಢರಿಗೆ ಅಜ್ಞಾನದಿಂದಲೇ ದೇಹೇಂದ್ರಿಯಾದಿ ಸಮಸ್ತ ಪ್ರಪಂಚವೂ ಉಂಟಾಗಿರುವುದು. " ಪುನಶ್ಚ ಈದೇಹವೇ ಆತ್ಮನಲ್ಲ- ಜ್ಞಾನಾನಂದಸ್ವರೂಪನಾಗಿರುವನೇ ಆತ್ಮನು." "ಇಂತೆಂಬ ದೃಢವಾದ ಅಪರೋಕ್ಷ ಜ್ಞಾನದಿಂದ ಆ ಅಜ್ಞಾನವೂ, ಅದರಿಂದ ಉಂಟಾದ ಆಪ್ರಪಂಚವೂ ಸಹ ಅಧಿಷ್ಠಾನ ರೂಪನಾದ ಆತ್ಮನಲ್ಲಿಯೇ ಲಯವನೆಯ್ದುವುದು.||೨೫|| ಮತ್ತು-"ಸಂಸಾರದಿಂದ ಬಂಧವೂ ಆಸಂಸಾರದವೆಸೆಯಿಂದಲೇ ಮೋಕ್ಷವೂ" ಎಂದು ಅಜ್ಞಾನಕಲ್ಪಿತಂಗಳಾಗಿ ಪ್ರಸಿದ್ಧಗಳಾಗಿರುವವೋ ಅವೆರಡೂ ಸಹ ತ್ರಿಕಾಲಾ ಬಾಧ್ಯನಾಗಿಯೂ ಸ್ವಪ್ರಕಾಶನಾಗಿಯೂ ಇರುವ ಆತ್ಮನಿಗಿಂತಲೂ ಅನ್ಯಗಳಾದವಲ್ಲವು- ಅದೆಂತೆನೆ- ಸೂರ್ಯನಲ್ಲಿ ಹಗಲಿರುಳುಗಳೆರಡೂ ಹೇಗೆ ಕಲ್ಪಿತಗಳೇ ಹೊರತು ಸೂರ್ಯನಿಗಿಂತಲೂ ಪ್ರತ್ಯೇಕಗಳಾಗಿಲ್ಲವೋ' ಹಾಗೆಯೇ ಅಖಂಡಾನಂದರೂಪನಾಗಿಯೂ ನಿತ್ಯಶುದ್ಧ ಬುದ್ಧಮುಕ್ತ ಸ್ವರೂಪನಾಗಿಯೂ ಇರುವ ಆತ್ಮನಲ್ಲಿ ವಿಚಾರಂಗೆಯ್ಯಲು ಅಜ್ಞಾನವೂ ಇಲ್ಲ, ಅದರಿಂದುಂಟಾದ ಬಂಧವೂ ಇಲ್ಲವಾದ್ದುದರಿಂದಲೇ ಪ್ರತ್ಯೇಕವಾಗಿ ಜ್ಞಾನವೂ ಅದರಿಂದುಂಟಾಗುವ ಮೋಕ್ಷವೂ ಬೇಕೆಯಿಲ್ಲವಾಯಿತು. ||೨೬||ಮತ್ತು ಆತ್ಮನಲ್ಲಿ ದೇಹಾದಿಗಳನ್ನು ಅಧ್ಯಾಸಂಗೆಯ್ದು ಅದೇರೀತಿಯಾಗಿ ದೇಹಾದಿಗಳಲ್ಲಿ ಆತ್ಮನನ್ನೂ

ರಂಮತ್ವಾಪರಮಾತ್ಮಾನಮೇವಚ| ಆತ್ಮಾಪುನರ್ಬಹಿರ್ಮೃಗ್ಯಅಹೋಅಜ್ಞಜನಾಜ್ಞತಾ||೨೭||ಅನ್ತರ್ಭ
ವೇನನ್ತಭವನ್ತಮೇವಹ್ಯತತ್ತ್ಯಜನ್ತೋಮೃಗಯನ್ತಿಸನ್ತಃ |ಅಸನ್ತಮಪ್ಯನ್ತ್ಯಹಿಮನ್ತರೇಣಸನ್ತಂಗುಣಂ
ತಂಕಿಮುಯನ್ತಿಸನ್ತಃ ||೨೮|| ಅಥಾಪಿತೇದೇವಪದಾಮ್ಬುಜದ್ವಯಪ್ರಸಾದಲೇಶಾನುಗೃಹೀತಏವ | ಜಾನಾ
ತಿತತ್ತ್ವಂಭಗವನ್ಮಹಿಮ್ನೋನಚಾನ್ಯಏಕೋಪಿಚಿರಂವಿಚಿನ್ವನ್ ||೨೯|| ತದಸ್ತುಮೇನಾಥಸಭೂರಿಭಾಗೋಭವೆ

ನಿನ್ನನ್ನು,ಪರಂ-ದೇಹಾದಿಕವನ್ನಾಗಿ, ಮತ್ವಾ-ತಿಳಿದು,(ತಥಾ-ಹಾಗೆಯೇ)ಪರಂ-ದೇಹಾದಿಯನ್ನು, ಆತ್ಮಾನಮೇವಚ-ಆತ್ಮವನ್ನಾಗಿ ಯೂ, ಮತ್ವಾ-ತಿಳಿದು, ಪುನಃ-ಮರಳಿಯೂ, ಆತ್ಮಾ-ಚೇತನವಸ್ತುವು, ಬಹಿಃ-ಹೊರಗೆ,ಮೃಗ್ಯಃ-ಹುಡುಕಲ್ಪಡತಕ್ಕವನು(ಎಂಬುವು ದು) ಅಜ್ಞಜನಾಜ್ಞತಾ-ಮೂಢಜನರ ಮೂಢತ್ವವೇ ಸರಿ, ಅಹೋ-ಆಶ್ಚರ್ಯವು ||೨೭|| ಹೇಅನಂತ-ನಾಶರಹಿತನಾದಭಗವಂತನೇ ಸಂತಃ-ಸತ್ಪುರುಷರು, ಅತತ್-ಚೇತನವಲ್ಲದಜಡವನ್ನು, ತ್ಯಜನ್ತಸ್ಸಂತ--ಅಪವಾದದಿಂದಬಿಡುವರಾಗಿ, ಭವೇ-ಚಿಜ್ಜಡಾತ್ಮಕವಾದ ಶರೀರದಲ್ಲಿ, ಅಂತಃ-ಒಳಗೆ, ಭವಂತಮೇವ- ನಿನ್ನನ್ನೇ, ಮೃಗಯಂತಿ- ಹುಡುಕುತ್ತಿದ್ದಾರೆ (ತಮ್ಮ ದೇಹದಲ್ಲಿ ಆತ್ಮಾನಾತ್ಮಗಳಂ ವಿವೇಕಿಸಿಕೊಳ್ಳುವರೆಂದುಭಾವವು.) ಅಂತಿ-ಸಮೀಪದಲ್ಲಿ, ಅಸಂತಮಪಿ-ಇಲ್ಲದೇ ಇರುವುದನ್ನಾದರೂ, ಅಹಿಮಂತರೇಣ-ಸರ್ಪವನ್ನು ಹೊರತು, (ಪ್ರಾತಿಭಾಸಿಕಸರ್ಪವನ್ನು ನಿಷೇಧಿಸಿದಹೊರತು) ಸಂತಂ-ವ್ಯಾವಹಾರಿಕ ಸತ್ಯವಾಗಿರುವ, ತಂ-ಪ್ರಾತಿಭಾಸಿಕಕ್ಕೆ ಅಧಿಷ್ಠಾನವಾದ, ಗುಣಂ-ರಜ್ಜುವನ್ನು, ಸಂತಃ-ಸತ್ಪುರುಷರು, ಯಂತಿಕಿಮು-ತಿಳಿಯುತ್ತಾರೆಯೇ ಏನು ||೨೮|| ಅಥಾಪಿ-ಇಷ್ಟಾದರೂ, ಹೇದೇವ-ಓಸ್ವಾಮಿಯೇ ತೇ-ನಿನ್ನ, ಪದಾಂಬುಜದ್ವಯಪ್ರಸಾದಲೇಶಾನುಗೃಹೀತಏವ- ಪದಾಂಬುಜದ್ವಯ-ಅಡಿದಾವರೆಗಳೆರಡರ, ಪ್ರಸಾದಲೇಶ-ಕಿಂಚಿತ್ಪ್ರಸನ್ನತೆಯಿಂದ, ಅನುಗೃಹೀತಏವ- ಅನುಗ್ರಹಿಸಲ್ಪಟ್ಟ ಪುರುಷನೇ, ಭಗವನ್ಮಹಿಮ್ನಃ- ಭಗವಂತನಾದ ನಿನ್ನ ಮಹತ್ವದ, ತತ್ವಂ - ಯಾಥಾರ್ಥ್ಯವನ್ನು, ಜಾನಾತಿ - ತಿಳಿಯುತ್ತಿರುವನು. ಏಕೋಪಿ - ಒಬ್ಬನಾದರೂ, ಅನ್ಯಃ-ನಿನ್ನ ಚರಣ ಭಕ್ತಿಯಿಲ್ಲದವನು, ಚಿರಂ - ಬಹುಕಾಲವು, ವಿಚಿನ್ವನ್ - ವಿಚಾರಿಸುವವ ನಾದರೂ, ನಜಾನಾತಿ – ತಿಳಿಯುವುದಿಲ್ಲವು. (ಜ್ಞಾನವು ಭಕ್ತಿಯಿಂದಲೇ ಲಭ್ಯವೆಂಬುಭಾವವು) || ೨೯ || ಹೇದೇವ- ಓಸ್ವಾಮಿಯೇ! ಯೇನ- ಯಾವ ಕಾರಣದಿಂದ, ಅಹಂ-ನಾನು, ಭವಜ್ಜನಾನಾಂ-ನಿನ್ನ ಭಕ್ತರೊಳಗೆ, ಏಕೋಪಿ- ಯಾವನೊಬ್ಬನಾದರೂ, ಭೂತ್ವಾ- ಆಗಿ, ತವ- ನಿನ್ನ, ಪಾದಪಲ್ಲವಂ- ಚಿಗುರಡಿಯನ್ನು, ನಿಷೇವೇ-ಸೇವಿಸುವೆನೋ, ತತ್ - ಆಕಾರಣದಿಂ, ಸಭೂರಿಭಾಗಃ - ಆಮಹಾಭಾಗ್ಯವು, ಅತ್ರಭ

ಅಧ್ಯಾಸಂಗೈದು ಮೂಢಜನರಿಂದ ಗೃಹದಲ್ಲಿ ನಷ್ಟವಾದವಸ್ತುವು ಅರಣ್ಯದಲ್ಲಿ ಹುಡುಕಲ್ಪಟ್ಟಂತೆ ಈದೇಹೇಂದ್ರಿಯಾದಿಗಳಲ್ಲಿ ಗೂಢನಾಗಿರುವ ಆತ್ಮನು ಹೊರಗೆ ಹುಡುಕಲ್ಪಡುವನು. ಕಟಕಟಾ! ಅವರಮೂಢತ್ವವು ಆಶ್ಚರ್ಯಕರವು ||೨೭||ಎಲೈ, ಪರಿಪೂರ್ಣನಾದ ಕೃಷ್ಣನೇ! ಮೋಕ್ಷಾಪೇಕ್ಷೆಯುಳ್ಳ ಸತ್ಪುರುಷರು ಚಿಜ್ಜಡಾತ್ಮಕವಾದ ಶರೀರದ ಮಧ್ಯವಲ್ಲಿ ಅತತ್ಸ್ವರೂಪವಾದ ಜಡವನ್ನು ಆತ್ಮನಲ್ಲವೆಂದು ತಿರಸ್ಕರಿಸುವರಾಗಿ ಸದ್ರೂಪನಾದ ನಿನ್ನನ್ನೇ ಹುಡುಕುತಲಿದ್ದಾರೆ. (ಅಂಥಾ ನಿನ್ನಂ ತಿಳಿಯುವುದೆ ಸಾಕು. ಅಸದ್ರೂಪವಾದ ಜಡವು ತಿರಸ್ಕರಿಸುವುದರಿಂದ ಫಲವೇನೆಂದರೆ - ಅಧ್ಯಾಸಂಗೆಯ್ಯಲ್ಪಟ್ಟ ಪದಾರ್ಥವಂ ತಿರಸ್ಕಾರಂಗೆಯ್ಯದೆ ಅಧಿಷ್ಠಾನತತ್ವಜ್ಞಾನವು ಉಂಟಾಗಲಾರವೆಂದು ಸತ್ಪುರುಷರ ವ್ಯವಹಾರದಿಂದ ನುಡಿಯುವನು) ಸಮೀಪದಲ್ಲಿರುವ ಹಗ್ಗದಲ್ಲಿ ಅಜ್ಞಾನದಿಂದ ತೋರುವ ಸರ್ಪವಂ ನಿರಾಕರಿಸಿದ ಹೊರತು ಸತ್ಯವಾಗಿರುವ ಆ ಹಗ್ಗವು ಸತ್ಪುರುಷರು ಕೂಡ ತಿಳಿಯುವರೋ ಏನು? ಸಮೀಪದಲ್ಲಿದ್ದರೂ ಇದು ಹಗ್ಗವೆಂದರಿಯರು || ೨೮ || (ಜ್ಞಾನದಿಂದಲೇ ಮುಖ್ಯವಾಗಿ ಸಾಧಿಸಲು ಯೋಗ್ಯವಾದ ಮೋಕ್ಷವಂ ಕುರಿತು ಭಕ್ತಿಯೂಕೂಡ ಸಾಧನವೆಂದು ಎಂತು ಹೇಳಲ್ಪಟ್ಟಿತು. ಎಂದಲ್ಲಿ ಹೇಳುವನು ) ಎಲೈಶ್ರೀಹರಿಯೇ! ಜ್ಞಾನವು ಹಸ್ತದಲ್ಲಿ ಗ್ರಹಿಸಲು ಯೋಗ್ಯವಾದಂತೆ ಹೇಳಲ್ಪಟ್ಟಿತು ಅದರೂ ನಿನ್ನ ಚರಣಾರವಿಂದಯುಗಳ ಮಧ್ಯವಲ್ಲಿ ಏಕದೇಶದ ಯಾವ ಪ್ರಸಾದಲೇಶವುಂಟೋ ಅದರಿಂದ ಅನುಗ್ರಹಿಸಲ್ಪಟ್ಟ ಪುರುಷನೇ ಭಗವಂತನಾದ ನಿನ್ನ ಮಹಿಮೆಯ ತತ್ವವಂ ತಿಳಿಯುವನು. ಮಿಕ್ಕವನೊಬ್ಬನಾದರೂ ಬಹುಕಾಲದಲ್ಲಿ ಅತತ್ವಾಂಶವಂ ನಿರಾಕರಿಸುವುದರೊಡನೆ ವಿಚಾರಂ ಗೆಯ್ಯುತ್ತಲಿರುವ ನಾದಾಗ್ಯೂ ನಿನ್ನ ತತ್ವವಂ ತಿಳಿಯಲಾರನು||೨೯|| (ಎಲೈ, ಸ್ವಾಮಿಯೇ! ಅದೇಕಾರಣದಿಂ ಈಬ್ರಹ್ಮಜನ್ಮದಲ್ಲಿಯಾದರೂ ತಿರ್ಯಗ್ಜಂತುಗಳಲ್ಲಿ

ತ್ರವಾನ್ಯತ್ರತುವಾತಿರಶ್ಚಾಮ್। ಯೇನಾಹಮೇಕೋಪಿಭವಜ್ಜನಾನಾಂಭೂತ್ವಾನಿಷೇವೇತವಪಾದಪಲ್ಲವಮ್॥೩೦॥ ಅಹೋತಿಧನ್ಯಾವ್ರಜಗೋರಮಣ್ಯಃಸ್ತನ್ಯಾಮೃತಂಪೀತಮತೀವತೇಮುದಾ । ಯಾಸಾಂವಿಭೋವತ್ಸತರಾತ್ಮಜಾತ್ಮನಾಯತ್ತೃಪ್ತಯೇದ್ಯಾಪಿಚನಾಲಮಧ್ವರಾಃ॥೩೧॥ ಅಹೋಭಾಗ್ಯಮಹೋಭಾಗ್ಯಂನನ್ದಗೋಪವ್ರಜೌಕಸಾಂ । ಯನ್ಮಿತ್ರಂಪರಮಾನಂದಂಪೂರ್ಣಂಬ್ರಹ್ಮಸನಾತನಮ್॥೩೨॥ ಏಷಾಂತುಭಾಗ್ಯಮಹಿಮಾಚ್ಯುತತಾವದಾಸ್ತಾಮೇಕಾದಶೈವಹಿವಯಂಬತಭೂರಿಭಾಗಾಃ । ಏತದ್ಧೃಷೀಕಚಷಕೈರಸಕೃತ್ಪಿಬಾಮಶ್ಶರ್ವಾ

---

ದೇವಾ-ಈಬ್ರಹ್ಮಜನ್ಮದೊಳಾದರೂ, ಅನ್ಯತ್ರ ತು-ಇತರಜನ್ಮದೊಳಾದರೂ, ತಿರಶ್ಚಾಂವಾ- ತಿರ್ಯಕ್‌ಜನ್ಮಗಳೊಳುಯಾವಜನ್ಮದೊಳಗಾದರೂ, ಮೇ-ನನಗೆ, ಅಸ್ತು-ಆಗಲಿ॥೩೦॥ ವಿಭೋ-ವ್ಯಾಪಕನಾದಬಡೆಯನೇ, ಯತ್ತೃಪ್ತಯೇ-ಯತ್-ಯಾವನಿನ್ನ, ತೃಪ್ತಯೇ-ಇಚ್ಛಾಪೂರ್ತಿಗೆ, ಅದ್ಯಾಪಿಚ-ಈಗಲೂಕೂಡ, ಅಧ್ವರಾಃ-ಯಜ್ಞಗಳು, ನಾಲಂ-ಸಾಲವೋ; ತೇ-ಆ, ವತ್ಸತರಾತ್ಮಜಾತ್ಮನಾ ವತ್ಸತರ-ಸಣ್ಣಕರುಗಳ, ಆತ್ಮಜ-ಮಕ್ಕಳ, ಆತ್ಮನಾ-ರೂಪವುಳ್ಳ, ತೇ-ನಿನ್ನಿಂದ, ಯಾಸಾಂ-ಯಾವಗೊಲ್ಲತಿಯರಯಾವಗೋವುಗಳ, ಸ್ತನ್ಯಾಮೃತಂ-ಮೊಲೆಹಾಲು, ಅತೀವ- ಹೆಚ್ಚು ಎಂಬಂತೆ, ಪೀತಂ- ಕುಡಿಯಲ್ಪಟ್ಟಿತೋ, ತಾಃ-ಅಂತಾ, ವ್ರಜಗೋರಮಣ್ಯಃ-ವ್ರಜ-ಗೋಕುಲದಲ್ಲಿರುವ, ಗೋ-ಆಕಳುಗಳೂ, ರಮಣ್ಯಃ-ಗೊಲ್ಲತಿಯರೂ, ಅತಿಧನ್ಯಾಃ-ಬಹಳಕೃತಾರ್ಥರು. ಅಹೋ-ಆಶ್ಚರ್ಯವು॥೩೧॥ ಪರಮಾನಂದಂ-ಅಖಂಡನಿತ್ಯಶುದ್ಧಸುಖರೂಪವಾದ, ಪೂರ್ಣಂ-ಪರಿಚ್ಛೇದವಿಲ್ಲದ, ಸನಾತನಂ- ತ್ರಿಕಾಲಾಬಾಧ್ಯವಾದ, ಬ್ರಹ್ಮ-ಪರಮಾತ್ಮನಾದಕೃಷ್ಣನು, ಯನ್ಮಿತ್ರಂ-ಯಾರಿಗೆಗೆಳೆಯನಾಗಿರುವನೋ, ತೇಷಾ-ಆ, ನಂದಗೋಪವ್ರಜೌಕಸಾಂ-ನಂದಗೋಪನ ಗೋಕುಲವೇಸ್ಥಾನವಾಗಿವುಳ್ಳಗೊಗೋಪಾಲಕ. ಭಾಗ್ಯಂ-ಪುಣ್ಯವು, ಅಹೋ-ಆಶ್ಚರ್ಯವಾದ್ದು, ಅಹೋಭಾಗ್ಯಂ-ಪುಣ್ಯವಾಶ್ಚರ್ಯವಾದ್ದು ॥೩೨॥ ಹೇಅಚ್ಯುತೆ-ಎಲೈಕೃಷ್ಣನೇ, ಏಷಾಂ-ಈಗೋಪ ಗೋಪಾಲಕರ, ಭಾಗ್ಯಮಹಿಮಾ-ಪುಣ್ಯಾತಿಶಯವಾದರೋ, ತಾವದಾಸ್ತಾಂ- ಅಟ್ಟಿರಲಿ, ಶರ್ವಾದಯಃ- ರುದ್ರನೇಮೊದಲಾದ, ಏಕಾದಶ-೧೧ ದೇವತೆಗಳು, ವಯಮೇವ-ನಾವೇ ಮನೋಬುದ್ಧ್ಯಹಂಕಾರ ದಶೇಂದ್ರಿಯಾಭಿಮಾನಿ ದೇವತೆಗಳು೧೩) ಏತದ್ಧೃಷೀಕಚಷಕೈಃ-ಏತತ್-ಈ, ಹೃಷೀಕ- ಇಂದ್ರಿಯಗಳೆಂಬ, ಚಷಕೈಃ-ಪಾನಪಾತ್ರೆಗಳಿಂದ, ತೇ-ಗಳನೆಯ ಚಿತ್ತಾಭಿಮಾನಿಯಾದನಿನ್ನ, ಅಂಘ್ರ್ಯುದಜಮಧ್ವಮೃತಾಸವಂ-ಅಂಘ್ರಿ-ಚರಣವೆಂಬ ಉದಜ-ತಾವರೆಯ, ಮಧು-ಜಂಡೆಂಬ, ಅಮೃತಾಸವಂ- ರುಚ್ಯವಾದ್ದರಿಂದ ಅಮೃತವಾಗಿಯೂ ಮದಕರವಾದ್ದರಿಂದ ಮದ್ಯವಾ

---

ಯಾವಜನ್ಮದೊಳಗಾದರೂ ಯಾವಭಾಗ್ಯದಿಂದ ನಾನು ನಿನ್ನಭಕ್ತಮಧ್ಯದಲ್ಲಿ ಯಾವವನಾದರೂ ಒಬ್ಬನಾಗಿ ನಿನ್ನ ಪಾದಪಲ್ಲವವ ಸೇವಿಸುವೆನೋ ಅಂತಾಮಹಾಭಾಗ್ಯವು ನನಗೆಉಂಟಾಗಲಿ. ॥೩೦॥(ದೇವಾದಿಗಳಜನ್ಮಕ್ಕಿಂತಲೂ ಎಲ್ಲಿಯಾದರೂ ಒಂದುಕಡೆಯಲ್ಲಿ ನಿನ್ನಭಕ್ತಿಯುಳ್ಳಜನ್ಮವೇ ಶ್ರೇಷ್ಠವೆಂದು ಅತಿಕುತೂಹಲದಿಂದ ವಿಜ್ಞಾಪನಂಗೆಯ್ವನು ಎಲೈ, ವ್ಯಾಪಕನಾದ ಶ್ರೀಕೃಷ್ಣನೇ! ಯಾವನಿನಗೆ ತೃಪ್ತಿಯುಂಟುಮಾಡಲೋಸುಗ ಸಮಸ್ತಯಜ್ಞಗಳೂ ಕೂಡ ಸಮರ್ಥಗಳಾಗಲಿಲ್ಲವೋ; ಆನೀನು ಕರುಗಳ ರೂಪದಿಂದಲೂ ಪುತ್ರರ ರೂಪದಿಂದಲೂ ಪ್ರತಿಕ್ಷಣದಲ್ಲಿಯೂ ತೃಪ್ತಿಪಡುತಲಿರುವನಾಗಿ ಯಾವಗೋವುಗಳ ಮತ್ತು ಯಾವಗೋಪಾಂಗನೆಯರ ಅಮೃತರೂಪವಾದ ಸ್ತನಗಳಲ್ಲಿ ಇರುವ ಕ್ಷೀರವನ್ನು ಸಂತೋಷದಿಂದ ಪಾನಂಗೆಯ್ದಿಯೋ, ಅಂತಾ ವ್ರಜದಲ್ಲಿರುವ ಗೋವುಗಳೂ ಗೋಪಾಂಗನೆಯರೂ ಸಹ ಆಹಾ! ಅತ್ಯಂತಧನ್ಯರು. ॥೩೧॥ಎಲೈ, ಕೃಷ್ಣನೇ! ಮತ್ತು ಪರಿಪೂರ್ಣನಾಗಿ, ಪರಮಾನಂದರೂಪನಾಗಿ, ಆದಿಕಾರಣನಾಗಿ, ಪರಬ್ರಹ್ಮ ಸ್ವರೂಪನಾಗಿಯೂ, ಇರುವ ನೀನೇ ಯಾರಿಗೆ ಪರಮಮಿತ್ರನಾಗಿ ಇರುವೆಯೋ ಅಂತಾ ಜನರ ಭಾಗ್ಯವೇ ಭಾಗ್ಯವು. ಅಕಟಕಟಾ! ಅವರ ಭಾಗ್ಯಕ್ಕೆ ಕೊರತೆಯಿಲ್ಲವು.॥೩೨॥ಎಲೈ, ಕೃಷ್ಣನೇ! ಶ್ರೋತ್ರಾದಿದಶೇಂದ್ರಿಯಗಳು ಮನೋಬುದ್ಧ್ಯಹಂಕಾರಗಳು ಅಂತು ೧೩ ಹದಿಮೂರರಲ್ಲಿ ಕ್ರಮದಿಂ ದೊಂದೊಂದಕ್ಕೆ ಅಭಿಮಾನಿಗಳಾದ- ದಿಕ್ಕುಗಳು; ವಾಯುವು, ಸೂರ್ಯನು, ವರುಣನು, ಅಶ್ವಿನೀದೇವತೆಗಳು, ಅಗ್ನಿಯು, ಇಂದ್ರನು, ಉಪೇಂದ್ರನು, ಮೃತ್ಯುವು, ಪ್ರಜಾಪತಿ, ಚಂದ್ರನು, ರುದ್ರನು, ಬ್ರಹ್ಮನಾದನಾನು, ಸಹ ಹದಿಮೂರು ಮಂದಿಯಾದ- ರುದ್ರನೇ ಮುಖ್ಯನಾದವರಾದ- ನಾವು, ಯಾವಕಾರಣದಿಂದ ಈಗೋಕುಲ ವಾಸಿಗಳಾದ ಜನರ ಇಂದ್ರಿಯಂಗಳೆಂಬ ಪಾತ್ರಂಗಳಿಂದ, ಹದಿನಾಲ್ಕನೆಯವನಾಗಿ ಚಿತ್ತಕ್ಕೆ ಅಭಿಮಾನಿ ಯಾಗಿರುವ ವಾಸುದೇವನಾದ ನಿನ್ನ

ದಯೊಂಘ್ರ್ಯುದಜಮಧ್ವಮೃತಾಸವಂತೇ ॥೩೩॥ ತದ್ಭೂರಿಭಾಗ್ಯಮಿಹಜನ್ಮಕಿಮಪ್ಯಟವ್ಯಾಂಯದ್ಗೋಕು
ಲೇಪಿಕತಮಾಂಘ್ರಿರಜೋಭಿಷೇಕಮ್ । ಯಜ್ಜೀವಿತಂತುನಿಖಿಲಂಭಗವಾನ್ಮುಕುಂದಸ್ತ್ವದ್ಯಾಪಿಯತ್ಪದರಜ
ಶ್ಶ್ರುತಿಭಿರ್ವಿಮೃಗ್ಯಮ್॥೩೪॥ ಏಷಾಂಘೋಷನಿವಾಸಿನಾಮುತಭವಾನ್ಕಿಂದೇವರಾತೇತಿನ। ಶ್ಚೇತೋವಿಶ್ವಫಲಾ
ತ್ಫಲಂತ್ವದಪರಂಕುತ್ರಾಪ್ಯಯನ್ಮುಹ್ಯತಿ। ಸದ್ವೇಷಾದಿವಪೂತನಾಪಿಸಕುಲಾತ್ವಾಮೇವದೇವಾಪಿತಾ। ಯದ್ಧಾ

---

ಗಿಯೂ ಇರುವರಸವನ್ನು, ಅಸಕೃತ್-ಅನೇಕಾವರ್ತಿ, ಪಿಬಾಮಃ-ಕುಡಿಯುವೆವಾದ್ದರಿಂದಲೇ, ಭೂರಿಭಾಗಾಃ- ಹೆಚ್ಚು ಪುಣ್ಯವುಳ್ಳವರು ಬತ-ಆಶ್ಚರ್ಯವು ॥೩೩॥ ಯತ್ಪದರಜಃ-ಯಾವವನಚರಣಧೂಳಿಯು, ಅದ್ಯಾಪಿ- ಈಗಲೂಕೂಡ, ಶ್ರುತಿಭಿಃ- ವೇದಗಳಿಂದ, ವಿಮೃಗ್ಯಂ-ಹುಡುಕಲ್ಪಡತಕ್ಕದ್ದಾಗಿರುವುದೋ, ಭಗವಾನ್-ಪರಮೇಶ್ವರನಾದ, ಮುಕುಂದಃ-ಮೋಕ್ಷದಾಯಕನಾದಕೃಷ್ಣನು, ನಿಖಿಲಂ-ಸಮಸ್ತವಾದ, ಯಜ್ಜೀವಿತಂ-ಯಾಜನ್ಮವುಳ್ಳವರಬದುಕಾಗಿದೆಯೋ, ತತ್-ಅಂತಾ, ಇಹ-ಈಲೋಕದಲ್ಲಿ, ಅಟವ್ಯಾಂ- ಬೃಂದಾವನದಲ್ಲಿ, ತತ್ರಾಪಿ-ಅದರೊಳಗೂ, ಗೋಕುಲೇ - ನಂದವ್ರಜದಲ್ಲಿ, ಕತಮಾಂಘ್ರಿರಜೋಭಿಷೇಕಂ- ಕತಮ- ಯಾವನಾದರೊಬ್ಬನ, ಅಂಘ್ರಿರಜಃ-ಚರಣಧೂಳಿಯ, ಅಭಿಷೇಕಂ-ಸ್ನಾನವುಳ್ಳ, ಕಿಮಪಿ-ಯಾವುದೋಒಂದು, ಜನ್ಮ-ಶರೀರವು, ಯತ್-ಯಾವುದೋ, ತತ್-ಅದು, ಭೂರಿಭಾಗ್ಯಂ-ಬಹುಪುಣ್ಯವುಳ್ಳದ್ದು ॥೩೪॥ ಹೇದೇವ-ಎಲೆದೇವನೇ, ಭವಾನ್-ನೀನು, ಏಷಾಂ-ಈ, ಘೋಷನಿವಾಸಿನಾಂ-ಗೋಕುಲದಲ್ಲಿರುವವರಿಗೆ, ಕಿಮುತ-ಯಾವಫಲವನ್ನು ತಾನೆ, ರಾತಾ-ಕೊಡುವವನಾಗುವಿ, ಇತಿ-ಹೀಗೆಂದು, ನಃ-ನಮ್ಮ, ಚೇತಃ-ಮನಸ್ಸು ವಿಶ್ವಫಲಾತ್-ವಿಶ್ವ-ಸರ್ವಕ್ಕೂ, ಫಲಾತ್-ಪ್ರಯೋಜನವಾಗಿರುವ, ತ್ವತ್-ನಿನಗಿಂತಲೂ, ಅಪರಂ-ಬೇರೆಯಾದ, ಫಲಂತು-ಫಲವನ್ನಾದರೋ, ಕುತ್ರಾಪಿ-ಎಲ್ಲಿಯೂ, ಅಯತ್-ಹುಡುಕುವುದಾಗಿ, ದೊರೆಯದೇಮೋಹವನ್ನುಗೊಳ್ಳುತ್ತಿದೆ ಹೇದೇವ-ಎಲೆದೇವನೇ, ಪೂತನಾಪಿ-ಪೂತನೆಯೆಂಬರಕ್ಕಸಿಯೂಕೂಡ, ಸದ್ವೇಷಾದಿವ-ಸತ್-ಸತ್ಪುರುಷರ, ವೇಷಾದಿವ-ಅಲಂಕಾರದವೇಷದಿಂದಲೋ ಎಂಬಂತೆ ಸಕುಲಾ-ತಮ್ಮನಾದಬಕಾಸುರನಿಂದಸಹಿತಳಾಗಿ, ತ್ವಾಮೇವ-ನಿನ್ನನ್ನೇ, ಅಪಿತಾ-ಹೊಂದಿಸಲ್ಪಟ್ಟವಳಾದಳು(ಆದರೆ)ಯದ್ಧಾ . . .

---

ಪಾದಪದ್ಮಗಳಲ್ಲಿರುವ ಮನೋಹರವಾದ ಮದಕರವಾದ ಮಕರಂದವೆಂಬ ಅಮೃತವಂ, ಬಾರಿಬಾರಿಗೂ ಪಾನಂಗೆಯ್ಯುತ ಇಷ್ಟುಮಹಾ ಭಾಗ್ಯವಂತರಾಗುತಲಿರುವೆವು. ಆದುದರಿಂದ ಈಗೋಕುಲವಾಸಿಗಳಾದ ಜನರ ಭಾಗ್ಯದ ಮಹಿಮೆಯಂ ಪೇಳಲು ಯಾವವನು ಸಮರ್ಥನಾಗುವನು, ॥೩೩॥ ಎಲೈಶ್ರೀಹರಿಯೇ! ಯಾವನಿನ್ನ ಪಾದಪದ್ಮಗಳ ರಜಸ್ಸು ವೇದಗಳಿಂದಲೂಕೂಡ ಅರಸಲ್ಪಡುವುದೇಹೊರತು ಪ್ರತ್ಯಕ್ಷವಾಗಿ ಕಾಣಲ್ಪಡುವುದಿಲ್ಲವೋ, ಅಂತಾ ಭಗವಂತನಾದ ನೀನು ಯಾವ ಗೋಕುಲ ವಾಸಿಗಳಾದ ಜನರಿಗೆ ಸಮಸ್ತ ಜೀವನರೂಪನಾಗಿರುವೆಯೋ ಈಲೋಕದಲ್ಲಿ ಅದರಲ್ಲಿಯೂ ಬೃಂದಾವನದಲ್ಲಿ ಅದರಲ್ಲಿಯೂ ಗೋಕುಲದಲ್ಲಿ ಅಂತಾ ಗೋಕುಲವಾಸಿಗಳಲ್ಲಿ ಯಾವವನಾದರು ಒಬ್ಬನ ಪಾದಧೂಳಿಗಳಿಂದ ಅಭಿಷೇಕವನ್ನುಂಟುಮಾಡಿಕೊಳ್ಳುವ ಒಂದಾನೊಂದು ಜನ್ಮವಾವುದುಂಟೋ, ಆಜನ್ಮವೇ ಮಹಾಭಾಗ್ಯವುಳ್ಳುದು ಆದುದರಿಂದ ಆಜನ್ಮವು ನನಗೆ ಉಂಟಾಗಲಿ. ॥೩೪॥ ಎಲೈ ಶ್ರೀಕೃಷ್ಣನೇ! ಮತ್ತು ಯಾರ ಗೃಹಂಗಳು, ದ್ರವ್ಯಂಗಳು, ಪುತ್ರರು ಪ್ರಿಯರು, ಆಪ್ತರು, ದೇಹಂಗಳು ಬಂಧುಗಳು, ಪ್ರಾಣಂಗಳು ಮೊದಲಾದವು, ಕೂಡ ನಿನಗೋಸುಗವೇ ಇರುವವೋ ಅಂತಾ ಈ ನಂದಗೋಕುಲದಲ್ಲಿ ವಾಸಂಗೆಯ್ದ ಗೋಪಾಲರು ಗೋಪಸ್ತ್ರೀಯರು ಮೊದಲಾದವರಿಗೆ ನಿನ್ನಲ್ಲಿರುವ ಭಕ್ತಿಯಿಂದ ನೀನು ಋಣಗ್ರಸ್ತನಂತೆ ಅವರಿಗೆ ವಶ್ಯನಾಗಿರುವಿ. ("ಆದರೆ ಯಾವುದರಿಂದ ನಾನು ಸಾಲಗಾರನಾಗುವೆನು? ಅದಕ್ಕೆ ಪ್ರತಿಫಲವಂ ಕೊಡಲು ನನಗೆ ಸಾಮರ್ಥ್ಯವಿಲ್ಲವೋ?" ಎಂದಲ್ಲಿ) ಇವರಿಗೆ ಸರ್ವಫಲಾತ್ಮಕನಾಗಿರುವ ನಿನಗಿಂತಲೂ ಅನ್ಯವಾದ ಯಾವಫಲವನ್ನು ನೀನು ಕೊಡುವೆಯೋ ಎಂದು ನನ್ನ ಚಿತ್ತವು ಸರ್ವತ್ರ ಸಂಚರಿಸಿ ವಿಚಾರಿಸುವುದಾದರೂ ಇವರಿಗೆ ತಕ್ಕಫಲವಂ ಅರಿಯದೆ ಮೋಹವನ್ನೇ ಪಡೆಯುತಲಿದೆ. ("ಆದರೆ ನನ್ನನ್ನೇ ದಯೆಗೆಯ್ದು ಋಣವಂ ಪರಿಹರಿಸಿಕೊಳ್ಳುವೆನು." ಎಂದಲ್ಲಿ) ಭಕ್ತರವೇಷವಂ ಧರಿಸಿ ನಟನೆಗೆಯ್ದ ಮಾತ್ರದಿಂದ ಪಾಪಿಷ್ಠಳಾದ ಪೂತನೆಯೂ ಕೂಡ ತನ್ನ ಸಹೋದರರಾದ ಅಘಾಸುರ ಬಕಾಸುರರೊಡನೆ ನಿನ್ನನ್ನೇ ಹೊಂದಿಸಲ್ಪಟ್ಟಳು. (ಇವರಿಗೂ "ಆರೀತಿಯಿಂದ ನನ್ನ

ಮಾರ್ಥಸುತಪ್ರಿಯಾತ್ಮತನುಗೋಪ್ರಾಣಾಶಯಾಸ್ತ್ವತ್ಕೃತೇ॥೩೫॥ತಾವದ್ರಾಗಾದಯಃಸ್ತೇನಾಸ್ತಾವತ್ಕಾ ರಾಗೃಹಂ ಗೃಹಮ್ | ತಾವನ್ಮೋಹೋಂಘ್ರಿನಿಗಳೋಯಾವತ್ಕೃಷ್ಣನತೇಜನಾಃ ॥೩೬॥ಪ್ರಪಂಚಂನಿಷ್ಪ್ರಪಂ ಚೋಪಿವಿಡಮ್ಬಯಸಿಮಾಯಯಾ | ಪ್ರಸನ್ನಜನತಾನನ್ದಸನ್ದೋಹಂಪ್ರಥಿತುಂಭವಾನ್ ॥೩೭॥ ಜಾನನ್ತ

---

ಶಯಾಃ..ಯತ್-ಯದ್ವಗೋಕುಲವಾಸಿಗಳ, ಧಾಮ-ಸ್ಥಾನವೂ, ಅರ್ಥ-ಪ್ರಯೋಜನವೂ, ಸುತ-ಮಕ್ಕಳೂ, ಪ್ರಿಯ-ಇಷ್ಟರೂ, ಆತ್ಮ-ಜೀವನೂ, ತನು-ಶರೀರವೂ, ಗೋ-ಪಶುಗಳೂ, ಪ್ರಾಣ-ಪ್ರಾಣಗಳೂ, ಆಶಯಾಃ-ಹೃದಯಾಭಿಪ್ರಾಯಗಳೂ ಕೂಡ, ತ್ವತ್ಕೃತೇ-ನಿನಗೋಸುಗವೇ ಆಗಿವೆಯೋ, (ಅಂತವರಿಗೆ ನಿನ್ನನ್ನೇ ಹೊರತು ಯೇನನ್ನು ಕೊಟ್ಟೀಯೆ) ॥೩೫॥ ಹೇಕೃಷ್ಣ- ಎಲೈಕೃಷ್ಣನೇ, ಜನಾಃ-ಜನಗಳು, ಯಾವತ್-ಯಾವವರೆಗೂ, ನತೇ-ನಿನ್ನವರಾಗುವುದಿಲ್ಲವೋ, ತಾವತ್-ಅವರೆಗೂ, (ಅವರ) ರಾಗಾದಯಃ-ಕಾಮಕ್ರೋಧಾದಿಗಳೇ, ಸ್ತೇನಾಃ-ಕಳ್ಳರಾಗಿರುವರು, ಗೃಹಂ-ಮನೆಯು, ತಾವತ್-ಅವರೆಗೂ, ಕಾರಾಗೃಹಂ-ಸೆರೆಮನೆಯಾಗಿರುವುದು, ಮೋಹಃ-ಪುತ್ರದಾರಧನಾದಿಗಳಲ್ಲಿ ಮಮತೆಯು, ತಾವತ್-ಅವರೆಗೂ, ಅಂಘ್ರಿನಿಗಳಃ-ಕಾಲುಸಂಕಲೆಯಾಗಿರುವುದು, ॥೩೬॥ ಭವಾನ್-ನೀನು, ನಿಷ್ಪ್ರಪಂಚೋಪಿ-ದ್ವೈತವ್ಯಾಪಾರವಿಲ್ಲದವನಾದರೂ, (ಜಗದ್ವ್ಯಾಪಾರವರ್ಜ್ಯನಾದರೂ) ಮಾಯಯಾ-ಮೂಲಪ್ರಕೃತಿಯಿಂದ, ಶಬಳನಾಗಿ, ಪ್ರಪನ್ನಜನತಾನಂದಸಂದೋಹಂ-ಪ್ರಪನ್ನ-ಶರಣಾಗತರಾದ, ಅಥವಾ ನಂಬಿದವರಾದ, ಜನತಾ- ಜನಸಮೂಹದ, ಆನಂದಸಂದೋಹಂ-ಸುಖಪರಂಪರೆಯನ್ನು, (ಆನಂದಧಾರೆಯನ್ನು) ಪ್ರಥಿತುಂ-ಪ್ರಖ್ಯಾತಿಗೊಳಿಸಲೋಸುಗ, ಪ್ರಪಂಚಂ-ಲೋಕವನ್ನು, ವಿಡಂಬಯಸಿ-ಅನುವರ್ತಿಸುವಿ ॥೩೭॥ ಹೇಪ್ರಭೋ- ಎಲೈಸಮರ್ಥನಾದಕೃಷ್ಣನೇ, ಜಾನಂತಏವ-ನಿನ್ನನ್ನು ದಿಟವಾಗಿ ಬಲ್ಲೆನೆಂಬುವರೇ, ಜಾನಂತು-ತಿಳಿದಿರಲಿ, ಬಹೂಕ್ತ್ಯಾ-ಹೆಚ್ಚುಮಾತಿನಿಂದ, ಕಿಂ-ಏನುಪ್ರಯೋಜನವು, ತವ-ನಿನ್ನ, ವೈಭವಂ-ಐಶ್ವರ್ಯವು, ಮೇ-ನನ್ನ, ಮನಸಃ-ಅಂತರಂಗಕ್ಕೂ, ವಪುಷಃ-ಶರೀರಕ್ಕೂ, ವಾಚಃ-ವಾಕ್ಕಿಗೂ, ನಗೋಚರಂ-ಕಾಣಿಸುವದಲ್ಲ, (ವಿಷ

---

ಸ್ನೇ ಫಲವನಾಗಿತ್ತು ಸಾಲತೀರಿಸಿಕೊಳ್ಳುವೆ ಃ ನೆಂದರೆ ಆ ಫಲವು ನಿಶ್ಚಯವಾಗಿ ಅವರಿಗೆ ಸಾಲವೆಂದು ನಿರ್ಣಯ ಗೈಯ್ಯನು.) ಯಾರ ಮನೆಮುಂತಾದ ಸಮಸ್ತಪದಾರ್ಥಗಳೂ ನಿನಗೋಸುಗ ಅರ್ಪಿಸಲ್ಪಟ್ಟಿರುವವೋ, ಅಂತಾ ಭಕ್ತಿಯುಕ್ತರಾದ ಗೋಕುಲವಾಸಿಗಳಿಗೆ ಮುಕ್ತಿರೂಪನಾದ ನಿನ್ನನ್ನು ನೀನು ಕೊಟ್ಟರೂ ಎಂತು ಸಾಕಾದೀತು? ನೀನು ಗೋಕುಲವಾಸಿಗಳ ಭಕ್ತಿಯಿಂದ ಅವರಿಗೆ ಋಣಗ್ರಸ್ತನೇಸರಿ.] ॥೩೫॥ (ರಾಗಾದಿ ರಹಿತರಾದ ಸನ್ಯಾಸಿಗಳಿಗೂ ಕೂಡ ನನಗಿಂತಲೂ ಅನ್ಯವಾದ ಪರಮಪುರುಷಾರ್ಥವು ಲೇಶಮಾತ್ರವಾದರೂಯಿಲ್ಲ. ಹೀಗಿರುವಲ್ಲಿ ಗೋಕುಲವಾಸಿಗಳಿಗೆ ನನ್ನನ್ನೇ ಕೊಟ್ಟರೆ ಹೇಗೆಸಾಲದು? ಎಂದರೆ ವಿಜ್ಞಾಪನಗೆಯ್ಯನು.) ಎಲೈ, ಕೃಷ್ಣದೇವನೇ! ಲೋಕದಲ್ಲಿ ಜನರು ಎಷ್ಟು ಪರ್ಯಂತರವೂ ನಿನ್ನಭಕ್ತರಾಗದೇ ಇರುವರೋ ಅಷ್ಟುಪರ್ಯಂತರವೂ ಅವರಿಗೆ ಕಾಮಕ್ರೋಧಾದಿಗಳುಂಟಾಗುವವು. ಮತ್ತು ಅಷ್ಟುಪರ್ಯಂತರವೂ ಅವರು ಚೋರರಾಗಿರುವರು. ಹಾಗೆಯೇ ಅವರ ಮನೆಯು ಸೆರೆಸಾಲೆಯಾಗಿರುವುದು. ಮತ್ತು ಮೋಹವೂಸಹ ಅವರಪಾದಂಗಳಿಗೆ ಸಂಕಲೆ ಯಾಗಿರುವುದು. ನಿನ್ನ ಭಕ್ತರಿಗಾದರೋ ಒಂದು ವೇಳೆಯಲ್ಲಿ ಕಾಮ ಕ್ರೋಧಾದಿಗಳುಂಟಾದರೂ ಅವೂಸಹ ನಿನ್ನಲ್ಲೇ ನಿಷ್ಠೆಯುಳ್ಳವಾಗಿ ಅವರಸಂಸಾರ ಬಂಧವು ಪರಿಹರಿಸುವವು. ಆದ್ದರಿಂದ ಆಸನ್ಯಾಸಿಗಳಲ್ಲಿ ಮತ್ತೆಯೇನೂ ವಿಶೇಷವಿಲ್ಲ. ಅವರಿಗಿಂತಲೂ ನಿನ್ನ ಭಕ್ತರಲ್ಲಿ ಭಜನವೆಂಬುವುದೊಂದು ವಿಶೇಷವು ಅಧಿಕವಾಗಿರುವುದು. ॥೩೬॥ (ಆದ್ದರಿಂದಲೇ ನಾನು ಇವರಿಗೆ ಪುತ್ರಾದಿರೂಪದಿಂದ ಇರುವೆನೆಂದಲ್ಲಿ ವಿಜ್ಞಾಪಿಸುವನು-) ಎಲೈ, ವ್ಯಾಪಕನಾದ ಶ್ರೀ ಕೃಷ್ಣಮೂರ್ತಿಯೇ! ಲೋಕದಲ್ಲಿ ಶರಣಾಗತವಾದ ಜನಸಮೂಹಕ್ಕೆ ಆನಂದಪರಂಪರೆಯಂ ವಿಸ್ತರಿಂಗೆಯ್ಯಲೋಸುಗ ನೀನು ನಿಷ್ಪ್ರಪಂಚನಾದರೂ ಪ್ರಪಂಚವನನುಸರಿಸಿ ನಟನಂಗೆಯ್ಯುತಲಿರುವಿ. ಆದ್ದರಿಂದ ಇಂತಾ ಕಪಟವಾದ ಪುತ್ರತ್ವಾದಿಗಳಿಂದ, ಗೋಕುಲವಾಸಿಗಳ ಅಂತಾ ಭಕ್ತಿಯು ಸಾಲತೀರಲಾರದು. [ನೀನೂ ಋಣಮುಕ್ತನಾಗಲಾರೆ.] ॥೩೭॥ (ಈ ರೀತಿಯಾಗಿ ಈವರೆಗೂ ಭಗವಂತನು ಚಿಂತಿಸಲು ಅಶಕ್ಯವಾದ ಅನಂತಗುಣಗಳುಳ್ಳವ ನಾದುದರಿಂದ ಸ್ವತಃ ತಿಳಿಯಲಶಕ್ಯನೆಂದು ಹೇಳಿ, ಈ

ಏವಜಾನನ್ತು ಕಿಂಬಹೂಕ್ತ್ಯಾನಮೇಪ್ರಭೋ। ಮನಸೋವಪುಷೋವಾಚೋವೈಭವಂತವಗೋಚರಃ ॥೩೮॥
ಅನುಜಾನೀಹಿಮಾಂಕೃಷ್ಣಸರ್ವಂತ್ವಂವೇತ್ಸಿಸರ್ವದೃಕ್ ।ತ್ವಮೇವಜಗತಾಂನಾಥೋಜಗಚ್ಚೈತತ್ತವಾರ್ಪಿತ
ಮ್॥೩೯॥ಶ್ರೀಕೃಷ್ಣವೃಷ್ಣಿಕುಲಪುಷ್ಕರಜೋಷದಾಯಿನ್ ಕ್ಷ್ಮಾನಿರ್ಜರದ್ವಿಜಪಶೂದಧಿವೃದ್ಧಿಕಾರಿನ್। ಉ
ದ್ಧರ್ಮಶಾರ್ವರಹರಕ್ಷಿತಿರಾಕ್ಷಸಧ್ರುಗಾಕಲ್ಪಮಾರ್ಕಮರ್ಹನ್ * ಭಗವನ್ನಮಸ್ತೇ॥೪೦॥ಶ್ರೀಶುಕಃ॥ಇತ್ಯಭಿ
ಷ್ಟೂಯಭೂಮಾನಂತ್ರಿಃಪರಿಕ್ರಮ್ಯಪಾದಯೋಃ।ನತ್ವಾಭೀಷ್ಟಂಜಗದ್ಧಾತಾಸ್ವಧಾಮಪ್ರತ್ಯಪದ್ಯತ॥೪೧॥

---

ಯುವೆಲ್ಲವು, ದೊರೆಯುವುದಿಲ್ಲ) ॥೩೮॥ಕೃಷ್ಣ-ಕೃಷ್ಣನೇ, ಸರ್ವದೃಕ್-ಸಕಲಸಾಕ್ಷಿಯಾದ, ತ್ವಂ-ನೀನು, ಸರ್ವಂ-ಎಲ್ಲವನ್ನೂ, ವೇತ್ಸಿ-ತಿಳಿದಿರುವಿ ತ್ವಮೇವ-ನೀನೇ, ಜಗತಾಂ-ಜಗತ್ತುಗಳಿಗೆ, ನಾಥಃ-ಒಡೆಯನಾಗಿರುವಿ. ಏತಜ್ಜಗಚ್ಚ- ಈಪ್ರಪಂಚವೂ, ತವ-ನಿನಗೆ, ಅರ್ಪಿತಂ -ಸಮರ್ಪಿಸಲ್ಪಟ್ಟಿರುವುದು, ಮಾಂ-ನನ್ನನ್ನು ಕುರಿತು, ಅನುಜಾನೀಹಿ- ಹೋರಡುವುದಕೆಅನುಜ್ಞೆಯಂಕೊಡುವನಾಗು ॥೩೯॥ವೃಷ್ಣಿಕುಲಪುಷ್ಕರಜೋಷದಾಯಿನ್-ವೃಷ್ಣಿಕುಲ-ಯಾದವರಲ್ಲಿವೃಷ್ಣಿಗಳವಂಶವೆಂಬ, ಪುಷ್ಕರ-ಕಮಲಕ್ಕೆ, ಜೋಷದಾಯಿನ್- ಸೂರ್ಯನಹಾಗೆಪ್ರೀತಿಯಕೊಡುವವನೇ! ಕ್ಷ್ಮಾ .. ಕಾರಿನ್_ಕ್ಷ್ಮಾ-ಭೂಮಿ, ನಿರ್ಜರ-ದೇವತೆಗಳು, ದ್ವಿಜ-ಬ್ರಾಹ್ಮಣರು, ಪಶು-ಗೋವುಗಳು, ಎಂಬ-ಉದಧಿ-ಸಮುದ್ರಕ್ಕೆ, ವೃದ್ಧಿಕಾರಿನ್-ಚಂದ್ರನಹಾಗೆವೃದ್ಧಿಯನ್ನು ಮಾಡುವವನೇ! ಉದ್ಧರ್ಮ- ಪಾಷಂಡಧರ್ಮವೆಂಬ, ಶಾರ್ವರ-ಇರುಳಿನ, ಇರುಳಿನಕತ್ತಲೆಯನ್ನು, ಹರ-ದೀಪಾಗ್ನಿನಕ್ಷತ್ರಗಳಂತೆಪರಿಹರಿಸುವನೇ! ಕ್ಷಿತಿರಾಕ್ಷಸಧ್ರುಕ್-ಕ್ಷಿತಿ-ಭೂಮಿಯಲ್ಲಿರುವ, ರಾಕ್ಷಸ-ಕಂಸಾದಿಗಳಿಗೆ, ಧ್ರುಕ್-ದ್ರೋಹಮಾಡುವವನೇ! ಅರ್ಹನ್-ಎಲ್ಲರಿಗೂಪೂಜ್ಯನಾದವನೇ, ಭಗವನ್-ಷಡ್ಗುಣೈಶ್ವರ್ಯಮುಳ್ಳವನೇ, ಶ್ರೀಕೃಷ್ಣ-ಲಕ್ಷ್ಮೀಪತಿಯಾದಕೃಷ್ಣನೇ, ಆರ್ಕಂ- ಸೂರ್ಯನಿರುವವರೆಗೂ, ಆಕಲ್ಪಂ-ಪ್ರಳಯದವರೆಗೂ, ತೇ-ನಿನಗೆ, ನಮಃ-ನಮಸ್ಕಾರವಾಗಲಿ ॥೪೦॥ [ಶುಕವಚನವು ]ಜಗದ್ಧಾತಾ-ಜಗತ್-ಪ್ರಪಂಚಕ್ಕೆ,ಧಾತಾ-ಸೃಷ್ಟಿಕರ್ತನಾದಬ್ರಹ್ಮನು, ಭೂಮಾನಂ-ದೊಡ್ಡದೇವರಾದಕೃಷ್ಣನನ್ನು, ಇತಿ-ಹೀಗೆ, ಅಭಿಷ್ಟೂಯ-ಸ್ತೋತ್ರಮಾಡಿ, ತ್ರಿಃಪರಿಕ್ರಮ್ಯ-ಮೂರುಸಲಪ್ರದಕ್ಷಿಣಮಾಡಿ, ಪಾದಯೋಃ-ಅಡಿಗಳಲ್ಲಿ, ನತ್ವಾ-ಎರಗಿ, ಅಭೀಷ್ಟಂ-ಬೇಕಾದ, ಸ್ವಧಾಮ-ತನ್ನ ಸತ್ಯಲೋಕವನ್ನು, ಪ್ರತ್ಯಪದ್ಯತ-ಸೇರಿದನು॥೪೧॥ಭಗವಾನ್-ಭಗವಂತನಾದಕೃಷ್ಣನು, ಸ್ವಯಂಭುವಂ-ತಾನಾಗಿಹುಟ್ಟಿದಬ್ರಹ್ಮನನ್ನು, ಅಥವಾ ತನ್ನ ಮಗನಾದಬ್ರಹ್ಮನ

---

ಭಗವಂತನ ಸ್ವರೂಪವನ್ನು ನಾವು ಬಲ್ಲೆವೆಂದು ನುಡಿಯುವ ಕೆಲವರಂ ಕುರಿತು ಹಾಸ್ಯಂಗೆಯ್ವನ ಹಾಗೆ ವಿಜ್ಞಾಪಿಸುವನು.) ಎಲೈ, ಪ್ರಭುವಾದ ಶ್ರೀಕೃಷ್ಣನೇ! ನಿನ್ನ ಮಹಿಮೆಯಂ ತಿಳಿಯುತ್ತೇವೆ ಎಂಬುವರು ತಿಳಿಯಲಿ. ಹಲವು ಮಾತುಗಳಂ ನುಡಿಯುವದರಿಂದ ಫಲವೇನು? ನನ್ನ ಮನೋವಾಕ್ಕಾಯ ಕರ್ಮಗಳಿಗೆ ನಿನ್ನ ಮಹಿಮೆಯು ಗೋಚರವಲ್ಲ ॥೩೮॥ ಎಲೈ, ಶ್ರೀಕೃಷ್ಣಮೂರ್ತಿಯೆ! ನೀನು ಸರ್ವಸಾಕ್ಷಿಯಾದುದರಿಂದ ನಿನ್ನ ಮಹಿಮೆಯನ್ನು ನಮ್ಮ ?ನಬಲಾದಿಸಮಸ್ತ ವ್ಯಾಪಾರವನ್ನೂ ಸಹ ತಿಳಿಯುತಲಿರುವಿ. ನಾನಾದರೋ, ನೀನೇ ಸಮಸ್ತಲೋಕಂಗಳಿಗೂ ?ನೆಂದು ಇಷ್ಟುಮಾತ್ರವನ್ನೇ ಬಲ್ಲೆನು. ಆದುದರಿಂದ ಇದು ನನ್ನದೆಂಬ ಮಮತೆಗೆ ವಿಷಯವಾಗಿರುವ ಜಗತ್ತೂ ?ನ್ನ ಶರೀರವೂ ನನ್ನಿಂದ ನಿನಗೆ ಸಮರ್ಪಿಸಲ್ಪಟ್ಟಿತು. ನನಗೆ ಅನುಜ್ಞೆಯಂ ಕೊಡುವನಾಗು. ॥೩೯॥ ಯಾದವ ?ಂಬ ಪದ್ಮಕ್ಕೆ ಪ್ರೀತಿಯನುಂಟು ಮಾಡುವ ನಾದುದರಿಂದ ಸೂರ್ಯನಿಗೆ ಸಮಾನನಾದ, ಮತ್ತು ಭೂಮಿದೇ ಬ್ರಾಹ್ಮಣರು ಗೋವುಗಳು ಇವೆಂಬ ಸಮುದ್ರಗಳಿಗೆ ಅಭಿವೃದ್ಧಿಯನುಂಟು ಮಾಡುವುದರಿಂದ ಪೂರ್ಣಚಂ ?ನನಾದ, ಮತ್ತು ಪಾಷಂಡಧರ್ಮವೆಂಬ ಅಂಧಕಾರಕ್ಕೆ ಪರಿಹಾರಕನಾದುದರಿಂದ ಸೂರ್ಯ ಚಂದ್ರರಿಗೆ ?, ಭೂಮಿಯಲ್ಲಿರುವ ಕಂಸಾದಿ ರಾಕ್ಷಸರಿಗೆ ಉದ್ಭವಿಸುವನಾಗುತಲೇ ದ್ರೋಹಂಗೆಯ್ವ ನಾದುದರಿಂದ ?ನಿಗೆ ಸಮಾನನಾದ,[ಸೂರ್ಯೋದಯವಾದರೆ ನಿಶಾಚರರಿಗೆ ಭಯವಾಗುವುದು.]ಮತ್ತು ಸೂರ್ಯಾ ?ಗಳಿಗೂ ಪೂಜ್ಯನಾದ, ಭಗವಂತನಾದ, ಶ್ರೀಕೃಷ್ಣನೇ! ಕಲ್ಪಪರ್ಯಂತವೂ ನಿನಗೆ ನಮಸ್ಕಾರವೆಂದು ?ನು.॥೪೦॥ಎಲೈ, ಪರೀಕ್ಷಿದ್ರಾಯನೇ! ಕೇಳು ಜಗತ್ತಿಗೆ ಸೃಷ್ಟಿಕರ್ತೃವಾದ ಬ್ರಹ್ಮದೇವನು-ರ್ವ ಪೂ ?ತ್ಯಂತ ಪ್ರಿಯನಾದ ಶ್ರೀಕೃಷ್ಣದೇವನಂ ಈರೀತಿಯಿಂದ ಸ್ತೋತ್ರಂಗೆಯ್ದು ಮೂರುಬಾರಿ ಪ್ರ ?ಾದಂಗಳಿಗೆ ನಮಸ್ಕರಿಸಿ ತನ್ನ ಸ್ಥಾನವಾದ ಸತ್ಯಲೋಕವನ್ನು ಎಯ್ದಿದನು. ॥೪೧॥ ಅನಂತ

ತತೋನುಜ್ಞಾಪ್ಯಭಗವಾನ್ಸ್ವಭುವಂಪ್ರಾಗಿವಸ್ಥಿತಾನ್ । ವತ್ಸಾನ್ಪುಲಿನಮಾನಿನ್ಯೇಯಥಾಪೂರ್ವಸಖಂಸ್ವಕ
ಮ್॥೪೦॥ ಏಕಸ್ಮಿನ್ನಪಿಯಾತೇಬ್ದೇಪ್ರಾಣೇಶಂಚಾನ್ತರಾತ್ಮನಃ।ಕೃಷ್ಣಮಾಯಾಹತಾರಾಜನ್ಕ್ಷಣಾರ್ಧಂಮೇನಿ
॥ರೇರ್ಭಕಾಃ॥೪೧॥ ಕಿಂಕಿನ್ನವಿಸ್ಮರಂತೀಹಮಾಯಾಮೋಹಿತಚೇತಸಃ ।ಯನ್ಮೋಹಿತಂಜಗತ್ಸರ್ವಮಭೀಕ್ಷ್ಣಂವಿ
ಸ್ಮೃತಾತ್ಮಕಮ್॥೪೨॥ಊಚುಶ್ಚಸುಹೃದಂಕೃಷ್ಣಂಸ್ವಾಗತಂತೇತಿರಂಹಸಾ ।ನೈಕೋಪ್ಯಭೋಜಿಕಬಳಏಹಿತ
ತ್ಸಾಧುಭುಜ್ಯತಾಮ್॥೪೩॥ ತತೋಹಸನ್ಹೃಷೀಕೇಶೋಭ್ಯವಹೃತ್ಯಸಹಾರ್ಭಕೈಃ ।ದರ್ಶಯಂಶ್ಚರ್ಮಾಜಗರಂ
ನ್ಯವರ್ತತವನಾದ್ವ್ರಜಮ್॥೪೪॥ಬರ್ಹಪ್ರಸೂನನವಧಾತುವಿಚಿತ್ರಿತಾಂಗಃಪ್ರೋದ್ದಾಮವೇಣುದಳಶೃಂಗರ

---

ನ್ನು, ಅನುಜ್ಞಾಪ್ಯ-ಅಪ್ಪಣೆಕೊಟ್ಟುಕಳುಹಿಸಿ, ತತಃ-ಆಮೇಲೆ, ಪ್ರಾಗಿವ-ಮುನ್ನಿನಂತೆ, ಸ್ಥಿತಾನ್-ಇರುವ, ವತ್ಸಾನ್-ಕರುಗಳನ್ನು ಯಥಾಪೂರ್ವಸಖಂ-ಮುನ್ನಿನಂತೆಯೇಸ್ನೇಹಿತರುಳ್ಳ, ಸ್ವಕಂ-ತನ್ನದಾದ, ಪುಳಿನಂ-ಮರಳತಿಟ್ಟೆಯನ್ನುಕುರಿತು, ಆನಿನ್ಯೇ-ಕರೆತಂದನು ॥೪೦॥ ಹೇರಾಜನ್-ಎಲೈದೊರೆಯೇ, ಆತ್ಮನಃ-ಜೀವಾತ್ಮನಿಗೆ, ಅಥವಾತಮಗೆ, ಪ್ರಾಣೇಶಂ- ಪ್ರಾಣಕ್ಕೊಡೆಯನಾದ, ಕೃಷ್ಣಮಂತರಾಚ-ಕೃಷ್ಣನನ್ನುಹೊರತಿಪ್ಪುದುಕೂಡ, ಏಕಸ್ಮಿನ್-ಒಂದಾದ, ಅಬ್ದೇ-ಸಂವತ್ಸರವು, ಯಾತೇಸತ್ಯಪಿ- ಕಳೆದುಹೋದ್ದಾದರೂ, ಕೃಷ್ಣಮಾಯಾಹತಾಃ-ಕೃಷ್ಣನಮಾಯೆಯಿಂದಮೋಹಿತರಾದ, ಅರ್ಭಕಾಃ-ಹುಡುಗರು, ಕ್ಷಣಾರ್ಧಂ-ಸಂವತ್ಸರಕಾಲವನ್ನರೆನಿಮುಷವನ್ನಾಗಿ, ಮೇನಿರೇ-ತಿಳಿದರು ॥೪೧॥ ಜಗತ್ಸರ್ವಂ-ಪ್ರಪಂಚವೆಲ್ಲವೂ, ಯನ್ಮೋಹಿತಂಸತ್-ಯಾವಮಾಯೆಯಿಂದಮೋಹಗೊಳಿಸಲ್ಪಟ್ಟುದ್ದಾಗಿ, ಅಭೀಕ್ಷ್ಣಂ-ಅತಿಶಯವಾಗಿ, ವಿಸ್ಮೃತಾತ್ಮಕಂ-ವಿಸ್ಮೃತ-ಮರೆಯಲ್ಪಟ್ಟ, ಆತ್ಮಕಂ- ಆತ್ಮಸ್ವರೂಪವುಳ್ಳದಾಗುವುದೋ, ಮಾಯಾಮೋಹಿತಚೇತಸಃ- ಅಂತಾಮಾಯೆಯಿಂದಮೋಹಿಸಲ್ಪಟ್ಟಬುದ್ಧಿಯುಳ್ಳವರು, ಇಹ-ಈಲೋಕದಲ್ಲಿ, ಕಿಂಕಿಂ-ಆವಾವುದನ್ನು, ನವಿಸ್ಮರಂತಿ-ಮರೆತುಹೋಗುವುದುಇಲ್ಲವು? ॥೪೨॥ ಸುಹೃದಂ-ಪ್ರಿಯನಾದ, ಕೃಷ್ಣಂ-ಕೃಷ್ಣನನ್ನುಕುರಿತು, ತೇ-ನಿನಗೆ, ಸ್ವಾಗತಂ-ಸುಖಾಗಮನವಾಯಿತೇ? (ನೀನುಸುಖವಾಗಿಬಂದೆಯಾ,) ಏಕಃಕಬಳೋಪಿ-ಒಂದುತುತ್ತಾದರೂ, ನಾಭೋಜಿ-ಉಣಲ್ಪಡಲಿಲ್ಲವು. ತತ್-ಆಕಾರಣದಿಂದ, ಅತಿರಂಹಸಾ-ಬಹುವೇಗದಿಂದ, ಏಹಿ-ಬಾ, ಸಾಧು-ಚನ್ನಾಗಿ, ಭುಜ್ಯತಾಂ-ಉಣಲ್ಪಡಲಿ, ಎಂದು, ಊಚುಶ್ಚ-ಹೇಳಿದರು ॥೪೩॥ ತತಃ-ಆಮೇಲೆ, ಹೃಷೀಕೇಶಃ-ಇಂದ್ರಿಯಗಳಿಗೊಡೆಯನಾದಕೃಷ್ಣನು, ಅರ್ಭಕೈಸ್ಸಹ-ಹುಡುಗರೊಂದಿಗೆ, ಹಸನ್-ನಗುತಲಿರುವನಾಗಿ, ಅಭ್ಯವಹೃತ್ಯ-ಊಟಮಾಡಿ, ಆಜಗರಂಚರ್ಮ-- ಹೆಬ್ಬಸಲೆಹಾವಿನತೊಗಲನ್ನೂ, ದರ್ಶಯಂಶ್ಚ-ತೋರಿಸುತಲಿರುವನಾಗಿ, ವನಾತ್- ಬೃಂದಾರಣ್ಯದಿಂದ, ವ್ರಜಂ- ಗೋಕುಲವನ್ನುಕುರಿತು, ನ್ಯವರ್ತತ-ತಿರುಗಿದನು ॥೪೪॥

---

ರದಲ್ಲಿ ಭಗವಂತನಾದ ಶ್ರೀಕೃಷ್ಣನು ಬ್ರಹ್ಮದೇವನಂ ಕೇಳಿ ಪೂರ್ವದಲ್ಲಿದ್ದ ಕರುಗಳನ್ನು ಪೂರ್ವದಂತೆ ತನ್ನ ವಿಚಿತ್ರದಿಂ ಶೋಭಿಸುವ ತನ್ನದಾದ ಆಮರಳುದಿಣ್ಣೆಗೆ ಕರೆದುಕೊಂಡು ಬಂದನು. ॥೪೦॥ ("ಈವರೆಗೂ ಆ ಗೋಪಾಲ ಬಾಲಕರು ಎಂತು ಅಲ್ಲಿಯೇ ಇದ್ದರು? ಮತ್ತು ಅವರು ಹಸಿವುನೀರಡಿಕೆ, ಮೊದಲಾದುವನ್ನು ಹೇಗೆ ಮರೆತಿದ್ದರು?" ಎಂದಲ್ಲಿ ನುಡಿಯುವನು.) ಎಲೈ ಪರೀಕ್ಷಿದ್ರಾಯನೇ! ಯಾವ ಗೋಪಾಲ ಬಾಲಕರಿಗೆ ತಮ್ಮಪ್ರಾಣೇಶನಾದ ಶ್ರೀಕೃಷ್ಣನಂ ಹೊರತು ಒಂದುಕ್ಷಣವೂಸಹ ಸಂವತ್ಸರಕ್ಕಿಂತಲೂ ಅಧಿಕವಾಗಿರುವುದೋ, ಅಂತಾಗೋಪಬಾಲಕರು ಶ್ರೀಕೃಷ್ಣನ ಮಾಯೆಯಿಂದ ಮೋಹಿತರಾಗಿ ಒಂದು ಸಂವತ್ಸರವೇ ಕಳೆದು ಹೋದರೂ ಅಷ್ಟುಕಾಲವನ್ನು ಅರ್ಧಕ್ಷಣವನ್ನಾಗಿ ತಿಳಿದರು ॥೪೧॥ ಮಾಯೆಯಿಂದ ಮೋಹಿತವಾದ ಜಗತ್ತು ಹೇಗೆ ಬಾರಿಬಾರಿಗೂ ಮರೆಯಲ್ಪಟ್ಟ ಆತ್ಮಸ್ವರೂಪವುಳ್ಳದ್ದೋ, ಹಾಗೆಯೇ ಮಾಯಾಮೋಹಿತವಾದ ಚಿತ್ತವುಳ್ಳ ಜನರು ಆವಾವುದನು ತಾನೇ ಮರೆಯದೇ ಇರುವರು?॥ ಆದುದರಿಂದಲೇ ಸ್ನೇಹಿತರಾದ ಆ ಗೋಪಾಲ ಬಾಲಕರು ಶ್ರೀಕೃಷ್ಣನಂ ಕುರಿತು, ಎಲೈ ಮಿತ್ರನೇ! ಅತಿ ಶೀಘ್ರದಿಂ ನೀನು ಬಂದವನಾದೆ, ನಿನ್ನನ್ನು ಬಿಟ್ಟು ನಮ್ಮಿಂದ ಒಂದು ತುತ್ತಾದರೂ ಉಣಲ್ಪಡಲಿಲ್ಲವು. ಆದುದರಿಂದ ಇಲ್ಲಿಬಂದು ನಿಶ್ಚಿಂತನಾಗಿ ಭೋಜನವು ಮಾಡು॥೪೩॥ ಅನಂತರದಲ್ಲಿ ಗೋಪ ಬಾಲಕರಿಂದ ಹೀಗೆ ಹೇಳಲ್ಪಟ್ಟ ಶ್ರೀಕೃಷ್ಣನು ಮುಗುಳುನಗೆ ಯುಳ್ಳವನಾಗಿ ಆಬಾಲಕರೊಡಗೂಡಿ ಭೋಜನಂಗೆಯ್ದು ಅವರಿಗೆ ಆ ಅಜಗರ ಚರ್ಮವಂ ತೋರಿಸುತ ಆ ಕಾಡಿನವೆಸೆಯಿಂದ ಗೋಕುಲವಂ ಕುರಿತೆಯ್ದಿದನು.॥೪೪॥ಅದೆಂತೆನೆ- ನವಿಲುಗಳಿಂದಲೂ, ಪುಷ್ಪಗಳಿಂದಲೂ ವನದಲ್ಲಿ

ವೇಣೂತ್ಸವಾಢ್ಯಃ । ವತ್ಸಾನ್ ಗೃಣನ್ನನುಗಗೀತಪವಿತ್ರಕೀರ್ತಿರ್ಗೋಪೀದೃಗುತ್ಸವದೃಶಿಃ ಪ್ರವಿವೇಶ ಗೋಷ್ಠಮ್ ॥
ಅದ್ಯಾನೇನ ಮಹಾನ್ ವ್ಯಾಲೋ ಯಶೋದಾನಂದಸೂನುನಾ । ಹತೋ ಽವಿತಾ ವಯಂ ಚಾಸ್ಮಾದಿತಿ ಬಾಲಾ ವ್ರಜೇ ಜ
ಗುಃ ॥೪೮॥ ರಾಜಾ ॥ ಬ್ರಹ್ಮನ್ ಪರೋದ್ಭವೇ ಕೃಷ್ಣೇ ಇಯಾನ್ ಪ್ರೇಮಾ ಕಥಂ ಭವೇತ್ । ಯೋ ಽಭೂತಪೂರ್ವಸ್ತೋ ಕೇ
ಷು ಸ್ವೋದ್ಭವೇಷ್ವಪಿ ಕಥ್ಯತಾಮ್ ॥ ಶ್ರೀಶುಕಃ ॥ ಸರ್ವೇಷಾಮೇವ ಜಂತೂನಾಂ ನೃಪ ಸ್ವಾತ್ಮೈವ ವಲ್ಲಭಃ । ಇತರೇ

---

ಬರ್ಹ .... ಅಂಗಃ-ಬರ್ಹ-ನವಿಲಗರಿ, ಪ್ರಸೂನ-ಪುಷ್ಪಗಳು, ನವ-ಹೊಸತಾದ, ಧಾತು-ಕಾವಿಮೊದಲಾದಧಾತುಗಳು, (ಇವುಗ ಳಿಂದ) ವಿಚಿತ್ರಿತ-ಚಿತ್ರವಾಗಿಮಾಡಲ್ಪಟ್ಟ, ಅಂಗಃ-ಮಯ್ಯುಳ್ಳವನಾಗಿಯೂ, ವೇಣುರವ .... ಆಢ್ಯಃ-ವೇಣುರವ-ಅಧಿಕವಾದ, ವೇಣುದಳಶೃಂಗರವ-ವೇಣು-ಕೊಳಲಿನ, ದಳ-ಎಲೆಗಳ, ಶೃಂಗ-ಕೊಂಬಿನ, ರವ-ಶಬ್ದಗಳಿಂದಾದ, ಉತ್ಸವ-ಸಂತೋಷದಿಂದ, ಆಢ್ಯಃ-ಸಂಪನ್ನನಾಗಿಯೂ, ವತ್ಸಾನ್-ಕರುಗಳನ್ನು, ಗೃಣನ್-ಲಾಲಿಸಿಕರೆಯುವನಾಗಿಯೂ, ಅನುಗಗೀತಪವಿತ್ರಕೀರ್ತಿಃ-ಅನುಗ-ಸಂಗಾತಿಗಳಿಂದ, ಗೀತ-ಹಾಡಲ್ಪಟ್ಟ, ಪವಿತ್ರ-ಪುಣ್ಯವಾದ, ಕೀರ್ತಿಃ-ಯಶಸ್ಸುಳ್ಳವನಾಗಿಯೂ, ಗೋಪೀದೃಗುತ್ಸವದೃಶಿಃ-ಗೋಪೀ-ಗೊಲ್ಲತಿಯರ, ದೃಕ್-ಕಣ್ಣುಗಳಿಗೆ, ಉತ್ಸವ-ಹಬ್ಬವಾದ, ದೃಶಿಃ-ದರ್ಶನವುಳ್ಳವನಾಗಿಯೂ, ಗೋಷ್ಠಂ-ಗೋಕುಲವನ್ನು, ಪ್ರವಿವೇಶ-ಹೊಕ್ಕನು ॥೪೭॥ ಅದ್ಯ-ಈಗ, ಯಶೋದಾನಂದಸೂನುನಾ-ಯಶೋದೆಗೂ ನಂದಗೋಪನಿಗೂ ಮಗನಾದ, ಅನೇನ, ಈ ಕೃಷ್ಣನಿಂದ, ಮಹಾನ್ ವ್ಯಾಲಃ-ದೊಡ್ಡಹಾವು, ಹತಃ-ಕೊಲ್ಲಲ್ಪಟ್ಟದ್ದಾಯಿತು. ಅಸ್ಮಾತ್-ಈ ಹಾವಿನ ದೆಸೆಯಿಂದ, ವಯಂ ಚ- ನಾವೂ ಕೂಡ, ಅವಿತಾಃ- ರಕ್ಷಿಸಲ್ಪಟ್ಟವರಾದೆವು. ಇತಿ-ಹೀಗೆ, ಬಾಲಾಃ- ಹುಡುಗರು, ವ್ರಜೇ- ಗೋಕುಲದಲ್ಲಿ, ಜಗುಃ-ಹಾಡಿದರು ॥೪೮॥ [ಪರೀಕ್ಷಿತ್ಪ್ರಶ್ನವು] ಬ್ರಹ್ಮನ್-ಬ್ರಾಹ್ಮಣನಾದ ಶುಕನೇ, ಸ್ವೋದ್ಭವೇಷು-ತಮ್ಮಿಂದ ಹುಟ್ಟಿದವರಾದ, ತೋಕೇಷ್ವಪಿ ಮಕ್ಕಳಲ್ಲಿಯೂ ಕೂಡ, ಯಃ-ಯಾವ ಪ್ರೇಮವು, ಅಭೂತಪೂರ್ವಃ- ಪೂರ್ವದಲ್ಲಿ ಉಂಟಾದದ್ದಲ್ಲವೋ, ಸಃ ಪ್ರೇಮಾ-ಆ ಪ್ರೀತಿಯು, ಇಯಾನ್-ಇಷ್ಟರವೂ, ಪರೋದ್ಭವೇ-ಹೆರವನಿಂದ ಹುಟ್ಟಿದವನಾದ, ಕೃಷ್ಣೇ-ಕೃಷ್ಣನಲ್ಲಿ, ಕಥಂ ಭವೇತ್-ಹೇಗಾದೀತು, ಕಥ್ಯತಾಂ-ಹೇಳಲ್ಪಡಲಿ ॥೪೯॥ (ಶುಕೋತ್ತರವು.) ನೃಪ-ಅರಸನೇ! ಜಂತೂನಾಂ-ಪ್ರಾಣಿಗಳಾದ, ಸರ್ವೇಷಾಮೇವ-ಎಲ್ಲರಿಗೂ ಕೂಡ, ಸ್ವಾತ್ಮೈವ-ತಮ್ಮ ಆತ್ಮನೇ, ವಲ್ಲಭಃ-ಪ್ರಿಯನಾದವನು. ಇತರೇ-ಅನ್ಯರಾದ, ಅಪತ್ಯವಿತ್ತಾದ್ಯಾಃ-ಪುತ್ರಧನ ಮುಂತಾದವುಗಳು, ತದ್ವಲ್ಲಭತಯೈವಹಿ-ತತ್-ಆ

---

ರುವ ಗೈರಿಕಾದಿಧಾತುಗಳಿಂದಲೂ ಸಹ ಚಿತ್ರವಾಗಿ ಅಲಂಕರಿಸಲ್ಪಟ್ಟ ದೇಹವುಳ್ಳ ಆ ಕೃಷ್ಣಮೂರ್ತಿಯು ಉತ್ಕೃಷ್ಟವಾದ ಕೊಳಲು ಕೊಂಬುಗಳ ಧ್ವನಿಯಿಂದುಂಟಾದ ಉತ್ಸವದೊಡಗೂಡಿರುವವನಾಗಿ, ಅತ್ಯಂತ ಲಾಲನೆಯಿಂದ ಕರುಗಳನ್ನು ಕರೆಯುತಲಿರುವವನಾಗಿ, ಸಂಗಡ ಬರುತಲಿರುವ ಗೋಪಬಾಲಕರಿಂದ ಗಾನಮಾಡಲ್ಪಡುತಲಿರುವ ಪಾವನವಾದ ಕೀರ್ತಿಯುಳ್ಳವನಾಗಿ, ಮತ್ತು ಗೋಪಸ್ತ್ರೀಯರ ಕಣ್ಣುಗಳಿಗೆ ಉತ್ಸಾಹರೂಪವಾದ ದರ್ಶನವುಳ್ಳವನಾಗಿಯೂ ಸಹ ಗೋಕುಲವ ನೈದಿದನು. ॥೪೭॥ ಆಮೇಲೆ ಆ ಗೋಪಬಾಲಕರು ಗೋಕುಲದಲ್ಲಿರುವವರಂ ಕುರಿತು “ಯಶೋದೆಗೆ ಆನಂದಕರನಾಗಿರುವ ಪುತ್ರನಾದ ಶ್ರೀಕೃಷ್ಣನಿಂದ ವನದಲ್ಲಿ ಮಹಾಸರ್ಪವು ಈಗಲೇ ಸಂಹರಿಸಲ್ಪಟ್ಟಿತು. ನಾವು ಇವನಿಂದ ಮೃತ್ಯುರೂಪವಾದ ಆ ಮಹಾಸರ್ಪದ ದೆಸೆಯಿಂ ರಕ್ಷಿಸಲ್ಪಟ್ಟೆವು” ಎಂದು ಹೇಳಿದರು. ॥೪೮॥ (ಪೂರ್ವದಲ್ಲಿ ಶುಕಮುನಿಯಿಂದ ಗೋಕುಲವಾಸಿಗಳಾದ ಜನರಿಗೆ ಮೊದಲು ಶ್ರೀಕೃಷ್ಣನಲ್ಲಿ ಪ್ರೇಮಾತಿಶಯವು ಯಾವರೀತಿಯಾಗಿತ್ತೋ ಆ ರೀತಿಯಾಗಿಯೇ ಒಂದು ಸಂವತ್ಸರದವರೆಗೂ ತಮ್ಮ ಮಕ್ಕಳಲ್ಲಿ ಪ್ರೇಮಾತಿಶಯವು ತಡೆಯಿಲ್ಲದೆ ಮೆಲ್ಲಮೆಲ್ಲನೆ ವೃದ್ಧಿಯನ್ನೈದಿತೆಂದು ಹೇಳಲ್ಪಟ್ಟದ್ದರಿಂದ, ತಮ್ಮ ಪುತ್ರನಲ್ಲದಿದ್ದರೂ ಶ್ರೀಕೃಷ್ಣನಲ್ಲಿ ತಮ್ಮ ಪುತ್ರರಿಗಿಂತಲೂ ಅಧಿಕವಾಗಿ ವಾತ್ಸಲ್ಯವಿದ್ದುದನ್ನೂ ನಿರೂಪಿಸಲ್ಪಟ್ಟಿತು. ಆ ಯರ್ಥವನ್ನೇ ತಿಳಿಯಲಿಚ್ಛೆಯಿಂದ ಪರೀಕ್ಷಿದ್ರಾಯನು ಪುನಃ ಶುಕಮುನಿಯಂ ಕುರಿತು ಪ್ರಶ್ನೆಗೈದನದೆಂತೆನೆ) ಎಲೈ ಶುಕಮುನಿಯೇ! ಗೋಕುಲವಾಸಿಗಳಿಗೆ ಯಾವ ಪ್ರೇಮಾತಿಶಯವು ತಮ್ಮ ಪುತ್ರರಲ್ಲಿಯೂ ಕೂಡ ಪೂರ್ವದೊಳಗುಂಟಾಗಿರಲಿಲ್ಲವೋ ಆ ಪ್ರೇಮಾತಿಶಯವು ಅನ್ಯರಾದ ಯಶೋದಾ ನಂದಗೋಪರ ಪುತ್ರನಾದ ಶ್ರೀಕೃಷ್ಣನಲ್ಲಿ ಎಂತು ಉಂಟಾಯಿತೋ, ಅದಂ ನನಗೆ ನಿರೂಪಿಸುವನಾಗು. ॥೪೯॥ ಹೀಗೆ ಪರೀಕ್ಷಿದ್ರಾಯನಿಂದ ಪ್ರಶ್ನೆಗೈಯಲ್ಪಟ್ಟ ಶುಕಮುನಿಯು ಹೇಳುವನದೆಂತೆನೆ-] ಎಲೈ, ಅ

ಪತ್ಯವಿತ್ತಾದ್ಯಾಸ್ತದ್ವಲ್ಲಭತಯೈವಹಿ॥೫೦॥ತದ್ರಾಜೇಂದ್ರಯಥಾಸ್ನೇಹಸ್ಸ್ವಸ್ವಕಾತ್ಮನಿದೇಹಿನಾಮ್। ನತ
ಥಾಮಮತಾಲಂಬಿಪುತ್ರವಿತ್ತಗೃಹಾದಿಷು॥೫೧॥ ದೇಹಾತ್ಮವಾದಿನಾಂಪುಂಸಾಮಪಿರಾಜನ್ಯಸತ್ತಮ । ಯ
ಥಾದೇಹಃ ಪ್ರಿಯತಮಸ್ತಥಾನಹ್ಯನುಯೇಚತಮ್ ॥೫೨॥ ದೇಹೋಽಪಿಮಮತಾಭಾಕ್ಚೇತ್ತರ್ಹ್ಯಸೌನಾತ್ಮ
ವತ್ಪ್ರಿಯಃ । ಯಜ್ಜೀರ್ಯತ್ಯಪಿದೇಹೇಸ್ಮಿನ್‌ಜೀವಿತಾಶಾಬಲೀಯಸೀ॥೫೩॥ತಸ್ಮಾತ್ಪ್ರಿಯತಮಸ್ಸ್ವಾತ್ಮಾ
ಸರ್ವೇಷಾಮೇವದೇಹಿನಾಮ್।ತದರ್ಥಮೇವಸಕಲಂಜಗಚ್ಚೈತಚ್ಚರಾಚರಮ್ ॥೫೪॥ ಕೃಷ್ಣಮೇನಮವೇಹಿತ್ವಾ

---

ತ್ಮನಿಗೆ, ವಲ್ಲಭತಯೈವಹಿ-ಪ್ರಿಯವಹತನದಿಂದಲೇವೇ,ಅಲ್ಲವೆ॥೫೦॥ ರಾಜೇಂದ್ರ-ರಾಯರಲ್ಲಿಶ್ರೇಷ್ಠನಾದವನೇ! ತತ್-ಆಕಾರಣದಿಂದ, ದೇಹಿನಾಂ-ಪ್ರಾಣಿಗಳಿಗೆ, ಸ್ವಸ್ವಕಾತ್ಮನಿ-ತಮ್ಮ ತಮ್ಮ ಆತ್ಮನಲ್ಲಿ, ಸ್ನೇಹಃ-ಪ್ರೀತಿಯು ಯಥಾ-ಹೇಗೊ, ತಥಾ-ಹಾಗೆ, ಪುತ್ರವಿತ್ತಗೃಹಾದಿಷು-ಮಕ್ಕಳು ಹಣ ಮನೆ ಮೊದಲಾದವುಗಳಲ್ಲಿ, ಮಮತಾಲಂಬೀ-ನನ್ನದೆಂಬ ಅಭಿಮಾನವನ್ನು ಆಶ್ರಯಿಸಿರುವುದು, ನ-ಇಲ್ಲವು ॥೫೧॥ರಾಜನ್ಯಸತ್ತಮ-ರಾಜನ್ಯ-ಪಟ್ಟಾಭಿಷಿಕ್ತರಾದ ದೊರೆಗಳಲ್ಲಿ, ಸತ್ತಮ-ಅತ್ಯಂತಸತ್ಪುರುಷನಾದವನೇ! ದೇಹಾತ್ಮವಾದಿನಾಂ-ದೇಹವೇ ಆತ್ಮವೆಂದು ಹೇಳುವವರಾದ, ಪುಂಸಾಮಪಿ-ಪುರುಷರಿಗೂ ಕೂಡ, ದೇಹಃ-ಶರೀರವು, ಯಥಾ-ಹೇಗೆ, ಪ್ರಿಯತಮಃ-ಬಹಳಇಷ್ಟವಾಗಿರುವುದೋ, ತಥಾ-ಹಾಗೆ, ಯೇ-ಯಾವಪುತ್ರನಾರಧನಾದಿಗಳು, ತಂ-ಆಶರೀರವನ್ನು, ಅನು-ಅನುಸರಿಸಿರುವವವೋ, ತೇಚ-ಅವುಗಳುಕೂಡ, ನಹಿ-ಅಲ್ಲವಷ್ಟೆ, ॥೫೨॥ದೇಹಃ-ಶರೀರವೇ, ಅತಿಮಮತಾಭಾಕ್ಚೇತ್-ಅತಿ-ಅತ್ಯಂತವಾದ, ಮಮತಾ-ನನ್ನದೆಂಬಅಭಿಮಾನವನ್ನು, ಭಾಕ್ಚೇತ್-ಹೊಂದಿದ್ದು ಆದರೆ, ತರ್ಹಿ-ಆಪಕ್ಷದಲ್ಲಿಯೂ, ಯತ್-ಯಾವಕಾರಣದಿಂದ, ಅಸ್ಮಿನ್‌ದೇಹೇ- ಈಶರೀರವು, ಜೀರ್ಯತಿಸತ್ಯಪಿ-ಮುದಿಯಾದುದಾಗುತಿರಲೂಕೂಡ, ಜೀವಿತಾಶಾ- ಪ್ರಾಣದಆಶೆಯು, ಬಲೀಯಸೀ-ಬಲವಾದದ್ದೋ, ತತ್-ಆಕಾರಣದಿಂದ, ಅಸೌ-ಈದೇಹವು, ಆತ್ಮವತ್-ಆತ್ಮನಂತೆ, ಪ್ರಿಯಃ- ಇಷ್ಟವಾದದ್ದು, ನ-ಅಲ್ಲವು ॥೫೩॥ ತಸ್ಮಾತ್-ಆಕಾರಣದಿಂದ, ದೇಹಿನಾಂ-ಶರೀರವುಳ್ಳ-ಸರ್ವೇಷಾಮೇವ-ಎಲ್ಲರಿಗೂವೆ, ಸ್ವಾತ್ಮಾ-ತಮ್ಮಆತ್ಮರು, ಪ್ರಿಯತಮಃ-ಅತ್ಯಂತಪ್ರಿಯನಾದವನು, ಸಕಲಂ-ಸಮಸ್ತವಾದ, ಚರಾಚರಂ-ಜಂಗಮಸ್ಥಾವರರೂಪವಾದ, ಜಗಚ್ಚ-ಪ್ರಪಂಚವೂಕೂಡ, ತದರ್ಥಮೇವ-ಆತನ್ನಆತ್ಮನಿಗೋಸುಗವೇ ॥೫೪॥ ತ್ವಂ-ನೀನು, ಏನಂಕೃಷ್ಣಂ-ಈಕೃಷ್ಣನನ್ನು, ಅಖಿಲಾತ್ಮನಾಂ-ಸಕಲಪ್ರಾಣಿಗಳಿಗೂ, ಆತ್ಮಾನಂ-ಆತ್ಮನನ್ನಾಗಿ, ಅಥವಾ-ಜೀವಾತ್ಮರಿಗೆಸಾಕ್ಷಿಚೈತನ್ಯವನ್ನಾಗಿ, ಅವೇಹಿ-ತಿಳಿದುಕೋ, ಸೋಽಪಿ-ಆಸರ್ವಾತ್ಮನೂಕೂಡ, ಜಗದ್ಧಿತಾಯ-ಲೋಕ

---

ರಸೇ! ಕೇಳು- ಲೋಕವಲ್ಲಿ ಸಮಸ್ತ ಪ್ರಾಣಿಗಳಿಗೂ ತಮ್ಮಆತ್ಮನೇ ಅತ್ಯಂತೇಷ್ಟನಾಗಿರುವನು ಅನ್ಯಗಳಾದ ಪುತ್ರಧನಾದಿಗಳೆಲ್ಲವೂ ತಮ್ಮಆತ್ಮನಲ್ಲಿ ಸಹಜವಾಗಿರುವ ಪ್ರೀತಿಯಿಂದಲೇ ಇಷ್ಟಗಳಾಗುವವು. ಅಷ್ಟೇಹೊರತು ಅವು ಸ್ವತಃ ಇಷ್ಟಗಳಾಗಲಾರವು ॥೫೦॥ಅದೆಂತೆಂದರೆ- ಎಲೈ, ಅರಸೇ! ಅದರಿಂದಲೇ ಪ್ರಾಣಿಗಳಿಗೆಲ್ಲರಿಗೂ ಯಾವರೀತಿಯಿಂದ ಅಹಂಕಾರಕ್ಕೆ ವಿಷಯವಾದ ತಮ್ಮದೇಹಗಳಲ್ಲಿ ಸ್ನೇಹವಿರುವುದೋ; ಅದೇರೀತಿಯಿಂದ ಪುತ್ರಧನಗೃಹಾದಿಗಳಲ್ಲಿ ಮಮತೆಗೆವಿಷಯವಾದ ಸ್ನೇಹವಿರುವುದಿಲ್ಲ ॥೫೧॥(ಆತ್ಮಾಧ್ಯಾಸದ ತಾರತಮ್ಯದಿಂದ ಕಾಣಲ್ಪಡುವ ಸ್ನೇಹತಾರತಮ್ಯಕ್ಕೆ ಆತ್ಮನೇಕಾರಣನೆಂದು ತೋರಿಸಲೋಸುಗ ಮುಖ್ಯಾಮುಖ್ಯಭೇದದಿಂದ ವಿಶೇಷವ ಹೇಳುವನು- ಅದೆಂತೆನ್ನೆ-) ಎಲೈ, ರಾಜಶ್ರೇಷ್ಠನೇ! ದೇಹವೇ ಆತ್ಮನೆಂದು ವಾದಂಗೆಯ್ಯುತಲಿರುವ ಮೂಢರಿಗೂಕೂಡ ದೇಹವೇ ಅತಿಪ್ರಿಯವಾಗಿ ತೋರುವಹಾಗೆ ದೇಹವನ್ನು ಅನುಸರಿಸಿಕೊಂಡಿರುವ ಪುತ್ರಾದಿಗಳು ಅತಿಪ್ರಿಯರಲ್ಲವು ॥೫೨॥ ಮತ್ತು ದೇಹವು ಮಮತೆಗೆ ವಿಷಯವಾಗಿದ್ದರೂ ಯಾವ ಕಾರಣದಿಂದ ಮರಣವು ಸನ್ನಿಹಿತವಾದಾಗಲೂಕೂಡ ಬದುಕಬೇಕೆಂದು ಜೀವನದಲ್ಲಿ ಆಶೆ ದೃಢವಾಗಿರುವುದೋ; ಆಕಾರಣದಿಂದ ದೇಹವೂ ಕೂಡ ಆತ್ಮನಂತೆ ಅತಿಪ್ರಿಯವಲ್ಲವು. ॥೫೩॥ ಎಲೈ ಅರಸೇ! ಆದುದರಿಂದ ಸಮಸ್ತ ಪ್ರಾಣಿಗಳಿಗೂ ತಮ್ಮ ಆತ್ಮನೇಪ್ರಿಯನಾಗಿರುವನು. ಅಂತಾ ಆತ್ಮನಿಗೋಸುಗವೇ ಚರಾಚರಾತ್ಮಕವಾದ ಈಸಮಸ್ತ ಪ್ರಪಂಚವೂ ಇಷ್ಟವಾಗಿರುವುದೇಹೊರತು ಸ್ವತಃ ಇಷ್ಟವಲ್ಲವು. ॥೫೪॥ಎಲೈ, ಅರಸೇ! ಕೇಳು- ಈಶ್ರೀಕೃಷ್ಣನಂ ಸಮಸ್ತಜೀವರಿಗೂ ಮುಖ್ಯನಾದ

ಮಾತ್ಮಾನಮಖಿಲಾತ್ಮನಾಮ್। ಜಗದ್ಧಿತಾಯಸೋಪ್ಯತ್ರದೇಹೀವಾಭಾತಿಮಾಯಯಾ ||೫೫|| ವಸ್ತುತೋಜಾ
ನತಾಮತ್ರಕೃತ್ಸ್ನಂಸ್ಥಾಸ್ನುಚರಿಷ್ಣುಚ। ಭಗವದ್ರೂಪಮಖಿಲಂನಾನ್ಯದ್ವಸ್ತ್ವಿಹಕಿಂಚನ||೫೬|| ಸರ್ವೆ
ಷಾಮಪಿಭೂತಾನಾಂಭಾವಾರ್ಥೋಭವತಿಸ್ಮೃತಃ ।ತಸ್ಯಾಪಿಭಗವಾನ್ಕೃಷ್ಣಃಕಿಮತದ್ವಸ್ತುರೂಪ್ಯತಾಮ್||
ಸಮಾಶ್ರಿತಾಯೆಪದಪಲ್ಲವಪ್ಲವಂಮಹತ್ಪದಂಪುಣ್ಯಯಶೋಮುರಾರೇಃ । ಭವಾಂಬುಧಿರ್ವತ್ಸಪದಂಪದಂ
ಪರಂಪದಂಪದಂಯದ್ವಿಪದಾಂನತೇಷಾಮ್ ||೫೮|| ಏತತ್ತೆಸರ್ವಮಾಖ್ಯಾತಂಯತ್ಪೃಷ್ಟೋಹಮಿಹತ್ವಯಾ

ಕವಹಿತಕ್ಕೋಸ್ಕರ, ಮಾಯಯಾ-ಸ್ವೇಚ್ಛೆಯಿಂದ, ಅತ್ರ-ಈಗೋಕುಲದಲ್ಲಿ, ದೇಹೀವ-ಶರೀರವುಳ್ಳವನಂತೆ, ಆಭಾತಿ-ತೋರುತ್ತಿರುವನು (ದಿಟವಾಗಿಶರೀರಿಯಲ್ಲವು)||೫೫||ಅತ್ರ-ಇಲ್ಲಿ, ವಸ್ತುತಃ-ದಿಟವಾಗಿ, ಕೃತ್ಸ್ನಂ-ಎಲ್ಲವನ್ನೂ, ಜಾನತಾಂ-ತಿಳಿವವರಿಗೆ, ಸ್ಥಾಸ್ನು-ಸ್ಥಿರವಾಗಿಯೂ, ಚರಿಷ್ಣುಚ-ಚರವಾಗಿಯೂಇರುವ, ಅಖಿಲಂ-ಸಮಸ್ತವೂ, ಭಗವದ್ರೂಪಂ-ಭಗವಂತನಸ್ವರೂಪವೆ ಅನ್ಯದ್ವಸ್ತು-ಬೇರೆಪದಾರ್ಥವು, ಕಿಂಚನ-ಕೊಂಚವಾದರೂ,ನಾಸ್ತಿ-ಇಲ್ಲವು||೫೬|| ಸರ್ವೆಷಾಂಭೂತಾನಾಂ-ಸಕಲಭಾವಪದಾರ್ಥಗಳಿಗೆ ಭಾವಾರ್ಥಃ-ಉಂಟಾಗಿರುವಿಕೆಯೆಂಬಪರಮಾರ್ಥವು,ಭವತಿ-ಪರಿಣಾಮಿಕಾರಣದಲ್ಲಿ, ಸ್ಮೃತಃ-ಸ್ಮರಿಸಲ್ಪಟ್ಟಿದೆ,(ಅಥವಾ)ಭೂತಾನಾಂ-ಸತ್ಯದಂತೆತೋರುತ್ತಿರುವ, ಸರ್ವೇಷಾಮಪಿ-ಸಕಲಪದಾರ್ಥಗಳಿಗೂ, ಭಾವಾರ್ಥಃ-ಪರಿಣಾಮಪ್ರಯೋಜನವಾಗಿವುಳ್ಳ, ಪ್ರಕೃತಿಪದಾರ್ಥವು, ಸ್ಮೃತಃ-ಕಾರಣವೆಂದುಸ್ಮರಿಸಲ್ಪಟ್ಟದ್ದು, ಭವತಿ-ಆಗುತ್ತಿದೆ. ತಸ್ಯಾಪಿ-ಅಂತಾಕಾರಣಕ್ಕೂಕೂಡ, ಭಗವಾನ್ಕೃಷ್ಣಃ-ಭಗವಂತನಾದಕೃಷ್ಣನು, ಭಾವಾರ್ಥಃ-ಸತ್ತಾರೂಪವಾದ ಪರಮಾರ್ಥವಸ್ತುವೆಂದು, ಸ್ಮೃತಃ-ಸ್ಮರಿಸಲ್ಪಟ್ಟವನು, ಆಗುತ್ತಿದ್ದಾನೆ (ಭಗವತ್ಸತ್ತಾನತಿರಿಕ್ತವಾದ್ದು ಕಾರಣಸತ್ತೆ - ಕಾರಣಸತ್ತಾಧೀನವಾದ್ದು ಕಾರ್ಯಸತ್ತೆ. ಜಗತ್ತಿನಲ್ಲಿಆತ್ಮಸತ್ತೆಗಿಂತಲೂಬೇರೆಸತ್ತೆಯಿಲ್ಲವು ಆದ್ದರಿಂದ)ಅತದ್ವಸ್ತು- ಅನಾತ್ಮನಾಗಿಸತ್ತೆಯುಳ್ಳವಸ್ತು, ಕಿಂ-ಏನುಂಟು ರೂಪ್ಯತಾಂ- ತೋರಿಸಲ್ಪಡಲಿ|| ೫೭||ಯೇ-ಯಾವಪುರುಷರು, ಪುಣ್ಯಯಶೋಮುರಾರೇಃ-ಪುಣ್ಯವಾದಕೀರ್ತಿಯುಳ್ಳಕೃಷ್ಣನ, ಮಹತ್ಪದಂ-ಮಹಾತ್ಮರಿಗೆ ಗತಿಯಾದ,ಅಥವಾ ಉತ್ತಮಗತಿಯಾಗಿರುವ, ಪದಪಲ್ಲವಪ್ಲವಂ-ಪದಪಲ್ಲವ-ಚಿಗುರಿನಹಾಗಿರುವ ಅಡಿಯೆಂಬ.ಪ್ಲವಂ-ತೆಪ್ಪವನ್ನು,ಸಮಾಶ್ರಿತಾಃ-ಅವಲಂಬಿಸಿದವರಾಗಿರುವರೋ, ತೇಷಾಂ-ಅವರಿಗೆ, ಭವಾಂಬುಧಿಃ-ಸಂಸಾರವೆಂಬಕಡಲು,ವತ್ಸಪದಂ-ಕರುವಿನಹೆಜ್ಜೆಯಂತೆ,ತುಚ್ಛವಾಗಿರುವುದು. ಅಥವಾಸಂಣದಾಗಿರುವದು, ಪರಂಪದಂ-ಮುಕ್ತಿಸ್ಥಾನವಾದ ಸಗುಣಬ್ರಹ್ಮಲೋಕವೇ, ಪದಂ-ಗತಿಯಾಗಿರುವುದು, ಯತ್-ಯಾವುದು,ವಿಪದಾಂ-ಜನನಮರಣಾದಿ ವಿಪತ್ತುಗಳಿಗೆ, ಪದಂ-ಸ್ಥಾನವಾಗಿರುವುದೋ,ತತ್- ಅದು(ಅಜ್ಞಾನಸಂಸಾರವು) ನ-ಇಲ್ಲವು|| ೫೮|| ಭುವಿ-ಭೂಲೋಕದಲ್ಲಿ,ಕೌಮಾರೇ-ಕೌಮಾರವಯಸ್ಸಿನೊಳಗೆ, ಹುಕೃತಂ-ಕೃಷ್ಣನಿಂದಮಾಡಲ್ಪಟ್ಟಚರಿತ್ರವು,ಪೌ

ಆತ್ಮನನ್ನಾಗಿ ತಿಳಕೋ, ಅಂತಾ ಶ್ರೀಕೃಷ್ಣನು ಲೋಕಹಿತಾರ್ಥವಾಗಿ ತನ್ನಮಾಯೆಯಿಂದ ಗೋಕುಲದಲ್ಲಿ ಅವತರಿಸಿದ ಮನುಷ್ಯನಂತೆತೋರುವನು. ||೫೫||(ಈಕೃಷ್ಣನು ಕೇವಲ ದೇಹಿಗಳಿಗೆ ಮಾತ್ರವೇ ಆತ್ಮನಲ್ಲವು. ಮತ್ತೆಯೇನೆಂದರೆ- ಜಡಗಳಿಗೂಸಹ ಆತ್ಮನೆಂದುಹೇಳುವನು-) ಪರಮಾರ್ಥದೃಷ್ಟಿಯಿಂದ ಶ್ರೀಕೃಷ್ಣನಂ ಜಗತ್ಕಾರಣವೆಂದು ತಿಳಿಯುತಲಿರುವ ಜ್ಞಾನಿಗಳಿಗೆ ಚರಾಚರ ರೂಪವಾದ ಈಸರ್ವಪ್ರಪಂಚವು ಭಗವಂತನೇ ಸ್ವರೂಪವಾಗಿ ಉಳ್ಳದ್ದು ಎಂದು ತೋರುವುದೇ ಹೊರತು ಆಭಗವಂತನಿಗಿಂತಲೂ ಅನ್ಯವಾದವಸ್ತುವು ಸ್ವಲ್ಪವಾದರೂಇಲ್ಲ ||೫೬|| ಅದೆಂತೆನೆ- ಸಮಸ್ತ ಭೂತಂಗಳಿಗೂ ಮೂಲಕಾರಣ ವಾದವಸ್ತುವೇ ಪರಮಾರ್ಥವೆಂದು ನಿರೂಪಿಸಲ್ಪಟ್ಟಿದೆ.ಅಂತಾ ಮೂಲಕಾರಣ ವಸ್ತುವಿಗೂ ಕೂಡ ಭಗವಂತನಾದ ಶ್ರೀಕೃಷ್ಣನೇ ಮೂಲಕಾರಣ ವಾದುದರಿಂದ ಅವನಿಗಿಂತಲೂ ಅನ್ಯವಾದ ಯಾವವಸ್ತುವು ತೋರಿಸಲ್ಪಟ್ಟೀತು? [ ಸರ್ವವೂ ಶ್ರೀಕೃಷ್ಣ ಸ್ವರೂಪವೇಸರಿ. ] ||೫೭|| ಎಲೈ ಅರಸೇ! ಆಕಾರಣದಿಂದ ಪುಣ್ಯಕರವಾದ ಕೀರ್ತಿಯುಳ್ಳ ಶ್ರೀಕೃಷ್ಣನ ಮಹಾತ್ಮರಿಗೆ ಆಶ್ರಯವಾದ ಪಾದಪಲ್ಲವವೆಂಬ ನಾವೆಯಂ ಯಾವಪುರುಷರು ಆಶ್ರಯಿಸಿಕೊಂಡಿರುವರೋ, ಆಭಕ್ತರಿಗೆ ಸಂಸಾರವೆಂಬ ಸಮುದ್ರವು ಕರುವಿನಹೆಜ್ಜೆಯಂತೆ ಸುಖದಿಂ ತರಿಸಲು ಯೋಗ್ಯವಾಗುವುದು. ಮತ್ತು ಅವರಿಗೆ ಉತ್ತಮವಾದ ವೈಕುಂಠವೇ ಸ್ಥಾನವಾಗುವುದು. ಮತ್ತು ವಿಪತ್ತುಗಳಿಗೆ ವಿಷಯವಾದುದು ಯಾವುದುಂಟೋ ಅದು ಪುನಃ ಒಂದುಸಮಯದಲ್ಲಿಯೂ ಅವರಿಗೆ ಉಂಟಾಗಲಾರದು. ||೫೮|| ಎಲೈ, ಅರಸೇ! ಯಾವಕೌಮಾರ ವಯಸ್ಸಿನಲ್ಲಿ ಕೃಷ್ಣನಿಂದ ಮಾಡ

ಯತ್ಕೌಮಾರೆಹರಿಕೃತಂಪೌಗಂಡೆಕೀರ್ತಿತಂಭುವಿ||೫೯|| ಏತತ್ಸುಹೃದ್ಭಿಶ್ಚರಿತಂಮುರಾರೇರಘಾರ್ದನಂಶಾ
ಡ್ವಲಭೋಜನಂಚ |ವ್ಯಕ್ತೇತರಂರೂಪಮಜೋರ್ವಭಿಷ್ಟವಂಶೃಣ್ವನ್ಗೃಣನ್ನೇತಿನರೋಖಿಲಾರ್ಥಾನ್|| ||೬೦||
ಇತಿ ಶ್ರೀಮದ್ಭಾಗವತೆ ದಶಮಸ್ಕಂಧೆ-ಚತುರ್ದಶೋಽಧ್ಯಾಯಃ-

---

ಗಂಡೇ-ಪೌಗಂಡವಯಸ್ಸಿನಲ್ಲಿ, ಕೀರ್ತಿತಂ-ಬಾಲಕರಿಂದ ಹೇಳಲ್ಪಟ್ಟಿತೆಂಬುವದು,ಯತ್-ಯಾವುದೋ, ಇಹ-ಇಲ್ಲಿ,ತ್ವಯಾ-ನಿನ್ನಿಂದ ಅಹಂ-ನಾನು,ಯತ್ಪೃಷ್ಟಃ-ಯಾವವನ್ನು ಕೇಳಲ್ಪಟ್ಟೆನೋ,ತದೇತತ್ಸರ್ವಂ-ಅದೆಲ್ಲವೂ,ತೇ-ನಿನಗೆ-ಆಖ್ಯಾತಂ-ಹೇಳಲ್ಪಟ್ಟದ್ದಾಗಿದೆ॥ ೫೯ ॥ಮುರಾರೇಃ-ಕೃಷ್ಣನ,ಸುಹೃದ್ಭಿಃ-ಗೆಳೆಯರಾದಗೋಪಾಲರೊಂದಿಗೆ,ಚರಿತಂ-ಉಂಡುವಿಕೆಯೂ, ತಿರುಗುವಿಕೆಯೂ,ಅಘಾರ್ದನಂ-ಅಘಾಸುರಸಂಹಾರವೂ,ಶಾಡ್ವಲ ಭೋಜನಂಚ-ಶಾಡ್ವಲ-ಎಳೆಹುಲ್ಲಿನಿಂದಹಸುರಾದಸ್ಥಲದಲ್ಲಿ,ಭೋಜನಂಚ-ತಂಗಳುಂಡುವಿಕೆಯೂ,ವ್ಯಕ್ತೇತರತ್-ಪ್ರಕೃತಿಯಲ್ಲಿ ವ್ಯಕ್ತವಾಗಿರುವಜಡಕ್ಕಿಂತಲೂ ಬೇರೆಯಾದ,ರೂಪಂ-ಶುದ್ಧಸತ್ವಾತ್ಮಕವಾದ,ವತ್ಸವತ್ಸಪಾಲರೂಪವೂ,ಅಧವಾ ಚಿದ್ವಿಲಾಸವಾಗಿಕಾಣಿಸಿದ್ದು,ಅಜೋರ್ವಭಿಷ್ಟವಂ-ಅಜ- ಬ್ರಹ್ಮನ,ಉರು-ಅಧಿಕವಾದ, ಅಭಿಷ್ಟವಂ-ಸ್ತೋತ್ರವೂ,ಎಂಬ,ಏತತ್_ಈಚರಿತ್ರವನ್ನು ಶೃಣ್ವನ್-ಕೇಳುತಲಿರುವ,ಗೃಣನ್-ಪಠಿಸುತಲಿರುವ,ನರಃ_ಪುರುಷನು,ಅಖಿಲಾರ್ಥಾನ್- ಧರ್ಮಾರ್ಥಕಾಮ ಮೋಕ್ಷಗಳೆಂಬ, ಸಕಲಪುರುಷಾರ್ಥಗಳನ್ನು,ಏತಿ-ಹೊಂದುತಲಿರುವನು॥ ೬೦ ॥

ಇತಿಶ್ರೀಮದ್ಭಾಗವತೆಪ್ರತಿಶಬ್ದಾರ್ಥಬೋಧಿನ್ಯಾಂದಶಮಸ್ಕಂಧೆ
ಚತುರ್ದಶೋಽಧ್ಯಾಯಃ

---

ಲ್ಪಟ್ಟ ಅಘಾಸುರ ಸಂಹಾರಾದಿ ವ್ಯಾಪಾರವು ಪೌಗಂಡವಯಸ್ಸಿನಲ್ಲಿ ಗೋಪಾಲಬಾಲಕರಿಂದ ಗೋಕುಲದಲ್ಲಿ ಹೇಳಲ್ಪಡುವುದಕೆ ನಿಮಿತ್ತವೇನೆಂದು ಯಾವ ಅರ್ಥವಂ ನಾನು ನಿನ್ನಿಂದ ಕೇಳಲ್ಪಟ್ಟೆನೋ, ಆಸಮಸ್ತಾರ್ಥವೂ ನಿನಗೆ ನನ್ನಿಂದ ನಿರೂಪಿಸಲ್ಪಟ್ಟಿತು. ||೫೯|| ಮುರವೈರಿಯಾದ ಶ್ರೀಕೃಷ್ಣನ- ಹಾಗೆಮಿತ್ರರೊಡಗೂಡಿ ವಿಹಾರಗೆಯ್ದ ಕ್ರಮವನ್ನೂ, ಅಘಾಸುರನಸಂಹಾರವನ್ನೂ, ವನಭೋಜನವನ್ನೂ, ಜಡಪ್ರಪಂಚಕ್ಕಿಂತಲೂ ಅನ್ಯವಾದ ಶುದ್ಧಸತ್ವಾತ್ಮಕವಾದ ಗೋಪಾಲಕರ ರೂಪಗಳನ್ನು ಧರಿಸಿದಕ್ರಮವನ್ನೂ, ಮಹತ್ತಾದ ಈಬ್ರಹ್ಮಸ್ತುತಿಯನ್ನೂ, ಸಹ ಯಾವವನು ಪಠನಗೆಯ್ವನೋ' ಆಪುರುಷನು ಸಮಸ್ತ ಪುರುಷಾರ್ಥಂಗಳಂ ಪಡೆಯುವನು. ||೬೦||

ಶುಕಮುನಿಯು ಪರೀಕ್ಷಿದ್ರಾಯನಿಗೆ ನಿರೂಪಿಸಿದನೆಂದು ಸೂತಪೌರಾಣಿಕನು ನೈಮಿಶಾ
ರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಹೇಳಿದನೆಂಬಲ್ಲಿಗೆ- ಶ್ರೀಮನ್ಮಹೀ
ಶೂರಪುರವರಾಧೀಶ ಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜ ವಿರ
ಚಿತಮಪ್ಪ, ಶ್ರೀಭಾಗವತದ "ಶ್ರೀಕೃಷ್ಣರಾಜ ವಾಣೀವಿ
ಲಾಸವು" ಎಂಬ ಕರ್ಣಾಟ ಭಾಷಾವ್ಯಾಖ್ಯಾನ
ದಲ್ಲಿ ದಶಮಸ್ಕಂಧದೊಳು ಹದಿನಾಲ್ಕನೆಯ
ಅಧ್ಯಾಯವು ಸಂಪೂರ್ಣವಾದುದು.
ಮಂಗಳಮಸ್ತು

ಶ್ರೀಬಾದರಾಯಣಿಃ॥ತತಶ್ಚ ಪೌಗಂಡವಯಸ್ಸಮಾಶ್ರಿತೌಬಭೂವತುಸ್ತೌಪಶುಪಾಲಸಮ್ಮತೌ। ಗಾಶ್ಚಾರಯಂತೌಸಖಿಭಿಸ್ಸಮಂಪದೈರ್ಬೃಂದಾವನಂಪುಣ್ಯಮತೀವಚಕ್ರತುಃ॥೧॥ ತನ್ಮಾಧವೋವೇಣುಮುದೀರಯನ್ ವೃತೋಗೋಪೈರ್ಗೃಣದ್ಭಿಸ್ಸ್ವಯಶೋಬಲಾನ್ವಿತಃ ॥ ಪಶೂನ್ಪುರಸ್ಕೃತ್ಯಪಶವ್ಯಮಾವಿಶದ್ವಿಹರ್ತುಕಾಮಃಕುಸುಮಾಕರಂವನಮ್ ॥೨॥ ತನ್ಮಂಜುಘೋಷಾಳಿಮೃಗದ್ವಿಜಾಕುಲಂಮಹನ್ಮನಃಪ್ರಖ್ಯಪಯಸ್ಸರ

---

೧೫ನೆಯ ಅಧ್ಯಾಯದ ಪ್ರತಿಪದಟೀಕೆ.

(ಶುಕವಾಕ್ಯವು)ತತಶ್ಚ-ಆಮೇಲೆ ಯಾವರೋ ತೌ_ಆರಾಮಕೃಷ್ಣರು, ಪೌಗಂಡವಯಃ-೬ರಿಂದ ೧೦ ವರುಷಗಳವರೆಗೂ ಪೌಗಂಡಪ್ರಾಯವನ್ನು, ಸಮಾಶ್ರಿತೌ-ಅವಲಂಬಿಸಿದವರಾಗಿ, ಪಶುಪಾಲಸಮ್ಮತೌ-ಪಶುಪಾಲ-ಗೋಪಾಲಕರಿಗೆ, ಸಮ್ಮತೌ-ಒಪ್ಪಿಗೆಯಾದವರಾದ್ದರಿಂದಲೇ, ಸಖಿಭಿಸ್ಸಮಂ-ಗೆಳೆಯರೊಡನೆ, ಗಾಃ-ಗೋವುಗಳನ್ನು, ಚಾರಯಂತೌಸಂತೌ-ಮೇಯಿಸುತಲಿರುವರಾಗಿ, ಪದೈಃ-ತಮ್ಮಹೆಜ್ಜೆಗಳಿಂದ, ಬೃಂದಾವನಂ-ಬೃಂದಾರಣ್ಯವನ್ನು, ಅತೀವಪುಣ್ಯಂ-ಬಹುಪುಣ್ಯವುಳ್ಳದ್ದನ್ನಾಗಿ, ಚಕ್ರತುಃ-ಮಾಡಿದರು ॥೧॥ ಬಲಾನ್ವಿತಃ_ಬಲರಾಮನೊಡನೆ ಕೂಡಿದವನಾದ, ಮಾಧವಃ-ಲಕ್ಷ್ಮೀಪತಿಯಾದಕೃಷ್ಣನು, ವೇಣುಂ-ಕೊಳಲನ್ನು, ಉದೀರಯನ್-ಗಟ್ಟಿಯಾಗಊದುತಲಿರುವನಾಗಿ, ಸ್ವಯಶಃ-ತನ್ನಕೀರ್ತಿಯನ್ನು, ಗೃಣದ್ಭಿಃ-ಹೇಳುತಲಿರುವ, ಗೋಪೈಃ-ಗೋಪಾಲಕರಿಂದ, ವೃತಃ-ಬಳಸಲ್ಪಟ್ಟವನಾಗಿ, ಪಶೂನ್-ಗೋವುಗಳನ್ನು, ಪುರಸ್ಕೃತ್ಯ-ಮುಂದಿಟ್ಟುಕೊಂಡು, ವಿಹರ್ತುಕಾಮಃ-ವಿನೋದಿಸೆ ಬಯಕೆಯುಳ್ಳವನಾದ್ದರಿಂದಲೇ, ಪಶವ್ಯಂ-ಪಶುವೃದ್ಧಿಕರವಾದ, ಕುಸುಮಾಕರಂ-ಪುಷ್ಪಗಳಿಗೆ ಕಣಿಯಾಗಿರುವ, ತತ್‌ವನಂ-ಆಕಾಡನ್ನು, ಆವಿಶತ್-ಹೊಕ್ಕನು ॥೨॥ ಭಗವಾನ್-ಭಗವಂತನಾದ ಕೃಷ್ಣನು, ಮಂಜುಘೋಷಾಳಿಮೃಗದ್ವಿಜಾಕುಲಂ- ಮಂಜು-ಮನೋಹರವಾದ, ಘೋಷ-ಧ್ವನಿಯುಳ್ಳ, ಅಳಿ-ತುಂಬಿಗಳಿಂದಲೂ, ಮೃಗಗಳಿಂದಲೂ, ದ್ವಿಜ_ಹಕ್ಕಿಗಳಿಂದಲೂ, ಆಕುಲಂ-ವ್ಯಾಪ್ತವಾಗಿಯೂ ಮಹ----ಸರಸ್ವತಾ-ಮಹನ್ಮನಃ-ದೊಡ್ಡವರಮನಸ್ಸಿನೊಡನೆ, ಪ್ರಖ್ಯ-ಸಮಾನವಾದ, ಪಯಃ-ನಿರ್ಮಲೋದಕವುಳ್ಳ, ಸರಸ್ವತಾ-

---

*೧೫ನೆಯಅಧ್ಯಾಯವು.*

ಶ್ರೀಧರೀಯಶ್ಲೋಕ॥ ತತಃಪಂಚದಶೇಧೇನು ಪಾಲನಂ ಧೇನುಕಾರ್ದನಂ । ಕಾಳೀಯಕ್ಷ್ವೇಳತೋಗೋಪರಕ್ಷಣಂಚನಿರೂಪ್ಯತೇ ॥ಟೀಕೆ॥ಹದಿನೈದನೆಯಅಧ್ಯಾಯದಲ್ಲಿ ಶ್ರೀಕೃಷ್ಣನು ಗೋವುಗಳನ್ನು ಪಾಲಿಸಿದ ಕ್ರಮವನ್ನೂ, ಧೇನುಕಾಸುರನಂ ಸಂಹರಿಸಿದನೆಂಬ ಅರ್ಥವನ್ನೂ, ಮತ್ತು ಕಾಳೀಯನೆಂಬ ಮಹಾಸರ್ಪದ ವಿಷದನೆಯಿಂದ ಗೋಪಾಲಕರಂ ರಕ್ಷಿಸಿದನೆಂಬ ಅರ್ಥವನ್ನೂ, ಶ್ರೀಶುಕಮುನಿಯು ಪರೀಕ್ಷಿದ್ರಾಯನಂಕುರಿತು ನಿರೂಪಿಸುವನದೆಂತೆನೆ-

ಎಲೈ, ಪರೀಕ್ಷಿದ್ರಾಯನೇ! ಅನಂತರದಲ್ಲಿ ಪೌಗಂಡವೆಂಬವಯಸ್ಸನೈದ್ದಿರುವ ಆರಾಮಕೃಷ್ಣರೀರ್ವರೂ ಗೋವುಗಳಂ ಪಾಲನಂಗೆಯ್ವುದರಲ್ಲಿ ಯೋಗ್ಯವಾದ ವಯಸ್ಸೂ ಬಲವೂ ಉಳ್ಳವರಾದುದರಿಂದ ನಂದಗೋಕುಲದಲ್ಲಿರುವ ಗೋವುಗಳಂ ಸ್ನೇಹಿತರಾದ ಗೋಪಾಲಕರೊಡಗೂಡಿ ಅಲ್ಲಲ್ಲಿ ಸುತ್ತಲೂ ಮೇಯಿಸುತಲಿರುವವರಾಗಿ ಬೃಂದಾವನವನ್ನು ತಮ್ಮ ಅಡಿದಾವರೆಗಳಿಡುವುದರಿಂದ ಅತ್ಯಂತ ಪುಣ್ಯಕರವನಾಗಿಮಾಡಿದರು. ।೧॥ಅನಂತರದಲ್ಲಿ ಬಲಭದ್ರನೊಡಗೂಡಿರುವ ಶ್ರೀಕೃಷ್ಣದೇವನು ವೇಣುಗಾನಂಗೆಯ್ವುತಲಿರುವನಾಗಿ ತನ್ನಕೀರ್ತಿಯಂ ಸ್ತೋತ್ರಂಗೆಯ್ವುತಲಿರುವ ಗೋಪಾಲಕರಿಂದ ಪರಿವೃತನಾಗಿ ವಿಹರಿಸಲಿಚ್ಛೆಯಿಂ ಗೋವುಗಳಂ ಮುಂದುಮಾಡಿಕೊಂಡು ಆಗೋವುಗಳಿಗೆ ಅತ್ಯಂತಹಿತಕರವಾಗಿಯೂ ಪುಷ್ಪಜಾತಿಗಳಿಗೆ ಉತ್ಪತ್ತಿಸ್ಥಾನವಾಗಿಯೂ ಇರುವ ಆಬೃಂದಾವನವಂ ಪ್ರವೇಶಂಗೆಯ್ದನು. ॥೨॥ ಆಮೇಲೆ ಭಗವಂತನಾದ ಶ್ರೀಕೃಷ್ಣನು- ಮನೋಹರಗಳಾದ ಧ್ವನಿಗಳುಳ್ಳ; ತುಂಬಿಗಳಿಂದಲೂ ಮೃಗಗಳಿಂದಲೂ ಪಕ್ಷಿಗಳಿಂದಲೂ ಸಹ ವ್ಯಾಪ್ತವಾದ, ಮತ್ತು ಮಹಾತ್ಮರಮನಸ್ಸಿನಂತೆ ಅತಿನಿರ್ಮ

ಸ್ವತಾ । ವಾತೇನ ಜುಷ್ಟಂ ಶತಪತ್ರಗನ್ಧಿನಾ ನಿರೀಕ್ಷ್ಯ ರನ್ತುಂ ಭಗವಾನ್ ಮನೋ ದಧೇ ‖೩‖ ಸ ತತ್ರ ತತ್ರಾರುಣಪಲ್ಲವಶ್ರಿಯಾ ಫಲಪ್ರಸೂನೋರುಭರೇಣ ಪಾದಯೋಃ। ಸ್ಪೃಶಚ್ಛಿಖಾನ್ ವೀಕ್ಷ್ಯ ವನಸ್ಪತೀನ್ ಮುದಾ ಸ್ಮಯನ್ನಿವಾಹಾಗ್ರಜಮಾದಿಪೂರುಷಃ ‖೪‖ ಶ್ರೀಭಗವಾನ್‖ ಅಹೋ ಅಮೀ ದೇವವರಾಮರಾರ್ಚಿತಂ ಪಾದಾಮ್ಬುಜಂ ತೇ ಸುಮನಃಫಲಾರ್ಹಣಮ್ । ನಮನ್ತ್ಯುಪಾದಾಯ ಶಿಖಾಭಿರಾತ್ಮನಸ್ತಮೋಪಹತ್ಯೈ ತರುಜನ್ಮ ಯತ್ಕೃತ

---

ಜಲಾಧಾರಗಳುಳ್ಳಂತಹ, ಶತಪತ್ರಗಂಧಿನಾ-ತಾವರೆಯ ಪರಿಮಳವುಳ್ಳಂತಹ, ವಾತೇನ-ಕಿರುಗಾಳಿಯಿಂದ, ಜುಷ್ಟಂ- ಸೇವಿಸಲ್ಪಟ್ಟದ್ದಾಗಿಯೂ ಇರುವ, ತತ್-ಆವನವನ್ನು, ನಿರೀಕ್ಷ್ಯ-ನೋಡಿ, ರಂತುಂ-ಕ್ರೀಡಿಸುವದಕ್ಕೆ, ಮನಃ-ಬಯಕೆಯನ್ನು, ದಧೇ-ತಾಳಿದನು‖೩‖ ಸಃ-ಆ, ಆದಿಪೂರುಷಃ-ಕಾರಣಪುರುಷನಾದ ಕೃಷ್ಣನು, ತತ್ರತತ್ರ-ಅಲ್ಲಲ್ಲಿ, ಅರುಣಪಲ್ಲವಶ್ರಿಯಾ-ಕೆಂಚಿಗುರುಗಳ ಹೊಳಪಿನಿಂದಲೂ, ಫಲಪ್ರಸೂನೋರುಭರೇಣ-ಫಲ- ಹಣ್ಣುಗಳ, ಪ್ರಸೂನ-ಪುಷ್ಪಗಳ, ಉರುಭರೇಣ- ಹೆಚ್ಚು ಭಾರದಿಂದಲೂ, ಪಾದಯೋಃ- ಅಡಿಗಳಲ್ಲಿ, ಸ್ಪೃಶಚ್ಛಿಖಾನ್-ಸೋಂಕುತಲಿರುವ ಕೊನೆಗಳುಳ್ಳ, ವನಸ್ಪತೀನ್-ವೃಕ್ಷಗಳನ್ನು, ವೀಕ್ಷ್ಯ-ನೋಡಿ, ಸ್ಮಯನ್ನಿವ- ಅಚ್ಚರಿಗೊಳ್ಳುವಂತೆ, ಆಹ-ಹೇಳಿದನು( ಪಾಠಾಂತರ,'ಅಗ್ರಜ ಆದಿಪೂರುಷಂ'' ಎಂದಿಟ್ಟುಕೊಂಡು ಬಲರಾಮನು ಕೃಷ್ಣನಿಗೆ ಹೇಳಿದಂತೆ ಅರ್ಥವಂ ಪೇಳುವರು. ಏತಕೆಂದರೆ ೮ನೆಯ ಶ್ಲೋಕದಲ್ಲಿ ''ಭುಜಯೋರಪಿ ಯತ್ಸ್ಪೃಹಾ ಶ್ರೀಃ'' ಎಂದು ಲಕ್ಷ್ಮಿಯು ನಿನ್ನ ಭುಜಾಂತರವಂ ಬಯಸುವಳೆಂಬುದರಿಂದ ಅದು ಕೃಷ್ಣನಂ ಕುರಿತು ಬಲರಾಮನು ಹೇಳತಕ್ಕ ಮಾತಾಗಿರುವುದರಿಂದ ಈ ಪ್ರಕರಣವು ಬಲರಾಮ ವಚನವೆನ್ನುವರು. ''ಆಪಕ್ಷದಲ್ಲಿ ಹಿಂದೆ ಹೇಳಲ್ಪಟ್ಟ'' ಮಾಧವಃ, ಭಗವಾನ್, ಎಂಬ ಶಬ್ದಗಳನ್ನು ಪರಾಮರ್ಶಿಸುವ ''ಸಃ.'' ಎಂಬ ತಚ್ಛಬ್ದವು ''ಆದಿಪೂರುಷಃ'' ಎಂಬುವುದಕ್ಕೆ ಅಭೇದಸಂಬಂಧದಿಂದ ವಿಶೇಷಣವಾಗತಕ್ಕದ್ದೇ ಹೊರತು ''ಅಗ್ರಜಃ ಎಂಬುವುದಕ್ಕೆ ವಿಶೇಷಣವಾಗಲಾರದು. ಆದ್ದರಿಂದ ಈ ಪ್ರಕರಣವು ಕೃಷ್ಣವಾಕ್ಯವೇ ಸರಿಯೆಂದು ಕೆಲವರೆನ್ನುವರು. ಹಾಗಾದರೆ ''ಯತ್ಸ್ಪೃಹಾ ಶ್ರೀಃ'' ಎಂಬುವುದನ್ನು ೮ನೆಯ ಶ್ಲೋಕದಲ್ಲಿ ಬಲರಾಮವಾಕ್ಯವನ್ನಾಗಿ ಹೇಳಬಹುದು, ಆದರೆ ಏವಂ ಬೃಂದಾವನಂ ಕೃಷ್ಣಃ'' ಎಂದು ಆಬಳಿಕ ಹೇಳಲ್ಪಡುವುದರಿಂದ ಏವಂ ಶಬ್ದಾನುವಾದದಿಂದ ಯತ್ಸ್ಪೃಹಾ ಶ್ರೀಃ'' ಎಂಬ ಮಾತು ಕೃಷ್ಣನದೇ ಆಗಬೇಕಾಗುತ್ತೆ. ಆದರೂ ಬಲರಾಮನಲ್ಲಿ ಸ್ವಾಂಶಬುದ್ಧಿಯಿಂದ ಔಪಚಾರಿಕವಾಗಿ ಕೃಷ್ಣನು ಹೇಳಿರಬಹುದೆಂದು ಕೆಲವರೆನ್ನುವರು ಈ ಪ್ರಕರಣದೊಳಗೆ ಇದು ಚಿಂತ್ಯವಾದ ವಿಷಯವು.) ‖೪‖ ದೇವವರ-ದೇವಶ್ರೇಷ್ಠನೇ! ಅಮೀ-ಈವೃಕ್ಷಗಳು, ತರುಜನ್ಮ-ಮೂಢವಾದ ವೃಕ್ಷಜನ್ಮವು, ಯತ್ಕೃತಂ-ಯಾವಪಾಪದಿಂದ ಮಾಡಲ್ಪಟ್ಟಿತೋ, ತಮೋಪಹತ್ಯೈ-ಆಪಾಪದ ಪರಿಹಾರಕ್ಕೋಸುಗ,(ಅಥವಾ) ಆತ್ಮನಃ-ತಮ್ಮ, ತಮೋ

---



ಲವಾದ ಜನ್ಮವುಳ್ಳ ಸರೋವರವೇ ಆಶ್ರಯವಾಗಿ ಉಳ್ಳದ್ದರಿಂದ ಅತಿಶೀತಳವಾದ, ಕಮಲಗಂಧದೊಡನೆ ಕೂಡಿರುವುದರಿಂ ಮಂದಗತಿ ಯುಕ್ತವಾಗಿರುವ, ವಾಯುವಿನಿಂದ ಸೇವಿಸಲ್ಪಡುತಲಿರುವ; ಬೃಂದಾವನವಂ ನೋಡಿ-ಅಲ್ಲಿ ರಮಿಸಲಿಚ್ಛೈಯಿಸಿದನು.‖ ಅನಂತರದಲ್ಲಿ ಆದಿಪುರುಷನಾದ ಶ್ರೀಕೃಷ್ಣನು ಆಯಾಪ್ರದೇಶಗಳಲ್ಲಿ ಫಲಪುಷ್ಪಗಳ ಅಧಿಕವಾದ ಭಾರದಿಂದಲೂ, ಕೆಂಪಾಗಿರುವ ತಳಿರುಗಳ ಕಾಂತಿಗಳಿಂದಲೂ, ಕೂಡಿ ಪಾದಂಗಳಂ ಮುಟ್ಟುತಲಿರುವ ಕೊನೆಗಳುಳ್ಳ, ಮರಗಳಂ ನೋಡಿ-ನಗುತ ಅಂಣನಾದ ಬಲರಾಮನಂ ಕುರಿತು ಈ ರೀತಿಯಾಗಿ ನುಡಿದನದೆಂತೆನೆ,- ‖೪‖ ಎಲೈ, ದೇವಶ್ರೇಷ್ಠನಾದ ಅಂಣನೇ! ಈ ಬೃಂದಾವನದಲ್ಲಿರುವ ವೃಕ್ಷಗಳು ಯಾವ ಪಾಪದಿಂದ ತಮಗೆ ವೃಕ್ಷ

ವ್ರ ॥೫॥ ಏತೇಲಿನಸ್ತವಯಶೋಖಿಲಲೋಕತೀರ್ಥಂಗಾಯನ್ತ ಆದಿಪುರುಷಾನುಪದಂಭಜನ್ತೇ । ಪ್ರಾಯೋಹ್ಯ
ಮೀಮುನಿಗಣಾಭವದೀಯಮುಖ್ಯಾಗೂಢಂವನೇಪಿನಜಹನ್ತ್ಯನಘಾತ್ಮದೈವಂ ॥೬॥ ನೃತ್ಯನ್ತ್ಯಮೀಶಿ
ಖಿನಈಡ್ಯಮುದಾಹರಿಣ್ಯಃಕುರ್ವನ್ತಿಗೋಪ್ಯಇವತೇಪ್ರಿಯಮೀಕ್ಷಣೇನ । ಸೂಕ್ತೈಶ್ಚಕೋಕಿಲಗಣಾಗೃಹಮಾ
ಗತಾಯಧನ್ಯಾವನೌಕಸಇಯಾನ್ಹಿಸತಾಂನಿಸರ್ಗಃ ॥೭॥ ಧನ್ಯೇಯಮದ್ಯಧರಣೀತೃಣವೀರುಧಸ್ತ್ವತ್ಪಾ
ದಸ್ಪೃಶೋದ್ರುಮಲತಾಃಕರಜಾಭಿಮೃಷ್ಟಾಃ । ನದ್ಯೋ*ದ್ರಯಃಖಗಮೃಗಾಸ್ಸದಯಾವಲೋಕೈರ್ಗೋ

---

ಪಪತ್ಯೈ-ಮೂಢತ್ವನಿವೃತ್ತಿಗೋಸುಗ, ತರುಜನ್ಮ-ಲೋಕೋಪಕಾರಕವಾದವೃಕ್ಷಜನ್ಮವು, ಯತ್ಕೃತಂ-ಯಾವದೇವರಿಂದಮಾಡ ಲ್ಪಟ್ಟಿತೋ, ತಸ್ಯತೇ-ಆನಿನ್ನ, ಅಮರಾರ್ಚಿತಂ-ದೇವತೆಗಳಿಂಪೂಜಿತವಾದ, ಪಾದಾಂಬುಜಂ-ಅಡಿದಾವರೆಯನ್ನುಕುರಿತು, ಶಿಖಾಭಿಃ-ಕೊಂಬೆಗಳಿಂದ, ಸುಮನಃಫಲಾರ್ಹಣಂ-ಹೂವುಗಳೂ ಹಣ್ಣುಗಳೂಎಂಬ, ಕಾಣಿಕೆಯನ್ನು, ಉಪಾದಾಯ-ತೆಗದುಕೊಂಡು, ನಮಂತಿ-ಪೊಡಮಡುತಲಿವೆ. ಅಹೋ-ಆಶ್ಚರ್ಯವು ॥೫॥ ಹೇಆದಿಪೂರುಷ-ಎಲೈಕಾರಣಮೂರ್ತಿಯೇ! ಅನಘ-ಪಾಪರಹಿತನೇ! ಏತೇ-ಈ, ಅಳಿನಃ-ತುಂಬಿಗಳು, ತವ-ನಿನ್ನ, ಅಖಿಲಲೋಕತೀರ್ಥಂ-ಸರ್ವಜನಗಳಿಗೂಶುದ್ಧಿಕರವಾದ, ಯಶಃ-ಕೀರ್ತಿಯನ್ನು, ಗಾಯಂತಃ-ಹಾಡುತಲಿರುವವಾಗಿ, ಅನುಪದಂ-ಪ್ರತಿಹೆಜ್ಜೆಯಲ್ಲಿಯೂ-ಭಜಂತೇ-ನಿನ್ನಂಸೇವಿಸುವವು. ಅಮೀ-ಈತುಂಬಿಗಳು, ಭವದೀಯಮುಖ್ಯಾಃ-ನಿನ್ನವರೊಳಗೆಮುಖ್ಯರಾದ, ಮುನಿಗಣಾಃ- ಮುನಿಸಂಘಗಳಾದ್ದರಿಂದಲೇ, ಪ್ರಾಯಃ-ಬಹುಶಃ, ವನೇಗೂಢಮಪಿ-ಕಾಡಿನೊಳಗೆಮನುಷ್ಯವೇಷದಿಂದಅಡಗಿರುವವನ್ನಾದರೂ, ಆತ್ಮದೈವಂ-ತಮ್ಮದೇವರನನ್ನು, ನಜಹಂತಿ-ಬಿಡುವುದಿಲ್ಲವು. (ಅಥವಾ-ತುಂಬಿಗಳು ಆದಿಪುರುಷನ ಪದವನ್ನು ಅನುಸರಿಸಿ ಭಜಿಸುತ್ತಿವೆ ಎಂದು ಅರ್ಥಮಾಡಬಹುದು.) ॥೬॥ ಈಡ್ಯ-ಕೊಂಡಾಡಲ್ಪಡತಕ್ಕವನೇ! ಅಮೀಶಿಖಿನಃ-ಈನವಿಲುಗಳು, ಮುದಾ-ಸಂತೋಷದಿಂದ, ನೃತ್ಯಂತಿ-ಕುಣಿಯುತಲಿವೆ. ಹರಿಣ್ಯಃ- ಹೆಣ್ಣುಜಿಂಕೆಗಳು, ಗೋಪ್ಯಇವ-ಗೊಲ್ಲತಿಯರಹಾಗೆ, ಈಕ್ಷಣೇನ-ನೋಟದಿಂದ, ತೇ-ನಿನಗೆ, ಪ್ರಿಯಂ-ಇಷ್ಟವನ್ನು, ಕುರ್ವಂತಿ – ಮಾಡುತಲಿವೆ. ಕೋಕಿಲಗಣಾಶ್ಚ-ಕೋಗಿಲೆಗಳಗುಂಪುಗಳೂಕೂಡ,ಗೃಹಂ-ತಮ್ಮಮನೆಯಾದವನವನ್ನು ಕುರಿತು,ಆಗತಾಯ-ಬಂದವನಾದ, ನಿನಗೋಸುಗ, ಸೂಕ್ತೈಃ-ಸುಶಬ್ದಗಳಿಂದ, ಪ್ರಿಯಂ-ಸಂತೋಷವನ್ನು, ಕುರ್ವಂತಿ- ಮಾಡುತಲಿವೆ, ವನೌಕಸಃ – ಕಾಡಿನಲ್ಲಿರುವಇವು, ಧನ್ಯಾಃ-ಕೃತಾರ್ಥಗಳು. ಸತಾಂ-ಸತ್ಪುರುಷರ, ನಿಸರ್ಗಃ-ಸ್ವಭಾವವು, ಇಯಾನ್ಹಿ-ಇಷ್ಟರವಲ್ಲವೇ; ॥೭॥ ಅದ್ಯ-ಈಗ, ಇಯಂಧರಣೀ-ಈಭೂಮಿಯು, ಧನ್ಯಾ-ಕೃತಾರ್ಥಳು, ತೃಣವೀರುಧಃ- ತೃಣ- ಹುಲ್ಲುಗಳೂ, ವೀರುಧಃ- ಬಳ್ಳಿಗಳೂ, ತ್ವತ್ಪಾದಸ್ಪೃಶಃ- ನಿನ್ನಅಡಿಗಳನ್ನುಸೋಂಕುವವಾಗಿ, ಧನ್ಯಾಃ-ಕೃತಾರ್ಥಗಳು, ದ್ರುಮಲತಾಃ- ಗಿಡಬಳ್ಳಿಗಳು, ಕರಜಾಭಿಮೃಷ್ಟಾಃ- ಕರಜ- ನಿನ್ನಉಗುರ್ಗಳಿಂ

---

ಜನ್ಮವುಂಟಾಯಿತೋ ಆ ಪಾಪವಂ ಪರಿಹರಿಸಿಕೊಳ್ಳ ಲೋಸುಗ ಪುಷ್ಪಫಲಗಳೆಂಬ ಪೂಜಾದ್ರವ್ಯಗಳಂ ಧರಿಸಿಕೊಂಡುದೇವತೆಗಳಿಂದ ಪೂಜಿಸಲ್ಪಟ್ಟ ನಿನ್ನ ಪಾದಾರವಿಂದವಂ ತಮ್ಮಶಿರೋಭಾಗಂಗಳಿಂದ ನಮಸ್ಕಾರಂಗೆಯ್ಯುತಲಿವೆ. ॥೫॥ ಎಲೈ, ದೋಷರಹಿತನಾದ ಆದಿಪುರುಷನಾದ ಶ್ರೀಬಲದೇವನೇ! ಈತುಂಬಿಗಳು ಸಮಸ್ತಲೋಕವಾಸಿಗಳಂ ಪಾವನಂಗೆಯ್ವ ನಿನ್ನಯಶಸ್ಸನ್ನು ಗಾನಂಗೆಯ್ಯುತಲಿರುವವಾಗಿ ಅಡಿಗಡಿಗೂ ನಿನ್ನಂಸೇವಿಸುತಲಿವೆಯಾದ್ದರಿಂದ ಇವುತುಂಬಿಗಳಲ್ಲ. ಮತ್ತೇನೆಂದರೆ ಬಹುತರವಾಗಿ ಭಾಗವತರಲ್ಲಿ ಮುಖ್ಯರಾದಮುನಿಗಳು ಮನುಷ್ಯವೇಷದಿಂದಗೂಢನಾಗಿಯೂ ತಮಗೆಇಷ್ಟದೇವರೂ ಆದ ನಿನ್ನಂ ಭ್ರಮರವೇಷದಿಂದ ತಾವೂಗೂಢರಾಗಿಬಿಡದೆ ಭಜಿಸುತಲಿರುವವರು. ॥೬॥ ಎಲೈ, ಸ್ತುತಿಸಲ್ಪಡತಕ್ಕಬಲರಾಮನೇ! ಈನವಿಲುಗಳು ಬೃಂದಾವನವನೆಯ್ದಿರುವ ನಿನ್ನಂನೋಡಿ ಸಂತೋಷದಿಂದ ನರ್ತನಂಗೆಯ್ಯುತಲಿವೆ. ಮತ್ತು ಈಹೆಣ್ಣು ಹುಲ್ಲೆಗಳು ಈಗೋಪಸ್ತ್ರೀಯರಂತೆ ತಮ್ಮ ಸವಿನೋಟದಿಂದ ನಿನಗೆ ಪ್ರೀತಿಯನ್ನುಂಟುಮಾಡುತಲಿವೆ. ಹಾಗೆಯೇಕೋಗಿಲೆಗಳಹಿಂಡುಗಳೂ ತಮ್ಮಮಧುರವಚನಗಳಿಂದ ನಿನಗೆ ಸಂತೋಷವನುಂಟು ಮಾಡುತಲಿವೆ ಆದುದರಿಂದ ಈ ವನವಾಸಿಗಳಾದ ನವಿಲುಮುಂತಾದ ಪ್ರಾಣಿಗಳು ಅತ್ಯಂತ ಪುಣ್ಯಶಾಲಿಗಳು. ತನ್ನ ಮನೆಯಲ್ಲಿ ಯಾವುದಿದೆಯೋ ಅದನ್ನ ಮನೆಗೆಬಂದ ಮಹಾತ್ಮನಿಗೆ ಸಮರ್ಪಿಸುವುದು ಸತ್ಪುರುಷರ ಸ್ವಭಾವವಲ್ಲವೆ. ॥೭॥ ಎಲೈ, ಸ್ವಾಮಿಯೇ! ಮತ್ತು ಈವನ ಭೂಮಿಯು ತೃಣಗಳು ಓಷಧಿಗಳು ಸಹಾ ನಿನ್ನಪಾದಾರವಿಂದವಂ ಸೋಂಕುತಲಿವೆ ಯಾದುದರಿಂದ ಅತ್ಯಂತಪುಣ್ಯಶಾಲಿಗಳು. ಹಾಗೆಯೇ

ಧ್ಯೋನ್ತರೇಣಭುಜಯೋರಪಿಯತ್ಸ್ಪೃಹಾಶ್ರೀಃ ॥೮॥ ಏವಂಬೃನ್ದಾವನಂಶ್ರೀಮತ್ಕೃಷ್ಣಃಪ್ರೀತಮನಾಃ

---

ಪ, ಅಭಿಮೃಷ್ಟಾಃ-ಸೋಂಕಲ್ಪಟ್ಟವಾದ್ದರಿಂದಲೇ, ಧನ್ಯಾಃ-ಕೃತಾರ್ಥಗಳಾಗಿರುವವು. ನದ್ಯಃ-ಹೊಳೆಗಳೂ, ಅದ್ರಯಃ- ಬೆಟ್ಟಗಳೂ, ಖಗಮೃಗಾಃ-ಹಕ್ಕಿಗಳೂಮೃಗಗಳೂ, ಸದಯಾವಲೋಕೈಃ-ನಿನ್ನಕರುಣಾಸಹಿತದೃಷ್ಟಿಗಳಿಂದ, ಧನ್ಯಾಃ- ಕೃತಾರ್ಥಗಳಾಗಿವೆ. ಗೋಪ್ಯಃ-ಗೋಲ್ಲತಿಯರು, ಶ್ರೀರಪಿಯತ್ಸ್ಪೃಹಾ-ಲಕ್ಷ್ಮಿಯೂಕೊಡಯಾವದರಲ್ಲಿ ಬಯಕೆಯುಳ್ಳವಳೋ, ತೇನಭುಜಯೋರಂತರೇಣ-ಆನಿನ್ನತೋಳುಗಳಮಧ್ಯಭಾಗದಿಂದ( ವಕ್ಷಸ್ಥಳದ ಆಲಿಂಗನದಿಂದ ) ಧನ್ಯಾಃ-ಕೃತಾರ್ಥೆಯರಾಗಿರುವರು ॥೮॥ ಶ್ರೀಮತ್ಕೃಷ್ಣಃ- ಸಂಪತ್ತುಳ್ಳಕೃಷ್ಣನು, ಸಾನುಗಃ- ಅನುಸರಿಸಿಬರುವಗೋಪಾಲಬಾಲರಿಂಸಹಿತನಾಗಿ, ಏವಂ- ಹೀಗೆ, ಪಶೂನ್-ಗೋವುಗಳನ್ನು, ಬೃಂದಾವನಂ-ಬೃಂದಾರಣ್ಯವನ್ನುಕುರಿತು, ಸಂಚಾರರ್ಯ-ತಿರುಗಿಸುತಲಿರುವನಾಗಿ, ಅದ್ರೇಃ-ಗೋವರ್ಧನ ಪರ್ವತದಬಳಿ

---

ವೃಕ್ಷಲತೆಗಳೂ ನಿನ್ನಉಗುರುಗಳಿಂದ ಸ್ಪರ್ಶಂಗೆಯ್ಯಲ್ಪಟ್ಟವಾದಕಾರಣದಿಂ ಅಂತ್ಯಂತಪುಣ್ಯಶಾಲಿಗಳು. ಮತ್ತು ಹೊಳೆಗಳು ಬೆಟ್ಟಗಳು ಹಕ್ಕಿಗಳು ಮೃಗಗಳೂಕೂಡ ದಯಾರಸದಿಂಕೂಡಿದ ನಿನ್ನನೋಟಗಳಿಂ ನೋಡಲ್ಪಡುವವಾದ್ದರಿಂದ ಅತ್ಯಂತಪುಣ್ಯಶಾಲಿಗಳು, ಮತ್ತು ಲಕ್ಷ್ಮೀದೇವಿಯೂಕೂಡ ಯಾವನಿನ್ನ ವಕ್ಷಸ್ಥಲಕ್ಕೋಸುಗಅತ್ಯಂತವಾಗಿ ಅಭಿಲಾಷಪಡುವಳೋ ಅಂತಾ ನಿನ್ನವಕ್ಷಸ್ಥಲದಿಂದ ಆಲಿಂಗನಂಗೆಯ್ಯಲ್ಪಡುವರಾದ ಕಾರಣದಿಂ ಈ ಗೋಕುಲದ ಗೋಪಸ್ತ್ರೀಯ್ಯರೂ ಅತ್ಯಂತಪುಣ್ಯಶಾಲಿಗಳು. [ಇಲ್ಲಿಬಲರಾಮನ ವಕ್ಷಸ್ಥಲದ ಆಲಿಂಗನವು ಲಕ್ಷ್ಮಿಯಿಂದ ಅಪೇಕ್ಷಿಸಲ್ಪಟ್ಟಂತೆ ಹೇಳಲ್ಪಟ್ಟಿದೆ. ಇದುವಿರುದ್ಧವಾಗಿ ರುವುದು. ಈ ಶ್ಲೋಕವು ಇಲ್ಲಿ ಕೃಷ್ಣವಾಕ್ಯವಾಗಿದೆ. ಬಲರಾಮನಲ್ಲಿ ಸ್ವಬುದ್ಧಿಯಿಂದ ಕೃಷ್ಣನು ಹೀಗೆಹೇಳಿದನೆಂದು ಕೆಲವರು ಅಭಿಪ್ರಾಯಮಂ ಪೇಳುವರು. ಬೇರೆಕೆಲವರು ಈಶ್ಲೋಕವು ಬಲರಾಮನ ವಾಕ್ಯವೆನ್ನುವರು. ಶ್ರೀಧರೀಯವ್ಯಾಖ್ಯಾನದಲ್ಲಿ ಇದು ಎಂಟನೆಯ ಶ್ಲೋಕವಾಗಿ ಮಾತ್ರ ಕಾಣುತ್ತಿದೆ. ಲಕ್ಷ್ಮಿ ದೇವಿಯು ಯಾವಭುಜಗಳ ಮಧ್ಯವನ್ನು ಅಪ್ಪಿಕೊಳ್ಳಲು ಬಯಸುವಳೋ ಆಭುಜಗಳ ಮಧ್ಯಭಾಗದಿಂದ ಅಪ್ಪಿಕೊಳ್ಳಲ್ಪಟ್ಟ ಗೋಪಸ್ತ್ರೀಯರೂ ಕೂಡ ಧನ್ಯರೆಂದು ಮಾತ್ರವೇ ಶ್ಲೋಕಾರ್ಥವಾಗುವುದರಿಂದ ಅಷ್ಟಂಶದಲ್ಲಿ ಕೃಷ್ಣನ ವಕ್ಷಸ್ಥಲವನ್ನು ಲಕ್ಷ್ಮಿಬಯಸುವಳೆನುತಲೂ ಕೃಷ್ಣನಿಂದಾಲಿಂಗಿತರಾದಗೋಪಿಯರು ಧನ್ಯರೆನುತಲೂ ಅರ್ಥವಾಗಬಹುದು. ಅದಕ್ಕೆಯಚ್ಛಬ್ದಸ್ವಾರಸ್ಯವೇ ಪ್ರಯೋಜಕವಾಗಿರುವುದು, ಕೃಷ್ಣನ ವಚನವಾಗಿರುವಪಕ್ಷದಲ್ಲಿ "ತ್ವತ್ಪಾದಸದ್ಮಕಃ "ಯೆಂಬಲ್ಲಿ 'ತ್ವತ್, ಎಂಬ ಯುಷ್ಮಚ್ಛಬ್ದಕ್ಕೆ ಬಲರಾಮನ ಎಂದರ್ಥವೂ; "ಯತ್ಸ್ಪೃಹಾಶ್ರೀಃ" ಎಂಬಲ್ಲಿ 'ಯತ್, ಎಂಬಶಬ್ದಕ್ಕೆ ಕೃಷ್ಣಭುಜಾಂತರವೆಂದರ್ಥವೂ ಹೇಳಲ್ಪಡಬೇಕಾಗಿದೇ ಬಲರಾಮವಾಕ್ಯವಾಗುವಪಕ್ಷದಲ್ಲಿ ವಿಶಿಷ್ಟಶ್ಲೋಕದ ಯಥಾಶ್ರುತಾರ್ಥವು ಕೃಷ್ಣನಲ್ಲಿಸಮನ್ವಯವಾಗುತ್ತೆ. ಮತ್ತೆ ಕೆಲವರು ವ್ಯಾಖ್ಯಾನಕರ್ತರು ನಾಲ್ಕನೆಯ ಶ್ಲೋಕದಲ್ಲಿ " ಸ್ಮಯನ್ನಿವಾಹಾಗ್ರಜ ಆದಿಪೂರುಷಂ,, ಎಂಬಪಾಠವಿಟ್ಟುಕೊಂಡು ೫ನೆಯಶ್ಲೋಕದಿಂದ ಇದೆಲ್ಲಬಲರಾಮವಚನವೆಂತಲೇ ಹೇಳುವರು. ಅದುಸಂಗತವಾಗಿದ್ದರೂ ಇಲ್ಲಿ ಬಲರಾಮನು ಧೇನುಕಾಸುರನನ್ನು ಸಂಹರಿಸುವ ಸಂದರ್ಭವು ಸಮೀಪವಾಗಿರುವುದರಿಂದ ಬಲರಾಮನಲ್ಲಿ ಸ್ವಾಂಶವನ್ನು ಲಕ್ಷಿಸಿ ಶ್ರೀಕೃಷ್ಣನು ಬಲರಾಮನಿಗೆ ಉತ್ಕರ್ಷ ಸಂಪಾದನಾರ್ಥವಾಗಿ ಹೇಳಿದವಚನ ವೆನುತಲೇ ತೋರುತ್ತೆ. ಆದುದರಿಂದಲೇ ನಾಲ್ಕನೆಯ ಶ್ಲೋಕದಲ್ಲಿ "ಅಗ್ರಜಮಾದಿಪೂರುಷಃ" ಎಂಬ ಪಾಠವಿಟ್ಟುಕೊಂಡು ಅಲ್ಲಿಂದ ಭಗವದ್ವಾಕ್ಯವೆನಿಸಿ ೯ ನೆಯ ಶ್ಲೋಕದಲ್ಲಿ 'ಏವಂಬೃಂದಾವನಂ ಶ್ರೀಮತ್ಕೃಷ್ಣಃ' ಎಂದು ಶುಕವಾಕ್ಯಾರಂಭವಾದಂತೆ ಮೂಲದಲ್ಲಿ ಕಾಣಲ್ಪಡುತ್ತಿದೆ. *ಶ್ರೀಧರೀಯ ವ್ಯಾಖ್ಯಾನದಲ್ಲಿ ಈವಿಷಯವು ಉಪೇಕ್ಷಿಸಲ್ಪಟ್ಟಿದೆ. ವಿಜಯಧ್ವಜ ವ್ಯಾಖ್ಯಾನದಲ್ಲಿ 'ಧನ್ಯೇಯಮದ್ಯಧರಣೀ' ಎಂಬ ಶ್ಲೋಕವು ಶ್ರೀಶುಕಾಚಾರ್ಯ ವಚನವೆಂದು ಮೂಲದೊಳಗೆ ೧೮ ಶ್ಲೋಕಗಳಾದ ಮೇಲೆ ಸೇರಿಸಲ್ಪಟ್ಟಿದೆ.] ॥೮॥ ಎಲೈ ಪರೀಕ್ಷಿದ್ರಾಯನೇ! ಶ್ರೀಕೃಷ್ಣನು ಹೀಗೆ ಅಣ್ಣನಾದ ಬಲರಾಮನಂ ಕುರಿತು ಹೇಳಿದ ಮೇಲೆ ಗೋವರ್ಧನ ಪರ್ವತದ ಸುತ್ತಲೂಇರುವ ನದೀತೀರಗಳಲ್ಲಿ ಗೋವುಗಳಂ ಮೇಯಿಸುತ ಅನುಚರರಾದ ಗೋಪಬಾಲಕರೊಡಗೂಡಿ ಕಾಂತಿಯುಕ್ತವಾದ ಬೃಂದಾವನದಲ್ಲಿ ಅತಿಸಂತುಷ್ಟವಾದ

ಪಶೂನ್ । ರೇಮೇಸಂಚಾರಯನ್ನದ್ರೇಸ್ಸರಿದ್ರೋಧಸ್ಸುಸಾನುಗಃ ‖ ೯ ‖ ಕ್ವಚಿದ್ಗಾಯತಿಗಾಯತ್ಸುಮದಾಂಧಾಲಿಷ್ವನುವ್ರತೈಃ । ಉಪಗೀಯಮಾನಚರಿತಸ್ಸಖಿಸಂಕರ್ಷಣಾನ್ವಿತಃ ‖೧೦‖ ಕ್ವಚಿಚ್ಚಕಲಹಂಸಾನಾಮನುಕೂಜತಿಕೂಜಿತಮ್ । ಅನುನೃತ್ಯತಿನೃತ್ಯಂತಂಬರ್ಹಿಣಂಹಾಸಯನ್ಸಖೀನ್ ‖೧೧‖ ಮೇಘಗಂಭೀರಯಾವಾಚಾನಾಮಭಿರ್ದೂರಗಾನ್ಪಶೂನ್ । ಕ್ವಚಿದಾಹ್ವಯತಿಪ್ರೀತ್ಯಾಗೋಗೋಪಾಲಮನೋಜ್ಞ

---

ಯಾ, ಸರಿದ್ರೋಧಸ್ಸು-ಹೊಳೆಯತಡಿಗಳಲ್ಲಿ, ಪ್ರೀತಮನಾಸ್ಸನ್-ಇಷ್ಟವಾದಮನಸ್ಸುಳ್ಳವನಾಗಿ, ರೇಮೆ-ಕ್ರೀಡಿಸಿದನು ‖೯‖ ಕ್ವಚಿತ್-ಒಂದಾನೊಂದುಕಡೆಯಲ್ಲಿ, ಅನುವ್ರತೈಃ-ಸೇವಕರಾದಸಂಗಾತಿಗಳಿಂದ, ಉಪಗೀಯಮಾನಚರಿತಃ- ಹತ್ತಿರಹಾಡಲ್ಪಡುತ್ತಿರುವ ಚರಿತ್ರವುಳ್ಳವನೂ, ಸಖಿಸಂಕರ್ಷಣಾನ್ವಿತಃ-ಗೆಳೆಯರೊಂದಿಗೂ ಬಲರಾಮನೊಂದಿಗೂ ಕೂಡಿದವನೂಆದಕೃಷ್ಣನು, ಮದಾಂಧಾಲಿಷು-ಸೊಕ್ಕಿನಿಂದಕುರುಡಾದತುಂಬಿಗಳು, ಗಾಯತ್ಸುಸತ್ಸು-ಹಾಡುತಲಿರುವವಾಗಲು, ಗಾಯತಿ-ಹಾಡುತಲಿರುವನು, ‖೧೦‖ ಕ್ವಚಿಚ್ಚ-ಮತ್ತೊಂದುಕಡೆಯಲಾದರೋ, ಕಲಹಂಸಾನಾಂ-ಅರಸಂಚೆಗಳ, ಕೂಜಿತಂ-ಕೂಗನ್ನು, ಅನುಕೂಜತಿ-ಅನುಸರಿಸಿಕೂಗುತಲಿರುವನು. ಸಖೀನ್-ಗೆಳೆಯರನ್ನು, ಹಾಸಯನ್ನ್-ನಗಿಸುತಲಿರುವನಾಗಿ, ನೃತ್ಯಂತಂ-ಕುಣಿಯುತಲಿರುವ, ಬರ್ಹಿಣಂ-ನವಿಲನ್ನು, ಅನುನೃತ್ಯತಿ- ಅನುಸರಿಸಿಕುಣಿಯುವನು ‖೧೧‖ ಕ್ವಚಿತ್- ಒಂದುಕಡೆಯಲ್ಲಿ, ಮೇಘಗಂಭೀರಯಾ- ಮೇಘದಂತೆಘನವಾಗಿಯೂ, ಗೋಪಾಲಮನೋಜ್ಞಯಾ-ಗೋವುಗಳಿಗೂ ಗೋಪಾಲರಿಗೂಮನೋಹರವಾದ, ವಾಚಾ- ಮಾತಿನಿಂದ, ದೂರಗಾನ್ಪಶೂನ್-ದೂರ

---

ಮನಸ್ಸುಳ್ಳವನಾಗಿ ರಮಿಸಿದನು. ‖೯‖ ಅದೆಂತೆನೆ- ಆ ಬೃಂದಾವನದಲ್ಲಿ ಶ್ರೀಕೃಷ್ಣನು ಒಂದು ಕಡೆಯಲ್ಲಿ ಅತ್ಯಂತಮದಯುಕ್ತಂಗಳಾದ ತುಂಬಿಗಳು ಗಾನಂಗೆಯ್ಯುತಲಿರಲು ಅನುಚರರಾದ ಗೋಪಾಲ ಬಾಲಕರಿಂ ಗಾನಂಗೆಯ್ಯಲ್ಪಡುತಲಿರುವ ಚರಿತ್ರೆಯುಳ್ಳವನಾಗಿ, ಬಲರಾಮ ನೊಡಗೂಡಿ, ತಾನೂ ಗಾನಂಗೆಯ್ಯುತಲಿದ್ದನು ‖೧೦‖ ಮತ್ತೊಂ



ದುಕಡೆಯಲ್ಲಿ ನರ್ತನಂ ಗೆಯ್ಯುತಲಿರುವ ನವಿಲಂಕಂಡು ತನ್ನ ಮಿತ್ರನಂ ನಗಿಸುತ ಆನವಿಲಿಗೆ ಅಭಿಮುಖನಾಗಿ ನರ್ತನಂಗೆಯ್ಯುವನು. ಮತ್ತೊಂದು ಕಡೆಯಲ್ಲಿ ಕಲಹಂಸಗಳ ಧ್ವನಿಯನನುಸರಿಸಿ ತಾನೂ ಧ್ವನಿಗೆಯ್ಯುವನು. ‖೧೧‖ ಮತ್ತೊಂದು ವೇಳೆಯಲ್ಲಿ ಶ್ರೀಕೃಷ್ಣನು ಮೇಘದಂತೆ ಗಂಭೀರವಾದ, ಗೋವುಗಳಿಗೂ ಗೋಪಾಲಕರಿಗೂ ಮನೋಹರವಾದ, ತನ್ನ ವಾಕ್ಕಿನಿಂದ- ದೂರಪ್ರದೇಶವನೆಯ್ದಿರುವ ಗೋವುಗಳಂ ಅವುಗಳ ಹೆಸರುಗಳಿಂದ ಪ್ರೀತಿಸಿ ತನ್ನ

ಯೌ ॥೧೬॥ ಚಕೋರಕ್ರೌಂಚಚಕ್ರಾಹ್ವಭರದ್ವಾಜಾಂಸ್ತುಬರ್ಹಿಣಃ । ಅನುರೌತಿಸ್ಮಸತ್ವಾನಾಂಭೀತವದ್ವ್ಯಾಘ್ರಸಿಂಹಯೋಃ ॥೧೭॥ ಕ್ವಚಿತ್ಕ್ರೀಡಾಪರಿಶ್ರಾಂತಂಗೋಪೋತ್ಸಂಗೋಪಬರ್ಹಣಂ । ಸ್ವಯಂವಿಶ್ರಮಯತ್ಯಾರ್ಯಂಪಾದಸಂವಾಹನಾದಿಭಿಃ ॥೧೮॥ ನೃತ್ಯತೋಗಾಯತಃಕ್ವಾಪಿವಲ್ಗತೋಯುಧ್ಯತೋಮಿಥಃ।

---

ಕ್ಕೆ ಹೋಗಿರುವ ಗೋವುಗಳನ್ನು, ನಾಮಭಿಃ-ಅವುಗಳ ಹೆಸರುಗಳಿಂದ, ಪ್ರೀತ್ಯಾ ಆಹ್ವಯತಿ-ಪ್ರೀತಿಯಿಂದ ಕರೆಯುವನು॥೧೬॥ಚಕೋರ-ತಿಂಗಳಹಕ್ಕಿ, ಕ್ರೌಂಚ-ಕೊಂಚವಕ್ಕಿ, ಚಕ್ರಾಹ್ವ-ಕೊಕ್ಕವಕ್ಕಿ, ಭರದ್ವಾಜಾನ್-ಕಬ್ಬುಲಹಕ್ಕಿಗಳನ್ನೂ, ಬರ್ಹಿಣಃ-ನವಿಲುಗಳನ್ನೂ, ಅನುರೌತಿಸ್ಮ - ಅನುಸರಿಸಿ ಕೂಗುತಲಿರುವನಾದನಲ್ಲವೆ; ಸತ್ವಾನಾಂತು-ಕ್ಷುದ್ರಜಂತುಗಳೊಳಗಾವವೋ, ವ್ಯಾಘ್ರಸಿಂಹಯೋಃ-ಹುಲಿಗೂ ಸಿಂಹಕ್ಕೂ, ಭೀತವತ್-ಹೆದರಿದವನ ಹಾಗೆ ಇರುವನು ॥೧೭॥ಕ್ವಚಿತ್-ಒಂದು ಕಡೆಯಲ್ಲಿ, ಕ್ರೀಡಾಪರಿಶ್ರಾಂತಂ-ಆಟದಿಂದ ಬಳಲಿದವನಾಗಿಯೂ, ಗೋಪೋತ್ಸಂಗೋಪಬರ್ಹಣಂ-ಗೋಪ-ಗೋಪಾಲಕನ, ಉತ್ಸಂಗ-ತೊಡೆಯೇ, ಉಪಬರ್ಹಣಂ-ತಲೆದಿಂಬಾಗಿವುಳ್ಳ, ಆರ್ಯಂ- ಅಣ್ಣನಾದ ಬಲರಾಮನನ್ನು, ಪಾದಸಂವಾಹನಾದಿಭಿಃ- ಕಾಲು ಹಿಸುಕುವುದು ಮೊದಲಾದ ಉಪಚಾರಗಳಿಂದ, ಸ್ವಯಂ-ತಾನೇ, ವಿಶ್ರಮಯತಿ-ಆಯಾಸವಿಲ್ಲದವನನ್ನಾಗಿ ಮಾಡುತ್ತಿರುವನು ॥೧೮॥ಕ್ವಾಪಿ- ಒಂದಾನೊಂದು ಕಡೆಯಲ್ಲಿ, ನೃತ್ಯತಃ-ಕುಣಿಯುತಲಿರುವ, ಗಾಯತಃ-ಹಾಡುತಲಿರುವ, ವಲ್ಗತಃ-ಹಾರುತಲಿರುವ, ಮಿಥಃ-ಪರಸ್ಪರವಾಗಿ, ಯುಧ್ಯತಃ- ಕಾದಾಡುತಲಿರುವ, ಗೃಹೀತಹಸ್ತಾನ್-ಹಿಡಿಯಲ್ಪಟ್ಟ ಕೈಗಳುಳ್ಳವರಾದ, ಗೋಪಾಲಾನ್-ದನಗಳಂ ಕಾಯುವ ಹುಡುಗರನ್ನು, ಹಸಂತೌ-ನಗು

---

ನವಿಲಾಪಕ್ಕಿ ಕರೆದನು ॥೧೬॥ ಮತ್ತು ಶ್ರೀಕೃಷ್ಣನು ಒಂದು ಕಡೆಯಲ್ಲಿ ಚಕೋರ, ಕ್ರೌಂಚ, ಹಂಸ, ಭಾರದ್ವಾಜ, ಮಯೂರ, ಮೊದಲಾದ ಪಕ್ಷಿಗಳು ಧ್ವನಿಗೆಯ್ಯುತಲಿರುವಲ್ಲಿ ಅವುಗಳನನುಸರಿಸಿ ತಾನೂ ಧ್ವನಿಗೆಯ್ಯುವನು. ಮ



ತ್ತೊಂದು ಸಮಯದಲ್ಲಿ ವನದಲ್ಲಿರುವ ಮೃಗಂಗಳ ಮಧ್ಯದಲ್ಲಿ ತಾನು ಹುಲಿ ಮೊದಲಾದ ಕ್ರೂರಜಂತುಗಳಿಂದ ಹೆದ



ರಿದವನಂತೆ ಅಡಗಿಕೊಂಡಿರುವನು. ॥೧೭॥ ಇನ್ನೊಂದು ಕಾಲದಲ್ಲಿ ಕೃಷ್ಣನು ಆಯಾ ಕ್ರೀಡೆಗಳಿಂ ಬಳಲಿದವನಾದ್ದರಿಂದ ಒಬ್ಬ ಗೋಪಾಲನ ತೊಡೆಯನ್ನೇ ತಲೆದಿಂಬನ್ನಾಗಿ ಮಾಡಿಕೊಂಡು ಮಲಗಿರುವ ಅಣ್ಣನಾದ ಬಲರಾಮನಂ ತಾನೇ ಕಾಲುಗಳನ್ನು ಹಿಸುಕುವುದು ಮುಂತಾದ ಸೇವೆಗಳಿಂದ ಶ್ರಮವಿಲ್ಲದವನನ್ನಾಗಿ ಮಾಡುವನು. ॥೧೮॥

ಪರಸ್ಪರವಾಗಿ ಒಂದು ಕಡೆಯಲ್ಲಿ ನರ್ತನಂಗೆಯ್ಯುತಲಿರುವ, ಮತ್ತೊಂದು ಕಡೆಯಲ್ಲಿ ಅಭಿನಯಮಂ ಗೆಯ್ಯುತಲಿರುವ,

ಗೃಹೀತಹಸ್ತೌ ಗೋಪಾಲಾನ್ ಹಸನ್ತೌ ಪ್ರಶಶಂಸತುಃ ॥ ೧೫ ॥ ಕ್ವಚಿತ್ಪಲ್ಲವತಲ್ಪೇಷು ನಿಯುದ್ಧಶ್ರಮಕ
ರ್ಶಿತಃ । ವೃಕ್ಷಮೂಲಾಶ್ರಯಶ್ಶೇತೇ ಗೋಪೋತ್ಸಂಗೋಪಬರ್ಹಣಃ ॥೧೬॥ ಪಾದಸಂವಹನಂ ಚಕ್ರುಃ ಕೇಚಿತ್ತ
ಸ್ಯ ಮಹಾತ್ಮನಃ । ಪರೇತು ಹತಪಾಪ್ಮಾನೋ ವ್ಯಜನೈಸ್ಸಮವೀಜಯನ್ ॥೧೭॥ ಅನ್ಯೇ ತದನುರೂಪಾಣಿ ಮ
ನೋಜ್ಞಾನಿ ಮಹಾತ್ಮನಃ । ಗಾಯನ್ತಿ ಸ್ಮ ಮಹಾರಾಜ ಸ್ನೇಹಕ್ಲಿನ್ನಧಿಯಶ್ಶನೈಃ ॥೧೮॥ ಏವಂ ನಿಗೂಢಾತ್ಮ
ಗತಿಸ್ಸ್ವಮಾಯಯಾ ಗೋಪಾತ್ಮಜತ್ವಂ ಚರಿತೈರ್ವಿಡಂಬಯನ್ । ರೇಮೇ ರಮಾಲಾಲಿತಪಾದಪಲ್ಲವೋ ಗ್ರಾಮ್ಯೈಸ್ಸ

---

ತಿರುವ ರಾಮಕೃಷ್ಣರು, ಪ್ರಶಶಂಸತುಃ-ಕೊಂಡಾಡಿದರು ॥೧೫॥ ಕ್ವಚಿತ್- ಒಂದುಕಡೆಯಲ್ಲಿ, ನಿಯುದ್ಧಶ್ರಮಕರ್ಶಿತಃ- ನಿಯುದ್ಧ- ಕೈಗಾಳಗದ, ಶ್ರಮ-ಆಯಾಸದಿಂದ, ಕರ್ಶಿತಃ- ಕೃಶಗೊಳಿಸಲ್ಪಟ್ಟ ಕೃಷ್ಣನು, ವೃಕ್ಷಮೂಲಾಶ್ರಯಃ- ಗಿಡದಬುಡವೇ ಆಧಾರವಾಗಿ ಉಳ್ಳವನಾಗಿ, ಗೋಪೋತ್ಸಂಗೋಪಬರ್ಹಣಂ-ಗೊಲ್ಲನತೊಡೆಯು ತಲೆದಿಂಬಾಗಿಉಳ್ಳವನಾಗಿ, ಶೇತೇ-ಮಲಗಿರುವನು ॥೧೬॥ ಕೇಚಿತ್- ಕೆಲವರು, ಮಹಾತ್ಮನಃ-ದೊಡ್ಡಮನಸ್ಸುಳ್ಳ, ತಸ್ಯ-ಆಕೃಷ್ಣನಿಗೆ, ಪಾದಸಂವಹನಂ- ಕಾಲುಹಿಸುಕುವಿಕೆಯನ್ನು, ಚಕ್ರುಃ- ಮಾಡಿದರು. ಹತಪಾಪ್ಮಾನಃ-ಪಾಪವಿಲ್ಲದವರಾದ, ಪರೇ ತು- ಅನ್ಯರಾದರೋ, ವ್ಯಜನೈಃ-ಬೀಸಣಿಗೆಗಳಿಂದ, ಸಮವೀಜಯನ್- ಚನ್ನಾಗಿಬೀಸಿದರು ॥೧೭॥ ಮಹಾರಾಜ-ಮಹಾರಾಯನೇ! ಅನ್ಯೇ- ಬೇರೆಜನರು, ಸ್ನೇಹಕ್ಲಿನ್ನಧಿಯಸ್ಸಂತಃ- ಸ್ನೇಹ-ಮಿತ್ರಭಾವದಿಂದ, ಕ್ಲಿನ್ನ- ತೊಯ್ದ, ಧಿಯಃ-ಬುದ್ಧಿಯುಳ್ಳವರಾಗಿ, ಮಹಾತ್ಮನಃ-ಮಹಾಪುರುಷನಾದಕೃಷ್ಣನ, ತದನುರೂಪಾಣಿ-ಅವನಿಗೆತಕ್ಕವುಗಳಾದ, ಮನೋಜ್ಞಾನಿ-ಮನೋಹರಗಳಾದಚರಿತ್ರಗಳನ್ನು, ಶನೈಃ-ಮೆಲ್ಲನೆ, ಗಾಯಂತಿಸ್ಮ-ಹಾಡಿದರು ॥೧೮॥ ಏವಂ-ಹೀಗೆ, ಸ್ವಮಾಯಯಾ-ತನ್ನ ಮಾಯೆಯಿಂದ, ನಿಗೂಢಾತ್ಮಗತಿಃ-ನಿಗೂಢ-ಗುಟ್ಟಾಗಿರುವ, ಆತ್ಮಗತಿಃ- ಸ್ವರೂಪಜ್ಞಾನಾದಿಗಳುಳ್ಳಕೃಷ್ಣನು, ಈಶಚೇಷ್ಟಿತೋಪಿ-ಪರಮೇಶ್ವರನಂತೆವ್ಯಾಪಾರಗಳುಳ್ಳವನಾದರೂ, ರಮಾಲಾಲಿತಪಾದಪಲ್ಲವೋಪಿ-ರಮಾ-ಲಕ್ಷ್ಮಿಯಿಂದ, ಲಾಲಿತ-ಉಪಚರಿಸಲ್ಪಟ್ಟ,

---



ಹಾಗೆಯೇ ಇನ್ನೊಂದುಕಡೆಯಲ್ಲಿ ಯುದ್ಧವನ್ನು ಮಾಡುತಲಿರುವ, ಗೋಪ ಬಾಲಕರಂ ನೋಡಿ ಶ್ರೀರಾಮಕೃಷ್ಣರೀರ್ವರೂ ಅವರ ಹಸ್ತಗಳಂ ಪಿಡಿದು ಇದು ಬಹುಚನ್ನಾಯಿತೆಂದು ಕೊಂಡಾಡಿದರು. ॥೧೫॥ ಬೇರೆಯೊಂದು ಕಾಲದೊಳು ಶ್ರೀಕೃಷ್ಣನು ಆಟದಿಂದ ಸ್ನೇಹಿತರೊಡನೆ ಬಹು ಯುದ್ಧಂಗೆಯ್ವುದರಿಂದಾದ ಶ್ರಮದಿಂದ ಪೀಡಿತನಾಗಿ ಒಂದು ಮರದಡಿಯನ್ನು ಸೇರಿ ಚಿಗುರುಗಳಿಂದ ಕಲ್ಪಿಸಲ್ಪಟ್ಟ ಹಾಸಿಗೆಯಲ್ಲಿ ಒಬ್ಬಾನೊಬ್ಬ ಗೋಪಬಾಲಕನ ತೊಡೆಯನ್ನೇ ತಲೆದಿಂಬನ್ನಾಗಿ ಮಾಡಿ ಕೊಂಡು ಮಲಗಿರುವನು. ॥೧೬॥ ಆಗ ಕೆಲವರು ಗೋಪಬಾಲಕರು ಮಹಾತ್ಮನಾದ



ಕೃಷ್ಣನ ಪಾದಂಗಳನೊತ್ತಿದವರಾಗಿ ಪಾಪದಿಂದಮುಕ್ತರಾದರು. ಮತ್ತೆ ಕೆಲವರು ಚಿಗುರು ಮೊದಲಾದುದರಿಂದ ನಿರ್ಮಿಸಲ್ಪಟ್ಟ ಬೀಸಣಿಗೆಗಳಿಂದ ಬೀಸಿ ಪಾಪರಹಿತರಾದರು. ॥೧೭॥ ಎಲೈ, ಅರಸೇ! ಆಗ ಮತ್ತೆ ಕೆಲವರು ಗೋಪಾಲಬಾಲರು ಸ್ನೇಹದಿಂದ ತಂಪಾದ ಹೃದಯವುಳ್ಳವರಾಗಿ ಮಹಾತ್ಮನಾದ ಕೃಷ್ಣನ ಮನೋಹರಂಗಳಾಗಿಯೂ ಆತನಿಗೆ ಅನುರೂಪಂಗಳಾಗಿಯೂ ಇರುವ ಚರಿತ್ರಗಳನ್ನು ಮೆಲ್ಲನೆ ಗಾನಂಗೆಯ್ದವರಾದರು ॥೧೮॥ ಎಲೈ, ರಾಯನೇ! ಲಕ್ಷ್ಮೀದೇವಿಯಿಂದ ಲಾಲಿಸಲ್ಪಟ್ಟ ಚಿಗುರಿನಂತೆ ಅತಿಕೋಮಲಂಗಳಾದ ಪಾದಪದ್ಮಂಗಳುಳ್ಳ

ಸ್ಸಮಂ ಗ್ರಾಮ್ಯವದೀಶಚೇಷ್ಟಿತಃ ॥೧೯॥ ಶ್ರೀದಾಮಾನಾಮಗೋಪಾಲೋರಾಮಕೇಶವಯೋಸ್ಸಖಾ। ಸುಬಲಸ್ತೋಕಕೃಷ್ಣಾದ್ಯಾಗೋಪಾಃಪ್ರೇಮ್ಣೇದಮಬ್ರುವನ್ ॥೨೦॥ ರಾಮರಾಮಮಹಾಸತ್ತ್ವಕೃಷ್ಣದುಷ್ಟನಿ

॥ ಧೇನುಕಾಸುರಭಂಜನಘಟ್ಟಃ ॥

ಬರ್ಹಣ । ಇತೋಽವಿದೂರೇಸುಮಹದ್ವನಂತಾಳಾಳಿಸಂಕುಲಮ್ ॥೨೧॥ ಫಲಾನಿತತ್ರಭೂರೀಣಿಪತಂತಿಪತಿತಾನಿಚ । ಸಂತಿಕಿಂತ್ವವರುದ್ಧಾನಿಧೇನುಕೇನದುರಾತ್ಮನಾ ॥೨೨॥ ಸೋಽತಿವೀರ್ಯೋಽಸುರೋರಾಮಹೇಕೃಷ್ಣಖರರೂಪಧೃತ್ । ಆತ್ಮತುಲ್ಯಬಲೈರನ್ಯೈರ್ಜ್ಞಾತಿಭಿರ್ಬಹುಭಿರ್ವೃತಃ ॥೨೩॥ ತಸ್ಮಾತ್ಕೃತನರಾಹಾರಾದ್ಭೀ

---

ತಾದಪಲ್ಲವೋಽಪಿ-ಚಿಗುರಡಿಗಳುಳ್ಳವನಾದರೂ, ಚರಿತ್ರೈಃ-ನಡತೆಗಳಿಂದ, ಗೋಪಾತ್ಮಜತ್ವಂ- ಗೊಲ್ಲರಮಗನಾಗಿರುವಿಕೆಯನ್ನು, ವಿಡಂಬಯನ್-ಅನುಕರಿಸಿತೋರಿಸುತ್ತಿರುವನಾಗಿ, ಗ್ರಾಮ್ಯವತ್-ಹಳ್ಳಿಕಾರನಂತೆ, ಗ್ರಾಮ್ಯೈಸ್ಸಮಂ- ಹಳ್ಳಿಕಾರರೊಂದಿಗೆ, ರೇಮೇ-ಕ್ರೀಡಿಸಿದನು ॥೧೯॥ ರಾಮಕೇಶವಯೋಃ-ಬಲರಾಮಕೃಷ್ಣರಿಗೆ, ಸಖಾ- ಗೆಳೆಯನಾದ, ಶ್ರೀದಾಮನಾಮಾ- ಶ್ರೀದಾಮನೆಂಬಹೆಸರುಳ್ಳ, ಗೋಪಾಲಃ-ಗೊಲ್ಲರವನೂ, ಸುಬಲಃ-ಸುಬಲನೆಂಬವನೂ, ಸ್ತೋಕಕೃಷ್ಣಾದ್ಯಾಃ- ಸಣ್ಣಕೃಷ್ಣನೇಮೊದಲಾದ, ಗೋಪಾಃ-ಗೊಲ್ಲರೂ, ಪ್ರೇಮ್ಣಾ-ಸ್ನೇಹದಿಂದ, ಇದಂ-ಈಮುಂದೆಹೇಳುವುದನ್ನು, ಅಬ್ರುವನ್-ನುಡಿದರು ॥೨೦॥ ಮಹಾಸತ್ತ್ವ-ಮಹಾಬಲವುಳ್ಳ, ರಾಮರಾಮ-ರಾಮನೇರಾಮನೇ! ದುಷ್ಟನಿಬರ್ಹಣ- ದೋಷವುಳ್ಳವರನ್ನುಕೊಲ್ಲುತಲಿರುವ, ಕೃಷ್ಣ- ಕೃಷ್ಣನೇ! ಇತಃ-ಇಲ್ಲಿಂದ, ಅವಿದೂರೇ-ಬಹಳದೂರವಲ್ಲದಸ್ಥಲದಲ್ಲಿ, ತಾಳಾಳಿಸಂಕುಲಂ-ತಾಳ-ತಾಳೇಮರಗಳ, ಆಳಿ-ಸಾಲುಗಳಿಂದ, ಸಂಕುಲಂ-ವ್ಯಾಪ್ತವಾದ, ಸುಮಹತ್-ದೊಡ್ಡ, ವನಂ-ಕಾಡಿರುವುದು ॥೨೧॥ ತತ್ರ-ಆವನದಲ್ಲಿ, ಭೂರೀಣಿ-ಬಹುವಾದ, ಫಲಾನಿ- ಹಣ್ಣುಗಳು, ಪತಂತಿ-ಬೀಳುತಲಿವೆ. ಪತಿತಾನಿಚ-ಬಿದ್ದವೂಕೂಡ, ಸಂತಿ-ಇರುವವು, ಕಿಂತು-ಮತ್ತೇನೆಂದರೆ, ದುರಾತ್ಮನಾ-ದುಷ್ಟಸ್ವಭಾವವುಳ್ಳ, ಧೇನುಕೇನ-ಧೇನುಕನೆಂಬವನಿಂದ, ಅವರುದ್ಧಾನಿ-ತಡೆಯಲ್ಪಟ್ಟವಾಗಿವೆ. ॥೨೨॥ ರಾಮ-ಬಲಭದ್ರನೇ! ಹೇಕೃಷ್ಣ-ಎಲೆಕೃಷ್ಣನೆ! ಸೋಽಸುರಃ-ಆದೈತ್ಯನು, ಅತಿವೀರ್ಯಃ- ಹೆಚ್ಚುಶಕ್ತಿಯುಳ್ಳವನಾಗಿಯೂ, ಖರರೂಪಧೃತ್- ಕತ್ತೆಯರೂಪವನ್ನು ಧರಿಸಿದವನಾಗಿಯೂ, ಆತ್ಮತುಲ್ಯಬಲೈಃ-ಆತ್ಮ-ತನ್ನೊಡನೆ, ತುಲ್ಯ-ಸಮಾನವಾದ, ಬಲೈಃ-ಸಾಮರ್ಥ್ಯವುಳ್ಳ-ತ್ರಾಣವುಳ್ಳ, ಅನ್ಯೈಃ-ಇತರರಾದ, ಬಹುಭಿರ್ಜ್ಞಾತಿಭಿಃ-ಹಲವುನೆಂಟರಿಂದ, ವೃತಃ-ಬಳಸಲ್ಪಟ್ಟವನಾಗಿಯೂಇರುವನು ॥೨೩॥ ಅಮಿತ್ರಹನ್- ಶತ್ರುಗಳಂಕೊಲ್ಲುವವನೇ! ಕೃತನರಾಹಾರಾತ್-ಮಾಡಲ್ಪಟ್ಟಮನುಷ್ಯಭಕ್ಷಣವುಳ್ಳ, ತಸ್ಮಾತ್-ಅವನದೆಸೆಯಿಂದ, ಭೀತೈಃ-ಹೆದರಿದವರಾದ, ನೃಭಿಃ- ಮನುಷ್ಯರಿಂದ, ಭು

---

ಶ್ರೀಕೃಷ್ಣನು ಈ ರೀತಿಯಿಂದ ತನ್ನ ಮಾಯೆಯಿಂ ಮುಚ್ಚಲ್ಪಟ್ಟಿರುವ ತನ್ನ ಸ್ವಭಾವವುಳ್ಳವನಾದರೂ ಆಗಾಗ ಅತ್ಯದ್ಭುತಗಳಾದ ಈಶ್ವರ ವ್ಯಾಪಾರಗಳಂ ತೋರಿಸುವವನಾಗಿ, ಮತ್ತು ತನ್ನ ಚರಿತ್ರಗಳಿಂದ ಗೋಪಬಾಲಕತ್ವವಂ ನಟಿಸುತಲಿರುವನಾಗಿ, ಅತಿಪ್ರಾಕೃತರಾದ ಗೋಪಾಲ ಬಾಲಕರೊಡಗೂಡಿ ತಾನೂ ಪ್ರಾಕೃತ ಬಾಲಕನಂತೆ ಹೀಗೆವಿಹರಿಸಿದನು. ॥೧೯॥ ಹೀಗಿರಲು ರಾಮಕೃಷ್ಣರೀರ್ವರಿಗೂ ಸ್ನೇಹಿತನಾದ ಶ್ರೀದಾಮನೆಂಬಹೆಸರುಳ್ಳ ಗೋಪಬಾಲಕನೂ ಸುಬಲನೆಂಬವನೂ ಬಾಲಕೃಷ್ಣನೆಂಬವನೂ (ಅಶೋಕನೆಂಬವನೂ) ಮೊದಲಾದ ಗೋಪಾಲಬಾಲಕರು ಅತಿಸ್ನೇಹದಿಂದ ರಾಮಕೃಷ್ಣರಂಕುರಿತು ಈರೀತಿಯಾಗಿ ಒಂದುವಾಕ್ಯವಂ ಬಿನ್ನವಿಸಿದರೆಂತೆನೆ॥೨೦॥ ಎಲೈ, ಮಹಾಭುಜಬಲ ಶಾಲಿಯಾದ ರಾಮನೇ! ದುಷ್ಟರಂನಿಗ್ರಹಿಸುವ ಕೃಷ್ಣನೇ! ಇಲ್ಲಿಗೆ ಸಮೀಪದೇಶದಲ್ಲಿತಾಳೇಮರಗಳಸಾಲಿನಿಂದ ತುಂಬಿರುವ ಮಹಾವನವೊಂದಿದೆ. ॥೨೧॥ ಆದೊಡ್ಡತಾಳವನದಲ್ಲಿ ಬೀಳುತಲಿರುವ, ಪಕ್ವಗಳಾಗಿಕೆಳಗೆಬಿದ್ದಿರುವ, ಅಪರಿಮಿತಗಳಾದ, ಹಣ್ಣುಗಳಿವೆ ಆದರೆ ಆಫಲಗಳು ದುರಾತ್ಮನಾದ ಧೇನುಕನೆಂಬ ಅಸುರನಿಂದ ಅನ್ಯರಿಗೆ ದೊರೆಯದಂತೆ ನಿರೋಧಂಗೆಯ್ಯಲ್ಪಟ್ಟದೆ. ॥೨೨॥ ಎಲೈ, ರಾಮನೇ! ಕೃಷ್ಣನೇ! ಮಹಾಪರಾಕ್ರಮವುಳ್ಳ ಆಧೇನುಕಾಸುರನು ಕತ್ತೆಯರೂಪವಂಧರಿಸಿ ತನಗೆ ಸಮಾನಬಲರಾದ ಅನೇಕರಾದ ತನ್ನನೆಂಟರಿಂದ ಬಳಸಲ್ಪಟ್ಟವನಾಗಿರುವವನು. ॥೨೩॥ ಮನುಷ್ಯರನ್ನು ತಿನ್ನುವ ದುಷ್ಟನಾದ ಆಧೇನುಕಾಸುರನದೆಸೆಯಿಂದ ಭಯಪಟ್ಟಿರುವ ಮನುಷ್ಯರಿಂದಲೂ ಪಶುಗಳಿಂದಲೂ ಪಕ್ಷಿಸಮೂಹಗಳಿಂದಲೂ ಕೂಡ ಬಿಡಲ್ಪಟ್ಟಿರುವ ಆತಾಳವನವ

ತೈರ್ನ್ಯರ್ಗಭಿರವಿತ್ರರ್ಹ । ವಿದ್ಯನ್ತೇಭುಕ್ತಪೂರ್ವಾಣಿಫಲಾನಿಸುರಭೀಣಿಚ ॥೨೩॥ವಿಷವೈಸುರಭಿರ್ಗಂಧೋ ವಿಷೂಚೀನೋದ್ಯಗೃಹ್ಯತೇ । ಪ್ರಯಚ್ಛತಾನಿನಃಕೃಷ್ಣಗನ್ಧಲೋಭಿತಚೇತಸಾಮ್ ॥೨೪॥ ವಾಞ್ಛಾಸ್ತೀನ್ಮಹತೀರಾಮಗಮ್ಯತಾಂಯದಿರೋಚತೇ । ಏವಂಸುಹೃದ್ವಚಃಶ್ರುತ್ವಾಸುಹೃತ್ಪ್ರಿಯಚಿಕೀರ್ಷಯಾ ॥೨೫॥ ಪ್ರಹಸ್ಯಜಗ್ಮತುರ್ಗೋಪೈರ್ವೃತೌತಾಳವನಂಪ್ರಭೂ । ಬಲಃಪ್ರವಿಶ್ಯಬಾಹುಭ್ಯಾಂತಾಳಾನ್ಸಮ್ಪರಿಕಮ್ಪಯನ್ ॥೨೬॥ಫಲಾನಿಪಾತಯಾಮಾಸಮತಂಗಜಇವೌಜಸಾ । ಫಲಾನಾಂಪತತಾಂಶಬ್ದಂನಿಶಮ್ಯಾಸುರರಾಸಭಃ ॥೨೭॥ಅಭ್ಯಧಾವತ್ಕ್ಷಿತಿತಲಂಸನಗಂಪರಿಕಮ್ಪಯನ್ ॥೨೮॥ಸಮೇತ್ಯತರಸಾಪ್ರತ್ಯಗ್ದ್ವಾಭ್ಯಾಂಪ

---

ಕ್ತಪೂರ್ವಾಣಿ-ಪೂರ್ವದಲ್ಲಿತಿನ್ನಲ್ಪಟ್ಟವುಗಳಾದ, ಸುರಭೀಣಿ-ಪರಿಮಳಿಸುತ್ತಿರು, ಫಲಾನಿಚ-ಹಣ್ಣುಗಳುಕೂಡ, ವಿದ್ಯಂತೇ- ಇರುವವು ॥೨೩॥ವಿಷೂಚೀನಃ-ಎಲ್ಲಕಡೆಗಳಲ್ಲಿಯೂಹರಡಿಕೊಳ್ಳುತಲಿರುವ, ಸುರಭಿಃ-ಪರಿಮಳವಾದ, ಏಷಗಂಧಃ- ಈವಾಸನೆಯು, ಅದ್ಯ-ಈಗ, ಗೃಹ್ಯತೇವೈ-ಪ್ರಸಿದ್ಧವಾಗಿಗ್ರಹಿಸಲ್ಪಡುತ್ತಿದೆ. ಕೃಷ್ಣ-ಕೃಷ್ಣನೇ! ಗಂಧಲೋಭಿತಚೇತಸಾಂ- ಪರಿಮಳದಿಂಪ ಆಶಗೊಳಸಲ್ಪಟ್ಟಮನಸ್ಸುಳ್ಳ, ನಃ-ನಮಗೆ, ತಾನಿ-ಆಹಣ್ಣುಗಳನ್ನು, ಪ್ರಯಚ್ಛ-ಕೊಡು,॥೨೪॥ ರಾಮ-ಬಲಭದ್ರನೇ! ಮಹತೀ-ದೊಡ್ಡದಾದ, ವಾಂಛಾ-ಆಶೆ, ಆಸೀತ್-ಉಂಟಾಯಿತು. ರೋಚತೇಯದಿ-ಇಷ್ಟವಾಗಿತೋರಿದರೆ, ಗಮ್ಯತಾಂ- ನಡೆಯಲ್ಪಡಲಿ. ಏವಂ-ಹೀಗೆ, ಸುಹೃದ್ವಚಃ-ಸ್ನೇಹಿತರಮಾತನ್ನು, ಶ್ರುತ್ವಾ-ಕೇಳಿ, ಸುಹೃತ್ಪ್ರಿಯಚಿಕೀರ್ಷಯಾ-ಗೆಳೆಯರಿಗೆಇಷ್ಟವನ್ನು ಮಾಡಲಪೇಕ್ಷೆಯಿಂದ ॥೨೫॥ಪ್ರಹಸ್ಯ-ಹೆಚ್ಚಾಗಿನಕ್ಕು, ಗೋಪೈಃ-ಗೊಲ್ಲರಿಂದ, ವೃತೌ- ಬಳಸಲ್ಪಟ್ಟವರಾದ, ಪ್ರಭೂ-ಸಮರ್ಥರಾದರಾಮಕೃಷ್ಣರು, ತಾಳವನಂ-ತಾಳೀಮರಗಳತೋಪನ್ನುಕುರಿತು, ಜಗ್ಮತುಃ-ಹೋದರು. ಬಲಃ- ಬಲರಾಮನು, ಪ್ರವಿಶ್ಯ- ಒಳಹೊಕ್ಕು, ಬಾಹುಭ್ಯಾಂ-ತೋಳುಗಳಿಂದ, ತಾಲಾನ್-ತಾಳೆಯಮರಗಳನ್ನು, ಸಂಪರಿಕಂಪಯನ್-ಚನ್ನಾಗಿಅಲ್ಲಾಡಿಸುತ್ತಿರುವನಾಗಿ॥೨೬॥ ಓಜಸಾ-ಸಾಮರ್ಥ್ಯದಿಂದ, ಮತಂಗಜಇವ-ಆನೆಯಹಾಗೆ, ಫಲಾನಿ-ಹಣ್ಣುಗಳನ್ನು, ಪಾತಯಾಮಾಸ-ಕೆಡಹಿದನು. ಅಸುರರಾಸಭಃ- ದೈತ್ಯನಾದಕತ್ತೆಯು, ಪತತಾಂ-ಬೀಳುತಲಿರುವ, ಫಲಾನಾಂ-ಹಣ್ಣುಗಳ, ಶಬ್ದಂ-ಸಪ್ಪಳನ್ನು, ನಿಶಮ್ಯ-ಕೇಳಿ ॥೨೭॥ ಸನಗಂ- ವೃಕ್ಷಗಳಿಂಕೂಡಿದ, ಕ್ಷಿತಿತಲಂ-ನೆಲದತಾಣವನ್ನು, ಪಗಿಕಂಪಯನ್-ಅದುರಿಸುತಲಿರುವನಾಗಿ, ಅಭ್ಯಧಾವತ್-ಅಟ್ಟಿಕೊಂಡುಬಂದನು॥೨೮॥

---

ನ್ನು ಈಗ ಯಾರೂಪ್ರವೇಶಿಸುವುದಿಲ್ಲ. ॥೨೩॥ ಆವನದಲ್ಲಿ ಎಂದಿಗೂಭಕ್ಷಿಸಲ್ಪಡದೇಇರುವವುಮತ್ತು ಪರಿಮಳದಿಂಕೂಡಿದಫಲಂಗಳಿವೆ. ರಾಮಕೃಷ್ಣರೇ! ನೋಡಿರಿ- ಆವನದಿಂದ ಅತಿಮನೋಹರವಾದ ಪರಿಮಳವು ಸರ್ವತ್ರವ್ಯಾಪ್ತವಾಗಿ ನಮ್ಮಿಂದ ಗ್ರಹಿಸಲ್ಪಡುತಲಿದೆ. ॥೨೪॥ ಆದುದರಿಂದ ಆಪರಿಮಳದಿಂ ಅತ್ಯಂತಾಸಕ್ತವಾಗಿ ಮಾಡಲ್ಪಟ್ಟಮನಸ್ಸುಳ್ಳ ನಮಗೆ ಆಫಲಗಳಂ ಕೊಡುವರಾಗಿ. ಈಅರ್ಥವು ನಿಮ್ಮಚಿತ್ತಕ್ಕೆ ಸಮ್ಮತವಾದರೆ ಹೊರಡತಕ್ಕದ್ದೆಂದರು. ॥೨೫॥ ಎಲೈ ಅರಸೇಕೇಳು ಆಮೇಲೆ ಸಮರ್ಥರಾದರಾಮಕೃಷ್ಣರೀರ್ವರೂ ಈರೀತಿಯಿಂದ ಮಿತ್ರರಾದ ಗೋಪಾಲರವಚನವಂಕೇಳಿ ನಕ್ಕವರಾಗಿ ಅವರಿಗೆಪ್ರೀತಿಯಂಮಾಡಲಿಚ್ಛೆಯಿಂದ ಆಗೋಪಬಾಲರಿಂಪರಿವೃತರಾಗಿ ಮಹತ್ತಾದ ಆತಾಳವನವನೈದಿದರು. ॥೨೬॥ ಆಬಳಿಕ ಬಲರಾಮನು ಆವನವಂ ಪ್ರವೇಶಿಸಿ ದೊಡ್ಡಆನೆಯಹಾಗೆ ತನ್ನ ಭುಜಬಲದಿಂದ ಆತಾಳವೃಕ್ಷಗಳಂ ಅಲ್ಲಾಡಿಸುವವನಾಗಿ ಅವುಗಳಹಣ್ಣುಗಳಂಕೆಡಹಿದನು. ॥ ಆಗ ಗಾರ್ದಭರೂಪವಂಧರಿಸಿರುವ ಧೇನುಕಾಸುರನು ಕೆಳಕ್ಕೆಬೀಳುತಲಿರುವ ಆತಾಳಫಲಗಳ ಶಬ್ದವಂ ಕೇಳಿ |*| ರೋಷದಿಂದ ಮರಗಳಿಂದ ಕೂಡಿದನೆಲವನ್ನು ಬಹಳವಾಗಿ ಅದುರಿಸುತ್ತ ಅಟ್ಟಿಬಂದನು ॥೨೮॥



ದ್ಭ್ಯಾಂಬಲವಾನ್ಬಲೀ । ನಿಹತ್ಯೋರಸಿಕಾಶಬ್ದಂಮುಂಚನ್ಪರ್ಯಸರತ್ಖರಃ ॥೩೦॥ ಪುನರಾಸಾದ್ಯಸಂರಬ್ಧ ಉಪಕ್ರೋಷ್ಟಾಪರಾಕ್ಸ್ಥಿತಃ ।ಚರಣಾವಪರೌರಾಜನ್ಬಲಾಯಪ್ರಾಕ್ಷಿಪದ್ರುಷಾ॥೩೧॥ ಸತಂಗೃಹೀತ್ವಾ ಪ್ರಪದಯೋರ್ಭ್ರಾಮಯಿತ್ವೈಕಪಾಣಿನಾ । ಚಿಕ್ಷೇಪತೃಣರಾಜಾಗ್ರೇಭ್ರಾಮಣತ್ಯಕ್ತಜೀವಿತಮ್ ॥೩೨॥ ತೇನಾಹತೋಮಹಾತಾಳಃಪತಮಾನೋಬೃಹಚ್ಛಿರಾಃ । ಪಾರ್ಶ್ವಸ್ಥಂಕಂಪಯನ್ಭಗ್ನಸ್ಸಚಾನ್ಯಂಸೋಽಪಿ ಚಾಪರಮ್ ॥ ೩೩ ॥ಬಲಸ್ಯಲೀಲಯೋತ್ಸೃಷ್ಟಖರದೇಹಹತಾಹತಾಃ । ತಾಳಾಶ್ಚಕಂಪಿರೇಸರ್ವೇಮಹಾವಾತೇರಿತಾಇವ॥ ೩೪ ॥ ನೈತಚ್ಚಿತ್ರಂಭಗವತಿಹ್ಯನಂತೇಜಗದೀಶ್ವರೇ। ಓತಪ್ರೋತಮಿದಂಯಸ್ಮಿನ್ತಂತುಷ್ವಂಗ

---

ಸಮೇತ್ಯ-ಬಂದು. ಬಲೀ-ಬಲವುಳ್ಳ, ಖರಃ-ಕತ್ತೆಯಾದವನು, ತರಸಾ-ಜೇಗನೆ, ಪಶ್ಚಿಮಾಭ್ಯಾಂಪದ್ಭ್ಯಾಂ-ಹಿಂದಣಎರಡುಕಾಲುಗಳಿಂದ, ಬಲಂ-ಬಲರಾಮನನ್ನು, ಉರಸಿ-ಎದೆಯಲ್ಲಿ, ನಿಹತ್ಯ-ಒದೆದು,ಕಾಶಬ್ದಂ-ಕಾಯೆಂಬಕೂಗನ್ನು, ಮುಂಚನ್-ಕೂಗುತಲಿರುವನಾಗಿ, ಪರ್ಯಸರತ್-ಓಡಿಹೋದನು॥೩೦॥ರಾಜನ್-ಅರಸನೇ! ಪುನಃ-ಮರಳಿಯೂ, ಆಸಾದ್ಯ-ಬಂದು, ಸಂರಬ್ಧಃ-ವೇಗವುಳ್ಳವನಾಗಿ, ಉಪಕ್ರೋಷ್ಟಾ-ಕೂಗುತಲಿರುವನಾಗಿ, ಪರಾಕ್ಸ್ಥಿತಃ-ಪ್ರತಿಮುಖವಾಗಿನಿಂತವನಾಗಿ, ಅಪರೌಚರಣೌ-ಹಿಂಗಾಲ್ಗಳನ್ನು, ರುಷಾ-ಸಿಟ್ಟಿನಿಂದ, ಬಲಾಯ-ಬಲರಾಮನಿಗೋಸುಗ, ಪ್ರಾಕ್ಷಿಪತ್-ಹಾರಿಸಿದನು॥೩೧॥ಸಃ-ಆಬಲರಾಮನು, ತಂ-ಆಧೇನುಕಾಸುರನನ್ನು, ಪ್ರಪದಯೋಃ ಗೃಹೀತ್ವಾ-ಕಾಲುಹಿಡಿದು, ಏಕಪಾಣಿನಾ-ಒಂದುಕೈಯಿಂದ, ಭ್ರಾಮಯಿತ್ವಾ-ತಿರುಗಿಸಿ, ಭ್ರಾಮಣೇನ- ತಿರುಗುವಿಕೆಯಿಂದ, ತ್ಯಕ್ತಜೀವಿತಂ-ಬಿಡಲ್ಪಟ್ಟಪ್ರಾಣವುಳ್ಳವನನ್ನು,ತೃಣರಾಜಾಗ್ರೇ-ತಾಳೆಯಮರದಕೊನೆಯಲ್ಲಿ,ಚಿಕ್ಷೇಪ-ಎತ್ತಿಹಾಕಿದನು ॥೩೨॥ ತೇನ-ಆಕತ್ತೆಯಿಂದ, ಆಹತಃ-ಹೊಡೆಯಲ್ಪಟ್ಟ, ಮಹಾತಾಳಃ-ದೊಡ್ಡತಾಳೆಯಮರವು, ಪತಮಾನಃ-ಬೀಳುತಲಿರುವುದಾಗಿ, ಬೃಹಚ್ಛಿರಾಃ-ದೊಡ್ಡತಲೆಯುಳ್ಳದ್ದಾದ್ದರಿಂದಲೇ, ಪಾರ್ಶ್ವಸ್ಥಂ-ಪಕ್ಕದಲ್ಲಿರುವತಾಳೇಮರವನ್ನು, ಕಂಪಯನ್- ನಡುಗಿಸುತಲಿರುವುದಾಗಿ, ಭಗ್ನಃ-ಮುರಿದುಹೋದದ್ದಾಯಿತು, ಸಚ-ಆಪಕ್ಕದಮರವೂ, ಅನ್ಯಂ-ಮತ್ತೊಂದುಮರವನ್ನು, ಸೋಽಪಿ-ಅದೂಕೂಡ, ಅಪರಂಚ- ಇನ್ನೊಂದುಮರವನ್ನು, ಕಂಪಯನ್- ನಡುಗಿಸುತಲಿರುವುದಾಗಿ, ಭಗ್ನಃ- ಮುರಿದುಹೋದದ್ದಾಯಿತು॥೩೩॥ ಬಲಸ್ಯ-ಬಲರಾಮನ, ಲೀಲಯಾ-ವಿಲಾಸದಿಂದ, ಉತ್ಸೃಷ್ಟ-ಎತ್ತಿಹಾಕಲ್ಪಟ್ಟ, ಖರದೇಹ- ಕತ್ತೆಯಮೈಯಿಂದ, ಹತ- ಹೊಡೆಯಲ್ಪಟ್ಟಮರದಿಂದ, ಹತಾಃ- ಹೊಡೆಯಲ್ಪಟ್ಟವುಗಳಾದ, ತಾಳಾಸ್ಸರ್ವೇ- ತಾಳೇಮರಗಳೆಲ್ಲವೂ, ಮಹಾವಾತೇರಿತಾಇವ- ಮಹಾವಾತ- ಹೆಗ್ಗಾಳಿಯಿಂದ, ಈರಿತಾಇವ-ತಳ್ಳಲ್ಪಟ್ಟವುಗಳಹಾಗೆ, ಚಕಂಪಿರೇ-ನಡುಗಿದವು॥೩೪॥ಅಂಗ-ಅಯ್ಯಾ! ಪಟಃ-ವಸ್ತ್ರವು, ತಂತುಷುಯಥಾ-ನೂಲುಗಳಲ್ಲಿಹೇಗೋಹಾಗೆ ಇದಂ-ಈಜಗತ್ತು, ಯಸ್ಮಿನ್-ಯಾವವನಲ್ಲಿ, ಓತಂಪ್ರೋತಂಚ-ಹಾಸಾಗಿಯೂಹೊಕ್ಕಾಗಿಯೂಇರುವುದೋ, ತಸ್ಮಿನ್-ಆ, ಜಗದೀಶ್ವ

---

ಯಾದ ಧೇನುಕಾಸುರನು ತ್ವರೆಯಿಂದ ಬಲಭದ್ರನನ್ನೈದಿ ಕತ್ತೆಯ ಕೂಗಂ ಕೂಗಿ ತನ್ನಯೆರಡು ಹಿಂಗಾಲ್ಗಳಿಂದಲೂ ಬಲರಾಮನ ಎದೆಯಲ್ಲಿ ಒದೆದು ಸುತ್ತಲೂ ಓಡಿಯಾಡಿದನು.॥೩೦॥ಅನಂತರದಲ್ಲಿ ಅತಿಕೋಪಯುಕ್ತನಾದಗರ್ದಭರೂಪಧಾರಿಯಾದ ಆ ಧೇನುಕಾಸುರನು ಮರಳಿಬಲರಾಮನ ಬಳಿಗೆಬಂದು ಎದುರಿಗೆತಿರುಗಿನಿಂತು ಬಲಭದ್ರನಂಕೊಲ್ಲಲೋಸುಗ ಪುನಶ್ಚ ಹಿಂಗಾಲ್ಗಳಂ ಜೋಡಿಸಿಯೊದೆದನು ॥೩೧॥ ಆಮೇಲೆ ಬಲರಾಮನು ಒಂದುಕೈಯಿಂದ ಅವನ ಎರಡು ಹಿಂಗಾಲ್ಗಳನ್ನೂ ಹಿಡಿದು ತಿರುಗಿಸಿತಿರುಗಿಸಿ ಅದರಿಂದಲೇ ಬಿಡಲ್ಪಟ್ಟಜೀವವುಳ್ಳ ಆಧೇನುಕಾಸುರನಂ ತಾಳವೃಕ್ಷದ ತುದಿಯಲ್ಲಿ ಎತ್ತಿಬಿಸುಟನು.॥೩೨॥ಆಗ ಮಹತ್ತಾದ ಅಗ್ರಭಾಗವುಳ್ಳ ಆತಾಳವೃಕ್ಷವು ಆಧೇನುಕಾಸುರನಿಂದ ಬಡಿಯಲ್ಪಟ್ಟು ಬೀಳುತ್ತ ತನ್ನ ಪಕ್ಕದಲ್ಲಿರುವ ಮತ್ತೊಂದು ತಾಳವೃಕ್ಷವನ್ನು ಬಹಳವಾಗಿ ಕಂಪಿಸುವಂತೆಮಾಡಿ ತಾನು ಮುರಿದುಹೋಯಿತು. ಆಮೇಲೆ ಆಮತ್ತೊಂದು ವೃಕ್ಷವೂಕೂಡ ಮುರಿದುಬೀಳುತ ಬೇರೆಯೊಂದುಮರವಂ ಮುರಿಯಿತು. ಹಾಗೆಯೇ ಆವೃಕ್ಷವು ಇನ್ನೊಂದು ವೃಕ್ಷವಂಮುರಿಯಿತು. ॥ಇಂತುಬಲರಾಮನಲೀಲೆಯಿಂದ ಎಸೆಯಲ್ಪಟ್ಟ ಆಧೇನುಕಾಸುರನ ಹೆಣದಿಂದ ಬಡಿಯಲ್ಪಟ್ಟ ತಾಳೇಮರಗಳಿಂದ ಚನ್ನಾಗಿ ಬಡಿಯಲ್ಪಟ್ಟು ಮಿಕ್ಕತಾಳ ವೃಕ್ಷಗಳೆಲ್ಲವೂ ಹೆಗ್ಗಾಳಿಯಿಂದ ಬಡಿಯಲ್ಪಟ್ಟಂತೆನಡುಗಿದವು॥ ಎಲೈ,ಅರಸೇ! ಯಾವರೀತಿಯಿಂದ ನೂಲೆಳೆಗಳಲ್ಲಿ ವಸ್ತ್ರವು ಉದ್ದವಾಗಿಯೂ ಅಡ್ಡಲಾಗಿಯೂತಗಲಕೊಂಡಿರುವುದೋ, ಆರೀತಿಯಿಂದ ಈಸಮಸ್ತಜಗತ್ತೂ ಯಾವವನಲ್ಲಿ ಸರ್ವತ್ರ ಅನು

ಯಥಾಪಟಃ ॥ ೩೫ ॥ ತತಃಕೃಷ್ಣಂಚರಾಮಂಚಜ್ಞಾತಯೋಧೇನುಕಸ್ಯಯೇ । ಕ್ರೋಷ್ಟಾರೋಭ್ಯಪತನ್ಸ
ರ್ವೇಸಂರಬ್ಧಾಹತಬಾನ್ಧವಾಃ ॥೩೬॥ ತಾಂಸ್ತಾನಾಪತತಃಕೃಷ್ಣೋರಾಮಶ್ಚನೃಪಲೀಲಯಾ । ಗೃಹೀತಪಶ್ಚಾ
ಚ್ಚರಣಾನ್ಪ್ರಾಹಿಣೋತ್ತೃಣರಾಜಸು ॥೩೭॥ ಫಲಪ್ರಕರಸಂಕೀರ್ಣಂದೈತ್ಯದೇಹೈರ್ಗತಾಸುಭಿಃ । ರರಾ
ಜಖರತಾಳಾಗ್ರೈರ್ಘನೈರಿವನಭಸ್ಥಲಮ್ ॥೩೮॥ ತಯೋಸ್ತತ್ಸುಮಹತ್ಕರ್ಮನಿಶಾಮ್ಯವಿಬುಧಾದಯಃ ।
ಮುಮುಚುಃಪುಷ್ಪವರ್ಷಾಣಿಚಕ್ರುರ್ವಾದ್ಯಾನಿತುಷ್ಟುವುಃ ॥೩೯॥ ಅಥತಾಳಫಲಾನ್ಯಾದನ್ಮನುಷ್ಯಾಗತ
ಸಾಧ್ವಸಾಃ । ತೃಣಂಚಪಶವಶ್ಚೇರುರ್ಹತಧೇನುಕಕಾನನೇ ॥೪೦॥ ಕೃಷ್ಣಃಕಮಲಪತ್ರಾಕ್ಷಃಪುಣ್ಯಶ್ರವಣಕೀ

---

ರೇ-ಪ್ರಪಂಚಕ್ಕೆನಿಯಾಮಕನಾದ, ಭಗವತಿ-ಭಗವಂತನಾದ, ಅನಂತೇ-ಸಂಕರ್ಷಣನಲ್ಲಿ, ಏತತ್- ಈದೈತ್ಯಸಂಹಾರಬಲವು, ನಚಿತ್ರಂಹಿ-ಆಶ್ಚರ್ಯವಲ್ಲವಷ್ಟೆ? ॥೩೫॥ ತತಃ-ಆಮೇಲೆ, ಧೇನುಕಸ್ಯ-ಧೇನುಕಾಸುರನ, ಜ್ಞಾತಯಃ-ನಂಟರು, ಯೇ-ಯಾರೋ, ತೇಸರ್ವೇ-ಅವರೆಲ್ಲರೂ, ಹತಬಾಂಧವಾಃ-ಕೊಲ್ಲಲ್ಪಟ್ಟನಂಟನುಳ್ಳವರಾದ್ದರಿಂದಲೇ, ಕ್ರೋಷ್ಟಾರಃ- ಕೂಗುತಲಿರುವರಾಗಿಯೂ, ಸಂರಬ್ಧಾಃ-ವೇಗವುಳ್ಳವರಾಗಿಯೂ, ಕೃಷ್ಣಂಚರಾಮಂಚ-ಕೃಷ್ಣನನ್ನೂರಾಮನನ್ನೂ ಕುರಿತು, ಅಭ್ಯಪತನ್-ಎದುರುಬಿದ್ದರು ॥೩೬॥ ನೃಪ- ಭೂರೆಯೇ, ತತಃ-ಆಮೇಲೆ, ರಾಮಃಕೃಷ್ಣಶ್ಚ-ರಾಮನೂಕೃಷ್ಣನೂ, ಆಪತತಃ- ಬರುತಲಿರುವ, ಗೃಹೀತಪಶ್ಚಾಚ್ಚರಣಾನ್-ಹಿಡಿಯಲ್ಪಟ್ಟಹಿಂಗಾಲ್ಗಳುಳ್ಳ, ತಾಂಸ್ತಾನ್-ಆಯಾಕತ್ತೆಗಳನ್ನು, ತೃಣರಾಜಸು-ತಾಳೀವೃಕ್ಷಗಳಲ್ಲಿ, ಪ್ರಾಹಿಣೋತ್-ಎತ್ತಿಹಾಕಿದನು ॥೩೭॥ ಫಲಪ್ರಕರಸಂಕೀರ್ಣಂ-ಹಣ್ಣುಗಳಗುಂಪಿನಿಂದಚಲ್ಲಲ್ಪಟ್ಟಿರುವ, ಸ್ಥಲಂ-ನೆಲವು, ಗತಾಸುಭಿಃ-ಸತ್ತವಾದ ದೈತ್ಯದೇಹೈಃ-ಅಸುರಶರೀರಗಳೊಡನೆಯೂ, ಖರತಾಳಾಗ್ರೈಃ-ಖರ-ತೀಕ್ಷ್ಣವಾದ, ತಾಳಾಗ್ರೈಃ-ತಾಳವೃಕ್ಷಗಳಕೊನೆಗಳೊಡನೆಯೂ, ಸಹಿತವಾಗಿ, ಘನೈಃ-ಹಲವುಬಂಣದಮೇಘಗಳೊಡನೆ, ನಭಇವ-ಆಕಾಶದಹಾಗೆ, ರರಾಜ-ಬೆಳಗಿತು ॥೩೮॥ ವಿಬುಧಾದಯಸ್ತು-ದೇವರ್ಕಳುಮೊದಲಾದವರಾದರೋ, ತಯೋಃ-ಆರಾಮಕೃಷ್ಣರ, ಸುಮಹತ್ಕರ್ಮ-ಚೆನ್ನಾದದೊಡ್ಡಕೆಲಸವನ್ನು, ನಿಶಾಮ್ಯ- ಕಂಡು, ಪುಷ್ಪವರ್ಷಾಣಿ-ಹೂಮಳೆಗಳನ್ನು, ಮುಮುಚುಃ-ಸುರಿದರು. ವಾದ್ಯಾನಿ- ವಾದ್ಯಗಳನ್ನು, ಚಕ್ರುಃ-ಮೊಳಗಿಸಿದರು. ತುಷ್ಟುವುಃ- ಕೊಂಡಾಡಿದರು ॥೩೯॥ ಅಥ-ಆಮೇಲೆ, ಹತಧೇನುಕ ಕಾನನೇ-ಹತ-ಕೊಲ್ಲಲ್ಪಟ್ಟ, ಧೇನುಕ-ಕತ್ತೆಯರೂಪದರಕ್ಕಸನುಳ್ಳ, ಕಾನನೇ- ಕಾಡಿನಲ್ಲಿ, ಗತಸಾಧ್ವಸಾಃ-ಗತ-ಹೋದ, ಸಾಧ್ವಸಾಃ-ಭಯವುಳ್ಳವರಾದ, ಮನುಷ್ಯಾಃ-ನರರು, ತಾಳಫಲಾನಿ- ತಾಳಿಯಹಣ್ಣುಗಳನ್ನು ಆದನ್-ತಿಂದರು, ಪಶವಶ್ಚ-ಗೋವುಗಳೂಕೂಡ, ತೃಣಂ-ಹುಲ್ಲನ್ನು, ಚೇರುಃ-ಮೆಯಿದವು ॥೪೦॥ ಕಮಲಪತ್ರಾಕ್ಷಃ-ತಾವರೆಯ ಎಲೆಯಂತೆವೈಯುಳ್ಳವನಾದ ಅಥವಾ ತಾವರೆಯಎಸಳ್ಗಳಂತೆಕಂಗಳುಳ್ಳವನಾದ, ಪುಣ್ಯಶ್ರವಣಕೀರ್ತನಃ-ಪುಣ್ಯಕರವಾದತನ್ನನಾಮಶ್ರವಣವೂಗುಣಕಥನವೂಉಳ್ಳವನಾದ, ಕೃಷ್ಣಃ-ಕೃಷ್ಣನು, ಸಾಗ್ರಜಃ- ಅಂಣನಿಂದಸಹಿತನಾಗಿ, ಅನುಗೈಃ- ಸಂಗಡಬರುತಲಿರುವ

---

ವರ್ತಿಸಿಕೊಂಡಿರುವುದೋ ಅಂತಾ ಭಗವಂತನಾದ ಜಗದೀಶ್ವರನಾದ ಅನಂತನಾದ ಬಲರಾಮನಲ್ಲಿ ಇಂತಾಮಹಾಸಾಮರ್ಥ್ಯವಿರುವುದು ಆಶ್ಚರ್ಯವಲ್ಲವು ॥೩೫॥ ಕೂಡಲೇ ಧೇನುಕಾಸುರನಿಗೆ ನೆಂಟರಾದಕತ್ತೆಗಳೆಲ್ಲವೂ ಸತ್ತುಹೋದಧೇನುಕನೆಂಬ ಬಂಧುವುಳ್ಳವಾದುದರಿಂದ ಬಹಳಸಿಟ್ಟನಿಂಕೂಡಿದವಾಗಿ ರಾಮಕೃಷ್ಣರನ್ನು ಅಟ್ಟಿಕೊಂಡುಬಂದವು ॥೩೬॥ ಎಲೈ, ಅರಸೇ! ಆಮೇಲೆ ರಾಮನೂ ಕೃಷ್ಣನೂ ಅಟ್ಟಿಕೊಂಡು ಬರುತ್ತಿರುವ ಗರ್ದಭರೂಪಧಾರಿಗಳಾದ ಅಸುರರ ಹಿಂಗಾಲ್ಗಳನ್ನು ವಿಲಾಸದಿಂದಹಿಡಿದುಹಿಡಿದು ಅವರಂ ತಾಳೆವೃಕ್ಷಗಳಮೇಲೆ ಬೀಸಿಎಚ್ಚುತಿರ್ದರು. ॥೩೭॥ ಆಗ ತಾಳೆಫಲಸಮೂಹದಿಂದಲೂ, ಅಸುರರ ಹೆಣಗಳಿಂದಲೂ, ಮುರಿದತಾಳವೃಕ್ಷಗಳ ಕೊನೆಗಳಿಂದಲೂ, ವ್ಯಾಪ್ತವಾದ ಭೂಪ್ರದೇಶವು ಹಲವುಬಂಣಗಳಾದ ಮೇಘಗಳಿಂವ್ಯಾಪ್ತವಾದ ಆಕಾಶಪ್ರದೇಶದಂತೆ ಪ್ರಕಾಶಿಸಿತು. ॥೩೮॥ ಆಗ ಅಂತರಿಕ್ಷದಲ್ಲಿ ದೇವಾದಿಗಳು ರಾಮಕೃಷ್ಣರಸಾಮರ್ಥ್ಯವಂನೋಡಿ ದಿವ್ಯಪುಷ್ಪಗಳಂ ಮಳೆಸುರಿಸಿದರು. ಭೇರಿಮೊದಲಾದ ವಾದ್ಯಂಗಳಂ ಮೊಳಗಿಸಿದರು. ಮತ್ತು ರಾಮಕೃಷ್ಣರಂ ಸ್ತುತಿಸಿದರು. ॥೩೯॥ ಅನಂತರದಲ್ಲಿ, ನಷ್ಟನಾದ ಧೇನುಕನುಳ್ಳ ಆವನದಲ್ಲಿ ಜನರೆಲ್ಲರೂಭಯವಿಲ್ಲದವರಾಗಿ ತಾಳೆಫಲಗಳನ್ನು ಭಕ್ಷಿಸಿದರು. ಗೋವುಗಳೂಸಹ ಭಯವಂ ಬಿಟ್ಟು ಹುಲ್ಲುಗಳಂ ಮೆದ್ದವು. ॥೪೦॥ ಆಮೇಲೆ ತಾವರೆಯೆಸಳ್ಗಳಂತಿರುವ ಕಂಣುಗಳುಳ್ಳ ಮಹಾತ್ಮರಿಂದ ಶ್ರವಣಂಗೆಯ್ಯಲ್ಪಡುತಿರುವ ಚರಿತ್ರವುಳ್ಳ, ಶ್ರೀಕೃಷ್ಣನು- ಬಲರಾಮ ನೊಡಗೂಡಿ ಅನುಚರ

ರ್ತನಃ । ಸ್ತೂಯಮಾನೋನುಗೈರ್ಗೋಪೈಸ್ಸಾಗ್ರಜೋವ್ರಜಮಾವಿಶತ್ ॥೪೧॥ ತಂಗೋರಜಶ್ಛುರಿತಕುನ್ತಲಬದ್ಧಬರ್ಹವನ್ಯಪ್ರಸೂನರುಚಿರೇಕ್ಷಣಚಾರುಹಾಸಮ್ । ವೇಣುಂಕ್ವಣನ್ತಮನುಗೈರುಪಗೀತಕೀರ್ತಿಂ ಗೋಪ್ಯೋದಿದೃಕ್ಷಿತದೃಶೋಭ್ಯಗಮನ್ಸಮೇತಾಃ ॥೪೨॥ ಪೀತ್ವಾಮುಕುಂದಮುಖಸಾರಘಮಕ್ಷಿಭೃಂಗೈಸ್ತಾಪಂಜಹುರ್ವಿರಹಜಂವ್ರಜಯೋಷಿತೋಹ್ನಿ । ತತ್ಸತ್ಕೃತಿಂಸಮಧಿಗಮ್ಯವಿವೇಶಗೋಷ್ಠಂಸವ್ರೀಡಹಾಸವಿನಯಂತದಪಾಂಗಮೋಕ್ಷಮ್ ॥೪೩॥ ತಯೋರ್ಯಶೋದಾರೋಹಿಣ್ಯೌಪುತ್ರಯೋಃಪುತ್ರವತ್ಸಲೇ । ಯಥಾಕಾಲಂ ಯಥಾಕಾಮಂವ್ಯಧತ್ತಾಂಪರಮಾಶಿಷಃ ॥೪೪॥ ವಿಗತಾಧ್ವಶ್ರಮೌತತ್ರಮರ್ದನೋನ್ಮಜ್ಜನಾದಿಭಿಃ। ವಾ

---

ಗೋಪೈಃ-ಗೊಲ್ಲರಿಂದ, ಸ್ತೂಯಮಾನಃ-ಕೊಂಡಾಡಲ್ಪಡುತಲಿರುವನಾಗಿ, ವ್ರಜಂ- ಗೋಕುಲವನ್ನು, ಆವಿಶತ್-ಹೊಕ್ಕನು ॥೪೧॥ ಗೋರಜಃ-.. .ಹಾಸಂ-ಗೋರಜಃ-ಪಶುಗಳಧೂಳ್ಗಳಿಂದ, ಛುರಿತ-ವ್ಯಾಪ್ತವಾದ, ಕುಂತಲ-ಮುಂಗುರುಳಿನಲ್ಲಿ, ಬದ್ಧ-ಕಟ್ಟಲ್ಪಟ್ಟ ಬರ್ಹ-ನವಿಲಗರಿಯೂ, ವನ್ಯಪ್ರಸೂನ-ವನದಲ್ಲಿಹುಟ್ಟಿದಪುಷ್ಪಗಳುಳ್ಳವನೂ, ರುಚಿರ-ಮನೋಹರವಾದ, ಈಕ್ಷಣ-ಕಂಗಳುಳ್ಳವನೂ ಚಾರು-ಮನೋಹರವಾದ, ಹಾಸಂ-ನಗೆಯುಳ್ಳವನೂಆದಂತಾ, ವೇಣುಂ-ಕೊಳಲನ್ನು, ಕ್ವಣಂತಂ- ಊದುತಲಿರುವಂತಾ, ಅನುಗೈಃ-ಸಂಗಡಬರುವವರಿಂದ, ಉಪಗೀತಕೀರ್ತಿಂ- ಹಾಡಲ್ಪಟ್ಟಹೆಸರುವಾಸಿಯುಳ್ಳಂತಾ, ಕೃಷ್ಣನನ್ನುಕುರಿತು, ದಿದೃಕ್ಷಿತದೃಶಃ-ನೋಡಲೆಳಸಿದಕಂಗಳುಳ್ಳ, ಗೋಪ್ಯಃ-ಗೊಲ್ಲತಿಯರು, ಸಮೇತಾಸ್ಸತ್ಯಃ-ಸೇರಿದವರಾಗಿ, ಅಭ್ಯಗಮನ್-ಎದುರಿಗೆಬಂದರು ॥೪೨॥ ವ್ರಜಯೋಷಿತಃ-ಗೋಕುಲದಹೆಂಗಳು, ಮುಕುಂದಮುಖಸಾರಘಂ- ಮುಕುಂದ-ಕೃಷ್ಣನ, ಮುಖ-ಮೊಗದಾವರೆಯ, ಸಾರಘಂ-ಜೇನನ್ನು, ಅಕ್ಷಿಭೃಂಗೈಃ-ಕಂಗಳೆಂಬತುಂಬಿಗಳಿಂದ, ಪೀತ್ವಾ-ಕುಡಿದು, ಅಹ್ನಿ-ಹಗಲಿನಲ್ಲಿ, ವಿರಹಜಂ- ಅಗಲಿಕೆಯಿಂದಹುಟ್ಟಿದ, ತಾಪಂ-ಬಿಸಿಯನ್ನು, ಜಹುಃ-ತೊರೆದರು. (ಆಕೃಷ್ಣನಾದರೋ) ಸವ್ರೀಡಹಾಸವಿನಯಂಯಥಾತಥಾ--ಸವ್ರೀಡ- ನಾಚಿಕೆಯಿಂಕೂಡಿದ ಹಾಸ-ನಗೆಯೂ, ವಿನಯಂ-ನಮ್ರತೆಯೂ, ಉಂಟಾಗೋಣವು ಹೇಗೋಹಾಗೇ, ತದಪಾಂಗಮೋಕ್ಷಂ-ತತ್-ಆಗೊಲ್ಲತಿಯರ, ಅಪಾಂಗ--ಕುಡಿನೋಟದ, ಮೋಕ್ಷಂ-ಪ್ರಸರಣವೆಂಬ, ತತ್ಸತ್ಕೃತಿಂ-ಅವರಉಪಚಾರವನ್ನು, ಸಮಧಿಗಮ್ಯ-ಪಡೆದು, ಗೋಷ್ಠಂ-ಗೋಕುಲವನ್ನು, ವಿವೇಶ-ಹೊಕ್ಕನು ॥೪೩॥ ಪುತ್ರವತ್ಸಲೇ-ಮಕ್ಕಳಲ್ಲಿದಯೆಯುಳ್ಳ, ಯಶೋದಾರೋಹಿಣ್ಯೌ-ಯಶೋದೆಯೂರೋಹಿಣೀದೇವಿಯೂ, ತಯೋಃಪುತ್ರಯೋಃ-ಆಮಕ್ಕಳಾದರಾಮಕೃಷ್ಣರಿಗೆ, ಯಥಾಕಾಲಂ- ಹೊತ್ತನ್ನುಮೀರದೆ, ಯಥಾಕಾಮಂ-ಬೇಕಾದ್ದನ್ನುಮೀರದೆ, ಪರಮಾಶಿಷಃ-ಉತ್ತಮವಾದಆಶೀರ್ವಾದಗಳನ್ನು, ವ್ಯಧತ್ತಾಂ-ಮಾಡಿದರು ॥೪೪॥ ತತ್ರ-ಅಲ್ಲಿ, ಮರ್ದನೋನ್ಮ

---

ಕಾದ ಗೋಪಾಲಕರಿಂ ಸ್ತುತಿಸಲ್ಪಡುತಿರುವನಾಗಿ ಗೋಕುಲವಂ ಪ್ರವೇಶಿಸಿದನು. ॥೪೧॥ ಆಸಮಯದಲ್ಲಿರುವ ಗೋಪಸ್ತ್ರೀಯರೆಲ್ಲರೂ ಕೂಡಿ ರಾಮಕೃಷ್ಣರಂನೋಡುವುದರಲ್ಲಿ ಅತ್ಯಂತಕುತೂಹಲದಿಂ ಕೂಡಿದ ಕಂಗಳುಳ್ಳವರಾಗಿ-ಗೋಧೂಳಿಗಳಿಂ ವ್ಯಾಪ್ತಗಳಾದ ಕೇಶಗಳಲ್ಲಿ ಕಟ್ಟಲ್ಪಟ್ಟನವಿಲಗರಿಗಳೂ, ವನದಲ್ಲಿ ಹುಟ್ಟಿದಪುಷ್ಪದಮಾಲಿಕೆಗಳೂ ವುಳ್ಳ, ಮತ್ತು ಮನೋಹರವಾದನೋಟವೂ, ರಮಣೀಯವಾದ ಮುಗುಳುನಗೆಯೂ, ಉಳ್ಳ; ಮತ್ತು ವೇಣುಗಾನಂಗೆಯುತಲಿರುವ ಅನುಚರರಾದಗೋಪಾಲಬಾಲಕರಿಂದ ಗಾನಂಗೆಯ್ಯಲ್ಪಡುತಲಿರುವ ಕೀರ್ತಿಯುಳ್ಳ, ಆ ಶ್ರೀಕೃಷ್ಣನಂಇದಿರ್ಗೊಂಡರು. ॥೪೨॥ ಮತ್ತುಆಗೋಪಿಯರು ಶ್ರೀಕೃಷ್ಣನ ಮೊಗದಾವರೆಯಲ್ಲಿರುವ ಚೆಲುವಿಕೆಯೆಂಬ ಬಂಡನ್ನು ತಮ್ಮಕಂಗಳೆಂಬತುಂಬಿಗಳಿಂದ ಕುಡಿದು, ಹಗಲಿನಲ್ಲಿ ಶ್ರೀಕೃಷ್ಣಮೂರ್ತಿಯಂ ಕಾದಿರುವುದರಿಂದುಂಟಾದ ವಿರಹತಾಪವಂ ತೊರೆದರು. ಆಗ ಶ್ರೀಕೃಷ್ಣನುನಾಚಿಕೆಯಿಂಕೂಡಿರುವ ಮುಗುಳುನಗೆಯಿಂದ ವಿನಯವುಂಟಾಗುವಂತೆ ಕಡೆಗಣ್ಣನೋಟದಿಂದ ಆಗೋಪಸ್ತ್ರೀಯರಿಂಮಾಡಲ್ಪಟ್ಟಪೂಜೆಯಂಸ್ವೀಕರಿಸಿ, ಗೋಕುಲವಂ ಪ್ರವೇಶಿಸಿದನು. ॥೪೩॥ ಬಳಿಕ ಪುತ್ರವಾತ್ಸಲ್ಯವುಳ್ಳ ಯಶೋದಾರೋಹಿಣಿಯರು ರಾಮಕೃಷ್ಣರಿಗೆ ಆಯಾಕಾಲಗಳಲ್ಲಿ ಅವರ ಮೆಚ್ಚಿಯಿದ್ದಂತೆ ಬೇಕಾದವುಗಳಂಕೊಟ್ಟುಲಾಲಿಸಿದರು. ॥೪೪॥ ಆಗೋಕುಲದಲ್ಲಿ ರಾಮಕೃಷ್ಣರೀರ್ವರೂ ಮೈನೀವೆ ಮಜ್ಜನಮೊದಲಾದುವುಗಳಿಂದ ಪರಿಹರಿಸಲ್ಪಟ್ಟ ಮಾರ್ಗಶ್ರಮವುಳ್ಳವರಾಗಿ, ದಿವ್ಯದುಕೂಲಂಗಳತೆಧರಿ

ಸೋವಸಿತ್ವಾರುಚಿರಂದಿವ್ಯಸ್ರಗ್ಗಂಧಮಂಡಿತೌ॥೪೫॥ ಜನನ್ಯುಪಹೃತಂಪ್ರಾಶ್ಯಸ್ವಾದ್ವನ್ನಮುಪಲಾಲಿತೌ। ಸಂವಿಶ್ಯವರಶಯ್ಯಾಯಾಂಸುಖಂಸುಷುಪತುರ್ವ್ರಜೆ॥೪೬॥ ಏವಂಸಭಗವಾನ್‌ಕೃಷ್ಣೋಬೃಂದಾವನಚರಃಕ್ವ

॥ ಕಾಳೀಯಮರ್ದನಕಥಾಪ್ರಾರಂಭಘಟ್ಟಃ ॥

ಚಿತ್।ಯಯೌರಾಮಮೃತೆರಾಜನ್‌ಕಾಳಿಂದೀಂಸಖಿಭಿರ್ವೃತಃ॥೪೭॥ಅಥಗಾವಶ್ಚಗೋಪಾಶ್ಚನಿದಾಘಾತಪಪೀಡಿತಾಃ। ದುಷ್ಟಂಪಪುರ್ಜಲಂತಸ್ಯಾಸ್ತೃಷಾರ್ತಾವಿಷದೂಷಿತಮ್॥೪೮॥ ವಿಷಾಂಭಸ್ತದುಪಸ್ಪೃಶ್ಯದೈವೋಪಹತಚೆತಸಃ। ನಿಪೆತುರ್ವ್ಯಸವಸ್ಸರ್ವೆಮೂರ್ಛಿತಾವೈಕುರೂದ್ವಹ ॥೪೯॥ ವೀಕ್ಷ್ಯತಾನ್‌ವೈತಥಾ

---

ಜ್ಞಾನಾದಿಭಿಃ-ಮರ್ದನ-ಕೈಕಾಲುಗಳನ್ನುಹಿಸುಕುವಿಕೆ, ಉನ್ಮಜ್ಜನ-ಮಿಾಯಿಸುವಿಕೆ, ಆದಿಭಿಃ-ಮುಂತಾದ ಉಪಚಾರಗಳಿಂದ, ವಿಗತಾಧ್ವಶ್ರಮೌ-ವಿಗತ-ಕಳೆದುಹೋದ, ಅಧ್ವಶ್ರಮೌ-ಮಾರ್ಗಾಯಾಸವುಳ್ಳವರಾಗಿ, ರುಚಿರಂ-ಸೊಗಸಾದ, ವಾಸಃ-ವಸ್ತ್ರವನ್ನು, ವಸಿತ್ವಾ-ಧರಿಸಿಕೊಂಡು, ದಿವ್ಯಸ್ರಗ್ಗಂಧಮಂಡಿತೌ-ದಿವ್ಯ-ಪ್ರಕಾಶಿಸುವ. ಸ್ರಕ್-ಹೂಮಾಲೆಗಳಿಂದಲೂ, ಗಂಧ-ಅಂಗರಾಗದಿಂದಲೂ ಮಂಡಿತೌ- ಸಿಂಗರಿಸಲ್ಪಟ್ಟವರಾಗಿ ॥೪೫॥ ಜನನೀ-ತಾಯಿಯಿಂದ, ಉಪಹೃತಂ-ಹತ್ತಿರಕ್ಕೆ ತರಲ್ಪಟ್ಟ, ಸ್ವಾದು-ಸವಿಯಾದ, ಅನ್ನಂ-ಆಹಾರವನ್ನು, ಪ್ರಾಶ್ಯ-ಉಂಡು, ಉಪಲಾಲಿತೌ-ಮುದ್ದಿಸಲ್ಪಟ್ಟವರಾಗಿ ಅಥವಾಪ್ರೀತಿಸಲ್ಪಟ್ಟವರಾಗಿ, ವ್ರಜೇ-ಗೋಕುಲದೊಳಗೆ, ಸಂವಿಶ್ಯ-ಕುಳಿತು,ವರಶಯ್ಯಾಯಾಂ-ಶ್ರೇಷ್ಠವಾದ ಹಾಸಿಗೆಯಲ್ಲಿ, ಸುಖಂ-ಸಂತೋಷವಾಗಿ, ಸುಷುಪತುಃ-ನಿದ್ದೆಗೆಯ್ದರು॥ ರಾಜನ್-ಅರಸೇ, ಭಗವಾನ್-ಭಗವಂತನಾದ, ಸಃಕೃಷ್ಣಃ-ಆಕೃಷ್ಣನು, ಏವಂ-ಹೀಗೆ, ಬೃಂದಾವನಚರಃ-ಬೃಂದಾರಣ್ಯದಲ್ಲಿ ತಿರುಗುತಲಿರುವನಾಗಿ, ಕ್ವಚಿತ್-ಒಂದುಸಮಯದಲ್ಲಿ ಸಖಿಭಿರ್ವೃತಃ-ಗೆಳೆಯರಿಂದಬಳಸಲ್ಪಟ್ಟವನಾಗಿ, ರಾಮಂಋತೇ-ಬಲರಾಮನನ್ನು ಬಿಟ್ಟು, ಕಾಳಿಂದೀಂ-ಯಮುನಾನದಿಯನ್ನು ಕುರಿತು, ಯಯೌ-ತೆರಳಿದನು॥೪೭॥ಅಥ-ಆಮೇಲೆ, ಗಾವಶ್ಚ-ಗೋವುಗಳೂ, ಗೋಪಾಶ್ಚ-ಪಶುಪಾಲಕರೂ, ನಿದಾಘಪರಿಪೀಡಿತಾಃ- ನಿದಾಘ-ಬೇಸಿಗೆಯಿಂದ, ಪರಿಪೀಡಿತಾಃ-ಬಾಧಿಸಲ್ಪಟ್ಟವರಾದ್ದರಿಂದಲೇ, ತೃಷಾ-ನೀರಡಕೆಯಿಂದ, ಆರ್ತಾಃ-ಪೀಡಿತರಾಗಿ,ತಸ್ಯಾಃ-ಆಯಮುನಾನದಿಯ,ವಿಷದೂಷಿತಂ-ವಿಷ-ನಂಜಿನಿಂದ,ದೂಷಿತಂ-ದೋಷವುಳ್ಳದ್ದಾಗಿಮಾಡಲ್ಪಟ್ಟಿರುವ ಜಲಂ-ನೀರನ್ನು , ಪಪುಃ-ಕುಡಿದರು॥೪೮॥ಕುರೂದ್ವಹ-ಎಲೈಕುರುವಂಶೋದ್ಧಾರಕನೇ! ದೈವೋಪಹತ ಚೇತಸಃ-ದೈವ-ದುರದೃಷ್ಟದಿಂದ ಉಪಹತ-ಕೆಡಿಸಲ್ಪಟ್ಟ, ಚೇತಸಃ-ಬುದ್ಧಿಯುಳ್ಳವರಾದ, ಸರ್ವೇ-ಅವರೆಲ್ಲರೂ, ತದ್ವಿಷಾಂಭಃ-ಆವಿಷದನೀರನ್ನು,ಉಪಸ್ಪೃಶ್ಯ-ತೊಟ್ಟು ಮೂರ್ಛಿತಾಃ-ಮೈಮರೆತವರಾಗಿ, ವ್ಯಸವಃ-ಉಸುರಿಲ್ಲದವರಾಗಿ, ವೈ-ಪ್ರಸಿದ್ಧವೆನೆ, ನಿಪೇತುಃ-ಬಿದ್ದುಹೋದರು॥೪೯॥ ಯೋಗೀಶ್ವರೇಶ್ವರಃ-ಯೋಗಿ-ಧ್ಯಾನಾದ್ಯುಪಾಯಗಳುಳ್ಳವರ, ಈಶ್ವರ-ಒಡೆಯರಿಗೆ, ಈಶ್ವರಃ-ನಿಯಾಮಕನಾದ, ಕೃಷ್ಣಃ-ಕೃಷ್ಣನು, ಸ್ವನಾಥಾನ್-ತಾ

---

ಸಿ, ದಿವ್ಯಗಂಧಗಳಿಂದಲೂ ದಿವ್ಯಪುಷ್ಪಮಾಲಿಕೆಗಳಿಂದಲೂ ಅಲಂಕರಿಸಲ್ಪಟ್ಟವರಾದರು. ॥೪೫॥ ಅನಂತರದಲ್ಲಿ ತಾಯಿಯಿಂದ ತಂದುಬಡಿಸಲ್ಪಟ್ಟ ಸ್ವಾದುವಾದ ಮೃಷ್ಟಾನ್ನವಂ ಭೋಜನಂಮಾಡಿ ಉಲ್ಲಾಸಗೊಂಡವರಾಗಿ ಸರ್ವೋತ್ತಮವಾದ ಹಾಸಿಗೆಯಲ್ಲಿ ಪವಡಿಸಿ ಸುಖದಿಂ ನಿದ್ದೆಗೆಯ್ದರು. ॥೪೬॥ ಎಲೈ, ಅರಸೇ! ಬೃಂದಾವನದಲ್ಲಿ ಸಂಚರಿಸುತಲಿರುವ ಭಗವಂತನಾದ ಕೃಷ್ಣನು ಒಂದುವೇಳೆಯಲ್ಲಿ ಬಲರಾಮನಂ ಹೊರತು ಮಿಕ್ಕಮಿತ್ರರಾದಗೋಪಾಲಬಾಲಕರಿಂ ಪರಿವೃತನಾಗಿ ಯಮುನಾ ತೀರವನೆಯ್ದಿದನು. ॥೪೭॥ ಆಮೇಲೆ ಗೋಪಾಲಬಾಲಕರು ಗೋವುಗಳು ಸಹ ಅತ್ಯುಷ್ಣವಾದ ಬಿಸಿಲಿನಿಂದ ಪೀಡಿಸಲ್ಪಟ್ಟವರಾಗಿ ವಿಷದಿಂದ ದೂಷಿತವಾಗಿರುವುದಾದುದರಿಂದ ದುಷ್ಟವಾದ ಆಯಮುನಾಜಲವನ್ನು ಪಾನಂಗೆಯ್ದರು॥೪೮॥ ಎಲೈ, ಅರಸೆ! ಗೋವುಗಳೊಡಗೂಡಿ ಗೋಪಾಲಕರೆಲ್ಲರೂ ದೈವದಿಂದ ನಷ್ಟವಾದ ಬುದ್ಧಿಯುಳ್ಳವರಾದ ಕಾರಣದಿಂ ಯಮುನಾನದಿಯ ವಿಷೋದಕವಂ ಪಾನಂಗೆಯ್ದು ಮೂರ್ಛೆಯನೆಯ್ದಿ ಪ್ರಾಣರಹಿತರಾಗಿ ಕೆಳಗೆ ಬಿದ್ದರು.॥೪೯॥ ಅನಂತರದಲ್ಲಿ ಯೋಗೀಶ್ವರರಾದ ಬ್ರ



ಭೂತಾನ್ ಕೃಷ್ಣೋ ಯೋಗೇಶ್ವರೇಶ್ವರಃ । ಈಕ್ಷಯಾಮೃತವರ್ಷಿಣ್ಯಾ ಸ್ವನಾಥಾನ್ ಸಮಜೀವಯತ್ ‖೫೦‖
ತೇ ಸಂಪ್ರತೀತಸ್ಮೃತಯಃ ಸಮುತ್ಥಾಯ ಜಲಾಂತಿಕಾತ್ । ಆಸನ್ ಸುವಿಸ್ಮಿತಾಃ ಸರ್ವೇ ವೀಕ್ಷಮಾಣಾಃ ಪರಸ್ಪರಂ
‖೫೧‖ ಅನ್ವಮಂಸತ ತದ್ರಾಜನ್ ಗೋವಿಂದಾನುಗ್ರಹೇಕ್ಷಿತಂ । ಪೀತ್ವಾ ವಿಷಂ ಪರೇತಸ್ಯ ಪುನರುತ್ಥಾನಮಾತ್ಮನಃ
‖೫೨‖ ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಪಂಚದಶೋಽಧ್ಯಾಯಃ

---

ನೇ ರಕ್ಷಕನಾಗಿರುವ, ತಥಾ ಭೂತಾನ್- ಹಾಗೆ ಆಗಿರುವ, ತಾನ್-ಆ ಗೋವುಗಳನ್ನು ಗೋಪಾಲಕರನ್ನು, ಅಮೃತವರ್ಷಿಣ್ಯಾ- ಅಮೃತವನ್ನು ಸುರಿಸುತಲಿರುವ, ಈಕ್ಷಯಾ-ದೃಷ್ಟಿಯಿಂದ, ವೀಕ್ಷ್ಯ-ನೋಡಿ, ಸಮಜೀವಯತ್-ಬದುಕಿಸಿದನು ‖೫೦‖ ತೇ ಸರ್ವೇ- ಅವರೆಲ್ಲರೂ, ಸಂಪ್ರತಿ-ಆಗಲೇ, ಇತಸ್ಮೃತಯಃ-ಪಡೆಯಲ್ಪಟ್ಟ ನೆನಪುಳ್ಳವರಾಗಿ, ಜಲಾಂತಿಕಾತ್-ನೀರಿನ ಬಳಿಯ ದೆಸೆಯಿಂದ, ಉತ್ಥಾಯ ಚ-ಎದ್ದು, ಪರಸ್ಪರಂ-ಒಬ್ಬರನ್ನೊಬ್ಬರು, ವೀಕ್ಷಮಾಣಾಃ-ನೋಡುತಲಿರುವರಾಗಿ; ಸುವಿಸ್ಮಿತಾಃ- ಆಶ್ಚರ್ಯವುಂಟಾದವರು, ಆಸನ್-ಆದರು ‖೫೧‖ ರಾಜನ್-ಅರಸನೇ, ವಿಷಂ-ನಂಜಿನ ನೀರನ್ನು, ಪೀತ್ವಾ-ಕುಡಿದು, ಪರೇತಸ್ಯ-ಸತ್ತುಹೋಗಿದ್ದ, ಆತ್ಮನಃ-ದೇಹದ, ಪುನರುತ್ಥಾನಂ-ಮರಳಿಯೇಳುವಿಕೆ, ಯತ್-ಯಾವುದೋ, ತತ್-ಅದನ್ನು, ಗೋವಿಂದಾನುಗ್ರಹೇಕ್ಷಿತಂ-ಗೋವಿಂದ-ಕೃಷ್ಣನ, ಅನುಗ್ರಹ-ದಯೆಯುಳ್ಳ, ಈಕ್ಷಿತಂ-ದೃಷ್ಟಿಯನ್ನಾಗಿ, ಅನ್ವಮಂಸತ-ತಿಳಿದುಕೊಂಡರು‖- ‖೫೨‖

ಇತಿ ಶ್ರೀಮದ್ಭಾಗವತೇ ಪ್ರತಿಶಬ್ದಾರ್ಥಬೋಧಿನ್ಯಾಂ ದಶಮಸ್ಕಂಧೇ
ಪಂಚದಶೋಽಧ್ಯಾಯಃ-

---

ಹ್ಮಾದಿಗಳಿಗೂ ಕೂಡ ನಿಯಾಮಕನಾದ ಶ್ರೀಕೃಷ್ಣನು- ವಿಷಪಾನದಿಂ ಹಾಗೆ ಮೂರ್ಛೆಯನೆಯ್ದಿ ಪ್ರಾಣರಹಿತರಾಗಿ ಬಿದ್ದಿರುವ ಮತ್ತು ತಾನೇ ಸ್ವಾಮಿಯಾಗಿವುಳ್ಳ, ಆ ಗೋವುಗಳನ್ನು ಗೋಪಾಲಕರನ್ನು ನೋಡಿ ಅಮೃತವನ್ನು ಮಳೆ ಸುರಿಸುವ ತನ್ನ ದಿವ್ಯದೃಷ್ಟಿಯಿಂದ ಬದುಕಿಸಿದನು ‖೫೦‖ ಆಮೇಲೆ ಆ ಗೋವುಗಳಿಂ ಕೂಡಿದ ಗೋಪಾಲಕರೆಲ್ಲರೂ ಆಕ್ಷಣವಲ್ಲಿಯೇ ಪಡೆಯಲ್ಪಟ್ಟ ಸ್ಮೃತಿಯುಳ್ಳವರಾಗಿ ಆ ಯಮುನಾಜಲ ಸಮೀಪದ ದೆಸೆಯಿಂದ ಎದ್ದು, ಅನ್ಯೋನ್ಯವಾಗಿ ನೋಡಿಕೊಳ್ಳುತ್ತ, ಅತ್ಯಂತಾಶ್ಚರ್ಯಯುಕ್ತರಾದರು. ‖೫೧‖ ಎಲೈ ಅರಸೇ! ಮತ್ತು ವಿಷೋದಕವಂ ಪಾನಂಗೆಯ್ದು ಮೃತರಾದ ನಾವು ಪುನಃ ಬದುಕಿದೆವೆಂಬುವುದು ಶ್ರೀಕೃಷ್ಣನ ಅನುಗ್ರಹದೃಷ್ಟಿಯ ಸಾಮರ್ಥ್ಯವೇ ಸರಿಯೆಂದು ಆ ಗೋಪಾಲಕರು ತಿಳಿದರು. ... .. ... ... ... ‖೫೨‖

ಇಂತು ಶುಕಮುನಿಯು ಪರೀಕ್ಷಿದ್ರಾಯನಿಗೆ ನಿರೂಪಿಸಿದನೆಂದು ಸೂತಪೌರಾಣಿಕನು ನೈಮಿಶಾ
ರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಹೇಳಿದನೆಂಬಲ್ಲಿಗೆ-ಶ್ರೀಮನ್ಮಹೀಶೂರಪುರವ
ರಾಧೀಶ ಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜ ವಿರಚಿತಮಪ್ಪ, ಶ್ರೀ
ಭಾಗವತದ "ಶ್ರೀಕೃಷ್ಣರಾಜ ವಾಣೀವಿಲಾಸವು" ಎಂಬ ಕರ್ಣಾಟಕ
ಭಾಷಾವ್ಯಾಖ್ಯಾನದಲ್ಲಿ ದಶಮಸ್ಕಂಧದೊಳು ಹದಿನೈದನೆಯ
ಅಧ್ಯಾಯವು ಸಂಪೂರ್ಣವಾದುದು.
ಮಂಗಳಮಸ್ತು

---

ಶ್ರೀಬಾದರಾಯಣಿಃ ॥ವಿಲೋಕ್ಯದೂಷಿತಾಂಕೃಷ್ಣಾಂಕೃಷ್ಣಃಕೃಷ್ಣಾಹಿನಾವಿಭುಃ ।ತಸ್ಯಾವಿಶುದ್ಧಿಮನ್ವಿಚ್ಛನ್ಸರ್ಪಂತಮುದವಾಸಯತ್॥೧॥ರಾಜಾ॥ ಕಥಮಂತರ್ಜಲೇಗಾಧೇನ್ಯಗೃಹ್ಣದ್ಭಗವಾನಹಿಮ್ ।ಸವೈಬಹುಯುಗಾವಾಸಂಯಥಾಸೀದ್ವಿಪ್ರಕಥ್ಯತಾಮ್ ॥೨॥ ಬ್ರಹ್ಮನ್ಭಗವತಸ್ತಸ್ಯಭೂಮ್ನಸ್ಸ್ವಚ್ಛಂದವರ್ತಿನಃ।ಗೋಪಾಲೋದಾರಚರಿತಂಕಸ್ತೃಪ್ಯೇತಾಮೃತಂಜುಷನ್ ॥೩॥ ಶ್ರೀಶುಕಃ । ಕಾಳಿಂದ್ಯಾಂಕಾಳಿಯಸ್ಯಾ

---

೧೬ನೆಯ ಅಧ್ಯಾಯದ ಪ್ರತಿಪದಟೀಕೆ.

(ಶುಕವಾಕ್ಯವು) ವಿಭುಃಕೃಷ್ಣಃ-ವ್ಯಾಪಕನಾದ ಕೃಷ್ಣನು, ಕೃಷ್ಣಾಹಿನಾ- ಕರಿಯಹಾವಿನಿಂದ, ದೂಷಿತಾಂ-ಕೆಡಿಸಲ್ಪಟ್ಟಿರುವ, ತಾಂಕೃಷ್ಣಾಂ-ಆಕಾಳಿಂದೀನದಿಯನ್ನು, ವಿಲೋಕ್ಯ-ನೋಡಿ, ತಸ್ಯಾಃ-ಆಹೊಳೆಯ, ವಿಶುದ್ಧಿಂ-ವಿಶೇಷವಾದ ನೈರ್ಮಲ್ಯವನ್ನು, ಅನ್ವಿಚ್ಛನ್-ಬಯಸಿದವನಾಗಿ, ತಂಸರ್ಪಂ-ಆ ಹಾವನ್ನು, ಉದವಾಸಯತ್-ಹೊರಡಿಸಿದನು. ॥೧॥ (ಪರೀಕ್ಷಿತನ ಪ್ರಶ್ನವು) ಭಗವಾನ್-ಕೃಷ್ಣನು, ಅಗಾಧೇ-ತಳದೊರೆಯದ, ಅಂತರ್ಜಲೇ-ನೀರಿನೊಳಗೆ, ಅಹಿಂ-ಹಾವನ್ನು, ಕಥಂ-ಹೇಗೆ, ನ್ಯಗೃಹ್ಣತ್- ನಿಗ್ರಹಿಸಿದನು? ಸವೈ-ಜಲಜಂತುವಲ್ಲದಆಹಾವುಕೂಡ, ತತ್ರ-ಆಹೊಳೆಯಲ್ಲಿ, ಬಹುಯುಗಾವಾಸಂ-ಅನೇಕಯುಗ ಕಾಲವಾಗಿರುವಂತೆ, ಯಥಾಸೀತ್-ಹೇಗಾದನು; ಕಥ್ಯತಾಂ-ಹೇಳಲ್ಪಡಲಿ ॥೨॥ ಬ್ರಹ್ಮನ್-ಬ್ರಾಹ್ಮಣನಾದಶುಕನೇ! ಭೂಮ್ನಃ- ಸದ್ಭಾವರೂಪನಾದ, ಸ್ವಚ್ಛಂದವರ್ತಿನಃ-ಸ್ವಚ್ಛಂದ-ಸ್ವೇಚ್ಛೆಯಿಂದ, ವರ್ತಿನಃ-ಇರುತಲಿರುವ, ತಸ್ಯಭಗವತಃ-ಆಕೃಷ್ಣನ, ಗೋಪಾಲೋದಾರಚರಿತಂ-ಗೋಪಾಲ- ದನಗಳನ್ನುಪಾಲಿಸುವರೂಪದಿಂದ, ಉದಾರ-ಧಾರಾಳವಾಗಿರುವ, ಚರಿತಂ-ಆಚರಣೆಯೆಂಬ, ಅಮೃತಂ-ಹಾಲನ್ನು, ಜುಷನ್-ಪ್ರೀತಿಯಿಂದಸೇವಿಸುತಲಿರುವ, ಕಃ-ಯಾವಪುರುಷನು, ತೃಪ್ಯೇತ-ತಣಿಯುವನು ॥೩॥ (ಶುಕೋತ್ತರವು) ಉಪರಿಗಾಃ- ಮೇಲೆಹೋಗುತಲಿರುವ, ಖಗಾಃ-ಹಕ್ಕಿಗಳು, ಯಸ್ಮಿನ್-ಯಾವಮಡುವಿನಲ್ಲಿ, ಪತಂತಿ-ಬೀಳುತಲಿವೆಯೋ, ಕಾಳಿಯಸ್ಯ- ಕಾಳಿಯನೆಂಬಸರ್ಪದ, ವಿಷಾಗ್ನಿನಾ-ವಿಷದಬೆಂಕಿಯಿಂದ, ಶ್ರಪ್ಯಮಾಣಪಯಾಃ-ಕಾಯಿಸಲ್ಪಡುತಲಿರುವನೀರುಳ್ಳ, ಸಃ-ಅಂತಾ, ಕಶ್ಚಿತ್ಹ್ರದಃ-ಒಂದಾ

---

ಶ್ರೀಧರೀಯಶ್ಲೋಕ ॥ ಷೋಡಶೇಕಾಳಿಯಸ್ಯೋಕ್ತೋನಿಗ್ರಹೋಯಮುನಾಹ್ರದೇ । ತತ್ಪತ್ನೀಭಿಃಸ್ತುತೇನಾಥ ಕೃಷ್ಣೇನಾನುಗ್ರಹಃಪುನಃ ॥ ಟೀ॥ ಹದಿನಾರನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ಯಮುನಾನದಿಯ ಮಡುವಿನಲ್ಲಿ ಕಾಳೀಯನೆಂಬ ಮಹಾಸರ್ಪವಂ ನಿಗ್ರಹಿಸಿದನೆಂಬರ್ಥವನುಂ ಬಳಿಕ ಆಕಾಳಿಯ್ಯನಪತ್ನಿಯರಿಂದ ಸ್ತುತಿಸಲ್ಪಟ್ಟವನಾಗಿ ಶ್ರೀಕೃಷ್ಣನು ಪುನಃ ಅವನನನುಗ್ರಹಿಸಿದನೆಂಬರ್ಥವನುಂ, ಶುಕಮುನಿಯು ಪರೀಕ್ಷಿದ್ರಾಯನಂಕುರಿತು ನಿರೂಪಿಸುವನದೆಂತೆನೆ

ಎಲೈ ಪರೀಕ್ಷಿದ್ರಾಯನೇ; ಅನಂತರದಲ್ಲಿ ವ್ಯಾಪಕನಾದ ಶ್ರೀಕೃಷ್ಣದೇವನು ಕಾಳೀಯನೆಂಬಕೃಷ್ಣಸರ್ಪದಿಂ ದೂಷಿತವಾದ ಯಮುನಾನದಿಯಂ ನೋಡಿ ಆಯಮುನಾನದಿಯಂ ಪರಿಶುದ್ಧವಂಮಾಡಲೋಸುಗ ಆಯಮುನಾನದಿಯದೆಸೆಯಿಂದ ಆಕಾಳೀಯನೆಂಬಸರ್ಪವಂ ಹೊರಡಿಸಿದನು ॥೧॥ (ಎಂದು ಈರೀತಿಯಿಂದ ಶುಕಮುನಿಯಿಂ ಪೇಳಲ್ಪಟ್ಟ ವಚನವಂಕೇಳಿ ಪರೀಕ್ಷಿದ್ರಾಯನು ಪ್ರಶ್ನಂಗೆಯ್ದನದೆಂತೆನೆ- (ಎಲೈಮುನಿಯೇ! ಭಗವಂತನಾದ ಶ್ರೀಕೃಷ್ಣನುಂ ಯಮುನಾನದಿಯ ಅಗಾಧವಾದಮಡುವಿನ ಜಲದಲ್ಲಿ ಅನೇಕಯುಗಗಳಿಂದ ವಾಸಂಗೆಯ್ಯುತಲಿರುವ ಆಕಾಳಿಯನೆಂಬಸರ್ಪವಂ ಯಾವಪ್ರಕಾರದಿಂ ನಿಗ್ರಹಿಸಿದನು? ಮತ್ತು ಆಕಾಳಿಯನೆಂಬಸರ್ಪವು ತಾನು ಜಲಚರವಲ್ಲದಿದ್ದರೂ ಯಾವಪ್ರಕಾರದಿಂ ಆಮಡುವಿನಮಧ್ಯದಲ್ಲಿ ವಾಸಂಗೆಯ್ದುದು. ಈ ಅರ್ಥವುನಿನ್ನಿಂದ ನಿರೂಪಿಸಲ್ಪಡಲಿ ॥೨॥ ಎಲೈ, ಮುನಿಯೇ! ವ್ಯಾಪಕನಾದ ಮತ್ತು ತನ್ನ ಇಚ್ಛೆಯಿದ್ದಂತೆ ಇರುವಭಗವಂತನಾದ ಶ್ರೀಕೃಷ್ಣನಗೋಪಾಲರೂಪದಿಂದುಂಟಾದ ಮಹಾಚರಿತ್ರೆಯೆಂಬ ಅಮೃತವಂ ಯಾವವನು ಪಾನಂಗೆಯ್ಯುತ ತೃಪ್ತಿಯಂಹೊಂದುವನು? ಆದ್ದರಿಂದ ಆವೃತ್ತಾಂತವಂ ನನಗೆನಿರೂಪಿಸುವನಾಗು. ॥೩॥ (ಎಂದು ಪರೀಕ್ಷಿದ್ರಾಯನಿಂದಪೇಳಲ್ಪಟ್ಟ ಪ್ರಶ್ನವಾಕ್ಯವಂಕೇಳಿ ಶುಕಮುನಿಯು ಪೇಳುವನದೆಂತೆನೆ-) ಎಲೈಪರೀಕ್ಷಿದ್ರಾಯನೆ! ವಿಷಾಗ್ನಿಯಿಂದಅತ್ಯಂತತಪಿಸಲ್ಪಡುತಲಿರುವ ಜಲವುಳ್ಳಂತಾದ್ದಾದಕಾರಣದಿಂದ ಯಾವಮಡುವಿನಲ್ಲಿ ಅಂತರಿಕ್ಷದೊಳುಸಂಚರಿಸುವಪಕ್ಷಿಗಳು ಬೀಳುವವೋ ಆಯಮುನಾನದಿಯಲ್ಲಿ ಅಂತಾಒಂದಾನೊಂದು ಮಡುವುಕಾಳಿಯನೆಂಬಮಹಾಸರ್ಪಕ್ಕೆ ಆವಾಸಸ್ಥಾನವಾಗಿತ್ತು. ॥೪॥

ಸೀದ್ಧ್ರದಃ ಕಶ್ಚಿದ್ವಿಷಾಗ್ನಿನಾ । ಶ್ರಪ್ಯಮಾಣಪಯಾಯಸ್ಮಿನ್ಪತಂತ್ಯುಪರಿಗಾಃಖಗಾಃ ॥೪॥ ವಿಪ್ರುಷ್ಮತಾವಿಷೋದೋರ್ಮಿಮಾರುತೇನಾಭಿಮರ್ಶಿತಾಃ । ಮ್ರಿಯಂತೇತೀರಗಾಯಸ್ಯಪ್ರಾಣಿನಸ್ಥಿರಜಂಗಮಾಃ ॥೫॥ ತಂಚಂಡವೇಗವಿಷವೀರ್ಯಮವೇಕ್ಷ್ಯತೇನದುಷ್ಟಾಂನದೀಂಚಖಲಸಂಯಮನಾವತಾರಃ । ಕೃಷ್ಣಃಕದಂಬಮಧಿರುಹ್ಯತತೋತಿತುಂಗಮಾಸ್ಫೋಟ್ಯಗಾಢರಶನೋನ್ಯಪತದ್ವಿಷೋದೇ ॥೬॥ ಸರ್ಪಹ್ರದಃಪುರುಷಸಾರನಿಪಾತವೇಗಸಂಕ್ಷೋಭಿತೋರಗವಿಷೋನ್ನಮಿತಾಂಬುರಾಶಿಃ । ಪರ್ಯಕ್ಪ್ಲುತೋವಿಷಕಷಾಯಿತಭೀಷಣೋರ್ಮಿರಂಚದ್ಧನುಶ್ಶತಮನಂತಬಲಸ್ಯಕಿಂತತ್ ॥೭॥ ತಸ್ಮಿನ್ಹ್ರದೇವಿಹರತೋಭುಜದಂಡಘೂರ್ಣವಾರ್ಘೋಷಮಂಗವರವಾರಣವಿಕ್ರ

---

ನೊಂದುಮಡುವು), ಕಾಳಿಂದ್ಯಾಂ-ಯಮುನೆಯಲ್ಲಿ, ಆಸೀತ್-ಉಂಟಾಗಿತ್ತು ॥೪॥ ಯಸ್ಯ-ಯಾವಮಡುವಿನ, ತೀರಗಾಃ- ತಡಿಯಲ್ಲಿತಿರುಗುವ, ಸ್ಥಿರಜಂಗಮಾಃ-ಅಚರಗಳಾಗಿಯೂ ಚರಗಳಾಗಿಯೂಇರುವ, ಪ್ರಾಣಿನಃ-ಜೀವಿಗಳು, ವಿಪ್ರುಷ್ಮತಾ-ತುಂತುರುಗಳುಳ್ಳ,ವಿಷೋದೋರ್ಮಿಮಾರುತೇನ-ವಿಷೋದ-ವಿಷದನೀರಿನ, ಊರ್ಮಿ-ಅಲೆಗಳ, ಮಾರುತೇನ-ಗಾಳಿಯಿಂದ, ಅಭಿಮರ್ಶಿತಾಸ್ಸಂತಃ-ತೀಡಲ್ಪಟ್ಟವಾಗಿ, ಮ್ರಿಯಂತೇ-ಸಾಯುತಲಿರುವವೋ ॥೫॥ ಖಲಸಂಯಮನಾವತಾರಃ-ಖಲ-ದುಷ್ಟರನ್ನು, ಸಯಂಮನ-ನಿಗ್ರಹಿಸಲೋಸುಗವಾದ, ಅವತಾರಃ-ಆವಿರ್ಭಾವವುಳ್ಳ, ಕೃಷ್ಣಃ-ಕೃಷ್ಣನು, ಚಂಡವೇಗವಿಷವೀರ್ಯಂ-ಚಂಡವೇಗ- ಕ್ರೂರವಾದವೇಗವುಳ್ಳ, ವಿಷವೀರ್ಯಂ ನಂಜಿನಶಕ್ತಿಯುಳ್ಳ, ತಂ-ಆಸರ್ಪವನ್ನೂ, ತೇನ-ಆಸರ್ಪದಿಂದ, ದುಷ್ಟಾಂ- ದೋಷಯುಕ್ತವಾಗಿರುವ, ನದೀಂಚ-ಹೊಳೆಯನ್ನೂ, ಅವೇಕ್ಷ್ಯ-ನೋಡಿ, ಗಾಢರಶನಃ-ಗಾಢ-ಗಟ್ಟಿಯಾಗಿಬಿಗಿದ, ರಶನಃ- ನಡುಕಟ್ಟುಳ್ಳವನಾಗಿ, ಆಸ್ಫೋಟ್ಯ- ತೋಳುತಟ್ಟಿಕೊಂಡು, ತುಂಗಂ-ಉದ್ದವಾಗಿರುವ, ಕದಂಬಂ- ಕಡಹದಮರವನ್ನು, ಅಧಿರುಹ್ಯ-ಏರಿ, ತತಃ-ಅಲ್ಲಿಂದ, ವಿಷೋದೇ- ವಿಷದನೀರುಳ್ಳಮಡುವಿನಲ್ಲಿ, ಅಭ್ಯಪತತ್-ದುಮ್ಮಿಕ್ಕಿದನು॥೬॥ಸರ್ಪಹ್ರದಃ-ಹಾವಿನಮಡುವು, ಪುರುಷ-...... ರಾಶಿಃ-ಪುರುಷಸಾರ-ಪುರುಷೋತ್ತಮನಾದಕೃಷ್ಣನ,ನಿಪಾತವೇಗ-ಬೀಳುವಅತಿಶಯದಿಂದ,ಸಂಕ್ಷೋಭಿತ-ನುರಿಯಲ್ಪಟ್ಟ,ಉರಗ-ಸರ್ಪಗಳ,ವಿಷ-ಗರಳದಿಂದ, ಉನ್ನಮಿತ-ಉಕ್ಕಿಸಲ್ಪಟ್ಟ, ಅಂಬುರಾಶಿಃ-ನೀರಿನಗುಂಪುಳ್ಳದ್ದೂ; ವಿಷಕಷಾಯಿತಭೀಷಣೋರ್ಮಿಃ-ವಿಷ-ನಂಜಿನಿಂದ, ಕಷಾಯಿತ-ಕದಡಲ್ಪಟ್ಟ (ಮಗರುಗೊಳಿಸಲ್ಪಟ್ಟ) ಭೀಷಣ-ಭಯಂಕರವಾದ, ಊರ್ಮಿಃ-ಅಲೆಗಳುಳ್ಳದ್ದೂ, ಆಗಿ, ಅಂಚದ್ಧನುಶ್ಶತಂ-ಅಂಚತ್- ಹೆಚ್ಚಿಬರುತಲಿರುವ, ಧನುಶ್ಶತಂ-ನೂರುಮಾರುಗಳುಂಟಾಗುವಂತೆ, ಪರ್ಯಕ್-ಎಲ್ಲಕಡೆಗಳಲ್ಲಿಯೂ, ಪ್ಲುತಃ-ಹಾರುತಲಿತ್ತು, ಅನಂತಬಲಸ್ಯ-ಕೊನೆಯಿಲ್ಲದಬಲವುಳ್ಳಕೃಷ್ಣನಿಗೆ, ತತ್-ಆಕೆಲಸವು, ಕಿಂ-ಏನುದೊಡ್ಡದು? ॥೭॥ ಅಂಗ-ಅಯ್ಯಾ! ತಸ್ಮಿನ್ಹ್ರದೇ-ಆಮಡುವಿನಲ್ಲಿ, ವಿಹರತಃ-ಕ್ರೀಡಿಸುತಲಿರುವ, ವರವಾರಣವಿಕ್ರಮಸ್ಯ-ವರ-ಶ್ರೇಷ್ಠವಾದ, ವಾರಣ-ಆನೆಯಹಾಗೆ, ವಿಕ್ರಮಸ್ಯ-ಸಾಮರ್ಥ್ಯವುಳ್ಳಕೃಷ್ಣನ, ಭುಜದಂಡಘೂರ್ಣವಾರ್ಘೋಷಂ-ಭುಜದಂಡ-ಕೋಲುಗಳಂತಿರುವ ತೋಳುಗಳಿಂದ,ಘೂರ್ಣ-ತಿರುಗುತಲಿರುವ, ವಾಃ-

---

ಮತ್ತು ಯಾವಮಡುವಿನ ತಡಿಯಲ್ಲಿರುವಸ್ಥಾವರಜಂಗಮಾತ್ಮಕಗಳಾದ ಪ್ರಾಣಿಗಳು ಜಲಬಿಂದುಗಳೊಡಗೂಡಿದ ವಿಷಜಲದ ಅಲೆಗಳನ್ನುಸೋಂಕಿ ಸುಳಿದಾಡುವಗಾಳಿಯಿಂದ ಸೋಂಕಲ್ಪಟ್ಟವಾಗಿಪ್ರಾಣಗಳಂ ಬಿಡುವವೋ! ಅಂತಾ ಒಂದಾನೊಂದುಮಡುವು ಕಾಳಿಯನೆಂಬ ಸರ್ಪಕ್ಕೆ ಆವಾಸಸ್ಥಾನವಾಗಿತ್ತು. ॥೫॥ ದುಷ್ಟನಿಗ್ರಹಾರ್ಥವಾಗಿ ಅವತರಿಸಿರುವ ಶ್ರೀಕೃಷ್ಣನು ಪ್ರಚಂಡವಾದ ವೇಗವುಳ್ಳವಿಷವೇ ಪರಾಕ್ರಮವಾಗಿಉಳ್ಳ ಆಕಾಳಿಯನೆಂಬಸರ್ಪವನ್ನು ಅದರಿಂದದೂಷಿತವಾದ ಯಮುನಾನದಿಯನ್ನು ನೋಡಿ, ತಡಿಯಲ್ಲಿರುವ ಕದಂಬವೃಕ್ಷವನ್ನೇರಿ, ಗಟ್ಟಿಯಾಗಿ ಕಟ್ಟಿಕೊಳ್ಳಲ್ಪಟ್ಟ ಉಡಿನೂಲಿನ ಹಗ್ಗವುಳ್ಳವನಾಗಿ, ತನ್ನಭುಜಗಳಂಹಸ್ತಗಳಿಂದ ತಟ್ಟಿಕೊಂಡು, ಅತ್ಯುನ್ನತವಾದ ಆಮರದತುದಿಯಿಂದ ಆವಿಷದಮಡುವಿನಲ್ಲಿ ಧುಮ್ಮಿಕ್ಕಿದನು. ॥೬॥ ಆಗ ಆಮಹಾಸರ್ಪವಿರುವ ಮಡುವು ಪುರುಷೋತ್ತಮನಾದಕೃಷ್ಣನ ಬೀಳುವವೇಗದಿಂದ ಕ್ಷೋಭೆಯನೈದಿರುವ ಸರ್ಪಗಳ ವಿಷಗಳಿಂದ ಮೇಲಕ್ಕೆಹಾರಿಸಲ್ಪಟ್ಟ ಜಲರಾಶಿಯುಳ್ಳದುದಾಗಿ, ಮತ್ತುವಿಷಗಳಿಂದ ವ್ಯಾಪ್ತಗಳಾದಕಾರಣದಿಂ ಭಯಂಕರಗಳಾದ ತೆರೆಗಳುಳ್ಳದುದಾಗಿ, ಸುತ್ತಲೂ ನೂರುಬಿಲ್ಲುಗಳಪ್ರಮಾಣದಿಂ (ನೂರುಮಾರುದೂರ) ಪ್ರವಹಿಸಿದಂತಾದ್ದಾಯಿತು. ॥೭॥ ಈರೀತಿಯಿಂದ ಆವಿಷದಮಡುವನ್ನು ಕ್ಷೋಭೆಗೊಳಿಸುವಿಕೆ ಅಪರಿಮಿತವಾದ ಬಲವುಳ್ಳಕೃಷ್ಣನಿಗೆ ಎಷ್ಟರ ಕೆಲಸವು? ಎಲೈ ಅರಸೇ! ಆಮೇಲೆ ಆಕಾಳಿಯಸರ್ಪವು ಮಡುವಿನಲ್ಲಿ ವಿಹರಿಸುತಲಿರುವ ಮದದಾನೆಯಸಾಮರ್ಥ್ಯದಂತೆ ಸಾಮ

ಮಸ್ಯ। ಆಶ್ರುತ್ಯ ತತ್ಸ್ವಸದನಾಭಿಭವಂ ನಿರೀಕ್ಷ್ಯ ಚಕ್ಷುಃಶ್ರವಾಃ ಸಮಸರತ್ತದಮೃಷ್ಯಮಾಣಃ॥೮॥ ತಂ ಪ್ರೇ
ಕ್ಷಣೀಯಸುಕುಮಾರಘನಾವದಾತಂ ಶ್ರೀವತ್ಸಪೀತವಸನಂ ಸ್ಮಿತಸುಂದರಾಸ್ಯಮ್। ಕ್ರೀಡಂತಮಪ್ರತಿಬಲಂ
ಕಮಲೋದರಾಂಘ್ರಿಂ ಸಂದಶ್ಯ ಮರ್ಮಸು ರುಷಾ ಭುಜಯಾ ಚಖಾದ॥೯॥ ತಂ ನಾಗಭೋಗಪರಿವೀತಮದೃಷ್ಟ
ಚೇಷ್ಟಮಾಲೋಕ್ಯ ತತ್ಪ್ರಿಯಸಖಾಃ ಪಶುಪಾ ಭೃಶಾರ್ತಾಃ। ಕೃಷ್ಣೇಽರ್ಪಿತಾತ್ಮಸುಹೃದರ್ಥಕಳತ್ರಕಾಮಾ ದುಃ
ಖಾರ್ತಿಶೋಕಭಯಮೂಢಧಿಯೋ ನಿಪೇತುಃ॥೧೦॥ ಗಾವೋ ವೃಷಾ ವತ್ಸತರ್ಯಃ ಕ್ರಂದಮಾನಾಃ ಸುದುಃಖಿತಾಃ। ಕೃ

---

ನೀರಿನ, ಘೋಷಂ-ಸಪ್ಪಳನ್ನು, ಆಶ್ರುತ್ಯ-ಕೇಳಿ, ಚಕ್ಷುಃಶ್ರವಾಃ- ಕಂಗಳೇ ಕಿವಿಗಳಾಗಿವುಳ್ಳಸರ್ಪವು, ತತ್ಸ್ವಸದನಾಭಿಭವಂ-ತತ್-ಅದರಿಂದ, ಸ್ವ-ತನ್ನ, ಸದನ-ವಾಸಸ್ಥಾನದ, ಅಭಿಭವಂ-ತಿರಸ್ಕಾರವನ್ನು, ನಿರೀಕ್ಷ್ಯ-ನೋಡಿ, ತತ್-ಅದರನ್ನು, ಅಮೃಷ್ಯಮಾಣಃ-ಸೈರಿಸದಿರುವನಾಗಿ, ಸಮಸರತ್-ಎದುರಿಗೆಬಂದನು ॥೮॥ ಪ್ರೇಕ್ಷಣೀಯಸುಕುಮಾರಘನಾವದಾತಂ-ಪ್ರೇಕ್ಷಣೀಯ-ಚನ್ನಾಗಿ ನೋಡತಕ್ಕವನಾಗಿಯೂ, ಸುಕುಮಾರ-ಅತಿಕೋಮಲನಾಗಿಯೂ, ಘನಾವದಾತಂ-ಘನ-ನೀಲಮೇಘದಂತೆ, ಅವದಾತಂ-ಪ್ರಕಾಶಿಸುವನಾಗಿಯೂ, ಶ್ರೀವತ್ಸಪೀತವಸನಂ-ಶ್ರೀವತ್ಸ- ಲಕ್ಷ್ಮೀಚಿಹ್ನವೆಂಬಮಚ್ಚೆಯಿಂದಕೂಡಿದ, ಪೀತವಸನಂ- ಹಸುರುಡಿಗೆಯುಳ್ಳವನಾಗಿಯೂ, ಸ್ಮಿತಸುಂದರಾಸ್ಯಂ-ಸ್ಮಿತ-ಕಿರುನಗೆಯಿಂದ, ಸುಂದರ-ಚಲುವಾದ, ಆಸ್ಯಂ-ಮುಖವುಳ್ಳವನಾಗಿಯೂ, ಕ್ರೀಡಂತಂ-ಆಡುತಲಿರುವನಾಗಿಯೂ, ಅಪ್ರತಿಬಲಂ- ತನಗೆಪ್ರತಿಯಾದ ಇತರನಬಲವಿಲ್ಲದವನಾಗಿಯೂ, ಕಮಲೋದರಾಂಘ್ರಿಂ- ಕಮಲ- ತಾವರೆಯಂತಿರುವ, ಉದರ-ಹೊಕ್ಕಳೂ, ಅಂಘ್ರಿಂ-ಅಡಿಗಳೂ, ಉಳ್ಳವನು. ಅಥವಾ ಕಮಲೋದರ- ತಾವರೆಯೊಳಭಾಗದಂತೆಕೋಮಲವಾದ, ಅಂಘ್ರಿಂ-ಪಾದಗಳುಳ್ಳವನಾಗಿಯೂಇರುವ, ತಂ-ಆಕೃಷ್ಣನನ್ನು, ರುಷಾ-ಸಿಟ್ಟನಿಂದ, ಮರ್ಮಸು-ಸಂಧಿಸ್ಥಾನಗಳಲ್ಲಿ, ಸಂದಶ್ಯ-ಚನ್ನಾಗಿಕಚ್ಚಿ-ಭುಜಯಾ-ತನ್ನಶರೀರದಿಂದ, ಚಖಾದ-ಸುತ್ತಿಮುಚ್ಚಿದನು॥೯॥ನಾಗಭೋಗಪರಿವೀತಂ-ನಾಗಭೋಗ- ಸರ್ಪದೇಹದಿಂದ, ಪರಿವೀತಂ-ಸರ್ವತ್ರಸುತ್ತಿಕೊಳ್ಳಲ್ಪಟ್ಟವನಾದ್ದರಿಂದಲೇ, ಅದೃಷ್ಟಚೇಷ್ಟಂ-ಅದೃಷ್ಟ ಕಾಣಲ್ಪಡದೇಹೋದ, ಚೇಷ್ಟಂ-ಮಿಸುಕಾಟಗಳುಳ್ಳ, ತಂ-ಆಕೃಷ್ಣನನ್ನು, ಆಲೋಕ್ಯ-ಚನ್ನಾಗಿನೋಡಿ, ತತ್ಪ್ರಿಯಸಖಾಃ- ತತ್-ಆಕೃಷ್ಣನಿಗೆ, ಪ್ರಿಯ- ಇಷ್ಟರಾದ, ಅಥವಾ ಆಕೃಷ್ಣನೇಇಷ್ಟನಾಗಿವುಳ್ಳ, ಸಖಾಃ-ಗೆಳೆಯರಾದ, ಪಶುಪಾಃ- ಗೋಪಾಲಕರು, ಭೃಶಾರ್ತಾಃ-ಭೃಶ- ಬಹಳವಾಗಿ, ಆರ್ತಾಃ-ಪೀಡಿತರಾಗಿಯೂ, ಕೃಷ್ಣೇ-ಕೃಷ್ಣನಲ್ಲಿ, ಅರ್ಪಿತಾತ್ಮಸುಹೃದರ್ಥಕಳತ್ರಕಾಮಾಃ-ಅರ್ಪಿತ- ಇಡಲ್ಪಟ್ಟ, ಅಥವಾ ಒಪ್ಪಿಸಲ್ಪಟ್ಟ, ಆತ್ಮ-ಶರೀರವೂ, ಸುಹೃತ್-ಗೆಳೆಯರೂ, ಅರ್ಥ-ಧನವೂ, ಕಳತ್ರ-ಮಡದಿಯರೂ, ಕಾಮಾಃ-ಭೋಗಗಳೂ, ಉಳ್ಳವರಾದ್ದರಿಂದಲೇ, ದುಃಖಾರ್ತಿಶೋಕಭಯಮೂಢಧಿಯಃ-ದುಃಖ-ಕಷ್ಟ, ಆರ್ತಿ-ಪೀಡೆ, ಶೋಕ- ಅಳುವು, ಭಯ- ಹೆದರಿಕೆ, ಗಳಿಂದ, ಮೂಢ-ಜಡವಾದ, ಧಿಯಃ-ಬುದ್ಧಿಯುಳ್ಳವರಾಗಿ, ನಿಪೇತುಃ-ಬಿದ್ದುಹೋದರು ॥೧೦॥ ಗಾವಃ-ಆಕಳು, ವೃಷಾಃ-ಎತ್ತುಗಳು,ವತ್ಸತ

---

ರ್ಯ್ಯವುಳ್ಳ ಕೃಷ್ಣದೇವನ ಭುಜದಂಡಗಳಿಂದ ಬಡಿಯಲ್ಪಟ್ಟನೀರಿನ ಮಹಾಶಬ್ದವಂ ಕೇಳಿ, ತನ್ನ ವಾಸಸ್ಥಾನಕೆಂಟಾದ ತಿರಸ್ಕಾರವನ್ನೂನೋಡಿ ಅದಂ ಸೈರಿಸಲಾರದೆ ಕೃಷ್ಣನನ್ನು ಅಟ್ಟಿಕೊಂಡುಬಂದುದು. ॥೮॥ ಆಗ ಆಕಾಳಿಯವೆಂಬಸರ್ಪವು ನೋಡಲುಯೋಗ್ಯನಾದ, ಅತಿಕೋಮಲನಾದ, ಮೇಘದಂತೆಪ್ರಕಾಶಿಸುತಲಿರುವ, ಶ್ರೀವತ್ಸವೆಂಬ ಮಚ್ಚೆಯೊಡನೆ ಶೋಭಿಸುತಲಿರುವ, ಪೀತಾಂಬರವುಳ್ಳ, ಮಂದಹಾಸದೊಡಗೂಡಿರುವ, ಅತಿಸುಂದರವಾದ ಮುಖವುಳ್ಳ, ಮಡುವಿನಲ್ಲಿಕ್ರೀಡಿಸುತಲಿರುವ, ಒಬ್ಬನಿಂದಲೂ ಭಯಪಡದೆಯಿರುವ, ಕಮಲಮಧ್ಯದಂತೆ ಅತ್ಯಂತಕೋಮಲಂಗಳಾದ ಪಾದಗಳುಳ್ಳ, ಆಶ್ರೀಕೃಷ್ಣದೇವನಂ ಮರ್ಮಸ್ಥಾನಗಳಲ್ಲಿ ಕೋಪದಿಂಕಚ್ಚಿದಂತಾದ್ದಾಗಿ ತನ್ನ ಶರೀರದಿಂದ ಸುತ್ತಿಕೊಂಡಂತಾದ್ದಾಯಿತು. ॥೯॥ ಆಗ ಆಕೃಷ್ಣನೇಪ್ರಿಯಮಿತ್ರನಾಗಿವುಳ್ಳ ಗೋಪಾಲಕರು ಮಹಾಸರ್ಪದ ಶರೀರದಿಂ ಸುತ್ತಲ್ಪಟ್ಟವನಾದುದರಿಂದ ಮಿಸುಕಾಡದೆಯಿರುವ ಕೃಷ್ಣನಂ ನೋಡಿ ವ್ಯಸನದಿಂದ ಅತ್ಯಂತಪೀಡಿತರಾಗಿ ಮತ್ತು ಕೃಷ್ಣನಲ್ಲಿಯೇಸಮರ್ಪಿಸಲ್ಪಟ್ಟ ತಮ್ಮ ದೇಹಗಳು ಬಂಧುಗಳು ದ್ರವ್ಯಗಳು ಮನೆಗಳುಸಹ ಉಳ್ಳವರಾದುದರಿಂದ, ದುಃಖದಿಂದಲೂ ಅತ್ಯಂತ ಶೋಕದಿಂದಲೂ ಭಯದಿಂದಲೂ, ಕೂಡ ಮೂಢವಾದ ಬುದ್ಧಿಯುಳ್ಳವರಾಗಿಮೂರ್ಛೆಬಿದ್ದರು. ॥೧೦॥ ಹಾಗಯೇ ಆಗೋವುಗಳು ಎತ್ತುಗಳು ಕಡಸುಗಳುಸಹ ಅತ್ಯಂತದುಃಖವುಳ್ಳವಾಗಿ ಕೂಗುತ ಕೃಷ್ಣನಲ್ಲಿಯೇನಿಲ್ಲಿಸಲ್ಪಟ್ಟ ದೃಷ್ಟಿಯುಳ್ಳವಾಗಿ ಅತ್ಯಂತಭಯಪಡುತ ಅಳುತಿರುವವುಗಳಂತೆ ನಿಂ

ಷ್ಣನ್ಯಸ್ತೇಕ್ಷಣಾಭೀತಾರುದಂತ್ಯಇವತಸ್ಥಿರೇ ॥೧೧॥ ಅಥವ್ರಜೇಮಹೋತ್ಪಾತಾಸ್ತ್ರಿವಿಧಾಅತಿದಾರುಣಾಃ ।
ಉತ್ಪೇತುರ್ಭುವಿದಿವ್ಯಾತ್ಮನ್ಯಾಸನ್ನಭಯಶಂಸಿನಃ ॥೧೨॥ ತಾನಾಲಕ್ಷ್ಯಭಯೋದ್ವಿಗ್ನಾಗೋಪಾನಂದಪುರೋಗ
ಮಾಃ। ವಿನಾರಾಮೇಣಗಾಃಕೃಷ್ಣಂಜ್ಞಾತ್ವಾಚಾರಯಿತುಂಗತಮ್ ॥೧೩॥ ತೈರ್ದುರ್ನಿಮಿತ್ತೈರ್ನಿಧನಂಮತ್ವಾ
ಪ್ರಾಪ್ತಮತದ್ವಿದಃ । ತತ್ಪ್ರಾಣಾಸ್ತನ್ಮನಸ್ಕಾಸ್ತೇದುಃಖಶೋಕಭಯಾತುರಾಃ ॥೧೪॥ ಆಬಾಲವೃದ್ಧವ
ನಿತಾಃಸರ್ವೇಂಗಪಶುವೃತ್ತಯಃ।ನಿರ್ಜಗ್ಮುರ್ಗೋಕುಲಾದ್ದೀನಾಃಕೃಷ್ಣದರ್ಶನಲಾಲಸಾಃ॥೧೫॥ತಾಂಸ್ತಥಾ

---

ರ್ಯಃ-ಸಂಜೆಕರುಗಳೂಕೂಡ, ಕ್ರಂದಮಾನಾಃ-ಕೂಗುತಲಿರುವವಾಗಿ, ಸುದುಃಖಿತಾಃ- ಅಧಿಕವಾಗಿದುಃಖಿಸುತಲಿರುವವಾಗಿ, ಕೃಷ್ಣ ನ್ಯಸ್ತೇಕ್ಷಣಾಃ- ಕೃಷ್ಣನಲ್ಲಿಇಡಲ್ಪಟ್ಟದೃಷ್ಟಿಯುಳ್ಳವಾದ್ದರಿಂದಲೇ, ಭೀತಾಃ- ಹೆದರಿದವಾಗಿ, ರುದತ್ಯಇವ- ಅಳುತಿರುವವೋಎಂಬ ಹಾಗೆ, ತಸ್ಥಿರೇ-ಇದ್ದವು ॥೧೧॥ಅಥ-ಆಮೇಲೆ, ವ್ರಜೇ-ಗೋಕುಲದಲ್ಲಿ, ಭುವಿ-ನೆಲದಲ್ಲಿ, (ಕಂಪಾದಿಗಳು)ದಿವಿ- ಅಂತರಿಕ್ಷದಲ್ಲಿ, ಕೊಳ್ಳಿಗಳಬೀಳುವಿಕೆಮೊದಲಾದವು.) ಆತ್ಮನಿ-ದೇಹದಲ್ಲಿ, (ಎಡಗಣ್ಣುಕೆತ್ತುವಿಕೆಮೊದಲಾದವು) ಆಸನ್ನಭಯಶಂಸಿನಃ-ಆಸನ್ನ-ಸಮೀಪಿಸಿದ, ಭಯ-ಭಯನಿಮಿತ್ತವನ್ನು, ಶಂಸಿನಃ-ಹೇಳುತ್ತಿರುವಸ್ವಭಾವವುಳ್ಳ, ಅತಿದಾರುಣಾಃ-ಅತಿಕ್ರೂರಗಳಾದ, ಮಹೋತ್ಪಾತಾಃ-ದೆಡ್ಡದುರ್ಲಕ್ಷಣಗಳು, ಉತ್ಪೇತುಃ-ಉಂಟಾದವು ॥೧೨॥ ನಂದಪುರೋಗಮಾಃ- ನಂದನೇಮುಂದಾಳಾಗಿವುಳ್ಳ, ಗೋಪಾಃ- ಗೊಲ್ಲರು, ತಾನ್-ಆಉತ್ಪಾತಗಳನ್ನು, ಆಲಕ್ಷ್ಯ-ನೋಡಿ, ಕೃಷ್ಣಂ-ಕೃಷ್ಣನನ್ನು, ರಾಮೇಣವಿನಾ-ಬಲರಾಮನನ್ನುಹೊರತು, ಗಾಃ- ಗೋವುಗಳನ್ನು, ಚಾರಯಿತುಂ-ತಿರಿಗಿಸುವದಕ್ಕೆ, ಗತಂ-ಹೋಗಿರುವವನನ್ನಾಗಿ, ಜ್ಞಾತ್ವಾ-ತಿಳಿದು, ಭಯೋದ್ವಿಗ್ನಾಃ-ಭಯ-ಭಯಕಾರಣಗಳ ದೆಸೆಯಿಂದ, ಉದ್ವಿಗ್ನಾಃ-ಹೆದರಿದವರಾಗಿ, ಅಥವಾ ಭಯದಿಂದನಡುಗುತಲಿರುವರಾದರು ॥೧೩॥ಅತದ್ವಿದಃ-ಆಕೃಷ್ಣನಪ್ರಭಾವವನ್ನು ಅರಿಯದವರಾದ್ದರಿಂದಲೇ, ತೈರ್ದುರ್ನಿಮಿತ್ತೈಃ-ಆಕೆಟ್ಟಶಕುನಗಳಿಂದ, ನಿಧನಂಪ್ರಾಪ್ತಂಮತ್ವಾ-ಮರಣವನ್ನು ಹೊಂದಿದವನನ್ನಾಗಿತಿಳಿದು, ತತ್ಪ್ರಾಣಾಃ-ಆಕೃಷ್ಣನಲ್ಲಿಪ್ರಾಣವುಳ್ಳವರೂ, ತನ್ಮನಸ್ಕಾಃ- ಆಕೃಷ್ಣನಲ್ಲಿಮನಸ್ಸುಳ್ಳವರೂಆದ, ತೇ-ಆನಂದಾದಿಗಳು, ದುಃಖಶೋಕಭಯಾತುರಾಃ-ದುಃಖದಿಂದಲೂ ಅಳುವಿನಿಂದಲೂ ಹೆದರಿಕೆ ಯಿಂದಲೂ ತ್ವರೆಪಡುತಲಿರುವರಾದರು॥೧೪॥ಅಂಗ- ಅಯ್ಯಾಪರೀಕ್ಷಿತನೇ! ಪಶುವೃತ್ತಯಸ್ಸರ್ವೇ-ಪಶುಗಳಿಂದಜೀವನವುಳ್ಳಗೊಲ್ಲರೆಲ್ಲರೂ, ದೀನಾಃ-ದುಃಖಿತರಾಗಿ, ಆಬಾಲವೃದ್ಧವನಿತಾಃ-ಹುಡುಗರೂ ಮುದುಕರೂಹೆಂಗಳೂಮೊದಲುಗೊಂಡು, ಕೃಷ್ಣದರ್ಶನಲಾಲಸಾಃ-ಕೃಷ್ಣನನ್ನುನೋಡುವುದರಲ್ಲಿ ಅತ್ಯಾಸಕ್ತರಾಗಿ, ಗೋಕುಲಾತ್-ಗೊಲ್ಲರಪಾಳ್ಯದ ದೆಸೆಯಿಂದ, ನಿರ್ಜಗ್ಮುಃ-ಹೊರಹೊಂಟರು ॥೧೫॥ ಭಗವಾನ್-ಐಶ್ವರ್ಯಸಪನ್ನನಾದ, ರೋಹಿಣೀಸುತಃ-ರೋಹಿಣೀದೇವಿಯಮಗನಾದಬಲರಾಮನು, ತಥಾಕಾತರಾನ್-ಹಾಗೆಭಯಚಂಚಲರಾದ, ತಾನ್-ಆನಂದಾದಿಗಳನ್ನು,ವೀಕ್ಷ್ಯ-ನೋಡಿ, ಪ್ರ

---

ತವಾದವು. ॥೧೧॥ ಹೀಗಿರಲು ಆಮೇಲೆ ಭೂಮಿಯಲ್ಲಿ ಭೂಕಂಪಾದಿಗಳೂ, ಅಂತರಿಕ್ಷದಲ್ಲಿ ಉಲ್ಕಾಪಾತಾದಿಗಳೂ ಗಂಡುಸರಲ್ಲಿ ಎಡಗಣ್ಣುಕೆತ್ತುವಿಕೆ ಮೊದಲಾದವುಗಳೂ, ಹೀಗೆ ಮೂರುತೆರಂಗಳಾದ, ಮತ್ತು ಆಗಲೇಪ್ರಾಪ್ತವಾಗುವ ಭಯಮಂಸೂಚಿಸುತಲಿರುವ ಮಹೋತ್ಪಾತಂಗಳು-ಗೋಕುಲದಲ್ಲಿಕಾಣಿಸಿದವು.॥೧೨॥ ಆ ನಂದಗೋಪಮೊದಲಾದಗೋಪಾಲಕರು ಗೋಕುಲದಲ್ಲುಂಟಾಗುತ್ತಿರುವ ಆಮಹೋತ್ಪಾತಂಗಳಂಕಂಡು ಭಯದಿಂದ ಕಂಪಿಸುತಲಿರುವವರಾಗಿ, ಮತ್ತು ಬಲರಾಮನಂಹೊರತು ಗೋವುಗಳಂ ಮೇಯಿಸಲೋಸುಗ ಕೃಷ್ಣನು ವನವನೆಯ್ದಿರುವನೆಂದು ಕೇಳಿ, ॥೧೩॥ಆಕೃಷ್ಣನಪ್ರಭಾವವನ್ನು ಅರಿಯದವರಾದುದರಿಂದ ಮಹಾ ದುರ್ನಿಮಿತ್ತಂಗಳಿಂ ಆಕೃಷ್ಣನಿಗೆ ಅಪೋಹವುಂಟಾಗಿಹುದೆಂದು ತಿಳಿದು ಆಶ್ರೀಕೃಷ್ಣನೇಪ್ರಾಣವಾಗಿವುಳ್ಳವರಾದುದರಿಂದಲೂ, ಆಶ್ರೀಕೃಷ್ಣನಲ್ಲಿಯೇ ಮನಸ್ಸುಳ್ಳವರಾದುದರಿಂದಲೂ ಸಹ ವ್ಯಸನಶೋಕಭಯಂಗಳಿಂ ಅತ್ಯಂತಪೀಡಿತರಾಗಿ ॥ ೧೪ ॥ಆಸ್ತ್ರೀಬಾಲವೃದ್ಧರು ಮೊದಲುಗೊಂಡು ಎಲ್ಲರೂ ಅತ್ಯಂತ ವಾತ್ಸಲ್ಯದಿಂದ ಶ್ರೀಕೃಷ್ಣನಂ ನೋಡಲಿಚ್ಛೆಯುಳ್ಳವರಾಗಿ ಅತಿದೀನರಾಗಿ ಗೋಕುಲದ ದೆಸೆಯಿಂದ ಹೊರಟರು. ॥೧೫॥ ಆಗ ಭಗವಂತನಾದ ಬಲರಾಮನು ತಮ್ಮನಾದ ಶ್ರೀಕೃಷ್ಣನ ಪ್ರಭಾವವಂ ಬಲ್ಲವನಾದುದರಿಂದ ಹಾಗೆ ಅತ್ಯಂತಭಯಂ ಬಡುತಲಿರುವ ಆನಂದಾದಿಗಳಂನೋಡಿ ನಕ್ಕವನಾಗಿ ಸ್ವ

ಕಾತರಾನ್ವೀಕ್ಷ್ಯಭಗವಾನ್ರೋಹಿಣೀಸುತಃ। ಪ್ರಹಸ್ಯಕಿಂಚಿನ್ನೋವಾಚಪ್ರಭಾವಜ್ಞೋನುಜಸ್ಯಸಃ॥೧೬॥
ತೇನ್ವೇಷಮಾಣಾದಯಿತಂಕೃಷ್ಣಂಸೂಚಿತಯಾಪದೈಃ । ಭಗವಲ್ಲಕ್ಷಣೈರ್ಜಗ್ಮುಃಪದವ್ಯಾಯಮುನಾತಟ
ಮ್॥೧೭॥ತತ್ರತತ್ರಾಬ್ಜಯವಾಂಕುಶಾಶನಿಧ್ವಜೋಪಪನ್ನಾನಿಪದಾನಿವಿಶ್ವತೇಃ।ಮಾರ್ಗೇಗವಾಮನ್ಯಪದಾಂ
ತರಾಂತರೇನಿರೀಕ್ಷಮಾಣಾಯಯುರಂಗಸತ್ವರಾಃ॥೧೮॥ಅಂತರ್ಜಲೇಭುಜಗಭೋಗಪರೀತಮಾರಾತ್ಕೃಷ್ಣಂನಿ
ರೀಹಮುಪಲಭ್ಯಜಲಾಶಯಾಂತೇ।ಗೋಪಾಂಶ್ಚಮೂಢಧಿಷಣಾನ್ಪರಿತಃಪಶೂಂಶ್ಚಸಂಕ್ರಂದತಃಪರಮಕಶ್ಮಲ
ಮಾಪುರಾರ್ತಾಃ॥೧೯॥ಗೋಪ್ಯೋನುರಕ್ತಮನಸೋಭಗವತ್ಯನಂತೇತತ್ಸೌಹೃದಸ್ಮಿತವಿಲೋಕಗಿರಃಸ್ಮರಂತ್ಯಃ।

---

ಪ್ರಹಸ್ಯ-ಹೆಚ್ಚಾಗಿನಕ್ಕು, ಕಿಂಚಿತ್-ಕೊಂಚವನ್ನಾದರೂ( ಏನನ್ನೂ )ನೋವಾಚ-ನುಡಿಯಲ್ಲಿಲ್ಲವು॥ಸಃ ಆಬಲರಾಮನು, ಅನುಜಸ್ಯ-ತನ್ನ ತಮ್ಮನಾದಕೃಷ್ಣನ, ಪ್ರಭಾವಜ್ಞಃ-ಸಾಮರ್ಥ್ಯವನ್ನು ಬಲ್ಲವನಾಗಿರುವನು ॥೧೬॥ ತೇ-ಆನಂದಾದಿಗಳು, ದಯಿತಂ-ಪ್ರಿಯನಾದ, ಕೃಷ್ಣಂ-ಕೃಷ್ಣನನ್ನು, ಅನ್ವೇಷಮಾಣಾಸ್ಸಂತಃ-ಹುಡುಕುತಲಿರುವರಾಗಿ, ಭಗವಲ್ಲಕ್ಷಣೈಃ-ಮಹಾಪುರುಷಚಿಹ್ನಗಳುಳ್ಳ( ಶಂಖ ಚಕ್ರ ಧ್ವಜ ಅಂಕುಶ ಕುಲಿಶ ಛತ್ರಾದಿರೇಖೆಗಳುಳ್ಳ )ಪದೈಃ-ಹೆಜ್ಜೆಗಳಿಂದ, ಸೂಚಿತಯಾ-ಸೂಕ್ಷ್ಮವಾಗಿಜ್ಞಾಪಿಸಲ್ಪಟ್ಟ, ಪದವ್ಯಾ-ದಾರಿಯಿಂದ, ಯಮುನಾತಟಂ-ಯಮುನೆಯತಡಿಯನ್ನು ಕುರಿತು, ಜಗ್ಮುಃ-ಹೋದರು ॥೧೭॥ ಅಂಗ-ಅಯ್ಯಾಪರೀಕ್ಷಿತನೆ; ತೇ-ಆಗೋಪಾಲರು, ಮಾರ್ಗೇ-ದಾರಿಯಲ್ಲಿ, ಗವಾಂ-ಗೋವುಗಳ, ಅನ್ಯಪದಾಂತರಾಂತರೇ-ಅನ್ಯಪದ-ಬೇರೆಯಾದಹೆಜ್ಜೆಗಳ, ಅಂತರಾಂತರೇ-ನಡುವೆನಡುವೆ, ತತ್ರತತ್ರ-ಅಲ್ಲಲ್ಲಿ, ಯವಾಂಕುಶಾಶನಿಧ್ವಜೋಪಪನ್ನಾನಿ- ಯವ-ಯವರೇಖೆ, ಅಂಕುಶ-ಅಂಕುಶರೇಖೆ, ಅಶನಿ-ವಜ್ರರೇಖೆ, ಧ್ವಜ-ಧ್ವಜರೇಖೆಗಳಿಂದ, ಉಪಪನ್ನಾನಿ-ಪೂರ್ಣಗಳಾದ, ವಿಶ್ವತೇಃ- ಪ್ರಪಂಚಕ್ಕೊಡೆಯನಾದಕೃಷ್ಣನ, ಪದಾನಿ-ಹೆಜ್ಜೆಗಳನ್ನು, ನಿರೀಕ್ಷಮಾಣಾಃ-ನೋಡುತಲಿರುವರಾಗಿ, ಸತ್ವರಾಃ-ವೇಗದಿಂದಸಹಿತರಾಗಿ, ಯಯುಃ-ತೆರಳಿದರು (ಧ್ವನ್ಯರ್ಥವು-ಗವಾಂಮಾರ್ಗೇ-ಉಪನಿಷದ್ವಾಕ್ಯಗಳದಾರಿಯಲ್ಲಿ, ಅನ್ಯಪದಾಂತರಾಂತರೇ- ಇತರದೇವತಾಲಿಂಗಗಳನಡುವೆ,ವಿಶ್ವತೇಃಪದಾನಿ-ಬ್ರಹ್ಮಲಿಂಗಗಳನ್ನು, ನಿರೀಕ್ಷಮಾಣಾಃ-ವಿವೇಕಿಸಿನೋಡುತಲಿರುವ, ತೇ-ಆಯೋಗಿಗಳು, ಯಯುಃ-ಪರಮಪದವನ್ನು ಕುರಿತುಹೋದರು-ಎಂಬಂತೆ) ॥೧೮॥ಅಂತರ್ಜಲೇ-ನೀರಿನೊಳಗೆ, ಭುಜಗಭೋಗಪರೀತಂ-ಸರ್ಪಶರೀರದಿಂದಸುತ್ತಿಕೊಳ್ಳಲ್ಪಟ್ಟವನಾದ್ದರಿಂದಲೇ, ನಿರೀಹಂ-ನಿಶ್ಚೇಷ್ಟನಾಗಿರುವನಂತೆ, ಕೃಷ್ಣಂ-ಕೃಷ್ಣನನ್ನು, ಆರಾತ್-ಬೇಗನೆ, ಉಪಲಭ್ಯ- ದೂರದಿಂದಪ್ರತ್ಯಕ್ಷವಾಗಿತಿಳಿದು, ಜಲಾಶಯಾಂತೇ-ಮಡುವಿನಸಮೀಪದಲ್ಲಿ, ಮೂಢಧಿಷಣಾನ್-ಮಂಕಾದಬುದ್ಧಿಯುಳ್ಳ, ಗೋಪಾಂಶ್ಚ-ಪಶುಪಾಲಕರನ್ನೂ, ಪರಿತಃ-ಸುತ್ತಲೂ, ಸಂಕ್ರಂದತಃ-ಕೂಗುತಲಿರುವ, ಪಶೂಂಶ್ಚ-ಗೋವುಗಳನ್ನೂ, ಉಪಲಭ್ಯ-ನೋಡಿ, ಆರ್ತಾಸ್ಸಂತಃ-ಪೀಡಿತರಾಗಿ, ಪರಮಕಶ್ಮಲಂ-ಮಹಾಮೋಹವನ್ನು, ಆಪುಃ-ಹೊಂದಿದರು ॥೧೯॥ಗೋಪ್ಯಃ-ಗೊಲ್ಲತಿಯರು, ಅನಂತೇ-ನಾಶರಹಿತನಾದ, ಭಗವತಿ-ಕೃಷ್ಣನಲ್ಲಿ, ಅನುರಕ್ತಮನಸಃ-ಅಕ್ಕರೆಗೊಂಡಚಿತ್ತವುಳ್ಳವರಾದ್ದರಿಂದಲೇ, ತತ್ಸೌಹೃದಸ್ಮಿತವಿಲೋಕಗಿರಃ- ತತ್-ಆಕೃಷ್ಣನ, ಸೌಹೃದ- ಸ್ನೇಹವ

---

ಲ್ಪವಾದರೂ. ಮಾತಾಡಿದವನಾಗಲಿಲ್ಲ॥೧೬॥ ಆಮೇಲೆ ಆನಂದಗೋಪಮೊದಲಾದ ಗೋಪಾಲಕರೆಲ್ಲರೂ ಭಗವಂತನಂಜ್ಞಾಪಿಸುವ ಅಡಿಗಳಿಂದ ಸೂಚಿಸಲ್ಪಟ್ಟಮಾರ್ಗದಿಂ ಅತ್ಯಂತವಾಗಿ ಇಷ್ಟನಾದಕೃಷ್ಣನು ಹುಡುಕುತಲಿರುವರಾಗಿ ಯಮುನಾತೀರವನೈಯ್ದಿದರು ॥೧೭॥ ಅದಂತೆನೆ ಎಲೈ ಅರಸೇ ಆನಂದಗೋಪ ಮೊದಲಾದವರೆಲ್ಲರೂ ಅಲ್ಲಲ್ಲಿ ಗೋವುಗಳ ಮಾರ್ಗದಮಧ್ಯದಲ್ಲಿ ಅನ್ಯರಾದಗೋಪಾಲಬಾಲಕರ ಅಡಿಗಳ ಮಧ್ಯದಲ್ಲಿ ಶ್ರೀಕೃಷ್ಣನ ಪದ್ಮ ಯವ ಅಂಕುಶ ವಜ್ರ ಧ್ವಜರೇಖೆಗಳೊಡಗೂಡಿದ ಅಡಿಗಳನ್ನು ನೋಡುತ ತ್ವರೆಯಿಂದ ಯಮುನಾತೀರವನೆಯ್ದಿದರು. ॥೧೮॥ ಅನಂತರದಲ್ಲಿ ನಂದಾದಿಗಳು ಆಯಮುನಾನದಿಯ ಮಡುವಿನೊಳಗೆ ಮಹಾಸರ್ಪದ ಶರೀರದಿಂದ ಸುತ್ತಲ್ಪಟ್ಟಿರುವ ನಿಷ್ಕಾಮನಾದ ಶ್ರೀಕೃಷ್ಣನಂ, ಆಮಡುವಿನತಡಿಯ ಸಮೀಪದಲ್ಲಿ ಮೂಢವಾದಬುದ್ಧಿಯುಳ್ಳ ಗೋಪಾಲಕರಂ, ಸುತ್ತಲೂದೈನ್ಯದಿಂದ ಕೂಗುತಲಿರುವ ಗೋವುಗಳಂ, ಸಹನೋಡಿ ಆರ್ತರಾಗಿ ಅತ್ಯಾಂತಮೋಹವನೆಯ್ದಿದರು.॥೧೯॥ ಮತ್ತು ಆಗೋಪಸ್ತ್ರೀಯರೆಲ್ಲರೂ ಅನಂತನಾದ ಭಗವಂತನಾದ ಶ್ರೀಕೃಷ್ಣಮೂರ್ತಿಯಲ್ಲಿ ಸ್ನೆಹಯುಕ್ತವಾದ ಮನಸ್ಸುಳ್ಳವರಾದುದರಿಂದ ಆಶ್ರೀಕೃಷ್ಣನ ಸ್ನೇಹಯುಕ್ತವಾದ ಮುಗುಳುನಗೆಯನ್ನೂ ಮಧುರವಚನಂಗಳನ್ನು ಸವಿನೋಟವನ್ನೂ ಸ್ಮರಿಸುತಲಿರುವವರಾಗಿ ಆಪ್ರಿಯನಾದ ಶ್ರೀಕೃಷ್ಣನು ಮಹಾಸರ್ಪದಿಂದ ಗ್ರಹಿಸಲ್ಪಡಲು ಅತ್ಯಂತದುಃಖದಿಂ

ಗ್ರಸ್ತೇಽಹಿನಾಪ್ರಿಯತಮೇಭೃಶದುಃಖತಪ್ತಾಃ ಶೂನ್ಯಂಪ್ರಿಯವ್ಯತಿಹೃತಂದದೃಶುಸ್ತ್ರಿಲೋಕಮ್ ॥೨೦॥
ತಾಃಕೃಷ್ಣಮಾತರಮಪತ್ಯಮನುಪ್ರತಪ್ತಾಂ ತುಲ್ಯವ್ಯಥಾಸ್ಸಮಧಿಗಮ್ಯಶುಚಸ್ಸ್ರವಂತ್ಯಃ। ತ್ರಸ್ತಾ ವ್ರಜ
ಪ್ರಿಯಕಥಾಃಕಥಯಂತ್ಯಆಸನ್ ಕೃಷ್ಣಾನನೇಽರ್ಪಿತದೃಶೋಮೃತಕಪ್ರತೀಕಾಃ॥೨೧॥ಕೃಷ್ಣಪ್ರಾಣಾನ್ನಿವಿಶ
ತೋನಂದಾದೀನ್ವೀಕ್ಷ್ಯತದ್ಧ್ರದಮ್। ಪ್ರತ್ಯಷೇಧತ್ಸಭಗವಾನ್ರಾಮಃಕೃಷ್ಣಾನುಭಾವವಿತ್ ॥೨೨॥ಇತ್ಥಂ
ಸ್ವಗೋಕುಲಮನನ್ಯಗತಿಂನಿರೀಕ್ಷ್ಯಸಸ್ತ್ರೀಕುಮಾರಮತಿದುಃಖಿತಮಾತ್ಮಹೇತೋಃ । ಆಜ್ಞಾಯಮರ್ತ್ಯಪದ
ವೀಮನುವರ್ತಮಾನಃಸ್ಥಿತ್ವಾಮುಹೂರ್ತಮುದತಿಷ್ಠದುರಂಗಬಂಧಾತ್॥೨೩॥ ತತ್ಪ್ರಥ್ಯಮಾನವಪುಷಾ

---

ಸ್ಮ, ಸ್ಮಿತ-ಕಿರುನಗೆಯಿಂಕೂಡಿದ, ವಿಲೋಕ-ನೋಟಗಳನ್ನೂ, ಗಿರಃ-ಮಾತುಗಳನ್ನೂ, ಸ್ಮರಂತ್ಯಃ- ನೆನಪುಗೊಳ್ಳುತ್ತಿರುವರಾಗಿ, ಪ್ರಿಯತಮೇ-ಅತ್ಯಂತವಲ್ಲಭನಾದಕೃಷ್ಣನು, ಅಹಿನಾ-ಸರ್ಪದಿಂದ, ಗ್ರಸ್ತೇಸತಿ-ಹಿಡಿಯಲ್ಪಟ್ಟವನಾಗಿರಲು, ಭೃಶದುಃಖತಪ್ತಾಃ-ಹೆಚ್ಚುದುಃಖದಿಂದಬೆಂದವರಾಗಿ, ಪ್ರಿಯವ್ಯತಿಹೃತಂ-ಪ್ರಿಯನಾದಕೃಷ್ಣನಿಂದಬಿಡಲ್ಪಟ್ಟಿರುವ, ತ್ರಿಲೋಕಂ-ಮೂರುಲೋಕವನ್ನೂ, ಶೂನ್ಯಂ-ಏನೂಇಲ್ಲದ್ದನ್ನಾಗಿ, (ವ್ಯರ್ಥವನ್ನಾಗಿ)ದದೃಶುಃ-ಕಂಡರು ॥೨೦॥ತಾಃ-ಆಗೊಲ್ಲತಿಯರು, ಅಪತ್ಯಮನು-ಮಗನನ್ನನುಸರಿಸಿ, ಪ್ರತಪ್ತಾಂ-ಬೇಯುತಲಿರುವ, ಕೃಷ್ಣಮಾತರಂ-ಕೃಷ್ಣನತಾಯಿಯಾದಯಶೋದೆಯನ್ನು, ಸಮಧಿಗಮ್ಯ-ಸೇರಿ, ತುಲ್ಯವ್ಯಥಾಃ-ಸಮಾನದುಃಖವುಳ್ಳವರಾಗಿ, ಶುಚಃ-ಅಳುವಿನಕಂಣೀರುಗಳನ್ನು, ಸ್ರವಂತ್ಯಃ-ಸೋರಿಸುತಲಿರುವರಾಗಿ, ತ್ರಸ್ತಾಃ- ಹೆದರಿದವರಾಗಿಯೂ, ವ್ರಜಪ್ರಿಯಕಥಾಃ-ಗೋಕುಲಕ್ಕೆಪ್ರಿಯನಾದಕೃಷ್ಣನಕಥೆಗಳನ್ನು, ಕಥಯಂತ್ಯಃ-ಬಣ್ಣಿಸುತಲಿರುವರಾಗಿಯೂ, ಕೃಷ್ಣಾನನೇ-ಕೃಷ್ಣನಮುಖದಲ್ಲಿ, ಅರ್ಪಿತದೃಶಃ-ಇರಿಸಲ್ಪಟ್ಟದೃಷ್ಟಿಯುಳ್ಳವರೂ, ಮೃತಕಪ್ರತೀಕಾಃ-ಹೆಣಗಳಿಗೆಸಮಾನರೂ, ಆಸನ್-ಆದರು ॥೨೧॥ ಕೃಷ್ಣಪ್ರಾಣಾನ್-ಕೃಷ್ಣನೇಪ್ರಾಣವಾಗಿವುಳ್ಳವರಾದ್ದರಿಂದಲೇ, ತದ್ಧ್ರದಂ-ಆಮಡುವನ್ನು, ನಿವಿಶತಃ-ಪ್ರವೇಶಿಸತೊಡಗುತಲಿರುವ, ನಂದಾದೀನ್-ನಂದನುಮೊದಲಾದವರನ್ನು, ವೀಕ್ಷ್ಯ-ನೋಡಿ, ಭಗವಾನ್-ಷಡ್ಗುಣೈಶ್ವರ್ಯಮುಳ್ಳ, ರಾಮಃ-ಬಲಭದ್ರನು, ಕೃಷ್ಣಾನುಭಾವವಿತ್-ಕೃಷ್ಣ-ಕೃಷ್ಣನ, ಅನುಭಾವ-ಸಾಮರ್ಥ್ಯವನ್ನು, ವಿತ್-ಬಲ್ಲವನಾದ್ದರಿಂದಲೇ, ಪ್ರತ್ಯಷೇಧತ್-ಬೇಡಬೇಡಿರೆಂದುತಡೆದನು ॥೨೨॥ ಸಸ್ತ್ರೀಕುಮಾರಂ-ಹೆಂಗಳಿಂದಲೂ ಮಕ್ಕಳಿಂದಲೂಸಹಿತವಾದ, ಸ್ವಗೋಕುಲಂ-ತನ್ನವ್ರಜವನ್ನು, ಇತ್ಥಂ-ಹೀಗೆ, ಅನನ್ಯಗತಿಂ-ತಾನುಹೊರತುಬೇರೆದಿಕ್ಕಿಲ್ಲದಿರುವದನ್ನಾಗಿ, ನಿರೀಕ್ಷ್ಯ-ನೋಡಿ, ಆತ್ಮಹೇತೋಃ-ತನ್ನನಿಮಿತ್ತದಿಂದ, ಅತಿದುಃಖಿತಂ-ಬಹಳಕಷ್ಟವುಂಟಾದದ್ದನ್ನಾಗಿಯೂ, ಆಜ್ಞಾಯ-ತಿಳಿದು, ಮುಹೂರ್ತಂ-ತಾಸುಹೊತ್ತು, ಮರ್ತ್ಯಪದವೀಂ-ಮನುಷ್ಯರದಾರಿಯನ್ನು, ಅನುವರ್ತಮಾನಃ-ಅನುಸರಿಸುವವನಾಗಿ, ಸ್ಥಿತ್ವಾ-ಮಿಸುಕದೇಯಿದ್ದು, ಉರಂಗಬಂಧಾತ್-ಹಾವಿನಕಟ್ಟಿನಿಂದಲೇಯಿಂದ, ಉದತಿಷ್ಠತ್-ತಪ್ಪಿಸಿಕೊಂಡೆದ್ದನು ॥೨೩॥ತತ್ಪ್ರಥ್ಯಮಾನವಪುಷಾ-ತತ್-ಆಕೃಷ್ಣನ, ಪ್ರಥ್ಯಮಾನ- ಹೆಚ್ಚುಬೆಳೆಯುತಲಿರುವ, ವಪುಷಾ-

---

ತಪ್ತರಾಗಿ ಪ್ರಿಯನಾದಕೃಷ್ಣಮೂರ್ತಿಯಿಂದ ರಹಿತವಾದ ಲೋಕತ್ರಯವನ್ನು ಶೂನ್ಯವನ್ನಾಗಿಕಂಡರು ॥೨೦॥ಮತ್ತು ಆಗೋಪಿಯರು ತನ್ನಪುತ್ರನಾದ ಕೃಷ್ಣನಂಕುರಿತು ಸಂತಾಪವನೆಯ್ದಿರುವ ಯಶೋದೆಯ ಸಮೀಪವನೆಯ್ದಿ ತಾವೂ ಆಯಶೋದೆಯೊಡನೆ ಸಮಾನವಾದವ್ಯಸನವುಳ್ಳವರಾಗಿ, ಕಂಬನಿಗಳಂ ಸುರಿಸುವರಾಗಿ, ಗೋಕುಲಕ್ಕೆ ಪ್ರಿಯನಾದ ಕೃಷ್ಣನ ಆಯಾದಿವ್ಯಚರಿತ್ರಗಳನ್ನು ವರ್ಣಿಸುತ ಶ್ರೀಕೃಷ್ಣಮುಖಾರವಿಂದದಲ್ಲಿಯೇ ಅರ್ಪಿಸಲ್ಪಟ್ಟಕಂಗಳುಳ್ಳವರಾಗಿ, ಮೃತಪ್ರಾಯರಾಗಿ, ಇದ್ದರು. ॥೨೧॥ ಭಗವಂತನಾದ ಬಲರಾಮನು ಶ್ರೀಕೃಷ್ಣನ ಮಹಿಮೆಯಂ ಬಲ್ಲವನಾದುದರಿಂದ ಕೃಷ್ಣನೇ ಪ್ರಾಣವಾಗಿ ಉಳ್ಳವರಾದುದರಿಂದ ದುಃಖದೊಡನೆ ಯಮುನಾನದಿಯಂ ಪ್ರವೇಶಂಗೆಯ್ವ ನಂದಾದಿಗಳಂ ಕಂಡು ಆಮಡುವಂಪ್ರವೇಶಂಗೆಯ್ಯದಂತೆ ಅವರಂ ಅಡ್ಡಗೆಯ್ದನು.॥೨೨॥ ಆಗ ಕೃಷ್ಣನು ತನ್ನನಿಮಿತ್ತವಾಗಿ ಈರೀತಿಯಿಂದ ಸ್ತ್ರೀಬಾಲವೃದ್ಧರು ಮೊದಲಾದ ಅತಿದುಃಖವನೆಯ್ದಿರುವ ಗೋಕುಲದ ಜನರಂ ನೋಡಿ, ಅವರಂ ತನ್ನಂಹೊರತು ಮತ್ತೊಂದು ಗತಿಯಿಲ್ಲದವರನ್ನಾಗಿಯೂ ತಿಳಿದು, ಒಂದುಮುಹೂರ್ತಮಾತ್ರವು ಮನುಷ್ಯಭಾವವು ನಟಿಸುತ ಸರ್ಪಬಂಧನದಲ್ಲಿ ತಗುಲಿಕೊಂಡಿರ್ದವನಾಗಿ ಆಮೇಲೆ ಹಾವಿನಕಟ್ಟಂಬಿಡಿಸಿ ಕೊಂಡು ಎದ್ದನು. ॥೨೩॥ ಆಗ ಹೆಚ್ಚುತಿರುವ ಕೃಷ್ಣನ ದೇಹದಿಂಪೀಡಿಸುತಲಿರುವ ದೇಹವುಳ್ಳ ಆಕಾಳಿಯಸರ್ಪವು ಮಂಡಲಾಕೃತಿಯಾಗಿರುವ ತನ್ನದೇಹವ ಬಿಚ್ಚಿಕೊಂಡು ಬಹಳಸಿಟ್ಟಿನಿಂದ ಕೂಡಿದುದಾಗಿ, ಹೆಡೆಗಳನೆತ್ತಿಕೊಂಡು ನಿಟ್ಟು

ವ್ಯಥಿತಾತ್ಮಭೋಗಸ್ತ್ಯಕ್ತ್ವೋನ್ನಮಯ್ಯ ಕುಪಿತಃ ಸ್ವಫಣಾನ್ ಭುಜಂಗಃ । ತಸ್ಥೌ ಶ್ವಸನ್ ಶ್ವಸನರಂಧ್ರವಿಷಾಂಬರೀಷಸ್ತಬ್ಧೇಕ್ಷಣೋಲ್ಮುಕಮುಖೋ ಹರಿಮೀಕ್ಷಮಾಣಃ॥೨೪॥ ತಂ ಜಿಹ್ವಯಾ ದ್ವಿಶಿಖಯಾ ಪರಿಲೇಲಿಹಾನಂ ದ್ವೇ ಸೃಕ್ವಿಣೀ ಹ್ಯತಿಕರಾಳವಿಷಾಗ್ನಿದೃಷ್ಟಿಮ್। ಕ್ರೀಡನ್ನಮುಂ ಪರಿಸಸಾರ ಯಥಾ ಖಗೇಂದ್ರೋ ಬಭ್ರಾಮ ಸೋಪ್ಯವಸರಂ ಪ್ರಸಮೀಕ್ಷಮಾಣಃ ॥೨೫॥ ಏವಂ ಪರಿಭ್ರಮಹತೌಜಸಮುನ್ನತಾಂಸಮಾನಮ್ಯ ತತ್ಪೃಥುಶಿರಸ್ಸ್ವಧಿರೂಢ ಆದ್ಯಃ । ತನ್ಮೂರ್ಧರತ್ನನಿಕರಸ್ಪರ್ಶಾತಿತಾಮ್ರಪಾದಾಂಬುಜೋಖಿಲಕಳಾದಿಗುರುರ್ನನರ್ತ॥

---

ವೆಸ್ಟಿಯಿಂದ, ವ್ಯಥಿತಾತ್ಮಭೋಗಃ-ವ್ಯಥಿತ-ಪೀಡಿಸಲ್ಪಟ್ಟ, ಆತ್ಮಭೋಗಃ-ತನ್ನ ಮೈಯುಳ್ಳವನಾದ್ದರಿಂದಲೇ, ತ್ಯಕ್ತ್ವಾ- ಕೃಷ್ಣನನ್ನು ಬಿಟ್ಟು, ಕುಪಿತಃ-ಸಿಟ್ಟುಗೊಂಡ, ಭುಜಂಗಃ-ಸರ್ಪವು, ಸ್ವಫಣಾನ್-ತನ್ನ ಹೆಡೆಗಳನ್ನು, ಉನ್ನಮಯ್ಯ-ಎತ್ತಿಕೊಂಡು, ಶ್ವಸನ ...... ಮುಖಃ-ಶ್ವಸನರಂಧ್ರ- ಉಸುರುತೂತುಗಳು, ಮೂಗಿನಹೊಳ್ಳೆಗಳೆಂಬ, ವಿಷಾಂಬರೀಷ- ವಿಷವಬಾಣಲೆಗಳೂ, ಸ್ತಬ್ಧೇಕ್ಷಣೋಲ್ಮುಕ-ಸ್ತಬ್ಧೇಕ್ಷಣ-ಕದಲದೆನಿಂತಿರುವಕಂಗಳೆಂಬ, ಉಲ್ಮುಕ-ಕೊಳ್ಳಿಗಳೂಉಳ್ಳ, ಮುಖಃ- ಮೋರೆಗಳೂಉಳ್ಳವನಾಗಿ, ಹರಿಂ-ಕೃಷ್ಣನನ್ನು, ಈಕ್ಷಮಾಣಃ-ನೋಡುತಲಿರುವನಾಗಿಯೇ, ತಸ್ಥೌ-ನಿಂತನು ॥೨೪॥ ದ್ವಿಶಿಖಯಾ-ಎರಡುಕೊನೆಗಳುಳ್ಳ, ಜಿಹ್ವಯಾ- ನಾಲಿಗೆಯಿಂದ, ದ್ವೇಸೃಕ್ವಿಣೀ-ಎರಡುಕಟವಾಯಿಗಳನ್ನೂ, ಪರಿಲೇಲಿಹಾನಂ-ಸುತ್ತಲೂನೆಕ್ಕಿಕೊಳ್ಳುತಲಿರುವಂತಾ, ಅತಿಕರಾಳವಿಷಾಗ್ನಿದೃಷ್ಟಿಂ-ಅತಿಕರಾಳ-ಬಹುಕ್ರೂರವಾದ, ವಿಷಾಗ್ನಿ-ವಿಷವೆಂಬಬೆಂಕಿಯುಳ್ಳ, ದೃಷ್ಟಿಂ-ಕಂಣುಳ್ಳ, ತಂ ಅಮುಂ- ಆಯಾಸರ್ಪವನ್ನು, ಖಗೇಂದ್ರೋಯಥಾ-ಗರಡನುಹೇಗೋಹಾಗೆ, ಕ್ರೀಡನ್-ಆಡುತಲಿರುವಕೃಷ್ಣನು, ಪರಿಸಸಾರ-ಸುತ್ತಲೂತಿರುಗಿದನು. ಸೋಪಿ-ಆಸರ್ಪವೂಕೂಡ, ಅವಸರಂ-ಕಚ್ಚುವದಕ್ಕೆಸಮಯವನ್ನು, ಪ್ರಸಮೀಕ್ಷಮಾಣಃ-ಚನ್ನಾಗಿನಿರೀಕ್ಷಿಸುತಲಿರುವನಾಗಿ, ಬಭ್ರಾಮ-ತಿರುಗಿದನು ॥೨೫॥ ಏವಂ-ಹೀಗೆ, ಪರಿಭ್ರಮಹತೌಜಸಂ-ಪರಿಭ್ರಮ-ಸುತ್ತಾಡುವುದರಿಂದ, ಹತ-ಭಗ್ನವಾದ, ಓಜಸಂ-ಶಕ್ತಿಯುಳ್ಳ, ಉನ್ನತಾಂಸಂ-ಎತ್ತಿದಹೆಡೆಯುಳ್ಳ, ಕಾಳಿಯನನ್ನು, ಆನಮ್ಯ-ಬಗ್ಗಿಸಿಕೊಂಡು, ತತ್ಪೃಥುಶಿರಸ್ಸು-ತತ್-ಅವನ, ಪೃಥು-ದೊಡ್ಡ, ಶಿರಸ್ಸು-ತಲೆಗಳಲ್ಲಿ, ಅಧಿರೂಢಃ-ಏರಿದ, ಆದ್ಯಃ-ಪುರಾಣಪುರುಷನಾದ, ತನ್ಮೂ. . ಬುಜಃ- ತತ್-ಆಸರ್ಪದ, ಮೂರ್ಧ-ತಲೆಗಳಲ್ಲಿರುವ, ರತ್ನ-ಮಣಿಗಳ, ನಿಕರ-ಗುಂಪಿನ, ಸ್ಪರ್ಶ-ಸೋಂಕುವಿಕೆಯಿಂದ, ಅತಿತಾಮ್ರ-ಬಹಳಕೆಂಪಾದ, ಪಾದಾಂಬುಜಃ-ಅಡಿದಾವರೆಗಳುಳ್ಳ, ಅಖಿಲಕಳಾದಿಗುರುಃ-ಅಖಿಲ-ಸಮಸ್ತಗಳಾದ, ಕಳಾ-ಕುಶಲವಿದ್ಯೆಗಳಿಗೆ, ಆದಿಗುರುಃ-ಪ್ರಥಮೋಪದೇಶಕನಾದಕೃಷ್ಣನು, ನನರ್ತ-ಕುಣಿದನು ॥೨೬॥ ತದಾ-ಆಗ, ನರ್ತುಂ-ಕುಣಿಯುವದಕ್ಕೆ, ಉದ್ಯತಂ-ಉದ್ಯೋಗಿಸುತಲಿರುವ, ತಂ-ಆಕೃಷ್ಣನನ್ನು, ಅವೇಕ್ಷ್ಯ-ಕಂಡು, ತದೀಯಾಃ-ಆವಿಷ್ಣುಸಂಬಂಧಿಗಳಾದ, ಗಂಧರ್ವಸಿದ್ಧಮುನಿಚಾರಣದೇವವಧ್ವಃ-ಗಂಧರ್ವ-ದೇವಗಾಯಕರು, ಸಿದ್ಧ

---

ಸುರಂಬಿಡುತ ಮೂಗಿನಹೊಳ್ಳೆಗಳಲ್ಲಿ ವಿಷದಿಂಕೂಡಿದುದಾಗಿ, ಹುರಿಯುವ ಓಡಿನಂತೆ ಬಹಳಬಿಸಿಯಾಗಿಯೂ ಇರುವ ಕಂಗಳುಳ್ಳದುದಾಗಿ, ಕೃಷ್ಣನಂ ಸುಮ್ಮನೆ ನೋಡುತನಿಂತುದಾಯಿತು. ॥೨೪॥ ಆಸಮಯದಲ್ಲಿ ಶ್ರೀಕೃಷ್ಣನು-ಒಂದೊಂದುಮುಖದಲ್ಲಿಯೂ ಎರಡೆರಡು ಕೊನೆಗಳುಳ್ಳನಾಲಿಗೆಗಳಿಂದ ಎರಡುಕಟವಾಯಿಗಳಂ ಸವರಿಸಿಕೊಳುತಲಿರುವ, ಮತ್ತು ಅತಿಭಯಂಕರವಾದ ವಿಷಾಗ್ನಿಯೊಡನೆ ಕೂಡಿದ ದೃಷ್ಟಿಯುಳ್ಳ, ಆಕಾಳಿಯಸರ್ಪವಂ; ಹಿಡಿಯಲೋಸುಗ ಗರುಡನಂತೆ ಕ್ರೀಡಿಸುತ ತಿರುಗುತಲಿರ್ದನು. ಆಸರ್ಪವೂ ಪುನಶ್ಚ ಕೃಷ್ಣನಂ ಹಿಡಿಯಲೋಸುಗ ಸಂದರ್ಭವಂ ನಿರೀಕ್ಷಿಸುತತಿರುಗುತಲಿರ್ದುದು.॥೨೫॥ ಆಮೇಲೆಆದಿಪುರುಷನಾದ ಕೃಷ್ಣನು ಹೀಗೆಸುತ್ತಲೂ ತಿರುಗುವುದರಿಂದ ನಷ್ಟವಾದ ಬಲವುಳ್ಳ ಮತ್ತು ಉನ್ನತಗಳಾದ ಹೆಗಲುಗಳುಳ್ಳ ಆಸರ್ಪವಂ ಬಗ್ಗಿಸಿ, ಅದರವಿಸ್ತಾರವಾದ ತಲೆಯನೇರಿ, ಸಮಸ್ತವಿದ್ಯೆಗಳಿಗೂ ಆದಿಗುರುವಾದುದರಿಂದ ಆಹೆಡೆಗಳಲ್ಲಿರುವ ದಿವ್ಯರತ್ನಸಮೂಹಗಳ ಸಂಪರ್ಕದಿಂದ ಬಹಳ ಕೆಂಪಾದ ಅಡಿದಾವರೆಗಳುಳ್ಳವನಾಗಿ ನರ್ತನಂಗೆಯ್ದನು.॥೨೬॥ ಆಗ ಆ ಸರ್ಪದತಲೆಯ ಮೇಲೆ ಕುಣಿ



‖೨೬‖ತಂನರ್ತುಮುದ್ಯತಮವೇಕ್ಷ್ಯತದಾತದೀಯಾಗಂಧರ್ವಸಿದ್ಧಮುನಿಚಾರಣದೇವವಧ್ವಃ।ಪ್ರೀತ್ಯಾಮೃದಂಗಪಣವಾನಕವಾದ್ಯಗೀತಪುಷ್ಪೋಪಹಾರನುತಿಭಿಸ್ಸಹಸೋಪಸೇದುಃ‖೨೭‖ಯದ್ಯಚ್ಛಿರೋನನಮತೇಂಗಶತೈಕಶೀರ್ಷ್ಣಸ್ತತ್ತನ್ಮಮರ್ದಖಲದಂಡಧರೋಂಘ್ರಿಪಾತೈಃ।ಕ್ಷೀಣಾಯುಷೋಭ್ರಮತಉಲ್ಬಣಮಾಸ್ಯತೋಸೃಙ್ನಸ್ತೋವಮನ್ಪರಮಕಶ್ಮಲಮಾಪನಾಗಃ‖೨೮‖ತಸ್ಯಾಕ್ಷಿಭಿರ್ಗರಳಮುದ್ವಮತಶ್ಶಿರಸ್ಸುಯದ್ಯತ್ಸಮುನ್ನಮತಿನಿಶ್ವಸತೋರುಷೋಚ್ಚೈಃ।ನೃತ್ಯತ್ಪದಾನುನಮಯರ್ದಮಯಾಂಬಭೂವಪುಷ್ಪೈಃಸ್ಸುಪೂಜಿತಇವೆಹಪುನಃಪುರಾಣಃ‖೨೯‖ತಚ್ಚಿತ್ರತಾಂಡವನಿರುಗ್ಣಫಣಾಸಹಸ್ರೋರಕ್ತಂಮುಖೈರುರುವಮನ್ನೃಪಭಗ್ನಗಾ

---

ವಿದ್ಯಾಸಿದ್ಧಿಯುಳ್ಳವರ, ಮುನಿ-ಜ್ಞಾನಿಗಳ, ಚಾರಣ-ಕೀರ್ತಿಪ್ರಚಾರಕರ, ದೇವ- ಇಷ್ಟುಬಗೆಯಾದದೇವತೆಗಳ, ವಧ್ವಃ-ಹೆಂಗಳು, ಪ್ರೀತ್ಯಾ-ಸ್ನೇಹದಿಂದ, ಮೃದಂಗ.....ನುತಿಭಿಃ-ಮೃದಂಗ-ಮದ್ದಳೆ, ಪಣವ-ಡೋಲು, ಆನಕ-ತಮಟೆ, ವಾದ್ಯ-ಹಲವುಬಗೆಯಶಬ್ದಸಾಧನಗಳು, ಗೀತ-ಹಾಡು, ಪುಷ್ಪ-ಹೂವು, ಉಪಹಾರ-ಕಾಣಿಕೆ, ನುತಿಭಿಃ-ಸ್ತೋತ್ರಗಳಿಂದ, ಕೂಡಿ, ಸಹಸಾ-ಬೇಗನೆ, ಉಪಸೇದುಃ-ಸೇವಿಸಿದರು ‖೨೭‖ ಅಂಗ-ಅಯ್ಯಾ! ಖಲದಂಡಧರಃ-ಖಲ-ದುಷ್ಟರಿಗೆ, ದಂಡಧರಃ-ಯಮನಾಗಿರುವಕೃಷ್ಣನು, ಶತೈಕಶೀರ್ಷ್ಣಃ-ಶತ-ನೂರಾದ, ಏಕ-ಮುಖ್ಯವಾದ, ಶೀರ್ಷ್ಣಃ-ತಲೆಗಳುಳ್ಳಸರ್ಪನ, ಯದ್ಯಚ್ಛಿರಃ-ಯಾವಯಾವತಲೆಯು, ನನಮತೇ- ಬೊಗ್ಗುವುದಿಲ್ಲವೋ, ತತ್ತತ್-ಆಯಾತಲೆಯನ್ನು, ಅಂಘ್ರಿಪಾತೈಃ-ಕಾಲುಗಳತುಳಿದಾಟಗಳಿಂದ, ಮಮರ್ದ-ಕುಟ್ಟಿದನು, ಕ್ಷೀಣಾಯುಷಃ- ಕೊರತೆಗೊಂಡಆಯುಷ್ಯವುಳ್ಳ, ಭ್ರಮತಃ-ಭ್ರಾಂತಿಯನ್ನುಪಡೆದಸರ್ಪದ, ಆಸ್ಯತಃ-ಮುಖದದೆಸೆಯಿಂದ, ಉಲ್ಬಣಂ-ಉಕ್ಕಿಬಂದ, ಅಸೃಕ್-ರಕ್ತವನ್ನು, ನಸ್ತಃ-ಮೂಗಿನದೆಸೆಯಿಂದ, ವಮನ್-ಕಾರುತಲಿರುವ, ನಾಗಃ-ಸರ್ಪನು, ಪರಮಕಶ್ಮಲಂ-ಹೆಚ್ಚುಮೋಹವನ್ನು, ಆಪ-ಹೊಂದಿದನು‖೨೮‖ಅಕ್ಷಿಭಿಃ-ಕಂಣುಗಳಿಂದ, ಗರಳಂ-ವಿಷವನ್ನು, ಉದ್ವಮತಃ-ಕಕ್ಕುತಲಿರುವ, ನಿಶ್ವಸತಃ-ನಿಟ್ಟುಸುರಿಕ್ಕುತಲಿರುವ, ತಸ್ಯ-ಆಸರ್ಪದ; ಶಿರಸ್ಸು-ತಲೆಗಳಲ್ಲಿ, ಯದ್ಯತ್-ಯಾವುದುಯಾವುದು, ಉಚ್ಚೈಃ-ರುಷಾ-ಹೆಚ್ಚುಸಿಟ್ಟಿನಿಂದ, ಸಮುನ್ನಮತಿ- ಏಳುತಲಿರುವುದೋ, ತತ್ತತ್-ಅದರದರನ್ನು, ನೃತ್ಯತ್ಪದಾ-ಕುಣಿಯುತಲಿರುವಪಾದದಿಂದ, ಅನುನಮಯನ್-ಬಗ್ಗಿಸುತಲಿರುವನಾಗಿ, ಇಹ-ಈಸಮಯದಲ್ಲಿ, ಪುನಃ-ಮರಳಿಯೂ, ಪುಷ್ಪೈಃ-ಗಂಧರ್ವಾದಿಗಳುಸುರಿಸಿದಹೂವಿನಮಳೆಯಿಂದ, ಸುಪೂಜಿತಃ-ಚೆನ್ನಾಗಿಪೂಜಿಸಲ್ಪಟ್ಟ, ಕೃಷ್ಣನು, ಪುರಾಣಇವ-ಶೇಷಾಸನನಾದವಿಷ್ಣುವಿನಹಾಗೆ, ದಮಯಾಂಬಭೂವ-ಶಿಕ್ಷಿಸಿದನು ‖೨೯‖ ತಚ್ಚಿತ್ರ..... ಸಹಸ್ರಃ-ತತ್-ಆಕೃಷ್ಣನ, ಚಿತ್ರ-ಆಶ್ಚರ್ಯಕರವಾದ, ತಾಂಡವ-ಕುಣಿದಾಟದಿಂದ, ನಿರುಗ್ಣ-ಬಹಳರೋಗಯುಕ್ತವಾದ, ಫಣಾಸಹ

---

ಯಲೊತ್ತಡಗಿದ ಆಕೃಷ್ಣನಂನೋಡಿ, ಕೃಷ್ಣಭಕ್ತರಾದ ಗಂಧರ್ವರು ಸಿದ್ಧರು ದೇವತೆಗಳು ಚಾರಣರು ಅಪ್ಸರಸಿಯರುಕೂಡ ತ್ವರೆಯಿಂಬಂದು ಅತಿಪ್ರೀತಿಯಿಂ ಮೃದಂಗ ಪಣವ ಆನಕ ಮೊದಲಾದ ವಾದ್ಯಗಳಿಂದಲೂ ಗೀತಗಳಿಂದಲೂ ಪುಷ್ಪಾಂಜಲಿಗಳಿಂದಲೂ ಸ್ತುತಿಗಳಿಂದಲೂ ಆಕೃಷ್ಣನಂ ಸೇವಿಸುವಂತವರಾದರು. ‖೨೭‖ ಎಲೈ, ಅರಸೇ! ಕೇಳು. ಆಗ ನೂರುದೊಡ್ಡ ತಲೆಗಳುಳ್ಳ ಮತ್ತು ಕ್ಷೀಣವಾದ ಬಲವುಳ್ಳುದುದಾದರೂ ಅಲ್ಲಲ್ಲಿ ಸುತ್ತುತಲಿರುವ ಆಕಾಳಿಯನ ನೂರುತಲೆಗಳಲ್ಲಿ ಯಾವ ಯಾವ ತಲೆಗಳು ಬಗ್ಗದೆ ಕಂಭದಂತೆನಿಂತಿರ್ದವೋ ಆಯಾ ತಲೆಗಳನ್ನು ದುಷ್ಟರಂ ಶಿಕ್ಷಿಸುವ ಶ್ರೀಕೃಷ್ಣನು ಕುಣಿಯುವನೆವದಿಂ ಕಾಲುಗಳತುಳಿತಗಳಿಂದ ಮರ್ದಿಸಿದನು. ಆಗ ಮಹಾಸರ್ಪವು ಪಾದಘಟ್ಟನಗಳಂ ಸೈರಿಸಲಾರದೆ ಬಾಯಿಂದಲೂ ಮೂಗಿನತೂತುಗಳಿಂದಲೂ ಹೆಚ್ಚಾಗಿ ರಕ್ತವಂಕಾರುತ ಬಹಳಮೂರ್ಛೆಯಂಹೊಂದಿತು. ‖೨೮‖ ಮತ್ತು ಕಂಣುಗಳಿಂದಲೂ ವಿಷವಂಕಾರುತಲಿರುವ, ಪುನಃ ಕೋಪದಿಂ ಗಟ್ಟಿಯಾಗಿ ನಿಟ್ಟುಸುರಂಬಿಡುತಲಿರುವ, ಆಕಾಳಿಯಸರ್ಪದ ನೂರುತಲೆಗಳಲ್ಲಿ ಯಾವಯಾವ ತಲೆಯು ಬಗ್ಗದೆ ಸ್ತಬ್ಧವಾಗಿರುವುದೋ ಆಯಾ ತಲೆಯಂ ಕೃಷ್ಣನುಕುಣಿಯುತ ತನ್ನಪಾದಘಾತದಿಂದ ಬಗ್ಗಿಸುತಲಿರುವವನಾಗಿ ಮಥಿಸಿದನು. ಆಕಾಲದಲ್ಲಿ ಸಂತುಷ್ಟರಾದ ಗಂಧರ್ವಾದಿಗಳಿಂದ ಶೇಷನಹಾಸಿಗೆಯಲ್ಲಿರುವ ಆದಿನಾರಾಯಣನಂತೆ ಯಶೋದಾಪುತ್ರನಾದಕೃಷ್ಣನು ದಿವ್ಯಪುಷ್ಪಗಳಿಂದ ಪೂಜಿಸಲ್ಪಟ್ಟನು ‖೨೯‖ ಎಲೈ, ಅರಸೇ! ಆಕೃ

ತ್ರಃ ‖ ಸ್ಮೃತ್ವಾಚರಾಚರಗುರುಂಪುರುಷಂಪುರಾಣಂನಾರಾಯಣಂತಮರಣಂಮನಸಾಜಗಾಮ ‖೩೦‖ ಕೃಷ್ಣಸ್ಯಗರ್ಭಜಗತೋತಿಭರಾವಸನ್ನಂಪಾರ್ಷ್ಣಿಪ್ರಹಾರಪರಿರುಗ್ಣಫಣಾತಪತ್ರಮ್ । ದೃಷ್ಟ್ವಾಹಿಮಾದ್ಯಮುಪಸೇದುರಮುಷ್ಯಪತ್ನ್ಯಆರ್ತಾಃಶ್ಲಥದ್ವಸನಭೂಷಣಕೇಶಬಂಧಾಃ ‖೩೧‖ ತಾಸ್ತಂಸುವಿಗ್ನಮನಸೋಥಪುರಸ್ಕೃತಾರ್ಭಾಃಕಾಯಾನ್ನಿಪಾತ್ಯಭುವಿಭೂತಪತಿಂಪ್ರಣೇಮುಃ । ಸಾಧ್ವ್ಯಃಕೃತಾಂಜಲಿಪುಟಾಶ್ಶಮಲ

‖ ಕಾಳೀಯಪತ್ನೀಕೃತಶ್ರೀಕೃಷ್ಣಸ್ತುತಿಃ ‖

ಸ್ಯಭರ್ತುರ್ಮೋಕ್ಷೇಪ್ಸವಶ್ಶರಣದಂಶರಣಂಪ್ರಪನ್ನಾಃ ‖೩೨‖ ನಾಗಪತ್ನ್ಯಃ ‖ ನ್ಯಾಯ್ಯೋಹಿದಂಡಃಕೃತಕಿಲ್ಬಿ

---

ಸ್ಫ್ರಃ-ಹಲವುಹೆಡೆಗಳುಳ್ಳ, ಮುಖ್ಯೈಃ-ಮೋರೆಗಳಿಂದ, ಉರು-ಅಧಿಕವಾದ, ರಕ್ತಂ-ರಕುತವನ್ನು, ವಮರ್-ಕಾರುತಲಿರುವನೂ, ಭಗ್ನಗಾತ್ರಃ-ಮುರಿದಮೈಯುಳ್ಳವನೂ, ಆದಕಾಳಿಯಸರ್ಪನು, ತಂ-ಆಕೃಷ್ಣನನ್ನು, ಚರಾಚರಗುರುಂ-ಚರಾಚರ- ಜಂಗಮಸ್ಥಾವರಪ್ರಪಂಚಕ್ಕಿಂತಲೂ, ಗುರುಂ-ದೊಡ್ಡವನಾದ, ಪುರಾಣಪುರುಷಂ-ಆದಿಪುರುಷನಾದ, ನಾರಾಯಣಂ-ವಿಷ್ಣುವನ್ನಾಗಿ, ಸ್ಮೃತ್ವಾ-ನೆನಪುಗೊಂಡು (ಭಾವಿಸಿ)ಮನಸಾ-ಮನಸ್ಸಿನಿಂದ, ಅರಣಂಜಗಾಮ-ಶರಣುಹೊಂದಿದನು‖೩೦‖ಗರ್ಭಜಗತಃ-ಬಸುರಲ್ಲಿಜಗತ್ತುಗಳುಳ್ಳ, ಕೃಷ್ಣಸ್ಯ-ಕೃಷ್ಣನ, ಅತಿಭರಾವಸನ್ನಂ-ಅತಿಭರ-ಹೆಚ್ಚುಭಾರದಿಂದ, ಅವಸನ್ನಂ-ಆಕ್ರಮಿಸಲ್ಪಟ್ಟವನೂ, ಪಾರ್ಷ್ಣಿಪ್ರಹಾರಪರಿರುಗ್ಣಫಣಾತಪತ್ರಂ-ಪಾರ್ಷ್ಣಿ-ಹಿಮ್ಮಡಿಗಳ, ಪ್ರಹಾರ-ತುಳಿತಗಳಿಂದ, ಪರಿರುಗ್ಣ-ಸರ್ವತ್ರರೋಗಯುಕ್ತವಾದ, ಫಣಾತಪತ್ರಂ-ಕೊಡೆಗಳಹಾಗಿರುವಹೆಡೆಗಳುಳ್ಳ. ಅಹಿಂ-ಸರ್ಪವನ್ನು, ದೃಷ್ಟ್ವಾ-ನೋಡಿ, ಅಮುಷ್ಯ-ಈಕಾಳಿಯನ, ಪತ್ನ್ಯಃ-ಹೆಂಡತಿಯರು, ಆರ್ತಾಃ-ಪೀಡಿತರಾಗಿಯೂ, ಶ್ಲಥದ್ವಸನಭೂಷಣಕೇಶಬಂಧಾಃ-ಶ್ಲಥತ್-ಕಳಚಿಹೋಗುತಲಿರುವ, (ಜಾರುತಲಿರುವ)ವಸನ-ವಸ್ತ್ರವೂ, ಭೂಷಣ-ಆಭರಣವೂ, ಕೇಶಬಂಧಾಃ-ತುರುಬೂವುಳ್ಳವರಾಗಿ, ಆದ್ಯಂ-ಪುರಾಣಪುರುಷನನ್ನು, ಉಪಸೇದುಃ-ಸಮೀಪಿಸಿನಿಂತರು‖೩೧‖ ಅಥ-ಆಮೇಲೆ, ಸುವಿಗ್ನಮನಸಃ-ಸುವಿಗ್ನ, ಕಲುಷವಾದ, ಮನಸಃ-ಮನಸ್ಸುಳ್ಳ, ತಾಃ-ಆನಾಗಪತ್ನಿಯರು, ಪುರಸ್ಕೃತಾರ್ಭಾಃ-ಮುಂದಿಟ್ಟುಕೊಂಡಮಕ್ಕಳುಳ್ಳವರಾಗಿ, ಕೃತಾಂಜಲಿಪುಟಾಃ-ಮಾಡಲ್ಪಟ್ಟಬಗಸೆಯುಳ್ಳವರಾಗಿ, ಸಾಧ್ವ್ಯಃ- ಪತಿವ್ರತೆಯರಾದ್ದರಿಂದಲೇ, ಭರ್ತುಃ-ತಮ್ಮಗಂಡನಾದಕಾಳಿಯನ, ಶಮಲಸ್ಯ-ಪಾಪದ, ಮೋಕ್ಷೇಪ್ಸವಃ-ಬಿಡುಗಡೆಯನ್ನು ಬಯಸುತಲಿರುವರಾಗಿ, ಶರಣದಂ-ಪ್ರಾಣಿಮಾತ್ರಕ್ಕ ರಕ್ಷಣವನ್ನುಕೊಡುತಲಿರುವಕೃಷ್ಣನನ್ನು, ಶರಣಂ-ತಮಗೆರಕ್ಷಕನೆಂದು, ಪ್ರಪನ್ನಾಃ-ನೆಚ್ಚಿದವರಾಗಿ, ಕಾಯಾನ್-ತಮ್ಮಶರೀರಗಳನ್ನು, ಭುವಿ-ನೆಲದಲ್ಲಿ, ನಿಪಾತ್ಯ-ಅಡ್ಡಕೆಡವಿ, ಭೂತಪತಿಂ-ಪ್ರಾಣಿಗಳಿಗೊಡೆಯನಾದ, ತಂ-ಆಕೃಷ್ಣನನ್ನು, ಪ್ರಣೇಮುಃ-ಹೆಚ್ಚಾಗಿನಮಸ್ಕರಿಸಿದರು ‖೩೨‖ [ನಾಗಪತ್ನಿಯರವಚನವು- ೭ಶ್ಲೋಕಗಳಿಂದದಂಡನವನ್ನು ಸುಮೋದಿಸುವರು] ಕೃತಕಿಲ್ಬಿಷೇ-ಮಾಡಲ್ಪಟ್ಟಪಾಪವುಳ್ಳ, ಅಸ್ಮಿನ್-ಈಕಾಳಿಯಸರ್ಪನವಿಷಯದಲ್ಲಿ, ದಂಡಃ-ನೀನುಮಾಡಿದಶಿಕ್ಷೆಯು, ನ್ಯಾಯ್ಯಃ-ನ್ಯಾಯಸಮ್ಮ

---

ಷ್ಣನ ವಿಚಿತ್ರವಾದ ನರ್ತನದಿಂದ ಮುರಿಯಲ್ಪಟ್ಟ ಛತ್ರಗಳಂತಿರುವ ಹೆಡೆಗಳುಳ್ಳ, ಮತ್ತು ಮುಖಗಳಿಂದ ಅಧಿಕವಾದರಕ್ತವಂ ಕಕ್ಕುತಲಿರುವ, ಅತ್ಯಂತಭಗ್ನವಾದಮೈಯುಳ್ಳ, ಆಕಾಳಿಯಸರ್ಪವು ಆಗ ಶ್ರೀಕೃಷ್ಣನಂ ಚರಾಚರಪ್ರಪಂಚಕ್ಕೆಗುರುವಾದ ಪುರಾಣಪುರುಷನಾದ ನಾರಾಯಣನನ್ನಾಗಿತಿಳಿದು ಮನಸ್ಸಿನಿಂದ ಶರಣುಹೊಂದಿತು. ‖೩೦‖ ಆಸಮಯದಲ್ಲಿ ತನ್ನ ಹೊಟ್ಟೆಯನಡುವೆ ಸಮಸ್ತಪ್ರಪಂಚವಂಧರಿಸಿರುವ ಆಕೃಷ್ಣಮೂರ್ತಿಯ ಅತ್ಯಂತಭಾರದಿಂದ ನೆಗ್ಗಿರುವ, ಮತ್ತು ಆಕೃಷ್ಣನ ಹಿಮ್ಮಡಿಗಳಪೆಟ್ಟಿನಿಂದ ಅತ್ಯಂತವಾಗಿ ಮುರಿಯಲ್ಪಟ್ಟ ಕೊಡೆಗಳಂತಿರುವ ಹೆಡೆಗಳುಳ್ಳ, ಆಕಾಳಿಯಸರ್ಪವಂ ಕಂಡು ಆಸರ್ಪದಪತ್ನಿಯರಾದ ನಾಗಸ್ತ್ರೀಯರು ಬಹಳ ಆರ್ತರಾಗಿ ಸಡಿಲಾಗುತ್ತಿರುವವಸ್ತ್ರಗಳೂ ಭೂಷಣಗಳೂ ತುರುಬುಗಳೂ ಸಹವುಳ್ಳವರಾಗಿ ಆದಿಪುರುಷನಾದ ಶ್ರೀಕೃಷ್ಣನ ಸಮೀಪವನೈದಿದರು. ‖೩೧‖ ಆಬಳಿಕ ಕೇವಲ ದೀನವಾದಮನಸ್ಸುಳ್ಳ ಪತಿವ್ರತೆಯರಾದ ಆನಾಗಕಾಂತೆಯರು ತಮ್ಮ ಪತಿಯು ಮಹಾಪಾಪಿಯಾದರೂ ಅವನಂ ಬಿಡಿಸಲಿಚ್ಛೆಯುಳ್ಳವರಾಗಿ ತಮ್ಮಬಾಲಕರಂಮುಂದೆಯಿಟ್ಟುಕೊಂಡು ಅಭಯಪ್ರದನಾದ ಕೃಷ್ಣನಂ ಶರಣುಹೊಂದಿದವರಾಗಿ ಆಸ್ವಾಮಿಯ ಮುಂಭಾಗದಲ್ಲಿ ಬಂದು ಅಡ್ಡಬಿದ್ದು, ಬಳಿಕ ಸಮಸ್ತಪ್ರಾಣಿಗಳಿಗೂ ಪತಿಯಾದ ಶ್ರೀಕೃಷ್ಣನಂ ಕುರಿತು ಕೈಗಳಂ ಜೋಡಿಸಿಕೊಂಡು ನಮಸ್ಕರಿಸಿದರು. ‖೩೨‖ ಆಗ ಕಾಳೀಯಸರ್ಪದಪತ್ನಿಯರಾದ ನಾಗಕನ್ಯೆಯರು ಸಿಟ್ಟಿನಿಂಕೂಡಿದ ಶ್ರೀ

ಷೇಸ್ಮಿಂತವಾವತಾರಃಖಲನಿಗ್ರಹಾಯ। ರಿಪೋಸ್ಸುತಾನಾಮಪಿತುಲ್ಯದೃಷ್ಟೇರ್ಧತ್ಸೇದಮಂಧರ್ಮಮೇವಾನುಶಂ
ಸನ್ ॥೩೩॥ ಅನುಗ್ರಹೋಯಂಭವತಾಕೃತೋಹಿನೋದಣ್ಡೋಽಸತಾಂತೇಖಲುಕಲ್ಮಷಾಪಹಃ।ಯದ್ದನ್ದಶೂ
ಕತ್ವಮಮುಷ್ಯದೇಹಿನಃಕ್ರೋಧೋಪಿತೇನುಗ್ರಹಏವಸಮ್ಮತಃ॥೩೪॥ ತಪಸ್ಸುತಪ್ತಂಕಿಮನೇನಪೂರ್ವಂನಿರಸ್ತ
ಮಾನೇನಚಮಾನದೇನ। ಧರ್ಮೋಥವಾಸರ್ವಜನಾನುಕಮ್ಪಯಾಯತೋಭವಾಂಸ್ತುಷ್ಯತಿಸರ್ವಜೀವಃ ॥೩೫॥
ಕಸ್ಯಾನುಭಾವೋಸ್ಯನದೇವವಿದ್ಮಹೇತವಾಂಘ್ರಿರೇಣುಸ್ಪ*ರ್ಶಾಧಿಕಾರಃ। ಯದ್ವಾಂಛಯಾಶ್ರೀರ್ಲಲನಾಚರತ್ತ

---

ತಪೋ. ತವ-ನಿನ್ನ, ಅವತಾರಃ-ಆವಿರ್ಭಾವವು, ಖಲನಿಗ್ರಹಾಯಹಿ-ದುಷ್ಟರನ್ನು ಶಿಕ್ಷಿಸಲೋಸುಗವೇ ಅಲ್ಲವೆ? ರಿಪೋಃ-ಶತ್ರುವಿನವಿಷಯದಲ್ಲಿಯೂ, ಸುತಾನಾಮಪಿ-ಮಕ್ಕಳವಿಷಯದಲ್ಲಿಯೂ ಕೂಡ, ತುಲ್ಯದೃಷ್ಟೇಃ-ಸಮಾನವಾಗಿನೋಡುವುದಕ್ಕೆ, ಧರ್ಮಮೇವ- ಧರ್ಮರಕ್ಷಣವನ್ನೇ, ಅನುಶಂಸನ್-ಆಲೋಚಿಸುವನಾಗಿ, ದಮಂ-ದುಷ್ಟನಿಗ್ರಹವನ್ನು, ಧತ್ಸೇ- ವಹಿಸುತಲಿರುವಿ ॥೩೩॥ ಅಸತಾಂ-ಸತ್ಪುರುಷರಲ್ಲದ, ನಃ-ನಮಗೆ, ಭವತಾ-ನಿನ್ನಿಂದ, ಕೃತಃ-ಮಾಡಲ್ಪಟ್ಟ, ಅಯಂದಂಡಃ-ಈಶಿಕ್ಷೆಯು, ಕಲ್ಮಷಾಪಹಃ-ಕಲ್ಮಷ- ಪಾಪವನ್ನು, ಅಪಹಃ-ಪರಿಹರಿಸುವುದಾದ್ದರಿಂದಲೇ, ತೇ-ನಿನ್ನ, ಅನುಗ್ರಹಃ-ಖಲು-ಪ್ರಸಾದವಲ್ಲವೆ? ಯತ್-ಯಾವಕಾರಣದಿಂದ, ಅಮುಷ್ಯದೇಹಿನಃ-ಈಪ್ರಾಣಿಗೆ, ದಂದಶೂಕತ್ವಂ-ಹಲ್ಲುಗಳಲ್ಲಿವಿಷವುಳ್ಳಂಟಾಗಿರುವಿಕೆಯು, (ದೃಶ್ಯತೇ-ಕಾಣಿಸುತಲಿದೆಯೋ) ತತಃ-ಆಕಾರಣದಿಂದ, ತೇಕ್ರೋಧೋಪಿ - ನಿನ್ನಸಿಟ್ಟುಕೂಡ, ಅನುಗ್ರಹಏವ - ಪ್ರಸಾದವೇ ಎಂದು, ಸಮ್ಮತಃ-ಒಪ್ಪಿಗೆಯಾಗಿರುವುದು ॥೩೪॥ ಪೂರ್ವಂ-ಹಿಂದಣಜನ್ಮದಲ್ಲಿ, ನಿರಸ್ತಮಾನೇನ-ತೊಲಗಿಸಲ್ಪಟ್ಟಗರ್ವವುಳ್ಳವನೂ, ಮಾನದೇನಚ-ಹೆರವರಿಗೆಸಮ್ಮಾನವನ್ನು ಕೊಡುವವನೂ, ಆಗಿಪ್ಪ, ಅನೇನ-ಇವನಿಂದ, ಕಿಂತಪಃ-ಯಾವತಪಸ್ಸು, ಸುತಪ್ತಂ-ಚೆನ್ನಾಗಿಆಚರಿಸಲ್ಪಟ್ಟಿತು? ಅಥವಾ-ಸರ್ವಜೀವಃ-ಎಲ್ಲರನ್ನೂ ಬದುಕಿಸುತಲಿರುವ, ಭವಾನ್-ನೀನು, ಯತಃ-ಯಾವುದರದೆಸೆಯಿಂದ, ತುಷ್ಯತಿ- ಸಂತೋಷಿಸುತಲಿರುವೆಯೋ, ಸಧರ್ಮಃ-ಆಧರ್ಮವು, ಸರ್ವಜನಾನುಕಂಪಯಾ-ಸಕಲಪ್ರಾಣಿಗಳಲ್ಲಿದಯೆಯಿಂದ, (ಸಂಪಾದಿಸಲ್ಪಟ್ಟಿರುವುದೋ ವಿಸು) ॥೩೫॥ ದೇವ-ದೇವರಾದಕೃಷ್ಣನೇ! ಶ್ರೀಲಲನಾ-ಲಕ್ಷ್ಮಿಯೆಂಬಹೆಂಗಸು, ಯದ್ವಾಂಛಯಾ-ಯಾವುದರಬಯಕೆಯಿಂದ, ಕಾಮಾನ್-ಇತರಮನೋರಥಗಳನ್ನು, ವಿಹಾಯ-ಬಿಟ್ಟು, ಸುಚಿರಂ-ಬಹುಕಾಲವು, ಧೃತವ್ರತಾಸತೀ-ಧರಿಸಲ್ಪಟ್ಟನಿಯಮವುಳ್ಳವಳಾಗಿ, ತಪಃ- ತಪವನ್ನು, ಅಚರತ್-ಮಾಡಿದಳೋ, ಸಃ-ಅಂತಾ, ತವ-ನಿನ್ನ, ಅಂಘ್ರಿರೇಣುಸ್ಪರ್ಶಾಧಿಕಾರಃ-ಅಂಘ್ರಿರೇಣು-ಚರಣಧೂಳಿಯನ್ನು, ಸ್ಪರ್ಶ-ಸೋಂ

---

ಕೃಷ್ಣನ ಅನುಗ್ರಹವು ತಮ್ಮಗಂಡನಲ್ಲಿ ಉಂಟಾಗಲೋಸುಗ ಸ್ತೋತ್ರಂಗೆಯ್ಯುರದೆಂತೆನೆ- ಎಲೈ, ಶ್ರೀಕೃಷ್ಣದೇವನೆ! ಶತ್ರುಗಳಲ್ಲಿಯೂ ಭಕ್ತರಲ್ಲಿಯೂ ಸಹ ಸಮಾನವಾದ ದೃಷ್ಟಿಯುಳ್ಳ ನಿನ್ನ ಅವತಾರವು ದುಷ್ಟರಂನಿಗ್ರಹಿಸಲೋಸುಗ ಉಂಟಾಗಿರುವದರಿಂದ ಈಲೋಕದಲ್ಲಿ ನೀನು ಧರ್ಮಸ್ವರೂಪವಂಧರಿಸಿ ಆಲೋಚನೆಯಂಗೆಯ್ದವನಾಗಿ ದುಷ್ಟರಿಗೆ ಶಿಕ್ಷೆಯಂಗೆಯ್ವೆ, ಆದ್ದರಿಂದ ಅಪರಾಧವಂ ಮಾಡಿರುವ ನಮ್ಮಪತಿಯಲ್ಲಿ ನಿನ್ನಿಂದಮಾಡಲ್ಪಟ್ಟ ಶಿಕ್ಷೆಯು ನ್ಯಾಯಪ್ರಾಪ್ತವೇಸರಿ. |೩೩| ಎಲೈ, ಹರಿಯೇ! ಯಾವಕಾರಣದಿಂದ ನಮ್ಮಪತಿಯಾದ ಈಪ್ರಾಣಿಗೆಸರ್ಪತ್ವವು ಕಾಣಲ್ಪಡುತಲಿದೆಯೋ, ಆಕಾರಣದಿಂದ ಈಸರ್ಪತ್ವಕ್ಕೆ ಮೂಲಭೂತವಾದ ಪಾಪವಂ ಪರಿಹರಿಸುವ ನಿನ್ನಿಂದ ಮಾಡಲ್ಪಟ್ಟ ಶಿಕ್ಷೆಯು ಸಿಟ್ಟಾಗಿತೋರುತಿದ್ದರೂ ನಿನ್ನಅನುಗ್ರಹ ರೂಪವಾದುದರಿಂದ ಅದು ನಮಗೆ ಸಮ್ಮತವೇಸರಿ. ನಿನ್ನಿಂದ ಮಾಡಲ್ಪಟ್ಟಶಿಕ್ಷೆಯು ನಿಶ್ಚಯವಾಗಿದುಷ್ಟರಪಾಪವಂ ಪರಿಹರಿಸುವುದಲ್ಲವೆ! |೩೪| ಎಲೈ, ಸ್ವಾಮಿಯೇ! ಸರ್ವಪ್ರಾಣಿಗಳನ್ನೂ ಜೀವಿಸುಮತೆಮಾಡುವ ನೀನು ಯಾವ ತಪೋಧರ್ಮಗಳ ದೆಸೆಯಿಂದ ಸಂತೋಷಪಡುತಲಿರುವೆಯೋ, ನಮ್ಮ ಪತಿಯಾದ ಕಾಳಿಯಸರ್ಪದಿಂದ ಪೂರ್ವಜನ್ಮದಲ್ಲಿ ತನ್ನ ದೇಹಾಭಿಮಾನವಂಬಿಟ್ಟು ಅನ್ಯರಿಗೆ ಬಹುಮಾನಂಗೆಯ್ವಾತ ಅಂತಾಯಾವತಪಸ್ಸು ಮಾಡಲ್ಪಟ್ಟಿತೋ, ಅಥವಾ ಸರ್ವಜನರಲ್ಲಿಯೂ ದಯೆಯಿಂದ ಅಂತಾಯಾವಧರ್ಮವು ಮಾಡಲ್ಪಟ್ಟಿತೋ, ಅದಂ ನಾವರಿಯೆವು. |೩೫| ಎಲೈ, ಶ್ರೀಕೃಷ್ಣನೇ! ಮತ್ತು ಬ್ರಹ್ಮಾದಿದೇವತೆಗಳೂ ಕೂಡ ತಪಸ್ಸುಮೊದಲಾದುದರಿಂದ ಯಾವಲಕ್ಷ್ಮೀದೇವಿಯ ಪ್ರಸಾದವಂ ಪ್ರಾರ್ಥಿಸುವರೋ, ಅಂತಾ ಸರ್ವೋತ್ತಮಳಾದ ಲಕ್ಷ್ಮೀದೇವಿಯೂ ಯಾವನಿನ್ನ ಪಾದಾರವಿಂದವಂ ಸ್ಪರ್ಶಿಸಲು ಯೋಗ್ಯವಾದ ಅಧಿಕಾರಸಂಪತ್ತುಂಟಾಗಬೇಕೆಂಬ ಬಯಕೆಯಿಂದ ಇತರಕಾಮಗಳಂಬಿಟ್ಟು ಬಹುಕಾಲವು ವ್ರತನಿಯಮಯುಕ್ತಳಾಗಿ ಮ

ಪೋವಿಹಾಯಕಾವರ್ೞಸುಚಿರಂಧೃತವ್ರತಾ ‖೩೬‖ ನನಾಕಪೃಷ್ಠಂನಚಸಾರ್ವಭೌಮಂನಪಾರಮೇಷ್ಠ್ಯಂ ನರಸಾಧಿಪತ್ಯಮ್ ‖ನಯೋಗಸಿದ್ಧೀರಪುನರ್ಭವಂವಾವಾಂಛಂತಿಯತ್ಪಾದರಜಃಪ್ರಪನ್ನಾಃ ‖೩೭‖ ತದೇಷ ನಾಥಾಪದುರಾಪಮನ್ಯೈಸ್ತಮೋಜನಿಃಕ್ರೋಧವಶೋಽಪ್ಯಹೀಂದ್ರಃ । ಸಂಸಾರಚಕ್ರೇಭ್ರಮತಶ್ಶರೀರಿಣೋ ಯದಿಚ್ಛತಃಸ್ಯಾದ್ವಿಭವಸ್ಸಮಕ್ಷಮ್ ‖೩೮‖ ನಮಸ್ತುಭ್ಯಂಭಗವತೆಪುರುಷಾಯಮಹಾತ್ಮನೆ ‖ಭೂತಾವಾಸಾಯಭೂತಾಯಪರಾಯಪರಮಾತ್ಮನೆ ‖೩೯‖ಜ್ಞಾನವಿಜ್ಞಾನನಿಧಯೆಬ್ರಹ್ಮಣೇನಂತಶಕ್ತಯೆ‖ಅಗುಣಾ

---

ಕುವ, ಅಧಿಕಾರಃ-ಯೋಗ್ಯತೆಯು, ಅಸ್ಯ-ಇವನಿಗುಂಟಾಗಿರುವುದು, ಕಸ್ಯ-ಯಾವಪುಣ್ಯದ, ಅನುಭಾವಃ-ಸಾಮರ್ಥ್ಯವೋ, ನ ವಿದ್ಮಹೇ-ಅರಿಯೆವು ‖೩೬‖ ಯತ್ಪಾದರಜಃ-ಯತ್-ಯಾವನಿನ್ನ, ಪಾದರಜಃ- ಚರಣಧೂಳಿಯನ್ನು, ಪ್ರಪನ್ನಾಃ- ರಕ್ಷಕವೆಂದು ನಂಬಿದ ಭಕ್ತರು, ನಾಕಪೃಷ್ಠಂ-ಸ್ವರ್ಗಕ್ಕೆ ಮೇಲ್ಪಟ್ಟಿರುವಪುಣ್ಯಲೋಕವನ್ನು, ನವಾಂಛಂತಿ-ಬಯಸುವುದಿಲ್ಲವೋ, ಸಾರ್ವಭೌಮಂಚ- ಸರ್ವಭೂಮಿಯಒಡೆತನವನ್ನೂ, ನ-ಬಯಸುವುದಿಲ್ಲವೋ, ಪಾರಮೇಷ್ಠ್ಯಂ-ಬ್ರಹ್ಮಪದವಿಯನ್ನೂ, ನ-ಬಯಸುವದಿಲ್ಲವೋ, ರಸಾಧಿಪತ್ಯಂ-ರಸಾ-ಪಾತಾಳಾದಿಭೂಮಿಗಳ, ಅಧಿಪತ್ಯಂ-ಪ್ರಭುತ್ವವನ್ನೂ, ನ-ಬಯಸುವದಿಲ್ಲವೋ, ಯೋಗಸಿದ್ಧೀಃ- ಅಷ್ಟಾಂಗಯೋಗಗಳನಿರ್ಣಯಗಳನ್ನೂ, ಅಪುನರ್ಭವಂವಾ-ಪುನರ್ಜನ್ಮವಿಲ್ಲದಿರುವಿಕೆಯನ್ನೂಕೂಡ, ನವಾಂಛಂತಿ-ಹಾರೈಸುವುದಿಲ್ಲವೋ ‖೩೭‖ ನಾಥ-ಒಡೆಯನೇ! ತಮೋಜನಿಃ-ತಮಃ-ತಮೋಗುಣವೇಪ್ರಧಾನವಾದ, ಜನಿಃ-ಜನ್ಮವುಳ್ಳವನಾದ್ದರಿಂದಲೇ, ಕ್ರೋಧವಶಃ- ಸಿಟ್ಟಿಗೆಅಧೀನನಾದ, ಅಹೀಂದ್ರಃ-ನಾಗರಾಜನಾದ, ಏಷಃ-ಇವನು, ಸಂಸಾರಚಕ್ರೇ-ಜನನಮರಣದುಃಖಯಂತ್ರದಲ್ಲಿ, ಭ್ರಮತಃ- ತಿರುಗುತಲಿರುವ, ಶರೀರಿಣಃ-ಪ್ರಾಣಿಗೆಆದರೂ ಯದಿಚ್ಛತಏವ-ಯತ್-ಯಾವನಿನ್ನ ಚರಣಧೂಳಿಯನ್ನೇ, ಇಚ್ಛತಏವ- ಬಯಸುವವನಿಗೇನೇ, ವಿಭವಃ-ಸರ್ವಸಂಪತ್ತು, ಸಮಕ್ಷಂ-ಪ್ರತ್ಯಕ್ಷವಾಗಿ, ಸ್ಯಾತ್-ಉಂಟಾಗುವುದೋ, ಅನ್ಯೈಃ- ಇತರರಾದಬ್ರಹ್ಮಾದಿಗಳಿಂದ, ದುರಾಪಂ-ಪ್ರಯಾಸದಿಂದಲೂಪಡೆಯಲುಅಶಕ್ಯವಾದ, ತತ್-ಆನಿನ್ನ ಚರಣಧೂಳಿಯನ್ನು, ಆಪ-ಅಪ್ರಯತ್ನವಾಗಿಪಡೆದನು ‖೩೮‖(೧೦ಶ್ಲೋಕಗಳಿಂದಸ್ತುತಿಸುವರು) ಭಗವತೇ-ಐಶ್ವರ್ಯಾದ್ಯಚಿಂತ್ಯಗುಣಗಳುಳ್ಳ, ಪುರುಷಾಯ- ದೇಹಗಳಲ್ಲಿ, ಅಂತರ್ಯಾಮಿಯಾಗಿರುವ, ಮಹಾತ್ಮನೇ-ದೊಡ್ಡದೇಹವುಳ್ಳವನಾದ್ದರಿಂದಅಪರಿಚ್ಛಿನ್ನನಾದ, ಭೂತಾವಾಸಾಯ-ಭೂತ-ಆಕಾಶಾದಿಗಳಿಗೆ, ಆವಾಸಾಯ- ಆಶ್ರಯನಾದ, ಭೂತಾಯ-ಪೂರ್ವದೊಳಗೂಯಿರುವನಾದ, ಪರಾಯ-ಕಾರಣಸ್ವರೂಪನಾದ, ಪರಮಾತ್ಮನೇ-ಕಾರಣಾತೀತನಾದ, ತುಭ್ಯಂ- ನಿನಗೆ, ನಮಃ-ನಮಸ್ಕಾರವಾಗಲಿ‖೩೯‖ಜ್ಞಾನವಿಜ್ಞಾನನಿಧಯೇ-ಜ್ಞಾನ-ಜ್ಞಪ್ತಿಗೂ, ವಿಜ್ಞಾನ-ಚಿಚ್ಛಕ್ತಿಗೂ, ನಿಧಯೇ- ಕಣಿಯಾಗಿರುವ, ಬ್ರ

---

ಹಾತಪವಂಗೆಯ್ದಳೋ, ನಮ್ಮಪತಿಯಾದ ಈಸರ್ಪಕ್ಕೆ ಅಂತಾ ನಿನ್ನ ಪಾದಾರವಿಂದದರಜಸ್ಸಂ ಸ್ಪೃಶಿಸಲುಯೋಗ್ಯವಾದ ಅಧಿಕಾರಮುಂಟಾದುದು ತಪಸ್ಸುಮೊದಲಾದ ಯಾವದರಪ್ರಭಾವವೋ' ಅದಂ ನಾವರಿಯೆವು. ‖೩೬‖ ಎಲೈ ಹರಿಯೇ! ಯಾವನಿನ್ನ ಪಾದಾರವಿಂದದ ರಜಸ್ಸಂಪಡೆದಿರುವ ಮಹಾತ್ಮರು ಇಂದ್ರಪದವನ್ನು, ಸಾರ್ವಭೌಮತ್ವವನ್ನು, ಬ್ರಹ್ಮಪದವಿಯನ್ನು, ಪಾತಾಳಲೋಕಾಧಿಪತ್ಯವನ್ನು, ಅಣಿಮಾದ್ಯಷ್ಟ ಮಹಾಸಿದ್ಧಿಗಳನ್ನೂ, ಪರಮಪುರುಷಾರ್ಥವಾದಮೋಕ್ಷವನ್ನು, ಕೂಡ ಬಯಸುವುದಿಲ್ಲವೋ, ಅಂತಾ ನಿನ್ನಪಾದಧೂಳಿಯಂ ಸ್ಪರ್ಶನಂಗೆಯ್ವಂತೆ ಅಧಿಕಾರವುಈನಮ್ಮಪತಿಗೆ ಯಾವುದರಿಂದುಂಟಾದುದೋ; ಅದಂನಾವರಿಯೆವು. ‖೩೭‖ಎಲೈ ಲೋಕನಾಥನೇ ಸಂಸಾರಚಕ್ರದಲ್ಲಿ ತಗುಲಿಸುತ್ತುತಲಿರುವ ಪುರುಷನು ಯಾವನಿನ್ನ ಪಾದಧೂಳಿಯಂ ತನಗೆ ಸೇವಿಸಲು ಯೋಗ್ಯವೆಂದುತಿಳಿದು ಪ್ರಾರ್ಥಿಸುತಲಿರುವವನಾಗಿ ಈರೀತಿಯಿಂದ ಪ್ರತ್ಯಕ್ಷವಾಗಿ ಅಪೇಕ್ಷಿಸಲ್ಪಟ್ಟ ಸಂಪತ್ತಂಪಡೆಯುವನೋ ಲಕ್ಷ್ಮೀದೇವಿಮೊದಲಾದ ಅನ್ಯರಿಂ ಹೊಂದಲಶಕ್ಯವಾದ ಅಂತಾ ನಿನ್ನ ಪಾದಧೂಳಿಯನ್ನು ತಮೋಗುಣದಿಂದ ಹುಟ್ಟಿದಸಿಟ್ಟಿಗೆ ಅಧೀನನಾದ ಸರ್ಪಗಳಿಗೊಡೆಯನಾದ ಈ ನಮ್ಮಪತಿಯೂ ಕೂಡ ಪ್ರಯತ್ನಮಾಡದೆ ಪಡೆದನು. ‖೩೮‖ಚಿಂತಿಸಲಶಕ್ಯವಾದ ಸಾಮರ್ಥ್ಯವುಳ್ಳ, ಶರೀರದಲ್ಲಿ ಅಂತರ್ಯಾಮಿ ರೂಪದಿಂದಿರುವವನಾದರೂ ಅತ್ಯಂತ ಪರಿಚ್ಛಿನ್ನನಾಗದೆ ಇರುವ, ಆಕಾಶಾದಿ ಪಂಚಮಹಾಭೂತಂಗಳಿಗೆ ಆಶ್ರಯನಾದ, ಮತ್ತು ಪ್ರಪಂಚಸೃಷ್ಟಿಗಿಂತಲೂ ಪೂರ್ವದಲ್ಲಿ ಸದ್ರೂಪದಿಂ ಕಾರಣನಾಗಿರುವ, ಮತ್ತು ಕಾರಣಗಳಿಗೆ ಕರ್ತನಾದ, ಇಂತಾ ನಿನಗೋಸುಗ ನಮಸ್ಕಾರವು. ‖೩೯‖ ಮತ್ತು ಜ್ಞಪ್ತಿ ಚಿಚ್ಛಕ್ತಿಗಳಿಗೆ ನಿಧಿರೂಪನಾದ, ಗುಣರಹಿತನಾದುದರಿಂದಲೂ ನಿರ್ವಿಕಾರನಾದುದ

ಯಾವಿಕಾರಾಯನಮಸ್ತೆಪ್ರಾಕೃತಾಯಚ||೪೦|| ಕಾಲಾಯಕಾಲನಾಭಾಯಕಾಲಾವಯವಸಾಕ್ಷಿಣೇ| ವಿಶ್ವಾಯತದುಪದ್ರಷ್ಟ್ರೇತತ್ಕರ್ತ್ರೇವಿಶ್ವಹೇತವೇ||೪೧|| ಭೂತಮಾತ್ರೇಂದ್ರಿಯಪ್ರಾಣಮನೋಬುದ್ಧ್ಯಾಶಯಾತ್ಮನೇ| ತ್ರಿಗುಣೇನಾಭಿಮಾನೇನಗೂಢಸ್ವಾತ್ಮಾನುಭೂತಯೇ ||೪೨|| ನಮೋನಂತಾಯಸೂಕ್ಷ್ಮಾಯಕೂಟಸ್ಥಾಯವಿಪಶ್ಚಿತೇ| ನಾನಾವಾದಾನುರೋಧಾಯವಾಚ್ಯವಾಚಕಶಕ್ತಯೇ|| ನಮಃಪ್ರಮಾಣಮೂಲಾಯಕವಯೇಶಾಸ್ತ್ರಯೋನ

---

ಹ್ಮಣೇ-ವ್ಯಾಪಕನಾದ, ಅನಂತಶಕ್ತಯೇ-ಹಲವುಶಕ್ತಿಗಳುಳ್ಳ, ಅಗುಣಾಯ-ಗುಣಗಳಿಲ್ಲದವನಾದ್ದರಿಂದಲೇ, ಅವಿಕಾರಾಯ-ವಿಕಾರವಿಲ್ಲದವನಾದ, ಅಪ್ರಾಕೃತಾಯಚ-ಪ್ರಕೃತಿಸಂಬಂಧವಿಲ್ಲದವನೂಆದ, ತೇ-ನಿನಗೆ, ನಮಃ-ನಮಸ್ಕಾರವು ||೪೦|| ಕಾಲಾಯ-ಕಾಲಸ್ವರೂಪನಾದ, ಕಾಲನಾಭಾಯ-ಕಾಲಶಕ್ತಿಗೆಆಶ್ರಯನಾದ, ಕಾಲಾವಯವಸಾಕ್ಷಿಣೇ-ಕಾಲಾವಯವ-ಕಾಲಕ್ಕೆಅಂಗಗಳಾದಸೃಷ್ಟ್ಯಾದಿಸಮಯಗಳಿಗೆ, ಸಾಕ್ಷಿಣೇ-ದ್ರಷ್ಟಾರನಾದ, ವಿಶ್ವಾಯ- ಪ್ರಪಂಚಸ್ವರೂಪನಾದ, ತದುಪದ್ರಷ್ಟ್ರೇ-ತತ್ -ಆ ಜಡಪ್ರಪಂಚಕ್ಕೆ, ಉಪದ್ರಷ್ಟ್ರೇ-ಸಾಕ್ಷಿಚೈತನ್ಯವಾಗಿರುವ, ತತ್ಕರ್ತ್ರೇ-ಅದಕ್ಕೆಕರ್ತಾರನಾದ ವಿಶ್ವಹೇತವೇ-ಪ್ರಪಂಚಕ್ಕೆಕಾರಣರೂಪನಾದ||೪೧|| ಭೂತ . ಆತ್ಮನೇ| ಭೂತ-ಪಂಚಭೂತಗಳ, ಮಾತ್ರಾ-ಶಬ್ದಾದಿವಿಷಯಗಳ, ಇಂದ್ರಿಯ-ಚಕ್ಷುರಾದೀಂದ್ರಿಯಗಳ,ಪ್ರಾಣ-ಪ್ರಾಣಾದಿವಾಯುಗಳ, ಮನಃ-ಮನಸ್ಸಿನ, ಬುದ್ಧಿ-ಜ್ಞಾನದ, ಆಶಯ-ಚಿತ್ತದ, ಆತ್ಮನೇ- ಸ್ವರೂಪವಾಗಿರುವ, ತ್ರಿಗುಣೇನ- ಮೂರುಗುಣಗಳುಳ್ಳ, ಅಭಿಮಾನೇನ-ಅಹಂಕಾರದಿಂದ, ಗೂಢಸ್ವಾತ್ಮಾನುಭೂತಯೇ-ಗೂಢ-ಅಡಗಿರುವ, ಸ್ವ-ತನ್ನ ಅಂಶಗಳಾದ, ಆತ್ಮ- ಚಿದಾಭಾಸರಾದಜೀವರ, ಅನುಭೂತಯೇ-ಸುಖಾನುಭವವುಳ್ಳ ||೪೨||ಅನಂತಾಯ- ಅಹಂಕಾರವಿಲ್ಲದ್ದರಿಂದನಾಶವಿಲ್ಲದವನಾದ, ಸೂಕ್ಷ್ಮಾಯ-ಅದೃಶ್ಯನಾದ್ದರಿಂದಸಣ್ಣಗಿರುವ, ಕೂಟಸ್ಥಾಯ-ಉಪಾಧಿವಿಕಾರವಿಲ್ಲದ್ದರಿಂದಗೂಟದಹಾಗೆನಿಶ್ಚಲನಾಗಿರುವ, (ಕೂಟ-ಪಟ್ಟಡಿ) ವಿಪಶ್ಚಿತೇ-ಸರ್ವಜ್ಞನಾದ, ನಾನಾವಾದಾನುರೋಧಾಯ-ನಾನಾವಾದ-ಉಂಟುಇಲ್ಲ, ಎಂಬುದುಮೊದಲಾದವಾದಮತಗಳನ್ನು, ಅನುರೋಧಾಯ-ಮಾಯೆಯಿಂದನುವರ್ತಿಸುವನಾದ, ವಾಚ್ಯವಾಚಕಶಕ್ತಯೇ-ಶಬ್ದಾರ್ಥಸಾಮರ್ಥ್ಯಗಳಭೇದದಿಂದಹಲವುಬಗೆಯಾಗಿತೋರುತಲಿರುವನಾದ(ಶಬ್ದವಾಗಿಯೂಅರ್ಥವಾಗಿಯೂ ತೋರುವಶಕ್ತಿಯುಳ್ಳ) ನಿನಗೆ, ನಮಃ-ವಂದನವು ||೪೩||ಪ್ರಮಾಣಮೂಲಾಯ- ಕಣ್ಣುಮೊದಲಾದಪ್ರಮಾಣಗಳಿಗೆಕಾರಣನಾದ, ಕವಯೇ-ಸ್ವಯಂಜ್ಞಾನಸ್ವರೂಪನಾದ, ಶಾಸ್ತ್ರಯೋನಯೇ- ವೇದವೇದ್ಯನಾದ, ಅಥವಾ-

---

ರಿಂದಲೂ ಬ್ರಹ್ಮರೂಪನಾದ, ಪ್ರಕೃತಿಗೆ ಪ್ರವರ್ತಕನಾದುದರಿಂದ ಪ್ರಾಕೃತಂಗಳಾದ ಅನಂತ ಶಕ್ತಿಗಳೊಡನೆ ಯುಕ್ತನಾದ, ||೪೦|| ಮತ್ತು ಕಾಲಸ್ವರೂಪನಾದ, ಆಕಾಲಶಕ್ತಿಗೆ ಆಶ್ರಯನಾಗಿರುವ, ಮತ್ತು ಕಾಲಕ್ಕೆ ಅವಯವಂಗಳಾದ ಸೃಷ್ಟಿಸ್ಥಿತಿಸಂಹಾರಂಗಳಿಗೆ ಸಾಕ್ಷಿರೂಪನಾದ, ಪ್ರಪಂಚರೂಪನಾದ, ಮತ್ತು ಪ್ರಪಂಚಕ್ಕೆದ್ರಷ್ಟೃವಾಗಿಯೂ ಕರ್ತೃವಾಗಿಯೂ ಸರ್ವಸಾಧನರೂಪನಾಗಿಯೂ ಇರುವ, ನಿನಗೆನಮಸ್ಕಾರವು. ||೪೧|| ಪಂಚಭೂತಗಳು ಪಂಚತನ್ಮಾತ್ರಗಳು ದಶೇಂದ್ರಿಯಂಗಳು ಪಂಚಪ್ರಾಣಂಗಳು ಮನಸ್ಸು ಬುದ್ಧಿ ಚಿತ್ತ ಈಸಮಸ್ತರೂಪನಾಗಿರುವನಾದುದರಿಂದ ಸರ್ವಕಾರಣರೂಪನಾದ, ಮತ್ತು ತ್ರಿಗುಣಾತ್ಮಕವಾದ ಅಹಂಕಾರದಿಂದ ಮುಚ್ಚಲ್ಪಟ್ಟ ಸ್ವಾಂಶಭಾಗವಾದ ಜೀವಾತ್ಮರಿಗೆ ಆಯಾ ಅನುಭವವಂ ಉಂಟುಮಾಡುವ, ನಿನಗೋಸುಗ ನಮಸ್ಕಾರವು ||೪೨|| ಮತ್ತು ಅಹಂಕಾರದಿಂದ ಆದ ಪರಿಚ್ಛೇದವಿಲ್ಲದವನಾದ, ದೃಶ್ಯನಲ್ಲದುದರಿಂ ಸೂಕ್ಷ್ಮರೂಪನಾದ, ಆಯಾ ಉಪಾಧಿಗಳಿಂ ಕಲ್ಪಿತಂಗಳಾದ ವಿಕಾರಗಳಿಲ್ಲದವನಾದುದರಿಂ ನಿರ್ಲೇಪನಾದ, ಸರ್ವಜ್ಞನಾದ, ಮತ್ತು ಉಂಟು ಇಲ್ಲ ಸರ್ವಜ್ಞನು ಕಿಂಚಿಜ್ಞನು ಬದ್ಧನು ಮುಕ್ತನು ಏಕನು ಅನೇಕನು ಎಂದು ಈರೀತಿಯಾಗಿ ನಾನಾವಿಧಗಳಾದ ವಾದಂಗಳಿಂದ ಮಾಯೆಯಿಂದ ಅನುವರ್ತಿಸಿ ಕೊಂಡಿರುವ, ಮತ್ತು ವಾಚ್ಯವಾಚಕ ಭೇದದಿಂದಲೂ ಹಲವುಬಗೆಯಾಗಿ ತೋರುತಲಿರುವ, ಇಂತಹನಿನಗೆನಮಸ್ಕಾರವು. ||೪೩|| ಮತ್ತು ಚಕ್ಷುರಾದಿಪ್ರಮಾಣಗಳಿಗೂ ಚಕ್ಷುರಾದಿರೂಪನಾದ, ಆ ಚಕ್ಷುರಾದೀಂದ್ರಿಯಂಗಳನ್ನು ಅಪೇಕ್ಷಿಸದೆ ತಾನೇಸಮಸ್ತವನ್ನೂ ತಿಳಿಯುತಲಿರುವ

ಯ । ಪ್ರವೃತ್ತಾಯನಿವೃತ್ತಾಯನಿಗಮಾಯನಮೋನಮಃ ‖ ೪೪ ‖ ನಮಃಕೃಷ್ಣಾಯರಾಮಾಯವಸುದೇವಸುತಾಯಚ।ಪ್ರದ್ಯುಮ್ನಾಯಾನಿರುದ್ಧಾಯಸಾತ್ವತಾಂಪತಯೇನಮಃ ‖೪೫‖ ನಮೋಗುಣಪ್ರದೀಪಾಯಗುಣಾತ್ಮಚ್ಛಾದನಾಯಚ।ಗುಣವೃತ್ತ್ಯುಪಲಕ್ಷ್ಯಾಯಗುಣದ್ರಷ್ಟ್ರೇ ಸ್ವಸಂವಿದೇ‖೪೬‖ಅವ್ಯಾಕೃತವಿಹಾರಾಯಸರ್ವವ್ಯಾಕೃತಸಿದ್ಧಯೇ। ಹೃಷೀಕೇಶನಮಸ್ತೇಸ್ತುಮುನಯೇಮೌನಶೀಲಿನೇ ‖೪೭‖ ಪರಾಪರಗತಿಜ್ಞಾಯಸ

---

ಶಾಸ್ತ್ರ-ಶಿಕ್ಷಿಸುವವೇದವೇ-ಯೋನಯೇ-ವಾಚಕವಾಗಿಯೂ ಲಕ್ಷಕವಾಗಿಯೂವುಳ್ಳವನಾದ, ಅಥವಾ ಶಾಸ್ತ್ರ-ಶಾಸಕವಾದವೇದಕ್ಕೆ ಯೋನಯೇ-ಕಾರಣನಾದ(ತನ್ನನಿಶ್ವಾಸಗಳಾಗಿರುವವೇದಗಳುಳ್ಳ) ಪ್ರವೃತ್ತಾಯ- ಸೃಷ್ಟ್ಯಾದಿಕಾರ್ಯಗಳಲ್ಲಿಪ್ರವರ್ತಿಸಿದವನಾದ, ನಿವೃತ್ತಾಯ-ಲಯಾದಿಮೋಕ್ಷಕಾರ್ಯಗಳಲ್ಲಿಪ್ರವರ್ತಿಸಿದವನಾದ, ನಿಗಮಾಯ-ನಿಶ್ಚಯರೂಪನಾದ, ಅಥವಾ- ವೇದರೂಪನಾದನಿನಗೆ ನಮೋನಮಃ-ವಂದನವುವಂದನವು ‖೪೪‖ವಸುದೇವಸುತಾಯ-ವಸುದೇವನಪುತ್ರನಾದ, ರಾಮಾಯ- ಸಂಕರ್ಷಣನಿಗೂ, ಕೃಷ್ಣಾಯ-ವಾಸುದೇವನಿಗೂ, ಪ್ರದ್ಯುಮ್ನಾಯ-ಪ್ರದ್ಯುಮ್ನನಿಗೂ, ಅನಿರುದ್ಧಾಯ-ಅನಿರುದ್ಧನಿಗೂ(ಹೀಗೆಚತುರ್ವ್ಯೂಹಮೂರ್ತಿಯಾದ)ಸಾತ್ವತಾಂಪತಯೇ-ಯಾದವರೊಡೆಯಂಗೆ, ನಮೋನಮಃ-ನಮಸ್ಕಾರವುನಮಸ್ಕಾರವು ‖೪೫‖ಗುಣಪ್ರದೀಪಾಯ-ಗುಣ-ಅಂತಃಕರಣಾದಿಗಳನ್ನು, ಪ್ರದೀಪಾಯ-ಬೆಳಗುತಲಿರುವ, ಗುಣಾತ್ಮಛಾದನಾಯಚ-ಗುಣ-ಅಂತಃಕರಣಾದಿಗಳಿಂದ, ಆತ್ಮ-ತನ್ನ, ಛಾದನಾಯ-ಮುಚ್ಚುವಿಕೆಯುಳ್ಳವನಾದ,)ಉಪಾಧಿಯಿಂದಹಲವುಬಗೆಯಾಗಿತೋರುತಲಿರುವ)ಗುಣವೃತ್ತ್ಯುಪಲಕ್ಷ್ಯಾಯ-ಗುಣ-ಚಿತ್ತಾದಿಗಳ, ವೃತ್ತಿ-ಚೇತನಾಧ್ಯವಸಾಯಾದಿವೃತ್ತಿಗಳಿಂದ, ಉಪಲಕ್ಷ್ಯಾಯ-ಕಾಣತಕ್ಕವನಾದ, ಗುಣದ್ರಷ್ಟ್ರೇ-ಗುಣಗಳಿಗೆಸಾಕ್ಷಿಯಾದ, ಸ್ವಸಂವಿದೇ-ಸ್ವಪ್ರಕಾಶನಾದ, ಸ್ವರೂಪಜ್ಞಾನವಾದ, ನಿನಗೆನಮಃ-ನಮಸ್ಕಾರವು‖೪೬‖ಹೃಷೀಕೇಶ- ಕರಣಗಳಿಗೆಪ್ರವರ್ತಕನೇ! ಅವ್ಯಾಕೃತವಿಹಾರಾಯ-ಅವ್ಯಾಕೃತ-ಅತರ್ಕ್ಯವಾದ, ವಿಹಾರಾಯ-ಮಹಿಮೆಯುಳ್ಳ, ಸರ್ವವ್ಯಾಕೃತಿಸಿದ್ಧಯೇ-ಸರ್ವ ವ್ಯಾಕೃತಿ- ಸರ್ವಕಾರ್ಯೋತ್ಪತ್ತಿಯಿಂದ, ಸಿದ್ಧಯೇ-ಲಕ್ಷಿಸಲ್ಪಡತಕ್ಕವನಾದ, ಮುನಯೇ-ಆತ್ಮಾರಾಮನಾದ, ಮೌನಶೀಲಿನೇ- ಸುಮ್ಮನಿರುವಿಕೆಯೇಸ್ವಭಾವವಾಗಿ ಉಳ್ಳವನಾದ, ತೇ-ನಿನಗೆ, ನಮಃ-ನಮಸ್ಕಾರವು, ಅಸ್ತು-ಆಗಲಿ ‖೪೭‖ಪರಾಪರಗತಿಜ್ಞಾಯ- ಪರಾವರ- ಸ್ಥೂಲಸೂಕ್ಷ್ಮಗಳ, ಗತಿಜ್ಞಾಯ-ಗತಿಯನ್ನುಸಂಬಂಧಿಸದೇತಿಳಿಯುತಲಿರುವ, ಸರ್ವಾಧ್ಯಕ್ಷಾಯ-ಸರ್ವಕ್ಕೂಅಧಿಷ್ಠಾನವಾದ, ಅವಿಶ್ವಾಯ-ದಿಟವಾಗಿತನ್ನೊ

---

ಸಮಸ್ತವೇದರೂಪವಾದ ನಿಶ್ವಾಸವುಳ್ಳ, ಪ್ರವೃತ್ತನಾಗಿಯೂ ನಿವೃತ್ತನಾಗಿಯೂ ವೇದಸ್ವರೂಪನಾಗಿಯೂ ಇರುವ ನಿನಗೋಸುಗ ನಮಸ್ಕಾರವು* [ದೇಹಿಯುನೋಡುವದಕ್ಕೆ ಕಣ್ಣುಕರಣವಾಗಿದೆ. ಕಣ್ಣುನೋಡುವುದಕ್ಕೆ ಆತ್ಮನು ಕರಣವಾಗಿರುವನು. ಈಮೇರೆ ಇಂದ್ರಿಯಂಗಳಿಗೆ ಇಂದ್ರಿಯವಾಗಿರುವನೆಂದರೆ ಇಂದ್ರಿಯ ಶಕ್ತಿಸ್ವರೂಪನೆಂಬುಭಾವವು.ದೇಹಿಗಳಂತೆ ಕರಣಗಳನಪೇಕ್ಷಿಸದೆ ಅಶರೀರನಾದರೂ ಮಾಯೆಯಿಂದ ಶರೀರಿಯಂತೆಕಾರ್ಯನಿರ್ವಾಹಕನಾಗಿರುವನೆಂದು ಭಾವವು. ‖೪೪‖ ಮತ್ತು ಸಂಕರ್ಷಣನು ವಾಸುದೇವನು ಪ್ರದ್ಯುಮ್ನನು 'ಅನಿರುದ್ಧನು ಹೀಗೆ ಚತುರ್ವ್ಯೂಹಮೂರ್ತಿಸ್ವರೂಪನಾದ, ಮತ್ತು ತನ್ನಭಕ್ತರಿಗೆ ಸಾಲೋಕ್ಯಾದಿಮುಕ್ತಿಗಳನಿತ್ತು ಪಾಲಿಸುವ, ಶ್ರೀಕೃಷ್ಣನಾದನಿನಗೆ ನಮಸ್ಕಾರವು. ‖೪೫‖ ಮತ್ತು ಚಿತ್ತಾದಿಗಳನ್ನು ಪ್ರಕಾಶಗೊಳಿಸುತಲಿರುವ, ಆಚಿತ್ತಾದಿಗಳಿಂದಲೇ ಉಪಾಸಕರಿಗೆ ವಿಚಿತ್ರಗಳಾದ ಫಲಗಳನ್ನು ಕಲ್ಪಿಸಲೋಸುಗ ಆತ್ಮಸ್ವರೂಪವನ್ನು ಮುಚ್ಚಿಕೊಂಡು ಹಲವುರೂಪದಿಂದಪ್ರಕಾಶಿಸುವ, ಮತ್ತು ಆಚಿತ್ತಾದಿವೃತ್ತಿಗಳಿಂದ ಅತಿಪ್ರಯಾಸದಿಂ ಕಾಣಲುಯೋಗ್ಯನಾದ, ಆಚಿತ್ತಾದಿವೃತ್ತಿಗಳಿಗೆ ಸಾಕ್ಷಿರೂಪನಾಗಿಯೂ ಅಗೋಚರನಾಗಿಯೂ ಇರುವ, ನಿನಗೆ ನಮಸ್ಕಾರವು. ‖೪೬‖ ಎಲೈ, ಸಕಲೇಂದ್ರಿಯಪ್ರವರ್ತಕನಾದಹರಿಯೇ! ಮತ್ತು ಊಹಿಸಲಶಕ್ಯವಾದ ಮಹಿಮೆಯುಳ್ಳವನಾಗಿ, ಆಕಾಶಾದಿಸಮಸ್ತಕಾರ್ಯಗಳ ಉತ್ಪತ್ತಿಪ್ರಕಾಶಗಳಿಗೆ ಕಾರಣತ್ವದಿಂದ ತಿಳಿಯಲುಯೋಗ್ಯನಾಗಿ, ಆತ್ಮಾರಾಮನಾಗಿ, ಮೌನಶೀಲನಾಗಿಯೂ, ಇರುವ ನಿನಗೋಸುಗ ನಮಸ್ಕಾರವು. ‖೪೭‖ ಮತ್ತು ಕಾರ್ಯಕಾರಣಂಗಳಗತಿಯಂ ತಿಳಿದವನಾದುದರಿಂದ ಒಂದರಲ್ಲಿಯೂ ಆಸಕ್ತನಾಗದೇಇರುವನಾಗಿಯೂ, ಸರ್ವಪ್ರಪಂಚಕ್ಕೂ ಅಧಿಷ್ಠಾತೃವಾಗಿಯೂ, ಆ ಪ್ರಪಂಚದನಿಷೇಧಕ್ಕೆ ಅವಧಿಭೂತನಾಗಿಯೂ, ಆಪ್ರಪಂಚಕಾರ್ಯಗಳಿಗೆ ಅಧಿಷ್ಠಾನಸ್ವರೂಪನಾಗಿಯೂ, ಆ

ರ್ಯಾಧ್ಯಕ್ಷಾಯತೇನಮಃ । ಅವಿಶ್ವಾಯಚವಿಶ್ವಾಯತದ್ದ್ರಷ್ಟ್ರೇಽಸ್ಯಚಹೇತವೇ ॥೪೮॥ ತ್ವಂಹ್ಯಸ್ಯಜನ್ಮಸ್ಥಿತಿಸಂಯಮಾನ್ವಿಭೋಗುಣೈರನೀಹೋಽಕೃತಕಾಲಶಕ್ತಿಧೃತ್ । ತತ್ತತ್ಸ್ವಭಾವಾನ್ಪ್ರತಿಬೋಧಯನ್ಸತಸ್ಸಮೀಕ್ಷಯಾಮೋಘವಿಹಾರಈಹಸೇ ॥೪೯॥ ತಸ್ಯೈವತೇಮೂಸ್ತನವಸ್ತ್ರಿಲೋಕ್ಯಾಂಶಾಂತಾಅಶಾಂತಾಉತಮೂಢಯೋನಯಃ । ಶಾಂತಾಃಪ್ರಿಯಾಸ್ತೇಹ್ಯಧುನಾವಿತುಂಸತಾಂಸ್ಥಾತುಶ್ಚತೇಧರ್ಮಪರೀಪ್ಸಯೇಹತಃ ॥೫೦॥ ಅಪರಾಧಸ್ಸಕೃದ್ಭರ್ತ್ರಾಸೋಢವ್ಯಸ್ಸ್ವಪ್ರಜಾಕೃತಃ । ಕ್ಷಾಂತುಮರ್ಹಸಿಸರ್ವಾತ್ಮನ್ಮೂಢ

---

ಊಪ್ರಪಂಚವಿಲ್ಲದವನಾದ, ವಿಶ್ವಾಯ-ವಿಶ್ವಕಲ್ಪನಕ್ಕೆ ಅಧಿಷ್ಠಾನವಾದ, ತದ್ದ್ರಷ್ಟ್ರೇ-ತತ್- ಆಪ್ರಪಂಚದಆರೋಪಾಪವಾದಗಳಿಗೆ, ದ್ರಷ್ಟ್ರೇ-ಸಾಕ್ಷಿಯಾದ, ಅಸ್ಯಚ-ಈಪ್ರಪಂಚಾರೋಪಕ್ಕೂನಿಷೇಧಕ್ಕೂ, ಹೇತವೇಚ-:ವಿದ್ಯಾವಿದ್ಯೆಗಳಿಂಕಾರಣವಾದಂಗೆ, ನಮಃ-ನಮಸ್ಕಾರವು ॥೪೮॥[ ೨ಶ್ಲೋಕಗಳಿಂದಪ್ರಾರ್ಥಿಸುವರು ] ಅಮೋಘವಿಹಾರ-ಅಮೋಘ-ವ್ಯರ್ಥವಲ್ಲದ, ವಿಹಾರ- ವಿನೋದವುಳ್ಳ ವಿಭೋ-ವ್ಯಾಪಕನಾದಕೃಷ್ಣನೇ! ತ್ವಂ-ನೀನು, ಅಕೃತಕಾಲಶಕ್ತಿಧೃತ್-ಅಕೃತ-ಕೃತ್ರಿಮವಲ್ಲದ,(ಸ್ವಾಭಾವಿಕವಾದ, ಕಾಲಶಕ್ತಿಧೃತ್-ಕಾಲಸಾಮರ್ಥ್ಯವನ್ನು ಧರಿಸಿದವನಾಗಿ, ಸತಃ-ಅನಾದಿಯಾಗಿರುವ, ತತ್ತತ್ಸ್ವಭಾವಾನ್-ಆಯಾವಸ್ತುಗಳಸ್ವಭಾವಗಳನ್ನು,ಪ್ರತಿಬೋಧಯನ್-ಸಮೀಕ್ಷಯಾ-ಸಂಕಲ್ಪಮಾತ್ರವಾದದೃಷ್ಟಿಯಿಂದ, ಪ್ರತಿಬೋಧಯನ್ -ವ್ಯಕ್ತಗೊಳಿಸುವನಾಗಿ, ಅನೀಹೋಪಿ- ಇಚ್ಛೆಯಿಲ್ಲದವನಾದರೂ, ಅಸ್ಯ-ಈಪ್ರಪಂಚದ, ಜನ್ಮಸ್ಥಿತಿಸಂಯಮಾನ್-ಉತ್ಪತ್ತಿಪಾಲನಸಂಹಾರಗಳನ್ನು, ಗುಣೈಃ- ಸತ್ವರಜಸ್ತಮೋಗುಣಗಳಿಂದ, ಈಹಸೇ-ಬಯಸುತಲಿರುವಿಯಲ್ಲವೆ; ॥೪೯॥ತಸ್ಯೈವ-ಅಪನೇಆದ, ತೇ-ನಿನ್ನ, ಅಮೂಸ್ತನವಃ-ಈಕ್ರೀಡೋಪಕರಣಂಗಳಾದಮೂರ್ತಿಗಳು, ತ್ರಿಲೋಕ್ಯಾಂ- ಮೂರುಲೋಕದಲ್ಲಿ, ಶಾಂತಾಃ-ಸಾಮ್ಯವಾಗಿರುವವು ಅಶಾಂತಾಃ-ಕ್ರೂರವಾಗಿರುವವು, ಉತ-ಮತ್ತು, ಮೂಢಯೋನಯಃ-ಜ್ಞಾನವೃತ್ತಿವ್ಯಕ್ತವಲ್ಲದಜನ್ಮವುಳ್ಳವು ( ಹೀಗೆಮೂರುಬಗೆಯಾಗಿವೆ )ಅಧುನಾ- ಈಗ, ಧರ್ಮಪರೀಪ್ಸಯಾ-ಧರ್ಮಪಾಲನೇಚ್ಛೆಯಿಂದ, ಈಹತಃ-ಪ್ರವರ್ತಿಸಿದವನಾದ್ದರಿಂದಲೇ, ಸತಾಂ-ಸತ್ಪುರುಷರನ್ನು, ಅವಿತುಂ-ರಕ್ಷಿಸುವದಕ್ಕೆ, ಸ್ಥಾತುಶ್ಚ-ಕೃಷ್ಣನಾಗಿರುವನೂಆದ, ತೇ-ನಿನಗೆ, ಶಾಂತಾಃ-ಸೌಮ್ಯಮೂರ್ತಿಗಳಾದ, ತೇ- ಆಸಾಧುಗಳು, ಪ್ರಿಯಾಃ- ಇಷ್ಟರಾಗಿರುವರು ॥೫೦॥ಭರ್ತ್ರಾ-ರಕ್ಷಕನಾದವನಿಂದ, ಸ್ವಪ್ರಜಾಕೃತಃ-ಸ್ವ-ತನ್ನ, ಪ್ರಜಾಕೃತಃ- ಮಕ್ಕಳಿಂದಮಾಡಲ್ಪಟ್ಟ, ಅಥವಾಜನಗಳಿಂದಮಾಡಲ್ಪಟ್ಟ, ಅಪರಾಧಃ-ತಪ್ಪು, ಸಕೃತ್-ಒಂದುಸಲ, ಸೋಢವ್ಯಃ-ಕ್ಷಮಿಸಲ್ಪಡತಕ್ಕದ್ದು. ಸರ್ವಾತ್ಮನ್-ಸರ್ವಕ್ಕೂಸ್ವರೂಪವಾಗಿರುವಕೃಷ್ಣನೇ! ಮೂಢಸ್ಯ-ಮುಗ್ಧನಾದ್ದರಿಂದಲೇ, ತ್ವಾಂ-ನಿನ್ನನ್ನು, ಅಜಾನತಃ- ತಿಳಿಯದೇಇರುವ, ಕಾಳಿಯನಅಪರಾ

---

ಪ್ರಪಂಚದ ಅಧ್ಯಾಸಾಪವಾದಗಳಿಗೆ ಸಾಕ್ಷಿರೂಪನಾಗಿಯೂ ಅವಿದ್ಯೆಯಿಂದ ಆಪ್ರಪಂಚದ ಅಧ್ಯಾಸಕ್ಕೆ ವಿದ್ಯೆಯಿಂದ ಆಪ್ರಪಂಚದ ಅಪವಾದಕ್ಕೆಸಹ ಕಾರಣರೂಪನಾಗಿಯೂ, ಇರುವನಾದುದರಿಂದ ಸರ್ವಗತಿಜ್ಞತ್ವ ಸರ್ವಾಧಿಷ್ಠಾತೃತ್ವ ಆತ್ಮಾರಾಮತ್ವ ಮೊದಲಾದಗುಣಂಗಳಿಂದ ಸರ್ವೋತ್ಕೃಷ್ಟವಾದ ಐಶ್ವರ್ಯವುಳ್ಳನಿನಗೆ ನಮಸ್ಕಾರವು ॥೪೮॥ ಎಲೈ, ವಿಭುವಾದಶ್ರೀಕೃಷ್ಣನೇ ವಸ್ತುತಃ (ದಿಟವಾಗಿ) ವ್ಯಾಪಾರರಹಿತನಾದನೀನು ಅನಾದಿಯಾದಕಾಲಶಕ್ತಿಯಂಧರಿಸಿದವನಾಗಿ ಸತ್ವರಜಸ್ತಮೋಗುಣಂಗಳಿಂದ ಈಜಗತ್ತಿನ ಸೃಷ್ಟಿಸ್ಥಿತಿಲಯಂಗಳಂ ಮಾಡುತಲಿರುವಿ. ಮತ್ತು ಆಮೋಘವಾದವಿಹಾರವುಳ್ಳನೀನೇ ಸಂಸ್ಕಾರರೂಪದಿಂದಿರುವ ಶಾಂತಕ್ರೂರತ್ವಾದಿಗಳಾದ ಆಯಾಸ್ವಭಾವಂಗಳಂ ನಿನ್ನ ದೃಷ್ಟಿಮಾತ್ರದಿಂದಲೇ ಪ್ರತಿಬೋಧನಂಗೆಯ್ವುತ ಕ್ರೀಡಿಸುವೆ. ॥೪೯॥ ಆದ್ದರಿಂದ ಮೂರುಲೋಕಂಗಳಲ್ಲಿಯೂ ಇರುವ ಶಾಂತರಾದಪ್ರಾಣಿಗಳು ಅಶಾಂತರಾದಪ್ರಾಣಿಗಳು ಮೂಢಜನ್ಮದಲ್ಲಿ ಹುಟ್ಟಿರುವ ಜಂತುಗಳು ಕೂಡ ಆ ನಿನ್ನ ಕ್ರೀಡಾಸಾಮಗ್ರಿಗಳಾಗಿರುವವರಾದರೂ ನೀನು ಸತ್ಪುರುಷರಧರ್ಮಗಳಂ ಪರಿಪಾಲಿಸಲಿಚ್ಛೆಯಿಂ ಪ್ರವರ್ತಿಸುವನಾದುದರಿಂದ ಆಸತ್ಪುರುಷರನ್ನು ಸಂರಕ್ಷಿಸಲೋಸುಗ ಅವತರಿಸಿರುವನಿನಗೆ ಈಸಮಯದಲ್ಲಿಶಾಂತರಾದಪ್ರಾಣಿಗಳೇ ಪ್ರಿಯರಾಗಿಹರು.॥೫೦॥ಎಲೈ, ಪರಮಶಾಂತಸ್ವಭಾವನಾದ ಶ್ರೀಹರಿಯೇ ನಮಗೆಪತಿಯಾದ ನಿನಗೆ ಪುತ್ರಪ್ರಾಯನಾದ, ನಿನ್ನಸ್ವರೂಪವನರಿಯದಿರುವ, ಈಕಾಳಿಯನೆಂಬಸರ್ಪನಿಂದ ಮಾಡಲ್ಪಟ್ಟಅಪರಾಧವು ಒಂದುಬಾರಿನಿನ್ನಿಂದ ಕ್ಷಮಿಸಲ್ಪಡತಕ್ಕದ್ದು.॥೫೧॥ಎಲೈ,ಭಗವಂತನೇ! ಈಕಾಳಿಯನು ನಿನ್ನಪಾದಘಾತಂಗಳಿಂದ ಪ್ರಾ

ಸ್ಯತ್ವಾಮಜಾನತಃ ॥೫೦॥ ಅನುಗೃಹ್ಣೀಷ್ವ ಭಗವನ್ ಪ್ರಾಣಾಂಸ್ತ್ಯಜತಿ ಪನ್ನಗಃ । ಸ್ತ್ರೀಣಾಂ ನಃ ಸಾಧುಶೋಚ್ಯಾನಾಂ ಪತಿಃ ಪ್ರಾಣಃ ಪ್ರದೀಯತಾಮ್ ॥೫೧॥ ವಿಧೇಹಿ ತೇ ಕಿಂಕರೀಣಾಮನುಷ್ಠೇಯಂ ತವಾಜ್ಞಯಾ । ಯಚ್ಛ್ರದ್ಧಯಾನುತಿಷ್ಠನ್ ವೈ ಮುಚ್ಯತೇ ಸರ್ವಬಂಧನಾತ್ ॥೫೨॥ ಬಾದರಾಯಣಿಃ । ಇತ್ಥಂ ಸ ನಾಗಪತ್ನೀಭಿರ್ಭಗವಾನ್ ಸಮಭಿಷ್ಟುತಃ । ಮೂರ್ಛಿತಂ ಭಗ್ನಶಿರಸಂ ವಿಸಸರ್ಜಾಂಘ್ರಿಕುಟ್ಟನೈಃ ॥೫೩॥ ಪ್ರತಿಲಬ್ಧೇಂದ್ರಿಯಪ್ರಾಣಃ ಕಾಲೀಯಃ ಶನಕೈರ್ಹರಿಮ್ । ಕೃಚ್ಛ್ರಾತ್ ಸಮುಚ್ಛ್ವಸನ್ ದೀನಃ ಕೃಷ್ಣಂ ಪ್ರಾಹ ಕೃತಾಂಜಲಿಃ ॥೫೪॥ ಕಾಲೀಯಃ ॥ ವಯಂ ಖಲಾಃ ಸಹೋತ್ಪತ್ತ್ಯಾ ತಾಮಸಾ ದೀರ್ಘಮನ್ಯವಃ । ಸ್ವಭಾವೋ ದುಸ್ತ್ಯಜೋ ನಾಥ ಭೂ

---

ಧವನ್ನು, ಕ್ಷಂತುಂ-ಸೈರಿಸಲು, ಅರ್ಹಸಿ-ಯೋಗ್ಯನಾಗುವಿ ॥೫೦॥ ಭಗವನ್-! ಕೃಷ್ಣನೇ! ಪನ್ನಗಃ-ಕಾಳಿಯನು, ಪ್ರಾಣಾನ್-ಅಸುಗಳನ್ನು, ತ್ಯಜತಿ-ಬಿಡುತಲಿರುವನು. ಅನುಗೃಹ್ಣೀಷ್ವ-ದಯೆಮಾಡು, ಸಾಧು-ಚನ್ನಾಗಿ, ಶೋಚ್ಯಾನಾಂ- ಅನುತಾಪಗೊಳ್ಳಲ್ತಕ್ಕ ಸ್ತ್ರೀಣಾಂ-ಹೆಂಗಳಾದ, ನಃ ನಮಗೆ-ಪತಿಪ್ರಾಣಃ-ಗಂಡನಪ್ರಾಣವು, ಪ್ರದೀಯತಾಂ-ನಿನ್ನಿಂದ ಕೊಡಲ್ಪಡಲಿ ॥೫೧॥ ಯತ್-ಯಾವ ಕೆಲಸವನ್ನು, ಶ್ರದ್ಧಯಾ- ಆವಶ್ಯಕತೆಯಿಂದ, ಅನುತಿಷ್ಠನ್- ಮಾಡುತಲಿರುವ ಪುರುಷನು, ಸರ್ವಬಂಧನಾತ್- ಸಕಲನಿರ್ಬಂಧದಿಂದಲೂ, ವೈ-ಪ್ರಸಿದ್ಧವಾಗಿ, ಮುಚ್ಯತೇ-ಬಿಡಲ್ಪಡುವನೋ, ತವ-ನಿನ್ನ, ಆಜ್ಞಯಾ-ಶಾಸನದಿಂದ, ಅನುಷ್ಠೇಯಂ- ಆಚರಿಸಲ್ಪಡತಕ್ಕ, ತತ್-ಆ ಕೆಲಸವನ್ನು, ತೇ ಕಿಂಕರೀಣಾಂ-ನಿನ್ನ ದಾಸಿಯರಾದ ನಮಗೆ, ವಿಧೇಹಿ-ಆಜ್ಞಾಪಿಸು ॥೫೨॥ ( ಶುಕವಾಕ್ಯವು ) ಸ ಭಗವಾನ್-ಆ ಕೃಷ್ಣನು, ಇತ್ಥಂ- ಹೀಗೆ, ನಾಗಪತ್ನೀಭಿಃ- ಕಾಳಿಯನ ಹೆಂಡಿರಿಂದ, ಸಮಭಿಷ್ಟುತಸ್ಸನ್- ಚನ್ನಾಗಿ ಕೊಂಡಾಡಲ್ಪಟ್ಟವನಾಗಿ, ಅಂಘ್ರಿಕುಟ್ಟನೈಃ-ತನ್ನ ಕಾಲುಗಳ ತುಳಿದಾಟಗಳಿಂದ, ಭಗ್ನಶಿರಸಂ-ಒಡೆದ ತಲೆಗಳುಳ್ಳವನಾದ್ದರಿಂದಲೇ, ಮೂರ್ಛಿತಂ-ಮೈಮರೆತಿರುವ ಸರ್ಪನನ್ನು, ವಿಸಸರ್ಜ ಒದೆಯದೇ ಬಿಟ್ಟನು ॥೫೩॥ ಪ್ರತಿಲಬ್ಧೇಂದ್ರಿಯಪ್ರಾಣಃ- ಪ್ರತಿಲಬ್ಧ- ಮರಳಿ ಯೂ ಪಡೆಯಲ್ಪಟ್ಟ, ಇಂದ್ರಿಯ-ಕರಣಗಳೂ, ಪ್ರಾಣಃ-ಅಸುಗಳೂ ಉಳ್ಳ, ಕಾಳಿಯಃ-ಸರ್ಪವು, ಕೃಚ್ಛ್ರಾತ್-ಪ್ರಯಾಸದಿಂದ, ಶನಕೈಃ-ಮೆಲ್ಲಗೆ, ಸಮುಚ್ಛ್ವಸನ್-ಚನ್ನಾಗಿ ಉಸುರಿಕ್ಕುತಲಿರುವ, ದೀನಃ-ಬಡವನಾಗಿ, ಕೃತಾಂಜಲಿಃ-ಕೈಜೋಡಿಸಿಕೊಂಡವನಾಗಿ, ಹರಿಂ- ಕಷ್ಟಗಳನ್ನು ಪರಿಹರಿಸುವ, ಕೃಷ್ಣಂ-ಕೃಷ್ಣನನ್ನು ಕುರಿತು, ಪ್ರಾಹ-ಹೇಳಿಕೊಂಡನು ॥೫೪॥ ( ಕಾಳಿಯನ ವಿಜ್ಞಾಪನವು ) ನಾಥ-ಒಡೆಯನೇ! ವಯಂ-ನಾವು, ಉತ್ಪತ್ತ್ಯಾ ಸಹ- ಜನ್ಮದೊಡನೆ, ಖಲಾಃ-ದುಷ್ಟರಾಗಿರುವೆವು. ತಾಮಸಾಃ- ತಮೋಗುಣಪ್ರಧಾನರು, ದೀರ್ಘಮನ್ಯವಃ- ದೀರ್ಘ-ಬಹುಕಾಲವಿರುವ, ಮನ್ಯವಃ ಸಿಟ್ಟು ಮತ್ಸರವುಳ್ಳವರು ಭೂತಾನಾಂ- ಪ್ರಾಣಿಗಳಿಗೆ, ಯತ್- ಯಾವಕಾರಣದಿಂದ, ಅಸದ್ಗ್ರಹಃ- ದುರಭಿಮಾನವುಂಟಾಗುವುದೋ, ಅಥವಾ ದುರ್ವಿಷಯಗಳು ಗ್ರಹಿಸಲ್ಪಡುವುದೋ, ಅಥವಾ ಅಸತ್ತಾದ ದೇಹಾದಿಗಳಲ್ಲಿ, ಆತ್ಮಾಧ್ಯಾಸವುಂಟಾಗುವುದೋ, ತತ್- ಆ ಕಾರಣದಿಂದ, ಸ್ವಭಾವಃ- ಆ ಸಹಜಶೀಲವು, ದುಸ್ತ್ಯಜಃ- ಪ್ರಯಾಸದಿಂದಲೂ ಬಿಡಲಶ

---

ಕ್ಯಂಗಳಾಗಿಡುವನು. ಆದುದರಿಂದ ಶೀಘ್ರದಿಂ ಇವನಲ್ಲಿ ಅನುಗ್ರಹಂಗೆಯ್ಯುವನಾಗು. ಸಾಧುಗಳಿಂದ ದಯೆಗೆಯ್ಯಲು ಯೋಗ್ಯರಾದ ಸ್ತ್ರೀಯರಾದ ನಮಗೆ ಪತಿಯೇ ಪ್ರಾಣಸ್ವರೂಪನಾದುದರಿಂದ ನೀನು ನಮಗೆ ಪತಿಯನ್ನು ಕೊಡುವನಾಗು. ॥೫೧॥ ಯಾವವನ ಆಜ್ಞೆಯನ್ನು ವಿಶ್ವಾಸದಿಂದ ಅನುವರ್ತಿಸಿ ನಡೆಯುವ ಪುರುಷನು ಸಮಸ್ತಭಯದ ಪಸೆಯಿಂದ ಮುಕ್ತನಾಗುವನೋ, ಅಂತಾ ನಿನ್ನ ಆಜ್ಞೆಯಿಂದ ನಿನಗೆ ದಾಸಿಯರಾದ ನಮಗೆ ಮಾಡತಕ್ಕ ಕಾರ್ಯವಂ ನಿರೂಪಿಸುವನಾಗು. ॥೫೨॥ ಎಲೈ, ಪರೀಕ್ಷಿದ್ರಾಯನೇ! ಭಗವಂತನಾದ ಶ್ರೀಕೃಷ್ಣನು ಈ ರೀತಿಯಾಗಿ ನಾಗಪತ್ನಿಯರಿಂದ ಅತ್ಯಂತಸ್ತುತಿಸಲ್ಪಟ್ಟವನಾಗಿ ಪಾದಗತಿಗಳಿಂದ ಭಗ್ನಗಳಾದ ಶಿರಸ್ಸುಗಳುಳ್ಳದಾದುದರಿಂದಲೇ ಮೂರ್ಛಿತವಾದ ಕಾಳೀಯಸರ್ಪವಂ ಬಿಟ್ಟನು. ॥೫೩॥ ಆಗ ಕಾಳಿಯನೆಂಬ ನಾಗೇಂದ್ರನು ಮೆಲ್ಲಮೆಲ್ಲನೆ ಪಡೆಯಲ್ಪಟ್ಟ ಇಂದ್ರಿಯಗಳೂ ಪ್ರಾಣಗಳೂ ಉಳ್ಳವನಾಗಿ ಅತಿಕಷ್ಟದಿಂದ ನಿಟ್ಟುಸುರಂಬಿಡುತ್ತ ದೀನನಾಗಿ ಅಂಜಲಿಬಂಧವಂ ಗೆಯ್ದವನಾಗಿ ಶ್ರೀಕೃಷ್ಣನಂ ಕುರಿತು ವಿಜ್ಞಾಪಿಸುವನು. ಅದೆಂತೆನೆ- ॥೫೪॥ ಎಲೈ, ಸ್ವಾಮಿಯೇ! ಪ್ರಾಣಿಗಳಿಗೆ ಯಾವ ಸ್ವಭಾವದಿಂದ ಅಸತ್ಯಗಳಾದ ದೇಹಾದಿಗಳಲ್ಲಿ ನಾನೆಂಬ ಆಗ್ರಹವು ತೋರೆಯಲಶಕ್ಯವೋ ಆ ಸ್ವಭಾವವನ್ನು ಉತ್ಪತ್ತಿಯೊಡನೆಯೇ ದುಷ್ಟರಾಗಿ ತಮೋಗುಣಪ್ರಧಾನರಾಗಿ ದೀರ್ಘಕೋಪಯುಕ್ತರಾಗಿಯೂ ಇರುವ ನಾವು ಎಂತು ತ್ಯಜಿಸಲು ಸಮರ್ಥರಾಗುವೆವು [ ಸಹಜಸ್ವ

ತಾಸಾಂ ಯದಸದ್ಗ್ರಹಃ ॥೫೬॥ ತ್ವಯಾ ಸೃಷ್ಟಮಿದಂ ಸರ್ವಂ ಧಾತರ್ಗುಣವಿಸರ್ಜನಂ । ನಾನಾಸ್ವಭಾವವೀ
ರ್ಯೌಜೋಯೋನಿಬೀಜಾಶಯಾಕೃತಿ ॥೫೭॥ ವಯಂ ಚ ತತ್ರ ಭಗವನ್ ಸರ್ಪಾ ಜಾತ್ಯುರುಮನ್ಯವಃ । ಕಥಂ ತ್ಯ
ಜಾಮಸ್ತ್ವನ್ಮಾಯಾಂ ದುಸ್ತ್ಯಜಾಂ ಮೋಹಿತಾಸ್ಸ್ವಯಂ ॥೫೮॥ ಭವಾನ್ ಹಿ ಕಾರಣಂ ತತ್ರ ಸರ್ವ
ಜ್ಞೋ ಜಗದೀಶ್ವರಃ । ಅನುಗ್ರಹಂ ನಿಗ್ರಹಂ ವಾ ಮನ್ಯಸೇ ತದ್ವಿಧೇಹಿ ನಃ ॥೫೯॥ ಶ್ರೀಶುಕಃ ॥ ಇತ್ಯಾಕರ್ಣ್ಯ ವ
ಚಃ ಪ್ರಾಹ ಭಗವಾನ್ ಕಾರ್ಯಮಾನುಷಃ । ನಾತ್ರ ಸ್ಥೇಯಂ ತ್ವಯಾ ಸರ್ಪ ಸಮುದ್ರಂ ಯಾಹಿ ಮಾ ಚಿರಂ । ಸ್ವಜ್ಞಾ

---

ಕ್ಯವು ॥೫೬॥ ಹೇ ಧಾತಃ-ಎಲೈ ಸೃಷ್ಟಿಕರ್ತನೇ-ಗುಣವಿಸರ್ಜನಂ-ಗುಣ-ಸತ್ವಾದಿತ್ರಿಗುಣಗಳಿಂದ, ವಿಸರ್ಜನಂ-ಹಲವುಬಗೆಯಾದ, ಹುಟ್ಟುವಿಕೆಯುಳ್ಳ, ಇದಂ ಸರ್ವಂ-ಈ ಪ್ರಪಂಚವೆಲ್ಲವೂ, ನಾನಾ .... ಕೃತಿ-ನಾನಾ-ಹಲವಾದ, ಸ್ವಭಾವ-ಸಹಜಶೀಲಗಳು, ವೀರ್ಯ-ಶಕ್ತಿ, ಓಜಃ-ಪರಾಕ್ರಮ-ಯೋನಿ-ಜನ್ಮಜಾತಿ-ಬೀಜ-ಪ್ರಕೃತಿ-ಕಾರಣ, ಆಶಯ-ಅಭಿಪ್ರಾಯ, ಆಕೃತಿ-ಆಕಾರ, ಗಳುಳ್ಳದ್ದಾಗಿ, ತ್ವಯಾ-ನಿನ್ನಿಂದ, ಸೃಷ್ಟಂ-ಹುಟ್ಟಿಸಲ್ಪಟ್ಟಿತು ॥೫೭॥ ಭಗವಾನ್- ಸರ್ವಜ್ಞನಾದ ಕೃಷ್ಣನೆ! ವಯಂ ಚ- ನಾವಾದರೋ, ತತ್ರ ಹಲವುಬಗೆಯಾದ ಆ ಪ್ರಪಂಚದಲ್ಲಿ, ಸರ್ಪಜಾತ್ಯಾ-ಹಾವುಗಳ ಜಾತಿಯಿಂದ, ಉರುಮನ್ಯವಃ-ಹೆಚ್ಚಾದ ಸಿಟ್ಟುಳ್ಳವರಾಗಿರುವೆವು. ತ್ವಯಾ-ನಿನ್ನಿಂದ, ಮೋಹಿತಾಃ-ಮರಹುಗೊಳಿಸಲ್ಪಟ್ಟ ನಾವು, ದುಸ್ತ್ಯಜಾಂ-ಪ್ರಯಾಸದಿಂದಲೂ ಬಿಡುವುದಕ್ಕೆ ಶಕ್ಯವಲ್ಲದ, ತ್ವನ್ಮಾಯಾಂ-ತ್ವತ್-ನಿನ್ನ, ಮಾಯಾಂ-ಆವರಣಾಜ್ಞಾನಶಕ್ತಿಯನ್ನು, ಕಥಂ-ಹೇಗೆ, ತ್ಯಜಾಮಃ-ಬಿಡಲಾಪುವೆವು ॥೫೮॥ ತತ್ರ-ಹಾಗೆ ನಾವು ಸರ್ಪಗಳಾಗಿರುವವಿಷಯದಲ್ಲಿ, ಭವಾನ್-ನೀನು, ಕಾರಣಂ ಹಿ-ನಿಮಿತ್ತನಾಗಿ ಇರುವಿಯಲ್ಲವೆ; ಸರ್ವಜ್ಞಃ-ಎಲ್ಲವಂ ಬಲ್ಲವನಾಗಿಯೂ, ಜಗದೀಶ್ವರಃ- ಪ್ರಪಂಚಕ್ಕೊಡೆಯನಾಗಿಯೂ ಇರುವ ನೀನು, ಅನುಗ್ರಹಂ-ರಕ್ಷಣವನ್ನಾಗಲೀ, ನಿಗ್ರಹಂ ವಾ- ಶಿಕ್ಷೆಯನ್ನಾಗಲೀ, ಯತ್-ಯಾವುದನ್ನು, ಮನ್ಯಸೇ-ತಕ್ಕದ್ದೆಂದು ತಿಳಿಯುವೆಯೋ, ತತ್-ಅದನ್ನು, ನಃ-ನಮಗೆ, ವಿಧೇಹಿ-ಮಾಡು ॥೫೯॥ (ಶುಕವಾಕ್ಯವು.) ಕಾರ್ಯಮಾನುಷಃ-ಕಾರ್ಯ-ಧರ್ಮಸಂಸ್ಥಾಪನಕ್ಕಾಗಿ, ಮಾನುಷಃ-ಮಾಯೆಯಿಂದ ಮನುಷ್ಯನಾಗಿ ತೋರುತಲಿರುವ, ಭಗವಾನ್-ಪರಮೇಶ್ವರನಾದ ಕೃಷ್ಣನು, ಇತಿ ವಚಃ-ಇಂತೆಂಬ ಕಾಳಿಯನ ಮಾತನ್ನು, ಆಕರ್ಣ್ಯ-ಕೇಳಿ. ಪ್ರಾಹ-ಹೇಳಿದನು (ಏನೆಂದರೆ-) ಸರ್ಪ-ಎಲೆ ಹಾವೇ! ತ್ವಯಾ-ನಿನ್ನಿಂದ- ಅತ್ರ-ಈ ಮಡುವಿನಲ್ಲಿ, ನಸ್ಥೇಯಂ-ಇರತಕ್ಕದ್ದಲ್ಲವು. ಸಮುದ್ರಂ-ಕಡಲನ್ನು ಕುರಿತು-ಯಾಹಿ-ಹೋಗು, ಚಿರಂ- ಬಹುಕಾಲವು, ಮಾ-ಬೇಡ; ಅಥವಾ ಮಾಚಿರಂ-ಬೇಗನೆ. ಸ್ವಜ್ಞಾತ್ಯಪತ್ಯದಾರಾಡ್ಯೈಃ-ಸ್ವ-ನಿನ್ನ, ಜ್ಞಾತಿ-ನೆಂಟರು, ಅಪತ್ಯ-ಮಕ್ಕಳು, ದಾರ-ಹೆಂಡಿರು ಆಡ್ಯೈಃ-ಮೊದಲಾದವರೊಡನೆ, ಸಮುದ್ರಂ-ಕಡಲನ್ನು ಕುರಿತು, ಯಾಹಿ ಹೋಗು. ನದೀ-ಯಮುನೆಯು, ಗೋನೃಭಿಃ-ಗೋವುಗ

---

ಭಾವವು ಬಿಡಲಾಗದು.] ॥೫೬॥ ಎಲೈ, ಸೃಷ್ಟಿಕರ್ತನಾದ ಹರಿಯೇ! ನಿನ್ನಿಂದ ಸತ್ವರಜಸ್ತಮೋಗುಣಗಳಿಂ ಹಲವುಬಗೆಯಾಗಿ ಹುಟ್ಟಿಸಲ್ಪಟ್ಟಿರುವ ಈ ಜಗತ್ತು ನಾನಾವಿಧಗಳಾದ ಸ್ವಭಾವ ಪರಾಕ್ರಮ ಬಲ ಕ್ಷೇತ್ರ ಬೀಜ ಅಂತಃಕರಣ ಆಕೃತಿಗಳುವುಳ್ಳದುದಾಗಿರುವುದು. ॥೫೭॥ ಎಲೈ, ಷಡ್ಗುಣೈಶ್ವರ್ಯ ಸಂಪನ್ನನಾದ ಶ್ರೀಕೃಷ್ಣದೇವನೇ! ಅಂತಾ ಪ್ರಪಂಚದಲ್ಲಿಯೂ ಉತ್ಪತ್ತಿಯಿಂದಲೇ ಅಧಿಕವಾದ ಕೋಪವುಳ್ಳ, ಸ್ವಭಾವದಿಂ ಮೋಹಯುಕ್ತರಾದ, ಸರ್ಪಗಳಾದ, ನಾವು ಬಿಡಲಶಕ್ಯವಾದ ನಿನ್ನ ಮಾಯೆಯಂ ಬಿಡಲು ಯಂತು ಯೋಗ್ಯರಾಗುವೆವು? ॥೫೮॥ ಎಲೈ, ಸ್ವಾಮಿಯೇ! ಯಾವಕಾರಣದಿಂದ ಅಂತಾ ನಿನ್ನ ಮಾಯೆಯಂ ತ್ಯಾಗಂಗೆಯ್ವುದರಲ್ಲಿ ಸರ್ವಜ್ಞನಾದ ಜಗದೀಶ್ವರನಾದ ನೀನೇ ಕಾರಣವಾಗಿರುವಿಯೋ ಆ ಕಾರಣದಿಂದ ನೀನು ಅನುಗ್ರಹಂಗೆಯ್ಯುವನಾಗಬೇಕೋ- ಅಥವಾ ಈಶ್ವರನಾದುದರಿಂದ ಲೋಕಬಾಧಕರೆಂದು ನಿಗ್ರಹಂಗೆಯ್ಯಬೇಕೋ- ಅದರಲ್ಲಿ ಯಾವುದು ಯುಕ್ತವೆಂದು ನೀನು ತಿಳಿಯುವೆಯೋ- ಅದಂ ಮಾಡತಕ್ಕದ್ದು ॥೫೯॥ ಎಲೈ, ಪರೀಕ್ಷಿದ್ರಾಯನೆ! ಈ ರೀತಿಯಲ್ಲಿ ಆ ಕಾಳೀಯನಿಂದ ವಿಜ್ಞಾಪನಂಗೆಯ್ಯಲ್ಪಟ್ಟ ವಾಕ್ಯವಂ ಕೇಳಿ, ಕಾರ್ಯಾರ್ಥವಾಗಿ ಮನುಷ್ಯರೂಪವಂ ತಾಳ್ದಿರುವ ಭಗವಂತನಾದ ಶ್ರೀಕೃಷ್ಣನು ಆಜ್ಞಾಪಿಸಿದನದೆಂತೆನೆ ॥*॥ ಎಲೈ, ಕಾಳಿಯನೇ ಈ ಯಮುನಾನದಿಯ ಜಲವು ಗೋವುಗಳಿಂದಲೂ ಮನುಷ್ಯರುಮೊದಲಾದವರಿಂದಲೂ ಸಹ ಪಾನಂಗೆಯ್ಯಲ್ತಕ್ಕುದಾದುದರಿಂದ ಈ ನದಿಯಲ್ಲಿ ಇರ

ತ್ಯಜ ತತ್ರ ಮಾ ಸ್ಥಾ ಸ್ವೈರ್ಜ್ಞಾತಿಭಿರ್ಭುಜ್ಯತಾಂ ನದೀ ॥೬೦॥ ಯ ಏತತ್ಸಂಸ್ಮರೇನ್ಮರ್ತ್ಯಸ್ತುಭ್ಯಂ ಮದನುಶಾಸ
ನಮ್ । ಕೀರ್ತಯನ್ನುಭಯೋಃ ಸಂಧ್ಯೋರ್ನ ಯುಷ್ಮದ್ಭಯಮಾಪ್ನುಯಾತ್ ॥೬೧॥ ಯೋಽಸ್ಮಿನ್ ಸ್ನಾತ್ವಾ
ಹ್ರದೇ ಮತ್ತ್ಯೋ ದೇವಾದೀಂಸ್ತರ್ಪಯೇಜ್ಜಲೈಃ । ಉಪೋಷ್ಯ ವಾ ಸ್ಮರನ್ನರ್ಚೇತ್ಸರ್ವಪಾಪೈಃ ಪ್ರಮುಚ್ಯತೇ ॥
ದ್ವೀಪಂ ರಮಣಕಂ ಹಿತ್ವಾ ಹ್ರದಮೇತಮುಪಾಶ್ರಿತಃ । ಯದ್ಭಯಾತ್ಸ ಸುಪರ್ಣಸ್ತ್ವಾಂ ನಾದ್ಯಾನ್ಮತ್ಪದಲಾಂ
ಛಿತಮ್ ॥೬೩॥ ಋಷಿಃ ॥ ಮುಕ್ತೋ ಭಗವತಾ ರಾಜನ್ ಕೃಷ್ಣೇನಾದ್ಭುತಕರ್ಮಣಾ । ತಂ ಪೂಜಯಾಮಾ
ಸ ಮುದಾ ನಾಗಪತ್ನ್ಯಶ್ಚ ಸಾದರಮ್ ॥೬೪॥ ದಿವ್ಯಾಂಬರಸ್ರಙ್ಮಣಿಭಿಃ ಪರಾರ್ಧ್ಯೈರಪಿ ಭೂಷಣೈಃ ದಿವ್ಯಗಂ

---

ಳಿಂದಲೂ ಮನುಷ್ಯರಿಂದಲೂ, ಭುಜ್ಯತಾಂ-ಅನುಭವಿಸಲ್ಪಡಲಿ॥೬೦॥ಯಃ-ಯಾವ, ಮರ್ತ್ಯಃ-ಮನುಷ್ಯನು, ತುಭ್ಯಂ-ನಿನಗೋಸ್ಕರ, ಮದ
ನುಶಾಸನಂ-ನನ್ನ ಆಜ್ಞೆಯನ್ನು, ಸಂಸ್ಮರೇತ್-ನೆನಪುಗೊಳ್ಳುವನೋ, ಉಭಯೋಃ-ಎರಡಾದ, ಸಂಧ್ಯೋಃ-ಅಹೋರಾತ್ರಸಂಧಿಕಾಲ
ಗಳಲ್ಲಿ, ಕೀರ್ತಯನ್-ಪಠಿಸುತಲಿರುವ ಮನುಷ್ಯನು, ಯುಷ್ಮದ್ಭಯಂ-ನಿಮ್ಮ ಹೆದರಿಕೆಯಿಂದ ಹೆದರಿಕೆಯನ್ನು, ನಾಪ್ನುಯಾತ್-ಹೊಂದುವು
ದಿಲ್ಲವು ॥೬೧॥ ಯಃ-ಯಾವ, ಮರ್ತ್ಯಃ-ಮನುಷ್ಯನು, ಅಸ್ಮಿನ್ ಹ್ರದೇ-ಈ ಮಡುವಿನಲ್ಲಿ, ಸ್ನಾತ್ವಾ-ಮಿಂದು, ಜಲೈಃ- ನೀರುಗಳಿಂದ
ದೇವಾದೀನ್ ದೇವತೆಗಳನ್ನೂ ಪಿತೃಗಳನ್ನೂ ಋಷಿಗಳನ್ನೂ, ತರ್ಪಯೇತ್-ತೃಪ್ತಿಗೊಳಿಸುವನೋ, ಉಪೋಷ್ಯ ವಾ- ನಿರಾಹಾರನಾ
ಗಿದ್ದಾದರೂ, ಸ್ಮರನ್-ನನ್ನನ್ನು ನೆನಪುಗೊಳ್ಳುವನಾಗಿ, ಅರ್ಚೇತ್-ಪೂಜಿಸುವನಾಗುವನೋ, ಸಃ-ಅವನು, ಸರ್ವಪಾಪೈಃ-ಸಕಲದು
ರಿತಂಗಳಿಂದಲೂ, ಪ್ರಮುಚ್ಯತೇ-ಚನ್ನಾಗಿ ಬಿಡಲ್ಪಡುವನು॥೬೨॥ ( ತ್ವಂ-ನೀನು ) ಯದ್ಭಯಾತ್-ಯಾವ ಗರುಡನ ಭಯದಿಂದ, ರಮ
ಣಕಂ ದ್ವೀಪಂ-ರಮಣಕವೆಂಬ ಸಮುದ್ರ ಮಧ್ಯಭೂಮಿಯನ್ನು, ಹಿತ್ವಾ-ಬಿಟ್ಟು, ಏತತ್-ಹ್ರದಂ- ಈ ಮಡುವನ್ನು, ಉಪಾಶ್ರಿತಃ-ಸೇ
ರಿದವನಾಗಿರುವೆಯೋ, ಸಸುಪರ್ಣಃ-ಆ ಗರುಡನು, ಮತ್ಪದಲಾಂಛಿತಂ-ನನ್ನ, ಪದ-ಅಡಿಗಳಿಂದ, ಲಾಂಛಿತಂ-ಗುರುತುಗೊ
ಳಿಸಲ್ಪಟ್ಟ, ತ್ವಾಂ-ನಿನ್ನನ್ನು, ನಾದ್ಯಾತ್-ತಿನ್ನದೇ ಬಿಡುವನು ॥೬೩॥ ( ಶುಕವಚನವು ) ರಾಜನ್-ಅರಸಾದ ಪರೀಕ್ಷಿತನೇ! ಅದ್ಭುತ
ಕರ್ಮಣಾ-ಆಶ್ಚರ್ಯ ವ್ಯಾಪಾರವುಳ್ಳ, ಭಗವತಾ ಕೃಷ್ಣೇನ-ಭಗವಂತನಾದ ಕೃಷ್ಣನಿಂದ, ಮುಕ್ತಃ- ಬಿಡಲ್ಪಟ್ಟ, ನಾಗಃ- ಕಾಳಿಯನೆಂಬ
ಸರ್ಪನು ಪತ್ನೀಭಿಸ್ಸಹ-ಹೆಂಡತಿಯರೊಂದಿಗೆ, ಆದರಂ-ಅಕ್ಕರೆಯಿಂದ, ತಂ-ಆ ಕೃಷ್ಣನನ್ನು, ಮುದಾ-ಸಂತೋಷದೊಡನೆ, ಪೂಜ
ಯಾಮಾಸ-ಉಪಚರಿಸಿದನು ॥೬೪॥ ದಿವ್ಯಾಂಬರಸ್ರಙ್ಮಣಿಭಿಃ- ದಿವ್ಯ- ಬೆಳಗುತಲಿರುವ, ಅಥವಾ ದೇವಲೋಕದಲ್ಲಿ ಹುಟ್ಟಿದ, ಅಂಬರ-
ವಸ್ತ್ರ, ಸ್ರಕ್-ಹಾರ, ಮಣಿಭಿಃ-ರತ್ನಗಳಿಂದಲೂ, ಪರಾರ್ಧ್ಯೈಃ-ಪರ-ಹೆರವರಿಂದ- ಅರ್ಧ್ಯೈಃ- ಬಯಸಲ್ಪಡತಕ್ಕ, ಅಥವಾ ಉತ್ತಮ
ರಿಂದ ಬಯಸಲ್ಪಡತಕ್ಕ, ಭೂಷಣೈಃ-ಆಭರಣಗಳಿಂದಲೂ, ದಿವ್ಯಗಂಧಾನುಲೇಪೈಶ್ಚ-ದಿವ್ಯ-ಕ್ರೀಡಾಯೋಗ್ಯವಾದ, ಅಥವಾ ಸಂತೋ

---

ಷಯೋಗ್ಯವಲ್ಲ. ಈ ಕಾರಣದಿಂದ ನೀನು ನಿನ್ನ ಜ್ಞಾತಿಪತ್ನೀಪುತ್ರರೊಡಗೂಡಿ ಶೀಘ್ರದಲ್ಲಿ ಸಮುದ್ರವಂ ಕುರಿತು
ಹೋಗುವನಾಗು ॥೬೦॥ ಎಲೈ, ಕಾಳಿಯನೇ! ನಿನಗೋಸುಗ ನನ್ನಿಂದ ಮಾಡಲ್ಪಟ್ಟ ಈ ಯಾಜ್ಞಾವಚನವಂ ಯಾವ ಪು
ರುಷನು ಸಾಯಂಪ್ರಾತಃಕಾಲಗಳಲ್ಲಿ ಕೀರ್ತನಂಗೆಯ್ಯುತ ಸ್ಮರಿಸುವನೋ ಆ ಪುರುಷನು ನಿಮ್ಮಿಂದ ಭಯಪಡಬೇಡ.॥
ಮತ್ತು ನನ್ನಿಂದ ವಿಹರಿಸಲ್ಪಟ್ಟ ಈ ಯಮುನೆಯ ಮಡುವಿನಲ್ಲಿ ಯಾವ ಪುರುಷನು ಸ್ನಾನಂಗೆಯ್ದು ಜಲಾಂಜಲಿಗ
ಳಿಂದ ದೇವರ್ಷಿಪಿತೃಗಳಿಗೆ ತರ್ಪಣವಂ ಸಹ ಮಾಡಿ ಉಪವಾಸವಿದ್ದು ನನ್ನಂ ಸ್ಮರಿಸುತ ಪೂಜಿಸುವನೋ ಆ ಪುರುಷನು
ಸಮಸ್ತಪಾಪಂಗಳಿಂ ಮುಕ್ತನಾಗುವನು॥೬೨॥ಎಲೈ, ಕಾಳಿಯನೇ! ನೀನು ಯಾವವನ ದೆಸೆಯಿಂದ ಭಯಪಟ್ಟವನಾಗಿ
ರಮಣಕಮೆಂಬ ದ್ವೀಪವಂ ಬಿಟ್ಟು ಈ ಯಮುನಾನದಿಯ ಮಡುವನ್ನಾಶ್ರಯಿಸಿದೆಯೋ, ಆ ಗರುಡನು ಈಗ ನನ್ನ ಪಾ
ದಗಳಿಂದ ಲಾಂಛಿತಗಳಾದ ಶಿರಸ್ಸುಗಳುಳ್ಳ ನಿನ್ನಂ ಭಕ್ಷಿಸುವನಾಗುವುದು ಇಲ್ಲ.॥೬೩॥ಎಲೈ ಪರೀಕ್ಷಿದ್ರಾಯನೇ! ಕೇಳು-.
ಆಶ್ಚರ್ಯಕರವಾದ ವ್ಯಾಪಾರವುಳ್ಳ ಭಗವಂತನಾದ ಶ್ರೀಕೃಷ್ಣನಿಂದ ಅನುಗ್ರಹಂಗೆಯ್ದು ಬಿಡಲ್ಪಟ್ಟ ಆ ಕಾಳಿಯ
ನೂ ಅವನ ಪತ್ನಿಯರೂ ಆದರಣೆಯೊಡಗೂಡಿ ಆಗ ಶ್ರೀಕೃಷ್ಣನಂ ಪೂಜಿಸಿದರದಂತೆನೆ-॥೬೪ ಕಾಳಿಯನೂ ಅವನ ಪತ್ನಿ
ಯರು ಸಹ ದಿವ್ಯಗಳಾದ ವಸ್ತ್ರಗಳಿಂದಲೂ, ಮಾಲ್ಯಗಳಿಂದಲೂ, ರತ್ನಗಳಿಂದಲೂ, ಸರ್ವೋತ್ತಮವಾದ ಭೂಷ
ಣಗಳಿಂದಲೂ, ದಿವ್ಯಗಂಧಾನುಲೇಪನಂಗಳಿಂದಲೂ ಮಹತ್ತಾದ ಕುಮುದಪುಷ್ಪಂಗಳಿಂದ ರಚಿಸಲ್ಪಟ್ಟ ಮಾಲ್ಯ

ಧಾನುಲೇಪೈಶ್ಚ ಮಹತ್ಯೋತ್ಪಲಮಾಲಯಾ ||೬೫|| ಪೂಜಯಿತ್ವಾ ಜಗನ್ನಾಥಂ ಪ್ರಸಾದ್ಯ ಗರುಡಧ್ವಜಮ್ |
ನಾಗರಾಜೋಽಭ್ಯನುಜ್ಞಾತಃ ಪರಿಕ್ರಮ್ಯಾಭಿವನ್ದ್ಯ ತಮ್ | ೬೬ | ಸಕಳತ್ರಸುಹೃತ್ಪುತ್ರೋ ದ್ವೀಪಮಬ್ಧೇರ್ಜ
ಗಾಮ ಹ ||೬೭|| ತದೈವ ಸಾಮೃತಜಲಾ ಯಮುನಾ ನಿರ್ವಿಷಾಭವತ್ | ಅನುಗ್ರಹಾದ್ಭಗವತಃ ಕ್ರೀಡಾಮನು
ಜರೂಪಿಣಃ ... ... ... ... ... ... ||೬೮||

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಷೋಡಶೋಽಧ್ಯಾಯಃ

---

...ಷಿಸತಕ್ಕ, ಗಂಧ-ಪರಿಮಳದ, ಅನುಲೇಪೈಶ್ಚ-ಅಂಗರಾಗಗಳಿಂದಲೂ, ಮಹತ್ಯಾ-ದೊಡ್ಡದಾದ, ಉತ್ಪಲಮಾಲಯಾಪಿ- ನೈದಿಲೆಯ ಹೂವುಗಳ ಸರದಿಂದಲೂ ||೬೫|| ಜಗನ್ನಾಥಂ-ಪ್ರಪಂಚಕ್ಕೊಡೆಯನಾದ, ಗರುಡಧ್ವಜಂ-ಗರುಡನೇ ಧ್ವಜದಲ್ಲಿ ಉಳ್ಳ ಕೃಷ್ಣನನ್ನು, ಪೂಜಯಿತ್ವಾ-ಸಂಭಾವಿಸಿ, ಪ್ರಸಾದ್ಯಚ-ಪ್ರಸನ್ನನಾಗಿ ಮಾಡಿಕೊಂಡು, ಅಭ್ಯನುಜ್ಞಾತಃ- ಅಪ್ಪಣೆಯಂ ಕೊಂಡವನಾದ, ನಾಗರಾಜಃ- ಸರ್ಪಗಳಿಗೊಡೆಯನಾದ ಕಾಳಿಯನು, ತಂ-ಆ ಕೃಷ್ಣನನ್ನು, ಪರಿಕ್ರಮ್ಯ-ಬಲಗೊಂಡು, ಅಭಿವಂದ್ಯ-ಪೊಡಮಟ್ಟು ||೬೬||, ಸಕಳತ್ರ ಸುಹೃತ್ಪುತ್ರಃ-ಪತ್ನಿಯರಿಂದಲೂ ಮಿತ್ರರಿಂದಲೂ ಮಕ್ಕಳಿಂದಲೂ ಸಹಿತನಾಗಿ, ಅಬ್ಧೇಃ-ಸಮುದ್ರದ, ದ್ವೀಪಂ-ನೀರ ನಡುವಣ ಗಡ್ಡೆಯನ್ನು ಕುರಿತು, ಜಗಾಮಹ- ಹೊರಟುಹೋದನು ||೬೭|| ಕ್ರೀಡಾಮನುಜರೂಪಿಣಃ- ಲೀಲಾಮಾನುಷವಿಗ್ರಹನಾದ, ಭಗವತಃ-ಕೃಷ್ಣನ, ಅನುಗ್ರಹಾತ್-ರಕ್ಷಣವಡೆಸೆಯಿಂದ, ಸಾ-ಆ, ಯಮುನಾ-ಯಮುನಾನದಿಯು, ತದೈವ-ಆಗಲೇ, ನಿರ್ವಿಷಾ-ವಿಷವಿಲ್ಲದ್ದೂ, ಅಮೃತಜಲಾಚ-ಸವಿಯಾದ ನೀರುಳ್ಳದ್ದೂ, ಅಭವತ್-ಆಯಿತು ||೬೮||

ಇತಿಶ್ರೀಮದ್ಭಾಗವತ ತತ್ಪ್ರತಿಶಬ್ದಾರ್ಥಬೋಧಿನ್ಯಾಂ ದಶಮಸ್ಕಂಧೇ.
ಷೋಡಶೋಽಧ್ಯಾಯಃ-

---

...ಡಿಂದಲೂ, ಸಹ ||೬೫|| ಜಗನ್ನಾಥನಾದ ಶ್ರೀಕೃಷ್ಣನಂ ಪೂಜಿಸಿ ಆತನ ಪ್ರಸಾದವಂ ಪಡೆದನು. |*| ಅನಂತರದಲ್ಲಿ ಕಾಳಿಯನು ಅತ್ಯಂತ ಸಂತೋಷಯುಕ್ತನಾಗಿ ಶ್ರೀಕೃಷ್ಣನ ಅನುಜ್ಞೆಯಂ ಪಡೆದು ಆ ಕೃಷ್ಣನಿಗೆ ಪ್ರದಕ್ಷಿಣನಮಸ್ಕಾರಂಗಳಂಗೆಯ್ದು, ||೬೬|| ಪತ್ನೀಪುತ್ರರೊಡಗೂಡಿದವನಾಗಿ ರಮಣಕದ್ವೀಪವನೆಯ್ದಿದನು. ||೬೭||ಎಲೈ, ಅರಸೇ! ಆಗ ಯಮುನಾನದಿಯು ಲೀಲೆಯಿಂ ಮನುಷ್ಯರೂಪವಂತಾಳ್ದಿರುವ ಭಗವಂತನಾದ ಶ್ರೀಕೃಷ್ಣನ ಅನುಗ್ರಹದೆಸೆಯಿಂದ ವಿಷರಹಿತವಾಗಿ ಅಮೃತಕ್ಕೆ ಸಮಾನವಾದ ಜಲವುಳ್ಳದ್ದಾದುದು. ||೬೮| ...... |*|

ಇಂತು ಶುಕಮುನಿಯು ಪರೀಕ್ಷಿದ್ರಾಯನಿಗೆ ನಿರೂಪಿಸಿದನೆಂದು ಸೂತಪೌರಾಣಿಕನು ನೈಮಿಶಾ

ರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಹೇಳಿದನೆಂಬಲ್ಲಿಗೆ-ಶ್ರೀಮನ್ಮಹೀಶೂರಪುರವ
ರಾಧೀಶ ಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜ ವಿರಚಿತಮಪ್ಪ, ಶ್ರೀ
ಭಾಗವತದ "ಶ್ರೀಕೃಷ್ಣರಾಜ ವಾಣೀವಿಲಾಸವು" ಎಂಬ ಕರ್ಣಾಟಕ
ಭಾಷಾವ್ಯಾಖ್ಯಾನದಲ್ಲಿ ದಶಮಸ್ಕಂಧದೊಳು ಹದಿನಾರನೆಯ
ಅಧ್ಯಾಯವು ಸಂಪೂರ್ಣವಾದುದು.
ಮಂಗಳಮಸ್ತು

---

ರಾಜಾ ॥ ನಾಗಾಲಯಂರಮಣಕಂಕಸ್ಮಾತ್ತತ್ಯಾಜಕಾಳಿಯಃ । ಕೃತಂಕಿಂವಾಸುಪರ್ಣಸ್ಯತೇನೈಕೇನಾಸಮಂಜಸಮ್ ॥೧॥ ಶ್ರೀಶುಕಃ॥ ಉಪಹಾರ್ಯೈಸ್ಸರ್ಪಜನ್ಯೈರ್ಮಾಸಿಮಾಸೀಹಯೋಬಲಿಃ । ವಾನಸ್ಪತ್ಯೋಮಹಾಬಾಹೋನಾಗಾನಾಂಪ್ರಾಙ್ನಿರೂಪಿತಃ ॥೨॥ ಸ್ವಂಸ್ವಂಭಾಗಂಪ್ರಯಚ್ಛಂತಿನಾಗಾಃಪರ್ವಣಿಪರ್ವಣಿ । ಗೋಪೀಥಾಯಾತ್ಮನಸ್ಸರ್ವೇಸುಪರ್ಣಾಯಮಹಾತ್ಮನೇ॥೩॥ ವಿಷವೀರ್ಯಮದಾವಿಷ್ಟಃಕಾದ್ರವೇಯಸ್ತುಕಾಳಿಯಃ। ಕದರ್ಥೀಕೃತ್ಯಗರುಡಂಸ್ವಯಂತಂಬುಭುಜೇಬಲಿಮ್ ॥೪॥ ತಚ್ಛ್ರುತ್ವಾಕುಪಿತೋರಾಜನ್‌ಗರುಡೋಭಗವ

---

[ ಪರೀಕ್ಷಿತನಪ್ರಶ್ನವು ] ಕಾಳಿಯಃ-ಕಾಳಿಯಸರ್ಪನು, ನಾಗಾಲಯಂ-ಸರ್ಪಗಳಿಗೆಮನೆಯಾಗಿರುವ, ರಮಣಕಂ-ರಮಣಕದ್ವೀಪವನ್ನು, ಕಸ್ಮಾತ್-ಯಾವನಿಮಿತ್ತದಿಂದ, ತತ್ಯಾಜ-ಬಿಟ್ಟನು; ತೇನೈಕೇನ- ಅವನೊಬ್ಬನಿಂದ, ಸುಪರ್ಣಸ್ಯ- ಗರುಡನಿಗೆ, ಅಸಮಂಜಸಂ-ಸರಿಯಲ್ಲದಕೆಲಸವು, ಕಿಂವಾ- ಏನುತಾನೆ, ಕೃತಂ- ಮಾಡಲ್ಪಟ್ಟಿತು, ॥೧॥ [ ಶುಕೋತ್ತರವು ] ಮಹಾಬಾಹೋ-ದೊಡ್ಡತೋಳಬಲವುಳ್ಳಪರೀಕ್ಷಿದ್ರಾಯನೇ! ಉಪಹಾರ್ಯೈಃ ಭಕ್ಷ್ಯಗಳಾಗಿಸವಿಸಲ್ಪಡತಕ್ಕ, ಸರ್ಪಜನ್ಯೈಃ-ಸರ್ಪಗಳಿಗೆಅಧೀನರಾದಪ್ರಾಣಿಗಳಿಂದ, ಮಾಸಿಮಾಸಿ-ತಿಂಗಳುತಿಂಗಳಲ್ಲಿಯೂ, ವಾನಸ್ಪತ್ಯಃ-ಗಿಡಮಬುಡದಲ್ಲಿಕೊಡತಕ್ಕ, ನಾಗಾನಾಂ-ಸರ್ಪಗಳ, ಯೋಬಲಿಃ-ಯಾವಕಾಣಿಕೆಯು, ಪ್ರಾಕ್-ಪೂರ್ವದಲ್ಲಿ, ನಿರೂಪಿತಃ-ಕಟ್ಟಳೆಗೊಳಿಸಲ್ಪಟ್ಟಿದೆಯಷ್ಟೋ. ಅಥವಾ, ಸರ್ಪಜನ್ಯೈಃ-ಸರ್ಪಗಳಾದ ಪ್ರಾಣಿಗಳಿಂದ, ನಾಗಾನಾಂಬಲಿಃ-ಸರ್ಪರೂಪವಾದಕಾಣಿಕೆಯು, ವಾನಸ್ಪತ್ಯಃ- ಗಿಡಮಬುಡದಲ್ಲಿಗರುಡನಿಗೆಕೊಡಲ್ಪಡತಕ್ಕದ್ದಾಗಿ, ನಿರೂಪಿತಃ-ನಿರ್ಣಯಿಸಲ್ಪಟ್ಟಿತ್ತು ॥೨॥ ಸರ್ವೇನಾಗಾಃ-ಸರ್ಪಗಳೆಲ್ಲವೂ, ಆತ್ಮನಃ-ತಮ್ಮದೇಹದ, ಗೋಪೀಥಾಯ-ರಕ್ಷಣಕ್ಕೋಸುಗ, ಮಹಾತ್ಮನೇ-ಮಹಾದೇಹವುಳ್ಳ, ಸುಪರ್ಣಾಯ-ಗರುಡನಿಗೆ, ಪರ್ವಣಿಪರ್ವಣಿ-ಪ್ರತಿಪರ್ವಕಾಲದಲ್ಲಿಯೂ, ಸ್ವಂಸ್ವಂ-ತಮ್ಮತಮ್ಮವಂತಿಗೆಯು, ಅಥವಾ-ತಮತಮಗೆಜನಗಳಿಂದಕೊಡಲ್ಪಟ್ಟಿದ್ದ, ಭಾಗಂ-ಹಸಿಗೆಯನ್ನು, ಪ್ರಯಚ್ಛಂತಿ-ಕೊಡುತಲಿರುವರು ॥೩॥ ಕಾದ್ರವೇಯಃ-ಕದ್ರುವಿನಮಗನಾದ, ವಿಷವೀರ್ಯಮದಾವಿಷ್ಟಃ-ವಿಷವೀರ್ಯ-ವಿಷಸಾಮರ್ಥ್ಯದ, ಮದ- ಗರ್ವದಿಂದ, ಆವಿಷ್ಟಃ-ಆವೇಶವುಂಟಾದ, ಏಷಕಾಳಿಯಸ್ತು-ಈಕಾಳಿಯಸರ್ಪನಾದರೋ, ಗರುಡಂ-ಗರುಡನನ್ನು, ಕದರ್ಥೀಕೃತ್ಯ-ಕೃಪಣನನ್ನಾಗಿಭಾವಿಸಿ, ಬಲಿಂತು-ಉಪಹಾರದ್ರವ್ಯವನ್ನಾದರೋ, ಸ್ವಯಂ-ತಾನೇ- ಬುಭುಜೇ-ಉಂಡನು ॥೪॥ ರಾಜನ್-ಅರಸನೇ! ತತ್- ಆಸಮಾಚಾರವನ್ನು,

---

*೧೭ ನೆಯ ಅಧ್ಯಾಯವು. *

ಶ್ರೀಧರೀಯಶ್ಲೋಕ॥ ನಾಗಂಸಪ್ತದಶೇನಾಗಾಲಯಂತನಿರಯಾಪಯತ್ । ಬಂಧೂಂಶ್ಚಸಖಿನಶ್ಯಾಂತಾನ್‌ಸಂಪ್ತಾಂಸ್ತತ್ರದವಾದವಾತ್ ॥ಟೀಕೆ॥ ಹದಿನೇಳನೆ ಯಅಧ್ಯಾಯದಲ್ಲಿ ಶ್ರೀಕೃಷ್ಣನು ಕಾಳಿಯಸರ್ಪವನ್ನು ರಮಣಕದ್ವೀಪಕ್ಕೆಕಳುಹಿಸಿ ತನಗೋಸುಗ ದುಃಖದಿಂದ ಬಳಲಿ ಮೈಮರೆತು ನಿದ್ರಿಸುತಲಿರುವ ಬಂಧುಗಳನ್ನು ದವಾಗ್ನಿಯ ದೆಸೆಯಿಂದ ರಕ್ಷಿಸಿದನೆಂಬ ಅರ್ಥವ ಶುಕಮುನಿಯು ಪರೀಕ್ಷಿದ್ರಾಯನಂಕುರಿತು ನಿರೂಪಿಸುವನಂತೆನೆ,

( ಪರೀಕ್ಷಿದ್ರಾಯನು ಶುಕಮುನಿಯಂಕುರಿತು ಪ್ರಶ್ನೆಗೆಯ್ವನು.-) ಎಲೈ, ಶುಕಮುನಿಯೇ! ಕಾಳಿಯವೆಂಬ ಮಹಾಸರ್ಪವು ಯಾವಕಾರಣದಿಂದ ಸರ್ಪಗಳಿಗೆ ವಾಸಸ್ಥಾನವಾದ ರಮಣಕದ್ವೀಪವಂ ಬಿಟ್ಟು ಬಂದುದಾದುದು? ಮತ್ತು ಆಕಾಳಿಯವೆಂಬ ಒಂದುಸರ್ಪದಿಂದಲೇ ಗರುಡನಿಗೆ ಏನು ಅಹಿತವ್ಯಾಪಾರವು ಮಾಡಲ್ಪಟ್ಟಿತು. ಆವೃತ್ತಾಂತವನು ನನಗೆ ನಿರೂಪಿಸುವನಾಗು. ॥೧॥( ಎಂಬವಚನವ ಕೇಳಿ ಶುಕಮುನಿಯು ನಿರೂಪಿಸುವನದೆಂತೆನೆ-) ಎಲೈ, ಪರೀಕ್ಷಿದ್ರಾಯನೇ! ಈಲೋಕದಲ್ಲಿ ಸರ್ಪೋಪಾಸಕರಾದ ಜನರಿಂದ ಸರ್ಪೋಪದ್ರವಪರಿಹಾರಾರ್ಥವಾಗಿ ಪ್ರತಿಮಾಸಂಗಳಲ್ಲಿಯೂ ಸರ್ಪಗಳಿಗೋಸುಗ ಭಕ್ಷ್ಯಂಗಳಿಂದ ವೃಕ್ಷಮೂಲದಲ್ಲಿ ಕೊಡತಕ್ಕ ಯಾವಬಲಿಯು ಪೂರ್ವದಲ್ಲಿ ನಿಯಮಿಸಲ್ಪಟ್ಟಿದ್ದದಷ್ಟೋ ॥೨॥ ಅದೇರೀತಿಯಿಂದ ಆಸರ್ಪಗಳೆಲ್ಲವೂ ಜನರಿಂದ ತಮಗೆ ಕೊಡಲ್ಪಟ್ಟ ಆಬಲಿದ್ರವ್ಯದಲ್ಲಿ ಕೆಲವುಭಾಗವನ್ನು ಗರುಡನಿಂದ ಭಯಪಟ್ಟವರಾದ ತಮ್ಮ ಕ್ಷೇಮಕ್ಕೋಸುಗ ಮಹಾತ್ಮನಾದ ಗರುಡನಿಗೆ ಕೊಡುತ್ತಿದ್ದವು. ॥೩॥ ಹೀಗಿರುವಲ್ಲಿ ಕದ್ರುವಿನ ಪುತ್ರನಾದ ಕಾಳಿಯನೆಂಬಮಹಾಸರ್ಪವು ವಿಷದಿಂದಲೂ ಪರಾಕ್ರಮದಿಂದಲೂ ಉಂಟಾದಮದದಿಂದ ಅಧಿಕನಾಗಿ ಗರುಡನಂಗಣನೆಗೆಯ್ಯದೆ ತನ್ನಭಾಗದ ಬಲಿದ್ರವ್ಯವಂ ತಾನೇಭಕ್ಷಿಸಿದನು. ॥೪॥ ಅನಂತರದಲ್ಲಿ

ತ್ರಿಪ್ರಿಯಃ । ವಿಜಿಘಾಂಸುರ್ಮಹಾವೇಗಃಕಾಳೀಯಂಸಮುಪಾದ್ರವತ್ ॥೫॥ ತಮಾಪತನ್ತಂತರಸಾವಿಷಾಯುಧಃಪ್ರತ್ಯಭ್ಯಯಾದುಚ್ಛ್ರಿತನೈಕಮಸ್ತಕಃ। ದದ್ಭಿಸ್ಸುಪರ್ಣಂವ್ಯದಶದ್ದದಾಯುಧಃಕರಾಳಜಿಹ್ವೋಚ್ಛ್ವಸಿತೋಗ್ರಲೋಚನಃ ॥೬॥ ತಂತಾರ್ಕ್ಷ್ಯಪುತ್ರಸ್ಸನಿರಸ್ಯಮನ್ಯುಮಾನ್ಪ್ರಚಂಡವೇಗೋಮಧುಸೂದನಾಸನಃ। ಪಕ್ಷೇಣಸವ್ಯೇನಹಿರಣ್ಯರೋಚಿಷಾಜಘಾನಕದ್ರೂಸುತಮುಗ್ರವಿಕ್ರಮಃ ॥೭॥ ಸುಪರ್ಣಪ

---

ಕ್ಷಾಭಿಹತಃ-ಕೇಳೀ, ಭಗವತ್ಪ್ರಿಯಃ- ಭಗವಂತನಿಗೆಪ್ರಿಯನಾಗಿರುವವನಾದರೂ, ಅಥವಾಭಗವಂತನಿಗೆಪ್ರಿಯನಾದಭಕ್ತನಾದರೂ, ಕುಪಿತಃ-ಸಿಟ್ಟುಗೊಂಡವನಾದ, ಗರುತ್ಮಾನ್-ಗರುಡನು, ಮಹಾವೇಗಃ-ಹೆಚ್ಚುವೇಗವುಳ್ಳವನಾಗಿ, ವಿಜಿಘಾಂಸುಃ-ಕೊಲ್ಲಬಯಸಿದವನಾಗಿ, ಕಾಳಿಯಂ-ಕಾಳಿಯಸರ್ಪವನ್ನು, ಸಮುಪಾದ್ರವತ್-ಎದುರಟ್ಟಿದನು ॥೫॥ ತರಸಾ-ವೇಗದಿಂದ, ಆಪತಂತಂ-ಬಂದು ಬೀಳುತಲಿರುವ ತಂ-ಆಗರುಡನನ್ನುಕುರಿತು, ಉಚ್ಛ್ರಿತನೈಕಮಸ್ತಕಃ-ಉಚ್ಛ್ರಿತ-ಎತ್ತಿದ, ನೈಕ-ಹಲವಾದ, ಮಸ್ತಕಃ-ತಲೆಗಳುಳ್ಳ, ವಿಷಾಯುಧಃ-ವಿಷವೇ ಆಯುಧವಾದ, ಕಾಳಿಯನು,ಪ್ರತ್ಯಭ್ಯಯಾತ್-ಪ್ರತಿಯಾಗಿಎದುರಟ್ಟಿದನು। ಕರಾಳಜಿಹ್ವೋಚ್ಛ್ವಸಿತೋಗ್ರಲೋಚನಃ-ಕರಾಳ-ಭಯಂಕರವಾದ, ಜಿಹ್ವ-ನಾಲಿಗೆಗಳೂ, ಉಚ್ಛ್ವಸಿತ-ಪೂತ್ಕಾರವೂ, ಉಗ್ರಲೋಚನಃ-ಕ್ರೂರವಾದಕಣ್ಣುಗಳೂ, ಉಳ್ಳವನಾದ, ದದಾಯುಧಃ-ಹಲ್ಲುಗಳೇಆಯುಧವಾಗಿಉಳ್ಳವನಾದ್ದರಿಂದ, ದದ್ಭಿಃ-ಹಲ್ಲುಗಳಿಂದ, ಸುಪರ್ಣಂ- ಗರುಡನನ್ನು, ವ್ಯದಶತ್-ವಿಶೇಷವಾಗಿಕಚ್ಚಿದನು ॥೬॥ ಪ್ರಚಂಡವೇಗಃ-ಪ್ರಚಂಡ-ಬಹಳಹೆಚ್ಚಾದ, ವೇಗಃ-ಜವವುಳ್ಳವನಾದ, ಉಗ್ರವಿಕ್ರಮಃ-ಕ್ರೂರವಾದಸಾಮರ್ಥ್ಯವುಳ್ಳವನಾದ, ಮಧುಸೂದನಾಸನಃ-ಮಧುಸೂದನ-ವಿಷ್ಣುವಿಗೆ, ಆಸನಃ-ವಾಹನನಾದ,ಮನ್ಯುಮಾನ್-ಸಿಟ್ಟುಳ್ಳ,ಸತಾರ್ಕ್ಷ್ಯಪುತ್ರಃ-ಆಗರುಡನು, ತಂ-ಆ, ಕದ್ರೂಸುತಂ-ಕಾಳಿಯನನ್ನು, ನಿರಸ್ಯ-ಹೊರಡಿಸಿ, ಹಿರಣ್ಯರೋಚಿಷಾ-ಭಂಗಾರದಹಾಗೆಕಾಂತಿಯುಳ್ಳ, ಸವ್ಯೇನಪಕ್ಷೇಣ-ಎಡರೆಕ್ಕೆಯಿಂದ, ಜಘಾನ-ಹೊಡೆದನು (ಹಿಂಸೆಮಾಡಿದನು) ॥೭॥ ಸುಪರ್ಣಪಕ್ಷಾಭಿಹತಃ-ಸುಪರ್ಣ-ಗರುಡನ, ಪಕ್ಷ-ರೆಕ್ಕೆಯಿಂದ, ಅಭಿಹತಃ ಹಪ್ಪಲ್ಪಟ್ಟ, ಕಾಳಿಯಃ-ಕಾಳಿಯನು, ಅತೀವ-ಬಹಳವಾಗಿ, ವಿಹ್ವಲಃ-ಭಯಚಂಚಲನಾಗಿ, ತದಗಮ್ಯಂ-ತತ್-ಆಗರುಡನಿಂದ,

---



ಭಗವಂತನಿಗೆ ಪ್ರಿಯನಾದ ಆಗರುಡನು ಆಕಾಳಿಯನ ವ್ಯಾಪಾರವಂಕೇಳಿ ಕ್ರೋಧಯುಕ್ತನಾಗಿ ಆಕಾಳಿಯನಂ ಸಂಹರಿಸಲಿಚ್ಛೆಯಿಂದ ಮಹಾವೇಗದಿಂ ಅಟ್ಟಿಕೊಂಡುಬಂದನು.॥೫। ಆಗ ವಿಷವೂ ಹಲ್ಲುಗಳುಸಹ ಆಯುಧವಾಗಿವುಳ್ಳ, ಮತ್ತು ಮೇಲಕ್ಕೆ ಎತ್ತಲ್ಪಟ್ಟ ಅನೇಕಗಳಾದ ಹೆಡೆಗಳುಳ್ಳ, ಭಯಂಕರಗಳಾದನಾಲಗೆಗಳುಳ್ಳ, ಮತ್ತು ತೆರೆಯಲ್ಪಟ್ಟಕ್ರೂರಗಳಾದ ಕಣ್ಣುಗಳುಳ್ಳ, ಆಕಾಳಿಯಸರ್ಪವು ಓಡಿಬರುತಲಿರುವ ಗರುಡನಂ ಕುರಿತು ಯುದ್ಧಂಗೆಯ್ಯಲೋಸುಗ ವೇಗದಿಂದ ಎದುರಾಗಿಹೋಗಿ ತನ್ನಹಲ್ಲುಗಳಿಂದ ಗರುಡನನ್ನು ಚನ್ನಾಗಿ ಕಚ್ಚಿತು ॥೬॥ಆಸಮಯದಲ್ಲಿ ವಿಷ್ಣುವಿಗೆ ವಾಹನ ರೂಪನಾದ, ಪ್ರಚಂಡವಾದವೇಗವುಳ್ಳ, ಭಯಂಕರವಾದಪರಾಕ್ರಮವುಳ್ಳ, ಗರುಡನು ಅತ್ಯಂತಕೋಪಯುಕ್ತನಾಗಿ ಆಕಾಳಿಯನಂ ತಿರಸ್ಕರಿಸಿ ಭಂಗಾರದಂತೆ ಹೊಳೆಯುತಲಿರುವತನ್ನ ಎಡದರೆಕ್ಕೆಯಿಂದ ಅವನಂ ಅಪ್ಪಳಿಸಿಹೊಡದನು. ॥೭॥ ಆಕಾಳಿಯನು ಗರುಡನಪಕ್ಷದಿಂದ ಹೊಡೆಯಲ್ಪಟ್ಟವನಾದುದರಿಂ ಅತಿಖಿನ್ನನಾಗಿ- ಆಗರುಡನು ಪ್ರವೇಶಿಸಕೂಡದುದಾಗಿಯೂ ಅಗಾಧವಾದುದರಿಂದ ಯಾರಿಗೂ ಪ್ರವೇಶಿಸಲಶಕ್ಯವಾಗಿಯೂ ಇರುವ ಆಯಮುನಾ

ಕ್ಷಾಭಿಹತಃ ಕಾಳೀಯೋಽತೀವ ವಿಹ್ವಲಃ | ಹ್ರದಂ ವಿವೇಶ ಕಾಳಿಂದ್ಯಾಸ್ತದಗಮ್ಯಂ ದುರಾಸದಮ್ ||೮|| ತತ್ರೈಕದಾ
ಜಲಚರಂ ಗರುಡೋ ಭಕ್ಷ್ಯಮೀಪ್ಸಿತಮ್ | ನಿವಾರಿತಸ್ಸೌಭರಿಣಾ ಪ್ರಸಹ್ಯ ಕ್ಷುಧಿತೋಽಹರತ್ ||೯|| ಮೀನಾನ್
ಸುದುಃಖಿತಾನ್ ದೃಷ್ಟ್ವಾ ದೀನಾನ್ ಮೀನಪತೌ ಹತೇ | ಕೃಪಯಾ ಸೌಭರಿಃ ಪ್ರಾಹ ತತ್ರತ್ಯಕ್ಷೇಮಮಾಚ
ರನ್ ||೧೦|| ಅತ್ರ ಪ್ರವಿಶ್ಯ ಗರುಡೋ ಯದಿ ಮತ್ಸ್ಯಾನ್ ಸ ಖಾದತಿ | ಸದ್ಯಃ ಪ್ರಾಣೈರ್ವಿಯುಜ್ಯೇತ ಸತ್ಯಮೇತ
ದ್ಬ್ರವೀಮ್ಯಹಮ್ ||೧೧|| ತತ್ಕಾಳಿಯಃ ಪರಂ ವೇದ ನಾನ್ಯಃ ಕಶ್ಚನ ಲೇಲಿಹಃ | ಅವಾತ್ಸೀದ್ಗರುಡಾದ್ಭೀತಃ ಕೃ
ಷ್ಣೇನ ಚ ವಿವಾಸಿತಃ ||೧೨|| ಕೃಷ್ಣಂ ಹ್ರದಾದ್ವಿನಿಷ್ಕ್ರಾಂತಂ ದಿವ್ಯಸ್ರಗ್ಗಂಧವಾಸಸಮ್ | ಮಹಾಮಣಿಗ

---

ಅಗಮ್ಯಂ-ಪ್ರವೇಶಿಸಲಶಕ್ಯವಾಗಿಯೂ, ದುರಾಸದಂ-ಪ್ರಯಾಸದಿಂದಲೂ ಪ್ರವೇಶಿಸಕೂಡದ್ದೂ ಆದ, ಕಾಳಿಂದ್ಯಾಃ ಯಮುನೆಯ
ಹ್ರದಂ-ಮಡುವನ್ನು. ವಿವೇಶ-ಹೊಕ್ಕನು ||೮|| ಏಕದಾ-ಒಂದುಸಮಯದಲ್ಲಿ. ತತ್ರ-ಆಮಡುವಿನೊಳಗೆ, ಗರುಡಃ- ಗರುಡನು, ಕ್ಷು
ಧಿತಃ-ಹಸಿದವನಾದ್ದರಿಂದ, ಈಪ್ಸಿತಂ-ಅಪೇಕ್ಷಿತವಾದ, ಭಕ್ಷ್ಯಂ-ಭಕ್ಷಿಸಲ್ಪಡತಕ್ಕ, ಜಲಚರಂ-ಜಲಜಂತುವನ್ನು, ಸೌಭರಿಣಾ-ಸೌಭ
ರಿಯೆಂಬಮುನಿಯಿಂದ, ನಿವಾರಿತೋಽಪಿ- ತಡೆಯಲ್ಪಟ್ಟವನಾದರೂ, ಪ್ರಸಹ್ಯ-ಬಲಾತ್ಕರಿಸಿ, ಅಹರತ್-ತೆಗೆದುಕೊಂಡುಹೋದನು ||೯||
ಮೀನಪತೌ-ಮೀನುಗಳಿಗೊಡೆಯನು, ಹತೇಸತಿ-ಕೊಲ್ಲಲ್ಪಟ್ಟವನಾಗುತಿರಲು, ಸುದುಃಖಿತಾನ್-ಬಹಳದುಃಖವುಂಟಾದ, ದೀನಾನ್-
ಬಡವಾದ, ಮೀನಾನ್-ಮತ್ಸ್ಯಗಳನ್ನು, ದೃಷ್ಟ್ವಾ-ನೋಡಿ, ಕೃಪಯಾ-ದಯೆಯಿಂದ, ಸೌಭರಿಃ-ಸೌಭರಿಮುನಿಯು, ತತ್ರತ್ಯಕ್ಷೇಮಂ-
ತತ್ರತ್ಯ-ಆಮಡುವಿನಲ್ಲಿರುವಜಂತುಗಳಿಗೆ, ಕ್ಷೇಮಂ-ರಕ್ಷಣವನ್ನು, ಆಚರನ್-ಮಾಡುತಲಿರುವನಾಗಿ, ಪ್ರಾಹ- ಹೇಳಿದನು ||೧೦||
ಸಗರುಡಃ-ಆಗರುಡನು, ಅತ್ರ-ಈಮಡುವಿನಲ್ಲಿ. ಪ್ರವಿಶ್ಯ-ಹೊಕ್ಕು, ಮತ್ಸ್ಯಾನ್-ಮೀನುಗಳನ್ನು, ಖಾದತಿಯದಿ-ಭಕ್ಷಿಸಿದನಾದರೆ
ಸದ್ಯಃ-ಆಗಲೇ, ಪ್ರಾಣೈಃ-ಹರಣಗಳಿಂದ, ವಿಯುಜ್ಯೇತ- ಬಿಡಲ್ಪಡುವನು ( ಸಾಯುವನು ) ಅಹಂ- ನಾನು, ಏತತ್- ಈಶಾಪವಚನ
ವನ್ನು, ಸತ್ಯಂ-ದಿಟವನ್ನಾಗಿ, ಬ್ರವೀಮಿ-ಹೇಳುತಲಿರುವೆನು, ||೧೧|| ಕಾಳಿಯಃಪರಂ-ಕಾಳಿಯನಾದರೋ, ತತ್- ಆಶಾಪವಚನವ
ನ್ನು, ವೇದ-ತಿಳಿದನು ಅನ್ಯಃ-ಇತರನಾದ, ಲೇಲಿಹಃಕಶ್ಚನ-ಸರ್ಪನೊಬ್ಬನೂ, ನ-ತಿಳಿಯಲಿಲ್ಲ ಗರುಡಾತ್-ಗರುಡನದೆಸೆಯಿಂದ,
ಭೀತಃ-ಹೆದರಿದವನಾಗಿ, ಅವಾತ್ಸೀತ್- ಅಲ್ಲಿದ್ದನು, ಕೃಷ್ಣೇನ- ಕೃಷ್ಣನಿಂದ, ವಿವಾಸಿತಶ್ಚ- ಹೊರಡಿಸಲ್ಪಟ್ಟವನೂ ಆದನು ||೧೨||
ಹ್ರದಾತ್- ಮಡುವಿನದೆಸೆಯಿಂದ, ವಿನಿಷ್ಕ್ರಾಂತಂ- ಹೊರಟುಬಂದತಾ, ದಿವ್ಯಸ್ರಗ್ಗಂಧವಾಸಸಂ- ದಿವ್ಯ- ದೇವಯೋಗ್ಯವಾದ,

---

ನೆಯ ಮಡುವಂ ಹೊಕ್ಕನು. ||೮|| ("ಆ ಯಮುನೆಯ ಮಡುವು ಗರುಡನಿಗೆ ಎಂತು ಪ್ರವೇಶಂಗೆಯ್ಯಲಶಕ್ಯವಾಗಿಹು
ದೆ?" ಎಂದಲ್ಲಿ ಕಾರಣವಂ ನುಡಿಯುವನದೆಂತೆನೆ-) ಎಲೈ, ಅರಸೇ! ಪೂರ್ವದಲ್ಲಿ ಒಂದುಸಮಯದೊಳು ಗರುಡನು
ಆ ಯಮುನಾನದಿಯ ಮಡುವಿನಲ್ಲಿ ತನಗೆ ಭಕ್ಷಿಸಲು ಯೋಗ್ಯವಾಗಿಯೂ ಇಷ್ಟವಾಗಿಯೂ ಇರುವ ಒಂದು ಮೀನ
ನ್ನು ಕಂಡು, ಸೌಭರಿಮುನಿಯಿಂದ ಅಪಹರಿಸಬೇಡವೆಂದು ಅಡ್ಡಗೆಯ್ಯಲ್ಪಟ್ಟವನಾದರೂ ಹೆಚ್ಚಾದಹಸಿವಿನಿಂ ಬಳಲಿ
ದವನಾದುದರಿಂದ ಬಲಾತ್ಕಾರದಿಂ ಆಮತ್ಸ್ಯವನ್ನೇ ಅಪಹರಿಸಿದನು. ||೯|| ಸಮಸ್ತಮತ್ಸ್ಯಗಳಿಗೂ ಅಧಿಪತಿಯಾ
ದ ಆಮಹಾಮತ್ಸ್ಯವು ಗರುಡನಿಂದ ಅಪಹರಿಸಲ್ಪಡುತಿರಲು ಆಗ ಅತಿದುಃಖದಿಂಕೂಡಿದವಾಗಿಯೂ ದೀನಗಳಾಗಿ
ಯೂ ಇರುವ ಮಿಕ್ಕಮೀನುಗಳಂನೋಡಿ, ದಯೆಯುಂಟಾದ ಸೌಭರಿಯೆಂಬಮಹಾಮುನಿಯು ಆಮೀನುಗಳಿಗೆ ಕ್ಷೇ
ಮವನ್ನುಂಟುಮಾಡುವವನಾಗಿ ಈರೀತಿಯಿಂನುಡಿದನು. ಅದೆಂತೆನೆ- ||೧೦|| ಗರುಡನು ಇನ್ನುಮೇಲೆ ಈಯಮುನಾನದಿ
ಯಮಡುವಿನಲ್ಲಿ ಹೊಕ್ಕು, ಮೀನುಗಳಂತಿಂದವನಾದರೆ ಅವನು ಆಕ್ಷಣದಲ್ಲಿಯೇ ಪ್ರಾಣವಿಲ್ಲದವನಾಗುವನು ಈಅ
ರ್ಥವಂ ಸತ್ಯವಾಗಿನುಡಿಯುವೆನು. ||೧೧|| ಎಲೈ, ಅರಸೇ! ಈ ರೀತಿಯಾಗಿ ಸೌಭರಿಮುನಿಯಿಂದ ಗರುಡನಿಗೆ ಕೊಡ
ಲ್ಪಟ್ಟಶಾಪವನ್ನು ಕಾಳಿಯನೊರ್ವನೆ ಬಲ್ಲನಲ್ಲದೆ ಮತ್ತೊಂದುಸರ್ಪವರಿಯದು. ಆಕಾರಣದಿಂದ ಗರುಡನದೆಸೆಯಿಂ
ಭಯಪಟ್ಟ ಆಕಾಳಿಯನು ಆಮಡುವಿನಲ್ಲಿ ಈವರೆಗೂವಾಸಂಗೆಯ್ದು, ಈ ಶ್ರೀಕೃಷ್ಣನಿಂದ ಮರಳಿ ರಮಣಕದ್ವೀಪವ
ನೆಯ್ದಿಸಲ್ಪಟ್ಟನು. ||೧೨|| ಅನಂತರದಲ್ಲಿ ಕಾಳಿಯನಂ ಕೃತಾರ್ಥನಂಗೆಯ್ದು ಆ ಯಮುನಾನದಿಯ ಮಡುವಿನ
ನೆಯಿಂದ ಹೊರಕ್ಕೆ ಬರುತಲಿರುವ, ದಿವ್ಯಗಳಾದ ಮಾಲ್ಯಗಳೂ ಗಂಧವೂ ದುಕೂಲಂಗಳೂ ಉಳ್ಳ, ಮತ್ತು ಅನ

ಣಾಕೀರ್ಣಂ ಜಾಂಬೂನದಪರಿಷ್ಕೃತಮ್ ॥೧೩॥ ಉಪಲಭ್ಯೋತ್ಥಿತಾಸ್ಸರ್ವೇ ಲಬ್ಧಪ್ರಾಣಾ ಇವಾಸವಃ । ಪ್ರಮೋದನಿಭೃತಾತ್ಮಾನೋ ಗೋಪಾಃ ಪ್ರೀತ್ಯಾಭಿರೇಭಿರೇ ॥೧೪॥ ಯಶೋದಾ ರೋಹಿಣೀ ನಂದೋ ಗೋಪ್ಯೋ ಗೋಪಾಶ್ಚ ಕೌರವ । ಕೃಷ್ಣಂ ಸಮೇತ್ಯ ಲಬ್ಧೇಹಾ ಆಸನ್ ಲಬ್ಧಮನೋರಥಾಃ ॥೧೫॥ ರಾಮಶ್ಚಾಚ್ಯುತಮಾಲಿಂಗ್ಯ ಜಹಾಸಾಸ್ಯಾನುಭಾವವಿತ್ । ನಗಾ ಗಾವೋ ವೃಷಾ ವತ್ಸಾ ಲೇಭಿರೇ ಪರಮಾಂ ಮುದಮ್ ॥೧೬॥ ನಂದಂ ವಿಪ್ರಾಸ್ಸಮಾಗಮ್ಯ ಗುರವಸ್ಸಕಳತ್ರಕಾಃ । ಊಚುಸ್ತೇ ಕಾಳಿಯಗ್ರಸ್ತೋ ದಿಷ್ಟ್ಯಾ ಮುಕ್ತಸ್ತವಾತ್ಮಜಃ ॥೧೭॥ ದೇಹಿ ದಾನಂ ದ್ವಿಜಾತೀನಾಂ ಕೃಷ್ಣನಿರ್ಮುಕ್ತಿಹೇತವೇ । ನಂದಃ ಪ್ರೀತಮನಾ ರಾಜನ್ ಗಾಸ್ಸುವರ್ಣಂ ತದಾದಿಶತ್ ॥೧೮॥ ಯಶೋ

---

ಸ್ರಕ್-ಪುಷ್ಪಹಾರವೂ, ಗಂಧ-ಪರಿಮಳವೂ, ವಾಸಸಂ-ವಸ್ತ್ರವೂ ಉಳ್ಳಂತಾ, ಮಹಾಮಣಿಗಣಾಕೀರ್ಣಂ-ಮಹಾಮಣಿ-ದೊಡ್ಡರತ್ನಗಳ, ಗಣ-ಪುಂಜದಿಂದ, ಆಕೀರ್ಣಂ-ಅಲಂಕರಿಸಲ್ಪಟ್ಟವನಾದಂತಾ, ಜಾಂಬೂನದಪರಿಷ್ಕೃತಂ- ಜಾಂಬೂನದ-ಜಂಬೂನದಿಯಲ್ಲಿ ಹುಟ್ಟಿದ ಭಂಗಾರದೊಡವೆಗಳಿಂದ, ಪರಿಷ್ಕೃತಂ- ಸಿಂಗರಿಸಲ್ಪಟ್ಟವನಾದಂತಾ, ಕೃಷ್ಣನನ್ನು ॥೧೩॥ ಉಪಲಭ್ಯ- ನೋಡಿ, ಲಬ್ಧಪ್ರಾಣಾಃ-ಪಡೆಯಲ್ಪಟ್ಟ ಪ್ರಾಣವುಳ್ಳ, ಅಸವಇವ-ಅಪಾನಾದಿವಾಯುಗಳ ಹಾಗೆ, ಉತ್ಥಿತಾಃ- ಎದ್ದವರಾಗಿಯೂ, ಪ್ರಮೋದನಿಭೃತಾತ್ಮಾನಃ-ಪ್ರಮೋದ-ಹೆಚ್ಚು ಸಂತೋಷದಿಂದ, ನಿಭೃತ-ತುಂಬಿದ, ಆತ್ಮಾನಃ-ಮನಸ್ಸುಳ್ಳವರಾದ, ಸರ್ವೇ ಗೋಪಾಃ- ಗೊಲ್ಲರೆಲ್ಲರೂ, ಪ್ರೀತ್ಯಾ-ಸ್ನೇಹದಿಂದ, ಅಭಿರೇಭಿರೇ-ಕ್ರೀಡಿಸಿದರು ॥೧೪॥ ಕೌರವ-ಕುರುಕುಲದವನಾದ ಪರೀಕ್ಷಿತನೇ ಯಶೋದಾ-ಯಶೋದೆಯೂ, ರೋಹಿಣೀ-ರೋಹಿಣಿಯೂ, ನಂದಃ-ನಂದಗೋಪನೂ, ಗೋಪ್ಯಃ-ಗೊಲ್ಲತಿಯರೂ, ಗೋಪಾಶ್ಚ-ಗೊಲ್ಲರೂ, ಕೃಷ್ಣಂ-ಕೃಷ್ಣನನ್ನು, ಸಮೇತ್ಯ ಹೊಂದಿ, ಲಬ್ಧೇಹಾಃ-ಲಬ್ಧ-ಪಡೆಯಲ್ಪಟ್ಟ, ಈಹಾಃ-ಚೇಷ್ಟೆಯುಳ್ಳವರಾಗಿ, ಲಬ್ಧಮನೋರಥಾಃ-ಪಡೆಯಲ್ಪಟ್ಟ ಬಯಕೆಯುಳ್ಳವರು, ಆಸನ್-ಆದರು ॥೧೫॥ ರಾಮಶ್ಚ-ಬಲರಾಮನಾದರೋ, ಅಚ್ಯುತಂ-ಕೃಷ್ಣನನ್ನು, ಆಲಿಂಗ್ಯ-ಅಪ್ಪಿಕೊಂಡು, ಅಸ್ಯ-ಈ ಕೃಷ್ಣನ, ಅನುಭಾವವಿತ್-ಸಾಮರ್ಥ್ಯವನ್ನು ಬಲ್ಲವನಾದ್ದರಿಂದ, ಜಹಾಸ-ನಕ್ಕನು ॥ ನಗಾಃ-ವೃಕ್ಷಗಳು, ಗಾವಃ ಆಕಳು, ವೃಷಾಃ-ಎತ್ತುಗಳು, ವತ್ಸಾಶ್ಚ-ಕರುಗಳೂ ಕೂಡ, ಪರಮಾಂ-ಉತ್ಕೃಷ್ಟವಾದ, ಮುದಂ-ಆನಂದವನ್ನು, ಲೇಭಿರೇ-ಪಡೆದರು ॥೧೬॥ ಸಕಳತ್ರಕಾಃ-ಸಕುಟುಂಬರಾದ, ಗುರವಃ-ದೊಡ್ಡವರಾದ, ವಿಪ್ರಾಃ-ಬ್ರಾಹ್ಮಣರು, ಸಮಾಗಮ್ಯ-ಬಂದು, ತೇ-ಅವರು, ಕಾಳಿಯಗ್ರಸ್ತಃ-ಕಾಳಿಯಸರ್ಪನಿಂದ ಹಿಡಿಯಲ್ಪಟ್ಟಿದ್ದ, ತವ-ನಿನ್ನ, ಆತ್ಮಜಃ-ಮಗನು, ದಿಷ್ಟ್ಯಾ-ಅದೃಷ್ಟದಿಂದ, ಮುಕ್ತಃ-ಬಿಡಲ್ಪಟ್ಟವನಾದನು ॥೧೭॥ ಕೃಷ್ಣನಿರ್ಮುಕ್ತಿಹೇತವೇ-ಕೃಷ್ಣನು ಬಿಡಲ್ಪಟ್ಟದ್ದಕ್ಕಾಗಿ, ದ್ವಿಜಾತೀನಾಂ-ವಿಪ್ರರಿಗೆ ದಾನಂ-ದೇಯದ್ರವ್ಯವನ್ನು, ದೇಹಿ-ಯಥಾವಿಧಿಯಾಗಿ ಕೊಡು, ಎಂದು, ನಂದಂ-ನಂದನನ್ನು ಕುರಿತು, ಊಚುಃ-ನುಡಿದರು । ರಾಜನ್-ಅರಸೇ! ತದಾ-ಆಗ, ಪ್ರೀತಮನಾಃ-ಸಂತುಷ್ಟಹೃದಯನಾದ, ನಂದಃ-ನಂದನು, ಗಾಃ-ಗೋವುಗಳನ್ನೂ, ಸುವರ್ಣಂ-ಭಂಗಾರವನ್ನೂ, ಅದಿಶತ್-ಕೊಟ್ಟನು ॥೧೮॥ ಮಹಾಭಾಗಾ-

---

ರ್ಘ್ಯಗಳಾದ ರತ್ನಸಮೂಹಗಳಿಂದಲೂ ಸುವರ್ಣಾಭರಣಂಗಳಿಂದಲೂ ಅಲಂಕೃತನಾಗಿರುವ ಶ್ರೀಕೃಷ್ಣದೇವನಂ ॥೧೩॥ ಪುನಃ ಹೊಂದಿ ಆ ಗೋಪಾಲಕರೆಲ್ಲರೂ ಪುನಃ ಪ್ರಾಣಂಗಳಂ ಪಡೆದಿರ್ಪ ಇಂದ್ರಿಯಂಗಳಂತೆ ಎದ್ದು, ಆನಂದದಿಂ ಪರಿಪೂರ್ಣವಾದ ಮನಸ್ಸುಳ್ಳವರಾಗಿ ಪ್ರೀತಿಯಿಂದ ಆ ಕೃಷ್ಣನಂ ಅಪ್ಪಿಕೊಂಡರು ॥೧೪॥ ಮತ್ತು ಆಗ ಯಶೋದಾದೇವಿ ರೋಹಿಣೀದೇವಿ ನಂದಗೋಪನು ಮಿಕ್ಕ ಗೋಪಸ್ತ್ರೀಯರು ಗೋಪಾಲಕರು ಸಹ- ಮರಳಿ ಶ್ರೀಕೃಷ್ಣನಂ ಪಡೆದು ಚೇಷ್ಟೆಗಳೊಡಗೂಡಿ ಪಡೆಯಲ್ಪಟ್ಟ ಮನೋರಥವುಳ್ಳವರಾದರು ॥೧೫॥ ಮತ್ತು ಆಗ ಬಲರಾಮನು ಶ್ರೀಕೃಷ್ಣನಂ ಅಪ್ಪಿಕೊಂಡು ಈ ಕೃಷ್ಣನ ಪ್ರಭಾವವಂ ತಿಳಿದವನಾದುದರಿಂದ ನಕ್ಕನು ಮತ್ತು ಆ ಯಮುನಾತೀರದಲ್ಲಿರುವ ವೃಕ್ಷಗಳು ಪೂರ್ವದಲ್ಲಿ ಆ ಕಾಳಿಯನ ವಿಷಜ್ವಾಲೆಯಿಂದ ಒಣಗಿದವಾದವರೂ ಶ್ರೀಕೃಷ್ಣಪ್ರಭಾವದಿಂದ ಆ ಕ್ಷಣದಲ್ಲಿಯೇ ವೃದ್ಧಿಯನ್ನೈದಿದವು. ಮತ್ತು ಆ ಕೃಷ್ಣನು ಪಡೆದ ಪರಮಾನಂದವಂ ಹೊಂದಿದವು ॥೧೬॥ ಆ ಮೇಲೆ ಗುರುಗಳಾದ ಬ್ರಾಹ್ಮಣರು ತಮ್ಮ ತಮ್ಮ ಪತ್ನೀಪುತ್ರರಿಂ ಕೂಡಿ ನಂದಗೋಪನ ಬಳಿಗೆ ಬಂದು, ಎಲೈ, ನಂದನೇ! ಕಾಳಿಯನೆಂಬ ಮಹಾಸರ್ಪದಿಂದ ಪೀಡಿತನಾದ ನಿನ್ನ ಪುತ್ರನು ಅದೃಷ್ಟವಶದಿಂದ ಬಿಡಲ್ಪಟ್ಟನು ॥೧೭॥ ✝ ಆದುದರಿಂದ ಬ್ರಾಹ್ಮಣರಿಗೆ ಉತ್ಸಾಹದಿಂದ ಕೊಡತಕ್ಕ ದ್ರವ್ಯವಂ ಕೊಟ್ಟು ಸಂತೋಷಪಡಿಸುವನಾಗೆಂದು ನುಡಿದರು. ಆಗ ಆ ನಂದಗೋಪನು ಆ ಬ್ರಾಹ್ಮಣರ ವಚನವನು ಕೇಳಿ ಸಂತುಷ್ಟವಾದ ಮನಸ್ಸುಳ್ಳವನಾಗಿ ಗೋವುಗಳಂ ಸುವರ್ಣಂಗಳಂ ಸಹ ಬ್ರಾಹ್ಮಣರಿಗೆ ಕೊಟ್ಟನು. ✝ ॥೧೮॥ ಆ ಸಮಯದಲ್ಲಿ ಪತಿವ್ರತೆಯಾದ ಮಹಾಭಾಗ್ಯಶಾಲಿಯಾದ ಯಶೋದಾದೇವಿಯು ನಷ್ಟಪ್ರಾಯ

ದಾಚಮಹಾಭಾಗಾನಷ್ಟಲಬ್ಧಪ್ರಜಾಸತೀ।ಪರಿಷ್ವಜ್ಯಾಂಕಮಾರೋಪ್ಯಮುಮೋಚಾಶ್ರುಕಣಾನ್ಬಹೂನ್॥
ತತಶ್ಚಾಸ್ತಂಗತೇಭಾನೌಕೃಷ್ಣೋವಾಸಮಕಲ್ಪಯತ್ । ಸರಾಮಸ್ಸಹಗೋಪಾಲೋಮಾತಾಪಿತಾಸಗೋಧ
ನಃ॥೨೦॥ ತಾಂರಾತ್ರಿಂತತ್ರರಾಜೇಂದ್ರಕ್ಷುತ್ತೃಡ್ಭ್ಯಾಂಶ್ರಮಕರ್ಶಿತಾಃ । ಊಷುರ್ವ್ರಜೌಕಸೋಗಾವೋ
ಕಾಳಿಂದ್ಯಾಉಪಕೂಲತಃ ॥೨೧॥ ತದಾಶುವಿಪಿನೋದ್ಭೂತೋದವಾಗ್ನಿಸ್ಸರ್ವತೋವ್ರಜಮ್ ।ಸುಪ್ತಂನಿಶೀಥಆ
ವೃತ್ಯಪ್ರದಗ್ಧುಮುಪಚಕ್ರಮೇ॥೨೨॥ ತತಉತ್ಥಾಯಸಂಭ್ರಾಂತಾದಹ್ಯಮಾನಾವ್ರಜೌಕಸಃ।ಕೃಷ್ಣಂಯ
ಯುಸ್ತೇಶರಣಂಮಾಯಾಮನುಜಮೀಶ್ವರಮ್ ॥೨೩॥ ಕೃಷ್ಣಕೃಷ್ಣಮಹಾಭಾಗಹೇರಾಮಾಮಿತವಿಕ್ರಮ।

---

ಹೆಚ್ಚುಪೂಜ್ಯತೆಯುಳ್ಳ, ಯಶೋದಾಚ-ಯಶೋದೆಯೂಕೂಡ, ನಷ್ಟಲಬ್ಧಪ್ರಜಾಸತೀ-ನಷ್ಟ-ನಾಶವಾಗಹೋಗಿದ್ದು, ಲಬ್ಧ-ಮರಳಿಪಡೆಯಲ್ಪಟ್ಟ, ಪ್ರಜಾಸತೀ-ಸಂತಾನವುಳ್ಳವಳಂತಾಗಿ, ಪರಿಷ್ವಜ್ಯ-(ಕೃಷ್ಣನನ್ನು)ಅಪ್ಪಿಕೊಂಡು, ಅಂಕಂ-ತೊಡೆಯನ್ನು, ಆರೋಪ್ಯ-ಏರಿಸಿಕೊಂಡು, ಬಹೂನ್-ಹಲವಾದ, ಅಶ್ರುಕಣಾನ್-ಕಂಣೀರತೊಟ್ಟುಗಳನ್ನು, ಮುಮೋಚ-ಬಿಟ್ಟಳು॥೧೯॥ತತಶ್ಚ-ಆಮೇಲಾದರೋ, ಭಾನೌ-ಸೂರ್ಯನು, ಅಸ್ತಂ-ಅದರ್ಶನವನ್ನು, ಗತೇಸತಿ-ಹೊಂದಿದವನಾಗುತ್ತಿರಲು, (ಕಾಣಿಸದೇಹೋಗುತಲೂ) ಕೃಷ್ಣಃ-ಕೃಷ್ಣನು, ಸರಾಮಃ-ರಾಮನಿಂದಸಹಿತನಾಗಿ, ಸಹಗೋಪಾಲಃ-ಸಂಗಡಬರುವಗೋಪಾಲಕರುಳ್ಳವನಾಗಿ, ಸಗೋಧನಃ-ಗೋವುಗಳೆಂಬಧನಗಳಿಂಕೂಡಿದವನಾಗಿ, ಮಾತಾಪಿತಾಸಹ-ತಾಯಿಯೊಡನೆಯೂತಂದೆಯೊಡನೆಯೂ, ವಾಸಂ-ಬಿಡದಿಯನ್ನು, ಅಕಲ್ಪಯತ್-ಅಲ್ಲಿಯೇಏರ್ಪಡಿಸಿದನು॥೨೦॥ರಾಜೇಂದ್ರ-ಅರಸರಲ್ಲಿಶ್ರೇಷ್ಠನಾದಪರೀಕ್ಷಿತನೇ! ಕ್ಷುತ್ತೃಡ್ಭ್ಯಾಂ-ಹಸಿವಿನಿಂದಲೂ ನೀರಡಿಕೆಯಿಂದಲೂ, ಶ್ರಮಕರ್ಶಿತಾಃ-ಆಯಾಸದಿಂದಬಳಲಿಸಲ್ಪಟ್ಟವರಾದ, ವ್ರಜೌಕಸಃ-ಗೋಕುಲವಾಸಿಗಳೂ, ಗಾವಃ-ಗೋವುಗಳೂ, ಕಾಳಿಂದ್ಯಾಃ-ಯಮುನೆಯ, ತತ್ರ-ಆ, ಉಪಕೂಲತಃ-ತಡಿಯಹತ್ತಿರದಲ್ಲಿ, ತಾಂರಾತ್ರಿಂ-ಆರಾತ್ರಿಯಲ್ಲಿ, ಊಷುಃ-ವಾಸಂಗೆಯ್ದರು॥೨೧॥ ತದಾ-ಆಗ, ಆಶು-ಬೇಗನೆ, ವಿಪಿನೋದ್ಭೂತಃ-ವಿಪಿನ-ಹೆಗ್ಗಾಡಿನಿಂದ, ಉದ್ಭೂತಃ-ಎರಚಲ್ಪಟ್ಟದ್ದಾದ, ದವಾಗ್ನಿಃ-ಕಾಳ್ಕಿಚ್ಚು, ನಿಶೀಥೇ-ಅರ್ಧರಾತ್ರದಲ್ಲಿ, ಸುಪ್ತಂ-ನಿದ್ದೆಗೆಯ್ಯುತ್ತಿರುವ, ವ್ರಜಂ-ಗೋಗೋಪಾಲಸಂಘವನ್ನು, ಸರ್ವತಃ-ಎಲ್ಲಕಡೆಗಳಲ್ಲಿಯೂ ಆವೃತ್ಯ-ಸುತ್ತಿಕೊಂಡು, ಪ್ರದಗ್ಧುಂ-ಸುಡುವುದಕ್ಕೆ, ಉಪಚಕ್ರಮೇ-ಆರಂಭಿಸಿತು॥೨೨॥ ತತಃ-ಆಮೇಲೆ, ಉತ್ಥಾಯ-ಎದ್ದು, ಸಂಭ್ರಾಂತಾಃ-ಭ್ರಮೆಗೊಂಡವರಾದ, ದಹ್ಯಮಾನಾಃ-ಸುಡಲ್ಪಡುತಲಿರುವರಾದ, ತೇವ್ರಜೌಕಸಃ-ಆಗೋಕುಲವಾಸಿಗಳು, ಈಶ್ವರಂ-ಜಗನ್ನಿಯಾಮಕನಾದವರೂ, ಮಾಯಾಮನುಜಂ-ಮಾಯೆಯಿಂದಮನುಷ್ಯನಾಗಿರುವ, ಕೃಷ್ಣಂ-ಕೃಷ್ಣನನ್ನು, ಶರಣಂ-ರಕ್ಷಕನನ್ನಾಗಿ, ಯಯುಃ-ಹೊಂದಿದರು ॥೨೩॥ಮಹಾಭಾಗ-ಮಹಾಪೂಜ್ಯತೆಯುಳ್ಳ, ಕೃಷ್ಣಕೃಷ್ಣ-ಕೃಷ್ಣನೇ! ಕೃಷ್ಣನೇ! ಅಮಿತವಿಕ್ರಮ-ಅಳೆಯಲ್ಪಡದಸಾಮರ್ಥ್ಯವುಳ್ಳ, ಹೇರಾಮ! ಎಲೈಬಲಭದ್ರನೇ! ಘೋರತಮಃ-ಅತಿಭಯಂಕರವಾದ, ಅಥವಾಬಹಳಕ್ರೂರವಾದ, ವಿಷಃ-

---

ನಾದ ಪುತ್ರನಂ ಪುನಃ ಪಡದವಳಾಗಿ ತನ್ನ ಪುತ್ರನಾದ ಶ್ರೀಕೃಷ್ಣನಂ ತೊಡೆಯ ಮೇಲೆಕುಳ್ಳಿರಿಸಿಕೊಂಡು ಅಪ್ಪಿಕೊಂಡು ಅಮಿತಗಳಾದ ಆನಂದ ಬಾಷ್ಪಬಿಂದುಗಳಂ ಬಿಟ್ಟಳು. ॥೧೯॥ ‡ ಆಮೇಲೆ ಸೂರ್ಯನು ಅಸ್ತಮಾನಂ ಹೊಂದುತಲೂ ಕೃಷ್ಣನು ರಾಮನಿಂದಲೂ ತಾಯಿತಂದೆಗಳಿಂದಲೂ ಗೋಪಾಲಕರಿಂದಲೂ ಗೋವುಗಳಿಂದಲೂ ಕೂಡಿದವನಾಗಿ ಇದ್ದನು. ‡ ॥೨೦॥ ಎಲೈ, ಅರಸನೇ! ಗೋವುಗಳು ಗೋಪಾಲಕರು ಸಹ ಆರಾತ್ರಿಯಲ್ಲಿ ಯಮುನಾತೀರದೊಳು ಹಸಿವಿನಿಂದಲೂ ಬಾಯಾರಿಕೆಯಿಂದಲೂ ಶ್ರಮದಿಂದಲೂ ಪೀಡಿತರಾಗಿ ವಾಸಂಗೆಯ್ದರು ॥೨೧॥ ಆಗ ವನದಲ್ಲಿ ಅತ್ಯಂತವೇಗಯುಕ್ತವಾದ ವಾಯುವಿನಿಂದ ಹುಟ್ಟಿದ ಕಾಡುಕಿಚ್ಚು ಅರ್ಧರಾತ್ರದಲ್ಲಿ ಯಮುನಾತೀರದೊಳು ನಿದ್ದೆಗೆಯ್ಯುತ್ತಿರುವ ಗೋಕುಲವಾಸಿಗಳಾದ ಜನರಂ ಸುತ್ತಲೂ ವ್ಯಾಪಿಸಿಕೊಂಡು ಸುಡತೊಡಗಿತು. ॥೨೨॥ಆಮೇಲೆ ಗೋಕುಲವಾಸಿಗಳಾದ ಆಜನರೆಲ್ಲರೂ ದವಾಗ್ನಿಯಿಂದ ದಹಿಸಲ್ಪಡುವರಾದುದರಿಂ ಬೇಗದಿಂದೆದ್ದು, ಮಾಯೆಯಿಂ ಮನುಷ್ಯರೂಪಮಂ ತಾಳಿಯಿರುವ ಈಶ್ವರನಾದ ಶ್ರೀಕೃಷ್ಣನು ಶರಣುಹೊಂದಿದರು ॥೨೩॥ ಅದೆಂತೆನೆ- ಮಹಾಭುಜವುಳ್ಳ ಎಲೈ, ಕೃಷ್ಣನೇ! ಅಪರಿಮಿತಪರಾಕ್ರಮವುಳ್ಳ ರಾಮನೇ! ಅತಿಭಯಂಕರವಾದದವಾಗ್ನಿಯು ನಿನ್ನವರಾದನಮ್ಮಂ ನುಂಗಾ

ಏಷನೋ ರತವೊವಹ್ನಿಸ್ತಾವಕಾನ್ಗ್ರಸತೆಹಿನಃ ॥೨೪॥ ಸುದುಸ್ತರಾನ್ನಸ್ಸ್ವಾನ್ಪಾಹಿಕಾಲಾಗ್ನೆಸ್ಸುಹೃ
ದಃಪ್ರಭೋ।ನಶಕ್ನುಮಸ್ತ್ವಚ್ಚರಣಂಸಂತ್ಯಕ್ತುಮಕುತೋಭಯಮ್॥೨೪॥ಇತ್ಥಂಸ್ವಜನವೈಕ್ಲವ್ಯಂನಿರೀ
ಕ್ಷ್ಯಜಗದೀಶ್ವರಃ।ತಮಗ್ನಿಮಪಿಬತ್ತೀವ್ರಮನಂತೋಽನಂತಶಕ್ತಿಧೃತ್ ॥೨೫॥

॥ ಇತಿ ಶ್ರೀಮದ್ಭಾಗವತೇ- ದಶಮಸ್ಕಂಧೆ- ಸಪ್ತದಶೋಽಧ್ಯಾಯಃ ॥

---

ಈ, ವಹ್ನಿಃ-ಬೆಂಕಿಯು, ತಾವಕಾನ್-ನಿನ್ನವರಾದ, ನಃ-ನಮ್ಮನ್ನು, ಗ್ರಸತೇಹಿ-ನುಂಗುತಲಿರುವದಲ್ಲವೆ? ॥೨೪॥ ಪ್ರಭೋ-ಸಮರ್ಥ ನಾದವನೇ। ಸುದುಸ್ತರಾತ್-ದಾಂಟಲಶಕ್ಯವಾದ, ಕಾಲಾಗ್ನೇಃ- ಮೃತ್ಯುರೂಪವಾದಬೆಂಕಿಯುದೆಸೆಯಿಂದ, ಸುಹೃದಃ- ಮಿತ್ರರಾಗಿ ಯೂ, ಸ್ವಾನ್-ತನ್ನವರಾಗಿಯೂಇರುವ, ನಃ-ನಮ್ಮನ್ನು, ಪಾಹಿ-ಪಾಲಿಸು। ಅಕುತೋಭಯಂ- ಯಾವುದರದೆಸೆಯಿಂದಲೂಭಯವಿ ಲ್ಲದ, ತ್ವಚ್ಚರಣಂ-ನಿನ್ನಪಾದವನ್ನು, ಸಂತ್ಯಕ್ತುಂ-ಬಿಡುವುದಕ್ಕೆ-ನಶಕ್ನುಮಃ-ಶಕ್ತರಾಗಲಾರೆವು॥೨೪॥ಅನಂತಃ-ನಾಶವಿಲ್ಲದವನೂ, ಅನಂತಶಕ್ತಿಧೃತ್-ನಿತ್ಯಸಾಮರ್ಥ್ಯವನ್ನು ಧರಿಸಿದವನೂಆದ, ಜಗದೀಶ್ವರಃ-ಲೋಕಪತಿಯಾದಕೃಷ್ಣನು. ಇತ್ಥಂ- ಹೀಗೆ, ಸ್ವಜನವೈ ಕ್ಲವ್ಯಂ-ಸ್ವಜನ-ತನ್ನವರ, ವೈಕ್ಲವ್ಯಂ-ಭಯಚಾಂಚಲ್ಯವನ್ನು, ನಿರೀಕ್ಷ್ಯ-ನೋಡಿ, ತೀವ್ರಂ-ಕ್ರೂರವಾದ, ತಮಗ್ನಿಂ- ಆಕಾಡ ಕಿಚ್ಚನ್ನು, ಅಥವಾ, ತೀವ್ರಂ-ಬೇಗನೆ, ಅಪಿಬತ್--ಕುಡಿದನು ॥೨೫॥

ಇತಿಶ್ರೀಮದ್ಭಾಗವತ ಪ್ರತಿಪದಾರ್ಥಬೋಧಿನ್ಯಾಂ ದಶಮಸ್ಕಂಧೇ-ಸಪ್ತದಶೋಽಧ್ಯಾಯಃ.

---



ತ್ತಿದೆ. ॥೨೪॥ ಎಲೈ, ಪ್ರಭುವಾದ ಶ್ರೀಕೃಷ್ಣನೇ। ದಾಂಟಲಶಕ್ಯವಾದ ಮೃತ್ಯುರೂಪವಾಗಿರುವ ಈ ದವಾಗ್ನಿಯದೆಸೆ ಯಿಂದ ಮಿತ್ರರಾದ ನಮ್ಮಂ ಸಲಹು ‡ ಯಾರಿಂದಲೂ ಭಯವಿಲ್ಲದೇ ಇರುವ ನಿನ್ನಪಾದಾರವಿಂದಮಂ ಬಿಡುದದಕ್ಕೆ ನಾ ವುಸಮರ್ಥರಲ್ಲವೆಂದು ಹೀಗೆ ಶರಣುಹೊಂದಿದರು. ‡॥೨೪॥ಸ್ವಜನ ದೈನ್ಯವಂನೋಡಿ ಜಗದೀಶ್ವರನಾದ ಅಪರಿಚ್ಛಿನ್ನ ನಾದ ಅನಂತಶಕ್ತಿಗಳಂ ಧರಿಸಿರುವ ಶ್ರೀಕೃಷ್ಣಮೂರ್ತಿಯು ಅವರಂ ರಕ್ಷಿಸಲೋಸುಗ ಅತ್ಯಂತತೀಕ್ಷ್ಣವಾದ ಆದ ವಾಗ್ನಿಯಂ ಪಾನಂಗೆಯ್ದನು. ॥೨೫॥ ... ... ... ... ... ... .. ...॥‡

ಇಂತು ಶುಕಮುನಿಯು ಪರೀಕ್ಷಿದ್ರಾಯನಿಗೆ ನಿರೂಪಿಸಿದನೆಂದು ಸೂತಪೌರಾಣಿಕನು ನೈಮಿಶಾ
ರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಹೇಳಿದನೆಂಬಲ್ಲಿಗೆ- ಶ್ರೀಮನ್ಮಹೀಶೂರಪುರವ
ರಾಧೀಶ ಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜ ವಿರಚಿತಮಪ್ಪ, ಶ್ರೀ
ಭಾಗವತಮಂ ಶ್ರೀಕೃಷ್ಣರಾಜ ವಾಣೀವಿಲಾಸವು. ಎಂಬ ಕರ್ಣಾಟಕ
ಭಾಷಾವ್ಯಾಖ್ಯಾನದಲ್ಲಿ ದಶಮಸ್ಕಂಧದೊಳ್ ಹದಿನೇಳನೆಯ
ಅಧ್ಯಾಯವು ಸಮ್ಪೂರ್ಣವಾದುದು.

ಮಂಗಳಮಸ್ತು

॥ ಗ್ರೀಷ್ಮರ್ತುವರ್ಣನಪ್ರಾರಂಭಃ ॥

ಶ್ರೀಶುಕಃ ॥ ಅಥಕೃಷ್ಣಃಪರಿವೃತೋಜ್ಞಾತಿಭಿರ್ಮುದಿತಾತ್ಮಭಿಃ । ಅನುಗೀಯಮಾನೋನ್ಯವಿಶದ್ವ್ರಜಂಗೋಕುಲಮಣ್ಡಿತಃ ॥೧॥ ವ್ರಜೇವಿಕ್ರೀಡತೋರೇವಂಗೋಪಾಲಚ್ಛದ್ಮಮಾಯಯಾ । ಗ್ರೀಷ್ಮೋನಾಮರ್ತುರಭವನ್ನಾತಿಪ್ರೇಯಾಞ್ಛರೀರಿಣಾಮ್ ॥೨॥ ಸಚವೃಂದಾವನಗುಣೈರ್ವಸಂತಇವಲಕ್ಷಿತಃ । ಯತ್ರಾಸ್ತೇಭಗವಾನ್ಸಾಕ್ಷಾದ್ರಾಮೇಣಸಹಕೇಶವಃ ॥೩॥ ಯತ್ರನಿರ್ಝರನಿರ್ಹ್ರಾದನಿವೃತ್ತಸ್ವನಝಿಲ್ಲಿಕಮ್ । ಶಶ್ವತ್ತಚ್ಛೀಕರೈರ್ಜುಷ್ಟದ್ರುಮಮಣ್ಡಲಮಣ್ಡಿತಮ್ ॥೪॥ ಸರಿತ್ಸರಃಪ್ರಸ್ರವಣೋರ್ಮಿವಾಯುನಾಕಲ್ಹಾರಕಂ

---

೧೮ಅಧ್ಯಾಯಪ್ರತಿಪದಟೀಕೆ.

[ ಶುಕವಚನವು ] ಅಥ-ಆಮೇಲೆ, ಜ್ಞಾತಿಭಿಃ-ಬಂಧುಗಳಿಂದ, ಪರಿವೃತಃ-ಸುತ್ತಿಕೊಳ್ಳಲ್ಪಟ್ಟ, ಕೃಷ್ಣನು, ಮುದಿತಾತ್ಮಭಿಃ-ಸಂತೋಷವುಂಟಾದಮನಸ್ಸುಳ್ಳವರಿಂದ, ಅನುಗೀಯಮಾನಃ-ಅನುಸರಿಸಿಹಾಡಲ್ಪಡುತ್ತಿರುವನಾಗಿಯೂ, ಗೋಕುಲಮಂಡಿತಃ-ಗೋಕುಲ-ಗೋವುಗಳಿಂದಿಡಿಸಿಂದ, ಮಂಡಿತಃ-ಅಲಂಕರಿಸಲ್ಪಟ್ಟವನಾಗಿಯೂ, ವ್ರಜಂ-ಗೋಕುಲವನ್ನು, ಅವಿಶತ್-ಹೊಕ್ಕನು ॥೧॥ ವ್ರಜೇ-ಗೋಕುಲದಲ್ಲಿ, ಗೋಪಾಲಛದ್ಮಮಾಯಯಾ-ಗೋಪಾಲ-ಪಶುಗಳನ್ನುಪಾಲಿಸುವಿಕೆಯೆಂಬ, ಛದ್ಮ-ನೆವವುಳ್ಳ, ಮಾಯಯಾ-ಮಾಯೆಯಿಂದ, ಏವಂ-ಹೀಗೆ, ವಿಕ್ರೀಡಿತೋಸ್ಸತೋಃ-ರಾಮಕೃಷ್ಣರುಆಡುತ್ತಿರುವಾಗಲು, ಶರೀರಿಣಾಂ-ಪ್ರಾಣಿಗಳಿಗೆ, ನಾತಿಪ್ರೇಯಾನ್-ಅತಿಪ್ರಿಯವಲ್ಲದ, ಗ್ರೀಷ್ಮೋನಾಮ-ಗ್ರೀಷ್ಮವೆಂದುಪ್ರಸಿದ್ಧವಾದ, ಋತುಃ-ಕಾಲವು, ಅಭವತ್-ಉಂಟಾಯಿತು ॥೨॥ ಸಚ-ಆಗ್ರೀಷ್ಮಕಾಲವಾದರೋ, ಬೃಂದಾವನಗುಣೈಃ-ಬೃಂದಾರಣ್ಯದಸುಗುಣಗಳಿಂದ, ವಸಂತಇವ-ವಸಂತಕಾಲದಹಾಗೆ, ಲಕ್ಷಿತಃ-ನೋಡಲ್ಪಟ್ಟದ್ದಾಯಿತು. ಯತ್ರ-ಯಾವುದರಬಳಿಯಲ್ಲಿ, ಸಾಕ್ಷಾತ್-ಪ್ರತ್ಯಕ್ಷವಾಗಿ, ಭಗವಾನ್-ಪರಮೇಶ್ವರನಾಗಿರುವ, ಕೇಶವಃ-ಕೃಷ್ಣನು, ರಾಮೇಣಸಹ-ಬಲರಾಮನೊಡನೆ, ಆಸ್ತೇ-ಇರುವನೋ ॥೩॥ ಯತ್ರ-ಯಾವಗ್ರೀಷ್ಮಕಾಲದಲ್ಲಿ, ನಿರ್ಝರ..ಝಿಲ್ಲಿಕಂ-ನಿರ್ಝರಪ್ರವಾಹಗಳ, ನಿರ್ಹ್ರಾದ ಧ್ವನಿಯಿಂದ, ನಿವೃತ್ತ-ಅಡಗಿದ, ಸ್ವನ ಶಬ್ದಗಳುಳ್ಳ, ಝಿಲ್ಲಿಕಂ-ಕ್ರೂರವಾಗಿಕೂಗುವಸಣ್ಣಹುಳಗಳುಳ್ಳಂತಹ, ಶಶ್ವತ್-ಬಾರಿಬಾರಿಗೂ, ತಚ್ಛೀಕರೈಃ-ತತ್-ಆಪ್ರವಾಹಗಳ, ಶೀಕರೈಃ-ನೀರತುಂತುರುಗಳಿಂದ, ಜುಷ್ಟ-ಸೇವಿಸಲ್ಪಡುವ, ದ್ರುಮ ಮಂಡಲ-ಗಿಡಗಳಗುಂಪಿನಿಂದ, ಮಂಡಿತಂ-ಅಲಂಕರಿಸಲ್ಪಟ್ಟಂತಹ ॥೪॥ ಕಲ್ಹಾರ.. ಹಾರಿಣಾ-ಕಲ್ಹಾರ-ಸೌಗಂಧಿಕಪುಷ್ಪಗಳ, ಕಂಜ-ತಾವರೆಗಳ, ಉತ್ಪಲ-ನೈದಿಲೆಗಳ, ರೇಣು-ಪುಪ್ಪುಡಿಗಳನ್ನು, ಹಾರಿಣಾ-ತರುತಲಿರುವ, ಅಥವಾ-ರೇಣು-ಪುಪ್ಪುಡಿಗಳಿಂದ,ಹಾ

---

॥೧೮ನೆಯ ಅಧ್ಯಾಯವು.॥

ಶ್ರೀಧರೀಯಶ್ಲೋಕ॥ ಅಷ್ಟಾದಶೇತತೋಗ್ರೀಷ್ಮೇ ವಸಂತಗುಣಲಕ್ಷಿತೇ। ಅಪಾತಯದ್ಬಲೋ ನಾಲಂಪ್ರಲಂಬಂಲೀಲಯಾಹರಿಃ॥ಟೀ॥ಹದಿನೆಂಟನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ಗ್ರೀಷ್ಮರ್ತುವಿನಲ್ಲಿ ಬಲರಾಮನಿಂದ ಪ್ರಲಂಬನೆಂಬ ಅಸುರನಂ ಕೊಲ್ಲಿಸಿದನೆಂಬ ಅರ್ಥವಂ ಶುಕಮುನಿಯು ಪರೀಕ್ಷಿದ್ರಾಯನಂಕುರಿತು ನಿರೂಪಿಸುವನದೆಂತೆನೆ-

ಎಲೈ, ಪರೀಕ್ಷಿದ್ರಾಯನೇ! ಅನಂತರದಲ್ಲಿ ಶ್ರೀಕೃಷ್ಣನು ಸಂತುಷ್ಟಚಿತ್ತರಾದ ಬಂಧುಗಳಿಂದ ಪರಿವೃತನಾಗಿ ಶ್ಲಾಘನಂಗೆಯ್ಯಲ್ಪಡುತ ಗೋಸಮೂಹಗಳಿಂದಲಂಕರಿಸಲ್ಪಟ್ಟ ಗೋಕುಲವಂ ಪ್ರವೇಶಿಸಿದನು.॥೧॥ಹೀಗೆರಾಮಕೃಷ್ಣರು ಗೋವುಗಳಂಪಾಲಿಸುವ ನೆವವುಳ್ಳ ಮಾಯೆಯಿಂದ ನಂದಗೋಕುಲದಲ್ಲಿ ಕ್ರೀಡಿಸುತ್ತಿರಲು ಪ್ರಾಣಿಗಳಿಗೆ ಅತ್ಯಂತ ವಿಷ್ಟವಿಲ್ಲದೇ ಇರುವ ಗ್ರೀಷ್ಮಕಾಲಬಂತು. ॥೨॥ ಭಗವಂತನಾದಕೃಷ್ಣನು ಬಲರಾಮನೊಡಗೂಡಿ ಯಾವಬೃಂದಾವನದಲ್ಲಿ ವಾಸಂಗೆಯ್ಯುತಲಿರ್ಪನೋ ಆಬೃಂದಾವನದ ಸದ್ಗುಣಗಳಿಂದ ಆತೀಕ್ಷ್ಣವಾದ ಗ್ರೀಷ್ಮಋತುವುಕೂಡ ಜನರಿಗೆವಸಂತರ್ತುವಿನಂತೆ ಕಾಣಲ್ಪಟ್ಟಿತು. ॥೩॥ ಯಾವಗ್ರೀಷ್ಮರ್ತುವಿನಲ್ಲಿಯೂಕೂಡ ಯಾವಬೃಂದಾವನವು ಜಲಪ್ರವಾಹಗಳ ಅತಿಘೋಷದಿಂದ ಘಾದನಂಗೆಯ್ಯಲ್ಪಟ್ಟ ಧ್ವನಿಗಳುಳ್ಳಚಿಮ್ಮುಂಡೆಗಳೆಂಬ ಸೂಕ್ಷ್ಮಕೀಟಂಗಳುಳ್ಳಂತಾದ್ದಾಗಿ ಬಾರಿಬಾರಿಗೂ ಆಜಲಪ್ರವಾಹಗಳುಳ್ಳತುಂತುರುಗಳಿಂದ ರಸವತ್ತಾಗಿರುವ ವೃಕ್ಷಸಮೂಹಗಳಿಂದ ಅಲಂಕರಿಸಲ್ಪಟ್ಟಂತಾದ್ದಾಗಿಯೂ ಇರುವುದೋ; ಅಂತಾ ಬೃಂದಾವನದ ಗುಣಗಳಿಂದ ಗ್ರೀಷ್ಮಋತುಕೂಡ ವಸಂತರ್ತುವಿನಂತೆ ಕಾಣಲ್ಪಟ್ಟಿತು.॥೪॥ಮತ್ತು ಅತ್ಯಂತಹಸುರಾಗಿರುವ ತೃಣಗಳಿಂದ ವ್ಯಾಪ್ತವಾದ ಯಾವ ಬೃಂದಾವನದಲ್ಲಿ ಕಲ್ಹಾರಕುಮುದ

ಜೋತ್ಪಲರೇಣುಹಾರಿಣಾ | ನ ವಿದ್ಯತೇ ಯತ್ರ ವನೌಕಸಾಂ ದವೋ ನಿದಾಘವಹ್ನ್ಯರ್ಕಭವೋಽತಿಶಾದ್ವಲೇ ||೫|| ಅಗಾಧತೋಯಹ್ರದಿನೀತಟೋರ್ಮಿಭಿರ್ದ್ರವತ್ಪುರೀಷ್ಯಾಃ ಪುಳಿನೈಸ್ಸಮನ್ತತಃ | ನ ಯತ್ರ ಚಂಡಾಂಶುಕರಾ ವಿಷೋಲ್ಬಣಾ ಭುವೋ ರಸಂ ಶಾದ್ವಲಿತಂ ವಿಗೃಹ್ಣತೇ ||೬|| ವನಂ ಕುಸುಮಿತಂ ಶ್ರೀಮನ್ನದಚ್ಚಿತ್ರಮೃಗದ್ವಿಜಮ್ | ಗಾಯನ್ಮಯೂರಭ್ರಮರಂ ಕೂಜತ್ಕೋಕಿಲಸಾರಸಮ್ ||೭|| ಕ್ರೀಡಿಷ್ಯಮಾಣಸ್ತತ್ಕೃಷ್ಣೋ ಭಗವಾನ್ ಬಲಸಂಯುತಃ | ವೇಣುಂ ವಿರಣಯನ್ ಗೋಪೈರ್ಗೋಧನೈಸ್ಸಂವೃತೋಽವಿಶತ್ ||೮|| ಪ್ರವಾಳಬರ್ಹಸ್ತಬಕ

---

ರಿಣಾ-ಮನೋಹರವಾದಂತಾ; ಸರಿತ್ಸರ ... ವಾಯುನಾ-ಸರಿತ್-ಹೊಳೆಗಳ, ಸರಃ-ಕೊಳಗಳ, ಪ್ರಸ್ರವಣ-ಜರಿಗಳ, ಊರ್ಮಿ-ಅಲೆಗಳ, ವಾಯುನಾ-ಗಾಳಿಯಿಂದ, ಅತಿಶಾದ್ವಲೇ-ಬಹಳಹಸುರಾಣಿಕೆಯುಳ್ಳ, ಯತ್ರ-ಯಾವಸ್ಥಲದಲ್ಲಿ, ವನೌಕಸಾಂ-ವನವಾಸಿಗಳಾದವರಿಗೆ, ನಿದಾಘವಹ್ನ್ಯರ್ಕಭವಃ-ನಿದಾಘ-ಉಷ್ಣಕಾಲದ, ವಹ್ನಿ-ಬೆಂಕಿಯಿಂದಲೂ, ಅರ್ಕ-ಸೂರ್ಯನಿಂದಲೂ, ಭವಃ-ಉಂಟಾದ, ದವಃ-ಬಿಸಿಯು, ನವಿದ್ಯತೇ-ಇರುವುದಿಲ್ಲವೋ ||೫|| ಅಗಾಧ. ...ಊರ್ಮಿಭಿಃ-ಅಗಾಧ-ಆಳವಾದ, ತೋಯ-ನೀರುಳ್ಳ, ಹ್ರದಿನೀ-ಹೊಳೆಗಳ, ತಟ-ತಡಿಯನ್ನು ನೋಂಕುವ, ಊರ್ಮಿಭಿಃ-ಅಲೆಗಳುಳ್ಳ, ಕುಸುಮೈಸ್ಸಹ, ಮರಳತಿಟ್ಟೆಗಳೊಡನೆ, ದ್ರವತ್ಪುರೀಷ್ಯಾಃ-ದ್ರವತ್-ನೀರಾಗಿರುವ, ಪುರೀಷ್ಯಾಃ-ಕೆಸರುಳ್ಳ, ಭುವಃ-ಭೂಮಿಯ, ಶಾದ್ವಲಿತಂ-ಎಳೆಹುಲ್ಲುವುಂಟಾಗಿರುವಿಕೆಯನ್ನೂ, ರಸಂಚ-ತೇವವನ್ನೂ, ಯತ್ರ-ಎಲ್ಲಿ, ವಿಷೋಲ್ಬಣಾಃ-ವಿಷದಂತೆತೀಕ್ಷ್ಣಗಳಾದ, ಚಂಡಾಂಶುಕರಾಃ-ಸೂರ್ಯಕಿರಣಗಳು, ಸಮಂತತಃ-ಸರ್ವಪ್ರದೇಶಗಳಲ್ಲಿಯೂ, ನವಿಗೃಹ್ಣತೇ-ಹೀರುವುದಿಲ್ಲವೋ ||೬|| ತತ್-ಅಂತಹದ್ದಾದ, ಶ್ರೀಮತ್-ಸಂಪತ್ತುಳ್ಳ, ಕುಸುಮಿತಂ-ಹೂಗಳುಂಟಾಗಿರುವಂತಾ, ನದಚ್ಚಿತ್ರಮೃಗದ್ವಿಜಂ-ನದತ್-ಕೂಗುತ್ತಲಿರುವ, ಚಿತ್ರ-ಆಶ್ಚರ್ಯಕರಗಳಾದ, ಮೃಗ-ಜಿಂಕೆಮೊದಲಾದವುಗಳೂ, ದ್ವಿಜಂ-ಹಕ್ಕಿಗಳೂಉಳ್ಳಂತಾ, ಗಾಯನ್ಮಯೂರಭ್ರಮರಂ-ಗಾಯತ್-ಹಾಡುತಲಿರುವ, ಮಯೂರ-ನವಿಲುಗಳೂ, ಭ್ರಮರಂ-ತುಂಬಿಗಳೂಉಳ್ಳಂತಾ, ಕೂಜತ್ಕೋಕಿಲಸಾರಸಂ-ಕೂಜತ್-ಕೂಗುತಲಿರುವ, ಕೋಕಿಲ-ಕೋಗಿಲೆಗಳೂ, ಸಾರಸಂ-ಕೊಳವಕ್ಕಿಗಳೂಉಳ್ಳಂತಾ, ವನಂ-ತೋಟವು, ಇರ್ದುದು ||೭|| ಭಗವಾನ್-ಕೃಷ್ಣಃ-ಈಶ್ವರನಾದಕೃಷ್ಣನು, ಬಲಸಂಯುತಃ-ಬಲರಾಮನೊಡನೆ ಸೇರಿದವನಾಗಿ, ಗೋಧನೈಃ-ಗೋವುಗಳೇಧನಗಳಾಗಿವುಳ್ಳ, ಗೋಪೈಃ-ಗೊಲ್ಲರಿಂದ, ಸಂವೃತಃ-ಬಳಸಲ್ಪಟ್ಟವನಾಗಿ, ಕ್ರೀಡಿಷ್ಯಮಾಣಃ-ಆಡಲ್ಹೋಗುವವನಾಗಿ, ವೇಣುಂ-ಕೊಳಲನ್ನು, ವಿರಣಯನ್-ವಿಶೇಷವಾಗಿಊದುತಲಿರುವನಾಗಿ, ತತ್-ಆವನವನ್ನು, ಅವಿಶತ್-ಹೊಕ್ಕನು ||೮|| ಪ್ರವಾಳ. ಭೂಷಣಾಃ-ಪ್ರವಾಳ-ಚಿಗುರುಗಳ, ಬರ್ಹ-ನವಿಲಗರಿಗಳ, ಸ್ತಬಕ-ತುರಾಯಿಗಳಿಂದಲೂ, ಸ್ರಕ್-ಹಾರಗಳಿಂದಲೂ, ಧಾತು-ಬಣ್ಣದಮಣ್ಣುಮೊದಲಾದವುಗಳಿಂದಲೂ, ಕೃತ-ಮಾಡಲ್ಪಟ್ಟ, ಭೂಷಣಾಃ-ಅಲಂಕಾರವುಳ್ಳಂತಾ, ರಾಮ

---

ಕಮಲಗಳೆಂಬ ಕುಸುಮಂಗಳ ಪರಾಗಗಳಂ ತೆಗೆದುಕೊಂಡು ಬರುತಲಿರುವ ಮತ್ತು ಮಹಾನದಿ ಸರೋವರ ಗಿರಿನದಿ ಇವುಗಳ ತೆರೆಗಳ ಗಾಳಿಯಿಂದ ಆವನದಲ್ಲಿ ವಾಸಂಗೆಯ್ವ ಪ್ರಾಣಿಗಳಿಗೆ ಗ್ರೀಷ್ಮರ್ತುವಿನಿಂದ ಆಕಾಶದಲ್ಲಿರುವ ಅಗ್ನಿಸೂರ್ಯರಿಂದಲೂ ಸಹ ಹುಟ್ಟುವತಾಪವಿಲ್ಲವೋ; ||೫|| ಮತ್ತು ಯಾವಬೃಂದಾವನದಲ್ಲಿ ಗ್ರೀಷ್ಮರ್ತುವಿನಲ್ಲಿರುವ ಸೂರ್ಯನ ವಿಷದಂತೆ ಅತಿತೀಕ್ಷ್ಣಗಳಾದ ಕಿರಣಗಳೂಕೂಡ ಅಗಾಧವಾದ ನೀರುಳ್ಳ ಹೊಳೆಗಳತಡಿಗಳಂ ವ್ಯಾಪಿಸಿಕೊಂಡು ಬರುತಲಿರುವ ತೆರೆಗಳಿಂದ ಮರಳುದಿಂಣೆಗಳೊಡಗೂಡಿ ದ್ರವಿಸುತಲಿರುವ ಕೆಸರುಳ್ಳ ಭೂಮಿಯ ಸಾರಮ ಅತ್ಯಂತಹಸುರಾದ ತೃಣಗಳಿಂದುಂಟಾದ ಕಾಂತಿಯಂಸಹ ಅಪಹರಿಸಲಾರವೋ ||೬|| ಅನೇಕಪುಷ್ಪಯುಕ್ತವಾದ, ಧ್ವನಿಗೆಯ್ವುತಲಿರುವ ವಿಚಿತ್ರವಾದ ಮೃಗಪಕ್ಷಿಗಳುಳ್ಳ, ಮತ್ತು ಗಾನಂಗೆಯ್ವುತಲಿರುವ ನವಿಲುಗಳು ತುಂಬಿಗಳುಳ್ಳ, ಧ್ವನಿಗೆಯ್ವುತಲಿರುವ ಕೋಕಿಲಪಕ್ಷಿಗಳು ಹಂಸಪಕ್ಷಿಗಳೂ ಸಹವುಳ್ಳ, ಶೋಭಾಯಮಾನವಾದ, ಅಂತಾ ಬೃಂದಾವನವು ||೭|| ಭಗವಂತನಾದ ಶ್ರೀಕೃಷ್ಣಮೂರ್ತಿಯು ಕ್ರೀಡಿಸಲಿಚ್ಛೆಯುಳ್ಳವನಾಗಿ ಬಲರಾಮನೊಡಗೂಡಿ ವೇಣುಗಾನಂಗೆಯ್ವುತ ಗೋಪಾಲಕರಿಂದಲೂ ಗೋಧನಂಗಳಿಂದಲೂ ಬಳಸಲ್ಪಟ್ಟವನಾಗಿ ಪ್ರವೇಶಂಗೆಯ್ದನು. ||೮|| ಆಮೇಲೆ ರಾಮಕೃಷ್ಣಾದಿಗೋಪಾಲಕರು ಆಬೃಂದಾವನದಲ್ಲಿ ತಳಿರುಗಳಿಂದಲೂ ನವಿಲುಗಳಿಂದಲೂ ಹೂವಿನಗೊಂಚಲುಗಳಿಂದಲೂ ಹೂವಿನಸರಗಳಿಂಗೆಯ್ವು; ಅವುಗಳಿಂದಲೂ ಗೈರಿಕಾದಿಧಾತುಗಳಿಂದಲೂ ಕಲ್ಪಿತಂಗಳಾದ

ಪ್ರಗಾಯಂತಃ ಕೃತಭೂಷಣಾಃ| ರಾಮಕೃಷ್ಣಾದಯೋ ಗೋಪಾ ನನೃತುರ್ಯುಯುಧುರ್ಜಗುಃ ||೯|| ಕೃಷ್ಣಸ್ಯ ನೃತ್ಯತಃ ಕೇಚಿಜ್ಜಗುಃ ಕೇಚಿದವಾದಯನ್ | ವೇಣುಪಾಣಿತಲೈಃ ಶೃಂಗೈಃ ಪ್ರಶಶಂಸುರಥಾಪರೇ ||೧೦|| ಗೋಪಜಾತಿ ಪ್ರತಿಚ್ಛನ್ನಾ ದೇವಾ ಗೋಪಾಲರೂಪಿಣಃ| ಈಡಿರೇ ಕೃಷ್ಣರಾಮೌ ಚ ನಟಾ ಇವ ನಟಂ ನೃಪ ||೧೧|| ಭ್ರಮಣೈರ್ಲಂ

---

ಕೃಷ್ಣಾದಯಃ-ರಾಮನೂ ಕೃಷ್ಣನೂ ಮುಂತಾದವರಾದ, ಗೋಪಾಃ-ಪಶುಪಾಲಕರು, ನನೃತುಃ- ಕುಣಿದರು. ಯುಯುಧುಃ- ಕಾದಿದರು ಜಗುಃ-ಹಾಡಿದರು. ||೯|| ಕೃಷ್ಣಸ್ಯ-ಕೃಷ್ಣನು, ನೃತ್ಯತಸ್ಸತಃ-ಕುಣಿಯುವನಾಗುತ್ತಿರಲು, ಕೇಚಿತ್-ಕೆಲವರು, ಜಗುಃ-ಹಾಡಿದರು, ಕೇಚಿತ್-ಕೆಲವರು, ವೇಣುಪಾಣಿತಲೈಃ-ವೇಣು-ಕೊಳಲುಗಳಿಂದಲೂ, ಪಾಣಿತಲೈಃ-ಚಪ್ಪಾಳೆಗಳಿಂದಲೂ, ಶೃಂಗೈಃ-ಕೊಂಬುಗಳಿಂದಲೂ, ಅವಾದಯನ್-ಕೃತಿಗೆಸರಿಯಾಗಿ ಶಬ್ದ ಮಾಡಿದರು, ಅಥ-ಆಮೇಲೆ, ಅಪರೇ-ಬೇರೆ ಕೆಲವರು, ಪ್ರಶಶಂಸುಃ-ಚನ್ನಾಯಿತೆಂದು ಕೊಂಡಾಡಿದರು ||೧೦|| ನೃಪ- ಅರಸೇ! ಗೋಪಜಾತಿಪ್ರತಿಚ್ಛನ್ನಾಃ-ಗೋಪಜಾತಿ-ಗೊಲ್ಲರಜಾತಿಯಿಂದ, ಪ್ರತಿಚ್ಛನ್ನಾಃ-ಮುಚ್ಚಲ್ಪಟ್ಟವರಾಗಿರುವ, ಗೋಪಾಲರೂಪಿಣಃ-ಪಶುಪಾಲಕರೂಪವುಳ್ಳ, ದೇವಾಃ-ದೇವತೆಗಳೂ, ಕೃಷ್ಣರಾಮೌಚ-ಕೃಷ್ಣನನ್ನೂ, ರಾಮನನ್ನೂ, ನಟಾಃನಟಮಿವ-ನಟ್ಟುವರು ಕುಣಿಯುವವನನ್ನು ಹೇಗೋ ಹಾಗೆ, ಈಡಿರೇ-ಹೊಗಳಿದರು ||೧೧|| ಕಾಕಪಕ್ಷಧರೌ-ಕಾಕಪಕ್ಷ-ಜುಟ್ಟು ಕೂದಲುಗಳನ್ನು, ಧರೌ-ಧರಿಸಿರುವವರಾದ, ಉಭೌ-ರಾಮಕೃಷ್ಣರೀರ್ವರೂ, ಭ್ರಮಣೈಃ-ತಿರುಗಾಟಗಳಿಂದಲೂ, ಲಂಘನೈಃ-

---

ಆಭರಣಂಗಳುಳ್ಳವರಾಗಿ ಒಂದುಸಮಯದಲ್ಲಿ ನರ್ತನಗಳನ್ನೂ, ಒಂದುಸಮಯದಲ್ಲಿ ಯುದ್ಧವನ್ನೂ, ಒಂದುಸಮಯದಲ್ಲಿ ಗಾನವನ್ನೂ, ಮಾಡಿದರು. ||೯|| ಆಗ ಕೃಷ್ಣನು ನರ್ತನಂಗೆಯ್ಯುತ್ತಿರಲು ಕೆಲವರು ಗೋಪಬಾಲಕರು ಗಾನಂಗೆಯ್ದರು, ಮತ್ತೆ ಕೆಲವರು ಕೊಳಲಧ್ವನಿಯನ್ನೂ ಕೈತಾಳವನ್ನೂ ಶೃಂಗವಾದ್ಯವನ್ನೂ ಸಹ ಮಾಡಿದರು. ಮತ್ತೆ ಕೆಲವರು ಕೃಷ್ಣನಂ ಶ್ಲಾಘಿಸಿದರು. ||೧೦|| ಎಲೈ, ಅರಸೇ! ಆಗ ಗೋಪಾಲಜಾತಿಯಿಂದ ಮರೆಮಾಡಲ್ಪಟ್ಟಿರುವ ದೇವತೆಗಳು ನಟರಂತೆ ನರ್ತನಂಗೆಯ್ಯುತಲಿರುವ ರಾಮಕೃಷ್ಣರಂ ಸ್ತುತಿಸಿದರು. ||೧೧|| ಮತ್ತು ಮುಂದಿನ ಜುಟ್ಟುಗಳಂ ಧರಿಸಿರುವ ರಾಮಕೃಷ್ಣರೀರ್ವರೂ ಸುತ್ತಲೂ ತಿರುಗುತ್ತಿರುವುದರಿಂದಲೂ ಹಾರುವುದರಿಂದಲೂ ಒಬ್ಬರನೊಬ್ಬರು ತಳ್ಳಿ



ಕ್ಷೇಪೈರಾಸ್ಫೋಟನವಿಕರ್ಷಣೈಃ । ಚಿಕ್ರೀಡತುರ್ನಿಯುದ್ಧೇನ ಕಾಕಪಕ್ಷಧರೌ ಕ್ವಚಿತ್ ॥ ಕ್ವಚಿನ್ನೃತ್ಯತ್ಸು ಚಾನ್ಯೇಷು ಗಾಯಕೌ ವಾದಕೌ ಸ್ವಯಮ್ । ಶಶಂಸತುರ್ಮಹಾರಾಜ ಸಾಧು ಸಾಧ್ವಿತಿ ವಾದಿನೌ ॥೧೩॥ ಕ್ವಚಿದ್ಬಿಲ್ವೈಃ ಕ್ವಚಿತ್ಕುಂಭೈಃ ಕ್ವಚಾಮಲಕಮುಷ್ಟಿಭಿಃ । ಅಸ್ಪೃಶ್ಯನೇತ್ರಬಂಧಾದ್ಯೈಃ ಕ್ವಚಿನ್ಮೃಗಖಗೇಹಯಾ ॥೧೪॥ ಕ್ವಚಿಚ್ಚ ದರ್ದುರಪ್ಲಾವೈರ್ವಿವಿಧೈರುಪಹಾಸಕೈಃ । ಕದಾಚಿತ್ಸ್ಪಂದೋಳಿಕಯಾ ಕರ್ಹಿಚಿನ್ನೃಪಚೇಷ್ಟಯಾ ॥೧೫॥ ಏವಂ ತೌ ಲೋಕಸಿದ್ಧಾಭಿಃ ಕ್ರೀಡಾಭಿಶ್ಚೇರತುರ್ವನೇ । ನದ್ಯದ್ರಿದ್ರೋಣಿಕುಂಜೇಷು ಕಾನನೇಷು ಸರಸ್ಸು ಚ ॥೧೬॥

॥ ಪ್ರಲಂಬಾಸುರವಧಸಟ್ಟಃ ॥

ಪಶೂಂಶ್ಚಾರಯತೋರ್ಗೋಪೈಸ್ತದ್ವನೇ ರಾಮಕೃಷ್ಣಯೋಃ । ಗೋಪರೂಪೀ ಪ್ರಲಂ

---

ಹಾರಾಟಗಳಿಂದಲೂ, ಕ್ಷೇಪೈಃ-ಎಸೆದಾಟಗಳಿಂದಲೂ, ಆಸ್ಫೋಟನವಿಕರ್ಷಣೈಃ-ಆಸ್ಫೋಟನ-ತಟ್ಟಾಟಗಳಿಂದಲೂ, ವಿಕರ್ಷಣೈಃ-ಎಳೆದಾಟಗಳಿಂದಲೂ, ನಿಯುದ್ಧೇನ-ಕೈಕಾಳಗಗಳಿಂದಲೂ, ಚಿಕ್ರೀಡತುಃ-ಆಡಿದರು ॥೧೨॥ ಮಹಾರಾಜ-ಮಹಾರಾಯನೇ! ಕ್ವಚಿತ್-ಒಂದು ಕಡೆಯಲ್ಲಿ, ಅನ್ಯೇಷು-ಇತರರು, ನೃತ್ಯತ್ಸು-ನರ್ತಿಸುವವರಾಗುತ್ತಿರಲು, ಸ್ವಯಂ-ತಾವೇ, ಗಾಯಕೌ-ಹಾಡುವರಾಗಿಯೂ, ವಾದಕೌ-ವಾದ್ಯಗಳನ್ನು ನುಡಿಸುವವರಾಗಿಯೂ, ಸಾಧುಸಾಧ್ವಿತಿ-ಚೆನ್ನಾಯಿತು ಚೆನ್ನಾಯಿತೆಂದು, ವಾದಿನೌಸಂತೌ-ಹೇಳುತಲಿರುವರಾಗಿ, ಶಶಂಸತುಃ-ಕೊಂಡಾಡಿದರು ॥೧೩॥ ಕ್ವಚಿತ್-ಒಂದೆಡೆಯೊಳು, ಕುಂಭೈಃ-ಕಿರುಬೇಲದಹಣ್ಣುಗಳಿಂದಲೂ, ಕ್ವಚಿತ್-ಒಂದೆಡೆಯೊಳು, ಬಿಲ್ವೈಃ-ಬೆಲ್ಲವತ್ತದ ಕಾಯಿಗಳಿಂದಲೂ, ಕ್ವಚ-ಒಂದು ಸ್ಥಳದಲ್ಲಿ, ಆಮಲಕಮುಷ್ಟಿಭಿಃ-ನೆಲ್ಲಿಕಾಯಿಗಳ ಹಿಡಿಗಳಿಂದಲೂ ಅಸ್ಪೃಶ್ಯನೇತ್ರಬಂಧಾದ್ಯೈಃ-ಅಸ್ಪೃಶ್ಯ-ಮುಟ್ಟದಿರುವಂತೆ ಓಡಾಡುವಾಟಗಳಿಂದಲೂ, ನೇತ್ರಬಂಧ-ಕಣ್ಣುಮುಚ್ಚಲಾಟವೇ, ಆದ್ಯೈಃ-ಮೊದಲಾದವುಗಳಿಂದಲೂ, ಕ್ವಚಿತ್-ಮತ್ತೊಂದೆಡೆಯೊಳು, ಮೃಗಖಗೇಹಯಾ-ಮೃಗ-ಸಿಂಹಾದಿ ಮೃಗಗಳ, ಖಗ-ಹಕ್ಕಿಗಳ ಹಾಗೆ, ಈಹಯಾ-ಚೇಷ್ಟೆಗಳಿಂಗೆಯ್ವ ಆಟಗಳಿಂದಲೂ ॥೧೪॥ ಕ್ವಚಿತ್ ಚ-ಒಂದೆಡೆಯೊಳು, ದರ್ದುರಪ್ಲಾವೈಃ-ದರ್ದುರ-ಕಪ್ಪೆಗಳಂತೆ ಪ್ಲಾವೈಃ-ಕುಪ್ಪಳಿಸಾಡುವುದರಿಂದಲೂ, ವಿವಿಧೈಃ-ಹಲವು ಬಗೆಗಳಾದ, ಉಪಹಾಸಕೈಃ-ನಗೆಯಾಟಗಳಿಂದಲೂ, ಕದಾಚಿತ್-ಒಂದಾನೊಂದು ವೇಳೆಯೊಳು, ಆಂದೋಳಿಕಯಾ-ಅಂದಳದ ಮರದ ಜೋಕಾಲಿಯಾಟದಿಂದಲೂ, ಕರ್ಹಿಚಿತ್-ಒಬ್ಬನೊಬ್ಬನು, ನೃಪಚೇಷ್ಟಯಾ-ಅರಸನಂತೆ ಆಳುವ ಆಟದಿಂದಲೂ ॥೧೫॥ ಏವಂ-ಹೀಗೆ, ಲೋಕಸಿದ್ಧಾಭಿಃ-ಜನರಲ್ಲಿ ಬಳಕೆಯಾಗಿರುವ, ಕ್ರೀಡಾಭಿಃ-ಆಟಗಳಿಂದ, ವನೇ-ಕಾಡಿನೊಳಗೆ, ನದ್ಯದ್ರಿದ್ರೋಣಿಕುಂಜೇಷು-ನದೀ-ಹೊಳೆಯಲ್ಲಿ, ಅದ್ರಿದ್ರೋಣಿ-ಬೆಟ್ಟದಿರುಬುಗಳಲ್ಲಿಯೂ, ಕುಂಜೇಷು-ಹೊದರುಮನೆಗಳಲ್ಲಿಯೂ ಕಾನನೇಷು-ಗಿಡಗಳ ಗುಂಪುಗಳಲ್ಲಿಯೂ, ಸರಸ್ಸು ಚ-ಕೊಳಗಳಲ್ಲಿಯೂ, ಚೇರತುಃ-ತಿರುಗಿದರು ॥೧೬॥ ತದ್ವನೇ-ಆ ಕಾಡಿನಲ್ಲಿ, ರಾಮ

---

ಯಾಡುವುದರಿಂದಲೂ ಚಪ್ಪಾಳೆಗಳಿಂದಲೂ ಅನ್ಯೋನ್ಯವಾಗಿ ಸೆಳೆದಾಡುವುದರಿಂದಲೂ ಬಾಹುಯುದ್ಧಮಂಗೆಯ್ಯುವದರಿಂದಲೂ ಕೂಡ ವಿಹರಿಸಿದರು. ॥೧೨॥ ಮತ್ತೊಂದು ಸಮಯದಲ್ಲಿ ಅನ್ಯರಾದ ಗೋಪಾಲಕರು ನರ್ತನಂಗೆಯ್ಯುತ್ತಿರಲು ರಾಮಕೃಷ್ಣರೀರ್ವರೂ ಹಾಡುತಲೂ ವಾದ್ಯಗಳಂ ಬಾರಿಸುತಲೂ ಇರುವರಾಗಿ ಅವರನ್ನು 'ಬಹುಚೆನ್ನಾಯಿತು, ಬಹುಚೆನ್ನಾಯಿತು,' ಎಂದು ನುಡಿಯುತ ಕೊಂಡಾಡಿದರು. ॥೧೩॥ ಮತ್ತೊಂದು ವೇಳೆಯಲ್ಲಿ ಬೆಲ್ಲವತ್ತದ ಹಣ್ಣುಗಳಿಂದಲೂ, ಕುಂಭವೃಕ್ಷದ ಫಲಗಳಿಂದಲೂ, ನೆಲ್ಲಿಯಕಾಯಿಗಳನ್ನು ಹಿಡಿಯಲ್ಲಿ ಹಿಡಿದು ಬೀಸುವುದು ಮೊದಲಾದುದರಿಂದಲೂ, ಕೈಗೆಸಿಕ್ಕದಂತೆ ವಸ್ತ್ರಗಳಿಂದ ಕಣ್ಣುಮುಚ್ಚಿಯಾಡುವುದರಿಂದಲೂ, ಮೃಗಗಳಂತೆಯೂ ಹಕ್ಕಿಗಳಂತೆಯೂ ಚೇಷ್ಟೆಯಂ ಗೆಯ್ವುದರಿಂದಲೂ, ವಿನೋದವಂ ಗೆಯ್ದರು ॥೧೪॥ ಮತ್ತು ಆ ರಾಮಕೃಷ್ಣಾದಿ ಗೋಪಾಲಕರು ಒಂದು ಸಮಯದಲ್ಲಿ ಕಪ್ಪೆಗಳಂತೆ ಕುಪ್ಪುವುದರಿಂದಲೂ, ಹಲವು ಬಗೆಯಾದ ಪರಿಹಾಸಕಂಗಳಿಂದಲೂ, ಒಂದು ವೇಳೆಯಲ್ಲಿ ಉಯ್ಯಾಲೆಗಳಲ್ಲಿ ಕುಳಿತು ತೂಗಿಯಾಡುವುದರಿಂದಲೂ, ಮತ್ತೊಂದು ವೇಳೆಯಲ್ಲಿ ಅರಸುಗಳಂತೆ ಮಂತ್ರಿಸೇವಕರಂ ಕಲ್ಪಿಸಿಕೊಂಡು ಆಡುವುದರಿಂದಲೂ, ಸಹ ಆಡಿದರು. ॥೧೫॥ ಹೀಗೆ ರಾಮಕೃಷ್ಣರೀರ್ವರೂ ಬೃಂದಾವನದೊಳು ಹೊಳೆಗಳಲ್ಲಿಯೂ ಬೆಟ್ಟದ ಗವಿಗಳಲ್ಲಿಯೂ ಬಳ್ಳಿಯ ಹೊದರುಮನೆಗಳಲ್ಲಿಯೂ, ಹಗ್ಗಾಡುಗಳಲ್ಲಿಯೂ ಕೊಳಗಳಲ್ಲಿಯೂ ಸಹ ಲೋಕಪ್ರಸಿದ್ಧಗಳಾದ ಆಟಗಳಿಂದ ವಿಹರಿಸಿದರು. ॥೧೬॥ ಬೃಂದಾವನದಲ್ಲಿ

ಬೋಽಗಾದಸುರಸ್ತಜ್ಜಿಹೀರ್ಷಯಾ॥೧೭॥ತಂವಿದ್ವಾನಪಿದಾಶಾರ್ಹೋಭಗವಾನ್ಸರ್ವದರ್ಶನಃ। ಅನ್ವಮೋದ
ತತತ್ಸಖ್ಯಂವಧಂತಸ್ಯವಿಚಿನ್ತಯನ್ ॥೧೮॥ ತತ್ರೋಪಹೂಯಗೋಪಾಲಾನ್ಕೃಷ್ಣಃಪ್ರಾಹವಿಹಾರವಿತ್ ।
ಹೇಗೋಪಾವಿಹರಿಷ್ಯಾಮೋದ್ವಂದ್ವೀಭೂಯಯಥಾಯಥಮ್ ॥೧೯॥ತತ್ರಚಕ್ರುಃಪರಿವೃಢೌಗೋಪಾರಾಮಜ
ನಾರ್ದನೌ।ಕೃಷ್ಣಸಂಘಟ್ಟಿನಃಕೇಚಿದಾಸನ್ರಾಮಸ್ಯಚಾಪರೇ॥೨೦॥ಆಚೇರುರ್ವಿವಿಧಾಃಕ್ರೀಡಾವಾಹ್ಯವಾಹ
ಕಲಕ್ಷಣಾಃ।ತತ್ರಾರೋಹನ್ತಿಜೇತಾರೋವಹನ್ತಿಚಪರಾಜಿತಾಃ॥೨೧॥ ವಹನ್ತೋವಾಹ್ಯಮಾನಾಶ್ಚಚಾರಯನ್ತ
ಶ್ಚಗೋಧನಮ್ । ಭಾಂಡೀರಕಂನಾಮವಟಂಜಗ್ಮುಃಕೃಷ್ಣಪುರೋಗಮಾಃ ॥೨೨॥ ರಾಮಸಂಘಟ್ಟಿನೋಯ

---

ಕೃಷ್ಣಯೋಃ-ಬಲಭದ್ರಕೇಶವರು, ಗೋಪೈಸ್ಸಹ-ಗೊಲ್ಲರೊಡನೆ, ಪಶೂನ್-ಗೋವುಗಳನ್ನು, ಚಾರಯತೋಸ್ಸತೋಃ-ಮೇಯಿಸುತಲಿ ರುವರಾಗಲು, ಪ್ರಲಂಬಃ-ಪ್ರಲಂಬನೆಂಬ, ಅಸುರಃ-ದೈತ್ಯನು, ತಜ್ಜಿಹೀರ್ಷಯಾ-ತತ್-ಆ ರಾಮಕೃಷ್ಣರನ್ನು, ಜಿಹೀರ್ಷಯಾ-ಅಪಹರಿ ಸಬೇಕೆಂಬ ಇಚ್ಛೆಯಿಂದ, ಗೋಪರೂಪೀಸನ್-ಗೊಲ್ಲರವರಾಗೆ ರೂಪವುಳ್ಳವನಾಗಿ, ಅಗಾತ್-ಬಂದನು॥ ಸರ್ವದರ್ಶನಃ-ಸಕಲವನ್ನೂ ನೋಡುತಲಿರುವ ಸಾಕ್ಷಿಯಾದ, ಭಗವಾನ್-ಐಶ್ವರ್ಯಪೂರ್ಣ, ದಾಶಾರ್ಹಃ-ದಶಾರ್ಹಕುಲದಲ್ಲಿಹುಟ್ಟಿದಕೃಷ್ಣನು, ತಂ-ಅವನನ್ನು, ವಿದ್ವಾನಪಿ-ದೈತ್ಯನೆಂದುಬಲ್ಲವನಾದರೂ, ತಸ್ಯ-ಅವನ, ವಧಂ-ನಾಶನವನ್ನು, ವಿಚಿಂತಯನ್ಸನ್-ಆಲೋಚಿಸುತಲಿರುವನಾಗಿ,ತತ್ಸಖ್ಯಂ-ಅವನೊಡನೆಸ್ನೇಹವನ್ನು,ಅನ್ವಮೋದತ-ಒಪ್ಪಿಕೊಂಡಾಡಿದನು॥೧೮॥ವಿಹಾರವಿತ್-ವಿನೋದಗಳನ್ನುಬಲ್ಲವನಾದ, ಕೃಷ್ಣಃ-ಭಗವಂತನು,ತತ್ರ-ಅಲ್ಲಿ, ಗೋಪಾಲಾನ್-ಪಶುಪಾಲಕರನ್ನು ಉಪಹೂಯ-ಹತ್ತಿರಕರೆದು, ಹೇಗೋಪಾಃ-ಎಲೈಪಶುಪಾಲಕರಿರಾ! ದ್ವಂದ್ವೀಭೂಯ-ಎರಡುಗುಂಪಾಗಿ, ಯಥಾಯಥಂ-ಹೇಗೆಸ್ವೇಚ್ಛೆಗೊಳಿಸುವೆವೋಹಾಗೆಯೇ, ವಿಹರಿಷ್ಯಾಮಃ-ವಿನೋದಿಸುವ ಎಂದು, ಪ್ರಾಹ-ಹೇಳಿದನು॥ ತತ್ರ-ಅಲ್ಲಿ, ಗುಡಿಗಿನತಿವವಲ್ಲಿ ಗೋಪಾಃ-ಗೋಪಾಲಕರು, ರಾಮಜನಾರ್ದನೌ-ಬಲರಾಮಕೃಷ್ಣರನ್ನು, ಪರಿವೃಢೌ-ಗಡಾವುದ್ದಿಗಳನ್ನಾಗಿ, ಚಕ್ರುಃ-ಮಾಡಿದರು ಕೇಚಿತ್-ಕೆಲವರು, ಕೃಷ್ಣಸಂಘಟ್ಟಿನಃ-ಕೃಷ್ಣನಕಡೆಯ ಪಿಳ್ಳೆವುದ್ದಿಗಳು, ಅಪರೇ-ಇತರರು-ರಾಮಸ್ಯ-ರಾಮನಕಡೆಯವರೂ, ಆಸನ್-ಆದರು॥ ವಾಹ್ಯವಾಹಕಲಕ್ಷಣಾಃ-ವಾಹ್ಯ-ಹೊರಲ್ಪಡತಕ್ಕವನು, ವಾಹಕ-ಹೊರುವವನು ಎಂಬ-ಲಕ್ಷಣಾಃ-ಗುರುತುಗಳುಳ್ಳ,ವಿವಿಧಾಃ-ಹಲವುಬಗೆಯಾದ, ಕ್ರೀಡಾಃ-ಆಟಗಳನ್ನು, ಆಚೇರುಃ- ನಡೆಯಿಸಿದರು ತತ್ರ-ಆಕುಮಾರರೆಯಾಟದಲ್ಲಿ,ಜೇತಾರಃ-ಗೆದ್ದವರು,ಆರೋಹಂತಿ-ಏರುವರು ಪರಾಜಿತಾಶ್ಚ-ಸೋತವರಾದರೋ, ವಹಂತಿ-ಹೊರುವರು॥ವಹಂತಃ-ಹೊರುವವರೂ,ವಾಹ್ಯಮಾನಾಶ್ಚ-ಹೊರಲ್ಪಡುತಲಿರುವವರೂ ಕೂಡ, ಗೋಧನಂ-ಧನಪ್ರಾಯವಾದಗೋವುಗಳನ್ನು, ಚಾರಯಂತಶ್ಚ-ಮೇಯಿಸುತಲಿರುವವರೂ ಆದ, ಕೃಷ್ಣಪುರೋಗಮಾಃ-ಕೃಷ್ಣನೇಮುಂದೆನಡೆಯುವವನಾಗಿವುಳ್ಳ, ಗೊಲ್ಲರು, ಭಾಂಡೀರಕಂನಾಮ-ಭಾಂಡೀರಕವೆಂದು ಪ್ರಸಿದ್ಧವಾದ, ವಟಂ-ಆಲದಮರವನ್ನು, ಕುರಿತು, ಜಗ್ಮುಃ-ನಡೆದರು॥೨೨॥ನೃಪ-ಅರಸೇ! ರಾಮಸಂಘಟ್ಟಿನಃ-ರಾಮನಕಡೆಯವರಾದ, ಶ್ರೀ

---

ರಾಮಕೃಷ್ಣರೀರ್ವರೂ ಗೋಪಾಲಕರೊಡಗೂಡಿ ಈರೀತಿಯಾಗಿ ಗೋವುಗಳಂ ಮೇಯಿಸುತ್ತಿರಲು ಆಸಮಯದಲ್ಲಿ ಪ್ರಲಂಬನೆಂಬ ಅಸುರನೊಬ್ಬನು ಆರಾಮಕೃಷ್ಣರಂ ಗೆಲ್ಲಬೇಕೆಂಬ ತವಕದಿಂದ ಗೋಪಾಲರೂಪವಂ ಧರಿಸಿದವನಾಗಿ ಬಂದನು. ॥೧೭॥ ಸರ್ವಜ್ಞನಾದ ಭಗವಂತನಾದ ಶ್ರೀಕೃಷ್ಣನು ಅವನು ಪ್ರಲಂಬಾಸುರನೆಂದು ಬಲ್ಲವನಾದರೂ ಅವನಂ ಕೊಲ್ಲುವಬಗೆಯಂ ಯೋಚಿಸುತಲಿರುವವನಾಗಿ ಅವನೊಡನೆ ಮಿತ್ರತ್ವವನ್ನು ಅಂಗೀಕರಿಸಿದನು. ॥೧೮॥ ಆಸಮಯದಲ್ಲಿ ಸಮಸ್ತಕ್ರೀಡೆಗಳಂ ತಿಳಿದಿರುವ ಶ್ರೀಕೃಷ್ಣ ಮೂರ್ತಿಯೂ ಗೋಪಾಲಕರಂ ಸಮೀಪಕ್ಕೆಕರೆದು "ಎಲೈ, ಗೋಪಾಲಕರೇ! ನಾವುಅವರವರ ಪ್ರಾಯದಬಲಕ್ಕೆತಕ್ಕಂತೆ ಇಬ್ಬರಿಬ್ಬರು ಜೊತೆಯಾಗಿ ಎರಡುಗುಂಪುಮಾಡಿಕೊಂಡು ಆಡುವ," ಎಂದು ನುಡಿದನು. ॥೧೯॥ ಆಗ ಗೋಪಾಲಕರೆಲ್ಲರೂ ರಾಮಕೃಷ್ಣರೀರ್ವರಂ ತಮಗೆ ನಾಯಕರನ್ನಾಗಿ ಕಲ್ಪಿಸಿಕೊಂಡರು. ಅವರಲ್ಲಿಕೆಲವರು ರಾಮನಪಕ್ಷವ ಸೇರಿದರು. ಕೆಲವರು ಕೃಷ್ಣನಪಕ್ಷವನಾಶ್ರಯಿಸಿದರು. ॥೨೦॥ ಆಗ ರಾಮಾದಿಗಳು ಯಾವಕ್ರೀಡೆಗಳಲ್ಲಿ ಗೆದ್ದವರು ಸೋತವರ ಮೇಲೆಹತ್ತುವರೋ ಸೋತವರು ಗೆದ್ದವರನ್ನು ವಹಿಸುವರೋ, ಅಂತಾ ವಾಹ್ಯವಾಹಕಲಕ್ಷಣವುಳ್ಳ ಹಲವುಬಗೆಯ ಆಟಗಳನ್ನು ಆಡಿದರು.॥೨೧॥ ಶ್ರೀಕೃಷ್ಣಮೊದಲಾದ ಗೋಪಾಲಕರು ಹೀಗೆ ಹೆರವರನ್ನು ತಾವುಹೊರುತಲೂ ಹೆರವರಿಂದ ತಾವುಹೊರಲ್ಪಡುತಲೂ ಆಕಳುಗಳಂ ಮೇಯಿಸುತಲೂ ಭಾಂಡೀರಕವೆಂಬ ಹೆಸರುಳ್ಳ ಆಲದಮರದಬಳಿ ಗೆಯ್ದಿದರು. ॥೨೨॥ ಯಾವಾಗ ಬಲರಾಮನಪಕ್ಷಕ್ಕೆಸೇರಿರುವ ಶ್ರೀದಾಮ ವೃಷಭಮೊದಲಾದ ಗೋಪಾಲಕರು

ಹಿ ಶ್ರೀದಾಮವೃಷಭಾದಯಃ। ಕ್ರೀಡಾಯಾಂ ಜಯಿನಸ್ತಾಂಸ್ತೇ ಹ್ಯೂಹುಃ ಕೃಷ್ಣಾದಯೋ ನೃಪ ॥ ಉವಾಹ ಕೃಷ್ಣೋ ಭಗವಾನ್ ಶ್ರೀದಾಮಾನಂ ಪರಾಜಿತಃ। ವೃಷಭಂ ಭದ್ರಸೇನಸ್ತು ಪ್ರಲಂಬೋ ರೋಹಿಣೀಸುತಮ್ ॥೨೪॥ ಅವಿಷಹ್ಯಂ ಮನ್ಯಮಾನಃ ಕೃಷ್ಣಂ ದಾನವಪುಂಗವಃ । ವಹನ್ ದ್ರುತತರಂ ಪ್ರಾಗಾದವರೋಹಣತಃ ಪರಮ್ ॥೨೫॥ ತಮುದ್ವಹನ್ ಧರಣಿಧರೇಂದ್ರಗೌರವಂ ಮಹಾಸುರೋ ನಿಹತರಯೋ ನಿಜಂ ವಪುಃ। ಸ ಆಸ್ಥಿತಃ ಪುರಟಪರಿಚ್ಛದೋ ಬಭೌ ತಡಿದ್ದ್ಯುಮಾನುಡುಪತಿವಾಡಿವಾಂಬುದಃ ॥೨೬॥ ನಿರೀಕ್ಷ್ಯ ತದ್ವಪುರಲಮಂಬರೇ ಚರತ್ ಪ್ರದೀಪ್ತದೃಗ್ಭ್ರು

---

ದಾಮವೃಷಭಾದಯಃ-ಶ್ರೀದಾಮನು ವೃಷಭನು ಮೊದಲಾದವರು, ಯೇ ಹಿ-ಯಾರುಂಟೋ, ತೇ-ಅವರು, ಕ್ರೀಡಾಯಾಂ-ಆಟದಲ್ಲಿ, ಜಯಿನಃ-ಜಯವುಳ್ಳವರಾದವರು ತಾನ್-ಆಗೆದ್ದವರನ್ನು, ಕೃಷ್ಣಾದಯಃ-ಕೃಷ್ಣನು ಮೊದಲಾದವರು, ಊಹುಃ-ಹೊತ್ತುಕೊಂಡರಲ್ಲವೆ॥೨೩॥ ಕೃಷ್ಣಃ- ಕೃಷ್ಣನು, ಭಗವಾನಪಿ-ಷಡ್ಗುಣೈಶ್ವರ್ಯ ಸಂಪನ್ನನಾದರೂಕೂಡ, ಪರಾಜಿತಃಸ- ಸೋತವನಾಗಿ, ಶ್ರೀದಾಮಾನಂ-ಶ್ರೀದಾಮನೆಂಬವನನ್ನೂ, ಉವಾಹ-ಹೊತ್ತುಕೊಂಡನು. ಭದ್ರಸೇನಸ್ತು-ಭದ್ರಸೇನನೆಂಬವನಾದರೋ, ವೃಷಭಂ-ವೃಷಭನೆಂಬವನನ್ನೂ, ಪ್ರಲಂಬಃ-ಗೋಪಾಲರೂಪನಾಗಿಬಂದಿದ್ದ ಪ್ರಲಂಬಾಸುರನು, ರೋಹಿಣೀಸುತಂ-ರೋಹಿಣೀದೇವಿಯ ಮಗನಾದಬಲಭದ್ರನನ್ನೂ, ಉವಾಹ-ಹೊತ್ತುಕೊಂಡನು॥೨೪॥ದಾನವಪುಂಗವಃ- ದನುವಿನಮಕ್ಕಳಾದರಕ್ಕಸರಲ್ಲಿ ಶ್ರೇಷ್ಠನಾದಪ್ರಲಂಬನು, ಕೃಷ್ಣಂ-ಕೃಷ್ಣನನ್ನು, ಅವಿಷಹ್ಯಂ- ಸಹಿಸಕೂಡದವನನ್ನಾಗಿ, ಮನ್ಯಮಾನಃ- ತಿಳಿಯುತ್ತಿರುವನಾಗಿ (ಇವನೊಬ್ಬನ ದರೆಸ್ಸರಿಸಲಾರೆನೆಂದು ತಪ್ಪಿಸಿಹೋಗಲೆಳಸಿ ) ವಹನ್- ಬಲರಾಮನನ್ನು ಹೊತ್ತವನಾಗಿ, ದ್ರುತತರಂ- ಅತಿಶೀಘ್ರವಾಗಿ, ಅವರೋಹಣತಃ-ಆಟದಲ್ಲಿ ಇಳಿಸತಕ್ಕ ಗುತ್ತಿಗಿಂತಲೂ,ಪರಂ-ಆಚೆಗೆ,ಪ್ರಾಗಾತ್-ದೂರವಾಗಿ ಹೋಗಿಬಿಟ್ಟನು॥೨೫॥ಧರಣಿಧರೇಂದ್ರಗೌರವಂ-ಧರಣಿಧರೇಂದ್ರ-ಪರ್ವತರಾಜನಂತೆ, ಗೌರವಂ-ಭಾರವುಳ್ಳ, ತಂ-ಆಬಲರಾಮನನ್ನು, ಉದ್ವಹನ್-ತನ್ನ ಮೇಲೆ ಹೊತ್ತುಕೊಂಡಿರುವನಾದ್ದರಿಂದಲೇ, ನಿಹತರಯಃ-ನಿಹತ-ನಾಶವಾದ, ರಯಃ- ವೇಗವುಳ್ಳವನಾದ, ಮಹಾಸುರಃ- ದೊಡ್ಡದೈತ್ಯನು, ನಿಜಂವಪುಃ- ತನ್ನ ಸಹಜವಾದದೇಹವನ್ನು, ಆಸ್ಥಿತಃ-ಆಶ್ರಯಿಸಿನಿಂತನಾದನು. ಪುರಟಪರಿಚ್ಛದಃ-ಪುರಟ- ಬಂಗಾರದ, ಪರಿಚ್ಛದಃ-ಅಲಂಕಾರಗಳುಳ್ಳ, ಬಲರಾಮನಂಹೊತ್ತಿರುವಆದೈತ್ಯನು, ತಡಿದ್ದ್ಯುಮಾನ್-ಮಿಂಚುಗಳಕಾಂತಿಗಳುಳ್ಳ, ಸಃ-ಬಲರಾಮನಂಹೊತ್ತಿರುವ ಆದೈತ್ಯನು, ತತ್-ಮಿಂಚುಗಳ- ಕಾಂತಿಗಳುಳ್ಳಂತಾ ಉಡುಪತಿವಾಟ್- ಚಂದ್ರನನ್ನು ವಹಿಸಿದಂತಾ, ಅಂಬುದಇವ- ಮೇಘದಹಾಗೆ, ಬಭೌ- ಪ್ರಕಾಶಿಸಿದನು ॥೨೬॥ ಅಂಬರೇ- ಆಕಾಶದಲ್ಲಿ, ಅಲಂ- ಅತಿವೇಗದಿಂ, ಚರತ್- ದೈತ್ಯನಿಂದ ಹೊರಲ್ಪಟ್ಟುತಿರುಗುತಲಿರುವ, ಹಲಧರಃ-ಬಲರಾಮನು, ಪ್ರದೀಪ್ತದೃಕ್ಭ್ರುಕುಟಿತಟೋಗ್ರದಂಷ್ಟ್ರಂ- ಪ್ರದೀಪ್ತ- ಜೇಜ್ವಾಗಿಬೆಳಗುತಲಿರುವ, ದೃಕ್- ಕೆಂಗಣ್ಣು, ಭ್ರುಕುಟಿತಟ- ಭ್ರೂಮಧ್ಯವೂ (ಹುಬ್ಬುಗಳವಾರ್ರಂ

---

ಆಟದಲ್ಲಿ ಅನ್ಯರನ್ನು ಗೆದ್ದವರಾದರೋ ಆಗ ಸೋತಿರುವ ಕೃಷ್ಣಾದಿಗಳು ರಾಮಮೊದಲಾದವರನ್ನು ಹೊತ್ತುಕೊಂಡರು. ॥೨೩॥ಅವೆಂತೆನೆ- ಭಗವಂತನಾದಕೃಷ್ಣನು ತಾನುಸೋತವನಾಗಿ ಗೆದ್ದಿರುವ ಶ್ರೀದಾಮನೆಂಬವನನ್ನು ವಹಿಸಿದನು. ಭದ್ರಸೇನನು ವೃಷಭನನ್ನು ಹೊತ್ತನು. ಗೋಪಾಲಕರೂಪವನ್ನು ಧರಿಸಿರುವ ಪ್ರಲಂಬಾಸುರನು ಬಲರಾಮನಂವಹಿಸಿದನು. ॥೨೪॥ಆಗ ದಾನವಶ್ರೇಷ್ಠನಾದ ಪ್ರಲಂಬಾಸುರನು ಕೃಷ್ಣನಂ ಜಯಿಸುವುದಶಕ್ಯವೆಂದು ತಿಳಿದವನಾದುದರಿಂದ ಕೃಷ್ಣನದೃಷ್ಟಿಸಾಮರ್ಥ್ಯವು ತಪ್ಪಿಸಲೋಸುಗ ಬಲರಾಮನಂಹೊತ್ತು ಶೀಘ್ರದಿಂನಡೆಯುತ ಯಾವಸ್ಥಳದಲ್ಲಿ ಗೆದ್ದವನನ್ನು ಹೆಗಲಿನಿಂದ ಕೆಳಕ್ಕೆ ಇಳುಹಬೇಕೋ ಗೊತ್ತಾದ ಆಸ್ಥಳವನತಿಕ್ರಮಿಸಿ ಆಚೆಗೆ ದೂರವಾಗಿ ಒಡಿದನು॥೨೫॥ ಆಪ್ರಲಂಬಾಸುರನು ಯಾವಾಗ ಹಿಮಾಲಯದಂತೆ ಭಾರವುಳ್ಳ ಬಲರಾಮನಂ ಹೊತ್ತು ನಷ್ಟವಾದ ಜಂಘಾಬಲವುಳ್ಳವನಾದನೋ ಆಗ ತನ್ನ ಅಸುರದೇಹವನ್ನೇ ಮರಳಿತಾಳಿ ಸುವರ್ಣಾಭರಣಗಳಿಂ ಯುಕ್ತನಾಗಿ- ಮಿಂಚುಗಳ ಪ್ರಕಾಶದಿಂಹೊಳೆಯುತಲಿರುವ, ಮೇಲೆಚಂದ್ರನಂ ಧರಿಸಿರುವ ಮೇಘದಂತೆ ಪ್ರಕಾಶಿಸಿದನು. (ಮಿಂಚುಗಳಂತೆ ಅಸುರನ ಆಭರಣಗಳೂ, ಚಂದ್ರನಂತೆ ಬಲರಾಮನೂ, ಮೇಘದಂತೆ ಅಸುರನೂ, ಪ್ರಕಾಶಿಸಿದರೆಂದು ತಿಳಿವುದು) ॥೨೬॥ ಆಸಮಯದಲ್ಲಿ ಬಲರಾಮನು- ಅತಿವೇಗದಿಂದ ಆಕಾಶದಲ್ಲಿ ಸಂಚರಿಸುತ್ತಿರುವುದಾಗಿಯೂ, ಉರಿಗಳಿಂಕೂಡಿದ ಕಣ್ಣುಗಳುಳ್ಳದ್ದಾಗಿಯೂ, ಹುಬ್ಬುಗಳ ಕೊನೆಗಳು ಮುಟ್ಟಿರುವ ಭಯಂಕರಗಳಾದ ಕೋರೆದಾಡೆಗಳುಳ್ಳದ್ದಾಗಿಯೂ, ಬೆಂಕಿಯಂತೆ ಉರಿಯುತಲಿರುವ ಕೂದಲುಗಳುಳ್ಳ

ಕುಟಿ* ತಟೋಗ್ರದಂಷ್ಟ್ರವ್ | ಜ್ವಲಚ್ಛಿಖಂಕಟಕಕಿರೀಟಕುಂಡಲತ್ವಿಷಾದ್ಭುತಂಹಲಧರಈಷದತ್ರ
ಸತ್ ॥೨೭॥ ಅಥಾಗತಸ್ಮೃತಿರಭಯೋರಿಪುಂಬಲೋವಿಹಾಯಸಾರ್ಥಮಿವಹರನ್ತಮಾತ್ಮನಃ | ರುಷಾಹನ
ಚ್ಛಿರಸಿದೃಢೇನಮುಷ್ಟಿನಾಸುರಾಧಿಪೋಗಿರಿಮಿವವಜ್ರರಂಹಸಾ॥೨೮॥ಸಆಹತಸ್ಸಪದಿವಿಶೀರ್ಣಮಸ್ತಕೋ
ಮುಖಾದ್ವಮನ್ರುಧಿರಮಪಸ್ಮೃತೋಽಸುರಃ|ಮಹಾರವಂವ್ಯಸುರಪತತ್ಸಮೀರಯನ್ಗಿರಿರ್ಯಥಾಮಘವತಆ
ಯುಧಾಹತಃ ॥೨೯॥ ದೃಷ್ಟ್ವಾಪ್ರಲಂಬಂನಿಹತಂಬಲೇನಬಲಶಾಲಿನಾ | ಗೋಪಾಸ್ಸುವಿಸ್ಮಿತಾಆಸನ್ಸಾ

---

ತವೂ ಪ್ರೇಕ್ಷಣಸಂಪ್ರಾಂ-ಕ್ರೂರವಾದಕೋರೆದಾಡೆಗಳುಳ್ಳದ್ದಾಗಿಯೂ, ಕಟಕಕಿರೀಟಕುಂಡಲತ್ವಿಷಾ-ಕಟಕ-ಕಡಗಗಳು,ಕಿರೀಟ
ಕಿರೀಟವೂ, ಕುಂಡಲ- ಕಿವಿದೊಡವೂಇವುಗಳ, ತ್ವಿಷಾ-ಕಾಂತಿಯಿಂದ, ಜ್ವಲಚ್ಛಿಖಂ-ಹೊಳೆಯುವಕೂದಲುಳ್ಳದ್ದಾಗಿಯೂ, ಅದ್ಭು
ತಂ-ಆಶ್ಚರ್ಯಕರವಾಗಿಯೂಇರುವ, ತದ್ವಪುಃ-ಆದೈತ್ಯನಶರೀರವನ್ನು, ನಿರೀಕ್ಷ್ಯ-ನೋಡಿ, ಈಷತ್-ಕೊಂಚ, ಅತ್ರಸತ್-ಹೆದ
ರಿದನು॥೨೭॥ ಅಥ-ಆಮೇಲೆ, ಆಗತಸ್ಮೃತಿಃ-ಆಗತ-ಬಂದಂತಾ, ಸ್ಮೃತಿಃ-ತಾನುಸಂಕರ್ಷಣನೆಂಬನೆನಪುಳ್ಳವನಾದ್ದರಿಂದಲೇ, ಅಭ
ಯಃ-ಭಯವಿಲ್ಲದವನಾದಂತೆ, ಬಲಃ-ಬಲರಾಮನು,ಆತ್ಮನಃ-ತನ್ನ, ಸಾರ್ಥಂ-ಸಂಗಡಬಂದಗೋಪಸಮೂಹವನ್ನು, ವಿಹಾಯ-ಬಿ
ಟ್ಟು,ಹರಂತಂ-ತನ್ನನ್ನುಮಾತ್ರ ಅಪಹರಿಸಿಕೊಂಡುಹೋಗುತಲಿರುವ,ರಿಪುಂ-ಶತ್ರುವಾದಪ್ರಲಂಬಾಸುರನನ್ನು, ರುಷಾ-ಸಿಟ್ಟಿನಿಂದ,
ವಜ್ರರಂಹಸಾ-ಸಿಡಿಲಿನಂತೆವೇಗವುಳ್ಳ,ದೃಢೇನ-ಗಟ್ಟಿಯಾದ, ಮುಷ್ಟಿನಾ-ಹಿಡಿಯಿಂದ, ಸುರಾಧಿಪೋಗಿರಿಮಿವ-ಇಂದ್ರನುಬೆಟ್ಟವನ್ನು
ಹೇಗೋಹಾಗೆ, ಶಿರಸಿ-ತಲೆಯಲ್ಲಿ, ಅಹನತ್-ಗುದ್ದಿದನು॥೨೮॥ಆಹತಃ-ಹೊಡೆಯಲ್ಪಟ್ಟವನಾದ್ದರಿಂದಲೇ, ಸಪದಿ-ತತ್‌ಕ್ಷಣದಲ್ಲಿ, ವಿಶೀ
ರ್ಣಮಸ್ತಕಃ-ವಿಶೀರ್ಣ-ಸೀಳಿದ, ಮಸ್ತಕಃ-ತಲೆಯುಳ್ಳವನಾಗಿ, ಮುಖಾತ್-ಬಾಯಿಯಿಂದ, ರುಧಿರಂ-ರಕ್ತವನ್ನು, ವಮನ್-ಕಾರು
ತಲಿರುವನಾಗಿ, ಅಪಸ್ಮೃತಃ-ಮೈಮೇಲೆನೆನಪುತಪ್ಪಿದ, ಸಅಸುರಃ-ಆದೈತ್ಯನು, ಮಹಾರವಂ- ದೊಡ್ಡಕೂಗನ್ನು, ಸಮೀರಯನ್
ನ್-ಕೂಗುತಲಿರುವನಾಗಿ, ಮಘವತಃ-ಇಂದ್ರನ, ಆಯುಧಾಹತಃ-ಆಯುಧವಾದಸಿಡಿಲಿನಿಂಬಡಿಯಲ್ಪಟ್ಟ, ಗಿರಿಃ-ಬೆಟ್ಟವು, ಯಥಾ-
ಹೇಗೋ, ತಥಾ-ಹಾಗೆ, ವ್ಯಸುಃ-ಪ್ರಾಣಹೋದವನಾಗಿ, ಅಪತತ್-ನೆಲಕ್ಕೆಬಿದ್ದನು॥೨೯॥ಗೋಪಾಃ-ಗೊಲ್ಲರು, ಸಾಧುರೂಪಿಣಂ-
ಸಾಧುವಿನಂತೆರೂಪವುಳ್ಳವನಾಗಿಬಂದ, ಅಸಾಧುಂ-ದುಷ್ಟನಾದ, ಪ್ರಲಂಬಂ-ಪ್ರಲಂಬಾಸುರನನ್ನು. ಬಲಶಾಲಿನಾ-ಬಲದಿಂದಲೋ



ದ್ದಾಗಿಯೂ, ಭಂಗಾರದಕಡಗ ಕಿರೀಟ ಕುಂಡಲ
ಮೊದಲಾದ ಆಭರಣಗಳಕಾಂತಿಯಿಂದ ಆಶ್ಚರ್ಯ
ಕರವಾದ್ದಾಗಿಯೂ, ಇರುವ ಅಸುರನ ದೇಹವಂ
ನೋಡಿ ಸ್ವಲ್ಪವಾಗಿ ಭಯವನೆಯ್ದಿದನು.॥೨೭॥
ಆಮೇಲೆ ಪಡೆಯಲ್ಪಟ್ಟ ನೆನಪುಳ್ಳವನಾದುದರಿಂದ
ನಿರ್ಭಯನಾದ, ಬಲಭದ್ರದೇವನು ಗೋಪಾಲಕರ
ಸಮೂಹವಂಬಿಟ್ಟು ತನ್ನಂ ಹೊತ್ತು ಕೊಂಡು
ಹೋಗುತಲಿರುವ ಶತ್ರುವಾದ ಪ್ರಲಂಬಾಸುರ
ನಂ ಸಿಟ್ಟಿನಿಂದ ತಲೆಯಲ್ಲಿ ದೃಢವಾದ ವಜ್ರಾಯು
ಧದಂತೆ ವೇಗಯುಕ್ತವಾದ ತನ್ನಮುಷ್ಟಿಯಿಂದ ಇಂದ್ರನು ಬೆಟ್ಟಗಳಂ ವಜ್ರಾಯುಧದಿಂದ ಹೊಡದಂತೆ ಪ್ರಹ
ರಿಸಿದನು. ॥೨೮॥ ಬಲರಾಮನಿಂದ ಹೀಗೆ ಪ್ರಹರಿಸಲ್ಪಟ್ಟ ಆಪ್ರಲಂಬಾಸುರನು ಆಕ್ಷಣದಲ್ಲಿಯೇ ಭಗ್ನವಾದ ಶಿರ
ಸ್ಸುಳ್ಳವನಾಗಿ ಬಾಯಿಂದ ರಕ್ತವಂಕಕ್ಕುತ ನಷ್ಟವಾದ ನೆನಪುಳ್ಳವನಾಗಿ ಗಟ್ಟಿಯಾಗಿಕೂಗುತ ಪ್ರಾಣಂಗಳಂ
ಬಿಟ್ಟು ಸಿಡಿಲಿನಿಂದ ಬಡಿಯಲ್ಪಟ್ಟ ಬೆಟ್ಟದಂತೆ ಬಿದ್ದನು. ॥೨೯॥ ತಾನುದುಷ್ಟನಾದರೂ ಗೋಪಾಲ ರೂಪನಾಗಿ

ಧುಂ ಸಾಧುರೂಪಿಣಮ್ ॥೩೦॥ ಆಶಿಷೋಭಿಗೃಣನ್ತಸ್ತಂ ಪ್ರಶಶಂಸುಸ್ತದರ್ಹಣಮ್। ಪ್ರೇತ್ಯಾಗತಮಿವಾಲಿಂಗ್ಯ
ಪ್ರೇಮವಿಹ್ವಲಚೇತಸಃ ॥೩೧॥ ಪಾಪೇ ಪ್ರಲಮ್ಬೇ ನಿಹತೇ ದೇವಾಃ ಪರಮನಿರ್ವೃತಾಃ । ಅಭ್ಯವರ್ಷನ್ ಬಲಂ ಮಾ
ಲ್ಯೈಃ ಶಶಂಸುಸ್ಸಾಧುಸಾಧ್ವಿತಿ॥ ॥೩೨॥

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೆ ಅಷ್ಟಾದಶೋಽಧ್ಯಾಯಃ

---

ತ್ತುತಲಿರುವ, ಬಲೇನ-ಬಲರಾಮನಿಂದ, ನಿಹತಂ-ಕೊಲ್ಲಲ್ಪಟ್ಟವನನ್ನಾಗಿ, ದೃಷ್ಟ್ವಾ-ನೋಡಿ, ಸುವಿಸ್ಮಿತಾಃ-ಬಹಳ ಆಶ್ಚರ್ಯಪಟ್ಟವರು, ಆಸನ್-ಆದರು ॥೩೦॥ ಪ್ರೇಮವಿಹ್ವಲಚೇತಸಃ-ಪ್ರೇಮ-ಸ್ನೇಹದಿಂದ, ವಿಹ್ವಲ-ಭಯಚಂಚಲವಾದ, ಚೇತಸಃ-ಮನಸ್ಸುಳ್ಳವರಾಗಿ, ಪ್ರೇತ್ಯಾಗತಮಿವ-ಸತ್ತು ಮರಳಿ ಬಂದವನಂತಿರುವ ಬಲರಾಮನನ್ನು, ಆಲಿಂಗ್ಯ-ಅಪ್ಪಿಕೊಂಡು, ಆಶಿಷಃ-ಹರಕೆಗಳನ್ನು, ಅಭಿಗೃಣಂತಃ-ಹೇಳುತಲಿರುವರಾಗಿ, ತದರ್ಹಣಂ-ತತ್- ಕೊಂಡಾಡುವವಕ್ಕೆ, ಅರ್ಹಣಂ-ತಕ್ಕವನಾಗಿರುವ, ತಂ-ಆ ಬಲರಾಮನನ್ನು, ಪ್ರಶಶಂಸುಃ-ಹೆಚ್ಚಾಗಿ ಕೊಂಡಾಡಿದರು ॥೩೧॥ ಪಾಪೇ-ಪಾಪವುಳ್ಳವನಾದ, ಪ್ರಲಂಬೇ-ಪ್ರಲಂಬಾಸುರನು, ನಿಹತೇ ಸತಿ-ಕೊಲ್ಲಲ್ಪಟ್ಟವನಾಗುತಲೂ, ದೇವಾಃ-ದೇವತೆಗಳು, ಪರಮನಿರ್ವೃತಾಃ-ಹೆಚ್ಚಾದ ವಿಶ್ರಾಂತಿ ಸುಖವುಂಟಾದವರಾದ, ದೇವಾಃ-ದೇವತೆಗಳು, ಬಲಮಭಿ-ಬಲರಾಮನ ಮೇಲೆ ಎಲ್ಲ ಕಡೆಗಳಲ್ಲಿಯೂ, ಮಾಲ್ಯೈಃ-ಪುಷ್ಪಮಾಲಿಕೆಗಳಿಂದ, ಅವರ್ಷನ್-ಮಳೆಸುರಿದರು. ಸಾಧುಸಾಧ್ವಿತಿ-ಚೆನ್ನಾಯಿತು ಚೆನ್ನಾಯಿತೆಂದು, ಶಶಂಸುಃ-ಹೊಗಳಿದರು ॥೩೨॥

ಇತಿ ಶ್ರೀಮದ್ಭಾಗವತೇ ಪ್ರತಿಶಬ್ದಾರ್ಥಬೋಧಿನ್ಯಾಂ ದಶಮಸ್ಕಂಧೇ
ಅಷ್ಟಾದಶಾಧ್ಯಾಯಃ.

---

ದರ್ಪದಿಂದ ಮಹಾಬಲಶಾಲಿಯಾದ ರಾಮನಿಂ ಕೊಲ್ಲಲ್ಪಟ್ಟ ಆ ಪ್ರಲಂಬಾಸುರನಂ ನೋಡಿ, ಗೋಪಾಲಕರೆಲ್ಲರೂ ಅತ್ಯಂತಾಶ್ಚರ್ಯಯುಕ್ತರಾಗಿ ॥೩೦॥ ಶ್ಲಾಘಿಸಲು ಯೋಗ್ಯನಾದ ಆ ಬಲರಾಮನಂ ಸತ್ತು ಮರಳಿ ಬದುಕಿಬಂದವನಂತೆ ಪಡೆದು ಆಶೀರ್ವಚನಮ ಪ್ರಯೋಗಿಸಿ ಅಪ್ಪಿಕೊಂಡು ಪ್ರೇಮದಿಂದ ಪರವಶವಾದ ಮನಸ್ಸುಳ್ಳವರಾಗಿ ಸ್ತೋತ್ರಂಗೆಯ್ದರು. ॥೩೧॥ ಅತಿಪಾಪಿಷ್ಠನಾದ ಆ ಪ್ರಲಂಬಾಸುರನು ಈ ರೀತಿಯಾಗಿ ಬಲರಾಮನಿಂದ ಸಂಹರಿಸಲ್ಪಡುವನಾಗುತ್ತಿರಲು ದೇವತೆಗಳೆಲ್ಲರೂ ಅತ್ಯಂತ ಸಂತೋಷಯುಕ್ತರಾಗಿ ಬಲರಾಮನ ಮೇಲೆ ದಿವ್ಯಪುಷ್ಪಗಳನ್ನು ಮಳೆಸುರಿಸಿದವರಾಗಿ ಬಹು ಚೆನ್ನಾಯಿತೆಂದು ಶ್ಲಾಘಿಸಿದರು. ... ... ... ... ॥೩೨॥

ಇಂತು ಶುಕಮುನಿಯು ಪರೀಕ್ಷಿದ್ರಾಯನಿಗೆ ನಿರೂಪಿಸಿದನೆಂದು ಸೂತಪೌರಾಣಿಕನು ನೈಮಿಶಾ
ರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಹೇಳಿದನೆಂಬಲ್ಲಿಗೆ-ಶ್ರೀಮನ್ಮಹೀಶೂರಪುರವ
ರಾಧೀಶ ಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜ ವಿರಚಿತಮಪ್ಪ, ಶ್ರೀ
ಭಾಗವತದ ಶ್ರೀಕೃಷ್ಣರಾಜ ವಾಣೀವಿಲಾಸವು, ಎಂಬ ಕರ್ಣಾಟಕ
ಭಾಷಾವ್ಯಾಖ್ಯಾನದಲ್ಲಿ ದಶಮಸ್ಕಂಧದೊಳು ಹದಿನೆಂಟನೆಯ
ಅಧ್ಯಾಯವು ಸಂಪೂರ್ಣವಾದುದು.

ಮಂಗಳಮಸ್ತು

---

ಕ್ರೀಡಾಸಕ್ತೇಷುಗೋಪೇಷುತದ್ಗಾವೋದೂರಚಾರಿಣೀಃ* । ಸ್ವೈರಂಚರಂತ್ಯೋವಿವಿಶುಸ್ತೃಣಲೋಭೇನಗಹ್ವರಮ್ ॥೧॥ ಅಜಾಗಾವೋಮಹಿಷ್ಯಶ್ಚನಿವಿಶಂತ್ಯೋವನಾದ್ವನಮ್ । ಮುಂಜಾಟವೀಂನಿವಿವಿಶುಃಕ್ರಂದಂತ್ಯೋದಾವತರ್ಷಿತಾಃ ॥೨॥ ತೇಪಶ್ಯಂತಃಪಶೂನ್ಗೋಪಾಃಕೃಷ್ಣರಾಮಾದಯಸ್ತಥಾ । ಜಾತಾನುತಾಪಾನವಿದುರ್ವಿಚಿನ್ವಂತೋಗವಾಂಗತಿಮ್ ॥೩॥ ತೃಣೈಸ್ತತ್ಖುರದಚ್ಛಿನ್ನೈರ್ಗೋಷ್ಪದೈರಂಕಿತೈರ್ಗವಾಮ್ । ಮಾರ್ಗಮನ್ವಗಮನ್ಸರ್ವೇನಷ್ಟಾಜೀವ್ಯಾವಿಚೇತಸಃ ॥೪॥ ಮುಂಜಾಟವ್ಯಾಂಭ್ರಷ್ಟಮಾರ್ಗಂಕ್ರಂದಮಾನಂಸ್ವಗೋಧನಮ್ ।

---

೧೯ ಅಧ್ಯಾಯ ಪ್ರತಿಪದಟೀಕೆ.

ಗೋಪೇಷು-ಗೋಪಾಲಕರು, ಕ್ರೀಡಾಸಕ್ತೇಷುಸತ್ಸು-ಕ್ರೀಡಾ-ಆಟಗಳಲ್ಲಿ, ಆಸಕ್ತೇಷು-ಲೋಲರಾಗಿರುವಲ್ಲಿ, ದೂರಚಾರಿಣೀಃ-ದೂರದಲ್ಲಿತಿರುಗುತಲಿದ್ದ, ತದ್ಗಾವಃ-ಅವರಗೋವುಗಳು, ಸ್ವೈರಂ-ಸ್ವೇಚ್ಛೆಯಾಗಿ, ಚರಂತ್ಯಃ-ಮೇಯುತಲಿರುವವಾಗಿ, ತೃಣಲೋಭೇನ-ಹುಲ್ಲಿನಆಶೆಯಿಂದ, ಗಹ್ವರಂ-ಹೆಗ್ಗಾಡನ್ನು, ವಿವಿಶುಃ-ಹೊಕ್ಕವು ॥೧॥ ಅಜಾಃ-ಮೇಕೆಗಳುಕುರಿಗಳು, ಗಾವಃ-ಗೋವುಗಳು, ಮಹಿಷ್ಯಶ್ಚ-ಎಮ್ಮೆಗಳೂಕೂಡ, ವನಾತ್‌ವನಂ-ಕಾಡಿನಿಂದಕಾಡನ್ನು, ನಿವಿಶಂತ್ಯಃ-ಪ್ರವೇಶಿಸುವವಾಗಿ, ದಾವತರ್ಷಿತಾಃ-ದಾವ-ಕಾಡುಬೇಗೆಯಿಂದ, ತರ್ಷಿತಾಃ-ನೀರಡಿಕೆಗೊಳಿಸಲ್ಪಟ್ಟವಾದ್ದರಿಂದಲೇ, ಕ್ರಂದಂತ್ಯಃ-ಕೂಗುತಲಿರುವವಾಗುತ್ತ, ಮುಂಜಾಟವೀಂ-ಉದ್ದವಾಗಿಬೆಳೆದಜಂಬುಹುಲ್ಲಿನಕಾಡನ್ನು, ನಿವಿವಿಶುಃ-ಹೊಕ್ಕವು ॥೨॥ ತೇಕೃಷ್ಣರಾಮಾದಯಃ-ಆಕೃಷ್ಣನೂರಾಮನೂಮೊದಲಾದ, ಗೋಪಾಃ-ಗೊಲ್ಲರು, ಪಶೂನ್-ಪಶುಗಳನ್ನು, ಅಪಶ್ಯಂತಃ-ನೋಡದೇ ಯಿರುವರಾದ್ದರಿಂದಲೇ, ಜಾತಾನುತಾಪಾಃ-ಪಶ್ಚಾತ್ತಾಪಹುಟ್ಟಿದವರಾಗಿ, ಗವಾಂ-ಆಕಳ, ಗತಿಂ-ದಾರಿಯನ್ನು, ವಿಚಿನ್ವಂತಸ್ಸಂತಃ-ಹುಡುಕುತಲಿರುವರಾಗುತ್ತ, ತಥಾ-ಹಾಗೆಯೇ, ವಿವಿಶುಃ-ತಾವೂಕಾಡನ್ನಹೊಕ್ಕರು ॥೩॥ ನಷ್ಟಾಜೀವ್ಯಾಃ-ನಷ್ಟ-ಕಾಣಿಸದೆಹೋದ, ಆಜೀವ್ಯಾಃ-ಜೀವನಸಾಧನವಾದ ಗೋಧನವುಳ್ಳವರಾದ್ದರಿಂದಲೇ, ವಿಚೇತಸಃ-ಸಮಾಧಾನಬುದ್ಧಿಯಿಲ್ಲದವರಾದ, ಸರ್ವೇ-ಎಲ್ಲರೂ. ತತ್ಖುರದಚ್ಛಿನ್ನೈಃ-ತತ್-ಆಪಶುಗಳ, ಖುರ-ಗೊರಸುಗಳಿಂದಲೂ, ದತ್-ಹಲ್ಲುಗಳಿಂದಲೂ, ಛಿನ್ನೈಃ-ಕುಯ್ಯಲ್ಪಟ್ಟ, ತೃಣೈಃ-ಹುಲ್ಲುಗಳಿಂದಲೂ, ಅಂಕಿತೈಃ-ಗುರ್ತಾಗಿರುವ, ಗೋಷ್ಪದೈಶ್ಚ-ಪಶುಗಳಹೆಜ್ಜೆಗಳಿಂದಲೂ, ಗವಾಂ-ಗೋವುಗಳ, ಮಾರ್ಗಂ-ದಾರಿಯನ್ನು, ಅನ್ವಗಮನ್-ಅನುಸರಿಸಿಹೋದರು ॥೪॥

---

॥ ೧೯ ನೆಯ ಅಧ್ಯಾಯವು. ॥

ಶ್ರೀಧರೀಯಶ್ಲೋಕಃ ॥ ಊನವಿಂಶೇನಿವಿಷ್ಟಸ್ತು ಗೋಪಗೋಕುಲಮುಚ್ಯುತಃ । ಮುಂಜಾರಣ್ಯಮರಣ್ಯಾಗ್ನೇರರಕ್ಷತ್ತನ್ನಿಪಾತನಃ ॥ಟೀ॥ ಹತ್ತೊಂಭತ್ತನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ಮುಂಜಾರಣ್ಯದ ಮಧ್ಯಮಂ ಪ್ರವೇಶಿಸಿದ ಗೋಸಮೂಹವನ್ನೂ ಗೋಪಾಲಕರನ್ನೂ ಸಹ ಕಾಡುಕಿಚ್ಚಿಂ ಪಾನಂಗೆಯ್ದು ರಕ್ಷಿಸಿದನೆಂಬರ್ಥಮಂ ಶುಕಾಚಾರ್ಯನು ಪರೀಕ್ಷಿದ್ರಾಯನಂ ಕುರಿತು ನಿರೂಪಿಸುವನದೆಂತೆನೆ:-

ಎಲೈ, ಪರೀಕ್ಷಿದ್ರಾಯನೇ! ಕೇಳು; ಗೋಪಾಲಕರೆಲ್ಲರೂ ಬೃಂದಾವನದಲ್ಲಿ ಈರೀತಿಯಾಗಿ ಕ್ರೀಡಾಸಕ್ತರೆನಿಸಿರಲು; ಅವರಗೋವುಗಳೆಲ್ಲವೂ ದೂರವಾಗಿಸಂಚರಿಸುತಲೂ ಮನಸ್ಸುಬಂದಂತೆ ಮೇಯುತಲೂ ಹುಲ್ಲುಗಳಲ್ಲಿ ಅಪೇಕ್ಷೆಯಿಂದ ಪ್ರವೇಶಿಸಲಶಕ್ಯವಾದ ಮಹತ್ತಾದ ಮುಂಜಾರಣ್ಯಮಂ ಪ್ರವೇಶಿಸಿದವು. ॥೧॥ ಮತ್ತು ಆಗ ಆಡುಗಳು ಗೋವುಗಳು ಎಮ್ಮೆಗಳು ಸಹ ಒಂದುವನದಿಂದ ಮತ್ತೊಂದುವನವಂ ಪ್ರವೇಶಿಸುತಲಿರುವವಾಗಿ ಗ್ರೀಷ್ಮತಾಪದಿಂದ ಬಾಯಾರಿಕೆಯುಳ್ಳವಾಗಿ ಬಹಳವೃದ್ಧವಾಗಿಯೂ ಸಾಂದ್ರವಾಗಿಯೂ ಬೆಳೆದಿರುವ ವಿಶೇಷವಾದ ಹುಲ್ಲುಳ್ಳ ಅರಣ್ಯವಂ ಪ್ರವೇಶಿಸಿದವು. ॥೨॥ ಅನಂತರದಲ್ಲಿ ರಾಮಕೃಷ್ಣಾದಿಗೋಪಾಲಕರೆಲ್ಲರೂ ಆಗೋವುಗಳಂ ಕಾಣದೆ ಪಶ್ಚಾತ್ತಾಪವನೆಯ್ದಿ ಹುಡುಕುತಲಿರುವವರಾದರೂ ಗೋವುಗಳಮಾರ್ಗವನ್ನೇ ಅರಿತವರಾಗಲಿಲ್ಲ. ॥೩॥ ಮತ್ತು ಗೋಪಾಲಕರೆಲ್ಲರೂ ನಷ್ಟವಾದ ಜೀವನೋಪಾಯವುಳ್ಳವರಾದುದರಿಂದ ಖಿನ್ನರಾಗಿ ಆಗೋವುಗಳಂ ಕಾಣದೆ ಅವುಗಳ ಗೊರಸುಗಳಿಂದಲೂ ಹಲ್ಲುಗಳಿಂದಲೂ ಸಹ ಕತ್ತರಿಸಲ್ಪಟ್ಟ ಹುಲ್ಲುಗಳಿಂದಲೂ, ಗೋವುಗಳ ಹೆಜ್ಜೆಗಳಿಂದಲೂ, ಅಂಕಿತಗಳಾದ ಭೂಪ್ರದೇಶಗಳಿಂದ ಆಗೋವುಗಳಮಾರ್ಗಮಂ ತಿಳಿದವರಾದರು. ॥೪॥ ಆಮೇಲೆ ಗೋಪಾಲಕರು ಮುಂ

ಅಪ್ರಾಪ್ಯತೃಷಿತಾಶ್ಶ್ರಾನ್ತಾಸ್ತತಸ್ತೇ ಸನ್ನ್ಯವರ್ತಯನ್ ॥೫॥ ಕೃಷ್ಣಃ ಪ್ರೋತ್ತುಂಗಮಾರುಹ್ಯ ವೃಕ್ಷಂ ಮೇಘ
ನಿಭಚ್ಛವಿಃ । ಆತ್ಮಾನಮಾಹ್ವಯಾಮಾಸ ದರ್ಶಯನ್ ಗಾಸ್ಸ್ವನಾಮಭಿಃ ॥೬॥ ತಾ ಆಹೂತಾ ಭಗವತಾ ಮೇಘಗ
ಮ್ಭೀರಯಾ ಗಿರಾ । ಸ್ವನಾಮ್ನಾಂ ನಿನದಂ ಶ್ರುತ್ವಾ ಪ್ರತಿನೇದುಃ ಪ್ರಹರ್ಷಿತಾಃ ॥೭॥ ತತಸ್ಸಮನ್ತಾದ್ವನಧೂ
ಮಕೇತುರ್ಯದೃಚ್ಛಯಾಭೂತ್ ಕ್ಷಯಕೃದ್ವನೌಕಸಾಮ್ । ಸಮೀರಿತಸ್ಸಾರಥಿನೋಲ್ಬಣೋಲ್ಮುಕೈರ್ವಿಲೇಲಿ
ಹಾನಸ್ಸ್ಥಿರಜಂಗಮಾನ್ ಮಹಾನ್ ॥೮॥ ತಮಾಪತನ್ತಂ ಪರಿತೋ ದವಾಗ್ನಿಂ ಗೋಪಾಸ್ಸಗಾವಃ ಪ್ರಸಮೀಕ್ಷ್ಯ

---

ಮುಂಜಾಟವ್ಯಾಂ-ಮುಂಜಾರಣ್ಯದಲ್ಲಿ, ಭ್ರಷ್ಟಮಾರ್ಗಂ-ತಪ್ಪಿದದಾರಿಯುಳ್ಳದಾದ್ದರಿಂದಲೇ, ಕ್ರಂದಮಾನಂ-ಕೂಗುತಲಿರುವ, ಸ್ವಗೋಧನಂ-ತಮ್ಮಗೋವುಗಳೆಂಬಧನವನ್ನು, ಅಪ್ರಾಪ್ಯ-ಹೊಂದದೆ, ತೃಷಿತಾಃ-ನೀರಡಿಕೆಯುಂಟಾದವರೂ, ಶ್ರಾಂತಾಃ-ಬಳಲಿದವರೂ ಆದ, ತೇ-ಅವರು, ತತಃ-ಆಕಾಡಿನದೆಸೆಯಿಂದ, ಸನ್ನ್ಯವರ್ತಯನ್-ಹಿಂದಕ್ಕೆ ಬಾರದೆಯಿದ್ದರು ॥೫॥ ಮೇಘನಿಭಚ್ಛವಿಃ-ಮೇಘದೊಡನೆ ಸಮಾನವಾದಕಾಂತಿಯುಳ್ಳ, ಕೃಷ್ಣನು, ಪ್ರೋತ್ತುಂಗಂ-ಬಹಳವೃದ್ಧವಾದ, ವೃಕ್ಷಂ-ಮರವನ್ನು, ಆರುಹ್ಯ-ಏರಿ, ಆತ್ಮಾನಂ-ತನ್ನ ದೇಹವನ್ನು, ದರ್ಶಯನ್-ತೋರಿಸುತಲಿರುವನಾಗಿ, ಸ್ವನಾಮಭಿಃ-ತಮ್ಮತಮ್ಮಹೆಸರುಗಳಿಂದ, ಗಾಃ-ಗೋವುಗಳನ್ನು, ಆಹ್ವಯಾಮಾಸ-ಕರೆದನು ॥೬॥ ತಾಃ-ಆಗೋವುಗಳು, ಭಗವತಾ-ಕೃಷ್ಣನಿಂದ, ಮೇಘಗಂಭೀರಯಾ-ಮೇಘದಂತೆಘನವಾದ, ಗಿರಾ-ಮಾತಿನಿಂದ, ಆಹೂತಾಃ-ಕರೆಯಲ್ಪಟ್ಟವಾಗಿ, ಸ್ವನಾಮ್ನಾಂ-ತಮ್ಮಹೆಸರುಗಳ, ನಿನದಂ-ಶಬ್ದವನ್ನು, ಶ್ರುತ್ವಾ-ಕೇಳಿ, ಪ್ರಹರ್ಷಿತಾಃ-ಹೆಚ್ಚು ಸಂತೋಷವುಂಟಾದವಾಗಿ, ಪ್ರತಿನೇದುಃ-ಪ್ರತಿಯಾಗಿ ಕೂಗಿದವು ॥೭॥ ತತಃ-ಆಮೇಲೆ, ಸಮಂತಾತ್-ಎಲ್ಲಕಡೆಗಳಲ್ಲಿಯೂ, ಸಾರಥಿನಾ-ಸಹಾಯಕನಾದ ಗಾಳಿಯಿಂದ, ಸಮೀರಿತಃ-ರಗಳಿಸಲ್ಪಟ್ಟ, ಮಹಾನ್-ದೊಡ್ಡ, ವನಧೂಮಕೇತುಃ-ಕಾಡುಬೆಂಕಿಯು, ಉಲ್ಬಣೋಲ್ಮುಕೈಃ-ಕೆರಳಿದ ಮೇಲುರಿಗಳಿಂದ, ಸ್ಥಿರಜಂಗಮಾನ್-ಸ್ಥಿರ-ಚಲಿಸದೆಯಿರುವ, ಜಂಗಮಾನ್-ತಿರುಗುತಲಿರುವಪದಾರ್ಥಗಳನ್ನು, ವಿಲೇಲಿಹಾನಃ-ವಿಶೇಷವಾಗಿ ನೆಕ್ಕುತಲಿರುವುದಾಗಿ, ಯದೃಚ್ಛಯಾ-ಸ್ವೇಚ್ಛೆಯಿಂದ, (ತಾನಾಗಿ) ವನೌಕಸಾಂ-ಕಾಡಿನಲ್ಲಿರುವಪ್ರಾಣಿಗಳಿಗೆ, ಕ್ಷಯಕೃತ್-ನಾಶವನ್ನು ಮಾಡುವುದು, ಅಭೂತ್-ಆಯಿತು ॥೮॥ ಸಗಾವಃ-ಗೋವುಗಳಿಂದಕೂಡಿದವರಾದ, ಗೋಪಾಃ-ಗೊಲ್ಲರು, ಪರಿತಃ-ಸುತ್ತಲೂ, ಆಪತಂತಂ-ಬರುತಲಿರುವ, ತಂದವಾಗ್ನಿಂ-ಆಕಾಡುಕಿಚ್ಚನ್ನು, ಪ್ರಸಮೀಕ್ಷ್ಯ-ನೋಡಿ, ಭೀತಾಃ-ಹೆದರಿದವರಾಗಿ, ಸಬಲಂ-ಬಲರಾಮನಿಂದಸಹಿತನಾದ, ಕೃಷ್ಣಂ-ಕೃಷ್ಣನನ್ನು, ಮೃತ್ಯುಭಯಾರ್ದಿತಾಃ-ಮರಣಭಯದಿಂದ

---



ಜಾರಣ್ಯದಲ್ಲಿ ದಾರಿತಪ್ಪಿ ಕೂಗುತಲಿರುವ ತಮ್ಮಗೋಸಮೂಹವ ಪಡೆಯಲಾರದೆ ಬಾಯಾರಿಕೆಯಿಂದಬಹಳೆ ಬಳಲಿದವರಾಗಿ ಅಲ್ಲಿಂದ ಹಿಂದಕ್ಕೆ ತಿರುಗಿ ಬಾರದೆಯಿದ್ದರು. ॥೫॥ ╪ ॥ ಕೃಷ್ಣನು ಉದ್ದವಾದ ಮರವನ್ನೇರಿ, ಮೇಘ ಸಮಾನವಾದ ಕಾಂತಿಯುಳ್ಳವನಾಗಿ, ತನ್ನ ಮೂರ್ತಿಯನ್ನು ತೋರಿಸುತ, ಗೋವುಗಳನ್ನು ಅವುಗಳ ಹೆಸರುಗಳಿಂದ ಕರೆದನು. ॥ ╪ ॥ ೬ ॥ ಆಭಗವಂತನಾದ ಕೃಷ್ಣನಿಂದ ಮೇಘಧ್ವನಿಯಂತೆ ಗಂಭೀರ ವಾಕ್ಯದಿಂದ ಕರೆಯಲ್ಪಟ್ಟ ಗೋವುಗಳು ತಮ್ಮ ಹೆಸರುಗಳ ಶಬ್ದವಕೇಳಿ ಸಂತೋಷಪಟ್ಟು ಪ್ರತಿಧ್ವನಿಯಂಗೆಯ್ದುವು. ॥ ೭ ॥ ಆಮೇಲೆ ಗೋಪಾಲಕರ ನಾಶಕ್ಕೆ ಕಾರಣವಾದ, ವಾಯುವಿನಿಂದ ಪ್ರೇರಿಸಲ್ಪಟ್ಟು ಸುತ್ತಲೂ ಹಾರಾಡಿಕೊಂಡಿರುವ, ಉರಿಗಳಿಂದ ಸ್ಥಾವರಜಂಗಮಪ್ರಾಣಿಗಳಂ ದಹಿಸುತಲಿರುವ, ಮಹತ್ತಾದ, ಕಾಡುಕಿಚ್ಚು ಆಕಸ್ಮಿಕವಾಗಿ ಆವಿರ್ಭವಿಸಿತು ॥೮॥ ಆಗ ಗೋವುಗಳಂಕೂಡಿರುವ ಗೋಪಾಲಕರು ಸುತ್ತಲೂವ್ಯಾಪಿಸಿಕೊಂಡು ಬರುತಲಿರುವ ವನಾಗ್ನಿಯಂ ಕಂಡು ಬಹಳಭೆ

ಮಸಾಭಾಂತಿನಗ್ರಹಾಃ । ಯಥಾಪಾಪೇನಪಾಷಂಡಾನಹಿವೇದಾಃಕಲೌಯುಗೇ ॥೮॥ ಶ್ರುತ್ವಾಪರ್ಜನ್ಯನಿನದಂಮಂಡೂಕಾವ್ಯಸೃಜನ್‌ಗಿರಃ।ತೂಷ್ಣೀಂಶಯಾನಾಃಪ್ರಾಗ್ಯದ್ವದ್ಬ್ರಾಹ್ಮಣಾನಿಯಮಾತ್ಯಯೇ॥೯॥ ಆಸನ್ನುತ್ಪಥವಾಹಿನ್ಯಃಕ್ಷುದ್ರನದ್ಯೋನುಶುಷ್ಯತೀಃ*।ಪುಂಸೋಯಥಾಸ್ವತಂತ್ರಸ್ಯಗೇಹೇದ್ರವಿಣಸಂಪದಃ॥೧೦॥ ಹರಿತಾಹರಿಭಿಶ್ಶಷ್ಪೈರಿಂದ್ರಗೋಪೈಶ್ಚಲೋಹಿತಾ । ಉಚ್ಛಿಲೀಂಧ್ರಕೃತಚ್ಛಾಯಾನೃಣಾಂಶ್ರೀರಿವಭೂರ

---

ಪಾಪೇನ-ದುಷ್ಕೃತ್ಯದಿಂದ, ಪಾಷಂಡಾಃ-ನಾಸ್ತಿಕರಾದವರು, ಯಥಾ-ಹೇಗೆ, ಭಾಂತಿ-ಪ್ರಕಾಶಿಸುವರೋ, ವೇದಾಃ-ವೇದಗಳು, ಯಥಾ-ಹೇಗೆ. ನಹಿ-ಇಲ್ಲವೋ, ತಥಾ-ಹಾಗೆ, ನಿಶಾಮುಖೇಷು-ರಾತ್ರಿಯಆರಂಭದಲ್ಲಿ, ಖದ್ಯೋತಾಃ-ಮಿಣುಕುಹುಳಗಳು, ತಮಸಾ-ಕತ್ತಲೆಯಿಂದ, ಭಾಂತಿ-ಬೆಳಗುವವು, ಗ್ರಹಾಃ-ಸೂರ್ಯಾದಿಗಳೋ, ನ-ಬೆಳಗುವುದಿಲ್ಲವು॥೮॥ಪ್ರಾಕ್-ಮುಂಚೆ, ತೂಷ್ಣೀಂ-ಸುಮ್ಮನೆ, ಶಯಾನಾಃ-ಮಲಗಿದ್ದ, ಬ್ರಾಹ್ಮಣಾಃ-ವಿಪ್ರರು, ನಿಯಮಾತ್ಯಯೇ-ನಿಯಮ-ನಿತ್ಯಕರ್ಮಾನುಷ್ಠಾನದ, ಅತ್ಯಯೇ-ಕೊನೆಯಲ್ಲಿ, ಯದ್ವತ್-ಹೇಗೋ, ತದ್ವತ್-ಹಾಗೆ, ಮಂಡೂಕಾಃ-ಕಪ್ಪೆಗಳು, ಪರ್ಜನ್ಯನಿನದಂ-ಗುಡುಗನ್ನು,ಶ್ರುತ್ವಾ-ಕೇಳಿ, ಗಿರಃ ಮಾತುಗಳನ್ನು, ವ್ಯಸೃಜನ್-ಹೊರಡಿಸಿದವು ॥೯॥ ಸ್ವತಂತ್ರಸ್ಯ-ತಡೆಯಿಲ್ಲದವನಾದ, ಪುಂಸಃ-ಪುರುಷನ-ಗೇಹೇ-ಮನೆಯಲ್ಲಿ, ದ್ರವಿಣಸಂಪದಃ-ಧನಸಂಪತ್ತುಗಳು, ಯಥಾ-ಹೇಗೋ, ತಥಾ-ಹಾಗೆ,ಅನುಶುಷ್ಯತೀಃ-ಒಣಗುತಲಿದ್ದ,ಕ್ಷುದ್ರನದ್ಯಃ-ಸಣಹೊಳೆಗಳು,ಉತ್ಪಥವಾಹಿನ್ಯಃ-ಉತ್ಪಥ-ದಾರಿಯನ್ನು ಮೀರಿ,ವಾಹಿನ್ಯಃ-ನೀರುಹರಿಯುತ್ತಿರುವವು, ಆಸನ್-ಆದವು॥೧೦॥ಹರಿಭಿಃ-ಕಪ್ಪಾದ, ಶಷ್ಪೈಃ-ಎಳೆಹುಲ್ಲುಗಳಿಂದ, ಹರಿತ-ಹಸುರಾಗಿಯೂ, ಇಂದ್ರಗೋಪೈಃ-ಭರಣಿಹುಳಗಳಿಂದ, ಲೋಹಿತಾಚ-ಕಂಪಾಗಿಯೂ, ಉಚ್ಛಿಲೀಂಧ್ರಕೃತಚ್ಛಾಯಾ-ಉತ್-ತಲೆಯೆತ್ತಿಕೊಂಡಿರುವ, ಶಿಲೀಂಧ್ರ-ಛತ್ರಾಕಾರವಾದಪುಷ್ಪಗಳಿಂದ, ಕೃತಛಾಯಾ-ಮಾಡಲ್ಪಟ್ಟನೆಳಲುಳ್ಳದ್ದಾದ್ದರಿಂದ,

---

ಯಿಂದ ಕಲಿಯುಗದಲ್ಲಿ ಪಾಪದಿಂ ವೇದೋಕ್ತಕರ್ಮವಿಲ್ಲದ ಪಾಷಂಡರು ಪ್ರಕಾಶಿಸುವರೇ ಹೊರತು ವೇದಗಳು ಪ್ರಕಾಶಿಸುವುದಿಲ್ಲವೋ, ಆರೀತಿಯಿಂದ ಪ್ರದೋಷಕಾಲದಲ್ಲಿ ಕತ್ತಲೆಯಿಂದ ಮಿಂಚುಹುಳಗಳೇ ಪ್ರಕಾಶಿಸಿದವಲ್ಲದೆ ಚಂದ್ರಾದಿಗ್ರಹಳು ಪ್ರಕಾಶಿಸಲಿಲ್ಲವು [ ಸಮಯವಿಶೇಷದಲ್ಲಿ ಅಲ್ಪರಿಗೂ ಪ್ರಾಬಲ್ಯಬರುವುದುಂಟು ದೊಡ್ಡವರ ಶಕ್ತಿ ನಡೆಯದೇ ಇರುವುದೂ ಉಂಟು ಕ್ರಿಯಾಬಲಕ್ಕಿಂತಲೂ ಕಾಲಬಲಹೆಚ್ಚಾದ್ದೆಂದು ಸೂಚಿಸಲ್ಪಟ್ಟಿದೆ] ॥೮॥ಮತ್ತು ಯಾವರೀತಿಯಿಂದ ಶಿಷ್ಯರು ನಿತ್ಯಕರ್ಮವಾದಮೇಲೆ ಆಚಾರ್ಯನಮುಖದಿಂದ ವೇದವಂ ಶ್ರವಣಂಗೆಯ್ದು ಅನಂತರದಲ್ಲಿ ಆವೇದವಂ ಗಟ್ಟಿಯಾಗಿ ಉಚ್ಚರಿಸುವರೋ, ಆರೀತಿಯಿಂದ ಮೊದಲು ಸುಮ್ಮನೆ ಮಲಗಿರುವ ಕಪ್ಪೆಗಳು ವರ್ಷಾಕಾಲದಲ್ಲಿ ಮೇಘಧ್ವನಿಯಂ ಕೇಳಿ ಸಂಗಡಲೇ ತಾವು ಗಟ್ಟಿಯಾಗಿ ಧ್ವನಿಗೆಯ್ದುವಾದವು. [ ಯೋಗ್ಯರಾದವರು ಗುರುಮುಖದಿಂದ ನಿಯಮವಾಗಿ ವೇದಾಧ್ಯಯನವಂ ಮಾಡ ಬೇಕೆನುತಲೂ ಬಳಿಕ ಅರ್ಥವಿಚಾರವಂ ಮಾಡದೆ ಶುಷ್ಕಪಾಠಕರಾಗಿಯೇ ಇದ್ದರೆ ಕಪ್ಪೆಗಳ ಹಾಗಿರುವರೆಂತಲೂ ಸೂಚಿಸಿದಂತಾಗುವುದು.] ॥೯॥ ಮತ್ತು ಇಂದ್ರಿಯಗಳಿಗೆ ಅಧೀನನಾದ ಪುರುಷನ ದೇಹಧನಾದಿಸಂಪತ್ತುಗಳು ಯಾವರೀತಿಯಿಂದ ದುರ್ಮಾರ್ಗದಲ್ಲಿ ಪ್ರವರ್ತಿಸಿದವಾಗಿ ಕೂಡಲೆ ಕ್ಷಯವನೆಯ್ದುವುವೋ, ಆರೀತಿಯಿಂದ ವರ್ಷಾಕಾಲದಲ್ಲಿ ಕ್ಷುದ್ರನದಿಗಳು ವೃದ್ಧಿಯನೆಯ್ದಿ ತಿಟ್ಟುಗಳಲ್ಲಿಯೂ ಪ್ರವಹಿಸಿದವಾಗಿ ಸ್ವಲ್ಪಹೊತ್ತಾಗುತಲೂ ಕ್ಷೀಣಿಸಿಹೋಗುತ್ತಿವೆ [ತನಗುಳ್ಳ ಅಲ್ಪಸಂಪತ್ತಿನಿಂದ ಹೆಮ್ಮೆಗೊಂಡು ದೊಡ್ಡವರೊಡನೆ ಸರಿಯಾಗಿ ಪ್ರವರ್ತಿಸತೊಡಗಿದ ನೀಚನು ಬೇಗನೇ ಕ್ಷೀಣಿಸಿಹೋಗುವನೆಂದು ಸೂಚಿಸಿದಂತಾದುದು. ] ॥೧೦॥ ಒಂದು ಕಡೆಯಲ್ಲಿ ನೀಲವರ್ಣಗಳಾದ ಎಳೆಹುಲ್ಲುಗಳಿಂದ ಕಪ್ಪಾಗಿಯೂ ಮತ್ತೊಂದು ಕಡೆಯಲ್ಲಿ ಇಂದ್ರಗೋಪಗಳೆಂಬ ಭರಣಿಹುಳಗಳಿಂದ ಕೆಂಪಾಗಿಯೂ ಅಲ್ಲಲ್ಲಿ ಛತ್ರಾಕೃತಿಯಾಗಿರುವ ಅಣಬೆಗಳಿಂದ ಮಾಡಲ್ಪಟ್ಟ ನೆರಳುಳ್ಳದ್ದಾಗಿಯೂ ಇರುವ ಭೂಮಿಯು ಅರಸುಗಳ ಸೇನಾಸಂಪತ್ತಿನಂತೆ ಪ್ರಕಾಶಿಸುವುದಾದುದು.] ಶಿಲೀಂಧ್ರ ಅಣಬೆ, ಎಂದರೆ ಛತ್ರಾಕಾರವಾಗಿರುವ ಪುಷ್ಪ- ಇದು ಮಳೆಗಾಲದಲ್ಲಿ ಪ್ರಚುರವಾಗುವುದು- ಜಾಲಾರಿ

ಭೂತ್॥೧೧॥ ಕ್ಷೇತ್ರಾಣಿಸಸ್ಯಸಂಪದ್ಭಿಃಕರ್ಷಕಾಣಾಂಮುದಂದದುಃ |ಮಾನಿನಾಮನುತಾಪಂಚದೈವಾಧೀನಮಜಾನತಾಮ್॥೧೨॥ಜಲಸ್ಥಲೌಕಸಸ್ಸರ್ವೇನವವಾರಿನಿಷೇವಯಾ | ಅಬಿಭ್ರನ್ರುಚಿರಂರೂಪಂಯಥಾಹರಿನಿಷೇವಯಾ॥೧೩॥ಸರಿದ್ಭಿಸ್ಸಂಗತಸ್ಸಿಂಧುಶ್ಚುಕ್ಷೋಭಶ್ವಸನೋರ್ಮಿಮಾನ್ |ಅಪಕ್ವಯೋಗಿನಶ್ಚಿತ್ತಂಕಾಮಾಕ್ತಂಗುಣಯುಗ್ಯಥಾ॥೧೪॥ಗಿರಯೋವರ್ಷಧಾರಾಭಿರ್ಹನ್ಯಮಾನಾನವಿವ್ಯಥುಃ|ಅ*ಭಿಭೂಯಮಾನಾವ್ಯಸನೈರ್ಯ

---

ಬೆಳೆವಾಗಿಯೂ ಇರುವ, ಭೂಃ-ನೆಲವು. ನೃಣಾಂ-ಮನುಷ್ಯರ, ಶ್ರೀರಿವ-ಹಲವುಬಣ್ಣದಕಾಂತಿಯಹಾಗೆ, ಅಭೂತ್-ಆಯಿತು॥೧೧॥ ಕ್ಷೇತ್ರಾಣಿ-ಹೊಲಗದ್ದೆ ಕೈತೋಟಗಳು, ಸಸ್ಯಸಂಪದ್ಭಿಃ-ಸಸ್ಯ-ಬೆಳೆಗಳ, ಸಂಪದ್ಭಿಃ-ಭಾಗ್ಯಗಳಿಂದ, ಕರ್ಷಕಾಣಾಂ-ಉಳುವವರಿಗೆ, ಮುದಂ-ಸಂತೋಷವನ್ನು, ದೈವಾಧೀನಂ-ಬೆಳೆಯೂ ಅದೃಷ್ಟಾಯತ್ತವೆಂದು, ಅಜಾನತಾಂ-ತಿಳಿಯದೆಇರುವ, ಮಾನಿನಾಂ-ಪುರುಷಪ್ರಯತ್ನವೇಫಲಕರವಾಗುವದೆಂಬಗರ್ವವುಳ್ಳವರಿಗೆ, ಅನುತಾಪಂಚ-ಪಶ್ಚಾತ್ತಾಪವನ್ನೂ, ದದುಃ-ಕೊಟ್ಟವು ೧೨॥ಸರ್ವೇ-ಸಮಸ್ತವಾದ, ಜಲಸ್ಥಲೌಕಸಃ-ನೀರೂನೆಲವೂವಾಸಸ್ಥಾನವಾಗಿವುಳ್ಳಜಂತುಗಳು, ನವವಾರಿನಿಷೇವಯಾ-ನವವಾರಿ-ಹೊಸನೀರಿನ, ನಿಷೇವಯಾ-ಬಳಿಕೆಯಿಂದ, ಹರಿನಿಷೇವಯಾಯಥಾ-ವಿಷ್ಣುವಿನಸೇವೆಯಿಂದಹೇಗೋಹಾಗೆ, ರುಚಿರಂ-ಮನೋಹರವಾದ, ರೂಪಂ-ಚೆಲುವಿಕೆಯನ್ನು, ಅಬಿಭ್ರನ್-ವಹಿಸಿದರು ೧೩ ಕಾಮಾಕ್ತಂ-ಕಾಮವಾಸನೆಯಿಂಕೂಡಿದ, ಗುಣಯುಕ್-ವಿಷಯಗಳಿಂಕೂಡಿದ, ಅಪಕ್ವಯೋಗಿನಃ-ಪಕ್ವವಾಗದಯೋಗವುಳ್ಳಪುರುಷನ, ಚಿತ್ತಂಯಥಾ-ಮನಸ್ಸುಹೇಗೋ, ತಥಾ-ಹಾಗೆ, ಶ್ವಸನೋರ್ಮಿಮಾನ್-ಶ್ವಸನ-ಗಾಳಿಯಿಂದ, ಊರ್ಮಿಮಾನ್-ಅಲೆಗಳುಳ್ಳದ್ದಾಗಿಯೂ, ಸರಿದ್ಭಿಃ-ಹೊಳೆಗಳೊಡನೆ, ಸಂಗತಃ-ಸೇರಿದ್ದಾಗಿಯೂಇರುವ, ಸಿಂಧುಃ-ಸಮುದ್ರವು, ಚುಕ್ಷೋಭ-ಕದಡಿತು ॥೧೪॥ ವ್ಯಸನೈಃ-ದುಃಖಗಳಿಂದ, ಅಭಿಭೂಯಮಾನಾಅಪಿ-ತಿರಸ್ಕರಿಸಲ್ಪಡುತಲಿರುವರಾದರೂ, ಅಧೋಕ್ಷಜಚೇತಸಃ-ಅಧೋಕ್ಷಜ-ವಿಷ್ಣುವಿನಲ್ಲಿ, ಚೇತಸಃ-ಮನಸ್ಸುಳ್ಳಪುರುಷರು, ಯಥಾ-ಹೇಗೋ, ತಥಾ-ಹಾಗೆ, ವರ್ಷಧಾರಾಭಿಃ-

---

ಹುಲ್ಲಿನ ಗೊಂಚಲಿಂದ ಕೆಲವರೆನ್ನುವರು ]॥೧೧॥ ಯಾವರೀತಿಯಿಂದ ವಿಚ್ಛೇದವಿಲ್ಲದೆ ವೃಷ್ಟಿಯುಂಟಾದಲ್ಲಿ ಹೊಲಗದ್ದೆಮೊದಲಾದ ಕ್ಷೇತ್ರಗಳೊಳು ಪ್ರಕಾಶಿಸುವ ಪೈರುಗಳು ತಮ್ಮವೃದ್ಧಿಯಿಂದ ಕೃಷಿಜೀವಿಗಳಾದ ಪ್ರಜೆಗಳಿಗೆ ಅತ್ಯಂತ ಸಂತೋಷವನುಂಟುಮಾಡಿದವೋ ಆರೀತಿಯಿಂದ ವೃಷ್ಟಿಗೆವಿಚ್ಛೇದವುಂಟಾದಲ್ಲಿ ಆಪೈರುಗಳು ಒಣಗುತಲಿರುವವಾಗಿ, 'ಸರ್ವವೂದೈವಾಧೀನ' ವೆಂಬರ್ಥವನ್ನು ಅರಿಯದೆಇರುವ ಧನವಂತರಿಗೆ ಪಶ್ಚಾತ್ತಾಪವನುಂಟುಮಾಡಿದವು. [ ಮಳೆಬಂದು ಬೆಳೆಯಾದರೆ ಹಿಗ್ಗುವುದು, ಮಳೆಬಾರದೆ ಬೆಳೆಯೊಣಗಿದರೆ ತಗ್ಗುವುದು, ಸಹ-ಪುರುಷಪ್ರಯತ್ನವೇ ಮುಖ್ಯವೆಂದರಿತಿರುವ ಲೋಕದಸ್ವಭಾವವಾಗಿದೆ. ಸರ್ವವೂದೈವಾಧೀನವೆಂದರಿತವರು ಇಂತಾ ಹರ್ಷವಿಷಾದಂಗಳಿಗೆ ಒಳಗಾಗುವದಿಲ್ಲವೆಂದು ಭಾವವು.]॥೧೨॥ಮತ್ತು ಯಾವರೀತಿಯಿಂದ ಶ್ರೀಹರಿಯ ಪೂಜೆಯಲ್ಲಿ ಪ್ರವರ್ತಿಸಿರುವ ಪುರುಷರೆಲ್ಲರೂ ಹರಿಪೂಜೆಯೇ ಪರಮಾರ್ಥರೂಪವೂ ಪರಮಸುಖರೂಪವೂ ಆದುದರಿಂದ ಅಗಲೆ ಮನೋಹರವಾದ ರೂಪವನ್ನು ಪಡೆಯುವರೋ, ಆರೀತಿಯಿಂದ ನೀರಿನಲ್ಲಿ ಸ್ಥಲದಲ್ಲಿ ವಾಸಂಗೆಯ್ವ ಪ್ರಾಣಿಗಳೆಲ್ಲವೂ ಹೊಸಹೊಸನೀರಂಸೇವಿಸುವುದರಿಂದ ಮನೋಹರವಾದರೂಪವಂ ಧರಿಸಿದವಾದವು. [ ಮಳೆಯಿಂದ ಪ್ರಾಣಿಗಳಿಗೆ ತೃಪ್ತ್ಯುಲ್ಲಾಸಾದಿಗಳುಂಟಾಗುವಂತೆ ಹರಿಸೇವೆಯಿಂದ ಮನುಷ್ಯರಿಗೆ ತೃಪ್ತ್ಯುಲ್ಲಾಸತೇಜಸ್ಸುಗಳುಂಟಾಗುವವೆಂದು ಸೂಚಿಸಲ್ಪಟ್ಟಿದೆ ॥೧೩॥ಮತ್ತು ಯಾವರೀತಿಯಿಂ ಯೋಗಸಿದ್ಧಿಯುಂಪಡೆಯದೆ ಇರುವಪುರುಷನ ಕಾಮವಾಸನಾಯುಕ್ತವಾದಚಿತ್ತವು ಗುಣವಿಕಾರವಿಷಯಂಗಳಿಂ ಕೂಡಿಕ್ಷೋಭಗೊಳ್ಳುವುದೋ ಆರೀತಿಯಿಂದ ನದಿಗಳೊಡಗೂಡಿರುವ ಸಮುದ್ರವು ಗಾಳಿಯಿಂದ ಅಲೆಗಳುಳ್ಳದ್ದಾಗಿ ಕ್ಷೋಭವನೆಯ್ದಿತು. ಮನಸ್ಸು ಸಮುದ್ರದಂತಿರುವುದು. ಗುಣವಿಷಯಗಳು ಹೊಳೆಗಳಂತೆ ಅದರಲ್ಲಿಬಂದುಸೇರುವವು ಕಾಮ ವಾಸನೆಯು ಗಾಳಿಯಂತೆ ಬಂದು ಅಲೆಗಳಂತಿರುವ ಬಯಕೆಗಳನೆಬ್ಬಿಸಿದಾಗಮನಸ್ಸು ಸಮುದ್ರದಂತೆ ಕ್ಷುಬ್ಧವಾಗುವುದೆಂಬರ್ಥವು ಉಪಮಾಲಂಕಾರದಂತೆ ಸೂಚಿಸಲ್ಪಟ್ಟಿದೆ. ಹೊಳೆಗಳು ತುಂಬಿ ಹರಿದು ಗಾಳಿಯಿಂದ ಕಡಲಿನಲ್ಲಿ ಅಲೆಗಳು ಹೆಚ್ಚಿದವೆಂಬುವುದು ವರ್ಷಾಕಾಲದವರ್ಣನವು. ]॥೧೪॥ ಮತ್ತು ಯಾವರೀತಿಯಿಂದ ಶ್ರೀಹರಿಯಲ್ಲಿಯೇ ಆಸಕ್ತವಾದಮನಸ್ಸುಳ್ಳ ಮಹಾತ್ಮರು ವ್ಯಸನಗಳಿಂದ

ಧಾಧೋಕ್ಷಜಚೇತಸಃ ॥೧೫॥ ಮಾರ್ಗಾ ಬಭೂವುಸ್ಸಂದಿಗ್ಧಾಸ್ತೃಣೈಶ್ಛನ್ನಾ ಅಸಂಸ್ಕೃತಾಃ । ನಾಭ್ಯಸ್ಯಮಾನಾಶ್ಶ್ರುತಯೋ ದ್ವಿಜೈಃ ಕಾಲಹತಾ ಇವ ॥೧೬॥ ಲೋಕಬಂಧುಷು ಮೇಘೇಷು ವಿದ್ಯುತಶ್ಚಲಸೌಹೃದಾಃ । ಸ್ಥೈರ್ಯಂ ನಚಕ್ರುಃ ಕಾಮಿನ್ಯಃ ಪುರುಷೇಷು ಗುಣಿಷ್ವಿವ ॥ ಧನುರ್ವಿಯತಿ ಮಾಹೇಂದ್ರಂ ನಿರ್ಗುಣಂ ಚ ಗುಣಿನ್ಯಭಾತ್ । ವ್ಯ

---

ಮಳೆಯ ಪರಂಪರೆಗಳಿಂದ, ಹನ್ಯಮಾನಾ ಅಪಿ-ಹೊಡೆಯಲ್ಪಡುತಲಿರುವುವಾದರೂ, ಗಿರಯಃ-ಬೆಟ್ಟಗಳು, ನವಿವ್ಯಥುಃ-ವ್ಯಥಿಸಲಿಲ್ಲವು ॥೧೫॥ ತೃಣೈಃ-ಹುಲ್ಲುಗಳಿಂದ, ಛನ್ನಾಃ-ಮುಚ್ಚಲ್ಪಟ್ಟವಾಗಿಯೂ, ಅಸಂಸ್ಕೃತಾಃ-ಸರಿಮಾಡಲ್ಪಡದೇ ಇರುವವೂ ಆದ, ಮಾರ್ಗಾಃ-ದಾರಿಗಳು, ದ್ವಿಜೈಃ-ಬ್ರಾಹ್ಮಣರಿಂದ, ನಾಭ್ಯಸ್ಯಮಾನಾಃ-ಚನ್ನಾಗಿ ಕಲಿಯಲ್ಪಡದೇ ಇರುವ, ಕಾಲಹತಾಃ-ಕೆಲವು ಕಾಲ ಕಳೆದದ್ದರಿಂದ ಮರೆತುಕೊಳ್ಳಲ್ಪಟ್ಟವಾದ, ಶ್ರುತಯಃ ಇವ-ವೇದಗಳಂತೆ, ಸಂದಿಗ್ಧಾಃ-ಅದೋ ಇದೋ ಎಂಬ ಸಂಶಯಕ್ಕೆ ವಿಷಯವಾದವುಗಳು, ಬಭೂವುಃ-ಆದವು ॥೧೬॥ ಚಲಸೌಹೃದಾಃ-ಚಂಚಲವಾದ ಸ್ನೇಹವುಳ್ಳ, ಕಾಮಿನ್ಯಃ-ಕಾಮವುಳ್ಳ ಹೆಂಗಸು, ಗುಣಿಷು-ಗುಣವಂತರಾದ, ಪುರುಷೇಷು ಇವ-ಗಂಡಸರಲ್ಲಿ ಹೇಗೋ ಹಾಗೆ, ವಿದ್ಯುತಃ-ಮಿಂಚುಗಳು, ಲೋಕಬಂಧುಷು-ಲೋಕಕ್ಕೆ ನಂಟರಾಗಿರುವ, ಮೇಘೇಷು-ಮೋಡಗಳಲ್ಲಿ, ಸ್ಥೈರ್ಯಂ-ಚಲಿಸದಿರುವಿಕೆಯನ್ನು, ನಚಕ್ರುಃ-ಮಾಡಲಿಲ್ಲವು ॥೧೭॥ ನಿರ್ಗುಣಂ-ಹೆದೆಯಿಲ್ಲದ, ಮಾಹೇಂದ್ರಂ-ಇಂದ್ರಸಂಬಂಧವಾದ, ಧನುಃ-ಬಿಲ್ಲು, ಗುಣಿನಿ-ಶಬ್ದಗುಣವುಳ್ಳ, ವಿಯತಿ-ಆಕಾಶದಲ್ಲಿ, ಅಗುಣವಾನ್-ಗುಣಗಳುಳ್ಳವನಲ್ಲದ, ಪುರುಷಃ-ಆತ್ಮನು, ಗುಣ

---

ಪೀಡಿಸಲ್ಪಟ್ಟವರಾದರೂ ವ್ಯಥೆಪಡುವರಾಗುವುದಿಲ್ಲವೋ ಅದೇ ರೀತಿಯಿಂದ ವರ್ಷಾಕಾಲದಲ್ಲಿ ಬೆಟ್ಟಗಳು ವರ್ಷಧಾರೆಗಳಿಂದ ಬಡಿಯಲ್ಪಟ್ಟವಾಗುತ್ತಿದ್ದರೂ ಚಲಿಸಿದವಾಗಲಿಲ್ಲವು. [ಪರ್ವತವು ಮಳೆಯನ್ನು ಲೆಕ್ಕಿಸದಂತೆ ಭಗವದ್ಭಕ್ತನು ದೈವವನ್ನು ಸ್ತುತಿಸುವನಾದುದರಿಂದ ವ್ಯಸನಘಾತವನ್ನು ಲೆಕ್ಕಿಸದೆ ಇರುವನೆಂಬುದು ಸೂಚಿಸಲ್ಪಟ್ಟಿದೆ.] ॥೧೫॥ ಮತ್ತು ಯಾವ ರೀತಿಯಾಗಿ ಬ್ರಾಹ್ಮಣರಿಂದ ಬಾರಿಬಾರಿಗೂ ಹೇಳಲ್ಪಡದೆಯಿರುವ ವೇದಗಳು ಕಾಲಾಂತರದಲ್ಲಿ ಮರೆಯಲ್ಪಟ್ಟಂತಾವಾಗಿ ಸಂದೇಹಕ್ಕೆ ವಿಷಯಗಳಾಗುವವೋ ಅದೇ ರೀತಿಯಾಗಿ ವರ್ಷಾಕಾಲದೊಳು ವಿಶೇಷವಾಗಿ ಸಂಚರಿಸಲ್ಪಡದೇ ಇರುವ ಮಾರ್ಗಗಳು ತೃಣಗಳಿಂದ ಮುಚ್ಚಲ್ಪಟ್ಟವಾಗಿ 'ಇದು ಮಾರ್ಗವೋ? ಅದು ಮಾರ್ಗವೋ?' ಎಂಬ ಸಂಶಯಕ್ಕೆ ವಿಷಯಗಳಾದವು. [ವೇದಾಭ್ಯಾಸವಂ ಮಾಡಿದ ಬ್ರಾಹ್ಮಣರಿಗೆ ವೈದಿಕ ಶಬ್ದಸರಣಿಯು ಪ್ರಕಾಶವಾಗಿರುತ್ತೆ. ಪ್ರತಿದಿನದಲ್ಲಿಯೂ ಬ್ರಹ್ಮಯಜ್ಞಾದಿಕಾಲಗಳಲ್ಲಿ ಆವೃತ್ತಿ ಮಾಡದೆ ಬಿಟ್ಟರೆ ಕೆಲವು ಕಾಲದ ಮೇಲೆ ಮರವು ತಟ್ಟಿ ಶಬ್ದಸರಣಿಯಲ್ಲಿ ಸಂದೇಹವುಂಟಾಗುತ್ತೆ. ಅಭ್ಯಾಸಲಬ್ಧವೇದವು ದಾರಿಯಂತಿರುವುದು ಅದರಲ್ಲಿ ಅನಭ್ಯಾಸದಶೆಯೆಂಬ ಮಳೆಗಾಲದೊಳು ಹುಲ್ಲು ಬೆಳದಂತೆ ವಿಸ್ಮೃತಿಯುಂಟಾಗಿ ಸಂದೇಹ ಕ್ಕೊಳಪಡಿಸುವುದು. ಆದ್ದರಿಂದ ವೇದವನ್ನು ಸರ್ವದಾ ಪಾರಾಯಣ ಮಾಡುತ್ತಿರಬೇಕೆಂಬರ್ಥವು ಸೂಚಿಸಲ್ಪಟ್ಟಿದೆ.] ॥೧೬॥ ಮತ್ತು ಯಾವ ವ್ಯಭಿಚಾರಿಣಿಯರಾದ ಸ್ತ್ರೀಯರು ಚಂಚಲವಾದ ಸ್ನೇಹವುಳ್ಳವರಾದುದರಿಂದ ಗುಣವಂತರಾದ ಪುರುಷರಲ್ಲಿಯೂ ಕೂಡ ಸ್ಥಿರಭಾವವನೆಯ್ದದೆ ಇರುವಂತೆ ಪ್ರಪಂಚಕ್ಕೆ ನೆಂಟರಾಗಿರುವ ಮೇಘಗಳಲ್ಲಿ ಮಿಂಚುಗಳು ಚಪಲಗಳಾದುದರಿಂದ ಸ್ಥಿರಭಾವವನೆಯ್ದಲಿಲ್ಲವು. [ಪುರುಷರು ಎಷ್ಟು ಬಗೆಯಿಂದ ಪೋಷಕರಾಗಿ ಗುಣವಂತರಾದರೂ ಅವರಲ್ಲಿ ಅತಿಕಾಮವುಳ್ಳ ಹೆಂಗಳು ಚಪಲೆಯರಾದುದರಿಂದ ಸ್ಥಿರಭಾವವನ್ನು ಹೊಂದುವುದಿಲ್ಲ. ಹೀಗೆ ಹೇಳಿದುದರಿಂದ ಪತಿವ್ರತೆಯರಾದವರು ಚಾಪಲ್ಯವಂ ತೊರೆದು ತಮ್ಮ ಪತಿಯಲ್ಲಿ ಸ್ಥಿರಭಾವವನೆಯ್ದುವರೆಂಬರ್ಥವು ಆರ್ಥಿಕವಾಗಿ ಸೂಚಿಸಲ್ಪಟ್ಟಂತಾಗುವುದು. ಮೇಘವು ಪುರುಷನಂತೆಯೂ ಮಿಂಚು ಕಾಮಿನಿಯಂತೆಯೂ ಹೋಲಿಸಲ್ಪಟ್ಟಿವೆ.] ॥೧೭॥ ಮತ್ತು ತ್ರಿಗುಣಾತ್ಮಕವಾದ ಪ್ರಪಂಚದಲ್ಲಿ ನಿರ್ಗುಣನಾದ ಆತ್ಮನು ಹೇಗೆ ಪ್ರಕಾಶಿಸುವನೋ ಹಾಗೆಯೇ ಮೇಘಗರ್ಜನವೆಂಬ ಶಬ್ದಗುಣದೊಡನೆ ಯುಕ್ತವಾದ ಅಂತರಿಕ್ಷದಲ್ಲಿ ಇಂದ್ರಧನುಸ್ಸು ಗುಣಶಬ್ದಾರ್ಥವಾದ ಹೆದೆಯಿಲ್ಲದಿದ್ದರೂ ಪ್ರಕಾಶಿಸಿತು. [ಶಬ್ದಗುಣಕ್ಕೂ, ಇದರ ಅಧಿಷ್ಠಾನವಾದ ಆಕಾಶಕ್ಕೂ, ಎಷ್ಟರ ಸಂಬಂಧವೋ ಮಾಯಾಗುಣಗಳಿಗೂ ಆತ್ಮನಿಗೂ ಅಷ್ಟರ ಸಂಬಂಧವೆಂಬುವುದರಿಂದ ಆಕಾಶವು ನಿರ್ಲಿಪ್ತವಾದಂತ ಆತ್ಮನು ನಿರಂಜನನಾಗಿರು

ಕ್ತೋಗುಣವ್ಯತಿಕರೇಗುಣವಾನ್ ಪುರುಷೋಯಥಾ ||೧೮|| ನರರಾಜೋಡುಪಶ್ಛನ್ನಃಸ್ವಜ್ಯೋತ್ಸ್ನಾರಂಜಿತೈರ್ಘನೈಃ | ಅಹಂಮತ್ಯಾಭಾಸಿತಯಾಸ್ವಭಾಸಾಪುರುಷೋಯಥಾ ||೧೯|| ಮೇಘಾಗಮೋತ್ಸವಾಹೃಷ್ಟಾಃಪ್ರತ್ಯನಂದನ್ ಶಿಖಂಡಿನಃ | ಗೃಹೇಷುತಪ್ತಾನಿರ್ವಿಣ್ಣಾಯಥಾಚ್ಯುತಜನಾಗಮೇ ||೨೦|| ಪೀತ್ವಾಪಃಪಾದಪಾಃಪದ್ಭಿರಾಸನ್ ನಾನಾತ್ಮಮೂರ್ತಯಃ | ಕ್ಷುತ್‌ಕ್ಷಾಮಾಸ್ತಪಸಾಶ್ರಾಂತಾಯಥಾಕಾಮಾನುಸೇವಯಾ ||೨೧|| ಸರಸ್ಸುಶಾಂ

---

ವ್ಯತಿಕರೇ-ಗುಣಸಂಬಂಧವುಳ್ಳ, ವ್ಯಕ್ತೇ ಪ್ರಪಂಚದಲ್ಲಿ, ಯಥಾ-ಹೇಗೋ, ತಥಾ-ಹಾಗೆ, ಅಭಾತ್-ಬೆಳಗಿತು||೧೮||ಸ್ವಜ್ಯೋತ್ಸ್ನಾ ರಂಜಿತೈಃ-ಸ್ವ-ತನ್ನ. ಜ್ಯೋತ್ಸ್ನಾ-ಬೆಳದಿಂಗಳಿನಿಂದ, ರಂಜಿತೈಃ-ಪ್ರಕಾಶಗೊಳಿಸಲ್ಪಟ್ಟ, ಘನೈಃ-ಮೇಘಗಳಿಂದ, ಛನ್ನಃ-ಮುಚ್ಚಲ್ಪಟ್ಟವನಾದ, ಉಡುಪಃ-ನಕ್ಷತ್ರಪತಿಯಾದಚಂದ್ರನು, ಸ್ವಭಾಸಾ-ತನ್ನ ಪ್ರಕಾಶದಿಂದ, ಭಾಸಿತಯಾ-ತೋರುವಂತೆಮಾಡಲ್ಪಟ್ಟ, ಅಹಂಮತ್ಯಾ-ಅಹಂಕಾರದಿಂದ, ಅಥವಾದೇಹವೇನಾನೆಂಬಅಧ್ಯಾಸದಿಂದ, ಛನ್ನಃ-ಮುಚ್ಚಲ್ಪಟ್ಟಸ್ವರೂಪವುಳ್ಳವನಾದ, ಪುರುಷಃ-ಇಂದ್ರಿಯಗಳಿಗೊಡೆಯನಾದಆತ್ಮನು, ಯಥಾ-ಹೇಗೋ, ತಥಾ-ಹಾಗೆ, ನರರಾಜ-ಬೆಳಗಲಿಲ್ಲವು ||೧೯|| ಗೃಹೇಷು-ಮನೆಗಳಲ್ಲಿ, ತಪ್ತಾಃ-ತಾಪತ್ರಯವುಂಟಾಗಿರುವ, ನಿರ್ವಿಣ್ಣಾಃ-ವಿರಕ್ತರಾದಜನಗಳು, ಅಚ್ಯುತಜನಾಗಮೇಸತಿ-ಅಚ್ಯುತಜನ-ವಿಷ್ಣುಭಕ್ತರ, ಆಗಮೇಸತಿ-ಬರುವಿಕೆಯಾಗುತ್ತಿರಲು, ಯಥಾ-ಹೇಗೋ, ತಥಾ-ಹಾಗೆ, ಮೇಘಾಗಮೋತ್ಸವಾಃ-ಮೇಘಾಗಮ-ಮೇಘಗಳುಬರುವುದರಿಂದ, ಉತ್ಸವಾಃ-ಹಬ್ಬವುಳ್ಳವಾದ್ದರಿಂದಲೇ, ಹೃಷ್ಟಾಃ-ಸಂತೋಷವುಳ್ಳವಾದ, ಶಿಖಂಡಿನಃ-ನವಿಲುಗಳು, ಪ್ರತ್ಯನಂದನ್ ಮೇಘಗಳನ್ನುಎದುರಿಗೆಸಂತೋಷಿಸಿದವು ||೨೦|| ಕ್ಷುತ್‌ಕ್ಷಾಮಾಃ-ಕ್ಷುತ್-ಹಸಿವಿನಿಂದ, ಕ್ಷಾಮಾಃ-ಬಡವರಾಗಿಯೂ, ತಪಸಾ-ಆಲೋಚನೆಯಿಂದ, ಶ್ರಾಂತಾಃ-ಬಳಲಿದವರಾಗಿಯೂ ಇರುವಪುರುಷರು, ಕಾಮಾನುಸೇವಯಾ-ಕಾಮ-ಬೇಕಾದಪದಾರ್ಥಗಳ, ಅನುಸೇವಯಾ-ಬಳಕೆಯಿಂದ, ಯಥಾ-ಹೇಗೋ, ತಥಾ-ಹಾಗೆ, ಪಾದಪಾಃ-ಮರಗಿಡಗಳು, ಪದ್ಭಿಃ-ಬೇರುಗಳಿಂದ, ಅಪಃ-ನೀರನ್ನು, ಪೀತ್ವಾ-ಕುಡಿದು, ನಾನಾತ್ಮಮೂರ್ತಯಃ-ನಾನಾತ್ಮ-ಹಲವುಬಗೆಯಾದ, ಮೂರ್ತಯಃ-ರೂಪಗಳುಳ್ಳವು, ಆಸನ್-ಆದವು ||೨೧|| ಅಂಗ-ಅಯ್ಯಾ, ಅಶಾಂತಕೃತ್ಯೇಷು-ಅಶಾಂತ-ಕ್ರೂರಗಳಾದ, ಕೃತ್ಯೇಷು-ಕೆಲಸಗಳುಳ್ಳ, ಗೃಹೇಷ್ವಪಿ-ಮನೆಗಳಲ್ಲಿಯೂ ಕೂಡ, ದುರಾಶಯಾಃ-ದುಷ್ಟವಾದಅಭಿಪ್ರಾಯವುಳ್ಳ, ಗ್ರಾಮ್ಯಾಇವ-ಪಾಮರಜನಗಳಹಾಗೆ, ಅಶಾಂತರೋಧಸ್ಸು-ಅಶಾಂತ-ಕೆಸರೂಮುಳ್ಳು ಅಡಗದೇಇರುವ, ರೋಧಸ್ಸು-ತಡಿಗಳುಳ್ಳ, ಸರಸ್ಸ್ವಪಿ-ಕೊಳಗಳಲ್ಲಿಯೂಕೂಡ, ಸಾರಸಾಃ-ಕೊಳವಕ್ಕಿಗಳಾದ ಚಕ್ರವಾಕಾದಿಗಳು, ನ್ಯೂ

---

ವನೆಂದು ಸೂಚಿಸಲ್ಪಟ್ಟಿವೆ.] ||೧೮|| ಮತ್ತು ಯಾವರೀತಿಯಿಂದ ಆತ್ಮನು ತನ್ನ ಚೈತನ್ಯದಿಂದಲೇ ಪ್ರಕಾಶಿಸಲ್ಪಟ್ಟ ಅಹಂಕಾರದಿಂದ ತಾನುಮರೆಮಾಡಲ್ಪಟ್ಟವನಾಗಿ ಪ್ರಕಾಶಿಸುವುದಿಲ್ಲವೋ ಅದೇರೀತಿಯಿಂದ ವರ್ಷಾಕಾಲದೊಳು ಚಂದ್ರನು ತನ್ನ ಬೆಳಕಿನಿಂದಲೇ ಪ್ರಕಾಶಗೊಳಿಸಲ್ಪಟ್ಟ ಮೋಡಗಳಿಂದ ತಾನೇ ಮರೆಮಾಡಲ್ಪಟ್ಟವನಾಗಿ ಪ್ರಕಾಶಿಸಲಿಲ್ಲವು. ||೧೯|| ಮತ್ತು ಯಾವರೀತಿಯಾಗಿ ಮನೆಗಳಲ್ಲಿ ಸಂಸಾರಿಗಳಾಗಿ ದುಃಖಾದಿಗಳಿಂದ ಸಂತಪ್ತರಾದುದರಿಂದ ಬೇಸರಿಕೆಯುಳ್ಳಪುರುಷರು ತಮ್ಮ ಮನೆಗೆ ಭಗವದ್ಭಕ್ತರು ಬಂದಾಗ ಅವರದರ್ಶನದಿಂದ ಅತ್ಯಂತ ಸಂತೋಷಪಡುವರೋ, ಅದೇರೀತಿಯಾಗಿ ನವಿಲುಗಳು ಮೇಘಗಳು ಬಂದುದರಿಂ ಉತ್ಸವವುಳ್ಳವಾದುದರಿಂದ ಅತ್ಯಂತಸಂತೋಷಪಟ್ಟವು. [ನವಿಲುಗಳು ತಮಗೆ ವಿಶೇಷೋಪಕಾರವಿಲ್ಲವಿದ್ದರೂ ಲೋಕೋಪಕಾರಿಗಳಾದ ಮೇಘಗಳು ಬಂದಾಗ ಸಂತೋಷಿಸುವಂತೆ ಸಂಸಾರದುಃಖಿಗಳಾದ ಗೃಹಸ್ಥರು ತಮ್ಮಗೃಹಕ್ಕೆ ಭಾಗವತರು ದಯಮಾಡಿದರೆ ಸಂತೋಷಿಸುವರೆಂಬುವುದರಿಂದ ಗುಣಗ್ರಹಣವು ಮುಖ್ಯವೇ ಹೊರತು ಸ್ವಾರ್ಥೈಕಪರತೆಯು ಮುಖ್ಯವಲ್ಲವೆಂದು ಸೂಚಿಸಲ್ಪಟ್ಟಂತಾ ಶಯತೋರುವುದು] ||೨೦|| ಮತ್ತು ತಪಸ್ಸಿನಿಂದ ಬಳಲಿರುವ ಪುರುಷರು ಇಷ್ಟಾರ್ಥಗಳಂ ಪಡೆಯುವುದರಿಂದ ವೃದ್ಧಿಯ ನೈಯ್ದುವರಾಗುವಂತೆ ಗ್ರೀಷ್ಮಕಾಲದಿಂದ ಕ್ಷೀಣಗಳಾದ ವೃಕ್ಷಗಳು ವರ್ಷಾಕಾಲದಲ್ಲಿ ಪಾತಿಗಳಿಂದ ನೀರಂಹೀರಿಕೊಂಡು ಅನೇಕಶಾಖಾರೂಪಗಳಾಗಿ ವೃದ್ಧಿಯನೈಯ್ದಿರುವ ದೇಹಗಳುಳ್ಳವಾದವು] [ತಪಮಾಗಯ್ದಷ್ಟೂ ಇಷ್ಟಸಿದ್ಧಿಯಾಗುವುದುದಿಟ. ಬಿಸಿಲಿನಿಂದೊಣಗಿದಷ್ಟೂ ಮಳೆಬರುವುದುದಿಟ.] ||೨೧|| ಮತ್ತು ಯಾವರೀತಿಯಿಂದ ರಾಗಾದಿಯುಕ್ತವಾದ ಅಂತಃಕರಣವುಳ್ಳ ಪ್ರಾಕೃತ ಜನರು ಭಯಂಕರಗಳಾದ ವ್ಯಾಪಾರಂಗ

ತಲ್ಪೋಘಸಸ್ಸನ್ನ್ಯಾಪುರುಗಾಪಿರಸಾಃ | ಗೃಹೇಷ್ವಶಾಂತಕೃತ್ಯೇಷುಗ್ರಾಮ್ಯಾಇವದುರಾಶಯಾಃ |೨೦| ಜಲೌಘೈರ್ನಿರಭಿದ್ಯಂತಸೇತವೋವರ್ಷತೀಶ್ವರೇ| ಪಾಷಂಡಿನಾಮಸದ್ವಾದೈರ್ವೇದಮಾರ್ಗಾಃಕಲೌಯಥಾ|೨೧| ವ್ಯಮುಂಚನ್ವಾಯುಭಿರ್ನುನ್ನಾಭೂತೇಭ್ಯೋಥಾಮೃತಂಘನಾಃ | ಯಥಾಶಿಷೋವಿಶ್ಪತಯಃಕಾಲೇಕಾಲೇದ್ವಿಜೇರಿತಾಃ|೨೨| ಏವಂವನಂತದ್ವರ್ಷಿಷ್ಠಂಪಕ್ವಖರ್ಜೂರಜಂಬುಮತ್ | ಗೋಗೋಪಾಲೈರ್ವೃತೋರಂತುಂಸಬಲಃಪ್ರಾವಿಶದ್ಧರಿಃ |೨೩| ಧೇನವೋಮಂದಗಾಮಿನ್ಯಊಧೋಭಾರೇಣಭೂಯಸಾ ।ಯಯುರ್ಭಗವತಾಹೂ

---

ಷಃ-ಚನ್ನಾಗಿದ್ದವು ||೨೦|| ಕಲೌ-ಕಲಿಕಾಲದಲ್ಲಿ, ಪಾಷಂಡಿನಾಂ-ನಾಸ್ತಿಕರ, ಅಸದ್ವಾದೈಃ-ದುರ್ವಾದಗಳಿಂದ, ವೇದಮಾರ್ಗಾಃ-ವೇದಗಳದಾರಿಗಳು, ಯಥಾ-ಹೇಗೋ, ತಥಾ-ಹಾಗೆ, ಈಶ್ವರೇ-ಪರ್ಜನ್ಯನು, ವರ್ಷತಿಸತಿ-ಮಳೆಯಂನುರಿಸುತಲಿರಲು, ಸೇತವಃ-ಕಟ್ಟೆಗಳು, ಜಲೌಘೈಃ-ನೀರಿನಪ್ರವಾಹಗಳಿಂದ, ನಿರಭಿದ್ಯಂತ-ಭೇದಿಸಲ್ಪಟ್ಟವು ||೨೧||ಕಾಲೇಕಾಲೇ-ಪ್ರತಿಸಮಯದಲ್ಲಿಯೂ, ದ್ವಿಜೇರಿತಾಃ-ದ್ವಿಜ-ಪುರೋಹಿತನುವೊದಲಾದಬ್ರಾಹ್ಮಣರಿಂದ, ಈರಿತಾಃ-ಪ್ರೇರಿಸಲ್ಪಟ್ಟವರಾಗುವ, ವಿಶ್ಪತಯಃ-ವಿಟ್-ಮನುಷ್ಯರಿಗೆ, ಅಥವಾ-ವೈಶ್ಯರಿಗೆ, ಪತಯಃ-ಒಡೆಯರಾದವರಾಯರೂ, ಅಥವಾಒಡೆಯರಾದಧನಿಕರು, ಆಶಿಷಃ-ಯಾಚಕರಿಂದಬಯಸಲ್ಪಟ್ಟವುಗಳನ್ನು, ಯಥಾ-ಹೇಗೋ, ತಥಾ-ಹಾಗೆ, ವಾಯುಭಿಃ-ಗಾಳಿಗಳಿಂದ, ನುನ್ನಾಃ-ಪ್ರೇರಿಸಲ್ಪಟ್ಟ, ಘನಾಃ-ಮೇಘಗಳು, ಭೂತೇಭ್ಯಃ-ಪ್ರಾಣಿಗಳಿಗೆ, ಅಮೃತಂ-ನೀರನ್ನು, ವ್ಯಮುಂಚನ್-ಬಿಟ್ಟುಕೊಟ್ಟವು ||೨೨|| ಗೋಗೋಪಾಲೈಃ-ಪಶುಗಳಿಂದಲೂಪಶುಪಾಲಕರಿಂದಲೂ, ವೃತಃ-ಬಳಸಲ್ಪಟ್ಟವನಾದ, ಸಬಲಃ-ಬಲರಾಮನಿಂಸಹಿತನಾದ, ಹರಿಃ-ಕೃಷ್ಣನು, ಏವಂ-ಹೀಗೆ, ವರ್ಷಿಷ್ಠಂ-ವರ್ಷಸಮೃದ್ಧವಾದ್ದರಿಂದಲೇ, ಪಕ್ವಖರ್ಜೂರಜಂಬುಮತ್-ಪಕ್ವ-ಹಣ್ಣಾಗಿದ್ದ, ಖರ್ಜೂರ-ಉತ್ತುತ್ತೆಯೂ, ಜಂಬುಮತ್-ನೇರಳೆಯೂಉಳ್ಳ, ತದ್ವನಂ-ಆಕಾಡನ್ನು, ರಂತುಂ-ಕ್ರೀಡಿಸಲೋಸುಗ, ಪ್ರಾವಿಶತ್-ಹೊಕ್ಕನು ||೨೩|| ಭೂಯಸಾ-ದೊಡ್ಡದಾದ, ಊಧೋಭಾರೇಣ-ಊಧಸ್-ಕೆಚ್ಚಲಿನ, ಭಾರೇಣ-ಹೊರೆಯಿಂದ, ಮಂದಗಾಮಿನ್ಯಃ-ಮೆಲ್ಲಗೆನಡೆಯುತಲಿರುವ, ಧೇನವಃ-ಆಕಳುಗಳು, ಭಗವತಾ-ಕೃಷ್ಣನಿಂದ, ಆಹೂತಾಃ-ಕರೆಯಲ್ಪಟ್ಟವಾದ್ದರಿಂದಲೇ, ಪ್ರೀತ್ಯಾ-ಸ್ನೇಹದಿಂದ,ಸ್ನುತಸ್ತನಾಃ-ಹಾಲುಜನಿಯುತಲಿರುವಮೊಲೆಗಳುಳ್ಳವಾಗಿ, ದ್ರುತಂ-

---

ಳುಳ್ಳವುಗಳಾದರೂ ಆಗೃಹಗಳಲ್ಲಿ ವಾಸಂಗೆಯ್ವರೋ ಅದೇರೀತಿಯಿಂದ ಚಕ್ರವಾಕಪಕ್ಷಿಗಳು ಕೆಸರು ಮುಳ್ಳುವೊದಲಾದುದರಿಂದ ಪ್ರವೇಶಿಸಲಶಕ್ಯವಾದ ದಡಿಗಳುಳ್ಳವುಗಳಾದರೂ ಆಸರಸ್ಸುಗಳಲ್ಲಿ ವಾಸಂಗೆಯ್ದವು [ಮಳೆಗಾಲದಲ್ಲಿ ಕೊಳದತಡಿಗಳಲ್ಲಿ ಮುಳ್ಳುಕಸರುಗಳು ಕಷ್ಟವಾಗಿದ್ದರೂ ಚಕ್ರವಾಕಪಕ್ಷಿಗಳು ಬಿಡದೇಅಲ್ಲಿಯೇಇರುವವು. ಹಾಗೆಯೇ ಪಾಮರರಾದವರು ಸಂಸಾರದ ಕಷ್ಟಂಗಳಂ ಸೈರಿಸಿಕೊಂಡು ಮನೆಯಲ್ಲಿ ಬಿದ್ದಿರುವರಲ್ಲದೆ ವಿರಕ್ತರಾಗಿ ಹೋಗಲಾರರು.]||೨೦||ಮತ್ತು, ಕಲಿಯುಗವುಹೆಚ್ಚುತ್ತಿರಲು ಪಾಷಂಡಗಳದುರ್ವಾದಗಳಿಂದ ವೇದೋಕ್ತಗಳಾದ ಕರ್ಮಮಾರ್ಗಗಳು ಶಿಥಿಲಗಳಾಗಿ ಮಾಡಲ್ಪಡುವಹಾಗೆ, ಪರ್ಜನ್ಯನು ವರ್ಷಿಸುತ್ತಿರಲು ಜಲಪ್ರವಾಹದಿಂದ ಕೆರೆಕಟ್ಟೆಮುಂತಾದವುಗಳು ಶಿಥಿಲಗಳಾಗಿಮಾಡಲ್ಪಟ್ಟವು [ಕಲಿದಿನಗಳುಹೆಚ್ಚಿದಹಾಗೆಲ್ಲ ಪಾಷಂಡಿಗಳ ನಾಸ್ತಿಕ್ಯವಾದಗಳಿಂದ ವೈದಿಕಕರ್ಮಮಾರ್ಗದ ಧರ್ಮಸೇತುಗಳು ಕ್ಷೀಣಿಸಿಮುರಿದು ಹೋಗುತ್ತಿರುವವು.]|| ಮತ್ತು ಯಾವರೀತಿಯಾಗಿ ಅರಸುಗಳುಉಚಿತವಾದ ಆಯಾಕಾಲಗಳಲ್ಲಿ ಪುರೋಹಿತಬ್ರಾಹ್ಮಣರಿಂದ ಪ್ರೇರಿಸಲ್ಪಟ್ಟವರಾಗಿ ಪ್ರಾಣಿಗಳಿಗೆ ಇಷ್ಟಾರ್ಥಗಳಂಕೊಡುತ್ತಿರುವರೋ' ಅದೇರೀತಿಯಾಗಿ ಮೇಘಗಳು ಮಳೆಗಾಲದಲ್ಲಿ ವಾಯುಗಳಿಂದ ಪ್ರೇರಿಸಲ್ಪಟ್ಟವಾಗಿ ಪ್ರಾಣಿಗಳಿಗೆ ಜೀವನವಂಕೊಟ್ಟವು. ||೨೨|| (ಆರಾಮಕೃಷ್ಣರಿಂದ ವರ್ಷಾಕಾಲದಲ್ಲಿ ಮಾಡಲ್ಪಟ್ಟ ಕ್ರೀಡೆಗಳಂ ಬಣ್ಣಿಸುವನವೆಂತೆನೆ-) ಎಲೈ, ಅರಸೇ! ಹೀಗಿರಲು ಬಲರಾಮನಿಂಕೂಡಿದ ಕೃಷ್ಣನು ಗೋವುಗಳಿಂದಲೂ ಗೋಪಾಲಕರಿಂದಲೂ ಬಳಸಲ್ಪಟ್ಟವನಾಗಿ ಕ್ರೀಡಿಸಲೋಸುಗ ಹೀಗೆ ಬಹಳಮಳೆಯುಳ್ಳ, ಮತ್ತು ಹಣ್ಣುಗಳಿಂಕೂಡಿದ ಖರ್ಜೂರ ನೇರಳೆ ಮರಗಳುಳ್ಳ, ಬೃಂದಾವನವಂ ಪ್ರವೇಶಿಸಿದನು. ||೨೩|| ಆಗ ಕೆಚ್ಚಲ್‌ಗಳ ಹೆಚ್ಚುಭಾರದಿಂದ ಮೆಲ್ಲಮೆಲ್ಲನೆ ನಡೆಯುತ್ತಿರುವ ಗೋವುಗಳು ಶ್ರೀಕೃಷ್ಣನಿಂದ ತಮ್ಮಹೆಸರುಹೇಳಿ ಕರೆಯಲ್ಪಟ್ಟವಾಗಿ ಪ್ರೀತಿಯಿಂದ ಮೊಲೆವಾಲಂ ಸೋರಿಸುತ ಬೇಗ

ತಾದ್ರುತಂಪ್ರೀತ್ಯಾಸ್ನುತಸ್ತನಾಃ ॥೨೬॥ ವನೌಕಸಃಪ್ರಮುದಿತಾವನರಾಜೀರ್ಮಧುಚ್ಯುತಃ । ಜಲಧಾರಾಗಿರೇರ್ನಾದಾನಾಸನ್ನಾದದೃಶೆಗುಹಾಃ ॥೨೭॥ ಕ್ವಚಿದ್ವನಸ್ಪತಿಕ್ರೋಡೆಗುಹಾಯಾಂಚಾಭಿವರ್ಷತಿ । ನಿರ್ವಿಶ್ಯಭಗವಾನ್ರೇಮೆಕನ್ದಮೂಲಫಲಾಶನಃ ॥೨೮॥ ದಧ್ಯೋದನಮುಪಾನೀತಂಶಿಲಾಯಾಂಸಲಿಲಾನ್ತಿಕೆ । ಸಂಭೋಜನೀಯೈರ್ಬುಭುಜೆಗೋಪೈಸ್ಸಂಕರ್ಷಣಾನ್ವಿತಃ ॥೨೯॥ ಶಾದ್ವಲೋಪರಿಸಂವಿಶ್ಯಚರ್ವತೋಮೀಲಿತೇಕ್ಷಣಾನ್ । ತೃಪ್ತಾನ್ವೃಷಾನ್ವತ್ಸತರಾನ್ಗಾಶ್ಚಸ್ವೋಧೋಭರಶ್ರಮಾಃ ॥೩೦॥ ಪ್ರಾವೃಟ್ಶ್ರಿಯಂಚತಾಂವೀಕ್ಷ್ಯಸರ್ವಭೂತಸುಖಾವಹಾಮ್ । ಭಗವಾನ್ಪೂಜಯಾಂಚಕ್ರೆಹ್ಯಾತ್ಮಶಕ್ತ್ಯುಪಬೃಂಹಿತಾಮ್ ॥೩೧॥ ಏ

---

ಜೇಗನೆ, ಯಯುಃ-ಹೋದವು ॥೨೬॥ ವನೌಕಸಃ-ವನದಲ್ಲಿರುವಬೇಡತಿಯರನ್ನು, ಪ್ರಮುದಿತಾಃ-ಸಂತೋಷವುಂಟಾದವರನ್ನಾಗಿಯೂ ವನರಾಜೀಃ-ವನಪಂತಿಗಳನ್ನು, ಮಧುಚ್ಯುತಃ-ಮಕರಂದವಂಸೋರಿಸುತಲಿರುವನ್ನಾಗಿಯೂ, ಗಿರೇಃ-ಬೆಟ್ಟದಪದೆಸೆಯಿಂದ, ಜಲಧಾರಾಃ-ನೀರಿನಪ್ರವಾಹಗಳನ್ನೂ, ನಾದಾನ್-ಅವುಗಳಸೆಲೆಗಳನ್ನೂ, ಆಸನ್ನಾಃ-ಹತ್ತಿರಲೇಇರುವ, ಗುಹಾಃ-ಗವಿಗಳನ್ನೂ, ದದೃಶೇ-ನೋಡಿದನು ॥೨೭॥ ಅಭಿವರ್ಷತಿಸತಿ-ಎಲ್ಲಕಡೆಗಳಲ್ಲಿಯೂಮಳೆಸುರಿಯುತ್ತಿರಲು, ಭಗವಾನ್-ಕೃಷ್ಣನು, ಕ್ವಚಿತ್-ಒಂದುಕಡೆಯೊಳು, ವನಸ್ಪತಿಕ್ರೋಡೇ-ವನಸ್ಪತಿ-ಹೆಮ್ಮರದ, ಕ್ರೋಡೇ-ಪೊಟರೆಯಲ್ಲಿಯೂ, ಗುಹಾಯಾಂಚ-ಗವಿಯಲ್ಲಿಯೂ, ನಿರ್ವಿಶ್ಯ-ಹೊಕ್ಕಿದ್ದು, ಕಂದಮೂಲಫಲಾಶನಸ್ಸನ್-ಕಂದ-ಗಡ್ಡೆಗಳು, ಮೂಲ-ಬೇರುಗಳು, ಫಲ-ಹಣ್ಣುಗಳು, ಅಶನಃ-ಆಹಾರವಾದವನಾಗಿ, ರೇಮೇ-ಕ್ರೀಡಿಸಿದನು ॥೨೮॥ ಸಂಕರ್ಷಣಾನ್ವಿತಃ-ಸಂಕರ್ಷಣ-ಬಲರಾಮನೊಡನೆ, ಅನ್ವಿತಃ-ಸೇರಿದವನಾದಕೃಷ್ಣನು, ಸಲಿಲಾಂತಿಕೇ-ನೀರಿನಬಳಿಯಲ್ಲಿ, ಶಿಲಾಯಾಂ-ಬಂಡೆಯಮೇಲೆ, ಉಪಾನೀತಂ-ಹತ್ತಿರತಂದಿರಿಸಲ್ಪಟ್ಟ, ದಧ್ಯೋದನಂ-ಮೊಸರನ್ನವನ್ನು, ಸಂಭೋಜನೀಯೈಃ-ಉಣತಕ್ಕವರಾದ, ಗೋಪೈಸ್ಸಹ-ಗೊಲ್ಲರೊಂದಿಗೆ, ಬುಭುಜೇ-ಉಂಡನು ॥೨೯॥ ಶಾದ್ವಲೋಪರಿ-ಹಸುರುಹುಲ್ಲುಳ್ಳನೆಲದಮೇಲೆ, ಸಂವಿಶ್ಯ-ಮಲಗಿಕೊಂಡು, ಚರ್ವತಃ-ಮೆಲುಕುಮಾಡುತ್ತಿರುವ, ಮೀಲಿತೇಕ್ಷಣಾನ್-ಮುಚ್ಚಿದಕಂಗಳುಳ್ಳ, ತೃಪ್ತಾನ್-ಗರ್ವಿತಗಳಾದ, ವೃಷಾನ್-ಎತ್ತುಗಳನ್ನೂ, ವತ್ಸತರಾನ್-ಸಣ್ಣಕರುಗಳನ್ನೂ, ಸ್ವೋಧೋಭರಶ್ರಮಾಃ-ಸ್ವ-ತಮ್ಮ, ಊಧಸ್-ಕೆಚ್ಚಲುಗಳ, ಭರ-ಅತಿಶಯದಿಂದ, ಶ್ರಮಾಃ-ಆಯಾಸವುಳ್ಳ, ಗಾಶ್ಚ-ಆಕಳುಗಳನ್ನೂ ॥೩೦॥ ಆತ್ಮಶಕ್ತ್ಯುಪಬೃಂಹಿತಾಂ-ಆತ್ಮ-ತನ್ನ, ಶಕ್ತಿ-ಸಾಮರ್ಥ್ಯದಿಂದ, ಉಪಬೃಂಹಿತಾಂ- ಬಲೀಕರಿಸಲ್ಪಟ್ಟದ್ದು ಆದ, ಸರ್ವಭೂತಸುಖಾವಹಾಂ-ಸಕಲಪ್ರಾಣಿಗಳಿಗೂಸೌಖ್ಯವನ್ನುಮಾಡುತಲಿರುವ, ತಾಂ-ಅಂತಾ, ಪ್ರಾವೃಟ್ಶ್ರಿಯಂಚ ಪ್ರಾವೃಟ್-ವರ್ಷಾಕಾಲದ, ಶ್ರಿಯಂಚ-ಸಂಪದವನ್ನೂ, ವೀಕ್ಷ್ಯ-ನೋಡಿ, ಭಗವಾನ್-ಕೃಷ್ಣನು, ಪೂಜಯಾಂಚಕ್ರೇ-ಪೂಜಿಸಿದನು ॥೩೧॥ ತಸ್ಮಿನ್ವ್ರಜೇ-ಆಗೋಕುಲದಲ್ಲಿ, ರಾಮಕೇಶವಯೋಃ-ಬಲಭದ್ರ ಕೃಷ್ಣರು, ಏವಂ-

---

ದು ಆಕೃಷ್ಣನ ಹಿಂದುಗಡೆಯಲ್ಲಿ ನಡೆದವು. ॥೨೬॥ ಆಗ ಕೃಷ್ಣನು ಆವನದಲ್ಲಿ ಕಿರಾತಸ್ತ್ರೀಯರಂ ಅತಿಸಂತೋಷದಿಂ ಕೂಡಿದವರನ್ನಾಗಿಯೂ, ವನಪಂತಿಗಳನ್ನು ಮಕರಂದವಂ ಸ್ರವಿಸುವನ್ನಾಗಿಯೂ, ನೋಡಿದನು. ಮತ್ತು ಪರ್ವತದಪಸೆಯಿಂದ ಇಳಿಯುತಲಿರುವ ಜಲಪ್ರವಾಹಗಳನ್ನೂ ಸಮೀಪದಲ್ಲಿರುವ ಗುಹೆಗಳನ್ನೂ ನೋಡಿ ಅವುಗಳ ಶಬ್ದಗಳಂ ಕೇಳಿದನು ॥೨೭॥ ಭಗವಂತನಾದ ಕೃಷ್ಣನು ಆಮಹಾವನದಲ್ಲಿ ಮೇಘವು ವರ್ಷಿಸುತ್ತಿರಲು ಒಂದು ದೊಡ್ಡಮರದಪೊಟರೆಯಲ್ಲಿಯೂ ಗವಿಯಲ್ಲಿಯೂ ಪ್ರವೇಶಂಗೆಯ್ದು ಕಂದಮೂಲ ಫಲಾದಿಗಳಂಭಕ್ಷಿಸಿಯೂ ಕ್ರೀಡಿಸಿದನು. ॥೨೮॥ ಕೃಷ್ಣನು ಒಂದುವೇಳೆಯಲ್ಲಿ ರಾಮನೊಡನೆಯೂ ಸಹ ಭೋಜನಕ್ಕೆಯೋಗ್ಯರಾದ ಗೋಪಾಲಕರೊಡನೆಯೂ ಕೂಡಿ ನೀರಿನಬಳಿಯಲ್ಲಿಯಿರುವ ಬಂಡೆಯಮೇಲೆ ತಮ್ಮಿಂದತರಲ್ಪಟ್ಟ ಮಸರನ್ನವಂ ಆರೋಗಣೆಗೆಯ್ದನು. ॥೨೯॥ ಆಗ ಕೃಷ್ಣನು- ಹುಲ್ಲುತುಂಬಿರುವ ನೆಲದಲ್ಲಿ ಕುಳಿತು ಕಣ್ಣುಗಳಂ ಮುಚ್ಚಿಕೊಂಡು ಮೆಲಕು ಮಾಡುತಲಿರುವ, ತೃಪ್ತಗಳಾದ, ಎತ್ತುಗಳನ್ನು ಕರುಗಳನ್ನು ತಮ್ಮಕೆಚ್ಚಲುಗಳಭಾರದಿಂದ ಶ್ರಮಯುಕ್ತಗಳಾದ ಗೋವುಗಳನ್ನೂ ॥೩೦॥ ಸರ್ವಭೂತಗಳಿಗೂ ಸಂತೋಷವನ್ನುಂಟುಮಾಡುತಲಿರುವ ಮತ್ತು ತನ್ನಶಕ್ತಿಯಿಂ ವೃದ್ಧಿಯನೆಯ್ದಿಸಲ್ಪಟ್ಟ ಆವರ್ಷರ್ತುವಿನ ಸಂಪದವನ್ನೂ ನೋಡಿ ಶ್ಲಾಘಿಸಿದನು. ॥೩೧॥ (ಶರತ್ಕಾಲವಂ ಬಣ್ಣಿಸುವನವೆಂತೆನೆ-) ಎಲೈ, ಅರಸೇ! ಕೇಳು- ರಾಮಕೃಷ್ಣರೀರ್ವರೂ ಗೋಕುಲದಲ್ಲಿ ಹೀಗೆಕ್ರೀಡಾಸಕ್ತರಾಗಿ ವಾಸಂಗೆ

ಏವಂನಿವಸತೋಸ್ತಸ್ಮಿನ್ರಾಮಕೇಶವಯೋರ್ವ್ರಜೆ । ಶರತ್ಸಮಭವದ್ವ್ಯಭ್ರಾಸ್ವಚ್ಛಾಂಬ್ವಪರುಷಾನಿಲಾ ॥

-*ಶರದೃತುವರ್ಣನಘಟ್ಟಃ*-

ಶರದಾನೀರಜೋತ್ಪತ್ತ್ಯಾನೀರಾಣಿಪ್ರಕೃತಿಂಯಯುಃ । ಭ್ರಷ್ಟಾನಾಮಿವಚೇತಾಂಸಿಪುನರ್ಯೋಗನಿಷೇವಯಾ ॥೩೩॥ ವ್ಯೋಮ್ನೋಬ್ದಂಭೂತಶಾಬಲ್ಯಂಭುವಃಪಂಕಮಪಾಂಮಲಂ । ಶರಜ್ಜಹಾರಾಶ್ರಮಿಣಾಂಕೃ

---

ಹೀಗೆ, ನಿವಸತೋಃ-ತಸ್ಮಿನ್-ವಾಸಂಗೆಯ್ಯುತ್ತಿರಲು, ವ್ಯಭ್ರ-ವಿಗತವಾದಮೇಘಗಳುಳ್ಳಂತಾ, ಸ್ವಚ್ಛಾಂಬ್ವಪರುಷಾನಿಲಾ-ಸ್ವಚ್ಛಾಂಬು-ತಿಳಿನೀರೂ, ಅಪರುಷ-ಶಾಂತವಾದ, ಅನಿಲಾ-ಗಾಳಿಯೂಉಂಟಾದಂತಾ, ಶರತ್-ಸಮಕಾಲವು, ಅಭವತ್-ಉಂಟಾಯಿತು ॥೩೨॥ ಭ್ರಷ್ಟಾನಾಂ-ಯೋಗಸಾಧನೆಯಿಂದಜಾರಿದವರಿಗೆ, ಪುನಃ-ಮರಳಿಯೂ, ಯೋಗನಿಷೇವಯಾ-ಯೋಗಾಭ್ಯಾಸದಿಂದ. ಚೇತಾಂಸೀವ-ಮನಸ್ಸುಗಳಂತೆ, ನೀರಜೋತ್ಪತ್ತ್ಯಾ-ತಾವರೆಗಳಹುಟ್ಟುವಿಕೆಯುಳ್ಳ, ಶರದಾ-ಶರತ್ಕಾಲದಿಂದ, ನೀರಾಣಿ-ನೀರು, ಪ್ರಕೃತಿಂ-ಸ್ವಭಾವಸ್ಥಿತಿಯನ್ನು, ಯಯುಃ-ಹೊಂದಿದವು॥೩೩॥ಆಶ್ರಮಿಣಾಂ-ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ-ಯತಿಗಳಿಗೆ, ಕೃಷ್ಣೇ-ಕೃಷ್ಣನಲ್ಲಿ, ಭಕ್ತಿಃ-ಪ್ರೀತಿಯು, ಅಶುಭಂ-ಅಮಂಗಳವನ್ನು, ಯಥಾ-ಹೇಗೆಹೋಗಲಾಡಿಸುವುದೋ, ತಥಾ-ಹಾಗೆ, ಶರತ್-ಶರದೃತುವು, ವ್ಯೋಮ್ನಃ-ಆಕಾಶದ, ಅಬ್ದಂ-ಮೇಘವನ್ನೂ, ಭೂತಶಾಬಲ್ಯಂ-ಜಂತುಗಳಿಗೆಸಂಘರೂಪವಾದಸಾಂಕರ್ಯವನ್ನೂ, ಭುವಃ-

---

ಯ್ಯುತ್ತಿರಲು ನಷ್ಟಗಳಾದ ಮೇಘಗಳುಳ್ಳ, ನಿರ್ಮಲಗಳಾದ ಉದಕಗಳುಳ್ಳ, ಸೌಮ್ಯವಾದವಾಯುಗಳುಳ್ಳ, ಶರತ್ಕಾಲವು ಆವಿರ್ಭವಿಸಿತು. ॥೩೨॥ಈರೀತಿಯಾಗಿ ಯೋಗಭ್ರಷ್ಟರಾದ ಪುರುಷರ ಮನಸ್ಸುಗಳು ಪುನಶ್ಚ ಯೋಗಾಭ್ಯಾಸಂಗೆಯ್ಯುವದರಿಂ ನಿರ್ಮಲಗಳಾಗುವುವೋ; ಆರೀತಿಯಿಂದ ವರ್ಷಾಕಾಲದಲ್ಲಿ ಕಲ್ಮಷಯುಕ್ತಗಳಾದ ನೀರುಗಳು ಕಮಲಂಗಳ ಉತ್ಪತ್ತಿಗೆ ಸಾಧಕವಾದ ಶರತ್ಕಾಲದಿಂದ ಪುನಶ್ಚ ನಿರ್ಮಲ ಭಾವವನೆಯ್ದುವವು॥೩೩॥ಬ್ರಹ್ಮಚರ್ಯಾದಿ ಆಶ್ರಮಗಳು ನಾಲ್ಕರಲ್ಲಿ ಆಸಕ್ತರಾದ ಆಯಾಜನರಿಗೆ ಶ್ರೀ ಕೃಷ್ಣನಲ್ಲಿ ಉಂಟಾದಭಕ್ತಿಯು ಅವರವರ ಕ್ಲೇಶವಂಪರಿಹರಿಸುವ ಹಾಗೆ- ಶರತ್ಕಾಲವು ಅಂತರಿಕ್ಷದಲ್ಲಿ ಮೇಘರೂಪವಾದ ಕಲ್ಮಷವನ್ನೂ, ಪ್ರಾಣಿಗಳಲ್ಲಿ ಪರಸ್ಪರಸಂಗರೂಪವಾದ ಕಲ್ಮಷವನ್ನೂ, ಭೂಮಿಯಲ್ಲಿ ಕೆಸರೆಂಬ ಕಲ್ಮಷವನ್ನೂ, ಜಲದಲ್ಲಿ ಕದಡೆಂಬ ದೋಷವನ್ನೂ, ಅಪಹರಿಸಿತು. [ ಅದರವಿವರಣವೆಂತೆನೆ,- ಭಗವದ್ಭಕ್ತಿಯಿಂದ ಪೂರ್ಣನಾದ ಶಿಷ್ಯನಿಗೆ ಗುರುವಿನಿಂದಾಗಬೇಕಾದ ಕಾರ್ಯವಿಲ್ಲದುದರಿಂದಲೂ ಕೃತಾರ್ಥನಾದ ಶಿಷ್ಯನಿಗೆ ಗುರುವಿನಿಂದ ಆಜ್ಞಾಪಿಸಲ್ಪಡತಕ್ಕದ್ದಿಲ್ಲವಾದುದರಿಂದಲೂ ಕೃಷ್ಣನಲ್ಲಿ ಉಂಟಾದಭಕ್ತಿಯೂ ಎಂತು ಬ್ರಹ್ಮಚಾರಿಗೆ ಗುರುವಿಗೋಸುಗ ಜಲಾಹರಣಾದಿ ವ್ಯಾಪಾರಗಳಿಂದುಂಟಾದ ಶ್ರಮವಂಪರಿಹರಿಸುವುದೋ' ಅಂತು ಶರತ್ಕಾಲವು ಅಂತರಿಕ್ಷದಲ್ಲಿ ಮೇಘವೆಂಬಕಲ್ಮಷವಂ ಪರಿಹರಿಸಿತು, ಎಂದರೆ, ಮೇಘದಿಂದ ತಾನುಕಪ್ಪಾಗಿತೋರಿದರೂ ಲೋಕಕ್ಕೆಜೀವನವು ಕೊಡುತಿರ್ದ ಗಗನವನ್ನು ಶರತ್ಕಾಲವು ಮೇಘಗಳಿಲ್ಲದುದರಿಂದ ನಿರ್ಮಲವನ್ನಾಗಿ ಮಾಡಿತು. ತಾನು ಶ್ರಮವನ್ನು ಸ್ವೀಕರಿಸಿಗುರುಸೇವೆಯಂಮಾಡುತ ಧರ್ಮಾಚರಣ ಸಂಕಲ್ಪ ಬದ್ಧನಾಗಿದ್ದ ಬ್ರಹ್ಮಚಾರಿಯನ್ನು ಕೃಷ್ಣಭಕ್ತಿಯು ಕೃತಕೃತ್ಯನಾದುದರಿಂದ ಸಂಕಲ್ಪವಿಲ್ಲದವನನ್ನಾಗಿಮಾಡಿತು. ಎಂದುಭಾವವು। ಗೃಹಸ್ಥನಿಗುಂಟಾದ ಕೃಷ್ಣಭಕ್ತಿಯು ಏಕಾಂತಸ್ಥಲವಾಸಾಭಿರುಚಿಯಂ ಪುಟ್ಟಿಸುವುದರಿಂದ ಅವನಿಗಿರುವ ಪಿತ್ರಾದಿಸಂಗವಂಪರಿಹರಿಸುವಹಾಗೆ- ಶರತ್ಕಾಲವು ಮಳೆಗಾಲದಲ್ಲಿ ಮಳೆಯಭಯದಿಂದ ಅಲ್ಲಲ್ಲಿ ಗುಂಪುಕೂಡಿರುವ ಪ್ರಾಣಿಗಳ ಪರಸ್ಪರಸಂಗವಂಪರಿಹರಿಸಿತು; ಎಂದರೆ ಮಳೆಯಭಯದಿಂದೊಂದು ಕಡೆಸೇರಿರುವ ಪ್ರಾಣಿಗಳು ಮಳೆಗಾಲಕಳೆದಮೇಲೆ ಚದರಿಸ್ವೇಚ್ಛೆಯಾಗಿ ಹೋಗುವವು. ದೇಹಶ್ರಮಕ್ಕೆಹೆದರಿ ಸುಖಾರ್ಥಿಯಾಗಿ ದಾರಪುತ್ರಾದಿಗಳಂಕೂಡಿರುವ ಗೃಹಸ್ಥನು ಕೃಷ್ಣಭಕ್ತಿಯುಂಟಾದಮೇಲೆ ಜನಸಂಗವಂಬಿಟ್ಟು ಏಕಾಂತಸ್ಥಲವಾಸವ ಬಯಸುವನೆಂದುಭಾವವು। ಮತ್ತು, ವಾನಪ್ರಸ್ಥನಿಗುಂಟಾದಕೃಷ್ಣಭಕ್ತಿಯು ಶರೀರದಲ್ಲಿ ಕಲ್ಮಷವಂಧರಿಸುವುದರಿಂದುಂಟಾದ ಕ್ಲೇಶವನ್ನುಹೇಗೆಪರಿಹರಿಸುವುದೋ ಹಾಗೆ- ಶರತ್ಕಾಲವು ಭೂ

ಷ್ಣಭಕ್ತಿರ್ಯಥಾಶುಭಮ್ ॥೩೪॥ ಸರ್ವಸ್ವಂ ಜಲದಾಹಿತ್ವಾ ವಿರೇಜುಶ್ಶುಭ್ರವರ್ಚಸಃ । ಯಥಾತ್ಯಕ್ತೈಷಣಾಶ್ಶಾ
ನ್ತಾಮುನಯೋಮುಕ್ತಕಿಲ್ಬಿಷಾಃ ॥೩೫॥ ಗಿರಯೋಮುಮುಚುಸ್ತೋಯಂಕ್ವಚಿನ್ನಮುಮುಚುಶ್ಶಿವಮ್ । ಯ
ಥಾಜ್ಞಾನಾಮೃತಂಕಾಲೇಜ್ಞಾನಿನೋದದತೇನವಾ ॥೩೬॥ ನೈವಾವಿದನ್ ಕ್ಷೀಯಮಾಣಂಜಲಂಗಾಧಜಲೇಚರಾಃ । ಯ

---

ಭೂಮಿಯ, ಪಂಕಂ-ಕೆಸರನ್ನೂ, ಅಪಾಂ-ನೀರಿನ, ಮಲಂ-ಕಲ್ಮಲವನ್ನು, ಜಹಾರ-ಅಪಹರಿಸಿತು ॥೩೪॥ ತ್ಯಕ್ತೈಷಣಾಃ-ತ್ಯಕ್ತ-ಬಿಡಲ್ಪಟ್ಟ, ಈಷಣಾಃ-ಹೊನ್ನು, ಹೆಣ್ಣು. ಮಕ್ಕಳಮೇಲಣಆಶೆಗಳುಳ್ಳವರಾದ, ಶಾಂತಾಃ-ಕಾಮಕ್ರೋಧಾದಿಗಳಿಲ್ಲದವರಾದ, ಮುಕ್ತಕಿಲ್ಬಿಷಾಃ-ಬಿಡಲ್ಪಟ್ಟಪಾಪಗಳವರಾದ, ಮುನಯಃ-ಜ್ಞಾನಿಗಳು; ಯಥಾ-ಹೇಗೋ, ತಥಾ-ಹಾಗೆ, ಸರ್ವಸ್ವಂ-ಎಲ್ಲವನ್ನೂ, ಹಿತ್ವಾ-ಬಿಟ್ಟು, ಶುಭ್ರವರ್ಚಸಃ-ಬಿಳುಪಾದಬಣ್ಣವುಳ್ಳ, ಜಲದಾಃ-ಮೇಘಗಳು, ವಿರೇಜುಃ-ಬೆಳಗಿದವು ॥೩೫॥ ಜ್ಞಾನಿನಃ-ಜ್ಞಾನವುಳ್ಳವರು, ಕಾಲೇ-ತಕ್ಕಹೊತ್ತಿನಲ್ಲಿ, ಜ್ಞಾನಾಮೃತಂ-ಜ್ಞಾನವೆಂಬಅಮೃತವನ್ನು, ಯಥಾ-ಹೇಗೆ, ದದತೇ-ಕೊಡುವರೋ, ಕಾಲೇ-ಮತ್ತೊಂದುಸಮಯದಲ್ಲಿ, ನದದತೇವಾ-ಕೊಡರೋ, ತಥಾ-ಹಾಗೆ, ಗಿರಯಃ-ಬೆಟ್ಟಗಳು, ಶಿವಂ-ನಿರ್ಮಲವಾದ, ತೋಯಂ-ನೀರನ್ನು, ಮುಮುಚುಃ-ಬಿಟ್ಟವು ಕ್ವಚಿತ್-ಮತ್ತೊಂದೆಡೆಯೊಳು, ನಮುಮುಚುಃ-ಬಿಡಲಿಲ್ಲವು ॥೩೬॥ ಕುಟುಂಬಿನಃ-ಪೋಷ್ಯವರ್ಗವುಳ್ಳಸಂಸಾರಿಗಳಾದ, ಮೂಢಾನರಾಃ-ಪಾಮರಜನರು, ಅನ್ವಹಂ-ಪ್ರತಿದಿನವಲ್ಲಿಯೂ, ಕ್ಷೀಣಂ-ಕೊರತೆಗೊಳ್ಳುವ,ಆಯುಃ-ಜೀವಿತಕಾಲಪರಿಮಿತಿಯನ್ನು, ಯಥಾ-ಹೇಗೋ, ತಥಾ-ಹಾಗೆ, ಗಾಧಜಲೇಚರಾಃ-ಅಡಿಯಮುಟ್ಟಲುಳ್ಳ ನೀರಿನಲ್ಲಿತಿರುಗುವ ಮೀನುಮೊದಲಾದವುಗಳು, ಕ್ಷೀಯಮಾಣಂ-

---

ಮಿಯಲ್ಲಿರುವಕೆಸರಂಪರಿ ಹರಿಸಿತು,ಎಂದರೆ, ವಾನಪ್ರಸ್ಥನು. ಆಶ್ರಮಧರ್ಮಕ್ಕಾಗಿ ಕೇಶಶ್ಮಶ್ರುನಖಾದಿಧಾರಣ ಮೊದಲಾದಕಲ್ಮಷವಮವಹಿಸಿರುವನು ಅವನೇಕೃಷ್ಣಭಕ್ತಿಯುಂಟಾದಮೇಲೆ ಆಶ್ರಮಧರ್ಮಶ್ರಮದ ನಿರ್ಬಂಧವಿಲ್ಲದೆ ಸ್ವತಂತ್ರನಾಗಿವಿಹರಿಸುವನು. ಶರತ್ಕಾಲದಲ್ಲಿ ನೆಲದೊಳು ಕೆಸರಡಗುವುದು. । ಮತ್ತು ಯತಿಗಳಿಗುಂಟಾದ ಕೃಷ್ಣಭಕ್ತಿಯು ಅವರ ಕಾಮವಾಸನಾದಿಕಲ್ಮಷವ ಪರಿಹರಿಸುವಂತೆ- ಶರತ್ಕಾಲವುನೀರಿನಲ್ಲಿಯಿರುವ ಕಲ್ಮಷವಂಪರಿಹರಿಸಿ ನಿರ್ಮಲಂಗೆಯ್ವುದು, ಎಂದರೆ, ಈಷಣತ್ರಯತ್ಯಾಗಮಂಗೆಯ್ದ ಸನ್ಯಾಸಿಗಳು ಯತ್ಯಾಶ್ರಮ ಧರ್ಮಾಚರಣದ ಶ್ರಮನನನುಭವಿಸುತ್ತಿದ್ದು ಕೃಷ್ಣಭಕ್ತಿಯುಂಟಾದಮೇಲೆ ಅಸಂಕಲ್ಪವೂಬಿಟ್ಟುಹೋಗುತಲೂ ನಿಷ್ಕಾಮದಿಂದ ನಿರ್ಮಲರಾಗುವರು ಪರಮಚಕೃಷ್ಣಭಕ್ತಿಯು ದೃಢತರವಾದಮೇಲೆ ಸ್ವರೂಪಜ್ಞಾನೋದಯವಾಗಿ ಅದುದೃಢತರವಾಗುತಲೂ ಅತ್ಯಾಶ್ರಮಿಯೆನಿಸಿ ಜೀವನ್ಮುಕ್ತನಾಗುವನೆಂದು ಫಲಿತಾರ್ಥವು. ।ಇದರಿಂದ ಭೇದಮೂಲಕವಾಗಿ ಆತ್ಮನಲ್ಲಿ ಅಧ್ಯಸ್ತಗಳಾದದೇಹಧರ್ಮಗಳೆನಿಸುವ ಆಶ್ರಮಚತುಷ್ಟಯ ಧರ್ಮಗಳೆಲ್ಲವೂ ಕೃಷ್ಣಭಕ್ತಿಯುಂಟಾದಮೇಲೆ ಬ್ರಹ್ಮೈಕ್ಯಾನುಭವವುಂಟಾಗಿ ಅಜ್ಞಾನಪ್ರಯುಕ್ತಭೇದಾಧ್ಯಾಸಗಳೆಲ್ಲವೂ ತೊಲಗಿಹೋಗುವವೆಂಬಸಿದ್ಧಾಂತವು ಸೂಚಿಸಲ್ಪಟ್ಟಂತೆ ಆಗುವುದು. ]॥೩೪ ಮತ್ತು, ಯಾವರೀತಿಯಿಂದ ಉಪಶಾಂತರಾದಮುನಿಗಳು ಈಷಣತ್ರಯವಂ ತ್ಯಾಗಂಗೆಯ್ದು ಪಾಪರಹಿತರಾಗಿಸಂಚರಿಸುವರೋ, ಆರೀತಿಯಿಂದ ಮೇಘಗಳು ತಮ್ಮಲ್ಲಿರುವ ಸಮಸ್ತಜಲವನ್ನೂ ಭೂಮಿಯಲ್ಲಿ ತ್ಯಾಗಂಗೆಯ್ದು ಅತಿಶುಭ್ರವಾದ ಕಾಂತಿಯುಳ್ಳವಾಗಿ ಸಂಚರಿಸಿದವಾದವು [ಸರ್ವಸ್ವವನ್ನೂ ತ್ಯಾಗಮಾಡಿದವನು ಶುಚಿಯಾಗುವನು ಮೇಘವು ತನ್ನಜೀವನವೆಲ್ಲವನ್ನೂ ಲೋಕೋಪಕಾರಕ್ಕೆಕೊಟ್ಟು ತಾನು ಶುಭ್ರವಾಯಿತು. ॥೩೫॥ ಜ್ಞಾನಿಗಳು ಪ್ರಾಣಿಗಳಿಗೆ ಹೇಗೆ ಜ್ಞಾನವೆಂಬ ಅಮೃತವನ್ನು ಒಂದು ಸಮಯದಲ್ಲಿ ದಯೆಯಿಂದೀವರೋ, ಮತ್ತೊಂದುಸಮಯದಲ್ಲಿ ಕೊಡದೆಇರುವರೊ, ಹಾಗೆಯೇ ಶರತ್ಕಾಲದಲ್ಲಿ ಪರ್ವತಗಳು ತಿಳಿನೀರನ್ನು ಒಂದುಕಡೆಯಲ್ಲಿ ಕೆಳಕ್ಕೆಹರಿಸುತ್ತಲಿವೆ ಮತ್ತೊಂದುಕಡೆಯಲ್ಲಿ ಕೆಳಕ್ಕೆ ಹರಿಸದೇಇರುವವು [ಬೆಟ್ಟದಮೇಲೆ ಸುರಿದ ಮಳೆಯಿಂದ ತಗ್ಗಾದತಪ್ಪಲಿನಲ್ಲಿ ನಿರ್ಝರಗಳುಂಟಾಗುವವು ಉಬ್ಬಾದತಪ್ಪಲಿನಲ್ಲಿ ನಿರ್ಝರಗಳಿಲ್ಲವು. ಹಾಗೆಯೇ ಜ್ಞಾನಿಗಳಲ್ಲಿ ದೈವಾನುಗ್ರಹಸಿದ್ಧವಾದ ಜ್ಞಾನವು ವಿನೀತರಾದಶಿಷ್ಯರಿಗೆ ಉಪದೇಶಿಸಲ್ಪಡುವುದು ಪರಿಪ್ರಶ್ನಸೇವಾದಿಗಳಿಲ್ಲದ ಅವಿನೀತರಾದಶಿಷ್ಯರಿಗೆ ಉಪದೇಶಿಸಲ್ಪಡುವುದಿಲ್ಲವೆಂದುಭಾವವು॥ ಮತ್ತು, ಯಾವರೀತಿಯಿಂದ ಮೂಢರಾದಜನರು ಪತ್ನೀಪುತ್ರಾದಿಗಳೊಡಗೂಡಿ, ತಮ್ಮ ಆಯುಷ್ಯವನ್ನು

ಥಾಯುರನ್ವಹಂಕ್ಷೀಣಂನರಾಮೂಢಾಃಕುಟುಂಬಿನಃ ॥೩೭॥ ಗಾಧವಾರಿಚರಾಸ್ತಾಪಮವಿನ್ದಞ್ಶರದರ್ಕ
ಜಮ್ । ಯಥಾದರಿದ್ರಃಕೃಪಣಃಕುಟುಂಬ್ಯವಿಜಿತೇಂದ್ರಿಯಃ ॥೩೮॥ ಶನೈಶ್ಶನೈರ್ಜಹುಃಪಂಕಂಸ್ಥಲಾ
ನ್ಯಾಮಂಚವೀರುಧಃ । ಯಥಾಹಂಮಮತಾಂಧೀರಾಶ್ಶರೀರಾದಿಷ್ವನಾತ್ಮಸು ॥೩೯॥ ನಿಶ್ಚಲಾಂಬುರಭೂ
ತ್ತೂಷ್ಣೀಂಸಮುದ್ರಶ್ಶರದಾಗಮೇ। ಆತ್ಮನ್ಯುಪರತೇಸಮ್ಯಙ್ಮುನಿರ್ವ್ಯುಪರತಾಗಮಃ॥೪೦॥ ಕೇದಾರೇಭ್ಯಸ್ತ್ವ
ಪೋಗೃಹ್ಣನ್ಕರ್ಷಕಾದೃಢಸೇತುಭಿಃ । ಯಥಾಪ್ರಾಣೈಸ್ಸ್ರವಜ್ಜ್ಞಾನಂತನ್ನಿರೋಧೇನಯೋಗಿನಃ ॥೪೧॥

---

ಹೋಗುತ್ತಲಿರುವ, ಜಲಂ-ನೀರನ್ನು, ನ್ಯವಿನ್ದನ್-ತಿಳಿದುಕೊಳ್ಳಲೇ ಇಲ್ಲವು ॥೩೭॥ ಕುಟುಂಬೀ-ಸ್ತ್ರೀಪುತ್ರಾದಿಗಳುಳ್ಳವನಾದ, ಅ ವಿಜಿತೇಂದ್ರಿಯಃ-ಗೆಲ್ಲಲ್ಪಡದ ಇಂದ್ರಿಯಗಳುಳ್ಳವನಾದ, ಕೃಪಣಃ-ಬುದ್ಧಿಹೀನನಾದ, ದರಿದ್ರಃ-ಕಡುಬಡವನು, ಯಥಾ-ಹೇಗೋ, ತಥಾ-ಹಾಗೆ, ಗಾಧವಾರಿಚರಾಃ-ಅಡಿಯಂಶೋಂಕಲುಳ್ಳ ನೀರಿನಲ್ಲಿ ತಿರುಗುವ ಜಂತುಗಳು, ಶರದರ್ಕಜಂ-ಶರತ್ಕಾಲದಸೂರ್ಯನ ಬಿಸಿಯಿಂದ ಹುಟ್ಟಿದ, ತಾಪಂ-ಬಿಸಿಯನ್ನು, ಅವಿನ್ದನ್-ತಿಳಿದವು ॥೩೮॥ ಧೀರಾಃ-ಪಂಡಿತರಾದವರು, ಶರೀರಾದಿಷು- ದೇಹವೇ ಮೊದಲಾದ, ಅನಾತ್ಮಸು-ಜಡವಸ್ತುಗಳಲ್ಲಿ, ಅಹಂಮಮತಾಂ-ನಾನುನನ್ನದೆಂಬ ಅಭಿಮಾನವನ್ನು, ಯಥಾ-ಹೇಗೋ, ತಥಾ-ಹಾಗೆ, ಸ್ಥಲಾನಿ-ನೆಲಗಳು, ಪಂಕಂ-ಕೆಸರನ್ನೂ, ವೀರುಧಃ-ಬಳ್ಳಿಗಳು, ಅಥವಾ ಓಷಧಿಗಳು, ಅಥವಾ ಬೆಳೆಗಳು, ಆಮಂಚ-ಅಪಕ್ವತೆಯನ್ನೂ, ಶನೈಶ್ಶನೈಃ-ಮೆಲ್ಲಮೆಲ್ಲಗೆ, ಜಹುಃ-ಬಿಟ್ಟುವು ॥೩೯॥ ಆತ್ಮನಿ-ಮನಸ್ಸು, ಉಪರತೇಸತಿ-ಕ್ರಿಯೆಗಳನ್ನು ಬಿಟ್ಟು ಉಪಶಾಂತವಾಗುತಲೂ, ವ್ಯುಪರತಾಗಮಃ-ವ್ಯುಪರತ-ಬಿಟ್ಟುಹೋದ, ಆಗಮಃ-ವೇದಘೋಷವುಳ್ಳ, ಸಮ್ಯಙ್ಮುನಿರಿವ-ಪೂರ್ಣ ಪಂಡಿತನಹಾಗೆ, ಶರದಾಗಮೇ-ಶರತ್ಕಾಲಬರುತಲೂ, ಸಮುದ್ರಃ-ಕಡಲು, ನಿಶ್ಚಲಾಂಬುಃ-ಕದಲದೆಯಿರುವ ನೀರುಳ್ಳದ್ದಾಗಿ, ತೂಷ್ಣೀಂ-ಸುಮ್ಮನೆ, ಅಭೂತ್-ಆಯಿತು ॥೪೦॥ ಯೋಗಿನಃ-ಆತ್ಮಧ್ಯಾನವುಳ್ಳವರು, ಪ್ರಾಣೈಃಸ್ರವತ್-ಇಂದ್ರಿಯಗಳಿಂದ ಜಾರಿಹೋಗುತಲಿರುವ, ಜ್ಞಾನಂ-ತಿಳುವಳಿಕೆಯನ್ನು, ತನ್ನಿರೋಧೇನ-ತತ್-ಆಯಿಂದ್ರಿಯಗಳ, ನಿರೋಧೇನ-ಪ್ರತ್ಯಾಹಾರವೆಂಬ ತಡೆಯಿಂದ, ಯಥಾ-ಹೇಗೋ, ತಥಾ-ಹಾಗೆ, ಕರ್ಷಕಾಃ-ಕೃಷಿಮಾಡುವವರು, ದೃಢಸೇತುಭಿಃ-ಗಟ್ಟಿಯಾದ ಕಟ್ಟೆಗಳಿಂದ, ಕೇದಾರೇಭ್ಯಃ-ಗದ್ದೆಗಳಿಗೆ, ಅಪಃ-ನೀರನ್ನು, ಅಗೃಹ್ಣನ್-ತೆಗೆದುಕೊಂಡರು ॥೪೧॥ ಉಡುಪಃ-ನಕ್ಷತ್ರಪತಿಯಾದ ಚಂದ್ರನು, ಶರದರ್ಕಾಂಶುಜಂ-ಶರತ್-ಶರತ್ಕಾಲದ, ಅರ್ಕಾಂಶು-ಸೂರ್ಯಕಿರಣ

---

ಪ್ರತಿಕ್ಷಣದಲ್ಲಿ ಕ್ಷೀಣಿಸುತಲಿರುವುದನ್ನಾಗಿ ತಿಳಿಯುವದಿಲ್ಲವೋ, ಅದೇರೀತಿಯಿಂದ ಸ್ವಲ್ಪಜಲದಲ್ಲಿ ಸಂಚರಿಸುತಲಿರುವ ಮತ್ಸ್ಯಾದಿಗಳು ಪ್ರತಿಕ್ಷಣದಲ್ಲಿಯೂ ಜಲವನ್ನು ಕ್ಷೀಣಿಸುವುದನ್ನಾಗಿ ತಿಳಿಯಲಿಲ್ಲವು. ॥೩೭॥ ಮತ್ತು, ದರಿದ್ರನಾಗಿಯೂ ದೀನನಾಗಿಯೂ ಕುಟುಂಬಿಯಾಗಿಯೂ ಇರುವ ಪುರುಷನು ಜಿತೇಂದ್ರಿಯನಾಗದೆ ತಾಪವನ್ನೆಯ್ದುತಲಿರುವ ಹಾಗೆ ಸ್ವಲ್ಪವಾದ ನೀರಿನಲ್ಲಿ ಸಂಚರಿಸುತಲಿರುವ ಮತ್ಸ್ಯಾದಿ ಪ್ರಾಣಿಗಳು ಶರತ್ಕಾಲದ ಸೂರ್ಯನಿಂದುಂಟಾದ ತಾಪವನ್ನು ಪಡೆದವು ॥೩೮॥ ಮತ್ತು, ಯಾವರೀತಿಯಿಂದ ಜ್ಞಾನಿಗಳು ಜಡಗಳಾದ ಶರೀರಾದಿಗಳಲ್ಲಿ ಇದು ನನ್ನದೆಂಬ ಮಮತೆಯನ್ನೂ ಇದೇ ನಾನೆಂಬ ಅಹಂಕಾರವನ್ನೂ ಮೆಲ್ಲಮೆಲ್ಲನೆ ಬಿಡುವರೋ, ಆರೀತಿಯಿಂದ ಶರತ್ಕಾಲದಲ್ಲಿ ಭೂಪ್ರದೇಶಗಳು ಕೆಸರಂ ಮೆಲ್ಲಮೆಲ್ಲನೆ ಬಿಟ್ಟವು ಓಷಧಿಗಳು ಅಪಕ್ವಭಾವವನ್ನೂ ಬಿಟ್ಟವು. ॥೩೯॥ ಯಾವರೀತಿಯಿಂದ ಮುನಿಯು ಆತ್ಮನಲ್ಲಿ ತ್ಯಾಗಂಗೆಯ್ಯಲ್ಪಟ್ಟ ಕ್ರಿಯೆಗಳುಳ್ಳವನಾದುದರಿಂದ ವೇದಘೋಷವಂ ಬಿಟ್ಟು ಸುಮ್ಮನೆ ಆತ್ಮನಲ್ಲಿಯೇ ಶಾಂತನಾಗಿರುವನೋ, ಆರೀತಿಯಿಂದ ಶರತ್ಕಾಲವು ಪ್ರಾಪ್ತವಾಗುತ್ತಿರಲು ಸಮುದ್ರವು ನಿಶ್ಚಲವಾದ ನೀರುಳ್ಳದ್ದಾದುದರಿಂದ ಅಲೆಗಳ ಸಪ್ಪಳಿಲ್ಲದೆ ಸುಮ್ಮನೆಯಿರುವುದಾಯಿತು. [ಬ್ರಾಹ್ಮಣರಿಗೆ ವೇದಾಧ್ಯಯನವು ನಿತ್ಯವಾಗಿದ್ದರೂ ಸನ್ಯಾಸಿಯಾದಮೇಲೆ ಕರ್ಮಗಳೆಲ್ಲವೂ ಆತ್ಮಸನ್ಯಸ್ತಗಳಾಗಿರುವುದರಿಂದ ಕರ್ಮಕಾಂಡವಂ ಪಠಿಸಬೇಕಾದುದಿಲ್ಲವೆ, ಆತ್ಮರತನಾಗಿರುವನು. ॥೪೦॥ ಯೋಗಿಗಳು ಪ್ರತ್ಯಾಹಾರವಿಧಾನದಿಂದ ನಿರೋಧಂಗೆಯ್ಯಲ್ಪಟ್ಟ ಇಂದ್ರಿಯಂಗಳಿಂದ ಅತ್ಯಂತ ಚಲಿಸುತಲಿರುವ ಜ್ಞಾನವಂ ತಡೆಯುವ ಹಾಗೆ- ಶರತ್ಕಾಲದಲ್ಲಿ ಕೃಷಿಜೀವಿಗಳಾದ ಪ್ರಾಣಿಗಳು ಮುಂದೆ ವೃಷ್ಟಿಯಿಲ್ಲವಾದುದರಿಂದ ಗದ್ದೆಗಳೊಳು ದೃಢವಾದ ಕಟ್ಟೆಗಳಲ್ಲಿ ಜಲವಂ ನಿಲ್ಲಿಸಿದರು ॥೪೧॥ ಮತ್ತು ಯಾವರೀತಿಯಿಂದ

ಶರದರ್ಕಾಂಶುಜಂತಾಪಂಭೂತಾನಾಮುಡುಪೋಽಹರತ್ |ದೇಹಾಭಿಮಾನಜಂಬೋಧೋಮುಕುಂದೋವ್ರಜಯೋಷಿತಾಮ್ ||೪೨|| ಖಮಶೋಭತನಿರ್ಮೇಘಂಶರದ್ವಿಮಲತಾರಕಮ್ | ಸತ್ವಯುಕ್ತಂಯಥಾಚಿತ್ತಂಶಬ್ದಬ್ರಹ್ಮಾರ್ಥದರ್ಶನಮ್ ||೪೩||ಅಖಂಡಮಂಡಲೋವ್ಯೋಮ್ನಿರರಾಜೋಡುಗಣೈಶ್ಶಶೀ | ಯಥಾಯದುಪತಿಃಕೃಷ್ಣೋವೃಷ್ಣಿಚಕ್ರಾವೃತೋಭುವಿ||೪೪||ಆಶ್ಲಿಷ್ಯಸಮಶೀತೋಷ್ಣಂಪ್ರಸೂನವನಮಾರುತಮ್| ಜನಾಸ್ತಾಪಂಜಹುರ್ಗೋಪ್ಯೋನಕೃಷ್ಣಹೃತಚೇತಸಃ ||೪೫|| ಗಾವೋಮೃಗಾಃಖಗಾನಾರ್ಯಃಪುಷ್ಪಿಣ್ಯಶ್ಶರದಾಭವನ್ |

---

ಗಳಿಂದ, ಜಂ-ಹುಟ್ಟಿದ, ಭೂತಾನಾಂ-ಪ್ರಾಣಿಗಳ, ತಾಪಂ-ಸೆಕೆಯನ್ನು, ಬೋಧಃ-ಜ್ಞಾನವು, ದೇಹಾಭಿಮಾನಜಂ-ಶರೀರದಅಭಿಮಾನದಿಂದಹುಟ್ಟಿದ, ತಾಪವನ್ನು ಹೇಗೋಹಾಗೂ, ಮುಕುಂದಃ-ಕೃಷ್ಣನು, ವ್ರಜಯೋಷಿತಾಂ-ಗೋಕುಲದಹೆಂಗಳ, ತಾಪಂ-ವಿರಹತಾಪವನ್ನುಹೇಗೋಹಾಗೂ, ಅಹರತ್-ಅಪಹರಿಸಿದನು ||೪೨|| ಸತ್ವಯುಕ್ತಂ-ಸತ್ವಗುಣದೊಡನೆಕೂಡಿದಂತಾ, ಶಬ್ದಬ್ರಹ್ಮಾರ್ಥದರ್ಶನಂ-ಶಬ್ದಬ್ರಹ್ಮ-ವೇದದ,ಅರ್ಥ-ಕರ್ಮಬ್ರಹ್ಮರೂಪವಾದಅರ್ಥವನ್ನು, ದರ್ಶನಂ-ನೋಡುತಲಿರುವ,ಚಿತ್ತಂ-ಮನಸ್ಸು, ಯಥಾ-ಹೇಗೋ, ತಥಾ-ಹಾಗೆ, ನಿರ್ಮೇಘಂ-ಮೇಘಗಳಿಲ್ಲದೆಶುಭ್ರವಾದಂತಾ, ಶರದ್ವಿಮಲತಾರಕಂ-ಶರತ್-ಶರತ್ಕಾಲದಿಂದ, ವಿಮಲ-ಕಲ್ಮಷವಿಲ್ಲದಂತೆಕಾಣಿಸುವ, ತಾರಕಂ-ನಕ್ಷತ್ರಗಳುಳ್ಳವಾದ, ಖಂ-ಆಕಾಶವು, ಅಶೋಭತ-ಪ್ರಕಾಶಿಸಿತು ||೪೩|| ಭುವಿ-ಭೂಲೋಕದಲ್ಲಿ, ವೃಷ್ಣಿಚಕ್ರಾವೃತಃ-ವೃಷ್ಣಿ-ಯಾದವಶ್ರೇಷ್ಠರುಗಳ, ಚಕ್ರ-ಮಂಡಲದಿಂದ, ಆವೃತಃ-ಬಳಸಲ್ಪಟ್ಟವನಾದ, ಯದುಪತಿಃ-ಯಾದವರಿಗೊಡೆಯನಾದ, ಕೃಷ್ಣಃ-ಯಥಾ-ಕೃಷ್ಣನುಹೇಗೋ, ತಥಾ-ಹಾಗೆ, ವ್ಯೋಮ್ನಿ-ಆಕಾಶದಲ್ಲಿ, ಉಡುಗಣೈಸ್ಸಾಕಂ-ನಕ್ಷತ್ರಗಳಗುಂಪುಗಳಿಂಕೂಡಿದ, ಅಖಂಡಮಂಡಲಃ-ಪೂರ್ಣಬಿಂಬವುಳ್ಳ, ಶಶೀ-ಚಂದ್ರನು, ರರಾಜ-ಬೆಳಗಿದನು ||೪೪||ಜನಾಃ-ಜನಗಳು, ಸಮಶೀತೋಷ್ಣಂ-ಸಮಾನವಾದಚಳಿಯುಬಿಸಿಯೂವುಳ್ಳ,ಪ್ರಸೂನವನಮಾರುತಂ-ಹೂವಿನತೋಟದಗಾಳಿಯನ್ನು, ಆಶ್ಲಿಷ್ಯ-ಅಪ್ಪಿಕೊಂಡು, ತಾಪಂ-ದುಃಖವನ್ನು, ಜಹುಃ-ಬಿಟ್ಟರು. ಕೃಷ್ಣಹೃತಚೇತಸಃ-ಕೃಷ್ಣನಿಂದ ಅಪಹರಿಸಲ್ಪಟ್ಟ ಬುದ್ಧಿಯುಳ್ಳವರಾದ, ಗೋಪ್ಯಃ-ಗೊಲ್ಲತಿಯರು, ತಾಪಂ-ವಿರಹಜ್ವರವನ್ನು, ನಜಹುಃ-ಬಿಡಲಿಲ್ಲ|| ಅಥವಾ-ಕೃಷ್ಣನಿಂದ ಅಪ್ಪಿಕೊಳ್ಳಲ್ಪಟ್ಟ, ಮನಸ್ಸುಳ್ಳವರಾದ್ದರಿಂದಲೇ, ಗೋಪ್ಯೋನ-ಗೋಪಿಯರಲ್ಲದ, ಸಮಶೀತೋಷ್ಣವಾತಗಳುಳ್ಳಜನರು, ತಾಪಂ-ಜ್ವರವನ್ನು, ಜಹುಃ-ಬಿಟ್ಟರು||೪೫|| ಗಾವಃ-ಗೋವುಗಳು, ಮೃಗಾಃ-ಮೃಗಗಳು, ಖಗಾಃ-ಪಕ್ಷಿಗಳೂ, ನಾರ್ಯಃ-ಹೆಂಗಳೂ, ಸ್ವವೃಷೈಃ-ತಮ್ಮಯೆತ್ತುಗಳಿಂದ (ತಮ್ಮಜಾತಿಯಗಂಡುಗಳಿಂದ) ಅನ್ವೀಯಮಾನಾಃ-ಅನುಸರಿಸಿಬರಲ್ಪಡುವರಾಗಿ, ಫಲೈಃ-ಧರ್ಮಾದಿಪುರುಷಾರ್ಥಗಳಿಂದ, ಅನ್ವೀಯಮಾನಾಃ-ತಾವಾಗಿಅನುಸರಿಸ

---

ಆತ್ಮಜ್ಞಾನವು ದೇಹಾಭಿಮಾನದಿಂದುಂಟಾದತಾಪವನ್ನು ಪರಿಹರಿಸುವದೋ, ಮತ್ತು ಶ್ರೀಕೃಷ್ಣನು ಯಾವರೀತಿಯಿಂದ ಗೋಪಾಂಗನೆಯರತಾಪವನ್ನು ಪರಿಹರಿಸುವನೋ, ಆರೀತಿಯಿಂದ ಚಂದ್ರನು ಪ್ರಾಣಿಗಳಿಗೆ ಶರತ್ಕಾಲಸೂರ್ಯನಕಿರಣಗಳಿಂದುಂಟಾದ ತಾಪವನ್ನು ಪರಿಹರಿಸುವನು ||೪೨|| ಮತ್ತು ಯಾವರೀತಿಯಿಂದ ಸತ್ವಗುಣಯುಕ್ತವಾದುದರಿಂದ ಪೂರ್ವೋತ್ತರಮೀಮಾಂಸ ಶಾಸ್ತ್ರಗಳಿಂದ ನಿರ್ಣಯಿಸಲ್ಪಟ್ಟ ವೇದಾರ್ಥಗಳಂ ತಿಳಿಯುತಲಿರುವ ಚಿತ್ತವು ಪ್ರಕಾಶಿಸುವುದೋ, ಅದೇರೀತಿಯಿಂದ ಮೇಘರಹಿತವಾಗಿ ಶರತ್ಕಾಲದೊಳು ಪ್ರಕಾಶಮಾನಗಳಾದನಕ್ಷತ್ರಗಳುಳ್ಳದಾಗಿಯೂ, ಇರುವ ಅಂತರಿಕ್ಷವು ಪ್ರಕಾಶಿಸಿತು ||೪೩|| ಮತ್ತು ಯಾದವಶ್ರೇಷ್ಠನಾದ ಶ್ರೀಕೃಷ್ಣನು ಯಾದವರಸಮೂಹಂಗಳಿಂದ ಭೂಲೋಕದಲ್ಲಿ ಪ್ರಕಾಶಿಸುವಂತೆ-ಶರತ್ಕಾಲದಪೂರ್ಣಚಂದ್ರನು ನಕ್ಷತ್ರಸಮೂಹಗಳಿಂ ಪರಿವೃತನಾಗಿಅಂತರಿಕ್ಷದಲ್ಲಿ ಪ್ರಕಾಶಿಸಿದನು||೪೪||ಮತ್ತು ಶರತ್ಕಾಲದಲ್ಲಿ ಜನರುಹೆಚ್ಚುಕಡಿಮೆಯಿಲ್ಲದೆ ಸಮವಾಗಿ ಸ್ವಲ್ಪಶೀತವಾಗಿಯೂ, ಸ್ವಲ್ಪೋಷ್ಣವಾಗಿಯೂ, ಪುಷ್ಪಭರಿತಗಳಾದ ವನಗಳದೆಸೆಯಿಂದ ಬರುವುದಾಗಿಯೂ, ಇರುವ ಗಾಳಿಯಂಸೇವಿಸಿತಾಪವಂಬಿಟ್ಟರು ಆದರೂ ಗೋಪಸ್ತ್ರೀಯರು ಮಾತ್ರ ಕೃಷ್ಣನಿಂದ ಅಪಹರಿಸಲ್ಪಟ್ಟ ಮನಸ್ಸುಳ್ಳವರಾದುದರಿಂದ ಆವಾಯುವಂ ಸೇವಿಸಿ ಅದುದುಸ್ಸಹವಾಗಿ ತೋರಿದುದರಿಂದ ತಾಪವು ಬಿಟ್ಟವರಾಗಲಿಲ್ಲವು ||೪೫|| ಮತ್ತು ಯಾವರೀತಿಯಿಂದ ಈಶ್ವರಾರಾಧನವೇ ಫಲವಾಗಿಯುಳ್ಳ ಸತ್ಕರ್ಮಗಳು ಯಾವಫಲವನ್ನೂ ಉದ್ದೇಶಂಗೆಯ್ಯದೆ ಮಾಡಲ್ಪಟ್ಟರೂ ಕೂಡ ಸಮಸ್ತ ಫಲಗಳಿಂದಲೂ ಬಲಾತ್ಕಾರದಿಂದನುಸರಿಸಲ್ಪಟ್ಟವಾಗಿ ಸಮಸ್ತ ಭೋಗಂಗಳಂ

ಅನ್ವೀಯಮಾನಾಸ್ಸ್ವವೃಷೈಃ ಫಲೈರೀಶಕ್ರಿಯಾ ಇವ ॥೪೬॥ ಉದಹೃಷ್ಯನ್ ವಾರಿಜಾನಿ ಸೂರ್ಯೋತ್ಥಾನೇ ಕು
ಮುದ್ವಿನಾ । ರಾಜ್ಞಾ ತು ನಿರ್ಭಯಾ ಲೋಕಾ ಋತೇ ದಸ್ಯೂನ್ ವಿನಾ ನೃಪ ॥೪೭॥ ಪುರಗ್ರಾಮೇಷ್ವಾಗ್ರಯಣೈ
ರೈಂದ್ರಿಯೈಶ್ಚ ಮಹೋತ್ಸವೈಃ । ಬಭೌ ಭೂಃ ಪಕ್ವಸಸ್ಯಾಢ್ಯಾ ಕಲಾಭ್ಯಾಂ ನಿತರಾಂ ಹರೇಃ ॥೪೮॥ ವಣಿಙ್ಮುನಿ
ನೃಪಸ್ನಾತಾ ನಿರ್ಗಮ್ಯಾರ್ಥಾನ್ ಪ್ರಪೇದಿರೇ । ವರ್ಷರುದ್ಧಾ ಯಥಾ ಸಿದ್ಧಾಸ್ಸ್ವಪಿಂಡಾನ್ ಕಾಲ ಆಗತೇ ॥೪೯॥
ಇತಿ ಶ್ರೀಮದ್ಭಾಗವತೇ-ದಶಮಸ್ಕಂಧೇ- ವಿಂಶೋಧ್ಯಾಯಃ-

---

ಲ್ಪಡುತಲಿರುವ, ಈಶಕ್ರಿಯಾ ಇವ-ಈಶ್ವರಾರ್ಪಣಬುದ್ಧಿಯಿಂದ ಮಾಡಲ್ಪಟ್ಟ ನಿಷ್ಕಾಮಕರ್ಮಗಳಂತೆ, ಶರದಾ-ಶರತ್ಕಾಲದಿಂದ, ಪುಷ್ಟಿ
ಣ್ಯಃ-ಗರ್ಭವುಳ್ಳವರು, ಅಭವನ್-ಆದರು ॥೪೬॥ ನೃಪ-ಅರಸಾದ ಪರೀಕ್ಷಿತನೇ, ಸೂರ್ಯೋತ್ಥಾನೇಸತಿ-ಸೂರ್ಯೋದಯವಾಗುತಲೂ,
ಕುಮುದ್ವಿನಾ-ನೈದಿಲೆಯನ್ನು ಹೊರತು, ವಾರಿಜಾನಿ-ತಾವರೆಗಳು, ಉದಹೃಷ್ಯನ್-ಸಂತೋಷಿಸಿದವು, ರಾಜ್ಞಾತು-ದೊರೆಯಿಂದಲಾದ
ರೋ, ದಸ್ಯೂನ್ ವಿನಾ-ಕಳ್ಳರನ್ನು ಹೊರತು, ಲೋಕಾಃ-ಜನರು, ನಿರ್ಭಯಾಃ-ಭಯವಿಲ್ಲದವರು, ಆಸನ್-ಆದರು, (ದೃಷ್ಟಾಂತಾಲಂಕಾರ)
ಅಥವಾ-ತುಶಬ್ದವು ಇವಾರ್ಥಕವೆನಿಸೆ, ಉಪಮಾಲಂಕಾರವಪ್ಪುದು ॥೪೭॥ ಪಕ್ವಸಸ್ಯಾಢ್ಯಾ-ಮಾಗಿದಪೈರುಗಳಿಂದ ತುಂಬಿದ, ಭೂಃ-
ಭೂಮಿಯು ಪುರಗ್ರಾಮೇಷು-ಪಟ್ಟಣಗಳಲ್ಲಿಯೂ ಹಳ್ಳಿಗಳಲ್ಲಿಯೂ, ಆಗ್ರಯಣೈಃ-ಹೊಸಧಾನ್ಯವನುಣಲೋಸುಗ ಮಾಡಲ್ಪಡುವ ವೈ
ದಿಕ ಕರ್ಮಗಳಿಂದಲೂ, ಐಂದ್ರಿಯೈಃ-ಇಂದ್ರಿಯ ಸುಖಾರ್ಥಗಳಾದ, ಮಹೋತ್ಸವೈಃ-ದರ್ಶನಾದ್ಯುತ್ಸವಗಳಿಂದಲೂ, ಹರೇಃ_ನಾರಾ
ಯಣನ, ಕಲಾಭ್ಯಾಂ-ಸಿತಾಸಿತಕೇಶಾಂಗಗಳಾದ ರಾಮಕೃಷ್ಣರಿಂದಲೂ, ನಿತರಾಂ-ಅತಿಶಯವಾಗಿ, ಬಭೌ-ಪ್ರಕಾಶಿಸಿತು ॥೪೮॥
ಸಿದ್ಧಾಃ-ಮಂತ್ರಯೋಗಾದಿಸಿದ್ಧಪುರುಷರು, ವರ್ಷರುದ್ಧಾಃ-ವರ್ಷ-ಬಹುಸಂವತ್ಸರಗಳ ಆಯುಷ್ಯದಿಂದ, ರುದ್ಧಾಃ-ಪ್ರಾರಬ್ಧವಶದಿಂ
ದನಾಯದೆ ತಡೆಯಲ್ಪಟ್ಟವರಾಗಿದ್ದು, ಕಾಲೇ-ಮರಣಸಮಯವು, ಆಗತೇಸತಿ-ಬಂದದ್ದಾಗುತಲೂ, ಸ್ವಪಿಂಡಾನ್-ಸ್ವ-ತಮ್ಮಿಂದ
ಹೊಂದಲ್ಪಡತಕ್ಕ, ಪಿಂಡಾನ್-ದೇವಾದಿದೇಹಗಳನ್ನು, ಯಥಾ-ಹೇಗೆ, ಪ್ರಪೇದಿರೇ-ಹೊಂದಿದರೋ, ತಥಾ-ಹಾಗೆ, ವಣಿಙ್ಮುನಿನೃ
ಪಸ್ನಾತಾಃ-ವಣಿಕ್-ವರ್ತಕರು, ಯತಿ-ಸನ್ಯಾಸಿಗಳು, ನೃಪ-ಅರಸರೂ, ಸ್ನಾತಾಃ-ಗುರುಸೇವಕರಾಗಿದ್ದು ಸ್ನಾತಕವ್ರತಮಾಡಿದ
ವರೂ, ವರ್ಷರುದ್ಧಾಸ್ಸಂತಃ-ವರ್ಷ ಮಳೆಯಿಂದ, ರುದ್ಧಾಸ್ಸಂತಃ-ತಡೆಯಲ್ಪಟ್ಟವರಾಗಿ, ಕಾಲೇ-ಶರತ್ಕಾಲವು, ಆಗತೇ-ಬಂದದಾ
ಗುತಲೂ, ನಿರ್ಗಮ್ಯಾರ್ಥಾನ್-ಕ್ರಮವಾಗಿ ತಾವು ತಾವು ಪಡೆಯತಕ್ಕ ವಾಣಿಜ್ಯವನ್ನೂ, ಸ್ವೇಚ್ಛಾ-ಸಂಚಾರವನ್ನೂ, ದಿಗ್ವಿಜಯವನ್ನೂ ಸ್ವ
ವಿದ್ಯಾದಿಗಳನ್ನೂ, ಪ್ರಪೇದಿರೇ-ಪಡೆದರು ॥೪೯॥
ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಪ್ರತಿಶಬ್ದಾರ್ಥಬೋಧಿನ್ಯಾಂ ವಿಂಶೋಧ್ಯಾಯಃ-

---

ತಮ್ಮಲ್ಲಿ ಧರಿಸುವವೋ; ಆರೀತಿಯಿಂದ ಗೋವುಗಳೂ ಮೃಗಪಕ್ಷಿಗಳೂ ಸ್ತ್ರೀಯರೂಸಹ ಶರತ್ಕಾಲದಲ್ಲಿ ತಮಗೆ
ಅಪೇಕ್ಷೆಯಿಲ್ಲದಿದ್ದರೂ ತಮ್ಮ ಪತಿಗಳಿಂದ ಬಲಾತ್ಕಾರದಿಂದನುಸರಿಸಲ್ಪಟ್ಟವರಾಗಿ ಗರ್ಭವಂಧರಿಸಿದರು. ॥೪೬॥
ಮತ್ತು ಧರ್ಮಿಷ್ಠನಾದ ಅರಸನಿಂದ ಚೋರರಂಹೊರತು ಸಮಸ್ತಜನರೂ ನಿರ್ಭಯರಾಗಿ ಸಂತೋಷಪಡುವಂತೆ
ಶರತ್ಕಾಲಸೂರ್ಯನಿಂದ ನೈದಿಲೆಯ ಹುವ್ವುಗಳಂಹೊರತು ತಾವರೆಗಳೆಲ್ಲವೂ ಅರಳಿದವು. ॥೪೭॥ ಮತ್ತು, ಶರತ್ಕಾ
ಲದಲ್ಲಿ ಪರಿಪಕ್ವಗಳಾದ ಸಸ್ಯಗಳಿಂದ ಪರಿಪೂರ್ಣವಾದ ಭೂಮಿಯು ಪುರಗಳಲ್ಲಿಯೂ ಗ್ರಾಮಗಳಲ್ಲಿಯೂ ನವಾ
ನ್ನಪ್ರಾಶನಾರ್ಥವಾಗಿ ದ್ವಿಜರಿಂದಮಾಡಲ್ಪಡುತಲಿರುವ ಆಗ್ರಯಣಮೊದಲಾದ ವೈದಿಕಮಹೋತ್ಸವಗಳಿಂದಲೂ
ಇಂದ್ರಿಯಪ್ರೀತಿಗೋಸುಗ ಮಾಡಲ್ಪಡುತಲಿರುವ ಲೌಕಿಕಮಹೋತ್ಸವಗಳಿಂದಲೂ, ಭಗವದಂಶರೂಪರಾದ ಶ್ರೀರಾ
ಮಕೃಷ್ಣರ ದರ್ಶನಾದಿಮಹೋತ್ಸವಗಳಿಂದಲೂ, ಅತ್ಯಂತಪ್ರಕಾಶಿಸಿತು. ॥೪೮॥ ಮತ್ತು, ಮಂತ್ರಯೋಗಾದಿಸಿದ್ಧಿ
ಯಂಪಡೆದಿರುವ ಮಹಾತ್ಮರು ಭೂಲೋಕದಲ್ಲಿ ತಮ್ಮ ಆಯುಸ್ಸಿನಿಂದ ತಡೆಯಲ್ಪಟ್ಟವರಾಗಿದ್ದು ಕಾಲವು ಪ್ರಾಪ್ತ
ವಾಗುತಿರಲು, ತಮ್ಮ ಯೋಗಾದ್ಯನುಷ್ಠಾನಗಳಿಂ ಪಡೆಯತಕ್ಕದೇವಾದಿದೇಹಗಳನ್ನು ಹೇಗೆಪಡೆಯುವರೋ, ಹಾಗೆಯೇ
ವರ್ತಕರು, ಯತಿಗಳು, ದೊರೆಗಳು, ಸ್ನಾತಕವ್ರತಾಚರಣಮಂಗೆಯ್ದರು, ಪುರುಷರುಸಹ ದೃಷ್ಟಾದೃಷ್ಟಗಳಾದ ಫಲಗ
ಳಿಗೋಸುಗ ವರ್ಷದಿಂ ತಡೆಯಲ್ಪಟ್ಟವರಾಗಿ ತಮ್ಮ ತಮ್ಮ ಸ್ಥಾನಂಗಳಲ್ಲಿ ವಾಸಂಗೆಯ್ಯುತಲಿದ್ದು ಶರತ್ಕಾಲವು ಪ್ರಾ
ಪ್ತವಾಗುತ್ತಿರಲು, ಅಲ್ಲಿಂದಹೊರಕ್ಕೆ ಹೊರಟವರಾಗಿ- ಕ್ರಮದಿಂದ- ವರ್ತಕತನದವ್ಯಾಪಾರ ಸ್ವೇಚ್ಛಾಸಂಚಾರ
ದಿಗ್ವಿಜಯದಂಡಯಾತ್ರೆ, ವಿದ್ಯಾಭ್ಯಾಸಗಳನ್ನು ಪಡೆದರು. ॥೪೯॥
ಇಂತು ಶ್ರೀಕೃಷ್ಣರಾಜ ವಾಣೀವಿಲಾಸದ-ದಶಮಸ್ಕಂಧದಲ್ಲಿ ಇಪ್ಪತ್ತನೇ ಅಧ್ಯಾಯವು ಸಂಪೂರ್ಣವಾದದು.

ಶ್ರೀಶುಕಃ॥ಇತ್ಥಂಶರತ್ಸ್ವಚ್ಛಜಲಂಪದ್ಮಾಕರಸುಗಂಧಿನಾ। ನ್ಯವಿಶದ್ವಾಯುನೋಪೇತಂಸಗೋಗೋಪಾಲಕೋಽಚ್ಯುತಃ ॥೧॥ ಕುಸುಮಿತವನರಾಜಿಶುಷ್ಮಿಭೃಂಗದ್ವಿಜಕುಲಘುಷ್ಟಸರಸ್ಸರಿನ್ಮಹೀಧ್ರಮ್ ।ಮಧುಪತಿರವಗಾಹ್ಯಚಾರಯನ್‌ಗಾಸ್ಸಹಪಶುಪಾಲಬಲಶ್ಚುಕೂಜವೇಣುಮ್ । ತದ್ವ್ರಜಸ್ತ್ರಿಯಆಶ್ರುತ್ಯವೇಣುಗೀತಂಸ್ಮರೋದಯಮ್ । ಕಾಶ್ಚಿತ್ಪರೋಕ್ಷಂಕೃಷ್ಣಸ್ಯಸ್ವಸಖೀಭ್ಯೋನ್ವವರ್ಣಯನ್॥೩॥ತದ್ವರ್ಣಯಿತುಮಾರಬ್ಧಾಸ್ಸ್ಮರಂತ್ಯಃಕೃಷ್ಣಚೇಷ್ಟಿತಮ್ । ನಾಶಕನ್ಸ್ಮರವೇಗೇನವಿಕ್ಷಿಪ್ತಮನಸೋನೃಪ॥೪॥ ಬರ್ಹಾಪೀಡಂನ

---

೨೧ನೆಯ ಅಧ್ಯಾಯದ ಪ್ರತಿಪದ ಟೀಕೆ.

[ ಶುಕವಚನವು ] ಸಗೋಗೋಪಾಲಕಃ-ಗೋವುಗಳಿಂದಲೂ ಗೋಪಾಲಕರಿಂದಲೂ ಸಹಿತನಾದ, ಅಚ್ಯುತಃ-ಕೃಷ್ಣನು, ಇತ್ಥಂ-ಹೀಗೆ, ಶರತ್ಸು-ಶರತ್ಕಾಲಗಳಲ್ಲಿ, ಅಚ್ಛಜಲಂ-ನಿರ್ಮಲೋದಕವುಳ್ಳ, ಅಥವಾ, ಶರತ್-ಶರತ್ಕಾಲದಿಂದ, ಸ್ವಚ್ಛಜಲಂ-ತಿಳಿಯಾದನೀರನ್ನುಳ್ಳಂತಾ, ಪದ್ಮಾಕರಸುಗಂಧಿನಾ-ಪದ್ಮಾಕರ-ತಾವರೆಯಕೊಳದ, ಸುಗಂಧಿನಾ-ಪರಿಮಳವುಳ್ಳ, ವಾಯುನಾ-ಗಾಳಿಯಿಂದ, ಉಪೇತಂ-ಕೂಡಿದ ವನವನ್ನು, ನ್ಯವಿಶತ್-ಹೊಕ್ಕನು ॥೧॥ ಮಧುಪತಿಃ-ಯಾದವರಿಗೊಡೆಯನಾದ ಕೃಷ್ಣನು ಸಹಪಶುಪಾಲಬಲಃ-ಗೋಪಾಲಕರಿಂದಲೂ ಬಲರಾಮನಿಂದಲೂಸಹಿತನಾಗಿ, ಕುಸುಮಿತ ಮಹೀಧ್ರಂ-ಕುಸುಮಿತ-ಪುಷ್ಪಿಸಿದ, ವನ-ತೋಟಗಳ, ರಾಜಿ-ಸಾಲುಗಳಲ್ಲಿ, ಶುಷ್ಮಿ-ಮದವುಳ್ಳ, ಭೃಂಗ-ತುಂಬಿಗಳಿಂದಲೂ, ದ್ವಿಜಕುಲ-ಹಕ್ಕಿಗಳಗುಂಪುಗಳಿಂದಲೂ, ಘುಷ್ಟ-ಘೋಷಿಸಲ್ಪಟ್ಟ, ಸರಃ-ಕೊಳಗಳೂ, ಸರಿತ್-ಹೊಳೆಗಳೂ, ಮಹೀಧ್ರಂ-ಬೆಟ್ಟಗಳೂಳ್ಳಂತಾವನವನ್ನು, ಅವಗಾಹ್ಯ-ಪ್ರವೇಶಿಸಿ, ಗಾಃ-ಗೋವುಗಳನ್ನು, ಚಾರಯನ್-ಮೇಯಿಸುತಲಿರುವನಾಗಿ, ವೇಣುಂ-ಕೊಳಲನ್ನು, ಚುಕೂಜ-ನುಡಿಸಿದನು॥೨॥ಕಾಶ್ಚಿತ್-ಕೆಲವರಾದ, ವ್ರಜಸ್ತ್ರಿಯಃ-ಗೋಕುಲದಹೆಂಗಳು, ಕೃಷ್ಣಸ್ಯ-ಕೃಷ್ಣನ, ಸ್ಮರೋದಯಂ-ಕಾಮೋದ್ರೇಕವುಳ್ಳ, ತದ್ವೇಣುಗೀತಂ-ಆಕೊಳಲಹಾಡನ್ನು, ಆಶ್ರುತ್ಯ-ಕೇಳಿ, ಪರೋಕ್ಷಂ-ಹಿಂಗಡೆಯಲ್ಲಿ, ಸ್ವಸಖೀಭ್ಯಃ-ತಮ್ಮಗೆಳತಿಯರಿಗೆ, ಅನ್ವವರ್ಣಯನ್-ಬಣ್ಣಿಸಿಹೇಳಿದರು ॥೩॥ ನೃಪ-ಅರಸನೇ! ತತ್-ಆವೇಣುಗಾನವನ್ನು, ವರ್ಣಯಿತುಂ-ಬಣ್ಣಿಸುವುದಕ್ಕೆ, ಆರಬ್ಧಾಃ-ತೊಡಗಿದವರಾಗಿ, ಕೃಷ್ಣಚೇಷ್ಟಿತಂ-ಕೃಷ್ಣನ ಲೀಲೆಯನ್ನು, ಸ್ಮರಂತ್ಯಃ-ನೆನಪುಗೊಳ್ಳುವರಾಗಿ, ಸ್ಮರವೇಗೇನ-ಕಾಮದಜವದಿಂದ, ವಿಕ್ಷಿಪ್ತಮನಸಃ-ಹಾರಿಸಲ್ಪಟ್ಟಮನಸ್ಸುಳ್ಳವರಾದ್ದರಿಂದಲೇ, ನಾಶಕನ್-ತಡೆಯಲಾರದೆಹೋದರು ॥೪॥ ಬರ್ಹಾಪೀಡಂ-ಬರ್ಹ-ನವಿಲಗರಿಯೇ, ಆಪೀಡಂ-ಶಿರೋಭೂಷಣವಾ

---

* ೨೧ನೆಯ ಅಧ್ಯಾಯವು. *

ಶ್ರೀಧರೀಯಶ್ಲೋಕಃ॥ಏಕವಿಂಶೇಶರದ್ರಮ್ಯೇ ಬೃಂದಾವನಗತೇಹರೌ। ತದ್ವೇಣುಸ್ವನಮಾಕರ್ಣ್ಯಗೋಪೀಭಿರ್ಗೀತವಿಸ್ಮಯಃ ॥ಟೀಕೆ॥ ಇಪ್ಪತ್ತೊಂದನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ಶರತ್ಕಾಲದಿಂ ರಮಣೀಯವಾದ ಬೃಂದಾವನವನೆಯ್ದುತಿರಲಾಗಿ ಆಕೃಷ್ಣನ ವೇಣುಗಾನವಂಕೇಳಿ, ಗೋಪಸ್ತ್ರೀಯರು ಗೀತವಂಪಾಡಿದರೆಂಬರ್ಥವಂ ಶುಕಮುನಿಯು ಪರೀಕ್ಷಿದ್ರಾಯನುಕುರಿತು ನುಡಿವನದೆಂತೆನೆ,-

ಎಲೈ, ಅರಸನೇ! ಅನಂತರದಲ್ಲಿ ಶ್ರೀಕೃಷ್ಣನು ಶರತ್ಕಾಲದಿಂ ನಿರ್ಮಲಗಳಾದ ಜಲಗಳುಳ್ಳ, ಮತ್ತು ರಮಣೀಯವಾದ ಪದ್ಮಗಂಧದಗಾಳಿಯಿಂದ ಅನುಸರಿಸಲ್ಪಟ್ಟ ಬೃಂದಾವನವಂ ಗೋವುಗಳೊಡನೆ ಗೋಪಾಲಕರೊಡನೆಯೂ ಕೂಡಿದವನಾಗಿ ಪ್ರವೇಶಿಸಿದನು.॥೧॥ ಆಮೇಲೆಕೃಷ್ಣನು ಪುಷ್ಟಿಯುಂಟಾದವನ ಪಙ್ಕ್ತಿಗಳಲ್ಲಿ ಮದಿಸಿದತುಂಬಿಗಳ ಝುಂಕಾರದಿಂಕೂಡಿದ ಸರಸ್ಸುಗಳು ಹೊಳೆಗಳು ಬೆಟ್ಟಗಳು ಸಹವುಳ್ಳ ಬೃಂದಾವನವಂ ಪ್ರವೇಶಿಸಿ, ಗೋಪಾಲರೊಡಗೂಡಿ, ರಾಮನೊಂದಿಗೆ ಗೋವುಗಳಂಮೇಯಿಸುವವನಾಗಿ ವೇಣುಗಾನವಮಾಡಿದನು ॥೨॥ ಆಗ ಗೋಕುಲದಲ್ಲಿ ಗೋಪಿಯರು ಕಾಮವಿಕಾರವನುಂಟುಮಾಡುವ, ಕೃಷ್ಣನ ವೇಣುಗಾನವಂಕೇಳಿ, ಕೆಲವರು ಪರೋಕ್ಷವಾಗಿ ಆವೇಣುಗಾನವಂ ಬಣ್ಣಿಸತೊಡಗಿದರು ॥೩॥ ಆಗ ಕೃಷ್ಣನವೇಣುಗಾನವಂ ವರ್ಣಿಸತೊಡಗಿದ ಗೋಪಿಯರು ಕೃಷ್ಣನವ್ಯಾಪಾರವಂನೆನಪುಗೊಳ್ಳುತ ಕಾಮವೇಗದಿಂ ವ್ಯಾಕುಲವಾದಮನಸ್ಸುಳ್ಳವರಾಗಿ ಆವೇಣುಗಾನವಂ ವರ್ಣಿಸಲುಸಮರ್ಥರಾಗಲಿಲ್ಲ॥೪॥(ಎಂತಾ ಕೃಷ್ಣನನೆನ ಪುಗೋಪಿಯರಮನಸಿಗೆ ಕ್ಷೋಭಕವಾಯಿತೋ ಅದಂ ಪೇಳುವನದೆಂತೆನೆ-) ಆಶ್ರೀ

ಟವರವಪುಃ ಕರ್ಣಯೋಃ ಕರ್ಣಿಕಾರಂ ಬಿಭ್ರದ್ವಾಸಃ ಕನಕಕಪಿಶಂ ವೈಜಯಂತೀಂ ಚ ಮಾಲಾಮ್ । ರಂಧ್ರಾನ್ವೇಣೋರಧರಸುಧಯಾಪೂರಯನ್ಗೋಪವೃಂದೈರ್ವೃಂದಾರಣ್ಯಂ ಸ್ವಪದರಮಣಂ ಪ್ರಾವಿಶದ್ಗೀತಕೀರ್ತಿಃ ‖ ೫ ‖ ಇತಿ ವೇಣುರವಂ ರಾಜನ್ಸರ್ವಭೂತಮನೋಹರಮ್ । ಶ್ರುತ್ವಾ ವ್ರಜಸ್ತ್ರಿಯಸ್ಸರ್ವಾ ವರ್ಣಯಂತ್ಯೋಽಭಿರೇಮಿರೇ ‖ ೬ ‖ ಗೋಪ್ಯಃ ‖ ಅಕ್ಷಣ್ವತಾಂ ಫಲಮಿದಂ ನ ಪರಂ ವಿದಾಮಸ್ಸಖ್ಯಃ ಪಶೂನನುವಿವೇಶಯತೋರ್ವಯಸ್ಯೈಃ । ವಕ್ತ್ರಂ ವ್ರಜೇಶಸುತಯೋರನುವೇಣುಜುಷ್ಟಂ ಯೈರ್ವಾ ನಿಪೀತಮನುರಕ್ತಕಟಾಕ್ಷಮೋಕ್ಷಮ್ ‖ ೭ ‖ ಚೂತಪ್ರವಾಳಬರ್ಹಸ್ತಬಕೋತ್ಪಲಾಬ್ಜಮಾ

---

ಗಿಯೂ, ನಟವರವಪುಃ-ನಟ್ಟುವರಲ್ಲಿ ಶ್ರೇಷ್ಠನಾದವನಂತಿರುವ ಶರೀರವನ್ನು, ಕರ್ಣಯೋಃ-ಕಿವಿಗಳಲ್ಲಿ, ಕರ್ಣಿಕಾರಂ-ಕರ್ಣಿಕಾರಪುಷ್ಪವನ್ನೂ, ಕನಕಕಪಿಶಂ-ಬಂಗಾರದಂತೆ ಹಳದಿಯಾದ, ವಾಸಃ-ವಸ್ತ್ರವನ್ನೂ, ವೈಜಯಂತೀಂ-ವೈಜಯಂತಿಯೆಂಬ, ಮಾಲಾಂ-ಹಾರವನ್ನೂ, ಬಿಭ್ರತ್-ಧರಿಸಿದವನಾಗಿಯೂ, ಅಥವಾ ನಟವರನಂತೆ ಶರೀರವುಳ್ಳವನಾಗಿಯೂ, ಬರ್ಹಾಪೀಡಾದಿಗಳನ್ನು ಧರಿಸಿದವನಾಗಿಯೂ, ವೇಣೋಃ-ಕೊಳಲಿನ, ರಂಧ್ರಾನ್-ತೂತುಗಳನ್ನು, ಅಧರಸುಧಯಾ-ಕೆಳತುಟಿಯ ಅಮೃತದಿಂದ, ಪೂರಯನ್-ತುಂಬುತಲಿರುವನಾಗಿಯೂ, ಗೋಪವೃಂದೈಃ-ಗೋಪಾಲಕರ ಗುಂಪುಗಳಿಂದ, ಗೀತಕೀರ್ತಿಃ-ಹಾಡಲ್ಪಟ್ಟ ಯಶಸ್ಸುಳ್ಳವನಾದ ಕೃಷ್ಣನು, ಸ್ವಪದರಮಣಂ-ಸ್ವ-ತನ್ನ, ಪದ-ಹೆಜ್ಜೆಗಳಿಂದ, ರಮಣಂ-ಅನುರಾಗವನ್ನು ಹುಟ್ಟಿಸುತಲಿರುವ, ಬೃಂದಾರಣ್ಯಂ-ಬೃಂದಾವನವನ್ನು, ಪ್ರಾವಿಶತ್-ಹೊಕ್ಕನು ‖೫‖ ರಾಜನ್-ಅರಸೇ! ಇತಿ-ಹೀಗೆ, ಸರ್ವಭೂತಮನೋಹರಂ-ಸಕಲಪ್ರಾಣಿಗಳಿಗೂ ರುಚ್ಯವಾದ, ವೇಣುರವಂ-ವೇಣುಶಬ್ದವನ್ನು, ಶ್ರುತ್ವಾ-ಕೇಳಿ, ವ್ರಜಸ್ತ್ರಿಯಸ್ಸರ್ವಾಃ-ಗೋಕುಲದ ಹೆಂಗಳೆಲ್ಲರೂ, ವರ್ಣಯಂತ್ಯಃ-ವರ್ಣಿಸುತಲಿರುವರಾಗಿ, ಅಭಿರೇಮಿರೇ-ಕ್ರೀಡಿಸಿದರು ‖೬‖ (ಗೋಪಿಯರ ವಚನವು) ಅಕ್ಷಣ್ವತಾಂ-ಕಂಣುಳ್ಳವರಿಗೆ, ಇದಂ ಫಲಂ-ಇದು ಪ್ರಯೋಜನವು, ಪರಂ-ಅನ್ಯವನ್ನು, ನ ವಿದಾಮಃ-ತಿಳಿಯೆವು. ಸಖ್ಯಃ-ಗೆಳತಿಯರೇ! ಪಶೂನನು-ಪಶುಗಳನ್ನು ಅನುಸರಿಸಿ, ವಯಸ್ಯೈಃ-ಸರಿಪ್ರಾಯದ ಸಂಗಾತಿಗಳೊಡನೆ, ನಿವೇಶಯತೋಃ-ವನವನ್ನು ಪ್ರವೇಶಿಸುತಲಿರುವ, ವ್ರಜೇಶಸುತಯೋಃ-ಗೋಕುಲದೊಡೆಯನ ಮಕ್ಕಳಾದ ರಾಮಕೃಷ್ಣರ, ಅನುವೇಣು-ಅನುಸರಿಸಿದ ಕೊಳಲುಳ್ಳಂತಾ, ಅನುರಕ್ತಕಟಾಕ್ಷಮೋಕ್ಷಂ-ಅನುರಕ್ತ-ಅಕ್ಕರೆಗೊಂಡ, ಕಟಾಕ್ಷ-ಕುಡಿನೋಟಗಳ, ಮೋಕ್ಷಂ-ಹರಡಿಕೆಯುಳ್ಳ, ವಕ್ತ್ರಂ-ಮುಖವು, ಯೈಃ-ಯಾರಿಂದ, ನಿಪೀತಂ-ಕುಡಿಯಲ್ಪಟ್ಟಂತೆ ನೋಡಲ್ಪಟ್ಟಿತೋ, ತೈಃ-ಅವರಿಂದ, ಜುಷ್ಟಂ-ಆ ಫಲವು ಸೇವಿಸಲ್ಪಟ್ಟದ್ದಾಗಿರುವುದು ‖೭‖

---

ಕೃಷ್ಣನು ನಟಶ್ರೇಷ್ಠನ ಶರೀರದಂತೆ ಮನೋಹರವಾದ ಶರೀರವಂ ಧರಿಸಿ ನವಿಲ ಬಾಲದ ಗರಿಯ ಶಿರೋಭೂಷಣವನ್ನೂ ಕಿವಿಗಳಲ್ಲಿ ಕರ್ಣಿಕಾರಪುಷ್ಪವನ್ನೂ, (ಬೆಟ್ಟದಾವರೆ ಹುವ್ವು) ಬಂಗಾರದಂತೆ ಹಳದಿ ಬಣ್ಣವಾಗಿರುವ ದುಕೂಲವನ್ನೂ, ಕೊರಳಲ್ಲಿ ವೈಜಯಂತಿಯೆಂಬ ವನಮಾಲೆಯನ್ನೂ, ಧರಿಸಿದವನಾಗಿ, ಮತ್ತು ಕೊಳಲರಂಧ್ರಗಳನ್ನು ತನ್ನ ಅಧರಾಮೃತದಿಂದ ಪೂರಿಸುತ ಗಾನಗೆಯ್ಯುತಲೂ, ಗೋಪಾಲಸಮೂಹಂಗಳಿಂ ಶ್ಲಾಘಿಸಲ್ಪಡುತ್ತಲೂ, ಕೀರ್ತಿಯುಳ್ಳವನಾಗಿ, ತನ್ನ ಹೆಜ್ಜೆಗಳ ಗುರುತುಗಳಿಂದ ಮನೋಹರವಾದ ಬೃಂದಾವನವಂ ಪ್ರವೇಶಿಸಿದನು ‖೫‖ ಎಲೈ ಅರಸೇ! ಆ ಗೋಕುಲದಲ್ಲಿರುವ ಸ್ತ್ರೀಯರೆಲ್ಲರೂ ಈ ರೀತಿಯಿಂದ ಸರ್ವಪ್ರಾಣಿಗಳ ಮನಸ್ಸನ್ನು ಅಪಹರಿಸುತಲಿರುವ ಶ್ರೀಕೃಷ್ಣನ ವೇಣುಗಾನವಂ ಕೇಳಿ, ಅದಂ ವರ್ಣಿಸುತ ಅಡಿಗಡಿಗೂ ಪರಮಾನಂದರೂಪನಾದ ಶ್ರೀಕೃಷ್ಣನಂ ತಮ್ಮ ಮನಸ್ಸಿನಿಂದ ಆಲಿಂಗನಗೆಯ್ದರು ‖೬‖ (ಆ ಗೋಪಸ್ತ್ರೀಯರು ಕೃಷ್ಣನ ವೇಣುಗಾನವಂ ಬಣ್ಣಿಸುವ ಪರಿಯೆಂತೆನೆ-) ಎಲೆ, ಸಖಿಯರ್ಗಳಿರಾ! ಮಿತ್ರರಾದ ಗೋಪಾಲ ಬಾಲಕರೊಡಗೂಡಿರುವ, ಗೋವುಗಳಂ ಬೃಂದಾವನವಂ ಪ್ರವೇಶಂಗೆಯ್ಸುವ, ನಂದಗೋಪನ ಪುತ್ರರಾದ, ರಾಮಕೃಷ್ಣರ ಕೊಳಲಗಾನಂಗೆಯ್ವ ಮನೋಹರವಾದ ಕಟಾಕ್ಷವೀಕ್ಷಣಗಳುಳ್ಳ ಮುಖವು- ಯಾರಿಂದ ಆದರದೊಡನೆ ಚನ್ನಾಗಿ ನೋಡಲ್ಪಟ್ಟಿತೋ ಆ ಜನಗಳಿಂದಲೇ ಕಂಣುಳ್ಳವರಿಂದ ಪಡೆಯಲ್ಪಡತಕ್ಕ ಪ್ರಿಯದರ್ಶನರೂಪವಾದ ಫಲವು ಪಡೆಯಲ್ಪಟ್ಟಿತೆಂಬರ್ಥವಂ ನಾವು ಬಲ್ಲೆವೇ ಹೊರತು ಮತ್ತೊಂದನ್ನರಿಯೆವು ‖ (ಮತ್ತೆ ಕೆಲವರು ಗೋಪಾಂಗನೆಯರು ವರ್ಣಿಸುವ ಪರಿಯೆಂತೆನೆ-

ಲಾನುಪೃಕ್ತಪರಿಧಾನವಿಚಿತ್ರವೇಷೌ । ಮಧ್ಯೇವಿರೇಜತುರಲಂಪಶುಪಾಲಗೋಷ್ಠ್ಯಾಂ ರಂಗೇಯಥಾನ
ಟವರೌಕ್ವಚಗಾಯಮಾನೌ ॥೮॥ ಗೋಪ್ಯಃಕಿಮಾಚರದಯಂಕುಶಲಂಸ್ಮವೇಣುರ್ದಾಮೋದರಾಧ
ರಸುಧಾಮಪಿಗೋಪಿಭೋಗ್ಯಾಮ್ । ಭುಂಕ್ತೇಸ್ವಯಂಯದವಶಿಷ್ಟರಸಂಹ್ರದಿನ್ಯೋಹೃಷ್ಯತ್ತ್ವಚೋ

---

ಚೂತ... .ವೇಷೌ-ಚೂತಪ್ರವಾಳ-ಮಾವಿನಚಿಗುರುಗಳ, ಬರ್ಹ-ನವಿಲಗರಿಗಳ, ಸ್ತಬಕ, ಗೊಂಚಲ್ಗಳ, ಉತ್ಪಲ-ನೈದಿಲೆಗಳ, ಅಬ್ಜ-ತಾವರೆಗಳ, ಮಾಲಾ-ಸರಗಳಿಂದ, ಅನುಪೃಕ್ತ-ಅಲ್ಲಲ್ಲಿಕಟ್ಟಲ್ಪಟ್ಟ, ಪರಿಧಾನ-ಉಡಿಗೆಯಿಂದ, ವಿಚಿತ್ರ-ಹಲವುಬಂಣವಾಗಿಆಶ್ಚರ್ಯಕರವಾದ, ವೇಷೌ-ಅಲಂಕಾರವುಳ್ಳ, ರಾಮಕೃಷ್ಣರು, ಪಶುಪಾಲಗೋಷ್ಠ್ಯಾಂ-ಗೋಪಾಲರಸಂಘದಲ್ಲಿ ಮಧ್ಯೇ-ನಡುವೆ, ಕ್ವಚ-ಒಂದುಸ್ಥಲದ, ರಂಗೇ-ಮಧ್ಯದಲ್ಲಿ, ಗಾಯಮಾನೌ-ಹಾಡುತಲಿರುವ, ನಟವರೌಯಥಾ-ನಟಶ್ರೇಷ್ಠರಲ್ಲಿ ಶ್ರೇಷ್ಠರುಹೇಗೋಹಾಗೆ, ಅಲಂ-ಅಧಿಕವಾಗಿ. ವಿರೇಜತುಃ-ಬೆಳಗಿದರು ॥೮॥ ಗೋಪ್ಯಃ-ಗೊಲ್ಲತಿಯರಿರಾ! ಅಯಂವೇಣುಃ ಈ ಕೊಳಲು, ಕಿಂಕುಶಲಂ-ಯಾವಪುಣ್ಯವನ್ನು, ಆಚರತ್ಸ್ಮ-ಮಾಡಿಯಿತ್ತೋ, ಯತ್-ಯಾವಕಾರಣದಿಂದ, ಗೋಪಿಭೋಗ್ಯಾಂ-ಗೋಪಿಯರಿಂದಅನುಭವಿಸಲ್ಪಡತಕ್ಕ, ದಾಮೋದರಾಧರಸುಧಾಮಪಿ-ಕೃಷ್ಣನತುಟಿಯಸವಿಯನ್ನೂಕೂಡ, ಅವಶಿಷ್ಟರಸಂ ಯಥಾತಥಾ-ರಸವುಳಿದಿರುವಂತೆ, ಸ್ವಯಂಭುಂಕ್ತೇ-ತಾನೇ ಅನುಭವಿಸುತಲಿದೆಯೋ, ಹ್ರದಿನ್ಯಃ-ಆಕೊಳಲುಬೆಳೆಯುವದಕ್ಕೆಸಹಾಯಕವಾಗಿದ್ದಹೊಳೆಗಳು, ಹೃಷ್ಯತ್ತ್ವಚಃ-ಸಂತೋಷಿಸುವಮೈಚರ್ಮವುಳ್ಳವುಗಳಂತೆ(ಅರಳಿದತಾವರೆಗಳುಳ್ಳವಾಗಿಕಾಣುತ್ತಿವೆ.)ಆರ್ಯಾಃ-ಹಿರಿಯರು, ಯಥಾ-ಹೇಗೋ. ತಥಾ-ಹಾಗೆ, ತರವಃ-ಮರಗಳು(ಬಿದಿರುಗಳು)ಅಶ್ರು-ಕಂಣೀರನ್ನು, ಮುಮುಚುಃ-ಸುರಿಸಿದವು (ನಮ್ಮಕುಲದವರಮಗುವಾದ ಕೊಳಲಿಗೆ ಇಷ್ಟುಪುಣ್ಯವುಂಟಾಯಿತೆಂಬ ಸಂತೋಷದಿಂದ ಜೇನೆಂಬಕಂಣೀ

---



ಮಾವಿನಚಿಗುರುಗಳಿಂದಲೂ ನವಿಲಗರಿಗಳಿಂದಲೂ ಹುವ್ವಿನಗೊಂಚಲುಗಳಿಂದಲೂ ನೈದಿಲೆಗಳಿಂದಲೂ ತಾವರೆಗಳಿಂದಲೂಕೂಡ ವಿಚಿತ್ರಗಳಾಗಿ ರಚಿಸಲ್ಪಟ್ಟಿರುವ ಮಾಲಿಕೆಗಳೊಡನೆ ಸ್ವಲ್ಪವಾಗಿ ಮಧ್ಯಮಧ್ಯದಲ್ಲಿ ಕೂಡಿರುವ ನೀಲಾಂಬರಪೀತಾಂಬರಗಳಿಂದ ವಿಚಿತ್ರವಾದದೇಹವುಳ್ಳ, ಆರಾಮಕೃಷ್ಣರೀರ್ವರೂ ಒಂದುಸಮಯದಲ್ಲಿ ಗೋಪಾಲಕರಸಭಾಮಧ್ಯದಲ್ಲಿ ಗಾನಂಗೆಯ್ಯುತಲಿರುವವರಾಗಿ ರಂಗಸ್ಥಾನದಲ್ಲಿ ನಟಶ್ರೇಷ್ಠರುಪ್ರಕಾಶಿಸುವಂತೆಅತಿಶಯವಾಗಿ ಬೆಳಗಿದರು. ಆಗೋಪಾಲಬಾಲಕರ ಭಾಗ್ಯವುಎಂತಾದ್ದೋ ತಿಳಿಯಲಿಲ್ಲವು॥೮॥(ಮತ್ತೆಕೆಲವರುನುಡಿಯುವರು)ಎಲೆ, ಗೆಳತಿಯರೇ! ಕೇಳಿ-ಯಾವಕಾರಣದಿಂ ಈಕೊಳಲು ಗೋಪಸ್ತ್ರೀಯರಿಂದಲೇ ಅನುಭವಿಸಲ್ಪಡತಕ್ಕ ಶ್ರೀಕೃಷ್ಣನ ಅಧರಾಮೃತವನ್ನು ತಾನು ಮನಸ್ಸುಬಂದಂತೆ ರಸಮಾತ್ರವು ಮಿಗುವಂತೆ ಅನುಭವಿಸುತ

ಶ್ರುಮುಮುಚುಸ್ತರವೋಯಥಾರ್ಯಾಃ ॥೯॥ ಬೃಂದಾವನಂಸಖಿಭುವೋವಿತನೋತಿಕೀರ್ತಿಂಯ
ದ್ದೇವಕೀಸುತಪದಾಂಬುಜಲಬ್ಧಲಕ್ಷ್ಮಿ । ಗೋವಿಂದವೇಣುಮನುಮತ್ತಮಯೂರನೃತ್ತಂಪ್ರೇಕ್ಷ್ಯಾದ್ರಿ
ಸಾನ್ವವರತಾನ್ಯಸಮಸ್ತಸತ್ತ್ವಮ್ ॥೧೦॥ ಧನ್ಯಾಃಸ್ಮಮೂಢಮತಯೋಽಪಿಹರಿಣ್ಯಏತಾಯಾನಂದನಂ
ದನಮುಪಾತ್ತವಿಚಿತ್ರವೇಷಮ್ । ಆಕರ್ಣ್ಯವೇಣುರಣಿತಂಸಹಕೃಷ್ಣಸಾರಾಃಪೂಜಾಂದಧುರ್ವಿರಚಿತಾಂಪ್ರ

---

ರನ್ನು ಸುರಿಸಿದವು) ॥೯॥ ಸಖಿ-ಗೆಳತಿಯೇ, ಯತ್-ಆವುದು, ದೇವಕೀ....ಲಕ್ಷ್ಮಿ-ದೇವಕೀಸುತ-ಕೃಷ್ಣನ, ಪದಾಂಬುಜ-ಅಡಿದಾ ವರೆಗಳಿಂದ, ಲಬ್ಧಲಕ್ಷ್ಮಿ-ಹೊಂದಲ್ಪಟ್ಟ ಭಾಗ್ಯವುಳ್ಳದ್ದೋ, ಗೋವಿಂದವೇಣುಮನು-ಕೃಷ್ಣನ ಕೊಳಲನ್ನು ಅನುಸರಿಸಿದ, ಮತ್ತಮಯೂರನೃತ್ತಂ-ಮದಿಸಿದ ನವಿಲುಗಳ ಕುಣಿದಾಟವನ್ನು, ಪ್ರೇಕ್ಷ್ಯ-ನೋಡಿ, ಅದ್ರಿ.... ಸತ್ತ್ವಂ-ಅದ್ರಿ-ಬೆಟ್ಟದ, ಸಾನು-ಜರಿಗಳಲ್ಲಿ, ಅವರತ-ಸುಮ್ಮನೆ ನಿಂತ, ಅನ್ಯ-ಇತರರಾದ, ಸಮಸ್ತಸತ್ತ್ವಂ-ಸಕಲಜಂತುಗಳುಳ್ಳದ್ದೋ, ತತ್-ಅಂತಹ, ಬೃಂದಾವನಂ-ಬೃಂದಾರಣ್ಯವು, ಭುವಃ-ಭೂಲೋಕಕ್ಕೆ, ಕೀರ್ತಿಂ-ಹೆಸರುವಾಸಿಯನ್ನು, ವಿತನೋತಿ-ವಿಸ್ತರಿಸುತಲಿದೆ ॥೧೦॥ ಯಾಃ-ಆವವುಗಳು, ವೇಣುರಣಿತಮಾಕರ್ಣ್ಯ-ವೇಣುಗಾನವನ್ನು ಕೇಳಿ, ಉಪಾತ್ತವಿಚಿತ್ರವೇಷಂ-ಹೊಂದಲ್ಪಟ್ಟ ವಿಚಿತ್ರವಾದ ಅಲಂಕಾರವುಳ್ಳ, ನಂದನಂದನಂ-ಕೃಷ್ಣನನ್ನು ಕುರಿತು, ಸಕೃಷ್ಣಸಾರಾಃ-ಗಂಡುಹುಲ್ಲೆಗಳಿಂದ ಸಹಿತವಾಗಿ, ಪ್ರಣಯಾವಲೋಕೈಃ-ಸ್ನೇಹದ ನೋಟಗಳಿಂದ, ವಿರಚಿತಾಂ-ಮಾಡಲ್ಪಟ್ಟ, ಪೂಜಾಂ-ಉಪಚಾರವನ್ನು, ದಧುಃ-ಸಮರ್ಪಿಸಿದವೋ, ತಾಃ ಏತಾಃ-ಆಯಾ, ಹರಿಣ್ಯಃ-ಹೆಣ್ಣುಹುಲ್ಲೆಗಳು, ಮೂಢಮತಯೋಽಪಿ-ಮುಗ್ಧಬುದ್ಧಿಗಳಾದರೂ ಕೂಡ, ಧನ್ಯಾಃಸ್ಮ-ಕೃತಾರ್ಥ

---

ಳಿವೆಯೋ; ಮತ್ತು ಯಾವ ಹೊಳೆಗಳ ನೀರಿನಿಂದ ಈ ಕೊಳಲು ಪೋಷಿಸಲ್ಪಟಿತೊ, ತಾಯಿಗೆ ಸಮಾನರಾದ ಆ ಹೊಳೆಗಳು ಕೂಡ ಯಾವ ಕಾರಣದಿಂದ ವಿಕಾಸಯುಕ್ತಗಳಾದ ಕಮಲವನಗಳೆಂಬ ನೆವದಿಂ ರೋಮಾಂಚವುಳ್ಳವಾಗಿ ಕಾಣಲ್ಪಡುತಲಿವೆಯೋ, ಮತ್ತು ಈ ಕೊಳಲು ಯಾವ ವೃಕ್ಷಗಳ ವಂಶದಲ್ಲಿ ಜನಿಸಿತೋ, ಆ ಬಿದಿರಮೆಳೆಗಳು ಸಹ ಯಾವ ರೀತಿಯಿಂದ ಕುಲವೃದ್ಧರು ತಮ್ಮ ವಂಶದಲ್ಲಿ ಹುಟ್ಟಿರುವ ಭಗವತ್ಸೇವಕನಾದ ಪುತ್ರರಂ ನೋಡಿ ರೋಮಾಂಚಯುಕ್ತರಾಗಿ ಆನಂದಬಾಷ್ಪವಂ ಬಿಡುವರೋ, ಆ ರೀತಿಯಿಂದಲೂ- ಯಾವ ಕಾರಣದಿಂದ ಜೇನುತುಪ್ಪದ ಮಧುಧಾರೆಯೆಂಬ ನೆವದಿಂದ ಆನಂದ ಬಾಷ್ಪವಂ ಬಿಟ್ಟಂತಹವಾದವೋ, ಆ ಕಾರಣದಿಂದಲೂ- ಈ ಕೊಳಲು ಎಂತಾ ಪುಣ್ಯವನ್ನು ಆಚರಿಸಿದುದಾಯಿತೋ ಅದಂ ನಾವರಿಯೆವು. [ ಕೃಷ್ಣನ ಅಧರಾಮೃತವನ್ನು ಗೋಪಿಯರು ಸವಿಯತಕ್ಕದ್ದಾಗಿರುವಲ್ಲಿ ಈ ಕೊಳಲು ಪಾನಂಗೆಯ್ವುದರಿಂದ ಬಹಳ ಪುಣ್ಯಮಾಡಿರಬಹುದು. ಇದು ಪಾನಮಾಡಿ ಮಿಕ್ಕ ರಸವನ್ನು ಹೊಳೆಗಳೂ ವೃಕ್ಷಗಳೂ ಪಾನಮಾಡುತ್ತಿವೆ. ಆದುದರಿಂದಲೇ ಶಿಷ್ಟರಾದವರು ತಮ್ಮ ವಂಶದಲ್ಲಿ ಭಾಗವತರು ಹುಟ್ಟಿದರೆ ತಾವು ಹೇಗೆ ಸಂತೋಷದಿಂದ ರೋಮಾಂಚಗೊಂಡು ಆನಂದ ಬಾಷ್ಪವಂ ಬಿಡುವರೋ ಹಾಗೆ ವೃಕ್ಷಗಳು ಪಟ್ಟೆಬಿಟ್ಟುಕೊಂಡದ್ದರಿಂದ ರೋಮಾಂಚಗೊಳ್ಳುತ್ತಿರುವಂತೆಯೂ ಕೊಂಬೆಗಳಿಂ ಜೇನು ಸೋರುತ್ತಿರುವುದರಿಂದ ಆನಂದ ಬಾಷ್ಪಂಗಳಂ ಸುರಿಸುವಂತೆಯೂ ತೋರುತ್ತಿವೆ. ] ॥೯॥ ( ಮತ್ತೆ ಕೆಲವರು ಬಣ್ಣಿಸುವರೆಂತೆನೆ- ) ಯಾವ ಬೃಂದಾವನವು ದೇವಕೀಪುತ್ರನಾದ ಕೃಷ್ಣನ ಪಾದಾರವಿಂದ ವಿನ್ಯಾಸಗಳಿಂದ ಪಡೆಯಲ್ಪಟ್ಟ ಕಾಂತಿಸಮೃದ್ಧಿಯುಳ್ಳದ್ದಾಗಿ ಕೃಷ್ಣನ ವೇಣುಗಾನವು ಕೇಳಿ, ಬಳಿಕ ಕೃಷ್ಣನನಂ ಮೆಲ್ಲನೆ ಗರ್ಜಿಸುವ ನೀಲಮೇಘವನ್ನಾಗಿ ತಿಳಿದು, ಮದಯುಕ್ತಗಳಾದ ನವಿಲುಗಳ ನರ್ತನಗಳಂ ಕಂಡು, ಆಯಾ ಪರ್ವತಗಳ ಜಲಗಳಲ್ಲಿ ಗುಂಪು ಗುಂಪಾಗಿ ನಿಂತು ಆಶ್ಚರ್ಯದಿಂ ಚೇಷ್ಟಾರಹಿತಗಳಾಗಿರುವ ಅನ್ಯಗಳಾದ ಸಮಸ್ತ ಪ್ರಾಣಿಗಳುಳ್ಳದ್ದಾಗಿ ಶೋಭಿಸುತ್ತಿರುವುದೋ ಆ ಬೃಂದಾವನವು ತಾನು ಸರ್ವೋತ್ಕೃಷ್ಟವಾದುದರಿಂದ ಭೂಲೋಕಕ್ಕೆ ಸ್ವರ್ಗಕ್ಕಿಂತಲೂ ಅತಿಶಯವಾದ ಕೀರ್ತಿಯಂ ವಿಸ್ತಾರಂಗೆಯ್ವುತಲಿದೆ. ॥೧೦॥ ( ಮತ್ತೆ ಕೆಲವರು ನುಡಿಯುವರು-) ಎಲೆ, ಸಖಿಯೇ! ಯಾವ ಹೆಣ್ಣುಹುಲ್ಲೆಗಳು ಕೃಷ್ಣನ ವೇಣುಗಾನವಂ ಕೇಳಿ ವಿಚಿತ್ರಾಲಂಕಾರವಂ ಧರಿಸಿರುವ ಕೃಷ್ಣಮೂರ್ತಿಯಂ ಕುರಿತು ಅಕ್ಕರೆಯಿಂ ಕೂಡಿದ ನೋಟಗಳಿಂದ ಪತಿಗಳೊಡನೆ ಪೂಜೆಯಂ ಮಾಡಿದವಾದವೋ ಆ ಹೆಣ್ಣುಹುಲ್ಲೆಗಳು ತಿರ್ಯಗ್ಜಂತುಗಳಾದರೂ ಕೃತಾ

ಣಯೋಪಲೋಕೈಃ ॥೧೧॥ ಕೃಷ್ಣಂನಿರೀಕ್ಷ್ಯವನಿತೋತ್ಸವರೂಪಶೀಲಂಶ್ರುತ್ವಾಚತತ್ಕ್ವಣಿತವೇಣುವಿಚಿತ್ರಗೀತಮ್ । ದೇವ್ಯೋವಿಮಾನಗತಯಃಸ್ಮರನುನ್ನಸಾರಾಭ್ರಶ್ಯತ್ಪ್ರಸೂನಕಬರಾಮುಮುಹುರ್ವಿನೀವ್ಯಃ॥೧೨॥ ಗಾವಶ್ಚಕೃಷ್ಣಮುಖನಿರ್ಗತವೇಣುಗೀತಪೀಯೂಷಮುತ್ತಭಿತಕರ್ಣಪುಟೈಃಪಿಬಂತ್ಯಃ। ಶಾಬಾಸ್ಸ್ನುತಸ್ತನಪಯಃಕಬಳಾಃಸ್ಮತಸ್ಥುರ್ಗೋವಿಂದಮಾತ್ಮನಿದೃಶಾಶ್ರುಕಳಾಃಸ್ಪೃಶಂತ್ಯಃ॥

---

ಗಳಲ್ಲವೇ? ॥೧೧॥ ವಿಮಾನಗತಯಃ-ಗಗನರಥಗಳಲ್ಲಿತಿರುಗುತಲಿರುವ, ದೇವ್ಯಃ-ದೇವಸ್ತ್ರೀಯರು, ವನಿತೋತ್ಸವರೂಪಶೀಲಂ-ವನಿತ-ಹೆಂಗಳಿಗೆ, ಉತ್ಸವ-ಸಂತೋಷಕರವಾದ, ರೂಪ-ಚಲುವಿಕೆಯೂ, ಶೀಲಂ-ಸ್ವಭಾವವೂವುಳ್ಳ, ಕೃಷ್ಣಂ-ಕೃಷ್ಣನನ್ನು ನಿರೀಕ್ಷ್ಯ-ನೋಡಿ, ತತ್ಕ್ವಣಿತವೇಣುವಿಚಿತ್ರಗೀತಂ-ತತ್-ಆಕೃಷ್ಣನ, ಕ್ವಣಿತ-ನುಡಿಸಲ್ಪಟ್ಟ, ವೇಣು-ಕೊಳಲಿನ, ವಿಚಿತ್ರ-ಆಶ್ಚರ್ಯಕರವಾದ, ಗೀತಂ-ಗಾನವನ್ನು, ಶ್ರುತ್ವಾಚ-ಕೇಳಿಯೂ, ಸ್ಮರನುನ್ನಸಾರಾಃ-ಸ್ಮರ-ಕಾಮೋದ್ರೇಕದಿಂದ, ನುನ್ನ-ತಳ್ಳಲ್ಪಟ್ಟ, ಸಾರಾಃ-ಧೈರ್ಯವುಳ್ಳವರಾದ್ದರಿಂದಲೇ, ಭ್ರಶ್ಯತ್ಪ್ರಸೂನಕಬರಾಃ-ಭ್ರಶ್ಯತ್-ಜಾರಿಬೀಳುತಲಿರುವ,ಪ್ರಸೂನ-ಪುಷ್ಪಗಳುಳ್ಳ, ಕಬರಾಃ-ತುರುಬುಗಳವರಾಗಿಯೂ, ವಿನೀವ್ಯಃ-ಬಿಚ್ಚಿಹೋದ, ಸಡಿಲಗಂಟುಳ್ಳವರಾಗಿಯೂ, ಮುಮುಹುಃ ಮೋಹವನ್ನುಪಡೆದರು॥೧೨॥ಗಾವಶ್ಚ-ಆಕಳೂಕೂಡ, ಕೃಷ್ಣ . .ಪೀಯೂಷಂ-ಕೃಷ್ಣ-ಕೃಷ್ಣನ, ಮುಖ-ಬಾಯಿಂದ,ನಿರ್ಗತ-ಹೊರಹೊರಟ, ವೇಣುಗೀತ-ಕೊಳಲಹಾಡೆಂಬ, ಪೀಯೂಷಂ-ಅಮೃತವನ್ನು, ಉತ್ತಭಿತಕರ್ಣಪುಟೈಃ-ಉತ್ತಭಿತ-ಕವಲದಂತೆಯೆತ್ತಲ್ಪಟ್ಟ, ಕರ್ಣಪುಟೈಃ-ಕಿವಿಗಳೆಂಬದೊನ್ನೆಗಳಿಂದ, ಪಿಬಂತ್ಯಃ-ಕುಡಿಯುತಲಿರುವವಾಗಿಯೂ, ಶಾಬಾಃ-ಕರುಗಳು, ಸ್ತನ....ಕಬಳಾಃ-ಸ್ತನ-ಆಕಳಮೊಲೆಯಿಂದ, ಸ್ನುತ-ಸೋರಿಹೋಗುತಲಿರುವ,ಪಯಃಕಬಳಾಃ-ಹಾಲುಗುಟುಕುಗಳುಳ್ಳವಾಗಿಯೂ, ಅಶ್ರುಕಳಾಃ-ಕಂಣೀರಿನಲೇಶವುಳ್ಳವುಗಳಾಗಿಯೂ, ಆತ್ಮನಿ-ಮನಸ್ಸಿನಲ್ಲಿ, ದೃಶಾ-ದೃಷ್ಟಿಮಾರ್ಗದಿಂದ, ಗೋವಿಂದಂ-ಕೃಷ್ಣನನ್ನು, ಸ್ಪೃಶಂತ್ಯಃ-ಸೋಂಕುತಲಿರುವವಾಗಿಯೂ, ತಸ್ಥುಃಸ್ಮ-ಕದಲದೆನಿಂತವಲ್ಲವೆ ॥೧೩॥ ಅಂಬ-ಅಮ್ಮಾ-

---

ರ್ಥಗಳಾದವು. ನಮ್ಮ ಪತಿಗಳಾದ ಗೋಪಾಲಕರಾದರೋ ತಾವು ಕ್ಷುದ್ರರಾದುದರಿಂದ ತಮ್ಮ ಯೆದುರಾಗಿ ನಮ್ಮಿಂದ ಆಕೃಷ್ಣನಿಗೆ ಮಾಡಲ್ಪಟ್ಟ ಪೂಜೆಯಂಸಹಿಸಲಾರದುದರಿಂದ ಕೃತಾರ್ಥರಲ್ಲವು. ॥೧೧॥ (ಮತ್ತೆ ಕೆಲವರು ವರ್ಣಿಸುವರೆಂತೆನೆ- ) ಎಲೈ, ಗೋಪಿಯರೇ! ಇನ್ನೊಂದಾಶ್ಚರ್ಯವಂ ಕೇಳುವರಾಗಿ . ಸ್ತ್ರೀಯರಿಗೆಮಹತ್ತಾದ ಉತ್ಸವವನುಂಟುಮಾಡುವ ಸೌಂದರ್ಯವೂ ಸ್ವಭಾವವೂ ಸಹಉಳ್ಳ ಶ್ರೀಕೃಷ್ಣನಂನೋಡಿ, ಮತ್ತು ಆಕೃಷ್ಣನಿಂದ ಧ್ವನಿಗೆಯಿಸಲ್ಪಟ್ಟ ಕೊಳಲಿನ ವಿಚಿತ್ರವಾದ ಗಾನವನ್ನೂ ಕೇಳಿ· ಆಕಾಶದಲ್ಲಿ ಸಂಚರಿಸುತಲಿರುವ ದೇವತಾಸ್ತ್ರೀಯರು ತಮ್ಮ ಪತಿಗಳಾದ ದೇವತೆಗಳತೊಡೆಗಳಲ್ಲಿ ಕುಳಿತಿರುವರಾದರೂ ಮನ್ಮಥನಿಂದ ಅಪಹರಿಸಲ್ಪಟ್ಟ ಧೈರ್ಯವುಳ್ಳವರಾಗಿ, ತುರುಬುಗಳಿಂದ ಜಾರಿಬೀಳುತಲಿರುವ ಪುಷ್ಪಮಾಲಿಕೆಗಳುಳ್ಳವರಾಗಿ ಸಡಲಿದ ಉಡಿಗಂಟುಳ್ಳವರಾಗಿಯೂ, ಮೋಹವನೆಯ್ದಿದರು ॥೧೨॥ (ಮತ್ತು ಗೋಪಿಯರು ವರ್ಣಿಸುವವರೆಂತೆನೆ- ) ಎಲೈ, ಗೆಳತಿಯರೇ! ಗೋವುಗಳುಕೂಡ ಶ್ರೀಕೃಷ್ಣನ ಮುಖಾರವಿಂದದ ದೆಸೆಯಿಂಹೊರಟಿರುವ ವೇಣುಗಾನವೆಂಬ ಅಮೃತವು ಇತ್ತತ್ತ ಸ್ರವಿಸುವದೋಎಂಬ ಶಂಕೆಯಿಂದ ಮೇಲಕ್ಕೆ ಎತ್ತಲ್ಪಟ್ಟ ಕಿವಿಗಳೆಂಬದೊನ್ನೆಗಳಿಂದ ಕುಡಿಯುತಲಿರುವವಾಗಿ ಮತ್ತು ಶ್ರೀಕೃಷ್ಣನಂ ನೇತ್ರಮಾತ್ರದಿಂ ತಮ್ಮ ಮನಸ್ಸಿನಲ್ಲಿ ಮುಟ್ಟುತಲಿವೆಯಾದುದರಿಂದ ನೇತ್ರಗಳಲ್ಲಿ ಆನಂದಬಾಷ್ಪಲೇಶಂಗಳಂ ಬಿಡುತ ತಮ್ಮ ತಮ್ಮ ವ್ಯಾಪಾರಂಗಳಂಮರೆತುನಿಂತವು. ಅದೇರೀತಿಯಿಂದ ಕರುಗಳುಕೂಡ ಸ್ತನ್ಯಪಾನದಲ್ಲಿ ಪ್ರವರ್ತಿಸಿದಂತಾವಾಗಿ, ಅನಂತರದಲ್ಲಿ ಆ ಶ್ರೀಕೃಷ್ಣನ ವೇಣುಗಾನವಂಕೇಳಿ ಆವೇಣುಗಾನವೆಂಬ ಅಮೃತವು ಮೇಲಕ್ಕೆಎತ್ತಲ್ಪಟ್ಟ ಕಿವಿಗಳೆಂಬ ದೊನ್ನೆಗಳಿಂದ ಪಾನಗೆಯ್ಯುತ ಆಸಮಯದಲಿ ತಮ್ಮತಮ್ಮತಾಯಿಗಳ ಸ್ತನ್ಯಗಳದೆಸೆಯಿಂದ ಸುಮ್ಮನೆ ತಮ್ಮಬಾಯಿಗಳಲ್ಲಿ ಸ್ರವಿಸುತಲಿರುವ ಕ್ಷೀರಗ್ರಾಸವುಳ್ಳಂತಾವಾಗಿ ಶ್ರೀಕೃಷ್ಣನನ್ನೇ ನೇತ್ರಗಳೆಂಬಮಾರ್ಗದಿಂದ ಮನಸ್ಸಿನಲ್ಲಿ ಮುಟ್ಟುತಲಿವೆಯಾದುದರಿಂದ ನೇತ್ರಗಳಲ್ಲಿ ಆನಂದಬಾಷ್ಪಗಳಂ ಬಿಡುತಲಿರುವುವಾಗಿ ತಮ್ಮತಮ್ಮ ವ್ಯಾಪಾರಂಗಳಂ ಮರೆತುನಿಂತವು.॥೧೩॥ (ಮತ್ತು ಕೆಲವರು ವರ್ಣಿಸುವರು.) ಎಲೈ ತಾಯೇ! ಬೃಂದಾವನದಲ್ಲಿ

ಪ್ರಾಯೋಬತಾಂಬಮುನಯೋವಿಹಗಾವನೇಽಸ್ಮಿನ್ ಕೃಷ್ಣೇಕ್ಷಿತಂತದುದಿತಂಕಲವೇಣುಗೀತಮ್ । ಆರುಹ್ಯ ಯೇದ್ರುಮಭುಜಾನ್ ರುಚಿರಪ್ರವಾಲಾನ್ ಶೃಣ್ವಂತಿಮೀಲಿತದೃಶೋವಿಗತಾನ್ಯವಾಚಃ ॥೧೪॥ ನದ್ಯಸ್ತದಾತದುಪಧಾರ್ಯಮುಕುಂದಗೀತಮಾವರ್ತಲಕ್ಷಿತಮನೋಭವಭಗ್ನವೇಗಾಃ । ಆಲಿಂಗನಸ್ಥಗಿತಮೂರ್ಮಿಭುಜೈರ್ಮುರಾರೇರ್ಗೃಹ್ಣಂತಿಪಾದಯುಗಳಂಕಮಲೋಪಹಾರಾಃ ॥೧೫॥ ದೃಷ್ಟ್ವಾತಪೇವ್ರಜಪಶೂನ್ ಸಹರಾಮಗೋಪೈಸ್ಸಂಚಾರಯಂತಮನುವೇಣುಮುದೀರಯಂತಮ್ । ಪ್ರೇಮಪ್ರವೃದ್ಧಉದಿತಃಕು

---

ಅಸ್ಮಿನ್ ವನೇ-ಈಕಾಡಿನಲ್ಲಿ, ಯೇ-ಆವುವು, ರುಚಿರಪ್ರವಾಲಾನ್- ಚೆಲುವಾದಚಿಗುರುಗಳುಳ್ಳ, ದ್ರುಮಭುಜಾನ್-ಮರದಕೊಂಬೆಗಳನ್ನು, ಆರುಹ್ಯ-ಏರಿ, ಮೀಲಿತದೃಶಃ-ಮುಚ್ಚಿಕೊಂಡಕಣ್ಣುಗಳುಳ್ಳವಾಗಿಯೂ. ವಿಗತಾನ್ಯವಾಚಃ-ವಿಗತ-ಬಿಟ್ಟುಹೋದ, ಅನ್ಯವಾಚಃ-ಬೇರೆಮಾತುಗಳುಳ್ಳವೂ ಆಗಿ, ಕೃಷ್ಣೇಕ್ಷಿತಂ ಕೃಷ್ಣನದೃಷ್ಟಿಯನ್ನೂ, ತದುದಿತಂ-ಆತನಿಂದಹುಟ್ಟಿದ, ಕಲವೇಣುಗೀತಂಚ-ಕಲ-ಅವ್ಯಕ್ತಮಧುರವಾದ, ವೇಣುಗೀತಂಚ-ಕೊಳಲಗಾನವನ್ನೂ, ಶೃಣ್ವಂತಿ-ಕೇಳುತಲಿವೆಯೋ, ತೇವಿಹಗಾಃ-ಆಪಕ್ಷಿಗಳು, ಪ್ರಾಯಃ-ಬಹುಶಃ-ಮುನಯಃ-ಮುನಿಗಳಾಗಿರಬಹುದು ಬತ ಆಶ್ಚರ್ಯವು ॥೧೪॥ ನದ್ಯಃ-ಹೊಳೆಗಳು, ತದಾ-ಆಕಾಲದಲ್ಲಿ, ತನ್ಮುಕುಂದಗೀತಂ-ಆಕೃಷ್ಣನಗಾನವನ್ನು, ಉಪಧಾರ್ಯ-ಕೇಳಿ, ಆವರ್ತ . ಆವರ್ತ-ಸುಳಿಗಳಿಂದ, ಲಕ್ಷಿತ-ಸೂಚಿಸಲ್ಪಟ್ಟ, ಮನೋಭವ-ಕಾಮನಿಂದ, ಭಗ್ನವೇಗಾಃ-ಕುಂದಿದವೇಗವುಳ್ಳವಾಗಿ, ಆಲಿಂಗನಸ್ಥಗಿತಂ ಯಥಾಭವತಿತಥಾ- ಅಪ್ಪಿಕೊಳ್ಳುವುದರಿಂದಮುಚ್ಚಲ್ಪಟ್ಟವು ಹೇಗಿರುವುದೋ ಹಾಗೆ, ಊರ್ಮಿಭುಜೈಃ-ಅಲೆಗಳೆಂಬತೋಳುಗಳಿಂದ, ಮುರಾರೇಃ-ಕೃಷ್ಣನ, ಪಾದಯುಗಳಂ-ಅಡಿಗಳೆರಡನ್ನೂ, ಕಮಲೋಪಹಾರಾಃ-ತಾವರೆಯೆಂಬ ಕಾಣಿಕೆಗಳುಳ್ಳವಾಗಿ, ಗೃಹ್ಣಂತಿ-ಧರಿಸುತಲಿರುವವು ॥೧೫॥ ಅಂಬುದಃ-ಮೇಘವು, ಆತಪೇ-ಬಿಸಿಲಿನಲ್ಲಿ, ರಾಮಗೋಪೈಃ ಸಹ- ರಾಮನೊಡನೆಯೂಗೋಪಾಲರೊಡನೆಯೂಕೂಡ, ವ್ರಜಪಶೂನ್-ಗೋಕುಲದ ಪಶುಗಳನ್ನು, ಸಂಚಾರಯಂತಂ-ಮೇಯಿಸುತಲಿರುವಂತಾ, ಅನುವೇಣುಂ-ಕೊಳಲನ್ನನುಸರಿಸಿ, ಉದೀರಯಂತಂ-ಹೆಚ್ಚಾಗಿಹಾಡುತಲಿರುವಕೃಷ್ಣನನ್ನು, ದೃಷ್ಟ್ವಾ-ನೋಡಿ, ಸಖ್ಯುಃ-ಗೆಳೆಯನಾದಕೃಷ್ಣನಮೇಲೆ, ಉದಿತಃ-ಅಂತರಿಕ್ಷದಲ್ಲಿಕಾಣಿಸಿಕೊಂಡದ್ದಾಗಿ, ಪ್ರೇಮಪ್ರವೃದ್ಧಃ-ಪ್ರೇಮಸ್ನೇಹದಿಂ

---

ಯಾವಪಕ್ಷಿಗಳು ಪುಷ್ಪಫಲಾದಿಗಳಿಂದ ಮರೆಯಿಲ್ಲದೆ ತಮಗೆಶ್ರೀಕೃಷ್ಣದೇವನದರ್ಶನವು ಉಂಟಾಗುವಂತೆ ಮನೋಹರಗಳಾದ ಚಿಗುರುಗಳುಳ್ಳ ಶಾಖೆಗಳನ್ನು ಏರಿ, ಶ್ರೀಕೃಷ್ಣನಿಂದ ಪ್ರಕಟಂಗೆಯ್ಯಲ್ಪಟ್ಟ ಮಧುರವಾದವೇಣುಗಾನವು ಒಂದಾನೊಂದು ಸುಖವಿಶೇಷದಿಂದ ಮುಚ್ಚಲ್ಪಟ್ಟ ನೇತ್ರಗಳುಳ್ಳವಾಗಿ, ತ್ಯಾಗಂಗೆಯ್ಯಲ್ಪಟ್ಟ ಇತರವಾಕ್ಕುಗಳುಳ್ಳವಾಗಿಯೂ, ಶ್ರವಣಗೆಯ್ಯುತಲಿವೆಯೋ, ಆ ಪಕ್ಷಿಗಳು ಬಹುತರವಾಗಿ ಮಹಾಮುನಿಗಳೇ ಆಗಿರಬಹುದು. ಅದುಹೇಗೆಂದರೆ ಲೋಕದಲ್ಲಿ ಮಹಾಮುನಿಗಳು ಯಾವರೀತಿಯಿಂದ ತಮಗೆ ಶ್ರೀಕೃಷ್ಣದರ್ಶನವಾದೀತೋ ಆ ರೀತಿಯಿಂದ ವೇದೋಕ್ತಕರ್ಮಫಲಗಳು ತ್ಯಜಿಸಿ ವೇದವೆಂಬ ವೃಕ್ಷಶಾಖೆಗಳನ್ನೇರಿ ಚಿಗುರುಗಳೆಂಬಂತೆ ಮನೋಹರಗಳಾದ ನಿಷ್ಕಾಮಕರ್ಮಗಳನ್ನು ಆಚರಿಸುತ್ತ ಸುಖಯುಕ್ತರಾಗಿ ಶ್ರೀಕೃಷ್ಣನಚರಿತ್ರೆಯನ್ನೇ ಶ್ರವಣಗೆಯ್ವರೋ, ಆ ರೀತಿಯಿಂದ ಆ ಮುನಿಗಳೇ ಈ ಪಕ್ಷಿಗಳಾಗಿರುವರು ॥೧೪॥ ಎಲೈ, ಸಖಿಯೇ! ಚೇತನಪ್ರಾಣಿಗಳ ವೃತ್ತಾಂತವಿರಲಿ ಅಚೇತನಗಳಾದ ನದಿಗಳೂಕೂಡ ಈ ಮುಕುಂದನ ವೇಣುಗಾನವನವಧರಿಸಿ ತಮ್ಮ ಪ್ರವಾಹಗಳಲ್ಲಿರುವ ಸುಳಿಗಳಿಂದ ಸೂಚಿಸಲ್ಪಟ್ಟ ತಮ್ಮ ಕಾಮಪೀಡೆಯಿಂ ಭಗ್ನವಾದ ವೇಗವುಳ್ಳವಾಗಿ ಆಲಿಂಗನದಿಂದ ಮರೆಮಾಡಲ್ಪಡುವಂತೆ ತೆರೆಗಳೆಂಬ ತಮ್ಮ ಭುಜಗಳಿಂದ ಕಮಲಾದಿಗಳೆಂಬ ಪೂಜಾದ್ರವ್ಯಗಳು ತೆಗದುಕೊಂಡು ಶ್ರೀಕೃಷ್ಣನ ಪಾದಪದ್ಮಯುಗಳವ ಧರಿಸುವಂತವುಗಳಾಗುವವು ॥೧೫॥ ಮತ್ತೂ ಬಲರಾಮನೊಡನೆಯೂ ಗೋಪಾಲಕರೊಡನೆಯೂ ಸಹ ಯುಕ್ತನಾಗಿ, ವೇಣುಗಾನವ ಗೆಯ್ಯುತ್ತ, ಗೋಕುಲದ ಗೋವುಗಳು ಬಿಸಿಲಿನಲ್ಲಿ ಸಂಚಾರವಂಮಾಡಿಸುತ ಮೇಯಿಸುತ್ತ, ಇರುವ ಶ್ರೀಕೃಷ್ಣಮೂರ್ತಿಯಂ ನೋಡಿ ನೀಲಮೇಘವರ್ಣ ಸಾಮ್ಯದಿಂದಲೂ ತಾಪಪರಿಹಾರಕತ್ವ ಸಾಮ್ಯದಿಂದಲೂ ತನಗೆಸಖನಾದ ಶ್ರೀಕೃಷ್ಣದೇವನ ಉಪರಿಭಾಗದಲುದ್ಭವಿಸಿ ಅಭಿವೃದ್ಧಿಯನೆಯ್ದಿ ಪುಷ್ಪಗಳಿಗೆ ಸಮಾನಗಳಾದ ಶೀತಳಗಳಾದ ಉದಕಬಿ

ಸುಮಾವಳೀಭಿಸ್ಸಖ್ಯುರ್ವ್ಯಧಾತ್ಸ್ವವಪುಷಾಂಬುದಆತಪತ್ರಮ್ ॥೧೬॥ ಪೂರ್ಣಾಃಪುಳಿಂದ್ಯಉರು
ಗಾಯಪದಾಬ್ಜರಾಗಶ್ರೀಕುಂಕುಮೇನದಯಿತಾಸ್ತನಮಂಡಿತೇನ । ತದ್ದರ್ಶನಸ್ಮರರುಜಸ್ತೃಣರೂ
ಷಿತೇನಲಿಂಪಂತ್ಯಆನನಕುಚೇಷುಜಹುಸ್ತದಾಧಿಮ್ ॥೧೭॥ ಹಂತಾಯಮದ್ರಿರಬಲಾಹರಿದಾಸವರ್ಯೋಯ
ದ್ರಾಮಕೃಷ್ಣಚರಣಸ್ಪರ್ಶಪ್ರಮೋದಃ । ಮಾನಂತನೋತಿಸಹಗೋಗಣಯೋಸ್ತಯೋರ್ಯತ್ಪಾನೀಯ
ಸೂಯವಸಕಂದರಕಂದಮೂಲೈಃ ॥೧೮॥ ಗಾಗೋಪಕೈರನುವನಂನಯತೋರುದಾರವೇಣುಸ್ವನೈಃಕ

---

ವ. ವರ್ಷನ್-ಮಳೆಯದ್ದಾಗಿ, ಕುಸುಮಾವಳೀಭಿಸ್ಸಹ-ಹೂವಿನಬಂತಿಗಳಂತಿರುವಮಂಜಿನತುಂತುರಗಳೊಡನೆ, ಸ್ವವಪುಷಾ-ತನ್ನ ದೇಹದಿಂದ, ಆತಪತ್ರಂ-ನೆಳಲನ್ನುಂಟುಮಾಡುವಕೊಡೆಯನ್ನು, ವ್ಯಧಾತ್-ಮಾಡಿತು ॥೧೬॥ ದಯಿತಾಸ್ತನಮಂಡಿತೇನ, ದಯಿತಾ-ಪ್ರಿಯಸ್ತ್ರೀಯರ, ಸ್ತನ-ಕುಚಗಳಲ್ಲಿ, ಮಂಡಿತೇನ-ಬಳಿಯಲ್ಪಟ್ಟದ್ದಾಗಿದ್ದಂತಾ, ಉರು .. ಕುಂಕುಮೇನ-ಉರುಗಾಯ-ದೊಡ್ಡವರೆಂದುಕೊಂಡಾಡಲ್ಪಟ್ಟಕೃಷ್ಣನ, ಪದಾಬ್ಜ-ಅಡಿದಾವರೆಗಳ, ರಾಗ-ಕೆಂಜಿಕೆಯಿಂದ, ಶ್ರೀ-ರತಿಸಮಯದಲ್ಲಿ ಸಂಪದ್ಯುಕ್ತವಾದ, ಕುಂಕುಮೇನ-ಕುಂಕುಮದಿಂದ, ತೃಣರೂಷಿತೇನ-ಬಳಿಕ ಗಿಡುನೆಲಗಳಲ್ಲಿತಿರುಗುವಾಗ ಹುಲ್ಲುಗಳಲ್ಲಿಮೆತ್ತಿಕೊಂಡಿರುವ ಆಕುಂಕುಮದಿಂದ, ತದ್ದರ್ಶನಸ್ಮರರುಜಃ-ತತ್-ಆಕುಂಕುಮದ, ದರ್ಶನ-ನೋಟದಿಂದಾದ, ಸ್ಮರರುಜಃ-ಕಾಮಪೀಡೆಯುಳ್ಳವರಾದ, ಪುಳಿಂದ್ಯಃ-ಬೇಡತಿಯರು, ಆನನಕುಚೇಷು-ಮುಖದಲ್ಲಿಯೂ ಮೊಲೆಗಳಲ್ಲಿಯೂ, ಲಿಂಪಂತ್ಯಃ-ಬಳಿದುಕೊಳ್ಳುವರಾಗಿ, ತದಾಧಿಂ-ತತ್-ಆಕಾಮನ, ಆಧಿಂ-ಚಿಂತೆಯನ್ನು, ಜಹುಃ-ತೊರೆದರು. ಆದ್ದರಿಂದ, ಪೂರ್ಣಾಃ-ಕೃತಾರ್ಥರಾಗಿರುವರು ॥೧೭॥ ಹೇಅಬಲಾಃ-ಎಲೌಹೆಂಗಳಿರಾ! ಯತ್-ಯಾವಕಾರಣದಿಂದ, ರಾಮ ...ಪ್ರಮೋದಃ-ರಾಮಕೃಷ್ಣ-ಬಲರಾಮಕೇಶವರ, ಚರಣ-ಅಡಿಗಳ, ಸ್ಪರ್ಶ-ಸೋಂಕುವಿಕೆಯಿಂದ, ಪ್ರಮೋದಃ-ಹೆಚ್ಚು ಸಂತೋಷವುಳ್ಳವನಾಗಿರುವನೋ, ಯತ್-ಯಾವಕಾರಣದಿಂದ, ಸಹಗೋಗಣಯೋಃ-ಗೋವುಗಳಿಂದಲೂ, ಗೆಳೆಯರಾದಗೋಪಾಲಕರಗುಂಪಿನಿಂದಲೂಸಹಿತರಾದ, ತಯೋಃ-ಆರಾಮಕೃಷ್ಣರಿಗೆ, ಪಾನೀಯ—ಮೂಲೈಃ-ಪಾನೀಯ-ಕುಡಿಯತಕ್ಕನೀರಿನಿಂದಲೂ, ಸೂಯವಸ-ನವೀನಗಳಾದ ಹುಲ್ಲುಗಳಿಂದಲೂ, ಕಂದರ-ವಾಸಯೋಗ್ಯಗಳಾದಗುಹೆಗಳಿಂದಲೂ, ಕಂದಮೂಲೈಃ-ಗೆಡ್ಡೆಗಳಿಂದಲೂ ಬೇರುಗಳಿಂದಲೂ, ಮಾನಂ-ಯಥೋಚಿತಸನ್ಮಾನವನ್ನು, ತನೋತಿ-ಮಾಡುತಲಿರುವನೋ, ತತ್-ಆಕಾರಣದಿಂದ, ಅಯಮದ್ರಿಃ-ಈಬೆಟ್ಟವು, ಹರಿದಾಸವರ್ಯಃ-ವಿಷ್ಣುಭಕ್ತರಲ್ಲಿಶ್ರೇಷ್ಠನಾಗಿರುವುದು, ಹಂತ-ಸಂತೋಷವು ॥೧೮॥ ಹೇಸಖ್ಯಃ-ಎಲೌಗೆಳತಿಯರಿರಾ! ನಿರ್ಯೋಗಪಾಶಕೃತಲಕ್ಷಣಯೋಃ-ನಿರ್ಯೋಗ-ತಲೆಸುತ್ತುಗಳಿಂದಲೂ, ಪಾಶ-ಹೆಗಲಲ್ಲಿರುವಕಟ್ಟುಹಗ್ಗಗಳಿಂದಲೂ, ಕೃತಲಕ್ಷಣಯೋಃ-

---

ದುಗಳಂ ಸ್ವಲ್ಪವಾಗಿ ವರ್ಷಿಸುತ ಮೇಘವು ತನ್ನ ಶರೀರದಿಂದ ಛತ್ರರೂಪವಾಗಿ ಶ್ರೀಕೃಷ್ಣದೇವನಿಗೆ ನೆರಳನುಂಟುಮಾಡಿತು. ॥೧೬॥ (ಮತ್ತೆ ಕೆಲವರುಸ್ತ್ರೀಯರು ಸೀತ್ಕಾರಪೂರ್ವಕವಾಗಿನುಡಿಯುವರದೆಂತೆನೆ-) ಎಲೈ, ಸಖಿಯರುಗಳಿರಾ! ಆದಿಯಲ್ಲಿ ಕೃಷ್ಣನಿಗೆ ಅತಿಪ್ರೀತಿಪಾತ್ರರಾದ ಸ್ತ್ರೀಯರಕುಚಗಳಲ್ಲಿ ಬಳಿಯಟ್ಟ ಬಳಿಕ ರತಿಕ್ರೀಡಾಸಮಯದೊಳು ಕೃಷ್ಣನ ಅಡಿದಾವರೆಯ ಕೆಂಜಿಗೆಯಿಂಕೂಡಿದುದರಿಂದ ವಿಶೇಷಕಾಂತಿಯುಕ್ತವಾಗಿ ಬಳಿಕ ಬೃಂದಾವನಾದಿಸ್ಥಳಗಳಲ್ಲಿ ಕೃಷ್ಣಸಂಚಾರದಿಂದ ಅಲ್ಲಲ್ಲಿರುವಹುಲ್ಲುಗಳಲ್ಲಿ ತಗುಲಿದ್ದಾಗಿಪ್ರಕಾಶಿಸುವ ಆಕುಂಕುಮವನ್ನು ನೋಡಿ, ಕಾಮೋದ್ರೇಕವುಳ್ಳಕಿರಾತಸ್ತ್ರೀಯರು ಆಕುಂಕುಮವಂತೆಗದು ತಮ್ಮ ಮುಖಗಳಲ್ಲಿಯೂ ವಿರಹತಪ್ತಗಳಾದ ಕುಚಗಳಲ್ಲಿಯೂ ಪೂಸಿಕೊಳ್ಳುತ್ತ ಕಾಮವ್ಯಥೆಯಂ ಪರಿಹರಿಸಿಕೊಂಡು ಧನ್ಯರಾದರು. ನಾವುಮಾತ್ರವೆ ವ್ಯರ್ಥವಾದಜನ್ಮವುಳ್ಳವರಾದೆವು. ॥೧೭॥ ಎಲ್ಕೈ, ಗೆಳತಿಯರೇ! ಈಗೋವರ್ಧನಪರ್ವತವು ಕೃಷ್ಣಭಕ್ತರಲ್ಲಿ ಶ್ರೇಷ್ಠವಾದುದು ಹೇಗೆಂದರೆ- ಯಾವಕಾರಣದಿಂದ ರಾಮಕೃಷ್ಣರ ಅಡಿದಾವರೆಯಸೋಂಕಿನಿಂದ ಉಂಟಾದಹರ್ಷವುಳ್ಳದ್ದಾಗಿ ಹುಲ್ಲುಬೆಳೆದಿರುವುದರಿಂದ ರೋಮಾಂಚವುಳ್ಳದ್ದೋ ಎಂಬ ಹಾಗೆ ಗೋವುಗಳ ಹಿಂಡಿನಿಂದಕೂಡಿದ ರಾಮಕೃಷ್ಣರಿಗೆ ಉದಕ ಎಳೆಹುಲ್ಲು ವಿಶ್ರಮಾರ್ಥಗಳಾದಗವಿಗಳು ಆಹಾರಕ್ಕೆ ಉಪಯೋಗಿಸುವ ಕಂದಮೂಲಫಲಗಳು ಇವುಗಳಿಂದ ಯಥೋಚಿತವಾಗಿ ಬಹುಮಾನಂಗೆಯ್ಯುತಲಿದೆಯೋ ಆಕಾರಣದಿಂದಲೇ ಈಗೋವರ್ಧನಪರ್ವತವು ಕೃತಾರ್ಥವಾದುದು. ॥೧೮॥ ಮತ್ತು, ಎಲೈ, ಸಖಿಯರುಗಳಿರ! ಗೋಪಸ್ತ್ರೀಯರುಗಳಿರಾ! ಗೋಪಬಾಲಕರಿಂಕೂಡಿದ ಗೋವುಗಳಂ ವನದಲ್ಲಿ ಮೇಯಿಸುತ

ಲಪದೈಸ್ತನುಭೃತ್ಸುಸಖ್ಯಃ | ಅಸ್ಪಂದನಂಗತಿಮತಾಂಪುಲಕಸ್ತರೂಣಾಂನಿರ್ಯೋಗಪಾಶಕೃತಲಕ್ಷಣಯೋರ್ವಿಚಿತ್ರಮ್ ||೧೯|| ಶ್ರೀಶುಕಃ|| ಏವಂವಿಧಾಭಗವತೋಯಾಬೃಂದಾವನಚಾರಿಣಃ| ವರ್ಣಯಂತ್ಯೋ ಮಿಥೋಗೋಪ್ಯಃಕ್ರೀಡಾಸ್ತನ್ಮಯತಾಂಯಯುಃ ... ... ... ... ||೨೦||

ಇತಿಶ್ರೀಮದ್ಭಾಗವತೆ ದಶಮಸ್ಕನ್ಧೆ-ಏಕವಿಂಶೋಧ್ಯಾಯಃ-

---

ಪಾಡಲ್ಪಟ್ಟಗುರ್ತುಗಳುಳ್ಳವರೂ, ಗೋಪಕೈಃ-ಗೋಪರೊಡನೆ, ಅನುವನಂ-ಕಾಡನ್ನು ಅನುಸರಿಸಿ, ಗಾಃ-ಗೋವುಗಳನ್ನು, ನಯತೋಃ-ಅಟ್ಟುತಲಿರುವ, ರಾಮಕೃಷ್ಣರ, ಕಲಪದೈಃ-ಅವ್ಯಕ್ತಮಧುರಶಬ್ದಗಳುಳ್ಳ, ಉದಾರವೇಣುಸ್ವನೈಃ-ಸಟ್ಟಗಿರುವ ಕೊಳಲಧ್ವನಿಗಳಿಂದ, ತನುಭೃತ್ಸು-ದೇಹಧಾರಿಗಳಲ್ಲಿ, ಗತಿಮತಾಂ-ನಡಿಕೆಯುಳ್ಳಚರವಸ್ತುಗಳಿಗೆ, ಅಸ್ಪಂದನಂ-ಮಿಸುಕದಂತಿರುವಿಕೆಯೂ, ತರೂಣಾಂ-ಸ್ಥಾವರವಾದವೃಕ್ಷಗಳಿಗೆ, ಪುಲಕಃ-ರೋಮಾಂಚದಂತೆ, ಅಂಕುರೋದ್ಗಮವೂ, ವಿಚಿತ್ರಂ-ಆಶ್ಚರ್ಯಕರವಾಗಿರುವುದು ||೧೯|| ಬೃಂದಾವನಚಾರಿಣಃ-ಬೃಂದಾರಣ್ಯದಲ್ಲಿ ತಿರುಗುತಲಿರುವ, ಭಗವತಃ-ಕೃಷ್ಣನ, ಏವಂವಿಧಾಃ-ಇಂತಾಬಗೆಯಾದ, ಕ್ರೀಡಾಃ-ಆಟಗಳು, ಯಾಃ-ಯಾವವೋ, ತಾಃ-ಅವುಗಳನ್ನು, ಮಿಥಃ-ಅನ್ಯೋನ್ಯವಾಗಿ, ವರ್ಣಯಂತ್ಯಃ-ಬಣ್ಣಿಸುತಲಿರುವ, ಗೋಪ್ಯಃ-ಗೊಲ್ಲತಿಯರು, ತನ್ಮಯತಾಂ-ಕೃಷ್ಣರೂಪವಾಗಿರ್ಪಭಾವವನ್ನು, ಯಯುಃ-ಹೊಂದಿದರು ||೨೦||

ಇತಿಶ್ರೀಮದ್ಭಾಗವತ ಪ್ರತಿಶಬ್ದಾರ್ಥಬೋಧಿನ್ಯಾಂ ದಶಮಸ್ಕಂಧೇ ಏಕವಿಂಶೋಧ್ಯಾಯಃ.

---

ದುಷ್ಟಗಳಾದ ಗೋವೃಷಭಗಳಂ ನಿಗ್ರಹಿಸಲೋಸುಗ ಹಗ್ಗಗಳಸಿಂಬೆಗಳಂ ಶಿರಸ್ಸುಗಳಲ್ಲಿಯೂ ಹೆಗಲುಗಳಲ್ಲಿಯೂ ಹೊತ್ತುಕೊಂಡು ಗೋಪಾಲಕರಮಧ್ಯದಲ್ಲಿ ಸೊಬಗಿನಿಂದ ಸಂಚರಿಸುವ ರಾಮಕೃಷ್ಣರ ಮಧುರಪದಯುಕ್ತಗಳಾದ ಮಹಾವೇಣುಗಾನಗಳಿಂದ ಮೋಹಿತರಾದ ಸಂಚಾರವುಳ್ಳ ಪ್ರಾಣಿಗಳಿಗೆ ಗಾನಶ್ರವಣದಿಂದುಂಟಾದಸ್ತಬ್ಧತೆಯು ಸ್ಥಾವರಂಗಳಾದ ವೃಕ್ಷಾದಿಗಳಿಗೆ ಪುಷ್ಪೋದ್ಗಮಾದಿರೂಪವಾದರೋಮಾಂಚವೂಸಹ ಉಂಟಾಯಿತು. ||೧೯|| ಇಂತೆಂದು ಗೋಪಿಯರು ಬೃಂದಾವನದಲ್ಲಿ ಸಂಚಾರಂಗೆಯ್ವ ಭಗವಂತನಾದ ಕೃಷ್ಣನ ವೇಣುಗಾನವಂ ಬಣ್ಣಿಸುವರಾಗಿ ಶ್ರೀಕೃಷ್ಣಾತ್ಮಕತ್ವವನೆಯ್ದಿದರು. ... .. ||೨೦||

ಇಂತು ಶುಕಮುನಿಯು ಪರೀಕ್ಷಿದ್ರಾಯನಿಗೆ ನಿರೂಪಿಸಿದನೆಂದು ಸೂತಪೌರಾಣಿಕನು ನೈಮಿಶಾ
ರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಹೇಳಿದನೆಂಬಲ್ಲಿಗೆ-ಶ್ರೀಮನ್ಮಹೀಶೂರಪುರವ
ರಾಧೀಶ ಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜ ವಿರಚಿತಮಪ್ಪ, ಶ್ರೀ
ಭಾಗವತದಾಃಶ್ರೀಕೃಷ್ಣರಾಜ ವಾಣೀವಿಲಾಸ,, ಎಂಬ ಕರ್ಣಾಟಕ
ಭಾಷಾವ್ಯಾಖ್ಯಾನದಲ್ಲಿ ದಶಮಸ್ಕಂಧದೊಳು ೨೧ನೆಯ
ಅಧ್ಯಾಯವು ಸಂಪೂರ್ಣವಾದುದು.

ಮಂಗಳಮಸ್ತು

ಶ್ರೀಶುಕಃ॥ ಹೇಮನ್ತೇಪ್ರಥಮೇಮಾಸಿನನ್ದವ್ರಜಕುಮಾರಿಕಾಃ ।ಚೇರುರ್ಹವಿಷ್ಯಂಭುಂಜಾನಾಮಾಸಂ
ಕಾತ್ಯಾಯನೀವ್ರತಮ್ ॥೧॥ಆಪ್ಲುತ್ಯಾಂಭಸಿಕಾಳಿಂದ್ಯಾಜಲಾಂತೇಚೋದಿತೇಽರುಣೇ। ಕೃತ್ವಾಪ್ರತಿಕೃತಿಂ
ದೇವೀಮಾನರ್ಚುರ್ನೃಪಸೈಕತೀಮ್॥೨॥ಗಂಧೈರ್ಮಾಲ್ಯೈಸ್ಸುರಭಿಭಿರ್ಬಲಿಭಿರ್ಧೂಪದೀಪಕೈಃ ।ಉ
ಚ್ಚಾವಚೈಶ್ಚೋಪಹಾರೈಃಪ್ರವಾಳಫಲತಂಡುಲೈಃ ॥೩॥ಕಾತ್ಯಾಯನಿಮಹಾಮಾಯೇಮಹಾಯೋಗಿನ್ಯ
ಧೀಶ್ವರಿ । ನಂದಗೋಪಸುತಂದೇವಿಪತಿಂಮೇಕುರುತೇನಮಃ ॥೪॥ ಇತಿಮಂತ್ರಂಜಪಂತ್ಯಸ್ತಾಃಪೂ

---

೨೨ಅಧ್ಯಾಯ ಪ್ರತಿಪದಟೀಕೆ.

[ಶುಕವಾಕ್ಯವು]ಹೇಮಂತೇ-ಹಿಮಕಾಲದಲ್ಲಿ, ಪ್ರಥಮೇಮಾಸಿ-ಮೊದಲನೆಯತಿಂಗಳಾದಮಾರ್ಗಶಿರದಲ್ಲಿ, ನಂದವ್ರಜಕುಮಾರಿಕಾಃ-ನಂದಗೋಕುಲದಲ್ಲಿರುವಪ್ರಾಯದಹುಡುಗಿಯರು, ಹವಿಷ್ಯಂ-ದೇವಭಾಗಶೇಷವಾದಶುದ್ಧಾನ್ನವನ್ನು, ಭುಂಜಾನಾಸ್ಸತ್ಯಃ-ನಿಯತವಾಗಿಉಣ್ಣುತಲಿರುವರಾಗಿ, ಮಾಸಂ-ಒಂದುತಿಂಗಳುಮಾಡತಕ್ಕ, ಕಾತ್ಯಾಯನೀವ್ರತಂ-ಗೌರಿಯನೋಹಿಯನ್ನು, ಚೇರುಃ-ನೋಂತರು ॥೧॥ನೃಪ-ಅರಸನೇ! ಅರುಣೇ-ಸೂರ್ಯಸಾರಥಿಯು, ಉದಿತೇಸತಿ-ಮೂಡುತಲೂ.(ಬೆಳಗ್ಗೆ ೫ ಘಂಟೆಯಹೊತ್ತಾಗುತಲೂ) ಕಾಳಿಂದ್ಯಾಃ-ಯಮುನೆಯ, ಅಂಭಸಿ-ನೀರಿನಲ್ಲಿ, ಆಪ್ಲುತ್ಯ-ಮುಳುಗಿಯೆದ್ದು, ಜಲಾಂತೇ-ನೀರಿನ ಬಳಿಯಲ್ಲಿ, ಸೈಕತೀಂ-ಮರಳಿನಿಂದಾದ, ಪ್ರತಿಕೃತಿಂ-ಪ್ರತಿಬಿಂಬವನ್ನು, ಕೃತ್ವಾ-ಕಲ್ಪಿಸಿಕೊಂಡು, ದೇವೀಂ-ಗೌರಿಯನ್ನು, ಆನರ್ಚುಃ-ಪೂಜಿಸಿದರು ॥೨॥ಗಂಧೈಃ-ಪರಿಮಳದ್ರವ್ಯಗಳಿಂದಲೂ, ಸುರಭಿಭಿಃ-ಪರಿಮಳಿಸುತ್ತಿರುವ, ಮಾಲ್ಯೈಃ-ಹೂದಂಡೆಗಳಿಂದಲೂ, ಬಲಿಭಿಃ-ಪೂಜಾದ್ರವ್ಯಗಳಿಂದಲೂ, ಧೂಪದೀಪಕೈಃ-ಪರಿಮಳದಹೊಗೆಗಳಿಂದಲೂದೀಪಿಗೆಗಳಿಂದಲೂ, ಪ್ರವಾಳಫಲತಂಡುಲೈಃ-ಪ್ರವಾಳ-ಚಿಗುರುಗಳಿಂದಲೂ, ಫಲ-ಹಣ್ಣುಗಳಿಂದಲೂ, ತಂಡುಲೈಃ-ಅಕ್ಷತೆಗಳಿಂದಲೂ, ಉಚ್ಚಾವಚೈಃ-ಹಲವುಬಗೆಗಳಾದ, ಉಪಹಾರೈಃ-ಕಾಣಿಕೆಗಳಿಂದಲೂ, ಪೂಜಿಸಿದರು ॥೩॥ ಕಾತ್ಯಾಯನಿ-ಕಾತ್ಯಾಯನಮುನಿಗೆಮಗಳಾಗಿಅವತರಿಸಿಯಿದ್ದ ಶಿವಶಕ್ತಿಯೇ! ಮಹಾಮಾಯೆ-ಮಹಾಸಾಮರ್ಥ್ಯರೂಪಿಣಿಯೇ! ಮಹಾಯೋಗಿನಿ-ಹೆಚ್ಚುಉಪಾಯಗಳುಳ್ಳವಳೇ! ಅಧೀಶ್ವರಿ-ಒಡೆಯರಿಗೊಡೆಯಳೇ! ದೇವಿ-ಉಪಾಸ್ಯದೇವತೆಯೇ! ಮೇ-ನನಗೆ, ನಂದಗೋಪಸುತಂ-ಕೃಷ್ಣನನ್ನು, ಪತಿಂ-ಗಂಡನನ್ನಾಗಿ, ಕುರು-ಮಾಡು, ತೇ-ನಿನಗೆ, ನಮಃ-ನಮಸ್ಕಾರವು ॥೪॥ ಇತಿ-ಇಂತೆಂಬ, ಮಂತ್ರಂ-ದೇವತಾಪ್ರಸಾದಕರವಾದ, ಛಂದೋಬದ್ಧಶ್ಲೋಕವನ್ನು, ಜಪಂತ್ಯಃ-ವ್ಯಕ್ತವಾಗಿಪಠಿಸುತಲಿರುವ, ತಾಃ-ಕುಮಾರಿಕಾಃ-ಹುಡುಗಿಯರು.ಪೂಜಾಂ-ಗೌರಿಯಪೂ

---

*೨೨ನೆಯಅಧ್ಯಾಯವು.*

ಶ್ರೀಧರೀಯಶ್ಲೋಕ॥ ದ್ವಾವಿಂಶೇಗೋಪಕನ್ಯಾನಾಂ ವಸ್ತ್ರಹರಣಲೀಲಯಾ । ವರಂದತ್ವಾಗತಃಕೃಷ್ಣೋಯಜ್ಞಶಾಲಾವಿತೀರ್ಯತೇ॥ಟೀಕೆ॥ ಇಪ್ಪತ್ತೆರಡನೆಯ ಅಧ್ಯಾಯದಲ್ಲಿ ಗೋಪಸ್ತ್ರೀಯರ ವಸ್ತ್ರಾಪಹರಣವೆಂಬಲೀಲೆಯಿಂದ ಆಗೋಪಸ್ತ್ರೀಯರಿಗೆ ವರವನಿತ್ತು, ಅಲ್ಲಿಂದ ಯಜ್ಞಶಾಲೆಯನೆಯ್ದಿದ ಶ್ರೀಕೃಷ್ಣನಚರಿತ್ರವಂ ಶುಕಮುನಿಯು ಪರೀಕ್ಷಿದ್ರಾಯನಿಗುಸುರಿತು ನಿರೂಪಿಸುವನದೆಂತೆನೆ-

ಎಲೈ, ಪರೀಕ್ಷಿದ್ರಾಯನೇ! ಇಂತಿರಲು ಬಳಿಕ ಗೋಕುಲದಲ್ಲಿರುವ ಗೋಪಕನ್ಯೆಯರು ಹಿಮಕಾಲ ಬರುತಲೂ ಮಾರ್ಗಶಿರಮಾಸದಲ್ಲಿ ನಿಯಮದಿಂದ ಹವಿರ್ಭೋಜನಮಂಗೆಯ್ವುತ ಒಂದುತಿಂಗಳ ಕಾತ್ಯಾಯನೀಪೂಜೆಯೆಂಬ ವ್ರತವನಾಚರಿಸಿದರು.॥೧॥ ಅದೆಂತೆನೆ- ಪ್ರತಿದಿವಸದಲ್ಲಿಯೂ ಆಗೋಪಕನ್ಯೆಯರು ಅರುಣೋದಯವಾಗುತ್ತಿರಲು ಯಮುನೆಯಲ್ಲಿಮಿಂದು ನೀರಬಳಿಯಲ್ಲಿ ಮರಳಿನಿಂದ ಗೌರೀಪ್ರತಿಮೆಯಂಕಲ್ಪಿಸಿಕೊಂಡು ಆಪ್ರತಿಮೆಯಲ್ಲಿ ಗೌರೀದೇವಿಯಂ ಆವಾಹನಂಗೆಯ್ದು॥೨॥ ಗಂಧಗಳಿಂದಲೂ ಪರಿಮಳಿಸುವಪುಷ್ಪಮಾಲಿಕೆಗಳಿಂದಲೂ, ಧೂಪದೀಪಮೊದಲಾದ, ಹಲವುಬಗೆಯ ಉಪಹಾರಗಳಿಂದಲೂ, ತಾಂಬೂಲಗಳಿಂದಲೂ, ತಂಡುಲಾಕ್ಷತೆಗಳಿಂದಲೂ, ಬಲಿಗಳಿಂದಲೂ, ಕೂಡ ಪೂಜಿಸಿದರು.॥೩॥ "ಎಲೈ, ಮಹಾಮಾಯಾರೂಪಳಾದ ಮಹಾಯೋಗಿನಿಯಾದ ಕಾತ್ಯಾಯನೀದೇವಿಯೇ, ನಂದಗೋಪಪುತ್ರನಾದಶ್ರೀಕೃಷ್ಣನಂ ನಮಗೆ ಪತಿಯನ್ನಾಗಿಮಾಡು. ನಿನಗೆನಮಸ್ಕಾರವು, ॥೪॥ ಎಂಬ ಅರ್ಥವುಳ್ಳಮಂತ್ರವಂ ಗೋಪಕನ್ಯೆಯರೆಲ್ಲರೂ ಬೇರೆಬೇರೆಜಪಿಸುತ ಪೂಜಿ

ಜಾಂಚಕ್ರುಃ ಕುಮಾರಿಕಾಃ ॥೫॥ ಏವಂ ಮಾಸಂ ವ್ರತಂ ಚೇರುಃ ಕುಮಾರ್ಯಃ ಕೃಷ್ಣಚೇತಸಃ । ಭದ್ರಕಾಳೀಂ ಸಮಾನರ್ಚುರ್ಭೂಯಾನ್ನಂದಸುತಃ ಪತಿಃ ॥೬॥ ಉಷಸ್ಯುತ್ಥಾಯ ಗೋತ್ರೈಃ ಸ್ವೈರನ್ಯೋನ್ಯಾಬದ್ಧಬಾಹವಃ । ಕೃಷ್ಣಮುಚ್ಚೈರ್ಜಗುರ್ಯಾಂತ್ಯಃ ಕಾಲಿಂದ್ಯಾಂ ಸ್ನಾತುಮನ್ವಹಮ್ ॥೭॥ ನದ್ಯಾಃ ಕದಾಚಿದಾಗತ್ಯ ತೀರೇ ನಿಕ್ಷಿಪ್ಯ ಪೂರ್ವವತ್ । ವಾಸಾಂಸಿ ಕೃಷ್ಣಂ ಗಾಯಂತ್ಯೋ ವಿಜಹ್ರುಃ ಸಲಿಲೇ ಮುದಾ ॥ ಭಗವಾಂಸ್ತದಭಿಪ್ರೇತ್ಯ ಕೃಷ್ಣೋ ಯೋಗೇಶ್ವರೇಶ್ವರಃ । ವಯಸ್ಯೈರಾಗತಸ್ತತ್ರ ವೃತಸ್ತತ್ಕರ್ಮಸಿದ್ಧಯೇ । ತಾಸಾಂ ವಾಸಾಂಸ್ಯುಪಾದಾಯ ನೀಪಮಾರುಹ್ಯ ಸತ್ವರಃ । ಹಸದ್ಭಿಃ ಪ್ರಹಸನ್ ಬಾಲೈಃ ಪರಿಹಾಸಮುವಾ

---

ಚೆಯನ್ನು, ಚಕ್ರುಃ-ಮಾಡಿದರು ॥೫॥ ಕುಮಾರ್ಯಃ-ಹುಡುಗಿಯರು, ಕೃಷ್ಣಚೇತಸಸ್ಸತ್ಯಃ-ಕೃಷ್ಣನಲ್ಲಿ ಮನಸ್ಸುಳ್ಳವರಾಗಿ, ಏವಂ ಹೀಗೆ, ಮಾಸಂ-ತಿಂಗಳು, ವ್ರತಂ ನಿಯಮವನ್ನು, ಚೇರುಃ-ಆಚರಿಸಿದರು. ನಂದಸುತಃ-ನಂದನಮಗನು, ಪತಿಃ-ನಮಗೆಗಂಡನು, ಭೂಯಾತ್-ಆಗಲಿ, ಎಂದು, ಭದ್ರಕಾಳೀಂ-ಮಂಗಳಪ್ರದಳಾದಕಾಳೀದೇವಿಯನ್ನು, ಸಮಾನರ್ಚುಃ-ಚನ್ನಾಗಿಪೂಜಿಸಿದರು ॥೬॥ ಅನ್ವಹಂ-ಪ್ರತಿದಿವಸದಲ್ಲಿಯೂ, ಉಷಸಿ-ಬೆಳಗ್ಗಿನಝಾಮದಹೊತ್ತಿನಲ್ಲಿ, ಉತ್ಥಾಯ-ಎದ್ದು, ಸ್ವೈರ್ಗೋತ್ರೈಃ-ತಮ್ಮ ಹೆಸರುಗಳಿಂದ, ಅನ್ಯೋನ್ಯಾಬದ್ಧಬಾಹವಃ-ಅನ್ಯೋನ್ಯ-ಪರಸ್ಪರವಾಗಿ, ಆಬದ್ಧ-ಕಟ್ಟಿಕೊಳ್ಳಲ್ಪಟ್ಟ, ಬಾಹವಃ-ತೋಳ್ಗಳುಳ್ಳವರಾಗಿ, ಕಾಳಿಂದ್ಯಾಂ-ಯಮುನೆಯಲ್ಲಿ, ಸ್ನಾತುಂ-ಮಿಂದುವುದಕ್ಕೆ, ಯಾಂತ್ಯಃ-ಹೋಗುತಲಿರುವಹುಡುಗಿಯರು, ಕೃಷ್ಣಂ-ಕೃಷ್ಣನನ್ನು ಕುರಿತು, ಉಚ್ಚೈಃ-ಗಟ್ಟಿಯಾಗಿ, (ಹೆಚ್ಚಾದಷಡ್ಜಸ್ವರದಿಂದ,) ಜಗುಃ-ಹಾಡಿದರು ॥೭॥ ಕದಾಚಿತ್-ಒಂದುಸಮಯದಲ್ಲಿ, ನದ್ಯಾಃ-ಹೊಳೆಯದೆಸೆಯಿಂದ, ಆಗತ್ಯ-ಬಂದು, ವಾಸಾಂಸಿ-ಸೀರೆಕುಪ್ಪಸಗಳನ್ನು, ತೀರೇ-ತಡಿಯಲ್ಲಿ, ನಿಕ್ಷಿಪ್ಯ-ಇಟ್ಟು, ಪೂರ್ವವತ್-ಮುನ್ನಿನಂತೆ, ಕೃಷ್ಣಂಗಾಯಂತ್ಯಃ-ಕೃಷ್ಣನನ್ನು ಕುರಿತು ಹಾಡುತಲಿರುವರಾಗಿ, ಮುದಾ-ಸಂತೋಷದಿಂದ, ಸಲಿಲೇ-ನೀರಿನಲ್ಲಿ, ವಿಜಹ್ರುಃ-ವಿಶೇಷವಾಗಿಕ್ರೀಡಿಸಿದರು ॥೮॥ ಯೋಗೀಶ್ವರೇಶ್ವರಃ-ಯೋಗಿ-ಉಪಾಯವುಳ್ಳವರಿಗೆ, ಈಶ್ವರ-ಒಡೆಯರಾದವರಿಗೆ, ಈಶ್ವರಃ-ಒಡೆಯನಾದ, ಭಗವಾನ್-ಷಡ್ಗುಣೈಶ್ವರ್ಯಮುಳ್ಳ, ಕೃಷ್ಣಃ-ಕೃಷ್ಣನು, ತತ್-ಅವರುಕ್ರೀಡಿಸುವುದನ್ನು, ಅಭಿಪ್ರೇತ್ಯ-ತಿಳಿದುಕೊಂಡು, ತತ್ಕರ್ಮಸಿದ್ಧಯೇ-ತತ್-ಆಸ್ತ್ರೀಯರ, ಕರ್ಮ-ವ್ರತದ, ಸಿದ್ಧಯೇ-ಫಲವನ್ನುಕೊಡಲೋಸುಗ, ತತ್ರ-ಅಲ್ಲಿಗೆ, ವಯಸ್ಯೈಃ-ಸರಿಹುಡುಗರಿಂದ, ವೃತಃ-ಬಳಸಲ್ಪಟ್ಟವನಾಗಿ, ಆಗತಃ-ಬಂದವನಾದನು ॥೯॥ ತಾಸಾಂ-ಆಸ್ತ್ರೀಯರ, ವಾಸಾಂಸಿ-ವಸ್ತ್ರಗಳನ್ನು, ಉಪಾದಾಯ-ತೆಗೆದುಕೊಂಡು, ಸತ್ವರಃ-ವೇಗದಿಂಕೂಡಿದವನಾಗಿ, ನೀಪಂ-ಕದಂಬವೃಕ್ಷವನ್ನು, ಆರುಹ್ಯ-ಏರಿ, ಹಸದ್ಭಿಃ-ನಗುತಲಿರುವ, ಬಾಲೈಸ್ಸಮಂ-ಹುಡುಗರೊಡನೆ, ಪ್ರಹಸನ್-ಹೆಚ್ಚಾ

---

ಸಿದರು ‡ ॥೫॥ ಪ್ರಾರ್ಥಿಸುತ್ತ ಕಾತ್ಯಾಯನಿಯೆಂಬ ಗೌರಿಯ ಪೂಜಾವ್ರತವಂ ಈರೀತಿಯಾಗಿ ಒಂದುತಿಂಗಳು ಶ್ರೀಕೃಷ್ಣನಲ್ಲಿ ಆಸಕ್ತವಾದ ಮನಸ್ಸುಳ್ಳವರಾಗಿ ಆಚರಿಸಿದರು ‡ (ಆವಿಧಾನವಂ ನಿರೂಪಿಸುವನು) 'ನಂದಪುತ್ರನಾದ ಶ್ರೀಕೃಷ್ಣನು ತಮಗೆ ಪತಿಯಾಗಲಿ.' ಎಂಬ ಮನೋರಥಸಿದ್ಧಿಗೋಸುಗ ಗೌರೀಪೂಜೆಗೆಯ್ಯಲುದ್ಯುಕ್ತರಾದ ಆಗೋಪಕನ್ಯೆಯರು ‡ ॥೬॥ ಪ್ರತಿದಿವಸದಲ್ಲಿಯೂ ಉಷಃಕಾಲದೊಳೆದ್ದು ತಮ್ಮಹೆಸರುಗಳಿಂಗ್ರಹಿಸಲ್ಪಟ್ಟ ಅನ್ಯೋನ್ಯ ಹಸ್ತಗಳುಳ್ಳವರಾಗಿ ಯಮುನೆಯಲ್ಲಿ ಸ್ನಾನಂಗೆಯ್ಯಲೋಸುಗ ನಡೆತರುತ ಕೃಷ್ಣನಂ ಕುರಿತು ಗಟ್ಟಿಯಾಗಿ ಗಾನಂಗೈಯ್ದರು. ॥೭॥ ಹೀಗೆ ಗೌರೀವ್ರತವು ಆಚರಿಸಲ್ಪಡುತ್ತಿರಲು ಒಂದುಸಮಯದಲ್ಲಿ ಗೋಪಕನ್ಯೆಯರು ಪೂರ್ವದಂತೆ ಯಮುನಾನದಿಯನೆಯ್ದಿ ತಮ್ಮವಸ್ತ್ರಗಳಂ ತಡಿಯಲ್ಲಿರಿಸಿ ನದೀಜಲಮಧ್ಯದಲ್ಲಿ ಶ್ರೀಕೃಷ್ಣನಂ ಕುರಿತು ಗಾನಂಗೆಯ್ಯುತ ಜಲಕ್ರೀಡೆಗೆಯ್ದರು. ॥೮॥ ಭಗವಂತನಾಗಿ, ಯೋಗೇಶ್ವರರಿಗೂ ಈಶ್ವರನಾದ, ಶ್ರೀಕೃಷ್ಣನು- ಆಗೋಪಕನ್ಯೆಯರ ಅಭಿಪ್ರಾಯವಂ ತಿಳಿದು ಅವರಿಗೆ ಆ ವ್ರತಫಲವಂಕೊಡಲೋಸುಗ ಗೋಪಾಲಕರಿಂ ಪರಿವೃತನಾಗಿ ಆಯಮುನಾತೀರಕ್ಕೆ ಬಂದನು. ॥೯॥ ಅನಂತರದಲ್ಲಿ ಶ್ರೀಕೃಷ್ಣನು ಆ ಗೋಪಕನ್ಯೆಯರ ವಸ್ತ್ರಗಳನ್ನು ಅಪಹರಿಸಿ ಗೋಪಾಲಕರೊಡನೆ ನಗುತತ್ವರೆಯಿಂದ ಆಯಮುನಾತೀರದಲ್ಲಿ

ಚಹ ॥೧೦॥ ಅತ್ರಾಗತ್ಯಾಬಲಾಃಕಾಮಂಸ್ವಂಸ್ವಂವಾಸಃಪ್ರಗೃಹ್ಯತಾಮ್। ಸತ್ಯಂಬ್ರವಾಣಿನೋನರ್ಮ
ಯದ್ಯೂಯಂವ್ರತಕರ್ಶಿತಾಃ ॥೧೧॥ ನಮಯೋದಿತಪೂರ್ವಂವಾಹ್ಯನೃತಂತದಿಮೇವಿದುಃ। ಏಕೈಕಶಃ
ಪ್ರತೀಚ್ಛಧ್ವಂಸಹವಾತನುಮಧ್ಯಮಾಃ॥೧೨॥ ತಸ್ಯತತ್‍ಕ್ಷ್ವೇಳಿತಂದೃಷ್ಟ್ವಾಗೋಪ್ಯಃಪ್ರೇಮಪರಿಪ್ಲು
ತಾಃ । ವ್ರೀಡಿತಾಃಪ್ರೇಕ್ಷ್ಯಚಾನ್ಯೋನ್ಯಂಜಾತಹಾಸಾನನಿರ್ಯಯುಃ॥೧೩॥ ಏವಂಬ್ರುವತಿಗೋವಿಂದೇನರ್ಮ
ಣಾಕ್ಷಿಪ್ತಚೇತಸಃ। ಆಕಂಠಮಗ್ನಾಃಶೀತೋದೇವೇಪಮಾನಾಸ್ತಮಬ್ರುವನ್ ॥೧೪॥ ಮಾನಯಂಭೋಕೃಥಾ

---

ಗಿನಗುತಲಿರುವನಾಗಿ, ಪರಿಹಾಸಂ-ನಗೆಸರಸವಮಾತನ್ನು, ಉವಾಚಹ-ನುಡಿದನು॥೧೦॥ ಹೇಅಬಲಾಃ-ಎಲೆ ಹೆಂಗಳಿರಾ! ಅತ್ರ-ಇಲ್ಲಿ. ಆಗತ್ಯ-ಬಂದು, ಸ್ವಂಸ್ವಂವಾಸಃ-ನಿಮ್ಮನಿಮ್ಮ ವಸ್ತ್ರವ, ಕಾಮಂ-ಬೇಕಾದಂತೆ, ಪ್ರಗೃಹ್ಯತಾಂ-ತೆಗೆದುಕೊಳ್ಳಲ್ಪಡಲಿ. ಯತ್-ಯಾವಕಾರಣದಿಂದ, ಯೂಯಂ-ನೀವು, ವ್ರತಕರ್ಶಿತಾಃ-ವ್ರತ-ಗೌರೀಪೂಜಾನಿಯಮದಿಂದ, ಕರ್ಶಿತಾಃ-ಕೃಶರಾಗಿಮಾಡಲ್ಪಟ್ಟಿರುವಿರೋ, ತತ್-ಆಕಾರಣದಿಂದ, ಸತ್ಯಂ-ದಿಟವನ್ನು, ಬ್ರವಾಣಿ-ಹೇಳುವೆನು. ನರ್ಮ-ಹಾಸ್ಯದಮಾತು ನ-ಅಲ್ಲವು ॥೧೧॥ಮಯಾ-ನನ್ನಿಂದ, ಉದಿತಪೂರ್ವಂವಾ-ಮುಂಚೆಹೇಳಲ್ಪಟ್ಟಿರುವುದಾದರೂ, ಅನೃತಂ-ಸಟೆಯು, ನಹಿ-ಇಲ್ಲ, ವಷ್ಟೆ? ತತ್-ನಾನುದಿಟವನ್ನೇಹೇಳುವೆನೆಂಬುದನ್ನು, ಇಮೇ-ಈಹುಡುಗರು, ವಿದುಃ-ಬಲ್ಲರು, ಹೇತನುಮಧ್ಯಮಾಃ-ಎಲೇಸಣ್ಣಗಿರುವಸೊಂಟವುಳ್ಳಹೆಂಗಳಿರಾ! ಏಕೈಕಶಃ-ಒಬ್ಬೊಬ್ಬರಾಗಲೀ ಸಹವಾ ಒಂದಿಗೆಯಾಗಿಆಗಲೀ, ಪ್ರತೀಚ್ಛಧ್ವಂ-ಬಂದುತೆಕ್ಕೊಳ್ಳಿರಿ ॥೧೨॥ ತಸ್ಯ-ಆಕೃಷ್ಣನ, ತತ್-ಆ, ಕ್ಷ್ವೇಳಿತಂ-ಪರಿಹಾಸವನ್ನು, ದೃಷ್ಟ್ವಾ-ನೋಡಿ, ಪ್ರೇಮಪರಿಪ್ಲುತಾಃ-ಪ್ರೇಮಸ್ನೇಹರಸದಲ್ಲಿ, ಪರಿಪ್ಲುತಾಃ-ಮುಳುಗಿದವರಾದ, ಗೋಪ್ಯಃ-ಗೊಲ್ಲತಿಯರು, ವ್ರೀಡಿತಾಸ್ಸತ್ಯಃ-ನಾಚಿಕೆಯುಂಟಾದವರಾಗಿ, ಅನ್ಯೋನ್ಯಂ-ತಮ್ಮೊಳಗೊಬ್ಬರನ್ನೊಬ್ಬರು, ಪ್ರೇಕ್ಷ್ಯ-ನೋಡಿ-ಜಾತಹಾಸಾಃ- ಹುಟ್ಟಿದನಗೆಯುಳ್ಳವರಾಗಿ, ನನಿರ್ಯಯುಃ-ಹೊರಹೊಂಟುಬರಲಿಲ್ಲವು ॥೧೩॥ಗೋವಿಂದೇ-ಕೃಷ್ಣನು, ಏವಂ-ಹೀಗೆ, ಬ್ರುವತಿಸತಿ-ಹೇಳುತಲಿರುವನಾಗುತಲೂ, ನರ್ಮಣಾ-ಪರಿಹಾಸವಚನದಿಂದ, ಆಕ್ಷಿಪ್ತಚೇತಸೋಪಿ-ಆಕ್ಷೇಪಿಸಲ್ಪಟ್ಟ ಮನಸ್ಸುಳ್ಳವರಾದರೂ, ಶೀತೋದೇ- ತಂಣೀರಿನಲ್ಲಿ, ಆಕಂಠಮಗ್ನಾಃ-ಕೊರಳವರೆಗೂಮುಳುಗಿದವರಾದ್ದರಿಂದಲೇ, ವೇಪಮಾನಾಃ-ನಡುಗುತಲಿರುವರಾಗಿ, ತಂ-ಆಕೃಷ್ಣನನ್ನು ಕುರಿತು, ಅಬ್ರುವನ್-ನುಡಿದರು ॥೧೪॥ ಭೋ-ಓಕೃಷ್ಣನೇ! ಅನಯಂ-ಅನ್ಯಾಯವನ್ನು, ಮಾಕೃಥಾಃ-ಮಾಡಬೇಡ; ತ್ವಾಂತು-ನಿನ್ನನ್ನಾದರೋ, ಪ್ರಿಯಂ-ಇಷ್ಟನಾದ, ನಂದರಾಜಸುತಂ-ನಂದರಾಯನಮಗನನ್ನಾಗಿ, ಜಾನೀಮಃ-ತಿಳಿದಿರುವೆವು; ಅಂಗ-ಓಕೃ

---

ರುವ ಕದಂಬವೃಕ್ಷವನೇರಿ ಈರೀತಿಯಾಗಿ ಪರಿಹಾಸವಚನವನಾಡಿದನ ದೆಂತೆನೆ॥೧೦॥ಎಲೈಗೋಪಕನ್ಯೆಯರಿರಾ! ನೀವು ವ್ರತಾಚರಣದಿಂ ಶ್ರಮವನೆಯ್ದಿರುವುದರಿಂದ ನಿಮ್ಮಕುರಿತುನಾನು ದಿಟವಾದಮಾತಂಹೇಳುವೆನೇಹೊರತು ಇದ ಪರಿಹಾಸವಲ್ಲವು. ನೀವು ಈಮರದ ಮೇಲಕ್ಕೆಬಂದು ಇಚ್ಛೆಯಿದ್ದಂತೆ ನಿಮ್ಮನಿಮ್ಮ ವಸ್ತ್ರವಂ ಗ್ರಹಿಸುವರಾಗಿ ॥೧೧॥ ಎಲೈ, ಗೋಪಕನ್ಯೆಯರೇ! ಪೂರ್ವದಲ್ಲಿ ನನ್ನಿಂದ ಸುಳ್ಳುನುಡಿಯಲ್ಪಡಲಿಲ್ಲ.ಅದನ್ನು ಈಗೋಪಾಲಕರು ಬಲ್ಲರು. ಆದುದರಿಂದ ನೀವು ಒಬ್ಬೊಬ್ಬರಾಗಿಯಾದರೂ ಎಲ್ಲರೊಟ್ಟಾಗಿಯಾದರೂ ಇಲ್ಲಿಗೆಬಂದು ನಿಮ್ಮನಿಮ್ಮ ವಸ್ತ್ರಗಳಂ ತೆಗೆದುಕೊಳ್ಳುವರಾಗಿ. ॥೧೨॥ಇಂತೆಂಬ ಶ್ರೀಕೃಷ್ಣನ ಪರಿಹಾಸವಚನವಂ ಕೇಳಿ, ಪ್ರೇಮರಸದಲ್ಲಿ ಮುಳುಗಿದವರಾದ ಆಗೋಪಕನ್ಯೆಯರು ನಾಚಿಕೆಗೊಳುತ ಪರಸ್ಪರವಾಗಿನೋಡಿ ನಗುತಲೂ ಆಯಮುನಾಜಲ ಮಧ್ಯದಿಂ ನೆಯ್ದಿಂದ ಹೊರಕ್ಕೆಹೊರಟವರಾಗಲಿಲ್ಲ.॥೧೩॥ಈರೀತಿಯಲ್ಲಿ ಶ್ರೀಕೃಷ್ಣ



ನುನುಡಿಯುತ್ತಿರಲಾಗಿ ಆಪರಿಹಾಸವಚನದಿ.ಮೋಹಿತಚಿತ್ತರಾದಗೋಪಕನ್ಯೆಯರು ತಂಣೀರಲ್ಲಿ ಕುತ್ತಿಗೆಯತನಕ ಮುಳುಗಿರುವವರಾಗಿ ಸೀತದಿಂನಡುಗುತ ಕೃಷ್ಣನಂಕುರಿತು ಬಿನ್ನೈಸಿದರು॥೧೪॥ ಆಗೋಪಕನ್ಯೆಯರಮಧ್ಯ

ಸ್ತ್ವಾಂತುನಂದರಾಜಸುತಂಪ್ರಿಯಮ್। ಜಾನೀಮೋಂಗವ್ರಜಶ್ಲಾಘ್ಯಂದೇಹಿವಾಸಾಂಸಿವೇಪಿತಾಃ॥೧೫॥
ಶ್ಯಾಮಸುಂದರತೇದಾಸ್ಯಃಕರವಾಮತವೋದಿತಮ್। ದೇಹಿವಾಸಾಂಸಿಸರ್ವಜ್ಞನೋಚೇದ್ರಾಜ್ಞೇಬ್ರುವಾ
ಮಹೇ॥೧೬॥ ಶ್ರೀಭಗವಾನ್॥ ಭವತ್ಯೋಯದಿಮೇದಾಸ್ಯೋಮಯೋಕ್ತಂವಾಕರಿಷ್ಯಥ। ಅತ್ರಾಗತ್ಯಸ್ವ
ವಾಸಾಂಸಿಪ್ರತೀಚ್ಛತಸುಮಧ್ಯಮಾಃ। ನೋಚೇನ್ನಾಹಂಪ್ರದಾಸ್ಯೇಕಿಂವೃದ್ಧೋರಾಜಾಕರಿಷ್ಯತಿ॥೧೭॥
ತತೋಜಲಾಶಯಾತ್ಸರ್ವಾದಾರಿಕಾಃಶೀತವೇಪಿತಾಃ। ಪಾಣಿಭ್ಯಾಂಯೋನಿಮಾಚ್ಛಾದ್ಯಪ್ರೋತ್ತೇರುಸ್ತೀರ
ಮಂಗನಾಃ॥೧೮॥ ಭಗವಾನಹತಾವೀಕ್ಷ್ಯಶುದ್ಧಭಾವಪ್ರಸಾದಿತಃ। ಸ್ಕಂಧೇನಿಧಾಯವಾಸಾಂಸಿಪ್ರೀ

---

ಷ್ಣನೇ! ವ್ರಜಶ್ಲಾಘ್ಯಂ-ಗೋಕುಲದಲ್ಲಿಶ್ಲಾಘಿಸಲ್ಪಡುವಂತೆ, ವಾಸಾಂಸಿ-ವಸ್ತ್ರಗಳನ್ನು, ದೇಹಿ-ಕೊಡು; ವೇಪಿತಾಃ-ನಡುಗಿಸಲ್ಪಟ್ಟವರಾಗಿರುವೆವು॥೧೫॥ ಶ್ಯಾಮಸುಂದರ-ಶ್ಯಾಮ-ಕರಿಯನಾಗಿಯೂ,ಅಥವಾಪ್ರಾಯವುಳ್ಳವನಾಗಿಯೂ, ಸುಂದರ-ಚಲುವನಾಗಿಯೂಇರುವಕೃಷ್ಣನೇ! ತೇ-ನಿನ್ನ, ದಾಸ್ಯಃ-ಸೇವಕಿಯರಾಗಿ, ತವ-ನಿನ್ನಿಂದ, ಉದಿತಂ-ಹೇಳಲ್ಪಟ್ಟದ್ದನ್ನು, ಕರವಾಮ-ಮಾಡುವೆವು. ಸರ್ವಜ್ಞ-ಎಲ್ಲವಂಬಲ್ಲವನೇ! ವಾಸಾಂಸಿ-ವಸ್ತ್ರಗಳನ್ನು, ದೇಹಿ-ಕೊಡು, ನೋಚೇತ್-ಇಲ್ಲದೆಹೋದರೆ ರಾಜ್ಞೇ-ಅರಸಿಗೆ,ಬ್ರುವಾಮಹೇ-ದೂರುಹೇಳುವೆವು ॥೧೬॥ [ಭಗವದ್ವಚನ] ಭವತ್ಯಃ-ನೀವು, ಮೇ-ನನ್ನ, ದಾಸ್ಯೋವಾ-ಸೇವಕಿಯರೋ। ಯದಿ-ಆದರೆ, ಮಯಾ-ನನ್ನಿಂದ, ಉಕ್ತಂ-ಹೇಳಲ್ಪಟ್ಟದ್ದನ್ನು, ಕರಿಷ್ಯಥ-ಮಾಡುವಿರಿ. ಸುಮಧ್ಯಮಾಃ-ಸೊಗಸಾದಸೊಂಟವುಳ್ಳಹೆಂಗಳಿರಾ! ಅತ್ರ-ಇಲ್ಲಿ-ಆಗತ್ಯ-ಬಂದು, ಸ್ವವಾಸಾಂಸಿ-ನಿಮ್ಮಸೀರೆಗಳನ್ನು, ಪ್ರತೀಚ್ಛತ-ತೆಗೆದುಕೊಳ್ಳಿರಿ, ನೋಚೇತ್-ಇಲ್ಲವಾದರೆ, ಅಹಂ-ನಾನು, ನಪ್ರದಾಸ್ಯೇ-ಕೊಡೆನು, ವೃದ್ಧೋರಾಜಾ-ಮುದಿರಾಯನು, ಕಿಂಕರಿಷ್ಯತಿ-ಏನುಮಾಡುವನು; ॥೧೭॥ ತತಃ-ಆಮೇಲೆ, ದಾರಿಕಾಃ-ಹುಡುಗಿಯರಾದ, ಅಂಗನಾಃ-ಹೆಂಗಳು, ಶೀತವೇಪಿತಾಃ-ಶೀತ-ಚಳಿಯಿಂದ, ವೇಪಿತಾಃ-ನಡುಗಿಸಲ್ಪಟ್ಟವರಾದ್ದರಿಂದಲೇ, ಸರ್ವಾಃ-ಎಲ್ಲರೂ, ಪಾಣಿಭ್ಯಾಂ-ಎರಡುಅಂಗೈಗಳಿಂದಲೂ, ಯೋನಿಂ-ಗುಹ್ಯಸ್ಥಾನವನ್ನು, ಆಚ್ಛಾದ್ಯ-ಮುಚ್ಚಿಕೊಂಡು, ಜಲಾಶಯಾತ್-ನೀರಿನೊಳಗಿನಿಂದ, ತೀರಂ-ತಡಿಯನ್ನು ಕುರಿತು, ಪ್ರೋತ್ತೇರುಃ-ಹತ್ತಿಬಂದರು ॥೧೮॥ ಭಗವಾನ್-ಕೃಷ್ಣನು, ಅಹತಾಃ-ಕೊಂಚವೈನೆಯದೇಇರುವಸ್ತ್ರೀಯರನ್ನು,ವೀಕ್ಷ್ಯ-ನೋಡಿ, ಶುದ್ಧಭಾವಪ್ರಸಾದಿತಃ-ಶುದ್ಧಭಾವ-ಅಭಿಮಾನವಂತೊರೆದಅವರಮನಶ್ಶುದ್ಧಿಯಿಂದ, ಪ್ರಸಾದಿತಃ-ಪ್ರಸನ್ನನಾಗಿಮಾಡಲ್ಪಟ್ಟವನಾಗಿ, ಪ್ರೀತಃ-ಸ್ನೇಹವುಂಟಾದವನಾಗಿಯೂ, ಸಸ್ಮಿತಃ-ಕಿರುನಗೆಯಿಂಕೂಡಿದವನಾಗಿಯೂ, ವಾಸಾಂಸಿ-ವಸ್ತ್ರಗಳನ್ನು,ಸ್ಕಂಧೇ-ಹೆಗಲಿನಲ್ಲಿ

---

ದಲ್ಲಿಕೆಲವರುಮುಗ್ಧೆಯರು ನುಡಿವರದೆಂತೆನೆ-] "ಎಲೈ, ಶ್ರೀಕೃಷ್ಣನೆ! ನಾವುನಿನ್ನನ್ನು ನಂದಗೋಪಪುತ್ರನನ್ನಾಗಿಯೂ ನಮಗೆಅತ್ಯಂತ ಪ್ರಿಯನನ್ನಾಗಿಯೂ ಗೋಕುಲದಲ್ಲಿಶ್ಲಾಘ್ಯನನ್ನಾಗಿಯೂ ದೇವನನ್ನಾಗಿಯೂ ತಿಳಿದಿರುವೆವು, ನೀನು ಅನ್ಯಾಯುವಂಮಾಡಬ್ಯಾಡ ನಾವುಶೀತದಿಂದ ನಡುಗುತ್ತಿದ್ದೇವೆ. ನಮ್ಮವಸ್ತ್ರಗಳಂನಮಗೆ ಕೊಡುವನಾಗು," ಎಂದುನುಡಿದರು. ॥೧೫॥ [ಪ್ರೌಢಸ್ತ್ರೀಯರುನುಡಿದರದೆಂತೆನೆ-] ಎಲೈ, ಸರ್ವಜ್ಞನಾದ ಶ್ಯಾಮವರ್ಣದಿಂ ಸುಂದರರೂಪನಾದ ಶ್ರೀಕೃಷ್ಣನೇ! ನಾವೆಲ್ಲರೂನಿನ್ನದಾಸಿಯರು. ನಿನ್ನಿಂದ ಆಜ್ಞಾಪಿಸಲ್ಪಟ್ಟ ಅರ್ಥವನ್ನೇ ಆಚರಿಸುವವರು. ನಮ್ಮವಸ್ತ್ರಗಳಂ ನಮಗೆದಯೆಮಾಡುವವನಾಗು. ಹಾಗೆನೀನುದಯೆಮಾಡಿ ಕೊಡದೇಹೋದಪಕ್ಷದಲ್ಲಿ ನಿನಗೋಸುಗ ಧೊರೆಯಾದನಂದಗೋಪನಿಗಾದರೂ ಕುಸನಿಗಾದರೂ ಹೇಳುವೆವು. ॥೧೬ [ಎಂದುನುಡಿಯುತಲಿರುವ ಗೋಪಸ್ತ್ರೀಯರ ವಾಕ್ಯವಂಕೇಳಿ ಶ್ರೀಕೃಷ್ಣನು ಪ್ರತ್ಯುತ್ತರವಂ ನುಡಿದನದೆಂತೆನೆ-] ಎಲೈ, ಮನೋಹರವಾದ(ಮುಗುಳುನಗೆಯುಳ್ಳ) ಗೋಪಸ್ತ್ರೀಯರೇ! ನೀವು ನನ್ನದಾಸಿಯರಾಗಿ ನನ್ನಿಂದ ಹೇಳಲ್ಪಟ್ಟ ಅರ್ಥವನ್ನೇ ಆಚರಿಸುವರಾದರೆ ಇಲ್ಲಿಗೆಬಂದು ನಿಮ್ಮನಿಮ್ಮವಸ್ತ್ರಗಳ ನೀಸಿಕೊಳ್ಳಿರಿ. ಇಲ್ಲದಿದ್ದರೆ ನಾನುಕೊಡುವುದಿಲ್ಲ ನೀವುದೂರುಹೇಳಿದರೆಮುದಿರಾಯನೇನುಮಾಡುವನು!॥೧೭॥ಎಂದು ನುಡಿಯಲ್ಪಟ್ಟ ವಾಕ್ಯವಂಕೇಳಿ ಆಗೋಪಕನ್ಯೆಯರು ಶೈತ್ಯದಿಂದನಡುಗುತ ಯಮುನಾಜಲದಿಂದ ಎದ್ದುಬರಲೋಸುಗಲಜ್ಜೆಯಿಂ ತಮ್ಮಹಸ್ತಂಗಳಿಂದ ರಹಸ್ಯ ಸ್ಥಾನವಂಮುಚ್ಚಿಕೊಂಡು ತಡಿಗೆಹತ್ತಿಬಂದರು.॥೧೮॥ ಅನಂತರದಲ್ಲಿ ಆಗೋಪಸ್ತ್ರೀಯರ ಪರಿಶುದ್ಧವಾದ ಮನೋಭಾವವಂನೋಡಿ ಪ್ರಸನ್ನನಾದ ಶ್ರೀಕೃಷ್ಣಭಗವಂತನು ಅವರವಸ್ತ್ರಗಳಂ ಕದಂಬವೃಕ್ಷದಶಾಖೆಯಲ್ಲಿರಿಸಿ ರಜೋದರ್ಶನದಿಂ ಪ್ರೌಢರಾದಸ್ತ್ರೀಯರಂಕುರಿತ

ತತಃಪ್ರೋವಾಚಸಸ್ಮಿತಃ ||೧೯|| ಯೂಯಂವಿವಸ್ತ್ರಾಯದಪೋಧೃತವ್ರತಾವ್ಯಗಾಹತೈತತ್ತದುದೇವಹೆ
ಳನಮ್ | ಬದ್ಧ್ವಾಂಜಲಿಂಮೂರ್ಧ್ನ್ಯಪನುತ್ತಯೇಂಹಸಃಕೃತ್ವಾನಮೋಧೋವಸನಂಪ್ರಗೃಹ್ಯತಾಮ್ ||
ಇತ್ಯೇತದ್ವಚನಂಶ್ರುತ್ವಾಧರ್ಮಯುಕ್ತಂಮಹಾತ್ಮನಃ | ಏಕೇನಪಾಣಿನಾನೇಮುರೇಕೇನಾಚ್ಛಾದ್ಯಚಾಂಗ
ನಾಃ ||೨೧|| ತಾನ್ವೀಕ್ಷ್ಯೋವಾಚಭಗವಾನ್ಭೂಯೋಧರ್ಮ್ಯಮಿದಂವಚಃ || ಏಕೇನಪಾಣಿನಾಯೋವೈಪ್ರ
ಣಮೇದ್ದೇವಮಚ್ಯುತಮ್ ||೨೨|| ತಸ್ಯದಂಡಃಕರಚ್ಛೇದಇತಿಧರ್ಮವಿದೋವಿದುಃ | ತಸ್ಮಾದುಭಾಭ್ಯಾಂ
ಪಾಣಿಭ್ಯಾಂಪ್ರಣಮೇತ್ಸ್ವಾಮಿನಂನರಃ ||೨೩|| ತಥಾಚಯೂಯಂಕುರುತತನ್ಮೇಪ್ರಿಯತರಂಭವೇತ್ |

---

ಸ್ಮಿತಃ-ಹೊತ್ತುಕೊಂಡು, ಪ್ರೋವಾಚ-ಗಟ್ಟಿಯಾಗಿಹೇಳಿದನು||೧೯|| ಯೂಯಂ-ನೀವು, ಧೃತವ್ರತಾಅಪಿ-ಧರಿಸಲ್ಪಟ್ಟನಿಯ
ಮವುಳ್ಳವರಾದರೂ, ವಿವಸ್ತ್ರಾಃಸತ್ಯಃ-ವಸ್ತ್ರವಿಲ್ಲದವರಾಗಿ, ಅಪಃ-ನೀರಿನಲ್ಲಿ, ವ್ಯಗಾಹತೇತಿಯತ್-ಮುಳುಗಿದಿರಿ ಎಂಬುವುದು
ಯಾವುದುಂಟೋ, ತದೇತತ್-ಆಯಿದಾಬೆತ್ತಲೆಯಸ್ನಾನವು,ದೇವಹೇಳನಂಖು-ದೇವತೆಗಳನ್ನು ಅಣಕಿಸುವಿಕೆಯೇ, ಆಗಿರುವುದು,
ಅಂಹಸಃ-ಪಾಪದ, ಅಪನುತ್ತಯೇ-ಪರಿಹಾರಕವಾದಪ್ರಾಯಶ್ಚಿತ್ತಕ್ಕೋಸುಗ, ಮೂರ್ಧ್ನಿ-ತಲೆಯಲ್ಲಿ, ಅಂಜಲಿಂ-ಎರಡುಕೈಗ
ಳನ್ನು, ಬದ್ಧ್ವಾ-ಜೋಡಿಸಿಕೊಂಡು, ನಮಃ-ನಮಸ್ಕಾರವನ್ನು, ಕೃತ್ವಾ-ಮಾಡಿ, ಅಧಃ-ನಿಮ್ಮ, ವಸನಂ-ವಸ್ತ್ರವು, ಪ್ರಗೃಹ್ಯ
ತಾಂ-ಗ್ರಹಿಸಲ್ಪಡಲಿ ||೨೦||ಅಂಗನಾಃ-ಹೆಂಗಳು, ಮಹಾತ್ಮನಃ-ಮಹಾಮನಸ್ಕನಾದ ಕೃಷ್ಣನ, ಇತಿ-ಇಂತೆಂಬ, ಧರ್ಮಯುಕ್ತಂ-
ಧರ್ಮದಿಂದಕೂಡಿದ, ಏತದ್ವಚನಂ-ಈಮಾತನ್ನು, ಶ್ರುತ್ವಾ-ಕೇಳಿ, ಏಕೇನ-ಒಂದುಹಸ್ತದಿಂದ, ಆಚ್ಛಾದ್ಯ-ಮುಚ್ಚಿಕೊಂಡು,
ಏಕೇನಪಾಣಿನಾ-ಒಂದುಕೈಯಿಂದ, ನೇಮುಃ-ನಮಸ್ಕಾರಮಾಡಿದರು||೨೧|| ಭಗವಾನ್-ಕೃಷ್ಣನು, ತಾಃ-ಅಂತವರನ್ನು, ವೀಕ್ಷ್ಯ-
ನೋಡಿ, ಭೂಯಃ-ಮರಳಿಯೂ, ಧರ್ಮ್ಯಂ-ಧರ್ಮಯುಕ್ತವಾದ, ಇದಂವಚಃ-ಈಮಾತನ್ನು, ಉವಾಚ-ನುಡಿದನು! ಯಃ-ಯಾವ
ಪುರುಷನು, ಏಕೇನಪಾಣಿನಾ-ಒಂದುಕೈಯಿಂದ, ವೈ-ಪ್ರಸಿದ್ಧವಾಗಿ, ಅಚ್ಯುತಂದೇವಂ-ವಿಷ್ಣುದೇವನನ್ನು ಕುರಿತು, ಪ್ರಣಮೇತ್-
ನಮಸ್ಕರಿಸುವನೋ,||೨೨||ತಸ್ಯ-ಅವನಿಗೆ, ಕರಚ್ಛೇದಃ-ಕೈಕತ್ತರಿಸುವಿಕೆಯು, ದಂಡಃ-ಶಿಕ್ಷೆಯಾಗಿರುವುದು, ಇತಿ-ಹೀಗೆಧರ್ಮ
ವಿದಃ-ಧರ್ಮಜ್ಞರು,ವಿದುಃ-ತಿಳಿದಿರುವರು. ತಸ್ಮಾತ್-ಆಕಾರಣದ ದೆಸೆಯಿಂದ, ನರಃ-ಮನುಷ್ಯನು, ಸ್ವಾಮಿನಂ-ಒಡೆಯನನ್ನು
ಕುರಿತು,ಉಭಾಭ್ಯಾಂಪಾಣಿಭ್ಯಾಂ-ಎರಡುಕೈಗಳಿಂದಲೂ, ಪ್ರಣಮೇತ್-ಚನ್ನಾಗಿನಮಸ್ಕರಿಸಬೇಕು||೨೩|| ತಥಾಚ-ಹಾಗೆಯೇ,
ಯೂಯಂ-ನೀವು, ಕುರುತ-ಮಾಡಿರಿ, ತತ್-ಅದು, ಮೇ-ನನಗೆ, ಪ್ರಿಯತರಂ-ಬಹಳ ಸಂತೋಷವು, ಭವೇತ್-ಆಗುವದು,

---

ಪ್ರೀತಿಯುಕ್ತನಾಗಿ ಮುಗುಳುನಗೆಯೊಡಗೂಡಿದವನಾಗುತ ಒಂದುವಚನವಂನುಡಿದನು.||೧೯||ಅದೆಂತೆನೆ- ಎಲೈ
ಗೋಪಸ್ತ್ರೀಯರೇ! ನೀವುವಸ್ತ್ರವಿಲ್ಲದೆ ನದೀಜಲದಲ್ಲಿಮಿಂದು ವ್ರತವಂಮಾಡುವಿರಾದುದರಿಂದ ಗೌರೀದೇವಿಗೆ
ಅಪರಾಧವಾಯಿತೇ ಹೊರತು ಅದುಪ್ರೀತಿಕರವಾಗಲಿಲ್ಲ. [ಏತಕೆಂದರೆ ರಜೋದರ್ಶನವಾಗಿ ಪ್ರೌಢರಾದಸ್ತ್ರೀ
ಯರು ವಸ್ತ್ರವಿಲ್ಲದೇ ಜಲಪ್ರವೇಶವಂ ಮಾಡುವುದು ಶಾಸ್ತ್ರನಿಷಿದ್ಧವಾದುದರಿಂದ ವ್ರತಭಂಗದಿಂದುಂಟಾದ]
ಪಾಪವನ್ನು ಪರಿಹರಿಸಿಕೊಳ್ಳುವುದಕಾಗಿ ನೀವೆಲ್ಲರೂ ಶಿರಸ್ಸಿನಲ್ಲಿ ಅಂಜಲಿಬಂಧವಂ ಮಾಡಿಕೊಂಡು ನಮಸ್ಕಾ
ರವಂಮಾಡಿ ನಿಮ್ಮವಸ್ತ್ರವಂ ತೆಗೆದುಕೊಳ್ಳಿರಿ. ||೨೦|| ಎಂದು ಅಜ್ಞಾಪಿಸುವ ಮಹಾತ್ಮನಾದ ಕೃಷ್ಣನ ಧರ್ಮ
ಯುಕ್ತವಾದ ವಚನವಂಕೇಳಿ ಗೋಪಸ್ತ್ರೀಯರು ಒಂದುಹಸ್ತದಿಂದ ಗುಹ್ಯಸ್ಥಾನವಂಮರೆಮಾಡಿಕೊಂಡು
ಒಂದುಹಸ್ತದಿಂದ ನಮಸ್ಕಾರವಂಗೆಯ್ದರು||೨೧||ಪುನಃ ಆಗೋಪಸ್ತ್ರೀಯರಂಕುರಿತು ಧರ್ಮಯುಕ್ತವಾದ
ಈವಾಕ್ಯವಂನಿರೂಪಿಸುವನದೆಂತೆನೆ- ಎಲೈ, ಸ್ತ್ರೀಯರೇ! ಯಾವವನು ಸರ್ವದೇವತಾಮಯನಾದ ಭಗವಂತ
ನಂಕುರಿತು ಒಂದುಕೈಯಿಂದ ನಮಸ್ಕಾರಂಗೆಯ್ವನೋ ಆಮನುಷ್ಯನ ಕೈಯಂಕತ್ತರಿಸುವುದೇ ಅವರಿಗೆ ಶಿಕ್ಷೆ
ಯೆಂದು ಧರ್ಮಜ್ಞರುಹೇಳುವರು. ‡ ||೨೨|| ಆದುದರಿಂದ ಪುರುಷನು ತನ್ನಎರಡುಕೈಗಳಿಂದಲೂ ಸ್ವಾಮಿ
ಯಂಕುರಿತು ನಮಸ್ಕರಿಸಬೇಕು. ‡ ||೨೩|| ಹಾಗೆಯೇನೀವೂಕೂಡ ಎರಡುಕೈಗಳಿಂದಲೂ ನಮಸ್ಕಾರವಂಮಾ
ಡಿದರೆ ಅದುನನಗೆ ಅತ್ಯಂತಪ್ರೀತಿಕರವಾಗುವುದು.% ನಿಮ್ಮಿಂದಮಾಡಲ್ಪಟ್ಟ ದೇವತಾಪರಾಧವಂ ಪರಿಹರಿ

ಅಂಹಸ್ತೂಭಯಮೇತತ್ತು ಪರಿಮಾರ್ಜಯಿತುಂ ಯದಿ। ಇಚ್ಛಾ ವಃ ಪಾಣಿಯುಗಳೈರ್ನಮಸ್ಕೃತ್ಯ ಪ್ರ
ಗೃಹ್ಯತಾಮ್ ॥೧೮॥ ಇತ್ಯಚ್ಯುತೇನಾಭಿಹಿತಂ ವ್ರಜಾಬಲಾ ಮತ್ವಾ ವಿವಸ್ತ್ರಾಪ್ಲವನಂ ವ್ರತಚ್ಯುತಿಮ್ ।
ತತ್ಪೂರ್ತಿಕಾಮಾಸ್ತದಶೇಷಕರ್ಮಣಾಂ ಸಾಕ್ಷಾತ್ಕೃತಂ ನೇಮುರವದ್ಯಮೃಡ್ಯತಃ ॥೧೯॥ ತಾಸ್ತಥಾವನ
ತಾ ದೃಷ್ಟ್ವಾ ಭಗವಾನ್ ದೇವಕೀಸುತಃ। ವಾಸಾಂಸಿ ತಾಭ್ಯಃ ಪ್ರಾದಾತ್ ಕರುಣಃ ಸ್ನೇಹತೋಷಿತಃ ॥೨೦
ದೃಢಂ ಪ್ರಲಬ್ಧಾಸ್ತ್ರಪಯಾ ಚ ಹಾಪಿತಾಃ ಪ್ರಸ್ತೋಭಿತಾಃ ಕ್ರೀಡನವಚ್ಚ ಕಾರಿತಾಃ। ವಸ್ತ್ರಾಣಿ ಚೈವಾ
ಪಹೃತಾನ್ಯಥಾಪ್ಯಮುಂ ತಾ ನಾಭ್ಯಸೂಯನ್ ಪ್ರಿಯಸಂಗನಿರ್ವೃತಾಃ ॥೨೧॥ ಪರಿಧಾಯ ಸ್ವವಾಸಾಂ

---

ಉಭಯಂ-ಎರಡುಬಗೆಯಾದ, ಏತತ್ ಅಂಹಸ್ತು-ಈಪಾಪವನ್ನಾದರೋ, ಪರಿಮಾರ್ಜಯಿತುಂ-ತೊಡೆದುಬಿಡುವುದಕ್ಕೆ, ವಃ-
ನಿಮಗೆ, ಇಚ್ಛಾ ಯದಿ-ಅಪೇಕ್ಷೆಯಿದ್ದರೆ, ಪಾಣಿಯುಗಳೈಃ-ಎರಡೆರಡುಕೈಗಳಿಂದ, ನಮಸ್ಕೃತ್ಯ-ನಮಸ್ಕಾರವಂಗೆಯ್ದು, ಪ್ರಗೃ
ಹ್ಯತಾಂ-ವಸ್ತ್ರವು ತೆಗೆದುಕೊಳ್ಳಲ್ಪಡಲಿ ॥೧೮। ವ್ರಜಾಬಲಾಃ-ಗೋಕುಲದಹೆಂಗಳು, ಇತಿ-ಹೀಗೆ, ಅಚ್ಯುತೇನ-ಕೃಷ್ಣನಿಂದ,
ಅಭಿಹಿತಂ-ಹೇಳಲ್ಪಟ್ಟಂತೆ, ವಿವಸ್ತ್ರಾಪ್ಲವನಂ-ಸೀರೆಯಿಲ್ಲದೆಮಿಂದದ್ದನ್ನು, ವ್ರತಚ್ಯುತಿಂ-ನಿಯಮಭಂಗವನ್ನಾಗಿ, ಮತ್ವಾ-
ತಿಳಿದು, ತತ್ಪೂರ್ತಿಕಾಮಾಃ-ತತ್-ಆವ್ರತದ, ಪೂರ್ತಿ-ಸಾಫಲ್ಯವನ್ನು, ಕಾಮಾಃ-ಬಯಸಿದವರಾಗಿ, ಯತಃ-ಯಾವಕಾರಣ
ದಿಂದ, ತದಶೇಷಕರ್ಮಣಾಂ-ಆಸಕಲಕರ್ಮಗಳಿಗೂ, ಅವದ್ಯಮೃಟ್-ದೋಷವನ್ನು ಹರಿಸುವನಾಗಿರುವನೋ, ತತಃ-ಆಕಾರ
ಣದಿಂದ, ಸಾಕ್ಷಾತ್-ಪ್ರತ್ಯಕ್ಷನಾಗಿರುವ, ಸತಂ-ಸದ್ವಸ್ತುವಾದಕೃಷ್ಣನನ್ನು, ನೇಮುಃ-ನಮಸ್ಕರಿಸಿದರು; ಅಥವಾ-ಸಾಕ್ಷಾ
ತ್ಕೃತಂ-ಫಲಸ್ವರೂಪನಾಗಿರುವ, ತಂ-ಆಕೃಷ್ಣನನ್ನು, ನೇಮುಃ-ನಮಸ್ಕರಿಸಿದರು ॥೧೯॥ ಭಗವಾನ್-ಭಗವಂತನಾದ, ದೇವ
ಕೀಸುತಃ-ದೇವಕಿಯಮಗನಾದಕೃಷ್ಣನು, ತಥಾ-ಹಾಗೆ, ಅವನತಾಃ-ನಮಸ್ಕರಿಸಿದ, ತಾಃ-ಆಹೆಂಗಳನ್ನು, ದೃಷ್ಟ್ವಾ-ನೋಡಿ,
ಕರುಣಃ-ದಯಾಶೀಲನಾದ್ದರಿಂದಲೇ, ಸ್ನೇಹತೋಷಿತಸ್ಸನ್-ಸ್ನೇಹ-ಪ್ರೀತಿಯಿಂದ, ತೋಷಿತಃ-ಸಂತೋಷಗೊಳಿಸಲ್ಪಟ್ಟವ
ನಾಗಿ, ವಾಸಾಂಸಿ-ವಸ್ತ್ರಗಳನ್ನು, ತಾಭ್ಯಃ-ಆಹೆಂಗಳಿಗೆ, ಪ್ರಾದಾತ್-ಕೊಟ್ಟನು ॥೨೦॥ ದೃಢಂ-ಗಟ್ಟಿಯಾಗಿ, ಪ್ರಲಬ್ಧಾಃ-
ವಂಚಿಸಲ್ಪಟ್ಟವರು, ತ್ರಪಯಾ-ನಾಚಿಕೆಯಿಂದ, ಹಾಪಿತಾಶ್ಚ-ಬಿಡಿಸಲ್ಪಟ್ಟವರೂ, ಪ್ರಸ್ತೋಭಿತಾಃ-ಅಪಹಾಸ್ಯಮಾಡಲ್ಪಟ್ಟವ
ವರೂ, ಕ್ರೀಡನವಚ್ಚ-ಆಟದಂತೆಯೂ, ಕಾರಿತಾಃ-ಮಾಡಿಸಲ್ಪಟ್ಟವರೂ, ಆದರು ವಸ್ತ್ರಾಣಿಚ-ಸೀರೆಗಳೂಕೂಡ, ಅಪಹೃ
ತಾನಿ-ತೆಗೆದುಕೊಳ್ಳಲ್ಪಟ್ಟವು. ಅಥಾಪಿ-ಇಷ್ಟಾದರೂ, ತಾಃ-ಆಹೆಂಗಳು, ಪ್ರಿಯಸಂಗನಿರ್ವೃತಾಃ-ಪ್ರಿಯ-ಇಷ್ಟನಾದ, ಕೃಷ್ಣ
ನೊಡನೆ, ಸಂಗ-ಸಂಬಂಧದಿಂದ, ನಿರ್ವೃತಾಃ-ಸುಖವುಳ್ಳವರಾದ್ದರಿಂದಲೇ, ನಾಭ್ಯಸೂಯನ್ನೇವ-ದೋಷದೃಷ್ಟಿಯಿಂದನೋ
ಡಲಿಲ್ಲವು ॥೨೧॥ ಸ್ವವಾಸಾಂಸಿ-ತಮ್ಮಸೀರೆಗಳನ್ನು, ಪರಿಧಾಯ-ಉಟ್ಟುಕೊಂಡು, ಪ್ರೇಷ್ಟಸಂಗಮಸಜ್ಜಿತಾಃ-ಪ್ರೇಷ್ಟ-ಅತ್ಯಂ

---

ಸಿಕೊಳ್ಳುವುದಕ್ಕೆ ನಿಮಗಪೇಕ್ಷೆಯಿದ್ದರೆ ಎರಡುಕೈಗಳಿಂದಲೂ ನಮಸ್ಕಾರವಂಮಾಡಿ ವಸ್ತ್ರಗಳು ಪರಿಗ್ರಹಿ
ಸಲ್ಪಡಲಿ ॥೧೮॥ ಹೀಗೆ ಕೃಷ್ಣನಿಂದ ಆಜ್ಞಾಪಿಸಲ್ಪಟ್ಟ ಗೋಪಸ್ತ್ರೀಯರು ತಾವುಮಾಡಿದುದು ವ್ರತಭಂಗ
ಕರವೆಂದುತಿಳಿದು ವ್ರತಪೂರ್ತಿಗೋಸುಗ ಸರ್ವಪಾಪಪರಿಹಾರಕನಾಗಿಯೂ ಸಮಸ್ತವ್ರತಫಲದಾಯಕನಾ
ಗಿಯೂ ಸಾಕ್ಷಾದ್ವ್ರತಫಲಸ್ವರೂಪನಾಗಿಯೂ ಇರುವ ಆಶ್ರೀಕೃಷ್ಣನನ್ನೇರಡುಹಸ್ತಗಳಿಂದಲೂ ಚೆನ್ನಾ
ಗಿನಮಸ್ಕಾರಂಗೆಯ್ದರು.॥೧೯॥ಬಳಿಕ ಭಗವಂತನಾದ ದಯಾಶೀಲನಾದಕೃಷ್ಣನು ತನಗೆನಮಸ್ಕಾರಂಗೆಯ್ದುವ
ದರಿಂದ ಹಾಗೆನಮ್ರರಾಗಿರುವ ಆಗೋಪಕನ್ಯೆಯರಂನೋಡಿ ಸಂತೋಷಯುಕ್ತನಾಗಿ ಆವಸ್ತ್ರಗಳನ್ನು ಅವ
ರಿಗಿತ್ತನು. ॥೨೦॥ಆಗೋಪಕನ್ಯೆಯರು ಕೃಷ್ಣಮೂರ್ತಿಯಿಂದ ಹೀಗೆವಂಚಿಸಲ್ಪಟ್ಟವರಾದರೂ ನಾಚಿಕೆಯಿಂ
ಬಿಡಿಸಲ್ಪಟ್ಟವರಾದರೂ ಪರಿಹಾಸಂಗೆಯ್ಯಲ್ಪಟ್ಟವರಾದರೂ ಬೊಂಬೆಗಳಂತೆಕುಣಿಯಿಸಲ್ಪಟ್ಟವರಾದರೂ ವಸ್ತ್ರ
ರಹಿತರಾಗಿ ಮಾಡಲ್ಪಟ್ಟವರಾದರೂ ಪ್ರಿಯನಾದಶ್ರೀಕೃಷ್ಣನೊಡನೆ ಸಂಗವುಂಟಾದುದರಿಂದ ಅತ್ಯಂತಸಂತೋ
ಷಯುಕ್ತರಾಗಿ ಆಕೃಷ್ಣನಲ್ಲಿ ದೋಷದೃಷ್ಟಿಯಿಂದ ಅಸೂಯೆಪಡಲಿಲ್ಲ. ॥೨೧॥ ಆಮೇಲೆ ಆಗೋಪಾಂಗನೆ
ಯರು ತಮ್ಮವಸ್ತ್ರಗಳನುಟ್ಟು ಪ್ರಿಯನಾದ ಕೃಷ್ಣನೊಡನೆ ಸಂಬಂಧವುಂಟಾದುದರಿಂದ ವಶೀಕೃತರಾದುದ

ಸಿಷ್ರಸ್ಯ ಸಂಗಮಸಜ್ಜಿತಾಃ |ಗೃಹೀತಚಿತ್ತಾನೋಚ್ಚೇಲುಸ್ತಸ್ಮಿನ್ಲಜ್ಜಾಯಿತೇಕ್ಷಣಾಃ|೧೮| ತಾಸಾಂ ವಿಜ್ಞಾಯಭಗವಾನ್ಸ್ವಪಾದಸ್ಪರ್ಶಕಾಮ್ಯಯಾ | ಧೃತವ್ರತಾನಾಂಸಂಕಲ್ಪಮಾಹದಾಮೋದರೋಬ ಲಾಃ |೧೯| ಸಂಕಲ್ಪೋವಿದಿತಸ್ಸಾಧ್ವ್ಯೋಭವತೀನಾಂಮದರ್ಚನೆ | ಮಯಾನುಮೋದಿತಸ್ಸೋಸೌ ಸತ್ಯೋಭವಿತುಮರ್ಹತಿ |೨೦| ನಮಯ್ಯಾವೇಶಿತಧಿಯಾಂಕಾಮಃಕಾಮಾಯಕಲ್ಪತೆ|ಭರ್ಜಿತಾಃಕ್ವಾಥಿತಾಧಾನಾಃಪ್ರಾಯೋಬೀಜಾಯನೆಷ್ಯತೆ |೨೧| ಯಾತಾಬಲಾವ್ರಜಂಸಿದ್ಧಾಮಯೆಮಾರಂಸ್ಯಥಕ್ಷಪಾಃ |ಯದುದ್ದಿಶ್ಯವ್ರತಮಿದಂಚೆರುರಾರ್ಯಾರ್ಚನಂಸತೀಃ* |೨೨| ಇತ್ಯಾದಿಷ್ಟಾಭಗವತಾಲಬ್ಧ

---

ತಪ್ರಿಯೆನಾಪಕೃಷ್ಣನೊಡನೆ, ಸಂಗಮ-ಸಂಪರ್ಕದಲ್ಲಿ, ಸಜ್ಜಿತಾಃ-ಆಸಕ್ತಿಯುಂಟಾದವರಾದ್ದರಿಂದಲೇ, ಗೃಹೀತಚಿತ್ತಾಃ-ಎಳೆಯಲ್ಪಟ್ಟಮನಸ್ಸುಳ್ಳವರಾಗಿಯೂ, ತಸ್ಮಿನ್-ಆಕೃಷ್ಣನವಿಷಯದಲ್ಲಿ, ಲಜ್ಜಾಯಿತೇಕ್ಷಣಾಃ-ನಾಚಿಕೆಯಂತೆಆಚರಿಸುತಲಿರುವ ದೃಷ್ಟಿಯುಳ್ಳವರಾಗಿಯೂ, ನೋಚ್ಚೇಲುಃ-ಚಲಿಸದೆಯಿದ್ದರು ||೧೮|| ಭಗವಾನ್-ಭಗವಂತನಾದ, ದಾಮೋದರಃ-ಪೂದಂಡೆಯುಹೊಟ್ಟೆಯಮೇಲೆಯುಳ್ಳಕೃಷ್ಣನು, ಸ್ವಪಾದಸ್ಪರ್ಶಕಾಮ್ಯಯಾ-ಸ್ವ-ತನ್ನ, ಪಾದಸ್ಪರ್ಶ-ಅಡಿಗಳನ್ನುಸೋಂಕುವ, ಕಾಮ್ಯಯಾ-ಬಯಕೆಯಿಂದ, ಧೃತವ್ರತಾನಾಂ-ಧರಿಸಲ್ಪಟ್ಟನಿಯಮವುಳ್ಳ, ತಾಸಾಂ-ಆಗೋಪಿಯರ, ಸಂಕಲ್ಪಂ-ಬಯಕೆಯನ್ನು, ವಿಜ್ಞಾಯ-ತಿಳಿದು, ಆಹ-ಹೇಳಿದನು ಹೇಅಬಲಾಃ-ಎಲೆಹೆಂಗಳಿರಾ' ||೧೯||ಸಾಧ್ವ್ಯಃ-ಪತಿವ್ರತೆಯರಿರಾ! ಮದರ್ಚನೇ-ನನ್ನ ಪೂಜೆಯಲ್ಲಿ, ಭವತೀನಾಂ-ನಿಮ್ಮ, ಸಂಕಲ್ಪಃ-ಬಯಕೆಯು, ವಿದಿತಃ-ನನ್ನಿಂದತಿಳಿಯಲ್ಪಟ್ಟದ್ದಾಗಿರುವುದು. ಮಯಾ-ನನ್ನಿಂದ, ಅನುಮೋದಿತಃ-ಅಂಗೀಕರಿಸಲ್ಪಟ್ಟ, ಸೋಸೌ-ಆಯೊನಿಮ್ಮಸಂಕಲ್ಪವು, ಸತ್ಯಃ-ದಿಟವಾದ್ದು, ಭವಿತುಂ-ಆಗುವುದಕ್ಕೆ, ಅರ್ಹತಿ-ಯೋಗ್ಯವಾಗುತಲಿದೆ, ||೨೦||ಮಯಿ-ನನ್ನಲ್ಲಿ, ಆವೇಶಿತಧಿಯಾಂ-ಪುಗಿಸಲ್ಪಟ್ಟಬುದ್ಧಿಯುಳ್ಳವರ, ಕಾಮಃ-ಬಯಕೆಯು, ಕಾಮಾಯ-ಮರಳಿಕಾಮಕ್ಕೆ, ನಕಲ್ಪತೇ-ಸಾಕಾದ್ದುಆಗುವುದಿಲ್ಲ. ಭರ್ಜಿತಾಃ-ಬೇಯಿಸಲ್ಪಟ್ಟ, ಕ್ವಥಿತಾಃ-ಕುದಿಸಲ್ಪಟ್ಟ,ಧಾನಾಃ-ಯವಾದಿಧಾನ್ಯಗಳು, ಬೀಜಾಯ-ಮೊಳಕೆಕೊಳ್ಳುವುದಕ್ಕೆ. ಪ್ರಾಯಃ-ಬಹುಶಃ-ನೇಷ್ಯತೇ-ಒಪ್ಪಿಗೆಯಾಗುವುದಿಲ್ಲ||೨೧|| ಅಬಲಾಃ-ಹೆಂಗಳಿರಾ! ಸಿದ್ಧಾಃ-ಸಫಲರಾದ್ದರಿಂದಲೇ, ವ್ರಜಂ-ಗೋಕುಲವನ್ನು ಕುರಿತು, ಯಾತ-ಹೋಗಿರಿ, ಸತೀಃ-ಪತಿವ್ರತೆಯರು, ಯಮುದ್ದಿಶ್ಯ-ಯಾವವನನ್ನು ಕುರಿತು, ಇದಮಾರ್ಯಾರ್ಚನಂ-ಈಗೌರೀಪೂಜೆಯನ್ನು, ಚೇರುಃ-ಮಾಡಿದರೋ, ತೇನಮಯಾ-ಆನನ್ನೊಡನೆ, ಇಮಾಃಕ್ಷಪಾಃ-ಈಮುಂದೆಬರುವರಾತ್ರಿಗಳಲ್ಲಿ, ರಂಸ್ಯಥ-ಕ್ರೀಡಿಸುವಿರಿ ||೨೨||ಭಗವತಾ-ಕೃಷ್ಣನಿಂದ, ಇತಿ-ಹೀಗೆ, ಆದಿಷ್ಟಾಃ-ಆಜ್ಞಾಪಿಸಲ್ಪಟ್ಟವರಾದ್ದರಿಂದಲೇ, ಲಬ್ಧಕಾಮಾಃ ಪಡೆಯಲ್ಪಟ್ಟಮನೋರಥವುಳ್ಳವರಾದ, ಕುಮಾರಿಕಾಃ-

---

ರಿಂ ಕೃಷ್ಣನಲ್ಲಿಯೇ ಲಜ್ಜೆಯಿಂ ವಿಕಾಸಯುಕ್ತವಾದ ಸವಿನೋಟವುಳ್ಳವರಾಗಿಯೂ ಅಪಹರಿಸಲ್ಪಟ್ಟ ಮನಸ್ಸುಳ್ಳವರಾಗಿಯೂ ಆಚೆಗೆಹೋಗಲಾರದೆ ಅಲ್ಲಿಯೇನಿಂತರು. |೧೮| ಭಕ್ತವತ್ಸಲನಾದ ಕೃಷ್ಣಭಗವಂತನು ತನ್ನ ಪಾದಸೇವೆಯಂ ಪಡೆಯಲಿಚ್ಛೆಯಿಂದ ವ್ರತವನಾಚರಿಸುತಲಿರುವ ಆ ಗೋಪಸ್ತ್ರೀಯರ ಅಭಿಪ್ರಾಯಮಂ ತಿಳಿದು ಅವರಂಕುರಿತು ಈರೀತಿಯಿಂ ನುಡಿದನು. |೧೯| ಎಂತೆನೆ- ಪತಿವ್ರತೆಯರಾದ ಗೋಪಾಂಗನೆಯರೇ! (ನನ್ನಂ ಪೂಜಿಸಬೇಕೆಂಬ ನಿಮ್ಮಮನೋರಥವು ಲಜ್ಜೆಯಿಂದ ನಿಮ್ಮಿಂಪೇಳಲ್ಪಡದಿದ್ದರೂ) ನಿಮ್ಮ ಸಂಕಲ್ಪವು ನನ್ನಿಂದ ತಿಳಿಯಲ್ಪಟ್ಟಿತು. ಮತ್ತು ಸಮ್ಮತಿಸಲ್ಪಟ್ಟಿತು. ಆದುದರಿಂದ ಈ ನಿಮ್ಮ ಸಂಕಲ್ಪವು ಸತ್ಯವಾಗ ತಕ್ಕದ್ದು. |೨೦| ಹುರಿಯಲ್ಪಟ್ಟಧಾನ್ಯಗಳು ಕುದಿಸಲ್ಪಟ್ಟಧಾನ್ಯಗಳು ಸಹ ಬಿತ್ತಿಮೊಳಕೆಗೊಳಿಸಲ್ಪಡುವುದಕ್ಕೆ ಯೋಗ್ಯವಾಗದೆ ಹೋಗುವ ಹಾಗೆ ನನ್ನಲ್ಲಿ ನಿಲ್ಲಿಸಲ್ಪಟ್ಟಬುದ್ಧಿಯುಳ್ಳ ಜನರಕಾಮವು ಮರಳಿ ಕಾಮಭೋಗಕ್ಕೋಸುಗ ಸಮರ್ಥವಾಗುವುದಿಲ್ಲ. |೨೧| ಎಲೌ, ಗೋಪಾಂಗನೆಯರೇ! ಯಾವ ಮನೋರಥವನುದ್ದೇಶಂಗೆಯ್ದು ನೀವು ಗೌರೀವ್ರತವನಾಚರಿಸಿದಿರೋ ಆ ಮನೋರಥಸಿದ್ಧಿಯು ನಿಮಗುಂಟಾಯಿತು. ಈರಾತ್ರಿಮೊದಲುಗೊಂಡು ಮುಂದೆ ಬರುವರಾತ್ರಿಗಳಲ್ಲಿ ನನ್ನೊಡನೆ ನೀವು ರಮಿಸುವವರಾಗುತ್ತೀರಿ. ಆದುದರಿಂದ ನೀವು ಗೋಕುಲವನೆಯ್ದುವರಾಗಿ. |೨೨| ಎಲೈ, ಅರಸೇ! ಗೋಪಾಂಗನೆಯರು ಪಡೆಯಲ್ಪಟ್ಟ ಮನೋರ

ಕಾಮಾಃಕುಮಾರಿಕಾಃ । ಧ್ಯಾಯಂತ್ಯಸ್ತತ್ಪದಾಂಭೋಜಂಕೃಚ್ಛ್ರಾನ್ನಿರ್ವಿವಿಶುರ್ವ್ರಜಂ ॥೩೩॥ ಅಥಗೋಪೈಃಪರಿವೃತೋಭಗವಾನ್ದೇವಕೀಸುತಃ । ಬೃಂದಾವನಾದ್ಗತೋದೂರಂ ಚಾರಯನ್ಗಾಸ್ಸಹಾಗ್ರಜಃ ॥ ೩೪ ॥ ನಿದಾಘಾರ್ಕಾತಪೇತಸ್ಮಿನ್ಛಾಯಾಭಿಸ್ಸ್ವಾಭಿರಾತ್ಮನಃ । ಆತಪತ್ರಾಯಿತಾನ್ವೀಕ್ಷ್ಯದ್ರುಮಾನಾಹವ್ರಜೌಕಸಃ ॥ ೩೫ ॥ ಹೇಸ್ತೋಕಕೃಷ್ಣಹೇಅಂಶೋ ಶ್ರೀದಾಮನ್ಸುಬಲಾರ್ಜುನ । ವಿಶಾಲವೃಷಭೌಜಸ್ವಿನ್ದೇವಪ್ರಸ್ಥವರೂಥಪ ॥ ೩೬ ॥ ಪಶ್ಯತೈತಾನ್ಮಹಾಭಾಗಾನ್ಪರಾರ್ಥೈಕಾಂತಜೀವಿತಾನ್ । ವಾತವರ್ಷಾತಪಹಿಮಾನ್ಸಹಂತೋವಾರಯಂತಿನಃ ॥೩೭॥

---

ಹುಡುಗಿಯರು, ತತ್ಪದಾಂಭೋಜಂ-ಆಕೃಷ್ಣನಅಡಿದಾವರೆಯನ್ನು,ಧ್ಯಾಯಂತ್ಯಸ್ಸತ್ಯಃ-ಭಾವಿಸುತಲಿರುವರಾಗಿ,ಕೃಚ್ಛ್ರಾತ್-ಬಿಟ್ಟುಬರಲಾರದಕಷ್ಟದಿಂದ, ವ್ರಜಂ-ಗೋಕುಲವನ್ನು, ನಿರ್ವಿವಿಶುಃ-ಹೊಕ್ಕರು ॥೩೩॥ ಅಥ-ಆಮೇಲೆ, ಗೋಪೈಃ-ಗೊಲ್ಲರಿಂದ, ಪರಿವೃತಃ-ಬಳಸಲ್ಪಟ್ಟವನಾದ, ಭಗವಾನ್-ಶ್ರೀಮಂತನಾದ, ದೇವಕೀಸುತಃ-ಕೃಷ್ಣನು, ಬೃಂದಾವನಾತ್-ಬೃಂದಾವನಕ್ಕಿಂತಲೂ, ದೂರಂ-ದೂರಪ್ರಾಂತವನ್ನುಕುರಿತು, ಗತಃ-ಹೋದವನಾಗಿ, ಸಹಾಗ್ರಜಃ-ಅಣ್ಣನಿಂಪಸಹಿತನಾಗಿ, ಗಾಃ-ಗೋವುಗಳನ್ನು, ಚಾರಯನ್-ಮೇಯಿಸುತಲಿರುವನಾಗಿ॥೩೪॥ತಸ್ಮಿನ್-ಆ, ನಿದಾಘಾರ್ಕಾತಪೇ-ನಿದಾಘ-ಬೇಸಿಗೆಯಂತಿರ್ಪ, ಅರ್ಕಾತಪೇ-ಬಿಸಿಲಿನಲ್ಲಿ, ಸ್ವಾಭಿಃಛಾಯಾಭಿಃ-ತಮ್ಮನೆರಳುಗಳಿಂದ, ಆತ್ಮನಃ-ತನಗೆ, ಆತಪತ್ರಾಯಿತಾನ್-ಕೊಡೆಗಳೋಎಂಬಂತೆಆಚರಿಸುತಲಿರುವ, ದ್ರುಮಾನ್-ಗಿಡಗಳನ್ನು, ವೀಕ್ಷ್ಯ-ನೋಡಿ, ವ್ರಜೌಕಸಃ-ಗೋಕುಲವಾಸಿಗಳನ್ನುಕುರಿತು, ಆಹ-ನುಡಿದನು ॥೩೫॥ ಹೇಸ್ತೋಕಕೃಷ್ಣ-ಎಲಾ, ಮರಿಕೃಷ್ಣನೇ! ಹೇಅಂಶೋ-ಎಲಾಅಂಶುವೇ! ಶ್ರೀದಾಮನ್-ಶ್ರೀದಾಮನೇ, ಹೇಸುಬಲ-ಎಲಾಸುಬಲನೇ! ಹೇಅರ್ಜುನ-ಅರ್ಜುನನೇ! ಹೇವಿಶಾಲ-ಎಲಾವಿಶಾಲನೇ! ಹೇವೃಷಭ-ಎಲಾವೃಷಭನೇ! ಹೇಓಜಸ್ವಿನ್-ಎಲಾಓಜಸ್ವಂತನೇ! ಹೇದೇವಪ್ರಸ್ಥ-ಎಲಾದೇವಪ್ರಸ್ಥನೇ! ಹೇವರೂಥಪ-ಎಲಾವರೂಥಪನೇ! ॥೩೬॥ ಮಹಾಭಾಗಾನ್-ಮಹಾಪೂಜ್ಯತೆಯುಳ್ಳಂತಾ, ಪರಾರ್ಥೈಕಾಂತಜೀವಿತಾನ್-ಪರಾರ್ಥ-ಹೆರವರಪ್ರಯೋಜನವೇ! ಏಕಾಂತ-ಒಂದೇ,ಜೀವಿತಾನ್-ಜೀವನವಾಗಿವುಳ್ಳ, ಅಥವಾ ಪ್ರಾಣವಾಗಿವುಳ್ಳ, ಏತಾನ್-ಈಮರಗಳನ್ನು, ಪಶ್ಯತ-ನೋಡಿರಿ. ವಾತವರ್ಷಾತಪಹಿಮಾನ್-ವಾತ-ಗಾಳಿಯನ್ನೂ, ವರ್ಷ-ಮಳೆಯನ್ನೂ, ಆತಪ-ಬಿಸಿಲನ್ನೂ, ಹಿಮಾನ್-ಮಂಜನ್ನೂ, ಸಹಂತಃ-ತಾವುಸೈರಿಸಿಕೊಳ್ಳುವವಾಗಿ, ನಃ-ನಮಗೆ, ವಾರಯಂತಿ-ತಪ್ಪಿಸುತಲಿವೆ॥೩೭॥ಏಷಾಂ-ಈಗಿಡಗಳ, ಸರ್ವಪ್ರಾಣ್ಯುಪಜೀವನಂ-ಸಕಲಪ್ರಾಣಿಗಳಿಗೂಆಶ್ರಯಿಸಿಬದುಕತಕ್ಕವುಪಕಾರವುಳ್ಳ, ಜನ್ಮ-ಶರೀರವು,ಪರಂ-ಉತ್ಕೃಷ್ಟವಾದ್ದಾಗಿದೆ,ಅಹೋ-ಆಶ್ಚರ್ಯವು. ಸುಜನಸ್ಯೇವ-ಸತ್ಪುರುಷನಿಗೆಹೇಗೋಹಾಗೆ, ಏಷಾಂ-

---

ಥವುಳ್ಳವರಾಗಿಯೂ, ಕೃಷ್ಣನಿಂದ ಹೀಗೆ ಅಜ್ಞಾಪಿಸಲ್ಪಟ್ಟವರಾಗಿಯೂ, ಕೃಷ್ಣಪಾದಾರವಿಂದವಂ ಧ್ಯಾನಂಗೆಯ್ಯುತಲಿರುವವರಾಗಿಯೂ, ಕೃಷ್ಣನಂ ಬಿಟ್ಟುಹೋಗದೆ ಅತಿಪ್ರಯಾಸದಿಂದ ಹೊರಟು ಹೋಗಿ ಗೋಕುಲವನ್ನು ಹೊಕ್ಕರು. ॥೩೩॥ ಆಮೇಲೆ ಗೋಪಬಾಲಕರಿಂದೊಡಗೂಡಿದ ದೇವಕೀ ಪುತ್ರನಾದ ಭಗವಂತನು ಅಣ್ಣನಾದ ಬಲರಾಮನಿಂ ಕೂಡಿಗೋವುಗಳಂ ಸಂಚಾರಂಗೆಯಿಸುತ ಬೃಂದಾವನದದಸೆಯಿಂದ ದೂರಪ್ರದೇಶಕ್ಕೆ ಹೋದನು. ॥೩೪॥ ಅಲ್ಲಿ ಅತ್ಯುಷ್ಣವಾದುದರಿಂದ ಸಹಿಸಲಶಕ್ಯವಾದ ಸೂರ್ಯಕಿರಣಗಳಿಂದುಂಟಾದ ಬಿಸಿಲಿನಲ್ಲಿ ತಮ್ಮ ನೆರಳ್ಗಳಿಂದ ಕೊಡೆಗಳೋಪಾದಿಯಲ್ಲಿ ಆಚರಿಸುತಲಿರುವ ವೃಕ್ಷಗಳಂನೋಡಿ ಶ್ರೀಕೃಷ್ಣನು ಗೋಕುಲದ ಗೋಪಾಲಕರಂ ಕುರಿತು ನುಡಿದನು. ॥೩೫॥ ಎಂತೆನೆ- ಎಲಾ, ಏಳೆಯಕೃಷ್ಣನೇ! ಎಲಾ, ಅಂಶುವೇ! ಎಲೈ, ಶ್ರೀದಾಮನೇ! ಎಲೋ, ಸುಬಲನೇ ಎಲೆ, ಅರ್ಜುನನೇ! ಎಲೈ, ವಿಶಾಲನೇ! ಎಲ, ಋಷಭನೇ! ಎಲಾ, ತೇಜಸ್ವಿಯಾದ ದೇವಪ್ರಸ್ಥನೇ! ಎಲೋ, ವರೂಥಪನೇ! ॥೩೬॥ ತಾವು ಗಾಳಿಯನ್ನೂ ಮಳೆಯನ್ನೂ ಬಿಸಿಲನ್ನೂ ಹಿಮವನ್ನೂ ಸೈರಿಸಿಕೊಂಡು ತಾವಾಗಿ ನಮಗೆ ವಾತವರ್ಷಾತಪಹಿಮಗಳ ಉಪದ್ರವಗಳಂ ಪರಿಹರಿಸುತ್ತಿರುವವಾಗಿ ಪರೋಪಕಾರವೇ ಮುಖ್ಯ ಪ್ರಯೋಜನವಾಗಿವುಳ್ಳ ಮಹಾಪುಣ್ಯಶಾಲಿಗಳಾದ ಈವೃಕ್ಷಗಳನ್ನು ನೋಡಿರಯ್ಯಾ ॥೩೭॥. ಆದುದರಿಂದ ಅರ್ಥಿಗಳಾದ ಯಾಚಕರು ದಯಾಶೀಲನಾದ ಸುಜನನಬಳಿಯಲ್ಲಿ ಯಾಚಿಸಿ ಹೇಗೆ ಇಷ್ಟಾರ್ಥವನ್ನೆಯ್ದದೆ ವಿಮುಖರಾಗಿ ಹೋಗುವದಿಲ್ಲವೋ, ಹಾಗೆ ಸರ್ವಪ್ರಾಣಿಗಳಿಗೂ ನೆರಳುಮುಂ

ಅಹೋಏಷಾಂಪರಂಜನ್ಮಸರ್ವಪ್ರಾಣ್ಯುಪಜೀವನಮ್ |ಸುಜನಸ್ಯೇವಯೇಷಾಂ ವೈವಿಮುಖಾಯಾಂತಿ ನಾರ್ಥಿನಃ ‖೩೮‖ ಪತ್ರಪುಷ್ಪಫಲಚ್ಛಾಯಾಮೂಲವಲ್ಕಲದಾರುಭಿಃ | ಗಂಧನಿರ್ಯಾಸಭಸ್ಮಾಸ್ಥಿತೋಕ್ಮೈಃಕಾಮಾನ್ವಿತನ್ವತೇ | ೩೯‖ಏತಾವಜ್ಜನ್ಮಸಾಫಲ್ಯಂದೇಹಿನಾಮಿಹದೇಹಿಷು| ಪ್ರಾಣೈರರ್ಥೈರ್ಧಿಯಾವಾಚಾಶ್ರೇಯಆಚರಣಂಸದಾ ‖ ೪೦ ‖ ಇತಿಪ್ರವಾಳಸ್ತಬಕಫಲಪುಷ್ಪದಲೋತ್ಕರೈಃ | ತರೂಣಾಂನಮ್ರಶಾಖಾನಾಂಮಧ್ಯೇನಯಮುನಾಂಗತಃ ‖೪೧‖ ತತ್ರಗಾಃಪಾಯಯಿತ್ವಾಪಸ್ಸುಮೃಷ್ಟಾಶ್ಶೀತಲಾಶ್ಶಿವಾಃ | ತತೋನೃಪಸ್ವಯಂಗೋಪಾಃ ಕಾಮಂಸ್ವಾದುಪಪುರ್ಜಲಮ್ ‖ ೪೨ ‖

---

ಈ ಗಿಡಗಳ,ಅರ್ಥಿನಃ-ಯಾಚಕರು, ವಿಮುಖಾಃ-ಪ್ರಯೋಜನವಿಲ್ಲದವರಾಗಿತಿರುಗುವರು,ನವೈ-ಅಲ್ಲವೆಂದುಪ್ರಸಿದ್ಧವು‖೩೮‖ಪತ್ರ.. ದಾರುಭಿಃ-ಪತ್ರ-ಎಲೆ, ಪುಷ್ಪ-ಹೂವು, ಫಲ-ಹಣ್ಣು, ಛಾಯಾ-ನೆಳಲು, ಮೂಲ, ಬೇರು, ವಲ್ಕಲ-ಪಟ್ಟೆ, ದಾರುಭಿಃ-ಮರಗಳಿಂದಲೂ, ಗಂಧ...ತೋಕ್ಮೈಃ-ಗಂಧ-ಪರಿಮಳ, ನಿರ್ಯಾಸ-ಬೊಂಕೆ, ಭಸ್ಮ-ಬೂದಿ, ಅಸ್ಥಿ-ಚೇಗು, ತೋಕ್ಮೈಃ-ಮೊಳಕೆಗಳಿಂದಲೂ, ಕಾಮಾನ್-ಜನರಬಯಕೆಗಳನ್ನು, ವಿತನ್ವತೇ-ವಿಸ್ತರಿಸಿಕೊಡುತಲಿರುವವು‖೩೯‖ದೇಹಿನಾಂ-ಶರೀರವುಳ್ಳವರಿಗೆ, ದೇಹಿಷು-ಇತರಶರೀರಧಾರಿಗಳವಿಷಯದಲ್ಲಿ, ಪ್ರಾಣೈಃ-ತಮ್ಮಪ್ರಾಣಗಳಿಂದಲೂ, ಅರ್ಥೈಃ-ಪ್ರಯೋಜನಗಳಿಂದಲೂ, ಧಿಯಾ-ಬುದ್ಧಿಯಿಂದಲೂ, ಸದಾ-ಯಾವಾಗಲೂ, ಶ್ರೇಯಆಚರಣಂ-ಪುಣ್ಯೋಪಕಾರಂಗೆಯ್ವುದು, ಇಹ ಈಲೋಕದಲ್ಲಿ, ಏತಾವತ್-ಇಷ್ಟೇ, ಜನ್ಮಸಾಫಲ್ಯಂ-ಹುಟ್ಟಿದ್ದಕ್ಕೆ ಪೂರ್ಣಪ್ರಯೋಜನವು ‖೪೦‖ಇತಿ-ಹೀಗೆಹೇಳುತ್ತಾ, ಪ್ರವಾಳ, ... ಉತ್ಕರೈಃ-ಪ್ರವಾಳ-ಚಿಗುರುಗಳ, ಸ್ತಬಕ-ಗೊಂಚಲ, ಫಲ-ಹಣ್ಣುಗಳ, ಪುಷ್ಪ-ಹೂವುಗಳ, ಎಲೆಗಳ, ಉತ್ಕರೈಃ-ಗುಂಪುಗಳಿಂದ,ನಮ್ರಶಾಖಾನಾಂ-ಬಗ್ಗಿದಕೊಂಬೆಗಳುಳ್ಳ, ತರೂಣಾಂ-ಗಿಡಗಳ, ಮಧ್ಯೇನ-ನಡುವಣದಾರಿಯಿಂದ, ಯಮುನಾಂ-ಯಮುನಾನದಿಯನ್ನು ಕುರಿತು, ಗತಃ-ಹೋದವನಾದನು. ‖೪೧‖ಹೇನೃಪ-ಎಲೈಪರೀಕ್ಷಿತ್ತುವೇ! ತತ್ರ-ಅಲ್ಲಿ, ಗೋಪಾಃ-ಗೊಲ್ಲರು, ಗಾಃ-ಗೋವುಗಳನ್ನು, ಶೀತಲಾಃ-ತಂಪಾಗಿರುವಂತಹಾ, ಶಿವಾಃ-ನಿರ್ಮಲಗಳಾಗಿಯೂ ಸವಿಯಾಗಿಯೂ ಇರುವ, ಅಪಃ-ನೀರನ್ನು, ಪಾಯಯಿತ್ವಾ-ಕುಡಿಯಿಸಿ, ಸುಮೃಷ್ಟಾಸ್ಸಂತಃ-ಚೆನ್ನಾಗಿಸಂತಸಗೊಂಡವರಾಗಿ, ತತಃ-ಅಮೇಲೆ, ಸ್ವಯಂ-ತಾವು, ಸ್ವಾದುಜಲಂ-ಮಧುರೋದಕವನ್ನು, ಕಾಮಂ-ಬೇಕಾದಷ್ಟು, ಪಪುಃ-ಕುಡಿದರು ‖೪೨‖ನೃಪ-ರಾಯನೇ! ತಸ್ಯಾಃ-ಆಕಾಳಿಂದಿಯ, ಉಪವನೇ-ಹತ್ತಿರದ ಕಾಡಿನಲ್ಲಿ, ಪಶೂನ್-ಪಶುಗಳನ್ನು, ಕಾಮಂ-ಯಥೇಚ್ಛವಾಗಿ, ಚಾರಯಂತಃ-ಮೇಯಿಸುತಲಿರುವಗೋಪಾಲರು ಕೃಷ್ಣರಾಮಾ

---

ತಾದವುಗಳಿಂದುಪಕಾರಂಗೆಯ್ವ ಈವೃಕ್ಷಗಳ ಜನ್ಮ ಸರ್ವೋತ್ತಮವಾದ್ದು ‖೩೮‖ ಎಂತೆನೆ-ಈವೃಕ್ಷಂಗಳು - ಎಲೆ ಹುವ್ವು, ಹಣ್ಣು, ನೆಳಲು, ಬೇರು, ನಾರು, ಕಟ್ಟಿಗೆ, ಮೇಣ, ಹಾಲು, ಗಂಧ, ಬೂದಿ, ಕೆಚ್ಚು, ಮೊಳಕೆ, ಚಿಗುರು, “ ಈರೂಪಗಳನ್ನು ಹೊಂದುವುದರಿಂದ ಯಥೋಚಿತವಾಗಿ ಸಮಸ್ತಪ್ರಾಣಿಗಳಿಗೂ ಅವರವರ ಇಷ್ಟಾರ್ಥಗಳಂ ಪೂರಯಿಸಿಕೊಡುವವು. [ಕೆಚ್ಚು ಅಸ್ಥಿ, ಚೇಗು] ಕೊಂಬೆ ಪೊಟರೆ ಬೊಂಕೆ ಮೊದಲಾದ ಸರ್ವಾಂಶಗಳೂ ಒಂದೊಂದು ಕೆಲಸಕ್ಕೆ ಉಪಯುಕ್ತಗಳಾಗುವುದರಿಂದ ಲಕ್ಷಿಸಲ್ಪಡುವವು. ‖೩೯‖ ಆದುದರಿಂದ ಲೋಕದಲ್ಲಿ ಪ್ರಾಣಿಗಳು ತಮ್ಮ ಪ್ರಾಣಂಗಳಿಂದಲೂ ಅರ್ಥಂಗಳಿಂದಲೂ ಬುದ್ಧಿವಿವೇಕಂಗಳಿಂದಲೂ ಮೃದುವಚನಗಳಿಂದಲೂ ಹೆರವ್ಗರಿಗೆ ಸರ್ವಕಾಲದಲ್ಲಿಯೂ ಉಪಕಾರಮಾಡುವರಾಗಬೇಕು. ಅದೇ ಹುಟ್ಟಿದುದಕೆ ಪ್ರಯೋಜನವು. ‖೪೦‖ ಎಲೈ, ಅರಸೇ! ಹೀಗೆ ಸಂತೋಷಯುಕ್ತನಾಗಿ ಹೇಳುತ್ತ ಶ್ರೀಕೃಷ್ಣನು- ಚಿಗುರುಗಳಿಂದಲೂ ಗೊಂಚಲ್ಗಳಿಂದಲೂ ಪುಷ್ಪಫಲಗಳಿಂದಲೂ ಉತ್ತಮಗಳಾದ ಪರ್ಣಗಳಿಂದಲೂ ಪೂರ್ಣಗಳಾಗಿ ಭಾರಗಳಿಂದ ನಮ್ರಗಳಾಗಿರುವ ಕೊಂಬೆಗಳುಳ್ಳ ವೃಕ್ಷಂಗಳ ನಡುವೆ ನೆಳಲನ್ನೇ ಅನುಸರಿಸಿಕೊಂಡು ಅದೇಮಾರ್ಗದಿಂದ ಯಮುನಾನದಿಯಂ ಕುರಿತೆಯ್ದಿದನು ‖೪೧‖ಎಲೈ, ಅರಸೇ! ಆಯಮುನಾನದಿಯಲ್ಲಿ ಶುದ್ಧಗಳಾದ ಶೀತೋದಕಗಳನ್ನು ಗೋವುಗಳಿಗೆ ಪಾನಂಗೆಯಿಸಿ ಕೃಷ್ಣಾದಿಗೋಪಾಲಕರೂ ತಾವೂ ನೀರಂಕುಡಿದರು. ‖೪೨‖ ಆಯಮುನಾನದಿಯ ಉಪವನದಲ್ಲಿ ಗೋಪಾಲಕರು ಪಶುಗಳನ್ನು ಯಥೇಚ್ಛವಾಗಿ

ತಸ್ಯಾಉಪವನೇಕಾಮಂಚಾರಯಂತಃಪಶೂನ್ನೃಪ । ಕೃಷ್ಣರಾಮಾವುಪಾಗಮ್ಯಕ್ಷುಧಾರ್ತಾಇದ
ಮಬ್ರುವನ್ ॥ ... ... ... ... ... ॥೪೩॥

ಇತಿಶ್ರೀಮದ್ಭಾಗವತೆ ದಶಮಸ್ಕಂಧೆ ದ್ವಾವಿಂಶೋಧ್ಯಾಯಃ

---

ಕೃಷ್ಣನನ್ನೂರಾಮನನ್ನೂಕುರಿತು, ಉಪಾಗಮ್ಯ-ಹತ್ತಿರಕ್ಕೆಬಂದು, ಕ್ಷುಧಾ-ಹಸಿವಿನಿಂದ, ಆರ್ತಾಃ-ಪೀಡಿತರಾದ್ದರಿಂದಲೇ,-
ಇದಂ-ಇನ್ನುಹೇಳಲ್ಪಡುವಮಾತನ್ನು, ಅಬ್ರುವನ್-ನುಡಿದರು ॥೪೩॥

ಇತಿಶ್ರೀಮದ್ಭಾಗವತ ಪ್ರತಿಶಬ್ದಾರ್ಥಬೋಧಿನ್ಯಾಂ ದಶಮಸ್ಕಂಧೇ
ದ್ವಾವಿಂಶೋಽಧ್ಯಾಯಃ-

---

ಮೋಯಿಸುತ್ತ ತಾವು ಹಸಿವಿನಿಂದ ಬಳಲಿದವರಾಗೆ ಶ್ರೀಕೃಷ್ಣರಾಮರ ಸನ್ನಿಧಾನವನೆಯ್ದಿ ಇದನ್ನು (ವಕ್ಷ್ಯ
ಮಾಣಾರ್ಥವನ್ನು) ನುಡಿದರು. ॥೪೩॥ ... ... ... ... ...॥ ‡

ಇಂತು ಶುಕಮುನಿಯು ಪರೀಕ್ಷಿದ್ರಾಯನಿಗೆ ನಿರೂಪಿಸಿದನೆಂದು ಸೂತಪೌರಾಣಿಕನು ನೈಮಿಶಾ
ರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಹೇಳಿದನೆಂಬಲ್ಲಿಗೆ-ಶ್ರೀಮನ್ಮಹೀಶೂರಪುರವ
ರಾಧೀಶ ಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜ ವಿರಚಿತಮಪ್ಪ, ಶ್ರೀ
ಭಾಗವತದ॥ಶ್ರೀಕೃಷ್ಣರಾಜ ವಾಣೀವಿಲಾಸವು, ಎಂಬ ಕರ್ಣಾಟಕ
ಭಾಷಾವ್ಯಾಖ್ಯಾನದಲ್ಲಿ ದಶಮಸ್ಕಂಧದೊಳು ೨೨ನೆಯ
ಅಧ್ಯಾಯವು ಸಂಪೂರ್ಣವಾದುದು.

ಮಂಗಳಮಸ್ತು

ಶ್ರೀಶುಕಃ ॥ ತತ್ರಗತ್ವೋಪವಿಷ್ಟಾಸ್ತೇಗೋಪಾಲಾಯಮುನಾತಟೇ । ಊಚುರ್ಬುಭುಕ್ಷಿತಾರಾಜನ್ ಕೃಷ್ಣರಾಮೌಜಗತ್ಪತೀ ॥೧॥ ಗೋಪಾಃ॥ ರಾಮರಾಮಮಹಾಬಾಹೋಕೃಷ್ಣದುಷ್ಟನಿಬರ್ಹಣ । ಏಷಾವೈಬಾಧತೇಕ್ಷುನ್ನಸ್ತಚ್ಛಾಂತಿಂಕರ್ತುಮರ್ಹಥಃ ॥೨॥ ಶ್ರೀಶುಕಃ॥ ಇತಿವಿಜ್ಞಾಪಿತೋಗೋಪೈರ್ಭಗವಾನ್ ಜಗದೀಶ್ವರಃ । ಭಕ್ತಾಯಾವಿಪ್ರಭಾರ್ಯಾಯಾಃಪ್ರಸೀದನ್ನಿದಮಬ್ರವೀತ್ ॥೩॥ ಪ್ರಯಾತದೇವಯಜನಂಬ್ರಾಹ್ಮಣಾಬ್ರಹ್ಮವಾದಿನಃ । ಸತ್ರಮಾಂಗಿರಸಂನಾಮಹ್ಯಾಸತೇಸ್ವರ್ಗಕಾಮ್ಯಯಾ ॥೪॥ ತತ್ರಗತ್ವೌದನಂಗೋಪಾಯಾಚತಾಸ್ಮದ್ವಿಸರ್ಜಿತಾಃ । ಕೀರ್ತಯಂತೋಭಗವತಆ

---

೨೩ ಅಧ್ಯಾಯದ ಪ್ರತಿಪದಟೀಕೆ

[ಶುಕವಾಕ್ಯವು] ರಾಜನ್-ಅರಸನೇ, ತತ್ರ-ಅಲ್ಲಿ, ಗತ್ವಾ-ಹೋಗಿ, ಯಮುನಾತಟೇ-ಯಮುನೆಯತಡಿಯೊಳು, ಉಪವಿಷ್ಟಾಃ-ಕುಳಿತಿರುವರಾದ, ತೇಗೋಪಾಲಾಃ-ಆಗೊಲ್ಲರು, ಬುಭುಕ್ಷಿತಾಸ್ಸಂತಃ-ಊಟಬಯಸಿದವರಾಗಿ, ಜಗತ್ಪತೀ-ಜಗದೊಡೆಯರಾದ, ಕೃಷ್ಣರಾಮೌ-ಕೃಷ್ಣರಾಮರಂಕುರಿತು, ಊಚುಃ-ನುಡಿದರು ॥೧॥ (ಗೋಪವಾಕ್ಯವು) ಮಹಾಬಾಹೋ-ಹೆಚ್ಚುಭುಜಬಲವುಳ್ಳವನಾದ, ರಾಮರಾಮ-ರಾಮನೇ ರಾಮನೇ! ದುಷ್ಟನಿಬರ್ಹಣ-ದೋಷಿಗಳನ್ನು ಕೊಲ್ಲುವ, ಕೃಷ್ಣ-ಕೃಷ್ಣನೇ! ಏಷಾಕ್ಷುತ್-ಈಹಸಿವು, ನಃ-ನಮ್ಮನ್ನು, ಬಾಧತೇವೈ-ಪ್ರಸಿದ್ಧವಾಗಿಪೀಡಿಸುತಲಿದೆ ತಚ್ಛಾಂತಿಂ-ಆಹಸಿವಿಗೆಉಪಶಾಂತಿಯನ್ನು, ಕರ್ತುಂ-ಮಾಡಲು, ಅರ್ಹಥಃ-ಯೋಗ್ಯರಾಗುವಿರಿ ॥೨॥ (ಶುಕವಾಕ್ಯವು) ಇತಿ-ಹೀಗೆ, ಗೋಪೈಃ-ಗೊಲ್ಲರಿಂದ, ವಿಜ್ಞಾಪಿತಃ-ಅರಿಕೆಮಾಡಲ್ಪಟ್ಟ, ಜಗದೀಶ್ವರಃ-ಜಗದೊಡೆಯನಾದ, ಭಗವಾನ್-ಕೃಷ್ಣನು, ಭಕ್ತಾಯಾಃ-ಭಕ್ತಳಾದ, ವಿಪ್ರಭಾರ್ಯಾಯಾಃ-ಬ್ರಾಹ್ಮಣನಹೆಂಡತಿಯವಿಷಯದಲ್ಲಿ, ಪ್ರಸೀದನ್-ಪ್ರಸನ್ನನಾಗುತಿರುವನಾಗಿ, ಇದಂ-ಈವಕ್ಷ್ಯಮಾಣವಚನವನ್ನು, ಅಬ್ರವೀತ್-ನುಡಿದನು ॥೩॥ ದೇವಯಜನಂ-ದೇವತೆಗಳನ್ನು ಕುರಿತಯಜ್ಞವನ್ನು ಮಾಡುವಸ್ಥಲವನ್ನುಕುರಿತು, ಪ್ರಯಾತ-ಹೋಗಿರಿ, ಬ್ರಹ್ಮವಾದಿನಃ-ವೇದವನ್ನುಹೇಳುತಲಿರುವ, ಬ್ರಾಹ್ಮಣಾಃ-ಬ್ರಾಹ್ಮಣರು, ಸ್ವರ್ಗಕಾಮ್ಯಯಾ-ಸ್ವರ್ಗಲೋಕಾಪೇಕ್ಷೆಯಿಂದ, ಆಂಗಿರಸಂನಾಮ-ಆಂಗಿರಸವೆಂಬಹೆಸರುಳ್ಳ, ಸತ್ರಂ-ಸತ್ರಯಾಗವನ್ನು, ಆಸತೇಹಿ-ಮಾಡುತಲಿರುವರಲ್ಲವೆ? ॥೪॥ ಗೋಪಾಃ-ಗೊಲ್ಲರೇ! ತತ್ರ-ಅಲ್ಲಿ, ಗತ್ವಾ-ಹೋಗಿ, ಅಸ್ಮದ್ವಿಸರ್ಜಿತಾಃ-ನಮ್ಮಿಂದಕಳುಹಿಸಲ್ಪಟ್ಟವರೆಂದು, ಭಗವತಃ-ಐಶ್ವರ್ಯವುಳ್ಳ, ಆರ್ಯಸ್ಯ-ಪೂಜ್ಯನಾದ

---

೨೩ನೆಯ ಅಧ್ಯಾಯವು

ಶ್ರೀಧರೀಯಶ್ಲೋಕ॥ ತ್ರಯೋವಿಂಶೇತತೋಗೋಪೈರನ್ನಯಾಚ್ಞಾಪದೇಶತಃ । ತತ್ಪತ್ನ್ಯನುಗ್ರಹಾತ್ಕೃಷ್ಣೋದೀಕ್ಷಿತಾನನ್ವತಾಪಯತ್ ॥ಟೀಕೆ॥ ಇಪ್ಪತ್ತುಮೂರನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು-ಋಷಿಗಳಯಾಗಶಾಲೆಯಬಳಿಗೆ ಗೋಪಾಲಕರಂ ಕಳುಹಿಸಿ ಅವರ ಮುಖಾಂತರದಿಂದ ಅನ್ನವಂಬೇಡುವನೆವದಿಂ ದೀಕ್ಷಿತರಾದ ಋಷಿಗಳ ಪತ್ನಿಯರಂ ಅನುಗ್ರಹಿಸಿ, ಅದರಿಂದಲೇ ಆಋಷಿಗಳಂ ಪಶ್ಚಾತ್ತಾಪ ಗೊಳಿಸಿದನೆಂಬರ್ಥವಂ ಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸುವನದೆಂತೆನೆ,-

ಎಲೈ, ಪರೀಕ್ಷಿದ್ರಾಯನೇ ಕೇಳು ಅನಂತರದಲ್ಲಿ ಯಮುನಾತೀರದೊಳು ಹಸಿವಿನಿಂದ ಪೀಡಿತರಾದ ಗೋಪಾಲಕರು ರಾಮಕೃಷ್ಣರಂ ಕುರಿತು ಈರೀತಿಯಾಗಿ ವಿಜ್ಞಾಪನಂ ಗೆಯ್ದರದೆಂತೆನೆ ॥ ೧ ॥ ಎಲೈ, ಮಹಾಭುಜವುಳ್ಳ ರಾಮನೇ ! ದುಷ್ಟರಂ ನಿಗ್ರಹಂಗೆಯ್ವ ಕೃಷ್ಣನೇ! ಹಸಿವು ನಮ್ಮಂ ಬಾಧಿಸುತಲಿದೆ ಅದಕ್ಕೆ ನೀವೀರ್ವರು ಉಪಶಾಂತಿಯಂ ಗೆಯ್ಯಬೇಕು ॥ ೨ ॥ ಎಂದು ಈರೀತಿಯಾಗಿ ಗೋಪಾಲಕರಿಂದ ಬಿನ್ನವಿಸಲ್ಪಟ್ಟ ಭಗವಂತನಾದ ಜಗದೀಶ್ವರನಾದ ಕೃಷ್ಣನು - ಭಕ್ತೆಯರಾದ ಆ ಬ್ರಾಹ್ಮಣ ಪತ್ನಿಯರಿಗೋಸುಗ ಅನುಗ್ರಹಂ ಗೆಯ್ವನಾಗಿ ಈ ವಾಕ್ಯವಂ ನುಡಿದನೆಂತೆನೆ- ॥ ೩ ॥ ಎಲೈ ಗೋಪಾಲಕರೇ ! ವೇದಾಧ್ಯಯನ ಸಂಪನ್ನರಾದ ಬ್ರಾಹ್ಮಣರು ಸ್ವರ್ಗವಂ ಪಡೆಯಲಿಚ್ಛೆಯಿಂದ ಆಂಗಿರಸವೆಂಬ ಹೆಸರುಳ್ಳ ಮಹಾಯಜ್ಞವಂ ಮಾಡುತಲಿರುವರಾದುದರಿಂದ ನೀವು ಅವರಯಜ್ಞಶಾಲೆಗೆ ಹೋಗಿರಿ ॥೪॥ ಈರ್ವರಾದ ನಮ್ಮಿಂದ ಕಳುಹಿಸಲ್ಪಟ್ಟ ನೀವು ಆಯಜ್ಞಶಾಲೆಯನೆಯ್ದಿ ಭಗವಂತನಾದ ನಮ್ಮಣ್ಣನ ಹೆಸರನ್ನೂ ನನ್ನಹೆಸರನ್ನೂ

ಕೃಷ್ಣಸ್ಯಮಮಚಾಭಿಧಾಮ್ ‖೫‖ ಇತ್ಯಾದಿಷ್ಟಾಭಗವತಾಗತ್ವಾಯಾಚನ್ತತೇತದಾ। ಕೃತಾಞ್ಜಲಿಪುಟಾವಿ
ಪ್ರಾನ್ದಣ್ಡವತ್ಪತಿತಾಭುವಿ ‖೬‖ ಹೇಭೂಮಿದೇವಾಶ್ಶೃಣುತಕೃಷ್ಣಸ್ಯಾದೇಶಕಾರಿಣಃ। ಪ್ರಾಪ್ತಾನ್
ಜಾನೀತಭದ್ರಂನೋಗೋಪಾನ್ನೋರಾಮಚೋದಿತಾನ್ ‖೭‖ ಗಾಶ್ಚಾರಯನ್ತಾವವಿದೂರಓದನಂರಾ
ಮಾಚ್ಯುತೌಯುಷ್ಮತೋಲಷತೋಬುಭುಕ್ಷಿತೌ। ತಯೋರ್ದ್ವಿಜಾಓದನಮರ್ಥಿನೋರ್ಯದಿಶ್ರದ್ಧಾಚವೋಯಚ್ಛ
ತಧರ್ಮವಿತ್ತಮಾಃ ‖೮‖ ದೀಕ್ಷಾಯಾಃಪಶುಸಂಸ್ಥಾಯಾಸ್ಸೌತ್ರಾಮಣ್ಯಾಶ್ಚಸತ್ತಮಾಃ। ಅನ್ಯ
ತ್ರದೀಕ್ಷಿತಸ್ಯಾಪಿನಾನ್ನಮಶ್ನನ್ಹಿದುಷ್ಯತಿ ‖೯‖ ಇತಿತೇಭಗವದ್ಯಾಚ್ಞಾಂಶೃಣ್ವನ್ತೋಪಿನಶುಶ್ರುವುಃ।

---

ಬಲರಾಮನ, ಅಭಿಧಾಂ-ಹೆಸರನ್ನೂ, ಮಮಚ-ನನ್ನ ಹೆಸರನ್ನೂ, ಕೀರ್ತಯಂತಃ-ಕೊಂಡಾಡುತ್ತಲಿರುವವರಾಗಿ, ಓದನಂ-ಅನ್ನ ವನ್ನು, ಯಾಚತ-ಬೇಡಿರಿ ‖೫‖ ಇತಿ-ಹೀಗೆ, ಭಗವತಾ-ಕೃಷ್ಣನಿಂದ, ಆದಿಷ್ಟಾಃ-ಆಜ್ಞಾಪಿಸಲ್ಪಟ್ಟ, ತೇ-ಆಗೋಪಾಲಕರು, ಗತ್ವಾ-ಹೋಗಿ, ತದಾ-ಆಗ, ಭುವಿ-ನೆಲದಲ್ಲಿ, ದಂಡವತ್-ಕೋಲಿನಂತೆ, ಪತಿತಾಃ-ಬಿದ್ದು ನಮಸ್ಕರಿಸಿದವರಾಗಿ, ಕೃತಾಂಜಲಿಪುಟಾಸ್ಸಂತಃ-ಮಾಡಲ್ಪಟ್ಟ ಬಗಸೆಯುಳ್ಳವರಾಗಿ, ವಿಪ್ರಾನ್-ಬ್ರಾಹ್ಮಣರನ್ನು ಕುರಿತು, ಅಯಾಚಂತ-ಬೇಡಿದರು ‖೬‖ ಹೇಭೂಮಿದೇವಾಃ-ಓಬ್ರಾಹ್ಮಣರೇ! ಶೃಣುತ-ಕೇಳಿರಿ. ನಃ-ನಮ್ಮನ್ನು, ರಾಮಚೋದಿತಾನ್-ಬಲರಾಮನಿಂದ ಪ್ರೇರಿಸಲ್ಪಟ್ಟವರನ್ನಾಗಿಯೂ, ಕೃಷ್ಣಸ್ಯ-ಕೃಷ್ಣನ, ಆದೇಶಕಾರಿಣಃ-ಆಜ್ಞೆಯನ್ನು ನಡೆಸುವವರನ್ನಾಗಿಯೂ, ಪ್ರಾಪ್ತಾನ್-ಬಂದವರನ್ನಾಗಿ, ಜಾನೀತ-ತಿಳಿದುಕೊಳ್ಳಿರಿ ವಃ-ನಿಮಗೆ, ಭದ್ರಂ-ಶುಭವಾಗಲಿ ‖೭‖ ಧರ್ಮವಿತ್ತಮಾಃ-ಅತ್ಯಂತವಾಗಿ ಧರ್ಮವಂಬಲ್ಲವರಾದ, ಹೇದ್ವಿಜಾಃ-ಓಬ್ರಾಹ್ಮಣರೇ; ಅವಿದೂರೆ-ಕೊಂಚಹತ್ತಿರದಲ್ಲಿಯೇ, ಗಾಃ-ಗೋವುಗಳನ್ನು, ಚಾರಯಂತೌ-ಮೇಯಿಸುತ್ತಲಿರುವ, ರಾಮಾಚ್ಯುತೌ-ರಾಮಕೃಷ್ಣರು, ಬುಭುಕ್ಷಿತೌಸಂತೌ-ಹಸಿದವರಾಗಿ, ಯುಷ್ಮತ್-ನಿಮ್ಮವರನ್ನು, ಲಷತಃ-ಬಯಸುತ್ತಿರುವರೋ, ತದೋದನಂ-ಆಯನ್ನವನ್ನು, ಅಥವಾ-ಯಾವಕಾರಣದಿಂದ ಅನ್ನವಂಬಯಸುವರೋ, ತತ್-ಆಕಾರಣದಿಂದ, ತಯೋಃ-ಆ, ಅರ್ಥಿನೋಃ-ಯಾಚಕರಾದ ರಾಮಕೃಷ್ಣರಿಗೆ, ಓದನಂ-ಅನ್ನವನ್ನು, ಶ್ರದ್ಧಾಚೇದ್ಯದಿ-ಅವಶ್ಯವಾಗಿ ಕೊಡತಕ್ಕದ್ದೆಂಬ ಬುದ್ಧಿಯುಳ್ಳವರಾದರೆ, ಯಚ್ಛತ-ಕೊಡಿರಿ ‖೮‖ ಹೇಸತ್ತಮಾಃ-ಎಲೈ ಅತ್ಯಂತ ಸತ್ಪುರುಷರಿರಾ; ದೀಕ್ಷಾಯಾಃ-ಅಗ್ನಿಷ್ಟೋಮಯಜ್ಞದೀಕ್ಷೆಯ ದೆಸೆಯಿಂದ ಮೊದಲುಗೊಂಡು, ಪಶುಸಂಸ್ಥಾಯಾಃ-ಪಶ್ವಾಲಂಭವೆಂಬರೆ ವಪಾಯಾಗದವರೆಗೂ, ಸೌತ್ರಾಮಣ್ಯಾಶ್ಚ-ಸೌತ್ರಾಮಣಿಯೆಂಬ ಯಜ್ಞಕ್ಕಿಂತಲೂ, ಅನ್ಯತ್ರ-ಇತರವಾದ ಯಜ್ಞಕರ್ಮದಲ್ಲಿಯೂ, ದೀಕ್ಷಿತಸ್ಯ-ಯಜ್ಞದೀಕ್ಷೆಯುಳ್ಳವನ, ಅನ್ನಮಪಿ-ಅನ್ನವನ್ನಾದರೂ, ಅಶ್ನನ್-ಭಕ್ಷಿಸುತಲಿರುವನು, ನದುಷ್ಯತಿಹಿ-ದೋಷವುಳ್ಳವನಾಗುವುದಿಲ್ಲವಲ್ಲವೇ ‖೯‖ ಕ್ಷುದ್ರಾಶಾಃ-

---

ಹೇಳಿ ಅನ್ನವಂ ಯಾಚಿಸುವರಾಗಿರಿ. ‖೫‖ ಹೀಗೆ ಭಗವಂತನಾದ ಕೃಷ್ಣನಿಂದ ಆಜ್ಞಾಪಿಸಲ್ಪಟ್ಟ ಗೋಪಾಲಕರು ಆಯಜ್ಞಶಾಲೆಯನೆಯ್ದಿ ಅಂಜಲಿ ಬಂಧಯುಕ್ತರಾಗಿ ಭೂಮಿಯಲ್ಲಿ ದಂಡದಂತೆ ಪ್ರಣಾಮಂಗೆಯ್ದು ಕೃಷ್ಣನ ಆಜ್ಞಾನುಸಾರವಾಗಿ ಬ್ರಾಹ್ಮಣರಂ ಕುರಿತು ಅನ್ನವಂ ಯಾಚಿಸಿದರು. ‖೬‖ ಅದೆಂತೆನೆ- ಎಲೈ, ಬ್ರಾಹ್ಮಣರೇ! ನಮ್ಮಿಂದ ಪೇಳಲ್ಪಡುವ ವಾಕ್ಯವಂ ಕೇಳಿ ನಿಮಗೆ ಶ್ರೇಯಸ್ಸುಂಟಾಗಲಿ, ನಮ್ಮನ್ನು ರಾಮಕೃಷ್ಣರ ಆಜ್ಞೆಯಿಂ ಪ್ರೇರಿಸಲ್ಪಟ್ಟು ಈ ಯಜ್ಞಶಾಲೆಗೆ ಬಂದವರನ್ನಾಗಿ ತಿಳಿಯಿರಿ; ‖೭‖ ನಿಮಿತ್ತವೇನೆಂದರೆ- ಧರ್ಮಜ್ಞರಲ್ಲಿ ಶ್ರೇಷ್ಠರಾದ ಬ್ರಾಹ್ಮಣೋತ್ತಮರೇ! ಶ್ರೀರಾಮ ಕೃಷ್ಣರೀರ್ವರೂ ಬಂದು ಇಲ್ಲಿಗೆ ಸಮೀಪವಾದ ವನದಲ್ಲಿ ಗೋವುಗಳಂ ಮೇಯಿಸುತ್ತ ಹಸಿವಿನಿಂದ ಬಳಲಿದವರಾದುದರಿಂದ ಅನ್ನವಂ ಬಯಸುತಲಿರುವರಾಗಿ ಅನ್ನಾರ್ತರಾದ ಅವರಲ್ಲಿ ನಿಮಗೆ ವಿಶ್ವಾಸವಿದ್ದರೆ ಅನ್ನವಂ ಕೊಟ್ಟು ಅವರಂ ಸಂತೋಷಪಡಿಸಿರಿ ‖೮‖ (ನಾವು ಯಜ್ಞದಲ್ಲಿ ದೀಕ್ಷಾಯುಕ್ತರಾಗಿರುವೆವಾದುದರಿಂದ ನಮ್ಮಲ್ಲಿರುವ ಅನ್ನವು ಶಿಷ್ಟರಿಗೆ ಯೋಗ್ಯವಲ್ಲವಾದುದರಿಂ ಆ ರಾಮಕೃಷ್ಣರು ಎಂತು ಈ ಅನ್ನವಂ ಭುಜಿಸುವರು? ಎಂದಲ್ಲಿ ನುಡಿಯುವರು.) ಎಲೈ, ಬ್ರಾಹ್ಮಣೋತ್ತಮರೇ! ಯಜ್ಞಕ್ಕೆ ದೀಕ್ಷೆಮಾಡಿಕೊಂಡಂದು ಮೊದಲುಗೊಂಡು ವಪಾಹೋಮವಾಗುವುದಕ್ಕಿಂತಲೂ ಪೂರ್ವದಲ್ಲಿ ಅಗ್ನಿಷ್ಟೋಮಯಾಗದೊಳಗೂ, ಸೌತ್ರಾಮಣಿಯೆಂಬ ಯಾಗದೊಳಗೂ, ಅನ್ನವು ನಿಷಿದ್ಧವೇ ಹೊರತು- ವಪಾಯಾಗವಾದ ಮೇಲೆ ಅಗ್ನಿಷ್ಟೋಮದಲ್ಲಿಯೂ ಸೌತ್ರಾಮಣಿಗಿಂತಲೂ ಅನ್ಯವಾದ ಯಾವ ಯಾಗದಲ್ಲಿಯೂ ಅನ್ನವು ಭುಜಿಸುವಪುರುಷನು ದೋಷಯುಕ್ತನಾಗುವದಿಲ್ಲವು. ‖೯‖ ಹೀಗೆ ಅವರು ಪೇಳಿದ ಮೇಲೆ ತುಚ್ಛಗಳಾದ ಸ್ವರ್ಗಾದಿ ಫಲಗಳಲ್ಲಿ ಅಪೇಕ್ಷೆಮಾತ್ರದ

ಕ್ಷುದ್ರಾಶಾಭೂರಿಕರ್ಮಾಣೋಬಾಲಿಶಾವೃದ್ಧಮಾನಿನಃ ||೧೦|| ದೇಶಃಕಾಲಃಪೃಥಗ್ದ್ರವ್ಯಂಮಂತ್ರ ತಂತ್ರರ್ತ್ವಿಜೋಗ್ನಯಃ | ದೇವತಾಯಜಮಾನಶ್ಚಕ್ರತುರ್ಧರ್ಮಶ್ಚಯನ್ಮಯಃ||೧೧|| ತದ್ಬ್ರಹ್ಮ ಪರಮಂಸಾಕ್ಷಾದ್ಭಗವನ್ತಮಧೋಕ್ಷಜಮ್| ಮನುಷ್ಯದೃಷ್ಟ್ಯಾದುಷ್ಪ್ರಜ್ಞಾಮರ್ತ್ಯಾತ್ಮಾನೋನ ತೇವಿದುಃ ||೧೨|| ನತೇತಏವಮಿತಿಪ್ರೋಚುರ್ನನೇತಿಚಪರಂತಪ, ಗೋಪಾನಿರಾಶಾಃಪ್ರತ್ಯೇತ್ಯತಥೋಚುಃ ಕೃಷ್ಣರಾಮಯೋಃ ||೧೩|| ತದುಪಾಕರ್ಣ್ಯಭಗವಾನ್ಪ್ರಹಸ್ಯಜಗದೀಶ್ವರಃ| ವ್ಯಾಜಹಾರಪುನ

---

ಕ್ಷುದ್ರ-ತುಚ್ಛವಾದ-ಸ್ವರ್ಗಾದ್ಯಲ್ಪಫಲಗಳಲ್ಲಿ, ಆಶಾಃ-ಅಭಿಲಾಷೆಯುಳ್ಳವರಾದ್ದರಿಂದಲೇ, ಭೂರಿಕರ್ಮಾಣಃ-ಬಹುಕರ್ಮಗಳು ಳ್ಳವರಾಗಿಯೂ, ಬಾಲಿಶಾಃ-ಮೂರ್ಖರಾಗಿಯೂ, ವೃದ್ಧಮಾನಿನಃ-ನಾವುದೊಡ್ಡವರೆಂಬಹೆಮ್ಮೆಯುಳ್ಳವರಾಗಿಯೂ, ಇರುವ,ತೇ-ಆಬ್ರಾಹ್ಮಣರು, ಇತಿ-ಇಂತೆಂಬ, ಭಗವದ್ಯಾಚ್ಞಾಂ-ಕೃಷ್ಣನಯಾಚನೆಯನ್ನು, ಶೃಣ್ವಂತೋಪಿ-ಕೇಳುತಲಿರುವರಾದರೂ, ನಶುಶ್ರುವುಃ-ಚನ್ನಾಗಿಕೇಳಲಿಲ್ಲವು||೧೦||ದೇಶಃ- ಜಂಕಗಳುತಿರುಗುವ ಪುಣ್ಯಭೂಮಿಯೂ, ಕಾಲಃ-ಉತ್ತರಾಯಣವಸಂತಪರ್ವಾಹರಾದಿಕಾಲವೂ, ಪೃಥಕ್-ಬೇರೆಯಾದ, ದ್ರವ್ಯಂ-ಆಜ್ಯಚರುಪುರೋಡಾಶಾದಿಪದಾರ್ಥವೂ, ಮಂತ್ರ-ಋಗ್ಯಜುಸ್ಸಾಮಮಂತ್ರಗಳೂ, ತಂತ್ರ-ಪ್ರವರ್ಗ್ಯಾದಿಕರ್ಮಗಳೂ, ಋತ್ವಿಕ್-ಹೋತ್ರಧ್ವರ್ಯೂದ್ಗಾತೃಬ್ರಹ್ಮರೆಂಬಯಜ್ಞನಿರ್ವಾಹಕರೂ, ಅಗ್ನಯಃ-ಆಹವನೀಯಗಾರ್ಹಪತ್ಯದಕ್ಷಿಣಾಗ್ನಿಗಳೂ,ದೇವತಾಃ- ಇಂದ್ರಾಗ್ನ್ಯಾದಿಮಂತ್ರೋಕ್ತದೇವತೆಗಳೂ,ಯಜಮಾನಶ್ಚ-ಯಜ್ಞಕರ್ತನಾದದೀಕ್ಷಿತನೂ, ಕ್ರತುಃ-ಯಜ್ಞವೂ, ಧರ್ಮಶ್ಚ-ಯಜ್ಞದಿಂದಹುಟ್ಟುಪುಣ್ಯವೂ, ಯನ್ಮಯಃ-ಯಾವಬ್ರಹ್ಮಮಯವಾಗಿರುವುದೋ ||೧೧|| ತತ್-ಆ, ಪರಮಂಬ್ರಹ್ಮ-ಪರಬ್ರಹ್ಮವೇ, ಸಾಕ್ಷಾತ್-ಪ್ರತ್ಯಕ್ಷವಾಗಿರುವ, ಭಗವಂತಂ-ಷಡ್ಗುಣೈಶ್ವರ್ಯಸಂಪನ್ನನಾದ, ಅಧೋಕ್ಷಜಂ-ಇಂದ್ರಿಯದೋಷಗಳನ್ನು ತಿರಸ್ಕರಿಸಿದ, ಕೃಷ್ಣನನ್ನು, ಮನುಷ್ಯದೃಷ್ಟ್ಯಾ-ಮನುಷ್ಯನೆಂಬಬುದ್ಧಿಯಿಂದ, ದುಷ್ಪ್ರಜ್ಞಾಃ-ದೋಷಯುಕ್ತಜ್ಞಾನವುಳ್ಳವರಾದ, ಮರ್ತ್ಯಾತ್ಮಾನಃ-ಮರಣಯೋಗಸ್ವಭಾವವುಳ್ಳ, ತೇ-ಆಬ್ರಾಹ್ಮಣರು, ನವಿದುಃ-ತಿಳಿದುಕೊಳ್ಳಲಿಲ್ಲವು ||೧೨|| ಹೇಪರಂತಪ-ಶತ್ರುಗಳಂ ವ್ಯಥಗೊಳಿಸುವ ಪರೀಕ್ಷಿದ್ರಾಯನೇ! ತೇ-ಆಬ್ರಾಹ್ಮಣರು, ತತ್-ಆ ಗೋಪಾಲಕರ ಪ್ರಾರ್ಥನೆಯಂ ಕುರಿತು, ಓಮಿತಿ-ಆಗಲಿಯೆಂಬಅಂಗೀಕಾರವಚನವನ್ನು, ನಪ್ರೋಚುಃ-ಹೇಳಲಿಲ್ಲವು. ನೇತಿಚ-ಇಲ್ಲವೆಂತಲೂ, ನಪ್ರೋಚುಃ-ಹೇಳಲಿಲ್ಲವು. ಗೋಪಾಃ-ಗೊಲ್ಲರು, ನಿರಾಶಾಸ್ಸಂತಃ-ಅನ್ನದೊರೆಕೀತೆಂಬ ಆಶೆಯಿಲ್ಲದವರಾಗಿ, ಪ್ರತ್ಯೇತ್ಯ-ಹಿಂದಕ್ಕೆಬಂದು, ತಥಾ-ಹಾಗೆ, ರಾಮಕೃಷ್ಣಯೋಃ - ರಾಮ ಕೃಷ್ಣರಿಗೆ, ಊಚುಃ- ಹೇಳಿದರು ||೧೩|| ಜಗದೀಶ್ವರನಾದ ಭಗವಂತನು, ತತ್-ಅವರಮಾತನ್ನು, ಉಪಕರ್ಣ್ಯ-ಕೇಳಿ, ಪ್ರಹಸ್ಯ-ಹೆಚ್ಚಾಗಿನಕ್ಕು, ಲೌಕಿ

---

ಉಳ್ಳವರಾಗಿ ಬಹುಕ್ಲೇಶಸಾಧ್ಯಗಳಾದ ಕರ್ಮಂಗಳನ್ನೇ ಆಚರಿಸುತ ತಾವುಮೂಢರಾದರೂ ತಾವೇಸರ್ವಜ್ಞ ರೆಂದುತಿಳಿದಿರುವ ಆಬ್ರಾಹ್ಮಣರು ಗೋಪಾಲಕರಿಂದತಿಳಿಸಲ್ಪಟ್ಟಪ್ರಕಾರ ಶ್ರೀಕೃಷ್ಣನ ಯಾಚನೆಯಂ ಹೇಳಿದವ ರಾದರೂ ಅದರನ್ನು ಅಂಗೀಕರಿಸಲಿಲ್ಲ. ||೧೦||ಎಲೈ, ಅರಸೇ! ದೇಶವು, ಕಾಲವು, ಪ್ರತ್ಯೇಕವಾದ ಆಜ್ಯಚರುಪು ರೋಡಾಶಾದಿದ್ರವ್ಯವು, ಮಂತ್ರವು, ಪ್ರಯೋಗವು,ಋತ್ವಿಕ್ಕುಗಳು, ಗಾರ್ಹಪತ್ಯದಕ್ಷಿಣಾಗ್ನಿ ಆಹವನೀಯಗಳೆಂಬಅಗ್ನಿಗಳು, ಇಂದ್ರಾದಿದೇವತೆಗಳು ದೀಕ್ಷಿತನಾದಯಜಮಾನನು, ಯಜ್ಞವು, ಧರ್ಮವು, ಸಹಯಾವ ಶ್ರೀಕೃಷ್ಣದೇವನೇ ಸ್ವರೂಪವಾಗಿ ಉಳ್ಳವುಗಳೋ||೧೧|| ಸಾಕ್ಷಾತ್ಪರಬ್ರಹ್ಮ ಸ್ವರೂಪನಾದ ಭಗವಂತನಾದ ಆಶ್ರೀಕೃಷ್ಣನಂ ಮನುಷ್ಯನೆಂಬ ದೃಷ್ಟಿಯಿಂದ ದೇಹಾಭಿಮಾನಿಗಳಾಗಿ ಪ್ರಜ್ಞಾಹೀನರಾದ ಆ ಮೂಢಬ್ರಾಹ್ಮಣರು ತಿಳಿದರೇಹೊರತು, ಪರಬ್ರಹ್ಮನೆಂದು ತಿಳಿದುಕೊಳ್ಳಲಾರದೇ ಹೋದರು ||೧೨|| ಎಲೈ, ಅರಸೇ ಆದ್ದರಿಂದ ಆ ಬ್ರಾಹ್ಮಣರು ಗೋಪಾಲಕರ ಯಾಚನೆಯಂಕೇಳಿ, "ಕೊಡುತ್ತೇವೆ," ಎಂಬ ಅಂಗೀಕಾರವನ್ನಾಗಲೀ ಇಲ್ಲ ವೆಂಬ ನಿಷೇಧವನ್ನಾಗಲೀ ಹೇಳಲಿಲ್ಲವು. ಉಪೇಕ್ಷೆಯಿಂದ ಸುಮ್ಮನೆಯಿದ್ದರು. ಆದುದರಿಂದ ಆ ಗೋಪಾಲಕರು ಅನ್ನದ ಆಶೆಯಂಬಿಟ್ಟು ಮರಳಿ ರಾಮಕೃಷ್ಣರ ಸನ್ನಿಧಾನವನೆಯ್ದಿ ಆ ಸುದ್ದಿಯಂ ಬಿನ್ನವಿಸಿದರು ||೧೩|| ಆ ಮೇಲೆ ಭಗವಂತನಾದ ಜಗದೀಶ್ವರನಾದ ಕೃಷ್ಣನು ಗೋಪಾಲರ ವಾಕ್ಯವಂಕೇಳಿ, ಕಿರುನಗೆಗೊಂಡವನಾಗಿ, "ಕಾರ್ಯಾರ್ಥಿಗಳಾದವರು ಪರಿತಾಪಪಟ್ಟರೆ ತೀರುವುದೆ? ಯಾಚನೆಯಂ ಗೆಯ್ವಪುರುಷನು ಯಾವವನುತಾನೇ ಅವಮಾನವನೆಯ್ದದಿರುತ್ತಾನೆ? ಸರ್ವವನ್ನೂ ಸೈರಿಸಿಕೊಂಡು ಕಾರ್ಯವಂ ಸಾಧಿಸಬೇಕೇಹೊರತು ಪರಾಭ

ಗೋಪಾನ್ದರ್ಶಯನ್ಲೌಕಿಕೀಂಗತಿಮ್ ।೧೪। ಮಾಂಜ್ಞಾಪಯತಪತ್ನೀಭ್ಯಸ್ಸಸಂಕರ್ಷಣಮಾ
ಗತಂ । ದಾಸ್ಯಂತಿಕಾಮಮನ್ನಂವಸ್ಸ್ನಿಗ್ಧಾಮಯ್ಯುಷಿತಾಧಿಯಾ ।೧೫। ಶ್ರೀಶುಕಃ। ಗತ್ವಾಥಪ
ತ್ನೀಶಾಲಾಯಾಂದೃಷ್ಟ್ವಾಸೀನಾಸ್ಸ್ವಲಂಕೃತಾಃ । ನತ್ವಾದ್ವಿಜಸತೀರ್ಗೋಪಾಃಪ್ರಶ್ರಿತಾಇದಮ
ಬ್ರುವನ್ ।೧೬॥ ನಮೋವೋದ್ವಿಜಪತ್ನೀಭ್ಯೋನಿಬೋಧತವಚಾಂಸಿನಃ। ಇತೋವಿದೂರೇಚರತಾಕೃಷ್ಣೇನ
ಪ್ರೇಷಿತಾವಯಂ ।೧೭। ಗಾಶ್ಚಾರಯನ್ಸಗೋಪಾಲೈಸ್ಸರಾಮೋದೂರಮಾಗತಃ। ಬುಭುಕ್ಷಿತಸ್ಯತ
ಸ್ಯಾನ್ನಂಸಾನುಗಸ್ಯಪ್ರದೀಯತಾಂ।೧೮। ಶೃತ್ವಾಚ್ಯುತಮುಪಾಯಾಂತಂನಿತ್ಯಂತದ್ದರ್ಶನೋತ್ಸು

---

ಕೀಂ-ಲೋಕಸಂಬಂಧವಾದ, ಗತಿಂ-ರೀತಿಯನ್ನು, ದರ್ಶಯನ್ಸನ್-ತೋರಿಸುತಲಿರುವನಾಗಿ, ಗೋಪಾನ್-ಗೋಪಾಲಕರನ್ನು
ಕುರಿತು, ಪುನಃ-ಮರಳಿಯೂ, ವ್ಯಾಜಹಾರ-ವಿಶೇಷವಾಗಿ ನುಡಿದನು ॥೧೪॥ ಸಸಂಕರ್ಷಣಂ-ರಾಮನಿಂದ ಸಹಿತನಾದ, ಮಾಂ-
ನನ್ನನ್ನು, ಆಗತಂ-ಬಂದವನನ್ನಾಗಿ, ಪತ್ನೀಭ್ಯಃ-ಋಷಿಪತ್ನಿಯರಿಗೆ, ಜ್ಞಾಪಯತ-ಅರುಹಿಸಿರಿ, ಮಯಿ-ನನ್ನಲ್ಲಿ, ಸ್ನಿಗ್ಧಾಃ-ಸ್ನೇ
ಹವುಳ್ಳವರಾಗಿ, ಧಿಯಾ-ಬುದ್ಧಿಯಿಂದ, ಉಷಿತಾಃ-ಇರುತಲಿರುವ ಆಹೆಂಗಳು, ವಃ-ನಮಗೆ, ಕಾಮಂ-ಬೇಕಾದಷ್ಟು, ಅನ್ನಂ-ಆ
ಹಾರವನ್ನು, ದಾಸ್ಯಂತಿ-ಕೊಡುವರು ॥೧೫॥ (ಶುಕವಾಕ್ಯವು) ಗೋಪಾಃ-ಗೊಲ್ಲರು, ಗತ್ವಾ-ಹೋಗಿ, ಪತ್ನೀಶಾಲಾಯಾಂ-
ಯಜಮಾನನ ಪತ್ನಿಯು ಇರತಕ್ಕಶಾಲೆಯಲ್ಲಿ, ಸ್ವಲಂಕೃತಾಃ-ಚನ್ನಾಗಿ ಸಿಂಗರಿಸಲ್ಪಟ್ಟವರಾಗಿ,ಆಸೀನಾಃ-ಕುಳಿತಿರುವ, ದ್ವಿಜ
ಸತೀಃ-ಬ್ರಾಹ್ಮಣರ ಪತ್ನಿಯರನ್ನು, ದೃಷ್ಟ್ವಾ-ನೋಡಿ, ಪ್ರಶ್ರಿತಾಸ್ಸಂತಃ-ವಿನಯದಿಂದ ಬಗ್ಗಿದವರಾಗಿ, ಇದಂ-ಮುಂದೆ
ಹೇಳಲ್ಪಡುವಮಾತನ್ನು, ಅಬ್ರುವಂಶ್ಚ-ನುಡಿದರು ॥೧೬॥ ದ್ವಿಜಪತ್ನೀಭ್ಯಃ-ಬ್ರಾಹ್ಮಣರ ಹೆಂಡಿರಾದ,ವಃ-ನಿಮಗೆ, ನಮಃ-
ನಮಸ್ಕಾರವಾಗಲಿ, ನಃ-ನಮ್ಮ, ವಚಾಂಸಿ-ಮಾತುಗಳನ್ನು, ನಿಬೋಧತ-ಕೇಳಿರಿ. ಇತಃ-ಇಲ್ಲಿಂದ, ಅವಿದೂರೇ-ವಿಶೇಷದೂರ
ವಲ್ಲದ ಸ್ಥಲದಲ್ಲಿ, ಚರತಾ-ತಿರುಗುತಲಿರುವ, ಕೃಷ್ಣೇನ-ಕೃಷ್ಣನಿಂದ, ವಯಂ-ನಾವು,ಪ್ರೇಷಿತಾಃ-ಕಳುಹಿಸಲ್ಪಟ್ಟವರು॥೧೭॥
ಸಃ-ಆ ಕೃಷ್ಣನು, ಸರಾಮಃ-ರಾಮನಿಂ ಕೂಡಿದವನಾಗಿ, ಗೋಪಾಲೈಃ-ಗೊಲ್ಲರೊಂದಿಗೆ,ಗಾಃ-ಗೋವುಗಳನ್ನು, ಚಾರಯನ್-
ಮೇಯಿಸುವನಾಗಿ, ದೂರಂ-ದೂರದೇಶವನ್ನು ಕುರಿತು, ಆಗತಃ-ಬಂದವನಾದನು. ಬುಭುಕ್ಷಿತಸ್ಯ-ಉಣಲೆಳಸಿದ, ಸಾನುಗ
ಸ್ಯ-ಸಂಗಡ ಬಂದವರಿಂಕೂಡಿದ, ತಸ್ಯ-ಆ ಕೃಷ್ಣನಿಗೆ, ಅನ್ನಂ-ಆ ಹಾರವು, ಪ್ರದೀಯತಾಂ-ಕೊಡಲ್ಪಡಲಿ ॥೧೮॥ ಅಚ್ಯು
ತಂ-ಕೃಷ್ಣನನ್ನು, ಉಪಾಯಾಂತಂ-ಹತ್ತಿರಕ್ಕೆ ಬರುತ್ತಿರುವವನನ್ನಾಗಿ, ಶೃತ್ವಾ-ಕೇಳಿ, ತತ್ಕಥಾಕ್ಷಿಪ್ತಮನಸಃ-ತತ್-ಆ

---

ವವನ್ನು ಹೊಂದಿಬರಬಾರದು. ,, ಎಂಬ ಲೋಕವ್ಯಾಪಾರವಂ ತೋರಿಸುವವನಾಗಿ ಪುನಶ್ಚ ಆಗೋಪಾಲಕರಂಕು
ರಿತು ನುಡಿದನು ।೧೪। ಅದೆಂತೆನೆ ಎಲೈ ಗೋಪಾಲಕರೇ! ನೀವು ಪುನಃ ಯಜ್ಞಶಾಲೆಯನೆಯ್ದಿ ಆಬ್ರಾಹ್ಮಣಪ
ತ್ನಿಯರಂ ಕುರಿತು ಬಲರಾಮನೊಡಗೂಡಿ ಬಂದಿರುವಕೃಷ್ಣನು ಅನ್ನವಂ ಯಾಚಿಸುವ ನೆಂಬರ್ಥವಂ ತಿಳಿಸುವ
ರಾಗಿ, ಆ ಬ್ರಾಹ್ಮಣ ಪತ್ನಿಯರು ನನ್ನಲ್ಲಿಯೇ ಆಸಕ್ತ ಚಿತ್ತವುಳ್ಳವರಾದುದರಿಂದ ಪ್ರೇಮದಿಂ ನಿಮಗೆ ಯಥೇ
ಚ್ಛೆಯಾಗಿ ಅನ್ನವಂ ಕೊಡುವರು ।೧೫। ಎಲೈ, ಅರಸೇ! ಇಂತೆಂಬಕೃಷ್ಣವಾಕ್ಯವಂ ಕೇಳಿ ಗೋಪಾಲಕರು ಪು
ನರಪಿ ಯಜ್ಞಶಾಲೆಗೆ ಹೋಗಿ ಪತ್ನೀಶಾಲೆಯೊಳು ಅಲಂಕೃತರಾಗಿ ಕುಳಿತಿರುವ ಆಬ್ರಾಹ್ಮಣ ಪತ್ನಿಯರಂಕಂ
ಡು ನಮಸ್ಕಾರಂಗೆಯ್ದು, ವಿನಯಯುಕ್ತರಾಗಿ ಒಂದುವಾಕ್ಯವಂ ನುಡಿದರು ।೧೬। ಬ್ರಾಹ್ಮಣಪತ್ನಿಯರೇ
ನಿಮಗೆ ನಮಸ್ಕಾರವು. ನೀವು ನಮ್ಮ ವಚನವನವಧರಿಸಿ, ಇಲ್ಲಿಗೆಸಮೀಪದಲ್ಲಿ ಸಂಚಾರಂಗೆಯ್ವ ಶ್ರೀಕೃಷ್ಣದೇ
ವನಿಂದಲೇ ನಾವು ಕಳುಹಿಸಲ್ಪಟ್ಟವರಾಗಿ ಬಂದಿರುವೆವು।೧೭। ಬಲಭದ್ರಸಮೇತನಾಗಿಗೋಪಾಲ ಬಾಲಕರೊ
ಡಗೂಡಿ ಗೋವುಗಳಂಮೇಯಿಸುತ, ಶ್ರೀಕೃಷ್ಣಮೂರ್ತಿಯು ಗೋಕುಲಕ್ಕೆ ದೂರವಾದ ಪ್ರದೇಶದಲ್ಲಿಬಂ
ದಿರುವನು. ಭೋಜನಾಪೇಕ್ಷೆಯುಳ್ಳ ಗೋಪಾಲಕರೊಡಗೂಡಿದ ಆಶ್ರೀಕೃಷ್ಣದೇವನಿಗಾಗಿ ಅನ್ನವು ನಿಮ್ಮಿಂ
ದಕೊಡಲ್ಪಡಲಿ. ।೧೮। ಇಂತೆಂದು ವಿಜ್ಞಾಪನಂಗೆಯ್ದು ಗೋಪಾಲಕರ ವಾಕ್ಯವಂಕೇಳಿ ಆಬ್ರಾಹ್ಮಣಪತ್ನಿಯರು

ಕಾಃ । ತತ್ಕಥಾಕ್ಷಿಪ್ತಮನಸೋಬಭೂವುರ್ಜಾತಸಂಭ್ರಮಾಃ ||೧೯|| ಚತುರ್ವಿಧಂಬಹುಗುಣಮನ್ನ
ಮಾದಾಯಭಾಜನೈಃ । ಅಭಿಸಸ್ರುಃಪ್ರಿಯಂಸರ್ವಾಸ್ಸಮುದ್ರಮಿವನಿಮ್ನಗಾಃ ||೨೦|| ನಿಷಿಧ್ಯಮಾ
ನಾಃಪತಿಭಿಃಪಿತೃಭಿರ್ಭ್ರಾತೃಭಿಸ್ಸುತೈಃ। ಭಗವತ್ಯುತ್ತಮಶ್ಲೋಕೇದೀರ್ಘಶ್ರುತಧೃತಾಶಯಾಃ||೨೧||
ಯಮುನೋಪವನೇಽಶೋಕನವಪಲ್ಲವಮಂಡಿತೇ । ವಿಚರಂತಂವೃತಂಗೋಪೈರ್ದದೃಶುಸ್ಸಾಗ್ರಜಂಸ್ತ್ರಿ

---

ಕೃಷ್ಣನ, ಕಥಾ-ಗುಣವರ್ಣನದಿಂದ, ಆಕ್ಷಿಪ್ತ-ಎಳೆಯಲ್ಪಟ್ಟ, ಮನಸಃ-ಮನಸ್ಸುಳ್ಳವರಾದ್ದರಿಂದಲೇ, ನಿತ್ಯಂ-ಸರ್ವಕಾಲ ದಲ್ಲಿಯೂ, ತದ್ದರ್ಶನ-ಆಕೃಷ್ಣನನ್ನು ನೋಡುವುದರಲ್ಲಿ, ಉತ್ಸುಕಾಃ-ಆದರವುಳ್ಳವರಾದ್ದರಿಂದ, ಜಾತಸಂಭ್ರಮಾಃ-ಜಾತ-ಪಡೆಯಲ್ಪಟ್ಟ, ಸಂಭ್ರಮಾಃ-ಸಂತೋಷವುಳ್ಳವರು, ಬಭೂವುಃ-ಆದರು ||೧೯|| ಸರ್ವಾಃ-ಋಷಿಪತ್ನಿಯರೆಲ್ಲರೂ, ಬಹುಗು ಣಂ-ಸುಪೋಷ್ಣ ಸುಗಂಧ ಸುರುಚಿ ಸುರೂಪಾದಿ ಬಹುಗುಣಗಳುಳ್ಳ, ಚತುರ್ವಿಧಂ-ಭಕ್ಷ್ಯ ಭೋಜ್ಯ ಲೇಹ್ಯ ಚೋಷ್ಯಗಳೆಂ ಬ ನಾಲ್ಕುಬಗೆಗಳುಳ್ಳ, ಅನ್ನಂ-ಉಣತಕ್ಕ ಪದಾರ್ಥವನ್ನು, ಭಾಜನೈಃ-ಪಾತ್ರೆಗಳಿಂದ, ಆದಾಯ-ತೆಗೆದುಕೊಂಡು, ಪ್ರಿ ಯಂ-ಇಷ್ಟನಾದ ಕೃಷ್ಣನನ್ನು ಕುರಿತು, ಸಮುದ್ರಂ-ಕಡಲನ್ನು, ನಿಮ್ನಗಾಇವ-ಹೊಳೆಗಳಂತೆ, ಅಭಿಸಸ್ರುಃ-ಇದಿರ್ಗೊಂ ಡು ಪೋದರು ||೨೦|| ಪತಿಭಿಃ-ಗಂಡಂದಿರಿಂದಲೂ, ಪಿತೃಭಿಃ-ತಂದೆಗಳಿಂದಲೂ, ಭ್ರಾತೃಭಿಃ-ಅಣ್ಣಂದಿರಿಂದಲೂ, ಅಥವಾ ಒಡಹುಟ್ಟಿದವರಿಂದಲೂ, ಸುತೈಃ-ಮಕ್ಕಳಿಂದಲೂ, ನಿಷಿಧ್ಯಮಾನಾಅಪಿ- ಹೋಗಬೇಡವೆಂದುತಡೆಯಲ್ಪಟ್ಟವರಾದರೂ, ಉತ್ತ ಮಶ್ಲೋಕ-ಸತ್ಕೀರ್ತಿಯನ್ನು ಹೊಂದಲ್ಪಟ್ಟವನಾದ, ಭಗವತಿ-ಕೃಷ್ಣನಲ್ಲಿ, ದೀರ್ಘಶ್ರುತಧೃತಾಶಯಾಃ-ದೀರ್ಘ-ಬಹುಕಾಲವಾಗಿ, ಶ್ರುತ-ಕೇಳಲ್ಪಟ್ಟದ್ದರಿಂದಲೇ, ಧೃತ-ಧರಿಸಲ್ಪಟ್ಟ, ಆಶಯಾಃ-ಅಭಿಪ್ರಾಯವುಳ್ಳವರಾದ||೨೧|| ಸ್ತ್ರಿಯಃ-ಹೆಂಗಳು; ಅಶೋಕ .. ಮಂಡಿತ-ಅಶೋಕ ಅಸುಗೆಯ ಮರಗಳ, ನವಪಲ್ಲವ-ಹೊಸಚಿಗುರುಗಳಿಂದ, ಮಂಡಿತೇ-ಅಲಂಕರಿಸ

---

ಪೂರ್ವದಲ್ಲಿಯೇ ಶ್ರೀಕೃಷ್ಣ ಕಥಾಶ್ರವಣದಿಂ ಮೋಹಿತಚಿತ್ತರಾಗಿ 'ಶ್ರೀಕೃಷ್ಣನಂ ಯಾವಾಗನೋಡುವೆ ವೋ' ಎಂದು ಅತ್ಯಂತಕುತೂಹಲವುಳ್ಳವರಾದುದರಿಂದ ಈಗ ಆಶ್ರೀಕೃಷ್ಣಮೂರ್ತಿಯೇ ಬಂದಿರುವ ನೆಂಬ ವೃತ್ತಾಂತವಂಕೇಳಿ ಕೃಷ್ಣದರ್ಶನಾರ್ಥವಾಗಿ ತ್ವರೆಯುಳ್ಳವರಾದರು ||೧೯|| ಅನಂತರದಲ್ಲಿ ಲೇಹ್ಯ-ನೆಕ್ಕಿಕೊ



ಳ್ಳತಕ್ಕದ್ದು, 'ಚೋಷ್ಯ- ಸುರ್ರಿಕೊಳ್ಳತಕ್ಕದ್ದು' ಖಾದ್ಯ - ಅಗಿಯತಕ್ಕದ್ದು, ಭಕ್ಷ್ಯ-ತಿನ್ನತಕ್ಕದ್ದು ಎಂಬ ಚತುರ್ವಿಧಗಳಾದ ಮತ್ತು ಪಾಕಸಂಸ್ಕಾರ ವಿಶೇಷದಿಂದುಂಟಾದ ಸುಗಂಧ ಸುರುಚಿಯುಳ್ಳ ದಿವ್ಯಾನ್ನಗಳಂ ಪಾತ್ರೆಗಳಲ್ಲಿಟ್ಟುಕೊಂಡು ಆಬ್ರಾಹ್ಮಣಪತ್ನಿಯರೆಲ್ಲರೂ ನದಿಗಳು ತಡೆಯಿಲ್ಲದೆ ಸಮುದ್ರವನೆಯ್ದುವಂತೆ ಪತಿಗಳಿಂದಲೂ ಬಂಧುಗಳಿಂದಲೂ ತಡೆಯಲ್ಪಟ್ಟವರಾದರೂ ಅವರ ಮಾತುಗಳಂಲಕ್ಕಿಸದೆ ಕೃಷ್ಣಮೂರ್ತಿಯ ಸಮೀಪವ ಸ್ಯೈದಿದರು ||೨೦|| ಮತ್ತು ಪತಿಗಳಿಂದಲೂ ಪಿತೃಗಳಿಂದಲೂ ಭ್ರಾತೃಗಳಿಂದಲೂ ಪುತ್ರರಿಂದಲೂ ತಡೆಯಲ್ಪಟ್ಟವರಾದರೂ ಆ ಬ್ರಾಹ್ಮಣಪತ್ನಿಯರೂ ಪುಣ್ಯಕೀರ್ತಿಯುಳ್ಳ ಭಗವಂತನಾದ ಶ್ರೀಕೃಷ್ಣಮೂರ್ತಿಯಲ್ಲಿ ಚಿರಕಾಲದಿಂದಿ ಸಲ್ಪಟ್ಟ ಪ್ರೇಮವುಳ್ಳವರಾದುದರಿಂದ ಶೀಘ್ರದಿಂಹೊರಟುಬಂದರು. ||೨ ಅನಂತರ ಆಬ್ರಾಹ್ಮಣಪತ್ನಿಯರು _ ಅಸುಗೆಯಮರದ ಹೊಸಚಿಗುರುಗಳಿಂದ ಶೋಭಿಸುತಲಿರುವ ಯಮುನಾ

ಯಃ |೨೨| ಶ್ಯಾಮಂಹಿರಣ್ಯಪರಿಧಿಂನವಮಾಲ್ಯಬರ್ಹಧಾತುಪ್ರವಾಳನಟವೇಷಮನುವ್ರತಾಂಸೇ | ವಿನ್ಯಸ್ತಹಸ್ತಮಿತರೇಣಧುನಾನಮಬ್ಜಂಕರ್ಣೋತ್ಪಲಾಲಕಕಪೋಲಮುಖಾಬ್ಜಹಾಸಂ |೨೩| ಪ್ರಾಯಃ ಶ್ರುತಪ್ರಿಯತಮೋದಯಕರ್ಣಪೂರೈರ್ಯಸ್ಮಿನ್ನಿಮಗ್ನಮನಸಸ್ತಮಥಾಕ್ಷಿರಂಧ್ರೈಃ| ಅಂತಃಪ್ರವೇಶ್ಯಸುಚಿರಂಪರಿರಭ್ಯತಾಪಂಪ್ರಾಜ್ಞಂಯಥಾಭಿಮತಯೋವಿಜಹುರ್ನರೇಂದ್ರ|೨೪| ತಾಸ್ತಥಾತ್ಯಕ್ತ

ಪ್ಟಿಟ್ಟ, ಯಮುನೋಪವನೇ-ಯಮುನಾನದಿಯ ಸಮೀಪದ ಕಾಡಿನಲ್ಲಿ, ವಿಚರಂತಂ-ತಿರುಗುತಲಿರುವಂತಾ, ಗೋಪೈರ್ವೃತಂ-ಗೊಲ್ಲರಿಂದ ಬಳಸಲ್ಪಟ್ಟವನಾದಂತಾ, ಸಾಗ್ರಜಂ-ಅಣ್ಣನಿಂದ ಕೂಡಿದ ಕೃಷ್ಣನನ್ನು, ದದೃಶುಃ-ಕಂಡರು,॥೨೨॥ ಶ್ಯಾಮಂ-ಸೊಗಸಾದ ಕಪ್ಪುಬಣ್ಣವುಳ್ಳ, ಹಿರಣ್ಯಪರಿಧಿಂ-ಭಂಗಾರದಂತಿರುವ ಉಡಿಗೆಯುಳ್ಳ, ನವ...ವೇಷಂ-ನವ-ಹೊಸತಾದ,ಮಾಲ್ಯ-ಪುಷ್ಪಹಾರಗಳಿಂದಲೂ, ಬರ್ಹ-ನವಿಲಗರಿಗಳಿಂದಲೂ, ಧಾತು-ಕಾವಿಮೊದಲಾದವುಗಳಿಂದಲೂ, ಪ್ರವಾಳ-ಚಿಗುರುಗಳಿಂದಲೂ, ನಟವೇಷಂ-ಕುಣಿಯುವವನಅಲಂಕಾರವುಳ್ಳ, ಅನುವ್ರತಾಂಸೇ-ಸಂಗಡಬರುವವನಭುಜದಲ್ಲಿ, ವಿನ್ಯಸ್ತಹಸ್ತಂ-ಇರಿಸಲ್ಪಟ್ಟ ಕೈಯುಳ್ಳ, ಇತರೇಣ-ಬೇರೆಕೈಯಿಂದ, ಅಬ್ಜಂ-ತಾವರೆಯನ್ನು, ಧುನಾನಂ-ಕದಲಾಡಿಸುತಲಿರುವ, ಕರ್ಣೋ...ಹಾಸಃ-ಕರ್ಣ-ಕಿವಿಯ ಸಂದಿನಲ್ಲಿರಿಸಲ್ಪಟ್ಟ,ಉತ್ಪಲ-ನೈದಿಲೆಯೂ,ಅಲಕ-ಬಿಡುಕುರುಳೂ, ಪುರುಚುಕುರುಳೂಉಳ್ಳ, ಕಪೋಲ-ಕೆನ್ನೆಗಳುಳ್ಳ, ಮುಖಾಬ್ಜ-ಮೊಗದಾವರೆಯಲ್ಲಿ, ಹಾಸಂ-ನಗೆಯುಳ್ಳವನನ್ನು,ಕಂಡರು ॥ ೨೩ ॥ ನರೇಂದ್ರ-ರಾಯನೇ! ಪ್ರಾಯಃ-ಬಹುತರವಾಗಿ, ಶ್ರುತ - ಕೇಳಲ್ಪಟ್ಟ, ಪ್ರಿಯತಮ – ಅತ್ಯಂತಪ್ರಿಯನಾದ ಕೃಷ್ಣನ, ಉದಯ - ಶ್ರೇಷ್ಠತೆಯೆಂಬ, ಕರ್ಣಪೂರೈಃ-ಕಿವಿದೊಡವುಗಳಿಂದ,ಯಸ್ಮಿನ್-ಯಾವಪುರುಷನಲ್ಲಿ,ನಿಮಗ್ನಮನಸಃ-ಮುಳುಗಿದ ಮನಸ್ಸುಳ್ಳವರಾದರೋ, ತಂ-ಆಪುರುಷನನ್ನು, ಅಥ-ಆಮೇಲೆ, ಅಕ್ಷಿರಂಧ್ರೈಃ-ಕಂಗಳೆಂಬ ತೂತುಗಳಿಂದ,ಅಂತಃ-ತಮ್ಮೊಳಗೆ, ಪ್ರವೇಶ್ಯ-ಹೊಗಿಸಿಕೊಂಡು,ಸುಚಿರಂ-ಬಹುಕಾಲವು, ಪರಿರಭ್ಯ-ಅಪ್ಪಿಕೊಂಡು, ಅಭಿಮತಯಃ-ನಾನೆಂಬಮನೋವೃತ್ತಿಗಳು, ಪ್ರಾಜ್ಞಂ-ಸುಷುಪ್ತಿಸಾಕ್ಷಿಯಾದ ಆತ್ಮನನ್ನು, ಪರಿರಭ್ಯ-ಅಪ್ಪಿಕೊಂಡು,(ಅವನಲ್ಲಿಲಯವಾಗಿ, ಯಥಾ-ಹೇಗೋ,ತಥಾ-ಹಾಗೆ, ತಾಪಂ-ದುಃಖವನ್ನು,ವಿಜಹುಃ-ತೊರೆದರು॥೨೪॥ ತಾಃ-ಆಹೆಂಗಳನ್ನು ತಥಾ-ಹಾಗೆ, ತ್ಯಕ್ತಸರ್ವಾಶಾಃ-ಬಿಡಲ್ಪಟ್ಟ ಸಕಲಾಶೆಗಳೂಉಳ್ಳವರಾಗಿ, ಆತ್ಮದಿದೃಕ್ಷಯಾ-ಆತ್ಮದರ್ಶನಾಪೇಕ್ಷೆಯಿಂದ, (ತನ್ನನ್ನು ನೋಡಬೇಕೆಂಬ ಬಯಕೆಯಿಂದ) ಪ್ರಾಪ್ತಾಃ-ಬಂದಿರುವರನ್ನಾಗಿ, ವಿಜ್ಞಾಯ-ತಿಳಿದು, ಅಖಿಲದೃಕ್-ಎಲ್ಲವನ್ನೂ ನೋಡುತಲಿರುವ, ದ್ರಷ್ಟಾ-ಸಾಕ್ಷಿಚೈತನ್ಯವಾದಕೃಷ್ಣನು, ಪ್ರಹಸಿತಾನನಸ್ಸನ್-ಹೆಚ್ಚಾದನಗೆಯುಂ

ನದಿಯ ಉಪವನದಲ್ಲಿ ಗೋಪಾಲರೊಡಗೂಡಿ ಬಲರಾಮಸಮೇತನಾಗಿ ಗೋವುಗಳಂ ಸಂಚಾರ ಗೊಳಿಸುತಲಿರುವ ಶ್ರೀಕೃಷ್ಣಮೂರ್ತಿಯಂ ಕಂಡರು. |೨೨| ನೀಲಮೇಘಶ್ಯಾಮನಾಗಿ, ಪೀತಾಂಬರಧಾರಿಯಾಗಿ, ವನದಲ್ಲಿರುವ ಕುಸುಮಗಳಿಂ ನಿರ್ಮಿಸಲ್ಪಟ್ಟ ತುರಾಯಿಗಳಿಂದ ಅಲಂಕರಿಸಲ್ಪಟ್ಟವನಾಗಿ, ಸಿಂದೂರಾದಿಧಾತುಗಳಿಂದಲೂ ಚಿಗುರುಗಳಿಂದಲೂ ಭೂಷಿತನಾಗಿ, ನಟನಂತೆ ಮನೋಹರವಾದವೇಷವಂಧರಿಸಿ ಮಿತ್ರನಾದ ಗೋಪಾಲಕನ ಭುಜದಮೇಲೆ ಒಂದುಕೈಯನಿರಿಸಿಕೊಂಡು ಮತ್ತೊಂದುಹಸ್ತದಿಂ ಪದ್ಮವಂತಿರುಗಿಸುತೆ ಕರ್ಣಂಗಳಲ್ಲಿ ಕುಮುದ ಪುಷ್ಪಂಗಳಂಧರಿಸಿ ಕಪೋಲಂಗಳಲ್ಲಿ ಶೋಭಿಸುವ ಮುಂಗುರುಳುಗಳಿಂದ ಪ್ರಕಾಶಿಸುವ ಮುಖಾರವಿಂದದಲ್ಲಿ ಪೊಳೆಯುವ ಮುಗುಳುನಗೆಯುಳ್ಳ ಆಕೃಷ್ಣಮೂರ್ತಿಯಂ ಆಬ್ರಾಹ್ಮಣಸ್ತ್ರೀಯರು ಕಂಡರು. |೨೩| ಎಲೈ! ಆಬ್ರಾಹ್ಮಣಸ್ತ್ರೀಯರು ಬಹಳವಾಗಿ ಶ್ರವಣಂ ಗೆಯ್ಯಲ್ಪಟ್ಟ ಪ್ರಿಯನಾದ ಕೃಷ್ಣಮೂರ್ತಿಯ ದಿವ್ಯಚರಿತಾತಿಶಯಗಳೆಂಬ ಕಿವಿದೊಡವುಗಳಿಂದ ಅಲಂಕೃತರಾದವರಾಗಿ, ಕೃಷ್ಣಮೂರ್ತಿಯಲ್ಲಿ ಲಗ್ನವಾದ ಮನಸ್ಸುಳ್ಳವರಾದುದರಿಂ ಆಕೃಷ್ಣನಂ ತಮ್ಮನೇತ್ರರಂಧ್ರಂಗಳಿಂ ತಮ್ಮಹೃದಯಂಗಳೊಳಗೆ ಪ್ರವೇಶಂಗೆಯಿಸಿ, ಅಹಂಕಾರಾದಿವೃತ್ತಿಗಳು ಸುಷುಪ್ತಿಸಾಕ್ಷಿಯಾದ ಪ್ರಾಜ್ಞನಂಆಲಿಂಗನಂಗೆಯ್ದು ಅವನಲ್ಲಿಯೇ ಲಯವನೆಯ್ದುವಹಾಗೆ ಆಕೃಷ್ಣಮೂರ್ತಿಯಲ್ಲಿಯೇ ಲಯವನೆಯ್ದಿ ಸಂಸಾರತಾಪವಂ ತೊರೆದರು. |೨೪| ಆಸಮಯದಲ್ಲಿ ಹಾಗೆ ತ್ಯಜಿಸಲ್ಪಟ್ಟ ಸಮಸ್ತಗಳಾದ ಆಶೆಗಳುಳ್ಳವರಾಗಿ ತನ್ನದರ್ಶನಾರ್ಥ

ಸರ್ವಾಶಾಃಪ್ರಾಪ್ತಾ ಆತ್ಮದಿದೃಕ್ಷಯಾ। ವಿಜ್ಞಾಯಾಖಿಲದೃಗ್ದ್ರಷ್ಟಾಪ್ರಾಹಪ್ರಹಸಿತಾನನಃ॥೨೫॥ ಶ್ರೀಭಗವಾನ್॥ ಸ್ವಾಗತಂವೋಮಹಾಭಾಗಾಆಸ್ಯತಾಂಕರವಾಮಕಿಂ। ಯನ್ನೋದಿದೃಕ್ಷಯಾಭ್ಯೈತಾ ಉಪಪನ್ನಮಿದಂಹಿವಃ ॥೨೬॥ ನನ್ವದ್ಧಾಮಯಿಕುರ್ವಂತಿಕುಶಲಾಸ್ಸ್ವಾರ್ಥ ದರ್ಶಿನಃ। ಅಹೈತುಕ್ಯವ್ಯವಹಿತಾಂಭಕ್ತಿಮಾತ್ಮಪ್ರಿಯೆಯಥಾ ॥೨೭॥ ಪ್ರಾಣಬುದ್ಧಿಮನಸ್ಸ್ವಾತ್ಮದಾರಾಪತ್ಯಧನಾದಯಃ। ಯತ್ಸಂಪರ್ಕಾತ್ಪ್ರಿಯಾಆಸಂಸ್ತತಃಕೋನ್ವಪರಃಪ್ರಿಯಃ ॥೨೮॥ ತದ್ಯಾತದೇವಯಜನಂ ಪತಯೋವೋದ್ವಿಜಾತಯಃ। ಸ್ವಸತ್ರಂಪಾರಯಿಷ್ಯಂತಿಯುಷ್ಮಾಭಿರ್ಗೃಹಮೇಧಿನಃ ॥೨೯॥ ವಿಪ್ರಪ

---

ಟಾದವುಖವುಳ್ಳವನಾಗಿ, ಪ್ರಾಹ-ಹೇಳಿದನು ॥೨೫॥ [ಭಗವದ್ವಚನವು.] ಮಹಾಭಾಗಾಃ-ಹೆಚ್ಚಾದಪುಣ್ಯವುಳ್ಳಹೆಂಗಳಿರಾ, ವಃ-ನಿಮಗೆ, ಸ್ವಾಗತಂ-ಸುಖವಾಗಿಬರುವಿಕೆಯೋ? (ಕ್ಷೇಮವಾಗಿಬಂದಿರಾ) ಆಸ್ಯತಾಂ-ಕುಳ್ಳಿರಲ್ಪಡಲಿ, ಕಿಂಕರವಾಮ-ಯಾವಉಪಚಾರವಂಮಾಡುವೆವು, ನಃ-ನಮ್ಮನ್ನು, ದಿದೃಕ್ಷಯಾ-ನೋಡಲಪೇಕ್ಷೆಯಿಂದ, ಅಭ್ಯೈತಾಇತಿಯತ್- ಎದುರಿಗೆಬಂದಿರಿಯೆಂಬುವುದುಯಾವುದೋ, ತದಿದಂಹಿ-ಆಯಿದಲ್ಲವೆ, ವಃ-ನಿಮಗೆ, ಉಪಪನ್ನಂ-ಯುಕ್ತವಾಗಿರುವುದು॥೨೬॥ ಕುಶಲಾಃ-ವಿವೇಕಿಗಳಾದ್ದರಿಂದಲೇ, ಸ್ವಾತ್ಮದರ್ಶಿನಃ-ತಮ್ಮಪ್ರಯೋಜನವನ್ನು ತಿಳಿಯುತಲಿರುವರು, ಆತ್ಮಪ್ರಿಯೆ-ಆತ್ಮನಾಗಿಯೂ ಪ್ರಿಯನಾಗಿಯೂ ಇರುವ, ಮಯಿ-ನನ್ನಲ್ಲಿ, ಅಹೈತುಕ್ಯವ್ಯವಹಿತಾಂ-ಅಹೈತುಕೀ-ಪ್ರಯೋಜನವಾಗಬೇಕೆಂಬ ನಿಮಿತ್ತವಿಲ್ಲದ್ದಾದ್ದರಿಂದಲೇ, ಅವ್ಯವಹಿತಾಂ-ನಿರಂತರವಾದ, ಭಕ್ತಿಂ-ಪ್ರೀತಿಯನ್ನು, ಅದ್ಧಾ-ಪ್ರತ್ಯಕ್ಷವಾಗಿ, ಯಥಾ-ಬಿಟವಾಗಿ, ಕುರ್ವಂತಿನನು-ಮಾಡುವರಲ್ಲವೆ? ॥೨೭॥ ಪ್ರಾಣ-ಆದಯಃ-ಪ್ರಾಣ-ಹೃದಯದಲ್ಲಿರುವವಾಯು, ಬುದ್ಧಿ-ಜ್ಞಾನ, ಮನಃ-ಅಂತಃಕರಣ, ಸ್ವಾತ್ಮ-ತನ್ನದೇಹ, ದಾರ-ಹೆಂಡತಿ-ಅಪತ್ಯ-ಮಕ್ಕಳು, ಧನ-ದ್ರವ್ಯ. ಆದಯಃ-ಮೊದಲಾದವುಗಳು, ಯತ್ಸಂಪರ್ಕಾತ್-ಯಾವವಸ್ತುವಿನ ಸಂಬಂಧದಿಂದ, ಪ್ರಿಯಾಃ-ಇಷ್ಟವಾದವುಗಳು, ಆಸನ್-ಆದವೋ, ತತಃ-ಆ ವಸ್ತುವಿಗಿಂತಲೂ, ಅಪರಃ-ಇತರವಾದ, ಪ್ರಿಯಃ-ಇಷ್ಟವಾದ ಪದಾರ್ಥವು, ಕೋನು-ಯಾವುದುಂಟು.? (ನಾನೇ ಪ್ರಿಯನಾದ್ದರಿಂದ ನೀವುನನ್ನನ್ನು ನೋಡಲ್ಬಂದದ್ದು ಯುಕ್ತವೆ) ॥೨೮॥ ಯತ್-ಯಾವಕಾರಣದಿಂದ, ವಃ-ನಿಮ್ಮ, ಪತಯಃ-ಗಂಡಂದಿರು, ದ್ವಿಜಾತಯಃ-ಬ್ರಾಹ್ಮಣರಾದ್ದರಿಂದ, ಯುಷ್ಮಾಭಿಃ-ನಿಮ್ಮಿಂದಲೇ, ಗೃಹಮೇಧಿನಸ್ಸಂತಃ-ಗೃಹಸ್ಥಾಶ್ರಮ ವುಳ್ಳವರಾಗಿ, ಸ್ವಸತ್ರಂ-ತಮ್ಮಯಾಗವನ್ನು, ಪಾರಯಿಷ್ಯಂತಿ-ಕಡೆಗಾಣಿಸಿಕೊಳ್ಳುವರೋ, ತತ್-ಆ ಕಾರಣದಿಂದ, ದೇವಯಜನಂ-ದೇವತೆಗಳ ಪೂಜಾರೂಪವಾದ ಯಜ್ಞಕರ್ಮವನ್ನು ಕುರಿತು, ಯಾತ-ಹೋಗಿರಿ ॥೨೯॥ (ವಿಪ್ರಪತ್ನಿಯರವಚನವು) ವಿಭೋ-ವ್ಯಾಪಕವಾದ ಕೃಷ್ಣ

---

ವಾಗಿ ಬಂದಿರುವ ಆಸ್ತ್ರೀಯರ್ಗಳ ಅಂತಃಕರಣವೃತ್ತಿಯಂ ಸರ್ವಬುದ್ಧಿಸಾಕ್ಷಿಯಾದ ಕೃಷ್ಣದೇವನುತಿಳಿದು ಮುಗುಳುನಗೆಯೊಡಗೂಡಿದ ಮುಖವುಳ್ಳವನಾಗಿ ನುಡಿದನು. ॥೨೫॥ ಅದೆಂತೆನೆ- ಎಲೌ, ಮಹಾಭಾಗ್ಯವತಿಯರಾದ ವಿಪ್ರಸ್ತ್ರೀಯರುಗಳಿರಾ, ನಿಮಗೆ ಸುಖಾಗಮನವುಂಟಾಯಿತೇ? ನೀವು ಇಲ್ಲಿಗೆಬರುವುದಕೆ ಉಂಟಾದಅನೇಕವಿಘ್ನಗಳಂ ನಿರಾಕರಿಸಿಕೊಂಡು ನನ್ನ ದರ್ಶನಾರ್ಥವಾಗಿಬಂದುದು ಬಹುಚನ್ನಾಯಿತು. ಇಲ್ಲಿಕುಳಿತುಕೊಳ್ಳಿ. ನಿಮಗೆ ನಾವೇನುಪಕಾರವಂ ಮಾಡುವೆವು? ॥೨೬॥ ನಿಪುಣರಾದ ವಿವೇಕಿಗಳು ತಮ್ಮಯಿಷ್ಟವನ್ನೇ ಆಲೋಚಿಸುವರಾದುದರಿಂದ ಆತ್ಮಸ್ವರೂಪದಿಂದತ್ಯಂತ ಪ್ರಿಯನಾಗಿರುವನನ್ನಲ್ಲಿ ಫಲಾಪೇಕ್ಷೆಯಿಲ್ಲದೆ ಲೌಕಿಕನಿಮಿತ್ತವಂಬಯಸದೆ ಉಂಟಾದ ಅವಿಚ್ಛಿನ್ನ ಭಕ್ತಿಯಂ ಮಾಡುವರು. ॥೨೭॥ ಪ್ರಾಣಗಳು, ಇಂದ್ರಿಯಗಳು, ಮನಸ್ಸು, ಬುದ್ಧಿ, ಚಿತ್ತ, ಅಹಂಕಾರ, ಮೊದಲಾದವು; ಪತ್ನೀ, ಪುತ್ರ, ದ್ರವ್ಯ, ಇವುಗಳು ಸಹ ಈಸವಸ್ತುವೂ ಪರಮಾತ್ಮನಾದ ಯಾವನನ್ನಿಂದ ಅಧಿಷ್ಠಿತವಾದುದರಿಂದಲೇ ಪ್ರೀತಿವಿಷಯವಾಗಿರುವವೋ-ಅಂತಾ ಆತ್ಮನಾದ ನನ್ನಂಹೊರತು ಮತ್ತೆಯಾವವನು ಪ್ರೀತಿವಿಷಯವಾದವನು? ॥೨೮॥ ಬ್ರಾಹ್ಮಣಪತ್ನಿಯರೇ, ನೀವು ಕೃತಾರ್ಥರಾದವರು, ಯಜ್ಞಶಾಲೆಯಂಕುರಿತು ಹೋಗುವರಾಗಿರಿ, ನಿಮ್ಮಪತಿಗಳಾದ ಬ್ರಾಹ್ಮಣರು ತಮ್ಮತಮ್ಮಯಜ್ಞಂಗಳಂ ಪೂರ್ತಿಗೆಯ್ಯುತಲಿರುವುದರಿಂದ ಆಕರ್ಮಗಳು ಸಾಂಗವಾಗುವಬಗ್ಗೆ ಹೋಗಿರಿ; ಅವರುನಿಮ್ಮಿಂದ ಗೃಹಸ್ಥರಾಗಿರುವರು. ॥೨೯॥ [ಎಂಬ ಶ್ರೀಕೃಷ್ಣವಾಕ್ಯವಂಕೇಳಿ, ಆಬ್ರಾಹ್ಮಣಸ್ತ್ರೀಯರು ನುಡಿದ

ತ್ಯ್ಯೈ॥ ಮೈವಂವಿಭೋಽರ್ಹತಿಭವಾನ್‍ಗದಿತುಂನೃಶಂಸಂಸತ್ಯಂಕುರುಷ್ವನಿಗಮಂತವಪಾದಮೂಲಂ। ಪ್ರಾಪ್ತಾವಯಂತುಲಸಿದಾಮಪದಾವಸೃಷ್ಟಂಕೇಶೈರ್ನಿವೋಢುಮತಿಲಂಘ್ಯಸಮಸ್ತಬಂಧೂನ್ ॥೨೯॥ ಗೃಹ್ಣಂತಿನೋನಪತಯಃಪಿತರಸ್ಸುತಾವಾನಭ್ರಾತೃಬಂಧುಸುಹೃದಃಕುತಏವಚಾನ್ಯೇ । ತಸ್ಮಾದ್ಭವತ್ಪ್ರಪದಯೋಃಪತಿತಾತ್ಮನಾಂನೋನಾನ್ಯಾಭವೇದ್ಗತಿರರಿಂದಮತದ್ವಿಧೇಹಿ ॥೩೦॥ ಶ್ರೀಭಗವಾನ್ ॥ ಪತಯೋನಾಭ್ಯಸೂಯೇರನ್‍ಪಿತೃಭ್ರಾತೃಸುತಾದಯಃ । ಲೋಕಾಶ್ಚವೋಮಯೋಪೇತಾದೇವಾಅಪ್ಯನುಮನ್ವತೇ ॥೩೧॥ ನಪ್ರೀತಯೇನುರಾಗಾಯಹ್ಯಂಗಸಂಗೋನೃಣಾಮಿಹ । ತನ್ಮನೋಮಯಿಯುಂಜಾನಾಅಚಿ

---

ನೇ! ಭವಾನ್-ನೀನು, ಏವಂ-ಹೀಗೆ, ನೃಶಂಸಂ-ಕಠಿನವಾದ ಮಾತನ್ನು, ಗದಿತುಂ-ಹೇಳುವುದಕ್ಕೆ, ನಾರ್ಹತಿ-ತಕ್ಕವನಾಗುವುದಿಲ್ಲವು. ನಿಗಮಂ-ಪ್ರತಿಜ್ಞೆಯನ್ನು, ಅಥವಾ ವೇದವನ್ನು, ಸತ್ಯಂ-ದಿಟವನ್ನಾಗಿ, ಕುರುಷ್ವ-ಮಾಡು, ವಯಂ-ನಾವು, ಪದ-ನಿನ್ನ ಕಾಲಿನಿಂದ, ಅವಸೃಷ್ಟಂ-ಅಲಕ್ಷ್ಯವಾಗಿ ಬಿಡಲ್ಪಟ್ಟ, ತುಲಸಿದಾಮ-ತುಲಸಿಯ ಹಾರವನ್ನು, ಕೇಶೈಃ-ನಮ್ಮ ತಲೆಕೂದಲುಗಳಿಂದ, ನಿವೋಢುಂ-ಚನ್ನಾಗಿ ವಹಿಸುವುದಕ್ಕೆ (ದಾಸಿಯರಾಗಲೋಸುಗ) ಸಮಸ್ತಬಂಧೂನ್-ಸಂಬಂಧಿಕರೆಲ್ಲರನ್ನೂ. ಅತಿಲಂಘ್ಯ-ಮೀರಿ, ತವ-ನಿನ್ನ, ಪಾದಮೂಲಂ-ಅಡಿಗಳ ಕೆಳಭಾಗವಂ ಕುರಿತು, ಪ್ರಾಪ್ತಾಃ-ಬಂದವರಾಗಿರುವೆವು ॥೨೯॥ ಪತಯಃ-ಗಂಡಂದಿರು, ನಃ-ನಮ್ಮನ್ನು, ನಗೃಹ್ಣಂತಿ-ಅಂಗೀಕರಿಸುವುದಿಲ್ಲ ಪಿತರಃ-ತಂದೆಯರು, ಸುತಾವಾ-ಮಕ್ಕಳಾದರು, ನ-ಅಂಗೀಕರಿಸುವುದಿಲ್ಲ. ಭ್ರಾತೃಬಂಧುಸುಹೃದಃ-ಸೋದರರು ನೆಂಟರು ಮಿತ್ರರುಕೂಡ, ನ-ಅಂಗೀಕರಿಸುವುದಿಲ್ಲ, ಅನ್ಯೇಚ-ಇತರರಾದರೋ, ಕುತಏವ-ಯಾವಕಾರಣದಿಂದ ಅಂಗೀಕರಿಸುವರು, ನ-ಇಲ್ಲವೋ ತಸ್ಮಾತ್-ತಡೆಯಂಮೀರಿ ಮನೆಯಂ ಬಿಟ್ಟುಬಂದು ವ್ಯಭಿಚಾರಿಣಿಯರೆಂಬ ಶಂಕೆಯಿಂದ ತೊರೆಯಲ್ಪಡುವೆವಾದ್ದರಿಂದ, ಭವತ್ಪ್ರಪದಯೋಃ-ಭವತ್-ನಿನ್ನ, ಪ್ರಪದಯೋಃ-ಕಾಲುಗಳತುದಿಗಳಲ್ಲಿ, ಪತಿತಾತ್ಮನಾಂ-ಬಿದ್ದಿರುವ ದೇಹಗಳುಳ್ಳ, ನಃ-ನಮಗೆ, ಅನ್ಯಾಗತಿಃ-ಇತರವಾದದಾರಿಯು, ನಭವೇತ್-ಉಂಟಾಗಲಾರದು, ಹೇಅರಿಂದಮ-ಎಲೈ, ಶತ್ರುನಾಶಕನಾದ ಕೃಷ್ಣನೇ! ತತ್-ಆ ನಿನ್ನ ದಾಸ್ಯವನ್ನೇ, ವಿಧೇಹಿ-ನಮಗೆ ವಿಧಿಸು ॥೩೦॥ [ಭಗವದ್ವಚನವು] ಮಯಾ-ನನ್ನಿಂದ, ಉಪೇತಾಃ-ಕೂಡಿದವರಾದ, (ಪ್ರೇರಿಸಲ್ಪಟ್ಟವರಾದ) ಪತಯಃ-ಗಂಡಂದಿರೂ, ಪಿತೃಭ್ರಾತೃಸುತಾದಯಃ-ತಂದೆ ಅಣ್ಣತಮ್ಮಂದಿರು ಮಕ್ಕಳುಮುಂತಾದವರೂ, ಲೋಕಾಶ್ಚ-ಜನರೂ, ಹಿ-ಯಾವಕಾರಣದಿಂದ, ನಾಭ್ಯಸೂಯೇರನ್-ದೋಷಬುದ್ಧಿಯಿಂದನೋಡುವುದಿಲ್ಲವೋ, ಆಕಾರಣದಿಂದ, ದೇವಾಅಪಿ-ದೇವತೆಗಳೂಕೂಡ, ಅನುಮನ್ವತೇ-ಒಪ್ಪಿಕೊಳ್ಳುವರು ॥೩೧॥ ಅಂಗಸಂಗಃ-ದೇಹಸಂಬಂಧವು, ನೃಣಾಮಿವ-ಮನುಷ್ಯರಿಗೆ ಹೇಗೋ ಹಾಗೆ, ಪ್ರೀತಯೇ-

---

ರವಂತೆನೆ-] ಎಲೈ, ವಿಭುವಾದ ಶ್ರೀಕೃಷ್ಣದೇವನೇ! ನೀನು ಈರೀತಿಯಾಗಿ ನಮ್ಮಂಕುರಿತು ಯಜ್ಞಶಾಲೆಗೆ ಹೋಗಿರೆಂದು ಕಠೋರವಾಕ್ಯಮಂ ನುಡಿಯಬೇಡ; "ನನ್ನಭಕ್ತರು ದುರ್ಗತಿಯನೆಯ್ದುವುದಿಲ್ಲವು- ನನ್ನಂ ಸೇರಿದವರು ಪುನಶ್ಚ ಸಾಂಸಾರಿಕದುಃಖವನನುಭವಿಸುವುದಿಲ್ಲವು" ಎಂಬ ನಿನ್ನ ಪ್ರತಿಜ್ಞಾವಾಕ್ಯಂಗಳಂ ಅಸತ್ಯಗಳನ್ನಾಗಿಮಾಡಬೇಡ; ಪತಿಪುತ್ರಾದಿ ಸಮಸ್ತ ಬಂಧುಗಳನ್ನೂ ಅತಿಕ್ರಮಿಸಿ ಬಂದಿರುವೆವು. ನಿನ್ನಪಾದಪದ್ಮಂಗಳಿಂದ ಅನಾದರದಿಂ ಕೊಡಲ್ಪಟ್ಟ ತುಲಸೀಮಾಲೆಯಂ ಬಹುಮಾನದಿಂ ಶಿರಸ್ಸುಗಳಲ್ಲಿಧರಿಸಿ ನಾವು ನಿನ್ನ ಸೇವಕಿಯರಾಗಿರಲೋಸುಗ ನಿನ್ನಪಾದಮೂಲಕ್ಕೆ ಬಂದಿರುವೆವು. ॥೨೯॥ ಎಲೈ, ಕಾಮಕ್ರೋಧಾದ್ಯರಿಷಡ್ವರ್ಗಮಂ ಪರಿಹರಿಸುವ ಶ್ರೀಕೃಷ್ಣದೇವನೇ! ನಮ್ಮಪತಿಗಳು ಮಾತಾಪಿತೃಗಳು ಪುತ್ರಭ್ರಾತೃಗಳು ಬಂಧುಗಳು ಸಖಿಯರುಸಹ ನಮ್ಮಂ ಪರಿಗ್ರಹಿಸಲಾರರು. ಮಿಕ್ಕವರೆಂತು ಪರಿಗ್ರಹಿಸುವರು? ಆದುದರಿಂದ ನಿನ್ನ ಚರಣಾರವಿಂದಗಳ ಮುಂಭಾಗದಲ್ಲಿಯೇ ನಮಸ್ಕಾರಂ ಗೆಯ್ಯುತ ಬಿದ್ದಿರುವ ದೇಹಗಳುಳ್ಳನಮಗೆ ಈ ನಿನ್ನ ಚರಣಾರವಿಂದವೇ ಹೊರತು ಇತರವಾದ ಸ್ವರ್ಗಾದಿಗತಿಯೂಕೂಡ ಆವಶ್ಯಕವಲ್ಲವು. ನಿನ್ನ ದಾಸ್ಯವನ್ನೇ ನಮಗೆ ಆಜ್ಞಾಪಿಸು. ॥೩೦॥ (ಎಂದು ವಿಜ್ಞಾಪನಂ ಗೆಯ್ಯುತಲಿರುವ ಬ್ರಾಹ್ಮಣಪತ್ನಿಯರ ವಾಕ್ಯಮಂಕೇಳಿ ಶ್ರೀಕೃಷ್ಣನು ನಿರೂಪಿಸುವನದೆಂತೆನೆ-) ಎಲೈ, ಬ್ರಾಹ್ಮಣ ಪತ್ನಿಯರೇ! ಅಂತಃಕರಣ ಸಾಕ್ಷಿಯಾದ ನನ್ನಿಂದ ಪ್ರೇರಿತರಾದ ನಿಮ್ಮಪತಿಗಳು ಪಿತೃಭ್ರಾತೃಮಾತೃ ಪುತ್ರರೇ ಮೊದಲಾದ ಸರ್ವಬಂಧುಗಳೂ ನಿಮ್ಮಲ್ಲಿ ದೋಷದೃಷ್ಟಿಯಂ ಮಾಡಿ ಅಸೂಯೆ ಪಡುವದಿಲ್ಲ. ದೇವತೆಗಳೂಕೂಡ ನಿಮ್ಮ ಶೀಲಗಳುನೋಡಿ ಸಮ್ಮತಿಯಂ ಪಡೆಯುವರು. ॥೩೧॥

ರಾನ್ಮಾಮವಾಪ್ಸ್ಯಥ ॥೩೩॥ ಶ್ರವಣಾದ್ದರ್ಶನಾದ್ಧ್ಯಾನಾನ್ಮಯಿಭಾವೋನುಕೀರ್ತನಾತ್। ನತಥಾ
ಸನ್ನಿಕರ್ಷೇಣಪ್ರತಿಯಾತತತೋಗೃಹಾನ್ ॥೩೪॥ ಶ್ರೀಶುಕಃ॥ ಇತ್ಯುಕ್ತಾದ್ವಿಜಪತ್ನ್ಯಸ್ತಾಯಜ್ಞ
ವಾಟಂಪುನರ್ಗತಾಃ। ತೇಚಾನಸೂಯವಸ್ತಾಭಿಸ್ಸ್ತ್ರೀಭಿಸ್ಸತ್ರಮಪಾರಯನ್ ॥೩೫॥ ತತ್ರೈಕಾ
ವಿಧೃತಾಭರ್ತ್ರಾಭಗವಂತಂಯಥಾಶ್ರುತಮ್ ।ಹೃದೋಪಗೂಹ್ಯವಿಜಹೌದೇಹಂಕರ್ಮಾನುಬಂಧನಮ್॥
ಭಗವಾನಪಿಗೋವಿಂದಸ್ತೇನೈವಾನ್ನೇನಗೋಪಕಾನ್ ।ಚತುರ್ವಿಧೇನಾಶಯಿತ್ವಾಸ್ವಯಂಚಬುಭುಜೇಪ್ರಭುಃ॥
ಏವಂಲೀಲಾನರವಪುರ್ನೃಲೋಕಮನುಶೀಲಯನ್ । ರೇಮೇಗೋಗೋಪಗೋಪೀನಾಂರಮಯನ್‌ರೂಪವಾ

ಸ್ನೇಹಕ್ಕೂ, ಅನುರಾಗಾಯ-ಅಕ್ಕರೆಗೂ, ನಹಿ- ಆಗುವುದಿಲ್ಲವಷ್ಟೆ; ತತ್-ಆದ್ದರಿಂದ, ಮನಃ-ಹೃದಯವನ್ನು, ಮಯಿ-ನನ್ನಲ್ಲಿ, ಯುಂಜಾನಾಸ್ಸತ್ಯಃ-ಕೂಡಿಸಿದವರಾಗಿ, ಅಚಿರಾತ್-ಬೇಗನೆ, ಮಾಂ-ನನ್ನನ್ನು, ಅವಾಪ್ಸ್ಯಥ-ಹೊಂದುವಿರಿ ॥೩೩॥ ಶ್ರವಣಾತ್-ಕೇಳುವುದರಿಂದಲೂ, ದರ್ಶನಾತ್-ನೋಡುವುದರಿಂದಲೂ, ಧ್ಯಾನಾತ್-ಭಾವಿಸುವುದರಿಂದಲೂ, ಅನುಕೀರ್ತನಾತ್-ಅನುಸರಿಸಿಹಾಡುವುದರಿಂದಲೂ, ಮಯಿ-ನನ್ನಲ್ಲಿ, ಭಾವಃ-ಅಭಿಪ್ರಾಯವುಹೇಗುಂಟಾಗುವುದೋ, ತಥಾ-ಹಾಗೆ, ಸನ್ನಿಕರ್ಷೇಣ-ಅಂಗಸಂಗದಿಂದ, ನ-ಉಂಟಾಗುವುದಿಲ್ಲ, ತತಃ-ಆದ್ದರಿಂದ, ಗೃಹಾನ್‌ಪ್ರತಿ-ಮನೆಗಳನ್ನು ಕುರಿತು, ಯಾತ-ಹೋಗಿರಿ ॥೩೪॥ (ಶುಕವಚನವು) ಇತಿ-ಹೀಗೆ, ಉಕ್ತಾಃ ಹೇಳಲ್ಪಟ್ಟವರಾದ, ತಾದ್ವಿಜಪತ್ನ್ಯಃ-ಆಬ್ರಾಹ್ಮಣರಹೆಂಡಿರು, ಪುನಃ-ಮರಳಿಯೂ, ಯಜ್ಞವಾಟಂ-ಯಜ್ಞಶಾಲೆಯನ್ನು ಕುರಿತು, ಗತಾಃ-ಬಂದವರಾದರು. ತೇಚ-ಆಬ್ರಾಹ್ಮಣರೂಕೂಡ, ಅನಸೂಯವಃ-ಹೊಟ್ಟೆಕಿಚ್ಚಿಲ್ಲದವರಾಗಿ, (ದೋಷಬುದ್ಧಿಯಿಲ್ಲದವರಾಗಿ,) ತಾಭಿಃಸ್ತ್ರೀಭಿಃ-ಆಹೆಂಗಳಿನೊಂದಿಗೆ, ಸತ್ರಂ-ಸತ್ರಯಾಗವನ್ನು, ಅಪಾರಯನ್-ಕಡೆಗಾಣಿಸಿದರು ॥೩೫॥ ತತ್ರ-ಆಹೆಂಗಳಲ್ಲಿ, ಏಕಾ-ಒಬ್ಬಳು, ಭರ್ತ್ರಾ-ಗಂಡನಿಂದ, ವಿಧೃತಾಸತೀ-ಅಡ್ಡೈಸಲ್ಪಟ್ಟವಳಾಗಿ,ಯಥಾಶ್ರುತಂ-ಹೇಗೆಕೇಳಲ್ಪಟ್ಟದ್ದನೋಹಾಗೆಯೇಯಿರುವ,ಭಗವಂತಂ-ಕೃಷ್ಣನನ್ನು,ಹೃದಾ-ಮನಸ್ಸಿನಿಂದ, ಉಪಗೂಹ್ಯ-ಅಪ್ಪಿಕೊಂಡು, ಕರ್ಮಾನುಬಂಧನಂ-ಪುಣ್ಯಪಾಪಸಂಬಂಧವುಳ್ಳ,ದೇಹಂ-ಶರೀರವನ್ನು, ವಿಜಹೌ-ತೊರೆದುಕೊಂಡಳು ॥೩೬॥ ಭಗವಾನ್-ಪ್ರಯತ್ನವುಳ್ಳ, ಪ್ರಭುಃ-ಸಮರ್ಥನಾದ, ಗೋವಿಂದೋಪಿ-ಕೃಷ್ಣನೂಕೂಡ, ಚತುರ್ವಿಧೇನ-ನಾಲ್ಕುಬಗೆಯಾದ, ತೇನೈವಾನ್ನೇನ-ಆಯನ್ನದಿಂದಲೇ, ಗೋಪಕಾನ್-ಗೋಪಾಲಕರನ್ನು, ಆಶಯಿತ್ವಾ-ಉಣಿಸಿ, ಸ್ವಯಂಚ-ತಾನೂಕೂಡ, ಬುಭುಜೇ-ಉಂಡನು॥೩೭॥ಏವಂ-ಹೀಗೆ, ಲೀಲಾನರವಪುಃ-ಕ್ರೀಡಾಮನುಜಮೂರ್ತಿಯಾದ ಕೃಷ್ಣನ

ಬ್ರಾಹ್ಮಣಿಯರೇ! ಲೋಕದಲ್ಲಿ ಮನುಷ್ಯರಿಗೆ ನನ್ನ ಸಾನ್ನಿಧ್ಯವೂ ನನ್ನ ಶರೀರ ಸಂಬಂಧವೂ ನನ್ನ ಪ್ರೀತಿಯ ವೃದ್ಧಿಗೋಸುಗ ವಾಗುವುದಿಲ್ಲ. ಮನಸ್ಸನ್ನು ನನ್ನಲ್ಲಿ ತಗುಲಿದ್ದನ್ನಾಗಿ ಮಾಡುವುದೆ ನನ್ನ ಪ್ರೀತಿವೃದ್ಧಿಗೆಕಾರಣವು. ಆದುದರಿಂದ ನೀವು ನನ್ನಲ್ಲಿ ಮನಸ್ಸನ್ನು ದೃಢವಾಗಿ ನಿಲ್ಲಿಸುವರಾಗಿ ಉತ್ತಮಗತಿಯಂ ಪಡೆದವರಾಗುವಿರಿ. ॥೩೩॥ ‡ ।ನನ್ನ ಕಥಾಶ್ರವಣ ಪ್ರತ್ಯಕ್ಷದರ್ಶನ ಭಾವಿತಮೂರ್ತಿಧ್ಯಾನ ಅನುವರ್ತನ ಇವುಗಳಿಂದ ನನ್ನಲ್ಲಿ ಭಾವವುಂಟಾದಹಾಗೆ ಸಮೀಪಸ್ಥಿತಿಯಿಂದ ಆಗುವುದಿಲ್ಲವು. ಆದುದರಿಂದ (ನನ್ನ ಬಳಿಯಲ್ಲಿಯೇ ಇರಬೇಕಾದುದಿಲ್ಲ.) ಮನೆಗೆಹೋಗಿರಿ % ॥೩೪॥ ಇಂತೆಂಬ ಶ್ರೀಕೃಷ್ಣ ವಾಕ್ಯವಂಕೇಳಿ- ಆಬ್ರಾಹ್ಮಣಪತ್ನಿಯರು ಮರಳಿ ಯಜ್ಞಶಾಲೆಗೈದಿದರು. ಆ ಬ್ರಾಹ್ಮಣರು ತಮ್ಮತಮ್ಮ ಸ್ತ್ರೀಯರಲ್ಲಿ ದೋಷದೃಷ್ಟಿಯಂಬಿಟ್ಟು ಅಸೂಯಾರಹಿತರಾಗಿ ಆ ಪತ್ನಿಯರಿಂದೊಡಗೂಡಿ ಯಜ್ಞ ಪೂರ್ತಿಯಂಗೈದರು ॥೩೫॥ ಅವರಲ್ಲಿ ಒಬ್ಬಳು ವಿಪ್ರಪತ್ನಿಯು ಪತಿಯಿಂದ ಗರ್ಜಿಸಲ್ಪಟ್ಟವಳಾಗಿ, ಪೂರ್ವದೊಳು ಭಗವಂತನಸ್ವರೂಪವಂ ಯಾವರೀತಿಯಲ್ಲಿ ಶ್ರವಣಂಗೈದಿರ್ದಳೋ ಅದೇರೀತಿಯಲ್ಲಿ ಆ ಸ್ವರೂಪವಂ ಹೃದಯದಲ್ಲಿ ಅಪ್ಪಿಕೊಂಡವಳಾಗಿ, ಕರ್ಮ ಸಂಬಂಧದಿಂದ ಹುಟ್ಟಿರುವ ಆಗಂಡನಿಗೆ ಭೋಗ್ಯವಾಗತಕ್ಕ ತನ್ನ ದೇಹವನ್ನು ಅಲ್ಲಿಯೇತ್ಯಾಗಂ ಗೆಯ್ದಳು. [ಚೈತನ್ಯಮಾತ್ರದಿಂದ ಭಗವಂತನಲ್ಲಿ ಐಕ್ಯವಂಪಡೆದು ಮುಕ್ತಳಾದಳು.] ॥೩೬॥ ಭಗವಂತನಾದ ಗೋವಿಂದನುಕೂಡ ಭಕ್ಷ್ಯ ಭೋಜ್ಯ ಲೇಹ್ಯ ಚೋಷ್ಯ ಭೇದದಿಂ ನಾಲ್ಕುಪ್ರಕಾರವಾದ ಆ ದಿವ್ಯಾನ್ನವಂ ಗೋಪಾಲಕರನ್ನೂ ಬಲಭದ್ರನನ್ನೂ ಉಣುವಂತೆಮಾಡಿ ತಾನೂ ಭೋಜನಂಗೆಯ್ದನು ॥೩೭॥ ಹೀಗೆ ಮಾಯೆಯಿಂ

ಕ್ಯಕೃತ್ಯೈಃ ॥೩೮॥ ಅಥಾನುಸ್ಮೃತ್ಯವಿಪ್ರಾಸ್ತೇಹ್ಯನ್ವತಪ್ಯನ್ಕೃತಾಗಸಃ । ಯದ್ವಿಶ್ವೇಶ್ವರಯೋರ್ಯಾಚ್ಞಾಮಹಾನ್ಮನೃವಿಡಂಬಯೋಃ॥೩೯॥ ದೃಷ್ಟ್ವಾಸ್ತ್ರೀಣಾಂಭಗವತಿಕೃಷ್ಣೇಭಕ್ತಿಮಲೌಕಿಕೀಮ್। ಆತ್ಮಾನಂಚತಯಾಹೀನಮನುತಪ್ತಾವ್ಯಗರ್ಹಯನ್ ॥೪೦॥ ಧಿಗ್ಜನ್ಮನಸ್ತ್ರಿವೃದ್ವಿದ್ಯಾಂಧಿಗ್ವ್ರತಂ ಧಿಗ್ಬಹುಜ್ಞತಾಮ್ । ಧಿಕ್ಕುಲಂಧಿಕ್ಕ್ರಿಯಾದಾಕ್ಷ್ಯಂವಿಮುಖಾಯೇತ್ವಧೋಕ್ಷಜೇ ॥೪೧॥ ನೂನಂ ಭಗವತೋಮಾಯಾಯೋಗಿನಾಮಪಿಮೋಹಿನೀ । ಯದ್ವಯಂಗುರವೋನೃಣಾಂಸ್ವಾರ್ಥೇಮುಹ್ಯಾ

---

ನೃಲೋಕಂ-ಮನುಷ್ಯಲೋಕವನ್ನು, ಅನುಶೀಲಯನ್- ಅನುಸರಿಸಿನಡೆಯುವನಾಗಿ, ರೂಪವಾಕ್ಕೃತ್ಯೈಃ-ರೂಪದಿಂದಲೂವಾಕ್ಕಿನಿಂದಲೂಕೆಲಸಗಳಿಂದಲೂ, ಗೋಗೋಪಗೋಪೀನಾಂ-ಗೋವುಗಳನ್ನೂ ಗೊಲ್ಲರನ್ನೂ ಗೊಲ್ಲತಿಯರನ್ನೂ, ರಮಯನ್-ಸಂತೋಷಗೊಳಿಸುವವನಾಗುತ, ರೇಮೇ-ಕ್ರೀಡಿಸಿದನು ॥೩೮॥ ಅಥ-ಅನಂತರದಲ್ಲಿ, ತೇವಿಪ್ರಾಃ-ಆಬ್ರಾಹ್ಮಣರು, ಅನುಸ್ಮೃತ್ಯ-ಕೂಡಲೇ ನೆನಪುಗೊಂಡು, ಯತ್-ಯಾವಕಾರಣದಿಂದ, ನೃವಿಡಂಬಯೋಃ-ಮನುಷ್ಯರಂತೆ ನಟನೆಯುಳ್ಳ, ವಿಶ್ವೇಶ್ವರಯೋಃ-ಪ್ರಪಂಚಕ್ಕೊಡೆಯರಾದ ರಾಮಕೃಷ್ಣರ, ಯಾಚ್ಞಾಂ-ಪ್ರಾರ್ಥನೆಯನ್ನು, ಅಹನ್ಮ- ಸಫಲವಾಗದಂತೆ ಕೆಡಿಸಿದೆವೋ, ತತ್-ಆಕಾರಣದಿಂದ, ಕೃತಾಗಸಃ-ಮಾಡಲ್ಪಟ್ಟಅಪರಾಧವುಳ್ಳವರಾಗಿರುವೆವಲ್ಲವೆ. ಎಂದು. ಅನ್ವತಪ್ಯನ್ ಅನುತಾಪಗೊಂಡರು॥೩೯॥ಸ್ತ್ರೀಣಾಂ-ಹೆಂಗಳಿಗೆ, ಭಗವತಿಕೃಷ್ಣೇ-ಭಗವಂತನಾದಕೃಷ್ಣನಲ್ಲಿಯುಂಟಾದ, ಅಲೌಕಿಕೀಂ-ಲೋಕಸಾಧಾರಣವಲ್ಲದ, ಭಕ್ತಿಂ-ಪ್ರೀತಿಯನ್ನು, ದೃಷ್ಟ್ವಾ-ನೋಡಿ, ತಯಾ-ಆಭಕ್ತಿಯಿಂದ, ಹೀನಂ-ರಹಿತನಾದ, ಆತ್ಮಾನಂಚ-ತಮ್ಮನ್ನೂ, ದೃಷ್ಟ್ವಾ-ನೋಡಿಕೊಂಡು, ಅನುತಪ್ತಾಸ್ಸಂತಃ-ಪಶ್ಚಾತ್ತಾಪವುಂಟಾದವರಾಗಿ, ವ್ಯಗರ್ಹಯನ್-ವಿಶೇಷವಾಗಿನಿಂದಿಸಿಕೊಂಡರು॥೪೦॥ಯೇ-ಯಾವನಾವು, ಅಧೋಕ್ಷಜೇ-ಕೃಷ್ಣನಲ್ಲಿ, ವಿಮುಖಾಃ-ಹಿಂದಿರುಗಿದ ಮುಖವುಳ್ಳವರಾದೆವೋ ತೇಷಾಂನಃ-ಆನಮ್ಮ, ಜನ್ಮ-ಬ್ರಾಹ್ಮಣದೇಹವನ್ನು, ಧಿಕ್-ನಿಂದಿಸು, ತ್ರಿವೃದ್ವಿದ್ಯಾಂ-ವೇದವಿದ್ಯೆಯನ್ನು, ಧಿಕ್-ನಿಂದಿಸು ವ್ರತಂ-ದೀಕ್ಷೆಯನ್ನು, ಧಿಕ್-ನಿಂದಿಸು, ಬಹುಜ್ಞತಾಂ-ಬಹುತತ್ವಗಳಂತಿಳಿದವರಾಗಿರುವಿಕೆಯನ್ನು, ಧಿಕ್- ನಿಂದಿಸಬೇಕು, ಕುಲಂ-ಅನೂಚಾನಸಂತತಿಯನ್ನು, ಅಥವಾವರ್ಣವನ್ನು, ಧಿಕ್-ನಿಂದಿಸಬೇಕು, ಕ್ರಿಯಾದಾಕ್ಷ್ಯಂ-ಕರ್ಮಶ್ರೇಷ್ಠತೆಯನ್ನು, ಅಥವಾಕೆಲಸಗಳಲ್ಲಿಸಾಮರ್ಥ್ಯವನ್ನು, ಧಿಕ್-ನಿಂದಿಸಬೇಕು॥೪೧॥ ಯತ್-ಯಾವಕಾರಣದಿಂದ,ದ್ವಿಜಾಃ-ಬ್ರಾಹ್ಮಣರಾದ್ದರಿಂದ, ನೃಣಾಂ-ಮನುಷ್ಯರೆಲ್ಲರಿಗೂ, ಗುರವೋಪಿ-ಅಜ್ಞಾನಪರಿಹಾರಕರಾದ ಗುರುಗಳಾಗಿಯೂ ಕೂಡ, ವಯಂ-ನಾವು, ಸ್ವಾರ್ಥೇ-

---

ದ ಲೀಲಾಮಾನುಷವಿಗ್ರಹನಾದ ಶ್ರೀಕೃಷ್ಣನು ಪುರುಷನಟನೆಯಂ ಅನುಕರಿಸುವನಾಗಿ ದಿವ್ಯಸೌಂದರ್ಯದಿಂದಲೂ ಮೃದುವಾದ ವಚನಗಳಿಂದಲೂ ಚರಿತ್ರಗಳಿಂದಲೂ ಗೋವುಗಳನ್ನು ಗೋಪಾಲಕರನ್ನೂ ಗೋಪಸ್ತ್ರೀಯರನ್ನೂ ರಮಿಸುವಂತೆ ಮಾಡಲೋಸುಗ ತಾನೂರಮಿಸಿದನು ॥೩೮॥ ಅನಂತರದಲ್ಲಿ ಆ ಬ್ರಾಹ್ಮಣರು ಮನುಷ್ಯರಂತೆ ನಟನಂಗೆಯ್ವ ಜಗದೀಶ್ವರರಾದ ರಾಮಕೃಷ್ಣರ ಅನ್ನಯಾಚನೆಯಂ ಆದರಿಸದುಪೇಕ್ಷಿಸಿದವರಾದುದರಿಂದ ಪಶ್ಚಾತ್ತಪ್ತರಾಗಿ ತಮ್ಮ ಅಪರಾಧವನ್ನು ಸ್ಮರಿಸಿಕೊಂಡು ಸಂತಾಪಪಡುವರಾದರು ॥೩೯॥ ಎಲೈ, ಅರಸೇ! ಆ ಬ್ರಾಹ್ಮಣರು ಭಗವಂತನಾದ ಕೃಷ್ಣನಲ್ಲಿ ತಮ್ಮಪತ್ನಿಯರಿಗಿರುವ ಲೋಕಾತೀತವಾದ ಭಕ್ತಿಯಂನೋಡಿ ಅಂತಾ ಭಕ್ತಿಯಿಲ್ಲದ ತಮ್ಮನ್ನು ನಿಂದಿಸಿಕೊಳ್ಳುವರಾಗಿ ಬಹಳವಾಗಿ ಪಶ್ಚಾತ್ತಾಪವನೆಯ್ದಿದರು ॥೪೦॥ ಅದೆಂತೆನೆ ನಾವು ಯಾವಕೃಷ್ಣನಲ್ಲಿ ಭಕ್ತಿಯಿಲ್ಲವೆ ವಿಮುಖರಾದುದರಿಂದ ನಮ್ಮ ಜನ್ಮವನ್ನೂ, ಶೌಕ್ಲ ಸಾವಿತ್ರದೈಕ್ಷವೆಂಬ ಮೂರುಬಗೆಯಾದ ವಿದ್ಯೆಯನ್ನೂ, ಬ್ರಹ್ಮಚರ್ಯಾದಿವ್ರತವನ್ನೂ ಬಹುವಿಷಯಗಳನ್ನು ತಿಳಿದಿರುವ ಧರ್ಮಜ್ಞತ್ವವನ್ನೂ ಅಥವಾ ಶಾಸ್ತ್ರಜ್ಞತೆಯನ್ನೂ, ಕುಲವನ್ನೂ,ಕರ್ಮಗಳನ್ನೂ, ಕರ್ಮಾಚರಣ ಸಾಮರ್ಥ್ಯವನ್ನೂ, ನಿಂದಿಸಬೇಕು (ಕೃಷ್ಣನಲ್ಲಿ ವಿಮುಖರಾದವರಿಗೆ ಇದೆಲ್ಲವೂ ವ್ಯರ್ಥವಾಗುವುದು] ॥೪೧॥ ಭಗವಂತನಮಾಯೆಯು ಮಹಾ ಯೋಗಿಗಳಿಗೂಕೂಡ ಮೋಹಕವಾದುದೇ ದಿಟವು. ಕಾರಣವೇನೆಂದರೆ ನಾವು ಸರ್ವವರ್ಣಗಳಿಗೂ ಗುರುಗಳಾದ ಬ್ರಾಹ್ಮಣೋತ್ತಮರಾಗಿದ್ದರೂ,

ಮಹದ್ವಿಜಾಃ ॥೪೨॥ ಅಹೋಪಶ್ಯತನಾರೀಣಾಮಪಿಕೃಷ್ಣೇಜಗದ್ಗುರೌ । ದುರಂತಭಾವಂಯೋವಿಧ್ಯನ್ಮೃತ್ಯುಪಾಶಾನ್ಗೃಹಾಭಿಧಾನ್ ॥೪೩॥ ನಾಸಾಂದ್ವಿಜಾತಿಸಂಸ್ಕಾರೋನನಿವಾಸೋಗುರಾವಪಿ । ನತಪೋನಾತ್ಮಮೀಮಾಂಸಾನಶೌಚಂನಕ್ರಿಯಾಶ್ಶುಭಾಃ ॥೪೪॥ ತಥಾಪಿಹ್ಯುತ್ತಮಶ್ಲೋಕೇಕೃಷ್ಣೇಯೋಗೇಶ್ವರೇಶ್ವರೇ । ಭಕ್ತಿರ್ದೃಢಾನಚಾಸ್ಮಾಕಂಸಂಸ್ಕಾರಾದಿಮತಾಮಪಿ ॥೪೫॥ ನನುಸ್ವಾರ್ಥವಿಮೂಢಾನಾಂಪ್ರಮತ್ತಾನಾಂಗೃಹೇಹಯಾ । ಅಹೋನಸ್ಸ್ಮಾರಯಾಮಾಸಗೋಪವಾಕ್ಯೈಸ್ಸತಾಂಗತಿಃ॥೪೬॥ಅನ್ಯಥಾಪೂರ್ಣಕಾಮಸ್ಯಕೈವಲ್ಯಾದ್ಯಾಶಿಷಾಂಪತೇಃ। ಈಶಿತವ್ಯೈಃಕಿಮಸ್ಮಾಭಿರೀಶಸ್ಯೈತ

---

ನಮ್ಮ ಪ್ರಯೋಜನದಲ್ಲಿಯೇ, ಮುಹ್ಯಾಮಹೇ-ಮೋಹಗೊಳ್ಳುತ್ತಿರುವೆವೋ, ತತ್-ಆಕಾರಣದಿಂದ, ಭಗವತಃ-ಭಗವಂತನ, ಮಾಯಾ-ಮೋಹಕಶಕ್ತಿಯು, ಯೋಗಿನಾಮಪಿ-ಜ್ಞಾನಶಕ್ತಿಯುಳ್ಳವರಿಗೆಕೂಡ, ಮೋಹಿನೀ-ಅಜ್ಞಾನಾವರಣವಂಗೆಯ್ಯುತಲಿರುವುದು, ನೂನಂ-ನಿಶ್ಚಯವು ॥೪೨॥ ಯಃ-ಯಾವುದು, ಗೃಹಾಭಿಧಾನ್-ಮನೆಯೆಂಬಹೆಸರುಳ್ಳ, ಮೃತ್ಯುಪಾಶಾನ್-ಯಮನಪಾಶಗಳನ್ನು, ಅವಿಧ್ಯತ್-ಕತ್ತರಿಸಿತೋ, ನಾರೀಣಾಮಪಿ-ಹೆಂಗಳೆಗೂಕೂಡ, ಜಗದ್ಗುರೌ-ಪ್ರಪಂಚಕ್ಕಿಂತಲೂದೊಡ್ಡವನಾದ, ಅಥವಾಸರ್ವಾಜ್ಞಾನಪರಿಹಾರಕನಾದ, ಕೃಷ್ಣೇ-ಕೃಷ್ಣನಲ್ಲಿ (ಉಂಟಾದ) ತಂ-ಅಂತಾ. ದುರಂತಭಾವಂ ನಿತ್ಯಭಕ್ತಿಯನ್ನು, ಪಶ್ಯತ-ನೋಡಿರಿ ಅಹೋ-ಆಶ್ಚರ್ಯವು॥೪೩॥ಆಸಾಂ-ಈಹೆಂಗಳಿಗೆ, ದ್ವಿಜಾತಿಸಂಸ್ಕಾರಃ-ಬ್ರಾಹ್ಮಣವರ್ಣದ ಉಪನಯನಾದಿಸಂಸ್ಕಾರವು, ನ-ಇಲ್ಲ, ಗುರೌನಿವಾಸೋಪಿ-ಗುರುವಿನಬಳಿಯಲ್ಲಿಸೇವೆಮಾಡುತಲಿರುವಿಕೆಯೂ, ನ-ಇಲ್ಲ, ತಪಃ- ಶಮದಮಯೋಗರೂಪವಾದತಪವೂ, ನ-ಇಲ್ಲ ಆತ್ಮಮೀಮಾಂಸಾ-ಬ್ರಹ್ಮವಿಚಾರವೂ, ನ-ಇಲ್ಲ, ಶೌಚಂ-ಶುದ್ಧಭಾವವೂ, ನ-ಇಲ್ಲ. ಶುಭಾಃಕ್ರಿಯಾಶ್ಚ-ಕುಶಲಕರ್ಮಗಳೂ, ನ-ಇಲ್ಲ॥೪೪॥ತಥಾಪಿ-ಹಾಗಾದರೂಕೂಡ, ಉತ್ತಮಶ್ಲೋಕೇ-ಉತ್ತಮನೆಂದುಕೊಂಡಾಡಲ್ಪಟ್ಟವನಾದ, ಯೋಗೇಶ್ವರೇಶ್ವರೇ-ಯೋಗಿಗಳೊಡೆಯರಿಗೊಡೆಯನಾದ, ಕೃಷ್ಣೇ-ಕೃಷ್ಣನಲ್ಲಿ, ದೃಢಾ-ಸ್ಥಿರವಾದ, ಭಕ್ತಿಃ-ಪ್ರೀತಿಯುಂಟಾಗಿರುವುದು ಸಂಸ್ಕಾರಾದಿಮತಾಮಪಿ-ಉಪನಯನಾದಿಯೋಗ್ಯತೆಗಳುಳ್ಳವರಾದರೂ, ಅಸ್ಮಾಕಂ-ನಮಗೆ, ನಚ-ಭಕ್ತಿಯುಂಟಾಗಲಿಲ್ಲವು ॥೪೫॥ ಗೃಹೇಹಯಾ-ಗೃಹ-ಮನೆಯ, ಈಹಯಾ-ಆಶೆಯಿಂದ, ಪ್ರಮತ್ತಾನಾಂ- ಹೆಚ್ಚುಮದವುಳ್ಳವರಾಗಿಯೂ, ಸ್ವಾರ್ಥವಿಮೂಢಾನಾಂ-ಸ್ವಾರ್ಥ-ಸ್ವಪ್ರಯೋಜನದಲ್ಲಿ, ವಿಮೂಢಾನಾಂ-ವಿಶೇಷವಾಗಿಜ್ಞಾನವಿಲ್ಲದವರಾದ, ನಃ-ನಮಗೆ, (ನಮ್ಮನ್ನು) ಸತಾಂ-ಸತ್ಪುಷರಿಗೆ, ಗತಿಃ-ಪ್ರಾಪ್ಯನಾದಕೃಷ್ಣನನ್ನು, ಗೋಪವಾಕ್ಯೈಃ-ಗೋಪಾಲಕರವಚನಗಳಿಂದ, ಸ್ಮಾರಯಾಮಾಸನನು-ನೆನಪುಗೊಳಿಸಿದನಲ್ಲವೇ? ಅಹೋ-ಆಶ್ಚರ್ಯವು. ॥೪೬॥ಅನ್ಯಥಾ-ಬೇರೆಬಗೆಯಾದರೆ ಪೂರ್ಣಕಾಮಸ್ಯ-ತುಂಬಿದಬಯಕೆಯುಳ್ಳವನಾದಂತಾ, ಕೈವಲ್ಯಾದ್ಯಾಶಿಷಾಂ-ಮೋಕ್ಷವೇ ಮೊದಲಾದಶ್ರೇಯಸ್ಸುಗಳಿಗೆ, ಪತೇಃ-ಒಡೆಯನಾದ, ಈಶಸ್ಯ-ನಿಯಾಮಕನಾದ

---

ಸ್ವಾರ್ಥಸಾಧನದಲ್ಲಿ ಮೋಹಪಡುವರಾಗಿರುವೆವು ॥೪೨॥ ಯಾವಭಕ್ತಿಭಾವವು ಗೃಹಕ್ಷೇತ್ರಾದಿನಾಮಧೇಯಗಳುಳ್ಳ ಮೃತ್ಯುಪಾಶಗಳನ್ನು ಛೇದಿಸುವುದೋ, ಅಂತಾ ದೃಢಭಕ್ತಿಭಾವವು ನಮ್ಮಸ್ತ್ರೀಯರಿಗೂಕೂಡ ಉಂಟಾಯಿತಲ್ಲವೆ! ಇದೇನಾಶ್ಚರ್ಯಾ ನೋಡಿರಿ ॥೪೩॥ ಈ ಸ್ತ್ರೀಯರಿಗೆ ಮುಂಜಿ ಗುರುಕುಲವಾಸ, ತಪಸ್ಸು ಆತ್ಮವಿಚಾರ, ಬಹಿರಂಗಾಂತರಂಗಶುದ್ಧಿ, ಸಂಧ್ಯಾವಂದನೆ, ಔಪಾಸನಾದಿ ಶುಭಕರ್ಮಗಳು, ಸಹ ಇಲ್ಲವು॥ ಆದರೂ ಸರ್ವೋತ್ತಮವಾದ ಕೀರ್ತಿಯುಳ್ಳ ಯೋಗೀಶ್ವರರಿಗೆ ಈಶ್ವರನಾದ ಶ್ರೀಕೃಷ್ಣದೇವನಲ್ಲಿ ದೃಢವಾದಭಕ್ತಿಯು ಸ್ವಭಾವಸಿದ್ಧವಾಗಿ ಇರುವುದರಿಂದ ಆ ಸ್ತ್ರೀಯರು ಕೃತಾರ್ಥರಾದರು. ಉಪನಯನಾದಿಸಂಸ್ಕಾರಗಳುಳ್ಳವರಾದರೂ ನಾವು ಅಂತಾಭಕ್ತಿಯಿಲ್ಲದುದರಿಂದ ಕೃತಾರ್ಥರಾಗಲಿಲ್ಲ ॥೪೫॥ ಸತ್ಪುರುಷರಿಗೆಮುಕ್ತಿಪ್ರದನಾದ ಶ್ರೀಮುಕುಂದನು, ನಮ್ಮನಮ್ಮ ಇಷ್ಟಾರ್ಥಗಳವಿಷಯದಲ್ಲಿ ನಾವೇಮೂಢರಾಗಿ ಗೃಹಾದಿಗಳಲ್ಲಿ ಆಸಕ್ತರಾಗಿ ಭ್ರಾಂತಿಗೊಂಡಿರುವ ಇಂತಾನಮಗೆ ಗೋಪಾಲಕರವಾಕ್ಯಗಳಿಂದ ತನ್ನಸ್ಮರಣೆಯುಂಟಾಗುವಂತೆ ಮಾಡಿದನು. ಆಹಾ॥ (ಹಾಗಾದರೂನಾವರಿಯದೇ ಹೋದೆವು) ॥೪೬॥ ಹಾಗಲ್ಲದಿದ್ದರೆ ಪೂರ್ಣಕಾಮನಾಗಿಯೂ ಕೈವಲ್ಯಾದಿ ಸಕಲಪುರುಷಾರ್ಥಗಳಿಗೂ ಒಡೆಯನಾಗಿಯೂ ಇರುವ ಶ್ರೀಕೃಷ್ಣನಿಗೆ ನಮ್ಮಿಂದಾಗತಕ್ಕದ್ದೇನು, ಆತನು ನಮಗೆ ತನ್ನಸ್ಮರಣೆಯಂ ಹುಟ್ಟಿಸುವಬಗ್ಗೆ ಗೋಪಾಲಮುಖಾಂತರದಿಂ

ದ್ವಿಡಂಬನಮ್||೪೭|| ಹಿತ್ವಾನ್ಯಾನ್ಭಜತೇಯಂಶ್ರೀಃಪಾದಸ್ಪರ್ಶಾಶಯಾಸಕೃತ್ | ಸ್ವಾತ್ಮದೋಷಾ
ಪವರ್ಗೇಣತದ್ಯಾಚ್ಞಾಜನಮೋಹಿನೀ ||೪೮|| ದೇಶಃಕಾಲಃಪೃಥಗ್ದ್ರವ್ಯಂಮಂತ್ರತಂತ್ರರ್ತ್ವಿಜೋಗ್ನ
ಯಃ| ದೇವತಾಯಜಮಾನಶ್ಚಕ್ರತುರ್ಧರ್ಮಶ್ಚಯನ್ಮಯಃ||೪೯|| ಸಏವಭಗವಾನ್ಸಾಕ್ಷಾದ್ವಿಷ್ಣು
ರ್ಯೋಗೀಶ್ವರೇಶ್ವರಃ | ಜಾತೋಯದುಷ್ವಿತ್ಯಾಶೃಣ್ಮಹ್ಯಪಿಮೂಢಾನವಿದ್ಮಹೇ ||೫೦|| ನಮಸ್ತುಭ್ಯಂಭಗ
ವತೇಕೃಷ್ಣಾಯಾಕುಂಠಮೇಧಸೇ | ಯನ್ಮಾಯಾಮೋಹಿತಧಿಯೋಭ್ರಮಾಮಃಕರ್ಮವರ್ತ್ಮಸು ||೫೧|| ಸ

---

ಕೃಷ್ಣನಿಗೆ, ಈಶಿತವ್ಯೈಃ-ನಿಯಮಿಸಲ್ಪಡತಕ್ಕವರಾಗಿರುವ, ಅಸ್ಮಾಭಿಃ-ನಮ್ಮಿಂದ, ಕಿಂ-ಏನುಪ್ರಯೋಜನವಿರುವುದೂ ಏತತ್-
ಇದು, ವಿಡಂಬನಂ-ಲೋಕಾನುಸರಣವಾದನಟನವಾಗಿದೆ||೪೭|| ಶ್ರೀಃ-ಲಕ್ಷ್ಮೀದೇವಿಯು,ಪಾದಸ್ಪರ್ಶಾಶಯಾ-ಚರಣಗಳಂಸೋಂ
ಕುವಅಪೇಕ್ಷೆಯಿಂದ, ಅನ್ಯಾನ್-ಇತರರನ್ನು, ಹಿತ್ವಾ-ಬಿಟ್ಟು, ಸ್ವಾತ್ಮದೋಷಾಪವರ್ಗೇಣ-ಸ್ವಾತ್ಮ-ತನ್ನ-ದೋಷ-ಚಾಂಚ
ಲ್ಯಗರ್ವಾದಿದೋಷಗಳ, ಅಪವರ್ಗೇಣ-ತ್ಯಾಗದಿಂದ, ಯಂ-ಯಾವವಿಷ್ಣುವಾದಕೃಷ್ಣನನ್ನು, ಅಸಕೃತ್-ಅನೇಕಾವರ್ತಿ,
ಭಜತೇ-ಸೇವಿಸುವಳೋ, ತದ್ಯಾಚ್ಞಾ-ಆಕೃಷ್ಣನಪ್ರಾರ್ಥನೆಯು,(ಅವನುಪರರಬೇಡುವಿಕೆಯು,)ಜನಮೋಹಿನೀ-ಜನಗಳನ್ನು
ಮೋಹಗೊಳಿಸುತಲಿರುವುದು||೪೮||ದೇಶಕಾಲಾದಿಗಳುಎಲ್ಲವೂ, ಯನ್ಮಯಃ-ಯಾವಆತ್ಮಚೈತನ್ಯವೇಸದ್ಭಾವವಾಗಿವುಳ್ಳದ್ದೋ(
(೧೧ನೆಯಶ್ಲೋಕದಟೀಕೆಯಂನೋಡಿರಿ) ||೪೯||ಸಭಗವಾನ್-ಆಭಗವಂತನಾದ, ಯೋಗೀಶ್ವರೇಶ್ವರಃ-ಯೋಗಿಗಳಿಗೂಈಶ್ವರರಿ
ಗೂಒಡೆಯನಾದ, ವಿಷ್ಣುರೇವ-ನಾರಾಯಣನೇ, ಯದುಷು-ಯಾದವರಲ್ಲಿ, ಸಾಕ್ಷಾತ್-ಪ್ರತ್ಯಕ್ಷವಾಗಿ, ಜಾತಃ-ಹುಟ್ಟಿದವನಾ
ಗಿರುವನು. ಇತಿ-ಹೀಗೆ, ಅಶೃಣ್ಮಹಿ-ಕೇಳಿರುವೆವುಅಲ್ಲವೆ, ಅಪಿ-ಹಾಗಾದರೂಕೂಡ, ಮೂಢಾಃ-ಮೂಢರಾಗಿ, ನವಿದ್ಮಹೇ-
ಕೃಷ್ಣನಸ್ವರೂಪವನ್ನುಅರಿತುಕೊಳ್ಳದೇಹೋದೆವು||೫೦||ಯನ್ಮಾಯಾಮೋಹಿತಧಿಯಃ-ಯತ್-ಯಾವಕೃಷ್ಣನ, ಮಾಯಾ-ಸ್ವಭಾ
ವಶಕ್ತಿಯಿಂದ, ಮೋಹಿತ-ಮರುಳುಗೊಳಿಸಲ್ಪಟ್ಟ, ಧಿಯಃ-ಬುದ್ಧಿಯುಳ್ಳವರಾಗಿ, ಕರ್ಮವರ್ತ್ಮಸು-ಕರ್ಮಮಾರ್ಗಗಳಲ್ಲಿ,
ಭ್ರಮಾಮಃ-ತಿರುಗುತಲಿರುವೆವೋ; ಅಕುಂಠಮೇಧಸೇ-ಅಕುಂಠ-ಕೊರತೆಗೊಳ್ಳದ, ಮೇಧಸೇ-ಜ್ಞಾನಶಕ್ತಿಯುಳ್ಳ, ಭಗವತೇ-ಐಶ್ವ
ರ್ಯವುಳ್ಳ, ಕೃಷ್ಣಾಯ-ಅವಿದ್ಯಾಬಂಧವಂತಪ್ಪಿಸಲುಳ್ಳವನಾದ, ತಸ್ಮೈತುಭ್ಯಂ-ಆನಿನಗೆ, ನಮಃ-ನಮಸ್ಕಾರವಾಗಲಿ ||೫೧||
ಆದ್ಯಃಪುರುಷಃ-ಪುರಾಣಪುರುಷನಾದ(ಕಾರಣಮೂರ್ತಿಯಾದ,) ಸಏ-ಆಕೃಷ್ಣನೇ,ಸ್ವಮಾಯಾಮೋಹಿತಾತ್ಮನಾಂ-ತನ್ನ ಸಂಕ

---

ದಅನ್ನಯಾಚನೆಯಂ ಮಾಡಿಸಿದುದು ಕೇವಲನಟನಮಾತ್ರವೇಸರಿ ||೪೭|| ಅದಂತೆನೆ ಮಹಾಲಕ್ಷ್ಮಿಯು ತನ್ನ
ನ್ನು ಭಜಿಸುತ್ತಿರುವ ಬ್ರಹ್ಮಾದಿದೇವತೆಗಳನ್ನೂ ಬಿಟ್ಟು ತನ್ನ ಚಾಂಚಲ್ಯಗರ್ವಾದಿದೋಷಗಳನ್ನೂ ಬಿಟ್ಟು
ಬಾರಬಾರಿಗೂ ಯಾವಭಗವಂತನ ಅಡಿದಾವರೆಯಂ ಸೋಂಕಲೆಳಸಿ ಸೇವಿಸುವಳೋ ಆ ಶ್ರೀಕೃಷ್ಣದೇವನ
ಯಾಚನೆಯು ಸರ್ವಜನ ಮೋಹಕವಾಗಿರುವುದು||೪೮|| ದೇಶವು, ಕಾಲವು, ಪ್ರತ್ಯೇಕವಾದ ಆಜ್ಯ ಸಮಿತ್ತು
ಚರುವು ಪುರೋಡಾಶ ಮೊದಲಾದ ಹವಿರ್ದ್ರವ್ಯವು, ವೇದವು, ಮಂತ್ರವು, ಪ್ರಯೋಗವು, ಋತ್ವಿಕ್ಕುಗಳು
ಅಗ್ನಿಗಳು, ದೇವತೆಗಳು, ಯಜಮಾನನು, ಯಜ್ಞವು, ಪುಣ್ಯವು, ಇವು ಯಾವಶ್ರೀಕೃಷ್ಣನೇ ಸ್ವರೂಪವಾ
ಗಿ ವುಳ್ಳವೋ ||೪೯|| ಆಭಗವಂತನಾದ ಯೋಗೀಶ್ವರರಿಗೂ ಈಶ್ವರನಾದ ಸಾಕ್ಷಾದ್ವಿಷ್ಣುವೇ ಶ್ರೀಕೃಷ್ಣರೂ
ಪನಾಗಿ ಯಾದವರಲ್ಲಿ ಅವತರಿಸಿರುವನೆಂದು ಕೇಳಿರುವೆವಾದರೂ ಮೂಢರಾದನಾವು ತಿಳಿಯದೇ ಹೋದೆವು||೫೦||
ಆದರೂ ಭಕ್ತಿಭಾವದಿಂದ ತಿಳಿದು ಕೃತಾರ್ಥರಾದ ಸ್ತ್ರೀಯರುನಮಗೆ ಪತ್ನಿಯರಾಗಿರುವುದರಿಂದ ಅವರ
ಸಂಬಂಧದಿಂದ ನಾವೂಕೃತಾರ್ಥರಾಗತಕ್ಕವರೇಸರಿ ||*||) (ಎಂದುನಿಶ್ಚಯಿಸಿ ಶ್ರೀಕೃಷ್ಣನು ಕುರಿತು
ನಮಸ್ಕಾರಂಗೆಯ್ವರೆಂತೆನೆ) ಯಾವವನಮಾಯೆಯಿಂದ ಮೋಹಿತಚಿತ್ತರಾದ ನಾವು ಕರ್ಮಮಾರ್ಗಗಳಲ್ಲಿ
ತೊಳಲುತ್ತಿರುವೆವೋ, ಅಂತಾ ಭಗವಂತನಾದ, ಮತ್ತು ಹೊಡೆಯಲ್ಪಡದ ಅಥವಾ ಮಂದವಾಗದ ಮಹಾಪ್ರ
ಜ್ಞೆಯುಳ್ಳ, ಶ್ರೀಕೃಷ್ಣರೂಪನಾಗಿರುವ ನಿನಗೋಸ್ಕರ ನಮಸ್ಕಾರಂಗೆಯ್ವೆವು ||೫೧|| ಆದುದರಿಂದ ಆದವು

ವೈನಆದ್ಯೇಃಪುರುಷಸ್ಯ ಮಾಯಯಾಮೋಹಿತಾತ್ಮನಾಮ್ | ಅವಿಜ್ಞಾತಾನುಭಾವಾನಾಂಕ್ಷನ್ತುಮರ್ಹತ್ಯ
ತಿಕ್ರಮಮ್ |೫೧| ಇತಿಸ್ವಾಘಮನುಸ್ಮೃತ್ಯಕೃಷ್ಣೇತೇಕೃತಹೇಳನಾಃ | ದಿದೃಕ್ಷವೋಪ್ಯಚ್ಯುತಯೋಃ
ಕಂಸಾದ್ಭೀತಾನಚಾಚಲ |೫೨|

ಇತಿಶ್ರೀಮದ್ಭಾಗವತೇ ದಶಮಸ್ಕಂಧೆ ತ್ರಯೋವಿಂಶೋಧ್ಯಾಯಃ

---

ಲ್ಪದಿಂದಮೋಸಗೊಳಿಸಲ್ಪಟ್ಟಬುದ್ಧಿಯುಳ್ಳವರಾಗಿಯೂ, ಅವಿಜ್ಞಾತಾನುಭಾವಾನಾಂ-ತಿಳಿಯಲ್ಪಡದಸಾಮರ್ಥ್ಯವುಳ್ಳವರಾದ, ನಃ-ನಮ್ಮ, ಅತಿಕ್ರಮಂ-ಅಪಚಾರವನ್ನು, ಕ್ಷಂತುಂ-ಸೈರಿಸುವುದಕ್ಕೆ, ಅರ್ಹತಿ-ತಕ್ಕವನಾಗಿರುವನು||೫೧||ಕೃಷ್ಣೇ-ಕೃಷ್ಣನಲ್ಲಿ, ಕೃತಹೇಳನಾಃ-ಮಾಡಲ್ಪಟ್ಟ ಅಲಕ್ಷ್ಯತೆಯುಳ್ಳವರಾದ, ತೇ-ಆಬ್ರಾಹ್ಮಣರು, ಇತಿ-ಹೀಗೆ, ಸ್ವಾಘಂ-ತಮ್ಮಅಪರಾಧವನ್ನು, ಅನುಸ್ಮೃತ್ಯ-ನೆನಪುಗೊಂಡು, ಅಚ್ಯುತಯೋಃ-ರಾಮಕೃಷ್ಣರನ್ನು, ದಿದೃಕ್ಷವೋಪಿ-ನೋಡಲೆಳಸಿದವರಾದರೂ, ಕಂಸಾತ್-ಕಂಸನಪೆಸೆಯಿಂದ, ಭೀತಾಃ-ಹೆದರಿದವರೂಆದ್ದರಿಂದಲೇ, ನಾಚಲನ್-ಇದ್ದಆಶ್ರಮದಿಂಕದಲಲಿಲ್ಲವು ||೫೨||

ಇತಿಶ್ರೀಮದ್ಭಾಗವತ ಪ್ರತಿಶಬ್ದಾರ್ಥಬೋಧಿನ್ಯಾಂ ದಶಮಸ್ಕಂಧೇ
ತ್ರಯೋವಿಂಶೋಧ್ಯಾಯಃ-

---

ರೂಪನಾದ ಶ್ರೀಕೃಷ್ಣದೇವನು ತನ್ನಮಾಯೆಯಿಂದ ಮೋಹಿತಚಿತ್ತರಾಗಿ ತನ್ನಪ್ರಭಾವವನರಿಯದೇ ಇರುವ ಮೂಢರಾದನಮ್ಮ ಅಪರಾಧವ ಕ್ಷಮಿಸಲಿ ||೫೧|| ಎಂದು ಶ್ರೀಕೃಷ್ಣದೇವನಲ್ಲಿ ಅಪರಾಧಂಗೆಯ್ದ ಬ್ರಾಹ್ಮಣರು ತಮ್ಮದೋಷವ ಸ್ಮರಿಸಿಕೊಂಡು ಕ್ಷಮಾಪಣಕ್ಕಾಗಿ ರಾಮಕೃಷ್ಣರೀರ್ವರ ದರ್ಶನಂಗೈಯ್ಯಬೇಕೆಂಬ ಇಚ್ಛೆಯುಳ್ಳವ ರಾಗಿಯೂಕೂಡ ಕಂಸನಭಯದಿಂದ (ಕೃಷ್ಣನಬಳಿಗೆ) ಹೋಗಲಿಲ್ಲವು||.. ... .... ||೫೨||

ಇಂತು ಶುಕಮುನಿಯು ಪರೀಕ್ಷಿದ್ರಾಯನಿಗೆ ನಿರೂಪಿಸಿದನೆಂದು ಸೂತಪೌರಾಣಿಕನು ನೈಮಿಶಾ
ರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಹೇಳಿದನೆಂಬಲ್ಲಿಗೆ-ಶ್ರೀಮನ್ಮಹೀಶೂರಪುರವ
ರಾಧೀಶ ಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜ ವಿರಚಿತಮಪ್ಪ, ಶ್ರೀ
ಭಾಗವತದ "ಶ್ರೀಕೃಷ್ಣರಾಜ ವಾಣೀವಿಲಾಸವು" ಎಂಬ ಕರ್ಣಾಟಕ
ಭಾಷಾವ್ಯಾಖ್ಯಾನದಲ್ಲಿ ದಶಮಸ್ಕಂಧದೊಳು ೨೩ನೆಯ
ಅಧ್ಯಾಯವು ಸಂಪೂರ್ಣವಾದುದು.

ಮಂಗಳಮಸ್ತು

*ಗೋವರ್ಧನೋದ್ಧರಣಕಥಾಪ್ರಾರಂಭಘಟ್ಟಃ*

ಶ್ರೀಶುಕಃ ‖ ಭಗವಾನಪಿತತ್ರೈವಬಲದೇವೇನಸಂಯುತಃ | ಅಪಶ್ಯನ್ನಿವಸನ್ಗೋಪಾನಿಂದ್ರಯಾ ಗಕೃತೋದ್ಯಮಾನ್ ‖೧‖ ತದಭಿಜ್ಞೋಪಿಭಗವಾನ್ಸರ್ವಾತ್ಮಾಸರ್ವದರ್ಶನಃ | ಪ್ರಶ್ರಯಾವನತೋಪೃಚ್ಛದ್ವೃದ್ಧಾನ್ನಂದಪುರೋಗಮಾನ್ ‖೨‖ ಕಥ್ಯತಾಂಮೇಪಿತಃಕೋಯಂಸಂಭ್ರಮೋವಉಪಾಗತಃ ‖ ಕಿಂಫಲಂಕಸ್ಯಚೋದ್ದೇಶಃಕೇನವಾಸಾಧ್ಯತೇಮಖಃ ‖೩‖ ಏತದ್ಬ್ರೂಹಿಮಹಾನ್ಕಾಮೋಮಹ್ಯಂಶುಶ್ರೂ

---

೨೪ಅಧ್ಯಾಯದಪ್ರತಿಪದಟೀಕೆ.

[ಶುಕವಾಕ್ಯ] ಬಲದೇವೇನ-ಬಲರಾಮನೊಡನೆ, ಸಂಯುತಃ-ಸೇರಿದವನಾದ, ಭಗವಾನಪಿ-ಕೃಷ್ಣನೂಕೂಡ, ತತ್ರೈವ-ಅಲ್ಲಿಯೇ, ನಿವಸನ್-ಇರುವವನಾಗಿ, ಇಂದ್ರಯಾಗಕೃತೋದ್ಯಮಾನ್-ಇಂದ್ರಯಾಗ-ದೇವೇಂದ್ರನನ್ನು ಪೂಜಿಸುವಯಜ್ಞದಲ್ಲಿ, ಕೃತ-ಮಾಡಲ್ಪಟ್ಟ, ಉದ್ಯಮಾನ್-ಪ್ರಯತ್ನವುಳ್ಳ, ಗೋಪಾನ್-ಗೋಪಾಲಕರನ್ನು, ಅಪಶ್ಯತ್-ನೋಡಿದನು ‖೧‖ ಸರ್ವಾತ್ಮಾ-ಸರ್ವಸ್ವರೂಪನಾಗಿಯೂ, ಸರ್ವದರ್ಶನಃ-ಸರ್ವಸಾಕ್ಷಿಯಾಗಿಯೂ ಇರುವ, ಭಗವಾನ್-ಕೃಷ್ಣನು, ತದಭಿಜ್ಞೋಪಿ-ಅವರಅಭಿಪ್ರಾಯವಂಬಲ್ಲವನಾದರೂ, ಪ್ರಶ್ರಯಾವನತಸ್ಸನ್-ಪ್ರಶ್ರಯ-ವಿನಯಭಾವದಿಂದ, ಅವನತಸ್ಸನ್-ಬಗ್ಗಿದವನಾಗಿ, ನಂದಪುರೋಗಮಾನ್-ನಂದನೇಮುಖ್ಯನಾಗಿವುಳ್ಳ, ವೃದ್ಧಾನ್-ವಯೋಧಿಕರಾದ ಗೋಪಾಲಕರನ್ನು ಕುರಿತು, ಅಪೃಚ್ಛತ್-ಪ್ರಶ್ನೆಮಾಡಿದನು ‖೨‖ಹೇಪಿತಃ-ಎಲೈತಂದೆಯೇ! ವಃ-ನಿಮಗೆ, ಕೋಯಂಸಂಭ್ರಮಃ-ಯಾವ ಈಸಂತೋಷವು, ಉಪಾಗತಃ-ಬಂದಿರುವುದು; ಕಿಂಫಲಂ-ಪ್ರಯೋಜನವೇನು; ಉದ್ದೇಶಶ್ಚ ಕಸ್ಯ-ಯಾವುದರನ್ನು ಕುರಿತು; ಮಖಃ-ಯಜ್ಞಕರ್ಮವು, ಕೇನ-ಯಾವಸಾಧನದಿಂದ; ಸಾಧ್ಯತೇವಾ-ಸಾಧಿಸಲ್ಪಡುವುದೋ;‖೩‖ ಕಾಮಃ-ಕೇಳುವಅಭಿಲಾಷೆಯು, ಮಹಾನ್-ಹೆಚ್ಚಾಗಿರುವುದು, ಪಿತಃ-ತಂದೆಯೇ! ಶುಶ್ರೂಷವೇ-ಕೇಳಲುಬಯಸುತಲಿರುವ, ಮಹ್ಯಂ-ನನಗೆ, ಬ್ರೂಹಿ-ಹೇಳು. ಸರ್ವಾತ್ಮನಾಂ-ಎಲ್ಲರಲ್ಲಿಯೂಆತ್ಮದೃಷ್ಟಿಯುಳ್ಳ, ಸಾಧೂನಾಂ-ಸತ್ಪುರುಷರಿಗೆ, ಗೋಪ್ಯಂ-ಹೇಳದೆಯಿರಿಸತಕ್ಕ, ಕೃತ್ಯಂ-ಕೆಲಸವು, ಇಹ-

---

೨೪ನೆಯಅಧ್ಯಾಯವು.

ಶ್ರೀಧರೀಯಶ್ಲೋಕ‖ ಚತುರ್ವಿಂಶೇ ಮಹೇಂದ್ರಸ್ಯ ಮಖಂವ್ಯಾಹತ್ಯಹೇತುಭಿಃ | ಕೃಷ್ಣಃಪ್ರವರ್ತಯಾಮಾಸಗೋವರ್ಧನಮಹೋತ್ಸವಂ ‖ಟೀ‖ ಇಪ್ಪತ್ತನಾಲ್ಕನೆಯ ಅಧ್ಯಾಯದಲ್ಲಿ ಶ್ರೀಕೃಷ್ಣದೇವನುಅನೇಕ ಕಾರಣಂಗಳಂ ಪೇಳುವುದರಿಂದ ಮಹೇಂದ್ರನಿಗೋಸುಗ ಮಾಡಲ್ಪಡುವಯಾಗವಂ ನಿಲ್ಲಿಸಿ ಗೋವರ್ಧನ ಪರ್ವತವನುದ್ದೇಶಂಗೆಯ್ದು ಮಹತ್ತಾದಉತ್ಸವವಂ ಮಾಡಿಸಿದನೆಂಬರ್ಥವಂ ಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸುವನದೆಂತೆನೆ,---

ಎಲೈ, ಪರೀಕ್ಷಿದ್ರಾಯನೇ! ಯಜ್ಞಂಗೆಯ್ವ ಆ ಬ್ರಾಹ್ಮಣರು ಕಂಸನದೆಸೆಯಿಂದ ಹೆದರಿ ತಮ್ಮಆಶ್ರಮಂಗಳಲ್ಲಿಯೇ ಇರುವರಾಗಿ ಶ್ರೀಕೃಷ್ಣನಂ ಭಜಿಸಿದರಲ್ಲವೆ-ಭಗವಂತನಾದ ಶ್ರೀಕೃಷ್ಣದೇವನು ಕೂಡ ಬಲದೇವನೊಡಗೂಡಿದವನಾಗಿ ನಂದಗೋಕುಲದಲ್ಲಿಯೇ ವಾಸಂಗೆಯ್ಯುತ ಇಂದ್ರನಂ ಕುರಿತು ಯಾಗಂಗೆಯ್ಯಲೋಸುಗಪ್ರಯತ್ನಂಗೆಯ್ವ ಗೋಪಾಲಕರಂ ಕಂಡನು ‖೧‖ ಆಗ ಸರ್ವಾತ್ಮಕನಾಗಿಯೂ ಸರ್ವಸಾಕ್ಷಿಯಾಗಿಯೂ ಭಗವಂತನಾಗಿಯೂ ಇರುವ ಶ್ರೀಕೃಷ್ಣನು ಇಂದ್ರನಪ್ರೀತ್ಯರ್ಥವಾಗಿ ಯಾಗಂಗೆಯ್ವುದಂ ಬಲ್ಲವನಾದರೂ ಅರಿಯದವನಂತೆ ನಂದಗೋಪಮೊದಲಾದ ಗೋಪಾಲಕರಂ ಕುರಿತು ವಿನಯದಿಂ ತಲೆಯಂಬಗ್ಗಿಸಿಕೊಂಡು ಈ ರೀತಿಯಿಂದ ಪ್ರಶ್ನೆಗೆಯ್ದನು. ಅದೆಂತೆನೆ ‖೨‖ ತಂದೆಯಾದ ನಂದಗೋಪನೇ! ನಿಮ್ಮನ್ನುಹೊಂದಿರುವ ಈಕೆಲಸವತ್ವರೆಯು ಯಾವುದು? ಯಾಗಸನ್ನಾಹವೆಂದರೆ ಅದಕ್ಕೆಫಲವೇನು? ದೇವತೆಯಾವುದು? ಯಾವ ಅಧಿಕಾರಿಯಿಂದ ಯಾವಸಾಧನದಿಂದ ಯಾಗವು ಸಾಧಿಸಲ್ಪಡುವುದು, ಇದೆಲ್ಲವಂನನಗೇಳು ‖೩‖ ಅದರನ್ನು ಕೇಳುವುದಕ್ಕೆ ನನಗೆಬಹಳ ಅಪೇಕ್ಷೆಯುಂಟು. ಲೋಕದಲ್ಲಿ ಸರ್ವತ್ರ ಆತ್ಮದೃಷ್ಟಿಯುಳ್ಳ ಮಹಾತ್ಮರಿಗೆ "ಇವರುನನ್ನವರು, ಇವರು ಹೆರವರು" ಎನುತಲೂ, "ಇವರುಮಿತ್ರರು, ಇವರು ಶತ್ರುಗಳು, ಇವರುದಾಸೀನರು" ಎನುತಲೂ, ಭೇದದೃಷ್ಟಿಯಿಲ್ಲವು. ಆದುದರಿಂದ ಅವರಿಗೆ ಗೋಪ್ಯವಾದ ಕೆಲಸವೇ ಇಲ್ಲವು. [ಆದುದರಿಂದನನಗೆ

ಷವೇಪಿತಃ | ನಹಿಗೋಪ್ಯಂಹಿಸಾಧೂನಾಂಕೃತ್ಯಂಸರ್ವಾತ್ಮನಾಮಿಹ ||೪|| ನಾಸ್ತ್ಯಸ್ವಪರದೃಷ್ಟೀನಾಮಮಿತ್ರೋದಾಸ್ತವಿದ್ವಿಷಾಮ್ | ಉದಾಸೀನೋಽರಿವದ್ವರ್ಜ್ಯ ಆತ್ಮವತ್ಸುಹೃದುಚ್ಯತೇ ||೫|| ಜ್ಞಾತ್ವಾಜ್ಞಾತ್ವಾಚಕರ್ಮಾಣಿಜನೋಯಮನುತಿಷ್ಠತಿ | ವಿದುಷಃಕರ್ಮಸಿದ್ಧಿಸ್ಸ್ಯಾದ್ಯಥಾನಾವಿದುಷೋಭವೇತ್ ||೬|| ತತ್ರತಾವತ್ಕ್ರಿಯಾಯೋಗೋಭವತಾಂಕಿಂವಿಚಾರಿತಃ | ಅಥವಾಲೌಕಿಕಸ್ತನ್ಮೇಪೃಚ್ಛತಸ್ಸಾಧುಭಣ್ಯತಾಮ್ ||೭|| ನಂದಃ|| ಪರ್ಜನ್ಯೋಭಗವಾನಿಂದ್ರೋಮೇಘಾಸ್ತಸ್ಯಾತ್ಮಮೂರ್ತಯಃ | ತೇಭಿವರ್ಷಂತಿಭೂತಾನಾಂಪ್ರಾಣಸಂಜೀವನಂಪಯಃ ||೮|| ತಂತಧಾವಯಮನ್ಯೇಚವಾರ್ಮುಚಾಂಪತಿಮೀಶ್ವರಮ್ |

---

ಈಲೋಕವಲ್ಲಿ, ನಹಿ-ಇಲ್ಲವಷ್ಟೆ ||೪|| ಅಸ್ವಪರದೃಷ್ಟೀನಾಂ-ತಾನುಬೇರೆಹೆರಿವರುಬೇರೆಯೆಂಬದೃಷ್ಟಿಯಿಲ್ಲದವರಾದ್ದರಿಂದಲೇ, ಅಮಿತ್ರೋದಾಸ್ತವಿದ್ವಿಷಾಂ-ಮಿತ್ರನೂ ಉದಾಸೀನನೂ ದ್ವೇಷಿಯೂ ಇಲ್ಲದವರಾದ, ಸಾಧೂನಾಂ-ಸತ್ಪುರುಷರಿಗೆ, ( ಗೋಪ್ಯಂಕೃತ್ಯಂ) ನಾಸ್ತಿ-ಹೇಳದೆ ಮುಚ್ಚಿರಿಸತಕ್ಕ ಕೆಲಸವಿಲ್ಲವಷ್ಟೆ, ಉದಾಸೀನಃ-ಸ್ನೇಹವೂ ದ್ವೇಷವೂ ಇಲ್ಲದ ತಟಸ್ಥನು, ಅರಿವತ್-ಶತ್ರುವಿನಂತೆ, ವರ್ಜ್ಯಃ-ಬಿಡಲ್ಪಡತಕ್ಕವನಾಗಿರುವನು, ಸುಹೃತ್-ಸ್ನೇಹವುಳ್ಳವನು, ಆತ್ಮವತ್-ತನ್ನಂತೆಯೇ (ಬಿಡಲ್ಪಡತಕ್ಕವನಲ್ಲವೆಂದು) ಉಚ್ಯತೇ-ಹೇಳಲ್ಪಡುವನು ||೫|| ಅಯಂಜನಃ-ಈಲೋಕವು, ಜ್ಞಾತ್ವಾಜ್ಞಾತ್ವಾ-ತಿಳಿದು ತಿಳಿಯದೆಕೊಂಡ, ಕರ್ಮಾಣಿ-ವಿಚಾರವಿಲ್ಲದ ಕೆಲಸಗಳನ್ನು, ಅನುತಿಷ್ಠತಿ-ಆಚರಿಸುತಲಿರುವುದು. ವಿದುಷಃ-ಶಾಸ್ತ್ರದಿಂದ ವಿಚಾರ ತಿಳಿದವನಿಗೆ, ಯಥಾ-ಹೇಗೆ ಕರ್ಮಸಿದ್ಧಿಃ-ಕರ್ಮದ ಫಲವು, ಸ್ಯಾತ್-ಆಗುವುದೋ, ತಥಾ-ಹಾಗೆ, ಅವಿದುಷಃ-ತಿಳಿಯದೇ ಇರುವವನಿಗೆ, ನಭವೇತ್-ಉಂಟಾಗಲಾರದು ||೬|| ತತ್ರ-ಕರ್ಮಭಕ್ತಿಜ್ಞಾನಕ್ರಿಯಾಯೋಗಗಳಲ್ಲಿ, ಕ್ರಿಯಾಯೋಗಸ್ತಾವತ್-ಈಕರ್ಮಯೋಗವಾದರೋ, ಭವತಾಂ-ನಿಮ್ಮಿಂದ, ವಿಚಾರಿತಃಕಿಂ-ವಿಚಾರಿಸಲ್ಪಟ್ಟಿರುವುದೋ ಏನು ಅಥವಾ-ಹಾಗಲ್ಲದಿದ್ದರೆ, ಲೌಕಿಕಃಕಿಂ-ಮೂಢಲೋಕವನ್ನು ನೋಡಿ ಅವರಂತೆ ವಿಚಾರವಿಲ್ಲದೆ ಉಂಟಾಗಿರುವುದೋ ಏನು? ತತ್-ಅದು, ಪೃಚ್ಛತಃ-ಕೇಳುತಲಿರುವ, ಮೇ-ನನಗೆ, ಸಾಧು-ಚನ್ನಾಗಿ, ಭಣ್ಯತಾಂ-ಹೇಳಲ್ಪಡಲಿ ||೭|| [ ನಂದವಚನವು ] ಭಗವಾನ್-ಶ್ರೀಮಂತನಾದ, ಇಂದ್ರಃ-ದೇವರಾಜನು, ಪರ್ಜನ್ಯಃ-ಮಳೆಯಂ ಸುರಿಸುವವನಾಗಿರುವನು ಮೇಘಾಃ-ಮೋಡಗಳು, ತಸ್ಯ-ಆಯಿಂದ್ರನ, ಆತ್ಮಮೂರ್ತಯಃ-ಪ್ರಿಯರೂಪಗಳಾಗಿರುವವು, ತೇ-ಆಮೇಘಗಳು, ಭೂತಾನಾಂ-ಶರೀರಧಾರಿಗಳಿಗೆ, ಪ್ರಾಣಸಂಜೀವನಂ-ಪ್ರಾಣಗಳನ್ನು ಬದುಕಿಸುವ, ಪಯಃ-ನೀರನ್ನು, ಅಭಿವರ್ಷಂತಿ-ಮಳೆಸುರಿಯುತಲಿರುವವು ||೮|| ತಥಾ-ಹಾಗೆ, ವಾರ್ಮುಚಾಂ-ಮಳೆಯಂ ಸುರಿಸುವ ಮೇಘಗಳಿಗೆ, ಪತಿಂ-ಒಡೆಯನಾದ,

---

ನೀವು ಹೇಳಬಹುದು. ]||೪|| ಮತ್ತು-ಭೇದಬುದ್ಧಿಯಿಲ್ಲದಿದ್ದರೂ ಉದಾಸೀನನಾದವನು ಕೂಡ ಶತ್ರುವಿನಂತೆ ಬಿಡಲ್ಪಡತಕ್ಕವನು. ಸಾತ್ವಿಕಬುದ್ಧಿಯುಳ್ಳವನು ತನಗೆ ಸಮಾನನಾದುದರಿಂದ ಮಿತ್ರರೊಳಗೆ ಸೇರತಕ್ಕವನಾಗಿ ಬಿಡಲ್ಪಡತಕ್ಕವನಲ್ಲವು. [ ಆದುದರಿಂದ ನನಗೆ ತಿಳುಹಿಸು ] ||೫|| ಮತ್ತು ಕರ್ಮಫಲದ ಸ್ವರೂಪವಂ ತಿಳಿದು ಅನುಷ್ಠಾನಂಗೆಯ್ವ ಪುರುಷನಿಗೆ ಕರ್ಮಫಲವು ಸಿದ್ಧಿಸುವಂತೆ ಅರಿಯದೇ ಅನುಷ್ಠಿಸುವ ಮೂಢನಿಗೆ ಸಿದ್ಧಿಸಲಾರದು ಆದುದರಿಂದ ಕರ್ಮಸ್ವರೂಪವನ್ನು ಲೋಕದಲ್ಲಿ ತಿಳಿದು ಆಚರಿಸುತಲಿರುವರು ||೬|| ಆದುದರಿಂ ಈ-ಯಾ



ಗಕರ್ಮವು ನಿಮಗೆ ಶಾಸ್ತ್ರದಿಂದುಂಟಾದುದೋ? ಅಲ್ಲದೆ ಲೋಕಾಚಾರದಿಂದ ಬಂದುದೋ? ಅದಂ ಕೇಳುವ ನನಗೆ ನಿಮಿತ್ತಸಹಿತವಾಗಿ ನೀವು ನಿರೂಪಿಸಿ ಹೇಳಬೇಕು. ||೭|| [ ಇಂತೆಂಬ ಕೃಷ್ಣನ ಪ್ರಶ್ನವಾಕ್ಯಮಂ ಕೇಳಿ ನಂದಗೋಪನು ಹೇಳುವನದೆಂತೆನೆ- ] ಜ್ಞಾನಾದಿಗುಣಸಂಪನ್ನನಾದ ಇಂದ್ರನು ಮಳೆಯನ್ನು ಕೊಡುವವನಾದುದರಿಂ ಪರ್ಜನ್ಯನೆಂದು ಕರೆಯಲ್ಪಡುವನು. ಆತನಿಗೆ ಮೇಘಗಳೇ ಪ್ರಿಯವಾದ ಮೂರ್ತಿಗಳಾಗಿವೆ. ಅವು ಸಮಸ್ತ ಪ್ರಾಣಿಗಳಿಗೂ ಜೀವನವಾಗಿರುವ ನೀರನ್ನು ಮಳೆಸುರಿಸುವವು. ||೮|| ಎಲೈ, ಬಾಲಕನಾದ ಕೃಷ್ಣನೇ! ನಾವೂ ಮಿ

ದ್ರವ್ಯೈಃ ಯಸ್ತದ್ರೇತಸಾ ಸಿದ್ಧೈರ್ಯಜಂತೇ ಕ್ರತುಭಿರ್ನರಾಃ ॥೯॥ ತಚ್ಛೇಷೇಣೋಪಜೀವಂತಿ ತ್ರಿವರ್ಗಫಲಸಿದ್ಧಯೇ । ಪುಂಸಾಂ ಪುರುಷಕಾರಾಣಾಂ ಪರ್ಜನ್ಯಃ ಫಲಭಾವನಃ ॥೧೦॥ ಯ ಏನಂ ವಿಸೃಜೇದ್ಧರ್ಮಂ ಪಾರಂಪರ್ಯಾಗತಂ ನರಃ । ಕಾಮಾಲ್ಲೋಭಾದ್ಭಯಾದ್ದ್ವೇಷಾತ್ಸ ವೈ ನಾಪ್ನೋತಿ ಶೋಭನಂ ॥೧೧॥ ಶ್ರೀಶುಕಃ॥ ವಚೋ ನಿಶಮ್ಯ ನಂದಸ್ಯ ತಥಾನ್ಯೇಷಾಂ ವ್ರಜೌಕಸಾಂ । ಇಂದ್ರಾಯ ಮನ್ಯುಂ ಜನಯನ್ ಪಿತರಂ ಪ್ರಾಹ ಕೇಶವಃ ॥೧೨॥ ಶ್ರೀಭಗವಾನ್॥ ಕರ್ಮಣಾ ಜಾಯತೇ ಜಂತುಃ ಕರ್ಮಣೈವ ಪ್ರಲೀಯತೇ । ಸುಖಂ ದುಃಖಂ ಭಯಂ ಕ್ಷೇಮಂ ಕರ್ಮಣೈವ ಪ್ರಪದ್ಯತೇ ॥೧೩॥ ಅಸ್ತಿ ಚೇದೀಶ್ವರಃ ಕ[illegible]ತ್ಫಲರೂಪ್ಯನ್ಯಕ

---

ತನಿಶ್ವರಂ-ಆ ಇಂದ್ರನನ್ನು ಕುರಿತು, ವಯಂ-ನಾವೂ, ಅನ್ಯೇ ನರಾಶ್ಚ-ಇತರಜನಂಗಳೂ ಕೂಡ, ತದ್ರೇತಸಾ-ಆ ಮೇಘವೀರ್ಯವಾದ ನೀರಿನಿಂದ, ಸಿದ್ಧೈಃ-ಫಲಿಸಿದಂತಾ, ದ್ರವ್ಯೈಃ-ಧಾನ್ಯಘೃತಾದಿಪದಾರ್ಥಗಳಿಂದ, ಕ್ರತುಭಿಃ-ಯಜ್ಞಗಳಿಂದ, ಯಜಂತೇ-ಪೂಜಿಸುತಲಿರುವರು॥೯॥ ತ್ರಿವರ್ಗಫಲಸಿದ್ಧಯೇ-ತ್ರಿವರ್ಗ-ಧರ್ಮಾರ್ಥಕಾಮಗಳೆಂಬ, ಫಲ-ಪುರುಷಾರ್ಥಗಳ, ಸಿದ್ಧಯೇ-ಪ್ರಯೋಜನಕ್ಕೋಸುಗ, ತಚ್ಛೇಷೇಣ-ಆ ಯಜನದ ಶೇಷದಿಂದ ಮಿಕ್ಕ ಪದಾರ್ಥದಿಂದ, ಉಪಜೀವಂತಿ-ಆ ದೇವತೆಗಳನ್ನನುಸರಿಸಿ ಬದುಕುವರು. ಪುರುಷಕಾರಾಣಾಂ-ನಾವು ಕರ್ತಾರರೆಂಬ ಅಭಿಮಾನದಿಂದ ಪ್ರಯತ್ನ ಮಾಡುತಲಿರುವ, ಪುಂಸಾಂ-ಪುರುಷರಿಗೆ, ಪರ್ಜನ್ಯಃ-ಮಳೆಯನ್ನು ಸುರಿಸುವ ಇಂದ್ರನು, ಫಲಭಾವನಃ-ಫಲಕ್ಕೆ ಸಾಧಕನಾಗಿರುವನು ॥೧೦॥ ಯೋ ನರಃ-ಯಾವ ಮನುಷ್ಯನು, ಪಾರಂಪರ್ಯಾಗತಂ-ಹಿರಿಯರ ಕಾಲದಿಂದ ಕುಲಪರಂಪರೆಯಾಗಿ ಬಂದಿರುವ, ಏನಂ ಧರ್ಮಂ-ಹೀಗೆ ನಡೆಯಿಸಬೇಕಾದ ಧರ್ಮಕಾರ್ಯವನ್ನು, ಕಾಮಾತ್-ಬೇರೆ ಬಯಕೆಯ ದೆಸೆಯಿಂದಲೇ, ಲೋಭಾತ್-ಕಾರ್ಪಣ್ಯದಿಂದಲೋ, ಭಯಾತ್-ಹೆದರಿಕೆಯಿಂದಲೋ, ದ್ವೇಷಾತ್-ವಿರೋಧದಿಂದಲಾದರೂ, ವಿಸೃಜೇತ್-ನಡೆಯಿಸದೇ ಬಿಡುವನೋ, ಸಃ-ಆ ಪುರುಷನು, ಶೋಭನಂ-ಕ್ಷೇಮವನ್ನು, ನಾಪ್ನೋತಿ-ಹೊಂದುವುದಿಲ್ಲವು, ವೈ-ಪ್ರಸಿದ್ಧವು॥೧೧॥ (ಶುಕವಚನವು) ಕೇಶವಃ-ಕೃಷ್ಣನು, ನಂದಸ್ಯ-ನಂದಗೋಪನ, ತಥಾ-ಹಾಗೆಯೇ-ಅನ್ಯೇಷಾಂ-ಇತರರಾದ, ವ್ರಜೌಕಸಾಂ-ಗೋಕುಲವಾಸಿಗಳ, ವಚಃ-ಮಾತನ್ನು, ನಿಶಮ್ಯ-ಕೇಳಿ, ಇಂದ್ರಾಯ-ದೇವರಾಜನಿಗೆ, ಮನ್ಯುಂ-ಸಿಟ್ಟನ್ನು, ಜನಯನ್-ಹುಟ್ಟಿಸುತಲಿರುವನಾಗಿ, ಪಿತರಂ-ತಂದೆಯಂ ಕುರಿತು, ಪ್ರಾಹ-ಚೆನ್ನಾಗಿ ಹೇಳಿದನು ॥೧೨॥ (ಭಗವದ್ವಚನವು) ಜಂತುಃ-ಪ್ರಾಣಿಯು, ಕರ್ಮಣಾ-ತನ್ನ ಕರ್ಮದಿಂದಲೇ, ಜಾಯತೇ-ಹುಟ್ಟುವನು ಕರ್ಮಣೈವ-ಕರ್ಮದಿಂದಲೇ, ಪ್ರಲೀಯತೇ-ಸಾಯುವನು, ಸುಖಂ-ಸಂತೋಷವನ್ನೂ, ದುಃಖಂ-ಕಷ್ಟವನ್ನೂ, ಭಯಂ-ಹೆದರಿಕೆಯನ್ನೂ, ಕ್ಷೇಮಂ-ರಕ್ಷಣವನ್ನೂ ಕರ್ಮಣೈವ-ತಾನು ಮಾಡಿದ ಕೆಲಸದಿಂದಲೇ, ಪ್ರಪದ್ಯತೇ-ಹೊಂದುವನು ॥೧೩॥ ಅನ್ಯಕರ್ಮಣಾಂ-ಹೆರವರ ಕೆಲಸಗಳಿಗೆ, ಫಲರೂಪೀ-ಫಲವಾಗಿರುವ ಅಥವಾ ಫಲಪ್ರದನಾದ. ಈಶ್ವರಃ-ನಿಯಾಮಕನಾದ ದೇವರು, ಕಶ್ಚಿತ್-

---

ಕ್ಕ ಜನರೂ ಸಹ ಮಳೆಯಂ ಸುರಿಸುವ ಮೇಘಂಗಳಿಗೊಡೆಯನಾದುದರಿಂದ ಪ್ರಭುವಾದ ಇಂದ್ರನಂ ಕುರಿತು ಮಳೆಯಿಂದುಂಟಾದ ದ್ರವ್ಯಗಳಿಂದಲೇ ಸಾಧಿಸಲ್ಪಟ್ಟ ಪಯಾಗಂಗಳನ್ನು ಆಚರಿಸುವೆವು. ॥೯॥ ಪ್ರಾಣಿಗಳಿಗೆ ಕೃಷಿಮೊದಲಾದ ಬೇಸಾಯದಿಂದ ಜೀವನವುಂಟಾಗುವುದು. ಉತ್ತು ಬಿತ್ತುವಷ್ಟು ಪ್ರಯತ್ನಮಾತ್ರವುಳ್ಳವರಿಗೆ ಮಳೆಯನ್ನು ಕೊಡುವ ಇಂದ್ರನೇ ಫಲಸಾಧಕನು. ಜನರು ಧರ್ಮಾರ್ಥಕಾಮಗಳ ಸಿದ್ಧಿಗೋಸುಗ ಇಂದ್ರನಂ ಕುರಿತು ಯಾಗಂಗೆಯ್ದು ಮಿಕ್ಕ ದ್ರವ್ಯದಿಂದ ತಮ್ಮ ಜೀವನವಂ ಕಲ್ಪಿಸಿಕೊಳ್ಳುವರು. ॥೧೦॥ ಯಾವ ಪುರುಷನು ಹೀಗೆ ವಂಶಪಾರಂಪರ್ಯದಿಂದ ನಡೆದುಬರುವ ಧರ್ಮವನ್ನು ಕಾಮದಿಂದಲಾದರೂ ಲೋಭದಿಂದಲಾದರೂ. ಭಯದಿಂದಲಾದರೂ ದ್ವೇಷದಿಂದಲಾದರೂ ಬಿಟ್ಟುಬಿಡುವನೋ ಅವನು ಶ್ರೇಯಸ್ಸನ್ನು ಪಡೆಯುವದಿಲ್ಲ॥೧೧॥ ಇಂತೆಂಬ ನಂದಾದಿಗಳ ವಚನವಂ ಕೇಳಿ ಶ್ರೀಕೃಷ್ಣನು ಇಂದ್ರನ ಗರ್ವವನ್ನು ಮುರಿಯಲೋಸುಗ ಇಂದ್ರನಿಗೆ ಸಿಟ್ಟೆಬ್ಬಿಸುವನಾಗಿ ತಂದೆಯಾದ ನಂದಗೋಪನಂ ಕುರಿತು ನುಡಿದನು ॥೧೨॥ ಎಲೈ ತಂದೆಯೇ! ಲೋಕದಲ್ಲಿ ಪ್ರಾಣಿಗಳು ಕರ್ಮದಿಂದಲೇ ಹುಟ್ಟುವರು. ಕರ್ಮದಿಂದಲೇ ಸಾಯುವರು ಸುಖದುಃಖಭಯಂಗಳನ್ನೂ ಕ್ಷೇಮವನ್ನೂ ಕೂಡ ಕರ್ಮದಿಂದಲೇ ಪಡೆಯುವರು ॥೧೩॥ ಆದರೆ "ಜಡವಾದ ಕೇವಲ ಕರ್ಮದಿಂದ,

ರ್ಮಣಾಂ । ಕರ್ತಾರಂಭಜತೆಸೋಪಿನಹ್ಯಕರ್ತುಃಪ್ರಭುರ್ಹಿಸಃ ॥೧೪॥ ಕಿಮಿಂದ್ರೇಣೇಹಭೂತಾನಾಂ ಸ್ವಸ್ವಕರ್ಮಾನುವರ್ತಿನಾಂ । ಅನೀಶೇನಾನ್ಯಥಾಕರ್ತುಂಸ್ವಭಾವವಿಹಿತಂನೃಣಾಂ ॥೧೫॥ ಸ್ವಭಾವ ತಂತ್ರೋಹಿಜನಸ್ಸ್ವಭಾವಮನುವರ್ತತೆ । ಸ್ವಭಾವಸ್ಥಮಿದಂಸರ್ವಂಸದೇವಾಸುರಮಾನುಷಂ॥೧೬॥ ದೇಹಾನುಚ್ಚಾವಚಾರ್ಜಂತುಃಪ್ರಾಪ್ಯೋತ್ಸೃಜತಿಕರ್ಮಣಾ । ಶತ್ರುರ್ಮಿತ್ರಉದಾಸೀನಃಕರ್ಮೈ ವಗುರುರೀಶ್ವರಃ ॥೧೭॥ ತಸ್ಮಾತ್ಸಂಪೂಜಯೆತ್ಕರ್ಮಸ್ವಭಾವಸ್ಸಸ್ವಕರ್ಮಕೃತ್ । ಅಂಜಸಾ ಯೆನವರ್ತೆತತದೇವಾಸ್ಯಹಿದೈವತಂ ॥೧೮॥ ಆಜೀವ್ಯೈಕತರಂಭಾವಂಯಸ್ತ್ವನ್ಯಮುಪಜೀವತಿ।ನ

---

ಯಾವವನಾದರೂ, ಅಸ್ತಿಚೇತ್-ಬೇರೆಯಾಗಿದ್ದಪಕ್ಷದಲ್ಲಿ, ಸೋಪಿ-ಆದೇವರೂಕೂಡ, ಕರ್ತಾರಂ-ಕರ್ಮಗಳಂಮಾಡಿದವನನ್ನೇ, ಭಜತೇ-ಪ್ರೀತಿಸುವನು(ಕರ್ಮಕ್ಕೆ ತಕ್ಕಫಲವಂಕೊಡುವನು)ಅಕರ್ತುಃ-ಕರ್ಮವನ್ನುಮಾಡದೆಯಿರುವವನಿಗೆ,(ಫಲವಂಕೊಡಲು) ಸಃ-ಆದೇವರು, ನಪ್ರಭುರ್ಹಿ-ಸಮರ್ಥನಲ್ಲವಷ್ಟೆ? ॥೧೪॥ ಸ್ವಭಾವವಿಹಿತಂ-ಸ್ವಭಾವ-ಸಹಜಶೀಲದಿಂದ, ವಿಹಿತಂ-ವಿಧಿಸಲ್ಪಟ್ಟಿರುವ,(ಯೋಗ್ಯವಾದ)ಸ್ವಂಸ್ವಂ-ತಮ್ಮತಮ್ಮ, ಕರ್ಮ-ಕೆಲಸವನ್ನು, ಅನುವರ್ತಿನಾಂ-ಅನುಸರಿಸುತಲಿರುವ, ನೃಣಾಂ-ಮನುಷ್ಯರಿಗೆ, ಅನ್ಯಥಾಕರ್ತುಂ-ಬೇರೆಬಗೆಯಾಗಿಮಾಡುವುದಕ್ಕೆ, ಅನೀಶೇನ-ಅಸಮರ್ಥನಾಗಿರುವ, ಇಂದ್ರೇಣ-ದೇವರಾಜನಿಂದ, ಇಹ-ಇಲ್ಲಿ, ಕಿಂ ಏನುಪ್ರಯೋಜನವಿದೆ ॥೧೫॥ಸ್ವಭಾವತಂತ್ರಃ-ಸ್ವಭಾವ-ಸಹಜಸಂಸ್ಕಾರವೇ, ತಂತ್ರಃ-ಸಿದ್ಧಿತ್ತವಾಗಿವುಳ್ಳ, ಜನಃ-ಲೋಕವು, ಸ್ವಭಾವಂ-ಸಹಜಶೀಲವನ್ನು, ಅನುವರ್ತತೇಹಿ-ಅನುವರ್ತಿಸಿಯಿರುವದಲ್ಲವೆ; ಸದೇವಾಸುರಮಾನುಷಂ-ದೇವತೆಗಳಿಂದಲೂದೈತ್ಯರಿಂದಲೂಮನುಷ್ಯರಿಂದಲೂಸಹಿತವಾದ, ಇದಂಸರ್ವಂ-ಈಪ್ರಪಂಚವೆಲ್ಲವೂ, ಸ್ವಭಾವಸ್ಥಂ-ಸ್ವ-ತನಗೆ, ಭಾವ-ಸತ್ತಾರೂಪವಾದಆತ್ಮನಲ್ಲಿಯೇ, ಸ್ಥಂ-ಕಲ್ಪಿತವಾಗಿರುವುದು ॥೧೬॥ ಜಂತುಃ-ಪ್ರಾಣಿಯು, ಕರ್ಮಣಾ-ಪುಣ್ಯಪಾಪಗಳಿಗೆಉತ್ಪಾದಕವಾದಕರ್ಮದಿಂದ, ಉಚ್ಚಾವಚಾನ್-ಅನೇಕಭೇದಗಳುಳ್ಳ, ದೇಹಾನ್-ಶರೀರಗಳನ್ನು, ಪ್ರಾಪ್ಯ-ಪಡೆದು, ಉತ್ಸೃಜತಿ-ಬಿಡುತಲಿರುವನು. ಶತ್ರುಃ-ಹಗೆ, ಮಿತ್ರಂ-ಸ್ನೇಹಿತನು-ಉದಾಸೀನಃ-ಮಧ್ಯಸ್ಥನು, ಗುರುಃ-ಹಿರಿಯನು ಈಶ್ವರಃ-ಒಡೆಯನುಕೂಡ, ಕರ್ಮೈವ-ಕರ್ಮವೇ॥೧೭॥ತಸ್ಮಾತ್-ಆಕಾರಣದಿಂದ, ಕರ್ಮ-ಸಹಜಕರ್ಮವನ್ನೇ, ಪೂಜಯೇತ್-ಪೂಜಿಸಬೇಕು,(ಸನ್ಮಾನಿಸಬೇಕು) ಸ್ವಭಾವಃ-ಸಹಜಸಂಸ್ಕಾರವೇ, ಅಂಜಸಾ-ಬೇಗನೆ, ಸ್ವಸ್ವಕರ್ಮಕೃತ್-ತನ್ನತನ್ನಕೆಲಸವನ್ನುಮಾಡುತಲಿರುವುದು. ಯಃ-ಯಾವಪುರುಷನು, ಯೇನ-ಯಾವುದರಿಂದ, ವರ್ತೇತ-ಜೀವಿಸುವನೋ, ತದೇವ-ಆಜೀವನಸಾಧನವೇ, ಅಸ್ಯ-ಅವನಿಗೆ, ದೈವತಂಹಿ-ದೇವರಲ್ಲವೇ! ॥೧೮॥ ಅಸತೀ-ಪತಿವ್ರತೆಯಲ್ಲದ, ನಾರೀ-ಹೆಂಗಸು, ಜಾರಂ-ವಿಂಡನನ್ನು, ಯಥಾ-ಹೇಗೋ, ತಥಾ-ಹಾಗೆ, ಯಃ-ಯಾವಪುರುಷನು, ಏಕತರಂಭಾವಂ-ಯಾವುದೋಒಂದಾದಸ್ವಭಾವ

---

ಫಲವು ಹೇಗಾಗುವುದು" ಎನ್ನುವಿಯೋ, ಕರ್ಮಗಳಿಗೆ ಫಲಗಳನ್ನು ಚೇತನನಾದ ಈಶ್ವರನೇಕೊಡುವನು. ಆದರೆ ಕರ್ಮಮಾಡಿದವರಿಗೆ ಫಲಕೊಡುವನೇಹೊರತು ಕರ್ಮವಂ ಮಾಡದವನಿಗೆ ಫಲಕೊಡುವುದಿಲ್ಲ॥೧೪ ಆದುದರಿಂದ ಪ್ರಾಣಿಗಳು ತಮ್ಮತಮ್ಮ ಕರ್ಮಗಳಿಗೆ ತಕ್ಕಂತೆ ತಪ್ಪದೆಉಂಟಾಗುವ ಫಲಗಳನನುಭವಿಸುವರು. ಅವರಶುಭಾಶುಭಗಳನ್ನು ತಪ್ಪಿಸುವದಕ್ಕೆ ಸಮರ್ಥನಾಗದೇ ಇರುವ ಇಂದ್ರನಿಂದ ಆಗತಕ್ಕದ್ದೇನಿದೆ? [ನಾವುಹೇಗೆ ಕರ್ಮಬದ್ಧರೋ ಹಾಗೆಯೇಇಂದ್ರನೂ ಕರ್ಮಬದ್ಧನಾದುದರಿಂದ ಅವನಿಂದ ನಮಗಾಗತಕ್ಕದ್ದೇನೂ ಇಲ್ಲವು ॥೧೫॥ ಮತ್ತುಲೋಕದಲ್ಲಿ ಸರ್ವಪ್ರಾಣಿಗಳೂ ಪೂರ್ವಕರ್ಮವಾಸನೆಯನ್ನೇ ಅನುವರ್ತಿಸಿ ಅದಕ್ಕನುಸಾರವಾಗಿ ಕರ್ಮವನ್ನೇ ಆಚರಿಸುವರು. ದೇವತೆಗಳು ಅಸುರರು ಮನುಷ್ಯರು ಇವರಿಂ ಕೂಡಿದ ಪ್ರಪಂಚವೆಲ್ಲವೂ ಪೂರ್ವಕರ್ಮಾನುಸಾರವಾಗಿಯೇ ಪ್ರವರ್ತಿಸುತಿರುವುದು ॥೧೬॥ ಮತ್ತು ಪ್ರಾಣಿಗಳು ಕರ್ಮದಿಂದಲೇ ಉತ್ಕೃಷ್ಟ ನಿಕೃಷ್ಟಂಗಳಾದ ಅನೇಕವಿಧ ದೇಹಂಗಳನೆಯ್ದಿ ಪುನಶ್ಚಬಿಡುವರು. ಆದುದರಿಂದ ಪ್ರಾಣಿಗಳಿಗೆ ಶತ್ರುವು ಮಿತ್ರನು ಉದಾಸೀನನು ಗುರುವು ಈಶ್ವರನು ಸಹ ಕರ್ಮವೇಸರಿ॥೧೭ ಆದುದರಿಂದ ಸ್ವಭಾವಸಿದ್ಧವಾದ ತಮ್ಮಕರ್ಮವಾಸನೆಯನ್ನೇ ಆಶ್ರಯಿಸಿರುವನಾಗಿ ಪುರುಷನು ಸ್ವಭಾವಸಿದ್ಧವಾದ ತನ್ನಕರ್ಮವನ್ನೇ ಆಚರಿಸಿ ಕರ್ಮವನ್ನೇ ಬಹುಮಾನಂ ಗೆಯ್ಯಲ್ತಕ್ಕುದು. ॥೧೮॥ ಆದುದ

ತಸ್ಮಾದ್ದ್ವಂದತೇಕ್ಷೇಮಂಜಾರಂನಾರ್ಯಸತೀಯಥಾ ॥೧೯॥ ವರ್ತೇತಬ್ರಹ್ಮಣಾವಿಪ್ರೋರಾಜನ್ಯೋರಕ್ಷಯಾಭುವಃ । ವೈಶ್ಯಸ್ತುವಾರ್ತಯಾಜೀವೇಚ್ಛೂದ್ರಸ್ತುದ್ವಿಜಸೇವಯಾ ॥೨೦॥ ಕೃಷಿವಾಣಿಜ್ಯಗೋರಕ್ಷಾಃಕುಸೀದಂತುರ್ಯಮುಚ್ಯತೇ। ವಾರ್ತಾಚತುರ್ವಿಧಾತತ್ರವಯಂಗೋವೃತ್ತಯೋಽನಿಶಂ ॥೨೧॥ ಸತ್ವಂರಜಸ್ತಮಇತಿಸ್ಥಿತ್ಯುತ್ಪತ್ತ್ಯಂತಹೇತವಃ । ರಜಸೋತ್ಪದ್ಯತೇವಿಶ್ವಮನ್ಯೋನ್ಯಂವಿವಿಧಂಜಗತ್ ॥೨೨॥ ರಜಸೋತ್ಪಾದಿತಾಮೇಘಾವರ್ಷಂತ್ಯಂಬೂನಿಸರ್ವತಃ । ಪ್ರಜಾಸ್ತೈರೇವಸಿದ್ಧ್ಯಂತಿಮಹೇಂದ್ರಃಕಿಂಕರಿಷ್ಯತಿ ॥೨೩॥ ನನಃಪುರೋಜನಪದಾನಗ್ರಾಮಾನಗೃಹಾವಯಂ ।ವನೌಕಸಸ್ತಾತನಿತ್ಯಂ

---

ವನ್ನು, ಆಜೀವ್ಯ-ಅನುಸರಿಸಿಬದುಕಿ,ಅನ್ಯಂ-ಇತರಸ್ವಭಾವವನ್ನೂ, ಉಪಜೀವತಿ-ಸೇರಿಬದುಕುವನೋ, ತಸ್ಮಾತ್-ಆಯಿತರ ಸ್ವಭಾವದದೆಸೆಯಿಂದ, ಕ್ಷೇಮಂ-ರಕ್ಷಣವನ್ನು, ನವಿಂದತೇ-ಪಡೆಯಲರಿಯನು. ॥೧೯॥ವಿಪ್ರಃ-ಬ್ರಾಹ್ಮಣನು, ಬ್ರಹ್ಮಣಾ-ವೇದೋಕ್ತಕರ್ಮದಿಂದ, ವರ್ತೇತ-ಜೀವಿಸುತಲಿರಬೇಕು. ರಾಜನ್ಯಃ-ಪಟ್ಟಾಭಿಕ್ತನಾದಘೋರೆಯು, ಭುವಃ-ಭೂಮಿಯನ್ನು, ರಕ್ಷಯಾ-ಪಾಲಿಸುವುದರಿಂದ, ವರ್ತೇತ-ಜೀವಿಸುತಲಿರುವನು ವೈಶ್ಯಸ್ತು-ವೈಶ್ಯಜಾತಿಯವನಾದರೋ, ವಾರ್ತಯಾ-ಕೃಷಿಗೋಪಶುವಾಣಿಜ್ಯವೃತ್ತಿಯಿಂದ, ಜೀವೇತ್-ಬದುಕಬೇಕು, ಶೂದ್ರಸ್ತು-ಶೂದ್ರನಾದರೋ, ದ್ವಿಜಸೇವಯಾ-ದ್ವಿಜ-ಬ್ರಹ್ಮಕ್ಷತ್ರಿಯವೈಶ್ಯರನ್ನು, ಸೇವಯಾ-ಉಪಚರಿಸುವವೃತ್ತಿಯಿಂದ, ಜೀವೇತ್-ಬದುಕಬೇಕು ॥೨೦॥ವಾರ್ತಾ-ವೈಶ್ಯಜೀವನವು, ಚತುರ್ವಿಧಾ-ಳಬಗೆಯುಳ್ಳದ್ದು, ಕೃಷಿವಾಣಿಜ್ಯಗೋರಕ್ಷಾಃ-ಕೃಷಿ-ನೆಲವನ್ನು ತುತ್ತುಬೆಳೆಯಿಡುವುದು, ವಾಣಿಜ್ಯ-ಪದಾರ್ಥಗಳನ್ನು ಕೊಂಡು ಮಾರುವುದು, ಗೋರಕ್ಷಾಃ-ಪಶುಗಳನ್ನು ಪಾಲಿಸುವುದು, ತುರ್ಯಂ-ನಾಲ್ಕನೆಯದು ಕುಸೀದಂ-ಸಾಲವಿತ್ತುಬಡ್ಡಿಯಂಪಡೆಯುವುದು. ಎಂದು,ಉಚ್ಯತೇ-ಹೇಳಲ್ಪಡುವುದು, ತತ್ರ-ಅವುಗಳಲ್ಲಿ, ವಯಂ-ನಾವು, ಅನಿಶಂ-ಯಾವಾಗಲೂ,ಗೋವೃತ್ತಯಃ-ಪಶುಪಾಲನವೇಜೀವನೋಪಾಯವಾಗಿವುಳ್ಳವರು॥೨೧॥ ಸತ್ವಂ-ರಜಃ-ತಮಃ-ಇತಿ-ಸತ್ವ, ರಜಸ್ಸು, ತಮಸ್ಸುಗಳೆಂಬು (ವರಸೆಯಾಗಿ)ಸ್ಥಿತ್ಯುತ್ಪತ್ತ್ಯಂತಹೇತವಃ-ಸ್ಥಿತಿ-ರಕ್ಷಣಕ್ಕೂ, ಉತ್ಪತ್ತಿ-ಸೃಷ್ಟಿಗೂ, ಅಂತ-ಸಂಹಾರಕ್ಕೂ, ಹೇತವಃ-ಕಾರಣಗಳಾಗಿರುವವು. ವಿವಿಧಂ-ಹಲವುಬಗೆಯಾದ, ವಿಶ್ವಂ-ಪ್ರಪಂಚವು, ರಜಸಾ-ರಜೋಗುಣದಿಂದ, ಅನ್ಯೋನ್ಯಂ-ಪರಸ್ಪರವಾಗಿಸೇರಿಪ್ಪನಿಸಿ, ಜಗತ್-ಜಗದ್ರೂಪವಾಗಿ, ಉತ್ಪದ್ಯತೇ-ಹುಟ್ಟುವುದು॥೨೨॥ ರಜಸಾ-ರಜೋಗುಣದಿಂದ, ಉತ್ಪಾದಿತಾಃ-ಹುಟ್ಟಿಸಲ್ಪಟ್ಟ, ಮೇಘಾಃ-ಮೋಡಗಳು, ಅಂಬೂನಿ-ನೀರುಗಳನ್ನು, ಸರ್ವತಃ-ಎಲ್ಲಕಡೆಗಳಲ್ಲಿಯೂ, ವರ್ಷಂತಿ-ಮಳೆಸುರಿಸುತಲಿವೆ, ಪ್ರಜಾಃ-ಪ್ರಾಣಿಗಳು, ತೈರೇವ-ಆಮೇಘಗಳಿಂದಲೇ, ಅಥವಾಆನೀರುಗಳಿಂದಲೇ, ಸಿದ್ಧ್ಯಂತಿ-ಫಲವಂಪಡೆಯುತಲಿರುವರು. ಮಹೇಂದ್ರಃ-ದೇವರಾಜನು, ಕಿಂಕರಿಷ್ಯತಿ-ಏನುಮಾಡಹೋಗುವನು ॥೨೩॥ನಃ-ನಮಗೆ, ಪುರಃ-ಪಟ್ಟಣಗಳು, ನ-ಇಲ್ಲವು, ಜನ

---

ರಿಂದ ಪುರುಷನು ಅನಾಯಾಸವಾಗಿ ಯಾವುದರಿಂದ ಜೀವಿಸುವನೋ ಆವಸ್ತುವೇ ಅವನಿಗೆ ದೇವತೆಯಾಗಿರುವುದು ಅಂತಾಜೀವನಕ್ಕೆ ಮುಖ್ಯಸಾಧನವಾದ ದೇವತೆಯಂಬಿಟ್ಟು ಯಾವವನು ಅನ್ಯದೇವತೆಯಂ ಭಜಿಸುವನೋ ಆಪುರುಷನು ಹಾದರಗಿತ್ತಿಯು ಪರಪುರುಷನಿಂದ ಕ್ಷೇಮವಂಪಡೆಯದೆ ಹೋಗುವಹಾಗೆ ರಕ್ಷಣವಂಪಡೆಯಲಾರನು ॥೧೯॥ ಬ್ರಾಹ್ಮಣನು ವೇದಾಧ್ಯಯನಾದಿ ಷಟ್ಕರ್ಮಗಳಿಂದ ಜೀವಿಸಬೇಕು. ಕ್ಷತ್ರಿಯನುಭೂಪಾಲನದಿಂದ ಜೀವಿಸಬೇಕು. ವೈಶ್ಯನು ಕ್ರಯವಿಕ್ರಯಾದಿ ವ್ಯಾಪಾರದಿಂದ ಜೀವಿಸಬೇಕು, ಶೂದ್ರನು ಬ್ರಾಹ್ಮಣಾದಿ ವರ್ಣತ್ರಯದ ಸೇವೆಯಿಂದ ಜೀವಿಸಬೇಕು ॥೨೦॥ ಮತ್ತು, ಕೃಷಿಯು, ಕ್ರಯವಿಕ್ರಯವ್ಯಾಪಾರವು, ಗೋವುಗಳಂ ರಕ್ಷಿಸುವಿಕೆ, ಧನವು ಬಡ್ಡಿಗಿತ್ತು ಅದರಿಂದ ಜೀವಿಸುವಿಕೆ, ಈ ನಾಲ್ಕು ಬಗೆಯಾಗಿರುವ ವೈಶ್ಯಜೀವನೋಪಾಯಗಳಲ್ಲಿ ನಾವು ಪಶುಪಾಲಕರಾಗಿ ಜೀವಿಸುತ್ತಿರುವೆವು ॥೨೧॥ ಮತ್ತು ಸತ್ವರಜಸ್ತಮೋಗುಣಗಳು ಉತ್ಪತ್ತಿ ಸ್ಥಿತಿಲಯಂಗಳಿಗೆ ಕ್ರಮವಾಗಿ ಕಾರಣಗಳಾಗಿರುವವು. ಅವುಗಳಲ್ಲಿ ರಜೋಗುಣದಿಂದ ಹಲವುಬಗೆಯಾದ ಜಗತ್ತೆಲ್ಲವೂ ಸ್ತ್ರೀಪುರುಷ ಸಂಯೋಗದಿಂದಲೂ ಹುಟ್ಟುವುದು ॥೨೨॥ ಮತ್ತು ಅದೇರೀತಿಯಿಂದ ಮೇಘಂಗಳೂಕೂಡ ರಜೋಗುಣದಿಂದಲೇ ಪ್ರೇರಿಸಲ್ಪಟ್ಟವಾಗಿ ಸಮುದ್ರ ಬೆಟ್ಟ ಭೂಮಿ ಕಾಡು ಮುಂತಾದ ಸರ್ವಸ್ಥಲಗಳಲ್ಲಿಯೂ ನೀರನ್ನು ಮಳೆಸುರಿಸುವವು. ಆಮೇಘಂಗಳಿಂದ ಪ್ರಜೆಗಳುಜೀವಿಸುವವು ಹೀಗಿರುವಲ್ಲಿ ಇಂದ್ರನೇನುಮಾಡುವನು ॥೨೩॥ ಎಲೈ ತಂದೆಯೇ! ನಮಗೆ ಪಟ್ಟಣಗಳೂ ಗ್ರಾಮಗ

ವನಶೈಲನಿವಾಸಿನಃ ||೨೪|| ತಸ್ಮಾದ್ಗವಾಂ ಬ್ರಾಹ್ಮಣಾನಾಮದ್ರೇಶ್ಚಾರಭ್ಯತಾಂ ಮಖಃ | ಯ ಇಂದ್ರ
ಯಾಗಸಂಭಾರಾಸ್ತೈರಯಂ ಸಾಧ್ಯತಾಂ ಮಖಃ ||೨೫|| ಪಚ್ಯಂತಾಂ ವಿವಿಧಾಃ ಪಾಕಾಃ ಸೂಪಾಂತಾಃ
ಪಾಯಸಾದಯಃ | ಸಂಯಾವಾಪೂಪಶಷ್ಕುಲ್ಯಃ ಸರ್ವದೋಹಶ್ಚ ಗೃಹ್ಯತಾಂ ||೨೬|| ಹೂಯಂತಾ
ಮಗ್ನಯಃ ಸಮ್ಯಗ್ಬ್ರಾಹ್ಮಣೈರ್ಬ್ರಹ್ಮವಾದಿಭಿಃ | ಅನ್ನಂ ಬಹುವಿಧಂ ದೇಯಂ ತೇಭ್ಯೋ ಧೇನುದಕ್ಷಿ
ಣಾಃ ||೨೭|| ಅನ್ಯೇಭ್ಯಶ್ಚಾಶ್ವಚಂಡಾಲಪತಿತೇಭ್ಯೋ ಯಥಾರ್ಹತಃ | ಯವಸಂ ಚ ಗವಾಂ ದತ್ವಾ ಗಿರಯೇ
ದೀಯತಾಂ ಬಲಿಃ ||೨೮|| ಸ್ವಲಂಕೃತಾ ಭುಕ್ತವಂತಃ ಸ್ವನುಲಿಪ್ತಾಃ ಸುವಾಸಸಃ | ಪ್ರದಕ್ಷಿಣಂ ಚ ಕು

---

ಪದಾಃ-ದೇಶಗಳು, ನ-ಇಲ್ಲವು, ಗ್ರಾಮಾಃ-ಹಳ್ಳಿಗಳು, ನ-ಇಲ್ಲ, ಗೃಹಾಃ-ಮನೆಗಳೂ, ನ-ಇಲ್ಲವು, ತಾತ-ತಂದೆಯೇ! ವಯಂ-ನಾವು, ವನೌಕಸಃ-ಕಾಡೇ ಮನೆಯಾಗಿವುಳ್ಳವರು ಆದ್ದರಿಂದಲೇ, ನಿತ್ಯಂ-ಯಾವಾಗಲೂ, ವನಶೈಲನಿವಾಸಿನಃ-ವನ-ತೋಪುಗಳಲ್ಲಿಯೂ, ಶೈಲ-ಗುಡ್ಡಗಳಲ್ಲಿಯೂ, ನಿವಾಸಿನಃ-ಇರುವವರು ||೨೪|| ತಸ್ಮಾತ್-ಆ ಕಾರಣದಿಂದ, ಗವಾಂ-ಗೋವುಗಳ, ಬ್ರಾಹ್ಮಣಾನಾಂ-ವಿಪ್ರರ, ಅದ್ರೇಶ್ಚ-ಗೋವರ್ಧನಪರ್ವತದ, ಮಖಃ-ಪೂಜೆಯು, ಆರಭ್ಯತಾಂ-ಉಪಕ್ರಮಿಸಲ್ಪಡಲಿ. ಅಯಂ ಮಖಃ-ಈ ಯಜ್ಞವೂ, ಇಂದ್ರಯಾಗಸಂಭಾರಾಃ-ಇಂದ್ರಯಾಗದ ಸಾಮಗ್ರಿಗಳೂ, ಯೇ-ಯಾವವೋ, ತೈರೇವ-ಅವುಗಳಿಂದಲೇ, ಸಾಧ್ಯತಾಂ-ಪೂರಯಿಸಲ್ಪಡಲಿ ||೨೫|| ಸಂಯಾವಾಪೂಪಶಷ್ಕುಲ್ಯಃ-ಸಂಯಾವ-ಗುಳಪಾಪಟಿ, ಲಡ್ಡು, ಮೊದಲಾದ ಗೋಧುಮಭಕ್ಷ್ಯಗಳೂ, ಅಪೂಪ-ಕಜ್ಜಾಯಗಳೂ, ಶಷ್ಕುಲ್ಯಃ-ಚಕ್ಕುಲಿಗಳೂ, ಪಾಯಸಾದಯಃ-ಪರಮಾನ್ನವೇ ಮೊದಲಾಗಿವುಳ್ಳ, ಸೂಪಾಂತಾಃ-ಹೆಸರತೊವ್ವೆಯೇ ಕೊನೆಯಾಗಿವುಳ್ಳ, ವಿವಿಧಾಃ-ಹಲವು ಬಗೆಗಳುಳ್ಳ, ಪಾಕಾಃ-ಪಕ್ವವಾಗತಕ್ಕ ಪದಾರ್ಥಗಳು, ಪಚ್ಯಂತಾಂ-ಪಕ್ವವಾಗುವಂತೆ ಸುಡಲ್ಪಡಲಿ. ಸರ್ವದೋಹಶ್ಚ-ಎಲ್ಲ ಆಕಳುಗಳು ಕರೆಯಲ್ಪಟ್ಟ ಹಾಲು ಕೂಡ, ಗೃಹ್ಯತಾಂ-ತೆಗೆದುಕೊಳ್ಳಲ್ಪಡಲಿ ||೨೬|| ಬ್ರಹ್ಮವಾದಿಭಿಃ-ವೇದಗಳನ್ನು ಪಠಿಸುತಲಿರುವ, ಬ್ರಾಹ್ಮಣೈಃ-ವಿಪ್ರರಿಂದ, ಅಗ್ನಯಃ-ಅಗ್ನಿಹೋತ್ರಗಳು, ಸಮ್ಯಕ್-ಚನ್ನಾಗಿ, ಹೂಯಂತಾಂ-ಹೋಮಮಾಡಲ್ಪಡಲಿ. ತೇಭ್ಯಃ-ಆ ಬ್ರಾಹ್ಮಣರಿಗೆ, ವಃ-ನಿಮ್ಮಿಂದ, ಬಹುವಿಧಂ-ಹಲವು ಬಗೆಯಾದ, ಅನ್ನಂ-ಆಹಾರದ್ರವ್ಯವೂ, ಧೇನುದಕ್ಷಿಣಾಶ್ಚ-ಧೇನು-ಆಕಳುಗಳೂ, ದಕ್ಷಿಣಾಶ್ಚ-ಧನಗಳೂ, ದೇಯಂ-ಕೊಡಲ್ಪಡತಕ್ಕದ್ದು ||೨೭|| ಅನ್ಯೇಭ್ಯಶ್ಚ-ಇತರರಿಗೂ, ಶ್ವಚಂಡಾಲಪತಿತೇಭ್ಯಶ್ಚ-ಶ್ವ-ನಾಯಿಗಳಿಗೂ, ಚಂಡಾಲ-ಹೊಲೆಮಾದಿಗರಿಗೂ, ಪತಿತೇಭ್ಯಶ್ಚ-ಭ್ರಷ್ಟರಿಗೂ, ಯಥಾರ್ಹತಃ-ಅವರವರ ಯೋಗ್ಯತೆಗೆ ತಕ್ಕಂತೆ, ದೇಯಂ-ಕೊಡತಕ್ಕದ್ದನ್ನು ಕೊಡಬೇಕು. ಗವಾಂ-ಗೋವುಗಳಿಗೆ, ಯವಸಂಚ-ಹುಲ್ಲನ್ನೂ, ದತ್ವಾ-ಕೊಟ್ಟು, ಗಿರಯೇ-ಗೋವರ್ಧನಾದ್ರಿಗೆ, ಬಲಿಃ-ಅನ್ನದ ರಾಶಿ ಮೊದಲಾದ ಕಾಣಿಕೆಯು, ದೀಯತಾಂ-ಕೊಡಲ್ಪಡಲಿ ||೨೮|| ಸ್ವಲಂಕೃತಾಃ-ಚನ್ನಾಗಿ ಸಿಂಗರಿಸಲ್ಪಟ್ಟವರೂ, ಭುಕ್ತವಂತಃ-ಊಟಮಾಡಿದವರೂ, ಸ್ವನುಲಿಪ್ತಾಃ-ಚನ್ನಾಗಿ ಗಂಧ ಬಳಿಯಲ್ಪಟ್ಟವರೂ, ಸುವಾಸಸಃ-ಉತ್ತಮವಸ್ತ್ರಗಳುಳ್ಳವರೂ, ಆಗಿ, ಗೋ

---

ಳೂ ದೇಶಗಳೂ ಮನೆಗಳೂ ಇಲ್ಲವಾದುದರಿಂದ ನಾವು ವನವಾಸಿಗಳಾಗಿರುವೆವು ಯಾವಾಗಲೂ ಬೆಟ್ಟಗಳಲ್ಲಿಯೇ ಇರುವೆವು ಆದುದರಿಂದ ನಮ್ಮ ಯೋಗಕ್ಷೇಮಕ್ಕೆ ಬೆಟ್ಟಮುಂತಾದ್ದು ಕಾರಣವೇ ಹೊರತು ಇಂದ್ರನಲ್ಲವಷ್ಟೆ ||೨೪ ಈ ನಿಮಿತ್ತದಿಂದ ಇಂದ್ರಯಾಗಕ್ಕೆ ನೀವು ಕಲ್ಪಿಸಿರುವ ಸಾಮಗ್ರಿಗಳಿಂದಲೇ ಬ್ರಾಹ್ಮಣರನ್ನೂ ಗೋವುಗಳನ್ನೂ ಗೋವರ್ಧನಪರ್ವತವನ್ನೂ ಕುರಿತು ಯಾಗವು ಆರಂಭಿಸಲ್ಪಡಲಿ ||೨೫|| ಹೇಗೆಂದರೆ ಪರಮಾನ್ನವೇ ಮೊದಲಾದ ತೊವ್ವೆಯೇ ಕಡೆಯಾಗಿವುಳ್ಳ ಹಲವು ಭೋಜ್ಯಪದಾರ್ಥಂಗಳು ಪಾಕಂಗೆಯ್ಯಲ್ಪಡಲಿ. ಮತ್ತು ಗೋಧಿವೇ ಮೊದಲಾದ ಧಾನ್ಯಗಳಿಂದ ಬಹುಪ್ರಕಾರವಾಗಿ ರಚಿಸಲ್ಪಡುವ ಚಕ್ಕುಲಿ ಕಜ್ಜಾಯ ಮೊದಲಾದ ಭಕ್ಷ್ಯಗಳು ಪಾಕಂಗೆಯ್ಯಲ್ಪಡಲಿ. ಹಾಲುಮುಂತಾದ ಸಾಮಗ್ರಿಗಳೆಲ್ಲವೂ ಸಂಪಾದಿಸಲ್ಪಡಲಿ ||೨೬|| ಮತ್ತು ವೇದಾಧ್ಯಯನ ಸಂಪನ್ನರಾದ ಬ್ರಾಹ್ಮಣರಿಂದ ಅಗ್ನಿಗಳಲ್ಲಿ ವಿಧ್ಯುಕ್ತವಾಗಿ ಹೋಮಂಗೆಯ್ಯಲ್ಪಡಲಿ, ಮತ್ತು ಆ ಬ್ರಾಹ್ಮಣರಿಗೋಸುಗ ಬಹುಪ್ರಕಾರವಾದ ಅನ್ನವೂ ಗೋವುಗಳೂ ದಕ್ಷಿಣಾದ್ರವ್ಯಂಗಳೂ ಕೂಡ ನಿಮ್ಮಿಂದ ಕೊಡಲ್ಪಡಲಿ ||೨೭|| ಮತ್ತು ಇತರರಾದ ಶುನಕಚಂಡಾಲಪತಿತರಿಗೂ ಸಹ ಅವರವರ ಯೋಗ್ಯತಾನುಸಾರವಾಗಿ ಅನ್ನಾದಿಗಳನ್ನಿತ್ತು ಗೋವುಗಳಿಗೆ ಹೊಸಹುಲ್ಲಂ ಹಾಕಿ ಗೋವರ್ಧನಪರ್ವತಕ್ಕೆ ಪೂಜೆಮಾಡಲ್ಪಡಲಿ ||೨೮||

ರುತ್ತಗೋವಿಪ್ರಾನಲಪರ್ವತಾನ್ ||೨೯|| ಎತನ್ಮಮಮತಂತಾತಕ್ರಿಯತಾಂಯದಿರೋಚತೇ | ಅಯಂ
ಗೋಬ್ರಾಹ್ಮಣಾದ್ರೀಣಾಂಮಹ್ಯಂಚದಯಿತೋಮಖಃ |೩೦| ಶ್ರೀಶುಕಃ| ಕಾಲಾತ್ಮನಾಭಗವತಾಶಕ್ರ
ದರ್ಪಜಿಘಾಂಸಯಾ | ಪ್ರೋಕ್ತಂನಿಶಮ್ಯನಂದಾದ್ಯಾಸ್ಸಾಧ್ವಗೃಹ್ಣಂತತದ್ವಚಃ |೩೧| ತಥಾಚವ್ಯ
ದಧುಸ್ಸರ್ವಂಯಥಾಹಮಧುಸೂದನಃ | ವಾಚಯಿತ್ವಾಸ್ವಸ್ತ್ಯಯನಂತದ್ದ್ರವ್ಯೇಣಗಿರಿದ್ವಿಜಾನ್|
ಉಪಹೃತ್ಯಬಲೀನ್ಸರ್ವಾನಾದೃತಾಯವಸಂಗವಾಂ | ಗೋಧನಾನಿಪುರಸ್ಕೃತ್ಯಗಿರಿಂಚಕ್ರುಃಪ್ರ
ದಕ್ಷಿಣಂ |೩೩| ಅನಾಂಸ್ಯನಡುದ್ಯುಕ್ತಾನಿತೇಚಾರುಹ್ಯಸ್ವಲಂಕೃತಾಃ | ಗೋಪ್ಯಶ್ಚಕೃಷ್ಣವೀರ್ಯಾ

---

ಗೋವಿಪ್ರಾನಲಪರ್ವತಾಂಶ್ಚ-ಗೋವುಗಳನ್ನೂ, ವಿಪ್ರ-ಬ್ರಾಹ್ಮಣರನ್ನೂ, ಅನಲ-ಅಗ್ನಿಗಳನ್ನೂ, ಪರ್ವತಾನ್-ಗೋವರ್ಧನಾ ದ್ರಿಯನ್ನೂ, ಪ್ರದಕ್ಷಿಣಂ-ನಿಮಗೆಬಲಗಡೆಗಿರುವುದನ್ನಾಗಿ, ಕುರುತ-ಮಾಡಿರಿ||೨೯||ತಾತ-ತಂದೆಯೇ! ಏತತ್-ಇದು, ಮಮ-ನನಗೆ, ಮತಂ-ಒಪ್ಪಿಗೆಯಾಗಿರುವುದು. ರೋಚತೇಯದಿ-ಸರಿಯೆಂದುನಿಮಗೆ ರುಚಿತೋರಿದರೆ, ಕ್ರಿಯತಾಂ-ಮಾಡಲ್ಪಡಲಿ ಅಯಂಮಖಃ-ಈಯಜ್ಞವು, ಗೋಬ್ರಾಹ್ಮಣಾದ್ರೀಣಾಂ-ಗೋವುಗಳಿಗೂವಿಪ್ರರಿಗೂಪರ್ವತಕ್ಕೂ,ಮಹ್ಯಂಚ-ನನಗೂಕೂಡ ದಯಿತಂ-ಪ್ರಿಯವಾಗಿರುವುದು ||೩೦||[ ಶುಕವಚನವು ]ನಂದಾದ್ಯಾಃ-ನಂದಗೋಪನೇಮೊದಲಾದವರು, ಕಾಲಾತ್ಮನಾ-ಕಾಲ ಸ್ವರೂಪನಾದ, ಭಗವತಾ-ಕೃಷ್ಣನಿಂ, ಶಕ್ರದರ್ಪಜಿಘಾಂಸಯಾ-ಶಕ್ರ-ಇಂದ್ರನ, ದರ್ಪ-ಗರ್ವವನ್ನು, ಜಿಘಾಂಸಯಾ-ನಾಶಮಾಡಬೇಕೆಂಬಯಿಚ್ಛೆಯಿಂದ, ಪ್ರೋಕ್ತಂ-ಹೇಳಲ್ಪಟ್ಟ, ತದ್ವಚಃ-ಆಮಾತನ್ನು, ನಿಶಮ್ಯ-ಕೇಳಿ, ಸಾಧು-ಚನ್ನಾಗಿರುವುದೆಂದು, ಅಗೃಹ್ಣಂತ-ಅಂಗೀಕರಿಸಿದರು ||೩೧|| ಮಧುಸೂದನಃ-ಮಧು-ಮಧ್ವಾದಿದೈತ್ಯರನ್ನು, ಸೂದನಃ-ನಾಶಮಾಡಿದವಿ ಷ್ಣುವಾದಕೃಷ್ಣನು, ಯಥಾ-ಹೇಗೆ, ಆಹ-ಹೇಳಿದನೋ, ಸ್ವಸ್ತ್ಯಯನಂ-ಪುಣ್ಯಾಹವನ್ನು, ವಾಚಯಿತ್ವಾ-ಬ್ರಾಹ್ಮಣರಿಂದಪ ಠನಮಾಡಿಸಿ, ತದ್ರವ್ಯೇಣ-ಆಯಿಂದ್ರಯಾಗದಸಾಮಗ್ರಿಯಿಂದ, ಗಿರಿದ್ವಿಜಾನ್-ಗೋವರ್ಧನಾದ್ರಿಯನ್ನೂಬ್ರಾಹ್ಮಣರನ್ನೂ ಕುರಿತು, ತಥಾಚ-ಹಾಗೆಯೇ, ಸರ್ವಂ-ಎಲ್ಲವನ್ನೂ, ವ್ಯದಧುಃ-ಮಾಡಿದರು ||೩೨|| ಬಲೀನ್ಸರ್ವಾನ್-ಕಾಣಿಕೆಗಳೆಲ್ಲವನ್ನೂ ಉಪಹೃತ್ಯ-ಸಮರ್ಪಿಸಿ, ಗವಾಂ-ಗೋವುಗಳಿಗೆ, ಯವಸಂ-ಹಸಿಯಹುಲ್ಲನ್ನು, ಕೊಟ್ಟು, ಆದೃತಾಃ-ಆದರದಿಂಕೂಡಿದವ ರಾಗಿ, ಗೋಧನಾನಿ-ಧನರೂಪವಾಗಿರುವಗೋವುಗಳನ್ನು, ಪುರಸ್ಕೃತ್ಯ-ಮುಂದಿಟ್ಟುಕೊಂಡು, ಗಿರಿಂ-ಗೋವರ್ಧನಾದ್ರಿಯ ನ್ನು, ಪ್ರದಕ್ಷಿಣಂಚಕ್ರುಃ-ಬಲನೊಂಡರು ||೩೩|| ಸದ್ವಿಜಾಶಿಷಃ-ಬ್ರಾಹ್ಮಣರಹರಕೆಗಳಿಂದಸಹಿತರಾದ, ತೇಚ-ಆಗೋಪಾಲ

---

ಆಮೇಲೆ ಎಲ್ಲರೂ ಭೋಜನಮಗೆಯ್ದವರಾಗಿ ದಿವ್ಯವಸ್ತ್ರಗಳಂ ಧರಿಸಿಕೊಂಡು ದಿವ್ಯಗಂಧಾನುಲೇಪನಂಗೆಯ್ದ ವರಾಗಿ ಗೋವುಗಳನ್ನೂ ಬ್ರಾಹ್ಮಣರನ್ನೂ ಅಗ್ನಿಗಳನ್ನೂ ಗೋವರ್ಧನಪರ್ವತವನ್ನೂ ಸಹ ನೀವೆಲ್ಲರೂಪ್ರ ದಕ್ಷಿಣಂ ಗೆಯ್ವರಾಗಿ ಪ್ರಾರ್ಥನಮಂಗೆಯಿರಿ |೨೯||ಎಲೈತಂದೆಯಾದ ನಂದಗೋಪನೇ! ಅಂತಾ ಈಯಾಗವುಗೋ ವುಗಳಿಗೂ ಬ್ರಾಹ್ಮಣರಿಗೂ ಗೋವರ್ಧನಪರ್ವತಕ್ಕೂನನಗೂಸಹ ಅಭಿಮತವಾದುದರಿಂದನಿಮಗೂ ಸಮ್ಮ ತವಾದರೆ ಈಯಾಗವೇ ನಿಮ್ಮಿಂದಮಾಡಲ್ಪಡಲಿ|೩೦|ಎಲೈ ಪರೀಕ್ಷಿದ್ರಾಯನೇ! ಈಪ್ರಕಾರದಿಂದ ಕಾಲಾತ್ಮಕ ನಾದ ಭಗವಂತನಾದ ಶ್ರೀಕೃಷ್ಣದೇವನಿಂದ ಇಂದ್ರನಗರ್ವಮಂ ಮುರಿಯಲೋಸುಗ ನುಡಿಯಲ್ಪಟ್ಟ ಅರ್ಥ ಮಂ ನಂದಗೋಪಮೊದಲಾದ ಗೋಪಾಲರೆಲ್ಲರೂ ಕೇಳಿ ಬಹುಚನ್ನಾಯಿತೆಂದು ಅಂಗೀಕರಿಸಿದರು |೩೧|| ಅನಂ ತರದಲ್ಲಿ ನಂದಾದಿಗೋಪಾಲಕರು ಮಧುಸೂದನನಾದ ಕೃಷ್ಣನಿಂದ ನುಡಿಯಲ್ಪಟ್ಟಂತೆ ಆಗೋವರ್ಧನಯಾ ಗಮಂ ಮಾಡಿದರು. ಎಂತೆನೆ,--ಪ್ರಥಮದಲ್ಲಿ ಶ್ರೋತ್ರಿಯರಾದ ಬ್ರಾಹ್ಮಣರಂ ಕರೆಯಿಸಿ ಅವರುಗಳಿಂದ ಪು ಣ್ಯಾಹವಾಚನಮಂ ಮಾಡಿಸಿದರು. ಆಮೇಲೆ ಅಕ್ಕರೆಯೊಡನೆ ಯಾಗಾರ್ಥವಾಗಿ ಸಂಪಾದಿಸಲ್ಪಟ್ಟ ಪದಾರ್ಥಂ ಗಳನ್ನು ಬ್ರಾಹ್ಮಣರೇಮೊದಲಾದಅತಿಥಿಗಳಿಗೆ ಉಪಯೋಗಮಂಮಾಡಿಸಿ ಗೋವರ್ಧನಪರ್ವತವನ್ನೂ ಪೂಜಿ ಸಿದರು |೩೨| ಆಬಳಿಕ ಗೋವುಗಳಿಗೆ ಹೊಸಹುಲ್ಲುಗಳಂ ಸಮರ್ಪಿಸಿ ಆಗೋವುಗಳಹಿಂಡಂ ಮುಂದಿಟ್ಟು ಕೊಂಡು ಅಲಂಕರಿಸಲ್ಪಟ್ಟ ಎತ್ತುಗಳಂಕಟ್ಟಿ ಬಂಡಿಗಳನ್ನೇರಿ ಗೋವರ್ಧನಪರ್ವತಕ್ಕೆ ಪ್ರದಕ್ಷಿಣಮಂ ಮಾಡಿ ದರು |೩೩|ಅದೇರೀತಿಯಿಂದ ಗೋಪಸ್ತ್ರೀಯರು ಶ್ರೀಕೃಷ್ಣನ ಚರಿತ್ರಂಗಳಂ ಪಾಡುತ್ತ ಬ್ರಾಹ್ಮಣರ ಆ

ಣೀರ್ಗಾಯಂತ್ಯಸ್ಸದ್ವಿಜಾಶಿಷಃ ॥೩೪॥ ಕೃಷ್ಣಸ್ತ್ವನ್ಯತಮಂರೂಪಂಗೋಪವಿಸ್ರಂಭಣಂಗತಃ । ಶೈ
ಲೋಸ್ಮೀತಿಬ್ರುವನ್ಭೂರಿಬಲಿಮಾದದ್ಬೃಹದ್ವಪುಃ ॥೩೫॥ ತಸ್ಮೈನಮೋವ್ರಜಜನೈಸ್ಸಹಚಕ್ರೇಮ
ಹಾತ್ಮನೆ । ಅಹೋಪಶ್ಯತಶೈಲೋಸೌರೂಪೀನೋನುಗ್ರಹಂವ್ಯಧಾತ್ ॥೩೬॥ ಏಷೋವಜಾನತೋಮ

---

ಕರೂ, ಕೃಷ್ಣವೀರ್ಯಾಣಿ-ಕೃಷ್ಣಸಾಮರ್ಥ್ಯಗಳನ್ನು, ಗಾಯಂತ್ಯಃ-ಹಾಡುತಲಿರುವ, ಗೋಪ್ಯಶ್ಚ-ಗೊಲ್ಲತಿಯರೂ ಕೂಡ ಸ್ವಲಂಕೃತಾಃ-ಚನ್ನಾಗಿ ಅಲಂಕರಿಸಿಕೊಂಡವರಾಗಿ, ಅನಡುದ್ಯುಕ್ತಾನಿ-ಅನಡುಟ್-ಎತ್ತುಗಳಿಂದ, ಯುಕ್ತಾನಿ-ಹೂಡಲ್ಪಟ್ಟ, ಅನಾಂಸಿ-ಬಂಡಿಗಳನ್ನು, ಆರುಹ್ಯ-ಏರಿಕೊಂಡು, ಗಿರಿಪ್ರದಕ್ಷಿಣವಂಗೆಯ್ದರು ॥೩೪॥ ಕೃಷ್ಣಸ್ತು-ಕೃಷ್ಣನಾದರೋ, ಗೋಪ ವಿಸ್ರಂಭಣಂ-ಗೋಪ-ಗೊಲ್ಲರಿಗೆ, ವಿಸ್ರಂಭಣಂ-ನಂಬಿಕೆಯನ್ನುಂಟುಮಾಡುವ, ಅನ್ಯತಮಂ-ಅವರೊಳಗೊಂದಾದ, ಬೃಹ ದ್ವಪುಃ-ದೊಡ್ಡದೇಹವುಳ್ಳ, ರೂಪಂ-ಆಕಾರವನ್ನು, ಗತಃ-ಹೊಂದಿದವನಾಗಿ, ಶೈಲೋಸ್ಮೀತಿ-ಬೆಟ್ಟವಾಗಿರುವೆನೆಂದು, ಬ್ರು ವನ್-ಹೇಳುತಲಿರುವನಾಗಿ, ಭೂರಿ-ಬಹುವಾದ, ಬಲಿಂ-ಉಪಹಾರವನ್ನು, ಆದತ್-ಭಕ್ಷಿಸಿದನು ॥೩೫॥ ತಸ್ಮೈ-ಹಾಗೆಬಲಿಯನ್ನುಣುತಲಿರುವ, ಮಹಾತ್ಮನೇ-ಮಹಾಪುರುಷನಾದತನಗೆ, ವ್ರಜಜನೈಃಸಹ-ಗೋಕುಲದಜನಗಳೊಡನೆ, ನಮಃಚಕ್ರೇ-ತಾನೇ ನಮಸ್ಕಾರವಂಗೆಯ್ದನು ಅಸೌಶೈಲಃ-ಈಪರ್ವತವು, ರೂಪೀ-ಆಕಾರವುಳ್ಳದ್ದಾಗಿ, ನಃ-ನಮ್ಮಗಳಿಗೆ, ಅನುಗ್ರಹಂ-ರಕ್ಷಣವನ್ನು, ವ್ಯಧಾತ್-ಮಾಡಿತು. ಅಹೋ-ಆಶ್ಚರ್ಯವು. ಪಶ್ಯತ-ನೋಡಿರಿ ॥೩೬॥ ಹಿ-ಯಾವಕಾರಣದಿಂದ, ಏಷಃ-ಈಪರ್ವತವು

---









ಶೀರ್ವಾದಗಳಂ ಶಿರಸಾವಹಿಸುತ್ತ, ಆಪರ್ವತಕ್ಕೆ ಪ್ರದಕ್ಷಿಣವಂ ಗೆಯ್ದರು. ॥೩೪॥ ಶ್ರೀಕೃಷ್ಣನು ಗೋಪ ಗೋಪೀಜನರ ನಂಬಿಕೆಗೆ ನಿಮಿತ್ತವಾದ ಮಹಾರೂಪವಂ ಧರಿಸಿಕೊಂಡು ನಾನೇಗೋವರ್ಧನ ಪರ್ವತವಾಗುವೆ ನೆಂದು ಹೇಳುತ ಗೋಪಾಲಕರಿಂದ ಕೊಡಲ್ಪಟ್ಟ ಬಲಿಗಳೆಲ್ಲವನ್ನೂ ಭಕ್ಷಿಸಿಬಿಟ್ಟನು. ಮತ್ತು ಗೋಪಾಲ ಕರೊಡನೆ ಪರ್ವತವನ್ನು ಕುರಿತು ನಮಸ್ಕಾರಂ ಮಾಡಿದಂ ॥೩೫॥ ಎಲೈ, ಗೋಪಾಲಕರೇ! ನೋಡಿರಯ್ಯಾ, ಈಶ್ರೇಷ್ಠವಾದ ಪರ್ವತವು ಶರೀರಯುಕ್ತವಾಗಿ ನಮ್ಮಲ್ಲಿ ಅನುಗ್ರಹವಂ ಮಾಡಿತು. ಸರ್ಪಾದಿ ಕಾಮರೂಪ ವುಳ್ಳ ಈಪರ್ವತವು ಅಜ್ಞಾನಿಗಳಾಗಿಯೂ ವನವಾಸಿಗಳಾಗಿಯೂ ಇರುವನಮ್ಮಂತವರನ್ನು ಅನುಗ್ರಹಿಸುತ ಲಿಹೆ ಅವಮಾನವನ್ನುಮಾಡುವರಂ ಕೊಲ್ಲುತ್ತೆ. ॥೩೬॥ ಆದುದರಿಂದ ಇಂತಾಪರ್ವತಶ್ರೇಷ್ಠವಾದ ಗೋವರ್ಧನ

ತಾರ್ತ್ಯ್ಕ ಕಾಮರೂಪೀವನೌಕಸಃ।ಹಂತಿಹ್ಯಸ್ಮೈನಮಸ್ಯಾಮಶ್ಶರ್ಮಣೇಹ್ಯಾತ್ಮನೋಗವಾಂ॥೩೭॥
ಇತ್ಯದ್ರಿಗೋದ್ವಿಜಮಖಂವಾಸುದೇವಪ್ರಚೋದಿತಾಃ। ಯಥಾವಿಧಾಯಗೋಪಾಲಾಸ್ಸಹಕೃಷ್ಣಾವ್ರ
ಜಂಯಯುಃ॥೩೮॥ ಶ್ಲೋ.

ಇತಿಶ್ರೀಮದ್ಭಾಗವತೇ ದಶಮಸ್ಕಂಧೆ ಚತುರ್ವಿಂಶೋಽಧ್ಯಾಯಃ

---

ಅವಜಾನತಃ-ತನ್ನಂಅವಮಾನಿಸುತಲಿರುವ, ಅಥವಾಅಲಕ್ಷ್ಯವಾಗಿತಿಳಿಯುತಲಿರುವ, ವನೌಕಸೋಮರ್ತ್ಯಕ-ಕಾಡಿನಲ್ಲಿರುವ ಮನುಷ್ಯರನ್ನು, ಕಾಮರೂಪೀಸನ್-ಬೇಕಾದಸರ್ಪಾದಿರೂಪವುಳ್ಳವನಾಗಿ, ಹಂತಿ-ಕೊಲ್ಲುವನೋ; ಆತ್ಮನಃ-ನಮಗೂ,ಗವಾಂ-ಗೋವುಗಳಿಗೂ, ಶರ್ಮಣೇ-ಸುಖಸಾಧನವಾಗಿರುವ, ಅಸ್ಮೈಹಿ-ಬೆಟ್ಟಕಲ್ಲವೆ, ನಮಸ್ಯಾಮಃ-ಪೊಡಮಡುವೆವು॥೩೭॥ಇತಿ-ಹೀಗೆ, ವಾಸುದೇವಪ್ರಚೋದಿತಾಃ-ವಾಸುದೇವ-ಕೃಷ್ಣನಿಂದ, ಪ್ರಚೋದಿತಾಃ-ಚೆನ್ನಾಗಿಪ್ರೇರಿಸಲ್ಪಟ್ಟ, ಗೋಪಾಲಾಃ-ಪಶುಪಾಲಕರು, ಸಹಕೃಷ್ಣಾಃ-ಕೃಷ್ಣನಿಂದಸಹಿತರಾಗಿ, ಅಪಿಗೋದ್ವಿಜಮಖಂ-ಪರ್ವತಗೋಬ್ರಾಹ್ಮಣರಪೂಜೆಯನ್ನು, ಯಥಾ-ಕೃಷ್ಣನಿಂದಹೇಗೆಹೇಳಲ್ಪಟ್ಟಿತೋಹಾಗೆ, ವಿಧಾಯ-ಮಾಡಿ, ವ್ರಜಂ-ಗೋಕುಲವನ್ನುಕುರಿತು, ಯಯುಃ-ತೆರಳಿದರು॥೩೮॥

ಇತಿಶ್ರೀಮದ್ಭಾಗವತೆ ಪ್ರತಿಶಬ್ದಾರ್ಥಬೋಧಿನ್ಯಾಂ ದಶಮಸ್ಕಂಧೇ
ಚತುರ್ವಿಂಶೋಽಧ್ಯಾಯಃ.

---

ಕ್ಕೆನಾವು ನಮ್ಮಗೋವುಗಳ ಕ್ಷೇಮಾರ್ಥವಾಗಿ ನಮಸ್ಕರಿಸ ಬೇಕೆಂದು ಶ್ರೀಕೃಷ್ಣನು ಗೋಪಾಲಕರಿಂದ ಯುಕ್ತನಾಗಿ ನಮಸ್ಕರಿಸಿದನು ॥೩೭॥ ಎಲೈ, ಅರಸೇ! ಈರೀತಿಯಲ್ಲಿ ಶ್ರೀಕೃಷ್ಣನಿಂದ ಪ್ರೇರಿತರಾದ ನಂದಾದಿಗಳು ಪರ್ವತಪೂಜೆಯನ್ನೂ ಗೋಪೂಜೆಯನ್ನೂ ಬ್ರಾಹ್ಮಣಪೂಜೆಯನ್ನೂ ಸಹ ಮಾಡಿ ಶ್ರೀಕೃಷ್ಣನಿಂದೊಡಗೂಡಿದವರಾಗಿ ವ್ರಜಕ್ಕೆ ಬಂದರು ॥೩೮॥ ... ... ... ......

ಇಂತು ಶುಕಮುನಿಯು ಪರೀಕ್ಷಿದ್ರಾಯನಿಗೆ ನಿರೂಪಿಸಿದನೆಂದು ಸೂತಪೌರಾಣಿಕನು ನೈಮಿಶಾ
ರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಹೇಳಿದನೆಂಬಲ್ಲಿಗೆ ಶ್ರೀಮನ್ಮಹೀಶೂರಪುರವ
ರಾಧೀಶ ಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜ ವಿರಚಿತಮಪ್ಪ ಶ್ರೀ
ಭಾಗವತದ ಶ್ರೀಕೃಷ್ಣರಾಜ ವಾಣೀವಿಲಾಸವೂ,, ಎಂಬಕರ್ಣಾಟಕ
ಭಾಷಾವ್ಯಾಖ್ಯಾನದಲ್ಲಿ ದಶಮಸ್ಕಂಧವೊಳು ೨೪ನೆಯ
ಅಧ್ಯಾಯವು ಸಂಪೂರ್ಣವಾದುದು.
ಮಂಗಳಮಸ್ತು

ಶ್ರೀಶುಕಃ॥ ಇಂದ್ರಸ್ತದಾತ್ಮನಃಪೂಜಾಂವಿಜ್ಞಾಯವಿಹತಾಂನೃಪ । ಗೋಪೇಭ್ಯಃಕೃಷ್ಣನಾಥೇಭ್ಯೋ ನಂದಾದಿಭ್ಯಶ್ಚುಕೋಪಹ ॥೧॥ ಗಣಂಸಂವರ್ತಕಂನಾಮಮೇಘಾನಾಂಚಾಂತಕಾರಿಣಾಂ । ಇಂದ್ರಃ ಪ್ರಾಚೋದಯತ್ಕ್ರುದ್ಧೋವಾಕ್ಯಂಚಾಹೇಶಮಾನ್ಯುತ ॥೨॥ ಅಹೋಶ್ರೀಮದಮಾಹಾತ್ಮ್ಯಂಗೋಪಾನಾಂಕಾನನೌಕಸಾಂ । ಕೃಷ್ಣಂಮರ್ತ್ಯಮುಪಾಶ್ರಿತ್ಯಯೇಚಕ್ರುರ್ದೇವಹೇಳನಂ ॥೩॥ ಯಥಾದೃಢೈಃಕರ್ಮಮಯೈಃಕ್ರತುಭಿರ್ನಾಮನೌನಿಭೈಃ । ವಿದ್ಯಾಮಾನ್ವೀಕ್ಷಕೀಂಹಿತ್ವಾತಿತೀರ್ಷಂ

---

೨೫ನೆಯಅಧ್ಯಾಯ ಪ್ರತಿಪದಟೀಕೆ-

[ ಶುಕವಾಕ್ಯವು ]ಹೇನೃಪ-ಎಲೈಪರೀಕ್ಷಿದ್ರಾಯನೇ! ತತ್-ಆಕಾರಣದಿಂದ, ಇಂದ್ರಃ-ದೇವರಾಜನು, ಆತ್ಮನಃ-ತನ್ನ, ಪೂಜಾಂ-ಸನ್ಮಾನವನ್ನು, ವಿಹತಾಂ-ಭಗ್ನವಾದ್ದನ್ನಾಗಿ, ವಿಜ್ಞಾಯ-ತಿಳಿದು, ಕೃಷ್ಣನಾಥೇಭ್ಯಃ-ಕೃಷ್ಣನೇಒಡೆಯನಾಗಿವುಳ್ಳ, ನಂದಾದಿಭ್ಯಃ-ನಂದನೇಮೊದಲಾದ, ಗೋಪೇಭ್ಯಃ-ಗೊಲ್ಲರಿಗೋಸ್ಕರ, ಚುಕೋಪ-ಸಿಟ್ಟುಗೊಂಡನು, ಹ-ಅದ್ಭುತವು॥೧॥ಈಶಮಾನೀ-ತಾನೇಒಡೆಯನಲ್ಲದಿದ್ದರೂ ತಾನೆಒಡೆಯನೆಂದುಗರ್ವವುಳ್ಳ, ಇಂದ್ರಃ-ದೇವರಾಜನು, ಕ್ರುದ್ಧಸ್ಸನ್-ಸಿಟ್ಟುಗೊಂಡವನಾಗಿ, ಅಂತಕಾರಿಣಾಂ-ನಾಶವನ್ನುಮಾಡುವ, ಮೇಘಾನಾಂ-ಮೋಡಗಳ, ಸಂವರ್ತಕಂನಾಮ-ಪ್ರಳಯಕರವೆಂಬಹೆಸರುಳ್ಳ, ಗಣಂ-ಗುಂಪನ್ನು, ಪ್ರಾಚೋದಯತ್-ಪ್ರೇರಿಸಿಬಿಟ್ಟನು. ಉತ-ಅಷ್ಟೇಅಲ್ಲವು. ವಾಕ್ಯಂಚ-ಮುಂದಣಮಾತನ್ನೂ, ಆಹ-ನುಡಿದನು॥೨॥ [ಇಂದ್ರವಚನವು]ಯೇ-ಯಾವಗೋಪಾಲಕರು, ಮರ್ತ್ಯಂ-ಮನುಷ್ಯನಾದ, ಕೃಷ್ಣಂ-ವಾಸುದೇವನನ್ನು, ಉಪಾಶ್ರಿತ್ಯ-ಅವಲಂಬಿಸಿಕೊಂಡು, ದೇವಹೇಳನಂ-ದೇವತೆಗಳ ಅವಮಾನವನ್ನು (ಇಂದ್ರಯಾಗಭಂಗವನ್ನು) ಚಕ್ರುಃ-ಮಾಡಿದರೋ, ತೇಷಾಂ-ಅಂಥಾ, ಕಾನನೌಕಸಾಂ-ಕಾಡೇವಾಸಸ್ಥಾನವಾಗಿಉಳ್ಳ, ಗೋಪಾನಾಂ-ಗೊಲ್ಲರ, ಶ್ರೀಮದಮಾಹಾತ್ಮ್ಯಂ-ಶ್ರೀ-ಸಂಪತ್ತಿನ, ಮದ-ಗರ್ವದ,ಮಾಹಾತ್ಮ್ಯಂ-ಮಹಿಮೆಯು, ಅಹೋ-ಆಶ್ಚರ್ಯಕರವಾದ್ದು! ೩॥ಯಥಾ-ಹೇಗೆ, ಅದೃಢೈಃ-ಶಿಥಿಲಗಳಾದ,(ಅಸಮರ್ಥಗಳಾದ)ಕರ್ಮಮಯೈಃ-ಕ್ರಿಯೆಗಳಿಂದ ನೆರವೇರಿಸಲ್ಪಡತಕ್ಕವುಗಳಾದ, ನಾಮನೌನಿಭೈಃ-ಹೆಸರುಮಾತ್ರದಿಂದ ಹಡಗುಗಳಾಗಿರುವ, ಕ್ರತುಭಿಃ-ಯಜ್ಞಕರ್ಮಗಳಿಂದ, ಆನ್ವೀಕ್ಷಕೀಂವಿದ್ಯಾಂ-ಆತ್ಮಸ್ವರೂಪ

---

* ೨೫ನೆಯ ಅಧ್ಯಾಯವು. *

ಶ್ರೀಧರೀಯಶ್ಲೋಕ॥ ಪಂಚವಿಂಶೇರುಷಾಶಕ್ರೇವ್ರಜನಾಶಾಯವರ್ಷತಿ ! ಉದ್ಧೃತ್ಯಗಿರಿಮಾಸಾರಾದ ರಕ್ಷದ್ಗೋಕುಲಂಪ್ರಭುಃ ॥ ‡ ॥ ಇಪ್ಪತ್ತೈದನೆಯ ಅಧ್ಯಾಯದಲ್ಲಿ ದೇವೇಂದ್ರನು ತನಗೆ ಅವಮಾನವಾಯ್ತೆಂದು ಕೋಪಿಸಿಕೊಂಡು ಈನಂದವ್ರಜವ ನಾಶಗೆಯ್ಯಲೋಸುಗ ಮಹಾ ಮೇಘಂಗಳಂ ಕರೆಸಿ ವರ್ಷಿಸಲಾಗಿ, ಶ್ರೀಕೃಷ್ಣನು ಗೋವರ್ಧನಪರ್ವತವಂ ಎತ್ತಿ, ಛತ್ರದಂತೆ ಹಿಡಿದು, ಗೋವುಗಳಂ ಗೋಪಾಲಕರಂ ಇನ್ನೂ ವ್ರಜದಲ್ಲಿರುವ ಸಮಸ್ತರಂ ಸಹ ರಕ್ಷಿಸಿದನೆಂಬ ಅರ್ಥವಂ ಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸುವನದೆಂತೆನೆ,—

ಎಲೈ, ಅರಸೇ! ಅನಂತರದಲ್ಲಿ ದೇವೇಂದ್ರನು ತನ್ನಂ ಪೂಜಿಸದೆ ಗೋವರ್ಧನಪರ್ವತವಂ ಪೂಜಿಸಿದರೆಂದು ಕೋಪವುಳ್ಳವನಾಗಿ ಶ್ರೀಕೃಷ್ಣಾಧೀನರಾದ ನಂದಾದಿಗೋಪಾಲಕರಮೇಲೆ ದ್ವೇಷವಮಾಡಿದನು ॥೧॥ ಪ್ರಳಯಕಾಲದಲ್ಲಿ ವರ್ಷಿಸಿ ಲೋಕಂಗಳಂ ನಾಶಮಂಮಾಡುವ ಸಂವರ್ತಕನಾಮಕವಾದ ಮೇಘಸಮೂಹವಂ ಕರೆಯಿಸಿ, ಇಂದ್ರನು ತಾನೇ ಈಶ್ವರನೆಂಬ ಗರ್ವದಿಂ ನುಡಿದನು ॥೨॥ (ಅದೆಂತೆನೆ-) ಅರಣ್ಯವಾಸಿಗಳಾದ ಗೋಪಾಲಕರ ಐಶ್ವರ್ಯಮದವಂ ನೋಡಿರಯ್ಯಾ! ಮನುಷ್ಯನಾದ ಕೃಷ್ಣನಂ ಆಶ್ರಯಿಸಿಕೊಂಡು ದೇವತಾವಮಾನವಂ ಮಾಡಿದರು ॥೩॥ ಏನಾಶ್ಚರ್ಯವು? ದೃಢಂಗಳಲ್ಲದೆ ಇರುವ ಕರ್ಮರೂಪಂಗಳಾದ ನಾಮಮಾತ್ರದಿಂದಲೇ ನಾವೆಗಳೆನಿಸಿ ಕೊಂಡಿದ್ದಂತೆ ಇರುವ ಯಾಗಂಗಳಂ ಅವಲಂಬಿಸಿ, ಆತ್ಮವಿಚಾ

ತಿಭವಾರ್ಣವಂ ॥೪॥ ವಾಚಾಲಂ ಬಾಲಿಶಂಸ್ತಬ್ಧಮಜ್ಞಂಪಂಡಿತಮಾನಿನಂ । ಕೃಷ್ಣಂಮರ್ತ್ಯ ಮುಪಾಶ್ರಿತ್ಯಗೋಪಾಮೇಚಕ್ರುರಪ್ರಿಯಂ ॥೫॥ ಏಷಾಂಶ್ರಿಯಾವಲಿಪ್ತಾನಾಂಮತ್ತಾನಾಂಧ್ಮಾಯಿ ತಾತ್ಮನಾಂ । ಧುನುತಶ್ರೀಮದಸ್ತಂಭಂಪಶೂನ್ನಯತಸಂಕ್ಷಯಂ ॥೬॥ ಅಹಂಚೈರಾವತಂನಾಗ ಮಾರುಹ್ಯಾನುವ್ರಜೇವ್ರಜಂ । ಮರುದ್ಗಣೈರ್ಮಹಾವೇಗೈರ್ನಂದಗೋಷ್ಠಜಿಘಾಂಸಯಾ ॥೭॥ ಶ್ರೀಶುಕಃ॥ ಇತ್ಥಂಮಘವತಾಜ್ಞಪ್ತಾಮೇಘಾನಿರ್ಮುಕ್ತಬಂಧನಾಃ । ನಂದಗೋಕುಲಮಾಸಾರೈಃ ಪೀಡಯಾಮಾಸುರೋಜಸಾ ॥೮॥ ವಿದ್ಯೋತಮಾನಾವಿದ್ಯುದ್ಭಿಸ್ಸ್ತನಂತಸ್ಸ್ತನಯಿತ್ನುಭಿಃ । ತೀ

---

ಜ್ಞಾನವನ್ನು, ಹಿತ್ವಾ-ಬಿಟ್ಟು, ಭವಾರ್ಣವಂ-ಸಂಸಾರವೆಂಬಕಡಲನ್ನು, ತಿತೀರ್ಷಂತಿ- ದಾಂಟಲೆಳಸುವರೋ (ಹಾಗೆ) ॥೪॥ ಗೋಪಾಃ-ಗೊಲ್ಲರು, ವಾಚಾಲಂ-ಹರಟೆಬಡಿಕನಾದ, ಬಾಲಿಶಂ-ಮೂರ್ಖನಾದ, ಪಂಡಿತಮಾನಿನಂ-ತಾನೇಪಂಡಿತನೆಂದು ತಿಳಿದುಕೊಂಡಿರುವ, ಸ್ತಬ್ಧಂ-ಅವಿನೀತನಾದ, ಅಜ್ಞಂ-ಮೂಢನಾದ, ಮರ್ತ್ಯಂ-ಮನುಷ್ಯನಾದ, ಕೃಷ್ಣಂ-ವಾಸುದೇವ ನನ್ನು, ಉಪಾಶ್ರಿತ್ಯ-ಅನುಸರಿಸಿ, ಮೇ-ನನಗೆ, ಅಪ್ರಿಯಂ-ಅನಿಷ್ಟವನ್ನು, ಚಕ್ರುಃ-ಮಾಡಿದರಂತೆ (ಹೀಗೆಕೃಷ್ಣನಿಂದಯಲ್ಲಿ ಪ್ರಯೋಗಿಸಲ್ಪಟ್ಟಿದ್ದಾಗ್ಯೂ ಇಂದ್ರನ ಭಾರತಿಯು ಶ್ರೀಕೃಷ್ಣನಂಸ್ತುತಿಸುವಂತಿದೆ ವಾಚಾಲಂ-ಶಾಸ್ತ್ರಯೋನಿಯಾದ, ಬಾಲಿಶಂ-ಶಿಶುವಿನಂತೆಅಭಿಮಾನವಿಲ್ಲದವನಾದ, ಸ್ತಬ್ಧಂ-ತನಗೆವಂದ್ಯನಿಲ್ಲದ್ದರಿಂದನಮ್ರನಲ್ಲದ, ಅಜ್ಞಂ-ತನಗಿಂತಲೂಬಲ್ಲ ವನಿಲ್ಲದ್ದರಿಂದ ಸರ್ವಜ್ಞನಾದ, ಪಂಡಿತಮಾನಿನಂ-ಬ್ರಹ್ಮಜ್ಞಾನಿಗಳಿಂದ ಮಾನನೀಯನಾದ, ಕೃಷ್ಣಂ ಆನಂದರೂಪವಾದಬ್ರಹ್ಮವನ್ನು, ಮರ್ತ್ಯಂ-ಭಕ್ತವಾತ್ಸಲ್ಯದಿಂದ ಮನುಷ್ಯಾವತಾರವಾಗಿತೋರುತ್ತಿರುವನಂ, ಎಂದು) ॥೫॥ ಶ್ರಿಯಾ ಸಂಪತ್ತಿ ನಿಂದ, ಅವಲಿಪ್ತಾನಾಂ-ಕೊಬ್ಬಿದವರಾಗಿಯೂ, ಮತ್ತಾನಾಂ-ಮದಿಸಿದವರಾಗಿಯೂ, ಧ್ಮಾಯಿತಾತ್ಮನಾಂ-ಊದಿದಮೈಯು ಳ್ಳವರಾಗಿಯೂಇರುವ, ಏಷಾಂ-ಈಗೊಲ್ಲರ, ಶ್ರೀಮದಸ್ತಂಭಂ-ಸಂಪನ್ಮದದಿಂದುಂಟಾದಗರ್ವವನ್ನು, ಧುನುತ-ಕೊಡಹಿರಿ, ಪಶೂನ್-ಗೋವುಗಳನ್ನು, ಸಂಕ್ಷಯಂನಯತ-ನಾಶಗೊಳಿಸಿರಿ ॥೬॥ ಅಹಂಚ-ನಾನೂಕೂಡ, ಐರಾವತಂನಾಗಂ-ಐರಾವತವೆಂ ಬಆನೆಯನ್ನು, ಆರುಹ್ಯ-ಏರಿ, ಮಹಾವೇಗೈಃ-ಹೆಚ್ಚುವೇಗವುಳ್ಳ, ಮರುದ್ಗಣೈಸ್ಸಹ-ದೇವಸಂಘಗಳೊಡನೆ, ವ್ರಜಂ-ಗೊಲ್ಲರಹಳ್ಳಿ ಯನ್ನುಕುರಿತು, ನಂದಗೋಷ್ಠಜಿಘಾಂಸಯಾ-ನಂದಗೋಪನಕೊಟ್ಟಿಗೆಯನ್ನು ನಾಶಗೊಳಿಸಬೇಕೆಂಬಬಯಕೆಯಿಂದ,ಅನುವ್ರಜೇ-ಹಿಂದೆಯೇಬರುವೆನು॥೭॥(ಶುಕವಚನವು)ಮಘವತಾ-ಇಂದ್ರನಿಂದ, ಇತ್ಥಂ-ಹೀಗೆ, ಆಜ್ಞಪ್ತಾಃ-ಆಜ್ಞಾಪಿಸಲ್ಪಟ್ಟ,ಮೇಘಾಃ-ಸಂವರ್ತಮೇಘಗಳು, ನಿರ್ಮುಕ್ತಬಂಧನಾಸ್ಸಂತಃ-ಬಿಡಲ್ಪಟ್ಟಕಟ್ಟುಗಳುಳ್ಳವಾಗಿ, ಓಜಸಾ-ಸಾಮರ್ಥ್ಯದಿಂದ, ಆಸಾರೈಃ-ಜಲಧಾರಾಸಂಪಾತಗಳಿಂದ, ಗೋಕುಲಂ-ಗೊಲ್ಲರಹಳ್ಳಿಯನ್ನು, ಪೀಡಯಾಮಾಸುಃ-ಬಾಧಿಸಿದವು ॥೮॥ ವಿದ್ಯುದ್ಭಿಃ-ಮಿಂಚು

---

ರರೂಪವಾದ ಆನ್ವೀಕ್ಷಿಕೀವಿದ್ಯೆಯಂಬಿಟ್ಟು, ಸಂಸಾರಸಮುದ್ರವ ದಾಂಟಲು ಇಚ್ಛೈಯಿಸುವರು ॥೪॥ಬಹು ಮಾತುಗಳಂ ಕಲಿತುಕೊಂಡು ಮೂರ್ಖನಾಗಿ ಸ್ತಬ್ಧನಾಗಿ ತಾನೇ ಪ್ರಾಜ್ಞನೆಂದು ತಿಳಿದುಕೊಂಡಿರುವ ಮ ನುಷ್ಯನಾದ ಕೃಷ್ಣನಂ ಆಶ್ರಯಿಸಿಕೊಂಡು, ಗೋಪರು ನನಗೆ ಅವಮಾನವಂ ಅನಿಷ್ಟವಂ ಮಾಡಿದರು [ಹೀ ಗೆ ಇಂದ್ರನವಾಣಿಯು ಕೃಷ್ಣನಂ ಪಳಿದಾಡತೊಡಗಿದ್ದಾದಗೂ ಆರ್ಥಿಕವಾಗಿ ಸ್ತುತಿಸುವಂತೆ ಭಾವವನ್ನು ಕೊಡುತ್ತೆ. ಶಾಸ್ತ್ರಗಳಿಗೆ ಕರ್ತನಾದರೂ ಶಿಶುವಿನಂತೆ ಅಭಿಮಾನವಿಲ್ಲದವನಾಗಿ, ತನಗಿಂತಲೂ ವಂದ್ಯರಿ ಲ್ಲದ್ದರಿಂದ ನಮ್ರನಲ್ಲದೆ, ತನಗಿಂತಲೂ ಬಲ್ಲವನಿಲ್ಲದ್ದರಿಂದ ಸರ್ವಜ್ಞನಾಗಿ, ಪಂಡಿತರಿಂದ ಮಾನನೀಯನಾಗಿ, ಆ ನಂದರೂಪನಾದ ಪರಮಾತ್ಮನಾದರೂ ಭಕ್ತವಾತ್ಸಲ್ಯದಿಂದ ಲೀಲಾಮಾನುಷ ವಿಗ್ರಹನಾಗಿರುವನೆಂದು ಅರ್ಥಾಂ ತರವಾಗುತ್ತೆ.] ॥೫॥ ಎಲೈ, ಮೇಘಗಳೇ! ಧನಮದದಿಂದ ಗರ್ವಿತರಾಗಿ ಕೃಷ್ಣನಿಂದ ಉತ್ಸಾಹ ಪಡಿಸಲ್ಪ ಟ್ಟಿರುವ ಈಗೋಪಾಲಕರ, ಐಶ್ವರ್ಯ ಮದಜನ್ಯವಾದ ಗರ್ವವಂ ಪರಿಹರಿಸಿಬಿಡಿ, ಗೋವುಗಳಂ ಕ್ಷಯಿಸುವಂ ತೆ ಮಾಡಿರಿ ॥೬॥ ನಾನೂಕೂಡ ಐರಾವತವನ್ನೇರಿಕೊಂಡು ದೇವಗಣಪರಿವೃತನಾಗಿ ವ್ರಜವಂ ಸಂಹರಿಸಲೋ ಸುಗನಿಮ್ಮಹಿಂದೆಯೇ ಬರುತ್ತೇನೆ ॥೭॥ ಎಂಬದಾಗಿ ದೇವೇಂದ್ರನಿಂದ ಆಜ್ಞಪ್ತಗಳಾದ ಮೇಘಂಗಳು ಬಂಧನ

ವ್ರೈರ್ಮರುದ್ಗಣೈರ್ನುನ್ನಾ ವವೃಷುರ್ಜಲಶರ್ಕರಾಃ ॥೯॥ ಸ್ಥೂಣಾಸ್ಥೂಲಾ ವರ್ಷಧಾರಾ ಮುಂಚತ್ಸ್ವಭ್ರೇಷ್ವಭೀಕ್ಷ್ಣಶಃ । ಜಲೌಘೈಃ ಪ್ಲಾವ್ಯಮಾನಾ ಭೂರ್ನಾದೃಶ್ಯತ ನತೋನ್ನತಂ ॥೧೦॥ ಅತ್ಯಾಸಾರಾತಿವಾತೇನ ಪಶವೋ ಜಾತವೇಪನಾಃ । ಗೋಪಾ ಗೋಪ್ಯಶ್ಚ ಶೀತಾರ್ತಾ ಗೋವಿಂದಂ ಶರಣಂ ಯಯುಃ ॥೧೧॥ ಶಿರಸ್ಸುತಾಂಶ್ಚ ಕಾಯೇನ ಪ್ರಚ್ಛಾದ್ಯಾಸಾರಪೀಡಿತಾಃ । ವೇಪಮಾನಾ ಭಗವತಃ ಪಾದಮೂಲಮುಪಾಯಯುಃ ॥೧೨॥ ಕೃಷ್ಣ ಕೃಷ್ಣ ಮಹಾಭಾಗ ತ್ವನ್ನಾಥಂ ಗೋಕುಲಂ ಪ್ರಭೋ । ತ್ರಾತುಮರ್ಹಸಿ ದೇವಾನ್ನಃ ಕುಪಿತಾದ್ಭಕ್ತವತ್ಸಲ ॥೧೩॥ ಶಿಲಾವರ್ಷಾತಿಪಾತೇನ ಹನ್ಯಮಾನಮಚೇತನಂ ।

---

ಗಳೊಡನೆ, ವಿದ್ಯೋತಮಾನಾಃ-ವಿಶೇಷವಾಗಿ ಹೊಳೆಯುತ್ತಿರುವವೂ, ಸ್ತನಯಿತ್ನುಭಿಃ-ಗುಡುಗುಗಳೊಡನೆ, ಸ್ತನಂತಃ-ಮೊಳಗುತ್ತಿರುವವೂ ಆದ ಮೇಘಗಳು, ತೀವ್ರೈಃ-ವೇಗವುಳ್ಳ, ಮರುದ್ಗಣೈಃ-ದೇವಸಂಘಗಳಿಂದ, (ಗಾಳಿಗಳ ಗುಂಪುಗಳಿಂದ) ನುನ್ನಾಃ-ಪ್ರೇರಿಸಲ್ಪಟ್ಟವುಗಳಾಗಿ (ತಳ್ಳಲ್ಪಟ್ಟವುಗಳಾಗಿ) ಜಲಶರ್ಕರಾಃ-ನೀರಿನ ಮರಳುಗಳನ್ನು, (ಆಲಿಕಲ್ಲುಗಳನ್ನು) ವವೃಷುಃ-ಸುರಿದವು ॥೯॥ ಅಭ್ರೇಷು-ಮೇಘಗಳು, ಸ್ಥೂಣಾಸ್ಥೂಲಾಃ-ಕಂಭಗಳಂತೆ ತೋರಗಳಾಗಿರುವ, ವರ್ಷಧಾರಾಃ-ಮಳೆಯ ನೀರಿನ ಪರಂಪರೆಗಳನ್ನು, ಅಭೀಕ್ಷ್ಣಶಃ-ಎಲ್ಲ ಕಡೆಗಳಲ್ಲಿಯೂ, ಮುಂಚತ್ಸು ಸತ್ಸು-ಬಿಡುತಲಿರುವವಾಗುತ್ತಿರಲು, ಜಲೌಘೈಃ-ನೀರಿನ ಗುಂಪುಗಳಿಂದ, ಪ್ಲಾವ್ಯಮಾನಾ-ಮುಳುಗಿಸಿ ತೇಲಿಸಲ್ಪಡುತ್ತಲಿರುವ, ಭೂಃ-ನೆಲವು, ನತೋನ್ನತಂ-ಹಳ್ಳತಿಟ್ಟುಗಳು, ನಾದೃಶ್ಯತ-ಕಾಣಿಸಲಿಲ್ಲವು ॥೧೦॥ ಅತ್ಯಾಸಾರಾತಿವಾತೇನ-ಅತ್ಯಾಸಾರ-ಪ್ರಬಲವಾದ ಮಳೆಯು, ಅತಿವಾತೇನ-ಹೆಚ್ಚಾಗಿ ಸುರಿಯುವುದರಿಂದ, ಶೀತಾರ್ತಾಃ-ತಣುವಿನಿಂದ ಪೀಡಿತರಾದ್ದರಿಂದಲೇ, ಜಾತವೇಪನಾಃ-ನಡುಕ ಹುಟ್ಟಿದವಾದ, ಪಶವಃ-ಗೋವುಗಳೂ, ಗೋಪಾಃ-ಗೊಲ್ಲರೂ, ಗೋಪ್ಯಶ್ಚ-ಗೊಲ್ಲತಿಯರೂ, ಗೋವಿಂದಂ-ಗೋಪಾಲಕೃಷ್ಣನನ್ನು, ಶರಣಂ-ರಕ್ಷಕನನ್ನಾಗಿ, ಯಯುಃ-ಸೇರಿದರು ॥೧೧॥ ತಾಂಶ್ಚ-ಆ ಗೋವುಗಳೊಡನೆ, ಶಿರಸ್ಸು-ತಲೆಗಳಲ್ಲಿ, ಕಾಯೇನ-ಮೈಯಿಂದ, ಪ್ರಚ್ಛಾದ್ಯ-ಮುಚ್ಚಿಕೊಂಡು, ಆಸಾರಪೀಡಿತಾಃ-ತೋರವಾದ ಜಡಿಮಳೆಯಿಂದ ವ್ಯಥಿಸಲ್ಪಟ್ಟವುಗಳಾದ್ದರಿಂದಲೇ, ವೇಪಮಾನಸ್ಸತ್ಯಃ-ನಡುಗುತಲಿರುವವಾಗಿ, ಭಗವತಃ-ಕೃಷ್ಣನ, ಪಾದಮೂಲಂ-ಚರಣತಲವನ್ನು ಕುರಿತು, ಉಪಾಯಯುಃ-ಹತ್ತಿರದಲ್ಲಿ ಬಂದವು ॥೧೨॥ ಕೃಷ್ಣ ಕೃಷ್ಣ-ಕೃಷ್ಣನೇ ಕೃಷ್ಣನೇ! ಮಹಾಭಾಗ-ಹೆಚ್ಚು ಪೂಜ್ಯತೆಯುಳ್ಳವನೇ! ಭಕ್ತವತ್ಸಲ-ಸೇವಕರಲ್ಲಿ ದಯೆಯುಳ್ಳವನೇ! ಪ್ರಭೋ-ಸಮರ್ಥನೇ! ತ್ವನ್ನಾಥಂ-ನೀನೇ ಒಡೆಯನಾಗಿವುಳ್ಳ, ಗೋಕುಲಂ-ಈ ಗೊಲ್ಲರ ಹಳ್ಳಿಯನ್ನು, ನಃ-ನಮ್ಮಗಳನ್ನೂ, ಕುಪಿತಾತ್-ಸಿಟ್ಟುಗೊಂಡ, ದೇವಾತ್-ಪರ್ಜನ್ಯದೇವರದೆಸೆಯಿಂದ, ತ್ರಾತುಂ-ರಕ್ಷಿಸುವುದಕ್ಕೆ, ಅರ್ಹಸಿ-ಯೋಗ್ಯನಾಗಿರುವಿ ॥೧೩॥ ಭಗವಾನ್-ಷಡ್ಗುಣೈಶ್ವರ್ಯಸಂಪನ್ನನಾದ, ಹರಿಃ-ಶ್ರೀಕೃಷ್ಣನು, ಶಿಲಾವರ್ಷಾತಿಪಾತೇನ-ಆನೆಗಲ್ಲಿನ ಮಳೆಯು ಹೆಚ್ಚಾಗಿ ಬೀಳುವುದರಿಂದ, ಹನ್ಯಮಾನಂ-

---

ದಿಂ ಬಿಡಿಸಲ್ಪಟ್ಟವಾಗಿ ನಂದವ್ರಜಕ್ಕೆ ಬಂದು ವೃಷ್ಟಿಧಾರೆಗಳಿಂದ ಪೀಡಿಸಿದವು ॥೮॥ ಮಿಂಚುಗಳಿಂದ ಹೊಳೆಯುತ ಸಿಡಿಲುಗಳಿಂದ ಗರ್ಜನವಂ ಮಾಡುತ ಪ್ರಚಂಡವಾಯುವಿನಿಂದ ತಳ್ಳಲ್ಪಟ್ಟವಾಗಿ, ಆ ಮೇಘಂಗಳು ಸ್ಥೂಲಗಳಾದ ಆನೆಕಲ್ಲುಗಳಂ ವರ್ಷಿಸಿದವು ॥೯॥ ಈ ರೀತಿಯಲ್ಲಿ ಮೇಘಂಗಳು ಸ್ತಂಭಗಳಂತೆ ಸ್ಥೂಲಗಳಾದ ವರ್ಷಧಾರೆಗಳಂ ಬಿಡುತ್ತಿರಲಾಗಿ ಜಲಪ್ರವಾಹದಿಂದ ಪೂರ್ಣವಾದ ಭೂಮಿಯು ಹಳ್ಳಕಟ್ಟುಗಳೆಲ್ಲವೂ ಸಮವಾಗಿ ಜಲಮಯವಾಯಿತು ॥೧೦॥ ಈ ರೀತಿಯಲ್ಲಿ ಮಹಾವರ್ಷಧಾರಾ ಪ್ರವಾಹಂಗಳಿಂದ ಪೀಡಿತಗಳಾದ ಗೋವುಗಳು ನಡುಗುತ ಶ್ರಮಪಟ್ಟವು ಗೋಪಾಲಕರು ಗೋಪಿಯರುಗಳು ಮುಂತಾದ ಸರ್ವರೂ ಮಹಾವೃಷ್ಟಿಬಾಧೆಯಂ ನಿರ್ವಹಿಸಲಾರದೆ ಶ್ರೀಕೃಷ್ಣನಂ ಶರಣುಹೊಕ್ಕರು ॥೧೧॥ ಗೋವುಗಳು ಶಿರಸ್ಸುಗಳಂ ಬಗ್ಗಿಸಿಕೊಂಡು ಶರೀರಗಳಿಂದ ಮುಚ್ಚಿಕೊಂಡು ವರ್ಷಧಾರೆಗಳಿಂ ಪೀಡಿತವಾಗಿ ನಡುಗುತ ಭಗವಂತನ ಪಾದಮೂಲಕ್ಕೆ ಬಂದವು ॥೧೨॥ (ಆ ಗೋಪ ಗೋಪಿಯರು ಶ್ರೀಕೃಷ್ಣನಂ ಮರೆಹೊಕ್ಕರು. ಅದೆಂತೆನೆ-) ಮಹಾಭುಜವುಳ್ಳ ಶ್ರೀಕೃಷ್ಣನೇ! ನಿನ್ನನ್ನೇ ನಾಥನನ್ನಾಗಿ ನಂಬಿಕೊಂಡಿರುವ ಗೋಕುಲವಂ ರಕ್ಷಿಸು. ಭಕ್ತವತ್ಸಲನಾದ ಪ್ರಭುವಾದ ಶ್ರೀಕೃಷ್ಣನೇ! ಕೋಪಿಷ್ಠನಾದ ಇಂದ್ರನಿಂದ ಪೀಡಿತರಾದ ನಮ್ಮಂ ರಕ್ಷಿಸು ॥೧೩॥ ಎಂದು ಗೋಪಾಲಕರು ಕೃಷ್ಣನಂ ಕುರಿತು ಮೊರೆಯಿಡಲಾಗಿ ಶ್ರೀಕೃಷ್ಣನು ಪ್ರಚಂಡವಾಯುವಿನಿಂದ ಯು

ನಿರೀಕ್ಷ್ಯ ಭಗವಾನ್ಮೇನೇ ಕುಪಿತೇಂದ್ರಕೃತಂ ಹರಿಃ ॥೧೪॥ ಅಪರ್ತ್ವತ್ಯುಲ್ಬಣಂ ವರ್ಷಮತಿವಾತಂ ಶಿಲಾಮಯಂ । ಸ್ವಯಾಗೇ ವಿಹತೇಽಸ್ಮಾಭಿರಿಂದ್ರೋ ನಾಶಾಯ ವರ್ಷತಿ ॥೧೫॥ ತತ್ರ ಪ್ರತಿವಿಧಿಂ ಸಮ್ಯಗಾತ್ಮಯೋಗೇನ ಸಾಧಯೇ । ಲೋಕೇಶಮಾನಿನಾಂ ಮೌಢ್ಯಾದ್ಧರಿಷ್ಯೇ ಶ್ರೀಮದಂ ತಮಃ ॥೧೬॥ ನ ಹಿ ಸದ್ಭಾವಯುಕ್ತಾನಾಂ ಸುರಾಣಾಮೀಶವಿಸ್ಮಯಃ । ಮತ್ತೋಽಸತಾಂ ಮಾನಭಂಗಃ ಪ್ರಶಮಾಯೋಪಕಲ್ಪತೇ ॥೧೭॥ ತಸ್ಮಾನ್ಮಚ್ಛರಣಂ ಗೋಷ್ಠಂ ಮನ್ನಾಥಂ ಮತ್ಪರಿಗ್ರಹಂ । ಗೋಪಾಯೇ ಸ್ವಾತ್ಮಯೋಗೇನ

* ಗೋವರ್ಧನೋದ್ಧರಣಸೌಷ್ಟವಂ *

ಸೋಽಯಂ ಮೇ ವ್ರತ ಆಹಿತಃ ॥೧೮॥ ಇತ್ಯುಕ್ತ್ವೈಕೇನ ಹಸ್ತೇನ ಕೃತ್ವಾ ಗೋವರ್ಧನಾಚಲಂ । ದಧಾರ

---

ಕೊಲ್ಲಲ್ಪಡುತಲಿರುವ ಗೋಪಗೋಕುಲವನ್ನು, ಅಚೇತನಂ-ಪ್ರಜ್ಞೆಯಿಲ್ಲದ್ದನ್ನಾಗಿ, ನಿರೀಕ್ಷ್ಯ-ನೋಡಿ, ಕುಪಿತೇಂದ್ರಕೃತಂ-ಸಿಟ್ಟುಗೊಂಡ ಇಂದ್ರನಿಂದ ಮಾಡಲ್ಪಟ್ಟ ಕೆಡುಕುಮಳೆಯನ್ನಾಗಿ, ಮೇನೇ-ಅರಿತನು ॥೧೪॥ ಇಂದ್ರಃ-ದೇವರಾಜನು, ಸ್ವಯಾಗೇ-ತನ್ನ ಪೂಜೆಯು, ಅಸ್ಮಾಭಿಃ-ನಮ್ಮಿಂದ, ವಿಹತೇ ಸತಿ-ವಿನಾಶಗೊಳಿಸಲ್ಪಟ್ಟದ್ದಾಗುತ್ತಿರಲು, ನಾಶಾಯ-ಗೋಕುಲದ ಹಾನಿಗೋಸ್ಕರ, ಅಪರ್ತು-ಅಕಾಲಸಂಭವವಾಗಿಯೂ, ಅತ್ಯುಲ್ಬಣಂ-ಬಹಳ ಹೆಚ್ಚಿದ್ದಾಗಿಯೂ, ಅತಿವಾತಂ-ಹೆಚ್ಚುಗಾಳಿಯುಳ್ಳದ್ದಾಗಿಯೂ, ಶಿಲಾಮಯಂ-ಆನೆಕಲ್ಲುಗಳು ಅಧಿಕವಾಗಿಯೂ ಇರುವ ವರ್ಷಂ-ಮಳೆಯನ್ನು, ವರ್ಷತಿ-ಸುರಿಸುತ್ತಿದಾನೆ ॥೧೫॥ ತತ್ರ-ಆ ವಿಷಯದಲ್ಲಿ, ಪ್ರತಿವಿಧಿಂ-ಪ್ರತಿಕ್ರಿಯೆಯನ್ನು, ಆತ್ಮಯೋಗೇನ-ನನ್ನ ಉಪಾಯದಿಂದ, ಸಮ್ಯಕ್-ಚನ್ನಾಗಿ, ಸಾಧಯೇ-ಸಾಧಿಸುವೆನು. ಮೌಢ್ಯಾತ್-ಮೂಢತ್ವದಿಂದ, (ಅರುಹಿಲ್ಲದ್ದರಿಂದ) ಲೋಕೇಶಮಾನಿನಾಂ-ತಾವೇ ಲೋಕಕ್ಕೊಡೆಯರೆಂಬ ಗರ್ವವುಳ್ಳವರ, ಶ್ರೀಮದಂ ಐಶ್ವರ್ಯದ ಸೊಕ್ಕುಳ್ಳ, ತಮಃ-ತಮೋಗುಣವಿಕಾರವನ್ನು, ಹರಿಷ್ಯೇ-ಪರಿಹರಿಸುವೆನು ॥೧೬॥ ಸದ್ಭಾವಯುಕ್ತಾನಾಂ ಸಾತ್ವಿಕಸ್ವಭಾವದಿಂದ ಕೂಡಿದ, ಸುರಾಣಾಂ-ದೇವತೆಗಳಿಗೆ, ಈಶವಿಸ್ಮಯಃ-ನಾವೇ ಈಶ್ವರರೆಂಬ ವಿಶೇಷಗರ್ವವು, ನಹಿ-ಇಲ್ಲವಷ್ಟೆ? ಅಸತಾಂ-ಸಾತ್ವಿಕರಲ್ಲದವರಿಗೆ, ಮತ್ತಃ-ನನ್ನದೆಸೆಯಿಂದ, ಮಾನಭಂಗಃ-ಗರ್ವಹಾನಿಯು, ಪ್ರಶಮಾಯ-ಶಾಂತಿಗೋಸ್ಕರ, ಉಪಕಲ್ಪತೇ-ಈಗಲೇ ಸಮರ್ಥವಾಗುವುದು ॥೧೭॥ ತಸ್ಮಾತ್-ಆ ಕಾರಣದೆಸೆಯಿಂದ, ಮಚ್ಛರಣಂ-ನಾನೇ ರಕ್ಷಕನಾಗಿವುಳ್ಳ, (ನನ್ನ ಮನೆಯಾದ) ಮನ್ನಾಥಂ-ನಾನೇ ಒಡೆಯನಾಗಿವುಳ್ಳ, ಮತ್ಪರಿಗ್ರಹಂ-ನನ್ನ ಕುಟುಂಬವಾದ, ಗೋಷ್ಠಂ-ನಂದಗೋಕುಲವನ್ನು, ಸ್ವಾತ್ಮಯೋಗೇನ-ನನ್ನ ಸ್ವಭಾವಶಕ್ತಿಯಿಂದ, ಗೋಪಾಯೇ-ರಕ್ಷಿಸುವೆನು. ಸೋಽಯಂ ವ್ರತಃ-ನನ್ನವರನ್ನು ರಕ್ಷಿಸುವೆನೆಂಬ ಆಯಿಾನಿಯಮವು, ಮೇ-ನನಗೆ, ಆಹಿತಃ-ಸಂಪಾದಿತವಾದ್ದು. (ತುಂಬಾಯಿಷ್ಟವಾದ್ದು) ॥೧೮॥ ಕೃಷ್ಣಃ-ಶ್ರೀಹರಿಯು, ಇತ್ಯುಕ್ತ್ವಾ-ಹೀಗೆ ಹೇಳಿ, ಗೋವರ್ಧನಾಚಲಂ-ಗೋವರ್ಧನಪರ್ವತವನ್ನು, ಏಕೇನ ಹಸ್ತೇನ-ಒಂದು ಕೈಯಿಂದ, ಕೃತ್ವಾ-ಉದ್ಧರಣವಂಗಯ್ದು, (ನೆಗಪಿ) ಬಾಲಕಃ-ಹುಡುಗನು, ಛತ್ರಾಕಮಿವ-ನಾಯಿ

---

ಕೊಡೆಗಳಾದ ಶಿಲಾವರ್ಷಗಳಿಂದ ಪೀಡಿತವಾಗಿ ಚೈತನ್ಯರಹಿತವಾದ ಗೋಕುಲಮಂ ವ್ರಜಮಂ ಸಹ ನೋಡಿ ಕೋಪಿಷ್ಠನಾದ ಇಂದ್ರನ ವ್ಯಾಪಾರವಿದು ಎಂದು ತಿಳಿದನು ॥೧೪॥ ನಮ್ಮಿಂದ ತನ್ನ ಪೂಜೆಯು ಅಡ್ಡಿಮಾಡಲ್ಪಟ್ಟದ್ದರಿಂದ ಇಂದ್ರನು ಕೋಪವುಳ್ಳವನಾಗಿ ಶಿಲಾಮಯವಾದ ಅಧಿಕವಾದ ಮಹಾವಾತವುಳ್ಳ ಅಕಾಲವರ್ಷಮಂ ವ್ರಜನಾಶಾರ್ಥವಾಗಿ ಉಂಟುಮಾಡಿದ್ದಾನೆ ॥೧೫॥ ಆಗಲಿ, ನಾನು ಇದಕ್ಕೆ ಪ್ರತಿವಿಧಾನವಂ ನನ್ನ ಸಾಮರ್ಥ್ಯದಿಂದ ಸಾಧಿಸುತ್ತೇನೆ, ಮೂಢಭಾವದಿಂದ 'ತಾವೇ ಲೋಕನಾಥರು' ಎಂಬದಾಗಿ ತಿಳಿದಿರುವ ದೇವತೆಗಳ ಐಶ್ವರ್ಯಮದದಿಂದುಂಟಾದ ಗರ್ವಮಂ ಪರಿಹರಿಸುತ್ತೇನೆ ॥೧೬॥ ಸತ್ವಸ್ವಭಾವರೂಪರಾಗಿ ನನ್ನಲ್ಲಿ ಭಕ್ತಿಯುಕ್ತರಾದ ದೇವತೆಗಳಿಗೆ 'ನಾವೇ ಪ್ರಭುಗಳು' ಎಂಬ ಗರ್ವವಿಲ್ಲ. ಅದಲ್ಲದೆ ದುರಹಂಕೃತರಾದವರಿಗೆ ಮಾನಭಂಗವೆ ಅನುಗ್ರಹವು ॥೧೭॥ ಆ ಕಾರಣದಿಂದ ನನಗೆ ಆವಾಸಸ್ಥಾನವಾಗಿ ನನ್ನನ್ನೇ ನಂಬಿಕೊಂಡಿರುವುದಾಗಿ ನನ್ನಿಂದ ಅಭಿಮಾನಿತವಾಗಿ ಇರುವ ಈ ವ್ರಜಮಂ ನನ್ನ ಸಾಮರ್ಥ್ಯದಿಂದ ರಕ್ಷಿಸುತ್ತೇನೆ, ಇದೇ ನನಗೆ ವ್ರತವು ಎಂದು ಶ್ರೀಕೃಷ್ಣನು ನುಡಿದು ಏಕಹಸ್ತದಿಂದ ಆ ಗೋವರ್ಧನಪರ್ವತಮಂ ಬಾಲಕನು ನಾಯಿಕೊಡೆಯನ್ನೆ

ಲೀಲಯೈಕಕರೇಣೋದ್ಧೃತ್ಯ ಛತ್ರಾಕಮಿವ ಬಾಲಕಃ ॥೧೯॥ ಅಥಾಹಭಗವಾನ್ಗೋಪಾನ್ಹೇಂಬತಾತವ್ರಜೌಕಸಃ । ಯಥೋಪಜೋಷಂವಿಶತಗಿರಿಗರ್ತಂಸಗೋಧನಾಃ ॥೨೦॥ ನತ್ರಾಸಇಹವಃಕಾರ್ಯೋಮದ್ಧಸ್ತಾದ್ರಿನಿಪಾತನಾತ್ । ವಾತವರ್ಷಭಯೇನಾಲಂತತ್ತ್ರಾಣಂವಿಹಿತಂಹಿವಃ ॥೨೧॥ ತಥಾನಿರ್ವಿವಿಶುರ್ಗರ್ತಂ ಕೃಷ್ಣಾಶ್ವಾಸಿತಮಾನಸಾಃ । ಯಥಾವಕಾಶಂಸಧನಾಸ್ಸವ್ರಜಾಸ್ಸೋಪಜೀವಿನಃ ॥೨೨॥ ಕ್ಷುತ್ತೃಡ್ವ್ಯಥಾಂಸುಖಾಪೇಕ್ಷಾಂಹಿತ್ವಾತೈರ್ವ್ರಜವಾಸಿಭಿಃ । ವೀಕ್ಷ್ಯಮಾಣೋದಧಾರಾದ್ರಿಂಸಪ್ತಾಹಂನಾಚಲತ್ಪದಾತ್ ॥೨೩॥ ಕೃಷ್ಣಯೋಗಾನುಭಾವಂತಂನಿಶಾಮ್ಯೇಂದ್ರೋತಿವಿಸ್ಮಿತಃ । ನಿಸ್ತಂಭೋಭ್ರಷ್ಟ

---

ಕೊಡೆಯನ್ನು ಹೇಗೋಹಾಗೆ, (ಸಂ-ಶಿಲೀಂಧ್ರ, ತೆ-ಪುಟ್ಟುಗೊಡುಗು, ಕನಡ-ಅಣಬೆ,)ಲೀಲಯಾ-ವಿಲಾಸದಿಂದ, ದಧಾರ-ಧರಿಸಿದನು (ಹೊತ್ತನು) ॥೧೯॥ ಅಥ-ಆಮೇಲೆ, ಭಗವಾನ್-ಶ್ರೀಕೃಷ್ಣನು, ಗೋಪಾನ್-ಗೊಲ್ಲರನ್ನು ಕುರಿತು, ಆಹ-ಹೇಳಿದನು ಹೇಅಂಬ-ಎಲೆಅಮ್ಮ! ಹೇತಾತ-ಎಲೈತಂದೆಯೇ! ಹೇವ್ರಜೌಕಸಃ-ಎಲೈಗೋಕುಲವಾಸಿಗಳಿರಾ! ಸಗೋಧನಾಸ್ಸಂತಃ-ಗೋವುಗಳಿಂದಲೂ ಧನಗಳಿಂದಲೂ ಸಹಿತರಾದವರಾಗಿ, ಯಥೋಪಜೋಷಂ-ಹೇಗೆಸುಖವೋಹಾಗೆ, ಗಿರಿಗರ್ತಂ-ಬೆಟ್ಟದ ಕುಳಿಯನ್ನು, ವಿಶತ-ಪ್ರವೇಶಿಸಿರಿ (ಹೊಗಿರಿ) ॥೨೦॥ ಇಹ-ಈಕುಳಿಯಲ್ಲಿ, ಮದ್ಧಸ್ತಾದ್ರಿನಿಪಾತನಾತ್-ಮತ್-ನನ್ನ, ಹಸ್ತ-ಕೈಯಿಂದ, ಅದ್ರಿ-ಬೆಟ್ಟದ, ನಿಪಾತನಾತ್-ಬೀಳುವಿಕೆಯಬದೆಸೆಯಿಂದ, ತ್ರಾಸಃ-ಭಯವು, ವಃ-ನಿಮ್ಮಿಂದ, ನಕಾರ್ಯಃ-ಮಾಡಲ್ಪಡತಕ್ಕದ್ದಲ್ಲವು, ವಾತವರ್ಷಭಯೇನ-ಗಾಳಿಮಳೆಯಹೆದರಿಕೆಯಿಂದ, ಅಲಂ-ಸಾಕು, ವಃ-ನಿಮಗೆ, ತತ್ತ್ರಾಣಂ-ಅದರದೆಸೆಯಿಂದರಕ್ಷಣವು, ವಿಹಿತಂಹಿ-ಮಾಡಲ್ಪಟ್ಟಿರುವದಲ್ಲವೆ? ॥೨೧॥ ತಥಾ-ಹಾಗೆ, ಕೃಷ್ಣಾಶ್ವಾಸಿತಮಾನಸಾಃ-ಕೃಷ್ಣನಿಂದ ಸಮಾಧಾನಗೊಳಿಸಲ್ಪಟ್ಟಮನಸ್ಸುಳ್ಳವರಾದಗೊಲ್ಲರು, ಸಧನಾಃ-ಗೋಧನಸಹಿತರಾಗಿಯೂ, ಸವ್ರಜಾಃ-ಮಕ್ಕಳಿಂದಸಹಿತರಾಗಿಯೂ. ಸೋಪಜೀವಿನಃ-ತಮ್ಮನ್ನು ಅನುಸರಿಸಿ ಜೀವಿಸುವ ಪ್ರಾಣಿಗಳಿಂದಸಹಿತರಾಗಿಯೂ, ಯಥಾವಕಾಶಂ-ಬೇಕಾದಷ್ಟುಸ್ಥಲವುಂಟಾಗೋಣ್ವುಹೇಗೋಹಾಗೆ, ಗರ್ತಂ-ಬೆಟ್ಟದಕುಳಿಯಲ್ಲಿ, ನಿರ್ವಿವಿಶುಃ-ಇಳಿದುಹೊಕ್ಕಿದ್ದರು ॥೨೨॥ ಕೃಷ್ಣನು ಕ್ಷುತ್ತೃಡ್ವ್ಯಥಾಂ-ಹಸಿವುನೀರಡಿಕೆಗಳಬಾಧೆಯನ್ನೂ, ಸುಖಾಪೇಕ್ಷಾಂ-ಸೌಖ್ಯದಬಯಕೆಯನ್ನೂ, ಹಿತ್ವಾ-ಬಿಟ್ಟು, ತೈರ್ವ್ರಜವಾಸಿಭಿಃ-ಆಗೋಕುಲದಲ್ಲಿರತಕ್ಕ ಗೊಲ್ಲರಿಂದ, ವೀಕ್ಷ್ಯಮಾಣಸ್ಸನ್-ನೋಡಲ್ಪಡುತಿರುವನಾಗಿ, ಅದ್ರಿಂ-ಗೋವರ್ಧನಾಚಲವನ್ನು, ದಧಾರ-ಹೊತ್ತನು ಸಪ್ತಾಹಂ-೭ದಿನಗಳು, ಪದಾತ್-ನಿಂತಹೆಜ್ಜೆಯದೆಸೆಯಿಂದ, ನಾಚಲತ್-ಕದಲಲಿಲ್ಲವು ॥೨೩॥

---



ತ್ತಿರಂತೆ ಲೀಲೆಯಿಂದಲೇ ಎತ್ತಿದನು ॥೧೯॥ ಅನಂತರದಲ್ಲಿ ಭಗವಂತನು ಗೋಪರಂಕುರಿತು ನುಡಿದನುಎಲೆತಾಯಿಯೇ! ಎಲೈ ತಂದೆಯೇ! ಎಲೈಗೋಪಾಲಕರಿರಾ! ನಿಮ್ಮಪಶುಗಳು ಕರೆದುಕೊಂಡುಹೋಗಿ ಸುಖವಾಗಿಈಗೋವರ್ಧನ ಪರ್ವತದ ಹಳ್ಳವಂ ಪ್ರವೇಶಂಗೆಯ್ದು ಅಲ್ಲಿಸ್ವಸ್ಥವಾಗಿರಿ॥೨೦॥ನನ್ನ ಹಸ್ತದಿಂದ ಕಳಕೊಂಡು ಈಪರ್ವತವು ಮೇಲೆಬೀಳುವುದು ಎಂಬಭಯವು ನಿಮಗೆಬೇಡ ಮಹಾವಾತಭಯವೂ ವರ್ಷಭಯವೂನಿಮಗೆ ಇಲ್ಲದಂತೆ ನಾನುನಿಮಗೆ ಕ್ಷೇಮವಂ ಮಾಡಿರುವೆನು॥೨೧॥ಎಂಬಭಗವಂತನವಾಕ್ಯವಂಕೇಳಿ ಗೋಪರುಗಳು ಸ್ತ್ರೀಗಳಂನೋಡಿಕೊಂಡು ಆಹಳ್ಳದಲ್ಲಿ ದ್ರವ್ಯಸಹಿತರಾಗಿ ಪುತ್ರಾದಿಗಳಿಂದಲೂ ಸಹಿತರಾಗಿ ಸಪರಿವಾರರಾಗಿ ಅಲ್ಲಿಪ್ರವೇಶಿಸಿದರು॥೨೨॥ವ್ರಜವಾಸಿಗಳಾದ ಜನರು ತುತ್ತಿನಭಯವಂ ಬಾಯಾರಿಕೆ ಪುಪದ್ರವಮಂಸಹ ಮರೆತು, ಸುಖಾಪೇಕ್ಷೆಯಂಬಿಟ್ಟು, ನೋಡುತ್ತಿರಲಾಗಿ, ಶ್ರೀಕೃಷ್ಣನು ಏಳುದಿನಪರ್ಯಂತವೂಹೆಜ್ಜೆಯ ನಾಚೆತೆಗೆಯದ ನಿಂತುಕೊಂಡು ಪರ್ವತವಂಧರಿಸಿಇದ್ದನು॥೨೩॥ಆದೇವೇಂದ್ರನು ಶ್ರೀ

ಸಂಕಲ್ಪಃ ಸ್ವಯಂ ಮೇಘಾನ್ ನ್ಯವಾರಯತ್ ॥೧೪॥ ಖಂ ವ್ಯಭ್ರಮುದಿತಾದಿತ್ಯಂ ವಾತವರ್ಷಂ ಚ ದಾರುಣಂ।
ನಿಶಾಮ್ಯೋಪರತಂ ಗೋಪಾನ್ ಗೋವರ್ಧನಧರೋಽಬ್ರವೀತ್ ॥೧೫॥ ನಿರ್ಯಾತ ತ್ಯಜತ ತ್ರಾಸಂ ಗೋಪಾಃ ಸ
ಸ್ತ್ರೀಧನಾರ್ಭಕಾಃ । ಉಪಾರತಂ ವಾತವರ್ಷಂ ವ್ಯುದಪ್ರಾಯಾಶ್ಚ ನಿಮ್ನಗಾಃ ॥೧೬॥ ತತಸ್ತೇ ನಿ
ರ್ಯಯುರ್ಗೋಪಾಃ ಸ್ವಂ ಸ್ವಮಾದಾಯ ಗೋಧನಂ । ಶಕಟೋಢೋಪಕರಣಂ ಸ್ತ್ರೀಬಾಲಸ್ಥವಿರಾಃ ಶ
ನೈಃ ॥೧೭॥ ಭಗವಾನಪಿ ತಂ ಶೈಲಂ ಸ್ವಸ್ಥಾನೇ ಪೂರ್ವವತ್ಪ್ರಭುಃ । ಪಶ್ಯತಾಂ ಸರ್ವಭೂತಾನಾಂ ಸ್ಥಾ
ಪಯಾಮಾಸ ಲೀಲಯಾ ॥೧೮॥ ತಂ ಪ್ರೇಮವೇಗಾನ್ನಿಭೃತಾ ವ್ರಜೌಕಸೋ ಯಥಾ ಸಮೀಯುಃ ಪರಿರಂಭ

---

ಇಂದ್ರಃ-ದೇವರಾಜನು, ತಂ-ಆ, ಕೃಷ್ಣಯೋಗಾನುಭಾವಂ-ಕೃಷ್ಣನ ಸ್ವಾಭಾವಿಕಸಾಮರ್ಥ್ಯವನ್ನು, ನಿಶಾಮ್ಯ-ನೋಡಿ, ಅತಿ
ವಿಸ್ಮಿತಃ-ಅತ್ಯಾಶ್ಚರ್ಯಪುಳ್ಳವನಾದ್ದರಿಂದಲೇ, ನಿಸ್ತಂಭಃ-ಗರ್ವವಿಲ್ಲದವನಾಗಿಯೂ, ಭ್ರಷ್ಟಸಂಕಲ್ಪಃ-ಭಗ್ನವಾದ ಇಚ್ಛೆ
ಯುಳ್ಳವನಾಗಿಯೂ, ಸ್ವಯಂ-ತಾನಾಗಿಯೇ, ಮೇಘಾನ್-ಸಂವರ್ತಗಳೆಂಬ ಮೋಡಗಳನ್ನು, ನ್ಯವಾರಯತ್-ಮಳೆಸುರಿಯದಂತೆ
ತಡೆದನು ॥೧೪॥ ಗೋವರ್ಧನಧರಃ-ಗೋವರ್ಧನಪರ್ವತವನ್ನು ಧರಿಸಿದ ಕೃಷ್ಣನು, ಖಂ-ಆಕಾಶವನ್ನು, ವ್ಯಭ್ರಂ-ಮೋಡವಿಲ್ಲದ್ದ
ನ್ನಾಗಿಯೂ, ಉದಿತಾದಿತ್ಯಂ-ಮೂಡಿದ ಸೂರ್ಯನುಳ್ಳದ್ದನ್ನಾಗಿಯೂ, ದಾರುಣಂ-ಕ್ರೂರವಾದ, ವಾತವರ್ಷಂ ಚ-ಗಾಳಿಯುಮ
ಳೆಯನ್ನೂ, ಉಪರತಂ ಬಿಟ್ಟುಹೋದ್ದನ್ನಾಗಿಯೂ, ನಿಶಾಮ್ಯ-ಕಂಡು, ಗೋಪಾನ್-ಗೊಲ್ಲರನ್ನು ಕುರಿತು, ಅಬ್ರವೀತ್-ನು
ಡಿದನು॥೧೫॥ ಹೇ ಗೋಪಾಃ-ಎಲೈ ಗೊಲ್ಲರೇ! ವಾತವರ್ಷಂ-ಗಾಳಿಯೂ ಮಳೆಯೂ, ಉಪಾರತಂ-ಶಾಂತವಾದದ್ದಾಗಿದೆ, ನಿಮ್ನ
ಗಾಶ್ಚ-ಜಲಪ್ರವಾಹಗಳೂಕೂಡ, ವ್ಯುದಪ್ರಾಯಾಃ-ನೀರುಕಡಮೆಯಾದವುಗಳಹಾಗಾಗಿವೆ, ತ್ರಾಸಂ-ಭಯವನ್ನು, ತ್ಯಜತ
ತೊರೆಯಿರಿ. ಸಸ್ತ್ರೀಧನಾರ್ಭಕಾಃ-ಹೆಂಗಳಿಂದಲೂ ಗೋಧನಗಳಿಂದಲೂ ಮಕ್ಕಳಿಂದಲೂ ಸಹಿತರಾದವರಾಗಿ, ನಿರ್ಯಾತ-
ಹೊರಕ್ಕೆಹೊರಟುಬನ್ನಿರಿ॥೧೬॥ತತಃ-ಕೃಷ್ಣನು ಹಾಗೆಹೇಳಿದಮೇಲೆ, ತೇ ಗೋಪಾಃ-ಆಗೊಲ್ಲರು, ಸ್ವಂಸ್ವಂ-ತಮ್ಮತಮ್ಮ-ಗೋ
ಧನಂ-ಗೋವುಗಳೆಂಬ ಧನವನ್ನೂ, ಶಕಟೋಢೋಪಕರಣಂ-ಬಂಡಿಗಳಮೇಲೆಹೇರಿಸಲ್ಪಟ್ಟಸಾಮಗ್ರಿಯನ್ನೂ, ಆದಾಯ-
ತೆಗೆದುಕೊಂಡು, ಸ್ತ್ರೀಬಾಲಸ್ಥವಿರಾಃ-ಹೆಂಗಳೂ ಹುಡುಗರೂ ಮುದುಕರೂ, ಶನೈಃ-ಮೆಲ್ಲಗೆ, ನಿರ್ಯಯುಃ-ಹೊರಟೋಟ
ಬಂದರು॥೧೭॥ಪ್ರಭುಃ-ಸಮರ್ಥನಾದ, ಭಗವಾನಪಿ-ಕೃಷ್ಣನೂಕೂಡ, ಸರ್ವಭೂತಾನಾಂ-ಸಕಲಪ್ರಾಣಿಗಳೂ, ಪಶ್ಯತಾಂ
ಸತಾಂ-ನೋಡುತ್ತಿರುವರಾಗುತ್ತಿರುವಲ್ಲಿ, ತಂ ಶೈಲಂ-ಆಪರ್ವತವನ್ನು, ಸ್ವಸ್ಥಾನೇ-ಅದರಸ್ಥಳದಲ್ಲಿ, ಪೂರ್ವವತ್-ಮುನ್ನಿನಂ
ತೆ, ಲೀಲಯಾ-ವಿಲಾಸದಿಂದ, ಸ್ಥಾಪಯಾಮಾಸ-ನೆಲೆಗೊಳಿಸಿದನು ॥೧೮॥ಪ್ರೇಮವೇಗಾತ್-ಸ್ನೇಹಾತಿಶಯದಿಂದ, ನಿಭೃತಾಃ-

---

ಕೃಷ್ಣನ ಸಾಮರ್ಥ್ಯಾತಿಶಯವಂ ನೋಡಿ ಆಶ್ಚರ್ಯಯುಕ್ತನಾಗಿ ವ್ಯರ್ಥಸಂಕಲ್ಪನಾಗಿ ಸ್ತಂಭಿತನಾಗಿ
ಮೇಘಂಗಳಂ ವರ್ಷಿಸಬೇಡವೆಂದು ನಿವಾರಣಂಗೆಯ್ದನು॥೧೪॥ ಮೇಘರಹಿತವಾಗಿ ಸೂರ್ಯಪ್ರಕಾಶವುಳ್ಳದ್ದಾ
ಗಿ ನಿರ್ಮಲವಾಗಿರುವ ಆಕಾಶಮಂ ನೋಡಿ ಶ್ರೀಕೃಷ್ಣನು ಮಹಾವಾತಯುಕ್ತವಾದ ವೃಷ್ಟಿಯಿಂದ ಪೀಡಿ
ತರಾಗಿ ಆಮೇಲೆ ಸ್ವಸ್ಥಚಿತ್ತರಾದ ಗೋಪರುಂ ಕುರಿತು ನುಡಿದನು॥೧೫॥ (ಅದೆಂತೆನೆ-) ಎಲೈ ಗೋಪಾಲರು
ಗಳಿರಾ! ಇನ್ನು ನಿರ್ಭಯರಾಗಿ ಹೊರಟುಬನ್ನಿ, ಸಪರಿವಾರರಾಗಿ ಸ್ತ್ರೀಸಹಿತರಾಗಿ ಬಾಲಕರಂ ಕರೆದುಕೊಂ
ಡು ನಿಮ್ಮನಿಮ್ಮ ಯಥಾಸ್ಥಾನಕ್ಕೆ ಹೋಗಿಬಿಡಿ, ಮಹಾವಾತವು ಮಹಾವರ್ಷವು ಶಾಂತವಾಯಿತು॥೧೬॥ಹ
ಳ್ಳಗಳುಂ ಕೊಳ್ಳಗಳುಂ ನದಿಗಳುಂ ಸ್ವಲ್ಪೋದಕಂಗಳಾದವು. ಎಂಬ ಕೃಷ್ಣನ ವಾಕ್ಯಮಂ ಕೇಳಿ ಗೋಪಾಲಕರು
ತಮ್ಮತಮ್ಮ ಪದಾರ್ಥಂಗಳಂ ಸಾಗಿಸಿಕೊಂಡು ಗೋವುಗಳಂ ಬಂಡಿಗಳಂ ಸಹ ಸಾಗಿಸಿಕೊಂಡು, ಸ್ತ್ರೀಬಾ
ಲವೃದ್ಧರೊಡನೆ ಸಮೇತರಾಗಿ ಹೊರಟುಬಂದರು॥೧೭॥ ಭಗವಂತನು ಸರ್ವಪ್ರಾಣಿಗಳಂ ನೋಡುತ್ತಿರಲಾ
ಗಿ, ಆಪರ್ವತಮಂ ಸ್ವಸ್ಥಾನದಲ್ಲಿ ಯಥಾಪ್ರಕಾರವಾಗಿ ಲೀಲೆಯಿಂದಲೆ ಇರಿಸಿಬಿಟ್ಟನು॥೧೮॥ ಆನಂತರದಲ್ಲಿ
ವ್ರಜವಾಸಿಗಳಾದ ಜನರು ಪ್ರೇಮಪೂರ್ಣರಾಗಿ ಆಲಿಂಗನಾದಿಗಳಿಂದ ಆಭಗವಂತನಂ ಯಥಾಯೋಗ್ಯವಾ

ಣಾದಿಭಿಃ । ಗೋಪ್ಯಶ್ಚ ಸಸ್ನೇಹಮಪೂಜಯನ್ ಮುದಾದಧ್ಯಕ್ಷತಾದ್ಭಿರ್ಯುಯುಜುಸ್ಸದಾಶಿಷಃ॥೨೯॥
ಯಶೋದಾರೋಹಿಣೀನಂದೋರಾಮಶ್ಚ ಬಲಿನಾಂವರಃ । ಕೃಷ್ಣಮಾಲಿಂಗ್ಯಯುಯುಜುರಾಶಿಷಸ್ಸ್ನೇ
ಹಕಾತರಾಃ ॥೩೦॥ ದಿವಿದೇವಗಣಾಸ್ಸಾಧ್ಯಾಸ್ಸಿದ್ಧಗಂಧರ್ವಚಾರಣಾಃ । ತುಷ್ಟುವುರ್ಮುಮುಚು
ಸ್ತುಷ್ಟಾಃಪುಷ್ಪವರ್ಷಾಣಿಪಾರ್ಥಿವ ॥೩೧॥ ಶಂಖದುಂದುಭಯೋನೇದುರ್ದಿವಿದೇವಪ್ರಚೋದಿತಾಃ ।
ಜಗುರ್ಗಂಧರ್ವಪತಯಸ್ತುಂಬುರುಪ್ರಮುಖಾನೃಪ ॥೩೨॥ ತತೋನುರಕ್ತೈಃಪಶುಪೈಃಪರಿಶ್ರಿ
ತೋರಾಜನ್ಸ್ವಗೋಷ್ಠಂಸಬಲೋವಿಶದ್ಧರಿಃ । ತಥಾವಿಧಾನ್ಯಸ್ಯಕೃತಾನಿಗೋಪಿಕಾಗಾಯಂತ್ಯಈ
ಯುರ್ಮುದಿತಾಹೃದಿಸ್ಪೃಶಃ ॥೩೩॥ ಇತಿದಶಮಸ್ಕಂಧೆ ಪಂಚವಿಂಶೋಧ್ಯಾಯಃ

---

ತುಂಬಿದವರಾದ, ವನೌಕಸಃ-ಕಾಡಿನಲ್ಲಿರುವಗೊಲ್ಲರು, ಪರಿರಂಭಣಾದಿಭಿಃ-ಅಪ್ಪಿಕೊಳ್ಳೋಣವೇಮೊದಲಾದಉಪಚಾರಗಳಿಂದ ಯಥಾ-ಹೇಗೆಉಚಿತವೋಹಾಗೆ, ತಂ-ಆಶ್ರೀಕೃಷ್ಣನನ್ನು ಕುರಿತು, ಸಮಿಯುಃ-ಸೇರಿದರು ಗೋಪ್ಯಶ್ಚ-ಗೊಲ್ಲತಿಯರೂಕೂಡ, ಸಸ್ನೇಹಂ-ಪ್ರೇಮದೊಡನೆ, ಅಪೂಜಯನ್-ಪೂಜಿಸಿದರು ವೃದ್ಧರೆಲ್ಲರೂ-ದಧ್ಯಕ್ಷತಾದ್ಭಿಃ-ಮೊಸರು ಅಕ್ಷತೆ ನೀರುಮುಂತಾದರಕ್ಷಾದ್ರವ್ಯಗಳಿಂದ, ಮುದಾ-ಸಂತೋಷದೊಡನೆ, ಸದಾಶಿಷಃ-ಸಮೀಚೀನವಾದಹರಕೆಗಳನ್ನು, ಯುಯುಜುಃ-ಕೂಡಿಸಿದರು ॥೨೯॥ ಯಶೋದಾ-ಗೋಪಿದೇವಿಯು, ರೋಹಿಣೀ-ವಸುದೇವಪತ್ನಿಯೂ, ನಂದಃ-ನಂದಗೋಪನೂ, ಬಲಿನಾಂ-ಬಲವುಳ್ಳವರಲ್ಲಿ, ವರಃ-ಶ್ರೇಷ್ಠನಾದ. ರಾಮಶ್ಚ-ಬಲಭದ್ರನೂಕೂಡ, ಸ್ನೇಹಕಾತರಾಸ್ಸಂತಃ-ಪ್ರೇಮದಿಂದಭಯಚಂಚಲರಾಗಿ, ಕೃಷ್ಣಂ-ಶ್ರೀಹರಿಯನ್ನು, ಆಲಿಂಗ್ಯ-ಅಪ್ಪಿಕೊಂಡು, ಆಶಿಷಃ-ಹರಕೆಗಳನ್ನು, ಯುಯುಜುಃ-ಕೂಡಿಸಿದರು ॥೩೦॥ ಹೇಪಾರ್ಥಿವ-ಎಲೈಪರೀಕ್ಷಿದ್ರಾಯನೇ! ದಿವಿ-ಅಂತರಿಕ್ಷದಲ್ಲಿ, ದೇವಗಣಾಃ-ದೇವತೆಗಳಗುಂಪುಗಳು, ಸಾಧ್ಯಾಃ-ಸಾಧ್ಯರೆಂಬವರು, ಸಿದ್ಧಗಂಧರ್ವ ಚಾರಣರೆಂಬವರೂ, ತುಷ್ಟಾಸ್ಸಂತಃ-ತೃಪ್ತರಾಗಿ, ತುಷ್ಟುವುಃ-ಸ್ತುತಿಗೆಯ್ದರು. ಪುಷ್ಪವರ್ಷಾಣಿ-ಪೂಮಳೆಗಳನ್ನು, ಮುಮುಚುಃ-ಸುರಿದರು ॥೩೧॥ ಹೇನೃಪ-ಎಲೈರಾಯನೇ! ದಿವಿ-ಅಂತರಿಕ್ಷದಲ್ಲಿ, ದೇವಪ್ರಚೋದಿತಾಃ-ದೇವತೆಗಳಿಂದಪ್ರಯೋಗಿಸಲ್ಪಟ್ಟವಾದ, ಶಂಖದುಂದುಭಯಃ-ಜಯಶಂಖಗಳೂ ಭೇರೀವಾದ್ಯಗಳೂ, ನೇದುಃ-ಮೊಳಗಿದವು, ತುಂಬುರುಪ್ರಮುಖಾಃ-ತಂಬುರುಮುಂತಾದ, ಗಂಧರ್ವಪತಯಃ-ಗಾಯಕದೇವನಾಯಕರು, ಜಗುಃ-ಹಾಡಿದರು ॥೩೨॥ ಹೇರಾಜನ್-ಎಲೈರಾಯನೇ ತತಃ-ಆಮೇಲೆ, ಸಬಲಃ-ಬಲರಾಮನೊಡನೆಸಹಿತನಾದ, ಹರಿಃ-ಶ್ರೀಕೃಷ್ಣನು, ಅನುರಕ್ತೈಃ-ತನ್ನೊಳಗಕ್ಕರೆಯುಳ್ಳ, ಪಶುಪೈಃ-ಗೋಪಾಲಕರಿಂದ, ಪರಿಶ್ರಿತಸ್ಸನ್-ಬಳಸಲ್ಪಟ್ಟವನಾಗಿ, ಸ್ವಗೋಷ್ಠಂ-ತನ್ನಗೊಲ್ಲರಹಳ್ಳಿಯನ್ನು, ಅವಿಶತ್-ಹೊಕ್ಕನು. ಗೋಪಿಕಾಃ-ಗೊಲ್ಲತಿಯರು, ಮುದಿತಾಸ್ಸತ್ಯಃ-ಸಂತುಷ್ಟರಾಗಿ, ಹೃದಿಸ್ಪೃಶಃ-ತಮ್ಮಮನವಂಮುಟ್ಟುತಲಿರುವ, (ಪ್ರಿಯನಾದ) ಅಸ್ಯ-ಈಶ್ರೀಕೃಷ್ಣನ, ತಥಾವಿಧಾನಿ-ಅಂಥಾ-ಬಗೆಯುಳ್ಳವಾದ, ಕೃತಾನಿ-ಲೀಲಾಕೃತ್ಯಗಳನ್ನು, ಗಾಯಂತ್ಯಸ್ಸತ್ಯಃ-ಹಾಡುತಲಿರುವರಾಗಿ, ಈಯುಃ-ತೆರಳಿದರು (ಸೇರಿದರು.) ॥೩೩॥

ಇತಿಶ್ರೀಮದ್ಭಾಗವತದಶಮಸ್ಕಂಧಪ್ರತಿಪದಟೀಕಾಯಾಂಪಂಚವಿಂಶೋಧ್ಯಾಯಃ-

---

ಸ್ತುತಿಸಿದರು ಗೋಪೀಜನರು ಸ್ನೇಹಪೂರ್ವಕವಾಗಿ ದಧ್ಯಕ್ಷತೋದಕಗಳಿಂದ ಆಶ್ರೀಕೃಷ್ಣನಂಪೂಜಿಸಿ ಆಶೀರ್ವಾದವಂ ಮಾಡಿದರು ॥೨೯॥ ಯಶೋದಾದೇವಿಯೂ ರೋಹಿಣೀದೇವಿಯೂ ನಂದನೂ ಬಲರಾಮನೂ ಶ್ರೀಕೃಷ್ಣನಂ ಆಲಿಂಗನಂಗೈದು ಸ್ನೇಹಪರವಶರಾಗಿ ಆಶೀರ್ವಾದಂಗಳಂ ಮಾಡಿದರು ॥೩೦॥ ಸ್ವರ್ಗದಲ್ಲಿ ದೇವಸಮೂಹಂಗಳು ಸಾಧ್ಯರು ಸಿದ್ಧರು ಗಂಧರ್ವರು ಚಾರಣರು ಸ್ತುತಿಯಂ ಮಾಡಿ ಪುಷ್ಪವರ್ಷಮಂ ಸುರಿಸಿದರು ॥೩೧॥ ದೇವಪ್ರೇರಿತವಾದ ಶಂಖಗಳು ಭೇರಿಗಳು ಧ್ವನಿಗೆಯ್ದುವು. ತುಂಬುರುಮೊದಲಾದ ಗಂಧರ್ವಪತಿಗಳು ಗಾನಂಗೆಯ್ದರು. ॥೩೨॥ ಅನಂತರದಲ್ಲಿ ಅನುರಾಗಯುಕ್ತರಾದ ಗೋಪಾಲಕರಿಂದ ಪರಿವೃತನಾಗಿ ಬಲರಾಮಸಮೇತನಾಗಿ ಶ್ರೀಕೃಷ್ಣನು ವ್ರಜಮಂ ಪ್ರವೇಶಿಸಿದನು. ಗೋಪಸ್ತ್ರೀಯರುಗಳು ಆಪ್ರಕಾರವಾದ ಶ್ರೀಕೃಷ್ಣನ ಚರಿತ್ರವಂ ಗಾನಂಗೆಯ್ಯುತ ಪ್ರೇಮಯುಕ್ತರಾಗಿ ವ್ರಜಕ್ಕೆ ಬಂದರು ॥೩೩॥ ‡

ಅಥಷಡ್ವಿಂಶಾಧ್ಯಾಯಾರಂಭಃ

ಶ್ರೀಶುಕಃ॥ ಏವಂವಿಧಾನಿಕರ್ಮಾಣಿಗೋಪಾಃಕೃಷ್ಣಸ್ಯವೀಕ್ಷ್ಯತೇ । ಅತದ್ವೀರ್ಯವಿದಃಪ್ರೋಚು ರ್ನಂದಮಭ್ಯೇತ್ಯವಿಸ್ಮಿತಾಃ ॥೧॥ ಬಾಲಕಸ್ಯಯದೇತಾನಿಕರ್ಮಾಣ್ಯತ್ಯದ್ಭುತಾನಿವೈ । ಕಥಮ ರ್ಹತ್ಯಸೌಜನ್ಮಗ್ರಾಮ್ಯೇಷ್ವಾತ್ಮಜುಗುಪ್ಸಿತಂ ॥೨॥ ಯಸ್ಸಪ್ತಹಾಯನೋಬಾಲಃಕರೇಣೈಕೇನಲೀ

---

೨೬ನೆಯಅಧ್ಯಾಯಪ್ರತಿಪದಟೀಕೆ.

[ ಶುಕವಾಕ್ಯವು ]ತೇಗೋಪಾಃ-ಆಗೊಲ್ಲರು, ಕೃಷ್ಣಸ್ಯ-ಶ್ರೀಹರಿಯ, ಏವಂವಿಧಾನಿ-ಇಂಥಾಬಗೆಯುಳ್ಳ, ಕರ್ಮಾಣಿ-೦ ಕೆಲಸಗಳನ್ನು, ವೀಕ್ಷ್ಯ-ನೋಡಿ, ಅತದ್ವೀರ್ಯವಿದಃ-ಆಕೃಷ್ಣನಸಾಮರ್ಥ್ಯವನ್ನು ಅರಿಯದವರಾದ್ದರಿಂದಲೇ, ವಿಸ್ಮಿತಾ ಸ್ಸಂತಃ-ಅಚ್ಚರಿಗೊಂಡವರಾಗಿ, ನಂದಂ-ನಂದಗೋಪನನ್ನು ಕುರಿತು, ಅಭ್ಯೇತ್ಯ-ಬಂದು, ಪ್ರೋಚುಃ-ಹೇಳಿದರು ॥೧ [ ಗೋಪಾಲಕರವಾಕ್ಯವು ] ಬಾಲಕಸ್ಯ-ಹುಡುಗನಾದಕೃಷ್ಣನ, ಏತಾನಿಕರ್ಮಾಣಿ-ಈಗೋವರ್ಧನೋದ್ಧರಣಾದಿಕರ್ಮಗಳು, ಯಥಾ-ಹೇಗೆ, ಅತ್ಯದ್ಭುತಾನಿ-ಬಹಳಆಶ್ಚರ್ಯಕರಗಳೆಂದು, ವೈ-ಪ್ರಸಿದ್ಧಗಳಾಗಿವೆಯೋ; ಅಸೌ-ಅಂತಾಈಕೃಷ್ಣನು, ಗ್ರಾ ಮ್ಯೇಷು-ಹಳ್ಳಿಗಾಡಿನಜನರಲ್ಲಿ, (ಗೊಲ್ಲರಲ್ಲಿ) ಆತ್ಮಜುಗುಪ್ಸಿತಂ-ತನಗೆಅಯೋಗ್ಯವಾದ, ಜನ್ಮ-ಜನನವನ್ನು, ಕಥಮರ್ಹತಿ-ಹೇಗೆ ಹೊಂದಲ್ತಕ್ಕವನಾಗುವನು? ॥೨॥ಯೋಬಾಲಃ-ಯಾವಹುಡುಗನು, ಸಪ್ತಹಾಯನಃ-ಏಳುವರ್ಷಗಳಪ್ರಾಯವುಳ್ಳವನೋ, ಸಃ-

---

ಇಂತು ಶುಕಮುನಿಯು ಪರೀಕ್ಷಿದ್ರಾಯನಿಗೆ ನಿರೂಪಿಸಿದನೆಂದು ಸೂತಪೌರಾಣಿಕನು ನೈಮಿಶಾ ರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಹೇಳಿದನೆಂಬಲ್ಲಿಗೆ-ಶ್ರೀಮನ್ಮಹೀಶೂರಪುರವ ರಾಧೀಶ ಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜ ವಿರಚಿತಮಪ್ಪ, ಶ್ರೀ ಭಾಗವತದ "ಶ್ರೀಕೃಷ್ಣರಾಜ ವಾಣೀವಿಲಾಸವು" ಎಂಬ ಕರ್ಣಾಟಕ ಭಾಷಾವ್ಯಾಖ್ಯಾನದಲ್ಲಿ ದಶಮಸ್ಕಂಧಮೊಳು ೨೫ನೆಯ ಅಧ್ಯಾಯವು ಸಂಪೂರ್ಣವಾದುದು.

ಮಂಗಳಮಸ್ತು

---

೨೬ನೆಯ ಅಧ್ಯಾಯವು.

ಶ್ರೀಧರೀಯಶ್ಲೋಕಃ॥ ಷಡ್ವಿಂಶೇವಿಸ್ಮಿತಾನ್ಗೋಪಾನ್ಕೃಷ್ಣಸ್ಯಾದ್ಭುತಕರ್ಮಭಿಃ॥ ನಂದೋಗರ್ಗೋ ಕ್ತಮಾಹಾತ್ಮ್ಯತದೈಶ್ವರ್ಯಮವರ್ಣಯತ್ ॥%॥ ಇಪ್ಪತ್ತಾರನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನ ಆಶ್ಚ ರ್ಯಕರಂಗಳಾದ ಸಾಹಸವ್ಯಾಪಾರಂಗಳಿಂದ ಆಶ್ಚರ್ಯಪರವಶರಾಗಿರುವ ಗೋಪಾಲಕರಂ ಕುರಿತು, ನಂ ದಗೋಪನು ಪೂರ್ವದಲ್ಲಿ ಗರ್ಗಾಚಾರ್ಯರಿಂದ ಹೇಳಲ್ಪಟ್ಟ ವಾಕ್ಯವಂ ಸ್ಮರಿಸಿಕೊಂಡು ಶ್ರೀಕೃಷ್ಣ ನಮಾಹಾತ್ಮ್ಯವಂ ವರ್ಣಿಸಿದನೆಂಬ ಅರ್ಥವಂ ಶುಕಾಚಾರ್ಯನು ಪರೀಕ್ಷಿದ್ರಾಯನಂ ಕುರಿತು ನಿರೂಪಿಸು ವನು. ಅದೆಂತೆನೆ;—

ಎಲೈ, ಅರಸೇ! ಅನಂತರದಲ್ಲಿ ಗೋಪಾಲಕರು ಈಪ್ರಕಾರಂಗಳಾದ ಶ್ರೀಕೃಷ್ಣನ ಸಾಹಸ ವ್ಯಾಪಾ ರಂಗಳಂ ನೋಡಿ ಆಭಗವಂತನ ಮಾಹಾತ್ಮ್ಯವನರಿಯದವರಾದ್ದರಿಂದ ಆಶ್ಚರ್ಯಪಡುವರಾಗಿ ನಂದನ ಸಮೀ ಪಕ್ಕೆಬಂದು ನಂದನಂ ಕುರಿತು ನುಡಿದರದೆಂತೆನೆ ॥೧॥ ಎಲೈ ನಂದಗೋಪನೇ! ಬಾಲಕನಾದ ಕೃಷ್ಣನ ಚ ರಿತ್ರಂಗಳು ಅತ್ಯಾಶ್ಚರ್ಯಕರಗಳಾಗಿವೆ. ಈಕೃಷ್ಣನು ಗ್ರಾಮವಾಸಿಗಳಾದ ಗೋಪಾಲಕರಲ್ಲಿ ಅಯೋಗ್ಯ ಸ್ಥಾನದಲ್ಲಿ ಹೇಗೆಉತ್ಪತ್ತಿಯ ನೈದಿದನು ॥೨॥ ಈಕೃಷ್ಣನು ಏಳುವರುಷಗಳ ವಯಸ್ಸಿನಲ್ಲಿ ಏಕಹಸ್ತದಿಂ

ಲಯಾ | ಕಥಂಬಿಭ್ರದ್ಗಿರಿವರಂಪುಷ್ಕರಂಗಜರಾಡಿವ ||೩|| ತೋಕೇನಾಮೀಲಿತಾಕ್ಷೇಣಪೂತನಾಯಾ ಮಹೌಜಸಃ | ಪೀತಃಸ್ತನಸ್ಸಹಪ್ರಾಣೈಃಕಾಲೇನೇವವಯಸ್ತನೋಃ ||೪|| ಹಿನ್ವತೋಽಧಃಶಯಾನಸ್ಯ ಮಾಸ್ಯಸ್ಯಚರಣಾವುದಕ್ | ಅನೋಽಪತದ್ವಿಪರ್ಯಸ್ತಂರುದತಃಪ್ರಪದಾಹತಂ ||೫|| ಏಕಹಾಯನ

---

ಅವನು, ಏಕೇನಕರೇಣ-ಒಂದುಕೈಯಿಂದ, ಲೀಲಯಾ-ಶೃಂಗಾರಚೇಷ್ಟೆಯಿಂದ, ಗಿರಿವರಂ-ಪರ್ವತಶ್ರೇಷ್ಠವಾದಗೋವರ್ಧನ ವನ್ನು, ಗಜರಾಟ್-ಅರಸಾನೆಯು, ಪುಷ್ಕರಮಿವ-ಕಮಲವನ್ನುಹೇಗೋಹಾಗೆ, ಕಥಂಬಿಭ್ರತ್-ಹೇಗೆಧರಿಸಿದನು; ||೩|| ಅಮೀಲಿ ತಾಕ್ಷೇಣ-ಕೊಂಚಮುಚ್ಚಿಕೊಳ್ಳಲ್ಪಟ್ಟಕಂಗಳುಳ್ಳ, ತೋಕೇನ-ಮಗುವಾದಕೃಷ್ಣನಿಂದ, ಮಹೌಜಸಃ-ಮಹಾಬಲವುಳ್ಳ, ಪೂತ ನಾಯಾಃ-**ಪೂತನೆಯೆಂಬರಕ್ಕಸಿಯ**, ಸ್ತನಃ-ಮೊಲೆಯು, ಪ್ರಾಣೈಸ್ಸಹ-ಜೀವನಪಾಯುಗಳೊಂದಿಗೆ,ತನೋಃ-ಶರೀರದ, ವಯಃ- ಪ್ರಾಯವು, ಕಾಲೇನೇವ-ಸಮಯದಿಂದಹೆಗೋಹಾಗೆ, ಕಥಂಹೇಗೆ, ಪೀತಃ-ಕುಡಿಯಲ್ಪಟ್ಟಿತ್ತಾಯಿತು ||೪||ಅಧಃ-ಬಂಡಿಯ ಕೆಳಗಡೆಯಲ್ಲಿ, ಶಯಾನಸ್ಯ-ಮಲಗಿರವನಾದ, ಮಾಸ್ಯಸ್ಯ-ಮೂರುತಿಂಗಳವನಾದ, ರುದತಃ-ಅಳುತಿರುವನಾದ, ಚರಣೌ-ಕಾ ಲುಗಳನ್ನು, ಉದಕ್-ಮೇಲಕ್ಕೆ, ಹಿನ್ವತಃ-ಹಾರಿಸುತಲಿರುವ,ಕೃಷ್ಣನ-ಪ್ರಪದಾಹತಂ-ತುದಿಗಾಲಿನಿಂದ ಒದೆಯಲ್ಪಟ್ಟ, ಅನಃ- ಬಂಡಿಯು, ವಿಪರ್ಯಸ್ತಂ-ವ್ಯತ್ಯಸ್ತವಾಗಿ, ಕಥಂ-ಹೇಗೆ, ಅಪತತ-ಬಿತ್ತು ||೫||ಯಃ-ಯಾವಕೃಷ್ಣನು, ಏಕಹಾಯನಃ-ಒಂದು

---

ದಲೇ ಮದಗಜವು ತಾವರೆಯ ಹೂವನಂತೆ ಗೋವರ್ಧನ ಪರ್ವತವ ಎತ್ತಿಧರಿಸಿದನು ||೩|| ಈಕೃಷ್ಣನು ಮಗುವಾಗಿರುವಾಗಲೇ ಕಂಣತೆರೆಯುವುದಕೆ ಮೊದಲೇ ಮಹಾಬಲಮುಳ್ಳ ಪೂತನೆಯೆಂಬ ರಾಕ್ಷಸಸ್ತ್ರೀಯ ಳ ಪ್ರಾಣಗಳೊಡನೆ ಸ್ತನ್ಯವಂ ಪಾನಂಗೆಯ್ದನು ||೪|| ಈಕೃಷ್ಣನು ಮೂರುತಿಂಗಳ ಶಿಶುವಾಗಿರುವಾಗಲೆ ಅಂಗತಂಗಾಗಿ ಮಲಗಿಕೊಂಡು ಅಳುತ್ತ ಕಾಲುಗಳಿಂದಒದೆಯಲ್ಪಟ್ಟ ಶಕಟವಂವ್ಯತ್ಯಸ್ತವಾಗಿ ಕೆಡಹಿದನು||೫||





ಆಸೀನೋಽಪಿ ಹ್ರಿಯಮಾಣೋ ವಿಹಾಯಸಾ | ದೈತ್ಯೇನ ಯಸ್ತೃಣಾವರ್ತಮಹನ್ ಕಂಠಗ್ರಹಾತುರಂ ||೬|| ಕ್ವಚಿದ್ಧೈಯಂಗವಸ್ತೈನ್ಯೇ ಮಾತ್ರಾ ಬದ್ಧ ಉಲೂಖಲೇ | ಗಚ್ಛನ್ನರ್ಜುನಯೋರ್ಮಧ್ಯೇ ಬಾಹುಭ್ಯಾಂ ತಾವಪಾತಯತ್ ||೭|| ವನೇ ಸಂಚಾರಯನ್ ವತ್ಸಾನ್ ಸರಾಮೋ ಬಾಲಕೈರ್ವೃತಃ | ಹಂತುಕಾಮಂ ಬಕಂ ದೋರ್ಭ್ಯಾಂ ಮುಖತೋಽರಿಮಪಾಟಯತ್ ||೮|| ವತ್ಸೇಷು ವತ್ಸರೂಪೇಣ ಪ್ರವಿಶಂತಂ ಜಿಘಾಂಸಯಾ | ಹತ್ವಾ ನ್ಯಪಾತಯತ್ತೇನ ಕಪಿತ್ಥಾನಿ ಚ ಲೀಲಯಾ ||೯|| ಹತ್ವಾ ರಾಸಭದೈತೇಯಂ ತದ್ಬಂಧೂಂಶ್ಚ ಬಲಾನ್ವಿತಃ | ಚಕ್ರೇ ತಾಳವನಂ ಕ್ಷೇಮಂ ಪರಿಪಕ್ವಫಲಾನ್ವಿತಂ ||೧೦|| ಪ್ರಲಂಬಂ ಘಾತಯಿತ್ವೋ

---

ವಾಯುರೂಪವುಳ್ಳವನಾಗಿ, ಆಸೀನಃ-ಕುಳಿತಿರುವನಾದಾಗ ದೈತ್ಯೇನ-ರಕ್ಕಸನಿಂದ, ವಿಹಾಯಸಾ-ಗಗನಮಾರ್ಗದಿಂದ, ಹ್ರಿಯಮಾಣಃ-ಅಪಹರಿಸಲ್ಪಡುತಲಿರುವನಾದ ಯಃ-ಆ ಕೃಷ್ಣನು, ಕಂಠಗ್ರಹಾತುರಂ-ಕತ್ತು ಹಿಡಿದದ್ದರಿಂದ ಪ್ರಾಣೋತ್ಕ್ರಮಣಾತ್ವರೆಯುಳ್ಳ, ತೃಣಾವರ್ತಂ ಆ ತೃಣಾವರ್ತನೆಂಬ ದೈತ್ಯನನ್ನು, ಕಥಮಹನ್-ಹೇಗೆ ಕೊಂದವನಾದನು ||೬|| ಕ್ವಚಿತ್-ಒಂದುಸಾರೆ ಹೈಯಂಗವಸ್ತೈನ್ಯೇ-ಹೊಸಬೆಣ್ಣೆಯ ಕಳ್ಳತನದಲ್ಲಿ, ಮಾತ್ರಾ-ತಾಯಿಯಾದ ಯಶೋದೆಯಿಂದ, ಉಲೂಖಲೇ-ಒರಳಿನಲ್ಲಿ ಬದ್ಧಃ-ಕಟ್ಟಲ್ಪಟ್ಟವನಾಗಿ, ಅರ್ಜುನಯೋರ್ಮಧ್ಯೇ-ಮತ್ತಿಯಮರಗಳನಡುವೆ, ಬಾಹುಭ್ಯಾಂ-ತೋಳುಗಳಿಂದ, ಗಚ್ಛನ್-ತೆರಳುವನಾಗಿ, ತೌ-ಆ ಯಮಳಾರ್ಜುನವೃಕ್ಷಗಳನ್ನು, ಕಥಮಪಾತಯತ್-ಹೇಗೆ ಕೆಡಹಿದನು ||೭|| ಬಾಲಕೈಃ-ಹುಡುಗರಿಂದ, ವೃತಃ-ಬಳಸಲ್ಪಟ್ಟವನಾದ, ಸರಾಮಃ-ರಾಮನೊಡನೆ ಕೂಡಿದ ಕೃಷ್ಣನು, ವನೇ-ಬೃಂದಾರಣ್ಯದಲ್ಲಿ, ವತ್ಸಾನ್-ಕರುಗಳನ್ನು, ಸಂಚಾರಯನ್-ಮೇಯಿಸುತಲಿರುವನಾಗಿ, ಅರಿಂ-ಶತ್ರುವಾದ್ದರಿಂದಲೇ, ಹಂತುಕಾಮಂ-ತನ್ನ ಕೊಲ್ಲಲೆಳಸಿದ, ಬಕಂ-ಕೊಕ್ಕರೆಯಾಗಿಬಂದ ದೈತ್ಯನನ್ನು, ದೋರ್ಭ್ಯಾಂ-ತನ್ನ ತೋಳುಗಳಿಂದ, ಮುಖತಃ-ಬಾಯಿ ಎರಡಲುಗೊಂಡು, ಕಥಮಪಾಟಯತ್-ಹೇಗೆ ಸೀಳಿದನು ||೮|| ವತ್ಸೇಷು-ಕರುಗಳಲ್ಲಿ, ಜಿಘಾಂಸಯಾ-ಕೊಲ್ಲಬೇಕೆಂಬ ಬಯಕೆಯಿಂದ, ವತ್ಸರೂಪೇಣ-ಕರುವಿನಾಕಾರದೊಡನೆ, ಪ್ರವಿಶಂತಂ-ನುಗ್ಗುತಲಿರುವ ವತ್ಸಾಸುರನನ್ನು, ಹತ್ವಾ-ಕೊಂದು, ತೇನ-ಕೊಂದಾದ ಅವನಿಂದಲೇ, ಲೀಲಯಾ-ವಿಲಾಸದಿಂದ ಕಪಿತ್ಥಾನಿಚ-ಬೇಲದಮರಗಳನ್ನೂ, ಕಥಂನ್ಯಪಾತಯತ್ ಹೇಗೆ ಬೀಳಿಕೆಡಹಿದನು ||೯|| ಬಲಾನ್ವಿತಃ-ಬಲರಾಮನಿಂದಕೂಡಿದ, ಕೃಷ್ಣನು, ರಾಸಭದೈತೇಯಂ-ಕತ್ತೆಯಾಗಿದ್ದ ಖರಾಸುರನನ್ನು, ತದ್ಬಂಧೂಂಶ್ಚ-ಅವನ ನಂಟರಾದ ದೈತ್ಯರನ್ನೂ ಕೂಡ, ಹತ್ವಾ-ಕೊಂದು (ಕೊಲ್ಲಿಸಿ) ಪರಿಪಕ್ವಫಲಾನ್ವಿತಂ-ತುಂಬಾ ಮಾಗಿದಹಣ್ಣುಗಳಿಂಕೂಡಿದ, ತಾಳವನಂ-ತಾಳೆಯಮರಗಳತೋಪನ್ನು, ಕ್ಷೇಮಂ-ಹಾನಿಯಿಲ್ಲದ್ದನ್ನಾಗಿ, ಕಥಂ-ಚಕ್ರೇ ಹೇಗೆ ಮಾಡಿದನಂತೆ ||೧೦|| ಬಲಶಾಲಿನಾ-ಬಲದಿಂದ ಚೆನ್ನಾದ, ಬಲೇನ-ಬಲರಾಮನಿಂದ, ಉಗ್ರಂ-ಕ್ರೂರನಾದ, ಪ್ರಲಂಬಂ-ಪ್ರಲಂಬಾಸುರನನ್ನು, ಘಾತಯಿತ್ವಾ-ಕೊಲ್ಲಿಸಿ, ಪ್ರ

---

ಶ್ರೀಕೃಷ್ಣನು ಒಂದುವರುಷದ ವಯಸ್ಸಿನಲ್ಲಿ ತೃಣಾವರ್ತನೆಂಬ ಅಸುರನಿಂದ ಮಹಾಪ್ರಚಂಡವಾಯುರೂಪದಿಂದ ಮೇಲಕ್ಕೆ ಹಾರಿಸಲ್ಪಟ್ಟವನಾಗಿ ಆ ದೈತ್ಯನಂ ಕಂಠಸ್ಥಾನದಲ್ಲಿ ತಬ್ಬಿಕೊಂಡು ಅವನಂ ಸಂಹರಿಸಿದನು ||೬|| ಒಬ್ಬರಮನೆಯಲ್ಲಿ ಬೆಣ್ಣೆಯಂ ಕದ್ದು, ಯಶೋದಾದೇವಿಯಿಂದ ಒರಳಿನಲ್ಲಿ ಕಟ್ಟಿಸಿಕೊಂಡು, ಆ ಒರಳಂ ಎಳೆಕೊಂಡು ಅರ್ಜುನವೃಕ್ಷಗಳೆರಡರ ಮಧ್ಯದಲ್ಲಿಹೋಗಿ ಭುಜಗಳಿಂದ ಆ ವೃಕ್ಷಂಗಳಂ ಕೆಡಹಿದನು ||೭|| ಶ್ರೀಕೃಷ್ಣನು ಬಲರಾಮಸಮೇತನಾಗಿ, ಕರುಗಳಂ ಮೇಯಿಸುತ, ಬಾಲಕರೊಡಗೂಡಿ ಸಂಚರಿಸುತ್ತ, ಬಕಾಕಾರನಾದ ಮುಖದಿಂ ಕೃಷ್ಣನಂ ಸಂಹರಿಸಲಿಚ್ಛೆಯುಳ್ಳ ಶತ್ರುವಾದ ಬಕಾಸುರನಂ ಬಾಹುಗಳಿಂದ ಸಂಹರಿಸಿದನು ||೮|| ಕರುಗಳ ಮಧ್ಯದಲ್ಲಿ ಕರುಗಳರೂಪದಿಂದ ಬಂದು ಕೃಷ್ಣನಂ ಸಂಹರಿಸಲಿಚ್ಛೆಯುಳ್ಳ ವತ್ಸಾಸುರನಂ ಸಂಹರಿಸಿ, ಆ ಅಸುರನ ದೇಹವನ್ನೇ ಬೇಲದಮರದಮೇಲೆ ಬೀಸಿಟ್ಟು, ಆ ಬೇಲದಹಣ್ಣುಗಳಂ ಕೆಡಹಿದನು ||೯|| ಕೃಷ್ಣನು ಬಲರಾಮಯುಕ್ತನಾಗಿ ಗರ್ದಭಾಸುರನಂ ಅವನಬಂಧುಗಳಂ ಸಹ ಸಂಹರಿಸಿ ಪಕ್ವಫಲಯುಕ್ತವಾದ ತಾಳವನಕ್ಕೆ ಕ್ಷೇಮವಂ ಉಂಟುಮಾಡಿದನು ||೧೦|| ಬಲಶಾಲಿಯಾದ ಬಲರಾಮನಿಂ

ಗ್ರಾಂಬಲಿನಬಲಶಾಲಿನಾ | ಅಮೋಚಯದ್ವ್ರಜಪಶೂನ್ಗೋಪಾಂಶ್ಚಾರಣ್ಯವಹ್ನಿತಃ ॥೧೧॥ ಆಶೀವಿ
ಷತಮಾಹೀಂದ್ರಂದಮಿತ್ವಾವಿಮದಂಹ್ರದಾತ್ | ಪ್ರಸಹ್ಯೋದ್ವಾಸ್ಯಯಮುನಾಂಚಕ್ರೇಽಸೌನಿರ್ವಿ
ಷೋದಕಾಂ ॥೧೨॥ ದುಸ್ತ್ಯಜಶ್ಚಾನುರಾಗೋಽಸ್ಮಿನ್ಸರ್ವೇಷಾಂನೋವ್ರಜೌಕಸಾಂ |ನಂದತೇತನಯೇ
ಽಸ್ಮಾಸುತಸ್ಯಾಪ್ಯೌತ್ಪತ್ತಿಕಃಕಥಂ ॥೧೩॥ ಕ್ವಸಪ್ತಹಾಯನೋಬಾಲಃಕ್ವಮಹಾದ್ರಿವಿಧಾರಣಂ |
ತತೋನೋಜಾಯತೇಶಂಕಾವ್ರಜನಾಥತವಾತ್ಮಜೇ ॥೧೪॥ ನಂದಃ॥ ಶ್ರೂಯತಾಂಮೇವಚೋಗೋಪಾವ್ಯೇ
ತುಶಂಕಾಚವೋಽರ್ಭಕೇ | ಏನಂಕುಮಾರಮುದ್ದಿಶ್ಯಗರ್ಗೋಮೇಯದುವಾಚತತ್ ॥೧೫॥ ವರ್ಣಾ

---

ಪಶೂನ್-ಗೋಕುಲದಗೋವುಗಳನ್ನು, ಗೋಪಾಂಶ್ಚ-ಗೊಲ್ಲರನ್ನೂ, ಅರಣ್ಯವಹ್ನಿತಃ-ಕಾಡುಕಿಚ್ಚಿನದೆಸೆಯಿಂದ,ಕಥಮಮೋ
ಚಯತ್ ಹೇಗೆಬಿಡಿಸಿದನು;॥೧೧॥ಆಶೀವಿಷತಮಾಹೀಂದ್ರಂ-ಆಶೀವಿಷತಮಃ- ಕೋರೆಹಲ್ಲುಗಳಬಳಿಯಲ್ಲಿ ವಿಷವುಳ್ಳಜಂತುಗಳೊಳಗೆ
ಅತಿಕ್ರೂರವಿಷವುಳ್ಳ, ಅಹೀಂದ್ರಂ-ಸರ್ಪಶ್ರೇಷ್ಠನಾದಕಾಳಿಯನನ್ನು, ವಿಮದಂ-ಮದವಿಲ್ಲದ್ದನ್ನಾಗಿ, ದಮಿತ್ವಾ-ತುಳಿದಾಟ
ದಿಂದಶಿಕ್ಷಿಸಿ, ಪ್ರಸಹ್ಯ-ಬಲಾತ್ಕರಿಸಿ, ಹ್ರದಾತ್-ಮಡುವಿನದೆಸೆಯಿಂದ, ಉದ್ವಾಸ್ಯ-ಹೊರಕ್ಕೆಹೊರಡಿಸಿ, ಯಮುನಾಂ-ಕಾ
ಳಿಂದೀನದಿಯನ್ನು, ನಿರ್ವಿಷೋದಕಾಂ-ವಿಷವಿಲ್ಲದನೀರುಳ್ಳದ್ದನ್ನಾಗಿ, ಕಥಂಚಕ್ರೇ-ಹೇಗೆಮಾಡಿದನಂತೆ; ॥೧೨॥ ಹೇನಂದ-
ಎಲೈನಂದಗೋಪನೇ! ವ್ರಜೌಕಸಾಂ-ಗೋಕುಲಪಲ್ಲಿಮನೆಯುಳ್ಳ, ನಸ್ಸರ್ವೇಷಾಂ-ನಮ್ಮೆಲ್ಲರಿಗೂ, ಅಸ್ಮಿನ್-ಈ,ತೇತನಯೇ-
ನಿನ್ನಮಗನಾದಕೃಷ್ಣನವಿಷಯದಲ್ಲಿ, ದುಸ್ತ್ಯಜಃ ಬಿಡಕೂಡದ, ಅನುರಾಗಶ್ಚ-ಅಕ್ಕರೆಯೂ, ತಸ್ಯಾಪಿ-ಆಕೃಷ್ಣನಿಗೂ, ಅ
ಸ್ಮಾಸು-ನಮ್ಮಲ್ಲಿ ಔತ್ಪತ್ತಿಕಃ-ಸಹಜವಾದಅಕ್ಕರೆಯೂ, ಕಥಂ-ಹೇಗೆಉಂಟಾಯಿತು, ॥೧೩॥ ಹೇವ್ರಜನಾಥ-ಎಲೈಗೋ
ಕುಲದೊಡೆಯನೇ! ಸಪ್ತಹಾಯನಃ-ಏಳುವರುಷಗಳುಳ್ಳ, ಬಾಲಃ-ಹುಡುಗನು, ಕ್ವ-ಎಲ್ಲಿ, ಮಹಾದ್ರಿವಿಧಾರಣಂ-ಹೆಬ್ಬೆಟ್ಟವ
ನ್ನುಹೊರುವಿಕೆ, ಕ್ವ-ಎಲ್ಲಿ; ತತಃ-ಆಕಾರಣದಿಂದ, ತವಾತ್ಮಜೇ-ನಿನ್ನಮಗನಾದಕೃಷ್ಣನವಿಷಯದಲ್ಲಿ, ನಃ-ನಮಗೆ, ಶಂಕಾ-
ಮನುಷ್ಯನಹುದೋ ಅಲ್ಲವೋ ಎಂಬಸಂದೇಹವು, ಜಾಯತೇ-ಹುಟ್ಟುತಲಿದೆ॥೧೪॥(ನಂದವಾಕ್ಯವು)ಹೇಗೋಪಾಃ-ಎಲೈಗೊಲ್ಲರೇ,
ಮೇ-ನನ್ನ, ವಚಃ-ಮಾತು, ಶ್ರೂಯತಾಂ-ನಿಮ್ಮಿಂದಕೇಳಲ್ಪಡಲಿ. ಮಮ-ನನ್ನ-ಅರ್ಭಕೇ-ಹುಡುಗನವಿಷಯದಲ್ಲಿ, ಶಂಕಾ-
ನಿಮ್ಮಸಂದೇಹವು. ವ್ಯೇತು-ಬಿಟ್ಟುಹೋಗಲಿ ಕುಮಾರಂ-ಹುಡುಗನನ್ನು, ಉದ್ದಿಶ್ಯ-ಕುರಿತು, ಗರ್ಗಃ-ಗರ್ಗಮುನಿಯು,
ಯತ್-ಯಾವಮಾತನ್ನು, ಮೇ-ನನಗೆ, ಉವಾಚ-ಹೇಳಿಯಿದ್ದನೋ, ತತ್-ಅದೇ, ಏವಂ-ಹೀಗಾಗಿದೆ ॥೧೫॥ ಅನುಯುಗಂ-
ಪ್ರತಿಯುಗಕಾಲದಲ್ಲಿಯೂ, ತನೂಃ-ಅವತಾರದೇಹಗಳನ್ನು, ಗೃಹ್ಣತಃ-ಪರಿಗ್ರಹಿಸುತಿರುವ, ಅಸ್ಯ-ಈತನಿಗೆ, ತ್ರಯೋವ

---

ದ ಪ್ರಲಂಬಾಸುರನು ಸಂಹಾರಂಗೆಯಿಸಿ, ವ್ರಜವಂ ಪಶುಗಳುಂ ಗೋಪಾಲಕರಂ ಬಿಡಿಸಿ ಕಾಡುಕಿಚ್ಚಿನಿಂದ
ತಪ್ಪಿಸಿದನು ॥೧೧॥ ಈಕೃಷ್ಣನು ಮಹಾವಿಷದಿಂದ ಕ್ರೂರನಾದ ಕಾಳಿಯನಾದ ಸರ್ಪರಾಜನು ನಿಗ್ರಹಿಸಿ
ಅವನಗರ್ವಮಂ ಅಡಗಿಸಿ, ಯಮುನಾನದಿಯ ಮಡುವಿನಿಂದ ಆಚೆಗೆಹೊರಡಿಸಿ, ಆಯಮುನೆಯಂ ವಿಷರಹಿತ
ವಾಗಿ ಶುದ್ಧವಾದ ಉದಕಮುಳ್ಳದ್ದನ್ನಾಗಿ ನಿರ್ದೋಷವನ್ನಾಗಿ ಮಾಡಿದನು ॥೧೨॥ ಎಲೈ ನಂದಗೋಪನೇ!
ನಿನ್ನಪುತ್ರನಾದ ಕೃಷ್ಣನಲ್ಲಿ ವ್ರಜವಾಸಿಗಳಾದ ನಮಗೆಲ್ಲರಿಗೂ ಅನುರಾಗವು ಬಿಡಲಶಕ್ಯವಾಗಿದೆ. ಆಕೃಷ್ಣ
ನಿಗೂ ನಮ್ಮಲ್ಲಿ ಸ್ವಾಭಾವಿಕವಾದ ವಾತ್ಸಲ್ಯವಿದೆ ॥೧೩॥ ಏಳುವರುಷಗಳ ಬಾಲಕನೆಲ್ಲಿ, ಮಹಾಪರ್ವತಧಾರ
ಣವೆಲ್ಲಿ? ಅದರಿಂದ ನಿನ್ನಮಗನಲ್ಲಿ ಶಂಕೆಯುಂಟಾಗುತ್ತೆ, ಈತಂ ಮನುಷ್ಯನಲ್ಲ, ಸಾಕ್ಷಾದೀಶ್ವರನೇ ಆಗಿರು
ವನು, ಎಂದುನಮಗೆ ತೋರುತ್ತೆ ॥೧೪॥ (ಎಂಬವಾಕ್ಯಮಂಕೇಳಿ ನಂದಗೋಪನು ಗರ್ಗಾಚಾರ್ಯವಾಕ್ಯಮಂ
ಸ್ಮರಿಸಿಕೊಂಡು ನುಡಿದನದೆಂತೆನೆ,--) ಎಲೈ, ಗೋಪರಿರಾ! ನನ್ನಮಾತಂ ಕೇಳಿರಿ, ನಾನು ಪೇಳುತ್ತೇನೆ, ಈ
ಬಾಲಕನಲ್ಲಿ ನಿಮಗೆ ಶಂಕೇಬೇಡ, ಈಬಾಲಕನಂ ಉದ್ದೇಶಿಸಿ ಗರ್ಗಋಷಿಯು ನನ್ನಂಕುರಿತು ಯಾವ ಅ
ರ್ಥವ ಪೇಳಿದನೋ, ಅದಂಪೇಳುತ್ತೇನೆ ॥೧೫॥ ಪೂರ್ವದೊಳು ಕೃತಯುಗಾದಿಗಳಲ್ಲಿ ಶರೀರವಂಗ್ರಹಿಸಿದ,
ಈಪುರುಷನಿಗೆ ಕ್ರಮವಾಗಿ ಮೂರುವರ್ಣಗಳುಂಟಾದವು, ಕೃತಯುಗದಲ್ಲಿ ಶುಕ್ಲವರ್ಣವು, ತ್ರೇತಾಯು

ಸ್ತ್ರಯಃ ಕಿಲಾಸ್ಯಾಸನ್ ಗೃಹ್ಣತೋನುಯುಗಂ ತನೂಃ । ಶುಕ್ಲೋ ರಕ್ತಸ್ತಥಾ ಪೀತ ಇದಾನೀಂ ಕೃಷ್ಣತಾಂ ಗತಃ ॥೧೬॥ ಪ್ರಾಗಯಂ ವಸುದೇವಸ್ಯ ಕ್ವಚಿಜ್ಜಾತಸ್ತವಾತ್ಮಜಃ । ವಾಸುದೇವ ಇತಿ ಶ್ರೀಮಾನಭಿಜ್ಞಾಸ್ಸಂಪ್ರಚಕ್ಷತೇ ॥೧೭॥ ಬಹೂನಿ ಸಂತಿ ನಾಮಾನಿ ರೂಪಾಣಿ ಚ ಸುತಸ್ಯ ತೇ । ಗುಣಕರ್ಮಾನುರೂಪಾಣಿ ತಾನ್ಯಹಂ ವೇದ ನೋ ಜನಾಃ ॥೧೮॥ ಏಷ ವಃ ಶ್ರೇಯ ಆಧಾಸ್ಯದ್ಗೋಪಗೋಕುಲನಂದನಃ । ಅನೇನ ಬಹುದುರ್ಗಾಣಿ ಯೂಯಮಂಜಸ್ತರಿಷ್ಯಥ ॥೧೯॥ ಪುರಾನೇನ ವ್ರಜಪತೇ ಸಾಧವೋ ದಸ್ಯುಪೀಡಿತಾಃ । ಅರಾಜಕೇ ರಕ್ಷ್ಯಮಾಣಾ ಜಿಗ್ಯುರ್ದಸ್ಯೂನ್ ಸಮೇಧಿತಾಃ ॥೨೦॥ ಯ ಏತಸ್ಮಿನ್ ಮಹಾಭಾಗೇ ಪ್ರೀತಿಂ ಕುರ್ವಂತಿ ಮಾನವಾಃ । ನಾರಯೋಭಿಭವಂತ್ಯೇತಾನ್ ವಿಷ್ಣುಪಕ್ಷಾನಿವಾಸುರಾಃ ॥೨೧॥ ತಸ್ಮಾ

---

ವರ್ಣಾಃ-ಮೂರುಬಣ್ಣಗಳು, ಶುಕ್ಲಃ-ಕೃತಯುಗದಲ್ಲಿಬಿಳುಪು, ರಕ್ತಃ-ತ್ರೇತಾಯುಗದಲ್ಲಿಕೆಂಪು, ಪೀತಃ-ದ್ವಾಪರಯುಗದಲ್ಲಿ ಹಳದಿ, ಆಸನ್ ಕಿಲ ಆದವಲ್ಲವೆ? ತಥಾ-ಹಾಗೆ, ಇದಾನೀಂ-ಈಕಲ್ಯಾರಂಭಸನ್ನಿಹಿತಕಾಲದಲ್ಲಿ, ಕೃಷ್ಣತಾಂ-ಕಪ್ಪಾಗಿರುವಿಕೆಯನ್ನು, ಗತಃ-ಹೊಂದಿದವನಾದನು ॥೧೬॥ಅಯಂ-ಈ, ತವ-ನಿನ್ನ, ಆತ್ಮಜಃ-ಮಗನು, ಪ್ರಾಕ್-ಮುಂಚೆ, ಕ್ವಚಿತ್-ಒಂದಾನೊಂದುಕಡೆಯಲ್ಲಿ, ವಸುದೇವಸ್ಯ-ವಸುದೇವನಿಗೆ, ಜಾತಃ-ಹುಟ್ಟಿದವನಾದನು. ಆದ್ದರಿಂದಲೇ, ಅಭಿಜ್ಞಾಃ-ಅಪರೋಕ್ಷಜ್ಞಾನಿಗಳು, ಅಯಂ-ಈಹುಡುಗನು, ಶ್ರೀಮಾನ್-ಸಂಪತ್ತುಳ್ಳ, (ಲಕ್ಷ್ಮಿಯುಳ್ಳ) ವಾಸುದೇವ ಇತಿ-ವಸುದೇವನಮಗನೆಂದು (ಸರ್ವಭೂತನಿವಾಸಿಯಾದವಿಷ್ಣುವೆಂದು) ಸಂಪ್ರಚಕ್ಷತೇ-ಚನ್ನಾಗಿನಿರೂಪಿಸಿಹೇಳುತ್ತಿರುವರು॥೧೭॥ತೇ-ನಿನ್ನ, ಸುತಸ್ಯ-ಮಗನ, ನಾಮಾನಿ-ಹೆಸರುಗಳು, ರೂಪಾಣಿಚ-ಮೂರ್ತಿಗಳುಕೂಡ, ಬಹೂನಿ-ಹಲವಾಗಿ, ಸಂತಿ-ಇವೆ, ಗುಣಕರ್ಮಾನುರೂಪಾಣಿ-ಗುಣಗಳಿಗೂ, ಕೆಲಸಗಳಿಗೂತಕ್ಕವುಗಳಾದ, ತಾನಿ-ಆಹೆಸರುಗಳನ್ನೂ ಮೂರ್ತಿಗಳನ್ನೂ, ಅಹಂ-ನಾನು, ವೇದ-ಬಲ್ಲೆನು. ಜನಾಃ-ಇತರಜನಗಳು, ನೋ-ಅರಿಯರು ॥೧೮॥ಏಷಃ-ಈಹುಡುಗನು, ಗೋಪಗೋಕುಲನಂದನಃ-ಗೋಪಾಲಕರನ್ನೂ ಗೋಕುಲವನ್ನೂ ಸಂತಸಗೊಳಿಸುವನಾಗಿ, ವಃ-ನಿಮಗೆ, ಶ್ರೇಯಃ-ಶುಭವನ್ನು, ಆಧಾಸ್ಯತ್-ಮಾಡುವನು, ಯೂಯಂ-ನೀವು, ಅನೇನ-ಈಹುಡುಗನಿಂದ, ಬಹುದುರ್ಗಾಣಿ-ಹಲವುಕಷ್ಟಗಳನ್ನು, ಅಂಜಃ-ಬೇಗನೆ, ತರಿಷ್ಯಥ-ದಾಂಟುವಿರಿ ॥೧೯॥ ವ್ರಜಪತೇ-ಗೋಕುಲದೊಡೆಯನಾದನಂದನೇ! ಪುರಾ-ಪೂರ್ವಕಾಲದಲ್ಲಿ, ಅರಾಜಕೇ-ಅರಸಿಲ್ಲದಿರುವಾಗ, ದಸ್ಯುಪೀಡಿತಾಃ-ಕಳ್ಳರಿಂದಬಾಧಿಸಲ್ಪಟ್ಟಂಥಾ, ಸಾಧವಃ-ಸತ್ಪುರುಷರು, ಅನೇನ-ಈತನಿಂದ, ರಕ್ಷ್ಯಮಾಣಾಸ್ಸಂತಃ-ಪಾಲಿಸಲ್ಪಡುತಲಿರುವರಾಗಿ, ಸಮೇಧಿತಾಃ-ಚನ್ನಾಗಿಹೆಚ್ಚಿಯಿದ್ದು, ದಸ್ಯೂನ್-ಕಳ್ಳರನ್ನು, ಜಿಗ್ಯುಃ-ಗೆದ್ದರಂತೆ. ॥೨೦॥ಯೇ-ಯಾವ, ಮಾನವಾಃ-ಮನುಷ್ಯರು, ಮಹಾಭಾಗೇ-ದೊಡ್ಡಪೂಜ್ಯತೆಯುಳ್ಳ, ಏತಸ್ಮಿನ್-ಈಕೃಷ್ಣನವಿಷಯದಲ್ಲಿ, ಪ್ರೀತಿಂ-ಅನುರಾಗವನ್ನು, ಕುರ್ವಂತಿ,- ಮಾಡುತಲಿರುವರೋ ತಾನೇತಾನ್-ಆಯಿಾಮನುಷ್ಯರನ್ನು, ಅರಯಃ-ಶತ್ರುಗಳು, ವಿಷ್ಣುಪಕ್ಷಾನ್-ವೈಷ್ಣವರನ್ನು, ಅಸುರಾಇವ-ದೈತ್ಯರಹಾಗೆ ನಾಭಿಭವಂತಿ-ತಿರಸ್ಕರಿಸುವುದಿಲ್ಲವು ॥೨೧॥ ತಸ್ಮಾತ್-ಆಕಾರಣದದೆಸೆಯಿಂದ, ನಂದ-ನಂದಗೋಪನೇ, ಅಯಂಕುಮಾರಃ-

---

ಗದಲ್ಲಿರಕ್ತವರ್ಣವು, ದ್ವಾಪರಯುಗದಲ್ಲಿಪೀತವರ್ಣವೂಉಂಟಾಯಿತು, ಈಗಕೃಷ್ಣವರ್ಣವಂ ಧರಿಸಿರುವನು ॥೧೬॥ ಎಲೈ ನಂದನೇ! ನಿನ್ನಮಗನು ಪೂರ್ವದಲ್ಲಿ ವಸುದೇವನಿಂದ ಜನಿಸಿದವನು, ಈತನಂ ವಾಸುದೇವನೆಂದುಪ್ರಾಜ್ಞರು ಪೇಳುವರು ॥೧೭॥ ನಿನ್ನಮಗನಿಗೆ ಅನೇಕರೂಪಂಗಳು ಅನೇಕನಾಮಂಗಳು ಉಂಟು, ಗುಣಕರ್ಮಾನುರೂಪಂಗಳಾದಆನಾಮಂಗಳಂರೂಪಂಗಳಂಸಹನಾನುಬಲ್ಲೆನು, ಮೂಢಜನರು ಅವುಗಳಂ ಅರಿಯರು ॥೧೮॥ ಈಬಾಲಕನು ಗೋಪಜನರಂ ಗೋಕುಲವನುಂ ಸಹ ಸಂತೋಷಪಡಿಸಿಕೊಂಡು ನಿಮಗೆ ಶ್ರೇಯಸ್ಸನ್ನು ಉಂಟುಮಾಡುವನು, ಈಬಾಲಕನಿಂದ ನೀವು ಬಹಳವಾಗಿ ಕಷ್ಟಂಗಳಂಪರಿಹರಿಸಿಕೊಂಡು ಮೋಕ್ಷವುಂಸಂಪಾದಿಸುವಿರಿ ॥೧೯॥ ಎಲೈ ವ್ರಜಪತಿಯಾದನಂದನೇ! ಪೂರ್ವದಲ್ಲಿ ಶತ್ರುಗಳಿಂದಪೀಡಿತರಾದ ಸತ್ಪುರುಷರು ಈಪುರುಷನಿಂದ ರಕ್ಷಿತರಾಗಿ, ಅರಾಜಕರಾಜ್ಯದಲ್ಲಿ ಶತ್ರುಗಳಂ ಜಯಿಸಿದರು ॥೨೦॥ ಈಮಹಾಪುರುಷನಲ್ಲಿ ಯಾವಜನರು ಪ್ರೀತಿಯಂ ಮಾಡುವರೋ, ಆಜನರಂ ಶತ್ರುಗಳು ವಿಷ್ಣುಪಕ್ಷಾವಲಂಬಿಗಳಾದವರನ್ನು ಸುರರಂ ತೇಪೀಡಿಸುವುದಿಲ್ಲ ॥೨೧॥ ಎಲೈನಂದನೇ! ಆಕಾರಣದಿಂದ ನಿನ್ನಮಗನಾದ ಈಪುರುಷನು ಗುಣಗಳಿಂದ ನಾರಾ

ನ್ನಂದಕುಮಾರೋಯಂನಾರಾಯಣಸಮೋಗುಣೈಃ | ಶ್ರಿಯಾಕೀರ್ತ್ಯಾನುಭಾವೇನತತ್ಕರ್ಮಸುನ
ವಿಸ್ಮಯಃ ‖೨೦‖ ಇತ್ಯದ್ಧಾಮಾಂಸಮಾದಿಶ್ಯಗರ್ಗೇಚಸ್ವಗೃಹಂಗತೇ | ಮನ್ಯೇನಾರಾಯಣಸ್ಯಾಂ
ಶಂಕೃಷ್ಣಮಕ್ಲಿಷ್ಟಕಾರಿಣಂ ‖೨೧‖ ಇತಿನಂದವಚಃಶ್ರುತ್ವಾಗರ್ಗಗೀತಂವ್ರಜೌಕಸಃ | ಮುದಿ
ತಾನಂದಮಾನರ್ಚುಃಕೃಷ್ಣಂಚಗತವಿಸ್ಮಯಾಃ ‖೨೨‖ ದೇವೇವರ್ಷತಿಯಜ್ಞವಿಪ್ಲವರುಷಾವಜ್ರಾ
ಶ್ಮವರ್ಷಾನಿಲೈಸ್ಸೀದದ್ಬಾಲಪಶುಸ್ತ್ರಿಯಾತ್ಮಶರಣಂದೃಷ್ಟ್ವಾನುಕಂಪ್ಯುತ್ಸ್ಮಯಃ | ಉತ್ಪಾ
ಟ್ಯೈಕಕರೇಣಶೈಲಮಬಲೋಲೀಲೋಚ್ಛಿಲೀಂಧ್ರಂಯಥಾ | ಬಿಭ್ರದ್ಗೋಷ್ಠಮಪಾನ್ಮಹೇಂದ್ರಮದ

---

ಈಹುಡುಗನು, ಗುಣೈಃ-ಅನಂತಕಲ್ಯಾಣಗುಣಗಳಿಂದ, ಶ್ರಿಯಾ-ಐಶ್ವರ್ಯದಿಂದ, ಕೀರ್ತ್ಯಾ-ಹೆಸರುವಾಸಿಯಿಂದ, ಅನುಭಾವೇ
ನಚ-ಸಾಮರ್ಥ್ಯದಿಂದಲೂ, ನಾರಾಯಣಸಮಃ-ವಿಷ್ಣುವಿನೊಡನೆಸರಿಯಾದವನು. ತತ್ಕರ್ಮಸು-ಆತನಕೆಲಸಗಳಲ್ಲಿ, ವಿಸ್ಮ
ಯಃ-ಆಶ್ಚರ್ಯವು, ನ-ಇಲ್ಲ ‖೨೦‖ಇತಿ-ಹೀಗೆ, ಅದ್ಧಾ-ಪ್ರತ್ಯಕ್ಷವಾಗಿ, ಮಾಂ-ನನ್ನಂಕುರಿತು, ಸಮಾದಿಶ್ಯ, ಚೆನ್ನಾಗಿಉ
ಪದೇಶಿಸಿ, ಗರ್ಗೇ-ಗರ್ಗಮುನಿಯು, ಸ್ವಗೃಹಂ-ತನ್ನಮನೆಯನ್ನುಕುರಿತು, ಗತೇಸತಿ ಹೋದವನಾಗುತಲೂ, ಅಕ್ಲಿಷ್ಟಕಾ
ರಿಣಂ-ಕ್ಲೇಶವಿಲ್ಲದಂತೆಮಾಡುತ್ತಿರುವ, ಕೃಷ್ಣಂ-ಹರಿಯನ್ನು, ನಾರಾಯಣಸ್ಯ-ವಿಷ್ಣುವಿನ, ಅಂಶಂ-ಕಲಾವತಾರವನ್ನಾಗಿ
ಮನ್ಯೇ-ತಿಳಿದಿರುವೆನು ‖೨೧‖ ವ್ರಜೌಕಸಃ-ಗೋಕುಲದಲ್ಲಿರುವವರು,ಗರ್ಗಮುನಿಯಿಂದಹೇಳಲ್ಪಟ್ಟದ್ದೆಂಬ,ನಂದವಚಃ-ನಂದ
ಗೋಪನಮಾತನ್ನು,ಶ್ರುತ್ವಾ-ಕೇಳಿ,ಮುದಿತಾಸ್ಸಂತಃ-ಸಂತುಷ್ಟರಾದವರಾಗಿ, ಗತವಿಸ್ಮಯಾಃ - ಆಶ್ಚರ್ಯವಿಲ್ಲದವರೂ
ಆಗಿ, ನಂದಂ-ನಂದಗೋಪನನ್ನು ,ಕೃಷ್ಣಂಚ-ಹರಿಯನ್ನು ,ಆನರ್ಚುಃ ಪೂಜಿಸಿದರು‖೨೨‖ದೇವೆ-ಇಂದ್ರದೇವನು,ಯಜ್ಞವಿಪ್ಲ
ವರುಷಾ-ತನ್ನಪೂಜೆತಪ್ಪಿಕೋಪಸಿಟ್ಟಿನಿಂದ , ವರ್ಷತಿಸತಿ-ಮಳೆಸುರಿಸುವನಾಗುತ್ತಿರಲಾಗಿ, ವಜ್ರಾಶ್ಮವರ್ಷಾನಿಲೈಃ-ವಜ್ರ-
ಸಿಡಿಲುಗಳಿಂದಲೂ,ಅಶ್ಮವರ್ಷ-ಆನೆಕಲ್ಲಿನಮಳೆಯಿಂದಲೂ, ಅನಿಲೈಃ-ಗಾಳಿಗಳಿಂದಲೂ, ಸೀದದ್ಬಾಲಪಶುಸ್ತ್ರಿ-ಸೀದತ್-ದುಃಖಿ
ಸುತಲಿರುವ,ಬಾಲಪಶುಸ್ತ್ರಿ-ಹುಡುಗರುಪಶುಗಳುಹೆಂಗಳು|ಇವರಗುಂಪನ್ನು, ಆತ್ಮಶರಣಂ-ತಾನೆರಕ್ಷಕನಾಗಿಉಳ್ಳದ್ದನ್ನಾಗಿ, ದೃ
ಷ್ಟ್ವಾ-ನೋಡಿ, ಅನುಕಂಪೀ-ದಯೆಯುಳ್ಳವನಾದ್ದರಿಂದಲೇ, ಉತ್ಸ್ಮಯಃ-ಅಧಿಕವಾಗಿನಗುತಲಿರುವನಾಗಿ, ಏಕಕರೇಣ-ಒಂ
ದುಕೈಯಿಂದ, ಶೈಲಂ-ಗೋವರ್ಧನಗಿರಿಯನ್ನು, ಉತ್ಪಾಟ್ಯ-ಕಿತ್ತು, ಅಬಲಃ-ಬಲವಿಲ್ಲದಹುಡುಗನು, ಲೀಲೋಚ್ಛಿಲೀಂಧ್ರಂ-ವಿ
ಲಾಸಾರ್ಥವಾಗಿಉದ್ಧವಾದಅಣಬೆಯನ್ನು, ಯಥಾ-ಹೇಗೋ, ತಥಾ-ಹಾಗೆ,ಬಿಭ್ರತ್-ಧರಿಸಿದವನಾಗಿ,ಗೋಷ್ಠಂ-ಗೋಕುಲವ

---

ಯಣನಿಗೆ ಸಮಾನನಾದವನು, ಸಂಪತ್ತಿನಿಂದಲೂ ಕೀರ್ತಿಯಿಂದಲೂ ಮಾಹಾತ್ಮ್ಯದಿಂದಲೂ ವಿಷ್ಣುವಿಗೆ ಸ
ಮಾನನು, ಆದುದರಿಂದ ಈತನಿಂದ ಮಾಡಲ್ಪಡುವ ಕರ್ಮಂಗಳಲ್ಲಿ ಆಶ್ಚರ್ಯಕಾರ್ಯಂಗಳಲ್ಲವು ‖೨೦‖ಎಂ
ದು ಗರ್ಗಋಷಿಯು ನನ್ನಂಕುರಿತು ಹೇಳಿಸ್ವಗೃಹಕ್ಕೆ ಹೋಗುತ್ತಿರಲಾಗಿ, ಈಕೃಷ್ಣನುನಾನು ನಾರಾಯ
ಣನ ಅಂಶವನ್ನಾಗಿ ತಿಳಿದುಕೊಂಡೆನು ‖೨೧‖ ಎಂಬನಂದನ ವಾಕ್ಯವಂಕೇಳಿ ವ್ರಜವಾಸಿಗಳಾದ ಗೋಪರು
ಆಕೃಷ್ಣನಮಹಿಮೆಯಂ ಕಣ್ಣುಗಳಿಂದಲೂ ನೋಡಿ, ಕಿವಿಗಳಿಂದಲೂಕೇಳಿ, ಸಂತುಷ್ಟರಾಗಿ ನಂದನಂಶ್ರೀ
ಕೃಷ್ಣನಂ ಸಹ ಪೂಜಿಸಿದರು ‖೨೨‖ (ಅನಂತರದಲ್ಲಿ ಶ್ರೀಕೃಷ್ಣನಂ ಪ್ರಾರ್ಥಿಸಿದರದೆಂತೆನೆ;-) ತನ್ನಯಾ
ಗವಂಮಾಡದೆ ಬಿಟ್ಟುದರಿಂದ ಕುಪಿತನಾದ ದೇವೇಂದ್ರನು ಪ್ರಚಂಡವಾಯು ಸಮೇತನಾಗಿ, ಆನೆಕಲ್ಲುಗಳಿಂದ
ಲೂ ಸ್ಥೂಲಂಗಳಾದ ಜಲಧಾರೆಗಳಿಂದಲೂ ಸಿಡಿಲುಗಳಿಂದಲೂ ಕೂಡವರ್ಷಿಸುತ ಲಿರಲಾಗಿ, ಉಪದ್ರವಪ
ಡುತಲಿರುವ, ಗೋವುಗಳು ಕರುಗಳು ಸ್ತ್ರೀಬಾಲ ವೃದ್ಧರ್ಕಳೂ ಕೂಡಿದ ಗೋಕುಲ ವುಳ್ಳದುದಾಗಿರುವ
ತನ್ನಸ್ಥಾನವಾದ ವ್ರಜವಂನೋಡಿ, ನಗುತ್ತ, ದಯಾರ್ದ್ರನಾಗಿ ಶ್ರೀಕೃಷ್ಣನು ಗೋವರ್ಧನಪರ್ವತವಂ
ಬಾಲಕನು ಅಣಬೆಯಂಕಿತ್ತು ಎತ್ತಿದಂತೆ ಏಕಹಸ್ತದಿಂದ ವಿಲಾಸದಿಂದಲೆ ಯೆತ್ತಿ ಹಿಡಿದುಕೊಂಡು, ದೇವೇಂ

ಭಿತ್ಪ್ರಿಯಾನ್ನ ಇಂದ್ರೋಗವಾಂ ‖೨೫‖ ಇತಿ ದಶಮಸ್ಕಂಧೇ ಷಡ್ವಿಂಶೋಽಧ್ಯಾಯಃ

ಅಥ ಶ್ರೀಮದ್ಭಾಗವತೇ ದಶಮಸ್ಕಂಧೇ ಸಪ್ತವಿಂಶೋಽಧ್ಯಾಯಃ

ಶ್ರೀಶುಕಃ‖ ಗೋವರ್ಧನೇ ಧೃತೇ ಶೈಲ ಆಸಾರಾದ್ರಕ್ಷಿತೇ ವ್ರಜೇ । ಗೋಲೋಕಾದಾವ್ರಜತ್ಕೃಷ್ಣಂ ಸುರಭಿಃ ಶಕ್ರ ಏವ ಚ ‖೧‖ ವಿವಿಕ್ತ ಉಪಸಂಗಮ್ಯ ವ್ರೀಡಿತಃ ಕೃತಹೇಳನಃ । ಪಸ್ಪರ್ಶ ಪಾದಯೋಗಳಂ

---

ನ್ನು, ಅಪಾತ್-ಪಾಲಿಸಿದನೋ, ಮಹೇಂದ್ರಮದಭಿತ್-ದೇವರಾಜನ ಗರ್ವವನು ಭೇದಿಸಿದ, ಗವಾಮಿಂದ್ರಃ-ಗೋಪತಿಯಾದ ಗೋವಿಂದನು, ನಃ-ನಮಗೆ, ಪ್ರೀಯಾತ್-ಪ್ರಿಯನಾಗಲಿ ‖೨೫‖

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಷಡ್ವಿಂಶೋಽಧ್ಯಾಯಃ-

೨೭ನೆಯ ಅಧ್ಯಾಯದ ಪ್ರತಿಪದಟೀಕೆ.

[ ಶುಕವಾಕ್ಯವು ] ಗೋವರ್ಧನೇ ಶೈಲೇ-ಗೋವರ್ಧನಗಿರಿಯು, ಧೃತೇ ಸತಿ-ಧರಿಸಲ್ಪಟ್ಟದ್ದಾಗುತಲೂ, ವ್ರಜೇ-ಗೋಕುಲವು, ಆಸಾರಾತ್-ಮಳೆಯ ಬಿರಿಸಿನ ಪರಂಪರೆಯ ಬೀಸೆಯಿಂದ, ರಕ್ಷಿತೇ-ಪಾಲಿಸಲ್ಪಟ್ಟದ್ದಾಗಲು, ಗೋಲೋಕಾತ್-ಗೋದೇವತೆಗಳಿರುವದೆಸೆಯಿಂದ, ಸುರಭಿಃ-ಕಾಮಧೇನುವು, ಶಕ್ರ ಏವ ಚ-ಇಂದ್ರನೂ ಕೂಡ, ಕೃಷ್ಣಂ-ಹರಿಯನ್ನುದ್ದೇಶಿಸಿ, ಆವ್ರಜತ್-ಬಂದನು (ಬಂದರು)‖೧‖ ಇಂದ್ರನು, ವಿವಿಕ್ತೇ-ಜನರಿಲ್ಲದ ಏಕಾಂತಸ್ಥಲದಲ್ಲಿ, ಉಪಸಂಗಮ್ಯ-ಕೃಷ್ಣನ ಬಳಿಯಂ ಸೇರಿ, ವ್ರೀಡಿತಃ-ನಾಚಿಕೊಂಡವನಾಗಿ, ಕೃತಹೇಳನಃ-ತನ್ನ ಅಯೋಗ್ಯತೆಯನ್ನು ಪಳಿದಾಡಿಕೊಳ್ಳುವನಾಗಿ. ಅರ್ಕವ

---

ದ್ರನ ಗರ್ವವಂ ಪರಿಹರಿಸಿ ವ್ರಜವಂ ರಕ್ಷಿಸಿದನು. ಆ ಕಾರಣದಿಂದ ಆ ಗೋಪಾಲಕನಾದ ಶ್ರೀಕೃಷ್ಣನು ನಮ್ಮಲ್ಲಿ ಪ್ರೀತಿಯಂ ಮಾಡಲಿ ‖೨೫‖ ... .. ... ... ‖+‖

ಇಂತು ಶುಕಮುನಿಯು ಪರೀಕ್ಷಿದ್ರಾಯನಿಗೆ ನಿರೂಪಿಸಿದನೆಂದು ಸೂತಪೌರಾಣಿಕನು ನೈಮಿಶಾರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಹೇಳಿದನೆಂಬಲ್ಲಿಗೆ ಶ್ರೀಮನ್ಮಹೀಶೂರಪುರವರಾಧೀಶ ಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜ ವಿರಚಿತವಪ್ಪ ಶ್ರೀಭಾಗವತದ ಶ್ರೀಕೃಷ್ಣರಾಜ ವಾಣೀವಿಲಾಸವು,, ಎಂಬ ಕರ್ಣಾಟಕ ಭಾಷಾವ್ಯಾಖ್ಯಾನದಲ್ಲಿ ದಶಮಸ್ಕಂಧದೊಳು ೨೬ನೆಯ ಅಧ್ಯಾಯವು ಸಂಪೂರ್ಣವಾದುದು.

೨೭ನೆಯ ಅಧ್ಯಾಯವು.

ಶ್ರೀಧರೀಯಶ್ಲೋಕಃ‖ ಸಪ್ತವಿಂಶತಮೇ ಲಜ್ಜ್ಯ ಕೃಷ್ಣಸ್ಯ ಪ್ರಾಭವಂ ಪರಂ । ವರ್ಣ್ಯತೇ ಸುರಭೀಂದ್ರಾಭ್ಯಾಮಭಿಷೇಕಮಹೋತ್ಸವಃ ‖+‖ ಇಪ್ಪತ್ತೇಳನೆಯ ಅಧ್ಯಾಯದಲ್ಲಿ ಕಾಮಧೇನುವು ದೇವೇಂದ್ರನು ಇವರೀರ್ವರೂ ಶ್ರೀಕೃಷ್ಣನ ಪ್ರಭಾವವಂ ನೋಡಿ ಶ್ರೀಕೃಷ್ಣನಿಗೆ ಪಟ್ಟಾಭಿಷೇಕಮಂ ಮಾಡಿದರೆಂಬರ್ಥಮಂ ಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸಿದನದೆಂತೆನೆ,---

ಎಲೈ, ಅರಸೇ! ಈ ರೀತಿಯಲ್ಲಿ ಶ್ರೀಕೃಷ್ಣನಿಂದ ಗೋವರ್ಧನಪರ್ವತವು ಧರಿಸಲ್ಪಡಲಾಗಿ, ವ್ರಜವು ವೃಷ್ಟ್ಯುಪದ್ರವದಿಂದ ರಕ್ಷಿತವಾಗುತ್ತಿರಲಾಗಿ, ಇಂದ್ರನೂ ಕಾಮಧೇನುವೂ ಸ್ವರ್ಗಲೋಕದಿಂದ ಕೃಷ್ಣಸ್ವಾಮಿಯಂ ಕುರಿತು ಬಂದರು ‖೧‖ ಇಂದ್ರನು ರಹಸ್ಯದಲ್ಲಿ ಶ್ರೀಕೃಷ್ಣನ ಸಮೀಪಕ್ಕೆ ಬಂದು ಲಜ್ಜಿತನಾಗಿ

ಕಿರೀಟೇನಾರ್ಕವರ್ಚಸಾ ||೧|| ದೃಷ್ಟಶ್ರುತಾನುಭಾವೋಸ್ಯಕೃಷ್ಣಸ್ಯಾಮಿತತೇಜಸಃ | ನಷ್ಟ ತ್ರಿಲೋಕೇಶಮದಇದಮಾಹಕೃತಾಂಜಲಿಃ ||೨|| ಇಂದ್ರಃ|| ವಿಶುದ್ಧಸತ್ವಂತವಧಾಮಶಾಂತಂತಪೋ ಮಯಂಧ್ವಸ್ತರಜಸ್ತಮಸ್ಕಂ | ಮಾಯಾಮಯೋಯಂಗುಣಸಂಪ್ರವಾಹೋನವಿದ್ಯತೇತೇಽಗ್ರಹಣಾ ನುಬಂಧಃ ||೩|| ಕುತೋನುತದ್ಧೇತವಈಶತತ್ಕೃತಾಲೋಭಾದಯೋಯೇಽಬುಧಲಿಂಗಭಾವಾಃ | ಅ ಥಾಪಿದಂಡಂಭಗವಾನ್ಬಿಭರ್ತಿಧರ್ಮಸ್ಯಗುಪ್ತ್ಯೈಖಲನಿಗ್ರಹಾಯ ||೪|| ಪಿತಾಗುರುಸ್ತ್ವಂಜಗ ತಾಮಧೀಶೋದುರತ್ಯಯಃಕಾಲಉಪಾತ್ತದಂಡಃ | ಹಿತಾಯಚೇಚ್ಛಾತನುಭಿಸ್ಸಮೀಹಸೇಮಾನಂವಿ

---

ರ್ಚಸಾ-ಸೂರ್ಯನಂತೆಬೆಳಕುಳ್ಳ, ಕಿರೀಟೇನ-ಶಿರೋಭೂಷಣದಿಂದ, ಪಾದಯುಗಳಂ-ಕೃಷ್ಣನಅಡಿಗಳೆರಡನ್ನೂ, ಪಸ್ಪರ್ಶ-ಸೋಂಕಿದನು (ನಮಸ್ಕರಿಸಿದನು) ||೧|| ಅಮಿತತೇಜಸಃ-ಅಳವಿಲ್ಲದಸಾಮರ್ಥ್ಯವುಳ್ಳ, ಅಸ್ಯಕೃಷ್ಣಸ್ಯ-ಈಕೃಷ್ಣನ, ದೃಷ್ಟಶ್ರುತಾನುಭಾವಃ-ನೋಡಲ್ಪಟ್ಟದ್ದೂ ಕೇಳಲ್ಪಟ್ಟದ್ದೂ ಆದ ಸಾಮರ್ಥ್ಯವುಳ್ಳಇಂದ್ರನು, ನಷ್ಟತ್ರಿಲೋಕೇಶಮದಃ-ಮೂರುಲೋಕಗಳಿಗೂ ನಾನೇಧೊರೆಯೆಂಬಗರ್ವವಿಲ್ಲದವನಾದ್ದರಿಂದಲೇ, ಕೃತಾಂಜಲಿಃ-ಕೈಜೋಡಿಸಿಕೊಂಡವನಾಗಿ, ಇದಂ-ಮುಂದೆಹೇಳುವಸ್ತೋತ್ರವನ್ನು, ಆಹ-ನುಡಿದನು||೨||[ಇಂದ್ರಸ್ತುತಿ] ತವ-ನಿನ್ನ, ಧಾಮ-ಸ್ವರೂಪಪ್ರಕಾಶವು, ವಿಶುದ್ಧಸತ್ವಂ-ನಿರ್ಮಲವಾದಸತ್ವಗುಣವುಳ್ಳದ್ದು, ಶಾಂತಂ-ಏಕರೂಪವಾದ್ದು. ತಪೋಮಯಂ-ಜ್ಞಾನಪ್ರಚುರವಾದ್ದು, ಧ್ವಸ್ತರಜಸ್ತಮಸ್ಕಂ-ನಾಶಗೊಳಿಸಲ್ಪಟ್ಟರಜೋಗುಣವೂತಮೋಗುಣವೂಉಳ್ಳದ್ದು. ತೇ-ಅಂಥಾನಿನಗೆ, ಅಗ್ರಹಣಾನುಬಂಧಃ-ಅಜ್ಞಾನಸಂಬಂಧವುಳ್ಳ, ಮಾಯಾಮಯಃ-ಅಜ್ಞಾನಪ್ರಚುರವಾದ, ಅಯಂ-ಈ, ಗುಣಸಂಪ್ರವಾಹಃ-ಸಂಸಾರವು, ನವಿದ್ಯತೇ-ಇಲ್ಲವು ||೩|| ಹೇಈಶ-ಎಲೈನಾಥನೇ! ತತ್ಕೃತಾಃ-ಆದೇಹಸಂಬಂಧದಿಂದುಂಟಾದ, ತದ್ಧೇತವಃ-ಆಪುನರ್ಜನ್ಮನಿಮಿತ್ತಗಳೂ, ಅಬುಧಲಿಂಗಭಾವಾಃ-ಅಜ್ಞನಿಗಳಿಗೆಕುರುಹುಗಳಾಗಿರುವ, ಲೋಭಾದಯಃ-ಆಶೆಮೊದಲಾದದುರ್ಗುಣಗಳೂ, ಯೇ-ಯಾವವೋ, ತೇ-ಅವು, ಕುತಃ-ಎತ್ತಣವು, (ಅಶರೀರನಾದನಿನಗೆ ಶರೀರವಿಕಾರವಿಲ್ಲವು) ಅಥಾಪಿ-ಹಾಗಾದರೂ, ಭಗವಾನ್-ಭಗವಂತನಾದನೀನು, ಧರ್ಮಸ್ಯ-ಧರ್ಮದ, ಗುಪ್ತ್ಯೈ-ರಕ್ಷಣಕ್ಕೋಸುಗವೂ ಖಲನಿಗ್ರಹಾಯ-ದುಷ್ಟಶಿಕ್ಷಣಕ್ಕೋಸುಗವೂ, ದಂಡಂ-ಶಿಕ್ಷಾಕರ್ತೃತ್ವವನ್ನು ಬಿಭರ್ತಿ-ವಹಿಸುವಿ ||೪|| ತ್ವಂ-ನೀನು, ಜಗತಾಂ-ಲೋಕಗಳಿಗೆ, ಪಿತಾ-ತಂದೆಯೂ, ಗುರುಃ-ಉಪದೇಶಕನೂ, ಅಧೀಶಃ-ನಿಯಾಮಕನೂ, ದುರತ್ಯಯಃ-ಮೀರಕೂಡದ, ಕಾಲಃ-ಕಾಲಪುರುಷನೂ, ಉಪಾತ್ತದಂಡಃ-ವಹಿಸಲ್ಪಟ್ಟಶಿಕ್ಷಾಕರ್ತೃತ್ವವುಳ್ಳವನೂ, ಆಗಿ ಇಚ್ಛಾತನುಭಿಃ-ಸ್ವೇಚ್ಛಾಧೀನಗಳಾದ ಅವತಾರಮೂರ್ತಿಗಳಿಂದ, ಹಿತಾಯ-ಪ್ರಿಯಕ್ಕೋಸುಗ, ಜಗದೀಶಮಾನಿನಾಂ-ನಾವೇಜಗತ್ತಿಗೊಡೆಯರೆಂಬಗರ್ವವುಳ್ಳವರ, ಮಾನಂ-ಗರ್ವವನ್ನು, ವಿಧುನ್ವನ್-ಕೊಡಹುತಲಿರುವನಾಗಿ, ಸಮೀಹಸೇ

---

ಶ್ರೀಕೃಷ್ಣನಂ ಹೇಳನವು ಮಾಡಿದಕಾರಣದಿಂದ ಖಿನ್ನನಾಗಿ, ಶ್ರೀಕೃಷ್ಣನ ಪಾದಂಗಳಮೇಲೆ ಸೂರ್ಯಕಾಂತಿಯಂತೆ ಕಾಂತಿಯುಳ್ಳ ತನ್ನಕಿರೀಟವನಿರಿಸಿ ನಮಸ್ಕರಿಸಿದನು ||೧|| ಅಮಿತಮಹಿಮೆಯುಳ್ಳ ಶ್ರೀಕೃಷ್ಣನ ಪ್ರಭಾವವಂ ಕಂಡು ಕೇಳಿ ಇದ್ದವನಾದ್ದರಿಂದ, ಆ ಯಿಂದ್ರನು ಲೋಕತ್ರಯಾಧಿಪತ್ಯದ ಗರ್ವವಂಬಿಟ್ಟವನಾದ ಕಾರಣದಿಂದಲೇ ಅಂಜಲಿಬಂಧವು ಮಾಡಿಕೊಂಡು ನುಡಿದನದೆಂತೆನೆ ||೨|| ಎಲೈ ಭಗವಂತನೇ! ನಿನ್ನಸ್ವರೂಪವು ಶುದ್ಧಸತ್ವಮಯವಾಗಿ, ಜ್ಞಾನಘನವಾಗಿ, ರಜಸ್ಸು ತಮಸ್ಸು ಇವುಗಳಸಂಬಂಧವಿಲ್ಲದ್ದಾಗಿ, ಶಾಶ್ವತವಾಗಿ, ಇರುವುದು. ಮಾಯಾಮಯವಾದ ಗುಣಜನ್ಯವಾದ ಸಂಸಾರವೂ ದೇಹಬಂಧವೂ ನಿನಗಿಲ್ಲ ||೩|| ಎಲೈ ಈಶ್ವರನೇ! ದೇಹಸಂಬಂಧದಿಂದುಂಟಾದ ಲೋಕಬಾಧೆಗಳು ನಿನಗೆ ಹೇಗೆಬಂದೀತು? ಅಜ್ಞಾನಿತ್ವಸೂಚಕಗಳಾದ ದೇಹಬಂಧ ಕಾರಣದಿಂದಾಗಲಿ ರಾಗಾದಿಗಳು ನಿನಗೆ ಇಲ್ಲವೇಇಲ್ಲ. ಹಾಗಾದರೂ ಧರ್ಮರಕ್ಷಾರ್ಥವಾಗಿಯೂ, ದುಷ್ಟನಿಗ್ರಹಾರ್ಥವಾಗಿಯೂ, ದಂಡವು ಧರಿಸುತ್ತೀಯೆ ||೪|| ಎಲೈ ಸ್ವಾಮಿಯೇ! ನೀನುಜಗತ್ತಿಗೆ ಪಿತೃವಾದವನು, ಗುರುವಾದವನು, ಈಶ್ವರನು, ಅಪರಿಹಾರ್ಯವಾದ ಕಾಲವೂನೀನೇಸರಿ, ಲೋಕಹಿತಾರ್ಥವಾಗಿ ಸ್ವೇಚ್ಛಾಶರೀರಂಗಳಿಂದ ನಿಗ್ರಹಾನುಗ್ರಹಂಗಳಂ ಮಾಡುತ್ತ, ಲೋಕನಾಥರೆಂಬ ಗರ್ವದಿಂ

ಧುನ್ವಞ್ಜಗದೀಶಮಾನಿನಾಂ ॥೬॥ ಯೇಮದ್ವಿಧಾಜ್ಞಾಜಗದೀಶಮಾನಿನಸ್ತ್ವಾಂವೀಕ್ಷ್ಯಕಾಲೇಭಯಮಾಶುತನ್ಮದಂ | ಹಿತ್ವಾರ್ಯಮಾರ್ಗಂಪ್ರಭಜಂತ್ಯಪಸ್ಮಯಾಈಹಾಖಲಾನಾಮಪಿತೇನುಶಾಸನಂ ॥೭॥ ಸತ್ವಂಮಮೈಶ್ವರ್ಯಮದಪ್ಲುತಸ್ಯಕೃತಾಗಸಸ್ತ್ವವಿದುಷಃಪ್ರಭಾವಮ್ | ಕ್ಷಂತುಂಪ್ರಭೋಥಾರ್ಹಸಿಮೂಢಚೇತಸೋಮೈವಂಪುನರ್ಭೂದಸತೀಶಮೇಮತಿಃ ॥೮॥ ತವಾವತಾರೋಯಮಧೋಕ್ಷಜೇಹಭುವೋಭರಾಣಾಮುರುಭಾರಜನ್ಮನಾಂ | ಚಮೂಪತೀನಾಮಭವಾಯದೇವಭವಾಯಯುಷ್ಮಚ್ಚರಣಾನುವರ್ತಿನಾಂ ॥೯॥ ನಮಸ್ತುಭ್ಯಂಭಗವತೇಪುರುಷಾಯಮಹಾತ್ಮನೇ | ವಾಸುದೇವಾಯಕೃಷ್ಣಾಯಸಾತ್ವತಾಂಪತಯೇನಮಃ ॥೧೦॥ ಸ್ವಚ್ಛಂದೋಪಾತ್ತದೇಹಾಯವಿಶುದ್ಧಜ್ಞಾನಮೂರ್ತಯೇ |

---

ಬಿಡಿಸುವಿ ॥೬॥ ಮದ್ವಿಧಾಜ್ಞಾಃ-ನನ್ನ ಹಾಗೆರೀತಿಯುಳ್ಳಅಜ್ಞಾನಿಗಳು, ಯೇ-ಯಾರೋ, ತೇ-ಅವರು, ಜಗದೀಶಮಾನಿನಃ-ಜಗತ್ತಿಗೊಡೆಯರೆಂಬಗರ್ವವುಳ್ಳವರಾಗಿ, ಕಾಲೇ-ಭಯಪಡತಕ್ಕ ಸಮಯದಲ್ಲಿಯೂ, ಅಭಯಂ-ಭಯವಿಲ್ಲದೇ ಇರುವ, ತ್ವಾಂ-ನಿನ್ನನ್ನು, ವೀಕ್ಷ್ಯ-ನೋಡಿ, ಆಶು-ಬೇಗನೆ, ತನ್ಮದಂ-ಆಗರ್ವವನ್ನು, ಹಿತ್ವಾ-ಬಿಟ್ಟು, ಅಪಸ್ಮಯಾಃ-ಗರ್ವವಿಲ್ಲದವರಾದ್ದರಿಂದಲೇ, ಆರ್ಯಮಾರ್ಗಂ-ಹಿರಿಯರಿಂದಾದಮಾರ್ಗವಾದನಿನ್ನಭಕ್ತಿಯನ್ನು, ಪ್ರಭಜಂತಿ-ಸೇವಿಸುವರು (ಪಡೆಯುವರು) ತೇ-ನಿನ್ನ, ಈಹಾಪಿ-ಇಚ್ಛೆಯೂಕೂಡ, ಖಲಾನಾಂ-ದುಷ್ಟರಿಗೆ, ಅನುಶಾಸನಂ-ದಂಡನವಾಗಿರುವುದು ॥೭॥ ಪ್ರಭೋ-ಸಮರ್ಥನೇ! ಸತ್ವಂ-ಆನೀನು, ಐಶ್ವರ್ಯಮದಾಪ್ಲುತಸ್ಯ-ಒಡೆತನದಗರ್ವದಲ್ಲಿ ಮುಳುಗಿದವನಾದ್ದರಿಂದ, ಕೃತಾಗಸಃ-ಮಾಡಲ್ಪಟ್ಟಅಪರಾಧವುಳ್ಳಂಥಾ, ತೇ-ನಿನ್ನ, ಪ್ರಭಾವಂ-ಸಾಮರ್ಥ್ಯವನ್ನು, ಅವಿದುಷಃ-ತಿಳಿದವನಲ್ಲದಂಥಾ, ಮೂಢಚೇತಸಃ-ಮೂಢಬುದ್ಧಿಯುಳ್ಳ, ಮಮ-ನನ್ನ ಅಪರಾಧವನ್ನು, ಕ್ಷಂತುಂ-ಸೈರಿಸುವುದಕ್ಕೆ, ಅರ್ಹಸಿ-ಯೋಗ್ಯನಾಗುವಿ. ಈಶ-ಒಡೆಯನೇ! ಅಥ-ಇನ್ನು ಮೇಲೆ, ಮೇ-ನನ್ನ, ಮತಿಃ-ಬುದ್ಧಿಯು, ಪುನಃ-ಮರಳಿಯೂ, ಏವಂ-ಹೀಗೆ, ಅಸತೀ-ದುಷ್ಟವಾದದ್ದು, ಮಾಭೂತ್-ಆಗಬೇಡ ॥೮॥ ಹೇಅಧೋಕ್ಷಜ-ಎಲೈವಿಷ್ಣುವೇ! ಇಹ-ಈಲೋಕದಲ್ಲಿ, ತವ-ನಿನ್ನ, ಅಯಮವತಾರಃ-ಈಕೃಷ್ಣಾವತಾರವು, ಭುವಃ-ಭೂಮಿಗೆ, ಭರಣಾಂ-ಭಾರವಾಗಿರುವಂಥಾ, ಉರುಭಾರಜನ್ಮನಾಂ-ಹೆಚ್ಚುಭಾರವಾದಹುಟ್ಟುವಿಕೆಯುಳ್ಳ, ಚಮೂಪತೀನಾಂ-ಸೇನಪತಿಗಳ, ಅಭವಾಯ-ನಾಶಕ್ಕೋಸುಗವೂ, ದೇವ-ಸ್ವಾಮೀ! ಯುಷ್ಮಚ್ಚರಣಾನುವರ್ತಿನಾಂ-ನಿಮ್ಮಅಡಿಗಳನ್ನು ಅನುಸರಿಸಿಯಿರುವಭಕ್ತರ, ಭವಾಯ-ತ-ಕ್ಷೇಮಕ್ಕೋಸುಗವೂ, ಆಗಿರುವುದು ॥೯॥ ಭಗವತೇ-ಷಡ್ಗುಣೈಶ್ವರ್ಯಸಂಪನ್ನನಾದ, ತುಭ್ಯಂ-ನಿನಗೆ, ನಮಃ-ನಮಸ್ಕಾರವು, ಪುರುಷಾಯ-ಅಂತರ್ಯಾಮಿಯಾದ, ಮಹಾತ್ಮನೇ-ಅಪರಿಚ್ಛಿನ್ನನಾದ, (ವಿಭುಮೂರ್ತಿಯಾದ) ವಾಸುದೇವಾಯ-ಸರ್ವತ್ರಯಿರುವನಾದ, ಸಾತ್ವತಾಂ-ಯಾದವರಿಗೆ, ಪತಯೇ-ನಾಥನಾದ, ಕೃಷ್ಣಾಯ-ಕೃಷ್ಣನಿಗೋಸುಗ, ನಮಃ-ನಮಸ್ಕಾರವಾಗಲಿ ॥೧೦॥ ಸ್ವಚ್ಛಂದೋಪಾತ್ತದೇಹಾಯ-ಸ್ವಚ್ಛಂದ-ತನ್ನಸಂಕಲ್ಪದಿಂದ, ಉಪಾತ್ತ-ಪಡೆಯಲ್ಪಟ್ಟ, ದೇಹಾಯ-ಅವತಾರಶರೀರವುಳ್ಳಂಥಾ, ವಿಶುದ್ಧಜ್ಞಾನ-ಜೊಕ್ಕವಾದಅರುಹೇ, ಮೂರ್ತಯೇ-ಆಕಾರವಾಗಿಉಳ್ಳಂಥಾ, ಸರ್ವಸ್ಮೈ-ಎಲ್ಲ

---

ಮದಿಸಿದವರಂ ಗರ್ವದಿಂದ ಹರಿಸುತ್ತೀಯೆ ॥೬॥ ನಮ್ಮಂತಾ ಅಜ್ಞರು ನಾವು ಲೋಕನಾಥರು ಎಂಬಗರ್ವವುಳ್ಳವರಾಗಿ ನಿನ್ನಂನೋಡಿ ಶೀಘ್ರವಾಗಿ ಆಗರ್ವವಂಬಿಟ್ಟು ನಿನ್ನಭಕ್ತಿಯಂ ಮಾಡುತ್ತಾರೆ. ಆದ್ದರಿಂದ ನಿನ್ನಲ್ಲಿಯೇ ದುಷ್ಟಜನರಂ ಶೀಕ್ಷಿಸುತ್ತಲಿದೆ ॥೭॥ ಎಲೈ ಕೃಷ್ಣನೇ! ಆನೀನು ಐಶ್ವರ್ಯಮದದಿಂದ ಗರ್ವಿತನಾಗಿ, ನಿನ್ನಪ್ರಭಾವವನರಿಯದೆ ನಿನಗೆ ಅಪರಾಧಿಯಾಗಿ, ಮೂಢಚಿತ್ತನಾಗಿ, ಇರುವನನ್ನ ಅಪರಾಧವಂ ಕ್ಷಮಿಸು. ಇನ್ನುಮೇಲೆ ನನಗೆ ಇಂತಾಮೂಢಬುದ್ಧಿಯು ಬರಬೇಡ ॥೮॥ ಎಲೈ ಅಧೋಕ್ಷಜನೆ! ಭೂಭಾರರೂಪರಾದ ಮತ್ತು ಭೂಮಿಗೆ ಭಾರವನ್ನುಂಟುಮಾಡುವ ಸೇನಾಪತಿಗಳಾದ ದುಷ್ಟಕ್ಷತ್ರಿಯರ ಸಂಹಾರಾರ್ಥವಾಗಿಯೂ ನಿನ್ನಅವತಾರಂಗಳು ಉಂಟಾಗುತ್ತಲಿವೆ ॥೯॥ ಭಗವಂತನಾದ ಮಹಾಪುರುಷನಾದ ವಾಸುದೇವನಾದ ಯಾದವಪತಿಯಾದ ಶ್ರೀಕೃಷ್ಣನೇ! ನಿನಗೋಸುಗ ನಮಸ್ಕಾರವು ॥೧೦॥ ಭಕ್ತರ ಇಚ್ಛಾನುಸಾರವಾಗಿ ದೇಹವಂಧರಿಸಿರುವ ವಿಶುದ್ಧವಾದ ಜ್ಞಾನಸ್ವರೂಪವುಳ್ಳ ಸರ್ವಸ್ವರೂಪನಾದ ಸರ್ವಕಾರಣನಾದ ಸ

ಸರ್ವಸ್ಮೈ ಸರ್ವಬೀಜಾಯ ಸರ್ವಭೂತಾತ್ಮನೇ ನಮಃ ||೧೧|| ಮಯೇದಂ ಭಗವನ್ ಗೋಷ್ಠನಾಶಾಯಾಸಾರವಾಯುಭಿಃ | ಚೇಷ್ಟಿತಂ ವಿಹತೇ ಯಜ್ಞೇ ಮಾನಿನಾ ತೀವ್ರಮನ್ಯುನಾ ||೧೨|| ತ್ವಯೇಶಾನುಗೃಹೀತೋಸ್ಮಿ ಧ್ವಸ್ತಸ್ತಂಭೋ ವೃಥೋದ್ಯಮಃ | ಈಶ್ವರಂ ಗುರುಮಾತ್ಮಾನಂ ತ್ವಾಮಹಂ ಶರಣಂ ಗತಃ ||೧೩|| ಏವಂ ಸಂಕೀರ್ತಿತಃ ಕೃಷ್ಣೋ ಮಘೋನಾ ಭಗವಾನಮುಂ | ಮೇಘಗಂಭೀರಯಾ ವಾಚಾ ಪ್ರಹಸನ್ನಿದಮಬ್ರವೀತ್ ||೧೪|| ಶ್ರೀಭಗವಾನ್ | ಮಯಾ ತೇಕಾರಿ ಮಘವನ್ ಯಜ್ಞಭಂಗೋನುಗೃಹ್ಣತಾ | ಮದನುಸ್ಮೃತಯೇ ನಿತ್ಯಂ ಮತ್ತಸ್ಯೇಂದ್ರಶ್ರಿಯಾ ಭೃಶಂ ||೧೫|| ಮಾಮೈಶ್ವರ್ಯಶ್ರೀಮದಾಂಧೋ ದಂಡಪಾಣಿಂ ನ ಪಶ್ಯತಿ | ತಂ ಭ್ರಂಶಯಾಮಿ ಸಂಪದ್ಭ್ಯೋ ಯಸ್ಯ ಚೇಚ್ಛಾಮ್ಯನುಗ್ರಹಂ ||೧೬||

---

ಕ್ಕೂ ಅಧಿಷ್ಠಾನವಾದಂಥಾ, ಸರ್ವಬೀಜಾಯ-ಎಲ್ಲಕ್ಕೂ ಕಾರಣವಾದಂಥಾ, ಸರ್ವಭೂತಾತ್ಮನೇ-ಸರ್ವಪ್ರಾಣಿಗಳಿಗೂ ಆತ್ಮನಾಗಿರುವ ನಿನಗೆ, ನಮಃ-ನಮಸ್ಕಾರವಾಗಲಿ ||೧೧|| ಭಗವನ್-ಭಗವಂತನೇ! ಯಜ್ಞೇ-ನನ್ನ ಪೂಜೆಯು, ವಿಹತೇಸತಿ-ನಿನ್ನಿಂದ ಹಾಳುಮಾಡಲ್ಪಡುತಲು, ಮಾನಿನಾ-ಗರ್ವವುಳ್ಳವನಾದ್ದರಿಂದ, ತೀವ್ರಮನ್ಯುನಾ-ಕ್ರೂರವಾದ ಸಿಟ್ಟುಳ್ಳ, ಮಯಾ-ನನ್ನಿಂದ, ಗೋಷ್ಠನಾಶಾಯ-ಗೋಕುಲದ ಹಾನಿಗೋಸ್ಕರ, ಆಸಾರವಾಯುಭಿಃ-ಜಡಿಮಳೆಗಾಳಿಗಳಿಂದ, ಇದಂ-ಈ ಕೆಡುಕು, ಚೇಷ್ಟಿತಂ-ಮಾಡಲ್ಪಟ್ಟಿತು ||೧೨|| ಈಶ-ನಿಯಾಮಕನೇ! ತ್ವಯಾ-ನಿನ್ನಿಂದ, ಧ್ವಸ್ತಸ್ತಂಭಃ-ಧ್ವಂಸಮಾಡಲ್ಪಟ್ಟ ಗರ್ವವುಳ್ಳವನೂ, ವೃಥೋದ್ಯಮಃ-ಭಗ್ನಪ್ರಯತ್ನನೂ ಆಗಿ, ಅನುಗೃಹೀತಃ-ಅನುಗ್ರಹಿಸಲ್ಪಟ್ಟವನು, ಅಸ್ಮಿ-ಆದೆನು ಅಹಂ-ನಾನು, ಈಶ್ವರಂ-ನಿಯಾಮಕನಾದ, ಗುರುಂ-ಅಜ್ಞಾನಪರಿಹಾರಕನಾದ, ಆತ್ಮಾನಂ-ಚೈತನ್ಯವಾಗಿರುವ, ತ್ವಾಂ-ನಿನ್ನನ್ನು, ಶರಣಂ-ರಕ್ಷಕನನ್ನಾಗಿ, ಗತಃ-ಹೊಂದಿದವನಾದೆನು ||೧೩|| ಏವಂ-ಹೀಗೆ, ಮಘೋನಾ-ಇಂದ್ರನಿಂದ, ಸಂಕೀರ್ತಿತಃ-ಚನ್ನಾಗಿ ಸ್ತುತಿಸಲ್ಪಟ್ಟ, ಭಗವಾನ್ ಸರ್ವೇಶ್ವರನಾದ, ಕೃಷ್ಣಃ-ಹರಿಯು, ಅಮುಂ-ಈ ಇಂದ್ರನನ್ನು ಕುರಿತು, ಪ್ರಹಸನ್-ಹೆಚ್ಚಾಗಿ ನಗುತಲಿರುವನಾಗಿ, ಮೇಘಗಂಭೀರಯಾ-ಮೇಘದ ಹಾಗೆ ಘನವಾದ, ವಾಚಾ-ಮಾತಿನಿಂದ, ಇದಂ-ಈ ಮುಂದೆ ಹೇಳಲ್ಪಡುವುದನ್ನು, ಅಬ್ರವೀತ್-ನುಡಿದನು ||೧೪|| (ಕೃಷ್ಣವಾಕ್ಯವು) ಮಘವನ್-ಇಂದ್ರನೇ! ಅನುಗೃಹ್ಣತಾ-ಅನುಗ್ರಹಿಸುತಲಿರುವ, ಮಯಾ-ನನ್ನಿಂದ, ಇಂದ್ರಶ್ರಿಯಾ-ದೇವರಾಜ್ಯದ ಸಂಪತ್ತಿನಿಂದ, ಮತ್ತಸ್ಯ-ಕೊಬ್ಬಿದವನಾದ, ತೇ-ನಿನಗೆ, ನಿತ್ಯಂ-ಯಾವಾಗಲೂ, ಮದನುಸ್ಮೃತಯೇ-ನನ್ನ ನೆನಪಿರುವಬಗ್ಗೆ, ಯಜ್ಞಭಂಗಃ-ನಿನ್ನ ಪೂಜೆಯಾದ ಇಂದ್ರಯಾಗದ ಹಾನಿಯು, ಅಕಾರಿ-ಮಾಡಲ್ಪಟ್ಟಿತು ||೧೫|| ಐಶ್ವರ್ಯಶ್ರೀಮದಾಂಧಃ-ಪ್ರಭುತ್ವಸಂಪತ್ತಿನ ಗರ್ವದಿಂದ ಕುರುಡನಾದವನು, ದಂಡಪಾಣಿಂ-ಕೋಲನ್ನು ಕೈಲಿಹಿಡಿದು ಶಿಕ್ಷಕನಾಗಿರುವ, ಮಾಂ-ನನ್ನನ್ನು, ನಪಶ್ಯತಿ-ನೋಡುವುದಿಲ್ಲವು. ಯಸ್ಯ-ಯಾವ ಪುರುಷನ, ಅನುಗ್ರಹಂ-ರಕ್ಷಣವನ್ನು, ವಾಂಛಾಮಿ-ಬಯಸುವೆನೋ, ತಂ-ಆ ಪುರುಷನನ್ನು, ಸಂಪದ್ಭ್ಯಃ-ಧನಭೋಗಗಳಪೆಸೆಯಿಂದ, ಭ್ರಂಶಯಾಮಿ-ತಪ್ಪಿಸಿಕೆಡಹುವೆನು ||೧೬|| ಶಕ್ರ-ಇಂದ್ರನೇ! ಗಮ್ಯ

---

ರ್ವಭೂತಾತ್ಮನಾದ ನಿನಗೋಸುಗ ನಮಸ್ಕಾರವು ||೧೧|| ಎಲೈ, ಭಗವಂತನೇ! ನನ್ನ ಪೂಜಾವಿಘಾತವಾದ್ದರಿಂದ ಕೋಪವುಳ್ಳ ನನ್ನಿಂದ ವ್ರಜನಾಶಾರ್ಥವಾಗಿ ಮಹಾವೃಷ್ಟಿಯಂ ಕರೆದು ಚೇಷ್ಟೆಯು ಮಾಡಲ್ಪಟ್ಟಿತು ||೧೨|| ನನ್ನ ದುರಹಂಕಾರದಿಂ ಪರಿಹರಿಸಲ್ಪಟ್ಟು ನಿನ್ನಿಂದ ನಾನು ಅನುಗ್ರಹಿಸಲ್ಪಟ್ಟೆನು. ಈಶ್ವರನಾದ ಗುರುವಾದ ಪರಮಾತ್ಮನಾದ ನಿನ್ನಂ ಶರಣುಹೊಂದಿದ್ದೇನೆ ||೧೩|| ಎಂಬದಾಗಿ ಈರೀತಿಯಲ್ಲಿ ಇಂದ್ರನಿಂದ ಪ್ರಾರ್ಥಿತನಾಗಿ ಶ್ರೀಕೃಷ್ಣನು ನಗುತ ಮೇಘಗಂಭೀರವಾದ ವಾಕ್ಕಿನಿಂದ ಇಂದ್ರನಂ ಕುರಿತು ನುಡಿದನು ||೧೪|| [ಅದೆಂತೆನೆ] ಎಲೈ, ಇಂದ್ರನೇ! ಲೋಕತ್ರಯಾಧಿಪತ್ಯದಿಂದ ಗರ್ವಿತನಾದ ನಿನಗೆ ನನ್ನ ಸ್ಮೃತಿ ಇರಬೇಕೆಂದು ನಿನ್ನಲ್ಲಿ ಅನುಗ್ರಹೇಚ್ಛೆಯುಳ್ಳ ನನ್ನಿಂದ ನಿನ್ನ ಪೂಜಾ ಭಂಗವು ಮಾಡಲ್ಪಟ್ಟಿತು ||೧೫|| ಐಶ್ವರ್ಯಮದಾಂಧನಾದ ಯಾವಪುರುಷನು ಶಿಕ್ಷಕನಾದ ನನ್ನಂ ಯಾವಾಗ ಮರೆಯುತ್ತಾನೆಯೋ, ಅವನಲ್ಲಿ ಅನುಗ್ರಹೇಚ್ಛೆ ತಪ್ಪಿ ಅವನ ಐಶ್ವರ್ಯವನಪಹರಿಸುತ್ತೇನೆ ||೧೬|| ಎಲೈ, ಇಂದ್ರನೇ! ನಿನಗೆ ಸುಖವಾಗಲಿ, ನಿನ್ನ ಸ್ವಸ್ಥಾನವಂ ಕುರಿತು ನಡೆ, ನನ್ನ ಆಜ್ಞೆಯನ್ನುಲ್ಲಂಘಿಸದೆ ಆಚರಿಸುವವನಾಗು, ಗರ್ವವಂ ಬಿಟ್ಟು ನಿಮ್ಮ ನಿಮ್ಮ

ಗಮ್ಯತಾಂಶಕ್ರಭದ್ರಂವಃಕ್ರಿಯತಾಂಮೇನುಶಾಸನಂ । ಸ್ಥೀಯತಾಂಸ್ವಾಧಿಕಾರೇಷುಯುಕ್ತೈರ್ವಃ ಸ್ತಂಭವರ್ಜಿತೈಃ ॥೧೭॥ ಅಥಾಹಸುರಭಿಃಕೃಷ್ಣಮಭಿನಂದ್ಯಮನಸ್ವಿನೀ । ಸ್ವಸಂತಾನೈರುಪಾಗಮ್ಯಗೋಪರೂಪಿಣಮೀಶ್ವರಂ ॥೧೮॥ ಸುರಭಿಃ॥ ಕೃಷ್ಣಕೃಷ್ಣಮಹಾಯೋಗಿನ್ವಿಶ್ವಾತ್ಮನ್ವಿಶ್ವಭಾವನ । ಭವತಾಲೋಕನಾಥೇನಸನಾಥಾವಯಮಚ್ಯುತ ॥೧೯॥ ತ್ವಮೇವಪರಮಂದೈವಂತ್ವಮಿಂದ್ರೋಜಗತ್ಪತೇ । ಭವಾಯಭವಗೋವಿಪ್ರದೇವಾನಾಂಯೇಚಸಾಧವಃ ॥೨೦॥ ಇಂದ್ರಂನಸ್ತ್ವಾಭಿಷೇಕ್ಷ್ಯಾಮೋಬ್ರಹ್ಮಣಾಚೋದಿತಾವಯಂ । ಅವತೀರ್ಣೋಸಿಭಗವನ್ಭೂಮೇರ್ಭಾರಾಪನುತ್ತಯೇ॥೨೧॥

---

ತಾಂ-ನಡೆಯಲ್ಪಡಲಿ. (ಹೋಗಿರಿ) ವಃ-ನಿಮಗೆ, ಭದ್ರಂ-ಶುಭವಾಗಲಿ ಮೇ-ನನ್ನ, ಅನುಶಾಸನಂ-ಆಜ್ಞಾನುಸಾರವಾದ ಕಾರ್ಯವು, ಕ್ರಿಯತಾಂ-ಮಾಡಲ್ಪಡಲಿ ಸ್ತಂಭವಿವರ್ಜಿತೈಃ-ಗರ್ವದಿಂದ ಬಿಡಲ್ಪಟ್ಟವರಾದ, ಯುಕ್ತೈಃ-ಜಾಗ್ರತೆಯಿಂದ ಕೂಡಿದವರಾದ, ನಿಮ್ಮಿಂದ, ಸ್ವಾಧಿಕಾರೇಷು-ನಿಮ್ಮಧಿಕಾರದ ಪದಗಳಲ್ಲಿ, ಸ್ಥೀಯತಾಂ-ನಿಮ್ಮಿಂದ ಇರಲ್ಪಡಲಿ (ಇರಿ) ॥೧೭॥ ಅಥ-ಆಮೇಲೆ, ಸುರಭಿಃ-ಕಾಮಧೇನುವು, ಕೃಷ್ಣಂ-ಹರಿಯನ್ನು ಕುರಿತು, ಅಭಿನಂದ್ಯ-ಸಂತೋಷಿಸಿ, ಮನಸ್ವಿನೀ-ಧಾರಾಳವಾದ ಬುದ್ಧಿಯುಳ್ಳವಳಾಗಿ, ಸ್ವಸಂತಾನೈಸ್ಸಹ-ತನ್ನ ಸಂತತಿಯಾದ ಗೋವುಗಳ ಹಿಂಡುಗಳೊಡನೆ, ಉಪಾಗಮ್ಯ-ಹತ್ತಿರಕ್ಕೆ ಬಂದು, ಗೋಪರೂಪಿಣಂ-ಗೋಪಾಲಕರೂಪವುಳ್ಳ, ಈಶ್ವರಂ-ನಿಯಾಮಕನನ್ನು ಕುರಿತು, ಆಹ-ನುಡಿದಳು ॥೧೮॥ ಅಚ್ಯುತ-ಹಾನಿಯಿಲ್ಲದವನೇ! ಕೃಷ್ಣ-ಅಜ್ಞಾನಪರಿಹಾರಕನೇ! ಕೃಷ್ಣ-ವಿಷ್ಣುವೇ! ಮಹಾಯೋಗಿನ್-ಪೂರ್ಣಜ್ಞಾನಿಯೇ! ವಿಶ್ವಾತ್ಮನ್-ಜಗನ್ನಿವಾಸನೇ (ಸರ್ವಾಂತರ್ಯಾಮಿಯೇ) ವಿಶ್ವಭಾವನ-ಪ್ರಪಂಚದ ಸೃಷ್ಟ್ಯಾದಿಕರ್ತನೇ! ಲೋಕನಾಥೇನ-ಲೋಕಗಳಿಗೆ ಒಡೆಯನಾದ, ಭವತಾ-ನಿನ್ನಿಂದ, ವಯಂ-ನಾವು, ಸನಾಥಾಃ-ಧಣಿಯಿಂದ ಕೂಡಿದವರು (ರಕ್ಷಿಸಲ್ಪಟ್ಟವರಾದೆವು) ॥೧೯॥ ಜಗತ್ಪತೇ-ವಿಶ್ವೇಶ್ವರನೇ! ತ್ವಮೇವ-ನೀನೇ, ಪರಮಂ-ಉತ್ಕೃಷ್ಟವಾದ, ದೈವಂ-ಭಾಗ್ಯವಾಗಿರುವಿ. ತ್ವಂ-ನೀನೇ, ನಃ-ನಮಗೆ, ಇಂದ್ರಃ-ಪರಮೈಶ್ವರ್ಯವುಳ್ಳ ಪ್ರಭುವಾಗಿರುವಿ. ಗೋವಿಪ್ರದೇವಾನಾಂ-ಗೋವುಗಳಿಗೂ ಬ್ರಾಹ್ಮಣರಿಗೂ ದೇವತೆಗಳಿಗೂ, ಸಾಧವೋ ಯೇ ಚ-ಸತ್ಪುರುಷರು ಯಾರೋ ಅವರಿಗೂ, ಭವಾಯ-ಕ್ಷೇಮಕ್ಕೋಸುಗ, ಭವ-ಆಗು ॥೨೦॥ ಭಗವನ್-ಪರಮೇಶ್ವರನೇ! ಬ್ರಹ್ಮದೇವರಿಂದ, ಚೋದಿತಾಃ-ಪ್ರೇರಿಸಲ್ಪಟ್ಟ, ವಯಂ ನಾವು, ತ್ವಾ-ನಿನ್ನನ್ನು, ನಃ-ನಮಗೆ, ಇಂದ್ರಂ-ಪ್ರಭುವನ್ನಾಗಿ, ಅಭಿಷೇಕ್ಷ್ಯಾಮಃ-ಪಟ್ಟಾಭಿಷೇಕವ ಮಾಡುವೆವು, ಭೂಮೇಃ-ಭೂಮಿಯ, ಭಾರಾಪನುತ್ತಯೇ-ಹೊರೆಯನ್ನು ತಪ್ಪಿಸಲೋಸುಗ, ಅವತೀರ್ಣಃ-ಆವಿರ್ಭವಿಸಿದವನು (ವೈಕುಂಠದಿಂದ ಇಳಿದವನು) ಅಸಿ-ಆಗಿರುವಿ ॥೨೧॥ ಏವಂ-ಹೀಗೆ, ಕೃಷ್ಣಂ-ಕೃಷ್ಣನನ್ನು ಕುರಿತು, ಉಪಾಮಂತ್ರ್ಯ-ಪ್ರಾರ್ಥಿಸಿ, ಸುರಭಿಃ-ಕಾಮಧೇನುವು, ಆತ್ಮನಃ-ತನ್ನ, ಪಯಸಾ-ಹಾಲಿನಿಂದಲೂ, (ಇಂದ್ರನು) ಐರಾವ

---

ಅಧಿಕಾರಂಗಳಲ್ಲಿ ಅಪ್ರಮತ್ತರಾಗಿ ಅತಿಜಾಗ್ರತೆಯುಳ್ಳವರಾಗಿ ಕರುಣೆಯುಳ್ಳವರಾಗಿ ಇರಿ ॥೧೭॥ [ಎಂದು ಯದುಕುಲತಿಲಕನಾದ ಶ್ರೀಕೃಷ್ಣನು ನುಡಿಯುತ್ತಿರಲಾಗಿ ಕಾಮಧೇನುವು ಶ್ರೀಕೃಷ್ಣನಂ ಕುರಿತು ನುಡಿಯುವಳು ಅದೆಂತೆನೆ) ಬಳಿಕ ಆ ಕಾಮಧೇನುವು ತನ್ನ ಸಂತಾನಗಳಾದ ಗೋವುಗಳೊಡನೆ ಬಂದು ಶ್ರೀಕೃಷ್ಣನು ನಮಸ್ಕರಿಸಿ ಗೋಪಾಲರೂಪನಾದ ಶ್ರೀಕೃಷ್ಣನಂ ಕುರಿತು ನುಡಿದಳು ॥೧೮॥ [ಅದೆಂತೆನೆ] ಮಹಾಯೋಗಿಯಾದ ವಿಶ್ವಾತ್ಮನಾದ ಅಚ್ಯುತನಾದ ಸರ್ವಕಾರಣನಾದ ಭಗವಂತನಾದ ಸರ್ವಸಾಕ್ಷಿಯಾದ ಶ್ರೀಕೃಷ್ಣನೇ! ಲೋಕನಾಥನಾದ ನಿನ್ನಿಂದ ನಾವು ಸನಾಥರು ॥೧೯॥ ಎಲೈ ಜಗದೀಶ್ವರನೇ? ನೀನೆ ನಮಗೆ ಪರದೈವವು, ನೀನೆ ನಮಗೆ ಇಂದ್ರನು, ಸಾಧುಗಳಾದವರಿಗೂ ಗೋವಿಪ್ರದೇವತೆಗಳಿಗೂ ಸಹ ಕ್ಷೇಮವನುಂಟುಮಾಡು ॥೨೦॥ ನಾವು ಬ್ರಹ್ಮನಿಂದಲೇ ಪ್ರೇರಿತರಾಗಿ ನಿನ್ನನ್ನೇ ಇಂದ್ರನನ್ನಾಗಿ ತಿಳಿದು ಅಭಿಷೇಕವಂ ಮಾಡುತ್ತೇವೆ. ಎಲೈ, ವಿಶ್ವಾತ್ಮನಾದ ಕೃಷ್ಣನೇ; ಭೂಭಾರ ಪರಿಹಾರಾರ್ಥವಾಗಿ ನೀನು ಅವತರಿಸಿ ಇರುವಿ ॥೨೧॥ ಎಂದು ಕಾಮಧೇನುವು ಆ ಕೃಷ್ಣನಂ ಒಡಂಬಡಿಸಿ ಪ್ರಾರ್ಥನೆಯಂ ಮಾಡಿ

ಏವಂಕೃಷ್ಣಮುಪಾಮಂತ್ರ್ಯಸುರಭಿಃಪಯಸಾತ್ಮನಃ । ಜಲೈರಾಕಾಶಗಂಗಾಯಾಐರಾವತಕರೋದ್ಧೃತೈಃ ॥೨೨॥ ಇಂದ್ರಸ್ಸುರರ್ಷಿಭಿಸ್ಸಾಕಂಚೋದಿತೋದೇವಮಾತೃಭಿಃ । ಅಭ್ಯಷಿಂಚತದಾಶಾರ್ಹಂಗೋವಿಂದಇತಿಚಾಭ್ಯಧಾತ್ ॥೨೩॥ ತತ್ರಾಗತಾಸ್ತುಂಬುರುನಾರದಾದಯೋಗಂಧರ್ವವಿದ್ಯಾಧರಸಿದ್ಧಚಾರಣಾಃ । ಜಗುರ್ಯಶೋಲೋಕಮಲಾಪಹಂಹರೇಸ್ಸುರಾಂಗನಾಸ್ಸನ್ನನೃತುರ್ಮುದಾನ್ವಿತಾಃ॥ ತಂತುಷ್ಟುವುರ್ದೇವನಿಕಾಯಕೇತವೋಹ್ಯವಾಕಿರಂಶ್ಚಾದ್ಭುತಪುಷ್ಪವೃಷ್ಟಿಭಿಃ । ಲೋಕಾಃಪರಾಂನಿರ್ವೃತಿಮಾಪ್ನುವಂಸ್ತ್ರಯೋಗಾವಸ್ತದಾಗಾಮನಯನ್ಪಯೋದ್ರುತಾಂ ॥೨೫॥ ನಾನಾರಸೌಘಾಸ್ಸರಿತೋವೃಕ್ಷಾಆಸನ್ಮಧುಸ್ರವಾಃ । ಅಕೃಷ್ಟಪಚ್ಯೌಷಧಯೋಗಿರಯೋಬಿಭ್ರದುನ್ಮಣೀನ್ ॥೨೬॥

---

ತತ್ಕರೋದ್ಧೃತೈಃ-ಪಟ್ಟದಆನೆಯ ಸೊಂಡಿಲಿನಿಂದಎತ್ತಿತರಲ್ಪಟ್ಟ, ಆಕಾಶಗಂಗಾಯಾಃ-ಮಂದಾಕಿನೀನದಿಯ, ಜಲೈಃ-ಉದಕಗಳಿಂದಲೂ, ॥೨೨॥ಇಂದ್ರಃ-ದೇವರಾಜನು, ದೇವಮಾತೃಭಿಃ-ಅದಿತ್ಯಾದಿಮಾತೃಕೆಗಳಿಂದ, ಚೋದಿತಃ-ಪ್ರೇರಿಸಲ್ಪಟ್ಟವನಾಗಿ, ಸುರರ್ಷಿಭಿಸ್ಸಾಕಂ-ನಾರದಾದಿದೇವರ್ಷಿಗಳೊಡನೆ, ದಾಶಾರ್ಹಂ-ದಶಾರ್ಹಕುಲದಲ್ಲಿಹುಟ್ಟಿದಕೃಷ್ಣನನ್ನು, ಅಭ್ಯಷಿಂಚತ-ಮಿಾಯಿಸಿದನು ) ಪಟ್ಟಾಭಿಷೇಕಮಾಡಿದನು,) ಗೋವಿಂದಇತಿಚ-ಗೋವಿಂದನೆನುತಲೂ, ಅಭ್ಯಧಾತ್-ಹೆಸರಿಟ್ಟುಕರೆದನು ॥೨೩॥ ತತ್ರ-ಅಲ್ಲಿ, ಆಗತಾಃ-ಬಂದಂಥಾ, ತುಂಬುರುನಾರದಾದಯಃ-ತುಂಬುರುವು ನಾರದನು ಮೊದಲಾದ, ಗಂಧರ್ವರೂ ವಿದ್ಯಾಧರರೂ ಸಿದ್ಧರೂ ಚಾರಣರೂ ಎಂಬದೇವಯೋನಿಪ್ರಭೇದಗಳು. ಲೋಕಮಲಾಪಹಂ-ಜನರಪಾಪಗಳನ್ನುಪರಿಹರಿಸುವ, ಹರೇಃ-ಕೃಷ್ಣನ, ಯಶಃ-ಕೀರ್ತಿಯನ್ನು, ಜಗುಃ-ಹಾಡಿದರು ಸುರಾಂಗನಾಃ-ದೇವಸ್ತ್ರೀಯರು, ಮುದಾ-ಸಂತೋಷದೊಡನೆ, ಅನ್ವಿತಾಸ್ಸತ್ಯಃ-ಕೂಡಿದವರಾಗಿ, ಸಂನನೃತುಃ-ಚನ್ನಾಗಿಕುಣಿದಾಡಿದರು ॥೨೪॥ದೇವನಿಕಾಯಕೇತವಃ-ದೇವಸಂಘಗಳಲ್ಲಿ ಪಳವಿಗೆಯಹಾಗೆ ಶ್ರೇಷ್ಠರಾದದೇವನಾಯಕರು, ತಂ-ಆಕೃಷ್ಣನನ್ನು, ತುಷ್ಟುವುಃ-ಸ್ತುತಿಮಾಡಿದರು. ಅದ್ಭುತಪುಷ್ಪವೃಷ್ಟಿಭಿಃ-ಆಶ್ಚರ್ಯಗಳಾದಪೂಮಳೆಗಳಿಂದ, ಅವಾಕಿರಂಶ್ಚ-ಚೆಲ್ಲಿದರು, ತ್ರಯೋಲೋಕಾಃ-ಸ್ವರ್ಗಮರ್ತ್ಯಪಾತಾಳಗಳೆಂಬಮೂರುಲೋಕಗಳೂ, ಪರಾಂ-ಉತ್ಕೃಷ್ಟವಾದ, ನಿರ್ವೃತಿಂ-ಸೌಖ್ಯವನ್ನು, ಆಪ್ನುವನ್-ಹೊಂದಿದವು ತದಾ-ಆಗ, ಗಾವಃ-ಗೋವುಗಳು, ಗಾಂ-ಭೂಮಿಯನ್ನು, ಪಯೋದ್ರುತಾಂ-ಹಾಲಿನಿಂದಬಳಸಲ್ಪಟ್ಟದ್ದನ್ನಾಗಿ, ಅನಯನ್-ಹೊಂದಿಸಿದವು ಮಾಡಿದವು(ತೋಯಿಸಿದವು.)॥೨೫॥ ಸರಿತಃ-ಹೊಳೆಗಳು, ನಾನಾರಸೌಘಾಃ-ಹಲವುಬಗೆಯರಸಗಳ ಗುಂಪುಗಳುಳ್ಳವಾದವು (ಹಾಲುತುಪ್ಪವುಂತಾದವಾಗಿಹರಿದವು) ವೃಕ್ಷಾಃ-ಗಿಡಗಳು, ಮಧುಸ್ರವಾಃ-ಜೇನನ್ನು ಸುರಿಸುವವು, ಆಸನ್-ಆದವು. ಅಕೃಷ್ಟಪಚ್ಯೌಷಧಯಃ-ಉಳುಮೆಯಿಲ್ಲದೆ ತಾನಾಗಿಬೆಳೆದು ಪಕ್ವವಾದ ನೆಲ್ಲುಮೊದಲಾದ ಬೆಳೆಗಳು, ಆಸನ್-ಆದವು. ಗಿರಯಃ-ಬೆಟ್ಟಗಳು, ಉನ್ಮಣೀನ್-ಹೊರಗೆಉಣ್ಮಿದ ರತ್ನಗಳನ್ನು, ಬಿಭ್ರತ್-(ಭಿಭ್ರನ್-ಬಿಭರುಃ-)ಧರಿಸಿದವು ॥೨೬॥ಹೇಕುರುನಂದನ-ಎಲೈಕು

---

ಸಂತೋಷಪಟ್ಟಳು. ಇಂದ್ರನು ಐರಾವತದ ಸೊಂಡಿಲಿನಿಂದ ತರಲ್ಪಟ್ಟ ದೇವಗಂಗೆಯ ಉದಕಗಳಿಂದ॥೨೨॥ ದೇವತೆಗಳಿಂದಲೂ ಋಷಿಗಳಿಂದಲೂ ಗಂಧರ್ವರಿಂದಲೂ ಯುಕ್ತನಾಗಿ, ಅದಿತಿಮೊದಲಾದ ದೇವಮಾತೃಕೆಗಳಿಂದಲೂ ಸಹಿತನಾಗಿ, ಶ್ರೀಕೃಷ್ಣನಿಗೆ ಅಭಿಷೇಕವಂಮಾಡಿ ಗೋವಿಂದನೆಂಬಹೆಸರಂಮಾಡಿದನು॥೨೩॥ ಅಲ್ಲಿಗೆತುಂಬುರುನಾರದಮುಂತಾದದೇವಋಷಿಗಂಧರ್ವರುವಿದ್ಯಾಧರರುಸಿದ್ಧರುಚಾರಣರು ಇವರೆಲ್ಲರೂಪಾಪಪರಿಹಾರಕವಾದ ಭಗವಂತನಯಶಸ್ಸಂಗಾನಂಗೆಯ್ದರು. ದೇವಸ್ತ್ರೀಯರು ಸಂತೋಷದಿಂದನರ್ತನಂ ಗೆಯ್ದರು॥೨೪॥ದೇವಸಮೂಹಪತಿಗಳಾದಇಂದ್ರಾದಿಗಳು ಪುಷ್ಪವೃಷ್ಟಿಯಂಕರೆಯುವರಾಗಿ ಸ್ತುತಿಸಿದರು.ಮೂರುಲೋಕಗಳೂಸುಖವನೆಯ್ದಿದವು.ಗೋವುಗಳು ತಮ್ಮ ಕ್ಷೀರಂಗಳಿಂದಭೂಮಿಯನೆನಸಿದವು॥೨೫॥ಆಗಸಮಸ್ತನದಿಗಳೂ ನಾನಾಪ್ರಕಾರವಾದಕ್ಷೀರಾದಿರಸಂಗಳಂಪ್ರವಹಿಸಿದವು. ವೃಕ್ಷಂಗಳುಫಲಪುಷ್ಪಮಕರಂದಂಗಳಂಧರಿಸಿದವು.ಭೂಮಿಯಲ್ಲಿ ಉತ್ತಬಿತ್ತುವಿಕೆಇಲ್ಲದೆಇದ್ದರೂಭತ್ತಮೊದಲಾದಧಾನ್ಯಂಗಳಂಫಲಿಸಿದವು ಪರ್ವತಂಗಳು ರತ್ನಂಗಳಂಧರಿಸಿದವು॥೨೬॥ಎಲೈಅರಸೇಶ್ರೀಕೃಷ್ಣನುಪಟ್ಟಾಭಿಷಿಕ್ತನಾದಮೇಲೆಈರೀತಿಯಲ್ಲಿಸರ್ವಪ್ರಾಣಿಭವಾ

ಕೃಷ್ಣೇಽಭಿಷಿಕ್ತ ಏತಾನಿ ಸರ್ವಾಣಿ ಕುರುನಂದನ । ನಿರ್ವೈರಾಣ್ಯಭವಂಸ್ತಾತ ಕ್ರೂರಾಣ್ಯಪಿ ನಿಸರ್ಗತಃ ‖೨೭‖ ಇತಿ ಗೋಗೋಕುಲಪತಿಂ ಗೋವಿಂದಮಭಿಷಿಚ್ಯ ಸಃ । ಅನುಜ್ಞಾತೋ ಯಯೌ ಶಕ್ರೋ ವೃತೋ ದೇವಾದಿಭಿರ್ದಿವಂ । ‖೨೮‖

ಇತಿ ಶ್ರೀಮದ್ಭಾಗವತೇ-ದಶಮಸ್ಕಂಧೇ-ಸಪ್ತವಿಂಶೋಽಧ್ಯಾಯಃ

---

ರುವಂಶವನ್ನು ಸಂತೋಷಗೊಳಿಸುವ ಪರೀಕ್ಷಿದ್ರಾಯನೇ! ತಾತ-ಅಪ್ಪಾ! ಕೃಷ್ಣೇ-ಶ್ರೀಹರಿಯು, ಅಭಿಷಿಕ್ತೇಸತಿ-ಗೋಪತಿಪಟ್ಟಾಭಿಷಿಕ್ತನಾಗುತಲೂ, ಏತಾನಿ ಸರ್ವಾಣಿ-ಇವೆಲ್ಲವೂ, ನಿಸರ್ಗತಃ-ಸ್ವಭಾವದಿಂದ, ಕ್ರೂರಾಣ್ಯಪಿ-ವಿರುದ್ಧಗಳಾದರೂ ಕೂಡ, ನಿರ್ವೈರಾಣಿ-ವಿರೋಧವಿಲ್ಲದವುಗಳು, ಅಭವನ್-ಆದವು ‖೨೭‖ ಸಶಕ್ರಃ-ಆಯಿಂದ್ರನು, ಇತಿ-ಹೀಗೆ, ಗೋಗೋಕುಲಪತಿಂ-ಗೋವುಗಳಿಗೂ ಗೋಕುಲಕ್ಕೂ ಒಡೆಯನಾದ, ಗೋವಿಂದಂ-ಕೃಷ್ಣನನ್ನು, ಅಭಿಷಿಚ್ಯ-ಪಟ್ಟಾಭಿಷಿಕ್ತನಂ ಮಾಡಿ, ಅನುಜ್ಞಾತಃ-ಅಪ್ಪಣೆಕೊಂಡವನಾಗಿ. ದೇವಾದಿಭಿಃ-ದೇವತೆಗಳುಮೊದಲಾದವರಿಂದ, ವೃತಃ-ಬಳಸಲ್ಪಟ್ಟವನಾಗಿ, ದಿವಂ-ಸ್ವರ್ಗವನ್ನು ಕುರಿತು. ಯಯೌ-ತೆರಳಿದನು (ಸೇರಿದನು) ‖೨೮‖

ಇತಿಶ್ರೀಮದ್ಭಾಗವತೇ ದಶಮಸ್ಕಂಧೇ ಸಪ್ತವಿಂಶೋಽಧ್ಯಾಯಃ-

---

ಯೆತು ಸ್ವಭಾವದಿಂದ ಕ್ರೂರಂಗಳಾದ ಪ್ರಾಣಿಗಳು ಪರಸ್ಪರ ವೈರವಿಲ್ಲದೆ ಇದ್ದವು ‖೨೭‖ ಎಲೈ ಅರಸೇ-ಈರೀತಿಯಲ್ಲಿ ದೇವೇಂದ್ರನು ಗೋಕುಲಪತಿಯಾದ ಶ್ರೀಕೃಷ್ಣನಿಗೆ ಪಟ್ಟಾಭಿಷೇಕವಂ ಮಾಡಿ ಶ್ರೀಕೃಷ್ಣನಿಂದ ಅಪ್ಪಣೆಯಂ ತೆಗದುಕೊಂಡು, ದೇವತೆಗಳಿಂದ ಯುಕ್ತನಾಗಿ ಸ್ವರ್ಗಲೋಕವಂ ಕುರಿತೆಯ್ದಿದನು ‖೨೮‖‡‖

ಇಂತು ಶುಕಮುನಿಯು ಪರೀಕ್ಷಿದ್ರಾಯನಿಗೆ ನಿರೂಪಿಸಿದನೆಂದು ಸೂತಪೌರಾಣಿಕನು ನೈಮಿಶಾರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಹೇಳಿದನೆಂಬಲ್ಲಿಗೆ-ಶ್ರೀಮನ್ಮಹೀಶೂರಪುರವರಾಧೀಶ ಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜ ವಿರಚಿತವಪ್ಪ, ಶ್ರೀಭಾಗವತದ "ಶ್ರೀಕೃಷ್ಣರಾಜ ವಾಣೀವಿಲಾಸವು" ಎಂಬ ಕರ್ಣಾಟಕ ಭಾಷಾವ್ಯಾಖ್ಯಾನದಲ್ಲಿ ದಶಮಸ್ಕಂಧದೊಳು ೨೭ನೆಯ ಅಧ್ಯಾಯವು ಸಂಪೂರ್ಣವಾದುದು.

ಮಂಗಳಮಸ್ತು

ಶ್ರೀಶ್ಲೋಕಃ॥ ಏಕಾದಶ್ಯಾಂನಿರಾಹಾರಸ್ಸಮಭ್ಯರ್ಚ್ಯಜನಾರ್ದನಂ । ಸ್ನಾತುಂನಂದಸ್ತು ಕಾಳಿಂದ್ಯಾಂದ್ವಾದಶ್ಯಾಂಜಲಮಾವಿಶತ್ ॥೧॥ ತಂಗೃಹೀತ್ವಾನಯದ್ದೂತೋವರುಣಸ್ಯಾಸುರೋಂತಿಕಂ ।ಅವಿಜ್ಞಾಯಾಸುರೀಂವೇಳಾಂಪ್ರವಿಷ್ಟಮುದಕಂನಿಶಿ ॥೨॥ ಚುಕ್ರುಶುಸ್ತಮಪಶ್ಯಂತಃಕೃಷ್ಣರಾಮೇತಿ ಗೋಪಿಕಾಃ । ಭಗವಾಂಸ್ತದುಪಶ್ರುತ್ಯಪಿತರಂವರುಣಾಹೃತಂ । ತದಂತಿಕಂಗತೋರಾಜನ್ ಸ್ವಾನಾ

ಶ್ರೀಕೃಷ್ಣಮೂರ್ತೇರ್ವರುಣಲೋಕಗಮನಂ.

ಮಭಯದೋವಿಭುಃ ॥೩॥ ಪ್ರಾಪ್ತಂವೀಕ್ಷ್ಯಹೃಷೀಕೇಶಂಲೋಕಪಾಲಸ್ಸಪರ್ಯಯಾ । ಮಹತ್ಯಾಪೂ

---

೨೮ನೆಯಅಧ್ಯಾಯದಪ್ರತಿಪದಟೀಕೆ.

(ಶುಕವಚನವು)ನಂದಸ್ತು-ನಂದನಾದರೋ, ಏಕಾದಶ್ಯಾಂ-ಪಕ್ಷಾದಿಯಾಗಿ೧೧ನೆಯದಿನದಲ್ಲಿ, ನಿರಾಹಾರಃ-ಧರ್ಮೋದ್ದೇಶದಿಂದ, ಆಹಾರವಿಲ್ಲದವನಾಗಿ, ಜನಾರ್ದನಂ-ವಿಷ್ಣುವನ್ನು, ಸಮಭ್ಯರ್ಚ್ಯ-ಚೆನ್ನಾಗಿಪೂಜಿಸಿ, ದ್ವಾದಶ್ಯಾಂ-ದ್ವಾದಶಿಯದಿನದಲ್ಲಿ, ಸ್ನಾತುಂ-ಸ್ನಾನಮಾಡಲೋಸುಗ, ಕಾಳಿಂದ್ಯಾಂ-ಯಮುನೆಯಲ್ಲಿ, ಜಲಂ-ನೀರನ್ನು, ಆವಿಶತ್-ಹೊಕ್ಕನು॥೧॥ ವರುಣಸ್ಯ-ವರುಣನ, ದೂತಃ-ಸೇವಕನಾದ, ಅಸುರಃ-ರಾಕ್ಷಸನು, ಆಸುರೀಂವೇಳಾಂ-ರಾಕ್ಷಸಸಮಯವನ್ನು, ಅವಿಜ್ಞಾಯ-ತಿಳಿಯದೆ, ನಿಶಿ-ರಾತ್ರಿಯಲ್ಲಿ, ಉದಕಂ-ನೀರನ್ನು, ಪ್ರವಿಷ್ಟಂ-ಹೊಕ್ಕಂಥಾ, ತಂ-ಆನಂದಗೋಪನನ್ನು, ಗೃಹೀತ್ವಾ-ಹಿಡಿದುತೆಕ್ಕೊಂಡು, ವರುಣಸ್ಯ-ಜಲಪಾಲಕನಾದದೇವರ, ಅಂತಿಕಂ-ಬಳಿಯನ್ನು, ಅನಯತ್-ಹೊಂದಿಸಿದನು॥೨॥ಗೋಪಿಕಾಃ-ಗೊಲ್ಲರು, ತಂ-ಆನಂದಗೋಪನನ್ನು, ಅಪಶ್ಯಂತಃ-ಕಾಣದೆಯಿರುವದರಿಂದಲೇ, ಕೃಷ್ಣರಾಮೇತಿ-ಕೃಷ್ಣನೇ! ರಾಮನೇ ಎಂದು, ಚುಕ್ರುಶುಃ-ಕೂಗಿದರು ರಾಜನ್-ಅರಸಾದಪರೀಕ್ಷಿತ್ತುವೇ! ಸ್ವಾನಾಂ-ತನ್ನವರಿಗೆ, ಅಭಯದಃ-ನಿರ್ಭಯವನ್ನು ಕೊಡುವಂಥಾ, ವಿಭುಃ-ಪ್ರಭುವಾದ, ಭಗವಾನ್-ಕೃಷ್ಣನು, ತತ್-ಅವರಮಾತಿನಿಂದ, ಪಿತರಂ-ತಂದೆಯಾದನಂದಗೋಪನನ್ನು, ವರುಣಾಹೃತಂ-ವರುಣನಿಂದಅಪಹರಿಸಲ್ಪಟ್ಟವನನ್ನಾಗಿ, ಉಪಶ್ರುತ್ಯ-ಕೇಳಿ,ತದಂತಿಕಂ-ಆವರುಣನಬಳಿಯನ್ನು, ಗತಃ-ಸೇರಿದವನಾದನು ॥೩॥ಲೋಕಪಾಲಃ-ಪಡುವಲಕಡೆಯಲೋಕಗಳಿಗೆ ಪಾಲಕನಾದವರುಣನು, ಪ್ರಾಪ್ತಂ-ತನ್ನಬಳಿಗೆಬಂದ, ಹೃಷೀ

---

೨೮ನೆಯ ಅಧ್ಯಾಯವು.

ಶ್ರೀಧರೀಯಶ್ಲೋಕಃ॥ ಅಷ್ಟಾವಿಂಶೇತತೋನಂದಾನಯನಂವರುಣಾಲಯಾತ್ । ವೈಕುಂಠದರ್ಶನಂ ಚಾಪಿಗೋಪಾನಾಮನುವರ್ಣ್ಯತೆ ।‡॥ ಇಪ್ಪತ್ತೆಂಟನೆಯ ಅಧ್ಯಾಯದಲ್ಲಿ ಅರ್ಧರಾತ್ರಿಕಾಲದೊಳು ಸ್ನಾನಾರ್ಥವಾಗಿ ಯಮುನಾನದಿಗೆ ಹೋಗಿರುವ ನಂದಗೋಪನು ವರುಣಭೃತ್ಯನಾದಅಸುರನು ವರುಣನಸಮೀಪಕ್ಕೆ ಕರೆದುಕೊಂಡುಹೋಗಲಾಗಿ, ಆ ಯರ್ಥವಂತಿಳಿದು ಶ್ರೀಕೃಷ್ಣನು ವರುಣನಸಮೀಪಕ್ಕೆಹೋಗಿ,ಆ ವರುಣನಿಂದ ಪೂಜಿತನಾಗಿ ತಂದೆಯಾದ ಆನಂದಗೋಪನಂ ಕರೆದುಕೊಂಡು ಬಂದನು. ಅನಂತರದಲ್ಲಿ ನಂದಗೋಪಾದಿ ಗೋಪಾಲಕರಿಗೆ ಪರಬ್ರಹ್ಮಸ್ಥಾನವಾದ ವೈಕುಂಠವಂ ತೋರಿಸಿದನು. ಎಂದು ಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸುವನು. ಅದೆಂತೆನ್ನೆ,-

ಎಲೈ, ಅರಸೇ! ನಂದಗೋಪನು ಏಕಾದಶೀದಿವಸದಲ್ಲಿ ನಿರಾಹಾರವ್ರತವನಾಚರಿಸಿ ಭಗವಂತನಂ ಪೂಜಿಸಿ, ಪರದಿವಸದಲ್ಲಿ ದ್ವಾದಶೀಕಲಾಮಾತ್ರವಿದ್ದುದರಿಂದ ತತ್ಕಾಲದಲ್ಲಿ ಪಾರಣವಂಮಾಡಬೇಕೆಂಬ ತ್ವರಿತದಿಂದ ಅರುಣೋದಯವಾಗುವುದಕ್ಕೆ ಮೊದಲೇ ಅಸುರಕಾಲದಲ್ಲಿ ಯಮುನಾನದಿಯಂ ಕುರಿತು ಸ್ನಾನಾರ್ಥವಾಗಿ ಹೋದನು ॥೧॥ ಆಸುರಕಾಲಮ ತಿಳಿಯದೆ ಜಲವಂಪ್ರವೇಶಿಸಿದ ನಂದಗೋಪನಂ ವರುಣದೂತನಾದ ಅಸುರನು ಕರೆದುಕೊಂಡುಹೋಗಿ ವರುಣನಿಗೆ ಒಪ್ಪಿಸಿದನು ॥೨॥ ಆಗೋಪಾಲಕರು ಆನಂದಗೋಪನಂ ಕಾಣದೆ, ಎಲೈರಾಮ! ಎಲೈಕೃಷ್ಣಾ! ಎಂದುಕೂಗಿದರು. ಭಗವಂತನು ಅದುಕೇಳಿ ವರುಣನಿಂದ ಅಪಹೃತನಾದನಂದನುತಿಳಿದು ಸ್ವಜನರಕ್ಷಕನಾದ ಕೃಷ್ಣನು ವರುಣನಸಮೀಪಕ್ಕೆ ಹೋದನು ॥೩॥ ಲೋಕಪಾಲಕನಾದ ವ

ಜಯಿತ್ವಾಹತದ್ದರ್ಶನಮಹೋತ್ಸವಃ ‖೪‖ ವರುಣಃ‖ ಅದ್ಯಮೇನಿಭೃತೋದೇಹೋಽದ್ಯಾರ್ಥೋಧಿಗತೋ ಮಯಾ । ತ್ವತ್ಪಾದಭಾಜೋಭಗವನ್ನವಾಪುಃಪಾರಮಧ್ವನಃ ‖೫‖ ನಮಸ್ತುಭ್ಯಂಭಗವತೇಬ್ರಹ್ಮಣೇ ಪರಮಾತ್ಮನೇ । ನಯತ್ರಶ್ರೂಯತೇಮಾಯಾಲೋಕಸೃಷ್ಟಿವಿಕಲ್ಪನಾ ‖೬‖ ಅಜಾನತಾಮಾಮಕೇನ

---

ಕೇಶಂ-ಸರ್ವೇಂದ್ರಿಯಗಳಿಗೊಡೆಯನಾದಕೃಷ್ಣನನ್ನು, ವೀಕ್ಷ್ಯ-ನೋಡಿ, ತದ್ದರ್ಶನಮಹೋತ್ಸವಃ-ಆಕೃಷ್ಣನನ್ನು ನೋಡುವುದರಿಂದಮಹತ್ಸಂತೋಷವುಳ್ಳವನಾಗಿ, ಮಹತ್ಯಾ-ಅಧಿಕವಾದ, ಸಪರ್ಯಯಾ-ಪೂಜೆಯಿಂದ, ಪೂಜಯಿತ್ವಾ-ಆರಾಧಿಸಿ, ಆಹ-ನುಡಿದನು ‖೪‖ (ವರುಣಸ್ತುತಿ) ಮೇ-ನನ್ನ, ದೇಹಃ ಶರೀರವು, ಅದ್ಯ-ಈಗ, ನಿಭೃತಃ-ಚನ್ನಾಗಿಪ್ರೋಕ್ಷಿಸಲ್ಪಟ್ಟಿತು. ಸಫಲವಾಯಿತು. ಅರ್ಥಃ-ಪ್ರಯೋಜನವು, ಅದ್ಯ-ಈಗ, ಮಯಾ-ನನ್ನಿಂದ, ಅಧಿಗತೋಹಿ-ಹೊಂದಲ್ಪಟ್ಟಿತಲ್ಲವೆ? ಭಗವನ್-ಸ್ವಾಮಿಯೇ! ತ್ವತ್ಪಾದಭಾಜಃ-ನಿನ್ನಚರಣಗಳನ್ನು ಸೇವಿಸುವರು, ಅಧ್ವನಃ-ದಾರಿಯ, ಪಾರಂ-ಕೊನೆಯನ್ನು (ಮೋಕ್ಷವನ್ನು) ಅವಾಪುಃ-ಪಡೆದರಂತೆ ‖೫‖ ಯತ್ರ-ಯಾವನಿನ್ನಲ್ಲಿ, ಲೋಕಸೃಷ್ಟಿವಿಕಲ್ಪನಾ-ಲೋಕ-ವೃತ್ತಿಜ್ಞಾನವಿಷಯವಸ್ತುಗಳ, (ದೃಶ್ಯಪದಾರ್ಥಗಳ) ಸೃಷ್ಟಿ-ಉತ್ಪತ್ತಿಯಲ್ಲಿ, ವಿಕಲ್ಪನಾ-ಹಲವುಬಗೆಗಳುಳ್ಳ, ಮಾಯಾ-ಅಜ್ಞಾನಪ್ರಕೃತಿಯು, ನಶ್ರೂಯತೇ-ಪಾರಮಾರ್ಥಿಕವಾಗಿರುವಂತೆ ಕೇಳಲ್ಪಡುವುದಿಲ್ಲವೋ, ತಸ್ಮೈ-ಅಂತಾ, ಭಗವತೇ-ದೊಡ್ಡವನಾದ, ಬ್ರಹ್ಮಣೇ-ವ್ಯಾಪಕನಾದ, ಪರಮಾತ್ಮನೇ-ಕೇವಲಚೈತನ್ಯಸ್ವರೂಪನಾದ, ತುಭ್ಯಂ-ನಿನಗೋಸುಗ, ನಮಃ-ಐಕ್ಯಾನುಸಂಧಾನಲಕ್ಷಣವಾದನಮಸ್ಕಾರವಾಗಲಿ ‖೬‖ ಜಗದ್ಗುರೋ-ಪ್ರಪಂಚಕ್ಕಿಂತಲೂ ದೊಡ್ಡವನಾದಕೃಷ್ಣನೇ! ತ್ವತ್ಪ್ರಭಾವಂ-ನಿನ್ನಸಾಮರ್ಥ್ಯವನ್ನು, ಅಜಾನತಾ-ತಿಳಿಯದೇಇರುವ, ಮಾಮಕೇನ-ನನ್ನದೂತನಿಂದ, ತವ-ನಿನ್ನ, ಪಿತಾ-ತಂದೆಯಾದ, ಅಯಂ-ಈನಂದಗೋಪನು, ಆ

---



ರುಣನು ಭಗವಂತನ ದರ್ಶನದಿಂದ ಉಂಟಾದ ಮಹೋತ್ಸವದಿಂದ ಹರ್ಷಿತನಾಗಿ, ತನ್ನಮನಗೆ ಭಗವಂತನು ಅಧಿಕವಾದ ಪೂಜೆಯಿಂದ ಆರಾಧಿಸಿದನು ‖೪‖ ಎಲೈ, ಪ್ರಭುವಾದ ಕೃಷ್ಣನೇ! ನನ್ನದೇಹವು ಸಫಲವಾಯಿತು, ಈಗಲೇ ಪುರುಷಾರ್ಥ ಲಾಭವಾಯಿತು, ನಿನ್ನಪಾದವಂ ಭಜಿಸಿದವರು ಸಂಸಾರಸಮುದ್ರದ ಪಾರವಂ ಕಂಡರು ‖೫‖ ಭಗವಂತನಾದ ಪರಬ್ರಹ್ಮನಾದ ಪರಮಾತ್ಮನಾದ ನಿನಗೆನಮಸ್ಕಾರವು, ಯಾವನಿನ್ನಲ್ಲಿ ಲೋಕಸೃಷ್ಟಿಕಲ್ಪನಾರೂಪವಾದ ಮಾಯೆಯಿಲ್ಲವೋ ಅಂತಾನಿನಗೆ ನಮಸ್ಕಾರವು ‖೬‖ ಆಕಾಲದಲ್ಲಿ ಜಲವಂಪ್ರವೇಶಿಸಿದ ಪ್ರಜಾಪತಿಯಾದ ನಿನ್ನ ತಂದೆಯಾದ ನಂದನು ನಿನ್ನಪ್ರಭಾವವನರಿಯದ ನನ್ನಭೃತ್ಯನಿಂದ ಕರೆದುಕೊಂಡು

ತ್ವತ್ಪ್ರಭಾವಂಜಗದ್ಗುರೋ । ಅಸ್ಮತ್ಕೋಯಂತವಪಿತಾ ತತ್ಪ್ರಭೋಕ್ಷಂತುಮರ್ಹಸಿ ॥೭॥ ಪಿತ್ರೈಷತೇ ಯದಾನೀತೋಯನ್ನಸ್ತ್ವತ್ಪಾದದರ್ಶನಂ । ಗೋವಿಂದನೀಯತಾಮೇಷಪಿತಾತೇಮಾಮಕಾಹೃತಃ । ಪ್ರಜಾವಯಮನುಗ್ರಾಹ್ಯಾಸ್ಸಾಪರಾಧಾಅಪಿಪ್ರಭೋ ॥೮॥ ಶ್ರೀಶುಕಃ॥ ಏವಂಪ್ರಸಾದಿತಃಕೃಷ್ಣೋ ಭಗವಾನಖಿಲೇಶ್ವರಃ । ಆದಾಯಾಗಾತ್ಸ್ವಪಿತರಂಬಂಧೂನಾಂಚಾವಹನ್ಮುದಂ ॥೯॥ ನಂದಸ್ತ್ವತೀಂದ್ರಿಯಂದೃಷ್ಟ್ವಾಲೋಕಪಾಲಮಹೋದಯಂ । ಕೃಷ್ಣೇಚಸನ್ನತಿಂತೇಷಾಂಜ್ಞಾತಿಭ್ಯೋವಿಸ್ಮಿತೋ ಬ್ರವೀತ್ ॥೧೦॥ ತೇತ್ವೌತ್ಸುಕ್ಯಧಿಯೋಗೋಪಾರಾಜನ್ಮತ್ವಾತಮೀಶ್ವರಂ । ಅಪಿನಸ್ಸ್ವಗತಿಂಸೂಕ್ಷ್ಮಾಮುಪಾಧಾಸ್ಯದಧೀಶ್ವರಃ ॥೧೧॥ ಇತಿಸ್ವಾನಾಂಸಸಂಕಲ್ಪಂವಿಜ್ಞಾಯಾಖಿಲದೃಕ್ಸ್ವಯಂ ।

---

ಹೃತಃ-ಅಪಹರಿಸಿತರಲ್ಪಟ್ಟವನಾದನು ಪ್ರಭೋ-ಸಮರ್ಥನಾದಕೃಷ್ಣನೇ! ತತ್-ಆಸೇನ ತಪ್ಪನ್ನು, ಕ್ಷಂತುಂ-ಸೈರಿಸುವುದಕ್ಕೆ, ಅರ್ಹಸಿ-ಯೋಗ್ಯನಾಗುವಿ ॥೭॥ ಗೋವಿಂದ-ಗೋಪಾಲಕೃಷ್ಣನೇ! ತೇ-ನಿನ್ನ, ಯಏಷಃ-ಯಾವಯಿಾ, ಪಿತಾ-ತಂದೆಯು, ಯತ್-ಯಾವಕಾರಣದಿಂದ, ಆನೀತಃ-ತರಲ್ಪಟ್ಟನೋ, ತತ್-ಆಕಾರಣದಿಂದ, ನಃ-ನಮಗೆ, ತ್ವತ್ಪಾದದರ್ಶನಂ-ನಿನ್ನ ಚರಣಗಳನ್ನು ನೋಡೋಣವಾಯಿತು ಮಾಮಕಾಹೃತಃ-ನನ್ನವನಿಂದ ತರಲ್ಪಟ್ಟ, ತವಏಷಪಿತಾ-ನಿನ್ನ ಯಿಾತಂದೆಯು, ನೀಯತಾಂ-ನಿನ್ನಿಂದ ಮನೆಗೆ ಕರೆದುಕೊಂಡುಹೋಗಲ್ಪಡಲಿ( ಪ್ರಭೋ-ಒಡೆಯನಾದಕೃಷ್ಣನೇ! ಪ್ರಜಾಃ-ಸಂತಾನವಾಗಿರುವ, ವಯಂ-ನಾವು, ಸಾಪರಾಧಾಅಪಿ-ತಪ್ಪಿನಿಂದಸಹಿತರಾದರೂ, ಅನುಗ್ರಾಹ್ಯಾಃ-ದಯೆಯಿಂದರಕ್ಷಿಸಲ್ಪಡತಕ್ಕವರಾಗಿರುವೆವು) ॥೮॥ ( ಶುಕವಚನವು. )ಅಖಿಲೇಶ್ವರಃ-ಎಲ್ಲರಿಗೂನಿಯಾಮಕನಾದ, ಭಗವಾನ್-ಸರ್ವಜ್ಞನಾದ, ಕೃಷ್ಣಃ-ಶ್ರೀಹರಿಯು, ಏವಂ-ಹೀಗೆ ಪ್ರಸಾದಿತಸ್ಸನ್-ಸಮಾಧಾನಗೊಳ್ಳುವಂತೆಪ್ರಾರ್ಥಿಸಲ್ಪಟ್ಟವನಾಗಿ,ಸ್ವಪಿತರಂ-ತನ್ನ ತಂದೆಯನ್ನು, ಆದಾಯ-ತೆಗೆದುಕೊಂಡು. ಆಗಾತ್-ಬಂದನು॥ ಬಂಧೂನಾಂ-ನಂಟರಿಗೆ, ಮುದಂಚ-ಸಂತೋಷವನ್ನೂ, ಆವಹತ್-ವಹಿಸಗೊಳಿಸಿದನು (ಉಂಟುಮಾಡಿದನು.)॥೯॥ನಂದಸ್ತು-ಗೋಪನಾದರೋ, ಅತೀಂದ್ರಿಯಂ-ಇಂದ್ರಿಯಗಳಿಗೆಗೋಚರವಾಗದ, ಲೋಕಪಾಲಮಹೋದಯಂ-ದಿಕ್ಪಾಲಕನಐಶ್ವರ್ಯವನ್ನು, ದೃಷ್ಟ್ವಾ-ನೋಡಿ, ಕೃಷ್ಣೇಚ-ಕೃಷ್ಣನವಿಷಯದಲ್ಲಿ, ತೇಷಾಂ-ಆಲೋಕದಲ್ಲಿರುವವರ, ಸನ್ನತಿಂ-ನಮ್ರತೆಯನ್ನು, ಜ್ಞಾತಿಭ್ಯಃ-ತನ್ನ ದಾಯಾದರುಮೊದಲಾದನಂಟರಿಷ್ಟರಿಗೆ, ವಿಸ್ಮಿತಃ-ಅಚ್ಚರಿಗೊಂಡವನಾಗಿ, ಅಬ್ರವೀತ್-ಹೇಳಿದನು ॥೧೦॥ಹೇರಾಜನ್-ಎಲೈಅರಸೇ! ತೇಗೋಪಾಸ್ತು-ಆಗೋಪಾಲಕರಾದರೋ, ಔತ್ಸುಕ್ಯಧಿಯಃ-ಧಾರಾಳವಾದಮಹಾಬುದ್ಧಿಯುಳ್ಳವರಾಗಿ, ತಂ-ಆಕೃಷ್ಣನನ್ನು, ಈಶ್ವರಂ-ಜಗನ್ನಿಯಾಮಕನನ್ನಾಗಿ, ಮತ್ವಾ-ತಿಳಿದು, ‘‘ ಅಧೀಶ್ವರಃ-ಒಡೆಯನಾದಕೃಷ್ಣನು, ನೋಽಪಿ-ನಮಗೂಕೂಡ, ಸೂಕ್ಷ್ಮಾಂ-ಅಗೋಚರವಾದ, ಸ್ವಗತಿಂ-ತನ್ನ ಸ್ವರೂಪವನ್ನು, ಅಥವಾ ತನ್ನ ಸ್ಥಾನವನ್ನು, ಉಪಾಧಾಸ್ಯತ್-ಹತ್ತಿರದಲ್ಲಿಯೇಇರುವಂತೆಮಾಡುವನು. ’’॥೧೧॥ಸ್ವಯಂ-ತಾನು, ಅಖಿಲದೃಕ್-ಎಲ್ಲರನ್ನೂ ನೋಡುತ್ತಿರುವನು, ಮತ್ತು ಎಲ್ಲರಿಗೂದೃಷ್ಟಿಯಾಗಿರುವವನೂಆದ, ಸಃ-ಆಕೃಷ್ಣನು, ಇತಿ-ಹೀಗೆ, ಸ್ವಾನಾಂ-ತನ್ನವರ, ಸಂಕಲ್ಪಂ-ಬಯಕೆಯನ್ನು, ವಿಜ್ಞಾಯ-ತಿಳಿದು, ತೇಷಾಂ-ಅವರ, ಸಂಕಲ್ಪಸಿದ್ಧಯೇ-ಬಯಕೆಯುಫಲಿಸಲೋಸುಗ,

---

ಬರಲ್ಪಟ್ಟನು. ಜಗತ್ತಿಗೆ ಗುರುವಾದ ಪ್ರಭುವಾದ ಶ್ರೀಕೃಷ್ಣನೇ! ಅದಂನೀನು ಕ್ಷಮಿಸಬೇಕು ॥೭॥ ಎಲೈ ಗೋವಿಂದನೇ! ನನ್ನ ಭೃತ್ಯನಿಂದ ಕರೆದುಕೊಂಡು ಬರಲ್ಪಟ್ಟ ನಿನ್ನ ತಂದೆಯಾದ ನಂದನನ್ನೂ ಕರೆದುಕೊಂಡು ಹೋಗು ಎಂದು ಕಳುಹಿಸಿದನು ॥೮॥ ಅನಂತರದಲ್ಲಿ ವರುಣನಿಂದ ಪ್ರಾರ್ಥಿತನಾದ ಶ್ರೀಕೃಷ್ಣನು ತಂದೆಯಂ ಕರೆದುಕೊಂಡು ಬಂದು ಸ್ವಜನರಿಗೆ ಸಂತೋಷವನ್ನುಂಟುಮಾಡಿದನು ॥೯॥ ನಂದನು ಲೋಕಪಾಲಕನಾದ ವರುಣನ ಸರ್ವೋತ್ತಮವಾದ ಐಶ್ವರ್ಯವನ್ನು ನೋಡಿ, ವರುಣಾದಿಗಳಿಗೆ ಭಗವಂತನಲ್ಲಿರುವ ನಮ್ರಭಾವವಂ ಸಹ ನೋಡಿ, ಆಶ್ಚರ್ಯಂಬಡುತ ತನ್ನ ಜ್ಞಾತಿಬಂಧುಗಳಂ ಕುರಿತು ಹೇಳಿದನು ॥೧೦॥ ಆಗೋಪರು ಆಶ್ಚರ್ಯಯುಕ್ತರಾಗಿ ಈಶ್ವರನಾದ ಶ್ರೀಕೃಷ್ಣನಂ ನಮಸ್ಕರಿಸಿ, ನಮಗೂಕೂಡ ಭಗವಂತನು ಪರಮಗತಿಯಂ ಕೊಡುವನೆಂದು ನಿಶ್ಚಯಿಸಿದರು ॥೧೧॥ ಸರ್ವಜ್ಞನಾದ ಭಗವಂತನು ಕೀರ್ತಿಯಲ್ಲಿ ಸ್ವಜ

ಸಂಕಲ್ಪಸಿದ್ಧಯೇತೇಷಾಂಕೃಪಯೈತದಚಿಂತಯತ್ ‖೧೨‖ ಜನೋವೈಲೋಕಏತಸ್ಮಿನ್ನವಿದ್ಯಾಕಾಮಕ
ರ್ಮಭಿಃ । ಉಚ್ಚಾವಚಾಸುಗತಿಷುನವೇದಸ್ವಾಂಗತಿಂಭ್ರಮನ್ ‖೧೩‖ ಇತಿಸಂಚಿಂತ್ಯಭಗವಾನ್ಮ
ಹಾಕಾರುಣಿಕೋವಿಭುಃ ।ದರ್ಶಯಾಮಾಸಲೋಕಂಸ್ವಂಗೋಪಾನಾಂತಮಸಃಪರಂ‖೧೪‖ಸತ್ಯಂಜ್ಞಾನಮ
ನಂತಂಚಬ್ರಹ್ಮಜ್ಯೋತಿಸ್ಸನಾತನಂ । ಯದ್ಧಿಪಶ್ಯಂತಿಮುನಯೋಗುಣಾಪಾಯೇಸಮಾಹಿತಾಃ‖೧೫‖

---

ಕೃಪಯಾ ದಯೆಯಿಂದ, ಏತತ್-ಇವರನ್ನು, ಅಚಿಂತಯತ್-ಆಲೋಚಿಸಿದನು ‖೧೨‖ ಜನಃ-ಪ್ರಾಣಿ, ಏತಸ್ಮಿನ್ಲೋಕೇ-ಈ ನರಲೋಕದಲ್ಲಿ, ಅವಿದ್ಯಾಕಾಮಕರ್ಮಭಿಃ-ಅವಿದ್ಯಾ-ದೇಹವೇತಾನೆಂಬ ಅಧ್ಯಾಸಿತವಾದ ಅಭಿಮಾನವು, ಕಾಮ-ಅದರಿಂದುಂಟಾಗುವ ಸಂಕಲ್ಪವು, ಕರ್ಮಭಿಃ-ಅದರಿಂದುಂಟಾಗುವ ಕ್ರಿಯೆಯು, ಇವುಗಳಿಂದ, ಉಚ್ಚಾವಚಾಸು-ಹಲವು ಭೇದಗಳುಳ್ಳ, ಗತಿಷು-ಜನ್ಮಗಳಲ್ಲಿ, ಭ್ರಮನ್-ತಿರುಗುತಲಿರುವನಾಗಿ, ಸ್ವಾಂಗತಿಂ-ತನ್ನ ಸ್ವರೂಪವನ್ನು, ನವೇದ-ತಿಳಿದುಕೊಳ್ಳಲಿಲ್ಲವು ‖೧೩‖ ವಿಭುಃ-ವ್ಯಾಪಕನಾದ, ಭಗವಾನ್-ಷಡ್ಗುಣೈಶ್ವರ್ಯಸಂಪನ್ನನಾದ, ಕೃಷ್ಣನು, ಇತಿ-ಹೀಗೆ, ಸಂಚಿಂತ್ಯ-ಆಲೋಚಿಸಿ, ಮಹಾಕಾರುಣಿಕಃ-ಅಧಿಕದಯೆಯುಳ್ಳವನಾದ್ದರಿಂದ, ತಮಸಃ-ಅಜ್ಞಾನದ ಕತ್ತಲೆಗಿಂತಲೂ, ಪರಂ-ಮೇಲೆಯಿರುವ, ಸ್ವಂಲೋಕಂ-ತನ್ನ ಸ್ಥಾನವನ್ನು, ಗೋಪಾನಾಂ-ಗೊಲ್ಲರಿಗೆ, ದರ್ಶಯಾಮಾಸ-ತೋರಿಸಿದನು ‖೧೪‖ ಮುನಯಃ-ಮನನಶೀಲರಾದವರು, ಗುಣಾಪಾಯೇ-ತ್ರಿಗುಣವಿಕಾರಗಳು ನಾಶವಾಗುತಲೂ, ಸಮಾಹಿತಾಸ್ಸಂತಃ-ಸಮಾಧಾನಗೊಂಡ ಶಾಂತರಾಗಿ, ಸತ್ಯಂ-ಯಾವಗಲೂ ಭಾಧಿಸಲ್ಪಡದ, ಜ್ಞಾನಂ-ಸ್ವಯಂಪ್ರಕಾಶವಾದ, ಅನಂತಂ-ನಾಶವಿಲ್ಲದ, ಕೊನೆಯಿಲ್ಲದ, ಸನಾತನಂ-ಅನಾದಿಯಾದ, ಬ್ರಹ್ಮಜ್ಯೋತಿಃ-ಆತ್ಮಚೈತನ್ಯವಾದ, ಯದ್ಧಿ-ಯಾವದರನ್ನು, ಪಶ್ಯಂತಿ-ನೋಡುವರೋ, ( ತಮ್ಮ ಸ್ವರೂಪವೆಂದರಿವರೋ ) ತತ್-ಅಂಥಾ ತನ್ನ ಪ್ರಕಾಶವನ್ನು, ಗೋಪಾಲಕರಿಗೆ ತೋರಿಸಿದನು ‖೧೫‖ ತೇತು-ಆ ಗೋಪಾಲಕರಾದವರೋ, ಪುರಾ-ಪೂರ್ವ

---



ನರ ಮನೋರಥವಂ ತಿಳಿದು ಅವರ ಮನೋರಥ ಸಿದ್ಧ್ಯರ್ಥವಾಗಿ ದಯೆಯಿಂ ಚಿಂತಿಸಿದನು ।೧೨। (ಅದೆಂತೆನೆ-) ಈ ಲೋಕದಲ್ಲಿ ಜನರು ಅವಿದ್ಯಾಮೂಲಕವಾದ ಕಾಮಗಳಿಂದಲೂ ತನ್ನಿಮಿತ್ತಂಗಳಾದ ಕರ್ಮಂಗಳಿಂದಲೂ ನಾನಾರೂಪಂಗಳಾದ ಜನ್ಮಂಗಳಿಂದ ಸುತ್ತುತ ಸ್ವಗತಿಯಂ ಅರಿಯರು ।೧೩। ಎಂದು ಭಗವಂತನು ಆಲೋಚಿಸಿ, ಪ್ರಭುವೆನಿಸಿ ಮಹಾ ದಯಾಶಾಲಿಯಾದ ಕಾರಣದಿಂ ಗೋಪಾಲಕರಿಗೆ ಸ್ವಪ್ರಕಾಶವಾದ ನಿಜಸ್ಥಾನವಾದ ವೈಕುಂಠಲೋಕವಂ ತೋರಿಸಿದನು ।೧೪। ಮಹಾ ಯೋಗಿಗಳು ಮಾಯೆಯನತಿಕ್ರಮಿಸಿಯಾವ ವಸ್ತುವಂ ಕಾಣುವರೋ, ಅಂತಾ ಅಬಾಧ್ಯವಾದ ಅಜಡವಾದ ಅಪರಿಚ್ಛಿನ್ನವಾದ ಸ್ವಪ್ರಕಾಶವಾದ ನಿತ್ಯಸಿದ್ಧವಾದ ಪರಬ್ರಹ್ಮ ವಸ್ತುವಂ ತೋರಿಸಿದನು ।೧೫। ಆ ಗೋಪರು ಬ್ರಹ್ಮವೆಂಬ ಮಡುವಿನಲ್ಲಿ ಮುಳುಗಿ

ತೆತುಬ್ರಹ್ಮಹ್ರದಂನೀತಾಮಗ್ನಾಃಕೃಷ್ಣೇನಚೋದ್ಧೃತಾಃ । ದದೃಶುರ್ಬ್ರಹ್ಮಣೋಲೋಕಂಯತ್ರಾ
ಕ್ರೂರೋಧ್ಯಗಾತ್ಪುರಾ ॥೧೬॥ ನಂದಾದಯಸ್ತುತಂದೃಷ್ಟ್ವಾಪರಮಾನಂದನಿರ್ವೃತಾಃ । ಕೃಷ್ಣಂ
ಚತಸಮಭಿಷ್ಟೂಯಮಾನಂಯಂತಸ್ಸುವಿಸ್ಮಿತಾಃ ॥೧೭॥

ಇತಿಶ್ರೀಮದ್ಭಾಗವತೆ-ದಶಮಸ್ಕಂಧೆ-ಅಷ್ಟಾವಿಂಶೋಧ್ಯಾಯಃ

---

ದಲ್ಲಿ, ಅಕ್ರೂರಃ-ಅಕ್ರೂರನೆಂಬಯಾದವನು, ಅಧ್ಯಗಾತ್-ಬ್ರಹ್ಮಲೋಕವನ್ನು ನೋಡಿದನೋ, ತಂ-ಆ ಬ್ರಹ್ಮಹ್ರದಂ-ಬ್ರಹ್ಮಹ್ರದವೆಂಬಯಮುನೆಯಮಡುವನ್ನು ಕುರಿತು, ಕೃಷ್ಣೇನ-ಕೃಷ್ಣನಿಂದ, ನೀತಾಃ-ಹೊಂದಿಸಲ್ಪಟ್ಟವರಾಗಿ, ಮಗ್ನಾಃ-ಮುಳುಗಿದವರಾಗಿ, ಉದ್ಧೃತಾಃ-ಎದ್ದವರಾಗಿ, ಬ್ರಹ್ಮಣಃ-ಪರಬ್ರಹ್ಮನ, ಲೋಕಂ-ಸ್ಥಾನವನ್ನು, ದದೃಶುಃ-ಕಂಡರು (ಅಕ್ರೂರನುನೋಡಿದ್ದು ಇದಕ್ಕಿಂತಲೂ ಪೂರ್ವವಲ್ಲದಿದ್ದರೂ ಶುಕಪರೀಕ್ಷಿತ್ಸಂವಾದಕಾಲಕ್ಕಿಂತಲೂ ಪೂರ್ವವಾದ್ದರಿಂದ ಭೂತಕಾಲವಾಗಿಹೇಳಲ್ಪಟ್ಟಿದೆ) ॥೧೬॥ ನಂದಾದಯಸ್ತು-ನಂದಗೋಪನುಮೊದಲಾದವರಾದರೋ, ತಂ-ಆವೈಕುಂಠವನ್ನು, ದೃಷ್ಟ್ವಾ-ನೋಡಿ, ಪರಮಾನಂದನಿರ್ವೃತಾಃ-ಅತ್ಯುತ್ತಮವಾದ ಸಂತೋಷದಿಂದ ನಿರ್ವೃತರಾಗಿ, ಕೃಷ್ಣಂಚ-ಕೃಷ್ಣನನ್ನೂ, ಸಮಭಿಷ್ಟೂಯ-ಚನ್ನಾಗಿಸ್ತೋತ್ರಮಾಡಿ, ಮಾನಯಂತಃ-ಸನ್ಮಾನಗೊಳಿಸುವರಾಗಿ, ಸುವಿಸ್ಮಿತಾಃ-ಪೂರ್ಣವಾಗಿಆಶ್ಚರ್ಯಗೊಂಡವರಾದರು ॥೧೭॥

ಇತಿಶ್ರೀಮದ್ಭಾಗವತೇ ದಶಮಸ್ಕಂಧೇ ಅಷ್ಟಾವಿಂಶೋಧ್ಯಾಯಃ.

---

ಪುನಃ ಕೃಷ್ಣನಿಂದ ಯೆತ್ತಲ್ಪಟ್ಟವರಾಗಿ, ಪೂರ್ವದಲ್ಲಿಅಕ್ರೂರನು ಯಮುನಾನದಿಯಲ್ಲಿ ಮುಳುಗಿ ಅಲ್ಲಿ ಯಾವ ವೈಕುಂಠಲೋಕವಂ ಕಂಡನೋ ಆವೈಕುಂಠಮ ಕಂಡರು ॥೧೬॥ ಆನಂದಸಾಂದ್ರರಾದ ನಂದಾದಿಗಳು ಆವೈಕುಂಠದಲ್ಲಿ ವೇದಂಗಳಿಂ ಸ್ತುತಿಸಲ್ಪಡುತ್ತಿರುವ ಶ್ರೀಕೃಷ್ಣನಂ ನೋಡಿಆಶ್ಚರ್ಯಂಗೊಳ್ಳರಾದರು ॥೧೭॥

ಇಂತು ಶುಕಮುನಿಯು ಪರೀಕ್ಷಿದ್ರಾಯನಿಗೆ ನಿರೂಪಿಸಿದನೆಂದು ಸೂತಪೌರಾಣಿಕನು ನೈಮಿಷಾ
ರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಹೇಳಿದನೆಂಬಲ್ಲಿಗೆ ಶ್ರೀಮನ್ಮಹೀಶೂರಪುರವ
ರಾಧೀಶ ಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜ ವಿರಚಿತಮಪ್ಪ ಶ್ರೀ
ಭಾಗವತದ ಶ್ರೀಕೃಷ್ಣರಾಜ ವಾಣೀವಿಲಾಸವು ಎಂಬ ಕರ್ಣಾಟಕ
ಭಾಷಾವ್ಯಾಖ್ಯಾನದಲ್ಲಿ ದಶಮಸ್ಕಂಧದೊಳು ೨೮ನೆಯ
ಅಧ್ಯಾಯವು ಸಂಪೂರ್ಣವಾದುದು.
ಮಂಗಳಮಸ್ತು.



ಶ್ರೀಶುಕಃ॥ ಭಗವಾನಪಿತಾರಾತ್ರೀಃ ಶರದೋತ್ಫುಲ್ಲಮಲ್ಲಿಕಾಃ । ವೀಕ್ಷ್ಯ ರಂತುಂ ಮನಶ್ಚಕ್ರೇ ಯೋಗಮಾಯಾಮುಪಾಶ್ರಿತಃ ॥೧॥ ತದೋಡುರಾಜಃ ಕಕುಭಃ ಕರೈರ್ಮುಖಂ ಪ್ರಾಚ್ಯಾ ವಿಲಿಂಪನ್ನರುಣೇನ ಶಂತಮೈಃ । ಸಚರ್ಷಣೀನಾಮುದಗಾಚ್ಛುಚೋ ಮೃಜನ್ ಪ್ರಿಯಃ ಪ್ರಿಯಾಯಾ ಇವ ದೀರ್ಘದರ್ಶನಃ ॥ ದೃಷ್ಟ್ವಾ ಕುಮುದ್ವಂತಮಖಂಡಮಂಡಲಂ ರಮಾನನಾಭಂ ನವಕುಂಕುಮಾರುಣಂ । ವನಂಚ ತ

---

## ೨೯ನೆಯ ಅಧ್ಯಾಯದ ಪ್ರತಿಪದಟೀಕೆ

[ ಶುಕವಚನವು ] ಭಗವಾನ್ ಅಪಿ-ಷಡ್ಗುಣೈಶ್ವರ್ಯಸಂಪನ್ನನಾದವರೂ ಕೂಡ, ಕೃಷ್ಣನು, ಶರದಾ-ಶರದೃತುವಿನಿಂದ, ಉತ್ಫುಲ್ಲಮಲ್ಲಿಕಾಃ-ಅರಳಿದ ಮಲ್ಲಿಗೆಗಳುಳ್ಳ, ತಾಃರಾತ್ರೀಃ-ಆರಾತ್ರಿಗಳನ್ನು, ವೀಕ್ಷ್ಯ-ನೋಡಿ, ಯೋಗಮಾಯಾಂ-ಸ್ವತಂತ್ರೇಚ್ಛಾವಿಲಾಸವಾದ ಮೋಹಕಶಕ್ತಿಯನ್ನು, ಉಪಾಶ್ರಿತಃ-ಅವಲಂಬಿಸಿದವನಾಗಿ, ರಂತುಂ-ಹೆಂಗಳನ್ನು ಭೋಗಿಸುವುದಕ್ಕೆ, ಮನಃ-ಸಂಕಲ್ಪವನ್ನು, ಚಕ್ರೇ-ಮಾಡಿದನಂತೆ ॥೧॥ ತದಾ-ಆಗ, ಉಡುರಾಜಃ-ಚಂದ್ರನು, ಶಂತಮೈಃ-ಸುಖಕರಂಗಳಾದ, ಕರೈಃ-ಕಿರಣಗಳಿಂದ, ಪ್ರಾಚ್ಯಾಃ ಕಕುಭಃ-ಪೂರ್ವದಿಕ್ಕಿನ, ಮುಖಂ-ಮುಂಭಾಗವನ್ನು, ಲಿಂಪನ್-ಲೇಪಿಸುತಲಿರುವನಾಗಿ ಚರ್ಷಣೀನಾಂ-ಓಷಧಿಗಳ ಶುಚಃ-ಶ್ರಮಗಳನ್ನು, ಮೃಜನ್-ತೊಡೆಯುತಲಿರುವನಾಗಿ, ದೀರ್ಘದರ್ಶನಃ-ಬಹುಕಾಲಕ್ಕೆ ಕಾಣಿಸಲ್ಪಟ್ಟಂಥ, ಅರುಣೇನ-ಕುಂಕುಮದಿಂದ, ಪ್ರಿಯಾಯಾಃ-ಪ್ರಿಯಳಾದ ಕಾಮಿನಿಯ, ಮುಖಂ-ಮೋರೆಯನ್ನು, ವಿಲಿಂಪನ್-ಲೇಪಿಸುವನಾಗಿ, ಸಃ-ಆ ಪುರುಷನು, ಚರ್ಷಣೀನಾಂ-ಜನಗಳ, ಶುಚಃ-ದುಃಖಗಳನ್ನು, ಮೃಜನ್-ತೊಡೆಯುತಲಿರುವ, ಪ್ರಿಯಃ ಇವ ಪ್ರಿಯಪುರುಷನಹಾಗೆ, ಉದಗಾತ್-ಉದಿಸಿದನು ॥೨॥ ನವಕುಂಕುಮಾರುಣಂ-ಹೊಸಕುಂಕುಮದಂತೆ ಕೆಂಪಾಗಿ, ಹೊಸಕುಂಕುಮದಿಂದ ಕೆಂಪಾದ, ರಮಾನನಾಭಂ-ಲಕ್ಷ್ಮೀಯ ಮುಖದಂತೆ ಕಾಂತಿಯುಳ್ಳ, ಅಖಂಡಮಂಡಲಂ-ಪೂರ್ಣಬಿಂಬವುಳ್ಳ, ಕುಮುದ್ವಂತಂ-ಚಂದ್ರನನ್ನು, ತತ್ಕೋಮಲಗೋ-ಆ ಚಂದ್ರನ ಮೃದುವಾದ ಕಿರಣಗಳಿಂದ, ಅಭಿರಂಜಿತಂ-ಮಧುರವಾದ, ವನಂಚ-ಬೃಂದಾರಣ್ಯವನ್ನು, ದೃಷ್ಟ್ವಾ-ನೋಡಿ, ವಾಮದೃಶಾಂ-ಚಲುವಾದ ದೃಷ್ಟಿಯುಳ್ಳ ಹೆಂಗಳ, ಮನೋಹರಂ-

---

## ೨೯ನೆಯ ಅಧ್ಯಾಯವು.

ಶ್ರೀಧರೀಯಶ್ಲೋಕಃ॥ ಊನತ್ರಿಂಶೇ ತು ರಾಸಾರ್ಥಮುಕ್ತಿಪ್ರತ್ಯುಕ್ತಯೋಃ ಕೃತೇ । ಗೋಪೀಭೀ ರಾಸಸಂರಂಭೇ ತಸ್ಯ ಚಾಂತರ್ಧಿಕೌತುಕಂ ॥+॥

ಇಪ್ಪತ್ತೊಂಭತ್ತನೆಯ ಅಧ್ಯಾಯದಲ್ಲಿ ರಾಸಕ್ರೀಡಾರ್ಥವಾಗಿ ಶ್ರೀಕೃಷ್ಣನಿಗೆ ಗೋಪಸ್ತ್ರೀಯರೊಡನೆ ಉತ್ತರಪ್ರತ್ಯುತ್ತರಂಗಳು ನಡದಮೇಲೆ ಆಗೋಪಸ್ತ್ರೀಯರುಗಳ ಗರ್ವ ಪರಿಹಾರಾರ್ಥವಾಗಿ, ಶ್ರೀಕೃಷ್ಣನು ಅಂತರ್ಧಾನವ ನೈದಿದನು. ಎಂದು ಶುಕಾಚಾರ್ಯನು ಪರೀಕ್ಷಿದ್ರಾಯನಂ ಕುರಿತು, ನುಡಿದನದೆಂತೆನೆ.

ಎಲೈ, ಅರಸೇ! ಅನಂತರದಲ್ಲಿ ಭಗವಂತನಾದ ಶ್ರೀಕೃಷ್ಣನು ಶರತ್ಕಾಲಾಗಮನದಿಂದ ವಿಕಸಿತಂಗಳಾದ ಮಲ್ಲಿಕಾಪುಷ್ಪಂಗಳುಳ್ಳ ಆರಾತ್ರಿಗಳಂನೋಡಿ ಯೋಗಮಾಯೆಯ ನಾಶ್ರಯಿಸಿ ರಮಿಸುವುದಕೆಮನವು ಮಾಡಿದನು ॥೧॥ ಆಸಮಯದಲ್ಲಿ ನಕ್ಷತ್ರನಾಥನಾದ ಚಂದ್ರನು ಬಹುಕಾಲ ವಿರಹವುಳ್ಳ ಪುರುಷನು ಪ್ರಿಯಳಾದ ಸ್ತ್ರೀಯಳ ಮುಖಮಂ ಕುಂಕುಮಾದಿಗಳಿಂದ ಲೇಪನಮಂ ಮಾಡುವಂತೆ ಪೂರ್ವದಿಕ್ಕೆಂಬ ಸ್ತ್ರೀಯಳ ಮುಖವ ಸುಖಕರಂಗಳಾದ ಕಿರಣಂಗಳೆಂಬ ಹಸ್ತಂಗಳಿಂದ ಸಂಧ್ಯಾರಾಗವೆಂಬ ಕುಂಕುಮದಿಂ ಲೇಪಿಸುವನಾಗಿ ಓಷಧಿಗಳ ಬಳಲಿಕೆಯಂ ಪರಿಹರಿಸುವನಾಗಿ ಉದಯಿಸಿದನು ॥೨॥ ಆಗ ಶ್ರೀಕೃಷ್ಣನು ಕುಂಕುಮಾರುಣವಾದ ಲಕ್ಷ್ಮೀಮುಖದಂತೆ ಪ್ರಕಾಶಿಸುವ ಪೂರ್ಣಮಂಡಲವುಳ್ಳ ಚಂದ್ರನಂನೋಡಿ ಕೋಮಲಗಳಾದ ಆ ಚಂದ್ರನ ಕಿರಣಂಗಳಿಂದ ವ್ಯಾಪ್ತವಾದ ಆವನವಂನೋಡಿ, ಸ್ತ್ರೀಯರುಗಳಿಗೆ ಮನೋಹರವಾದ ಗಾನವ

ತ್ಕೋಮಲಗೋಭೀರಂಜಿತಂಜಗೌಕಲಂವಾಮದೃಶಾಂಮನೋಹರಂ ॥೩॥ ನಿಶಮ್ಯಗೀತಂತದನಂಗ
ವರ್ಧನಂವ್ರಜಸ್ತ್ರಿಯಃಕೃಷ್ಣಗೃಹೀತಮಾನಸಾಃ । ಆಜಗ್ಮುರನ್ಯೋನ್ಯಮಲಕ್ಷಿತೋದ್ಯಮಾಸ್ಸ
ಯತ್ರಕಾಂತೋಜವಲೋಲಕುಂಡಲಾಃ ॥೪॥ ದುಹಂತ್ಯೋಭಿಯಯುಃಕಾಶ್ಚಿದ್ದೋಹಂಹಿತ್ವಾಸಮು
ತ್ಸುಕಾಃ । ಪಯೋಧಿಶ್ರಿತ್ಯಸಂಯಾವಮನುದ್ವಾಸ್ಯಾಪರಾಯಯುಃ ॥೫॥ ಪರಿವೇಷಯಂತ್ಯಸ್ತ

---

ಹೃದಯಗಳನ್ನು ಅಪಹರಿಸುತಲಿರುವ, ಕಲಂ-ಮಧುರಗಾನವನ್ನು, ಜಗೌ-ಹಾಡಿದನು ॥೩॥ ವ್ರಜಸ್ತ್ರಿಯಃ-ಗೋಕುಲದಲ್ಲಿರುವ ಹೆಂಗಳು. ಅನಂಗವರ್ಧನಂ-ಕಾಮೋದ್ದೀಪಕವಾದ. ತದ್ಗೀತಂ-ಆಗಾನವನ್ನು, ನಿಶಮ್ಯ-ಕೇಳಿ, ಕೃಷ್ಣಗೃಹೀತಮಾನಸಾಸ್ಸತ್ಯಃ-ಕೃಷ್ಣನಿಂದಪತ್ತಿಗೆಮಾಡಿಕೊಳ್ಳಲ್ಪಟ್ಟ ತಮ್ಮಮನಸ್ಸುಗಳುಳ್ಳವರಾಗಿ, ಅನ್ಯೋನ್ಯಂ-ಒಬ್ಬಳಿಗೊಬ್ಬಳು, ( ಪರಸ್ಪರವಾಗಿ ) ಅಲಕ್ಷಿತೋದ್ಯಮಾಃ-ನೋಡಲ್ಪಡದಪ್ರಯತ್ನವುಳ್ಳವರಾಗಿ, ಜವಲೋಲಕುಂಡಲಾಃ-ಜವ-ವೇಗದಿಂದ, ಲೋಲ-ಕದಲುತ್ತಿರುವ ಕುಂಡಲಾಃ-ಕರ್ಣಾಭರಣಗಳುಳ್ಳವರಾಗಿ, ಸಕಾಂತಃ-ಆಪ್ರಿಯನಾದಕೃಷ್ಣನು, ಯತ್ರ-ಎಲ್ಲಿರುವನೋ, ತತ್ರ-ಅಲ್ಲಿಗೆ, ಆಜಗ್ಮುಃ-ಬಂದರು ॥೪॥ ದುಹಂತ್ಯಃ-ಹಾಲುಕರೆಯುತಲಿರುವ, ಕಾಶ್ಚಿತ್-ಕೆಲವರುಹೆಂಗಳು, ದೋಹಂ-ಕರೆಯುವುದನ್ನು, ಹಿತ್ವಾ-ಬಿಟ್ಟು, ಸಮುತ್ಸುಕಾಃ-ಬಹಳಕುತೂಹಲಗೊಂಡವರಾಗಿ, ಯಯುಃ-ತೆರಳಿದರು. ಅಪರಾಃ-ಇತರಸ್ತ್ರೀಯರು, ಪಯಃ-ಹಾಲನ್ನು, ಅಧಿಶ್ರಿತ್ಯ-ಒಲೆಯಮೇಲಿರಿಸಿ, (ಉಕ್ಕಿಹೋಗುವುದುಲೆಕ್ಕಿಸದೆ) ಯಯುಃ-ತೆರಳಿದರು. ಮತ್ತೆಕೆಲವರು. ಸಂಯಾವಂ-ಗೋಧಿಯರವೆಯಸಜ್ಜಿಗೆಯನ್ನು, ಅನುದ್ವಾಸ್ಯ-ಪಕ್ವಗೊಳಿಸಿಒಲೆಯಿಂದಿಳಿಸದೆ, ಯಯುಃ-ತೆರಳಿದರು ॥೫॥ ಪರಿವೇಷಯಂ

---



ಹಾಡಿದನು ॥೩॥ ಗೋಪಸ್ತ್ರೀಯರುಗಳು ಕಾಮೋದ್ದೀಪಕವಾದ ಆಗಾನವಂಕೇಳಿ, ಕೃಷ್ಣನಿಂದ ಆಕರ್ಷಿಸಲ್ಪಟ್ಟ ಮನಸ್ಸುಳ್ಳವರಾಗಿ, ಒಬ್ಬರಿಗೊಬ್ಬರು ಹೇಳದೆ ವೇಗದಿಂದ ಜೋಲಾಡುತಲಿರುವ ಕುಂಡಲಗಳುಳ್ಳವರಾಗಿ. ಶ್ರೀಕೃಷ್ಣನಿರುವ ಸ್ಥಾನಕ್ಕೆ ಬಂದರು ॥೪॥ ಕೆಲವರು ಸ್ತ್ರೀಯರು ಹಸುಗಳಂ ಕರೆಯುತಲಿರುವಾಗಲೇ ಆಕೆಲಸವಂ ಬಿಟ್ಟು ಹೊರಟರು. ಕೆಲವರು ಸ್ತ್ರೀಯರು ಹಾಲಂಕಾಸುವುದಕೆ ಹಾಲಗಡಿಗೆಗಳ ನೊಲೆಯಮೇಲೆ ಇರಿಸಿ ಕಾಸುತಲಿದ್ದು ಅದು ಉಕ್ಕಿಹೋಗುವುದೆಂಬುದಂ ಆಲೋಚಿಸದೆ ಹಾಗೆಯೇ ಹೊರಟರು. ಕೆಲರು ಗೋಧಿಸಜ್ಜಿಗೆಯಂ ಪಾಕಂ ಮಾಡುತಲಿದ್ದು ಅದಂತೆಗದು ಕೆಳಗಿರಿಸದೆ ಹಾಗೆಯೇ ಹೊರಟರು ॥೫॥ ಕೆಲವರು ಪತಿಪುತ್ರಾದಿಗಳಿಗೆ ಅನ್ನಾದಿಗಳಂ ಬಡಿಸುತಲಿದ್ದು ಅದಂಬಿಟ್ಟು ಹೊರಟರು. ಕೆ

ದ್ಧಿತ್ವಾ ಪಾಯಯಂತ್ಯಃ ಶಿಶೂನ್ ಪಯಃ । ಶುಶ್ರೂಷಂತ್ಯಃ ಪತೀನ್ ಕಾಶ್ಚಿದಶ್ನಂತ್ಯೋಽಪಾಸ್ಯ ಭೋಜನಂ ॥೬॥ ಲಿಂಪಂತ್ಯಃ ಪ್ರಮೃಜಂತ್ಯೋಽನ್ಯಾ ಅಂಜಂತ್ಯಃ ಕಾಶ್ಚ ಲೋಚನೇ । ವ್ಯತ್ಯಸ್ತವಸ್ತ್ರಾಭರಣಾಃ ಕಾಶ್ಚಿತ್ ಕೃಷ್ಣಾಂತಿಕಂ ಯಯುಃ ॥೭॥ ತಾ ವಾರ್ಯಮಾಣಾಃ ಪತಿಭಿಃ ಪಿತೃಭಿರ್ಭ್ರಾತೃಬಂಧುಭಿಃ । ಗೋವಿಂದಾಪಹೃತಾತ್ಮಾನೋ ನ ನ್ಯವರ್ತಂತ ಕಾಶ್ಚನ ॥೮॥ ಅಂತರ್ಗೃಹಗತಾಃ ಕಾಶ್ಚಿದ್ಗೋಪ್ಯೋಽಲಬ್ಧವಿನಿರ್ಗಮಾಃ । ಕೃಷ್ಣಂ ತದ್ಭಾವನಾಯುಕ್ತಾ ದಧ್ಯುರ್ಮೀಲಿತಲೋಚನಾಃ ॥೯॥ ದುಸ್ಸಹಪ್ರೇಷ್ಠವಿರಹತೀವ್ರತಾಪಧುತಾಶುಭಾಃ । ಧ್ಯಾನಪ್ರಾಪ್ತಾಚ್ಯುತಾಶ್ಲೇಷನಿರ್ವೃತ್ಯಾ ಕ್ಷೀಣಮಂಗಳಾಃ ॥೧೦॥ ತಮೇವ ಪರಮಾತ್ಮಾನಂ ಜಾರಬುದ್ಧ್ಯಾಪಿ ಸಂಗತಾಃ । ಜಹುರ್ಗುಣಮಯಂ ದೇಹಂ ಸ

---

ತ್ಯಃ-ಊಟಕ್ಕೆ ಬಡಿಸುತಲಿರುವರೂ, ತದ್ಧಿತ್ವಾ-ಆ ಬಡಿಸುವ ಕೆಲಸವನ್ನು ಬಿಟ್ಟು, ಶಿಶೂನ್-ಮಕ್ಕಳನ್ನು, ಪಯಃ-ಹಾಲನ್ನು, ಪಾಯಯಂತ್ಯಃ-ಕುಡಿಸುತಲಿರುವವರು, ತದ್ಧಿತ್ವಾ-ಆ ಕೆಲಸವನ್ನು ಬಿಟ್ಟು, ಪತೀನ್-ಗಂಡಂದಿರನ್ನು, ಶುಶ್ರೂಷಂತ್ಯಃ-ಸೇವಿಸುತ್ತಲಿರುವವರು, ತದ್ಧಿತ್ವಾ-ಆ ಕೆಲಸವನ್ನು ಬಿಟ್ಟು, ಕಾಶ್ಚಿತ್-ಕೆಲವರು, ಅಶ್ನಂತ್ಯೋಽಪಿ-ಉಣ್ಣುತಲಿರುವರಾದರೂ ಕೂಡ, ಭೋಜನಂ-ಊಟವನ್ನು, ಅಪಾಸ್ಯ-ಬಿಟ್ಟು, ॥೬॥ ಕಾಶ್ಚ-ಕೆಲವರು, ಲಿಂಪಂತ್ಯಃ-ಮನೆಯಂ ಸಾರಿಸುತಲಿದ್ದವರೂ, ಅನ್ಯಾಃ-ಇತರೆಯರು, ಪ್ರಮೃಜಂತ್ಯಃ-ಗುಡಿಸುತಲಿರುವವರೂ, ಲೋಚನೇ, ಕಂಗಳನ್ನು, ಅಂಜಂತ್ಯಃ-ಕಾಡಿಗೆಯಂ ತೊಡೆಯುತಲಿರುವವರೂ, ಕಾಶ್ಚಿತ್-ಕೆಲವರು, ವ್ಯತ್ಯಸ್ತವಸ್ತ್ರಾಭರಣಾಃ-ಆತುರದಿಂ ಸ್ಥಲವಿನಿಮಯವಾದ ಉಡಿಗೆತೊಡಿಗೆಗಳುಳ್ಳವರೂ ಆಗಿ, (ಹಾಗೆಯೇ) ಕೃಷ್ಣಾಂತಿಕಂ-ಕೃಷ್ಣನ ಬಳಿಯನ್ನು ಕುರಿತು, ಯಯುಃ-ಸೇರಿದರು ॥೭॥ ತಾಃ-ಆ ಸ್ತ್ರೀಯರು, ಪತಿಭಿಃ-ಗಂಡಂದಿರಿಂದಲೂ, ಪಿತೃಭಿಃ-ತಾಯಿತಂದೆಯರಿಂದಲೂ, ಭ್ರಾತೃಬಂಧುಭಿಃ-ಸೋದರರಿಂದಲೂ ನೆಂಟರಿಂದಲೂ, ವಾರ್ಯಮಾಣಾಃ-ಹೋಗಬೇಡಿರೆಂದು ತಡೆಯಲ್ಪಟ್ಟವರಾದರೂ, ಕಾಶ್ಚನ-ಕಲವರು, ಗೋವಿಂದಾಪಹೃತಾತ್ಮಾನಃ-ಕೃಷ್ಣನಿಂದ ಅಪಹರಿಸಲ್ಪಟ್ಟ ಮನಸ್ಸುಳ್ಳವರಾದ್ದರಿಂದಲೇ, ನ ನ್ಯವರ್ತಂತ-ಹೋಗದೇ ಹಿಂದುಳಿದಿರಲಿಲ್ಲವು ॥೮॥ ಕಾಶ್ಚಿತ್-ಕೆಲವರಾದ, ಗೋಪ್ಯಃ-ಗೊಲ್ಲತಿಯರು, ಅಂತರ್ಗೃಹಗತಾಃ-ಒಳಮನೆಯಲ್ಲಿ ಸಿಕ್ಕಿಯಿರುವರಾದ್ದರಿಂದಲೇ, ಅಲಬ್ಧವಿನಿರ್ಗಮಾಃ-ಲಭಿಸದೇ ಹೋದ ಹೊರಪಯಣವುಳ್ಳವರಾದ್ದರಿಂದ, ತದ್ಭಾವನಾಯುಕ್ತಾಃ-ಹೋಗಿ ಕೃಷ್ಣನಂ ಸೇರಿದಂತೆ ಆಯ ಭಿಪ್ರಾಯದಿಂದ ಕೂಡಿದವರಾಗಿ, ಮೀಲಿತಲೋಚನಾಸ್ಸತ್ಯಃ-ಮುಚ್ಚಿಕೊಂಡ ಕಂಗಳುಳ್ಳವರಾಗಿ, ಕೃಷ್ಣಂ-ಶ್ರೀಹರಿಯನ್ನು, ದಧ್ಯುಃ-ಧ್ಯಾನಮಾಡಿದರು ॥೯॥ ದುಸ್ಸಹ......ಶುಭಾಃ-ದುಸ್ಸಹ-ಸೈರಿಸಲಾಗದ, ಪ್ರೇಷ್ಠವಿರಹ-ಪ್ರಿಯನ ಅಗಲಿಕೆಯಿಂದಾದ, ತೀವ್ರ-ಚುರುಕಾದ, ತಾಪ-ದುಃಖಾನುಭವದಿಂದ, ಧುತ-ಕೊಡಹಿಬಿಡಲ್ಪಟ್ಟ, ಅಶುಭಾಃ-ಅಮಂಗಳವಾದ ಪಾಪಬಂಧವುಳ್ಳವರೂ, ಧ್ಯಾನ.....ಮಂಗಳಾಃ-ಧ್ಯಾನ-ಭಾವನೆಯಿಂದ, ಪ್ರಾಪ್ತ-ಪಡೆಯಲ್ಪಟ್ಟ, ಅಚ್ಯುತಾಶ್ಲೇಷ-ಕೃಷ್ಣನ ಆಲಿಂಗನದ, ನಿರ್ವೃತ್ಯಾ-ಸುಖಾನುಭವದಿಂದ, ಕ್ಷೀಣ-ನಾಶವಂ ಪಡೆದ, ಮಂಗಳಾಃ-ಸುಖಪ್ರಾರಬ್ಧಪುಣ್ಯವುಳ್ಳವರಾಗಿಯೂ ॥೧೦॥ ಜಾರಬುದ್ಧ್ಯಾಪಿ-ಮಿಂಡನೆಂಬ ಬುದ್ಧಿಯಿಂದಲಾದರೂ,

---

ಲವರು ಮಕ್ಕಳಿಗೆ ಸ್ತನ್ಯವಂ ಕೊಡುತಲಿದ್ದು ಅದಂಬಿಟ್ಟು ಹಾಗೆಯೆ ನಡೆದರು. ಕೆಲವರು ಪತಿಶುಶ್ರೂಷೆಯಂ ಮಾಡುತಲಿದ್ದು ಅದಂಬಿಟ್ಟು ತೆರಳಿದರು ॥೬॥ ಕೆಲವರು ಅರಿಸಿನವಂ ತೊಡಕೊಳ್ಳುವುದಂ ಬಿಟ್ಟು ಹೊರಟರು. ಕೆಲವರು ಕಂಣಿಗೆ ಕಪ್ಪು ಹಚ್ಚಿಕೊಳ್ಳುತ್ತಿದ್ದು ಅದಂಬಿಟ್ಟು ಹೊರಟರು. ಕೆಲವರು ಸೀರೆಗಳಂ ತಲೆಕೆಳಗಾಗಿ ವುಟ್ಟು, ಆಭರಣಂಗಳಂ ವ್ಯತ್ಯಸ್ತಂಗಳಾಗಿ ಧರಿಸಿ ಕೃಷ್ಣನ ಸಮೀಪಕ್ಕೆ ಓಡಿದರು ॥೭॥ ಆ ಸ್ತ್ರೀಯರುಗಳು ಪತಿಗಳಿಂದಲೂ ಭ್ರಾತೃಗಳಿಂದಲೂ ಪಿತೃಗಳಿಂದಲೂ ಬಂಧುಗಳಿಂದಲೂ ಹೋಗಬೇಡವೆಂದು ತಡೆಯಲ್ಪಟ್ಟವರಾದರೂ ಭಗವಂತನಿಂದ ಅಪಹೃತಚಿತ್ತರಾಗಿ ಹಿಂದಿರುಗಲಿಲ್ಲ ॥೮॥ ಕೆಲವರು ಸ್ತ್ರೀಯರುಗಳು ಒಳಮನೆಗಳಲ್ಲಿ ಇದ್ದವರಾಗಿ ಹೊರಕ್ಕೆ ಬರುವುದಕ್ಕೆ ಸಂದರ್ಭವಿಲ್ಲದೆ ಆ ಕೃಷ್ಣನನ್ನೇ ಧ್ಯಾನಿಸುತ ಕಂಗಳುಮುಚ್ಚಿಕೊಂಡು ಅನುಸಂಧಾನವಂ ಮಾಡಿದರು ॥೯॥ ಪ್ರಿಯನಾದ ಶ್ರೀಕೃಷ್ಣನ ವಿರಹದಿಂದುಂಟಾದ ಮಹಾತಾಪದಿಂದ ಭಗವಂತನಂ ಧ್ಯಾನಂಗೆಯ್ವುದರಿಂದ ಸಮಸ್ತಪಾಪಂಗಳಂ ಪರಿಹರಿಸಿಕೊಂಡು ಮಾನಸಿಕವಾದ ಭಗವಂತನ ಆಲಿಂಗನ ಸುಖದಿಂದ ಕ್ಷೀಣಬಂಧರಾಗಿ ॥೧೦॥ ಪರಮಾತ್ಮನಾದ ಆ ಕೃಷ್ಣನಂ ಜಾರಭಾವದಿಂ ಸಂ

ದ್ಯಃಪ್ರಕ್ಷೀಣಬಂಧನಾಃ ॥೧೧॥ ರಾಜಾ॥ ಕೃಷ್ಣಂವಿದುಃಪರಂಕಾಂತಂನತುಬ್ರಹ್ಮತಯಾಮುನೇ ।
ಗುಣಪ್ರವಾಹೋಪರಮಸ್ತಾಸಾಂಗುಣಧಿಯಾಕಥಂ ॥೧೨॥ ಶ್ರೀಶುಕಃ॥ ಉಕ್ತಂಪುರಸ್ತಾದೇತತ್ತೇ
ಚೈದ್ಯಸ್ಸಿದ್ಧಿಂಯಥಾಗತಃ । ದ್ವಿಷನ್ನಪಿಹೃಷೀಕೇಶಂಕಿಮುತಾಧೋಕ್ಷಜಪ್ರಿಯಾಃ ॥೧೩॥ ನೃಣಾಂ
ನಿಶ್ಶ್ರೇಯಸಾರ್ಥಾಯವ್ಯಕ್ತಿರ್ಭಗವತೋಭುವಿ । ಅವ್ಯಯಸ್ಯಾಪ್ರಮೇಯಸ್ಯನಿರ್ಗುಣಸ್ಯಗುಣಾ
ತ್ಮನಃ ॥೧೪॥ ಕಾಮಂಕ್ರೋಧಂಭಯಂಸ್ನೇಹಮೈಕ್ಯಂಸೌಹೃದಮೇವಚ । ನಿತ್ಯಂಹರೌವಿದಧತೋ

---

ತಂಪರಮಾತ್ಮಾನಮೇವ-ಪರಮಾತ್ಮನಾದಕೃಷ್ಣನನ್ನೇ, ಸಂಗತಾಃ-ಜಾರನಾಗಿಸೇರಿದವರಾದ್ದರಿಂದಲೇ, ಸದ್ಯಃ-ತತ್‍ಕ್ಷಣದಲ್ಲಿ, ಪ್ರಕ್ಷೀಣಬಂಧನಾಃ-ನಾಶವಾದ ಕರ್ಮದಕಟ್ಟುಗಳುಳ್ಳವರಾಗಿ, (ಪುಣ್ಯಪಾಪಲೇಪವಿಲ್ಲದವರಾಗಿ) ಗುಣಮಯಂ-ತ್ರಿಗುಣವಿಕಾರವಾದ, ದೇಹಂ-ಶರೀರವನ್ನು, ಜಹುಃ-ತೊರೆಕೊಂಡರು ॥೧೧॥ [ ಪರೀಕ್ಷಿತ್ಪ್ರಶ್ನೆ ] ಮುನೇ-ಶುಕಮುನಿಯೇ! ಗೋಪಿಯರು, ಕೃಷ್ಣಂ-ಕೃಷ್ಣನನ್ನು, ಕಾಂತಂಪರಂ-ಮನೋಹರನಾದಪತಿಯನ್ನಾಗಿಮಾತ್ರವೇ, ವಿದುಃ-ತಿಳಿದರು. ಬ್ರಹ್ಮತಯಾತು-ಪರಬ್ರಹ್ಮವೆಂದಾದರೋ, ನವಿದುಃ-ತಿಳಿಯಲಿಲ್ಲ, ತಾಸಾಂ-ಹಾಗೆಬ್ರಹ್ಮಜ್ಞಾನವಿಲ್ಲದಗೊಲ್ಲತಿಯರಿಗೆ, ಗುಣಧಿಯಾ-ತ್ರಿಗುಣವಿಕಾರವಾದಬುದ್ಧಿಯಿಂದ, ಗುಣಪ್ರವಾಹೋಪರಮಃ-ಗುಣಪ್ರವಾಹ-ಸಂಸಾರದ, ಉಪರಮಃ-ವಿರಾಮವು, ಕಥಂ-ಹೇಗಾಯಿತು, ॥೧೨॥ (ಶುಕೋತ್ತರವು.) ಏತತ್-ಇದು, ಯಥಾ-ಹೇಗೋ, ತಥಾ-ಹಾಗೆ, ಪುರಸ್ತಾತ್-ಮುಂಚೆಯೇ, ತೇ-ನಿನಗೆ, ಉಕ್ತಂ-ಹೇಳಲ್ಪಟ್ಟಿದ್ದಾಗಿದೆ. ಹೃಷೀಕೇಶಂ-ಇಂದ್ರಿಯಗಳಿಗೊಡೆಯನಾದಕೃಷ್ಣನನ್ನು, ದ್ವಿಷನ್ನಪಿ-ವಿರೋಧಿಸಿದವನಾದರೂ, ಚೈದ್ಯಃ-ಶಿಶುಪಾಲನು, ಸಿದ್ಧಿಂ-ಮೋಕ್ಷವನ್ನು, ಗತಃ-ಹೊಂದಿದವನಾದನು, ಅಧೋಕ್ಷಜಪ್ರಿಯಾಃ-ಕೃಷ್ಣನಿಗೆ ಪ್ರಿಯನಾದವರು, ಅಥವಾ-ಕೃಷ್ಣನೇಪ್ರಿಯನಾಗಿಉಳ್ಳವರು ( ಸಿದ್ಧಿಯಂಪಡೆಯುವರೆಂಬುವದನ್ನು ) ಕಿಮುತ-ಏನುಹೇಳತಕ್ಕದ್ದು ॥೧೩॥ ಅವ್ಯಯಸ್ಯ-ನಾಶರಹಿತನಾದ, ಅಪ್ರಮೇಯಸ್ಯ-ಜ್ಞಾನಕ್ಕೆಗೋಚರನಲ್ಲದ (ತಿಳಿಯಲಶಕ್ಯನಾದ) ನಿರ್ಗುಣಸ್ಯ-ಗುಣಗಳಿಲ್ಲದೇಯಿರುವವನಾದರೂ, ಗುಣಾತ್ಮನಃ-ಮಾಯೆಯಿಂದ ಸಗುಣಮೂರ್ತಿಯುಳ್ಳವನಾದ, ಭಗವತಃ-ಪರಮೇಶ್ವರನ, ವ್ಯಕ್ತಿಃ-ಅವತಾರವು. ನೃಣಾಂ-ಮನುಷ್ಯರ, ನಿಶ್ರೇಯಸಾರ್ಥಾಯ-ಮೋಕ್ಷಕ್ಕೋಸುಗವೇ ॥೧೪॥ ಕಾಮಂ-ಬಯಕೆಯನ್ನು ( ಅನುರಾಗವನ್ನು ) ಕ್ರೋಧಂ-ಸಿಟ್ಟನ್ನೂ, ಭಯಂ-ಅಂಜಿಕೆಯನ್ನೂ, ಸ್ನೇಹಂ-ಮೈತ್ರಿಯನ್ನೂ, ಐಕ್ಯಂ-ಅಭೇದಭಾವನೆಯನ್ನೂ, ಸೌಹೃದಮೇವವಾ-ಭಕ್ತಿಯನ್ನಾದರೂ, ನಿತ್ಯಂ-ಸರ್ವಕಾಲಗಳಲ್ಲಿಯೂ, ಹರೌ-ವಿಷ್ಣುವಿನಲ್ಲಿ, ಯೇ-ಯಾರು,

---

ಬ ಬುದ್ಧಿಯಿಂದ ಕೂಡಿದವರಾದರೂ ಗುಣಮಯವಾದ ದೇಹಬಂಧವಂ ತಪ್ಪಿಸಿಕೊಂಡು ಉತ್ತಮಗತಿಯನೈದಿದರು ॥೧೧॥ (ಎಂಬ ಶುಕಾಚಾರ್ಯರ ವಾಕ್ಯವಂಕೇಳಿ ಪರೀಕ್ಷಿದ್ರಾಯನು ಪ್ರಶ್ನಂಗೆಯ್ದನಂತೆನೆ) ಎಲೈ ಶುಕಾಚಾರ್ಯನೇ! ಗೋಪಸ್ತ್ರೀಯರುಗಳು ಶ್ರೀಕೃಷ್ಣನಂ ಮನೋಹರನಾದ ಜಾರಕಾಂತನನ್ನಾಗಿ ತಿಳಿದು ಇದಾಕೆಯೇಹೊರತು ಪರಬ್ರಹ್ಮನೆಂದರಿಯರು, ಆದುದರಿಂದ ಮಾಯಾಜನ್ಯವಾದ ಅಜ್ಞಾನವುಳ್ಳ ಆಸ್ತ್ರೀಯರುಗಳಿಗೆ ಸಂಸಾರಬಂಧ ಪರಿಹಾರವುಹೇಗೆ ಆಯಿತು ॥೧೨॥ (ಎಂಬರಾಜವಾಕ್ಯವಂಕೇಳಿ ಶುಕಾಚಾರ್ಯನು ಉತ್ತರವ ನಿತ್ತನೆಂತೆನೆ-) ಎಲೈ, ಅರಸೇ! ಪೂರ್ವದಲ್ಲಿಯೇ ನಿನಗೆ ನಮ್ಮಿಂದ ಹೇಳಲ್ಪಟ್ಟಿತೆಯಲ್ಲವೆ? ಶಿಶುಪಾಲನು ಕೃಷ್ಣನಲ್ಲಿ ದ್ವೇಷದಿಂದಲೇ ಭಾವನಾಸಿದ್ಧಿಯಿಂದ ಮುಕ್ತನಾದನು. ಆ ಭಗವಂತನಲ್ಲಿಯೇ ಪ್ರೀತಿಯಂ ಮಾಡುವರು ಮುಕ್ತರಾಗುವುದರಲ್ಲಿ ಆಶ್ಚರ್ಯವೇನು ॥೧೩॥ ಪ್ರಾಣಿಗಳಕ್ಷೇಮಕ್ಕೋಸುಗ ಭಗವಂತನಿಗೆ ಭೂಮಿಯಲ್ಲಿ ಆವಿರ್ಭಾವವು. ಅವ್ಯಯನಾಗಿ ಅಪ್ರಮೇಯನಾಗಿ ಗುಣರಹಿತನಾಗಿ ಮಾಯಾನಿಯಾಮಕನಾದ ಪರಬ್ರಹ್ಮನಿಗೆ ದೇಹವೂ ಬಂಧವೂ ಸ್ವಾಭಾವಿಕವಲ್ಲ ॥೧೪॥ ಎಲೈ ಅರಸೇ! ಭಗವಂತನಲ್ಲಿ ಕಾಮವನ್ನೂ ಕ್ರೋಧವನ್ನೂ ಭಯವನ್ನೂ ಸ್ನೇಹವನ್ನೂ ಸಂಬಂಧವನ್ನೂ ಮೈತ್ರಿಯನ್ನೂ ಇದರಲ್ಲಿ ಯಾವುದನ್ನಾದರೂ ದೃಢವಾಗಿನಿತ್ಯವೂ ಯಾರುಮಾಡುತ್ತಾರೋ ಅವರು ಭಗವಂತನಸ್ವರೂಪವಂನೆ

ಯಾಂತಿತನ್ಮಯತಾಂಹಿತೇ ॥೧೫॥ ನಚೈವಂವಿಸ್ಮಯಃಕಾರ್ಯೋಭವತಾಭಗವತ್ಯಜೇ । ಯೋಗೇಶ್ವರೇ
ಶ್ವರೇಕೃಷ್ಣೇಯತಏತದ್ವಿಮುಚ್ಯತೇ ॥೧೬॥ ತಾದೃಷ್ಟ್ವಾಂತಿಕಮಾಯಾತಾಭಗವಾನ್ವ್ರಜಯೋಷಿ
ತಃ । ಅವದದ್ವದತಾಂಶ್ರೇಷ್ಠೋವಾಚಃಪೇಶೈರ್ವಿಮೋಹಯನ್ ॥೧೭॥ ಶ್ರೀಭಗವಾನ್ ॥ ಸ್ವಾಗತಂ
ವೋಮಹಾಭಾಗಾಃಪ್ರಿಯಂಕಿಂಕರವಾಣಿವಃ । ವ್ರಜಸ್ಯಾನಾಮಯಂಕಚ್ಚಿದ್ಬ್ರೂತಾಗಮನಕಾರ
ಣಂ ॥೧೮॥ ರಜನ್ಯೇಷಾಘೋರರೂಪಾಕ್ರೂರಸತ್ವನಿಷೇವಿತಾ । ಪ್ರತಿಯಾತವ್ರಜಂನೇಹಸ್ಥೇಯಂ
ಸ್ತ್ರೀಭಿಸ್ಸುಮಧ್ಯಮಾಃ ॥೧೯॥ ಮಾತರಃಪಿತರಃಪುತ್ರಾಭ್ರಾತರಃಪತಯಶ್ಚವಃ । ವಿಚಿನ್ವಂತಿ
ಹ್ಯಪಶ್ಯಂತೋಮಾಕೃಧ್ವಂಬಂಧುಸಾಧ್ವಸಂ ॥೨೦॥ದೃಷ್ಟಂವನಂಕುಸುಮಿತಂರಾಕೇಶಕರರಂಜಿತಂ।

---

ವಿಪಥತಃ-ಮಾಡುವವರೋ-ತೇ-ಅವರು, ತನ್ಮಯತಾಂ-ಆವಿಷ್ಣುಸ್ವರೂಪರಾಗುವಿಕೆಯನ್ನು, ಯಾಂತಿ-ಹೊಂದುವರು ॥೧೫॥
ಯೋಗೇಶ್ವರೇಶ್ವರೇ-ಜ್ಞಾನಿಗಳೊಡೆಯನಾದ, ಅಜೇ-ಜನ್ಮವತ್ತೊಡರಿಲ್ಲದ, ಭಗವತಿ-ಷಡ್ಗುಣೈಶ್ವರ್ಯಸಂಪನ್ನನಾದ, ಕೃಷ್ಣೇ-
ಹರಿಯವಿಷಯದಲ್ಲಿ, ಭವತಾ-ನಿನ್ನಿಂದ, ಏವಂವಿಸ್ಮಯಃ-ಹೀಗೆಆಶ್ಚರ್ಯವು, ನಕಾರ್ಯಃ-ಮಾಡಲ್ಪಡತಕ್ಕದ್ದಲ್ಲ ಯತಃ
ಯಾವಕೃಷ್ಣನಿಂದ, ಏತತ್-ಈಸ್ಥಾವರಾದಿಜಗತ್ತುಕೂಡ, ವಿಮುಚ್ಯತೇ-ಸಂಸಾರಬಂಧದಿಂದಬಿಡಿಸಲ್ಪಡುವುದೋ (ಅಂತ
ವನುಕೃಷ್ಣನು) ॥೧೬॥ ವದತಾಂ-ಮಾತಾಡುವರಲ್ಲಿ, ಶ್ರೇಷ್ಠಃ-ಉತ್ತಮನಾದ, ಭಗವಾನ್-ಕೃಷ್ಣನು, ಅಂತಿಕಂ-ತನ್ನಬಳಿಯ
ನ್ನುಕುರಿತು, ಆಯಾತಾಃ-ಬಂದವರಾದ, ವ್ರಜಯೋಷಿತಃ-ಗೊಲ್ಲತಿಯರನ್ನು, ದೃಷ್ಟ್ವಾ-ನೋಡಿ, ತಾಃ-ಅವರನ್ನು, ವಾಚಃ
ಪೇಶೈಃ-ಮಾತಿನವಿಲಾಸಗಳಿಂದ, ವಿಮೋಹಯನ್-ಮೋಹಗೊಳಿಸುತಲಿರುವನಾಗಿ, ಅವದತ್-ಹೇಳಿದನು ॥೧೭॥ (ಭಗವದ್ವಾ
ಕ್ಯಗಳು) ಹೇಮಹಾಭಾಗಾಃ-ಎಲೌಅಧಿಕವಾದಪೂಜ್ಯತೆಯುಳ್ಳಹೆಂಗಳಿರಾ, ವಃ-ನಿಮಗೆ, ಸ್ವಾಗತಂ-ಸುಖವಾಗಿಬರೋಣವಾ
ಯಿತೇ, ವಃ-ನಿಮಗೆ, ಪ್ರಿಯಂ-ಇಷ್ಟವಾದದ್ದನ್ನು, ಕಿಂಕರವಾಣಿ-ಯಾವದನ್ನುಮಾಡುವೆನು ವ್ರಜಸ್ಯ-ಗೋಕುಲಕ್ಕೆ, ಅನಾ
ಮಯಂ-ಕಚ್ಚಿತ್-ಆರೋಗ್ಯವೇನು; ಆಗಮನಕಾರಣಂ-ನೀವುಬಂದದ್ದಕ್ಕೆನಿಮಿತ್ತವನ್ನು, ಬ್ರೂತ-ಹೇಳಿರಿ ॥೧೮॥ ಏಷಾರ
ಜನೀ-ಈರಾತ್ರಿಯು, ಕ್ರೂರಸತ್ವನಿಷೇವಿತಾ-ಕ್ರೂರಜಂತುಗಳಿಂದಸೇವಿಸಲ್ಪಟ್ಟದ್ದು, ಘೋರರೂಪಾ-ಭಯಂಕರವಾದ
ರೂಪವುಳ್ಳದ್ದು, ಆದ್ದರಿಂದ, ವ್ರಜಂಪ್ರತಿ-ಗೋಕುಲವನ್ನುಕುರಿತು, ಯಾತ-ಹೋಗಿರಿ ಹೇಸುಮಧ್ಯಮಾಃ-ಶುಭವಾದಮಧ್ಯ
ಸ್ಥಲವುಳ್ಳಹೆಂಗಳಿರಾ! ಸ್ತ್ರೀಭಿಃ-ಹೆಂಗಳಿಂದ, ಇಹ-ಈಸ್ಥಲದಲ್ಲಿ, ನಸ್ಥೇಯಂ-ಇರತಕ್ಕದ್ದಲ್ಲವು ॥೧೯॥ ಮಾತರಃ-ತಾಯಿಯ
ರು, ಪಿತರಃ-ತಂದೆಯರೂ, ಪುತ್ರಾಃ-ಮಕ್ಕಳೂ ಭ್ರಾತರಃ-ಸೋದರರೂ, ಪತಯಶ್ಚ-ಗಂಡಂದಿರೂಕೂಡ, ವಃ-ನಿಮ್ಮನ್ನು,
ಅಪಶ್ಯಂತಃ-ನೋಡದೇಯಿರುವರಾದ್ದರಿಂದಲೇ, ವಿಚಿನ್ವಂತಿಹಿ-ವಿಶೇಷವಾಗಿಹುಡುಕುತಲಿದ್ದಾರೆಯಲ್ಲವೇ ಬಂಧುಸಾಧ್ವಸಂ-
ಸಂಬಂಧಿಗಳಭಯವನ್ನು, ಮಾಕೃಧ್ವಂ-ಮಾಡಬೇಡಿರಿ ॥೨೦॥ ಕುಸುಮಿತಂ-ಪುಷ್ಪಿಸಿದ್ದಾಗಿಯೂ, ರಾಕೇಶಕರ-ಚಂದ್ರಕಿರಣಗಳಿಂ-

---

ಯುದ್ಧವರಾಗುತ್ತಾರೆ ॥೧೫॥ ಎಲೈ, ಅರಸೇ! ಭಗವಂತನಾದ ಯೋಗೀಶ್ವರನಾದ ಶಾಶ್ವತನಾದ ಶ್ರೀಕೃಷ್ಣ
ನಲ್ಲಿ ನೀನು ಆಶ್ಚರ್ಯಪಡಬೇಡ, ಆಕೃಷ್ಣನ ಅನುಗ್ರಹದಿಂದ ಸ್ಥಾವರಾದಿಗಳೂ ಕೂಡ ಗತಿಯ ನೈದುವವು
ವು ॥೧೬॥ ಎಲೈಅರಸೇ! ಅನಂತರದಲ್ಲಿ ವಾಕ್ಚಾತುರ್ಯಮುಳ್ಳವರೊಳಗೆ ಶ್ರೇಷ್ಠನಾದ ಭಗವಂತನಾದ ಕೃ
ಷ್ಣನು ತನ್ನಂ ಹುಡುಕಿಕೊಂಡು ಬಂದ ಗೋಪಸ್ತ್ರೀಯರುಗಳಂ ಕುರಿತು ವಾಗ್ವಿಲಾಸಗಳಿಂದ ಅವರಂ
ಮರುಳು ಮಾಡುವವನಾಗಿ ನುಡಿದನು ॥೧೭॥ (ಅದೆಂತೆನೆ-) ಎಲೆ, ಪುಣ್ಯವತಿಯರಾದ ಸ್ತ್ರೀಯರುಗಳಿರಾ!
ನಿಮಗೆ ಸುಖದಿಂದ ಬರುವಿಕೆ ಯಾಯಿತೆ ಬನ್ನಿ, ನಿಮಗೆ ಪ್ರಿಯವಾದ ಕಾರ್ಯವಂ ನಾನೇನುಮಾಡಲಿ ವ್ರಜ
ವು ಕ್ಷೇಮದಲ್ಲಿ ಇದೆಯೋ ಏನು ನೀವು ಬಂದನಿಮಿತ್ತವೇನು ॥೧೮॥ ಈ ರಾತ್ರಿಯು ಭಯಂಕರವಾದ್ದು, ಭ
ಯಂಕರಗಳಾದ ದುಷ್ಟಜಂತುಗಳಿಂ ಸೇವಿತವಾದದ್ದು, ವ್ರಜಕ್ಕೆಹೋಗಿ, ಸ್ತ್ರೀಯರುಗಳು ಇಲ್ಲಿಇರಬಾರ
ದು ॥೧೯॥ ಇದರಮೇಲೆ ನಿಮ್ಮತಾಯಿಯರು ತಂದೆಗಳು ಪುತ್ರರು ಭ್ರಾತಾರರು ಪತಿಗಳು ನಿಮ್ಮಂ ಕಾಣದೇ
ಹುಡುಕುವರು, ಬಂಧುಗಳಿಗೆ ಭಯವು ಮಾಡಬೇಡಿರಿ ॥೨೦॥ ಪೂರ್ಣಚಂದ್ರನ ಕಿರಣಂಗಳಿಂದ ರಂಜಿತವಾಗಿ

ಯಮುನಾನಿಲಲೀಲೈಜತ್ತರುಪಲ್ಲವಶೋಭಿತಂ ||೨೧|| ತದ್ಯಾತಮಾಚಿರಂಗೋಷ್ಠಂಶುಶ್ರೂಷಧ್ವಂಪ
ತೀನ್ಸತೀಃ | ಕ್ರಂದಂತಿವತ್ಸಾಬಾಲಾಶ್ಚತಾನ್ಪಾಯಯತದುಹ್ಯತ ||೨೨|| ಅಥವಾಮದಭಿಸ್ನೇ
ಹಾದ್ಭವತ್ಯೋಯಂತ್ರಿತಾಶಯಾಃ | ಆಗತಾಹ್ಯುಪಪನ್ನಂತತ್ಪ್ರೀಯಂತೇಮಯಿಜಂತವಃ ||೨೩||ಭ

ದ, ರಂಜಿತಂ-ಸುಖಕರವಾಗಿಮಾಡಲ್ಪಟ್ಟದ್ದೂ, ಯಮುನಾ . . ಶೋಭಿತಂ-ಯಮುನಾ-ನದಿಯಮೇಲಣ, ಅನಿಲ-ಗಾಳಿಯ-ಲೀಲಾ-ಮಂದಗಮನಚೇಷ್ಟೆಯಿಂದ, ಏಜತ್-ಕದಲುತಲಿರುವ, ತರು-ಮರಗಳ, ಪಲ್ಲವ-ಚಿಗುರುಗಳಿಂದ, ಶೋಭಿತಂ-ಅಲಂಕಾರವುಂಟಾದ, ವನಂ-ಬೃಂದಾರಣ್ಯವು, ದೃಷ್ಟಂ-ನಿಮ್ಮಿಂದನೋಡಲ್ಪಟ್ಟದ್ದಾಯಿತಲ್ಲವೆ||೨೧||ಹೇಸತೀಃ-ಓಪತಿವ್ರತೆಯರಿರಾ! ತತ್-ವನವನ್ನುನೋಡಿದ್ದಾದಕಾರಣದಿಂದ, ಗೋಷ್ಠಂ-ಗೋಕುಲವನ್ನುಕುರಿತು, ಯಾತ-ಹೋಗಿರಿ. ಚಿರಂ-ನಾವಕಾಶವು, (ಅಧಿಕಕಾಲವು) ಮಾ-ಬೇಡ, ಪತೀನ್-ನಿಮ್ಮಗಂಡಂದಿರನ್ನು, ಶುಶ್ರೂಷಧ್ವಂ-ಸೇವಿಸಿರಿ. ವತ್ಸಾಃ-ಕರುಗಳು, ಬಾಲಾಶ್ಚ-ಹುಡುಗರುಕೂಡ, ಕ್ರಂದಂತಿ-ಅಳುತಲಿದಾರೆ. ತಾನ್-ಆಹುಡುಗರನ್ನೂಕರುಗಳನ್ನೂ, ಪಾಯಯತ-ಹಾಲುಕುಡಿಸಿರಿ. ದುಹ್ಯತ-ಹಾಲನ್ನುಕರೆಯಿರಿ ||೨೨||ಅಥವಾ-ಹಾಗಲ್ಲದಿದ್ದರೇ, ಭವತ್ಯಃ-ನೀವು, ಹಿ-ಯಾವಕಾರಣದಿಂದ, ಮದಭಿಸ್ನೇಹಾತ್-ನನ್ನಲ್ಲಿಪೂರ್ಣಾನುರಾಗದಿಂದ. ಯಂತ್ರಿತಾಶಯಾಸ್ಸತ್ಯಃ-ಸಿಕ್ಕುಬಿದ್ದಬುದ್ಧಿಯುಳ್ಳವರಾಗಿ, ಆಗತಾಃ-ಬಂದವರಾದಿರೋ, ತತ್-ಹಾಗೆಬಂದದ್ದು, ಉಪಪನ್ನಂ-ಯುಕ್ತವಾದ್ದೇ, ಹೇಗೆಂದರೆ-ಜಂತವಃ-ಪ್ರಾಣಿಗಳು, ಮಯಿ-ಆತ್ಮನಾದನನ್ನಲ್ಲಿ, ಪ್ರೀಯಂತೇ-ಸಹಜವಾಗಿಪ್ರೀತಿಯುಳ್ಳವರಾಗುವರು ||೨೩|| ಹೇಕಲ್ಯಾಣ್ಯಃ-ಎಲೌಮುತ್ತೈದೆಯರಿರೇ! ಸ್ತ್ರೀಣಾಂ-ಹೆಂಗಳಿಗೆ, ಅ



ಯಮುನಾನದಿಯ ವಾಯುವಿನಿಂದ ಕಂಪಿಸಲ್ಪಟ್ಟ ವೃಕ್ಷಂಗಳ ಚಿಗುರುಗಳಿಂದ ಶೋಭಿತವಾದ ವನವು ನಿಮ್ಮಿಂದ ನೋಡಲ್ಪಟ್ಟಿತಲ್ಲವೆ ಎಲೈ, ಪತಿವ್ರತೆಯರುಗಳಿರಾ! ಅದರಿಂದ ಬೇಗನೆ ವ್ರಜಕ್ಕೆ ಹೋಗಿರಿ ||೨೧|| ಪತಿಗಳ ಶುಶ್ರೂಷೆಯಂ ಮಾಡಿರಿ, ಮಕ್ಕಳು ಕರುಗಳು ರೋದನಂಮಾಡುತ್ತವೆ, ಮಕ್ಕಳಿಗೆ ಸ್ತನ್ಯಪಾನವಂ ಮಾಡಿಸಿ, ಹಸುಗಳಂ ಕರೆದು ಕರುಗಳಿಗೆ ಕ್ಷೀರಪಾನಂಗಳಂ ಮಾಡಿಸಿರಿ ||೨೨|| ಅಥವಾ ನನ್ನಲ್ಲಿ ಸ್ನೇಹದಿಂದನೀವು ಕಟ್ಟಲ್ಪಟ್ಟ ಮನಸ್ಸುಳ್ಳವರಾಗಿ ಬಂದು ಯಿರುವಿರಿಯಾದಪಕ್ಷದಲ್ಲಿ, ಯುಕ್ತವು, ನನ್ನಲ್ಲಿ ನಿಮಗೆಪ್ರೀತಿಯು ಅಧಿಕವಾಗಿದೆ, ಅದರಿಂದ ನೀವು ಬಂದದ್ದು ಒಳ್ಳೆಯದಾಯಿತು ||೨೩|| ಎಲೆ, ಸುಂದರಿಯರುಗಳಿ

ಭರ್ತುಃ ಶುಶ್ರೂಷಣಂ ಸ್ತ್ರೀಣಾಂ ಪರೋ ಧರ್ಮೋ ಹ್ಯಮಾಯಯಾ । ತದ್ಬಂಧೂನಾಂ ಚ ಕಲ್ಯಾಣ್ಯಃ ಪ್ರಜಾನಾಂ ಚಾನುಪೋಷಣಮ್ ॥೨೪॥ ದುಃಶೀಲೋ ದುರ್ಭಗೋ ವೃದ್ಧೋ ಜಡೋ ರೋಗ್ಯಧನೋಽಪಿ ವಾ । ಪತಿಃ ಸ್ತ್ರೀಭಿರ್ನ ಹಾತವ್ಯೋ ಲೋಕೇಪ್ಸುಭಿರಪಾತಕೀ ॥೨೫॥ ಅಸ್ವರ್ಗ್ಯಮಯಶಸ್ಯಂ ಚ ಫಲ್ಗು ಕೃಚ್ಛ್ರಂ ಭಯಾವಹಮ್ । ಜುಗುಪ್ಸಿತಂ ಚ ಸರ್ವತ್ರ ಹ್ಯೌಪಪತ್ಯಂ ಕುಲಸ್ತ್ರಿಯಃ ॥೨೬॥ ಶ್ರವಣಾದ್ದರ್ಶನಾದ್ಧ್ಯಾನಾನ್ಮಯಿ ಭಾವೋಽನುಕೀರ್ತನಾತ್ । ನ ತಥಾ ಸನ್ನಿಕರ್ಷೇಣ ಪ್ರತಿಯಾತ ತತೋ ಗೃಹಾನ್ ॥೨೭॥ ಶ್ರೀಶುಕಃ ॥ ಇತಿ ವಿಪ್ರಿಯಮಾಕರ್ಣ್ಯ ಗೋಪ್ಯೋ ಗೋವಿಂದಭಾಷಿತಮ್ । ವಿಷಣ್ಣಾ ಭಗ್ನಸಂಕಲ್ಪಾಶ್ಚಿಂತಾಮಾಪುರ್ದುರತ್ಯಯಾಮ್ ॥೨೮॥ ಕೃತ್ವಾ ಮುಖಾನ್ಯವಶುಚಃ ಶ್ವಸನೇನ

---

ಮಾಯಯಾ ನಿರ್ವಂಚನೆಯಿಂದ, ಭರ್ತುಃ ಶುಶ್ರೂಷಣಂ-ಗಂಡನನ್ನು ಸೇವಿಸೋಣವೂ, ತದ್ಬಂಧೂನಾಂ-ಆ ಗಂಡನ ನಂಟರಾದ ಅತ್ತೆ ಮಾವ ಭಾವ ಮುಂತಾದವರ ಸೇವೆಯೂ, ಪ್ರಜಾನಾಂ ಮಕ್ಕಳ, ಅನುಪೋಷಣಂ ಚ-ಆರೈಕೆಯೂ, ಪರಧರ್ಮೋ ಹಿ-ಉತ್ತಮವಾದ ಧರ್ಮವಲ್ಲವೆ ॥೨೪॥ ದುಶ್ಶೀಲಃ-ದುಷ್ಟಸ್ವಭಾವನು, ದುರ್ಭಗಃ ಭಾಗ್ಯವಿಲ್ಲದವನು, ವೃದ್ಧಃ-ಮುದುಕನು, ಜಡಃ-ಮೂಢನು, ರೋಗೀ-ಬೇನೆಯುಳ್ಳವನು, ಅಧನೋಽಪಿ ವಾ-ಬಡವನೂ, ಆದರೂ, ಪತಿಃ-ಗಂಡನು, ಅಪಾತಕೀ ಚೇತ್-ಬಿಡತಕ್ಕಷ್ಟು ಪ್ರಬಲವಾದ ಪಾಪವಿಲ್ಲದವನಾದರೆ, ಲೋಕೇಪ್ಸುಭಿಃ-ಪತಿವ್ರತಾಪುಣ್ಯಲೋಕಗಳನ್ನು ಬಯಸುವ, ಸ್ತ್ರೀಭಿಃ-ಹೆಂಗಳಿಂದ, ನ ಹಾತವ್ಯಃ-ಬಿಡಲ್ಪಡತಕ್ಕವನಲ್ಲವು ॥೨೫॥ ಕುಲಸ್ತ್ರಿಯಃ-ಉತ್ತಮಕುಲದಲ್ಲಿ ಹುಟ್ಟಿದ ಹೆಂಗಸಿಗೆ, ಔಪಪತ್ಯಂ-ಮಿಂಡನುಂಟಾಗುವಿಕೆ, ಅಸ್ವರ್ಗ್ಯಂ-ಸ್ವರ್ಗಸಾಧನವಲ್ಲವು, (ಪುಣ್ಯಲೋಕಭಂಜಕವು.) ಅಯಶಸ್ಯಂ ಚ-ಅಪಕೀರ್ತಿಯನ್ನುಂಟುಮಾಡತಕ್ಕದ್ದು, ಫಲ್ಗು-ಅಸಾರವಾದ ನೀಚಕೃತ್ಯವು, ಕೃಚ್ಛ್ರಂ-ಕಷ್ಟವಾದ್ದು. ಭಯಾವಹಂ-ಭಯವನ್ನು ಮಾಡುವುದು. ಸರ್ವತ್ರ-ಎಲ್ಲ ಕಡೆಗಳಲ್ಲಿಯೂ ಜುಗುಪ್ಸಿತಂ ಚ-ಅಹಸ್ಯವಾಗಿಯೂ ಇರುವುದೋ, ಹಿ-ಅಲ್ಲವೆ ॥೨೬॥ ಶ್ರವಣಾತ್-ನನ್ನ ಸುಗುಣಗಳನ್ನು ಕೇಳುವುದರಿಂದಲೂ, ದರ್ಶನಾತ್-ನನ್ನ ನೋಡುವುದರದೆಸೆಯಿಂದಲೂ, ಧ್ಯಾನಾತ್-ನನ್ನ ಭಾವಿಸುವುದರಿಂದಲೂ, ಅನುಕೀರ್ತನಾತ್-ನನ್ನ ಚರಿತ್ರಂಗಳಂ ಹಾಡುವುದರಿಂದಲೂ, ಯಥಾ-ಹೇಗೆ, ಮಯಿ-ನನ್ನಲ್ಲಿ, ಭಾವಃ-ತಾದಾತ್ಮ್ಯವು (ತನ್ಮಯವಾದ ವೃತ್ತಿಯು) ಉಂಟಾಗುವುದೋ, ಸನ್ನಿಕರ್ಷೇಣ-ಶರೀರಸಂಬಂಧದಿಂದ, ತಥಾ-ಹಾಗೆ, ನ-ಉಂಟಾಗುವುದಿಲ್ಲ. ತತಃ-ಆ ಕಾರಣದಿಂದ, ಗೃಹಾನ್ ಪ್ರತಿ-ಮನೆಗಳನ್ನು ಕುರಿತು, ಯಾತ-ಹೋಗಿರಿ ॥೨೭॥ (ಶುಕವಾಕ್ಯವು.) ಗೋಪ್ಯಃ-ಗೊಲ್ಲತಿಯರು, ಇತಿ-ಹೀಗೆ, ಗೋವಿಂದಭಾಷಿತಂ-ಕೃಷ್ಣನಿಂದ ಹೇಳಲ್ಪಟ್ಟ, ವಿಪ್ರಿಯಂ-ಅನಿಷ್ಟವನ್ನು, ಅಥವಾ ಪ್ರಿಯವಲ್ಲದ ಕೃಷ್ಣವಾಕ್ಯವನ್ನು, ಆಕರ್ಣ್ಯ-ಕೇಳಿ, ವಿಷಣ್ಣಾಃ-ದುಃಖವುಳ್ಳವರಾಗಿಯೂ, ಭಗ್ನಸಂಕಲ್ಪಾಃ-ಮುರಿದ ಬಯಕೆಯುಳ್ಳವರೂ, ಆಗಿ ದುರತ್ಯಯಾಂ-ಪ್ರಯಾಸದಿಂದಲೂ ದಾಂಟಲು ಸದರವಲ್ಲದ, ಚಿಂತಾಂ-ಹಳಹಳಿಯನ್ನು, ಆಪುಃ-ಹೊಂದಿದರು ॥೨೮॥ ಶುಚಃ-

---

ರು। ಸ್ತ್ರೀಯರುಗಳಿಗೆ ಅಕಪಟದಿಂದ ಪತಿಶುಶ್ರೂಷೆಯೇ ಉತ್ತಮಧರ್ಮವು, ಪತಿಗಳಿಗೆ ಬಂಧುಗಳಾದವರಂ ಪೋಷಿಸುವುದು, ಪ್ರಜೆಗಳಂ ಪೋಷಿಸುವಿಕೆಯು ಸ್ತ್ರೀಯರುಗಳಿಗೆ ಉತ್ತಮಧರ್ಮವು ॥೨೪॥ ಪತಿಯು ದುಷ್ಟಶೀಲವುಳ್ಳವನಾಗಲಿ, ದುರ್ಭಗನಾಗಲಿ, ವೃದ್ಧನಾಗಲಿ, ಜಡನಾಗಲಿ, ಸರೋಗನಾಗಲಿ, ಉತ್ತಮಗತಿಯ ನೆಯ್ದಲಿಚ್ಛೆಯುಳ್ಳ ಸ್ತ್ರೀಯರುಗಳಿಂದ ಉಪೇಕ್ಷೆಯಂ ಮಾಡತಕ್ಕವನಲ್ಲವು ॥೨೫॥ ಕುಲಸ್ತ್ರೀಯಾದವಳಿಗೆ ಜಾರಸೌಖ್ಯವು ಸ್ವರ್ಗಪ್ರದವಲ್ಲ, ಯಶಸ್ಕರವಲ್ಲ, ಅಸಾರವಾದ್ದು, ಭಯಪ್ರದವಾದ್ದು, ಪರಲೋಕದಲ್ಲಿ ಭಯವನುಂಟುಮಾಡುವುದು. ಲೋಕದಲ್ಲಿ ನಿಂದಿತವಾದ್ದು ॥೨೬॥ ಎಲೈಸ್ತ್ರೀಯರುಗಳಿರಾ ಮನನದಿಂದಲೂ ದರ್ಶನದಿಂದಲೂ ಧ್ಯಾನದಿಂದಲೂ ಕೀರ್ತನದಿಂದಲೂ ನನ್ನಲ್ಲಿ ಚಿತ್ತವಿದ್ದರೆ ಹೇಗೋ ಹಾಗೆ ಸಮೀಪದಲ್ಲಿದ್ದರೆ ಆದಾರ್ಢ್ಯವಿರುವದಿಲ್ಲ, ಅದ್ದರಿಂದ ನಿಮ್ಮ ನಿಮ್ಮ ಮನೆಗಳಿಗೆ ನೀವು ನೀವು ನಡೆಯಿರಿ ॥೨೭॥ ಎಂದು ಈ ಪ್ರಕಾರವಾಗಿ ಶ್ರೀಕೃಷ್ಣನು ನುಡಿಯುತಿರಲಾಗಿ ಮನಸ್ಸಿಗೆ ಇಂಪಿಲ್ಲದ ಶ್ರೀಕೃಷ್ಣನ ಆ ಮಾತುಗಳಂ ಕೇಳಿ, ಗೋಪಸ್ತ್ರೀಯರುಗಳು ದುಃಖಿತರಾಗಿ, ಭಗ್ನಸಂಕಲ್ಪರಾಗಿ ಅಧಿಕವಾದ ಚಿಂತೆಯನೆಯ್ದಿದರು ॥೨೮॥ (ಅಪ್ಪಂತೆನೆ-) ಶೋಕದಿಂದ ಉಷ್ಣಂಗಳಾದ ಶ್ವಾಸಂಗಳಿಂದ ಒಣಗುವ ಅಧರೋಷ್ಠಂಗಳುಳ್ಳ

ಶುಷ್ಯದ್ಬಿಂಬಾಧರಾಣಿಚರಣೇನಭುವಂಲಿಖಂತ್ಯಃ । ಅಸ್ರೈರುಪಾತ್ತಮಷಿಭಿಃಕುಚಕುಂಕುಮಾ
ನಿತಸ್ಥುರ್ಮೃಜಂತ್ಯ ಉರುದುಃಖಭರಾಃಸ್ಮತೂಷ್ಣೀಂ ॥೨೯॥ ಪ್ರೇಷ್ಠಂಪ್ರಿಯೇತರಮಿವಪ್ರತಿ
ಭಾಷಮಾಣಂಕೃಷ್ಣಂತದರ್ಥವಿನಿವರ್ತಿತಸರ್ವಕಾಮಾಃ । ನೇತ್ರೇವಿಮೃಜ್ಯರುದಿತೋಪಹತೇಸ್ಮಕಿಂ
ಚಿತ್ಸಂರಂಭಗದ್ಗದಗಿರೋಬ್ರುವತಾನುರಕ್ತಾಃ ॥೩೦॥ ಗೋಪ್ಯಃ॥ ಮೈವಂವಿಭೋಽರ್ಹತಿಭವಾನ್ಗದಿ
ತುಂನೃಶಂಸಂಸಂತ್ಯಜ್ಯಸರ್ವವಿಷಯಾಂಸ್ತವಪಾದಮೂಲಂ । ಭಕ್ತಾಭಜಸ್ವದುರವಗ್ರಹಮಾ
ತ್ಯಜಾಸ್ಮಾನ್ದೇವೋಯಥಾದಿಪುರುಷೋಭಜತೇಮುಮುಕ್ಷೂನ್ ॥೩೧॥ ಯತ್ಪತ್ಯಪತ್ಯಸುಹೃದಾ

---

ಶೋಕಪಡೆಸೆಯಿಂದಾದ, ಶ್ವಸನೇನ-ಬಿಸುಸುಯ್ಯಿಕೆಯಿಂದ, ಶುಷ್ಯತ್ ಒಣಗುತ್ತಿರುವ, ಬಿಂಬಾಧರಾಣಿ-ತೊಂಡೆಯಹಂಣಿ ನಂತಿರುವತುಟಿಗಳುಳ್ಳ, ಮುಖಾನಿ-ಮೋರೆಗಳನ್ನು, ಅವಕೃತ್ವಾ-ಬಾಗಿಸಿಕೊಂಡು, ಚರಣೇನ-ಕಾಲಿನಿಂದ, ಭುವಂ-ನೆಲವನ್ನು, ಲಿಖಂತ್ಯಃ-ಗೀಚುತಲಿರುವರಾಗಿ, ಉಪಾತ್ತಮಷಿಭಿಃ-ಹೊಂದಲ್ಪಟ್ಟಕಾಡಿಗೆಯುಳ್ಳ, ಅಸ್ರೈಃ-ಕಂಣೀರುಗಳಿಂದ, ಕುಚಕುಂಕುಮಾನಿ-ಮೊಲೆಗಳಿಗೆಪಚ್ಚಿದ್ದಕೇಸರಗಂಧವನ್ನು, ಮೃಜಂತ್ಯಃ-ತೊಳೆಯುತಲಿರುವರಾಗಿಯೂ, ಉರುದುಃಖಭರಾಃ-ಹೆಚ್ಚಾದದುಃಖದಭಾರವುಳ್ಳವರಾಗಿಯೂ, ತೂಷ್ಣೀಂ-ಸುಮ್ಮನೆ,( ಮಾತಾಡದೆ ) ತಸ್ಥುಃ-ನಿಂತರು ॥೨೯॥ ಪ್ರಿಯೇತರಮಿವ-ಇಷ್ಟನಲ್ಲದವನಹಾಗೆ, ಪ್ರತಿಭಾಷಮಾಣಂ-ಪ್ರತ್ಯುತ್ತರವನ್ನು ಹೇಳುತಲಿರುವ, ಕೃಷ್ಣಂ-ಕೃಷ್ಣನನ್ನು ಕುರಿತು, ತದರ್ಥವಿನಿವರ್ತಿತಸರ್ವಕಾಮಾಃ-ತದರ್ಥ-ಕೃಷ್ಣನಿಗೋಸುಗ, ವಿನಿವರ್ತಿತ-ಅನುಭವಿಸದೇಬಿಡಲ್ಪಟ್ಟ-ಸರ್ವಕಾಮಾಃ-ಬೇಕಾದಸಕಲಸುಖಗಳುಳ್ಳವರಾದ್ದರಿಂದಲೇ, ರುದಿತೋಪಹತೇ-ಅಳುವಿನಿಂದಬಾಧಿಸಲ್ಪಟ್ಟ-ನೇತ್ರೇ-ಕಂಗಳನ್ನು, ವಿಮೃಜ್ಯ-ಉಜ್ಜಿಕೊಂಡು, ಕಿಂಚಿತ್-ಕೊಂಚವಾದ, ಸಂರಂಭ-ಸಿಟ್ಟಿನಿಂದ, ಗದ್ಗದಗಿರಃ-ಬಿಕ್ಕುಮಾತುಳ್ಳವರಾಗಿಯೂ, ಅನುರಕ್ತಾಃ ಅಕ್ಕರೆಯುಳ್ಳವರಾಗಿಯೂ, ಅಬ್ರುವತಸ್ಮ-ಹೇಳಿದರು ॥೩೦॥ (ಗೋಪೀವಾಕ್ಯವು) ವಿಭೋ-ವ್ಯಾಪಕನಾದಕೃಷ್ಣನೇ! ಭವಾನ್-ನೀನು, ನೃಶಂಸಂ-ಕ್ರೂರವಾಕ್ಯವನ್ನು, ಏವಂ-ಹೀಗೆ, ಗದಿತುಂ-ಹೇಳುವುದಕ್ಕೆ, ನಾರ್ಹತಿ-ಯೋಗ್ಯನಾಗಬೇಡ, ಸರ್ವವಿಷಯಾನ್-ಸಕಲಭೋಗಗಳನ್ನೂ, ಸಂತ್ಯಜ್ಯ-ಚನ್ನಾಗಿಬಿಟ್ಟು, ತವ-ನಿನ್ನ, ಪಾದಮೂಲಂ-ಅಡಿಗಳಬುಡವನ್ನು, ಭಕ್ತಾಃ-ಸೇವಿಸಿದವರಾದ ನಮ್ಮನ್ನು, ಭಜಸ್ವ-ಅನುಭವಿಸು, ದುರವಗ್ರಹ-ಮನಸ್ಸುಬಂದಂತೆಪ್ರವರ್ತಿಸುವನೇ! ಆದಿಪುರುಷಃದೇವಃ-ನಾರಾಯಣನು, ಭಜತಃ-ತನ್ನಂಸೇವಿಸುವ, ಮುಮುಕ್ಷೂನ್-ಮೋಕ್ಷಾರ್ಥಿಗಳನ್ನು, ಯಥಾ-ಹೇಗೋ, ತಥಾ-ಹಾಗೆ, ಅಸ್ಮಾನ್-ನಮ್ಮನ್ನು, ಮಾತ್ಯಜ-ಬಿಡಬೇಡ ॥೩೧॥ ಪತ್ಯಪತ್ಯಸುಹೃದಾಂ-ಗಂಡಸುಮಕ್ಕಳು ನಂಟರನ್ನು, ಅನುವೃತ್ತಿಃ ರಿತಿಯತ್-ಅನುಸರಿಸಿಯಿರೋಣವುಯಾವುದೋ, ತತ್-ಅದು, ಸ್ತ್ರೀಣಾಂ-ಹೆಂಗಳಿಗೆ, ಸ್ವಧರ್ಮಃ-ನಿಜಧರ್ಮವಾಗಿರುವುದು, ಇತಿ-ಹೀಗೆ, ಧರ್ಮವಿದಾ-ಧರ್ಮವನ್ನುಬಲ್ಲ, ತ್ವಯಾ-ನಿನ್ನಿಂದ, ಉಕ್ತಂ-ಹೇಳಲ್ಪಟ್ಟಿತು. ಉಪದೇಶಪದೇ-ಹೀಗೆಹೇಳುವುದಕ್ಕೆಸ್ಥಾನವಾದ, ಈಶೇ-ನಿ

---

ಮುಖಂಗಳಂ ಬಾಗಿಸಿಕೊಂಡು, ಪಾದಾಂಗುಷ್ಠದಿಂದ ಭೂಮಿಯಂಬರೆಯುತ್ತ, ಕಂಣಕಪ್ಪಿನಿಂದ ಮಿಶ್ರಂಗಳಾದ ಬಾಷ್ಪಂಗಳಿಂದ ಕುಚಂಗಳ ಕುಂಕುಮಂಗಳಂ ನೆನೆಯಿಸುವರಾಗಿ, ಮಹಾದುಃಖಮುಳ್ಳವರಾಗಿ, ಸುಮ್ಮನೆ ನಿಂತುಕೊಂಡರು ॥೨೯॥ ಪ್ರಿಯನಲ್ಲದೆ ಇರುವವನಂತೆ ಮಾತನಾಡುತಲಿರುವ ಪ್ರಿಯನಾದ ಕೃಷ್ಣನಂ ಕುರಿತು, ಅವನನಿಮಿತ್ತವಾಗಿ ಸರ್ವಕಾಮಂಗಳಂ ಬಿಟ್ಟು ಬಂದಗೋಪಿಯರು ರೋದನದಿಂದ ವಿವರ್ಣಂಗಳಾದ ನೇತ್ರಂಗಳಂ ಒರಸಿಕೊಂಡು ಸ್ವಲ್ಪರೋಷಯುಕ್ತರಾಗಿ ಅನುರಕ್ತರುಮಾಗಿ ನುಡಿದರು॥೩೦॥ (ಅದೆಂತೆನೆ-) ಎಲೈ, ಪ್ರಭುವಾದ ಶ್ರೀಕೃಷ್ಣನೇ! ಈರೀತಿಯಲ್ಲಿ ಕ್ರೂರವಾದ ವಾಕ್ಯವಂ ನೀನುಹೇಳಬೇಡ, ಸರ್ವವಿಷಯಂಗಳಂತ್ಯಜಿಸಿ ಭಕ್ತರಾಗಿ ನಿನ್ನಪಾದಮೂಲಕ್ಕೆ ಬಂದಿರುವ ನಮ್ಮಂ ನೀನುಬಿಡಬೇಡ, ಎದ್ದುಲಕ್ಷ್ಯನಾದ ಶ್ರೀಕೃಷ್ಣನೇ! ಪರಮಪುರುಷನಾದ ಪರಮೇಶ್ವರನು ಮೋಕ್ಷೇಚ್ಛುಗಳಾಗಿ ಭಜಿಸುವ ಭಕ್ತರನಂತೆ ನಮ್ಮಂ ತ್ಯಜಿಸಬೇಡ ॥೩೧॥ ಎಲೈಶ್ರೀಕೃಷ್ಣನೇ! ಪತಿಪುತ್ರಬಂಧುಮಿತ್ರರಂ ಸ್ತ್ರೀಯರುಗಳು ಉಪೇಕ್ಷಿಸಬಾರದೆಂದು ಧರ್ಮೋಪದೇಶವು ನಿನ್ನಿಂದಮಾಡಲ್ಪಟ್ಟದ್ದು ಸತ್ಯವೇಸರಿ, ಆದ್ದರಿಂದ ಪ್ರಿಯನೂ ಬಂಧುವೂ

ಮನುವೃತ್ತಿರಂಗಸ್ತ್ರೀಣಾಂಸ್ವಧರ್ಮಇತಿಧರ್ಮವಿದಾತ್ವಯೋಕ್ತಂ । ಅಸ್ತ್ವೇವಮೇತದುಪದೇಶ
ಪದೇತ್ವಯೀಶೇಪ್ರೇಷ್ಠೋಭವಾಂಸ್ತನುಭೃತಾಂಕಿಲಬಂಧುರಾತ್ಮಾ ॥೩೨॥ ಕುರ್ವಂತಿಹಿತ್ವಯಿರತಿಂಕು
ಶಲಾಸ್ಸ್ವಆತ್ಮನ್ನಿತ್ಯಂಪ್ರಿಯೇಪತಿಸುತಾದಿಭಿರಾರ್ತಿದೈಃಕಿಂ । ತನ್ನಃಪ್ರಸೀದಪರಮೇಶ್ವರಮಾಸ್ಮ
ಛಿಂದ್ಯಾಆಶಾಂಧೃತಾಂತ್ವಯಿಚಿರಾದರವಿಂದನೇತ್ರ ॥೩೩॥ ಚಿತ್ತಂಸುಖೇನಭವತಾಪಹೃತಂಗೃಹೇಷು
ಯನ್ನಿರ್ವಿಶತ್ಯುತಕರಾವಪಿಗೃಹ್ಯಕೃತ್ಯೇ । ಪಾದೌಪದಂನಚಲತಸ್ತವಪಾದಮೂಲಾದ್ಯಾಮಃಕಥಂ
ವ್ರಜಮಥೋಕರವಾಮಕಿಂವಾ ॥೩೪॥ ಸಿಂಚಾಂಗನಸ್ತ್ವದಧರಾಮೃತಪೂರಕೇಣಹಾಸಾವಲೋಕಕ
ಲಗೀತಜಹೃಚ್ಛಯಾಗ್ನಿಂ । ನೋಚೇದ್ವಯಂವಿರಹಜಾಗ್ನ್ಯುಪಯುಕ್ತದೇಹಾಧ್ಯಾನೇನಯಾಮಪದ

---

ಯಾವುದುಂಟಾದ, ತ್ವಯಿ-ನಿನ್ನಲ್ಲಿ, ಏತತ್-ಇದು, ಏವಂ-ಹೀಗೆ, ಅಸ್ತು-ಆಗಲಿ, ಹೇಅಂಗ-ಓಪ್ರಿಯನೇ! ಭವಾಂಸ್ತು-ನೀನಾದ
ರೋ, ತನುಭೃತಾಂ-ಪ್ರಾಣಿಗಳಿಗೆ, ಪ್ರೇಷ್ಠಃ-ಅತಿಶಯಿತನಾದ, ಬಂಧುಃ-ನಂಟನೂ, ಆತ್ಮಾ-ಸ್ವರೂಪವೂಆದವನು, ಕಿಲ-
ಅಲ್ಲವೆ, ॥೩೨॥ ಹೇಅರವಿಂದನೇತ್ರ-ಎಲೈಕಮಲಾಕ್ಷನಾದಕೃಷ್ಣನೇ! ಕುಶಲಾಃ-ಶಾಸ್ತ್ರನಿಪುಣರು, ಸ್ವೇಆತ್ಮನ್-ತಮ್ಮಆ
ತ್ಮನಾದ, ತ್ವಯಿ-ನಿನ್ನಲ್ಲಿ, ನಿತ್ಯಂ-ಸರ್ವಕಾಲದಲ್ಲಿಯೂ, ರತಿಂ-ಪ್ರೀತಿಯನ್ನು, ಹಿ-ಯಾವಕಾರಣದಿಂದ, ಕುರ್ವಂತಿ-
ಮಾಡುತಲಿರುವರೋ, ಆಕಾರಣದಿಂದ, ಪ್ರಿಯೈಃ-ಸುಖಕರವಾಗಿ ತೋರುತಲಿರುವರಾದರೂ, ಆರ್ತಿದೈಃ-ಪೀಡೆಯನ್ನುಕೊಡು
ತಲಿರುವ, ಪತಿಸುತಾದಿಭಿಃ ಗಂಡನುಮಕ್ಕಳುಮೊದಲಾದವರಿಂದ, ಕಿಂ-ಏನುಪ್ರಯೋಜನವಿರುವುದು; ತತ್-ಅದುದರಿಂದ, ನಃ-
ನಮಗೆ, ಪ್ರಸೀದ-ಪ್ರಸನ್ನನಾಗು. ಹೇಪರಮೇಶ್ವರ- ಎಲೈಮಹಾಪ್ರಭುವೇ! ತ್ವಯಿ-ನಿನ್ನಲ್ಲಿ, ಚಿರಾತ್-ಬಹುಕಾಲದಿಂದ,
ಧೃತಾಂ-ಧರಿಸಲ್ಪಟ್ಟ, ಆಶಾಂ-ನಮ್ಮಬಯಕೆಯನ್ನು, ಮಾಸ್ಮಛಿಂದ್ಯಾಃ-ಹರಿದುಹಾಕಬೇಡ ॥೩೩॥ ಯತ್-ಯಾವ, ಚಿತ್ತಂ-
ನಮ್ಮಮನಸ್ಸು, ಗೃಹೇಷು-ಗೃಹಕೃತ್ಯಗಳಲ್ಲಿ, ನಿರ್ವಿಶತಿ-ಈವರೆಗೂಸುಖವಾಗಿ ಪ್ರವೇಶಿಸುತಲಿತ್ತೋ, ತತ್-ಆನಮ್ಮಚಿತ್ತ
ವು, ಸುಖೇನ-ಸುಖಸ್ವರೂಪನಾದ, ಭವತಾ-ನಿನ್ನಿಂದ, ಅಪಹೃತಂ-ಕಸುಗೊಳ್ಳಲ್ಪಟ್ಟಿತು. ಉತ-ಮತ್ತು, ಗೃಹ್ಯಕೃತ್ಯೇ-
ಮನೆಕೆಲಸವಲ್ಲಿದ್ದ, ಕರಾವಪಿ-ಕೈಗಳೂಕೂಡ, ಅಪಹೃತೌ-ನಿನ್ನಿಂದಕಸುಗೊಳ್ಳಲ್ಪಟ್ಟುವು. ಪಾದೌ-ನಮ್ಮಅಡಿಗಳು, ಪದಂ-
ಹೆಜ್ಜೆಯನ್ನು, ನಚಲತಃ-ಕದಲಿಸಲಾರವು. ಅಹೋ-ಆಶ್ಚರ್ಯವು ತವ-ನಿನ್ನ, ಪಾದಮೂಲಾತ್-ಚರಣಸನ್ನಿಧಿಯಿಂದ, ಕ
ಥಂ-ಹೇಗೆ, ವ್ರಜಂ-ಗೋಕುಲವಂಕುರಿತು, ಯಾಮಃ-ಹೋದೇವು. ಕಿಂವಾಕರವಾಮ-ಏನನ್ನುಮಾಡುವೆವು ॥೩೪॥ ಹೇಅಂಗ-ಎ
ಲೈಪ್ರಿಯನಾದಕೃಷ್ಣನೇ! ತ್ವದಧರಾಮೃತಪೂರಕೇಣ-ನಿನ್ನತುಟಿಯಅಮೃತಪ್ರವಾಹದಿಂದ, ನಃ-ನಮ್ಮ, ಹಾಸಾವಲೋಕ-ನ
ಗೆಯಿಂಕೂಡಿದನೋಟದಿಂದಲೂ, ಕಲಗೀತ-ಅವ್ಯಕ್ತಮಧುರಗಾನದಿಂದಲೂ, ಜ-ಹುಟ್ಟಿದ, ಹೃಚ್ಛಯ-ಕಾಮವೆಂಬ, ಅಗ್ನಿಂ-
ಬೆಂಕಿಯನ್ನು, ಸಿಂಚ-ತೋಯಿಸಿನಂದಿಸು. ನೋಚೇತ್-ಹಾಗಿಲ್ಲದಿದ್ದರೆ, ವಯಂ-ನಾವು, ವಿರಹಜಾಗ್ನಿ-ನಿನ್ನನಗಲಿದುದರಿಂ

---

ಅಂತರಾತ್ಮನೂ ನೀನೇಸರಿ, ಎಲೈ, ಕೃಷ್ಣನೇ! ಶಾಸ್ತ್ರಜ್ಞರಾದವರು ನಿತ್ಯಪ್ರಿಯನಾದ ಆತ್ಮನಾದನಿನ್ನ
ಲ್ಲಿ ಪ್ರೇಮವಂ ಮಾಡುತ್ತಾರೆ ॥೩೨॥ ದುಃಖಪ್ರದರಾದ ಪತಿಪುತ್ರಾದಿಗಳಿಂದ ಏನುಫಲವು? ಎಲೈ, ಪರಮೇಶ್ವ
ರನೇ! ಆಕಾರಣದಿಂದ ನಮ್ಮಲ್ಲಿ ಪ್ರಸನ್ನನಾಗು, ಪದ್ಮನೇತ್ರನಾದ ಶ್ರೀಕೃಷ್ಣನೇ! ನಿನ್ನಲ್ಲಿ ಬಹುಕಾಲದಿಂ
ದ ಇರಿಸಲ್ಪಟ್ಟ ನಮ್ಮಅಪೇಕ್ಷೆಯಂ ವ್ಯರ್ಥವಂ ಮಾಡಬೇಡ ॥೩೩॥ ಸುಖಸ್ವರೂಪನಾದನಿನ್ನಿಂದ ನಮ್ಮಚಿ
ತ್ತವೃತ್ತಿಯು ಅಪಹೃತವಾಯಿತು, ಮನೆಗಳಲ್ಲಿ ಹೇಗೆಯಿರುವುದು, ನಮ್ಮಹಸ್ತಂಗಳುಗೃಹಕೃತ್ಯಂಗಳಲ್ಲಿ ಉ
ದ್ಯುಕ್ತಂಗಳಾಗುವುದಿಲ್ಲ, ನಿನ್ನಪಾದವಂಬಿಟ್ಟು ನಮ್ಮಪಾದಂಗಳು ಒಂದುಹೆಜ್ಜೆಯೂ ಹಿಂದಕ್ಕೆ ಹೋಗ್ಗು
ವುದಿಲ್ಲ, ನಾವು ವ್ರಜಕ್ಕೆ ಹೇಗೆಹೋಗುವೆವು, ನಾವುಯೇನಂ ಮಾಡುವೆವು ॥೩೪॥ ಎಲೈ ಕೃಷ್ಣನೇ! ಮುಗು
ಳುನಗೆಯಿಂದ ಯುಕ್ತವಾದ ನಿನ್ನನೋಟದಿಂದಲೂ ಮಧುರವಾದ ನಿನ್ನಗಾನದಿಂದಲೂ ಹುಟ್ಟಿದಕಾಮಾಗ್ನಿ
ಯಂ ನಿನ್ನಯ ಧರಾಮೃತಪ್ರವಾಹದಿಂದ ನೆನೆಯಿಸು, ಯಿಲ್ಲದೆಯಿದ್ದರೆ ನಿನ್ನವಿರಹದಿಂದ ಹುಟ್ಟಿದ ಕಾಮಾಗ್ನಿ

ಯೋಃಪದವೀಂಸಖೇತೇ ॥೩೫॥ ಯರ್ಹ್ಯಂಬುಜಾಕ್ಷತವಪಾದತಲಂರಮಾಯಾದತ್ತಕ್ಷಣಂಕ್ವಚಿದರಣ್ಯ
ಜನಪ್ರಿಯಸ್ಯ । ಅಸ್ಪ್ರಾಕ್ಷ್ಮತತ್ಪ್ರಭೃತಿನಾನ್ಯಸಮಕ್ಷಮಂಗಸ್ಥಾತುಂತ್ವಯಾಭಿರಮಿತಾಃಬತ
ಪಾರಯಾಮಃ ॥೩೬॥ ಶ್ರೀರ್ಯತ್ಪದಾಂಬುಜರಜಶ್ಚಕಮೇತುಲಸ್ಯಾಲಬ್ಧ್ವಾಪಿವಕ್ಷಸಿಪದಂಕಿಲಭೃತ್ಯ
ಜುಷ್ಟಂ । ಯಸ್ಯಾಃಸ್ವವೀಕ್ಷಣಕೃತೇನ್ಯಸುರಪ್ರಯಾಸಸ್ತದ್ವದ್ವಯಂಚತವಪಾದರಜಃಪ್ರಪ
ನ್ನಾಃ ॥೩೭॥ ತನ್ನಃಪ್ರಸೀದವೃಜಿನಾರ್ದನತೇಂಘ್ರಿಮೂಲಂಪ್ರಾಪ್ತಾವಿಸೃಜ್ಯವಸತೀಸ್ತ್ವದುಪಾ
ಸನಾಶಾಃ । ತ್ವತ್ಸುಂದರಸ್ಮಿತನಿರೀಕ್ಷಣತೀವ್ರಕಾಮತಪ್ತಾತ್ಮನಾಂಪುರುಷಭೂಷಣದೇಹಿದಾಸ್ಯಂ॥

---

ದುಂಟಾದಚಿಂತೆಯೆಂಬಬೆಂಕಿಯಿಂದ, ಉಪಯುಕ್ತದೇಹಾಃ-ಬಳಸಲ್ಪಟ್ಟದೇಹವುಳ್ಳವರಾಗಿ. ಧ್ಯಾನೇನ-ನಿನ್ನ ಭಾವನೆಯಿಂದ, ಸಖೇ-ಗೆಳೆಯನೇ! ತೇ-ನಿನ್ನ, ಪದಯೋಃ-ಚರಣಗಳ, ಪದವೀಂ-ದಾರಿಯನ್ನು ಕುರಿತು ಯಾಮ-ಹೋಗುವೆವು॥೩೫॥ಹೇಅಂಬುಜಾಕ್ಷ-ಎಲೈ ಕಮಲಲೋಚನನೇ! ಯರ್ಹಿ-ಯಾವಾಗ-ಅರಣ್ಯಜನಪ್ರಿಯಸ್ಯ-ಕಾಡುಜನಗಳೇ ಇಷ್ಟರಾಗಿಉಳ್ಳ, ತವ-ನಿನ್ನ ರಮಾಯಾಃ-ಲಕ್ಷ್ಮಿಗೆ, ಕ್ವಚಿತ್-ಒಂದೆಡೆಯಲ್ಲಿ ಅಥವಾ ಒಂದುಸಮಯದಲ್ಲಿ, ದತ್ತಕ್ಷಣಂ-ಕೊಡಲ್ಪಟ್ಟಉತ್ಸವವುಳ್ಳ, ಅಥವಾ ಕೊಡಲ್ಪಟ್ಟಸಮಯವುಳ್ಳ, ಪಾದತಲಂ-ಅಂಗಾಲನ್ನು, ಅಸ್ಪ್ರಾಕ್ಷ್ಮ-ಸ್ಪರ್ಶಮಾಡಿದೆವು. ತತ್ಪ್ರಭೃತಿ-ನಿನ್ನಚರಣಗಳನ್ನು ಹಿಡಿದದ್ದು ಮೊದಲುಗೊಂಡು ತ್ವಯಾ-ನಿನ್ನಿಂದ, ಅಭಿರಮಿತಾಃ-ಸರ್ವತ್ರ ಸಂತೋಷಗೊಳಿಸಲ್ಪಟ್ಟವರಾಗಿ, ಇರುವದರಿಂದ, ಅನ್ಯಸಮಕ್ಷಂ-ಇತರರಇದಿರಿನಲ್ಲಿ, ಸ್ಥಾತುಂ-ಇರುವುದಕ್ಕೂ ಕೂಡ,ನಪಾರಯಾಮಃ-ಶಕ್ತರಾಗೆವು. (ಇರಲಾರೆವು) ಬತ-ಅಯ್ಯೋ ॥೩೬॥ಯಸ್ಯಾಃ-ಯಾವಲಕ್ಷ್ಮಿಗೂ, ಸ್ವವೀಕ್ಷಣಕೃತೇ-ತನ್ನನ್ನು ನೋಡಲೋಸುಗ, ಅನ್ಯಸುರಪ್ರಯಾಸಃ-ಇತರದೇವತೆಗಳಿಗೆ ಪ್ರಯಾಸವಾಗುವಂತಾಗಿದೆಯೋ, ಸಾಶ್ರೀಃ-ಆಮಹಾಲಕ್ಷ್ಮಿಯು, ವಕ್ಷಸಿ-ನಿನ್ನಯೆದೆಯಲ್ಲಿ, ಪದಂ-ಮಲತಿಯನೋಜಿಲ್ಲದಸುಖವಸತಿಯನ್ನು, ಲಬ್ಧ್ವಾಪಿ-ಹೊಂದಿಯೂಕೂಡ, ಭೃತ್ಯಜುಷ್ಟಂ-ಸೇವಕರಿಂದ ಸೇವಿಸಲ್ಪಟ್ಟ, ಯತ್ಪದಾಂಬುಜರಜಃ-ಯಾವನಿನ್ನ ಅಡಿದಾವರೆಯರೇಣುವನ್ನು, ತುಲಸ್ಯಾಸಹ-ಮಲತಿಯಾದತುಲಸಿಯೊಡನೆ, ಚಕಮೇಕಿಲ-ಬಯಸಿದಳಲ್ಲವೇ? ತದ್ವತ್-ಆಲಕ್ಷ್ಮಿಯಹಾಗೆ, ವಯಂಚ-ನಾವೂಕೂಡ, ತವ-ನಿನ್ನ, ಪಾದರಜಃ-ಚರಣಧೂಳಿಯನ್ನು, ಪ್ರಪನ್ನಾಃ-ರಕ್ಷಕವೆಂದುನಂಬಿದವರಾದೆವು ॥೩೭॥ ಹೇವೃಜಿನಾರ್ದನ-ಆಪದುಃಖಪರಿಹಾರಕನಾದಕೃಷ್ಣನೇ! ತ್ವದುಪಾಸನಾಶಾಃ-ನಿನ್ನಂ ಸೇವಿಸುವುದರಲ್ಲಿ ಆಶೆಯುಳ್ಳವರಾದ್ದರಿಂದ, ವಸತೀಃ-ಮನೆಗಳನ್ನು, ವಿಸೃಜ್ಯ-ಬಿಟ್ಟು, ತೇ-ನಿನ್ನ, ಅಂಘ್ರಿಮೂಲಂ-ಚರಣಸನ್ನಿಧಿಯನ್ನು ಕುರಿತು, ಪ್ರಾಪ್ತಾಃ-(ಯೋಗಿಗಳಹಾಗೆ)ಬಂದುಸೇರಿದವರಾದೆವು. ಪುರುಷಭೂಷಣ-ಗಂಡುಸರಲ್ಲಿರತ್ನವಾದವನೇ! ತತ್-ಆಕಾರಣದಿಂದ, ತ್ವತ್... .ನಾಂ-ತ್ವತ್-ನಿನ್ನ, ಸುಂದರ-ಚಲುವಾದ, ಸ್ಮಿತ-ಕಿರುನಗೆಯುಳ್ಳ, ನಿರೀಕ್ಷಣ-ನೋಟದಿಂದಾದ, ತೀವ್ರಕಾಮ-ಚುರುಕಾದಬಯಕೆಯಿಂದ, ತಪ್ತಾತ್ಮನಾಂ-ಬಿಸಿಯಾದಮೈಯುಳ್ಳ ( ತಪದಿಂಕ್ಳೇಶವಾದಮೈಯುಳ್ಳ )

---

ಗೆ ಶರೀರವಂವಪ್ಪಿಸಿ ನಿನ್ನಧ್ಯಾನವಂ ಮಾಡಿಕೊಂಡು ಶರೀರವಂ ಬಿಡುವವರಾಗುತ್ತೇವೆ ॥೩೫॥ ಎಲೈ, ಕಮಲಲೋಚನನೇ, ಯಾವಾಗ ಅರಣ್ಯಜನಪ್ರಿಯನಾದ ನಿನ್ನಸಂಬಂಧಿಯಾದ ಮಹಾಲಕ್ಷ್ಮಿಗೂ ಉತ್ಸವಪ್ರದವಾದ, ನಿನ್ನಪಾದಮೂಲವಂ ನೋಡಿದೆವು. ಅದುಮೊದಲುಗೊಂಡು ಮನೋಹರನಾದ ನಿನ್ನಂಬಿಟ್ಟು ಮತ್ತೊಬ್ಬರಯೆದುರಿಗೆ ನಿಲ್ಲುವುದಕ್ಕೆ ನಾವು ಶಕ್ತರಲ್ಲ ॥೩೬॥ ಬ್ರಹ್ಮಾದಿಗಳು ಕೂಡ ಯಾವಲಕ್ಷ್ಮೀದೇವಿಯ ಕಟಾಕ್ಷವ ನಪೇಕ್ಷಿಸಿ ತಪಸ್ಸಂಗೆಯ್ವರೋ, ಆಮಹಾ ಲಕ್ಷ್ಮಿಯೂಕೂಡ ಭಕ್ತರಿಂದ ಸೇವಿತವಾದಯಾವನಿನ್ನ ಪಾದಪದ್ಮರಜಸ್ಸಂ ನಿನ್ನವಕ್ಷಸ್ಥಲದಲ್ಲಿ ವಾಸವಮಾಡುವಳಾದರೂ ತುಲಸೀದೇವಿಯೊಡನೆ ಅಪೇಕ್ಷಿಸುತ್ತಾಳೆಯೋ, ಹಾಗೆ ನಿನ್ನಪಾದರಜಸ್ಸನೆಯ್ದಿರುವೆವು ॥೩೭॥ ಎಲೈ ಪಾಪಪರಿಹಾರಕನಾದ ಶ್ರೀಕೃಷ್ಣನೇ! ಮನೆಗಳಂಬಿಟ್ಟು ನಿನ್ನಪಾದಮೂಲವನೆಯ್ದಿ ನಿನ್ನನ್ನೇ ಸೇವಿಸಬೇಕೆಂಬ ಆಶೆಯುಳ್ಳ ನಮ್ಮಲ್ಲಿಪ್ರಸನ್ನನಾಗು,ಸುಂದರವಾದ ನಿನ್ನನೋಟಗಳಿಂದ ಜನಿತವಾದ ಕಾಮದಿಂದ ತಪ್ತರಾದನಮಗೆ ದಾಸೀಭಾವವಂ ಕೊಡುವವನಾಗು ॥೩೮॥ ಎಲೈ ಕೃಷ್ಣನೇ? ಮುಂಗುರುಳುಗಳಿಂದ ಅಲಂಕೃತವಾದ ರತ್ನಕುಂಡಲಕಾಂ

ವೀಕ್ಷ್ಯಾಲಕಾವೃತಮುಖಂತವಕುಂಡಲಶ್ರೀಗಂಡಸ್ಥಲಾಧರಸುಧಂಹಸಿತಾವಲೋಕಂ । ದತ್ತಾಭ
ಯಂಚಭುಜದಂಡಯುಗಂವಿಲೋಕ್ಯವಕ್ಷಃಶ್ರಿಯೈಕರಮಣಂಚಭವಾಮದಾಸ್ಯಃ ॥೩೯॥ ಕಾ
ಸ್ತ್ರ್ಯಂಗತೇಕಲಪದಾಯತವೇಣುಗೀತಸಂಮೋಹಿತಾರ್ಯಚರಿತಾನ್ನಚಲೇತ್ತ್ರಿಲೋಕ್ಯಾಂ । ತ್ರೈಲೋ
ಕ್ಯಸೌಭಗಮಿದಂಚನಿರೀಕ್ಷ್ಯರೂಪಂಯದ್ಗೋದ್ವಿಜದ್ರುಮಮೃಗಾಃಪುಲಕಾನ್ಯಬಿಭ್ರನ್ ॥೪೦॥ ವ್ಯ
ಕ್ತಂಭವಾನ್ವ್ರಜಜನಾರ್ತಿಹರೋಭಿಜಾತೋದೇವೋಯಥಾದಿಪುರುಷಸ್ಸುರಲೋಕಗೋಪ್ತಾ । ತನ್ನೋ
ನಿಧೇಹಿಕರಪಂಕಜಮಾರ್ತಬಂಧೋತಪ್ತಸ್ತನೇಷುಚಶಿರಸ್ಸುಚಕಿಂಕರೀಣಾಂ ॥೪೧॥ಶ್ರೀಶುಕಃ॥ ಇತಿ

---

ನಃ-ನಮಗೆ, ದಾಸ್ಯಂ-ನಿನ್ನ ಸೇವೆಯನ್ನು (ದಾಸೀಭಾವವನ್ನು) ದೇಹಿ-ಕೊಡು॥೩೮॥ತವ-ನಿನ್ನ, ಕುಂಡಲಶ್ರೀಗಂಡಸ್ಥಲಾಧರಸುಧಂ-ಕುಂಡಲ-ಕರ್ಣಭೂಷಣಂಗಳ, ಶ್ರೀ-ಕಾಂತಿಯು, ಗಂಡಸ್ಥಲ-ಕೆನ್ನೆಗಳೂ, ಅಧರಸುಧಂ-ತುಟಿಯಲ್ಲಿಅಮೃತವೂ, ಉಳ್ಳಂಥಾ, ಹಸಿತಾವಲೋಕಂ-ನಗೆಯನೋಟವುಳ್ಳಂಥಾ, ಅಲಕಾವೃತಮುಖಂ-ಮುಂಗುರುಳ್ಗಳಿಂದ ಬಳಸಲ್ಪಟ್ಟಿರುವ ಮೊಗವನ್ನೂ, ದತ್ತಾಭಯಂ-ಕೊಡಲ್ಪಟ್ಟನಿರ್ಭಯತೆಯುಳ್ಳ, ಭುಜದಂಡಯುಗಂ ದಂಡಗಳಹಾಗಿರುವತೋಳುಗಳೆರಡನ್ನೂ, ವೀಕ್ಷ್ಯ-ನೋಡಿ, ಶ್ರಿಯೈಕರಮಣಂ-ಲಕ್ಷ್ಮಿಗೆಮುಖ್ಯಸಂತೋಷಕವಾದ, ವಕ್ಷಃ-ಎದೆಯನ್ನೂ, ವಿಲೋಕ್ಯ-ನೋಡಿ, ದಾಸ್ಯಃ-ಸೇವಕಿಯರು, ಭವಾಮ-ಆಗುವೆವು ॥೩೯॥ಅಂಗ-ಪ್ರಿಯನೇ! ತೇ-ನಿನ್ನ, ಕಲ-ಮಧುರವಾದ, ಪದ-ಸ್ಥಾನಭೇದಗಳಿಂದ (ತೂತುಗಳಮೆಟ್ಟುಗಳಿಂದ) ಆಯತ-ದೀರ್ಘವಾದ (ಷಡ್ಜಸ್ವರಕ್ಕೆ ಏರಿದ) ಪಾರಾಂತರ-ಅವ್ಯಕ್ತ-ಅಮೃತದಹಾಗಿರುವ, ವೇಣುಗೀತ-ಕೊಳಲಗಾನದಿಂದ, ಸಂಮೋಹಿತ-ಮೋಹಿಸಲ್ಪಟ್ಟವಳಾದ, ಕಾಸ್ತ್ರೀ-ಯಾವಹೆಂಗಸುತಾನೇ, ತ್ರಿಲೋಕ್ಯಾಂ-ಮೂರುಲೋಕಗಳಲ್ಲಿಯೂ, ಆರ್ಯಚರಿತಾತ್-ಉತ್ತಮವಾದಸ್ವಧರ್ಮದಹೆಸೆಯಿಂದ, ನಚಲೇತ್-ಜಾರಿಹೋಗದವಳು॥ ಯತ್-ಯಾವ ನಿನ್ನರೂಪವನ್ನು, ನಿರೀಕ್ಷ್ಯ-ನೋಡಿ, ಗೋದ್ವಿಜದ್ರುಮಮೃಗಾಃ-ಪಶುಗಳೂ ಹಕ್ಕಿಗಳೂ ಗಿಡಗಳೂ ಮೃಗಗಳೂಕೂಡ, ಪುಲಕಾನಿ-ರೋಮಾಂಚಗಳನ್ನು, ಅಬಿಭ್ರನ್-ಧರಿಸಿದವೋ, ತತ್-ಅಂಥಾ-ತ್ರೈಲೋಕ್ಯಸೌಭಗಂ - ಮೂರುಲೋಕಗಳಿಗೂ ಚಲುವಾದ (ಭಾಗ್ಯವಾದ-ಮಂಗಳವಾದ) ಇದಂಚ-ಈರೂಪವನ್ನೂ, ನಿರೀಕ್ಷ್ಯ-ನೋಡಿ, ಯಾವಹೆಂಗಸುತಾನೇ, ಸ್ವಧರ್ಮವನ್ನು ಬಿಟ್ಟುಬರಲಾರಳು ॥೪೦॥ ಸುರಲೋಕಗೋಪ್ತಾ-ದೇವಲೋಕಗಳಿಗೆರಕ್ಷಕನಾದ, ಆದಿಪುರುಷಃ ಕಾರಣಪುರುಷನಾದ, ದೇವಃ-ನಾರಾಯಣನು, ಯಥಾ-ಹೇಗೋ, ತಥಾ-ಹಾಗೆ, ಭವಾನ್-ನೀನು, ವ್ರಜಜನಾರ್ತಿಹರಃ-ಗೋಕುಲವಜನರ ಪೀಡೆಗಳನ್ನು ಪರಿಹರಿಸುವನಾಗಿ, ಜಾತಃ-ಹುಟ್ಟಿದವನೆಂಬು, ವ್ಯಕ್ತಂ-ಸ್ಪಷ್ಟವಾಗಿದೆ. ತತ್-ಆಕಾರಣದಿಂದ, ಆರ್ತಬಂಧೋ-ಪೀಡಿತರಿಗೆನೆಂಟನಾಗಿರುವಕೃಷ್ಣನೇ, ಕರಪಂಕಜಂ-ಕೈದಾವರೆಯನ್ನು, ಕಿಂಕರೀಣಾಂ-ಸೇವಕಿಯರಾದ, ನಃ-ನಮ್ಮ, ತಪ್ತಸ್ತನೇಷು ಬಿಸಿಯಾದಮೊಲೆಗಳಲ್ಲಿಯೂ, ಶಿರಸ್ಸುಚ-ತಲೆಗಳಲ್ಲಿಯೂ, ನಿಧೇಹಿ-ಇಡು ॥೪೧॥(ಶುಕವಚನವು.)ಯೋಗೇಶ್ವರೇಶ್ವರಃ-ಯೋಗಿಗಳಿ

---

ತಿಯಿಂದ ಯುಕ್ತವಾದ ಅಧರಾಮೃತ ಸಮೇತವಾದ ನಿನ್ನಮುಖವಂ, ಅಭಯಪ್ರದವಾದ ನಿನ್ನಬಾಹುಯುಗ್ಮವಂ, ಮಹಾ ಲಕ್ಷ್ಮಿಗೆ ಮುಖ್ಯಸ್ಥಳವಾದ ನಿನ್ನವಕ್ಷಸ್ಥಳವಂ, ಸಹ ನೋಡಿ ನಿನಗೆದಾಸಿಯರಾಗುತ್ತೇವೆ ॥೩೯॥ ಎಲೈ ಶ್ರೀಕೃಷ್ಣನೇ? ಮಧುರವಾದ ಪದಂಗಳುಳ್ಳ, ದೀರ್ಘವಾದ ಸ್ವರಾಲಾಪಮುಳ್ಳ, ನಿನ್ನ ಗಾನದಿಂದ ಮೋಹಿತಳಾಗಿ ಯಾವಸ್ತ್ರೀಯು ಸ್ವಧರ್ಮವಂ ಬಿಡದೆಯಿರುವಳು? ಲೋಕತ್ರಯಮೋಹಕವಾದ ನಿನ್ನ ಸೌಂದರ್ಯವಂನೋಡಿ ಗೋವುಗಳು ಪಕ್ಷಿಗಳು ವೃಕ್ಷಂಗಳು ಮೃಗಂಗಳು ಸಹ ಮೋಹಿತಗಳಾಗಿರೋಮಾಂಚಯುಕ್ತವಾಗುತ್ತವೆ ॥೪೦॥ ಎಲೈನಾಥನೇ! ನೀನು ವ್ರಜದಲ್ಲಿರುವ ಜನರ ಕಷ್ಟಂಗಳು ಪರಿಹರಿಸಲೋಸುಗ ಆವಿರ್ಭವಿಸಿಯಿದ್ದೀಯೆ, ನಿಶ್ಚಯವು. ದೇವರಕ್ಷಕನಾದ ಆದಿಪುರುಷನಂತೆ ನೀನು ಜನಿಸಿಯಿದ್ದೀಯೆ. ದೀನಬಂಧುವಾದ ಶ್ರೀಕೃಷ್ಣನೇ! ಕಿಂಕರಿಯರಾದ ನಮ್ಮ ತಪ್ತಂಗಳಾದ ಸ್ತನಂಗಳಲ್ಲಿಯೂ ಶಿರಸ್ಸುಗಳಲ್ಲಿಯೂ ಸಹ ನಿನ್ನಹಸ್ತಕಮಲವನ್ನಿರಿಸು ॥೪೧॥ ಈ ಪ್ರಕಾರಂಗಳಾದ ಗೋಪಸ್ತ್ರೀಯರ ದೀನವಾಕ್ಯವಂಕೇಳಿ, ಯೋಗೀಶ್ವರನಾದ ಆತ್ಮಾರಾಮನಾದ ಶ್ರೀಕೃಷ್ಣನು ದಯಾಯುಕ್ತನಾಗಿ ನಗುತ ಆವರೊಡನೆ ರಮಿಸಿ

ವಿಕ್ಲಬಿತಂತಾಸಾಂಶ್ರುತ್ವಾಯೋಗೇಶ್ವರೇಶ್ವರಃ। ಪ್ರಹಸ್ಯಸದಯಂಗೋಪೀರಾತ್ಮಾರಾಮೋಪ್ಯರೀರಮತ ॥೪೨॥ ತಾಭಿಸ್ಸಮೇತಾಭಿರುದಾರಚೇಷ್ಟಿತಃಪ್ರಿಯೇಕ್ಷಣೋತ್ಫುಲ್ಲಮುಖೀಭಿರಚ್ಯುತಃ ।ಉದಾರಹಾಸದ್ವಿಜಕುಂದದೀಧಿತಿರ್ವ್ಯರೋಚತೈಣಾಂಕಇವೋಡುಭಿರ್ವೃತಃ ॥೪೩॥ ಉಪಗೀಯಮಾನಉದ್ಗಾಯನ್ವನಿತಾಶತಯೂಥಪಃ । ಮಾಲಾಂಬಿಭ್ರದ್ವೈಜಯಂತೀಂವ್ಯಚರತ್ಸವನಾದ್ವನಂ ॥೪೪॥ ನದ್ಯಾಃಪುಳಿನಮಾವಿಶ್ಯಗೋಪೀಭಿರ್ಹೆಮವಾಲುಕಂ ।ಜುಷ್ಟಂತತ್ತರಳಾಂಭೋಜಕುಮುದಾಮೋದವಾಯುನಾ॥೪೫॥ ಬಾಹುಪ್ರಸಾರಪರಿರಂಭಕರಾಲಕೋರುನೀವೀಸ್ತನಾಲಭನನರ್ಮನಖಾಗ್ರಪಾತೈಃ। ಕ್ಷ್ವೇಳಾವಲೋಕಹಸಿತೈರ್ವ್ರಜಸುಂದರೀಣಾಮುತ್ತಂಭಯನ್ರತಿಪತಿಂರಮಯಾಂಚಕಾರ ॥೪೬॥

---

ಡೆಯರಿಗೆ ನಿಯಾಮಕನಾದ, (ಸಂಗತವಾದಯುಕ್ತಿಧ್ಯಾನವುಳ್ಳವರಲ್ಲಿಕ್ರೀಷ್ಟನಾದ) ಕೃಷ್ಣನು, ತಾಸಾಂ-ಆಗೋಪಸ್ತ್ರೀಯರ, ವಿಕ್ಲಬಿತಂ-ಪರವಶವಮಾತನ್ನು, ಶ್ರುತ್ವಾ-ಕೇಳಿ, ಪ್ರಹಸ್ಯ-ಹೆಚ್ಚಾಗಿನಕ್ಕು, ಸದಯಂ-ದಯೆಯಿಂದಕೂಡೋಣವು ಹೇಗೋ ಹಾಗೆ, ಆತ್ಮಾರಾಮೋಪಿ-ತನ್ನಲ್ಲಿಯೇತಾನುಕ್ರೀಡಿಸಿತೃಪ್ತನಾಗಿರುವನಾದರೂ, ಗೋಪೀಃ-ಗೊಲ್ಲತಿಯರನ್ನು, ಅರೀರಮತ್-ರಮಿಸಗೊಳಿಸಿದನು (ಆಡಿಸಿದನು)॥೪೨॥ಉದಾರಚೇಷ್ಟಿತಃ-ಧಾರಾಳವಾದಲೀಲೆಯುಳ್ಳಂಥಾ,ಉದಾರಹಾಸದ್ವಿಜಕುಂದದೀಧಿತಿಃ-ಉದಾರ-ಅತಿಶಯವಾದ, ಹಾಸ-ನಗೆಯುಳ್ಳ, ದ್ವಿಜಕುಂದ-ಮೊಲ್ಲೆಯಮೊಗ್ಗುಗಳಂತಿರುವಹಲ್ಲುಗಳ, ದೀಧಿತಿಃ-ಕಾಂತಿಯುಳ್ಳ, ಅಚ್ಯುತಃ-ಶ್ರೀಕೃಷ್ಣನು, ಸಮೇತಾಭಿಃ-ಬಂದಂಥಾ, ಪ್ರಿಯೇಕ್ಷಣೋತ್ಫುಲ್ಲಮುಖೀಭಿಃ-ಪ್ರಿಯ-ಇಷ್ಟನಾದ ಪುರುಷನನ್ನು ಈಕ್ಷಣ-ನೋಡುವುದರಿಂದ, ಉತ್ಫುಲ್ಲ-ಅರಳಿದ (ವಿಕಾಸವುಳ್ಳ) ಮುಖೀಭಿಃ-ಮೋರೆಗಳುಳ್ಳ, ತಾಭಿಸ್ಸಮಂ-ಆಗೊಲ್ಲತಿಯರಿಂದ, ವೃತಸ್ಸನ್-ಬಳಸಲ್ಪಟ್ಟವನಾಗಿ, ಉಡುಭಿಃ-ನಕ್ಷತ್ರಗಳಿಂದ, ವೃತಃ-ಬಳಸಲ್ಪಟ್ಟ, ಏಣಾಂಕಇವ-ಚಂದ್ರನಂತೆ ವ್ಯರೋಚತ-ವಿಶೇಷವಾಗಿ ಬೆಳಗಿದನು, ॥೪೩॥ ವನಿತಾಶತಯೂಥಪಃ-ನೂರಾರುಹೆಂಗಳ ತಂಡಗಳಿಗೆ ಪಾಲಕನಾದ ಕೃಷ್ಣನು (ಹೆಣ್ಣಾನೆಗಳ ಹಿಂಡಿಗೆ ಪಾಲಕವಾದ ಗಂಡುಸಲಗಾನೆಯಂತೆ ಎಂದುಧ್ವನ್ಯರ್ಥವು) ಉಪಗೀಯಮಾನಃ-ಹೆಂಗಳಿಂದ ಬಳಿಯಲ್ಲಿ ಗಾನಮಾಡಲ್ಪಡುತಿರುವನಾಗಿಯೂ, ಉದ್ಗಾಯನ್-ಅಧಿಕವಾಗಿ ಹಾಡುತಲಿರುವನಾಗಿಯೂ, ವೈಜಯಂತೀಂ-ವೈಜಯಂತಿಯೆಂಬ ವನಮಾಲೆಯನ್ನು, ಬಿಭ್ರತ್-ಧರಿಸಿದವನಾದ, ಸಃ-ಆಕೃಷ್ಣನು, ವನಾತ್-ಅರಣ್ಯದಿಂದ, ವನಂ-ಮತ್ತೊಂದು ವನವನ್ನು ಕುರಿತು, (ತೋಟದಿಂದ ತೋಟಕ್ಕೆ) ವ್ಯಚರತ್-ವಿಶೇಷವಾಗಿ ಸಂಚರಿಸಿದನು, ॥೪೪॥ ತತ್ತ. ....... ಯುನಾ-ತತ್-ಆ ಯಮುನಾತರಂಗಗಳಿಂದ, ತರಳ-ಕದಲುತಲಿರುವ, ಅಂಭೋಜ-ತಾವರೆಗಳ, ಅಥವಾ-ತತ್-ಆ, ತರಳ-ಚಂಚಲವಾದ, ಅಂಭಃ-ನೀರಿನಲ್ಲಿ, ಜ-ಹುಟ್ಟಿದ, ಕುಮುದ-ಬಿಳುನೈದಿಲೆಗಳ, ಆಮೋದ-ಪರಿಮಳವುಳ್ಳ, ವಾಯುನಾ-ಗಾಳಿಯಿಂದ, ಜುಷ್ಟಂ-ಸೇವಿಸಲ್ಪಟ್ಟದ್ದಾಗಿಯೂ, ಹೇಮವಾಲುಕಂ-ಭಂಗಾರದ ಪುಡಿಯಂತಿರುವ ಮಳಲುಳ್ಳ, ನದ್ಯಾಃ-ಯಮುನೆಯ, ಪುಳಿನಂ-ತೊಯಿನೆಯನ್ನು, (ಮರಳತಿಟ್ಟೆಯನ್ನು) ಗೋಪೀಭಿಸ್ಸಹ-ಗೊಲ್ಲತಿಯರೊಡನೆ, ಆವಿಶ್ಯ-ಅಧಿಷ್ಠಿಸಿ (ಹೊಕ್ಕು ಕುಳಿತು) ॥೪೫॥ ಬಾಹು---ಪಾತೈಃ-ಬಾಹುಪ್ರಸಾರ-ಕೈಗಳಂ ಅಗಲಿಸಿ ಚಾಚುನಿಕೆ,ಪರಿರಂಭ-ಅಪ್ಪಿಕೊಳ್ಳುವಿಕೆ, ಕರ-ಕೈಗ

---

ದನು ॥೪೨॥ ಉದಾರಚರಿತ್ರವುಳ್ಳ ಮನೋಹರವಾದ ಹಾಸದಿಂದ ಪ್ರಕಾಶಿಸುವದಂತ ಕಾಂತಿಯುಳ್ಳ ಶ್ರೀಕೃಷ್ಣನು, ತನ್ನ ಸವಿನೋಟಗಳಿಂದ ವಿಕಸಿತವಾದ ಮುಖವುಳ್ಳ ಸ್ತ್ರೀಸಮೂಹಂಗಳಿಂದ ಯುಕ್ತನಾಗಿ ನಕ್ಷತ್ರಗಳಿಂದ ಯುಕ್ತನಾದಚಂದ್ರನಂತೆ ಪ್ರಕಾಶಿಸಿದನು ॥೪೩॥ ಸ್ತ್ರೀಯರುಗಳಿಂದ ಗಾನಂಗೆಯ್ಯಲ್ಪಡುವನಾಗಿ ತಾನೂ ಗಾನಂಗೆಯ್ಯುತ ಸ್ತ್ರೀಶತಂಗಳಿಂ ಯುಕ್ತನಾಗಿ ವೈಜಯಂತೀಮಾಲೆಯಂ ಧರಿಸಿದವನಾಗಿ ಆಕೃಷ್ಣನು ವನದಿಂದ ವನವಂ ಸಂಚರಿಸಿದನು ॥೪೪॥ ಶೀತಳವಾದ ಮಳಲುಳ್ಳ ನದಿಯ ಸೈಕತಂಗಳಲ್ಲಿ ನೈದಿಲೆಗಳ ಪರಿಮಳದಿಂ ಯುಕ್ತವಾದ ವಾಯುವಿನಿಂದ ರಮಣೀಯವಾದ ಯಮುನಾನದಿಯ ತೀರದಲ್ಲಿ ॥೪೫॥ ಶ್ರೀಕೃಷ್ಣನು ಬಾಹುಗಳಂ ಪ್ರಸರಿಸಿಕೊಂಡು ಆಲಿಂಗನಂಗೆಯ್ಯುತ ಹಸ್ತಂಗಳಂ ಹಿಡಿದುಕೊಂಡು, ಕೇಶಂಗಳಂಪಿಡಿದು ಸ್ತನಂಗಳ ಸ್ಪರ್ಶನವಂಮಾಡುತ್ತ, ನಖಕ್ಷತಂಗಳಂ ಗೆಯ್ಯುತ, ಕ್ರೀಡೆಯಿಂದಲೂ ನೋಟಂಗಳಿಂದಲೂ ಮುಗುಳುನಗೆಯಿಂದಲೂ ಸಹ ಗೋಪಸ್ತ್ರೀಯರುಗಳಿಗೆ ಕಾಮೋದ್ದೀಪನವಂ ಮಾಡುತ್ತ,

ಏವಂಭಗವತಃಕೃಷ್ಣಾಲ್ಲಬ್ಧಮಾನಾಮಹಾತ್ಮನಃ । ಸ್ವಾತ್ಮಾನಂಮೇನಿರೇಸ್ತ್ರೀಣಾಂಮಾನಿನ್ಯೋ
ಭ್ಯಧಿಕಂಭುವಿ ॥೪೭॥ ತಾಸಾಂತತ್ಸೌಭಗಮದಂವೀಕ್ಷ್ಯಮಾನಂಚಕೇಶವಃ । ಪ್ರಶಮಾಯಪ್ರಸಾ
ದಾಯತತ್ರೈವಾಂತರಧೀಯತ. ॥೪೮॥

ಇತಿಶ್ರೀಮದ್ಭಾಗವತೇ ದಶಮಸ್ಕಂಧೇಏಕೋನತ್ರಿಂಶೋಧ್ಯಾಯಃ.

---

ಳಿಂದ ಅಧರಾಕ್ಯೈಗಳನ್ನು, ಅಲಕ-ಕುರುಳನ್ನು, ಊರು-ತೊಡೆಗಳನ್ನು, ನೀವೀ-ಸೆರಗಿನಮುಡಿಯನ್ನು, ಸ್ತನ-ಮೊಲೆಗಳನ್ನು, ಆಲಭನ-ಸೋಂಕುವಿಕೆ, ನರ್ಮ-ನಗೆಸರಸಮಾತು, ಹಾಸ್ಯಸಖಾಗ್ರಪಾತೈಃ- ಉಗುರುಕೊನೆಗಳಿಂತಗುಲಿಸುವಿಕೆ ಇವುಗಳಿಂದಲೂ, ಕ್ಷ್ವೇಳ್ಯಾ-ಕ್ರೀಡೆಯಿಂದಲೂ, ಅವಲೋಕ-ನೋಟಗಳಿಂದಲೂ, ಹಸಿತೈಃ-ನಗುವುದರಿಂದಲೂ, ವ್ರಜಸುಂದರೀಣಾಂ-ಗೋಕುಲದಚಲುವೆಯರಿಗೆ, ರತಿಪತಿಂ-ಕಾಮನನ್ನು, ಉತ್ತಂಭಯನ್-ಕೆರಳಿಸುವನಾಗಿ, ರಮಯಾಂಚಕಾರ-ರಮಿಸಗೊಳಿಸಿದನು ಅಥವಾ ರಮಿಸಿದನು (ಸಂತಸದಿಂದಾಡಿಸಿ ಆಡಿದನು)॥೪೬॥ ಏವಂ-ಹೀಗೆ, ಮಹಾತ್ಮನಃ-ಮಹಾಪುರುಷನಾದ, ಭಗವತಃ-ಷಡ್ಗುಣೈಶ್ವರ್ಯವುಳ್ಳ, ಕೃಷ್ಣಾತ್-ಶ್ರೀಹರಿಯುದೆಸೆಯಿಂದ, ಲಬ್ಧಮಾನಾಃ-ಪಡೆಯಲ್ಪಟ್ಟಗೌರವವುಳ್ಳವರಾದ (ಹೆಮ್ಮೆಯುಳ್ಳ) ಮಾನಿನ್ಯಃ-ಹೆಂಗಳು, ಭುವಿ-ಭೂಲೋಕದಲ್ಲಿ, ಸ್ವಾತ್ಮಾನಂ-ತಮ್ಮನ್ನು, ಸ್ತ್ರೀಣಾಂ-ಹೆಂಗಳೊಳಗೆ, ಅಭ್ಯಧಿಕಂ-ಶ್ರೇಷ್ಠರಾದ್ದನ್ನಾಗಿ (ತಾವೇ ಉತ್ತಮರೆಂದು) ಮೇನಿರೇ-ತಿಳಿದರು॥೪೭॥ ಕೇಶವಃ-ಕೃಷ್ಣನು, ತಾಸಾಂ-ಆಗೋಪ್ತಿಯರ, ತತ್-ಆ, ಸೌಭಗಮದಂ-ಸೌಭಾಗ್ಯದಕೊಬ್ಬನ್ನು, ಮಾನಂಚ-ತಾವೇಉತ್ತಮರೆಂಬಗರ್ವವನ್ನು, ವೀಕ್ಷ್ಯ-ನೋಡಿ, ಪ್ರಶಮಾಯ-ಅದಕ್ಕೆ ಶಾಂತಿಯುಂಟಾಗಲೋಸುಗವೂ, ಪ್ರಸಾದಾಯ-ತನ್ನಅನುಗ್ರಹವುಂಟಾಗಲೋಸುಗವೂ (ಚಿತ್ತಶುದ್ಧಿಯಾಗುವುದಕ್ಕೆ) ತತ್ರೈವ-ಅಲ್ಲಿಯೇ, ಅಂತರಧೀಯತ-ಕಾಣಿಸದಂತೆಅಡಗಿದನು ॥೪೮॥

ಇತಿಶ್ರೀಮದ್ಭಾಗವತೇ ದಶಮಸ್ಕಂಧೇ ಏಕೋನತ್ರಿಂಶೋಧ್ಯಾಯಃ-

---



ರಮಿಸಿದನು ॥೪೬॥ ಈರೀತಿಯಲ್ಲಿ ಭಗವಂತನಾದ ಶ್ರೀಕೃಷ್ಣನಿಂದ ಬಹುಮಾನಿತರಾಗಿ ಗೋಪಸ್ತ್ರೀಯರುಗಳು ಲೋಕದಲ್ಲಿ ಸ್ತ್ರೀಯರುಗಳೊಳಗೆ ತಾವೇ ಸೌಂದರ್ಯಶಾಲಿಗಳು, ತಮ್ಮನ್ನೇ ಶ್ರೀಕೃಷ್ಣನು ವರಿಸಿಯಿದಾನೆ, ಎಂದು ತಿಳಿದುಕೊಂಡರು ॥೪೭॥ ಶ್ರೀಕೃಷ್ಣನು ಆಸ್ತ್ರೀಯರುಗಳ ಸೌಂದರ್ಯಮದವಂನೋಡಿ ಈಮದಗರ್ವ ಪರಿಹಾರಾರ್ಥವಾಗಿಯೂ ಅನುಗ್ರಹಾರ್ಥವಾಗಿಯೂ ಅಲ್ಲಿಯೇ ಅಂತರ್ಧಾನವನೆಯ್ದಿದನು. ॥೪೮॥

ಇಂತು ಶುಕಮುನಿಯು ಪರೀಕ್ಷಿದ್ರಾಜನಿಗೆ ನಿರೂಪಿಸಿದನೆಂದು ಸೂತಪೌರಾಣಿಕನು ನೈಮಿಶಾರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಹೇಳಿದನೆಂಬಲ್ಲಿಗೆ ಶ್ರೀಮನ್ಮಹೀಶೂರಪುರವರಾಧೀಶ ಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜ ವಿರಚಿತವಪ್ಪ ಶ್ರೀಭಾಗವತದ ಶ್ರೀಕೃಷ್ಣರಾಜ ವಾಣೀವಿಲಾಸವು ಎಂಬಕರ್ಣಾಟಕ ಭಾಷಾವ್ಯಾಖ್ಯಾನದಲ್ಲಿ ದಶಮಸ್ಕಂಧದೊಳು ೨೯ನೆಯ ಅಧ್ಯಾಯವು ಸಂಪೂರ್ಣವಾದುದು.

ಅಂತರ್ಹಿತೇಭಗವತಿಸಹಸೈವವ್ರಜಾಂಗನಾಃ । ಅತಪ್ಯಂಸ್ತಮಚಕ್ಷಾಣಾಃಕರಿಣ್ಯಇವಯೂಥಪಂ ॥೧॥ ಗತ್ಯಾನುರಾಗಸ್ಮಿತವಿಭ್ರಮೇಕ್ಷಿತೈರ್ಮನೋರಮಾಲಾಪವಿಹಾರವಿಭ್ರಮೈಃ । ಆಕ್ಷಿಪ್ತಚಿತ್ತಾಃಪ್ರಮದಾರಮಾಪತೇಸ್ತಾಸ್ತಾವಿಚೇಷ್ಟಾಜಗೃಹುಸ್ತದಾತ್ಮಿಕಾಃ ॥೨॥ ಗತಿಸ್ಮಿತಪ್ರೇಕ್ಷಣಭಾಷಣಾದಿಷುಪ್ರಿಯಾಃಪ್ರಿಯಸ್ಯಪ್ರತಿರೂಢಮೂರ್ತಯಃ । ಅಸಾವಹಂತ್ವಿತ್ಯಬಲಾಸ್ತದಾತ್ಮಿಕಾನ್ಯವೇದಿಷುಃಕೃಷ್ಣವಿಹಾರವಿಭ್ರಮಾಃ ॥೩॥ ಗಾಯಂತ್ಯಉಚ್ಚೈರಮುಮೇವಸಂಗತಾವಿಚಿಕ್ಯುರುನ್ಮ

---

೩೦ನೆಯಅಧ್ಯಾಯದ ಪ್ರತಿಪದಟೀಕೆ.

ಭಗವತಿ-ಕೃಷ್ಣನು, ಅಂತರ್ಹಿತೇಸತಿ-ಕಾಣಿಸದವನಾಗುತಲೂ, ವ್ರಜಾಂಗನಾಃ-ಗೋಪಸ್ತ್ರೀಯರು, ತಂ-ಆಕೃಷ್ಣನನ್ನು, ಅಚಕ್ಷಾಣಾಃ-ನೋಡದೇಯಿರುವವರಾದ್ದರಿಂದಲೇ, ಯೂಥಪಂ-ಗಂಡಾನೆಯನ್ನು, ಕಾಣದೆಯಿರುವ, ಕರಿಣ್ಯಇವ, ಹೆಣ್ಣಾನೆಗಳಹಾಗೆ, ಸಹಸೈವ-ಬೇಗನೆ, ಅತಪ್ಯನ್-ಅನುತಾಪಗೊಂಡರು ॥೧॥ ರಮಾಪತೇಃ-ಲಕ್ಷ್ಮೀಪತಿಯಾದಕೃಷ್ಣನ, ಗತ್ಯಾ-ನಡಿಕೆಯಿಂದಲೂ, ಅನುರಾಗಸ್ಮಿತ-ಅಕ್ಕರೆಯಿಂದಲೂ ಕಿರುನಗೆಯಿಂದಲೂ, ವಿಭ್ರಮೇಕ್ಷಿತೈಃ-ವಿಲಾಸದಿಂಕೂಡಿದನೋಟಗಳಿಂದಲೂ, ಮನೋಹರಾಲಾಪವಿಹಾರವಿಭ್ರಮೈಃ-ಮನೋಹರ-ಕಾಂತಗಳಾದ, ಆಲಾಪ-ಮಾತುಗಳಿಂದಲೂ, ವಿಹಾರ-ಕ್ರೀಡೆಗಳಿಂದಲೂ, ವಿಭ್ರಮೈಃ-ವಿನೋದಗಳಿಂದಲೂ, ಆಕ್ಷಿಪ್ತಚಿತ್ತಾಃ-ಎಳೆಯಲ್ಪಟ್ಟಮನಸ್ಸುಳ್ಳವರಾದ, ಪ್ರಮದಾಃ-ಹೆಚ್ಚಾದಕಾಮಬಲವುಳ್ಳಹೆಂಗಳು, ತದಾತ್ಮಿಕಾಸ್ಸತ್ಯಃ-ಆಕೃಷ್ಣನಲ್ಲಿಮನಸ್ಸುಳ್ಳವರಾಗಿ, ವಿವಿಧಾಃ-ಹಲವುಬಗೆಯಾದ, ಚೇಷ್ಟಾಃ-ಕೃಷ್ಣಲೀಲೆಗಳನ್ನು, ಜಗೃಹುಃ-ತಾವೂಗ್ರಹಿಸಿಅನುಭವಿಸಿಆಡಿದರು॥೨॥ ಪ್ರಿಯಸ್ಯ-ಇಷ್ಟನಾದಕೃಷ್ಣನ, ಗತಿಸ್ಮಿತಪ್ರೇಕ್ಷಣಭಾಷಣಾದಿಷು ಗತಿ-ನಡಿಕೆ, ಸ್ಮಿತ-ಕಿರುನಗೆ, ಪ್ರೇಕ್ಷಣ-ಅತಿಶಯವಾದನೋಟ, ಭಾಷಣ-ಸಲ್ಲಾಪ, ಆದಿಷು-ಮುಂತಾದವುಗಳಲ್ಲಿ, ಪ್ರತಿರೂಢಮೂರ್ತಯಃ-ಪ್ರವೇಶಿಸಿನಿಂತಮನಸ್ಸುಳ್ಳವರಾದ್ದರಿಂದಲೇ, ಕೃಷ್ಣವಿಹಾರವಿಭ್ರಮಾಃ-ಕೃಷ್ಣನಕ್ರೀಡೆಗಳಹಾಗೆವಿಲಾಸಗಳುಳ್ಳವರಾದ,ಪ್ರಿಯಾಃ-ಇಷ್ಟೆಯರಾದ, ಅಬಲಾಃ-ಹೆಂಗಳು,ತದಾತ್ಮಿಕಾಸ್ಸತ್ಯಃ-ತನ್ಮಯಿಯರಾಗಿ, ಅಸೌ-ಈಕೃಷ್ಣನೇ, ಅಹಂ-ನಾನು, ಇತಿ-ಹೀಗೆ, ನ್ಯವೇದಿಷುಃ-ಒಬ್ಬರಿಗೊಬ್ಬರುತಿಳಿಸಿಕೊಂಡರು॥೩॥

---

೩೦ನೆಯ ಅಧ್ಯಾಯವು.

ಶ್ರೀಧರೀಯಶ್ಲೋಕಃ॥ ತ್ರಿಂಶೇವಿರಹಸಂತಪ್ತಗೋಪೀಭಿಃಕೃಷ್ಣಮಾರ್ಗಣಂ । ಉನ್ಮತ್ತವನ್ನಿಯತಂಭ್ರಮತೀಭಿರ್ವನೇವನೇ. ... .. ... ... ... ||+||

ಮೂವತ್ತನೆಯ ಅಧ್ಯಾಯದಲ್ಲಿ ಕೃಷ್ಣನು ಅಂತರ್ಧಾನವ ನೈದ್ದಲಾಗಿ ವಿರಹಸಂತಪ್ತರಾದ ಗೋಪಸ್ತ್ರೀಯರುಗಳು ಉನ್ಮತ್ತರಂತೆ ಪ್ರತಿವನದಲ್ಲಿಯೂ ಶ್ರೀಕೃಷ್ಣನು ಹುಡುಕಿದರು, ಎಂಬಅರ್ಥವಂ ಶುಕಾಚಾರ್ಯನು ಪರೀಕ್ಷಿದ್ರಾಯನಂ ಕುರಿತು ನಿರೂಪಿಸುವನದೆಂತೆನೆ,

ಅರಸೇ! ಶ್ರೀಕೃಷ್ಣನು ಅಂತರ್ಧಾನವ ನೆಯ್ಯುತ್ತಿರಲಾಗ ಗೋಪಸ್ತ್ರೀಯರುಗಳು ಆಕೃಷ್ಣನಂ ಕಾಣದೆ ಹೆಣ್ಣಾನೆಗಳು ಪುರುಷಗಜವಂ ಕಾಣದೆ ಸಂತಾಪಪಡುವಂತೆ ಬಹಳವಾಗಿ ಸಂತಾಪಪಟ್ಟರು ॥೧॥ ಲಕ್ಷ್ಮೀಪತಿಯಾದ ಶ್ರೀಕೃಷ್ಣನವಿಲಾಸ ಗಮನದಿಂದಲೂ, ಅನುರಾಗ ಪೂರ್ವಕವಾದ ಮಂದಸ್ಮಿತದಿಂದಲೂ, ವೈಯಾರಗಳಿಂದಲೂ, ಕಡೆಗಣ್ಣ ನೋಟಗಳಿಂದಲೂ, ಮಧುರಭಾಷಣಂಗಳಿಂದಲೂ, ಕ್ರೀಡಾವಿಲಾಸಗಳಿಂದಲೂ, ಪರವಶಚಿತ್ತರಾದ ಗೋಪಸ್ತ್ರೀಯರುಗಳು ತದಾತ್ಮಿಕೆಯರಾಗಿ ಭಗವಂತನ ಆಯಾ ವ್ಯಾಪಾರಂಗಳಂ ತಾವುಮಾಡಿದರು ॥೨॥ ಪ್ರಿಯನಾದ ಶ್ರೀಕೃಷ್ಣನ ಗಮನವು ನೋಟವು ಭಾಷಣವು ಇವೇಮುಂತಾದ ವ್ಯಾಪಾರಂಗಳಲ್ಲಿ ನಿವಿಷ್ಟವಾದ ಶರೀರವುಳ್ಳವರಾಗಿ ಗೋಪಸ್ತ್ರೀಯರುಗಳು ನಾನೇಕೃಷ್ಣನು ನೀವುಗೋಪಸ್ತ್ರೀಯರುಗಳು ಎಂದು ಪ್ರತ್ಯೇಕ ಪ್ರತ್ಯೇಕವಾಗಿ ಭಾವಿಸಿಕೊಂಡು ಕೃಷ್ಣನವಿಹಾರಂಗಳ ನಾಚರಿಸು

ತ್ತಕವದ್ವನಾದ್ವನಂ | ಪಪ್ರಚ್ಛುರಾಕಾಶವದಂತರಂಬಹಿರ್ಭೂತೇಷುಸಂತಂಪುರುಷಂವನಸ್ಪತೀನ್ ||೪|| ದೃಷ್ಟೋವಃಕಚ್ಚಿದಶ್ವತ್ಥಪ್ಲಕ್ಷನ್ಯಗ್ರೋಧನೋಮನಃ | ನಂದಸೂನುರ್ಗತೋಹೃತ್ವಾಪ್ರೇಮಹಾಸಾವಲೋಕನೈಃ ||೫|| ಕಚ್ಚಿತ್ಕುರವಕಾಶೋಕನಾಗಪುನ್ನಾಗಚಂಪಕಾಃ | ರಾಮಾನುಜೋಮಾನಿನೀನಾಂಗತೋದರ್ಪಹರಸ್ಮಿತಃ ||೬|| ಕಚ್ಚಿತ್ತುಲಸಿಕಲ್ಯಾಣಿಗೋವಿಂದಚರಣಪ್ರಿಯೇ |

---

ಅಮುಮೇವ-ಈಕೃಷ್ಣನನ್ನೇ, ಗಾಯಂತ್ಯಃ-ಹಾಡುತ್ತಲಿರುವರಾಗಿ, ಸಂಹತಾಃ-ಸೇರಿದವರಾಗಿ, ಉನ್ಮತ್ತಕವತ್-ಹುಚ್ಚರಹಾಗೆ, ವನಾದ್ವನಂ-ಒಂದುತೋಟದಿಂದಮತ್ತೊಂದುತೋಟವನ್ನು, ವಿಚಿಕ್ಯುಃ-ಹುಡುಕಿದರು ಆಕಾಶವತ್-ಗಗನದಹಾಗೆ, ಅಂತರಂ-ಒಳಗೂ, ಬಹಿಃ-ಹೊರಗೂ, ಸಂತಂ-ಇರುವಂಥಾ, ಪುರುಷಂ-ಪರಮಾತ್ಮನನ್ನು, (ಎಲ್ಲಿರುವನೆಂದು) ವನಸ್ಪತೀನ್-ವೃಕ್ಷಗಳನ್ನು ಕುರಿತು, ಪಪ್ರಚ್ಛುಃ-ಕೇಳಿದರು ||೪|| ನಂದಸೂನುಃ-ನಂದಗೋಪನಮಗನು, ಪ್ರೇಮಹಾಸಾವಲೋಕನೈಃ-ಸ್ನೇಹದನಗೆನೋಟಗಳಿಂದ, ನಃ-ನಮ್ಮ ಮನಃ-ಹೃದಯವನ್ನು, ಹೃತ್ವಾ-ಅಪಹರಿಸಿಕೊಂಡು, ಗತಃ-ಹೋದನು. ಅಶ್ವತ್ಥ-ಅರಳೀಮರವೇ! ಪ್ಲಕ್ಷ-ಬಸರೀಮರವೇ! ನ್ಯಗ್ರೋಧ-ಆಲದಮರವೇ, ವಃ-ನಿಮ್ಮಿಂದ, ದೃಷ್ಟಃಕಚ್ಚಿತ್-ನೋಡಲ್ಪಟ್ಟನೇಏನು?||೫|| ಕುರವಕ-ಗೋರಂಟಿಯಗಿಡವೇ, ಅಶೋಕ-ಅಸುಗೇಮರವೇ! ನಾಗ-ನಾಗಕೇಸರಮರವೇ! ಪುನ್ನಾಗ-ಸುರಹೊನ್ನೆಮರವೇ! ಚಂಪಕಾಃ-ಸಂಪಗೇಮರಗಳೇ! ಮಾನಿನೀನಾಂ-ಹೆಂಗಳ, ದರ್ಪಹರಸ್ಮಿತಃ-ಗರ್ವವನ್ನುಹರಿಸುವಕಿರುನಗೆಯುಳ್ಳವನಾದ, ರಾಮಾನುಜಃ-ಬಲರಾಮನತಮ್ಮನು, ಗತಃ ಹೊರಟುಹೋದನು. ವಃ-ನಿಮ್ಮಿಂದ, ದೃಷ್ಟಃಕಚ್ಚಿತ್-ನೋಡಲ್ಪಟ್ಟನೇಏನು?||೬||

---



ಹ ತದಾತ್ಮಕರಾಗಿ ವಿಹರಿಸಿದರು ||೩|| ಆಸ್ತ್ರೀಯರುಗಳು ಗುಂಪಾಗಿ ಆಶ್ರೀಕೃಷ್ಣನನ್ನೇ ಧ್ಯಾನಂಗೆಯ್ವುತ್ತ ಗಾನಂಗೆಯ್ವರಾಗಿ ಉನ್ಮತ್ತರಂತೆ ಪ್ರತಿವನದಲ್ಲಿಯೂ ಕೃಷ್ಣನಂ ಹುಡುಕಿದರು. ಆಕಾಶದಂತೆ ಒಳಗೂ ಹೊರಗೂ ಕೂಡ ಪೂರ್ಣನಾದಭಗವಂತನಂ ಕಾಣದೆ ವೃಕ್ಷಂಗಳಂ ಕೇಳಿದರು ||೪|| (ಅದೆಂತೆನೆ) ಎಲೈ ಅಶ್ವತ್ಥವೇ! ಎಲೈ, ಬಸುರೀಮರವೇ! ಆಲದಮರವೇ! ನಂದನಪುತ್ರನಾದ ಶ್ರೀಕೃಷ್ಣನು ಪ್ರೇಮಹಾಸಾವಲೋಕನಂಗಳಿಂದ ನಮ್ಮಮನವ ನಪಹರಿಸಿಕೊಂಡು ಹೋದನು. ಅವನಂ ನೀವು ಕಂಡುದಿಲ್ಲವೇ ||೫|| ಎಲೈ, ಕುರವಕವೇ? ಎಲೈ, ಅಶೋಕವೇ! ನಾಗಕೇಸರವೃಕ್ಷವೇ ಪುನ್ನಾಗವೃಕ್ಷವೇ ಎಲೈ ಸಂಪಗೆಯಮರವೇ ಸ್ತ್ರೀಯರುಗಳ ಗರ್ವವಂ ಪರಿಹರಿಸುವ ಕಪಟವಾದ ನಗೆಯುಳ್ಳ ರಾಮಾನುಜನಾದ ಕೃಷ್ಣನು ಹೊರಟುಹೋದನು ನೀವುಕಾಣಲಿಲ್ಲವೇ ||೬|| ಗೋವಿಂದ ಚರಣಪ್ರಿಯಳಾದ ಶುಭಕರಳಾದ ತುಲಸಿಯೇ! ನಿನಗೆ ಅತಿಪ್ರಿಯನಾದ

ಸಹತ್ವಾಳಿಕುಲೈರ್ಬಿಭ್ರದ್ದೃಷ್ಟಸ್ತೇತಿಪ್ರಿಯೋಚ್ಯುತಃ ॥೭॥ ಮಾಲತ್ಯದರ್ಶಿವಃಕಚ್ಚಿನ್ಮಲ್ಲಿಕೆಜಾತಿ ಯೂಥಿಕೆ ! ಪ್ರೀತಿಂವೋಜನಯನ್ಯಾತಃಕರಸ್ಪರ್ಶನಮಾಧವಃ ॥೮॥ ಚೂತಪ್ರಿಯಾಳಪನಸಾ ಸನಕೋವಿದಾರಜಂಬೀರಬಿಲ್ವವಕುಳಾಮ್ರಕದಂಬನೀಪಾಃ । ಯೇನ್ಯೇಪರಾರ್ಥಭವಿಕಾಯಮುನೋ ಪಕೂಲಾಃಶಂಸಂತುಕೃಷ್ಣಪದವೀಂರಹಿತಾತ್ಮನಾಂನಃ ॥೯॥ ಕಿಂತೇಕೃತಂಕ್ಷಿತಿತಪೋಬತಕೇಶವಾಂ ಘ್ರಿಸ್ಪರ್ಶೋತ್ಸವೋತ್ಪುಲಕಿತಾಂಗರುಹೈರ್ವಿಭಾಸಿ । ಅಪ್ಯಂಘ್ರಿಸಂಭವಉರುಕ್ರಮವಿಕ್ರಮಾದ್ವಾ

---

ಕಲ್ಯಾಣಿ-ಶುಭವುಳ್ಳವಳಾದ, ಗೋವಿಂದಚರಣಪ್ರಿಯೇ-ಶ್ರೀಹರಿಪಾದಗಳಿಗೆಪ್ರಿಯಳಾದ, ತುಲಸಿ-ತುಲಸಿವೃಕ್ಷವೇ! ಅಳಿಕುಲೈಸ್ಸಹ-ತುಂಬಿವಿಂಡುಗಳೊಂದಿಗೆ, ತ್ವಾ-ನಿನ್ನನ್ನು, ಬಿಭ್ರತ್ ಧರಿಸಿರುವ,ತೇ-ನಿನಗೆ,ಅತಿಪ್ರಿಯಃ-ಬಹಳಇಷ್ಟನಾದ ಅಚ್ಯುತಃ-ಕೃಷ್ಣನು, ದೃಷ್ಟಃಕಚ್ಚಿತ್-ನೋಡಲ್ಪಟ್ಟನೇನು ॥೭॥ ಮಾಲತಿ-ಜಾಜಿಯಬಳ್ಳಿಯೇ; ಮಲ್ಲಿಕೇ-ಮಲ್ಲಿಗೆಯಬಳ್ಳಿಯೇ; ಜಾಜಿ-ಕಿರುಜಾಜಿಯಬಳ್ಳಿಯೇ;ಯೂಥಿಕೇ-ಸೇವಂತಿಯಬಳ್ಳಿಯೇ, ಮಾಧವಃ-ಕೃಷ್ಣನು, ಕರಸ್ಪರ್ಶೇನ-ಕೈಸೋಂಕುವುದರಿಂದ, ವಃ-ನಿಮಗೆ, ಪ್ರೀತಿಂ-ಪ್ರೇಮವನ್ನು, ಜನಯನ್-ಹುಟ್ಟಿಸುವನಾಗಿ, ಯಾತಃ-ಹೋದವನಾದವನು, ಅದರ್ಶಿಕಚ್ಚಿತ್-ನೋಡಲ್ಪಟ್ಟನೇನು, ॥೮॥ ಚೂತ...ನೀಪಾಃ--ಚೂತ-ಸೀಮಾವು, ಪ್ರಿಯಾಳು-ಸಾರಪಪ್ಪಿನಮರ, ಪನಸ-ಹಲಸು, ಅಸನ-ಬಂದುಗೆ, ಕೋವಿದಾರ-ಕಂಚವಾಳ, ಜಂಬೀರ-ನಿಂಬೆ, ಬಿಲ್ವ-ಬೆಲ್ಲವತ್ತ, ವಕುಳ-ರಂವಳಸರಿಗಿಡ, ಆಮ್ರ-ಹುಣಸೆ, (ಹುಳಿಮಾವು) ಕದಂಬ-ಈಚಲು, ನೀಪಾಃ-ಕಡಹ, ಈವೃಕ್ಷಗಳಿರಾ, ಅನ್ಯೇ-ಇತರಗಳಾದ, ಪರಾರ್ಥಭವಿಕಾಃ-ಹೆರವರಪ್ರಯೋಜನಕ್ಕೋಸುಗವೆ ಜನ್ಮವುಳ್ಳಂಥಾ, ಯಮುನೋಪಕೂಲಾಃ-ಯಮುನಾನದಿಯತಡಿಯಲ್ಲಿರುವವಾದ, (ತೀರ್ಥವಾಸಿಗಳಾದಪುಣ್ಯಾತ್ಮರು) ಯೇ-ಯಾರೋ, ತೇ-ಆನೀವು, ರಹಿತಾತ್ಮನಾಂ-ಶೂನ್ಯಬುದ್ಧಿಗಳಾದ, ನಃ-ನಮಗೆ, ಕೃಷ್ಣಪದವೀಂ-ಕೃಷ್ಣನಮಾರ್ಗವನ್ನು, ಶಂಸಂತು-ಹೇಳಲಿ (ಹೇಳಿರಿ)॥೯॥ ಹೇಕ್ಷಿತಿ-(ಕ್ಷಿತೇ) ಎಲೌಭೂಮಿಯೇ, ತೇ-ನಿನ್ನಿಂದ, ಕಿಂತಪಃಕೃತಂ-ಏನುತಪಸ್ಸುಮಾಡಲ್ಪಟ್ಟಿತು? ಬತ-ಆಹಾ, ಕೇಶವಾ.. ರುಹೈಃ-ಕೇಶವ-ವಿಷ್ಣುವಿನ, ಅಂಘ್ರಿ-ಅಡಿಗಳ, ಸ್ಪರ್ಶ-ಸೋಂಕುವಿಕೆಯಿಂದಾದ, ಉತ್ಸವ-ಸಂತೋಷದಿಂದ, ಉತ್ಪುಲಕಿತ-ನಿಗುಡಿದ, ಅಂಗರುಹೈಃ-ರೋಮಗಳಿಂದ, ವಿಭಾಸಿ-ಪ್ರಕಾಶಿಸುತಲಿರುವಿ. ನಿನ್ನಉತ್ಸವವು, ಅಂಘ್ರಿಸಂಭವಃ-ವಿಷ್ಣುವಿನ, (ಕೃಷ್ಣನ) ಅಡಿಗಳಸೋಂಕುವಿಕೆಯಿಂದುಂಟಾದದ್ದು, ಅಪಿಕಿಂ-ಅಹುದೋಏನು? ಉರುಕ್ರಮವಿಕ್ರಮಾದ್ವಾ-ಉರುಕ್ರಮ-ದೊಡ್ಡಹೆಜ್ಜೆಗಳುಳ್ಳತ್ರಿವಿಕ್ರಮನ, ವಿಕ್ರಮಾದ್ವಾ-ಹೆಜ್ಜೆಯಿಡುವುದರಿಂದಲೋ, ಆಹೋ-ಅಥವಾ, ವರಾಹವಪುಷಃ-ಆದಿವರಾಹಮೂರ್ತಿಯಾದವಿಷ್ಣುವಿನ, ಪರಿರಂಭಣೇನಾಪಿಕಿಂ-ಆಲಿಂಗನ

---

ಭ್ರಮರಗಣಂಗಳೊಡನೆ ನಿನ್ನಂ ವಕ್ಷಸ್ಥಲದಲ್ಲಿ ಧರಿಸುವ ಅಚ್ಯುತನು ನಿನ್ನಿಂದಲೂ ಕಾಣಲ್ಪಟ್ಟದಿಲ್ಲವೇ॥೭॥ ಎಲೈ ಜಾಜಿಯಬಳ್ಳಿಯೇ! ಮಲ್ಲಿಕಾಲತೆಯೇ! ಯೂಥಿಕಾಲತೆಯೇ ಹಸ್ತಸ್ಪರ್ಶದಿಂದ ನಿಮಗೆ ಪ್ರೀತಿಯನುಂಟು ಮಾಡುವವನಾಗಿ ಮಾಧವನು ಹೋಗುವಾಗ ನೀವು ಕಾಣಲಿಲ್ಲವೆ ॥೮॥ ಎಲೈಚೂತವೃಕ್ಷವೇ ಪ್ರಿಯಾಳುವೃಕ್ಷವೇ ಹಲಸಿನಮರವೇ ಬಂಧೂಕವೃಕ್ಷವೇ ಕೋವಿದಾರವೃಕ್ಷವೇ ಜಂಬೂವೃಕ್ಷವೇ ಎಲೈಬಿಲ್ವವೃಕ್ಷವೇ ವಕುಳವೃಕ್ಷವೇ ಕದಂಬವೃಕ್ಷವೇ ನೀಪವೃಕ್ಷವೇ ಇನ್ನೂ ಯಮುನಾನದಿಯ ತೀರದಲ್ಲಿ ಹುಟ್ಟಿರುವ ನಾನಾವಿಧಂಗಳಾದ ವೃಕ್ಷಂಗಳಿರಾ; ಕೃಷ್ಣನಂಕಾಣದೆ ಶೂನ್ಯಮನಸ್ಕರಾದ ನಮಗೆ ಕೃಷ್ಣನಮಾರ್ಗವಂ ತೋರಿಸಿಕೊಡಿರಿ ॥೯॥ ಎಲೈ; ಭೂಮಿಯೇ ನಿನ್ನಿಂದ ಎಂತಾತಪಸ್ಸು ಮಾಡಲ್ಪಟ್ಟಿತೋ, ಭಗವಂತನ ಪಾದಸ್ಪರ್ಶೋತ್ಸವ ವುಳ್ಳವಳಾಗಿ ರೋಮಾಂಚಿತವಾದ ಶರೀರವುಳ್ಳವಳಾಗಿ ತೋರಲ್ಪಡುತ್ತೀಯೆ, ಶ್ರೀಕೃಷ್ಣನ ಪಾದಸ್ಪರ್ಶನ ಸಂತೋಷದಿಂದಲೇಯೋ, ಅಥವಾ ತ್ರಿವಿಕ್ರಮನ ಮಹಾವಿಶಾಲವಾದ ಪಾದದಸಂಬಂಧದಿಂದಲೋ, ಇಲ್ಲದೇಇದ್ದರೆ ವರಾಹದೇಹವುಳ್ಳ ಭಗವಂತನ ಆಲಿಂಗನದಿಂದಲೋ, ಅದರಿಂದನೀನು ಕೃಷ್ಣನಂ

ಆಹೋವರಾಹವಪುಷಃಪರಿರಂಭಣೇನ ॥೧೦॥ ಅಪ್ಯೇಣಪತ್ನ್ಯುಪಗತಃಪ್ರಿಯಯೇಹಗಾತ್ರೈಸ್ತನ್ವನ್ದೃ
ಶಾಂಸಖಿಸುನಿರ್ವೃತಿಮಚ್ಯುತೋವಃ । ಕಾಂತಾಂಗಸಂಗಕುಚಕುಂಕುಮರಂಜಿತಾಯಾಃಕುಂದಸ್ರ
ಜಃಕುಲಪತೇರಿಹವಾತಿಗಂಧಃ ॥೧೧॥ ಬಾಹುಂಪ್ರಿಯಾಂಸಉಪಧಾಯಗೃಹೀತಪದ್ಮೋರಾಮಾನುಜ
ಸ್ತುಲಸಿಕಾಲಿಕುಲೈರ್ಮದಾಂಧೈಃ । ಅನ್ವೀಯಮಾನಇಹವಸ್ತರವಃಪ್ರಣಾಮಂಕಿಂವಾಭಿನಂದತಿ
ಚರನ್ಪ್ರಣಯಾವಲೋಕೈಃ ॥೧೨॥ ಪೃಚ್ಛತೇಮಾಲತಾಬಾಹೂನಪ್ಯಾಶ್ಲಿಷ್ಟಾವನಸ್ಪತೇಃ । ನೂ
ನಂತತ್ಕರಜಸ್ಪೃಷ್ಟಾಬಿಭ್ರತ್ಯುತ್ಪುಲಕಾನ್ಯಹೋ ॥೧೩॥ ಇತ್ಯುನ್ಮತ್ತವಚೋಗೋಪ್ಯಃಕೃಷ್ಣಾ

---

ದಿಂದಲೋ ಏನು? (ಆದವರಿಂದನೀನುಕೃಷ್ಣನಂಬಲ್ಲವಳು, ನಮಗೆ ಆತನದಾರಿಯಂ ಪೇಳು, ಎಂದುಭಾವವು) ॥೧೦॥ ಸಖಿ-ಗೆಳತಿ ಯಾದ, ಏಣಪತ್ನಿ-ಜಿಂಕೆಯಹೆಂಡತಿಯೇ; ಅಚ್ಯುತಃ-ಕೃಷ್ಣನು, ಇಹ-ಇಲ್ಲಿ, ಪ್ರಿಯಯಾಸಹ ಇಷ್ಟಳಾದವಳೊಡನೆ, ಗಾತ್ರೈಃ-ಚಲುವಾದತನ್ನ ಅವಯವಗಳಿಂದ, ವಃ-ನಿಮ್ಮ, ದೃಶಾಂ-ಕಂಗಳಿಗೆ, ಸುನಿರ್ವೃತಿಂ-ಉತ್ತಮವಾದ ಸುಖವನ್ನು, ತನ್ವನ್-ವಿಸ್ತರಿಸಿಮಾಡುತಲಿರುವನಾಗಿ, ಉಪಗತಃಅಪಿಕಿಂ-ಹತ್ತಿರಕ್ಕೆಬಂದವನಾದನೋಏನು? ಇಹ-ಇಲ್ಲಿ, ಕುಲಪತೇಃ- ನಮ್ಮಜಾತಿಗೊಡೆಯನಾದಕೃಷ್ಣನ, ಕಾಂತಾ.....ತಾಯಾಃ-ಕಾಂತಾ-ಪ್ರಿಯಳ, ಅಂಗ ಶರೀರದ, ಸಂಗ- ಸಂಬಂಧದಿಂದ, ಕುಚಕುಂಕುಮ ಮೊಲೆಗಳಕೇಸರಗಂಧದಿಂದ, ರಂಜಿತಾಯಾಃ- ಸೊಗಸುಗೊಳಿಸಲ್ಪಟ್ಟ, ಕುಂದಸ್ರಜಃ-ಮಲ್ಲಿಗೆಯಹಾರದ, ಗಂಧಃ-ಪರಿಮಳವು, ವಾತಿ-ಬರುತ್ತಿರುವಂತಿದೆ ॥೧೧॥ ಹೇತರವಃ-ಎಲೈವೃಕ್ಷಗಳಿರಾ! ರಾಮಾನುಜಃ-ಬಲರಾಮನತಮ್ಮನಾದಕೃಷ್ಣನು, ಬಾಹುಂ-ತನ್ನ ತೋಳನ್ನು, ಪ್ರಿಯಾಂಸೇ-ಇಷ್ಟಳಾದವಳಹೆಗಲಮೇಲೆ, ಉಪಧಾಯ-ಇರಿಸಿಕೊಂಡು, ಗೃಹೀತಪದ್ಮಃ-ಹಿಡಿಯಲ್ಪಟ್ಟತಾವರೆಯಹುವ್ವುಳ್ಳವನಾಗಿ, ಮದಾಂಧೈಃ-ಬಂಡಿನಸೊಕ್ಕಿನಿಂದ ಕುರುಡಾದಂತಿರುವ, ತುಲಸಿಕಾಳಿಕುಲೈಃ-ತುಲಸಿಕಾ-ತುಲಸಿಯ, ಅಳಿಕುಲೈಃ-ತುಂಬಿವಿಂಡುಗಳಿಂದ, ಅನ್ವೀಯಮಾನಃ- ಅನುಸರಿಸಲ್ಪಡುತ್ತಿರುವನಾಗಿ, ಇಹ-ಇಲ್ಲಿ; ಚರನ್-ತಿರುಗುತಲಿರುವನಾಗಿ, ವಃ-ನಿಮ್ಮ, ಪ್ರಣಾಮಂ-ನಮಸ್ಕಾರವನ್ನು, ಪ್ರಣಯಾವಲೋಕೈಃ-ಸ್ನೇಹದನೋಟಗಳಿಂದ, ಅಭಿನಂದತಿ ವಾಕಿಂ-ಪರಿಗ್ರಹಿಸಿಸಂತೋಷಿಸುವನೋಏನು ॥೧೨॥ (ಸಖಿಯರಿರಾ)ಇಮಾಃ-ಈ, ಲತಾಃ-ಬಳ್ಳಿಗಳು, ವನಸ್ಪತೇಃ-ತಮ್ಮ ಗಂಡನಾದವೃಕ್ಷದ, ಬಾಹೂನ್-ತೋಳುಗಳಾದರೆಂಬೆಗಳನ್ನು, ಆಶ್ಲಿಷ್ಟಾಅಪಿ-ಅಪ್ಪಿಕೊಂಡಿರುವ ವಾದರೂಕೂಡ, ನೂನಂ-ದಿಟವಾಗಿ, ತತ್ಕರಜಸ್ಪೃಷ್ಟಾಸ್ಸತ್ಯಃ-ತತ್-ಆಕೃಷ್ಣನ, ಕರಜ-ಉಗುರುಗಳಿಂದ, ಸ್ಪೃಷ್ಟಾಃ-ಸೋಂಕಲ್ಪಟ್ಟವಾಗಿ, ಉತ್ಪುಲಕಾನಿ-ನಿಗುಡಿದರೋಮಾಂಚಗಳನ್ನು, ಬಿಭ್ರತಿ-ವಹಿಸಿಯಿವೆ, ಅಹೋ-ಆಶ್ಚರ್ಯವು (ಆದ್ದರಿಂದ) ಇಮಾಃಪೃಚ್ಛತ-(ಕೃಷ್ಣನುಎಲ್ಲಿಹೋದನೋ) ಇವುಗಳನ್ನು ಕೇಳಿರಿ ॥೧೩॥ ಇತಿ-ಹೀಗೆ, ಉನ್ಮತ್ತವಚಃ-ಗೋಪ್ಯಃ-ಹುಚ್ಚುಮಾತುಗಳುಳ್ಳಗೋಪಿ

---

ನೋಡಿದವಳಾಗಿರಬೇಕು ॥೧೦॥ ಎಲೈ, ಹೆಣ್ಣುಹುಲ್ಲೆಯೇ, ಮುಖಬಾಹು ವಕ್ಷಸ್ಥಳವೇ ಮುಂತಾದ ಅಂಗಗಳಿಂದ ನಿಮ್ಮನೇತ್ರಂಗಳಿಗೆ ಸುಖಪ್ರದನಾಗಿ, ಶ್ರೀಕೃಷ್ಣನು ತನಗೆ ಪ್ರಿಯಳಾದ ಸ್ತ್ರೀಯೊಡನೆ ಸಹಿತನಾಗಿ, ನಿಮ್ಮಿಂದ ಕಾಣಲ್ಪಡಲಿಲ್ಲವೆ ॥೧೧॥ ಪ್ರಿಯಳಾದ ಸ್ತ್ರೀಯಳ ಕುಚಕುಂಕುಮದಿಂದ ರಂಜಿತವಾದಕೃಷ್ಣನ ವಕ್ಷಸ್ಥಳದಲ್ಲಿರುವ ಮಲ್ಲಿಕಾಪುಷ್ಪದ ಮಾಲೆಯಗಂಧವು ಇಲ್ಲಿಗೆಬರುವಂತೆಇದೆ. ಪ್ರಿಯಳಾದಸ್ತ್ರೀಯಳ ಭುಜದಮೇಲೆ ತನ್ನಭುಜವನಿರಿಸಿಕೊಂಡು ಕೈಯಲ್ಲಿ ಪದ್ಮವಂಹಿಡಿದುಕೊಂಡು ರಾಮಾನುಜನಾದಶ್ರೀಕೃಷ್ಣನು ಮದಾಂಧಂಗಳಾದ ತುಲಸಿಯನ್ನಾಕ್ರಮಿಸಿ ಕೊಂಡಿರುವ ಭೃಂಗಂಗಳಿಂದ ಅನುಸರಿಸಲ್ಪಟ್ಟವನಾಗಿ ಇಲ್ಲಿಚರಿಸುತ್ತ, ಎಲೈವೃಕ್ಷಗಳಿರಾ! ನಿಮ್ಮಿಂದಮಾಡಲ್ಪಟ್ಟ ನಮಸ್ಕಾರಂಗಳಂ ಶ್ಲಾಘಿಸುವನಾಗಿ, ನಿಮ್ಮಂ ಪ್ರೇಮವೀಕ್ಷಣಂಗಳಿಂದ ನೋಡಿದನೋ ಏನು ॥೧೨॥ [ಮತ್ತೆ ಕೆಲವರು ಸ್ತ್ರೀಯರುಗಳು, ಪರಸ್ಪರವಾಗಿ ನುಡಿದರದೆಂತೆನೆ] ಎಲೌ ಸ್ತ್ರೀಯರುಗಳಿರಾ ನೋಡಿರಮ್ಮಾ ಈಲತೆಗಳು ವೃಕ್ಷಂಗಳ ಬಾಹುಗಳನಾಲಿಂಗಿಸಿಕೊಂಡು ಇದ್ದರೂ ಆಕೃಷ್ಣನ ನಖಕ್ಷತಗಳಿಂದ ರೋಮಾಂಚಿತಗಳಾಗಿವೆ. ಈ ಲತೆಗಳಂಕೇಳುವ ॥೧೩॥

ನ್ವೇಷಣಕಾತರಾಃ। ಲೀಲಾಭಗವತಸ್ತಾಸ್ತಾಹ್ಯನುಚಕ್ರುಸ್ತದಾತ್ಮಿಕಾಃ॥ ಕಸ್ಯಾಶ್ಚಿತ್ಪೂತನಾಯಂ
ತ್ಯಾಃಕೃಷ್ಣಾಯಂತ್ಯಪಿಬತ್ಸ್ತನಂ।ತೋಕಯಿತ್ವಾರುದಂತ್ಯನ್ಯಾಪದಾಹಂಛಕಟಾಯತೀಂ।೧೫॥ ದೈತ್ಯಾ
ಯಿತ್ವಾಜಹಾರಾನ್ಯಾಮೇಕಾಕೃಷ್ಣಾರ್ಭಭಾವನಾಂ ।ಕೃಷ್ಣರಾಮಾಯಿತೇದ್ವೇತುಗೋಪವತ್ಸಾಯಿತಾಃ
ಪರಾಃ ।೧೬॥ ವತ್ಸಾಯಿತಾಂಗೃಹೀತ್ವಾನ್ಯಾಭ್ರಾಮಯಿತ್ವಾವ್ಯಪಾತಯತ್ । ಕೃಷ್ಣಾಯಿತಾಜಘಾ
ನಾನ್ಯಾತತ್ರೈಕಾಂತುಬಕಾಯಿತಾಂ ।೧೭। ಆಹೂಯದೂರಗಾಯದ್ವತ್ಕೃಷ್ಣಸ್ತಮನುಕು
ರ್ವತೀಂ । ವೇಣುಂಕ್ವಣಂತೀಂಕ್ರೀಡಂತೀಮನ್ಯಾಃಶಂಸಂತಿಸಾಧ್ವಿತಿ ।೧೮। ಕಸ್ಯಾಂಚಿತ್ಸ್ವಭುಜಂ

---

ಯರು, ಕೃಷ್ಣಾನ್ವೇಷಣಕಾತರಾಃ- ಕೃಷ್ಣನನ್ನು ಹುಡುಕುವುವರಲ್ಲಿ ಚಪಲೆಯರಾದ್ದರಿಂದಲೇ, ತದಾತ್ಮಿಕಾಃ- ತನ್ಮಯವಾ ದಮನಸ್ಸುಳ್ಳವರಾಗಿ, ಭಗವತಃ-ಶ್ರೀಕೃಷ್ಣನ, ತಾಸ್ತಾಲೀಲಾಃ-ಆಯಾವಿಲಾಸಗಳನ್ನು, ಅನುಚಕ್ರುಃ-ಅನುಸರಿಸಿಮಾಡಿದರು ॥೧೪॥ಕೃಷ್ಣಾಯಂತೀ-ಕೃಷ್ಣನಂತೆಆಚರಿಸುವಗೋಪಿಯು, ಪೂತನಾಯಂತ್ಯಾಃ ಪೂತನೆಯಂತೆಆಚರಿಸುವವಳಾದ,ಕಸ್ಯಾಶ್ಚಿತ್-ಒಬ್ಬಳ, ಸ್ತನಂ-ಮೊಲೆಯನ್ನು, ಅಪಿಬತ್-ಕುಡಿದಳು. ಅನ್ಯಾ-ಮತ್ತೊಬ್ಬಳು, ತೋಕಯಿತ್ವಾ-ತನ್ನನ್ನುಮಗುವಿನಂತೆಮಾಡಿಕೊಂಡು, ರುದಂತೀಸತೀ-ಅಳುತಿರುವಳಾಗಿ, ಶಕಟಾಯತೀಂ-ಬಂಡಿಯಂತೆ ಆಚರಿಸುವವಳನ್ನು, ಪದಾ-ಕಾಲಿನಿಂದ, ಅಹನ್-ಒದೆದಳು॥೧೫॥ ಏಕಾ-ಒಬ್ಬಳು, ದೈತ್ಯಾಯಿತ್ವಾ-ತೃಣಾವರ್ತದೈತ್ಯನಂತೇಚರಿಸುವಳಾಗಿ, ಕೃಷ್ಣಾರ್ಭಭಾವನಾಂ-ತಾನೇಕೃಷ್ಣನೆಂಬಮಗುವೆಂದುಭಾವಿಸಿಕೊಂಡಿರುವ.ಅನ್ಯಾಂ-ಮತ್ತೊಬ್ಬಳನ್ನು, ಜಹಾರ-ಅಪಹರಿಸಿದಳು ದ್ವೇ-ಇಬ್ಬರುಗೋಪಿಯರು, ಕೃಷ್ಣರಾಮಾಯಿತೇ-ಕೃಷ್ಣನಂತೆಯೂ ರಾಮನಂತೆಯೂ ಆಚರಿಸುವವರಾದರು॥ ಪರಾಸ್ತು-ಇತರೆಯರಾದರೋ, ಗೋಪವತ್ಸಾಯಿತಾಃ-ಗೋಪಾಲರಂತೆ ಕರುಗಳಂತೆಆಚರಿಸಿದರು॥ಅನ್ಯಾ-ಮತ್ತೊಬ್ಬಳು, ವತ್ಸಾಯಿತಾಂ-ವತ್ಸಾಸುರನಂತೆಆಚರಿಸುವಳಾದ,ಮತ್ತೊರ್ರ್ವಳನ್ನು,ಗೃಹೀತ್ವಾ-ಹಿಡಿದು,ಭ್ರಾಮಯಿತ್ವಾ-ತಿರುಗಿಸಿ,ವ್ಯಪಾತಯತ್-ಕೆಡವಿದಳು.ಅನ್ಯಾ-ಮತ್ತೊರ್ರ್ವಳು,ಕೃಷ್ಣಾಯಿತಾಸತೀ-ಕೃಷ್ಣನಂತೆಆಚರಿಸುವಳಾಗಿ,ತತ್ರ-ಅಲ್ಲಿ, ಬಕಾಯಿತಾಂ-ಬಕಾಸುರನಂತೆಆಚರಿಸುವಳಾದ,ಏಕಾಂತು-ಒಬ್ಬಳನ್ನಾದರೋ, ಜಘಾನ-ಹೊಡೆದಳು॥೧೭॥ಕೃಷ್ಣಃ-ಕೃಷ್ಣನು, ಯದ್ವತ್-ಹೇಗೋ, ತದ್ವತ್-ಹಾಗೆ, ತಂ-ಆಕೃಷ್ಣನನ್ನು, ಅನುಕುರ್ವತೀಂ-ಅನುಸರಿಸಿನಟನವಂಮಾಡುತ್ತಿರುವಳನ್ನು, ಆಹೂಯ-ಕರೆದು, ಅನ್ಯಾ-ಮತ್ತೊರ್ರ್ವಳು, ಕ್ರೀಡಂತೀಂ-ಆಡುತಲಿರುವ, ವೇಣುಂ-ಪಿಳ್ಳಗೋವಿಯನ್ನು, ಕ್ವಣಂತೀಂ-ನುಡಿಸುತಲಿರುವಳಂಕುರಿತು, ಸಾಧ್ವಿತಿ-ಚನ್ನಾಗಿದೆಯೆಂದು, ಶಂಸತಿ-ಶ್ಲಾಘಿಸುತ್ತಿರುವಳು ॥೧೮॥ಕಸ್ಯಾಂಚಿತ್-ಒಬ್ಬಳಲ್ಲಿ, ಸ್ವಭುಜಂ-ತನ್ನತೋಳನ್ನು, ನ್ಯಸ್ಯ-ಹಾಕಿಕೊಂಡು, ಚರಂ

---

ಈರೀತಿಯಲ್ಲಿ ಉನ್ಮತ್ತರಾಗಿ ಮಾತನಾಡುತ ಕೃಷ್ಣನಂ ಹುಡುಕುತ ಭಗವಂತನ ತಾದಾತ್ಮ್ಯವನೆಯ್ದಿ ಆಯಾ ಭಗವಂತನ ವಿಲಾಸಂಗಳಂ ತಾವು ಆಚರಿಸಿದರು ।೧೪। (ಅದೆಂತೆನೆ) ಒಬ್ಬಳುಗೋಪಿಯು ತಾನೇಕೃಷ್ಣನೆಂದು ಭಾವಿಸಿಕೊಂಡು ಮತ್ತೊಬ್ಬಳಾದ ಗೋಪಿಯಂ ಪೂತನೆಯಂಮಾಡಿ ಅವಳಸ್ತನ್ಯವಂ ಪಾನಂಗೆಯ್ದಳು. ಒಬ್ಬಳು ಬಾಲಕನಾದ ಕೃಷ್ಣನಂತೆ ಆಗಿ ಮತ್ತೊಬ್ಬಳು ಶಕಟಾಸುರನಂಮಾಡಿ ಕಾಲುಗಳಿಂದ ಒದೆದಳು ।೧೫। ಒಬ್ಬಳು ಬಾಲಕನಾದ ಕೃಷ್ಣನಂತೆ ಆಗಿ, ಒಬ್ಬಳುದೈತ್ಯನಂತೆ ಆಗಿ ಕೃಷ್ಣನಂತೆ ಇರುವವಳ ನಪಹರಿಸಿದಳು. ಇಬ್ಬರು ಸ್ತ್ರೀಯರು ಬಲರಾಮಕೃಷ್ಣರಂತೆ ಆಗಿ ಮಿಕ್ಕಸ್ತ್ರೀಯರುಗಳು ಗೋಪಾಲಕರುಕರುಗಳಾಗಿ ಕ್ರೀಡಿಸಿದರು।೧೬।ಒಬ್ಬಳು ಕೃಷ್ಣನಂತೆಆಗಿ, ವತ್ಸಾಸುರನಂತೆಆಗಿರುವ ಒಬ್ಬಳಂ ತಿರುಗಿಸಿ ಕೆಡಹಿದಳು. ಬಕಾಸುರನಂತೆ ಆಗಿರುವ ಒಬ್ಬಳು ಕೃಷ್ಣನಂತೆ ಆಗಿರುವಒಬ್ಬಳು ಪ್ರಹರಿಸಿದಳು । ಕೆಲವರುಸ್ತ್ರೀಯರು ದೂರದಲ್ಲಿರುವ ಗೋಪಾಲಕರಂತೆ ಆಗಿ ಕೃಷ್ಣನಂತೆ ಆಗಿರುವಒಬ್ಬಳಂಕರೆದರು.ಕೃಷ್ಣನಂತೆ ವೇಣುಗಾನಂಗೆಯ್ವ ಒಬ್ಬಸ್ತ್ರೀಯಳಂ ಕಂಡು, ಮಿಕ್ಕಸ್ತ್ರೀಯರುಗಳು ಅವಳಂ ಚನ್ನಾಯಿತೆಂದು ಸ್ತುತಿಮಾಡಿದರು ।೧೮।ಒಬ್ಬಳುತಾನು ಕೃಷ್ಣನಂತೆಆಗಿಒಬ್ಬಳಭುಜದಮೇಲೆ ಕೈಯನಿರಿಸಿಕೊಂಡುನಾನುಕೃಷ್ಣನು ನನ್ನವಂ

ನ್ಯಸ್ಯಚಕರಂತ್ವಾಹಾಪರಾಂತುಸಾ । ಕೃಷ್ಣೋಹಂಪಶ್ಯತಗತಿಂಲಲಿತಾಮಿತಿತನ್ಮಯೀ ॥೧೯॥ ಮಾ
ಭೈಷ್ಟವಾತವರ್ಷಾಭ್ಯಾಂತತ್ತ್ರಾಣಂವಿಹಿತಂಮಯಾ । ಇತ್ಯುಕ್ತ್ವೈಕೇನಹಸ್ತೇನಯತಂತ್ಯುನ್ನಿ
ದಧೇಂಬರಂ ॥೨೦॥ ಆರುಹ್ಯೈಕಾಪದಾಕ್ರಮ್ಯಶಿರಸ್ಯಾಹಾಪರಾಂನೃಪ । ದುಷ್ಟಾಹೇಗಚ್ಛಜಾತೋಹಂಖ
ಲಾನಾಮನುದಂಡಭೃತ್ ॥೨೧॥ ತತ್ರೈಕೋವಾಚಹೇಗೋಪಾದಾವಾಗ್ನಿಂಪಶ್ಯತೋಲ್ಬಣಂ । ಚಕ್ಷೂಂ
ಷ್ಯಾಶ್ವಪಿದಧ್ವಂವೋವಿಧಾಸ್ಯೇಕ್ಷೇಮಮಂಜಸಾ ॥೨೨॥ ಬಧ್ನಂತ್ಯನ್ಯಾಂಸ್ರಜೈಕಾಹತ್ವಾಮದ್ಯೋ
ಲೂಖಲೇಹರೇ । ಬಧ್ನಾಮಿಭಾಂಡಭೇತ್ತಾರಂಹೈಯಂಗವಮುಷಂತ್ವಿತಿ । ಭೀತಾಸುದೃಕ್ಪಿಧಾಯಾ
ಸ್ಯಂಭೇಜೇಭೀತಿವಿಡಂಬನಂ ॥೨೩॥ ಏವಂಕೃಷ್ಣಂಪೃಚ್ಛಮಾನಾಬೃಂದಾವನಲತಾಸ್ತರೂನ್ । ವ್ಯಚ

---

ತೀ-ತಿರುಗುವಳಾಗಿ. ಪರಾಂ-ಮತ್ತೊರ್ವಳನ್ನು ಕುರಿತು, ಆಹ-ಹೇಳಿದಳು ಸಾತು-ಅವಳಾದರೋ, ತನ್ಮಯೀ-ಕೃಷ್ಣಮಯ
ಳಾಗಿ, ಅಹಂ-ನಾನು, ಕೃಷ್ಣಃ-ಕೃಷ್ಣನಾಗಿರುವೆನು. ಲಲಿತಾಂ-ಕೋಮಲವಾದ, ಗತಿಂ-ನಡಿಕೆಯನ್ನು, ಪಶ್ಯತ-ನೋಡಿರಿ,
ಇತಿ-ಹೀಗೆ, ಹೇಳಿದಳು ॥೧೯॥ ಮತ್ತೊರ್ವಳು, ವಾತವರ್ಷಾಭ್ಯಾಂ-ಗಾಳಿಯುದೆಸೆಯಿಂದಲೂ ಮಳೆಯದೆಸೆಯಿಂದಲೂ,
ತ್ರಾಣಂ-ರಕ್ಷಣವು, ಯತ್-ಯಾವಕಾರಣದಿಂದ, ಮಯಾ-ನನ್ನಿಂದ, ವಿಹಿತಂ-ಮಾಡಲ್ಪಟ್ಟಿದೆಯೋ, ತತ್-ಆಕಾರಣದಿಂ
ದ, ಮಾಭೈಷ್ಟ-ಹೆದರಬೇಡಿರಿ, ಇತಿ-ಹೀಗೆ, ಉಕ್ತ್ವಾ-ಹೇಳಿ, ಏಕೇನಹಸ್ತೇನ-ಒಂದುಕೈಯಿಂದ, ಯತಂತೀ-ಪ್ರಯತ್ನಮಾ
ಡುವಳಾಗಿ, ಅಂಬರಂ-ಮೇಲುಹೊದಿಕೆಯವಸ್ತ್ರವನ್ನು, ಉನ್ನಿದಧೇ-ಎತ್ತಿಹಿಡಕೊಂಡಳು॥೨೦॥ಹೇನೃಪ-ಎಲೈಅರಸೇ, ಏಕಾ-
ಒಬ್ಬಳು, ಅಪರಾಂ-ಮತ್ತೊಬ್ಬಳನ್ನು, ಪದಾ-ಕಾಲಿನಿಂದ, ಶಿರಃ-ತಲೆಯನ್ನು, ಆಕ್ರಮ್ಯ-ಮೆಟ್ಟಿ, ಹೇದುಷ್ಟ-ಎಲದುಷ್ಟನೇ,
ಗಚ್ಛ-ನಡೆ, ಅಹಂ-ನಾನು, ಖಲಾನಾಂ-ದುಷ್ಟರಿಗೆ, ಅನುದಂಡಭೃತ್-ಕೂಡ್ಲೇಶಿಕ್ಷೆಯನ್ನು ಧರಿಸುವನಾಗಿ, ಜಾತಃ-ಹುಟ್ಟಿ
ರುವನು, ಎಂದು, ಆಹ-ಹೇಳಿದಳು ॥೨೧॥ ತತ್ರ-ಅಲ್ಲಿ, ಏಕಾ-ಒಬ್ಬಳು, ಹೇಗೋಪಾಃ-ಎಲೈಗೊಲ್ಲರಿರಾ! ಉಲ್ಬಣಂ ಹೆಚ್ಚಿ
ಯಿರುವ, ದಾವಾಗ್ನಿಂ-ಕಾಡುಕಿಚ್ಚನ್ನು, ಪಶ್ಯತ-ನೋಡಿರಿ. ಆಶು-ಬೇಗನೆ, ಚಕ್ಷೂಂಷಿ-ಕಂಗಳನ್ನು, ಪಿದಧ್ವಂ-ಮುಚ್ಚಿಕೊ
ಳ್ಳಿರಿ. ವಃ-ನಿಮಗೆ, ಅಂಜಸಾ-ಬೇಗನೇ, ಕ್ಷೇಮಂ-ರಕ್ಷಣವನ್ನು, ವಿಧಾಸ್ಯೇ-ಮಾಡುವೆನೆಂದು, ಉವಾಚ-ಹೇಳಿದಳು ॥೨೨॥
ಏಕಾ-ಒಬ್ಬಳು, ಅನ್ಯಾಂ-ಮತ್ತೊರ್ವಳನ್ನು, ಸ್ರಜಾ-ಪುಷ್ಪಸರದಿಂದ, ಬಧ್ನಂತೀಸತೀ-ಕಟ್ಟುವಳಾಗಿ, ಹರೇ-ಕೃಷ್ಣನೇ!
ಭಾಂಡಭೇತ್ತಾರಂ-ಮಡಿಕೆಗಳನ್ನು ಒಡೆದಂಥಾ, ಹೈಯಂಗವಮುಷಂ-ಹೊಸಬೆಂಣೆಯಂಕದ್ದವನಾದಂಥಾ-ತ್ವಾಂ-ನಿನ್ನನ್ನು,
ಅದ್ಯ-ಈಗ, ಉಲೂಖಲೇ-ಒರಳಿನಲ್ಲಿ, ಬಧ್ನಾಮಿ-ಕಟ್ಟುವೆನೆಂದು, ಆಹ-ನುಡಿದಳು. ಮತ್ತೊರ್ವಳು ಸುದೃಕ್-ಸವಿ
ಚೀನವಾದನೇತ್ರಗಳುಳ್ಳವಳು,ಆಸ್ಯಂ-ಮುಖವನ್ನು,ಪಿಧಾಯ-ಮುಚ್ಚಿಕೊಂಡು, ಭೀತಿವಿಡಂಬನಂ-ಹೆದರಿಕೆಯನಟನವನ್ನು,ಭೇ
ಜೇ-ಪಡೆದಳು ॥೨೩॥ ಏವಂ-ಹೀಗೆ, ಬೃಂದಾವನಲತಾಸ್ತರೂನ್-ಬೃಂದಾರಣ್ಯದ ಬಳ್ಳಿಗಳನ್ನೂ ಗಿಡಗಳನ್ನೂ, ಕೃಷ್ಣಂಪೃಚ್ಛ

---

ದಗಮನವನ್ನೋಡಿರಿ, ಎಂದು ನುಡಿದಳು ॥೧೯॥ ಒಬ್ಬಳು ಕೃಷ್ಣನಂತೆ ಆಗಿ ವಾಯುವರ್ಷಂಗಳಿಂದ
ನೀವು ಭಯಂಗೊಳ್ಳಬೇಡಿ, ನಾನು ನಿಮ್ಮಂ ರಕ್ಷಿಸುತ್ತೇನೆ, ಎಂದುಪೇಳಿ, ಏಕಹಸ್ತದಿಂದ ಗೋವರ್ಧನ
ಪರ್ವತವ ನೆತ್ತಿದಂತೆ ಕೈಯಂಮೇಲಕ್ಕೆ ಎತ್ತಿದಳು ॥೨೦॥ ಎಲೈ ಅರಸೇ! ಒಬ್ಬಳು ಕಾಳಿಯಸರ್ಪ
ಮಂ ನಿಗ್ರಹಿಸುವ ಕೃಷ್ಣನಂತೆ ಆಗಿ, ಒಬ್ಬಳಂ ಕೆಳಗೆ ಮಲಗಿಸಿ, ಅವಳಂ ಕಾಳಿಯ ಸರ್ಪವನ್ನಾಗಿ ಭಾ
ವಿಸಿ, ಆವಳಂ ಕಾಲಿನಿಂದ ಮೆಟ್ಟಿಕೊಂಡು, ಎಲೈ ದುಷ್ಟಸರ್ಪವೇ? ನೀನು ಇಲ್ಲಿರದೆ ಆಚೆಗೆಹೋಗು ನಾ
ನು ಕೃಷ್ಣನು, ದುಷ್ಟರಾದನಿಮ್ಮಂತಾವರಂ ನಿಗ್ರಹಿಸುವವನು, ಎಂದು ಹೇಳಿದಳು ॥೨೧॥ ಮತ್ತೊಬ್ಬ
ಳು ಕೃಷ್ಣನಂತೆಆಗಿ, ಎಲೈ ಗೋಪಾಲಕರಿರಾ ಜ್ವಲಿಸುವ ಕಾಡುಕಿಚ್ಚಂನೋಡದೆ ಬೇಗನೆಕಂಗಳಂ ಮುಚ್ಚಿ
ಕೊಳ್ಳಿರಿ ನಿಮಗೆ ಶೀಘ್ರವಾಗಿ ಕ್ಷೇಮವಂ ಮಾಡುತ್ತೇನೆ, ಎಂದುಪೇಳಿದಳು ॥೨೨॥ ಮತ್ತೆಯೋರ್ವಳು
ಯಶೋದಾದೇವಿಯಾಗಿ ಕೃಷ್ಣರೂಪಳಾದ ಮತ್ತೊಬ್ಬಳಂ ಕುರಿತು ಪೇಳಿದಳು, ಎಲೈಕೃಷ್ಣನೇ ಬೆಣ್ಣೆ
ಯಂಭಕ್ಷಿಸುವುದಕ್ಕೋಸುಗಂ ಮಡಿಕೆಗಳಂ ಒಡೆಯುತಲಿರುವ ನಿನ್ನ ಒರಳಿನಲ್ಲಿ ಕಟ್ಟಹಾಕುತ್ತೇನೆ ಎಂದುಪು
ಷ್ಪಮಾಲೆಯಿಂದ ಕಟ್ಟಿದಳು ॥*॥ ಮತ್ತೊಬ್ಬಳು ಕೃಷ್ಣನಂತೆ ಅತಿಸುಂದರವಾದ ನೇತ್ರಗಳುಳ್ಳ ಮುಖ
ಮಂ ಮುಚ್ಚಿಕೊಂಡು ಭಯಂಬಡುವ ಕೃಷ್ಣನಂತೆ ಇದ್ದಳು ॥೨೩॥ ಈರೀತಿಯಲ್ಲಿ ಗೋಪಿಯರುಗಳು ಬೃಂ

ಕ್ಷತವನೋದ್ದೇಶೆಪದಾನಿಪರಮಾತ್ಮನಃ ॥೨೪॥ ಪದಾನಿವ್ಯಕ್ತಮೇತಾನಿನಂದಸೂನೋರ್ಮಹಾತ್ಮನಃ । ಲಕ್ಷ್ಯಂತೆಹಿಯದಂಭೋಜಧ್ವಜವಜ್ರಾಂಕುಶಾದಿಭಿಃ ॥೨೫॥ ತತಸ್ತತಸ್ತತ್ಪದವೀಮನ್ವೀಕ್ಷಂತ್ಯೋಗ್ರತೋಬಲಾಃ । ವಧ್ವಾಃಪದೈಸ್ಸುಪೃಕ್ತಾನಿವಿಲೋಕ್ಯಾರ್ತಾಸ್ಸಮಬ್ರುವನ್ ॥೨೬॥ ಕಸ್ಯಾಃಪದಾನಿ ಯಾತಾಯಾಃಪಶ್ಯಧ್ವಂನಂದಸೂನುನಾ । ಅಂಸನ್ಯಸ್ತಪ್ರಕೋಷ್ಠಾಯಾಃಕರೇಣೋಃಕರಿಣಾಯಥಾ ॥೨೭॥ ಅನಯಾರಾಧಿತೋನೂನಂಭಗವಾನ್ಹರಿರೀಶ್ವರಃ । ಯನ್ನೋವಿಹಾಯಗೋವಿಂದಃಪ್ರೀತೋ ಯಾಮನಯದ್ರಹಃ ॥೨೮॥ ಧನ್ಯಾಅಹೋಅಮೀಆಳ್ಯೋಗೋವಿಂದಾಂಘ್ರ್ಯಬ್ಜರೇಣವಃ । ಯಾನ್

---

ಮಾನಾಃ-ಕೃಷ್ಣನನ್ನುಕುರಿತುಕೇಳುತ್ತಿರುವರಾಗಿ, ವನೋದ್ದೇಶೇ-ಅರಣ್ಯದಮೇಲ್ಭಾಗದಲ್ಲಿ, ಪರಮಾತ್ಮನಃ- ಶ್ರೀಕೃಷ್ಣನ, ಪದಾನಿ-ಹೆಜ್ಜೆಗಳನ್ನು, ವ್ಯಚಕ್ಷತ-ಕಂಡರು ॥೨೪॥ ಯತ್-ಯಾವಕಾರಣದಿಂದ, ಅಂಭೋಜಧ್ವಜವಜ್ರಾಂಕುಶಾದಿಭಿಃ-ಅಂಭೋಜ-ಕಮಲರೇಖೆ, ಧ್ವಜ-ಧ್ವಜರೇಖೆ, ವಜ್ರ-ಕುಲಿಶರೇಖೆ, ಅಂಕುಶ-ಅಂಕುಶರೇಖೆ, ಆದಿಭಿಃ-ಮುಂತಾದುವುಗಳೊಡನೆ, ಲಕ್ಷ್ಯಂತೇ-ಕಾಣಲ್ಪಡುತ್ತಿವೆಯೋ, ತತ್-ಅಕಾರಣದಿಂದ, ಏತಾನಿಪದಾನಿ-ಈಹೆಜ್ಜೆಗಳು, ವ್ಯಕ್ತಂ-ಸ್ಪಷ್ಟವಾಗಿ, ಮಹಾತ್ಮನಃ-ಮಹಾಪುರುಷನಾದ, ನಂದಸೂನೋಃಹಿ-ಕೃಷ್ಣನವಲ್ಲವೆ? ॥೨೫॥ ತತಸ್ತತಃ-ಅಲ್ಲಿಂದಲ್ಲಿಂದ, ತತ್ಪದವೀಂ-ಆಕೃಷ್ಣನದಾರಿಯನ್ನು, ಅನ್ವೀಕ್ಷಂತ್ಯಃ-ಅನುಸರಿಸಿನೋಡುತಲಿರುವ, ಅಬಲಾಃ-ಹೆಂಗಳು, ಅಗ್ರತಃ-ಮುಂಗಡೆಯಲ್ಲಿ, ವಧ್ವಾಃ-ಒಬ್ಬಹೆಂಗಸಿನ, ಪದೈಃ-ಹೆಜ್ಜೆಗಳಿಂದ, ಸುಪೃಕ್ತಾನಿ-ಚನ್ನಾಗಿಬೆರತಿರುವ, ಕೃಷ್ಣನಹೆಜ್ಜೆಗಳನ್ನು, ವಿಲೋಕ್ಯ-ನೋಡಿ, ಆರ್ತಾಃ-ಹೊಟ್ಟೆಕಿಚ್ಚಿನಿಂದಪೀಡಿತರಾಗಿ, ಸಮಬ್ರುವನ್-ಹೇಳಿದರು ॥೨೬॥ ಕರಿಣಾ-ಗಂಡಾನೆಯಿಂದ, ಕರೇಣೋರ್ಯಥಾ-ಹೆಣ್ಣಾನೆಗೆಹೇಗೋಹಾಗೆ, ನಂದಸೂನುನಾ-ನಂದಗೋಪನಮಗನಿಂದ, ಅಂಸನ್ಯಸ್ತಪ್ರಕೋಷ್ಠಾಯಾಃ-ಅಂಸ-ಹೆಗಲಿನಲ್ಲಿ, ನ್ಯಸ್ತ-ಇಡಲ್ಪಟ್ಟ, ಪ್ರಕೋಷ್ಠಾಯಾಃ ಮುಂಗೈಯುಳ್ಳವಳಾಗಿ, ಯಾತಾಯಾಃ-ಹೋದವಳಾದ, ಕಸ್ಯಾಃ-ಯಾವಳೋಒಬ್ಬಳ, ಪದಾನಿ-ಹೆಜ್ಜೆಗಳನ್ನು, ಪಶ್ಯಧ್ವಂ-ನೋಡಿರಿ ॥೨೭॥ ಯತ್-ಯಾವಕಾರಣದಿಂದ, ಗೋವಿಂದಃ-ಕೃಷ್ಣನು, ನಃ-ನಮ್ಮನ್ನು, ವಿಹಾಯ-ಬಿಟ್ಟು, ಪ್ರೀತಃ-ಪ್ರೀತಿಯುಳ್ಳವನಾಗಿ, ಯಾಂ-ಯಾವವಳನ್ನು, ರಹಃ-ರಹಸ್ಯಸ್ಥಾನವಂಕುರಿತು, ಅನಯತ್-ಒಯ್ದನೋ, ಅನಯಾ-ಆಯಿವಳಿಂದ, ಭಗವಾನ್-ಷಡ್ಗುಣೈಶ್ವರ್ಯಸಂಪನ್ನನಾದ, ಈಶ್ವರಃ-ಪ್ರಭುವಾದ, ಹರಿಃ-ಕೃಷ್ಣನು, ಆರಾಧಿತಃ-ಪೂಜಿಸಲ್ಪಟ್ಟಿರುವನು. ನೂನಂ-ನಿಶ್ಚಯವು ॥೨೮॥ ಹೇಆಳ್ಯಃ-ಎಲೆಸಖಿಯರಿರಾ! ಬ್ರಹ್ಮೇಶೌ-ಬ್ರಹ್ಮನೂರುದ್ರನೂ, ರಮಾ-

---

ದಾವನದ ಲತೆಗಳಂ ವೃಕ್ಷಂಗಳಂ ಸಹ ಕುರಿತು ಶ್ರೀಕೃಷ್ಣನಂ ಕೇಳುವರಾಗಿ ವನದಲ್ಲಿ ಪರಮಾತ್ಮನಾದಶ್ರೀಕೃಷ್ಣನ ಹೆಜ್ಜೆಯಂ ಕಂಡರು ॥೨೪॥ ಧ್ವಜರೇಖೆಗಳಿಂದಲೂ ಪದ್ಮರೇಖೆಗಳಿಂದಲೂ ಚಕ್ರರೇಖೆಗಳಿಂದಲೂ ಅಂಕುಶರೇಖೆಗಳಿಂದಲೂ ಯವಾದಿರೇಖೆಗಳಿಂದಲೂ ಚಿಹ್ನಿತಂಗಳಾದ ಶ್ರೀಕೃಷ್ಣನಪಾದಂಗಳಂನೋಡಿ, ಈ ಹೆಜ್ಜೆಗಳು ನಿಶ್ಚಯವಾಗಿ ನಂದಪುತ್ರನಾದ ಪರಮಾತ್ಮನಾದ ಶ್ರೀಕೃಷ್ಣನದೇ ಸರಿಯೆಂದು ತಿಳಿದರು ॥೨೫॥ ಅಲ್ಲಿಂದ ಆ ಶ್ರೀಕೃಷ್ಣನ ದಾರಿಯನ್ನೇ ಹುಡುಕುತ್ತಲಿರುವರಾದ ಗೋಪಸ್ತ್ರೀಯರು ಮುಂದುಗಡೆಯಲ್ಲಿ ಮತ್ತೊಬ್ಬಳಾದ ಸ್ತ್ರೀಯಳ ಹೆಜ್ಜೆಗಳಿಂದ ಕೂಡಿಕೊಂಡಿರುವ ಶ್ರೀಕೃಷ್ಣನಹೆಜ್ಜೆಗಳಂ ನೋಡಿ ಹುಡುಕುತ ವ್ಯಸನಯುಕ್ತರಾಗಿ ನುಡಿದರು ॥೨೬॥ [ಅದೆಂತೆನೆ-] ಎಲೈ ಸಖಿಯರುಗಳಿರಾ! ಶ್ರೀಕೃಷ್ಣನಭುಜದಮೇಲೆ ತನ್ನ ಭುಜವನಿರಿಸಿಕೊಂಡು ಅವನಸಂಗಡ ಗಂಡಾನೆಯೊಡನೆ ಹೆಣ್ಣಾನೆಹೋದಂತೆ ಹೋಗುತಲಿರುವ ಯಾವಳೋ ಒಬ್ಬಳಹೆಜ್ಜೆಯು ಕಾಣಲ್ಪಡುತ್ತಲಿದೆ, ನೋಡಿರಮ್ಮಾ ॥೨೭॥ ಈಸ್ತ್ರೀಯಿಂದ ಭಗವಂತನಾದ ಈಶ್ವರನಾದ ಹರಿಯು ಪೂರ್ವದಲ್ಲಿ ಚನ್ನಾಗಿ ಆರಾಧಿಸಲ್ಪಟ್ಟಿರಬಹುದು. ಅದರಿಂದ ಕೃಷ್ಣನು ನಮ್ಮಂಬಿಟ್ಟು ಈಸ್ತ್ರೀಯೊಡನೆ ರಹಸ್ಯವಾಗಿ ಹೋಗಿರುವನು ‡ ॥೨೮॥ ಎಲೈಸಖಿಯರುಗಳಿರಾ, ಗೋವಿಂದನವಾದಪದ್ಮಂಗಳ ಯಾವರೇಣುಗಳಂ ಬ್ರಹ್ಮರುದ್ರ ಲಕ್ಷ್ಮೀದೇವತೆಗಳು ತಲೆಯಲ್ಲಿ ಧರಿಸುತ್ತಾರೆಯೋ

ಬ್ರಹ್ಮೇಶೌರಮಾದೇವೀದಧುರ್ಮೂರ್ಧ್ನ್ಯಘನುತ್ತಯೇ ‖೨೯‖ ತಸ್ಯಾ ಅಮೂನಿನಃಕ್ಷೋಭಂಕುರ್ವಂತ್ಯುಚ್ಚೈಃಪದಾನಿಯತ್ । ಯೈಕಾಪಹೃತ್ಯಗೋಪೀನಾಂರಹೋಭುಂಕ್ತೇಽಚ್ಯುತಾಧರಂ ‖೩೦‖ ನಲಕ್ಷ್ಯಂತೇಪದಾನ್ಯತ್ರತಸ್ಯಾನೂನಂತೃಣಾಂಕುರೈಃ । ಖಿದ್ಯತ್ಸುಜಾತಾಂಘ್ರಿತಲಾಮುನ್ನಿನ್ಯೇಪ್ರೇಯಸೀಂಪ್ರಿಯಃ ‖೩೧‖ ಇಮಾನ್ಯಧಿಕಮಗ್ನಾನಿಪದಾನಿವಹತೋವಧೂಂ । ಗೋಪ್ಯಃಪಶ್ಯತಕೃಷ್ಣಸ್ಯಭಾರಾಕ್ರಾಂತಾನಿಕಾಮಿನಃ ‖೩೨‖ (ಅತ್ರಾವರೋಪಿತಾಕಾಂತಾಪುಷ್ಪಹೇತೋರ್ಮಹಾತ್ಮನಾ । ಅತ್ರಪ್ರಸೂನಾವಚಯಃಪ್ರಿಯಾರ್ಥೇಪ್ರೇಯಸಾಕೃತಃ ‖೩೩‖ ಪ್ರಪದಾಕ್ರಮಣೇಹ್ಯೇತೇಪಶ್ಯತಾಸಕಲೇಪ

---

ಲಕ್ಷ್ಮಿಯೂ, ದೇವಾಃ-ಇಂದ್ರಾದಿಗಳೂ, ಯಾನ್-ಯಾವವುಗಳನ್ನು, ಅಘನುತ್ತಯೇ-ತಮ್ಮಪಾಪಕ್ಷಯಕ್ಕೋಸುಗ, ಮೂರ್ಧ್ನಿ-ತಲೆಯಲ್ಲಿ, ದಧುಃ-ಧರಿಸಿದರೋ, ತೇಅಮೀ-ಆಯಿ, ಗೋವಿಂದಾಂಘ್ರ್ಯಬ್ಜರೇಣವಃ-ಕೃಷ್ಣನಪಾದಾರವಿಂದದಧೂಳಿಗಳು, ಧನ್ಯಾಃ-ಅತಿಪುಣ್ಯಗಳಾಗಿರುವವು. ಅಹೋ-ಆಶ್ಚರ್ಯವು ‖೨೯‖ ಯತ್-ಯಾವಕಾರಣದಿಂದ, ಏಕಾ ಯಾವಳೊಬ್ಬಳೇ, ಅಚ್ಯುತಾಧರಂ-ಕೃಷ್ಣನತುಟಿಯನ್ನು, ಗೋಪೀನಾಮಪಹೃತ್ಯ-ಇತರಗೋಪಿಯರಿಗಿಲ್ಲದಂತೆತಾನುಕಸುಗೊಂಡು, ರಹಃ-ಏಕಾಂತಸ್ಥಾನದಲ್ಲಿ ಭುಙ್ಕ್ತೇ-ಅನುಭವಿಸುವಳೋ, ತತ್-ಆಕಾರಣದಿಂದ, ತಸ್ಯಾಃ-ಅವಳ, ಅಮೂನಿಪದಾನಿ-ಈಹೆಜ್ಜೆಗಳು, ನಃ-ನಮಗೆ, ಉಚ್ಚೈಃ-ಅಧಿಕವಾಗಿ, ಕ್ಷೋಭಂ-ಹೊಟ್ಟೆಕಿಚ್ಚನ್ನು, ಕುರ್ವಂತಿ-ಮಾಡುತಲಿವೆ ‖೩೦‖ ಅತ್ರ-ಇಲ್ಲಿ, ತಸ್ಯಾಃ-ಅವಳ, ಪದಾನಿ-ಹೆಜ್ಜೆಗಳು, ನಲಕ್ಷ್ಯಂತೇ-ಕಾಣಿಸುವುದಿಲ್ಲ. ಪ್ರಿಯಃ-ಇಷ್ಟನಾದಕೃಷ್ಣನು, ತೃಣಾಂಕುರೈಃ-ಹುಲ್ಲಿನಕೂಳೆಗಳಿಂದ, ಖಿದ್ಯತ್ಸುಜಾತಾಂಘ್ರಿತಲಾಂ-ಖಿದ್ಯತ್-ನೋಯುತಲಿರುವ, ಸುಜಾತ-ಕೋಮಲಗಳಾದ, ಅಂಘ್ರಿತಲಾಂ-ಅಂಗಾಲುಗಳುಳ್ಳ, ಪ್ರೇಯಸೀಂ-ಪ್ರಿಯಳನ್ನು, ಉನ್ನಿನ್ಯೇ-ಮೇಲಕ್ಕೆಎತ್ತಿಕೊಂಡನು ನೂನಂ-ನಿಶ್ಚಯವು, (ಹೀಗೆತರ್ಕಿಸುವನೆಂಬುಭಾವವು) ‖೩೧‖ ಹೇಗೋಪ್ಯಃ-ಎಲೌಗೊಲ್ಲತಿಯರಿರಾ! ಕಾಮಿನಃ-ಕಾಮವುಳ್ಳವನಾದ್ದರಿಂದಲೇ, ವಧೂಂ-ಹೆಂಗಸನ್ನು ವಹತಃ-ಹೊತ್ತುಕೊಂಡಿರುವ, ಕೃಷ್ಣಸ್ಯ-ಕೃಷ್ಣನ,ಭಾರಾಕ್ರಾಂತಾನಿ-ಭಾರದಿಂದಪಂಕಲ್ಪಟ್ಟವಾದ್ದರಿಂದಲೇ, ಅಧಿಕಮಗ್ನಾನಿ-ಹೆಚ್ಚಾಗಿಹೂತಲ್ಪಟ್ಟಿರುವ, ಇಮಾನಿಪದಾನಿ-ಈಹೆಜ್ಜೆಗಳನ್ನು, ಪಶ್ಯತ-ನೋಡಿರಿ ‖೩೨‖ಅತ್ರ ಇಲ್ಲಿ, ಮಹಾತ್ಮನಾ-ಮಹಾಪುರುಷನಾದಕೃಷ್ಣನಿಂದ, ಪುಷ್ಪಹೇತೋಃ-ಹುವ್ವಿಗಳನಿಮಿತ್ತದಿಂದ, ಕಾಂತಾ-ಹೆಂಗಸು, ಅವರೋಪಿತಾ-ಇಳಿಸಲ್ಪಟ್ಟವಳಾಗಿರಬಹುದು ಪ್ರೇಯಸಾ-ಪ್ರಿಯನಾದಕೃಷ್ಣನಿಂದ, ಪ್ರಿಯಾರ್ಥೇ-ಅವಳಪ್ರಿಯಕ್ಕೋಸುಗ, ಅತ್ರ-ಇಲ್ಲಿ, ಪ್ರಸೂನಾವಚಯಃ-ಹೂವುಗಳಂಕುಯ್ಯೋಣವು, ಕೃತಃ-ಮಾಡಲ್ಪಟ್ಟಿದೆ‖೩೩‖ಪ್ರಪದಾಕ್ರಮಣೇ-ಕೊನೆಗಾಲೂರಿಕೆಯುಳ್ಳವಾದ್ದರಿಂದಲೇ,

---

ಆಯಿರೇಣುಗಳು ಮಹಾಪುಣ್ಯತಮಂಗಳಾದವು ।೨೯‖ (ಮತ್ತೆಕೆಲವರು ನುಡಿದರದೆಂತೆನೆ-) ಆಸ್ತ್ರೀಯ ಹೆಜ್ಜೆಗಳು ನಮಗೆ ವ್ಯಸನವನುಂಟು ಮಾಡುತ್ತಲಿವೆ. ನಾವು ಇಷ್ಟುಮಂದಿಯೂ ವ್ಯಸನಪಡುತ್ತಿರಲಾಗಿ ಅವಳೊಬ್ಬಳು ಮಾತ್ರವೇ ಶ್ರೀಕೃಷ್ಣನ ಅಧರ ಚುಂಬನೋತ್ಸವಮಂ ಅನುಭವಿಸುತ್ತಾಳೆ ‖೩೦‖ ಎಲೈ ಸಖಿಯರುಗಳಿರಾ, ಇಲ್ಲಿಂದಆಚೆಗೆ ಆಸ್ತ್ರೀಯಹೆಜ್ಜೆಗಳು ಕಾಣುವುದಿಲ್ಲ. ಆದ್ದರಿಂದ ನಿಶ್ಚಯವಾಗಿ ತೃಣಂಗಳಿಂದ ಪೀಡಿತಗಳಾದ ಪಾದಂಗಳುಳ್ಳ ಆಸ್ತ್ರೀಯಳಂ ಎತ್ತಿಕೊಂಡು ಶ್ರೀಕೃಷ್ಣನು ಹೋಗಿರಬಹುದು ‖೩೧‖ ಅದೇನುಕಾರಣದಿಂದ ಎಂದರೆ ಇಲ್ಲಿಂದಮುಂದೆ ಕೃಷ್ಣನ ಹೆಜ್ಜೆಗಳು ಆಸ್ತ್ರೀಯಳ ಭಾರದಿಂದ ಬಹಳವೂರಲ್ಪಟ್ಟ ಹಳ್ಳಗಳಾಗಿವೆ. ಕಾಮುಕನಾದ ಕೃಷ್ಣನು ಆಸ್ತ್ರೀಯಂ ಹೆಗಲಮೇಲೆಯೇರಿಸಿಕೊಂಡು ನಡೆದುಯಿದ್ದಾನು ‖೩೨‖ ಈಸ್ಥಳದಲ್ಲಿ ಅವಳು ಕೆಳೆಯಿಂಕೆಯಿಳಿಸಿ ಹೂಗಳು ಕುಯ್ದಿರುವನು, ಮೇಲೆಯಿರುವ ಪುಷ್ಪಂಗಳು ಕುಯ್ಯುವದಕೆ ಮೆಟ್ಟುಂಗಾಲಿಟ್ಟುಕೊಂಡು ಕೃಷ್ಣನು ಪುಷ್ಪಾಪಚಯಮಂ ಮಾಡಿರುವನು. ಆದ್ದರಿಂದ ಹೆಜ್ಜೆಗಳು ಮುಂದೆಹಳ್ಳಗಳಾಗಿವೆ ಅರೆಯೂರಿದ ಹೆಜ್ಜೆಗಳಂ ನೋಡಿರಿ ‖೩೩‖ ಈಸ್ಥಳದಲ್ಲಿ ಆಸ್ತ್ರೀಯ

ದೆ । ಕೇಶಪ್ರಸಾಧನಂ ತ್ವತ್ರ ಕಾಮಿನ್ಯಾಃ ಕಾಮಿನಾ ಕೃತಂ ॥೩೪॥ *ತಾನಿ ಚೂಡಯತಾ ಕಾಂತಾಮು
ಪವಿಷ್ಟಮಿಹ ಧ್ರುವಂ* ॥೩೫॥ ರೇಮೇ ತಯಾ ಚಾತ್ಮರತ ಆತ್ಮಾರಾಮೋಽಪ್ಯಖಂಡಿತಃ । ಕಾಮಿನಾಂ ದರ್ಶ
ಯನ್ ದೈನ್ಯಂ ಸ್ತ್ರೀಣಾಂ ಚೈವ ದುರಾತ್ಮತಾಂ ॥೩೬॥ ಇತ್ಯೇವಂ ದರ್ಶಯಂತ್ಯಸ್ತಾಶ್ಚೇರುರ್ಗೋ
ಪ್ಯೋ ವಿಚೇತಸಃ । ಯಾಂ ಪ್ರಿಯಾಮನಯತ್ ಕೃಷ್ಣೋ ವಿಹಾಯಾನ್ಯಾಃ ಸ್ತ್ರಿಯೋ ವನೇ ॥೩೭॥ ಸಾ
ಚ ಮೇನೇ ತದಾತ್ಮಾನಂ ವರಿಷ್ಠಂ ಸರ್ವಯೋಷಿತಾಂ । ಹಿತ್ವಾ ಗೋಪೀಃ ಕಾಮಯಾನಾ ಮಾಮಸೌ ಭಜ
ತೇ ಪ್ರಿಯಃ ॥೩೮॥ ತತೋ ಗತ್ವಾ ವನೋದ್ದೇಶಂ ದೃಪ್ತಾ ಕೇಶವಮಬ್ರವೀತ್ । ನ ಪಾರಯೇಽಹಂ ಚಲಿತುಂ
ನಯ ಮಾಂ ಯತ್ರ ತೇ ಮನಃ ॥೩೯॥ ಏವಮುಕ್ತಃ ಪ್ರಿಯಾಮಾಹ ಸ್ಕಂಧ ಆರುಹ್ಯತಾಮಿತಿ । ತತಶ್ಚಾಂ

---

ಅಸಕಲೇ-ಸಂಪೂರ್ಣವಾಗಿ ಕಾಣಲ್ಪಡದೇ ಇರುವ, ಏತೇ ಪದೇ-ಈ ಹೆಜ್ಜೆಗಳೆರಡರನ್ನೂ, ಪಶ್ಯತ-ನೋಡಿರಿ ಅತ್ರ-ಇಲ್ಲಿ, ಕಾಮಿನಾ-ಕಾಮುಕನಾದ ಕೃಷ್ಣನಿಂದ. ಅಸ್ಯಾಃ-ಇವಳ, ಕೇಶಪ್ರಸಾಧನಂ-ಕುರುಳ್ಗಳ ಅಲಂಕಾರವು, ಕೃತಂ-ಮಾಡಲ್ಪಟ್ಟಿತು.॥೩೪॥ ತಾನಿ-ಆ ಪುಷ್ಪಗಳನ್ನು, ಕಾಂತಾಂ-ಸೊಗಸುಗಾತಿಗೆ, ಚೂಡಯತಾ-ಮುಡಿಸುತಲಿರುವ ಕೃಷ್ಣನಿಂದ, ಇಹ-ಇಲ್ಲಿ, ಉಪವಿಷ್ಟಂ-ಕುಳಿತುಕೊಳ್ಳಲ್ಪಟ್ಟಿತು, ಧ್ರುವ-ನಿಶ್ಚಯವೆಂದು ತರ್ಕಿಪೆನು ॥೩೫॥ ಆತ್ಮಾರಾಮಃ-ತನ್ನಲ್ಲಿಯೇ ಕ್ರೀಡಿಸುತ್ತಿರುವ ಜ್ಞಾನಿಯೊಬ್ಬರಿಂದಲೇ, ಅಖಂಡಿತೋಽಪಿ-ಹೆಂಗಳಿಗೆ ಸೋಲದೇ ಯಿರುವವನಾದರೂ ಕೂಡ, ಕಾಮಿನಾಂ-ಲೋಕದಲ್ಲಿ ಕಾಮವಂತರಿಗುಂಟಾಗುವ ದೈನ್ಯಂ-ಕೆಟ್ಟ ಬನೆಯನ್ನೂ, ಸ್ತ್ರೀಣಾಂ-ಹೆಂಗಳಿಗುಂಟಾಗುವ, ದುರಾತ್ಮತಾಂ ಚ-ದುಷ್ಟಸ್ವಭಾವವನ್ನೂ, ದರ್ಶಯನ್ನೇವ-ತೋರಿಸುವವನಾಗಿಯೇ, ತಯಾ ಚ-ಅವಳೊಂದಿಗೂ, ರೇಮೇ-ಕ್ರೀಡಿಸಿದನು॥೩೬॥ತಾಃ ಗೋಪ್ಯಃ-ಆ ಗೊಲ್ಲತಿಯರು, ಇತ್ಯೇವಂ-ಹೀಗೆ, ದರ್ಶಯಂತ್ಯಃ-ಕೃಷ್ಣಲೀಲೆಗಳನ್ನು ಅಭಿನಯಿಸಿ ತೋರಿಸುತಲಿರುವರಾದ್ದರಿಂದಲೇ, ವಿಚೇತಸಃ-ಬೇರೆ ನೆನಪಿಲ್ಲದವರಾಗಿ, ಚೇರುಃ-ತಿರುಗಿದರು. ಕೃಷ್ಣಃ-ಶ್ರೀಕೃಷ್ಣನು, ವನೇ-ಅರಣ್ಯದಲ್ಲಿ, ಅನ್ಯಾಃ ಸ್ತ್ರಿಯಃ-ಇತರರಾದ ಹೆಂಗಳನ್ನು, ವಿಹಾಯ-ಬಿಟ್ಟು, ಯಾಂ ಪ್ರಿಯಾಂ-ಯಾವ ಇಷ್ಟಳನ್ನು, ಅನಯತ್-ತನ್ನ ಸಂಗಡ ಕೊಯ್ದನೋ ॥೩೭॥ ಸಾ ಚ-ಅವಳೂ ಕೂಡ, ತತ್-ಆ ಕಾರಣದಿಂದ, ಅಸೌ ಪ್ರಿಯಃ-ಪ್ರಿಯನಾದ ಈ ಕೃಷ್ಣನು, ಕಾಮಯಾನಾಃ-ಬಯಸುತಲಿರುವ, ಗೋಪೀಃ-ಗೊಲ್ಲತಿಯರನ್ನು, ಹಿತ್ವಾ-ತೊರೆದು, ಮಾಂ-ನನ್ನನ್ನು, ಭಜತೇ-ಪ್ರೀತಿಸುತ್ತಿದಾನೆ ಆದ್ದರಿಂದ, ಆತ್ಮಾನಂ-ತನ್ನನ್ನು, ಸರ್ವಯೋಷಿತಾಂ-ಸಕಲಸ್ತ್ರೀಯರಲ್ಲಿಯೂ, ವರಿಷ್ಠಾಂ-ಶ್ರೇಷ್ಠಳನ್ನಾಗಿ, ಮೇನೇ-ತಿಳಕೊಂಡಳು॥೩೮॥ತತಃ-ಬಳಿಕ, ವನೋದ್ದೇಶಂ-ಅರಣ್ಯದ ಮೇಲ್ಭಾಗವನ್ನು, ಗತ್ವಾ-ಸೇರಿ, ದೃಪ್ತಾ ಸತೀ-ಗರ್ವಿತಳಾಗಿ, ಅಹಂ-ನಾನು, ಚರಿತುಂ-ನಡೆಯುವುದಕ್ಕೆ, ನಪಾರಯೇ-ಸಮರ್ಥಳಾಗೆನು. (ನಡೆಯಲಾರೆನು) ತೇ-ನಿನ್ನ, ಮನಃ-ಇಚ್ಛೆಯು, ಯತ್ರ-ಎಲ್ಲಿಯೋ, ತತ್ರ-ಅಲ್ಲಿಗೆ, ಮಾಂ-ನನ್ನ

---

ಳ ಕೇಶಂಗಳಂ ಸಿಕ್ಕುಬಿಡಿಸಿ ಜಡೆಯುಹಣೆದು ಪುಷ್ಪಂಗಳಂ ಮುಡಿಸಿ ನಿಶ್ಚಯವಾಗಿ ಕುಳಿತು ಇರಬಹುದು ॥೩೪॥೩೫॥ (ಎಂದು ಸ್ತ್ರೀಯರುಗಳು ಮಾತನಾಡುತ ಕೃಷ್ಣನಂ ಹುಡುಕಿದರು] ಎಲೈ ಅರಸೇ! ಈ ಪ್ರಕಾರವಾಗಿ ಸ್ವತಃತುಷ್ಟನಾದ ಶ್ರೀಕೃಷ್ಣನು ಆತ್ಮಾರಾಮನಾದರೂ ಕಾಮುಕರ ದೈನ್ಯವು ಹೀಗಿರುವುದೆಂದು ತೋರಿಸುವವನಾಗಿ ಸ್ತ್ರೀಯರುಗಳಿಗೆ ಪರಶ್ರೇಯಸ್ಸಂನೋಡಿ ಸಹಿಸುವುದಶಕ್ಯವು ಎಂಬ ಅರ್ಥವನ್ನೂ ತೋರಿಸುವವನಾಗಿ ಆ ಸ್ತ್ರೀಯೊಡನೆ ರಮಿಸಿದನು ॥೩೬॥ ಈ ರೀತಿಯಲ್ಲಿ ಗೋಪಸ್ತ್ರೀಯರುಗಳು ಪರಸ್ಪರವಾಗಿ ಕೃಷ್ಣವ್ಯಾಪಾರಂಗಳಂ ತೋರಿಸಿ ಪರವಶರಾಗಿ ಸಂಚರಿಸಿದರು. ಶ್ರೀಕೃಷ್ಣ ಗೋಪಸ್ತ್ರೀಯರುಗಳನ್ನೆಲ್ಲರುಂ ವನದಲ್ಲಿ ವಂಚಿಸಿ ಯಾವ ಸ್ತ್ರೀಯಂ ಕರೆದುಕೊಂಡು ಹೋಗಿ ರಮಿಸಿದನೋ ॥೩೭॥ ಆ ಸ್ತ್ರೀಯು ತನ್ನಂ ಎಲ್ಲ ಹೆಂಗಳಲ್ಲಿಯೂ ಬಹುಶ್ರೇಷ್ಠಳನ್ನಾಗಿ ತಿಳಿದುಕೊಂಡು, ಕಾಮಿಸುತ್ತಲಿರುವ ಗೋಪಸ್ತ್ರೀಯರುಗಳೆಲ್ಲರು ಬಿಟ್ಟು ಪ್ರಿಯನಾದ ಶ್ರೀಕೃಷ್ಣನು ನನ್ನನ್ನೇ ರಮಿಸುತ್ತಾನೆ ಎಂದು ತಿಳಿದಳು ॥೩೮॥ ಬಳಿಕ ವನದಲ್ಲಿ ಹೋಗಿ ಗರ್ವಿತಳಾದ ಅವಳು ಕೃಷ್ಣನಂ ಕುರಿತು ನುಡಿದಳು [ಅದೆಂತೆನೆ] ಎಲೈ, ಕೃಷ್ಣನೇ!

ತರ್ದಧೇಕೃಷ್ಣಸ್ಸಾವಧೂರನ್ವತಪ್ಯತ ॥೪೦॥ ಹಾನಾಥರಮಣಪ್ರೇಷ್ಠಕ್ವಾಸಿಕ್ವಾಸಿಮಹಾಭುಜ । ದಾಸ್ಯಾಸ್ತೇಕೃಪಣಾಯಾಮೇಸಖೇದರ್ಶಯಸನ್ನಿಧಿಂ ॥೪೧॥ ಅನ್ವಿಚ್ಛಂತ್ಯೋಭಗವತೋಮಾರ್ಗಂಗೋಪ್ಯೋವಿದೂರತಃ । ದದೃಶುಃಪ್ರಿಯವಿಶ್ಲೇಷಮೋಹಿತಾಂದುಃಖಿತಾಂಸತೀಂ ॥೪೨॥ ತಯಾಕಥಿತಮಾಕರ್ಣ್ಯಮಾನಪ್ರಾಪ್ತಿಂಚಮಾಧವಾತ್ । ಅವಮಾನಂಚದೌರಾತ್ಮ್ಯಾದ್ವಿಸ್ಮಯಂಪರಮಂಯಯುಃ ॥೪೩॥ ತತೋವಿಶನ್ವನಂಚಂದ್ರಜ್ಯೋತ್ಸ್ನಾಯಾವದ್ವಿಭಾವ್ಯತೇ । ತಮಃಪ್ರವಿಷ್ಟಮಾಲಕ್ಷ್ಯತತೋನಿವವೃತುಃಸ್ತ್ರಿಯಃ ॥೪೪॥ ತನ್ಮನಸ್ಕಾಸ್ತದಾಲಾಪಾಸ್ತದ್ವಿಚೇಷ್ಟಾಸ್ತದಾತ್ಮಿಕಾಃ।

---

ನ್ನು, ನಯ-ಎತ್ತಿಕೊಂಡುಹೋಗು. ಎಂದು, ಕೇಶವಂ-ಕೃಷ್ಣನನ್ನು ಕುರಿತು, ಅಬ್ರವೀತ್-ನುಡಿದಳು, ॥೩೯॥ ಏವಂ-ಹೀಗೆ, ಉಕ್ತಃ-ಹೇಳಲ್ಪಟ್ಟವನಾಗಿ, ಸ್ಕಂಧಃ-ನನ್ನ ಹೆಗಲು,ಆರುಹ್ಯತಾಂ-ನಿನ್ನಿಂದೇರಲ್ಪಡಲಿ, ಇತಿ-ಹೀಗೆಂದು, ಪ್ರಿಯಾಂ-ಇಷ್ಟಳನ್ನು ಕುರಿತು, ಆಹ-ಹೇಳಿದನು. ತತಶ್ಚ-ಆಬಳಿಕಲಾಪರೋ, ಕೃಷ್ಣಃ-ಹರಿಯು, ಅಂತರ್ದಧೇ-ಕಾಣದಂತೆಅಡಗಿಕೊಂಡನು, ಸಾವಧೂಃ-ಹೆಮ್ಮೆಗೊಂಡಆಹೆಂಣು,ಅನ್ವತಪ್ಯತ-ಕೃಷ್ಣನುತಪ್ಪಿಸಿಕೊಂಡದ್ದರಿಂದ ಅನುತಾಪಗೊಂಡಳು॥೪೦॥ನಾಥ-ಒಡೆಯನೇ! ರಮಣ-ಆಡಿಸುವವನೇ! ಪ್ರೇಷ್ಠ-ಅತಿಪ್ರಿಯನೇ! ಮಹಾಭುಜ-ನೀಳವಾದತೋಳುಳ್ಳವನೇ! ಕ್ವಾಸಿಕ್ವಾಸಿ-ಎಲ್ಲಿರುವಿಯೆಲ್ಲಿರುವಿ, ಸಖೇ-ಗೆಳೆಯನಾದಕೃಷ್ಣನೇ! ಕೃಪಣಾಯಾಃ-ಬಡವಳಾದ, ದಾಸ್ಯಾಃ-ಸೇವಕಳಾದ, ಮೇ- ನನಗೆ, ತೇ-ನಿನ್ನ, ಸನ್ನಿಧಿಂ-ಸಮೀಪವನ್ನು, ದರ್ಶಯ-ತೋರಿಸು ॥೪೧॥ ಭಗವತಃ-ಭಗವಂತನಾದಕೃಷ್ಣನ, ಮಾರ್ಗಂ-ದಾರಿಯನ್ನು, ಅನ್ವಿಚ್ಛಂತ್ಯಃ-ಹುಡುಕುತಲಿರುವ, ಗೋಪ್ಯಃ-ಗೊಲ್ಲತಿಯರು, ಅವಿದೂರತಃ-ಹತ್ತಿರದಲ್ಲಿಯೇ! ಪ್ರಿಯವಿಶ್ಲೇಷಮೋಹಿತಾಂ-ಪ್ರಿಯ-ಕೃಷ್ಣನ, ವಿಶ್ಲೇಷ-ಅಗಲಿಕೆಯಿಂದ, ಮೋಹಿತಾಂ-ಅರುಹಿಲ್ಲದವಳಾದ್ದರಿಂದಲೇ, ದುಃಖಿತಾಂ-ಕ್ಲೇಶವುಳ್ಳ, ಸತೀಂ-ಸಾಧುಶೀಲೆಯಾದ ಗೋಪಿಯನ್ನು, ದದೃಶುಃ-ಕಂಡರು ॥೪೨॥ತಯಾ-ಅವಳಿಂದ, ಕಥಿತಂ-ಹೇಳಲ್ಪಟ್ಟದ್ದಾದ, ಮಾಧವಾತ್ಮಾನಪ್ರಾಪ್ತಿಂಚ-ಕೃಷ್ಣನಬಳಿಯಿಂದಾದಮಾನದಲಾಭವನ್ನು, ದೌರಾತ್ಮ್ಯಾತ್-ತನ್ನಗರ್ವದಿಂದಾದ, ಅವಮಾನಂಚ-ಅಪಮಾನವನ್ನೂ, ಆಕರ್ಣ್ಯ-ಕೇಳಿ, ಪರಮಂ-ಅಧಿಕವಾದ, ವಿಸ್ಮಯಂ-ಆಶ್ಚರ್ಯವನ್ನು, ಯಯುಃ-ಹೊಂದಿದರು ॥೪೩॥ ತತಃ-ಅಲ್ಲಿಂದ, ಚಂದ್ರಜ್ಯೋತ್ಸ್ನಾ-ಬೆಳದಿಂಗಳು, ಯಾವತ್-ಎಷ್ಟುಹೊತ್ತಿನವರೆಗೂ, ವಿಭಾವ್ಯತೇ-ಅನುಭವಿಸಲ್ಪಡುವುದೋ, ತಾವತ್-ಅಷ್ಟುಹೊತ್ತಿನವರೆಗೂ, ವನಂ-ಬೃಂದಾರಣ್ಯವನ್ನು, ಆವಿಶನ್-ಹೊಕ್ಕಿದ್ದರು. ಸ್ತ್ರಿಯಃ-ಹೆಂಗಳು, ತಮಃ-ಕತ್ತಲೆಯನ್ನು, ಪ್ರವಿಷ್ಟಂ-ಪ್ರವೇಶಿಸಿದ್ದನ್ನಾಗಿ, ಆಲಕ್ಷ್ಯ-ನೋಡಿ, ತತಃ-ಅಲ್ಲಿಂದ, ನಿವವೃತುಃ-ಹಿಂದಕ್ಕೆತಿರುಗಿದರು. ॥೪೪॥ ತನ್ಮನಸ್ಕಾಃ-ಆ

---

ನಾನು ನಡೆಯಲಾರೆನು, ನಿನ್ನಮನಸುಬಂದಸ್ಥಳಕ್ಕೆ ಎತ್ತಿಕೊಂಡುಹೋಗು ॥೩೯॥ ಎಂದು ಹೇಳಲ್ಪಟ್ಟಂತಾ ಕೃಷ್ಣನು ಆಸ್ತ್ರೀಯಳಂ ಕುರಿತು, ನನ್ನಹೆಗಲಮೇಲೆ ಕುಳಿತುಕೋ ಎಂದುನುಡಿದು ಅಂತರ್ಧಾನವನೈದಿದನು. ಆಸ್ತ್ರೀಯಳೂ ವ್ಯಸನಪಟ್ಟಳು ॥೪೦॥ [ಅದೆಂತೆನೆ] ಹಾ, ನಾಥನೇ! ರಮಣನೇ ಪ್ರಿಯನಾದವನೇ ಮಹಾಭುಜನಾದ ಶ್ರೀಕೃಷ್ಣನೇ ಎಲ್ಲಿರುವಿ ಎಲ್ಲಿರುವಿ, ಎಲೈ ಸಖನೇ! ದೀನಳಾದ ಮತ್ತು ದಾಸಿಯಾದ ನನಗೆ ನಿನ್ನಸನ್ನಿಧಾನವಂ ತೋರಿಸು ॥೪೧॥ [ಎಂದಆಸ್ತ್ರೀಯು ವಿಲಾಪನಂಗೆಯ್ಯುತ್ತಿರಲಾಗಿ] ಶ್ರೀಕೃಷ್ಣನಂ ಹುಡುಕಿಕೊಂಡುಬರುವ ಗೋಪಸ್ತ್ರೀಯರುಗಳು ಸಮೀಪದಲ್ಲಿ ಕೃಷ್ಣವಿರಹದಿಂದ ದುಃಖಿತಳಾಗಿವಿ ವಶಳಾದ ಆಸ್ತ್ರೀಯಳಂ ಕಂಡರು ॥೪೨॥ ಆಸ್ತ್ರೀಯು ಕೃಷ್ಣನಿಂದ ತನಗೆಉಂಟಾದ ಬಹುಮಾನವಂ ತನ್ನಗರ್ವದಿಂದುಂಟಾದ ಅವಮಾನವಂ ಸಹ ಪೇಳಲಾಗಿ, ಅದಂಕೇಳಿ ಆಗೋಪಸ್ತ್ರೀಯರುಗಳು ಆಶ್ಚರ್ಯವಂ ಪಡುವರಾದರು ॥೪೩॥ ಆರಾತ್ರಿಯಲ್ಲಿ ಎಷ್ಟುಹೊತ್ತು ಚಂದ್ರನ ಬೆಳದಿಂಗಳು ಇತ್ತೋ ಅಷ್ಟುಹೊತ್ತು ವನದಲ್ಲಿ ಕೃಷ್ಣನಂಹುಡುಕಿ, ಕತ್ತಲುಂಟಾದ್ದನ್ನು ನೋಡಿ ಆಸ್ತ್ರೀಯೊಡನೆ ಎಲ್ಲರೂ ಹಿಂದಿರುಗಿದರು ॥೪೪॥ ಕೃಷ್ಣನಲ್ಲಿಯೇ ಮನಸ್ಸುಳ್ಳವರಾಗಿ, ಕೃಷ್ಣನ ಪ್ರಸ್ತಾಪಂಗಳನ್ನೇ ಆಡುತ್ತಲಿರುವರಾಗಿ, ಆತ

ತದ್ಗುಣಾನೇವಗಾಯಂತ್ಯೋನಾತ್ಮಾಗಾರಾಣಿಸಸ್ಮರುಃ ॥೪೫॥ ಪುನಃಪುಳಿನಮಾಗತ್ಯಕಾಳಿಂದ್ಯಾಃಕೃ
ಷ್ಣಭಾವಿತಾಃ । ಸಮವೇತಾಜಗುಃಕೃಷ್ಣಂತದಾಗಮನಕಾಂಕ್ಷಿತಾಃ॥ ॥೪೬
ಇತಿಶ್ರೀಮದ್ಭಾಗವತೆ-ದಶಮಸ್ಕಂಧೆ-ತ್ರಿಂಶೋಧ್ಯಾಯಃ

---

ಕೃಷ್ಣನಲ್ಲಿಯೇ ಮನಸ್ಸುಳ್ಳವರು, ತದಾಲಾಪಾಃ-ಆಕೃಷ್ಣನನ್ನು ಕುರಿತಮಾತುಗಳುಳ್ಳವರು, ತದ್ವಿಚೇಷ್ಟಾಃ-ಆಕೃಷ್ಣನಂತೆನಟನೆಯುಳ್ಳವರು, ತದಾತ್ಮಿಕಾಃ-ತನ್ಮಯೆಯರಾದವರೂ, ತದ್ಗುಣಾನೇವ-ಆಕೃಷ್ಣನಗುಣಗಳನ್ನೇ, ಗಾಯಂತ್ಯಃ-ಹಾಡುತಲಿರುವವರೂಆದ್ದರಿಂದಲೇ, ಆತ್ಮಾಗಾರಾಣಿ-ತಮ್ಮಮನೆಗಳನ್ನು, ನಸಸ್ಮರುಃ-ನೆನಪುಮಾಡಿಕೊಳ್ಳಲಿಲ್ಲವು॥೪೫॥ಪುನಃ-ಮರಳಿಯೂ, ಕೃಷ್ಣಭಾವಿತಾಃ-ಕೃಷ್ಣನಂಧ್ಯಾನಿಸುವವರಾಗಿ, ಕಾಳಿಂದ್ಯಾಃ-ಯಮುನಾನದಿಯ, ಪುಳಿನಂ-ಮರಳತಿಟ್ಟನ್ನು ಕುರಿತು, ಆಗತ್ಯ-ಬಂದು, ಸಮವೇತಾಸ್ಸತ್ಯಃ-ಕೂಡಿದವರಾಗಿ, ತದಾಗಮನಕಾಂಕ್ಷಿತಾಃ-ಆಕೃಷ್ಣನಬರುವಿಕೆಯೇ ಬಯಕೆಯಾಗಿ ಉಳ್ಳವರಾಗಿ, ಕೃಷ್ಣಂ-ಕೃಷ್ಣನನ್ನೇ, ಜಗುಃ-ಹಾಡಿದರು ॥೪೬॥

ಇತಿಶ್ರೀಮದ್ಭಾಗವತೇ ದಶಮಸ್ಕಂಧೇ ತ್ರಿಂಶೋಧ್ಯಾಯಃ.

---

ನವ್ಯಾಪಾರಂಗಳನ್ನೇ ತಾವೂ ಮಾಡುತ್ತ, ಆಕೃಷ್ಣಗುಣಂಗಳನೇ ಗಾನಂ ಗೆಯ್ವುತ್ತ, ತದಾತ್ಮಿಕೆಯರಾಗಿ, ಆಗೋಪಸ್ತ್ರೀಯರುಗಳು ತಮ್ಮಮನೆಗಳಂ ಮರೆತರು ॥೪೫॥ ಮರಳಿಯೂ ಯಮುನಾನದಿಯ ಮರಳುದಿಣ್ಣೆಗಳಿಗೆ ಬಂದು ಗುಂಪಾಗಿಕೂಡಿ ಅವನ ಆಗಮನವನ್ನೇ ನಿರೀಕ್ಷಿಸಿಕೊಂಡು ಶ್ರೀಕೃಷ್ಣನನ್ನೇ ಗಾನಂ ಗೆಯ್ದರು॥ ... ... .. ... .. ॥೪೬॥ ‡ ॥

ಇಂತು ಶುಕಮುನಿಯು ಪರೀಕ್ಷಿದ್ರಾಯನಿಗೆ ನಿರೂಪಿಸಿದನೆಂದು ಸೂತಪೌರಾಣಿಕನು ನೈಮಿಶಾ
ರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಹೇಳಿದನೆಂಬಲ್ಲಿಗೆ-ಶ್ರೀಮನ್ಮಹೀಶೂರಪುರವ
ರಾಧೀಶ ಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜ ವಿರಚಿತಮಪ್ಪ, ಶ್ರೀ
ಭಾಗವತದ "ಶ್ರೀಕೃಷ್ಣರಾಜ ವಾಣೀವಿಲಾಸವು" ಎಂಬ ಕರ್ಣಾಟಕ
ಭಾಷಾವ್ಯಾಖ್ಯಾನದಲ್ಲಿ ದಶಮಸ್ಕಂಧದೊಳು ೩೦ನೆಯ
ಅಧ್ಯಾಯವು ಸಂಪೂರ್ಣವಾದುದು.

ಮಂಗಳಮಸ್ತು.

**※ ಗೋಪಿಕಾಗೀತ ಪ್ರಾರಂಭಃ ※**

ಗೋಪ್ಯಃ॥ ಜಯತಿತೇಽಧಿಕಂಜನ್ಮನಾವ್ರಜಃ ಶ್ರಯತಇಂದಿರಾಶಶ್ವದತ್ರಹಿ । ದಯಿತದೃಶ್ಯತಾಂ ದಿಕ್ಷುತಾವಕಾಸ್ತ್ವಯಿಧೃತಾಸವಸ್ತ್ವಾಂವಿಚಿನ್ವತೆ ॥೧॥ ಶರದುದಾಶಯೆಸಾಧುಜಾತಸತ್ಸರಸಿಜೋದರಶ್ರೀಮುಷಾದೃಶಾ । ಸುರತನಾಥತೆಽಶುಲ್ಕದಾಸಿಕಾವರದನಿಘ್ನತೋನೆಹಕಿಂವಧಃ ॥೨॥ ವಿಷಜಲಾಶಯಾದ್ವ್ಯಾಳರಾಕ್ಷಸಾದ್ವರ್ಷಮಾರುತಾದ್ವೈದ್ಯುತಾನಲಾತ । ವೃಷಮಯಾತ್ಮಜಾದ್ವಿಶ್ವತೋಭ

---

೩೧ನೆಯಅಧ್ಯಾಯದಪ್ರತಿಪದಟೀಕೆ.

[ಗೋಪಿಯರಹಾಡು] ಹೇದಯಿತ-ಎಲೈಪ್ರಿಯನಾದಕೃಷ್ಣನೇ! ತೇ-ನಿನ್ನ, ಜನ್ಮನಾ-ಅವತಾರದಿಂದ, ವ್ರಜಃ-ನಂದಗೋಕುಲವು, ಅಧಿಕಂ-ಅತಿಶಯವಾಗಿ, ಜಯತಿ-ಸರ್ವೋತ್ತಮವಾಗಿದೆ, ಅತ್ರ-ಇಲ್ಲಿ, ಇಂದಿರಾ-ಲಕ್ಷ್ಮಿಯು, ಶಶ್ವತ್-ಬಾರಿಬಾರಿಗೂ, ಶ್ರಯತೇಹಿ-ಆಶ್ರಯಿಸಿರುವಳಲ್ಲವೇ? ತಾವಕಾಃ-ನಿನ್ನವರು, ತ್ವಯಿಧೃತಾಸವಃ-ನಿನ್ನಲ್ಲಿಇಡಲ್ಪಟ್ಟಪ್ರಾಣಗಳುಳ್ಳವರಾಗಿ, ದಿಕ್ಷು-ದಿಕ್ಕುಗಳಲ್ಲಿ, ತ್ವಾಂ-ನಿನ್ನನ್ನು, ವಿಚಿನ್ವತೇ-ಹುಡುಕುತ್ತಿದ್ದಾರೆ. ಆದ್ದರಿಂದ, ದೃಶ್ಯತಾಂ-ನಿನ್ನಿಂದ ಕಾಣಿಸಲ್ಪಡಲಿ॥೧॥ಹೇಸುರತನಾಥ-ಎಲೈಸಂಭೋಗಕ್ಕೆಪತಿಯೇ, ವರದ-ಬೇಡಿದ್ದನ್ನು ನೀಡುವವನೇ! ಶರದುದಾಶಯೆ-ಶರತ್ಕಾಲದಕೆರೆಮಡುವಿನಲ್ಲಿ, ಸಾಧು-ಚನ್ನಾಗಿ, ಜಾತ-ಹುಟ್ಟಿದ, ಸತ್ಸರಸಿಜ-ಉತ್ತಮವಾದಕಮಲದ, ಉದರ-ಗರ್ಭದ, ಶ್ರೀ-ಕಾಂತಿಯನ್ನು, ಮುಷಾ-ಹರಿಸುತಲಿರುವ, ದೃಶಾ-ದೃಷ್ಟಿಯಿಂದ, ಅಶುಲ್ಕದಾಸಿಕಾಃ-ಬೆಲೆಯಿಲ್ಲದದಾಸಿಯರಾದನಮ್ಮನ್ನು, ನಿಘ್ನತಃ-ಕೊಲ್ಲುತಲಿರುವ, ತೇ-ನಿನಗೆ, ಇಹ-ಇಲ್ಲಿ, ವಧಃ-ಹೆಂಗೊಲೆಯು, ನಕಿಂ-ಇಲ್ಲವೇನು? ॥೨॥ ಹೇಋಷಭ-ಎಲೈಶ್ರೇಷ್ಠನಾದಕೃಷ್ಣನೇ!ವಿಷಜಲಾಶಯಾತ್-ವಿಷದನೀರಿನಮಡುವಿನದೆಸೆಯಿಂದಲೂ, ವ್ಯಾಳರಾಕ್ಷಸಾತ್-ಅಜಗರಸರ್ಪನಾದಅಘಾಸುರನಿಂದಲೂ, ವರ್ಷಮಾರುತಾತ್-ಮಳೆಯದೆಸೆಯಿಂದಲೂ ಗಾಳಿಯದೆಸೆಯಿಂದಲೂ, ವೈದ್ಯುತಾನಲಾತ್-ಮಿಂಚಿನಗಾಳಿಎಂಬ ಸಿಡಿಲಿನಗಾಳಿಯದೆಸೆಯಿಂದಲೂ, ವೃಷ-ಅರಿಷ್ಟಾಸುರನದೆಸೆಯಿಂದಲೂ, ಮಯಾತ್ಮಜಾತ್-ಮಯನಮಗನಾದವ್ಯೋಮಾಸುರನದೆಸೆಯಿಂದಲೂ, ವಿಶ್ವತೋಭಯಾತ್-ಎಲ್ಲಭಯದೆಸೆಯಿಂದಲೂ, ಮುಹುಃ-ಬಾರಿಬಾರಿಗೂ, ವಯಂ-ನಾವು, ತೇ-ನಿನ್ನಿಂದ, ರಕ್ಷಿತಾಃ-

---

೩೧ನೆಯ ಅಧ್ಯಾಯವು.

ಶ್ರೀಧರೀಯಶ್ಲೋಕಃ॥ ಏಕತ್ರಿಂಶೇನಿಶಾಯಾಂತಾಃ ಪುನಃ ಪುಳಿನಮಾಗತಾಃ । ಕೃಷ್ಣಮೇವಾನುಗಾ
ಯಂತ್ಯಃಪ್ರಾರ್ಥಯಂತೇತದಾಗಮಂ॥ ॥ ‡ ॥

ಮೂವತ್ತೊಂದನೆಯ ಅಧ್ಯಾಯದಲ್ಲಿ ಗೋಪಸ್ತ್ರೀಯರುಗಳು ಕೃಷ್ಣನಂ ಹುಡುಕಿ ಎಲ್ಲಿಯೂ ಕಾಣದೆ ನಿರಾಶೆಯಂ ಮಾಡಿಕೊಂಡು ಪುನಃ ಯಮುನಾನದಿಯ ಸೈಕತಕ್ಕೆಬಂದು ಆಕೃಷ್ಣಾಗಮನವನ್ನೇ ನಿರೀಕ್ಷಿಸಿಕೊಂಡು ಕೃಷ್ಣನನ್ನೇ ಗಾನವಂಮಾಡಿದರು ಎಂಬಅರ್ಥವಂ ಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸುವದೆಂತೆನೆ,--

ಎಲೈ ಅರಸನೇ! ಅನಂತರದಲ್ಲಿ ಗೋಪಿಕಾಸ್ತ್ರೀಯರುಗಳು ಶ್ರೀಕೃಷ್ಣನಂ ಕಾಣದೆ ಹುಡುಕಿದವರಾಗಿ ಶ್ರೀಕೃಷ್ಣನಂ ಕುರಿತು ವಿಲಾಪಪೂರ್ವಕವಾಗಿ ನುಡಿದರದೆಂತೆನೆ, ಎಲೈ ಪ್ರಾಣಕಾಂತನಾದ ಶ್ರೀಕೃಷ್ಣನೇ! ನೀನು ಯಿಲ್ಲಿ ಆವಿರ್ಭವಿಸಿದ್ದರಿಂದ ಈವ್ರಜಾದಿಕವು ಸರ್ವೋತ್ಕೃಷ್ಟವಾಗಿದೆ. ಆಕಾರಣದಿಂದಲೇ ಲಕ್ಷ್ಮಿಯು ಈವ್ರಜದಲ್ಲಿ ಯೇಸಾನ್ನಿಧ್ಯವಂ ಮಾಡಿರುವಳು. ನಿನಗೋಸುಗವೇ ಪ್ರಾಣಂಗಳಂ ಧರಿಸಿರುವ ನಿನ್ನಸಂಬಂಧಿಗಳಾದ ಗೋಪಿಕಾಜನರು ದಿಕ್ಕುಗಳಲ್ಲಿ ನಿನ್ನಂ ಹುಡುಕುತ್ತಾರೆ ನಮಗೆ ಪ್ರತ್ಯಕ್ಷನಾಗು ॥೧॥ ಎಲೈ, ಸಂಭೋಗಪತಿಯಾದ ಇಷ್ಟಾರ್ಥಪ್ರದನಾದ ಶ್ರೀಕೃಷ್ಣನೇ ಶರತ್ಕಾಲಿಕ ಸರೋವರದಲ್ಲಿ ಕೋಮಲವಾಗಿ ಬೆಳದಿರುವ ಉತ್ತಮವಾದ ಪದ್ಮಗರ್ಭದ ಕಾಂತಿಯ ನಹರಿಸುವ ನಿನ್ನದೃಷ್ಟಿಪ್ರಸಾದದಿಂದಲೇ ದ್ರವ್ಯವನು ಕೊಡದೆ ನಿನಗೆ ಸ್ವಾಧೀನರಾದ ದಾಸಿಯರಾದ ನಮ್ಮಂಪ್ರಹರಿಸುವ ನಿನಗೆ ಸ್ತ್ರೀವಧೆಯ ದೋಷವಿಲ್ಲವೇನು ॥೨॥ ಎಲೈ ಶ್ರೇಷ್ಠನಾದ ಕೃಷ್ಣನೇ! ವಿಷಮಯವಾದ ಉದಕದದೆಸೆಯಿಂದಲೂ, ಸರ್ಪಾಕಾರ

ಯಾದ್ವೃಷಭ ತೇವಯಂರಕ್ಷಿತಾಮುಹುಃ ॥೩॥ ನಖಲುಗೋಪಿಕಾನಂದನೋಭವಾನಖಿಲದೇಹಿನಾಮಂತ
ರಾತ್ಮದೃಕ್ । ವಿಖನಸಾರ್ಥಿತೋವಿಶ್ವಗುಪ್ತಯೆಸಖಉದೇಯಿವಾನ್ಸಾತ್ವತಾಂಕುಲೆ ॥೪॥ ವಿರಚಿ
ತಾಭಯಂವೃಷ್ಣಿಧುರ್ಯತೇಚರಣಮೀಯುಷಾಂಸಂಸೃತೇರ್ಭಯಾತ್ । ಕರಸರೋರುಹಂಕಾಂತಕಾಮ
ದಂಶಿರಸಿಧೇಹಿನಃಶ್ರೀಕರಗ್ರಹಂ॥೫॥ವ್ರಜಜನಾರ್ತಿಹನ್ವೀರಯೋಷಿತಾಂನಿಜಜನಸ್ಮಯಧ್ವಂಸನಸ್ಮಿ
ತ॥ಭಜಸಖೇಭವತ್ಕಿಂಕರೀಃಸ್ಮನೋಜಲರುಹಾನನಂಚಾರುದರ್ಶಯ॥೬॥ ಪ್ರಣತದೇಹಿನಾಂಪಾಪಕರ್ಶ
ನಂತೃಣಚರಾನುಗಂಶ್ರೀನಿಕೇತನಂ । ಫಣಿಫಣಾರ್ಪಿತಂತೇಪದಾಂಬುಜಂಕೃಣುಕುಚೇಷುನಃಕೃಂಧಿ

---

ಪಾಲಿಸಲ್ಪಟ್ಟವರಾದೆವು ॥೩॥ ಸಖ-ಗೆಳೆಯನೇ, ಭವಾನ್-ನೀನು, ಗೋಪಿಕಾನಂದನಃ-ಯಶೋದೆಯಮಗನು, ನಖಲು-ಅಲ್ಲ ವಷ್ಟೆ (ಇನ್ನಾರೆಂದರೆ.) ಅಖಿಲದೇಹಿನಾಂ-ಸಕಲಪ್ರಾಣಿಗಳಿಗೂ, ಅಂತರಾತ್ಮದೃಕ್-ಒಳಗಣ ಬುದ್ಧಿಗೆ ಸಾಕ್ಷಿಚೈತನ್ಯವಾಗಿ ರುವ, ಆನೀನು, ವಿಖನಸಾ-ಬ್ರಹ್ಮನಿಂದ, ವಿಶ್ವಗುಪ್ತಯೇ-ಲೋಕರಕ್ಷಣೆಕ್ಕೋಸುಗ, ಅರ್ಥಿತಸ್ಸನ್-ಪ್ರಾರ್ಥಿಸಲ್ಪಟ್ಟವ ನಾಗಿ, ಸಾತ್ವತಾಂ-ಸಾತ್ವತರೆಂಬಯಾದವರ, ಕುಲೇ, ವಂಶದಲ್ಲಿ, ಉದೇಯಿವಾನ್-ಹುಟ್ಟಿದವನಾದಿ ॥೪॥ ಹೇಕಾಂತ-ಎಲ್ಲೌ ಮನೋಹರನಾದ, ವೃಷ್ಣಿಧುರ್ಯ-ವೃಷ್ಣಿಗಳೆಂಬಯಾದವರಲ್ಲಿ ಭಾರವಾಹಕನೆನಿಸಿ ರಕ್ಷಕನಾಗಿರುವಕೃಷ್ಣನೇ। ಸಂಸೃತೇಃ-ಸಂಸಾರದ. ಭಯಾತ್-ಅಂಜಿಕೆಯಿಂದ, ಶರಣಂಈಯುಷಾಂ-ರಕ್ಷಕನೆಂದುನಿನ್ನ ಹೊಂದಿದವರಿಗೆ, ವಿರಚಿತಾಭಯಂ-ಮಾಡ ಲ್ಪಟ್ಟ ಅಭಯವುಳ್ಳಂಥಾ, ಕಾಮದಂ-ಬೇಡಿದವರಗಳನ್ನು ಕೊಡುವಂಥಾ, ಶ್ರೀಕರಗ್ರಹಂ-ಲಕ್ಷ್ಮೀದೇವಿಯಕೈಯಂಪಿಡಿದಂಥಾ-ತೇ-ನಿನ್ನ, ಕರಸರೋರುಹಂ-ಹಸ್ತಕಮಲವನ್ನು, ನಃ-ನಮ್ಮ, ಶಿರಸಿ-ತಲೆಯಲ್ಲಿ, ಧೇಹಿ-ಇಡು ॥೫॥ ವ್ರಜಜನಾರ್ತಿಹನ್-ವ್ರಜಜನ-ಗೋಕುಲದವರ, ಆರ್ತಿಹನ್-ಪೀಡೆಗಳಂಪರಿಹರಿಸುವವನಾದ, ವೀರ-ಶೂರನಾದ, ನಿಜ .. ಸ್ಮಿತ-ನಿಜಜನ-ತನ್ನವರ, ಸ್ಮಯ-ಗರ್ವವನ್ನು, ಧ್ವಂಸನ-ನಾಶಗೊಳಿಸುವ, ಸ್ಮಿತ-ಕಿರುನಗೆಯುಳ್ಳವನಾದ, ಸಖೇ-ಗೆಳೆಯನಾದಕೃಷ್ಣನೇ! ಭವತ್ಕಿಂಕರೀಃ-ನಿನ್ನಸೇವಕಿಯರಾದ, ನಃ-ನಮ್ಮನ್ನು, ಭಜ-ಪ್ರೀತಿಸಿಸೇರು, ಸ್ಮ-ನಿಶ್ಚಯವಾಗಿ, ಚಾರು-ಚಲುವಾದ, ಜಲರುಹಾನನಂ-ತಾವರೆಯಂತಿರುವನಿನ್ನ ಮೊಗವನ್ನು, ಯೋಷಿತಾಂ-ಹೆಂಗಳಾದನಮಗೆ. ದರ್ಶಯ-ತೋರಿಸು ॥೬॥ ಪ್ರಣತದೇಹಿನಾಂ-ಪೊಡಮ ಡುವಪ್ರಾಣಿಗಳಿಗೆ, ಪಾಪಕರ್ಶನಂ-ಪಾಪಕ್ಷಯಮಂಗೆಯ್ಯುವ, ತೃಣಚರಾನುಗಂ-ತೃಣಚರ-ಹುಲ್ಲಂಮೇಯ್ವಗೋವುಗಳನ್ನು, ಅನುಗಂ-ಅನುಸರಿಸಿಹೋಗುವ, ಶ್ರೀನಿಕೇತನಂ-ಶ್ರೀ-ಲಕ್ಷ್ಮೀದೇವಿಗೂಕಾಂತಿಗೂ, ನಿಕೇತನಂ-ವಾಸಸ್ಥಾನವಾದ, ಫಣಿಫಣಾರ್ಪಿತಂ-ಫಣಿ-ಕಾಳಿಯಸರ್ಪನ, ಫಣ-ಹೆಡೆಗಳಲ್ಲಿ, ಅರ್ಪಿತಂ-ಇರಿಸಲ್ಪಟ್ಟ, ತೇ-ನಿನ್ನ, ಪದಾಂಬುಜಂ-ಅಡಿದಾವರೆಯನ್ನು, ನಃ-ನಮ್ಮ, ಕುಚೇಷು-ಸ್ತನಗಳಲ್ಲಿ, ಕೃಣು-ಮಾಡು(ಇರಿಸು) ಹೃಚ್ಛಯಂ-ಹೃದಯದಲ್ಲಿಮಲಗಿರುವಕಾಮನನ್ನು, ಕೃಂಧಿ-ಛೇ

---

ನಾದ ರಾಕ್ಷಸನವಸೆಯಿಂದಲೂ, ಮಹಾ ವೃಷ್ಟಿಯವಸೆಯಿಂದಲೂ, ಚಂಡಮಾರುತದ ವಸೆಯಿಂದಲೂ,ಸಿಡಿ ಲಿನಪ್ರಹಾರದ ವಸೆಯಿಂದಲೂ, ಮಯಪುತ್ರನಾದ ವೃಷಭಾಸುರನಿಂದಲೂ, ಇನ್ನೂ ನಾನಾಪ್ರಕಾರವಾದಮ ಹಾಭಯದ ವಸೆಯಿಂದಲೂಕೂಡ, ನಮ್ಮಂರಕ್ಷಿಸಿದ ನೀನು ಏಕೆ ಉಪೇಕ್ಷೆಯಂ ಮಾಡುತ್ತೀಯ ॥೩॥ ಎಲೈಪ ರಮ ಮಿತ್ರನಾದ ಶ್ರೀಕೃಷ್ಣನೇ, ನೀನು ನಮ್ಮಂತಾ ಗೋಪಿಕಾಸ್ತ್ರೀಯರುಗಳಿಗೆ ಮಾತ್ರವೇ ಸಂತೋಷ ಕರನಲ್ಲವು, ಮತ್ತೆಯೇನಂದರೆ ಸಮಸ್ತಪ್ರಾಣಿಗಳಿಗೂ ಬುದ್ಧಿಸಾಕ್ಷಿಯಾದವನು ನೀನು. ಜಗದ್ರಕ್ಷಾರ್ಥ ವಾಗಿ ಬ್ರಾಹ್ಮಣರಿಂದ ಪ್ರಾರ್ಥಿತನಾಗಿ ಸಾತ್ವತಕುಲದಲ್ಲಿ ಅವತರಿಸಿದೆ ॥೪॥ ಎಲೈ ವೃಷ್ಣಿಕುಲಶ್ರೇಷ್ಠನಾ ದ ಶ್ರೀಕೃಷ್ಣನೇ ಸಂಸಾರಭಯದಿಂದ ನಿನ್ನಪಾದವ ನೆಮ್ಮಿರುವ ಸತ್ಪುರುಷರಿಗೆ ಅಭಯಪ್ರದವಾದ। ಇಷ್ಟಾ ರ್ಥಪ್ರದವಾದ ಲಕ್ಷ್ಮೀದೇವಿಯ ಪಾಣಿಗ್ರಹಣವಂ ಮಾಡಿದ, ನಿನ್ನ ಕರಕಮಲವಂ ನಮ್ಮ ಶಿರಸ್ಸಿನಲ್ಲಿ ಇರಿ ಸು ॥೫॥ ವ್ರಜವಾಸಿಗಳಾದ ಜನರಕಷ್ಟವಂ ಪರಿಹರಿಸುವನೇ! ವೀರನಾದವನೇ, ಸ್ವಜನರಗರ್ವವಂ ಭಂಜ ಸಿಸುವ ನಗುವುಳ್ಳವನೇ ಕೃಷ್ಣನೇ ನಿನ್ನನ್ನೇನಂಬಿರುವ ಸೇವಕಿಯರಾದ ನಮ್ಮಂಭಜಿಸು. ಸುಂದರವಾದ ಮುಖಪದ್ಮವ ನಮಗೆತೋರಿಸು ॥೬॥ ಎಲೈ ಶ್ರೀಕೃಷ್ಣನೇ! ಪ್ರಣತರಾದ ಪ್ರಾಣಿಗಳ ಪಾಪನಾಶಕವಾದಪ ಶುಗಳನನುಸರಿಸಿ ಸಂಚರಿಸುವುದಾದ ಕಾಂತಿಗೆ ಆವಾಸಸ್ಥಾನವಾದ ಕಾಳಿಯ ಸರ್ಪದಹೆಡೆಗಳಲ್ಲಿ ಇಡಲ್ಪ

ಹೃಚ್ಛಯಂ ||೭|| ಮಧುರಯಾಗಿರಾವಲ್ಗುವಾಕ್ಯಯಾಬುಧಮನೋಜ್ಞಯಾಪುಷ್ಕರೇಕ್ಷಣ | ವಿಧಿಕರೀರಿಮಾವೀರಮುಹ್ಯತೀರಧರಸೀಧುನಾಪ್ಯಾಯಯಸ್ವನಃ ||೮|| ತವಕಥಾಮೃತಂತಪ್ತಜೀವನಂಕವಿಭಿರೀಡಿತಂಕಲ್ಮಷಾಪಹಂ | ಶ್ರವಣಮಂಗಳಂಶ್ರೀಮದಾತತಂಭುವಿಗೃಣಂತಿಯೇಭೂರಿದಾಜನಾಃ ||೯|| ಪ್ರಹಸಿತಂಪ್ರಿಯಪ್ರೇಮವೀಕ್ಷಿತಂವಿಹರಣಂಚತೇಧ್ಯಾನಮಂಗಳಂ | ರಹಸಿಸಂವಿದೋಯಾಹೃದಿಸ್ಪೃಶಃಕುಹಕನೋಮನಃಕ್ಷೋಭಯಂತಿಹಿ ||೧೦|| ಚಲಸಿಯದ್ವ್ರಜಾಚ್ಚಾರಯನ್ಪಶೂನ್ನಳಿನಸುಂದರಂನಾಥತೇಪದಂ | ಶಿಲತೃಣಾಂಕುರೈಸ್ಸೀದತೀತಿನಃಕಲಿಲತಾಂಮನಃಕಾಂತಗಚ್ಛತಿ ||೧೧|| ದಿನಪರಿಕ್ಷಯೇನೀಲಕುಂತಲೈರ್ವನರುಹಾನನಂಬಿಭ್ರದಾವೃತಂ | ಘನರಜಸ್ವಲಂದ

---

ದಿಸು ||೭|| ವೀರ-ಶೂರನಾದ, ಹೇಪುಷ್ಕರೇಕ್ಷಣ-ಎಲೈಕಮಲಲೋಚನನೇ! ಮಧುರಯಾ-ಸ್ವಭಾವದಿಂದಪ್ರಿಯವಾಗಿಯೂ, ವಲ್ಗುವಾಕ್ಯಯಾ-ಮನೋಹರವಾದನುಡಿಗಳುಳ್ಳದ್ದಾಗಿಯೂ, ಬುಧಮನೋಜ್ಞಯಾ-ವಿದ್ವಾಂಸರಿಗೆಸಂತೋಷಕರವಾಗಿಯೂ ಇರುವ, ಗಿರಾ-ನಿನ್ನಮಾತಿನಿಂದ, ಮುಹ್ಯತೀಃ-ಮೋಹಗೊಳ್ಳುತಲಿರುವ, ವಿಧಿಕರೀಃ-ನಿನ್ನಆಜ್ಞೆಯಂಮಾಡುವ, ಕಿಂಕರಿಯರಾದ, ಇಮಾಃ-ಈನಮ್ಮನ್ನು, ಅಧರಶೀಧುನಾ-ತುಟಿಯಅಮೃತದಿಂದ, ಆಪ್ಯಾಯಯಸ್ವ-ತೃಪ್ತಿಗೊಳಿಸು||೮||ತಪ್ತಜೀವನಂ-ತಪ್ತ-ತಾಪತ್ರಯದಲ್ಲಿಬೆಂದಪ್ರಾಣಿಗಳಿಗೆ, ಜೀವನಂ-ಉಜ್ಜೀವಕವಾದಂಥಾ, ಕವಿಭಿಃ-ವಿದ್ವಾಂಸರಿಂದ, ಈಡಿತಂ-ಸ್ತುತಿಸಲ್ಪಟ್ಟಂಥಾ, ಕಲ್ಮಷಾಪಹಂ-ಕಲ್ಮಷ-ಕಾಮ್ಯಕರ್ಮಸಂಚಿತಪಾಪಂಗಳನ್ನು, ಅಪಹಂ-ಪರಿಹರಿಸುವಂಥಾ, ಶ್ರವಣಮಂಗಳಂ-ಕಿವಿಗಳಿಗೆಶುಭವಾದಂಥಾ, ಶ್ರೀಮದಾತತಂ-ಶ್ರೀಮಂತರಲ್ಲಿಶಾಂತವಾದಂಥಾ, ಅಥವಾ, ಸಂಪತ್ತುಳ್ಳಂಥಾ,ವಿಸ್ತಾರವಾದಂಥಾ ತವ-ನಿನ್ನ, ಕಥಾಮೃತಂ-ಗುಣವರ್ಣನವೆಂಬ ಅತಿಶಯವಾದಅಮೃತವನ್ನು, ಭುವಿ-ಭೂಲೋಕದಲ್ಲಿ, ಯೇ-ಯಾವಮನುಷ್ಯರು, ಗೃಣಂತಿ-ನಿರೂಪಿಸುವರೋ, ತೇಜನಾಃ-ಆಜನರು, ಭೂರಿದಾಃ-ಪೂರ್ವಜನ್ಮದಲ್ಲಿ ಬಹುದಾನಧರ್ಮಗಳಂಗೆಯ್ದ ಪುಣ್ಯವಂತರು ||೯||ಕುಹಕ-ವಂಚಕನಾದ, ಪ್ರಿಯ-ಇಷ್ಟನಾದಕೃಷ್ಣನೇ!. ತೇ-ನಿನ್ನ, ಪ್ರಹಸಿತಂ-ಅತಿಶಯವಾದನಗೆಯೂ, ಪ್ರೇಮವೀಕ್ಷಿತಂ-ಸ್ನೇಹದನೋಟವೂ, ಧ್ಯಾನಮಂಗಳಂ-ಭಾವನಾಮಾತ್ರದಿಂದ ಶುಭಕರವಾದ, ವಿಹರಣಂಚ-ವಿಹಾರವೂ, ರಹಸಿ-ಏಕಾಂತದಲ್ಲಿ, ಹೃದಿಸ್ಪೃಶಃ-ನಮ್ಮಮನಸ್ಸಂಮುಟ್ಟುತಲಿರುವ, ಸಂವಿದಃ-ಸಂಕೇತಕ್ರೀಡಾಲೀಲೆಗಳೂ, ಯಾಃ-ಯಾವವೋ, ತಾಸ್ತು-ಅವುಗಳೂಕೂಡ, ನಃ-ನಮ್ಮ, ಮನಃ-ಹೃದಯವನ್ನು, ಕ್ಷೋಭಯಂತಿಹಿ-ಕಳವಳಪಡಿಸುತ್ತಿದೆಯಲ್ಲವೇ||೧೦|| ಕಾಂತ-ಮನೋಹರನಾದ, ನಾಥ-ಪತಿಯೇ, ಯತ್-ಯಾವಕಾರಣದಿಂದ, ಪಶೂನ್-ಗೋವುಗಳನ್ನು, ಚಾರಯನ್-ಮೇಯಿಸುತಲಿರುವನಾಗಿ, ವ್ರಜಾತ್-ಗೋಕುಲದದೆಸೆಯಿಂದ, ಚಲಸಿ-ಹೊರಟುತಿರುಗುತ್ತಿರುವೆಯೋ, ತತ್-ಆಕಾರಣದಿಂದ, ನಳಿನಸುಂದರಂ-ತಾವರೆಯಹಾಗೆಚೆಲುವಾದ, ತೇ-ನಿನ್ನ, ಪದಂ-ಪಾದವು, ಶಿಲತೃಣಾಂಕುರೈಃ-ಕಲ್ಲುಗಳಿಂದಲೂ ಹುಲ್ಲಕೊನೆಯಕೊನೆಗಳಿಂದಲೂ, ಸೀದತೀತಿ-ನೋಯುತಲಿದೆಯೆಂದು, ನಃ-ನಮ್ಮ, ಮನಃ-ಅಂತರಂಗವು, ಕಲಿಲತಾಂ-ಕಳವಳವನ್ನು, ಗಚ್ಛತಿ-ಹೊಂದುತಲಿದೆ ||೧೧||ವೀರ-ಶೂರನಾದಕೃಷ್ಣನೇ! ದಿನಪರಿಕ್ಷಯೇ-ಸಂಜೆಯಹೊತ್ತಿನಲ್ಲಿ, ನೀಲಕುಂತಲೈಃ-ಕಪ್ಪಾದ

---

ಟ್ಟ ನಿನ್ನಪಾದಪದ್ಮಮಂ ನಮ್ಮಕುಚಕಗಳಲ್ಲಿ ಯಿರಿಸು. ನಮ್ಮ ವಿರಹ ವ್ಯಥೆಯಂ ಪರಿಹರಿಸು ||೭|| ಎಲೈಪದ್ಮಲೋಚನನಾದ ಶ್ರೀಕೃಷ್ಣನೇ ಮನೋಹರಂಗಳಾದ ಮಾತುಗಳುಳ್ಳದ್ದಾಗಿ ವಿದ್ವಾಂಸರಚಿತ್ತಕ್ಕೆ ಸಂತೋಷಕರವಾದ ಮಧುರವಾದ ನಿನ್ನವಾಕ್ಕಿನಿಂದಲೂ, ಅಧರಾಮೃತದಿಂದಲೂ, ಕಿಂಕರಿಯರಾದ ಮೋಹಪಡುತಲಿರುವ ನಮ್ಮಂ ಸಂತೋಷಪಡಿಸು ||೮|| ಎಲೈ ಶ್ರೀಕೃಷ್ಣನೇ! ಸಂಸಾರ ತಾಪತಪ್ತರಾದ ಜನರಂಜೀವಿಸುವಂತೆ ಮಾಡುವ ಕವಿಗಳಿಂದ ಹೊಗಳಲ್ಪಡುವ ಪಾಪಪರಿಹಾರಕಮಾದ ಶ್ರೋತ್ರಸುಖಕರಮಾದ ಶ್ರೀಕರವಾದ ವಿಸ್ತೃತವಾದ ನಿನ್ನ ಚರಿತವೆಂಬ ಅಮೃತವಂ ಭೂಮಿಯಲ್ಲಿ ಯಾರುಹೇಳುತ್ತಾರೆಯೋ, ಆವರುಜನ್ಮಾಂತರದಲ್ಲಿ ಬಹಳ ದಾನಧರ್ಮಂಗಳಂ ಮಾಡಿರುವರು ||೯|| ಎಲೈ ಕಪಟಿಯಾದ ಪ್ರಿಯನೇ! ನಿನ್ನಮುಗುಳುನಗೆಯೂ ಪ್ರೇಮಾರ್ದ್ರವಾದ ನೋಟವು ಕ್ರೀಡೆಯೂ ಮನಸ್ಸಿಗೆ ಇಂಪಾದ ಸರಸಾಲಾಪಂಗಳುಯಿವೆಲ್ಲವೂ ಸ್ಮರಣಕೆಬಂದು ನಮ್ಮಂ ವ್ಯಥೆಪಡಿಸುತ್ತವೆ ||೧೦|| ಎಲೈ ಕಾಂತನೇ! ನೀನು ಯಾವಾಗ ಗೋವುಗಳಂ ಸಂಚಾರಂಗೆಯಿಸಿಕೊಂಡು ವ್ರಜದಿಂದ ಹೊರಡುತ್ತೀಯೋ ಆಗ ಪದ್ಮದಂತೆ ಸುಂದರವಾದ ನಿನ್ನಪಾದವು ಸಣ್ಣಕಲ್ಲುಗಳಿಂದಲೂ ತೃಣಂಗಳಿಂದಲೂ ಉಪದ್ರವವನೆಯ್ದುವುದೆಂದು ನಮ್ಮ ಮನಸ್ಸು ವ್ಯಥೆಪಡುತ್ತೆ ||೧೧||

ರ್ಶಯನ್ಮುಹುರ್ಮನಸಿನಸ್ಸ್ಮರಂವೀರಯಚ್ಛಸಿ ||೧೨|| ಪ್ರಣತಕಾಮದಂಪದ್ಮಜಾರ್ಚಿತಂಧರಣಿಮಂಡನಂಧ್ಯೇಯಮಾಪದಿ |ಚರಣಪಂಕಜಂಶಂತಮಂಚತೇರಮಣನಸ್ತನೇಷ್ವರ್ಪಯಾಧಿಹನ್ ||೧೩|| ಸುರತವರ್ಧನಂಶೋಕನಾಶನಂಸ್ವರಿತವೇಣುನಾಸುಷ್ಠುಚುಂಬಿತಂ | ಇತರರಾಗವಿಸ್ಮಾರಣಂನೃಣಾಂ ವಿತರವೀರನಸ್ತೇಧರಾಮೃತಂ ||೧೪|| ಅಟತಿಯದ್ಭವಾನಹ್ನಿಕಾನನಂತ್ರುಟಿಯುಗಾಯತೇತ್ವಾಮಪಶ್ಯತಾಂ | ಕುಟಿಲಕುಂತಲಂಶ್ರೀಮುಖಂಚತೇಜಡಉದೀಕ್ಷತಾಂಪಕ್ಷ್ಮಕೃದ್ದೃಶಾಂ ||೧೫|| ಪತಿಸುತಾನ್ವಯಭ್ರಾತೃಬಾಂಧವಾನತಿವಿಲಂಘ್ಯತೇಹ್ಯಚ್ಯುತಾಗತಾಃ | ಗತಿವಿದಸ್ತವೋದ್ಗೀತಮೋಹಿ

---

ಕುರುಳ್ಗಳಿಂದ,ಆವೃತಂ-ಬಳಸಲ್ಪಟ್ಟದ್ದಾಗಿಯೂ, ಘನರಜಸ್ವಲಂ-ಘನ-ಸಾಂದ್ರವಾದ, ರಜಸ್ವಲಂ-ಗೋಧೂಳಿಯುಳ್ಳ, ವನರುಹಾನನಂ-ಕಮಲದಹಾಗಿರುವಮುಖವನ್ನು, ಬಿಭ್ರತ್-ಧರಿಸಿಯಿರುವನೀನು, (ಆಮುಖವನ್ನೇ)ಮುಹುಃ-ಬಾರಿಬಾರಿಗೂ, ದರ್ಶಯನ್-ತೋರಿಸುತಲಿರುವನಾಗಿ, ನಃ-ನಮ್ಮ,ಮನಸಿ-ಹೃದಯದಲ್ಲಿ, ಸ್ಮರಂ-ಕಾಮವನ್ನು, ಯಚ್ಛಸಿ-ಕುಡತಲಿರುವಿ ||೧೨|| ಆಧಿಹನ್-ಚಿಂತಾಪರಿಹಾರಕನಾದ, ರಮಣ-ಕ್ರೀಡಿಸುವಕೃಷ್ಣನೇ! ಪ್ರಣತಕಾಮದಂ ಭಕ್ತರಬಯಕೆಗಳನ್ನುಕೊಡುವ, ಪದ್ಮಜಾರ್ಚಿತಂ-ಬ್ರಹ್ಮನಿಂದಪೂಜಿಸಲ್ಪಟ್ಟ, ಧರಣಿಮಂಡನಂ-ಭೂಮಿಗೆ ಅಲಂಕಾರವಾದ, ಆಪದಿಧ್ಯೇಯಂ-ಕಷ್ಟಕಾಲದಲ್ಲಿರಕ್ಷಕವಾಗಿಧ್ಯಾನಿಸಲ್ಪಡತಕ್ಕ, ಶಂತಮಂಚ-ಅತ್ಯಂತಶುಭಕರವೂಆದ, ತೇ-ನಿನ್ನ, ಚರಣಪಂಕಜಂ-ಪಾದಪದ್ಮವನ್ನು, ನಃ-ನಮ್ಮ, ಸ್ತನೇಷು-ಕುಚಗಳಲ್ಲಿ, ಅರ್ಪಯ-ಇರಿಸು ||೧೩||ವೀರ-ಮಹಾಶೂರನಾದಕೃಷ್ಣನೇ! ಸುರತವರ್ಧನಂ-ಸುಖವನ್ನುಹೆಚ್ಚಿಸುವಂಥಾ, ಶೋಕನಾಶನಂ-ದುಃಖವನ್ನುಪರಿಹರಿಸುವಂಥಾ,ಸ್ವರಿತವೇಣುನಾ-ಹೆಚ್ಚುಧ್ವನಿಯುಳ್ಳಕೊಳಲಿನಿಂದ, ಸುಷ್ಠು-ಚನ್ನಾಗಿ, ಚುಂಬಿತಂ-ಮುತ್ತಿಟ್ಟುಕೊಳ್ಳಲ್ಪಟ್ಟಂಥಾ, ನೃಣಾಂ-ಮನುಷ್ಯರಿಗೆ, ಇತರರಾಗವಿಸ್ಮಾರಣಂ-ವಿಷಯಅಕ್ಕರೆಗಳಂಮರೆಯಿಸುತಲಿರುವ, ತೇ-ನಿನ್ನ, ಅಧರಾಮೃತಂ-ತುಟಿಯಹಾಲನ್ನು, ನಃ-ನಮಗೆ, ವಿತರ-ಕೊಡು||೧೪||ಭವಾನ್-ನೀನು, ಅಹ್ನಿ-ಹಗಲಿನಲ್ಲಿ, ಕಾನನಂ-ಕಾಡಿನಲ್ಲಿ, ಅಟತಿ-ತಿರುಗುತಲಿರ ಯೋ, ತತ್-ಆಕಾರಣದಿಂದ, ತ್ವಾಂ-ನಿನ್ನನ್ನು, ಅಪಶ್ಯತಾಂ-ನೋಡದೇಯಿರುವನಮಗೆ, ತ್ರುಟಿ-ಅತಿಸೂಕ್ಷ್ಮವಾದತ್ರುಟಿಕಾಲವುಕೂಡ, ಯುಗಾಯತೇ-ಅತಿದೀರ್ಘವಾದ ಮಹಾಯುಗದಕಾಲದಂತೆಆಚರಿಸುವುದು.ಕುಟಿಲಕುಂತಲಂ-ಕೊಂಕಿದಕುರುಳ್ಗಳುಳ್ಳ, ತೇ-ನಿನ್ನ,ಶ್ರೀಮುಖಂಚ-ಸಂಪದ್ಯುಕ್ತವಾದಮೋರೆಯನ್ನೂ, ಉದೀಕ್ಷತಾಂ-ಕಣ್ಣೆತ್ತಿನೋಡುತಲಿರುವನಮ್ಮ, ದೃಶಾಂ-ಕಂಗಳಿಗೆ, ಪಕ್ಷ್ಮಕೃತ್-ರೆಪ್ಪೆಗಳನ್ನುಅಡ್ಡವಾಗಸೃಷ್ಟಿಸಿದಬ್ರಹ್ಮನು, ಜಡಃ-ಮೂಢನು||೧೫||ಕಿತವ-ಮೋಸಗಾರನಾದ, ಅಚ್ಯುತ-ಕೃಷ್ಣನೇ! ಪತಿ... .ವಾನ್-ಪತಿ-ಗಂಡ, ಸುತ-ಮಕ್ಕಳು, ಅನ್ವಯ ಕುಲಸ್ಥರು ಭ್ರಾತೃ-ಸೋದರರು, ಬಾಂಧವಾನ್-ನಂಟರನ್ನು, ಅತಿವಿಲಂಘ್ಯ-ಅತಿಕ್ರಮಿಸಿ, ತೇ-ನಿನ್ನಬಳಿಗೆ,

---

ಎಲೈಶ್ರೀಕೃಷ್ಣನೇ? ಸಾಯಂಕಾಲದಲ್ಲಿ ಗೋವುಗಳಂ ಮನೆಗೆ ಕರದುಕೊಂಡು ಬರುವಾಗ ನೀಲಂಗಳಾದ ಕುರುಳುಗಳಿಂದ ಆವೃತವಾದ್ದರಿಂದ ಭೃಂಗಯುಕ್ತವಾದ ಪದ್ಮದಂತೆ ಶೋಭಿಸುವ ಗೋಧೂಳಿಗಳಿಂ ವ್ಯಾಪ್ತವಾದ ಮುಖವಂ ಧರಿಸಿದವನಾಗಿ, ಆಮುಖವಂ ನಮಗೆ ತೋರಿಸುವವನಾಗಿ, ಮನಸ್ಸಿನಲ್ಲಿ ಕಾಮವಿಕಾರವಂ ಕೊಡುತ್ತೀಯೆ ||೧೨|| ಎಲೈ ಮನೋವ್ಯಥಾ ಪರಿಹಾರಕನಾದ ರಮಣನೇ? ನಮಸ್ಕರಿಸುವ ಜನರ ಇಷ್ಟಾರ್ಥವಾಗಿ ಬ್ರಹ್ಮನಿಂದಲೂ ಪೂಜಿತವಾಗಿ ಭೂಮಿಗೆ ಭೂಷಣವಾಗಿ ಕಷ್ಟಕಾಲದಲ್ಲಿ ಸ್ಮರಿಸಲ್ಪಟ್ಟು ಅವರ ಕಷ್ಟಂಗಳಂ ಪರಿಹರಿಸುವ ಶುಭಕರವಾದ ನಿನ್ನ ಪಾದಪದ್ಮವಂ ನಮ್ಮಸ್ತನಂಗಳಲ್ಲಿ ಅರ್ಪಿಸು ||೧೩||ಎಲೈವೀರನಾದ ಶ್ರೀಕೃಷ್ಣನೇ! ರತಿಸುಖವಂ ವೃದ್ಧಿಪಡಿಸುವುದಾಗಿ, ಶೋಕಪರಿಹಾರಕವಾಗಿ, ಉತ್ಕೃಷ್ಟಸ್ವರವುಳ್ಳ ಕೊಳಲಿನಿಂದ ಸೋಂಕಿಸಲ್ಪಟ್ಟದ್ದಾಗಿ, ಮನುಷ್ಯರಿಗೆ ಸಾರ್ವಭೌಮತ್ವಾದಿ ಸುಖಂಗಳಲ್ಲಿ ಅಪೇಕ್ಷೆಯಂ ತಪ್ಪಿಸುವ, ನಿನ್ನ ಅಧರಾಮೃತವಂ ನಮಗೆಕೊಡು ||೧೪|| ಎಲೈ ಕೃಷ್ಣನೇ! ನೀನು ಹಗಲಿನಲ್ಲಿ ಪಶುಗಳೊಡನೆ ಯಾವಾಗ ವನವಂಕುರಿತು, ಹೋಗುತ್ತೀಯೋ, ಆಗನಿನ್ನಂನೋಡದೆ ಇರುವನಮಗೆ ಕ್ಷಣಾರ್ಧವು ಯುಗದಂತೆ ಆಗದಹಾಗೆ, ವಕ್ರಂಗಳಾದ ಮುಂಗುರುಳುಗಳುಳ್ಳ ದಿವ್ಯವಾದ ನಿನ್ನ ಮುಖವಂ ಅನುರಾಗದಿಂನೋಡುವ ಜನರುಗಳ ನೇತ್ರಂಗಳಲ್ಲಿ ರೆಪ್ಪೆಹುಯ್ಯುವಿಕೆಯಂ ನಿರ್ಮಿಸಿದ ಬ್ರಹ್ಮನು ಅಜ್ಞನೇಸರಿ ||೧೫|| ಎಲೈ ಅಚ್ಯುತನೇ; ಪತಿಗಳಂ, ಪುತ್ರರು, ಅವರಸಂಬಂಧಿಗಳಾದ ಭ್ರಾತಾರರಂ ಬಾಂಧವರಂ ಸಹ

ಶಠಃ ಕಿತವ ಯೋಷಿತಃ ಕಸ್ತ್ಯಜೇನ್ನಿಶಿ ॥೧೬॥ ರಹಸಿ ಸಂವಿದಂ ಹೃಚ್ಛಯೋದಯಂ ಪ್ರಹಸಿತಾನನಂ ಪ್ರೇಮವೀಕ್ಷಣಂ । ಬೃಹದುರಃ ಶ್ರಿಯೋ ಧಾಮವೀಕ್ಷ್ಯ ತೇ ಮುಹುರತಿಸ್ಪೃಹಾ ಮುಹ್ಯತೇ ಮನಃ ॥೧೭॥ ವ್ರಜವನೌಕಸಾಂ ವ್ಯಕ್ತಿರಂಗ ತೇ ವೃಜಿನಹಂತ್ರ್ಯಹೋ ವಿಶ್ವಮಂಗಳಂ । ತ್ಯಜ ಮನಾಕ್ಚ ನಸ್ತ್ವತ್ಸ್ಪೃಹಾತ್ಮನಾಂ ಸ್ವಜನಹೃದ್ರುಜಾಂ ಯನ್ನಿಷೂದನಂ ॥೧೮॥ ಯತ್ತೇ ಸುಜಾತಚರಣಾಂಬುರುಹಂ ಸ್ತನೇಷು ಭೀತಾಃ ಶನೈಃ ಪ್ರಿಯ ದಧೀಮಹಿ ಕರ್ಕಶೇಷು । ತೇನಾಟವೀಮಟಸಿ ತದ್ವ್ಯಥತೇ ನ ಕಿಂಸ್ವಿತ್ ಕೂರ್ಪಾದಿಭಿರ್ಭ್ರಮತಿ ಧೀರ್ಭವದಾಯುಷಾಂ ನಃ ॥೧೯॥ ಇತಿ ಶ್ರೀ ದಶಮಸ್ಕಂಧೇ ಏಕತ್ರಿಂಶೋಽಧ್ಯಾಯಃ-

---

ಆಗತಾಃ-ಬಂದವರಾಗಿಯೂ, ಗತಿವಿದಃ-ನಮ್ಮ ಬರುವಿಕೆಯನ್ನು ಬಲ್ಲ, ತವ-ನಿನ್ನ, ಉದ್ಗೀತ ಮೋಹಿತಾಃ-ಹೆಚ್ಚಾದ ಗಾನದಿಂದ ಮೋಹಿಸಲ್ಪಟ್ಟ, ಯೋಷಿತಃ-ಹೆಂಗಳನ್ನು, ನಿಶಿ-ರಾತ್ರಿ ಕಾಲದಲ್ಲಿ, ಕಸ್ತ್ಯಜೇತ್-ಯಾವವನು ತಾನೇ ಬಿಡುವನು ॥೧೬॥ ರಹಸಿ-ಏಕಾಂತದಲ್ಲಿ, ಸಂವಿದಂ-ಸಂಕೇತಕ್ರೀಡೆಯುಳ್ಳಂಥಾ, ಹೃಚ್ಛಯೋದಯಂ-ಕಾಮನ ಆವಿರ್ಭಾವವುಳ್ಳ ಪ್ರೇಮವೀಕ್ಷಣಂ-ಸ್ನೇಹದ ನೋಟವುಳ್ಳ, ಪ್ರಹಸಿತಾನನಂ-ಹೆಚ್ಚು ನಗೆಯುಳ್ಳ, ಮುಖವನ್ನೂ, ಶ್ರಿಯಃ-ಲಕ್ಷ್ಮಿಗೆ, ಧಾಮ-ವಾಸಸ್ಥಾನವಾದ, ಬೃಹತ್ ವಿಶಾಲವಾದ, ತೇ-ನಿನ್ನ, ಉರಃ-ವಕ್ಷಸ್ಥಲವನ್ನೂ, ವೀಕ್ಷ್ಯ-ನೋಡಿ, ಮುಹುಃ-ಬಾರಿಬಾರಿಗೂ, ಅತಿಸ್ಪೃಹಾ-ಬಹಳ ಕುತೂಹಲವುಂಟಾಗಿದೆ. ತಯಾ-ಅದರಿಂದ, ಮನಃ-ಮನಸ್ಸು, ಮುಹ್ಯತೇ-ಮೋಹಗೊಳ್ಳುತ್ತಿದೆ ॥೧೭॥ ಅಂಗ-ಪ್ರಿಯನಾದ ಕೃಷ್ಣನೇ! ತೇ-ನಿನ್ನ, ವ್ಯಕ್ತಿಃ-ಆವಿರ್ಭಾವವು, ವ್ರಜವನೌಕಸಾಂ- ಗೋಕುಲ ವೃಂದಾವನದಲ್ಲಿರುವವರಿಗೆ, ವೃಜಿನಹಂತ್ರೀ-ಪಾಪಪರಿಹಾರಕವಾಗಿರುವುದು ವಿಶ್ವಮಂಗಳಂಚ-ಪ್ರಪಂಚಕ್ಕೆ ಶುಭವಾಗಿಯೂ ಇರುವುದು, ಅಹೋ-ಆಶ್ಚರ್ಯವು. ಸ್ವಜನಹೃದ್ರುಜಾಂ-ತನ್ನವರ ಮನೋರೋಗಗಳಿಗೆ, ನಿಷೂದನಂ-ನಾಶಕವಾದ ಮದ್ದು, ಯತ್-ಯಾವುದೋ, ತತ್-ಅದರನ್ನು, ತ್ವತ್ಸ್ಪೃಹಾತ್ಮನಾಂ-ನಿನ್ನಲ್ಲಿ ಆಶೆಯುಳ್ಳ ಮನಸ್ಸುಳ್ಳವರಾದ, ನಃ-ನಮಗೆ, ಮನಾಕ್-ಕೊಂಚವಾದರೂ, ತ್ಯಜ-ಬಿಟ್ಟುಕೊಡು ॥೧೮॥ ಹೇ ಪ್ರಿಯ-ಇಷ್ಟನಾದ ಕೃಷ್ಣನೇ! ತೇ-ನಿನ್ನ, ಸುಜಾತಚರಣಾಂಬುರುಹಂ-ಕೋಮಲವಾದ ಅಡಿದಾವರೆಯನ್ನು, ಕರ್ಕಶೇಷು-ಕಠಿನಗಳಾದ, ಸ್ತನೇಷು-ನಮ್ಮ ಕುಚಗಳಲ್ಲಿ, ಭೀತಾಃ-ನಿನಗೆ ನೊಂದೀತೆಂದು ಹೆದರಿದವರಾಗಿ, ಶನೈಃ-ಮೆಲ್ಲನೆ, ದಧೀಮಹಿ-ಧರಿಸುತಲಿರುವೆವೋ, ತೇನ-ಅಂಥಾ ನಿನ್ನ ಅಡಿದಾವರೆಯಿಂದ, ಅಟವೀಂ-ಕಾಡನ್ನು, ಅಟಸಿ-ತಿರುಗುತ್ತಿರುವಿ, ತತ್-ಆ ನಿನ್ನ ಅಡಿದಾವರೆಯು, ಕೂರ್ಪಾದಿಭಿಃ-ನೊರಜುಕಲ್ಲು ಮುಂತಾದವುಗಳಿಂದ, ನ ವ್ಯಥತೇ ಕಿಂಸ್ವಿತ್-ನೋಯುವದಿಲ್ಲವೇ ಏನ? ಭವದಾಯುಷಾಂ-ನೀನೇ ಜೀವನವಾಗಿವುಳ್ಳ, ನಃ-ನಮ್ಮ, ಧೀಃ-ಬುದ್ಧಿಯು, ಭ್ರಮತಿ-ಮೋಹಗೊಳ್ಳುತ್ತಿದೆ ॥೧೯॥

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಏಕತ್ರಿಂಶೋಽಧ್ಯಾಯಃ-

---

ಉಲ್ಲಂಘಿಸಿ, ನಿನ್ನ ವೇಣುಗಾನದಿಂ ಮೋಹಿತರಾಗಿ, ಆ ವೇಣುಗಾನವಾಗುವ ಸ್ಥಳದ ಗುರುತಿಸಿಂದಲೇ ನಿನ್ನಂ ಹುಡುಕಿಕೊಂಡು ನಾವು ಬಂದು ಇದ್ದೇವೆ. ಹೀಗೆ ರಾತ್ರಿ ಕಾಲದಲ್ಲಿ ಬಂದ ಸ್ತ್ರೀಯರುಗಳಂ ಯಾವ ಪುರುಷನು ತ್ಯಾಗವಂ ಮಾಡುವನು? ನೀನು ಕಪಟಿಯಾದವನು, ಆದ್ದರಿಂದ ನಮ್ಮಂ ಉಪೇಕ್ಷಿಸುತ್ತೀಯೋ ॥೧೬॥ ಎಲೈ ಶ್ರೀ ಕೃಷ್ಣನೆ! ಕಾಮೋದ್ದೀಪನವಾದ ನಿನ್ನ ಚಟೂಕ್ತಿಗಳಂ ಮುಗುಳುನಗೆಯಿಂ ಕೂಡಿದ ನಿನ್ನ ಮುಖವಂ ಪ್ರೇಮಾದ್ರವಾದ ನೋಟವಂ, ಲಕ್ಷ್ಮಿಗೆ ನಿವಾಸಸ್ಥಾನವಾದ ವಿಶಾಲವಾದ ನಿನ್ನ ವಕ್ಷಸ್ಥಳವಂ ಸಹ ನೋಡಿ ನಮಗೆ ಅಪೇಕ್ಷೆ ವುಂಟಾಗುತ್ತೆ. ನಮ್ಮ ಮನಸು ಮೋಹಿತವಾಗುತ್ತೆ ॥೧೭॥ ಎಲೈ ನಾಥನೇ ಸರ್ವಲೋಕಪ್ರಿಯವಾದ ನಿನ್ನ ಆವಿರ್ಭಾವವು ವ್ರಜವಾಸಿಗಳಾದ ಸರ್ವಜನರಿಗೂ ಪಾಪ ಪರಿಹಾರಕವಾದ್ದು, ನಿನ್ನಲ್ಲಿ ಆಸಕ್ತವಾದ ಚಿತ್ತವುಳ್ಳ ನಮಗೆ ಸ್ವಜನರ ಹೃದ್ರೋಗ ಪರಿಹಾರಕವಾದ ಸೌಖ್ಯವಂ ಸ್ವಲ್ಪ ಕೊಡುವವನಾಗು ॥೧೮॥ ಎಲೈ ಪ್ರಿಯನಾದ ಶ್ರೀ ಕೃಷ್ಣನೇ! ಅತಿ ಕೋಮಲವಾದ ಮೃದುವಾದ ನಿನ್ನ ಪಾದಪದ್ಮಗಳಂ, ಕಠಿನಂಗಳಾದ ನಮ್ಮ ಸ್ತನಗಳಲ್ಲಿ ಇರಿಸು. ಭೀತರಾಗಿ ಮೆಲ್ಲಮೆಲ್ಲನೆ ಇರಿಸಿಕೊಳ್ಳುತ್ತೇವೆ ಅಂತಾ ಪಾದಪದ್ಮದಿಂದ ವನದಲ್ಲಿ ನೀನು ಸಂಚರಿಸುತ್ತೀಯೆ. ಸಣ್ಣವಾದ ಶಿಲೆಗಳಿಂದಲೂ ಮುಳ್ಳುಗಳಿಂದಲೂ ನಿನ್ನ ಪಾದಪದ್ಮವು ಉಪದ್ರವಂ ಪಡುವುದೆಂದು ನಿನ್ನನ್ನೇ ನಂಬಿ ಜೀವಿಸುವ ನಮ್ಮ ಬುದ್ಧಿಯು ವ್ಯಸನವನ್ನೈದುತಲಿದ್ದೇವೆ ॥೧೯॥

ಶ್ರೀಶುಕಃ॥ ಇತಿಗೋಪ್ಯಃಪ್ರಗಾಯಂತ್ಯಃಪ್ರಲಪಂತ್ಯಶ್ಚಚಿತ್ರಧಾ । ರುರುದುಃಸುಸ್ವರಂರಾಜನ್ಕೃಷ್ಣದರ್ಶನಲಾಲಸಾಃ ॥೧॥ ತಾಸಾಮಾವಿರಭೂಚ್ಛೌರಿಸ್ಸ್ಮಯಮಾನಮುಖಾಂಬುಜಃ । ಪೀತಾಂಬರ

---

೩೨ನೆಯಅಧ್ಯಾಯದ ಪ್ರತಿಪದಟೀಕೆ.

[ ಶುಕವಾಕ್ಯವು. ]ಹೇರಾಜನ್-ಎಲೈಪರೀಕ್ಷಿದ್ರಾಜನೇ! ಗೋಪ್ಯಃ-ಗೊಲ್ಲತಿಯರು. ಇತಿ-ಹೀಗೆ, ಪ್ರಗಾಯಂತ್ಯಃ-ಹಾಡುವರಾಗಿಯೂ, ಪ್ರಲಪಂತ್ಯಶ್ಚ-ಅಳುತಿರುವರಾಗಿಯೂ, ಕೃಷ್ಣದರ್ಶನಲಾಲಸಾಃ-ಕೃಷ್ಣನನ್ನುನೋಡುವುದರಲ್ಲಿ ಬಹಳ ಕುತೂಹಲವುಳ್ಳವರಾಗಿ, ಚಿತ್ರಧಾ- ಆಶ್ಚರ್ಯವಾದಬಗೆಯಿಂದ, ಸುಸ್ವರಂಯಥಾತಥಾ-ಸಹಿತೀನವಾದಸ್ವರವುಂಟಾಗುವಂತೆ, ರುರುದುಃ-ಅತ್ತರು॥೧॥ಸ್ಮಯಮಾನಮುಖಾಂಬುಜಃ-ಸ್ಮಯಮಾನ-ನಗುತಲಿರುವ, ಮುಖಾಂಬುಜಃ-ವದನಕಮಲವುಳ್ಳ,

---

ಇಂತು ಶುಕಮುನಿಯು ಪರೀಕ್ಷಿದ್ರಾಯನಿಗೆ ನಿರೂಪಿಸಿದನೆಂದು ಸೂತಪೌರಾಣಿಕನು ನೈಮಿಶಾ
ರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಹೇಳಿದನೆಂಬಲ್ಲಿಗೆ-ಶ್ರೀಮನ್ಮಹೀಶೂರಪುರವ
ರಾಧೀಶ ಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜ ವಿರಚಿತವಪ್ಪ, ಶ್ರೀ
ಭಾಗವತದ "ಶ್ರೀಕೃಷ್ಣರಾಜ ವಾಣೀವಿಲಾಸವು" ಎಂಬ ಕರ್ಣಾಟಕ
ಭಾಷಾವ್ಯಾಖ್ಯಾನದಲ್ಲಿ ದಶಮಸ್ಕಂಧದೊಳು ೩೧ನೆಯ
ಅಧ್ಯಾಯವು ಸಂಪೂರ್ಣವಾದುದು
ಮಂಗಳಮಸ್ತು

೩೨ನೆಯ ಅಧ್ಯಾಯವು.

ಶ್ರೀಧರೀಯಶ್ಲೋಕಃ॥ ದ್ವಾತ್ರಿಂಶೇವಿರಹಾಲಾಪವಿಕ್ಲಿನ್ನಹೃದಯೋಹರಿಃ । ತತ್ರಾವಿರ್ಭೂಯ ಗೋಪೀಸ್ತಾಸ್ಸಾಂತ್ವಯಾಮಾಸಮಾನಯನ್॥%॥

ಮೂವತ್ತೆರಡನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ವಿರಹ ತಾಪತಪ್ತರಾದ ಗೋಪಸ್ತ್ರೀಯರುಗಳ ದೀನೋಕ್ತಿಗಳಿಂದ ಆದ್ರ್ರಚಿತ್ತನಾಗಿ, ಅವರಿಗೆದುರಾಗಿ ಆವಿರ್ಭೂತನಾಗಿ, ಮೃದುವಾಕ್ಯಂಗಳಿಂದಆ ಗೋಪಸ್ತ್ರೀಯರುಗಳಂ ಸಮಾಧಾನಂ ಗೆಯ್ದನು. ಎಂಬಅರ್ಥವಂ ಪರೀಕ್ಷಿದ್ರಾಯನಂ ಕುರಿತು ಶುಕಮುನಿಯು ನಿರೂಪಿಸಿದ ವಿವರವೆಂತೆಂದರೆ,-

ಎಲೈ ಅರಸೇ! ಗೋಪಸ್ತ್ರೀಯರುಗಳು ಈರೀತಿಯಲ್ಲಿ ಗಾನಂಗೆಯ್ವರಾಗಿ ನಾನಾಪ್ರಕಾರವಾಗಿ ರೋಪನಂ ಗೆಯ್ವರಾಗಿ ಕೃಷ್ಣದರ್ಶನದಿಂ ಅತ್ಯಾಸಕ್ತರಾಗಿ ಸ್ವರಯುಕ್ತವಾಗಿ ರೋದನಂಗೆಯ್ದರು ॥೧॥

ಧರಸ್ಸ್ರಗ್ವೀ ಸಾಕ್ಷಾನ್ಮನ್ಮಥಮನ್ಮಥಃ ॥೨॥ ತಂ ವಿಲೋಕ್ಯಾಗತಂ ಕೃಷ್ಣಂ ಪ್ರೀತ್ಯುತ್ಫುಲ್ಲದೃಶೋಬಲಾಃ । ಉತ್ತಸ್ಥುರ್ಯುಗಪತ್ಸರ್ವಾಸ್ತನ್ವಃ ಪ್ರಾಣಮಿವಾಗತಂ ॥೩॥ ಕಾಚಿತ್ಕರಾಂಬುಜಂ ಶೌರೇರ್ಜಗೃಹೇಂಜಲಿನಾ ಮುದಾ । ಕಾಚಿದ್ಬಭಾರ ತದ್ಬಾಹುಮಂಸೇ ಚಂದನರೂಷಿತಂ ॥೪॥ ಕಾಚಿದಂಜಲಿನಾಗೃಹ್ಣಾತ್ತನ್ವೀ ತಾಂಬೂಲಚರ್ವಣಂ । ಏಕಾ ತದಂಘ್ರಿಕಮಲಂ ಸಂತಪ್ತಾ ಸ್ತನಯೋರಧಾತ್ ॥೫॥ ಏಕಾ ಭ್ರುಕುಟಿಮಾಬಧ್ಯ ಪ್ರೇಮಸಂರಂಭವಿಹ್ವಲಾ । ಘ್ನಂತೀವೈಕ್ಷತ್ಕಟಾಕ್ಷೇಪೈರ್ನಿರ್ದಷ್ಟದಶನಚ್ಛದಾ ॥೬॥ ಅಪರಾನಿಮಿಷದ್ದೃಗ್ಭ್ಯಾಂ ಜುಷಾಣಾ ತನ್ಮುಖಾಂಬುಜಂ । ಆಪೀತಮಪಿ ನಾತೃಪ್ಯತ್ಸಂ

ಪೀತಾಂಬರಧರಃ-ಹೊಂಬಣ್ಣದ ಉಡಿಗೆಯಂ ಧರಿಸಿದ, ಸ್ರಗ್ವೀ-ವನಮಾಲೆಯುಳ್ಳ, ಮನ್ಮಥಮನ್ಮಥಃ-ಮನ್ಮಥನಿಗೂ ಮನ್ಮಥನಾದ, ಶೌರಿಃ-ಕೃಷ್ಣನು, ತಾಸಾಂ-ಆಗೋಪಿಯರಿಗೆ, ಸಾಕ್ಷಾತ್-ಪ್ರತ್ಯಕ್ಷವಾಗಿ, ಆವಿರಭೂತ್-ಕಾಣಿಸಿದನು ॥೨॥ ಆಗತಂ-ಬಂದಂಥಾ, ತಂ ಕೃಷ್ಣಂ-ಆಕೃಷ್ಣನನ್ನು, ವಿಲೋಕ್ಯ-ನೋಡಿ, ಪ್ರೀತ್ಯುತ್ಫುಲ್ಲದೃಶಃ-ಪ್ರೇಮದಿಂದ ಅರಳಿದ ಕಂಗಳುಳ್ಳವರಾದ, ಅಬಲಾಃ-ಹೆಂಗಳು, ಸರ್ವಾಃ-ಎಲ್ಲರೂ, ಆಗತಂ ಪ್ರಾಣಂ-ಮರಳಿಬಂದ ಪ್ರಾಣವನ್ನು, ತನ್ವ ಇವ-ಅವಯವಗಳ ಹಾಗೆ, ಯುಗಪತ್-ಏಕಕಾಲದಲ್ಲಿ, ಉತ್ತಸ್ಥುಃ-ಎದ್ದರು ॥೩॥ ಕಾಚಿತ್-ಒಬ್ಬಳು, ಶೌರೇಃ-ವಾಸುದೇವನ, ಕರಾಂಬುಜಂ-ಹಸ್ತಕಮಲವನ್ನು, ಅಂಜಲಿನಾ-ತನ್ನ ಬಗಸೆಯಿಂದ, ಮುದಾ-ಸಂತಸದೊಡನೆ, ಜಗೃಹೇ-ಹಿಡಿದಳು ಕಾಚಿತ್-ಮತ್ತೊರ್ವಳು, ಚಂದನರೂಷಿತಂ-ಶ್ರೀಗಂಧದಿಂದ ಬಳಿಯಲ್ಪಟ್ಟ, ತದ್ಬಾಹುಂ-ಆಕೃಷ್ಣನ ತೋಳನ್ನು, ಅಂಸೇ-ತನ್ನ ಹೆಗಲಿನಲ್ಲಿ, ಬಭಾರ-ಹೊತ್ತಳು ॥೪॥ ಕಾಚಿತ್-ಮತ್ತೊಬ್ಬಳು, ತನ್ವೀ-ಗೋಪಿಯು, ತಾಂಬುಲಚರ್ವಣಂ-ವೀಳ್ಯದ ತಂಬುಲವನ್ನು, ಅಂಜಲಿನಾ-ಬಗಸೆಯಿಂದ, ಅಗೃಹ್ಣಾತ್-ಗ್ರಹಿಸಿದಳು, ಏಕಾ-ಒಬ್ಬಳು, ತದಂಘ್ರಿಕಮಲಂ-ಆಕೃಷ್ಣನ ಅಡಿದಾವರೆಯನ್ನು, ಸಂತಪ್ತಾ ಸ್ತನಯೋಃ-ಬಿಸಿಯಾದ ತನ್ನ ಕುಚಗಳಲ್ಲಿ, ಅಧಾತ್-ಇರಿಸಿಕೊಂಡಳು ॥೫॥ ಏಕಾ-ಇನ್ನೊಬ್ಬಳು, ಭ್ರುಕುಟಿಂ-ಹುಬ್ಬನ್ನು, ಆಬಧ್ಯ-ಗಂಟಿಟ್ಟುಕೊಂಡು, ಪ್ರೇಮಸಂರಂಭವಿಹ್ವಲಾ-ಪ್ರಣಯಕೋಪದಿಂದ ವಿವಶಳಾಗಿ, ನಿರ್ದಷ್ಟದಶನಚ್ಛದಾ-ಕಚ್ಚಿಕೊಳ್ಳಲ್ಪಟ್ಟ ತುಟಿಯುಳ್ಳವಳಾಗಿ, ಕಟಾಕ್ಷೇಪೈಃ-ಕಟ-ಕಟಾಕ್ಷಗಳ, ಆಕ್ಷೇಪೈಃ-ಪ್ರಸರಣಗಳಿಂದ (ಕುಡಿನೋಟಗಳಿಂ ಪರಿಭವಿಸುವಿಕೆಗಳಿಂದ) ಘ್ನಂತೀವ-ಹೊಡೆಯುವಳ ಹಾಗೆ, ಐಕ್ಷತ್-ನೋಡಿದಳು ॥೬॥ ಅಪರಾ-ಮತ್ತೊರ್ವಳು, ಅನಿಮಿಷದ್ದೃಗ್ಭ್ಯಾಂ-ಅನಿಮಿಷತ್-ರೆಪ್ಪೆಹೊಡೆಯದ, ದೃಗ್ಭ್ಯಾಂ-ಕಂಗಳಿಂದ, ತನ್ಮುಖಾಂಬುಜಂ-ಆಕೃಷ್ಣನ ಮೊಗದಾವರೆಯನ್ನು, ಆಪೀತಮಪಿ-ಚನ್ನಾಗಿ ಕುಡಿಯಲ್ಪಟ್ಟದ್ದನ್ನೂ ಕೂಡ, ಜುಷಾಣಾ-ಮರಳಿ ಸೇವಿಸುವಳಾಗಿ, ತಚ್ಚರಣಂ-ಆಕೃಷ್ಣನ ಪಾದವನ್ನು ಸೇವಿಸಿ, ಸಂತಃ-ಸತ್ಪುರುಷರು, ಯಥಾ-ಹೇಗೋ,

---

ಆಗ ಶ್ರೀಕೃಷ್ಣನು ಮುಗುಳುನಗೆಯಿಂದ ರಮ್ಯವಾದ ಮುಖಕಮಲವುಳ್ಳವನಾಗಿ ಪೀತಾಂಬರಧಾರಿಯಾಗಿ ಮನ್ಮಥನಿಗೂ ಮೋಹಕನಾಗಿ ಆಗೋಪಿಕಾಸ್ತ್ರೀಯರುಗಳಿಗೆ ಪ್ರತ್ಯಕ್ಷನಾದನು ॥೨॥ ಇಂತು ಪ್ರಾಣಕಾಂತನಾದ ಆಕೃಷ್ಣನಂ ನೋಡಿ ಪ್ರೇಮದಿಂದ ವಿಕಸಿತಂಗಳಾದ ನೇತ್ರಂಗಳುಳ್ಳ ಆಗೋಪಸ್ತ್ರೀಯರುಗಳು ಎಲ್ಲರೂ ಏಕಕಾಲದಲ್ಲಿ ಕರಚರಣಾದಿ ಶರೀರಾವಯವಗಳು ಪ್ರಾಣವನೆಯ್ದಿ ಹೇಗೆ ಏಳುವುದೋ ಹಾಗೆ ಇದ್ದರು ॥೩॥ (ಆಗೋಪಸ್ತ್ರೀಯರುಗಳು ಶ್ರೀಕೃಷ್ಣನ ಮುಖಸೌಂದರ್ಯವೆಂಬ ಅಮೃತವಂ ನೇತ್ರಂಗಳೆಂಬ ಪಾತ್ರಂಗಳಿಂ ಪಾನಂಗೆಯ್ದು ಸತ್ಪುರುಷರು ಆಶ್ರೀಕೃಷ್ಣನ ಪಾದಪದ್ಮವಂ ಧ್ಯಾನಂಗೆಯ್ದು ಹೇಗೆ ತೃಪ್ತಿಯನೆಯ್ದುವುದಿಲ್ಲವೋ ಹಾಗೆ ತೃಪ್ತಿಯ ನೆಯ್ದಲಿಲ್ಲ। ॥೪॥ ಒಬ್ಬಳು ಸ್ತ್ರೀಯು ಕೃಷ್ಣನ ಹಸ್ತವ ತನ್ನ ಹಸ್ತದ್ವಯದಿಂದ ಸಂತೋಷದಿಂ ಹಿಡಿದಳು. ಮತ್ತೊಬ್ಬಳು ಚಂದನಲಿಪ್ತವಾದ ಆಕೃಷ್ಣನ ಬಾಹುವ ಹೆಗಲಿನಲ್ಲಿ ಹಿಡಿದಳು ಒಬ್ಬಳು ಸ್ತ್ರೀಯು ತನ್ನ ಬಗಸೆಯಿಂದ ಶ್ರೀಕೃಷ್ಣನ ಮುಖಸ್ಥವಾದ ತಾಂಬೂಲವ ಗ್ರಹಿಸಿದಳು. ಒಬ್ಬಳು ಆಶ್ರೀಕೃಷ್ಣನ ಪಾದಪದ್ಮವಂ ವಿರಹತಪ್ತವಾದ ತನ್ನ ಕುಚಂಗಳಲ್ಲಿರಿಸಿ ಕೊಂಡಳು ॥೫॥ ಒಬ್ಬಳು ಹುಬ್ಬುಗಂಟುಹಾಕಿಕೊಂಡು ಪ್ರೇಮಾಧಿಕ್ಯದಿಂ ಕಾಮಾಭಿವೇಶದಿಂದ ಪರವಶಳಾಗಿ ಹಲ್ಲು ಮುಡಿಕಚ್ಚಿಕೊಂಡು ತೀಕ್ಷ್ಣಂಗಳಾದ ಕುಡಿನೋಟಂಗಳಿಂದ ಪ್ರಹರಿಸುವಂತೆ ನೋಡಿದಳು ॥೬॥ ಮತ್ತೊಬ್ಬಳು ರೆಪ್ಪೆಹಾಕದೆ ಇರುವ ನೇತ್ರಂಗಳಿಂದ ಆಕೃಷ್ಣನಂ ಚನ್ನಾಗಿನೋ

ತಸ್ಯ ಚರಣಂ ಯಥಾ ॥೭॥ ತಂ ಕಾಚಿನ್ನೇತ್ರರಂಧ್ರೇಣ ಹೃದಿ ಕೃತ್ವಾ ನಿಮೀಲ್ಯ ಚ । ಪುಲಕಾಂಗ್ಯುಪಗೂ
ಹ್ಯಾಸ್ತೇ ಯೋಗೀವಾನಂದನಿರ್ಭರಾ ॥೮॥ ಸರ್ವಾಸ್ತಾಃ ಕೇಶವಾಲೋಕಪರಮೋತ್ಸವನಿರ್ವೃತಾಃ ॥
ಜಹುರ್ವಿರಹಜಂ ತಾಪಂ ಪ್ರಾಜ್ಞಂ ಪ್ರಾಪ್ಯ ಯಥಾ ಜನಾಃ ॥೯॥ ತಾಭಿರ್ವಿಧೂತಶೋಕಾಭಿರ್ಭಗ
ವಾನಚ್ಯುತೋ ವೃತಃ । ವ್ಯರೋಚತಾಧಿಕಂ ತತ್ರ ಪುರುಷಃ ಶಕ್ತಿಭಿರ್ಯಥಾ ॥೧೦॥ ತಾಃ ಸಮಾದಾಯ ಕಾಳಿಂ
ದ್ಯಾ ನಿರ್ವಿಶ್ಯ ಪುಳಿನಂ ವಿಭುಃ । ವಿಕಚತ್ಕುಂದಮಂದಾರಸುರಭ್ಯನಿಲಷಟ್ಪದಂ ॥೧೧॥ ಶರಚ್ಚಂದ್ರಾಂ
ಶುಸಂದೋಹಧ್ವಸ್ತದೋಷಾತಮಃ ಶಿವಂ । ಕೃಷ್ಣಾಯಾ ಹಸ್ತತರಳಾಚಿತಕೋಮಲವಾಲುಕಂ ॥೧೨॥

---

ತಥಾ-ಹಾಗೆ, ನಾತ್ಮೃಪ್ಯತ್-ತಣಿಯಲಿಲ್ಲವು ॥೭॥ ಕಾಚಿತ್-ಒಬ್ಬಳು, ತಂ-ಆಕೃಷ್ಣನನ್ನು, ನೇತ್ರರಂಧ್ರೇಣ-ಕಂಣಿನತೂತಿ ನಿಂದ, ಹೃದಿ-ತನ್ನ ಮನಸ್ಸಿನಲ್ಲಿ, ಕೃತ್ವಾ-ತಂದಿರಿಸಿಕೊಂಡು, ನಿಮೀಲ್ಯಚ-ಕಂಗಳನ್ನೂ ಮುಚ್ಚಿಕೊಂಡು, ಪುಲಕಾಂಗೀ-ರೋಮಾಂಚಿತವಾದವೈಯುಳ್ಳವಳಾಗಿ, ಉಪಗೂಹ್ಯ-ಹೊದ್ದಿಕೊಂಡು, ಆನಂದನಿರ್ಭರಾಸತೀ-ಸುಖದಿಂದಅತಿಶಯಿತಳಾಗಿ, ಯೋಗೀವ-ಭಗವಂತನಂ ಧ್ಯಾನಿಸುವಜ್ಞಾನಿಯಹಾಗೆ, ಆಸ್ತೇ-ಇರುವಳು ॥೮॥ ತಾಸ್ಸರ್ವಾಃ-ಆಗೋಪಿಯರೆಲ್ಲರೂ, ಕೇಶವಾಲೋಕ ಪರಮೋತ್ಸವನಿರ್ವೃತಾಃ-ಕೇಶವ-ಕೃಷ್ಣನನ್ನು, ಆಲೋಕ-ನೋಡಿದ, ಪರಮೋತ್ಸವ-ಉತ್ತಮವಾದಉಲ್ಲಾಸದಿಂದ, ನಿರ್ವೃತಾಃ-ವಿಶ್ರಾಂತಿಸುಖವುಳ್ಳವರಾಗಿ, ವಿರಹಜಂ-ಅಗಲಿಕೆಯಿಂದಹುಟ್ಟಿದ, ತಾಪಂ-ಜ್ವರವನ್ನು, ಪ್ರಾಜ್ಞಂಪ್ರಾಪ್ಯ-ಸುಷುಪ್ತ್ಯವಸ್ಥಾಭಿಮಾನಿಯಾದ, ಪ್ರಾಜ್ಞವೆಂಬಚೈತನ್ಯವನ್ನು ಸೇರಿ, ಜನಾಯಥಾ-ಜನಗಳುಹೇಗೋಹಾಗೆ, ಜಹುಃ-ತೊರೆದರು ॥೯॥ ವಿಧೂತಶೋಕಾಭಿಃ-ಝಾಡಿಸಿಬಿಡಲ್ಪಟ್ಟದುಃಖಂಗಳುಳ್ಳ, ತಾಭಿಃ-ಆಗೋಪ್ಯತಿಯರಿಂದ, ವೃತಃ-ಸುತ್ತಿಕೊಳ್ಳಲ್ಪಟ್ಟ, ಭಗವಾನ್-ಪೂಜ್ಯನಾದ, ಅಚ್ಯುತಃ-ಕೃಷ್ಣನು, ತತ್ರ-ಅಲ್ಲಿ, ಶಕ್ತಿಭಿಃ-ಜ್ಞಾನಾದಿಶಕ್ತಿಗಳಿಂದ, ವೃತಃ-ಬಳಸಲ್ಪಟ್ಟ ಪುರುಷೋಯಥಾ-ಆತ್ಮನುಹೇಗೋಹಾಗೆ, ಅಧಿಕಂ-ಹೆಚ್ಚಾಗಿ, ವ್ಯರೋಚತ-ಬೆಳಗಿದನು ॥೧೦॥ ವಿಭುಃ-ವ್ಯಾಪಕನಾದಕೃಷ್ಣನು, ತಾಃ-ಆಹೆಂಗಳನ್ನು, ಸಮಾದಾಯ-ಕರಕೊಂಡು, ವಿಕ.. ಷಟ್ಪದಂ-ವಿಕಚತ್-ಅರಳಿದ, ಕುಂದ-ಮಲ್ಲಿಗೆಯು, ಮಂದಾರ-ಕಲ್ಪಕುಸುಮದ, ಸುರಭಿ-ಪರಿಮಳದ, ಅನಿಲ-ಗಾಳಿಯು, ಷಟ್ಪದಂ-ತುಂಬಿಗಳೂವುಳ್ಳ, ಕಾಳಿಂದ್ಯಾಃಪುಳಿನಂ-ಯಮುನಾನದಿಯಹೊಯಿಗೆಯನ್ನು, ನಿರ್ವಿಶ್ಯ-ಪ್ರವೇಶಿಸಿ ॥೧೧॥ ಶರತ್..... ಶಿವಂ-ಶರತ್-ಸಮಕಾಲವಾದಶರದೃತುವಿನ, ಚಂದ್ರ-ಚಂದಿರನ, ಅಂಶು-ಕಿರಣಗಳ, ಸಂದೋಹ-ಪ್ರಸರಣದಿಂದ, ಧ್ವಸ್ತ-ನಾಶಮಾಡಲ್ಪಟ್ಟ, ದೋಷಾ-ರಾತ್ರಿಯ, ತಮಃ-ಕತ್ತಲೆಯುಳ್ಳಂಥಾ, ಶಿವಂ-ಶುಭವಾದಂಥಾ, ಕೃಷ್ಣಾಯಾಃ-ಯಮುನೆಯ, ಹಸ್ತ....ವಾಲುಕಂ-ಹಸ್ತ-ಕೈಗಳಾಗಿರುವ, ತರಳ-ಅಲೆಗಳಿಂದ, ಆಚಿತ-ಹರಡಲ್ಪಟ್ಟ, ಕೋಮಲ-ಮೃದುವಾದ, ವಾಲುಕಂ-ಸಂಣಮಳಲುಳ್ಳ. (ಪುಳಿನವನ್ನು ಹೊಕ್ಕೆಂಬ ಪೂರ್ವಶ್ಲೋಕದೊಡನೆ ಅನ್ವಯವು.) ॥೧೨॥

---

ಡಿಯೂ ಕೂಡ ಸತ್ಪುರುಷರು ಆಕೃಷ್ಣಪಾದಾರವಿಂದವನ್ನು ಹೇಗೋಹಾಗೆ ತೃಪ್ತಳಾಗಲಿಲ್ಲ ॥೭॥ ಮತ್ತೊಬ್ಬಳು ತನ್ನನೇತ್ರಮಾರ್ಗದಿಂದ ಆಕೃಷ್ಣನಂ ಹೃದಯದಲ್ಲಿ ಸೇರಿಸಿಕೊಂಡು ನೇತ್ರಂಗಳಂ ಮುಚ್ಚಿಕೊಂಡು ಮನಸ್ಸಿನಿಂದಲೇ ಆಲಿಂಗನವಂ ಮಾಡಿಕೊಂಡು ರೋಮಾಂಚವುಳ್ಳವಳಾಗಿ ಯೋಗಿಯಂತೆ ಪರವಶಳಾದಳು ॥೮॥ ಈರೀತಿಯಲ್ಲಿ ಸಮಸ್ತರಾದ ಗೋಪಸ್ತ್ರೀಯರುಗಳೂ ಶ್ರೀಕೃಷ್ಣನ ದರ್ಶನದಿಂದ ಉಂಟಾದ ಉತ್ಸವದಿಂದ ಸುಖಗೊಳಿಸಲ್ಪಟ್ಟವರಾಗಿ ಪರಬ್ರಹ್ಮವನೆಯ್ದಿ ಜನರು ಸಂಸಾರತಾಪವಂ ಬಿಟ್ಟಂತೆ ವಿರಹತಾಪವಂ ಬಿಟ್ಟರು ॥೯॥ ಶೋಕವಂ ಬಿಟ್ಟು ಆನಂದಭರಿತರಾದ ಆಗೋಪಸ್ತ್ರೀಯರೊಡನೆ ಸುತ್ತುಕಟ್ಟಲ್ಪಟ್ಟಿರುವ ಶ್ರೀಕೃಷ್ಣನು ಸತ್ವಾದಿಶಕ್ತಿಗಳಿಂದ ಪರಮಾತ್ಮನಂತೆ ಪ್ರಕಾಶಿಸಿದನು ॥೧೦॥ ಸಮರ್ಥನಾದ ಶ್ರೀಕೃಷ್ಣನು ವಿಕಸಿತಂಗಳಾದ ಕುಂದಮಂದಾರ ಪುಷ್ಪಂಗಳ ಪರಿಮಳಯುಕ್ತವಾದ ಮಂದಮಾರುತವನಾಶ್ರಯಿಸಿ ಬರುತ್ತಲಿರುವ ಭೃಂಗಂಗಳುಳ್ಳದ್ದಾಗಿ, ಶರತ್ಕಾಲದ ಚಂದ್ರನ ಬೆಳದಿಂಗಳಿನಿಂದ ಅಪಹೃತವಾದ ಅಂಧಕಾರವುಳ್ಳ, ಶುಭಕರವಾದ ಯಮುನಾನದಿಯ ತೆರೆಗಳೆಂಬ ಹಸ್ತಂಗಳಿಂದ ಹರಡಲ್ಪಟ್ಟ ಸಂಣಮರಳುಳ್ಳ, ಸೈಕತರಾಶಿಯಲ್ಲಿ ಆಗೋಪಸ್ತ್ರೀಯರಂ ಕರೆದುಕೊಂಡುಹೋಗಿ ಅವರಮಧ್ಯದಲ್ಲಿ ಪ್ರಕಾಶಿಸಿದನು ॥೧೨॥ ಆಗೋಪಿಕಾಸ್ತ್ರೀಯರುಗಳು ಆಭಗವಂತನ ದರ್ಶನದಿಂದುಂಟಾದ ಸಂತೋಷದಿಂದ ವಿಸ್ಮೃತವಾದ ಮನೋವ್ಯಥೆಯುಳ್ಳವರಾಗಿ ಪೂರ್ಣಕಾಮರಾದರು ಅದೆಂತೆಂದರೆ, ಆಮೇಲೆ ತಮ್ಮ ಕುಚಕುಂಕುಮಾಂಕಿತಂಗ

ತದ್ದರ್ಶನಾಹ್ಲಾದವಿಧೂತಹೃದ್ರುಜೋಮನೋರಥಾಂತಂಶ್ರುತಯೋಯಥಾಯಯುಃ । ಸ್ವೈರುತ್ತರೀಯೈಃಕುಚಕುಂಕುಮಾಂಕಿತೈರಚೀಕ್ಲೃಪನ್ನಾಸನಮಾತ್ಮಬಂಧವೇ ||೧೩|| ತತ್ರೋಪವಿಷ್ಟೋ ಭಗವಾನ್ ಸಈಶ್ವರೋಯೋಗೀಶ್ವರಾಂತರ್ಹೃದಿಕಲ್ಪಿತಾಸನಃ । ಚಕಾಸಗೋಪೀಪರಿಷದ್ಗತೋರ್ಚಿತಸ್ತ್ರೈಲೋಕ್ಯಲಕ್ಷ್ಮ್ಯೈಕಪದಂವಪುರ್ದಧತ್ ||೧೪|| ಸಭಾಜಯಿತ್ವಾತಮನಂಗದೀಪನಂಸಹಾಸಲೀಲೇಕ್ಷಣವಿಭ್ರಮಭ್ರುವಾ । ಸಂಸ್ಪರ್ಶನೇನಾಂಕಕೃತಾಂಘ್ರಿಹಸ್ತಯೋಸ್ಸಂಸ್ತುತ್ಯಈಷತ್ಕುಪಿತಾಬಭಾಷಿರೇ ||೧೫|| ಗೋಪ್ಯಃ || ಭಜತೋನುಭಜಂತ್ಯೇಕಏಕಏತದ್ವಿಪರ್ಯಯಂ । ನೋಭಯಾಂಶ್ಚಭಜಂತ್ಯನ್ಯಏತನ್ನೋಬ್ರೂಹಿಸಾಧುಭೋ ||೧೬|| ಶ್ರೀಭಗವಾನ್ || ಮಿಥೋಭಜಂತಿಯೇಸಖ್ಯಸ್ಸ್ವಾರ್ಥೈಕಾಂತೋ

ಟೀ.. ರುಜಃ-ತತ್-ಆಪರಮೇಶ್ವರನ-ದರ್ಶನ-ಸಾಕ್ಷಾತ್ಕಾರದಿಂದಾದ, ಆಹ್ಲಾದ-ಆನಂದದಿಂದ, ವಿಧೂತ-ಸೋಡಿಸಿಬಿಡಲ್ಪಟ್ಟ ಹೃದ್ರುಜಃ-ಮನೋರೋಗಗಳುಳ್ಳವರಾಗಿ, ಶ್ರುತಯೋಯಥಾ-ವೇದಗಳಹಾಗೆ, ಮನೋರಥಾಂತಂ-ಬಯಕೆಗಳತುದಿಯನ್ನು, ಯಯುಃ-ಹೊಂದಿದರು. ಕುಚಕುಂಕುಮಾಂಕಿತೈಃ-ಸ್ತನಗಳಕೇಸರಗಂಧದಿಂದ ಗುರುತುಮಾಡಲ್ಪಟ್ಟ, ಸ್ವೈಃ-ಉತ್ತರೀಯೈಃ-ತಮ್ಮಸೆರಗುಗಳಿಂದ, ಆತ್ಮಬಂಧವೇ-ಅಂತರ್ಯಾಮಿಯಾದ್ದರಿಂದ, ತಮ್ಮನಂಟನಾದ, ಶ್ರೀಕೃಷ್ಣನಿಗೆ, ಆಸನಂ-ಹಾಸಿಯನ್ನು, ಅಚೀಕ್ಲೃಪನ್-ರಚಿಸಿದರು ಹಾಸಿದರು ||೧೩|| ತತ್ರ-ಆಸೆರಗಿನಮೇಲೆ, ಉಪವಿಷ್ಟಃ-ಕುಳಿತುಕೊಂಡಂಥಾ, ಭಗವಾನ್ ಭಗವಂತನಾದ, ಈಶಃ-ಪರಮೇಶ್ವರನಾದ, ಯೋಗೀಶ್ವರಾಂತರ್ಹೃದಿ-ಯೋಗೀಶ್ವರರಅಂತರಂಗದಲ್ಲಿ, ಕಲ್ಪಿತಾಸನಃ-ರಚಿಸಲ್ಪಟ್ಟಗದ್ದುಗೆಯುಳ್ಳ, ಸಃ-ಆಕೃಷ್ಣನು, ತ್ರೈಲೋಕ್ಯಲಕ್ಷ್ಮ್ಯೈಕಪದಂ-ಮೂರುಲೋಕಗಳಭಾಗ್ಯಕ್ಕೆ ಮುಖ್ಯಸ್ಥಾನವಾದ, ವಪುಃ-ಶರೀರವನ್ನು, ದಧತ್-ಧರಿಸುವವನಾಗಿಯು, ಗೋಪೀಪರಿಷದ್ಗತಃ - ಗೊಲ್ಲತಿಯರಸಭೆಯಲ್ಲಿರುವವನಾಗಿಯೂ, ಅರ್ಚಿತಃ-ಅವರಿಂದಪೂಜಿಸಲ್ಪಟ್ಟವನಾಗಿಯೂ, ಚಕಾಸ-ಪ್ರಕಾಶಿಸಿದನು ||೧೪|| ಅನಂಗದೀಪನಂ-ಕಾಮವರ್ಧಕನಾದ, ತಂ-ಆಕೃಷ್ಣನನ್ನು. ಸಹಾಸಲೀಲೇಕ್ಷಣವಿಭ್ರಮಭ್ರುವಾ-ಸಹಾಸ-ನಗೆಯಿಂಕೂಡಿದ, ಲೀಲೇಕ್ಷಣ-ವಿಲಾಸದನೋಟದ, ವಿಭ್ರಮ-ವಿನೋದವುಳ್ಳ, ಭ್ರುವಾ-ಹುಬ್ಬಿನಿಂದಲೂ, ಅಂಕಕೃತಾಂಘ್ರಿಹಸ್ತಯೋಃ-ಅಂಕ-ತಮ್ಮತೊಡೆಗಳಲ್ಲಿ, ಕೃತ-ಇರಿಸಿಕೊಳ್ಳಲ್ಪಟ್ಟ, ಅಂಘ್ರಿಹಸ್ತಯೋಃ ಕೃಷ್ಣನಕಾಲುಗಳಮತ್ತುಕೈಗಳ, ಸಂಸ್ಪರ್ಶನೇನ-ಒಸುಕುವುದರಿಂದಲೂ, ಸಭಾಜಯಿತ್ವಾ-ಸನ್ಮಾನಿಸಿ, ಸಂಸ್ತುತ್ಯಚ-ಸ್ತುತಿಮಾಡಿಯೂಕೂಡ, ಈಷತ್ಕುಪಿತಾಸ್ಸತ್ಯಃ-ಕೊಂಚಸಿಟ್ಟುಗೊಂಡವರಾಗಿ, ಬಭಾಷಿರೇ-ನುಡಿದರಂತೆ ||೧೫|| ( ಗೋಪೀವಾಕ್ಯವು-) ಭೋ-ಎಲೈಕೃಷ್ಣನೇ! ಏಕೇ-ಕೆಲವರು, ಭಜತಃ-ತಮ್ಮಂಸೇವಿಸುವರನ್ನು, ಅನುಭಜಂತಿ-ಹಾಗೆಯೇತಾವೂಸೇವಿಸುವರು, ಏಕೇ-ಬೇರೆಕೆಲವರು, ಏತದ್ವಿಪರ್ಯಯಂ-ಇದಕ್ಕೆವಿಪರೀತವನ್ನು, (ಭಜಿಸದವರನ್ನು) ಭಜಂತಿ-ಸೇವಿಸುತ್ತಾರೆ, ಅನ್ಯೇ-ಇತರರು, ಉಭಯಾಂಶ್ಚ-ಸೇವಕರನ್ನೂ ಅಸೇವಕರನ್ನೂ, ನಭಜಂತಿ-ಸೇವಿಸುವುದಿಲ್ಲ ಏತತ್-ಈರಹಸ್ಯವನ್ನು, ನಃ-ನಮಗೆ, ಸಾಧು-ಚೆನ್ನಾಗಿ, ಬ್ರೂಹಿ-ಹೇಳು ||೧೬|| (ಭಗವದ್ವಾಕ್ಯವು.) ಹೇಸಖ್ಯಃ-ಗೆಳತಿಯರಿರಾ! ಯೇ-

ಳಾದ ಸೀರೆಗಳ ಸೆರಗುಗಳಿಂದ ಶ್ರೀಕೃಷ್ಣನಿಗೆ ಹಾಸಿಗೆಯಂ ಕಲ್ಪಿಸಿದರು |೧೩| ಮಹಾಯೋಗಿಗಳ ಹೃದಯ ಮಧ್ಯದಲ್ಲಿ ಕಲ್ಪಿತವಾದ ಆಸನವುಳ್ಳ ಭಗವಂತನಾದ ಶ್ರೀಕೃಷ್ಣನು ಲೋಕತ್ರಯದ ಶೋಭಾಲಕ್ಷ್ಮಿಗೆ ಮುಖ್ಯಾವಾಸವಾದ ಶರೀರವ ಧರಿಸಿದಂತಾವನಾಗಿ, ಗೋಪಸ್ತ್ರೀರಚಿತವಾದ ಹಾಸಿಗೆಯಲ್ಲಿ ಕುಳಿತು ಕೊಂಡು, ಗೋಪಿಕಾಸ್ತ್ರೀ ಸಮೂಹದಿಂದ ಪರಿವೃತನಾಗಿ ಪ್ರಕಾಶಿಸಿದನು |೧೪| ಅನಂತರದಲ್ಲಿ ಮಂದಹಾಸ ಯುಕ್ತವಾದ ವಿಲಾಸಂಗಳಿಂದಲು ಮನೋಹರಂಗಳಾದ ನೋಟಂಗಳಿಂದ ಚಲಿಸುತ್ತಲಿರುವ ಹುಬ್ಬುಗಳುಳ್ಳ ಗೋಪಿಕಾಸ್ತ್ರೀಯರುಗಳು ಕಾಮೋದ್ದೀಪಕನಾದ ಶ್ರೀಕೃಷ್ಣನಂ ಬಹುಮಾನದಿಂದ ಪೂಜಿಸಿ ಶ್ರೀಕೃಷ್ಣನ ಪಾದಂಗಳಂ ಹಸ್ತಂಗಳಂ ಪಿತ್ತುತ್ತ, ಸ್ವಲ್ಪಕೋಪಮುಳ್ಳವರಾಗಿ ನುಡಿದರು |೧೫| [ಅದೆಂತೆನೆ] ಎಲೈ ಶ್ರೀಕೃಷ್ಣನೆ ಲೋಕದಲ್ಲಿ ಕೆಲವರು ತಮ್ಮನ್ನು ಯಾರು ಭಜಿಸುತ್ತಾರೋ ಅವರಂ ತಾವು ಭಜಿಸುವರು, ಕೆಲವರು ತಮ್ಮನ್ನು ಭಜಿಸದಿರುವರನ್ನೂ ಭಜಿಸುವರು. ಕೆಲವರು ತಮ್ಮನ್ನೇ ಭಜಿಸುವಂತಾವರವನ್ನೂ ಕೂಡ ಭಜಿಸುವುದಿಲ್ಲ. ಇವರಸಂಗತಿಯನ್ನು ನಮಗೆ ಹೇಳು |೧೬| (ಎಂಬ ಗೋಪಸ್ತ್ರೀಯರುಗಳ ವಾಕ್ಯವಂ ಕೇಳಿ ಶ್ರೀಕೃಷ್ಣನು ನುಡಿದ

ದ್ಯವಾಹಿತೇ। ನತತ್ರಸೌಹೃದಂಧರ್ಮಃಸ್ವಾರ್ಥಾರ್ಥಂತದ್ಧಿನಾನ್ಯಥಾ॥೧೭॥ಭಜಂತ್ಯಭಜತೋಯೇ
ವೈಕರುಣಾಃಪಿತರೋಯಥಾ। ಧರ್ಮೋನಿರಪವಾದೋತ್ರಸೌಹೃದಂಚಸುಮಧ್ಯಮಾಃ॥೧೮॥ಭಜತೋಪಿನ
ವೈಕೇಚಿದ್ಭಜಂತ್ಯಭಜತಃಕುತಃ। ಆತ್ಮಾರಾಮಾಹ್ಯಾಪ್ತಕಾಮಾಅಕೃತಜ್ಞಾಗುರುದ್ರುಹಃ॥೧೯॥ನಾಹಂ
ತುಸಖ್ಯೋಭಜತೋಪಿಜಂತೂನ್‌ಭಜಾಮ್ಯಮೀಷಾಮನುವೃತ್ತಿವೃತ್ತಯೇ। ಯಥಾಧನೋಲಬ್ಧ
ಧನೇವಿನಷ್ಟೇತಚ್ಚಿಂತಯಾನ್ಯನ್ನಿಭೃತೋನವೇದ॥೨೦॥ಏವಂಮದರ್ಥೋಜ್ಝಿತಲೋಕವೇದಸ್ವಾನಾಂಹಿ

---

ಯಾರು, ಮಿಥಃ-ಪರಸ್ಪರವಾಗಿ, ಭಜಂತಿ-ಸೇವಿಸುವರೋ, ತೇ-ಅವರು, ಸ್ವಾರ್ಥೈಕಾಂತೋದ್ಯಮಾಃ-ಸ್ವಾರ್ಥ-ಸ್ವಪ್ರ
ಯೋಜನಪಲ್ಲಿಯೇ, ಏಕಾಂತೋದ್ಯಮಾಃ-ರಹಸ್ಯವಾದಮುಖ್ಯಪ್ರಯತ್ನವುಳ್ಳವರಲ್ಲವೆ? ತತ್ರ-ಪ್ರತ್ಯುಪಕಾರಾಪೇಕ್ಷೆಯಿಂದ
ಮಾಡುವಭಜನದಲ್ಲಿ, ಸೌಹೃದಂ-ಸ್ನೇಹವೂ, ಧರ್ಮಃ-ಪುಣ್ಯವೂ, ನ-ಇಲ್ಲವು. ತತ್-ಆಭಜನವು, ಸ್ವಾರ್ಥಂಹಿ-ತಮ್ಮಪ್ರ
ಯೋಜನಕ್ಕೋಸುಗವೇ ಅನ್ಯಥಾ-ಬೇರೆಬಗೆಯಾಗಿ, ನ-ಇಲ್ಲವು ॥೧೭॥ಹೇಸುಮಧ್ಯಮಾಃ-ಎಲೆಹೆಂಗಳಿರಾ। ಯೇ-ಯಾರು, ಅ
ಭಜತಃವೈ-ತಮ್ಮಂಸೇವಿಸದೇಯಿರುವರನ್ನೂಕೂಡ, ಭಜಂತಿ-ತಾವುಸೇವಿಸುವರೋ, ತೇ-ಅವರು, ಕರುಣಾಃ-ದಯೆಯು
ಳ್ಳವರು. ಪಿತರಃ-ತಂದೆಯರು, ಯಥಾ-ಹೇಗೋ, ತಥಾ-ಹಾಗೆ, ಇರುವರು. ಅತ್ರ-ಈಭಜನದಲ್ಲಿ, ನಿರಪವಾದಃ-ದೂಷಣವಿ
ಲ್ಲದ, ಧರ್ಮಃ-ಪುಣ್ಯವೂ, ಸೌಹೃದಂಚ-ಸ್ನೇಹವೂಯಿರುವುದು ॥೧೮॥ ಕೇಚಿತ್-ಕೆಲವರು, ಭಜತೋಪಿ-ತಮ್ಮಂಸೇವಿಸಿ
ದವರನ್ನೂಕೂಡ, ನಭಜಂತಿ-ತಾವುಸೇವಿಸುವುದಿಲ್ಲ. ಅಭಜತಃ-ತಮ್ಮಂಸೇವಿಸದವರನ್ನು, ಕುತಃ-ಎಲ್ಲಿಂದಸೇವಿಸುವರು.
(ಅಂಥವರುನಾಲ್ಕು ಬಗೆಯಾಗಿರುವರು) ಆತ್ಮಾರಾಮಾಃ-ಕೆಲವರು ತಮ್ಮಪ್ರತ್ಯಗಾತ್ಮನಲ್ಲಿಯೇ ಭೇದವಿಲ್ಲದೇಕ್ರೀಡಿಸುವವರು
ಆಪ್ತಕಾಮಾಃ-ಬಯಕೆಗಳಿಗೆಫಲಗಳಂಪಡೆದುತೃಪ್ತರಾಗಿರುವರು, ಅಕೃತಜ್ಞಾಃ-ಪ್ರತ್ಯುಪಕಾರಂಗೆಯ್ಯಲುಅರುಹಿಲ್ಲದಮೂಢರು।
ಗುರುದ್ರುಹಃ-ಉಪಕಾರಿಗಳಿಗೆಪ್ರತ್ಯುಪಕಾರವಂಗೆಯ್ಯವೆ ಬೇಕೆಂದು ಕೃತಘ್ನರಾಗಿರುವವರು ॥೧೯॥ ಹೇಸಖ್ಯಃ-ಎಲೆಗೆಳತಿಯ
ರಿರಾ। ಅಹಂತು-ನಾನಾದರೋ, ಭಜತೋಪಿ-ನನ್ನನ್ನುಸೇವಿಸುವ, ಜಂತೂನ್-ಪ್ರಾಣಿಗಳನ್ನುಕೂಡ, ನಭಜಾಮಿ-ನಾನುಸೇ
ವಿಸುವುದಿಲ್ಲವು (ಏಕೆಂದರೆ) ಅಮೀಷಾಂ-ಇವರಿಗೆ, ಅನುವೃತ್ತಿವೃತ್ತಯೇ-ಅನುವೃತ್ತಿ-ಅನುಸರಿಸಿಬರುವನಿರಂತರವಾದ, ವೃ
ತ್ತಯೇ-ನನ್ನಧ್ಯಾನಪ್ರವರ್ತನಕ್ಕೋಸುಗವೇ (ಎಂತೆಂದರೆ.) ಅಧನಃ-ಧನವಿಲ್ಲದಪುರುಷನು, ಲಬ್ಧಧನೇ-ಕೈಗೆಬಂದಧನವು, ವಿ
ನಷ್ಟೇಸತಿ ಕೈಬಿಟ್ಟುಹೋಗುತಲೂ, ತಚ್ಚಿಂತಯಾ-ಹೋಯಿತೆಂಬಅದರಚಿಂತೆಯಿಂದ, ನಿಭೃತಃ-ವ್ಯಾಪ್ತನಾಗಿ, ಯಥಾ-
ಹೇಗೆ, ಅನ್ಯತ್-ಬೇರೆವಿಷಯವನ್ನು, ನವೇದ-ತಿಳಿಯನೋ, ತಥಾ-ಹಾಗೆ, ನಾನುನನ್ನಭಜಕರನ್ನುಭಜಿಸುವುದಿಲ್ಲವೆಂದುಭಾ
ವವು ॥೨೦॥ಪ್ರಿಯಾಃ-ಇಷ್ಟೆಯರಾದ, ಅಬಲಾಃ-ಹೆಂಗಳಿರಾ! ಏವಂ-ಹೀಗೆ, ಮದ...ಸ್ವಾನಾಂ-ಮದರ್ಥ-ನನಗೋಸುಗ

---

ನದೆಂತೆನೆ-) ಎಲೈ, ಸಖಿಯರುಗಳಿರಾ! ಯಾವಜನರು ಉಪಕಾರ ಪ್ರತ್ಯುಪಕಾರ ರೂಪವಾಗಿ ಪರಸ್ಪರವಾಗಿ
ಯೂ ಭಜಿಸುವರೋ, ಅವರು ಸ್ವಾರ್ಥಸಂಪಾದನಾರ್ಥವಾಗಿ ಭಜಿಸುವರು. ಅವರಿಗೆ ಧರ್ಮದೃಷ್ಟಿಯಿಲ್ಲ.
ಮೈತ್ರಿಯೂಇಲ್ಲ. ಸ್ವಕಾರ್ಯನಿಮಿತ್ತವಾದ ನಟನವು ॥೧೭॥ ಎಲೈ ಸ್ತ್ರೀಯರುಗಳಿರಾ! ಯಾವಜನರು ತ
ಮ್ಮಂಭಜಿಸದೆ ಇರುವಜನರಂಕೂಡ ಭಜಿಸುತ್ತಾರೆಯೋ, ಆಜನರು ಕರುಣಾಶಾಲಿಗಳು ಪ್ರೀತಿಯುಳ್ಳವರು
ಅವರಿಗೆ ಧರ್ಮಸಿದ್ಧಿಯೂ ಮೈತ್ರಿಯೂ ಉಂಟಾಗುವುದು॥೧೮॥ ಇನ್ನು ತಮ್ಮನ್ನೇ ಭಜಿಸುವಜನರಂ ಯಾ
ರುಭಜಿಸುವುದಿಲ್ಲವೋ ಅವರುನಾಲ್ಕು ಪ್ರಕಾರದವರು. ಅದೆಂತೆನ್ನೆ-೧ ಸ್ವಸ್ವರೂಪಾನಂದವಂ ಅನುಭವಿಸಿ
ಕೊಂಡಿರುವವರು. ೨ ಪೂರ್ಣಕಾಮರಾಗಿ ವಿಷಯಾಪೇಕ್ಷೆ ಯಿಲ್ಲದವರು. ೩ ಕೃತಜ್ಞರಲ್ಲದ ಮೂಢರು.
೪ ಉಪಕಾರಂಗಳಂ ತಿಳಿಯದ ಗುರುದ್ರೋಹಿಗಳು. ಎಂದು ನಾಲ್ಕುವಿಧದವರಾಗಿರುವರು ॥೧೯॥ ಎಲೈಸ
ಖಿಯರುಗಳಿರಾ? ನಾನು ಈಪೂರ್ವೋಕ್ತರಾದ ಜನರಲ್ಲಿ ಓರ್ವನೂ ಅಲ್ಲ. ಮತ್ತೇನೆಂದರೆ-ಮಹಾದಯಾ
ಶಾಲಿಯೂ ಪರಮಮಿತ್ರನಾದವನೂ ಅದಕಾರಣದಿಂದ ನಾನು ನನ್ನನ್ನೇ ಭಜಿಸುವಜನರನ್ನೇ ಪುನಃ ನಾನು
ಭಜಿಸುವುದಿಲ್ಲ. ಯಾವನಿಮಿತ್ತದಿಂದ ಎಂದರೆ-ಮತ್ತು ಚೆನ್ನಾಗಿ ನನ್ನಂಭಜಿಸಲಿ ಎಂದುನಾನು ಉಪೇಕ್ಷೆಯಿಂ
ದಯಿರುವವನಂತೆ ಯಿರುತ್ತೇನೆ. ಅದೆಂತೆಂದರೆ-ಸ್ವಾಧೀನವಾದ ಧನವುನಷ್ಟವಾದರೆ ತದೇಕಧ್ಯಾನದಿಂದ ಮ
ತ್ತೊಂದು ಕ್ಷುತ್ತೃಪಿಪಾಸೆಯಂ ಸಹ ಅರಿಯದೆ ಇರುವಪುರುಷನಂತೆ ಭಜಿಸುವರು ॥೨೦॥ ಎಲೈ ಸ್ತ್ರೀಯರು

ಪ್ರೇಮಯ್ಯನುವೃತ್ತಯೇಬಲಾಃ | ಮಯಾಪರೋಕ್ಷಂಭಜತಾತಿರೋಹಿತಂಮಾಸೂಯಿತುಂಮಾ
ರ್ಹಥತತ್ಪ್ರಿಯಂಪ್ರಿಯಾಃ||೨೧||ನಪಾರಯೇಹಂನಿರವದ್ಯಸಂಯುಜಾಂಸ್ವಸಾಧುಕೃತ್ಯಂವಿಬುಧಾ
ಯುಷಾಪಿವಃ | ಯಾಮಾಭಜನ್ದುರ್ಜರಗೇಹಶೃಂಖಲಾಃಸಂವೃಶ್ಚ್ಯತದ್ವಃಪ್ರತಿಯಾತುಸಾಧು
ನಾ||೨೨||

ಇತಿಶ್ರೀಮದ್ಭಾಗವತೇ ದಶಮಸ್ಕಂಧೇ ದ್ವಾತ್ರಿಂಶೋಽಧ್ಯಾಯಃ

---

ವಾಗಿ, ಉಜ್ಝಿತ-ಬಿಡಲ್ಪಟ್ಟ, ಲೋಕ-ಲೌಕಿಕವಾದಯುಕ್ತಾಯುಕ್ತಭಯವು, ವೇದ-ವೈದಿಕವಾದಪುಣ್ಯಪಾಪಭಯವು, ಸ್ವಾ ನಾಂ-ತನ್ನವರಾದವರೆಂಟರಸ್ನೇಹತ್ಯಾಗಭಯವುಳ್ಳ, ವಃ-ನಿಮಗೆ, ಮಯಿ-ನನ್ನವಿಷಯದಲ್ಲಿ, ಅನುವೃತ್ತಯೇ-ಅನುಸರಣ ವೆಂಬಭಕ್ತಿಯುಂಟಾಗಲೋಸುಗ, ಪರೋಕ್ಷಂ-ಹಿಂದುಗಡೆಯಲ್ಲಿ, ಭಜತಾ-ನಿಮ್ಮಂಪ್ರೀತಿಸುತಲಿರುವ, ಮಯಾ-ನನ್ನಿಂದ, ತಿರೋಹಿತಂ-ಅಡಗಿರೋಣವಾಯಿತು. ತತ್-ಆಕಾರಣದಿಂದ, ಪ್ರಿಯಂ-ನಿಮಗೆಇಷ್ಟನಾದ, ಮಾ-ನನ್ನಂಕುರಿತು, ಅಸೂ ಯಿತುಂ-ಇಲ್ಲದದೋಷವಂಆರೋಪಿಸಿದುಷ್ಟನೆಂದುಭಾವಿಸುವುದಕ್ಕೆ, ಮಾರ್ಹಥ-ತಕ್ಕವರಾಗಬೇಡಿರಿ||೨೧||ನಿರವದ್ಯಸಂಯು ಜಾಂ-ನಿರವದ್ಯ-ನಿರ್ದುಷ್ಟವಾದ, ಸಂಯುಜಾಂ-ಭಕ್ತಿಸಂಬಂಧವುಳ್ಳ, ವಃ-ನಿಮಗೆ, ಸ್ವಸಾಧುಕೃತ್ಯಂ-ಸಮಿಾಚೀನವಾದಸ ರಿಯಾದಪ್ರತ್ಯುಪಕಾರಕರ್ಮವನ್ನು,(ಮಾಡುವುದಕ್ಕೆ) ವಿಬುಧಾಯುಷಾಪಿ-ದೇವತೆಗಳಆಯುಷ್ಯದಿಂದಲೂಕೂಡ, (ಎಷ್ಟುಕಾಲ ವಾದರೂ) ಅಹಂ-ನಾನು, ನಪಾರಯೇ-ಕಡೆಗಾಣೆನು (ಅಸಮರ್ಥನಾಗಿರುವೆನು.) ಯಾಃ-ಯಾವಗೊಲ್ಲತಿಯರು, ದುರ್ಜರಗೇ ಹಶೃಂಖಲಾಂ-ದುರ್ಜರ-ಮುದಿತನವಿಲ್ಲದ, ಗೇಹ-ಗೃಹಾಭಿಮಾನವೆಂಬ, ಶೃಂಖಲಾಂ-ಸಂಕಲೆಯನ್ನು, ಸಂವೃಶ್ಚ್ಯ-ನಿಶ್ಶೇಷ ವಾಗಿತರಿದುಹಾಕಿ, ಮಾ-ನನ್ನನ್ನು, ಅಭಜನ್-ಹೊಂದಿಸೇವಿಸಿದರೋ, ತದ್ವಃ-ಅಂಥಾನಿಮಗೆ, ಸಾಧುನಾ-ನಿಮ್ಮಸಮಿಾಚೀ ನಕೃತ್ಯದಿಂದಲೇ, ತತ್-ಆನೀವುನನ್ನಂಭಜಿಸಿದಕೃತ್ಯವು, ಪ್ರತಿಯಾತು-ಪ್ರತ್ಯುಪಕಾರಮಾಡಲ್ಪಟ್ಟದ್ದಾಗಲಿ.(ನಿಮ್ಮಸುಕೃ ತಕ್ಕೆನಾನುಪ್ರತ್ಯುಪಕಾರಮಾಡಲಾರೆನು. ನಿಮ್ಮಸುಕೃತವೇನಿಮಗೆಪ್ರತ್ಯುಪಕಾರವಾಗುತ್ತೆ ||೨೨||

ಇತಿಶ್ರೀಮದ್ಭಾಗವತೇ ದಶಮಸ್ಕಂಧೇ ದ್ವಾತ್ರಿಂಶೋಽಧ್ಯಾಯಃ

---

ಗಳೇ! ಈರೀತಿಯಲ್ಲಿ ನನ್ನನಿಮಿತ್ತವಾಗಿ ಲೋಕಾಪವಾದವನ್ನೂ ಶಾಸ್ತ್ರವನ್ನೂ ಸ್ವಜನವಿರೋಧವನ್ನೂ ಸ ಹ ಉಪೇಕ್ಷಿಸಿ ನನ್ನಲ್ಲಿಯೇ ಆಸಕ್ತರಾಗಿ ನನ್ನನ್ನೇ ಚಿಂತಿಸುತಲಿರುವ ನಿಮಗೆ ಮತ್ತು ನನ್ನಲ್ಲಿ ಪ್ರೇಮಾತಿಶ ಯವುಂಟಾಗಿ ನನ್ನನ್ನೇ ಅನುವರ್ತಿಸುವಂತೆ ಮಾಡಲೋಸುಗ ನಾನು ನಿಮ್ಮಕಂಣಿಗೆ ಕಾಣದೆ ತಿರೋಹಿತನಾ ಗಿ ನಿಮ್ಮ ಪ್ರಲಾಪಂಗಳಂ ಕೇಳುತ್ತಲೇ ಇದ್ದೆನು. ಆಕಾರಣದಿಂದ ನನ್ನಲ್ಲಿ ಅಸೂಯೆಪಡಬೇಡಿ, ನೀವುನ ನಗೆ ಪ್ರಿಯತಮರು ||೨೧|| ಎಲೈ ಪ್ರಾಣಕಾಂತೆಯರಿರಾ? ನೀವು ಬಿಡಲಶಕ್ಯವಾದ ಗೃಹಾದ್ಯಭಿಮಾನವಂ ನಿ ಶ್ಶೇಷವಾಗಿಬಿಟ್ಟು ನನ್ನನ್ನೇಭಜಿಸುವಿರಿ. ಆಕಾರಣದಿಂದ ನೀವುಮಾಡಿದ ಸಮಿಾಚೀನವಾದ ನನ್ನಧ್ಯಾನರೂ ಪವಾದ ವ್ಯಾಪಾರವಂ ನಾನುತಿಳಿದು, ಅದಕ್ಕೆ ಪ್ರತ್ಯುಪಕಾರವ ಮಾಡುವುದಕ್ಕೆ ಬ್ರಹ್ಮಕಲ್ಪಪರ್ಯಂತವಾ ದ ಕಾಲದಿಂದಲೂ ಸಮರ್ಥನಾಗುವುದಿಲ್ಲ. ಅದರಿಂದ ನೀವುಮಾಡಿದ ಸಾಧುಕೃತ್ಯವೇ ನಿಮಗೆ ಪ್ರತ್ಯುಪಕಾ ರವಂ ಮಾಡುತ್ತೆ. ನಿಮ್ಮಮನೋರಥಂ ಪೂರ್ಣವಾಗುವುದು ||೨೨|| |‡|

ಇಂತು ಶುಕಮುನಿಯು ಪರೀಕ್ಷಿದ್ರಾಯನಿಗೆ ನಿರೂಪಿಸಿದನೆಂದು ಸೂತಪೌರಾಣಿಕನು ನೈಮಿಶಾ
ರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಹೇಳಿದನೆಂಬಲ್ಲಿಗೆ ಶ್ರೀಮನ್ಮಹೀಶೂರಪುರವ
ರಾಧೀಶ ಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜ ವಿರಚಿತವಪ್ಪ ಶ್ರೀ
ಭಾಗವತದ ಶ್ರೀಕೃಷ್ಣರಾಜ ವಾಣೀವಿಲಾಸವು ಎಂಬಕರ್ಣಾಟಕ
ಭಾಷಾವ್ಯಾಖ್ಯಾನದಲ್ಲಿ ದಶಮಸ್ಕಂಧದೊಳು೩೨ನೆಯ
ಅಧ್ಯಾಯವು ಸಂಪೂರ್ಣವಾದುದು.
ಮಂಗಳಮಸ್ತು

ಶ್ರೀಶುಕಃ॥ ಇತ್ಥಂಭಗವತೋಗೋಪ್ಯಃಶ್ರುತ್ವಾವಾಚಸ್ಸುಪೇಶಲಾಃ । ಜಹುರ್ವಿರಹಜಂತಾಪಂತದಂಗೋಪಚಿತಾಶಿಷಃ ॥೧॥ ರಾಸಕ್ರೀಡಾಪ್ರಾರಂಭಃ.

ತತ್ರಾರಭತಗೋವಿಂದೋರಾಸಕ್ರೀಡಾಮನುವ್ರತೈಃ । ಸ್ತ್ರೀರತ್ನೈರನ್ವಿತಃಪ್ರೀತೈರನ್ಯೋನ್ಯಾಬದ್ಧಬಾಹುಭಿಃ ॥೨॥ ರಾಸೋತ್ಸವಸ್ಸಂಪ್ರವೃತ್ತೋಗೋಪೀಮಂಡಲಮಂಡಿತಃ । ಯೋಗೇಶ್ವರೇಣಕೃಷ್ಣೇನ

---

೩೩ನೆಯ-ಅಧ್ಯಾಯಪ್ರತಿಪದಟೀಕೆ.

[ ಶುಕವಾಕ್ಯವು. ] ಗೋಪ್ಯಃ-ಗೊಲ್ಲತಿಯರು, ಇತ್ಥಂ-ಹೀಗೆ, ಭಗವತಃ-ಕೃಷ್ಣನ, ಸುಪೇಶಲಾಃವಾಚಃ-ಮೃದುಸೂಕ್ತಿಗಳನ್ನು, ಶ್ರುತ್ವಾ-ಕೇಳಿ, ತದಂಗೋಪಚಿತಾಶಿಷಸ್ಸತ್ಯಃ-ತತ್-ಆಕೃಷ್ಣನ,ಅಂಗ-ಶರೀರಸಂಬಂಧದಿಂದ,ಉಪಚಿತ-ವೃದ್ಧಿಹೊಂದಿದ (ಸಮೃದ್ಧವಾದ) ಆಶಿಷಃ-ಹರಕೆಯುಳ್ಳವರಾಗಿ, ವಿರಹಜಂ-ಕೃಷ್ಣನನ್ನಗಲಿದ್ದರಿಂದಹುಟ್ಟಿದ್ದ, ತಾಪಂ-ಜ್ವರವನ್ನು, ಜಹುಃ-ತೊರೆದರು॥೧॥ ತತ್ರ-ಅಲ್ಲಿ, ಗೋವಿಂದಃ-ಕೃಷ್ಣನು, ಪ್ರೀತೈಃ-ಸಂತುಷ್ಟೆಯರಾದ, (ಸ್ನೇಹವುಳ್ಳ) ಅನ್ಯೋನ್ಯಾಬದ್ಧಬಾಹುಭಿಃ-ಅನ್ಯೋನ್ಯ-ಪರಸ್ಪರವಾಗಿ, ಆಬದ್ಧ-ಸೇರಿಸಿಕಟ್ಟಿಕೊಳ್ಳಲ್ಪಟ್ಟ, ಬಾಹುಭಿಃ-ತೋಳುಗಳುಳ್ಳಂಥಾ, ಅನುವ್ರತೈಃ-ತನ್ನನ್ನು ಅನುಸರಿಸುವುದೇನಿಯಮವಾಗಿವುಳ್ಳ, ಸ್ತ್ರೀರತ್ನೈಃ-ಹೆಂಗಳಲ್ಲಿಶ್ರೇಷ್ಠೆಯರೊಂದಿಗೆ, ಅನ್ವಿತಸ್ಸನ್-ಕೂಡಿದವನಾಗಿ, ರಾಸಕ್ರೀಡಾಂ-ರಾಸಕ್ರೀಡೆಯನ್ನು, ಆರಭತ-ಆಡತೊಡಗಿದನು(ರಾಸವೆಂಬರೆ ಹಲವುನರ್ತನಕಿಯರುಸೇರಿಕು

---

೩೩ನೇಯ ಅಧ್ಯಾಯವು.

ಶ್ರೀಧರೀಯಶ್ಲೋಕಃ॥ ತ್ರಯಸ್ತ್ರಿಂಶೇತತೋಗೋಪೀಮಂಡಲೀಮಧ್ಯಗೋಹರಿಃ । ಪ್ರಿಯಾಸ್ಸ್ವಾರಮಯಾಮಾಸಹೃದಿನೀವನಕೇಳಿಭಿಃ ॥೧॥ ಮೂವತ್ತಮೂರನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ಗೋಪಸ್ತ್ರೀಸಮೂಹ ಮಧ್ಯಗತನಾಗಿ ಯಮುನಾವನವಿಹಾರಂಗಳಿಂದ ಪ್ರೀತಿಪಾತ್ರರಾದ ಗೋಪಸ್ತ್ರೀಯರೊಡನೆ ರಮಿಸುವವನಾಗಿ ಆಗೋಪಸ್ತ್ರೀಯರುಗಳನ್ನು ಸಂತೋಷಪಡಿಸಿದನು. ಎಂಬಅರ್ಥವಂ ಶ್ರೀಶುಕಾಚಾರ್ಯನು ಪರೀಕ್ಷಿದ್ರಾಯನಂ ಕುರಿತು ನಿರೂಪಿಸುವ ವಿವರಣವೆಂತೆನೆ.

ಎಲೈ, ಅರಸನೇ? ಈಪ್ರಕಾರವಾಗಿ ಶ್ರೀಕೃಷ್ಣನಿಂದ ಪೇಳಲ್ಪಟ್ಟ ಅಮೃತವಾಕ್ಕುಗಳಂಕೇಳಿ ಗೋಪಸ್ತ್ರೀಯರು ಶ್ರೀಕೃಷ್ಣನ ಅಂಗಸಂಗಂಗಳ ಸ್ಪರ್ಶನದಿಂದ ವಿರಹತಾಪವಂ ಪರಿಹರಿಸಿಕೊಂಡು ಸಂತುಷ್ಟರಾದರು ॥೧॥ ಅನಂತರದಲ್ಲಿ ಗೋವಿಂದನು ಆಸ್ಥಲದಲ್ಲಿ ಸಂತುಷ್ಟರಾಗಿ ಪರಸ್ಪರವಾಗಿ ಭುಜಂಗಳನ್ನು ಸೇರಿಸಿಕೊಂಡು ವರ್ತುಲಾಕಾರವಾಗಿ ನಿಂತಿರುವ ಗೋಪಸ್ತ್ರೀಯರೊಡನೆ ರಾಸಕ್ರೀಡೆಯ ನುಪಕ್ರಮಿಸಿದನು (ಬಹುಮಂದಿ ಸ್ತ್ರೀಯರುಗಳಿಂದ ಏಕಕಾಲದಲ್ಲಿ ಮಾಡಲ್ಪಡುವ ನಾಟ್ಯವೇ ರಾಸಕ್ರೀಡೆಯೆನಿಸುವುದು] ॥೨॥



ತಾಸಾಂಮಧ್ಯೇದ್ವಯೋರ್ದ್ವಯೋಃ ॥೩॥ ಪ್ರವಿಷ್ಟೇನಗೃಹೀತಾನಾಂಕಂಠೇಸ್ವನಿಕಟಂಸ್ತ್ರಿಯಃ । ಯಂಮನ್ಯೇರನ್ನಭಸ್ತಾವದ್ವಿಮಾನಶತಸಂಕುಲಂ॥ದಿವೌಕಸಾಂಸದಾರಾಣಾಮೌತ್ಸುಕ್ಯನಿಭೃತಾತ್ಮನಾಂ ॥೪॥ ತತೋದುಂದುಭಯೋನೇದುರ್ನಿಪೇತುಃಪುಷ್ಪವೃಷ್ಟಯಃ । ಜಗುರ್ಗಂಧರ್ವಪತಯಸ್ಸಸ್ತ್ರೀಕಾಸ್ತದ್ಯಶೋಽಮಲಂ ॥೫॥ ವಲಯಾನಾಂನೂಪುರಾಣಾಂಕಿಂಕಿಣೀನಾಂಚಯೋಷಿತಾಂ । ಸಪ್ರಿಯಾಣಾಮಭೂಚ್ಛಬ್ದಸ್ತುಮುಲೋರಾಸಮಂಡಲೇ ॥೬॥ ತತ್ರಾತಿಶುಶುಭೇತಾಭಿರ್ಭಗವಾಂದೇವಕೀಸುತಃ॥೭॥ಮಧ್ಯೇಮಣೀನಾಂಹೈಮಾನಾಂಮಹಾಮರಕತೋಯಥಾ॥೮॥ಪಾದನ್ಯಾಸೈರ್ಭುಜವಿಧು

---

ಣಿಯುವ ಆಟವು.)॥೨॥ಗೋಪೀಮಂಡಲಮಂಡಿತಃ-ಗೊಲ್ಲತಿಯರಚಕ್ರಾಕಾರವಾದ ಹಿಂಡಿನಿಂದಅಲಂಕರಿಸಲ್ಪಟ್ಟ, ರಾಸೋತ್ಸವಃ-ಸಂಘನಾಟ್ಯವು, ಸಂಪ್ರವೃತ್ತಃ-ನಡೆಯುತೊಡಗಿತು. ತಾಸಾಂ-ಅವರೊಳಗೆ, ದ್ವಯೋರ್ದ್ವಯೋರ್ಮಧ್ಯೇ-ಇಬ್ಬಿಬ್ಬರನಡುವೆ, ಯೋಗೇಶ್ವರೇಣ-ಧ್ಯಾನೋಪಾಯಪತಿಯಾದ, (ಮುಂದಣಶ್ಲೋಕಕ್ಕೆ ಅನ್ವಯವು) ॥೩॥ ಪ್ರವಿಷ್ಟೇನ-ಹೊಕ್ಕವನಿಂದ. ಕೃಷ್ಣೇನ-ಕೃಷ್ಣನಿಂದ, ಕಂಠೇ-ಕತ್ತಿನಲ್ಲಿ, ಗೃಹೀತಾನಾಂ-ಆಲಿಂಗಿಸಿಹಿಡಿಯಲ್ಪಟ್ಟ, ಆಸ್ತ್ರೀಯರಲ್ಲಿ, ಸ್ತ್ರಿಯಃ-ಹೆಂಗಳು, ಯಂ-ಯಾವಕೃಷ್ಣನನ್ನು, ಸ್ವನಿಕಟಂ-ತಮ್ಮಹತ್ತಿರಇರುವವನನ್ನಾಗಿ, ಮನ್ಯೇರನ್-ತಿಳಿಯುವರೋ, (ಅಂಥಾಕೃಷ್ಣನಿಂದಲೂ ರಾಸೋತ್ಸವವುಪ್ರವರ್ತಿಸಿತು.) ತಾವತ್-ಅಷ್ಟರೊಳಗೆ, ನಭಃ-ಆಕಾಶವು, ವಿಮಾನಶತಸಂಕುಲಂ-ವಿಮಾನ-ಗಗನಚಾರಿಗಳಾದದೇವರಥಗಳ, ಶತ-ಹಲವುತಂಡಗಳಿಂದ, ಸಂಕುಲಂ-ವ್ಯಾಪ್ತವಾದದ್ದಾಯಿತು ॥೪॥ಔತ್ಸುಕ್ಯ-ಅತಿಕುತೂಹಲದಿಂದ, ನಿಭೃತ-ತುಂಬಿದ, ಆತ್ಮನಾಂ-ಮನಸ್ಸುಳ್ಳ, ಸದಾರಾಣಾಂ-ಪತ್ನಿಯರಿಂದಸಹಿತರಾದ, ದಿವೌಕಸಾಂ-ದೇವತೆಗಳ, (ವಿಮಾನಗಳುಸೇರಿದವೆಂದುಪೂರ್ವಶ್ಲೋಕದೊಡನೆಅನ್ವಯವು) ತತಃ-ಆಮೇಲೆ, ದುಂದುಭಯಃ-ಭೇರೀವಾದ್ಯಗಳು, ನೇದುಃ-ಮೊಳಗಿದವು, ಪುಷ್ಪವೃಷ್ಟಯಃ-ಹೂವಿನಮಳೆಗಳು, ನಿಪೇತುಃ-ಸುರಿದವು, ॥೫॥ ಸಸ್ತ್ರೀಕಾಃ-ತಮ್ಮತಮ್ಮಸ್ತ್ರೀಯರಿಂದೊಡಗೂಡಿದ, ಗಂಧರ್ವಪತಯಃ-ದೇವಗಾಯಕನಾಯಕರು, ಅಮಲಂ-ದೋಷವಿಲ್ಲದ, ತದ್ಯಶಃ-ಆಕೃಷ್ಣನಕೀರ್ತಿಯನ್ನು, ಜಗುಃ-ಹಾಡಿದರು. ವಲಯಾನಾಂ-ಕಡಗಗಳ, ನೂಪುರಾಣಾಂ-ಅಂದಿಗೆಗಳ, ಕಿಂಕಿಣೀನಾಂಚ-ಕಿರುಗಂಟೆಗಳ ಅಥವಾಗೆಜ್ಜೆಗಳ, ಯೋಷಿತಾಂ-ಹೆಂಗಳ ॥೬॥ ಸಪ್ರಿಯಾಣಾಂ-ಪ್ರಿಯಪುರುಷರಿಂಸಹಿತರಾದವರ, ತುಮುಲಃ-ಗುಂಪಾಗಿಬೆರತ, ಶಬ್ದಃ-ಗುಜು, ರಾಸಮಂಡಲೇ-ರಾಸಕೇಳೀಚಕ್ರದಲ್ಲಿ, ಅಭೂತ್-ಆಯಿತು ತತ್ರ-ಆಸ್ತ್ರೀಯರಹಿಂಡಿನಲ್ಲಿ, ಭಗವಾನ್-ಈಶ್ವರನಾದ, ದೇವಕೀಸುತಃ-ಕೃಷ್ಣನು, ತಾಭಿಸ್ಸಹ-ಆಹೆಂಗಳೊಡನೆ, ಅತಿಶುಶುಭೇ-ಅಧಿಕವಾಗಿಬೆಳಗಿದನು ॥೭॥ ಹೇಮಾನಾಂಮಣೀನಾಂ-ಅಪರಂಜಿಯುಗುಂಡುಗಳ, ಮಧ್ಯೇ-ನಡುವೆ, ಮಹಾಮರಕತಃ-ದೊಡ್ಡಪಚ್ಚೆಯಮಣಿಯು, ಯಥಾ-ಹೇಗೋ-ತಥಾ-ಹಾಗೆ ( ಹೆಂಗಳ

---

ಯೋಗೀಶ್ವರನಾದ ಶ್ರೀಕೃಷ್ಣನು ಅನೇಕಕೃಷ್ಣರೂಪನಾಗಿ ಒಬ್ಬಕೃಷ್ಣನಿಗೆ ಉಭಯಪಾರ್ಶ್ವದಲ್ಲಿಯೂ ಇಬ್ಬರುಸ್ತ್ರೀಯರು ಈಮರ್ಯಾದೆಯಲ್ಲಿ ಮಂಡಲಾಕಾರವಾಗಿನಿಂತು ನರ್ತನವಂಮಾಡುತ ಮತ್ತು ಗಾನಮಂಮಾಡುತ ರಾಸಕ್ರೀಡೆಯಂ ಮಾಡಿದರು ॥೩॥ ಯಾವಶ್ರೀಕೃಷ್ಣನನ್ನು ಪ್ರತಿಯೊಬ್ಬ ಶ್ರೀಕೃಷ್ಣನ ಸಮೀಪವರ್ತಿಗಳಾದ ಗೋಪಸ್ತ್ರೀಯರು ಉಭಯಪಾರ್ಶ್ವದಲ್ಲಿಯೂ ಕಂಠದಲ್ಲಿ ಆಲಿಂಗಿಸಿಕೊಳ್ಳಲ್ಪಟ್ಟವರಾಗಿ ನಮ್ಮನ್ನೇ ಅಪ್ಪಿಕೊಂಡಿರುವನೆಂದು ತಿಳಿದರೋ, ಆಕೃಷ್ಣನರಾಸಕ್ರೀಡಾ ಮಹೋತ್ಸವಮಂ ನೋಡಲೋಸುಗ ವಿಮಾನಾರೂಢರಾಗಿ ದೇವತೆಗಳು ಬಂದರು ॥೪॥ ಆಮೇಲೆ ದೇವದುಂದುಭಿಗಳು ಧ್ವನಿಗೆಯ್ದುವು. ಪುಷ್ಪವೃಷ್ಟಿಗಳು ಸುರಿದವು. ಶ್ರೀಕೃಷ್ಣನ ನಿರ್ಮಲವಾದ ಯಶಸ್ಸನ್ನು ಸ್ತ್ರೀಯರೊಡನೆ ಕೂಡಿದವರಾದ ಗಂಧರ್ವರು ಗಾನಂಗೆಯ್ದರು ॥೫॥ ಅನೇಕ ಕೃಷ್ಣಮೂರ್ತಿಗಳಿಂದಲೂ ಅನೇಕಗೋಪಸ್ತ್ರೀಯರುಗಳಿಂದಲೂ ಯುಕ್ತವಾದ ರಾಸಮಂಡಲದಲ್ಲಿ ಸ್ತ್ರೀಯರುಗಳು, ಕಡಗಂಗಳು, ಕಾಲಂದಿಗೆಗಳು, ಕಾಲುಂಗುರಗಳು, ಒಡ್ಡಿಯಾಣಂಗಳ ಕಿರುಗಂಟೆಗಳು, ಗೆಜ್ಜೆಗಳು, ಭುಜಕೀರ್ತಿಗಳು, ಮುಂತಾದ ಭೂಷಣಂಗಳ ನಾದಂಗಳು ತುಂಬಿದವು ॥೬॥ ಸುವರ್ಣದಂತೆ ಹೊಳೆಯುತ್ತಲಿರುವ ಗೋಪಸ್ತ್ರೀಯರುಗಳ ಮಧ್ಯದಲ್ಲಿ ನೀಲಮೇಘಶ್ಯಾಮನಾದ ಶ್ರೀಕೃಷ್ಣನು ಸ್ವರ್ಣಮಯಂಗಳಾದ ಹಾರಮಣಿಗಳಲ್ಲಿ ಮರಕತ ಮಾಣಿಕ್ಯದಂತೆ ಪ್ರಕಾಶಿಸಿದ

ತಿಭಿಸ್ಸಸ್ಮಿತಭ್ರೂವಿಲಾಸೈರ್ಭಜ್ಯನ್ಮಧ್ಯೈಶ್ಚಲಕುಚಪಟೈಃಕುಂಡಲೈರ್ಗಂಡಲೋಲೈಃ । ಸ್ವಿದ್ಯನ್ಮುಖ್ಯಃಕಬರರಶನಾಗ್ರಂಥಯಃಕೃಷ್ಣವಧ್ವೋಗಾಯಂತ್ಯಸ್ತಂತಟಿತಇವತಾಮೇಘಚಕ್ರೇವಿರೇಜುಃ ॥೮॥ ಉಚ್ಚೈರ್ಜಗುರ್ನೃತ್ಯಮಾನಾರಕ್ತಕಂಠ್ಯೋರತಿಪ್ರಿಯಾಃ । ಕೃಷ್ಣಾಭಿಮರ್ಶಮುದಿತಾಯದ್ಗೀತೇನೇದಮಾವೃತಂ ॥೯॥ ಕಾಚಿತ್ಸಮಂಮುಕುಂದೇನಸ್ವರಜಾತೀರಮಿಶ್ರಿತಾಃ । ಉನ್ನಿನ್ಯೇಪೂಜಿತಾತೇನಪ್ರೀಯಮಾಣೇನಸಾಧ್ವಿತಿ ।ತದೇವಧ್ರುವಮುನ್ನಿನ್ಯೇತಸ್ಯೈಮಾನಂಚಬಹ್ವದಾತ್॥೧೦॥ ಕಾಚಿದ್ರಾಸಪರಿಶ್ರಾಂತಾಪಾರ್ಶ್ವಸ್ಥಸ್ಯಗದಾಭೃತಃ । ಜಗ್ರಾಹಬಾಹುನಾಸ್ಕಂಧಂಶ್ಲಥದ್ವಲಯಮಲ್ಲಿಕಾ ॥೧೧॥ ತತ್ರೈಕಾಂಸಗತಂಬಾಹುಂಕೃಷ್ಣಸ್ಯೋತ್ಪಲಸೌರಭಂ । ಚಂದನಾಲಿಪ್ತಮಾ

---

ನಡುವೆ ಕೃಷ್ಣನುಬೆಳಗಿದನು) ॥೮॥ ಪಾದನ್ಯಾಸೈಃ-ಅಡಿಗಳನ್ನಿಡುವುದರಿಂದಲೂ, ಭುಜವಿಧುತಿಭಿಃ-ತೋಳುಗಳನ್ನಲುಗಿಸುವುದರಿಂದಲೂ, ಸಸ್ಮಿತಭ್ರೂವಿಲಾಸೈಃ-ಕಿರುನಗೆಯಿಂಕೂಡಿದಹುಬ್ಬುಗಳ ಚೇಷ್ಟೆಗಳಿಂದಲೂ, ಭಜ್ಯನ್ಮಧ್ಯೈಃ-ಬಗ್ಗಿಸಲ್ಪಡುತ್ತಲಿರುವನೊಂಟಗಳಿಂದಲೂ, ಚಲಕುಚಪಟೈಃ-ಕವಲುತ್ತಿರುವ ಕುಪ್ಪುಸಗಳಿಂದಲೂ,ಅಥವಾ ಮೇಲುದಗಳಿಂದಲೂ, ಗಂಡಲೋಲೈಃ-ಕೆನ್ನೆಗಳಲ್ಲಿಚಲಿಸುತ್ತಿರುವ, ಕುಂಡಲೈಃ-ಕಿವಿದೊಡವುಗಳಿಂದಲೂ, ಕೂಡಿದವರೂ, ಸ್ವಿದ್ಯನ್ಮುಖ್ಯಃ-ಬೆವರಿದಮೋರೆಗಳುಳ್ಳವರೂ, ಕಬರರಶನಾಗ್ರಂಥಯಃ-ಕಬರ-ತುರುಬಿನಲ್ಲಿಯೂ, ರಶನಾ-ಉಡಿದಾರದಲ್ಲಿಯೂ, ಅಗ್ರಂಥಯಃ-ಗಂಟುಗಳಿಲ್ಲದವರೂ ಆದ, ಕೃಷ್ಣವಧ್ವಃ-ಕೃಷ್ಣನಸ್ತ್ರೀಯರಾದಗೋಪಿಯರು, ತಂ-ಆಕೃಷ್ಣನನ್ನು, ಗಾಯಂತ್ಯಃ-ಹಾಡುತಲಿರುವರಾಗಿ, ತಾಃ-ಅವರು, ಮೇಘಚಕ್ರೇ-ಕರಿಯಮೋಡಗಳಮಂಡಲದಲ್ಲಿ, ತಟಿತಇವ-ಮಿಂಚುಗಳಹಾಗೆ, ವಿರೇಜುಃ-ವಿಶೇಷವಾಗಿಬೆಳಗಿದರು॥೯॥ ನೃತ್ಯಮಾನಾಃ-ಕುಣಿಯುತಲಿರುವ, ರಕ್ತಕಂಠ್ಯಃ-ಕೇಳುವವರಿಗೆಅನುರಾಗವನ್ನುಂಟುಮಾಡುವ ಕೊರಳಧ್ವನಿಯುಳ್ಳ, ರತಿಪ್ರಿಯಾಃ-ಆಟದಲ್ಲಿಇಷ್ಟವುಳ್ಳ, ಕೃಷ್ಣಾಭಿಮರ್ಶಮುದಿತಾಃ-ಕೃಷ್ಣನಸೋಂಕುವಿಕೆಯಿಂದಸಂತೋಷಿಸಿದ, ಯದ್ಗೀತೇನ-ಯಾವಗೋಪಿಯರಗಾನದಿಂದ, ಇದಂ-ಈರಾಸಮಂಡಲವು, (ಅಥವಾಪ್ರಪಂಚವು) ಆವೃತಂ-ಮುಚ್ಚಲ್ಪಟ್ಟಿತೋ, ಆಗೋಪಿಯರು, ಉಚ್ಚೈಃಜಗುಃ-ಹೆಚ್ಚುಸ್ವರದಿಂದಹಾಡಿದರು ॥೧೦॥ಕಾಚಿತ್-ಒಬ್ಬಳು, ಮುಕುಂದೇನಸಮಂ-ಕೃಷ್ಣನಕೂಡೆ, ಅಮಿಶ್ರಿತಾಃ-ಬೆರಿಕೆಯಿಲ್ಲದ, ಸ್ವರಜಾತೀಃ-ಷಡ್ಜಮೊದಲಾದಸ್ವರಗಳ ಆಲಾಪಗತಿಗಳನ್ನು, ಪ್ರೀಯಮಾಣೇನ-ಸುಪ್ರೀತನಾದ, ತೇನ-ಆಕೃಷ್ಣನಿಂದ, ಸಾಧ್ವಿತಿ-ಚನ್ನಾಗಿದೆಯೆಂದು, ಪೂಜಿತಾಸತೀ-ಶ್ಲಾಘಿಸಲ್ಪಟ್ಟವಳಾಗಿ, ಉನ್ನಿನ್ಯೇ-ಎತ್ತಿಹಾಡಿದಳು. ತದೇವ-ಅದರನ್ನೇ, ಧ್ರುವಂ-ಧ್ರುವತಾಳವನ್ನಾಗಿ, ಉನ್ನಿನ್ಯೇ-ತೇಲಿಸಿಹಾಡಿದಳು. ತಸ್ಯೈ-ಅವಳಿಗೆ, ಕೃಷ್ಣನು-ಮಾನಂಚ-ಸಮ್ಮಾನವನ್ನೂ, ಬಹು-ಅಧಿಕವಾಗಿ, ಅದಾತ್-ಕೊಟ್ಟನು ॥೧೧॥ಕಾಚಿತ್-ಒಬ್ಬಳು, ರಾಸಪರಿಶ್ರಾಂತಾ-ರಾಸ-ಸಂಘನೃತ್ಯದಿಂದ, ಪರಿಶ್ರಾಂತಾ-ಬಳಲಿದವಳಾದ್ದರಿಂದಲೇ, ಶ್ಲಥದ್ವಲಯಮಲ್ಲಿಕಾ-ಶ್ಲಥತೆ-ಉಡಿಮುಜಾರುತಲಿರುವ, ವಲಯ-ಕಡಗಗಳೂ, ಮಲ್ಲಿಕಾ-ಮಲ್ಲಿಗೆಯಹೂವುಗಳೂ ಉಳ್ಳವಳಾಗಿ, ಪಾರ್ಶ್ವಸ್ಥಸ್ಯ-ಮಗ್ಗುಲಿನಲ್ಲಿರುವ, ಗದಾಭೃತಃ-ಕೃಷ್ಣನ, ಸ್ಕಂಧಂ-ಹೆಗಲನ್ನು, ಬಾಹುನಾ-ತನ್ನತೋಳಿನಿಂದ, ಜಗ್ರಾಹ-ಹಿಡಿದಳು ॥೧೨॥ತತ್ರ-ಆರಾಸಮಂಡಲದಲ್ಲಿ, ಏಕಾ-ಒಬ್ಬಳು, ಸಂಗತಂ-

---

ನು ॥೭॥೮। ಅನಂತರದಲ್ಲಿ ಗೋಪಿಕಾಸ್ತ್ರೀಯರು ಪಾದವಿನ್ಯಾಸಂಗಳಿಂದಲೂ, ಕೈಚಪ್ಪಾಳೆಗಳಿಂದಲೂ,ಮುಗುಳುನಗೆಯಿಂದ ಯುಕ್ತವಾದ ವಿಲಾಸಂಗಳಿಂದಲೂ, ಬಳುಕುವ ನಡುಗಳಿಂದಲೂ, ಕುಚಕುಪಸ್ತನಂಗಳಿಂದಲೂ, ಕಪೋಲಂಗಳಲ್ಲಿ ಜೋಲುತ್ತಲಿರುವ ವಾಲೆಗಳಿಂದಲೂ, ಸ್ವಲ್ಪಸ್ವೇದಯುಕ್ತಂಗಳಾದ ಮುಖಂಗಳುಳ್ಳವರಾಗಿ ಕೇಶಗ್ರಂಥಿಗಳು ಶಿಥಿಲವಾಗುತ್ತಿರಲಾಗಿ ಗಾನಂಗೆಯ್ಯುತ ಶ್ರೀಕೃಷ್ಣನಂ ಸಂತೋಷಪಡಿಸುವರಾಗಿ ಪ್ರಕಾಶಿಸಿದರು ॥೯॥ ಆಗೋಪಸ್ತ್ರೀಯರು ರಾಗಯುಕ್ತವಾದ ಕಂಠಸ್ವರವುಳ್ಳವರಾಗಿ ನರ್ತನಂಗೆಯ್ಯುತ ಶ್ರೀಕೃಷ್ಣನ ಸಂಸ್ಪರ್ಶದಿಂದ ಮುದಿತರಾಗಿ ಗಟ್ಟಿಯಾಗಿ ಗಾನಂಗೆಯ್ದರು. ॥೧೦॥ ಒಬ್ಬಳುಗೋಪಸ್ತ್ರೀಯು ಶ್ರೀಕೃಷ್ಣನೊಡನೆ ಷಡ್ಜಾದಿಸ್ವರವಿಭಾಗದಿಂದ ಗಾನವಂಮಾಡಿ, ಆಕೃಷ್ಣನಿಂದ ಚನ್ನಾಯಿತೆಂದು ಶ್ಲಾಘಿಸಲ್ಪಟ್ಟವಳಾಗಿ, ಧ್ರುವತಾಳಕ್ಕೆಸರಿಯಾಗಿ ಗಾನವಂ ನರ್ತನಂ ಸಹ ಮಾಡಿದಳು ॥೧೧॥ ಒಬ್ಬಸ್ತ್ರೀಯು ರಾಸನರ್ತದಿಂದ ಶ್ರಾಂತಳಾಗಿ ಶಿಥಿಲಗಳಾದ ಕಡಗಗಳೂ ಮಲ್ಲಿಕಾಪುಷ್ಪಮಾಲೆಗಳೂ ಉಳ್ಳವಳಾಗಿ ಪಾರ್ಶ್ವದಲ್ಲಿರುವ ಶ್ರೀಕೃಷ್ಣನ ಹೆಗಲಮೇಲೆ ತನ್ನಭುಜವ ನಿರಿಸಿಕೊಂಡಳು ॥೧೨॥ ಮ

ಘ್ರಾಯಹೃಷ್ಟರೋಮಾಚುಚುಂಬಹ ॥೧೩॥ ಕಸ್ಯಾಶ್ಚಿನ್ನಾಟ್ಯವಿಕ್ಷಿಪ್ತಕುಂಡಲತ್ವಿಷಮಂಡಿತಂ ।
ಗಂಡಂಗಂಡೇಸಂದಧತ್ಯಾಅದಾತ್ತಾಂಬೂಲಚರ್ವಿತಂ ॥೧೪॥ ನೃತ್ಯತೀಗಾಯತೀಕಾಚಿತ್ಕೂಜನ್ನೂ
ಪುರಮೇಖಲಾ । ಪಾರ್ಶ್ವಸ್ಥಾಚ್ಯುತಹಸ್ತಾಬ್ಜಂಶ್ರಾಂತಾಧಾತ್ಸ್ತನಯೋಃಶಿವಂ ॥೧೫॥ ಗೋಪ್ಯೋ
ಲಬ್ಧ್ವಾಚ್ಯುತಂಕಾಂತಂಶ್ರಿಯಏಕಾಂತವಲ್ಲಭಂ । ಗೃಹೀತಕಂಠ್ಯಸ್ತದ್ದೋರ್ಭ್ಯಾಂಗಾಯಂತ್ಯ
ಸ್ತಂವಿಜಹ್ರಿರೆ ॥೧೬॥ ಕರ್ಣೋತ್ಪಲಾಲಕವಿಟಂಕಕಪೋಲಘರ್ಮವಕ್ತ್ರಶ್ರಿಯೋವಲಯನೂಪುರ
ಘೋಷವಾದ್ಯೈಃ । ಗೋಪ್ಯಸ್ಸಮಂಭಗವತಾನನೃತುಸ್ಸ್ವಕೇಶಸ್ರಸ್ತಸ್ರಜೋಭ್ರಮರಗಾಯಕರಾಸ

---

ತನ್ನ ಮೇಲೆಕೂಡಿರುವ, ಉತ್ಪಲಸೌರಭಂ-ನೈದಿಲೆಯಹಾಗೆಪರಿಮಳವುಳ್ಳ, ಚಂದನಾಲಿಪ್ತಂ-ಶ್ರೀಗಂಧದಿಂದಬಳೆಯಲ್ಪಟ್ಟಿರು
ವ, ಕೃಷ್ಣಸ್ಯಬಾಹುಂ-ಕೃಷ್ಣನತೋಳನ್ನು, ಆಘ್ರಾಯ-ಮೂಸಿನೋಡಿ, ಹೃಷ್ಟರೋಮಾ-ಸಂತಸದಿಂನಿಗುಡಿದರೋಮಗ
ಳುಳ್ಳವಳಾಗಿ, ಚುಚುಂಬಹ-ಮುತ್ತಿಟ್ಟುಕೊಂಡಳಂತೆ ॥೧೩॥ ನಾಟ್ಯ.... ಮಂಡಿತಂ-ನಾಟ್ಯ-ಕುಣಿದಾಟದಿಂದ, ವಿಕ್ಷಿಪ್ತ-ಚಲಿ
ಸುತ್ತಿರುವ, ಕುಂಡಲ-ಕರ್ಣಭೂಷಣಗಳ, ತ್ವಿಷಾ-ಕಾಂತಿಯಿಂದ, ಮಂಡಿತಂ-ಅಲಂಕರಿಸಲ್ಪಟ್ಟ, ಗಂಡಂ-ಕಪೋಲವನ್ನು,
ಗಂಡೇ-ಅಂಧಾತನ್ನಕಪೋಲದಲ್ಲಿ, ಸಂದಧತ್ಯಾಃ-ಕೂಡಿಸುವವಳಾದ, ಕಸ್ಯಾಶ್ಚಿತ್-ಒಬ್ಬಾನೊಬ್ಬಳಿಗೆ, ತಾಂಬೂಲಚರ್ವಿತಂ-
ಅಗಿದತಂಬುಲವನ್ನು, ಅದಾತ್-ಕೊಟ್ಟನು ॥೧೪॥ ನೃತ್ಯತೀ-ಕುಣಿಯುವಳಾಗಿಯೂ, ಗಾಯತೀ-ಹಾಡುವಳಾಗಿಯೂ ಕೂಜ
ನ್ನೂಪುರಮೇಖಲಾ-ಕೂಜತ್-ಶಬ್ದಿಸುತ್ತಿರುವ, ನೂಪುರ-ಕಾಲಂದಿಗೆಯೂ, ಮೇಖಲಾ-ಗಜ್ಜೆಯುಡಾಬೂ, ಉಳ್ಳವಳಾದ, ಕಾ
ಚಿತ್-ಒಬ್ಬಳು, ಶ್ರಾಂತಾ-ಸಮಾಹಿತಳಾಗಿ, ಶಿವಂ-ಶುಭವಾದ, ಪಾರ್ಶ್ವಸ್ಥಾಚ್ಯುತಹಸ್ತಾಬ್ಜಂ-ಪಾರ್ಶ್ವಸ್ಥ-ಮಗ್ಗುಲಲ್ಲಿರುವ
ಅಚ್ಯುತ-ಕೃಷ್ಣನ, ಹಸ್ತಾಬ್ಜಂ-ಕರಕಮಲವನ್ನು, ಸ್ತನಯೋಃ-ತನ್ನ ಕುಚಗಳಲ್ಲಿ, ಅಧಾತ್-ಇರಿಸಿಕೊಂಡಳು ॥೧೫॥ ಶ್ರಿಯಃ-
ಲಕ್ಷ್ಮಿಗೆ, ಏಕಾಂತವಲ್ಲಭಂ-ಮುಖ್ಯವಾಗಿಗಂಡನಾದ, ಅಚ್ಯುತಂ-ಕೃಷ್ಣನನ್ನು, ಕಾಂತಂಲಬ್ಧ್ವಾ-ಗಂಡನನ್ನಾಗಿಪಡೆದು,
ತದ್ದೋರ್ಭ್ಯಾಂ-ಆಕೃಷ್ಣನತೋಳುಗಳಿಂದ, ಗೃಹೀತಕಂಠ್ಯಃ-ಅಪ್ಪಿಹಿಡಿಯಲ್ಪಟ್ಟ ಕೊರಳ್ಗಳುಳ್ಳವರಾದ, ಗೋಪ್ಯಃ-ಗೊ
ಲ್ಲತಿಯರು, ತಂ-ಆಕೃಷ್ಣನನ್ನು, ಗಾಯಂತ್ಯಸ್ಸತ್ಯಃ-ಹಾಡುತಲಿರುವರಾಗಿ, ವಿಜಹ್ರಿರೇ-ವಿಹರಿಸಿದರು ॥೧೬॥ ಕರ್ಣ... ಶ್ರಿಯಃ-
ಕರ್ಣೋತ್ಪಲ-ಕಿವಿಗಲಂಕಾರವಾದನೈದಿಲೆಗಳಿಂದಲೂ, ಅಲಕವಿಟಂಕ-ಕುರುಳುಗಳಿಂದಅಲಂಕರಿಸಲ್ಪಟ್ಟ, ಕಪೋಲ-ಕೆನ್ನೆ
ಗಳಿಂದಲೂ, ಘರ್ಮ-ಬೆವರುಗಳಿಂದಲೂ, ವಕ್ತ್ರ-ಮುಖಗಳಲ್ಲಿ, ಶ್ರಿಯಃ-ಕಾಂತಿಯುಳ್ಳ, ಗೋಪ್ಯಃ-ಗೊಲ್ಲತಿಯರು, ಸ್ವಕೇ
ಶಸ್ರಸ್ತಸ್ರಜಃ-ಸ್ವ-ತಮ್ಮ-ಕೇಶ-ಕುರುಳುಗಳಿಂದ, ಸ್ರಸ್ತ-ಜಾರಿದ. ಸ್ರಜಃ-ಹುವ್ವಿನಸರಗಳುಳ್ಳವರಾಗಿ, ಭ್ರಮರಗಾಯಕ
ರಾಸಗೋಷ್ಠ್ಯಾಂ-ತುಂಬಿಗಳೆಂಬಹಾಡುಗಾರರುಳ್ಳ ರಾಸಸಭೆಯಲ್ಲಿ, ವಲಯನೂಪುರಘೋಷವಾದ್ಯೈಃ-ವಲಯ-ಕಂಕಣಗಳ,
ನೂಪುರ-ಪಾದಾಭರಣಗಳ, ಘೋಷ-ಶಬ್ದಗಳೆಂಬ, ವಾದ್ಯೈಃ-ವಾದಿತ್ರಗಳಿಂದ, ಭಗವತಾಸಮಂ-ಕೃಷ್ಣನೊಡನೆ, ನನೃತುಃ-

---

ಟ್ಟೊಬ್ಬಳು ತನ್ನ ಹೆಗ್ಗತ್ತಿನಮೇಲೆ ಹಾಕಿಕೊಂಡಿರುವ ಶ್ರೀಕೃಷ್ಣನ ನೈದಿಲೆಯವಾಸನೆಯುಳ್ಳ ಚಂದನದಿಂದ
ಲಿಪ್ತವಾದ ಭುಜವನಾಘ್ರಾಣಂಗೆಯ್ದು ಚುಂಬನವಂ ಮಾಡಿದಳು ॥೧೩॥ ನರ್ತನದಿಂದ ಚಲಿಸುವ ಕುಂಡಲಂ
ಗಳ ಕಾಂತಿಯಿಂದ ಅಲಂಕೃತವಾದ ತನ್ನ ಕಪೋಲವಂ ಶ್ರೀಕೃಷ್ಣನ ಗಂಡಸ್ಥಳದಲ್ಲಿರಿಸುತಲಿರುವಳೊಬ್ಬಸ್ತ್ರೀ
ಯಳಕಪೋಲವಂ ಶ್ರೀಕೃಷ್ಣನು ಚುಂಬನವಂ ಗೆಯ್ದನು ॥೧೪॥ ಬೇರೊಬ್ಬಳು ಧ್ವನಿಗೆಯ್ಯುತಲಿರುವ ಕಾಲಂ
ದಿಗೆಗಳೂ ವೊಡ್ಡಿಯಾಣಗಳೂ ವುಳ್ಳವಳಾಗಿ, ಗಾನಪೂರ್ವಕವಾಗಿ ನಾಟ್ಯವಂ ಮಾಡುವಳಾಗಿ, ಶ್ರಾಂತಳಾಗಿ,ಪಾ
ರ್ಶ್ವದಲ್ಲಿರುವ ಶುಭವಾದ ಶ್ರೀಕೃಷ್ಣ ಹಸ್ತಕಮಲವಂ ತನ್ನಕುಚಂಗಳಮೇಲೆ ಇರಿಸಿಕೊಂಡಳು ॥ ೫॥
ಗೋಪಸ್ತ್ರೀಯರುಗಳು ಲಕ್ಷ್ಮಿಗೆಪತಿಯಾದ ಶ್ರೀಕೃಷ್ಣನಂ ಪತಿಯನ್ನಾಗಿಎಯ್ದು, ಆಕೃಷ್ಣನಭುಜಂಗಳಿಂ
ದ ಗ್ರಹಿಸಲ್ಪಟ್ಟ ಕಂಠಗಳುಳ್ಳವರಾಗಿ, ಆಕೃಷ್ಣನನ್ನೇ ಗಾನಂಗೆಯ್ಯುತ ಕ್ರೀಡಿಸಿದರು ॥೧೬॥ ಆಗೋಪಸ್ತ್ರೀ
ಯರುಗಳು ಕರ್ಣಾಭರಣಂಗಳಾದ ನೈದಿಲೆಗಳಿಂದಲೂ ಮುಂಗುರುಳುಗಳಿಂದ ವ್ಯಾಪ್ತವಾದ ಕಪೋಲಂಗಳಿಂ
ದಲೂ ಸ್ವೇದೋದಕಗಳಿಂದಲೂ ಶೋಭಿತವಾದ ಮುಖಕಾಂತಿಯುಳ್ಳವರಾಗಿ, ಕಡಗಗಳುಕಾಲಂದಿಗೆಗಳು ಒಡ್ಡಿ
ಯಾಣಂಗಳು ಇವುಗಳಧ್ವನಿಗಳೆಂಬ ವಾದ್ಯಂಗಳಿಂದ ಯುಕ್ತವಾಗಿ ತಮ್ಮಕೇಶಂಗಳಿಂದೆಯಿಂದ ಜಾರಿಬೀಳು
ತ್ತಲಿರುವ ಪುಷ್ಪಮಾಲಿಕೆಗಳುಳ್ಳವರಾಗಿ, ಭ್ರಮರಂಗಳೆಂಬ ಗಾಯಕರುಳ್ಳ ರಾಸಸಭೆಯಲ್ಲಿ ಕೃಷ್ಣನೊಡ

ಗೋಷ್ಠ್ಯಾಂ ||೧೭|| ಏವಂಪರಿಷ್ವಂಗಕರಾಭಿಮರ್ಶಸ್ನಿಗ್ಧೇಕ್ಷಣೋದ್ದಾಮವಿಲಾಸಹಾಸ್ಯೈಃ | ರೇಮೇ ರಮೇಶೋವ್ರಜಸುಂದರೀಭಿರ್ಯಥಾರ್ಭಕಸ್ಸ್ವಪ್ರತಿಬಿಂಬವಿಭ್ರಮಃ ||೧೮|| ತದಂಗಸಂಗಪ್ರಮುದಾಕುಲೇಂದ್ರಿಯಾಃಕೇಶಾನ್ದುಕೂಲಂಕುಚಪಟ್ಟಿಕಾಂವಾ | ನಾಂಜಃಪ್ರತಿವ್ಯೋಢುಮಲಂವ್ರಜಸ್ತ್ರಿಯೋ ವಿಸ್ರಸ್ತಮಾಲ್ಯಾಭರಣಾಃಕುರೂದ್ವಹ ||೧೯|| ಕೃಷ್ಣವಿಕ್ರೀಡಿತಂವೀಕ್ಷ್ಯವ್ಯಮುಹ್ಯನ್ಖೇಚರಸ್ತ್ರಿಯಃ | ಕಾಮಾರ್ದಿತಾಃಶಶಾಂಕಶ್ಚಸಗಣೋವಿಸ್ಮಿತೋಽಭವತ್ ||೨೦||ಕೃತ್ವಾತಾವಂತಮಾತ್ಮಾನಂಯಾವತೀರ್ಗೋಪಯೋಷಿತಃ | ರರಾಮಭಗವಾಂಸ್ತಾಭಿರಾತ್ಮಾರಾಮೋಽಪಿಲೀಲಯಾ ||೨೧|| ತಾಸಾಂರತಿವಿಹಾರೇಣಶ್ರಾಂತಾನಾಂವದನಾನಿಸಃ | ಪ್ರಾಮೃಜತ್ಕರುಣಃಪ್ರೇಮ್ಣಾಶಂತಮೇನಾಂಗಪಾಣಿನಾ ||೨೨||ಗೋಪ್ಯಃಸ್ಫುರತ್ಕನಕಕುಂಡಲಕುಂತಲತ್ವಿಡ್ಗಂಡಶ್ರಿಯಾಸುಧಿತಹಾಸನಿರೀಕ್ಷಣೇನ |ಮಾ

---

ಕುಣಿದರು ||೧೭||ರಮೇಶಃ-ಲಕ್ಷ್ಮೀಪತಿಯಾದ, ಕೃಷ್ಣನು, ಏವಂ-ಹೀಗೆ, ಪರಿಷ್ವಂಗ .. ಹಾಸ್ಯೈಃ-ಪರಿಷ್ವಂಗ, ಆಲಿಂಗನ, ಕರಾಭಿಮರ್ಶ-ಹಸ್ತಸ್ಪರ್ಶನ, ಸ್ನಿಗ್ಧೇಕ್ಷಣ-ಸ್ನೇಹದನೋಟ, ಉದ್ದಾಮವಿಲಾಸ-ಅತಿಶಯವಾದ ಶೃಂಗಾರಭಾವ, ಹಾಸ್ಯೈಃ-ನಗೆ,ಯಿವುಗಳಿಂದ, ವ್ರಜಸುಂದರೀಭಿಸ್ಸಮಂ-ಗೋಕುಲದಚಲುವೆಯರೊಡನೆ, ಸ್ವಪ್ರತಿಬಿಂಬವಿಭ್ರಮಃ-ಸ್ವ-ತನ್ನ, ಪ್ರತಿಬಿಂಬ-ಪಡಿನೆಳಲ್ಗಳಿಂದ, ವಿಭ್ರಮಃ-ವಿನೋದವುಳ್ಳ, ಅರ್ಭಕೋಯಥಾ-ಹುಡುಗನುಹೇಗೋಹಾಗೆ, ರೇಮೇ-ಕ್ರೀಡಿಸಿದನು.|| ಹೇಕುರೂದ್ವಹ-ಎಲೈಕುರುವಂಶೋದ್ಧಾರಕನಾದಪರೀಕ್ಷಿದ್ರಾಜನೇ!ವ್ರಜಸ್ತ್ರಿಯಃ-ಗೋಕುಲದಹೆಂಗಳು,ತದಂಗ್ಯಾಃ-ತತ್-ಆಕೃಷ್ಣನ, ಅಂಗ-ದೇಹದ,ಸಂಗ-ಸಂಬಂಧದಿಂದಾದ,ಪ್ರಮುತ್-ಹೆಚ್ಚುಸಂತೋಷದಿಂದ,ಆಕುಲ-ಕಳವಳಗೊಂಡ, ಇಂದ್ರಿಯಾಃ-ಕರಣಂಗಳುಳ್ಳವರಾದ್ದರಿಂದಲೇ, ವಿಸ್ರಸ್ತಮಾಲ್ಯಾಭರಣಾಃ-ವಿಸ್ರಸ್ತ-ಜಾರಿಸಡಿಲಿದ,ಮಾಲ್ಯ-ಹೂವಿನಸರಗಳು,ಆಭರಣಾಃ-ಭೂಷಣಗಳೂವುಳ್ಳವರಾಗಿ, ಕೇಶಾನ್-ಕುರುಳುಗಳನ್ನು,ದುಕೂಲಂ-ಸೀರೆಯನ್ನು, ಕುಚಪಟ್ಟಿಕಾಂವಾ-ಕುಪ್ಪುಸವನ್ನಾದರೂ,ಅಂಜಃ-ಬೇಗನೆ, ಪ್ರತಿವ್ಯೋಢುಂ-ಸರಿಯಾಗಿಧರಿಸಿಕೊಳ್ಳುವುದಕ್ಕೆ, ನಾಲಂ-ಅಸಮರ್ಥರಾದರು||೧೯||ಕೃಷ್ಣವಿಕ್ರೀಡಿತಂ-ಕೃಷ್ಣನವಿಲಾಸದಆಟವನ್ನು ವೀಕ್ಷ್ಯ-ನೋಡಿ,ಕಾಮಾರ್ದಿತಾಃ-ಮನ್ಮಥನಿಂದ,ಪೀಡಿಸಲ್ಪಟ್ಟವರಾದ,ಖೇಚರಸ್ತ್ರಿಯಃ-ಗಗನಚಾರಿಣಿಯರಾದಸ್ತ್ರೀಯರೂ,ವ್ಯಮುಹ್ಯನ್-ವಿಶೇಷವಾಗಿ ಮೋಹಿಸಿದರು ಸಗಣಃ-ನಕ್ಷತ್ರಗಣಸಹಿತನಾದ, ಶಶಾಂಕಶ್ಚ-ಚಂದ್ರನೂಕೂಡ, ವಿಸ್ಮಿತಃ-ಅಚ್ಚರಿಯುಂಟಾದವನು ಅಭವತ್-ಆದನು||೨೦||ಭಗವಾನ್-ಸರ್ವಜ್ಞನಾದಕೃಷ್ಣನು,ಆತ್ಮಾರಾಮೋಽಪಿ-ತನ್ನೊಳಗೇಕ್ರೀಡಿಸುವವನಾದರೂ, ಗೋಪಯೋಷಿತಃ-ಗೊಲ್ಲರಹೆಂಗಳು, ಯಾವತೀಃ-ಎಷ್ಟುಮಂದಿಯಿದ್ದರೋ, ಆತ್ಮಾನಂ-ತನ್ನನ್ನು, ತಾವಂತಂ-ಅಷ್ಟುಮಂದಿಯನ್ನಾಗಿ, ಕೃತ್ವಾ-ಮಾಡಿ, ಲೀಲಯಾ-ವಿನೋದದಿಂದ, ತಾಭಿಸ್ಸಮಂ-ಆಗೋಪಿಯರೊಡನೆ, ರರಾಮ-ಕ್ರೀಡಿಸಿದನು||೨೧|| ಹೇಅಂಗ-ಎಲೈಪರೀಕ್ಷಿದ್ರಾಯನೇ! ಕರುಣಃ-ದಯಾಶಾಲಿಯಾದ, ಸಃ-ಆಕೃಷ್ಣನು, ರತಿವಿಹಾರೇಣ-ಕ್ರೀಡಾವಿನೋದದಿಂದ, ಶ್ರಾಂತಾನಾಂ-ಬಳಲಿದವರಾದ, ತಾಸಾಂ-ಆಗೊಲ್ಲತಿಯರ, ವದನಾನಿ-ಮುಖಗಳನ್ನು, ಪ್ರೇಮ್ಣಾ-ಪ್ರಿಯದಿಂದ,ಶಂತಮೇನ-ಅತಿಸುಖಕರವಾದ. ಪಾಣಿನಾ-ಹಸ್ತದಿಂದ, ಪ್ರಾಮೃಜತ್-ತೊಡೆದನು||೨೨||

---

ಗೂಡಿ ನರ್ತನಂಗೆಯ್ದರು ||೧೭|| ಅನಂತರದಲ್ಲಿ ಲಕ್ಷ್ಮೀಪತಿಯಾದ ಶ್ರೀಕೃಷ್ಣನು ಅದೇರೀತಿಯಲ್ಲಿ ಆಲಿಂಗನಂಗಳಿಂದಲೂ, ಹಸ್ತಸ್ಪರ್ಶನಂಗಳಿಂದಲೂ, ಪ್ರೇಮಪೂರ್ಣಂಗಳಾದ ನೋಟಂಗಳಿಂದಲೂ, ಉತ್ತಮರತಿಗಳಿಂದಲೂ, ಮಂದಹಾಸಂಗಳಿಂದಲೂ, ಬಾಲಕನು ತನ್ನಪ್ರತಿಬಿಂಬಂಗಳಿಂದ ಕ್ರೀಡಿಸಿದಂತೆ ಗೋಪಸ್ತ್ರೀಯರೊಡನೆ ಕ್ರೀಡಿಸಿದನು ||೧೮|| ಎಲೈ ಪರೀಕ್ಷಿದ್ರಾಯನೇ! ಆಗೋಪಸ್ತ್ರೀಯರು ಆಕೃಷ್ಣನ ಅಂಗಸಂಗದಿಂದುಂಟಾದ ಆನಂದದಿಂದ ಪರವಶಂಗಳಾದ ಸರ್ವೇಂದ್ರಿಯಂಗಳುಳ್ಳವರಾಗಿ, ಶಿಥಿಲಂಗಳಾದ ಪುಷ್ಪಮಾಲೆಗಳೂ ಭೂಷಣಂಗಳೂ ಉಳ್ಳವರಾಗಿ, ಶಿಥಿಲಂಗಳಾದ ಕೇಶಪಾಶಂಗಳಂ ಕುಪ್ಪುಸಂಗಳುಂ ಸಹ ಯಥಾಪ್ರಕಾರವಾಗಿ ಕಟ್ಟಿಕೊಳ್ಳಲೋಸುಗ ತೋರದೆ ವಿವಶರಾದರು ||೧೯|| ಅನಂತರದಲ್ಲಿ ಬಂದಿರುವ ದೇವಸ್ತ್ರೀಯರು ಕೃಷ್ಣನ ವಿಲಾಸಕ್ರೀಡೆಯಂನೋಡಿ ಕಾಮಪೀಡಿತರಾಗಿ ಮೋಹಿತರಾದರು. ಗ್ರಹಸಮೇತನಾದ ಚಂದ್ರನೂ ಸಹ ಆಶ್ಚರ್ಯಂಪಟ್ಟನು ||೨೦|| ಭಗವಂತನಾದ ಶ್ರೀಕೃಷ್ಣನು ಆತ್ಮಾರಾಮನಾದರೂ ಗೋಪಸ್ತ್ರೀಯರುಗಳು ಎಷ್ಟುಮಂದಿಯಿರುವರೋ ಅಷ್ಟುಪ್ರಕಾರಂಗಳಾದ ಕೃಷ್ಣರಾಗಿ ಅವರೊಡನೆ ವಿಹರಿಸಿದನು||೨೧ ಆಕೃಷ್ಣನು ರತಿವಿಹಾರದಿಂದ ಶ್ರಾಂತರಾಗಿರುವ ಆಗೋಪಸ್ತ್ರೀಯರುಗಳ ಮುಖಂಗಳಂ ಸುಖಕರವಾದ

ನಂದಂತಿ ಯಸ್ಯ ಚರಿತಾನಿ ಜಗುಃ ಕೃತಾನಿ ಪುಣ್ಯಾನಿ ತತ್ಕರರುಹಸ್ಪರ್ಶಪ್ರಮೋದಾಃ ||೨೧|| ತಾಭಿರ್ಯುತ

ಜಲಕ್ರೀಡಾ ಪಸಕ್ತಿ ಪ್ರಯೋಜನಾರಂಭಃ

ಶ್ರಮಮಪೋಹಿತುಮಂಗಸಂಗಘೃಷ್ಟಸ್ರಜಃ ಸ್ವಕುಚಕುಂಕುಮರಂಜಿತಾಯಾಃ|ಗಂಧರ್ವಪಾಳಿಭಿರನುದ್ರುತ ಆವಿಶದ್ವಾಃ ಶ್ರಾಂತೋ ಗಜೀಭಿರಿಭರಾಡಿವ ಭಿನ್ನಸೇತುಃ||೨೨||ಸೋಂಭಸ್ಯಲಂ ಯುವತಿಭಿಃ ಪರಿಷಿಚ್ಯಮಾನಃ ಪ್ರೇಮ್ಣೇಕ್ಷಿತಃ ಪ್ರಹಸಿತಾಭಿರಭಿಷ್ಟುತಾಂಗಃ | ವೈಮಾನಿಕೈಃ ಕುಸುಮವರ್ಷಿಭಿರೀಡ್ಯಮಾನೋ ರೇಮೇ ಸ್ವಯಂ ಸ್ವರತಿರತ್ರ ಗಜೇಂದ್ರಲೀಲಃ ||೨೩|| ತತಶ್ಚ ಕೃಷ್ಣೋಪವನೇ ಜಲಸ್ಥಲಪ್ರಸೂನ

ಗೋಪ್ಯಃ-ಗೊಲ್ಲತಿಯರು, ಸ್ಫುರತ್ ...ಶ್ರಿಯಾ-ಸ್ಫುರತ್-ಹೊಳೆಯುತ್ತಿರುವ, ಕನಕಕುಂಡಲ-ಚಿನ್ನದೋಲೆಗಳ, ಕುಂತಲ-ಕುರುಳ್ಗಳ, ತ್ವಿಟ್-ಕಾಂತಿಯುಳ್ಳ, ಗಂಡಶ್ರಿಯಾ ಕೆನ್ನೆಗಳ ಹೊಳಪಿನಿಂದಲೂ, ಸುಧಿತಹಾಸನಿರೀಕ್ಷಣೇನಚ-ಸುಧಿತ-ಅಮೃತದಂತೆ ಆಚರಿಸುತ್ತಿರುವ ಅಥವಾ ಅಮೃತವುಂಟಾದ, ಹಾಸ-ನಗೆಯುಳ್ಳ, ನಿರೀಕ್ಷಣೇನ-ನೋಟದಿಂದಲೂ, ಋಷಭಸ್ಯ-ರಮಣನಾದ ಕೃಷ್ಣನ, ಮಾನಂ-ಸನ್ಮಾನವನ್ನು, ದಧತ್ಯಃ-ಧರಿಸುವರಾಗಿ, ತತ್ಕರರುಹಸ್ಪರ್ಶಪ್ರಮೋದಾಃ-ತತ್-ಆಕೃಷ್ಣನ ಕರರುಹ-ಉಗುರ್ಗಳ, ಸ್ಪರ್ಶ-ಸೋಂಕುವಿಕೆಯಿಂದಾದ, ಪ್ರಮೋದಾಃ-ಹೆಚ್ಚು ಸಂತೋಷವುಳ್ಳವರು ಆಗಿ, ಪುಣ್ಯಾನಿ-ಪವಿತ್ರಗಳಾದ, ಕೃತಾನಿ, ಕೃಷ್ಣನ ಕಾರ್ಯಗಳನ್ನು, ಜಗುಃ-ಹಾಡಿದರು||೨೧||ತಾಭಿಃ-ಆಸ್ತ್ರೀಯರಿಂದ, ಯುತಃ-ಕೂಡಿದ, ಕೃಷ್ಣನು, ಶ್ರಮಂ-ರಾಸಕ್ರೀಡಾಯಾಸವನ್ನು, ಅಪೋಹಿತುಂ-ಹೋಗಲಾಡಿಸಿಕೊಳ್ಳುವುದಕ್ಕೆ, ಸ್ವ....ತಾಯಾಃ-ಸ್ವ-ತಮ್ಮ, ಕುಚ-ಸ್ತನಗಳ, ಕುಂಕುಮ-ಕೇಸರಗಂಧದಿಂದ, ರಂಜಿತಾಯಾಃ-ಸೊಗಸುಗೊಳಿಸಲ್ಪಟ್ಟ, ಅಂಗಸಂಗ ಘೃಷ್ಟಸ್ರಜಃ-ಅಂಗಸಂಗ-ಮೈಸೋಂಕುವಿಕೆಗಳಿಂದ, ಘೃಷ್ಟ-ನುರಿಯಲ್ಪಟ್ಟ, ಸ್ರಜಃ-ಪುಷ್ಪಮಾಲಿಕೆಗೆ ಸಂಬಂಧಿಸಿದ, ಗಂಧರ್ವಪಾಳಿಭಿಃ-ಗಂಧರ್ವ-ದೇವಗಾಯಕಶ್ರೇಷ್ಠರಂತೆ ಆಡುತ್ತಿರುವ, ಅಳಿಭಿಃ-ತುಂಬಿಗಳಿಂದ, ಅನುದ್ರುತಃ ಅನುಸರಿಸಿ ಬರಲ್ಪಟ್ಟವನಾಗಿ, ಭಿನ್ನಸೇತುಃ-ಭಿನ್ನ-ಅತಿಕ್ರಮಣದಿಂದ ಮುರಿಯಲ್ಪಟ್ಟ, ಸೇತುಃ-ವೈದಿಕ ಲೌಕಿಕ ಧರ್ಮನಿಬಂಧನವುಳ್ಳವನೂ ಆಗಿ, ಭಿನ್ನಸೇತುಃ-ಮುರಿಯಲ್ಪಟ್ಟ ನೀರಕಟ್ಟೆಯುಳ್ಳದ್ದಾದ, ಶ್ರಾಂತಃ-ಬಳಲಿದ್ದಾದ, ಗಜೀಭಿಃ-ಹೆಣ್ಣಾನೆಗಳಿಂದ, ಅನುದ್ರುತಃ-ಅನುಸರಿಸಿ ಅಟ್ಟಲ್ಪಟ್ಟದ್ದಾದ, ಗಜರಾಡಿವ-ಆನೆರಾಯನಂತೆ, ವಾಃ-ನೀರನ್ನು, ಆವಿಶತ್-ಹೊಕ್ಕನು||೨೨||ಸಃ-ಆಕೃಷ್ಣನು, ಅಂಭಸಿ-ನೀರಿನಲ್ಲಿ, ಯುವತಿಭಿಃ-ಹೆಂಗಳಿಂದ, ಅಲಂ-ಅಧಿಕವಾಗಿ, ಪರಿಷಿಚ್ಯಮಾನಃ-ತೋಯಿಸಲ್ಪಡುತಲಿರುವನಾಗಿಯೂ, ಪ್ರೇಮ್ಣಾ-ಅನುರಾಗದಿಂದ, ಈಕ್ಷಿತಃ-ನೋಡಲ್ಪಟ್ಟವನಾಗಿಯೂ ಪ್ರಹಸಿತಾಭಿಃ-ಹೆಚ್ಚು ನಗೆಯುಳ್ಳ ಗೋಪಿಯರಿಂದ, ಅಭಿಷ್ಟುತಾಂಗಃ-ಸ್ತುತಿಸಲ್ಪಟ್ಟ ಮೂರ್ತಿಯುಳ್ಳವನಾಗಿಯೂ, ಕುಸುಮವರ್ಷಿಭಿಃ-ಹೂವುಗಳನ್ನು ಸುರಿಸುತಲಿರುವ, ವೈಮಾನಿಕೈಃ-ವಿಮಾನದಲ್ಲಿ ಕುಳಿತಿರುವ ದೇವತೆಗಳಿಂದ, ಈಡ್ಯಮಾನಃ-ಸ್ತುತಿಸಲ್ಪಟ್ಟವನಾಗಿ. ಸ್ವರತಿಃ-ತನ್ನಲ್ಲಿಯೇ ಕ್ರೀಡಿಸುವನಾದರೂ, ಸ್ವಯಂ-ತಾನಾಗಿ, ಗಜೇಂದ್ರಲೀಲಃ-ಆನೆಯಂತೆ ವಿಲಾಸವುಳ್ಳವನಾಗಿ, ಅತ್ರ ಇಲ್ಲಿ, ರೇಮೇ-ಕ್ರೀಡಿಸಿದನು||೨೩||ತತಶ್ಚ-ಆವೇಳೆ

ತನ್ನ ಹಸ್ತದಿಂದ ಕರುಣಾಶಾಲಿಯಾಗಿ ತಡವರಿಸಿದನು ||೨೦|| ಗೋಪಸ್ತ್ರೀಯರುಗಳು ಸುವರ್ಣಕುಂಡಲಗಳಿಂದಲೂ ಮುಂಗುರುಳುಗಳಿಂದಲೂ, ಶೋಭಿತವಾದ ಕಪೋಲಕಾಂತಿಯಿಂದಲೂ, ಅಮೃತಪ್ರಾಯವಾದ ಮುಗುಳುನಗೆಯು ಕಟಾಕ್ಷಪ್ರಸರಣವೂ ಉಳ್ಳ ಮುಖವಿಕಾಸಂಗಳಿಂದಲೂ, ಕೃಷ್ಣನಂ ಪೂಜಿಸಿ, ಆಕೃಷ್ಣನ ನಖಸ್ಪರ್ಶನದಿಂದುಂಟಾದ ಆನಂದಪಾರವಶ್ಯತೆಯುಳ್ಳವರಾಗಿ, ಆಕೃಷ್ಣನ ಚರಿತ್ರವಂ ಗಾನಂಗೆಯ್ದರು ||೨೧|| ಆಗೋಪಸ್ತ್ರೀಯರುಗಳ ಶರೀರಸಂಮರ್ದದಿಂದ ಶಿಥಿಲವಾದ ಅವರುಗಳ ಕುಚಕುಂಕುಮ ರಂಜಿತವಾದ ಪುಷ್ಪಮಾಲೆಗಳಲ್ಲಿರುವ ಭ್ರಮರಂಗಳೆಂಬ ಗಾಯಕರಿಂದ ಅನುಯುಕ್ತನಾಗಿ, ಶ್ರೀಕೃಷ್ಣನು ಬಳಲಿದ ಮದಗಜವು ಹೆಣ್ಣಾನೆಗಳೊಡನೆ ಜಲವು ಪ್ರವೇಶಿಸುವಂತೆ ಆಗೋಪಸ್ತ್ರೀಯರುಗಳ ರತಿಪರಿಶ್ರಮವು ಪರಿಹರಿಸಲೋಸುಗ ಉದಕವಂ ಪ್ರವೇಶಿಸಿದನು ||೨೨|| ಆಕೃಷ್ಣನು ಉದಕಮಧ್ಯದಲ್ಲಿ ಸ್ತ್ರೀಯರುಗಳಿಂದ ಉದಕವ ನೆರಚಲ್ಪಟ್ಟವನಾಗಿ ಪುಷ್ಪವೃಷ್ಟಿಯಂ ಮಾಡುವ ದೇವತೆಗಳಿಂದ ಸ್ತುತಿಗೆಯ್ಯಲ್ಪಟ್ಟವನಾಗಿ ಆತ್ಮಾರಾಮನಾದಾಗ್ಯೂ ಮದಗಜದಂತೆ ಜಲವಿಹಾರವ ಮಾಡಿದನು ||೨೩|| ಅನಂತರದಲ್ಲಿ ಶ್ರೀಕೃಷ್ಣನು ಜಲದ

ಗಂಧಾನಿಲಜುಷ್ಟದಿಕ್ತಟೇ । ಚಚಾರಭೃಂಗಪ್ರಮದಾಗಣಾವೃತೋಯಥಾಮದಾಂಧೋದ್ವಿರದಃಕರೇಣುಭಿಃ ॥೨೬॥ ಏವಂಶಶಾಂಕಾಂಶುವಿರಾಜಿತಾನಿಶಾಸ್ಸಸತ್ಯಕಾಮೋನುರತಾಬಲಾಗಣಃ । ನಿಷೇವಆತ್ಮನ್ಯವರುದ್ಧಸೌರತಸ್ಸರ್ವಾಃಶರತ್ಕಾವ್ಯಕಥಾರಸಾಶ್ರಯಾಃ ॥೨೭॥ರಾಜಾ॥ ಸಂಸ್ಥಾಪನಾಯಧರ್ಮಸ್ಯಪ್ರಶಮಾಯೇತರಸ್ಯಚ। ಅವತೀರ್ಣೋಹಿಭಗವಾನಂಶೇನಜಗದೀಶ್ವರಃ॥೨೮॥ಸಕಥಂಧರ್ಮಸೇತೂನಾಂವಕ್ತಾಕರ್ತಾಭಿರಕ್ಷಿತಾ । ಪ್ರತೀಪಮಾಚರದ್ಬ್ರಹ್ಮನ್ಪರದಾರಾಭಿಮರ್ಶನಂ ॥೨೯॥ಆಪ್ತಕಾಮೋಯದುಪತಿಃಕೃತವಾನ್ವೈಜುಗುಪ್ಸಿತಂ।ಕಿಮಭಿಪ್ರಾಯಏತನ್ಮೇಸಂಶಯಂಛಿಂಧಿಸುವ್ರತ ॥೩೦॥

---

ಜಲ. ತಟೀ-ಜಲ-ನೀರಿನ, ಸ್ಥಲ-ನೆಲದ, ಪ್ರಸೂನ-ಪುಷ್ಪಗಳ, ಗಂಧ-ಪರಿಮಳವುಳ್ಳ, ಅನಿಲ-ಗಾಳಿಯಿಂದ, ಜುಷ್ಟ-ಸೇವಿಸಲ್ಪಟ್ಟ, ದಿಕ್ತಟೀ-ದೆಸೆಗಳ ಪ್ರದೇಶಗಳುಳ್ಳ, ಕೃಷ್ಣೋಪವನೇ-ಯಮುನೆಯ ತಡಿಯ ವನದಲ್ಲಿ, ಭೃಂಗಪ್ರಮದಾ-ಹೆಣ್ಣು ತುಂಬಿಗಳ, ಗಣ-ಹಿಂಡಿನಿಂದ, ಆವೃತಃ ಬಳಸಲ್ಪಟ್ಟ, ಮದಾಂಧಃ-ಸೊಕ್ಕಿದ, ದ್ವಿರದಃ-ಆನೆಯು, ಕರೇಣುಭಿಃ-ಹೆಣ್ಣಾನೆಗಳೊಡನೆ, ಯಥಾ-ಹೇಗೋ, ತಥಾ-ಹಾಗೆ, ಚಚಾರ-ತಿರುಗಿದನು॥೨೬॥ ಸತ್ಯಕಾಮಃ-ದಿಟವಾದ ಸಂಕಲ್ಪವುಳ್ಳವನೂ, ಅನುರತಾಬಲಾಗಣಃ-ತನ್ನಂ ಅನುಸರಿಸಿದ ಹೆಂಗಳಗುಂಪುಳ್ಳವನೂ, ಆತ್ಮನಿ-ತನ್ನಲ್ಲಿಯೇ, ಅವರುದ್ಧ-ತಡೆದುನಿಲ್ಲಿಸಿ ಕೊಳ್ಳಲ್ಪಟ್ಟ, ಸೌರತಃ-ವೀರ್ಯವುಳ್ಳವನೂ ಆದ, ಸಃ-ಆಕೃಷ್ಣನು, ಶಶಾಂಕಾಂಶುವಿರಾಜಿತಾಃ-ಚಂದ್ರಕಿರಣಗಳಿಂದ ಪ್ರಕಾಶಿಸುತಲಿರುವಂಥಾ, ಶರತ್ಕಾವ್ಯಕಥಾ ರಸಾಶ್ರಯಾಃ-ಶರತ್-ಶರತ್ಕಾಲದಲ್ಲಿ ಹುಟ್ಟುವ, ಕಾವ್ಯಕಥಾರಸ-ಕಾವ್ಯಕಥೆಗಳಲ್ಲಿ ಹೇಳಲ್ಪಟ್ಟಿರುವ ಶೃಂಗಾರಾದಿ ರಸಗಳಿಗೆ, ಆಶ್ರಯಾಃ-ಆಧಾರಂಗಳಾದ, ಸರ್ವಾ ನಿಶಾಃ-ಎಲ್ಲರಾತ್ರಿಗಳನ್ನೂ, ಏವಂ-ಹೀಗೆ, ನಿಷೇವೇ-ಸೇವಿಸಿದನು॥೨೭॥ [ಪರೀಕ್ಷಿತ್ಪ್ರಶ್ನವು] ಜಗದೀಶ್ವರಃ-ಪ್ರಪಂಚಕ್ಕೆನಿಯಾಮಕನಾದ, ಭಗವಾನ್-ಷಡ್ಗುಣೈಶ್ವರ್ಯ ಸಂಪನ್ನನಾದ ನಾರಾಯಣನು, ಧರ್ಮಸ್ಯ-ಪುಣ್ಯದ, ಸಂಸ್ಥಾಪನಾಯ-ರಕ್ಷಣಕ್ಕೋಸುಗವೂ, ಇತರಸ್ಯ-ಅನ್ಯವಾದ ಪಾಪದ, ಪ್ರಶಮಾಯಚ-ಶಾಂತಿಗೋಸುಗವೂ, ಅಂಶೇನ-ತನ್ನ ಕಲೆಯಿಂದ, ಅವತೀರ್ಣೋಹಿ-ಅವತರಿಸಿದವನಲ್ಲವೆ ॥೨೮॥ಹೇಬ್ರಹ್ಮನ್-ಎಲೈಬ್ರಾಹ್ಮಣನಾದಶುಕಮುನಿಯೇ! ಧರ್ಮಸೇತೂನಾಂ-ಪುಣ್ಯಕ್ಕೆ ಭಂಗವಿಲ್ಲದಂತೆರಕ್ಷಕಂಗಳಾದ ನಿಯಮಗಳನ್ನು, ವಕ್ತಾ-ಹೇಳುವವನಾಗಿಯೂ, ಕರ್ತಾ-ಮಾಡುವವನಾಗಿಯೂ, ಅಭಿರಕ್ಷಿತಾ-ಪಾಲಿಸುವವನಾಗಿಯೂ ಇರುವ, ಸಃ-ಆವಿಷ್ಣುವು, ಪ್ರತೀಪಂ-ಅದಕ್ಕೆ ವಿರುದ್ಧವಾದ, ಪರದಾರಾಭಿಮರ್ಶನಂ-ಪರರಹೆಂಡಿರನ್ನು ಸೋಂಕುವಿಕೆ ಯೆಂಬಪಾಪವನ್ನು, ಕಥಂ-ಹೇಗೆ, ಆಚರತ್-ಮಾಡಿದನು॥೨೯॥ ಯದುಪತಿಃ-ಯಾದವರಿಗೊಡೆಯನಾದ ಕೃಷ್ಣನು, ಆಪ್ತಕಾಮಃ-ಪಡೆಯಲ್ಪಟ್ಟ ಮನೋರಥವುಳ್ಳವನಾದ್ದರಿಂದ ಕಾಮವಿಲ್ಲದವನಾದರೂ, ಕಿಮಭಿಪ್ರಾಯಃ-ಯಾವತಾತ್ಪರ್ಯವುಳ್ಳವನಾಗಿ, ಜುಗುಪ್ಸಿತಂ-ಅಸಹ್ಯವಾದ ಹೀನಕರ್ಮವನ್ನು, ಕೃತವಾನ್-ಮಾಡಿದವನಾದನು? ಸುವ್ರತ-ಸಮೀಚೀನವಾದ ಬ್ರಹ್ಮಚರ್ಯ ನಿಯಮವುಳ್ಳ ಶುಕಮುನಿಯೇ! ಏತಂ-ಈ, ಮೇ-ನನ್ನ, ಸಂಶ

---

ಲ್ಲಿರುವ ಪುಷ್ಪಗಳೂ ತೀರದಲ್ಲಿರುವ ಪುಷ್ಪಂಗಳೂ ಇವುಗಳ ಸೌರಭ್ಯದಿಂದ ಕೂಡಿದ ಮಂದಮಾರುತವುಳ್ಳ ದಿಗಂತರಗಳುಳ್ಳ ಯಮುನಾತೀರದಲ್ಲಿ ಭೃಂಗಂಗಳಿಂದಲೂ ಸ್ತ್ರೀಯರುಗಳಿಂದಲೂ ಪರಿವೃತನಾಗಿ ಸ್ತ್ರೀಗಜಂಗಳಿಂ ಕೂಡಿದ ಮದಗಜದಂತೆ ವಿಹಾರವಂ ಮಾಡಿದನು ॥೨೬॥ ಈಪ್ರಕಾರವಾಗಿ ಶರತ್ಕಾಲ ಸಂಬಂಧವಾದ ಚಂದ್ರನ ಬೆಳದಿಂಗಳಿಂದ ರಮಣೀಯಂಗಳಾದ ಕಾವ್ಯಾದಿಗಳಲ್ಲಿ ಪ್ರತಿಪಾದಿತಂಗಳಾದ ಶೃಂಗಾರಾದಿರಸಂಗಳಿಗೆ ಆಶ್ರಯಗಳಾದ ರಾತ್ರಿಗಳಲ್ಲಿ ಅನುಕರ್ಷಿಸಲ್ಪಟ್ಟ ಸ್ತ್ರೀಯರುಗಳುಳ್ಳ ಸತ್ಯಕಾಮನಾದ ಶ್ರೀಕೃಷ್ಣನು ರೇತಸ್ಖಲನವಂ ಮಾಡದೆ ಕೇವಲರತಿಯಿಂದ ಅವರಂ ತೃಪ್ತಿಪಡಿಸಿದನು ॥೨೭॥ [ಎಂದು ಶುಕಮುನಿಯಿಂದ ನಿರೂಪಿಸಲ್ಪಟ್ಟ ಅರ್ಥವಂ ಕೇಳಿ ಪರೀಕ್ಷಿದ್ರಾಯನು ಪ್ರಶ್ನೆಗೆಯ್ದನೆಂತೆನೆ] ಎಲೈ ಶುಕಮುನಿಯೇ! ಭಗವಂತನಾದ ಜಗದೀಶ್ವರನು ಧರ್ಮಸಂಸ್ಥಾಪನಾರ್ಥವಾಗಿಯೂ, ಅಧರ್ಮನಿಗ್ರಹಾರ್ಥವಾಗಿಯೂ ಅವತರಿಸಿದನಷ್ಟೆ ॥೨೮॥ ಅಂತಾಭಗವಂತನು ಧರ್ಮವ್ಯವಸ್ಥೆಯಂ ಮಾಡುವ ಉಪದೇಶವಂ ಗೆಯ್ವನು ಧರ್ಮಸೇತುವಿಗೆ ಸಂರಕ್ಷಕನಾದರೂ ಯಾವನಿಮಿತ್ತದಿಂದ ಶಾಸ್ತ್ರವಿರುದ್ಧವಾದ ಪರದಾರಾಭಿಗಮನವಂಮಾಡಿದನು ॥೨೯॥ ಪೂರ್ಣಕಾಮನಾದರೂ ಭಗವಂತನು ಲೋಕನಿಂದಿತವಾದ ಈವ್ಯಾಪಾರವಂ ಏನುಕಾರಣದಿಂ ಚರಿಸಿದನು ಇ

ಶ್ರೀಶುಕಃ॥ ಧರ್ಮವ್ಯತಿಕ್ರಮೋದೃಷ್ಟ ಈಶ್ವರಾಣಾಂಚಸಾಹಸಂ।ತೇಜೀಯಸಾಂನದೋಷಾಯವ ಹ್ನೇಸ್ಸರ್ವಭುಜೋಯಥಾ ॥೩೧॥ ನೈತತ್ಸಮಾಚರೇಜ್ಜಾತುಮನಸಾಪಿಹ್ಯನೀಶ್ವರಃ। ವಿನಶ್ಯತ್ಯಾಚ ರನ್ಮೌಢ್ಯಾದ್ಯಥಾರುದ್ರೋಽಬ್ಧಿಜಂವಿಷಂ ॥೩೨॥ ಈಶ್ವರಾಣಾಂವಚಸ್ಸತ್ಯಂತಥೈವಾಚರಿತಂಕ್ವಚಿ ತ್ । ತೇಷಾಂಯತ್ಸ್ವವಚೋಯುಕ್ತಂಬುದ್ಧಿಮಾಂಸ್ತತ್ತದಾಚರೇತ್ ॥೩೩॥ ಕುಶಲಾಚರಿತೇನೈಷಾ ಮಿಹಸ್ವಾರ್ಥೋನವಿದ್ಯತೇ । ವಿಪರ್ಯಯೇಣಚಾನರ್ಥೋನಿರಹಂಕಾರಿಣಾಂಪ್ರಭೋ ॥೩೪॥ ತಿರ್ಯಙ್ಮರ್ತ್ಯ

---

ಯಂ-ಸಂದೇಹವನ್ನು, ಛಿಂಧಿ-ಛೇದಿಸು॥೩೦॥ [ಶ್ರೀಶುಕೋತ್ತರವು.] ಈಶ್ವರಾಣಾಂ-ಧರ್ಮ ಮಾರ್ಗನಿಯಾಮಕರಾದ, ಪ್ರಭುಗಳಿಗೆ, ಧರ್ಮವ್ಯತಿಕ್ರಮಃ-ವರ್ಣಾಕ್ರಮಧರ್ಮವ್ಯತ್ಯಾಸವು, ಸಾಹಸಂಚ-ಸಾಹಸಕಾರ್ಯವೂ, ದೃಷ್ಟಃ-ನೋಡಲ್ಪಟ್ಟಿದೆ ಸರ್ವಭುಜಃ-ಎಲ್ಲವನ್ನೂ ಭಕ್ಷಿಸುವ, ವಹ್ನೇಃ-ಅಗ್ನಿಗೆ, ಯಥಾ-ಹೇಗೋ, ತಥಾ-ಹಾಗೆ, ತೇಜೀಯಸಾಂ-ಜ್ಞಾನತೇಜಸ್ಸುಳ್ಳವರಿಗೆ, ನದೋಷಾಯ-ದೋಷಕ್ಕೆ ಆಗುವುದಿಲ್ಲವು ॥೩೧॥ ಅನೀಶ್ವರಃ-ಅಸಮರ್ಥನಾದಪುರುಷನು, ಏತತ್-ಈಸಮರ್ಥರು ಮಾಡಿದಕೆಲಸವನ್ನು, ಜಾತು-ಒಂದುಕಾಲವಲ್ಲಿಯೂ, ಮನಸಾಪಿ-ಮನಸ್ಸಿನಿಂದ ಲಾದರೂಕೂಡ, ನಾಚರೇತ್-ಮಾಡಬಾರದು. ಅ. ರುದ್ರಃ-ರುದ್ರನಲ್ಲದವನು, ಅಬ್ಧಿಜಂ-ಸಮುದ್ರದಲ್ಲಿ ಹುಟ್ಟಿದ ವಿಷಂ-ನಂಜನ್ನು, ಮೌಢ್ಯಾತ್-ಅರಿಯದ್ದರಿಂದ, ಆಚರನ್-ಕೊಂಚತಿಂದವನಾದರೂ, ಯಥಾ-ಹೇಗೆ, ವಿನಶ್ಯತಿ-ನಾಶವನ್ನು ಹೊಂದುವನೋ ॥೩೨॥ ಈಶ್ವರಾಣಾಂ-ಧರ್ಮನಿಯಾಮಕರಾದ ಪ್ರಭುಗಳ, ವಚಃ-ಮಾತು, ಸತ್ಯಂ-ದಿಟವಾದದ್ದು, ಚರಿತಂತು-ನಡತೆಯಾದರೋ, ಕ್ವಚಿತ್-ಕೆಲವುಕಡೆಯಲ್ಲಿ, ತಥೈವ-ಮಾತಿನಹಾಗೆಯೇ, ಸತ್ಯಂ-ದಿಟವಾಗಿರುವುದು. (ಕೆಲವುಕಡೆಯಲ್ಲಿ ದಿಟವಲ್ಲ) ಬುದ್ಧಿಮಾನ್-ವಿವೇಕವುಳ್ಳವನು, ತತ್-ಆಕಾರಣದಿಂದ, ತೇಷಾಂ-ಅವರ, ಸ್ವವಚೋಯುಕ್ತಂ-ಸ್ವಂತಮಾತುಗಳಿಂದ ಕೂಡಿದ್ದು, ಯತ್-ಯಾವುದೋ, ತತ್-ಆ ಕರ್ಮವನ್ನು, ಆಚರೇತ್-ಮಾಡಬೇಕು ॥೩೩॥ ಪ್ರಭೋ-ಪರೀಕ್ಷಿದ್ರಾಯನೇ! ನಿರಹಂಕಾರಿಣಾಂ-ಅಹಂಕಾರ ವಿಲ್ಲದವರಾದ, ಏಷಾಂ-ಈಮಹಾತ್ಮರಿಗೆ, ಇಹ-ಈಲೋಕದಲ್ಲಿ, ಕುಶಲಾಚರಿತೇನ-ಪುಣ್ಯಕರ್ಮವನ್ನು ಆಚರಿಸುವುದರಿಂದ, ಅರ್ಥಃ-ಪ್ರಯೋಜನವೂ, ವಿಪರ್ಯಯೇಣ-ವ್ಯತಿರಿಕ್ತವಾದ ಪಾಪಕರ್ಮಾಚರಣದಿಂದ, ಅನರ್ಥಃ-ಕೇಡೂ, ನವಿದ್ಯತೇ-ಇರುವುದಿಲ್ಲ॥೩೪॥ತಿರ್ಯಙ್ಮರ್ತ್ಯದಿವೌಕಸಾಂ-ಪಕ್ಷ್ಯಾದಿ ತಿರ್ಯಗ್ಜಂತುಗಳು ಮನುಷ್ಯರು ದೇವತೆಗಳು ಇವರಿಗೂ, ಅಖಿಲಸತ್ವಾನಾಂ-ಸಕಲ ಪ್ರಾಣಿಗಳಿಗೂ, ಈಶಿತವ್ಯಾನಾಂ-ನಿಯಮಿಸಲ್ಪಡತಕ್ಕವರೆಲ್ಲರಿಗೂ, ಈಶಿತುಃ-ನಿಯಾಮಕನಾದ ಕೃಷ್ಣನಿಗೆ, ಕುಶಲಾ ಕುಶಲಾನ್ವಯಃ-ಕುಶಲ-

---

ದರ ಅಭಿಪ್ರಾಯವೇನು, ಈ ಸಂಶಯವಂ ಪರಿಹರಿಸು ॥೩೦॥ [ಎಂಬರಾಜವಾಕ್ಯವಂಕೇಳಿ ಶುಕಾಚಾರ್ಯನು ಉತ್ತರವ ನಿತ್ತನದೆಂತೆನೆ] ಎಲೈ, ಅರಸೇ? ಬ್ರಹ್ಮನು, ಇಂದ್ರನು, ಸೋಮನು, ವಿಶ್ವಾಮಿತ್ರನು, ಮುಂತಾದ ಮಹಾಪುರುಷರು ಧರ್ಮಾತಿಕ್ರಮವಂ ಮಾಡುವುದುಂಟು. ಆದರೂ ತೇಜಸ್ವಿಗಳಾದವರಿಗೆ ದೋಷವಿಲ್ಲ. ಯಜ್ಞೇಶ್ವರನು ಸರ್ವಭಕ್ಷಕನಾದರೂ ಹೇಗೆಪರಿಶುದ್ಧನೋ ಆರೀತಿಯಲ್ಲಿ ಮಹಾತ್ಮರು ಶುದ್ಧರೇಸರಿ॥೩೧॥ ಆದ್ದರಿಂದ ದೇಹಾದಿಪರತಂತ್ರನಾದ ಸಾಧಾರಣಪುರುಷನು ಮನಸ್ಸಿನಿಂದಲೂ ಕೂಡ ಅಂತಾಕಾರ್ಯವಂ ಮಾಡಬಾರದು. ಮೂಢಭಾವದಿಂದ ಧರ್ಮವ್ಯತಿಕ್ರಮವಂ ಮಾಡಿದರೆ ಶೀಘ್ರವಾಗಿ ಅಧಃಪತನವಂ ಪಡೆಯುತ್ತಾನೆ ಅದೆಂತೆನೆ ಮಹೇಶ್ವರ ವ್ಯತಿರಿಕ್ತನಾದ ಸಾಧಾರಣದೇವನು ಕಾಲಕೂಟವಿಷವಂ ಧರಿಸಿಬದುಕುವನೇ? ಆತನಿಗೆದಕ್ಕೀತೆ ॥೩೨॥ ಅಂತಾ ಮಹಾತ್ಮರವಚನವೇ ಸತ್ಯವು, ಅವರಿಂದ ಆಚರಿಸಲ್ಪಟ್ಟದ್ದು ಕೆಲವು ಸತ್ಯ, ಕೆಲವು ಅಸತ್ಯವಾಗಿರುವುದು. ಅವರವಚನಾನುಸಾರವಾಗಿ ಆಚರಿಸಬೇಕು. ಬುದ್ಧಿವಂತನು ಅವರಿಂದ ಆಚರಿಸಲ್ಪಟ್ಟರೀತಿಯಲ್ಲಿ ಆಚರಿಸಬಾರದು ॥೩೩॥ [ಹಾಗಾದರೆ ಅವರು ಏಕೆಸಾಹಸವಂ ಮಾಡುವರು ಎಂದರೆ) ಸಾಧುಕರ್ಮಾಚರಣದಿಂದ ಅವರಿಗೆ ಫಲಾಪೇಕ್ಷೆಇಲ್ಲ. ದುರಾಚಾರವನ್ನು ಅನುಷ್ಠಾನವಂ ಮಾಡಿದುದರಿಂದ ದುರ್ಗತಿಯೂಇಲ್ಲ. ನಿಸ್ಪೃಹರಾಗಿ ಪ್ರಾರಬ್ಧಸುಖವನ್ನುಮಾತ್ರ ಮನುಭವಿಸಿ ಬ್ರಹ್ಮಾನಂದವ ನನುಭವಿಸುವರು ॥೩೪॥ ದೇವತಿರ್ಯಙ್ಮನುಷ್ಯಾದಿ ಸಮಸ್ತಪ್ರಾಣಿಗಳಿಗೂ ಜನಕನಾದ, ಅಪೇಕ್ಷಿಸತಕ್ಕ ಸರ್ವವಿಷಯಂ

ಲ[illegible] ಪಿವೌಕಸಾಂ । ಈಶಿತುಶ್ಚೇಶಿತವ್ಯಾನಾಂ ಕುಶಲಾಕುಶಲಾನ್ವಯಃ ॥೩೫॥
ಯತ್[illegible] ಷೇವತೃಪ್ತಾ ಯೋಗಪ್ರಭಾವವಿಧುತಾಖಿಲಕರ್ಮಬಂಧಾಃ । ಸ್ವೈರಂಚರಂ
ತಿ[illegible] ನಹ್ಯಮಾನಾಸ್ತಸ್ಯೇಚ್ಛಯಾತ್ತವಪುಷಃ ಕುತ ಏವ ಬಂಧಃ ॥೩೬॥ ಗೋಪೀನಾಂತ
ತ್ಪ[illegible] ರ್ವೇಷಾಂಚಾಪಿ ದೇಹಿನಾಂ । ಯೋಽಂತಶ್ಚರತಿ ಸೋಽಧ್ಯಕ್ಷ ಏಷ ಕ್ರೀಡನ ದೇಹಭಾಕ್ ॥೩೭॥
ಅನುಗ್ರಹಾ[illegible]ತಾನಾಂ ಮಾನುಷಂ ದೇಹಮಾಶ್ರಿತಃ । ಭಜತೇ ತಾದೃಶೀಃ ಕ್ರೀಡಾ ಯಾಃ ಶ್ರುತ್ವಾ ತತ್ಪ
ರೋ ಭವೇತ್ ॥೩೮॥ ನಾಸೂಯನ್ ಖಲು ಕೃಷ್ಣಾಯ ಮೋಹಿತಾಸ್ತಸ್ಯ ಮಾಯಯಾ । ಮನ್ಯಮಾನಾ
ಸ್ಸ್ವಪಾರ್ಶ್ವಸ್ಥಾನ್ ಸ್ವಾನ್ ಸ್ವಾನ್ ದಾರಾನ್ ವ್ರಜೌಕಸಃ ॥೩೯॥ ಬ್ರಹ್ಮರಾತ್ರ ಉಪಾವೃತ್ತೇ ವಾಸುದೇ

ಪುಣ್ಯದ, ಅಕುಶಲ-ಪಾಪದ, ಅನ್ವಯಃ-ಸಂಬಂಧವು, ಕಿಮುತ-ಇಲ್ಲವೆಂದು ಹೇಳತಕ್ಕದ್ದೇನಿದೆ ॥೩೫॥ ಯತ್- - - -ತೃಪ್ತಾಃ-
ಯತ್-ಯಾವಕೃಷ್ಣನ, ಪಾದಪಂಕಜ-ಅಡಿದಾವರೆಯ, ಪರಾಗ-ಧೂಳಿನ, ನಿಷೇವ-ಸೇವನೆಯಿಂದ, ತೃಪ್ತಾಃ-ತಣಿದವರಾಗಿ,
ಯೂ, ಯೋಗ - - - - ಬಂಧಾಃ-ಯೋಗ-ಈಶ್ವರ ಧ್ಯಾನದ, ಪ್ರಭಾವ-ಸಾಮರ್ಥ್ಯದಿಂದ, ವಿಧುತ-ಕೊಡಹಿಬಿಡಲ್ಪಟ್ಟ,
ಅಖಿಲ-ಸಮಸ್ತಗಳಾದ, ಕರ್ಮಬಂಧಾಃ-ಪುಣ್ಯಪಾಪ ಕರ್ಮಗಳ ಕಟ್ಟುಗಳುಳ್ಳವರಾಗಿಯೂ ಇರುವ, ಮುನಯೋಽಪಿ-ಋಷಿಗ
ಳೂಕೂಡ, ನನಹ್ಯಮಾನಾಃ-ಕಟ್ಟಲ್ಪಡದೇ ಇರುವರಾಗಿ, ಸ್ವೈರಂ-ಸ್ವೇಚ್ಛೆಯಾಗಿ, ಚರಂತಿ-ತಿರುಗುತ ಲಿರುವರೋ, ಇಚ್ಛ
ಯಾ-ತನ್ನ ಸಂಕಲ್ಪಮಾತ್ರದಿಂದ, ಆತ್ತವಪುಷಃ-ಪಡೆಯಲ್ಪಟ್ಟ ಲೀಲಾಮೂರ್ತಿಯುಳ್ಳ, ತಸ್ಯ-ಆಕೃಷ್ಣನಿಗೆ, ಬಂಧಃ-ಪುಣ್ಯ
ಪಾಪದ ಕಟ್ಟಳೆಯು, ಕುತಏವ-ಎಲ್ಲಿಂದ ತಾನೇಬಂದೀತು? (ಇಲ್ಲವು) ॥೩೬॥ ಗೋಪೀನಾಂ-ಗೊಲ್ಲತಿಯರಿಗೂ, ತತ್ಪತೀನಾಂ
ಚ-ಅವರ ಗಂಡಂದಿರಿಗೂ, ಸರ್ವೇಷಾಂದೇಹಿನಾಂಚಾಪಿ-ಸಕಲಪ್ರಾಣಿಗಳಿಗೂ ಕೂಡ, ಅಂತಃ-ಒಳಗೆ, ಯಃ-ಯಾರು, ಚರ
ತಿ-ಪ್ರೇರಕನಾಗಿರುವನೋ, ಅಧ್ಯಕ್ಷಃ-ಬುಧ್ಧ್ಯಾದಿಗಳಿಗೆ ಸಾಕ್ಷಿಯಾದ, ಸಃ-ಆಪರಮಾತ್ಮನೇ, ಕ್ರೀಡನದೇಹಭಾಕ್-ಲೀಲಾ
ಮೂರ್ತಿಯನ್ನು ಪಡೆದಿರುವ, ಏಷಃ-ಈಕೃಷ್ಣನಾಗಿರುವನು ॥೩೭॥ ಭೂತಾನಾಂ-ಚರಾಚರ ಪ್ರಾಣಿಗಳ, ಅನುಗ್ರಹಾಯ-
ಕ್ಷೇಮಕ್ಕೋಸುಗ, ಮಾನುಷಂ-ಮನುಷ್ಯ ಸಂಬಂಧವಾದ, ದೇಹಂ-ಶರೀರವನ್ನು, ಆಶ್ರಿತಃ-ಸೇರಿರುವ, ಶ್ರೀಕೃಷ್ಣನು, ಯಾಃ
ಕ್ರೀಡಾಃ-ಯಾವಆಟಗಳನ್ನು, ಶ್ರುತ್ವಾ-ಕೇಳಿ, (ಮನುಷ್ಯನು) ತತ್ಪರಃ-ಆಕೃಷ್ಣನಲ್ಲಿ ಆಸಕ್ತನು, ಭವೇತ್-ಆಗುವನೋ,
ತಾದೃಶೀಃ ಕ್ರೀಡಾಃ-ಅಂತಾ ಆಟಗಳನ್ನೇ, ಭಜತೇ-ಸೇವಿಸುತ ಲಿರುವನು ॥೩೮॥ ವ್ರಜೌಕಸಃ-ಗೋಕುಲವೇ ವಾಸಸ್ಥಾನ
ವಾಗಿ ವುಳ್ಳ ಗೊಲ್ಲರು, ತಸ್ಯ-ಆ ಕೃಷ್ಣನ, ಮಾಯಯಾ-ಮೋಹಕ ಶಕ್ತಿಯಿಂದ, ಮೋಹಿತಾಃ-ಮರಹು ಗೊಳಿಸಲ್ಪಟ್ಟವರಾ
ಪ್ಪರಿಂದಲೇ, ಸ್ವಾನ್ಸ್ವಾನ್ದಾರಾನ್-ತಮ್ಮತಮ್ಮ ಹೆಂಡಿರನ್ನು, ಸ್ವಪಾರ್ಶ್ವಸ್ಥಾನ್-ತಮ್ಮಪಕ್ಕಗಳಲ್ಲಿರುವ ವರನ್ನಾಗಿ,

---

ಗಳಿಗೂ ನಿಯಾಮಕನಾದ, ಪರಮಾತ್ಮನಿಗೆ ಪಾಪಪುಣ್ಯ ಸಂಬಂಧವೆಲ್ಲಿಂದ ಬರುವುದು ॥೩೫॥ ಭಗವದ್ಭಕ್ತರಾ
ದ ಮುನಿಗಳುಕೂಡ ಯಾವಪರಬ್ರಹ್ಮನ ಪಾದಕಮಲ ರಜಸ್ಸಿನ ಸೇವೆಯಿಂದ ತೃಪ್ತರಾಗಿ, ಜ್ಞಾನಯೋಗಪ್ರ
ಭಾವದಿಂದ ಪರಿಹರಿಸಲ್ಪಟ್ಟ ಸಮಸ್ತಕರ್ಮ ಬಂಧಂಗಳುಳ್ಳವರಾಗಿ ಮುಕ್ತರಾಗ ಸ್ವೇಚ್ಛೆಯಿಂ ಸಂಚರಿಸು
ತ್ತಾರೆಯೋ, ಸ್ವೇಚ್ಛೆಯಿಂದ ಸ್ವೀಕರಿಸಲ್ಪಟ್ಟ ಮೂರ್ತಿಯುಳ್ಳ ಆಪರಮಾತ್ಮನಿಗೆ ಕರ್ಮಬಂಧವೆಲ್ಲಿಂದ ಬಂದೀ
ತು ॥೩೬॥ ಗೋಪಸ್ತ್ರೀಯರುಗಳಿಗೂ ಅವರಪತಿಗಳಿಗೂ ಇನ್ನೂ ಸರ್ವ ಪ್ರಾಣಿಗಳಿಗೂ ಅಂತರ್ಯಾಮಿಯಾ
ಗಿ ಬುದ್ಧಿಸಾಕ್ಷಿಯಾದ ಆಪರಮಾತ್ಮನು ಮಾಯಾದೇಹವ ನಂಗೀಕರಿಸಿ ವಿಹರಿಸುವನು ॥೩೭॥ ಆಪರಮಾತ್ಮನು
ಪ್ರಾಣಿಗಳಂ ಅನುಗ್ರಹಿಸಲೋಸುಗ ಮನುಷ್ಯದೇಹವನಾಶ್ರಯಿಸಿ ಅತ್ಯಂತಾಶ್ಚರ್ಯ ಕರಂಗಳಾದ ವಿಲಾ
ಸಂಗಳಂ ಮಾಡುತ್ತಾನೆ. ಆವಿಲಾಸಂಗಳಂ ಕೇಳಿದರೆ ಆಭಗವಂತನಲ್ಲಿ ಭಕ್ತಿಹುಟ್ಟುವುದು ॥೩೮॥ ಆಗೋಪಸ್ತ್ರೀ
ಯರುಗಳ ಪತಿಗಳು ಭಗವನ್ಮಾಯಾ ಮೋಹಿತರಾಗಿ, ತಮ್ಮತಮ್ಮ ಪತ್ನಿಯರನ್ನು ತಮ್ಮಸಮೀಪದಲ್ಲಿ ನೋ
ಡುವರಾಗಿ, ಕೃಷ್ಣನಲ್ಲಿ ಅಸೂಯೆಯಂ ಮಾಡಲಿಲ್ಲ ॥೩೯॥ ಅರುಣೋದಯಕಾಲಂ ಪ್ರಾಪ್ತವಾಗಲು ಗೋಪ
ಸ್ತ್ರೀಯರುಗಳು ಶ್ರೀಕೃಷ್ಣನಿಂ ಅನುಮೋದಿತರಾಗಿ, ಕೃಷ್ಣನಲ್ಲಿ ಆಸಕ್ತವಾದ ಚಿತ್ತವುಳ್ಳವರಾಗಿ ಕೃ

ಮಾನುಮೋದಿತಾಃ । ಅನಿಚ್ಛಂತ್ಯೋ ಯಯುರ್ಗೋಪ್ಯಸ್ಸ್ವಗೃಹಾನ್ ಭಗವತ್ಪ್ರಿಯಾಃ ॥೪೦॥ ವಿ
ಕ್ರೀಡಿತಂ ವ್ರಜವಧೂಭಿರಿದಂ ಚ ವಿಷ್ಣೋಃ ಶ್ರದ್ಧಾನ್ವಿತೋನುಶೃಣುಯಾದನುವರ್ಣಯೇದ್ಯಃ । ಭಕ್ತಿಂ
ಹರೌ ಭಗವತಿ ಪ್ರತಿಲಭ್ಯ ಕಾಮಂ ಹೃದ್ರೋಗಮಾಶ್ವಪಹಿನೋತ್ಯಚಿರೇಣ ಧೀರಃ ॥೪೧॥

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ತ್ರಯಸ್ತ್ರಿಂಶೋಽಧ್ಯಾಯಃ

---

ಮನ್ಯಮಾನಾಸ್ಸಂತಃ-ತಿಳಿಯುತಲಿರುವರಾಗಿ, ಕೃಷ್ಣಾಯಾಃ-ಕೃಷ್ಣನಿಗೋಸ್ಕರ, ನಾಸೂಯನ್ ಖಲು-ಹೊಟ್ಟೆಕಿಚ್ಚು ಪಡಲಿಲ್ಲವಲ್ಲವೆ ॥೩೯॥ ಬ್ರಹ್ಮರಾತ್ರೇ-ಬ್ರಾಹ್ಮಮುಹೂರ್ತವಾದ, ಉಷಃಕಾಲವು, ಅಥವಾ ಅರುಣೋದಯಸಮಯವು, ಉಪಾವೃತ್ತೇ ಸತಿ-ಸಮೀಪಿಸಿದ್ದಾಗುತಲೂ, ವಾಸುದೇವಾನುಮೋದಿತಾಃ-ವಾಸುದೇವ-ಕೃಷ್ಣನಿಂದ, ಅನುಮೋದಿತಾಃ-ಒಪ್ಪಿಗೆಯುಳ್ಳವರಾಗಿ, ಅನಿಚ್ಛಂತ್ಯೋಪಿ-ಮನೆಗೆಹೋಗಬೇಕೆಂದು ಬಯಸದೇ ಇರುವರಾದರೂಕೂಡ, ಭಗವತ್ಪ್ರಿಯಾಃ-ಕೃಷ್ಣನಿಗೆಪ್ರಿಯೆಯರಾದ, ಗೋಪ್ಯಃ-ಗೊಲ್ಲತಿಯರು, ಸ್ವಗೃಹಾನ್-ತಮ್ಮತಮ್ಮಮನೆಗಳನ್ನು ಕುರಿತು, ಯಯುಃ-ತೆರಳಿದರು॥೪೦॥ ಯಃ-ಯಾವಪುರುಷನು, ಶ್ರದ್ಧಾನ್ವಿತಸ್ಸನ್-ದೃಢವಾದ ನಂಬಿಕೆಯಿಂದ ಕೂಡಿದವನಾಗಿ, ವಿಷ್ಣೋಃ-ನಾರಾಯಣನ, ಇದಂ-ಈ, ವ್ರಜವಧೂಭಿಃ ವಿಕ್ರೀಡಿತಂ-ಗೋಕುಲದ ಹೆಂಗಳೊಡನೆ ಆಡಿದಆಟವನ್ನು, ಅನುಶೃಣುಯಾತ್-ಅನುಸರಿಸಿಕೇಳುವನೋ, ಅನುವರ್ಣಯೇತ್-ಅನುಸರಿಸಿ ಬಣ್ಣಿಸಿ ಹೇಳುವನೋ, ಸಃ-ಆಪುರುಷನು, ಭಗವತಿ-ಷಡ್ಗುಣೈಶ್ವರ್ಯಸಂಪನ್ನನಾದ, ಹರೌ-ಕೃಷ್ಣನಲ್ಲಿ, ಭಕ್ತಿಂ-ಪ್ರೀತಿಯನ್ನು, ಕಾಮಂ-ಅಧಿಕವಾಗಿ, ಪ್ರತಿಲಭ್ಯ-ಪಡೆದು, ಅಚಿರೇಣ-ಕಾಲವಿಳಂಬವಿಲ್ಲದೇ, ಧೀರಸ್ಸನ್-ಜ್ಞಾನಿಯಾಗಿ, ಹೃದ್ರೋಗಂ-ಮನೋವ್ಯಾಧಿಯನ್ನು, ಆಶು-ಬೇಗನೆ, ಅಪಹಿನೋತಿ-ಬಿಡ್ಡುಬಿಡುವನು ॥೪೧॥

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ತ್ರಯಸ್ತ್ರಿಂಶೋಽಧ್ಯಾಯಃ-

---

ಷನು ಬಿಟ್ಟುಹೋಗಲಾರದೆ ಪ್ರಯಾಸದಿಂ ತಮ್ಮತಮ್ಮಮನೆಗಳಿಗೆ ಹೋದರು ॥೪೦॥ ಗೋಪಸ್ತ್ರೀಯರೊಡನೆ ಭಗವಂತನಾದ ಕೃಷ್ಣನ ರಾಸಕ್ರೀಡಾ ಮಹೋತ್ಸವವಂ ಯಾವಪುರುಷನು ಶ್ರದ್ಧಾಯುಕ್ತನಾಗಿ ಕೇಳುವನೋ ಮತ್ತು ಕೀರ್ತನಂ ಗೆಯ್ವನೋ ಆಪುರುಷನು ಹರಿಯಲ್ಲಿ ಮುಖ್ಯವಾದ ಭಕ್ತಿಯನೆಯ್ದಿ ಸಂಸಾರದುಃಖಮಂ ಪರಿಹರಿಸಿಕೊಂಡು ಮುಕ್ತನಾಗುವನು ॥೪೧॥

ಇಂತು ಶುಕಮುನಿಯು ಪರೀಕ್ಷಿದ್ರಾಯನಿಗೆ ನಿರೂಪಿಸಿದನೆಂದು ಸೂತಪೌರಾಣಿಕನು ನೈಮಿಶಾ
ರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಹೇಳಿದನೆಂಬಲ್ಲಿಗೆ ಶ್ರೀಮನ್ಮಹೀಶೂರಪುರವ
ರಾಧೀಶ ಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜ ವಿರಚಿತಮಪ್ಪ ಶ್ರೀ
ಭಾಗವತದ ಶ್ರೀಕೃಷ್ಣರಾಜ ವಾಣೀವಿಲಾಸವು ಎಂಬ ಕರ್ಣಾಟಕ
ಭಾಷಾವ್ಯಾಖ್ಯಾನದಲ್ಲಿ ದಶಮಸ್ಕಂಧದೊಳು೩೩ನೆಯ
ಅಧ್ಯಾಯವು ಸಂಪೂರ್ಣವಾದುದು.
ಮಂಗಳಮಸ್ತು



ಅಹಿರೂಪಧಾರಿಣಸ್ಸುದರ್ಶನಾಖ್ಯಗಂಧರ್ವಸ್ಯಶಾಪಮೋಕ್ಷಣಂ

ಶ್ರೀಶುಕಃ॥ ಏಕದಾದೇವಯಾತ್ರಾಯಾಂಗೋಪಾಲಾಜಾತಕೌತುಕಾಃ । ಅನೋಭಿರನಡುದ್ಯುಕ್ತೈಃ ಪ್ರಯಯುಸ್ತೇಂಬಿಕಾವನಂ ॥೧॥ ತತ್ರಸ್ನಾತ್ವಾಸರಸ್ವತ್ಯಾಂದೇವಂಪಶುಪತಿಂಪ್ರಭುಂ । ಆನರ್ಚುರರ್ಹಣೈರ್ಭಕ್ತ್ಯಾದೇವೀಂಚನೃಪತೇಂಬಿಕಾಂ ॥೨॥ ಗಾವೋಹಿರಣ್ಯಂವಾಸಾಂಸಿಮಧುಮಧ್ವನ್ನಮಾದೃತಾಃ । ಬ್ರಾಹ್ಮಣೇಭ್ಯೋದದುಸ್ಸರ್ವೇದೇವೋನಃಪ್ರೀಯತಾಮಿತಿ ॥೩॥ ಊಷುಸ್ಸರಸ್ವತೀತೀರೇಜಲಂಪ್ರಾಶ್ಯಯತವ್ರತಾಃ । ರಜನೀಂತಾಂಮಹಾಭಾಗಾಸ್ಸನಂದಾನಂದಕಾದಯಃ ॥೪॥ ಕಶ್ಚಿನ್ಮಹಾ

---

೩೪ನೆಯ ಅಧ್ಯಾಯದಪ್ರತಿಪದಟೀಕೆ.

(ಶುಕವಾಕ್ಯವು.)ಏಕದಾ-ಒಂದುಸಮಯದಲ್ಲಿ, ತೇಗೋಪಾಲಾಃ-ಆಗೊಲ್ಲರು, ದೇವಯಾತ್ರಾಯಾಂ-ದೇವರಯಾತ್ರೆಯಲ್ಲಿ, ಜಾತಕೌತುಕಾಸ್ಸಂತಃ-ಹುಟ್ಟಿದ ಕುತೂಹಲವುಳ್ಳವರಾಗಿ, (ಅಥವಾ-ದೇವರಯಾತ್ರೆಯಲ್ಲಿ ಯಾರಿಗೆ ಅಪೇಕ್ಷೆ ಹುಟ್ಟಿತೋ ಆಗೊಲ್ಲರು) ಅನಡುದ್ಯುಕ್ತೈಃ-ಅನಡುತ್-ಎತ್ತುಗಳಿಂದ, ಯುಕ್ತೈಃ-ಹೂಡಲ್ಪಟ್ಟ, ಅನೋಭಿಃ-ಬಂಡಿಗಳಿಂದ, ಅಂಬಿಕಾವನಂ-ಗೌರಿಯಕಾಡನ್ನು ಕುರಿತು,ಪ್ರಯಯುಃ-ಪ್ರಯಾಣಮಾಡಿದರು॥೧॥ನೃಪತೇ-ಅರಸಾದ ಪರೀಕ್ಷಿದ್ರಾಯನೇ!ತತ್ರ-ಆಗೌರಿಯವನದಲ್ಲಿ, ಸರಸ್ವತ್ಯಾಃ-ಸರಸತೀನದಿಯೊಳು, ಸ್ನಾತ್ವಾ-ಮಿಂದು,ಭಕ್ತ್ಯಾ-ಪ್ರೀತಿಯಿಂದ, ಪ್ರಭುಂ-ಒಡೆಯನಾದ,ಪಶುಪತಿಂ-ಆತ್ಮೇಶ್ವರನಾದ, ದೇವಂ-ಮಹಾದೇವನನ್ನೂ, ಅಂಬಿಕಾಂ-ಜಗನ್ಮಾತೆಯಾದ, ದೇವೀಂಚ-ಗೌರಿಯನ್ನೂ, ಅರ್ಹಣೈಃ-ಪೂಜಾಸಾಮಗ್ರಿಗಳಿಂದ,ಆನರ್ಚುಃ-ಪೂಜಿಸಿದರು ॥೨॥ ಸರ್ವೇ-ಎಲ್ಲರು, ಆದೃತಾಸ್ಸಂತಃ-ಅಕ್ಕರೆಯುಳ್ಳವರಾಗಿ, ನಃ-ನಮಗೆ, ದೇವಃ-ಒಡೆಯನಾದಪರಮೇಶ್ವರನು,ಪ್ರೀಯತಾಂ-ಸುಪ್ರೀತನಾಗಲಿ, ಇತಿ-ಇಂತೆಂದು,ಗಾವಃ-ಗೋವುಗಳನ್ನೂ, ಹಿರಣ್ಯಂ-ಭಂಗಾರವನ್ನೂ, ವಾಸಾಂಸಿ-ವಸ್ತ್ರಗಳನ್ನೂ, ಮಧು-ಜೇನನ್ನೂ, ಮಧ್ವನ್ನಂ-ಮಧುರವಾದಅನ್ನವನ್ನೂ, ಬ್ರಾಹ್ಮಣೇಭ್ಯಃ-ಬ್ರಾಹ್ಮಣರಿಗೆ,ದದುಃ-ಕೊಟ್ಟರು॥೩॥ಮಹಾಭಾಗಾಃ-ಅಧಿಕಮರ್ಯಾದೆಯುಳ್ಳ, ಸನಂದಾಃ-ನಂದಗೋಪನಿಂ ಸಹಿತರಾದ, ನಂದಕಾದಯಃ-ನಂದಕನು ಮೊದಲಾದ ಗೊಲ್ಲರು, ಜಲಂ-ನೀರನ್ನು ಮಾತ್ರವೇ, ಪ್ರಾಶ್ಯ-ಕುಡಿದು ಯತವ್ರತಾಃ-ಕ್ಲಿಪ್ತವಾದ ನಿಯಮವುಳ್ಳವರಾಗಿ, ತಾಂರಜನೀಂ-ಆರಾತ್ರಿಯಲ್ಲಿ, ಸರಸ್ವತೀತೀರೇ-ಸರಸ್ವತಿಯನದಿಯತಡಿಯಲ್ಲಿ, ಊಷುಃ-ನಿವಸಿಸಿದರು ॥೪॥ ತಸ್ಮಿನ್ವಿಪಿನೇ-ಆಕಾಡಿನಲ್ಲಿ, ಯದೃಚ್ಛಯಾ-ಸ್ವೇಚ್ಛೆಯಿಂದ, ಆಗತಃ-ಬಂದಂಥಾ-ಬುಭುಕ್ಷಿತಃ-ಹಸಿವು

---

೩೪ನೆಯ ಅಧ್ಯಾಯವು.

ಶ್ರೀಧರೀಯಶ್ಲೋಕಃ॥ ಚತುಸ್ತ್ರಿಂಶೇಹಿನಾಗ್ರಸ್ತಂನಂದಂಹರಿರಮೂಮುಚತ್ । ವಿದ್ಯಾಧ್ರಂಚಾಂಗಿರಶ್ಶಾಪಾಚ್ಛಂಖಚೂಡಂತಥಾವಧೀತ್ ॥ ‡ ॥ ಮೂವತ್ತಾಲ್ಕನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ಸರ್ಪದಿಂದ ನುಂಗಲ್ಪಟ್ಟ ನಂದನಂಬಿಡಿಸಿ, ಆಂಗೀರಸ ಋಷಿಯಶಾಪದ ದೆಸೆಯಿಂದ ಸರ್ಪಭಾವವನೆಯ್ದಿರ್ದ ಸುದರ್ಶನನಾಮಕನಾದ ಆವಿದ್ಯಾಧರನ ನನುಗ್ರಹಿಸಿ, ಅನಂತರದಲ್ಲಿ ಗೋಪಸ್ತ್ರೀಯರುಗಳಂ ಅಪಹರಿಸಿಕೊಂಡುಹೋಗುತ್ತಿರುವ ಶಂಖಚೂಡನಾಮಕನಾದ ಯಕ್ಷನಂ ಸಂಹರಿಸಿದನೆಂದು ಶ್ರೀಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸುವನ ದೆಂತೆನೆ,-

ಎಲೈ, ಅರಸೇ! ಒಂದುಸಮಯದಲ್ಲಿ ನಂದಮೊದಲಾದ ಗೋಪಾಲಕರು ದೇವಯಾತ್ರೆಯಲ್ಲಿ ಕುತೂಹಲವುಳ್ಳವರಾಗಿ ವೃಷಭಂಗಳಂ ಕಟ್ಟಿದಬಂಡಿಗಳಲ್ಲಿ ಏರಿಕೊಂಡು ಅಂಬಿಕಾವನಮಂ ಕುರಿತು ಹೋದರು ॥೧॥ ಆಯಂಬಿಕಾವನದೊಳು ಸರಸ್ವತೀನದಿಯಲ್ಲಿ ಸ್ನಾನಮಂಮಾಡಿ ಪ್ರಭುವಾದ ಪಶುಪತಿಯಾದ ಪರಮೇಶ್ವರನಂ ಪಾರ್ವತೀದೇವಿಯುಂ ಸಹ ಭಕ್ತಿಯಿಂದ ಆರಾಧಿಸಿದರು ॥೨॥ ಆಮೇಲೆನಮಗೆ ಪರಮೇಶ್ವರನು ಪ್ರಸನ್ನನಾಗಲಿಯೆಂದು ಗೋವುಗಳಂ ಸುವರ್ಣಮಂ ವಸ್ತ್ರಂಗಳಂ ಮಧುರವಾದ ದಿವ್ಯಾನ್ನಮಂ ಸಹ ಬ್ರಾಹ್ಮಣರಿಗಾಗಿ ಕೊಟ್ಟರು ॥೩॥ ನಂದಮೊದಲಾದ ಗೋಪಾಲಕರು ತಾವು ಉದಕವನ್ನೇ ಆಹಾರವನ್ನಾಗಿ ಮಾಡಿಕೊಂಡು ವ್ರತನಿಷ್ಠರಾಗಿ ಆರಾತ್ರಿಯಲ್ಲಿ ಆಸರಸ್ವತೀ ತೀರದಲ್ಲಿಯೇ ವಾಸಮಂಮಾಡಿದರು ॥೪॥ ಆಸ್ಥಳದಲ್ಲಿ ಮಹತ್ತಾದ ಹೆಬ್ಬಾವು

ನಹಿಸ್ತಸ್ಮಿನ್ವಿಪಿನೇತಿಬುಭುಕ್ಷಿತಃ | ಯದೃಚ್ಛಯಾಗತೋನಂದಂಶಯಾನಮುರಗೋಗ್ರಸತ್ ||೫||
ಸಚುಕ್ರೋಶಾಹಿನಾಗ್ರಸ್ತಃಕೃಷ್ಣಕೃಷ್ಣಮಹಾನಯಂ | ಸರ್ಪೋಮಾಂಗ್ರಸತೇತಾತಪ್ರಪನ್ನಂ
ಪರಿಮೋಚಯ ||೬||ತಸ್ಯಚಾಕ್ರಂದಿತಂಶ್ರುತ್ವಾಗೋಪಾಲಾಸ್ಸಹಸೋತ್ಥಿತಾಃ|ಗ್ರಸ್ತಂಚದೃಷ್ಟ್ವಾವಿ
ಸಂಭ್ರಾಂತಾಸ್ಸರ್ಪಂವಿವ್ಯಧುರುಲ್ಮುಕೈಃ ||೭|| ಅಲಾತೈರ್ಹನ್ಯಮಾನೋಪಿನಾಮುಂಚತ್ತಭುಜಂ
ಗಮಃ | ತಮಸ್ಪೃಶತ್ಪದಾಭ್ಯೇತ್ಯಭಗವಾನ್ಸಾತ್ವತಾಂಪತಿಃ ||೮|| ಸವೈಭಗವತಃಶ್ರೀಮತ್ಪಾ

---

ಗೊಂಡಂಥಾ, ಮಹಾನಹಿಃ-ಅಜಗರವಾದಂಥಾ, ಕಶ್ಚಿದುರಗಃ-ಒಂದಾನೊಂದುಹಾವು, ಶಯಾನಂ-ಮಲಗಿರುವ, ನಂದಂ-ನಂದಗೋಪನನ್ನು, ಅಗ್ರಸತ್-(ನುಂಗಲ್ಕೆ)ಬಾಯಿಂದ ಹಿಡಿಯಿತು ||೫||ಅಹಿನಾ-ಸರ್ಪದಿಂದ, ಗ್ರಸ್ತಃ-ಹಿಡಿದುನುಂಗಲ್ಪಡುತಿರುವ, ಸಃ-ಆನಂದಗೋಪನು, ಕೃಷ್ಣಕೃಷ್ಣ-ಕೃಷ್ಣನೇಕೃಷ್ಣನೇ! ಅಯಂಮಹಾನಸರ್ಪಃ-ಈದೊಡ್ಡಹಾವು, ಮಾಂ-ನನ್ನನ್ನು, ಗ್ರಸತೇ-ನುಂಗುತಲಿದೆ. ತಾತ-ಅಪ್ಪಾ! ಪ್ರಪನ್ನಂ-ನೀನೇರಕ್ಷಕನೆಂದು ನಂಬಿದ, ಮಾಂ-ನನ್ನನ್ನು, ಪರಿಮೋಚಯ-ಬಿಡಿಸು, ಇತಿ-ಹೀಗೆಂದು, ಚುಕ್ರೋಶ-ಕೂಗಿಕೊಂಡನು ||೬|| ಗೋಪಾಶ್ಚ-ಗೊಲ್ಲರಾದರೋ, ತಸ್ಯ-ಆನಂದಗೋಪನ, ಆಕ್ರಂದಿತಂ-ಅಳುವನ್ನು, ಶ್ರುತ್ವಾ-ಕೇಳಿ, ಸಹಸಾ-ಬೇಗನೆ, ಉತ್ಥಿತಾಸ್ಸಂತಃ-ಎದ್ದವರಾಗಿ. ಗ್ರಸ್ತಂ-ನುಂಗಲ್ಪಡತ್ತಿರುವ, ನಂದನನ್ನು, ದೃಷ್ಟ್ವಾ-ನೋಡಿ, ಸಂಭ್ರಾಂತಾಶ್ಚ-ತ್ವರೆಯುಳ್ಳವರೂಆಗಿ, ಉಲ್ಮುಕೈಃ-ಕೊಳ್ಳಿಗಳಿಂದ, ಸರ್ಪಂ-ಹಾವನ್ನು, ವಿವ್ಯಧುಃ-ನೋಯಿಸಿದರು ||೭||ಭುಜಂಗಮಃ ಸರ್ಪವು, ಅಲಾತೈಃ-ಕೊಳ್ಳಿಗಳಿಂದ, ಹನ್ಯಮಾನೋಪಿ-ಹೊಡೆಯಲ್ಪಡುತಿರುವುದಾದರೂ, ನಾಮುಂಚತ-ನಂದನನ್ನು ಬಿಡಲಿಲ್ಲವು. ಸಾತ್ವತಾಂ-ಸತ್ಪುರುಷರಾದ ಯಾದವರಿಗೆ, ಪತಿಃ-ಒಡೆಯನಾದ, ಭಗವಾನ್-ಕೃಷ್ಣನು, ಅಭ್ಯೇತ್ಯ-ಇದಿರಿಗೆಬಂದು, ಪದಾ-ಕಾಲಿನಿಂದ, ತಂ-ಆಹಾವನ್ನು, ಅಸ್ಪೃಶತ್-ಸೋಂಕಿದನು ||೮||ಸವೈ-ಆಸರ್ಪವಾದರೋ, ಭಗವತಃ-ಭಗವಂತನಾದ ಕೃಷ್ಣನ,ಶ್ರೀಮತ್ಪಾದಸ್ಪರ್ಶಹತಾಶುಭಃ-ಶ್ರೀಮತ್-ಸಂ

---



ಕ್ಷುತ್ತಿನಿಂದ ಪೀಡಿತವಾಗಿ ಯದೃಚ್ಛೆಯಿಂದ ಮಲಗಿರುವ ನಂದನಂಗ್ರಹಿಸಿತು ||೫|| ಆಗನಂದನು ಅಜಗರಸರ್ಪದಿಂದ ಗ್ರಹಿಸಲ್ಪಟ್ಟವನಾಗಿ, ಎಲೈ, ಅಪ್ಪಾ! ಕೃಷ್ಣನೇ! ಮಹಾಸರ್ಪವು ನನ್ನಂಗ್ರಹಿಸುತ್ತೆ. ನೀನು ಪ್ರಸನ್ನನಾಗಿ ರಕ್ಷಿಸು, ಎಂದುಕೂಗಿದನು ||೬|| ಗೋಪಾಲಕರು ಆನಂದನ ಕೂಗಂಕೇಳಿ ಬೇಗನೆಎದ್ದುಬಂದು ಸರ್ಪಗ್ರಸ್ತನಾದ ನಂದನಂನೋಡಿ ಸಂಭ್ರಾಂತರಾಗಿ ಉರಿಯುವ ಕೊಳ್ಳಿಗಳಿಂದ ಆಸರ್ಪವಂ ಪ್ರಹರಿಸಿದರು ||೭|| ಕೊಳ್ಳಿಗಳಿಂದ ಪ್ರಹರಿಸಲ್ಪಟ್ಟರೂ ಆಸರ್ಪವು ನಂದನಂಬಿಡಲಿಲ್ಲ. ಈಗ ಯಾದವಪತಿಯಾದ ಶ್ರೀಕೃಷ್ಣನು ಆಸರ್ಪವಂ ಕಾಲಿನಿಂದ ಒದೆದನು ||೮|| ಆಸರ್ಪವು ಭಗವಂತನ ಪಾದಸ್ಪರ್ಶದಿಂದ ಧ್ವಸ್ತಪಾಪ

ಪಸ್ಪರ್ಶಹತಾಶುಭಃ । ಭೇಜೆಸರ್ಪವಪುರ್ಹಿತ್ವಾರೂಪಂವಿದ್ಯಾಧರಾರ್ಚಿತಂ ॥೯॥ ತಮಪೃಚ್ಛದ್ಧೃಷೀಕೇಶಃಪ್ರಣತಂಸಮುಪಸ್ಥಿತಂ । ದೀಪ್ಯಮಾನೇನವಪುಷಾಪುರುಷಂಹೇಮಮಾಲಿನಂ ॥೧೦॥ ಕೋಭವಾನ್ಪರಯಾಲಕ್ಷ್ಮ್ಯಾಶೋಭತೇಶುಭಲಕ್ಷಣ । ಕಥಂಜುಗುಪ್ಸಿತಾಮೇತಾಂಗತಿಂವಾಪ್ರಾಪಿತೋಽವಶಃ ॥೧೧॥ ಸರ್ಪಃ॥ ಅಹಂವಿದ್ಯಾಧರಃಕಶ್ಚಿತ್ಸುದರ್ಶನಇತಿಶ್ರುತಃ । ಶ್ರಿಯಾನುರೂಪಸಂಪತ್ತ್ಯಾವಿಮಾನೇನಾಚರನ್ದಿಶಃ ॥೧೨॥ ಋಷೀನ್ವಿರೂಪಾನಂಗಿರಸಃಪ್ರಾಹಸಂರೂಪದರ್ಪಿತಃ।ತೈರಿಮಾಂಪ್ರಾಪಿತೋಯೋನಿಂಪ್ರಲಬ್ಧೈಃಸ್ವೇನಪಾಪ್ಮನಾ ॥೧೩॥ ಶಾಪೋಮೇನುಗ್ರಹಾಯೈವಕೃತಸ್ತೈಃಕ

---

ಪತ್ತ್ರುಳ್ಳ, ಪಾದ-ಚರಣದ, ಸ್ಪರ್ಶ-ಸಂಬಂಧದಿಂದ, ಹತ-ನಾಶಮಾಡಲ್ಪಟ್ಟ, ಅಶುಭಃ-ಪಾಪವುಳ್ಳವನಾಗಿ, ಸರ್ಪವಪುಃ-ಹಾವಿನದೇಹವನ್ನು, ಹಿತ್ವಾ-ಬಿಟ್ಟು, ವಿದ್ಯಾಧರಾರ್ಚಿತಂ-ವಿದ್ಯಾಧರರಿಂದ ಪೂಜಿಸಲ್ಪಟ್ಟ, ರೂಪಂ-ಶರೀರವನ್ನು, ಭೇಜೇ-ಹೊಂದಿದನು ॥೯॥ ಪ್ರಣತಂ-ನಮಸ್ಕರಿಸಿ, ಸಮುಪಸ್ಥಿತಂ-ಹತ್ತಿರದಲ್ಲಿ ನಿಂತಿರುವ, ದೇದೀಪ್ಯಮಾನೇನ-ವಿಶೇಷವಾಗಿ ಬೆಳಗುತ್ತಿರುವ, ವಪುಷಾ-ಶರೀರ ದೊಡನೆಕೂಡಿದ, ಹೇಮಮಾಲಿನಂ-ಚಿನ್ನದ ಹಾರವುಳ್ಳ, ತಂಪುರುಷಂ-ಆಪುರುಷನನ್ನು ಕುರಿತು, ಹೃಷೀಕೇಶಃ-ಕೃಷ್ಣನು, ಅಪೃಚ್ಛತ್-ಪ್ರಶ್ನೆಮಾಡಿದನು॥೧೦॥ ಹೇಶುಭಲಕ್ಷಣ-ಎಲೈಶಿವಚಿಹ್ನೆಗಳುಳ್ಳವನೇ! ಭವಾನ್-ನೀನು, ಪರಯಾ-ಉತ್ಕೃಷ್ಟವಾದ, ಲಕ್ಷ್ಮ್ಯಾ-ಕಾಂತಿಯಿಂದ, ಶೋಭತೇ-ಬೆಳಗುತ್ತಿರುವಿ. ಕಃ-ನೀನುಯಾರು; ಅವಶಃ-ಅಸ್ವತಂತ್ರನಾಗಿ, ಏತಾಂ-ಈ, ಜುಗುಪ್ಸಿತಾಂಗತಿಂ-ನಿಂದ್ಯವಾದ ಪಾಪಜನ್ಮವನ್ನು, ಕಥಂವಾಪ್ರಾಪಿತಃ-ಹೇಗೆತಾನೇ ಹೊಂದಿಸಲ್ಪಟ್ಟವನಾದಿ;॥೧೧॥ (ಸರ್ಪವಾಕ್ಯವು) ಅಹಂ-ನಾನು, ಸುದರ್ಶನಇತಿ-ಸುದರ್ಶನನೆಂದು, ಶ್ರುತಃ-ಪ್ರಸಿದ್ಧನಾದ, ಕಶ್ಚಿದ್ವಿದ್ಯಾಧರಃ-ಒಬ್ಬಾನೊಬ್ಬವಿದ್ಯಾಧರ ದೇವಜಾತೀಯವನಾಗಿರುವೆನು. ಶ್ರಿಯಾ-ಕಾಂತಿಯಿಂದಲೂ, ಅನುರೂಪಸಂಪತ್ತ್ಯಾ-ರೂಪಕ್ಕೆ ತಕ್ಕಭಾಗ್ಯದಿಂದಲೂ, ಕೂಡಿದವನಾಗಿ, ವಿಮಾನೇನ-ಪುಷ್ಪರಥದಿಂದ, ದಿಶಃ-ದಿಕ್ಕುಗಳನ್ನು, ಆಚರನ್-ತಿರುಗುತಲಿರುವನಾಗಿ ॥೧೨॥ ರೂಪದರ್ಪಿತಃ ರೂಪ-ಸೌಂದರ್ಯದಿಂದ, ದರ್ಪಿತಃ-ಹೆಮ್ಮೆಯುಂಟಾದವ ನಾದ್ದರಿಂದಲೇ, ವಿರೂಪಾನ್-ವಕ್ರರೂಪವುಳ್ಳ (ಚಲುವಿಕೆಯಿಲ್ಲದ) ಅಂಗಿರಸಃಋಷೀನ್-ಅಂಗಿರೋಋಷಿಗಳನ್ನು, ಪ್ರಾಹಸಂ-ಪಳಿಹಸಿಕ್ಕೆನು॥ ಪ್ರಲಬ್ಧೈಃ-ಅಪಹಾಸ್ಯಮಾಡಲ್ಪಟ್ಟ, ತೈಃ-ಆಋಷಿಗಳಿಂದ, ಸ್ವೇನಪಾಪ್ಮನಾ-ನನ್ನ ಪಾಪದಿಂದಲೇ, ಇಮಾಂಯೋನಿಂ-ಈಸರ್ಪಜನ್ಮವನ್ನು, ಪ್ರಾಪಿತಃ-ಹೊಂದಿಸಲ್ಪಟ್ಟವನಾದೆನು ॥೧೩॥ ಕರುಣಾತ್ಮಭಿಃ-ದಯಾಶೀಲರಾದ, ಮುನಿಗಳಿಂದ, ಶಾಪಃ-ನಿಗ್ರಹವಚನವು, ಮೇ-ನನ್ನ, ಅನುಗ್ರಹಾಯೈವ-ರಕ್ಷಣಕ್ಕೋಸುಗವೇ, ಕೃತಃ-ಹೇಳಲ್ಪಟ್ಟಿತು. ಯತ್-ಯಾವಶಾಪದಿಂದ, ಅಹಂ-ನಾನು, ಲೋಕಗುರುಣಾ-ಜಗದೀಶ್ವರನಾದ ಕೃಷ್ಣನಿಂದ, ಪದಾ-ಕಾಲಿನಿಂದ, ಸ್ಪೃಷ್ಟಃ-ಒದೆಯಲ್ಪಟ್ಟವನಾದ್ದರಿಂದಲೇ, ಹತಾಶುಭಃ-

---

ವುಳ್ಳದ್ದಾಗಿ ಸರ್ಪದೇಹವಂ ಬಿಟ್ಟು ವಿದ್ಯಾಧರರಿಂ ಪೂಜಿತವಾದ ದಿವ್ಯದೇಹವ ನೆಯ್ದಿದನು ॥೯॥ ಆಮೇಲೆ ನಮಸ್ಕರಿಸಿ ನಿಂತಿರುವ ದೀಪ್ಯಮಾನವಾದ ದೇಹದಿಂದ ಪ್ರಕಾಶಿಸುತಲಿರುವ ಆಪುರುಷನಂ ಕುರಿತು ಶ್ರೀಕೃಷ್ಣನು ಪ್ರಶ್ನೆಗೆಯ್ದನು ॥೧೦॥ [ಅದೆಂತೆನೆ] ಎಲೈಪುರುಷನೇ! ನೀನುಯಾರು; ಅಧಿಕವಾದ ಕಾಂತಿಯಿಂದ ಶುಭಲಕ್ಷಣನಾಗಿ ಪ್ರಕಾಶಿಸುತ್ತೀಯೆ, ನಿಂದಿತವಾದ ಈ ಸರ್ಪದೇಹವು ನಿನಗೆ ಏಕೆಬಂದುದು, ಅದಂಹೇಳುವನಾಗು॥೧೧॥ [ಎಂಬ ಕೃಷ್ಣನವಾಕ್ಯವಂ ಕೇಳಿ ಆಪುರುಷನು ನುಡಿದನದೆಂತೆನೆ-] ಎಲೈ, ಮಹಾಪುರುಷನೇ! ನಾನು ಸುದರ್ಶನ ನಾಮಕನಾದ ಒಬ್ಬವಿದ್ಯಾಧರನು ದಿವ್ಯಕಾಂತಿಯಿಂದಲೂ ಸೌಂದರ್ಯಸಂಪತ್ತಿನಿಂದಲೂ ಯುಕ್ತನಾಗಿ ವಿಮಾನಾರೂಢನಾಗಿ ದಿಕ್ಕುಗಳಲ್ಲಿ ಸಂಚರಿಸುವವನಾದೆನು ॥೧೨॥ ಆಗ ವಿರೂಪರಾಗಿರುವ ಅಂಗಿರಸ್ಸು ಋಷಿಗಳು ನೋಡಿ ನಾನು ಸೌಂದರ್ಯಗರ್ವದಿಂದ ಅವರು ಹಾಸ್ಯವಂ ಮಾಡಿದೆನು. ನಾನು ಮಾಡಿದ ಅಪರಾಧದಿಂದ ಕುಪಿತರಾದ ಋಷಿಗಳಿಂದ ಈಗತಿಯು ನೆಯ್ದಿಸಲ್ಪಟ್ಟೆನು ॥೧೩॥ ದಯಾವಂತರಾದ ಆ ಋಷಿಗಳಿಂದ ಕೊಡಲ್ಪಟ್ಟ ಶಾಪವು ನನಗೆ ಅನುಗ್ರಹಾರ್ಥವಾಗಿ ಆಯಿತು. ಲೋಕಗುರುವಾದ ನಿನ್ನ

ಕುಣಾತ್ಮಭಿಃ । ಯದಹಂಲೋಕಗುರುಣಾಪದಾಸ್ಪೃಷ್ಟೋಹತಾಶುಭಃ॥೧೪॥ ತಂತ್ವಾಹಂಭವಭೀತಾನಾಂಪ್ರಪನ್ನಾನಾಂಭಯಾಪಹಂ । ಆಪೃಚ್ಛೇಶಾಪನಿರ್ಮುಕ್ತಃಪಾದಸ್ಪರ್ಶಾದಮೀವಹನ್॥೧೫॥ ಪ್ರಪನ್ನೋಸ್ಮಿಮಹಾಯೋಗಿನ್ಮಹಾಪುರುಷಸತ್ಪತೇ ।ಅನುಜಾನೀಹಿಮಾಂಕೃಷ್ಣಸರ್ವಲೋಕೇಶ್ವರೇಶ್ವರ । ಬ್ರಹ್ಮದಂಡಾದ್ವಿಮುಕ್ತೋಹಂಸದ್ಯಸ್ತೇಚ್ಯುತದರ್ಶನಾತ್॥೧೬॥ ಯನ್ನಾಮಗೃಹ್ಣನ್ನಖಿಲಾನ್ಶ್ರೋತೄನಾತ್ಮಾನಮೇವಚ।ಸದ್ಯಃಪುನಾತಿಕಿಂಭೂಯಸ್ತಸ್ಯಸ್ಪೃಷ್ಟಃಪದಾಹಿತೇ॥೧೭॥ಇತ್ಯನುಜ್ಞಾಪ್ಯದಾಶಾರ್ಹಂಪರಿಕ್ರಮ್ಯಾಭಿವಂದ್ಯಚ । ಸುದರ್ಶನೋದಿವಂಯಾತಃಕೃಚ್ಛ್ರಾನ್ನಂದಶ್ಚಮೋಚಿತಃ॥೧೮॥ ನಿಶಾಮ್ಯಕೃಷ್ಣಸ್ಯತದಾತ್ಮವೈಭವಂವ್ರಜೌಕಸೋವಿಸ್ಮಿತಚೇತಸಸ್ತತಃ । ಸಮಾಪ್ಯತಸ್ಮಿನ್ನಿಯ

---

ನಾಶವಾದ ಪಾಪವುಳ್ಳವ ನಾದೆನೋ॥೧೪॥ಅಮೀವಹನ್-ಅಮೀವ-ದುಃಖವನ್ನು. ಹನ್-ನಾಶಗೊಳಿಸುವ ಕೃಷ್ಣನೇ! ಪ್ರಪನ್ನಾನಾಂ ನೀನೇಗತಿಯೆಂದುನಂಬಿದ, ಭವಭೀತಾನಾಂ-ಸಂಸಾರದಬೆಸೆಯಿಂದ ಹೆದರಿದವರ, ಭಯಾಪಹಂ-ಹೆದರಿಕೆಯನ್ನು ಹೋಗಲಾಡಿಸುವಂಥಾ, ತಂತ್ವಾ-ಆನಿನ್ನನ್ನು, ಪಾದಸ್ಪರ್ಶಾತ್-ಕಾಲುಸೋಂಕಿದುದರಿಂದ. ಶಾಪನಿರ್ಮುಕ್ತಃ-ಶಾಪದಿಂದಲೂ ಬಿಡಲ್ಪಟ್ಟನಾನು, ಆಪೃಚ್ಛೇ-ಬೇಡಿಕೊಳ್ಳುವೆನು ॥೧೫॥ ಮಹಾಯೋಗಿನ್-ಮಹಾಜ್ಞಾನಿಯೇ! ಸತ್ಪತೇ-ಸತ್ಪುರುಷರಿಗೊಡೆಯನೇ! ಮಹಾಪುರುಷ-ಪರಮಾತ್ಮನೇ! ಸರ್ವಲೋಕೇಶ್ವರೇಶ್ವರ-ಸಕಲಲೋಕಪಾಲಕರಿಗೂ ಪಾಲಕನಾದವನೇ! ಕೃಷ್ಣ-ಶ್ರೀಹರಿಯೇ! ಮಾಂ-ನನ್ನನ್ನು, ಅನುಜಾನೀಹಿ-ಹೊರಟು ಹೋಗುವುದಕ್ಕೆ ಅಪ್ಪಣೆಕೊಟ್ಟು ಸಮ್ಮತಿಸು॥ ಅಚ್ಯುತ-ಚ್ಯುತಿಯಿಲ್ಲದವನೆ! ತೇ-ನಿನ್ನ, ದರ್ಶನಾತ್-ನೋಟದಿಂದ, ಸದ್ಯಃ-ತತ್ಕ್ಷಣದಲ್ಲಿ, ಅಹಂ-ನಾನು, ಬ್ರಹ್ಮದಂಡಾತ್-ಬ್ರಾಹ್ಮಣಶಾಪದಬೆಸೆಯಿಂದ, ವಿಮುಕ್ತಃ-ಬಿಡಲ್ಪಟ್ಟವನಾದೆನು ॥೧೬॥ ಹಿ-ಯಾವಕಾರಣದಿಂದ, ಯನ್ನಾಮ-ಯಾರಹೆಸರನ್ನು, ಗೃಹ್ಣನ್-ಗ್ರಹಿಸಿನುಡಿಯುವ ಮನುಷ್ಯನು, ಅಖಿಲಾನ್ ಶ್ರೋತೄನ್-ಕೇಳುವವರೆಲ್ಲರನ್ನೂ, ಆತ್ಮಾನಮೇವಚ-ತನ್ನನ್ನೂ ಕೂಡ, ಸದ್ಯಃ-ಆಗಲೇ, ಪುನಾತಿ-ಪರಿಶುದ್ಧಿಗೊಳಿಸುವನೋ, ತಸ್ಯತೇ-ಆನಿನ್ನ,ಪದಾ-ಚರಣದಿಂದ, ಸ್ಪೃಷ್ಟಃ-ಸೋಂಕಲ್ಪಟ್ಟವನು, ಕಿಂಭೂಯಃ-ಮರಳಿಯೇನು ಹೇಳಲ್ಪಡತಕ್ಕವನು?॥೧೭॥ಇತಿ-ಹೀಗೆ, ಅನುಜ್ಞಾಪ್ಯ-ಅಪ್ಪಣೆಯಂ ಪಡಕೊಂಡು,(ಒಪ್ಪಿಸಿ)ದಾಶಾರ್ಹಂ-ಕೃಷ್ಣನನ್ನು, ಪರಿಕ್ರಮ್ಯ-ಬಲವಂದು, ಅಭಿವಂದ್ಯಚ-ನಮಸ್ಕಾರವನ್ನು ಮಾಡಿ, ಸುದರ್ಶನಃ-ಸುದರ್ಶನನೆಂಬ ವಿದ್ಯಾಧರನು, ದಿವಂ-ಸ್ವರ್ಗವನ್ನು ಕುರಿತು, ಯಾತಃ-ಹೋದವನಾದನು ,ನಂದಶ್ಚ ನಂದನೂಕೂಡ,ಕೃಚ್ಛ್ರಾತ್-ಸಂಕಟದಬೆಸೆಯಿಂದ, ಮೋಚಿತಃ-ಬಿಡಲ್ಪಟ್ಟವನಾದನು ॥೧೮॥ವ್ರಜೌಕಸಃ- ಗೋಕುಲದಲ್ಲಿ ಮನೆಯುಳ್ಳ, ಗೋಪಾಃ-ಗೊಲ್ಲರು, ಕೃಷ್ಣಸ್ಯ-ಕೃಷ್ಣನ, ತತ್-ಆ, ಆತ್ಮವೈಭವಂ-ಈಶ್ವರಶಕ್ತಿಯನ್ನು, ನಿಶಾಮ್ಯ ನೋಡಿ, ವಿಸ್ಮಿತಚೇತಸಸ್ಸಂತಃ-ಆಶ್ಚರ್ಯವುಂಟಾದ ಮನಸ್ಸುಳ್ಳವರಾಗಿ, ತಸ್ಮಿನ್-ಆರಾತ್ರಿಯಲ್ಲಿ. ನಿಯಮಂ-ವ್ರತವನ್ನು, ಸಮಾಪ್ಯ ಮುಗಿಸಿಕೊಂಡು, ಪುನಃ-ಮರಳಿಯೂ, ವ್ರಜಂ-ಗೋಕುಲವನ್ನು ಕುರಿತು, ಆದೃತಾಃ-ಅಕ್ಕರೆಗೊಂಡವರಾಗಿ,ತತ್-ಆಕೃಷ್ಣಚರಿತ್ರವನ್ನು, ಕಥಯಂತಃ-ಹೇಳಿಕೊಳ್ಳುತ್ತಿರುವರಾಗಿ,

---

ಪಾದಸ್ಪರ್ಶದಿಂದ ಸರ್ವಾಶುಭಗಳಂ ಪರಿಹರಿಸಿಕೊಂಡು ನಾನು ಶುದ್ಧನಾದನು ||೧೪|| ಸಂಸಾರಭಿಂ ಭೀತರಾಗಿ ಶರಣಾಗತರಾದ ಭಕ್ತರ ಭಯಪರಿಹಾರಕನಾದ ನಿನ್ನಪಾದಸ್ಪರ್ಶದಿಂ ಶಾಪಮುಕ್ತನಾಗಿ, ಸ್ವಲೋಕಗಮನಾರ್ಥವಾಗಿ ಅನುಜ್ಞೆಯಂ ಯಾಚಿಸುವೆನು || ೧೫|| ದುಃಖಪರಿಹಾರಕನಾದ ಮಹಾಪುರುಷನೇ! ಮಹಾಯೋಗಿಯಾದ ಸತ್ಪತಿಯಾದ ಶ್ರೀಕೃಷ್ಣನೇ! ಸರ್ವಲೋಕೇಶ್ವರನೇ! ನನಗೆ ಅಪ್ಪಣೆಯಂಕೊಡು. ಎಲೈ, ಅಚ್ಯುತನೇ! ನಿನ್ನ ದರ್ಶನದಿಂದ ಬ್ರಹ್ಮಶಾಪ ಮುಕ್ತನಾದೆನು ||೧೬|| ಪುರುಷನು ಯಾವಭಗವಂತನ ನಾಮವಂ ಉಚ್ಚರಿಸುವವನಾಗಿ ಕೇಳುವಜನರಂ ತನ್ನಂ ಸಹ ಪವಿತ್ರರಂ ಮಾಡುತ್ತಿರುವನೋ ಅಂತಾ ನಿನ್ನ ಪಾದಸ್ಪರ್ಶವು ನನಗೆ ಸಾಕ್ಷಾತ್ತಾಗಿ ಆಯಿತು ||೧೭|| ನನ್ನ ಪುಣ್ಯಕ್ಕೆ ಸಮಾನವಿಲ್ಲವು. ಎಂದು ಭಗವಂತನಿಗೆ ನಮಸ್ಕರಿಸಿ ಪ್ರದಕ್ಷಿಣವಂ ಮಾಡಿ ಅಪ್ಪಣೆತೆಗೆದುಕೊಂಡು ಸುದರ್ಶನನೆಂಬ ವಿದ್ಯಾಧರನು ಸ್ವರ್ಗಕ್ಕೆ ಹೋದನು, ನಂದನು ಕ್ಷೇಮದಿಂದ ಜೀವಿಸಿದನು ||೧೮|| ಆಗ ನಂದನು ಮೊದಲಾದ ಗೋಪಾಲಕರು ಶ್ರೀಕೃಷ್ಣನ ಮಹಾತ್ಮ್ಯವೈಭವವಂ ನೋಡಿ ಆಶ್ಚರ್ಯಯುಕ್ತರಾಗಿ ವ್ರತವ ಪೂರ್ತಿ ಮಾಡಿಕೊಂಡು ಆ ಕೃಷ್ಣನ ವ್ಯಾಪಾರ

ಮುಂಪುನರ್ವ್ರಜಂಗೋಪಾಯಯುಸ್ತತ್ಕಥಯಂತಆದೃತಾಃ ||೧೯|| ಕದಾಚಿದಥಗೋವಿಂದೋರಾಮ

ಶಂಖಚೂಡವಧಸೂಚ್ಯಃ

ಶ್ಚಾದ್ಭುತವಿಕ್ರಮಃ | ವಿಜಹ್ರತುರ್ವನೇರಾತ್ರ್ಯಾಂಮಧ್ಯಗೌವ್ರಜಯೋಷಿತಾಂ ||೨೦|| ಉಪಗೀಯಮಾನೌಲಲಿತಂಸ್ತ್ರೀಜನೈರ್ಬದ್ಧಸೌಹೃದೈಃ | ಸ್ವಲಂಕೃತಾನುಲಿಪ್ತಾಂಗೌಸ್ರಗ್ವಿಣೌವಿರಜೋಂಬರೌ ||೨೧|| ನಿಶಾಮುಖಂಮಾನಯಂತಾವುದಿತೋಡುಪತಾರಕಂ | ಮಲ್ಲಿಕಾಗಂಧಮತ್ತಾಳಿಜುಷ್ಟಂಕುಮುದವಾಯುನಾ ||೨೨|| ಜಗತುಸ್ಸರ್ವಭೂತಾನಾಂಮನಃಶ್ರವಣಮಂಗಳಂ | ತೌಕಲ್ಪಯಂತೌಯುಗಪತ್ಸ್ವರಮಂಡಲಮೂರ್ಛಿತಂ ||೨೩|| ಗೋಪ್ಯಸ್ತದ್ಗೀತಮಾಕರ್ಣ್ಯಮೂರ್ಛಿತಾನಾವಿದನ್ನೃಪ | ಸ್ರಂಸದ್ದುಕೂಲಮಾತ್ಮಾನಂಸ್ರಸ್ತಕೇಶಸ್ರಜಂತತಃ ||೨೪|| ಏವಂವಿಕ್ರೀಡತೋ

---

ಯಯುಃ-ಹೋದರು ||೧೯|| ಅಥ-ಆಮೇಲೆ, ಕದಾಚಿತ್-ಒಂದಾನೊಂದು ಕಾಲದಲ್ಲಿ, ಅದ್ಭುತವಿಕ್ರಮಃ-ಆಶ್ಚರ್ಯವಾದ ಸಾಮರ್ಥ್ಯವುಳ್ಳ, ಗೋವಿಂದಃ-ಕೃಷ್ಣನು, ರಾಮಶ್ಚ-ಬಲರಾಮನೂ ಕೂಡ, ವನೇ-ಬೃಂದಾರಣ್ಯದಲ್ಲಿ, ರಾತ್ರ್ಯಾಂ-ರಾತ್ರಿಯೊಳಗೆ, ಗೋವ್ರಜಯೋಷಿತಾಂ-ಗೊಲ್ಲರಹಳ್ಳಿಯ ಹೆಂಗಳ, ಮಧ್ಯೇ-ನಡುವೆ, ವಿಜಹ್ರತುಃ-ವಿನೋದವಾಗಿ ಕ್ರೀಡಿಸಿದರು ||೨೦|| ಬದ್ಧಸೌಹೃದೈಃ-ಸ್ಥಿರವಾಗಿ ಕಟ್ಟಲ್ಪಟ್ಟ ಸ್ನೇಹವುಳ್ಳ, ಸ್ತ್ರೀಜನೈಃ-ಹೆಂಗುಸರಿಂದ, ಲಲಿತಂ-ಮೃದುವಾಗಿ, ಉಪಗೀಯಮಾನೌ-ಹಾಡಲ್ಪಡುತಲಿರುವ, ಸ್ವಲಂಕೃತಾನುಲಿಪ್ತಾಂಗೌ-ಸ್ವಲಂಕೃತ-ಚೆನ್ನಾಗಿ ಸಿಂಗರಿಸಲ್ಪಟ್ಟ, ಅನುಲಿಪ್ತ-ಗಂಧದಿಂದ ಬಳಿಯಲ್ಪಟ್ಟ, ಅಂಗೌ-ಮೈಯುಳ್ಳ, ಸ್ರಗ್ವಿಣೌ-ಹಾರಗಳುಳ್ಳ, ವಿರಜೋಂಬರೌ-ಶುದ್ಧವಾದ ವಸ್ತ್ರಗಳುಳ್ಳ ||೨೧|| ಉದಿತೋಡುಪತಾರಕಂ-ಉದಿತ-ಮೂಡಿದ, ಉಡುಪ-ಚಂದ್ರನೂ, ತಾರಕಂ-ನಕ್ಷತ್ರಗಳೂ ಉಳ್ಳ; ಮಲ್ಲಿಕಾ ಗಂಧಮತ್ತಾಳಿಜುಷ್ಟಂ-ಮಲ್ಲಿಕಾಗಂಧ-ಮಲ್ಲಿಗೆ ಹುವ್ವಿನ ಪರಿಮಳದಿಂದ, ಮತ್ತ, ಮದಿಸಿದ, ಅಳಿ-ತುಂಬಿಗಳನ್ನು, ಜುಷ್ಟಂ-ಸೇವಿಸುವ, ಕುಮುದವಾಯುನಾ-ಬಿಳುನೈದಿಲೆಯ ಗಾಳಿಯಿಂದ, ಸಹಿತವಾದ, ನಿಶಾಮುಖಂ-ಪ್ರದೋಷಕಾಲವನ್ನು, ಮಾನಯಂತೌ-ಕೊಂಡಾಡುತಲಿರುವ ರಾಮಕೃಷ್ಣರು ||೨೨|| ತೌ-ಅವರು, ಯುಗಪತ್-ಏಕಕಾಲದಲ್ಲಿ, ಸ್ವರಮಂಡಲಮೂರ್ಛಿತಂ-ಸ್ವರ-ಷಡ್ಜಾದಿಸ್ವರಗಳ, ಮಂಡಲ-ಗ್ರಾಮಗಳ, ಮೂರ್ಛಿತಂ-ಮೂರ್ಛನೆಗಳೆಂಬ ರಚನೆಗಳನ್ನು, ಕಲ್ಪಯಂತೌ-ಕಲ್ಪಿಸುತಲಿರುವರಾಗಿ, ಸರ್ವಭೂತಾನಾಂ-ಸಕಲಪ್ರಾಣಿಗಳಿಗೂ, ಮನಃಶ್ರವಣಮಂಗಳಂ-ಮನಸ್ಸಿಗೂ ಕಿವಿಗಳಿಗೂ ಸುಖವಾಗುವಂತೆ, ಜಗತುಃ-ಹಾಡಿದರು ||೨೩|| ನೃಪ-ಅರಸೇ! ಗೋಪ್ಯಃ-ಗೊಲ್ಲತಿಯರು, ತದ್ಗೀತಂ-ಆ ಕೃಷ್ಣರಾಮರ ಗಾನವನ್ನು, ಆಕರ್ಣ್ಯ-ಕೇಳಿ, ಮೂರ್ಛಿತಾಃ-ಅದರಲ್ಲಿ ಲೀನವಾದ ಮನಸ್ಸುಳ್ಳವರಾಗಿ, ತತಃ-ಆ ಗಾನಶ್ರವಣದಿಂದ, ಸ್ರಂಸದ್ದುಕೂಲಂ-ಜಾರಿದ ಸೀರೆಗಳುಳ್ಳ; ಸ್ರಸ್ತಕೇಶಸ್ರಜಂ-ಜಾರಿದ ಕುರುಳ್ಗಳ ಪುಷ್ಪಮಾಲೆಗಳುಳ್ಳ, ಆತ್ಮಾನಂ-ತಮ್ಮ ಶರೀರವನ್ನು, ನಾವಿದನ್-ತಿಳಿಯಲಿಲ್ಲ ||೨೪|| ಏವಂ-ಹೀಗೆ, ಸ್ವೈರಂ-ಸ್ವೇಚ್ಛೆ

---

ಯಿಂ ಪರಸ್ಪರವಾಗಿ ಅಕ್ಕರೆಯಿಂದ ವರ್ಣಿಸಿಕೊಂಡು, ತಮ್ಮ ಊರಿಗೆ ಬಂದರು ||೧೯|| ಎಲೈ ಅರಸೇ! ಮತ್ತೊಂದು ಸಮಯದಲ್ಲಿ ಶ್ರೀಕೃಷ್ಣನು ಬಲರಾಮನು, ಈ ಅದ್ಭುತಪರಾಕ್ರಮಿಗಳಾದ ಈರ್ವರೂ ರಾತ್ರಿಕಾಲಂಗಳಲ್ಲಿ ಗೋವುಗಳು ಗೋಪಸ್ತ್ರೀಯರುಗಳು ಇವರ ಮಧ್ಯದಲ್ಲಿ ವಿಹರಿಸಿದರು ||೨೦|| ಅತಿಪ್ರೇಮಯುಕ್ತರಾದ ಸ್ತ್ರೀಯರುಗಳಿಂದ ಲಲಿತಗಾನ ಗೆಯ್ಯಲ್ಪಡುವರಾಗಿ ಅಲಂಕೃತವಾದ ಚಂದನಾನುಲಿಪ್ತಾಂಗಳಾದ ಅಂಗಗಳುಳ್ಳವರಾಗಿ ಹಾರಭೂಷಿತರಾಗಿ ದಿವ್ಯವಸ್ತ್ರಧಾರಿಗಳಾಗಿ ||೨೧|| ಉದಯಿಸಿದ ನಕ್ಷತ್ರಂಗಳೂ ಚಂದ್ರನೂವುಳ್ಳ ರಾತ್ರಿಯಲ್ಲಿ ಮಲ್ಲಿಕಾಪುಷ್ಪಂಗಳಲ್ಲಿ ಮದಿಸಿದ ಭೃಂಗಂಗಳಿಂದ ಯುಕ್ತವಾದ ನೈದಿಲೆಗಳ ಮೇಲಿನಿಂದ ಗಾಳಿಯು ಸುಳಿಯುತ್ತಿರಲು ||೨೨|| ಆ ಪ್ರದೇಶದಲ್ಲಿ ಸರ್ವಜನರ ಮನಸ್ಸುಗಳಿಗೂ ಶ್ರೋತ್ರಂಗಳಿಗೂ ಸುಖಕರವಾಗಿ ಸ್ವರಮಂಡಲಂಗಳ ಮೂರ್ಛನಾಕ್ರಮಂಗಳಿಂದ ಏಕಕಾಲದಲ್ಲಿ ಗಾನವಂಗೆಯ್ದರು ||೨೩|| ಗೋಪಸ್ತ್ರೀಯರು ಆ ಗಾನವಂ ಕೇಳಿ ಮೋಹಿತರಾಗಿ ಉಟ್ಟ ಸೀರೆಗಳು ಜಾರಿಹೋದರೂ ಕೇಶಪಾಶಂಗಳೂ ಬಿಚ್ಚಿಹೋದರೂ ಆಭರಣಂಗಳು ಕಳಚಿಬಿದ್ದರೂ ತಿಳಿಯದೆ ಪರವಶರಾದರು ||೨೪|| ಈ ರೀತಿಯಲ್ಲಿ ರಾಮಕೃಷ್ಣ

ಸ್ವೈರಂ ಗಾಯತೋಸ್ಸಂಪ್ರಮತ್ತವತ್‌। ಶಂಖಚೂಡ ಇತಿ ಖ್ಯಾತೋ ಧನದಾನುಚರೋಽಭ್ಯಗಾತ್‌ ॥೨೫॥
ತಯೋರ್ನಿರೀಕ್ಷತೋ ರಾಜಂಸ್ತನ್ನಾಥಂ ಪ್ರಮದಾಜನಂ। ಕ್ರೋಶಂತಂ ಕಾಲಯಾಮಾಸ ದಿಶ್ಯುದೀಚ್ಯಾ
ಮಶಂಕಿತಃ ॥೨೬॥ ಕ್ರೋಶಂತಂ ಕೃಷ್ಣ ರಾಮೇತಿ ವಿಲೋಕ್ಯ ಸ್ವಪರಿಗ್ರಹಂ । ಯಥಾ ಗಾ ದಸ್ಯುನಾ
ಗ್ರಸ್ತಾ ಭ್ರಾತರಾವನ್ವಧಾವತಾಂ ॥೨೭॥ ಮಾಭೈಷ್ಟೇತ್ಯಭಯಾರಾವೌ ಸಾಲಹಸ್ತೌ ತರಸ್ವಿನೌ ।
ಆಸೇದತುಸ್ತಂ ತರಸಾ ತ್ವರಿತಂ ಗುಹ್ಯಕಾಧಮಂ ॥೨೮॥ ಸವೀಕ್ಷ್ಯ ತಾವನುಪ್ರಾಪ್ತೌ ಕಾಲಮೃತ್ಯೂ

---

ಯಾಗಿ, ಚಿಕ್ರೀಡತೋಃ-ಆಡುತಲಿರುವ ರಾಮಕೃಷ್ಣರು, ಸಂಪ್ರಮತ್ತವತ್-ಹೆಚ್ಚುವೈಕವುಳ್ಳವರಹಾಗೆ, ಗಾಯತೋಃಸ್ವ
ತೋಃ-ಹಾಡುತಲಿರುವರಾಗುತ್ತಿರಲಾಗಿ, ಶಂಖಚೂಡಇತಿ-ಶಂಖಚೂಡನೆಂದು, ಖ್ಯಾತಃ-ಪ್ರಸಿದ್ಧನಾದ, ಧನದಾನುಚರಃ-
ಕುಬೇರನಸೇವಕನು, ಅಭ್ಯಗಾತ್-ಇದಿರಿನೆಬಂದನು ॥೨೫॥ ರಾಜನ್-ಭೋರೆಯೇ, ತಯೋಃ-ಆರಾಮಕೃಷ್ಣರು, ನಿರೀಕ್ಷತೋಃ-
ನೋಡುತ್ತಿರುವ ರಾಗುತ್ತಿರಲಾಗಿಯೇ, ಅಶಂಕಿತಃ-ಭಯವಿಲ್ಲದವನಾಗಿ, ತನ್ನಾಥಂ-ಅವರೇ ಒಡೆಯರಾಗುಳ್ಳಂಥಾ, ಕ್ರೋ
ಶಂತಂ-ಕೂಗಿಕೊಳ್ಳುತಲಿರುವ, ಪ್ರಮದಾಜನಂ-ಹೆಂಣಾಳುಗಳನ್ನು, ಉದೀಚ್ಯಾಂದಿಶಿ ಬಡಗಲಕಡೆಗೆ, ಕಾಲಯಾಮಾಸ-ಬಲಾ
ತ್ಕರಿಸಿಅಟ್ಟಿದನು ॥೨೬॥ ಭ್ರಾತರೌ-ಅಂಣತಮ್ಮಂದಿರಾದ ರಾಮಕೃಷ್ಣರು, ಕೃಷ್ಣರಾಮೇತಿ-ಕೃಷ್ಣನೇ ರಾಮನೇ ಎಂದು,
ಕ್ರೋಶಂತಂ-ಕೂಗುತಲಿರುವ, ಸ್ವಪರಿಗ್ರಹಂ-ತಮ್ಮಜನವನ್ನು, ವಿಲೋಕ್ಯ-ನೋಡಿ, ದಸ್ಯುನಾ-ಕಳ್ಳನಿಂದ(ಅಥವಾಹುಲಿ
ಯಿಂದ) ಗ್ರಸ್ತಾಃ-ಹಿಡಿಯಲ್ಪಟ್ಟ, ಗಾಃ-ಗೋವುಗಳನ್ನು, ಯಥಾ-ಹೇಗೋ, ತಥಾ-ಹಾಗೆ, ಅನ್ವಧಾವತಾಂ-ಅನುಸರಿಸಿ
ಅಟ್ಟಿಕೊಂಡು ಹೋದರು ॥೨೭॥ ಮಾಭೈಷ್ಟ-ಹೆದರಬೇಡಿರಿ, ಇತಿ-ಹೀಗೆ, ಅಭಯಾರಾವೌ-ಭಯವಿಲ್ಲದ ಮಾತುಳ್ಳವರೂ, ಸಾ
ಲಹಸ್ತೌ-ಮರದಕೊಂಬೆಗಳೇ ಕೈಗಳಲ್ಲಿ ವುಳ್ಳವರೂ, ತರಸ್ವಿನೌ-ವೇಗವುಳ್ಳವರೂ, ಆದರಾಮಕೃಷ್ಣರು, ತರಸಾ-ಬೇಗನೆ, ತ್ವ
ರಿತಂ-ತ್ವರೆಗೊಳ್ಳುತಲಿರುವ, ಗುಹ್ಯಕಾಧಮಂ-ಗುಹ್ಯಕರಲ್ಲಿ ನೀಚನಾದ, ತಂ-ಅವನನ್ನು, ನಿಷೇಧತುಃ-ತಡೆದರು ॥೨೮॥ ಕಾಲ

---

ರು ಸ್ವೇಚ್ಛೆಯಿಂ ಗಾನಂಗೆಯ್ಯುತ ವಿಹರಿಸುತ್ತಲಿರಲಾಗಿ ಕುಬೇರನಭೃತ್ಯನಾದ ಶಂಖಚೂಡನೆಂಬ ಯಕ್ಷನುಬಂದು ॥೨೫॥ ರಾಮಕೃಷ್ಣರು ನೋಡುತ್ತಿರುವಾಗಲೇ ರಾಮಕೃಷ್ಣಾಧೀನವಾದ ಸ್ತ್ರೀಜನದಲ್ಲಿ



ಉತ್ತರದಿಕ್ಕಿನಲ್ಲಿ ಕೂಗುತಲಿರುವ ಸ್ತ್ರೀಜನವಂ ಶಂಕೆಗೊಳ್ಳದೆ ತಿರುಗಿಸಿಕೊಂಡು ಹೋದನು ॥೨೬॥ ವ್ಯಾಘ್ರದಿಂದ ಅಟ್ಟಲ್ಪಟ್ಟ ಗೋವುಗಳಂತೆ ಶಂಖಚೂಡನೆಂಬ ಅಸುರನಿಂದ ಕರೆದುಕೊಂಡು ಹೋಗಲ್ಪಡುವ ಸ್ತ್ರೀಜನರುಗಳ ಕೃಷ್ಣಾ ರಾಮಾ ಎಂದುಕೂಗುತ್ತಲಿರುವಶಬ್ದವಂಕೇಳಿ ಕೃಷ್ಣರಾಮರು ಅವನನ್ನಟ್ಟಿಕೊಂಡುಹೋದರು ॥೨೭॥ ಎಲೆ ಸ್ತ್ರೀಯರುಗಳಿರಾ; ಅಂಜಬೇಡಿ, ಎಂದು ಕೂಗುತ್ತ ವೃಕ್ಷಂಗಳಂ ಕೈಯ

ಇತ್ಯುದ್ವಿಜತ್ | ವಿಸೃಜ್ಯ ಸ್ತ್ರೀಜನಂ ಮೂಢಃ ಪ್ರಾದ್ರವಜ್ಜೀವಿತೇಚ್ಛಯಾ ||೨೯|| ತಮನ್ವಧಾವದ್ಗೋವಿಂದೋ ಯತ್ರಯತ್ರ ಸ ಧಾವತಿ | ಜಿಹೀರ್ಷುಸ್ತಚ್ಛಿರೋರತ್ನಂ ತಸ್ಥೌ ರಕ್ಷನ್ ಸ್ತ್ರಿಯೋ ಬಲಃ ||೩೦|| ಅವಿದೂರ ಇವಾಭ್ಯೇತ್ಯ ಶಿರಸ್ತಸ್ಯ ದುರಾತ್ಮನಃ | ಜಹಾರ ಮುಷ್ಟಿನೈವಾಂಗ ಸಹಚೂಡಾಮಣಿಂ ವಿಭುಃ ||೩೧|| ಶಂಖಚೂಡಂ ನಿಹತ್ಯೈವಂ ಮಣಿಮಾದಾಯ ಭಾಸ್ವರಂ | ಅಗ್ರಜಾಯಾದದಾತ್ಪ್ರೀತ್ಯಾ ಪಶ್ಯಂತೀನಾಂ ಚ ಯೋಷಿತಾಂ || ||೩೨||

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಚತುಸ್ತ್ರಿಂಶೋಽಧ್ಯಾಯಃ

---

ಮೃತ್ಯುರಿವ-ಮರಣಕಾಲದ ಮೃತ್ಯುದೇವತೆಗಳಹಾಗೆ, ಅನುಸಂಪ್ರಾಪ್ತೌ-ಹಿಂದೆಯೇ ಬಂದಂಥಾ, ತೌ-ಆ ರಾಮಕೃಷ್ಣರನ್ನು, ವೀಕ್ಷ್ಯ-ನೋಡಿ, ಉದ್ವಿಜತ್-ಹೆದರುತಲಿರುವ, ಸಃ-ಅವನು, ಸ್ತ್ರೀಜನಂ-ಹೆಂಗಳುಗಳನ್ನು, ವಿಸೃಜ್ಯ ಬಿಟ್ಟು, ಮೂಢಃ-ಉಪಾಯವನ್ನರಿಯದವನಾದ್ದರಿಂದಲೇ, ಜೀವಿತೇಚ್ಛಯಾ-ಪ್ರಾಣದಬಯಕೆಯಿಂದ, ಪ್ರಾದ್ರವತ್-ಹೆಚ್ಚಾಗಿ ಓಡಿಹೋದನು ||೨೯|| ಗೋವಿಂದಃ-ಕೃಷ್ಣನು, ತಚ್ಛಿರೋರತ್ನಂ-ಅವನತಲೆಯನ್ನೂ ರತ್ನವನ್ನೂ, ಜಿಹೀರ್ಷುಃ-ಅಪಹರಿಸಲಿಚ್ಛಿಸಿದವನಾಗಿ, ಸಃ-ಅವನು, ಯತ್ರಯತ್ರ-ಎಲ್ಲೆಲ್ಲಿ, ಧಾವತಿ-ಓಡುತಲಿರುವನೋ, ತತ್ರತತ್ರ-ಅಲ್ಲಲ್ಲಿ, ತಂ-ಅವನನ್ನು, ಅನ್ವಧಾವತ್-ಅನುಸರಿಸಿ ಓಡಿದನು. ಬಲಃ-ಬಲರಾಮನು, ಸ್ತ್ರಿಯಃ-ಹೆಂಗಳನ್ನು, ರಕ್ಷನ್-ಕಾಪಾಡುವವನಾಗಿ, ತಸ್ಥೌ-ಅಲ್ಲಿಯೇ ನಿಂತನು ||೩೦|| ಅಂಗ, ಅಯ್ಯಾ ರಾಯನೇ! ವಿಭುಃ-ವ್ಯಾಪಕನಾದ ಕೃಷ್ಣನು, ಅವಿದೂರ ಇವ-ಹತ್ತಿರಲೇ ಎಂಬಂತೆ, ಅಭ್ಯೇತ್ಯ-ಇದಿರಿಗೆ ಬಂದು, ತಸ್ಯ ದುರಾತ್ಮನಃ-ಆ ದುಷ್ಟನ. ಸಹಚೂಡಾಮಣಿಂ - ಚೂಡಾಮಣಿರತ್ನ ಸಹಿತವಾದ, ಶಿರಃ-ತಲೆಯನ್ನು, ಮುಷ್ಟಿನೈವ-ಹಿಡಿಯಿಂದಲೇ, (ಗುದ್ದಿನಿಂದಲೇ) ಜಹಾರ-ಅಪಹರಿಸಿದನು ||೩೧|| ಏವಂ-ಹೀಗೆ, ಶಂಖಚೂಡಂ-ಶಂಖಚೂಡನೆಂಬ ಗುಹ್ಯಕನನ್ನು, ನಿಹತ್ಯ-ಕೊಂದು, ಭಾಸ್ವರಂ- ಹೊಳೆಯುತಲಿರುವ, ಮಣಿಂ-ರತ್ನವನ್ನು, ಆದಾಯ-ತಂದು, ಯೋಷಿತಾಂಚ - ಸ್ತ್ರೀಯರೂ ಕೂಡ, ಪಶ್ಯಂತೀನಾಂ ಸತೀನಾಂ-ನೋಡುತ್ತಿರುವರಾಗುತ್ತಿರಲು, ಪ್ರೀತ್ಯಾ-ಪ್ರೀತಿಯಿಂದ, ಅಗ್ರಜಾಯ-ಅಣ್ಣನಾದ ರಾಮನಿಗೆ, ಅದಾತ್-ಕೊಟ್ಟನು. ||೩೨||

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಚತುಸ್ತ್ರಿಂಶೋಽಧ್ಯಾಯಃ

---

ಲ್ಲಿ ಧರಿಸಿಕೊಂಡು ವೇಗಯುಕ್ತರಾಗಿ ಬೇಗನೆ ಆ ಯಕ್ಷಾಧಮನಂ ಅಡ್ಡಮಾಡಿದರು ||೨೮|| ಆ ಯಕ್ಷನು ಕಾಲಮೃತ್ಯುವಿನಂತೆ ಬಂದ ಆ ರಾಮಕೃಷ್ಣರಂ ನೋಡಿ, ಭಯಂಪಡುವನಾಗಿ ಸ್ತ್ರೀಜನವಂ ಬಿಟ್ಟು ಪ್ರಾಣರಕ್ಷಣಾರ್ಥವಾಗಿ ಮೂಢನಾಗಿ ಓಡಿದನು ||೨೯|| ಸ್ತ್ರೀರಕ್ಷಣಾರ್ಥವಾಗಿ ಬಲರಾಮನು ಸ್ತ್ರೀಸಮೂಹದ ಬಳಿಯಲ್ಲಿ ನಿಂತನು. ಶ್ರೀಕೃಷ್ಣನು ಅವನು ಎಲ್ಲಿಗೆ ಹೋಗುತ್ತಾನೆಯೋ ಅಲ್ಲಲ್ಲಿಗೆ ಅಟ್ಟಿಕೊಂಡು ಅವನ ತಲೆಯಲ್ಲಿರುವ ಮಣಿಯಂ ಅಪೇಕ್ಷಿಸಿದವನಾಗಿ ಹೋದನು ||೩೦|| ಅವನ ಶಿರಸ್ಸಿನಲ್ಲಿ ರತ್ನವಿರುವುದು, ಆ ರತ್ನವಂ ತರುವ ನಿಮಿತ್ತವಾಗಿ, ಸಮೀಪದಲ್ಲಿ ಹೋಗಿ ರತ್ನಸಮೇತವಾದ ಅವನ ಶಿರಸ್ಸಂ ಮುಷ್ಟಿಪ್ರಹಾರದಿಂದ ಕೆಡಹಿದನು ||೩೧|| ಈ ರೀತಿಯಲ್ಲಿ ಶಂಖಚೂಡನಂ ಸಂಹರಿಸಿ ಪ್ರಕಾಶಕವಾದ ರತ್ನವಂ ತೆಗೆದುಕೊಂಡು ಬಂದು ಸ್ತ್ರೀಯರುಗಳು ನೋಡುವಾಗಲೇ ಆ ರತ್ನವಂ ಅಣ್ಣನಾದ ಬಲರಾಮನಿಗೆ ಕೊಟ್ಟನು || ||೩೨||

ಇಂತು ಶುಕಮುನಿಯು ಪರೀಕ್ಷಿದ್ರಾಯನಿಗೆ ನಿರೂಪಿಸಿದನೆಂದು ಸೂತಪೌರಾಣಿಕನು ನೈಮಿಶಾ
ರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಹೇಳಿದನೆಂಬಲ್ಲಿಗೆ-ಶ್ರೀಮನ್ಮಹೀಶೂರಪುರವ
ರಾಧೀಶ ಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜ ವಿರಚಿತಮಪ್ಪ, ಶ್ರೀ
ಭಾಗವತದ "ಶ್ರೀಕೃಷ್ಣರಾಜ ವಾಣೀವಿಲಾಸವು" ಎಂಬ ಕರ್ಣಾಟಕ
ಭಾಷಾವ್ಯಾಖ್ಯಾನದಲ್ಲಿ ದಶಮಸ್ಕಂಧದೊಳು ೩೪ನೆಯ
ಅಧ್ಯಾಯವು ಸಂಪೂರ್ಣವಾದುದು.

ದಿವಾ ಕಾಲೇ ಶ್ರೀಕೃಷ್ಣವಿರಹಪ್ರಯುಕ್ತಗೋಪೀವಿಲಾಪಃ

ಶ್ರೀಶುಕಃ॥ ಗೋಪ್ಯಃ ಕೃಷ್ಣೇ ವನಂ ಯಾತೇ ತಮನುದ್ರುತಚೇತಸಃ । ಕೃಷ್ಣಲೀಲಾಃ ಪ್ರಗಾಯಂತ್ಯೋ ನಿನ್ಯುರ್ದುಃಖೇನ ವಾಸರಾನ್ ॥೧॥ ಗೋಪ್ಯಃ॥ ವಾಮಬಾಹುಕೃತವಾಮಕಪೋಲೋ ವಲ್ಗಿತಭ್ರುರಧರಾರ್ಪಿತವೇಣುಂ ಕೋಮಲಾಂಗುಳಿಭಿರಾಶ್ರಿತಮಾರ್ಗಂ ಗೋಪ್ಯ ಈರಯತಿ ಯತ್ರ ಮುಕುಂದಃ॥೨॥ ವ್ಯೋಮಯಾನವನಿತಾಃ ಸಹ ಸಿದ್ಧೈರ್ವಿಸ್ಮಿತಾಸ್ತದುಪಧಾರ್ಯ ಸಲಜ್ಜಾಃ ಕಾಮಮಾರ್ಗಣಸಮರ್ಪಿತಚಿ

---

೩೫ನೆಯ ಅಧ್ಯಾಯದ ಪ್ರತಿಪದಟೀಕೆ.

[ವೇಣುಗೀತಗಳು]-(ಶುಕವಾಕ್ಯವು) ಕೃಷ್ಣೇ ಶ್ರೀಹರಿಯು, ವನಂ-ಬೃಂದಾರಣ್ಯವನ್ನು ಕುರಿತು, ಯಾತೇ ಸತಿ ಹೋದವನಾಗುತಲೂ, ತಮನು-ಆಕೃಷ್ಣನನ್ನು ಅನುಸರಿಸಿ, ದ್ರುತಚೇತಸಃ-ಓಡಿಹೋದ ಮನಸ್ಸುಳ್ಳವರಾದ, ಗೋಪ್ಯಃ-ಗೋಲ್ಲತಿಯರು, ಕೃಷ್ಣಲೀಲಾಃ-ಶ್ರೀಕೃಷ್ಣನ ವಿಹಾರಗಳನ್ನು, ಗಾಯಂತ್ಯಸ್ಸತ್ಯಃ-ಹಾಡುತಲಿರುವರಾಗಿ, ದುಃಖೇನ-ವಿರಹವೇದನೆಯಿಂದ, ವಾಸರಾನ್-ಹಗಲುಗಳನ್ನು, ನಿನ್ಯುಃ-ಕಳೆದರು ॥೧॥ [ಗೋಪೀವಾಕ್ಯವು। ೨-೨ಶ್ಲೋಕಗಳಿಗೊಂದೊಂದನ್ವಯವಾಗಿ ೨೪ಶ್ಲೋಕಗಳಿಂದ ೧೨ಹಾಡುಗಳು ಹೇಳಲ್ಪಟ್ಟಿವೆ] ಹೇಗೋಪ್ಯಃ-ಎಲೆಗೋಪಿಯರಿರಾ! ವಾಮಬಾಹುಕೃತ ವಾಮಕಪೋಲಃ-ವಾಮಬಾಹು-ಎಡದತೋಳಿನ ಮೇಲೆ, ಕೃತ-ಇರಿಸಲ್ಪಟ್ಟ, ವಾಮಕಪೋಲಃ-ಎಡದಕೆನ್ನೆಯುಳ್ಳವನೂ, ವಲ್ಗಿತಭ್ರುಃ-ವಲ್ಗಿತ-ಅಥವಾ ಕುಣಿಸಲ್ಪಟ್ಟ, ಭ್ರುಃ-ಹುಬ್ಬುಗಳುಳ್ಳವನೂ, ಆದ, ಮುಕುಂದಃ-ಮೋಕ್ಷದಾಯಕನಾದ ಕೃಷ್ಣನು, ಯತ್ರ-ಯಾವಸ್ಥಲವಲ್ಲಿ, ಕೋಮಲಾಂಗುಳಿಭಿಃ-ಮೃದುವಾದ ಬೆರಳುಗಳಿಂದ, ಆಶ್ರಿತಮಾರ್ಗಂ-ಅವಲಂಬಿಸಲ್ಪಟ್ಟ ಸಪ್ತಸ್ವರಗಳ ತೂತುಗಳುಳ್ಳ, ಅಧರಾರ್ಪಿತವೇಣುಂ-ತುಟಿಯಲ್ಲಿಡಲ್ಪಟ್ಟ ಕೊಳಲನ್ನು, ಈರಯತಿ-ನುಡಿಸುತಲಿರುವನೋ ॥೨॥ ತತ್ರ-ಅಲ್ಲಿ, ವ್ಯೋಮಯಾನವನಿತಾಃ-ವಿಮಾನಗಳಲ್ಲಿರುವ ಸ್ತ್ರೀಯರು, ಸಿದ್ಧೈಸ್ಸಹ-ಸಿದ್ಧರೆಂಬ ದೇವತೆಗಳಿಂ ಕೂಡಿ, ತತ್-ಆವೇಣುಗಾನವನ್ನು, ಉಪಧಾರ್ಯ-ಕೇಳಿ, ವಿಸ್ಮಿತಾಃ-ಆಶ್ಚರ್ಯವುಂಟಾದವರಾಗಿಯೂ, ಸಲಜ್ಜಾಃ-ನಾಚಿಕೆಯಿಂದ ಸಹಿತರಾಗಿಯೂ, ಕಾಮಮಾರ್ಗಣಸಮರ್ಪಿತಚಿತ್ತಾಃ-ಮನ್ಮಥಬಾಣಗಳಿಗೆ ಕೊಡಲ್ಪಟ್ಟ ಮನಸ್ಸುಳ್ಳವರಾಗಿಯೂ, ಅಪಸ್ಮೃತನೀವ್ಯಃ-ಮರೆತುಹೋಗಲ್ಪ

---

೩೫ನೆಯ ಅಧ್ಯಾಯವು.

ಶ್ರೀಧರೀಯಶ್ಲೋಕಃ॥ ಪಂಚತ್ರಿಂಶೇ ವನಂ ಯಾತೇ ಕೃಷ್ಣೇ ಗೋಕುಲಯೋಷಿತಃ । ಯುಗ್ಮಶ್ಲೋಕಾನುಗೀತೇನ ನಿನ್ಯುರ್ದುಃಖೇನ ವಾಸರಾನ್ ॥ ॥ ಮೂವತ್ತೈದನೆಯ ಅಧ್ಯಾಯದಲ್ಲಿ ಹಗಲುಗಳಲ್ಲಿ ಶ್ರೀಕೃಷ್ಣನು ವನಕ್ಕೆ ಹೋಗುತ್ತಿರಲಾಗಿ ವಿರಹಖಿನ್ನರಾದ ಗೋಪಸ್ತ್ರೀಯರುಗಳು ಯುಗ್ಮಶ್ಲೋಕಗೀತಂಗಳಿಂದ ಶ್ರೀಕೃಷ್ಣದೇವನಂ ಗಾನಂಗೆಯ್ಯುತ್ತ ಯಾವಾಗ ಸಾಯಂಕಾಲವಾದೀತೋ ಯಾವಾಗ ಶ್ರೀಕೃಷ್ಣದೇವನು ಬರುವನೋ ಎಂದು ಚಿಂತಿಸುತ ಹಗಲುಗಳಂ ಕಳೆದರು. ಎಂಬ ಅರ್ಥವಂ ಶ್ರೀಶುಕಾಚಾರ್ಯನು ಪರೀಕ್ಷಿದ್ರಾಯನು ಕುರಿತು ನಿರೂಪಿಸುವನೆಂತೆಂದಡೆ,

ಎಲೈ ಅರಸೇ! ಪ್ರತಿದಿವಸದಲ್ಲಿಯೂ ಹಗಲು ಶ್ರೀಕೃಷ್ಣನು ವನಮಂ ಕುರಿತು ಹೋದಮೇಲೆ, ವಿರಹಖಿನ್ನರಾಗಿ ಗೋಪಸ್ತ್ರೀಯರುಗಳು ಆ ಕೃಷ್ಣನ ಲೀಲೆಗಳಂ ಗಾನಂಗೆಯ್ಯುತ್ತ ದುಃಖದಿಂದ ಹಗಲುಗಳು ಕಳೆಯುವರಾದರು ॥೧॥ (ಆಗೋಪಸ್ತ್ರೀಯರುಗಳು ಕೃಷ್ಣಚರಿತ್ರವಂ ಬಣ್ಣಿಸುವರೆಂತೆನೆ) ಎಲೈ ಸಖಿಯರುಗಳೇ! ಮುಕುಂದನು ವಾಮಭುಜದಲ್ಲಿ ಇರಿಸಲ್ಪಟ್ಟ ವಾಮಕಪೋಲವುಳ್ಳ ಚಲಿಸಲ್ಪಟ್ಟ ಹುಬ್ಬುಗಳುಳ್ಳವನಾಗಿ, ಮೃದುಗಳಾದ ಬೆರಳುಗಳಿಂದ ಮುಚ್ಚಲ್ಪಟ್ಟ ಸಪ್ತಸ್ವರರಂಧ್ರಂಗಳುಳ್ಳ ಅಧರೋಷ್ಠದಲ್ಲಿ ಇರಿಸಲ್ಪಟ್ಟ ಕೊಳಲಂ ಯಾವಾಗ ನುಡಿಸುವನು ॥೨॥ ಆಗ ತಮ್ಮತಮ್ಮ ಪತಿಗಳಿಂ ಸಮೇತರಾದ ಸಿದ್ಧಸ್ತ್ರೀಯರುಗಳು ಆ ಗಾನಮಂ ಕೇಳಿ ಆಶ್ಚರ್ಯಪಡುವವರಾಗಿ ಲಜ್ಜಾಯುಕ್ತರಾಗಿ ಕಾಮಬಾಣಾಧೀನಚಿತ್ತಮುಳ್ಳವರಾಗಿ ವಿದ್ದ

ತ್ತಾ[illegible]ಯಯುರಪಸ್ಮೃತನೀವ್ಯಃ ||೩|| ಹಂತಚಿತ್ರಮಬಲಾಃಶೃಣುತೇದಂಹಾರಹಾಸಉರ
ಸಿಸ್ಥಿರವಿದ್ಯುತ್ | ನಂದಸೂನುರಯಮಾರ್ತಜನಾನಾಂನರ್ಮದೋಯರ್ಹಿಕೂಜಿತವೇಣುಃ ||೪||
ಬೃಂದಶೋವ್ರಜವೃಷಾಮೃಗಗಾವೋವೇಣುವಾದ್ಯಹೃತಚೇತಸಆರಾತ್ | ದಂತದಷ್ಟಕಬಳಾಧೃತಕ
ರ್ಣಾನಿದ್ರಿತಾಲಿಖಿತಚಿತ್ರಮಿವಾಸನ್ ||೫|| ಬರ್ಹಿಣಸ್ತಬಕಧಾತುಪಲಾಶೈರ್ಬದ್ಧಮಲ್ಲಪರಿಬರ್ಹ
ವಿಡಂಬಃ | ಕರ್ಹಿಚಿತ್ಸಬಲಆಲಿಸಗೋಪೈರ್ಗಾಸ್ಸಮಾಹ್ವಯತಿಯತ್ರಮುಕುಂದಃ ||೬|| ತರ್ಹಿ
ಭಗ್ನಗತಯಸ್ಸರಿತೋವೈತತ್ಪದಾಂಬುಜರಜೋನಿಲನೀತಂ | ಸ್ಪೃಹಯತೀರ್ವಯಮಿವಾಬಹುಪು
ಣ್ಯಾಃಪ್ರೇಮವೇಪಿತಭುಜಾಃಸ್ತಿಮಿತಾಪಃ ||೭|| ಅನುಚರೈಸ್ಸಮನುವರ್ಣಿತವೀರ್ಯಆದಿಪೂರುಷಇವಾ

---

ಟ್ಟ ಉಡಿಗಂಟುಳ್ಳವರಾಗಿಯೂ, ಕಶ್ಮಲಂ-ಮೋಹವನ್ನು, ಯಯುಃ-ಹೊಂದಿದರು ||೩|| ಹೇಅಬಲಾಃ-ಎಲೆಹೆಂಗಳಿರಾ! ಚಿತ್ರಂ-ಆಶ್ಚರ್ಯವಾದ, ಇದಂ-ಇದರನ್ನು, ಶೃಣುತ-ಕೇಳಿರಿ ಹಂತ-ಆಹಾ! ಯರ್ಹಿ ಯಾವಾಗ, ಹಾರಹಾಸಃ-ಹಾರವಾಗಿ ತೋರುವ ನಗೆಯುಳ್ಳವನೂ, ಉರಸ್ಥಿತವಿದ್ಯುತ್-ಎದೆಯಲ್ಲಿರುವ ಮಿಂಚುಳ್ಳವನೂ, ಆರ್ತಜನಾನಾಂ-ಪೀಡಿತರಾದಪ್ರಾಣಿಗಳಿಗೆ, ನರ್ಮದಃ-ಸುಖವನ್ನು ಕೊಡುವವನೂಆದ, ಅಯಂನಂದಸೂನುಃ-ಈಕೃಷ್ಣನು, ಕೂಜಿತವೇಣುಃ-ನುಡಿಸಲ್ಪಟ್ಟ ಕೊಳಲುಳ್ಳವನಾದನೋ ||೪|| ತದಾ-ಆಗ, ಬೃಂದಶಃ-ಗುಂಪುಗುಂಪಾಗಿ, ವ್ರಜವೃಷಾಃ-ಗೋಕುಲದ ಎತ್ತುಗಳು, ಮೃಗಗಾವಃ-ಮೃಗಗಳೂ ಆಕಳುಗಳೂ, ವೇಣುವಾದ್ಯಹೃತಚೇತಸಃ-ಕೊಳಲಧ್ವನಿಯಿಂದ ಅಪಹರಿಸಲ್ಪಟ್ಟ ಬುದ್ಧಿಯುಳ್ಳವಾಗಿ, ಆರಾತ್-ಬೇಗನೆ, ದಂತದಷ್ಟಕಬಳಾಃ-ದಂತ-ಹಲ್ಲುಗಳಿಂದ, ದಷ್ಟ-ಕಚ್ಚಿಕೊಳ್ಳಲ್ಪಟ್ಟ, ಕಬಳಾಃ ಹುಲ್ಲಮುದ್ದೆಗಳುಳ್ಳವೂ, ಧೃತಕರ್ಣಾಃ-ಧೃತ-ನಿಗುಚಿಸಿ ಧರಿಸಲ್ಪಟ್ಟ, ಕರ್ಣಾಃ-ಕಿವಿಗಳುಳ್ಳವೂ, ನಿದ್ರಿತಾಃ-ನಿದ್ರೆಹೋಗುವಂತಿರುವವೂ ಆಗಿ, ಲಿಖಿತಚಿತ್ರಮಿವ-ಬರೆಯಲ್ಪಟ್ಟಚಿತ್ರದಂತೆ, ಆಸನ್-ಆದವು ||೫|| ಆಳಿ-ಸಖಿಯೇ! ಕರ್ಹಿಚಿತ್-ಒಂದಾನೊಂದಾದ, ಬರ್ಹಿಣಃ-ನವಿಲಿನ, ಸ್ತಬಕ-ಗರಿಗಳ ಗೊಂಚಲುಗಳಿಂದಲೂ, ಧಾತು-ಕಾವಿಮೊದಲಾದ ಬಣ್ಣಗಳಿಂದಲೂ, ಪಲಾಶೈಃ-ಚಿಗುರುಗಳಿಂದಲೂ, ಬದ್ಧ-ಕಟ್ಟಲ್ಪಟ್ಟ, ಮಲ್ಲಪರಿಬರ್ಹ-ಜಟ್ಟಿಗರವೇಷದ, ವಿಡಂಬಃ-ಅನುಕರಣವುಳ್ಳಂಥಾ, ಸಬಲಃ-ಬಲರಾಮನಿಂದ,ಸಹಿತನಾದಂಥಾ, ಸಮುಕುಂದಃ-ಆಕೃಷ್ಣನು, ಗೋಪೈಸ್ಸಹ-ಗೊಲ್ಲರೊಂದಿಗೆ, ಯತ್ರ-ಯಾವಕಾಲದಲ್ಲಿ, ಗಾಃ-ಆಕಳನ್ನು, ಸಮಾಹ್ವಯತಿ-ಕೂಗಿಕರೆಯುತಲಿರುವನೋ ||೬|| ತರ್ಹಿ-ಆಗ, ಸರಿತೋವೈ-ಹೊಳೆಗಳಾದರೋ, ಭಗ್ನಗತಯಃ-ಭಂಗಗೊಂಡ ಗಮನವುಳ್ಳವಾಗಿ, (ಹರಿಯದೆ) ಸ್ತಿಮಿತಾಪಃ-ನಿಂತನೀರುಳ್ಳವಾಗಿ, ಅನಿಲನೀತಂ-ಗಾಳಿಯಿಂದ ತರಲ್ಪಟ್ಟ, ತತ್ಪದಾಂಬುಜರಜಃ-ತತ್-ಆಕೃಷ್ಣನ, ಪದಾಂಬುಜ-ಅಡಿದಾವರೆಯ, ರಜಃ-ಧೂಳಿಪುಡಿಯನ್ನು, ಸ್ಪೃಹಯತೀಃ-ಬಯಸುತಲಿರುವ, ಪ್ರೇಮವೇಪಿತಭುಜಾಃ-ಸ್ನೇಹದಿಂದ ಕಂಪಿಸಲ್ಪಟ್ಟ ತೋಳುಳ್ಳವರೂ, ಆದ, ವಯಮಿವ-ನಮ್ಮಂತೆ, ಅಬಹುಪುಣ್ಯಾಃ-ಅಲ್ಪಭಾಗ್ಯಗಳಾಗಿರುವವು ||೭|| ಯದಾ-ಯಾವಾಗ, ಹಿ-

---

ಮೂರ್ಛೆಯನ್ನೈದಿದರು ||೩|| ಇಂತಾಕೃಷ್ಣನ ವಿರಹವಂ ನಾವುಹೇಗೆ ಸಹಿಸುವೆವು, ಎಲೈ ಸಖಿಯರುಗಳಿರಾ! ಈ ಆಶ್ಚರ್ಯವಂ ಕೇಳಿರಿ, ಮೌಕ್ತಿಕಹಾರದಂತೆ ಶುಭ್ರವಾದ ಮುಗುಳುನಗೆಯುಳ್ಳವನಾಗಿ, ವಕ್ಷಸ್ಥಳದಲ್ಲಿ ಆವಾಸಿ[illegible]ದ ಲಕ್ಷ್ಮೀದೇವಿಯುಳ್ಳವನಾಗಿ, ದೀನಜನರ ಕಷ್ಟಪರಿಹಾರಕನಾದ ನಂದಕುಮಾರನಾದ ಶ್ರೀಕೃಷ್ಣನ[illegible]ವಾಗ ಕೊಳಲಂ ನುಡಿಸುವನೋ ||೪|| ಆಗವೃಷಭಂಗಳು ಗೋವುಗಳು ಮೃಗಂಗಳು ಪರವಶಚಿತ್ತ[illegible]ಗಳಾ[illegible]ಂಪುಗುಂಪಾಗಿರುವುದಾಗಿ, ದಂತಂಗಳಿಂದ ಕಚ್ಚಲ್ಪಟ್ಟ ತೃಣಕಬಳಂಗಳುಳ್ಳವವಾಗಿ, ಸ್ತಬ್ಧವಾದ ಕ[illegible]ಗಳುಳ್ಳವಾಗಿ, ನಿದ್ರೆಯಂಗೆಯ್ವ ರೀತಿಯಲ್ಲಿ ಚಿತ್ರದಲ್ಲಿ ಬರೆಯಲ್ಪಟ್ಟಂತೆ ನಿಶ್ಚಲಂಗಳಾದವು ||೫|| ಎ[illegible]ಸಖಿಯರೇ! ನವಿಲುಗರಿಗಳಿಂದಲೂ ಗೈರಿಕಾದಿ ಧಾತುಗಳಿಂದಲೂ ಚಿಗುರುಗಳಿಂದಲೂ ಜಟ್ಟಿಗರ ಅಲಂಕಾರವಂ ಮಾಡಿಕೊಂಡು ಬಲರಾಮಸಮೇತನಾಗಿ ಗೋಪಾಲಕರೊಡಗೂಡಿ ಶ್ರೀಕೃಷ್ಣನುಯಾವಾಗ ವೇಣುಗಾನದಿಂ ಗೋವುಗಳ ಹೆಸರನಿಟ್ಟು ಕರೆಯುವನೋ ||೬|| ಆಗನದಿಗಳು ಭಗ್ನವಾದ ಗಮನವುಳ್ಳವಾಗಿ ವಾಯುಗಳಿಂದ ತರಲ್ಪಟ್ಟ ಆಕೃಷ್ಣಪಾದ ರಜಸ್ಸಂ ಅಪೇಕ್ಷಿಸುವುವಾಗಿ ನಮ್ಮಂತೆ ಪುಣ್ಯಹೀನಂಗಳಾದುದರಿಂದ ಪ್ರೇಮದಿಂ ಕಂಪಿತಂಗಳಾದ ಭುಜಗಳುಳ್ಳವಾಗಿ ಸ್ತಬ್ಧವಾದ ಜಲವುಳ್ಳವಾಗಿವೆ ||೭|| ಅನುಚರರಾ

ಚಲಭೂತಿಃ । ವನಚರೋ ಗಿರಿತಟೇಷು ಚರಂತೀರ್ವೇಣುನಾಹ್ವಯತಿ ಗಾಸ್ಸ ಯದಾ ಹಿ ॥೮॥ ವನಲತಾ
ಸ್ತರವ ಆತ್ಮನಿ ವಿಷ್ಣುಂ ವ್ಯಂಜಯಂತ್ಯ ಇವ ಪುಷ್ಪಫಲಾಢ್ಯಾಃ । ಪ್ರಣತಭಾರವಿಟಪಾ ಮಧುಧಾರಾಃ
ಪ್ರೇಮಹೃಷ್ಟತನವೋ ವವೃಷುಃ ಸ್ಮ ॥೯॥ ದರ್ಶನೀಯತಿಲಕೋ ವನಮಾಲಾದಿವ್ಯಗಂಧತುಲಸೀಮಧು
ಮತ್ತೈಃ । ಅಲಿಕುಲೈರಲಘು ಗೀತಮಭೀಷ್ಟಮಾದ್ರಿಯನ್ ಯರ್ಹಿ ಸಂಧಿತವೇಣುಃ ॥೧೦॥ ಸರ
ಸಿ ಸಾರಸಹಂಸವಿಹಂಗಾಶ್ಚಾರುಗೀತಹೃತಚೇತಸ ಏತ್ಯ । ಹರಿಮುಪಾಸತ ತೇ ಯತಚಿತ್ತಾ ಹಂತ
ಮೀಲಿತದೃಶೋ ಧೃತಮೌನಾಃ ॥೧೧॥ ಸಹಬಲಸ್ಸ್ರಗವತಂಸವಿಲಾಸಸ್ಸಾನುಷು ಕ್ಷಿತಿಭೃತೋ ವ್ರ

---

ಯಾವಕಾರಣದಿಂದ, ಅನುಚರೈಃ-ಸಂಗಡಬರುವ ಗೋಪರಿಂದ, ಸಮನುವರ್ಣಿತವೀರ್ಯಃ-ಬಣ್ಣಿಸಲ್ಪಟ್ಟ ಸಾಮರ್ಥ್ಯವುಳ್ಳವನೂ, ಆದಿಪೂರುಷ ಇವ-ಕಾರಣಪುರುಷನಾದ ನಾರಾಯಣನಂತೆ, ಅಚಲಭೂತಿಃ-ಸ್ಥಿರವಾದ ಐಶ್ವರ್ಯವುಳ್ಳವನೂ, ವನಚರಃ-ಬೃಂದಾರಣ್ಯದಲ್ಲಿ ತಿರುಗುವವನೂ ಆದ, ಕೃಷ್ಣನು, ಗಿರಿತಟೇಷು-ಗೋವರ್ಧನಗಿರಿಯ ತಪ್ಪಲುಗಳಲ್ಲಿ, ಚರಂತೀಃ-ಹುಲ್ಲಂ ಮೇಯುತಲಿರುವ, ಗಾಃ-ಗೋವುಗಳನ್ನು, ವೇಣುನಾ-ಕೊಳಲಿನಿಂದ, ಸಮಾಹ್ವಯತಿ-ಕರೆಯುತಲಿರುವನೋ ॥೮॥ ತದಾ-ಆಗ, ಹಿ-ಆ ಕಾರಣದಿಂದ, ವನಲತಾಃ-ಅರಣ್ಯದ ಬಳ್ಳಿಗಳೂ, ತರವಃ-ಗಿಡಗಳೂ ಕೂಡ, ಆತ್ಮನಿ-ತಮ್ಮಲ್ಲಿ, ವಿಷ್ಣುಂ-ವ್ಯಾಪಕನಾಗಿರುವ ಕೃಷ್ಣನನ್ನು, ವ್ಯಂಜಯಂತ್ಯ ಇವ-ಸೂಚಿಸುವವುಗಳ ಹಾಗೆ, ಪುಷ್ಪಫಲಾಢ್ಯಾಃ-ಹೂವುಗಳಿಂದಲೂ ಹಣ್ಣುಗಳಿಂದಲೂ ಸಂಪನ್ನವಾಗಿ, ಪ್ರಣತಭಾರವಿಟಪಾಃ-ಪ್ರಣತಭರ-ಭಾರದಿಂದ ಬಗ್ಗಿದ, ವಿಟಪಾಃ-ಶಾಖೆಗಳುಳ್ಳವಾಗಿ, ಪ್ರೇಮಹೃಷ್ಟತನವಃ-ಸ್ನೇಹದಿಂದ ಸಂತೋಷಿಸುವ ಮೈಯುಳ್ಳವಾಗಿ, ಮಧುಧಾರಾಃ-ಮಕರಂದ ಪರಂಪರೆಗಳನ್ನು, ವವೃಷುಸ್ಸ್ಮ-ಸುರಿಸಿದವಲ್ಲವೆ ॥೯॥ ಯರ್ಹಿ-ಯಾವಾಗ, ದರ್ಶನೀಯತಿಲಕಃ-ನೋಡತಕ್ಕ ಹಣೆಬಟ್ಟುಳ್ಳವನೂ, ವನಮಾಲಾದಿವ್ಯಗಂಧತುಲಸೀಮಧುಮತ್ತೈಃ-ವನಮಾಲಾ-ತೋರವಾದ ಹಾರದ, ದಿವ್ಯಗಂಧ-ಹೆಚ್ಚು ಪರಿಮಳವುಳ್ಳ, ತುಲಸೀ-ತುಳಸಿಯ ಕುಡಿಗಳ, ಮಧು-ಜೇನಿನಿಂದ, ಮತ್ತೈಃ-ಮದಿಸಿದವಾದ, ಅಳಿಕುಲೈಃ-ತುಂಬಿಪಿಂಡುಗಳಿಂದ, ಅಲಘು-ಅಧಿಕವಾಗಿಯೂ, ಅಭೀಷ್ಟಂ-ಪ್ರಿಯವಾಗಿಯೂ, ಗೀತಂ-ಹಾಡಲ್ಪಟ್ಟದ್ದನ್ನು, ಆದ್ರಿಯನ್-ಆದರಿಸುತಲಿರುವನೂ ಆದ ಕೃಷ್ಣನು, ಸಂಧಿತವೇಣುಃ-ತುಟಿಗೆ ಜೋಡಿಸಲ್ಪಟ್ಟ ಬಿದಿರುಳ್ಳವನಾದನೋ, (ಕೊಳಲಂ ನುಡಿಸಿದನೋ) ॥೧೦॥ ತದಾ-ಆವಾಗ, ಸರಸಿ-ಕೊಳದಲ್ಲಿರುವ, ಸಾರಸಹಂಸವಿಹಂಗಾಃ-ಸಾರಸ-ಜಲಪಕ್ಷಿಗಳು, ಹಂಸ-ಅಂಚೆಗಳು, ವಿಹಂಗಾಃ-ಬಗೆಬಗೆಯ ಹಕ್ಕಿಗಳೂ, ಚಾರುಗೀತಹೃತಚೇತಸಃ-ಮನೋಹರವಾದ ಗಾನದಿಂದ, ಅಪಹರಿಸಲ್ಪಟ್ಟ ಮನಸ್ಸುಳ್ಳವಾಗಿ, ತೇ-ಅವು, ಯತಚಿತ್ತಾಃ-ನಿಗ್ರಹಿಸಲ್ಪಟ್ಟ ಬುದ್ಧಿಯುಳ್ಳವೂ, ಮೀಲಿತದೃಶಃ-ಮುಚ್ಚಿದ ಕಂಗಳುಳ್ಳವೂ, ಧೃತಮೌನಾಃ-ಧರಿಸಲ್ಪಟ್ಟ ಮೌನವ್ರತವುಳ್ಳವೂ, ಆಗಿ, ಹರಿಂ-ಕೃಷ್ಣನನ್ನು, ಉಪಾಸತ-ಧ್ಯಾನಿಸುತಲಿದ್ದವು, ಹಂತ-ಆಶ್ಚರ್ಯವು ॥೧೧॥ ಹೇ ವ್ರಜದೇವ್ಯಃ-ಎಲೆ ಗೋಕುಲದ ಹೆಂಗಳಿರಾ! ಕೃಷ್ಣನು, ಯರ್ಹಿ-ಯಾವಾಗ, ಸಹಬಲಃ-ಬಲರಾಮನಿಂದ ಸಹಿ

---

ದ ಗೋಪಾಲಕರಿಂದ ವರ್ಣಿಸಲ್ಪಟ್ಟ ಪರಾಕ್ರಮವುಳ್ಳವನಾಗಿ ಸಾಕ್ಷಾನ್ನಾರಾಯಣನಂತೆ ಸ್ಥಿರವಿಭೂತಿಯುಳ್ಳ ಶ್ರೀಕೃಷ್ಣನು ವನದಲ್ಲಿ ಸಂಚರಿಸುವಸಾಗ ವೇಣುಗಾನದಿಂದ ಯಾವಾದ ಗೋವುಗಳನ್ನು ಆಹ್ವಾನಂಗೆಯ್ವನೋ ॥೮॥ ಆಗ ವನಲತೆಗಳು ವೃಕ್ಷಂಗಳು ಸಹ ತಮ್ಮಲ್ಲಿ ವಿಷ್ಣುವಂ ವ್ಯಕ್ತಗೊಳಿಸುವಂತೆ ಫಲಪುಷ್ಪಯುಕ್ತಂಗಳಾಗಿ, ಪುಷ್ಪಫಲ ಭಾರಂಗಳಿಂದ ಬಗ್ಗಿದ ಕೊಂಬುಗಳುಳ್ಳವಾಗಿ ಪ್ರೇಮದಿಂ ರೋಮಾಂಚಮಾದ ಶರೀರಮುಳ್ಳವಾಗಿ ಮಕರಂದದ ಧಾರೆಗಳಂ ಸ್ರವಿಸಿದವು ॥೯॥ ನೋಡುವುದಕ್ಕೆ ರಮಣೀಯಮಾದ ತಿಲಕಮುಳ್ಳವನಾಗಿ, ವನಮಾಲೆಯು ದಿವ್ಯಗಂಧಗಳು ತುಲಸೀಮಕರಂದಗಳು ಇವುಗಳಿಂ ವೆರಸಿ, ಮದಿಸಿದ ಭ್ರಮರಸಮೂಹಗಳಿಂದ ಅನುಸರಿಸಲ್ಪಟ್ಟ ದಿವ್ಯಮಾದ ವೇಣುನಾದವಂ ಮಾಡುತ್ತ ಶ್ರೀಕೃಷ್ಣನು ಯಾವಾಗ ವಿಹರಿಸುತ್ತಾನೆಯೋ ॥೧೦॥ ಆಗ ಸರೋವರದಲ್ಲಿ ಸಾರಸಪಕ್ಷಿಗಳು ಹಂಸಂಗಳು ಮುಂತಾದ ಪಕ್ಷಿಗಳು ರಮಣೀಯಮಾದ ಗಾನದಿಂ ಪರವಶಚಿತ್ತಂಗಳಾಗಿ ಬಂದು, ಮೌನಮಂ ಧರಿಸಿ ಕಂಣಂ ಮುಚ್ಚಿಕೊಂಡು ಶ್ರೀಹರಿಯಂ ಧ್ಯಾನಂಗೆಯ್ಯುತ್ತಲಿವೆ ॥೧೧॥ ಎಲೈ ವ್ರಜಸ್ತ್ರೀಯರುಗಳಿರಾ! ಹಾರಂಗಳಿಂದಲೂ ಶಿರೋಭೂಷಣಂಗಳಿಂದಲೂ ಅಲಂಕೃತನಾದ ಬಲರಾಮನಿಂ ಸಮೇತನಾಗಿ ಶ್ರೀಕೃಷ್ಣನು ಪರ್ವತದ ತಪ್ಪಲುಗಳಲ್ಲಿ ವೇಣುವಂ ಯಾವಾಗ ಲೋಕವಂ

ಜದೇವ್ಯಃ | ಹರ್ಷಯನ್ಯರ್ಹಿವೇಣುರವೇಣಜಾತಹರ್ಷಉಪರಂಭತಿವಿಶ್ವಂ ||೧೨|| ಮಹದತಿಕ್ರ
ಮವಿಶಂಕಿತಚೇತಾಮಂದಮಂದಮನುಗರ್ಜತಿಮೇಘಃ | ಸುಹೃದಮಭ್ಯವರ್ಷತ್ಸುಮನೋಭಿಶ್ಛಾ
ಯಯಾಚವಿದಧತ್ಪ್ರತಪತ್ರಂ ||೧೩|| ವಿವಿಧಗೋಪಚರಣೇಷುವಿದಗ್ಧೋವೇಣುವಾದ್ಯಉರುಧಾನಿಜ
ಶಿಕ್ಷಾಃ | ತವಸುತಸ್ಸತಿಯದಾಧರಬಿಂಬೇದತ್ತವೇಣುರನಯತ್ಸ್ವರಜಾತೀಃ ||೧೪|| ಸವನಶಸ್ತದು
ಪಧಾರ್ಯಸುರೇಶಾಶ್ಶಕ್ರಶರ್ವಪರಮೇಷ್ಠಿಪುರೋಗಾಃ | ಕವಯಆನಮಿತಕಂಧರಚಿತ್ತಾಃಕಶ್ಮಲಂಯಯು
ರನಿಶ್ಚಿತತತ್ತ್ವಾಃ ||೧೫|| ನಿಜಪದಾಬ್ಜದಳೈರ್ಧ್ವಜವಜ್ರನೀರಜಾಂಕುಶವಿಚಿತ್ರಲಲಾ
ಮೈಃ | ವ್ರಜಭುವಶ್ಶಮಯನ್ಖುರತೋದಂವರ್ಷ್ಮಧುರ್ಯಗತಿರೀರಿತವೇಣುಃ ||೧೬|| ವ್ರಜತಿತೇ

---

ತನಾಗಿ, ಜಾತಹರ್ಷಃ-ಉಂಟಾದಸಂತೋಷ ವುಳ್ಳವನಾಗಿ, ಸ್ರಗವತಂಸವಿಲಾಸಃ-ಸ್ರಕ್-ಹುವ್ವಿನಹಾರಗಳಿಂದಲೂ, ಅವತಂಸ-ಗೊಂಡೆಮುಕುಟಗಳಿಂದಲೂ, ವಿಲಾಸಃ-ವಿನೋದವುಳ್ಳವರಾಗಿ, ಕ್ಷಿತಿಭೃತಃ-ಗೋವರ್ಧನಪರ್ವತದ, ಸಾನುಷು-ತಪ್ಪಲುಗಳಲ್ಲಿ, ವಿಶ್ವಂ-ಪ್ರಪಂಚವನ್ನು, ವೇಣುರವೇಣ-ಕೊಳಲಸ್ವರದಿಂದ, ಹರ್ಷಯನ್-ಸಂತಸಗೊಳಿಸುವನಾಗಿ, ಉಪರಂಭತಿ-ನಾದಮಯವಾಗಿ ಮಾಡುತ್ತಿರುವನೋ ॥೧೨॥ತದಾ-ಆವಾಗ, ಮಹದತಿಕ್ರಮವಿಶಂಕಿತಚೇತಾಃ ಮಹತ್-ಮಹಾಪುರುಷನಾದಕೃಷ್ಣನನ್ನು, ಅತಿಕ್ರಮ-ಮೀರಿ ತಾನುಶಬ್ದಿಸುವುದರಲ್ಲಿ, ವಿಶಂಕಿತ-ಹೆದರಿಕೆಯುಂಟಾದ, ಚೇತಾಃ-ಬುದ್ಧಿಯುಳ್ಳ, ಮೇಘಃ-ಮೋಡವು, ಮಂದಮಂದಂ-ಮೆಲ್ಲಮೆಲ್ಲಗೆ, ಅನುಗರ್ಜತಿ-ಅನುಸರಿಸಿ ಗುಡುಗುತ್ತಿರುವುದು. ಸುಮನೋಭಿಃ-ಹೂವುಗಳಿಂದ, ಸುಹೃದಂ-ಮಿತ್ರನಾದ ಕೃಷ್ಣನಲ್ಲಿ, ಅಭ್ಯವರ್ಷತ್-ಮಳೆಸುರಿಸಿತು. ಛಾಯಯಾಚ-ನೆಳಲಿನಿಂದಲೂ, ಪ್ರತಪತ್ರಂ-ಕೊಡೆಯನ್ನು, ವಿದಧತ್-ಹಿಡಿಯಿತು ॥೧೩॥ಹೇಸತಿ-ಎಲೌಪತಿವ್ರತೆಯಾದ ಯಶೋದೆಯೇ! ವಿವಿಧಗೋಪಚರಣೇಷು-ವಿವಿಧ-ಹಲವುಬಗೆಯಾದ, ಗೋಪಚರಣೇಷು-ಗೋಪಾಲಕರ ನಡತೆಗಳಲ್ಲಿ, ವಿದಗ್ಧಃ-ಜಾಣನಾದ, ತವಸುತಃ-ನಿನ್ನ ಮಗನು, ಯದಾ-ಯಾವಾಗ ಅಧರಬಿಂಬೇ-ತೊಂಡೆಹಣ್ಣಿನಂತಿರುವ ತುಟಿಯಲ್ಲಿ, ದತ್ತವೇಣುಃ-ಕೊಡಲ್ಪಟ್ಟ ಕೊಳಲುಳ್ಳವನಾಗಿ, ವೇಣುವಾದ್ಯೇ-ಕೊಳಲವಾದ್ಯದಲ್ಲಿ, ನಿಜಶಿಕ್ಷಾಃ-ತನ್ನ ಸ್ವಾತಂತ್ರ್ಯಾಭ್ಯಾಸವುಳ್ಳ, ಸ್ವರಜಾತೀಃ-ಷಡ್ಜಾದಿ ಸ್ವರಗಳ ಬಗೆಗಳನ್ನು, ಉರುಧಾ-ಹೆಚ್ಚು ಬಗೆಯಿಂದ, ಅನಯತ್-ನುಡಿಸಿದನೋ ॥೧೪॥ತದಾ-ಆವಾಗ, ಸವನಶಃ-ಬಾರಿಬಾರಿಗೂ, ತತ್-ಆ ವೇಣುಗಾನವನ್ನು, ಉಪಧಾರ್ಯ-ಕೇಳಿ, ಶಕ್ರಶರ್ವಪರಮೇಷ್ಠಿಪುರೋಗಾಃ-ಶಕ್ರ-ಇಂದ್ರನು, ಶರ್ವ-ರುದ್ರನು, ಪರಮೇಷ್ಠಿ-ಬ್ರಹ್ಮನು, ಪುರೋಗಾಃ-ಮುಂದಾಳುಗಳಾಗಿವುಳ್ಳ ದೇವರ್ಕಳು, ಕವಯಃ-ವಿದ್ವಾಂಸರಾದರೂಕೂಡ, ಆನಮಿತಕಂಧರಚಿತ್ತಾಃ-ಆನಮಿತ-ಆಕಡೆಗೆ ಎತ್ತಲ್ಪಟ್ಟ, ಕಂಧರ-ಕೊರಳು, ಚಿತ್ತಾಃ-ಮನಸ್ಸುಳ್ಳವರಾಗಿ, ಅನಿಶ್ಚಿತತತ್ತ್ವಾಃ-ನಿರ್ಧರಿಸಲ್ಪಡದ ಯಾಥಾರ್ಥ್ಯವುಳ್ಳವರಾದ್ದರಿಂದಲೇ, ಕಶ್ಮಲಂ-ಮೋಹವನ್ನು, ಯಯುಃ-ಹೊಂದಿದರು॥೧೫॥ಯದಾ-ಯಾವಾಗ, ಧ್ವಜವಜ್ರೈಃ-ಧ್ವಜರೇಖೆಗಳಿಂದಲೂ ವಜ್ರರೇಖೆಗ

---

ಸಂತೋಷಗೊಳಿಸುತ ಗಾನಂಗೆಯ್ವನೋ |೧೨| ಆಗಮೇಘವು ಮಹಾಪುರುಷ ಗಾನವನತಿಕ್ರಮಿಸಬಾರದೆಂದು ಭಯವುಳ್ಳದುದಾಗಿ ಮೆಲ್ಲನೆಗರ್ಜಿಸುತ ಪುಷ್ಪಾಕಾರಂಗಳಾದ ಉದಕಬಿಂದುಗಳಿಂದ ವರ್ಷಿಸುತ ಛತ್ರದರೀತಿಯಲ್ಲಿ ಕೃಷ್ಣನಿಗೆ ಛಾಯೆಯ ನುಂಟುಮಾಡುವುದು |೧೩| ಎಲೈ ಯಶೋದಾದೇವಿಯೇ; ನಾನಾರೂಪಂಗಳಾದ ಗೋಪವಿಹಾರದಲ್ಲಿ ಕುಶಲನಾದ ನಿನ್ನಮಗನಾದ ಕೃಷ್ಣನು ವೇಣುವಾದ್ಯದ ಬಹುಪ್ರಕಾರವಾಗಿ ಸ್ವಬುದ್ಧಿಯಿಂದ ಶಿಕ್ಷಿತಂಗಳಾದ ಸ್ವರಜಾತಿಗಳಂ ಅದರಲ್ಲಿನುಡಿಸುತ್ತ ಯಾವಾಗವಿಹರಿಸುವನೋ |೧೪|ಆಗ ಇಂದ್ರನು ಈಶ್ವರನು ಬ್ರಹ್ಮನು ಮೊದಲಾದ ದೇವತೆಗಳು ಆಗಾನವಂಕೇಳಿ ಕಂಠಂಗಳಂ ಬಗ್ಗಿಸಿಕೊಂಡು, ಏಕಾಗ್ರಚಿತ್ತರಾಗಿ ಆಸ್ವರಜಾತಿ ಭೇದಂಗಳಂ ತಿಳಿಯಲಾರದೆ ಸರ್ವಜ್ಞರಾದರೂ ಪರವಶರಾದರು |೧೫|ಎಲೈ ಸಖಿಯರುಗಳಿರಾ! ಧ್ವಜರೇಖೆಗಳಿಂದಲೂ ವಜ್ರರೇಖೆಗಳಿಂದಲೂ ಪದ್ಮರೇಖೆಗಳಿಂದಲೂ ಅಂಕುಶರೇಖೆಗಳಿಂದಲೂ ಗುರುತಾಗಿ ಮಾಡಲ್ಪಟ್ಟ ಪಾದವಿನ್ಯಾಸಂಗಳಿಂದ ವೃಷಭಂಗಳ ಕಾಲು ಕೊಳಗುಗಳ ಪ್ರಹಾರವ್ಯಥೆಯಂ ವ್ರಜಭೂಮಿಗಳಿಗೆ ಪರಿಹರಿಸುವವನಾಗಿ, ವೇಣುನಾದವಂ ಗೆಯ್ಯುತ ಮದಗಜದಂತೆ ಗಮನವುಳ್ಳವನಾ

ನವಯಂಸವಿಲಾಸವೀಕ್ಷಣಾರ್ಪಿತಮನೋಭವವೇಗಾಃ । ಕುಜಗತಿಂಗಮಿತಾನವಿದಾಮಃಕಶ್ಮಲೇನವಸ
ನಂಕಬರೀಂವಾ ।೧೭। ಮಣಿಧರಃಕ್ವಚಿದಾಗಣಯನ್ಗಾಮಾಲಯಾದಯಿತಗಂಧತುಲಸ್ಯಾಃ । ಪ್ರ
ಣಯಿನೋನುಚರಸ್ಯಯದಾಂಸೇಪ್ರಕ್ಷಿಪನ್ಭುಜಮಗಾಯತಯತ್ರ ।೧೮। ಕ್ವಣಿತವೇಣುರವವಂಚಿ
ತಚಿತ್ತಾಃಕೃಷ್ಣಮನ್ವಸತಕೃಷ್ಣಗೃಹಿಣ್ಯಃ । ಗುಣಗಣಾರ್ಣಮನುಗವ್ಯಹರಿಣ್ಯೋಗೋಪಿಕಾ
ಇವವಿಮುಕ್ತಗೃಹಾಶಾಃ ।೧೯। ಕುಂದದಾಮಕೃತಕೌತುಕವೇಷೋಗೋಪಗೋಧನವೃತೋಯಮು

---

ಳಿಂದಲೂ, ನೀರಜಾಂಕುಶ-ನೀರಜ-ಪದ್ಮರೇಖೆಗಳಿಂದಲೂ, ಅಂಕುಶರೇಖೆಗಳಿಂದಲೂ, ವಿಚಿತ್ರ-ಆಶ್ಚರ್ಯಕರಗಳಾದ, ಲಲಾಮೈಃ-ಗುರುತುಗಳುಳ್ಳ, ನಿಜಪದಾಬ್ಜದಳೈಃ-ತನ್ನಡಿದಾವರೆಗಳೆಂಬ ತಾವರೆಯೆಸಳ್ಗಳಿಂದ, ವ್ರಜಭುವಃ-ಗೋಕುಲದನೆಲದ, ಖುರತೋದಂ-ಕೊಳಗುಗಳ ತುಳಿತದಿಂದಾದ ಶ್ರಮವನ್ನು, ಪ್ರಶಮಯನ್-ಶಾಂತಿಗೊಳಿಸುತಲಿರುವ, ವರ್ಷ್ಮಧುರ್ಯಗತಿಃ-ವರ್ಷ್ಮ-ಶರೀರದಿಂದ, ಧುರ್ಯ-ಭಾರವನ್ನು ವಹಿಸಲುಳ್ಳ ಆನೆಯಂತೆ, ಗತಿಃ-ಮಂದಗಮನವುಳ್ಳ ಆಕೃಷ್ಣನು, ಈಡಿತವೇಣುಃ-ನುಡಿಸಲ್ಪಟ್ಟ ಕೊಳಲುಳ್ಳವನಾಗಿ॥೧೬॥ ವ್ರಜತೀತಿಯತ್-ನಡೆಯುತ್ತಿರುವನೆಂಬುವುದು ಯಾವುದುಂಟೋ, ತೇನ-ಆನಿಮಿತ್ತದಿಂದ, ಸವಿಲಾಸ-ವಿಲಾಸದಿಂಕೂಡಿದ, ವೀಕ್ಷಣ-ನೋಟದಿಂದ, ಅರ್ಪಿತ-ಕುಡಲ್ಪಟ್ಟ, ಮನೋಭವ-ಕಾಮದ, ವೇಗಾಃ-ತ್ವರೆಯುಳ್ಳ, ವಯಂ-ನಾವು, ಕುಜಗತಿಂ-ಮರಗಳ ಗತಿಯನ್ನು,(ಸ್ತಬ್ಧತೆಯನ್ನು)ಗಮಿತಾಸ್ಸತ್ಯಃ-ಹೊಂದಿಸಲ್ಪಟ್ಟವರಾಗಿ, ಕಶ್ಮಲೇನ-ಮೋಹದಿಂದ, ವಸನಂ-ಸೀರೆಯನ್ನು, ಕಬರೀಂವಾ-ತುರುಬನ್ನಾದರೂ, ನವಿದಾಮಃ-ಅರಿಯೆವು॥೧೭॥ಮಣಿಧರಃ-ಗೋವುಗಳನ್ನು ಲೆಕ್ಕಿಸುವುದಕ್ಕೆ ಗುಂಡುಗಳಂ ಕಟ್ಟಿಕೊಂಡವನಾಗಿ, ಕ್ವಚಿತ್-ಒಂದುಕಡೆಯಲ್ಲಿ, ಗಾಃ-ಗೋವುಗಳನ್ನು, ಆಗಣಯನ್-ಲೆಕ್ಕಮಾಡುತಲಿರುವನಾಗಿ, ದಯಿತಗಂಧತುಲಸ್ಯಾಃ-ದಯಿತಗಂಧ-ಪ್ರಿಯವಾದ ಪರಿಮಳವುಳ್ಳ, ತುಲಸಿಯ, ಮಾಲಯಾ-ಸರದಿಂದ ಕೂಡಿದವನಾದ ಕೃಷ್ಣನು, ಪ್ರಣಯಿನಃ-ಸ್ನೇಹವುಳ್ಳ, ಅನುಚರಸ್ಯ-ಸಂಗಾತಿಯ, ಅಂಸೇ-ಭುಜದಲ್ಲಿ, ಭುಜಂ-ತನ್ನತೋಳನ್ನು, ಪ್ರಕ್ಷಿಪನ್-ಹಾಕುತಲಿರುವನಾಗಿ, ಯತ್ರ-ಯಾವಾಗ, ಅಗಾಯತ-ಹಾಡಿದನೋ॥೧೮॥ ತದಾ-ಆಗ, ಕ್ವಣಿತವೇಣುರವವಂಚಿತಚಿತ್ತಾಃ-ಕ್ವಣಿತ-ನುಡಿಸಲ್ಪಟ್ಟ, ವೇಣು-ಕೊಳಲಿನ,ರವ-ಶಬ್ದದಿಂದ, ವಂಚಿತ-ಮೋಸಗೊಳಿಸಲ್ಪಟ್ಟ, ಚಿತ್ತಾಃ-ಮನಸ್ಸುಳ್ಳವರಾದ, ಕೃಷ್ಣಗೃಹಿಣ್ಯಃ-(ಕೃಷ್ಣನಹೆಂಡತಿಯರಾದ) ಕೃಷ್ಣ-ಕೃಷ್ಣಮೃಗವಾದ ಗಂಡುಹುಲ್ಲೆಗೆ, ಗೃಹಿಣ್ಯಃ-ಹೆಂಡಿರಾದ, ಹರಿಣ್ಯಃ-ಹೆಣ್ಣುಜಿಂಕೆಗಳು, ಗುಣಗಣಾರ್ಣಂ-ಸುಗುಣಗಳೆಂಬ ರತ್ನಪುಂಜಗಳಿಗೆ ಸಮುದ್ರಪ್ರಾಯನಾಗಿರುವ ಕೃಷ್ಣನನ್ನು, ಅನುಗವ್ಯ-ಅನುಸರಿಸಿಹೋಗಿ, ವಿಮುಕ್ತಗೃಹಾಶಾಃ-ಬಿಡಲ್ಪಟ್ಟ ಮನೆಯಆಶೆಯುಳ್ಳ, ಗೋಪಿಕಾಇವ-ಗೊಲ್ಲತಿಯರಹಾಗೆ, ಕೃಷ್ಣಂ-ಕೃಷ್ಣನನ್ನು, ಅನ್ವಸತ- (ಅನ್ವಾಸತ) ಅನುಸರಿಸಿ ಬಳಿಯಲ್ಲಿಯೇಯಿದ್ದವು ॥೧೯॥ ಅನಘೇ-ಪಾಪರಹಿತಳಾದ ಯಶೋದೆಯೇ, 'ಕುಂದದಾಮಕೃತಕೌತುಕವೇಷಃ-ಕುಂದ-ಮಾಘಮಲ್ಲಿಗೆಗಳ, ದಾಮ-ಹಾರಗಳಿಂ

---

ಗಿ, ಯಾವಾಗ ವನವಂ ಕುರಿತು ಹೋಗುವನೋ ।೧೬। ಆಗ ಶ್ರೀಕೃಷ್ಣನ ಸೊಕ್ಕಿನನೋಟಂಗಳಿಂದಕಾಮಪರವಶರಾಗಿ ವೃಕ್ಷಂಗಳಂತೆ ಸ್ತಬ್ಧರಾಗಿ ಮೂರ್ಛೆಯಿಂ ಶಿಥಿಲವಾದ ಕೇಶಂಗಳಂ ವಸ್ತ್ರವಂ ಸಹಾ ತಿಳಿಯದೆ ನಾವು ಪರವಶರಾಗುವೆವು ।೧೭। ಎಲೈ ಸಖಿಯರುಗಳಿರಾ! ಗೋವುಗಳ ಗಣನಾರ್ಥವಾಗಿ ಮಣಿಗಳಂ ಧರಿಸಿಕೊಂಡು ಇರುವವನಾಗಿ ರಮ್ಯವಾದ ಸೌರಭ್ಯಮುಳ್ಳ ತುಲಸೀಮಾಲೆಯಿಂದ ಶೋಭಿತನಾದ ಶ್ರೀಕೃಷ್ಣನು ಗೋವುಗಳಂ ಎಣಿಸುತ ಮಿತ್ರನಾದ ಒಬ್ಬಗೋಪಾಲಕನ ಭುಜವನವಲಂಬಿಸಿಕೊಂಡು ಯಾವಾಗ ವೇಣುಗಾನವಂ ಮಾಡಿದನೋ ।೧೮। ಆಗ ಗಂಡುಹುಲ್ಲೆಗಳ ಪತ್ನಿಯರಾದ ಹೆಣ್ಣುಹುಲ್ಲೆಗಳು ವೇಣುನಾದದಿಂದ ವಿವಶಚಿತ್ತಂಗಳಾಗಿ ಗೃಹದ ಆಶೆಯಂಬಿಟ್ಟು ಗೋಪಸ್ತ್ರೀಯರುಗಳು ಹೇಗೋ ಅದೇರೀತಿಯಲ್ಲಿ ಗುಣಸಮುದ್ರನಾದ ಶ್ರೀಕೃಷ್ಣನನ್ನೇ ಆಶ್ರಯಿಸಿದವು ।೧೯। ಎಲೈ ಯಶೋದೆಯೇ! ಮಲ್ಲಿಕಾಪುಷ್ಪಹಾರಂಗಳಿಂದಅಲಂಕೃತನಾಗಿ ಗೋಪಾಲಕರಿಂದಲೂ ಗೋವುಗಳಿಂದಲೂ ಪರಿವೃತನಾಗಿ ನಿನ್ನ ಮಗನಾದ ಕೃಷ್ಣನು ಸ್ನೇಹಿತರಿಗೆ ಸುಖಪ್ರದನಾಗಿ ಯಮುನಾ ನದಿಯಲ್ಲಿ ಗೋವುಗಳಂ ಹಿಂತಿರುಗಿಸಿಕೊಂಡು ಜಲಪಾನವಂ ಮಾಡಿಸುತ್ತ

ನಾಯಾಂ । ನಂದಸೂನುರನಘೆ ತವವತ್ಸೋನರ್ಮದಃಪ್ರಣಯಿನಾಂವಿಜಹಾರ ॥೨೦॥ ಮಂದವಾ
ಯುರುಪವಾತ್ಯನುಕೂಲಂಮಾನಯನ್ಮಲಯಜಸ್ಪರ್ಶೇನ । ವಂದಿನಸ್ತಮುಪದೇವಗಣಾಯೇವಾದ್ಯ
ಗೀತಬಲಿಭಿಃಪರಿವವ್ರುಃ ॥೨೧॥ ವತ್ಸಲೋವ್ರಜಗವಾಂಯದಗಧ್ರೋವಂದ್ಯಮಾನಚರಣಃಪಥಿವೃ
ದ್ಧೈಃ । ಕೃತ್ಸ್ನಗೋಧನಮುಪೋಹ್ಯದಿನಾಂತೇಗೀತವೇಣುರನುಗೇಡಿತಕೀರ್ತಿಃ ॥೨೨॥ ಉತ್ಸವಂ
ಶ್ರಮರುಚಾಪಿದೃಶೀನಾಮುನ್ನಯನ್ಖುರರಜಶ್ಛುರಿತಸ್ರಕ್ । ದಿತ್ಸಯೈತಿಸುಹೃದಾಶಿಷಏಷದೇವ
ಕೀಜಠರಭೂರುಡುರಾಜಃ ॥೨೩॥ ಮದವಿಘೂರ್ಣಿತಲೋಚನಈಷನ್ಮಾನದಸ್ಸ್ವಸುಹೃದಾಂವನ

---

ದ, ಕೃತಕೌತುಕವೇಷಃ-ಮಾಡಲ್ಪಟ್ಟ ಹಾಸ್ಯಕೆಯ ಅಲಂಕಾರವುಳ್ಳವನೂ, ಗೋಪಗೋಧನವೃತಃ-ಗೊಲ್ಲರಿಂದಲೂ ಗೋವುಗಳಿಂದಲೂ ಬಳಸಲ್ಪಟ್ಟವನೂ, ಆದ,ತವವತ್ಸಃ-ನಿನ್ನ ಮಗುವಾದ, ನಂದಸೂನುಃ-ನಂದಗೋಪನ ಕುಮಾರನು, ಯದಾ-ಯಾವಾಗ, ಯಮುನಾಯಾಂ-ಯಮುನೆಯತಡಿಯಲ್ಲಿ, ಪ್ರಣಯಿನಾಂ-ಸ್ನೇಹವುಳ್ಳವರಿಗೆ, ನರ್ಮದಃ-ಸುಖವನ್ನು ಕೊಡುವವನಾಗಿ, ವಿಜಹಾರ-ಕ್ರೀಡಿಸಿದನೋ॥೨೦॥ತದಾ-ಆಗ, ಮಂದವಾಯುಃ-ಕಿರುಗಾಳಿಯು, ಮಲಯಜಸ್ಪರ್ಶೇನ-ಶ್ರೀಗಂಧದ ಸೋಂಕುವಿಕೆಯಿಂದ, ಅನುಕೂಲಂ-ಯಮುನೆಯ ತಡಿಯನ್ನನುಸರಿಸಿ, ಮಾನಯನ್-ಸನ್ಮಾನಗೊಳಿಸುವುದಾಗಿ, ಅನುವಾತಿ-ಅನುಕೂಲವಾಗಿ ಸುಳಿಯುತ್ತಿದೆ. ಉಪದೇವಗಣಾಃ-ದೇವತೆಗಳ ಬಳಿಯಲ್ಲಿರುವ ಪರಿಚಾರಕದೇವತೆಗಳಗುಂಪುಗಳು, ಯೇ-ಯಾವವೋ-ತೇ-ಅವು, ವಾದ್ಯಗೀತಬಲಿಭಿಃ-ವಾದ್ಯಗಳಿಂದಲೂ ಗಾನಗಳಿಂದಲೂ ಕಾಣಿಕೆಗಳಿಂದಲೂ, ತಂ-ಆಕೃಷ್ಣನನ್ನು, ಪರಿವವ್ರುಃ-ಸೇವಿಸುವುದಕ್ಕೆ ಮುತ್ತಿಕೊಂಡರು ॥೨೧॥ಯತ್-ಯಾವಕಾರಣದಿಂದ, ಅಗಧ್ರಃ-ಅಗ-ಗೋವರ್ಧನ ಪರ್ವತವನ್ನು, ಧ್ರಃ-ಧರಿಸಿದವನಾದನೋ, ತತ್-ಆಕಾರಣದಿಂದ, ವ್ರಜಗವಾಂ-ಗೋಕುಲದ ಗೋವುಗಳಿಗೆ, ವತ್ಸಲಃ-ಹಿತಕರನಾದ ಕೃಷ್ಣನು, ಪಥಿ-ದಾರಿಯಲ್ಲಿ, ವೃದ್ಧೈಃ-ಮುದುಕರಿಂದ, (ಬ್ರಹ್ಮಾದಿಗಳಿಂದ) ವಂದ್ಯಮಾನಚರಣಃ-ನಮಸ್ಕರಿಸಲ್ಪಡುತಿರುವ ಪಾದಗಳುಳ್ಳವನಾಗಿ, ಕೃತ್ಸ್ನಗೋಧನಂ-ಆಕಳ ಹಿಂಡೆಲ್ಲವನ್ನೂ, ದಿನಾಂತೇ-ಹಗಲಿನ ತುದಿಯಲ್ಲಿ,(ಸಾಯಂಕಾಲದಲ್ಲಿ) ಉಪೋಹ್ಯ-ಒಟ್ಟುಗೂಡಿಸಿ, ಅನುಗೇಡಿತಕೀರ್ತಿಃ-ಅನುಗ-ಸಂಗಾತಿಗಳಿಂದ, ಈಡಿತ-ಕೊಂಡಾಡಲ್ಪಟ್ಟ, ಕೀರ್ತಿಃ-ಯಶಸ್ಸುಳ್ಳವನಾಗಿ, ಯದಾ-ಯಾವಾಗ, ಗೀತವೇಣುಃ-ನುಡಿಸಲ್ಪಟ್ಟ ಕೊಳಲುಳ್ಳವನಾದನೋ ॥೨೨॥ತದಾ-ಆಗ, ಶ್ರಮರುಚಾಪಿ-ಆಯಾಸ ದೊಳಗೂ ಕಾಂತಿಯಿಂದ, ದೃಶೀನಾಂ-ನೋಡುವವರ ಕಂಗಳಿಗೆ, ಉತ್ಸವಂ-ಸಂತೋಷವನ್ನು, ಉನ್ನಯನ್-ಉಂಟುಮಾಡುವವನಾದ, ಖುರರಜಚ್ಛುರಿತಸ್ರಕ್-ಖುರ-ಗೋವುಗಳ ಗೊರಸುಗಳ, ರಜಃ-ಧೂಳಿಯಿಂದ, ಛುರಿತ-ವ್ಯಾಪ್ತವಾದ, ಸ್ರಕ್-ಪುಷ್ಪಮಾಲೆಗಳುಳ್ಳವನಾದ, ದೇವಕೀಜಠರಭೂಃ-ದೇವಕಿಯ ಬಸುರಲ್ಲಿ ಹುಟ್ಟಿದ, ಉಡುರಾಜಃ-ನಕ್ಷತ್ರಗಳ ರಾಯನಹಾಗಿರುವ, ಏಷಃ-ಈಕೃಷ್ಣನು, ಸುಹೃದಾಶಿಷಃ-ಸ್ನೇಹಿತರ ಬಯಕೆಗಳನ್ನು, ದಿತ್ಸಯಾ-ಕೊಡಲ್ಬಯಕೆಯಿಂದ, ಏತಿ-ಬರುತ್ತಿರುವನು॥೨೩॥ ಮದವಿಘೂರ್ಣಿತಲೋಚನಃ-ಮದ-ಪ್ರಾಯದಸೊಕ್ಕಿನಿಂದ, ವಿಘೂರ್ಣಿತ-ಚಲಿಸುತತಿರುವ, ಲೋಚನಃ-ಕಂಗಳುಳ್ಳವನೂ,

---

ಯಾವಾಗ ವಿಹರಿಸುವನೋ ॥೨೦॥ ಆಗ ಮಲಯ ಪರ್ವತದಲ್ಲಿಹುಟ್ಟಿದ ಮಂದಮಾರುತವು ಸುಖಸ್ಪರ್ಶದಿಂದ ಶ್ರೀಕೃಷ್ಣನಂ ಪೂಜಿಸಿತು. ಸ್ತುತಿಪಾಠಕರಾದ ಗಂಧರ್ವರು ವಾದ್ಯಗೀತ ಪುಷ್ಪವರ್ಷಾದಿಗಳಿಂದ ಸೇವಿಸಿದರು ॥೨೧॥ ವ್ರಜದಗೋವುಗಳಲ್ಲಿ ವಾತ್ಸಲ್ಯಶಾಲಿಯಾದ ಗೋವರ್ಧನ ಧಾರಕನಾದ ಶ್ರೀಕೃಷ್ಣನು ಬ್ರಹ್ಮಾದಿಗಳಿಂದ ನಮಸ್ಕರಿಸಲ್ಪಡುತಲಿರುವ ಪಾದವುಳ್ಳವನಾಗಿ ಸಾಯಂಕಾಲದಲ್ಲಿ ಅನುಚರರಾದ ಗೋಪಾಲಕರಿಂದ ಸ್ತುತಿ ಮಾಡಿಸಿಕೊಳ್ಳುತ್ತ ಸಮಸ್ತ ಗೋಸಮೂಹವಂ ತಿರುಗಿಸಿಕೊಂಡು ಮಾರ್ಗದಲ್ಲಿ ಕೊಳಲಂ ನುಡಿಸುತ ಬರುತ್ತಾನೆ ॥೨೨॥ಮಾರ್ಗ ಶ್ರಮದಿಂದುಂಟಾದ ಕಾಂತಿಯಿಂದಲೂ ಕೂಡ ರಮ್ಯವಾಗಿ,ನೋಡುವವರ ನೇತ್ರಂಗಳಿಗೆ ಉತ್ಸವವಂಕೊಡುತ ಗೋಧೂಳಿಗಳಿಂ ವ್ಯಾಪ್ತಂಗಳಾದ ಹಾರಂಗಳುಳ್ಳವನಾಗಿ,ದೇವಕೀ ಗರ್ಭಜಾತನಾದ ಈ ಕೃಷ್ಣನೆಂಬ ಚಂದ್ರನು ಮಿತ್ರರಮನೋರಥಮಂ ಕೊಡಲೋಸುಗಂ ಬರುವನು ॥೨೩॥ ಎಲೈ ಸ್ತ್ರೀಯರುಗಳಿರಾ! ಮದದಿಂದ ಸೊಕ್ಕಿದ ನೇತ್ರಗಳುಳ್ಳವನಾಗಿ ಸ್ವಜನರಿಗೆ ಬಹುಮಾನಮಂ ಮಾಡುವ ಶ್ರೀಕೃಷ್ಣನು ಸ್ವಲ್ಪಪಕ್ವವಾದ ಎಳಚಿಯ ಹಣ್ಣಿನಂತೆ ಸ್ವಲ್ಪವಾಗಿ ಬಿಳುಪಾದ ಮುಖವು

ಮಾಲೀ । ಬದರಪಾಂಡುವದನೋಮೃದುಗಂಡಂಮಂಡಯನ್ ಕನಕಕುಂಡಲಲಕ್ಷ್ಮ್ಯಾ ॥೨೪॥ ಯ
ದುಪತಿರ್ದ್ವಿರದರಾಜವಿಹಾರೋಯಾಮಿನೀಪತಿರಿವೈಷದಿನಾಂತೇ । ಮುದಿತವಕ್ತ್ರಉಪಯಾತಿದುರಂ
ತಂಮೋಚಯನ್ ವ್ರಜಗವಾಂದಿನತಾಪಂ ॥೨೫॥ ಶ್ರೀಶುಕಃ॥ ಏವಂವ್ರಜಸ್ತ್ರಿಯೋರಾಜನ್ ಕೃಷ್ಣ
ಲೀಲಾನುಗಾಯತೀಃ । ರೇಮಿರೇಹಸ್ಸುತಚ್ಚಿತ್ತಾಸ್ತನ್ಮನಸ್ಕಾಮಹೋದಯಾಃ । ॥೨೬॥
ಇತಿಶ್ರೀಮದ್ಭಾಗವತೇ-ದಶಮಸ್ಕಂಧೇ-ಪಂಚತ್ರಿಂಶೋಽಧ್ಯಾಯಃ.

---

ಸ್ವಸುಹೃದಾಂ-ತನ್ನ ಸ್ನೇಹಿತರಿಗೆ, ಈಷನ್ಮಾನದಃ-ಕೊಂಚಗರ್ವವನ್ನು ಕುಡುವಂಥಾ, ವನಮಾಲೀ-ತುಲಸಿಯ ಮಾಲಿಕೆಯು
ಳ್ಳಂಥಾ, ಬದರಪಾಂಡುವದನಃ-ಬದರ-ಬೋರೆಯ ಹಂಣಿನಹಾಗೆ, ಪಾಂಡುವರ್ಣವಾದ ಮುಖವುಳ್ಳಂಥಾ, ಕನಕಕುಂಡಲಲ
ಕ್ಷ್ಮ್ಯಾ-ಚಿನ್ನದ ಕಿವಿದೊಡವುಗಳ ಕಾಂತಿಯಿಂದ, ಮೃದುಗಂಡಂ-ಕೋಮಲವಾದ ಕಪೋಲವನ್ನು, ಮಂಡಯನ್-ಅಲಂಕರಿ
ಸುತ ಲಿರುವಂಥಾ ॥೨೪॥ಯದುಪತಿಃ-ಯಾದವರಿ ಗೊಡೆಯನಾದ ಕೃಷ್ಣನು, ದ್ವಿರದರಾಜವಿಹಾರಃ-ಆನೆಯಹಾಗೆ ಕ್ರೀಡೆಯು
ಳ್ಳವನಾಗಿದ್ದನೋ, ದಿನಾಂತೇ-ಆಸಾಯಂಕಾಲದಲ್ಲಿ, ಯಾಮಿನೀಪತಿರಿವ-ರಾತ್ರಿಗೊಡೆಯನಾದ ಚಂದ್ರನಹಾಗೆ, ಮುದಿತವ
ಕ್ತ್ರಃ-ಸಂತೋಷವುಂಟಾದ ಮುಖವುಳ್ಳ, ಏಷಃ-ಈಕೃಷ್ಣನು, ದುರಂತಂ-ಅಪರಿಹಾರ್ಯವಾದ, ವ್ರಜಗವಾಂ-ಗೋಕುಲ
ದಲ್ಲಿರುವ ಗೋವುಗಳ, ದಿನತಾಪಂ-ಹಗಲಿನ ಬಿಸಿಯನ್ನು, ಮೋಚಯನ್-ಬಿಡಿಸುತಲಿರುವನಾಗಿ, ಉಪಯಾತಿ-ಹತ್ತಿರಕ್ಕೆ ಬರುತ್ತಿ
ರುವನು॥೨೫॥[ಶುಕವಾಕ್ಯವು]ರಾಜನ್-ಅರಸಾದ ಪರೀಕ್ಷಿತನೇ! ವ್ರಜಸ್ತ್ರಿಯಃ-ಗೋಕುಲದಹೆಂಗಳು, ಕೃಷ್ಣಲೀಲಾಃ-ಕೃಷ್ಣ
ನಚರಿತ್ರಗಳನ್ನು, ಅನುಗಾಯತೀಃ-ಅನುಸರಿಸಿ ಹಾಡುತಲಿರುವರಾಗಿಯೂ, ತಚ್ಚಿತ್ತಾಃ-ಆಕೃಷ್ಣನಲ್ಲಿಯೇ ಬುದ್ಧಿಯುಳ್ಳವರಾ
ಗಿಯೂ, ತನ್ಮನಸ್ಕಾಃ-ಅವನಲ್ಲಿಯೇ ಸಂಕಲ್ಪ ವಿಕಲ್ಪರೂಪವಾದ ಮನಸ್ಸುಳ್ಳವ ರಾಗಿಯೂ, ಮಹೋದಯಾಃ-ದೊಡ್ಡ ಉತ್ಸ
ವವುಳ್ಳವರಾಗಿಯೂ, ಅಹಸ್ಸು-ಹಗಲುಗಳಲ್ಲಿ, ಏವಂ-ಹೀಗೆ, ರೇಮಿರೇ-ಕ್ರೀಡಿಸಿದರು ॥೨೬॥
ಇತಿಶ್ರೀಮದ್ಭಾಗವತೇ ದಶಮಸ್ಕಂಧೇ
ಪಂಚತ್ರಿಂಶೋಽಧ್ಯಾಯಃ

---

ಳ್ಳವನಾಗಿ ಕನಕಕುಂಡಲ ಶೋಭೆಯಿಂ ಕಪೋಲವನಲಂಕರಿಸುವವನಾಗಿ ॥೨೪॥ ಯದುಪತಿಯಾದ ಮದಗಜ
ಗಾಮಿಯಾದ ಈ ಕೃಷ್ಣನು ಚಂದ್ರನಂತೆ ಆಹ್ಲಾದಕರನಾಗಿ ಸಂತುಷ್ಟವಾದ ಮುಖವುಳ್ಳವನಾಗಿ ವ್ರ
ಜದ ಗೋವುಗಳ ಅಧಿಕವಾದ ದಿನತಾಪವಂ ಪರಿಹರಿಸುವನು ॥೨೫॥ ಎಲೈ ಅರಸೇ! ಎಂದು, ಈರೀತಿಯ
ಲ್ಲಿ ಗೋಪಸ್ತ್ರೀಯರುಗಳು ಕೃಷ್ಣನ ಲೀಲೆಗಳನೇ ಗಾನಂಗೆಯ್ವರಾಗಿ ಆಕೃಷ್ಣನಲ್ಲಿಯೇ ಲಗ್ನವಾದ ಚಿ
ತ್ತಂಗಳುಳ್ಳವರಾಗಿ ಮಹಾಸಂತೋಷವುಳ್ಳವರಾಗಿ ಹಗಲುಗಳಲ್ಲಿ ರಮಿಸಿದರು। ॥೨೬॥

ಇಂತು ಶುಕಮುನಿಯು ಪರೀಕ್ಷಿದ್ರಾಯನಿಗೆ ನಿರೂಪಿಸಿದನೆಂದು ಸೂತಪೌರಾಣಿಕನು ನೈಮಿಶಾ
ರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಹೇಳಿದನೆಂಬಲ್ಲಿಗೆ ಶ್ರೀಮನ್ಮಹೀಶೂರಪುರವ
ರಾಧೀಶ ಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜ ವಿರಚಿತವಪ್ಪ ಶ್ರೀ
ಭಾಗವತದ ಶ್ರೀಕೃಷ್ಣರಾಜ ವಾಣೀವಿಲಾಸವು ಎಂಬ ಕರ್ಣಾಟಕ
ಭಾಷಾವ್ಯಾಖ್ಯಾನದಲ್ಲಿ ದಶಮಸ್ಕಂಧದೊಳು ೩೫ನೆಯ
ಅಧ್ಯಾಯವು ಸಂಪೂರ್ಣವಾದುದು.
ಮಂಗಳಮಸ್ತು

ವೃಷಭಾಸುರವಧಘಟ್ಟಃ

ಶ್ರೀಶುಕಃ॥ ಅಥತರ್ಹ್ಯಾಗತೋಗೋಷ್ಠಮರಿಷ್ಟೋವೃಷಭಾಸುರಃ । ಮಹೀಂಮಹಾಕಕುತ್ಕಾಯಃ
ಕಂಪಯನ್ಖುರವಿಕ್ಷತಾಂ ॥೧॥ ರಂಭಮಾಣಃಖರತರಂಪದಾಭ್ಯಾಂವಿಲಿಖನ್ಮಹೀಂ । ಉದ್ಯಮ್ಯಪು
ಚ್ಛಂವಪ್ರಾಣಿವಿಷಾಣಾಗ್ರೇಣಚೋತ್ಕ್ಷಿಪನ್ ॥೨॥ ಕಿಂಚಿತ್ಕಿಂಚಿಚ್ಛಕೃನ್ಮೂತ್ರಮುತ್ಸೃಜಂಸ್ತಬ್ಧ

---

೩೬ನೆಯಅಧ್ಯಾಯದ ಪ್ರತಿಪದಟೀಕೆ.

[ಶುಕವಾಕ್ಯವು.] ಅಥ-ಆಮೇಲೆ, ತರ್ಹಿ-ಆಗ, ಗೋಷ್ಠಂ-ಗೋಕುಲವನ್ನು ಕುರಿತು, ಆಗತಃ-ಬಂದವನಾದ, ಅರಿಷ್ಟಃ-ಅರಿಷ್ಟನೆಂಬ, ವೃಷಭಾಸುರಃ-ಎತ್ತಿನ ಆಕಾರವುಳ್ಳ ದೈತ್ಯನು, ಮಹಾಕಕುತ್ಕಾಯಃ-ಮಹಾಕಕುತ್-ದೊಡ್ಡಹಿಣಿಲುಳ್ಳ, ಕಾಯಃ-ಮೈಯುಳ್ಳವನಾಗಿ, ಖುರವಿಕ್ಷತಾಂ-ಖುರ-ಕೊಳಗುಗಳಿಂದ, ವಿಕ್ಷತಾಂ-ವಿಶೇಷವಾಗಿ ನುರಿಯಲ್ಪಟ್ಟ, ಮಹೀಂ-ಭೂಮಿಯನ್ನು, ಕಂಪಯನ್-ನಡುಗಿಸುತಲಿರುವವನಾಗಿ ॥೧॥ ಖರತರಂ-ಬಹಳಕ್ರೂರವಾಗಿ, ರಂಭಮಾಣಃ-ಗುಟ್ರನುತ್ತಿರುವವನಾಗಿ, ಪದಾಭ್ಯಾಂ-ಕಾಲುಗಳಿಂದ, ಮಹೀಂ-ಭೂಮಿಯನ್ನು, ವಿಲಿಖನ್-ಕೆರೆಯುತಲಿರುವವನಾಗಿ, ಪುಚ್ಛಂ-ಬಾಲವನ್ನು, ಉದ್ಯಮ್ಯ-ಎತ್ತಿಕೊಂಡು, ವಿಷಾಣಾಗ್ರೇಣ-ಕೊಂಬಿನತುದಿಯಿಂದ, ವಪ್ರಾಣಿ-ಪೌಳಿಗೋಡೆಗಳನ್ನು, ಉತ್ಕ್ಷಿಪಂಶ್ಚ-ಹಾರಿಸುತಲಿರುವವನೂ ಆಗಿ ॥೨॥ ಸ್ತಬ್ಧಲೋಚನಃ-ಕದಲದೇಯಿರುವ ಕಂಗಳುಳ್ಳವನಾಗಿ, ಶಕೃನ್ಮೂತ್ರಂ-ಸಗಣಿಯನ್ನೂ ಗಂಜಳವನ್ನೂ, ಕಿಂಚಿತ್ಕಿಂಚಿತ್-ಕೊಂಚಕೊಂಚ-ಉತ್ಸೃಜನ್-ಬಿಡುತಲಿರುವವನಾದನು. ಅಂಗ-ರಾಯನೇ! ಯಸ್ಯ-ಯಾವವೃಷಭಾಸುರನ, ನಿಷ್ಠುರೇಣ-

---

೩೬ನೆಯ ಅಧ್ಯಾಯವು.

ಶ್ರೀಧರೀಯಶ್ಲೋಕಃ॥ ಷಟ್ತ್ರಿಂಶೇನಿಹತೇರಿಷ್ಟೇನಾರದೋಕ್ತ್ಯಾಬಲಾಚ್ಯುತೌ । ವಸುದೇವಸುತೌ
ಜ್ಞಾತ್ವಾಕಂಸೋಕ್ರೂರಂಸಮಾದಿಶತ್ ॥ ‡ ॥ ಮೂವತ್ತಾರನೆಯ ಅಧ್ಯಾಯದಲ್ಲಿ ಶ್ರೀಕೃಷ್ಣದೇವನಿಂದ ಅರಿಷ್ಟಾಸುರನು ಸಂಹೃತನಾದಮೇಲೆ ನಾರದಋಷಿಯು ಬಂದು ಕಂಸನಂಕುರಿತು "ರಾಮಕೃಷ್ಣರೀರ್ವರೂ ವಸುದೇವನಪುತ್ರರು, ಎಂದು ಹೇಳಲಾಗಿ ಆರಾಮಕೃಷ್ಣರಂ ಕರೆತರಲೋಸುಗಂ ಕಂಸನು ಅಕ್ರೂರನಂ ನಂದವ್ರಜಕ್ಕೆ ಕಳುಹಿಸಿದನು ಎಂಬ ಅರ್ಥವಂ ಶುಕಮುನಿಯು ಪರೀಕ್ಷಿದ್ರಾಯನಂಕುರಿತು ನಿರೂಪಿಸುವನದಂತೆನ್ಯೆ-

ಎಲೈ ಅರಸೇ! ಅನಂತರದಲ್ಲಿ ವೃಷಭಾಕಾರನಾದ ಅರಿಷ್ಟನಾಮಕನಾದ ಅಸುರನು ಗೋಸ್ಥಾನವಂ ಕುರಿತು ಬಂದನು. ಆಯಸುರನು ಸ್ಥೂಲಮಾದ ಹಿಣಿಲಮೈಯುಳ್ಳವನಾಗಿ ಕಾಲಗೊರಸುಗಳ ಪ್ರಹಾರದಿಂದ ಭೂಮಿಯಂ ಕಂಪಿಸುವಂತೆ ಮಾಡುವವನಾಗಿ॥೧॥ ಗುಟ್ರುಹಾಕುವವನಾಗಿ ಪಾದಂಗಳಿಂದ ಭೂಮಿಯಂ ಕೆರೆಯುತ ಬಾಲವನೆತ್ತಿಕೊಂಡು ಶೃಂಗಂಗಳಿಂದ ತೀರಂಗಳಂ ತಿವಿಯುವವನಾಗಿ ॥೨॥ ಕೊಂಚಕೊಂಚವಾಗಿ ಮೂತ್ರ



ಪುರೀಷಂಗಳಂ ಬಿಡುತ ರೆಪ್ಪೆಹಾಕದಿರುವ ನೇತ್ರಂಗಳುಳ್ಳವನಾಗಿ ತನ್ನ ಗರ್ಜನೆಯಿಂದ ಗೋವುಗಳು ಮನುಷ್ಯರು ಇವರ ॥೩॥ ಗರ್ಭಂಗಳಂ ಸ್ರವಿಸುವಂತೆ ಮಾಡುವವನಾಗಿ ಬಂದನು. ಆವೃಷಭಾಸುರನ ಹಿಣಿಲಂ

ಲೋಚನಃ । ಯಸ್ಯನಿರ್ಹ್ರಾದಿತೇನಾಂಗನಿಷ್ಠುರೇಣಗವಾಂನೃಣಾಂ ॥೩॥ ಪತಂತ್ಯಕಾಲತೋಗರ್ಭಾಃ ಸ್ರವಂತಿಸ್ಮಭಯೇನವೈ । ನಿರ್ವಿಶಂತಿಘನಾಯಸ್ಯಕಕುದ್ಯಚಲಶಂಕಯಾ ॥೪॥ ತಂತೀಕ್ಷ್ಣಶೃಂಗಮುದ್ವೀಕ್ಷ್ಯಗೋಪ್ಯೋಗೋಪಾಶ್ಚತತ್ರಸುಃ । ಪಶವೋದುದ್ರುವೂರಾಜನ್ ಸಂತ್ಯಜ್ಯನಿಜಗೋಕುಲಂ॥ ಕೃಷ್ಣಕೃಷ್ಣೇತಿತೇಸರ್ವೇಗೋವಿಂದಂಶರಣಂಯಯುಃ । ಭಗವಾನಥತದ್ವೀಕ್ಷ್ಯಗೋಕುಲಂಭಯವಿಹ್ವಲಂ ॥೬॥ ಮಾಭೈಷ್ಟೇತಿಗಿರಾಶ್ವಾಸ್ಯವೃಷಾಸುರಮುಪಾಹ್ವಯತ್ । ಸಬಾಲೈಃಪಶುಭಿರ್ಮಂದತ್ರಾಸಿತೈಃಕಿಮಸತ್ತಮ ॥೭॥ ಬಲದರ್ಪಹಾಹಂದುಷ್ಟಾನಾಂತ್ವದ್ವಿಧಾನಾಂದುರಾತ್ಮನಾಂ । ಇತ್ಯಾಸ್ಫೋಟ್ಯಾಚ್ಯುತೋರಿಷ್ಟಂತಲಶಬ್ದೇನಕೋಪಯನ್ । ಸಖ್ಯುರಂಸೇಭುಜಾಭೋಗಂಪ್ರಸಾರ್ಯಾವಸ್ಥಿತೋಹರಿಃ ॥೮॥ ಸೋಪ್ಯೇವಂಕೋಪಿತೋರಿಷ್ಟಃಖುರೇಣಾವನಿಮುಲ್ಲಿಖನ್ । ಉದ್ಯತ್ಪುಚ್ಛಭ್ರಮನ್ಮೇ

---

ಠಿನವಾದ, ನಿರ್ಹ್ರಾದಿತೇನ-ಗುಟುರಿಯಿಂದ, ಗವಾಂ-ಗೋವುಗಳ, ನೃಣಾಂ-ಮನುಷ್ಯರ, ॥೩॥ ಗರ್ಭಾಃ-ಬಸುರಿನಪಿಂಡಗಳು, ಪತಂತಿ-ಬಿದ್ದುಹೋಗುತಲಿವೆಯೋ, ಭಯೇನವೈ-ಹೆದರಿಕೆಯಿಂದ, ಸ್ರವಂತಿಸ್ಮ-ನಾಲ್ಕುತಿಂಗಳೊಳಗಾಗಿಯೇ ಪ್ರೈಯಿಳಿದು ಹೋಗುತಲಿದೆಯೋ, ಘನಾಃ-ಮೇಘಗಳು, ಯಸ್ಯ-ಯಾವವೃಷಭಾಸುರನ. ಕಕುದಿ-ಹಿಣಲಿನಲ್ಲಿ, ಅಚಲಶಂಕಯಾ-ಬೆಟ್ಟದ ಕೋಡೆಂಬ ಭ್ರಾಂತಿಯಿಂದ, ನಿರ್ವಿಶಂತಿ-ಕುಳಿತುಕೊಳ್ಳುತಲಿವೆಯೋ॥೪॥ ತೀಕ್ಷ್ಣಶೃಂಗಂ-ಹರಿತವಾದ ಕೊಂಬುಗಳುಳ್ಳ, ತಂ-ಆವೃಷಭಾಸುರನನ್ನು, ಉದ್ವೀಕ್ಷ್ಯ-ತಲೆಯೆತ್ತಿನೋಡಿ, ಗೋಪಾಃ-ಗೊಲ್ಲರು, ಗೋಪ್ಯಶ್ಚ-ಗೊಲ್ಲತಿಯರೂ, ತತ್ರಸುಃ-ಹೆದರಿದರು, ರಾಜನ್-ಅರಸೇ! ಪಶವಃ-ಆಕಳು, ಎತ್ತುಗಳೂ, ನಿಜಗೋಕುಲಂ-ತಮ್ಮಹಳ್ಳಿಯನ್ನು, (ಹಿಂಡನ್ನು)ಸಂತ್ಯಜ್ಯ-ಬಿಟ್ಟು, ದುದ್ರುವುಃ-ಓಡಿಹೋದವು॥೫॥ತೇಸರ್ವೇ-ಅವರೆಲ್ಲರೂ, ಕೃಷ್ಣಕೃಷ್ಣೇತಿ-ಕೃಷ್ಣನೇ ಕೃಷ್ಣನೇಯೆಂದು, ಗೋವಿಂದಂ-ಕೃಷ್ಣನನ್ನು, ಶರಣಂಯಯುಃ-ಶರಣುಹೊಕ್ಕರು. ಅಥ-ಆಮೇಲೆ, ಭಗವಾನ್-ಕೃಷ್ಣನು, ಭಯವಿಹ್ವಲಂ-ಹೆದರಿಕೆಯಿಂದಕಳವಳವಾದ, ತದ್ಗೋಕುಲಂ-ಆಗೊಲ್ಲರ ಹಳ್ಳಿಯನ್ನು, ವೀಕ್ಷ್ಯ-ನೋಡಿ, ॥೬॥ಮಾಭೈಷ್ಟೇತಿ-ಹೆದರಬೇಡವೆಂದು, ಗಿರಾ-ಮಾತಿನಿಂದ; ಆಶ್ವಾಸ್ಯ-ಸಮಾಧಾನ ಗೊಳಿಸಿ, ವೃಷಾಸುರಂ-ಆಯರಿಷ್ಟನೆಂಬ ರಾಕ್ಷಸನನ್ನು, ಉಪಾಹ್ವಯತ್-ಹತ್ತಿರಕ್ಕೆ ಕರೆದನು॥ ಮಂದ-ಅಲ್ಪಶಕ್ತನಾದ, ಅಸತ್ತಮ-ಬಹಳದುಷ್ಟನೇ! ಸಬಾಲೈಃ-ಹುಡುಗರಿಂದ ಸಹಿತವಾದ, ತ್ರಾಸಿತೈಃ-ಹೆದರಿಸಲ್ಪಟ್ಟ, ಪಶುಭಿಃ-ಗೋವುಗಳಿಂದ, ಕಿಂ-ಏನುಪ್ರಯೋಜನವು? ॥೭॥ ತ್ವದ್ವಿಧಾನಾಂ-ನಿನ್ನಂಥವರಾದ,ದುರಾತ್ಮನಾಂ-ದುಷ್ಟಬುದ್ಧಿಗಳಾದ, ದುಷ್ಟಾನಾಂ-ಕೆಟ್ಟವರಿಗೆ, ಅಹಂ-ನಾನು, ಬಲದರ್ಪಹಾ-ಬಲದಗರ್ವವನ್ನು ಹರಿಸುವವನು. ಇತಿ-ಹೀಗೆ, ಆಸ್ಫೋಟ್ಯ-ಭುಜವಂ ತಟ್ಟಿಕೊಂಡು, ಅಚ್ಯುತಃ-ಕೃಷ್ಣನು, ತಲಶಬ್ದೇನ-ಅಂಗೈನಪ್ಪಳಿಸಿಂದ, ಅರಿಷ್ಟಂ-ಅರಿಷ್ಟಾಸುರನನ್ನು, ಕೋಪಯನ್-ಕೆರಳಿಸುವನಾಗಿ, ಹರಿಃ-ಕೃಷ್ಣನು, ಸಖ್ಯುಃ-ಗೆಳೆಯನಾದ ಗೊಲ್ಲನ, ಅಂಸೇ-ಹೆಗಲಿನಲ್ಲಿ, ಭುಜಾಭೋಗಂ, ನಿಗಳವಾದ ತನ್ನತೋಳನ್ನು, ಪ್ರಸಾರ್ಯ-ಚಾಚಿ, ಅವಸ್ಥಿತಃ-ನಿಂತಿರುವನಾದನು ॥೮॥ಸೋರಿಷ್ಟೋಪಿ-ಆಯರಿಷ್ಟನೂ ಕೂಡ,

---

ನೋಡಿ ಮೇಘಂಗಳು ಪರ್ವತವೆಂಬ ಭ್ರಾಂತಿಯಿಂದ ಅದರಮೇಲೆ ಕುಳಿತುಕೊಳ್ಳುವವು ॥೪॥ ತೀಕ್ಷ್ಣಂಗಳಾದ ಶೃಂಗಂಗಳುಳ್ಳ ಆವೃಷಭಾಸುರನಂನೋಡಿ ಗೋಪಾಲಕರುಗೋಪಸ್ತ್ರೀಯರು ಸಹ ಭಯಂಬಟ್ಟರು. ಪಶುಗಳು ತಮ್ಮಹಿಂಡಂ ಬಿಟ್ಟುಓಡಿದವು ॥೫॥ ಕೃಷ್ಣ! ರಕ್ಷಿಸು, ಕೃಷ್ಣಾ! ಎಂದು ಗೋಪರುಗಳು ಕೂಗಿಕೃಷ್ಣನಿಗೆ ಶರಣಾಗತರಾದರು. ಭಗವಂತನಾದ ಶ್ರೀಕೃಷ್ಣನು ಭಯಾರ್ತವಾದ ಗೋಕುಲವಂನೋಡಿ॥೬॥ ಅಂಜಬೇಡಿರಿ ಎಂದು ಧೈರ್ಯೋಕ್ತಿಯಿಂದ ಅವರಂ ಸಮಾಧಾನರಂಮಾಡಿ ಆವೃಷಭಾಸುರನಂ ಕರೆದನು. ಎಲೈ, ಮಂದಬುದ್ಧಿಯುಳ್ಳ ದುಷ್ಟನಾದ ಅಸುರಾಧಮನೇ! ಭಯಂಗೊಳಿಸಲ್ಪಟ್ಟ ಬಾಲಕರಿಂದ ಯುಕ್ತಂಗಳಾದ ಪಶುಗಳಿಂದ ನಿನಗೆ ಏನುಕೆಲಸವೋ? ॥೭॥ ನಿಮ್ಮಂತಾದುಷ್ಟರ ಬಲಗರ್ವವಂ ನಾಶಂಗೆಯ್ವನಾನು ಇರುವೆನು, ಇಲ್ಲಿಯೇ ಬರುವನಾಗು, ಎಂದು ಭುಜಂಗಳಂ ತಟ್ಟಿಕೊಂಡು ಹಸ್ತಶಬ್ದಂಗಳಿಂದಆಸುರನಂ ಕೋಪಯುಕ್ತನನ್ನಾಗಿ ಮಾಡುತ್ತ, ಸ್ನೇಹಿತನಾದ ಒಬ್ಬ ಗೋಪಾಲಕನ ಹೆಗಲಮೇಲೆ ತನ್ನಭುಜವನಿರಿಸಿ

ಘುಃ ಕ್ರುದ್ಧಃ ಕೃಷ್ಣಮುಪಾದ್ರವತ್ ॥೯॥ ಅಗ್ರನ್ಯಸ್ತವಿಷಾಣಾಗ್ರಸ್ತಬ್ಧಾಸೃಗ್ಲೋಚನೋಽಚ್ಯುತಂ । ಕಟಾಕ್ಷಿಪ್ಯಾದ್ರವತ್ತೂರ್ಣಮಿಂದ್ರಮುಕ್ತೋಽಶನಿರ್ಯಥಾ ॥೧೦॥ ಗೃಹೀತ್ವಾ ಶೃಂಗಯೋಸ್ತಂ ವಾ ಅಷ್ಟಾದಶಪದಾನಿ ಸಃ । ಪ್ರತ್ಯಪೋವಾಹ ಭಗವಾನ್ ಗಜಃ ಪ್ರತಿಗಜಂ ಯಥಾ ॥೧೧॥ ಸೋಽಪವಿದ್ಧೋ ಭಗವತಾ ಪುನರುತ್ಥಾಯ ಸತ್ವರಂ । ಆಪತತ್ಸ್ವಿನ್ನಸರ್ವಾಂಗೋ ನಿಃಶ್ವಸನ್ ಕ್ರೋಧಮೂರ್ಛಿತಃ ॥೧೨॥ ತಮಾಪತಂತಂ ಸ ನಿಗೃಹ್ಯ ಶೃಂಗಯೋಃ ಪದಾ ಸಮಾಕ್ರಮ್ಯ ನಿಪಾತ್ಯ ಭೂತಲೆ । ನಿಷ್ಪೀಡಯಾಮಾಸ ಯಥಾರ್ದ್ರಮಂಬರಂ ಕೃತ್ವಾ ವಿಷಾಣೇನ ಜಘಾನ ಸೋಽಪತತ್ ॥೧೩॥ ಅಸೃಗ್ವಮನ್ ಮೂತ್ರಶಕೃತ್ಸಮುತ್ಸೃಜನ್ ಕ್ಷಿಪಂಶ್ಚ ಪಾದಾನನವಸ್ಥಿತೇಕ್ಷಣಃ । ಜಗಾಮ ಕೃಚ್ಛ್ರಂ ನಿರೃತೇರಥ ಕ್ಷಯಂ

---

ಏವಂ-ಹೀಗೆ, ಕುಪಿತಃ-ಸಿಟ್ಟುಗೊಂಡವನಾಗಿ, ಖುರೇಣ-ಕಾಲಿನಕೊಳಗಿನಿಂದ, ಅವನಿಂ-ನೆಲವನ್ನು, ಉಲ್ಲಿಖನ್-ಕೆರೆಯುತ್ತಲಿರುವನಾಗಿ, ಉದ್ಯತ್ಪುಚ್ಛಭ್ರಮನ್ಮೇಘಃ-ಉದ್ಯತ್ಪುಚ್ಛ-ಎತ್ತಿದ ಬಾಲದಲ್ಲಿ, ಭ್ರಮನ್ಮೇಘಃ-ತಿರುಗುತಲಿರುವ ಮೋಡಗಳುಳ್ಳವನಾಗಿ, ಕ್ರುದ್ಧಃ-ಸಿಟ್ಟುಗೊಂಡವನಾಗಿ, ಕೃಷ್ಣಂ-ಕೃಷ್ಣನನ್ನು ಕುರಿತು, ಉಪಾದ್ರವತ್-ಅಟ್ಟಿಕೊಂಡುಬಂದನು ॥೯॥ ಅಗ್ರ...ಲೋಚನಃ-ಅಗ್ರ-ಮುಂಗಡೆಯಲ್ಲಿ, ನ್ಯಸ್ತ-ಚಾಚಲ್ಪಟ್ಟ, ವಿಷಾಣಾಗ್ರ-ಕೊಂಬುಗಳ ತುದಿಗಳೂ, ಸ್ತಬ್ಧ-ಚಲಿಸದೇಯಿರುವ, ಅಸೃಕ್-ರಕ್ತವಾದ, ಲೋಚನಃ-ಕಂಗಳುಳ್ಳವನೂ ಆದ ಅರಿಷ್ಟನು, ಅಚ್ಯುತಂ-ಕೃಷ್ಣನನ್ನು, ಕಟಾಕ್ಷಿಪ್ಯ-ಕುಡಿನೋಟಗಳಿಂದ ಅಡ್ಡವಾಗಿನೋಡಿ, ಇಂದ್ರಮುಕ್ತಾಶನಿರ್ಯಥಾ-ದೇವೇಂದ್ರನಿಂದ ಬಿಡಲ್ಪಟ್ಟ ವಜ್ರಾಯುಧವು ಹೇಗೋಹಾಗೆ(ಸಿಡಿಲುನುಗ್ಗಿದಂತೆ) ತೂರ್ಣಂ-ಬೇಗನೆ, ಆಪ್ರವತ್-ಅಟ್ಟಿಕೊಂಡುಬಂದನು ॥೧೦॥ ಸಭಗವಾನ್-ಆ ಕೃಷ್ಣನು, ತಂವಾ-ಅವನನ್ನು, ಶೃಂಗಯೋಃ-ಕೊಂಬುಗಳಲ್ಲಿ, ಗೃಹೀತ್ವಾ-ಹಿಡಿದು, ಗಜಃ-ಆನೆಯು, ಪ್ರತಿಗಜಂಯಥಾ-ಇದಿರಾನೆಯನ್ನು ಹೇಗೋಹಾಗೆ, ಅಷ್ಟಾದಶಪದಾನಿ-೧೮ ಹೆಜ್ಜೆಗಳು, ಪ್ರತ್ಯಪೋವಾಹ-ಹಿಮ್ಮೆಟ್ಟಿಸಿ ತಳ್ಳಿದನು ॥೧೧॥ ಭಗವತಾ-ಕೃಷ್ಣನಿಂದ, ಅಪವಿದ್ಧಃ-ತಳ್ಳಲ್ಪಟ್ಟ, ಸಃ-ಆಯರಿಷ್ಟಾಸುರನು, ಸತ್ವರಂ-ಬೇಗದೊಡನೆ, ಪುನಃ-ಮರಳಿಯೂ. ಉತ್ಥಾಯ-ಎದ್ದು, ಸ್ವಿನ್ನಸರ್ವಾಂಗಃ-ಬೆವರಿದ ಸಕಲದೇಹವುಳ್ಳವನೂ, ನಿಶ್ವಸನ್-ನಿಟ್ಟುಸಿರಿಕ್ಕುವನೂ, ಕ್ರೋಧಮೂರ್ಛಿತಃ-ಸಿಟ್ಟಿನಿಂದವ್ಯಾಪ್ತನೂ ಆಗಿ, ಆಪತತ್-ಬಂದುಬಿದ್ದನು ॥೧೨॥ ಸಃ-ಆ ಕೃಷ್ಣನು, ಆಪತಂತಂ-ಮೇಲೆಬೀಳಬ್ಬರುತಲಿರುವ, ತಂ-ಆವೃಷಭಾಸುರನನ್ನು, ಶೃಂಗಯೋಃ-ಕೊಂಬುಗಳಲ್ಲಿ, ನಿಗೃಹ್ಯ-ವತ್ತಿಹಿಡಿದು, ಪದಾ-ಕಾಲಿನಿಂದ, ಸಮಾಕ್ರಮ್ಯ-ತುಳಿದು, ಭೂತಲೇ-ನೆಲದಲ್ಲಿ, ನಿಪಾತ್ಯ-ಬೀಳಕೆಡವಿ, ಆರ್ದ್ರಮಂಬರಂಯಥಾ-ಒದ್ದೆಬಟ್ಟೆಯನ್ನು ಹೇಗೋಹಾಗೆ ನಿಷ್ಪೀಡಯಾಮಾಸ-ಹಿಂಡಿಬಾಧಿಸಿದನು. ಕೃಂತ್ವಾ-ಮುರಿದುಕೊಂಡು, ವಿಷಾಣೇನ-ಅಪರಕೊಂಬಿನಿಂದಲೇ, ಜಘಾನ-ಹುಯ್ದನು. ಸಃ-ಆವೃಷಭನು, ಅಪತತ್-ಬಿದ್ದನು ॥೧೩॥

---

ಕೊಂಡು ನಿಂತವನಾದನು ॥೮॥ ಆಯಸುರನು ಈ ರೀತಿಯಲ್ಲಿ ಕೃಷ್ಣನಿಂದ ಕೋಪಿತನಾದವನಾಗಿ ಕಾಲುಗಳಿಂದ ಭೂಮಿಯುಂ ಕೆರೆಯುತ್ತ, ಎತ್ತಲ್ಪಟ್ಟ ಪುಚ್ಛದಿಂದ ಸುತ್ತುತಲಿರುವ ಮೇಘಂಗಳುಳ್ಳವನಾಗಿ, ಶ್ರೀಕೃಷ್ಣನಂ ಕುರಿತು ಓಡಿಬಂದನು ॥೯॥ ತಿವಿಯಲೋಸುಗ ಶೃಂಗಂಗಳಂ ಮುಂದಕ್ಕೆ ಮಾಡಿಕೊಂಡು ಸ್ತಬ್ಧಂಗಳಾದ ಕೆಂಪಾದ ನೇತ್ರಂಗಳುಳ್ಳವನಾಗಿ ಶ್ರೀಕೃಷ್ಣನಂ ವಕ್ರದೃಷ್ಟಿಯಿಂದ ನೋಡುತ್ತ ಇಂದ್ರಪ್ರಯುಕ್ತವಾದ ವಜ್ರಾಯುಧದಂತೆ ಓಡಿಬಂದನು ॥೧೦॥ ಆಗ ಶ್ರೀಕೃಷ್ಣನು ಶೃಂಗಂಗಳಲ್ಲಿಹಿಡಿದು ಆವೃಷಭಾಸುರನು ಹಿಂದಕ್ಕೆ ನೂರುಹೆಜ್ಜೆಗಳ ಪರ್ಯಂತವೂ ಮಹಾಗಜವು ಪ್ರತಿಗಜವಂ ತಳ್ಳಿದರೀತಿಯಲ್ಲಿ ನೂಕಿದನು ॥೧೧॥ ಆಯಸುರನು ಭಗವಂತನಿಂದ ಕೆಡಹಲ್ಪಟ್ಟು ಹಿಂದಕ್ಕೆ ಹೋಗಿಬಿದ್ದು ಪುನಶ್ಚಾತ್ವರೆಯಿಂದೆದ್ದು ಬೆವರಿದ ಸರ್ವಾಂಗವುಳ್ಳವನಾಗಿ ನಿಟ್ಟುಸುರುಗಳಂ ಬಿಡುತ್ತ ಕ್ರೋಧದಿಂದ ಮೂರ್ಛಿತನಾಗಿರುವ ॥೧೨॥ ಬಿದ್ದುಹೋಗಿದ್ದ ಆಯಸುರನಂ ಪುನಶ್ಚ ಶೃಂಗಗಳಲ್ಲಿಹಿಡಿದು ಕೆಳಕ್ಕೆ ಕೆಡಹಿ ಪಾದದಿಂದ ಮೆಟ್ಟಿಕೊಂಡು ಆರ್ದ್ರವಸ್ತ್ರವಂ ಹಿಂಡದಂತೆ ಹಿಂಡಿ ಅವನಶೃಂಗವಂ ಹಿಡಿದುಕೊಂಡು ಅದರಿಂದಲೇ ಪ್ರಹರಿಸಿದನು ॥೧೩॥ ಈಪ್ರಕಾರವಾಗಿ ಕೃಷ್ಣನಿಂದ ಪೀಡಿತನಾದ ವೃಷಭಾಸುರನು ರಕ್ತವಂ ಕಾರುತ ಮೂತ್ರಪುರೀಷಂಗಳಂ ಬಿಡುತ ಅಂಗತ

ಪುಷ್ಪೈಃಕಿರಂತೋಹರಿಮೀಡಿರೇಸುರಾಃ ||೧೪|| ಏವಂಕಕುದ್ಮಿನಂಹತ್ವಾಸ್ತೂಯಮಾನಸ್ಸ್ವಜಾತಿಭಿಃ | ವಿವೇಶಗೋಷ್ಠಂಸಬಲೋಗೋಪೀನಾಂನಯನೋತ್ಸವಃ ||೧೫|| ಅರಿಷ್ಟೇನಿಹತೇಗೋಷ್ಠೇ ಕೃಷ್ಣೇ

* ನಾರದಮಹರ್ಷಿಬೋಧಿತೇನಕಂಸೇನಶ್ರೀಕೃಷ್ಣಬಲರಾಮೌ *

* ಹ್ವಾನಾಯಾಕ್ರೂರಪ್ರೇಷಣಾದಿಘಟ್ಟಿಃ *

ನಾದ್ಭುತಕರ್ಮಣಾ | ಕಂಸಾಯಾಥಾಹಭಗವಾನ್ನಾರದೋದೇವದರ್ಶನಃ ||೧೬|| ಯಶೋದಾಯಾಸ್ಸುತಾಂಕನ್ಯಾಂದೇವಕ್ಯಾಃಕೃಷ್ಣಮೇವಚ | ರಾಮಂಚರೋಹಿಣೀಪುತ್ರಂವಸುದೇವೇನಬಿಭ್ಯ

---

ಅಸೃಗ್ವಮರ್-ರಕ್ತವನ್ನು ಕಾರುವನಾಗಿಯೂ, ಮೂತ್ರಶಕೃತ್-ಗಂಜಳವನ್ನೂ ಸಗಣಿಯನ್ನೂ, ಸಮುತ್ಸೃಜರ್-ಹೊರಡಿಸಿ ಬಿಡುವನಾಗಿಯೂ, ಪಾದಾರ್-ಕಾಲುಗಳನ್ನು, ಕ್ಷಿಪಂಶ್ಚ-ಹಾರಿಸಿಹೊಡಕೊಳ್ಳುವನಾಗಿಯೂ, ಅನವಸ್ಥಿತೇಕ್ಷಣಃ-ಭ್ರಮಿಸುವ ಕಂಗಳುಳ್ಳವನಾಗಿಯೂ, ಕೃಚ್ಛ್ರಂ-ಕಷ್ಟವನ್ನು, ಜಗಾಮ-ಹೊಂದಿದನು. ಅಥ-ಆಮೇಲೆ, ನಿರೃತೇಃ-ರಾಕ್ಷಸನಾದ ದಿಕ್ಪಾಲನ, ಅಥವಾ ಮೃತ್ಯುವಿನ, ಕ್ಷಯಂ-ಮನೆಯನ್ನು ಕುರಿತು, ಜಗಾಮ-ಹೋದನು. ಸುರಾಃ-ದೇವತೆಗಳು, ಪುಷ್ಪೈಃ-ಹೂವುಗಳಿಂದ, ಕಿರಂತಸ್ಸಂತಃ-ಎರಚುವರಾಗಿ, ಹರಿಂ-ಕೃಷ್ಣನನ್ನು, ಈಡಿರೇ-ಸ್ತುತಿಸಿದರು||೧೪||ಏವಂ-ಹೀಗೆ, ಕಕುದ್ಮಿನಂ-ಕಾಡನೆತ್ತನ್ನು, ಹತ್ವಾ-ಕೊಂದು, ಸ್ವಜಾತಿಭಿಃ-ತನ್ನ ಜಾತಿಯವರಿಂದ, ಸ್ತೂಯಮಾನಸ್ಸನ್-ಕೊಂಡಾಡಲ್ಪಡುತಲಿರುವನಾಗಿ. ಸಬಲಃ-ಬಲರಾಮನಿಂದ ಸಹಿತನಾದ, ಗೋಪೀನಾಂನಯನೋತ್ಸವಃ-ಗೊಲ್ಲತಿಯರ ಕಂಗಳಿಗೆ ಹಬ್ಬವಾಗಿರುವ ಕೃಷ್ಣನು, ಗೋಷ್ಠಂ-ಗೋಕುಲವನ್ನು, ವಿವೇಶ-ಹೊಕ್ಕನು ||೧೫||ಗೋಷ್ಠೇ-ಗೋಕುಲದಲ್ಲಿ, ಅದ್ಭುತಕರ್ಮಣಾ-ಆಶ್ಚರ್ಯವಾದಕೆಲಸಗಳುಳ್ಳ, ಕೃಷ್ಣೇನ-ಕೃಷ್ಣನಿಂದ, ಅರಿಷ್ಟೇ-ವೃಷಭಾಸುರನು, ನಿಹತೇಸತಿ-ಕೊಲ್ಲಲ್ಪಟ್ಟವನಾಗುತಲೂ, ದೇವದರ್ಶನಃ-ದೇವರ್ಷಿಯಾದ, ಅಥವಾ ದೇವತೆಗಳಿದ್ದಂತೆ ಜ್ಞಾನವುಳ್ಳವನಾದ, ಭಗವಾನ್-ಪೂಜ್ಯನಾದ, ನಾರದಃ-ನಾರದಮುನಿಯು, ಕಂಸಾಯ-ಕಂಸನಿಗೆ, ಪ್ರಾಹ-ಸ್ಪಷ್ಟವಾಗಿಹೇಳಿದನು ||೧೬|| ಏನೆಂದರೆ-ಕನ್ಯಾಂ-ಹೆಂಣುಕೂಸನ್ನು, ಯಶೋದಾಯಾಃ-ಯಶೋದೆಯ, ಸುತಾಂ-ಮಗಳನ್ನಾಗಿಯೂ, ಕೃಷ್ಣಂಚ-ಕೃಷ್ಣನನ್ನೂ, ದೇವಕ್ಯಾಏವ-ದೇವಕಿಯ ಮಗನನ್ನಾಗಿಯೇ, ರಾಮಂ

---

ಗಾಗಿಬಿದ್ದು ಕಾಲುಗಳಂ ಒದೆದುಕೊಳ್ಳುತ ಕಂಣಗುಡ್ಡು ಹೊರಟು ಮೃತ್ಯುವಿನಾಂತುಕ್ಷಯವನೆಯ್ದಿದನು. ಶ್ರೀಕೃಷ್ಣನಮೇಲೆ ದೇವತೆಗಳು ಪುಷ್ಪವೃಷ್ಟಿಯಂಕರೆದು ಹರಿಯಂಸ್ತುತಿಸಿದರು||೧೪|| ಎಲೈಅರಸೇ! ಈ ಪ್ರಕಾರಂ ವೃಷಭಾಸುರನಂ ಸಂಹರಿಸಿ ಗೋಪಾಲಕರಿಂದ ಸ್ತುತಿಸಲ್ಪಡುವನಾಗಿ ಬಲರಾಮಸಮೇತನಾದಶ್ರೀಕೃಷ್ಣನು ಗೋಪಸ್ತ್ರೀಯರುಗಳ ನೇತ್ರಾನಂದವಂ ಮಾಡುವನಾಗಿ ಗೋಪಸ್ಥಾನಕ್ಕೆ ಬಂದನು ||೧೫||ಎಲೈಅರಸೇ! ಅದ್ಭುತವ್ಯಾಪಾರವುಳ್ಳ ಕೃಷ್ಣನಿಂದ ಗೋಷ್ಠದಲ್ಲಿ ಅರಿಷ್ಟಾಸುರನು ಸಂಹೃತನಾಗಲಾಗಿ ಭಗವಂತನಾದ ದೇವರ್ಷಿಯಾದ ನಾರದನು ಕಂಸನಂಕುರಿತು ಹೇಳಿದನು ||೧೬|| [ಅದೆಂತೆನೆ] ದುರ್ಗಾರೂಪಳಾ





ದಕನ್ಯೆಯಂ ಯಶೋದಾಪುತ್ರಿಯನ್ನಾಗಿಯೂ,ಆಕೃಷ್ಣನಂ ದೇವಕೀಪುತ್ರನನ್ನಾಗಿಯೂ, ರೋಹಿಣೀಗರ್ಭದಲ್ಲಿ ಜನಿಸಿದ ಬಲರಾಮನಂ ದೇವಕೀದೇವಿಯುಳಿಳನೆಯಗರ್ಭವನ್ನಾಗಿಯೂ,ತಿಳಿಸಿ ವಸುದೇವನು ಭಯದಿಂದ ಮಿತ್ರನಾದ ನಂದನವಶದಲ್ಲಿ ರಾಮಕೃಷ್ಣರ ನಿರಿಸಿರುವನೆನುತಲೂ, ಆರಾಮಕೃಷ್ಣರಿಂನಿನ್ನ ಸಂಬಂಧಿಗಳಾದಬಹಳೆಮಂದಿಅಸುರರುಸಂಹೃತರಾದರೆನುತಲೂ,ಹೇಳಿದನು ||೧೭||ನಾರದನಿಂದ ಹೇಳಲ್ಪಟ್ಟಈ

ತಾ | ನ್ಯಸ್ತಾಸ್ಸ್ವಮಿತ್ರೇನಂದವ್ರೇಯಾಭ್ಯಾಂತೇಪುರುಷಾಹತಾಃ |೧೭| ನಿಶಮ್ಯತದ್ಭೋಜಪತಿಃಕೋಪಾತ್ಪ್ರಚಲಿತೇಂದ್ರಿಯಃ | ನಿಶಾತಮಸಿಮಾದತ್ತವಸುದೇವಜಿಘಾಂಸಯಾ |೧೮| ನಿವಾರಿತೋನಾರದೇನತತ್ಸುತೌಮೃತ್ಯುಮಾತ್ಮನಃ | ಜ್ಞಾತ್ವಾಲೋಹಮಯೈಃಪಾಶೈರ್ಬಬಂಧಸಹಭಾರ್ಯಯಾ|೧೯ ಪ್ರತಿಯಾತೇತುದೇವರ್ಷೌಕಂಸಆಭಾಷ್ಯಕೇಶಿನಂ | ಪ್ರೇಷಯಾಮಾಸಹನ್ಯೇತಾಂರಾಮಮಾಧ

---

ಚ-ಬಲರಾಮನನ್ನು, ರೋಹಿಣೀಪುತ್ರಂ-ರೋಹಿಣೀದೇವಿಯ ಮಗನನ್ನಾಗಿಯೂ, ಯಾಭ್ಯಾಂ-ಯಾವಕೃಷ್ಣರಾಮರಿಂದ, ತೇ-ನಿನ್ನವರಾದ, ಪುರುಷಾಃ-ದೈತ್ಯರು, ಹತಾಃ-ಕೊಲ್ಲಲ್ಪಟ್ಟವರಾದರೋ, ತೌವೈ-ಆರಾಮಕೃಷ್ಣರಾದರೋ, ಬಿಭ್ಯತಾ-ಹೆದರುತಲಿರುವ, ವಸುದೇವೇನ-ವಸುದೇವನಿಂದ, ಸ್ವಮಿತ್ರೇ-ತನ್ನಸ್ನೇಹಿತನಾದ, ನಂದೇ-ನಂದಗೋಪನ ಬಳಿಯಲ್ಲಿ, ನ್ಯಸ್ತೌ-ಇರಿಸಲ್ಪಟ್ಟವರಾದರು ಎಂತಲೂಹೇಳಿದನು||೧೭||ಭೋಜಪತಿಃ-ಭೋಜರೆಂಬ ಯಾದವರಿಗೊಡೆಯನಾದ ಕಂಸನು, ತತ್-ಆನಾರದನಮಾತನ್ನು, ನಿಶಮ್ಯ-ಕೇಳಿ, ಕೋಪಾತ್-ಸಿಟ್ಟಿನಿಂದ, ಪ್ರಚಲಿತೇಂದ್ರಿಯಸ್ಸ-ಕದಲುವ ಕರಣಂಗಳುಳ್ಳವನಾಗಿ,, (ವೈನಡುಗುತ್ತ)ವಸುದೇವಜಿಘಾಂಸಯಾ-ವಸುದೇವನಂ ಕೊಲ್ಲಲಿಚ್ಛೆಯಿಂದ, ನಿಶಾತಂ-ತೀಕ್ಷ್ಣವಾದ, ಅಸಿಂ-ಕತ್ತಿಯನ್ನು, ಆದತ್ತ-ತೆಗೆದುಕೊಂಡನು||೧೮|| ನಾರದೇನ-ನಾರದಮುನಿಯಿಂದ, ನಿವಾರಿತಃ-ಬೇಡವೆಂದು ತಡೆಯಲ್ಪಟ್ಟವನಾಗಿ, ತತ್ಸುತೌ-ಆವಸುದೇವನ ಪುತ್ರರನ್ನು, ಆತ್ಮನಃ-ತನಗೆ, ಮೃತ್ಯುಂ-ನಾಶಕವನ್ನಾಗಿ, ಜ್ಞಾತ್ವಾ ತಿಳಿದು, ತಂ-ಆವಸುದೇವನನ್ನು ಭಾರ್ಯಯಾಸಹ-ಹೆಂಡತಿಯೊಡನೆ, ಲೋಹಮಯೈಃಪಾಶೈಃ-ಕಬ್ಬಿಣದ ಸರಪಣಿಗಳಿಂದ, ಬಬಂಧ-ಕಟ್ಟಿಹಾಕಿದನು||೧೯|| ದೇವರ್ಷೌ-ನಾರದನು, ಪ್ರತಿಯಾತೇ- ಹಿಂತೆರಳಿಹೋಗುತಲೂ, ಕಂಸಸ್ತು- ಕಂಸನಾದರೋ, ಕೇಶಿನಂ- ಕೇಶಿಯೆಂಬದೈತ್ಯ

---

ರಹಸ್ಯಾರ್ಥವ ನೆಲ್ಲಮಂಕೇಳಿ, ಕಂಸನು ಕೋಪದಿಂದ ವ್ಯಾಕುಲಿತೇಂದ್ರಿಯನಾಗಿ ವಸುದೇವನಂಸಂಹರಿಸಲೋಸುಗ ತೀಕ್ಷ್ಣವಾದ ಖಡ್ಗಮ ತೆಗದುಕೊಂಡನು ||೧೮|| ಆಗನಾರದನು ವಸುದೇವನಂ ನೀನು ಸಂಹರಿಸಿದರೆ



ರಾಮಕೃಷ್ಣರು ಪಲಾಯನವಂ ಮಾಡುವರು, ಆದುದರಿಂದ ವಸುದೇವನಂ ಸಂಹರಿಸಬೇಡ,ಎಂದು ಉಪಾಯದಿಂದ ತಪ್ಪಿಸಿದನು. ಆಮೇಲೆ ಆಕಂಸನು ಆದೇವಕೀ ವಸುದೇವರಿಗೆ ಪುತ್ರನಾದ ಶ್ರೀಕೃಷ್ಣನಂ ತನಗೆ ಮೃತ್ಯುರೂಪನನ್ನಾಗಿ ತಿಳಿದು ಆದೇವಕೀ ವಸುದೇವರಂ ಲೋಹಮಯಂಗಳಾದ ಸಂಕೋಲೆಗಳಿಂದ ಬಂಧಿಸಿದನು |೧೯|| ಈಪ್ರಕಾರಂ ನಾರದನುಹೇಳಿ ಹೊರಟುಹೋದಮೇಲೆ ಆಕಂಸನು ಕೇಶಿಯೆಂಬ ಅಸುರನಂಕರೆ

ವೌ ॥೨೦॥ ತತೋಮುಷ್ಟಿಕಚಾಣೂರಶಲತೋಸಲಕಾದಿಕಾನ್ । ಅಮಾತ್ಯಾನ್ಹಸ್ತಿಪಾಂಶ್ಚೈವ ಸಮಾಹೂಯಾಹಭೋಜರಾಟ್ ॥೨೧॥ ಭೋಭೋನಿಶಮ್ಯತಾಮೇತದ್ವೀರಚಾಣೂರಮುಷ್ಟಿಕೌ । ನಂದವ್ರಜೇಕಿಲಾಸಾತೇಸುತಾವಾನಕದುಂದುಭೇಃ ॥೨೨॥ ರಾಮಕೃಷ್ಣೌತತೋಮಹ್ಯಂಮೃತ್ಯುಃಕಿಲ ನಿದರ್ಶಿತಃ। ಭವದ್ಭ್ಯಾಮಿಹಸಂಪ್ರಾಪ್ತೌಹನ್ಯೇತಾಂಮಲ್ಲಲೀಲಯಾ॥೨೩॥ಮಂಚಾಃಕ್ರಿಯಂತಾಂ

---

ರನ್ನು, ಆಹೂಯ-ಕರೆದು, ಭವತಾ-ನಿನ್ನಿಂದ, ರಾಮಮಾಧವೌ-ರಾಮಕೃಷ್ಣರು, ಹನ್ಯೇತಾಮಿತಿ-ಕೊಲ್ಲಲ್ಪಡಲಿಯೆಂದು, ಪ್ರೇಷಯಾಮಾಸ-ಕಳುಹಿಸಿದನು ॥೨೦॥ ತತಃ-ಆಮೇಲೆ, ಭೋಜರಾಟ್-ಕಂಸನು, ಮುಷ್ಟಿಕ..ಕಾನ್-ಮುಷ್ಟಿಕ-ಮುಷ್ಟಿಕನೆಂಬಜಟ್ಟಿ, ಚಾಣೂರ-ಚಾಣೂರನೆಂಬಜಟ್ಟಿ, ಶಲನೆಂಬವನು, ತೋಸಲಕನೆಂಬವನು, ಆದಿಕಾನ್-ಮೊದಲಾದವರನ್ನು, ಅಮಾತ್ಯಾನ್-ಮಂತ್ರಿಗಳನ್ನೂ, ಹಸ್ತಿಪಾಂಶ್ಚೈವ-ಮಾವುತರನ್ನೂ ಕೂಡ, ಸಮಾಹೂಯ-ಕರೆಯಿಸಿಕೊಂಡು, ಆಹ-ನುಡಿದನು॥೨೧॥ಭೋಭೋ-ಅಯ್ಯಯ್ಯಾ। ವೀರ-ಶೂರನಾದ ಚಾಣೂರನೇ ಮುಷ್ಟಿಕನೇ।ಏತತ್-ಈವಾಕ್ಯವು, ನಿಶಮ್ಯತಾಂ-ನಿಮ್ಮಿಂದಕೇಳಲ್ಪಡಲಿ ಆನಕದುಂದುಭೇಃ-ವಸುದೇವನ, ಸುತೌ-ಕುಮಾರರೂ, ನಂದವ್ರಜೇ-ನಂದಗೋಕುಲದಲ್ಲಿ, ಆಸಾತೇಕಿಲ-ಇರುವರಂತೆ ॥೨೨॥ ತತಃ-ಅದರಿಂದ, ರಾಮಕೃಷ್ಣೌ-ರಾಮನೂ ಕೃಷ್ಣನೂ, ಮಹ್ಯಂ-ನನಗೋಸುಗ, ಮೃತ್ಯುಃ-ಮರಣಕಾರಿಗಳಾಗಿ, ನಿದರ್ಶಿತೌಕಿಲ-ತೋರಿಸಲ್ಪಟ್ಟಿದ್ದಾರೆಯಲ್ಲವೆ. ಇಹ-ಇಲ್ಲಿಗೆ, ಸಂಪ್ರಾಪ್ತೌ-ಬಂದಂತಾ, ಆರಾಮಕೃಷ್ಣರು,ಭವದ್ಭ್ಯಾಂ-ನಿಮ್ಮಿಂದ, ಮಲ್ಲಲೀಲಯಾ-ಜಟ್ಟಿಗರಆಟದಿಂದ, ಹನ್ಯೇತಾಂ-ಕೊಲ್ಲಲ್ಪಟ್ಟವರಾಗಲಿ ॥೨೩॥ ಮಂಚಾಃ-ಮಂಚಿಕೆಗಳು, ವಿವಿಧಾಃ-ಹಲವುಬಗೆಗಳುಳ್ಳವಾಗಿಯೂ, ಮಲ್ಲರಂಗಪರಿಶ್ರಿತಾಃ-ಜಟ್ಟಿಗರ ಆಟದನೆಲವನ್ನು ಆಶ್ರಯಿಸಿದ ವಾಗಿಯೂ, ಕ್ರಿಯಂತಾಂ-ಮಾಡಲ್ಪಡಲಿ ಪೌರಜಾನಪದಾಃ-ಪಟ್ಟಣದಲ್ಲಿ ದೇಶದಲ್ಲಿಯೂ ಇರುವ, ಸರ್ವೇ-ಎಲ್ಲರೂ, ಸ್ವೈರಸಂಯುಗಂ-ಸ್ವೇಚ್ಛೆಯಾದ ಕಾಳಗ

---

ದು ನೀನು ರಾಮಕೃಷ್ಣರು ಸಂಹರಿಸಿ ಹೊರಟುಬಾಯೆಂದು ಕಳುಹಿಸಿದನು ॥೨೦॥ ಆಮೇಲೆ ಕಂಸನುಮುಷ್ಟಿಕನು ಚಾಣೂರನು ಶಲನು ತೋಸಲಕನು ಮುಂತಾದ ಮಂತ್ರಿಗಳಂ ಆನೆಯಮಾವುತರಂ ಸಹ ಕರೆಯಿಸಿ







ಆಜ್ಞಾಪಿಸಿದನು ॥೨೧॥ [ಅದೆಂತೆನೆ] ಎಲೈವೀರಚಾಣೂರನೇ! ಎಲೈಮುಷ್ಟಿಕನೇ! ಇದಂಕೇಳಿರಿ, ವಸುದೇವಪುತ್ರರಾದ ರಾಮಕೃಷ್ಣರು ನಂದವ್ರಜದಲ್ಲಿ ಇರುವರಂತೆ॥೨೨॥ ಅವರಿಂದ ನನಗೆಮೃತ್ಯುವೆಂದು ನಾರದನಿಂ ಹೇಳಲ್ಪಟ್ಟಿತು. ಅವರಿಬ್ಬರಂ ನೀವು ಇಲ್ಲಿಜಟ್ಟಿಗರಕಾಳಗವೆಂಬ ನೆವದಿಂದ ಸಂಹಾರವಂ ಮಾಡಿರಿ ॥೨೩॥ಯುದ್ಧರಂಗಕ್ಕೆ ಸುತ್ತಲೂ ನಾನಾಪ್ರಕಾರವಾಗಿ ಮಂಚಗಳಂ ಕಲ್ಪಿಸುವರಾಗಿ ಪುರದಜನರು ದೇಶದಲ್ಲಿರುವಜನ

ವಿವಿಧಾಮಲ್ಲರಂಗಪರಿಶ್ರಿತಾಃ । ಪೌರಜಾನಪದಾಸ್ಸರ್ವೇಪಶ್ಯಂತುಸ್ವೈರಸಂಯುಗಂ ॥೨೪॥
ಅಥವ್ಯಾಖ್ಯಾನರಹಿತಪ್ರಕ್ಷಿಪ್ತಗ್ರಂಥಃ *
ಮಹಾಮಾತ್ಯನಿಬೋಧೇದಂವಚೋಮಮಮಹಾಮತೇ॥ಶೃಣುಧ್ವಮೇತದ್ವಚನಂಮಯೋದಿತಂನಿಶಮ್ಯಸರ್ವ
ಂಯದಿಧಾರಯಂತುತತ್ ।ಯೇನಾಹಮೇತೇಷ್ವಸುಹೃತ್ತ್ವಮಾದಿತಶ್ಚರಾಮಿಬಂಧುಷ್ವಪಿತತ್ರಕಾರ
ಣಂ।೧॥ಮಾತಾಮಮಮಹಾಭಾಗಾಕದಾಚಿತ್ಕಮಲೇಕ್ಷಣಾ ।ವಿಚರಂತೀಗೃಹೋದ್ಯಾನೇಮಂದಮಾರುತ
ವೀಜಿತೇ॥೨॥ಪ್ರಫುಲ್ಲಾಶೋಕವಕುಳಪೂಗಪುನ್ನಾಗಶೋಭಿತೇ॥ಭ್ರಮದ್ಭ್ರಮರಸಂಘಾತಕೂಜತ್ಕೋ
ಕಿಲಸಂಯುತೇ॥೩॥ನೃತ್ಯಚ್ಛಿಖಂಡಿನಿವಹೇಮರ್ಕಟಾಟೋಪಸುಂದರೇ॥ವಸಂತಸಮಯೇರಮ್ಯೇಸಾಲಮಂಡ
ಲಮಂಡಿತೇ॥೪॥ಚರಂತೀತತ್ರಮೇಮಾತಾಚಿಂತಯಾಮಾಸಸುವ್ರತಾ ।ಭರ್ತಾರಂಕಾಮಸಂತಪ್ತಾಋತು

---

ವನ್ನು, ಪಶ್ಯಂತು-ನೋಡಲಿ.॥೨೪॥(ಮಹಾಮಾತ್ಯ-ಪ್ರಧಾನ ಮಂತ್ರಿಯೇ, ಮಹಾಮತೇ-ಹೆಚ್ಚು ಬುದ್ಧಿಯುಳ್ಳವನೇ! ಮಮ-ನನ್ನ, ಇದಂ ವಚಃ-ಈ ಮಾತನ್ನು, ನಿಬೋಧ-ತಿಳಿಕೋ) ॥ಪ್ರಕ್ಷಿಪ್ತಗ್ರಂಥಟೀಕಾರಂಭ॥

*[ಕಂಸವಾಕ್ಯವು.] ಮಯಾ-ನನ್ನಿಂದ, ಉದಿತಂ-ಹೇಳಲ್ಪಟ್ಟ, ಏತದ್ವಚನಂ-ಈ ಮಾತನ್ನು, ಶೃಣುಧ್ವಂ-ಕೇಳಿರಿ. ಯೇನ-ಯಾವಕಾರಣದಿಂದ, ಅಹಂ-ನಾನು, ಏತೇಷು-ಈಯಾದವರಲ್ಲಿ, ಬಂಧುಷ್ವಪಿ-ನಂಟರಾದವರಲ್ಲಿಯೂ ಕೂಡ, ಆದಿತಃ-ಮೊದಲಿನಿಂದ, ಅಸುಹೃತ್ತ್ವಂ-ದ್ವೇಷವನ್ನು, ಚರಾಮಿ-ಆಚರಿಸುತಲಿರುವೆನು, ತತ್ರ-ಆವಿಷಯದಲ್ಲಿ, ಕಾರಣಂ ಸರ್ವಂ-ನಿಮಿತ್ತವೆಲ್ಲವನ್ನೂ, ನಿಶಮ್ಯ-ಕೇಳಿ, ಯದಿ-ಆದರೆ, ತತ್-ಅದರನ್ನು, ಧಾರಯಂತು-ಮನಸ್ಸಿನಲ್ಲಿಟ್ಟುಕೊಳ್ಳಿರಿ ॥೧॥ ಕದಾಚಿತ್-ಒಂದಾನೊಂದು ಕಾಲದಲ್ಲಿ, ಕಮಲೇಕ್ಷಣಾ-ತಾವರೆಗಂಣಿಯಾದ, ಮಹಾಭಾಗಾ-ಮಹಾಪೂಜ್ಯತೆಯುಳ್ಳ, ಮಮ ಮಾತಾ-ನನ್ನ ತಾಯಿ, ಮಂದಮಾರುತವೀಜಿತೇ-ಕಿರುಗಾಳಿಯಿಂದ ಸುಳಿಯಲ್ಪಡುತಿರುವ, ಗೃಹೋದ್ಯಾನೇ-ಮನೆಯತೋಟದಲ್ಲಿ, ವಿಚರಂತೀ-ವಿಹರಿಸುತಲಿರುವಳಾದಳು ॥೨॥ ಪ್ರಫುಲ್ಲ-ಅರಳಿದ, ಅಶೋಕ-ಅಸುಗೆ, ವಕುಳ-ಹವಳಸರಿ, ಪೂಗ-ಅಡಕೆ, ಪುನ್ನಾಗ-ಸುರಹೊನ್ನೆಮರಗಳಿಂದ, ಶೋಭಿತೇ-ಅಲಂಕರಿಸಲ್ಪಟ್ಟಂಥಾ, ಭ್ರಮತ್-ತಿರುಗುತ್ತಿರುವ, ಭ್ರಮರ-ತುಂಬಿಗಳ, ಸಂಘಾತ-ಹಿಂಡಿನಿಂದಲೂ, ಕೂಜತ್-ಕೂಗುತ್ತಿರುವ, ಕೋಕಿಲ-ಕೋಗಿಲೆಗಳಿಂದಲೂ, ಸಂಯುತೇ-ಕೂಡಿದಂಥಾ, ॥೩॥ ನೃತ್ಯತ್-ಕುಣಿಯುತಲಿರುವ, ಶಿಖಂಡಿ-ನವಿಲುಗಳ, ನಿವಹೇ-ಗುಂಪುಳ್ಳಂಥಾ, ಮರ್ಕಟ-ಕಪಿಗಳ, ಆಟೋಪ-ಆಡಂಬರದಿಂದ, ಸುಂದರೇ-ಚೆಲುವಾದಂಥಾ, ವಸಂತಸಮಯೇ-ವಸಂತಕಾಲವುಳ್ಳಂಥಾ, ರಮ್ಯೇ-ಮನೋಹರವಾದಂಥಾ, ಸಾಲ-ಮರಗಳ, ಮಂಡಲ-ಸಮೂಹದಿಂದ, ಮಂಡಿತೇ-ಅಲಂಕರಿಸಲ್ಪಟ್ಟಂಥಾ ॥೪॥ ತತ್ರ-ಆತೋಟದಲ್ಲಿ, ಚರಂತೀ-ತಿರುಗುತಲಿರುವ, ಮೇ-ನನ್ನ, ಮಾತಾ-ತಾಯಿ, ಸುವ್ರತಾ-ಒಳ್ಳೆಯ ನಿಯಮವುಳ್ಳವಳೂ, ಋತುಸ್ನಾತಾ-ಮುಟ್ಟುನೀರೆರಕೊಂಡವಳೂ, ಸ್ವಲಂಕೃತಾ-ಚನ್ನಾಗಿಸಿಂಗರಿಸಲ್ಪಟ್ಟವಳೂ, ಆದ್ದರಿಂದಲೇ, ಕಾಮಸಂತಪ್ತಾ-ಮನ್ಮಥನಿಂದ ಕುದಿಸಲ್ಪಟ್ಟವಳಾಗಿ, ಭರ್ತಾರಂ-ಗಂಡನನ್ನು, ಚಿಂತಯಾಮಾಸ-ನೆನಪುಮಾಡಿ ಕೊಳ್ಳುತ್ತಿದ್ದಳು॥೫॥ಅತ್ರೈವ-ಇಲ್ಲಿಯೇ, ನಾಮತಃ-ಹೆಸರಿನಿಂದ, ದ್ರುಮಿಡಃ--ದ್ರುಮಿಡನೆಂದುಪ್ರ

---

ರು ಎಲ್ಲರೂ ಸ್ವೇಚ್ಛೆಯಿಂದುಂಟಾಗುವ ಯುದ್ಧವಂ ನೋಡುವವರಾಗಲಿ॥ ॥೨೪॥

[ಪ್ರಕ್ಷಿಪ್ತತಾತ್ಪರ್ಯವು]॥ ಕಂಸನುಹೇಳುತ್ತಾನೆ—ಮಂತ್ರಿಗಳಿರಾ! ನನ್ನ ನಂಟರಲ್ಲಿ ಮೊದಲಿನಿಂದ ನಾನು ಮಾಡುತ್ತಬಂದ ವಿರೋಧಕ್ಕುಂಟಾದ ಕಾರಣವನ್ನು ಹೇಳುತ್ತೇನೆ. ಅದರನ್ನು ನೀವುಕೇಳಿ ನೆನಪಿಟ್ಟುಕೊಳ್ಳಿರಿ ॥೧॥ ಪೂಜ್ಯಳಾದ ನನ್ನ ತಾಯಿ ಒಂದುಸಮಯದಲ್ಲಿ ಕಿರುಗಾಳಿ ಬೀಸುತ್ತಿರುವಾಗಮನೆಯತೋಟದಲ್ಲಿ ವಿನೋದವಾಗಿದ್ದಳು ॥೨॥ ಅಸುಗೆ, ಪಗಡಸರಿ, ಅಡಿಕೆ ಸುರಹೊನ್ನೆ, ಮೊದಲಾದ ಗಿಡಗಳು ಚಿಗುರಿದ್ದವು. ತುಂಬಿವಿಂಡೂ ಕೋಗಿಲೆಗಳೂ ತಿರುಗುತ್ತಲೂ ಕೂಗುತ್ತಲೂ ಇದ್ದವು ॥೩॥ ನವಿಲುಗಳು ಕುಣಿಯುತ್ತಲೂ ಕೋತಿಗಳು ಹಾರಾಡುತ್ತಲೂ ಗಿಡಗಳು ಪುಷ್ಪಿಸುವ ಕಾಲವು ಚನ್ನಾಗಿತ್ತು ॥೪॥ ಅಲ್ಲಿತಿರುಗುತ್ತಿದ್ದ ನನ್ನತಾಯಿ ಋತುಸ್ನಾನಮಾಡಿ ಅಲಂಕರಿಸಿಕೊಂಡು ಕಾಮಪೀಡಿತಳಾಗಿದ್ದದ್ದರಿಂದ ಗಂಡನಂ ಸ್ಮರಿಸಿದಳು ॥೫॥ ಅಲ್ಲಿಯೇ ಅಡಗಿಕೊಂಡು ತಿರುಗಿತ್ತಿದ್ದ ದ್ರುಮಿಡನೆಂಬ ಗಂಧರ್ವನು ಒಂಟಿಗಳಾಗಿ ತಿರು

ತುಸ್ನಾತಾಸ್ವಲಂಕೃತಾ ||೫|| ಅತ್ರೈವಕಶ್ಚಿದ್ಗಂಧರ್ವೋದ್ರವಿಡೋನಾಮನಾಮತಃ | ಚರನ್ನಂತರ್ಹಿತಃಕಾಲೇದೃಷ್ಟ್ವಾತಾಮೇಕಚಾರಿಣೀಂ ||೬|| ವಿಜ್ಞಾಯಚಿಂತಿತಂತಸ್ಯಾಸ್ಸರ್ವಸತ್ವಾಶಯಾರ್ಥವಿತ್ | ಉಗ್ರಸೇನವಪುರ್ಬಿಭ್ರತ್ಸಸ್ಮಿತಾಲಾಪವೀಕ್ಷಿತಃ ||೭|| ತಾಮಾಸಸಾದಕಾಮಾರ್ತಾಂಕಾಮಯಾನಃಪತಿವ್ರತಾಂ | ಅಜಾನಮಾನಾಸಾಭ್ಯೇತ್ಯರೇಮೇತೇನಸಮಂವನೇ ||೮|| ಸಾತಂವಿದಿತ್ವಾರಮಣೇತರಂಸತೀನಿತಾಂತಖೇದಾವಿಲಲೋಚನಾಶಯಾ | ಉವಾಚಕಸ್ತ್ವಂಕಿತವಾರ್ಯಗರ್ಹಿತಂದುರಾತ್ಮನಾಯೇನಕೃತಂತ್ವಯೇದೃಶಂ ||೯|| ಇತಿಬ್ರುವಂತೀಂಪರಿಸಾಂತ್ವಯಞ್ಛನೈಸ್ಸದೀರ್ಘಬಾಹುರ್ದ್ರವಿಡೋಭ್ಯಭಾಷತ | ವಯಂಹಿಗಂಧರ್ವಕುಲೋದ್ಭವಾಬಲೇಗೀರ್ವಾಣತುಲ್ಯಾಮರವಲ್ಲಭಾನುಗಾಃ ||೧೦|| ಭವಾದೃಶೀನಾಂಮನುಜಾಂಗನಾನಾಂಜಾನೀಹಿಭದ್ರೇಸುಲಭಾವಯಂನಚ | ಜರಾವಿನಾಶಾದ್ಯಖಿಲಾಧಿ

---

ಸಿದ್ಧನಾದ, ಕಶ್ಚಿದ್ಗಂಧರ್ವಃ-ಒಬ್ಬಾನೊಬ್ಬ ಗಂಧರ್ವನು, ಅಂತರ್ಹಿತಃ-ಅಡಗಿದ್ದವನಾಗಿ, ಚರನ್-ತಿರುಗುತಲಿದ್ದವನಾದ್ದರಿಂದ, ಕಾಲೇ-ಕಾಮೋದ್ದೀಪಕ ಸಮಯದಲ್ಲಿ, ಏಕಚಾರಿಣೀಂ-ಒಬ್ಬಳಾಗಿ ತಿರುಗುತ್ತಿರುವ, ತಾಂ-ಆಕೆಯನ್ನು, ದೃಷ್ಟ್ವಾ-ನೋಡಿ ||೬|| ಸರ್ವ-ಸಮಸ್ತರಾದ, ಸತ್ವ-ಪ್ರಾಣಿಗಳ, ಆಶಯ-ಅಭಿಪ್ರಾಯದ, ಅರ್ಥ-ವಿಷಯವನ್ನು, ವಿತ್-ಬಲ್ಲವನಾದ್ದರಿಂದ, ತಸ್ಯಾಃ-ಆಕೆಯ, ಚಿಂತಿತಂ-ಬಯಕೆಯನ್ನು, ವಿಜ್ಞಾಯ-ತಿಳಿದು, ಉಗ್ರಸೇನವಪುಃ-ಅವಳ ಗಂಡನ ರೂಪವನ್ನು, ಬಿಭ್ರತ್-ಧರಿಸಿದವನಾಗಿ, ಸಸ್ಮಿತ-ಕಿರುನಗೆಯಿಂದ ಕೂಡಿದ, ಆಲಾಪ-ಮಾತುಗಳು, ವೀಕ್ಷಿತಃ-ನೋಟಗಳೂ ಉಳ್ಳವನಾಗಿ ||೭|| ಕಾಮಾರ್ತಾಂ-ಮನ್ಮಥ ಪೀಡಿತಳಾದ, ತಾಂಪತಿವ್ರತಾಂ-ಆಗರ್ತೆಯನ್ನು, ಕಾಮಯಾನಃ-ಬಯಸಿದವನಾಗಿ, ಆಸಸಾದ-ಹತ್ತಿರಕ್ಕೆ ಸೇರಿದನು. ಸಾ-ಅವಳು, ಅಜಾನಮಾನಾ-ಅರಿಯದವಳಾದ್ದರಿಂದ, ಅಭ್ಯೇತ್ಯ-ಬಂದು, ವನೇ-ತೋಟದಲ್ಲಿ, ತೇನ ಸಮಂ-ಅವನೊಡನೆ, ರೇಮೇ-ಕ್ರೀಡಿಸಿದಳು ||೮|| ಸಾ-ಆ, ಸತೀ-ಪತಿವ್ರತೆಯು, ತಂ-ಅವನನ್ನು, ರಮಣೇತರಂ-ಗಂಡನಲ್ಲದವನನ್ನಾಗಿ, ವಿದಿತ್ವಾ-ತಿಳಿದು, ನಿತಾಂತ-ಬಹಳವಾಗಿ, ಖೇದ-ದುಃಖದಿಂದ, ಆವಿಲ-ಕಲುಷವಾದ, ಲೋಚನ-ಕಂಗಳೂ, ಆಶಯಾ-ಮನಸ್ಸು ಉಳ್ಳವಳಾಗಿ, ಉವಾಚ-ನುಡಿದಳು ಯೇನ-ಯಾವ, ದುರಾತ್ಮನಾ-ದುಷ್ಟನಾದ, ತ್ವಯಾ-ನಿನ್ನಿಂದ, ಈದೃಶಂ-ಇಂಥಾ, ಆರ್ಯಗರ್ಹಿತಂ-ಹಿರಿಯರಿಂದ ನಿಂದಿಸಲ್ಪಟ್ಟ ಕೆಲಸವು, ಕೃತಂ-ಮಾಡಲ್ಪಟ್ಟಿತೋ, ಕಿತವ-ಮೋಸಗಾರನೇ, ಸತ್ವಂ-ಆನೀನು, ಕಃ-ಯಾವವನು? ||೯|| ಇತಿ-ಹೀಗೆ, ಬ್ರುವಂತೀಂ-ಹೇಳುತಲಿರುವ, ಅವಳನ್ನು, ಶನೈಃ-ಮೆಲ್ಲಗೆ, ಪರಿಸಾಂತ್ವಯನ್-ಸಮಾಧಾನ ಗೊಳಿಸುವನಾಗಿ, ದೀರ್ಘಬಾಹುಃ-ನಿಗಳವಾದತೋಳುಗಳುಳ್ಳ, ಸದ್ರವಿಡಃ-ಆದ್ರವಿಡನೆಂಬ ಗಂಧರ್ವನು, ಅಭ್ಯಭಾಷತ-ಪ್ರತಿಯಾಗಿ ನುಡಿದನು. ಅಬಲೇ-ಹೆಂಣೇ, ವಯಂಹಿ-ನಾವಾದರೋ, ಗೀರ್ವಾಣ-ದೇವತೆಗಳೊಡನೆ, ತುಲ್ಯಾ-ಸಮಾನರು, ಅಮರವಲ್ಲಭ-ಇಂದ್ರನಿಗೆ, ಅನುಗಾಃ-ಪರಿಚಾರಕರೂ ಆದ, ಗಂಧರ್ವ ಕುಲೋದ್ಭವಾಃ-ಗಂಧರ್ವ ಜಾತಿಯಲ್ಲಿ ಹುಟ್ಟಿದವರು ||೧೦|| ಭದ್ರೇ-ಶುಭಳಾದವಳೇ! ಭವಾದೃಶೀನಾಂ-ನಿನ್ನಂತವರಾದ, ಮನುಜಾಂಗನಾನಾಂ-ಮನುಷ್ಯಸ್ತ್ರೀಯ

---

ಗುತ್ತಿರುವಳಂ ನೋಡಿ ||೬|| ಅವನು ಸಕಲಪ್ರಾಣಿಗಳ ತಾತ್ಪರ್ಯವನ್ನು ತಿಳಿಯುವನಾದ್ದರಿಂದ ಅವಳಚಿಂತೆಯನ್ನರಿತು ಅವಳಗಂಡನಾದ ಉಗ್ರಸೇನನ ರೂಪವನ್ನು ಧರಿಸಿಕೊಂಡು ಓರೆನೋಟದಿಂದ ನಗುತಬಂದನು ||೭|| ಕಾಮಪೀಡಿತನಾದ ಅವನು ಕಾಮಪೀಡಿತಳಾದ ಆಕೆಯಬಳಿಗೆ ಸೇರುತಲೂ ಅವನುಪರಪುರುಷನೆಂದರಿಯದೇ ಇರುವ ಆಕೆಯು ಅವನೊಡನೆ ಉಪವನದಲ್ಲಿ ಕ್ರೀಡಿಸಿದಳು ||೮|| ಬಳಿಕವಳು ಅವನು ತನ್ನಗಂಡನಲ್ಲನೆಂದು ತಿಳಿದುಕೊಂಡು ದುಃಖದಿಂದ ಕಂಣುಕೆಂಪಗೆಮಾಡಿಕೊಂಡು ಎಲಾ, ಹಿರಿಯರಿಗೆ ನಿಂದ್ಯವಾದ ಪಾಪಕರ್ಮಗೆಯ್ದ ದುಷ್ಟನಾದ ವಂಚಕನೇ! ನೀನುಯಾರು ||೯|| ಹೀಗೆಕೇಳಿದ ಆಕೆಯಂಕುರಿತು ಅವನು ಸಮಾಧಾನ ಹೇಳತೊಡಗಿದವನಾಗಿ ನಾವು ಗಂಧರ್ವಕುಲದಲ್ಲಿ ಹುಟ್ಟಿದವರು. ದೇವತೆಗಳ ಹಾಗೆಯೇ ಇರುವೆವು ದೇವೇಂದ್ರನಿಗೆ ಪರಿಚಾರಕರು ||೧೦|| ನಿನ್ನಂತಾ ಮನುಷ್ಯಸ್ತ್ರೀಯರಿಗೆ ನಾವು ಸುಲಭವಾಗಿರುವರಲ್ಲವು. ಮುಪ್ಪಿನ ತನವೂ ಮರಣವೂ ದುಃಖಗಳೂ ಉಳ್ಳಮನುಷ್ಯರಿಗೂ ಆಮೋಷಗಳಿಲ್ಲದ ದೇವತೆಗಳಿಗೂ ಬಹಳ ಹೆಚ್ಚುಕಡಿಮೆಯಿರುತ್ತೆ. ||೧೧|| ಹೀಗೆಹೇಳುವ ಅವನು ಕುರಿತು ಸಿಟ್ಟಿನಿಂದ ಕಳವಳಗೊಂಡ ಆಕೆಯು ಮರಳಿಹೇಳಿದ

ಭಾಗಿನಾಂನೃಣಾಂಸುರಾಣಾಮಪ್ಯಹದಂತರಂಶುಭೇ ॥೧೧॥ ಇತಿಬ್ರುವಂತಂಸಾಭೂಯಃಕ್ರೋಧಪರ್ಯಾಕುಲೇಂದ್ರಿಯಾ । ಕಿಂಮಾಂಸಾಂತ್ವಯಸೇಭೂಯಃಕೃತ್ವೈತ್ಥಂದುಷ್ಟಚೇಷ್ಟಿತಂ ॥೧೨॥ ಇಮಾನತಿಕ್ರಮ್ಯಮಹೀಜಲಾಗ್ನಿಸಮೀರಣಾಕಾಶನಿಶೇಶಸೂರ್ಯಾನ್ । ದಿಕ್ಕಾಲಧರ್ಮಾಂಶ್ಚತಥೈವಸಂಧ್ಯೇದುರಾತ್ಮನೇತ್ಥಂಮಲಿನೀಕೃತಾಹಂ ॥೧೩॥ ಗಜೇನೈವಮದಾಂಧೇನಪದ್ಮಿನೀಪಯಮಧ್ಯಗಾ । ವಿಶೃಂಖಲೇನವಿಮಲಾಯೇನಾಹಂಮಲಿನೀಕೃತಾ ॥೧೪॥ ಸತ್ವಂಕಿಮಿತಿಮಾಂಭೂಯಸ್ಸಾಂತ್ವಯಸ್ಯಮರಾಧಮ । ಇತಿಬ್ರುವಂತೀಂಪ್ರೋವಾಚಸಭಯಃಶಾಪಶಂಕಿತಃ ॥೧೫॥ ಅನುಲೋಮಸ್ತುಕಂಜಾಕ್ಷಿಮನುಷ್ಯಾಸುದಿವೌಕಸಾಂ । ನರಾಣಾಂದೇವಕಾಂತಾಸುಪ್ರತಿಲೋಮೋಹಿಸಂಗಮಃ ॥೧೬॥ ಜಾನೀಹಿಮಾಮನಾಗಸ್ಕೃತ್ತೇಹಿಪಂಕಜಗಂಧಿನಿ । ತಸ್ಮಾತ್ತೇಜಾಯತಾಂಪುತ್ರೋಮದ್ವೀರ್ಯಾನ್ನಪ್ಯಧಾಭ

---

ರಿಗೆ, ವಯಂ-ನಾವು, ನಸುಲಭಾಶ್ಚ-ಸುಲಭರೂ ಅಲ್ಲವು. ಶುಭೇ-ಕಲ್ಯಾಣಿಯೇ! ಜರಾ-ಮುದಿತನವೂ, ವಿನಾಶ-ಮರಣವೂ ಆದಿ-ಮೊದಲಾದ, ಅಖಿಲಾಧಿ-ಸಕಲದುಃಖಗಳಿಗೂ, ಭಾಗಿನಾಂ-ಪಾಲುಗಾರರಾದ, ನೃಣಾಂ-ಮನುಷ್ಯರಿಗೂ, ಸುರಾಣಾಂ-ದೇವತೆಗಳಿಗೂ, ಮಹದಂತರಂ-ಬಹಳತಾರತಮ್ಯವಿದೆ॥೧೧॥ ಇತಿ-ಹೀಗೆ, ಬ್ರುವಂತಂ-ಹೇಳುತ್ತಲಿರುವವನನ್ನು ಕುರಿತು, ಸಾ-ಅವಳು, ಕ್ರೋಧ-ಸಿಟ್ಟಿನಿಂದ, ಪರ್ಯಾಕುಲ-ಕಳವಳಗೊಂಡ, ಇಂದ್ರಿಯಾ-ಕರಣಂಗಳುಳ್ಳವಳಾಗಿ, ಭೂಯಃ-ಮರಳಿಯೂ, ಉವಾಚ-ಹೇಳಿದಳು. ಎಲಾ, ಹೀಗೆ, ದುಷ್ಟಚೇಷ್ಟಿತಂ-ಕೆಡುಕಾಟವನ್ನು, ಕೃತ್ವಾ-ಮಾಡಿ, ಭೂಯಃ-ಬಹಳವಾಗಿ, ಮಾಂ-ನನ್ನನ್ನು, ಕಿಂಸಾಂತ್ವಯಸೇ-ಏನುಸಮಾಧಾನಪಡಿಸುವಿ? ॥೧೨॥ ಇಮಾನ್-ಈ, ಮಹಿ-ಭೂಮಿ, ಜಲ-ನೀರು, ಅಗ್ನಿ-ಬೆಂಕಿ, ಸಮೀರಣ-ಗಾಳಿ, ಆಕಾಶ-ಬಯಲು, ನಿಶೇಶ-ಚಂದ್ರ, ಸೂರ್ಯಾನ್-ಸೂರ್ಯರನ್ನು, ದಿಕ್-ದಿಕ್ಕು, ಕಾಲ-ಸಮಯ, ಧರ್ಮಾಂಶ್ಚ-ಪುಣ್ಯಗಳನ್ನೂ, ತಥೈವ-ಹಾಗೆಯೇ, ಸಂಧ್ಯೇ-ಸಂಧ್ಯಾಕಾಲಗಳನ್ನೂ (ಈ ಸರ್ವಸಾಕ್ಷಿಗಳನ್ನು) ಅತಿಕ್ರಮ್ಯ-ಮೀರಿ, ದುರಾತ್ಮನಾ-ದುಷ್ಟಸ್ವಭಾವನಾದ ನಿನ್ನಿಂದ, ಅಹಂ-ನಾನು, ಇತ್ಥಂ-ಹೀಗೆ, ಮಲಿನೀಕೃತಾ-ಪಾಪಿಯಾಗಿ ಮಾಡಲ್ಪಟ್ಟೆನು ॥೧೩॥ ಮದಾಂಧೇನ-ಸೊಕ್ಕಿನಿಂದ ಕುರುಡನಾದ, ವಿಶೃಂಖಲೇನ-ಕಟ್ಟುಸರಪಣಿಯಿಲ್ಲದ, ಗಜೇನ-ಆನೆಯಿಂದ, ಪಯಮಧ್ಯಗಾ-ನೀರ ನಡುವೆಯಿರುವ, ಪದ್ಮಿನೀವ-ತಾವರೆಯುದಂಟಿನಂತೆ, ವಿಮಲಾ-ನಿರ್ಮಲಳಾದ, ಅಹಂ-ನಾನು, ಯೇನ-ಯಾವನಿಂದ, ಮಲಿನೀಕೃತಾ-ಶುದ್ಧಳಾಗಿದ್ದವಳು ಕೆಡಿಸಲ್ಪಟ್ಟವಳಾದೆನೋ ॥೧೪॥ ಅಮರಾಧಮ-ದೇವತೆಗಳಲ್ಲಿ ನೀಚನೆ, ಸತ್ವಂ-ಆ ನೀನು, ಭೂಯಃ-ಮರಳಿಯೂ, ಮಾಂ-ನನ್ನನ್ನು, ಕಿಮಿತಿಸಾಂತ್ವಯಸಿ-ಏನೆಂದು ಸಮಾಧಾನ ಪಡಿಸುತ್ತಿರುವಿ? ಇತಿ-ಹೀಗೆ, ಬ್ರುವಂತೀಂ-ಹೇಳುತಲಿರುವವಳನ್ನು ಕುರಿತು, ಶಾಪಶಂಕಿತಃ-ಶಾಪಬಂದೀತೆಂಬ ಸಂದೇಹವುಳ್ಳವ ನಾದ್ದರಿಂದ, ಸಭಯಃ-ಭೀತಿಸಹಿತನಾದ ಧ್ರುವನು, ಪ್ರೋವಾಚ-ಹೇಳಿದನು ॥೧೫॥ ಕಂಜಾಕ್ಷಿ-ಕಮಲಲೋಚನೆಯೇ! ದಿವೌಕಸಾಂತು-ಸ್ವರ್ಗವಾಸಿಗಳಿಗಾದರೋ, ಮನುಷ್ಯಾಸು-ಮನುಷ್ಯಸ್ತ್ರೀಯರಲ್ಲಿ, ಸಂಗಮಃ-ಸಂಬಂಧವು, ಅನುಲೋಮಃ-ಕ್ರಮವಾದದ್ದು, ನರಾಣಾಂ-ಮನುಷ್ಯರಿಗೆ, ದೇವಕಾಂತಾಸು-ದೇವಸ್ತ್ರೀಯರಲ್ಲಿ, ಸಂಗಮಃ-ಸಂಬಂಧವು, ಪ್ರತಿಲೋಮೋಹಿ-ಅಕ್ರಮವಾದದ್ದಲ್ಲವೆ? ॥೧೬॥ ಪಂಕಜಗಂಧಿನಿ-ತಾವರೆಯ ಪರಿಮಳವುಳ್ಳವಳೇ! ತೇ-ನಿನಗೆ, ಅನಾಗಸ್ಕೃದ್ಧಿ-ಅಪರಾಧವನ್ನು ಮಾಡಿದವನಲ್ಲವಷ್ಟು, ಮಾಂ-ನನ್ನನ್ನು, ಜಾನೀ

---

ಹಿ. ಎಲಾ! ಕೆಟ್ಟಕೆಲಸವನ್ನು ಮಾಡಿ ಏನುಸಮಾಧಾನ ಹೇಳುತ್ತೀಯೋ ॥೧೨॥ ಪಂಚಭೂತಗಳನ್ನೂ, ಚಂದ್ರಸೂರ್ಯರನ್ನೂ ದಿಕ್ಕಾಲಧರ್ಮದೇವತೆಗಳನ್ನೂ ಸಂಧ್ಯಾಕಾಲಗಳನ್ನೂ ಈ ಸಾಕ್ಷಿಗಳನ್ನು ಲಕ್ಷ್ಯಿಸದೆ, ದುಷ್ಟನಾದ ನಿನ್ನಿಂದ ನಾನು ಪಾಪಿಷ್ಠಳಾಗಿ ಮಾಡಲ್ಪಟ್ಟೆನು ॥೧೩॥ ಮದಿಸಿದ ಆನೆಯು ನೀರಲ್ಲಿರುವ ತಾವರೆಯಂ ಕೆಡಿಸುವಂತೆ ತಡೆಯಿಲ್ಲದನೀನು ನಿರ್ಮಲಳಾದ ನನ್ನನ್ನು ಕೆಡಿಸಿಬಿಟ್ಟೆ ॥೧೪॥ ದೇವತೆಗಳಲ್ಲಿ ಅಧಮನಾದವನೇ! ಅಂಥಾನೀನು ಮರಳಿಯೂ ಏನೆಂದು ನನಗೆ ಸಮಾಧಾನಹೇಳುತ್ತೀಯೆ? ಹೀಗೆ ಹೇಳುತ್ತಿರುವ ಆಕೆಯುಂ ಕುರಿತು ಶಾಪಭಯವುಳ್ಳ ಅವನು ಕೇಳಿಕೊಂಡನು ॥೧೫॥ ದೇವತೆಗಳು ನಾರಿಯರಂ ಮದುವೆಯಾದರೆ ಅದುನ್ಯಾಯವಾದ ಕ್ರಮವೇ, ನರರು ದೇವತಾಸ್ತ್ರೀಯರಂ ಮದುವೆಯಾದರೆ ಅನ್ಯಾಯವಾದ ಅಕ್ರಮವು ॥೧೬॥ ಹೀಗಿರುದರಿಂದ ನಾನು ನಿನಗೆ ಪಾಪಬರುವಂತೆ ಮಾಡಿದವನಲ್ಲವೆಂದು ತಿಳಿದುಕೋ, ನಿನಗಿಂತಲೂ ಉತ್ತಮಜಾ

ಪೇತ್ ॥೧೭॥ ಶ್ರೀಮಾನ್‌ಧೀಮಾನ್‌ಮಹೋತ್ಸಾಹೋನಮೇವಾಗ್ಜಾಯತೇವೃಷಾ ।ಇತ್ಯೇವಂವಾದಿನಂಕ್ರುದ್ಧಾಮಮಮಾತಾಯಶಸ್ವಿನೀ ॥೧೮॥ ಪ್ರಾಹಸಂತ್ಯಜ್ಯಸಂತಪ್ತಾಪಾತಿವ್ರತ್ಯಂಸುದುರ್ಲಭಂ । ನಿಸ್ಸೇತೋರ್ಭಿನ್ನವೃತ್ತಸ್ಯಪಾಪಸ್ಯೋನ್ಮಾದವರ್ತಿನಃ ॥೧೯॥ ಕ್ರೂರಸ್ತೇತನಯೋಭೂಯಾತ್ಸಾಹಸೀನಿರ್ಗುಣೋದಯಃ । ನಾನುಗ್ರಾಹ್ಯೋದೇವತಾನಾಂದ್ವಿಜಾನಾಂಚತಪಸ್ವಿನಾಂ ॥೨೦॥ ಇತ್ಥಂವದಂತ್ಯಾಂತಸ್ಯಾಂಸಕ್ರುದ್ಧಾಯಾಂಶಾಪಶಂಕಿತಃ । ತಾವಕಾನಾಂಭವೇಚ್ಛತ್ರುರಿತ್ಯುಕ್ತ್ವಾಂತರಧೀಯತ ॥೨೧॥ ಗತೇತಸ್ಮಿನ್‌ಗೃಹೋದ್ಯಾನಾನ್ಮಾತಾಮಮಯಶಸ್ವಿನೀ । ಕೇನಾಪ್ಯಜ್ಞಾತವೃತ್ತಾಂತಾಗೃಹಾನೇವಾಭ್ಯಪದ್ಯತ ॥೨೨॥ ತತಸ್ಸಾಗರ್ಭಿಣೀಕಾಲೇಕಾಲೇನೈವಸುಷಾವಮಾಂ । ಇತಿಮೆ

---

ಹಿ-ತಿಳಿಯಕೋ, ತಸ್ಮಾತ್-ಆದ್ದರಿಂದ, ತೇ-ನಿನಗೆ, ಪುತ್ರಃ-ಮಗನು, ಜಾಯತಾಂ-ಹುಟ್ಟಲಿ, ಮದ್ವೀರ್ಯಂ-ನನ್ನ ತೇಜಸ್ಸು, ವೃಥಾ-ವ್ಯರ್ಥವಾಗಿ, ನಭವೇ -ಆಗುವದಿಲ್ಲ ॥೧೭॥ ಶ್ರೀಮಾನ್-ಸಂಪತ್ತುಳ್ಳವನೂ, ಧೀಮಾನ್-ಬುದ್ಧಿಯುಳ್ಳವನೂ, ಮಹೋತ್ಸಾಹಃ-ಹೆಚ್ಚು ಉತ್ಸಾಹವುಳ್ಳವನೂ, ಆಗುವನು. ಮೇ-ನನ್ನ, ವಾಕ್-ಮಾತು, ವೃಷಾನಜಾಯತೇ-ಸುಳ್ಳಾಗುವುದಿಲ್ಲ. ಇತ್ಯೇವಂವಾದಿನಂ-ಹೀಗೆಹೇಳಿರುವವನಂ ಕುರಿತು, ಕ್ರುದ್ಧಾ-ಸಿಟ್ಟುಗೊಂಡವಳಾದ, ಯಶಸ್ವಿನೀ-ಕೀರ್ತಿವಂತಳಾದ, ಮಮಮಾತಾ-ನನ್ನತಾಯಿ ॥೧೮॥ ಸುದುರ್ಲಭಂ-ಲಭಿಸತಕ್ಕದ್ದಲ್ಲವಾದ, ಪಾತಿವ್ರತ್ಯಂ-ಪತಿನಿಯಮವನ್ನು, ಸಂತ್ಯಜ್ಯ-ಬಿಟ್ಟು, ಸಂತಪ್ತಾ-ದುಃಖಿಸುವಳಾಗಿ, ಪ್ರಾಹ-ಹೇಳಿದಳು. ನಿಸ್ಸೇತೋಃ-ಧರ್ಮದ ಕಟ್ಟಿಲ್ಲದ, ಭಿನ್ನವೃತ್ತಸ್ಯ-ಒಳ್ಳೇನಡತೆಯನ್ನು ಭಂಗಪಡಿಸಿದ, ಉನ್ಮಾದವರ್ತಿನಃ-ಹುಚ್ಚುತನದಲ್ಲಿರುವ, ಪಾಪಸ್ಯ-ಪಾಪಿಷ್ಠನಾದ ॥೧೯॥ ತೇ-ನಿನ್ನ, ತನಯಃ-ಮಗನು, ಕ್ರೂರಃ-ಕೆಟ್ಟವನೂ, ಸಾಹಸೀ-ಆತುರಗಾರನೂ, ನಿರ್ಗುಣಃ-ಗುಣವಿಲ್ಲದವನೂ, ಅದಯಃ-ಕರುಣೆಯಿಲ್ಲದವನೂ, ದೇವತಾನಾಂ-ದೇವತೆಗಳಿಂದಲೂ, ದ್ವಿಜಾನಾಂ-ಬ್ರಾಹ್ಮಣರಿಂದಲೂ, ತಪಸ್ವಿನಾಂ-ತಪೋವಂತರಿಂದಲೂ, ನಾನುಗ್ರಾಹ್ಯಃ-ಅನುಗ್ರಹಿಸಲ್ಪಡತಕ್ಕವನಲ್ಲದವನೂ, ಭೂಯಾತ್-ಆದಾನು ॥೨೦॥ ಕ್ರುದ್ಧಾಯಾಂ-ಸಿಟ್ಟುಗೊಂಡವಳಾದ, ತಸ್ಯಾಂ-ಅವಳು, ಇತ್ಥಂ-ಹೀಗೆ, ವದಂತ್ಯಾಂಸತ್ಯಾಂ-ಹೇಳುತ್ತಿರುವಳಾಗುತಲೂ, ಶಾಪಶಂಕಿತಃ-ತನಗೂ ಶಾಪ ಬಂದೀತೆಂಬ ಹೆದರಿಕೆ ಯುಂಟಾದವನಾದ, ಸಃ-ಆದ್ರಮಿಡನು, ತಾವಕಾನಾಂ-ನಿನ್ನವರಿಗೆ, ಶತ್ರುರ್ಭವೇತ್-ಹಗೆಯಾದನು, ಇತ್ಯುಕ್ತ್ವಾ-ಹೀಗೆಹೇಳಿ, ಅಂತರಧೀಯತ-ಕಾಣಿಸದೇ ಅಡಗಿಹೋದನು ॥೨೧॥ ತಸ್ಮಿನ್‌ಗತೇ-ಅವನುಹೋಗುತಲೂ, ಯಶಸ್ವಿನೀ-ಹೆಸರುವಾಸಿಯುಳ್ಳ, ಮಮಮಾತಾ-ನನ್ನತಾಯಿ, ಕೇನಾಪಿ-ಯಾವವನಿಂದಲೂ, ಅಜ್ಞಾತವೃತ್ತಾಂತಾ-ತಿಳಿಸಲ್ಪಡದ ಸಮಾಚಾರವುಳ್ಳವಳಾದ್ದರಿಂದಲೇ, ಗೃಹೋದ್ಯಾನಾತ್-ಮನೆಯತೋಟದಿಂದ, ಗೃಹಾನೇವ-ಮನೆಯನ್ನೇ ಅಭ್ಯಪದ್ಯತ-ಸೇರಿದಳು ॥೨೨॥ ತತಃ-ಆಮೇಲೆ,

---

ತಿಯುವನಾದ ನನ್ನ ವೀರ್ಯವು ವ್ಯರ್ಥವಾಗಬಾರದು. ಆದ್ದರಿಂದ ನಿನಗೆ ಮಗನುಹುಟ್ಟಲಿ ॥೧೭॥ ಅವನು ಭಾಗ್ಯವಂತನೂ ಬುದ್ಧಿವಂತನೂ ಉತ್ಸಾಹಶಾಲಿಯೂ ಆಗುತ್ತಾನೆ. ನನ್ನ ಮಾತುಸುಳ್ಳಾಗುವುದಿಲ್ಲ. ಹೀಗೆ ಹೇಳುತ್ತಿರುವವನಂ ಕುರಿತು ನನ್ನತಾಯಿ ಸಿಟ್ಟುಗೊಂಡವಳಾಗಿ ॥೧೮॥ ದುರ್ಲಭವಾದ ಗರತಿತನವನ್ನು ಹೋಗಲಾಡಿಸಿಕೊಂಡು ದುಃಖಿಸುತ್ತಿರುವವಳಾಗಿ ಹೇಳಿದಳು, ಧರ್ಮಕಟ್ಟಳೆಯಿಲ್ಲದೆ ಉತ್ತಮರ ನಡತೆಯನ್ನು ಹಾಳುಮಾಡಿ ಪಾಪಿಯಾಗಿ ಹುಚ್ಚುತನದಲ್ಲಿ ಪ್ರವರ್ತಿಸಿದವನೇ ॥೧೯॥ ನಿನಗೆ ಹುಟ್ಟುವಮಗನು ಕ್ರೂರಸ್ವಭಾವನಾಗಿಯೂ ಆತುರದಿಂದ ಹೆಚ್ಚು ಕೆಲಸಗಳಂ ಮಾಡುವನಾಗಿಯೂ ಸುಗುಣಗಳಿಲ್ಲದವನಾಗಿಯೂ ದೇವಬ್ರಾಹ್ಮಣರಿಗೂ ತಪೋವಂತರಿಗೂ ವಿರೋಧಿಯಾಗಿಯೂ ಕೆಟ್ಟುಹೋಗಲಿ ॥೨೦॥ ಆಕೆಸಿಟ್ಟುಗೊಂಡು ಹೀಗೆಹೇಳುತಲೂ ಅವನು ತನಗೂ ಎಲ್ಲಿಶಾಪಕೊಡುವಳೋ ಎಂದು ಹೆದರಿದವನಾಗಿ ಹಾಗಾದರೆ ಆಪುತ್ರನು ನಿನ್ನವರಿಗೇ ವಿರೋಧಿಯಾಗಲಿ. ಎಂದುಹೇಳಿಬಿಟ್ಟು ಅವಳಿಗೆ ಕಾಣಿಸದಹಾಗೆ ಅಲ್ಲಿಯೇ ಅಡಗಿಹೋದನು ॥೨೧॥ ಅವನುಹೋಗುತಲೂ ಹೆಸರುವಾಸಿಯುಮೇಲೆ ಲಕ್ಷ್ಯವುಳ್ಳ ನಮ್ಮತಾಯಿ ರಹಸ್ಯವಾಗಿನಡೆದ ಕೆಟ್ಟಕೆಲಸವು ಯಾರೊಬ್ಬರಿಗೂ ತಿಳಿಯಲಿಲ್ಲವಾದ್ದರಿಂದ ತಾನು ಯಥಾಪ್ರಕಾರ ಮನೆಗೆ ಬಂದುಸೇರಿಕೊಂಡಳು ॥೨೨॥ ಆ

ನಾರದಃಪ್ರಾಹಕದಾಚಿದ್ಭಗವಾನೃಷಿಃ ||೧೩|| ತದಾಪ್ರಭೃತ್ಯಹಂದ್ವೇಷ್ಮಿತ್ರಾನೇತಾನ್ಬಂಧುದು ರ್ಜನಾನ್ | ಯೂಯಂತತ್ರಪ್ರಮಾಣಂಹಿದ್ವಿಷಂತೇತೇಪಿಮಾಂಸದಾ ||೧೪|| ಉಗ್ರಸೇನಂಚದು ರ್ಬುದ್ಧಿಂದೇವಕಂಚದುರಾಶಯಂ | ವಸುದೇವಂಚಕಿತವಮನ್ಯಾಂಶ್ಚತದುಪಾಶ್ರಯಾನ್ ||೧೫||ಹ ತ್ವಾನಜಾಯತೇದೋಷೋಮಮಗಂಧರ್ವಜನ್ಮನಃ | ತೇನಾದೇಕ್ಷ್ಯಾಮಿಪರುಷಂಹನ್ಯೇತಾಮಿತಿತಾವ ಹಂ ||೧೬|| ತಾಭ್ಯಾಂಹತಾಭ್ಯಾಂಬಾಲಾಭ್ಯಾಂಕುಂಜರೇಣಬಲೀಯಸಾ | ಕೃತ್ವಾಭದ್ರಾತ್ಮಿಕೀಂ ಪೂಜಾಂಯಾಂತುತತ್ಪದವೀಮಿಮೇ |೧೭| ವಸುದೇವೋಗ್ರಸೇನೌಚತಥಾತೌನಂದದೇವಕೌ | ಗೋಪಾ ಲಾಯಾದವಾಶ್ಚೈವಯೇಚಾನ್ಯೇತಾವನುವ್ರತಾಃ |೧೮| ಪಶ್ಯಂತುವಿವಿಧೈರ್ನೇತ್ರೈರ್ಹನ್ಯಮಾನೌ ಸ್ವದಾರಕೌ) *ಇತಿಪ್ರಕ್ಷಿಪ್ತಂ*

---

ಸಾ-ಅವಳು ಕಾಲೇ-ಸಮಯದಲ್ಲಿ, ಗರ್ಭಿಣೀ-ಬಸುರಿಯಾಗಿದ್ದು ಕಾಲೇನೈವ-ಪ್ರಸವಸಮಯದಿಂದಲೇ, ಮಾಂ-ನನ್ನನ್ನು, ಸು ಷಾವ-ಹೆತ್ತಳು. ಇತಿ-ಹೀಗೆಂದು, ಭಗವಾನ್-ಸರ್ವಜ್ಞನಾದ, ನಾರದಃಋಷಿಃ-ನಾರದಮುನಿಯು, ಕದಾಚಿತ್-ಒಂದಾನೊಂ ದುಸಮಯದಲ್ಲಿ, ಮೇ-ನನಗೆ, ಪ್ರಾಹ-ಹೇಳಿದನು ||೧೩||ತದಾಪ್ರಭೃತಿ-ಅದುಮೊದಲುಗೊಂಡು, ಅಹಂ-ನಾನು,ತಾನೇತಾನ್- ಆಯಾ, ಬಂಧುದುರ್ಜನಾನ್-ನಂಟರಾದ ದುಷ್ಟಜನರನ್ನು, ದ್ವೇಷ್ಮಿ-ವಿರೋಧಿಸುತಲಿರುವೆನು. ತೇಪಿ-ಅವರೂಕೂಡ, ಮಾಂ-ನ ನ್ನನ್ನು, ಸದಾ-ಯಾವಾಗಲೂ, ದ್ವಿಷಂತೇ-ದ್ವೇಷಿಸುತ ಲಿರುವರು. ತತ್ರ-ಆವಿಷಯದಲ್ಲಿ, ಯೂಯಂಹಿ-ನೀವಲ್ಲವೆ? ಪ್ರಮಾ ಣಂ-ಅನುಭವ ಶಾಲಿಗಳಾಗಿರುವಿರಿ; ||೧೪||ದುರ್ಬುದ್ಧಿಂ-ಕೆಟ್ಟಬುದ್ಧಿಯುಳ್ಳ, ಉಗ್ರಸೇನಂಚ-ತಂದೆಯನ್ನೂ, ದುರಾಶಯಂ- ಕೆಟ್ಟತಾತ್ಪರ್ಯವುಳ್ಳ, ದೇವಕಂಚ-ಚಿಕ್ಕಪ್ಪನನ್ನೂ, ಕಿತವಂ-ವಂಚಕನಾದ, ವಸುದೇವಂಚ-ವಸುದೇವನನ್ನೂ, ತದುಪಾ ಶ್ರಯಾನ್-ಅವರೇ ಆಧಾರವಾಗಿವುಳ್ಳ, ಅನ್ಯಾಂಶ್ಚ-ಇತರರನ್ನೂ ||೧೫|| ಹತ್ವಾ-ಕೊಂದು, ಗಂಧರ್ವಜನ್ಮನಃ-ಗಂಧರ್ವನ ದೆ ಸೆಯಿಂದ ಹುಟ್ಟಿದವನಾದ, ಮಮ-ನನಗೆ, ದೋಷಃ-ಪಾಪವು, ನಜಾಯತೇ-ಹುಟ್ಟುವುದಿಲ್ಲ. ತೇನ-ಆಕಾರಣದಿಂದ, ಅಹಂ- ನಾನು, ತೌಹನ್ಯೇತಾಂ-ಆರಾಮಕೃಷ್ಣರು ಕೊಲ್ಲಲ್ಪಡಲಿ. ಇತಿ-ಹೀಗೆ, ಪರುಷಂ-ಕ್ರೂರವಾಕ್ಯವನ್ನು. ಆದೇಕ್ಷ್ಯಾಮಿ-ಆಜ್ಞಾ ಪಿಸುತ ಲಿರುವೆನು ||೧೬|| ಬಲೀಯಸಾ-ಬಲವುಳ್ಳ, ಕುಂಜರೇಣ-ಆನೆಯಿಂದ, ತಾಭ್ಯಾಂಬಾಲಾಭ್ಯಾಂ-ಆಹುಡುಗರು, ಹತಾ ಭ್ಯಾಂನದ್ಭ್ಯಾಂ-ಕೊಲ್ಲಲ್ಪಟ್ಟವ ರಾಗುತಲೂ, ಭದ್ರಾತ್ಮಿಕೀಂ-ಮಂಗಳಕರವಾದ, ಪೂಜಾಂ-ಪೂಜೆಯನ್ನು, ಕೃತ್ವಾ-ಮಾ ಡಿ, ಇಮೇ-ಇವರು, ತತ್ಪದವೀಂ-ಅವರ ದಾರಿಯನ್ನು, ಯಾಂತು-ಹೋಗಲಿ||೧೭||ವಸುದೇವೋಗ್ರಸೇನೌಚ-ವಸುದೇವನೂ, ಉಗ್ರಸೇನನೂ, ತಥಾ-ಹಾಗೆ, ತೌ-ಆ, ನಂದದೇವಕೌ-ನಂದನೂ ದೇವಕನೂ, ಗೋಪಾಲಾಃ-ಗೊಲ್ಲರೂ, ಯಾದವಾಶ್ಚ-ಯಾ ದವರೂ, ಯೇಚ-ಯಾರು, ತೌ-ಅವರನ್ನು, ಅನುವ್ರತಾಃ-ಅನುಸರಿಸುವ ನಿಯಮವುಳ್ಳವರೋ, ತೇಚೈವ-ಅವರೂಕೂಡ||೧೮|| ವಿವಿಧೈಃ-ಹಲವುಬಗೆಯಾದ, ನೇತ್ರೈಃ-ದೃಷ್ಟಿಗಳಿಂದ,ಹನ್ಯಮಾನೌ-ಕೊಲ್ಲಲ್ಪಡುತಲಿರುವ, ಸ್ವದಾರಕೌ-ತಮ್ಮಹುಡುಗರನ್ನು, ಪಶ್ಯಂತು ನೋಡಲಿ||*||

---

ಮೇಲೆ ಅವಳು ಬಸುರಿಯಾಗಿದ್ದು ಪ್ರಸವಕಾಲಬರುತಲೂ ನನ್ನಂಹೆತ್ತಳಂತೆ. ಹೀಗೆಮಹರ್ಷಿಯಾದ ನಾ ರದನು ಒಂದು ಸಮಯದಲ್ಲಿ ನನಗೆಹೇಳಿದನು ||೧೩|| ಆಗಿನಿಂದ ನಂಟರಾಗಿರುವ ಈದುಷ್ಟರಲ್ಲಿ ನಾನುದ್ವೇಷ ಮಾಡುತ್ತಿದ್ದೇನೆ. ಅವರೂ ನನ್ನಲ್ಲಿ ದ್ವೇಷಮಾಡುತ್ತಿದಾರೆ. ಈಪರಸ್ಪರದ್ವೇಷವು ನಿಮಗೆ ತಿಳಿಯುವುದ ಷ್ಟೆ |೧೪| ಆದ್ದರಿಂದ ದುಷ್ಟಬುದ್ಧಿಯಾದ ಉಗ್ರಸೇನನನ್ನೂ ದುಷ್ಟತಾತ್ಪರ್ಯವುಳ್ಳ ದೇವಕನನ್ನೂ ಮೋಸಗಾರನಾದ ವಸುದೇವನನ್ನೂ ಅವರಿಗೆಸೇರಿದ ಇತರರನ್ನೂ |೧೫|| ಕೊಂದುಹಾಕಿದರೆ ಗಂಧರ್ವನವ್ಮ ಗನಾದ ನನಗೆ ಪಿತೃಹತ್ಯೇ ಬಂಧುಹತ್ಯೆ ಈದೋಷಗಳು ಬರುವುದಿಲ್ಲ. ಆದ್ದರಿಂದಲೇ ರಾಮಕೃಷ್ಣರನು ಕೊಂದುಹಾಕಿರೆಂದು ನಿಮಗೆನಾನು ಅಪ್ಪಣೆಕೊಟ್ಟದ್ದು. ||೧೬|| (ಧನುರ್ಯಾಗದಲ್ಲಿ) ಕುವಲಯಾಪೀಡವೆಂಬ ಆನೆಯಿಂದ ಆರಾಮಕೃಷ್ಣರನ್ನು ಕೊಂದುಹಾಕಿಸಿ ಶುಭವಾದ ಉತ್ಸವವನ್ನುಮಾಡಿ ಈನನ್ನ ಸಭಿಕರೆಲ್ಲರೂ ಆಗೌರವವನ್ನು ಪಡೆಯಿರಿ |೧೭| ವಸುದೇವ, ಉಗ್ರಸೇನ, ನಂದ, ದೇವಕ, ಗೋಪಾಲರು, ಯಾದವರು, ಇ ನ್ನೂ ಅವರಿಗೆಸೇರಿದವರು, ಎಲ್ಲರೂ|೧೮|ಹಲವುಬಗೆಯಾದ ತಮ್ಮಕಂಗಳಿಂದಲೇ ತಮ್ಮಹುಡುಗರು ಕೊಲ್ಲಲ್ಪ

ಮಹಾಮಾತ್ರತ್ವಯಾಭದ್ರರಂಗದ್ವಾರ್ಯುಪನೀಯತಾಂ | ದ್ವಿಪಃಕುವಲಯಾಪೀಡೋಜಹಿತೇನಮಮಾಹಿತೌ ||೨೫|| ಆರಭ್ಯತಾಂಧನುರ್ಯಾಗಶ್ಚತುರ್ದಶ್ಯಾಂಯಥಾವಿಧಿ | ವಿಶಸಂತುಪಶೂನ್ಮೇಧ್ಯಾನ್ಭೂತರಾಜಾಯಮೀಢುಷೇ ||೨೬|| ಇತ್ಯಾಜ್ಞಾಪ್ಯಾರ್ಥತಂತ್ರಜ್ಞಆಹೂಯಯದುಪುಂಗವಂ | ಗೃಹೀತ್ವಾಪಾಣಿನಾಪಾಣಿಂತತೋಽಕ್ರೂರಮುವಾಚಹ ||೨೭|| ಭೋಭೋದಾನಪತೇಮಹ್ಯಂಕ್ರಿಯತಾಂಮೈತ್ರಮಾದೃತಃ | ನಾನ್ಯಸ್ತ್ವತ್ತೋಹಿತತಮೋವಿದ್ಯತೇಭೋಜವೃಷ್ಣಿಷು ||೨೮|| ಅ

---

ಭದ್ರ-ಶುಭನಾದ, ಮಹಾಮಾತ್ರ-ಪ್ರಧಾನಮಂತ್ರಿಯೇ! ಕುವಲಯಾಪೀಡಃ-ಕುವಲಯಾ ಪೀಡವೆಂಬ, ದ್ವಿಪಃ-ಆನೆ, ತ್ವಯಾ-ನಿನ್ನಿಂದ, ರಂಗದ್ವಾರಿ-ಮಲ್ಲರಂಗದ ಬಾಕಲಿನಲ್ಲಿ, ಉಪನೀಯತಾಂ-ಅವರಬಳಿಗೆ ತರಲ್ಪಡಲಿ. ತೇನ-ಅದರಿಂದ, ಮಮ-ನನ್ನ, ಅಹಿತೌ-ವಿರೋಧಿಗಳನ್ನು, ಜಹಿ-ಗೆಲ್ಲು ||೨೫||ಚತುರ್ದಶ್ಯಾಂ-ಚತುರ್ದಶಿಯಲ್ಲಿ, ಯಥಾವಿಧಿ-ಯುದ್ಧಶಾಸ್ತ್ರ ಪ್ರಕಾರವಾಗಿ, ಧನುರ್ಯಾಗಃ-ಬಿಲ್ಲಹಬ್ಬವು. ಆರಭ್ಯತಾಂ-ಆರಂಭಿಸಲ್ಪಡಲಿ, ಮೀಢುಷೇ-ವರವನ್ನು ಕುಡುವ, ಭೂತರಾಜಾಯ-ಭೂತಪತಿಯಾದ ರುದ್ರನಿಗೋಸುಗ, ಮೇಧ್ಯಾನ್-ಪರಿಶುದ್ಧಗಳಾದ, ಪಶೂನ್-ಪಶುಗಳನ್ನು, ವಿಶಸಂತು-ಕೊಂದುಮಡಿಯುಂಬಿಡಿಸಲಿ ||೨೬||ಇತಿ-ಹೀಗೆ, ಆಜ್ಞಾಪ್ಯ-ಅಪ್ಪಣೆಯಂ ಕೊಟ್ಟು, ಅರ್ಥತಂತ್ರಜ್ಞಃ-ಪ್ರಯೋಜನ ಕರವಾದ ಉಪಾಯುವಂ ಬಲ್ಲವ ನಾದ್ದರಿಂದಲೇ, ಯದುಪುಂಗವಂ-ಯಾದವರಲ್ಲಿ ಶ್ರೇಷ್ಠನಾದ, ಅಕ್ರೂರಂ-ಅಕ್ರೂರನೆಂಬವನನ್ನು, ಆಹೂಯ-ಕರೆದು, ಪಾಣಿನಾ-ತನ್ನಕೈಯಿಂದ, ಪಾಣಿಂ-ಅವನಕೈಯನ್ನು, ಗೃಹೀತ್ವಾ-ಹಿಡಿಕೊಂಡು, ತತ್ರ-ಅಲ್ಲಿ, ಉವಾಚ-ಹೇಳಿದನು ||೨೭|| ಭೋಭೋ-ಅಯ್ಯೋಅಯ್ಯೋ! ದಾನಪತೇ-ಅಕ್ರೂರನೇ! ಮಹ್ಯಂ-ನನಗೋಸುಗ, ಮೈತ್ರಂ-ಸ್ನೇಹಕಾರ್ಯವು, ಕ್ರಿಯತಾಂ-ನಿನ್ನಿಂದ ಮಾಡಲ್ಪಡಲಿ. ಭೋಜವೃಷ್ಣಿಷು-ಭೋಜರಲ್ಲಿಯೂ ವೃಷ್ಣಿಗಳಲ್ಲಿಯೂ, ತ್ವತ್ತಃ-ನಿನಗಿಂತಲೂ,

---

ಡುವುದನ್ನು ನೋಡಲಿ||೪|| ಎಲೈಮಹಾಮಾತ್ರನೇ! ನೀನು ರಂಗದ್ವಾರದಲ್ಲಿ ಕುವಲಯಾ ಪೀಡವೆಂಬ ಮಹಾ ಗಜವ ತೆಗದುಕೊಂಡುಬಂದು ಇದ್ದು,ಆಯಾನೆಯಿಂದ ಆರಾಮಕೃಷ್ಣರಂ ಕೊಂದುಹಾಕಿಸು||೨೫|| ಚತುರ್ದಶಿಯಲ್ಲಿ ಧನುರ್ಯಜ್ಞವು ವಿಧ್ಯುಕ್ತವಾಗಿ ಆರಂಭಿಸಲ್ಪಡಲಿ. ಭೂತರಾಜನಾದ ದೇವನಿಗಾಗಿ ಪಶುಗಳನ್ನು ಪ್ರಹಾರವಂ ಮಾಡಿರಿ ||೨೬||ಎಂದುಮಂತ್ರಿಗಳಿಗೆ ಆಜ್ಞಾಪಿಸಿ ಯದುಶ್ರೇಷ್ಠನಾದಅಕ್ರೂರನಂಕರೆದು ಅವನಕೈಯಂ ಹಿಡಿದುಕೊಂಡು ಮಂತ್ರಜ್ಞನಾದ ಕಂಸನು ಪೇಳಿದನಪಂತೆನೆ ||೨೭|| ಎಲೈ ಅಕ್ರೂರನೇ? ಒಂದು ಮಿತ್ರಕಾರ್ಯವ ನೀನು ನನಗೋಸುಗಂ ಮಾಡಬೇಕು. ಭೋಜರುಗಳಲ್ಲಿ ವೃಷ್ಣಿಗಳಲ್ಲಿ ನಿನ್ನಂತಿಯುಹಿತರುನನಗೆ ಯಾರೂಯಿಲ್ಲ. ||೨೮|| ಆದ್ದರಿಂದ ಅಸಾಧ್ಯವಾದ ಕಾರ್ಯವನಾದರೂ ನಿರ್ವಾಹಮಂಮಾ



ತಸ್ಮಾತ್ತ್ವಮಾಶ್ರಿತಸ್ಸೌಮ್ಯ ಕಾರ್ಯಗೌರವಸಾಧನೇ । ಯಥೇಂದ್ರೋ ವಿಷ್ಣುಮಾಶ್ರಿತ್ಯ ಸ್ವಾರ್ಥಮಧ್ಯ
ಗಮದ್ವಿಭುಃ ॥೨೯॥ ಗಚ್ಛ ನಂದವ್ರಜಂ ತತ್ರ ಸುತಾವಾನಕದುಂದುಭೇಃ । ಆಸಾತೇ ತಾವಿಹಾನೇನ ರ
ಥೇನಾನಯ ಮಾಚಿರಂ ॥೩೦॥ ವಿಸೃಷ್ಟಃ ಕಿಲ ಮೇ ಮೃತ್ಯುರ್ದೇವೈರ್ವೈಕುಂಠಸಂಶ್ರಯೈಃ । ತಾವಾ
ನಯ ಸಮಂ ಗೋಪೈರ್ನಂದಾದ್ಯೈಸ್ಸಾಭ್ಯುಪಾಯನೈಃ ॥೩೧॥ ಘಾತಯಿಷ್ಯ ಇಹಾನೇನ ಕಾಲಕಲ್ಪೇ
ನ ಹಸ್ತಿನಾ । ಯದಿ ಮುಕ್ತೌ ತತೋ ಮಲ್ಲೈರ್ಘಾತಯೇ ವೈದ್ಯುತೋಪಮೈಃ ॥೩೨॥ ತಯೋರ್ನಿಹ
ತಯೋಸ್ತಪ್ತಾನ್ ವಸುದೇವಪುರೋಗಮಾನ್ । ತದ್ಬಂಧೂನ್ನಿಹನಿಷ್ಯಾಮಿ ವೃಷ್ಣಿಭೋಜದಶಾರ್ಹ
ಕಾನ್ ॥೩೩॥ ಉಗ್ರಸೇನಮ್ಮತ್ಪಿತರಂ ಸ್ಥವಿರಂ ರಾಜ್ಯಕಾಮುಕಂ । ತದ್ಭ್ರಾತರಂ ದೇವಕಂ ಚ ಯೇ
ಚಾನ್ಯೇ ವಿದ್ವಿಷೋ ಮಮ ॥೩೪॥ ತತಶ್ಚೈಷಾ ಮಹೀ ಮಹ್ಯಂ ಭವಿತ್ರೀ ನಷ್ಟಕಂಟಕಾ । ಜರಾಸಂ

---

ಹಿತತಮಃ-ಅತಿಪ್ರಿಯನಾದ, ಆದೃತಃ-ಅಕ್ಕರೆಯುಳ್ಳ, ಅನ್ಯಃ-ಇತರನು, ನ-ಇಲ್ಲವು ॥೨೮॥ ಅತಃ-ಆದ್ದರಿಂದ, ಇಂದ್ರಃ-ದೇವರಾಜನು, ವಿಭುಃ-ಪ್ರಭುವಾದರೂ, ಯಥಾ-ಹೇಗೆ, ವಿಷ್ಣುಂ-ಉಪೇಂದ್ರನನ್ನು, ಆಶ್ರಿತ್ಯ-ಅವಲಂಬಿಸಿ, ಸ್ವಾರ್ಥಂ-ತನ್ನ ಪ್ರಯೋಜನವನ್ನು, ಅಧ್ಯಗಮತ್-ಪಡೆದುಕೊಂಡನೋ, ತಥಾ-ಹಾಗೆ, ಸೌಮ್ಯ-ಶಾಂತಸ್ವಭಾವನೇ! ಅಹಂ-ನಾನು, ಕಾರ್ಯಗೌರವಸಾಧನೇ-ಕೆಲಸದ ಅತಿಶಯವನ್ನು ಸಾಧಿಸುವ ವಿಷಯದಲ್ಲಿ, ತ್ವಾಂ-ನಿನ್ನನ್ನು, ಆಶ್ರಿತಃ-ಅವಲಂಬಿಸಿರುವೆನು॥೨೯॥ ನಂದವ್ರಜಂ-ನಂದಗೋಕುಲವನ್ನು ಕುರಿತು, ಗಚ್ಛ-ಹೋಗು, ತತ್ರ-ಅಲ್ಲಿ, ಆನಕದುಂದುಭೇಃ-ವಸುದೇವನ, ಸುತೌ-ಮಕ್ಕಳು, ಆಸಾತೇ-ಇರುವರು. ತೌ-ಅವರನ್ನು, ಅನೇನರಥೇನ-ಈತೇರಿನಿಂದಲೇ, ಇಹ-ಇಲ್ಲಿಗೆ, ಆನಯ-ಕರೆದುಕೊಂಡುಬಾ, ಮಾಚಿರಂ-ತಡಮಾಡಬೇಡ ॥೩೦॥ ವೈಕುಂಠಸಂಶ್ರಯೈಃ-ವಿಷ್ಣುವೇ ಆಶ್ರಯನಾಗಿಉಳ್ಳ, ದೇವೈಃ-ದೇವತೆಗಳಿಂದ, ಮೇ-ನನಗೆ, ಮೃತ್ಯುಃ-ಮರಣಕರನು, ವಿಸೃಷ್ಟಃ ಕಿಲ-ಹುಟ್ಟಿಸಲ್ಪಟ್ಟಿದ್ದಾನೆಯಲ್ಲವೆ? ತೌ-ಆರಾಮಕೃಷ್ಣರನ್ನು, ಸಾಭ್ಯುಪಾಯನೈಃ-ಕಾಣಿಕೆಗಳಿಂದ ಸಹಿತರಾದ, ನಂದಾದ್ಯೈಃ-ನಂದಗೋಪನೇ ಮೊದಲಾಗಿವುಳ್ಳ, ಗೋಪೈಸ್ಸಮಂ-ಗೊಲ್ಲರ ಸಂಗಡ, ಆನಯ-ಕರೆದು ಕೊಂಡುಬಾ ॥೩೧॥ ಇಹ-ಇಲ್ಲಿ, ಕಾಲಕಲ್ಪೇನ-ಮೃತ್ಯುವಿನ ಹಾಗಿರುವ, ಅನೇನಹಸ್ತಿನಾ-ಈಆನೆಯಿಂದ, ಘಾತಯಿಷ್ಯೇ-ಕೊಲ್ಲಿಸುವೆನು ತತಃ-ಅದರದೆಸೆಯಿಂದ, ಮುಕ್ತೌಯದಿ-ಬಿಡಲ್ಪಟ್ಟವರಾದರೆ, ವೈದ್ಯುತೋಪಮೈಃ-ಸಿಡಿಲಿಗೆ ಸಮಾನರಾದ, ಮಲ್ಲೈಃ-ಜಟ್ಟಿಗರಿಂದ, ಘಾತಯೇ-ಕೊಲ್ಲಿಸುವೆನು ॥೩೨॥ ತಯೋಃ-ಆರಾಮಕೃಷ್ಣರು, ನಿಹತಯೋಸ್ಸತೋಃ-ಕೊಲ್ಲಲ್ಪಟ್ಟವರಾಗುತಲೂ, ವೃಷ್ಣಿಭೋಜದಶಾರ್ಹಕಾನ್-ವೃಷ್ಣಿಗಳೂ ಭೋಜರೂ ದಶಾರ್ಹರೂ, ಎಂಬ ಯಾದವರಲ್ಲಿ ಹುಟ್ಟಿದಂಥಾ, ತದ್ಬಂಧೂನ್-ಅವರನಂಟರಾದ, ದೃಪ್ತಾನ್-ಗರ್ವಿಷ್ಠರಾದ, ವಸುದೇವ ಪುರೋಗಮಾನ್-ವಸುದೇವನು ಮುಂತಾದವರನ್ನು, ಹನಿಷ್ಯಾಮಿ-ಕೊಲ್ಲುವೆನು॥೩೩॥ ರಾಜ್ಯಕಾಮುಕಂ-ನನ್ನ ರಾಜ್ಯವನ್ನು ಬಯಸುತಲಿರುವ, ಸ್ಥವಿರಂ-ಮುದುಕನಾದ,

---

ಡುವುದರಲ್ಲಿ ಸಮರ್ಥನಾದ ನಿನ್ನಂ ಇಂದ್ರನುಹೇಗೆ ವಿಷ್ಣುವನ್ನಾಶ್ರಯಿಸಿ ಸ್ವಾರ್ಥವಂ ಪಡೆಯುವನೋ, ಹಾಗೆ ಆಶ್ರಯಿಸಿರುವೆನು ॥೨೯॥ ನೀನು ನಂದವ್ರಜಕ್ಕೆಹೋಗು ಅಲ್ಲಿ ವಸುದೇವನ ಪುತ್ರರಾದ ರಾಮಕೃಷ್ಣರಿರುವರು. ಈ ರಥವಂ ತೆಗೆದುಕೊಂಡುಹೋಗಿ ಅವರಂ ಇದರಲ್ಲಿ ಕುಳ್ಳಿರಿಸಿಕೊಂಡು ಬೇಗನೆ ಬರುವನಾಗು ॥೩೦॥ ವಿಷ್ಣುವನಾಶ್ರಯಿಸಿರುವ ದೇವತೆಗಳಿಂದ ನನ್ನಮೃತ್ಯುರೂಪರಾಗಿ ಆರಾಮಕೃಷ್ಣರು ಸೃಷ್ಟಿಸಲ್ಪಟ್ಟು ಇರುವರಾದುದರಿಂದ; ಕಾಣಿಕೆಗಳಂಕೊಂಡು ಬರುವನಂದಾದಿಗಳೊಡನೆ ಅವರಿಬ್ಬರಂಕರೆದುಕೊಂಡು ಬರುವನಾಗು ॥೩೧॥ ಇಲ್ಲಿಗೆಬಂದ ಅವರೀರ್ವರಂ ಮೃತ್ಯುಸಮಾನವಾದ ಆನೆಯಿಂದ ಕೊಂದುಹಾಕಿಸಿ ಬಿಡುತ್ತೇನೆ. ಅದುತಪ್ಪಿದರೆ ಸಿಡಿಲಿನಂತೆ ಅತಿಕ್ರೂರರಾದ ಜಟ್ಟಿಗಳಿಂದ ಸಂಹಾರವಂ ಮಾಡಿಸಿ ಬಿಡುವೆನು ॥೩೨॥ ಅವರೀರ್ವರೂ ಹತರಾದಮೇಲೆ ಶೋಕತಪ್ತರಾದ ವಸುದೇವನೇ ಮುಂತಾದ ವೃಷ್ಣಿಗಳಂ ಭೋಜರುಗಳಂ ದಾಶಾರ್ಹರಂ ಸಹ ಸಂಹರಿಸುವೆನು ॥೩೩॥ ವೃದ್ಧನಾದ ರಾಜ್ಯಕಾಮುಕನಾದ ನನ್ನ ತಂದೆಯಾದ ಉಗ್ರಸೇನನಂ ಅವನತಮ್ಮನಾದ ದೇವಕನಂ ಇನ್ನೂ ನನಗೆ ಯಾರುದ್ವೇಷಿಗಳೋ ಅವರನ್ನೆಲ್ಲರಂ ಸಂಹರಿಸಿದಮೇಲೆ ॥೩೪॥ ಈಭೂಮಿಯು ನಿಷ್ಕಂಟಕವಾಗಿ ನನ್ನ ಸ್ವಾಧೀನ ಮಪ್ಪುದು. ಜರಾಸಂಧನು ನನಗಗುರುವು. ದ್ವಿವಿದನು

ಘೋಮಮಗುರುರ್ದ್ವಿವಿದೋದಯಿತಸ್ಸಖಾ ॥೩೫॥ ಶಂಬರೋನರಕೋಬಾಣೋಮಯ್ಯೇವಕೃತಸೌಹೃದಾಃ । ತೈರಹಂಸುರಪಕ್ಷೀಯಾನ್ಹತ್ವಾಭೋಕ್ಷ್ಯೇಮಹೀಂನೃಪಾನ್ ॥೩೬॥ ಏತದ್ಜ್ಞಾತ್ವಾನಯಕ್ಷಿಪ್ರಂರಾಮಕೃಷ್ಣಾವಿಹಾರ್ಭಕೌ।ಧನುರ್ಮಖನಿರೀಕ್ಷಾರ್ಥಂದ್ರಷ್ಟುಂಯದುಪುರಶ್ರಿಯಂ॥೩೭॥ ಅಕ್ರೂರಃ॥ ರಾಜನ್ಮನೀಷಿತಂಸಧ್ರ್ಯಕ್ತವಸ್ವಾವದ್ಯಮಾರ್ಜನಂ । ಸಿದ್ಧ್ಯಸಿದ್ಧ್ಯೋಸ್ಸಮೋಭೂಯಾದ್ದೈವಮಹಿಫಲಭಾವನಂ ॥೩೮॥ ಮನೋರಥಾನ್ಕರೋತ್ಯುಚ್ಚೈರ್ಜನೋದೈವಹತಾನಪಿ । ಯುಜ್ಯತೇಹರ್ಷಶೋಕಾಭ್ಯಾಂತಥಾಪ್ಯಾಜ್ಞಾಂಕರೋಮಿತೇ॥೩೯॥ ಶ್ರೀಶುಕಃ॥ ಏವಮಾದಿಶ್ಯಚಾಕ್ರೂ

---

ಮತ್ಪಿತರಂ-ನಮ್ಮಪ್ಪನಾದ, ಉಗ್ರಸೇನಂ-ಉಗ್ರಸೇನನನ್ನು, ತದ್ಭ್ರಾತರಂ-ಅವನಸೋದರನಾದ, ದೇವಕಂಚ-ದೇವಕನನ್ನೂ, ಅನ್ಯೇ-ಇತರರಾದ, ಮಮವಿದ್ವಿಷಃ-ನನ್ನದ್ವೇಷಿಗಳು, ಯೇ-ಯಾರೋ, ತಾಂಶ್ಚ-ಅವರನ್ನೂ, ಹನಿಷ್ಯೇ-ಕೊಲ್ಲುವೆನು॥೩೪॥ತತಃ-ಆಮೇಲೆ, ಏಷಾಮಹೀಚ-ಈಭೂಮಿಯೂಕೂಡ, ನಷ್ಟಕಂಟಕಾ-ಗತಿಸಿಹೋದ ಬಾಧಕರುಳ್ಳದ್ದಾಗಿ,ಮಹ್ಯಂ-ನನಗೋಸುಗ, ಭವಿತ್ರೀ-ಆಗುತ್ತೆ. ಜರಾಸಂಧಃ-ಜರಾಸಂಧನು, ಮಮ-ನನಗೆ, ಗುರುಃ-ಹಿರಿಯನಾಗಿರುವನು. ದ್ವಿವಿದಃ-ದ್ವಿವಿದನೆಂಬವನು, ದಯಿತಃ-ಪ್ರಿಯನಾಗಿಯೂ, ಸಖಾ-ಮಿತ್ರನಾಗಿಯೂ ಇರುವನು ॥೩೫॥ಶಂಬರಃ-ಶಂಬರಾಸುರನು, ನರಕಃ-ನರಕಾಸುರನು, ಬಾಣಃ-ಬಾಣಾಸುರನು, ಮಯ್ಯೇವ-ನನ್ನಲ್ಲಿಯೇ, ಕೃತಸೌಹೃದಾಃ-ಮಾಡಲ್ಪಟ್ಟ ಮೈತ್ರಿಯುಳ್ಳವರಾಗಿದ್ದಾರೆ. ಅಹಂ-ನಾನು, ತೈಃ-ಅವರಸಹಾಯದಿಂದ, ಸುರಪಕ್ಷೀಯಾನ್-ದೇವತೆಗಳ ಕಡೆಯವರಾದ, ನೃಪಾನ್-ಅರಸುಗಳನ್ನು, ಹತ್ವಾ-ಕೊಂದು, ಮಹೀಂ-ಭೂಮಿಯನ್ನು, ಭೋಕ್ಷ್ಯೇ-ಅನುಭವಿಸುವೆನು॥೩೬॥ ಏತತ್-ಇದರನ್ನು, ಜ್ಞಾತ್ವಾ-ತಿಳಿದು, ಅರ್ಭಕೌ-ಹುಡುಗರಾದ, ರಾಮಕೃಷ್ಣೌ-ಬಲಕೇಶವರನ್ನು,ಧನುರ್ಮಖನಿರೀಕ್ಷಾರ್ಥಂ-ಬಿಲ್ಲಿನ ಯಾಗವನ್ನು ನೋಡಲೋಸುಗವೂ,ಯದುಪುರಶ್ರಿಯಂ-ಯಾದವ ರಾಜಧಾನಿಯಾದ ಮಥುರಾ ನಗರದ ಭಾಗ್ಯವನ್ನು, ದ್ರಷ್ಟುಂ-ನೋಡುವುದಕ್ಕೂ, ಇಹ-ಇಲ್ಲಿಗೆ, ಕ್ಷಿಪ್ರಂ-ಬೇಗನೆ, ಆನಯ-ತೆಗೆದುಕೊಂಡುಬಾ॥೩೭॥[ಅಕ್ರೂರನು ಹೇಳುತ್ತಾನೆ] ರಾಜನ್-ದೊರೆಯಾದಕಂಸನೇ! ತವ-ನಿನ್ನ, ಸ್ವಾವದ್ಯಮಾರ್ಜನಂ-ತನ್ನ ಕೇಡನ್ನು ತೊಡೆಕೊಳ್ಳುವ, ಮನೀಷಿತಂ-ಮನೋರಥವು, ಸಧ್ರ್ಯಕ್-ಸರಿಯಾದ್ದೇ, ಆದರೆ-ಸಿದ್ಧ್ಯಸಿದ್ಧ್ಯೋಃ-ಲಾಭಾಲಾಭಗಳಲ್ಲಿ, ಸಮಃ-ಸಮಾನಬುದ್ಧಿಯುಳ್ಳವನು, ಭೂಯಾತ್-ಆಗಬೇಕು.ಏಕೆಂದರೆ-ಫಲಭಾವನಂ-ಪ್ರಯೋಜನವನ್ನುಂಟುಮಾಡುವುದು, ದೈವಂಹಿ-ಅದೃಷ್ಟವೇ ಅಲ್ಲವೆ ॥೩೮॥ಆದರೆ, ಜನಃ-ಲೋಕವು, ದೈವಹತಾನಪಿ-ಅದೃಷ್ಟದಿಂದ ನಾಶಗೊಳಿಸಲ್ಪಟ್ಟವುಗಳನ್ನಾದರೂ, ಮನೋರಥಾನ್-ಬಯಕೆಗಳನ್ನು ಮಾತ್ರ, ಉಚ್ಚೈಃ-ಅಧಿಕವಾಗಿ, ಕರೋತಿ-ಮಾಡುತ್ತಿರುವುದು. ಆದರಿಂದ ಹರ್ಷಶೋಕಾಭ್ಯಾಂ-ಸುಖದುಃಖಗಳೊಡನೆ, ಯುಜ್ಯತೇ-ಕೂಡಿಸಲ್ಪಡುವನು, ತಥಾಪಿ-ಹಾಗಾದರೂ, ತೇ-ನಿನ್ನ, ಆಜ್ಞಾಂ-ಶಾಸನವನ್ನು, ಕರೋಮಿ-ಮಾಡುವೆನು ॥೩೯॥[ಶುಕವಾಕ್ಯವು.] ಸಃಕಂಸಃ-ಆಕಂಸನು,

---

ನನಗೆ ಮಿತ್ರನು ॥೩೫॥ ಶಂಬರನು ನರಕನು ಬಾಣನು ಸಹ ನನ್ನಲ್ಲಿಯೇ ಮಾಡಲ್ಪಟ್ಟ ಸ್ನೇಹವುಳ್ಳಂತವರು ಅವರುಗಳಿಂದ ಸಮೇತನಾಗಿ ದೇವಪಕ್ಷಪಾತಿಗಳಾದ ಈದುಷ್ಟರಾದ ಅರಸರಂ ಸಂಹರಿಸಿ ಭೂಮಿಯಂ ನಾನಪಹರಿಸುವೆನು ॥೩೬॥ ಈಯರ್ಥಮಂ ತಿಳಿದು ಬಾಲಕರಾದ ರಾಮಕೃಷ್ಣರಂ, ಧನುರ್ಯಾಗವಂ ಮಥುರಾಪುರದ ಸಂಪದವನುಂ ನೋಡುವುದಕೆ ಇಲ್ಲಿಗೆ ಕರೆದುಕೊಂಡು ಬಂದವನಾಗು ॥೩೭॥ [ಎಂಬ ಕಂಸನವಾಕ್ಯಮಂ ಕೇಳಿ ಅಕ್ರೂರನು ಪೇಳಿದನದೆಂತೆನೆ-] ಎಲೈ ಅರಸಾದ ಕಂಸನೇ! ನಿನ್ನ ಮನೋಭಿಪ್ರಾಯವು ಚೆನ್ನಾಗಿದೆ. ನಿನ್ನಮೃತ್ಯುವಂ ಪರಿಹರಿಸಲು ಒಳ್ಳೇಪ್ರಯತ್ನವಂ ಮಾಡಿರುವಿ. ಆದರೂ ಸಿದ್ಧ್ಯಸಿದ್ಧಿಗಳಂ ಸಮವಾಗಿ ಭಾವಿಸಿ ಕೆಲಸವಂ ಮಾಡಬೇಕು. ಫಲಪ್ರಾಪ್ತಿಯು ದೈವಾಧೀನವಾದುದು ॥೩೮॥ ದೈವಸಂಕಲ್ಪದಲ್ಲಿ ಇಲ್ಲವೆಇದ್ದರೂ ಅಂತಿಯು ಮನೋರಥಂಗಳಂ ಕುರಿತು ಮನುಷ್ಯನು ಯತ್ನಂಗೆಯ್ವನು. ಆದರಿಂದ ಹರ್ಷಶೋಕಂಗಳನೈದುವನು. ಆದರೂ ನೀನು ಹೇಳಿದರೀತಿಯಿಂ ಕರೆತರುವೆನು ॥೩೯॥ ಎಲೈ, ಅರಸೇ! ಎಂದುಅಕ್ರೂರನಂ

ರಂಮಂತ್ರಿಣಶ್ಚ ವಿಸೃಜ್ಯಸಃ । ಪ್ರವಿವೇಶಗೃಹಂಕಂಸಸ್ತಥಾಕ್ರೂರಂಸ್ವಮಾಲಯಂ ॥೪೦॥

ಇತಿಶ್ರೀಮದ್ಭಾಗವತೇ-ದಶಮಸ್ಕಂಧೇ-ಷಟ್ತ್ರಿಂಶೋಧ್ಯಾಯಃ

ಕೇಶಿಸಂಹಾರಘಟ್ಟಃ

ಶ್ರೀಶುಕಃ॥ಕೇಶೀತುಕಂಸಪ್ರಹಿತಃಖುರೈರ್ಮಹೀಂಮಹತ್ತಯಾನಿರ್ಜರಯರ್ನ್ಮಹಾಹಯಃ।ಸಟಾವಧೂತಾಭ್ರವಿಮಾನಸಂಕುಲಂಕುರ್ವನ್ನಭೋಹೇಷಿತಭೀಷಿತಾಖಿಲಃ॥೧॥ವಿಶಾಲನೇತ್ರೋವಿಕಟಾಸ್ಯಕೋ

---

ಏವಂ-ಹೀಗೆ, ಆದಿಶ್ಯ-ಆಜ್ಞಾಪಿಸಿ, ಅಕ್ರೂರಂ-ಅಕ್ರೂರನನ್ನು, ಮಂತ್ರಿಣಶ್ಚ-ಮಂತ್ರಿಗಳನ್ನೂ, ವಿಸೃಜ್ಯ-ಬಿಟ್ಟು, ಸ್ವಕಂಗೃಹಂ-ತನ್ನ ಮನೆಯನ್ನು, ಪ್ರವಿವೇಶ-ಹೊಕ್ಕನು. ತಥಾ-ಹಾಗೆಯೇ, ಅಕ್ರೂರಃ-ಅಕ್ರೂರನು, ಸ್ವಂ-ತನ್ನ, ಆಲಯಂ-ಮನೆಯನ್ನು, ಪ್ರವಿವೇಶ-ಹೊಕ್ಕನು ॥೪೦॥

ಇತಿಶ್ರೀಮದ್ಭಾಗವತೇ ದಶಮಸ್ಕಂಧೇ

ಷಟ್ತ್ರಿಂಶೋಧ್ಯಾಯಃ

೩೭ನೆಯಅಧ್ಯಾಯದ ಪ್ರತಿಪದಟೀಕೆ-

[ಶುಕವಾಕ್ಯವು.]ಕಂಸಪ್ರಹಿತಃ-ಕಂಸನಿಂದ ಕಳುಹಿಸಲ್ಪಟ್ಟ, ಕೇಶೀತು-ಕೇಶಿಯೆಂಬ ಅಸುರನಾದರೋ, ಮಹತ್ತಯಾ-ದೊಡ್ಡಮ್ಮೆಯುಳ್ಳವನಾದ್ದರಿಂದ, ಖುರೈಃ-ಕಾಲಗೊರಸುಗಳಿಂದ, ಮಹೀಂ-ಭೂಮಿಯನ್ನು, ನಿರ್ಜರಯರ್ನ್-ಶಿಥಿಲ ಗೊಳಿಸುತಲಿರುವನಾದ, ಮಹಾಹಯಃ-ದೊಡ್ಡಕುದುರೆಯಾಗಿರುವನು ನಭಃ-ಆಕಾಶವನ್ನು, ಸಟಾ....ಕುಲಂ-ಸಟಾ-ಜಡೆಕೂದಲುಗಳಿಂದ, ಅವಧೂತ-ಕೊಡಹಲ್ಪಟ್ಟ, ಅಭ್ರ-ಮೇಘಗಳ, ವಿಮಾನ-ವಿಮಾನಗಳ,ಸಂಕುಲಂ-ಗುಂಪುಳ್ಳದ್ದನ್ನಾಗಿ, ಕುರ್ವನ್-ಮಾಡುತಲಿರುವನು. ಹೇಷಿತಭೀಷಿತಾಖಿಲಃ-ಹೇಷಾಧ್ವನಿಯಿಂದ, ಹೆದರಿಸಲ್ಪಟ್ಟ ಸರ್ವರೂಉಳ್ಳವನು॥೧॥ವಿಶಾಲನೇತ್ರಃ-ಅಗಲವಾ

---

ಆಜ್ಞಾಪಿಸಿ ಒಪ್ಪಿಸಿ ಕಂಸನು ಮಂತ್ರಿಗಳಂ ಕಳುಹಿಸಿಬಿಟ್ಟು ತನ್ನಮನೆಗೆ ಹೋದನು ॥೪೦॥ ‡

ಇಂತು ಶುಕಮುನಿಯು ಪರೀಕ್ಷಿದ್ರಾಯನಿಗೆ ನಿರೂಪಿಸಿದನೆಂದು ಸೂತಪೌರಾಣಿಕನು ನೈಮಿಶಾ
ರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಹೇಳಿದನೆಂಬಲ್ಲಿಗೆ ಶ್ರೀಮನ್ಮಹೀಶೂರಪುರವ
ರಾಧೀಶ ಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜ ವಿರಚಿತವಪ್ಪ ಶ್ರೀ
ಭಾಗವತದ ಶ್ರೀಕೃಷ್ಣರಾಜ ವಾಣೀವಿಲಾಸವು ಎಂಬಕರ್ಣಾಟಕ
ಭಾಷಾವ್ಯಾಖ್ಯಾನದಲ್ಲಿ ದಶಮಸ್ಕಂಧದೊಳು೩೬ನೆಯ
ಅಧ್ಯಾಯವು ಸಂಪೂರ್ಣವಾದುದು.

ಮಂಗಳಮಸ್ತು

೩೭ನೆಯ ಅಧ್ಯಾಯವು.

ಶ್ರೀಧರೀಯಶ್ಲೋಕಃ॥ ಸಪ್ತತ್ರಿಂಶೇಹತೇಕೇಶಿನ್ಯಚ್ಯುತೋಭಾವಿಕರ್ಮಭಿಃ । ನಾರದೇನಸ್ತುತಃಶ್ರೀಡಃವ್ಯೋಮಾಸುರಮಥಾವಧೀತ್ ॥‡॥ ಮೂವತ್ತೇಳನೆಯ ಅಧ್ಯಾಯದಲ್ಲಿಶ್ರೀಕೃಷ್ಣನಿಂದ ಕೇಶಿನಾಮಕನಾದ ಅಸುರನು ಸಂಹರಿಸಲ್ಪಟ್ಟಮೇಲೆ, ನಾರದಮಹರ್ಷಿಯಿಂದ ಮುಂದೆ ಶ್ರೀಕೃಷ್ಣನಿಂದ ಮಾಡಲ್ಪಡುವ ಅತ್ಯದ್ಭುತ ಚರಿತ್ರಂಗಳಿಂದಸ್ತುತಿಮಾಡಲ್ಪಡುತಲಿರುವ ಶ್ರೀಕೃಷ್ಣನು ವ್ಯೋಮಾಸುರನಂ ಲೀಲೆಯಿಂದಲೇ ಸಂಹರಿಸಿದನು. ಎಂಬಅರ್ಥವಂ ಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸುವನದಂತೆನೆ-

ಎಲೈ, ಅರಸೇ! ಅನಂತರದಲ್ಲಿ ಕಂಸನಿಂದ ಕಳುಹಿಸಲ್ಪಟ್ಟ ಕೇಶಿನಾಮಕನಾದ ಅಸುರನು ಮಹತ್ತಾದ ಅಶ್ವದೇಹಮಂಧರಿಸಿ ಕಾಲಕೊಳೆಗಳ ಪ್ರಹಾರಂಗಳಿಂ ಭೂಮಿಯಂಸೀಳುವನಾಗಿ, ಮನೋವೇಗವುಳ್ಳವನಾಗಿ, ಹೆಗಲಿನಮೇಲಿರುವ ಕೇಸರಂಗಳಿಂದ ಮೇಘಂಗಳಂ ವ್ಯಾಪಿಸಿ ತಳ್ಳಲ್ಪಟ್ಟ ವಿಮಾನಂಗಳುಳ್ಳವನಾಗಿ, ಕಂಠ

ಟರೋಬೃಹದ್ಗಳೋನೀಲಮಹಾಚಲೋಪಮಃ । ದುರಾಸದಃಕಂಸಹಿತಂಚಿಕೀರ್ಷುರ್ವ್ರಜಂಸನಂದಸ್ಯ
ಜಗಾಮಕಂಪಯನ್ ॥೨॥ ತಂತ್ರಾಸಯಂತಂಭಗವಾನ್ಸ್ವಗೋಕುಲಂತದ್ಧೇಷಿತೈರ್ವಾಲವಿಘೂರ್ಣಿ
ತಾಂಬುದಂ । ಆತ್ಮಾನಮಾಜೌಮೃಗಯಂತಮಗ್ರಣೀರುಪಾಹ್ವಯತ್ಸವ್ಯನದನ್ಮೃಗೇಂದ್ರವತ್॥೩॥
ಸತಂನಿಶಾಮ್ಯಾಭಿಮುಖೋಮುಖೇನಪಿಬನ್ನಿವಾಭ್ಯದ್ರವದತ್ಯಮರ್ಷಣಃ । ಜಘಾನಪದ್ಭ್ಯಾಮ
ರವಿಂದಲೋಚನಂದುರಾಸದಶ್ಚಂಡರವೋದುರತ್ಯಯಃ॥೪॥ ತದ್ವಂಚಯಿತ್ವಾತಮಧೋಕ್ಷಜೋರುಷಾ

---

ಡ ಕಂಠವುಳ್ಳವನೂ, ವಿಕಟಾಸ್ಯಕೋಟರಃ-ವಿಸ್ತಾರವಾದ ಬಾಯಿಪೊಟರೆಯುಳ್ಳವನೂ, ಬೃಹದ್ಗಳಃ-ದೊಡ್ಡಕತ್ತುಳ್ಳವನೂ, ನೀಲಮಹಾಚಲೋಪಮಃ-ಕರಿಯಹೆಬ್ಬೆಟ್ಟದ ಹೋಲಿಕೆಯುಳ್ಳವನೂ, ದುರಾಸದಃ-ಯಾರೂಪ್ರಯಾಸದಿಂದಲೂ ಹತ್ತಿರಕ್ಕೆ ಸೇರಲು ಅಶಕ್ಯನಾದವನೂ, ಆದ, ಸಃ-ಆಕೇಶಿಯು, ಕಂಸಹಿತಂ-ಕಂಸನಿಗೆಪ್ರಿಯವನ್ನು, ಚಿಕೀರ್ಷುಃ-ಮಾಡಲೆಳಸಿದವನಾಗಿ,ನಂದಸ್ಯ-ನಂದಗೋಪನ, ವ್ರಜಂ-ಗೋಕುಲವನ್ನು, ಕಂಪಯನ್-ನಡುಗಿಸುವವನಾಗಿ, ಜಗಾಮ-ತೆರಳಿದನು ॥೨॥ ಸ್ವಗೋಕುಲಂ-ತನ್ನ ಗೋಕುಲವನ್ನು, ತ್ರಾಸಯಂತಂ-ಹೆದರಿಸುತಲಿರುವಂಥಾ, ತದ್ಧೇಷಿತೈಃ-ಆಹಲಹಲ ಧ್ವನಿಗಳಿಂದಲೂ ಕೂಡಿ, ವಾಲವಿಘೂರ್ಣಿತಾಂಬರಂ-ಬಾಲದಿಂದತಿರುಗಿಸಲ್ಪಟ್ಟ ಮೋಡಗಳುಳ್ಳಂತಾ,ಆತ್ಮಾನಂ-ತನ್ನನ್ನು, ಆಜೌ-ಯುದ್ಧವಿಷಯದಲ್ಲಿ, ಮೃಗಯಂತಂ-ಹುಡುಕುತಲಿರುವ, ತಂ-ಆಕೇಶಿದಾನವನನ್ನು, ಅಗ್ರಣೀಃ-ಮುಂದಾಳಾಗಿ, ಮೃಗೇಂದ್ರವತ್-ಸಿಂಹದಹಾಗೆ, ವ್ಯನದತ್-ಗರ್ಜಿಸುತಲಿರುವ, ಸಭಗವಾನ್-ಆಕೃಷ್ಣನು,ಉಪಾಹ್ವಯತ್-ಹತ್ತಿರಕ್ಕೆ ಕರೆದನು ॥೩॥ ಸಃ-ಆಕೇಶಿದೈತ್ಯನು, ತಂ-ಆಕೃಷ್ಣನನ್ನು, ನಿಶಾಮ್ಯ-ನೋಡಿ, ಅಭಿಮುಖಃ-ಇದಿರಿಗೆ ತಿರುಗಿದವನಾಗಿ, ಮುಖೇನ-ಬಾಯಿಯಿಂದ, ಪಿಬನ್ನಿವ-ಕುಡಿಯುವವನಹಾಗೆ, ಅತ್ಯಮರ್ಷಣಃ-ಬಹಳಸಿಟ್ಟುಳ್ಳವನಾಗಿ, ಅಭ್ಯದ್ರವತ್-ಅಟ್ಟಿಕೊಂಡುಬಂದನು. ಚಂಡರವಃ-ಕ್ರೂರಶಬ್ದವುಳ್ಳವನೂ, ದುರಾಸದಃ-ಹತ್ತಿರಕ್ಕೆ ಸೇರಗೊಳಿಸದವನೂ, ದುರತ್ಯಯಃ-ಮೀರಲಳವಲ್ಲದವನೂ, ಆದ, ಆಕೇಶಿಯು ಪದ್ಭ್ಯಾಂ-ತನ್ನಕಾಲುಗಳಿಂದ, ಅರವಿಂದಲೋಚನಂ-ಕಮಲಾಕ್ಷನಾದ ಕೃಷ್ಣನನ್ನು, ಜಘಾನ-ಹೊಡೆದನು ॥೪॥ ಅಧೋಕ್ಷ

---

ಗರ್ಜನೆಗಳಿಂದ ಲೋಕವು ಹೆದರಿಸುತ್ತ ಬಂದನು ॥೧॥ ಮತ್ತು ವಿಶಾಲನೇತ್ರಮುಳ್ಳವನಾಗಿ, ಘೋರವಾದ ಮುಖರಂಧ್ರಮುಳ್ಳವನಾಗಿ, ಸ್ಥೂಲವಾದ ಕಂಠವುಳ್ಳವನಾಗಿ, ನೀಲವಾದ ಮಹಾಶೈಲದಂತೆ ಭಯಂಕರನಾಗಿ, ದುಷ್ಟಬುದ್ಧಿಯುಳ್ಳವನಾಗಿ, ಕಂಸನಿಗೆ ಹಿತವಂ ಮಾಡಲಿಚ್ಛೆಯುಳ್ಳವನಾಗಿ, ನಂದಗೋಪನ ವ್ರಜವಂಕಂಪಿಸುವಂತೆ ಮಾಡುತಬಂದನು॥೨॥ ಗೋಪವೇಷನಾದ ಕೃಷ್ಣನು, ಭಯಂಕರಂಗಳಾದ ಹೇಷಾಧ್ವನಿಂಗಳಿಂ



ದ ಗೋಕುಲವಂ ಭಯಂಗೊಳಿಸುತ ಬಾಲದಿಂದಬೀಸಲ್ಪಟ್ಟ ಮೇಘಂಗಳುಳ್ಳವನಾಗಿ ತನ್ನನ್ನೇಹುಡುಕಿಕೊಂಡು ಬರುತಲಿರುವಆಯಸುರನಂ ಕಂಡಸುಳಿಯರುನು ಸಿಂಹದಂತೆ ಗರ್ಜಿಸಿದನು ॥೩॥ ಅನಂತರದಲ್ಲಿ ಅಸುರನು ಇದಿರಾಗಿರುವ ಶ್ರೀಕೃಷ್ಣನಂನೋಡಿ ಆಕಾಶವನ್ನೇ ನುಂಗುವಂತೆ ವಿಶಾಲವಾದ ಬಾಯಿಯಂತೆರದುಕೊಂಡು ಬಹುಕೋಪದಿಂದ ಅಟ್ಟಿಬಂದನು. ಹಾಗೆಯೇ ಮಹಾವೇಗಮುಳ್ಳ ಅಸಾಧ್ಯನಾದ ಪ್ರಚಂಡಧ್ವನಿಯುಳ್ಳ ಅವನುತಿರುಗಿಕೊಂಡುಹಿಂಗಾಲ್ಗಳಿಂದಕೃಷ್ಣನಂಒದೆದನು॥೪॥ಶ್ರೀಕೃಷ್ಣನು ಅವನಪ್ರಹಾರವಂ ತಪ್ಪಿಸಿಕೊಂಡು ಕೋಪದಿಂದ ತನ್ನಬಾಹುಗಳಿಂದ ಆಯಸುರನಂ ಕಾಲುಗಳಲ್ಲಿ ಹಿಡಿದುಎತ್ತಿ, ನೂರುಮಾ

ಪ್ರಗೃಹ್ಯ ದೋರ್ಭ್ಯಾಂ ಪರಿವಿಧ್ಯ ಪಾದಯೋಃ । ಸಾವಜ್ಞಮುತ್ಸೃಜ್ಯ ಧನುಃಶತಾಂತರೇ ಯಥೋರಗಂ ತಾರ್ಕ್ಷ್ಯಸುತೋ ವ್ಯವಸ್ಥಿತಃ ॥೫॥ ಸ ಲಬ್ಧಸಂಜ್ಞಃ ಪುನರುತ್ಥಿತೋ ರುಷಾ ವ್ಯಾದಾಯ ಕೇಶೀ ತರಸಾಽಪತದ್ಧರಿಂ । ಸೋಽಪ್ಯಸ್ಯ ವಕ್ತ್ರೇ ಭುಜಮುತ್ತರಂ ಸ್ಮಯನ್ ಪ್ರವೇಶಯಾಮಾಸ ಯಥೋರಗಂ ಬಿಲೇ ॥೬॥ ದಂತಾ ನಿಪೇತುರ್ಭಗವದ್ಭುಜಸ್ಪೃಶಸ್ತೇ ಕೇಶಿನಸ್ತಪ್ತಮಯಸ್ಪೃಶೋ ಯಥಾ । ಬಾಹುಶ್ಚ ತದ್ದೇಹಗತೋ ಮಹಾತ್ಮನೋ ಯಥಾಽಽಮಯಃ ಸಂವವೃಧೇ ಉಪೇಕ್ಷಿತಃ ॥೭॥ ಸಮೇಧಮಾನೇನ ಸ ಕೃಷ್ಣಬಾಹುನಾ ನಿರುದ್ಧವಾಯುಶ್ಚರಣಾಂಶ್ಚ ವಿಕ್ಷಿಪನ್ । ಪ್ರಸ್ವಿನ್ನಗಾತ್ರಃ ಪರಿವೃತ್ತಲೋಚನಃ ಪಪಾತ ಲಂಡಂ ವಿಸೃಜನ್ ಕ್ಷಿತೌ ವ್ಯಸುಃ ॥೮॥ ತದ್ದೇಹತಃ ಕರ್ಕಟಿಕಾಫಲೋಪಮಾದ್ವ್ಯಸೋರಪಾಕೃಷ್ಯ ಭುಜಂ ಮಹಾಭುಜಃ ।

---

ಜಃ-ಕೃಷ್ಣನು, ತತ್-ಅವನಪೆಟ್ಟನ್ನು, ವಂಚಯಿತ್ವಾ-ಮೋಸದಿಂದ ತಪ್ಪಿಸಿಕೊಂಡು, ರುಷಾ-ಸಿಟ್ಟಿನಿಂದ, ದೋರ್ಭ್ಯಾಂ-ತೋಳುಗಳಿಂದ, ಪಾದಯೋಃ-ಕಾಲುಗಳಲ್ಲಿ, ತಂ-ಅವನನ್ನು, ಪ್ರಗೃಹ್ಯ-ಗಟ್ಟಿಯಾಗಿಹಿಡಿದು, ಪರಿವಿಧ್ಯ-ಚನ್ನಾಗಿ ಸೋಯಿಸಿ, ಸಾವಜ್ಞಂ-ಅಲಕ್ಷ್ಯದೊಡನೆ, ತಾರ್ಕ್ಷ್ಯಸುತಃ-ಗರುಡನ ಮರಿಯು, ಉರಗಂ ಯಥಾ-ಹಾವನ್ನು ಹೇಗೋಹಾಗೆ, ಧನುಶ್ಶತಾಂತರೇ--ನೂರುಮಾರು ದೂರದಲ್ಲಿ, ಉತ್ಸೃಜ್ಯ-ಬಿಸುಟು, ವ್ಯವಸ್ಥಿತಃ-ನಿಂತಿದ್ದನು ॥೫॥ ಲಬ್ಧಸಂಜ್ಞಃ-ಪಡೆಯಲ್ಪಟ್ಟ ಎಚ್ಚರುಳ್ಳವನಾದ, ಸಃ ಕೇಶೀ-ಆ ಕೇಶಿಯು, ಪುನಃ-ಮರಳಿ, ಉತ್ಥಿತಃ-ಎದ್ದವನಾಗಿ, ರುಷಾ-ಸಿಟ್ಟಿನಿಂದ, ವ್ಯಾದಾಯ-ಬಾಯಿ ತೆರಕೊಂಡು, ತರಸಾ-ಬೇಗನೆ, ಹರಿಂ-ಕೃಷ್ಣನನ್ನು ಕುರಿತು, ಅಪತತ್-ಬಂದು ಬಿದ್ದನು. ಸೋಪಿ-ಆ ಕೃಷ್ಣನೂ ಕೂಡ, ಅಸ್ಯ-ಆ ಕುದುರೆಯ, ವಕ್ತ್ರೇ-ಬಾಯಿಯಲ್ಲಿ, ಉತ್ತರಂ ಭುಜಂ-ಎಡದ ತೋಳನ್ನು, ಬಿಲೇ-ಹುತ್ತದಲ್ಲಿ, ಉರಗಂ ಯಥಾ-ಹಾವನ್ನು ಹೇಗೋಹಾಗೆ, ಸ್ಮಯನ್-ನಗುತಲಿರುವನಾಗಿ, ಪ್ರವೇಶಯಾಮಾಸ-ಹೊಗಿಸಿದನು ॥೬॥ ಕೇಶಿನಃ-ಕೇಶಿದೈತ್ಯನ, ತೇ ದಂತಾಃ-ಆ ಹಲ್ಲುಗಳು, ಭಗವದ್ಭುಜಸ್ಪೃಶಃ-ಕೃಷ್ಣನ ತೋಳನ್ನು ಸೋಂಕಿದವಾದ್ದರಿಂದಲೇ, ತಪ್ತಮಯಸ್ಪೃಶೋ ಯಥಾ-ಕಾವಕಬ್ಬಿಣವನ್ನು ಸೋಂಕಿದರೆ ಹೇಗೋಹಾಗೆ, ನಿಪೇತುಃ-ಉದಿದುಬಿದ್ದವು. ಮಹಾತ್ಮನಃ-ಮಹಾಪುರುಷನಾದ ಕೃಷ್ಣನ, ಬಾಹುಶ್ಚ-ತೋಳುಕೂಡ, ತದ್ದೇಹಗತಸ್ಸನ್-ಅವನ ಮೈಯಲ್ಲಿ ಹೊಕ್ಕದ್ದಾಗಿ, ಉಪೇಕ್ಷಿತಃ-ಚಿಕಿತ್ಸೆ ಮಾಡದೇ ಅಲಕ್ಷ್ಯವಾಗಿ ಬಿಡಲ್ಪಟ್ಟ, ಆಮಯೋ ಯಥಾ-ರೋಗವು ಹೇಗೋಹಾಗೆ, ಸಂವವೃಧೇ-ಬೆಳೆದುದು. ॥೭॥ ಸಃ-ಆ ಕೇಶಿಯು, ಸಮೇಧಮಾನೇನ-ಚನ್ನಾಗಿ ಬೆಳೆಯುತಲಿರುವ, ಕೃಷ್ಣಬಾಹುನಾ-ಕೃಷ್ಣನ ತೋಳಿನಿಂದ, ನಿರುದ್ಧವಾಯುಃ-ತಡೆಯಲ್ಪಟ್ಟ ಉಸಿರುಳ್ಳವನಾಗಿ, ಚರಣಾನ್-ಕಾಲುಗಳನ್ನು, ವಿಕ್ಷಿಪನ್-ಒದ್ದಾಡಿಕೊಳ್ಳುವನೂ, ಪ್ರಸ್ವಿನ್ನಗಾತ್ರಃ-ಹೆಚ್ಚಾಗಿ ಬೆವರಿದ ಮೈಯುಳ್ಳವನೂ, ಪರಿವೃತ್ತಲೋಚನಃ-ಸುತ್ತುತಲಿರುವ ಕಂಣುಗಳುಳ್ಳವನೂ, ಲಂಡಂ-ಲದ್ದಿಯನ್ನು, ವಿಸೃಜನ್-ಬಿಡುತಲಿರುವನಾಗಿ, ವ್ಯಸುಃ-ಪ್ರಾಣಹೋದವನಾಗಿ, ಕ್ಷಿತೌ-ನೆಲದಲ್ಲಿ, ಪಪಾತ-ಬಿದ್ದನು ॥೮॥ ಕರ್ಕಟಿಕಾಫಲೋಪಮಾತ್-ಕೆಕ್ಕರಿಕೆಯ ಹಂಣಿನ ಹೋಲಿಕೆಯುಳ್ಳ, ವ್ಯಸೋಃ-ಪ್ರಾ

---

ಣದೂರ ಪರ್ಯಂತರಂ ಗರುಡನು ಸರ್ಪವಂ ಬೀಸಿಬಿಟ್ಟಂತೆ ಬೀಸಿಬಿಟ್ಟನು ॥೫॥ ಆಸುರನು ಮೂರ್ಛಿತನಾಗಿ ಪುನಶ್ಚ ಮೂರ್ಛೆತಿಳಿದು ಎದ್ದು ಬಾಯಂ ತೆರದುಕೊಂಡು ಕೋಪದಿಂದ ವೇಗದಿಂದ ಶ್ರೀಕೃಷ್ಣನಿಗೆ ಇದಿರಾಗಿ ಬಂದನು. ಆ ಶ್ರೀಕೃಷ್ಣನು ನಗುತಲೇ ತನ್ನ ಯೆಡದ ಭುಜವಂ ಆಸುರನ ಬಾಯೊಳಕ್ಕೆ ಬಿಲದಲ್ಲಿ ಸರ್ಪವಂ ಪುಗಿಸಿದಂತೆ ನುಗ್ಗಿಸಿದನು ॥೬॥ ಭಗವಂತನ ಭುಜಸ್ಪರ್ಶದಿಂದ ಉಕ್ಕಿನಗಟ್ಟಿಯ ಸ್ಪರ್ಶವಂ ಮಾಡಿದರೆ ಹೇಗೋಹಾಗೆ ಅದೇರೀತಿಯಲ್ಲಿ ಆಸುರನ ಹಲ್ಲುಗಳು ಉದಿರಿದುಬಿದ್ದವು. ಚಿಕಿತ್ಸೆಯಂ ಮಾಡದೆ ಉಪೇಕ್ಷಿಸಲ್ಪಟ್ಟ ಮಹೋದರರೋಗವು ವೃದ್ಧಿಹೊಂದುವುದು ಹಾಗೆ ಅವನ ಬಾಯಿಯಲ್ಲಿ ಹೊಕ್ಕಿರುವ ಭಗವಂತನ ಭುಜವು ಬೆಳತುದು ॥೭॥ ಅಧಿಕವಾಗಿ ಬೆಳೆದ ಶ್ರೀಕೃಷ್ಣನ ಭುಜದಿಂದ ತಡೆಯಲ್ಪಟ್ಟ ಶ್ವಾಸಗಳುಳ್ಳವನಾಗಿ ಕಾಲುಗಳಂ ಒದೆದುಕೊಳ್ಳುತ್ತ ಬೆವರಿದ ಶರೀರಮುಳ್ಳವನಾಗಿ ತಿರುಗುತಲಿರುವ ನೇತ್ರಮುಳ್ಳವನಾಗಿ ಪುರೀಷೋತ್ಸರ್ಜನವಂ ಮಾಡಿಕೊಂಡು ಅಸುರನು ಭೂಮಿಯಲ್ಲಿ ಬಿದ್ದನು ॥೮॥ ಪಕ್ವವಾದ ಕೆಕ್ಕರಿಕೆಹಂಣು ಬಿರಿದಂತೆ ಬಿರಿದಿರುವ ನಿರ್ಜೀವವಾದ ಆಸುರನ ದೇಹದದೆಸೆಯಿಂದ ತನ್ನ ಭುಜವಂ ಸೆಳೆದುಕೊಂಡು ಮಹಾಭುಜನಾದ ಕೃಷ್ಣನು ಗರ್ವರಹಿತನಾಗಿ ಅಯತ್ನದಿಂದಲೇ ಶತ್ರುವಂ ಸಂಹರಿಸಿದವ

ಅವಿಸ್ಮಿತೋಯತ್ನಹತಾರಿರುತ್ಸ್ಮಯೈಃಪ್ರಸೂನವರ್ಷೈರ್ದಿವಿಷದ್ಭಿರೀಡಿತಃ ॥೯॥ ದೇವರ್ಷಿರುಪ

ಶ್ರೀಕೃಷ್ಣಂಪ್ರತಿನಾರದಾಗಮನಘಟ್ಟಃ

ಸಂಗಮ್ಯಭಗವತ್ಪ್ರವಣೋನೃಪ । ಕೃಷ್ಣಮಕ್ಲಿಷ್ಟಕರ್ಮಾಣಂರಹಸ್ಯೇತದುವಾಚಹ ॥೧೦॥
ಕೃಷ್ಣಕೃಷ್ಣಾಪ್ರಮೇಯಾತ್ಮನ್ಯೋಗೇಶಜಗದೀಶ್ವರ । ವಾಸುದೇವಾಖಿಲಾವಾಸಸಾತ್ವತಾಂಪ್ರವ
ರಪ್ರಭೋ ॥೧೧॥ ತ್ವಮಾತ್ಮಾಸರ್ವಭೂತಾನಾಮೇಕೋಜ್ಯೋತಿರಿವೈಧಸಾಂ । ಗೂಢೋಗುಹಾಶಯ
ಸ್ಸಾಕ್ಷೀಮಹಾಪುರುಷಈಶ್ವರಃ ॥೧೨॥ ಆತ್ಮನಾತ್ಮಾಶ್ರಯಃಪೂರ್ವಂಮಾಯಯಾಸಸೃಜೇಗು

---

ಣವಿಲ್ಲದ, ತದ್ದೇಹತಃ-ಅವನಮೈಯ ದೆಸೆಯಿಂದ, ಭುಜಂ-ತನ್ನ ತೋಳನ್ನು, ಅಪಾಕೃಷ್ಯ-ಎಳೆಕೊಂಡು, ಮಹಾಭುಜಃ-ದೊಡ್ಡತೋಳುಗಳುಳ್ಳವನೂ, ಅವಿಸ್ಮಿತಃ-ಆಶ್ಚರ್ಯಪಡದೇ ಯಿರುವವನೂ, ಯತ್ನಹತಾರಿಃ-ಪ್ರಯತ್ನವಿಂದ ಕೊಲ್ಲಲ್ಪಟ್ಟ ಹಗೆಯುಳ್ಳವನೂ, ಉತ್ಸ್ಮಯೈಃ-ಹೆಚ್ಚುಆಶ್ಚರ್ಯವುಳ್ಳಂಥಾ, ಪ್ರಸೂನವರ್ಷೈಃ-ಹೂವಿನಮಳೆಯಂ ಸುರಿಸುವಂಥಾ, ದಿವಿಷದ್ಭಿಃ-ಸ್ವರ್ಗವಾಸಿಗಳಿಂದ, ಈಡಿತಃ-ಸ್ತುತಿಸಲ್ಪಟ್ಟವನೂ ಆದನು ॥೯॥ ನೃಪ-ಧೊರೆಯಾದ ಪರೀಕ್ಷಿದನೇ! ಭಗವತ್ಪ್ರವಣಃ-ದೇವರಲ್ಲಿ ಭಕ್ತನಾದ, ದೇವರ್ಷಿಃ-ದೇವಲೋಕದ ಋಷಿಯಾದನಾರದನು, ಉಪಸಂಗಮ್ಯ-ಹತ್ತಿರಕ್ಕೆಬಂದು, ಅಕ್ಲಿಷ್ಟಕರ್ಮಾಣಂ-ಕ್ಲೇಶವಿಲ್ಲದ ಕೆಲಸವುಳ್ಳ, ಕೃಷ್ಣಂ-ಕೃಷ್ಣನನ್ನು ಕುರಿತು, ರಹಸಿ-ಏಕಾಂತದಲ್ಲಿ, ಏತತ್-ಈಮುಂದೆ ಹೇಳುವ ವಿಷಯವನ್ನು, ಉವಾಚಹ-ನುಡಿದನಂತೆ ॥೧೦॥ ಕೃಷ್ಣಕೃಷ್ಣ-ಕೃಷ್ಣನೇ ಕೃಷ್ಣನೇ! ಅಪ್ರಮೇಯಾತ್ಮನ್-ಯಾರಿಂದಲೂ ಇದಿವಾಗಿ ತಿಳಿಯಲಾವಲ್ಲದ ಆತ್ಮಸ್ವರೂಪವುಳ್ಳವನೇ! ಯೋಗೇಶ-ಉಪಾಯಗಳಿಗೊಡೆಯನೇ! ಜಗದೀಶ್ವರ-ಪ್ರಪಂಚಕ್ಕೆ ನಿಯಾಮಕನೇ! ವಾಸುದೇವ-ವಸುದೇವನಮಗನೇ, ಅಥವಾ ಸರ್ವವ್ಯಾಪಕನೇ! ಅಖಿಲಾವಾಸ-ಸರ್ವಕ್ಕೂ ಆಶ್ರಯನೇ! ಸಾತ್ವತಾಂ-ಯಾದವರೊಳಗೆ, (ಸತ್ಪುರುಷರಲ್ಲಿ) ಪ್ರವರ-ಶ್ರೇಷ್ಠನೇ! ಪ್ರಭೋ-ಸಮರ್ಥನೇ! ॥೧೧॥ ತ್ವಂ-ನೀನು, ಸರ್ವಭೂತಾನಾಂ-ಸಕಲಪ್ರಾಣಿಗಳಿಗೂ, ಏಧಸಾಂ-ಕಾಷ್ಠಗಳಿಗೆ, ಜ್ಯೋತಿರಿವ-ಒಳಗಡಗಿರುವ ಅಗ್ನಿಯಹಾಗೆ, ಏಕಃ-ಒಬ್ಬನೇಆದ, ಆತ್ಮಾ-ಚೈತನ್ಯವಾಗಿರುವಿ. ಗೂಢಃ-ಅಡಗಿದವನಾಗಿ, ಗುಹಾಶಯಃ-ದಹರಾಕಾಶದೊಳಗೆ ವ್ಯಾಪಿಸಿಯಿರುವಿ. ಸಾಕ್ಷೀ-ಜೀವವೃತ್ತಿಗಳನ್ನು ನೋಡುತಲಿರುವಿ. ಮಹಾಪುರುಷಃ-ಪರಮಾತ್ಮನಾಗಿರುವಿ. ಈಶ್ವರಃ-ಅಂತರ್ಯಾಮಿಯಾಗಿರುವಿ ॥೧೨॥ ಆತ್ಮನಾ-ನಿನ್ನಿಂದಲೇ, ಆ

---

ನಾಗಿ ಪುಷ್ಪವರ್ಷಂಗಳಂ ಕರೆಯುತ್ತಲಿರುವ ದೇವತೆಗಳಿಂದ ಸ್ತುತಿಸಲ್ಪಟ್ಟವನಾದನು ॥೯॥ ಎಲೈ ಅರಸೇ



ಅನಂತರದಲ್ಲಿ ಭಗವದ್ಭಕ್ತನಾದ ದೇವರ್ಷಿಯಾದ ನಾರದನು ಶ್ರೀಕೃಷ್ಣನ ಸಮೀಪಕ್ಕೆಬಂದು ತೊಂದರೆಇಲ್ಲದ ಕೆಲಸವುಳ್ಳ ಕೃಷ್ಣನಂ ಕುರಿತು ಈ ಪ್ರಕಾರವಾಗಿ ನುಡಿದನದೆಂತೆನೆ ॥೧೦॥ ಎಲೈ ಕೃಷ್ಣನೇ! ಅಪರಿಚ್ಛಿನ್ನ ಸ್ವರೂಪನಾದವನೇ! ಯೋಗೀಶನೇ! ಜಗದೀಶ್ವರನೇ! ವಾಸುದೇವನೇ! ಸಮಸ್ತಕ್ಕೂ ಆಧಾರಭೂತನೇ! ಯಾದವಶ್ರೇಷ್ಠನೇ! ಪ್ರಭುವೇ! ॥೧೧॥ ನೀನು ಒಬ್ಬನೇ ಸಮಸ್ತಕಾರ್ಯಂಗಳಲ್ಲಿಯೂ ಅಗ್ನಿಯಂ ಸರ್ವಪ್ರಾಣಿಗಳಲ್ಲಿಯೂ ಅಂತರಾತ್ಮನು, ಅಗೋಚರನಾದವನು, ಸಭೂತಹೃದಯವಾಸಿಯು, ಬುದ್ಧಿಸಾಕ್ಷಿಯು, ಮಹಾ ಪುರುಷನಾದ ಈಶ್ವರನು ॥೧೨॥ ಸೃಷ್ಟಿಗೆಪೂರ್ವದಲ್ಲಿ ಕೇವಲಪರಮಾತ್ಮನಾದ ನೀ

ಣಾನ್ |ತ್ರೈರಿದಂಸತ್ಯಸಂಕಲ್ಪಸ್ಸೃಜಸ್ಯತ್ಸ್ಯವಸೀಶ್ವರಃ |೧೩| ಸತ್ವಂಭೂಧರಭೂತಾನಾಂದೈತ್ಯ
ಪ್ರಮಥರಕ್ಷಸಾಂ | ಅವತೀರ್ಣೋವಿನಾಶಾಯಸಾಧೂನಾಂರಕ್ಷಣಾಯಚ |೧೪| ದಿಷ್ಟ್ಯಾದ್ಯಸಿಹ
ತೋದೈತ್ಯೋಲೀಲಯಾಯಂಹಯಾಕೃತಿಃ| ಯಸ್ಯಹೇಷಿತಸಂತ್ರಸ್ತಾಸ್ತ್ಯಜಂತ್ಯನಿಮಿಷಾದಿವಂ|೧೫|
ಚಾಣೂರಂಮುಷ್ಟಿಕಂಚೈವಮಲ್ಲಾನನ್ಯಾಂಶ್ಚಹಸ್ತಿನಂ | ಕಂಸಂಚನಿಹತಂದ್ರಕ್ಷ್ಯೇಪರಶ್ವೋಹ
ನಿತೆವಿಭೋ |೧೬| ತಸ್ಯಾನುಶಂಖಯವನಮುರಾಣಾಂನರಕಸ್ಯಚ | ಪಾರಿಜಾತಾಪಹರಣಮಿಂದ್ರ
ಸ್ಯಚಪರಾಜಯಂ |೧೭| ಸ್ಯಮಂತಕಸ್ಯಚಮಣೇರಾದಾನಂಸಹಭಾರ್ಯಯಾ | ಮೃತಪುತ್ರಪ್ರ

---

ತ್ಮಾಶ್ರಯಃ-ನೀನೇ(ನಿನಗೆ ಆಶ್ರಯನಾಗಿರುವಿ. (ಸ್ವತಂತ್ರನು) ಮಾಯಯಾ-ಮೂಲಪ್ರಕೃತಿಯಿಂದ, ಗುಣಾನ್-ಸತ್ವರಜಸ್ತ
ಮೋಗುಣಗಳನ್ನು, ಸಸೃಜೇ-ಸೃಷ್ಟಿಮಾಡಿದವನಾದಿ. ಸತ್ಯಸಂಕಲ್ಪಃ-ವ್ಯರ್ಥವಲ್ಲದ ಇಚ್ಛೆಯುಳ್ಳವ ನಾದ್ದರಿಂದ, ತ್ರೈಃ-ಆ
ಗುಣಗಳಿಂದ, ಇದಂ-ಈಜಗತ್ತನ್ನು, ಸೃಜಸಿ-ಸೃಷ್ಟಿಸುವಿ. ಅತ್ಸಿ-ಭಕ್ಷಿಸುವಿ. ಅವಸಿ-ಪೋಷಿಸುವಿ. ಈಶ್ವರಃ-ಒಡೆಯನಾಗಿ
ರುವಿ ||೧೩|| ಸತ್ವಂ-ಆನೀನು, ಭೂಧರಭೂತಾನಾಂ-ಬೆಟ್ಟದಹಾಗೆ ಭೂಮಿಗೆಭಾರವಾಗಿರುವ, ದೈತ್ಯಪ್ರಮಥರಕ್ಷಸಾಂ-ದೈತ್ಯ
ರಪ್ರಮಥರರಾಕ್ಷಸರ, ವಿನಾಶಾಯ-ಸಂಹಾರಕ್ಕೋಸುಗವೂ, ಸಾಧೂನಾಂ-ಸತ್ಪುರುಷರ, ರಕ್ಷಣಾಯಚ-ಪಾಲನಕ್ಕೋ
ಸುಗವೂ, ಅವತೀರ್ಣಃ-ಮನುಷ್ಯನಾಗಿಅವತರಿಸಿಯಿರುವಿ ||೧೪|| ಯಸ್ಯ-ಯಾವಕೇಶಿದೈತ್ಯನ, ಹೇಷಿತಸಂತ್ರಸ್ತಾಃ-ಹಲಹಲಧ್ವ
ನಿಯದೆಸೆಯಿಂದ ಹೆದರಿದವರಾದ, ಅನಿಮಿಷಾಃ-ದೇವರ್ಕಳು, ದಿವಂ-ಸ್ವರ್ಗವನ್ನು, ತ್ಯಜಂತಿ-ಬಿಡುವರೋ. ಹಯಾಕೃತಿಃ-
ಕುದುರೆಯ ಆಕಾರವುಳ್ಳ, ಸೋಯಂದೈತ್ಯಃ-ಆಯಿರಾಕ್ಷಸನು, ಅದ್ಯ-ಈಗ, ಲೀಲಯಾ-ನಿನ್ನ ವಿಲಾಸದಿಂದ, ನಿಹತಃ-ನಾಶಮಾ
ಡಲ್ಪಟ್ಟನು. ದಿಷ್ಟ್ಯಾ-ದೈವಯೋಗವಾಗಿದೆ ||೧೫|| ವಿಭೋ-ವ್ಯಾಪಕನಾದವನೇ! ಚಾಣೂರಂ-ಚಾಣೂರನನ್ನು, ಮುಷ್ಟಿಕಂ
ಚೈವ-ಮುಷ್ಟಿಕನನ್ನೂ, ಅನ್ಯಾನ್ಮಲ್ಲಾಂಶ್ಚ-ಬೇರೇಜಟ್ಟಿಗಳನ್ನೂ, ಹಸ್ತಿನಂ-ಆನೆಯನ್ನೂ, ಕಂಸಂಚ-ಕಂಸನನ್ನೂ,
ತೇ-ನಿನ್ನಿಂದ, ನಿಹತಂ-ಕೊಲ್ಲಲ್ಪಟ್ಟವನನ್ನಾಗಿ, ಪರಶ್ವೋಹನಿ-ನಾಳಿಂದಿನ ಹಗಲಿನಲ್ಲಿ, ದ್ರಕ್ಷ್ಯೇ-ನೋಡುವೆನು ||೧೬|| ತ
ಸ್ಯ-ಆಕಂಸನ, ಅನು-ಕೂಡ್ಲೇ, ಶಂಖ-ಶಂಖನು, (ಪಂಚಜನಾಸುರನು.) ಯವನ-ಕಾಲಯವನನು, ಮುರಾಣಾಂ-ಮುರಾಸು
ನು, ಎಂಬವರ, ಚ-ಮತ್ತು, ನರಕಸ್ಯ-ನರಕಾಸುರನ, (ಮರಣವನ್ನೂ) ಪಾರಿಜಾತಾಪಹರಣಂ-ಪಾರಿಜಾತವೆಂಬ ಕಲ್ಪವೃಕ್ಷ
ವನ್ನು ಕಸುಗೊಂಡು ಬರುವಿಕೆಯನ್ನೂ, ಇಂದ್ರಸ್ಯ-ದೇವ [illegible] ಜಯಂಚ-ಸೋಲ್ವಿಕೆಯನ್ನೂ ||೧೭|| ವೀರ್ಯಶ
ಲ್ಕಾದಿಲಕ್ಷಣಂ-ಶೌರ್ಯವಪಣವೇ ಮೊದಲಾದ ಗುರುತ್ತಗಳು [illegible] ಮುದ್ವಾಹಂ-ಶೂರರಕನ್ಯೆಯರಂ ಮದುವೆಯಾ
ಗೋಣವನ್ನೂ, ನೃಗಸ್ಯ-ನೃಗರಾಯನನ್ನು, ಶಾಪಾತ್-ಶಾ [illegible] ದ, ಮೋಕ್ಷಣಂ-ಬಿಡಿಸುವಿಕೆಯನ್ನೂ, ದ್ವಾರಕಾ
ಯಾಂ-ದ್ವಾರಕಾನಗರದಲ್ಲಿ, ಜಗತ್ಪತೇಃ-ಒಡೆಯನಾದನಿನ್ನ, [illegible] ಯಾಸಹ-ಹೆಂಡತಿಯಾದ ಸತ್ಯಭಾಮೆಯೊಡನೆ,

---

ನು ನಿನ್ನಿಂದಲೇ ಮಾಯೆಯಂ ಅವಲಂಬಿಸಿ ಗುಣಂಗಳ [illegible] ವು. ಸತ್ಯಸಂಕಲ್ಪನಾದ ನೀನೂ ಸತ್ವಾ
ದಿಗುಣಂಗಳಿಂದ ಜಗತ್ತಂಸ್ಸೃಜಿಸುವಿ ರಕ್ಷಿಸುವಿ ಸಂಹ [illegible] ಅಂತಾನೀನು ಕ್ಷತ್ರಿಯವಂಶದಲ್ಲಿ ಉತ್ಪ
ನ್ನರಾದ ದೈತ್ಯದಾನವ ರಾಕ್ಷಸರಂ ಸಂಹರಿಸಲೋಸುಗ [illegible] ಯಂ ರಕ್ಷಿಸಲೋಸುಗ ಈ ಅವತಾರ
ವಂ ಗೆಯ್ದಿರುವಿ ||೧೪|| ಯಾವಅಸುರನ ಹೇಷಾಧ್ವನಿ [illegible] ದಿಂದ ದೇವತೆಗಳು ಸ್ವರ್ಗಮಂ ಬಿಟ್ಟು
ಹೋದರೋ, ಆಯಶ್ವಾಕೃತಿಯುಳ್ಳ ಕೇಶಿನಾಮಕನಾದ [illegible] ರು ಮಾಡಿದಪುಣ್ಯದಿಂದ ನಿನ್ನಿಂದಸಂ
ಹೃತನಾದನು ||೧೫|| ಚಾಣೂರನಂ ಮುಷ್ಟಿಕನಂ [illegible] ದ ಜಟ್ಟಿಗರಂ ಕುವಲಯಾಪೀಡವೆಂಬ
ಮದಗಜವಂ ಕಂಸನಂಸಹ ನಾಳಿದ್ದು ಸಂಹರಿಸುತ್ತೀಯೆ [illegible] ವೆನು ||೧೬|| ಆಮೇಲೆಯಾಮೇಲೆ
ಪಂಚಜನನೆಂಬ ಅಸುರನು ಯವನನಂ ಮುರನು ನರಕ [illegible] ತ್ತೀಯೆ ||೧೭|| ಪರಾಕ್ರಮವನೇ
ಶುಲ್ಕದ್ರವ್ಯವನ್ನಾಗಿ ಕೊಟ್ಟು ವೀರಕನ್ಯೆಯರಂ ವಿವಾಹ [illegible] ತ್ತೀಯೆ, ದ್ವಾರಕಾನಗರದಲ್ಲಿ ನೃಗ
ರಾಯಂಗೆ ಶಾಪವಿಮೋಚನವಂ ಮಾಡುತ್ತೀಯೆ ||೧೮ [illegible] ದ ಶ್ರೀಕೃಷ್ಣನೇ! ಅನಂತರದಲ್ಲಿ
ಜಾಂಬವಂತನ ಪುತ್ರಿಯಾದ ಜಾಂಬವತೀದೇವಿಯ ಪಾಣಿಗ್ರ [illegible] ಕೊಂಡು ಸ್ಯಮಂತಕಮಣಿಯಂ

ದಾನಂಚೆಬ್ರಾ[illegible]ಮತಃ |೧೯| ಪೌಂಡ್ರಕಸ[illegible]ಕಾಶೀಪುರ್ಯಾಶ್ಚದೀಪನಂ|
ದಂತವಕ್ತ್ರಸ್ಯ[illegible]ಸ್ಯಚಮಹಾಕ್ರತೌ |೨೦| [illegible]ನಿವೀರ್ಯಾಣಿದ್ವಾರಕಾಮಾ
ವರ್ಸಭವಾಕ್[illegible]ನ್ಯುಹಂತಾನಿಗೇಯಾನಿಕ[illegible]೨೧| ಅಥತೇಕಾಲರೂಪಸ್ಯ
ಕ್ಷಪಯಿಷ್ಣೋರಮ[illegible]ಕ್ಷೌಹಿಣೀನಾಂನಿಧನಂದ[illegible]ನಸಾರಥೇಃ |೨೨| ವಿಶು
ದ್ಧವಿಜ್ಞಾನಘನಂಸ[illegible]ಮಾಪ್ತಸರ್ವಾರ್ಥಮ[illegible]ಂ | ಸ್ವತೇಜಸಾನಿತ್ಯನಿವೃ
ತ್ತಮಾಯಾಗುಣಪ್ರ[illegible]ಂತಮಿಮಹಿ |೨೩| [illegible]ಸ್ವಾಶ್ರಯಮಾತ್ಮಮಾಯ

---

ಸ್ಯಮಂತಕಸ್ಯಮಣೇಃ-ಸ್ಯಮಂತಕವೆಂಬರತ್ನದ, ಆದಾನಂಚ-ಪ್ರತಿ[illegible] ಸ್ವಧಾಮತಃ-ತನ್ನ ಸ್ಥಲದಿಂದ ಬ್ರಾ
ಹ್ಮಣಸ್ಯ-ಬ್ರಾಹ್ಮಣನಿಗೆ, ಮೃತಪುತ್ರಪ್ರದಾನಂಚ-ಸತ್ತಮಕ್ಕಳಂ [illegible]ಯನ್ನೂ ||೧೯|| ಪಶ್ಚಾತ್-ಆಮೇಲೆ,
ಪೌಂಡ್ರಕಸ್ಯ-ಪೌಂಡ್ರಕ ವಾಸುದೇವ ನೆಂಬವನ, ವಧಂ-ಸಂಹಾರವನ್ನೂ, ಕಾಶೀಪುರ್ಯಾಃದೀಪನಂಚ-ಕಾಶಿಯಂಸುಡು[illegible]
ಕೆಯನ್ನೂ, ದಂತವಕ್ತ್ರಸ್ಯ-ದಂತವಕ್ತ್ರನೆಂಬ ರಾಕ್ಷಸನ, ನಿಧನಂ-ಮರಣವನ್ನೂ, ಮಹಾಕ್ರತೌ-ರಾಜಸೂಯಯಾಗದ
ಲ್ಲಿ, ಚೈದ್ಯಸ್ಯ-ಶಿಶುಪಾಲನ, ನಿಧನಂಚ-ಮರಣವನ್ನೂ ||೨೦||ದ್ವಾರಕಾಂ-ದ್ವಾರಕಾಪಟ್ಟಣದಲ್ಲಿ, ಆವರ್ಸ-ಇರುತಲಿರುವ, ಭ
ವಾನ್-ನೀನು, ಅನ್ಯಾನಿ-ಇತರಗಳಾದ, ಯಾನಿವೀರ್ಯಾಣಿ-ಯಾವಸಾಮರ್ಥ್ಯಗಳನ್ನು, ಕರ್ತಾ-ಮಾಡುತಲಿರುವೆಯೋ, ಭು
ವಿ-ಭೂಲೋಕದಲ್ಲಿ, ಕವಿಭಿಃ-ವಿದ್ವಾಂಸರಿಂದ, ಗೇಯಾನಿ-ಹಾಡಲ್ಪಡತಕ್ಕವಾದ, ತಾನಿ-ಅವುಗಳನ್ನು, ಅಹಂ-ನಾನು, ಪ್ರ
ಕ್ಷ್ಯಾಮಿ-ನೋಡುವೆನು||೨೧||ಅಥ-ಆಮೇಲೆ, ಅಮುಷ್ಯ-ಈಪ್ರಪಂಚಕ್ಕೆ, ಕ್ಷಪಯಿಷ್ಣೋಃ-ನಾಶಕಶೀಲನಾದ, ಕಾಲರೂಪಸ್ಯ-
ಕಾಲಸ್ವರೂಪನಾದ, ಅರ್ಜುನಸಾರಥೇಃ-ಅರ್ಜುನಂಗೆಸಾರಥಿಯಾಗುವ, ತೇ-ನಿನ್ನ,ಅಕ್ಷೌಹಿಣೀನಾಂ-ಭಾರತರ ೧೮ ಅಕ್ಷೌಹಿ
ಣಿಗಳ, ನಿಧನಂ-ನಾಶತಂತ್ರವನ್ನೂ, ದ್ರಕ್ಷ್ಯಾಮಿ-ನೋಡುವೆನು||೨೨||ವಿಶುದ್ಧವಿಜ್ಞಾನಘನಂ-ವಿಶುದ್ಧ-ವಿಕಲ್ಪಾದಿ ದೋಷಗಳಿ
ಲ್ಲದ, ವಿಜ್ಞಾನ-ಉಪನಿಷತ್ಪ್ರಕಾಶಿತವಾದ ಸ್ವರೂಪಜ್ಞಾನವೇ, ಘನಂ-ನಿರಂತರವಾದ,(ಚಿನ್ಮಾತ್ರವಾದ)ಸ್ವಸಂಸ್ಥಯಾ-ಸ್ವ
ರೂಪಾವಸ್ಥಿತಿಯಿಂದ, ಸಮಾಪ್ತಸರ್ವಾರ್ಥಂ-ಹೊಂದಲ್ಪಟ್ಟ ಸಕಲಪ್ರಯೋಜನಗಳೂಳ್ಳ, (ನಿತ್ಯತೃಪ್ತನಾದ,) ಅಮೋ
ಘವಾಂಛಿತಂ-ವ್ಯರ್ಥವಲ್ಲದಬಯಕೆಯುಳ್ಳ,(ಸತ್ಯಸಂಕಲ್ಪನಾದ) ಸ್ವತೇಜಸಾ-ಚಿಚ್ಛಕ್ತಿಯಿಂದ, ನಿತ್ಯ....ಪ್ರವಾಹಂ-ನಿತ್ಯ-
ತ್ರಿಕಾಲಗಳಲ್ಲಿಯೂ, ನಿವೃತ್ತ-ತನ್ನನ್ನುಸಂಬಂಧಿಸದೇಹೋದ, ಮಾಯಾ-ಮೂಲಾಜ್ಞಾನಪ್ರಯುಕ್ತವಾದ, ಗುಣಪ್ರವಾಹಂ-
ಪ್ರಪಂಚಸಂಸಾರವುಳ್ಳವನು (ಶುದ್ಧಬ್ರಹ್ಮವಾದ) ಭಗವಂತಂ-ನಿರತಿಶಯವಾದ ಐಶ್ವರ್ಯವುಳ್ಳನಿನ್ನನ್ನು, ಈಮಹಿ-ಶರಣುಹೊಗು
ವೆವು ||೨೩||ಈಶ್ವರಂ-ನಿಯಾಮಕನಾದ, ಸ್ವಾಶ್ರಯಂ-ಎಲ್ಲಕ್ಕೂ ತಾನೇಆಶ್ರಯವಾದ, ಆತ್ಮಮಾಯಯಾ-ಮೂಲಪ್ರಕೃತಿ
ಯಿಂದ, ವಿನಿರ್ಮಿತ ..ಕಲ್ಪನಂ-ವಿನಿರ್ಮಿತ-ಸೃಜಿಸಲ್ಪಟ್ಟ, ಅಶೇಷ-ಸಕಲವಾದ, ವಿಶೇಷ-ವ್ಯಾವರ್ತಕಧರ್ಮಗಳ,ಕಲ್ಪನಂ-
ಅಧ್ಯಾಸವುಳ್ಳವನು (ಸವಿಶೇಷನಾದಂತೆ ತೋರುತ್ತಿರುವನು) ಕ್ರೀಡಾರ್ಥಂ-ಸ್ವಭಾವಲೀಲೆಗೋಸುಗ, ಅಧ್ಯಾತ್ತಮನುಷ್ಯವಿ

---

ಸಾಧಿಸಿಕೊಂಡು ಬರುತ್ತೀಯೆ ಬ್ರಾಹ್ಮಣನಿಗೆ ಮೃತನಾದ ಪುತ್ರನಂ ತಂದುಕೊಡುತ್ತೀಯೆ ||೧೯|| ಪೌಂ
ಡ್ರಕನಂ ಸಂಹರಿಸುತ್ತೀಯೆ, ಕಾಶೀಪುರವಂ ದಹಿಸುತ್ತೀಯೆ, ದಂತವಕ್ರನಂ ಸಂಹರಿಸುತ್ತೀಯೆ||೨೦||ನೀ
ನು ದ್ವಾರಕಾನಗರದಲ್ಲಿ ವಾಸಮಾಡಿಕೊಂಡು ಯಾವಯಾವ ಸಾಹಸಂಗಳಂ ಮಾಡುವಿಯೋ, ಕವಿಗಳಿಗೆ
ಭೂಮಿಯಲ್ಲಿ ಗಾನಯೋಗ್ಯಂಗಳಾದ ಆಯಾಪರಾಕ್ರಮಂಗಳಂ ವ್ಯಾಪಾರಂಗಳಂ ನಾನು ನೋಡುವೆನ್ಯೆ|೨೧
ಅನಂತರದಲ್ಲಿ ಈಭೂಭಾರವಂ ಪರಿಹರಿಸಲೋಸುಗ ಅರ್ಜುನನಿಗೆ ಸಾರಥಿಯಾಗಿ ಅನೇಕಾಕ್ಷೌಹಿಣೀ ಸೇನೆಗ
ಳಂ ಸಂಹಾರವಮಾಡುವಿ, ಅದಂನಾನು ನೋಡುವೆನ್ಯೆ |೨೨| ಶುದ್ಧ ಚಿದ್ರೂಪನಾದಸ್ವರೂಪಭೂತಸ್ಥಮಾದ
ಪರಮಾನಂದಸ್ಥಿತಿಯಿಂ ಪಡೆಯಲ್ಪಟ್ಟ ಸರ್ವಾರ್ಥಂಗಳುಳ್ಳ ಅಮೋಘಮಾದ ಇಚ್ಛೆಯುಳ್ಳ ಸತ್ಯಸಂಕಲ್ಪನಾ
ದ ಸ್ವತೇಜಸ್ಸಿನಿಂದ ಪರಿಹೃತಮಾದ ಮಾಯಾದಿಗುಣ ಪ್ರವಾಹಮುಳ್ಳ ಭಗವಂತನಾದ ಪರಮಾತ್ಮನಾದನಿ
ನ್ನಂ ನಾನು ಶರಣುಹೊಂದುವೆನ್ಯೆ |೨೩| ಈಶ್ವರನಾಗಿ ಸ್ವಾಶ್ರಯನಾಗಿ ನಿಜಮಾಯೆಯಿಂದ ನಿರ್ಮಿಸಲ್ಪ
ಟ್ಟಮಹತ್ತ್ವವೇಮೊದಲಾದ ಸರ್ವಪ್ರಪಂಚಮುಳ್ಳವನಾಗಿ ವಿಲಾಸಾರ್ಥವಾಗಿ ಯಾಗ್ರಹಿಸಲ್ಪಟ್ಟಮಾನುಷ

ಯಾವಿನಿರ್ಮಿತಾಶೇಷವಿಶೇಷಕಲ್ಪನಂ | ಕ್ರೀಡಾರ್ಥಮದ್ಯಾತ್ತಮನುಷ್ಯವಿಗ್ರಹಂ ನತೋಽಸ್ಮಿ ಧುರ್ಯಂ ಯದುವೃಷ್ಣಿಸಾತ್ವತಾಂ ||೨೪|| ಶ್ರೀಶುಕಃ ಏವಂ ಯದುಪತಿಂ ಕೃಷ್ಣಂ ಭಗವತ್ಪ್ರವರೋ ಮು-

ವ್ಯೋಮಾಸುರವಧಘಟ್ಟಃ.

ನಿಃ | ಪ್ರಣಿಪತ್ಯಾಭ್ಯನುಜ್ಞಾತೋ ಯಯೌ ತದ್ದರ್ಶನೋತ್ಸುಕಃ ||೨೫|| ಭಗವಾನಪಿ ಗೋವಿಂದೋ ಹತ್ವಾ ಕೇಶಿನಮಾಹವೇ | ಪಶೂಂಶ್ಚಾಪಾಲಯದ್ಬಾಲೈಃ ಪ್ರೀತೈರ್ವ್ರಜಸುಖಾವಹಃ ||೨೬|| ಏಕದಾ ತೇ ಪಶೂನ್ ಬಾಲಾಶ್ಚಾರಯಂತೋಽದ್ರಿಸಾನುಷು ಚಕ್ರುರ್ನಿಲಾಯನಕ್ರೀಡಾಂ ಚೋರಪಾಲಾಪದೇಶತಃ ||೨೭|| ತತ್ರಾಸನ್ ಕತಿಚಿಚ್ಚೋರಾಃ ಪಾಲಾಶ್ಚ ಕತಿಚಿನ್ನೃಪ | ಮೇಷಾಯಿತಾಶ್ಚ ತತ್ರೈಕೇ ವಿಜಹ್ರುರಕುತೋಭಯಾಃ ||೨೮|| ಮಯಪುತ್ರೋ ಮಹಾಮಾಯೋ ವ್ಯೋಮೋ ಗೋಪಾಲರೂಪಭೃತ್ | ಮೇಷಾಯಿತಾನಪೋ-

---

ಗ್ರಹಂ-ಹೊಂದಲ್ಪಟ್ಟ ಮಾನವಾವತಾರಮೂರ್ತಿಯುಳ್ಳವನು, ಯದುವೃಷ್ಣಿಸಾತ್ವತಾಂ-ಯಾದವರ ವೃಷ್ಣಿಗಳ ಸಾತ್ವತರ, ಧುರ್ಯಂ-ರಕ್ಷಣಭಾರವನ್ನು ವಹಿಸಿದವನಾದ, ತ್ವಾಂ-ನಿನ್ನನ್ನು ಕುರಿತು, ನತಃ-ಬಗ್ಗಿದವನು, ಅಸ್ಮಿ-ಆದೆನು ||೨೪|| [ಶುಕವಾಕ್ಯವು] ಭಗವತ್ಪ್ರವರಃ-ಹರಿಯೇ ಸರ್ವೋತ್ತಮನಾಗಿವುಳ್ಳ,(ಭಗವದ್ಭಕ್ತನಾದ) ಮುನಿಃ-ನಾರದಮುನಿಯು, ಏವಂ-ಹೀಗೆ, ಯದುಪತಿಂ-ಯಾದವರಿಗೊಡೆಯನಾದ, ಕೃಷ್ಣಂ-ಕೃಷ್ಣನನ್ನು, ಪ್ರಣಿಪತ್ಯ-ನಮಸ್ಕರಿಸಿ; ಅಭ್ಯನುಜ್ಞಾತಃ-ಅಪ್ಪಣೆಯಂ ಪಡೆದವನಾಗಿ, ತದ್ದರ್ಶನೋತ್ಸುಕಃ-ತದ್ದರ್ಶನ-ಆತನನ್ನು ನೋಡುವುದರಲ್ಲಿ, ಅಥವಾ ಭಾಗವತಶಾಸ್ತ್ರದಲ್ಲಿ ಅಥವಾ ಬ್ರಹ್ಮಜ್ಞಾನದಲ್ಲಿ, ಉತ್ಸುಕಃ-ಕುತೂಹಲವುಳ್ಳವನಾಗಿ, ಯಯೌ-ತೆರಳಿದನು ||೨೫|| ಭಗವಾನ್-ಐಶ್ವರ್ಯವುಳ್ಳ, ಗೋವಿಂದೋಽಪಿ-ಕೃಷ್ಣನೂ ಕೂಡ, ಆಹವೇ-ಜಗಳದಲ್ಲಿ, ಕೇಶಿನಂ-ಕುದುರೆಯಾಗಿ ಬಂದ ದೈತ್ಯನನ್ನು, ಹತ್ವಾ-ಕೊಂದು, ವ್ರಜಸುಖಾವಹಃ-ಗೋಕುಲಕ್ಕೆ ಸಂತೋಷವಂ ಗೆಯ್ಯುತಲಿರುವನಾಗಿ, ಪ್ರೀತೈಃ-ಸ್ನೇಹವುಳ್ಳ, ಬಾಲೈಃ-ಹುಡುಗರೊಡನೆ, ಪಶೂಂಶ್ಚ-ಗೋವುಗಳನ್ನೂ, ಅಪಾಲಯತ್-ಕಾಯಿದನು ||೨೬|| ಏಕದಾ-ಒಂದುಸಮಯದಲ್ಲಿ, ಪಶೂನ್-ಗೋವುಗಳನ್ನು, ಅದ್ರಿಸಾನುಷು-ಗೋವರ್ಧನಾಚಲದ ತಪ್ಪಲುಗಳಲ್ಲಿ, ಚಾರಯಂತಃ-ಮೇಯಿಸುತಲಿರುವ, ತೇ ಬಾಲಾಃ-ಆ ಹುಡುಗರು, ಚೋರಪಾಲಾಪದೇಶತಃ-ಇವನು ಕಳ್ಳನು ಇವನು ಪಾಲಕನು ಎಂಬ ನೆಪದಿಂದ, ನಿಲಾಯನಕ್ರೀಡಾಂ-ಅಡಗಿಕೊಳ್ಳುವ ಆಟವನ್ನು, ಚಕ್ರುಃ-ಮಾಡಿದರು ||೨೭|| ನೃಪ-ಧೊರೆಯೇ! ತತ್ರ-ಆ ಆಟದಲ್ಲಿ, ಕತಿಚಿತ್-ಕೆಲವರು, ಚೋರಾಃ-ಕಳ್ಳರೂ, ಕತಿಚಿತ್-ಕೆಲವರು, ಪಾಲಾಶ್ಚ-ರಕ್ಷಕರೂ, ಆಸನ್-ಆದರು ತತ್ರೈಕೇ-ಅವರಲ್ಲಿ ಕೆಲವರು, ಮೇಷಾಯಿತಾಶ್ಚ-ಆಡುಗಳಂತೆ ಆಚರಿಸುವವರಾಗಿ, ಅಕುತೋಭಯಾಃ-ಯಾವುದರದೆಸೆಯಿಂದಲೂ ಅಂಜಿಕೆಯಿಲ್ಲದವರಾಗಿ; ವಿಜಹ್ರುಃ-ವಿಹಾರವಂಗೆಯ್ದರು ||೨೮|| ಮಯಪುತ್ರಃ-ಮಯಾಸುರನ ಮಗನಾದ, ಮಹಾಮಾಯಃ-ದೊಡ್ಡ ಮೋಸವುಳ್ಳವನಾದ, ವ್ಯೋಮಃ-ವ್ಯೋಮನೆಂಬ ದೈತ್ಯನು, ಗೋಪಾಲರೂಪಭೃತ್-ಗೊಲ್ಲನ ರೂಪವನ್ನು ಧರಿಸಿದವನಾಗಿ, ಪ್ರಾಯಃ-ಬಹುಶಃ-ಚೋರಾಯಿತಃ-ಕಳ್ಳನಂತೆ ಆಚರಿಸುವವನಾಗಿ, ಮೇಷಾಯಿತಾನ್-ಆಡುಗಳ

---

ದೇಹವುಳ್ಳವನಾಗಿ ಯದುವೃಷ್ಣಿಭೋಜರಿಗೆ ಅಧಿಪತಿಯಾದ ನಿನ್ನಂ ನಾನು ನಮಸ್ಕರಿಸುವೆನು ||೨೪|| ಭಗವದ್ಭಕ್ತನಾದ ನಾರದನು ಈ ಪ್ರಕಾರವಾಗಿ ಯದುಪತಿಯಾದ ಶ್ರೀಕೃಷ್ಣನಿಂದ ಅನುಜ್ಞೆಯಂ ಪಡೆದವನಾಗಿ, ಕೃಷ್ಣದರ್ಶನ ಸಂತೋಷದಿಂ ಪರವಶನಾಗಿ, ಹೊರಟುಹೋದನು ||೨೫|| ಭಗವಂತನಾದ ಕೃಷ್ಣನು ಕೇಶಿಯೆಂಬ ಅಸುರನಂ ಯುದ್ಧದಲ್ಲಿ ಸಂಹರಿಸಿ ಸಂತೋಷಿತರಾದ ಗೋಪಾಲಕರೊಡನೆ ಶುಭವಾಗಿ, ವ್ರಜಕ್ಕೆ ಸುಖವಂ ಮಾಡುವವನಾಗಿ ಪಶುಗಳಂ ಪಾಲಿಸಿದನು ||೨೬|| ಎಲೈ, ಅರಸೇ! ಒಂದುಸಮಯದಲ್ಲಿ ಗೋಪಾಲಕರು ಪರ್ವತದ ತಪ್ಪಲುಗಳಲ್ಲಿ ಗೋವುಗಳಂ ಸಂಚಾರವಂ ಮಾಡಿಸುತ ಕಳ್ಳಕೊಡೆಯರೆಂಬ ಆಟದ ನೆವದಿಂದ ನಿಲಾಯನಾದಿ ಆಟಂಗಳಂ ಆಡಿದರು ||೨೭|| ಅಲ್ಲಿ ಯಾವುದರಿಂದಲೂ ಭಯವಿಲ್ಲದವರಾಗಿ ಕೆಲವರು ಕಳ್ಳರಾದರು, ಕೆಲವರು ಕುರಿಗಳಂತೆ ವೇಷಂಗಳಂ ಧರಿಸಿಕೊಂಡರು, ಇಂತು ಕ್ರೀಡಿಸಿದರು ||೨೮|| ಆಗ ಗೋಪಾಲಕರೂಪಂ ಧರಿಸಿದ ಮಯಪುತ್ರನಾದ ವ್ಯೋಮಾಸುರನು ಚೋರರೂಪದಿಂದ ಬಂದು ಕುರಿಗಳ ವೇಷವಂ ಧರಿಸಿದ ಗೋಪಾಲಕರಂ ಅಪಹರಿಸಿ ಕೊಂಡುಹೋಗಿ ||೨೯|| ಪರ್ವತದ ಗುಹೆಯಲ್ಲಿ ಇರಿಸಿ, ಈ ರೀತಿಯಲ್ಲಿ ಬಾರಿಬಾರಿಗೂ ಬಂದು

ವಾಹಪ್ರಾಯಶ್ಶೋಽಪಾಯಿತೋಬಹೂನ್ ॥೨೯॥ಗಿರಿದರ್ಯಾಂವಿನಿಕ್ಷಿಪ್ಯನೀತಂನೀತಂಮಹಾಸುರಃ । ಶಿ
ಲಯಾಪಿದಧೇದ್ವಾರಂಚತುಃಪಂಚಾವಶೇಷಿತಾಃ ॥೩೦॥ ತಸ್ಯತತ್ಕರ್ಮವಿಜ್ಞಾಯಕೃಷ್ಣಶ್ಶರಣದಸ್ಸ
ತಾಂ । ಗೋಪಾನ್ನಯಂತಂಜಗ್ರಾಹವೃಕಂಹರಿರಿವೌಜಸಾ ॥೩೧॥ಸನಿಜಂರೂಪಮಾಸ್ಥಾಯಗಿರೀಂ
ದ್ರಸದೃಶಂಬಲೀ । ಇಚ್ಛನ್ವಿಮೋಕ್ತುಮಾತ್ಮಾನಂನಾಶಕ್ನೋದ್ಗ್ರಹಣಾತುರಃ ॥೩೨॥ ತಂನಿಗೃ
ಹ್ಯಾಚ್ಯುತೋದೋರ್ಭ್ಯಾಂಪಾತಯಿತ್ವಾಮಹೀತಲೇ । ಪಶ್ಯತಾಂದಿವಿದೇವಾನಾಂಪಶುಮಾರಮಮಾರ
ಯತ್ ॥೩೩॥ ಗುಹಾಪಿಧಾನಂನಿರ್ಭಿದ್ಯಗೋಪಾನ್ನಿಸ್ಸಾರ್ಯಕೃಚ್ಛ್ರತಃ ।ಸ್ತೂಯಮಾನಸ್ಸುರೈರ್ಗೋ

---

ತ್ತೆಆಚರಿಸುತಲಿರುವವರಾದ, ಬಹೂನ್-ಹಲವುಮಂದಿಯನ್ನು, ಅಪ್ರೀವಾಹ-ಕದ್ದೊಯ್ದನು ॥೨೯॥ಮಹಾಸುರಃ-ದೊಡ್ಡದೈ
ತ್ಯನು, ನೀತಂನೀತಂ-ಕೊಂಡೊಯ್ಯಲ್ಪಟ್ಟವನನ್ನು ಕೊಂಡೊಯ್ಯಲ್ಪಟ್ಟವನನ್ನಾಗಿ, ಗಿರಿದರ್ಯಾಂ-ಬೆಟ್ಟದಗವಿಯಲ್ಲಿ, ವಿನಿ
ಕ್ಷಿಪ್ಯ-ಬಚ್ಚಿರಿಸಿ, ದ್ವಾರಂ-ಬಾಕಲನ್ನು, ಶಿಲಯಾ-ಕಲ್ಲಿನಿಂದ, ಪಿದಧೇ-ಮುಚ್ಚಿದನು. ಚತುಃಪಂಚ-ನಾಲ್ಕೈದುಮಂದಿ, ಅವ
ಶೇಷಿತಾಃ-ಉಳಿಸಲ್ಪಟ್ಟರು ॥೩೦॥ ಸತಾಂ-ಸತ್ಪುರುಷರಿಗೆ, ಶರಣದಃ-ರಕ್ಷಣವನ್ನು ಕೊಡುವವನಾದ, ಕೃಷ್ಣಃ-ವಾಸುದೇವ
ನು, ತಸ್ಯ-ಆವ್ಯೋಮಾಸುರನ. ತತ್ಕರ್ಮ-ಆಕೆಲಸವನ್ನು, ವಿಜ್ಞಾಯ-ವಿಶೇಷವಾಗಿತಿಳಿದು, ಗೋಪಾನ್-ಗೊಲ್ಲರಹುಡುಗರನ್ನು,
ನಯಂತಂ-ಕೊಯ್ಯುತಲಿರುವ ಅವನನ್ನು, ಹರಿಃ-ಸಿಂಹವು, ವೃಕಮಿವ-ತೋಳವನ್ನು ಹೇಗೋಹಾಗೆ, ಓಜಸಾ-ಪರಾಕ್ರಮ
ದಿಂದ, ಜಗ್ರಾಹ-ಹಿಡಿದನು ॥೩೧॥ ಗ್ರಹಣಾತುರಃ-ಗ್ರಹಣ-ಹಿಡಿಯಲ್ಪಟ್ಟದ್ದರಿಂದ, ಆತುರಃ-ತ್ವರೆಯುಳ್ಳವನಾದ, ಸಃ-ಆ
ವ್ಯೋಮಾಸುರನು, ಗಿರೀಂದ್ರಸದೃಶಂ-ಹೆಬ್ಬೆಟ್ಟಕ್ಕೆಸಮಾನವಾದ, ನಿಜಂರೂಪಂ-ಸಹಜಾಕಾರವನ್ನು, ಆಸ್ಥಾಯ-ಅಧಿಷ್ಠಿಸಿ,
ಬಲೀ-ಬಲವಂತನಾದರೂಕೂಡ, ಆತ್ಮಾನಂ-ತನ್ನದೇಹವನ್ನು, ವಿಮೋಕ್ತುಂ-ಬಿಡಿಸಿಕೊಳ್ಳುವುದಕ್ಕೆ, ಇಚ್ಛನ್ಅಪಿ-ಬಯಸಿ
ದವನಾದರೂಕೂಡ, ನಾಶಕ್ನೋತ್-ಸಮರ್ಥನಾಗಲಿಲ್ಲವು ॥೩೨॥ಅಚ್ಯುತಃ-ಚ್ಯುತಿಯಿಲ್ಲದಕೃಷ್ಣನು,ತಂ-ಅವನನ್ನು, ದೋ
ರ್ಭ್ಯಾಂ-ತೋಳುಗಳಿಂದ, ನಿಗೃಹ್ಯ-ಹಿಂಡಿಶಿಕ್ಷಿಸಿ, ಮಹೀತಲೇ-ನೆಲದಲ್ಲಿ, ಪಾತಯಿತ್ವಾ-ಬೀಳಕೆಡಹಿ, ದಿವಿ-ಆಕಾಶದಲ್ಲಿ, ದೇ
ವಾನಾಂ-ದೇವರ್ಕಳು, ಪಶ್ಯತಾಂಸತಾಂ-ನೋಡುವವರಾಗುತ್ತಿರಲು, ಪಶುಮಾರಂ-ಪಶುವನ್ನುಬಡಿದಂತೆ, ಅಮಾರಯತ್-
ಬಡಿದುಹಾಕಿದನು ॥೩೩॥ಗುಹಾಪಿಧಾನಂ-ಗವಿಯಮುಚ್ಚಳವನ್ನು, ನಿರ್ಭಿದ್ಯ-ಕಿತ್ತುಹಾಕಿ, ಕೃಚ್ಛ್ರತಃ-ಕಷ್ಟವಾದಸ್ಥಳದ ದೆಸೆ
ಯಿಂದ, ಗೋಪಾನ್-ದನಗಳಂ ಕಾಯುವ ಹುಡುಗರನ್ನು, ನಿಸ್ಸಾರ್ಯ-ಹೊರಹೊರಡಿಸಿ, ಸುರೈಃ ದೇವತೆಗಳಿಂದಲೂ, ಗೋ



ಅಪಹರಿಸಿಕೊಂಡುಹೋಗಿ ಗುಹೆಯಲ್ಲಿ ಸೇರಿಸಿ, ಗುಹಾದ್ವಾರಕ್ಕೆ ದೊಡ್ಡ
ಕಲ್ಲ ಚಾಂಚಿದನು. ಬಳಿಕನಾಲ್ಕಯಿದು ಮಂದಿಯೇ ಉಳಿದರು ॥೩೦॥
ಸತ್ಪುರುಷ ರಕ್ಷಕನಾದ ಶ್ರೀಕೃಷ್ಣನು ಆಯುಸುರನವ್ಯಾಪಾರವಂ ತಿ
ಳಿದುಗೋಪಾಲಕರನಾಕರ್ಷಿಸಿಕೊಂಡು ಹೋಗಿರುವ ಆಯುಸುರನಂ
ಸಿಂಹವು ಮೃಗವ ಹಿಡಿದರೀತಿಯಲ್ಲಿ ಹಿಡಿದನು ॥೩೧॥ ಆಯುಸುರನು ಪ
ರ್ವತಕ್ಕೆ ಸಮಾನವಾದರೂಪವಂ ಧರಿಸಿದವನಾಗಿ ಶ್ರೀಕೃಷ್ಣನಿಂದಹಿ
ಡಿಯಲ್ಪಟ್ಟವನಾಗಿ ಮಹಾ ಬಲಶಾಲಿಯಾಗಿದ್ದರೂಂ ಬಿಡಿಸಿಕೊಳ್ಳುವುದ
ಕ್ಕೆ ಇಚ್ಛೆಯುಳ್ಳವನಾದರೂ ಬಿಡಿಸಿಕೊಳ್ಳಲಾರದೆ ಪೀಡಿತನಾದನು ॥
ಶ್ರೀಕೃಷ್ಣನು ತನ್ನಬಾಹುಗಳಿಂದ ಆಯುಸುರನಂತಬ್ಬಿಕೊಂಡುಭೂಮಿ
ಯಲ್ಲಿಕೆಡಹಿ ಅಂತರಿಕ್ಷದಲ್ಲಿ ದೇವತೆಗಳು ನೋಡುವಾಗಲೇ ಯಜ್ಞದಲ್ಲಿಪಶುವ ಶ್ವಾಸವಂ ಬಿಡದರೀತಿಯಲ್ಲಿ
ಸಂಹರಿಸುವಂತೆ ಸಂಹರಿಸಿದನು ॥೩೩॥ ಆಮೇಲೆ ಶ್ರೀಕೃಷ್ಣನು ಗುಹಾದ್ವಾರವಂತೆಗದು ಶಿಲೆಯಂತಳ್ಳಿಬಿ

ಪ್ತೈಃಪ್ರವಿವೇಶಸ್ವಗೋಕುಲಂ॥೩೪॥ ಇತಿಶ್ರೀಮದ್ಭಾಗವತೇ-ದಶಮಸ್ಕಂಧೇ-ಸಪ್ತತ್ರಿಂಶೋಧ್ಯಾಯಃ
ಶ್ರೀಕೃಷ್ಣಬಲರಾಮಾನಯನಾರ್ಥಮಕ್ರೂರಸ್ಯನಂದಗೋಕುಲಪ್ರವೇಶಘಟ್ಟಃ
ಶ್ರೀಶುಕಃ॥ ಅಕ್ರೂರೋಪಿಚತಾಂರಾತ್ರಿಂಮಧುಪುರ್ಯಾಂಮಹಾಮತಿಃ।ಉಷಿತ್ವಾರಥಮಾಸ್ಥಾಯ
ಪ್ರಯಯೌನಂದಗೋಕುಲಂ ॥೧॥ ಗಚ್ಛನ್ಪಥಿಮಹಾಭಾಗೋಭಗವತ್ಯಂಬುಜೇಕ್ಷಣೇ । ಭಕ್ತಿಂಪರಾ

---

ಪ್ತೈಃ-ಗೊಲ್ಲರಿಂದಲೂ, ಸ್ತೂಯಮಾನಸ್ಸನ್-ಕೊಂಡಾಡಲ್ಪಡುತ ಲಿರುವನಾಗಿ, ಸ್ವಗೋಕುಲಂ-ತನ್ನಗೋವ್ರಜವನ್ನು, ಪ್ರ
ವಿವೇಶ-ಹೊಕ್ಕನು ॥೩೪॥

ಇತಿಶ್ರೀಮದ್ಭಾಗವತೇ ದಶಮಸ್ಕಂಧೇ
ಸಪ್ತತ್ರಿಂಶೋಧ್ಯಾಯಃ-

೩೮ನೆಯಅಧ್ಯಾಯದ ಪ್ರತಿಪದಟೀಕೆ.

[ಶುಕವಾಕ್ಯವು.]ಮಹಾಮತಿಃ-ಹೆಚ್ಚುಬುದ್ಧಿಯುಳ್ಳ, ಅಕ್ರೂರೋಪಿ-ಅಕ್ರೂರನೆಂಬವನೂಕೂಡ, ತಾಂರಾತ್ರಿಂ-ಆ ರಾತ್ರಿಯಲ್ಲಿ, ಮಧುಪುರ್ಯಾಂ-ಮಧುರಾನಗರದೊಳು, ಉಷಿತ್ವಾ-ಇದ್ದು, ರಥಮಾಸ್ಥಾಯ-ತೇರನ್ನೇರಿ, ನಂದಗೋಕುಲಂ-ನಂದವ್ರಜವಂಕುರಿತು, ಪ್ರಯಯೌ-ಪಯಣಗೊಂಡನು ॥೧॥ ಮಹಾಭಾಗಃ-ಮಹಾಪೂಜ್ಯತೆಯುಳ್ಳ, ಅಕ್ರೂರನು, ಪಥಿ-ದಾರಿಯಲ್ಲಿ, ಗಚ್ಛನ್-ಹೋಗುತಲಿರುವನಾಗಿ, ಅಂಬುಜೇಕ್ಷಣೇ-ಕಮಲಾಕ್ಷನಾದ, ಭಗವತಿ-ಭಗವಂತನಾದ ಕೃಷ್ಣನಲ್ಲಿ, ಪರಾಂ-ಉತ್ಕೃಷ್ಟವಾದ, ಭಕ್ತಿಂ-ಪ್ರೀತಿಯನ್ನು, ಉಪಗತಃ-ಹೊಂದಿದವನಾಗಿ, ಏತತ್-ಇದರನ್ನು, ಏವಂ-ಹೀಗೆ, ಅಚಿಂತಯತ್-

---

ಟ್ಟು ಗೋಪಾಲಕರನ್ನೆಲ್ಲರಂ ಈಚೆಗೆ ಹೊರಡಿಸಿಕೊಂಡು, ದೇವತೆಗಳಿಂದ ಸ್ತುತಿಮಾಡಲ್ಪಡುವನಾಗಿ ಗೋಪಾಲಕರೊಡನೆ ಗೋಕುಲಕ್ಕೆ ಬಂದನು॥ ॥೩೪॥

ಇಂತು ಶುಕಮುನಿಯು ಪರೀಕ್ಷಿದ್ರಾಯನಿಗೆ ನಿರೂಪಿಸಿದನೆಂದು ಸೂತಪೌರಾಣಿಕನು ನೈಮಿಶಾ
ರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಹೇಳಿದನೆಂಬಲ್ಲಿಗೆ-ಶ್ರೀಮನ್ಮಹೀಶೂರಪುರವ
ರಾಧೀಶ ಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜ ವಿರಚಿತವಪ್ಪ, ಶ್ರೀ
ಭಾಗವತದ "ಶ್ರೀಕೃಷ್ಣರಾಜ ವಾಣೀವಿಲಾಸವು" ಎಂಬ ಕರ್ಣಾಟಕ
ಭಾಷಾವ್ಯಾಖ್ಯಾನದಲ್ಲಿ ದಶಮಸ್ಕಂಧದೊಳು ೩೭ನೆಯ
ಅಧ್ಯಾಯವು ಸಂಪೂರ್ಣವಾದುದು

ಮಂಗಳಮಸ್ತು

೩೮ನೆಯ ಅಧ್ಯಾಯವು.

ಶ್ರೀಧರೀಯೆಶ್ಲೋಕಃ॥ ಅಷ್ಟತ್ರಿಂಶೇಯಥಾಧ್ಯಾಯೇನ್ನಕ್ರೂರೋಗೋಕುಲಂಗತಃ ।ತತ್ರೈವರಾಮಕೃಷ್ಣಾಭ್ಯಾಂಗೃಹಂನೀತ್ವಾಸುಸತ್ಕೃತಃ ॥✣॥ ಮೂವತ್ತೆಂಟನೆಯ ಅಧ್ಯಾಯದಲ್ಲಿ ಅಕ್ರೂರನು ಮಧುರಾಪಟ್ಟಣದಿಂದ ಗೋಕುಲಕ್ಕೆ ಬರುವಾಗ ಮಾರ್ಗದಲ್ಲಿ ಯಾವಯಾವ ಮನೋರಥಂಗಳನಾಲೋಚಿಸುತಬಂದನೋ ಅದೇಪ್ರಕಾರವಾಗಿ ರಾಮಕೃಷ್ಣರಿಂದ ಸತ್ಕಾರವನೆಯ್ದಿದವನಾದನು. ಎಂದು ಶುಕಾಚಾರ್ಯನು ಪರೀಕ್ಷಿದ್ರಾಯನಂ ಕುರಿತು ನಿರೂಪಿಸುವನದೆಂತೆನೆ,-

ಎಲೈಅರಸೇ! ಮಹಾಬುದ್ಧಿಶಾಲಿಯಾದ ಅಕ್ರೂರನು ಕಂಸನಿಂದ ಆಜ್ಞಾಪಿಸಲ್ಪಟ್ಟವನಾಗಿ ಆರಾತ್ರಿಯಂ ಮಧುರಾಪುರದಲ್ಲಿ ಕಳೆದು, ಬೆಳಗಾದಮೇಲೆ ರಥಾರೂಢನಾಗಿ ನಂದಗೋಕುಲಕ್ಕೆ ಬಂದನು ॥೧॥ ಬರುವದಾರಿಯಲ್ಲಿ ಭಗವಂತನಾದ ಪದ್ಮಲೋಚನನಾದ ಶ್ರೀಕೃಷ್ಣನಲ್ಲಿ ಪರಮಭಕ್ತಿಯಂ ಮಾಡುವನಾಗಿ ಈಪ್ರ

ಮುಪಗತ ಏವಮೇತದಚಿಂತಯತ್ ‖ ೨ ‖ ಕಿಂ ಮಯಾಚರಿತಂ ಭದ್ರಂ ಕಿಂ ತಪ್ತಂ ಪರಮಂ ತಪಃ
ಕಿಂ ವಾಥಾಪ್ಯರ್ಹತೇ ದತ್ತಂ ಯದ್ದ್ರಕ್ಷ್ಯಾಮ್ಯದ್ಯ ಕೇಶವಂ ‖೩‖ ಮಮೈತದ್ದುರ್ಲಭಂ ಮನ್ಯ ಉತ್ತ
ಮಶ್ಲೋಕದರ್ಶನಂ । ವಿಷಯಾತ್ಮನೋ ಯಥಾ ಬ್ರಹ್ಮಕೀರ್ತನಂ ಶೂದ್ರಜನ್ಮನಃ ‖೪‖ ಮೈವಂ ಮ
ಮಾಧಮಸ್ಯಾಪಿ ಸ್ಯಾದೇವಾಚ್ಯುತದರ್ಶನಂ । ಹ್ರಿಯಮಾಣಃ ಕಾಲನದ್ಯಾ ಕ್ವಚಿತ್ತರತಿ ಕಶ್ಚನ ‖೫‖
ಮಮಾದ್ಯಾಮಂಗಳಂ ನಷ್ಟಂ ಫಲವಾಂಶ್ಚೈವ ಮೇ ಭವಃ । ಯನ್ನಮಸ್ಯೇ ಭಗವತೋ ಯೋಗಿಧ್ಯೇಯಾಂಘ್ರಿ

---

ಯೋಚಿಸಿದನು ‖೨‖ ಯತ್-ಯಾವುದರಿಂದ, ಅದ್ಯ-ಈಗ, ಕೇಶವಂ-ಕೃಷ್ಣನನ್ನು, ದ್ರಕ್ಷ್ಯಾಮಿ-ನೋಡುವೆನೋ, ತತ್-ಅದರಿಂದ, ಮಯಾ-ನನ್ನಿಂದ, ಕಿಂ ಭದ್ರಮಾಚರಿತಂ-ಏನು ಶುಭವು ಮಾಡಲ್ಪಟ್ಟಿತ್ತೋ; ಪರಮಂ-ಉತ್ಕೃಷ್ಟವಾದ, ಕಿಂ ತಪಃ-ಯಾವ ತಪವನ್ನು, ತಪ್ತಂ-ಮಾಡಲ್ಪಟ್ಟಿತ್ತೋ; ಅಥಾಪಿ-ಮತ್ತು, ಅರ್ಹತೇ-ಯೋಗ್ಯನಾದವನಿಗೆ, ಕಿಂ ವಾ ದತ್ತಂ-ಏನು ಕೊಡಲ್ಪಟ್ಟಿತ್ತೋ; ‖೩‖ ಶೂದ್ರಜನ್ಮನಃ-ಶೂದ್ರಜಾತಿಯಲ್ಲಿ ಹುಟ್ಟಿದವನಿಗೆ, ಬ್ರಹ್ಮಕೀರ್ತನಂ-ವೇದಪಾಠವು, ಯಥಾ-ಹೇಗೆ, ದುರ್ಲಭಂ-ದೊರೆಯತಕ್ಕದ್ದಲ್ಲವೋ, ತಥಾ-ಹಾಗೆ, ವಿಷಯಾತ್ಮನಃ-ಭೋಗಗಳಲ್ಲಿ ಮನಸ್ಸುಳ್ಳ, ಮಮ-ನನಗೆ, ಏತತ್-ಈ. ಉತ್ತಮಶ್ಲೋಕದರ್ಶನಂ-ಉತ್ತಮರಿಂದ ಕೊಂಡಾಡಲ್ಪಟ್ಟ ಕೃಷ್ಣನನ್ನು ನೋಡುವಿಕೆ, ದುರ್ಲಭಂ-ಪ್ರಯಾಸದಿಂದಲೂ ಅಭಿಸತಕ್ಕದ್ದಲ್ಲವೆಂದು, ಮನ್ಯೇ-ತಿಳಿಯುವೆನು ‖೪‖ ಮೈವಂ-ಹೀಗಲ್ಲವು, ಅಧಮಸ್ಯಾಪಿ-ನೀಚನಾದವನಾದರೂ, ಮಮ-ನನಗೆ ಅಚ್ಯುತದರ್ಶನಂ-ಭಗವತ್ಸಾಕ್ಷಾತ್ಕಾರವು, ಸ್ಯಾದೇವ-ಆಗಲೇ ಆಗುತ್ತೆ. ಕಾಲನದ್ಯಾ-ಕಾಲವೆಂಬ ಹೊಳೆಯಿಂದ, ಹ್ರಿಯಮಾಣಃ-ಕೊಚ್ಚಿಕೊಂಡು ಹೋಗಲ್ಪಡುತ್ತಿರುವ, ಕಶ್ಚನ-ಯಾವನಾದರೂ ಒಬ್ಬನು, ಕ್ವಚಿತ್-ಯಾವ ಕಡೆಯಲ್ಲಿಯಾದರೂ, ತರತಿ-ದಾಟುತ್ತಿರುವನು ‖೫‖ ಮಮ-ನನ್ನ, ಅಮಂಗಳಂ-ಅಶುಭವು, ಅದ್ಯ-ಈಗ, ನಷ್ಟಂ-ನಾಶವಾದದ್ದಾಯಿತು. ಮೇ-ನನ್ನ, ಭವಃ-ಜನ್ಮವೂ ಕೂಡ, ಫಲವಾನೇವ-ಪ್ರಯೋಜನವುಳ್ಳದ್ದೇ ಸರಿ. ಯತ್-ಯಾವ ಕಾರಣದಿಂದ, ಭಗವತಃ-ಪರಮೇಶ್ವರನ, ಯೋಗಿಧ್ಯೇಯಾಂಘ್ರಿಪಂಕಜಂ-ಯೋಗಿಗಳಿಂದ ಧ್ಯಾನಿಸಲ್ಪಡತಕ್ಕ ಅಡಿದಾವರೆಯನ್ನು, ನಮಸ್ಯೇ-ಕೊಂಡಾಡುವೆನೋ ‖೬‖ ಅದ್ಯ-

---



ಕಾತರನಾಗಿ ಚಿಂತಿಸಿದನು ‖೨‖ (ಅದೆಂತೆನೆ) ನಾನು ಏನು ಪುಣ್ಯವಂ ಮಾಡಿರುವೆನೋ, ಏನು ಉತ್ಕೃಷ್ಟ ತಪವಂ ಮಾಡಿರುವೆನೋ, ನಾನು ಸತ್ಪಾತ್ರದಲ್ಲಿ ಯಾವ ವಸ್ತುವಂ ದಾನವ ಮಾಡಿರುವೆನೋ, ಈಗ ಭಗವಂತನಾದ ಕೇಶವನಂ ನೋಡುವೆನು ‖೩‖ ವಿಷಯಾಸಕ್ತಚಿತ್ತನಾದ ನನಗೆ ಉತ್ತಮಶ್ಲೋಕನಾದ ಶ್ರೀಕೃಷ್ಣನ ದರ್ಶನವು ಶೂದ್ರೋತ್ಪನ್ನನಾದವನಿಗೆ ವೇದಾಧ್ಯಯನವು ಹೇಗೆ ದುರ್ಲಭವೋ ಹಾಗೆ ದುರ್ಲಭವೆಂದು ತಿಳಿಯುವೆನು ‖೪‖ ಅಥವಾ ಹಾಗಲ್ಲ ಅಧಮನಾದ ನನಗೂ ಕೂಡ ಅಚ್ಯುತದರ್ಶನವಾದೀತು; ಕಾಲವೆಂಬ ನದಿಯಲ್ಲಿ ಕೊಚ್ಚಿಕೊಂಡು ಹೋಗುವ ಪುರುಷನು ಒಂದು ಸ್ಥಳದಲ್ಲಿ ತಡಿಯಂ ಸೇರಬಹುದು ‖೫‖ ನನ್ನ ಪಾಪವು ನಷ್ಟವಾದುದು. ನನ್ನ ಜನ್ಮವು ಸಫಲವಾದುದು. ಯಾವ ಕಾರಣದಿಂದ ಯೋಗಿಗಳಿಂದ ಧ್ಯಾನಯೋಗ್ಯವಾದ ಪಾದಪದ್ಮಮುಳ್ಳ ಭಗವಂತನಂ ನಮಸ್ಕರಿಸುವೆನೋ ಆ ಕಾರಣದಿಂದ ನಾನು ಕೃತಾರ್ಥನೇ ಸರಿ ‖೬‖ ಈಗ ನನ್ನಲ್ಲಿ ಕಂಸನು ಮಹತ್ತಾದ ಅನುಗ್ರಹವಂ ಮಾಡಿದನು, ಯಾವ ಕಾರಣದಿಂದ ಕಳುಹಿಸಲ್ಪಟ್ಟ ನಾನು ಮನುಷ್ಯಾವತಾರವಂ ಮಾಡಿರುವ ಭಗವಂತನ ಪಾದಪದ್ಮವಂ ಕಾಣುವೆನೋ ಅದರಿಂದ ಕಂಸನು ನನ್ನಲ್ಲಿ ಅನುಗ್ರಹಿಸಿದನು.

ಪಂಕಜಂ ॥೬॥ ಕಂಸೋ ಬತಾದ್ಯಾಕೃತ ಮೇಽತ್ಯನುಗ್ರಹಂ ದ್ರಕ್ಷ್ಯೇಂಘ್ರಿಪದ್ಮಂ ಪ್ರಹಿತೋಽಮುನಾ ಹರೇಃ।
ಕೃತಾವತಾರಸ್ಯ ದುರತ್ಯಯಂ ತಮಃ ಪೂರ್ವೇಽತರನ್ ಯನ್ನಖಮಂಡಲತ್ವಿಷಾ ॥೭॥ ಯದರ್ಚಿತಂ ಬ್ರ
ಹ್ಮಭವಾದಿಭಿಃ ಸುರೈಃ ಶ್ರಿಯಾ ಚ ದೇವ್ಯಾ ಮುನಿಭಿಃ ಸಸಾತ್ವತೈಃ । ಗೋಚಾರಣಾಯಾನುಚರೈಶ್ಚರ
ದ್ವನೇ ಯದ್ಗೋಪಿಕಾನಾಂ ಕುಚಕುಂಕುಮಾಂಕಿತಂ ॥೮॥ ದ್ರಕ್ಷ್ಯಾಮಿ ನೂನಂ ಸುಕಪೋಲನಾಸಿಕಂ
ಸ್ಮಿತಾವಲೋಕಾರುಣಕಂಜಲೋಚನಂ । ಮುಖಂ ಮುಕುಂದಸ್ಯ ಗುಡಾಲಕಾವೃತಂ ಪ್ರದಕ್ಷಿಣಂ ಮೇ ಪ್ರ
ಚರಂತಿ ವೈ ಮೃಗಾಃ ॥೯॥ ಅಪ್ಯದ್ಯ ವಿಷ್ಣೋರ್ಮನುಜತ್ವಮೀಯುಷೋ ಭಾರಾವತಾರಾಯ ಭುವೋ

---

ಈಗ, ಕಂಸಃ-ಕಂಸನು, ಮೇ-ನನಗೆ, ಅತ್ಯನುಗ್ರಹಂ-ಬಹಳ ಉಪಕಾರವನ್ನು, ಅಕೃತ-ಮಾಡಿದನು. ಹೇಗೆಂದರೆ-ಪ್ರಹಿ
ತಃ-ಅವನಿಂದ ಕಳುಹಿಸಲ್ಪಟ್ಟವನಾದ ನಾನು, ಯನ್ನಖಮಂಡಲತ್ವಿಷಾ-ಯಾವುದರ ಉಗುರುಗಳ ಗುಂಪಿನ ಕಾಂತಿಯಿಂದ, ಪೂ
ರ್ವೇ-ಪ್ರಾಚೀನರಾದ ಹಿರಿಯರು, ದುರತ್ಯಯಂ-ದಾಟಲಿಕ್ಕೊಡದವ್ವನ್ನಾದರೂ, ತಮಃ-ಅಜ್ಞಾನವೆಂಬ ಕತ್ತಲೆಯನ್ನು, ಅತರನ್-
ದಾಂಟಿದರೋ, ತತ್-ಅಂಥಾ, ಕೃತಾವತಾರಸ್ಯ-ಅವತಾರವಂ ಗೆಯ್ದ, ಮುರಾರೇಃ-ಕೃಷ್ಣನ, ಅಂಘ್ರಿಪದ್ಮಂ-ಅಡಿದಾವ
ರೆಯನ್ನು, ದ್ರಕ್ಷ್ಯೇ-ನೋಡುವೆನು ॥೭॥ ಬ್ರಹ್ಮಭವಾದಿಭಿಃ-ಚತುರ್ಮುಖನು ರುದ್ರನು ಮೊದಲಾದ, ಸು
ರೈಃ-ದೇವತೆಗಳಿಂದಲೂ, ಶ್ರಿಯಾದೇವ್ಯಾಚ-ಲಕ್ಷ್ಮೀದೇವಿಯಿಂದಲೂ, ಮುನಿಭಿಃ-ಋಷಿಗಳಿಂದಲೂ, ಸಾತ್ವತೈಃ-ಪಾಂಚ
ರಾತ್ರಿಂದಲೂ, ಯತ್-ಯಾವುದು, ಅರ್ಚಿತಂ-ಪೂಜಿಸಲ್ಪಟ್ಟಿದೆಯೋ, ಗೋಚಾರಣಾಯ-ಗೋವುಗಳನ್ನು ಮೇಯಿಸ
ಲೋಸುಗ, ವನೇ-ಬೃಂದಾರಣ್ಯದಲ್ಲಿ, ಚರತ್-ತಿರುಗುತಲಿರುವ, ಯತ್-ಯಾವುದು, ಅನುಚರೈಃ-ಸಂಗಾತಿಗಳಿಂದ, ಅರ್ಚಿ
ತಂ-ಪೂಜಿಸಲ್ಪಟ್ಟಿದೆಯೋ, ಯತ್-ಯಾವುದು, ಗೋಪಿಕಾನಾಂ-ಗೊಲ್ಲತಿಯರ ಕುಚಕುಂಕುಮಾಂಕಿತಂ-ಸ್ತನಕಾಶ್ಮೀರಚಿ
ಹ್ನಿತವಾಗಿದೆಯೋ, ತತ್-ಅಂಥಾ ಚರಣಕಮಲವನ್ನು, ದ್ರಕ್ಷ್ಯಾಮಿ-ನೋಡುವೆನು ॥೮॥ ಸುಕಪೋಲನಾಸಿಕಂ-ಚನ್ನಾದ ಕಪೋಲ
ಗಳೂ ಮೂಗೂ ಉಳ್ಳ ಸ್ಮಿತಾವಲೋಕಾರುಣಕಂಜಲೋಚನಂ-ಕಿರುನಗೆಯಿಂಕೂಡಿದ ನೋಟವೂ ಕೆಂದಾವರೆಯಂತೆ ಕಂಗಳೂ
ಉಳ್ಳ, ಗುಡಾಲಕಾವೃತಂ-ಗುಂಗುರು ಕುರುಳ್ಗಳಿಂದ ಬಳಸಲ್ಪಟ್ಟಿರುವ, ಮುಕುಂದಸ್ಯ-ಮುಕ್ತಿಯಂ ಕುಡುವ ಕೃಷ್ಣನ, ಮುಖಂ-
ಮೋರೆಯನ್ನು, ನೂನಂ-ದಿಟವಾಗಿ, ದ್ರಕ್ಷ್ಯಾಮಿ-ಕಾಣುವೆನು. ನಿಶ್ಚಯಕವೇನೆಂದರೆ-ಅಮೀ ಮೃಗಾಃ-ಈ ಮೃಗಗಳು, ಮೇ-
ನನಗೆ, ಪ್ರದಕ್ಷಿಣಂ ಪ್ರಚರಂತಿ-ಬಲಗಡೆ ಬಿಟ್ಟುಕೊಂಡು ಸುಳಿದಾಡುತ್ತಿವೆ ॥೯॥ ಭುವಃ-ಭೂದೇವಿಯ, ಭಾರಾವತಾರಾಯ-
ಮುಷ್ಕರ ಹೊರೆಯನ್ನಿಳಿಸುವುದಕ್ಕೆ, ವಿಷ್ಣೋರಪಿ-ಸರ್ವವ್ಯಾಪಕನಾಗಿರುವನಾದರೂ, ನಿಜೇಚ್ಛಯಾ-ಸ್ವತಂತ್ರ ಸಂಕಲ್ಪದಿಂ
ದ, ಮನುಜತ್ವಂ-ಮನುಷ್ಯನಾಗಿ ತೋರುತ್ತಿರುವಿಕೆಯನ್ನು, ಈಯುಷಃ-ಹೊಂದಿಯಿರುವಂಥಾ, ಲಾವಣ್ಯಧಾಮ್ನಃ-ಚಲುವಿಕೆಗೆ

---

ಪೂರ್ವಿಕರಾದ ಅಂಬರೀಷಾದಿಗಳು ಯಾವ ಪಾದಪದ್ಮದ ನಖಕಾಂತಿಯಿಂ ಅಪಹಾರ್ಯವಾದ ಸಂಸಾರವಂ ದಾಂ
ಟಿದರೋ ಅಂತಿಯ ಪಾದಪದ್ಮವಂ ಕಾಣುವೆನು ॥೭॥ ಭಗವಂತನ ಯಾವ ಪಾದಪದ್ಮವು ಬ್ರಹ್ಮದೇವನೇ ಮೊ
ದಲಾದ ದೇವತೆಗಳಿಂ ಪೂಜಿತವಾದುದೋ, ಮಹಾಲಕ್ಷ್ಮಿಯಿಂದಲೂ ಮುನಿಗಳಿಂದಲೂ ಯಾದವರಿಂದಲೂ ಆ
ರಾಧಿತವಾದುದೋ, ಗೋವುಗಳಂ ಸಂಚಾರವಂ ಮಾಡಿಸಲೋಸುಗ ಗೋಪಾಲಕರೊಡನೆ ವನದಲ್ಲಿ ಸಂಚಾರ
ವಂ ಮಾಡುವುದೋ, ಗೋಪಸ್ತ್ರೀಯರುಗಳ ಕುಚಕುಂಕುಮದಿಂದ ಲಿಪ್ತವಾದುದೋ, ಭಗವಂತನ ಅಂತಿ
ಯ ಪಾದಪದ್ಮವಂ ನೋಡುವೆನು ॥೮॥ ಈಗ ಮೃಗಂಗಳು ನನಗೆ ಪ್ರದಕ್ಷಿಣಾಕಾರಂಗಳಾಗಿ ಬರುತ್ತಲಿವೆ
ನನಗೆ ದಿವ್ಯಶಕುನವಾದ ಕಾರಣದಿಂ ನಾನು ನಿಸ್ಸಂಶಯವಾಗಿ ಮನೋಹರಂಗಳಾದ ಕಪೋಲಂಗಳೂ ನಾಸಿ
ಕವೂ ಉಳ್ಳುದುದಾಗಿ, ಮಂದಸ್ಮಿತಯುಕ್ತವಾದ ಕಟಾಕ್ಷಪ್ರಸಾರವುಳ್ಳುದುದಾಗಿ, ಕೆಂದಾವರೆಗೆ ಸಮಾನ
ವಾದ ನೇತ್ರಂಗಳುಳ್ಳದುದಾಗಿ, ವಕ್ರಂಗಳಾದ ಕೇಶಂಗಳಿಂದ ಆವೃತವಾಗಿ, ಇರುವ ಕೃಷ್ಣನ ಮುಖವಂ ನೋ
ಡುವೆನು ॥೯॥ ಭೂಭಾರ ಪರಿಹಾರಕ್ಕೋಸುಗ ಸ್ವಜನರಾದ ದೇವತೆಗಳ ಪ್ರಾರ್ಥನೆಯಿಂದ ಮನುಷ್ಯಾವತಾರ
ವನೆತ್ತಿರುವ ಸೌಂದರ್ಯನಿಧಿಯಾದ ಶ್ರೀಕೃಷ್ಣನ ದರ್ಶನವು ನನಗೆ ಉಂಟಾಗುತ್ತಲಿದೆ. ನನ್ನ ನೇತ್ರಂಗಳಿ
ಗೆ ಶೀಘ್ರವಾಗಿ ಸಾಫಲ್ಯವುಂಟಾಗುವುದು ॥೧೦॥ ಯಾವ ಪರಮಾತ್ಮನು ಕಾರ್ಯಕಾರಣಂಗಳಂ ನೋ

ನಿಜೇಚ್ಛಯಾ । ಲಾವಣ್ಯಧಾಮ್ನೋಭವಿತೋಪಲಂಭನಂಮಹ್ಯಂನನಸ್ಯಾತ್ಫಲಮಂಜಸಾದೃಶಃ ॥೧೦॥
ಯಈಕ್ಷಿತಾಹಂರಹಿತೋಪ್ಯಸತ್ಸತೋಸ್ಸ್ವತೇಜಸಾಪಾಸ್ತತಮೋಭಿದಾಭ್ರಮಃ। ಸ್ವಮಾಯಯಾತ್ಮನ್
ರಚಿತೈಸ್ತದೀಕ್ಷಯಾಪ್ರಾಣಾಕ್ಷಧೀಭಿಸ್ಸದನೇಷ್ವಭೀಯತೇ ॥೧೧॥ಯಸ್ಯಾಖಿಲಾಮೀವಹಭಿಸ್ಸುಮಂ
ಗಳೈರ್ವಾಚೋವಿಮಿಶ್ರಾಗುಣಕರ್ಮಜನ್ಮಭಿಃ । ಪ್ರಾಣಂತಿಶುಂಭಂತಿಪುನಂತಿವೈಜಗದ್ಯಾಸ್ತದ್ವಿರ
ಕ್ತಾಶ್ಶವಶೋಭನಾಮತಾಃ॥೧೨॥ ಸಚಾವತೀರ್ಣಃಕಿಲಸಾತ್ವತಾನ್ವಯೆಸ್ವಸೇತುಪಾಲಾಮರವರ್ಯಶ

---

ನೆಲೆಯಾಗಿರುವ, ಕೃಷ್ಣನ, ಉಪಲಂಭನಂ-ಪ್ರತ್ಯಕ್ಷವು, ಅದ್ಯ-ಈಗ, ಭವಿತಾ-ಉಂಟಾಗುತ್ತೆ. ಮಹ್ಯಂ-ನನಗೆ, ದೃಶಃ-ದೃಷ್ಟಿಯ, ಫಲಂ-ಪ್ರಯೋಜನವು, ಅಂಜಸಾ-ಬೇಗನೆ, ನಸ್ಯಾದಿತಿನ-ಆಗಲಾರದೆಂಬುವುದಿಲ್ಲ ॥೧೦॥ಯಃ-ಯಾವಆತ್ಮನು, ಅಸತ್ಸತೋಃ-ಕಾರ್ಯಕಾರಣಗಳೆರಡಕ್ಕೂ, ಈಕ್ಷಿತಾಪಿ-ಸಾಕ್ಷಿಯಾದರೂ, (ಪ್ರವರ್ತಕವಾದ ಸಂಕಲ್ಪವುಳ್ಳವನಾದರೂ) ಅಹಂರಹಿತಃ-ಅಹಂಕಾರವಿಲ್ಲದವನೋ, ಸ್ವತೇಜಸಾ-ತನ್ನ ಬೆಳಕಿನಿಂದ(ಸ್ವರೂಪಚಿಚ್ಛಕ್ತಿಯಿಂದ) ಅಪಾಸ್ತತಮೋಭಿದಾಭ್ರಮಃ-ಅಪಾಸ್ತ-ನಿಷೇಧಿಸಿಬ್ಬೋಗಳಿಸಲ್ಪಟ್ಟ, ತಮಃ-ಮೂಲಪ್ರಕೃತಿಯಾವ ಅನಾದಿಭಾವಾಜ್ಞಾನದಿಂದ, (ಆರೋಪಿಸಲ್ಪಟ್ಟ)ಭಿದಾಭ್ರಮಃ-ಭೇದಪ್ರಪಂಚದಭ್ರಾಂತಿಯುಳ್ಳವನೋ, ಸ್ವಮಾಯಯಾ-ತನ್ನ ಮೂಲಪ್ರಕೃತಿಯಿಂದಲೇ, ತದೀಕ್ಷಯಾ-ಮಾಯೆಯೋ ಆಗಿರುವಸಂಕಲ್ಪದಿಂದ, ಆತ್ಮನ್-ತನ್ನಲ್ಲಿಯೇ, ರಚಿತೈಃ-ಕಲ್ಪಿಸಲ್ಪಟ್ಟ, ಪ್ರಾಣಾಕ್ಷಧೀಭಿಃ-ಪ್ರಾಣೇಂದ್ರಿಯ ಬುದ್ಧಿಗಳೊಡನೆ, ಸದನೇಷು-ಗೋಕುಲದ ಮನೆಗಳಲ್ಲಿ, ಅಭೀಯತೇ-ಪ್ರಸನ್ನನಾಗಿತೋರುತ್ತಿರುವನೋ ॥೧೧॥ಅಖಿಲಾಮೀವಹಭಿಃ-ಅಖಿಲ-ಸಮಸ್ತಗಳಾದ ಅಥವಾಸಮಸ್ತರ, ಅಮೀವ-ಪಾಪಗಳನ್ನು, ಹಭಿಃ-ನಾಶಮಾಡುತಲಿರುವಂಥಾ, ಸುಮಂಗಳೈಃ-ಶೋಭನವಾದಮಂಗಳಗಳಿಗೆ ನಿಮಿತ್ತಗಲಾದಂಥಾ, ಯಸ್ಯ-ಯಾವಕೃಷ್ಣನ, ಗುಣಕರ್ಮಜನ್ಮಭಿಃ-ಗುಣ-ಅವ್ಯಾಜಕರುಣಾದಿಗಳು, ಕರ್ಮ-ದುಷ್ಟಶಿಕ್ಷಣಶಿಷ್ಟಪರಿಪಾಲನಾದಿಗಳು, ಜನ್ಮಭಿಃ-ರಾಮಕೃಷ್ಣಾದ್ಯವತಾರಗಳು, ಇವುಗಳೊಡನೆ, ವಿಮಿಶ್ರಾಃ-ವಿಶೇಷವಾಗಿಬೆರತಿರುವ, ವಾಚಃ-ಸೂಕ್ತಿಗಳು, ಜಗತ್-ಪ್ರಪಂಚವನ್ನು; ವೈ-ಪ್ರಸಿದ್ಧವಾಗಿ, ಪ್ರಾಣಂತಿ-ಬದುಕಿಸುತ್ತಿವೆ. ಶುಂಭಂತಿ-ಬೆಳಗುತ್ತಿವೆ ಪುನಂತಿ-ಪವಿತ್ರಗೊಳಿಸುತ್ತಿವೆ. ಯಾಃ-ಯಾವಮಾತುಗಳು, ತದ್ವಿರಕ್ತಾಃ-ತತ್-ಆಭಗವದ್ಗುಣ ಕರ್ಮಜನ್ಮಗಳಲ್ಲಿ, ವಿರಕ್ತಾಃ-ಅಕ್ಕರೆಯಿಲ್ಲದವುಗಳೋ, ತಾಃ-ಆಮಾತುಗಳು, ಶವಶೋಭನಾಃ-ಹೆಣದಂತೆ ಬೆಳಗುತ್ತಿರುವವಾಗಿ, ಮತಾಃ-ಸತ್ಪುರುಷರಿಗೊಪ್ಪಿಗೆಯಾಗಿರುವುವು.-ಸಃ-ಆವಿಷ್ಣುವಾದರೋ, ಸಾತ್ವತಾನ್ವಯೇ-ಯಾದವರಕುಲದಲ್ಲಿ, ಅವತೀರ್ಣಃಕಿಲ-ಹುಟ್ಟಿರುವನಲ್ಲವೆ? ದೇವಾಃ-ದೇವತೆಗಳು, ಯತ್-ಯಾವಅವತಾರದ, ಅಶೇಷಮಂಗಳಂ-ಸಕಲಶುಭಚರಿತವನ್ನೂ, ಗಾಯಂತಿ-ಹಾಡುತಲಿರುವರೋ, ಸಈಶ್ವರಃ-ಆಪರಮೇಶ್ವರನು, ಸ್ವಸೇತುಪಾಲಾಮರವರ್ಯಶರ್ಮಕೃತ್-ಸ್ವ-ತನ್ನ, ಸೇತು-ಧರ್ಮದಕಟ್ಟಳೆಯನ್ನು, ಪಾಲ-ರಕ್ಷಿಸುತಲಿರುವ, ಅಮರವರ್ಯ-ದೇವಶ್ರೇಷ್ಠರಿಗೆ, ಶರ್ಮಕೃತ್-ಶುಭವನ್ನು ಮಾಡುವ, ಯಶಃ-ಕೀರ್ತಿಯನ್ನು,ವಿ

---

ಡುವವನಾಗಿ ಅಹಂಕಾರರಹಿತನಾಗಿ ತನ್ನಚಿಚ್ಛಕ್ತಿಯಿಂದ ಪರಿಹರಿಸಲ್ಪಟ್ಟ ಅಜ್ಞಾನಜನ್ಯಮಾದ ಭೇದಭ್ರಮೆಯುಳ್ಳವನಾದರೂ ತನ್ನಮಾಯೆಯಿಂದ ಸ್ವಕೀಯವಾದ ಈಕ್ಷಣದಿಂದ ತನ್ನಲ್ಲಿ ನಿರ್ಮಿತಂಗಳಾದ ಪ್ರಾಣೇಂದ್ರಿಯ ಬುದ್ಧಿಗಳಿಂದ ಯುಕ್ತವಾದ ಜೀವಂಗಳಿಂದ ಬೃಂದಾವನಾದಿಸ್ಥಲದಲ್ಲಿ ಗೋಪಿಕಾಗೃಹದಲ್ಲಿ ಅವರಿಗೆ ಸ್ವಾಧೀನನುತೆ ಅಭಿಮುಖನಾಗಿ ವಿಹರಿಸುವನೋ ॥೧೧॥ ಸಮಸ್ತಪಾಪ ಪರಿಹಾರಕಗಳಾದ ಅತಿಶುಭಪ್ರದಂಗಳಾದ ಭಗವಂತನ ಕರುಣಾದಿ ಗುಣಂಗಳಿಂದಲೂ, ಚರಿತಂಗಳಿಂದಲೂ, ದಿವ್ಯನಾಮಂಗಳಿಂದಲೂ,ಯುಕ್ತವಾದ ವಾಕ್ಯಂಗಳು, ಲೋಕಂಗಳಂ ಜೀವಿಸುವಂತೆ ಮಾಡುವವೋ, ಪವಿತ್ರಂಗಳಂ ಮಾಡುವವೋ, ಆಭಗವದ್ಗುಣ ಕರ್ಮನಾಮಂಗಳಿಂದ ಹೀನಂಗಳಾದ ವಾಕ್ಯಂಗಳುವಸ್ತ್ರಭೂಷಣಾದ್ಯಲಂಕೃತಂಗಳಾದ ನಿರ್ಜೀವದೇಹಂಗಳಂತೆ ವ್ಯರ್ಥಂಗಳೋ; ॥೧೨॥ ಅಂತಾ ಪರಮೇಶ್ವರನು ಯಾದವರಕುಲದಲ್ಲಿ ಅವತರಿಸಿ ತನ್ನಿಂದ ನಿರ್ಮಿತಂಗಳಾದ ಲೋಕಧರ್ಮಾಧರ್ಮ ವ್ಯವಸ್ಥೆಗಳಂ ಪರಿಪಾಲಿಸು ಪಬ್ರಹ್ಮಾದಿಗಳಿಗೆ ಸುಖಪ್ರದನಾಗಿ, ಸರ್ವಮಂಗಳ ಪ್ರದವಾದ ದೇವತೆಗಳಿಗೂ ಗಾನಯೋಗ್ಯವಾದ ಮಹಾಯಶಸ್ಸಂ ವಿಸ್ತರಿಸುವನಾಗಿ,ವ್ರಜದಲ್ಲಿ ವಾಸವಂ ಮಾಡುವನೋ. ॥೧೩॥ ಮಹಾ ಪುರುಷರಿಗೂಕೂಡ ಮಹಾಗುರುವಾಗಿ ಲೋಕತ್ರಯದಲ್ಲಿಯೂ

ವರ್ಗಕೃತ್ | ಯಶೋವಿತನ್ವನ್ವ್ರಜಆಸ್ತಈಶ್ವರೋಗಾಯಂತಿದೇವಾಯದಶೇಷಮಂಗಳಂ ||೧೩|| ತಂ ತ್ವದ್ಯನೂನಂಮಹತಾಂಗತಿಂಗುರುಂತ್ರೈಲೋಕ್ಯಕಾಂತಂದೃಶಿಮನ್ಮಹೋತ್ಸವಂ | ರೂಪಂದಧಾನಂಶ್ರಿಯಈಪ್ಸಿತಾಸ್ಪದಂದ್ರಕ್ಷ್ಯೇಮಮಾಸನ್ನುಷಸಸ್ಸುದರ್ಶನಾಃ ||೧೪|| ಅಥಾವತೀರ್ಣಸ್ಸಪದೀಶಯೋರಥಾತ್ಪ್ರಧಾನಪುಂಸೋಶ್ಚರಣಂಸ್ವಲಬ್ಧಯೇ | ಧಿಯಾಧೃತಂಯೋಗಿಭಿರಪ್ಯಹಂಧ್ರುವಂನಮಸ್ಯಆಭ್ಯಾಂಚಸಖೀನ್ವನೌಕಸಃ ||೧೫|| ಅಪ್ಯಂಘ್ರಿಮೂಲೇಪತಿತಸ್ಯಮೇವಿಭುಃಶಿರಸ್ಯಧಾಸ್ಯನ್ನಿಜಹಸ್ತಪಂಕಜಂ | ದತ್ತಾಭಯಂಕಾಲಭುಜಂಗರಂಹಸಾಪ್ರೋದ್ವೇಜಿತಾನಾಂಶರಣೈಷಿಣಾಂನೃಣಾಂ ||೧೬|| ಸಮರ್ಹಣಂಯತ್ರನಿಧಾಯಕೌಶಿಕಸ್ತಥಾಬಲಿಶ್ಚಾಪಜಗತ್ತ್ರಯೇಂದ್ರತಾಂ | ಯದ್ವಾವಿಹಾರೇವ್ರಜಯೋಷಿತಾಂಶ್ರಮಂಸ್ಪರ್ಶನಸೌಗಂಧಿಕಗಂಧ್ಯಪಾನುದತ್ ||೧೭|| ನಮಯ್ಯುಪೈ

---

ತನ್ವನ್-ವಿಸ್ತರಿಸುವನಾಗಿ, ವ್ರಜೇ-ಗೋಕುಲದಲ್ಲಿ, ಆಸ್ತೇ-ಇರುವನು ||೧೩|| ಮಹತಾಂಗತಿಂ-ಮಹಾತ್ಮರಿಗೆಪ್ರಾಪ್ಯನೂ, ಗುರುಂ-ಅಜ್ಞಾನಪರಿಹಾರಕನೂ, ತ್ರೈಲೋಕ್ಯಕಾಂತಂ-ಮೂರುಲೋಕಗಳಲ್ಲಿಯೂ ಮನೋಹರನೂ, ದೃಶಿಮನ್ಮಹೋತ್ಸವಂ-ದೃಶಿಮತ್-ಕಣ್ಣುಳ್ಳವರಿಗೆ, ಮಹೋತ್ಸವಂ-ದೊಡ್ಡಹಬ್ಬವಾಗಿರುವ, ರೂಪಂ-ಆಕಾರವನ್ನು, ದಧಾನಂ-ವಹಿಸಿರುವನೂ, ಶ್ರಿಯಃ-ಲಕ್ಷ್ಮಿಗೆ, ಈಪ್ಸಿತಾಸ್ಪದಂ-ಬಯಕೆಗಳಿಗೆ ನಿಮಿತ್ತಭೂತನೂ, ಆದ, ತಂತು-ಆ ಕೃಷ್ಣನನ್ನಾದರೋ, ಅದ್ಯ-ಈಗ, ನೂನಂ-ದಿಟವಾಗಿ, ದ್ರಕ್ಷ್ಯೇ-ನೋಡುವೆನು (ಯಾವುದರಿಂದಲೆಂದರೆ-) ಮಮ-ನನ್ನ, ಉಷಸಃ-ಪ್ರಾತಃಕಾಲಗಳು, ಸುದರ್ಶನಾಃ-ಉತ್ತಮದರ್ಶನಗಳುಳ್ಳವುಗಳು, ಆಸನ್-ಆದವು ||೧೪|| ಅಥ-ಆಮೇಲೆ, ರಥಾತ್-ತೇರಿನಿಂದಲೆಯಿಂದ, ಅವತೀರ್ಣಃ-ಕೆಳಗಿಳಿದ, ಅಹಂ-ನಾನು, ಸಪದಿ-ಈಗ, ಪ್ರಧಾನಪುಂಸೋಃ-ಮುಖ್ಯಪುರುಷರಾದ, ಈಶಯೋಃ-ಒಡೆಯರಾದರಾಮಕೃಷ್ಣರ, ಯೋಗಿಭಿರಪಿ-ಧ್ಯಾನಮಾಡುವರಿಂದಲೂ, ಧಿಯಾ-ಬುದ್ಧಿಯಿಂದ, ಧೃತಂ-ಧರಿಸಲ್ಪಟ್ಟ, ಚರಣಂ-ಪಾದವನ್ನು, ಸ್ವಲಬ್ಧಯೇ-ಸ್ವರೂಪಲಾಭಕ್ಕೋಸುಗ, ನಮಸ್ಯೇ-ನಮಸ್ಕರಿಸುವೆನು. ಆಭ್ಯಾಂಚ-ಅವರೊಡನೆಯೇ, ಸಖೀನ್-ಗೆಳೆಯರಾದ, ವನೌಕಸಶ್ಚ-ಗೊಲ್ಲರನ್ನೂ, ನಮಸ್ಯೇ-ನಮಸ್ಕರಿಸುವೆನು, ಧ್ರುವಂ-ನಿಶ್ಚಯವು ||೧೫|| ಅಂಘ್ರಿಮೂಲೇ-ಪಾದದಡಿಯಲ್ಲಿ, ಪತಿತಸ್ಯ-ಬಿದ್ದಂಥಾ, ಮೇ-ನನ್ನ, ಶಿರಸಿ-ತಲೆಯಲ್ಲಿ, ವಿಭುರಪಿ-ಪ್ರಭುವಾದ ಕೃಷ್ಣನೂಕೂಡ, ಕಾಲಭುಜಂಗರಂಹಸಾ-ಕಾಲವೆಂಬಸರ್ಪದವೇಗದಿಂದ, ಪ್ರೋದ್ವೇಜಿತಾನಾಂ-ಹೆಚ್ಚಾಗಿಹೆದರಿಸಲ್ಪಟ್ಟವರಾದ್ದರಿಂದಲೇ, ಶರಣೈಷಿಣಾಂ-ರಕ್ಷಕರಂಬಯಸುತಲಿರುವ, ನೃಣಾಂ-ಮನುಷ್ಯರಿಗೆ, ದತ್ತಾಭಯಂ-ಕೊಡಲ್ಪಟ್ಟನಿರ್ಭಯತ್ವವುಳ್ಳ, ನಿಜಹಸ್ತಪಂಕಜಂ-ತನ್ನ ಕರಕಮಲವನ್ನು, ಅಧಾಸ್ಯತ್-ಇಡುವನು ||೧೬|| ಯತ್ರ-ಯಾವಕೈಯಲ್ಲಿ, ಕೌಶಿಕಃ-ಇಂದ್ರನು, ತಥಾ-ಹಾಗೆ, ಬಲಿಶ್ಚ-ಬಲಿಯೆಂಬದೈತ್ಯನೂ, ಸಮರ್ಹಣಂ-ಪೂಜೆಯನ್ನು, (ದಾನವನ್ನು) ನಿಧಾಯ-ಮಾಡಿ, ಜಗತ್ತ್ರಯೇಂದ್ರತಾಂ-ಮೂರುಲೋಕದೊಡೆತನವನ್ನು, ಆಪ-ಹೊಂದಿದನೋ, ಯದ್ವಾ-ಅಥವಾ, (ಮತ್ತು) ವಿಹಾರೇ-ರಾಸಕ್ರೀಡೆಯಲ್ಲಿ, ವ್ರಜಯೋಷಿತಾಂ-ಗೋಕುಲದಹೆಂಗಳ, ಶ್ರಮಂ-ಆಯಾಸವನ್ನು, ಸೌಗಂಧಿಕಗಂಧಿ-ಕಲ್ಹಾರಪುಷ್ಪದಪರಿಮಳವುಳ್ಳ, ಯಾವಹಸ್ತವು, ಸ್ಪರ್ಶನ-ತನ್ನಸೋಂಕುವಿಕೆಯಿಂದ, ಅಪಾನುದತ್-ಹೋಗಲಾಡಿಸಿತೋ ||೧೭||

---

ಕೂಡ ಬಹುಸುಂದರವಾದ ನೇತ್ರೋತ್ಸವಪ್ರದವಾದ ಮಹಾಲಕ್ಷ್ಮಿಗೂ ಅಪೇಕ್ಷಿಸುವುದಕ್ಕೂ ಯೋಗ್ಯವಾದ ದಿವ್ಯರೂಪವಂ ಧರಿಸಿರುವ ಶ್ರೀಕೃಷ್ಣನು ಈದಿನವೇ ಕಾಣುವೆನು, ನಿಶ್ಚಯವು, ನನಗೆ ಪ್ರಾತಃಕಾಲಗಳು ಶುಭಸೂಚನೆಗಳಾಗಿವೆ, ಇದೇ ಮಹಾಶಕುನ ಮೂಡುದರಿಂದ ಭಗವಂತನ ದರ್ಶನವು ನನಗೆ ಆಗುವುದು ||೧೪|| ನಾನು ಕೃಷ್ಣದರ್ಶನಾನಂತರದಲ್ಲಿ ರಥದಿಂದಇಳಿದು ಯೋಗಿಗಳಿಂದ ಆತ್ಮಸಾಕ್ಷಾತ್ಕಾರವಾಗಿ ಮನಸ್ಸಿನಲ್ಲಿ ಧರಿಸಿರುವ ಪ್ರಧಾನಪುರುಷರಾದ ರಾಮಕೃಷ್ಣರ ಪಾದಾಬ್ಜವಂ ನಮಸ್ಕರಿಸುವೆನು. ಈ ರಾಮಕೃಷ್ಣರೊಡನೆಇವರಮಿತ್ರರಾದ ಗೋಪಾಲಕರಂ ಸಹನಮಸ್ಕರಿಸುವೆನು ||೧೫|| ಆ ಶ್ರೀಕೃಷ್ಣನು ಪಾದಮೂಲದಲ್ಲಿ ಬಿದ್ದುನಮಸ್ಕರಿಸುತಲಿರುವ ನನ್ನ ಶಿರಸ್ಸಿನಲ್ಲಿ ಪದ್ಮದಂತೆ ಸುಂದರವಾದ ತನ್ನ ಹಸ್ತವನಿಡುವನೋ? ಆ ಹಸ್ತವೆಂತಿಯದೆಂದರೆ ಮಹಾಸರ್ಪದಿಂದ ವೇಗದಿಂದ ಭಯಪಟ್ಟು ಮರೆಹೊಕ್ಕ ಜನರಿಗೆ ಅಭಯವನಿತ್ತುದು ||೧೬|| ಯಾವಹಸ್ತದಲ್ಲಿ ದೇವೇಂದ್ರನು ಸ್ವಲ್ಪವಸ್ತುವನಿತ್ತು ಲೋಕತ್ರಯಾಧಿಪತ್ಯವಂ ಪಡೆದನೋ, ಅದೇಪ್ರಕಾರ

ಷ್ಯತ್ಯರಿಬುದ್ಧಿಮಚ್ಯುತಃಕಂಸಸ್ಯಭೃತ್ಯಃಪ್ರಹಿತೋಪಿವಿಶ್ವದೃಕ್ | ಯೋಂತರ್ಬಹಿಶ್ಚೇತಸಏತದೀ
ಹಿತಂಕ್ಷೇತ್ರಜ್ಞಈಕ್ಷತ್ಯಮಲೇನಚಕ್ಷುಷಾ |೧೮| ಅಪ್ಯಂಘ್ರಿಮೂಲೇವಹಿತಂಕೃತಾಂಜಲಿಂಮಾಮೀ
ಕ್ಷಿತಾಸಸ್ಮಿತಯಾದ್ರಯಾದೃಶಾ | ಸಪದ್ಯಪಧ್ವಸ್ತಸಮಸ್ತಕಿಲ್ಬಿಷೋವೋಢಾಮುದಂವೀತವಿ
ಶಂಕಊರ್ಜಿತಾಂ |೧೯| ಸುಹೃತ್ತಮಂಜ್ಞಾತಿಮನನ್ಯದೈವತಂದೋರ್ಭ್ಯಾಂಬೃಹದ್ಭ್ಯಾಂಪರಿರ
ಪ್ಸ್ಯತೇಥಮಾಂ| ಆತ್ಮಾಹಿತೀರ್ಥೀಕ್ರಿಯತೇತದೈವಮೇಬಂಧಶ್ಚಕರ್ಮಾತ್ಮಕಉಚ್ಛ್ವಸಿತ್ಯತಃ|೨೦|

---

ಅಹಂ-ನಾನು, ಪ್ರಹಿತೋಪಿ-ಕಂಸನಿಂದಕಳುಹಿಸಲ್ಪಟ್ಟವನಾದರೂ, ಕಂಸಸ್ಯ-ಕಂಸನ, ಭೃತ್ಯಇತಿ-ಸೇವಕನೆಂದು, ಮಯಿ-
ನನ್ನಲ್ಲಿ, ಅರಿಬುದ್ಧಿಂ-ಶತ್ರುವೆಂಬಭಾವವನ್ನು, ಅಚ್ಯುತಃ-ಕೃಷ್ಣನು, ನೋಪಯಿಷ್ಯತಿ-ಹೊಂದುವುದಿಲ್ಲ. ಯಃ-ಯಾವಕೃಷ್ಣ
ನು, ವಿಶ್ವದೃಕ್-ಪ್ರಪಂಚವನ್ನು ನೋಡುತ್ತಿರುವ ಸಾಕ್ಷಿಚೈತನ್ಯವಾಗಿರುವನೋ, ಕ್ಷೇತ್ರಜ್ಞಃ-ದೇಹಸಾಕ್ಷಿಚೈತನ್ಯವಾಗಿ, ಅ
ಮಲೇನ-ಶುದ್ಧವಾದ, ಚಕ್ಷುಷಾ-ಜ್ಞಾನದಿಂದ, ಅಂತಃ-ಒಳಗೂ, ಬಹಿಶ್ಚ-ಹೊರಗೂ, ಚೇತಸಃ-ಪ್ರಾಣಿಬುದ್ಧಿಯ, ಅಥವಾ
ನನ್ನಹೃದಯದ, ಏತದೀಹಿತಂ-ಈಯಭಿಪ್ರಾಯವನ್ನು, ಈಕ್ಷತಿ-ನೋಡುತಲಿರುವನೋ; (ಆಕೃಷ್ಣನು ನನ್ನಲ್ಲಿದ್ವೇಷಬುದ್ಧಿಯಂ
ಮಾಡುವದಿಲ್ಲ) ||೧೮|| ಅಂಘ್ರಿಮೂಲೇ-ಚರಣದಡಿಯಲ್ಲಿ, ಅವಹಿತಂ-ಅವಧಾನವುಳ್ಳವನಾಗಿ, ಕೃತಾಂಜಲಿಂ-ಕೈಜೋಡಿಸಿಕೊಂ
ಡಿರುವ, ಮಾಮಪಿ-ನನ್ನನ್ನೂ, ಸಸ್ಮಿತಯಾ-ಕಿರುನಗೆಯಿಂಸಹಿತವಾದ,ಆರ್ದ್ರಯಾ-ದಯೆಯಿಂದತೋಯ್ದ, ದೃಶಾ-ದೃಷ್ಟಿಯಿಂ
ದ, ಈಕ್ಷಿತಾ-ನೋಡುವನು.ಅಹಂ-ನಾನು, ಸಪದಿ-ಈಗ,ಅಪಧ್ವಸ್ತಸಮಸ್ತಕಿಲ್ಬಿಷಃ-ಕೊಡಹಲ್ಪಟ್ಟ ಸಕಲಪಾಪಗಳುಳ್ಳವನಾ
ದ್ದರಿಂದಲೇ, ವೀತವಿಶಂಕಃ-ನಿಸ್ಸಂಶಯನಿವೃತ್ತನಾಗಿ, ಊರ್ಜಿತಾಂ-ವೃದ್ಧಿಹೊಂದಿದ,ಮುದಂ-ಸ್ಥಿರಾನಂದವನ್ನು,ಒಢಾ-
ವಹಿಸದವನಾಗುವೆನು||೧೯||ಸುಹೃತ್ತಮಂ-ಅತಿಮಿತ್ರನಾಗಿಯೂ,ಜ್ಞಾತಿಂ-ಸಂಟನಾಗಿಯೂ, ಅನನ್ಯದೈವತಂ-ಬೇರೇಪ್ರಭುವಿ
ಲ್ಲದವನಾಗಿಯೂಇರುವ, ಮಾಂ-ನನ್ನನ್ನು, ಅಥ-ಆಮೇಲೆ, ಬೃಹದ್ಭ್ಯಾಂದೋರ್ಭ್ಯಾಂ-ದೊಡ್ಡತೋಳುಗಳಿಂದ, ಪರಿರಪ್ಸ್ಯ
ತೇ-ಅಪ್ಪಿಕೊಳ್ಳುವನು. ತದೈವ-ಆಗಲೇ, ಆತ್ಮಾ-ನನ್ನದೇಹವು, ತೀರ್ಥೀಕ್ರಿಯತೇಹಿ-ಪವಿತ್ರವಾಗಿಮಾಡಲ್ಪಡುವುದಷ್ಟೆ? ಅ
ತಃ-ಅದರಿಂದ, ಕರ್ಮಾತ್ಮಕಃ-ಪುಣ್ಯಪಾಪರೂಪವಾದ, ಮೇ-ನನ್ನ, ಬಂಧಶ್ಚ-ಸಂಸಾರದಕಟ್ಟುಕೂಡ, ಉಚ್ಛ್ವಸಿತಿ-ಕಳಚಿ
ಹೋಗುವುದು ||೨೦||ಉರುಶ್ರವಾಃ-ಉತ್ತಮನೆಂದು ಕೇಳಲ್ಪಡುತಲಿರುವಕೃಷ್ಣನು, ಲಬ್ಧಾಂಗಸಂಗಂ-ಪಡೆಯಲ್ಪಟ್ಟ ತನ್ನ

---

ವಾಗಿ ಬಲಿಯು ಯಾವಹಸ್ತದಲ್ಲಿ ಭೂದಾನಾರ್ಥವಾಗಿ ತೀರ್ಥೋದಕವನಿತ್ತು, ಲೋಕತ್ರಯಾಧಿಪತ್ಯವನೆ
ಯ್ದಿದನೋ, ಮತ್ತುಯಾವಹಸ್ತವು ರಾಸವಿಹಾರದಲ್ಲಿ ಕಲ್ಹಾರಪುಷ್ಪಕ್ಕೆ ಸಮಾನವಾದ ಸುಗಂಧವುಳ್ಳುದು
ದಾಗಿ, ಸ್ಪರ್ಶಸುಖವನುಂಟುಮಾಡಿ ಗೋಪಸ್ತ್ರೀಯರುಗಳ ಕ್ರೀಡಾಶ್ರಮವಂಪರಿಹರಿಸಿತೋ, ಅಂತಿಯುಹಸ್ತ
ವು ನನ್ನ ಶಿರಸ್ಸಿನಲ್ಲಿ ಇರಿಸಿ ಅನುಗ್ರಹಿಸುವನೋ |೧೭| ನಾನುಕಂಸನಿಂದ ಕಳುಹಿಸಲ್ಪಟ್ಟು ಅವನಭೃತ್ಯನಾಗಿ
ಬಂದವನಾದರೂ ನನ್ನಲ್ಲಿ ಶತ್ರುಪಕ್ಷೀಯನಿವನೆಂದು ಭಗವಂತನು ಉಪೇಕ್ಷೆಯಂ ಮಾಡುವುದಿಲ್ಲ, ಅದಂತೆಂದರೆ
ಸರ್ವಜ್ಞನಾದ ಶ್ರೀಕೃಷ್ಣನು ನಮ್ಮೊಳಗೂ ಹೊರಗೂಕೂಡಇರ್ದವನಾಗಿ ಅಂತರ್ಯಾಮಿಯಾಗಿ ದಿವ್ಯಜ್ಞಾ
ನದಿಂದ ತಿಳಿದವನಾದ ಕಾರಣದಿಂ ನನ್ನಮನೋವೃತ್ತಿಯಂ ಬಲ್ಲನು |೧೮| ಪಾದಮೂಲದಲ್ಲಿ ಕೈಮುಗಿದು ತ
ಲೆವಾಗಿನಿಂತಿರುವ ನನ್ನಂ ಶ್ರೀಕೃಷ್ಣನು ಕೃಪಾದೃಷ್ಟಿಯಿಂದ ನಗುತನೋಡಿದವನಾದರೆ, ಆಕ್ಷಣದಲ್ಲಿಯೇ
ಸಮಸ್ತಪಾಪಂಗಳಂ ಪರಿಹರಿಸಿಕೊಂಡು ನಿರ್ಭಯನಾಗಿ ಉತ್ತಮವಾದ ಸಂತೋಷವಂಪಡೆಯುವೆನು |೧೯|
ಅತ್ಯಂತ ಮಿತ್ರನಾಗಿ ಬಂಧುವಾಗಿ ಎಲ್ಲರಂಬಿಟ್ಟು ತನ್ನನ್ನೇನಂಬಿರುವ ನನ್ನಂ ಶ್ರೀಕೃಷ್ಣನು ದೀರ್ಘಂಗಳಾ
ದ ಬಾಹುಗಳಿಂದ ಆಲಿಂಗನೆಯಂ ಮಾಡಿಕೊಂಡವನಾದರೆ, ಆಕ್ಷಣದಲ್ಲಿಯೇ ನನ್ನಶರೀರವು ಪವಿತ್ರವಪ್ಪುದು.
ನನ್ನ ಕರ್ಮಬಂಧವೂ ಶಿಥಿಲವಾಗುವುದು |೨೦| ಶ್ರೀಕೃಷ್ಣನಶರೀರಸ್ಪರ್ಶವಂ ಪಡೆದು ನಮಸ್ಕರಿಸಿ ಅಂಜ
ಲಿಬಂಧವಂ ಮಾಡಿಕೊಂಡು ನಿಂತಿರುವನನ್ನಂ ಆಭಗವಂತನು, ಎಲೈ ಅಪ್ಪಾ! ಅಕ್ರೂರನೇ! ಎಂದುಮಾತನಾ
ಡಿಸಿದವನಾದರೆ, ಆಗನಾನು ಜನ್ಮವಂ ಪಡೆದುಸಾರ್ಥಕವು. ಭಗವಂತನಿಂದ ಆದರಿಸಲ್ಪಡದವನ ಜನ್ಮವು ವ್ಯ

ಲಬಾಹ್ವಂಗಸಂಗಂಪ್ರಣತಂಕೃತಾಂಜಲಿಂಮಾಂವಕ್ಷ್ಯತೇಕ್ರೂರತತೇತ್ಯುರುಶ್ರವಾಃ | ತದಾ ವಯಂಜನ್ಮಭೃತೋಮಹೀಯಸಾನೈವಾದೃತೋಯೋಧಿಗಮುಷ್ಯಜನ್ಮತತ್ |೨೧|ನತಸ್ಯಕಶ್ಚಿದ್ದಯಿತಸ್ಸುಹೃತ್ತಮೋನಚಾಪ್ರಿಯೋದ್ವೇಷ್ಯಉಪೇಕ್ಷ್ಯಏವವಾ | ತಥಾಪಿಭಕ್ತಾನ್ಭಜತೇಯಥಾತಥಾಸುರದ್ರುಮೋಯದ್ವದುಪಾಶ್ರಿತಾರ್ಥದಃ |೨೨| ಕಿಂಚಾಗ್ರಜೋಮಾವನತಂಯದೂತ್ತಮಃಸ್ಮಯನ್ಪರಿಷ್ವಜ್ಯಗೃಹೀತಮಂಜಲೌ | ಗೃಹಂಪ್ರವೇಶ್ಯಾಪ್ತಸಮಸ್ತಸತ್ಕೃತಂಸಂಪ್ರಕ್ಷ್ಯತೇಕಂಸಕೃತಂಸ್ವಬಂಧುಷು |೨೩| ಶ್ರೀಶುಕಃ|| ಇತಿಸಂಚಿಂತಯನ್ಕೃಷ್ಣಂಶ್ವಫಲ್ಕತನಯೋಧ್ವನಿ | ರಥೇನಗೋಕುಲಂಪ್ರಾಪ್ತಸ್ಸೂರ್ಯಶ್ಚಾಸ್ತಗಿರಿಂನೃಪ|೨೪| ಪದಾನಿತಸ್ಯಾಖಿಲಲೋಕಪಾಲಕಿರೀಟಜುಷ್ಟಾಮಲಪಾದರೇಣೋಃ | ದದರ್ಶಗೋಷ್ಠೇಕ್ಷಿತಿಕೌತುಕಾನಿವಿಲಕ್ಷಿತಾನ್ಯಬ್ಜಯವಾಂಕುಶಾದ್ಯೈಃ|೨೫| ತದ್ದರ್ಶನಾ

---

ದೇಹಸ್ಪರ್ಶವುಳ್ಳವನಾದ, ಪ್ರಣತಂ-ಸಾಷ್ಟಾಂಗವೆರಗಿದವನಾದ, ಕೃತಾಂಜಲಿಂ-ಕೈಜೋಡಿಸಿಕೊಂಡಿರುವವನಾದ, ಮಾಂ-ನನ್ನಂಕುರಿತು, ಅಕ್ರೂರ-ಅಕ್ರೂರನೇ! ತತ-(ತಾತ)ಅಪ್ಪಾ! ಇತಿ-ಇಂತೆಂದು, ವಕ್ಷ್ಯತೇ-ಹೇಳುವನು. ತದಾ-ಆಗ,ವಯಂ-ನಾವು, ಜನ್ಮಭೃತಃ-ದೇಹವನ್ನುಧರಿಸಿದವರಾಗುವೆವು. ಯಃ-ಯಾವವನು, ಮಹೀಯಸಾ-ಮಹಾಪುರುಷನಾದಕೃಷ್ಣನಿಂದ. ನೈವಾದೃತಃ-ಆದರಿಸಲ್ಪಡಲೇಯಿಲ್ಲವೋ, ಅಮುಷ್ಯ-ಆಯಿವನ, ತಜ್ಜನ್ಮ-ಆಶರೀರವನ್ನು, ಧಿಕ್-ನಿಂದಿಸು; ||೨೧|| ತಸ್ಯ-ಆಕೃಷ್ಣನಿಗೆ, ದಯಿತಃ-ಪ್ರಿಯನು, ಸುಹೃತ್ತಮಃ-ಅತಿಪ್ರಿಯನು, ಆದರೂ, ಕಶ್ಚಿದಪಿ-ಒಬ್ಬನೂ, ನ-ಇಲ್ಲ. ಅಪ್ರಿಯಶ್ಚ-ಪ್ರಿಯನಲ್ಲದವನಾದರೂ, ದ್ವೇಷ್ಯಃ-ವಿರೋಧಿಸತಕ್ಕ ಶತ್ರುವಾದರೂ, ಉಪೇಕ್ಷ್ಯೋವಾ-ಅಲಕ್ಷ್ಯಮಾಡತಕ್ಕ ಉದಾಸೀನನಾದರೂ, ನೈವಕಶ್ಚಿತ್-ಇಲ್ಲವೇಇಲ್ಲವು. ತಥಾಪಿ-ಹಾಗಾದರೂ, ಉಪಾಶ್ರಿತಾರ್ಥದಃ-ತನ್ನಂಸೇರಿದವರ ಮನೋರಥಗಳಂಕೊಡುವುದಾದ, ಸುರದ್ರುಮಃ-ಕಲ್ಪವೃಕ್ಷವು, ಯದ್ವತ್-ಹೇಗೋ, ತದ್ವತ್-ಹಾಗೆ, ಭಕ್ತಾನ್-ತನ್ನಭಕ್ತರನ್ನು, ಯಥಾತಥಾಭಜತೇ-ಅವರುಹೇಗೆತನ್ನಂ ಪ್ರೀತಿಸುವರೋ ತಾನುಹಾಗೆಯೇಅವರಂ ಪ್ರೀತಿಸುವನು ||೨೨|| ಯದೂತ್ತಮಃ-ಯಾದವರಲ್ಲಿಶ್ರೇಷ್ಠನಾದ, ಅಗ್ರಜಃ-ಹಿರಿಯನಾದ ಬಲರಾಮನು, ಸ್ಮಯನ್-ಕಿರುನಗೆಗೊಳ್ಳುವನಾಗಿ, ಸ್ವಬಂಧುಷು-ತನ್ನ ನೆಂಟರಲ್ಲಿ, ಕಂಸಕೃತಂ-ಕಂಸನಿಂದ ಕಳುಹಿಸಲ್ಪಟ್ಟಿರುವ, ಅವನತಂ-ನಮ್ರನಾದ, ಮಾ-ನನ್ನನ್ನು, ಗೃಹಂ-ತನ್ನ ಮನೆಯನ್ನು, ಪ್ರವೇಶ್ಯ-ಹುಗಿಸಿ, ಸಮಸ್ತಸತ್ಕೃತಂ-ಸರ್ವಸಂಮಾನಗಳಿಂದಲೂ ಉಪಚರಿಸಲ್ಪಟ್ಟವನಂಮಾಡಿ, ಸಂಪ್ರಕ್ಷ್ಯತೇ-ಕಿಂವಾ-ಕೇಳುವನೋಏನೋ ||೨೩|| [ಶುಕವಾಕ್ಯವು] ನೃಪ-ಅರಸಾದ ಪರೀಕ್ಷಿತ್ತನೇ! ಶ್ವಫಲ್ಕತನಯಃ-ಶ್ವಫಲ್ಕನೆಂಬವನ ಮಗನಾದ ಅಕ್ರೂರನು, ಅಧ್ವನಿ-ದಾರಿಯಲ್ಲಿ, ಇತಿ-ಹೀಗೆ, ಕೃಷ್ಣಂ-ಹರಿಯಂ ಕುರಿತು ಸಂಚಿಂತಯನ್-ಚನ್ನಾಗಿಯೋಚಿಸುವನಾಗಿ,ರಥೇನ-ತೇರೆಂಬ ಸಾಧನದಿಂದ, ಗೋಕುಲಂ-ನಂದವ್ರಜವನ್ನು, ಪ್ರಾಪ್ತಃ-ಸೇರಿದವನಾದನು. ಸೂರ್ಯಶ್ಚ-ಆದಿತ್ಯನೂಕೂಡ, ಅಸ್ತಗಿರಿಂ-ಅಸ್ತಮಯಸ್ಥಾನವನ್ನು, ಪ್ರಾಪ್ತಃ-ಸೇರಿದವನಾದನು ||೨೪|| ಗೋಷ್ಠೇ-ಗೋವುಗಳಿಗೆ ನೆಲೆಯಾದ ಹಳ್ಳಿಯಲ್ಲಿ, ಅಖಿಲ.......ರೇಣೋಃ-ಅಖಿಲ-ಸಮಸ್ತರಾದ, ಲೋಕಪಾಲ-ದಿಗೀಶ್ವರರ, ಕಿರೀಟ-ಟೊಪ್ಪಿಗೆಗಳಿಂದ, ಜುಷ್ಟ-ಸೇವಿಸಲ್ಪಟ್ಟ

---

ರ್ಥವು ||೨೧|| ಪರಮೇಶ್ವರನಾದ ಆಕೃಷ್ಣನಿಗೆ ಮಿತ್ರರೊಬ್ಬರಿಲ್ಲ, ಆಪ್ತರೂಇಲ್ಲ, ಹಿತರೂಇಲ್ಲ, ಆದರೂಭಕ್ತರಂ ಭಜಿಸುವನು, ಕಲ್ಪವೃಕ್ಷವು ಭಜಿಸುವಜನರಿಗೆ ಇಷ್ಟಾರ್ಥವಂ ಕೊಡುವಂತೆ ಭಕ್ತರಇಷ್ಟಾರ್ಥಮಂ ಕೊಡುವನು ||೨೨|| ಯಾದವೋತ್ತಮನಾದ ಶ್ರೀಕೃಷ್ಣನು ನಮಸ್ಕಾರವಂಮಾಡಿ ಕೃತಾಂಜಲಿಯಾಗಿ ನಿಂತಿರುವ ನನ್ನನಾಲಿಂಗನಂಗೆಯ್ದು ನನ್ನಕೈಯನು ಹಿಡಿದುಕೊಂಡು ಮನೆಗೆಕರೆದುಕೊಂಡುಹೋಗಿ ಅರ್ಘ್ಯಾದಿಗಳಿಂದ ಸತ್ಕರಿಸಿ ಕುಳ್ಳಿರಿಸಿಕೊಂಡು ಕಂಸನದುರಾಲೋಚನೆಗಳಂ ಕೇಳುವನೇ ||೨೩||ಎಂಬುದಾಗಿ ಶ್ರೀಕೃಷ್ಣನನ್ನೇ ಚಿಂತಿಸುತ ಶ್ವಫಲ್ಕಪುತ್ರನಾದ ಅಕ್ರೂರನು ಮಾರ್ಗದಲ್ಲಿ ಬಂದವನಾಗಿ ರಥದಿಂದ ಗೋಕುಲಕ್ಕೆ ಬಂದನು. ಸೂರ್ಯಾಸ್ತಮಯವುಂ ಆದುದು ||೨೪|| ಆಯಕ್ರೂರನು ಸಮಸ್ತಲೋಕಪಾಲಕರ ಕಿರೀಟಂಗಳಿಂದ ಪಡೆಯಲ್ಪಟ್ಟ ಪಾದರೇಣುಗಳುಳ್ಳ, ಶ್ರೀಕೃಷ್ಣನ ಸುಬಂಧಿಗಳಾದ, ಭೂಮಿಗೆ ಭೂಷಣಂಗಳಾದ, ಪದ್ಮರೇಖೆಗಳಿಂದಲೂ ಯವರೇಖೆಗಳಿಂದಲೂ ಅಂಕುಶರೇಖೆಗಳಿಂದಲೂ ಮೊದಲಾದರೇಖೆಗಳಿಂದ ಅಂಕಿತಂಗಳಾದ, ಹೆ

ಹ್ಲಾದವಿವೃದ್ಧಸಂಭ್ರಮಃ ಪ್ರೇಮ್ಣೋರ್ಧ್ವರೋಮಾಶ್ರುಕಲಾಕುಲೇಕ್ಷಣಃ । ರಥಾದವಸ್ಕಂದ್ಯಸತೇಷ್ವಚೇಷ್ಟತಪ್ರಭೋರಮೂನ್ಯಂಘ್ರಿರಜಾಂಸ್ಯಹೋಇತಿ ‖೨೬‖ ದೇಹಂಭೃತಾಮಿಯಾನರ್ಥೋಹಿತ್ವಾದಂಭಂಭಯಂಶುಚಂ । ಸಂದೇಶಾದ್ಯೋಹರೇರ್ಲಿಂಗದರ್ಶನಶ್ರವಣಾದಿಭಿಃ ‖೨೭‖ ಚಿರಮಾವೇಷ್ಟ್ಯಚೋತ್ಥಾಯರಥಮಾರುಹ್ಯವೇಗತಃ । ಕ್ವಾತಿಷ್ಠತಿಗವೇಶಾನಃಕೃಷ್ಣೋರಾಮಇತಿಬ್ರುವನ್ ‖೨೮‖ ಗೋಷ್ಠಮಧ್ಯಇತಿಶ್ರುತ್ವಾತರುಸ್ಥೈರ್ಗೋಪದಾರಕೈಃ । ಕೃಷ್ಣಸಂದರ್ಶನಾಕಾಂಕ್ಷೀಪ್ರಕಾಶೇಸವಿತುಸ್ಸತಿ ‖೨೯‖ ದದರ್ಶರಾಮಂಕೃಷ್ಣಂಚವ್ರಜೇಗೋದೋಹನಂಗತೌ । ಪೀತನೀಲಾಂಬರಧರೌಶರ

---

ಅಮಲ-ನಿರ್ಮಲವಾದ, ಪಾದರೇಣೋಃ-ಚರಣಧೂಳಿಯುಳ್ಳ, ತಸ್ಯ-ಆಕೃಷ್ಣನ, ಅಬ್ಜಯವಾಂಕುಶಾದ್ಯೈಃ-ಅಬ್ಜ-ಕಮಲರೇಖೆ, ಯವ-ಧಾನ್ಯರೇಖೆ, ಅಂಕುಶ-ಅಂಕುಶರೇಖೆ, ಆದ್ಯೈಃ-ಮೊದಲಾದಮಹಾಪುರುಷಚಿಹ್ನಗಳಿಂದ, ವಿಲಕ್ಷಿತಾನಿ-ಕೂಡಿದವುಗಳಾದ್ದರಿಂದಲೇ, ಕ್ಷಿತಿಕೌತುಕಾನಿ-ಭೂಮಿಗೆಅಲಂಕಾರಗಳಾಗಿರುವ, ಅಥವಾ ಭೂಮಿಯಲ್ಲಿ ನೋಡಲ್ಪಡತಕ್ಕವುಗಳಾಗಿರುವ, ಪದಾನಿ, ಅಡಿಯೂರಿದಹೆಜ್ಜೆಗುರುತ್ತುಗಳನ್ನು, ದದರ್ಶ-ಕಂಡನು‖೨೫‖ತದ್ದ.....ಸಂಭ್ರಮಃ-ತತ್-ಆಶ್ರೀಕೃಷ್ಣಚರಣಗಳ, ದರ್ಶನ-ಸಾಕ್ಷಾತ್ಕಾರದಿಂದಾದ, ಆಹ್ಲಾದ-ಸಂತೋಷದಿಂದ, ವಿವೃದ್ಧ-ವಿಶೇಷವಾಗಿಬೆಳದ, ಸಂಭ್ರಮಃ ಉಲ್ಲಾಸವುಳ್ಳವನೂ, ಪ್ರೇಮ್ಣಾ-ಸ್ನೇಹದಿಂದ, ಊರ್ಧ್ವರೋಮ-ನಿಗುಡಿದಕೂದಲುಳ್ಳವನಾಗಿಯೂ, ಅಶ್ರುಕಲಾಕುಲೇಕ್ಷಣಃ-ಅಶ್ರು-ಕಂಣೀರ್ಗಳ, ಕಲಾ-ಲೇಶಗಳಿಂದ, ಆಕುಲ- ವ್ಯಾಪ್ತಗಳಾದ, ಈಕ್ಷಣಃ-ಕಂಗಳುಳ್ಳವನೂಆದ, ಸಃ-ಆಯಕ್ರೂರನು, ರಥಾತ್-ತಾನುಕುಳಿತಿದ್ದತೇರಿನಿಂದ, ಅವಸ್ಕಂದ್ಯ-ಕೆಳಗಿಳಿದು,ಪ್ರಭೋಃ-ಸಮರ್ಥನಾದಕೃಷ್ಣನ, ಅಂಘ್ರಿರಜಾಂಸಿ- ಚರಣಧೂಳಿಗಳು,ಅಮೂನಿ-ಇವು, ಅಹೋ-ಆಶ್ಚರ್ಯವು. ಇತಿ-ಇಂತೆಂದುಕೊಂಡು, ತೇಷು-ಆಹೆಜ್ಜೆಗಳಲ್ಲಿ, ಅಚೇಷ್ಟತ-ಹೊರಳಿದನು‖೨೬‖ ಹರೇಃ-ಕೃಷ್ಣನ, ಲಿಂಗದರ್ಶನಶ್ರವಣಾದಿಭಿಃ-ಲಿಂಗ, ಗುರ್ತುಗಳ, ದರ್ಶನ-ಕಾಣುವಿಕೆ, ಶ್ರವಣ-ಕೇಳುವಿಕೆ, ಆದಿಭಿಃ-ಮುಂತಾದವುಗಳಿಂದ, ದಂಭಂ-ಗರ್ವವನ್ನೂ, ಭಯಂ-ಹೆದರಿಕೆಯನ್ನೂ, ಶುಚಂ-ಶೋಕವನ್ನೂ, ಹಿತ್ವಾ-ಬಿಟ್ಟು-ಸಂದೇಶಾದ್ಯಃ-ಕಂಸನಅಪ್ಪಣೆಯೇಆದಿಯಾಗಿಉಳ್ಳ, ಅರ್ಥಃ-ಪ್ರಯೋಜನವು, ಯಾವುದೋ ಅದು, ದೇಹಂಭೃತಾಂ-ದೇಹಧಾರಿಗಳಾದಪ್ರಾಣಿಗಳ, ಅರ್ಥಃ-ಪ್ರಯೋಜನವು, ಇಯಾನೇವ-ಇಷ್ಟರದೆ(ಜನ್ಮವೆತ್ತಿದ್ದಕ್ಕೆ ಗರ್ವಭಯಶೋಕಂಗಳಂತೊರೆದು ಹರಿಗುಣ ಶ್ರವಣಾದಿಗಳಂಮಾಡುವುದೇಪ್ರಯೋಜನವು.ಅಮಕಂಸನಅಪ್ಪಣೆಯಾದ್ದುಮೊದಲುನನಗುಂಟಾಯಿತೆಂದುಫಲಿತಾರ್ಥವು)‖೨೭‖ ಚಿರಂ-ಬಹುಕಾಲವು, ಆವೇಷ್ಟ್ಯ-ಪ್ರದಕ್ಷಿಣವಾಗಿಬಳಸುತಿದ್ದು, ಉತ್ಥಾಯ-ಎದ್ದು, ವೇಗತಃ-ಬೇಗದಿಂದ, ರಥಂ-ತೇರನ್ನು, ಆರುಹ್ಯ-ಏರಿ, ಗವೇಶಾನಃ-ಗೋಪಾಲಕನಾದ, ಕೃಷ್ಣಃ-ಕೃಷ್ಣನು, ರಾಮಃ-ರಾಮನು, ಕ್ವಾತಿಷ್ಠತಿ-ಎಲ್ಲಿದ್ದಾನೆ, ಇತಿ-ಹೀಗೆ, ಬ್ರುವನ್-ಹೇಳುತ್ತಿರುವನಾಗಿ ‖೨೮‖ತರುಸ್ಥೈಃ-ಗಿಡಗಳಲ್ಲಿರುವ, ಗೋಪದಾರಕೈಃ-ಗೊಲ್ಲರಹುಡುಗರಿಂದ, ಗೋಷ್ಠಮಧ್ಯೇ-ಗೋಕುಲದನಡುವೆ(ಇದ್ದಾನೆ)ಇತಿ-ಹೀಗೆ, ಶ್ರುತ್ವಾ-ಕೇಳಿ, ಸವಿತುಃ-ಸೂರ್ಯನ, ಪ್ರಕಾಶೇಸತಿ-ಬೆಳಕಾಗುತಲೂ, ಕೃಷ್ಣಸಂದರ್ಶನಾಕಾಂಕ್ಷೀ-ಶ್ರೀಕೃಷ್ಣನಂನೋಡುವುದರನ್ನು ಬಯಸುವನಾಗಿ ‖೨೯‖ವ್ರಜೇ-ಗೋಕುಲದಲ್ಲಿ, ಗೋದೋಹ

---

ಜ್ಜೆಗಳಂ ಗೋಷ್ಠದಲ್ಲಿ ಕಂಡನು ‖೨೫‖ ಅಕ್ರೂರನು ಆಹೆಜ್ಜೆಗಳ ದರ್ಶನದಿಂದ ಅಭಿವೃದ್ಧವಾದ ತ್ವರೆಯುಳ್ಳವನಾಗಿ ಪ್ರೇಮದಿಂ ರೋಮಾಂಚಿತನಾಗಿ ಆನಂದಬಾಷ್ಪ ಪೂರ್ಣವಾದ ನೇತ್ರಂಗಳುಳ್ಳವನಾಗಿ ಮುಕ್ತಿಪ್ರಭುವಾದ ಶ್ರೀಕೃಷ್ಣನ ಪಾದರಜಸ್ಸುಗಳು ಇವು ಎಂದು ಆಹೆಜ್ಜೆಗಳಲ್ಲಿ ಬಿದ್ದುಹೊರಳಿದನು ‖೨೬‖ ದಂಭವನ್ನೂ ಭಯವನ್ನೂ ಶೋಕವನ್ನೂಬಿಟ್ಟು ಅಕ್ರೂರನು ಕಂಸನ ಅಪ್ಪಣೆಯಿಂದ ಬಂದು ಭಗವಂತನದರ್ಶನಶ್ರವಣ ಕೀರ್ತನಂಗಳಿಂದಂಪರವಶನಾದನುಎಲೈಅರಸೇ! ಪ್ರಾಣಿಗಳಿಗೆಇದೇಪರಮಪುರುಷಾರ್ಥವು‖೨೭‖ ಈರೀತಿಯಲ್ಲಿ ಅಕ್ರೂರನು ಬಹಳಹೊತ್ತುಹೊರಳಿ ಎದ್ದು ರಥವನ್ನೇರಿಕೊಂಡು ಗೋಸಾಥನಾದ ರಾಮಕೃಷ್ಣರು ಎಲ್ಲಿರುವರೆಂದು ಕೇಳುತ್ತ ‖೨೮‖ ಗೋಸ್ಥಾನದಲ್ಲಿರುವರು ಎಂದುಗೋಪಾಲಕರಿಂದ ಹೇಳಲ್ಪಟ್ಟು ಸೂರ್ಯನು ಮೂಡಿಪ್ರಕಾಶಿಸುತ್ತಿರುವಲ್ಲಿ ಕೃಷ್ಣನನ್ನು ನೋಡುವ ಅಪೇಕ್ಷೆಯುಳ್ಳವನಾಗಿ ಶೀಘ್ರವಾಗಿ ಗೋವುಗಳು ಕರೆಯುವಸ್ಥಾನಕ್ಕೆ ಹೋಗಿ ರಾಮಕೃಷ್ಣರಂ ಕಂಡನು ‖೨೯‖ (ಆಕೃಷ್ಣರಾಮರು ಎಂತಿಯುವ

ದಂಬುರುಹೇಕ್ಷಣೌ ॥೩೦॥ ಕಿಶೋರೌಶ್ಯಾಮಲಶ್ವೇತೌಶ್ರೀನಿಕೇತೌಬೃಹದ್ಭುಜೌ । ಸುಮುಖೌಸುಂ
ದರವರೌಬಾಲದ್ವಿರದವಿಕ್ರಮೌ ॥೩೧॥ ಧ್ವಜವಜ್ರಾಂಕುಶಾಂಭೋಜೈಶ್ಚಿಹ್ನಿತೈರಂಘ್ರಿಭಿರ್ವ್ರಜಂ ।
ಶೋಭಯಂತೌಮಹಾತ್ಮಾನೌಸಾನುಕ್ರೋಶಸ್ಮಿತೇಕ್ಷಣೌ ॥೩೨॥ ಉದಾರರುಚಿರಕ್ರೀಡೌಸ್ರಗ್ವಿಣೌ

---

ಸಂ-ಹಾಲುಕರೆಯುವಕೆಲಸವನ್ನು, ಗತೌ-ಹೊಂದಿರುವ, ರಾಮಂಕೃಷ್ಣಂಚ-ರಾಮನನ್ನೂ ಕೃಷ್ಣನನ್ನೂ, ದದರ್ಶ-ಕಂಡನು (ಅವರುಯೆಂತವರೆಂದರೆ-) ಪೀತನೀಲಾಂಬರಧರೌ-ಹಸುರುಡಿಗೆಯನ್ನೂ ಕಪ್ಪುಡಿಗೆಯನ್ನೂ ಹೊಂದಿರುವರು. ಶರಪಂಬುರುಹೇಕ್ಷಣೌ-ಶರತ್ಕಾಲದ ತಾವರೆಯಂತಿರುವ ಕಂಗಳುಳ್ಳವರು ॥೩೦॥ ಕಿಶೋರೌ-ಹುಡುಗರು, ಶ್ಯಾಮಲಶ್ವೇತೌ-ಕಪ್ಪಾಗಿಯೂ ಬಿಳುಪಾಗಿಯೂ ಇರುವರು, ಶ್ರೀನಿಕೇತೌ-ಸಂಪತ್ತಿಗೆಮನೆಯಾಗಿರುವರು. ಬೃಹದ್ಭುಜೌ-ದೊಡ್ಡತೋಳುಗಳುಳ್ಳವರು-ಸುಮುಖೌ-ಚನ್ನಾದಮೋರೆಯುಳ್ಳವರು ಸುಂದರವರೌ-ಚಲುವರಲ್ಲಿಶ್ರೇಷ್ಠರು, ಬಾಲದ್ವಿರದವಿಕ್ರಮೌ-ಮರಿಯಾನೆಗಳಂತೆ ನಡಿಕೆಯುಳ್ಳವರು ॥೩೧॥ ಧ್ವಜವಜ್ರಾಂಕುಶಾಂಭೋಜೈಃ-ಧ್ವಜರೇಖೆ ಕುಲಿಶರೇಖೆ ಅಂಕುಶರೇಖೆ ಪದ್ಮರೇಖೆಗಳಿಂದ, ಚಿಹ್ನಿತೈಃ-ಗುರ್ತುಮಾಡಲ್ಪಟ್ಟ, ಅಂಘ್ರಿಭಿಃ-ಅಡಿಗಳಿಂದ, ವ್ರಜಂ-ಗೋಕುಲವನ್ನು, ಶೋಭಯಂತೌ-ಬೆಳಗುತಲಿರುವರು. ಮಹಾತ್ಮಾನೌ-ಮಹಾಪುರುಷರು. ಸಾನುಕ್ರೋಶಸ್ಮಿತೇಕ್ಷಣೌ-ದಯಾಸಹಿತವಾದ ನಗೆಯುಳ್ಳ ನೋಟಗಳುಳ್ಳವರು ॥೩೨॥ಉದಾರರುಚಿರಕ್ರೀಡೌ-ಘಾಗಾಳವಾಗಿಯೂ ಸೊಗಸಾಗಿಯೂಇರುವ ಆಟಗಳುಳ್ಳವರು.ಸ್ರಗ್ವಿಣೌ-ಹಾರಗಳುಳ್ಳವರು. ವನಮಾಲಿನೌ-ತುಳಸಿಯ ದಂಡೆಗಳುಳ್ಳವರು, ಪುಣ್ಯಗಂಧಾನುಲಿಪ್ತಾಂಗೌ-ಪವಿತ್ರವಾದಪರಿಮಳದಿಂದ ಬಳಿಯಲ್ಪಟ್ಟಮೈಯುಳ್ಳವರು. ಸ್ನಾತೌ-

---





ರಾಮ ಕೃಷ್ಣ ಅಕ್ರೂರನು

ಕೆಂದರೆ) ಪೀತಾಂಬರವನ್ನೂ ನೀಲಾಂಬರವನ್ನೂ ಧರಿಸಿರುವ, ಶರತ್ಕಾಲದ ಚಂದ್ರನಂತೆ ಸುಂದರಂಗಳಾದ ನೇತ್ರಂಗಳುಳ್ಳವರು ॥೩೦॥ ಬಾಲಕರಾದವರು, ಶ್ಯಾಮಶ್ವೇತವರ್ಣಂಗಳುಳ್ಳವರು, ಮತ್ತು ಶೋಭನವಾದ ಮುಖವುಳ್ಳವರು, ಅತಿಸುಂದರರು, ಆನೆಮರಿಗಳಂತೆ ಪರಾಕ್ರಮವುಳ್ಳವರು ॥೩೧॥ ಧ್ವಜವಜ್ರಾಂಕುಶ ಪದ್ಮರೇಖೆಗಳುಳ್ಳ ಪಾದನ್ಯಾಸಂಗಳಿಂದ ವ್ರಜವಂಶೋಭಿಸುವಂತೆ ಮಾಡುವರು, ದಯಾರ್ದ್ರವಾದ ಮುಗುಳುನಗೆಯಿಂದ ಯುಕ್ತವಾದ ನೇತ್ರವುಳ್ಳವರು, ಮಹಾತ್ಮರಾದವರು ॥೩೨॥ ಉತ್ಕೃಷ್ಟವಾದ ರಮ್ಯವಾದ ವಿಹಾರಕ್ರೀಡೆಯುಳ್ಳವರು, ಹಾರ ವನಮಾಲೆಗಳಿಂದಲಂಕೃತರಾದವರು, ದಿವ್ಯವಾದ ಗಂಧದಿಂದ ಲಿಪ್ತವಾದ ಶರೀರವು

ವನಮಾಲಿನೌ । ಪುಣ್ಯಗಂಧಾನುಲಿಪ್ತಾಂಗೌ ಸ್ನಾತೌ ವಿರಜವಾಸಸಾ ॥೩೩॥ ಪ್ರಧಾನಪುರುಷಾವಾ
ದ್ಯೌ ಜಗದ್ಧೇತೂ ಜಗತ್ಪತೀ । ಅವತೀರ್ಣೌ ಜಗತ್ಯರ್ಥೇ ಸ್ವಾಂಶೇನ ಬಲಕೇಶವೌ ॥೩೪॥ ದಿಶೋ ವಿತಿಮಿ
ರಾ ರಾಜನ್ ಕುರ್ವಾಣೌ ಪ್ರಭಯಾ ಸ್ವಯಾ । ಯಥಾ ಮರಕತಃ ಶೈಲೋ ರೌಪ್ಯಶ್ಚ ಕನಕಾಚಿತೌ ॥೩೫॥
ರಥಾತ್ತೂರ್ಣಮವಪ್ಲುತ್ಯ ಸೋಽಕ್ರೂರಸ್ಸ್ನೇಹವಿಹ್ವಲಃ । ಪಪಾತ ಚರಣೋಪಾಂತೇ ದಂಡವದ್ರಾಮ
ಕೃಷ್ಣಯೋಃ ॥೩೬॥ ಭಗವದ್ದರ್ಶನಾಹ್ಲಾದಬಾಷ್ಪಪರ್ಯಾಕುಲೇಕ್ಷಣಃ । ಪುಲಕಾಚಿತಾಂಗ ಔತ್ಕಂ
ಠ್ಯಾತ್ಸ್ವಾಖ್ಯಾನೇ ನಾಶಕನ್ನೃಪ ॥೩೭॥ ಭಗವಾಂಸ್ತದಭಿಪ್ರೇತ್ಯ ರಥಾಂಗಾಂಕಿತಪಾಣಿನಾ । ಪರಿರೇಭೇ
ಽಭ್ಯುಪಾಕೃಷ್ಯ ಪ್ರೀತಃ ಪ್ರಣತವತ್ಸಲಃ ॥೩೮॥ ಸಂಕರ್ಷಣಶ್ಚ ಪ್ರಣತಮುಪಗೂಹ್ಯ ಮಹಾಮನಾಃ

---

ಪಿಂದಿರುವವರು. ವಿರಜವಾಸಸೌ-ಚಲುವೆಯಾದಬಟ್ಟೆಗಳುಳ್ಳವರು ॥೩೩॥ ಪ್ರಧಾನಪುರುಷೌ-ಮುಖ್ಯಾತ್ಮರಾಗಿರುವವರು ಆದ್ಯಾ-
ಮೊದಲನೆಯವರಾಗಿರುವವರು. ಜಗದ್ಧೇತೂ-ಪ್ರಪಂಚಕ್ಕೆ ಕಾರಣವಾಗಿರುವವರು. ಜಗತ್ಪತೀ-ಪ್ರಪಂಚಕ್ಕೊಡೆಯರಾಗಿರುವರು,
ಜಗತ್ಯರ್ಥೇ-ಭೂದೇವಿಗೋಸುಗ, ಸ್ವಾಂಶೇನ-ತಮ್ಮ ಕಲೆಯಿಂದ, ಬಲಕೇಶವೌ-ರಾಮಕೃಷ್ಣರಾಗಿ, ಅವತೀರ್ಣೌ-ಅವತರಿ
ಸಿಹುಟ್ಟಿದವರು ॥೩೪॥ ರಾಜನ್-ಪರೀಕ್ಷಿತ್ತುವೇ! ಸ್ವಯಾಪ್ರಭಯಾ-ತಮ್ಮ ಕಾಂತಿಯಿಂದ, ಕನಕಾಚಿತೌ-ಭಂಗಾರಗಳಿಂದ ವ್ಯಾ
ಪ್ತಗಳಾದ, ಮರಕತಶ್ಶೈಲಃ-ಪಚ್ಚೆಗಳಗುಡ್ಡವೂ, ರೌಪ್ಯಶ್ಚ-ಬೆಳ್ಳಿಯಬೆಟ್ಟವೂ, ಯಥಾ-ಹೇಗೋ, ತಥಾ-ಹಾಗೆ, ದಿಶಃ-ದೆಸೆಗ
ಳನ್ನು, ವಿತಿಮಿರಾಃ-ಕತ್ತಲೆಹರಿದುಹೋದವುಗಳನ್ನಾಗಿ, ಕುರ್ವಾಣೌ-ಮಾಡುತಲಿರುವವರನ್ನು,(ನೋಡಿ) ॥೩೫॥ ಸೋಽಕ್ರೂರಃ-
ಆಯಕ್ರೂರನು, ತೂರ್ಣಂ-ಬೇಗನೆ, ರಥಾತ್-ಬಂಡಿಯಿಂದ, ಅವಪ್ಲುತ್ಯ-ಧುಮ್ಮಿಕ್ಕಿ, ಸ್ನೇಹವಿಹ್ವಲಃ-ಪ್ರೀತಿಯಿಂಪರವಶ
ನಾದ್ದರಿಂದಲೇ, ರಾಮಕೃಷ್ಣಯೋಃ-ಬಲಕೇಶವರ, ಚರಣೋಪಾಂತೇ-ಪಾದಗಳಬಳಿಯಲ್ಲಿ, ದಂಡವತ್-ಕೋಲಿನಹಾಗೆ, ಪ
ಪಾತ-ಬಿದ್ದನು ॥೩೬॥ ನೃಪ-ಅರಸೇ, ಭಗ......ಕ್ಷಣಃ-ಭಗವತ್-ಈಶ್ವರರಾರಾದಮಕೃಷ್ಣರ, ದರ್ಶನ-ಸಾಕ್ಷಾತ್ಕಾರದಿಂದಾದ,
ಆಹ್ಲಾದ-ಆನಂದದ, ಬಾಷ್ಪ-ಉದಕದಿಂದ, ಪರ್ಯಾಕುಲ-ವ್ಯಾಪ್ತವಾದ, ಈಕ್ಷಣಃ-ದೃಷ್ಟಿಯುಳ್ಳವನೂ, ಪುಲಕಾಚಿತಾಂಗಃ-ನಿ
ಗುಡುಗೂದಲ್ಗಳಿಂದ ವ್ಯಾಪ್ತವಾದಮೈಯುಳ್ಳವನೂ ಆದ್ದರಿಂದ, ಔತ್ಕಂಠ್ಯಾತ್-ಅತ್ಯಾಸಕ್ತಿಯಿಂದ, ಸ್ವಾಖ್ಯಾನೇ-ತನ್ನ ಹೆಸ
ರುಹೇಳಿಕೊಳ್ಳುವುದರಲ್ಲಿ, ನಾಶಕತ್-ಸಮರ್ಥನಾಗಲಿಲ್ಲ ॥೩೭॥ ಭಗವಾನ್-ಕೃಷ್ಣನು, ತತ್-ಅದರನ್ನು, ಅಭಿಪ್ರೇತ್ಯ-ತಿಳಿದು,
ಪ್ರಣತವತ್ಸಃ-ಸಾಷ್ಟಾಂಗವೆರಗಿದವರಲ್ಲಿ ದಯೆಯುಳ್ಳವನಾದ್ದರಿಂದಲೇ, ಪ್ರೀತಃ-ಪ್ರಿಯನಾಗಿ, ರಥಾಂಗಾಂಕಿತಪಾಣಿನಾ-
ಚಕ್ರಚಿಹ್ನಿತವಾದ ಹಸ್ತದಿಂದ, ಅಭ್ಯುಪಾಕೃಷ್ಯ-ಮುಂದಕ್ಕೆಳೆಕೊಂಡು, ಪರಿರೇಭೇ-ಅಪ್ಪಿಕೊಂಡನು ॥೩೮॥ ಮಹಾಮನಾಃ-
ಉದಾರಬುದ್ಧಿಯುಳ್ಳ, ಸಂಕರ್ಷಣಶ್ಚ-ಬಲರಾಮನೂಕೂಡ, ಪ್ರಣತಂ-ಸಮಸ್ಕರಿಸಿದ ಅಕ್ರೂರನನ್ನು, ಉಪಗೂಹ್ಯ-ಅಪ್ಪಿ
ಕೊಂಡು, ಪಾಣಿನಾ-ತನ್ನ ಕೈಯಿಂದ, ಪಾಣೀ-ಅವನ ಕೈಗಳನ್ನೂ, ಗೃಹಿತ್ವಾ-ಹಿಡಕೊಂಡು, ಸಾನುಜಃ-ತಮ್ಮನೊಡನೆಸ

---

ಳ್ಳವರು, ಸ್ನಾತರಾಗಿ ಮಡಿಗಳಂ ಧರಿಸಿದವರು ॥೩೩॥ ಪ್ರಧಾನರಾದ ಆದಿಪುರುಷರಾದವರು, ಜಗತ್ಪತಿಗಳಾ
ದವರು, ಜಗತ್ತಿಗೆ ಸೃಷ್ಟಿಕರ್ತೃಗಳಾದವರು, ಭೂರಕ್ಷಣಾರ್ಥವಾಗಿ ಅಂಶದಿಂದ ಅವತರಿಸಿದವರು ॥೩೪॥
ತಮ್ಮ ಕಾಂತಿಗಳಿಂದ ದಿಕ್ಕುಗಳ ಅಂಧಕಾರವಂ ಪರಿಹರಿಸುವವರು, ಮರಕತಪರ್ವತವೂ ರಜತಪರ್ವತವೂ ಸು
ವರ್ಣಯುಕ್ತವಾಗಿದ್ದಂತೆ ಇರುವವರು ॥೩೫॥ [ಇಂತಾರಾಮಕೃಷ್ಣರನ್ನು ಕಂಡವನಾಗಿ] ಅನಂತರದಲ್ಲಿ ಆ
ಯಕ್ರೂರನು ರಥದಿಂದ ಧುಮ್ಮಿಕ್ಕಿ ಸ್ನೇಹದಿಂದ ಪರವಶನಾಗಿ ಆರಾಮ ಕೃಷ್ಣರ ಚರಣಂಗಳ ಸಮೀಪದಲ್ಲಿ
ದಂಡಾಕಾರವಾಗಿ ಬಿದ್ದನು ॥೩೬॥ ಭಗವಂತನ ದರ್ಶನದಿಂದುಂಟಾದ ಆಹ್ಲಾದನದಿಂದ ಆನಂದಬಾಷ್ಪಗಳಿಂ
ದ ತುಂಬಿದ ನೇತ್ರಂಗಳುಳ್ಳವನಾಗಿ, ರೋಮಾಂಚಿತ ದೇಹವುಳ್ಳವನಾಗಿ, ಕುತೂಹಲದಿಂದ ಪರವಶನಾಗಿ,
ನಾನು ಅಕ್ರೂರನೆಂದು ಹೇಳುವುದಕ್ಕೂ ತೋರದೆ ಇದ್ದನು, ಎಲೈರಾಯನೇ! ॥೩೭॥ ಭಗವಂತನಾದ ಶ್ರೀ
ಕೃಷ್ಣನು ಆಯಕ್ರೂರನಂ ಬಂದನೆಂದು ತಿಳಿದು ಚಕ್ರಾಯುಧದಿಂದ ಅಂಕಿತವಾದ ಹಸ್ತದಿಂದ ಪ್ರೇಮ
ಗೊಂಡವನಾಗಿ ಪ್ರಣತವತ್ಸಲನಾಗಿ ಅಕ್ರೂರನಂ ಚಾಚಿ ಅಪ್ಪಿಕೊಂಡನು ॥೩೮॥ ಬಲರಾಮನು ನಮಸ್ಕರಿಸಿ
ದ ಅಕ್ರೂರನಂ ಭುಜಂಗಳಿಂದ ಅಪ್ಪಿಕೊಂಡು ಅವನಕೈಯಂ ಹಿಡಿದುಕೊಂಡು ಕೃಷ್ಣಸಮೇತನಾಗಿ ತಮ್ಮ

ಗೃಹೀತ್ವಾಪಾಣಿನಾಪಾಣೀಅನಯತ್ಸಾನುಜೋಗೃಹಂ ‖೩೯‖ ಪೃಷ್ಟ್ವಾಥಸ್ವಾಗತಂತಸ್ಮೈನಿವೇ
ದ್ಯಚವರಾಸನಂ । ಪ್ರಕ್ಷಾಳ್ಯವಿಧಿವತ್ಪಾದೌಮಧುಪರ್ಕಾರ್ಹಣಮಾಹರತ್ ‖೪೦‖ ನಿವೇದ್ಯಗಾಂಚಾತಿ
ಥಯೇಸಂವಾಹ್ಯಶ್ರಾಂತಮಾದೃತಃ । ಅನ್ನಂಬಹುಗುಣಂಮೇಧ್ಯಂಶ್ರದ್ಧಯೋಪಾಹರತ್ಪ್ರಭುಃ‖೪೧‖
ತಸ್ಮೈಭುಕ್ತವತೇಪ್ರೀತ್ಯಾರಾಮಃಪರಮಧರ್ಮವಿತ್ । ಮುಖವಾಸೈರ್ಗಂಧಮಾಲ್ಯೈಃಪರಾಂಪ್ರೀ
ತಿಂವ್ಯಧಾತ್ಪುನಃ ‖೪೨‖ ಪಪ್ರಚ್ಛಸತ್ಕೃತಂನಂದಃಕಥಂಸ್ಥನಿರನುಗ್ರಹೇ । ಕಂಸೇಜೀವತಿದಾಶಾ
ರ್ಹಸೌನಪಾಲಾಇವಾವಯಃ ‖೪೩‖ಯೋವಧೀತ್ಸ್ವಸ್ವಸುಸ್ತೋಕಾನ್ಕ್ರೋಶಂತ್ಯಾಅಸುತೃಪ್ಖಲಃ‖
ಕಿಂನುಸ್ವಿತ್ತತ್ಪ್ರಜಾನಾಂವಃಕುಶಲಂವಿಮೃಶಾಮಹೇ ‖೪೪‖ ಇತ್ಥಂಸೂನೃತಯಾವಾಚಾನಂದೇನ

---

ಹಿತನಾಗಿ, ಗೃಹಂ-ಮನೆಯನ್ನು, ಅನಯತ್-ಹೊಂದಿಸಿದನು ‖೩೯‖ಅಥ-ಆಮೇಲೆ, ಸ್ವಾಗತಂ-ಸುಖವಾಗಿಬಂದಿರಾ ಎಂಬಕು
ಶಲವನ್ನು, ಪೃಷ್ಟ್ವಾ-ಕೇಳಿ, ತಸ್ಮೈ-ಅವನಿಗೆ, ವರಾಸನಂಚ-ಶ್ರೇಷ್ಠವಾದಗದ್ದುಗೆಯನ್ನೂ, ನಿವೇದ್ಯ-ಅರ್ಪಿಸಿ, ವಿಧಿವತ್-
ಧರ್ಮಶಾಸ್ತ್ರಪ್ರಕಾರ, ಪಾದೌಪ್ರಕ್ಷಾಳ್ಯ-ಕಾಲುತೊಳೆದು, ಮಧುಪರ್ಕಾರ್ಹಣಂ-ಮಧುಪರ್ಕವೆಂಬ ಸವಿಯೂಟಕ್ಕೆ ತಕ್ಕದ್ರವ್ಯ
ನ್ನು, ಆಹರತ್-ತಂದನು ‖೪೦‖ಅತಿಥಯೇ-ಬಳಲಿಬಂದಪೂಜ್ಯನಿಗೆ, ಗಾಂಚ-ಗೋವನ್ನೂ, ನಿವೇದ್ಯ-ಅರ್ಪಿಸಿ, ಶ್ರಾಂತಂ-ಬಳ
ಲಿದವನನ್ನು, ಆದೃತಃ-ಅಕ್ಕರೆಯುಳ್ಳವನಾಗಿ, ಸಂವಾಹ್ಯ-ಮೈಕೈಕಾಲುಗಳಂಹಿಸಿಕಿ, ಪ್ರಭುಃ-ಸಮರ್ಥನಾದ್ದರಿಂದ, ಬಹು
ಗುಣಂ-ಮಡಿ ರುಚಿ ಸುಖೋಷ್ಣ ಮೊದಲಾದ ಹಲವುಗುಣಗಳುಳ್ಳ, ಮೇಧ್ಯಂ-ಪರಿಶುದ್ಧವಾದ, ಅನ್ನಂ-ಆಹಾರದ್ರವ್ಯವನ್ನು,
ಶ್ರದ್ಧಯಾ-ಅವಶ್ಯಮಾಡತಕ್ಕದ್ದೆಂಬನಿರ್ಣಯದಿಂದ, ಉಪಾಹರತ್-ತಂದರ್ಪಿಸಿದನು‖೪೧‖ ಪರಮಧರ್ಮವಿತ್-ಉತ್ತಮವಾದ
ಪುಣ್ಯವನ್ನುಬಲ್ಲವನಾದ, ರಾಮಃ-ಬಲರಾಮನು, ಭುಕ್ತವತೇ-ಉಂಡವನಾದ, ತಸ್ಮೈ-ಆಯಕ್ರೂರನಿಗೆ, ಪ್ರೀತ್ಯಾ-ಪ್ರೇಮ
ದೊಡನೆ, ಮುಖವಾಸೈಃ-ಯಾಲಕ್ಕಿಲವಂಗಮೊದಲಾದ ಮುಖಪರಿಮಳದ್ರವ್ಯಗಳಿಂದಲೂ, ಗಂಧಮಾಲ್ಯೈಃ-ಪರಿಮಳದ್ರವ್ಯಗ
ಳಿಂದಲೂ, ಪುಷ್ಪಮಾಲಿಕೆಗಳಿಂದಲೂ, ಪರಾಂ-ಉತ್ಕೃಷ್ಟವಾದ, ಪ್ರೀತಿಂ-ಪ್ರಿಯವನ್ನು, ವ್ಯಧಾತ್-ವಿಶೇಷವಾಗಿಮಾಡಿದನು.
ಪುನಃ-ಮರಳಿಯೂ ‖೪೨‖ನಂದಃ-ನಂದಗೋಪನು, ಸತ್ಕೃತಂ-ಉಪಚರಿಸಲ್ಪಟ್ಟ ಆಕ್ರೂರನಂಕುರಿತು, ಪಪ್ರಚ್ಛ-ಕೇಸ
ಗೊಂಡನು, ಹೇದಾಶಾರ್ಹ-ಎಲೈಯಕ್ರೂರನೇ! ನಿರನುಗ್ರಹೇ-ದಯೆಯಿಲ್ಲದ, ಕಂಸೇ-ಕಂಸನು, ಜೀವತಿಸತಿ-ಬದುಕಿರಲಾಗಿ, ಸೌ
ನಪಾಲಾಃ-ಕಟುಕರವನೇಪಾಲಕನಾಗಿವುಳ್ಳ, ಅವಯಃಇವ-ಕುರಿಗಳಹಾಗೆ, ಕಥಂಸ್ಥ-ಹೇಗೆಬದುಕಿರುವಿ? ‖೪೩‖ ಅಸುತೃಪ್-ಪ್ರಾ
ಣಘಾತಕನಾದ, ಖಲಃ-ದುಷ್ಟನಾದ, ಯಃ-ಯಾವಕಂಸನು, ಕ್ರೋಶಂತ್ಯಾಃ-ಅಳುತಲಿರುವ, ಸ್ವಸ್ವಸುಃ-ತನ್ನತಂಗಿಯ,
ತೋಕಾನ್-ಮಕ್ಕಳನ್ನು, ಅವಧೀತ್-ಕೊಂದನೋ, ತತ್ಪ್ರಜಾನಾಂ-ಅಂತವನಿಗೊಕ್ಕಲಾದ, ವಃ-ನಿಮ್ಮ, ಕುಶಲಂ-ಕ್ಷೇಮ
ವನ್ನು, ಕಿನ್ನುಸ್ವಿತ್‌ವಿಮೃಶಾಮಹೇ-ಏನೆಂದುವಿಚಾರಿಸುವೆವು? ‖೪೪‖ಇತ್ಥಂ-ಹೀಗೆ, ಸೂನೃತಯಾ-ಸತ್ಯವಾದ, ವಾಚಾ-ಪ್ರಿ

---

ಮನೆಗೆ ಕರೆದುಕೊಂಡು ಹೋದನು ‖೩೯‖ ಆಮೇಲೆ ಆ ಯಕ್ರೂರನಂ ಕ್ಷೇಮಸಮಾಚಾರವಂಕೇಳಿ ಪೀಠವಂ
ಕೊಟ್ಟು ಶಾಸ್ತ್ರೋಕ್ತವಾಗಿ ಪಾದಪ್ರಕ್ಷಾಳನಂಗೆಯ್ದು ಮಧುಪರ್ಕೋಪಚಾರವಂಮಾಡಿ ‖೪೦‖ ಗೋವಂ
ಸಮರ್ಪಿಸಿ, ಮಾರ್ಗಶ್ರಾಂತನಾದ ಆಯಕ್ರೂರನಂ ಆದರದಿಂದ ಕಾಲುಗಳನೊತ್ತಿ, ಷಡ್ರಸೋಪೇತವಾದ
ದಿವ್ಯಾನ್ನವಂ ಭೋಜನವಂ ಮಾಡಿಸಿದನು ‖೪೧‖ ಅನಂತರದಲ್ಲಿ ಬಲರಾಮನು ಪರಮಧರ್ಮಜ್ಞನಾದ ಕಾರ
ಣದಿಂ ಮುಖವಾಸನಾರ್ಥಂಗಳಾದ ತಾಂಬೂಲಂಗಳಿಂದಲೂ ಗಂಧಮಾಲ್ಯಂಗಳಿಂದಲೂ ಪ್ರೀತಿಯಂಪುಟ್ಟಿಸು
ತ ಉಪಚರಿಸಿದನು ‖೪೨‖ ಈರೀತಿಯಲ್ಲಿ ಅಕ್ರೂರನಂಕುರಿತು ನಂದನು ಪ್ರಶ್ನಂಗೆಯ್ದಂ- ಎಲೈ ಅಕ್ರೂರನೇ
ದಯಾಶೂನ್ಯನಾದ ಕಂಸನು ಜೀವಿಸುತ್ತಿರಲಾಗಿ ಅವನವಶದಲ್ಲಿ ನೀವುಹೇಗೆಇರುವಿರಿ? ಕಟಕರಸವಿಾಪದಲ್ಲಿ
ಮೇಕೆಗಳು ಜೀವಿಸುವಂತೆ ಜೀವಿಸುವಿರಯ್ಯಾ ‖೪೩‖ ದುರ್ಜನನಾದ ಸ್ವಪ್ರಾಣರಕ್ಷಣದಲ್ಲಿಯೇ ಉದ್ಯುಕ್ತ
ನಾದ ಆಕಂಸನು ತಂಗಿಯಾದ ದೇವಕೀದೇವಿಯ ಮಕ್ಕಳಂ ಸಂಹರಿಸಿದನು . ಅವನಪ್ರಜೆಗಳಾದ ನಿಮ್ಮಕ್ಷೇ
ಮವಂ ಏನುಹೇಳುವ ‖೪೪‖ ಎಂದು ನಂದಗೋಪನಾಡಿದ ಸತ್ಯವಾಕ್ಯದಿಂದ ಬಹುಮಾನಿತನಾದ ಆಯಕ್ರೂರನು

ಸುಸಭಾಜಿತಃ | ಅಕ್ರೂರಃಪರಿಪೃಷ್ಟೇನಜಹಾವಧ್ವಪರಿಶ್ರಮಂ| |೪೫|

ಇತಿಶ್ರೀಮದ್ಭಾಗವತೆ ದಶಮಸ್ಕಂಧೆ ಅಷ್ಟತ್ರಿಂಶೋಽಧ್ಯಾಯಃ

ಶ್ರೀಶುಕಃ|| ಸುಖೋಪವಿಷ್ಟಃಪರ್ಯಂಕೆರಾಮಕೃಷ್ಣೋರುಮಾನಿತಃ | ಲೆಭೆಮನೋರಥಾನ್ಸರ್ವಾನ್ ಪಥಿಯಾನ್ಸಚಕಾರಹ |೧|| ಕಿಮಲಭ್ಯಂಭಗವತಿಪ್ರಸನ್ನೆಶ್ರೀನಿಕೆತನೆ |ತಥಾಪಿತತ್ಪರಾರಾಜನ್ನಹಿ

---

ವಚನದಿಂದ, ಪರಿಪೃಷ್ಟೇನ-ಕುಶಲಪ್ರಶ್ನದಿಂದ, ನಂದೇನ-ನಂದಗೋಪನಿಂದ,ಸುಸಭಾಜಿತಃ-ಚನ್ನಾಗಿಉಪಚರಿಸಲ್ಪಟ್ಟ, ಅಕ್ರೂರಃ-ಅಕ್ರೂರನು, ಅಧ್ವಪರಿಶ್ರಮಂ-ಮಾರ್ಗಾಯಾಸವನ್ನು, ಜಹೌ-ತೊರೆದನು ||೪೫||

ಇತಿಶ್ರೀಮದ್ಭಾಗವತೇ ದಶಮಸ್ಕಂಧೇ

ಅಷ್ಟತ್ರಿಂಶೋಧ್ಯಾಯಃ-

೩೯ನೆಯಅಧ್ಯಾಯದ ಪ್ರತಿಪದಟೀಕೆ.

[ ಶುಕವಾಕ್ಯವು. ]ಪರ್ಯಂಕೇ-ಮಂಚದಲ್ಲಿ, ಸುಖೋಪವಿಷ್ಟಃ-ಅನಾಯಾಸದಿಂದಕುಳಿತವನಾಗಿ, ರಾಮಕೃಷ್ಣೋರುಮಾನಿತಃ-ರಾಮಕೃಷ್ಣರಿಂದ ಅಧಿಕವಾಗಿ ಸನ್ಮಾನಿಸಲ್ಪಟ್ಟ,ಸಃ-ಆಯಕ್ರೂರನು, ಪಥಿ-ದಾರಿಯಲ್ಲಿ, ಯಾನ್ಮನೋರಥಾನ್-ಯಾವಬಯಕೆಗಳನ್ನು, ಚಕಾರಹ-ಮಾಡಿಕೊಂಡಿದ್ದನೋ, ತಾನ್ಸರ್ವಾನ್-ಅವುಗಳೆಲ್ಲವನ್ನೂ, ಲೆಭೇ-ಹೊಂದಿದನು ||೧|| ರಾಜನ್-ಅರಸನೇ! ಶ್ರೀನಿಕೇತನೇ-ಲಕ್ಷ್ಮಿಗೆಮನೆಯಾಗಿರುವ, ಭಗವತಿ-ನಾರಾಯಣನು, ಪ್ರಸನ್ನೇಸತಿ-ಅಭಿಮುಖನಾಗುತ್ತಿರಲು, ಅಲಭ್ಯಂಕಿಂ-ದೊರೆಯದೇಇರುವುದೇನಿದೆ? ತಥಾಪಿ-ಹಾಗೆಸರ್ವವೂ ದೊರೆಯತಕ್ಕದ್ದಾದರೂ, ತತ್ಪರಾಃ-ಆಭಗ

---

ಮಾರ್ಗಶ್ರಮವನೆಲ್ಲವಂ ಬಿಟ್ಟು ಸಂತೋಷಯುಕ್ತನಾದನು || |೪೫| |+

ಇಂತು ಶುಕಮುನಿಯು ಪರೀಕ್ಷಿದ್ರಾಯನಿಗೆ ನಿರೂಪಿಸಿದನೆಂದು ಸೂತಪೌರಾಣಿಕನು ನೈಮಿಶಾರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಹೇಳಿದನೆಂಬಲ್ಲಿಗೆ-ಶ್ರೀಮನ್ಮಹೀಶೂರಪುರವರಾಧೀಶ ಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜ ವಿರಚಿತವಪ್ಪ, ಶ್ರೀ ಭಾಗವತದ "ಶ್ರೀಕೃಷ್ಣರಾಜ ವಾಣೀವಿಲಾಸವು" ಎಂಬ ಕರ್ಣಾಟಕ ಭಾಷಾವ್ಯಾಖ್ಯಾನದಲ್ಲಿ ದಶಮಸ್ಕಂಧಮೊಳು ೩೮-ನೆಯ ಅಧ್ಯಾಯವು ಸಂಪೂರ್ಣವಾದುದು

ಮಂಗಳಮಸ್ತು

೩೯ನೆಯ ಅಧ್ಯಾಯವು.

ಶ್ರೀಧರೀಯಶ್ಲೋಕಃ|| ನವತ್ರಿಂಶೇಪುರೀಂಗಚ್ಛತ್ಯಚ್ಯುತೇಗೋಪಿಕೋಕ್ತಯಃ | ಅಕ್ರೂರೇಣಾಥ ಕಾಳಿಂದ್ಯಾಂವಿಷ್ಣುಲೋಕಸ್ಯದರ್ಶನಂ |+| ಮೂವತ್ತೊಂಭತ್ತನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ಗೋಕುಲದಿಂದ ಮಧುರಾಪುರಮಂ ಕುರಿತು ತೆರಳುತ್ತಿರಲಾಗಿ ಕೃಷ್ಣವಿರಹ ತಪ್ತರಾದ ಗೋಪಸ್ತ್ರೀಯರುಗಳು ನಾನಾಪ್ರಕಾರವಾಗಿ ಪ್ರಳಾಪಮಂ ಗೆಯ್ದರೆಂಬ ಅರ್ಥವು ಅನಂತರದಲ್ಲಿ ಅಕ್ರೂರನು ಭಗವಂತನಿಂದ ತೋರಿಸಲ್ಪಟ್ಟ ವಿಷ್ಣುಲೋಕವಂ ಯಮುನಾನದಿಯಲ್ಲಿ ಕಂಡನು ಎಂಬಅರ್ಥವಂ, ಸಹ ಶುಕಾಚಾರ್ಯನು ಪರೀಕ್ಷಿದ್ರಾಯನಂ ಕುರಿತು ನಿರೂಪಿಸುವನದೆಂತೆನೆ:--

ಎಲೈಅರಸೇ! ಅನಂತರದಲ್ಲಿಅಕ್ರೂರನುಮಂಚದಮೇಲೆಕುಳಿತುಕೊಂಡು, ರಾಮಕೃಷ್ಣರಿಂದ ಬಹುಮಾನಿತನಾಗಿ ಮಾರ್ಗದಲ್ಲಿ ಬರುವಾಗಯಾವಯಾವ ಮನೋರಥವನಾಲೋಚಿಸಿದನೋ, ಅವೆಲ್ಲವನೆಯ್ದಿದನು||೧|| ಶ್ರೀನಿವಾಸನಾ

ವಾಂಛಂತಿ ಕಿಂಚನ ||೨|| ಸಾಯಂತನಾಶನಂ ಕೃತ್ವಾ ಭಗವಾನ್ ದೇವಕೀಸುತಃ | ಸುಹೃತ್ಸು ವೃತ್ತಿಂ ಕಂಸಸ್ಯ ಪಪ್ರಚ್ಛಾನ್ಯಚ್ಚಿಕೀರ್ಷಿತಂ ||೩|| ಶ್ರೀಭಗವಾನುವಾಚ || ತಾತ ಸೌಮ್ಯಾಗತಃ ಕಂಸಾತ್ ಸ್ವಾಗತಂ ಭದ್ರಮಸ್ತು ವಃ | ಅಪಿ ಸ್ವಜ್ಞಾತಿಬಂಧೂನಾಮನಮೀವಮನಾಮಯಂ ||೪|| ಕಿನ್ನು ನಃ ಕುಶಲಂ ಪೃಚ್ಛೇ ಏಧಮಾನೇ ಕುಲಾಮಯೇ | ಕಂಸೇ ಮಾತುಲನಾಮ್ನ್ಯಂಗ ಸ್ವಾನಾಂ ನಸ್ತತ್ಪ್ರಜಾಸು ವೈ ||೫|| ಅಹೋ ಅಸ್ಮದಭೂದ್ಭೂರಿ ಪಿತ್ರೋರ್ವೃಜಿನಮಾರ್ಯಯೋಃ | ಯದ್ಧೇತೋಃ ಪುತ್ರಮರಣಂ ಯದ್ಧೇತೋರ್ಬಂಧನಂ ತಯೋಃ ||೬|| ದಿಷ್ಟ್ಯಾದ್ಯ ದರ್ಶನಂ ಸ್ವಾನಾಂ ಮಹ್ಯಂ ವಃ ಸೌಮ್ಯ ಕಾಂಕ್ಷಿತಂ | ಸಂಜಾತಂ ವರ್ಣ್ಯತಾಂ ತಾತ ತವಾಗಮನಕಾರಣಂ ||೭|| ಶ್ರೀಶುಕಃ || ಪೃಷ್ಟೋ ಭಗವತಾ ಸರ್ವಂ ವರ್ಣಯಾಮಾಸ

---

ವಂತನಲ್ಲಿ ಆಸಕ್ತರಾದ ಭಕ್ತರು, ಕಿಂಚನ-ಕೊಂಚವನ್ನಾದರೂ, (ಯಾವುದೊಂದನ್ನೂ) ನವಾಂಛಂತಿಹಿ-ಬಯಸುವುದಿಲ್ಲವಷ್ಟೆ? ||೨|| ಭಗವಾನ್-ಐಶ್ವರ್ಯವುಳ್ಳ, ದೇವಕೀಸುತಃ-ಕೃಷ್ಣನು, ಸಾಯಂತನಾಶನಂ-ರಾತ್ರಿ ಭೋಜನವನ್ನು, ಕೃತ್ವಾ-ಮಾಡಿ, ಸುಹೃತ್ಸು-ಒಳ್ಳೇಮನಸ್ಸುಳ್ಳವರ ವಿಷಯದಲ್ಲಿ, ಕಂಸಸ್ಯ-ಕಂಸನ, ವೃತ್ತಿಂ-ನಡತೆಯನ್ನೂ, ಅನ್ಯತ್-ಇತರವಾದ, ಚಿಕೀರ್ಷಿತಂ-ಮಾಡಲೆಳಸಿದ ಯೋಚನೆಯನ್ನೂ, ಪಪ್ರಚ್ಛ-ಬೆಸಗೊಂಡನು ||೩|| [ಭಗವತ್ಪ್ರಶ್ನವು] ಸೌಮ್ಯ-ಶಾಂತನಾದ, ತಾತ-ಅಪ್ಪಾ! ಕಂಸಾತ್-ಕಂಸನಕಡೆಯಿಂದ ಆಗತಃ-ಬಂದವನಾದೆಯಾ? ಸ್ವಾಗತಂ-ಸುಖವಾಗಿಬರೋಣವಾಯಿತೇ? ವಃ-ನಿಮಗೆ, ಭದ್ರಂ-ಶುಭವು, ಅಸ್ತು-ಆಗಲಿ, ಸ್ವಜ್ಞಾತಿಬಂಧೂನಾಮಪಿ-ನಮ್ಮದಾಯಾದರಿಗೂ ನಂಟರಿಗೂ ಕೂಡ, ಅನಮೀವಂ-ಪಾಪಘಟನೆಯಿಲ್ಲವೋ? ಅನಾಮಯಂ-ಆರೋಗ್ಯವೇ ಹೇಗೆ? ||೪|| ಅಂಗ-ಪ್ರಿಯನಾದ ಅಕ್ರೂರನೇ! ನಃ-ನಮ್ಮ-ಕುಲಾಮಯೇ-ಜಾತಿಗೇ ಅಥವಾ ವಂಶಕ್ಕೆ ರೋಗರೂಪನಾಗಿರುವ, ಮಾತುಲನಾಮ್ನಿ-ಸೋದರಮಾವನೆಂಬ ಹೆಸರುಳ್ಳ, ಕಂಸೇ-ಕಂಸನು, ಏಧಮಾನೇ ಸತಿ-ವೃದ್ಧಿಹೊಂದುವನಾಗುತ್ತಿರಲಾಗಿ, ತತ್ಪ್ರಜಾಸು-ಅವನ ಪ್ರಜೆಗಳಲ್ಲಿ ಇಷ್ಟಮಿತ್ರಬಂಧುಗಳ, ಕುಶಲಂ-ಕ್ಷೇಮವನ್ನು, ವೈ-ಪ್ರಸಿದ್ಧವಾಗಿ, ಕಿನ್ನುಪೃಚ್ಛೇ-ಏನು ಕೇಳಲಿ ||೫|| ಯದ್ಧೇತೋರಪಿ-ಯಾರನಿಮಿತ್ತದಿಂದ, ತಯೋಃ-ಅವರಿಗೆ, ಬಂಧನಂ-ಸೆರೆಯೂ, ಪುತ್ರಮರಣಂ-ಮಕ್ಕಳಸಾಯೋಣವೂ, ಸಂಭವಿಸಿತೋ, ಅಂಥಾ, ಅಸ್ಮತ್-ನಮ್ಮದೆಸೆಯಿಂದ, ಆರ್ಯಯೋಃ-ಪೂಜ್ಯರಾದ, ಪಿತ್ರೋಃ-ತಾಯಿತಂದೆಗಳಿಗೆ, (ದೇವಕೀವಸುದೇವರಿಗೆ) ಭೂರಿವೃಜಿನಂ-ಬಹಳಕಷ್ಟವು, ಅಭೂತ್-ಆಯಿತು, ಅಹೋ-ಅಯ್ಯೋ! ||೬|| ಹೇಸೌಮ್ಯ-ಎಲೈಶಾಂತನೇ! ಮಮ-ನನಗೆ, ಸ್ವಾನಾಂ-ನನ್ನವರಿಗೂ, ಕಾಂಕ್ಷಿತಂ-ಬೇಕಾಗಿದ್ದ, ವಃ-ನಿಮ್ಮ, ದರ್ಶನಂ-ನೋಡುವಿಕೆಯು, ಅದ್ಯ-ಈಗ, ಸಂಜಾತಂ-ಉಂಟಾದದ್ದು, ದಿಷ್ಟ್ಯಾ-ಶುಭವಾಯಿತು (ದೈವಯೋಗದಿಂದಲೇ) ತವ-ನಿನ್ನ, ಆಗಮನಕಾರಣಂ ತಾವತ್-ಬರುವಿಕೆಗೆ ನಿಮಿತ್ತವಾದರೋ, ವರ್ಣ್ಯತಾಂ-ವರ್ಣಿಸಲ್ಪಡಲಿ ||೭|| [ಶುಕವಾ

---

ದ ಭಗವಂತನು ಪ್ರಸನ್ನನಾದರೆ ಯಾವುದು ದುರ್ಲಭವಾಗುವುದು, ಆದರೂ ಭಗವದ್ಭಕ್ತರು ಏನನ್ನೂ ಅಪೇಕ್ಷಿಸುವುದಿಲ್ಲ ||೨|| ಭಗವಂತನಾದ ದೇವಕೀಪುತ್ರನಾದ ಕೃಷ್ಣನು ರಾತ್ರಿಭೋಜನವಂ ಮಾಡಿ ಅಕ್ರೂರನ ಸಮೀಪದಲ್ಲಿ ಕುಳಿತುಕೊಂಡು ಕಂಸನಿಗೆ ಮಿತ್ರರಲ್ಲಿರುವ ನಡತೆಯೂ ಇನ್ನೂ ಅವನ ಮನೋರಥಂಗಳಾದ ದುರಾಲೋಚನೆಗಳನ್ನೆಲ್ಲವಂ ತಿಳಿಯಲೋಸುಗ ಪ್ರಶ್ನಂಗೆಯ್ದನು ||೩|| ಅದೆಂತೆನೆ-ಎಲೈ, ಅಪ್ಪಾ! ಸೌಮ್ಯನಾದ ಅಕ್ರೂರನೇ! ಕ್ಷೇಮದಿಂ ಬರುವಿಕೆಯಾದುದೇ? ನಿನಗೆ ಕ್ಷೇಮವಾಗಲಿ, ನಿನ್ನ ಜ್ಞಾತಿಬಂಧುಗಳು ಕ್ಷೇಮದಲ್ಲಿರುವರೇ? ||೪|| ಅಥವಾ ನಮ್ಮ ನಿಮ್ಮ ಕ್ಷೇಮವಂ ವಿಚಾರಿಸಕೆಲಸವಿಲ್ಲ, ನಮ್ಮ ವಂಶಕ್ಕೆ ಮಹಾರೋಗಸ್ವರೂಪನಾದ ಕಂಸನು ನಮಗೆ ಸೋದರಮಾವನೆನಿಸಿಕೊಂಡು ವರ್ಧಮಾನನಾಗಿರುವಲ್ಲಿ ನಮ್ಮ ಸ್ವಜನರಿಗೂ ಪ್ರಜೆಗಳಿಗೂ ಸಹ ಕ್ಷೇಮವೆಂತು ಉಂಟಾಗುವುದು? ||೫|| ಶ್ರೇಷ್ಠರಾದ ನಮ್ಮ ಮಾತಾಪಿತರಾದ ದೇವಕೀವಸುದೇವರಿಗೆ ನಮ್ಮ ನಿಮಿತ್ತವಾಗಿ ಏನು ವಿಪತ್ತು ಬಂದುದು? ಪುತ್ರಮರಣವೂ ಬಂಧನವೂ ನಮ್ಮ ನಿಮಿತ್ತವಾಗಿ ಪ್ರಾಪ್ತವಾದುದು ||೬|| ಎಲೈ ಸೌಮ್ಯನಾದ ಅಕ್ರೂರನೇ! ದೈವಕೃಪೆಯಿಂದ ಬಹುಕಾಲದಿಂದ ಅಪೇಕ್ಷಿತರಾದ ಸ್ವಜನರಾದ ನಿಮ್ಮ ದರ್ಶನವು ಈದಿನದಲ್ಲಿ ಉಂಟಾದುದು, ನೀನು ಬಂದ ಕಾರ್ಯವಂ ಹೇಳು ||೭|| ಎಂದು ಭಗವಂತನಿಂದ ಕೇಳಲ್ಪಟ್ಟ ಮಧುವಂಶೋತ್ಪನ್ನನಾದ ಅಕ್ರೂರನು ಯಾದವರಲ್ಲಿ ವೈರಾನುಬಂಧವನ್ನೂ ವಸುದೇವನಲ್ಲಿ ಸಂ

ಮಾಧವಃ । ವೈರಾನುಬಂಧಂಯದುಷುವಸುದೇವವಧೋದ್ಯಮಂ ॥೮॥ ಯತ್ಸಂದೇಶೋಯದರ್ಥಂವಾ ದೂತಸ್ಸಂಪ್ರೇಷಿತಸ್ಸ್ವಯಂ । ಯದುಕ್ತಂನಾರದೇನಾಸ್ಯಸ್ವಜನ್ಮಾನಕದುಂದುಭೇಃ ॥೯॥ ಶ್ರುತ್ವಾಕ್ರೂರವಚಃಕೃಷ್ಣೋಬಲಶ್ಚಪರವೀರಹಾ । ಪ್ರಹಸ್ಯನಂದಂಪಿತರಂರಾಜ್ಞಾದಿಷ್ಟಂವಿಜಜ್ಞತುಃ ॥೧೦॥ ಗೋಪಾನ್ಸಮಾದಿಶತ್ಸೋಪಿಗೃಹ್ಯತಾಂಸರ್ವಗೋರಸಃ । ಉಪಾಯನಾನಿಗೃಹ್ಣೀಧ್ವಂ ಯುಜ್ಯಂತಾಂಶಕಟಾನಿಚ ॥೧೧॥ ಯಾಸ್ಯಾಮಃಶ್ವೋಮಧುಪುರೀಂದಾಸ್ಯಾಮೋನೃಪತೇರಸಾನ್ । ದ್ರಕ್ಷ್ಯಾಮಸ್ಸುಮಹತ್ಸತ್ರಂಯಾಂತಿಜಾನಪದಾಃಕಿಲ ॥೧೨॥ ಶುಕಃ ॥ ಏವಮಾಘೋಷಯತ್ಕ್ಷತ್ತ್ರಾನಂದ

---

ಕ್ಯವು.] ಭಗವತಾ-ಕೃಷ್ಣನಿಂದ, ಪೃಷ್ಟಃ-ಕೇಳಲ್ಪಟ್ಟ, ಮಾಧವಃ-ಮಧುವಿನವಂಶದಲ್ಲಿ ಹುಟ್ಟಿದವನಾದ ಅಕ್ರೂರನು, ಸರ್ವಂ-ಎಲ್ಲವನ್ನೂ, ವರ್ಣಯಾಮಾಸ-ಬಣ್ಣಿಸಿಹೇಳಿದನು. ಯದುಷು-ಯಾದವರಲ್ಲಿ, ವೈರಾನುಬಂಧಂ-ದ್ವೇಷವುಂಟಾದ್ದನ್ನೂ, ವಸುದೇವವಧೋದ್ಯಮಂ-ವಸುದೇವನನ್ನು ಕೊಲ್ಲುವುದಕ್ಕೆ ಮಾಡಿದಪ್ರಯತ್ನವನ್ನೂ ॥೮॥ ಸ್ವಯಂ-ತಾನು, ಯತ್ಸಂದೇಶಃ-ಯಾವನ ಆಜ್ಞೆಯುಳ್ಳವನಾಗಿ, ಯದರ್ಥಂವಾ-ಯಾವಕಾರ್ಯಕ್ಕೋಸ್ಕರವಾದರೂ, ದೂತಃ-ಆಳಾಗಿ, ಸಂಪ್ರೇಷಿತಃ-ಕಳುಹಿಸಲ್ಪಟ್ಟನೋ, ಅದರನ್ನೂ, ಅಸ್ಯ-ಈಕಂಸನಿಗೆ, ನಾರದೇನ-ನಾರದನಿಂದ, ಯತ್-ಯಾವುದು, ಉಕ್ತಂ-ಹೇಳಲ್ಪಟ್ಟಿತೋ ತತ್-ಆ, ಆನಕದುಂದುಭೇಃಸ್ವಜನ್ಮ-ವಸುದೇವನಡೆಯಿಂದ ಕೃಷ್ಣನಜನನವನ್ನೂ ॥೯॥ ಅಕ್ರೂರವಚಃ-ಅಕ್ರೂರನಮಾತನ್ನು, ಶ್ರುತ್ವಾ-ಕೇಳಿ, ಪ್ರಹಸ್ಯ-ಹೆಚ್ಚಾಗಿನಕ್ಕು, ಪರವೀರಹಾ-ಶತ್ರುಗಳಾದ ಶೂರರನ್ನೂ ಕೊಲ್ಲುವಂಥಾ, ಕೃಷ್ಣೋಬಲಶ್ಚ-ಕೃಷ್ಣನೂರಾಮನೂ, ಪಿತರಂ-ತಂದೆಯಾದ, ನಂದಂ-ನಂದಗೋಪನನ್ನು ಕುರಿತು, ರಾಜ್ಞಃ-ದೊರೆಯಾದಕಂಸನ, ಉದ್ದಿಷ್ಟಂ-ಆಲೋಚನೆಯನ್ನು, ವಿಜಜ್ಞತುಃ-ವಿಶೇಷವಾಗಿ ಅರಿಕೆಮಾಡಿದರು ॥೧೦॥ ಸೋಪಿ-ಆನಂದಗೋಪನೂಕೂಡ, ಗೋಪಾನ್-ಗೊಲ್ಲರನ್ನು, ಸಮಾದಿಶತ್-ಆಜ್ಞಾಪಿಸಿದನು. ಸರ್ವಗೋರಸಃ-ಸಕಲವಿಧವಾದ ಗೋರಸವು (ಹಾಲು ಬೆಣ್ಣೆ ತುಪ್ಪ ಮೊಸರು) ಗೃಹ್ಯತಾಂ-ತೆಗೆದುಕೊಳ್ಳಲ್ಪಡಲಿ. ಉಪಾಯನಾನಿ-ಕಾಣಿಕೆಗಳನ್ನು, ಗೃಹ್ಣೀಧ್ವಂ-ತಕ್ಕೊಳ್ಳಿರಿ. ಶಕಟಾನಿಚ-ಬಂಡಿಗಳೂಕೂಡ, ಯುಜ್ಯಂತಾಂ-ಹೂಡಲ್ಪಡಲಿ ॥೧೧॥ ಶ್ವಃ-ನಾಳೆ, ಮಧುಪುರೀಂ-ಮಧುರಾನಗರವಂಕುರಿತು, ಯಾಸ್ಯಾಮಃ-ಹೋಗುವೆವು. ನೃಪತೇಃ-ದೊರೆಗೆ, ರಸಾನ್-ಗವ್ಯಗಳನ್ನು, ದಾಸ್ಯಾಮಃ-ಕೊಡುವೆವು. ಸುಮಹತ್-ಬಹಳದೊಡ್ಡದಾದ, ಸತ್ರಂ-ಧನುರ್ಯಾಗವನ್ನು, ದ್ರಕ್ಷ್ಯಾಮಃ-ನೋಡುವೆವು. ಜಾನಪದಾಃ-ದೇಶದಲ್ಲಿರುವವರು, ಯಾಂತಿಕಿಲ-ಹೋಗುತ್ತಿರುವರಲ್ಲವೆ ॥೧೨॥ [ಶುಕವಾಕ್ಯವು] ನೃಪ-ಅರಸೇ! ನಂದಗೋಪಃ-ನಂದನು, ಸ್ವಗೋಕುಲೇ-ತನ್ನವ್ರಜದಲ್ಲಿ, ಕ್ಷತ್ತ್ರಾ-ಕ್ಷತ್ತನೆಂಬಗ್ರಾಮಾಧಿಕಾರಿಯಿಂದ, ಏವಂ-ಹೀಗೆ, ಆಘೋಷಯತ್-ಡಂಗೋರೆಹೊಡೆಯಿಸಿ ಸಾರಿಸಿದನು ತಾಃಗೋಪ್ಯಃ-ಕೃಷ್ಣನೇ ಪ್ರಾಣವಾಗಿಉಳ್ಳ ಆಗೊಲ್ಲತಿಯರು,

---

ಕಾರಪ್ರಯತ್ನವನ್ನೂ ವರ್ಣಿಸಿದನು ॥೮॥ ಇನ್ನೂ ಯಾವನಿಮಿತ್ತದಿಂದ ತನ್ನಂ ಕಳುಹಿಸಿದನೋ, ನಾರದಋಷಿಯಿಂದ ಕಂಸನಂ ಕುರಿತು ವಸುದೇವನಿಗೆ ಆದ ಪುತ್ರೋತ್ಪತ್ತಿಯುಹೇಗೆ ಹೇಳಲ್ಪಟ್ಟಿತೋ (ರಾಮಕೃಷ್ಣರ ಸಂಹಾರವಂ ಚಾಣೂರಾದಿಗಳಿಂದ ಮಾಡಿಸಬೇಕೆಂಬ ತಾತ್ಪರ್ಯ ವಾವುದಿರುದೋ, ಅವುಗನ್ನೆಲ್ಲವಂ ಶ್ರೀಕೃಷ್ಣನಿಗೆ ಅಕ್ರೂರನು) ವರ್ಣಿಸಿದನು ॥೯॥ ಆಪ್ರಕಾರವಾದ ಅಕ್ರೂರನ ವಾಕ್ಯವಂಕೇಳಿ ಕೃಷ್ಣರಾಮರು ಅನ್ಯೋನ್ಯವಾಗಿ ನಗುತ ಕಂಸನಿಂದ ಹೇಳಲ್ಪಟ್ಟ ಅರ್ಥವಂ ತಂದೆಯಾದ ನಂದನಂ ಕುರಿತು ವಿಜ್ಞಾಪಿಸಿದರು ॥೧೦॥ ಆಮಾತಂ ಕೇಳಿ ನಂದನು ಗೋಪರಿಗೆ ಆಜ್ಞಾಪಿಸಿದನು-ಎಲೈ ಗೋಪರುಗಳಿರಾ! ಸಮಸ್ತವಾದ ಹಾಲುಮೊಸರು ಬೆಣ್ಣೆ ತುಪ್ಪ ಮುಂತಾದವುಗಳಂ ತೆಗದುಕೊಂಡು ಕೈಗಾಣಿಕೆ ಪದಾರ್ಥವನ್ನೆಲ್ಲವಂ ಜೊತೆ ಮಾಡಿಕೊಳ್ಳಿರಿ. ನಿಮ್ಮನಿಮ್ಮ ಶಕಟಂಗಳಂ ಸಿದ್ಧಪಡಿಸಿಕೊಳ್ಳಿರಿ ॥೧೧॥ ನಾಳೆ ಮಧುರಾಪಟ್ಟಣಕ್ಕೆ ಹೋಗುವಿಕೆಯಾಗುವುದು, ಈವಸ್ತುಗಳೆ ನ್ನೆಲ್ಲವಂ ಅರಸಿಗೆ ಒಪ್ಪಿಸಬೇಕಾಗುವುದು, ಮಹತ್ತಾದ ಧನುರ್ಯಾಗವಂ ನೋಡುವ್ಯ ದೇಶದಲ್ಲಿರುವ ಜನರೆಲ್ಲರೂ ಬರುವರಂತೆ ॥೧೨॥ ಎಂಬುದಾಗಿ ನಂದನು ಪುರಾಧಿಕಾರಿಯಾದ ಕ್ಷತ್ರಕನ ಮುಖಾಂತರವಾಗಿ ಸಾರುವುದಕೆ ನಿಯಮಿಸಿದನು. ಗೋಪಸ್ತ್ರೀಯರುಗಳು ರಾಮಕೃಷ್ಣರಂ ಕರೆದು ಹೋಗುವುದಕಾಗಿ ಅಕ್ರೂರನುಬಂದು ಇರುವನು. ಎಂಬ ಆಯರ್ಥವಂಕೇಳಿ ಬಹುವಾಗಿದುಃಖಪಟ್ಟ

ಗೋಪಸ್ಯ ಗೋಕುಲೇ | ಗೋಪ್ಯಸ್ತಾಸ್ತದುಪಶ್ರುತ್ಯ ಬಭೂವುರ್ವ್ಯಥಿತಾ ನೃಪ | ರಾಮಕೃಷ್ಣೌ ಪುರೀಂ ನೇತುಮಕ್ರೂರಂ ವ್ರಜಮಾಗತಮ್ ||೧೩|| ಕಾಶ್ಚಿತ್ತತ್ಕೃತಹೃತ್ತಾಪಶ್ವಾಸಮ್ಲಾನಮುಖಶ್ರಿಯಃ | ಸ್ರಂಸದ್ದುಕೂಲವಲಯಕೇಶಬಂಧಾಶ್ಚ ಕಾಶ್ಚನ ||೧೪|| ಅನ್ಯಾಶ್ಚ ತದನುಧ್ಯಾನನಿವೃತ್ತಾಶೇಷವೃತ್ತಯಃ | ನಾಭ್ಯಜಾನನ್ನಿಮಂ ಲೋಕಮಾತ್ಮಲೋಕಂ ಗತಾ ಇವ ||೧೫|| ಸ್ಮರಂತ್ಯಶ್ಚಾಪರಾಃ ಶೌರೇರನುರಾಗಸ್ಮಿತೇರಿತಾಃ | ಹೃದಿಸ್ಪೃಶಶ್ಚಿತ್ರಪದಾ ಗಿರಸ್ಸಂಮುಮುಹುಃ ಸ್ತ್ರಿಯಃ ||೧೬|| ಗತಿಂ ಸುಲಲಿತಾಂ ಚೇಷ್ಟಾಂ ಸ್ನಿಗ್ಧಹಾಸಾವಲೋಕನಮ್ | ಶೋಕಾಪಹಾನಿ ಕರ್ಮಾಣಿ ಪ್ರೋದ್ದಾಮಚರಿತಾನಿ ಚ ||೧೭|| ಚಿಂತಯಂತ್ಯೋ ಮುಕುಂದಸ್ಯ ಭೀತಾ ವಿರಹಕಾತರಾಃ | ಸಮೇತಾಸ್ಸಂಘಶಃ ಪ್ರೋಚುರಶ್ರುಮುಖ್ಯೋ

---

ತತ್ ರಾಮಕೃಷ್ಣೌ-ಬಲರಾಮಕೃಷ್ಣರನ್ನು, ಪುರೀಂ ನೇತುಂ-ಮಧುರೆಯಂ ಕುರಿತು ಸೇರಿಸಲೋಸುಗ, ವ್ರಜಂ-ಗೋಕುಲವಂ ಕುರಿತು, ಅಕ್ರೂರಂ-ಅಕ್ರೂರನನ್ನು, ಆಗತಂ-ಬಂದವನನ್ನಾಗಿ, ಎಂಬುದನ್ನು, ಉಪಶ್ರುತ್ಯ ಕೇಳಿ ವ್ಯಥಿತಾಃ-ದುಃಖವುಂಟಾದವರು, ಬಭೂವುಃ-ಆದರು ||೧೩|| ಕಾಶ್ಚಿತ್-ಕೆಲವರು ಗೋಪಿಯರು, ತತ್ಕೃತ... .ಶ್ರಿಯಃ-ತ -ಆವಾರ್ತೆಯಂ ಕೇಳಿದ್ದರಿಂದ, ಕೃತ-ಮಾಡಲ್ಪಟ್ಟ, ಹೃತ್ತಾಪ-ಮನೋಜ್ವರದ, ಶ್ವಾಸ-ನಿಟ್ಟುಸಿರಿನಿಂದ, ಮ್ಲಾನ-ಬಾಡಿದ, ಮುಖಶ್ರೀಯಃ-ಮೋರೆಯಹೊಳಪುಳ್ಳವರಾದರು. ಕಾಶ್ಚನ-ಕೆಲವರು, ಸ್ರಂಸದ್ದುಕೂಲವಲಯಕೇಶಬಂಧಾಶ್ಚ-ಸ್ರಂಸ -ಜಾರುತಲಿರುವ, ದುಕೂಲ-ಸೀರೆಗಳೂ, ವಲಯ-ಕಡಗಗಳೂ, ಕೇಶಬಂಧಾಶ್ಚ-ತುರುಬುಗಳೂ ಉಳ್ಳವರಾದರು ||೧೪|| ಅನ್ಯಾಶ್ಚ-ಇತರೆಯರಾದರೋ, ತದನು.....ವೃತ್ತಯಃ-ತತ್-ಆಕೃಷ್ಣನ, ಅನುಧ್ಯಾನ-ಅನುಸಂಧಾನದಿಂದ, ನಿವೃತ್ತ-ಬಿಟ್ಟುಹೋದ, ಅಶೇಷವೃತ್ತಯಃ-ಸಕಲಬುದ್ಧಿಗಳೂ ಉಳ್ಳವರಾದ್ದರಿಂದಲೇ, ಆತ್ಮಲೋಕಂ-ವೈಕುಂಠವನ್ನು, ಗತಾ ಇವ-ಸೇರಿದವರಹಾಗೆ, ಇಮಂ ಲೋಕಂ-ಈಲೋಕವನ್ನು, ಮತ್ತು ಈದೇಹವನ್ನು ಕೂಡ, ನಾಭ್ಯಜಾನನ್-ತಿಳಿಯಲಿಲ್ಲವು (ಜೀವನ್ಮುಕ್ತರಹಾಗಿದ್ದರು) ||೧೫|| ಅಪರಾಃ-ಬೇರೆ, ಸ್ತ್ರಿಯಶ್ಚ-ಗೋಪಿಯರೂ, ಶೌರೇಃ-ಕೃಷ್ಣನ-ಅನುರಾಗಸ್ಮಿತೇರಿತಾಃ-ಅನುರಾಗ-ಅಕ್ಕರೆಯಿಂದಲೂ, ಸ್ಮಿತ-ಕಿರುನಗೆಯೊಡನೆಯೂ, ಈರಿತಾಃ-ನುಡಿಯಲ್ಪಟ್ಟವುಗಳಾದುದರಿಂದಲೇ, ಹೃದಿಸ್ಪೃಶಃ-ಮನಸ್ಸಿನಲ್ಲಿ ಸೋಂಕುತಲಿರುವ, ಚಿತ್ರಪದಾಃ-ಆಶ್ಚರ್ಯಪಾದಶಬ್ದಗಳುಳ್ಳ, ಗಿರಃ-ಮಾತುಗಳನ್ನು, ಸ್ಮರಂತ್ಯಃ-ನೆನಪುಗೊಳ್ಳುತ್ತಿರುವರಾಗಿ, ಸಂಮುಮುಹುಃ-ಮೋಹವನ್ನೈದಿದರು ||೧೬|| ಸುಲಲಿತಾಂ ಚೆನ್ನಾಗಿಯೂ ಕೋಮಲವಾಗಿಯೂ ಇರುವ, ಗತಿಂ-ನಡಿಕೆಯನ್ನು, ಚೇಷ್ಟಾಂ-ಆಟವನ್ನು, ಸ್ನಿಗ್ಧಹಾಸಾವಲೋಕನಂ-ಸ್ನೇಹದನಗೆಯುಳ್ಳ ನೋಟವನ್ನು, ಶೋಕಾಪಹಾನಿ-ದುಃಖಗಳಂ ಪರಿಹರಿಸುತಲಿರುವ, ಕರ್ಮಾಣಿ-ಕೆಲಸಗಳನ್ನು, ಪ್ರೋದ್ದಾಮಚರಿತಾನಿ ಚ-ಅತಿಶಯಗಳಾದ ಚರಿತ್ರಗಳನ್ನೂ ||೧೭|| ಚಿಂತಯಂತ್ಯಃ-ಮನನಂಗೆಯ್ಯುತಲಿರುವರಾದ್ದರಿಂದಲೇ, ಮುಕುಂದಸ್ಯ-ಕೃಷ್ಣನ, ವಿರಹಕಾತರಾಃ-ವಿಯೋಗದಿಂದ ಚಂಚಲರಾಗಿಯೂ, ಭೀತಾಃ ಹೆದರಿದವರಾಗಿಯೂ, ಸಂಘಶಃ-ಗುಂಪಾಗಿ, ಸಮೇತಾಃ-ಸೇರಿದವರಾಗಿಯೂ, ಅಚ್ಯುತಾಶಯಾಃ-ಕೃಷ್ಣನಲ್ಲಿ ಅಭಿಪ್ರಾಯವುಳ್ಳವರಾಗಿಯೂ, ಅಶ್ರುಮುಖ್ಯಃ-ಕಂಣೀರಮೋರೆಯುಳ್ಳವರಾಗಿಯೂ, ಪ್ರೋಚುಃ-ಅಧಿಕವಾಗಿ ಹೇಳಿದರು ||೧೮|| [ಗೋಪಿಯರವಾಕ್ಯಗಳು.] ಅಹೋ-ಆಹಾ! ವಿಧಾತಃ-ಸೃಷ್ಟಿಕರ್ತನಾ

---

ರು ||೧೩|| ಅದೆಂತೆನೆ-ಕೆಲವರು ಸ್ತ್ರೀಯರು ಆವೃತ್ತಾಂತವಂ ಕೇಳುವುದರಿಂದ ಉಂಟಾದ ಮನಸ್ತಾಪದಿಂದ ನಿಟ್ಟುಸುರುಗಳಂ ಬಿಡುತ್ತ ಬಳಲಿದ ಮುಖಕಾಂತಿಯುಳ್ಳವರಾದರು. ಕೆಲವರು ಸ್ತ್ರೀಯರು ಆಕೃಷ್ಣನನ್ನೇ ಧ್ಯಾನಿಸುವುದರಿಂದ ಸಮಸ್ತಗೃಹಕೃತ್ಯಂಗಳಂ ಮರೆತು ಈಭೂಲೋಕವನ್ನೇ ಮರೆತು ಕೃಷ್ಣಲೋಕವನೆಯ್ದಿದವರಂತೆ ಆದರು ||೧೫|| ಮತ್ತೆ ಕೆಲವರು ಸ್ತ್ರೀಯರು ಅನುರಾಗಪೂರ್ವಕವಾಗಿ ಮುಗುಳುನಗೆಯಿಂದಕೂಡಿ ಹೇಳಲ್ಪಟ್ಟ, ಮನಸ್ಸಿಗೆರಮ್ಯವಾದ ವಿಚಿತ್ರಪದಂಗಳುಳ್ಳ, ಶ್ರೀಕೃಷ್ಣನ ಮಾತುಗಳಂ ಸ್ಮರಿಸಿಕೊಂಡು ಮೂರ್ಛಿತರಾದರು ||೧೬|| ಶ್ರೀಕೃಷ್ಣನ ಒಯ್ಯಾರವಂ ಚೇಷ್ಟಾರೂಪವಾದ ವ್ಯಾಪಾರವಂ ಸ್ನೇಹಯುಕ್ತವಾದ ಸ್ಮಿತಪೂರ್ವಕವಾದ ನೋಟವಂ ಶೋಕಪರಿಹಾರ ಕರ್ಮಂಗಳಂ ಅತ್ಯಾಶ್ಚರ್ಯಕರವಾದ ಚರಿತ್ರಮಂ ಸಹ ||೧೭|| ಚಿಂತಿಸುವರಾಗಿ ವಿರಹಕ್ಕೆ ಭಯಪಟ್ಟು ಎಲ್ಲರೂ ಒಗ್ಗಟ್ಟಾಗಿಕೂಡಿ ಕೃಷ್ಣನಲ್ಲಿ ಲಗ್ನವಾದಮನವುಳ್ಳವರಾಗಿ ನೇತ್ರೋದಕಂಗಳಂ ಬಿಡುತ ಮಾತನಾಡಿದರು ||೧೮|| ಅದೆಂತೆನೆ-ಎಲೈಬ್ರಹ್ಮನೇ ! ನಿನಗೆ

ಚ್ಯುತಾಶಯಾಃ ॥೧೮॥ಗೋಪ್ಯಃ॥ ಅಹೋವಿಧಾತಸ್ತವನಕ್ವಚಿದ್ದಯಾಸಂಯೋಜ್ಯಮೈತ್ರ್ಯಾಪ್ರಣ
ಯೇನದೇಹಿನಃ । ತಾಂಶ್ಚಾಕೃತಾರ್ಥಾನ್ವಿಯುನಂಕ್ಷ್ಯಪಾರ್ಥಕಂವಿಚೇಷ್ಟಿತಂತೇರ್ಭಕಚೇಷ್ಟಿತಂ
ಯಥಾ॥೧೯॥ಯಸ್ತ್ವಂಪ್ರದರ್ಶ್ಯಾಸಿತಕುಂತಲಾವೃತಂಮುಕುಂದವಕ್ತ್ರಂಸುಕಪೋಲಮುನ್ನಸಂ
ಶೋಕಾಪನೋದಸ್ಮಿತಲೇಶಸುಂದರಂಕರೋಷಿಪಾರೋಕ್ಷ್ಯಮಸಾಧುತೇಕೃತಂ ॥೨೦॥ ಕ್ರೂರಸ್ತ್ವಮ
ಕ್ರೂರಸಮಾಖ್ಯಯಾಸ್ಮನಶ್ಚಕ್ಷುರ್ಹಿದತ್ತಂಹರಸೇಬತಾಜ್ಞವತ್ । ಯೇನೈಕದೇಶೇಖಿಲಸರ್ಗಸೌಷ್ಠ

---

ದ ಬ್ರಹ್ಮನೇ! ತವ-ನಿನಗೆ, ಕ್ವಚಿತ್-ಒಬ್ಬರಲ್ಲಿಯೂ, ದಯಾ-ಕರುಣೆಯು, ನ-ಇಲ್ಲವು-(ಏಕೆಂದರೆ)ಮೈತ್ರ್ಯಾ-ಸ್ನೇಹದಿಂದಲೂ ಪ್ರಣಯೇನ-ವಿಶ್ವಾಸದಿಂದಲೂ, ದೇಹಿನಃ-ಪ್ರಾಣಿಗಳನ್ನು, ಸಂಯೋಜ್ಯ-ಸೇರಿಸಿ, ಅಕೃತಾರ್ಥಾನ್-ಪ್ರಯೋಜನಗಳಂ, ಪಡೆಯದೆಯಿರುವ, ತಾಂಶ್ಚ-ಅವರನ್ನೂ ಕೂಡ, ವಿಯುನಂಕ್ಷಿ-ಅಗಲಿಸುವಿ. ತೇ-ನಿನ್ನ, ವಿಚೇಷ್ಟಿತಂ-ವ್ಯಾಪಾರವು, ಅರ್ಭಕ ಚೇಷ್ಟಿತಂಯಥಾ-ಹುಡುಗಾಟದಹಾಗೆ,ಅಪಾರ್ಥಕಂ-ಪ್ರಯೋಜನವಿಲ್ಲದ್ದು ॥೧೯॥ ಯಸ್ತ್ವಂ-ಯಾವನೀನು, ಅಸಿತಕುಂತಲಾವೃತಂ-ಕಪ್ಪಾದ ಮುಂಗುರುಳ್ಗಳಿಂ ಬಳಸಲ್ಪಟ್ಟ, ಸುಕಪೋಲಂ-ಸೊಗಸಾದ ಕೆನ್ನೆಗಳುಳ್ಳ, ಉನ್ನಸಂ-ತಕ್ಕಷ್ಟುಉದ್ಧವಾದ ಮೂಗುಳ್ಳ, ಶೋಕಾಪನೋದಸ್ಮಿತಲೇಶಸುಂದರಂ-ದುಃಖವಂಪೋಗೋಳಿಪ ಕಿರುನಗೆಯಿಂದ ಚಲುವಾದ, ಮುಕುಂದವಕ್ತ್ರಂ-ಕೃಷ್ಣನಮುಖವನ್ನು, ಪ್ರದರ್ಶ್ಯ-ಚನ್ನಾಗಿತೋರಿಸಿ, ಪಾರೋಕ್ಷ್ಯಂ-ಕಾಣಿಸದೇಇರುವುದನ್ನಾಗಿ, ಕರೋಷಿ-ಮಾಡುತಲಿರುವಿ. ತೇ-ನಿನ್ನಿಂದ, ಕೃತಂ-ಮಾಡಲ್ಪಟ್ಟದ್ದು, ಅಸಾಧು-ಸರಿಯಾದ್ದಲ್ಲವು ॥೨೦॥ಕ್ರೂರಃ-ಬಾಧಕನಾದ, ತ್ವಂ-ನೀನು, ಅಕ್ರೂರಸಮಾಖ್ಯಯಾ-ಅಕ್ರೂರನೆಂಬ ಹೆಸರಿನಿಂದ(ಬಂದು)ದತ್ತಂನಃಚಕ್ಷುಃ-ನಿನ್ನಿಂದಲೇ ಕೊಡಲ್ಪಟ್ಟಿರುವ ನಮ್ಮ ಕಂಣನ್ನು, ಅಜ್ಞವತ್-ಮೂಢನಹಾಗೆ, ಹರಸೇ-ಒಯ್ಯುವಿ, ಬತ-ಕಷ್ಟವು(ನಿನಗೆದತ್ತಾಪಹಾರದೋಷಬರುತ್ತಲ್ಲಾ-) ಯೇನ-

---







ಗೋಪಿಯರಚಿಂತೆ

ಸ್ವಲ್ಪವಾದರೂ ದಯೆಯಿಲ್ಲ, ಪ್ರಾಣಿಗಳನ್ನು ಮೈತ್ರಿಯಿಂದಲೂ ಅನುರಾಗದಿಂದಲೂ ಪರಸ್ಪರವಾಗಿ ಮೊದಲು ಕೂಡಿಸಿ, ಆಮೇಲೆ ಅವರಮನೋರಥಗಳು ಪೂರ್ತಿಯಾಗುವುದಕ್ಕೆ ಮೊದಲೇ ಅವರನಗಲಿಸಿಬಿಡುವಿ, ನಿನ್ನವ್ಯಾಪಾರವು ಬಾಲಚೇಷ್ಟೆಯಂತೆ ಇರುವುದು ॥೧೯॥ ಎಲೈ, ಬ್ರಹ್ಮನೇ! ನೀನು ಮಕರಕುಂಡಲಂಗಳಿಂದಅಲಂಕೃತವಾಗಿ ಸುಂದರಂಗಳಾದ ಕಪೋಲಂಗಳುಳ್ಳುದಾಗಿ ಉನ್ನತವಾದ ನಾಸಿಕವುಳ್ಳದುದಾಗಿ ಶೋಕಪರಿಹಾರಕವಾದ ಮುಗುಳುನಗೆಯಿಂದ ಸುಂದರವಾದ ಮುಕುಂದನ ಮುಖವಂ ಮುಂಚೆ ನಮಗೆತೋರಿಸಿ, ಈಗ ನಮ್ಮಕಣ್ಣುಗಳಿಗೆ ಇದಿರಾಗಿರದೆ ತಪ್ಪಿಹೋಗುವಂತೆ ಮಾಡುವಿ, ಇಂತಿಯ ಅಯುಕ್ತವ್ಯಾಪಾರಮಂ ನೀನು ಮಾಡಲ್ಬಾರದು ॥೨೦॥ ಎಲೈ ಬ್ರಹ್ಮನೇ! ಕ್ರೂರನಾದ ನೀನು ಅಕ್ರೂರನೆಂಬ ಹೆಸರಿಸಿಂದಬಂದು ನಿನ್ನಿಂದ ಕೊಡಲ್ಪಟ್ಟ ನೇತ್ರಂಗಳು ಅಪಹರಿಸುವಿ, ನಿನ್ನವ್ಯಾಪಾರವು ದತ್ತಾಪಹಾರರೂಪ ಮಾದುದು, ನಿನ್ನಿಂದಕೊ

ಮೆತ್ತ್ವದೀಯಮದ್ರಾಕ್ಷ್ಮವಯಂಮಧುದ್ವಿಷಃ ॥೨೧॥ ಸನಂದಸೂನುಃಕ್ಷಣಭಂಗಸೌಹೃದಸ್ಸಮೀ ಕ್ಷತೇನಸ್ಸ್ವಕೃತಾತುರಾಬತ । ವಿಹಾಯಗೇಹಾನ್ಸ್ವಜನಾನ್ಸುತಾನ್ಪತೀನ್ಸ್ವದಾಸ್ಯಮದ್ಧೋಪ ಗತ್ತಾನವಪ್ರಿಯಃ ॥೨೨॥ ಸುಖಂಪ್ರಭಾತಾರಜನೀಯಮಾಶಿಷಸ್ಸತ್ಯಾಬಭೂವುಃಪುರಯೋಷಿತಾಂ ಧ್ರುವಂ।ಯಾಸ್ಸಂಪ್ರವಿಷ್ಟಸ್ಯಮುಖಂವ್ರಜಸ್ಪತೇಃಪಾಸ್ಯಂತ್ಯಪಾಂಗೋತ್ಕಲಿತಸ್ಮಿತಾಸವಂ ॥೨೩॥ ತಾಸಾಂಮುಕುಂದೋಮಧುಮಂಜುಭಾಷಿತೈರ್ಗೃಹೀತಚಿತ್ತಃಪರವಾನ್ಮನಸ್ವ್ಯಪಿ । ಕಥಂಪುನ

---

ಯಾವಕಂಣಿನಿಂದ, ಮಧುದ್ವಿಷಃ-ಕೃಷ್ಣನ, ಏಕದೇಶೇ-ಒಂದವಯವದಲ್ಲಿ, ತ್ವದೀಯಂ-ನಿನ್ನದಾದ, ಅಖಿಲಸರ್ಗಸೌಷ್ಠವಂ-ಸಕಲಸೃಷ್ಟಿಚಾತುರ್ಯವನ್ನು, ಅದ್ರಾಕ್ಷ್ಮ-ನೋಡಿದೆವೋ ॥೨೧॥ನಂದಸೂನುಃ-ನಂದಗೋಪನಮಗನೂ, ಕ್ಷಣಭಂಗಸೌಹೃದಃ-ನಿಮಿಷದಲ್ಲಿಹೋಗುವ ಸ್ನೇಹವುಳ್ಳವನು.ನವಪ್ರಿಯಃ-ಹೊಸಬರಿಗೆಯಿಷ್ಟನಾದವನು. ಆದ್ದರಿಂದಲೇ, ಸ್ವಕೃತಾತುರಾಃ-ಸ್ವ-ತನ್ನಿಂದ, ಕೃತ-ಮಾಡಲ್ಪಟ್ಟ, ನಗೆಮುಂತಾದ ಚೇಷ್ಟೆಯಿಂದಲೇ, ಆತುರಾಃ-ಪರವಶರಾದ್ದರಿಂದಲೇ, ಗೇಹಾನ್-ಮನೆಗಳನ್ನೂ, ಸ್ವಜನಾನ್-ತನ್ನವರನ್ನೂ, ಸುತಾನ್-ಮಕ್ಕಳನ್ನೂ, ಪತೀನ್-ಗಂಡಂದಿರನ್ನೂ, ವಿಹಾಯ-ಬಿಟ್ಟು, ಸ್ವದಾಸ್ಯಂ-ತನ್ನದಾಸಿಯರಾಗಿರುವಿಕೆಯನ್ನು, ಅದ್ಧಾ-ಪ್ರತ್ಯಕ್ಷವಾಗಿ, ಉಪಗತಾಃ-ಹೊಂದಿದವರಾದ, ನಃ-ನಮ್ಮನ್ನು. ನಸಮೀಕ್ಷತೇ-ಚನ್ನಾಗಿನೋಡುವುದಿಲ್ಲವು ॥೨೨॥ಪುರಯೋಷಿತಾಂ-ಮಥುರಾಪುರದಲ್ಲಿರುವ ಹೆಂಗಳಿಗೆ, ಇಯಂರಜನೀ-ಈರಾತ್ರಿಯು, ಸುಖಂ-ನಿರಾಯಾಸವಾಗಿ, ಪ್ರಭಾತಾ-ಬೆಳಗಾಗುವುದು ಆಶಿಷಃ-ಅವರಹರಿಕೆಗಳು, ಸತ್ಯಾಬಭೂವುಃ-ದಿಟವಾದವು. ಧ್ರುವಂ-ನಿಶ್ಚಯವು ಯಾಃ-ಯಾವಹೆಂಗಳು, ಪ್ರವಿಷ್ಟಸ್ಯ-ನಗರವಂಹೊಕ್ಕಂಥಾ, ವ್ರಜಸ್ಪತೇಃ-ಗೋಕುಲದೊಡೆಯನ, ಅಪಾಂ.....ಸವಂ-ಅಪಾಂಗ-ಕುಡಿನೋಟಗಳಿಂದ, ಉತ್ಕಲಿತ-ಕೂಡಿದ, ಸ್ಮಿತ-ಕಿರುನಗೆಯುಳ್ಳ, ಆಸವಂ-ಅಮೃತಸ್ವರೂಪವಾದ, ಮುಖಂ-ಮೋರೆಯನ್ನು, ಪಾಸ್ಯಂತಿ-ಕುಡಿವರೋ ॥೨೩॥ಹೇಅಬಲಾಃ-ಎಲೌಹೆಂಗಳಿರಾ! ಮುಕುಂದಃ-ಕೃಷ್ಣನು, ತಾಸಾಂ-ಆಪಟ್ಟಣದಲ್ಲಿರುವಹೆಂಗಳ, ಮಧುಮಂಜುಭಾಷಿತೈಃ-ಜೇನಿನಹಾಗೆ ರುಚಿಯಾಗಿರುವ ಮಾತುಗಳಿಂದ, ಗೃಹೀತಚಿತ್ತಃ-ಹಿಡಿಯಲ್ಪಟ್ಟ ಬುದ್ಧಿಯುಳ್ಳವನಾಗಿ, ಪರವಾನ್-ಆಜ್ಞಾಪಿಸಲುಳ್ಳ ತಂದೆಮುಂತಾದ ಹಿರಿಯರುಳ್ಳವನಾದರೂ, ಮನಸ್ವ್ಯಪಿ-ಹಾಗೆಸೋತುಹೋಗುವನಲ್ಲದ ಧೀರನಾದರೂಕೂಡ, ಸಲಜ್ಜಸ್ಮಿತವಿಭ್ರಮೈಃ-(ಅವರ)ಸಲಜ್ಜ-ನಾಚಿಕೆಯಿಂ ಸಹಿತವಾದ, ಸ್ಮಿತ-ಕಿರುನಗೆಯುಳ್ಳ, ವಿಭ್ರಮೈಃ-ವಿಲಾಸಗಳಿಂದ, ಭ್ರಮನ್-ಭ್ರಾಂತಿಗೊಂಡವನಾಗಿ, ಗ್ರಾಮ್ಯಾಃ-ಹಳ್ಳಿಗಾಡಿನಲ್ಲಿರುವ, ನಃ-ನಮ್ಮನ್ನುಕುರಿತು, ಪುನಃ-ಮರ

---

ಚಲ್ಪಟ್ಟಿರುವ ನೇತ್ರಂಗಳಿಂದ ಶ್ರೀಕೃಷ್ಣನ ಮುಖವೇಮುಂತಾದ ಅಂಗಂಗಳಲ್ಲಿ ನಿನ್ನಸೃಷ್ಟಿಕೌಶಲ್ಯವನೆಲ್ಲಮಂ ನೋಡಿದೆವು ಅಂತಾ ಶ್ರೀಕೃಷ್ಣನಂ ಅಪಹರಿಸಿಕೊಂಡು ಹೋದಮೇಲೆ ನಮ್ಮನೇತ್ರಂಗಳ ನಪಹರಿಸಿದಹಾಗೆ ಅಲ್ಲವೆ, ॥೨೧॥ ನಂದನಕುಮಾರನಾದ ಶ್ರೀಕೃಷ್ಣನು ಕ್ಷಣಿಕವಾದ ಸ್ನೇಹಮುಳ್ಳವನು, ಸ್ಥಿರವಿಶ್ವಾಸಮುಳ್ಳವನಲ್ಲವು, ನೂತನಂಗಳಾದ ವಸ್ತುಗಳಲ್ಲಿ ಪ್ರಿಯವಂಮಾಡಿಕೊಂಡು ಪೂರ್ವದಲ್ಲಿ ಸ್ನೇಹಿತರಾಗಿ ನಂಬಿಕೊಂಡಿರ್ದವರಲ್ಲಿ ಉಪೇಕ್ಷೆಯಂ ಮಾಡುವನು. ಮುಂಚೆ ತನ್ನಿಂದಲೇ ತೋರಿಸಲ್ಪಟ್ಟ ಮಂದಸ್ಮಿತವೀಕ್ಷಣಂಗಳಂ ವಿಲಾಸಂಗಳಂ ನೋಡಿ ಮರುಳಾಗಿ, ಮನೆಗಳಂ ಸ್ವಜನರಂ ಪತಿಗಳಂ ಪುತ್ರರಂಸಹ ತ್ಯಜಿಸಿ ತನ್ನದಾಸೀ ಭಾವವನೆಯ್ದಿರುವ ನಮ್ಮಂ ನೋಡುವುದೇಇಲ್ಲ ॥೨೨॥ ಇನ್ನು ಬೆಳಗು ಆಗುವುದು, ಮಥುರಾನಗರದ ಸ್ತ್ರೀಯರುಗಳ ಮನೋರಥಗಳು ಸಫಲಂಗಳಾದವು, ಈಕೃಷ್ಣನು ಮಥುರಾಪುರಕ್ಕೆ ಹೋಗುತ್ತಾನೆ. ಆಗ ಆಪುರದ ಸ್ತ್ರೀಯರುಗಳು ಮುಗುಳುನಗೆಯಿಂದ ಯುಕ್ತವಾದ ಕಟಾಕ್ಷಪ್ರಸರಣವೆಂಬ ಮದಕರದ್ರವ್ಯಮುಳ್ಳ ಕೃಷ್ಣನ ಮುಖವಂ ನಿರ್ಭಯರಾಗಿ ನೋಡುವರು. ನಾವು ಭಾಗ್ಯಹೀನರಾದೆವು ॥೨೩॥ ಎಲೈಸ್ತ್ರೀಯರುಗಳಿರಾ। ಆಕೃಷ್ಣನು ಕೆಲವುದಿವಸಂಗಳು ಅಲ್ಲಿದ್ದು ಪುನಶ್ಚ ಬರುವನೆಂಬ ಅರ್ಥವು ಮನಸ್ಸಿಗೆತೋರುವುದಿಲ್ಲ. ಅದೆಂತೆಂದರೆ ಆಕೃಷ್ಣನು ಒಳ್ಳೆಯ ಮನಸ್ಸುಳ್ಳವನಾದರೂ ಪಿತ್ರಾದಿಗಳಿಗೆ ಅಧೀನನು. ಇದರಮೇಲೆ ಆಪುರಸ್ತ್ರೀಯರುಗಳ ಮಧುರ ಭಾಷಣಂಗಳಿಂದಲೂ ಲಜ್ಜಾಯುಕ್ತಂಗಳಾದ ಮಂದಸ್ಮಿತಂಗಳಿಂದಲೂ ಸೊಂಪಿನ ನೋಟಂಗಳಿಂದಲೂ ಪರವಶಚಿತ್ತನಾಗಿ, ಹಳ್ಳಿಗಳಲ್ಲಿ ವಾಸವಂಮಾಡುವ ಮುಗ್ಧರಾದ ನ

ರ್ನಃ ಪ್ರತಿಯಾಸ್ಯತೇಽಬಲಾಗ್ರಾಮ್ಯಾಸ್ಸಲಜ್ಜಸ್ಮಿತವಿಭ್ರಮೈರ್ಭ್ರುವಾಮ್ ॥೨೪॥ ಅದ್ಯ ಧ್ರುವಂ ತತ್ರ ದೃಶೋ ಭವಿಷ್ಯತೇ ದಾಶಾರ್ಹಭೋಜಾಂಧಕವೃಷ್ಣಿಸಾತ್ವತಾಮ್ । ಮಹೋತ್ಸವಶ್ಶ್ರೀರಮಣಂ ಗುಣಾಸ್ಪದಂ ದ್ರಕ್ಷ್ಯಂತಿ ಯೇ ಚಾಧ್ವನಿ ದೇವಕೀಸುತಮ್ ॥೨೫॥ ಮೈತದ್ವಿಧಸ್ಯಾಕರುಣಸ್ಯ ನಾಮ ಭೂದಕ್ರೂರ ಇತ್ಯೇತದತೀವ ದಾರುಣಃ । ಯೋಽಸಾವನಾಶ್ವಾಸ್ಯ ಸುದುಃಖಿತಂ ಜನಂ ಪ್ರಿಯಾತ್ಪ್ರಿಯಂ ನೇಷ್ಯತಿ ಪಾರಮಧ್ವನಃ ॥೨೬॥ ಅನಾರ್ದ್ರಧೀರೇಷ ಸಮಾಸ್ಥಿತೋ ರಥಂ ತಮನ್ವಮೀ ಚ ತ್ವರಯಂತಿ ದುರ್ಮದಾಃ । ಗೋಪಾ ಅನೋಭಿಃ ಸ್ಥವಿರೈರುಪೇಕ್ಷಿತಂ ದೈವಂ ಚ ನೋಽದ್ಯ ಪ್ರತಿಕೂಲಮೀಹತೇ ॥೨೭॥ ನಿವಾರಯಾಮಸ್ಸಮುಪೇತ್ಯ ಮಾಧವಂ ಕಿಂ ನೋಽಕರಿಷ್ಯನ್ ಕುಲವೃದ್ಧಬಾಂಧವಾಃ । ಮುಕುಂದಸಂ

---

ಳಿಯೂ, ಕಥಂ-ಹೇಗೆ, ಪ್ರತಿಯಾಸ್ಯತೇ-ಹಿಂದಕ್ಕೆ ಬರುವನು ॥೨೪॥ ಅದ್ಯ-ಈದಿವಸದಲ್ಲಿ, ತತ್ರ-ಮಧುರಾಪಟ್ಟಣದಲ್ಲಿ, ದಾಶಾರ್ಹಭೋಜಾಂಧಕವೃಷ್ಣಿಸಾತ್ವತಾಂ-ದಾಶಾರ್ಹರು ಭೋಜರು ಅಂಧಕರು ವೃಷ್ಣಿಗಳು ಸಾತ್ವತರು ಇವರುಗಳ, ದೃಶಾಃ-ದೃಷ್ಟಿಗೆ, ಮಹೋತ್ಸವಃ-ದೊಡ್ಡಹಬ್ಬವು, ಭವಿಷ್ಯತೇ-ಪ್ರಾಪ್ತವಾಗುತ್ತೆ. ಮತ್ತು, ಯೇಚ-ಯಾರು, ಅಧ್ವನಿ-ದಾರಿಯಲ್ಲಿ, ಶ್ರೀರಮಣಂ-ಲಕ್ಷ್ಮೀಪತಿಯೂ, ಗುಣಾಸ್ಪದಂ-ಸುಗುಣಗಳಿಗೆ ಆಶ್ರಯನೂ, ಆದ, ದೇವಕೀಸುತಂ-ದೇವಕಿಯಮಗನಾದ ಶ್ರೀಕೃಷ್ಣನನ್ನು, ದ್ರಕ್ಷ್ಯಂತಿ-ನೋಡುವರೋ, ತೇಷಾಂದೃಶಶ್ಚ-ಅವರದೃಷ್ಟಿಗೂ, ಮಹೋತ್ಸವಃ-ದೊಡ್ಡಹಬ್ಬವಾಗುತ್ತೆ, ಧ್ರುವಂ-ನಿಶ್ಚಯವು ॥೨೫॥ ಯೋಽಸೌ-ಯಾವಇವನು, ಸುದುಃಖಿತಂಜನಂ-ಬಹಳ ದುಃಖವುಂಟಾಗಿರುವ ಜನರಾದ ನಮ್ಮನ್ನು, ಅನಾಶ್ವಾಸ್ಯ-ಸಮಾಧಾನಗೊಳಿಸದೆ, ಪ್ರಿಯಾತ್ಪ್ರಿಯಂ-ಪ್ರಿಯಕ್ಕಿಂತಲೂ ಪ್ರಿಯನಾದ ಕೃಷ್ಣನನ್ನು, ಅಧ್ವನಃಪಾರಂ-ದೃಷ್ಟಿಮಾರ್ಗದ ಆಚೆಯತಡಿಯನ್ನು, ನೇಷ್ಯತಿ-ಹೊಂದಿಸುತಲಿರುವನೋ, ಸೋಽಸೌ-ಅಯಿವನು, ಅತೀವ-ಬಹಳವಾಗಿ, ದಾರುಣಃ-ಕ್ರೂರನಾಗಿರುವನು. ಏತದ್ವಿಧಸ್ಯ-ಇಂತಾಬಗೆಯುಳ್ಳ, ಅಕರುಣಸ್ಯ-ನಿರ್ದಯನಿಗೆ, ಅಕ್ರೂರಇತಿ-ಕ್ರೂರನಲ್ಲವೆಂಬ, ಏತನ್ನಾಮ-ಈಹೆಸರುಮಾಭೂತ್-ಆಗಬೇಡ ॥೨೬॥ ಅನಾರ್ದ್ರಧೀಃ-ತೇವವಿಲ್ಲದಬುದ್ಧಿಯುಳ್ಳ(ನಿಷ್ಕರುಣನಾದ)ಏಷಃ-ಈಯಕ್ರೂರನು, ರಥಂ-ತೇರನ್ನು, ಸಮಾಸ್ಥಿತಃ-ಏರಿಕುಳಿತಿರುವನು, ತಮನು-ಅವನನ್ನನುಸರಿಸಿ, ದುರ್ಮದಾಃ-ಕೆಟ್ಟಗರ್ವವುಳ್ಳ, ಅಮೀಗೋಪಾಶ್ಚ-ಈಗೊಲ್ಲರೂಕೂಡ, ಅನೋಭಿಃ-ಬಂಡಿಗಳೊಡನೆ, ತ್ವರಯಂತಿ-ಆತುರಪಡಿಸುತಲಿದಾರೆ ಸ್ಥವಿರೈಃ-ಮುದುಕರಿಂದಲಾದರೋ, ಉಪೇಕ್ಷಿತಂ-ನೋಡಲ್ಪಡುತಲಿರೋಣವಾಗಿದೆ ದೈವಂಚ-ಅದೃಷ್ಟವೂಕೂಡ, ನಃ-ನಮಗೆ, ಅದ್ಯ-ಈಸಮಯದಲ್ಲಿ, ಪ್ರತಿಕೂಲಂ-ವಿರೋಧವನ್ನು, ಈಹತೇ-ಬಯಸುತ್ತಿದೆ ॥೨೭॥ (ಆದ್ದರಿಂದ) ಸಮುಪೇತ್ಯ-ಎಲ್ಲರೂ ಗುಂಪಾಗಿ ಹತ್ತಿರಕ್ಕೆಹೋಗಿ, ಮಾಧವಂ-ಲಕ್ಷ್ಮೀಪತಿಯಾದ ಕೃಷ್ಣನನ್ನು, ನಿವಾರಯಾಮಃ-ಹೋಗಬೇಡವೆಂದು ತಡೆಯುವೆವು. ನಿಮಿಷಾರ್ಧದುಸ್ತ್ಯಜಾತ್-ಅರೆನಿಮಿಷವೂಬಿಡಲಾಗದ, ಮುಕುಂದಸಂಗಾತ್-ಕೃಷ್ಣಸಂಬಂಧದ ದೆಸೆಯಿಂದ, ದೈವೇನ-ದುರದೃಷ್ಟ

---

ಮ್ಮನ್ನುಂ ನೋಡುವುದಕೆ ಪುನಶ್ಚ ಹೇಗೆಬರುವನು ॥೨೪॥ ಇನ್ನುಮೇಲೆ ಮಧುರಾಪುರದಲ್ಲಿರುವ ದಾಶಾರ್ಹರು ವೃಷ್ಣಿಗಳು ಅಂಧಕರು ಸಾತ್ವತರು ಭೋಜರು ಇವರೆಲ್ಲರಿಗೂ ನೇತ್ರೋತ್ಸವಮುಂಟಾಗುವಂತೆ ಗುಣಸಮುದ್ರನಾದ ಶ್ರೀಪತಿಯಾದ ಕೃಷ್ಣನಂ ಮಾರ್ಗದಲ್ಲಿ ನೋಡುವರಾಗಿ ನೇತ್ರೋತ್ಸವವನೆಯ್ದುವರು ॥೨೫॥ ಅಂತಾ ಅಸದ್ವ್ಯಾಪಾರಮುಳ್ಳ ದಯಾರಹಿತನಾದಶ್ವಫಲ್ಕಪುತ್ರನಿಗೆ ಅಕ್ರೂರನೆಂಬ ಹೆಸರುಬರಬಾರದು, ಅತಿಕ್ರೂರನಾದಇವನು ಬಹುದುಃಖಿತರಾದ ನಮ್ಮೆಲ್ಲರಂ ಸಮಾಧಾನರಂ ಮಾಡದೆ ಪ್ರಾಣಕ್ಕಿಂತಲೂ ಪ್ರಿಯನಾದ ಶ್ರೀಕೃಷ್ಣನಂ ದೂರವಾಗಿ ಕರೆದುಕೊಂಡು ಹೋಗುವನು ॥೨೬॥ ಎಲೈ ಸಖಿಯರುಗಳಿರಾ, ಸ್ವಲ್ಪಮಾದರೂ ಪ್ರೇಮವಿಲ್ಲದ ಬುದ್ಧಿಯುಳ್ಳ ಶ್ರೀಕೃಷ್ಣನು ರಥವನೇರಿದನು. ಶಕಟಂಗಳಂ ಸನ್ನಾಹಂಪಡಿಸಿಕೊಂಡು ದುಷ್ಟರಾದಗೋಪರು ಮತ್ತು ತ್ವರೆಗೊಳ್ಳುವರು. ದೊಡ್ಡವರಾದವರು ಅಡ್ಡಿಮಾಡದೆಸುಮ್ಮನೆಇರುವರು. ದೈವವೂ ನಮಗೆಪ್ರತಿಕೂಲದ ಭಾವನೇಮಾಡುವುದು ॥೨೭॥ (ಪ್ರಯಾಣಕ್ಕೆ ವಿಘ್ನವಂ ಮಾಡುವುದಿಲ್ಲವೆಂದು ಮಾತನಾಡಿಕೊಂಡು ಗೋಪಸ್ತ್ರೀಯರುಗಳು ಧೈರ್ಯವಂ ಮಾಡಿ ಆಲೋಚನೆಯಂ ಮಾಡುವರಾದರು ಅದೆಂತೆನೆ) ಎಲೈ, ಸಖಿಯರುಗಳಿರಾ, ನಾವೆಲ್ಲರುಂ ಗುಂಪಾಗಿ ಶ್ರೀಕೃಷ್ಣನಂ ಹೋಗಬೇಡವೆಂದು ತಡೆಮಾಡುವ ಶ್ರೀಕೃ

ಗಾನ್ನಿಮಿಷಾರ್ಧದುಸ್ತ್ಯಜಾದ್ದೈವೇನವಿಧ್ವಂಸಿತದೀನಚೇತಸಾಂ ||೨೮|| ಯಸ್ಯಾನುರಾಗಲಲಿತಸ್ಮಿತವಲ್ಗುಮಂತ್ರಲೀಲಾವಲೋಕಪರಿರಂಭಣರಾಸಗೋಷ್ಠ್ಯಾಂ | ನೀತಾಸ್ಮನಃಕ್ಷಣಮಿವಕ್ಷಣದಾವಿನಾತಂಗೋಪ್ಯಃಕಥಂನ್ವತಿತರೇಮತಮೋದುರಂತಂ ||೨೯|| ಯೋಹ್ನಃಕ್ಷಯೆವ್ರಜಮನಂತಸಖಃಪರೀತೋಗೋಪೈರ್ವಿಶನ್ ಖುರರಜಶ್ಛುರಿತಾಲಕಸ್ರಕ್ | ವೇಣುಂಕ್ವಣನ್ಸ್ಮಿತಕಟಾಕ್ಷನಿರೀಕ್ಷಣೇನಚಿತ್ತಂಕ್ಷಿಣೋತಿತಮೃತೆನುಕಥಂಭವೇಮ ||೩೦|| ಶ್ರೀಶುಕಃ || ಏವಂಬ್ರುವಾಣಾವಿರಹಾತುರಾಭೃಶಂವ್ರಜಸ್ತ್ರಿಯಃಕೃಷ್ಣವಿಷಕ್ತಮಾನಸಾಃ | ವಿಸೃಜ್ಯಲಜ್ಜಾಂರುರುದುಸ್ಸ್ಮಸುಸ್ವರಂಗೋವಿಂದದಾಮೋದರ

ದಿಂದ, ವಿಧ್ವಂಸಿತದೀನಚೇತಸಾಂ-ಹಾಳುಮಾಡಲ್ಪಟ್ಟ ಬಡಮನಸ್ಸುಳ್ಳವರಾದ, ನಃ-ನಮಗೆ, ಕುಲವೃದ್ಧಬಾಂಧವಾಃ-ಜಾತಿಯಲ್ಲಿ ಮುದುಕರೂ ನಂಟರೂ, ಕಿಂಕರಿಷ್ಯಂತಿ-ಏನುಮಾಡುವರು? ||೨೮||ಗೋಪ್ಯಃ-ಗೊಲ್ಲತಿಯರಿರಾ! ಯಸ್ಯ-ಯಾವಕೃಷ್ಣನ ಅನುರಾಗ.....ಗೋಷ್ಠ್ಯಾಂ-ಅನುರಾಗ-ಪ್ರೇಮದಿಂದ, ಲಲಿತ-ಕೋಮಲವಾದ, ಸ್ಮಿತ-ಕಿರುನಗೆ, ವಲ್ಗು-ರಮಣೀಯವಾದ, ಮಂತ್ರ-ಯೋಚನೆ, ಲೀಲಾ-ವಿಲಾಸದಿಂಕೂಡಿದ, ಅವಲೋಕ-ನೋಟ, ಪರಿರಂಭಣ-ಆಲಿಂಗನ, ಉಳ್ಳ, ರಾಸಗೋಷ್ಠ್ಯಾಂ-ರಾಸಕ್ರೀಡಾಸಭೆಯಲ್ಲಿ, ನಃ-ನಮ್ಮ, ಕ್ಷಣದಾಃ-ಉತ್ಸವವನ್ನು ಕೊಡುವರಾತ್ರಿಗಳನ್ನು, ಕ್ಷಣಮಿವ-ನಿಮಿಷಕಾಲವನ್ನು ಹೇಗೋಹಾಗೆ, ನೀತಾಃಸ್ಮಃ-ಕಳೆದವರಾದೆವು. ತಂವಿನಾ-ಅಂಥಾಕೃಷ್ಣನನ್ನು ಬಿಟ್ಟು, ದುರಂತಂ-ಪ್ರಯಾಸದಿಂದಲೂ ಕೊನೆಗಾಣದ, ತಮಃ-ವಿರಹದುಃಖವನ್ನು, ಕಥಂನು-ಹೇಗೆತಾನೆ, ಅತಿತರೇಮ-ಕಡೆಹಾಯ್ವೆವು? ||೨೯|| ಅಹ್ನಃಕ್ಷಯೇ-ಹಗಲು ಕ್ಷೀಣಿಸುವ ಸಂಜೆಹೊತ್ತಿನಲ್ಲಿ, ಅನಂತಸಖಃ-ಬಲರಾಮನು ಸಂಗಾತಿಯಾಗಿವುಳ್ಳವನೂ, ಗೋಪೈಃ-ಗೊಲ್ಲರಿಂದ, ಪರೀತಃ-ಬಳಸಲ್ಪಟ್ಟವನೂ,ಆದ, ಯಃ-ಯಾವಕೃಷ್ಣನು,ವ್ರಜಂ-ಗೋಕುಲವನ್ನು,ವಿಶನ್-ಹೊಗುತಲಿರುವನಾಗಿ, ಖುರರಜಃಛುರಿತಾಲಕಸ್ರಕ್-ಖುರ-ಆಕಳಕೊಳಗುಗಳ, ರಜಃ-ಧೂಳ್ಗಳಿಂದ, ಛುರಿತ-ವ್ಯಾಪ್ತಗಳಾದ, ಅಲಕ-ಮುಂಗುರಲ್ಗಳೂ, ಸ್ರಕ್-ಪುಷ್ಪಮಾಲೆಗಳೂ ಉಳ್ಳವನಾಗಿಯೂ, ವೇಣುಂ-ಕೊಳಲನ್ನು, ಕ್ವಣನ್-ನುಡಿಸುತ ಲಿರುವನಾಗಿಯೂ, ಸ್ಮಿತಕಟಾಕ್ಷನಿರೀಕ್ಷಣೇನ-ಕಿರುನಗೆಯಿಂ ಕೂಡಿದ ಕುಡಿನೋಟಗಳಿಂ ನೋಡುವಿಕೆಯಿಂದ, ಚಿತ್ತಂ-ನಮ್ಮಮನಸ್ಸನ್ನು, ಕ್ಷಿಣೋತಿ-ಹರಿಸುತಲಿರುವನೋ, ತಮೃತೇ-ಆಕೃಷ್ಣನಂಬಿಟ್ಟು, ಕಥಂನು-ಹೇಗೆತಾನೆ, ಭವೇಮ-ಆಜೀವು(ಇರುವೆವು-ಬದುಕುವೆವು)||೩೦||[ಶುಕವಾಕ್ಯವು.] ಏವಂ-ಹೀಗೆ, ಬ್ರುವಾಣಾಃ-ಹೇಳುತಲಿರುವ, ಭೃಶಂ-ಅಧಿಕವಾಗಿ, ವಿರಹಾತುರಾಃ-ಅಗಲಿಕೆಯಿಂದ ಆತುರವುಳ್ಳವರಾದ, ವ್ರಜಸ್ತ್ರಿಯಃ-ಗೋಕುಲದಹೆಂಗಳು, ಕೃಷ್ಣವಿಷಕ್ತಮಾನಸಾಸ್ಸತ್ಯಃ-ಕೃಷ್ಣನಲ್ಲಿ ವಿಶೇಷವಾಗಿ ಸಂಬಂಧಿಸಿದ ಮನಸ್ಸುಳ್ಳವರಾಗಿ, ಲಜ್ಜಾಂ-ನಾಚಿಕೆಯನ್ನು, ವಿಸೃಜ್ಯ-ಬಿಟ್ಟು, ಗೋವಿಂದ! ದಾಮೋದರ! ಮಾಧವ, ಇತಿ-ಹೀಗೆಂದು, ಸುಸ್ವರಂ-ಒಳ್ಳೇಸ್ವರವುಂಟಾಗುವಂತೆ, ರುರುದುಃ-ಅತ್ತರು ||೩೧||ಸ್ತ್ರೀಣಾಂ-ಹೆಂಗಳು, ಏವಂ-ಹೀಗೆ, ರುದಂತೀನಾಂಸತೀನಾಂ-ಅಳುತಿರುವ ರಾಗುತ್ತಿರಲಾಗಿ, ಸ

ಷ್ಣನಸಂಗವು ಕ್ಷಣಮಾತ್ರವೂ ಬಿಟ್ಟುಇರಲಾರದೆ ದುಃಖಿತವಾದ ಮನಸ್ಸುಳ್ಳವರಾಗಿ ದೀನರಾದ ನಮ್ಮನ್ನು ಕುಲವೃದ್ಧರಾದ ಬಾಂಧವರು ಏನಂಮಾಡುವರು; ||೨೮|| ಎಲೌ ಗೋಪಸ್ತ್ರೀಯರುಗಳೇ! ರಾಸಸಭೆಯಲ್ಲಿ ಯಾವಶ್ರೀಕೃಷ್ಣನ ಅನುರಾಗ ಪೂರ್ವಕವಾದ ಮಂದಸ್ಮಿತದಿಂದಲೂ ಮನೋಹರಂಗಳಾದ ಆಪ್ತಾಲೋಚನೆಗಳಿಂದಲೂ ಸೊಂಪಿನ ನೋಟಂಗಳಿಂದಲೂ ಆಲಿಂಗನಂಗಳಿಂದಲೂ ರಾತ್ರಿಗಳಂ ಕ್ಷಣದಂತೆ ಕಳೆದವ್ರೋ,ಆಶ್ರೀಕೃಷ್ಣನಂಬಿಟ್ಟು ನಾವು ಈ ವಿರಹತಾಪವಂ ಹೇಗೆ ಪರಿಹರಿಸಿಕೊಳ್ಳುವೆವು; ||೨೯|| ಯಾವಶ್ರೀಕೃಷ್ಣನು ಸಾಯಂಕಾಲ ಸಮದಲ್ಲಿಗೋಪಾಲಕರಿಂದ ಯುಕ್ತನಾಗಿ ಗೋವುಗಳ ಕಾಲುಕೊಳಗಗಳ ಧೂಳುಗಳಿಂದ ವ್ಯಾಪ್ತಂಗಳಾದ ಕೇಶಂಗಳುಳ್ಳವನಾಗಿ, ಕೊಳಲಂನುಡಿಸುತ ಮುಗುಳುನಗೆಯಿಂದ ರಮ್ಯಂಗಳಾದ ಕಟಾಕ್ಷಪ್ರಸರಣಗಳಿಂದ ನಮ್ಮಚಿತ್ತವ ನಪಹರಿಸುವನಾಗಿ ವ್ರಜಕ್ಕೆಬರುವನೋ ಆಶ್ರೀಕೃಷ್ಣನಂಬಿಟ್ಟು ನಾವುಹೇಗೆಜೀವಿಸುವೆವು ||೩೦|| ಈರೀತಿಯಲ್ಲಿ ಪರಸ್ಪರವಾಗಿ ಮಾತನಾಡುತ ವಿರಹಪೀಡಿತರಾಗಿ ಕೃಷ್ಣನಲ್ಲಿ ಆಸಕ್ತವಾದ ಮನಮುಳ್ಳವರಾಗಿ ಆಗೋಪಸ್ತ್ರೀಯರುಗಳು ಲಜ್ಜೆಯಂಬಿಟ್ಟು ಎಲೈಗೋವಿಂದನೇ! ದಾಮೋದರನೇ! ಮಾಧವನೇ! ಎಂದುಗಟ್ಟಿಯಾಗಿ ರೋದನಂಗೆಯ್ದರು ||೩೧|| ಆಮೇಲೆ ಸೂರ್ಯೋದಯಾನಂತರದಲ್ಲಿ ಅಕ್ರೂರನುಸಂ

ಮಾಧವೇತಿ ‖೩೧‖ ಸ್ತ್ರೀಣಾಮೇವಂರುದಂತೀನಾಮುದಿತೇಸವಿತರ್ಯಥ। ಅಕ್ರೂರಶ್ಚೋದಯಾಮಾಸ ಕೃತಮೈತ್ರಾದಿಕೋರಥಂ ‖೩೨‖ ಗೋಪಾಸ್ತಮನ್ವಸಜ್ಜಂತನಂದಾದ್ಯಾಃಶಕಟೈಸ್ತತಃ । ಆದಾಯೋಪಾಯನಂಭೂರಿಕುಂಭಾನ್ಗೋರಸಸಂಭೃತಾನ್ ‖೩೩‖ ಗೋಪ್ಯಶ್ಚದಯಿತಂಕೃಷ್ಣಮನುವ್ರಜ್ಯಾನುರಂಜಿತಾಃ । ಪ್ರತ್ಯಾದೇಶಂಭಗವತಃಕಾಂಕ್ಷಂತ್ಯಶ್ಚಾವತಸ್ಥಿರೇ ‖೩೪‖ ತಾಸ್ತಥಾತಪ್ಯತೀರ್ವೀಕ್ಷ್ಯಸ್ವಪ್ರಸ್ಥಾನೇಯದೂತ್ತಮಃ । ಸಾಂತ್ವಯಾಮಾಸಸವಚನೈರಾಯಾಸ್ಯಇತಿದೌತ್ಯಕೈಃ ‖೩೫‖

---

ಸವಿತರಿ-ಸೂರ್ಯನು, ಉದಿತೇ-ಉದಯಿಸುತ್ತಿರಲು, ಅಥ-ಆಬಳಿಕ, ಅಕ್ರೂರಃ-ಅಕ್ರೂರನು, ಕೃತಮೈತ್ರಾದಿಕಸ್ಸನ್-ಕೃತ-ಮಾಡಲ್ಪಟ್ಟ, ಮೈತ್ರ-ಸೂರ್ಯೋದ್ದೇಶ್ಯಕವಾದ ಸಂಧ್ಯಾವಂದನವೇ, ಆದಿತಃ-ಮುಂತಾದ ಕರ್ಮವುಳ್ಳವನಾಗಿ, ರಥಂ-ತೇರನ್ನು, ಚೋದಯಾಮಾಸ-ನಡೆಯಿಸಿದನು ‖೩೨‖ ನಂದಾದ್ಯಾಃ-ನಂದಗೋಪನು ಮೊದಲಾದ, ಗೋಪಾಃ-ಗೊಲ್ಲರು, ತತಃ-ಆಬಳಿಕ, ಶಕಟೈಃ-ಬಂಡಿಗಳಿಂದ, ಗೋರಸಸಂಭೃತಾನ್-ಹಾಲು ಮೊಸರು ಬೆಣ್ಣೆ ತುಪ್ಪಗಳೆಂಬ, ಗೋರಸಗಳಿಂದ ತುಂಬಲ್ಪಟ್ಟ, ಕುಂಭಾನ್-ಗಡಿಗೆಗಳನ್ನು, ಭೂರಿ-ಬಹುವಾದ, ಉಪಾಯನಂ-ಕಾಣಿಕೆಯನ್ನಾಗಿ, ಆದಾಯ-ತೆಗದುಕೊಂಡು, ತಂ-ಆಯಕ್ರೂರನನ್ನು, ಅನ್ವಸಜ್ಜಂತ-ಅನುಸರಿಸಿನಡೆದರು ‖೩೩‖ ಗೋಪ್ಯಶ್ಚ-ಗೊಲ್ಲತಿಯರೂಕೂಡ, ದಯಿತಂ-ಪ್ರಿಯನಾದ, ಕೃಷ್ಣಂ-ಹರಿಯನ್ನು, ಅನುವ್ರಜ್ಯ-ಅನುಸರಿಸಿಬಂದು, ಅನುರಂಜಿತಾಸ್ಸತ್ಯೋಪಿ-(ಹಿಂತಿರುಗಿ ನೋಡುವುದು ಮುಂತಾದವುಗಳಿಂದ) ಕೊಂಚಸಂತೋಷ ಗೊಳಿಸಲ್ಪಟ್ಟವರಾಗಿಯೂ, ಭಗವತಃ-ಶ್ರೀಕೃಷ್ಣನ, ಪ್ರತ್ಯಾದೇಶಂ-ಪ್ರತ್ಯುತ್ತರವನ್ನು, ಕಾಂಕ್ಷಂತ್ಯಶ್ಚ-ಬಯಸುವವರೂಆಗಿ, ಅವತಸ್ಥಿರೇ-ಕುಳಿತಿದ್ದರು. ‖೩೪‖ ಯದೂತ್ತಮಃ-ಯಾದವರಲ್ಲಿ ಶ್ರೇಷ್ಠನಾದ ಕೃಷ್ಣನು, ಸ್ವಪ್ರಸ್ಥಾನೇ-ತನ್ನಪ್ರಯಾಣದಲ್ಲಿ, ತಥಾ-ಹಾಗೆ, ತಪ್ಯತೀಃ-ಅನುತಾಪಗೊಳ್ಳುತ್ತಿರುವ, ತಾಃ-ಆಗೋಪಿಯರನ್ನು, ವೀಕ್ಷ್ಯ-ನೋಡಿ, ಆಯಾಸ್ಯೇ-ಬರುವೆನು. ಇತಿ-ಹೀಗೆಂದು, ದೌತ್ಯಕೈಃ-ದೂತರಸಂಬಂಧಗಳಾದ, ವಚನೈಃ-ಮಾತುಗಳಿಂ

---

ಧ್ಯಾವಂದನವಂಮಾಡಿ ಗೋಪಸ್ತ್ರೀಯರುಗಳು ರೋದನಂಗೆಯ್ಯುತ್ತಿರಲಾಗಿಯೂ ರಥದಮೇಲೆ ರಾಮಕೃಷ್ಣರಂ ಕುಳ್ಳಿರಿಸಿಕೊಂಡು ತೇರಂನಡೆಯಿಸಿದನು ‖೩೨‖ ನಂದನೇಮೊದಲಾದ ಗೋಪಾಲಕರು ಕಾಣಿಕೆಗಳಂ ತೆಗದುಕೊಂಡು, ಹಾಲುಮೊಸರುಗಳ ಗಡಿಗೆಗಳಂ ಅಡ್ಡೆಗಳಿಂದ ತೆಗೆಯಿಸಿಕೊಂಡು, ಅಕ್ರೂರನಸಂಗಡ ಹೊರಟರು ‖೩೩‖ ಗೋಪಸ್ತ್ರೀಯರುಗಳು ಪ್ರಿಯನಾದ ಶ್ರೀಕೃಷ್ಣನಸಂಗಡ ಹೋಗಿ ಭಗವಂತನ ಪ್ರತ್ಯಾಗಮನವನ್ನೇ ಅಪೇಕ್ಷಿಸುವರಾಗಿ ನಿಂತರು ‖೩೪‖ ಆಕೃಷ್ಣನು ವಿರಹಕಾತುರರಾಗಿ ರೋದನಂಗೆಯ್ವ ಗೋಪಸ್ತ್ರೀ



ಯರುಗಳಂ ದೂತವಾಕ್ಯಂಗಳಿಂದ ಬೇಗನೆಬರುವೆನು, ನೀವುವ್ಯಸನವಂ ಪಡೆಯಬೇಡಿರಿ ಎಂದುಸಮಾಧಾನಂಗೆ

ಯಾವದಾಲಕ್ಷ್ಯತೇಕೇತುರ್ಯಾವದ್ರೇಣೂರಥಸ್ಯಚ । ಅನುಪ್ರಸ್ಥಾಪಿತಾತ್ಮಾನೋಲೇಖ್ಯಾನೀವೋಪಲಕ್ಷಿತಾಃ ॥೩೬॥ ತಾನಿರಾಶಾನಿವವೃತುರ್ಗೋವಿಂದವಿನಿವರ್ತನೇ । ಅಹಾನಿನಿನ್ಯುರ್ಗಾಯಂತ್ಯೋವಿಶೋಕಾಃಪ್ರಿಯಚೇಷ್ಟಿತಂ ॥೩೭॥ ಭಗವಾನಪಿಸಂಪ್ರಾಪ್ತೋರಾಮಾಕ್ರೂರೌತಥಾನೃಪ । ರಥೇನವಾಯುವೇಗೇನಕಾಳಿಂದೀಮಘನಾಶನೀಂ॥೩೮॥ ತತ್ರೋಪಸ್ಪೃಶ್ಯಪಾನೀಯಂಪೀತ್ವಾಮೃಷ್ಟಮಣಿಪ್ರಭಂ। ವೃಕ್ಷಷಂಡಮುಪವ್ರಜ್ಯಸರಾಮೋರಥಮಾವಿಶತ್ ॥೩೯॥ ಅಕ್ರೂರಸ್ತಾವುಪಾಮಂತ್ರ್ಯನಿವೇಶ್ಯಚರಥೋಪರಿ । ಕಾಳಿಂದ್ಯಾಹ್ರದಮಾಗತ್ಯಸ್ನಾನಂವಿಧಿವದಾಚರತ್ ॥೪೦॥ ನಿಮಜ್ಯತಸ್ಮಿನ್ಸಲಿಲೇಜಪನ್ಬ್ರಹ್ಮಸನಾತನಂ । ತಾವೇವಾಪಶ್ಯದಕ್ರೂರೋರಾಮಕೃಷ್ಣೌಸಮನ್ವಿತೌ ॥೪೧॥ ತೌರಥಸ್ಥೌಕಥ

---

ತೆ, ಸಾಂತ್ವಯಾಮಾಸ-ಸಮಾಧಾನಗೊಳಿಸಿದನು ॥೩೫॥ರಥಸ್ಯ-ಬಂಡಿಯ, ಕೇತುಃ-ಧ್ವಜವು, ರೇಣುಶ್ಚ-ಧೂಳಿಯೂ, ಯಾವತ್-ಯಾವವರೆಗೂ, ಆಲಕ್ಷ್ಯತೇ-ನೋಡಲ್ಪಡುತ್ತಿರುವುದೋ, ತಾವತ್-ಅದುವರೆಗೂ, ಅನುಪ್ರಸ್ಥಾಪಿತಾತ್ಮಾನಃ-ಅನುಪ್ರಸ್ಥಾಪಿತ-ಸಂಗಡಕಳುಹಿಸಲ್ಪಟ್ಟ, ಆತ್ಮಾನಃ-ಚಿತ್ತವುಳ್ಳವರಾಗಿ, ಲೇಖ್ಯಾನೀವ-ಚಿತ್ರಪ್ರತಿಮೆಗಳಹಾಗೆ, ಉಪಲಕ್ಷಿತಾಃ-ನೋಲ್ಪಟ್ಟವರಾದರು॥೩೬॥ ತಾಃ-ಆಗೋಪ್ಯತಿಯರು, ಗೋವಿಂದವಿನಿವರ್ತನೇ-ಕೃಷ್ಣನು ಹಿಂದಕ್ಕೆತಿರುಗಿಸತಕ್ಕವವಿಷಯದಲ್ಲಿ, ನಿರಾಶಾಃ-ಆಶೆಯಿಲ್ಲದವರಾದ್ದರಿಂದಲೇ, ನಿವವೃತುಃ-ತಾವೇ ಹಿಂದಕ್ಕೆತಿರುಗಿದರು. ಪ್ರಿಯಚೇಷ್ಟಿತಂ-ಪ್ರಿಯನಾದ ಕೃಷ್ಣನ ಚರಿತ್ರವನ್ನು, ಗಾಯಂತ್ಯಃ-ಹಾಡುತಲಿರುವವರಾದ್ದರಿಂದಲೇ, ವಿಶೋಕಾಃ-ದುಃಖವಿಲ್ಲದವರಾಗಿ, ಅಹಾನಿ-ಹಗಲುಗಳನ್ನು, ನಿನ್ಯುಃ-ಕಳೆದರು ॥೩೭॥ಹೇನೃಪ-ಎಲೈರಾಯನೇ! ತಥಾ-ಹಾಗೆಯೇ, ಭಗವಾನಪಿ-ಕೃಷ್ಣನೂಕೂಡ, ರಾಮಾಕ್ರೂರೌ-ರಾಮನನ್ನೂ ಅಕ್ರೂರನನ್ನೂ, ಸಂಪ್ರಾಪ್ತಃ-ಸೇರಿದವನಾಗಿ, ವಾಯುವೇಗೇನ-ಗಾಳಿಯಹಾಗೆ ವೇಗವುಳ್ಳ, ರಥೇನ-ತೇರಿನಿಂದ, ಅಘನಾಶನೀಂ-ಪಾಪವನ್ನು ಹರಿಸುತಲಿರುವ, ಕಾಳಿಂದೀಂ-ಯಮುನಾನದಿಯನ್ನು, ಸಂಪ್ರಾಪ್ತಃ-ಸೇರಿದವನಾದನು ॥೩೮॥ ತತ್ರ-ಆಯಮುನೆಯಲ್ಲಿ, ಪಾನೀಯಂ-ನೀರನ್ನು, ಉಪಸ್ಪೃಶ್ಯ-ಸ್ಪರ್ಶಮಾಡಿ(ವಿಂದುಶುಚಿಯಾಗಿ)ಪೀತ್ವಾ-ಕುಡಿದು, ಮೃಷ್ಟಮಣಿಪ್ರಭಂ-ಸಾಣೆಹಿಡಿಯಲ್ಪಟ್ಟ ರತ್ನಗಳ ಕಾಂತಿಯುಳ್ಳ, ವೃಕ್ಷಷಂಡಂ-ಮರಗಳ ತೋಪಿನ, ಉಪವ್ರಜ್ಯ-ಬಳಿಯಲ್ಲಿಕುಳಿತು, ಸರಾಮಃ-ರಾಮನಿಂ ಸಹಿತನಾಗಿ, ರಥಂ-ತೇರನ್ನು, ಆವಿಶತ್-ಏರಿದನು(ಹೊಕ್ಕನು)॥೩೯॥ಅಕ್ರೂರಃ-ಶ್ವಫಲ್ಕನಮಗನು, ತೌ-ಆರಾಮಕೃಷ್ಣರನ್ನು, ಆಮಂತ್ರ್ಯ-ಕರೆತಂದು, ರಥೋಪರಿ-ರಥದಮೇಲೆ, ನಿವೇಶ್ಯಚ-ಕುಳ್ಳಿರಿಸಿ, ಕಾಳಿಂದ್ಯಾಃ-ಯಮುನೆಯ, ಹ್ರದಂ-ಮಡುವಿಗೆ, ಆಗತ್ಯ-ಬಂದು, ವಿಧಿವತ್-ಶಾಸ್ತ್ರವಿಧಿಪ್ರಕಾರ, ಸ್ನಾನಂ-ಮಿಾಯುವಿಕೆಯನ್ನು, ಆಚರತ್-ಮಾಡಿದನು ॥೪೦॥ಸನಾತನಂ-ಶಾಶ್ವತವಾದ, ಬ್ರಹ್ಮ-ವೇದವನ್ನು, ಜಪನ್-ಪಠಿಸುತಲಿರುವನಾಗಿ, ತಸ್ಮಿನ್ಸಲಿಲೇ-ಆನೀರಿನಲ್ಲಿ, ನಿಮಜ್ಯ-ಮುಳುಗಿ, ಅಕ್ರೂರಃ-ಅಕ್ರೂರನು, ಸಮನ್ವಿತೌ-ಕೂಡಿರುವ, ತೌರಾಮಕೃಷ್ಣಾವೇವ-ಆರಾಮಕೃಷ್ಣರನ್ನೇ, ಅಪಶ್ಯತ್-ಕಂಡನು ॥೪೧॥ರಥಸ್ಥೌ-ಬಂಡಿಯಲ್ಲಿಕುಳಿತಿರುವ, ಆನಕದುಂದುಭೇಸ್ಸುತೌ-ವಸುದೇವನಪುತ್ರರಾದ, ತೌ-ಆರಾಮ

---

ಯ್ದನು ॥೩೫॥ ಗೋಪಸ್ತ್ರೀಯರುಗಳು ರಥಧ್ವಜವು ಎಷ್ಟುಪರ್ಯಂತವೂ ಕಾಣಲ್ಪಡುವುದೋ ಮತ್ತು ತೇರಿನ ಧೂಳಿಯೆಷ್ಟುಪರ್ಯಂತವೂ ಕಾಣಲ್ಪಡುವುದೋ, ಅಷ್ಟುಪರ್ಯಂತವೂ ನೋಡುತ್ತ ಚಿತ್ತವಂ ಕೃಷ್ಣನಲ್ಲಿಯೇ ಇರಿಸಿಕೊಂಡು ಚಿತ್ರದ ಗೊಂಬೆಗಳಂತೆ ನಿಂತಿರ್ದರು ॥೩೬॥ ಆಸ್ತ್ರೀಯರುಗಳು ಶ್ರೀಕೃಷ್ಣನು ಹಿಂತಿರುಗಿಬರುವನೆಂಬ ಆಶೆಯಂಬಿಟ್ಟು ದೃಢಚಿತ್ತರಾಗಿ ಪ್ರಿಯನವ್ಯಾಪಾರವಂ ಗಾನಂಗೆಯ್ಯುತ ದಿವಸಗಳಂ ಕಳೆದರು ॥೩೭॥ ಎಲೈ, ರಾಯನೇ! ಶ್ರೀಕೃಷ್ಣನೂ ಬಲರಾಮನೂ ಅಕ್ರೂರನೂ ಸಹ ವಾಯುವೇಗಮುಳ್ಳ ರಥದಿಂದ ಪಾಪಹಾರಿಣಿಯಾದ ಯಮುನಾನದಿಗೆ ಹೋದರು ॥೩೮॥ ಆನದಿಯಲ್ಲಿ ಪಾದಪ್ರಕ್ಷಾಳನಾಚಮನಾದಿಗಳಂಮಾಡಿ ನೀಲಮಣಿಪ್ರಭೆಯುಳ್ಳ ನಿರ್ಮಲವಾದ ಉದಕವಂಪಾನಂಗೆಯ್ದು ವೃಕ್ಷಂಗಳ ಸಮೂಹದಲ್ಲಿ ಸಂಚರಿಸುತಲಿದ್ದರು ॥೩೯॥ ಆಯಕ್ರೂರನು ಆರಾಮಕೃಷ್ಣರಂ ರಥದಮೇಲೆಕುಳ್ಳಿರಿಸಿ ಅವರಅಪ್ಪಣೆಯಿಂದ ಯಮುನಾನದಿಯ ಮಡುವಿನಲ್ಲಿ ಶಾಸ್ತ್ರಸಮ್ಮತವಾಗಿ ಸ್ನಾನಂಗೆಯ್ದನು ॥೪೦॥ ಅಕ್ರೂರನು ಜಲದಲ್ಲಿಮುಳುಗಿ ವೇದವಂ ಜಪಿಸುವನಾಗಿ ರಾಮಕೃಷ್ಣರಂ ಜಲದಲ್ಲಿ ಕಂಡನು ॥೪೧॥ ಆಗರಾಮಕೃಷ್ಣರು

ಮಿಹಸುತಾವಾನಕದುಂದುಭೇಃ । ತರ್ಹಿಸ್ವಿತ್ಸ್ಯಂದನೇನಸ್ತ ಇತ್ಯುನ್ಮಜ್ಜ್ಯವ್ಯಚಷ್ಟಸಃ ॥೪೦॥ ತ
ತ್ರಾಪಿಚಯಥಾಪೂರ್ವಮಾಸೀನೌಪುನರೇವಸಃ । ನ್ಯಮಜ್ಜದ್ದರ್ಶನಂಯನ್ಮೇಮೃಷಾಕಿಂಸಲಿಲೇತ
ಯೋಃ ॥೪೧॥ ಭೂಯಸ್ತತ್ರಾಪಿಸೋಽದ್ರಾಕ್ಷೀತ್ಸ್ತೂಯಮಾನಂಮಹೇಶ್ವರಂ । ಸಿದ್ಧಚಾರಣಗಂಧರ್ವಪ
ತಿಭಿರಸುರೈರ್ನತಕಂಧರೈಃ ॥೪೨॥ ಸಹಸ್ರಶಿರಸಂದೇವಂಸಹಸ್ರಫಣಮೌಳಿನಂ । ನೀಲಾಂಬರಂಬಿಸ
ಶ್ವೇತಂಶೃಂಗೈಶ್ಶ್ವೇತಮಿವಸ್ಥಿತಂ ॥೪೩॥ ತಸ್ಯೋತ್ಸಂಗೇಘನಶ್ಯಾಮಂಪೀತಕೌಶೇಯವಾಸಸಂ । ಪು

---

ಕೃಷ್ಣರು, ಇಹ-ಈನೀರಿನೊಳಗೆ, ಕಥಂ-ಹೇಗಿರುವರು? ತರ್ಹಿಸ್ವಿತ್-ಇಲ್ಲಿರುವರಾದರೆ, ಸ್ಯಂದನೇ-ಬಂಡಿಯಲ್ಲಿ, ನಸ್ತಃ-ಇರು ವುದಿಲ್ಲವು. ಇತಿ-ಹೀಗೆಂದುಕೊಂಡು, ಸಃ-ಆಯಕ್ರೂರನು, ಉನ್ಮಜ್ಜ್ಯ-ನೀರಿನಿಂದಮೇಲಕ್ಕೆದ್ದು, ವ್ಯಚಷ್ಟ-ನೋಡಿದನು॥೪೦॥ ತತ್ರಾಪಿ-ಆರಥದಲ್ಲಿಯೂ, ಯಥಾಪೂರ್ವಂ-ಮುಂಚೆ ಹೇಗೋಹಾಗೆ, ಆಸೀನೌ-ಕುಳಿತಿರುವರನ್ನು, ವ್ಯಚಷ್ಟ-ನೋಡಿದನು. ಸಲಿಲೇ-ನೀರಿನಲ್ಲಿ, ಮೇ-ನನಗೆ, ತಯೋರ್ದರ್ಶನಂ-ಅವರನ್ನು ನೋಡಿದ್ದು, ಯತ್-ಯಾವುದೋ, ತತ್-ಅದು, ಮೃಷಾಕಿಂ-ಸುಳ್ಳೋಏನು? ಎಂದುಕೊಂಡು, ಸಃ-ಆಯಕ್ರೂರನು, ಪುನರೇವ-ಮರಳಿಯೂಕೂಡ, ನ್ಯಮಜ್ಜತ್-ಮುಳುಗಿದನು॥೪೧॥ ಸಃ-ಆಯಕ್ರೂರನು, ತತ್ರಾಪಿ-ಆನೀರಿನಲ್ಲಿಯೂ, ಭೂಯಃ-ಹಲವುಬಾರಿಗಳು, ಅದ್ರಾಕ್ಷೀತ್-ನೋಡಿದನು(ಯಾರನ್ನೆಂದರೆ-) ನತಕಂಧರೈಃ-ಬಗ್ಗಿದಕೊರಳುಳ್ಳ, ಸಿದ್ಧೈಃ-ಸಿದ್ಧರೆಂಬ ದೇವರ್ಕಳಿಂದಲೂ, ಗಂಧರ್ವಪತಿಭಿಃ-ಗಂಧರ್ವ ನಾಯಕರಿಂದಲೂ, ಅಸುರೈಃ-ದೈತ್ಯರಿಂದಲೂ, ಸ್ತೂಯಮಾನಂ-ಕೊಂಡಾಡಲ್ಪಡುತಲಿರುವ, ಮಹೇಶ್ವರಂ-ದೊಡ್ಡದೇವರಾದ ॥೪೨॥ಸಹಸ್ರಶಿರಸಂ-ಸಾವಿರತಲೆಗಳುಳ್ಳ, ಸಹಸ್ರಫಣಮೌಳಿನಂ-ಸಾವಿರಹೆಡೆಗಳೇ ಕಿರೀಟಗಳಾಗಿವುಳ್ಳ, ನೀಲಾಂಬರಂ-ಕಪ್ಪಾಗಿರುವ ವಸ್ತ್ರವುಳ್ಳ, ಬಿಸಶ್ವೇತಂ-ತಾವರೆಯ ದಂಟಿನಂತೆ ಬಿಳುಪಾಗಿರುವ, ಶೃಂಗೈಃ-ಸಾವಿರಶಿಖರಗಳಿಂಕೂಡಿದ, ಶ್ವೇತಮಿವ-ಬಿಳುಗಿರಿಯ ಹಾಗೆ, ಸ್ಥಿತಂ-ಇರುವ, ದೇವಂ-ದೇವರನ್ನೂ ॥೪೩॥ ತಸ್ಯ-ಸಹಸ್ರಶೀರ್ಷನಾದ ಆಶ್ವೇತಮೂರ್ತಿಯ, ಉತ್ಸಂಗೇ-ತೊಡೆಯಲ್ಲಿ, ಘನಶ್ಯಾಮಂ-ಮೇಘದಂತೆ ಶ್ಯಾಮಲವರ್ಣನೂ, ಪೀತಕೌಶೇಯವಾಸಸಂ-ಹಸುರಾದ ಪಟ್ಟೆಯ ದುಪ್ಪಟ್ಟೆಯುಳ್ಳವ

---

ರಥದಲ್ಲಿಯಿದ್ದು ಇಲ್ಲಿಗೆಬಂದಿರುವರು ರಥದಲ್ಲಿ ಇಲ್ಲವ್ರೋಏನೋಎಂದು ಮೇಲಕ್ಕೆ ತಲೆಯೆನೆತ್ತಿನೋಡಿದನು॥೪೦॥





ಯಥಾಪೂರ್ವರಾಗಿ ರಥದಲ್ಲಿರುವವರಂಕಂಡು ಪುನಃ ಮುಗಿದನು. ಅವರನೀರ್ವರಂ ನೀರಲ್ಲಿ ಕಂಡಹಾಗೆಭ್ರಮೆಯೋ ಏನೋಎಂದು ಚಿಂತಿಸುತ್ತ ॥೪೧॥ ಪುನಃ ನೀರಿನೊಳಗೆ ಸಿದ್ಧರಿಂದಲೂ ಗಂಧರ್ವರಿಂದಲೂ ನಮ್ರರಾದ ದೇವತೆಗಳಿಂದಲೂ ಸ್ತುತಿಗೆಯ್ಯಲ್ಪಡುತಲಿರುವ ಮಹಾಶೇಷನಂ ಕಂಡನು ॥೪೨॥ ಸಹಸ್ರಫಣಂಗಳಿಂದ ಮಂಡಿತನಾದ ನೀಲವಸ್ತ್ರಧಾರಿಯಾದತಾವರೆಯದಂಟಿನಂತೆ ಶುಭ್ರವರ್ಣಮುಳ್ಳವನಾದ ಅನೇಕಶಿಖರಂಗಳಿಂದಲಂಕೃತಮಾದ ಕೈಲಾಸಗಿರಿಯಂತೆ ಪ್ರಕಾಶಿಸುವ ಶೇಷನಂಕಂಡನು ॥೪೩॥ ಆಶೇಷನಮೇಲೆ ಘನಶ್ಯಾಮನಾಗಿ, ಪೀ

ರುಷಂಚತುರ್ಭುಜಂಶಾಂತಂಪದ್ಮಪತ್ರಾಯತೇಕ್ಷಣಂ ॥೪೬॥ ಚಾರುಪ್ರಸನ್ನವದನಂಚಾರುಹಾಸನಿರೀಕ್ಷಣಂ । ಸುಭ್ರೂನ್ನಸಂಚಾರುಕರ್ಣಂಸುಕಪೋಲಾರುಣಾಧರಂ ॥೪೭॥ ಪ್ರಲಂಬಪೀವರಭುಜಂತುಂಗಾಂಸೋರಸ್ಥಲಶ್ರಿಯಂ । ಕಂಬುಕಂಠಂನಿಮ್ನನಾಭಿಂವಲಿಮತ್ಪಲ್ಲವೋದರಂ ॥೪೮॥ ಬೃಹತ್ಕಟಿತಟಶ್ರೋಣಿಕರಭೋರುದ್ವಯಾನ್ವಿತಂ । ಚಾರುಜಾನುಯುಗಂಚಾರುಜಂಘಾಯುಗಳಸಂಯುತಮ್ ॥೪೯॥ ತುಂಗಗುಲ್ಫಾರುಣನಖವ್ರಾತದೀಧಿತಿಭಿರ್ವೃತಂ । ನವಾಂಗುಳ್ಯಂಗುಷ್ಠದಳೈರ್ವಿಲಸತ್ಪಾದಪಂಕಜಂ ॥೫೦॥ ಮಹಾರ್ಹಮಣಿಕವ್ರಾತಕಿರೀಟಕಟಕಾಂಗದೈಃ । ಕಟಿಸೂತ್ರಬ್ರಹ್ಮಸೂ

---

ನೂ, ಚತುರ್ಭುಜಂ-ನಾಲ್ಕುತೋಳುಳ್ಳವನೂ, ಪದ್ಮಪತ್ರಾಯತೇಕ್ಷಣಂ-ತಾವರೆಯ ಎಸಳ್ಗಳಂತೆ ನೀಳಂಗಳಾದ ಕಂಗಳುಳ್ಳವನೂ, ಶಾಂತಂ-ಸೌಮ್ಯನಾದ, ಪುರುಷಂ-ನೀಲಮೂರ್ತಿಯನ್ನೂ (ಶೇಷಶಾಯಿಯಾದ ಪರಮಾತ್ಮನನ್ನು ಕಂಡನು) ॥೪೬॥ ಆತನು ಇನ್ನೂ ಹೇಗಿದ್ದನೆಂದರೆ-ಚಾರುಪ್ರಸನ್ನವದನಂ-ಮನೋಹರವಾಗಿಯೂ ನಿರ್ಮಲನಾಗಿಯೂ ಇರುವ ಮುಖವುಳ್ಳವನು, ಚಾರುಹಾಸನಿರೀಕ್ಷಣಂ-ಚಲುವಾದ ನಗೆಯೂ ನೋಟವೂ ಉಳ್ಳವನು, ಸುಭ್ರೂನ್ನಸಂ-ಒಳ್ಳೆಯ ಹುಬ್ಬುಗಳೂ ತಕ್ಕಷ್ಟು ನೀಳವಾದ ಮೂಗೂ ಉಳ್ಳವನು, ಚಾರುಕರ್ಣಂ-ಚಲುವಾದ ಕಿವಿಗಳುಳ್ಳವನು, ಸುಕಪೋಲಾರುಣಾಧರಂ-ಚನ್ನಾದ ಕೆನ್ನೆಗಳೂ ಕೆಂಪಾದ ತುಟಿಯೂ ಉಳ್ಳವನು ॥೪೭॥ ಪ್ರಲಂಬಪೀವರಭುಜಂ-ನೀಳವಾಗಿ ಬಲಿತ ತೋಳುಗಳುಳ್ಳವನು, ತುಂಗಾಂಸೋರಸ್ಥಲಶ್ರಿಯಂ-ಉನ್ನತವಾದ ಹೆಗಲಿನ ಮತ್ತೂ ಎದೆಯ ಕಾಂತಿಯುಳ್ಳವನು, ಕಂಬುಕಂಠಂ-ಶಂಖದಂತಿರುವ ಕೊರಳುಳ್ಳವನು, ನಿಮ್ನನಾಭಿಂ-ಕುಳಿಯಾದ ಹೊಕ್ಕುಳುಳ್ಳವನು, ವಲಿಮತ್ಪಲ್ಲವೋದರಂ-ಮಡಿಚೆಗಳುಳ್ಳ ಚಿಗುರಿನಂತಿರುವ ಹೊಟ್ಟೆಯುಳ್ಳವನು ॥೪೮॥ ಬೃಹತ್... ಅನ್ವಿತಂ-ಬೃಹತ್-ಪಟ್ಟವಾದ, ಕಟಿತಟ-ಸೊಂಟದ ಬಳಿಯಣ, ಶ್ರೋಣಿ-ಅಂಡುಗಳಿಂದಲೂ, ಕರಭ-ಆನೆಯಸೊಂಡಿಲಿನಂತಿರ್ಪ-ಊರುದ್ವಯ-ತೊಡೆಗಳೆರಡರಿಂದಲೂ, ಅನ್ವಿತಂ-ಕೂಡಿದವನು, ಚಾರುಜಾನುಯುಗಂ-ಚಲುವಾದ ಮೊಣಕಾಲುಗಳೆರಡುಳ್ಳವನು, ಚಾರುಜಂಘಾಯುಗಳಸಂಯುತಂ-ಮನೋಹರವಾದ ಕಣಕಾಲುಗಳೆರಡರಿಂದ ಕೂಡಿದವನು ॥೪೯॥ ತುಂಗ.. ಭಿಃ-ತುಂಗಗುಲ್ಫ-ಉಬ್ಬಿದ ಗಣ್ಣುಗಳ, ಅರುಣನಖ-ಕೆಂಪಾದ ಉಗುರ್ಗಳ, ವ್ರಾತ-ಗುಂಪಿನ, ದೀಧಿತಿಭಿಃ-ಕಾಂತಿಗಳಿಂದ, ವೃತಂ-ಬಳಸಲ್ಪಟ್ಟಿರುವನು. ನವಾಂಗುಳ್ಯಂಗುಷ್ಠದಳೈಃ-ನವ-ಹೊಸತಾದ(ಕೋಮಲವಾದ) ಅಂಗುಳಿ-ಬೆರಳ್ಗಳ, ಅಂಗುಷ್ಠ-ಹೆಬ್ಬೆಟ್ಟುಗಳ, ದಳೈಃ-ಎಸಳ್ಗಳಿಂದ, ವಿಲಸತ್ಪಾದಪಂಕಜಂ-ಶೋಭಿಸುತಲಿರುವ ಅಡಿದಾವರೆಗಳುಳ್ಳವನು ॥೫೦॥ ಮಹಾ.... ಗದೈಃ-ಮಹಾರ್ಹ-ದೊಡ್ಡ ಪರಿಗೆತಕ್ಕ ಅಥವಾ-ದೊಡ್ಡದಾಗಿಯೂ ಯೋಗ್ಯವಾಗಿಯೂ ಇರುವ, ಮಣಿಕ-ರತ್ನಗಳ, ವ್ರಾತ-ಪುಂಜವುಳ್ಳ, ಕಿರೀಟ-ಟೊಪ್ಪಿಗೆಯಿಂದಲೂ, ಕಟಕ-ಕಡಗ, ಅಂಗದೈಃ-ತೋಳುಬಂದಿಗಳಿಂದಲೂ, ಕಟಿ....ಡಲೈಃ-ಕಟಿಸೂತ್ರ-ಉಡಿದಾರ, ಬ್ರಹ್ಮಸೂತ್ರ-ಜನಿವಾರ, ಹಾರ-ಕೊರಳಸರ, ನೂಪುರ ಕಾಲಂದಿಗೆ, ಕುಂಡಲೈಃ-ಕಿವಿದೊಡವುಗಳಿಂದಲೂ ॥೫೧॥

---

ತಾಂಬರಧಾರಿಯಾಗಿ, ಚತುರ್ಭುಜನಾಗಿ ಪದ್ಮಪತ್ರಸಮಾನಂಗಳಾದ ನೇತ್ರಂಗಳುಳ್ಳವನಾಗಿ, ಶಾಂತನಾಗಿ ॥೪೬॥ ಸುಂದರವಾದ ಪ್ರಸನ್ನವಾದ ಮುಖಮುಳ್ಳ ರಮ್ಯವಾದ ಕಟಾಕ್ಷಪ್ರಸಾರಣವೂ ಮಂದಹಾಸವೂ ಉಳ್ಳ, ಮನೋಹರವಾದ ಹುಬ್ಬುಗಳೂ ಉನ್ನತವಾದ ನಾಸಿಕವೂ ಉಳ್ಳ, ಸುಕಪೋಲಂಗಳುಳ್ಳ, ಕೆಂಪಾದ ಅಧರೋಷ್ಠಂಗಳುಳ್ಳ ॥೪೭॥ ಜೋಲುವ ಸ್ಥೂಲವಾದ ಭುಜಂಗಳುಳ್ಳ, ಉನ್ನತಂಗಳಾದ ಭುಜಶಿರಸ್ಸುಗಳುಳ್ಳ, ವಕ್ಷಸ್ಥಳದಲ್ಲಿರುವ ಲಕ್ಷ್ಮೀದೇವಿಯುಳ್ಳ, ಶಂಖದಂತೆ ಕಂಠಮುಳ್ಳ, ಹಳ್ಳವಾದ ನಾಭಿಯುಳ್ಳ, ವಳಿತ್ರಯಶೋಭಿತವಾದ ಉದರಪ್ರದೇಶಮುಳ್ಳ ॥೪೮॥ ವಿಶಾಲವಾದ ಕಟಿಪ್ರದೇಶದಿಂದಲೂ ನಿತಂಬಂಗಳಿಂದಲೂ ರಮ್ಯಂಗಳಾದ ತೊಡೆಗಳಿಂದಲೂ ಶೋಭಿತನಾದ, ಮನೋಹರಂಗಳಾದ ಮೊಣಕಾಲುಗಳಿಂದಲೂ ಜಂಘೆಗಳಿಂದಲೂ ಒಪ್ಪುತ್ತಲಿರುವ ॥೪೯॥ ಕೆಂಪಾದ ನಖಂಗಳಿಂದಲೂ ಉನ್ನತಂಗಳಾದ ಗುಲ್ಫಂಗಳಿಂದಲೂ ಅಂಗುಲೀದಳಂಗಳಿಂದಲೂ ಪ್ರಕಾಶಿಸುವ ಪಾದಪದ್ಮಂಗಳುಳ್ಳವನಾದ ॥೫೦॥ ಅನರ್ಘ್ಯರತ್ನ ಖಚಿತಂಗಳಾದ ಕಿರೀಟದಿಂದಲೂ ವಲಯದಿಂದಲೂ ಭುಜಕೀರ್ತಿಗಳಿಂದಲೂ ಕಟಿಸೂತ್ರ ಬ್ರಹ್ಮಸೂತ್ರ ಹಾರಂಗಳಿಂದಲೂ ಅಲಂಕೃತನಾದ ॥೫೧॥ ಶಂಖಚಕ್ರಗದಾಪದ್ಮಧಾರಿಯಾಗಿ ಶ್ರೀವತ್ಸದಿಂದಲೂ ಕೌಸ್ತುಭಮಣಿಯಿಂದಲೂ ವನಮಾಲೆಯಿಂದಲೂ ಶೋಭಿತ

ತ್ರಹಾರನೂಪುರಕುಂಡಲೈಃ ॥೫೧॥ ಭ್ರಾಜಮಾನಂಪದ್ಮಕರಂಶಂಖಚಕ್ರಗದಾಧರಂ । ಶ್ರೀವತ್ಸವಕ್ಷಸಂಭ್ರಾಜತ್ಕೌಸ್ತುಭಂವನಮಾಲಿನಂ ॥೫೨॥ ಸುನಂದನಂದಪ್ರಮುಖೈಃ ಪಾರ್ಷದೈಸ್ಸನಕಾದಿಭಿಃ । ಸುರೇಶೈರ್ಬ್ರಹ್ಮರುದ್ರಾದ್ಯೈರ್ನವಭಿಶ್ಚ ದ್ವಿಜೋತ್ತಮೈಃ ॥೫೩॥ ಪ್ರಹ್ಲಾದನಾರದವಸುಪ್ರಮುಖೈರ್ಭಾಗವತೋತ್ತಮೈಃ । ಸ್ತೂಯಮಾನಂಪೃಥಗ್ಭಾವೈರ್ವಚೋಭಿರಮಲಾತ್ಮಭಿಃ ॥೫೪॥ ಶ್ರಿಯಾಪುಷ್ಟ್ಯಾಗಿರಾಕೀರ್ತ್ಯಾಕಾಂತ್ಯಾತುಷ್ಟ್ಯೇಲಯೋರ್ಜಯಾ । ವಿದ್ಯಯಾವಿದ್ಯಯಾಶಕ್ತ್ಯಾಮಾಯಯಾಚನಿಷೇವಿತಂ ॥೫೫॥ ವಿಲೋಕ್ಯಸುಭೃಶಂಪ್ರೀತೋಭಕ್ತ್ಯಾಪರಮಯಾಯುತಃ । ಹೃಷ್ಯತ್ತನೂರುಹೋಭಾವಪರಿಕ್ಲಿನ್ನಾತ್ಮಲೋಚನಃ ॥೫೬॥ ಗಿರಾಗದ್ಗದಯಾಸ್ತೌ

---

ಭ್ರಾಜಮಾನಂ-ಬೆಳಗುತಲಿರುವನೂ, ಪದ್ಮಕರಂ-ತಾವರೆಯ ಹುವ್ವುಕೈಯಲ್ಲಿ ಉಳ್ಳವನೂ, ಶಂಖಚಕ್ರಗದಾಧರಂ-ಶಂಖ-ಪಾಂಚಜನ್ಯವೆಂಬ ಸಂಕನ್ನು, ಚಕ್ರ-ಸುದರ್ಶನವನ್ನು. ಗದಾ-ಕೌಮೋದಕಿಯನ್ನು, ಧರಂ-ಕೈಯಲ್ಲಿ ವಹಿಸಿದವನೂ, ಶ್ರೀವತ್ಸವಕ್ಷಸಂ-ಶ್ರೀವತ್ಸವೆಂಬಮಚ್ಚೆಯೇಎದೆಯಲ್ಲಿಉಳ್ಳವನೂ,ಭ್ರಾಜತ್ಕೌಸ್ತುಭಂ-ಬೆಳಗುತ್ತಿರುವಕೌಸ್ತುಭವೆಂಬರತ್ನವುಳ್ಳವನೂ ವನಮಾಲಿನಂ-ತುಲಸಿಯ ತೋಮಾಲೆಯುಳ್ಳವನೂ॥೫೨॥ಸುನಂದನಂದಪ್ರಮುಖೈಃ-ಸುನಂದನು ನಂದನು ಮೊದಲಾದ, ಪಾರ್ಷದೈಃ-ಸಭಿಕರಿಂದಲೂ, ಸನಕಾದಿಭಿಃ-ಸನಕನು ಮೊದಲಾದ ಜ್ಞಾನಿಗಳಿಂದಲೂ, ಬ್ರಹ್ಮರುದ್ರಾದ್ಯೈಃ-(ಸದ್ರೂಪ ಚಿದ್ರೂಪ ಮುಂತಾದ) ಅಥವಾ-ಚತುರ್ಮುಖ ಬ್ರಹ್ಮನೂ ನೀಲಲೋಹಿತನೆಂಬ ಕಾರ್ಯರುದ್ರನೂ ಮೊದಲಾದ, ಸುರೇಶೈಃ-ದೇವನಾಯಕರಿಂದಲೂ, ದ್ವಿಜೋತ್ತಮೈಃ-ಬ್ರಾಹ್ಮಣಶ್ರೇಷ್ಠರಾದ, ನವಭಿಃ-ಮರೀಚ್ಯಾದಿ ನವಪ್ರಜಾಪತಿಗಳಿಂದಲೂ॥೫೩॥ಪೃಥಗ್ಭಾವೈಃ-ಬೇರೆಬೇರೆ ಅಭಿಪ್ರಾಯವುಳ್ಳ, ಪ್ರಹ್ಲಾದನಾರದವಸುಪ್ರಮುಖೈಃ-ಪ್ರಹ್ಲಾದನುನಾರದನು ಉಪರಿಚರ-ವಸು ಮೊದಲಾದ, ಭಾಗವತೋತ್ತಮೈಃ-ಭಗವದ್ಭಕ್ತಶ್ರೇಷ್ಠರಿಂದಲೂ, ಅಮಲಾತ್ಮಭಿಃ-ನಿರ್ಮಲಜ್ಞಾನಿಗಳಿಂದಲೂ, ಸ್ತೂಯಮಾನಂ-ಕೊಂಡಾಡಲ್ಪಡುತ ಲಿರುವನೂ॥೫೪॥ ಶ್ರಿಯಾ-ಲಕ್ಷ್ಮಿಯಿಂದಲೂ, ಪುಷ್ಟ್ಯಾ-ಪುಷ್ಟಿಯಿಂದಲೂ, ಕೀರ್ತ್ಯಾ-ಕೀರ್ತಿಯಿಂದಲೂ, ಕಾಂತ್ಯಾ-ಕಾಂತಿಯಿಂದಲೂ, ತುಷ್ಟ್ಯಾ-ತುಷ್ಟಿಯಿಂದಲೂ, ಇಲಯಾ-ಇಳೆಯಿಂದಲೂ, ಊರ್ಜಯಾ-ಊರ್ಜೆಯಿಂದಲೂ, ವಿದ್ಯಯಾ-ಮೋಚಕಜ್ಞಾನದಿಂದಲೂ, ಅವಿದ್ಯಯಾ-ಬಂಧಕಜ್ಞಾನದಿಂದಲೂ,ಮಾಯಯಾ-ಕಾರಣಜ್ಞಾನದಿಂದಲೂ,(ಎಂಬತತ್ತದಭಿಮಾನಿದೇವತೆಯರಿಂದ ೧೨ಶಕ್ತಿಯರಿಂದಲೂ)ಚಕಾರದಿಂದ, ಹ್ಲಾದಿನಿ ಮೊದಲಾದ ಅನಂತಶಕ್ತಿಯರಿಂದಲೂ, ನಿಷೇವಿತಂ-ಅಧಿಕವಾಗಿಸೇವಿಸಲ್ಪಡುತಇರುವನೂ ಆದನಾರಾಯಣನನ್ನು ॥೫೫॥ ವಿಲೋಕ್ಯ-ನೋಡಿ, ಸುಭೃಶಂ-ಅಧಿಕವಾಗಿ, ಪ್ರೀತಃ-ಪ್ರೇಮವುಳ್ಳವನೂ, ಪರಮಯಾ-ಉತ್ಕೃಷ್ಟವಾದ, ಭಕ್ತ್ಯಾ-ಸೇವೆಯಿಂದಲೂ, ಯುತಃ-ಕೂಡಿದವನೂ, ಆದ್ದರಿಂದಲೇ, ಹೃಷ್ಯತ್ತನೂರುಹಃ-ಸಂತಸಗೊಂಬ ನಿಗುಡುಗೂದಲುಳ್ಳವನು, ಭಾವಪರಿಕ್ಲಿನ್ನಾತ್ಮಲೋಚನಃ-ಭಾವ-ಸಮ್ಯಕೃಷ್ಣನೇ ಈಪರಮೇಶ್ವರನೆಂಬ ಭಾವದಿಂದ, ಪರಿಕ್ಲಿನ್ನ-ಆನಂದಾಶ್ರುಗಳುಕ್ಕುತ್ತಿರುವ, ಲೋಚನಃ-ಕಂಗಳುಳ್ಳವನೂಆವ ॥೫೬॥ ಸಾತ್ವತಃ-ಯಾದವನೂಸಾತ್ವಿಕನೂ ಆದಅಕ್ರೂರನು, ಸತ್ವಂ-ಸತ್ವಗುಣವನ್ನು, ಮತ್ತು-ಸಾಮರ್ಥ್ಯವನ್ನು, ಆಲಂಬ್ಯ-ಆಶ್ರಯಿಸಿ, ಮೂರ್ಧ್ನಾ-ಪಮುಖವಾದ ತಲೆಯೊಡನೆ, ಅವಹಿತಃ-ಅವಧಾನವುಳ್ಳವನಾಗಿ, ಕೃತಾಂಜಲಿಪುಟಃ-ಜೋಡಿಸಿಕೊಳ್ಳಲ್ಪಟ್ಟ ಕೈಗಳುಳ್ಳವನಾಗಿ,

---

ನಾಗಿ ॥೫೨॥ ಸುನಂದನಂದಮುಂತಾದ ಪರಿವಾರಜನದಿಂದಲೂ ಸನಕಾದಿಗಳಿಂದಲೂ ಬ್ರಹ್ಮರುದ್ರಾದಿದೇವೇಶ್ವರರಿಂದಲೂ ಮರೀಚ್ಯಾದಿ ಪ್ರಜೇಶ್ವರರಿಂದಲೂ ॥೫೩॥ ಪ್ರಹ್ಲಾದ ನಾರದವಸುಗಳು ಮುಂತಾದ ಭಾಗವತರಿಂದಲೂ ಬೇರೆಬೇರೆ ನಾನಾಪ್ರಕಾರಂಗಳಾಗಿ ಸ್ತುತಿಸಲ್ಪಡುವನಾಗಿ ॥೫೪॥ ಶ್ರೀದೇವಿಯಿಂದಲೂ ಪುಷ್ಟಿದೇವಿಯಿಂದಲೂ ವಾಗ್ದೇವಿಯಿಂದಲೂ ಕೀರ್ತಿದೇವಿಯಿಂದಲೂ ಕಾಂತಿದೇವಿಯಿಂದಲೂ ತುಷ್ಟಿದೇವಿಯಿಂದಲೂಇಳಾದೇವಿಯಿಂದಲೂ ಶಕ್ತಿದೇವಿಯಿಂದಲೂ ಮಾಯಾದೇವಿಯಿಂದಲೂ ಸೇವಿತನಾದ ॥೫೫॥ ಪರಮಪುರುಷನಂ ನೋಡಿ, ಪ್ರೀತನಾಗಿ ಪರಮಭಕ್ತಿಯುಕ್ತನಾಗಿ ರೋಮಾಂಚಿತನಾಗಿ ಆನಂದ ಬಾಷ್ಪಂಗಳಿಂ ನೆನೆಸಲ್ಪಟ್ಟ ನೇತ್ರಂಗಳುಳ್ಳವನಾಗಿ ॥೫೬॥ ಅಕ್ರೂರನು ಸತ್ವಗುಣವನವಲಂಬಿಸಿ ಗದ್ಗದವಾಕ್ಯದಿಂದ ಸ್ತುತಿಗೆಯ್ದನು-ಶಿರಸ್ಸಿ

ಸ್ತೋತ್ರಸತ್ವಮಾಲಂಬ್ಯಸಾತ್ತ್ವತಃ । ಪ್ರಣಮ್ಯಮೂರ್ಧ್ನಾವಹಿತಃಕೃತಾಂಜಲಿಪುಟಃಶನೈಃ ॥೫೭॥
ಇತಿ ಶ್ರೀಮದ್ಭಾಗವತೇ-ದಶಮಸ್ಕಂಧೇ-ಏಕೋನಚತ್ವಾರಿಂಶೋಽಧ್ಯಾಯಃ.

ಅಕ್ರೂರಕೃತ ಶ್ರೀಕೃಷ್ಣಸ್ತುತಿಃ.

ಅಕ್ರೂರಃ ॥ ನತೋಽಸ್ಮ್ಯಹಂತ್ವಾಖಿಲಹೇತುಹೇತುಂನಾರಾಯಣಂಪೂರುಷಮಾದ್ಯಮವ್ಯಯಂ ।ಯ

---

ಶನೈಃ-ಮೆಲ್ಲಗೆ, ಗದ್ಗದಯೊಗಿರಾ-ಬಿಗ್ಗುತ್ತಿಗೆಯ ಸ್ವರದಿಂದ, ಅಸ್ತೌಷೀತ್-ಸ್ತೋತ್ರಮಾಡಿದನು ॥೫೭॥

ಇತಿಶ್ರೀಮದ್ಭಾಗವತೇ ದಶಮಸ್ಕಂಧೇ
ಏಕೋನಚತ್ವಾರಿಂಶೋಽಧ್ಯಾಯಃ.



೪೦ನೆಯಅಧ್ಯಾಯದ ಪ್ರತಿಪದಟೀಕೆ.

[ಅಕ್ರೂರಸ್ತುತಿ.] ಹೇಕೃಷ್ಣ-ಓಕೃಷ್ಣನೇ! ಏಷಲೋಕಃ-ಈಪ್ರಪಂಚವು, ಯತಃ-ಯಾವವನದೆಸೆಯಿಂದಾಯಿತೋ ಸಬ್ರಹ್ಮಾ-ಆಚತುರ್ಮುಖ ಬ್ರಹ್ಮನು, ಯನ್ನಾಭಿಜಾತಾತ್-ಯಾವವನ ಹೊಕ್ಕುಳಿನಿಂದಹುಟ್ಟಿದ,ಅರವಿಂದಕೋಶಾತ್-ಕಮಲದ ಗರ್ಭದದೆಸೆಯಿಂ,ಆವಿರಾಸೀತ್-ಉದಿಸಿದನೋ; ಆದ್ಯಂಪೂರುಷಂ ಮೊದಲನೆಯ ಪುರುಷನಾಗಿರುವ,ಅವ್ಯಯಂ-ಆದ್ಯಂತಗಳಿಲ್ಲದ, ಅಖಿಲಹೇತುಹೇತುಂ-ಸಕಲಪದಾರ್ಥಗಳಿಗೂ ಕಾರಣನಾದ ಪಂಚಮಹಾ ಭೂತಗಳಿಗೂ ಕಾರಣವಾದ,ನಾರಾಯಣಂ-

---

ನಿಂದ ನಮಸ್ಕರಿಸಿ ಏಕಾಗ್ರಚಿತ್ತನಾಗಿಅಂಜಲಿಬಂಧವಂ ಮಾಡಿಕೊಂಡು ಭಗವಂತನಂ ಸ್ತುತಿಸಿದನು॥ ॥೫೭॥
ಇಂತು ಶುಕಮುನಿಯು ಪರೀಕ್ಷಿದ್ರಾಯನಿಗೆ ನಿರೂಪಿಸಿದನೆಂದು ಸೂತಪೌರಾಣಿಕನು ನೈಮಿಶಾ
ರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಹೇಳಿದನೆಂಬಲ್ಲಿಗೆ ಶ್ರೀಮನ್ಮಹೀಶೂರಪುರವ
ರಾಧೀಶ ಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜ ವಿರಚಿತವಪ್ಪ ಶ್ರೀ
ಭಾಗವತದ ಶ್ರೀಕೃಷ್ಣರಾಜ ವಾಣೀವಿಲಾಸವು ಎಂಬಕರ್ಣಾಟಕ
ಭಾಷಾವ್ಯಾಖ್ಯಾನದಲ್ಲಿದಶಮಸ್ಕಂಧದೊಳ್ಮೂರ್ವತ್ತೊಂಭತ್ತನೆಯ
ಅಧ್ಯಾಯವು ಸಂಪೂರ್ಣವಾದುದು.
ಮಂಗಳಮಸ್ತು



೪೦ನೆಯಅಧ್ಯಾಯದತಾತ್ಪರ್ಯವು.

ಶ್ರೀಧರೀಯಶ್ಲೋಕಃ ॥ಚತ್ವಾರಿಂಶೇತತೋಽಕ್ರೂರಃಕೃಷ್ಣಂವಿಶ್ವೇಶ್ವರೇಶ್ವರಂ । ಪ್ರಣಮ್ಯಭಕ್ತ್ಯಾತುಷ್ಟಾವಸಗುಣಾಗುಣಭೇದತಃ ॥ ॥ ನಾಲ್ವತ್ತನೆಯಅಧ್ಯಾಯದಲ್ಲಿ ಅಕ್ರೂರನು ಕೃಷ್ಣನಂಲೋಕೇಶ್ವರರಾದ ಬ್ರಹ್ಮಾದಿಗಳಿಗೂ ನಿಯಾಮಕನನ್ನಾಗಿತಿಳಿದು ಭಕ್ತಿಯಿಂದನಮಸ್ಕರಿಸಿ ಆಶ್ರೀಕೃಷ್ಣದೇವನ ಸಗುಣಸ್ವರೂಪವಂನಿರ್ಗುಣಸ್ವರೂಪವಂಸಹ ಸ್ತುತಿಸಿದನೆಂಬರ್ಥವಂ ಶ್ರೀಶುಕಮುನಿಯು ಪರೀಕ್ಷಿದ್ರಾಯನಂಕುರಿತು ನಿರೂಪಿಸಿದವಿವರವೆಂತೆಂದಲೆ?-

(ಎಲೈಅರಸೇ! ಅಕ್ರೂರನು ಈರೀತಿಯಲ್ಲಿಭಗವಂತನಂಜಲದಲ್ಲಿಕಂಡು ಸ್ತುತಿಸಿದನದೆಂತೆನೆ-) ಈಸಮಸ್ತಲೋಕಸ್ಸೃಷ್ಟಿಕರ್ತೃವಾದಬ್ರಹ್ಮನು ಯಾವಭಗವಂತನನಾಭಿಯಲ್ಲಿಹುಟ್ಟಿದಪದ್ಮದಿಂದ ಆವಿರ್ಭವಿಸಿದನೋ

ನ್ನಾಭಿಜಾತಾದರವಿಂದಕೋಶಾದ್ಬ್ರಹ್ಮಾವಿರಾಸೀದ್ಯತ ಏಷ ಲೋಕಃ ॥೧॥ ಭೂಸ್ತೋಯಮಗ್ನಿಃ ಪವನಃ ಖಮಾದಿರ್ಮಹಾನಜಾದಿರ್ಮನ ಇಂದ್ರಿಯಾಣಿ । ಸರ್ವೇಂದ್ರಿಯಾರ್ಥಾ ವಿಬುಧಾಶ್ಚ ಸರ್ವೇ ಯೇ ಹೇತವಸ್ತೇ ಜಗತೋಂಗಭೂತಾಃ ॥೨॥ ನೈತೇ ಸ್ವರೂಪಂ ವಿದುರಾತ್ಮನಸ್ತೇ ಅಜಾದಯೋನಾತ್ಮತಯಾ ಗೃಹೀತಾಃ । ಅಜೋನುಬದ್ಧಃ ಸ ಗುಣೈರಜಾಯಾ ಗುಣಾತ್ಪರಂ ವೇದ ನ ತೇ ಸ್ವರೂಪಂ ॥೩॥ ತ್ವಾಂ ಯೋಗಿನೋ ಯಜಂತ್ಯದ್ಧಾ ಮಹಾಪುರುಷಮೀಶ್ವರಂ । ಸಾಧ್ಯಾತ್ಮಂ ಸಾಧಿಭೂತಂ ಚ ಸಾಧಿದೈವಂ ಚ ಸಾಧವಃ ॥೪॥ ತ್ರಯ್ಯಾ ಚ ವಿದ್ಯಯಾ ಕೇಚಿತ್ತ್ವಾಂ ವೈ ವೈತಾನಿಕಾ ದ್ವಿಜಾಃ । ಯಜಂತೇ ವಿವಿಧೈರ್ಯಜ್ಞೈರ್ನಾನಾರೂಪಾಮರಾಖ್ಯಯಾ ॥೫॥ ಏಕೇ ತ್ವಾಖಿಲಕರ್ಮಾಣಿ ಸನ್ನ್ಯಸ್ಯೋಪಶಮಂ ಗತಾಃ । ಜ್ಞಾನಿ

---

ನಾರಾಯಣನೇ ಆಗಿರುವ, ತಂ ತ್ವಾ-ಆ ನಿನ್ನನ್ನು, ಅಹಂ-ನಾನು, ನತೋಽಸ್ಮಿ-ನಮಸ್ಕರಿಸಿದವನಾದೆನು ॥೧॥ ಭೂಃ-ಭೂಮಿ, ತೋಯಂ-ನೀರು, ಅಗ್ನಿಃ-ತೇಜಸ್ಸು, ಪವನಃ-ವಾಯು, ಖಂ-ಆಕಾಶ, ಆದಿಃ-ಭೂತಾದಿಯಾದ ಅಹಂಕಾರ, ಮಹಾನ್-ಮಹತ್ತತ್ತ್ವ-ಅಜಾ-ಪ್ರಕೃತಿ, ಆದಿಃ-ಪುರುಷನು, ಮನಃ-ಅಂತಃಕರಣ, ಇಂದ್ರಿಯಾಣಿ-ಶ್ರೋತ್ರಾದಿಕರಣಗಳು, ಸರ್ವೇಂದ್ರಿಯಾರ್ಥಾಃ-ಶಬ್ದಾದಿ ಸಕಲವಿಷಯಗಳು, ಸರ್ವೇ ವಿಬುಧಾಃ-ಸಕಲದೇವತೆಗಳೂ, ಜಗತಃ-ಪ್ರಪಂಚಕ್ಕೆ, ಹೇತವಃ-ಕಾರಣಗಳು, ಯೇ-ಯಾವವೋ, ತೇ ಚ-ಅವುಗಳೂ ಕೂಡ, ತೇ-ನಿನಗೆ, ಅಂಗಭೂತಾಃ-ಶರೀರವಾಗಿರುವವು. ಅಥವಾ-ಅಂಗದಿಂದ ಆದವು ॥೨॥ ಅನಾತ್ಮತಯಾ-ಜಡಗಳಾಗಿರುವುದರಿಂದ, ಗೃಹೀತಾಃ-ಪ್ರತ್ಯಕ್ಷಾದಿಗಳಿಂದ ಗ್ರಹಿಸಲ್ಪಟ್ಟವಾದ, ತೇ ಅಜಾದಯಃ-ಅವಾಯ ಮೊದಲಾದ ತತ್ವಗಳು, ತೇ-ನಿನ್ನ, ಸ್ವರೂಪಂ-ಚಿನ್ಮಾತ್ರವನ್ನು, ನವಿದುಃ-ಅರಿಯರು ॥ ಸೋಽಜಃ-ಆಜೀವನೂ ಕೂಡ (ಬ್ರಹ್ಮನೂ ಕೂಡ) ಅಜಾಯಾಃ-ಪ್ರಕೃತಿಯ, ಗುಣೈಃ-ಸತ್ವರಜಸ್ತಮಸ್ಸುಗಳಿಂದ, ಬದ್ಧಃ ನು-ಕಟ್ಟಲ್ಪಟ್ಟವನಾಗಿರುವನಲ್ಲವೆ? ಗುಣಾತ್-ಪ್ರಾಕೃತಗುಣಕ್ಕಿಂತಲೂ, ಪರಂ-ಅತೀತವಾದ, ತೇ-ನಿನ್ನ, ಸ್ವರೂಪಂ-ಯಾಥಾರ್ಥ್ಯವನ್ನು, ನವೇದ-ಅರಿಯನು ॥೩॥ ಅದ್ಧಾ-ಆದರೂ, ಸಾಧವಃ-ಸಾಧುಗಳಾದ, ಯೋಗಿನಃ-ಹಿರಣ್ಯಗರ್ಭಾದಿಯೋಗಿಗಳು, ಸಾಧ್ಯಾತ್ಮಂ-ಅಧ್ಯಾತ್ಮದಿಂ ಕೂಡಿದ, ಸಾಧಿಭೂತಂ-ಅಧಿಭೂತದಿಂ ಸಹಿತವಾದ, ಸಾಧಿದೈವಂ-ಅಧಿದೈವದಿಂ ಬೆರಸಿದ, ಈಶ್ವರಂ-ಅಂತರ್ಯಾಮಿಯಾದ, ಮಹಾಪುರುಷಂ-ಪುರುಷೋತ್ತಮನಾದ, ತ್ವಾಂ-ನಿನ್ನನ್ನು, ಯಜಂತಿ-ಭಜಿಸುತಲಿರುವರು ॥೪॥ ವೈತಾನಿಕಾಃ-ಕರ್ಮಯೋಗಿಗಳಾದ, ಕೇಚಿತ್ ದ್ವಿಜಾಃ-ಕೆಲವರು ಬ್ರಾಹ್ಮಣರು, ತ್ರಯ್ಯಾ ವಿದ್ಯಯಾ ಚ-ಕರ್ಮಮಾರ್ಗದಿಂದ, ವಿವಿಧೈಃ ಯಜ್ಞೈಃ-ಹಲವು ಬಗೆಯ ಯಜ್ಞಗಳಿಂದ, ನಾನಾರೂಪಾಮರಾಖ್ಯಯಾ-ನಾನಾರೂಪ-ಅಗ್ನೀಷೋಮೇಂದ್ರ ವರುಣ ವಾಯ್ವಾದಿರೂಪಗಳುಳ್ಳ, ಅಮರ-ದೇವತೆಗಳ, ಆಖ್ಯಯಾ-ಹೆಸರಿನಿಂದ, ತ್ವಾಂ ವೈ-ನಿನ್ನನ್ನೇ, ಯಜಂತೇ-ಭಜಿಸುತಲಿರುವರು ॥೫॥ ಏಕೇ-ಕೆಲವರು, ಅಖಿಲಕರ್ಮಾಣಿ-ಸಕಲ ಕೆಲಸಗಳನ್ನೂ, ಸನ್ನ್ಯಸ್ಯ-ಬಿಟ್ಟು, ಉಪಶಮಂ-ಶಾಂತಿಯನ್ನು, ಗತಾಃ-ಹೊಂದಿದವರಾದ, ಜ್ಞಾನಿನಃ-ಬ್ರಹ್ಮವೇತ್ತರು, ಜ್ಞಾನವಿಗ್ರಹಂ-ಜ್ಞಾನಮೂರ್ತಿಯಾದ, ತ್ವಾ-ನಿನ್ನನ್ನು, ಜ್ಞಾನಯಜ್ಞೇನ-ಜ್ಞಾನರೂಪವಾದ ಯಜ್ಞ

---

ಸಮಸ್ತಕ್ಕೂ ಕಾರಣಂಗಳಾದ ಪಂಚಭೂತಂಗಳಿಗೂ ಕಾರಣನಾದ ಆದಿಪುರುಷನಾದ ನಾರಾಯಣನಾದ ಅಂಥಾ ನಿನ್ನಂ ನಮಸ್ಕರಿಸುವೆನು ॥೧॥ ಭೂಮಿಯು ಅಗ್ನಿಯು ಜಲವು ವಾಯುವು ಆಕಾಶವು ಅಹಂಕಾರವು ಮಹತ್ತತ್ತ್ವವು ಮಾಯೆಯು ಪುರುಷನು ಮನಸ್ಸು ಇಂದ್ರಿಯಗಳು ಸರ್ವವಿಷಯಂಗಳು ಸಮಸ್ತದೇವತೆಗಳು ಜಗತ್ತಿಗೆ ಸೃಷ್ಟಿಕಾರಣಭೂತಂಗಳಾದವು ಆವುವುಂಟೋ ಅವೆಲ್ಲವು ನಿನ್ನ ಅವಯವಂಗಳು ॥೨॥ ಅನಾತ್ಮಭೂತಂಗಳಾದ ಮಾಯೆ ಮೊದಲಾದ ವಸ್ತುಗಳು ಪರಮಾತ್ಮನಾದ ನಿನ್ನ ಸ್ವರೂಪವನರಿಯವು. ಬ್ರಹ್ಮನು ಕೂಡ ಮಾಯಾಬದ್ಧನಾಗಿ ಸತ್ವಾದಿಗುಣಾತೀತವಾದ ನಿನ್ನ ಸ್ವರೂಪವಂ ಅರಿಯನು ॥೩॥ ಸಾಧುಗಳಾದ ಯೋಗಿಗಳು ಅಧ್ಯಾತ್ಮ ಅಧಿಭೂತ ಅಧಿದೈವತವುಗಳಿಂ ಯುಕ್ತನಾದ ಮಹಾಪುರುಷನಾದ ಈಶ್ವರನಾದ ನಿನ್ನಂ ಭಜಿಸುವರು ॥೪॥ ಕರ್ಮನಿಷ್ಠರಾದ ಬ್ರಾಹ್ಮಣರು ಕರ್ಮಪ್ರತಿಪಾದಕಮಾದ ಭೇದದಿಂದ ನಾನಾರೂಪಂಗಳಾದ ಅಗ್ನಿಷ್ಟೋಮಾದಿಯಾಗಗಳಿಂದ ಇಂದ್ರಾಗ್ನಿ ವರುಣಾದಿನಾಮಭೇದಂಗಳಿಂದ ಪ್ರತಿಪಾದ್ಯನಾದ ನಿನ್ನಂ ಆರಾಧಿಸುವರು ॥೫॥ ಕೇವಲ ಮಹಾಯೋಗಿಗಳು ಸಮಸ್ತ ಕರ್ಮಂಗಳಂ ನಿನ್ನಲ್ಲಿ ಸಮರ್ಪಿಸಿ ಉಪಶಾಂತರಾಗಿ ಜ್ಞಾನಸ್ವರೂಪನಾದ ನಿನ್ನಂ ಜ್ಞಾನಯಜ್ಞದಿಂದ ಆರಾಧ

**ಸೋಽಜ್ಞಾನಯಜ್ಞೇನ ಯಜಂತಿ ಜ್ಞಾನವಿಗ್ರಹಂ ॥೬॥ ಅನ್ಯೇ ಚ ಸಂಸ್ಕೃತಾತ್ಮಾನೋ ವಿಧಿನಾಭಿಹಿತೇನ ತೇ। ಯಜಂತಿ ತ್ವನ್ಮಯಾಸ್ತ್ವಾಂ ವೈ ಬಹುಮೂರ್ತ್ಯೇಕಮೂರ್ತಿಕಂ ॥೭॥ ತ್ವಾಮೇವಾನ್ಯೇ ಶಿವೋಕ್ತೇನ ಮಾರ್ಗೇಣ ಶಿವರೂಪಿಣಂ । ಬಹ್ವಾಚಾರ್ಯವಿಭೇದೇನ ಭಗವನ್ ಸಮುಪಾಸತೇ ॥೮॥ ಸರ್ವ ಏವ ಯಜಂತಿ ತ್ವಾಂ ಸರ್ವದೇವಮಯೇಶ್ವರಂ । ಯೇಽನ್ಯಾನ್ಯದೇವತಾಭಕ್ತಾ ಯದ್ಯಪ್ಯನ್ಯಧಿಯಃ ಪ್ರಭೋ ॥೯॥ ಯಥಾದ್ರಿಪ್ರಭವಾ ನದ್ಯಃ ಪರ್ಜನ್ಯಾಪೂರಿತಾಃ ವಿಭೋ । ವಿಶಂತಿ ಸರ್ವತಃ ಸಿಂಧುಂ ತದ್ವತ್ತ್ವಾಂ ಗತಯೋಽಂತತಃ ॥೧೦॥ ಸತ್ತ್ವಂ ರಜಸ್ತಮ ಇತಿ ಭವತಃ ಪ್ರಕೃತೇರ್ಗುಣಾಃ । ತೇಷು ಹಿ ಪ್ರಾಕೃತಾಃ ಪ್ರೋತಾ ಆಬ್ರಹ್ಮಸ್ಥಾವರಾದಯಃ ॥೧೧॥ ತುಭ್ಯಂ ನಮಸ್ತೇ ತ್ವವಿಷಕ್ತದೃಷ್ಟಯೇ ಸರ್ವಾತ್ಮನೇ ಸರ್ವಧಿಯಾಂ**

---

ಕರ್ಮದಿಂದ, ಯಜಂತಿ-ಪೂಜಿಸುವರು ॥೬॥ ಅನ್ಯೇ ಚ-ಇತರರಾದರೋ, ಸಂಸ್ಕೃತಾತ್ಮಾನಃ-ಶೈವವೈಷ್ಣವದೀಕ್ಷೆಗಳಿಂದ ಶುದ್ಧಿಗೊಳಿಸಲ್ಪಟ್ಟ ದೇಹವುಳ್ಳವರಾಗಿ, ತೇ-ನಿನ್ನಿಂದ, ಅಭಿಹಿತೇನ-ಹೇಳಲ್ಪಟ್ಟ, ವಿಧಿನಾ-ಪಾಂಚರಾತ್ರಾದ್ಯಾಗಮವಿಧಿಯಿಂದ, ತ್ವನ್ಮಯಾಃ-ನಿನ್ನ ಪ್ರಾಚುರ್ಯವುಳ್ಳವರಾಗಿ, ಬಹುಮೂರ್ತ್ಯೇಕಮೂರ್ತಿಕಂ-ಹಲವು ರೂಪನಾಗಿಯೂ, ಒಂದೇ ರೂಪನಾಗಿಯೂ ಇರುವ, ತ್ವಾಂ ವೈ-ನಿನ್ನನ್ನೇ, ಯಜಂತಿ-ಪೂಜಿಸುವರು ॥೭॥ ಭಗವನ್-ಕೃಷ್ಣನೇ! ಅನ್ಯೇ-ಬೇರೆ ಜನಗಳು, ಬಹ್ವಾಚಾರ್ಯವಿಭೇದೇನ-ಬಹ್ವಾಚಾರ್ಯ-ಪಾಶುಪತರು, ಮಾಹೇಶ್ವರರು, ಶೈವರು, ಕಾಪಾಲಿಕರು, ವೀರಶೈವರು ಮೊದಲಾದ ಬಹುಮಂದಿ ಮತಪ್ರವರ್ತಕರ, ವಿಭೇದೇನ-ಸಂಪ್ರದಾಯ ಭೇದಗಳುಳ್ಳ, ಶಿವೋಕ್ತೇನ ಮಾರ್ಗೇಣ-ಶಿವನಿಂದ ಹೇಳಲ್ಪಟ್ಟ ಪಾಶುಪತ ಕಾಮಿಕಾದ್ಯಾಗಮಗಳ ದಾರಿಯಿಂದ, ಶಿವರೂಪಿಣಂ-ಮಂಗಳ ಸ್ವರೂಪನಾಗಿರುವ, ತ್ವಾಮೇವ-ನಿನ್ನನ್ನೇ, ಸಮುಪಾಸತೇ-ಆರಾಧಿಸುತ್ತಿರುವರು ॥೮॥ ಪ್ರಭೋ-ಒಡೆಯನೇ! ಯೇ-ಯಾರು, ನಾನಾದೇವತಾಭಕ್ತಾಃ-ಹಲವು ದೇವತೆಗಳಿಗೆ ಭಕ್ತರಾಗಿರುವರೋ, ತೇ-ಅವರು, ಅನ್ಯಧಿಯೋ ಯದ್ಯಪಿ-ಬೇರೆ ಬುದ್ಧಿಯುಳ್ಳವರಾದರೂ, ತೇ ಸರ್ವ ಏವ-ಅವರೆಲ್ಲರೂ ವೆ, ಸರ್ವದೇವಮಯೇಶ್ವರಂ-ಸರ್ವದೇವತಾಮಯನಾದ ಅಂತರ್ಯಾಮಿಯಾಗಿರುವ, ತ್ವಾಂ-ನಿನ್ನನ್ನು, ಯಜಂತಿ-ಪೂಜಿಸುವರು ॥೯॥ ವಿಭೋ-ವ್ಯಾಪಕನಾದ ವಿಷ್ಣುವೇ! ಅದ್ರಿಪ್ರಭವಾಃ-ಬೆಟ್ಟಗಳಿಂದ ಹುಟ್ಟಿದವುಗಳಾದ, ಪರ್ಜನ್ಯಾಪೂರಿತಾಃ-ಮಳೆಯಿಂದ ತುಂಬಿಸಲ್ಪಟ್ಟವಾದ, ನದ್ಯಃ-ಹೊಳೆಗಳು, ಯಥಾ-ಹೇಗೆ, ಸರ್ವತಃ-ಎಲ್ಲ ಕಡೆಗಳಿಂದಲೂ, ಸಿಂಧುಂ-ಸಮುದ್ರವನ್ನು, ವಿಶಂತಿ-ಪ್ರವೇಶಿಸುತ್ತಲಿವೆಯೋ, ತದ್ವತ್-ಹಾಗೆ, ಗತಯಃ-ಸರ್ವವಿಧಗಳಾದ ಜ್ಞಾನಗಳೂ (ಉಪಾಸನೆಗಳೂ) ಅಂತತಃ-ಕಡೆಗೆ, ತ್ವಾಂ-ನಿನ್ನನ್ನು, ವಿಶಂತಿ-ಪ್ರವೇಶಿಸುತಲಿವೆ ॥೧೦॥ ತೇಷು-ಅವುಗಳಲ್ಲಿ, ಸತ್ತ್ವವೂ, ರಜಸ್ಸೂ, ತಮಸ್ಸೂ, ಇತಿ-ಎಂದು, ಭವತಃ-ನಿನ್ನ, ಪ್ರಕೃತೇಃ-ಮಾಯೆಯ, ಗುಣಾಃ-ಗುಣಗಳವೆ. ತೇಷು ಹಿ-ಅವುಗಳಲ್ಲಿ ಅಲ್ಲವೆ, ಪ್ರೋತಾಃ-ಪೋಣಿಸಲ್ಪಟ್ಟ, ಆಬ್ರಹ್ಮಸ್ಥಾವರಾದಯಃ-ಕಲ್ಲು ಗಿಡ ಮೊದಲು ಬ್ರಹ್ಮನವರೆಗೂ ಇರುವ ಜೀವರೆಲ್ಲರೂ, ಪ್ರಾಕೃತಾಃ-ಪ್ರಕೃತಿ ಸಂಬಂಧವುಳ್ಳವರು ॥೧೧॥

---

ನಂಗೆಯ್ವರು ॥೬॥ ಮತ್ತೆ ಕೆಲವರು ವೈಷ್ಣವದೀಕ್ಷೆಯಂ ಮಾಡಿಕೊಂಡು ನಿನ್ನಿಂದ ಹೇಳಲ್ಪಟ್ಟ ಪಾಂಚರಾತ್ರಾಗಮ ವಿಹಿತವಾದ ವಿಧಾನದಿಂದ ತಮ್ಮನ್ನೇ ನಿನ್ನನ್ನಾಗಿ ಭಾವಿಸಿ ವಾಸುದೇವ ಸಂಕರ್ಷಣ ಅನಿರುದ್ಧ ಪ್ರದ್ಯುಮ್ನರೆಂಬ ಭೇದದಿಂದ ಬಹುಮೂರ್ತಿಗಳುಳ್ಳ ನಿನ್ನಂ ನಾರಾಯಣರೂಪದಿಂದೇಕಮೂರ್ತಿಯನ್ನಾಗಿ ಭಜಿಸುವರು ॥೭॥ ಮತ್ತೆ ಕೆಲವರು ಮಹಾಪುರುಷರು ಪರಮೇಶ್ವರನಿಂದ ಹೇಳಲ್ಪಟ್ಟ ಶೈವಾಗಮಮಾರ್ಗದಿಂದ ಶಿವರೂಪನಾದ ನಿನ್ನಂ ಬಹ್ವಾಚಾರ್ಯರ ಭೇದದಿಂದ ಶೈವಪಾಶುಪತಾದಿಮಾರ್ಗದಿಂ ಭಜಿಸುವರು ॥೮॥ ಮತ್ತೆ ಕೆಲವರು ನಾನಾದೇವತಾ ಭಕ್ತರಾಗಿ ದೇವಬುದ್ಧಿಯಿಂದ ಸರ್ವದೇವಮಯನಾದ ನಿನ್ನನ್ನೇ ಭಜಿಸುವರು ॥೯॥ ಪರ್ವತಂಗಳಲ್ಲಿ ಹುಟ್ಟಿದ ನದಿಗಳು ವರ್ಷೋದಕಗಳಿಂದ ಪೂರಿತಂಗಳಾಗಿ ಸಮುದ್ರವನ್ನೇ ಹೇಗೆ ಸೇರುವವೋ ಆ ರೀತಿಯಾಗಿ ಸಮಸ್ತಂಗಳಾದ ಶ್ರುತಿಸ್ಮೃತಿ ಪುರಾಣಾಗಳಿಂದ ಪ್ರತಿಪಾದಿತಂಗಳಾದ ಮಾರ್ಗಗಳು ನಿನ್ನನ್ನೇ ಸೇರುತಲಿವೆ ॥೧೦॥ ಸತ್ತ್ವವು ರಜಸ್ಸು ತಮಸ್ಸು ಎಂಬ ನಿನ್ನ ಮಾಯೆಯ ಗುಣಂಗಳು ಪ್ರಕೃತಿ ಕಾರ್ಯೋಪಾಧಿಕಂಗಳಾದ ಬ್ರಹ್ಮಾದಿ ಸ್ಥಾವರ ಪರ್ಯಂತವು ಆ ಗುಣತ್ರಯದಿಂ ಬದ್ಧರಾಗಿರುವರು ॥೧೧॥ ಆ ಮಾಯಾಗುಣಂಗಳಲ್ಲಿ ಆಸಕ್ತವಾದ ದೃಷ್ಟಿಯುಳ್ಳ ಸರ್ವಾತ್ಮಕನಾದ ಸರ್ವ ಬುದ್ಧಿಸಾಕ್ಷಿಯಾದ ಅಂತಹ ನಿನಗಾಗಿ ನಮಸ್ಕಾರವು. ಯಾ

ಚಸಾಕ್ಷಿಣೇ । ಗುಣಪ್ರವಾಹೋಯಮವಿದ್ಯಯಾಸಕೃತ್ಪ್ರವರ್ತತೇದೇವನೃತಿರ್ಯಗಾತ್ಮಸು ॥೧೨॥ ಅ
ಗ್ನಿರ್ಮುಖಂತೇವನಿರಂಘ್ರಿರೀಕ್ಷಣಂಸೂರ್ಯೋನಭೋನಾಭಿರಧೋದಿಶಶ್ಶ್ರುತಿಃ । ದ್ಯೌಃಕಂಸುರೇಂ
ದ್ರಾಸ್ತವಬಾಹವೋರ್ಣವಾಃಕುಕ್ಷಿರ್ಮರುತ್ಪ್ರಾಣಬಲಂಪ್ರಕಲ್ಪಿತಂ ॥೧೩॥ ರೋಮಾಣಿವೃಕ್ಷೌ
ಷಧಯಶ್ಶಿರೋರುಹಾಮೇಘಾಃಪರಸ್ಯಾಸ್ಥಿನಖಾನಿತೇದ್ರಯಃ । ನಿಮೇಷಣಂರಾತ್ರ್ಯಹನೀಪ್ರಜಾಪತಿ
ರ್ಮೇಢ್ರಸ್ತುವೃಷ್ಟಿಸ್ತವವೀರ್ಯಮಿಷ್ಯತೇ ॥೧೪॥ ತ್ವಯ್ಯವ್ಯಯಾತ್ಮನ್ಪುರುಷೇಪ್ರಕಲ್ಪಿತಾಲೋ
ಕಾಸ್ಸಪಾಲಾಬಹುಜೀವಸಂಕುಲಾಃ । ಯಥಾಜಲೇಸಂಜಹತೇಜಲೌಕಸೋಪ್ಯುದುಂಬರೇವಾಮಶಕಾ
ಮನೋಮಯೇ ॥೧೫॥ ಯಾನಿಯಾನೀಹರೂಪಾಣಿಕ್ರೀಡಾರ್ಥಂತ್ವಂಬಿಭರ್ಷಿಹಿ । ತೈರಾಮೃಷ್ಟಶು

---

ತೇಷು-ಆಪ್ರಕೃತಿ ಗುಣಗಳಲ್ಲಿ, ಅವಿಷಕ್ತದೃಷ್ಟಯೇ-ಸಂಬಂಧಿಸದ ಬುದ್ಧಿಯುಳ್ಳ, ಸರ್ವಾತ್ಮನೇ-ಸರ್ವಮಯನಾದ, ಸರ್ವ
ಧಿಯಾಂಚ-ಸಕಲಬುದ್ಧಿವೃತ್ತಿಗಳಿಗೂ, ಸಾಕ್ಷಿಣೇ-ದ್ರಷ್ಟಾರನಾದ, ತುಭ್ಯಂ-ನಿನಗೆ, ನಮಃ-ನಮಸ್ಕಾರವು ॥ ಅಯಂಗುಣ
ಪ್ರವಾಹಃ-ಈಗುಣಗಳ ಹರಿದಾಟವು. ದೇವನೃತಿರ್ಯಗಾತ್ಮಸು-ದೇವತೆಗಳು ಮನುಷ್ಯರು ತಿರ್ಯಗ್ಜಂತುಗಳೆಂಬ ಆತ್ಮರಲ್ಲಿ,
ಅವಿದ್ಯಯಾ-ಜೀವೋಪಾಧಿಯಾದ ಅಜ್ಞಾನದಿಂದ, ಅಸಕೃತ್-ಬಾರಿಬಾರಿಗೂ, ಪ್ರವರ್ತತೇ-ವಿಶೇಷವಾಗಿ ವರ್ತಿಸುತಲಿದೆ ॥೧೨॥
ತೇ-ನಿನ್ನ, ಮುಖಂ-ಮೋರೆಯೇ, ಅಗ್ನಿಃ-ತೇಜಸ್ಸು, ಅವನಿಃ-ಭೂಮಿ, ಅಂಘ್ರಿಃ-ಕಾಲು, ಈಕ್ಷಣಂ-ದೃಷ್ಟಿ-ಸೂರ್ಯಃ-
ಸೂರ್ಯನು, ನಭಃ-ಅಂತರಿಕ್ಷವು, ನಾಭಿಃ-ಹೊಕ್ಕಳು, ಅಧೋ-ಅಮೇಲೆ, ದಿಶಃ-ದಿಕ್ಕುಗಳು. ಶ್ರುತಿಃ-ಕಿವಿ. ದ್ಯೌಃ-ಸ್ವರ್ಗ
ವು, ಕಂ-ತಲೆ, ಸುರೇಂದ್ರಾಃ-ದೇವನಾಯಕರು, ತವ-ನಿನ್ನ, ಬಾಹವಃ-ತೋಳುಗಳು, ಅರ್ಣವಾಃ-ಸಮುದ್ರಗಳು, ಕುಕ್ಷಿಃ-
ಹೊಟ್ಟೆ, ಮರುತ್-ವಾಯುವು, ಪ್ರಾಣಬಲಂ-ಪ್ರಾಣವಬಲವೂ, ಆಗಿ, ಪ್ರಕಲ್ಪಿತಂ-ಕಲ್ಪಿಸಲ್ಪಟ್ಟಿದೆ ॥೧೩॥ ಪರಸ್ಯ-ಪರ
ರಮೇಶ್ವರನಾದ, ತೇ-ನಿನ್ನ, ರೋಮಾಣಿ-ಕೂದಲು, ವೃಕ್ಷೌಷಧಯಃ-ಗಿಡಗಳೂ ಪೈರುಗಳೂ, ಶಿರೋರುಹಾಃ-ಕುರುಳ್ಗಳು,
ಮೇಘಾಃ-ಮೋಡಗಳು, ಅಸ್ಥಿನಖಾನಿ-ಎಲುಬುಗಳೂ ಉಗುರುಗಳೂ, ಅದ್ರಯಃ-ಬೆಟ್ಟಗಳು, ನಿಮೇಷಣಂ-ರೆಪ್ಪೆಹೊಡಯು
ವಿಕೆ, ರಾತ್ರ್ಯಹನೀ-ರಾತ್ರಿಯೂ ಹಗಲೂ, ಮೇಢ್ರಸ್ತು-ಶಿಶ್ನವಾದರೋ, ಪ್ರಜಾಪತಿಃ-ಬ್ರಹ್ಮನು, ತವ-ನಿನ್ನ, ವೀರ್ಯಂ-
ರೇತಸ್ಸು, ವೃಷ್ಟಿಃ-ಮಳೆಯೆಂದು, ಇಷ್ಯತೇ-ಒಪ್ಪಿಕೊಳ್ಳಲ್ಪಡುವುದು ॥೧೪॥ ಅವ್ಯಯಾತ್ಮನ್-ನಿತ್ಯರೂಪನೇ! ಜಲೇ-ನೀರಿನಲ್ಲಿ,
ಜಲೌಕಸೋಪಿ-ಸಣ್ಣ ಜಲಜಂತುಗಳೂ ಕೂಡ, ಯಥಾ-ಹೇಗೆ, ಸಂಜಹತೇ-ಚಲಿಸುತ್ತಿವೆಯೋ, ಉದುಂಬರೇವಾ-ಅತ್ತಿಯ
ಹಂಣಿನಲ್ಲಿಯೂ, ಮಶಕಾಃ-ನುಸಿಹುಳಗಳು, ಯಥಾ-ಹೇಗೋ, ತಥಾ-ಹಾಗೆ, ಮನೋಮಯೇ-ಮನಃಪ್ರಧಾನನಾದ, (ಮನೋ
ವೃತ್ತಿಗೆ ಲಕ್ಷ್ಯನಾಗಿ ತೋರತಕ್ಕ) ಪುರುಷೇ-ಮಹಾಪುರುಷನಾದ, ತ್ವಯಿ-ನಿನ್ನಲ್ಲಿ, ಸಪಾಲಾಃ-ಪಾಲಕರಿಂ ಸಹಿತವಾದ, ಬ
ಹುಜೀವಸಂಕುಲಾಃ-ಬಹುಪ್ರಾಣಿ ಸಂಘಗಳುಳ್ಳ, ಲೋಕಾಃ-ಬ್ರಹ್ಮಾಂಡಗಳು, ಸಂಜಹತೇ-ಚಲಿಸುತ್ತಿವೆ ॥೧೫॥ ತ್ವಂ-ನೀನು,

---

ವ ನಿನ್ನಂ ತಿಳಿಯದ ಅಜ್ಞಾನದಿಂದ ಗುಣಪ್ರವಾಹರೂಪವಾದ ಸಂಸಾರವು ದೇವ ಮನುಷ್ಯ ತಿರ್ಯಗಾದಿಗಳಲ್ಲಿ
ಪ್ರವೃತ್ತವಾಗಿದೆಯೋ ಅಂತಾ ನಿನಗೆ ನಮಸ್ಕರಿಸುವೆನು ॥೧೨॥ ಎಲೈ ಪರಮಾತ್ಮನೇ! ಅಗ್ನಿಯು ನಿನ್ನ ಮು
ಖವು, ಭೂಮಿಯು ನಿನ್ನ ಪಾದವು, ಸೂರ್ಯನೇ ನಿನ್ನ ಚಕ್ಷುಸ್ಸು, ಅಂತರಿಕ್ಷವೇ ನಿನ್ನ ನಾಭಿಯು, ದಿಕ್ಕು
ಗಳೇ ನಿನ್ನ ಶ್ರೋತ್ರಂಗಳು, ಸ್ವರ್ಗವೇ ನಿನ್ನ ಶಿರಸ್ಸು, ದೇವಪತಿಗಳು ನಿನ್ನ ಬಾಹುಗಳು ಸಮುದ್ರಂಗ
ಳೇ ನಿನ್ನ ಉದರವು, ವಾಯುವೇ ನಿನ್ನ ಪ್ರಾಣವು, ಬಲವು ॥೧೩॥ ವೃಕ್ಷಂಗಳು ಓಷಧಿಗಳು ನಿನ್ನ ರೋಮಂ
ಗಳು, ಮೇಘಂಗಳೇ ನಿನ್ನ ಕೇಶಂಗಳು, ಪರ್ವತಂಗಳು ನಿನ್ನ ಅಸ್ಥಿನಖಂಗಳು, ದಿವಾ ರಾತ್ರಿಗಳು ರೆಪ್ಪೆಗಳು,
ಪ್ರಜೇಶನೇ ನಿನ್ನ ಮೇಢ್ರವು, ವೃಷ್ಟಿಯೇ ನಿನ್ನ ವೀರ್ಯವು, ॥೧೪॥ ಎಲೈ ಅವ್ಯಯನಾದ ಪರಮಾತ್ಮನೇ!
ಪರಮಪುರುಷನಾದ ನಿನ್ನಲ್ಲಿ ಕಲ್ಪಿತಂಗಳಾದ ಸನಾಯಕಂಗಳಾದ ಲೋಕಂಗಳು ಅನೇಕ ಜೀವಂಗಳಿಂದ ವ್ಯಾ
ಪ್ತಂಗಳಾಗಿ ಜಲದಲ್ಲಿ ಜಲಜಂತುಗಳಿರುವಂತೆ ಔದುಂಬರ ಫಲದಲ್ಲಿ ಕ್ರಿಮಿಗಳಿರುವಂತೆ ಅನೇಕ ಬ್ರಹ್ಮಾಂಡಂ
ಗಳು ಮನೋಮಯನಾದ ನಿನ್ನಲ್ಲಿ ವಾಸವಂ ಮಾಡುತಲಿವೆ ॥೧೫॥ ಎಲೈ ಈಶ್ವರನೇ! ನೀನು ಲೋಕ ರಕ್ಷಣಾ

ಚೋಲೋಕಾಮುದಾಗಾಯಂತಿತೇಯಶಃ ॥೧೬॥ ನಮಃಕಾರಣಮತ್ಸ್ಯಾಯ ಪ್ರಳಯಾಬ್ಧಿಚರಾಯ ಚ । ಹಯಶೀರ್ಷ್ಣೇನಮಸ್ತುಭ್ಯಂಮಧುಕೈಟಭಮೃತ್ಯವೇ ॥೧೭॥ ಅಕೂಪಾರಾಯಮಹತೇನಮೋ ಮಂದರಧಾರಿಣೇ । ಕ್ಷಿತ್ಯುದ್ಧಾರವಿಹಾರಾಯನಮಸ್ಸೂಕರಮೂರ್ತಯೇ ॥೧೮॥ ನಮಸ್ತೇಽದ್ಭುತಸಿಂಹಾಯಸಾಧುಲೋಕಭಯಾಪಹ। ವಾಮನಾಯನಮಸ್ತುಭ್ಯಂಕ್ರಾಂತತ್ರಿಭುವನಾಯಚ ॥೧೯॥ ನಮೋಭೃಗೂಣಾಂಪತಯೇದುಷ್ಟಕ್ಷತ್ರವನಚ್ಛಿದೇ । ನಮಸ್ತೇರಘುವರ್ಯಾಯ ರಾವಣಾಂತಕರಾಯಚ ॥೨೦॥ ನಮಸ್ತೇವಾಸುದೇವಾಯನಮಸ್ಸಂಕರ್ಷಣಾಯಚ । ಪ್ರದ್ಯುಮ್ನಾಯಾನಿರುದ್ಧಾಯಸಾತ್ವತಾಂಪತಯೇನಮಃ ॥೨೧॥ ನಮಶ್ಶುದ್ಧಾಯಬುದ್ಧಾಯದೈತ್ಯದಾನವಮೋಹಿನೇ । ಮ್ಲೇ

---

ಇಹ-ಈಲೋಕದಲ್ಲಿ, ಕ್ರೀಡಾರ್ಥಂ-ಆಟಗಳ ಗೋಸುಗ, ಯಾನಿಯಾನಿ-ಯಾವಯಾವ-ರೂಪಾಣಿ-ಲೀಲಾಮೂರ್ತಿಗಳನ್ನು, ಬಿಭರ್ಷಿಹಿ-ವಹಿಸುತ್ತಿರುವೆಯೋ, ತೈಃ-ಅವುಗಳಿಂದ, ಆಮೃಷ್ಟಶುಚಃ-ತೊಡೆಯಲ್ಪಟ್ಟ ಶೋಕವುಳ್ಳ, ಲೋಕಾಃ-ಜನರು, ಮುದಾ-ಸಂತೋಷದಿಂದ, ತೇ-ನಿನ್ನ, ಯಶಃ-ಕೀರ್ತಿಯನ್ನು, ಗಾಯಂತಿ-ಹಾಡುತಲಿರುವರು ॥೧೬॥ ಪ್ರಳಯಾಬ್ಧಿ ಚರಾಯ-ಪ್ರಳಯಕಾಲದಲ್ಲಿ ಸಮುದ್ರದೊಳಗೆ ತಿರುಗುತ್ತಿರುವ, ಕಾರಣಮತ್ಸ್ಯಾಯ-ಜಗತ್ಕಾರಣವಾದ ಮತ್ಸ್ಯಮೂರ್ತಿಗೆ, ನಮಃ-ನಮಸ್ಕಾರವಾಗಲಿ, ಹಯಶಿರ್ಷ್ಣೇ-ಕುದುರೆಯ ತಲೆಯುಳ್ಳ, ತುಭ್ಯಂ-ನಿನಗೆ, ನಮಃ-ನಮಸ್ಕಾರವಾಗಲಿ, ಮಧುಕೈಟಭಮೃತ್ಯವೇ-ಮಧುಕೈಟಭರೆಂಬ ರಾಕ್ಷಸರಿಗೆ ನಾಶಕನಾದ ನಿನಗೆ ನಮಸ್ಕಾರವಾಗಲಿ; ॥೧೭॥ ಮಂದರಧಾರಿಣೇ-ಮಂದರ ಪರ್ವತವನ್ನು ಹೊತ್ತು, ಮಹತೇ-ದೊಡ್ಡದಾದ, ಅಕೂಪಾರಾಯ-ಕೂರ್ಮಮೂರ್ತಿಗೆ, ನಮಃ-ನಮಸ್ಕಾರವಾಗಲಿ; ಕ್ಷಿತ್ಯುದ್ಧಾರವಿಹಾರಾಯ-ಭೂಮಿಯನ್ನು ಎತ್ತುವಿಕೆಯೇ ಲೀಲೆಯಾಗಿವುಳ್ಳ, ಸೂಕರಮೂರ್ತಯೇ-ವರಾಹರೂಪನಿಗೆ ನಮಃ-ನಮಸ್ಕಾರವಾಗಲಿ ॥೧೮॥ ಸಾಧುಲೋಕಭಯಾಪಹ-ಸತ್ಪುರುಷರ ಭಯವನ್ನು ಪರಿಹರಿಸುವವನೇ! ಅದ್ಭುತಸಿಂಹಾಯ-ನರಾಕೃತಿಯಿಂದ ಆಶ್ಚರ್ಯವಾದ ಸಿಂಹವಾಗಿರುವ, ತೇ-ನಿನಗೆ, ನಮಃ-ನಮಸ್ಕಾರವಾಗಲಿ; ವಾಮನಾಯ-ಕುಳ್ಳನಾದ ನಿನಗೆ, ನಮಃ-ನಮಸ್ಕಾರವಾಗಲಿ; ಕ್ರಾಂತತ್ರಿಭುವನಾಯಚ-ಅಡಿಗಳಿಡಲ್ಪಟ್ಟ ಮೂರುಲೋಕಗಳುಳ್ಳ, ತುಭ್ಯಂಚ-ತ್ರಿವಿಕ್ರಮನಾದನಿನಗೂ, ನಮಃ-ನಮಸ್ಕಾರವಾಗಲಿ ॥೧೯॥ ದುಷ್ಟಕ್ಷತ್ರವನಚ್ಛಿದೇ-ದೋಷವುಳ್ಳ ಕ್ಷತ್ರಿಯರೆಂಬ ಕಾಡನ್ನು ಕತ್ತರಿಸಿದವನಾದ, ಭೃಗೂಣಾಂಪತಯೇ-ಭೃಗುವಂಶದ ವರಿಗೊಡೆಯನಾದ ಪರಶುರಾಮನಿಗೆ, ನಮಃ-ನಮಸ್ಕಾರವಾಗಲಿ, ರಾವಣಾಂತಕರಾಯ-ರಾವಣಾಸುರನನಾಶಮಂಗೆಯ್ದ, ರಘುವರ್ಯಾಯಚ-ರಘುವಂಶದವರಲ್ಲಿಶ್ರೇಷ್ಠನಾದ, ತೇ-ರಾಮನಾದನಿನಗೆ, ನಮಃ-ನಮಸ್ಕಾರವಾಗಲಿ ॥೨೦॥ ವಾಸುದೇವಾಯ-ವಸುದೇವಪುತ್ರನಾದ, ತೇನಮಃ-ಕೃಷ್ಣನಾದನಿನಗೆ ನಮಸ್ಕಾರವು, ಸಂಕರ್ಷಣಾಯಚನಮಃ-ಬಲರಾಮನಿಗೂ ನಮಸ್ಕಾರವು. ಪ್ರದ್ಯುಮ್ನಾಯ-ಪ್ರದ್ಯುಮ್ನನೆಂಬ ಕಾಮನಿಗೂ, ಅನಿರುದ್ಧಾಯ-ಅನಿರುದ್ಧನೆಂಬ ಕಾಮ ಪುತ್ರನಿಗೂ, ಸಾತ್ವತಾಂಪತಯೇ-ಯಾದವರಿಗೊಡೆಯನಿಗೂ, ನಮಃ ॥೨೧॥ ಶುದ್ಧಾಯ-ಪರಿಶುದ್ಧನಾದ, ದೈತ್ಯದಾನವಮೋಹಿನೇ-

---

ರ್ಥವಾಗಿ ಯಾವ ಯಾವ ಅವತಾರರೂಪಂಗಳಂ ಧರಿಸುವಿಯೋ ಆಯಾ ರೂಪಂಗಳಿಂದ ಪರಿಹೃತಮಾದ ಶೋಕಮುಳ್ಳವರಾಗಿ ಜನರು ಸಂತೋಷವಾಗಿ ನಿನ್ನ ಯಶಸ್ಸಂ ಗಾನಂಗೆಯ್ವರು ॥೧೬॥ ಪ್ರಳಯ ಸಮುದ್ರದಲ್ಲಿ ಸಂಚರಿಸುವ ಆದಿ ಮತ್ಸ್ಯರೂಪನಾದ ನಿನಗೆ ನಮಸ್ಕಾರವು. ಹಯಗ್ರೀವನಾದ ನಿನಗೆ ನಮಸ್ಕಾರವು. ಮಧುಕೈಟಭಧ್ವೇಷಿಯಾದ ನಿನಗೆ ನಮಸ್ಕಾರವು ॥೧೭॥ ಮಂದರಧಾರಿಯಾದ ಕೂರ್ಮ ರೂಪನಾದ ನಿನಗೆ ನಮಸ್ಕಾರವು. ಭೂಮಿಯ ನುದ್ಧರಿಸಿದ ವರಾಹರೂಪನೇ! ನಿನಗೆ ನಮಸ್ಕಾರವು ॥೧೮॥ ಸಜ್ಜನರ ಭಯಾಪಹಾರಕನಾದ ನರಸಿಂಹದೇವನೇ! ನಿನಗೆ ನಮಸ್ಕಾರವು. ಮೂರು ಲೋಕಂಗಳನುಂ ಪಾದವಿನ್ಯಾಸವ ಗೆಯ್ದು ಆಕ್ರಮಿಸಿದ ವಾಮನನೇ! ನಿನಗೆ ನಮಸ್ಕಾರವು ॥೧೯॥ ದುಷ್ಟ ಕ್ಷತ್ರಿಯ ಸಂಹಾರಕನಾದ ಭಾರ್ಗವರಾಮನೇ ನಿನಗೆ ನಮಸ್ಕಾರವು. ರಾವಣ ಸಂಹಾರಕನಾದ ರಾಮನೇ! ನಿನಗೆ ನಮಸ್ಕಾರವು ॥೨೦॥ ವಾಸುದೇವನೇ ನಿನಗೆ ನಮಸ್ಕಾರವು. ಸಂಕರ್ಷಣನೇ! ನಿನಗೆ ನಮಸ್ಕಾರವು. ಪ್ರದ್ಯುಮ್ನನೇ! ಅನಿರುದ್ಧನೇ! ಯಾದವಪತಿಯೇ! ನಿನಗೆ ನಮಸ್ಕಾರವು. ॥೨೧॥ ದೈತ್ಯದಾನವ ಮೋಹಕನಾದ ಶುದ್ಧನಾದ ಬುದ್ಧಾವತಾರನೇ! ನಿನಗೆ

ಚ್ಛಪ್ರಾಯಕ್ಷತ್ರಹಂತ್ರೇ ನಮಸ್ತೇ ಕಲ್ಕಿರೂಪಿಣೇ ॥೨೨॥ ಭಗವನ್ ಸರ್ವಲೋಕೋಽಯಂ ಮೋಹಿತಸ್ತವ ಮಾಯಯಾ । ಅಹಂ ಮಮೇತ್ಯಸದ್ಗ್ರಾಹೋ ಭ್ರಾಮ್ಯತೇ ಕರ್ಮವರ್ತ್ಮಸು ॥೨೩॥ ಅಹಂ ಚಾತ್ಮಾತ್ಮಜಾಗಾರದಾರಾರ್ಥಸ್ವಜನಾದಿಷು । ಭ್ರಮಾಮಿ ಸ್ವಪ್ನಕಲ್ಪೇಷು ಮೂಢಃ ಸತ್ಯಧಿಯಾ ವಿಭೋ ॥೨೪॥ ಅನಿತ್ಯಾನಾತ್ಮದುಃಖೇಷು ವಿಪರ್ಯಾಸಮತಿರ್ಹ್ಯಹಂ । ದ್ವಂದ್ವಾರಾಮಸ್ತಮೋವಿಷ್ಟೋ ನ ಜಾನೇ ತ್ವಾತ್ಮನಃ ಪ್ರಿಯಂ ॥೨೫॥ ಯಥಾಬುಧೋ ಜಲಂ ಹಿತ್ವಾ ಪ್ರತಿಚ್ಛನ್ನಂ ತದುದ್ಭವೈಃ । ಅಭ್ಯೇತಿ ಮೃಗತೃಷ್ಣಾಂ ವೈ ಹಿತ್ವಾಹಂ ತ್ವಾಂ ಪರಾಙ್ಮುಖಃ ॥೨೬॥ ನೋತ್ಸಹೇಽಹಂ ಕೃಪಣಧೀಃ ಕಾಮಕರ್ಮಹತಂ ಮ

---

ದೈತ್ಯರನ್ನೂ ದಾನವರನ್ನೂ ಮೋಹಗೊಳಿಸುವ, ಬುದ್ಧಾಯ-ಬುದ್ಧಮೂರ್ತಿಯಾದ ನಿನಗೆ ನಮಸ್ಕಾರವು. ಮ್ಲೇಚ್ಛಪ್ರಾಯಕ್ಷತ್ರಹಂತ್ರೇ-ತುರುಕರ ಹಾಗಿರುವ ಕ್ಷತ್ರಿಯರನ್ನು ಕೊಲ್ಲುವವನಾದ, ಕಲ್ಕಿರೂಪಿಣೇ ತೇ-ಕಲ್ಕಿಸ್ವರೂಪನಾದ ನಿನಗೆ ನಮಸ್ಕಾರವು ॥೨೨॥ ಭಗವನ್-ಭಗವಂತನೇ! ಅಯಂ-ಈ, ಸರ್ವಲೋಕಃ-ಸಮಸ್ತಲೋಕವೂ, ತವ-ನಿನ್ನ, ಮಾಯಯಾ-ಅಜ್ಞಾನಶಕ್ತಿಯಿಂದ, ಮೋಹಿತಃ-ಭ್ರಮೆಗೊಳಿಸಲ್ಪಟ್ಟದ್ದಾಗಿ, ಅಹಂ ಮಮೇತಿ-ನಾನು ನನ್ನದು ಎಂದು, ಅಸದ್ಗ್ರಾಹಃ-ಇಲ್ಲದ್ದನ್ನು ಗ್ರಹಿಸಿದ್ದಾಗಿ, ಕರ್ಮವರ್ತ್ಮಸು-ಕರ್ಮಮಾರ್ಗಗಳಲ್ಲಿ, ಭ್ರಾಮ್ಯತೇ-ತಿರುಗಿಸಲ್ಪಡುತ್ತಿದೆ ॥೨೩॥ ವಿಭೋ-ಸ್ವಾಮಿಯೇ! ಅಹಂ ಚ-ನಾನೂ ಕೂಡ, ಸ್ವಪ್ನತಲ್ಪೇಷು-ಕೊಂಚಕಾಲವೆಯಾಗಿ ಕನಸಿಗೆ ಸಮಾನವಾಗಿರುವ, ಆತ್ಮಾ .....ದಿಷು-ಆತ್ಮಾ-ತಾನು, ಆತ್ಮಜ ಮಕ್ಕಳು, ಆಗಾರ-ಮನೆ, ದಾರ-ಹೆಂಡತಿ, ಅರ್ಥ-ಧನ, ಸ್ವಜನ-ನಂಟರು, ಮಿತ್ರರು, ಆದಿಷು-ಮೊದಲಾದವರಲ್ಲಿ, ಸತ್ಯಧಿಯಾ-ದಿಟವಾದ್ದೆಂಬ ಬುದ್ಧಿಯಿಂದ, ಮೂಢಃ-ಅರಿಯದವನಾಗಿ, ಭ್ರಮಾಮಿ-ಭ್ರಾಂತಿಗೊಳ್ಳುತ್ತಿದ್ದೇನೆ ॥೨೪॥ ಅನಿತ್ಯಾನಾತ್ಮದುಃಖೇಷು-ಅನಿತ್ಯ-ಶಾಶ್ವತವಲ್ಲದ, ಅನಾತ್ಮ-ಜಡಗಳಾದ, ದುಃಖೇಷು-ಕಷ್ಟಕರಗಳಲ್ಲಿ, ವಿಪರ್ಯಾಸಮತಿಃ-ಸುಖಭ್ರಾಂತಿಯಿಂದ ವ್ಯತ್ಯಸ್ತವಾದ ಬುದ್ಧಿಯುಳ್ಳ, ಅಹಂ ಹಿ-ನಾನಲ್ಲವೆ? ತಮೋವಿಷ್ಟಃ-ತಾಮಸವಾದ ಅಜ್ಞಾನದಿಂದ ಪ್ರವೇಶಿಸಲ್ಪಟ್ಟವನಾದ್ದರಿಂದಲೇ, ದ್ವಂದ್ವಾರಾಮಃ-ದ್ವೈತಪ್ರಪಂಚದಲ್ಲಿ ಕ್ರೀಡಿಸುವವನಾಗಿ, ಆತ್ಮನಃ ಪ್ರಿಯಂ ತು-ನನ್ನ ಸುಖವನ್ನಾದರೋ, ನ ಜಾನೇ-ಅರಿಯೆನು ॥೨೫॥ ಅಬುಧಃ-ಮೂಢನಾದವನು, ತದುದ್ಭವೈಃ-ಆ ನೀರಿನಿಂದ ಹುಟ್ಟಿದ ಹಾವಸೆ ಮೊದಲಾದವುಗಳಿಂದ, ಪ್ರತಿಚ್ಛನ್ನಂ-ಮುಚ್ಚಲ್ಪಟ್ಟಿರುವ, ಜಲಂ-ನೀರನ್ನು, ಹಿತ್ವಾ-ಬಿಟ್ಟು, ಮೃಗತೃಷ್ಣಾಂ ವೈ-ಬಿಸಿಲುಗುದುರೆಯನ್ನೇ, ಅಭ್ಯೇತಿ-ಹುಡುಕಿಕೊಂಡು ಹೋಗುವನೋ, ತಥಾ-ಹಾಗೆ, ಅಹಂ-ನಾನು, ತ್ವಾ-ನಿನ್ನನ್ನು, ಹಿತ್ವಾ-ಬಿಟ್ಟು, ಪರಾಙ್ಮುಖಃ-ಬಾಹ್ಯದೃಷ್ಟಿಯುಳ್ಳವನಾಗಿರುವೆನು ॥೨೬॥ ಕೃಪಣಧೀಃ-ಲುಬ್ಧಬುದ್ಧಿಯುಳ್ಳವನಾದ (ಬಡಮನಸ್ಸಿನವನಾದ) ಅಹಂ-ನಾನು, ಪ್ರಮಾದಿಭಿಃ-ಎಚ್ಚರು ತಪ್ಪುವಿಕೆಯುಳ್ಳ, ಸಾಕ್ಷೈಃ-ಇಂದ್ರಿಯಂಗಳಿಂ ಸಹಿತಂಗಳಾದ ಮನೋವೃತ್ತಿಗಳಿಂದ, ಇತಸ್ತತಃ-ಇತ್ತತ್ತ, ಹ್ರಿಯಮಾಣಂ-ಎಳೆಯಲ್ಪಡುತಲಿರುವ, ಕಾಮಕರ್ಮಹತಂ-ಕಾಮದಿಂದಲೂ ಕರ್ಮದಿಂದಲೂ ಕೊಲ್ಲಲ್ಪಟ್ಟ,

---

ನಮಸ್ಕಾರವು. ಮ್ಲೇಚ್ಛಪ್ರಾಯರಾದ ದುಷ್ಟ ಕ್ಷತ್ರಿಯರಂ ಸಂಹರಿಸಿದ ಕಲ್ಕಿರೂಪನೇ! ನಿನಗೆ ನಮಸ್ಕಾರವು. ॥೨೨॥ ಎಲೈ ಭಗವಂತನೇ! ನಿನ್ನ ಮಾಯೆಯಿಂ ಮೋಹಿತವಾದ ಜೀವಲೋಕವು "ನಾನು ನನ್ನದು" ಎಂಬ ಅಹಂಕಾರ ಮಮಕಾರಂಗಳಿಂದ ದುಷ್ಟ ವಿಷಯಾಸಕ್ತವಾದ ಕರ್ಮ ಬಂಧದಿಂದ ಸುತ್ತುತಲಿದೆ ॥೨೩॥ ಎಲೈ ವಿಭುವೇ! ನಾನು ದೇಹದಲ್ಲಿ, ಪುತ್ರರಲ್ಲಿ, ಗೃಹದಲ್ಲಿ, ಪತಿಗಳಲ್ಲಿ, ಧನದಲ್ಲಿ, ಬಂಧುಗಳಲ್ಲಿ; ಸ್ವಪ್ನಸಮಾನಂಗಳಾಗಿ ಇದ್ದರೂ, ಈ ವಸ್ತುಗಳಲ್ಲಿ ಇವು ಸತ್ಯಂಗಳೆಂದು ಭ್ರಮಿಸುವೆನು ॥೨೪॥ ಮತ್ತು ನಾನು ಅನಿತ್ಯವಾದ ಕರ್ಮಫಲದಲ್ಲಿ ನಿತ್ಯವೆಂಬ ಬುದ್ಧಿಯಂ ಮಾಡುತ್ತ, ಅನಾತ್ಮಂಗಳಾದ ದೇಹಾದಿಗಳಲ್ಲಿ ಆತ್ಮನೆಂಬ ಬುದ್ಧಿಯಂ ಮಾಡುತ್ತ, ದುಃಖರೂಪಂಗಳಾದ ವಿಷಯಂಗಳಲ್ಲಿ ಸುಖವೆಂಬ ಬುದ್ಧಿಯಂ ಮಾಡುತ್ತ, ದುಃಖಮಯವಾದ ಸಂಸಾರದಲ್ಲಿ ಆಸಕ್ತನಾಗಿ ಅಜ್ಞಾನಾವಿಷ್ಟನಾಗಿ ಹಿತಾರ್ಥಮಂ ತಿಳಿಯುವುದಿಲ್ಲ ॥೨೫॥ ಮೂಢನಾದ ಪುರುಷನು ಯಾವ ಪ್ರಕಾರ ಜಲದಲ್ಲಿ ಹುಟ್ಟಿದ ತೃಣಂಗಳಿಂದ ಆಚ್ಛಾದಿತವಾದ ಜಲಮಂ ಬಿಟ್ಟು [illegible]ಮರೀಚಿಕೆಗಳಲ್ಲಿ ಜಲಬುದ್ಧಿಯಂ ಮಾಡುವನೋ ಹಾಗೆಯೇ ನಾನು ಮಾಯಾಚ್ಛನ್ನನಾದ ನಿನ್ನ ನರಿಯದೆ ದೇಹಾದಿಗಳಲ್ಲಿ ಆತ್ಮಬುದ್ಧಿಯಂ ಮಾಡುವೆನು ॥೨೬॥ ನಾನು ಕಾಮಕರ್ಮಂಗಳಿಂದ ಕಲುಷವಾಗಿ ಮಾಡಲ್ಪಟ್ಟ ಪ್ರಮಾದಿಗಳಾದ ಇಂದ್ರಿಯಂಗಳಿಂದ ನಾನಾ ವಿಷಯಂಗಳಂ ಕುರಿತು ಎಳೆಯಲ್ಪಡುತಲಿರುವ ಮ

ನಃ । ರೋದ್ಧುಂ ಪ್ರಮಾದಿಭಿಸ್ಸಾಕ್ಷೈರ್ಹ್ರಿಯಮಾಣಮಿತಸ್ತತಃ ॥೨೭॥ ಸೋಽಹಂ ತವಾಂಘ್ರ್ಯು
ಪಗತೋಸ್ಮ್ಯಸತಾಂ ದುರಾಪಂ ತಚ್ಚಾಪ್ಯಹಂ ಭವದನುಗ್ರಹ ಈಶ ಮನ್ಯೇ । ಪುಂಸೋ ಭವೇದ್ಯರ್ಹಿ
ಸಂಸರಣಾಪವರ್ಗಸ್ತ್ವಯ್ಯಬ್ಜನಾಭ ಸದುಪಾಸನಯಾ ಮತಿಸ್ಸ್ಯಾತ್ ॥೨೮॥ ನಮೋ ವಿಜ್ಞಾನಮಾತ್ರಾ
ಯ ಸರ್ವಪ್ರತ್ಯಯಹೇತವೇ । ಪುರುಷೇಶಪ್ರಧಾನಾಯ ಬ್ರಹ್ಮಣೇಽನಂತಶಕ್ತಯೇ ॥೨೯॥ ನಮಸ್ತೇ ವಾಸು
ದೇವಾಯ ಸರ್ವಭೂತಕ್ಷಯಾಯ ಚ । ಹೃಷೀಕೇಶ ನಮಸ್ತುಭ್ಯಂ ಪ್ರಪನ್ನಂ ಪಾಹಿ ಮಾಂ ವಿಭೋ ॥೩೦॥

ಇತಿ ಶ್ರೀಮದ್ಭಾಗವತೇ-ದಶಮಸ್ಕಂಧೇ-ಚತ್ವಾರಿಂಶೋಽಧ್ಯಾಯಃ.

---

ಮನಃ-ಅಂತಃಕರಣವನ್ನು, ರೋದ್ಧುಂ-ತಡೆದು ನಿಗ್ರಹಿಸುವುದಕ್ಕೆ, ನೋತ್ಸಹೇ-ಶಕ್ತನಾಗಲಾರೆನು ॥೨೭॥ ಸೋಽಹಂ-ಆ ನಾನು, ಅಸತಾಂ-ದುಷ್ಟರಿಗೆ, ದುರಾಪಂ-ದೊರೆಯಲಸಾಧ್ಯವಾದ, ತವಾಂಘ್ರಿ-ನಿನ್ನ ಚರಣವನ್ನು, ಉಪಗತಃ-ಹೊಂದಿದವನು, ಅಸ್ಮಿ-ಆದೇನು ಈಶ-ಒಡೆಯನೇ! ತಚ್ಚಾಪಿ-ಅದೂ ಕೂಡ, ಭವದನುಗ್ರಹಃ-ನಿನ್ನ ಪ್ರಸಾದವೇ ಎಂದು, ಅಹಂ-ನಾನು, ಮನ್ಯೇ-ತಿಳಿಯುತ್ತಲಿರುವೆನು. ಅಬ್ಜನಾಭ-ಪದ್ಮನಾಭನೇ! ಯರ್ಹಿ-ಯಾವಾಗ, ಪುಂಸಃ-ಪುರುಷನಿಗೆ, ಸಂಸರಣಾಪವರ್ಗಃ-ಸಂಸಾರದ ಅವಧಿಯು, ಭವೇತ್-ಆಗುವುದೋ, ತದಾ-ಆವಾಗ, ಸದುಪಾಸನಯಾ-ಸತ್ಪುರುಷರ ಸೇವೆಯಿಂದ, ತ್ವಯಿ-ನಿನ್ನಲ್ಲಿ, ಮತಿಃ-ಬುದ್ಧಿಯು, ಸ್ಯಾತ್-ಆಗುವುದು ॥೨೮॥ ವಿಜ್ಞಾನಮಾತ್ರಾಯ-ಉಪನಿಷದ್ಗಮ್ಯವಾದ ಕೇವಲ ಚಿದ್ರೂಪನಾದ, ಸರ್ವಪ್ರತ್ಯಯಹೇತವೇ-ಸಂಚಿಕಗಳೆಲ್ಲಕ್ಕೂ ಕಾರಣವಾದ, ಪುರುಷೇಶ-ಆತ್ಮರಲ್ಲಿ, ಪ್ರಧಾನಾಯ-ಮುಖ್ಯನಾದ, ಅನಂತಶಕ್ತಯೇ-ಹಲವು ಸಾಮರ್ಥ್ಯಗಳುಳ್ಳ, ಬ್ರಹ್ಮಣೇ-ದೊಡ್ಡವನಾದ, ಅಥವಾ ವ್ಯಾಪಕನಾದ ನಿನಗೆ, ನಮಃ-ನಮಸ್ಕಾರವು ॥೨೯॥ ವಾಸುದೇವಾಯ-ಸರ್ವಭೂತಗಳಲ್ಲಿಯೂ ಅಂತರ್ಯಾಮಿಯಾಗಿರುವ ದೇವನಾದ ಅಥವಾ ಸರ್ವಭೂತಗಳಿಗೂ ಆಶ್ರಯನಾದ, ಸರ್ವಭೂತಕ್ಷಯಾಯಚ-ಸರ್ವಭೂತಗಳಿಗೂ ನಾಶಕನಾದ, ತೇನಮಃ-ನಿನಗೆ ನಮಸ್ಕಾರವಾಗಲಿ. ಹೃಷೀಕೇಶ-ಇಂದ್ರಿಯಗಳಿಗೊಡೆಯನೇ! ತುಭ್ಯಂ-ನಮಃ-ನಿನಗೆ ನಮಸ್ಕಾರವಾಗಲಿ. ವಿಭೋ-ಪೂರ್ಣನೇ! ಪ್ರಪನ್ನಂ-ನೀನೇ ಗತಿಯೆಂದು ನಂಬಿರುವವನಾದ, ಮಾಂ-ನನ್ನನ್ನು, ಪಾಹಿ-ರಕ್ಷಿಸು ॥೩೦॥

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಚತ್ವಾರಿಂಶೋಽಧ್ಯಾಯಃ-

---

ನಮಂ ನಿಗ್ರಹಿಸುವುದಕೆ ಸಮರ್ಥನಾಗುವುದಿಲ್ಲ ॥೨೭॥ ಆ ಸಜ್ಜನರಿಗೆ ಪಡೆಯಲಶಕ್ಯವಾದ ನಿನ್ನ ಪಾದವಂ ಶರಣು ಹೊಂದಿರುವೆನು. ಆ ನಿನ್ನ ಪಾದಸೇವೆಯು ನಿನ್ನ ಅನುಗ್ರಹದಿಂದಲೇ ಉಂಟಾಗಬೇಕೆಂದು ತಿಳಿವುತಲಿರುವೆನು. ಪುರುಷನಿಗೆ ಯಾವ ಕಾಲದಲ್ಲಿ ಸಂಸಾರಬಂಧಮೋಕ್ಷವುಂಟಾಗುವುದೆಂದರೆ, ಸತ್ಸೇವೆಯಿಂದ ನಿನ್ನಲ್ಲಿ ಬುದ್ಧಿಯು ಯಾವ ಕಾಲದಲ್ಲಿ ಹುಟ್ಟುವುದೋ ಆಗ ಸಂಸಾರಬಂಧವು ಪರಿಹಾರವಾಗುವುದು ॥೨೮॥ ವಿಜ್ಞಾನಶರೀರನಾದ, ಸರ್ವಜ್ಞನಾದ, ಜೀವರಿಗೆ ಸುಖದುಃಖ ಪ್ರಾಪಕಂಗಳಾದ ಕಾಲಕರ್ಮ ಸ್ವಭಾವಾದಿಗಳಿಗೆ ನಿಯಾಮಕನಾದ, ಅನಂತಶಕ್ತಿಯುಳ್ಳ, ಪರಬ್ರಹ್ಮನಾದ ನಿನಗೆ ನಮಸ್ಕಾರವು ॥೨೯॥ ಸರ್ವಭೂತಂಗಳಿಗೂ ಅಧಿಷ್ಠಾನನಾದ ವಾಸುದೇವನೇ! ನಿನಗೆ ನಮಸ್ಕಾರವು. ಹೃಷೀಕೇಶನೇ! ನಿನಗೆ ನಮಸ್ಕಾರವು. ಶರಣಾಗತನಾದ ನನ್ನಂ ರಕ್ಷಿಸು ॥೩೦॥

[ಎಂದು ಅಕ್ರೂರನು ಶ್ರೀ ಭಗವಂತನಂ ಸ್ತುತಿಸಿದನು ಎಂದು]

ಇಂತು ಶ್ರೀ ಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸಿದನೆಂದು, ಸೂತಪೌರಾಣಿಕನು
ನೈಮಿಶಾರಣ್ಯವಾಸಿಗಳಾದ ಶೌನಕಾದಿ ಮಹರ್ಷಿಗಳಿಗೆ ಪೇಳಿದನೆಂಬಲ್ಲಿಗೆ-ಶ್ರೀಮನ್ಮಹೀ
ಶೂರ ಪುರವರಾಧೀಶ ಶ್ರೀ ಚಾಮರಾಜತನುಜ ಶ್ರೀಮತ್ಕೃಷ್ಣರಾಜ ವಿರಚಿತಮಾ
ದ " ಶ್ರೀಕೃಷ್ಣರಾಜ ವಾಣೀವಿಲಾಸ „ ಮೆಂಬ ಶ್ರೀ ಭಾಗವತಪುರಾಣ
ದ ಕರ್ಣಾಟಭಾಷಾ ವ್ಯಾಖ್ಯಾನದೊಳು ದಶಮಸ್ಕಂಧದಲ್ಲಿ
ಚತ್ವಾರಿಂಶಾಧ್ಯಾಯಂ
ಸಂಪೂರ್ಣಮಾದುದು.

ಶ್ರೀಶುಕಃ ॥ ಸ್ತುವತಸ್ತಸ್ಯಭಗವಾನ್ದರ್ಶಯಿತ್ವಾಜಲೇವಪುಃ ।ಭೂಯಸ್ಸಮಾಹರತ್ಕೃಷ್ಣೋನಟೋನಾಟ್ಯಮಿವಾತ್ಮನಃ ॥೧॥ ಸೋಪಿಚಾಂತರ್ಹಿತಂವೀಕ್ಷ್ಯಜಲಾದುನ್ಮಜ್ಯಸತ್ವರಃ । ಕೃತ್ವಾಚಾವಶ್ಯಕಂಸರ್ವಂವಿಸ್ಮಿತೋರಥಮಾಗಮತ್ ॥೨॥ ತಮಪೃಚ್ಛದ್ಧೃಷೀಕೇಶಃಕಿಂತೇದೃಷ್ಟಮಿಹಾದ್ಭುತಮ್ । ಭೂಮೌವಿಯತಿವಾತೋಯೇತಥಾತ್ವಾಂಲಕ್ಷಯಾಮಹೇ ॥೩॥ ಅಕ್ರೂರಃ ॥ ಅದ್ಭುತಾನೀಹಯಾವಂತಿಭೂಮೌವಿಯತಿವಾಜಲೇ । ತ್ವಯಿವಿಶ್ವಾತ್ಮಕೇತಾನಿಕಿಂಮೇದೃಷ್ಟಂವಿಪಶ್ಯತಃ ॥೪॥ ಯತ್ರಾದ್ಭುತಾನಿಸರ್ವಾಣಿಭೂಮೌವಿಯತಿವಾಜಲೇ । ತಂತ್ವಾನುಪಶ್ಯತೋಬ್ರಹ್ಮನ್ಕಿಂಮೇದೃಷ್ಟಮಿಹಾ

---

ಳಂಸೆಯು ಅಧ್ಯಾಯದ ಪ್ರತಿಪದಟೀಕೆ.

[ಶುಕವಾಕ್ಯವು.]ಭಗವಾನ್-ಐಶ್ವರ್ಯವುಳ್ಳ, ಕೃಷ್ಣಃ-ಕೃಷ್ಣನು, ಸ್ತುವತಃ-ಸ್ತೋತ್ರಮಾಡುತ್ತಿರುವ, ತಸ್ಯ-ಆ ಯಕ್ರೂರನಿಗೆ, ಜಲೇ-ನೀರಿನಲ್ಲಿ, ಆತ್ಮನಃ-ತನ್ನ, ವಪುಃ-ಮೂಲರೂಪವನ್ನು, ದರ್ಶಯಿತ್ವಾ-ತೋರಿಸಿ, ನಟಃ-ನಟ್ಟುವನು, ನಾಟ್ಯಮಿವ-ಕುಣಿದಾಟವನ್ನು ಹೇಗೋಹಾಗೆ, ಭೂಯಃ-ಮರಳಿಯೂ, ಸಮಾಹರತ್-ಉಪಸಂಹರಿಸಿ ಕೊಂಡನು ॥೧॥ಸೋಪಿ-ಆಯಕ್ರೂರನೂಕೂಡ, ಅಂತರ್ಹಿತಂ-ಅಡಗಿಹೋದ್ದನ್ನು, ವೀಕ್ಷ್ಯ-ಕಂಡು, ಜಲಾತ್-ನೀರಿನಿಂದ, ಉನ್ಮಜ್ಯ-ಎದ್ದು, ಸತ್ವರಃ-ತ್ವರೆಯಿಂ ಸಹಿತನಾಗಿ, ಆವಶ್ಯಕಂ ಅವಶ್ಯವಾಗಿ ಮಾಡಬೇಕಾದ, ಸರ್ವಂ-ಸಂಧ್ಯಾದಿಕರ್ಮಗಳೆಲ್ಲವನ್ನೂ, ಕೃತ್ವಾಚ-ಮಾಡಿಯೂ, ವಿಸ್ಮಿತಃ-ಅಚ್ಚರಿಯುಳ್ಳವನಾಗಿ, ರಥಂ-ತೇರನ್ನು ಕುರಿತು, ಆಗಮತ್-ಬಂದನು ॥೨॥ ಹೃಷೀಕೇಶಃ-ಕೃಷ್ಣನು, ತಂ-ಅವನನ್ನು ಕುರಿತು, ತೇ-ನಿನ್ನಿಂದ, ಇಹ-ಈಗ, ಭೂಮೌ-ನೆಲದಲ್ಲಿಯೂ, ವಿಯತಿವಾ-ಅಂತರಿಕ್ಷದಲ್ಲಿಯಾಗಲಿ, ತೋಯೇವಾ-ನೀರಿನಲ್ಲಿ ಆಗಲಿ, ಕಿಮದ್ಭುತಂ-ಏನುಆಶ್ಚರ್ಯವು, ದೃಷ್ಟಂ-ನೋಡಲ್ಪಟ್ಟಿತು? ತಥಾ-ಹಾಗೆ,ತ್ವಾಂ-ನಿನ್ನನ್ನು,ಲಕ್ಷಯಾಮಹೇ-ಕಾಣುವೆವು, ಇತಿ-ಹೀಗೆ, ಅಪೃಚ್ಛತ್-ಬೆಸಗೊಂಡನು ॥೩॥ [ಅಕ್ರೂರವಾಕ್ಯವು.]ಭೂಮೌ-ನೆಲದಲ್ಲಿ, ಜಲೇ-ನೀರಿನಲ್ಲಿ, ವಿಯತಿವಾ-ಗಗನದಲ್ಲಿ ಯಾದರೂ, ಇಹ-ಈಗ, ಅದ್ಭುತಾನಿ-ಆಶ್ಚರ್ಯಗಳು,ಯಾವಂತಿ-ಎಷ್ಟುಂಟೋ, ತಾನಿ-ಅವೆಲ್ಲವೂ, ವಿಶ್ವಾತ್ಮಕೇ-ಪ್ರಪಂಚಮಯನಾದ, ತ್ವಯಿ-ನಿನ್ನಲ್ಲಿರುವವು, ಅಂಥಾನಿನ್ನನ್ನು, ವಿಪಶ್ಯತಃ-ನೋಡುತ ಲಿರುವ, ಮೇ-ನನ್ನಿಂ

---

* ೪೧ನೆಯಅಧ್ಯಾಯದತಾತ್ಪರ್ಯವು.

ಶ್ರೀಧರೀಯಶ್ಲೋಕಃ॥ಏಕಚತ್ವಾರಿಂಶಕೇಽರ್ಹನ್ ರಜಕಂಪ್ರವಿಶನ್ ಪುರೀಮ್।ತತೋಽಪರಾನದಾತ್ತುಷ್ಟಃಸುದಾಮ್ನೋಮಾಲಾಕಸ್ಯಚ॥*॥ನಾಲ್ವತ್ತೊಂದನೆಯ ಅಧ್ಯಾಯದೊಳು ಶ್ರೀಕೃಷ್ಣನು ಮಥುರಾಪುರ ಪ್ರವೇಶವಂ ಮಾಡುವಾಗ ಇದಿರಾಗಿ ಬರುತಲಿರುವ ಒಬ್ಬ ಅಗಸನಂಕಂಡು ಗರ್ವಿತನಾದ ಆಯಗಸನಂ ಸಂಹರಿಸಿ, ಮುಂದೆ ಹೋಗುತ ಸುದಾಮ ನಾಮಕನಾದ ಒಬ್ಬ ಜಾಡನಂಕಂಡು ಅವನಿಂದ ಪೂಜಿತನಾಗಿ ಅವನಿಗೆ ವರಂಗಳಂ ಕೊಟ್ಟನುಎಂಬ ಅರ್ಥವು ಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸುವನದೆಂತನೆ:

ಎಲೈ,ಅರಸೇ! ಈಪ್ರಕಾರವಾಗಿ ಸ್ತೋತ್ರವಂ ಮಾಡುತ್ತಲಿರುವ ಅಕ್ರೂರಂಗೆ ಜಲದಲ್ಲಿ ನಿಜರೂಪವಂ ತೋರಿಸಿ, ಶ್ರೀಕೃಷ್ಣನು ವೇಷಧಾರಿಯು ವೇಷವಂ ತೆಗದುಹಾಕಿ ನಿಜಸ್ವರೂಪನಾದಂತೆ ಆಭಗವದ್ರೂಪವಂ ತಿರೋಧಾನವಂಮಾಡಿ ಕೃಷ್ಣರೂಪನೆ ಆದನು॥೧॥ಆಯಕ್ರೂರನು ತಿರೋಹಿತವಾದಭಗವದ್ರೂಪವಂ ತಿಳಿದು ಜಲದಿಂದೆದ್ದು ಶೀಘ್ರವಾಗಿ ನಿತ್ಯಕರ್ಮವಂ ಮಾಡಿಕೊಂಡು ಆಶ್ಚರ್ಯಂಗೊಳ್ಳುತ ರಥವನೇರಿದನು॥೨॥ ಆಯಕ್ರೂರನಂಕುರಿತು ಶ್ರೀಕೃಷ್ಣನು ಕೇಳಿದನು- ಎಲೈಅಕ್ರೂರನೇ! ಭೂಮಿಯಲ್ಲಾಗಲಿ, ಅಂತರಿಕ್ಷದಲ್ಲಾಗಲಿ, ಜಲದಲ್ಲಾಗಲಿ, ನಿನ್ನಿಂದ ಆಶ್ಚರ್ಯ ವ್ಯಾಪಾರವು ಕಾಣಲ್ಪಟ್ಟಿತೋ ಏನು?ನಿನ್ನಂ ನೋಡಿದರೆ ನಮಗೆ ಹಾಗೆತೋರುತ್ತೆ ॥೩॥ (ಆಕೃಷ್ಣವಾಕ್ಯವಂಕೇಳಿ ಅಕ್ರೂರನು ನುಡಿದನು; -) ಎಲೈ, ಅಪ್ಪಾ! ಕೃಷ್ಣನೇ! ಭೂಮಿಯಲ್ಲಿ ಆಕಾಶದಲ್ಲಿ ಜಲದಲ್ಲಿ ಸಹ ಆಶ್ಚರ್ಯಂಗಳೆಷ್ಟುವುಂಟೊ ಅವೆಲ್ಲವೂವಿಶ್ವಾತ್ಮಕನಾದ ನಿನ್ನಲ್ಲಿಯಿದ್ದೆ,ನಿನ್ನನ್ನೇ ನೋಡುವನನ್ನಿಂದ ಸಮಸ್ತಾಶ್ಚರ್ಯಂಗಳೂ ನೋಡಲ್ಪಟ್ಟವು॥೪॥ಯಾವನಿನ್ನಲ್ಲಿ ಸರ್ವಾಶ್ಚರ್ಯಂಗಳೂ ಇವೆಯೋ, ಎಲೈ ಪರಮೇಶ್ವರನೇ! ಆಯಾಶ್ಚರ್ಯಂಗಳೇ ಭೂಮಿಯಲ್ಲಿ ನೀರಿನಲ್ಲಿ ಆಕಾಶದಲ್ಲಿ ಸಹ ಇವೆ, ನಿನ್ನಂಬಿಟ್ಟು

ದ್ಭುತಂ ॥೫॥ ಇತ್ಯುಕ್ತ್ವಾಚೋದಯಾಮಾಸಸ್ಯಂದನಂಗಾಂದಿನೀಸುತಃ । ಮಥುರಾಮನಯ
ದ್ರಾಮಂಕೃಷ್ಣಂಚೈವದಿನಾತ್ಯಯೆ ॥೬॥ ಮಾರ್ಗೆ ಗ್ರಾಮಜನಾರಾಜಂಸ್ತತ್ರತತ್ರೋಪಸಂಗತಾಃ।
ವಸುದೆವಸುತೌದೃಷ್ಟ್ವಾಪ್ರೀತಾದೃಷ್ಟಿಂಚನಾದದುಃ ॥೭॥ ತಾವದ್ವ್ರಜೌಕಸಸ್ತತ್ರನಂದಗೋ
ಪಾದಯೋಗ್ರತಃ । ಪುರೋಪವನಮಾಸಾದ್ಯಪ್ರತೀಕ್ಷಂತೋವತಸ್ಥಿರೆ ॥೮॥ ತಾನ್ಸಮೇತ್ಯಾಹಭಗ
ವಾನಕ್ರೂರಂಜಗದೀಶ್ವರಃ । ಗೃಹೀತ್ವಾಪಾಣಿನಾಪಾಣಿಂಪ್ರಶ್ರಿತಂಪ್ರಹಸನ್ನಿವ ॥೯॥ ಭವಾನ್ಪ್ರ
ವಿಶತಾದಗ್ರೆಸಹಯಾನಃಪುರೀಂಗೃಹಂ । ವಯಂತ್ವಿಹಾವಮುಚ್ಯಾಥಪ್ರಾತದ್ರಕ್ಷ್ಯಾಮಹೆಪು
ರೀಂ ॥೧೦॥ ಅಕ್ರೂರಃ ॥ ನಾಹಂಭವದ್ಭ್ಯಾಂರಹಿತಃಪ್ರವೆಕ್ಷ್ಯೆಮಥುರಾಪುರೀಂ । ತ್ಯಕ್ತುಂನಾರ್ಹ
ಸಿಮಾಂನಾಥಭಕ್ತಂತೆಭಕ್ತವತ್ಸಲ ॥೧೧॥ ಆಗಚ್ಛಯಾಮಗೆಹಂನಸ್ಸನಾಥಾನ್ಕುರ್ವಧೋಕ್ಷಜ ।

---

ದ, ಇಹ-ಈಗ, ಕಿಮದ್ಭುತಂ-ಏನುಆಶ್ಚರ್ಯವು, ಅದೃಷ್ಟಂ-ನೋಡಲ್ಪಡಲಿಲ್ಲ? ॥೫॥ಇತ್ಯುಕ್ತ್ವಾ-ಹೀಗೆಹೇಳಿ, ಗಾಂದಿನೀಸು
ತಃ-ಗಾಂದಿನಿ ಯೆಂಬವಳ ಮಗನಾದ ಅಕ್ರೂರನು, ಸ್ಯಂದನಂ-ತೇರನ್ನು, ಚೋದಯಾಮಾಸ-ಮುಂದಕ್ಕೆ ನಡೆಯಿಸಿದನು
ರಾಮಂಕೃಷ್ಣಂಚ-ರಾಮನನ್ನು ಕೃಷ್ಣನನ್ನೂ, ಮಥುರಾಂ-ಮಥುರಾನಗರವನ್ನು, ಅನಯದೇವ-ಸೇರಿಸಿದನು ॥೬॥ರಾಜನ್-
ಅರಸೇ! ಮಾರ್ಗೇ-ದಾರಿಯಲ್ಲಿ, ತತ್ರತತ್ರ-ಅಲ್ಲಲ್ಲಿ, ಉಪಸಂಗತಾಃ-ಸೇರಿದವರಾದ, ಗ್ರಾಮಜನಾಃ-ಹಳ್ಳಿಗಳ ಜನರು, ವ
ಸುದೇವಸುತೌ-ವಸುದೇವನ ಪುತ್ರರನ್ನು, ದೃಷ್ಟ್ವಾ-ನೋಡಿ, ಪ್ರೀತಾಶ್ಚ-ಪ್ರೇಮವುಳ್ಳವರೂ ಆಗಿ, ದೃಷ್ಟಿಂ-ನೋಟವ
ನ್ನು, ನಾದದುಃ-ಹಿಂತಿರುಗಿಸಿ ಕೊಳ್ಳಲಿಲ್ಲವು॥೭॥ತಾವತ್-ಅಷ್ಟರಲ್ಲಿ, ನಂದಗೋಪಾದಯಃ-ನಂದಗೋಪನು ಮೊದಲಾದ,ವ್ರಜೌ
ಕಸಃ-ಗೋಕುಲವಾಸಿಗಳಾದ ಗೊಲ್ಲರು, ಅಗ್ರತಃ-ಮುಂಚೆಯೇ, ಪುರೋಪವನಂ-ಮಥುರಾನಗರದ ಬಳಿಯಣ ತೋಪನ್ನು,
ಆಸಾದ್ಯ-ಸೇರಿ, ತತ್ರ-ಅಲ್ಲಿ, ಪ್ರತೀಕ್ಷಂತಃ-ರಾಮಕೃಷ್ಣರ ನಿರೀಕ್ಷಿಸುವರಾಗಿ, ಅವತಸ್ಥಿರೇ-ಕುಳಿತಿದ್ದರು॥೮॥ಜಗದೀಶ್ವ
ರಃ-ಪ್ರಪಂಚಕ್ಕೊಡೆಯನಾದ, ಭಗವಾನ್-ಕೃಷ್ಣನು, ತಾನ್-ಆನಂದಗೋಪಾದಿಗಳನ್ನು, ಸಮೇತ್ಯ-ಸೇರಿ, ಪ್ರಶ್ರಿತಂ-
ನಮ್ರನಾದ, ಅಕ್ರೂರಂ-ಅಕ್ರೂರನನ್ನು, ಪಾಣಿನಾಪಾಣಿಂಗೃಹೀತ್ವಾ-ತನ್ನ ಕೈಯಿಂದವನ ಕೈಯಂಹಿಡಿದುಕೊಂಡು, ಪ್ರ
ಹಸನ್ಇವ-ನಗುತ್ತಿರುವನಂತೆ, ಆಹ-ನುಡಿದನು ॥೯॥ಭವಾನ್-ನೀನು, ಅಗ್ರೇ-ಮುಂದೆ, ಸಹಯಾನಃ-ರಥದಿಂ ಸಹಿತನಾಗಿ, ಪು
ರೀಂ-ನಗರವನ್ನೂ, ಗೃಹಂ-ಮನೆಯನ್ನೂ, ಪ್ರವಿಶತಾತ್-ಸೇರು, ವಯಂತು-ನಾವಾದರೋ, ಇಹ-ಇಲ್ಲಿ, ಅವಮುಚ್ಯ-ತಂ
ಗಿದ್ದು, ಪ್ರಾತರಥ-ಬೆಳಕಾದಮೇಲೆ, ಪುರೀಂ-ಮಥುರಾನಗರವನ್ನು, ದ್ರಕ್ಷ್ಯಾಮಹೇ-ನೋಡುವೆವು॥೧೦॥[ಅಕ್ರೂರವಾಕ್ಯವು]
ಭವದ್ಭ್ಯಾಂ-ನಿಮ್ಮಿಂದ, ರಹಿತಃ-ಬಿಡಲ್ಪಟ್ಟವನಾಗಿ, ಅಹಂ-ನಾನು, ಮಥುರಾಪುರೀಂ-ಮಥುರಾ ಪಟ್ಟಣವನ್ನು, ನಪ್ರವೆ
ಕ್ಷ್ಯೇ-ಪ್ರವೇಶಿಸುವುದಿಲ್ಲವು. ನಾಥ-ಒಡೆಯನೇ! ಭಕ್ತವತ್ಸಲ-ಭಕ್ತರಲ್ಲಿ ದಯೆಯುಳ್ಳವನೇ! ತೇ-ನಿನ್ನ, ಭಕ್ತಂ-ಸೇವಕನಾದ,
ಮಾಂ-ನನ್ನನ್ನು, ತ್ಯಕ್ತುಂ-ಬಿಡುವುದಕ್ಕೆ, ನಾರ್ಹಸಿ-ನೀನುತಕ್ಕವ ನಾಗುವದಿಲ್ಲ॥೧೧॥ಅಧೋಕ್ಷಜ-ಕೃಷ್ಣನೇ! ಸಹಾಗ್ರಜಃ-

---

ಆಶ್ಚರ್ಯ ವಾದುದಾವುದುಂಟು?॥೫।ಈರೀತಿಯಲ್ಲಿ ಹೇಳಿದವನಾದ ಗಾಂದಿನೀಪುತ್ರನಾದ ಅಕ್ರೂರನು ರಥ
ವಂ ನಡೆಯಿಸಿದನು.ಸಾಯಂಕಾಲದಹೊತ್ತಿಗೆ ಮಥುರಾಪುರಕ್ಕೆ ರಾಮಕೃಷ್ಣರಂಪ್ರವೇಶಗೊಳಿಸಿದನು॥೬॥ಮಾ
ರ್ಗದಲ್ಲಿ ಹೋಗುವಾಗ ಸಮೀಪಗ್ರಾಮಸ್ಥರಾದ ಜನರುಗಳು ಅಲ್ಲಲ್ಲಿ ಬಂದವರಾಗಿ ವಸುದೇವಪುತ್ರರಂ ನೋ
ಡಿ ಸಂತುಷ್ಟರಾಗಿ ದೃಷ್ಟಿಯಂಹಿಂದಕ್ಕೆತಿರುಗಿಸಲಿಲ್ಲ॥೭॥ಅನಿತರೊಳು ನಂದನೇಮುಂತಾದಗೋಪರುಗಳು ಮೊ
ದಲೇಹೋಗಿ ಮಥುರಾಪುರದ ಸಮೀಪದಲ್ಲಿ ತೋಪಿನಲ್ಲಿನಿಂತು ರಾಮಕೃಷ್ಣರ ಎದಿರುನೋಡುತಲಿದ್ದರು ॥೮॥
ಜಗದೊಡೆಯನಾದ ಭಗವಂತನಾದಶ್ರೀಕೃಷ್ಣನು ಅವರಂಸೇರಿ ವಿನಯಯುಕ್ತನಾದ ಅಕ್ರೂರನಂಕುರಿತು ಕೈ
ಯಂಹಿಡಿದುಕೊಂಡು ನಗುತಹೇಳಿದನು॥೯॥ಎಲೈ, ಅಕ್ರೂರನೇ! ನೀನುರಥಾರೂಢನಾಗಿಮಥುರಾಪುರಕ್ಕೆಹೋ
ಗು,ನಾವೆಲ್ಲರೂ-ಈರಾತ್ರಿಯಿಲ್ಲಿ ವಿಶ್ರಮಿಸಿಕೊಂಡು ನಾಳೆಯದಿನ ಪ್ರಾತಃಕಾಲದಲ್ಲಿಬರುವೆವು॥೧೦॥(ಎಂಬಕೃಷ್ಣ
ನವಾಕ್ಯವಂಕೇಳಿ ಅಕ್ರೂರನು ಹೇಳಿದನು-) ನಿಮ್ಮೀರ್ವರಂಬಿಟ್ಟು ನಾನೊಬ್ಬನೇಹೋಗುವದಿಲ್ಲ, ಎಲೈ ಭಕ್ತ
ವತ್ಸಲನಾದ ನಾಥನಾದಕೃಷ್ಣನೇ! ಭಕ್ತನಾದನನ್ನಂಬಿಡಬೇಡ, ನನ್ನಸಂಗಡಲೇ ಬರುವನಾಗು ॥೧೧॥ನನ್ನಮ

ಸಹಾಗ್ರಜಸ್ಸಗೋಪಾಲೈಸ್ಸುಹೃದ್ಭಿಶ್ಚ ಸುಹೃತ್ತಮ ॥೨೬॥ ಪುನೀಹಿ ಪಾದರಜಸಾ ಗೃಹಾನ್ನೋ ಗೃಹಮೇಧಿನಾಂ । ಯಚ್ಛೌಚೇನಾನುತೃಪ್ಯಂತಿ ಪಿತರಸ್ಸಾಗ್ನಯಸ್ಸುರಾಃ ॥೨೭॥ ಅವನಿಜ್ಯಾಂಘ್ರಿಯುಗಳಮಾಸೀಚ್ಛ್ಲೋಕ್ಯೋ ಬಲಿರ್ಮಹಾನ್ । ಐಶ್ವರ್ಯಮತುಲಂ ಲೇಭೇ ಗತಿಂ ಚೈಕಾಂತಿನಾಂ ತು ಯಾ ॥೨೮॥ ಆಪಸ್ತೇಂಘ್ರ್ಯವನೇಜನ್ಯಸ್ತ್ರೀಂಲ್ಲೋಕಾನ್ ಶುಚಯೋಽಪುನನ್ । ಶಿರಸಾಧತ್ತ ಯಾಶ್ಶರ್ವಸ್ಸ್ವರ್ಯಾತಾಸ್ಸಗರಾತ್ಮಜಾಃ ॥೨೯॥ ದೇವದೇವ ಜಗನ್ನಾಥ ಪುಣ್ಯಶ್ರವಣಕೀರ್ತನ । ಯದೂತ್ತಮೋತ್ತಮಶ್ಲೋಕ ನಾರಾಯಣ ನಮೋಸ್ತು ತೇ ॥೩೦॥ ಶ್ರೀಕೃಷ್ಣಬಲರಾಮಯೋರ್ಮಧುರಾನಗರಪ್ರವೇಶಘಟ್ಟಃ ಶ್ರೀಭಗವಾನ್ ॥ ಆಯಾಸ್ಯೇ ಭವತೋ ಗೇಹಮಹಮಾರ್ಯಸಮನ್ವಿತಃ । ಯದುಚಕ್ರದ್ರುಹಂ ಹತ್ವಾ ವಿತರಿಷ್ಯೇ ಸುಹೃತ್ಪ್ರಿಯಂ ॥೩೧॥ ಏವಮುಕ್ತೋ ಭಗವತಾ

---

ಅಂಣನಿಂ ಸಹಿತನಾಗಿ, ಸುಹೃತ್ತಮ-ಅತಿಪ್ರಿಯನೇ! ಸುಹೃದ್ಭಿಃ-ಇಷ್ಟರಾದ, ಗೋಪಾಲೈಸ್ಸಹ-ಗೊಲ್ಲರೊಡನೆ, ಆಗಚ್ಛ-ಬಾ ಗೇಹಂ-ಮನೆಯಂ ಕುರಿತು, ಯಾಮಃ-ಹೋಗುವ, ನಃ-ನಮ್ಮನ್ನು, ಸನಾಥಾನ್-ಒಡೆಯನುಳ್ಳವರನ್ನಾಗಿ, ಕುರು-ಮಾಡು ॥೨೬॥ ಗೃಹಮೇಧಿನಾಂ-ಗೃಹಸ್ಥರ-ಪಿತರಃ-ಪಿತೃದೇವತೆಗಳೂ, ಸಾಗ್ನಯಃ-ಅಗ್ನಿಗಳಿಂ ಸಹಿತರಾದ, ಸುರಾಃ-ದೇವತೆಗಳೂ, ಯಚ್ಛೌಚೇನ-ಯಾವಧೂಳನ್ನು ತೊಳೆದನೀರಿನಿಂದ, ಅನುತೃಪ್ಯಂತಿ-ಕೂಡಲೇ ತೃಪ್ತಿಗೊಳ್ಳುತ್ತಿರುವರೋ, ತೇನ-ಅಂಥಾ, ಪಾದರಜಸಾ-ಚರಣಧೂಳಿಯಿಂದ, ನಃ-ನಮ್ಮ, ಗೃಹಾನ್-ಮನೆಯನ್ನು, ಪುನೀಹಿ-ಪವಿತ್ರವನ್ನಾಗಿಮಾಡು ॥೨೭॥ ಮಹಾನ್-ಮಹಾತ್ಮನಾದ, ಬಲಿಃ-ಬಲಿಚಕ್ರವರ್ತಿಯು, ಅಂಘ್ರಿಯುಗಳಂ-(ವಾಮನನಾದನಿನ್ನ) ಅಡಿದಾವರೆಗಳೆರಡರನ್ನು, ಅವನಿಜ್ಯ-ತೊಳೆದು, ಶ್ಲೋಕ್ಯಃ-ಶ್ಲಾಘ್ಯನು, ಆಸೀತ್-ಆದನು. ಅತುಲಂ-ಸಮಾನವಿಲ್ಲದ, ಐಶ್ವರ್ಯಂ-ಭಾಗ್ಯವನ್ನೂ, ಏಕಾಂತಿನಾಂ-ಮಹಾಭಕ್ತರಿಗೆ, ಯಾ-ಯಾವುದೋ, ತಾಂ ಗತಿಂ ಚ-ಆಗತಿಯನ್ನೂ, ಲೇಭೇ-ಹೊಂದಿದನು ॥೨೮॥ ತೇ-ನಿನ್ನ, ಅಂಘ್ರ್ಯವನೇಜನ್ಯಃ-ಕಾಲುಗಳನ್ನು ತೊಳೆದ ವಾದ್ದರಿಂದಲೇ, ಶುಚಯಃ-ಪರಿಶುದ್ಧಗಳಾಗಿರುವ, ಯಾಃ ಆಪಃ-ಯಾವನೀರನ್ನು, ಶರ್ವಃ-ಶಿವನು, ಶಿರಸಾ-ತಲೆಯಿಂದ, ಅಧತ್ತ-ಧರಿಸಿದನೋ, ಯಾಭಿಃ-ಯಾವನೀರುಗಳಿಂದ, ಸಗರಾತ್ಮಜಾಃ-ಸಗರನಮಕ್ಕಳು, ಸ್ವರ್ಯಾತಾಃ-ಸ್ವರ್ಗಕ್ಕೆ ಹೋದವರಾದರೋ, ತಾಃ ಆಪಃ-ಆ ಗಂಗೋದಕಗಳು, ತ್ರೀನ್ ಲೋಕಾನ್-ಸ್ವರ್ಗ ಮರ್ತ್ಯ ಪಾತಾಳಗಳನ್ನು, ಅಪುನನ್-ಪವಿತ್ರಗೊಳಿಸಿದವು ॥೨೯॥ ದೇವದೇವ-ದೇವತೆಗಳಿಗೂ ದೇವನೇ! ಜಗನ್ನಾಥ-ಲೋಕಕ್ಕೊಡೆಯನೇ! ಪುಣ್ಯಶ್ರವಣಕೀರ್ತನ-ಪುಣ್ಯಕರವಾದ ಕೇಳ್ವಿಕೆಯೂ ಪಠನವೂ ಉಳ್ಳವನೇ! ಯದೂತ್ತಮ-ಯಾದವರಲ್ಲಿ ಶ್ರೇಷ್ಠನೇ! ಉತ್ತಮಶ್ಲೋಕ-ಸರ್ವೋತ್ತಮನೆಂದು ಕೊಂಡಾಡಲ್ಪಟ್ಟವನೇ! ನಾರಾಯಣ-ಸಕಲ ಪ್ರಾಣಿಗಳಲ್ಲಿಯೂ ಇರುವವನೇ! (ಜಲರಾಶಿಯಲ್ಲಿ ಮಲಗಿರುವ ಪರಮಾತ್ಮನೇ!) ತೇ-ನಿನಗೆ, ನಮಃ-ನಮಸ್ಕಾರವಾಗಲಿ ॥೩೦॥ [ಭಗವದ್ವಾಕ್ಯವು.] ಅಹಂ-ನಾನು, ಆರ್ಯಸಮನ್ವಿತಸ್ಸನ್-ವಸುದೇವಾದಿಗಳಾದ ಹಿರಿಯರಿಂ ಕೂಡಿದವನಾಗಿ, ಭವತಃ-ನಿನ್ನ, ಗೇಹಂ-ಮನೆಯಂ ಕುರಿತು, ಆಯಾಸ್ಯೇ-ಬರುವೆನು. ಯದುಚಕ್ರದ್ರು

---

ನೆಗೆಬಂದು ನಮ್ಮಂ ಸನಾಥರನ್ನಾಗಿಮಾಡು ಬಲರಾಮಸಮೇತನಾಗಿ ಗೋಪಯುಕ್ತನಾಗಿ ಮಿತ್ರರೊಡನೆಕೂಡಿ ನಮ್ಮಮನೆಗೆಬಂದು ॥೨೬॥ ನಮ್ಮಂ ನಮ್ಮ ಗೃಹಂಗಳಂ ಸಹ ನಿನ್ನ ಪಾದಧೂಳಿನಿಂದ ಪವಿತ್ರಂಗಳಂ ಮಾಡು, ನಿನ್ನ ಪಾದಪ್ರಕ್ಷಾಳನೋದಕದಿಂದ ಸಿಕ್ತಮಾದ ನಮ್ಮ ಗೃಹಭೂಮಿಯಿಂದ ಅಗ್ನಿಗಳು, ಪಿತೃಗಳು, ದೇವತೆಗಳು, ತೃಪ್ತರಾಗುವರು ॥೨೭॥ ಬಲಿಯು ನಿಂನ ಪಾದವಂ ತೊಳೆದು ಪುಣ್ಯಶ್ಲೋಕನಾಗಿ ಅತ್ಯದ್ಭುತಮಾದ ಐಶ್ವರ್ಯಮಂ ಮಹಾಯೋಗಿಗಳಿಗೆ ಬರುವಗತಿಯಂ ಸಹ ಪಡೆದನು ॥೨೮॥ ನಿನ್ನ ಪಾದಪ್ರಕ್ಷಾಳನೋದಕವು ಲೋಕತ್ರಯಮಂ ಪರಿಶುದ್ಧವಂ ಮಾಡುವುದು. ಆದಕಾರಣದಿಂದ ಪರಮೇಶ್ವರನು ಕೂಡ ಶಿರಸ್ಸಿನಲ್ಲಿ ಧರಿಸಿದನು, ಆ ಜಲದ ಮಹಿಮೆಯಿಂದ ಸಗರಪುತ್ರರು ಸ್ವರ್ಗವನೆಯ್ದಿದರು ॥೨೯॥ ಎಲೈ ದೇವದೇವನೆ! ಪುಣ್ಯಶ್ರವಣಕೀರ್ತನನೇ! ಜಗನ್ನಾಥನೇ! ಯದೂತ್ತಮನೇ! ಉತ್ತಮಕೀರ್ತಿಯುಳ್ಳವನೇ! ನಾರಾಯಣನೇ! ನಿನಗೆ ನಮಸ್ಕಾರವು ॥೩೦॥ (ಎಂದು ಪ್ರಾರ್ಥನಂಗೆಯ್ವ ಅಕ್ರೂರನಂ ಕುರಿತು ಶ್ರೀಕೃಷ್ಣನು ನುಡಿದನು) ನಾಳೆಯ ದಿನದ ಉದಯಕಾಲದಲ್ಲಿ ನಿಮ್ಮ ಮನೆಗೆ ರಾಮಸಮೇತನಾಗಿ ಬರುವೆನು, ಯಾದವಸಮೂಹದ್ರೋಹಿಯಾದ ಕಂಸನಂ ಸಂಹರಿಸಿ ನಿಮಗೆ ಸುಖವನ್ನುಂಟುಮಾಡ

ಸೋಕ್ರೂರೋವಿಮನಾಇವ । ಪುರೀಂಪ್ರವಿಷ್ಟಃಕಂಸಾಯಕರ್ಮಾವೇದ್ಯಗೃಹಂಯಯೌ ॥೧೮॥ ಅಥಾಪರಾಹ್ಣೇಭಗವಾನ್ಕೃಷ್ಣಸ್ಸಂಕರ್ಷಣಾನ್ವಿತಃ ।ಮಥುರಾಂಪ್ರಾವಿಶದ್ಗೋಪೈರ್ದಿದೃಕ್ಷುಃಪರಿವಾರಿತಃ ॥೧೯॥ ದದರ್ಶತಾಂಸ್ಫಾಟಿಕತುಂಗಗೋಪುರದ್ವಾರಾಂ ಬೃಹದ್ಧೇಮಕಪಾಟತೋರಣಾಂ । ತಾಮ್ರಾರಕೋಷ್ಠಾಂಪರಿಘಾದುರಾಸದಾಮುದ್ಯಾನರಮ್ಯೋಪವನೋಪಶೋಭಿತಾಂ ॥೨೦॥ ಸೌವರ್ಣಶೃಂಗಾಟಕಹರ್ಮ್ಯನಿಷ್ಕುಟೈಃಶ್ರೇಣೀಸಭಾಭಿರ್ಭವನೈರುಪಸ್ಕೃತಾಂ । ವೈಡೂರ್ಯವಜ್ರಾಮಲನೀಲವಿದ್ರುಮೈರ್ಮುಕ್ತಾಹರಿದ್ಭಿರ್ವಲಭೀಷುವೇದಿಷು ॥೨೧॥ ಜುಷ್ಟೇಷುಜಾಲಾಮುಖರಂಧ್ರಕು

---

ಹಂ-ಯಾದವ ಮಂಡಲಕ್ಕೆ ದ್ರೋಹಿಯಾದ ಕಂಸನನ್ನು, ಹತ್ವಾ-ಕೊಂದು, ಸುಹೃತ್ಪ್ರಿಯಂ-ಒಳ್ಳೇ ಮನಸ್ಸುಳ್ಳವರಿಗೆ ಇಷ್ಟವನ್ನೂ, ಸ್ನೇಹಿತರಿಗೆ ಪ್ರೀತಿಯನ್ನೂ, ವಿತರಿಷ್ಯೇ-ಕೊಡುವೆನು ॥೧೭॥ಭಗವತಾ-ಕೃಷ್ಣನಿಂದ, ಏವಂ-ಹೀಗೆ, ಉಕ್ತಃ-ಹೇಳಲ್ಪಟ್ಟವನಾದ, ಸೋಕ್ರೂರಃ-ಆಯಕ್ರೂರನು, ವಿಮನಾಇವ-ಅಸಮಾಧಾನವುಳ್ಳವನಹಾಗೆ, ಪುರೀಂ-ಪಟ್ಟಣವನ್ನು, ಪ್ರವಿಷ್ಟಃ-ಪ್ರವೇಶಿಸಿದವನಾಗಿ, ಕರ್ಮ-ತಾನುಮಾಡಿದ ಕೆಲಸವನ್ನು, ಕಂಸಾಯ-ಕಂಸನಿಗೆ, ಆವೇದ್ಯ-ಅರಿಕೆಮಾಡಿ, ಗೃಹಂ-ತನ್ನಮನೆಯನ್ನು, ಯಯೌ-ಸೇರಿದನು ॥೧೮॥ಅಥ-ಆಮೇಲೆ, ಅಪರಾಹ್ಣೇ-ಮಧ್ಯಾಹ್ನದಮೇಲೆ, ಭಗವಾನ್ಕೃಷ್ಣಃ-ಭಗವಂತನಾದ ಕೃಷ್ಣನು, ಸಂಕರ್ಷಣಾನ್ವಿತಃ-ಬಲರಾಮನಿಂ ಸಹಿತನಾಗಿ, ಮಥುರಾಂ-ಮಥುರಾ ನಗರವನ್ನು, ದಿದೃಕ್ಷುಃ-ನೋಡಲು ಬಯಸಿದವನಾಗಿ, ಗೋಪೈಃ-ಗೊಲ್ಲರಿಂದ, ಪರಿವಾರಿತಸ್ಸನ್-ಬಳಸಲ್ಪಟ್ಟವನಾಗಿ, ಪ್ರಾವಿಶತ್-ಒಳಹೊಕ್ಕನು ॥೧೯॥ ತಾಂ-ಆಮಥುರಾ ನಗರಿಯನ್ನು, ದದರ್ಶ-ಕಂಡನು. (ಅದುಯೆಂಥಾದ್ದೆಂದರೆ-) ಸ್ಫಾಟಿಕ..... ದ್ವಾರಾಂ-ಸ್ಫಾಟಿಕ-ಸ್ಫಟಿಕದಿಂದ ರಚಿಸಲ್ಪಟ್ಟ, ತುಂಗ-ಉದ್ದವಾದ, ಗೋಪುರದ್ವಾರಾಂ-ಊರಬಾಕಲುಳ್ಳದ್ದು ಬೃಹತ್-ದೊಡ್ಡ, ಹೇಮಕಪಾಟ-ಭಂಗಾರದ ಕದಗಳೂ, ತೋರಣಾಂ-ಹೊರಬಾಕಲೂ ಉಳ್ಳದ್ದು. ತಾಮ್ರಾರಕೋಷ್ಠಾಂ-ತಾಮ್ರ-ತಾಮ್ರದ, ಆರ-ಬೆಳ್ಳಿಯ-ಕೋಷ್ಠಾಂ-ಕಣಜಗಳೂ, ಲಾಯಗಳೂ, ಮುಂತಾದ್ದುಳ್ಳದ್ದು. ಪರಿಘಾದುರಾಸದಾಂ-ಪರಿಘಾ-ಅಗಳ್ತಿಯಿಂದ, (ಕಂದಕ) ದುರಾಸದಾಂ-ಪ್ರವೇಶಿಸುವುದಕ್ಕೆ ಅಶಕ್ಯವಾದ್ದು.ಉದ್ಯಾ....ತಾಂ-ಉದ್ಯಾನ-ಮನೆಯ ತೋಟಗಳಿಂದಲೂ, ರಮ್ಯ-ಮನೋಹರವಾದ, ಉಪವನ-ಹೊರತೋಟಗಳಿಂದಲೂ, ಶೋಭಿತಾಂ-ಅಲಂಕರಿಸಲ್ಪಟ್ಟದ್ದು ॥೨೦॥ಸೌ-....ಟೈಃ-ಸೌವರ್ಣ-ಭಂಗಾರದ, ಶೃಂಗಾಟಕ-ನಾಲ್ಕುದಾರಿಗಳ ಚೌಕಗಳಲ್ಲಿ, ಹರ್ಮ್ಯ-ಧನವಂತರ ಮನೆಗಳ, ನಿಷ್ಕುಟೈಃ ಮನೆಯ ತೋಟಗಳಿಂದಲೂ, ಶ್ರೇಣೀ-ಸಾಲಾಗಿರುವ ಮಂಟಪಗಳಿಂದಲೂ, ಭವನೈಃ-ಮನೆಗಳಿಂದಲೂ, ಉಪಸ್ಕೃತಾಂ-ಅಲಂಕರಿಸಲ್ಪಟ್ಟದ್ದು, ವೈಡೂರ್ಯ-ಬೆಕ್ಕಿನ ಕಂಗಳ ಹಾಗಿರುವ ರತ್ನಗಳು, ವಜ್ರ-ರವೆಗಳು, ಅಮಲ-ಶುದ್ಧವಾದ, ನೀಲ-ಇಂದ್ರನೀಲ ರತ್ನಗಳು, ವಿದ್ರುಮೈಃ-ಹವಳಗಳು, ಇವುಗಳಿಂದಲೂ, ಮುಕ್ತಾಹರಿದ್ಭಿಃ-ಮುತ್ತುಗಳಿಂದಲೂ ಪಚ್ಚೆಗಳಿಂದಲೂ, ವಲಭೀಷು-ಲೋವೆಗಳಲ್ಲಿಯೂ, ವೇದಿಷು-ಜಗುಲಿಗಳಲ್ಲಿಯೂ ॥೨೧॥ಜುಷ್ಟೇಷು-ಕೂಡಿರುವ, ಜಾಲಾಮುಖರಂಧ್ರ ಕುಟ್ಟಿಮೇಷು-ಜಾಲಾಮುಖರಂಧ್ರ-ಗವಾಕ್ಷದ

---

ವೆನು ॥೧೭॥ ಎಂಬಕೃಷ್ಣನವಾಕ್ಯವಂಕೇಳಿ ಅಕ್ರೂರನು ಮನಸ್ಸಂಚಿಕ್ಕದಂಮಾಡಿಕೊಂಡು ಮಧುರಾಪುರಕ್ಕೆಹೋಗಿ ಕಂಸನಿಗೆ ಈ ರಾಮಕೃಷ್ಣಾಗಮನವಂಪೇಳಿ ತನ್ನಮನೆಗೆಹೋದನು ॥೧೮॥ಆಬಳಿಗಾಗ ಕೃಷ್ಣನು ಬಲರಾಮಸಮೇತನಾಗಿ ಗೋಪರಿಂದ ಯುಕ್ತನಾಗಿಮಧುರಾಪುರವಂನೋಡಲಿಚ್ಛೆಯುಳ್ಳವನಾಗಿಬಂದನು॥೧೯॥ (ಆಮಧುರಾಪುರವೆಂತಿಯದೆಂದರೆ-) ಸ್ಫಟಿಕಶಿಲಾಮಯಂಗಳಾದ ಉನ್ನತಂಗಳಾದ ಪುರದ್ವಾರಂಗಳುಳ್ಳುದುದಾಗಿ, ವಿಶಾಲಂಗಳಾದ ಸುವರ್ಣಮಯಂಗಳಾದ ಕದಗಳಿಂದಲೂ ಶೋಭಿತವಾಗಿ, ತಾಮ್ರ, ಹಿತ್ತಾಳೆಗಳಿಂದ ನಿರ್ಮಿತಂಗಳಾದ ಗೃಹಂಗಳುಳ್ಳುದುದಾಗಿ, ಅಗಾಧವಾದಅಗಳ್ತಿಯುಳ್ಳುದುದಾಗಿ, ತೋಪುಗಳಿಂದಲೂ ಉದ್ಯಾನವನಂಗಳಿಂದಲೂ ಶೋಭಿತವಾಗಿ,ಇರುವುದು॥೨೦॥ ಸ್ವರ್ಣಮಯಂಗಳಾದ ಚತುಷ್ಪಥಗಳಿಂದಲೂ ಉಪ್ಪರಿಗೆಗಳಿಂದಲೂಗೃಹೋದ್ಯಾನಂಗಳಿಂದಲೂ ಸಾಲುಮನೆಗಳಿಂದಲೂ ಅಲಂಕೃತವಾಗಿ,ವೈಡೂರ್ಯಂಗಳಿಂದಲೂ ವಜ್ರಂಗಳಿಂದಲೂ ನಿರ್ಮಲಂಗಳಾದಹವಳಂಗಳಿಂದಲೂ ರಚಿತಂಗಳಾದ ಜಗಲಿಗಳೂ ಲೋವೆಗಳೂ ಉಳ್ಳುದುದಾಗಿ, ಪ್ರಕಾಶಿಸುವುದು ॥೨೧॥ ಗವಾಕ್ಷಂಗಳಲ್ಲಿಯೂ ಲೋವೆಗಳಲ್ಲಿಯೂ ವಾಸಂಗೆಯ್ವ ಪಾರಾವತಪಕ್ಷಿಗ



ಶ್ರೀಕೃಷ್ಣ ಬಲರಾಮರು ಮಧುರಾಪುರವಂಪ್ರವೇಶಿಸುವಿಕೆ

ಟ್ಟಿಮೇಷ್ವಾವಿಷ್ಟಪಾರಾವತಬರ್ಹಿನಾದಿತಾಂ । ಸಂಸಿಕ್ತರಥ್ಯಾಪಣಮಾರ್ಗಚತ್ವರಾಂ ಪ್ರಕೀರ್ಣ
ಮಾಲ್ಯಾಂಕುರಲಾಜತಂಡುಲಾಂ ॥೨೨॥ ಆಪೂರ್ಣಕುಂಭೈರ್ದಧಿಚಂದನೋಕ್ಷಿತೈಃ ಪ್ರಸೂನದೀಪಾ
ವಳಿಭಿಸ್ಸಪಲ್ಲವೈಃ । ಸವೃಂತರಂಭಾಕ್ರಮುಕೈಸ್ಸಕೇತುಭಿಸ್ಸ್ವಲಂಕೃತದ್ವಾರಗೃಹಾಂ ಸಪಟ್ಟಿ
ಕೈಃ ॥೨೩॥ ತಾಂ ಸಂಪ್ರವಿಷ್ಟೌ ವಸುದೇವನಂದನೌ ವೃತೌ ವಯಸ್ಯೈರ್ನರದೇವವರ್ತ್ಮನಾ । ದ್ರ
ಷ್ಟುಂ ಸಮೀಯುಸ್ತ್ವರಿತಾಃ ಪುರಸ್ತ್ರಿಯೋ ಹರ್ಮ್ಯಾಣಿ ಚೈವಾರುರುಹುರ್ನೃಪೋತ್ಸುಕಾಃ ॥೨೪॥

---

ತೊತುಗಳಲ್ಲಿಯೂ, ಕುಟ್ಟಿಮೇಷು ರತ್ನಗಳು ಕೆತ್ತಿದ ನೆಲಗಳಲ್ಲಿಯೂ, ಆವಿಷ್ಟ... ನಾದಿತಾಂ-ಆವಿಷ್ಟ-ಹೊಕ್ಕಿರುವ, ಪಾರಾ
ವತ-ಪಾರಿವಾಳ ಹಕ್ಕಿಗಳಿಂದಲೂ, ಬರ್ಹಿ-ನವಿಲುಗಳಿಂದಲೂ, ನಾದಿತಾಂ-ಧ್ವನಿಯುಂಟಾಗುವಂತೆ ಮಾಡಲ್ಪಟ್ಟಿರುವದು.
ಸಂಸಿಕ್ತ...ಚತ್ವರಾಂ-ಸಂಸಿಕ್ತ-ಸಾರಿಸಲ್ಪಟ್ಟ, ರಥ್ಯಾ-ಬಂಡಿದಾರಿಗಳೂ, ಆಪಣ-ಅಂಗಡಿಗಳೂ, ಮಾರ್ಗ-ಕಾಲುದಾರಿ
ಗಳೂ, ಚತ್ವರಾಂ-ಮುಂಗಡಗಳೂ, ಉಳ್ಳದ್ದು ಪ್ರಕೀರ್ಣ...,ತಂಡುಲಾಂ-ಪ್ರಕೀರ್ಣ-ಎರಚಲ್ಪಟ್ಟಿರುವ, ಮಾಲ್ಯ-ಹೂವಿನ
ಸರಗಳೂ, ಅಂಕುರ-ಗರಿಕೆ ಚಿಗುರುಗಳೂ, ಲಾಜ-ಅರಳೂ, ತಂಡುಲಾಂ-ಅಕ್ಷತೆಗಳೂ ಉಳ್ಳದ್ದು ॥೨೨॥ದಧಿಚಂದನೋಕ್ಷಿತೈಃ-
ಮೊಸರಿನಿಂದಲೂ ಗಂಧದಿಂದಲೂ ಚಿಮುಕಿಸಲ್ಪಟ್ಟ, ಸಪಲ್ಲವೈಃ-ಚಿಗುರುಗಳಿಂ ಸಹಿತವಾದ, ಪ್ರಸೂನದೀಪಾವಳಿಭಿಃ-ಹು
ವ್ವುಗಳೂ ದೀವಿಗೆಗಳ ಸಾಲುಗಳೂ ಉಳ್ಳ, ಆಪೂರ್ಣಕುಂಭೈಃ-ನೀರುತುಂಬಿದ ಕೊಡಗಳಿಂದಲೂ, ಸಕೇತುಭಿಃ-ಧ್ವಜಗಳಿಂ
ಸಹಿತಗಳಾದ, ಸವೃಂತರಂಭಾಕ್ರಮುಕೈಃ-ಗೊನೆಗಳಿಂ ಸಹಿತವಾದ, ಬಾಳೆಅಡಿಕೆಗಳಿಂದಲೂ, ಸ್ವಲಂಕೃತ-. ಪಟ್ಟಿಕೈಃ
ಸ್ವಲಂಕೃತ-ಚೆನ್ನಾಗಿ ಅಲಂಕರಿಸಲ್ಪಟ್ಟ, ದ್ವಾರ-ಬಾಗಿಲುಗಳ, ಗೃಹ-ಮನೆಗಳ, ಅಂಸಪಟ್ಟಿಕೈಃ-ಕಟಕಟಿಗಳಿಂದಲೂ, ಮ
ತ್ತು, ಪಟ್ಟೆಯ ಮೇಲ್ಕಟ್ಟು ವಸ್ತ್ರಗಳಿಂದಲೂ ಸಹಿತವಾದ್ದು ॥೨೩॥ತಾಂ-ಅಂಥಾ ಮಥುರಾ ನಗರಿಯನ್ನು, ಸಂಪ್ರವಿ
ಷ್ಟೌ-ಪ್ರವೇಶಿಸಿದವರಾದ, ವಯಸ್ಯೈಃ-ಸಂಗಾತಿಗಳಿಂದ, ವೃತೌ-ಬಳಸಲ್ಪಟ್ಟವರಾದ, ವಸುದೇವನಂದನೌ-ವಸುದೇವನ
ಪುತ್ರರಾದ ರಾಮಕೃಷ್ಣರನ್ನು, ದ್ರಷ್ಟುಂ-ನೋಡುವ ಪಕ್ಕೆ, ತ್ವರಿತಾಃ-ಆತುರಗೊಂಡವರಾದ, ಪುರಸ್ತ್ರಿಯಃ-ಪಟ್ಟಣದ
ಹೆಂಗಳು, ನರದೇವವರ್ತ್ಮನಾ-ರಾಜಮಾರ್ಗದಿಂದ,ಸಮೀಯುಃ-ಧಾರಾಳವಾಗಿಹೊರಟುಬಂದರು. ನೃಪ-ಅರಸೇ!ಉತ್ಸುಕಾಃ-
ಕೃಷ್ಣನಂ ನೋಡುವುದರಲ್ಲಿ ಉತ್ಸಾಹವುಳ್ಳವರಾದ್ದರಿಂದಲೇ, ಹರ್ಮ್ಯಾಣಿಚ-ಧನವಂತರ ಮನೆಗಳನ್ನು, ಆರುರುಹುರೇವ-
ಏರಲೇಏರಿದರು ॥೨೪॥ಕಾಶ್ಚಿತ್-ಕೆಲವರು ಹೆಂಗಳು, ವಿಪರ್ಯಕ್-ವ್ಯತ್ಯಸ್ತವಾಗಿ, ಧೃತ-ಧರಿಸಲ್ಪಟ್ಟ, ವಸ್ತ್ರಭೂಷಣಾಃ-

---

ಳಿಂದಲೂ ಮಯೂರಂಗಳಿಂದಲೂ ಧ್ವನಿಗೆಯ್ಯಲ್ಪಟ್ಟು ದುದಾಗಿ, ಗಂಧೋದಕಂಗಳಿಂದ ನನೆಯಿಸಲ್ಪಟ್ಟ
ರಾಜವೀಧಿಗಳು ಳ್ಳುದುದಾಗಿ, ಮಾಲ್ಯಂಗಳಿಂದಲೂ ಅರಳುಗಳಿಂದಲೂ ಅಕ್ಷತಂಗಳಿಂದಲೂ ಹರಹಲ್ಪಟ್ಟ ರಾಜ
ವೀಧಿಗಳೂ ಅಂಗಡಿ ಬೀದಿಗಳೂ ಉಳ್ಳುದುದಾಗಿ ಇರುವುದು ॥೨೨॥ ದ್ವಾರಂಗಳ ಉಭಯ ಪಾರ್ಶ್ವದಲ್ಲಿ
ಯೂ ಉಭಯಕುಂಭಗಳಿಂದಲೂ ಮೊಸರಿನ ಗಡಿಗೆ ಗಳಿಂದಲೂ ಚಂದ
ನೋದಕಂಗಳಿಂದಲೂ ನನಯಿಸಲ್ಪಟ್ಟಜೋಡಿಗಳಲ್ಲಿ ಇರಿಸಲ್ಪಟ್ಟದೀಪಂ
ಗಳಿಂದ ಯುಕ್ತಂಗಳಾದ ಬಾಳೆಯ ಸ್ತಂಭಂಗಳಿಂದಲೂ ಅಲಂಕೃತಂಗ
ಳಾದದ್ವಾರಂಗ ಳುಳ್ಳುದುದಾಗಿ, ಅಡಿಕೆತಾರುಗಳಿಂದಲೂ ಧ್ವಜಂಗಳಿಂ
ದಲೂ ಅಲಂಕೃತವಾಗಿ, ಇರುವುದು॥೨೩॥ಎಲೈ ಅರಸೇ! ಶ್ರೀಕೃಷ್ಣನು
ಇಂತಾ ಮಧುರಾ ಪುರವಂನೋಡಿ, ಬಲರಾಮನು ಸಹ ಮಿತ್ರರೊಡನೆಸ
ಮೇತರಾಗಿ ಆಪುರವಂಪ್ರವೇಶಿಸಿ ರಾಜಮಾರ್ಗದಿಂದ ಹೋಗುತ್ತಿರಲಾ
ಗಿ, ಆರಾಮ ಕೃಷ್ಣರಂ ನೋಡಲೋಸುಗ ಪುರದಸ್ತ್ರೀಯರು ಕು
ತೂಹಲ ಯುಕ್ತರಾಗಿ ಉಪ್ಪರಿಗೆಗಳ ಮೇಲೆ ಏರಿದರು ॥೨೪॥ಕೃಷ್ಣ
ನಂ ನೋಡುವ ತ್ವರಿತದಿಂದಕೆಲವರು ಸ್ತ್ರೀಯರುವ್ಯತ್ಯಸ್ತವಾಗಿವಸ್ತ್ರ
ಭೂಷಣಂಗಳಿಂ ಧರಿಸಿದವರಾಗಿ, ಕೆಲವರು ಒಂದು ಹಸ್ತದಲ್ಲಿ ಕಡಗವಂ



ಕಾಶ್ಚಿದ್ವಿಪರ್ಯಗ್ಧೃತವಸ್ತ್ರಭೂಷಣಾವಿಸ್ಮೃತ್ಯಚೈಕಂಯುಗಳೇಷ್ವಥಾಪರಾಃ । ಕೃತೈಕಪತ್ರಶ್ರ
ವಣೈಕನೂಪುರಾನಾಙ್ಕ್ತ್ವಾದ್ವಿತೀಯಂತ್ವಪರಾಶ್ಚಲೋಚನಂ ॥೨೪॥ ಅಶ್ನಂತ್ಯ ಏಕಾಸ್ತದಪಾ
ಸ್ಯಭೋಜನಮಭ್ಯಜ್ಯಮಾನಾ ಅಕೃತೋಪಮಜ್ಜನಾಃ । ಸ್ವಪಂತ್ಯ ಉತ್ಥಾಯ ನಿಶಮ್ಯ ನಿಸ್ವನಂ ನಿ
ಪಾಯಯಂತ್ಯೋಽರ್ಭಮಪೋಹ್ಯ ಮಾತರಃ ॥೨೫॥ ಮನಾಂಸಿತಾಸಾಮರವಿಂದಲೋಚನಃಪ್ರಗಲ್ಭಲೀ
ಲಾಹಸಿತಾವಲೋಕನೈಃ । ಜಹಾರಮತ್ತದ್ವಿರದೇಂದ್ರವಿಕ್ರಮೋದೃಶಾಂದದಚ್ಛ್ರೀರಮಣಾತ್ಮನೋ
ತ್ಸವಂ ॥೨೬॥ ದೃಷ್ಟ್ವಾಮುಹುಃಶ್ರುತಮನುದ್ರುತಚೇತಸಸ್ತಂತತ್ಪ್ರೇಕ್ಷಣೋತ್ಸ್ಮಿತಸುಧೋಕ್ಷ
ಣಲಬ್ಧಮಾನಾಃ । ಆನಂದಮೂರ್ತಿಮುಪಗೂಹ್ಯದೃಶಾತ್ಮಲಬ್ಧಂಹೃಷ್ಯತ್ತ್ವಚೋಜಹುರನಂ

---

ಉಡಿಗೆಗಳೂ ತೊಡಿಗೆಗಳೂ ಉಳ್ಳವರಾದರು ಅಥ-ಆಮೇಲೆ, ಅಪರಾಃ-ಬೇರೆಹೆಂಗಳು, ಯುಗಳೇಷು-ಎರಡರಲ್ಲಿ, ಏಕಂ-ಒಂದ
ರನ್ನು, ವಿಸ್ಮೃತ್ಯ-ಮರೆತು, ಕೃತೈ... ಪುರಾಃ-ಕೃತ-ಅಲಂಕರಿಸಲ್ಪಟ್ಟ, ಏಕಪತ್ರ-ಒಂದೋಲೆಯುಳ್ಳ, ಶ್ರವಣ-ಕಿವಿಯೂ,
ಏಕನೂಪುರಾಃ-ಒಂದುಕಾಲಂದಿಗೆಯೂ ಉಳ್ಳವರಾದರು. ಅಪರಾಃ-ಬೇರೆಹೆಂಗಳು, ದ್ವಿತೀಯಂ-ಎರಡನೆಯ, ಸ್ವಲೋಚನಂ-
ತನ್ನಕಂಣನ್ನು, ನಾಙ್ಕ್ತ್ವಾ-ಕಾಡಿಗೆಯಿಂದಲಂಕರಿಸಿಕೊಳ್ಳದೆ, (ಸಮಾಯಯುಃ-ಬಂದರು) ॥೨೪॥ ಏಕಾಃ-ಕೆಲವರು, ಅಶ್ನಂ
ತ್ಯಃ-ಉಣ್ಣುತಲಿರುವರಾದರೂ, ತತ್-ಆ, ಭೋಜನಂ-ಊಟವನ್ನು, ಅಪಾಸ್ಯ-ಬಿಟ್ಟು, ಅಭ್ಯಜ್ಯಮಾನಾಸ್ತು-ಎಂಣೆಯೊ
ತ್ತಲ್ಪಡುತ್ತಿರುವರಾದರೋ, ಅಕೃತೋಪಮಜ್ಜನಾಃ- (ನೀರೆರಕೊಳ್ಳದವರಾಗಿಯೂ,) ಅಕೃತ-ಮಾಡಲ್ಪಡದ, ಉಪಮ
ಜ್ಜನಾಃ-ಸ್ನಾನವುಳ್ಳವರೂ, ಸ್ವಪಂತ್ಯಃ-ಮಲಗಿರುವರಾದರೋ, ನಿಸ್ವನಂ-ಶಬ್ದವನ್ನು, ನಿಶಮ್ಯ-ಕೇಳಿ, ಉತ್ಥಾಯ-ಎ
ದ್ದು, ಅರ್ಭಂ-ಮಗುವನ್ನು. ನಿಪಾಯಯಂತ್ಯಃ-ಮೊಲೆಯುಂಣಿಸುತಲಿರುವ, ಮಾತರಃ-ತಾಯಿಯರು, ಅಪೋಹ್ಯ-ಮಕ್ಕಳ
ನ್ನುಬಿಟ್ಟು, ಸಮಾಯಯುಃ-ಬಂದರು) ॥೨೫॥ ಮತ್ತದ್ವಿರದೇಂದ್ರವಿಕ್ರಮಃ-ಮದಿಸಿದ ಗಜರಾಜನಂತೆ ನಡಿಕೆಯುಳ್ಳವನೂ,
ಅರವಿಂದಲೋಚನಃ-ದೊಡ್ಡನೈದಿಲೆಗಳಂತಿರ್ಪ ಕಂಗಳುಳ್ಳವನೂ, ಆಪಕೃಷ್ಣನು, ಶ್ರೀರಮಣಾತ್ಮನಾ-ಲಕ್ಷ್ಮಿಯಂ ಸಂತ
ಸಗೊಳಿಸುವ ಮೂರ್ತಿಯಿಂದ, ದೃಶಾಂ-ಕಂಗಳಿಗೆ, ಉತ್ಸವಂ-ಹಬ್ಬವನ್ನು, ದದತ್-ಕೊಡುತಲಿರುವನೂಆಪ ಕೃಷ್ಣನು,
ಪ್ರಗಲ್ಭಲೀಲಾಹಸಿತಾವಲೋಕನೈಃ-ಪ್ರಗಲ್ಭ-ಪ್ರೌಢಗಳಾದ, ಲೀಲಾ-ಶೃಂಗಾರ ಭಾವಗಳಿಂದಲೂ, ಹಸಿತ-ನಗೆಗಳಿಂದಲೂ,
ಅವಲೋಕನೈಃ-ನೋಟಗಳಿಂದಲೂ, ತಾಸಾಂ-ಆಹೆಂಗಳ, ಮನಾಂಸಿ-ಹೃದಯಗಳನ್ನು, ಜಹಾರ-ಅಪಹರಿಸಿದನು ॥೨೬॥ ಹೇ
ಅರಿಂದಮ-ಎಲೈಕಾಮಾದಿ ಶತ್ರುಗಳಂ ನಿಗ್ರಹಿಸಿದ ಪರೀಕ್ಷಿದ್ರಾಯನೇ! ಮುಹುಃಶ್ರುತಂ-ಬಾರಿಬಾರಿಗೂ ಕೇಳಲ್ಪಡುತ್ತಿದ್ದ
ಕೃಷ್ಣನನ್ನು, ಅನುದ್ರುತಚೇತಸಃ-ಅನುಸರಿಸಿ ಓಡುತಲಿರುವ ಮನಸ್ಸುಳ್ಳವರಾದಹೆಂಗಳು, ತಂ-ಆಕೃಷ್ಣನನ್ನು, ದೃ
ಷ್ಟ್ವಾ-ಪ್ರತ್ಯಕ್ಷವಾಗಿಕಂಡು, ತತ್ಪ್ರೇ...ಮಾನಾಃ-ತತ್-ಆಕೃಷ್ಣನ, ಪ್ರೇಕ್ಷಣ-ನೋಟ, ಉತ್ಸ್ಮಿತ-ಹೆಚ್ಚಾದನಗೆ, ಎಂಬ

---

ಧರಿಸಿ ದವರಾಗಿ, ಕೆಲವರೊಂದೇ ಕಿವಿಗೆ ವಾಲೆಯನಿಟ್ಟ ವರಾಗಿ,ಕೆಲವರು ಒಂದೇ ಕಾಲಿಗೆ ಅಭರಣವ
ನಿಟ್ಟು ಕೊಂಡವರಾಗಿ, ಕೆಲವರೊಂದು ಕಂಣಿಗೆ ಕಪ್ಪು ಹಚ್ಚಿದವರಾಗಿ, ಎಲ್ಲ ಗೃಹ ಕೃತ್ಯವನುಂ ಮರೆತು
ಕೆಲವರು ಭೋಜನವಂ ಮಾಡುವರಾಗಿ ॥೨೪॥ ಅದರಲ್ಲಿ ಬಿಟ್ಟು ಎದ್ದು ಬಂದವರು ಕೆಲವರು, ಎಣ್ಣೆಯ
ನಭ್ಯಂಗನಂ ಗೆಯ್ದು ಕೆಲವರು ಎರಕೊಳ್ಳುವುದಕೆ ಮೊದಲೇ ಬಂದರು ಮಲಗಿದವರು ಶಬ್ದಮಂ ಕೇಳಿ
ಮಕ್ಕಳಿಗೆ ಸ್ತನ್ಯವಂ ಕೊಡದೆ ಓಡಿಬಂದರು ॥೨೫॥ ಮದಗಜ ಗಾಮಿಯಾದ ಪದ್ಮಲೋಚನ ನಾದ
ಶ್ರೀಕೃಷ್ಣನು. ಪ್ರೌಢವಾದ ವಿಲಾಸಯುಕ್ತವಾದ ಮುಗುಳು ನಗೆಯಿಂದಲೂ ಸೊಕ್ಕುನೋಟಂ
ಗಳಿಂದಲೂ ಮಹಾಲಕ್ಷ್ಮಿಗೆ ಅಪೇಕ್ಷಿತವಾದ ಸುಂದರವಾದದೇಹದಿಂದ ಆಸ್ತ್ರೀಯರುಗಳ ನೇತ್ರಂಗಳಿಗೆ ಉ
ತ್ಸವವನುಂಟು ಮಾಡುತ್ತ, ಅವರಮನಸ್ಸಂ ಅಪಹರಿಸಿದನು ॥೨೬॥ ಎಲೈ ಶತ್ರುಸಂಹಾರಕ ನಾದ ಪರೀಕ್ಷಿದ್ರಾ
ಯನೇ! ಶ್ರೀಕೃಷ್ಣನ ಸೌಂದರ್ಯಾದಿ ಗುಣಂಗಳಂ ಬಾರಿ ಬಾರಿಗೂ ಕೇಳುತಕೇಳುತ ಆತನಲ್ಲಿ ಲಗ್ನಮಾದಮ
ನಮುಳ್ಳ ಸ್ತ್ರೀಯರುಗಳು ಆತನನೋಟಂಗಳು ಮಂದಸ್ಮಿತವುಎಂಬ ಅಮೃತಸೇಚನದಿಂದಪಡೆಯಲ್ಪಟ್ಟಉ
ಲ್ಲಾಸಮುಳ್ಳವರಾಗಿ, ಆನಂದ ಮೂರ್ತಿಯಾದ ಶ್ರೀಕೃಷ್ಣನಂ ನೇತ್ರಂಗಳಿಂದ ಆಲಿಂಗನೆಯಂಮಾಡಿಕೊಂಡು
ತಂಮ್ಮವಕ್ಷಸ್ಥಳದಲ್ಲಿ ಸಿಕ್ಕಿರುವವನನ್ನಾಗಿ ಭಾವಿಸಿರೋಮಾಂಚಿತದೇಹರಾಗಿ ಅಧಿಕವಾದಮನೋವ್ಯಥೆಯಂ

ಜಹುರನಂತಮಾಧಿಂ ॥೨೮॥ ಪ್ರಾಸಾದಶಿಖರಾರೂಢಾಃ ಪ್ರೀತ್ಯುತ್ಫುಲ್ಲಮುಖಾಂಬುಜಾಃ । ಅಭ್ಯವರ್ಷನ್ ಸೌಮನಸ್ಯೈಃ ಪ್ರಮದಾ ಬಲಕೇಶವೌ ॥೨೯॥ ದಧ್ಯಕ್ಷತೈಃ ಸೋದಪಾತ್ರೈಃ ಸ್ರಗ್ಗಂಧೈರಭ್ಯುಪಾಯನೈಃ । ತಾವಾನರ್ಚುಃ ಪ್ರಮುದಿತಾಸ್ತತ್ರ ತತ್ರ ದ್ವಿಜಾತಯಃ ॥೩೦॥ ಊಚುಃ ಪೌರಾ ಅಹೋ ಗೋಪ್ಯಸ್ತಪಃ ಕಿಮಚರನ್ಮಹತ್ । ಯಾ ಹ್ಯೇತಾವನುಪಶ್ಯಂತಿ ನರಲೋಕಮಹೋತ್ಸವೌ ॥೩೧॥ ರಜ

ರಜಕವಧ - ವಾಯಕ - ಸುದಾಮ - ತ್ರಿವಕ್ರಾದೀನಾಂ ಸಮ್ಮಾನಘಟ್ಟಃ.

ಕಂ ಕಂಚಿದಾಯಾಂತಂ ರಂಗಕಾರಂ ಗದಾಗ್ರಜಃ । ದೃಷ್ಟ್ವಾಯಾಚತ ವಾಸಾಂಸಿ ಧೌತಾನ್ಯತ್ಯುತ್ತಮಾನಿ ಚ ॥೩೨॥ ದೇಹ್ಯಾವಯೋಃ ಸಮುಚಿತಾನ್ಯಂಗ ವಾಸಾಂಸಿ ಚಾರ್ಹತೋಃ । ಭವಿಷ್ಯತಿ ಪರಂ ಶ್ರೇ

---

ಸುಧಾ-ಅಮೃತದ, ಉಕ್ಷಣ-ಚೆಲ್ಲುವಿಕೆಯಿಂದ, ಲಬ್ಧ-ಪಡೆಯಲ್ಪಟ್ಟ, ಮಾನಾಃ-ಸಮ್ಮಾನವುಳ್ಳವರಾಗಿ, ದೃಶಾ-ತಮ್ಮ ಕಂಣ್ಣಿಂಬದಾರಿಯಿಂದ, ಆತ್ಮಲಬ್ಧಂ-ಮನಸ್ಸಿನಿಂದ ಪಡೆಯಲ್ಪಟ್ಟ, ಆನಂದಮೂರ್ತಿಂ-ಸುಖರೂಪನಾದ ಕೃಷ್ಣನನ್ನು, ಉಪಗೂಹ್ಯ-ತಮ್ಮ ಬಳಿಯಲ್ಲಿಯೇ ಬಚ್ಚಿಟ್ಟುಕೊಂಡು, ಹೃಷ್ಯತ್ತ್ವಚಃ-ಸಂತೋಷಿಸುತ್ತಲಿರುವ ಚರ್ಮಗಳುಳ್ಳವರಾಗಿ, (ರೋಮಾಂಚಿತೆಯರು) ಅನಂತಂ-ಕೊನೆಯಿಲ್ಲದ, ಆಧಿಂ-ಮನೋವೇದನೆಯನ್ನು, ಜಹುಃ-ತೊರೆದರು (ಮುಂಚೆ ಕೇಳಿ ಬಯಸುತ್ತಿದ್ದರು. ಈಗ ನೋಡಿ ಸಂತೋಷಿಸಿದರು.)॥೨೮॥ ಪ್ರಾಸಾದಶಿಖರಾರೂಢಾಃ-ಉಪ್ಪರಿಗೆಗಳ ಮೇಲ್ಮಚ್ಚುಗಳನ್ನು ಏರಿದವರಾದ, ಪ್ರಮದಾಃ-ಹೆಚ್ಚು ಮದವುಳ್ಳ ಹೆಂಗಳು, ಪ್ರೀತ್ಯುತ್ಫುಲ್ಲಮುಖಾಂಬುಜಾಃ-ಪ್ರೀತಿ-ಪ್ರೇಮದಿಂದ, ಉತ್ಫುಲ್ಲ-ಅರಳಿದ, ಮುಖಾಂಬುಜಾಃ-ಮುಖಕಮಲಗಳುಳ್ಳವರಾಗಿ, ಬಲಕೇಶವೌ-ರಾಮಕೃಷ್ಣರಲ್ಲಿ, ಸೌಮನಸ್ಯೈಃ-ಪುಷ್ಪರಾಶಿಗಳಿಂದ,(ಅಥವಾ ಶುಭವಾದ ಮನೋಭಾವಗಳಿಂದ) ಅಭ್ಯವರ್ಷನ್-ಮಳೆಸುರಿಸಿದರು॥೨೯॥ ತತ್ರತತ್ರ-ಅಲ್ಲಲ್ಲಿ, ದ್ವಿಜಾತಯಃ-ಬ್ರಹ್ಮಕ್ಷತ್ರಿಯವೈಶ್ಯರು, ಪ್ರಮುದಿತಾಸ್ಸಂತಃ-ಹೆಚ್ಚು ಸಂತೋಷವುಂಟಾದವರಾಗಿ, ದಧ್ಯಕ್ಷತೈಃ-ಮೊಸರಿನಿಂದಲೂ ಅಕ್ಷತೆಗಳಿಂದಲೂ, ಸೋದಪಾತ್ರೈಃ-ಜಲಕಲಶಗಳಿಂ ಸಹಿತಗಳಾದ, ಉಪಾಯನೈಃ-ಭಕ್ಷ್ಯಾದ್ಯುಪಹಾರದ್ರವ್ಯಗಳಿಂದಲೂ, ಸ್ರಗ್ಗಂಧೈರಪಿ-ಪುಷ್ಪಮಾಲಿಕೆಗಳಿಂದಲೂ ಪರಿಮಳಗಂಧಗಳಿಂದಲೂ ಕೂಡ, ತೌ-ಆ ರಾಮಕೃಷ್ಣರನ್ನು, ಆನರ್ಚುಃ-ಪೂಜಿಸಿದರು॥೩೦॥ ಹಿ-ಯಾವ ಕಾರಣದಿಂದ, ಯಾಃ-ಯಾವ ಗೊಲ್ಲತಿಯರು, ನರಲೋಕಮಹೋತ್ಸವೌ-ಮನುಷ್ಯರ ಲೋಕಕ್ಕೆ ದೊಡ್ಡ ಹಬ್ಬಗಳಂತಿರುವ, ಏತೌ-ಈ ರಾಮಕೃಷ್ಣರನ್ನು, ಅನುಪಶ್ಯಂತಿ-ಆಗಾಗ್ಗೆ ನೋಡುತ್ತಿರುವರೋ, ಅಥವಾ ಪ್ರತಿನಿಮಿಷದಲ್ಲಿಯೂ ನೋಡುತ್ತಿರುವರೋ, ಆ ಕಾರಣದಿಂದ, ತಾಃ ಗೋಪ್ಯಃ-ಆ ಗೊಲ್ಲತಿಯರು, ಕಿಂ ಮಹತ್ತಪಃ-ಯಾವ ದೊಡ್ಡ ತಪಸ್ಸನ್ನು, ಅಚರನ್-ಮಾಡಿದ್ದರೋ? ಅಹೋ-ಆಶ್ಚರ್ಯವು (ಇತಿ-ಹೀಗೆಂದು) ಪೌರಾಃ-ಪುರದಜನರು, ಊಚುಃ-ಹೇಳಿದರು ॥೩೧॥ ಗದಾಗ್ರಜಃ-ಗದನೆಂಬ ಯಾದವನಿಗಿಂತಲೂ ಮುಂಚೆ ಹುಟ್ಟಿದವನಾದ ಕೃಷ್ಣನು, ಆಯಾಂತಂ-ಬರುತಲಿರುವ, ರಂಗಕಾರಂ-ರಂಗಾರೆಯವನೂ, ರಜಕಂ-ಅಗಸನೂ ಆದ, ಕಂಚಿತ್-ಒಬ್ಬಾನೊಬ್ಬನನ್ನು, ದೃಷ್ಟ್ವಾ-ನೋಡಿ, ಧೌತಾನಿ-ತೊಳೆಯುವಿಕೆಯಿಂ ಶುದ್ಧಗಳಾಗಿರುವ, ಉತ್ತಮಾನಿಚ-ಬಹಳ ಶ್ರೇಷ್ಠಗಳಾಗಿಯೂ ಇರುವ, ವಾಸಾಂಸಿ-ವಸ್ತ್ರಗಳನ್ನು, ಅಯಾಚತ-ಬೇಡಿದನು ॥೩೨॥ ಅಂಗ-ಅಯ್ಯೋ-ಅರ್ಹ

---

ಪಟ್ಟರು ॥೨೮॥ ಉಪ್ಪರಿಗೆಗಳಲ್ಲಿ ಆರೂಢರಾಗಿ ಪ್ರೀತಿಯಿಂದ ವಿಕಸಿತಂಗಳಾದ ಮುಖಕಮಲಂಗಳುಳ್ಳವರಾಗಿ ಆ ಸ್ತ್ರೀಯರು ಪುಷ್ಪಸಮೂಹಗಳಿಂದ ರಾಮಕೃಷ್ಣರಂ ವರ್ಷಿಸಿದರು॥೨೯॥ ಅಲ್ಲಲ್ಲಿ ಬ್ರಾಹ್ಮಣರುಗಳು ದಧ್ಯಕ್ಷತಾದಿಗಳಿಂದಲೂ ಅರ್ಘೋದಕಂಗಳಿಂದಲೂ ಗಂಧಮಾಲ್ಯಂಗಳಿಂದಲೂ ಕಾಣಿಕೆಗಳಿಂದಲೂ ಸಂತುಷ್ಟರಾಗಿ ರಾಮಕೃಷ್ಣರಂ ಪೂಜಿಸಿದರು॥೩೦॥ ಪುರದಲ್ಲಿರುವ ಸ್ತ್ರೀಯರುಗಳು ಪರಸ್ಪರವಾಗಿ ಮಾತನಾಡಿಕೊಂಡರೆಂತೆನೆ-ವ್ರಜದಲ್ಲಿರುವ ಗೋಪಸ್ತ್ರೀಯರುಗಳು ಏನು ಪುಣ್ಯವಂ ಮಾಡಿದರೋ, ಭೂಲೋಕಕ್ಕೆ ಮಹೋತ್ಸವವಂ ಮಾಡುವರಾದ ಈ ರಾಮಕೃಷ್ಣರಂ ಕಣ್ಣುತುಂಬಲು ನೋಡಿಕೊಂಡಿರ್ದರು ॥೩೧॥ ಎಂದು ಪರಸ್ಪರವಾಗಿ ಮಾತನಾಡಿಕೊಂಡರು. ಅನಂತರದಲ್ಲಿ ಮಾರ್ಗದಲ್ಲಿ ವಸ್ತ್ರಂಗಳಂ ಚೊಕ್ಕಟವಾಗಿ ಒಗೆದು ಮಡಿಮಾಡಿ ತೆಗೆದುಕೊಂಡು ಹೋಗುತಲಿರುವ ಒಬ್ಬ ಮಡಿವಾಳನಂ ಕಂಡು, ಶ್ರೀಕೃಷ್ಣನು ಆ ಅಗಸನಂ ಉತ್ತಮಂಗಳಾದ ವಸ್ತ್ರಗಳಂ ಯಾಚಿಸಿದನು ॥೩೨॥ ಎಲೈ ಗೃಹಸ್ಥನೇ! ನಮ್ಮೀರ್ವರಿಗೂ ಯೋಗ್ಯಂಗಳಾದ ವಸ್ತ್ರಂಗಳಂ ಕೊಡು, ನಮಗೆ

ಯೋದಾತುಸ್ತೇನಾತ್ರಸಂಶಯಃ ॥೩೩॥ ಸಯಾಚಿತೋಭಗವತಾಪರಿಪೂರ್ಣೇನಸರ್ವತಃ । ಸಾಕ್ಷೇಪಂ ರುಷಿತಃಪ್ರಾಹಭೃತ್ಯೋರಾಜ್ಞಸ್ಸುದುರ್ಮದಃ ॥೩೪॥ ಈದೃಶಾನ್ಯೇವವಾಸಾಂಸಿನಿತ್ಯಂಗಿರಿವನೇಚ ರಾಃ । ಪರಿಧತ್ತಕಿಮುದ್ವೃತ್ತಾರಾಜದ್ರವ್ಯಾಣ್ಯಭೀಪ್ಸಥ ॥೩೫॥ ಯಾತಾಶುಬಾಲಿಶಾನೈವಂಪ್ರಾ ರ್ಥ್ಯಂಯದಿಜಿಜೀವಿಷಾ । ಬಧ್ನಂತಿಘ್ನಂತಿಲುಂಪಂತಿದುಪ್ತಂರಾಜಕುಲಾನಿವೈ ॥೩೬॥ ಏವಂ ವಿಕತ್ಥಮಾನಸ್ಯಕುಪಿತೋದೇವಕೀಸುತಃ । ರಜಕಸ್ಯಕರಾಗ್ರೇಣಶಿರಃಕಾಯಾದಪಾಹರತ್॥೩೭॥ತಸ್ಯಾ ನುಜೀವಿನಸ್ಸರ್ವೇವಾಸಃಕೋಶಾನ್ವಿಸೃಜ್ಯವೈ । ದುದ್ರುವುಸ್ಸರ್ವತೋಮಾರ್ಗಂವಾಸಾಂಸಿಜಗೃ ಹೇಚ್ಯುತಃ ॥೩೮॥ ವಸಿತ್ವಾತ್ಮಪ್ರಿಯೇವಸ್ತ್ರೇಕೃಷ್ಣಸ್ಸಂಕರ್ಷಣಸ್ತಥಾ । ಶೇಷಾಣ್ಯಾದತ್ತಗೋ

---

ತೋಃ-ತಕ್ಕವರಾಗಿರುವ, ಆವಯೋಃಚ-ನಮಗೂ, ಸಮುಚಿತಾನಿ-ಚೆನ್ನಾಗಿ ತಕ್ಕವುಗಳಾದ, ವಾಸಾಂಸಿ-ವಸ್ತ್ರಗಳನ್ನು, ದೇಹಿ-ಕೊಡು, ದಾತುಃ-ಕೊಟ್ಟಂಥಾ, ತೇ-ನಿನಗೆ, ಪರಂಶ್ರೇಯಃ-ಉತ್ತಮವಾದ ಶುಭವು, ಭವಿಷ್ಯತಿ-ಮುಂದೆ ಆಗುತ್ತೆ, ಅತ್ರ-ಈವಿಷಯದಲ್ಲಿ, ನಸಂಶಯಃ-ಸಂದೇಹವಿಲ್ಲವು ॥೩೩॥ ಸರ್ವತಃಪರಿಪೂರ್ಣೇನ-ಸರ್ವತ್ರತುಂಬಿದವನಾದ, ಅಥವಾ ಸರ್ವ ಪ್ರಕಾರಗಳಿಂದಲೂ ವ್ಯಾಪಕನಾದ, ಭಗವತಾ-ಷಡ್ಗುಣೈಶ್ವರ್ಯ ಸಂಪನ್ನನಾದ ಕೃಷ್ಣನಿಂದ, ಯಾಚಿತಃ-ಬೇಡಿಕೊಳ್ಳಲ್ಪಟ್ಟ, ಸಃ-ಬಣ್ಣಗಾರನಾದ ಆಮಡಿವಾಳಿಯು, ರಾಜ್ಞಃ-ಘೋರನಾದಕಂಸನ, ಭೃತ್ಯಃ-ಸಂಬಳದಿಂದ ಜೀವಿಸುವ ಆಳಾದ್ದರಿಂದ, ಸುದುರ್ಮದಃ-ಬಹಳ ಕೆಟ್ಟಕೊಬ್ಬುಳ್ಳವನಾಗಿ, ರುಷಿತಃ-ಸಿಟ್ಟುಳ್ಳವನೂ ಆಗಿ, ಸಾಕ್ಷೇಪಂ-ಆಕ್ಷೇಪ ಸಹಿತವಾಗುವಂತೆ, ಪ್ರಾಹ-ಗಟ್ಟಿಯಾಗಿನುಡಿದನು ॥೩೪॥ ಗಿರಿವನೇ-ಗೋವರ್ಧನ ಗಿರಿಯಬೃಂದಾರಣ್ಯದಲ್ಲಿ, ಚರಾಃ-ತಿರುಗುತಲಿರುವ ಕಾಡುಮನುಷ್ಯರಾದನೀವು, ಈದೃಶಾನಿ ವಾಸಾಂಸ್ಯೇವ-ಇಂಥಾ ವಸ್ತ್ರಗಳನ್ನೇ-ಪರಿಧತ್ತಕಿಮು-ಧರಿಸುತ್ತಿರುವಿರೋ ಏನು? ಉದ್ವೃತ್ತಾಃ-ಹೆಚ್ಚುನಡತೆಯುಳ್ಳವರಾಗಿ, ರಾಜದ್ರವ್ಯಾಣಿ-ಅರಸಿನವಡಿವೆಗಳನ್ನು, ಅಭೀಪ್ಸಥ-ಬಯಸುತಲಿರುವಿರಿ ॥೩೫॥ ಬಾಲಿಶಾಃ-ಎಲಾ ಮೂರ್ಖರಿರಾ! ಆಶು-ಬೇಗನೆ, ಯಾತ-ಹೋಗಿಬಿಡಿರಿ. ಜಿಜೀವಿಷಾಯದಿ-ಬದುಕಬೇಕೆಂಬಆಶೆಯಿದ್ದರೆ, ಏವಂ-ಹೀಗೆ, ನಪ್ರಾರ್ಥ್ಯಂ-ಬಯಸತಕ್ಕದ್ದಲ್ಲವು. ರಾಜಕುಲಾನಿ-ಅರಸಿನಕಡೆಯವರು, ದುಪ್ತಂ-ತಪ್ಪುಳ್ಳವರನ್ನು, ಬಧ್ನಂತಿ-ಸೆರೆಯಲ್ಲಿ ಬಿಗಿಯುವರು. ಘ್ನಂತಿ-ಹೊಡದುಕೊಲ್ಲುವರು. ಲುಂಪಂತಿ-ಸ್ವತ್ತುಗಳಂ ಕೊಳ್ಳೆಗೊಳ್ಳುವರು ॥೩೬॥ ಏವಂ-ಹೀಗೆ, ವಿಕತ್ಥಮಾನಸ್ಯ-ಪರಟು ತಪಳಿದಾಡುವ, ರಜಕಸ್ಯ-ಮಡಿವಾಳಿಯ, ಶಿರಃ-ತಲೆಯನ್ನು, ಕುಪಿತಃ-ಸಿಟ್ಟುಂಟಾದ. ದೇವಕೀಸುತಃ-ಕೃಷ್ಣನು, ಕರಾಗ್ರೇಣ-ತನ್ನ ಕೈಯಕೊನೆಯಿಂದ, ಕಾಯಾತ್-ಅವನಶರೀರದದೆಸೆಯಿಂದ, ಅಪಾಹರತ್-ತೆಗೆದುಬಿಟ್ಟನು ॥೩೭॥ ತಸ್ಯ-ಆಮಡಿವಾಳಿಯ, ಅನುಜೀವಿನಃ-ಸೇವಕರಾಗಿ ಬದುಕುತ್ತಿರುವ, ಸರ್ವೇ-ಆಳುಗಳೆಲ್ಲರೂ, ವಾಸಃಕೋಶಾನ್-ವಸ್ತ್ರಗಳ ಮೊಟ್ಟೆಗಳನ್ನು, ವಿಸೃಜ್ಯ-ಬಿಟ್ಟು, ಸರ್ವತೋಮಾರ್ಗಂ-ಎಲ್ಲಾದಾರಿಗಳಲ್ಲಿಯೂ, ದುದ್ರುವುಃ-ಓಡಿಹೋದರು. ಅಚ್ಯುತಃ-ಕೃಷ್ಣನು, ವಾಸಾಂಸಿ-ವಸ್ತ್ರಗಳನ್ನು, ವೈ-ಪ್ರಕಟವಾಗಿ, ಜಗೃಹೇ-ತೆಗದುಕೊಂಡನು ॥೩೮॥ ಕೃಷ್ಣಃ-ಹರಿಯೂ, ತಥಾ-ಹಾಗೆಯೇ, ನಂ

---

ಕೊಟ್ಟರೆನಿನಗೆ ಶ್ರೇಯಸ್ಸುಂಟಾಗುವುದು, ಸಂಶಯವಿಲ್ಲ ॥೩೩॥ ಎಂದುಸರ್ವತ್ರಪರಿಪೂರ್ಣನಾದ ಭಗವಂತನಿಂದ ಯಾಚಿಸಲ್ಪಟ್ಟಅಗಸನು ಕಂಸನಭೃತ್ಯನಾದಕಾರಣದಿಂ ಮದಿಸಿದವನಾಗಿ ಕೋಪದಿಂದ ಆಕ್ಷೇಪಪೂರ್ವಕವಾಗಿಹೇಳಿದನು ॥೩೪॥ ಎಲೈಕೊಬ್ಬಿದಹುಡುಗರಿರಾ! ಬೆಟ್ಟದಲ್ಲಿಯೂ ವನದಲ್ಲಿಯೂ ವಾಸಮಾಡಿಕೊಂಡಿರುವನೀವು ಇಂತಾದಿವ್ಯವಸ್ತ್ರಂಗಳಂ ನಿತ್ಯದಲ್ಲಿಯೂ ಉಟ್ಟುಕೊಳ್ಳುತ್ತಿರ್ದುದು ಉಂಟೋ ಏನು? ರಾಜದ್ರವ್ಯವನಪೇಕ್ಷಿಸುವಿರಿ ॥೩೫॥ ಮೂಢರಾದಹುಡುಗರಿರಾ! ಆಚೆಗೆಹೋಗಿ, ನೀವುಜೀವಿಸಬೇಕಾದರೆ ಹೀಗೆಕೇಳಬೇಡಿರಿ ರಾಜಭಟರು ಈ ಮಾತಂಕೇಳಿದರೆ ಹಿಡಿದುಕಟ್ಟಿ ಕೊಂದುಹಾಕಿಬಿಡುವರು ॥೩೬॥ ಎಂಬ ಅಗಸನವಾಕ್ಯಮಂಕೇಳಿ ಶ್ರೀಕೃಷ್ಣನುಕೆರಳಿದುಭಾಷೆಗಳ ನಾಡುವ ಆರಜಕನಶಿರಸ್ಸಂ ಹಸ್ತಾಗ್ರದಿಂದ ಛೇದಿಸಿದನು ॥೩೭॥ ಅವನಸಂಗಡ ಬಂದಿದ್ದ ರಜಕರೆಲ್ಲರೂವಸ್ತ್ರಂಗಳ ಮೊಟ್ಟೆಗಳೆಲ್ಲವಂ ಅಲ್ಲಿಯೇ ಬಿಸುಟುಬಿಟ್ಟು ಪಲಾಯನಂಗೆಯ್ದರು. ಆಗಕೃಷ್ಣನು ಅವುಗಳಂತೆಗದುಕೊಂಡನು ॥೩೮॥ ಅದರಲ್ಲಿ ರಾಮನೂಕೃಷ್ಣ



ವೇಭ್ಯೋವಿಸೃಜ್ಯಭುವಿಕಾನಿಚಿತ ‖೩೯‖ ತತಸ್ತು ವಾಯಕಃಪ್ರೀತಸ್ತಯೋರ್ವೇಷಮಕಲ್ಪಯತ್ । ವಿಚಿತ್ರವರ್ಣೈಶ್ಚೈಲೇಯೈರಾಕಲ್ಪೈರನುರೂಪತಃ ‖೪೦‖ ನಾನಾಲಕ್ಷಣವೇಷಾಭ್ಯಾಂಕೃಷ್ಣರಾಮೌವಿರೇಜತುಃ । ಅಲಂಕೃತೌಬಾಲಗಜೌಪರ್ವಣೀವಸಿತೇತರೌ ‖೪೧‖ ತಸ್ಯಪ್ರಸನ್ನೋಭಗವಾನ್ ಪ್ರಾದಾತ್ಸಾರೂಪ್ಯಮಾತ್ಮನಃ । ಶ್ರಿಯಂಚಪರಮಾಂಲೋಕೇಬಲೈಶ್ವರ್ಯಸ್ಮೃತೀಂದ್ರಿಯಮ್ ‖೪೨‖

---

ಕರ್ಷಣಃ-ರಾಮನೂ, ಆತ್ಮಪ್ರಿಯೇ-ತಮಗಿಷ್ಟವಾದ, ವಸ್ತ್ರೇ-ಎರಡು ವಸ್ತ್ರಗಳನ್ನು, ವಸಿತ್ವಾ-ಹೊದ್ದಿಕೊಂಡು, ಕಾನಿಚಿತ್-ಕೆಲವನ್ನು, ಭುವಿ-ನೆಲದಲ್ಲಿ. ವಿಸೃಜ್ಯ-ಬಿಸುಟು, ಶೇಷಾಣಿ-ನಿಂತವುಗಳನ್ನು, ಗೋಪೇಭ್ಯಃ-ಗೊಲ್ಲರಿಗೆ, ಅದತ್ತ-ಕೊಟ್ಟನು ‖೩೯‖ ತತಸ್ತು-ಆ ಮೇಲಾದರೋ, ವಾಯಕಃ-ಸೆಯ್ಗಾರನು, ಪ್ರೀತಃ-ಪ್ರಿಯವುಂಟಾದವನಾಗಿ, ವಿಚಿತ್ರವರ್ಣೈಃ-ಹಲವು ಬಣ್ಣಗಳುಳ್ಳ, ಚೈಲೇಯೈಃ-ಉಡಿಗೆಗಳಿಂದಲೂ, ಆಕಲ್ಪೈಃ-ಆಭರಣಗಳಿಂದಲೂ, ಅನುರೂಪತಃ-ತಕ್ಕಹಾಗೆ, ತಯೋಃ-ಆ ರಾಮಕೃಷ್ಣರಿಗೆ, ವೇಷಂ-ಅಲಂಕಾರವನ್ನು, ಅಕಲ್ಪಯತ್-ಮಾಡಿದನು ‖೪೦‖ ಕೃಷ್ಣರಾಮೌ-ಕೃಷ್ಣನೂ ರಾಮನೂ, ನಾನಾಲಕ್ಷಣವೇಷಾಭ್ಯಾಂ-ಹಲವುಗುರ್ತುಗಳುಳ್ಳ ಅಲಂಕಾರಗಳಿಂದ, ಪರ್ವಣಿ-ಉತ್ಸವದಲ್ಲಿ, ಅಲಂಕೃತೌ-ಸಿಂಗರಿಸಲ್ಪಟ್ಟ, ಸಿತೇತರೌ-ಬಿಳುಪೂ ಕಪ್ಪೂ ಆದ, ಬಾಲಗಜಾವಿವ-ಮರಿಯಾನೆಗಳಂತೆ, ವಿರೇಜತುಃ-ಪ್ರಕಾಶಿಸಿದರು ‖೪೧‖ ಪ್ರಸನ್ನಃ-ಪ್ರಸಾದವುಳ್ಳವನಾದ, ಭಗವಾನ್-ಭಗವಂತನು, ತಸ್ಯ-ಆ ಸೆಯ್ಗಾರನಿಗೆ, ಆತ್ಮನಃ-ತನ್ನ, ಸಾರೂಪ್ಯಂ-ಸಮಾನ ರೂಪವುಳ್ಳಮೋಕ್ಷವನ್ನೂ, ಪರಮಾಂ-ಉತ್ಕೃಷ್ಟವಾದ, ಶ್ರಿಯಂಚ-ಭಾಗ್ಯವನ್ನೂ, ಲೋಕೇ-ಈಲೋಕದಲ್ಲಿ, ಬಲೈಶ್ವರ್ಯ ಸ್ಮೃತೀಂದ್ರಿಯಂ-ಬಲವನ್ನೂ ಒಡೆತನವನ್ನೂ ಇಂದ್ರಿಯ ಬಲವನ್ನೂ, ಪ್ರಾದಾತ್-ಹೆಚ್ಚಾಗಿಕೊಟ್ಟನು ‖೪೨‖ ತತಃ-ಆಮೇಲೆ, ಮಾಲಾಕಾರ

---

ನು ತಮಗೆ ಬೇಕಾದ ವಸ್ತ್ರಂಗಳಂ ಸಿಂಗರಿಸಿ ಕೊಂಡು ಮಿಕ್ಕ ವಸ್ತ್ರಂಗಳ ನೆಲ್ಲಮಂ ಗೋಪಾಲಕರಿಗೆ ಕೊಟ್ಟರು. ಅಲ್ಲಿಗೂ ನಿಂತವಸ್ತ್ರಂಗಳ ನಲ್ಲಿಯೇ ಬಿಟ್ಟರು ‖೩೯‖ ಆಮೇಲೆ ಒಬ್ಬ ತಂತು ವಾಯನು









ಸಂತುಷ್ಟನಾಗಿ ಆರಾಮ ಕೃಷ್ಣರಿಗೆ ಅನುರೂಪಂಗಳಾದ ಬಳ್ಳೊಳ್ಳೆಯ ವಿಚಿತ್ರ ವಸ್ತ್ರಂಗಳಂ ಅಲಂಕಾರವಂ ಮಾಡಿದನು ‖೪೦‖ ಆರಾಮ ಕೃಷ್ಣರು ನಾನಾ ಪ್ರಕಾರಂಗಳಾದ ಅಲಂಕಾರಂಗಳಿಂದೆ ಶೋಭಿತರಾಗಿ ಉತ್ಸವಕಾಲದ ಬಿಳಿಕರಿಯ ಬಾಲಗಜಂಗಳಂತೆ ಮೆರೆದರು ‖೪೧‖ ಪ್ರಸನ್ನನಾದ ಭಗವಂತನು ಆತಂತುವಾಯನಿಗೆ ಸಾರೂಪ್ಯ ಮುಕ್ತಿಯಂ ಕೊಟ್ಟನು. ಈ ಲೋಕದಲ್ಲಿ ಉತ್ಕೃಷ್ಟವಾದ ಐಶ್ವರ್ಯವಂ ಬಲವಂ ಜ್ಞಾನವಂಸಹ ಕೊಟ್ಟನು ‖೪೨‖ ಆಮೇಲೆ ಪುಷ್ಪಂಗಳಂ ಕಟ್ಟುವ ಮಾಲಾಕಾರನಾದ ಸು

ತತಸ್ಸುದಾಮ್ನೋಭವನಂಮಾಲಾಕಾರಸ್ಯಜಗ್ಮತುಃ । ತೌದೃಷ್ಟ್ವಾಸಹಸೋತ್ಥಾಯನನಾಮಶಿರ
ಸಾಭುವಿ ।೪೩। ತಯೋರಾಸನಮಾನೀಯಪಾದ್ಯಂಚಾರ್ಘ್ಯಾರ್ಹಣಾದಿಭಿಃ । ಪೂಜಾಂಸಾನುಗ
ಯೋಶ್ಚಕ್ರೇಸ್ರಕ್ತಾಂಬೂಲಾನುಲೇಪನೈಃ ।೪೪। ಪ್ರಾಹನಸ್ಸಾರ್ಥಕಂಜನ್ಮಪಾವಿತಂಚಕುಲಂಪ್ರ
ಭೋ । ಪಿತೃದೇವರ್ಷಯೋಮಹ್ಯಂತುಷ್ಟಾಹ್ಯಾಗಮನೇನವಾಂ ।೪೫। ಭವಂತೌಕಿಲವಿಶ್ವಸ್ಯಜಗತಃ
ಕಾರಣಂಪರಂ । ಅವತೀರ್ಣಾವಿಹಾಂಶೇನಕ್ಷೇಮಾಯಚಭವಾಯಚ ।೪೬। ನಹಿವಾಂವಿಷಮಾದೃ

---

ಸ್ಯ-ಹೂವಾಡಿಗನಾದ, ಸುದಾಮ್ನಃ-ಸುದಾಮನೆಂಬವನ, ಭವನಂ-ಮನೆಗೆ, ಜಗ್ಮತುಃ-ಹೋದರು (ಅವನು)ತೌ-ಆರಾಮಕೃ
ಷ್ಣರನ್ನು, ದೃಷ್ಟ್ವಾ-ನೋಡಿ, ಸಹಸಾ-ಬೇಗನೆ, ಉತ್ಥಾಯ-ಎದ್ದು, ಭುವಿ-ನೆಲದಲ್ಲಿ, ಶಿರಸಾ-ತಲೆಯಿಂದ, ನನಾಮ-ಪೊಡ
ಮಟ್ಟನು ॥೪೩॥ ಸಾನುಗಯೋಃ-ಅನುಸರಿಸಿ ಬಂದವರಿಂದ ಸಹಿತರಾದ, ತಯೋಃ-ಅವರಿಗೆ, ಆಸನಂ-ಗದ್ದುಗೆಯನ್ನು, ಆ
ನೀಯ-ತಂದಿರಿಸಿ-ಪಾದ್ಯಂಚ-ಕಾಲಿಗೆನೀರನ್ನೂ ಹಾಕಿ, ಅರ್ಘ್ಯಾರ್ಹಣಾದಿಭಿಃ-ಕೈಗೆನೀರು ಮೊದಲಾದ ಯೋಗ್ಯೋಪಚಾರಗ
ಳಿಂದಲೂ, ಸ್ರಕ್ತಾಂಬೂಲಾನುಲೇಪನೈಃ-ಸ್ರಕ್-ಹುವ್ವಿನಮಾಲೆ, ತಾಂಬೂಲ-ವೀಳ್ಯ, ಅನುಲೇಪನೈಃ-ಅಂಗರಾಗ ಪರಿಮಳ
ದ್ರವ್ಯಗಳಿಂದಲೂ, ಪೂಜಾಂಚಕ್ರೇ-ಆರಾಧಿಸಿದನು ॥೪೪॥ಪ್ರಭೋ-ಒಡೆಯನಾದ ಕೃಷ್ಣನೇ! ನಃ-ನಮ್ಮ, ಜನ್ಮ-ಹುಟ್ಟಿಕೆ,
ಸಾರ್ಥಕಂ-ಪ್ರಯೋಜನಗಳಿಂ ಸಹಿತವಾದ್ದು, ಕುಲಂಚ-ಜಾತಿಯೂ ಕೂಡ, ಅಥವಾ ವಂಶವೂಕೂಡ, ಪಾವಿತಂ-ರಕ್ಷಿಸಲ್ಪ
ಟ್ಟದ್ದು. ವಾಂ-ನಿಮ್ಮ, ಆಗಮನೇನ-ಬರುವಿಕೆಯಿಂದ, ಪಿತೃದೇವರ್ಷಯಃ-ಪಿತೃಗಳೂ ದೇವತೆಗಳೂ ಋಷಿಗಳೂ, ಮಹ್ಯಂ-
ನನಗೋಸುಗ, ತುಷ್ಟಾಃ-ತೃಪ್ತಿಯುಳ್ಳವರಾದರು ॥೪೫॥ಭವಂತೌ-ನೀವಿರ್ವರೂ, ಜಗತಃ-ಪ್ರಪಂಚಕ್ಕೆ, ಪರಂಕಾರಣಂಕಿ
ಲ-ಉತ್ಕೃಷ್ಟವಾದ ನಿಮಿತ್ತವಾಗಿರುವರಲ್ಲವೆ? ಕ್ಷೇಮಾಯಚ-ಲೋಕದರಕ್ಷಣಕ್ಕೂ, ಭವಾಯಚ-ಶುಭಕ್ಕೂಕೂಡ, ಇಹ-ಈ
ಲೋಕದಲ್ಲಿ, ಅಂಶೇನ-ಕಲಾಮಾತ್ರದಿಂದ, ಅವತೀರ್ಣೌ-ಅವತರಿಸಿ ಹುಟ್ಟಿದವರಾಗಿರುವಿರಿ॥೪೬॥ಜಗದಾತ್ಮನೋಃ-ಜಗತ್ತಿ

---







ದಾಮನೆಂಬವನ ಗೃಹಮಂಕುರಿತು ಪೋದನು. ಆಸುದಾಮನು ರಾಮಕೃಷ್ಣರಂ ದೂರದಲ್ಲಿಯೇನೋಡಿ ಎದ್ದು
ಶಿರಸ್ಸಿನಿಂದ ದೂರದಲ್ಲಿಯೇ ದಂಡಾಕಾರವಾಗಿ ನಮಸ್ಕರಿಸಿದನು।೪೩। ಆರಾಮ ಕೃಷ್ಣರಿಗೆ ಪೀಠಮಂಕೊಟ್ಟು
ಸಪರಿವಾರರಾದ ರಾಮಕೃಷ್ಣರಂ ಪೂಜಿಸಿದನು. ಪುಷ್ಪಹಾರಂಗಳಿಂ ತಾಂಬೂಲಂಗಳಿಂ ಸುಗಂಧಂಗಳಿಂ ಒಪ್ಪಿ
ಸಿ ೪।೪। (ನುಡಿದನದೆಂತೆನೆ-) ನಮ್ಮ ಜನ್ಮವು ಸಾರ್ಥಕವಾದುದು, ನಮ್ಮಕುಲವು ಪವಿತ್ರವಾಯ್ತು, ನೀವೀ
ರ್ವರೂ ನಮ್ಮಮನೆಗೆ ದಯೆಗೆಯ್ದುಬಂದುದರಿಂದ ನಮ್ಮದೇವಋಷಿ ಪಿತೃಗಳು ಸಂತುಷ್ಟರಾದರು।೪೫।ನೀವಿ
ರ್ವರೂಸರ್ವಜಗತ್ತಿಗೂಕಾರಣರಲ್ಲವೇ! ಭೂಲೋಕಕ್ಕೆಕ್ಷೇಮಾರ್ಥವಾಗಿ ಅಂಶದಿಂದ ಅವತಾರವಂಗೆಯ್ದುಬಂ
ದಿರುವಿರಿ ।೪೬। ನಿಮ್ಮೀರ್ವರಿಗೂವಿಷಮದೃಷ್ಟಿಯಿಲ್ಲ, ಜಗತ್ಸ್ವರೂಪರಾಗಿ ಜಗನ್ಮಿತ್ರರಾಗಿ ಸರ್ವಪ್ರಾಣಿಗ

ಷ್ಟಿಸ್ಸುಹೃದೋರ್ಜಗದಾತ್ಮನೋಃ । ಸಮಯೋಸ್ಸರ್ವಭೂತೇಷುಭವಂತಂಭಜತೋರಪಿ ॥೪೭॥ ತಾವಾಜ್ಞಾಪಯತಂಭೃತ್ಯಂಕಿಮಹಂಕರವಾಣಿವಾಂ । ಪುಂಸಸ್ತ್ವನುಗ್ರಹೋಹ್ಯೇಷಭವದ್ಭ್ಯಾಂ ಯನ್ನಿಯುಜ್ಯತೆ ॥೪೮॥ ಶ್ರೀಶುಕಃ ॥ ಇತ್ಯಭಿಪ್ರೇತ್ಯರಾಜೇಂದ್ರಸುದಾಮಾಪ್ರೀತಮಾನಸಃ । ಶಸ್ತೈಸ್ಸುಗಂಧೈಃಕುಸುಮೈರ್ಮಾಲಾವಿರಚಿತಾದದೌ ॥೪೯॥ ತಾಭಿಸ್ಸ್ವಲಂಕೃತೌಪ್ರೀತೌಕೃಷ್ಣರಾಮೌಸಹಾನುಗೌ । ಪ್ರಣತಾಯಪ್ರಪನ್ನಾಯದದತುರ್ವರದೌವರಾನ್ ॥೫೦॥ ಸೋಽಪಿವವ್ರೇಚಲಾಂಭಕ್ತಿಂತಸ್ಮಿನ್ನೇವಾಖಿಲಾತ್ಮನಿ । ತದ್ಭಕ್ತೇಷುಚಸೌಹಾರ್ದಂಭೂತೇಷುಚಪರಾಂದಯಾಂ ॥೫೧॥ ಇತಿತಸ್ಮೈವರಾನ್ದತ್ವಾಶ್ರಿಯಂಚಾನ್ವಯವರ್ಧಿನೀಂ । ಬಲಮಾಯುರ್ಯಶಃಕಾಂತಿಂನಿರ್ಜಗಾಮಸಹಾಗ್ರಜಃ ॥೫೨॥

---

ಗೆ ಆತ್ಮರಾಗಿರುವ, ಸುಹೃದೋಃ-ಮಿತ್ರರಾಗಿರುವ, ಸರ್ವಭೂತೇಷು-ಸಕಲ ಪ್ರಾಣಿಗಳಲ್ಲಿಯೂ, ಸಮಯೋಃ-ತಾರತಮ್ಯವಿಲ್ಲದೇಯಿರುವ, ಭಜಂತಂ-ಸೇವಿಸುವವನನ್ನು, ಭಜತೋರಪಿ-ಸೇವಿಸುತಲೂ ಯಿರುವರಾದ, ವಾಂ-ನಿಮ್ಮಿಬ್ಬರಿಗೆ, ವಿಷಮಾ ದೃಷ್ಟಿಃ-ಹೆಚ್ಚು ಕಡಮೆಯಾಗಿ ನೋಡುವಿಕೆ, ನಹಿ-ಇಲ್ಲವಲ್ಲವೆ ॥೪೭॥ ಭೃತ್ಯಂ-ಸೇವಕನಾಗಿರುವ, ಮಾಂ-ನನ್ನನ್ನು, ಆಜ್ಞಾಪಯತಂ-ಆಜ್ಞಾಪಿಸಿರಿ ವಾಂ-ನಿಮಗೆ, ಅಹಂ ನಾನು, ಕಿಂಕರವಾಣಿ-ಏನುಮಾಡಲಿ; ಭವದ್ಭ್ಯಾಂ-ನಿಮ್ಮಿಂದ, ನಿಯುಜ್ಯತೇಯತ್-ಯಾವಕಾರಣದಿಂದ ಆಜ್ಞಾಪಿಸಲ್ಪಡುವನೋ, ತತ್-ಆಕಾರಣದಿಂದ, ಏಷಃ-ಇದು, ಪುಂಸಃ-ಪುರುಷನಿಗೆ, ಅನುಗ್ರಹಃ-ನಿಮ್ಮದಯೆಯಾಗಿರುವುದು ॥೪೮॥ [ಶುಕವಾಕ್ಯವು] ರಾಜೇಂದ್ರ-ಅರಸುಗಳಲ್ಲಿ ಉತ್ತಮನೇ! ಸುದಾಮಾ-ಸುದಾಮನೆಂಬವನು, ಇತಿ-ಹೀಗೆ, ಅಭಿಪ್ರೇತ್ಯ-ಅಭಿಪ್ರಾಯವಂ ತಿಳಿದು, ಪ್ರೀತಮಾನಸಸ್ಸನ್-ಪ್ರಿಯವುಂಟಾದ ಮನಸ್ಸುಳ್ಳವನಾಗಿ, ಶಸ್ತೈಃ-ಪ್ರಶಸ್ತಗಳಾದ, ಸುಗಂಧಿಕುಸುಮೈಃ-ಪರಿಮಳವುಳ್ಳ ಪುಷ್ಪಗಳಿಂದ, ವಿರಚಿತಾಃ-ಕಟ್ಟಲ್ಪಟ್ಟ, ಮಾಲಾಂ-ಹಾರಗಳನ್ನು, ದದೌ-ಕೊಟ್ಟನು ॥೪೯॥ ತಾಭಿಃ-ಆಪುಷ್ಪಮಾಲೆಗಳಿಂದ, ಸ್ವಲಂಕೃತೌ-ಚನ್ನಾಗಿ ಸಿಂಗರಿಸಲ್ಪಟ್ಟವರೂ, ಪ್ರೀತೌ-ಪ್ರಿಯವುಳ್ಳವರೂ, ವರದೌ-ವರವನ್ನು ಕುಡುವವರೂ, ಸಹಾನುಗೌ-ಪರಿಚಾರಕರಿಂ ಸಹಿತ ರಾದವರೂಆದ, ಕೃಷ್ಣರಾಮೌ-ಕೃಷ್ಣನೂರಾಮನೂ, ಪ್ರಣತಾಯ-ಸಾಷ್ಟಾಂಗ ವೆರಗಿದವನಾದ, ಪ್ರಪನ್ನಾಯ-ನೀವೇಗತಿಯೆಂದು ಸಂಬಿದವನೂಆದ, ಸುದಾಮನಿಗೆ, ವರಾನ್-ಬಯಸಿದ ಬಯಕೆಗಳನ್ನು, ದದೌ-ಕೊಟ್ಟನು ॥೫೦॥ ಸೋಽಪಿ-ಅವನೂಕೂಡ, ಅಖಿಲಾತ್ಮನಿ-ಸರ್ವಮಯನಾದ, ಅಥವಾ ಎಲ್ಲರಿಗೂ ಆತ್ಮಸ್ವರೂಪವಾದ, ತಸ್ಮಿನ್ನೇವ-ಆಕೃಷ್ಣನಲ್ಲಿಯೇ, ಅಚಲಾಂ-ಚಲಿಸದೇ ಯಿರುವ, ಭಕ್ತಿಂ-ಪ್ರೀತಿಯನ್ನೂ, ತದ್ಭಕ್ತೇಷು-ಭಾಗವತರಲ್ಲಿ, ಸೌಹಾರ್ದಂಚ-ಸ್ನೇಹವನ್ನೂ, ಭೂತೇಷು-ಪ್ರಾಣಿಗಳಲ್ಲಿ, ಪರಾಂದಯಾಂಚ-ಉತ್ತಮವಾದ ಕರುಣೆಯನ್ನೂ, ವವ್ರೇ-ಬಯಸಿದನು ॥೫೧॥ ಇತಿ-ಹೀಗೆ, ತಸ್ಮೈ-ಆಸುದಾಮನಿಗೆ, ವರಾನ್-ಮನೋರಥಗಳನ್ನೂ, ಅನ್ವಯವರ್ಧಿನೀಂ-ವಂಶವನ್ನು ಬೆಳಸುತಲಿರುವ, ಶ್ರಿಯಂಚ-ಭಾಗ್ಯವನ್ನೂ, ಬಲಂ-ದೇಹಶಕ್ತಿಯನ್ನೂ, ಆಯುಃ-ಚಿರಕಾಲ ಬದುಕುವಿಕೆಯನ್ನೂ, ಯಶಃ-ಉತ್ತಮವಾದ ಹೆಸರುವಾಸಿಯನ್ನೂ, ಕಾಂತಿಂ-ವರ್ಚಸ್ಸನ್ನೂ, ದತ್ವಾ-ಕೊಟ್ಟು, ಸಹಾಗ್ರಜಃ-ಸಂಗಡ

---

ಳಲ್ಲಿಯೂಸಮರಾಗಿಸೇವಕರಿಗೆ ರಕ್ಷಕರಾಗಿ ಇರುವ ನಿಮಗೆ ಸರ್ವಪ್ರಾಣಿಗಳಲ್ಲಿಯೂ ವೈಷಮ್ಯವಿಲ್ಲವು ॥೪೭॥ ಭೃತ್ಯನಾದನನಗೆಆಜ್ಞಾಪಿಸಿರಿ, ನಾನೇನುಬೇಕಾದಕೆಲಸವಂಮಾಡಲಿ? ಯಾವಪುರುಷನಿಗೆ ನೀವುಕೆಲಸವನಾಜ್ಞಾಪಿಸುವಿರೋ ಆಪುರುಷನಿಗ ಅದೇಪರಮಾನುಗ್ರಹವು ॥೪೮॥ ಎಂದು ವಿಜ್ಞಾಪಿಸಿ, ಎಲೈಅರಸೇ! ಆಸುದಾಮನುಪ್ರೀತಮನಸ್ಕನಾಗಿ ದಿವ್ಯಂಗಳಾದಕುಸುಮಂಗಳಿಂದ ಮಾಲಿಕೆಗಳಂಮಾಡಿಕೊಟ್ಟನು ॥೪೯॥ ಆಪುಷ್ಪಮಾಲೆಗಳಿಂದ ಅಲಂಕೃತರಾದ ರಾಮಕೃಷ್ಣರು ಪ್ರೀತರಾಗಿ ಗೋಪಸಹಿತರಾಗಿ ಶರಣಾಗತನಾದ ಪ್ರಣತನಾದ ಆಸುದಾಮನಿಗೆ ಇಷ್ಟಂಗಳಾದವರಂಗಳನಿತ್ತರು ॥೫೦॥ ಆಸುದಾಮನು ಅಖಿಲಾತ್ಮನಾದ ಶ್ರೀಕೃಷ್ಣನಲ್ಲಿಯೇ ಭಕ್ತಿಯಂಯಾಚಿಸಿದನು. ಎಲೈಸ್ವಾಮಿಯೆ! ನಿನ್ನಭಕ್ತರಲ್ಲಿಮೈತ್ರಿಯೂ ಪ್ರಾಣಿಗಳಲ್ಲಿ ದಯೆಯೂ ನಿನಗೆಉಂಟಾಗಲಿ ॥೫೧॥ ಎಂದುಪ್ರಾರ್ಥಿಸುವ ಆಸುದಾಮಂಗೆ ವರಂಗಳನಿತ್ತು, ವಂಶವೃದ್ಧಿಕರವಾದ ಸಂಪದವಂ ಆಯುವಂ ಬಲವಂ ಕಾಂತಿಯಂ ಸಹ ಇತ್ತು, ಸಪರಿವಾರನಾಗಿ ರಾಮಸಮೇತನಾಗಿ ಹೊರಟುಬಂದನು ॥೫೨॥

-* ಇತಿಶ್ರೀಮದ್ಭಾಗವತೇ-ದಶಮಸ್ಕಂಧೇ- ಏಕಚತ್ವಾರಿಂಶೋಧ್ಯಾಯಃ- *-



ಶ್ರೀಶುಕಃ॥ಅಥವ್ರಜನ್‌ರಾಜಪಥೇನಮಾಧವಸ್ತ್ರಿಯಂಗೃಹೀತಾಂಗವಿಲೇಪಭಾಜನಾಮ್।ವಿಲೋಕ್ಯ ಕುಬ್ಜಾಂಯುವತಿಂವರಾನನಾಂಪಪ್ರಚ್ಛಯಾಂತೀಂಪ್ರಹಸನ್‌ರಸಪ್ರದಃ ॥೧॥ ಕಾತ್ವಂವರೋರ್ವೇತದು ಹಾನುಲೇಪನಂಕಸ್ಯಾಂಗನೇವಾಕಥಯಸ್ವನಃಸಾಧುನಃ । ದೇಹ್ಯಾವಯೋರಂಗವಿಲೇಪಮುತ್ತಮಂಶ್ರೇಯ

ಅಂಣನುಳ್ಳವನಾಗಿ, ನಿರ್ಜಗಾಮ-ಹೊರಹೊರಟನು ॥೫೨॥

ಇತಿಶ್ರೀಮದ್ಭಾಗವತ ಟೀಕಾಯಾಂದಶಮಸ್ಕಂಧೇ
ಏಕಚತ್ವಾರಿಂಶೋಧ್ಯಾಯಃ-
೪೧ನೆಯಅಧ್ಯಾಯದ ಪ್ರತಿಪದಟೀಕೆ.

[ಶುಕವಾಕ್ಯವು.] ಅಥ-ಆಮೇಲೆ, ರಾಜಪಥೇನ ಘೋರೆಗಳು ತಿರುಗತಕ್ಕ ದಾರಿಯಿಂದ, ವ್ರಜನ್-ಬರುತಲಿರುವ, ಮಾಧವಃ-ಕೃಷ್ಣನು, ಗೃಹೀತ-ಗ್ರಹಿಸಲ್ಪಟ್ಟ, ಅಂಗವಿಲೇಪಭಾಜನಾಂ-ಗಂಧದ ಬಟ್ಟಲುಳ್ಳವಳಾದ, ಯುವತಿಂ-ಪ್ರಾಯದವ ಳಾದ, ಯಾಂತೀಂ-ಹೋಗುತಲಿರುವಳಾದ,ವರಾನನಾಂ-ಶ್ರೇಷ್ಠವಾದ ಮುಖವುಳ್ಳವಳಾದ, ಕುಬ್ಜಾಂಸ್ತ್ರಿಯಂ-ಕುಳ್ಳಹೆಂಗಸ ನ್ನು, ವಿಲೋಕ್ಯ-ನೋಡಿ, ಪ್ರಹಸನ್-ಅತಿಶಯವಾಗಿ ನಗುತಲಿರುವವನಾದ್ದರಿಂದಲೇ, ರಸಪ್ರದಃ-ಸುಖವನ್ನು ಕುಡುವವನಾ ಗಿ, ಪಪ್ರಚ್ಛ-ಕೇನಗೊಂಡನು ॥೧॥ವರೋರು-ಶ್ರೇಷ್ಠವಾದ ತೊಡೆಗಳುಳ್ಳವಳೇ (ವಕ್ರವಾದ ಮೈಯುಳ್ಳವಳೇ ಎಂದುವಿರು ದ್ಧಾಭಿಪ್ರಾಯವು) ಅಂಗನೇ-ಹೆಂಣೇ, ಕಾತ್ವಂ-ಯಾರುನೀನು? ಏತದನುಲೇಪನಂ-ಈಗಂಧವು, ಕಸ್ಯವಾ-ಯಾರದು? ಉಹ- ಹೀಗೆಂದು, ಹುಬ್ಬನ್ನುಹಾರಿಸಿ, ನಃ-ನಮಗೆ, ಸಾಧು-ಚೆನ್ನಾಗಿ, ಕಥಯಸ್ವ-ಹೇಳು, ಉತ್ತಮಂ-ಶ್ರೇಷ್ಠವಾದ, ಅಂಗವಿಲೇ

ಇಂತು ಶುಕಮುನಿಯು ಪರೀಕ್ಷಿದ್ರಾಯನಿಗೆ ನಿರೂಪಿಸಿದನೆಂದು ಸೂತಪೌರಾಣಿಕನು ನೈಮಿಶಾ
ರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಹೇಳಿದನೆಂಬಲ್ಲಿಗೆ ಶ್ರೀಮನ್ಮಹೀಶೂರಪುರವ
ರಾಧೀಶ ಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜ ವಿರಚಿತಮಪ್ಪ ಶ್ರೀ
ಭಾಗವತದ ಶ್ರೀಕೃಷ್ಣರಾಜ ವಾಣೀವಿಲಾಸವು ಎಂಬಕರ್ಣಾಟ
ಭಾಷಾವ್ಯಾಖ್ಯಾನದಲ್ಲಿದಶಮಸ್ಕಂಧದೊಳ೪೧ನೆಯ
ಅಧ್ಯಾಯವು ಸಂಪೂರ್ಣವಾದುದು.
ಮಂಗಳಮಸ್ತು

* ೪೨ನೆಯಅಧ್ಯಾಯದತಾತ್ಪರ್ಯವು. *

ಶ್ರೀಧರೀಯಶ್ಲೋಕಃ॥ ದ್ವಿಚತ್ವಾರಿಂಶಕೇಕುಬ್ಜಾನ್ವಮನಂಧನುಷೋಭಿದಾ ವಧಸ್ತದ್ರಕ್ಷಿಣಾಂಕಂಸ ರಿಷ್ಟರಂಗೋತ್ಸವಾದಿಚ॥*॥ನಾಲ್ವತ್ತೆರಡನೆಯಅಧ್ಯಾಯದಲ್ಲಿ ಶ್ರೀಕೃಷ್ಣನು ವಕ್ರಾಕೃತಿಯುಳ್ಳಕುಬ್ಜೆಯನೆತ್ತಿ ಸಮವಾದದೇಹಮುಳ್ಳವಳನ್ನಾಗಿಮಾಡಿ, ಧನುರ್ಭಂಗವನ್ನುಮಾಡಿ, ಆಧನುಸ್ಸಿಗೆ ರಕ್ಷಕರಾದಜನರಂ ಸಂಹರಿಸಿ, ಕಂಸನಿಗೆ ಅರಿಷ್ಟಪ್ರದಮಾದ ಯುದ್ಧರಂಗೋತ್ಸವಂಮೊದಲಾದವ್ಯಾಪಾರವಂಮಾಡಿದನೆಂದು ಶ್ರೀಶುಕಮು ನಿಯು ಪರೀಕ್ಷಿದ್ರಾಯನಂಕುರಿತು ನಿರೂಪಿಸುವನದೆಂತೆನೆ-

ಎಲೈ ಅರಸೇ! ಅನಂತರದಲ್ಲಿ ಶ್ರೀಕೃಷ್ಣನು ರಾಜಮಾರ್ಗದಲ್ಲಿ ಹೋಗುವವನಾಗಿ ಗಂಧದಬಟ್ಟಲು ಗಳಂ ತೆಗದುಕೊಂಡುಹೋಗುವ ಯುವತಿಯಾದ ಸುಂದರವಾದಮುಖಮುಳ್ಳ ಕುಬ್ಜೆಯಾದ ಒಬ್ಬಳಂನೋಡಿ ಆಸ್ತ್ರೀಯಳಿಗೆಸುಖಪ್ರದನಾಗಿ ಅವಳಂಮಾತನಾಡಿಸಿದನು ॥೧॥ ಅದೆಂತೆನೆ- ಎಲೈ ಶ್ರೇಷ್ಠಂಗಳಾದ ತೊಡೆಗ ಳುಳ್ಳಸ್ತ್ರೀಯೇ! ನೀನುಯಾರು? ಈ ಅನುಲೇಪನ ದ್ರವ್ಯಂಗಳಂ ಯಾರಿಗೆ ತೆಗದುಕೊಂಡುಹೋಗುವಿ? ನ ಮಗೆ ಚೆನ್ನಾಗಿಪೇಳು; ಉತ್ತಮವಾದಗಂಧದ್ರವ್ಯವಂ ನಮ್ಮಿಬ್ಬರಿಗೂಕೊಡು ; ನಿನಗೆ ಶೀಘ್ರವಾಗಿ ಶ್ರೇಯ

ಸ್ತ್ವಸ್ತೇ ನಚಿರಾದ್ಭವಿಷ್ಯತಿ ॥೨॥ ಸೈರಂಧ್ರ್ಯುವಾಚ ॥ ದಾಸ್ಯಸ್ಮ್ಯಹಂ ಸುಂದರ ಕಂಸಸಮ್ಮತಾ ತ್ರಿವಕ್ರನಾಮಾ ಹ್ಯನುಲೇಪಕರ್ಮಣಿ । ಮದ್ಭಾವಿತಂ ಭೋಜಪತೇರತಿಪ್ರಿಯಂ ವಿನಾ ಯುವಾಂ ಕೋಽನ್ಯತಮಸ್ತದರ್ಹತಿ ॥೩॥ ರೂಪಪೇಶಲಮಾಧುರ್ಯಹಸಿತಾಲಾಪವೀಕ್ಷಿತೈಃ । ಧರ್ಷಿತಾತ್ಮಾ ದದೌ ಸಾಂದ್ರಮುಭಯೋರನುಲೇಪನಮ್ ॥೪॥ ತತಸ್ತಾವಂಗರಾಗೇಣ ಸ್ವವರ್ಣೇತರಶೋಭಿನಾ । ಸಂಪ್ರಾಪ್ತಪರಭಾಗೇನ ಶುಶುಭಾತೇಽನುರಂಜಿತೌ ॥೫॥ ಪ್ರಸನ್ನೋ ಭಗವಾನ್ ಕುಬ್ಜಾಂ ತ್ರಿವಕ್ರಾಂ ರುಚಿರಾನನಾಮ್ । ಋಜ್ವೀಂ ಕರ್ತುಂ ಮ

---

ವರಂ-ಮೈಗೆ ಬಳಿಕೊಳ್ಳುವ ಗಂಧವನ್ನು, ಆವಯೋಃ-ನಮ್ಮಿಬ್ಬರಿಗೂ, ದೇಹಿ-ಕುಡು, ತತಃ-ಅದರಿಂದ, ತೇ-ನಿನಗೆ, ನಚಿರಾತ್-ಬೇಗನೆ, ಶ್ರೇಯಃ-ಶುಭವು, ಭವಿಷ್ಯತಿ-ಮುಂದೆಯಾಗುತ್ತೆ ॥೨॥ [ದಾಸಿಯುವಚನವು.] ಸುಂದರ-ಚಲುವನೇ! ಅಹಂ-ನಾನು, ತ್ರಿವಕ್ರನಾಮಾ-ತ್ರಿವಕ್ರೆಯೆಂಬ ಹೆಸರುಳ್ಳವಳು, ಅನುಲೇಪಕರ್ಮಣಿ-ಗಂಧದ್ರವ್ಯಗಳಂ ಸೇರಿಸುವ ಕೆಲಸದಲ್ಲಿ, ಕಂಸಸಮ್ಮತಾ-ಕಂಸನಿಗೆ ಒಪ್ಪಿಗೆಯಾದವಳು. ಹಿ-ಆದ್ದರಿಂದ, ಭೋಜಪತೇಃ-ಭೋಜರಿಗೊಡೆಯನಾದ ಕಂಸನಿಗೆ, ಅತಿಪ್ರಿಯಂ-ಬಹಳ ಯಿಷ್ಟವಾಗಿರುವಂತೆ, ಮದ್ಭಾವಿತಂ-ನನ್ನಿಂದ ತೇಯಲ್ಪಟ್ಟಿರುವ ಅಥವಾ ಸಿದ್ಧಪಡಿಸಲ್ಪಟ್ಟ, ತತ್-ಆ ಗಂಧವನ್ನು, ಯುವಾಂವಿನಾ-ನಿಮ್ಮೀರ್ವರಂ ಹೊರತು, ಅನ್ಯತಮಃ-ಇತರರೊಳಗೊಬ್ಬನಾವನೂ, ಕೋಽರ್ಹತಿ-ಯಾವವನು, (ಪಡೆಕೊಳ್ಳಲು) ಯೋಗ್ಯನಾಗಿರುವನು? ॥೩॥ ರೂಪ.. .ತೈಃ-ರೂಪ-ಅಂಗಗಳು ಚನ್ನಾಗಿರುವಿಕೆ, ಪೇಶಲ-ಕೋಮಲವಾಗಿರುವಿಕೆ, ಮಾಧುರ್ಯ-ರಸಿಕತ್ವ, ಹಸಿತ-ಸೊಗಸಾದನಗೆ, ಆಲಾಪ-ಸವಿಯಾದಮಾತು, ವೀಕ್ಷಿತೈಃ-ಮೋಹಕವಾದ ನೋಟಗಳಿಂದ, ಧರ್ಷಿತಾತ್ಮಾ-ಮೋಹಿಸಲ್ಪಟ್ಟ ಚಿತ್ತವುಳ್ಳವಳಾಗಿ, ಉಭಯೋಃ-ಇಬ್ಬರಿಗೂ, ಸಾಂದ್ರಂ-ತುಂಬಹಿಡಿಯುವಷ್ಟು, ಅಥವಾ ಮುದ್ದೆಯಾಗಿರುವ, ಅನುಲೇಪನಂ-ಅಂಗರಾಗವನ್ನು, ದದೌ-ಕೊಟ್ಟಳು ॥೪॥ ತತಃ-ಆಮೇಲೆ, ಸ್ವವರ್ಣೇತರಶೋಭಿನಾ-ತಮ್ಮ ಬಣ್ಣಗಳಿಗಿಂತಲೂ ಬೇರೆಯಾದ ಬಣ್ಣಗಳಿಂದ ಶೋಭಿಸುತಲಿರುವಂಥಾ, ಸಂಪ್ರಾಪ್ತಪರಭಾಗೇನ-ಹೊಂದಲ್ಪಟ್ಟ ಗುಣೋತ್ಕರ್ಷವುಳ್ಳ, ಅಂಗರಾಗೇಣ-ಅನುಲೇಪನ ಗಂಧದಿಂದ, ಅನುರಂಜಿತೌ-ಸೊಗಸುಗೊಳಿಸಲ್ಪಟ್ಟ, ತೌ-ಆರಾಮಕೃಷ್ಣರು,

---

ಶ್ರೇಯಸ್ಸುಂಟಾಗುವುದು ॥೨॥ (ಎಂಬ ಈ ಕೃಷ್ಣನವಾಕ್ಯವಂ ಕೇಳಿ ಆಸ್ತ್ರೀಯು ನುಡಿದಳದೆಂತೆನೆ-) ಎಲೈ ಸುಂದರನಾದ ಪುರುಷನೇ! ನಾನು ಅನುಲೇಪನ ದ್ರವ್ಯಂಗಳಂ ಮಾಡುವದರಲ್ಲಿ ಕಂಸನಿಗೆ ಸಮ್ಮತಳಾದಗಾಡಿ. ನನ್ನ ಹೆಸರಂ ತ್ರಿವಕ್ರೆಯೆಂದು ಹೇಳುವರು, ನನ್ನಿಂದ ಮಾಡಲ್ಪಟ್ಟ ಗಂಧಾನುಲೇಪಂಗಳು ಕಂಸನಿಗೆ ಅತಿಪ್ರೀತಿಕರಂಗಳಾಗಿರುವವು, ದಿವ್ಯಪುರುಷರಾದ ನಿಮ್ಮಂ ಹೊರತು ಈ ಗಂಧದ್ರವ್ಯಂಗಳಿಗೆ ಯಾರು ಯೋಗ್ಯರಾಗುವರು ॥೩॥ ನೀವೇ ತೆಗದುಕೊಳ್ಳಿಯೆಂದು ಹೇಳಿ ಆ ಕುಬ್ಜೆಯು ಅವರೀರ್ವರ ಸೌಂದರ್ಯದಿಂದಲೂ ಸೌಕುಮಾರ್ಯದಿಂದಲೂ



ಮನೋಹರ್ಯದಿಂದಲೂ ಮಂದಸ್ಮಿತದಿಂದಲೂ ಸರಸಂಗಳಾದ ಮಾತುಗಳಿಂದಲೂ, ನೋಟಗಳಿಂದಲೂ ಮೋಹಿತಳಾಗಿ, ಗಟ್ಟಿಯಾಗಿರುವ ಅನುಲೇಪನವಂ ರಾಮಕೃಷ್ಣರಿಗೆ ಕೊಟ್ಟಳು ॥೪॥ ಅನಂತರದಲ್ಲಿ ಆ ರಾಮಕೃಷ್ಣರು ತಮ್ಮ ಶರೀರವರ್ಣಂಗಳು ಕಪ್ಪು ಬಿಳುಪುಗಳಾದುದರಿಂದ ಅದಕ್ಕೆ ಹೊರ

ನಶ್ಚಕ್ರೇ ದರ್ಶಯನ್ ದರ್ಶನೇ ಫಲಮ್ ॥೬॥ ಪದ್ಭ್ಯಾಮಾಕ್ರಮ್ಯ ಪ್ರಪದೇ ದ್ವ್ಯಂಗುಳ್ಯುತ್ತಾನಪಾ
ಣಿನಾ । ಪ್ರಗೃಹ್ಯ ಚುಬುಕೇಧ್ಯಾತ್ಮಮುದನೀನಮದಚ್ಯುತಃ ॥೭॥ ಸಾ ತದರ್ಜುಸಮಾನಾಂಗೀ ಬೃಹ
ಚ್ಛ್ರೋಣಿಪಯೋಧರಾ । ಮುಕುಂದಸ್ಪರ್ಶನಾತ್ಸದ್ಯೋ ಬಭೂವ ಪ್ರಮದೋತ್ತಮಾ ॥೮॥ ತತೋ ರೂ
ಪಗುಣೌದಾರ್ಯಸಂಪನ್ನಾ ಪ್ರಾಹ ಕೇಶವಮ್ । ಉತ್ತರೀಯಾಂತಮಾಕೃಷ್ಯ ಸ್ಮಯಂತೀ ಜಾತಹೃಚ್ಛ
ಯಾ ॥೯॥ ಏಹಿ ವೀರ ಗೃಹಂ ಯಾಮೋ ನ ತ್ವಾಂ ತ್ಯಕ್ತುಮಿಹೋತ್ಸಹೇ । ತ್ವಯೋನ್ಮಥಿತಚಿತ್ತಾಯಾಃ
ಪ್ರಸೀದ ಪುರುಷರ್ಷಭ ॥೧೦॥ ಏವಂ ಸ್ತ್ರಿಯಾ ಯಾಚ್ಯಮಾನಃ ಕೃಷ್ಣೋ ರಾಮಸ್ಯ ಪಶ್ಯತಃ । ಮು
ಖಂ ವೀಕ್ಷ್ಯಾನುಗಾನಾಂ ಚ ಪ್ರಹಸಂಸ್ತಾಮುವಾಚ ಹ ॥೧೧॥ ಏಷ್ಯಾಮಿ ತೇ ಗೃಹಂ ಸುಭ್ರು ಪುಂಸಾಂ

---

ಶುಶುಭಾತೇ-ಶೋಭಿಸಿದರು ॥೫॥ ಪ್ರಸನ್ನಃ-ಪ್ರಸಾದ ವುಂಟಾದ, ಭಗವಾನ್-ಕೃಷ್ಣನು, ರುಚಿರಾನನಾಂ-ಚೆಲುವಾದ ಮೋರೆ ಯುಳ್ಳವಳಾದರೂ, ತ್ರಿವಕ್ರಾಂ-ಮೂರುಡೊಂಕುಗಳುಳ್ಳ, ಕುಬ್ಜಾಂ-ಕುಬ್ಜಳನ್ನು, ಋಜ್ವೀಂಕರ್ತುಂ-ನೆಟ್ಟಗಿರುವಳನ್ನಾಗಿಮಾ ಡಲೋಸುಗ, ದರ್ಶನೇ-ತನ್ನಂ ನೋಡಿದ್ದರಲ್ಲಿ, ಫಲಂ-ಪ್ರಯೋಜನವನ್ನು, ದರ್ಶಯನ್-ತೋರಿಸುತಲಿರುವನಾಗಿ, ಮನಶ್ಚ ಕ್ರೇ-ಮನಸ್ಸುಮಾಡಿದನು ॥೬॥ ಅಚ್ಯುತಃ-ಕೃಷ್ಣನು, ಪ್ರಪದೇ-ಅವಳತುದಿಗಾಲುಗಳನ್ನು, ಪದ್ಭ್ಯಾಂ-ತನ್ನ ಕಾಲುಗಳಿಂದ ಆಕ್ರಮ್ಯ-ತುಳಿದುಕೊಂಡು, ದ್ವ್ಯಂಗುಳ್ಯುತ್ತಾನಪಾಣಿನಾ-ದ್ವ್ಯಂಗುಳ-ಎರಡುಬೆರಳು, ಉತ್ತಾನ-ಅಂಗತ್ತಾಗಿರುವ ಪಾಣಿ ನಾ-ಹಸ್ತದಿಂದ, ಚುಬುಕೇ-ಗದ್ದದಲ್ಲಿ, ಪ್ರಗೃಹ್ಯ-ಪತ್ತಿಹಿಡಿದು, ಅಧ್ಯಾತ್ಮಂ-ಅವಳದೇಹವನ್ನು, ಉದನೀನಮತ್-ಮೇಲಕ್ಕೆತ್ತಿ ದನು ॥೭॥ ಸಾ-ಆಕುಬ್ಜೆಯು, ತದಾ-ಆಗ, ಮುಕುಂದಸ್ಪರ್ಶನಾತ್-ಕೃಷ್ಣನ ಸೋಂಕುವಿಕೆಯಿಂದ, ಸದ್ಯಃ-ತತ್‌ಕ್ಷಣದಲ್ಲಿಯೇ, ಋಜುಸಮಾನಾಂಗೀ-ನೆಟ್ಟಗೂ ಸರಿಹೊಗಿಯೂ ಇರುವ ಮೈಯುಳ್ಳವಳೂ, ಬೃಹಚ್ಛ್ರೋಣಿಪಯೋಧರಾ-ದೊಡ್ಡ ಅಂಡುಗಳೂ ಮೊಲೆಗಳೂ ಉಳ್ಳವಳೂ, ಪ್ರಮದೋತ್ತಮಾ-ಹೆಚ್ಚು ಪ್ರಾಯವುಳ್ಳ ಹೆಂಗಳಲ್ಲಿ ಶ್ರೇಷ್ಠಳೂ, ಬಭೂವ-ಆದಳಂತೆ ॥೮॥ ರೂ ಪಗುಣೌದಾರ್ಯಸಂಪನ್ನಾ-ರೂಪ-ಚೆಲುಪಿಕೆಯು, ಗುಣ-ಸುಗುಣಗಳ, ಔದಾರ್ಯ-ಧಾರಾಳಿಕೆಯಿಂದ, ಸಂಪನ್ನಾ-ಪುಷ್ಟಳಾ ದ್ದರಿಂದಲೇ, ಸ್ಮಯಂತೀ-ಮಾನಿತಳಾಗಿಯೂ, ಜಾತಹೃಚ್ಛಯಾ-ಮೂಡಿದಕಾಮವುಳ್ಳವಳಾಗಿಯೂ, ತತಃ-ಆಮೇಲೆ, ಉತ್ತ ರೀಯಾಂತಂ-ಹೊದ್ದುವಸ್ತ್ರವಸೆರಗನ್ನು, ಆಕೃಷ್ಯ-ಎಳದು, ಕೇಶವಂ-ಕೃಷ್ಣನನ್ನು ಕುರಿತು, ಪ್ರಾಹ-ಪ್ರಕಟವಾಗಿ ಹೇಳಿದ ಳು ॥೯॥ ವೀರ-ಶೂರನೇ! ಏಹಿ-ಬಾ! ಗೃಹಂ-ನನ್ನಮನೆಯಂ ಕುರಿತು, ಯಾಮಃ-ಹೋಗುವ, ಇಹ-ಇಲ್ಲಿ, ತ್ವಾಂ-ನಿನ್ನನ್ನು, ತ್ಯ ಕ್ತುಂ-ಬಿಡುವುದಕ್ಕೆ, ನೋತ್ಸಹೇ-ನಾನುಉತ್ಸಾಹಗೊಳ್ಳುವದಿಲ್ಲ, ಪುರುಷರ್ಷಭ-ಪುರುಷರಲ್ಲಿ ಶ್ರೇಷ್ಠನಾದವನೇ! ತ್ವಯಾ-ನಿನ್ನಿಂ ದ, ಉನ್ಮಥಿತಚಿತ್ತಾಯಾಃ-ಚೆಚ್ಚಾಗಿಕಡೆಯಲ್ಪಟ್ಟ ಮನಸ್ಸುಳ್ಳವಳಾದ, ನನ್ನ ವಿಷಯದಲ್ಲಿ, ಪ್ರಸೀದ-ಪ್ರಸನ್ನನಾಗು ॥೧೦॥ ಏವಂ-ಹೀಗೆ, ಸ್ತ್ರಿಯಾ-ಹೆಂಗಸಿನಿಂದ, ಯಾಚ್ಯಮಾನಃ-ಬೇಡಿಕೊಳ್ಳಲ್ಪಡುತಲಿರುವನಾದ, ಕೃಷ್ಣಃ-ಕೃಷ್ಣನು, ಪಶ್ಯತಃ- ನೋಡುತಲಿರುವ, ರಾಮಸ್ಯ-ಬಲರಾಮನ, ಅನುಗಾನಾಂಚ-ಸಂಗಡಬರುತಿರುವವರ, ಮುಖಂ-ಮೋರೆಯನ್ನು, ವೀಕ್ಷ್ಯಚ-ನೋ

---

ಚ್ಚಾದ ಹಳದಿ ಕೆಂಪುಬಣ್ಣವುಳ್ಳ ದಿವ್ಯಗಂಧಂಗಳಿಂದ ಅನುಲೇಪನವಂ ಮಾಡಿಕೊಂಡು ಪ್ರಕಾಶಿಸಿದರು ॥೫॥ ಭಗವಂತನಾದ ಕೃಷ್ಣನು ಸುಂದರವಾದ ಮುಖವುಳ್ಳ ಕುಬ್ಜೆಯಾದ ಆತ್ರಿವಕ್ರೆಯಂ ಸರಿಯಾಗಿ ಮಾಡುವು ದಕ್ಕೆ ಮನಸ್ಸಂ ಮಾಡಿದನು. ತನ್ನ ದರ್ಶನ ಫಲವಂ ಆಕ್ಷಣದಲ್ಲಿಯೇ ತೋರಿಸುವನಾದನು ॥೬॥ ಶ್ರೀಕೃಷ್ಣ ನು ಆಸ್ತ್ರೀಯಂ ಇದಿರಾಗಿನಿಲ್ಲಿಸಿಕೊಂಡು ಅವಳಪಾದಂಗಳಂ ತಂನ್ನಪಾದಂಗಳಿಂದ ಮೆಟ್ಟಿಕೊಂಡು ಆವಳಗ ಲ್ಲಕ್ಕೆ ಕೈಹಾಕಿ ಯೆತ್ತಿದನು ॥೭॥ ಆಗ ಆಸ್ತ್ರೀಯು ಸಮವಾದ ಸರ್ವಾಂಗವುಳ್ಳವಳಾಗಿ ಸ್ಥೂಲಂಗಳಾದ ನಿತಂಬಂಗಳೂ ಕುಚಂಗಳೂ ಉಳ್ಳವಳಾಗಿ ಮುಕುಂದನಸ್ಪರ್ಶದಿಂದ ಆಕ್ಷಣದಲ್ಲಿಯೇ ಉತ್ತಮಸ್ತ್ರೀಯಾ ದಳು ॥೮॥ ಅನಂತರದಲ್ಲಿ ರೂಪಸೌಂದರ್ಯಯುಕ್ತಳಾದ ಆಸ್ತ್ರೀಯು ಶ್ರೀಕೃಷ್ಣನ ಸೆರಗಂಪಿಡಿದು ಕಾಮಪೀಡಿತಳಾಗಿ ನಗುತ್ತ ನುಡಿದಳು ॥೯॥ ಎಲೈ ವೀರನೇ ! ನನ್ನ ಸಂಗಡ ಬರುವನಾಗು, ನಮ್ಮ ಮನೆಗೆ ಹೋಗುವ, ನಿನ್ನಂ ಬಿಡಲಾರೆನು ನಿನ್ನಿಂದ ಮೋಹಿತಚಿತ್ತಳಾದ ನನಗೆ ಪ್ರಸನ್ನನಾಗು ॥೧೦॥ ಎಲೈ ಪುರು ಷಶ್ರೇಷ್ಠನೇ ಆಸ್ತ್ರೀಯಿಂದ ಯಾಚಿಸಲ್ಪಡುವ ಕೃಷ್ಣನು ಬಲರಾಮಂಗೆ ಇದಿರಾಗಿ ಸಂಗಡಬರುವ ಗೋಪರ ಮು

ಮಾಧಿವಿಕರ್ಶನಮ್ । ಸಾಧಿತಾರ್ಥೋಽಗೃಹಾಣಾಂನಃಪಾಂಥಾನಾಂತ್ವಂಪರಾಯಣಮ್ ‖೧೨‖ ವಿಸೃಜ್ಯಮಾಧ್ವ್ಯಾವಾಣ್ಯಾತಾಂವ್ರಜನ್ಮಾರ್ಗೆವಣಿಕ್ಪಥೆ। ನಾನೋಪಾಯನತಾಂಬೂಲಸ್ರಗ್ಗಂಧೈಸ್ಸಾಗ್ರಜೋಽರ್ಚಿತಃ ‖೧೩‖ ತದ್ದರ್ಶನಸ್ಮರಕ್ಷೋಭಾದಾತ್ಮಾನಂನಾವಿದಂಸ್ತ್ರಿಯಃ । ವಿಸ್ರಸ್ತವಸ್ತ್ರಕಬರವಲಯಾಲೆಖ್ಯಮೂರ್ತಯಃ ‖೧೪‖ ತತಃಪೌರಾನ್ಪೃಚ್ಛಮಾನೋಧನುಷಃಸ್ಥಾನಮ

---

ಡಿಯೂ, ಪ್ರಹಸನ್-ಅತಿಶಯವಾಗಿ ನಗುತಲಿರುವನಾಗಿ, ತಾಂ-ಅವಳನ್ನು ಕುರಿತು, ಉವಾಚಹ-ಹೇಳಿದನು ‖೧೧‖ ಸುಭ್ರು-ಚಿನ್ನಾದಹುಬ್ಬುಗಳುಳ್ಳವಳೇ! ತ್ವಂ-ನೀನು, ಪುಂಸಾಂ-ಪುರುಷರಿಗೆ, ಆಧಿವಿಕರ್ಶನಂ-ಮನಃಪೀಡಾಶಾಮಕವಾದ, ಅಗೃಹಾಣಾಂ-ಗೃಹಸ್ಥಾಶ್ರಮವಿಲ್ಲದ, ಪಾಂಥಾನಾಂ-ದಾರಿಗರಾದ, ನಃ-ನಮಗೆ,ಪರಾಯಣಂ-ಉತ್ತಮವಾದ ಆಶ್ರಯವಾಗಿಯೂ, ಇರುವಿ. ಸಾಧಿತಾರ್ಥಃ-ಸಾಧಿಸಲ್ಪಟ್ಟ ಪ್ರಯೋಜನವುಳ್ಳವನಾಗಿ, ತೇ-ನಿನ್ನ , ಗೃಹಂ-ಮನೆಯುಂಕುರಿತು, ಏಷ್ಯಾಮಿ-ಬರುವೆನು‖೧೨‖ ಮಧ್ವ್ಯಾ-ಸವಿಯಾದ,ವಾಣ್ಯಾ-ಮಾತಿನಿಂದ, ತಾಂ-ಅವಳನ್ನು, ವಿಸೃಜ್ಯ-ಬಿಟ್ಟು, ಮಾರ್ಗೇ-ದಾರಿಯಲ್ಲಿ,ಸಾಗ್ರಜಃ-ಅಣ್ಣನಿಂ ಸಹಿತನಾಗಿ, ವ್ರಜನ್-ಹೋಗುವಕೃಷ್ಣನು,ವಣಿಕ್ಪಥೇ-ಅಂಗಡಿಬೀದಿಯಲ್ಲಿ,ನಾನೋಪಾಯನತಾಂಬೂಲಸ್ರಗ್ಗಂಧೈಃ-ನಾನಾ-ಹಲವುಬಗೆಯಾದ, ಉಪಾಯನ-ಕಾಣಿಕೆಗಳಿಂದಲೂ, ತಾಂಬೂಲ-ವೀಳ್ಯಗಳಿಂದಲೂ, ಸ್ರಕ್-ಪುಷ್ಪಮಾಲೆಗಳಿಂದಲೂ, ಗಂಧೈಃ-ಅನುಲೇಪನಗಳಿಂದಲೂ, ಅರ್ಚಿತಃ-ಪೂಜಿಸಲ್ಪಟ್ಟವನಾದನು ‖೧೩‖ತದ್ದರ್ಶನಸ್ಮರಕ್ಷೋಭಾತ್-ತತ್-ಆಕೃಷ್ಣನ,ದರ್ಶನ-ನೋಡುವಿಕೆಯಿಂದಾದ,ಸ್ಮರಕ್ಷೋಭಾತ್-ಕಾಮಪುರುವಣೆಯಿಂದ,ಸ್ತ್ರಿಯಃ-ಹೆಂಗಳು,ವಿಸ್ರ....ವಲಯಾಃ-ವಿಸ್ರಸ್ತ-ಬಿಚ್ಚಿಜಾರಿದ, ವಸ್ತ್ರ-ಸೀರೆಯು, ಕಬರ-ತುರುಬು, ವಲಯಾಃ-ಕಡಗಂಗಳೂಉಳ್ಳವರೂ, ಆಲೇಖ್ಯಮೂರ್ತಯಃ-ಚಿತ್ರದಗೊಂಬೆಗಳಂತಿರುವರೂ ಆದ್ದರಿಂದಲೇ, ಆತ್ಮಾನಂ-ತಮ್ಮಶರೀರವನ್ನೇ, ನಾವಿದನ್- ಅರಿಯಲಿಲ್ಲವು‖೧೪‖ತತಃ-ಆಮೇಲೆ, ಪೌರಾನ್-

---

ಖವಂನೋಡಿ ನಗುತ ಅವಳಂಕುರಿತು ನುಡಿದನು ‖೧೧‖ ಎಲೈಸ್ತ್ರೀಯೆ ! ನಮ್ಮ ಕಾರ್ಯವಂ ಸಾಧಿಸಿದಮೇಲೆ ಸಾವಕಾಶವಾಗಿ ಪುರುಷರಿಗೆ ವ್ಯಥಾಪರಿಹಾರಕವಾದ ನಿನ್ನ ಮನೆಗೆ ಬರುವೆನು. ಪತ್ನೀರಹಿತರಾದ ವಿರಹಿಗಳಿಗೆ ನೀನುಗತಿಯು ‖೧೨‖ ಎಂದು ಮೃದುವಾಕ್ಯದಿಂದ ಅವಳಂಕಳುಹಿಸಿ, ಅಂಗಡಿಬೀದಿಯಲ್ಲಿ ಹೋಗುವನಾಗಿ ಆವರ್ತಕರಿಂದ ನಾನಾಕಾಣಿಕೆಗಳಿಂದಲೂ ಸ್ರಕ್ಚಂದನ ತಾಂಬೂಲಂಗಳಿಂದಲೂ ಪೂಜಿತನಾದನು. ‖೧೩‖ ಆಪುರಸ್ತ್ರೀಯರು ಆಕೃಷ್ಣನದರ್ಶನದಿಂದುಂಟಾದ ಕಾಮವಿಕಾರದಿಂದ ಜಾರಿಹೋಗುತಲಿರುವ ವಸ್ತ್ರಂಗಳೂ ಕೇಶಂಗಳೂ ಭೂಷಣಂಗಳೂ ಉಳ್ಳವರಾಗಿ, ಚಿತ್ತರದ ಬೊಂಬೆಗಳಂತೆ ಸ್ತಬ್ಧರಾಗಿ,ತಮ್ಮಶರೀರವನ್ನೇ ತಾವು ಮರೆತರು ‖೧೪‖ ಅನಂತರದಲ್ಲಿ ಶ್ರೀಕೃಷ್ಣನು ಪುರಸ್ಥರಾದ ಜನರಂ ಧನುರ್ಯಾಗಸ್ಥಾನವಂ ಕೇಳುವವನಾಗಿ.






ಚ್ಯುತಃ। ತಸ್ಮಿನ್ಪ್ರವಿಷ್ಟೋದದೃಶೇಧನುರೈಂದ್ರಮಿವಾದ್ಭುತಮ್ ॥೧೫॥ ಪುರುಷೈರ್ಬಹುಭಿರ್ಗು
ಪ್ತಮರ್ಚಿತಂಪರಮರ್ದ್ಧಿಮತ್ । ವಾರ್ಯಮಾಣೋನೃಭಿಃ ಕೃಷ್ಣಃಪ್ರಸಹ್ಯಧನುರಾದದೇ ॥೧೬॥ ಕ
ರೇಣವಾಮೇನಸಲೀಲಮುದ್ಧೃತಂಸಜ್ಜಂಚಕೃತ್ವಾನಿಮಿಷೇಣಪಶ್ಯತಾಮ್।ನೃಣಾಂವಿಕೃಷ್ಯಪ್ರಬಭಂ
ಜಮಧ್ಯತೋಯಥೇಕ್ಷುದಂಡಂಮದಕರ್ಯುರುಕ್ರಮಃ ॥೧೭॥ ಧನುಷೋಭಜ್ಯಮಾನಸ್ಯಶಬ್ದಃಖಂರೋ
ದಸೀದಿಶಃ । ಪೂರಯಾಮಾಸಯಂಶ್ರುತ್ವಾಕಂಸಸ್ತ್ರಾಸಮುಪಾಗಮತ್ ॥೧೮॥ ತದ್ರಕ್ಷಿಣಸ್ಸಾ
ನುಚರಾಃಕುಪಿತಾಆತತಾಯಿನಃ । ಗೃಹೀತುಕಾಮಾಆವವ್ರುರ್ಗೃಹ್ಯತಾಂಬಧ್ಯತಾಮಿತಿ॥೧೯॥ ಅಥ
ತಾನ್ದುರಭಿಪ್ರಾಯಾನ್ವಿಲೋಕ್ಯಬಲಕೇಶವೌ । ಕ್ರುದ್ಧೌಧನುಷಆದಾಯಶಕಲೇತಾಂಶ್ಚಜಘ್ನ

---

ಪುರಜನಗಳಂ ಕುರಿತು, ಧನುಷಃ-ಬಿಲ್ಲಿನ, ಸ್ಥಾನಂ-ಸ್ಥಲವನ್ನು, ಪೃಚ್ಛಮಾನಃ-ಕೇಳುತಲಿರುವನಾದ, ಅಚ್ಯುತಃ-ಕೃಷ್ಣನು ತಸ್ಮಿನ್-ಆಬಿಲ್ಲಿನಮನೆಯಲ್ಲಿ, ಪ್ರವಿಷ್ಟಃ-ಹೊಕ್ಕವನಾಗಿ, ಐಂದ್ರಮಿವ-ಮೇಘದಲ್ಲಿ ಹಲವುಬಣ್ಣವಾಗಿ ಕಾಣುವಇಂದ್ರನಬಿಲ್ಲಿ ನಂತೆ, ಅದ್ಭುತಂ-ಆಶ್ಚರ್ಯಕರವಾದ, ಧನುಃ-ಬಿಲ್ಲನ್ನು, ದದೃಶೇ-ಕಂಡನು ॥೧೫॥ಬಹುಭಿಃಪುರುಷೈಃ-ಹಲವುಮಂದಿ ಆಳುಗ ಳಿಂದ, ಗುಪ್ತಂ-ಪಾಲಿಸಲ್ಪಟ್ಟದ್ದೂ, ಅರ್ಚಿತಂ-ಪೂಜಿಸಲ್ಪಟ್ಟದ್ದೂ,ಪರಮರ್ದ್ಧಿಮತ್-ಹೆಚ್ಚುಭಾಗ್ಯವುಳ್ಳದ್ದೂಆದ,ಧನುಃ-ಬಿಲ್ಲನ್ನು, ಕೃಷ್ಣಃ-ಹರಿಯು,ನೃಭಿರ್ವಾರ್ಯಮಾಣೋಽಪಿ-ಆಳುಗಳಿಂ ತಡೆಯಲ್ಪಟ್ಟವನಾದರೂಕೂಡ, ಪ್ರಸಹ್ಯ-ಬಲಾತ್ಕರಿಸಿ ಆದದೇ-ತೆಗೆದುಕೊಂಡನು ॥೧೬॥ವಾಮೇನಕರೇಣ-ಎಡಗೈಯಿಂದ, ಸಲೀಲಂ-ವಿಲಾಸಸಹಿತವಾಗುವಂತೆ, ಉದ್ಧೃತಂ-ಎತ್ತ ಲ್ಪಟ್ಟಬಿಲ್ಲನ್ನು, ನಿಮಿಷೇಣ-ರೆಪ್ಪೆಹೊಡೆಯುವಷ್ಟು ವೇಗದಿಂದ, ಸಜ್ಜಂಚ-ಹೆದೆಯಿಂ ಸಹಿತವಾದ್ದನ್ನಾಗಿಯೂ, ಕೃತ್ವಾ-ಮಾಡಿ, ನೃಣಾಂ-ಆಳುಗಳು, ಪಶ್ಯತಾಂಸತಾಂ-ನೋಡುತ್ತಿರುವ ರಾಗುತ್ತಿರಲು, ಉರುಕ್ರಮಃ-ಹೆಚ್ಚುನಡತೆಯುಳ್ಳ, ಕೃಷ್ಣನು ಮದಕರೀ-ಮದವುಳ್ಳ ಆನೆಯು, ಇಕ್ಷುದಂಡಂಯಥಾ-ಕಬ್ಬಿನಜಳವೆಯನ್ನು ಹೇಗೋಹಾಗೆ, ವಿಕೃಷ್ಯ-ಎಳದು, ಮಧ್ಯತಃಪ್ರ ಬಭಂಜ-ನಡುಕಲಿನಿಂದ ಮುರಿದುಹಾಕಿದನು ॥೧೭॥ಭಜ್ಯಮಾನಸ್ಯ-ಮುರಿಯಲ್ಪಡುತಲಿರುವ, ಧನುಷಃ-ಬಿಲ್ಲಿನ, ಯಂ-ಯಾವಧ್ವ ನಿಯನ್ನು, ಶ್ರುತ್ವಾ-ಕೇಳಿ, ಕಂಸಃ-ಕಂಸನು, ತ್ರಾಸಂ-ಭಯವನ್ನು, ಉಪಾಗಮತ್-ಹೊಂದಿದನೋ, ಸಶಬ್ದಃ-ಆಸಪ್ಪಳು, ಖಂ-ಆಕಾಶವನ್ನೂ, ರೋದಸೀ-ಭೂಮ್ಯಂತರಿಕ್ಷಗಳನ್ನೂ, ದಿಶಃ-ದಿಕ್ಕುಗಳನ್ನೂ, ಪೂರಯಾಮಾಸ-ತುಂಬಿಸಿತು ॥೧೮॥ ತದ್ರಕ್ಷಿಣಃ-ಆಬಿಲ್ಲಿನ ಕಾವಲುಗಾರರು, ಸಾನುಚರಾಃ-ಸಂಗಾತಿಗಳಿಂ ಸಹಿತರಾಗಿ, ಕುಪಿತಾಃ-ಸಿಟ್ಟುಂಟಾದವರೂ, ಆತತಾ ಯಿನಃ-ಮಹಾಪಾಪಿಗಳೂ. ಆದ್ದರಿಂದಲೇ, ಗೃಹೀತುಕಾಮಾಃ-ಕೃಷ್ಣನಂ ಹಿಡಿಯಲ್ಬಯಸಿದವರಾಗಿ, ಗೃಹ್ಯತಾಂ-ಹಿಡಿಯ ಲ್ಪಡಲಿ, ಬಧ್ಯತಾಂ-ಕಟ್ಟಲ್ಪಡಲಿ. ಇತಿ-ಹೀಗೆಂದುಕೊಳ್ಳುತ್ತ, ಆವವ್ರುಃ-ಮುತ್ತಿದರು ॥೧೯॥ ಅಥ-ಆಮೇಲೆ, ತಾನ್-ಅವರನ್ನು ದುರಭಿಪ್ರಾಯಾನ್-ಕೆಟ್ಟತಾತ್ಪರ್ಯವುಳ್ಳವರನ್ನಾಗಿ, ವಿಲೋಕ್ಯ-ನೋಡಿ, ಕ್ರುದ್ಧೌ-ಸಿಟ್ಟುಗೊಂಡವರಾದ, ಬಲಕೇಶವೌ-ರಾ ಮಕೃಷ್ಣರು, ಧನುಷಃ-ಬಿಲ್ಲಿನ, ಶಕಲೇ-ತುಂಡುಗಳೆರಡರನ್ನು, ಆದಾಯ-ತೆಗೆದುಕೊಂಡು, ತಾಂಶ್ಚ-ಅವರನ್ನೂ, ಜಘ್ನತುಃ-

---

ಆಧನುಸ್ಸಿನ ಸ್ಥಾನಕ್ಕೆಹೋಗಿ ಇಂದ್ರನ ಧನುಸ್ಸಿನಂತೆ ಅದ್ಭುತವಾದ ಆಧನುವಂ ನೋಡಿದನು ॥೧೫॥ ಅನೇಕ ರಾಜಪುರುಷರಿಂದ ರಕ್ಷಿತವಾಗಿ ಪೂಜಿತವಾಗಿ ಅತಿವೈಭವಯುಕ್ತವಾದ ಆಧನುವಂ, ಶ್ರೀಕೃಷ್ಣನು ಜನರಿಂದನಿವಾರಿತನಾಗಿ ಬೇಡಬೇಡವೆಂದು ತಡೆಯಲ್ಪಟ್ಟವನಾದರೂ ಬಲಾತ್ಕಾರದಿಂದ ಹೋಗಿ ಅದಂಗ್ರಹಿಸಿದ ನು॥೧೬॥ಶ್ರೀಕೃಷ್ಣನು ಆಧನುಸ್ಸಂ ವಾಮಹಸ್ತದಿಂದ ಲೀಲೆಯಿಂದಲೇ ಎತ್ತಿ ಎಲ್ಲರೂನೋಡುತ್ತಿರುವಾಗಲೇ ಕ್ಷಣಮಾತ್ರದಲ್ಲಿಯೇಹೆದೆಯನೇರಿಸಿ ಮಧ್ಯಭಾಗದಲ್ಲಿಯೇ ಮದಗಜವು ಕಬ್ಬಿನಜಳವೆಯಂ ಮುರಿದರೀತಿಯಿಂ ದಮುರಿದನು ॥೧೭॥ ಶ್ರೀಕೃಷ್ಣನಿಂದ ಮುರಿಯಲ್ಪಡುತಲಿರುವ ಧನಸ್ಸಿನಶಬ್ದವು ಭೂಮ್ಯಾಕಾಶಂಗಳಂ ದಿ ಕ್ಕುಗಳಂಸಹ ವ್ಯಾಪಿಸಿತು. ಆಶಬ್ದವಂಕೇಳಿ ಕಂಸನು ಭಯವನೈದಿದನು ॥೧೮॥ ಆಧನುಸ್ಸಿನರಕ್ಷಕರಾದ ಕಾವಲುಗಾರರು ಸಾನುಚರರಾಗಿ ಕೋಪಿಷ್ಠರಾಗಿ ದ್ರೋಹಿಗಳಾಗಿ ಇವರಂ ಹಿಡಿಯಿರಿ ಕಟ್ಟಿ ಎಂದು ಹೇಳುವ ರಾಗಿ ಆಶ್ರೀಕೃಷ್ಣನಂ ಬಡಿಯಲಿಚ್ಛೆಯುಳ್ಳವರಾಗಿ ಸುತ್ತಿಕೊಂಡರು ॥೧೯॥ ಆಮೇಲೆದುಷ್ಟಾಭಿಪ್ರಾಯು

ತುಃ ||೨೦|| ಬಲಂಚಕಂಸಪ್ರಹಿತಂಹತ್ವಾಶಾಲಾಮುಖಾತ್ತತಃ | ನಿಷ್ಕ್ರಮ್ಯಚೇರತುರ್ಹೃಷ್ಟೌ ನಿರೀಕ್ಷ್ಯಪುರಸಂಪದಃ ||೨೧|| ತಯೋಸ್ತದದ್ಭುತಂವೀರ್ಯಂನಿಶಾಮ್ಯಪುರವಾಸಿನಃ | ತೇಜಃಪ್ರಾಗಲ್ಭ್ಯ ರೂಪಂಚಮೆನಿರೆವಿಬುಧೋತ್ತಮೌ ||೨೨|| ತಯೋರ್ವಿಚರತೋಸ್ಸ್ವೈರಮಾದಿತ್ಯೋಸ್ತಮುಪೇಯಿ ವಾನ್ | ಕೃಷ್ಣರಾಮೌವೃತೌಗೋಪೈಃಪುರಾಚ್ಛಕಟಮೀಯತುಃ ||೨೩|| ಗೋಪ್ಯೋಮುಕುಂದವಿಗಮೆ ವಿರಹಾತುರಾಯಾಆಶಾಸತಾಶಿಷಋತಾಮಧುಪುರ್ಯಭೂವನ್ | ಸಂಪಶ್ಯತಾಂಪುರುಷಭೂಷಣಗಾತ್ರಲಕ್ಷ್ಮೀಂಹಿತ್ವೇತರಾಂನ್ನುಭಜತಶ್ಚಕಮೆನುಯಾಂಶ್ರೀಃ ||೨೪|| ಅವನಿಕ್ತಾಂಘ್ರಿಯುಗಳೌಭುಕ್ತ್ವಾಕ್ಷೀ

---

ಕೊಂದರು ||೨೦|| ಕಂಸಪ್ರಹಿತಂ-ಕಂಸನಿಂದ ಕಳುಹಿಸಲ್ಪಟ್ಟ, ಬಲಂಚ-ದಂಡನ್ನೂ, ಹತ್ವಾ-ಕೊಂದು, ತತಃ-ಆಮೇಲೆ, ಶಾಲಾಮುಖಾತ್-ಧನುಶ್ಶಾಲೆಯ ಬಾಕಲಿನಿಂದ, ನಿಷ್ಕ್ರಮ್ಯ-ಹೊರಹೊರಟು, ಪುರಸಂಪದಃ-ನಗರದ ಭಾಗ್ಯಗಳನ್ನು, ನಿರೀಕ್ಷ್ಯ-ನೋಡಿ, ಹೃಷ್ಟೌ-ಸಂತೋಷಪುಂಟಾದವರಾಗಿ, ಚೇರತುಃ-ತಿರುಗಿದರು ||೨೧|| ಪುರವಾಸಿನಃ-ನಗರದಲ್ಲಿರುವವರು, ತಯೋಃ-ಆ ರಾಮಕೃಷ್ಣರ, ಅದ್ಭುತಂ-ಆಶ್ಚರ್ಯಕರವಾದ, ತದ್ವೀರ್ಯಂ-ಆ ಸಾಮರ್ಥ್ಯವನ್ನು, ತೇಜಃ-ವರ್ಚಸ್ಸನ್ನು, ಪ್ರಾಗಲ್ಭ್ಯರೂಪೇಚ-ಪ್ರೌಢಿಮೆಯನ್ನೂ, ಚಲುವಿಕೆಯನ್ನೂ, ನಿಶಾಮ್ಯ-ನೋಡಿ, ವಿಬುಧೋತ್ತಮೌ-ದೇವತೆಗಳಲ್ಲಿ ಶ್ರೇಷ್ಠರಾದವರೆಂದು, ಮೇನಿರೆ-ತಿಳಿದರು ||೨೨|| ತಯೋಃ-ಆ ರಾಮಕೃಷ್ಣರು, ಸ್ವೈರಂ-ಮನಸ್ಸುಬಂದಂತೆ, ವಿಚರತೋಸ್ಸತೋಃ-ತಿರುಗುವರಾಗುತ್ತಿರಲು, ಆದಿತ್ಯಃ-ಸೂರ್ಯನು, ಅಸ್ತಂ-ಅಸ್ತಮಾನವನ್ನು, ಉಪೇಯಿವಾನ್-ಹೊಂದಿದವನಾದನು. ಕೃಷ್ಣರಾಮೌ-ಕೃಷ್ಣನೂ ರಾಮನೂ, ಗೋಪೈಃ-ಗೊಲ್ಲರಿಂದ, ವೃತೌ-ಬಳಿಸಲ್ಪಟ್ಟವರಾಗಿ, ಪುರಾತ್-ಪಟ್ಟಣದಿಂದ, ಹೊರಟು, ಶಕಟಂ-ಬಂಡಿಮೆಟ್ಟನ್ನು, ಈಯತುಃ-ಸೇರಿದರು ||೨೩|| ಮುಕುಂದವಿಗಮೇ-ಗೋಕುಲದಿಂ ಕೃಷ್ಣನ ಪ್ರಯಾಣಸಮಯದಲ್ಲಿ, ವಿರಹಾತುರಾಃ-ಕೃಷ್ಣನ ಅಗಲಿಕೆಯಿಂದ ಆತುರ ಗೊಳ್ಳುತಲಿರುವರಾದ, ಗೋಪ್ಯಃ-ಗೊಲ್ಲತಿಯರು, ಯಾಃಆಶಿಷಃ-ಯಾವಆಶೀರ್ವಾದಗಳನ್ನು, ಆಶಾಸತ-ಬಯಸಿದರೋ, ತಾಃ-ಅವುಗಳು, ಮಧುಪುರಿ-ಮಧುರಾನಗರದಲ್ಲಿ, ಋತಾಃ-ಸತ್ಯವಾದವುಗಳು ಅಭೂವನ್-ಆದವು, ಶ್ರೀಃ-ಲಕ್ಷ್ಮಿಯು, ಸಂಪಶ್ಯತಾಃ-ತನ್ನಂನೋಡುತಲಿರುವ, ಭಜತಶ್ಚ-ಸೇವಿಸುತಲೂಇರುವ, ಇತರಾನ್-ಅನ್ಯರಾದಬ್ರಹ್ಮಾದಿಗಳನ್ನುಆದರೊ, ಹಿತ್ವಾ-ಬಿಟ್ಟು, ಯಾಂ-ಯಾವ, ಪುರುಷಭೂಷಣಗಾತ್ರಲಕ್ಷ್ಮೀಂ-ಪುರುಷಭೂಷಣ-ಪುರುಷರಲ್ಲಿ ಉತ್ತಮನಾದ ವಿಷ್ಣುವಿನ, ಗಾತ್ರಲಕ್ಷ್ಮೀಂ-ದೇಹಕಾಂತಿಯನ್ನು, ಚಕಮೇ-ಬಯಸಿದಳೋ, ನು-ಆಶ್ಚರ್ಯವು ||೨೪|| ಅವನಿಕ್ತಾಂಘ್ರಿಯುಗಳೌ-ತೊಳೆಯಲ್ಪಟ್ಟ ಕಾಲುಗಳುಳ್ಳವರಾಗಿ, ಕ್ಷೀರೋಪಸೇಚನಂ-ಹಾಲುಪರಿಕರವಾಗಿಉಳ್ಳ ಅನ್ನವನ್ನು, ಭುಕ್ತ್ವಾ-ಉಂಡು, ಕಂಸಚಿಕೀರ್ಷಿತಂ-ಕಂಸನು ಮಾಡಲೆಳಸಿರುವುದನ್ನು, ಜ್ಞಾತ್ವಾ-ತಿಳಿದು, ತಾಂರಾತ್ರಿಂ-ಆರಾತ್ರಿಯಲ್ಲಿ

---

ಮುಳ್ಳ ಅವರಂ ನೋಡಿ ರಾಮಕೃಷ್ಣರುಕೋಪಿಷ್ಠರಾಗಿ ಮುರಿದು ಹಾಕಿದಧನುಸ್ಸಿನ ಎರಡುತುಂಡುಗಳನ್ನೂ ಇಬ್ಬರೂ ಕೈಗೆತೆಗೆದುಕೊಂಡು ಅವರ ನೆಲ್ಲರಂಸಂಹರಿಸಿದನು ||೨೦|| ಕಂಸನಿಂದ ಕಳುಹಿಸಲ್ಪಟ್ಟ ಸೇನೆಯಂ ಸಹ ಸಂಹರಿಸಿದರು. ಅಧನುರ್ಯಾಗ ಶಾಲೆಯಿಂದ ಹೊರಕ್ಕೆಬಂದು ಪುರದ ಅಲಂಕಾರಂಗಳಂನೋಡುತ ಸಂಚರಿಸಿದರು ||೨೧|| ಪುರವಾಸಿಗಳಾದ ಜನರು ಅದ್ಭುತಪರಾಕ್ರಮಮಂ ತೇಜಸ್ಸಂ ಪ್ರೌಢತ್ವಮಂ ಸೌಂದರ್ಯಮಂಸಹ ಕೇಳಿ ದೇವಶ್ರೇಷ್ಠರನ್ನಾಗಿ ಆರಾಮ ಕೃಷ್ಣರಂ ತಿಳಿದರು ||೨೨|| ಈ ರೀತಿಯಲ್ಲಿ ರಾಮಕೃಷ್ಣರು ಸಂಚರಿಸುತಿರಲಾಗಿ ಸೂರ್ಯಾಸ್ತಮಾನವಾಯಿತು. ರಾಮಕೃಷ್ಣರು ಗೋಪರಿಂದ ಪರಿವೃತರಾಗಿ ಪುರದಿಂದ ಹೊರಕ್ಕೆಬಂದು ತಾವಿಳಿದಿರುವ ಸ್ಥಾನಕ್ಕೆಹೋದರು ||೨೩|| ವ್ರಜವಂ ಬಿಟ್ಟು ಶ್ರೀಕೃಷ್ಣನು ಬರುವಾಗ ಗೋಪಸ್ತ್ರೀಯರುಗಳು“ ಮಧುರಾಪುರದ ಜನರಿಗೆ ಪುಣ್ಯಾನುಕೂಲವಾಯ್ತು. ಅವರು ಕೃಷ್ಣದರ್ಶನವಂ ಮಾಡಿ ಧನ್ಯರಾಗುವರು. ನಾವು ಪುಣ್ಯಹೀನರು.„ ಎಂದು ಯಾವ ಮಾತುಗಳನಾಡಿಕೊಂಡರೋ, ಆಮಾತುಗಳು ಪುರವಾಸಿಗಳಾದ ಜನರಿಗೆ ಸತ್ಯಂಗಳಾದವು. ಮಹಾಲಕ್ಷ್ಮಿಯುಕೂಡ ಇತರರಾದ ಬ್ರಹ್ಮಾದಿಗಳಂಬಿಟ್ಟು ಯಾವಭಗವಂತನ ದೇಹಕಾಂತಿಶ್ರೀಯಂ ನೋಡಿ ಮೋಹಿಸಿದಳೋ, ಅಂತಾ ಶ್ರೀಕೃಷ್ಣನಂನೋಡುವವರಾಗಿ ಪುರವಾಸಿಗಳು ಆನಂದ ಭರಿತರಾದರು ||೨೪|| ರಾಮಕೃಷ್ಣರು ತಮ್ಮ ಸ್ಥಾನಕ್ಕೆಹೋಗಿ ಪಾದಪ್ರಕ್ಷಾಳನಂಗೆಯ್ದು ಕ್ಷೀರಾನ್ನವಂ ಭುಜಿಸಿ ಕಂಸನ ತಾತ್ಪರ್ಯವಂ ತಿಳಿದು ಆರಾತ್ರಿಯಲ್ಲಿ ಸುಖವಾಗಿ ಶಯನಂಗೆಯ್ದು

ಕೋಽಪಸೇಚನಮ್ । ಊಷತುಸ್ತಾಂಸುಖಂರಾತ್ರಿಂಜ್ಞಾತ್ವಾಕಂಸಚಿಕೀರ್ಷಿತಮ್॥೨೫॥ಕಂಸಸ್ತು ತದ್ಧನುರ್ಭಂಗಂರಕ್ಷಿಣಾಂಸ್ವಬಲಸ್ಯಚ।ವಧಂನಿಶಮ್ಯಗೋವಿಂದರಾಮವಿಕ್ರೀಡಿತಂಪರಮ್॥೨೬॥ ದೀರ್ಘಪ್ರಜಾಗರೋಭೀತೋದುರ್ನಿಮಿತ್ತಾನಿದುರ್ಮತಿಃ ।ಬಹೂನ್ಯಚಷ್ಟೋಭಯಧಾಮೃತ್ಯೋರ್ದೌತ್ಯಕರಾಣಿಚ ॥೨೭॥ ಆದರ್ಶನಂಸ್ವಶಿರಸಃಪ್ರತಿರೂಪೇಚಸತ್ಯಪಿ । ಅಸತ್ಯಪಿದ್ವಿತೀಯೇಚದ್ವೈರೂಪ್ಯಂಜ್ಯೋತಿಷಾಂತಥಾ॥೨೮॥ ಛಿದ್ರಪ್ರತೀತಿಶ್ಛಾಯಾಯಾಂಪ್ರಾಣಘೋಷಾನುಪಶ್ರುತಿಃ।ಸ್ವರ್ಣಪ್ರತೀತಿರ್ವೃಕ್ಷೇಷುಸ್ವಪದಾನಾಮದರ್ಶನಮ್ ॥೨೯॥ಸ್ವಪ್ನೇಪ್ರೇತಪರಿಷ್ವಂಗಃಖರಯಾನಂಬಿಸಾದನಮ್ ।ಯಾಯಾನ್ನಲದಮಾಲ್ಯೇಕಸ್ತೈಲಾಭ್ಯಕ್ತೋದಿಗಂಬರಃ॥೩೦॥ಅನ್ಯಾನಿಚೇತ್ಥಂಭೂತಾನಿಸ್ವ

---

ಸುಖಂ-ಸುಖವಾಗಿ, ಊಷತುಃ-ತಂಗಿದ್ದರು॥೨೫॥ಕಂಸಸ್ತು-ಕಂಸನಾದರೋ, ತದ್ಧನುರ್ಭಂಗಂ-ಆಬಿಲ್ಲಂಮುರಿದವ್ಧನ್ನೂ, ರಕ್ಷಿಣಾಂ-ಕಾವಲುಗಾರರ, ಚ-ಮತ್ತು, ಸ್ವಬಲಸ್ಯ-ತನ್ನದಂಡಿನ, ವಧಂ-ನಾಶವನ್ನೂ, ಎಂಬ, ಪರಂ-ಉತ್ಕೃಷ್ಟವಾದ, ಗೋವಿಂದರಾಮವಿಕ್ರೀಡಿತಂ-ಕೃಷ್ಣರಾಮರ ವಿಲಾಸವನ್ನು, ನಿಶಮ್ಯ-ಕೇಳಿ, ॥೨೬॥ಭೀತಃ-ಹೆದರಿದವನಾದ್ದರಿಂದಲೇ, ದೀರ್ಘಪ್ರಜಾಗರಃ-ಬಹಳಹೊತ್ತು ನಿದ್ರೆಹಿಡಿಯದ ಜಾಗರಾವಸ್ಥೆಯುಳ್ಳವನಾಗಿ, ದುರ್ಮತಿಃ-ದುಷ್ಟಬುದ್ಧಿಯುಳ್ಳವ ನಾದ್ದರಿಂದಲೇ, ಉಭಯಧಾಚ-ಸ್ವಪ್ನಜಾಗರಗಳೆಂಬ ಎರಡುಬಗೆಯಾಗಿಯೂ, ಮೃತ್ಯೋಃ-ಯಮನಿಗೆ,ದೌತ್ಯಕರಾಣಿ-ದೂತಕೃತ್ಯವಂ ಮಾಡುತಲಿರುವ, ಬಹೂನಿ-ಹಲವಾದ, ದುರ್ನಿಮಿತ್ತಾನಿ-ದುಸ್ಸ್ವಪ್ನಾದಿದುಶ್ಶಕುನಗಳನ್ನು, ಅಚಷ್ಟ-ಕಂಡನು ॥೨೭॥ಪ್ರತಿರೂಪೇ-ಪಡಿನೆಳಲು, ಸತ್ಯಪಿ-ಇರುವಲ್ಲಿಯೂ, ಸ್ವಶಿರಸಃ-ತನ್ನ ತಲೆಯನ್ನು, ಅದರ್ಶನಂ-ಕಾಣದಿರುವಿಕೆಯೂ, ದ್ವಿತೀಯೇ-ಎರಡನೆಯ, ಅಸತ್ಯಪಿ-ಇಲ್ಲದಿದ್ದರೂ,ಜ್ಯೋತಿಷಾಂ-ಸೂರ್ಯ ಚಂದ್ರಾದಿಬೆಳಕುಗಳ, ದ್ವೈರೂಪ್ಯಂಚ-ಎರಡುರೂಪಗಳಾಗಿರುವಿಕೆಯೂ, ತಥಾ-ಹಾಗೆ ॥೨೮॥ಛಾಯಾಯಾಂ-ನೆಳಲಿನಲ್ಲಿ, ಛಿದ್ರಪ್ರತೀತಿಃ-ತೂತುಗಳು ತೋರುವಿಕೆಯೂ, ಪ್ರಾಣಘೋಷಾನುಪಶ್ರುತಿಃ-ಪ್ರಾಣದಶಬ್ದವು ಕೇಳಲ್ಪಡದೇ ಹೋಗುವಿಕೆಯೂ,(ಕಿವಿಗಳಂಮುಚ್ಚಿಕೊಂಡರೆ ತಿಳಿಯಲ್ಪಡತಕ್ಕುದು,)ವೃಕ್ಷೇಷು-ಗಿಡಗಳಲ್ಲಿ, ಸ್ವರ್ಣಪ್ರತೀತಿಃ-ಭಂಗಾರವಾಗಿರುವಂತೆ ತೋರುವಿಕೆಯೂ॥೨೯॥ಸ್ವಪ್ನೇ-ಕನಸಿನಲ್ಲಿ, ಪ್ರೇತಪರಿಷ್ವಂಗಃ-ಹೆಣವನ್ನು ಅಪ್ಪಿಕೊಳ್ಳುವಿಕೆಯೂ, ಖರಯಾನಂ-ಕತ್ತೆಯನ್ನೇರಿ ಪಯಣಗೊಳ್ಳುವಿಕೆಯೂ,ಬಿಸಾದನಂ-ತಾವರೆಯ ದಂಟಂತಿನ್ನುವಿಕೆಯೂ, ನಲದಮಾಲೀ-ಕೆಂಪುದಾಸಿವಾಳದ ಹುವ್ವಿನಹಾರವುಳ್ಳವನಾಗಿಯೂ, ತೈಲಾಭ್ಯಕ್ತಃ-ಎಣ್ಣೆಯಿಂಬಳಿಯಲ್ಪಟ್ಟವನಾಗಿಯೂ, ದಿಗಂಬರಃ-ದಿಕ್ಕುಗಳೇ ವಸ್ತ್ರವಾಗಿವುಳ್ಳವನು, (ಬೆತ್ತಲೆಗಾರ) ಆಗಿಯೂ, ಏಕಃ-ಒಬ್ಬನೇ, ಯಾಯಾತ್-ಹೋಗುವನುಎಂಬುವುದೂ, ॥೩೦॥ಇತ್ಥಂಭೂತಾನಿ-ಹೀಗೆಯೇಆದಂಥಾ, ಸ್ವಪ್ನಜಾಗರಿತಾನಿ-ಕನಸುಎಚ್ಚರುಆದಂಥಾ, ಅನ್ಯಾನಿ-ಇತ

---

ರು ॥೨೫॥ ಕಂಸನು ರಾಮಕೃಷ್ಣರಿಂದ ಮಾಡಲ್ಪಟ್ಟ ರಾಮಕೃಷ್ಣರ ಕೇವಲಕ್ರೀಡೆಯಂತಿಯ ದಾಗಿರುವ ಧನುರ್ಭಂಗವಂ ಕಾವಲುಗಾರರು ಕೊಲ್ಲಲ್ಪಟ್ಟುದಂ ತನ್ನಸೇನೆಯ ಸಂಹಾರವಂ ಸಹಕೇಳಿ ॥೨೬॥ ಮೃತ್ಯುವಿನ ದೂತಕೃತ್ಯವಂ ಮಾಡುವ ಅನೇಕ ದುಶ್ಶಕುನಂಗಳಂಕಂಡು ದುರ್ಬುದ್ಧಿಯುಳ್ಳಕಂಸನು ನಿದ್ರೆಯಂ ಬಿಟ್ಟು ಬಹಳ ಚಿಂತಾಕ್ರಾಂತನಾಗಿ ಭಯಂಬಟ್ಟನು ॥೨೭॥ (ಆಕಂಸನಿಗೆ ಜಾಗ್ರತ್ತಿನಲ್ಲಿಯೂ ಸ್ವಪ್ನದಲ್ಲಿಯೂಕೂಡ ದುಶ್ಶಕುನಂಗಳಾದವು. ಜಾಗ್ರತ್ತಿನಲ್ಲಿ ಏನಾಯ್ತೆಂದರೆ-) ಜಲಾದಿಗಳಲ್ಲಿ ತೋರುವ ತನ್ನ ಪ್ರತಿಬಿಂಬದಲ್ಲಿ ಶಿರಸ್ಸಂ ಕಾಣದೆ ಹೋಗುವಿಕೆಯು, ಸೂರ್ಯಚಂದ್ರರಂ ಎರಡೆರಡಾಗಿ ಕಾಣುವಿಕೆಯೂ ॥೨೮॥ ತನ್ನ ಪ್ರತಿಬಿಂಬದಲ್ಲಿ ರಂಧ್ರಂಗಳಂಕಾಣುವಿಕೆಯೂ, ಕಿವಿಮುಚ್ಚಿದರೆ ಕೇಳಲ್ಪಡುವಶಬ್ದವು ಕೇಳಲ್ಪಡದೆಹೋಗುವಿಕೆಯೂ, ವೃಕ್ಷಂಗಳು ಸುವರ್ಣದಂತೆ ಕಾಣಲ್ಪಡುವಿಕೆಯೂ, ಕೆಸರಿನಲ್ಲಿ ಧೂಳುಗಳಲ್ಲಿ ತನ್ನ ಹೆಜ್ಜೆಗಳು ಕಾಣಲ್ಪಡದಿರುವಿಕೆಯೂ, (ಇತ್ಯಾದಿಗಳು ಜಾಗ್ರತ್ತಿನಲ್ಲಿ ಆಗುವದುರ್ನಿಮಿತ್ತಂಗಳು) ॥೨೯॥ (ಸ್ವಪ್ನದಲ್ಲಿ ಆಗುವ ದುರ್ನಿಮಿತ್ತಂಗಳಾವುವೆಂದರೆ-) ಶವಂಗಳ ಆಲಿಂಗನವೂ, ಗರ್ದಭಾರೋಹಣವೂ, ವಿಷಭಕ್ಷಣವೂ ದಾಸಿವಾಳದ ಹೂವುಗಳದಂಡೆಯಂಧರಿಸಿಕೊಂಡು ಒಬ್ಬನೆ ಸಂಚಾರವಂಮಾಡುವಿಕೆಯೂ ॥೩೦॥ ಇತ್ಯಾದಿ ಸ್ವಪ್ನಜಾಗ್ರನ್ನಿಮಿತ್ತಂಗಳಾದ ದುಶ್ಶಕುನಂಗಳಂನೋಡಿ ಮರಣಭಯಗ್ರಸ್ತನಾಗಿ ಕಂಸನು ಚಿಂತೆಯಿಂದ

ಪ್ನಜಾಗರಿತಾನಿಚ । ಪಶ್ಯನ್ಮರಣಸಂತ್ರಸ್ತೋ ನಿದ್ರಾಂ ಲೇಭೇನಚಿಂತಯಾ ॥೩೧॥ ವ್ಯುಷ್ಟಾಯಾಂ ನಿಶಿಕೌರವ್ಯಸೂರ್ಯೇಚಾದ್ಭ್ಯಸ್ಸಮುತ್ಥಿತೇ । ಕಾರಯಾಮಾಸವೈಕಂಸೋಮಲ್ಲಕ್ರೀಡಾಮಹೋತ್ಸವಮ್॥೩೨॥ಆನರ್ಚುಃಪುರುಷಾರಂಗಂತೂರ್ಯಭೇರ್ಯಶ್ಚಜಘ್ನಿರೇ।ಮಂಚಾಶ್ಚಾಲಂಕೃತಾಸ್ಸ್ರಗ್ಭಿಃಪತಾಕಾಚೇಲತೋರಣೈಃ॥೩೩॥ತೇಷುಪೌರಾಜಾನಪದಾಬ್ರಹ್ಮಕ್ಷತ್ರಪುರೋಗಮಾಃ।ಯಥೋಪಜೋಷಂವಿವಿಶೂರಾಜಾನಶ್ಚಕೃತಾಸನಾಃ ॥೩೪। ಕಂಸಃಪರಿವೃತೋಮಾತ್ಯೈರಾಜಮಂಚಉಪಾವಿಶತ್ । ಮಂಡಲೇಶ್ವರಮಧ್ಯಸ್ಥೋಹೃದಯೇನವಿದೂಯತಾ ॥೩೫॥ ವಾದ್ಯಮಾನೇಷುತೂರ್ಯೇಷುಮಲ್ಲತಾಳೋತ್ತರೇ

---

ರಗಳನ್ನೂ, ಪಶ್ಯನ್-ನೋಡುತಲಿರುವನಾದ್ದರಿಂದಲೇ, ಮರಣಸಂತ್ರಸ್ತಃ-ಸಾವಿನದೆಸೆಯಿಂದ ಬಹಳಹೆದರಿದವನಾಗಿ, ಚಿಂತಯಾ-ಹಳಹಳಿಯಿಂದ, ನಿದ್ರಾಂ-ನಿದ್ರೆಯನ್ನು, ನಲೇಭೇ-ದೊರೆಯಲಿಲ್ಲವು॥೩೧॥ಹೇಕೌರವ್ಯ-ಎಲೈಕುರುವಂಶೋದ್ಧಾರಕನೇ!ನಿಶಿ-ಆರಾತ್ರಿಯು, ವ್ಯುಷ್ಟಾಯಾಂಸತ್ಯಾಂ-ಬೆಳಗಾದದ್ದಾಗುತಲೂ, ಸೂರ್ಯೇಚ-ಸೂರ್ಯನೂಕೂಡ, ಅದ್ಭ್ಯಃ-ಸಮುದ್ರೋದಕಂಗಳದೆಸೆಯಿಂದ, ಸಮುತ್ಥಿತೇ-ಚನ್ನಾಗಿ ಮೇಲಕ್ಕೆಬಂದವನಾಗುತ್ತಿರಲು, ಕಂಸಃ-ಭೋಜರಾಜನು, ವೈ-ಪ್ರಸಿದ್ಧವಾಗಿ, ಮಲ್ಲಕ್ರೀಡಾಮಹೋತ್ಸವಂ-ಜಟ್ಟಿಕಾಳಗದ ದೊಡ್ಡಹಬ್ಬವನ್ನು, ಕಾರಯಾಮಾಸ-ಮಾಡಿಸಿದನಂತೆ ॥೩೨॥ಪುರುಷಾಃ-ಆಳುಗಳು, ರಂಗಂ-ಕಾಳಗದ ಸ್ಥಳವನ್ನು, ಆನರ್ಚುಃ-ಪೂಜಿಸಿದರು. ತೂರ್ಯಭೇರ್ಯಶ್ಚ-ತಮಟೆಗಳೂ ಡೋಲುಗಳೂ, ಜಘ್ನಿರೇ-ಬಾರಿಸಲ್ಪಟ್ಟವು, ಮಂಚಾಶ್ಚ-ಮಂಚಿಕೆಗಳೂಕೂಡ, ಸ್ರಗ್ಭಿಃ-ಪುಷ್ಪಹಾರಗಳಿಂದಲೂ,ಪತಾಕಾ ಚೇಲತೋರಣೈಃ-ಪತಾಕಾ-ಹೊಲ್ಕಟ್ಟುಗಳ, ಮತ್ತುಸಣ್ಣಧ್ವಜಗಳ, ಚೇಲ-ವಸ್ತ್ರಗಳಿಂದಲೂ, ತೋರಣೈಃ-ಅಲಂಕಾರದ ಅಡ್ಡಪಟ್ಟಿಕೆಗಳಿಂದಲೂ, ಅಲಂಕೃತಾಃ-ಸಿಂಗರಿಸಲ್ಪಟ್ಟು ವಾದವು ॥೩೩॥ತೇಷು-ಆಮಂಚಗಳಲ್ಲಿ, ಪೌರಾಃ-ಪುರದಲ್ಲಿರುವವರು, ಜಾನಪದಾಃ-ನಾಡಿನಲ್ಲಿರುವರೂ, ಆವಬ್ರಹ್ಮಕ್ಷತ್ರಪುರೋಗಮಾಃ-ಬ್ರಾಹ್ಮಣರು ಕ್ಷತ್ರಿಯರುಮೊದಲಾದವರೂ, ಯಥೋಪಜೋಷಂ-ಹೇಗೆಸುಖವೋ ಹಾಗೆ, ವಿವಿಶುಃ-ಕುಳಿತರು. ರಾಜಾನಶ್ಚ-ದೊರೆಗಳೂಕೂಡ, ಕೃತಾಸನಾಃ-ಗದ್ದುಗೆಗಳಲ್ಲಿ ಕುಳಿತವರಾದರು, ॥೩೪॥ ಕಂಸಃ-ಕಂಸನು, ಅಮಾತ್ಯೈಃ-ಮಂತ್ರಿಗಳಿಂದ,ಪರಿವೃತಃ-ಸುತ್ತಲೂ ಬಳಸಲ್ಪಟ್ಟವನಾಗಿ, ವಿದೂಯತಾ-ವಿಶೇಷವಾಗಿದುಃಖಿಸುತಲಿರುವ, ಹೃದಯೇನ-ಮನಸ್ಸಿನೊಡನೆ, ಮಂಡಲೇಶ್ವರಮಧ್ಯಸ್ಥಃ-ಪಾಳೆಯಗಾರರ ನಡುವೆಯಿರುವನಾಗಿ, ರಾಜಮಂಚೇ-ದೊರೆಕುಳಿತು ಕೊಳ್ಳತಕ್ಕಮಂಚದಲ್ಲಿ, ಉಪಾವಿಶತ್-ಕುಳಿತನು॥೩೫॥ತೂರ್ಯೇಷು-ಚರ್ಮವಾದ್ಯಗಳು, ಮಲ್ಲತಾಳೋತ್ತರೇಷುಚ-ಜಟ್ಟಿಗರ ಚಪ್ಪಾಳೆಗಳಿಂದ ಹೆಚ್ಚಿದವೂಆಗಿ, ವಾದ್ಯಮಾನೇಷುಸತ್ಸು-ಬಾರಿಸಲ್ಪಡುತಿರಲಾಗಿ, ಸ್ವಲಂಕೃತಾಃ-ಚನ್ನಾಗಿಸಿಂಗರಿಸಲ್ಪಟ್ಟವರೂ, ದೃಪ್ತಾಃ-ಗರ್ವಿತರೂಆದ, ಮಲ್ಲಾಃ-ಜಟ್ಟಿಗರು, ಸೋಪಾಧ್ಯಾಯಾಃ-ತಮಗೆಕಲಿಸಿದವರಿಂ ಸಹಿತರಾಗಿ,

---

ನಿದ್ರೆಯಂಪಡಲಿಲ್ಲ ॥೩೧॥ ಆರಾತ್ರಿ ಯತಿಪ್ರಯಾಸದಿಂದ ಕಳೆದಮೇಲೆ ಸೂರ್ಯನು ಸಮುದ್ರದಿಂದ ಉದಿಸುತ್ತಿರಲಾಗಿ ಕಂಸನು ಜಟ್ಟಿಗಳ ಕಾಳಗಮೆಂಬ ಮಹೋತ್ಸವವಂ ಮಾಡಿಸಿದನು ॥೩೨॥ ಪುರುಷರುರಂಗವಂ ಪೂಜಿಸಿದರು. ಭೇರ್ಯಾದಿಗಳು ಬಾರಿಸಲ್ಪಟ್ಟವು. ಮಂಚಂಗಳು ಪುಷ್ಪಮಾಲೆಗಳಿಂದ ಅಲಂಕೃತಂಗಳಾದವು. ಮತ್ತು ಧ್ವಜಂಗಳಿಂದಲೂ ವಸ್ತ್ರಂಗಳಿಂದಲೂ ತೋರಣಂಗಳಿಂದಲೂ ಅಲಂಕೃತಂಗಳಾದವು ॥೩೩॥ಆಮಂಚಂಗಳಲ್ಲಿ ಪುರಜನರುದೇಶದಜನರುಬ್ರಹ್ಮಕ್ಷತ್ರಿಯರುಮೊದಲಾದವರೂ ಯಥಾಯೋಗ್ಯವಾಗಿ ಕುಳಿತರು. ಅರಸುಗಳು ಗದ್ದುಗೆಗಳಂ ಹಾಸಿಕೊಂಡುಕುಳಿತರು ॥೩೪॥ ಅರಸುಗಳಮಧ್ಯದಲ್ಲಿ ಕಂಸನ ಮಂತ್ರಿಗಳಿಂದ ಯುಕ್ತನಾಗಿ ಉತ್ತಮವಾದ ರಾಜಾಸನದಲ್ಲಿ ವ್ಯಥಿತವಾದಮನಸ್ಸಿನಿಂದ ಕುಳಿತನು ॥೩೫॥ ಜಟ್ಟಿಗರ ವಾದ್ಯಾಗಳಿಂದ ಮಿಶ್ರಂಗಳಾದ ವಾದ್ಯಾಗಳು ಬಾರಿಸಲ್ಪಡುತ್ತಲಿರಲಾಗಿ ಜಟ್ಟಿಗಳ ಅಲಂಕೃತ























ಕಂಸನರಾಜಾಸ್ಥಾನ

ಷುಚ॥ಮಲ್ಲಾಸ್ಸ್ವಲಂಕೃತಾದೃಪ್ತಾಸ್ಸೋಪಾಧ್ಯಾಯಾಸ್ಸಮಾವಿಶನ್॥೩೬॥ಚಾಣೂರೋಮುಷ್ಟಿ
ಕಃಕೂಟಶ್ಶಲಸ್ತೋಸಲಏವಚ।ತಆಸೆದುರುಪಸ್ಥಾನಂವಲ್ಗುವಾದ್ಯಪ್ರಹರ್ಷಿತಾಃ ॥೩೭॥ ನಂದಗೋ
ಪಾದಯೋಗೋಪಾಭೋಜರಾಜಸಮಾಹುತಾಃ । ನಿವೇದಿತೋಪಾಯನಾಸ್ತ ಏಕಸ್ಮಿನ್ಮಂಚಆವಿಶನ್ ॥೩೮॥
-※ಇತಿಶ್ರೀಮದ್ಭಾಗವತೇದಶಮಸ್ಕಂಧೆ-ದ್ವಿಚತ್ವಾರಿಂಶೋಧ್ಯಾಯಃ-



(ವಸ್ತ್ರಾದಿಗಳಿಂದಕೂಡಿ)ಸಮಾವಿಶನ್-ಬಂದುಹೊಕ್ಕರು॥೩೬॥ಚಾಣೂರಃ-ಚಾಣೂರನೆಂಬ ಮಲ್ಲಾಚಾರ್ಯನು, ಮುಷ್ಟಿಕಃ-ಮುಷ್ಟಿಕನೆಂಬವನಾದಿ, ಕೂಟಃ-ಕೂಟನೆಂಬವನು, ಶಲಃ-ಶಲನೆಂಬವನು, ತೋಸಲಏವಚ-ತೋಸಲನೆಂಬವನು, ಇತರರೂ ಕೂಡಯಾರೋ, ವಲ್ಗುವಾದ್ಯಪ್ರಹರ್ಷಿತಾಃ-ಮನೋಹರಗಳಾದ ವಾದ್ಯಗಳಿಂದ ಹೆಚ್ಚಾದಸಂತೋಷವುಳ್ಳವರಾಗಿ, ಉಪಸ್ಥಾನಂ-ಕಾಳಗದ ಬಳಿಯಲ್ಲಿ, ತೇ-ಅವರು, ಆಸೇದುಃ-ಸೇರಿಸಿಂತರು ॥೩೭॥ ಭೋಜರಾಜಸಮಾಹುತಾಃ-(ಸಮಾಹೂತಾಃ)ಕಂಸನಿಂದ ಕರೆಯಿಸಲ್ಪಟ್ಟವರು,ಯೇ-ಯಾರೋ, ತೇನಂದಗೋಪಾದಯಃ-ಆನಂದಗೋಪನು ಮೊದಲಾದ,ಗೋಪಾಃ-ಗೊಲ್ಲರು, ನಿವೇದಿತೋಪಾಯನಾಃ-ಅರ್ಪಿಸಲ್ಪಟ್ಟಕಾಣಿಕೆಗಳುಳ್ಳವರಾಗಿ,ಏಕಸ್ಮಿನ್‌ಮಂಚೇ-ಒಂದುಮಂಚಿಗೆಯಲ್ಲಿ,ಆವಿಶನ್-ಕುಳಿತರು ॥೩೮॥
ಇತಿಶ್ರೀಮದ್ಭಾಗವತೇ ದಶಮಸ್ಕಂಧೇ ದ್ವಿಚತ್ವಾರಿಂಶಾಧ್ಯಾಯಟೀಕಾ.



ರಾಗಿ ಆಚಾರ್ಯಸಮೇತರಾಗಿ ರಂಗಕ್ಕೆಬಂದರು ॥೩೬॥ ಚಾಣೂರನೂ, ಮುಷ್ಟಿಕನೂ, ಕೂಟನೂ, ಶಲನೂ, ತೋಸಲನೂ, ಇವರುಗಳು ಮನೋಹರಂಗಳಾದ ವಾದ್ಯಂಗಳಿಂಕೇಳಿ, ಸಂತೋಷಯುಕ್ತರಾಗಿ ಅರಂಗಸ್ಥಳಕ್ಕೆ ಬಂದವರಾದರು ॥೩೭॥ ಕಂಸನಿಂದ ಕರೆಯಿಸಲ್ಪಟ್ಟವರಾದ ಆನಂದಗೋಪನೇ ಮೊದಲಾದ ಗೋಪಾಲಿಕರು ಕಂಸನಿಗೆ ಕಾಣಿಕೆಗಳಂ ಒಪ್ಪಿಸಿ, ಒಂದುಮಂಚದಮೇಲೆ ಕುಳಿತವರಾದರು ॥೮॥

ಇಂತುಶ್ರೀಶುಕಮುನಿಯು ಪರೀಕ್ಷಿದ್ರಾಯನಂಕುರಿತು ನಿರೂಪಿಸಿದನೆಂದುಸೂತಪೌ
ರಾಣಿಕನು ನೈಮಿಶಾರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಪೇಳಿದ
ನೆಂಬಲ್ಲಿಗೆ- ಶ್ರೀಮನ್ಮಹೀಶೂರಪುರವರಾಧೀಶಶ್ರೀಚಾಮರಾಜತನುಜ
ಶ್ರೀಮತ್ಕೃಷ್ಣರಾಜ ವಿರಚಿತಮಾದ“ಶ್ರೀಕೃಷ್ಣರಾಜವಾಣೀ
ವಿಲಾಸ” ಮೆಂಬ ಶ್ರೀಭಾಗವತದ ಕರ್ಣಾಟಭಾಷಾ
ವ್ಯಾಖ್ಯಾನದೊಳು ದಶಮಸ್ಕಂಧದಲ್ಲಿದ್ವಿಚತ್ವಾ
ರಿಂಶಾಧ್ಯಾಯಂ ಸಂಪೂರ್ಣಮಾದುದು
ಮಂಗಳಮಸ್ತು



ಕುವಲಯಾಪೀಡಾಖ್ಯಗಜತತ್ಸಾದಿವಧಕಥಾಪ್ರಾರಂಭಘಟ್ಟಃ-

ಅಥರಾಮಶ್ಚಕೃಷ್ಣಶ್ಚಕೃತಶೌಚೌಪರಂತಪ ।ಮಲ್ಲದುಂದುಭಿನಿರ್ಘೋಷಂಶ್ರುತ್ವಾದ್ರಷ್ಟುಮು
ಪೇಯತುಃ ॥೧॥ ರಂಗದ್ವಾರಮುಪಾಸಾದ್ಯತಸ್ಮಿನ್ನಾಗಮವಸ್ಥಿತಮ್ । ಪಶ್ಯನ್ಕುವಲಯಾಪೀಡಂ
ಕೃಷ್ಣೋಂಬಷ್ಠಪ್ರಚೋದಿತಮ್ ॥೨॥ ಬದ್ಧ್ವಾಪರಿಕರಂಶೌರಿಸ್ಸಮುಹ್ಯಕುಟಿಲಾಲಕಾನ್ ।
ಉವಾಚಹಸ್ತಿಪಂವಾಚಾಮೇಘನಾದಗಭೀರಯಾ ॥೩॥ ಅಂಬಷ್ಠಾಂಬಷ್ಠಮಾರ್ಗಂನೋದೇಹ್ಯಪಕ್ರಾ

---

೪೩ನೆಯ ಅಧ್ಯಾಯದ ಪ್ರತಿಪದಟೀಕೆ.

* ಪರಂತಪತ-ಹಗೆಗಳಂ ಬೇಯಿಸಲುಳ್ಳ ಪರಾಕ್ರಮಶಾಲಿಯಾದ ಪರೀಕ್ಷಿತ್ತುವೇ! ಅಥ-ಆಮೇಲೆ, ರಾಮಶ್ಚಕೃಷ್ಣಶ್ಚ-ಬಲನೂ ಕೇಶವನೂ, ಕೃತಶೌಚೌಸಂತೌ-ಮಾಡಿಕೊಳ್ಳಲ್ಪಟ್ಟ ಶೌಚಾಚಾರವುಳ್ಳವರಾಗಿ, ಮಲ್ಲದುಂದುಭಿನಿರ್ಘೋಷಂ-ಜಟ್ಟಿಗರಭೇರೀವಾದ್ಯಗಳ ದೊಡ್ಡನಪ್ಪುಳನ್ನು, ಶ್ರುತ್ವಾ-ಕೇಳಿ, ದ್ರಷ್ಟುಂ-ನೋಡುವುದಕ್ಕೆ, ಉಪೇಯತುಃ-ಆಬಳಿಗೆಬಂಡವರಾದರು ॥೧॥ರಂಗದ್ವಾರಂ-ಮಲ್ಲರಂಗವಂಟಪದಬಾಗಿಲನ್ನು, ಉಪಾಸಾದ್ಯ-ಹತ್ತಿರದಲ್ಲಿಸೇರಿ, ತಸ್ಮಿನ್-ಆಬಾಗಿಲಿನಲ್ಲಿ, ಅವಸ್ಥಿತಂ-ನಿಂತಿರುವಂಥಾ, ಅಂಬಷ್ಠಪ್ರಚೋದಿತಂ-ಅಂಬಷ್ಠವಾವಟಿಗನಿಂದ, ತನ್ನಮೇಲೆ ನಡೆಯಿಸಲ್ಪಡುತ್ತಿರುವ, ಕುವಲಯಾಪೀಡಂ-ಕುವಲಯಾ ಪೀಡವೆಂಬ(ಭೂಮಂಡಲಕ್ಕೆಭೂಷಣವು)ಗಜಂ-ಆನೆಯನ್ನು, ಕೃಷ್ಣಃ-ಕೃಷ್ಣನು, ಪಶ್ಯನ್-ನೋಡುತ್ತಿರುವನಾಗಿ ॥೨॥ಶೌರಿಃ-ಕೃಷ್ಣನು, ಪರಿಕರಂ-ದಟ್ಟಿಯನ್ನು, ಬಧ್ವಾ-ಬಿಗಿದುಕೊಂಡು, ಕುಟಿಲಾಲಕಾನ್-ಕೊಂಕಿದ ಕುರುಳ್ಗಳನ್ನು, ಸಮುಹ್ಯ-ಸೇರಿಸಿಕಟ್ಟಿಕೊಂಡು, ಮೇಘನಾದಗಭೀರಯಾ-ಗುಡುಗಿನಂತೆ ಗಂಭೀರವಾದ, ವಾಚಾ-ವಚನದಿಂದ, ಹಸ್ತಿಪಂ-ವಾವಟಿಗನಂಕುರಿತು, ಉವಾಚ-ಹೇಳಿದನು॥೩॥ಅಂಬಷ್ಠಾಂಬಷ್ಠ-ಅಂಬಷ್ಠನೇಅಂಬಷ್ಠನೇ! ನಃ-ನಮಗೆ, ಮಾರ್ಗಂ-ದಾರಿಯನ್ನು, ದೇಹಿ-ಕುಡು, ಮಾಚಿರಂ-ಬೇಗನೆ, ಅಪಕ್ರಾಮ-ತೊಲಗಿಹೋಗು, ನೋಚೇತ್-ಇಲ್ಲದಿದ್ದರೆ, ಸಕುಂಜರಂ-ಆ

---

*೪೩ನೆಯಅಧ್ಯಾಯವು.*

ಶ್ರೀಧರೀಯಶ್ಲೋಕಃ॥ ತ್ರಿಚತ್ವಾರಿಂಶಕೇಹತ್ವಾಗಜೇಂದ್ರಂ ರಾಮಕೃಷ್ಣಯೋಃ। ರಂಗಪ್ರವೇಶಸೌಭಾಗ್ಯಂ ಚಾಣೂರೇಣಾನುಭಾಷಣಮ್ ॥*॥ ನಾಲ್ವತ್ತಮೂರನೆಯಅಧ್ಯಾಯದಲ್ಲಿ ಶ್ರೀಕೃಷ್ಣನು ಕುವಲಯಾಪೀಡವೆಂಬ ಗಜವಂಸಂಹರಿಸಿದನು. ಅನಂತರಲ್ಲಿ ರಾಮಕೃಷ್ಣರೀರ್ವರೂ ರಂಗಸ್ಥಾನವಂಪ್ರವೇಶಿಸಿದರು. ಅನಂತರಲ್ಲಿ ಶ್ರೀಕೃಷ್ಣನು ಚಾಣೂರನೆಂಬ ಜಟ್ಟಿಯೊಡನೆ ಸಂಭಾಷಣವಂಮಾಡಿದನು. ಎಂಬರ್ಥವಂ ಶ್ರೀಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸುವವಿವರವೆಂತೆನೆ-

ಎಲೈ, ಅರಸೇ! ಆಮೇಲೆ ಆ ರಾಮಕೃಷ್ಣರು ಪರಿಶುದ್ಧರಾಗಿ ಜಟ್ಟಿಗಳ ದುಂದುಭಿವಾದ್ಯಧ್ವನಿಯಂ ಕೇಳಿ ನೋಡಲೋಸುಗ ಬಂದರು. ॥೧॥ ಶ್ರೀಕೃಷ್ಣನು ರಂಗದ ಬಾಕಲಿಗೆ ಬಂದು ಮಾವತ್ತನಿಂದಪ್ರೇರಿತವಾಗಿ ರಂಗದ್ವಾರದಲ್ಲಿ ನಿಂತಿರುವ ಕುವಲಯಾಪೀಡವೆಂಬ ಗಜವಂನೋಡಿ ॥೨॥ ಆಕೃಷ್ಣನು ನಡುಕಟ್ಟಂಬಿಗಿಯಾಗಿ ಕಟ್ಟಿಕೊಂಡು ಕೇಶಂಗಳಂಸೇರಿಸಿಕಟ್ಟಿ, ಮಾವುತನಂ ಕುರಿತು ಮೇಘಧ್ವನಿಯಂತೆ ಗಂಭೀರವಾದವಾಕ್ಕಿನಿಂದ ನುಡಿದನು॥೩॥ಎಲೈಮಾವುತನೆ! ಮಾವುತನೇ! ನಮಗೆಮಾರ್ಗವಂಬಿಡು, ಹೊರಚಾಗಿಹೋಗು, ಇಲ್ಲದಿದ್ದರೆ ನಿನ್ನಂ ನಿನ್ನ ಗಜವಂ ಸಹ ಯಮಲೋಕಕ್ಕೆ ಕಳುಹಿಸುವೆ





ಬಲರಾಮಕೃಷ್ಣರು ರಂಗಪ್ರವೇಶ

ಮಮಾಚಿರಮ್ । ನೋ ಚೇತ್ಸಕುಂಜರಂ ತ್ವಾದ್ಯ ನಯಾಮಿ ಯಮಸಾದನಮ್ ॥೪॥ ಏವಂ ನಿರ್ಭರ್ತ್ಸಿತೋಂಬಷ್ಠಃ ಕುಪಿತಃ ಕೋಪಯನ್ ಗಜಮ್ । ಚೋದಯಾಮಾಸ ಕೃಷ್ಣಾಯ ಕಾಲಾಂತಕಯಮೋಪಮಮ್ ॥೫॥ ಕರೀಂದ್ರಸ್ತಮಭಿದ್ರುತ್ಯ ಕರೇಣ ತರಸಾಗ್ರಹೀತ್ । ಕರಾದ್ವಿಗಳಿತಸ್ಸೋಮುಂ ನಿಹತ್ಯಾಂಘ್ರಿಷ್ವಲೀಯತ ॥೬॥ ಸಂಕ್ರುದ್ಧಸ್ತಮಚಕ್ಷಾಣೋ ಘ್ರಾಣದೃಷ್ಟಿಸ್ಸ ಕೇಶವಮ್ । ಪರಾಮೃಶತ್ಪುಷ್ಕರೇಣ ಸ ಪ್ರಸಹ್ಯ ವಿನಿರ್ಗತಃ ॥೭॥ ಪುಚ್ಛೇ ಪ್ರಗೃಹ್ಯಾತಿಬಲಂ ಧನುಷಃ ಪಂಚವಿಂಶತಿಮ್ । ವಿಚಕರ್ಷ ಯಥಾ ನಾಗಂ ಸುಪರ್ಣ ಇವ ಲೀಲಯಾ ॥೮॥ ಸ ಪರ್ಯಾವರ್ತಮಾನೇನ ಸವ್ಯದಕ್ಷಿಣ

---

ನೆಯೊಡನೆ ಸಹಿತನಾದ, ತ್ವಾ-ನಿನ್ನನ್ನು, ಅದ್ಯ-ಈಗ, ಯಮಸಾದನಂ-ಯಮನಮನೆಯನ್ನು, ನಯಾಮಿ-ಹೊಂದಿಸುವೆನು ॥೪॥ ಏವಂ-ಹೀಗೆ, ನಿರ್ಭರ್ತ್ಸಿತಃ-ಗದರಿಸಿಹೆದರಿಸಲ್ಪಟ್ಟವನಾದ, ಅಂಬಷ್ಠಃ-ಅಂಬಷ್ಠನೆಂಬಮಾವಟಿಗನು, ಕುಪಿತಃ-ಸಿಟ್ಟುಗೊಂಡವನಾಗಿ, ಕಾಲಾಂತಕಯಮೋಪಮಂ- ಕಾಲಃ-ಮೃತ್ಯುನಿಮಿತ್ತವು, ಅಂತಕ-ಮೃತ್ಯು, ಯಮಃ-ಅದಕ್ಕೆನಿಯಾಮಕನೂ, ಉಪಮಂ-ಹೋಲಿಕೆಯಾಗಿವುಳ್ಳ, ಗಜಂ-ಆನೆಯನ್ನು, ಕೋಪಯನ್-ಸಿಟ್ಟುಂಕೆರಳಿಸುವನಾಗಿ, ಕೃಷ್ಣಾಯ-ಕೃಷ್ಣನಿಗೋಸುಗ, ಚೋದಯಾಮಾಸ-ಪ್ರೇರಿಸಿನಡಯಿಸಿದನು ॥೫॥ ಕರೀಂದ್ರಃ-ಆಗಜಶ್ರೇಷ್ಠವು, ತಂ-ಆಕೃಷ್ಣನನ್ನು, ಅಭಿದ್ರುತ್ಯ-ಅಟ್ಟಿಕೊಂಡುಬಂದು, ಕರೇಣ-ಸೊಂಡಿಲಿನಿಂದ, ತರಸಾ-ಬೇಗನೆ, ಅಗ್ರಹೀತ್-ಹಿಡಿದುದು ಸಃ-ಆಕೃಷ್ಣನು, ಕರಾತ್-ಸೊಂಡಿಲಿನದೆಸೆಯಿಂದ, ವಿಗಳಿತಃ-ಜಾರಿತಪ್ಪಿಸಿಕೊಂಡವನಾಗಿ, ಅಮುಂ-ಈಆನೆಯನ್ನು, ನಿಹತ್ಯ-ಹೊಡೆದು, ಅಂಘ್ರಿಷು-ಕಾಲುಗಳಲ್ಲಿ, ಅಲೀಯತ ಅಡಗಿಕೊಂಡನು ॥೬॥ ಸಂಕ್ರುದ್ಧಃ-ಬಹಳಸಿಟ್ಟುಗೊಂಡ, ಘ್ರಾಣದೃಷ್ಟಿಃ-ಮೂಸಿನೋಡುವುದಾದ, ಸಃ-ಆಯಾನೆಯು, ಕೇಶವಂ-ಕೃಷ್ಣನನ್ನು, ಅಚಕ್ಷಾಣಃ-ಕಾಣದೇಯಿರುವುದಾಗಿ, ಪುಷ್ಕರೇಣ-ಸೊಂಡಿಲಕೊನೆಯಿಂದ, ಪರಾಮೃಶತ್-ತಡಕಿಹಿಡಿದುದು ಸಃ-ಆಕೃಷ್ಣನು, ಪ್ರಸಹ್ಯ-ಬಲಾತ್ಕರಿಸಿ, ವಿನಿರ್ಗತಃ-ಹೊರಗೆಬಂದವನಾದನು ॥೭॥ ಅತಿಬಲಃ-ಹೆಚ್ಚುಬಲವುಳ್ಳವನಾದ ಕೃಷ್ಣನು, ಪುಚ್ಛೇ-ಅದರಬಾಲದಲ್ಲಿ, ಪ್ರಗೃಹ್ಯ-ಗಟ್ಟಿಯಾಗಿಹಿಡಿದು, ಸುಪರ್ಣಃ-ನಾಗಂಯಥಾ-ಗರುಡನು ಸರ್ಪವನ್ನುಹೇಗೋ, ತಥೇವ-ಹಾಗೆಯೆಂಬಂತೆ, ಲೀಲಯಾ-ಆಟದಿಂದ, ಧನುಷಃ-ಮಾರಿನ, ಪಂಚವಿಂಶತಿಂ-ಇಪ್ಪತ್ತೈದುದೂರದಲ್ಲಿ, ವಿಚಕರ್ಷ-ಹಿಂದಕ್ಕೆಳೆದನು ॥೮॥ ಸವ್ಯದಕ್ಷಿಣತಃ-ಎಡಕ್ಕೂ ಬಲಕ್ಕೂ, ಪರ್ಯಾವರ್ತಮಾನೇನ-ತಿರುಗಿಕೊಳ್ಳುತಲಿರುವ, ಆನೆಯೊಡನೆ, ಸಃ-ಆ, ಅಚ್ಯುತಃ-ಕೃಷ್ಣನು, ಭ್ರಾಮ್ಯಮಾಣೇನ-ತಿರುಗಿಸಲ್ಪಡುತಲಿರುವ, ಗೋವತ್ಸೇನ-ಆಕಳಕರುವಿನೊಡನೆ,

---

ನೆಂದು ಶ್ರೀಕೃಷ್ಣನಿಂದ ॥೪॥ ಹೇಳಲ್ಪಟ್ಟವನಾಗಿ ಮಾವುತನು ಕೋಪಮುಳ್ಳವನಾಗಿ ಕುಪಿತಮಾದ ಕಾಲಾಂತಕಯಮಸಮಾನವಾದ ಆಗಜಮಂ ಕೃಷ್ಣನಮೇಲೆ ಪ್ರೇರಿಸಿದನು ॥೫॥ ಆಗಜವು ಶ್ರೀಕೃಷ್ಣನಂ ಸೊಂಡಿಲಿನಿಂದ ಬೇಗನೆಹಿಡಿದುದು. ಕೃಷ್ಣನೂ ಅದರಂ ಲಾಘವದಿಂ ತಪ್ಪಿಸಿಕೊಂಡು ಮುಷ್ಟಿಯಿಂದ ಪ್ರಹರಿಸಿ ಅದರಕಾಲುಗಳನಡುವೆ ಅವಿತುಕೊಂಡನು ॥೬॥ ವಾಸನೆಯೇ ಕಂಣಾಗಿವುಳ್ಳ ಆಯಾನೆಯು ಸಿಟ್ಟಿನಿಂದ ಅಲ್ಲಲ್ಲಿ ಸೊಂಡಿಲಿನಿಂದಮುಟ್ಟಿನೋಡಿ ಕೃಷ್ಣನಂ ಕಾಣದಕಡೆಗೆ ಮರಳಿಕೃಷ್ಣನಂಹಿಡಿಯಿತು. ಪುನಶ್ಚ ಕೃಷ್ಣನು ತಪ್ಪಿಸಿಕೊಂಡು ಹೊರಟುಬಂದನು ॥೭॥ ಆಮೇಲೆ ಕೃಷ್ಣನು ಮಹಾಬಲಶಾಲಿಯಾದಆಗಜವ ಬಾಲದಲ್ಲಿಹಿಡಿದು ಇಪ್ಪತ್ತೈದುಮಾರು ಗರುಡನು ಸರ್ಪವಂ ಎಳೆದಂತೆ ಎಳೆದನು ॥೮॥ ಪುಚ್ಛವಂಹಿಡಿದಿರುವ ಕೃಷ್ಣನಂಗ್ರಹಿಸಲೋಸುಗಆನೆಯು ಸವ್ಯವಾಗಿತಿರುಗಿದರೆ ತಾನುದಕ್ಷಿಣವಾಗಿಬರುವುದು, ಅತ್ತಲಾಗಿ ಗಜತಿರುಗಿದರೆ ತಾನೀಕಡೆಗೆ ಬರುವುದು ಈರೀತಿಯಲ್ಲಿ ಗಜವಂ ತಿರುಗಿಸುತ್ತ ಬಾಲಕರುಎಳೆಕರುಗಳಂ ಆಡಿಸಿದ ರೀತಿಯಲ್ಲಿ ಆಡಿಸುತ್ತ ತಿರುಗಿದನು ॥೯॥ ಆಮೇಲೆ ಶ್ರೀಕೃಷ್ಣ


ಗಜಕೃಷ್ಣರಕಾಳಗ

ತೋಚ್ಯುತಃ । ಬಭ್ರಾಮಭ್ರಾಮ್ಯಮಾಣೇನಗೋವತ್ಸೇನೇವಬಾಲಕಃ ॥೯॥ ತತೋಭಿಮುಖಮಭ್ಯೇತ್ಯಪಾಣಿನಾಹತ್ಯವಾರಣಮ್ । ಪ್ರಾದ್ರವನ್ಪಾತಯಾಮಾಸಸ್ಪೃಶ್ಯಮಾನಃಪದೇಪದೇ ॥೧೦॥ ಸಧಾವನ್ಕ್ರೀಡಯಾಭೂಮೌಪತಿತಸ್ಸಹಸೋತ್ಥಿತಃ । ತಂಮತ್ವಾಪತಿತಂಕ್ರುದ್ಧೋದಂತಾಭ್ಯಾಂವ್ಯಹನತ್ಕ್ಷಿತಿಮ್ ॥೧೧॥ ಸ್ವವಿಕ್ರಮೇಪ್ರತಿಹತೇಕುಂಜರೇಂದ್ರೋತ್ಯಮರ್ಷಿತಃ । ಚೋದ್ಯಮಾನೋಮಹಾಮಾತ್ರೈಃಕೃಷ್ಣಮಭ್ಯದ್ರವದ್ರುಷಾ ॥೧೨॥ ತಮಾಪತಂತಮಾಸಾದ್ಯಭಗವಾನ್ಮಧುಸೂದನಃ । ನಿಗೃಹ್ಯಪಾಣಿನಾಹಸ್ತಂಪಾತಯಾಮಾಸಭೂತಲೆ ॥೧೩॥ ಪತಿತಂತಂಪದಾಕ್ರಮ್ಯಮೃಗೇಂದ್ರಇವಲೀ

---

ಬಾಲಕಃಇವ-ಹುಡುಗನಹಾಗೆ, ಬಭ್ರಾಮ-ಬಳಸಿತಿರುಗಿದನು ॥೯॥ ತತಃ-ಆಮೇಲೆ, ಅಭಿಮುಖಂ-ಇದಿರಾಗಿ, ಅಭ್ಯೇತ್ಯ-ಬಂದು, ವಾರಣಂ-ಆನೆಯನ್ನು, ಪಾಣಿನಾ-ಕೈಯಿಂದ, ಆಹತ್ಯ-ಹೊಡದು, ಪ್ರಾದ್ರವನ್-ಓಡಿಹೋಗುತಲಿರುವನಾಗಿ, ಪದೇಪದೇ-ಹೆಜ್ಜೆಹೆಜ್ಜೆಯಲ್ಲಿಯೂ, ಸ್ಪೃಶ್ಯಮಾನಃ-ಸೋಂಕಲ್ಪಡುತಿರುವನಾಗಿ, ಪಾತಯಾಮಾಸ-ಬೀಳಕೆಡವಿದನು॥೧೦॥ ಸಃ-ಆಯಾನೆಯು, ಧಾವನ್-ಓಡುತಲಿರುವುದಾಗಿ, ಕ್ರೀಡಯಾ-ಸೋವಿನಿಂದ, ಭೂಮೌ-ನೆಲದಲ್ಲಿ, ಪತಿತಃ-ಬಿದ್ದದ್ದಾಗಿ, ಸಹಸಾ-ಬೇಗನೆ, ಉತ್ಥಿತಃ-ಎದ್ದದ್ದಾಗಿ,ತಂ-ಆಕೃಷ್ಣನನ್ನು, ಪತಿತಂ-ಬಿದ್ದವನನ್ನಾಗಿ, ಮತ್ವಾ-ತಿಳಕೊಂಡು, ಕ್ರುದ್ಧಃ-ಸಿಟ್ಟುಗೊಂಡುದಾಗಿ, ದಂತಾಭ್ಯಾಂ-ಕೊಂಬುಗಳಿಂದ, ಕ್ಷಿತಿಂ-ನೆಲವನ್ನು, ವ್ಯಹನತ್-ಗುಮ್ಮಿತು ॥೧೧॥ ಸ್ವವಿಕ್ರಮೇ-ತನ್ನಸಾಮರ್ಥ್ಯವು, ಪ್ರತಿಹತೇಸತಿ-ಭಗ್ನವಾದದ್ದಾಗುತಲೂ, ಅತ್ಯಮರ್ಷಿತಃ-ಬಹಳಸಿಟ್ಟುಂಟಾದ,ಕುಂಜರೇಂದ್ರಃ-ಗಜಶ್ರೇಷ್ಠವು,ಮಹಾಮಾತ್ರೈಃ-ದೊಡ್ಡಮಾವಟಿಗರಿಂದ, ಚೋದ್ಯಮಾನಃ-ಪ್ರೇರಿಸಲ್ಪಡುತಿರುವುದಾಗಿ, ರುಷಾ-ಸಿಟ್ಟಿನಿಂದ. ಕೃಷ್ಣಂ-ಕೃಷ್ಣನನ್ನು, ಅಭ್ಯದ್ರವತ್-ಸರ್ವತ್ರಅಟ್ಟಿಕೊಂಡುಹೋಯಿತು ॥೧೨॥ ಮಧುಸೂದನಃ-ಮಧುವೆಂಬ ರಕ್ಕಸನಂ ಕೊಂದವನಾದ, ಭಗವಾನ್-ಪರಮೇಶ್ವರನಾದ ಕೃಷ್ಣನು, ಆಪತಂತಂ-ಮೇಲೆಬೀಳಬರುತಲಿರುವ, ತಂ-ಆಯಾನೆಯನ್ನು, ಆಸಾದ್ಯ-ಹತ್ತಿರಕ್ಕೆಸೇರಿ,ಪಾಣಿನಾ-ತನ್ನಕೈಯಿಂದ, ಹಸ್ತಂ-ಅದರಸುಂಡಿಲನ್ನು, ನಿಗೃಹ್ಯ-ವತ್ತಿಹಿಡಿದು, ಭೂತಲೇ, ನೆಲದಲ್ಲಿ, ಪಾತಯಾಮಾಸ-ಬೀಳಕೆಡಪಿದನು ॥೧೩॥ ಪತಿತಂ-ಬಿದ್ದಿರುವ, ತಂ-ಆಯಾನೆಯನ್ನು, ಹರಿಃ-ಕೃಷ್ಣನು, ಮೃಗೇಂದ್ರಇವ-ಸಿಂಹದಹಾಗೆ, ಪದಾ-ಕಾಲಿನಿಂದ, ಆಕ್ರಮ್ಯ-ತುಳಿದುಕೊಂಡು, ಲೀಲಯಾ-ವಿಲಾಸದಿಂದ, ದಂತಂ-ಹಲ್ಲನ್ನು, ಉತ್ಪಾಟ್ಯ-ಕಿತ್ತು, ತೇನ-ಅದರಿಂದ, ಇಭಂ-ಆನೆಯನ್ನು, ಹ

---

ನು ಇದಿರಾಗಿಬಂದುಮುಷ್ಟಿಯಿಂದ ಗಜವಂಪ್ರಹರಿಸಿಓಡಿಸುವನಾಗಿಅದರಕಾಲಿಗೆ ತೊಡರುಹಾಕಿ ಆಗಜವಂಕೆಡಹಿದನು॥೧೦॥ಆಕೃಷ್ಣನು ಭೂಮಿಯಲ್ಲಿವಿಲಾಸದಿಂದಓಡುವವನಾಗಿಬಿದ್ದುಬೇಗನೆಯೆದ್ದನು.ಆಗಜವುಬಹಳಸಿಟ್ಟಿನಿಂದ ಶ್ರೀಕೃಷ್ಣನು ಕೆಳಗೆಬಿದ್ದಿರುವನೆಂದು ಕೊಂಬುಗಳಿಂದ ಭೂಮಿಯಂತಿವಿಯಿತು॥೧೧॥ಕೃಷ್ಣನು ತಪ್ಪಿಸಿಕೊಂಡು ಮುಂಚೆಯೇ ಎದ್ದುಹೋಗಿರುವನಾದಕಾರಣದಿಂದ ತನ್ನಯತ್ನವು ವ್ಯರ್ಥಮಾದುದರಿಂದ ಕೋಪಮುಳ್ಳ ಆಗಜವುಮಾವುತನಿಂದಪ್ರೇರಿತವಾಗಿ ಅಟ್ಟಿಬಂದುದು॥೧೨॥ಭಗವಂತನಾದ ಕೃಷ್ಣನುಬರುತ್ತಲಿರುವ ಆಯಾನೆಯಂ ಸೊಂಡಿಲಂಪಿಡಿದು ಭೂಮಿಯಲ್ಲಿ ಜುಂಗಿಸಿ ಕೆಡಹಿದನು ॥೧೩॥ಕೆಳಗೆಬಿದ್ದ ಆಯಾನೆಯಂ ಸಿಂಹ



ಆನೆಯನ್ನು ಕೊಲ್ಲುವಿಕೆ



೧೧೭

ಲಯಾ। ದಂತಮುತ್ಪಾಟ್ಯ ತೇನೇಭಂ ಹಸ್ತಿಪಾಂಶ್ಚಾಹನದ್ಧರಿಃ ॥೧೪॥ ಮೃತಕಂ ದ್ವಿಪಮುತ್ಸೃಜ್ಯ ದಂತಪಾಣಿಸ್ಸಮಾವಿಶತ್। ಅಂಸನ್ಯಸ್ತವಿಷಾಣೋಽಸೃಙ್ಮದಬಿಂದುಭಿರಂಕಿತಃ। ವಿರೂಢಸ್ವೇದಕಣಿಕವದನಾಂಬುರುಹೋ ಬಭೌ ॥೧೫॥ ವೃತೌ ಗೋಪೈಃ ಕತಿಪಯೈರ್ಬಲದೇವಜನಾರ್ದನೌ। ರಂಗಂ ವಿವಿಶತೂ ರಾಜನ್ ಗಜದಂತವರಾಯುಧೌ ॥೧೬॥ ಮಲ್ಲಾನಾಮಶನಿರ್ನೃಣಾಂ ನರವರಸ್ಸ್ತ್ರೀಣಾಂ ಸ್ಮರೋ ಮೂರ್ತಿಮಾನ್ ಗೋಪಾನಾಂ ಸ್ವಜನೋಽಸತಾಂ ಕ್ಷಿತಿಭುಜಾಂ ಶಾಸ್ತಾ ಸ್ವಪಿತ್ರೋಶ್ಶಿಶುಃ । ಮೃತ್ಯು

ಚಾಣೂರಮುಷ್ಟಿಕಾದಿಮಲ್ಲವಧಕಥಾಪ್ರಾರಂಭಃ

---

ಸ್ತಿಪಾಂಶ್ಚ- ಮಾವುಟಿಗರನ್ನು, ಅಹನತ್- ಕೊಂದನು ॥೧೪॥ ಮೃತಕಂ- ಸತ್ತಿರುವ, ದ್ವಿಪಂ- ಆನೆಯನ್ನು, ಉತ್ಸೃಜ್ಯ-ಬಿಟ್ಟು, ದಂತಪಾಣಿಃ-ಅದರಕೊಂಬು ಕೈಯಲ್ಲಿವುಳ್ಳವನಾಗಿ, ಸಮಾವಿಶತ್-ರಂಗಸ್ಥಲವಂಪೊಕ್ಕನು. ಅಂಸನ್ಯಸ್ತವಿಷಾಣಃ-ಹೆಗಲಿರಿಸಿಕೊಳ್ಳಲ್ಪಟ್ಟ ಆನೆಯಕೊಂಬುಳ್ಳವನೂ, ಅಸೃಙ್ಮದಬಿಂದುಭಿಃ-ಅಸೃಕ್-ರಕ್ತದ, ಮದ, ಆನೆಯಸೊಕ್ಕಿನ ಬೆವರಿನ ಬಿಂದುಭಿಃ-ತೊಟ್ಟುಗಳಿಂದ, ಅಂಕಿತಃ-ಗುರುತುಮಾಡಲ್ಪಟ್ಟವನೂ, ವಿರೂ.....ರುಹಃ-ವಿರೂಢ-ಉಕ್ಕಿದ, ಸ್ವೇದಕಣಿಕ-ಬೆವರು ತುಂತುರುಗಳುಳ್ಳ, ವದನಾಂಬುರುಹಃ-ಮುಖಕಮಲವುಳ್ಳವನೂ ಆಗಿ, ಬಭೌ-ಪ್ರಕಾಶಿಸಿದನು ॥೧೫॥ ರಾಜನ್-ಅರಸೇ! ಕತಿಪಯೈಃ ಗೋಪೈಃ-ಕೆಲವರಾದ ಗೊಲ್ಲರಿಂದ, ವೃತೌ-ಬಳಸಲ್ಪಟ್ಟವರೂ, ಗಜದಂತವರಾಯುಧೌ-ಆನೆಯದಂತಗಳೆಂಬ ಶ್ರೇಷ್ಠಗಳಾದ ಆಯುಧಗಳುಳ್ಳವರೂ, ಆದ ಬಲದೇವಜನಾರ್ದನೌ-ರಾಮಕೃಷ್ಣರು, ಮಲ್ಲರಂಗಂ-ಜಟ್ಟಿಕಾಳಗದ ಸ್ಥಳವನ್ನು, ವಿವಿಶತುಃ-ಹೊಕ್ಕರು ॥೧೬॥ ಮಲ್ಲಾನಾಂ-ಜಟ್ಟಿಗರಿಗೆ, ಅಶನಿಃ-ಸಿಡಿಲಾಗಿ, ವಿದಿತಃ-ರೌದ್ರರಸದಿಂ ತಿಳಿಯಲ್ಪಟ್ಟವನೂ, ನೃಣಾಂ-ಮನುಷ್ಯರಿಗೆ, ನರವರಃ-ಮನುಷ್ಯಶ್ರೇಷ್ಠನಾಗಿ, ಅದ್ಭುತರಸದಿಂ ತಿಳಿಯಲ್ಪಟ್ಟವನೂ, ಸ್ತ್ರೀಣಾಂ-ಹೆಂಗಳಿಗೆ, ಮೂರ್ತಿಮಾನ್ಸ್ಮರಃ-ರೂಪಯುಳ್ಳಮನ್ಮಥನೆಂದು ಶೃಂಗಾರರಸದಿಂ ತಿಳಿಯಲ್ಪಟ್ಟವನೂ, ಗೋಪಾನಾಂ-ಗೊಲ್ಲರಿಗೆ, ಸ್ವಜನಃ-ಸಮ್ಮವನೆಂದು, ಹಾಸ್ಯರಸದಿಂದ ತಿಳಿಯಲ್ಪಟ್ಟವನೂ, ಅಸತಾಂಕ್ಷಿತಿಭುಜಾಂ-ದುಷ್ಟಕ್ಷತ್ರಿಯರಿಗೆ, ಶಾಸ್ತಾ-ಶಿಕ್ಷಕನೆಂದು ವೀರರಸವಾಗಿ ತಿಳಿಯಲ್ಪಟ್ಟವನೂ, ಸ್ವಪಿತ್ರೋಃ-ತನ್ನ ತಾಯಿತಂದೆಗಳಿಗೆ, ಶಿಶುಃ-ಮಗುವೆಂದು ದಯಾರಸದಿಂದ ತಿಳಿಯಲ್ಪಟ್ಟವನೂ, ಭೋಜಪತೇಃ-ಕಂಸನಿಗೆ, ಮೃತ್ಯುಃ-ಯಮನೆಂದು ಭಯಾನಕರಸವಾಗಿ ತಿಳಿಯಲ್ಪಟ್ಟವನೂ, ಅವಿದುಷಾಂ-ಅರಿಯದವರಿಗೆ, ವಿರಾಟ್-ವಿಕಲನೆಂದು ಭೀಭತ್ಸರಸವಾಗಿ ತಿಳಿಯಲ್ಪಟ್ಟವನೂ, ಯೋಗಿನಾಂ-ಜ್ಞಾನಸಿದ್ಧರಿಗೆ, ಪರಂತತ್ವಂ-ಪರಬ್ರಹ್ಮವೆಂದು, ಶಾಂತರಸವಾಗಿ ತಿಳಿಯಲ್ಪಟ್ಟವನೂ, ವೃಷ್ಣೀನಾಂ-ಯಾದವರಿಗೆ, ಪರದೇವತೇತಿ-ಉತ್ಕೃಷ್ಟನಾದದೇವರೆಂದು, ಸಪ್ರೇಮಭಕ್ತಿರಸದಿಂದ, ವಿದಿತಃ-ತಿಳಿಯಲ್ಪಟ್ಟವನಾಗಿ, ಸಾಗ್ರಜಃ-ಅಣ್ಣನಿಂ ಸಹಿತನಾಗಿ, ರಂಗಂ-ರಂಗಸ್ಥಲವನ್ನು, ಗತಃ-ಸೇರಿದವನಾದನು ॥೧೭॥ ನೃಪ-ಪರೀಕ್ಷಿತ್ತೇ! ಕುವಲಯಾಪೀಡಂ-ಆನೆಯನ್ನು, ಹತಂ-ಕೊಲ್ಲಲ್ಪಟ್ಟದ್ದನ್ನಾಗಿ, ದೃಷ್ಟ್ವಾ-ನೋ

---

ದುತೆ ಲೀಲೆಯಿಂದಲೇ ಕಾಲಿನಿಂದಮೆಟ್ಟಿ ಅದರದಂತವಂ ಕಿತ್ತುಕೊಂಡು ಅದರಿಂದ ಮಾವುತರನೆಲ್ಲರಂಸಂಹರಿಸಿದನು ॥೧೪॥ ಬಿದ್ದುಮೃತವಾದ ಆಗಜವಂಬಿಟ್ಟು ಕೃಷ್ಣನು ದಂತವಂ ಕೈಲಿಹಿಡುಕೊಂಡು ರಂಗದಬಳಿಕ್ಕೆಬಂದು ಆದಂತವಂಭುಜದಲ್ಲಿರಿಸಿಕೊಂಡು ಗಜರಕ್ತಬಿಂದುಗಳಿಂದಲೂ ಮದೋದಕಬಿಂದುಗಳಿಂದಲೂ ಚಿಹ್ನಿತನಾಗಿ ಬೆವರುಬೊಟ್ಟುಗಳಿಂದ ಅಲಂಕೃತವಾದ ಮುಖವುಳ್ಳವನಾಗಿ ರಂಗಮಧ್ಯಕ್ಕೆ ಬರುತ ಪ್ರಕಾಶಿಸಿದನು ॥೧೫॥ ಬಲರಾಮನು ಆಗಜದ ಮತ್ತೊಂದುದಂತವಂ ಭುಜದಲ್ಲಿ ಇರಿಸಿಕೊಂಡನು. ಈರೀತಿಯಲ್ಲಿ ಗಜದಂತಂಗಳನ್ನೇ ಆಯುಧಂಗಳನ್ನಾಗಿ ಮಾಡಿಕೊಂಡು ಗೋಪರಿಂದ ಪರಿವೃತರಾಗಿ ರಾಮಕೃಷ್ಣರು ರಂಗವಂ ಪ್ರವೇಶಿಸಿದರು ॥೧೬॥ ಬಲರಾಮಸಮೇತನಾಗಿ ಕೃಷ್ಣನು ರಂಗಕ್ಕೆಬರುವಾಗ ಜಟ್ಟಿಗಳಿಗೆಸಿಡಿಲಿನಂತೆಯೂ, ಜನರಿಗೆಪುರುಷಶ್ರೇಷ್ಠನಂತೆಯೂ, ಸ್ತ್ರೀಯರುಗಳಿಗೆ ಮೂರ್ತಿವಂತನಾದ ಕಾಮನಂತೆಯೂ, ಗೋಪರಿಗೆಸ್ವಜನನಂತೆಯೂ ದುಷ್ಟಕ್ಷತ್ರಿಯರಿಗೆ ಶಿಕ್ಷಕನಂತೆಯೂ, ಮಾತಾಪಿತೃಗಳಿಗೆ ಶಿಶುವಿನಂತೆಯೂ ಕಂಸನಿಗೆ ಮೃತ್ಯುವಿನಂತೆಯೂ, ಅಜ್ಞಾನಿಗಳಿಗೆ ಕೊಬ್ಬಿದಪುರುಷನಂತೆಯೂ, ಯೋಗಿಗಳಿಗೆ ಪರತತ್ವದಂತೆಯೂ, ಯಾದವರಿಗೆ ಪರದೇವತೆಯು

ರ್ಭೋಜಪತೇರ್ವಿರಾಡವಿದುಷಾಂತತ್ತ್ವಂಪರಂಯೋಗಿನಾಂವೃಷ್ಣೀನಾಂಪರದೇವತೇತಿವಿದಿತೋರಂಗಂಗತಸ್ಸಾಗ್ರಜಃ ॥೧೭॥ ಹತಂಕುವಲಯಾಪೀಡಂದೃಷ್ಟ್ವಾತಾವಪಿದುರ್ಜಯೌ। ಕಂಸೋಮನಸ್ವ್ಯಪಿತದಾಭೃಶಮುದ್ವಿವಿಜೇನೃಪ ॥೧೮॥ ತೌರೇಜತೂರಂಗಗತೌಮಹಾಭುಜೌವಿಚಿತ್ರವೇಷಾಭರಣಸ್ರಗಂಬರೌ ।ಯಥಾನಟಾವುತ್ತಮವೇಷಧಾರಿಣೌಮನಃಕ್ಷಿಪಂತೌಪ್ರಭಯಾನಿರೀಕ್ಷತಾಮ್॥೧೯॥ ನಿರೀಕ್ಷ್ಯತಾವುತ್ತಮಪೂರುಷೌತದಾಮಂಚಸ್ಥಿತಾನಾಗರರಾಷ್ಟ್ರಕಾನೃಪಾಃ । ಪ್ರಹರ್ಷವೇಗೋತ್ಕಲಿತೇಕ್ಷಣಾನನಾಃಪಪುರ್ನತೃಪ್ತಾನಯನೈಸ್ತದಾನನಮ್ ॥೨೦॥ ಪಿಬಂತಇವಚಕ್ಷುರ್ಭ್ಯಾಂಲಿಹಂತಇವಜಿಹ್ವಯಾ। ಜಿಘ್ರಂತಇವನಾಸಾಭ್ಯಾಂಶ್ಲಿಷ್ಯಂತಇವಬಾಹುಭಿಃ॥೨೧॥ ಊಚುಃಪರಸ್ಪರಂತೇವೈಯಥಾದೃಷ್ಟಂಯಥಾಶ್ರುತಮ್ ॥ ತದ್ರೂಪಗುಣಮಾಧುರ್ಯಪ್ರಾಗಲ್ಭ್ಯಸ್ಮಾರಿತಾಇ

---

ಡಿ, ದುರ್ಜಯೌ-ಜಯಿಸಲ್ಪಡಲಶಕ್ಯರಾದ,ತಾವಪಿ-ಆರಾಮಕೃಷ್ಣರನ್ನೂ,ದೃಷ್ಟ್ವಾ-ನೋಡಿ, ಕಂಸಃ-ಭೋಜರಾಜನು, ಮನಸ್ವ್ಯಪಿ-ಧೀರವಾದ ಮನಸ್ಸುಳ್ಳವನಾದರೂ,ತದಾ-ಆಗ, ಭೃಶಂ-ಅಧಿಕವಾಗಿ,ಉದ್ವಿವಿಜೇ-ಬಹಳಹೆದರಿದನು॥೧೮॥ರಂಗಗತೌ-ರಂಗಸ್ಥಲವಂ ಸೇರಿದ, ಮಹಾಭುಜೌ-ದೊಡ್ಡತೋಳುಗಳುಳ್ಳ,ವಿಚಿತ್ರವೇಷಾಭರಣಸ್ರಗಂಬರೌ-ಆಶ್ಚರ್ಯವಾದ ಅಲಂಕಾರ ಭೂಷಣಪುಷ್ಪಮಾಲಾವಸ್ತ್ರಗಳುಳ್ಳ. ತೌ-ಆರಾಮಕೃಷ್ಣರು, ನಿರೀಕ್ಷತಾಂ-ನೋಡುವವರ, ಮನಃ-ಹೃದಯವನ್ನು,ಪ್ರಭಯಾ-ಕಾಂತಿಯಿಂದ, ಕ್ಷಿಪಂತೌ-ಚಲನಗೊಳಿಸುತಲಿರುವರಾಗಿ, ಉತ್ತಮವೇಷಧಾರಿಣೌ-ಮೇಲಾದ,ವೇಷವನ್ನು ಧರಿಸಿಕೊಂಡಿರುವ, ನಟೌಯಥಾ-ನಟ್ಟುವರು ಹೇಗೋಹಾಗೆ, ರೇಜತುಃ-ಬೆಳಗಿದರು ॥೧೯॥ತದಾ-ಆಗ,ಮಂಚಸ್ಥಿತಾಃ-ಮಂಚಗಳಲ್ಲಿಕುಳಿತಿರುವ,ನಾಗರರಾಷ್ಟ್ರಕಾಃ-ಊರಿನವರೂ ದೇಶದವರೂ, ನೃಪಾಃ-ದೊರೆಗಳೂ, ಉತ್ತಮಪೂರುಷೌ-ಮಹಾಪುರುಷರಾದ, ತೌ-ಆರಾಮಕೃಷ್ಣರನ್ನು. ನಿರೀಕ್ಷ್ಯ-ನೋಡಿ, ಪ್ರಹ-.. .ನನಾಃ-ಪ್ರಹರ್ಷ-ಹೆಚ್ಚುಸಂತೋಷದ,ವೇಗ-ತ್ವರೆಯಿಂದ, ಉತ್ಕಲಿತ-ಕೂಡಿದ, ಈಕ್ಷಣ-ಕಂಗಳುಳ್ಳ, ಆನನಾಃ-ಮುಖಂಗಳುಳ್ಳವರಾಗಿ,ನತೃಪ್ತಾಃ-ತೃಪ್ತಿಯುಂಟಾದವರಾಗದೆ, ನಯನೈಃ-ಕಂಗಳಿಂದ,ತದಾನನಂ-ಅವನಮುಖವನ್ನು,ಪಪುಃ-ಕುಡಿದರು॥೨೦॥ಚಕ್ಷುರ್ಭ್ಯಾಂ-ಕಂಗಳಿಂದ, ಪಿಬಂತಇವಕುಡಿಯುವರಹಾಗೂ,ಜಿಹ್ವಯಾ-ನಾಲಿಗೆಯಿಂದ,ಲಿಹಂತಇವ-ನೆಕ್ಕುವರಹಾಗೂ,ನಾಸಾಭ್ಯಾಂ-ಮೂಗುಗಳಿಂದ,ಜಿಘ್ರಂತಇವ-ಮೂಸಿನೋಡುವವರಹಾಗೂ,ಬಾಹುಭಿಃ-ತೋಳುಗಳಿಂದಶ್ಲಿಷ್ಯಂತಇವ-ಅಪ್ಪಿಕೊಳ್ಳುವರಹಾಗೂ॥೨೧॥ತೇ-ಆಜನಗಳು, ವೈ-ಪ್ರಸಿದ್ಧವಾಗಿ,ಪರಸ್ಪರಂ-ಅನ್ಯೋನ್ಯವಾಗಿ, ತದ್ರೂ...ಇವ-ತತ್-ಆರಾಮಕೃಷ್ಣರ,ರೂಪ-ಆಕಾರ,ಗುಣ-ಸುಗುಣಗಳು, ಮಾಧುರ್ಯ-ರಸಿಕತ್ವ, ಪ್ರಾಗಲ್ಭ್ಯ-ಪ್ರೌಢಿಮೆ,ಗಳಿಂದ,ಸ್ಮಾರಿತಾಇವ-ನೆನಪುಗೊಳಿಸಲ್ಪಟ್ಟವರಹಾಗೆ, ಯಥಾದೃಷ್ಟಂ-ಹೇಗೆನೋಡಲ್ಪಟ್ಟಿತೋ, ಯಥಾಶ್ರುತಂ-

---

ತೆಯುಳ್ಳ, ತೋರುವನಾಗಿ ರಂಗವಂಪ್ರವೇಶಿಸಿದನು॥೧೭॥ ಕಂಸನು ಧೀರನಾದರೂ ಕುವಲಯಾಪೀಡವೆಂಬಗಜಮಂ ಹತಮಾದುದನಾಗಿ ತಿಳಿದು, ಜಯಿಸಲಶಕ್ಯರಾದ ರಾಮಕೃಷ್ಣರಂನೋಡಿ ಮನಸ್ಸಿನಲ್ಲಿ ಬಹುವಾಗಿ ಭಯಪಟ್ಟನು ॥೧೮॥ದೀರ್ಘ ಬಾಹುಗಳುಳ್ಳ ವಿಚಿತ್ರಾಲಂಕಾರಂಗಳಿಂದ ಶೋಭಿತರಾಗಿ, ಭೂಷಣಂಗಳು ವಸ್ತ್ರಂಗಳು ಹಾರಂಗಳು ಇವುಗಳಿಂದ ಅಲಂಕೃತರಾಗಿ, ಇರುವ ಆರಾಮಕೃಷ್ಣರು ರಂಗವನೆಯ್ದಿದವರಾಗಿ ಉತ್ತಮವೇಷಧಾರಿಗಳಾದ ನಟರಂತೆ ತಮ್ಮಪ್ರಭೆಯಿಂದ ನೋಡುವವರಾದ ಜನರ ಮನವನಪಹರಿಸುವವರಾಗಿ ಪ್ರಕಾಶಿಸಿದರು ॥೧೯॥ ಮಂಚದಲ್ಲಿ ಕುಳಿತವರಾದ ಪೌರಜಾನಪದರಾದ ಜನಪರು ಪುರುಷೋತ್ತಮರಾದ ಆರಾಮಕೃಷ್ಣರಂನೋಡಿ ಸಂತೋಷಾತಿಶಯದಿಂದ ವಿಕಸಿತಂಗಳಾದ ನೇತ್ರಂಗಳುಳ್ಳ ಮುಖಂಗಳುಳ್ಳವರಾಗಿ ನೇತ್ರಂಗಳಿಂದ ಆರಾಮಕೃಷ್ಣರಮುಖಂಗಳಂ ನೋಡಿತೃಪ್ತರಾಗಲಿಲ್ಲ ॥೨೦॥ ಆಜನರು ಆರಾಮಕೃಷ್ಣರಂ ನೇತ್ರಂಗಳಿಂದ ಪಾನಂಗೆಯ್ವರಂತೆ ಜಿಹ್ವೆಯಿಂದ ಆಸ್ವಾದನಂಗೆಯ್ವರಂತೆ ಘ್ರಾಣಂಗಳಿಂದ ಆಘ್ರಾಣಿಸುವರಂತೆ ಬಾಹುಗಳಿಂದ ಆಲಿಂಗನಂಗೆಯ್ವರಂತೆ ಇದ್ದರು॥೨೧॥ ರಾಮಕೃಷ್ಣರಚರಿತ್ರಮಂ ಪೂರ್ವದಲ್ಲಿ ಹೇಗೆಕೇಳಿದ್ದರೋ ಹೇಗೆನೋಡಿದ್ದರೋ, ಅದಕ್ಕೆ ಅನುರೂಪಮಾದ ಸೌಂದರ್ಯವೂ ಸುಗುಣಂಗಳೂ ಮನೋಹರತ್ವವೂ ಪ್ರೌ

ವ|೨೦|ಏತೌಭಗವತಸ್ಸಾಕ್ಷಾದ್ಧರೇರ್ನಾರಾಯಣಸ್ಯಹಿ|ಅವತೀರ್ಣಾವಿಹಾಂಶೇನವಸುದೇವಸ್ಯವೇಶ್ಮನಿ ||೨೧|| ಸವೈಷಕಿಲದೇವಕ್ಯಾಂಜಾತೋನೀತಶ್ಚಗೋಕುಲಮ್ | ಕಾಲಮೇತಂವಸನ್ಗೂಢೋವವೃಧೇನಂದವೇಶ್ಮನಿ |೨೨| ಪೂತನಾನೇನನಿಹತಾಚಕ್ರವಾತಶ್ಚದಾನವಃ | ಅರ್ಜುನೌಧೇನುಕಃಕೇಶೀ ಗುಹ್ಯಕೋನ್ಯೇಚತದ್ವಿಧಾಃ |೨೩| ಗಾವಸ್ಸಪಾಲಾಏತೇನದವಾಗ್ನೇಃಪರಿಮೋಚಿತಾಃ | ಕಾಳೀಯೋದಮಿತಸ್ಸರ್ಪ ಇಂದ್ರಶ್ಚವಿಮದಃಕೃತಃ |೨೪| ಸಪ್ತಾಹಮೇಕಹಸ್ತೇನಧೃತೋದ್ರಿಪ್ರವರೋಮುನಾ | ವರ್ಷವಾತಾಶನಿಭ್ಯಶ್ಚಪರಿತ್ರಾತಂಚಗೋಕುಲಮ್ |೨೫| ಗೋಪ್ಯೋಸ್ಯನಿತ್ಯಮುದಿತಾ

---

ಹೇಗೆಕೇಳಲ್ಪಟ್ಟಿತ್ತೋ, ತಥಾ-ಹಾಗೆ, ಊಚುಃ-ಮಾತಾಡಿಕೊಂಡರು ||೨೦||ಏತೌ-ಇವರು, ಭಗವತಃ-ಭಗವಂತನಾದ, ನಾರಾಯಣಸ್ಯ-ವಿಷ್ಣುವಾದ, ಹರೇಃ-ಕೃಷ್ಣನ, ಸಾಕ್ಷಾದಂಶೇನ-ಪ್ರತ್ಯಕ್ಷವಾದ ಭಾಗದಿಂದ, ಇಹ-ಇಲ್ಲಿ, ವಸುದೇವಸ್ಯ-ವಸುದೇವನ, ವೇಶ್ಮನಿ-ಮನೆಯಲ್ಲಿ, ಅವತೀರ್ಣೌಹಿ-ಹುಟ್ಟಿದವರಲ್ಲವೆ||೨೧||ಸಏಷಃ-ಆ ಯೀಕೃಷ್ಣನು, ದೇವಕ್ಯಾಂಕಿಲ-ದೇವಕಿಯೊಳಗಲ್ಲವೆ, ಜಾತಃ-ಹುಟ್ಟಿದವನು. ಗೋಕುಲಂ-ನಂದವ್ರಜವನ್ನು, ನೀತಶ್ಚ-ಹೊಂದಿಸಲ್ಪಟ್ಟವನೂಆಗಿ, ಏತಂಕಾಲಂ-ಇಷ್ಟುದಿನವಲ್ಲಿಯೂ, ಗೂಢೋವಸನ್-ಗುಟ್ಟಾಗಿರುವನಾಗಿ, ನಂದವೇಶ್ಮನಿ-ನಂದಗೋಪನಮನೆಯಲ್ಲಿ, ವವೃಧೇ-ಬೆಳೆದನು ||೨೨|| ಅನೇನ-ಇವನಿಂದ, ಪೂತನಾ-ಪೂತನೆಯೆಂಬವಳು, ನಿಹತಾ-ಕೊಲ್ಲಲ್ಪಟ್ಟವಳಾದಳು. ಚಕ್ರವಾತಃ-ಸುಳಿಗಾಳಿಯಾದ, ದಾನವಶ್ಚ-ತೃಣಾವರ್ತನೆಂಬರಕ್ಕಸನೂ, ಅರ್ಜುನೌ-ಜೌಳಿಯ ಮತ್ತಿಯಮರಗಳೂ, ಧೇನುಕಃ-ಧೇನುಕಾಸುರನೂ, ಕೇಶೀ-ಕುದುರೆಯಾಗಿಬಂದ ದೈತ್ಯನೂ, ಗುಹ್ಯಕಃ-ದುಷ್ಟಯಕ್ಷನೂ, ತದ್ವಿಧಾಃ-ಅದೇಬಗೆಯುಳ್ಳ, ಅನ್ಯೇಚ-ಇತರದೈತ್ಯರೂಕೂಡ, ನಿಹತಾಃ-ಕೊಲ್ಲಲ್ಪಟ್ಟವರಾದರು||೨೩||ಏತೇನ-ಇವನಿಂದ, ಸಪಾಲಾಃ-ಪಾಲಕನಿಂಸಹಿತವಾದ, ಗಾವಃ-ಗೋವುಗಳು, ದವಾಗ್ನೇಃ-ಕಾಡುಕಿಚ್ಚಿನಬೆಸೆಯಿಂದ, ಪರಿಮೋಚಿತಾಃ-ತಪ್ಪಿಸಲ್ಪಟ್ಟವಾದವು. ಕಾಳೀಯಸ್ಸರ್ಪಃ-ಕಾಳಿಯನೆಂಬಹಾವು, ದಮಿತಃ-ಶಿಕ್ಷಿಸಲ್ಪಟ್ಟದ್ದಾಯಿತು. ಇಂದ್ರಶ್ಚ-ದೇವರಾಜನೂಕೂಡ, ವಿಮದಃ-ಗರ್ವವಿಲ್ಲದವನಾಗಿ, ಕೃತಃ-ಮಾಡಲ್ಪಟ್ಟವನಾದನು||೨೪||ಅಮುನಾ-ಇವನಿಂದ, ಅದ್ರಿಪ್ರವರಃ-ಶ್ರೇಷ್ಠವಾದಗೋವರ್ಧನಪರ್ವತವು, ಸಪ್ತಾಹಂ-೭ದಿನಗಳಲ್ಲಿ,ಏಕಹಸ್ತೇನ-ಒಂದುಕೈಯಿಂದ, ಧೃತಃ-ಧರಿಸಲ್ಪಟ್ಟದ್ದಾಯಿತು. ವರ್ಷವಾತಾಶನಿಭ್ಯಶ್ಚ-ಮಳೆ ಗಾಳಿ ಸಿಡಿಲುಗಳಬೆಸೆಯಿಂದಲೂ, ಗೋಕುಲಂಚ-ಗೋವ್ರಜವೂ, ಪರಿತ್ರಾತಂ-ರಕ್ಷಿಸಲ್ಪಟ್ಟಿತ್ತು ||೨೫||ಅಸ್ಯ-ಈಕೃಷ್ಣನ, ಹಸಿತಪ್ರೇಕ್ಷಣಂ-ನಗೆನೋಟವುಳ್ಳ, ಮುಖಂ-ವದನವನ್ನು, ಪಶ್ಯಂತ್ಯಃ-ನೋಡುತಲಿರುವರಾಗಿ, ನಿತ್ಯಮುದಿತಾಃ-ನಿತ್ಯಸಂತುಷ್ಟೆಯರಾದ, ಗೋಪ್ಯಃ-ಗೊಲ್ಲತಿಯರು, ಅಶ್ರಮಂಯುದಾ

---

ಷತ್ವವೂ ಇವುಗಳಿಂದ ಮೋಹಿತರಾಗಿ ಪರಸ್ಪರವಾಗಿ ಮಾತನಾಡಿದರು ||೨೦|| (ಅದೆಂತೆನೆ-) ಈರಾಮಕೃಷ್ಣರು ಸಾಕ್ಷಾದ್ಭಗವಂತನಾದ ನಾರಾಯಣನಾದ ಹರಿಯಅಂಶದಿಂದ ವಸುದೇವನಗೃಹದಲ್ಲಿ ಅವತರಿಸಿದರು ನಿಶ್ಚಯಂ ||೨೧|| ಈಕೃಷ್ಣನು ದೇವಕೀದೇವಿಯಲ್ಲಿ ಹುಟ್ಟಿಗೋಕುಲದಲ್ಲಿ ಇಷ್ಟುಪರ್ಯಂತವೂ ಗೂಢನಾಗಿನಂದಗೋಪನಗೃಹದಲ್ಲಿ ಬೆಳೆದನು |೨೨| ಈಕೃಷ್ಣನಿಂದಲೇ ಪೂತನೆಯು ಸಂಹೃತಳಾದಳು. ಚಕ್ರವಾತಾಕಾರನಾಗಿ ಬಂದದೈತ್ಯನು ಸಂಹೃತನಾದನು. ಯಮಳಾರ್ಜುನರು ಧೇನುಕಾಸುರನು ಯಕ್ಷನು ಶಂಖಚೂಡನು ಇನ್ನೂಕೆಲವರು ಅಘಾಸುರಾದಿಗಳೂ ಈಕೃಷ್ಣನಿಂದಲೇ ಸಂಹೃತರಾದರು |೨೩| ಗೋವುಗಳು ಗೋಪಾಲಕರು ಸಹ ಕಾಡುಕಿಚ್ಚಿನಲ್ಲಿಸಿಕ್ಕಿ ಈತನಿಂದಲೇರಕ್ಷಿತರಾದರು. ಕಾಳಿಯಸರ್ಪವು ಈತನಿಂದಲೇ ನಿಗ್ರಹಿಸಲ್ಪಟ್ಟಿತು. ಇಂದ್ರನು ಗರ್ವರಹಿತನಾಗಿ ಮಾಡಲ್ಪಟ್ಟನು |೨೪| ಈಕೃಷ್ಣನಿಂದಲೇ ಏಳುದಿನಪರ್ಯಂತವೂ ಗೋವರ್ಧನಪರ್ವತವು ಉದ್ಧರಿಸಲ್ಪಟ್ಟಿತು. ವೃಷ್ಟಿಯಿಂದಲೂ ಚಂಡಮಾರುತದಿಂದಲೂ ಸಿಡಿಲುಗಳಿಂದಲೂ ಉಂಟಾದ ಉಪದ್ರವವಂಪರಿಹರಿಸಿ ಈಕೃಷ್ಣನೇ ಗೋಕುಲವಂ ರಕ್ಷಿಸಿದನು|೨೫| ಗೋಪಸ್ತ್ರೀಯರುಗಳು ನಿರಂತರದಲ್ಲಿಯೂ ಸಂತುಷ್ಟರಾಗಿ ಮುಗುಳುನಗೆನೋಟಗಳು ಉಳ್ಳ ದಿವ್ಯಮುಖವು

ಹಸಿತಪ್ರೇಕ್ಷಣಂಮುಖಮ್ | ಪಶ್ಯಂತ್ಯೋವಿವಿಧಾಂಸ್ತಾಪಾಂಸ್ತರಂತಿಸ್ಮಾಶ್ರಮಂಮುದಾ ||೧೮||
ವದಂತ್ಯನೇನವಂಶೋಽಯಂಯದೋಸ್ಸುಬಹುವಿಶ್ರುತಃ | ಶ್ರಿಯಂಯಶೋಮಹತ್ವಂಚಲಪ್ಸ್ಯತೆಪರಿರಕ್ಷಿತಃ ||೧೯|| ಅಯಂಚಾಸ್ಯಾಗ್ರಜಶ್ಶ್ರೀಮಾನ್ರಾಮಃಕಮಲಲೋಚನಃ | ಪ್ರಲಂಬೋನಿಹತೋಽನೇನವತ್ಸಕೋಧೇನುಕಾದಯಃ ||೨೦|| ಶ್ರೀಶುಕಃ|ಜನೇಷ್ವೇವಂಬ್ರುವಾಣೇಷುತೂರ್ಯೇಷುನಿನದತ್ಸುಚ| ಕೃಷ್ಣರಾಮೌಸಮಾಭಾಷ್ಯಚಾಣೂರೋವಾಕ್ಯಮಬ್ರವೀತ್ ||೨೧|| ಹೇನಂದಸೂನೊಹೇರಾಮಭವಂತೌವೀರ್ಯಸಂಮತೌ | ನಿಯುದ್ಧಕುಶಲೌಶ್ರುತ್ವಾರಾಜ್ಞಾಹೂತೌದಿದೃಕ್ಷುಣಾ||೨೨|| ಪ್ರಿಯಂರಾಜ್ಞಃಪ್ರಕುರ್ವಂತ್ಯಶ್ಶ್ರೇಯೋವಿಂದಂತಿವೈಪ್ರಜಾಃ| ಮನಸಾಕರ್ಮಣಾವಾಚಾವಿಪರೀತಮತೋಽನ್ಯಥಾ ||೨೩|| ನಿತ್ಯಂಪ್ರಮುದಿತಾಗೋಪಾವತ್ಸಪಾಲಾಸ್ತಥಾಸ್ಫುಟಮ್ | ವನೇಷುಮಲ್ಲ

---

ಭವತಿತಥಾ-ಹೇಗೆ ಆಯಾಸವಿಲ್ಲವೋ ಹಾಗೆ, ಮುದಾ-ಸಂತೋಷದೊಡನೆ, ವಿವಿಧಾಂಸ್ತಾಪಾನ್-ಹಲವುಬಗೆಯಾದ ದುಃಖಗಳನ್ನು, ತರಂತಿ-ದಾಂಟುತಲಿರುವರು.||೧೮|| ಅನೇನ-ಈಕೃಷ್ಣನಿಂದ, ಪರಿರಕ್ಷಿತಃ-ಪಾಲಿಸಲ್ಪಟ್ಟ, ಯದೋಃ-ಯದುರಾಯನ, ಅಯಂವಂಶಃ-ಈಕುಲವು, ಸುಬಹುವಿಶ್ರುತಃ ಚನ್ನಾಗಿಯೂ ಬಹಳವಾಗಿಯೂ ಪ್ರಖ್ಯಾತಿಯುಳ್ಳದ್ದಾಯಿತು. ಶ್ರಿಯಂ-ಭಾಗ್ಯವನ್ನು, ಯಶಃ-ಕೀರ್ತಿಯನ್ನೂ, ಮಹತ್ವಂಚ-ದೊಡ್ಡಸ್ತಿಕೆಯನ್ನೂ, ಲಪ್ಸ್ಯತೇ-ಪಡೆಯುತ್ತೆ. (ಎಂದು) ವದಂತಿ-ಹಿರಿಯರು ಹೇಳುತ್ತಿರುವರು ||೧೯||ಅಯಂಚ-ಇವನಾದರೋ, ಅಸ್ಯ-ಈಕೃಷ್ಣನಿಗೆ,ಅಗ್ರಜಃ-ಅಣ್ಣನಾದ, ಶ್ರೀಮಾನ್-ಸಂಪತ್ತುಳ್ಳ, ಕಮಲಲೋಚನಃ-ಪದ್ಮನೇತ್ರನಾದ, ರಾಮಃ-ರಾಮನೆಂಬವನು, ಅನೇನ-ಇವನಿಂದ, ಪ್ರಲಂಬಃ-ಪ್ರಲಂಬಾಸುರನು, ನಿಹತಃ-ಕೊಲ್ಲಲ್ಪಟ್ಟನು ವತ್ಸಕಃ-ವತ್ಸಾಸುರನು, ಧೇನುಕಾದಯಃ-ಧೇನುಕಾಸುರನೇ ಮೊದಲಾದವರೂ,ನಿಹತಾಃ-ಕೊಲ್ಲಲ್ಪಟ್ಟರು||೨೦|| [ಶುಕವಾಕ್ಯವು] ಜನೇಷು-ಜನಗಳು, ಏವಂಬ್ರುವಾಣೇಷು-ಹೀಗೆಹೇಳುತ್ತಿರುವ ರಾಗುತ್ತಿರಲು, ತೂರ್ಯೇಷುಚ-ತವಟೆಗಳೂ, ನಿನದತ್ಸುಚ-ಮೊಳಗುತ್ತಿರಲು, ಚಾಣೂರಃ-ಚಾಣೂರನೆಂಬವನು,ಕೃಷ್ಣರಾಮೌ-ಕೃಷ್ಣರಾಮರನ್ನು, ಸಮಾಭಾಷ್ಯ-ಕರೆದು, (ಸಂಬೋಧಿಸಿ) ವಾಕ್ಯಂ-ಮುಂದೆಹೇಳಲ್ಪಡುವ ಮಾತನ್ನು, ಅಬ್ರವೀತ್-ನುಡಿದನು. ||೨೧|| ಹೇನಂದಸೂನೋ-ಎಲೈನಂದನ ಮಗನೇ! ಹೇರಾಮ-ಎಲಾರಾಮನೇ! ಭವಂತೌ-ನೀವೀರ್ವರೂ, ವೀರ್ಯಸಮ್ಮತೌ-ಶೂರತ್ವದಿಂದ ಒಪ್ಪಿಗೆಯಾದವರು. ನಿಯುದ್ಧಕುಶಲೌ-ಕೈಗಾಳಗದಲ್ಲಿ ಜಾಣರು. ಎಂದು, ಶ್ರುತ್ವಾ-ಕೇಳಿ, ದಿದೃಕ್ಷುಣಾ-ನೋಡಬಯಸಿದ,ರಾಜ್ಞಾ-ದೊರೆಯಿಂದ, ಆಹೂತೌ-ಕರೆಯಲ್ಪಟ್ಟವರಾಗಿರುವಿರಿ ||೨೨||ಮನಸಾ-ಮನಸ್ಸಿನಿಂದಲೂ, ಕರ್ಮಣಾ-ಕೆಲಸದಿಂದಲೂ, ವಾಚಾ-ಮಾತಿನಿಂದಲೂ, ರಾಜ್ಞಃ-ದೊರೆಗೆ, ಪ್ರಿಯಂ-ಇಷ್ಟವನ್ನು, ಪ್ರಕುರ್ವಂತ್ಯಃ-ಚನ್ನಾಗಿಮಾಡುತಲಿರುವ, ಪ್ರಜಾಃ-ಜನಗಳು, ಶ್ರೇಯಃ-ಶುಭವನ್ನು, ವಿಂದಂತಿ-ಅನುಭವಿಸುವರು. ವೈ-ಪ್ರಸಿದ್ಧವು. ಅತಃ-ಇದಕ್ಕಿಂತಲೂ. ವಿಪರೀತಂ-ವ್ಯತ್ಯಸ್ತವಾದ್ದು, ಅನ್ಯಥಾ-ಬೇರೆಬಗೆ

---

ಳ್ಳ ಈಕೃಷ್ಣನನ್ನೋಡುತಲಿರುವರಾಗಿ ಸಮಸ್ತ ತಾಪಂಗಳನ್ನು ಪರಿಹರಿಸಿಕೊಂಡರು ||೧೮|| ಆ ಕೃಷ್ಣನಿಂದಲೇ ಯದುವಂಶವುಸಂತೋಷಪಡುತ್ತೆ. ಪ್ರಸಿದ್ಧವಾದಯಾದವವಂಶವು ಈಕೃಷ್ಣನ ಅನುಗ್ರಹದಿಂದಲೇ ರಕ್ಷಿತವಾಗಿ ಸಂಪದವಂ ಕೀರ್ತಿಯಂ ಮಹಾತ್ಮ್ಯವಂ ಸಹ ಪಡೆಯುತಲಿದೆ ||೧೯|| ಕೃಷ್ಣನಿಗೆ ಅಗ್ರಜನಾದ ಬಲರಾಮನು ಶ್ರೀಮಂತನಾಗಿ ಪದ್ಮಲೋಚನನಾಗಿ ಪ್ರಕಾಶಿಸುವನು. ಪ್ರಲಂಬನು ವತ್ಸನು ಧೇನುಕನು ಮೊದಲಾದವರು ಈಬಲರಾಮನಿಂದಲೇಸಂಹೃತರಾದರು||೨೦||ಈರೀತಿಯಲ್ಲಿ ಪರಸ್ಪರವಾಗಿ ಮಾತಾಡನಾಡುತಲಿರಲಾಗಿ ಶಂಖಭೇರ್ಯಾದಿ ವಾದ್ಯಂಗಳು ಧ್ವನಿಗೆಯ್ಯುತ್ತಲಿರಲಾಗಿ ಚಾಣೂರನೆಂಬ ಪ್ರಧಾನಜಟ್ಟಿಯು ಸಹಿಸಲಾರದೆ ರಾಮಕೃಷ್ಣರಂಕುರಿತು ನುಡಿದನದೆಂತೆನೆ ||೨೧|| ಎಲೈನಂದಪುತ್ರನಾದಕೃಷ್ಣನೇ! ಎಲೈ ಬಲರಾಮನೆ! ನೀವೀರ್ವರೂ ಪರಾಕ್ರಮವಂತರು, ಬಾಹುಯುದ್ಧದಲ್ಲಿ ಸಮರ್ಥರು, ಎಂದು ತಿಳಿದುನೋಡಬೇಕೆಂದಿಯಿಂದ ಅರಸಾದ ಕಂಸನಿಂದ ಕರೆಯಿಸಲ್ಪಟ್ಟು ಬಂದುಇರುವಿರಿ||೨೨||ಪ್ರಜೆಗಳು ಅರಸಿಂಗೆ ಮನೋವಾಕ್ಕಾಯಕರ್ಮಂಗಳಿಂದ ಪ್ರಿಯವಮಾಡಿದರೆ ಸೌಖ್ಯವನೆಯ್ದುವರು. ಇಲ್ಲದಿರ್ದಡೆ ಕಷ್ಟವನೆಯ್ದುವರು||೨೩||

ಯುದ್ಧೇನಕ್ರೀಡಂತಶ್ಚಾರಯಂತಿಗಾಃ ॥೩೪॥ ತಸ್ಮಾದ್ರಾಜ್ಞಃಪ್ರಿಯಂಯೂಯಂವಯಂಚಕರವಾಮಹೆ । ಭೂತಾನಿನಃಪ್ರಸೀದಂತಿಸರ್ವಭೂತಮಯೋನೃಪಃ ॥೩೫॥ ತನ್ನಿಶಮ್ಯಾಬ್ರವೀತ್ಕೃಷ್ಣೋದೇಶಕಾಲೋಚಿತಂವಚಃ । ನಿಯುದ್ಧಮಾತ್ಮನೋಭೀಷ್ಟಂಮನ್ಯಮಾನೋಭಿನಂದ್ಯಚ ॥೩೬॥ ಪ್ರಜಾಭೋಜಪತೇರಸ್ಯವಯಂಚಾಪಿವನೇಚರಾಃ । ಕರವಾಮಪ್ರಿಯಂನಿತ್ಯಂತನ್ನಃಪರಮನುಗ್ರಹಃ ॥೩೭॥ ಬಾಲಾವಯಂತುಲ್ಯಬಲೈಃಕ್ರೀಡಿಷ್ಯಾಮೋಯಥೋಚಿತಮ್ । ಭವೇನ್ನಿಯುದ್ಧಂಮಾಧರ್ಮಸ್ಸ್ಪೃಶೇನ್ಮಲ್ಲಸಭಾಸದಃ ॥೩೮॥ ಚಾಣೂರಃ ॥ನಬಾಲೋನಕಿಶೋರಸ್ತ್ವಂಬಲಶ್ಚಬಲಿನಾಂವರಃ । ಲೀಲ

ಯಾಗಿರುವುದು ॥೩೩॥ಗೋಪಾಃ-ಗೊಲ್ಲರು, ವತ್ಸಪಾಲಾಃ-ಕರುಗಳಂ ಮೇಯಿಸುವರು, ನಿತ್ಯಂ-ಯಾವಾಗಲೂ, ಪ್ರಮುದಿತಾಃ-ಹೆಚ್ಚು ಸಂತೋಷ ವುಳ್ಳವರಾದ್ದರಿಂದಲೇ, ತಥಾ-ಹಾಗೆ, ವನೇಷು-ಕಾಡುಗಳಲ್ಲಿ, ಸ್ಫುಟಂ-ಪ್ರಕಟವಾಗಿ, ಮಲ್ಲಯುದ್ಧೇನ-ಜಟ್ಟಿಕಾಳಗದಿಂದ, ಕ್ರೀಡಂತಃ-ಆಡುತಲಿರುವರಾಗಿ, ಗಾಃ-ಗೋವುಗಳನ್ನು,ಚಾರಯಂತಿ-ಮೇಯಿಸುತ ಲಿರುವರು ॥೩೪॥ ತಸ್ಮಾತ್-ಆದರದೆಸೆಯಿಂದ, ಯೂಯಂ-ನೀವೂ, ವಯಂಚ-ನಾವೂ, ರಾಜ್ಞಃ-ದೊರೆಗೆ, ಪ್ರಿಯಂ-ಇಷ್ಟ ವಾದ್ದನ್ನು,ಕರವಾಮಹೇ-ಮಾಡುವೆವು.ನಃ-ನಮಗೆ,ಭೂತಾನಿ-ಪ್ರಾಣಿಗಳು,ಪ್ರಸೀದಂತಿ-ಪ್ರಸನ್ನರಾಗುವವು. ನೃಪಃ-ದೊರೆಯು, ಸರ್ವಭೂತಮಯಃ-ಸರ್ವಪ್ರಾಣಿಗಳಲ್ಲಿಯೂ ವ್ಯಾಪಕನಾಗಿರುವನು ॥೩೫॥ ತನ್ನಿಶಮ್ಯ-ಆಮಾತನ್ನು ಕೇಳಿ, ನಿಯುದ್ಧಂ-ಕೈಜಗಳವನ್ನು, ಆತ್ಮನಃ-ತನಗೆ, ಅಭೀಷ್ಟಂ-ಪ್ರಿಯವನ್ನಾಗಿ, ಮನ್ಯಮಾನಃ-ತಿಳಿಯುತಲಿರುವನಾದ, ಕೃಷ್ಣಃ-ಕೃಷ್ಣನು, ದೇಶಕಾಲೋಚಿತಂ-ಸ್ಥಲಕ್ಕೂ ಹೊತ್ತಿಗೂತಕ್ಕ, ವಚಃ-ಮಾತನ್ನು, ಅಬ್ರವೀತ್-ನುಡಿದನು॥೩೬॥ಅಸ್ಯಭೋಜಪತೇಃ-ಈಕಂಸನಿಗೆ, ವನೇಚರಾಃ-ಕಾಡಿನಲ್ಲಿತಿರುಗುವವರಾದ, ವಯಂಚಾಪಿ-ನಾವೂಕೂಡ,ಪ್ರಜಾಃ-ರೈತರಾಗಿದ್ದೇವೆ. ನಿತ್ಯಂ-ಯಾವಾಗಲೂ, ಪ್ರಿಯಂ-ಇಷ್ಟವನ್ನು,ಕರವಾಮ-ಮಾಡುತ್ತಿರುವೆವು,ತತ್-ಅದು,ನಃ-ನಮಗೆ,ಪರಂ-ಅತಿಶಯವಾಗಿ,ಅನುಗ್ರಹಃ-ಕರಕೆಯಾಗಿರುವುದು॥೩೭॥ ವಯಂತು-ನಾವಾದರೋ, ಬಾಲಾಃ-ಚಿಕ್ಕಪ್ರಾಯದವರಾದ್ದರಿಂದ ,ತುಲ್ಯಬಲೈಃ-ಸಮಾನವಾದಬಲವುಳ್ಳವರೊಡನೆ,ಯಥೋಚಿತಂ-ತಕ್ಕಹಾಗೆ,ಕ್ರೀಡಿಷ್ಯಾಮಃ-ಆಡುವೆವು ನಿಯುದ್ಧಂ-ನಿಮ್ಮನಮ್ಮಕೈಕಾಳಗವು,ಮಾಭವೇತ್-ಆಗಬೇಡ,ಅಧರ್ಮಃ-ಪಾಪವು, ಮಲ್ಲಸಭಾಸದಃ-ಜಟ್ಟಿಗರಸಭೆಯಲ್ಲಿಕುಳಿತಿರುವರನ್ನು,ಮಾಸ್ಪೃಶೇತ್-ಸೋಂಕಬೇಡ॥೩೮॥ ಚಾಣೂರನುಹೇಳುತ್ತಾನೆ]ತ್ವಂ-ನೀನು, ನಬಾಲಃ-ಚಿಕ್ಕಪ್ರಾಯದವನಲ್ಲ. ಕಿಶೋರೋನ-ಎಳೆಹುಡುಗನಲ್ಲ ಯೇನ-ಯಾವನಿಂದಾ, ಸಹಸ್ರದ್ವಿಪಸತ್ವಭೃತ್-ಸಾವಿರಾನೆಗಳ ಬಲವನ್ನು ವಹಿಸಿದ, ಇಭಃ-ಆನೆಯು, ಲೀಲಯಾ-ವಿಲಾಸದಿಂದ, ಹತಃ-ಕೊಲ್ಲಲ್ಪಟ್ಟಿತೋ, ಸಃ-ಅವನಾಗಿರುವಿ.ಬಲ



ಗೋಪಾಲಕರಾದ ನೀವು ಸಂತುಷ್ಟರಾಗಿವನಂಗಳಲ್ಲಿ ಮಲ್ಲಯುದ್ಧದಿಂದವಿಹರಿಸುತ ಗೋವುಗಳಂಸಂಚಾರವಂಮಾಡಿಸಿಕೊಂಡು ಇರುವಿರಿ॥೩೪॥ ಆದಕಾರಣದಿಂದ ಅರಸಂಗೆ ನೀವುನಾವುಸಹ ಪ್ರಿಯವಂಮಾಡುವ, ಅರಸು ಸರ್ವದೇವತಾಮಯನಾದುದರಿಂದ ಆತನುಸಂತೋಷಪಟ್ಟರೆ ಸರ್ವಭೂತಂಗಳೂ ಸಂತೋಷಪಡುತಲಿವೆ ॥೩೫॥ ಎಂಬ ಆಮಾತಂಕೇಳಿ ಶ್ರೀಕೃಷ್ಣನು ತನಗೆಇಷ್ಟವಾದುದನಾಗೆ ಬಾಹುಯುದ್ಧವಂಸಮ್ಮತಿಸಿ, ದೇಶಕಾಲೋಚಿತವಾದ ಮಾತನಾಡಿದನು ॥೩೬॥ (ಅದೆಂತೆನೆ-) ವನಚರರಾದನಾವು ಇನ್ನೂ ಇತರರು ಎಲ್ಲರೂ ಕಂಸನಪ್ರಜೆಗಳೇಹೊರತುಬೇರೆಯಲ್ಲ, ನಿರಂತರದಲ್ಲಿಯೂ ಆತನಿಗೆಪ್ರಿಯವನ್ನೇಮಾಡುವೆವು, ಅದೇನಮಗೆ ಪರಮಾನುಗ್ರಹವು ॥೩೭॥ ನಾವುಬಾಲಕರು ನಮ್ಮವಯಸ್ಕರಾದಬಾಲಕರೊಡನೆಯಾಚಿತರಾಗಿ ಯಥೋಚಿತವುಸ್ಸಂತೆಬಾಹುಯುದ್ಧಾದಿಗಳಿಂದ ವಿಹರಿಸುವೆವು. ಎಲೈಜಟ್ಟಿಗನೇ! ಅಧರ್ಮವಂಮಾಡಬಾರದು ॥೩೮॥ (ಎಂಬಕೃಷ್ಣನವಾಕ್ಯವಂ ಕೇಳಿಚಾಣೂರನು ನುಡಿದನದೆಂತೆನೆ-) ಎಲೈಕೃಷ್ಣನೇ! ನೀನುಬಾಲಕನಲ್ಲ, ಬಲರಾ

ಯಿಭೊಹತೋಯನೆಸಹಸ್ರದ್ವಿಪಸತ್ತ್ವಭೃತ್ ‖೩೯‖ ತಸ್ಮಾದ್ಭವದ್ಭ್ಯಾಂಬಲಿಭಿರ್ಯೋದ್ಧವ್ಯಂ ನಾನಯೋತ್ರವೈ । ಮಯಿವಿಕ್ರಮವಾರ್ಷ್ಣೇಯಬಲೇನಸಹಮುಷ್ಟಿಕಃ ‖೪೦‖

-*ಇತಿಶ್ರೀಮದ್ಭಾಗವತೆ- ದಶಮಸ್ಕಂಧೆ-ತ್ರಿಚತ್ವಾರಿಂಶೋಧ್ಯಾಯಃ-*-

—:*:—

ಶ್ಚ-ಬಲರಾಮನೂಕೂಡ, ಬಲಿನಾಂ-ಬಲವಂತರಲ್ಲಿ, ವರಃ-ಶ್ರೇಷ್ಠನಾಗಿರುವನು‖೩೯‖ತಸ್ಮಾತ್-ಆದ್ದರಿಂದ, ಭವದ್ಭ್ಯಾಂ-ನಿಮ್ಮೊಡನೆ, ಬಲಿಭಿಃ-ಬಲವಂತರಿಂದ, ಯೋದ್ಧವ್ಯಂ-ಕಾಳಗಮಾಡಲ್ಪಡತಕ್ಕದ್ದು. ಅತ್ರ-ಈವಿಷಯದಲ್ಲಿ, ಅನಯಃ-ಅನ್ಯಾಯವು, ನವೈ-ಇಲ್ಲವೇಯಿಲ್ಲ. ವಾರ್ಷ್ಣೇಯ-ಕೃಷ್ಣನೇ! ಮಯಾ-ನನ್ನೊಡನೆ, ವಿಕ್ರಮ-ಸಾಮರ್ಥ್ಯವಂ ತೋರಿಸು, ಬಲೇನಸಹ-ಬಲರಾಮನಕೂಡೆ, ಮುಷ್ಟಿಕಃ-ಮುಷ್ಟಿಕನೆಂಬವನು, ಸಾಮರ್ಥ್ಯವಂ ತೋರಿಸುವನು ‖೪೦‖

ಇತಿಶ್ರೀಮದ್ಭಾಗವತೇ ದಶಮಸ್ಕಂಧೇ
ತ್ರಿಚತ್ವಾರಿಂಶಟೀಕಾ



ಮನೂ ಹುಡುಗನಲ್ಲ, ಬಲವಂತರಲ್ಲಿ ಹೆಗ್ಗಡಿಯು; ಸಾವಿರಾನೆಗಳಬಲಮುಳ್ಳಮಹಾಗಜವಂ ಲೀಲೆಯಿಂದಲೇ ನೀನುಸಂಹರಿಸಿದೆಯಲ್ಲವೆ? ‖೩೯‖ ಆದುದರಿಂದ ಬಲಶಾಲಿಗಳಾದನಿಮ್ಮಸಂಗಡಲೇ ಯುದ್ಧವಂಮಾಡಬೇಕು-ಇಲ್ಲಿ ಅಧರ್ಮವೇನೂ ಇಲ್ಲವು. ಎಲಾಕೃಷ್ಣನೇ! ನೀನುನನ್ನಲ್ಲಿಪರಾಕ್ರಮವಂತೋರಿಸು, ಮುಷ್ಟಿಕನುಬಲರಾಮನೊಡನೆಯುದ್ಧವಂಮಾಡಲಿ ‖೪೦‖ (ಎಂದುಚಾಣೂರನುಕೃಷ್ಣನಂಕುರಿತುನುಡಿದನು) ‖✝‖

ಇಂತುಶ್ರೀಶುಕಮುನಿಯು ಪರೀಕ್ಷಿದ್ರಾಯನಂಕುರಿತು ನಿರೂಪಿಸಿದನೆಂದುಸೂತಪೌರಾಣಿಕನು ನೈಮಿಶಾರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಪೇಳಿದನೆಂಬಲ್ಲಿಗೆ- ಶ್ರೀಮನ್ಮಹೀಶೂರಪುರವರಾಧೀಶಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜ ವಿರಚಿತಮಾದ "ಶ್ರೀಕೃಷ್ಣರಾಜವಾಣೀವಿಲಾಸ" ಮೆಂಬ ಶ್ರೀಭಾಗವತದ ಕರ್ಣಾಟಭಾಷಾ ವ್ಯಾಖ್ಯಾನದೊಳು ದಶಮಸ್ಕಂಧದಲ್ಲಿತ್ರಿಚತ್ವಾರಿಂಶಾಧ್ಯಾಯಂ ಸಂಪೂರ್ಣಮಾದುದು

ಮಂಗಳಮಸ್ತು



ಏವಂ ಚರ್ಚಿತಸಂಕಲ್ಪೋ ಭಗವಾನ್ ಮಧುಸೂದನಃ । ಆಸಸಾದಾಥ ಚಾಣೂರಂ ಮುಷ್ಟಿಕಂ ರೋಹಿಣೀಸುತಃ ॥೧॥ ಅಸ್ಫೋಟ್ಯ ಹಸ್ತೌ ಹಸ್ತಾಭ್ಯಾಮೂರೂ ಚೈವ ಪುನಃಪುನಃ । ವಿಸೃಜ್ಯ ಭೂಯಸ್ಸಂಗೃಹ್ಯ ಪರಿಕ್ರಮ್ಯ ಪರಸ್ಪರಮ್ ॥೨॥ ಹಸ್ತಾಭ್ಯಾಂ ಹಸ್ತಯೋರ್ಬದ್ಧ್ವಾ ಪದ್ಭ್ಯಾಮೇವ ಚ ಪಾದಯೋಃ । ವಿಚಕರ್ಷತುರನ್ಯೋನ್ಯಂ ಪ್ರಸಹ್ಯ ವಿಜಿಗೀಷಯಾ ॥೩॥ ಅರತ್ನೀ ದ್ವೇ ಅರತ್ನಿಭ್ಯಾಂ ಜಾನುಭ್ಯಾಂ ಚೈವ ಜಾನುನೀ । ಶಿರಶ್ಶೀರ್ಷ್ಣೋರಸೋರಸ್ತಾವನ್ಯೋನ್ಯಮಭಿಜಘ್ನತುಃ ॥೪॥ ಪರಿಭ್ರಾಮಣವಿಕ್ಷೇಪಪರಿರಂಭಾವಪಾತನೈಃ । ಉತ್ಸರ್ಪಣಾಪಸರ್ಪೈಸ್ತಾವನ್ಯೋನ್ಯಂ ಪ್ರತ್ಯರುಂಧತಾಮ್ ॥೫॥ ಉತ್ಥಾಪನೈರುನ್ನಯ

---

೪೪ನೆಯ ಅಧ್ಯಾಯದ ಪ್ರತಿಪದಟೀಕೆ.

ಏವಂ-ಹೀಗೆ, ಚರ್ಚಿತಸಂಕಲ್ಪಃ-ನಿಶ್ಚಯಿಸಲ್ಪಟ್ಟ ಯೋಚನೆಯುಳ್ಳವನಾದ, ಭಗವಾನ್-ಭಗವಂತನಾದ, ಮಧುಸೂದನಃ-ಕೃಷ್ಣನು, ಚಾಣೂರಂ-ಚಾಣೂರನನ್ನೂ, ಅಥ-ಆಮೇಲೆ, ರೋಹಿಣೀಸುತಃ-ರಾಮನು, ಮುಷ್ಟಿಕಂ-ಮುಷ್ಟಿಕನನ್ನೂ, ಆಸಸಾದ ಸಂಧಿಸಿದನು॥೧॥ ಹಸ್ತಾಭ್ಯಾಂ-ಕೈಗಳಿಂದ, ಹಸ್ತೌ-ಕೈಗಳನ್ನೂ, ಊರೂಚೈವ-ತೊಡೆಗಳನ್ನೂ, ಪುನಃಪುನಃ-ಮರಳಿಮರಳಿ, ಆಸ್ಫೋಟ್ಯ-ತಟ್ಟಿ, ವಿಸೃಜ್ಯ-ಬಿಟ್ಟು, ಭೂಯಃ-ಮರಳಿಯೂ, ಸಂಗೃಹ್ಯ-ಹಿಡಿದು, ಪರಸ್ಪರಂ-ಅನ್ಯೋನ್ಯವಾಗಿ, ಪರಿಕ್ರಮ್ಯ-ಸುಳಿದಾಡಿ॥೨॥ ಹಸ್ತಾಭ್ಯಾಂ-ಕೈಗಳಿಂದ, ಹಸ್ತಯೋಃ-ಕೈಗಳಲ್ಲಿಯೂ, ಪದ್ಭ್ಯಾಮೇವ-ಕಾಲುಗಳಿಂದಲೆ, ಪಾದಯೋಶ್ಚ-ಕಾಲುಗಳಲ್ಲಿಯೂ, ಅನ್ಯೋನ್ಯಂ-ಒಬ್ಬರನ್ನೊಬ್ಬರು, ಪ್ರಸಹ್ಯ-ಬಲಾತ್ಕರಿಸಿ, ವಿಜಿಗೀಷಯಾ-ವಿಶೇಷವಾಗಿಜಯಿಸಬೇಕೆಂಬಯಿಚ್ಛೆಯಿಂದ, ವಿಚಕರ್ಷತುಃ-ಎಳೆದಾಡಿದರು॥೩॥ ಅರತ್ನೀದ್ವೇ-ಎರಡುಮೊಣಕೈಗಳನ್ನೂ, ಅರತ್ನಿಭ್ಯಾಂ-ಮೊಣಕೈಗಳಿಂದಲೂ, ಜಾನುಭ್ಯಾಮೇವ-ಮೊಣಕಾಲುಗಳಿಂದಲೇ, ಜಾನುನೀಚ-ಮೊಣಕಾಲುಗಳನ್ನೂ, ಶೀರ್ಷ್ಣಾ-ತಲೆಯಿಂದ, ಶಿರಃ-ತಲೆಯನ್ನೂ, ಉರಸಾ-ಎದೆಯಿಂದ, ಉರಃ-ಎದೆಯನ್ನು, ಅನ್ಯೋನ್ಯಂ-ಪರಸ್ಪರವಾಗಿ, ಅಭಿಜಘ್ನತುಃ-ಥೀತಗಿಲಿಸಿಬಡಿದಾಡಿದರ॥೪॥ ಪರಿ...ತನೈಃ-ಪರಿಭ್ರಾಮಣ-ತಿರುಗಿಸುವಿಕೆ, ವಿಕ್ಷೇಪ-ಎತ್ತಿಹಾಕುವಿಕೆ, ಪರಿರಂಭ-ಘಟ್ಟಿಯಾಗಿಅಪ್ಪಿಹಿಡಿಯುವಿಕೆ, ಅವಪಾತನೈಃ-ಬೀಳಕೆಡಹುವಿಕೆಗಳಿಂದಲೂ, ಉತ್ಸರ್ಪಣಾಪಸರ್ಪೈಃ-ಹಾರಾಡುವಿಕೆಗಳಿಂದಲೂ, ಧುಮ್ಮಿಕ್ಕುವಿಕೆಗಳಿಂದಲೂ, ಅಥವಾ ಮುಂದೋಡುವಿಕೆ ಹಿಂದಟ್ಟುವಿಕೆಗಳಿಂದಲೂ, ತೌ-ಆಕೃಷ್ಣಚಾಣೂರರು, ಅನ್ಯೋನ್ಯಂಪರಸ್ಪರವಾಗಿ, ಪ್ರತ್ಯರುಂಧತಾಂ-ತಡದಾಡಿದರು ॥೫॥ ಉತ್ಥಾಪನೈಃ-ಕಾಲುಹಿಡಿದು ಎತ್ತುವಿಕೆಗಳಿಂದಲೂ, ಉನ್ನಯನೈಃ-

---

ಶ್ರೀಧರೀಯಶ್ಲೋಕಃ ॥ ಚತುಶ್ಚತ್ವಾರಿಂಶಕೇತು ಮಲ್ಲಕಂಸಾದಿಮರ್ದನಂ । ಕಂಸಯೋಷಿತ್ಸಮಾಶ್ವಾಸಸ್ತಾಭ್ಯಾಂ ಪಿತ್ರೋಶ್ಚದರ್ಶನಮ್ ॥ ‡ ॥ ನಾಲ್ವತ್ತನಾಲ್ಕನೆಯಅಧ್ಯಾಯದಲ್ಲಿ ಶ್ರೀಕೃಷ್ಣನು ಜಟ್ಟಿಗಳನ್ನೂ ಕಂಸನಂಸಹ ಸಂಹರಿಸಿ ಅವನಸ್ತ್ರೀಯರುಗಳಂ ಸಮಾಧಾನಂಗೊಳಿಸಿ ಬಲರಾಮಸಮೇತನಾಗಿ ಮಾತಾಪಿತೃಗಳಾದ ದೇವಕೀವಸುದೇವರದರ್ಶನವಂಮಾಡಿದನು. ಎಂಬರ್ಥವಂ ಶ್ರೀಶುಕಮುನಿಯು ಪರೀಕ್ಷಿದ್ರಾಯನಂಕುರಿತುನಿರೂಪಿಸುವನಪಂತೆನೆ;-

ಎಲೈ, ಅರಸೇ! ಅನಂತರದಲ್ಲಿ ಈಪ್ರಕಾರಂನಿಶ್ಚಿತಸಂಕಲ್ಪನಾಗಿ ಭಗವಂತನಾದಶ್ರೀಕೃಷ್ಣನು ಚಾಣೂರನಂಕುರಿತು ಬಾಹುಯುದ್ಧಕ್ಕೆಹೋದನು. ಬಲರಾಮನುಮುಷ್ಟಿಕನಮೇಲೆಹೋದನು ॥೧॥ ಹಸ್ತಂಗಳಿಂದ ಭುಜಂಗಳಂತಟ್ಟಿಕೊಂಡು ತೊಡೆಗಳಂಬಾರಿಬಾರಿಗೂತಟ್ಟಿಕೊಂಡು ಹಿಂದಕ್ಕೂಮುಂದಕ್ಕೂ ಚಲಿಸುತ್ತಪರಸ್ಪರವಾಗಿ ಇದಿರುತಟ್ಟಿ॥೨॥ಪರಸ್ಪರವಾಗಿ ಹಸ್ತಗಳಿಂದಹಸ್ತಂಗಳಂಹಿಡಿದು, ಪಾದಂಗಳಿಂದಪಾದಂಗಳಂ ತೊಡರುಹಾಕಿಕೊಂಡು, ಪರಸ್ಪರವಾಗಿಜಯಿಸಬೇಕೆಂಬೆಣಿಕೆಯಿಂ ಎಳೆದಾಡಿದರು ॥೩॥ಮೊಣಕೈಗಳಿಂದ ಮೊಣಕೈಗಳಂಮೊಣಕಾಲ್ಗಳಿಂದಮೊಣಕಾಲ್ಗಳಂ ಶಿರಸ್ಸಿನಿಂದ ಶಿರಸ್ಸಂ ವಕ್ಷಸ್ಸಿನಿಂದ ವಕ್ಷಸ್ಸಂ ಪರಸ್ಪರವಾಗಿಪ್ರಹರಿಸಿದರು॥೪॥ಹಸ್ತಾದಿಗಳಲ್ಲಿಪಿಡಿದು ಸುತ್ತಿಸುವಿಕೆಗಳಿಂದಲೂ, ಹಿಂದಕ್ಕೆತಳ್ಳುವಿಕೆಗಳಿಂದಲೂ, ಬಾಹುಗಳಿಂದಪ್ಪಿಪೀಡಿಸುವಿಕೆಗಳಿಂದಲೂ, ಇದಿರಿಗೆಹೋಗಿಬೀಳುವಿಕೆಗಳಿಂದಲೂ, ಹಿಡಿದುಕೊಳ್ಳುವುದರಿಂದಲೂ, ಹಿಂಭಾಗದಿಂದ ಬಂದುಹಿಡಿಯುವಿಕೆಗಳಿಂದಲೂ, ಪರಸ್ಪರವಾಗಿ ಬಾಹುಯುದ್ಧವಂಮಾಡಿದರು॥೫॥ ಕೆಳಗೆಬಿದ್ದಿರುವನಂ ಮುದಿರಿಮೊಟ್ಟೆಕಟ್ಟಿ ಎತ್ತಿಹಾಕುವುದರಿಂದಲೂ, ಹೆಗ್ಗತ್ತಿನಮೇಲೆ ಭುಜವಂಸೇರಿಸಿ ಬಗ್ಗಿಸುವಿಕೆಯಿಂ

ನೈಶ್ಚಾಲನೈಸ್ಸ್ಥಾಪನೈರಪಿ|ಪರಸ್ಪರಂಜಿಗೀಷಂತಾವಪಚಕ್ರತುರಾತ್ಮನಃ ೬|ತದ್ಬಲಾಬಲವದ್ಯುದ್ಧ
ಸಮೇತಾಸ್ಸರ್ವಯೋಷಿತಃ|ಊಚುಃಪರಸ್ಪರಂರಾಜನ್ಸಾನುಕಂಪಾಶ್ಚಯೂಥಶಃ|೭|ಮಹಾನಯಂ
ಬತಾಧರ್ಮಏಷಾಂರಾಜಸಭಾಸದಾಮ್|ಯೇಬಲಾಬಲವದ್ಯುದ್ಧಂರಾಜ್ಞೋಽನ್ವಿಚ್ಛಂತಿಪಶ್ಯತಃ|೮|ಕ್ವ
ವಜ್ರಸಾರಸರ್ವಾಂಗೌಮಲ್ಲೌಶೈಲೇಂದ್ರಸಮ್ಮಿತೌ |ಕ್ವಚಾತಿಸುಕುಮಾರಾಂಗೌಕಿಶೋರೌನಾಪ್ತ
ಯೌವನೌ |೯| ಧರ್ಮವ್ಯತಿಕ್ರಮೋಹ್ಯಸ್ಯಸಮಾಜಸ್ಯಧ್ರುವಂಭವೇತ್ |ಯತ್ರಾಧರ್ಮಸ್ಸಮುತ್ತಿಷ್ಠೇ
ನ್ನಸ್ಥೇಯಂತತ್ರಕರ್ಹಿಚಿತ್ |೧೦| ನಸಭಾಂಪ್ರವಿಶೇತ್ಪ್ರಾಜ್ಞಸ್ಸಭ್ಯದೋಷಾನನುಸ್ಮರನ್ | ಅ

---

ತೋಳ್ಗಳಂನೆಗಪಿಬಿಸುಡುವುದರಿಂದಲೂ, ಚಾಲನೈಃ ಪಟ್ಟುಗಳಂಜಿಡಿಸಿಕೊಂಡುಕೊಡಹುವಿಕೆಗಳಿಂದಲೂ, ಸ್ಥಾಪನೈರಪಿ ಅಂಗಗಳನ್ನು ಉಂಡೆಸುತ್ತಿದಂತೆಮಾಡಿಯಿಡುವಿಕೆಗಳಿಂದಲೂ, ಪರಸ್ಪರಂ-ಒಬ್ಬರನೊಬ್ಬರು, ಜಿಗೀಷಂತೌ-ಗೆಲ್ಲಲೆಳಸಿದವರಾಗಿ, ಆತ್ಮನಃ-ಶರೀರಕ್ಕೆ, ಅಪಚಕ್ರತುಃ-ಅಪಕಾರವಂಗೆಯ್ದರು ||೬|| ತತ್-ಆ, ಬಲಾಬಲವದ್ಯುದ್ಧಂ-ಬಲಿಷ್ಠನಾದವನಿಗೂಬಲವಿಲ್ಲದವನಿಗೂಆಗುವ ಕಾಳಗವನ್ನು ಕುರಿತು. ಯೂಥಶಃ-ಗುಂಪುಗಳಾಗಿ, ಸಮೇತಾಃ-ಕೂಡಿದವರಾದ, ಸರ್ವಯೋಷಿತಃ-ಹೆಂಗಳೆಲ್ಲರೂ,ಸಾನುಕಂಪಾಶ್ಚ-ದಯೆಯಿಂದ ಸಹಿತರೂಆಗಿ, ಪರಸ್ಪರಂ-ಅನ್ಯೋನ್ಯವಾಗಿ, ಊಚಿರೆರಾಜನ್-ಹೇಳಿಕೊಂಡರು, ದೊರೆಯೇ ||೭||ಯೇ-ಯಾವಸಭಿಕರು, ರಾಜ್ಞಃಪಶ್ಯತಃ-ದೊರೆಯು ನೋಡುತ್ತಿರಲಾಗಿ, ಬಾಲಬಲವದ್ಯುದ್ಧಂ-ಹುಡುಗನಿಗೂ ಬಲವಂತನಿಗೂ ಜಗಳವನ್ನು, ಅನ್ವಿಚ್ಛಂತಿ- ಬಯಸುತಲಿರುವರೋ, ತೇಷಾಮೇಷಾಂ-ಆಯಿಾ, ರಾಜಸಭಾಸದಾಂ-ಅರಸಿನಸಭೆಯಲ್ಲಿ ಕುಳಿತಿರುವರಿಗೆ, ಅಯಂ-ಇದು, ಮಹಾನಧರ್ಮಃ-ದೊಡ್ಡಪಾಪವಾಗಿದೆ ಬತ-ಕಷ್ಟವು ||೮|| ವಜ್ರಸಾರಸರ್ವಾಂಗೌ-ವಜ್ರದಂತೆದೃಢವಾದ ಸಕಲಾವಯವಗಳೂ ಉಳ್ಳಂಥಾ, ಶೈಲೇಂದ್ರಸಮ್ಮಿತೌ-ಹೆಬ್ಬೆಟ್ಟುಗಳಹಾಗಿರುವರೆಂಬ ಒಪ್ಪಿನಯಾದ, ಮಲ್ಲೌ-ಜಟ್ಟಿಗರು, ಕ್ವ-ಎಲ್ಲಿ? ಅತಿಸುಕುಮಾರಾಂಗೌ-ಬಹಳ ಕೋಮಲವಾದ ಮೈಯುಳ್ಳವರೂ, ನಾಪ್ತಯೌವನೌ-ಪಡೆಯಲ್ಪಟ್ಟ ಪ್ರಾಯವುಳ್ಳವರಲ್ಲದವರೂ, ಆದ, ಕಿಶೋರೌ-ಹುಡುಗರು, ಕ್ವ-ಎಲ್ಲಿ? ||೯||ಅಸ್ಯಸಮಾಜಸ್ಯ-ಈಸಭೆಗೆ, ಧರ್ಮವ್ಯತಿಕ್ರಮಃ-ಧರ್ಮವನ್ನು ಮಿಾರಿನಡೆಯುವಿಕೆ, ಧ್ರುವಂ-ನಿಶ್ಚಯವಾಗಿ, ಭವೇದ್ಧಿ-ಆದೀತಲ್ಲವೆ,ಯತ್ರ-ಯಾವಸ್ಥಳದಲ್ಲಿ, ಅಧರ್ಮಃ-ಪಾಪವು, ಸಮುತ್ತಿಷ್ಠೇತ್-ಹುಟ್ಟುವುದೋ, ತತ್ರ-ಅಲ್ಲಿ, ಕರ್ಹಿಚಿತ್-ಯಾವಾಗಲೂ, ನಸ್ಥೇಯಂ-ಇರತಕ್ಕದ್ದಲ್ಲವು ||೧೦||ಸಭ್ಯದೋಷಾನ್-ಸಭಿಕರತಪ್ಪುಗಳನ್ನು, ಅನುಸ್ಮರನ್-ನೆನಪುಗೊಳ್ಳುತಲಿರುವ, ಪ್ರಾಜ್ಞಃ-ಪಂಡಿತನು, ಸಭಾಂ-ಸಭೆಯನ್ನು, ನಪ್ರವಿಶೇತ್-ಪ್ರವೇಶಿಸಬಾರದು. ನರಃ-ತಿಳಿದಮನುಷ್ಯನು, ಅಬ್ರುವನ್-ಹೇಳದೇ ಹೋದರೂ, ಅಜ್ಞಃ-ಮೂಢನಾಗಿ, ವಿಬ್ರುವನ್-ವ್ಯತ್ಯಸ್ತವಾಗಿ ಹೇಳಿದವನಾದರೂ, ಕಿಲ್ಬಿಷಂ-ಪಾಪವನ್ನು, ಅಶ್ನುತೇ-ಅನುಭವಿಸುತಲಿರುವನು ||೧೧||

---

ದಲೂ, ಗಳಗೆಹಾಕಿಮೊಟ್ಟುವುದರಿಂದಲೂ, ಅನ್ಯೋನ್ಯವಾಗಿ ಪೀಡನೆಯಂಮಾಡಿದರು |೬|ನೋಡುವ ದಯಾಯುಕ್ತರಾದ ಆಪುರಸ್ತ್ರೀಯರುಗಳು ಗುಂಪುಗುಂಪಾಗಿನಿಂತು ಬಾಲಕನಾದ ಶ್ರೀಕೃಷ್ಣನಿಗೂ ದೊಡ್ಡವನಾದ ಚಾಣೂರನಿಗೂ ದ್ವಂದ್ವಯುದ್ಧವಂನೋಡಿ ಈಕಾಳಗವು ವಿಷಮವೆಂದು ಮಾತನಾಡಿಕೊಂಡರು|೭| ಈರಾಜಸ್ಥಾನದಲ್ಲಿರುವ ಸಾಮಾಜಿಕರು ಅಧರ್ಮಪ್ರವರ್ತಕರಾಗಿರುವರು, ಬಾಲಕನಿಗೂ ದೊಡ್ಡರಾಕ್ಷಸನಿಗೂ ಜೋಡಿಮಾಡಿ ಕೌತುಕವಂನೋಡುವರು, ಅರಸಿಗೂವಿವೇಕವಿಲ್ಲ, ನ್ಯಾಯವಾದರೆ ಕಾಳಗವಂಬಿಡಿಸಬೇಕು |೮| [illegible]ಬಿಟ್ಟು ಮತ್ತು ನೋಡುತ್ತಲಿರುವರು. ವಜ್ರಸಾರದಂತೆ ಕಠಿನವಾದ ದೇಹವುಳ್ಳ ಪರ್ವತಾಕಾರರಾದ ಚಾಣೂರಮುಷ್ಟಿಕರೆಲ್ಲಿ, ಅತಿಮೃದುವಾದದೇಹವುಳ್ಳ ಈಗಹುಟ್ಟಿಬರುತ್ತಲಿರುವ ಯೌವನವುಳ್ಳ ಈಬಾಲಕರೆಲ್ಲಿ |೯| ಅದರಿಂದ ಈಸಭಾಜನರಿಗೆ ಅಧರ್ಮವುನಿಶ್ಚಯವಾಗಿ ಉಂಟಾಗುವುದು. ಎಲ್ಲಿಅಧರ್ಮವುಂಟಾಗುವುದೋ ಅಲ್ಲಿಕ್ಷಣಮಾತ್ರವೂಇರಬಾರದು. (ಎಂದುನುಡಿದರು) |೧೦| ಮತ್ತೆ ಕೆಲವರುಸ್ತ್ರೀಯರುಹೇಳಿದರೆಂತೆನೆ-ಪ್ರಾಜ್ಞನಾದವನು ಸಭಾಜನರದೋಷಂಗಳನಾಲೋಚಿಸಿ ಸಭೆಗೆಹೋಗಲೇಬಾರದು ನ್ಯಾಯಂಗಳಂತಿಳಿದಿದ್ದರೂ ಹೇಳದಿರುವಪುರುಷನೂ, ನ್ಯಾಯವಂಅನ್ಯಾಯವನಾಗಿಯೂ ಅನ್ಯಾಯವಂ ನ್ಯಾಯವನಾಗಿಯೂ ಹೇಳುವಪುರುಷನೂ ಮಹಾಪಾಪವನೆಯ್ದುವನು |೧೧| ಎಲೈಸಖಿಯರುಗಳಿರಾ [illegible]

ಬ್ರುವನ್ವಿಬ್ರುವನ್ನಜ್ಞೋನರಃಕಿಲ್ಬಿಷಮಶ್ನುತೇ ॥೧೧॥ ವಲ್ಗತಶ್ಶತ್ರುಮಭಿತಃಕೃಷ್ಣಸ್ಯವದನಾಂಬುಜಮ್ । ವೀಕ್ಷ್ಯತಾಂಶ್ರಮವಾರ್ಯುಪ್ತಂಪದ್ಮಕೋಶಮಿವಾಂಬುಭಿಃ ॥೧೨॥ ಕಿಂನಪಶ್ಯತರಾಮಸ್ಯಮುಖಮಾತಾಮ್ರಲೋಚನಮ್ । ಮುಷ್ಟಿಕಂಪ್ರತಿಸಾಮರ್ಷಂಹಾಸಸಂರಂಭಶೋಭನಮ್ ॥೧೩॥ ಪುಣ್ಯಾಬತವ್ರಜಭುವೋಯದಯಂನೃಲಿಂಗಗೂಢಃಪುರಾಣಪುರುಷೋವನಚಿತ್ರಮಾಲ್ಯಃ । ಗಾಃಪಾಲಯನ್ಸಹಬಲಃಕ್ವಣಯಂಶ್ಚವೇಣುಂವಿಕ್ರೀಡಯಾಂಚತಿಗಿರಿತ್ರರಮಾರ್ಚಿತಾಂಘ್ರಿಃ ॥೧೪॥ ಗೋಪ್ಯಸ್ತಪಃಕಿಮಚರನ್ಯದಮುಷ್ಯರೂಪಂಲಾವಣ್ಯಸಾರಮಸಮೋರ್ಧ್ವಮನನ್ಯಸಿದ್ಧಮ್ । ದೃಗ್ಭಿಃಪಿಬಂ

---

ಶತ್ರುಮಭಿತಃ-ಹಗೆಯವನಮುಂದೆ, ವಲ್ಗತಃ-ಹಾರಾಡುತಲಿರುವ, ಕೃಷ್ಣಸ್ಯ-ಕೃಷ್ಣನ, ಅಂಬುಭಿಃಪದ್ಮಕೋಶಮಿವ ನೀರಹನಿಗಳಿಂದ ತಾವರೆಯ ಮುಗ್ಗಿನಂತೆ, ಶ್ರಮವಾರ್ಯುಪ್ತಂ-ಬೆವರುನೀರಿನಿಂದ ತೋಯಿಸಲ್ಪಟ್ಟಿರುವ, ವದನಾಂಬುಜಂ-ಮುಖಕಮಲವು, ವೀಕ್ಷ್ಯತಾಂ-ನೋಡಲ್ಪಡಲಿ ॥೧೨॥ ಆತಾಮ್ರಲೋಚನಂ-ತುಂಬಕೆಂಪಾದ ಕಂಗಳುಳ್ಳದ್ದೂ, ಮುಷ್ಟಿಕಂಪ್ರತಿ-ಮುಷ್ಟಿಕನನ್ನುಕುರಿತು, ಸಾಮರ್ಷಂ-ಸಿಟ್ಟಿನಿಂದ ಸಹಿತವಾದ್ದೂ, ಹಾಸಸಂರಂಭಶೋಭನಂ-ನಗೆಯಿಂದಲೂ ತ್ವರೆಯಿಂದಲೂ ಶುಭವಾಗಿರುವುದೂ ಆದ, ರಾಮಸ್ಯಮುಖಂ-ರಾಮನಮೋರೆಯನ್ನು, ನಪಶ್ಯತಕಿಂ-ನೀವು ನೋಡಲಿಲ್ಲವೇನು? ॥೧೩॥ ಯತ್-ಯಾವಕಾರಣದಿಂದ, ನೃಲಿಂಗಗೂಢಃ-ಮನುಷ್ಯಚಿಹ್ನಗಳಿಂದ ಅಡಗಿರುವನಾದ, ಪುರಾಣಪುರುಷಃ-ಪರಮಾತ್ಮನೇ ಆದ, ಅಯಂ-ಈಕೃಷ್ಣನು, ವನಚಿತ್ರಮಾಲ್ಯಃ-ಚಿತ್ರವಾದ ವನಮಾಲೆಯುಳ್ಳವನೂ, ಸಹಬಲಃ-ಬಲರಾಮನೊಡನೆ ಸಹಿತನಾಗಿ, ಗಾಃ-ಆಕಳನ್ನು, ಪಾಲಯನ್-ಪಾಲಿಸುವನಾಗಿ, ವೇಣುಂ-ತನ್ನ ಕೊಳಲನ್ನು, ಕ್ವಣಯನ್-ನುಡಿಸುತಲಿರುವನೂ ಆಗಿ, ಗಿರಿತ್ರರಮಾರ್ಚಿತಾಂಘ್ರಿಃ-ಗಿರಿತ್ರ-ಶಿವನಿಂದಲೂ, ರಮಾ-ಲಕ್ಷ್ಮಿಯಿಂದಲೂ, ಅರ್ಚಿತ-ಪೂಜಿಸಲ್ಪಟ್ಟ, ಅಂಘ್ರಿಃ-ಚರಣಗಳುಳ್ಳವನಾದರೂ, ವಿಕ್ರೀಡಯಾ-ಹಲವು ಆಟಗಳಿಂದ, ಅಂಚತಿ-ತಿರುಗುತಲಿರುವನೋ, ತತ್-ಆಕಾರಣದಿಂದ, ವ್ರಜಭುವಃ-ಗೋಕುಲದ ಭೂಮಿಗಳು, ಪುಣ್ಯಾಃ-ಪುಣ್ಯವುಳ್ಳವುಗಳು (ಈಸಭೆಯಾದರೋ) ಬತ-ಕಷ್ಟವಾಗಿದೆ ॥೧೪॥ ಯತ್-ಯಾವಕಾರಣದಿಂದ, ಲಾವಣ್ಯಸಾರಂ-ರೂಪದಚಲುವಿಕೆಯಿಂದ ಶ್ರೇಷ್ಠವಾದ, ಅಸಮೋರ್ಧ್ವಂ-ಸಮಾನವೂ ಅಧಿಕವೂ ಇಲ್ಲದ, ಅನನ್ಯಸಿದ್ಧಂ-ಅನ್ಯತ್ರಸಿದ್ಧವಾಗಿರುವುದಲ್ಲದ, ಅಥವಾ ಮತ್ತೊಂದರಿಂದ ಸಿದ್ಧವಲ್ಲದ, ಅನುಸವಾಭಿನವಂ-ಪ್ರತಿಕಾಲದಲ್ಲಿಯೂ ಹೊಸತಾಗಿರುವ, ದುರಾಪಂ-ಪ್ರಯಾಸದಿಂದಲೂ ದೊರೆಯತಕ್ಕದ್ದಲ್ಲದ, ಶ್ರಿಯಃ-ಲಕ್ಷ್ಮಿಗೆ, ಏಕಾಂತಧಾಮ-ತಾನೊಬ್ಬಳೇ ಇರತಕ್ಕ ಮನೆಯಾದ, ಅಮುಷ್ಯೈಶ್ವರಸ್ಯ-ಪರಮೇಶ್ವರನಾದ ಈಕೃಷ್ಣನ, ರೂಪಂ-ಮೂರ್ತಿಯನ್ನು, ದೃಗ್ಭಿಃ-ಕಂಗಳಿಂದ, ಪಿಬಂತಿ-ಕುಡಿಯುತಲಿರುವರೋ

---

ವಿಗೆ ಇದಿರಾಗಿ ಸಂಚರಿಸುತಲಿರುವ ಶ್ರೀಕೃಷ್ಣನ ಸ್ವೇದಯುಕ್ತವಾದ ಮುಖಕಮಲವು ಜಲಬಿಂದುಯುಕ್ತವಾದ ತಾವರೆಹೂವಿನಂತೆ ಇದೆ ನೋಡಿರಮ್ಮಾ ॥೧೨॥ (ಮತ್ತೆ ಕೆಲವರು ನುಡಿದರದೆಂತೆನೆ-) ಎಲೈ ಸ್ತ್ರೀಯರುಗಳಿರಾ! ಸ್ವಲ್ಪ ಕೆಂಪಾದ ನೇತ್ರಗಳುಳ್ಳದುದಾಗಿ, ಮುಷ್ಟಿಕನನ್ನು ಕುರಿತು ಕೋಪಯುಕ್ತವಾದ, ನಗುವಿನಿಂದಲೂ ಪ್ರಯತ್ನದಿಂದಲೂ ಶೋಭಿತವಾದ, ಬಲರಾಮನ ಮುಖವಂ ನೋಡಲಿಲ್ಲವೆ? ॥೧೩॥ (ಮತ್ತೆ ಕೆಲವರು ಸ್ತ್ರೀಯರು ನುಡಿದರು-) ವ್ರಜಭೂಮಿಗಳು ಬಹುಪುಣ್ಯಮುಳ್ಳಂತಹವುಗಳು, ಅದೇಂ ಕಾರಣದಿಂದೆಂದರೆ- ಪುರಾಣಪುರುಷನಾದ ಪರಮಾತ್ಮನು ಮಾನುಷವೇಷದಿಂ ಗೂಢನಾಗಿ ವನಪುಷ್ಪಂಗಳ ಮಾಲೆಯಂ ಧರಿಸಿದವನಾಗಿ ಬಲರಾಮನ ಸಮೇತನಾಗಿ ಕೊಳಲನೂದುತ ರುದ್ರನಿಂದಲೂ ಲಕ್ಷ್ಮಿಯಿಂದಲೂ ಪೂಜಿತಮಾದ ಪಾದಪದ್ಮಮುಳ್ಳವನಾಗಿ ಗೋವುಗಳಂ ಸಂಚಾರಗೊಳಿಸುತ ಆವನಭೂಮಿಯಲ್ಲಿ ವಾಸಮಂ ಮಾಡಿದನು ॥೧೪॥ ಇದೇ ಅಲ್ಲ- ಯಾವ ಗೋಪಸ್ತ್ರೀಯರು ಲಕ್ಷ್ಮೀಸತಿಯಾದ ಕೃಷ್ಣನ ಸೌಂದರ್ಯಾತಿಶಯವಂ ನೇತ್ರಂಗಳಿಂದ ನೋಡುವರೋ, ಆ ಗೋಪಸ್ತ್ರೀಯರು ಏನು ಪುಣ್ಯವಂ ಮಾಡಿದರೋ, ಭಗವಂತನ ಸೌಂದರ್ಯವೆಂತಾದ್ದೆಂದರೆ- ಆ ಸೌಂದರ್ಯಕ್ಕೆ ಸಮಾನವಾದ ಸೌಂದರ್ಯವು ಎಲ್ಲಿಯೂ ಇಲ್ಲ, ಅಧಿಕವಾದದ್ದೂ ಇಲ್ಲವು, ಅಂತಾದ್ದು ಪ್ರತಿಕ್ಷಣದಲ್ಲಿಯೂ ಸ್ವಭಾವಸಿದ್ಧವಾಗಿ ತೋರುವುದು ' ಪುಣ್ಯಹೀನರಿಗೆ ದುರ್ಲಭವಾದಂತಾದ್ದು, ಕಾಂತಿಗೂ ಯಶಸ್ಸಿಗೂ ಮುಖ್ಯಸ್ಥಾನವಾ

ಶ್ಯಾನುಸವಾಭಿನವಂದುರಾಪಮೇಕಾಂತಧಾಮಯಶಸಃ ಶ್ರಿಯಈಶ್ವರಸ್ಯ ||೧೫||ಯಾದೋಹನೇವಹನ
ನೇಮಥನೋಪಲೇಪಪ್ರೇಂಖೇಂಖನಾರ್ಭರುದಿತೋಕ್ಷಣಮಾರ್ಜನಾದೌ|ಗಾಯಂತಿಚೈನಮನುರಕ್ತಧಿಯಾ
ಶ್ರುಕಂಠ್ಯೋಧನ್ಯಾವ್ರಜಸ್ತ್ರಿಯಉರುಕ್ರಮಚಿತ್ತಯಾನಾಃ |೧೬| ಪ್ರಾತರ್ವ್ರಜಾದ್ವ್ರಜತಆ
ವಿಶತಶ್ಚಸಾಯಂಗೋಭಿಸ್ಸಮಂಕ್ವಣಯತೋಸ್ಯನಿಶಮ್ಯವೇಣುಮ್ | ನಿರ್ಗಮ್ಯತೂರ್ಣಮಬಲಾಃಪ
ಥಿಭೂರಿಪುಣ್ಯಾಃಪಶ್ಯಂತಿಸಸ್ಮಿತಮುಖಂಸದಯಾವಲೋಕಮ್ |೧೭| ಏವಂಪ್ರಭಾಷಮಾಣಾಸುಸ್ತ್ರೀ
ಷುಯೋಗೇಶ್ವರೋಹರಿಃ | ಶತ್ರುಂಹಂತುಂಮನಶ್ಚಕ್ರೇಭಗವಾನ್ಭರತರ್ಷಭ |೧೮| ಉಪಶ್ರುತ್ಯಗಿ

---

ಅತ್ರ-ಆಕಾರಣದಿಂದ, ಗೋಪ್ಯಃ-ಗೊಲ್ಲತಿಯರು, ಕಿಂತಪಃ-ಯಾವತಪಸ್ಸನ್ನು, ಅಚರನ್-ಮಾಡಿರುವರು? ||೧೫||
ಯಾಃ-ಯಾವಗೋಪಿಯರು, ದೋಹನೇ-ಹಾಲಂಕರೆಯುವಲ್ಲಿಯೂ,ಅವಹನನೇ-ಅಕ್ಕಿಯಂ ಕುಟ್ಟಿತೊಳಸುವಲ್ಲಿಯೂ, ಮಥನ....
ನಾದೌ-ಮಥನಂ-ಮೊಸರಂ ಕಡೆಯುವುದರಲ್ಲಿಯೂ, ಉಪಲೇಪ-ಅರಿಸಿನ ಮೊದಲಾದುವುಗಳಂ ತೊಡೆದುಕೊಳ್ಳುವಲ್ಲಿಯೂ, ಪ್ರೇಂ
ಖೇಂಖನ-ತೊಟ್ಟಿಲಂ ತೂಗುವುದರಲ್ಲಿಯೂ, ಅರ್ಭರುದಿತ-ಮಕ್ಕಳುಅಳುತಿರುವಲ್ಲಿಯೂ, ಉಕ್ಷಣ-ನೀರುಚಿಮುಕಿಸುವುದರಲ್ಲಿಯೂ.
ಮಾರ್ಜನ-ನೀರುಚಿಮುಕಿಸುವುದು, ಆದೌ-ಮೊದಲಾದಕೆಲಸವಲ್ಲಿ, ಅನುರಕ್ತಧಿಯಃ-ಅನುರಾಗಬಾಧಬುದ್ಧಿಯುಳ್ಳವರಾಗಿಯೂ,
ಅಶ್ರುಕಂಠ್ಯಃ-ಕಣ್ಣೀರೂ ಬಿಗ್ಗಿತೊಡು ಉಳ್ಳವರೂ, ಆಗಿ, ಏನಂ-ಈಕೃಷ್ಣನನ್ನು, ಗಾಯಂತಿ-ಹಾಡುತ್ತಿರುವರೋ, ಉರುಕ್ರ
ಮಚಿತ್ತಯಾನಾಃ-ಉರುಕ್ರಮ-ವಿಷ್ಣುವಿನಲ್ಲಿ, ಚಿತ್ತ-ಮನಸ್ಸಿರೋಣವೇ, ಯಾನಾಃ-ಸಾಧನವಾಗಿವುಳ್ಳವರು. ಅಥವಾ ಮನಸ್ಸೇ,
ಯಾನಾಃ-ಸರ್ವವಿಷಯ ಪ್ರಾಪ್ತಿಯಾಗಿವುಳ್ಳವರು ಆದ, ವ್ರಜಸ್ತ್ರಿಯಃ-ಗೋಕುಲದಹೆಂಗಸು, ಧನ್ಯಾಃ-ಕೃತಾರ್ಥರಾದವರು||೧೬||
ಪ್ರಾತಃ-ಬೆಳಗಿನಹೊತ್ತಿನಲ್ಲಿ, ವ್ರಜಾತ್-ಗೋಕುಲದಿಂದ, ಗೋಭಿಸ್ಸಮಂ-ಗೋವುಗಳೊಡನೆ, ವ್ರಜತಃ-ಹೋಗುತಲಿರು
ವಂಥಾ, ಸಾಯಂ-ಸಂಜೆಯಹೊತ್ತಿನಲ್ಲಿ, ಗೋಭಿಸ್ಸಮಂ-ಗೋವುಗಳೊಡನೆ, ಆವಿಶತಶ್ಚ-ಬಂದುಪ್ರವೇಶಿಸುತಲೂ,ಇರು
ವಂಥಾ, ವೇಣುಂಕ್ವಣಯತಃ-ಕೊಳಲಂನುಡಿಸುತಲಿರುವ, ಅಸ್ಯ-ಈಶ್ರೀಕೃಷ್ಣನ, ವೇಣುಂ-ಪಿಳ್ಳಗೋವಿಯನಾದವನ್ನು ಕೇ
ಳಿ, ಅಬಲಾಃ-ಹೆಂಗಳು, ತೂರ್ಣಂ-ಬೇಗನೆ, ಪಥಿ-ದಾರಿಯಲ್ಲಿ, ನಿರ್ಗಮ್ಯ-ಹೊರಟುಬಂದು, ಸದಯಾವಲೋಕಂ-ದಯೆಯಿಂ
ಸಹಿತವಾದನೋಟವುಳ್ಳ, ಸಸ್ಮಿತಮುಖಂ-ಕಿರುನಗೆಯಿಂ ಸಹಿತವಾದಮುಖವನ್ನು, ಪಶ್ಯಂತಿ-ನೋಡುತಲಿರುವರು. ಆದ್ದ
ರಿಂದ, ಭೂರಿಪುಣ್ಯಾಃ-ಬಹುಭಾಗ್ಯವುಳ್ಳವರು ||೧೭|| ಭರತರ್ಷಭ-ಭರತಕುಲಶ್ರೇಷ್ಠನೇ! ಏವಂ-ಈಪ್ರಕಾರವಾಗಿ, ಸ್ತ್ರೀಷು-
ಹೆಂಗಳು, ಪ್ರಭಾಷಮಾಣಾಸುಸತೀಷು-ಘಟ್ಟಿಯಾಗಿನುಡಿಯುತ್ತಿರುವರಾಗುತ್ತಿರಲು, ಯೋಗೇಶ್ವರಃ-ಉಪಾಯಗಳಿಗೊಡೆಯ
ನಾದ, ಭಗವಾನ್ಹರಿಃ-ಭಗವಂತನಾದಕೃಷ್ಣನು, ಶತ್ರುಃ-ಹಗೆಯನ್ನು, ಹಂತುಂ-ಕೊಲ್ಲುವುದಕ್ಕೆ, ಮನಶ್ಚಕ್ರೇ-ಸಂಕಲ್ಪಿಸಿ
ದನು ||೧೮|| ಸ್ತ್ರೀಣಾಂ-ಹೆಂಗಳ, ಗಿರಃ-ಮಾತುಗಳನ್ನು, ಉಪಶ್ರುತ್ಯ-ಸಮೀಪದಲ್ಲಿಕೇಳಿ, ಪುತ್ರರಲ್ಲಿಪ್ರೇಮದಿಂದಾದ

---

ಗಿರುವುದು, ಇಂತಾಸೌಂದರ್ಯವಂನೋಡುವ ಗೋಪಸ್ತ್ರೀಯರುಗಳ ಪುಣ್ಯವಂಹೇಳತಕ್ಕದ್ದೇನು?||೧೫||
ಯಾವಗೋಪಸ್ತ್ರೀಯರುಗಳು ಗೋವುಗಳಂಕರೆಯುವಾಗಲೂ, ಅಕ್ಕಿಗಳಂತೊಳಸುವಾಗಲೂ, ದಧಿಮಥನಕಾ
ಲದಲ್ಲಿಯೂ, ಅರಿಸಿನಗಂಧಗಳಂತೊಡೆದುಕೊಳ್ಳುವಾಗಲೂ, ತೂಗುಮಂಚಗಳಲ್ಲಿ ತೂಗುವಾಗಲೂ, ಬಾಲಕ
ರು ರೋದನಂಗೆಯ್ವಾಗಲೂ, ನೀರ್ತೊಳೆಯುವಕಾಲದಲ್ಲಿಯೂ, ಮಾರ್ಜನಕಾಲದಲ್ಲಿಯೂ, ಕೃಷ್ಣನಲ್ಲಿ ಲಗ್ನ
ವಾದಮನವುಳ್ಳವರಾಗಿ ಬಾಷ್ಪಗದ್ಗದಕಂಠಗಳುಳ್ಳವರಾಗಿ ಈಕೃಷ್ಣನನ್ನೆಗಾನಂಗೆಯ್ವರೋ ಆಗೋಪ
ಸ್ತ್ರೀಯರೇ ಧನ್ಯರು ||೧೬|| ಮತ್ತು, ಬಹುಪುಣ್ಯಶಾಲಿಗಳಾದ ಗೋಪಸ್ತ್ರೀಯರುಗಳು ಪ್ರಾತಃಕಾಲ
ದಲ್ಲಿವ್ರಜದಿಂದ ಶ್ರೀಕೃಷ್ಣನು ಹೋಗುವಾಗಲೂ, ಸಾಯಂಕಾಲದಲ್ಲಿ ಗೋವುಗಳಸಂಗಡ ಕೊಳಲಂಬಾರಿಸಿ
ಕೊಂಡುಬರುವಾಗಲೂ. ಆವೇಣುಗಾನವಂಕೇಳಿ ಬೇಗನೆ ಬೀದಿಬಾಗಲಿಗೆ ಬಂದು- ಸ್ಮಿತಯುಕ್ತಮಾದಮುಖ
ಮುಳ್ಳ ದಯಾರ್ದ್ರದೃಷ್ಟಿಯುಳ್ಳ ಆಶ್ರೀಕೃಷ್ಣನಂನೋಡುವರು. ಆದರಿಂದ ಅವರುಧನ್ಯರು |೧೭|| ಈರೀ
ತಿಯಲ್ಲಿ ಸ್ತ್ರೀಯರು ಪರಸ್ಪರವಹಾಗಿಮಾತನಾಡುತ್ತಿರಲಾಗಿ ಯೋಗೇಶ್ವರನಾದ ಶ್ರೀಕೃಷ್ಣನು ಶತ್ರುವಾದ
ಚಾಣೂರನಂ ಸಂಹರಿಸಲೋಸುಗ ಮನಮಂಮಾಡಿದಂ|೧೮|ದೇವಕೀವಸುದೇವರು ಸ್ತ್ರೀಯರುಗಳಮಾತಂಕೇ
ಳಿಪುತ್ರವಾತ್ಸಲ್ಯದಿಂದ ಶೋಕಪೀಡಿತರಾಗಿ ಪುತ್ರರಬಲವಂ ಅರಿಯದವರಾದಕಾರಣದಿಂ ವ್ಯಸನವಂ ಹೊಂ

ರಸ್ಥಿತಾನಾಂ ಪುತ್ರಸ್ನೇಹಶುಚಾತುರೌ । ಪಿತರಾವನ್ವತಪ್ಯೇತಾಂ ಪುತ್ರಯೋರಬುಧೌ ಬಲಮ್ ॥೧೯॥ ತೈಸ್ತೈರ್ನಿಯುದ್ಧವಿಧಿಭಿರುಭೌ ಚಾಣೂರಕೇಶವೌ । ಯುಯುಧಾತೇ ಯಥಾನ್ಯೋನ್ಯಂ ತಥೈವ ಬಲಮುಷ್ಟಿಕೌ ॥೨೦॥ ಭಗವದ್ಗಾತ್ರನಿಷ್ಪಾತೈರ್ವಜ್ರನಿಷ್ಪೇಷನಿಷ್ಠುರೈಃ । ಚಾಣೂರೋ ಭಜ್ಯಮಾನಾಂಗೋ ಮುಹುರ್ಗ್ಲಾನಿಮವಾಪ ಹ ॥೨೧॥ ಸ ಶ್ಯೇನವೇಗ ಉತ್ಪತ್ಯ ಮುಷ್ಟೀಕೃತ್ಯ ಕರಾವುಭೌ । ಭಗವಂತಂ ವಾಸುದೇವಂ ಕ್ರುದ್ಧೋ ವಕ್ಷಸ್ಯಬಾಧತ ॥೨೨॥ ನಾಚಲತ್ತತ್ಪ್ರಹಾರೇಣ ಸ್ರಜಾಹತ ಇವ ದ್ವಿಪಃ । ಬಾಹ್ವೋರ್ನಿಗೃಹ್ಯ ಚಾಣೂರಂ ಬಹುಶೋ ಭ್ರಾಮಯನ್ ಹರಿಃ ॥೨೩॥ ಭೂಪೃಷ್ಠೇ ಪೋಥಯಾಮಾಸ ತರಸಾ ಕ್ಷೀಣಜೀವಿತಮ್ । ವಿಸ್ರಸ್ತಾಕಲ್ಪಕೇಶಸ್ರಗಿಂದ್ರಧ್ವಜ ಇವಾಪತತ್ ॥೨೪॥ ತಥೈವ ಮುಷ್ಟಿಕಃ ಪೂರ್ವಂ ಸ್ವಮುಷ್ಟ್ಯಾಭಿಹತೇನ ವೈ । ಬಲಭದ್ರೇಣ ಬಲಿನಾ ತಲೇನಾಭಿಹತೋ ಭೃಶಮ್ ॥೨೫॥ ಪ್ರವೇಪಿತ

---

ಶೋಕದಿಂದ, ಆತುರೌ-ಅವಸರಗೊಳ್ಳುತಲಿರುವ, ಪಿತರೌ-ತಾಯಿತಂದೆಗಳು, ಪುತ್ರಯೋಃ-ಮಕ್ಕಳ, ಬಲಂ-ಶಕ್ತಿಯನ್ನು, ಅಬುಧೌ-ತಿಳಿಯದವರಾದ್ದರಿಂದ, ಅನ್ವತಪ್ಯೇತಾಂ-ಅನುತಾಪಗೊಂಡರು ॥೧೯॥ ಉಭೌ-ಈರ್ವರಾದ, ಚಾಣೂರಕೇಶವೌ-ಚಾಣೂರನೂ ಕೃಷ್ಣನೂ, ತೈಸ್ತೈಃ-ಆಯಾ, ನಿಯುದ್ಧವಿಧಿಭಿಃ-ಕೈಕಾಳಗದಬಗೆಗಳಿಂದ, ಅನ್ಯೋನ್ಯಂ-ಪರಸ್ಪರವಾಗಿ, ಯಥಾ-ಹೇಗೆ, ಯುಯುಧಾತೇ-ಕಾಳಗಮಾಡಿದರೋ, ತಥೈವ-ಹಾಗೆಯೇ, ಬಲಮುಷ್ಟಿಕೌ-ಬಲರಾಮನೂ ಮುಷ್ಟಿಕನೂ, ಯುಯುಧಾತೇ-ಜಗಳವಾಡಿದರು ॥೨೦॥ ವಜ್ರನಿಷ್ಪೇಷನಿಷ್ಠುರೈಃ-ಸಿಡಿಲೆರಗುವಂತೆ ಕಠಿನಗಳಾದ, ಭಗವದ್ಗಾತ್ರನಿಷ್ಪಾತೈಃ-ಕೃಷ್ಣನ ಅಂಗಗಳು ತಟ್ಟುವುದರಿಂದ, ಭಜ್ಯಮಾನಾಂಗಃ-ಮುರಿಯಲ್ಪಡುತಲಿರುವ ಅಂಗಗಳುಳ್ಳ, ಚಾಣೂರನು, ಮುಹುಃ-ಬಾರಿಬಾರಿಗೂ, ಗ್ಲಾನಿಂ-ಆಯಾಸವನ್ನು, ಅವಾಪಹ-ಪ್ರಕಟವಾಗಿ ಹೊಂದಿದನು. ॥೨೧॥ ಶ್ಯೇನವೇಗಃ-ಗಿಡಗನಹಾಗೆ ವೇಗವುಳ್ಳ, ಸಃ-ಆಚಾಣೂರನು, ಉತ್ಪತ್ಯ-ಹಾರಿ, ಉಭೌಕರೌ-ಎರಡುಕೈಗಳನ್ನೂ, ಮುಷ್ಟೀಕೃತಃ-ಹಿಡಿಯಾಗಿಜೋಡಿಸಿಕೊಂಡು, ಕ್ರುದ್ಧಃ-ಸಿಟ್ಟುಗೊಂಡವನಾಗಿ, ಭಗವಂತಂ-ಈಶ್ವರನಾದ, ವಾಸುದೇವಂ-ಕೃಷ್ಣನನ್ನು, ವಕ್ಷಸಿ-ಎದೆಯಲ್ಲಿ, ಅಬಾಧತ-ಹೊಡೆದು ನೋಯಿಸಿದನು ॥೨೨॥ ಸ್ರಜಾ-ಹೂವಿನಸರದಿಂದ, ಆಹತಃ-ಬಡಿಯಲ್ಪಟ್ಟ, ದ್ವಿಪ ಇವ-ಆನೆಯುಹಾಗೆ, ತತ್ಪ್ರಹಾರೇಣ-ಆಪೆಟ್ಟಿನಿಂದ, ಹರಿಃ-ಕೃಷ್ಣನು, ನಾಚಲತ್-ಕದಲಲಿಲ್ಲವು. ಚಾಣೂರಂ-ಚಾಣೂರನನ್ನು, ಬಾಹ್ವೋಃ-ತೋಳುಗಳಲ್ಲಿ, ನಿಗೃಹ್ಯ-ಗಟ್ಟಿಯಾಗಿಹಿಡಿದು, ಬಹುಶಃ-ಹಲವುಬಗೆಯಾಗಿ, ಭ್ರಾಮಯನ್-ತಿರುಗಿಸುತ ಲಿರುವನಾಗಿ ॥೨೩॥ ತರಸಾ-ವೇಗದಿಂದ, ಕ್ಷೀಣಜೀವಿತಂ-ಕ್ಷಯವನ್ನುಹೊಂದಿದ ಪ್ರಾಣವುಳ್ಳವನನ್ನು, ಭೂಪೃಷ್ಠೇ-ನೆಲದಮೇಲೆ, ಪೋಥಯಾಮಾಸ-ಅಪ್ಪಳಿಸಿದನು. ವಿಸ್ರಸ್ತಾಕಲ್ಪಕೇಶಸ್ರಕ್-ವಿಸ್ರಸ್ತ-ಉಡಿದುಬಿದ್ದ, ಆಕಲ್ಪ-ಆಭರಣಗಳೂ, ಕೇಶ-ಕೂದಲೂ, ಸ್ರಕ್-ಪುಷ್ಪಮಾಲೆಗಳೂ ಉಳ್ಳವನಾಗಿ, ಇಂದ್ರಧ್ವಜ ಇವ-ಸಿಡಿಲಿನಹಾಗೆ, ಅಥವಾ ಗೌಡದೇಶದಲ್ಲಿ ಉತ್ಸವದೊಳಗೆ ನಿಲ್ಲಿಸಿಯಿರುವ ಧ್ವಜದಹಾಗೆ, ಆಪತತ್-ಬಿದ್ದನು ॥೨೪॥ ತಥೈವ-ಹಾಗೆಯೇ, ಮುಷ್ಟಿಕಃ-ಮುಷ್ಟಿಕನೆಂಬ ಮಸ್ತಾದಿಯು, ಪೂರ್ವಂ-ಮುಂಚೆ, ವೈ-ಪ್ರಸಿದ್ಧವಾಗಿ, ಸ್ವಮುಷ್ಟ್ಯಾ-ತನ್ನ ಹಿಡಿಯಿಂದ, ಅಭಿಹತೇನ-ಗುದ್ದಲ್ಪಟ್ಟ, ಬಲಿನಾ-ಬಲವಂತನಾದ, ಬಲಭದ್ರೇಣ-ಬಲರಾಮನಿಂದ, ತಲೇನ-ಅಂಗೈಯಿಂದ

---

ಬಿದರು ॥೧೯॥ ನಾನಾಪ್ರಕಾರಂಗಳಾದ ಬಾಹುಯುದ್ಧ ಚಾತುರ್ಯಂಗಳಿಂದ ಕೃಷ್ಣಬಲರಾಮರು ಚಾಣೂರಮುಷ್ಟಿಕರೊಡನೆ ಯುದ್ಧಮಂಮಾಡಿದರು ॥೨೦॥ ವಜ್ರಘಟ್ಟನೆಗಳಂತೆ ಕಠಿನಂಗಳಾದ ಭಗವಂತನ ಶರೀರ ಪೀಡನೆಗಳಿಂದ ಚಾಣೂರನು ಮುರಿಯಲ್ಪಡುತಲಿರುವ ಅಂಗಂಗಳುಳ್ಳವನಾಗಿ ಬಹಳ ಬಳಲಿದನು ॥೨೧॥ ಆ ಚಾಣೂರನು ಕುಪಿತನಾಗಿ ಮುಷ್ಟಿಗಳಂಗಟ್ಟಿಯಾಗಿಮಾಡಿಕೊಂಡು ಗಿಡಗನುತೆ ವೇಗಮುಳ್ಳವನಾಗಿ ನೆಗೆದು ಭಗವಂತನವಕ್ಷಸ್ಸ್ಥಲದಲ್ಲಿ ಮುಷ್ಟಿಗಳಿಂದ ಪ್ರಹರಿಸಿದನು ॥೨೨॥ ಶ್ರೀಕೃಷ್ಣನು ಆಪ್ರಹಾರದಿಂದಚಲಿಸದೆ ಪುಷ್ಪಮಾಲಾಪ್ರಹಾರದಿಂದ ಮದಗಜದಂತೆಲಕ್ಷ್ಯವಂಮಾಡದೆ ಭುಜಂಗಳಿಂದ ಚಾಣೂರನಂಅಪ್ಪಿಕೊಂಡು ಬಹುಪ್ರಕಾರವಾಗಿ ತಿರುಗಿದನು ॥೨೩॥ ಭೂಮಿಯಲ್ಲಿ ಕೆಡಹಿಹೊಶಳಿಸಿ ಕುಕ್ಕಿದನು. ಶಿಥಿಲವಾದಅಲಂಕಾರವೂ ಕೇಶಂಗಳೂ ಪುಷ್ಪಮಾಲಿಕೆಗಳೂ ಉಳ್ಳವನಾದ ಆಚಾಣೂರನು ನಿರ್ಜೀವನಾಗಿ ಇಂದ್ರಧ್ವಜವು ಬಿದ್ದ ಹಾಗೆ ಬಿದ್ದನು ॥೨೪॥ ಅದೇಪ್ರಕಾರವಾಗಿ ಮುಷ್ಟಿಕನು ಬಲರಾಮನಂಮುಷ್ಟಿಪ್ರಹಾರಂಗಳಿಂದ ಬಾಧಿಸಿ ಬಲಿಷ್ಠನಾದ ಬಲರಾಮನ ಹಸ್ತಪ್ರಹಾರಂಗಳಿಂದ ಪೀಡಿತನಾಗಿ ॥೨೫॥ ನಡುಗುತ್ತ ರಕ್ತಾತಪಂಕಾರಿ

ಸ್ಸರುಧಿರಮುದ್ವಮನ್ಮುಖತೋರ್ದಿತಃ । ವ್ಯಸುಃಪಪಾತೋರ್ವ್ಯುಪಸ್ಥೇವಾತಾಹತಇವಾಂಘ್ರಿಪಃ
॥೨೬॥ ತತಃಕೂಟಮನುಪ್ರಾಪ್ತಂರಾಮಃಪ್ರಹರತಾಂವರಃ ।ಅವಧೀಲ್ಲೀಲಯಾರಾಜನ್ ಸಾವಜ್ಞಂವಾ
ಮಮುಷ್ಟಿನಾ॥೨೭॥ ತರ್ಹ್ಯೇವಹಿಶಲಃಕೃಷ್ಣಪದಾಪಹತಶೀರ್ಷಕಃ।ದ್ವಿಧಾಕೀರ್ಣಸ್ತೋಸಲಕಉಭಾ
ವಪಿನಿಪೇತತುಃ ॥೨೮॥ ಚಾಣೂರೇಮುಷ್ಟಿಕೇಕೂಟೇಶಲೇತೋಸಲಕೇಹತೇ । ಶೇಷಾಃಪ್ರದುದ್ರುವುರ್ಮ

ಅಭಿಹತಃ-ಬಡಿಯಲ್ಪಟ್ಟವನಾದನು, ಭೃಶಂ-ಅಧಿಕವಾಗಿ ॥೨೫॥ ಪ್ರವೇಪಿತಃ-ಹೆಚ್ಚಾಗಿನಡುಗಿಸಲ್ಪಟ್ಟವನಾದ, ಸಃ-ಆಮುಷ್ಟಿಕನು, ಮುಖತಃ-ಬಾಯಿಂದ. ರುಧಿರಂ-ರಕ್ತವನ್ನು, ಉದ್ವಮನ್-ಕಾರಿಕೊಳ್ಳುವನಾಗಿ, ಅರ್ದಿತಃ-ಪೀಡಿತನಾದ್ದರಿಂದಲೇ, ವ್ಯಸುಃ-ಪ್ರಾಣಗಳು ಹೋದವನಾಗಿ, ವಾತಾಹತಃ-ಗಾಳಿಯಿಂದ ಬಡಿಯಲ್ಪಟ್ಟ, ಅಂಘ್ರಿಪಃಇವ-ಗಿಡದಹಾಗೆ, ಉರ್ವ್ಯುಪಸ್ಥೇ-ಉರ್ವಿ-ನೆಲದ, ಉಪಸ್ಥೇ-ಬಳಿಯಲ್ಲಿ, ಪಪಾತ-ಬಿದ್ದನು ॥೨೬॥ ರಾಜನ್-ಅರಸೇ! ತತಃ-ಆಮೇಲೆ, ಪ್ರಹರತಾಂ-ಹೊಡೆಯುವವರಲ್ಲಿ, ವರಃ-ಶ್ರೇಷ್ಠನಾದ, ರಾಮಃ-ಬಲಭದ್ರನು, ಅನುಪ್ರಾಪ್ತಂ-ಕೂಡಲೇಜಗಳಕ್ಕೆಬಂದ, ಕೂಟಂ-ಜಟ್ಟಿಗನನ್ನು ಸಾವಜ್ಞಂ-ಅಲಕ್ಷ್ಯದೊಡನೆ, ಲೀಲಯಾ-ವಿಲಾಸದಿಂದ, ವಾಮಮುಷ್ಟಿನಾ-ಎಡಗೈಹಿಡಿಯಿಂದ, ಅವಧೀತ್-ಕೊಂದುಹಾಕಿದನು ॥೨೭॥ತರ್ಹ್ಯೇವಹಿ-ಆಸಮಯದಲ್ಲಿಯೇ, ಶಲಃ-ಶಲನೆಂಬವನು, ಕೃಷ್ಣಪದಾ-ಕೃಷ್ಣನಕಾಲಿನಿಂದ, ಅಪಹತಶೀರ್ಷಕಃ-ತುಳಿಯಲ್ಪಟ್ಟ ತಲೆಯುಳ್ಳವನಾಗಿಯೂ, ದ್ವಿಧಾ-ಎರಡುಬಗೆಯಾಗಿ,ಕೀರ್ಣಃ-ಸೀಳಿಹಾಕಲ್ಪಟ್ಟ, ತೋಸಲಕಃ-ತೋಸಲಕನೆಂಬವನೂ, ಉಭಾವಪಿ-ಇಬ್ಬರೂಕೂಡ, ನಿಪೇತತುಃ-ಬಿದ್ದುಹೋದರು॥೨೮॥ಚಾಣೂರೇ-ಚಾಣೂರನೂ, ಮುಷ್ಟಿಕೇ-ಮುಷ್ಟಿಕನೂ, ಕೂಟೇ-ಜಟ್ಟಿಗನೂ, ಶಲೇ-ಶಲನೆಂಬವನೂ, ತೋಸಲಕೇ-ತೋಸಲಕನೆಂಬವನೂ, ಹತೇಸತಿ-ಕೊಲ್ಲಲ್ಪಡುತಲೂ, ಶೇಷಾಃ-



ಕೃಷ್ಣಬಲರಾಮರು ಚಾಣೂರ ಮುಷ್ಟಿಕರಂಕೊಲ್ಲುವಿಕೆ

ಕೊಂಡು ನಿರ್ಜೀವನಾಗಿ ಭೂಮಿಯಲ್ಲಿ ಪ್ರಚಂಡವಾಯುವಿನಿಂದ ಕೆಡವಲ್ಪಟ್ಟ ವೃಕ್ಷದಂತೆಬಿದ್ದನು॥೨೬॥ಆಮೇಲೆ ಕೂಟನೆಂಬಜಟ್ಟಿಯಂ ಮಹಾಪರಾಕ್ರಮಶಾಲಿಯಾದ ಬಲರಾಮನು ವಿಲಾಸದಿಂದಲೇ ಅಲಕ್ಷ್ಯವಾಗಿ ಎಡದಮುಷ್ಟಿಯಿಂದಲೇ ಸಂಹರಿಸಿದನು ॥೨೭॥ ಶಲನೆಂಬಜಟ್ಟಿಯು ಕೃಷ್ಣನಪಾದಪ್ರಹಾರದಿಂದ ತಲೆಯೊಡದು ಬಿದ್ದನು. ಕೋಸಲನೆಂಬಜಟ್ಟಿಯು ಅದೇರೀತಿಯಲ್ಲಿ ಕೃಷ್ಣನಪಾದಪ್ರಹಾರದಿಂದಲೇಬಿದ್ದು ಪ್ರಾಣವಂಬಿಟ್ಟನು ॥೨೮॥ ಚಾಣೂರನೂ ಮುಷ್ಟಿಕನೂ ತೋಟನೂ ಶಲನೂ ಕೋಸಲನೂ ಈ ೫ ಮಂದಿಪ್ರಧಾನರಾದ ಜಟ್ಟಿಗರು ಬಿದ್ದು ಮೃತರಾಗುತ್ತಿರಲಾಗಿ ಮಿಕ್ಕಜಟ್ಟಿಗಳೆಲ್ಲರೂ ಪ್ರಾಣರಕ್ಷಣವಂ ಮಾಡಿಕೊಂ

ಲ್ಲಾಸ್ಸರ್ವೇಪ್ರಾಣಪರೀಪ್ಸವಃ ।೨೯। ಗೋಪಾನ್ವಯಸ್ಯಾನಾಹೂಯತೈಸ್ಸಂಸೃಜ್ಯವಿಜಹ್ರತುಃ। ವಾದ್ಯಮಾನೇಷುತೂರ್ಯೇಷುವಲ್ಗಂತೌರುತನೂಪುರೌ ।೩೦। ಜನಾಃಪ್ರಜಹೃಷುಸ್ಸರ್ವೇಕರ್ಮಣಾರಾಮಕೃಷ್ಣಯೋಃ । ಋತೇಕಂಸಂವಿಪ್ರಮುಖ್ಯಾಸ್ಸಾಧವಸ್ಸಾಧುಸಾಧ್ವಿತಿ ।೩೧। ಹತೇಷುಮಲ್ಲವರ್ಯೇಷುವಿದ್ರುತೇಷುಚಭೋಜರಾಟ್ । ನ್ಯವಾರಯತ್ಸ್ವತೂರ್ಯಾಣಿವಾಕ್ಯಂಚೇದಮುವಾಚಹ।೩೨। ನಿಸ್ಸಾರಯತದುರ್ವೃತ್ತೌವಸುದೇವಾತ್ಮಜೌಪುರಾತ್।ಧನಂಹರತಗೋಪಾನಾಂನಂದಂಬಧ್ನೀತದುರ್ಮತಿಮ್ ।೩೩। ವಸುದೇವಸ್ತುದುರ್ಮೇಧಾಹನ್ಯತಾಮಾಶ್ವಸತ್ತಮಃ । ಉಗ್ರಸೇನಃಪಿತಾಚಾಪಿಸಾನುಗಃಪರಪಕ್ಷಗಃ ।೩೪। ಏವಂವಿಕತ್ಥಮಾನೇವೈಕಂಸೇಪ್ರಕುಪಿತೋಽವ್ಯಯಃ । ಲಘಿಮ್ನೋತ್ಪತ್ಯತರಸಾಮಂ

ಮುಕ್ಕವರಾದ, ಸರ್ವೇ-ಮಲ್ಲಾಃ-ಜಟ್ಟಿಗರೆಲ್ಲರೂ, ಪ್ರಾಣಪರೀಪ್ಸವಸ್ಸಂತಃ-ಪ್ರಾಣಗಳಂ ಕಾಪಾಡಿಕೊಳ್ಳಲು ಬಯಸಿದವರಾಗಿ, ಪ್ರದುದ್ರುವುಃ-ಅಧಿಕವಾಗಿ ಓಡಿಹೋದರು ॥೨೯॥ವಯಸ್ಯಾನ್-ಸರಿಪ್ರಾಯದ ಗೆಳೆಯರಾದ, ಗೋಪಾನ್-ಗೊಲ್ಲರನ್ನು, ಆಹೂಯ-ಕರೆದು, ತೈಃ-ಅವರೊಡನೆ, ಸಂಸೃಜ್ಯ-ಸೇರಿಕೊಂಡು, ತೂರ್ಯೇಷು-ತಮಟೆಗಳು, ವಾದ್ಯಮಾನೇಷು-ಬಾರಿಸಲ್ಪಡುತ್ತಿರಲಾಗಿ, ವಲ್ಗಂತೌ-ಕುಣಿಯುತ್ತಲಿರುವವರಾದ್ದರಿಂದಲೇ, ರುತನೂಪುರೌ-ಗಲುಗುಟ್ಟುವ ಕಾಲುಗೆಜ್ಜೆಗಳುಳ್ಳವರಾಗಿ, ವಿಜಹ್ರತುಃ-ವಿಹರಿಸಿದರು ॥೩೦॥ರಾಮಕೃಷ್ಣಯೋಃ-ಬಲಕೇಶವರ, ಕರ್ಮಣಾ-ಕೆಲಸದಿಂದ, ಕಂಸಂಋತೇ-ಕಂಸನೊರ್ವನನುಳಿದು, ಜನಾಃಸರ್ವೇ-ಜನರೆಲ್ಲರೂ, ವಿಪ್ರಮುಖ್ಯಾಃ-ಬ್ರಾಹ್ಮಣಶ್ರೇಷ್ಠರಾದ, ಸಾಧವಃ-ಸತ್ಪುರುಷರೂ, ಸಾಧುಸಾಧ್ವಿತಿ-ಚನ್ನಾಯಿತು ಚೆನ್ನಾಯಿತೆಂದು, ಪ್ರಜಹೃಷುಃ-ಸಂತಸಗೊಂಡರು ॥೩೧॥ಮಲ್ಲವರ್ಯೇಷು-ಜಟ್ಟಿಗರಲ್ಲಿಗಟ್ಟಿಗರು, ಹತೇಷು-ಕೊಲ್ಲಲ್ಪಟ್ಟವರೂ, ವಿದ್ರುತೇಷುಚ-ಓಡಿಹೋದವರೂ ಆಗುತ್ತಿರಲಾಗಿ, ಭೋಜರಾಟ್-ಭೋಜಕುಲಗೊಡೆಯನಾದ ಕಂಸನು, ಸ್ವತೂರ್ಯಾಣ್-ತನ್ನವಾದ್ಯಗಳನ್ನು, ನ್ಯವಾರಯತ್-ಬಾರಿಸಬೇಡಿರೆಂದು ನಿಲ್ಲಿಸಿದನು ಇದಂವಾಕ್ಯಂಚ-ಈಮಾತನ್ನೂ, ಹ-ಪ್ರಕಟವಾಗಿ, ಉವಾಚ-ನುಡಿದನು ॥೩೨॥ದುರ್ವೃತ್ತೌ-ಕೆಟ್ಟನಡತೆಯುಳ್ಳ, ವಸುದೇವಾತ್ಮಜೌ-ವಸುದೇವನ ಮಕ್ಕಳನ್ನು, ಪುರಾತ್-ಪಟ್ಟಣದಿಂದ, ನಿಸ್ಸಾರಯತ-ಹೊರಡಿಸಿಬಿಡಿರಿ, ಗೋಪಾನಾಂ-ಗೊಲ್ಲರ, ಧನಂ-ಸ್ವತ್ತನ್ನು, ಹರತ-ಕಸುಗೊಳ್ಳಿರಿ. ದುರ್ಮತಿಂ-ಕೆಟ್ಟಬುದ್ಧಿಯುಳ್ಳ, ನಂದಂ-ನಂದಗೋಪನನ್ನು, ಬಧ್ನೀತ-ಕಟ್ಟಿಹಾಕಿರಿ ॥೩೩॥ಅಸತ್ತಮಃ-ಬಹಳಅಯೋಗ್ಯನಾದ, ದುರ್ಮೇಧಾಃ-ಕೆಟ್ಟಯೋಚನೆಯುಳ್ಳ, ವಸುದೇವಸ್ತು-ವಸುದೇವನಾದರೋ, ಆಶು-ಬೇಗನೆ, ಹನ್ಯತಾಂ-ಕೊಲ್ಲಲ್ಪಡಲಿ. ಪರಪಕ್ಷಗಃ-ಹೆರವರಗುಂಪಿಗೆಸೇರಿದ, ಪಿತಾ-ತಂದೆಯಾದ, ಉಗ್ರಸೇನೋಽಪಿ-ಉಗ್ರಸೇನನೂ ಕೂಡ, ಸಾನುಗಃ-ಅನುಸರಿಸಿ ಹೋಗುವವರೊಡನೆ, ಹನ್ಯತಾಂ-ಕೊಲ್ಲಲ್ಪಡಲಿ ॥೩೪॥ಕಂಸೇ-ಕಂಸನು, ವೈ-ಪ್ರಸಿದ್ಧವಾಗಿ, ಏವಂ-ಹೀಗೆ, ವಿಕತ್ಥಮಾನೇ-ವ್ಯರ್ಥವಾಗಿ ಹರಟುವವನಾಗುತ್ತಿರಲು, ಪ್ರಕುಪಿತಃ-ಹೆಚ್ಚಾಗಿಸಿಟ್ಟುಗೊಂಡಾದ, ಅವ್ಯಯಃ-ನಾಶರಹಿತನಾದ ಕೃಷ್ಣನು, ಲಘಿಮ್ನಾ-ಲಾಘವದಿಂದ, ಉತ್ಪತ್ಯ-ಹಾರಿ, ತರಸಾ-ವೇಗದಿಂದ, ಉತ್ತುಂಗಂ-ಎತ್ತರವಾಗಿರುವ, ಮಂಚಂ-ಮಂಚಿಗೆಯನ್ನು, ಆರುಹತ್-ಏರಿದ

ದು ಪಲಾಯನಂಗೆಯ್ದರು ॥೨೯॥ ಅನಂತರದಲ್ಲಿ ರಾಮಕೃಷ್ಣರು ಸ್ನೇಹಿತರಾದಗೋಪರಂ ಕರೆದುಕೊಂಡು ವಾದ್ಯಂಗಳು ಧ್ವನಿಗೆಯ್ಯುತ್ತಿರಲಾಗಿ, ಸಂಚರಿಸುತ್ತಿರಲು ರತ್ನಮಯಂಗಳಾದ ಪಾದಾಭರಣಂಗಳು ಧ್ವನಿಗೆಯ್ಯುತ್ತಲಿರಲಾಗಿ, ರಂಗಸ್ಥಾನದಲ್ಲಿ ವಿಹರಿಸಿದರು ॥೩೦॥ ಈರಾಮಕೃಷ್ಣರ ಸಾಹಸವ್ಯಾಪಾರದಿಂದ ನೋಡುವಜನರು ಸಂತೋಷಪಟ್ಟರು. ಬ್ರಾಹ್ಮಣೋತ್ತಮರು ಒಳ್ಳೆಕೆಲಸವಾಯಿತೆಂದುಶ್ಲಾಘಿಸಿದರು. ಕಂಸನೋರ್ವನೇವ್ಯಥೆಪಟ್ಟನು ।೩೧॥ ಪ್ರಧಾನಜಟ್ಟಿಗರುಹತರಾದಮೇಲೆ ಕಡಮೆಜಟ್ಟಿಗಳು ಓಡಿಹೋದಮೇಲೆ ಕಂಸನುವಾದ್ಯಂಗಳಂನಿಲ್ಲಿಸಿ ಒಂದುಮಾತಂಪೇಳಿದನು ॥೩೨॥ (ಅದೆಂತೆನೆ-)ವಸುದೇವಪುತ್ರರಾದದುಷ್ಟರಾದ ಇವರಂ ಊರಂಬಿಟ್ಟೋಡಿಸಿಬಿಡಿ; ಗೋಪಾಲಕರಧನಂಗಳಂ ಅರಮನೆಗೆತೆಗೆದುಕೊಳ್ಳಿರಿ ದುಷ್ಟಬುದ್ಧಿಯುಳ್ಳ ನಂದನಂಹಿಡಿದು ಕಟ್ಟಿಬಿಡಿ ॥೩೩॥ ದುಷ್ಟಬುದ್ಧಿಯುಳ್ಳದುರ್ಜನನಾದ ವಸುದೇವನಂ ಬೇಗನೆಸಂಹರಿಸಿಬಿಡಿ ನನ್ನತಂದೆಯಾದ ಉಗ್ರಸೇನನಂ ಶತ್ರುಪಕ್ಷವನೆಯ್ದಿದವನಾದಕಾರಣದಿಂದ ಅವನನುಂಸಹ ಕೊಲ್ಲಿಸಿಬಿಡಿ ॥೩೪॥ ಎಂದುಕಂಸನುದುರ್ಭಾಷಣಂಗಳನಾಡುತಿರಲು ಭಗವಂತನಾದ ಶ್ರೀಕೃಷ್ಣನುಕೋಪಿಷ್ಠನಾಗಿ

ಕಂಸವಧಘಟ್ಟಃ-

ಚಮುತ್ತುಂಗಮಾರುಹತ್ ॥೩೫॥ ತಮಾಪತಂತಮಾಲೋಕ್ಯಮೃತ್ಯುಮಾತ್ಮನಆಸನಾತ್।ಮನಸ್ವೀ ಸಹಸೋತ್ಥಾಯಜಗೃಹೇಸೋಸಿಚರ್ಮಣೀ ।೩೬। ತಂಖಡ್ಗಪಾಣಿಂವಿಚರಂತಮಾಶುಶ್ಯೇನಂಯಥಾದಕ್ಷಿಣಸವ್ಯಮಂಬರೇ ।ಸಮಗ್ರಹೀದ್ದುರ್ವಿಷಹೋಗ್ರತೇಜಾಯಥೋರಗಂತಾರ್ಕ್ಷ್ಯಸುತಃಪ್ರಸಹ್ಯ ।೩೭। ಪ್ರಗೃಹ್ಯಕೇಶೇಷುಚಲತ್ಕಿರೀಟಂನಿಪಾತ್ಯರಂಗೋಪರಿತುಂಗಮಂಚಾತ್ । ತಸ್ಯೋಪರಿಷ್ಟಾತ್ಸ್ವಯಮಬ್ಜನಾಭಃಪಪಾತವಿಶ್ವಾಶ್ರಯಆತ್ಮತಂತ್ರಃ ॥೩೮॥ ಕಂಸಂಪರೇತಂವಿಚಕರ್ಷಭೂಮೌಹರಿರ್ಯಥೇಭಂಜಗತೋವಿಪಶ್ಯತಃ । ಹಾಹೇತಿಶಬ್ದಸ್ಸುಮಹಾಂಸ್ತದಾಭೂದುದೀರಿತಸ್ಸರ್ವಜನೈರ್ನರೇಂದ್ರ ॥೩೯॥ ಸನಿತ್ಯದೋದ್ವಿಗ್ನಧಿಯಾತಮೀಶ್ವರಂಪಿಬನ್ನದನ್ವಾವಿಚರನ್ಸ್ವಪನ್ಶ್ವಸನ್ । ದದರ್ಶಚಕ್ರಾಯು

---

ಧ॥೩೫॥ಸಃ-ಆಕಂಸನು, ಆತ್ಮನಃ-ತನಗೆ, ಮೃತ್ಯುಂ-ನಾಶಕನಾಗಿ, ಆಪತಂತಂ-ಮೇಲೆಬೀಳುತಲಿರುವ, ತಂ-ಆಕೃಷ್ಣನನ್ನು, ಆಲೋಕ್ಯ-ನೋಡಿ, ಸಹಸಾ-ಬೇಗನೆ, ಆಸನಾತ್-ಗದ್ದುಗೆಯಿಂದ, ಉತ್ಥಾಯ-ಎದ್ದು, ಮನಸ್ವೀ-ಧೈರ್ಯವುಳ್ಳವನಾಗಿ, ಅಸಿಚರ್ಮಣೀ ಕತ್ತಿಯನ್ನೂ ಗುರಾಣಿಯನ್ನೂ, ಜಗೃಹೇ-ತೆಕ್ಕೊಂಡನು ॥೩೬॥ ದುರ್ವಿಷಹೋಗ್ರತೇಜಾಃ-ದುರ್ವಿಷಹ-ಪ್ರಯಾಸದಿಂದಲೂ ವಿಶೇಷವಾಗಿ ಸಹಿಸಲಳವಲ್ಲದ, ಅಥವಾ-ಕೆಟ್ಟವಿಷವನ್ನು ಪರಿಹರಿಸುವ, ಉಗ್ರ-ಕ್ರೂರವಾದ, ತೇಜಾಃ-ವೀರ್ಯವುಳ್ಳ, ಕೃಷ್ಣನು, ಅಂಬರೇ-ಆಕಾಶದಲ್ಲಿ, ಶ್ಯೇನಂಯಥಾ-ಗಿಡಗನನ್ನುಹೇಗೋಹಾಗೆ, ಖಡ್ಗಪಾಣಿಂ-ಕತ್ತಿಯು ಕೈಯಲ್ಲಿಯುಳ್ಳವನಾಗಿ, ದಕ್ಷಿಣಸವ್ಯಂ-ಎಡಕ್ಕೂ ಬಲಕ್ಕೂ, ವಿಚರಂತಂ-ಹಾರಾಡುತಲಿರುವ, ತಂ-ಆಕಂಸನನ್ನು, ತಾರ್ಕ್ಷ್ಯಸುತಃ-ಗರುಡನು, ಉರಗಂಯಥಾ-ಸರ್ಪವನ್ನು ಹೇಗೋಹಾಗೆ, ಪ್ರಸಹ್ಯ-ಬಲಾತ್ಕರಿಸಿ, ಸಮಗ್ರಹೀತ್-ಚನ್ನಾಗಿಹಿಡಿದನು ॥೩೭॥ ವಿಶ್ವಾಶ್ರಯಃ-ಪ್ರಪಂಚಕ್ಕಾಧಾರನಾದ, ಆತ್ಮತಂತ್ರಃ-ಸ್ವತಂತ್ರನಾದ, ಅಬ್ಜನಾಭಃ-ಪದ್ಮನಾಭನಾದ ಕೃಷ್ಣನು, ಕೇಶೇಷು-ತಲೆಕೂದಲುಗಳಲ್ಲಿ, ಚಲತ್ಕಿರೀಟಂಯಥಾತಥಾ-ಕಿರೀಟವುಕಳಚಿ ಹೋಗುವಂತೆ, ಪ್ರಗೃಹ್ಯ-ಬಲವಾಗಿಹಿಡಿದು, ತುಂಗಮಂಚಾತ್-ಉದ್ದವಾದ ಮಂಚಿಕೆಯ ದೆಸೆಯಿಂದ, ರಂಗೋಪರಿ-ಮಲ್ಲರಂಗ ಸ್ಥಲದಮೇಲೆ, ನಿಪಾತ್ಯ-ಬೀಳಕೆಡವಿ, ತಸ್ಯ-ಬಿದ್ದಆಕಂಸನ, ಉಪರಿಷ್ಟಾತ್-ಮೇಲೆ, ಸ್ವಯಂ-ತಾನು. ಪಪಾತ-ಧುಮ್ಮಿಕ್ಕಿದನು ॥೩೮॥ಜಗತಃ-ಪ್ರಪಂಚವೇ, ವಿಪಶ್ಯತಃ-ನೋಡುತ್ತಿರುವುದಾಗಿರಲು, ಹರಿಃ-ಸಿಂಹವು, ಇಭಂಯಥಾ-ಆನೆಯನ್ನು ಹೇಗೋಹಾಗೆ, ಪರೇತಂಕಂಸಂ-ಸತ್ತುಹೋದ ಕಂಸನನ್ನು, ಭೂಮೌ-ನೆಲದಲ್ಲಿ, ವಿಚಕರ್ಷ-ಎಳೆದನು. ನರೇಂದ್ರ-ಪರೀಕ್ಷಿದ್ರಾಯನೇ! ತದಾ-ಆಗ, ಸರ್ವಜನೈಃ-ಎಲ್ಲರಿಂದಲೂ, ಉದೀರಿತಃ-ಘಟ್ಟಿಯಾಗಿಕೂಗಲ್ಪಟ್ಟ, ಹಾಹೇತಿಶಬ್ದಃ-ಹಾಹಾಯೆಂಬ ಅದ್ಭುತದುಃಖಸೂಚಕವಾದ ಶಬ್ದವು, ಸುಮಹಾನ್-ಬಹಳದೊಡ್ಡದು,ಅಭೂತ್-ಆಯಿತು॥೩೯॥ಸಃ-ಆಕಂಸನು,ನಿತ್ಯದಾ-ಸರ್ವಕಾಲಗಳಲ್ಲಿಯೂ,ಉದ್ವಿಗ್ನಧಿಯಾ-ಹೆದರಿದಬುದ್ಧಿಯಿಂದ,ಪಿಬನ್-ಕುಡಿಯುವವನಾಗಿಯೂ, ಅದನ್ವಾ-ಉಣ್ಣುವವನಾದರೂ, ವಿಚರನ್-ತಿರುಗುವವನಾದರೂ, ಸ್ವಪನ್-ನಿದ್ರಿಸುವವನಾದರೂ,ಶ್ವಸನ್-ಸುಯ್ಲಿಕ್ಕುವವನಾದರೂ, ಯತಃ-ಯಾವಕಾರಣದಿಂದ,ಚಕ್ರಾಯುಧಂ-ಚಕ್ರಪಾಣಿಯಾದ,ಈಶ್ವರಂ-ಜಗದೊಡೆಯನಾದ,ತಂ-ಆವಿಷ್ಣುವನ್ನು, ಅಗ್ರತಃ-ಮುಂಮುಗದೆಯೇ,ದದರ್ಶ-ನೋಡುತಲಿದ್ದನೋ,ತತಃ-ಆಕಾರಣದಿಂದ, ದುರವಾಪಂ-ಪ್ರಯಾಸದಿಂ

---

ಲಾಘವದಿಂದ ನೆಗದು ಉನ್ನತವಾದಮಂಚವನ್ನೇರಿದನು ॥೩೫॥ಕಂಸನುತನಗೆಮೃತ್ಯುವಾಗಿಬಂದಕೃಷ್ಣನಂನೋಡಿ ಧೈರ್ಯದಿಂದ ಬೇಗನೆಯೆದ್ದು ಖಡ್ಗಮಂ ಗುರಾಣಿಯನುಂಗ್ರಹಿಸಿದನು ॥೩೬॥ ಖಡ್ಗಪಾಣಿಯಾಗಿಆಕಾಶದಲ್ಲಿಗಿಡಗನಂತೆ ಸವ್ಯದಕ್ಷಿಣವಾಗಿ ಸಂಚರಿಸುತಲಿರುವಕಂಸನಂ, ಸಹಿಸಲಶಕ್ಯವಾದಮಹಾಪರಾಕ್ರಮವುಳ್ಳ ಶ್ರೀಕೃಷ್ಣನು ಗರುಡನು ಸರ್ಪವನ್ನು ಹೇಗೋಹಾಗೆ ಗ್ರಹಿಸಿದನು॥೩೭॥ಪದ್ಮನಾಭನಾದ ಸ್ವತಂತ್ರನಾದ ಶ್ರೀಕೃಷ್ಣನು ಕಂಸನ ಕೇಶಂಗಳಂಪಿಡಿದು ಕಳಚಿಕೊಂಡುಬೀಳುವ ಕಿರೀಟದಿಂದಸಹಿತ ಅವನಂ ರಂಗದೊಳಭಾಗಕ್ಕೆಕೆಡಹಿ, ತಾನೂ ಅವನಮೇಲೆಬಿದ್ದನು ॥೩೮॥ ಮೃತನಾದಕಂಸನಂ ಸಿಂಹವುಗಜವಂಎಳೆದಂತೆ ಸರ್ವಜನರೂ ನೋಡುತ್ತಿರಲಾಗಿ ಭೂಮಿಯಲ್ಲಿ ಎಳೆದನು. ಎಲೈರಾಜನೇ! ಆಗಸರ್ವಜನರೂ ಹಾಹಾಕಾರವಂಮಾಡಿದರು ॥೩೯॥ ಆಕಂಸನು ನಿರಂತರದಲ್ಲಿ ಭೀತವಾದ ಬುದ್ಧಿಯಿಂದ ಅಭಸವಂತನಂಧ್ಯಾನಿಸುತ- ಮಾ

ಧವಂಗತ್ರೋಯತಸ್ತದ್ವರೂಪಂದುರವಾಪಮಾಪ ॥ ೪೦ ॥ ತಸ್ಯಾನುಜಾ ಭ್ರಾತರೋಷ್ಟೌ ಕಂಕನ್ಯ
ಗ್ರೋಧಕಾದಯಃ । ಅಭ್ಯಧಾವನ್ನತಿಕ್ರುದ್ಧಾ ಭ್ರಾತುರ್ನಿರ್ವೇಶಕಾರಿಣಃ ॥ ೪೧ ॥ ತಥಾತಿರಭಸಾಂಸ್ತಾಂ
ಸ್ತು ಸಂಯತ್ತಾನ್ ರೋಹಿಣೀಸುತಃ । ಅಹನ್ ಪರಿಘಮುದ್ಯಮ್ಯ ಪಶೂನಿವ ಮೃಗಾಧಿಪಃ ॥ ೪೨ ॥ ನೆದು
ರ್ದುಂದುಭಯೋ ವ್ಯೋಮ್ನಿ ಬ್ರಹ್ಮೇಶಾದ್ಯಾ ವಿಭೂತಯಃ । ಪುಷ್ಪೈಃ ಕಿರಂತಸ್ತಂ ಪ್ರೀತಾಃ ಶಶಂಸುರ್ನ

---

ದಲೂ ಪೊರೆಯತಕ್ಕದ್ದಲ್ಲದ, ತದ್ರೂಪಮೇವ-ಆರೂಪವನ್ನೇ-ಅಪ-ಹೊಂದಿದನು ॥ ೪೦ ॥ ತಸ್ಯ-ಆ ಕಂಸನ-ಅನುಜಾಃ-ಹಿಂದೆ ಹುಟ್ಟಿದ, ಭ್ರಾತರಃ-ಸೋದರರಾದ, ಕಂಕನ್ಯಗ್ರೋಧಕಾದಯಃ-ಕಂಕನು ನ್ಯಗ್ರೋಧಕನು ಮೊದಲಾದ, ಅಷ್ಟೌ-೮ ಮಂದಿ, ಅತಿಕ್ರುದ್ಧಾಃ-ಬಹಳ ಸಿಟ್ಟುಳ್ಳವರಾಗಿಯೂ, ಭ್ರಾತುಃ-ಅಣ್ಣನ-ನಿರ್ವೇಶಕಾರಿಣಃ-ನಿರ್ವೇಶ-ಋಣ ತೀರಿಸಿ ಕೊಳ್ಳುವಿಕೆಯನ್ನು, ಕಾರಿಣಃ-ಮಾಡುತಲಿರುವರಾಗಿ, ಅಭ್ಯಧಾವನ್-ಅಟ್ಟಿಕೊಂಡು ಬಂದರು ॥ ೪೧ ॥ ತಥಾ-ಹಾಗೆ, ಅತಿರಭಸಾನ್-ಬಹಳ ವೇಗವುಳ್ಳ, ಸಂಯತ್ತಾನ್-ಸಿದ್ಧರಾಗಿಯೂ ಸೇರಿವವರಾಗಿಯೂ ಇರುವ, ತಾಂಸ್ತು-ಅವರನ್ನಾದರೋ, ರೋಹಿಣೀಸುತಃ-ಬಲರಾಮನು, ಪರಿಘಂ-ಪರಿಘಾಯುಧವನ್ನು, ಉದ್ಯಮ್ಯ-ಎತ್ತಿಕೊಂಡು, ಮೃಗಾಧಿಪಃ-ಸಿಂಹವು, ಪಶೂನಿವ-ವನಪಶುಗಳಂತೇ ಗೋ ಹಾಗೆ, ಅಹನ್-ಕೊಂದನು ॥ ೪೨ ॥ ವ್ಯೋಮ್ನಿ-ಆಕಾಶದಲ್ಲಿ, ದುಂದುಭಯಃ-ಭೇರಿಗಳು, ನೇದುಃ-ಮೊಳಗಿದವು. ವಿಭೂತಯಃ-ಭಗವದ್ವಿಭೂತಿವಿಶೇಷರಾದ, ಬ್ರಹ್ಮೇಶಾದ್ಯಾಃ-ಬ್ರಹ್ಮರುದ್ರಾದಿಗಳು, ಪುಷ್ಪೈಃ-ಹೂವುಗಳಿಂದ, ತಂ-ಆ ಕೃಷ್ಣನಲ್ಲಿ, ಕಿರಂತಃ-ಚಲ್ಲುತಲಿರುವರಾಗಿ, ಪ್ರೀತಾಃ-ಪ್ರಿಯವುಳ್ಳವರಾಗಿ, ಶಶಂಸುಃ-ಶ್ಲಾಘಿಸಿದರು. ಸ್ತ್ರಿಯಃ-ಅಪ್ಸರಸೆಯರು, ನನೃತುಃ-ಕುಣಿದರು ॥ ೪೩ ॥

---

ಕೃಷ್ಣನು ಕಂಸನನ್ನು ಕೊಲ್ಲುವಿಕೆ



ಗುವಾಗಲೂ, ಏಳುವಾಗಲೂ, ತದೇಕಧ್ಯಾನದಿಂದ ಭಗವಂತನನ್ನೇ ಸ್ಮರಿಸುತಲಿದ್ದುದರಿಂದ ಚಕ್ರಾಯುಧನಾದ ಆ ಭಗವಂತನಂ ನೋಡಿದನು, ಆ ಕಾರಣದಿಂದ ಆ ಭಗವಂತನ ಸಾರೂಪ್ಯವನ್ನೇ ಪಡೆದನು ।೪೦। ಕಂಕನ್ಯಗ್ರೋಧನು ಮೊದಲಾದ ೮ ಮಂದಿ ಕಂಸನ ಭ್ರಾತರರು ಕ್ರೋಧದಿಂದ ರಾಮಕೃಷ್ಣರ ಮೇಲೆ ಬಂದುಬಿದ್ದರು ।೪೧। ಅತಿರಭಸದಿಂದ ಬಂದಾ ಯೆಂಟುಮಂದಿಯನ್ನೂ ಬಲರಾಮನು ಗದೆಯನೆತ್ತಿಕೊಂಡು ವ್ಯಾಘ್ರವು ಪಶುಗಳಂ ಹೇಗೋ ಹಾಗೆ ಸಂಹರಿಸಿದನು. ।೪೨। ಅನಂತರದಲ್ಲಿ ದೇವದುಂದುಭಿಗಳು ಧ್ವನಿಗೆಯ್ದವು. ಬ್ರಹ್ಮರುದ್ರರೇ ಮೊದಲಾದ ದೇವತೆಗಳು ಪುಷ್ಪವೃಷ್ಟಿಯಂ ಕರೆದರು. ದೇವಸ್ತ್ರೀಯರು ನರ್ತನಂಗೆಯ್ದರು ।೪೩। ಆ ಕಂಸಾದಿಗಳ ಸ್ತ್ರೀಯರುಗಳು ಪತಿಗಳ ಮರಣಂಗಳಿಂದ ದುಃಖಿತರಾಗಿ ತಲೆಗಳಂ ವಕ್ಷಸ್ಥ



ಕಂಸನ ತಮ್ಮಂದಿರನ್ನು ಬಲರಾಮಕೃಷ್ಣರು ಕೊಲ್ಲುವಿಕೆ













ಶ್ರೀಕೃಷ್ಣಬಲರಾಮರು ಬ್ರಹ್ಮಾದಿಗಳಿಂ ಸ್ತುತಿಸುವಿಕೆ













ಸ್ಮೃತಸ್ತ್ರಿಯಃ ॥೪೩॥ ತೇಷಾಂಸ್ತ್ರಿಯೋಮಹಾರಾಜಸುಹೃನ್ಮರಣದುಃಖಿತಾಃ। ತತ್ರಾಭ್ಯಯು ರ್ವಿನಿಘ್ನಂತ್ಯಶ್ಶೀರ್ಷಾಣ್ಯಶ್ರುವಿಲೋಚನಾಃ॥೪೪॥ಶಯಾನಾನ್ವೀರಶಯ್ಯಾಯಾಂಪತೀನಾಲಿಂಗ್ಯಶೋ ಚತೀಃ। ವಿಲೇಪುಸ್ಸುಸ್ವರಂನಾರ್ಯೋವಿಸೃಜಂತ್ಯೋಮುಹುಶ್ಶುಚಃ ॥೪೫॥ ಹಾನಾಥಪ್ರಿಯಧರ್ಮ ಜ್ಞಕರುಣಾನಾಥವತ್ಸಲ। ತ್ವಯಾಹತೇನನಿಹತಾವಯಂತೇಸಗೃಹಪ್ರಜಾಃ ॥೪೬॥ ತ್ವಯಾವಿರಹಿ

---

ಮಹಾರಾಜ-ಎಲೈ, ಮಹಾರಾಯನೇ! ತೇಷಾಂ-ಆಕಂಸಾದಿಗಳ, ಸ್ತ್ರಿಯಃ-ಹೆಂಗಳು, ಸುಹೃನ್ಮರಣದುಃಖಿತಾಃ-ಗೆಳೆಯರು ಸಾ ಏಸಿಂದ ದುಃಖವುಳ್ಳವರಾಗಿ, ಅಶ್ರುವಿಲೋಚನಾಃ-ನೀರುಸೋರುವ ಕಣ್ಣುಳ್ಳವರಾಗಿ, ಶೀರ್ಷಾಣಿ-ತಲೆಗಳನ್ನು, ವಿನಿಘ್ನಂತ್ಯಃ-ಕ ಟ್ಟಿಕೊಳ್ಳುತ ಲಿರುವರಾಗಿ, ತತ್ರ-ಅಲ್ಲಿ, ಅಭ್ಯಯುಃ-ಸುತ್ತಲೂ ಬಂದರು ॥೪೪॥ವೀರಶಯ್ಯಾಯಾಂ-ವೀರರು ಮಲಗತಕ್ಕ ಹಾಸಿ ಗೆಯಲ್ಲಿ, ಶಯಾನಾನ್-ಮಲಗಿರುವರಾದ, ಪತೀನ್-ಗಂಡಂದಿರನ್ನು, ಆಲಿಂಗ್ಯ-ಅಪ್ಪಿಕೊಂಡು, ಶೋಚತೀಃ-(ಶೋಚಂತ್ಯಃ-) ದುಃಖಿಸುತಲಿರುವ, ನಾರ್ಯಃ-ಹೆಂಗಳು, ಮುಹುಃ-ಬಾರಿಬಾಗೂ, ಶುಚಃ-ಕಣ್ಣೀರನ್ನು, ವಿಸೃಜಂತ್ಯಃ-ಬಿಡುತಲಿರುವರಾಗಿ, ಸುಸ್ವರಂ-ಒಳ್ಳೇಸ್ವರವುಂಟಾಗುವಂತೆ, ವಿಲೇಪುಃ-ಅತ್ತರು ॥೪೫॥ಹಾ-ಅಯ್ಯೋ! ನಾಥ-ಒಡೆಯನೇ! ಪ್ರಿಯ-ಇಷ್ಟನೇ! ಧ ರ್ಮಜ್ಞ-ಧರ್ಮವಂ ಬಲ್ಲವನೇ! ಕರುಣಾನಾಥ-ದಯೆಗೊಡೆಯನೇ! ವತ್ಸಲ-ಪ್ರೀತಿಯುಳ್ಳವನೇ! ತೇ-ನಿನ್ನ, ಸಗೃಹಪ್ರಜಾಃ-ಮನೆಯಿಂದ ಸಹಿತರಾದ ಪ್ರಜೆಗಳೆನಿಸುವ, ವಯಂ-ನಾವು, ಹತೇನ-ಕೊಲ್ಲಲ್ಪಟ್ಟ, ತ್ವಯಾ-ನಿನ್ನಿಂದ, ನಿಹತಾಃ-ಕೊಲ್ಲಲ್ಪ ಟ್ಟವರಾದೆವು ॥೪೬॥ಪುರುಷರ್ಷಭ-ಪುರುಷಶ್ರೇಷ್ಠನೇ! ಪತ್ಯಾ-ಒಡೆಯನಾದ (ಗಂಡನಾದ) ತ್ವಯಾ-ನಿನ್ನಿಂದ ವಿರಹಿತಾ-ಇ

---

ಮೃತರಾದ ಕಂಸಾದಿಗಳಂ ನೋಡಿ ಹೆಂಗಳುಅಳುವಿಕೆ,



ಳಂಗಳಂ ಕುಟ್ಟಿಕೊಳ್ಳುತ ಕಣ್ಣನೀರಂಬಿಡುತ್ತ ಆರಂಗಸ್ಥಾನಕ್ಕೆ ಬಂದರು॥೪೪॥ ವೀರಶಯನದಲ್ಲಿ ಮಲ ಗಿರುವ ಪತಿಗಳಂ ಆಲಿಂಗನಮು ಮಾಡಿಕೊಂಡು ರೋದನಂಗೆಯ್ವರಾಗಿ ನೇತ್ರೋದಕಂಗಳಂಬಿಡುತ ಸ್ವರ ಯುಕ್ತವಾಗಿ ವಿಲಾಪಂಗೆಯ್ದರು ॥೪೫॥ (ಅದೆಂತೆನೆ-) ಹಾ,ನಾಥನೇ! ಎಲೈಪ್ರಿಯನೇ! ಧರ್ಮಜ್ಞನೇ! ದ ಯಾಶಾಲಿಯಾದ ವಾತ್ಸಲ್ಯವುಳ್ಳ ಪತಿಯೆ! ನೀನು ಹತನಾದಮೇಲೆ ನಾವು ಪ್ರಜೆಗಳುಸಹ ಹತರಾದವರೇಸ ರಿ ॥೪೬॥ ಪತಿಯಾದನಿನ್ನಿಂದ ರಹಿತವಾದ ಈಪುರವುನಮ್ಮಂತೆ ಅನಾಥವಾಗಿ ಉತ್ಸವಮಂಗಳರಹಿತವಾಗಿ

ತಾಪತ್ಯಾಪುರೀಯಂಪುರುಷರ್ಷಭ| ನಶೋಭತೆವಯಮಿವನಿವೃತ್ತೋತ್ಸವಮಂಗಳಾ ||೪೭|| ಅನಾಗಸಾಂತ್ವಂಭೂತಾನಾಂಕೃತವಾನ್ದ್ರೋಹಮುಲ್ಬಣಮ್ | ತೆನೆಮಾಂಭೋದಶಾಂನೀತೊಭೂತಧ್ರುಕ್ಕೋಲಭೆತಶಮ್ ||೪೮|| ಸರ್ವೇಷಾಮೇವಭೂತಾನಾಮೇಷಹಿಪ್ರಭವಾಪ್ಯಯಃ| ಗೋಪ್ತಾಚತದವಧ್ಯಾಯೀನಕ್ವಚಿತ್ಸುಖಮೇಧತೆ||೪೯||ಶ್ರೀಶುಕಃ|| ರಾಜಯೋಷಿತಆಶ್ವಾಸ್ಯಭಗವಾನ್ ಭೂತಭಾವನಃ|ಯಾಮಾಹುರ್ಲೌಕಿಕೀಂಸಂಸ್ಥಾಂಹತಾನಾಂಸಮಕಾರಯತ್ ||೫೦|| ಮಾತರಂಪಿತರಂಚೈವಮೋಚಯಿತ್ವಾಥಬಂಧನಾತ್ | ಕೃಷ್ಣರಾಮೌವವಂದಾತೆಶಿರಸಾಸ್ಪೃಶ್ಯಪಾದಯೋಃ ||೫೧|| ದೇವಕೀವಸುದೇವಶ್ಚವಿಜ್ಞಾಯಜಗದೀಶ್ವರೌ || ಕೃತಸಂವಂದನೌಪುತ್ರೌಸಸ್ವಜಾತೆನಶಂಕಿತೌ ||೫೨||

---

ಲ್ಲದೇಯಿರುವ, ಇಯಂಪುರೀ-ಈಮಧುರಾ ನಗರಿಯು, ವಯಮಿವ-ನಮ್ಮಹಾಗೆ, ನಿವೃತ್ತೋತ್ಸವಮಂಗಳಾ-ಕಳೆದುಹೋದ ಹಬ್ಬದಶುಭಾಲಂಕಾರವುಳ್ಳ ದಾದ್ದರಿಂದ, ನಶೋಭತೇ-ಪ್ರಕಾಶಿಸುವುದಿಲ್ಲವು ||೪೭||ತ್ವಂ-ನೀನು, ಅನಾಗಸಾಂ-ಅಪರಾಧವಿಲ್ಲದ, ಭೂತಾನಾಂ-ಪ್ರಾಣಿಗಳಿಗೆ, ಉಲ್ಬಣಂ-ಮಿತಿಮೀರಿದ, ದ್ರೋಹಂ-ಅಪಕಾರವನ್ನು, ಕೃತವಾನ್-ಮಾಡಿದವನು. ಭೋ-ಓಕಂಸನೇ! ತೇನ-ಹಾಗೆ ದ್ರೋಹಿಯಾದ್ದರಿಂದಲೇ, ಇಮಾಂದಶಾಂ-ಈಮರಣವನ್ನು, ನೀತಃ-ಹೊಂದಿಸಲ್ಪಟ್ಟೆ. ಭೂತಧ್ರುಕ್-ಪ್ರಾಣಿಗಳಿಗೆ ದ್ರೋಹಮಾಡಿದವನು, ಕಃ-ಯಾವವನುತಾನೆ, ಶಂ-ಸುಖವನ್ನು, ಲಭೇತ-ಪಡೆಯುವನು?||೪೮|| ಭೂತಾನಾಂ-ಪ್ರಾಣಿಗಳಾದ, ಸರ್ವೇಷಾಮೇವ-ಎಲ್ಲರಿಗೂವೆ, ಏಷಹಿ-ಈಯೆಹಿಂಸಾಧರ್ಮವಲ್ಲವೆ,(ಈಕೃಷ್ಣನಲ್ಲವೆ)ಪ್ರಭವಾಪ್ಯಯಃ-ಉತ್ಪಾದಕನೂ ನಾಶಕನೂ, ಗೋಪ್ತಾಚ-ರಕ್ಷಕನೂ ಆಗಿರುವನು. ತದವಧ್ಯಾಯೀ-ತತ್-ಅಧರ್ಮಕ್ಕೆ(ಕೃಷ್ಣನಿಗೆ)ಅವಧ್ಯಾಯೀ-ಕೇಡನ್ನು ಯೋಚಿಸುವವನು, ಕ್ವಚಿತ್-ಎಲ್ಲಿಯೂ, ಸುಖಂ-ಅನಾಯಾಸವಾಗಿ, ನೇಧತೇ-ವೃದ್ಧಿಹೊಂದುವುದಿಲ್ಲ ||೪೯|| [ಶುಕವಾಕ್ಯವು.] ಭೂತಭಾವನಃ-ಪ್ರಾಣಿಗಳನ್ನು ಒಪ್ಪಿಸುತಲಿರುವವನಾದ, ಭಗವಾನ್-ಕೃಷ್ಣನು, ರಾಜಯೋಷಿತಃ-ದೊರೆಯ ಹೆಂಗಸರನ್ನು, ಆಶ್ವಾಸ್ಯ-ಸಮಾಧಾನಗೊಳಿಸಿ, ಲೌಕಿಕೀಂಸಂಸ್ಥಾಂ-ಪರಲೋಕ ಸಂಪಾದಕವಾದ ಪಿತೃಮೇಧಕರ್ಮವನ್ನು, ಯಾಂಆಹುಃ-ಯಾವುದರನ್ನು ಹೇಳುವರೋ, ತಾಂ-ಅದರನ್ನು, ಹತಾನಾಂ-ಸತ್ತವರಿಗೆ, ಸಮಕಾರಯಾತ್-ಚನ್ನಾಗಿಮಾಡಿಸಿದನು ||೫೦|| ಅಥ-ಆಮೇಲೆ, ಮಾತರಂ-ತಾಯಿಯನ್ನೂ, ಅಥ-ಆಮೇಲೆ, ಪಿತರಂಚೈವ-ತಂದೆಯನ್ನೂ, ಬಂಧನಾತ್-ಸೆರೆಯಿಂದ, ಮೋಚಯಿತ್ವಾ-ಬಿಡಿಸಿ, ಕೃಷ್ಣರಾಮೌ-ಕೃಷ್ಣನೂ ರಾಮನೂ, ಶಿರಸಾ-ತಲೆಯಿಂದ, ಪಾದಯೋಃ-ಅವರಕಾಲುಗಳಲ್ಲಿ, ವವಂದಾತೇ-ವಂದನವಂಗೆಯ್ದರು ||೫೧|| ದೇವಕೀ-ದೇವಕಿಯೂ, ವಸುದೇವಶ್ಚ-ವಸುದೇವನೂ ಕೂಡ, ಕೃತಸಂವಂದನೌ-ಮಾಡಲ್ಪಟ್ಟ ಸಾಷ್ಟಾಂಗನಮಸ್ಕಾರವುಳ್ಳ, ಪುತ್ರೌ-ಕುಮಾರರನ್ನು, ಜಗದೀಶ್ವರೌ-ಪ್ರಪಂಚಕ್ಕೊಡೆಯರನ್ನಾಗಿ, ವಿಜ್ಞಾಯ-ತಿಳಿದುಕೊಂಡು, ಶಂಕಿತೌ-ಭಯವುಂಟಾದವರಾಗಿ, ನಸಸ್ವಜಾತೇ-ಅಪ್ಪಿಕೊಳ್ಳಲಿಲ್ಲವು ||೫೨||

---

ಪ್ರಕಾಶಿಸುವುದಿಲ್ಲ ||೪೭|| ಎಲೈಪುರುಷಶ್ರೇಷ್ಠನೇ! ನೀನು ನಿರಪರಾಧಿಗಳಾದ ಪ್ರಾಣಿಗಳಿಗೆ ಅಧಿಕವಾದ ದ್ರೋಹವಂಮಾಡಿ ಯಾವಕಾರಣದಿಂದ ಈಅವಸ್ಥೆಯುನಿನಗೆಬಂತು. ಪ್ರಾಣಿಗಳಿಗೆ ದ್ರೋಹವಂಮಾಡಿದವನು ಅವನುತಾನೆಸುಖವಂ ಏಯ್ದುವನು ||೪೮|| ಈಕೃಷ್ಣನು -ಸರ್ವಜಗತ್ತುಗಳಿಗೆ ಸೃಷ್ಟಿಕಾರಣನು ಸಂಹಾರಕನು ರಕ್ಷಕನೂ ಈತನೇ ಸರಿ' ಅಂತಾ ಶ್ರೀಕೃಷ್ಣನಂ ಅವಮಾನವಂಮಾಡಿದವನು ಯಾವಾಗಲೂ ಸುಖವನೆಯ್ದುವುದಿಲ್ಲ ||೪೯|| ಎಲೈ ಅರಸನೇ! ಈರೀತಿಯಲ್ಲಿ ವಿಲಾಪಂಗೆಯ್ಯುತ್ತಿರುವ, ಆ ರಾಜಸ್ತ್ರೀಯರುಗಳ್ಗೆ ಸಮಾಧಾನವಂಮಾಡಿ ಶ್ರೀಕೃಷ್ಣನು ಮೃತರಾದಕಂಸಾದಿಗಳಿಗೆ.ಪಾರವ್ಯಾಪಾರಲೌಕಿಕ ವ್ಯಾಪಾರವಂ ಮಾಡಿಸಿದಂ ||೫೦|| ಅನಂತರದಲ್ಲಿ ಮಾತಾಪಿತೃಗಳಿಗೆ ಬಂಧನವಂಬಿಡಿಸಿ ರಾಮಕೃಷ್ಣರು ಮಾತಾಪಿತೃಗಳಿಗೆ ತಲೆಗಳಿಂಕಾಲುಗಳಂ ಮುಟ್ಟುತ ನಮಸ್ಕರಿಸಿದರು ||೫೧|| ಆದೇವಕೀವಸುದೇವರು ನಮಸ್ಕರಿಸಿರುವ ರಾಮಕೃಷ್ಣರಂ ಜಗದೀಶ್ವರರನ್ನಾಗಿತಿಳಿದು ಭಯದಿಂದಲೇಆಲಿಂಗನವಂಮಾಡಲಿಲ್ಲ ||೫೨|| || ೫ ||

ಇತಿಶ್ರೀಮದ್ಭಾಗವತೆ- ದಶಮಸ್ಕಂಧೆ- ಚತುಶ್ಚತ್ವಾರಿಂಶೊಧ್ಯಾಯಃ



ಇತಿಶ್ರೀಮದ್ಭಾಗವತೇ ದಶಮಸ್ಕಂಧೇ ಚತುಶ್ಚತ್ವಾರಿಂಶೋಧ್ಯಾಯಃ



ವಸುದೇವದೇವಕಿಯರಿಗೆ ಕೃಷ್ಣಬಲರಾಮರು ವಂದಿಸುವಿಕೆ.



ಇಂತು ಶುಕಮುನಿಯು ಪರೀಕ್ಷಿದ್ರಾಯನಿಗೆ ನಿರೂಪಿಸಿದನೆಂದು ಸೂತಪೌರಾಣಿಕನು ನೈಮಿಷಾ
ರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಹೇಳಿದನೆಂಬಲ್ಲಿಗೆ ಶ್ರೀಮನ್ಮಹೀಶೂರಪುರವ
ರಾಧೀಶ ಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜ ವಿರಚಿತವಪ್ಪ ಶ್ರೀ
ಭಾಗವತದ ಶ್ರೀಕೃಷ್ಣರಾಜ ವಾಣೀವಿಲಾಸವು ಎಂಬಕರ್ಣಾಟ
ಭಾಷಾವ್ಯಾಖ್ಯಾನದಲ್ಲಿದಶಮಸ್ಕಂಧದೊಳು ೪೪ನೆಯ
ಅಧ್ಯಾಯವು ಸಂಪೂರ್ಣವಾದುದು.
ಮಂಗಳಮಸ್ತು

ಶ್ರೀಶುಕಃ॥ ಪಿತರಾವುಪಲಬ್ಧಾರ್ಥೌ ವಿದಿತ್ವಾ ಪುರುಷೋತ್ತಮಃ । ಮಾಭೂದಿತಿ ನಿಜಾಂ ಮಾಯಾಂ ತತಾನ ಜನಮೋಹಿನೀಮ್ ॥೧॥ ಉವಾಚ ಪಿತರಾವೇತ್ಯ ಸಾಗ್ರಜಃ ಸಾತ್ವತರ್ಷಭಃ । ಪ್ರಶ್ರಯಾವನತಃ ಪ್ರೀಣನ್ನಂಬ ತಾತೇತಿ ಸಾದರಮ್ ॥೨॥ ನಾಸ್ಮತ್ತೋ ಯುವಯೋಸ್ತಾತ ನಿತ್ಯೋತ್ಕಂಠಿತಯೋರಪಿ । ಬಾಲ್ಯಪೌಗಂಡಕೈಶೋರಾಃ ಪುತ್ರಾಭ್ಯಾಮಭವನ್ಕ್ವಚಿತ್ ॥೩॥ ನ ಲಬ್ಧೋ ದೈವಹತಯೋರ್ವಾಸೋ ನೌ

---

೪೫ನೆಯ ಅಧ್ಯಾಯದ ಪ್ರತಿಪದಟೀಕೆ.

[ಶುಕವಾಕ್ಯವು.] ಪುರುಷೋತ್ತಮಃ-ಪರಮಾತ್ಮನಾದ ಕೃಷ್ಣನು, ಪಿತರೌ-ತಾಯಿತಂದೆಗಳಾದ ದೇವಕೀವಸುದೇವರನ್ನು, ಉಪಲಬ್ಧಾರ್ಥೌ-ತಿಳಿಯಲ್ಪಟ್ಟ ತತ್ವವುಳ್ಳವರನ್ನಾಗಿ, ವಿದಿತ್ವಾ-ಅರಿತು, ಮಾಭೂದಿತಿ-ಅವರು ಹಾಗೆ ತಿಳಿದಿರಬೇಡವೆಂದು, ಜನಮೋಹಿನೀಂ-ಜನಗಳನ್ನು ಮೋಹಗೊಳಿಸುತಲಿರುವ, ನಿಜಾಂ ಮಾಯಾಂ-ತನ್ನ ಮಾಯಾಶಕ್ತಿಯನ್ನು, ತತಾನ-ವಿಸ್ತಾರಗೊಳಿಸಿದನು॥೧॥ ಸಾತ್ವತರ್ಷಭಃ-ಯಾದವರಲ್ಲಿ ಶ್ರೇಷ್ಠನಾದ ಕೃಷ್ಣನು, ಸಾಗ್ರಜಃ-ಅಣ್ಣನ ಸಹಿತನಾಗಿ, ಪ್ರಶ್ರಯಾವನತಃ-ವಿನಯದಿಂದ ಬಗ್ಗಿದವನಾಗಿ, ಪಿತರೌ-ತಾಯಿತಂದೆಗಳನ್ನು, ಏತ್ಯ-ಹೊಂದಿ, ಪ್ರೀಣನ್-ಸಂತೋಷಗೊಳಿಸುತ್ತಿರುವನಾಗಿ (ಪ್ರೀತಿಯನ್ನುಂಟುಮಾಡುವನಾಗಿ) ಸಾದರಂ-ಅಕ್ಕರೆಯೊಡನೆ, ಅಂಬ ತಾತೇತಿ-ಅಮ್ಮಾ ಅಪ್ಪಾ ಎಂದು, ಉವಾಚ-ನುಡಿದನು ॥೨॥ ತಾತ-ಅಪ್ಪನೇ! ನಿತ್ಯೋತ್ಕಂಠಿತಯೋರಪಿ-ಸರ್ವದಾ ಬಹಳ ಆಶೆಗೊಳ್ಳುತ ಲಿರುವರಾದರೂ, ಯುವಯೋಃ-ನಿಮಗೆ, ಅಸ್ಮತ್ತಃ-ನಮ್ಮದೆಸೆಯಿಂದ, ಪುತ್ರಾಭ್ಯಾಂ-ಮಕ್ಕಳಿಂದಾಗತಕ್ಕ, ಬಾಲ್ಯಪೌಗಂಡಕೈಶೋರಾಃ-ಬಾಲ್ಯಾವಸ್ಥೆ ಪೌಗಂಡಾವಸ್ಥೆ ಕೈಶೋರಾವಸ್ಥೆಗಳಲ್ಲಿ ಉಂಟುಮಾಡಲ್ಪಡತಕ್ಕ ಸಂತೋಷಗಳು, ಕ್ವಚಿತ್-ಒಂದು ಕಾಲದಲ್ಲಿಯೂ, ನಾಭವನ್-ಆಗಲಿಲ್ಲವು ॥೩॥ ಪಿತೃಗೇಹಸ್ಥಾಃ-ತಾಯಿತಂದೆಗಳ ಮನೆಯಲ್ಲಿರುವರೂ, ಲಾಲಿತಾಃ-ಪ್ರೀತಿಸಲ್ಪಟ್ಟವರೂ ಆದ, ಬಾಲಾಃ-ಹುಡುಗರು, ಯಾಂ ಮುದಂ-ಯಾವ ಸಂತೋಷವನ್ನು, ವಿಂದಂತೇ-ಅನುಭವಿಸುವರೋ, (ಅದರನ್ನ ನಾವರಿಯೆವು) ದೈವಹತಯೋಃ-ಅದೃಷ್ಟದಿಂದ ಕೊಲ್ಲಲ್ಪಟ್ಟವರಾದ, ನೌ-ನಮಗೆ, ಭವದಂಕೇ-ನಿಮ್ಮ ಬಳಿಯಲ್ಲಿ, ವಾಸಃ-ಇರುವಿಕೆ, ನಲಬ್ಧಃ-ಪಡೆಯಲ್ಪಟ್ಟ

---

* ೪೫ನೆಯ ಅಧ್ಯಾಯವು. *

ಶ್ರೀಧರೀಯಶ್ಲೋಕಃ॥ ಪಂಚಚತ್ವಾರಿಂಶಕೇಥ ಪಿತ್ರೋಸ್ಸಂದಾದಿಸಾಂತ್ವನಂ । ಉಗ್ರಸೇನಾಭಿಷೇಕಶ್ಚ ಗುರೌ ವಾಸಾತ್ಪುರಾಗಮಃ ॥ ॥ ನಾಲ್ವತ್ತೈದನೆಯ ಅಧ್ಯಾಯದಲ್ಲಿ ಮಾತಾಪಿತೃಗಳಾದ ದೇವಕೀವಸುದೇವರನ್ನು ನಂದಗೋಪನೇ ಮುಂತಾದ ಗೋಪಾಲಕರಂ ಸಹ ಸಮಾಧಾನಂಗೆಯ್ದು ಉಗ್ರಸೇನರಾಯಂಗೆ ಪಟ್ಟಾಭಿಷೇಕವನ್ನು ಮಾಡಿ, ಶ್ರೀಕೃಷ್ಣಮೂರ್ತಿಯು ಗುರುಕುಲದಲ್ಲಿ ವಿದ್ಯಾಭ್ಯಾಸವಂಮಾಡಿಕೊಂಡು, ಪುನಶ್ಚ ಮಧುರಾಪುರಕ್ಕೆ ಬಂದನು-ಎಂಬರ್ಥವಂ ಶ್ರೀಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸುವದೆಂತೆನೆ-

ಎಲೈ, ಅರಸೇ! ಅನಂತರದಲ್ಲಿ ಶ್ರೀಕೃಷ್ಣನು ಮಾತಾಪಿತೃಗಳಾದ ದೇವಕೀವಸುದೇವರು ತಾನು ಪರಮೇಶ್ವರನೆಂಬರ್ಥವಂ ತಿಳಿದು ಜ್ಞಾನಿಗಳಾಗಿ ಸಂಸಾರಸುಖಾನುಭವದಲ್ಲಿ ವಿರಕ್ತರಾದರು ಎಂದು ಆಲೋಚಿಸಿ ಮೋಹಕವಾದ ತನ್ನ ಮಾಯೆಯಂ ಅವರಮೇಲೆ ಪ್ರವರ್ತಿಸುವಂತೆ ಮಾಡಿ ಪುನಶ್ಚ ವ್ಯವಹಾರಾಸಕ್ತರಂ ಮಾಡಿದನು ॥೧॥ ಬಲರಾಮಯುಕ್ತನಾದ ಶ್ರೀಕೃಷ್ಣನು ಮಾತಾಪಿತೃಗಳ ಸಮೀಪಕ್ಕೆ ಹೋಗಿ ವಿನಯದಿಂದ ನಮ್ರನಾದವನಾಗಿ ಎಲೈ, ತಾಯಿಯೇ! ಎಲೈ, ತಂದೆಯೇ! ಎಂದು ಆದರಪೂರ್ವಕವಾಗಿ ನುಡಿದನು ॥೨॥ ಎಲೈ ತಂದೆಯೇ! ನಮ್ಮ ನಿಮಿತ್ತವಾಗಿ ನಿತ್ಯದಲ್ಲಿಯೂ ಉತ್ಕಂಠಿತರಾದ ನಿಮಗೆ ಪುತ್ರರಾದ ನಮ್ಮಿಂದ ಬಾಲ್ಯ ಯೌವನಾದಿ ಲೀಲೆಗಳಂ ನೋಡುವುದಕ್ಕೆ ಇಲ್ಲದೆ ಹೋಯಿತು ॥೩॥ ನಾವು ಭಾಗ್ಯಹೀನರಾದ ಕಾರಣದಿಂ ನಮಗೆ ನಿಮ್ಮ ಸಮೀಪದಲ್ಲಿ ವಾಸವಂ ಮಾಡುವುದಕ್ಕೆ ಇಲ್ಲದೆ ಹೋಯ್ತು. ಲೋಕದಲ್ಲಿ ಬಾಲಕರು ಪಿತೃಗೃಹಂಗಳಲ್ಲಿದ್ದು

ಭವದಂತಿಕೇ | ಯಾಂಬಾಲಾಃಪಿತೃಗೇಹಸ್ಥಾವಿಂದಂತೇಲಾಲಿತಾಮುದಮ್ ||೪|| ಸರ್ವಾರ್ಥಸಂಭವೋದೇ
ಹೋಜನಿತಃಪೋಷಿತೋಯತಃ|ನತಯೋರ್ಯಾತಿನಿರ್ವೇಶಂಪಿತ್ರೋರ್ಮರ್ತ್ಯಃಶತಾಯುಷಾ ||೫||ಯಸ್ತಯೋ
ರಾತ್ಮಜಃಕಲ್ಪಆತ್ಮನಾಚಧನೇನಚ|ವೃತ್ತಿಂನದದ್ಯಾತ್ತಂಪ್ರೇತ್ಯಸ್ವಮಾಂಸಂಖಾದಯಂತಿಹಿ||೬|| ಮಾ
ತರಂಪಿತರಂವೃದ್ಧಂಭಾರ್ಯಾಂಸಾಧ್ವೀಂಸುತಂಶಿಶುಮ್ | ಗುರುಂವಿಪ್ರಂಪ್ರಪನ್ನಂಚಕಲ್ಪೋಽ
ಬಿಭ್ರಚ್ಛ್ವಸನ್ಮೃತಃ||೭||ತನ್ನಾವಕಲ್ಪಯೋಃಕಂಸಾನ್ನಿತ್ಯಮುದ್ವಿಗ್ನಚೇತಸೋಃ | ಮೋಘಮೇತೇವ್ಯ
ತಿಕ್ರಾಂತಾದಿವಸಾವಾಮನರ್ಚತೋಃ||೮||ತತ್ಕ್ಷಂತುಮರ್ಹಥಸ್ತಾತಮಾತರ್ನೌಪರತಂತ್ರಯೋಃ|

---

ದಾ [illegible]ಗಲಿಲ್ಲ ||೪|| ಸರ್ವಾರ್ಥಸಂಭವಃ-ಸರ್ವಪ್ರಯೋಜನಗಳೂ ಯಾವುದರಲ್ಲಿಹುಟ್ಟುತ್ತವೆಯೋ ಅಂಥಾದ್ದಾದ, ದೇಹಃ-ಶರೀ
ರವು, ಯತಃ-ಯಾರದೆಸೆಯಿಂದ, ಜನಿತಃ-ಹುಟ್ಟಿಸಲ್ಪಟ್ಟದ್ದಾಗಿಯೂ, ಪೋಷಿತಃ-ಸಲಹಲ್ಪಟ್ಟದ್ದಾಗಿಯೂ ಇರುವುದೋ,
ತಯೋಃಪಿತ್ರೋಃ- ಅಂಥಾತಾಯಿತಂದೆಗಳ, ನಿರ್ವೇಶಂ-ಆನೃಣ್ಯವನ್ನು, ಮರ್ತ್ಯಃ-ಮನುಷ್ಯನು, ಶತಾಯುಷಾ-೧೦೦ವರು
ಷಗಳು ಬದು[illegible]ವುದರಿಂದಲೂ, ನಯಾತಿ-ಹೊಂದುವುದಿಲ್ಲವು ||೫|| ಯಃಆತ್ಮಜಃ-ಯಾವಮಗನು, ಆತ್ಮನಾ-ದೇಹದಿಂದಲೂ
ಧನೇನಚ-ಸ್ವತ್ತಿನಿಂದಲೂ, ಕಲ್ಪಃ-ಪುಷ್ಟನಾಗಿಯೂ ಕೂಡ, ತಯೋಃ-ಆತಾಯಿತಂದೆಗಳಿಗೆ,ವೃತ್ತಿಂ-ಜೀವನಸುಖವನ್ನು,
ನದದ್ಯಾ[illegible]-ಕೊಡುವುದಿಲ್ಲವೋ, ತಂ-ಅವನನ್ನು, ಪ್ರೇತ್ಯ-ಸತ್ತಮೇಲೆ, ಸ್ವಮಾಂಸಂ-ಅವನಅಡಗನ್ನು, ಖಾದಯಂತಿಹಿ,
ತಿನ್ನಿಸ[illegible]ತಲಿರುವರಲ್ಲವೆ||೬|| ಮಾತರಂ-ತಾಯಿಯನ್ನೂ, ವೃದ್ಧಂಪಿತರಂ-ಮುದುಕನಾದತಂದೆಯನ್ನೂ, ಸಾಧ್ವೀಂಭಾರ್ಯಾಂ-
ಪತಿವ್ರತೆ[illegible]ವ ಹೆಂಡತಿಯನ್ನು, ಶಿಶುಂಸುತಂ-ಹುಡುಗನಾದ ಮಗನನ್ನೂ, ಗುರುಂ-ಗುರುಗಳನ್ನೂ, ವಿಪ್ರಂ-ಬ್ರಾಹ್ಮಣ
ನನ್ನೂ, [illegible]ಪನ್ನಂಚ-ನೀನೇ ಗತಿಯೆಂದು ನಂಬಿದವನನ್ನೂ, ಕಲ್ಪಃ-ಸಮರ್ಥನಾಗಿಯೂ ಕೂಡ, ಅಬಿಭ್ರತ್-ಭರಿಸದೇಯಿ
ರುವವನು [illegible]ಸನ್ಮೃತಃ-ಉಸಿರಿಕ್ಕುತಲಿರುವ ಹೆಣನಾಗಿರುವನು ||೭||ಅಕಲ್ಪಯೋಃ-ಅಸಮರ್ಥರಾದ್ದರಿಂದಲೇ, ಕಂಸಾತ್-
ಕಂಸನದೆ[illegible]ಯಿಂದ, ನಿತ್ಯಂ-ಯಾವಾಗಲೂ, ಉದ್ವಿಗ್ನಚೇತಸೋಃ-ಹೆದರಿದಬುದ್ಧಿಯುಳ್ಳವರಾದ, ವಾಂ-ನಿಮ್ಮನ್ನು, ಅನರ್ಚ
ತೋಃ-ಪೂಜಿಸದೇಯಿರುವ, ನೌ-ನಮಗೆ, ತತ್-ಆಕಾರಣದಿಂದ, ಏತೇದಿವಸಾಃ-ಈದಿನಗಳು, ಮೋಘಂ-ವ್ಯರ್ಥವಾಗಿ, ವ್ಯ
ತಿಕ್ರಾಂತಾಃ-ಕಳೆದುಹೋದವಾದವು ||೮||ತಾತ-ಅಪ್ಪನೇ! ಮಾತಃ-ಅಮ್ಮನೇ! ದುರ್ಹೃದಾ-ದುಷ್ಟಬುದ್ಧಿಯಾದ ಕಂಸನಿಂದ,
ಭೃಶಂಕ್ಲಿಷ್ಟಯೋಃ-ಬಹಳಕಷ್ಟವನ್ನು ಹೊಂದಿದವರಾದ, ವಾಂ-ನಿಮ್ಮ, ಶುಶ್ರೂಷಾಂ-ಸೇವೆಯನ್ನು, ಪರತಂತ್ರಯೋಃ-ಪ
ರಾಧೀನರಾದ್ದರಿಂದ, ಅಕುರ್ವತೋಃ-ಮಾಡದೆಯಿರುವ, ನೌ-ನಮ್ಮ, ತತ್-ಆಯತರಾಧವನ್ನು, ಕ್ಷಂತುಂ-ಸೈರಿಸುವುದಕ್ಕೆ,
ಅರ್ಹಥ-ಯೋಗ್ಯರಾಗುವಿರಿ ||೯||ಇತ್ಥಂ-ಹೀಗೆ, ವಿಶ್ವಾತ್ಮನಃ-ಪ್ರಪಂಚಕ್ಕೆ ಆತ್ಮನಾಗಿಯೂ, ಮಾಯಾಮನುಷ್ಯಸ್ಯ-ಮಾಯೆ

---

ಅವರಿಂದಲಾಲಿತರಾಗಿ ಸಂತೋಷವನೆಯ್ದುವರು. ಆಪುಣ್ಯವುನಮಗೆ ಇಲ್ಲವಾಯ್ತು |೪| ಸರ್ವಪುರುಷಾರ್ಥಂ
ಗಳಿಗೂ ಸಾಧನವಾದ ಶರೀರವಂಕಲ್ಪಿಸಿ ಪೋಷಣವಂ ಮಾಡಿ ಸಂತೋಷಪಡುವ ಮಾತಾಪಿತೃಗಳ ಋಣವಂ
ಪ್ರತ್ಯುಪಕಾರಾದಿಗಳಿಂದ ನಿರ್ವಹಿಸುವುದಕ್ಕೆ ಶತವರ್ಷಂಗಳಿಂದಲೂ ಪುತ್ರನುಸಮರ್ಥನಾಗುವುದಿಲ್ಲ |೫|
ಈಪುತ್ರನಾದವನು ಸಮರ್ಥನಾಗಿದ್ದರೂ ತನ್ನಶರೀರದಿಂದಲೂ ಧನಾದಿಗಳಿಂದಲೂ ಮಾತಾಪಿತೃಗಳಿಗೆ ಜೀ
ವನವಂಕಲ್ಪಿಸುವುದಿಲ್ಲವೋ ಆಪುತ್ರಾಧಮನಂ ಯಮದೂತರು ಅವನಮಾಂಸವಂ ಅವನೇ ತಿನ್ನುವಂತೆಮಾ
ಡುವರು |೬| ಸಮರ್ಥನಾದರೂ ಯಾವಪುರುಷನು ಮಾತೃವನ್ನೂ, ವೃದ್ಧನಾದ ಪಿತೃವನ್ನೂ, ಪತಿವ್ರತೆ
ಯಾದಪತ್ನಿಯನ್ನೂ, ಶಿಶುವಾದ ಪುತ್ರನನ್ನೂ, ಗುರುವಾದಬ್ರಾಹ್ಮಣನನ್ನೂ, ಶರಣಾಗತನನ್ನೂ, ಪೋ
ಷಿಸುವುದಿಲ್ಲವೋ, ಆಪುರುಷನು ಜೀವಂತನಾದರೂ ಮೃತಪ್ರಾಯನೆ |೭| ಆದಕಾರಣದಿಂದ ಅಸಮರ್ಥ
ನಾಗಿ ಕಂಸನಭಯದಿಂದ ಖಿನ್ನಚೇತಸ್ಕರಾಗಿ ನಿಮ್ಮಪೂಜೆಯಂಮಾಡದೆ ಇರುವನಮಗೆ ಇಷ್ಟುದಿವಸಂಗಳೂ
ಕಳೆದುವ್ಯರ್ಥವಾಗಿಹೋದುವು |೮| ಎಲೈತಂದೆಯೇ, ತಾಯೇ! ದುಷ್ಟಕಂಸನಿಂದ ಕ್ಲೇಶಂಗೊಳಿಸಲ್ಪಟ್ಟ
ದೀನರಾಗಿ ಅಜ್ಞಾತವಾಸವಂಮಾಡಿಕೊಂಡು ನಿಮ್ಮ ಶುಶ್ರೂಷೆಯಂಮಾಡದೆಇದ್ದ ನಿಮ್ಮಅಪರಾಧವೆಂಸೀವುಕ್ಷ
ಮಿಸಬೇಕು |೯| ಎಂದೀರೀತಿಯಲ್ಲಿ ನುಡಿಯುತಲಿರುವ ಮಾಯಾಮನುಷ್ಯನಾದ ಸರ್ವಾತ್ಮಕನಾದ ಆಕೃ

ಆರೋಪ್ಯಾಂಕಮಪರಿಷ್ವಜ್ಯ ... ವ್ಯಾಪ್ತೋರಸ್ವಾಂ ... ಶೂಪಾಂಕ್ಷಿಪ್ತೈರ್ಯೋದುರ್ಗದಾತ್ಮಕೇಷು ||೯|| ಆತ್ಮನೋಮಾಯಯಾಮನುಷ್ಯಸ್ಯ ಹರೇರ್ವಿಶ್ವಾತ್ಮನೋಗಿರಾ | ಮೋಹಿತಾವಂಕಮಾರೋಪ್ಯಪರಿಷ್ವಜ್ಯಾಪತುರ್ಮುದಮ್ ||೧೦|| ಸಿಂಚಂತಾವಶ್ರುಧಾರಾಭಿಸ್ಸ್ನೇಹಪಾಶೇನಚಾವೃತೌ | ನಕಿಂಚಿದೂಚತೂರಾಜನ್ಬಾಷ್ಪಕಂಠೌವಿಮೋಹಿತೌ ||೧೧|| ಏವಮಾಶ್ವಾಸ್ಯಪಿತರೌಭಗವಾನ್ದೇವಕೀಸುತಃ| ಮಾತಾಮಹಂತೂಗ್ರಸೇನಂಯದೂನಾಮಕರೋತ್ಪತಿಮ್ ||೧೨|| ಆಹಚಾಸ್ಮಾನ್ಮಹಾರಾಜಪ್ರಜಾಸ್ಸಾಜ್ಞಪ್ತುಮರ್ಹಸಿ | ಯಯಾತಿಶಾಪಾದ್ಯದುಭಿರ್ನಾಸಿತವ್ಯಂನೃಪಾಸನೇ ||೧೩|| ಮಯಿಭೃತ್ಯಉಪಾಸೀನೇಭವತೋವಿಬುಧಾದಯಃ | ಬಲಿಂಹರಂತ್ಯ

ಯಿಂದ ಮನುಷ್ಯನಾಗಿರುವ, ಹರೇಃ-ಕೃಷ್ಣನ ಗಿರಾ-ಮಾತಿನಿಂದ, ಮೋಹಿತೌ-ಮೋಹಗೊಳಿಸಲ್ಪಟ್ಟ ದೇವಕೀವಸುದೇವರು. ಅಂಕಂ-ತೊಡೆಯನ್ನು, ಆರೋಪ್ಯ-ಏರಿಸಿಕೊಂಡು, ಪರಿಷ್ವಜ್ಯ-ಅಪ್ಪಿಕೊಂಡು, ಮುದಂ-ಸಂತೋಷವನ್ನು, ಆಪತುಃ-ಹೊಂದಿದರು ||೧೦||ರಾಜನ್-ಅ... ...ಕಣ್ಣೀರ್ಗಳ ಪರಂಪರೆಗಳಿಂದ, ಸಿಂಚಂತೌ-ತೋಯಿಸುತಲಿರುವವರೂ, ಸ್ನೇಹಪಾಶೇನ-ಸ್ನೇಹವೆಂಬ ಹಗ್ಗದಿಂ... ...ಮುಚ್ಚಲ್ಪಟ್ಟವರೂ, ಬಾಷ್ಪಕಂಠೌ-ಕಂಣೀರೂ ಬಿಗ್ಗುತ್ತಿಗೆಯೂ, ಉಳ್ಳವರೂ, ವಿಮೋಹಿತೌ-ವಿಶೇಷವಾ... ...ಟ್ಟವರೂ, ಆದ್ದರಿಂದ, ಕಿಂಚಿತ್-ಕೊಂಚವನ್ನಾದರೂ, ನೋಚತುಃ-ಹೇಳಲಿಲ್ಲವು||೧೧||ಭಗವಾನ್-ಭಗವಂತನಾದ ದೇವಕೀಸುತಃ ಕೃಷ್ಣನು, ಪಿತರೌ-ತಾಯಿತಂದೆಗಳನ್ನು, ಏವಂ-ಹೀಗೆ, ಆಶ್ವಾಸ್ಯ-ಸಮಾಧಾನಗೊಳಿಸಿ, ಮಾತಾಮಹಂ-ತಾಯ ತಂದೆಯಾದ, ಉಗ್ರಸೇನಂತು-ಉಗ್ರಸೇನನನ್ನಾದರೋ, ಯದೂನಾಂ-ಯದುರಾಯನ ವಂಶದಲ್ಲಿ ಹುಟ್ಟಿದವರ್ಗ... ...ತಿಂ-ಡೊರೆಯನ್ನಾಗಿ, ಅಕರೋತ್-ಮಾಡಿದನು ||೧೨|| ಆಹಚ-ಬಿನ್ನಹವನ್ನೂ ಮಾಡಿದನು. ಮಹಾರಾಜ-ದೊಡ್ಡದೊರೆಯೇ! ಪ್ರಜಾಃ-ನಿನ್ನ ರೈತರಾದ ಅಸ್ಮಾಂಸ್ತು-ನಮ್ಮನ್ನು ಕುರಿತಾದರೋ, ಆಜ್ಞಪ್ತುಂ-ಆಜ್ಞೆಗೆಯ್ಯುವುದಕ್ಕೆ, ಅರ್ಹಸಿ-ಯೋಗ್ಯನಾಗುವಿ (ಆದರೆ) ಯಯಾತಿಶಾಪಾತ್-ಯಯಾತಿಯನಿಗ್ರಹ ವಚನದಿಂದ, ಯದುಭಿಃ-ಯದುರಾಯನ ಕುಲದವರಿಂದ, ನೃಪಾಸನೇ ದೊರೆಯಗದ್ದುಗೆಯಲ್ಲಿ, ನಾಸಿತವ್ಯಂ-ಕುಳಿತುಕೊಳ್ಳತಕ್ಕದ್ದಲ್ಲವು ||೧೩|| (ಆದರೂ)-ಭೃತ್ಯೇ-ಸೇವಕನಾದ, ಮಯಿ-ನನ್ನ, ಉಪಾಸೀನೇಸತಿ-ಸೇವಿಸುವ ನಾಗುತ್ತಿರಲಾಗ(ಹತ್ತಿರಯಿರಲಾಗಿ)ವಿಬುಧಾ

ದೇವಕೀವಸುದೇವರು ಮಕ್ಕಳನ್ನು ಎತ್ತಿಕೊಂಡು ಮುದ್ದಾಡುವಿಕ



ಷ್ಣನವಾಕ್ಯದಿಂದ ಮೋಹಿತರಾಗಿ ದೇವಕೀವಸುದೇವರು ಪುತ್ರರಂತೊಡೆಯಮೇಲೆ ಕುಳ್ಳಿರಿಸಿಕೊಂಡು ಆಲಿಂಗನವಂಗೆಯ್ದು ಸಂತೋಷವನೆಯ್ದಿದರು ||೧೦|| ನೇತ್ರೋದಕಂಗಳಿಂದ ತೋಯಿಸುವವರಾಗಿ ಸ್ನೇಹಪಾಶಬದ್ಧರಾಗಿ ಬಾಷ್ಪಗದ್ಗದಕಂಠರಾಗಿ ಮೋಹಿತರಾಗಿ ಏನೂಮಾತಾಡಲಿಲ್ಲ ||೧೧|| ಭಗವಂತನಾದ ದೇವಕೀಪುತ್ರನು ಮಾತಾಪಿತೃಗಳಂಯಿಾರೀತಿಯಲ್ಲಿ ಸಮಾಧಾನವಂಮಾಡಿ ಮಾತಾಮಹನಾದ ಉಗ್ರಸೇನನಂಯಾದವರಿಗೆ ಪತಿಯನಾಗಿಮಾಡಿದನು ||೧೨|| ಮಹಾರಾಜನೇ! ಪ್ರಜೆಗಳಾದನಮಗೆ ಕೆಲಸಂಗಳಂ ಆಜ್ಞಾಪಿಸು, (ಎಂದುಉಗ್ರಸೇನನಂಕುರಿತುನುಡಿದನು-) ಯಯಾತಿಯ ಶಾಪದಿಂದ ನಿಮಗೆ ಸಿಂಹಾಸನಾರೋಪಣಮಾಗದು. ನೀನು ಯಾದವನಾದರೂನಿನಗೆ ದೋಷವಿಲ್ಲದಂತೆನಾನಿರುಪೆನು ||೧೩|| ಭೃತ್ಯನಾದನಾನು ನಿನ್ನ ಸಮಿಾಪದಲ್ಲಿ ಕುಳಿತಿರಲಾಗಿ ದೇವತೆಗಳುಕೂಡ ನಿನಗೆ ಕಾಣಿಕೆಗಳಂಕೊಡುವರು, ಮನುಷ್ಯಾದಿಗಳು ಕೇಳಲ್ಕತಕ್ಕುವೇ



ಉಗ್ರಸೇನಂಗೆ ಶ್ರೀಕೃಷ್ಣನು ರಾಜ್ಯಾಧಿಕಾರವಂ ಕುಡುವಿಕೆ- ಉಗ್ರಸೇನನ ಒಡ್ಡೋಲಗ

ರ್ಭವಾನ್ಪ್ರಿಯಚಿಕೀರ್ಷಯಾ ॥೪॥ ಅನ್ಯಥಾಗೋವ್ರಜೇತಸ್ಯಸ್ಮರಣೀಯಂನಚಕ್ಷ್ಮಹೇ ॥೫॥ ಸ್ನೆಹಾನುಬಂಧೋಬಂಧೂನಾಂಮುನೇರಪಿಸುದುಸ್ತ್ಯಜಃ। ಅನ್ಯೇಷ್ವರ್ಥಕೃತಾಮೈತ್ರೀಯಾವದರ್ಥವಿಡಂಬನಾ॥೬॥ಪುಂಭಿಸ್ತ್ರೀಷುಕೃತಾಯದ್ವತ್ಸುಮನಸ್ಸ್ವಿವಷಟ್ಪದೈಃ॥ನಿಸ್ಸ್ವಂತ್ಯಜಂತಿಗಣಿಕಾಅಕಲ್ಯಂನೃಪತಿಂಪ್ರಜಾಃ॥೭॥ ಅಧೀತವಿದ್ಯಾಆಚಾರ್ಯಮೃತ್ವಿಜೋದತ್ತದಕ್ಷಿಣಮ್। ಖಗಾವೀತಫಲಂ ವೃಕ್ಷಂಭುಕ್ತ್ವಾಚಾತಿಥಯೋಗೃಹಮ್। ದಗ್ಧಂಮೃಗಾಸ್ತಥಾರಣ್ಯಂಜಾರೋಭುಕ್ತ್ವಾರತಾಂಸ್ತ್ರಿಯಮ್॥೮॥ ಶ್ರೀಶುಕಃ॥ಇತಿಗೋಪ್ಯೋಹಿಗೋವಿಂದಗತವಾಕ್ಕಾಯಮಾನಸಾಃ। ಕೃಷ್ಣದೂತೇವ್ರಜಂ

---

ಸಭಿಕನನ್ನಾಗಿಯೂ, ಜಾನೀಮಃ-ಬಲ್ಲೆವು, ಭರ್ತ್ರಾ-ನಮ್ಮೊಡೆಯನಿಂದ, ಪಿತ್ರೋಃ-ತಾಯಿತಂದೆಗಳಿಗೆ, ಪ್ರಿಯಚಿಕೀರ್ಷಯಾ-ಸಂತೋಷವಂ ಮಾಡಲಪೇಕ್ಷೆಯಿಂದ, ಭವಾನ್-ನೀನು, ಇಹ-ಇಲ್ಲಿ, ಪ್ರೇಷಿತಃ-ಕಳುಹಿಸಲ್ಪಟ್ಟವನಾಗಿರುವಿ ॥೪॥ ಅನ್ಯಥಾ-ಹಾಗಲ್ಲದಿದ್ದರೆ, ಗೋವ್ರಜೇ-ಗೋಕುಲದಲ್ಲಿ, ತಸ್ಯ-ಆ ಕೃಷ್ಣನ, ಸ್ಮರಣೀಯಂ-ನೆನಪುಗೊಳಿಸತಕ್ಕವನನ್ನು, ನಚಕ್ಷ್ಮಹೇ-ಹೇಳಲಾರೆವು ॥೫॥ ಬಂಧೂನಾಂ-ನಂಟರ, ಸ್ನೇಹಾನುಬಂಧಃ-ಪ್ರೇಮಸಂಬಂಧವು, ಮುನೇರಪಿ-ಮೌನಶೀಲನಾದ ಪಂಡಿತನಿಗೂ ಕೂಡ, ಸುದುಸ್ತ್ಯಜಃ-ಸುಲಭವಾಗಿ ಬಿಡುವುದಕ್ಕೆ ಶಕ್ಯವಲ್ಲದ್ದು, ಅನ್ಯೇಷು-ಇತರರಲ್ಲಿ, ಅರ್ಥಕೃತಾ-ಧನಾದಿಪ್ರಯೋಜನಗಳಿಗಾಗಿ ಮಾಡಲ್ಪಟ್ಟ, ಮೈತ್ರೀ-ಸ್ನೇಹವು, ಯಾವದರ್ಥವಿಡಂಬನಾ-ಪ್ರಯೋಜನವು ಯಾವವರೆಗೋ ಆವರೆಗೇನೇ ನಟನಮಾತ್ರವುಳ್ಳದ್ದು ॥೬॥ ಸುಮನಸ್ಸು-ಪುಷ್ಪಗಳಲ್ಲಿ, ಷಟ್ಪದೈರಿವ-ಭೃಂಗಗಳಿಂದ ಹೇಗೋ ಹಾಗೆ, ಸ್ತ್ರೀಷು-ಹೆಂಗಳಲ್ಲಿ, ಪುಂಭಿಃ-ಪುರುಷರಿಂದ, ಕೃತಾ-ಮಾಡಲ್ಪಟ್ಟ ಮೈತ್ರಿಯಾಗಿರುವುದು, ಗಣಿಕಾಃ-ಸೂಳೆಯರು, ನಿಸ್ಸ್ವಂ-ಹಣವಿಲ್ಲದವನನ್ನು, ತ್ಯಜಂತಿ-ಬಿಡುವರು. ಪ್ರಜಾಃ-ಜನಗಳು, ಅಕಲ್ಯಂ-ಅಸಮರ್ಥನಾದ, ನೃಪಂ-ದೊರೆಯನ್ನು, ತ್ಯಜಂತಿ-ಬಿಡುವರು ॥೭॥ ಅಧೀತವಿದ್ಯಾಃ-ಕಲಿತವಿದ್ಯೆಗಳುಳ್ಳವರು, ಆಚಾರ್ಯಂ-ಗುರುವನ್ನೂ, ಋತ್ವಿಜಃ-ಋತ್ವಿಕ್ಕುಗಳು, ದತ್ತದಕ್ಷಿಣಂ-ಕೊಡಲ್ಪಟ್ಟ ದಕ್ಷಿಣೆಯುಳ್ಳ ಯಜಮಾನನನ್ನೂ, ಖಗಾಃ-ಹಕ್ಕಿಗಳು, ವೀತಫಲಂ-ಫಲವು ಹೋದ, ವೃಕ್ಷಂ-ಗಿಡವನ್ನೂ, ಅತಿಥಯಃ-ಅನ್ನಾರ್ಥಿಗಳು, ಭುಕ್ತ್ವಾ-ಉಂಡು, ಗೃಹಂ-ಮನೆಯನ್ನೂ, ಮೃಗಾಃ-ಮೃಗಗಳು, ದಗ್ಧಮರಣ್ಯಂ-ಸುಡಲ್ಪಟ್ಟ ಕಾಡನ್ನೂ, ತಥಾ-ಹಾಗೆಯೇ, ಜಾರಃ-ಮಿಂಡನು, ಭುಕ್ತ್ವಾ-ಅನುಭವಿಸಿ, ರತಾಂ-ಅನುರಕ್ತಳಾದ, ಸ್ತ್ರಿಯಂ-ಹೆಂಗಸನ್ನೂ, ತ್ಯಜಂತಿ-ಬಿಡುವರು॥೮॥ [ಶುಕವಚನವು] ಇತಿ-ಹೀಗೆ, ಗೋಪ್ಯೋಹಿ-ಗೊಲ್ಲತಿಯರಲ್ಲವೆ, ಗೋವಿಂದಗತವಾಕ್ಕಾಯಮಾನಸಾಃ-ಕೃಷ್ಣನಂ ಹೊಂದಿದ ಮಾತು ಮೈಮನಸ್ಸೂ ಉಳ್ಳವರು. ಕೃಷ್ಣದೂತೇ-ಕೃಷ್ಣನಿಗೆ ಆಳಾದ, ಉದ್ಧವೇ-ಉದ್ಧವನು, ವ್ರಜಂ-ಗೋಕುಲವನ್ನು ಕುರಿತು

---

ವ್ಯಾಪಾರಂಗಳಿಂದ ರಹಸ್ಯದಲ್ಲಿ ಪ್ರಶ್ನಂಗೆಯ್ದರು ॥೩॥ಎಲೈ ಪುರುಷನೇ! ನೀನು ಕೃಷ್ಣನಸೇವಕನು ಬಂದಿರುವಿ, ಶ್ರೀಕೃಷ್ಣನು ತಮ್ಮ ಮಾತಾ ಪಿತೃಗಳಿಗೆ ಪ್ರಿಯವಂ ಮಾಡಲೋಸುಗ ನಿನ್ನಂ ಕಳುಹಿಸಿರುವನು ॥೪॥ ಮತ್ತೆ ಬೇರೆ ಆಕೃಷ್ಣನಿಗೆ ಇಲ್ಲಿನ ಸ್ಮರಣೀಯ ವ್ಯಾಪಾರವಾವುದೂ ಇಲ್ಲ ।೫॥ಬಂಧುಗಳಲ್ಲಿ ಸ್ನೇಹಾನುಬಂಧವು ಯೋಗಿಗಳಿಗೂ ಸಹ ಬಿಡುವುದು ಅಸಾಧ್ಯವು. ಇತರ ವಿಷಯವಾದ ಮೈತ್ರಿಯು ಕಾರ್ಯನಿಮಿತ್ತವಾಗಿ ನಟನಮಾತ್ರವೇಸರಿ ॥೬॥ಪುರುಷರಿಂದ ಸ್ತ್ರೀಯರಲ್ಲಿ ಮಾಡಲ್ಪಟ್ಟ ಸ್ನೇಹವು ಭ್ರಮರಂಗಳಿಂದ ಪುಷ್ಪಂಗಳೊಡನೆ ಮಾಡಲ್ಪಟ್ಟ ಸ್ನೇಹವು ಹೇಗೋ ಹಾಗೆ ಕಾರ್ಯಾರ್ಥವಾಗಿರುವುದು. ವೇಶ್ಯಾಸ್ತ್ರೀಯರು ನಿರ್ಧನನಾದಪುರುಷನು ತ್ಯಜಿಸುವರು. ಅಧಮನಾದ ಅರಸು ಪ್ರಜೆಗಳಿಂ ತ್ಯಜಿಸುವನು ॥೭॥ ವಿದ್ಯಾ ಪ್ರಾಪ್ತಿಯ ಅನುತರದಲ್ಲಿ ಶಿಷ್ಯರು ಆಚಾರ್ಯನಂ ತ್ಯಜಿಸುವರು. ಋತ್ವಿಕ್ಕುಗಳು ದಕ್ಷಿಣೆ ಸಂದಮೇಲೆ ಯಜಮಾನನಂ ತ್ಯಜಿಸುವರು. ಫಲರಹಿತವಾದ ವೃಕ್ಷವಂ ಪಕ್ಷಿಗಳು ತ್ಯಜಿಸುವವು. ಭೋಜನ ವಾದಮೇಲೆ ಅತಿಥಿಗಳು ಯಜಮಾನನ ಗೃಹವಂ ತ್ಯಜಿಸುವರು. ದಗ್ಧವಾದ ಅರಣ್ಯವಂ ಮೃಗಂಗಳು ತ್ಯಜಿಸುವವು. ಜಾರಪುರುಷನು ಪರಸ್ತ್ರೀಯ ನನುಭವಿಸಿ ಆಸ್ತ್ರೀಯಳಿಗೆ ಕಾಮತೃಪ್ತಿಯಾಗದಿದ್ದರೂ ಅವಳಂ ತ್ಯಜಿಸುವನು॥೮॥ಈರೀತಿಯಲ್ಲಿ ನುಡಿವುತ ಗೋಪಿಯರುಗಳು ಶ್ರೀಕೃಷ್ಣನಲ್ಲಿ ಲಗ್ನವಾದ ಮನಸ್ಸೂ ವಾಕ್ಕುಗಳೂ ಉಳ್ಳವರಾಗಿ, ಕೃಷ್ಣ

**ಯಾತೇಉದ್ಧವೇತ್ಯಕ್ತಲೌಕಿಕಾಃ‖೯‖ಗಾಯಂತ್ಯಃಪ್ರಿಯಕರ್ಮಾಣಿರುದಂತ್ಯಶ್ಚಗತಹ್ರಿಯಃ ।ತಸ್ಯ**

ಭ್ರಮರಗೀತಾದಿ ಕಥಾಪ್ರಾರಂಭಘಟ್ಟಃ.

**ಸಂಸ್ಮೃತ್ಯಸಂಸ್ಮೃತ್ಯಯಾನಿಕೈಶೋರಬಾಲ್ಯಯೋಃ ‖೧೦‖ ಕಾಚಿನ್ಮಧುಕರಂದೃಷ್ಟ್ವಾಧ್ಯಾಯಂತೀಕೃಷ್ಣಸಂಗಮಮ್ । ಪ್ರಿಯಪ್ರಸ್ಥಾಪಿತಂದೂತಂಕಲ್ಪಯಿತ್ವೇದಮಬ್ರವೀತ್ ‖೧೧‖ ಗೋಪಿಕಾ ‖ ಮಧುಪಕಿತವಬಂಧೋಮಾಸ್ಪೃಶಾಂಘ್ರಿಂಸಪತ್ನ್ಯಾಃಕುಚವಿಲುಳಿತಮಾಲಾಕುಂಕುಮಶ್ಮಶ್ರುಭಿರ್ನಃ । ವಹತುಮಧುಪತಿಸ್ತನ್ಮಾನಿನೀನಾಂಪ್ರಸಾದಂ ಯದುಸದಸಿವಿಡಂಬ್ಯಂಯಸ್ಯದೂತಸ್ತ್ವಮೀದೃಕ್ ‖೧೨‖ ಸಕೃದಧರಸುಧಾಂಸ್ವಾಂಮೋಹಿನೀಂಪಾಯಯಿತ್ವಾಸುಮನಸಇವಸದ್ಯ**

---

ಯಾತೇಸತಿ-ಬಂದವನಾಗುತಲೂ, ತ್ಯಕ್ತಲೌಕಿಕಾಃ-ಬಿಡಲ್ಪಟ್ಟ ಲೋಕವ್ಯಾಪಾರವುಳ್ಳವರಾದರು ‖೯‖ ಪ್ರಿಯಕರ್ಮಾಣಿ-ಕೃಷ್ಣನ ಕೆಲಸಗಳನ್ನು, ಗಾಯಂತ್ಯಃ-ಹಾಡುತಲಿರುವರೂ, ತಸ್ಯ ಆ ಕೃಷ್ಣನ, ಕೈಶೋರಬಾಲ್ಯಯೋಃ-ಕಿಶೋರಬಾಲ್ಯಾವಸ್ಥೆಗಳ್ಲಿ, ಯಾನಿ-ಯಾವ ಕರ್ಮಗಳನ್ನು ಅನುಭವಿಸಿಯಿದ್ದರೋ, ತಾನಿ-ಅವುಗಳನ್ನು, ಸಂಸ್ಮೃತ್ಯಸಂಸ್ಮೃತ್ಯ-ನೆನಪುಗೊಂಡು ನೆನಪುಗೊಂಡು, ಗತಹ್ರಿಯಃ-ಬಿಟ್ಟುಹೋದ ನಾಚಿಕೆಯುಳ್ಳವರಾಗಿ, ರುದಂತ್ಯಶ್ಚ-ಅಳುತಿರುವರೂ ಆದರು‖೧೦‖ [ಭ್ರಮರಸಂದೇಶದಗೋಪೀಗೀತಗಳು] ಕೃಷ್ಣಸಂಗಮಂ-ಕೃಷ್ಣನ ಸಂಬಂಧವನ್ನು, ಧ್ಯಾಯಂತೀ-ಭಾವಿಸುತಲಿರುವ, ಕಾಚಿತ್-ಒಬ್ಬಳು, ಮಧುಕರಂದೃಷ್ಟ್ವಾ-ಭೃಂಗವನ್ನು ನೋಡಿ, ಪ್ರಿಯಪ್ರಸ್ಥಾಪಿತಂ-ಪ್ರಿಯನಿಂದ ಕಳುಹಿಸಲ್ಪಟ್ಟ, ದೂತಂಕಲ್ಪಯಿತ್ವಾ-ಆಳನ್ನಾಗಿ ಭಾವಿಸಿಕೊಂಡು, ಇದಂ-ಈ ಮುಂದೆ ಹೇಳಲ್ಪಡುವುದನ್ನು, ಅಬ್ರವೀತ್-ನುಡಿದಳು ‖೧೧‖ [ಗೋಪಿವಾಕ್ಯವು]. ಮಧುಪ-ಭೃಂಗವೇ! ಕಿತವಬಂಧೋ-ಧೂರ್ತನಿಗೆ ನಂಟನೇ! ಸಪತ್ನ್ಯಾಃ-ಸವತಿಯ, ಕುಚ...ಭಿಃ-ಕುಚ-ಸ್ತನಗಳಲ್ಲಿ,ವಿಲುಳಿತ ಹೊರಳಿದ, ಮಾಲಾ-ಪುಷ್ಪಸರಗಳ, ಕುಂಕುಮ-ಕುಂಕುಮವುಳ್ಳ, ಶ್ಮಶ್ರುಭಿಃ-ಮೀಸೆಗಳಿಂದ, ನಃ-ನಮ್ಮ, ಅಂಘ್ರಿಂ-ಕಾಲನ್ನು ಮಾಸ್ಪೃಶ-ಸೋಂಕಬೇಡ, ಯಸ್ಯ-ಯಾವವನ, ದೂತಃ-ಆಳಾದ, ತ್ವಂ-ನೀನು, ಈದೃಕ್-ಇಂಥವನೋ, ಸಮಧುಪತಿಃ-ಆ ಭೃಂಗವು, (ಕೃಷ್ಣನು) ತನ್ಮಾನಿನೀನಾಂ-ಆ ಹೆಂಗಳ, ಪ್ರಸಾದಂ-ಅನುಗ್ರಹವನ್ನೂ, ಯದುಸದಸಿ-ಯಾದವರ ಸಭೆಯಲ್ಲಿ, ವಿಡಂಬಂ-ಹಾಸ್ಯಾಸ್ಪದವನ್ನೂ, ವಹತು-ಧರಿಸಲಿ ‖೧೨‖ ಸಕೃತ್-ಒಂದುಸಲ, ಮೋಹಿನೀಂ_ಮೋಹವನ್ನುಂಟುಮಾಡುವ, ಸ್ವಾ

---

ದೂತನಾದ ಉದ್ಧವನು ವ್ರಜಕ್ಕೆ ಬಂದಿರಲಾಗಿ ಗೃಹಕೃತ್ಯಂಗಳಂ ಬಿಟ್ಟು‖೯‖ ಶ್ರೀಕೃಷ್ಣನ ವ್ಯಾಪಾರಂಗಳಂ ಗಾನಂ ಗೆಯ್ಯುತ ಲಜ್ಜೆಯುಂ ಬಿಟ್ಟು ರೋದನಂ ಗೆಯ್ವರಾಗಿ, ಆಶ್ರೀಕೃಷ್ಣನ ಬಾಲಕೈಶೋರಚರಿತ್ರಂಗಳಂ ಸ್ಮರಿಸಿಕೊಂಡು ಸ್ಮರಿಸಿಕೊಂಡು ‖೧೦‖ಒಬ್ಬಳು ಸ್ತ್ರೀಯು ಒಂದುಭ್ರಮರವಂ ನೋಡಿ ಕೃಷ್ಣ ಸಮಾಗಮಾಕಾಂಕ್ಷೆಯಿಂದ ಕೃಷ್ಣನಿಂದ ಕಳುಹಿಸಲ್ಪಟ್ಟ ದೂತನನ್ನಾಗಿ ಭಾವಿಸಿ, ಉದ್ಧವನಂ ಕುರಿತು ಪೇಳತಕ್ಕ ಮಾತುಗಳಂ ಭ್ರಮರವಂ ಕುರಿತು ಪೇಳಿದಳು(ಎಂತೆನೆ)‖೧೧‖ ಎಲೈ ವಂಚಕನಾದ ಭ್ರಮರಪತಿಗೆ ದೂತನಾದ ಭೃಂಗವೇ! ಸಪತ್ನಿಯರುಗಳ ಕುಚಂಗಳಲ್ಲಿ ಜೋಲುವ ಮಾಲ್ಯಂಗಳ ಕುಂಕುಮಂಗಳಿಂದ ವ್ಯಾಪೃತಮಾದ ಮೀಸೆಗಳಿಂದ ನಮ್ಮ ಪಾದಂಗಳಂ ಮುಟ್ಟಬೇಡ, ಆಭೃಂಗಪತಿಯು ಆಸ್ತ್ರೀಯರುಗಳ ದಯವನ್ನೇ ಸಂಪಾದಿಸಿಕೊಳಲಿ, ಅವನ ಕಪಟ ಕೃತ್ಯಮಂ ನೋಡಿ ಯಾದವಸಭೆಯಲ್ಲಿಎಲ್ಲರೂ ನಿಂದಿಸಲಿ‖೧೨‖ಆ ಭ್ರಮರ ನಾಥನುಮೋಹಕಮಾದ ಸ್ವಕೀಯಮಾದ ಅಧರಾಮೃತವಂಒಂದುಬಾರಿನಮಗೆ ಪಾನವಂ ಮಾಡಿಸಿ ಪುಷ್ಪಂಗಳಂ ಭ್ರಮರವು ತ್ಯಜಿಸಿದಂತೆ ನಮ್ಮಂ ತ್ಯಜಿಸಿದನು. ಅಂತಾ ಮೋಸಗಾರನಾದ ನಾಥನ ಪಾದಪದ್ಮಮಂ ನೀನು ಹೇಗೆಪರಿಚರಣಂಗೆಯ್ಯುತ್ತೀಯೆ? ಆಪುರುಷನ ಬೆಲ್ಲದ ಮಾತುಗಳಿಂದ ಬೆರಗಾ



ಸ್ತ್ಯಜೆಸ್ಮಾನ್ ಭವಾದೃಕ್ ॥ಪರಿಚರತಿಕಥಂತತ್ಪಾದಪದ್ಮಂನುಪದ್ಮಾಅಪಿಬತಹೃತಚೇತಾಹ್ಯುತ್ತಮ
ಶ್ಲೋಕಜಲ್ಪೈಃ ॥೧೩॥ ಕಿಮಿಹಬಹುಷಡಂಘ್ರೇಗಾಯಸಿತ್ವಂಯದೂನಾಮಧಿಪತಿಮಗೃಹಾಣಾಮಗ್ರ
ತೋನಃಪುರಾಣಂ ವಿಜಯಸಖಸಖೀನಾಂಗೀಯತಾಂತತ್ಪ್ರಸಂಗಃಕ್ಷಪಿತಕುಚರುಜಸ್ತೇಕಲ್ಪಯಂ
ತೀಷ್ಟಮಿಷ್ಟಾಃ ॥೧೪॥ ದಿವಿಭುವಿಚರಸಾಯಾಂಕಾಸ್ತ್ರಿಯಸ್ತದ್ದುರಾಪಾಃಕಪಟರುಚಿರಹಾಸಭ್ರೂ
ವಿಜೃಂಭಸ್ಯಯಾಸ್ಯುಃ ಚರಣರಜಉಪಾಸ್ತೆಯಸ್ಯಭೂತಿರ್ವಯಂಕಾಹ್ಯಪಿಚಕೃಪಣಪಕ್ಷೆಹ್ಯು
ತ್ತಮಶ್ಲೋಕಶಬ್ದಃ ॥ ೧೫॥ ವಿಸೃಜಶಿರಸಿಪಾದಂವೇದ್ಮ್ಯಹಂಚಾಟುಕಾರೈರನುನಯವಿದುಷಸ್ತೇಭ್ಯೆ

ಮಧುರಸುಧಾಂ-ತನ್ನ ದಾದ ತುಟಿಯ ಅಮೃತವನ್ನು, ಪಾಯಯಿತ್ವಾ-ಕುಡಿಸಿ, ಭವಾದೃಕ್-ನಿನ್ನಂಥವನು. ಸುಮನಸಃ-ಪು
ಷ್ಪಗಳನ್ನು ಹೇಗೋ ಹಾಗೆ, ಅಸ್ಮಾನ್-ನಮ್ಮನ್ನು, ಸದ್ಯಃ-ಆಗಲೇ, ತತ್ಯಜೇ-ತೊರಕೊಂಡನು. ತತ್ಪಾದಪದ್ಮಂನು-ಅಂತವ
ನ ಅಡಿದಾವರೆಯನ್ನು ಕೂಡ, ಪದ್ಮಾ-ಲಕ್ಷ್ಮಿಯು, ಕಥಂಪರಿಚರತಿ-ಹೇಗೆ ಸೇವಿಸುತಲಿರುವಳು? ಬತ-ಖೇದವು, ಉತ
ಮಶ್ಲೋಕಜಲ್ಪೈಃ-ಕೃಷ್ಣನ ಸುಳ್ಳುಮಾತುಗಳಿಂದ, ಹೃತಚೇತಾಹಿ-ಹರಿಸಲ್ಪಟ್ಟ ಮನಸ್ಸುಳ್ಳವಳಾದಳಲ್ಲವೆ? ॥೧೩॥ ಷಡಂಘ್ರೇ-
ಆರಡಿಯೇ! ಅಗೃಹಾಣಾಂ-ಮನೆಯಿಲ್ಲದವರಾದ (ಮನೆಯಾಗಿರದ) ನಃ-ನಮ್ಮ, ಅಗ್ರತಃ-ಮುಂದೆ, ಪುರಾಣಂ-ಹಳಬನಾದ-
(ಅನಾದಿಪುರುಷನಾದ) ಯದೂನಾಂಪತಿಂ-ಧಣಿಯನ್ನು, (ಕೃಷ್ಣನನ್ನು) ಇಹ-ಇಲ್ಲಿ, ತ್ವಂ-ನೀನು, ಬಹು-ಅಧಿಕವಾಗಿ, ಕಿಂ
ಗಾಯಸಿ-ಏನು ಹಾಡುತ್ತೀಯೆ? ವಿಜಯಸಖಸಖೀನಾಂ-ಮನ್ಮಥನಗೆಳೆಯನ ಗೆಳತಿಯರ, (ಕೃಷ್ಣನ ಸಖಿಯರ) ಅಗ್ರತಃ-
ಮುಂದೆ, ತತ್ಪ್ರಸಂಗಃ-ಆ ಪ್ರಸ್ತಾವವು, ಗೀಯತಾಂ-ಹಾಡಲ್ಪಡಲಿ ಕ್ಷಪಿತಕುಚರುಜಃ-ಪರಿಹರಿಸಲ್ಪಟ್ಟ ಸ್ತನರೋಗಗಳುಳ್ಳ,
ಇಷ್ಟಾಃ-ಬೇಕಾದ ಆ ಹೆಂಗಳು, ತೇ-ನಿನ್ನ, ಇಷ್ಟಂ-ಪ್ರಿಯವನ್ನು, ಕಲ್ಪಯಂತಿ-ಉಂಟುಮಾಡುವರು॥೧೪॥ ಹೇಕಪಟ-ಎಲವೋ
ನಗಾರನಾದ ತುಂಬಿಯೇ! ದಿವಿ-ಸ್ವರ್ಗದಲ್ಲಿ, ಭುವಿಚ-ಭೂಲೋಕದಲ್ಲಿಯೂ, ರಸಾಯಾಂ-ಪಾತಾಳದಲ್ಲಿಯೂ, ಯಾಸ್ಸ್ಯುಃ-ಯಾವ
ಹೆಂಗಳಿರುವರೋ, ತಾಸು-ಅವರಲ್ಲಿ, ಕಾಸ್ತ್ರಿಯಃ-ಯಾವಹೆಂಗಳುತಾನೆ, ರುಚಿರಹಾಸಭ್ರೂವಿಜೃಂಭಸ್ಯ-ಮನೋಹರವಾದನಗೆ
ಯೂ ಹುಬ್ಬುಗಳಂಹಾರಿಸುವಿಕೆಯೂಉಳ್ಳ, ತತ್-ಆ ಕೃಷ್ಣನಿಗೆ, ದುರಾಪಾಃ-ದುರ್ಲಭೆಯರಾಗಿರುವರು, ಭೂತಿಃ- ಐಶ್ವರ್ಯರೂಪಿ
ಣಿಯಾದ ಲಕ್ಷ್ಮಿಯು, ಯಸ್ಯ-ಯಾವವನ, ಚರಣರಜಃ-ಪಾದಧೂಳಿಯನ್ನು, ಉಪಾಸ್ತೇ-ಸೇವಿಸುವಳೋ, ತಸ್ಯ-ಅವನಿಗೆ, ವಯಂ
ಕಾಃ-ನಾವು ಯಾರು? ಹಿ-ಅಲ್ಲವೆ, ಅಪಿಚ-ಹಾಗಾದರೂ, ಕೃಪಣಪಕ್ಷೇ-ದೀನರಲ್ಲಿ ಪಕ್ಷಪಾತಿಯಾಗಿರುವ ಅವನ ವಿಷಯದಲ್ಲಿ, ಉ
ತ್ತಮಶ್ಲೋಕಶಬ್ದೋಹಿ-ಉತ್ತಮನೆಂದು ಕೊಂಡಾಡಲ್ಪಡತಕ್ಕ ಮಾತು ಯುಕ್ತವೇಸರಿ ॥೧೫॥ ಶಿರಸಿ-ನಮ್ಮತಲೆಯಲ್ಲಿ, ಪಾ
ದಂ-ನಿನ್ನ ಕಾಲನ್ನು, ವಿಸೃಜ-ಇಡಬೇಡಬಿಡು ಮುಕುಂದಾತ್-ಕೃಷ್ಣನಪಸೆಯಿಂದ, ಅಭ್ಯೇತ್ಯ-ಕಲಿತುಕೊಂಡು ಬಂದು, ದೌ
ತ್ಯೈಃ-ದೂತನ ಕೆಲಸಗಳಿಂದಲೂ, ಚಾಟುಕಾರೈಃ-ಚಮತ್ಕಾರದ ನುಡಿಗಳಂ ನುಡಿಯುವುದರಿಂದಲೂ, ಅನುನಯವಿದುಷಃ-
ಪ್ರಾರ್ಥಿಸುವಬಗೆಯಂ ಬಲ್ಲವನಾದ, ತೇ-ನಿನ್ನ ಸಂಗತಿಯನ್ನು, ಅಹಂವೇದ್ಮಿ-ನಾನು ಬಲ್ಲೆನು ಸ್ವಕೃತೇ-ತನಗೋಸುಗ, ಇ
ಹ-ಈ ಲೋಕದಲ್ಲಿ, ವಿಸೃಷ್ಟಾಪತ್ಯಪತ್ಯನ್ಯಲೋಕಾಃ-ವಿಸೃಷ್ಟ-ಬಿಡಲ್ಪಟ್ಟ, ಅಪತ್ಯ-ಮಕ್ಕಳು, ಪತಿ-ಗಂಡಂದಿರು, ಅ

---

ಗಿ ಲಕ್ಷ್ಮಿಯು ಅವನಂಸೇರಿರುವಳು॥೧೩॥ನಾವುಲಕ್ಷ್ಮಿಯಂತೆ ಅಪ್ರೌಢೆಯರಲ್ಲವು, ಎಲೈ ಭೃಂಗವೇ! ಪೂರ್ವದಲ್ಲಿ
ಕಾಣಲ್ಪಟ್ಟು ಕೇಳಲ್ಪಟ್ಟಿರುವ ಯದುಪತಿಯಾದ ಪುರುಷನಂ ಬಹುವಾಗಿ ನಮ್ಮಮುಂದೆ ಏಕೆ ಗಾನಂಗೆ
ಯ್ಯುವಿ? ಆಕೃಷ್ಣನಿಗೆ ಆಪ್ತರಾದ ಸ್ತ್ರೀಯರುಗಳಮುಂದೆ ಗಾನವಂ ಮಾಡು, ಆಲಿಂಗನದಿಂದ ಪರಿಹರಿಸಲ್ಪಟ್ಟ
ಕುಚರೋಗವುಳ್ಳವರಾಗಿಆಸ್ತ್ರೀಯರುಗಳು ಪ್ರಿಯವಂ ಮಾಡುವರು॥೧೪॥ಸ್ವರ್ಗದಲ್ಲಿ ಭೂಮಿಯಲ್ಲಿ ಪಾತಾಳ
ದಲ್ಲಿಯೂ ಯಾವ ಸ್ತ್ರೀಯರುಂಟೋ, ಅವರೊಳಗೆ ಯಾವ ಸ್ತ್ರೀಯರುಗಳ ಕಪಟವಾದಮನೋಹರವಾದ
ನಗೆಯೂ ಹುಬ್ಬುಗಳ ಚಾಲನವೂಉಳ್ಳ ಆ ಶ್ರೀಕೃಷ್ಣನಿಗೆ ದುರ್ಲಭರಾದರು? ಎಲ್ಲರೂ ಮರಳಾಗುವರು. ಯಾವ
ಶ್ರೀಕೃಷ್ಣನ ಪಾದರಜಸ್ಸಂ ಲಕ್ಷ್ಮಿಯು ಸೇವಿಸುವಳೋ ಅಂಥಾ ಶ್ರೀಕೃಷ್ಣನಿಗೆ ನಾವು ಎಷ್ಟುಮಾತ್ರರಾದ
ರೂ, ದೀನರಂ ಕಾಪಾಡುವನು ಎಂದು ಉತ್ತಮಶ್ಲೋಕನೆನಿಸಿರುವನು ॥೧೫॥ ನಮ್ಮ ಪಾದಂಗಳಲ್ಲಿ ಶಿರಸ್ಸನಿ
ರಿಸಿ ನಮಸ್ಕರಿಸಬೇಡ, ಮುಕುಂದನ ಡೆಸೆಯಿಂದ ಕಲಿಸಿಕೊಂಡಿರುವ ಚಾಟುವಾಕ್ಯಗಳಿಂದ ಸ್ತ್ರೀಯರುಗಳಂ

ತ್ಯದೌತ್ಯೈರ್ಮುಕುಂದಾತ್ | ಸ್ವಕೃತ ಇಹ ವಿಸೃಷ್ಟಾಪತ್ಯಪತ್ಯನ್ಯಲೋಕಾ ವ್ಯಸೃಜದಕೃತಚೇತಾಃ ಕಿನ್ನು ಸಂಧೇಯಮಸ್ಮಿನ್ ||೧೬|| ಮೃಗಯುರಿವ ಕಪೀಂದ್ರಂ ವಿವ್ಯಧೇ ಲುಬ್ಧಧರ್ಮಾ ಸ್ತ್ರಿಯಮಕೃತ ವಿರೂಪಾಂ ಸ್ತ್ರೀಜಿತಃ ಕಾಮಯಾನಾಂ | ಬಲಿಮಪಿ ಬಲಿಮತ್ತ್ವಾವೇಷ್ಟಯದ್ಧ್ವಾಂಕ್ಷವದ್ಯಸ್ತದಲಮಸಿತಸಖ್ಯೈರ್ದುಸ್ತ್ಯಜಸ್ತತ್ಕಥಾರ್ಥಃ ||೧೭|| ಯದನುಚರಿತಲೀಲಾಕರ್ಣಪೀಯೂಷವಿಪ್ರುಟ್ಸಕೃದದನವಿಧೂತದ್ವಂದ್ವಧರ್ಮಾ ವಿನಷ್ಟಾಃ | ಸಪದಿ ಗೃಹಕುಟುಂಬಂ ದೀನಮುತ್ಸೃಜ್ಯ ದೀನಾ ಬಹವ ಇವ ವಿಹಂಗಾ ಭಿಕ್ಷುಚರ್ಯಾಂ ಚರಂತಿ ||೧೮|| ವಯಮೃತಮಿವ ಜಿಹ್ಮವ್ಯಾಹೃತಂ ಶ್ರದ್ದಧಾ

---

ಸ್ವಲೋಕಾಃ-ಪರಲೋಕವನ್ನೂ ಬಿಟ್ಟವರಾದ ನಮ್ಮನ್ನು, ಅಕೃತಚೇತಾಃ-ಅನಿಶ್ಚಿತಬುದ್ಧಿಯುಳ್ಳವನಾದ ಅವನು, ವ್ಯಸೃಜತ್-ತೊರೆದುಕೊಂಡನು ಅಸ್ಮಿನ್-ಇವನ ವಿಷಯದಲ್ಲಿ, ಸಂಧೇಯಂ-ಸಂಧಿಮಾಡತಕ್ಕದ್ದು ಕಿನ್ನು-ಏನುಂಟು? ||೧೬|| ಲುಬ್ಧಧರ್ಮಾ-ಕಿರಾತರ ಧರ್ಮವುಳ್ಳವನಾಗಿ, ಮೃಗಯುರಿವ-ಬೇಟೆಯಾಡುವವನಹಾಗೆ, ಕಪೀಂದ್ರಂ-ಶ್ರೇಷ್ಠನಾದ ಕಪಿಯನ್ನು, ವಿವ್ಯಧೇ-ನೋಯಿಸಿದನು ಸ್ತ್ರೀಜಿತಃ-ಹೆಂಗಸಿನಿಂದ ಗೆಲ್ಲಲ್ಪಟ್ಟವನಾಗಿ, ಕಾಮಯಾನಾಂ-ತನ್ನಂ ಬಯಸುತಲಿರುವ, ಸ್ತ್ರಿಯಂ ಹೆಂಗಸನ್ನು, ವಿರೂಪಾಂ-ವಿಕಾರರೂಪಳನ್ನಾಗಿ, ಅಕೃತ-ಮಾಡಿದನು ಯಃ-ಯಾವವನು, ಬಲಿಂ-ಪೂಜೆಯನ್ನು, ಅತ್ತ್ವಾ-ಅನುಭವಿಸಿ (ಅನ್ನವನ್ನು) ಧ್ವಾಂಕ್ಷವತ್-ಕಾಗೆಯಹಾಗೆ, ಅತ್ತ್ವಾ-ತಿಂದು, ಬಲಿಮಪಿ-ಬಲಿಯನ್ನೂ, ಅವೇಷ್ಟಯತ್-ಕಟ್ಟಿದನೋ, ಹೇ ಅಸಿತ-ಎಲ ಕಪ್ಪಾದವನೇ! ತತ್-ಅದರಿಂದ, ಸಖ್ಯೈರಲಂ-ಸ್ನೇಹಗಳಿಂದ ಸಾಕು ಆದರೂ, ತತ್ಕಥಾರ್ಥಃ-ಅವನ ಕಥೆಯ ಪ್ರಯೋಜನವು, ದುಸ್ತ್ಯಜಃ-ಬಿಡಲಶಕ್ಯವಾದ್ದು, (ಕೃಷ್ಣನ ಪೂರ್ವಾವತಾರಗಳಾದ ರಾಮವಾಮನರ ಕಥಾಸೂಚನೆಯುಂಟು) ||೧೭|| [ಹರಿಕಥಾರ್ಥವು ಧರ್ಮಾರ್ಥಕಾಮನಾಶಕನಾದರೂ ವೈರಾಗ್ಯದಿಂ ಮುಕ್ತಿಸಾಧಕವಪ್ಪುದರಿಂದ ಬಿಡತಕ್ಕದ್ದಲ್ಲವು.] ಯತ್... ವಿನಷ್ಟಾಃ-ಯತ್-ಯಾವ ಕೃಷ್ಣನ, ಅನುಚರಿತ-ಆಚರಣೆಗಳೆಂಬ, ಲೀಲಾ-ವಿಲಾಸಗಳೆಂಬ, ಕರ್ಣಪೀಯೂಷ-ಕಿವಿಗಳಿಗಮೃತವಾಗಿರುವುದರ, ವಿಪ್ರುಟ್-ತೊಟ್ಟುಗಳನ್ನು, ಸಕೃದದನ-ಒಂದುಸಲ ಸೇವಿಸಿದಮಾತ್ರದಿಂದ, ವಿಧೂತ-ಕೊಡಹಲ್ಪಟ್ಟ, ದ್ವಂದ್ವಧರ್ಮಾಃ-ರಾಗದ್ವೇಷಾದಿ ದ್ವಂದ್ವದೋಷಗಳುಳ್ಳವರು, ವಿನಷ್ಟಾಃ-ಪ್ರವೃತ್ತಿಧರ್ಮನಾಶವಾದವರಾಗಿ, ಸಪದಿ-ತತ್‌ಕ್ಷಣದಲ್ಲಿ, ದೀನಂ-ಬಡವಾಗಿರುವ, ಗೃಹಕುಟುಂಬಂ-ಮನೆಯನ್ನೂ ಪೋಷ್ಯವರ್ಗವನ್ನೂ, ಉತ್ಸೃಜ್ಯ-ಬಿಟ್ಟು, ಬಹವಃ-ಬಹುಮಂದಿ, ದೀನಾವಿಹಂಗಾ ಇವ-ಬಡಹಕ್ಕಿಗಳಹಾಗೆ, (ಪರಮಹಂಸರಾಗಿ) ಭಿಕ್ಷುಚರ್ಯಾಂ ಚರಂತಿ-ಭಿಕ್ಷಾಶನವನ್ನು ಉಣ್ಣುತಲಿರುವರು, (ಸನ್ಯಾಸಿ ಧರ್ಮವನ್ನು ಆಚರಿಸುತಲಿರುವರೋ) ||೧೮|| ಹೇ ಉಪಮಂತ್ರಿನ್-ಎಲೈ ನಾಥನಬಳಿಯಲ್ಲಿ ಮಂತ್ರಿಯಾಗಿರುವ ದೂತನೇ! ಕೃಷ್ಣವಧ್ವಃ-ಗಂಡುಹುಲ್ಲೆಯ ಹೆಂಗಳಾದ, ಹರಿಣ್ಯಃ-ಹೆಣ್ಣುಹುಲ್ಲೆಗಳು, ಅಜ್ಞಾಃ-ತಿಳಿಯದವರಾದ್ದರಿಂದ, ಲುಬ್ಧಕರುತ

---

ಒಡಂಬಡಿಸುವ ನಿನ್ನ ವಿದ್ಯೆಯಂ ನಾನು ಬಲ್ಲೆನು. ಆ ಕೃಷ್ಣನು ತನ್ನ ನಿಮಿತ್ತವಾಗಿ ಪತಿಪುತ್ರಾದಿಗಳಂ ಧರ್ಮವಂ ಪರಲೋಕವಂ ಸಹ ಬಿಟ್ಟು ತನ್ನನ್ನೇ ನಂಬಿದ ನಮ್ಮಂ ಬಿಟ್ಟವನಾದನು. ಅವನ ವಿಷಯದಲ್ಲಿ ಸಂಧಾನವೇನು ||೧೬|| ಪೂರ್ವದಲ್ಲಿ ಅವನ ವ್ಯಾಪಾರವು ಸ್ಮರಿಸಲಾಗಿ ಭಯವಾಗುವುದು, ಅದು ಏತಕೆಂದರೆ-ಈ ಭಗವಂತನು ಪೂರ್ವದಲ್ಲಿ ರಾಮನಾಗಿ ಬೇಡಗಾರನಂತೆ ವಾಲಿಯಂ ಸಂಹರಿಸಿದನು, ಕ್ರೂರನಾದವನು, ಸೀತಾಧೀನನಾಗಿ ಸ್ವೇಚ್ಛೆಯಿಂದ ವನದಲ್ಲಿ ಚರಿಸುವ ಶೂರ್ಪನಖಿಗೆ ಕರ್ಣನಾಸಿಕಾಛೇದನವಂ ಮಾಡಿ ವಿರೂಪೆಯಂ ಮಾಡಿದನು, ಬಲಿಚಕ್ರವರ್ತಿಯಿಂದ ಮಾಡಲ್ಪಟ್ಟ ಪೂಜೆಯಂ ಗ್ರಹಿಸಿ ಅವನಂ ಬಂಧನಂ ಗೆಯ್ದಂ, ಅಂಥಾ ಕೃಷ್ಣನ ಸ್ನೇಹವು ಸಾಕು, ಅವನ ಕಥೆಯಂ ಮಾತ್ರ ಬಿಡಲಶಕ್ಯವು ||೧೭|| ಯಾವ ಶ್ರೀಕೃಷ್ಣನ ಚರಿತ್ರದ ವಿಲಾಸಗಳೆಂಬ ಅಮೃತರಸ ಬಿಂದುಗಳಂ ಸೇವಿಸುವುದರಿಂದ ಪರಿಹೃತವಾದ ರಾಗದ್ವೇಷಾದಿಗಳುಳ್ಳವರಾಗಿ ಬಹುಮಂದಿ ಯೋಗಿಗಳು ಆಕ್ಷಣದಲ್ಲಿಯೇ ದೀನರಾದ ಪತ್ನೀಪುತ್ರಾದಿಗಳಂ ತ್ಯಜಿಸಿ ಪಕ್ಷಿಗಳಂತೆ ಉದರಭರಣವ ಮಾಡಿಕೊಂಡು ಭಿಕ್ಷುಗಳಂತೆ ಇರುವರೋ, ಅಂತಾ ಕೃಷ್ಣನ ಚರಿತ್ರವು ಬಿಡಲಶಕ್ಯವಾಗಿರುವುದು ||೧೮|| ಬೇಟೆಗಾರನ ಕಪಟಗಾನದಿಂ ಮೋಹಿತಂಗಳಾದ ಮೃಗಗಳಂತೆ ಕಪಟಿಯಾದ ಶ್ರೀಕೃಷ್ಣನ ಮಾತುಗಳಂ ಸತ್ಯ

ಧಾನಾಃಕುಳಿಕರುತಮಿವಾಜ್ಞಾಃಕೃಷ್ಣವಧ್ವೋಹರಿಣ್ಯಃ। ದದೃಶುರಸಕೃದೇತತ್ತನ್ನಖಸ್ಪರ್ಶತೀವ್ರ
ಸ್ಮರರುಜಉಪಮಂತ್ರಿನ್ಭಣ್ಯತಾಮನ್ಯವಾರ್ತಾ॥೧೯॥ಪ್ರಿಯಸಖಪುನರಾಗಾಃಪ್ರೇಯಸಾಪ್ರೇಷಿತಃ
ಕಿಂವರಯಕಿಮನುರುಂಧೇಮಾನನೀಯೋಸಿಮೇಂಗ ।ನಯಸಿಕಥಮಿಹಾಸ್ಮಾನ್ದುಸ್ತ್ಯಜದ್ವಂದ್ವಪಾ
ರ್ಶ್ವಂಸತತಮುರಸಿಸೌಮ್ಯಶ್ರೀಃವಧೂಸ್ಸಾಕಮಾಸ್ತೇ ॥೨೦॥ ಅಪಿಬತಮಧುಪುರ್ಯಾಮಾರ್ಯಪು
ತ್ರೋಧುನಾಸ್ತೇಸ್ಮರತಿಸಪಿತೃಗೇಹಾನ್ಸೌಮ್ಯಬಂಧೂಂಶ್ಚಗೋಪಾನ್ । ಕ್ವಚಿದಪಿಸಕಥಾನಃಕಿಂಕರೀ
ಣಾಂಗೃಣೀತೇಭುಜಮಗರುಸುಗಂಧಿಂಮೂರ್ಧ್ನ್ಯಧಾಸ್ಯತ್ಕದಾನು ॥೨೧॥ಶ್ರೀಶುಕಃ।ಅಥೋದ್ಧವೋನಿ

---

ಮಿವ-ನರಿಯಕೂಗನ್ನು ಹೇಗೋಹಾಗೆ, ಜಿಂಹವ್ಯಾಹೃತಂ-ಕುಟಿಲನಾದವನ ವಚನವನ್ನು, ಋತಮಿವ-ಸತ್ಯವನ್ನು ಹೇಗೋ ಹಾಗೆ, ಶ್ರದ್ಧಧಾನಾಃ-ನೆಚ್ಚಿದವರಾದ, ಕೃಷ್ಣವಧ್ವಃ-ಕೃಷ್ಣನಹೆಂಗಳಾದ, ವಯಂ-ನಾವು, ಸಕೃದೇವ-ಒಂದುಸಲದಲ್ಲಿಯೇ, ತತ್-ಆ ಕೃಷ್ಣನ, ನಖ-ಉಗುರುಗಳ, ಸ್ಪರ್ಶ-ಸೋಂಕುವಿಕೆಯಿಂದ, ತೀವ್ರ-ತೀಕ್ಷ್ಣವಾದ, ಸ್ಮರರುಜಃ-ಕಾಮರೋಗಗಳನ್ನು, ದದೃಶಿಮ-ಕಂಡೆವು. (ಆದ್ದರಿಂದ) ಅನ್ಯವಾರ್ತಾ-ಬೇರೆಸುದ್ದಿಯು, ಭಣ್ಯತಾಂ-ನುಡಿಯಲ್ಪಡಲಿ ॥೧೯॥ ಹೇಪ್ರಿಯಸಖ-ಎಲೈ ನಮ್ಮಪ್ರಿಯನಿಗೆ ಗೆಳೆಯನಾದವನೇ! ಪ್ರೇಯಸಾ-ಪ್ರಿಯನಾದ ಕೃಷ್ಣನಿಂದ, ಪುನಃಪ್ರೇಷಿತಃ-ಮರಳಿ ಕಳುಹಿಸಲ್ಪಟ್ಟವನಾಗಿ, ಆಗಾಃಕಿಂ-ಬಂದೆಯೋ ಏನು? (ಹಾಗಾದರೆ) ಕಿಮನುರುಂಧೇ-ಯಾವುದರನ್ನು ಬಯಸುವೆಯೋ? ವರಯ-ಬೇಡಿಕೋ? ಅಂಗ-ಅಯ್ಯಾ ದೂತನೇ! ಮೇ-ನನಗೆ, ಮಾನನೀಯಃ-ಮಾನ್ಯನು, ಅಸಿ-ಆಗುವಿ, ಆದರೆ ಇಹ-ಇಲ್ಲಿಂದ, ಅಸ್ಮಾನ್-ನಮ್ಮನ್ನು, ದುಸ್ತ್ಯಜದ್ವಂದ್ವಪಾರ್ಶ್ವಂ-ಬಿಡಕೂಡದ ಹೆಂಣುಜಂಟಿಗೆಯುಳ್ಳವನ ಪಕ್ಕವಂಕುರಿತು, ಕಥಂನಯಸಿ-ಹೇಗೆ ಕರಕೊಂಡುಹೋಗುವಿ? ಹೇಸೌಮ್ಯ-ಎಲಾ ಶಾಂತನೇ ಉರಸಿ-ಎದೆಯಲ್ಲಿಯೇ, ಶ್ರೀವಧೂಃ-ಲಕ್ಷ್ಮಿಯೆಂಬ ಹೆಂಣು, ಸಾಕಂ-ಸಂಗಡಲೇ, ಸತತಂ-ಯಾವಾಗಲೂ, ಆಸ್ತೇ-ಇರುವಳಲಾ ॥೨೦॥ ಬತ-ಸಂತೋಷವು, ಆರ್ಯಪುತ್ರೋಪಿ-ಹಿರಿಯರಮಗನೂ ಕೂಡ, (ಕೃಷ್ಣನು) ಅಧುನಾ-ಈಗ, ಮಧುಪುರ್ಯಾಂ-ಮಥುರಾನಗರದಲ್ಲಿ, ಆಸ್ತೇ-ಇರುವನೋ? ಸಃ-ಅವನು, ಪಿತೃಗೇಹಾನ್-ತಂದೆಯಮನೆಯನ್ನು, ಬಂಧೂನ್-ನಂಟರನ್ನು, ಗೋಪಾನ್-ಗೊಲ್ಲರನ್ನೂ, ಕ್ವಚಿದಪಿ-ಯಾವಾಗಲಾದರೂ, ಸ್ಮರತಿ-ನೆನಪುಮಾಡುವನೋ? ಹೇಸೌಮ್ಯ-ಎಲಾ ಶಾಂತನೇ! ಕಿಂಕರೀಣಾಂ-ಸೇವಕಿಯರಾದ, ನಃ-ನಮ್ಮ, ಕಥಾಃ-ಪ್ರಸ್ತಾಪಗಳನ್ನು, ಕ್ವಚಿದಪಿ-ಯಾವಾಗಲಾದರೂ, ಗೃಣೀತೇ-ಹೇಳುವನೋ? ಅಗರುಸುಗಂಧಿಂ-ಅಗರುವೃಕ್ಷದಹಾಗೆ ಪರಿಮಳವುಳ್ಳ, ಭುಜಂ-ತೋಳನ್ನು, ಕದಾನು-ಯಾವಾಗ, ಮೂರ್ಧ್ನಿ-ನಮ್ಮತಲೆಯಲ್ಲಿ, ಅಧಾಸ್ಯತಿ-ಇಡುವನು ॥೨೧॥ [ಶುಕವಚನವು.] ಅಥ-ಆಮೇಲೆ, ಉದ್ಧವಃ-ಉದ್ಧವನು, ಏವಂ-ಹೀಗೆ, ಗೀತಂ-ಹಾಡನ್ನು, ನಿಶಮ್ಯ-ಕೇಳಿ, ಕೃಷ್ಣದರ್ಶನಲಾಲಸಾಃ-ಕೃಷ್ಣನಂ ನೋಡುವುದಕ್ಕೆ ಬಹಳವಾಗಿ ಹಾರೈಸುತಲಿರುವ, ಗೋಪೀಃ-ಗೊಲ್ಲತಿಯರನ್ನು, ಪ್ರಿಯಸಂದೇಶೈಃ-ಕೃಷ್ಣನು ಹೇಳಿಕಳುಹಿದಮಾತುಗಳಿಂದ, ಸಾಂತ್ವಯನ್-ಸಮಾಧಾನಗೊಳಿಸುವನಾಗಿ, ಇದಂ-ಈ ಮುಂದೆ ಹೇಳಲ್ಪಡುವುದನ್ನು, ಅಭಾಷತ-ನುಡಿದನು॥೨೨॥

---

ವನ್ನಾಗಿ ತಿಳಿದು ಅವನ ನಖಸ್ಪರ್ಶದಿಂದ ಉದ್ದೀಪಿತವಾದ ಕಾಮವುಳ್ಳವರಾಗಿ ಅವನ ವಂಚನೆಯಮಾರ್ಗಗಳಂ ಬಹುಳವಾಗಿ ನೋಡಿರುವೆವು. ಎಲೈ ದೂತನೇ! ಆ ಪ್ರಸ್ತಾಪವಂಬಿಟ್ಟು ಮತ್ತೊಂದು ಪ್ರಸ್ತಾಪವಂ ಮಾತನಾಡು ॥೧೯॥ ಎಲೈ ಕೃಷ್ಣಸಖನಾದ ದೂತನೇ! ಪುನಶ್ಚ ಬಂದವನಾದೆಯಾ ? ಶ್ರೀಕೃಷ್ಣನು ನಿನ್ನಂ ಕಳುಹಿಸಿದನೋ ಏನು, ನೀನು ನಮಗೆ ಪೂಜಾಯೋಗ್ಯನು, ನಿನ್ನ ಮನೋಗತವೇನು ? ಸ್ತ್ರೀಸಮೇತನಾದ ಶ್ರೀಕೃಷ್ಣನ ಸಮೀಪಕ್ಕೆ ಹೇಗೆ ಕರೆದುಕೊಂಡು ಹೋಗುವಿ, ಆ ಕೃಷ್ಣನ ವಕ್ಷಸ್ಥಲದಲ್ಲಿಯೇ ಲಕ್ಷ್ಮಿಯು ಸರ್ವದಾ ಇರುವಳಲ್ಲ, ಅಲ್ಲಿಗೆ ನಾವು ಬರುವುದುಹೇಗೆ ॥೨೦॥ ಎಲೈದೂತನೇ! ಆ ಕೃಷ್ಣನು ಗುರುಕುಲದಿಂದ ಬಂದು ಈಗ ಮಥುರಾಪುರದಲ್ಲಿರುವನೇ, ಎಲೈ ಸೌಮ್ಯನೇ! ಶ್ರೀಕೃಷ್ಣನು ಮಾತಾಪಿತೃಗಳಂ ಮನೆಗಳಂ ಬಂಧುಗಳಂ ಗೋಪಾಲಕರಂ ಸ್ಮರಿಸುವನೇ, ದಾಸಿಯರಾದ ನಮ್ಮಂ ಯಾವಾಗಲಾದರೂ ಒಂದುಬಾರಿ ನೆನೆಯುವನೇ? ಅಗರುಗಂಧಲಿಪ್ತವಾದ ಭುಜವಂ ನಮ್ಮಶಿರಸ್ಸಿನಲ್ಲಿ ಯಾವಾಗಲಾದರೂ ಇರಿಸುವನೇ?॥೨೧॥ ಎಂಬುದಾಗಿ ಕೃಷ್ಣನಂ ನೋಡಲಿಚ್ಛೆಯುಳ್ಳ ಗೋಪಸ್ತ್ರೀಯರುಗಳಂ ಶ್ರೀಕೃಷ್ಣವಾಕ್ಯದಿಂದ ಸಮಾಧಾನವಂ ಮಾಡುವವ

ಶಿಷ್ಯೈರ್ಮಕೃಷ್ಣದರ್ಶನಲಾಲಸಾಃ | ಸಾಂತ್ವಯಾಮಾಸ ಪ್ರಿಯಸಂದೇಶೈರ್ಗೋಪೀರಿದಮುಭಾಷತ ||೨೨|| ಉದ್ಧವಃ ಅಹೋ ಯೂಯಂ ಸ್ಮ ಪೂರ್ಣಾರ್ಥಾ ಭವತ್ಯೋ ಲೋಕಪೂಜಿತಾಃ | ವಾಸುದೇವೇ ಭಗವತಿ ಯಾಸಾಮಿತ್ಯರ್ಪಿತಂ ಮನಃ ||೨೩|| ಧ್ಯಾನವ್ರತತಪೋಹೋಮಜಪಸ್ವಾಧ್ಯಾಯಸಂಯಮೈಃ | ಶ್ರೇಯೋವಿಧಿಭಿರನ್ಯೈಶ್ಚ ಕೃಷ್ಣೇ ಭಕ್ತಿರ್ಹಿ ಸಾಧ್ಯತೇ ||೨೪|| ಭಗವತ್ಯುತ್ತಮಶ್ಲೋಕೇ ಭವತೀಭಿರನುತ್ತಮಾ | ಭಕ್ತಿಃ ಪ್ರವರ್ತಿತಾ ದಿಷ್ಟ್ಯಾ ಮುನೀನಾಮಪಿ ದುರ್ಲಭಾ ||೨೫|| ದಿಷ್ಟ್ಯಾ ಪುತ್ರಾನ್ ಪತೀನ್ ದೇಹಾನ್ ಸ್ವಜನಂಚ ಗೃಹಾಂಸ್ತಥಾ | ಹಿತ್ವಾವೃಣೀತ ಯೂಯಂ ಯತ್ಕೃಷ್ಣಾಖ್ಯಂ ಪುರುಷಂ ಪರಮ್ ||೨೬|| ಸರ್ವಾತ್ಮಭಾವೋಽಧಿಕೃತೋ ಭವತೀನಾಮಧೋಕ್ಷಜೇ | ವಿರಹೇಣ ಮಹಾಭಾಗಾ ಮಹಾನ್ಮೇಽನುಗ್ರಹಃ ಕೃತಃ ||೨೭|| ಶ್ರೂಯತಾಂ ಪ್ರಿಯಸಂದೇಶೋ ಭವತೀನಾಂ ಸುಖಾವಹಃ | ಯಮಾದಾಯಾ

---

[ಉದ್ಧವವಾಕ್ಯವು.] ಯಾಸಾಂ-ಯಾವ ನಿಮ್ಮ, ಮನಃ-ಹೃದಯವು, ಭಗವತಿ-ಭಗವಂತನಾದ, ವಾಸುದೇವೇ-ಕೃಷ್ಣನಲ್ಲಿ, ಅರ್ಪಿತಂ-ಅಧಿಕವಾಗಿ ಕೊಡಲ್ಪಟ್ಟಿತೋ, ತಾ ಯೂಯಂ-ಆ ನೀವು, ಪೂರ್ಣಾರ್ಥಾಃ-ತುಂಬಿದ ಪ್ರಯೋಜನವುಳ್ಳವರು. ಸ್ಮ-ಇದಿರಿ. ಅಹೋ-ಆಶ್ಚರ್ಯವು ಭವತ್ಯಃ-ನೀವು, ಲೋಕಪೂಜಿತಾಃ-ಜನರಿಂದ ಪೂಜಿಸಲ್ಪಟ್ಟವರಾದಿರಿ ||೨೩|| ಧ್ಯಾ...ಮೈಃ-ಧ್ಯಾನದಿಂದಲೂ ವ್ರತದಿಂದಲೂ ತಪಸ್ಸಿನಿಂದಲೂ ಹೋಮದಿಂದಲೂ ಜಪದಿಂದಲೂ ವೇದಪಾರಾಯಣದಿಂದಲೂ ಇಂದ್ರಿಯನಿಗ್ರಹದಿಂದಲೂ, ಅನ್ಯೈಃ-ಇತರಗಳಾದ, ಶ್ರೇಯೋವಿಧಿಭಿಶ್ಚ-ಶ್ರೇಯಸ್ಸನ್ನು ಮಾಡುವ ಕರ್ಮಗಳಿಂದಲೂ, ಹಿ-ಯಾವ ಕಾರಣದಿಂದ. ಕೃಷ್ಣೇ-ಕೃಷ್ಣನಲ್ಲಿ, ಭಕ್ತಿಃ-ಪ್ರೀತಿಯು, ಸಾಧ್ಯತೇ-ಸಾಧಿಸಲ್ಪಡುವುದೋ ||೨೪|| ತತ್-ಆ ಕಾರಣದಿಂದ, ಉತ್ತಮಶ್ಲೋಕೇ-ಉತ್ತಮನೆಂದು ಕೊಂಡಾಡಲ್ಪಟ್ಟವನಾದ, ಭಗವತಿ-ಕೃಷ್ಣನಲ್ಲಿ, ಮುನೀನಾಮಪಿ-ಪಂಡಿತರುಗಳಿಗೂ ಕೂಡ, ದುರ್ಲಭಾ-ದೊರೆಯತಕ್ಕದ್ದಲ್ಲದ, ಅನುತ್ತಮಾ-ಯಾವುದಕ್ಕಿಂತಲೂ ಉತ್ತಮವಿಲ್ಲವೋ ಅಂಥಾದ್ದಾದ ಭಕ್ತಿಃ-ಪ್ರೀತಿಯು, ದಿಷ್ಟ್ಯಾ-ದೈವಯೋಗದಿಂದ, ಭವತೀಭಿಃ-ನಿಮ್ಮಿಂದ, ಪ್ರವರ್ತಿತಾ-ಆಚರಿಸಲ್ಪಟ್ಟಿತು ||೨೫|| ದಿಷ್ಟ್ಯಾ-ದೈವಬಲದಿಂದ, ಪುತ್ರಾನ್-ಮಕ್ಕಳನ್ನೂ, ಪತೀನ್-ಗಂಡಂದಿರನ್ನೂ, ದೇಹಾನ್-ಶರೀರಗಳನ್ನೂ, ಸ್ವಜನಂಚ-ತನ್ನವರನ್ನೂ, ತಥಾ-ಹಾಗೆಯೇ, ಗೃಹಾನ್-ಮನೆಗಳನ್ನೂ, ಹಿತ್ವಾ-ಬಿಟ್ಟು, ಯೂಯಂ-ನೀವು, ಕೃಷ್ಣಾಖ್ಯಂ-ಕೃಷ್ಣನೆಂಬ ಹೆಸರುಳ್ಳ, ಪರಂಪುರುಷಂ-ಪುರುಷೋತ್ತಮನನ್ನು, ವೃಣೀತ-ಒಪ್ಪಿಕೊಂಡಿರೋ ||೨೬|| ಭವತೀನಾಂ-ನಿಮ್ಮ, ಸರ್ವಾತ್ಮಭಾವಃ-ಸಕಲಮನೋರಥವೂ, ಅಧೋಕ್ಷಜೇ-ಕೃಷ್ಣನಲ್ಲಿ, ಅಧಿಕೃತಃ-ಅಧಿಕಾರವುಳ್ಳದ್ದಾಗಿ ಮಾಡಲ್ಪಟ್ಟಿತು ಮಹಾಭಾಗಾಃ-ಮಹಾಪೂಜ್ಯತೆಯುಳ್ಳ ಹೆಂಗಸರಾ! ವಿರಹೇಣ-ಅಗಲಿಕೆಯಿಂದ, ಮೇ-ನನಗೆ, ಮಹಾನನುಗ್ರಹಃ-ದೊಡ್ಡ ಉಪಕಾರವು, ಕೃತಃ-ಮಾಡಲ್ಪಟ್ಟದ್ದಾಯಿತು ||೨೭|| ಹೇಭದ್ರಾಃ-ಎಲೌ ಕಲ್ಯಾಣಿಯರಿರಾ! ಭರ್ತುಃ-ಒಡೆಯನ, ರಹಸ್ಕರಃ-ರಹಸ್ಯಕಾರ್ಯಗಳನ್ನು ಮಾಡುವವನಾದ, ಅಹಂ-ನಾನು,

---

ನಾಗಿ ಉದ್ಧವನು ನುಡಿದನು ||೨೨|| ಎಲೈ ಸ್ತ್ರೀಯರುಗಳಿರಾ! ನೀವು ಪೂರ್ಣಕಾಮರು, ಲೋಕಪೂಜಿತರಾದವರು, ಭಗವಂತನಾದ ವಾಸುದೇವನಲ್ಲಿಯೇ ನಿಮ್ಮ ಮನಸ್ಸು ಈ ರೀತಿಯಿಂದ ಲಗ್ನವಾದ ಮೇಲೆ ನೀವು ಧನ್ಯರು ||೨೩|| ಧ್ಯಾನದಿಂದಲೂ, ವ್ರತಂಗಳಿಂದಲೂ, ತಪಸ್ಸಿನಿಂದಲೂ, ಹೋಮದಿಂದಲೂ, ವೇದಾಧ್ಯಯನದಿಂದಲೂ, ಮನೋನಿಗ್ರಹದಿಂದಲೂ, ಇನ್ನೂ ಕೆಲವಾದ ಶ್ರೇಯಃಪ್ರಾಪ್ತಿಸಾಧನಂಗಳಾದ ಕರ್ಮಂಗಳಿಂದಲೂ, ಸಹ ಶ್ರೀಕೃಷ್ಣನಲ್ಲಿ ಭಕ್ತಿಯು ಸಾಧಿಸಲ್ಪಡುವುದು ||೨೪|| ನಿಮ್ಮಿಂದ ಉತ್ತಮಶ್ಲೋಕನಾದ ಭಗವಂತನಲ್ಲಿ ಉತ್ತಮೋತ್ತಮವಾದ ಮುನಿಗಳಿಗೂ ದುರ್ಲಭವಾದ ದೃಢಭಕ್ತಿಯು ಮಾಡಲ್ಪಟ್ಟಿದೆ ||೨೫|| ದೈವಯೋಗದಿಂದ ನೀವು ಪುತ್ರರಂ ಪತಿಗಳಂ ದೇಹಂಗಳಂ ಸಹ ಉಪೇಕ್ಷಿಸಿ ಯಾವ ಕಾರಣದಿಂ ಕೃಷ್ಣಾಖ್ಯನಾದ ಪರಮಪುರುಷನಂ ಅಪೇಕ್ಷಿಸಿದರೋ ಅದೇ ಕಾರಣದಿಂದ ನೀವು ಧನ್ಯರು ||೨೬|| ನಿಮ್ಮಿಂದ ಭಗವಂತನಲ್ಲಿ ಏಕಾಂತಭಕ್ತಿಯು ಮಾಡಲ್ಪಟ್ಟಿತು. ಭಗವದ್ವಿರಹಜನ್ಯವಾದ ಪಾರವಶ್ಯದಿಂದ ಸರ್ವವಸ್ತುಗಳಲ್ಲಿ ಕೃಷ್ಣನನ್ನಾಗಿ ಭಾವಿಸುವಿರಿ. ಇಂಥಾ ಭಕ್ತಿಯಂ ನೋಡುವ ನನಗೆ ಇದು ಪರಮಾನುಗ್ರಹವು ||೨೭|| ಪ್ರಿಯನಾದ ಶ್ರೀಕೃ

ಗತೋಭದ್ರಾ ಹ್ಯಹಂಭರ್ತೂರಹಸ್ಕರಃ ॥೨೮॥ ಭಗವಾನ್ ॥ ಭವತೀನಾಂವಿಯೋಗೋಮೇನಹಿಸರ್ವಾತ್ಮ
ನಾಕ್ವಚಿತ್ । ಯಥಾಭೂತಾನಿಭೂತೇಷುಖಂವಾಯ್ವಗ್ನಿರ್ಜಲಂಮಹೀ । ತಥಾಹಂಚಮನಃಪ್ರಾಣಬು
ದ್ಧೀಂದ್ರಿಯಗುಣಾಶ್ರಯಃ ॥೨೯॥ ಆತ್ಮನ್ಯೇವಾತ್ಮನಾತ್ಮಾನಂಸೃಜೇಹನ್ಮ್ಯನುಪಾಲಯೇ । ಆತ್ಮಮಾ
ಯಾನುಭಾವೇನಭೂತೇಂದ್ರಿಯಗುಣಾತ್ಮನಾ ॥೩೦॥ ಆತ್ಮಾಜ್ಞಾನಮಯಶ್ಶುದ್ಧೋವ್ಯತಿರಿಕ್ತೋಗುಣಾ
ನ್ವಯಃ । ಸುಷುಪ್ತಿಸ್ವಪ್ನಜಾಗ್ರದ್ಭಿರ್ಮಾಯಾವೃತ್ತಿಭಿರೀಯತೇ ॥೩೧॥ ಯೇನೇಂದ್ರಿಯಾರ್ಥಾನ್ಧ್ಯಾ
ಯೇತಮೃಷಾಸ್ವಪ್ನವದುತ್ಥಿತಃ । ತಂನಿರುಂಧ್ಯಾದಿಂದ್ರಿಯಾಣಿವಿನಿದ್ರಃಪ್ರತ್ಯಪದ್ಯತ ॥೩೨॥

---

ಯಾಂ-ಯಾವ ವಾರ್ತೆಯನ್ನು, ಆದಾಯ-ತೆಗೆದುಕೊಂಡು, ಆಗತೋಹಿ-ಬಂದವನಾದೆನೋ, ಭವತೀನಾಂ-ನಿಮಗೆ. ಸುಖಾವ
ಹಃ-ಸುಖವನ್ನು ಮಾಡುವ, ಪ್ರಿಯಸಂದೇಶಃ-ಆ ಕೃಷ್ಣನು ಹೇಳಿದಮಾತು, ಶ್ರೂಯತಾಂ-ನಿಮ್ಮಿಂದ ಕೇಳಲ್ಪಡಲಿ ॥೨೮॥
ಭಗವದ್ವಚನವು.] ಭವತೀನಾಂ-ನಿಮ್ಮ, ವಿಯೋಗಃ-ಅಗಲಿಕೆಯು, ಮೇ-ನನಗೆ, ಸರ್ವಾತ್ಮನಾ-ಹಲವುಬಗೆಯಿಂದಲೂ, ಕ್ವ
ಚಿತ್-ಒಂದುಕಡೆಯಲ್ಲಿ ಒಂದು ಸಮಯದಲ್ಲಿಯೂ, ನಹಿ-ಇಲ್ಲವಷ್ಟೆ? ಖಂ-ಆಕಾಶವು, ವಾಯ್ವಗ್ನಿಃ-ಗಾಳಿಯೂ ಬೆಂಕಿಯೂ,
ಜಲಂ-ನೀರೂ, ಮಹೀ-ಮಣ್ಣೂ, ಎಂಬ-ಭೂತಾನಿ-ಪಂಚಭೂತಗಳು, ಭೂತೇಷು-ಪ್ರಾಣಿಗಳಲ್ಲಿ, ಯಥಾ-ಹೇಗೋ, ತಥಾ-
[ಹಾಗೆ, ಅಹಂಚ-ನಾನೂಕೂಡ, ಮನಃ ..ಶ್ರಯಃ-ಮನಸ್ಸೂ ಪ್ರಾಣಗಳು ಬುದ್ಧಿ ಇಂದ್ರಿಯಗಳು ಗುಣಗಳು ಇವುಗಳಿಗೆ ಆ
ಶ್ರಯನಾಗಿರುವೆನು ॥೨೯॥ ಆತ್ಮಮಾಯಾನುಭಾವೇನ-ನನ್ನ ಮಾಯಾಸಾಮರ್ಥ್ಯದಿಂದ, ಭೂತೇಂದ್ರಿಯಗುಣಾತ್ಮನಾ ಭೂ
ತಗಳು ಇಂದ್ರಿಯಗಳು ಗುಣಗಳು ಇವುಗಳ ರೂಪದಿಂದ, ಆತ್ಮನ್ಯೇವ-ನನ್ನಲ್ಲಿಯೇ, ಆತ್ಮನಾ-ನನ್ನಿಂದಲೇ, ಆತ್ಮಾನಂ-ನನ್ನ
ನ್ನೇ, ಅಥವಾ-ಆತ್ಮನ್ಯೇವ-ನನ್ನಲ್ಲೇ, ಆತ್ಮನಾ-ಸಂಕಲ್ಪದಿಂದ, ಆತ್ಮಾನಂ-ಜೀವೋಪಾಧಿಯನ್ನು, ಅಥವಾ ಮನಸ್ಸನ್ನು,
ಅಥವಾ ಸಂಸಾರ ಪ್ರಪಂಚವನ್ನು, ಸೃಜೇ-ಹುಟ್ಟಿಸುವೆನು. ಹನ್ಮಿ-ಕೊಲ್ಲುವೆನು ಅನುಪಾಲಯೇ-ರಕ್ಷಿಸುವೆನು ॥೩೦॥ ಆತ್ಮಾ-
ಪ್ರತ್ಯಗಾತ್ಮನು, ಜ್ಞಾನಮಯಃ-ಚಿನ್ಮಾತ್ರನು, ಶುದ್ಧಃ-ಉಪಾಧಿರಹಿತನು, ವ್ಯತಿರಿಕ್ತಃ-ವಿಲಕ್ಷಣನು, ಅಗುಣಾನ್ವಯಃ-ಗುಣಸಂ
ಬಂಧವಿಲ್ಲದವನು, ಆದರೂ, ಸುಷುಪ್ತಿಸ್ವಪ್ನಜಾಗ್ರದ್ಭಿಃ-ನಿದ್ರೆ ಕನಸು ಜಾಗರವೆಂಬ, ಮಾಯಾವೃತ್ತಿಭಿಃ-ಅವಿದ್ಯಾಪರಿಣಾಮ
ವಾದ, ಅಂತಃಕರಣೋಪಾಧ್ಯವಸ್ಥೆಗಳಿಂದ, ಈಯತೇ-ಪ್ರಾಜ್ಞಾತ್ಮನು ತೈಜಸಾತ್ಮನು ವಿಶ್ವಾತ್ಮನೆಂದು ತೋರುತಲಿರುವನು.
(ಅದು ಪ್ರತಿಭಾಸವೇ ಹೊರತು ಸತ್ಯವಲ್ಲವು) ॥೩೧॥ ಯೇನ-ಯಾವ ಅಂತಃಕರಣದಿಂದ, ಉತ್ಥಿತಃ-ನಿದ್ದೆಯೆದ್ದವನು, ಇಂ
ದ್ರಿಯಾರ್ಥಾನ್-ಇಂದ್ರಿಯವಿಷಯಗಳನ್ನು, ಸ್ವಪ್ನವತ್-ಕನಸಿನಂತೆ, ಮೃಷಾ-ಮಿಥ್ಯಾಭೂತಗಳನ್ನಾಗಿ, ಧ್ಯಾಯೇತ-ಭಾವಿಸು
ವನೋ, ಯೇನ-ಯಾವ ಅಂತಃಕರಣದಿಂದ, ಇಂದ್ರಿಯಾಣಿ-ಶ್ರೋತ್ರಾದಿಕರಣಗಳನ್ನು, ಪ್ರತ್ಯಪದ್ಯತ-ಹೊಂದಿದನೋ,
ತಂ-ಅದರನ್ನು, ವಿನಿದ್ರಃ-ಜಾಗರೂಕನಾಗಿ, (ಅಲಸನಲ್ಲದೆ) ನಿರುಂಧ್ಯಾ -ನಿಗ್ರಹಿಸಬೇಕು ॥೩೨॥ ಸಮಾಮ್ನಾಯಃ-ವೇದ

---

ಷ್ಣನ ಸಂದೇಶವಂ ನಿಮಗೆ ನಾನು ಹೇಳುವುದಕ್ಕಾಗಿ ಬಂದಿರುವೆನು. ಆ ವಾರ್ತೆಯು ನಿಮಗೆ ಸುಖಕರವಾಗಿ
ರುವುದು. ಅದಂಕೇಳಿರಿ ॥೨೮॥ [ಎಂದು ಉದ್ಧವನು ಭಗವಂತನ ಮಾತುಗಳಂ ಪೇಳುವನದೆಂತೆನೆ] ಎಲೈ
ಗೋಪಸ್ತ್ರೀಯರುಗಳೇ! ಸರ್ವಪ್ರಕಾರದಿಂದಲೂ ನಿಮಗೂ ನಮಗೂ ವಿಯೋಗವಿಲ್ಲ, ಪೃಥಿವ್ಯಾದಿ ಪಂಚ
ಭೂತಂಗಳು ಹೇಗೆ ಸರ್ವಪ್ರಾಣಿಗಳಲ್ಲಿಯೂ ಅವಿನಾಭೂತಂಗಳಾಗಿರುವವೊ, ಹಾಗೆ ನಾನೂ ಮನಸ್ಸೂ
ಪ್ರಾಣಂಗಳೂ ಬುದ್ಧಿಯು, ಇಂದ್ರಿಯಂಗಳು, ಸತ್ವಾದಿಗುಣಂಗಳು ಇವುಗಳಿಗೆ ಆಧಾರನಾಗಿ ಸರ್ವತ್ರ ಇ
ರುವೆನು ॥೨೯॥ ಭೂತೇಂದ್ರಿಯಗುಣಸ್ವರೂಪದಿಂದ ನನ್ನಿಂದಲೇ ನನ್ನಲ್ಲಿ ಮಾಯಾಪ್ರಭಾವದಿಂ ನನ್ನನ್ನೇ ಆ
ವಿರ್ಭಾವಮಂತೆ ಮಾಡುತ್ತೇನೆ, ಪಾಲಿಸುತ್ತೇನೆ, ಲಯವಂ ಮಾಡುತ್ತೇನೆ ॥೩೦॥ ಜಗದ್ವ್ಯತಿರಿಕ್ತನಾಗಿ, ಶುದ್ಧ
ನಾಗಿ, ಜ್ಞಾನಸ್ವರೂಪನಾದ ಪರಮಾತ್ಮನು ಸುಷುಪ್ತಿಸ್ವಪ್ನಜಾಗರಣಂಗಳಿಂದ ತಿಳಿಯಲ್ಪಡುವನು ॥೩೧॥ ಸ್ವ
ಪ್ನದಿಂದ ಎಚ್ಚೆತ್ತ ಪುರುಷನು ಯಾವ ಮನಸ್ಸಿನಿಂದ ಅನುಭೂತವಾದ ಅರ್ಥವಂ ಮಿಥ್ಯಾಭೂತವೆಂದು ತಿಳಿ
ಯುವನೋ, ಯಾವ ಮನಸ್ಸಿನಿಂದ ಇಂದ್ರಿಯಾರ್ಥಂಗಳಂ ಧ್ಯಾನಿಸುವನೋ, ಅಂಥಾ ಮನಸ್ಸಿನಿಂ ಗ್ರಹಿಸ
ಬೇಕು ॥೩೨॥ ಈರೀತಿಯಲ್ಲಿ ಮನೋನಿಗ್ರಹಕ್ಕೆ ಸಾಂಖ್ಯವು, ಯೋಗವು, ಸನ್ಯಾಸವುತಪಸ್ಸು, ಸತ್ಯವೂ

ಏತದಂತಸ್ಸಮಾಮ್ನಾಯೋ ಯೋಗಸ್ಸಾಂಖ್ಯೋ ಮನೀಷಿಣಾಂ । ತ್ಯಾಗಸ್ತಪೋ ದಮಸ್ಸತ್ಯಂ ಸಮು
ದ್ರಾಂತಾ ಇವಾಪಗಾಃ ॥೩೩॥ ಯತ್ತ್ವಹಂ ಭವತೀನಾಂ ವೈ ದೂರೇ ವರ್ತೇ ಪ್ರಿಯೋ ದೃಶಾಂ । ಮನಸಸ್ಸ
ನ್ನಿಕರ್ಷಾರ್ಥಂ ಮದನುಧ್ಯಾನಕಾಮ್ಯಯಾ ॥೩೪॥ ಯಥಾ ದೂರಚರೇ ಪ್ರೇಷ್ಠೇ ಮನ ಆವಿಶ್ಯ ವರ್ತತೇ ।
ಸ್ತ್ರೀಣಾಂ ಚ ನ ತಥಾ ಚೇತಸ್ಸನ್ನಿಕೃಷ್ಟೇಽಕ್ಷಿಗೋಚರೇ ॥೩೫॥ ಮಯ್ಯಾವೇಶ್ಯ ಮನಃ ಕೃತ್ಸ್ನಂ ವಿಮುಕ್ತಾಶೇ
ಷವೃತ್ತಯಃ । ಅನುಸ್ಮರಂತ್ಯೋ ಮಾಂ ನಿತ್ಯಮಚಿರಾನ್ಮಾಮುಪೈಷ್ಯಥ ॥೩೬॥ ಯಾ ಮಯಾ ಕ್ರೀಡತಾ
ರಾತ್ರ್ಯಾಂ ವನೇಽಸ್ಮಿನ್ ವ್ರಜ ಆಸ್ಥಿತಾಃ । ಅಲಬ್ಧರಾಸಾಃ ಕಲ್ಯಾಣ್ಯೋ ಮಾಪುರ್ಮದ್ವೀರ್ಯಚಿಂತಯಾ ॥೩೭॥
॥ಶ್ರೀಶುಕಃ॥ ಏವಂ ಪ್ರಿಯತಮಾದೇಶಮಾಕರ್ಣ್ಯ ವ್ರಜಯೋಷಿತಃ । ತಾ ಊಚುರುದ್ಧವಂ ಪ್ರೀತಾಸ್ತತ್ಸಂ

ವು, ಯೋಗಃ-ಯೋಗಶಾಸ್ತ್ರವು, ಸಾಂಖ್ಯಃ-ಸಾಂಖ್ಯಶಾಸ್ತ್ರವು, ಮನೀಷಿಣಾಂ-ಜ್ಞಾನಿಗಳ, ತ್ಯಾಗಃ-ಸನ್ಯಾಸವು, ತಪಃ-ಧ್ಯಾನವು, ದಮಃ-ಬಾಹ್ಯೇಂದ್ರಿಯನಿಗ್ರಹವು, ಸತ್ಯಂ-ಯಥಾರ್ಥಭಾಷಣವು, ಇದೆಲ್ಲವೂ, ಆಪಗಾಃ-ಹೊಳೆಗಳು, ಸಮುದ್ರಾಂತಾ ಇವ-ಸಮುದ್ರದವರೆಗೂ ಆದಂತೆ, ಏತದಂತಃ-ಈ ಮನೋನಿಗ್ರಹದವರೆಗೇ ಆಗಿರುವದು ॥೩೩॥ ಅಹಂ-ನಾನು, ಭವತೀನಾಂ-ನಿಮ್ಮ, ಪ್ರಿಯಃ-ಇಷ್ಟನಾದರೂ, ದೃಶಾಂ-ಕಂಗಳಿಗೆ, ದೂರೇ-ದೂರದಲ್ಲಿ, ವರ್ತ ಇತಿ ಯತ್-ಇರುವೆನು ಎಂಬುವುದು ಯಾವುದುಂಟೋ, ತತ್-ಅದು, ಮದನುಧ್ಯಾನಕಾಮ್ಯಯಾ-ನನ್ನನ್ನು ನೀವು ಧ್ಯಾನಿಸುತ್ತಿರಬೇಕೆಂಬ ಬಯಕೆಯಿಂದ, ಮನಸಃ-ನಿಮ್ಮ ಅಂತಃಕರಣಕ್ಕೆ, ಸನ್ನಿಕರ್ಷಾರ್ಥಂ-ನನ್ನ ಸಂಬಂಧವುಂಟಾಗಲೋಸುಗವೇ ॥೩೪॥ ಸ್ತ್ರೀಣಾಂ ಚ-ಹೆಂಗಳಿಗೂ, ದೂರಚರೇ-ದೂರದಲ್ಲಿ ತಿರುಗುತಲಿರುವ, ಪ್ರೇಷ್ಠೇ-ಶ್ರೇಷ್ಠನಾದ ಪ್ರಿಯನಲ್ಲಿ, ಮನಃ-ಹೃದಯವು, ಯಥಾ-ಹೇಗೆ, ಆವಿಶ್ಯ-ಹೊಕ್ಕು, ವರ್ತತೇ-ಇರುವುದೋ, ತಥಾ-ಹಾಗೆ, ಸನ್ನಿಕೃಷ್ಟೇ-ಹತ್ತಿರದಲ್ಲಿರುವ, ಅಕ್ಷಿಗೋಚರೇ-ಕಂಣಿಗೆ ಕಾಣಿಸುತಲಿರುವ ವಿಷಯದಲ್ಲಿ, ಚೇತಃ-ಬುದ್ಧಿಯು, ತಥಾ ನ-ಹಾಗೆ ಯಿರುವುದಿಲ್ಲವು ॥೩೫॥ ಕೃತ್ಸ್ನಂ ಮನಃ-ಮನಸ್ಸೆಲ್ಲವನ್ನೂ, ಮಯಿ-ನನ್ನಲ್ಲಿ, ಆವೇಶ್ಯ-ಚನ್ನಾಗಿ ಯಿರಿಸಿ, ವಿಮುಕ್ತಾಶೇಷವೃತ್ತಯಃ-ಬಿಡಲ್ಪಟ್ಟ ಸಮಸ್ತ ದ್ವೈತಜ್ಞಾನಗಳುಳ್ಳವರಾಗಿ, ನಿತ್ಯಂ-ಯಾವಾಗಲೂ, ಮಾಂ-ನನ್ನನ್ನು, (ಅಹಂಪದಲಕ್ಷ್ಯಾರ್ಥನನ್ನು) ಅನುಸ್ಮರಂತ್ಯಃ-ಶಾಬ್ದಾಪರೋಕ್ಷದಿಂದ ಅನುಭವಿಸುತಲಿರುವರಾಗಿ, (ನೆನಪುಗೊಳ್ಳುತಲಿರುವರಾಗಿ) ಎಂದರೆ ಸ್ವರೂಪಾನುಸಂಧಾನವಂಗೆಯ್ಯುತ್ತ, ಮಾಂ-ನನ್ನನ್ನು, ಉಪೈಷ್ಯಥ-ಸೇರುವಿರಿ ॥೩೬॥ ಅಸ್ಮಿನ್ ವನೇ-ಈ ಬೃಂದಾವನದಲ್ಲಿ, ರಾತ್ರ್ಯಾಂ-ಇರುಳೊಳು, ಕ್ರೀಡತಾ-ಆಡುತಲಿರುವ, ಮಯಾ-ನನ್ನೊಡನೆ, ಅಲಬ್ಧರಾಸಾಃ-ಪಡೆಯಲ್ಪಡದ ರಾಸಕ್ರೀಡೆಯುಳ್ಳವರಾಗಿ, ವ್ರಜೇ-ಗೋಕುಲದಲ್ಲಿಯೇ, ಆಸ್ಥಿತಾಃ-ಗಂಡಂದಿರಿಂದ ತಡೆಯಲ್ಪಟ್ಟು ನಿಂತವರಾದರು. ಕಲ್ಯಾಣ್ಯಃ-ಅದೃಷ್ಟಪರಿಪಕ್ವವಾದ ಪುಣ್ಯದೇಹಿಗಳು, ಯಾಃ-ಯಾವ ಹೆಂಗಳು, ಮದ್ವೀರ್ಯಚಿಂತಯಾ-ನನ್ನ ಶಕ್ತಿಯನ್ನು ಧ್ಯಾನಿಸುವುದರಿಂದಲೇ, ಮಾಂ-ನನ್ನನ್ನು, ಆಪುಃ-ಹೊಂದಿದರೋ, (ಅವರಂತೆ ನೀವೂ ನನ್ನಂ ಹೊಂದುವಿರಿ) ॥೩೭॥ [ಶುಕವಚನವು] ಏವಂ-ಹೀಗೆ, ಪ್ರಿಯತಮಾದೇಶಂ-ಅತ್ಯಂತ ಪ್ರಿಯನಾದ ಕೃಷ್ಣನ ಆಜ್ಞೆಯನ್ನು, ಯಾಃ ವ್ರಜಯೋಷಿತಃ-ಯಾವ ಗೋಕುಲದ ಹೆಂಗಳು, ಆಕರ್ಣ್ಯ-ಕೇಳಿ, ಪ್ರೀತಾಃ-ಪ್ರೀತಿವುಳ್ಳವರಾದರೋ, ತಾಃ-ಆ ಹೆಂಗಳು, ತತ್ಸಂದೇಶಾಗತಸ್ಮೃತೀಃ-ತತ್-ಆ ಕೃಷ್ಣನ, ಸಂದೇಶ-ಉಪದೇಶವಾಕ್ಯಗಳಂ ಕೇಳುವುದರಿಂದ, ಆಗತ-ಬು

ಸರ್ವನದಿಗಳೂ ಸಮುದ್ರವನೆಯ್ದುವ ರೀತಿಯಲ್ಲಿ ಸಮಸ್ತಮಾರ್ಗಂಗಳೂ ಮನೋನಿಗ್ರಹಪೂರ್ವಕಮಾಗಿ ಪರಮಾತ್ಮಪ್ರಾಪ್ತಿಸಾಧನಂಗಳು ॥೩೩॥ ನಾನು ದೂರದಲ್ಲಿ ಇರುವಿಕೆಯು ನಿಮ್ಮ ಮನಸ್ಸಿನಲ್ಲಿ ಸನ್ನಿಹಿತನಾಗಿರುವ ನಿಮಿತ್ತದಿಂದ ಎಂದು ನೀವು ತಿಳಿಯಬೇಕು ॥೩೪॥ ಸ್ತ್ರೀಯರುಗಳಿಗೆ ದೂರದಲ್ಲಿರುವ ಪುರುಷನಲ್ಲಿ ಹೇಗೆ ಮನಸ್ಸು ಲಗ್ನವಾಗಿರುವುದೋ, ಹಾಗೆ ಸಮೀಪದಲ್ಲಿ ಕಣ್ಣಿನಿದಿರಿಗೆ ಇದ್ದ ಪ್ರಿಯನಲ್ಲಿ ಲಗ್ನವಾಗಿರುವುದಿಲ್ಲ ॥೩೫॥ ಎಲೈ ಸ್ತ್ರೀಯರುಗಳೇ! ಮನಮನೆಲ್ಲವಂ ನನ್ನಲ್ಲಿಯೇ ಇರಿಸಿ ಸಮಸ್ತ ಲೌಕಿಕವ್ಯಾಪಾರಂಗಳಂ ಬಿಟ್ಟು ನನ್ನನ್ನೇ ಸ್ಮರಿಸುವ ನೀವು ನನ್ನನ್ನೇ ಹೊಂದುವಿರಿ ॥೩೬॥ ನಾನು ಸ್ತ್ರೀಸಮೇತನಾಗಿ ವನದಲ್ಲಿ ರಾಸಕ್ರೀಡೆಯಂ ಮಾಡುತಿರಲಾಗಿ ಮನೆಗಳಲ್ಲಿ ಪತಿಗಳಿಂದ ಶಿಕ್ಷಿತರಾಗಿ ವನಕ್ಕೆ ಬರುವುದಕ್ಕೆ ಸಂಗತಿಯಿಲ್ಲದೆ ನನ್ನನ್ನೇ ಧ್ಯಾನಿಸುತ್ತ ಮನೆಗಳಲ್ಲಿ ಇದ್ದ ಗೋಪಸ್ತ್ರೀಯರುಗಳು ನನ್ನನೆಯ್ದಿದರು ॥೩೭॥ ಎಂಬ ಶ್ರೀಕೃಷ್ಣನ ಸಂದೇಶವಾಕ್ಯಗಳಂ ಉದ್ಧವನ ಮುಖದಿಂದ ಕೇಳಿ ಗೋಪಸ್ತ್ರೀಯರು ಪ್ರೀತರಾಗಿ ಶ್ರೀಕೃಷ್ಣ ಸಂದೇಶದಿಂದ ಲ

ದೆಶಗತಸ್ಮೃತೇಃ ॥೩೭॥ ಗೋಪ್ಯಃ ॥ ದಿಷ್ಟ್ಯಾಹಿತೋ ಹತಃ ಕಂಸೋ ಯದೂನಾಂ ಸಾನುಗೋಘಕೃತ್ । ದಿ
ಷ್ಟ್ಯಾಪ್ತೈರ್ಲಬ್ಧಸರ್ವಾರ್ಥೈಃ ಕುಶಲ್ಯಾಸ್ತೇಚ್ಯುತೋಧುನಾ ॥೩೮॥ ಕಚ್ಚಿದ್ಗದಾಗ್ರಜಃ ಸೌಮ್ಯ
ಕರೋತಿ ಪುರಯೋಷಿತಾಮ್ । ಪ್ರೀತಿಂ ನಃ ಸ್ನಿಗ್ಧಸವ್ರೀಡಹಾಸೋದಾರೇಕ್ಷಣಾರ್ಚಿತಃ ॥೩೯॥ ಕಥಂ ರತಿವಿ
ಶೇಷಜ್ಞಃ ಪ್ರಿಯಶ್ಚ ಪುರಯೋಷಿತಾಮ್ । ನಾನುಬಧ್ಯೇತ ತದ್ವಾಕ್ಯೈರ್ವಿಭ್ರಮೈಶ್ಚಾನುಭಾಜಿತಃ ॥೪೦॥
ಅಪಿ ಸ್ಮರತಿ ನಃ ಸಾಧೋ ಗೋವಿಂದಃ ಪ್ರಸ್ತುತೇ ಕ್ವಚಿತ್ । ಗೋಷ್ಠಿಮಧ್ಯೇ ಪುರಸ್ತ್ರೀಣಾಂ ಗ್ರಾಮ್ಯಾಃ ಸ್ವೈ
ರಕಥಾಂತರೇ ॥೪೧॥ ತಾಃ ಕಿಂ ನಿಶಾಃ ಸ್ಮರತಿ ಯಾಸು ತಥಾ ಪ್ರಿಯಾಭಿರ್ವೃಂದಾವನೇ ಕುಮುದಕುಂದಶ
ಶಾಂಕರಮ್ಯೇ । ರೇಮೇ ಕ್ವಣಚ್ಚರಣನೂಪುರರಾಸಗೋಷ್ಠ್ಯಾಮಸ್ಮಾಭಿರೀಡಿತಮನೋಜ್ಞಕಥಃ ಕದಾ

---

ದ್ಧ್ಯರೂಢವಾದ್ಧ, ಸ್ಮೃತೇಃ-ಆತ್ಮಸ್ವರೂಪದ ನೆನಪುಳ್ಳವರಾಗಿ, ಉದ್ಧವಂ-ಉದ್ಧವನಂ ಕುರಿತು, ಊಚುಃ-ಹೇಳಿದರು ॥೩೭॥ [ಗೋಪೀವಾಕ್ಯವು] ಯದೂನಾಂ-ಯಾದವರಿಗೆ, ಅಹಿತಃ-ವಿರೋಧಿಯೂ, ಅಘಕೃತ್-ಪಾಪವಂಗೆಯ್ದವನೂ, ಆದ, ಕಂಸಃ-ಕಂಸನು, ಸಾನುಗಃ-ಸಹಚರರಿಂ ಸಹಿತನಾಗಿ, ದಿಷ್ಟ್ಯಾ-ಕಾಲದೈವಬಲದಿಂದ, ಹತಃ-ಕೊಲ್ಲಲ್ಪಟ್ಟವನಾದನು, ಲಬ್ಧಸರ್ವಾರ್ಥೈಃ-ಪಡೆಯಲ್ಪಟ್ಟ ಸಕಲಪ್ರಯೋಜನಗಳೂಳ್ಳ, ಆಪ್ತೈಸ್ಸಹ-ಆಪ್ತರೊಡನೆ, ಅಚ್ಯುತಃ-ಕೃಷ್ಣನು, ಅಧುನಾ-ಈಗ, ದಿಷ್ಟ್ಯಾ-ದೈವಯೋಗದಿಂದ, ಕುಶಲೀ-ಕ್ಷೇಮವುಳ್ಳವನಾಗಿ. ಆಸ್ತೇ-ಇರುವನೋ? ॥೩೮॥ ಹೆ ಸೌಮ್ಯ-ಎಲೈ ಶಾಂತನೇ! ನಃ-ನಮ್ಮಿಂದ, ಸ್ನಿಗ್ಧ..ಚಿತಃ-ಸ್ನಿಗ್ಧ-ಸ್ನೇಹವುಳ್ಳ, ಸವ್ರೀಡ-ನಾಚಿಕೆಯಿಂ ಕೂಡಿದ, ಹಾಸ-ನಗೆಯಿಂದಲೂ, ಉದಾರೇಕ್ಷಣ-ಧಾರಾಳವಾದ ನೋಟದಿಂದಲೂ, ಅರ್ಚಿತಃ-ಪೂಜಿಸಲ್ಪಟ್ಟವನಾದ, ಗದಾಗ್ರಜಃ-ಕೃಷ್ಣನು, ಪುರಯೋಷಿತಾಂ-ನಗರದಲ್ಲಿರುವ ಹೆಂಗಳಿಗೆ, ಪ್ರೀತಿಂ-ಪ್ರಿಯವನ್ನು, ಕರೋತಿ ಕಚ್ಚಿತ್-ಮಾಡುತಲಿರುವನೋ ಏನು ॥೩೯॥ ಪುರಯೋಷಿತಾಂ-ಪಟ್ಟಣದ ಹೆಂಗಳ, ರತಿವಿಶೇಷಜ್ಞಃ-ರತಿಯೊಳಗಣ ವಿಶೇಷಣಗಳನ್ನು ಬಲ್ಲವನೂ, ಪ್ರಿಯಶ್ಚ-ಇಷ್ಟನೂ, ಆದ ಕೃಷ್ಣನು, ತದ್ವಾಕ್ಯೈಃ-ಅವರ ಮಾತುಗಳಿಂದಲೂ. ವಿಭ್ರಮೈಶ್ಚ-ವಿಲಾಸಗಳಿಂದಲೂ, ಅನುಭಾಜಿತಸ್ಸನ್-ಸೇವಿಸಲ್ಪಟ್ಟವನಾಗಿ, ಕಥಂ ನಾನುವಧ್ಯೇತ-ಹೇಗೆ ಸೆರೆಗೊಳಿಸಲ್ಪಡನು ॥೪೦॥ ಸಾಧೋ-ಸತ್ಪುರುಷನಾದ ಉದ್ಧವನೇ! ಗೋವಿಂದಃ-ಕೃಷ್ಣನು, ಪುರಸ್ತ್ರೀಣಾಂ-ಪುರದ ಹೆಂಗಳ, ಗೋಷ್ಠೀಮಧ್ಯೇ-ಸಮಾಜದ ನಡುವೆ, ಗ್ರಾಮ್ಯಾಸ್ವೈರಕಥಾಂತರೇ-ಹಳ್ಳಿಗಾಡಿನ ಹೆಂಗಸರಂ ಕುರಿತು, ಮನಸ್ಸು ಬಂದಂತೆ ಬಂಣಿಸುವ ಮಾತುಗಳ ನಡುವೆ, ಕ್ವಚಿತ್ಪ್ರಸ್ತುತೇ-ಯಾವ ಪ್ರಸ್ತಾವದಲ್ಲಿಯಾದರೂ, ನೋಪಿಸ್ಮರತಿ-ನಮ್ಮನ್ನು ನೆನಪುಗೊಳ್ಳುವನೋ ॥೪೧॥ ಕದಾಚಿತ್-ಒಂದಾನೊಂದು ಕಾಲದಲ್ಲಿ, ಯಾಸು-ಯಾವ ರಾತ್ರಿಗಳಲ್ಲಿ, ತಥಾ-ಹಾಗೆ, ಪ್ರಿಯಾಭಿಃ-ವಲ್ಲಭೆಯರಾದ, ಅಸ್ಮಾಭಿಃ-ನಮ್ಮೊಡನೆ, ಕುಮುದಕುಂದಶಶಾಂಕರಮ್ಯೇ-ಬಿಳುನೈದಿಲೆ ಮಾಘಮಲ್ಲಿಗೆ ಚಂದ್ರ ಇವರಿಂದ ಮನೋಹರವಾದ, ಬೃಂದಾವನೇ-ಬೃಂದಾರಣ್ಯದಲ್ಲಿ, ಕ್ವಣಚ್ಚರಣನೂಪುರರಾಸಗೋಷ್ಠ್ಯಾಂ-ಕ್ವಣತ್-ಗಲುಗುಟ್ಟುತಲಿರುವ, ಚರಣನೂಪುರ-ಪಾದಾಭರಣಗಳುಳ್ಳ, ರಾಸಗೋಷ್ಠ್ಯಾಂ-ರಾಸಕ್ರೀಡಾಸಭೆಯಲ್ಲಿ, ಈಡಿತಮನೋಜ್ಞಕಥಃ-ಕೊಂಡಾಡಲ್ಪ

---

ಬ್ಧವಾದ ಜ್ಞಾನಮುಳ್ಳವರಾಗಿ ಉದ್ಧವನಂ ಕುರಿತು ನುಡಿದರು ॥೩೭॥ ಯಾದವರಿಗೆ ದ್ರೋಹಿಯಾದ ಶತ್ರುವಾದ ಕಂಸನು ದೈವಯೋಗದಿಂದ ಹತನಾದನು. ದೈವಗತಿಯಿಂ ಇಷ್ಟಾರ್ಥಂಗಳನೆಯ್ದಿ ಸುಖವಂತರಾದ ಆಪ್ತಬಂಧುಗಳೊಡನೆ ಸಹಿತನಾಗಿ ಶ್ರೀಕೃಷ್ಣನು ಕ್ಷೇಮದಿಂದಿರುವನೇ ॥೩೮॥ [ಮತ್ತೆ ಕೆಲವರು ನುಡಿದರು.] ಎಲೈ ಉದ್ಧವನೇ! ಶ್ರೀಕೃಷ್ಣನು ಪುರಸ್ತ್ರೀಯರುಗಳ ಸ್ನೇಹಯುಕ್ತಂಗಳಾದ ಮುಗುಳುನಗೆಗಳಿಂದಲೂ ಮನೋಹರಂಗಳಾದ ಕಟಾಕ್ಷಂಗಳಿಂದಲೂ ಅರ್ಚಿತನಾಗಿ ಆ ಸ್ತ್ರೀಯರುಗಳಿಗೆ ಪ್ರೀತಿಯನುಂಟುಮಾಡುವನೋ ॥೩೯॥ (ಮತ್ತೆ ಕೆಲವರು ನುಡಿದರು-) ರತಿವಿಶೇಷಂಗಳಂ ತಿಳಿದಿರುವ ಪ್ರಿಯನಾದ ಶ್ರೀಕೃಷ್ಣನು ಪುರಸ್ತ್ರೀಯರುಗಳ ವಿಲಾಸಂಗಳಿಂದಲೂ ಆಲಾಪಂಗಳಿಂದಲೂ ಪೂಜಿತನಾಗಿ ಹೇಗೆ ಮರುಳಾಗದೆ ಇರುವನು ॥೪೦॥ (ಮತ್ತೆ ಕೆಲವರು ನುಡಿವರು-) ಎಲೈ ಸತ್ಪುರುಷನೇ! ಗೋವಿಂದನು ಪ್ರಕೃತದಲ್ಲಿ ಸ್ತ್ರೀಸಭಾಮಧ್ಯದಲ್ಲಿ ಸ್ವೈರಾಲಾಪಂಗಳಲ್ಲಿ ಕೇಳಿಗಳಲ್ಲಿ ಹಳ್ಳಿಗಳಲ್ಲಿರುವ ಮುಗ್ಧರಾದ ನಮ್ಮಂ ಸ್ಮರಿಸುತ್ತಾನೆಯೋ ॥೪೧॥ [ಮತ್ತೆ ಕೆಲವಸ್ತ್ರೀಯರು ಪ್ರೌಢರಾಗಿ ನುಡಿದರು-] ಎಲೈ ಉದ್ಧವನೇ! ಶ್ರೀಕೃಷ್ಣನು ಬಿಳುನೈದಿಲೆಗಳಿಂದಲೂ ಸಂಣಮೊಲ್ಲೆಗಳಿಂದಲೂ ಚಂದ್ರಿಕೆಗಳಿಂದಲೂ ರಮ್ಯವಾದ ಬೃಂದಾವನದಲ್ಲಿ ಧ್ವನಿಗೆಯ್ವ ಕಾಲಂದಿಗೆಗಳಿಂ ರಾಸಸಭೆಯಲ್ಲಿ ಪ್ರೀತಿಪಾತ್ರರಾದ ನೆ

ಚಿತ್॥೪೩॥ಅಪ್ಯೇಷ್ಯತೀಹದಾಶಾರ್ಹಸ್ತಪ್ತಾಸ್ಸ್ವಕೃತಯಾಶುಚಾ ಸಂಜೀವಯನ್ನುನೋಗಾತ್ರೈರ್
ಯಥೇಂದ್ರೋವನಮಂಬುದೈಃ॥೪೪॥ಕಸ್ಮಾತ್ಕೃಷ್ಣಇಹಾಯಾತಿಪ್ರಾಪ್ತರಾಜ್ಯೋಹತಾಹಿತಃ । ನರೇಂ
ದ್ರಕನ್ಯಾಉದ್ವಾಹ್ಯಪ್ರೀತಸ್ಸರ್ವಸುಹೃದ್ವೃತಃ ॥೪೫॥ಕಿಮಸ್ಮಾಭಿರ್ವನೌಕೋಭಿರನ್ಯಾಭಿರ್ವಾಮ
ಹಾತ್ಮನಃ । ಶ್ರೀಪತೇರಾಪ್ತಕಾಮಸ್ಯಕ್ರಿಯೇತಾರ್ಥಃಕೃತಾತ್ಮನಃ ॥೪೬॥ಪರಂಸೌಖ್ಯಂಹಿನೈರಾಶ್ಯಂ
ಸ್ವೈರಿಣ್ಯಪ್ಯಾಹಪಿಂಗಳಾ। ತಜ್ಜಾನತೀನಾಂನಃಕೃಷ್ಣೇತಥಾಪ್ಯಾಶಾದುರತ್ಯಯಾ॥೪೭॥ಕಉತ್ಸಹೇ
ತಸಂತ್ಯಕ್ತುಮುತ್ತಮಶ್ಲೋಕಸಂವಿದಂ।ಅನಿಚ್ಛತೋಽಪಿಯಸ್ಯಶ್ರೀರಂಗಾನ್ನಚ್ಯವತೇಕ್ವಚಿತ್॥೪೮

---

ಟ್ಟ ಚೆಲುವಾದ ಕಥೆಗಳುಳ್ಳವನಾಗಿ, ರೇಮೇ-ಕ್ರೀಡಿಸಿದನೋ, ತಾಃನಿಶಾಃ-ಆ ರಾತ್ರಿಗಳನ್ನು, ಸ್ಮರತಿಕಿಂ-ನೆನಪುಗೊಳ್ಳುತ್ತಿರುವನೋ ಏನು ॥೪೩॥ ಇಂದ್ರಃ-ಪರ್ಜನ್ಯನು, ಅಂಬುದೈಃ-ಮೇಘಗಳಿಂದ, ವನಂಯಥಾ-ತೋಟವನ್ನು ಹೇಗೋ, ತಥಾ-ಹಾಗೆ, ಸ್ವಕೃತಯಾ-ತನ್ನಿಂದ ಮಾಡಲ್ಪಟ್ಟ, ಶುಚಾ-ವಿರಹಶೋಕದಿಂದ, ತಪ್ತಾಃ-ಬಿಸಿಮಾಡಲ್ಪಟ್ಟ, ನಃ-ನಮ್ಮನ್ನು, ಗಾತ್ರೈಃ-ತನ್ನ ಅಂಗಗಳಿಂದ, ಸಂಜೀವಯನ್-ಬದುಕಿಸುತಲಿರುವನಾದ, ದಾಶಾರ್ಹಸ್ತು-ಕೃಷ್ಣನಾದರೋ, ಇಹಾಪಿ-ಇಲ್ಲಿಗೂ, ಏಷ್ಯತಿ-ಬರುವನೋ ॥೪೪॥ ಹತಾಹಿತಃ-ಕೊಲ್ಲಲ್ಪಟ್ಟ ವೈರಿಗಳುಳ್ಳವನು, ಪ್ರಾಪ್ತರಾಜ್ಯಃ-ಪಡೆಯಲ್ಪಟ್ಟ ಧೊರೆತನವುಳ್ಳವನು, ನರೇಂದ್ರಕನ್ಯಾಃ-ಉದ್ವಾಹ್ಯ-ರಾಜಪುತ್ರಿಯರಂ ಮದುವೆಯಾಗಿ, ಸರ್ವಸುಹೃದ್ವೃತಃ-ಸಕಲಬಂಧುಮಿತ್ರರಿಂ ಬಳಸಲ್ಪಟ್ಟವನಾಗಿ, ಪ್ರೀತಃ-ಪ್ರೇಮವುಳ್ಳವನೂ ಆದ, ಕೃಷ್ಣಃ-ಕೃಷ್ಣನು, ಕಸ್ಮಾದಿಹಾಯಾತಿ-ಯಾವ ನಿಮಿತ್ತದಿಂದಿಲ್ಲಿಗೆ ಬರುವನು ॥೪೫॥ ವನೌಕೋಭಿಃ-ಕಾಡಿನಲ್ಲಿ ವಾಸಸ್ಥಾನವುಳ್ಳವರಾದ, ಅಸ್ಮಾಭಿಃ-ನಮ್ಮಿಂದಲಾದರೂ, ಅನ್ಯಾಭಿರ್ವಾ-ಬೇರೆ ಹೆಂಗಳಿಂದಲಾದರೂ, ಕೃತಾತ್ಮನಃ- ಪೂರ್ಣನಾದ, ಆಪ್ತಕಾಮಸ್ಯ-ಪಡೆಯಲ್ಪಟ್ಟ ಮನೋರಥಂಗಳುಳ್ಳವನಾದ, ಶ್ರೀಪತೇಃ-ಲಕ್ಷ್ಮೀಕಾಂತನಾದ, ಮಹಾತ್ಮನಃ-ಧೀರನಾದ ಕೃಷ್ಣನಿಗೆ, ಅರ್ಥಃ-ಪ್ರಯೋಜನವು, ಕಿಂ ಕ್ರಿಯತೇ-ಮಾಡಲ್ಪಡುವುದೋ ಏನು ॥೪೬॥ ಸ್ವೈರಿಣೀ-ಹಾದರಗಿತ್ತಿಯಾದ, ಪಿಂಗಳಾ-ಪಿಂಗಳೆಯೆಂಬವಳು, ಹಿ-ಯಾವಕಾರಣದಿಂದ, ನೈರಾಶ್ಯಂ-ಆಶೆಯನ್ನು ತೊರಕೊಂಡಿರುವಿಕೆಯೇ, ಪರಮಂಸೌಖ್ಯಂ-ಉತ್ತಮಸುಖವು, ಎಂದು, ಪ್ರಾಹ-ಹೇಳಿದಳೋ, ತತ್-ಅದರನ್ನು, ಜಾನತೀನಾಂ-ತಿಳಿದಿರುವರಾದ, ನಃ-ನಮಗೆ, ತಥಾಪಿ-ಹಾಗೆ ತಿಳಿದಿದ್ದರೂ, ಕೃಷ್ಣೇ-ಕೃಷ್ಣನವಿಷಯದಲ್ಲಿ, ಆಶಾ-ಅಪೇಕ್ಷೆಯು, ದುರತ್ಯಯಾ-ದುಃಖದಿಂದಲೂ ತೊರೆಯಲಶಕ್ಯವಾದದ್ದಾಗಿರುವದು ॥೪೭॥ ಅನಿಚ್ಛತೋಽಪಿ-ಬಯಕೆಯಿಲ್ಲದವನಾದರೂ, ಯಸ್ಯ-ಯಾವ ಕೃಷ್ಣನ, ಅಂಗಾತ್-ಶರೀರದ ದೆಸೆಯಿಂದ, ಶ್ರೀಃ-ಲಕ್ಷ್ಮಿಯು, ಕ್ವಚಿತ್-ಯಾವಾಗಲೂ, ನಚ್ಯವತೇ-ಜಾರುವದಿಲ್ಲವೋ, ಉತ್ತಮಶ್ಲೋಕಸಂವಿದಂ-ಉತ್ತಮಶ್ಲೋಕ-ಉತ್ತಮನೆನಿಸಿಕೊಂಡ ಆ ಕೃಷ್ಣನ, ಸಂವಿದಂ-ಏಕಾಂತವಾರ್ತೆಯನ್ನು, ಸಂತ್ಯಕ್ತುಂ-ಬಿಡುವದಕ್ಕೆ, ಕಉತ್ಸಹೇತ-ಯಾವವನು ಉತ್ಸಾಹಗೊಳ್ಳುವನು ॥೪೮॥ ಪ್ರಭೋ-ನಮ್ಮ ಕೃಷ್ಣನೊ

---

ಡನೆ ನಮ್ಮಿಂದ ಹೇಳಲ್ಪಟ್ಟ ಮನೋಹರವಾದ ಕಥೆಗಳುಳ್ಳವನಾಗಿ ಯಾವರಾತ್ರಿಗಳಲ್ಲಿ ಕ್ರೀಡಿಸಿದನೋ, ಆರಾತ್ರಿಗಳನ್ನಾದರೂ ಸ್ಮರಿಸುವನೇ॥೪೩॥ ಆಕೃಷ್ಣನು ಆಕೃಷ್ಣನಿಂದಲೇ ಮಾಡಲ್ಪಟ್ಟ ಶೋಕದಿಂದ ತಪ್ತರಾಗಿರುವ ನಮ್ಮಂ ಇಂದ್ರನು ತೋಟವಂ ಮೇಘಂಗಳಿಂದೆ ಹೇಗೋ ಹಾಗೆ ತನ್ನ ಅಂಗಂಗಳಿಂದೆ ಜೀವಿಸುವರನ್ನಾಗಿ ಮಾಡಲು ಒಂದಾವರ್ತಿ ಯಿಲ್ಲಿಗೆಬರುವನೋ?॥೪೪॥ [ಮತ್ತೆ ಕೆಲವರು ನುಡಿದರು ಶತ್ರುವಾದ ಕಂಸನಂ ಸಂಹರಿಸಿ ರಾಜ್ಯಾಧಿಪತ್ಯವನೆಯ್ದಿ ರಾಜಕನ್ಯೆಯರಂ ವಿವಾಹವಂ ಮಾಡಿಕೊಂಡು ಸುಹೃತ್ತುಗಳಂ ಲಾಲಿಸುತ್ತಿರುವ ಆಶ್ರೀಕೃಷ್ಣನುಇಲ್ಲಿಗೆ ಏಕೆಬರುವನು? ॥೪೫॥ (ಮತ್ತೆ ಕೆಲವರು ಪ್ರಾಜ್ಞರಾದ ಸ್ತ್ರೀಯರುನುಡಿದರು) ಮಹಾತ್ಮನಾದ ಶ್ರೀಪತಿಯಾದ ಪೂರ್ಣಕಾಮನಾದ ಶ್ರೀಕೃಷ್ಣನಿಗೆ ಅರಣ್ಯವಾಸಿಗಳಾದ ನಮ್ಮಿಂದ ಲಾಗಲಿ ರಾಜಕನ್ಯೆಯರಿಂದಲಾಗಲಿ ಅನ್ಯರಿಂದಲಾಗಲಿ ಏನುಪ್ರಯೋಜನವು ॥೪೬॥ ನಿರಾಶೆಯೆ ಸೌಖ್ಯಪ್ರದವೆಂದು ಪಿಂಗಳಾ ನಾಮಕಳಾದ ಜಾರಿಣೀ ಸ್ತ್ರೀಯು ಯಾವ ಅರ್ಥವಂ ಪೇಳಿದಳೋ ಆಯರ್ಥವಂ ತಿಳಿದವರಾದರೂ ನಾವುಕೃಷ್ಣನಲ್ಲಿ ಆಶೆಯಂ ಮಾಡುವೆವು॥೪೭॥ ಉತ್ತಮಶ್ಲೋಕನಾದ ಶ್ರೀಕೃಷ್ಣನ ಏಕಾಂತ ಯೋಗಕ್ಷೇಮವು ಉಪೇಕ್ಷಿಸುವುದಕೆ ಯಾರು ಸಮರ್ಥರಾಗುವರು ಅವನು ಇಚ್ಛಿಸದೇ ಇರುವನಾದರೂ ಲಕ್ಷ್ಮೀದೇವಿಯು ಕೂಡ ಅವನ ವಕ್ಷಸ್ಥಳವಂ ಬಿಡುವುದಿಲ್ಲ ॥೪೮॥ನದಿಗಳು, ಪರ್ವತಂಗಳು, ವನಂಗಳು, ಗೋ

ಸರಿಚ್ಛೈಲವನೋದ್ದೇಶಾಗಾವೋವೇಣುರವಾಇಮೇ | ಸಂಕರ್ಷಣಸಹಾಯೇನಕೃಷ್ಣೇನಾಚರಿತಾಃಪ್ರ
ಭೋ||೪೯||ಪುನಃಪುನಸ್ಸ್ಮಾರಯಂತಿನಂದಗೋಪಸುತಂಬತ | ಶ್ರೀನಿಕೇತೈಸ್ತತ್ಪದಕೈರ್ವಿಸ್ಮರ್ತುಂ
ನೈವಶಕ್ನುಮಃ ||೫೦|| ಗತ್ಯಾಲಲಿತಯೋದಾರಹಾಸಲೀಲಾವಲೋಕನೈಃ | ಮಾಧ್ವ್ಯಾಗಿರಾಹೃತಧಿ
ಯಃಕಥಂತಂವಿಸ್ಮರಾಮಹೇ ||೫೧||ಹೇನಾಥಹೇರಮಾನಾಥವ್ರಜನಾಥಾರ್ತಿನಾಶನ | ಮಗ್ನಮುದ್ಧರ
ಗೋವಿಂದಗೋಕುಲಂವೃಜಿನಾರ್ಣವಾತ್||೫೨||ಶ್ರೀಶುಕಃ|| ತತಸ್ತಾಃಕೃಷ್ಣಸಂದೇಶೈರ್ವ್ಯಪೇತವಿರಹ
ಜ್ವರಾಃ | ಉದ್ಧವಂಪೂಜಯಾಂಚಕ್ರುರ್ಜ್ಞಾತ್ವಾತ್ಮಾನಮಧೋಕ್ಷಜಮ್||೫೩||ಉವಾಸಕತಿಚಿನ್ಮಾ
ಸಾನ್ಗೋಪೀನಾಂವಿನುದಞ್ಶುಚಃ | ಕೃಷ್ಣಲೀಲಾಕಥಾಗಾಯನ್ರಮಯಾಮಾಸಗೋಕುಲಮ್ ||೫೪||

---

ಷನೆ ಸೇರಿಸಲು ಸಮರ್ಥನಾದ ಉದ್ಧವನೇ! ಸರಿಚ್ಛೈಲವನೋದ್ದೇಶಾಃ-ಹೊಳೆ ಬೆಟ್ಟ ಕಾಡು ಉನ್ನತಸ್ಥಳಗಳೂ, ಗಾವಃ-ಗೋವುಗಳೂ, ವೇಣುರವಾಃ-ಕೊಳಲ ಸಪ್ಪಳಗಳೂ, ಇಮೇ-ಇವು, ಸಂಕರ್ಷಣಸಹಾಯೇನ-ಬಲರಾಮನು ಸಂಗಾತಿಯಾಗಿವುಳ್ಳ, ಕೃಷ್ಣೇನ-ಕೃಷ್ಣನಿಂದ, ಆಚರಿತಾಃ-ಅನುಭವಿಸಲ್ಪಟ್ಟಿರುವವು ||೪೯|| ಅವು ನಂದಗೋಪಸುತಂ-ಕೃಷ್ಣನನ್ನು, ಪುನಃಪುನಃ-ಮರಳಿ ಮರಳಿಯೂ, ಸ್ಮಾರಯಂತಿ-ನೆನಪುಗೊಳಿಸುತ್ತಿವೆ, ಬತ-ಆಹಾ! ಶ್ರೀನಿಕೇತೈಃ-ಲಕ್ಷ್ಮಿಗೆ ಶರಣಗಳಾದ, ತತ್ಪದಕೈಃ-ಆತನ ಸ್ಥಾನಗಳಿಂದ, ವಿಸ್ಮರ್ತುಂ-ಮರೆತುಹೋಗ ವುದಕ್ಕೆ, ನಶಕ್ನುಮಃಏವ-ಸಮರ್ಥರಾಗಲಾರೆವು ||೫೦|| ಲಲಿತಯಾ-ಕೋಮಲವಾದ, ಗತ್ಯಾ-ನಡಿಕೆಯಿಂದಲೂ, ಉದಾರಹಾಸಲೀಲಾವಲೋಕನೈಃ-ಧಾರಾಳವಾದ ನಗೆಯುಳ್ಳ ವಿನೋದದನೋಟಗಳಿಂದಲೂ, ಮಾಧ್ವ್ಯಾ-ಜೇನಿನಂತೆ ಸೀಯಾದ, ಗಿರಾ-ಮಾತಿನಿಂದಲೂ, ಹೃತಧಿಯಃ-ಅಪಹರಿಸಲ್ಪಟ್ಟ ಬುದ್ಧಿಯುಳ್ಳವರಾದ ನಾವು, ತಂ-ಆ ಕೃಷ್ಣನನ್ನು, ಕಥಂ-ವಿಸ್ಮರಾಮಹೇ-ಹೇಗೆಮರೆಯುವೆವು? ||೫೧|| ಹೇನಾಥ-ಎಲೈ ಒಡೆಯನೇ! ಹೇರಮಾನಾಥ-ಎಲೈ ಲಕ್ಷ್ಮೀಪತಿಯೇ! ವ್ರಜನಾಥ-ಗೋಕುಲಪತಿಯೇ! ಆರ್ತಿನಾಶನ-ಪೀಡಾಪರಿಹಾರಕನೇ! ಗೋವಿಂದ-ಕೃಷ್ಣನೇ! ಮಗ್ನಂ-ಮುಳುಗಿಹೋಗುತಲಿರುವ, ಗೋಕುಲಂ-ನಂದವ್ರಜವನ್ನು, ವೃಜಿನಾರ್ಣವಾತ್-ಪಾಪವೆಂಬಸಮುದ್ರದೆಸೆಯಿಂದ, ಉದ್ಧರ-ಎತ್ತಿಕೋ ||೫೨|| [ಶುಕವಚನವು.] ತತಃ-ಆಮೇಲೆ, ತಾಃ-ಆ ಗೋಪಿಯರು, ಕೃಷ್ಣಸಂದೇಶೈಃ-ಕೃಷ್ಣನು ಹೇಳಿಕಳುಹಿಸಿದ ಮಾತುಗಳಿಂದ, ವ್ಯಪೇತವಿರಹಜ್ವರಾಃ-ಕಳೆದುಹೋದ ಅಗಲಿಕೆಯತಾಪವುಳ್ಳವರಾಗಿ, ಅಧೋಕ್ಷಜಂ-ಕೃಷ್ಣನನ್ನು, ಆತ್ಮಾನಂ-ಸ್ವರೂಪವನ್ನಾಗಿ, ಜ್ಞಾತ್ವಾ-ತಿಳಿದು, ಉದ್ಧವಂ-ಅವರನ್ನು ತಮಗುಪದೇಶಂಗೆಯ್ದ ಉದ್ಧವನನ್ನು, ಪೂಜಯಾಂಚಕ್ರುಃ-ಆರಾಧಿಸಿದರು ||೫೩|| ಗೋಪೀನಾಂ-ಗೊಲ್ಲತಿಯರ, ಶುಚಃ-ಶೋಕಗಳನ್ನು, ವಿನುದನ್-ತೊಳೆಯುತಲಿರುವನಾಗಿ, ಕತಿಚಿನ್ಮಾಸಾನ್-ಕೆಲವು ತಿಂಗಳಲ್ಲಿ, ಉವಾಸ-ಅಲ್ಲಿ ಉಳಿದಿದ್ದನು, ಕೃಷ್ಣಲೀಲಾಕಥಾಃ-ಕೃಷ್ಣನವಿಲಾಸಚರಿತಗಳನ್ನು, ಗಾಯನ್-ಹಾಡುತಲಿರುವನಾಗಿ, ಗೋಕುಲಂ-ವ್ರಜವನ್ನು, ರಮಯಾಮಾಸ-ಸಂತಸದಿಂದಾಡಿಸಿದನು ||೫೪|| ಸಃಉದ್ಧವಃ-ಆಯುದ್ಧವನು, ನಂದಸ್ಯವ್ರಜೇ-ನಂದಗೋಪನ ಗೋಕುಲದಲ್ಲಿ, ಯಾವಂತಿ ಅಹಾನಿ-ಎಷ್ಟುದಿನಗಳಲ್ಲಿ, ಅವಾ

---

ವುಗಳು, ವೇಣುಗಾನಂಗಳು, ಇವೆಲ್ಲವೂ ಬಲರಾಮಸಮೇತನಾದಶ್ರೀಕೃಷ್ಣನಿಂದ ಸೇವಿತಂಗಳಾದವುಗಳು||೪೯||
ಇವುಗಳಂ ನೋಡಿದರೆ ನಮಗೆ ಬಾರಿಬಾರಿಗೂ ನಂದಗೋಪನ ಪುತ್ರನಾದ ಶ್ರೀಕೃಷ್ಣನೇ ಸ್ಮರಣೆಗೆಬರುವನು, ಕಾಂತಿಯುಕ್ತಂಗಳಾದ ಆಶ್ರೀಕೃಷ್ಣನ ಪಾದನ್ಯಾಸಂಗಳಿಂದ ನಾವುಮರೆಯಲಾರೆವು||೫೦||ಲಲಿತವಾದ ಗಮನದಿಂದಲೂ, ಉತ್ಕೃಷ್ಟಂಗಳಾದ ಮಂದಹಾಸ ಕಟಾಕ್ಷಪ್ರಸರಣಂಗಳಿಂದಲೂ, ಮಧುರಂಗಳಾದ ಮಾತುಗಳಿಂದಲೂ, ಪರವಶಚಿತ್ತರಾದ ನಾವು ಆಶ್ರೀಕೃಷ್ಣನಂ ಹೇಗೆಮರೆಯುವೆವು ||೫೧|| ಎಲೈ, ನಾಥನೇ! ಲಕ್ಷ್ಮೀಪತಿಯೇ! ಗೋಕುಲಪತಿಯೇ ಕಷ್ಟಪರಿಹಾರಕನೇ! ಪಾಪಸಮುದ್ರದಲ್ಲಿ ಮುಳುಗಿರುವ ಗೋಕುಲವಂ ಉದ್ಧಾರವಂಮಾಡು ಎಂದು ||೫೨||ಮೊರೆಯಿಟ್ಟ ಗೋಪಸ್ತ್ರೀಯರು ಕೃಷ್ಣಸಂದೇಶದಿಂದ ವಿರಹಜ್ವರವಂ ಪರಿಹರಿಸಿಕೊಂಡು ಶ್ರೀಕೃಷ್ಣನಂ ಪರಮಾತ್ಮನನ್ನಾಗಿ ತಿಳಿದು ಉದ್ಧವನಂ ಪೂಜಿಸಿದರು ||೫೩|| ಆವುದ್ಧವನು ಗೋಪಸ್ತ್ರೀಯರುಗಳ ಶೋಕವಂ ಪರಿಹರಿಸುವನಾಗಿ ಕೃಷ್ಣನವಿಲಾಸ ಕಥೆಗಳಂ ಗಾನಂಗೆಯ್ವನಾಗಿ ಗೋಕುಲವಂ ಸಂತೋಷಂಬಡಿಸುತ ಕೆಲವು ಮಾಸಂಗಳು ಅಲ್ಲಿಯೇ ವಾಸವಂ ಮಾಡಿದನು||೫೪||ಉದ್ಧವನು ನಂದಗೋಕುಲದಲ್ಲಿ ಎಷ್ಟುಮಾಸಂಗಳು ವಾಸವಂ ಮಾಡಿದನೋ, ಶ್ರೀಕೃಷ್ಣನ ಪ್ರಸ್ತಾವಂಗಳಿಂದ ಅಷ್ಟುದಿನಂ

ಯಾವಂತ್ಯಹಾನಿನಂದಸ್ಯವ್ರಜೇವಾತ್ಸೀತ್ಸಉದ್ಧವಃ। ವ್ರಜೌಕಸಾಂಕ್ಷಣಪ್ರಾಯಾಣ್ಯಾಸನ್ಕೃಷ್ಣ
ಸ್ಯವಾರ್ತಯಾ ॥೫೫॥ಸರಿದ್ವನಗಿರಿದ್ರೋಣೀರ್ವೀಕ್ಷನ್‌ಕುಸುಮಿತದ್ರುಮಾನ್ । ಕೃಷ್ಣಂಸಂಸ್ಮಾರ
ಯನ್‌ರೇಮೇಹರಿದಾಸೋವ್ರಜೌಕಸಾಮ್॥೫೬॥ದೃಷ್ಟ್ವೈವಮಾದಿಗೋಪೀನಾಂಕೃಷ್ಣಾವೇಶಾತ್ಮವಿಕ್ಲ
ಬಮ್ । ಉದ್ಧವಃಪರಮಪ್ರೀತಸ್ತಾನಮಸ್ಯನ್ನಿದಂಜಗೌ ॥೫೭॥ಏತಾಃಪರಂತನುಭೃತೋಭುವಿಗೋ
ಪವಧ್ವೋಗೋವಿಂದಏವಮುಖಿಲಾತ್ಮನಿರೂಢಭಾವಾಃ । ವಾಂಛಂತಿಯದ್ಭವಭಿಯೋಮುನಯೋವಯಂ
ಚಕಿಂಬ್ರಹ್ಮಜನ್ಮಭಿರನಂತಕಥಾರಸಸ್ಯ ॥೫೮॥ಕ್ವೇಮಾಃಸ್ತ್ರಿಯೋವನಚರಾವ್ಯಭಿಚಾರಶೀಲಾಃಕ್ವಕೃ
ಷ್ಣೇಕ್ವಚೈಷಪರಮಾತ್ಮನಿರೂಢಭಾವಃ । ನನ್ವೀಶ್ವರೋನುಭಜತೋವಿದುಷೋಪಿಸಾಕ್ಷಾಚ್ಛ್ರೇಯಸ್ತ

---

ತ್ಸೀತ್-ವಾಸಮಾಡಿದನೋ, ತಾವಂತ್ಯಹಾನಿ-ಅಷ್ಟುದಿನಗಳೂ, ಕೃಷ್ಣಸ್ಯವಾರ್ತಯಾ-ಕೃಷ್ಣನ ಸುದ್ದಿಯಿಂದ, ವ್ರಜೌಕ
ಸಾಂ-ಗೋಕುಲವಾಸಿಗಳಿಗೆ, ಕ್ಷಣಪ್ರಾಯಾಣಿ-ನಿಮಿಷಕ್ಕೆ ಸಮಾನವಾದವು, ಆಸನ್-ಆದವು॥೫೫॥ ಸರಿದ್ವನಗಿರಿದ್ರೋಣೀಃ-
ಹೊಳೆ ಕಾಡು ಬೆಟ್ಟ ಓಣಿ ಅಥವಾದೋಣಿಗಳನ್ನೂ, ಕುಸುಮಿತದ್ರುಮಾನ್-ಪುಷ್ಪಿಸಿದ ವೃಕ್ಷಗಳನ್ನೂ, ವೀಕ್ಷನ್-ನೋಡುತಲಿರು
ವನಾಗಿಯೂ, ವ್ರಜೌಕಸಾಂ-ಗೋಕುಲವಾಸಿಗಳಿಗೆ, ಕೃಷ್ಣಂ-ಕೃಷ್ಣನನ್ನು, ಸಂಸ್ಮಾರಯನ್-ಚೆನ್ನಾಗಿ ನೆನಪುಗೊಳಿಸು
ತ್ತಿರುವನಾಗಿಯೂ, ಹರಿದಾಸಃ-ಕೃಷ್ಣಸೇವಕನಾದ ಉದ್ಧವನು, ರೇಮೇ-ಕ್ರೀಡಿಸಿದನು ॥೫೬॥ ಗೋಪೀನಾಂ-ಗೊಲ್ಲತಿಯ
ರ, ಕೃಷ್ಣಾವೇಶಾತ್ಮವಿಕ್ಲಬಂ-ಕೃಷ್ಣನಲ್ಲಿ ಇರಿಸಲ್ಪಟ್ಟ ಮನಸ್ಸಿನ ದೈನ್ಯವನ್ನು, ಏವಮಾದಿ-ಇದೇಮೊದಲಾದ್ದನ್ನು, ದೃ
ಷ್ಟ್ವಾ-ನೋಡಿ, ಪರಮಪ್ರೀತಃ-ಉತ್ಕೃಷ್ಟಪ್ರೇಮವುಳ್ಳವನಾದ ಉದ್ಧವನು, ತಾಃ-ಆ ಗೋಪಿಯರನ್ನು ಕುರಿತು, ನಮಸ್ಯನ್-
ನಮಸ್ಕರಿಸುವನಾಗಿ, ಇದಂ-ಈ ಹಾಡನ್ನು, ಜಗೌ-ಹಾಡಿದನು ॥೫೭॥ ಅಖಿಲಾತ್ಮನಿ-ಸರ್ವಪ್ರಪಂಚಕ್ಕೂ ಆತ್ಮನಾಗಿರುವ,
ಗೋವಿಂದಏವ-ಕೃಷ್ಣನಲ್ಲಿಯೇ, ರೂಢಭಾವಾಃ-ನೆಲೆಯಾಗಿನಿಂತ ಬುದ್ಧಿಯುಳ್ಳವರಾದ, ಏತಾಗೋಪವಧ್ವಏವ-ಈ ಗೊಲ್ಲತಿ
ಯರೇ! ಭುವಿ-ಭೂಮಿಯಲ್ಲಿ, ಪರಂತನುಭೃತಃ-ಉತ್ಕೃಷ್ಟವಾಗಿ ದೇಹವನ್ನು ಧರಿಸಿರುವರು. ಭವಭಿಯಃ-ಸಂಸಾರದದೆಸೆಯಿಂ
ದ ಭಯವುಳ್ಳ ಮೋಕ್ಷಾಪೇಕ್ಷಿಗಳೂ, ಮುನಯಃ-ಮನನಶೀಲರಾದ ಆರು ಋಷಿಗಳೂ, ವಯಂ-ನಾವೂಕೂಡ, ಯತ್-ಯಾವ
ಗೋವಿಂದಪದವನ್ನು, ವಾಂಛಂತಿ-ಬಯಸುವರೋ, ಅನಂತಕಥಾರಸಸ್ಯ-ಅಂಥಾ ವಿಷ್ಣುವಿನಕಥೆಯಲ್ಲಿ ಸುಖವುಳ್ಳವನಿಗೆ,
ಬ್ರಹ್ಮಜನ್ಮಭಿಃ-ಬ್ರಾಹ್ಮಣಜನ್ಮಗಳಿಂದ,ಕಿಂ-ಏನುಪ್ರಯೋಜನವು॥೫೮॥ವನಚರಾಃ-ಕಾಡಿನಲ್ಲಿ ತಿರುಗುವರಾದ, ವ್ಯಭಿಚಾರಶೀ
ಲಾಃ-ಹಾದರವೇ ಸ್ವಭಾವವಾಗಿ ಉಳ್ಳವರಾದ, ಇಮಾಃಸ್ತ್ರಿಯಃ-ಈ ಹೆಂಗಳು, ಕ್ವ-ಎಲ್ಲಿ, ಪರಮಾತ್ಮನಿ-ಪರಬ್ರಹ್ಮವಾದ ಕೃ
ಷ್ಣೇ-ಕೃಷ್ಣನಲ್ಲಿ, ಏಷಃ-ಈ, ರೂಢಭಾವಃ-ನೆಲೆಯಾಗಿನಿಂತಬುದ್ಧಿಯು, ಕ್ವಚ-ಎಲ್ಲಿ, ಈಶ್ವರಃ-ಭಗವಂತನು, ಅನುಭಜ
ತಃ-ತನ್ನನ್ನು ಅನುಸರಿಸಿ ಪ್ರೀತಿಸುವವರನ್ನು, ಅವಿದುಷೋಪಿ-ಅರಿಯದವರನ್ನಾದರೂ, ಉಪಯುಕ್ತಃ-ಸೇವಿಸಲ್ಪಟ್ಟ, ಅಗ
ದರಾಜಇವ-ಆರೋಗ್ಯಾಮೃತವೆಂಬ ಮದ್ದಿನಹಾಗೆ, ಸಾಕ್ಷಾತ್-ಪ್ರತ್ಯಕ್ಷವಾಗಿ, ಶ್ರೇಯಃ-ಉತ್ತಮಸುಖವನ್ನು, ತನೋತಿನ

---

ಗಳೂ ಕ್ಷಣಂಗಳಂತೆ ಆದವು ॥೫೫॥ಪುಷ್ಪಿತಂಗಳಾದ ವೃಕ್ಷಂಗಳುಳ್ಳ ವನಂಗಳಂ ನದಿಗಳಂ ಪರ್ವತಂಗಳಂ
ಗುಹೆಗಳಂ ನೋಡುವ ಹರಿದಾಸನಾದ ಉದ್ಧವನು ಶ್ರೀಕೃಷ್ಣನಂ ಸ್ಮರಿಸುವಂತೆ ಮಾಡುತ್ತ ವಾಸವಂ ಮಾಡಿ
ದನು ॥೫೬॥ಗೋಪಸ್ತ್ರೀಯರುಗಳ ಹೃದಯವು ಕೃಷ್ಣಾಸಕ್ತವಾಗಿ ತದೇಕಾಯತ್ತವಾಗಿ ಇರುವುದಂನೋ
ಡಿ, ಉದ್ಧವನು ಪರಮಪ್ರೀತನಾಗಿ ಅವರಿಗೆ ನಮಸ್ಕರಿಸುವನಾಗಿ ಇದಂನುಡಿದನು॥೫೭॥ಈಗೋಪಸ್ತ್ರೀಯ
ರುಗಳು ಸಫಲವಾದ ಜನ್ಮಮುಳ್ಳವರು; ಸರ್ವಾತ್ಮನಾದ ಗೋವಿಂದನಲ್ಲಿಯೇ ದೃಢವಾದ ಚಿತ್ತಮುಳ್ಳವರು
ಸಂಸಾರ ಭಯಮುಳ್ಳ ಮುನಿಗಳು ಕೂಡಾ ಯಾವದೃಢವಾದ ಭಕ್ತಿಯಂ ಅಪೇಕ್ಷಿಸುವರೋ, ಭಕ್ತರಾದನಾವು
ಯಾವಭಕ್ತಿಯಂ ಅಪೇಕ್ಷಿಸುವೆವೋ, ಅಂತಾ ಭಕ್ತಿಯಂ ಸ್ತ್ರೀಯರುಗಳು ಪಡೆದಿರುವರು; ಭಗವಂತನಲ್ಲಿ
ಭಕ್ತಿಯುಳ್ಳವನು ಯಾವಜಾತಿಯಲ್ಲಿ ಹುಟ್ಟಿದರೇನು?॥೫೮॥ವನಚರಿಯರಾದ ಚಪಲಚಿತ್ತರಾದ ಸ್ತ್ರೀಯರುಗ
ಳೆಲ್ಲಿ? ಪರಮಾತ್ಮನಾದ ಶ್ರೀಕೃಷ್ಣನೆಲ್ಲಿ? ಸ್ಥಿರವಾದ ಭಕ್ತಿಯೆಲ್ಲಿ? ತನ್ನನ್ನೇ ಭಜಿಸುವ ಮೂಢರನ್ನೂ
ಕೂಡ ಅಮೃತವು ಸೇವಿಸಲ್ಪಟ್ಟರೆ ಹೇಗೆ ಸೌಖ್ಯವನುಂಟುಮಾಡುತ್ತಲಿದೆಯೋ ಅದೇರೀತಿಯಿಂದ ಅನುಗ್ರ

ನೊತ್ಯಗದರಾಜಇವೋಪಯುಕ್ತಃ ॥೫೯॥ ನಾಯಂ ಶ್ರಿಯೋಂಗಉನಿತಾಂತರತೇಃಪ್ರಸಾದಸ್ಸ್ವರ್ಯೋಷಿ
ತಾಂನಲಿನಗಂಧರುಚಾಂಕುತೋನ್ಯಾಃ । ರಾಸೋತ್ಸವೇಸ್ಯಭುಜದಂಡಗೃಹೀತಕಂಠಲಬ್ಧಾಶಿಷಾಂಯ
ಉದಗಾದ್ವ್ರಜವಲ್ಲವೀನಾಮ್ ॥೬೦॥ ಆಸಾಮಹೋಚರಣರೇಣುಜುಷಾಮಹಂಸ್ಯಾಂಬೃಂದಾವನೇಕಿಮಪಿ
ಗುಲ್ಮಲತೌಷಧೀನಾಮ್ । ಯಾದುಸ್ತ್ಯಜಂಸ್ವಜನಮಾರ್ಯಪಥಂಚಹಿತ್ವಾಭೇಜುರ್ಮುಕುಂದಪದವೀಂ
ಶ್ರುತಿಭಿರ್ವಿಮೃಗ್ಯಾಮ್ ॥೬೧॥ ಯಾವೈಶ್ರಿಯಾರ್ಚಿತಮಜಾದಿಭಿರಾಪ್ತಕಾಮೈರ್ಯೋಗೀಶ್ವರೈರಪಿಯ
ದಾತ್ಮನಿರಾಸಗೋಷ್ಠ್ಯಾಮ್ । ಕೃಷ್ಣಸ್ಯತದ್ಭಗವತಶ್ಚರಣಾರವಿಂದಂನ್ಯಸ್ತಂಸ್ತನೇಷುವಿಜಹುಃಪ
ರಿರಭ್ಯತಾಪಮ್ ॥೬೨॥ ವಂದೇನಂದವ್ರಜಸ್ತ್ರೀಣಾಂಪಾದರೇಣುಮಭೀಕ್ಷ್ಣಶಃ । ಯಾಸಾಂಹರಿಕಥೋ

---

ನು-ವಿಸ್ತರಿಸಿಮಾಡುವನಲ್ಲವೆ ॥೫೯॥ ರಾಸೋತ್ಸವೇ-ರಾಸಕ್ರೀಡಾವಿನೋದದಲ್ಲಿ, ಅಸ್ಯ-ಈ ಕೃಷ್ಣನ, ಭುಜ....ಶಿಷಾಂ-ಭುಜದಂಡ-ದಂಡಗಳಂತಿರ್ಪ ತೋಳುಗಳಿಂ, ಗೃಹೀತ-ಅಪ್ಪಿಹಿಡಿಯಲ್ಪಟ್ಟ, ಕಂಠ-ಕೊರಳುಗಳಿಂದ ಲಬ್ಧ-ಪಡೆಯಲ್ಪಟ್ಟ, ಆಶಿಷಾಂ-ಅನುಗ್ರಹವುಳ್ಳ, ವ್ರಜವಲ್ಲವೀನಾಂ-ಗೋಕುಲದ ಗೊಲ್ಲತಿಯರಿಗೆ, ಯಃ-ಯಾವ ಪ್ರಸಾದವು, ಉದಗಾತ್-ಉಂಟಾಯಿತೋ, ಸೋಯಂ-ಆ ಈ, ಪ್ರಸಾದಃ-ಅನುಗ್ರಹವು. ನಿತಾಂತರತೇಃ-ಅತಿಕುತೂಹಲವುಳ್ಳ. ಶ್ರಿಯಃ-ಲಕ್ಷ್ಮಿಗೆ, ನ-ಇಲ್ಲವು, ಅಂಗ-ಪರೀಕ್ಷಿದ್ರಾಯನೇ! ನಲಿನಗಂಧರುಚಾಂ-ತಾವರೆಯಂತೆ ಪರಿಮಳವೂ ಕಾಂತಿಯೂಉಳ್ಳ, ಸ್ವರ್ಯೋಷಿತಾಂ-ಸ್ವರ್ಗದಹೆಂಗಳಿಗೂ ನ-ಇಲ್ಲವು. ಅನ್ಯಾಃ-ಇತರಸ್ತ್ರೀಯರು, ಕುತಃ-ಯಾವದರದೆಸೆಯಿಂದ? ॥೬೦॥ ಯಾಃ-ಯಾವಗೋಪಿಯರು, ದುಸ್ತ್ಯಜಂ-ಬಿಡಕೂಡದ, ಸ್ವಜನಂ-ಗಂಡನುಮುಂತಾದ ತನ್ನ ಜನವನ್ನೂ, ಆರ್ಯಪಥಂಚ-ಹಿರಿಯರದಾರಿಯಾದ, ವರ್ಣಾಶ್ರಮಧರ್ಮವನ್ನೂ, ಹಿತ್ವಾ-ಬಿಟ್ಟು, ಶ್ರುತಿಭಿಃ-ವೇದಗಳಿಂದಲೂ, ವಿಮೃಗ್ಯಾಂ-ವಿಶೇಷವಾಗಿ ಹುಡುಕಲ್ಪಡತಕ್ಕದ್ದಾದ, ಮುಕುಂದಪದವೀಂ-ಕೃಷ್ಣನ ಗತಿಯನ್ನು, ಭೇಜುಃ-ಹೊಂದಿದರೋ, ಆಸಾಂ-ಅಂಥಾ ಗೋಪಿಯರ, ಚರಣರೇಣುಜುಷಾಂ-ಪಾದರೇಣುಗಳನ್ನು ಸೇವಿಸಿರುವಂಥಾ, ಬೃಂದಾವನೇ-ಬೃಂದಾವನದೊಳಗಿನ, ಗುಲ್ಮಲತೌಷಧೀನಾಂ-ಹೊದರುಬಳ್ಳಿಪೈರುಗಳೊಳಗೆ, ಅಹಂ-ನಾನು, ಕಿಮಪಿ-ಯಾವುದಾದರೂ ಒಂದು, ಸ್ಯಾಂ-ಆಗುವೆನು ಅಹೋ-ಆಶ್ಚರ್ಯವು ॥೬೧॥ ಯಾಃ-ಯಾವಗೋಪಿಯರು, ರಾಸಗೋಷ್ಠ್ಯಾಂ-ರಾಸಕ್ರೀಡಾಸಭೆಯಲ್ಲಿ, ಕೃಷ್ಣಸ್ಯಭಗವತಃ-ಭಗವಂತನಾದ ಕೃಷ್ಣನ, ಶ್ರಿಯಾರ್ಚಿತಂ-ಲಕ್ಷ್ಮಿಯಿಂದ ಪೂಜಿಸಲ್ಪಟ್ಟ, ಅಜಾದಿಭಿಃ-ಬ್ರಹ್ಮಾದಿಗಳಿಂದಲೂ, ಆಪ್ತಕಾಮೈಃ-ಕೃತಾರ್ಥರಾದ, ಯೋಗೀಶ್ವರೈರಪಿ-ಯೋಗಶ್ರೇಷ್ಠರಿಂದಲೂ, ಅರ್ಚಿತಂ-ಪೂಜಿಸಲ್ಪಟ್ಟ, ಸ್ತನೇಷು-ತಮ್ಮ ಕುಚಗಳಲ್ಲಿ, ನ್ಯಸ್ತಂ-ಇರಿಸಲ್ಪಟ್ಟ, ಚರಣಾರವಿಂದಂ-ಅಡಿದಾವರೆಯನ್ನು, ಪರಿರಭ್ಯ-ಅಪ್ಪಿಕೊಂಡು, ಯತ್-ಯಾವಕಾರಣದಿಂದ, ಆತ್ಮನಿ ಮನಸ್ಸಿನಲ್ಲಿರುವ, ತಾಪಂ-ದುಃಖವನ್ನು, ವಿಜಹುಃ-ತೊರೆದರೋ, ತಾವೈ-ಆ ಗೋಪಿಯರೇ ಪ್ರಸಿದ್ಧವಾದ ಧನ್ಯೆಯರು ॥೬೨॥ ಯಾಸಾಂ-ಯಾವ ಗೊಲ್ಲತಿಯರ, ಹರಿಕಥೋದ್ಗೀತಂ-ಕೃಷ್ಣಕಥೆಯುಳ್ಳ ಉಚ್ಚಸ್ವರದಹಾಡು, ಭುವನತ್ರಯಂ-ಮೂರುಲೋಕವನ್ನೂ, ಪುನಾತಿ-

---

ಹಿಸುತ್ತಾನೆ ॥೫೯॥ ಭಗವಂತನಲ್ಲಿ ಅತ್ಯಂತಾಸಕ್ತಳಾದ ಲಕ್ಷ್ಮಿಗೂಕೂಡ ಇಂತಪ್ಪ ಅನುಗ್ರಹವಿಲ್ಲವು, ಪದ್ಮಗಂಧಮುಳ್ಳ ಸ್ವರ್ಗಸ್ತ್ರೀಯರಿಗೂಯಿಲ್ಲ, ಮಿಗಿಲಾದ ಸ್ತ್ರೀಯರುಗಳಿಗೆ ಹೇಳತಕ್ಕದೇನು? ರಾಸೋತ್ಸವದಲ್ಲಿ ಭಗವಂತನ ಭುಜಂಗಳಿಂದ ಗ್ರಹಿಸಲ್ಪಟ್ಟ ಕಂಠಮುಳ್ಳವರಾಗಿ ಧನ್ಯರಾದ ಗೋಪಸ್ತ್ರೀಯರುಗಳಿಗೆ ಯಾವಅನುಗ್ರಹವು ಉಂಟಾಯಿತೋ ಆಯನುಗ್ರಹವು ಮಿಕ್ಕವರಿಗೆ ದುರ್ಲಭವು ॥೬೦॥ ಈಗೋಪಸ್ತ್ರೀಯರಪಾದರಜಸ್ಸಂಬಂಧಮುಳ್ಳ ಬೃಂದಾವನಸ್ಥಂಗಳಾದ ವೃಕ್ಷಲತಾಗುಲ್ಮಂಗಳಲ್ಲಿ ಒಂದುವೃಕ್ಷವಾಗಿ ನಾನಾದರೂ ಧನ್ಯನು. ಈಗೋಪಸ್ತ್ರೀಯರು ಬಿಡಲಶಕ್ಯವಾದ ಧರ್ಮಮಾರ್ಗಮಂ ತ್ಯಜಿಸಿ ವೇದಂಗಳಿಂದ ಹುಡುಕಲು ಯೋಗ್ಯವಾದ ಗೋವಿಂದನ ಮಾರ್ಗಮಂ ಭಜಿಸುವರು ॥೬೧॥ ಲಕ್ಷ್ಮೀದೇವಿಯಿಂದಲೂ ಪೂರ್ಣಕಾಮರಾದ ಬ್ರಹ್ಮಾದಿಗಳಿಂದಲೂ ಯೋಗೇಶ್ವರರಿಂದಲೂ ಮನಸ್ಸಿನಲ್ಲಿ ಪೂಜಿತನಾದ ಭಗವಂತನಾದ ಕೃಷ್ಣನ ಪಾದಪದ್ಮವಂ ಯಾವಗೋಪಸ್ತ್ರೀಯರುಗಳು ತಮ್ಮ ಕುಚಂಗಳಲ್ಲಿ ಇರಿಸಿಕೊಂಡು ಆಲಿಂಗನಂ ಗೆಯ್ದು ತಾಪವಂ ಪರಿಹರಿಸಿಕೊಂಡರೋ; ॥೬೨॥ ಯಾವಗೋಪಸ್ತ್ರೀಯರುಗಳಿಂದ ಗಾನಂಗೆಯ್ಯಲ್ಪಟ್ಟ ಹರಿಚರಿತ್ರವು ಲೋಕತ್ರಯವಂ ಪವಿತ್ರಮಾಡುದನ್ನಾಗಿ ಮಾಡುವುದೋ ಅಂತಾ ಗೋಪಸ್ತ್ರೀಯರುಗಳ ಪಾದರೇಣುವಂ ನಾನು

ಧ್ಗೀತಂಪುನಾತಿಭುವನತ್ರಯಮ್॥೬೩॥ಶ್ರೀಶುಕಃ॥ಅಥಗೋಪೀರನುಜ್ಞಾಪ್ಯಯಶೋದಾಂನಂದಮೇವಚ।
ಗೋಪಾನಾಮಂತ್ರ್ಯದಾಶಾರ್ಹೋಯಾಸ್ಯನ್ನಾರುರುಹೇರಥಮ್॥೬೪॥ತಂನಿರ್ಗತಂಸಮಾಸಾದ್ಯನಾನೋ
ಪಾಯನಪಾಣಯಃ । ನಂದಾದಯೋಽನುರಾಗೇಣಪ್ರಾವೋಚನ್ನಶ್ರುಲೋಚನಾಃ ॥೬೫॥ಮನಸೋವೃತ್ತ
ಯೋನಸ್ಸ್ಯುಃಕೃಷ್ಣಪಾದಾಂಬುಜಾಶ್ರಯಾಃ। ವಾಚೋಽಭಿಧಾಯಿನೀಃ *ನಾಮ್ನಾಂಕಾಯಸ್ತತ್ಪ್ರ
ಹ್ವಣಾದಿಷು॥೬೬॥ಕರ್ಮಭಿರ್ಭ್ರಾಮ್ಯಮಾಣಾನಾಂಯತ್ರಕ್ವಾಪೀಶ್ವರೇಚ್ಛಯಾ । ಮಂಗಳಾಚರಿತೈ
ರ್ದಾನೈರತಿರ್ನಃಕೃಷ್ಣ ಈಶ್ವರೇ॥೬೭॥ಏವಂಸಭಾಜಿತೋಗೋಪೈಃಕೃಷ್ಣಭಕ್ತ್ಯಾನರಾಧಿಪ।ಉದ್ಧವಃ
ಪುನರಾಗಚ್ಛನ್ಮಥುರಾಂಕೃಷ್ಣಪಾಲಿತಾಮ್॥೬೮॥ಕೃಷ್ಣಾಯಪ್ರಣಿಪತ್ಯಾಹಭಕ್ತ್ಯುದ್ರೇಕಂವ್ರಜೌ

---

ಶುದ್ಧಿಗೊಳಿಸುವುದೋ, ತಾಸಾಂ-ಅಂಥಾ, ನಂದವ್ರಜಸ್ತ್ರೀಣಾಂ-ನಂದಗೋಕುಲದಹೆಂಗಳ, ಪಾದರೇಣುಂ-ಚರಣಧೂಳಿ
ಯನ್ನು, ಅಭೀಕ್ಷ್ಣಶಃ-ಹೆಚ್ಚಾದಬಗೆಯಿಂದ, ವಂದೇ-ನಮಸ್ಕರಿಸುವೆನು॥೬೩॥ [ಶುಕವಾಕ್ಯವು.] ಅಥ-ಆಮೇಲೆ, ಗೋಪೀಃ-
ಗೊಲ್ಲತಿಯರನ್ನೂ, ಯಶೋದಾಂ-ಯಶೋದೆಯನ್ನೂ, ನಂದಮೇವಚ-ನಂದಗೋಪನನ್ನೂ, ಅನುಜ್ಞಾಪ್ಯ-ಒಪ್ಪಿಸಿ ಸಮ್ಮತಿಯಂ
ಪಡೆಕೊಂಡು, ಗೋಪಾನ್-ಗೊಲ್ಲರನ್ನು, ಆಮಂತ್ರ್ಯ-ಕರೆದು ಬೆಸಗೊಂಡು. ಯಾಸ್ಯನ್-ಹೊರಟುಬರುವನಾಗಿ, ದಾಶಾ
ರ್ಹಃ-ಉದ್ಧವನು ರಥಂ-ತೇರನ್ನು, ಆರುರುಹೇ-ಏರಿದನು ॥೬೪॥ ನಿರ್ಗತಂ-ಹೊರಟುಬಂದಂಥಾ, ತಂ-ಆ ಉದ್ಧವನನ್ನು,
ನಾನೋಪಾಯನಪಾಣಯಃ-ಹಲವುಬಗೆಯಾದ ಕಾಣಿಕೆಗಳು ಕೈಗಳಲ್ಲಿವುಳ್ಳವರಾದ, ನಂದಾದಯಃ-ನಂದನುಮೊದಲಾದವರು, ಸ
ಮಾಸಾದ್ಯ-ಹತ್ತಿರಕ್ಕೆಸೇರಿ, ಅನುರಾಗೇಣ-ಅಕ್ಕರೆಯಿಂದ, ಅಶ್ರುಲೋಚನಾಃ-ನೀರುವುಕ್ಕುವಕಣ್ಣುಗಳುಳ್ಳವರಾಗಿ, ಪ್ರಾವೋ
ಚನ್-ಘಟ್ಟಿಯಾಗಿ ನುಡಿದರು ॥೬೫॥ ನಃ-ನಮ್ಮ, ಮನಸಃ-ಮನಸ್ಸಿನ, ವೃತ್ತಯಃ-ಯೋಚನೆಗಳು, ಕೃಷ್ಣಪಾದಾಂಬುಜಾ
ಶ್ರಯಾಃ-ಕೃಷ್ಣನ ಅಡಿದಾವರೆಯೇ ಆಧಾರವಾಗಿಉಳ್ಳವುಗಳು. ಸ್ಯುಃ-ಆಗಲಿ, ವಾಚಃ-ಮಾತುಗಳು, ಕೃಷ್ಣನ, ನಾಮ್ನಾಂ-
ಹೆಸರುಗಳನ್ನು, ಅಭಿಧಾಯಿನೀಃ-(ಅಭಿಧಾಯಿನ್ಯಃ)ಹೇಳುವವಾಗಲಿ, ಕಾಯಃ-ಶರೀರವು, ತತ್ಪ್ರಹ್ವಣಾದಿಷು-ಅವನಿಗೆ ನಮ
ಸ್ಕಾರ ಮಾಡುವುದು ಮೊದಲಾದವುಗಳಲ್ಲಿ ಆಗಲಿ ॥೬೬॥ ಕರ್ಮಭಿಃ-ಪುಣ್ಯಪಾಪಕರ್ಮಗಳಿಂದ, ಭ್ರಾಮ್ಯಮಾಣಾನಾಂ-
ತಿರುಗುತಲಿರುವ, ನಃ-ನಮಗೆ, ಯತ್ರಕ್ವಾಪಿ-ಎಲ್ಲಿಯಾದರೂ ಒಂದುಕಡೆಯಲ್ಲಿ, ಈಶ್ವರೇಚ್ಛಯಾ-ದೇವರದಯೆಯಿಂದ, ಮಂಗ
ಳಾಚರಿತೈಃ-ಶುಭಕರ್ಮಾನುಷ್ಠಾನಗಳಿಂದಲೂ, ದಾನೈಃ-ಸತ್ಪಾತ್ರದಾನಗಳಿಂದಲೂ, ಈಶ್ವರೇ-ಭಗವಂತನಾದ, ಕೃಷ್ಣೇ-
ಕೃಷ್ಣನಲ್ಲಿ, ರತಿಃ-ಅನುರಾಗವುಂಟಾಗುವುದು ॥೬೭॥ ನರಾಧಿಪ-ರಾಯನೇ! ಏವಂ-ಹೀಗೆ, ಗೋಪೈಃ-ಗೊಲ್ಲರಿಂದ, ಕೃಷ್ಣ
ಭಕ್ತ್ಯಾ-ಕೃಷ್ಣನಲ್ಲಿ ಭಕ್ತಿಯಿಂದ, ಸಭಾಜಿತಃ-ಸನ್ಮಾನಿಸಲ್ಪಟ್ಟವನಾದ, ಉದ್ಧವಃ-ಉದ್ಧವನು, ಕೃಷ್ಣಪಾಲಿತಾಂ-ಕೃ
ಷ್ಣನಿಂದ ರಕ್ಷಿಸಲ್ಪಟ್ಟದ್ದಾದ, ಮಥುರಾಂ-ಮಥುರಾನಗರಿಯಂಕುರಿತು, ಪುನಃ-ಮರಳಿಯೂ, ಆಗಚ್ಛತ್-ಬಂದನು ॥೬೮॥
ಕೃಷ್ಣಾಯ-ಕೃಷ್ಣನಿಗೆ, ಪ್ರಣಿಪತ್ಯ-ಪೊಡಮಟ್ಟು, ವ್ರಜೌಕಸಾಂ-ಗೋಕುಲವಾಸಿಗಳ, ಭಕ್ತ್ಯುದ್ರೇಕಂ-ಭಕ್ತಿಯ ಅತಿಶ
ಯವನ್ನು, ಆಹ-ಬಿನ್ನೈಸಿದನು. ವಾಸುದೇವಾಯ-ಕೃಷ್ಣನಿಗೂ, ರಾಮಾಯ-ಬಲರಾಮನಿಗೂ, ರಾಜ್ಞೇ-ಉಗ್ರಸೇನನಿಗೂ,

---

ಬಾರಿಬಾರಿಗೂ ನಮಸ್ಕರಿಸುವೆನು ॥೬೩॥ ಈರೀತಿಯಲ್ಲಿ ಉದ್ಧವನು ಗೋಪಿಯರಿಗೆ ನಮಸ್ಕರಿಸಿ, ಅವರಿಂದ
ಅಪ್ಪಣೆಯಂ ತೆಗದುಕೊಂಡು, ಯಶೋದೆಯಂ ನಂದನಂಸಹ ಅಪ್ಪಣೆಯಂಕೇಳಿ, ಗೋಪಾಲಕರಂಸಂಮತಿಸಿ
ರಥವನ್ನೇರಿದನು ॥೬೪॥ನಂದಾದಿಗಳು ನಾನಾರೂಪಂಗಳಾದ ಕಾಣಿಕೆಗಳಂ ತೆಗದುಕೊಂಡು ಅನುರಾಗದಿಂ
ಬಾಷ್ಪಲೋಚನರಾಗಿ ಹೊರಟು ಹೋಗುತಲಿರುವ ಉದ್ಧವನಂ ಕುರಿತು ನುಡಿದರು ॥೬೫॥ ಎಲೈಉದ್ಧವನೇ
ನಮ್ಮಮನಸ್ಸು ಶ್ರೀಕೃಷ್ಣನ ಪಾದವನ್ನೇ ಆಶ್ರಯಿಸಿರಲಿ, ನಮ್ಮವಾಕ್ಕುಗಳು ಕೃಷ್ಣನ ನಾಮಂಗಳನ್ನೇ ಉ
ಚ್ಚರಿಸಲಿ. ದೇಹಂಗಳು ಶ್ರೀಕೃಷ್ಣನ ಸೇವೆಯಲ್ಲಿ ನಮ್ರಂಗಳಾಗಲಿ ॥೬೬॥ ಕರ್ಮಂಗಳಿಂದ ನಾನಾದೇಹಂಗ
ಳನೆಯ್ದಿದವರಾದರೂ, ನಾವುಸತ್ಕಾರಂಗಳಂ ಮಾಡಿಕೊಂಡು ಕೃಷ್ಣನಲ್ಲಿಯೇ ಆಸಕ್ತರಾಗಿರುವೆವು ॥೬೭॥
ಎಂದೀರೀತಿಯಲ್ಲಿ ಗೋಪರಿಂದ ಪ್ರೇರಿಸಲ್ಪಟ್ಟವನಾಗಿ ಶ್ರೀಕೃಷ್ಣನಲ್ಲಿರುವ ಭಕ್ತಿಯಿಂದಉದ್ಧವನು ಪುನಃ
ಕೃಷ್ಣಪಾಲಿತವಾದ ಮಥುರಾಪಟ್ಟಣಕ್ಕೆಬಂದನು ॥೬೮॥ ಬಳಿಕಉದ್ಧವನು ಶ್ರೀಕೃಷ್ಣನಿಗೆ ನಮಸ್ಕರಿಸಿ
ವ್ರಜವಾಸಿಗಳಾದ ಗೋಪಗೋಪಿಯರ ಭಕ್ತ್ಯತಿಶಯವಂ ಶ್ರೀಕೃಷ್ಣನಿಗೂ ವಸುದೇವನಿಗೂ ಬಲರಾಮ

ಕಂಸಾವ್ ವಾಸುದೇವಾಯರಾಮಾಯರಾಜ್ಞೇಚೋಪಾಯನಾನ್ಯದಾತ್‖ ... ...‖೬೯‖

ಇತಿಶ್ರೀಮದ್ಭಾಗವತೆ ದಶಮಸ್ಕಂಧೆ ಸಪ್ತಚತ್ವಾರಿಂಶೋಧ್ಯಾಯಃ

‖ಶ್ಲೋಕಃ‖ಅಥವಿಜ್ಞಾಯಭಗವಾನ್ಸರ್ವಾತ್ಮಾಸರ್ವದರ್ಶನಃ । ಸೈರಂಧ್ರ್ಯಾಃಕಾಮತಪ್ತಾಯಾಃಪ್ರಿಯಮಿಚ್ಛನ್‌ಗೃಹಂಯಯೌ ‖೧‖ಮಹಾರ್ಹೋಪಸ್ಕರಾಢ್ಯಂವೈಕಾಮೋಪಾಯೋಪಬೃಂಹಿ

---

ಚ-ವಸುದೇವದೇವಕ್ಯಾದಿಗಳಿಗೂ, ಉಪಾಯನಾನಿ-ಕಾಣಿಕೆಗಳನ್ನು, ಅದಾತ್-ಕೊಟ್ಟನು, ‖೬೯‖

**ಇತಿಶ್ರೀಮದ್ಭಾಗವತೇ ದಶಮಸ್ಕಂಧೇ ಸಪ್ತಚತ್ವಾರಿಂಶೋಧ್ಯಾಯಃ**

೪೮ನೆಯ ಅಧ್ಯಾಯದ ಟೀಕೆ.

[ಶುಕವಾಕ್ಯವು.] ಅಥ-ಆಮೇಲೆ, ಸರ್ವದರ್ಶನಃ-ಸಕಲಸಾಕ್ಷಿಯೂ, ಸರ್ವಾತ್ಮಾ-ಸಕಲಸ್ವರೂಪನೂ ಆದ, ಭಗವಾನ್-ಶ್ರೀಕೃಷ್ಣನು, ಕಾಮತಪ್ತಾಯಾಃ-ಕಾಮಪೀಡಿತಳಾದ, ಸೈರಂಧ್ರ್ಯಾಃ-ದಾಸಿಯವಿಷಯವನ್ನು, ವಿಜ್ಞಾಯ-ತಿಳಿದು, ಪ್ರಿಯಂ-ಅವಳ ಯಿಷ್ಟವನ್ನು, ಇಚ್ಛನ್-ಮಾಡಲೆಳಸಿದವನಾಗಿ, ಗೃಹಂ-ಅವಳಮನೆಯಂಕುರಿತು, ಯಯೌ-ಹೋದನು ‖೧‖ ಮಹಾರ್ಹೋಪಸ್ಕರಾಢ್ಯಂ-ಮಹಾರ್ಹ-ದೊಡ್ಡಮನುಷ್ಯರಿಗೆತಕ್ಕ, ಉಪಸ್ಕರ-ಆಸನಶಯ್ಯಾದ್ಯುಪಕರಣಗಳಿಂದ, ಆಢ್ಯಂ-ಸಂಪನ್ನವಾಗಿಯೂ, ವೈ-ಪ್ರಸಿದ್ಧವಾಗಿ, ಕಾಮೋಪಾಯೋಪಬೃಂಹಿತಂ-ಕಾಮೋಪಾಯ-ಕಾಮೋದ್ದೀಪನಕ್ಕೆ ಸಾಧಕಂಗಳಾದ, ಪುಷ್ಪಪರಿಮಳತಾಂಬೂಲಾದಿವಸ್ತುಗಳಿಂದ, ಉಪಬೃಂಹಿತಂ-ಬಲಕರಿಸಲ್ಪಟ್ಟಿರುವುದು. ಮುಕ್ತಾದಾಮಪತಾಕಾಭಿಃ-ಮುತ್ತಿನಸರಗಳ ಮೇಲ್ಕಟ್ಟುಗಳಿಂದಲೂ, ವಿತಾನಶಯನಾಸನೈಃ-ಛಾದಿನಿ ಹಾಸಿಗೆ ಗದ್ದುಗೆಗಳಿಂದಲೂ, ಸುರಭಿಭಿಃ-ಪರಿಮಳಿಸುತಲಿರುವ, ಧೂಪೈಃ-ಹೊಗೆಗಳಿಂದಲೂ, ದೀಪೈಃ-ದೀವಿಗೆಗಳಿಂದಲೂ, ಸ್ರಗ್ಗಂಧೈರಪಿ-ಮಾಲಿಕಾಪರಿಮಳಗಳಿಂದಲೂ,ಮಂ

---

ನಿಗೂ ಉಗ್ರಸೇನನಿಗೂ ಸಹತಿಳುಹಿಸಿ ಕಾಣಿಕೆಳಂ ಒಪ್ಪಿಸಿದನು ... ... ...‖೬೯‖

ಇಂತುಶ್ರೀಶುಕಮುನಿಯುಪರೀಕ್ಷಿದ್ರಾಯನಂಕುರಿತುನಿರೂಪಿಸಿದನೆಂದು ಸೂತಪೌರಾ
ಣಿಕನು ನೈಮಿಶಾರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆಪೇಳಿದ
ನೆಂಬಲ್ಲಿಗೆ- ಶ್ರೀಮನ್ಮಹೀಶೂರಪುರವರಾಧೀಶ ಶ್ರೀಚಾಮರಾಜ
ತನುಜ ಶ್ರೀಮತ್ಕೃಷ್ಣರಾಜವಿರಚಿತಮಾದಶ್ರೀಕೃಷ್ಣ
ರಾಜವಾಣೀವಿಲಾಸಮೆಂಬ ಶ್ರೀಭಾಗವತಪುರಾಣದಕ
ರ್ಣಾಟಭಾಷಾವ್ಯಾಖ್ಯಾನದೊಳುದಶಮಸ್ಕಂಧ
ವಳಿಸಪ್ತಚತ್ವಾರಿಂಶಾಧ್ಯಾಯಂ
ಸಂಪೂರ್ಣಮಾದುದು-



೪೮ನೆಯಅಧ್ಯಾಯವು.

ಶ್ರೀಧರೀಯಶ್ಲೋಕಃ‖ಅಷ್ಟಚತ್ವಾರಿಂಶಕೇಥಕೃಷ್ಣಃಕುಬ್ಜಾಪುರೀರಮತ್ । ಅಕ್ರೂರಸ್ಯಗೃಹಂಗತ್ವಾತಂಗಜಾಹ್ವಯಮಾದಿಶತ್ ‖✝‖ ನಾಲ್ವತ್ತೆಂಟನೆಯಅಧ್ಯಾಯದಲ್ಲಿ ಶ್ರೀಕೃಷ್ಣನು ಕುಬ್ಜೆಯೆಂಬ ಸ್ತ್ರೀಯಳ ಗೃಹವನೆಯ್ದಿ ಆಸ್ತ್ರೀಯೊಡನೆ ರಮಿಸಿ, ಅವಳಂ ಸಂತೋಷಪಡಿಸಿ ಅನಂತರದಲ್ಲಿ ಅಕ್ರೂರನಗೃಹವನೆಯ್ದಿ ಆಯಕ್ರೂರನಂ ಪಾಂಡವರ ಯೋಗಕ್ಷೇಮವಂ ವಿಚಾರಿಸಿಕೊಂಡು ಬರುವಬಗ್ಗೆ ಹಸ್ತಿನಾಪುರಕ್ಕೆ ಕಳುಹಿಸಿದನು. ಎಂಬರ್ಥವಂ ಶ್ರೀಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸುವನದೆಂತೆನೆ:

ಎಲೈಅರಸೇ! ಅನಂತರದಲ್ಲಿ ಸರ್ವಾತ್ಮನಾದ ಸರ್ವಜ್ಞನಾದ ಭಗವಂತನಾದ ಶ್ರೀಕೃಷ್ಣನು ಕುಬ್ಜೆಯ ಪ್ರಾರ್ಥನವಂ ಸ್ಮರಿಸಿಕೊಂಡವನಾಗಿ ಕಾಮತಪ್ತಳಾದ ಕುಬ್ಜೆಯ ಮನೋರಥವಂ ಪೂರ್ಣಂಗೆಯ್ಯಲೋಸುಗ ಅವಳಮನೆಗೆ ಹೋದನು ‖೧‖ಆಕುಬ್ಜಾಗೃಹವೆಂತಿಯದೆಂದರೆ- ಅನರ್ಘ್ಯವಾದ ವಸ್ತುಗಳಿಂದಲೂ

ತಮ್ | ಮುಕ್ತಾದಾಮಪತಾಕಾಭಿರ್ವಿತಾನಶಯನಾಸನೈಃ| ಧೂಪೈಸ್ಸುರಭಿಭಿರ್ದೀಪೈಸ್ಸ್ರಗ್ಗಂಧೈರಪಿಮಂಡಿತಮ್ ||೨||ಗೃಹಂತಮಾಯಾಂತಮವೇಕ್ಷ್ಯಸಾಸನಾತ್ಸದ್ಯಸ್ಸಮುತ್ಥಾಯಹಿಜಾತಸಂಭ್ರಮಾ | ಯಥೋಪಸಂಗಮ್ಯಸಖೀಭಿರಚ್ಯುತಂಸಭಾಜಯಾಮಾಸತದಾಸನಾದಿಭಿಃ ||೩|| ಅಥೋದ್ಧವಸ್ಸಾಧುತಯಾಭಿಪೂಜಿತೋನ್ಯಷೀದದುರ್ವ್ಯಾಮಭಿಮೃಶ್ಯಚಾಸನಮ್|ಕೃಷ್ಣೋಪಿನೂತ್ನಂಶಯನಂಮಹಾಧನಂವಿವೇಶಲೋಕಾಚರಿತಾನ್ಯನುವ್ರತಃ||೪||ಸಾಮಜ್ಜನಾಲೇಪದುಕೂಲಭೂಷಣಸ್ರಗ್ಗಂಧತಾಂಬೂಲಸುಧಾಸವಾದಿಭಿಃ | ಪ್ರಸಾಧಿತಾತ್ಮೋಪಸಸಾರಮಾಧವಂಸವ್ರೀಡಲೀಲೋತ್ಸ್ಮಿತವಿಭ್ರಮೇಕ್ಷಿತೈಃ ||೫||ಆಹೂಯಕಾಂತಾಂನವಸಂಗಮಹ್ರಿಯಾವಿಶಂಕಿತಾಂಕಂಕಣಭೂಷಿತೇಕರೇ |. ಪ್ರಗೃಹ್ಯಶ

---

ಡಿತಂ-ಅಲಂಕರಿಸಲ್ಪಟ್ಟದ್ದಾಗಿದ್ದ ||೨|| ಗೃಹಂ-ಮನೆಯಂಕುರಿತು,ಆಯಾಂತಂ-ಬರುತಲಿರುವವನಾದ, ತಂ-ಆ ಕೃಷ್ಣನನ್ನು, ಅವೇಕ್ಷ್ಯ-ಕಂಡು, ಸಾ-ಆ ದಾಸಿಯು, ಆಸನಾತ್-ತಾನು ಕುಳಿತಿದ್ದ ಗದ್ದುಗೆಯದೆಸೆಯಿಂದ, ಸದ್ಯಃ-ಬೇಗಲೇ, ಸಮುತ್ಥಾಯ-ಚನ್ನಾಗಿಯೆದ್ದು, ಜಾತಸಂಭ್ರಮಾಹಿ-ಮೂಡಿದಸಂತಸವುಳ್ಳವಳಾಗಿಯೇ, ಸಖೀಭಿಃ-ಗೆಳತಿಯರೊಡನೆ, ಯಥಾ-ಹೇಗೆ ಉ ತವೋ ಹಾಗೆ; ಉಪಸಂಗಮ್ಯ-ಸಮೀಪಿಸಿ ಯಿದಿರ್ಗೊಂಡು, ತದಾ-ಆಗ, ಆಸನಾದಿಭಿಃ-ಗದ್ದುಗೆಮೊದಲಾದವುಗಳಿಂದ, ಅಚ್ಯುತಂ-ಕೃಷ್ಣನನ್ನು, ಸಭಾಜಯಾಮಾಸ-ಸಮ್ಮಾನಿಸಿದಳು ||೩|| ಅಥ-ಆಮೇಲೆ, ಉದ್ಧವಃ-ಉದ್ಧವನು, ತಯಾ-ಆ ಕುಬ್ಜೆಯಾಗಿದ್ದವಳಾದ ದಾಸಿಯಿಂದ, ಸಾಧು-ಚನ್ನಾಗಿ, ಅಭಿಪೂಜಿತಃ-ಅರ್ಚಿಸಲ್ಪಟ್ಟವನಾಗಿ, ಆಸನಂ-ತನಗರ್ಪಿಸಿದಪೀಠವನ್ನು, ಅಭಿಮೃಶ್ಯ-ಸಂತೆಂದುಸೋಂಕಿ, ಉರ್ವ್ಯಾಂ-ನೆಲದಲ್ಲಿ, ನ್ಯಷೀದತ್-ಕುಳಿತನು. ಕೃಷ್ಣೋಪಿ-ಕೃಷ್ಣನೂಕೂಡ, ಲೋಕಾಚರಿತಾನಿ-ಲೋಕದನಡತೆಗಳನ್ನು, ಅನುವ್ರತಃ-ಅನುಸರಿಸುವನಾಗಿ,ಮಹಾಧನಂ-ಹೆಚ್ಚು ಭಾಗ್ಯವುಳ್ಳ, ನೂತ್ನಂ-ಹೊಸತಾದ, ಶಯನಂ-ಮಲಗುವಮನೆಯನ್ನು, ವಿವೇಶ-ಹೊಕ್ಕನು ||೪|| ಸಾ-ಆ ದಾಸಿಯು, ಮಜ್ಜನ....ದಿಭಿಃ-ಮಜ್ಜನ-ಅಭ್ಯಂಜನವೂ, ಆಲೇಪ-ಗಂಧಾಂಗರಾಗಲೇಪನವು, ದುಕೂಲ-ದಿವ್ಯವಸ್ತ್ರವೂ, ಭೂಷಣ-ಆಭರಣಗಳು, ಸ್ರಕ್-ಪುಷ್ಪಮಾಲೆಗಳು, ಗಂಧ-ಪರಿಮಳವಸ್ತುಗಳು, ತಾಂಬೂಲ-ವೀಳ್ಯಗಳು, ಸುಧಾ-ಸುಣ್ಣ, ಅಥ-ಹಾಲು, ಆಸವ-ಉತ್ತಮವಾದ ಮದ್ಯವು, ಆದಿಭಿಃ-ಮೊದಲಾದವುಗಳೊಡನೆ, ಪ್ರಸಾಧಿತಾತ್ಮಾ-ಅಲಂಕರಿಸಲ್ಪಟ್ಟ ದೇಹವುಳ್ಳವಳಾಗಿ, ಸವ್ರೀಡ. ಕ್ಷಿತೈಃ-ಸವ್ರೀಡ-ನಾಚಿಕೆಯಿಂಸಹಿತವಾದ, ಲೀಲಾ-ಶೃಂಗಾರಚೇಷ್ಟೆಗಳು, ಉತ್ಸ್ಮಿತ-ಮೇಲಾದಕಿರುನಗೆ, ವಿಭ್ರಮ-ವಿಲಾಸದ, ಈಕ್ಷಿತೈಃ-ನೋಟಗಳಿಂದ ಕೂಡಿದವಳಾಗಿ, ಮಾಧವಂ-ಲಕ್ಷ್ಮೀಪತಿಯಾದ ಕೃಷ್ಣನನ್ನು, ಉಪಸಸಾರ-ಸೇರಿದಳು ||೫|| ನವಸಂಗಮಹ್ರಿಯಾ-ಹೊಸತಾಗಿ ಸೇರುವಲಜ್ಜೆಯಿಂದ, ವಿಶಂಕಿತಾಂ-ಭಯಸಂದೇಹಗಳುಂಟಾದವಳಾದ, ತಾಂಕಾಂತಾಂ-ಆ ಮನೋಹರಳಾದಹೆಣ್ಣನ್ನು, ಆಹೂಯ-ಕರೆದು, ಕಂಕಣಭೂಷಿತೇ-ಕಡಗಗಳಿಂದಲಂಕೃತವಾದ, ಕರೇ-ಕೈಯಲ್ಲಿ, ಪ್ರಗೃಹ್ಯ-ಚಿಮ್ಮನೆ ಹಿಡಿದು, ಶಯ್ಯಾಂ-

---

ಪೂರ್ಣವಾಗಿ, ಕಾಮವಿಹಾರೋಪಯುಕ್ತಂಗಳಾದ ವಸ್ತುಗಳಿಂದಲೂ ಯುಕ್ತವಾಗಿ, ಮುತ್ತುಗಳ ಕುಚ್ಚುಗಳಿಂದಲೂ ಪತಾಕಂಗಳಿಂದಲೂ ಮೇಲುಕಟ್ಟುಗಳಿಂದಲೂ ಹಾಸಿಗೆಗಳಿಂದಲೂ ಪೀಠಂಗಳಿಂದಲೂ ಪರಿಮಳಯುಕ್ತಂಗಳಾದ ಧೂಪಂಗಳಿಂದಲೂ ದೀಪಂಗಳಿಂದಲೂ ಪುಷ್ಪಹಾರಂಗಳಿಂದಲೂ ದಿವ್ಯಗಂಧಂಗಳಿಂದಲೂ ಅಲಂಕೃತವಾಗಿ, ಇರುವುದು||೨||ಅನಂತರದಲ್ಲಿ ಆ ಕುಬ್ಜೆಯು ತನ್ನ ಮನೆಗೆ ಬರುತ್ತಲಿರುವ ಶ್ರೀಕೃಷ್ಣನಂ ನೋಡಿ ಪೀಠದಿಂದೆದ್ದು ಸಂತೋಷತ್ವರಿತಗಳಿಂದೆ ಯುಕ್ತಳಾಗಿ ಸಖಿಯರೊಡನೆ ಇದಿರಾಗಿ ಪೋಗಿ ಶ್ರೀಕೃಷ್ಣನಂ ಕರೆತಂದು ಪೀಠಪ್ರದಾನಾದಿಗಳಿಂದ ಪೂಜಿಸಿದಳು ||೩||ಶ್ರೀಕೃಷ್ಣನ ಸಂಗಡಹೋಗಿರುವ ಆ ಉದ್ಧವನು ಆ ಸ್ತ್ರೀಯಿಂದ ಚನ್ನಾಗಿ ಪೂಜಿತನಾಗಿ ಭೂಮಿಯಲ್ಲಿ ಪೀಠದಮೇಲೆ ಕುಳಿತುಕೊಂಡನು. ಆ ಶ್ರೀಕೃಷ್ಣನು ಅನರ್ಘ್ಯವಾದ ನೂತನವಾದ ಹಾಸಿಗೆಯ ನೈದಿದನು ||೪||ಆ ಕುಬ್ಜೆಯು ಅಭ್ಯಂಗನವಂ ಮಾಡಿಕೊಂಡು ಅರಿಸಿನವಂ ತೊಡೆಕೊಂಡು ದಿವ್ಯದುಕೂಲವನುಟ್ಟುಕೊಂಡು ಆಭರಣಂಗಳನಿಟ್ಟುಕೊಂಡು ಗಂಧತಾಂಬೂಲ ಸೂಪಾಸನೆಗಳಿಂದ ಶರೀರವನಲಂಕರಿಸಿಕೊಂಡು ಲಜ್ಜಾಯುಕ್ತವಾದ ಮುಗುಳುನಗೆಯಿಂದಲೂ ಒಯ್ಯಾರದಿಂದಲೂ ಕಡೆಗಣ್ಣನೋಟಂಗಳಿಂದಲೂ ಶ್ರೀಕೃಷ್ಣನ ಸಮೀಪಕ್ಕೆ ಬಂದಳು||೫||ಶ್ರೀಕೃಷ್ಣನೆ ನೂತನಸಮಾಗಮಲಜ್ಜೆಯಿಂದೆ

ಯ್ಯಾವಮಧಿವೇಶ್ಯರಾಮಯಾರೇಮೇನುಲೇಪಾರ್ಪಣಪುಣ್ಯಲೇಶಯಾ ॥೬॥ ಸಾನಂಗತಪ್ತಕುಚಯೋರುರಸ
ಸ್ತಥಾಕ್ಷ್ಣೋರ್ಜಿಘ್ರಂತ್ಯನಂತಚರಣೇನರುಜೋಮೃಜಂತೀ ।ದೋರ್ಭ್ಯಾಂಸ್ತನಾಂತರಗತಂಪರಿರಭ್ಯ
ಕಾಂತಮಾನಂದಮೂರ್ತಿಮಜಹಾದತಿದೀರ್ಘತಾಪಮ್ ॥೭॥ ಸೈವಂಕೈವಲ್ಯನಾಥಂತಂಪ್ರಾಪ್ಯದು
ಷ್ಪ್ರಾಪಮೀಶ್ವರಮ್ । ಅಂಗರಾಗಾರ್ಪಣೇನಾಹೋದುರ್ಭಗೇದಮಯಾಚತ ॥೮॥ ಅಹೋಷ್ಯತಾಮಿ
ಹಪ್ರೇಷ್ಠದಿನಾನಿಕತಿಚಿನ್ಮಯಾ । ರಮಸ್ವನೋತ್ಸಹೇತ್ಯಕ್ತುಂಸಂಗಂತೇಂಬುರುಹೇಕ್ಷಣ ॥೯॥ ತಸ್ಯೈ

---

ಹಾಸಿಗೆಯನ್ನು, ಅಧಿವೇಶ್ಯ-ಏರಿಸಿ ಕುಳ್ಳಿರಿಸಿಕೊಂಡು, ಅನುಲೇಪಾರ್ಪಣಪುಣ್ಯಲೇಶಯಾ-ಮುನ್ನು ಗಂಧವಂ ಅರ್ಪಿಸಿದ ಸುಕೃತದ ಕಿಂಚಿದ್ಭಾಗವುಳ್ಳವಳಾದ, ರಾಮಯಾ-ಆ ರಮಣಿಯೊಡನೆ, ರೇಮೇ-ಕ್ರೀಡಿಸಿದನು ॥೬॥ ಸಾ-ಅವಳು, ಅನಂಗತಪ್ತ ಕುಚಯೋಃ-ಕಾಮಜ್ವರದಿಂದ ಬಿಸಿಯಾದ ಸ್ತನಗಳ, ಉರಸಃ-ಎದೆಯ, ತಥಾ-ಹಾಗೆಯೇ, ಅಕ್ಷ್ಣೋಃ-ಕಂಗಳ, ರುಜಃ-ವೇದನೆಗಳನ್ನು, ಜಿಘ್ರಂತೀ-ಮೂಸಿನೋಡುವಳಾಗಿ, ಅನಂತಚರಣೇನ-ಕೃಷ್ಣನಪಾದದಿಂದ, ಮೃಜಂತೀ-ತೊಡೆದುಕೊಳ್ಳುವಳಾಗಿ, ದೋರ್ಭ್ಯಾಂ-ತೋಳುಗಳಿಂದ, ಸ್ತನಾಂತರಗತಂ-ಕುಚಮಧ್ಯವಂಸೇರಿದ, ಆನಂದಮೂರ್ತಿಂ-ಸುಖರೂಪನಾದ, ಕಾಂತಂ-ಪ್ರಿಯನನ್ನು, ಪರಿರಭ್ಯ-ಆಲಿಂಗಿಸಿಕೊಂಡು, ಅತಿದೀರ್ಘತಾಪಂ-ಚಿರಕಾಲದಿಂಬಂದ ಸಂಕಟವನ್ನು, ಅಜಹಾತ್-ತೊರೆದಳು ॥೭॥ ಸಾ-ಅವಳು, ಅಂಗರಾಗಾರ್ಪಣೇನ-ಪರಿಮಳಗಂಧವನ್ನು ಸಮರ್ಪಿಸಿಯಿದ್ದ ಪುಣ್ಯದಿಂದ, ದುಷ್ಪ್ರಾಪಂ-ದೊರೆಯತಕ್ಕವನಲ್ಲದ, ಕೈವಲ್ಯನಾಥಂ-ಮೋಕ್ಷಕ್ಕೊಡೆಯನಾದ, ಈಶ್ವರಂ-ಸರ್ವನಿಯಾಮಕನಾದ, ತಂ-ಆ ಕೃಷ್ಣನನ್ನು, ಏವಂ ಪ್ರಾಪ್ಯ-ಹೀಗೆ ಹೊಂದಿಯೂಕೂಡ, ಅಹೋ-ಆಶ್ಚರ್ಯವು. ದುರ್ಭಗಾ-ನಿರ್ಭಾಗ್ಯಳಾದವಳು, ಏನಂ-ಈ ಕೃಷ್ಣನನ್ನು, ಅಯಾಚತ-(ಸ್ವೈರಸುಖವಂ)ಬೇಡಿದಳು ॥೮॥ ಅಹೋ-ಓ ಕೃಷ್ಣನೇ! ಪ್ರೇಷ್ಠ-ಅತಿಶಯಪ್ರಿಯನಾದವನೇ! ಕತಿಚಿದ್ದಿನಾನಿ-ಕೆಲವು ದಿನಗಳು, ಇಹ-ಇಲ್ಲಿ, ಉಷ್ಯತಾಂ-ನಿನ್ನಿಂದಿರಲ್ಪಡಲಿ, ಮಯಾ-ನನ್ನೊಡನೆ, ರಮಸ್ವ-ಕ್ರೀಡಿಸು, ಅಂಬುರುಹೇಕ್ಷಣ-ಕಮಲಾಕ್ಷನೇ. ತೇ-ನಿನ್ನ, ಸಂಗಂ-ಸಂಬಂಧವನ್ನು, ತ್ಯಕ್ತುಂ-ಬಿಡುವವಕ್ಕೆ, ನೋತ್ಸಹೇ-ಒಪ್ಪಲಾರೆನು ॥೯॥ ಮಾನದಃ-ಭಕ್ತರಿಗೆ

---

ಭಯಶಂಕಿತಳಾದ ಸುಂದರಿಯಾದ ಆಸ್ತ್ರೀಯಂ ಕಂಕಣಂಗಳಿಂದ ಭೂಷಿತವಾದ ಹಸ್ತದಿಂದ ಹಿಡಿದನು. ಮಂಚದಮೇಲಕ್ಕೆ ಕರೆದು ಪುರಪ್ರವೇಶಕಾಲದಲ್ಲಿ ಶ್ರೀಕೃಷ್ಣನಿಗೆ ಲೇಪನದ್ರವ್ಯವಂ ಕೊಟ್ಟುದುದರಿಂದ ಲಬ್ಧವಾದ ಪುಣ್ಯಮಹಿಮೆಯಿಂದ ಆಸ್ತ್ರೀಯೊಡನೆ ರಮಿಸಿದನು ॥೬॥ ಕಾಮತಪ್ತಳಾದ ಆಸ್ತ್ರೀಯು ಕುಚಂಗಳು ವಕ್ಷಸ್ಥಳವು ನೇತ್ರಂಗಳು ಇವುಗಳತಾಪಮಂ ಭಗವಂತನ ಚರಣಾಲಿಂಗನೆಯಿಂದ ಪರಿಹರಿಸಿಕೊಂಡು ಸುಂದರನಾದ ಕೃಷ್ಣನಂ ಭುಜಂಗಳಿಂದ ತನ್ನವಕ್ಷಸ್ಥಳದಲ್ಲಿ ಅಪ್ಪಿಕೊಂಡು ಆನಂದಾನುಭವದಿಂದ ಕಾಮತಾಪವಂ ಪರಿಹರಿಸಿಕೊಂಡಳು ॥೭॥ ಆಸ್ತ್ರೀಯು ಲೇಪನದ್ರವ್ಯವಂಕೊಟ್ಟಮಾತ್ರದಿಂದ ಕೈವಲ್ಯನಾಥನಾದದುರ್ಲಭನಾದ ಈಶ್ವರನನೆಯ್ದಿಯೂ ಕೂಡ ಭಾಗ್ಯಹೀನಳಾಗಿ ಇಂತುಯಾಚಿಸಿದಳು ॥೮॥ ಎಲೈನಾಯಕನೇ! ನನ್ನಮನೆಯಲ್ಲಿ ಕೆಲವುಕೆಲವು ದಿವಸಂಗಳಿಲ್ಲಿಯೇ ಇದ್ದು ನನ್ನಲ್ಲಿರಮಿಸು. ಎಲೈಪದ್ಮಲೋಚನನೇ! ನಿನ್ನ ಸಂಗವಂ ನಾನು ಬಿಡಲಾರೆನು ॥೯॥ ಎಂದುಯಾಚಿಸುವ ಸ್ತ್ರೀಯಳಿಗೆ ಕಾಮವರವನಿತ್ತು ಅವಳಂ ಸಂತೋಷಗೊಳಿಸಿ ಸರ್ವೇಶ್ವರನಾದ ಶ್ರೀಕೃಷ್ಣನು ಉದ್ಧವನೊಡನೆ ತನ್ನದಿವ್ಯ ಗೃಹಕ್ಕೆ ಬಂದನು ॥೧೦॥ ಸರ್ವೇಶ್ವರನಾದ ಪೂಜಿಸುವುದಕ್ಕೆ

ಕುಬ್ಜೆಯೊಡನೆ ಕೃಷ್ಣನು ಕ್ರೀಡಿಸುವಿಕೆ



ಕಾಮವರಂದತ್ವಾಮಾನಯಿತ್ವಾಚಮಾನದಃ । ಸಹೋದ್ಧವೇನಸರ್ವೇಶಸ್ಸ್ವಧಾಮಾಗಮದೃದ್ಧಿಮ
ತ್ ॥೧೦॥ದುರಾರಾಧ್ಯಂಸಮಾರಾಧ್ಯವಿಷ್ಣುಂಸರ್ವೇಶ್ವರೇಶ್ವರಮ್ । ಯಾವೃಣೀತಮನೋಗ್ರಾಹ್ಯಮಸ
ತ್ವಾತ್ಕುಮತಿರ್ಹ್ಯಸೌ॥೧೧॥ಅಕ್ರೂರಭವನಂಕೃಷ್ಣಸ್ಸಹರಾಮೋದ್ಧವಃಪ್ರಭುಃ ।ಕಿಂಚಿಚ್ಚಿಕೀರ್ಷ
ಯನ್ಪ್ರಾಗಾದಕ್ರೂರಪ್ರಿಯಕಾಮ್ಯಯಾ ॥೧೨॥ಸತಾನ್ನರವರಶ್ರೇಷ್ಠಾನಾರಾದ್ವೀಕ್ಷ್ಯಸ್ವಬಾಂಧ
ವಾನ್ । ಪ್ರತ್ಯುತ್ಥಾಯಪ್ರಮುದಿತಃಪರಿಷ್ವಜ್ಯಾಭ್ಯನಂದತ॥೧೩॥ನನಾಮಕೃಷ್ಣಂರಾಮಂಚಸತೈ
ರಪ್ಯಭಿವಾದಿತಃ । ಪೂಜಯಾಮಾಸವಿಧಿವತ್ಕೃತಾಸನಪರಿಗ್ರಹಾನ್ ॥೧೪॥ ಪಾದಾವನೇಜನೀರಾಪಶ್ಶಿ
ರಸಾಧಾರಯನ್ನೃಪ । ಅರ್ಹಣೇನಾಂಬರೈರ್ದಿವ್ಯೈರ್ಗಂಧಸ್ರಗ್ಭೂಷಣೋತ್ತಮೈಃ॥೧೫॥ಅರ್ಚಿ

---

ಮಾನವನ್ನು ಕೊಡುವ ಕೃಷ್ಣನು, ತಸ್ಯೈ-ಅವಳಿಗೆ, ಕಾಮವರಂ-ಕಾಮದಬಯಕೆಯನ್ನು, ದತ್ವಾ-ಕೊಟ್ಟು, ಮಾನಯಿತ್ವಾಚ-ಸಮ್ಮಾನವನ್ನೂ ಉಂಟುಮಾಡಿ, ಸರ್ವೇಶಃ-ಎಲ್ಲರಿಗೂ ಒಡೆಯನಾದ ಕೃಷ್ಣನು, ಉದ್ಧವೇನಸಹ-ಉದ್ಧವನೊಡನೆ, ಋದ್ಧಿಮತ್-ಭಾಗ್ಯವುಳ್ಳ, ಸ್ವಧಾಮ-ತನ್ನ ಮನೆಯಂಕುರಿತು, ಅಗಮತ್-ಬಂದನು ॥೧೦॥ ದುರಾರಾಧ್ಯಂ-ಪ್ರಯಾಸದಿಂದಲೂ ಆರಾಧಿಸಲು ಶಕ್ಯನಾಗದವನು ಆದ, ಸರ್ವೇಶ್ವರೇಶ್ವರಂ-ಒಡೆಯರೆಲ್ಲರಿಗೂ ಒಡೆಯನಾದ ವಿಷ್ಣುಂ-ನಾರಾಯಣನನ್ನು, ಸಮಾರಾಧ್ಯ-ಚನ್ನಾಗಿ ಪೂಜಿಸಿಯೂ ಕೂಡ, ಯಾ-ಯಾವದಾಸಿಯು, ಮನೋಗ್ರಾಹ್ಯಂ-ಮನಸ್ಸಿನಿಂದ ಗ್ರಹಿಸತಕ್ಕವಿಷಯಸುಖವನ್ನು, ಅವೃಣೀತ-ಬೇಡಿಕೊಂಡಳೋ, ಅಸತ್ವಾತ್-ತುಚ್ಛವಾದ್ದರಿಂದ, ಅಸೌ-ಇವಳು, ಕುಮತಿರ್ಹಿ-ಕುತ್ಸಿತ ಬುದ್ಧಿಯುಳ್ಳವಳಲ್ಲವೆ? (ನಿಕೃಷ್ಟಬುದ್ಧಿಯುಳ್ಳವಳು.) ॥೧೧॥ ಪ್ರಭುಃ-ಸಮರ್ಥನಾದ, ಕೃಷ್ಣಃ-ಕೃಷ್ಣನು, ಸಹರಾಮೋದ್ಧವಃ-ರಾಮನೊಡನೆಯೂ ಉದ್ಧವನೊಡನೆಯೂ ಸಹಿತನಾಗಿ, ಅಕ್ರೂರಪ್ರಿಯಕಾಮ್ಯಯಾ-ಅಕ್ರೂರನಿಗೆ ಪ್ರಿಯವಂಗೆಯ್ವ ಬಯಕೆಯಿಂದ, ಕಿಂಚಿತ್-ಕೊಂಚಕೆಲಸವನ್ನು, ಚಿಕೀರ್ಷಯನ್-ಅವನಿಂದಮಾಡಿಸಲೆಳಸಿದವನಾಗಿ, ಅಕ್ರೂರಭವನಂ-ಅಕ್ರೂರನಮನೆಯ ಕುರಿತು, ಪ್ರಾಗಾತ್-ಪಯಣಗೊಂಡನು ॥೧೨॥ ಸಃ-ಆ ಅಕ್ರೂರನು, ಸ್ವಬಾಂಧವಾನ್-ತನ್ನ ನಂಟರಾದ, ನರವರಶ್ರೇಷ್ಠಾನ್-ಕ್ಷತ್ರಿಯೋತ್ತಮರಾದ, ತಾನ್-ಆ ರಾಮಕೃಷ್ಣೋದ್ಧವರನ್ನು. ವೀಕ್ಷ್ಯ-ನೋಡಿ, ಆರಾತ್-ಬೇಗನೆ, ಪ್ರತ್ಯುತ್ಥಾಯ-ಇದಿರ್ಗೊಂಡೆದ್ದು, ಪ್ರಮುದಿತಃ-ಹೆಚ್ಚುಸಂತೋಷವುಳ್ಳವನಾಗಿ, ಪರಿಷ್ವಜ್ಯ-ಅಪ್ಪಿಕೊಂಡು,ಅಭ್ಯನಂದತ-ಸಂತೋಷಿಸಿದನು ॥೧೩॥ ಕೃಷ್ಣಂರಾಮಂಚ-ಕೃಷ್ಣನನ್ನೂ ರಾಮನನ್ನೂ, ನನಾಮ-ನಮಸ್ಕರಿಸಿದನು ಸಃ-ಆ ಅಕ್ರೂರನು, ತೈರಪಿ-ಅವರಿಂದಲೂ, ಅಭಿವಾದಿತಃ-ನಮಸ್ಕರಿಸಲ್ಪಟ್ಟವನಾಗಿ, ಕೃತಾಸನಪರಿಗ್ರಹಾನ್-ಮಾಡಲ್ಪಟ್ಟ ಆಸನದ ಅಂಗೀಕಾರವುಳ್ಳವರಾದ, ಅವರನ್ನು, ವಿಧಿವತ್-ಸತ್ಕಾರವಿಧಿಪ್ರಕಾರ, ಪೂಜಯಾಮಾಸ-ಸತ್ಕರಿಸಿದನು ॥೧೪॥ ನೃಪ-ದೊರೆಯೇ, ಪಾದಾವನೇಜನೀಃ-ಕಾಲುತೊಳೆದ, ಆಪಃ-ನೀರನ್ನು, ಶಿರಸಾ-ತಲೆಯಿಂದ, ಧಾರಯನ್-ವಹಿಸಿದವನಾಗಿ, ಅಂಬರೈಃ-ವಸ್ತ್ರಗಳಿಂದಲೂ, ದಿವ್ಯೈಃ-ಸಂತೋಷಿಸತಕ್ಕ, ಗಂಧಸ್ರಗ್ಭೂಷಣೋತ್ತಮೈಃ-ಗಂಧಮಾಲ್ಯಾಭರಣಶ್ರೇಷ್ಠಗಳಿಂದ, ಅರ್ಹಣೇನ-ಸಮ್ಮಾನಿಸುವುದರಿಂದ ॥೧೫॥ ಅರ್ಚಿತ್ವಾ-ಪೂಜಿಸಿ, ಶಿರಸಾ-ತಲೆಯಿಂದ, ಆನಮ್ಯ-ಕುರಿಬಿಟ್ಟು, ಅಂಕಗತೌ-ತೊಡೆಯಮೇ

---

ದುರ್ಲಭನಾದ ವಿಷ್ಣುವಂ ಆರಾಧಿಸಿಯೂ ಕೂಡ ಆಕುಬ್ಜೆಯುತುಚ್ಛಮಾದ ವಿಷಯಸುಖಮಂ ಯಾಚಿಸಿದಳೇ ಹೊರತುಪರಮಪುರುಷಾರ್ಥಮಾದ ಮುಕ್ತಿಯಂ ಯಾಚಿಸಲಿಲ್ಲವಾದಕಾರಣದಿಂದ ಅವಳುಪುಣ್ಯಹೀನಳು॥೧೧॥ ಅನಂತರದಲ್ಲಿ ಉದ್ಧವ ಬಲರಾಮರಿಂದ ಯುಕ್ತನಾಗಿ ಕೃಷ್ಣನು, ಅಕ್ರೂರ ಹಿತಾರ್ಥಮಾಗಿ ಅಕ್ರೂರನ ಗೃಹಕ್ಕೆ ಹೋದನು ॥೧೨॥ ಆಯಕ್ರೂರನು ಮನುಷ್ಯಶ್ರೇಷ್ಠರಾದ ಸ್ವಬಂಧುಗಳಾದ ಕೃಷ್ಣರಾಮೋದ್ಧವರಂ ನೋಡಿ ಪ್ರತ್ಯುತ್ಥಾನಮಂ ಮಾಡಿ ಸಂತುಷ್ಟನಾಗಿ ಆಲಿಂಗನಂ ಗೆಯ್ದನು॥೧೩॥ರಾಮಕೃಷ್ಣರಿಗೆ ನಮಸ್ಕರಿಸಿದನು ಅವರಿಂದಲೂ ನಮಸ್ಕರಿಸಲ್ಪಟ್ಟು ಪೀಠಂಗಳಲ್ಲಿ ಕುಳ್ಳಿರಿಸಿ ಯಥಾಶಾಸ್ತ್ರಮಾಗಿ ಪೂಜಿಸಿದನು ॥೧೪॥ ರಾಮಕೃಷ್ಣರ ಪಾದಪ್ರಕ್ಷಾಳನೋದಕಮಂ ಶಿರಸ್ಸಿನಲ್ಲಿಧರಿಸಿ ದಿವ್ಯವಸ್ತ್ರಂಗಳಿಂದಲೂ ಗಂಧಮಾಲ್ಯಾದಿಗಳಿಂದಲೂ ದಿವ್ಯಭೂಷಣಂಗಳಿಂದಲೂ॥೧೫॥ಪೂಜಿಸಿ ನಮಸ್ಕರಿಸಿದನು. ಆಕೃಷ್ಣನ ಪಾದಂಗಳಂ ತನ್ನತೊಡೆಯಮೇಲೆ ಇರಿಸಿಕೊಂಡು ತನ್ನಹಸ್ತಗಳಿಂದ ಮೆಲ್ಲಮೆಲ್ಲನೆ ಒತ್ತುತ ವಿನಯಸಮ್ಪನ್ನನಾಗಿ ರಾಮಕೃಷ್ಣರಂಕುರಿತುನು

ತ್ವಾ ಶಿರಸ್ಯಾನಧ್ಯ ಪಾದಾವಂಕಗತೌ ಮೃಜನ್ । ಪ್ರಶ್ರಯಾವನತೋಽಕ್ರೂರಃ ಕೃಷ್ಣರಾಮೌ ಬಭಾಷ
ತ ॥೧೬॥ ದಿಷ್ಟ್ಯಾ ಪಾಪೋ ಹತಃ ಕಂಸಃ ಸಾನುಗೋ ವಾಮಿದಂ ಕುಲಮ್ । ಭವದ್ಭ್ಯಾಮುದ್ಧೃತಂ ಕ
ೃಚ್ಛ್ರಾದ್ದುರಂತಾಚ್ಚ ಸಮೇಧಿತಮ್ ॥೧೭॥ ಯುವಾಂ ಪ್ರಧಾನಪುರುಷೌ ಜಗದ್ಧೇತೂ ಜಗನ್ಮಯೌ ।
ಭವದ್ಭ್ಯಾಂ ನ ವಿನಾ ಕಿಂಚಿತ್ಪರಮಸ್ತಿ ನ ಚಾಪರಮ್ ॥೧೮॥ ಆತ್ಮಸೃಷ್ಟಮಿದಂ ವಿಶ್ವಮನ್ವಾವಿಶ್ಯ ಸ್ವಶ
ಕ್ತಿಭಿಃ । ಈಯತೇ ಬಹುಧಾ ಬ್ರಹ್ಮನ್ ಶ್ರುತಿಪ್ರತ್ಯಕ್ಷಗೋಚರಮ್ ॥೧೯॥ ಯಥಾ ಹಿ ಭೂತೇಷು ಚರಾಚರೇ

---

ಲಿರುವ, ಪಾದೌ-ಕಾಲುಗಳನ್ನು, ಮೃಜನ್-ಹಿಸುಕುವನಾಗಿ, (ತೊಡೆಯುವನಾಗಿ) ಪ್ರಶ್ರಯಾವನತಃ-ವಿನಯದಿಂದ ನಮ್ರನಾದ, ಅಕ್ರೂರಃ-ಅಕ್ರೂರನು, ಕೃಷ್ಣರಾಮೌ-ಕೇಶವಬಲರನ್ನು ಕುರಿತು, ಅಭಾಷತ-ನುಡಿದನು ॥೧೬॥ ದಿಷ್ಟ್ಯಾ-ದೈವಯೋಗದಿಂದ, ಪಾಪಃ ಕಂಸಃ-ಪಾಪಿಯಾದ ಕಂಸನು, ಸಾನುಗಃ-ಸಹಚರರಿಂ ಸಹಿತನಾಗಿ, ಹತಃ-ಕೊಲ್ಲಲ್ಪಟ್ಟವನಾದನು. ವಾಂ-ನಿಮ್ಮ, ಇದಂ ಕುಲಂ-ಈ ಯಾದವವಂಶವು, ದುರಂತಾತ್-ಕೊನೆಯಿಲ್ಲದ, ಕೃಚ್ಛ್ರಾತ್-ಕಷ್ಟದ ದೆಸೆಯಿಂದ, ಭವದ್ಭ್ಯಾಂ-ನಿಮ್ಮಿಬ್ಬರಿಂದ, ಉದ್ಧೃತಂ-ಉದ್ಧರಿಸಲ್ಪಟ್ಟಿತು ಸಮೇಧಿತಂ ಚ-ವೃದ್ಧಿಹೊಂದಿಸಲ್ಪಟ್ಟಿತು ॥೧೭॥ ಯುವಾಂ-ನೀವು, ಪ್ರಧಾನಪುರುಷೌ-ಪ್ರಕೃತಿಪುರುಷರು, ಜಗದ್ಧೇತೂ-ಪ್ರಪಂಚಕ್ಕೆ ಕಾರಣವಾಗಿರುವರು, ಜಗನ್ಮಯೌ-ಜಗದ್ರೂಪವಾಗಿ ಪರಿಣಮಿಸಿರುವರು. ಭವದ್ಭ್ಯಾಂ ವಿನಾ-ನಿಮ್ಮನ್ನು ಹೊರತು, ಪರಂ-ಉತ್ತಮವಾದುದು, ನ ಕಿಂಚಿತ್-ಏನೂಯಿಲ್ಲ. ಅಪರಂ ಚ-ಅಧಮವಾದುದೂ, ನಾಸ್ತಿ-ಇಲ್ಲವು ॥೧೮॥ ಹೇ ಬ್ರಹ್ಮನ್-ಎಲೈ ಪರಮೇಶ್ವರನೇ! ಸ್ವಶಕ್ತಿಭಿಃ-ಸ್ವತಂತ್ರಶಕ್ತಿಗಳಿಂದ, ಆತ್ಮಸೃಷ್ಟಂ-ನಿನ್ನಿಂದ ಸೃಷ್ಟಿಸಲ್ಪಟ್ಟ, ಇದಂ ವಿಶ್ವಂ-ಈ ಪ್ರಪಂಚವನ್ನು, ಅನ್ವಾವಿಶ್ಯ-ಜೀವರೂಪದಿಂದ ಅನುಪ್ರವೇಶಂಗೆಯ್ದು, ಶ್ರುತಿಪ್ರತ್ಯಕ್ಷಗೋಚರಂ-ವೇದಗಳಿಗೂ ಇಂದ್ರಿಯಗಳಿಗೂ ತಿಳಿಯಬರುವಹಾಗೆ, ಬಹುಧಾ-ಹಲವು ಬಗೆಯಾಗಿ, ಈಯಸೇ-ತೋರುತಲಿರುವಿ. (ಪಾಠಾಂತರ-ಈಯತೇ) ॥೧೯॥

---

ಕುಳಿತ ಕೃಷ್ಣನ ಕಾಲು ಹಿಸುಕುವ ಅಕ್ರೂರನು ಪೀಠಂಗಳಲ್ಲಿ ಕುಳಿತ ಉದ್ಧವ ಬಲರಾಮರು.



ಡಿದನು ॥೧೬॥ ಪಾಪಿಷ್ಠನಾದ ಕಂಸನು ಸಪರಿವಾರನಾಗಿ ನಿಮ್ಮಿಂದ ಹತನಾದನು. ಅದು ಬಹುಕ್ಷೇಮವಾಯ್ತು. ಅತ್ಯಂತಕಷ್ಟವ ನನುಭವಿಸುತಲಿರುವ ಈ ನಮ್ಮ ಕುಲವು ನಿಮ್ಮಿಂದ ಉದ್ಧಾರಂಗೆಯ್ಯಲ್ಪಟ್ಟಿತು ॥೧೭॥ ಈ ನೀವೀರ್ವರೂ ಪ್ರಧಾನಪುರುಷರು. ಜಗತ್ಕಾರಣರು. ಜಗನ್ಮಯರು. ನಿಮ್ಮೀರ್ವರಂ ಹೊರತು ಬೇರೆ ಯಾವುದೂ ಇಲ್ಲ ॥೧೮॥ ಎಲೈ ಶ್ರೀಕೃಷ್ಣನೇ ಸ್ವಮಾಯಾಶಕ್ತಿಗಳಿಂದ ನಿನ್ನಿಂದ ಸೃಷ್ಟಿಯಾದ ಜಗತ್ತಿನಲ್ಲಿ ಪ್ರವೇಶಿಸಿ ಬಹುಪ್ರಕಾರವಾಗಿ ಪ್ರತ್ಯಕ್ಷದಿಂದಲೂ ಶ್ರುತಿಗಳಿಂದಲೂ ಗಮ್ಯನಾಗಿ ನೀನೆ ಇರುವಿ ॥೧೯॥ ಪೃಥಿವ್ಯಾದಿ ಪಂಚಭೂತಂಗಳು ಸ್ವಕಾರ್ಯಂಗಳಾದ ಚರಾಚರ ಪ್ರಾಣಿಗಳಲ್ಲಿ ಹೇಗೆ ನಾನಾರೂಪಂಗಳಾಗಿ ಅನುವರ್ತಿಸಿರುವವೋ; ಅದೇ ರೀತಿಯಲ್ಲಿ ನಿನ್ನಿಂದ ಸೃಷ್ಟಂಗಳಾದ ಜಗತ್ತುಗಳಲ್ಲಿ ನೀನು ಸ್ವತಂತ್ರನಾಗಿ ಅಂತರಾತ್ಮನಾಗಿ ಬಹು

ಮಹ್ಯಾದಯೋಯೋನಿಷುಭಾಂತಿನಾನಾ । ಏವಂಭವಾನ್ ಕೇವಲಆತ್ಮಯೋನಿಷ್ವಾತ್ಮಾತ್ಮತಂತ್ರೋಬಹುಧಾವಿಭಾತಿ ॥೨೦॥ ಸೃಜಸ್ಯಥೋಲುಂಪಸಿಪಾಸಿವಿಶ್ವಂರಜಸ್ತಮಸ್ಸತ್ತ್ವಗುಣೈಸ್ಸ್ವಶಕ್ತಿಭಿಃ । ನಬಧ್ಯಸೇತದ್ಗುಣಕರ್ಮಭಿರ್ವಾಜ್ಞಾನಾತ್ಮನಸ್ತೇಕ್ವಚಬಂಧಹೇತುಃ ॥೨೧॥ ದೇಹಾದ್ಯುಪಾಧೇರನಿರೂಪಿತತ್ವಾದ್ಭವೋನಸಾಕ್ಷಾನ್ನಭಿದಾತ್ಮನಸ್ಸ್ಯಾತ್ । ಅತೋನಬಂಧಸ್ತವನೈವಮೋಕ್ಷಸ್ಸ್ಯಾತಾಂನಿಕಾಮಸ್ತ್ವಯಿನೋಽವಿವೇಕಃ ॥೨೨॥ ತ್ವಯೋದಿತೋಽಯಂಜಗತೋಹಿತಾಯಯದಾಯದಾವೇದಪಥಃಪುರಾಣಃ ।

---

ಮಹ್ಯಾದಯಃ-ಪೃಥಿವ್ಯಾದ್ಯಪಂಚೀಕೃತಭೂತಗಳು, ಚರಾಚರೇಷು-ಜಂಗಮಸ್ಥಾವರಂಗಳಾದ, ಭೂತೇಷು-ಪಂಚೀಕೃತ ಚೇತನಾಚೇತನಭೂತಂಗಳಲ್ಲಿ, ನಾನಾ-ಹಲವುಬಗೆಯಾಗಿ, ಯಥಾ-ಹೇಗೆ. ಭಾಂತಿ-ತೋರುತಲಿವೆಯೋ, ತಥಾಹಿ-ಹಾಗೆಯೇ ಭವಾನ್-ನೀನು, ಆತ್ಮತಂತ್ರಃ-ಸ್ವತಂತ್ರನಾದ್ದರಿಂದ, ಕೇವಲಂ-ಒಬ್ಬನೆಯಾಗಿದ್ದರೂ, ಆತ್ಮಯೋನಿಷು-ನೀನೇಕಾರಣವಾಗಿವುಳ್ಳ ಪದಾರ್ಥಂಗಳಲ್ಲಿ, ಆತ್ಮಾ-ಜೀವರೂಪನಾಗಿ, ಏವಂ-ಹೀಗೆ, ಬಹುಧಾ-ಹಲವುಬಗೆಯಾಗಿ, ವಿಭಾತಿ-ತೋರುತಲಿರುವಿ ॥೨೦॥ ಅಥೋ-ಮತ್ತೂ, ರಜಸ್ತಮಸ್ಸತ್ತ್ವಗುಣೈಃ-ರಾಜಸ ತಾಮಸ ಸಾತ್ವಿಕ ಗುಣಮಯಂಗಳಾದ, ಸ್ವಶಕ್ತಿಭಿಃ-ಅಜಾದಿಸ್ವಸಾಮರ್ಥ್ಯಗಳಿಂದ, ಸೃಜಸಿ-ಸೃಷ್ಟಿಮಾಡುವಿ, ವಿಶ್ವಂ-ಸೃಷ್ಟಿಸಲ್ಪಟ್ಟಪ್ರಪಂಚವನ್ನು. ಪಾಸಿ-ಪಾಲಿಸುವಿ, ಲುಂಪಸಿ-ಕಡೆಗೆಕಾಣಿಸದಂತೆ ಅಡಗಿಸಿಕೊಳ್ಳುವಿ, ತದ್ಗುಣಕರ್ಮಭಿಃ-ಆ ಪ್ರಾಕೃತಗುಣಕಾರ್ಯಗಳಿಂದ, ನಬಧ್ಯಸೇ-ನೀನುಕಟ್ಟಲ್ಪಡುವುದಿಲ್ಲ. ಜ್ಞಾನಾತ್ಮನಃ-ಶುದ್ಧಚಿದ್ರೂಪನಾದ, ತೇ-ನಿನಗೆ, ಹೇತುರ್ವಾ-ಬಂಧಕಾರಣವಾದರೂ, ಕ್ವಚ-ಎಲ್ಲಿಯೂ, ನೈವ-ಇಲ್ಲವೇಯಿಲ್ಲವು ॥೨೧॥ ಆತ್ಮನಃ-ಪರಮಾತ್ಮನಿಗೇಆಗಲೀ ಜೀವಾತ್ಮನಿಗೇಆಗಲೀ ಉಭಯಸಾಧಾರಣವಾದ ಚಿದ್ವಸ್ತುವಿಗೆ, ದೇಹಾದ್ಯುಪಾಧೇಃ-ದೇಹ-ಅಪ್ರಾಕೃತದೇಹ ಪ್ರಾಕೃತದೇಹ, ಆದಿ-ಸರ್ವಜ್ಞತ್ವ-ಕಿಂಚಿಜ್ಞತ್ವವೊದಲಾದ, ಉಪಾಧೇಃ-ಮಾಯೋಪಾಧಿಗೂ ಅವಿದ್ಯೋಪಾಧಿಗೂ, ಅನಿರೂಪಿತತ್ವಾತ್-ಅನಿರ್ವಚನೀಯತ್ವದಿಂದ, (“ನಸನ್ನಾಸನ್ನಸದಸತ್” = ಸತ್ತೂ ಅಲ್ಲ, ಅಸತ್ತೂ ಅಲ್ಲ, ಸದಸತ್ತೂ ಅಲ್ಲ, ಆದ್ದರಿಂದ ಹೀಗೆಂದು ನಿರೂಪಿಸಲು ಸಾಧ್ಯವಲ್ಲದ್ದರಿಂದ ಅನಿರ್ವಚನೀಯವಾಗಿರುವದು ಉಪಾಧಿ. ಇದೇ ಅನಾದಿಭಾವಾಜ್ಞಾನಪ್ರಯುಕ್ತವು) ಆದ್ದರಿಂದ, ಸಾಕ್ಷಾತ್-ಪ್ರತ್ಯಕ್ಷವಾಗಿ, (ಸತ್ಯವಾಗಿ) ಭವೋಪಿ-ಜನ್ಮವೂ, ಭಿದಾ-ತತ್ಪ್ರಯುಕ್ತಭೇದವೂ,ನಸ್ಯಾತ್-ಇಲ್ಲದೇಹೋಗುವುದು (ಶುದ್ಧಚಿದ್ವಸ್ತುವಿಗೆ“ಅಸಂಗೋಹ್ಯಯಂಪುರುಷಃ”,“ನಿರಂಜನಃ”,ಎಂಬ ಶ್ರುತ್ಯಾದಿಗಳಿಂದ ದಿಟವಾಗಿ ಜನ್ಮಸಂಬಂಧವಿಲ್ಲವು. “ಏಕಮೇವಾದ್ವಿತೀಯಂಬ್ರಹ್ಮ”, ಏಕೋದೇವಃ”, ಎಂಬ ಶ್ರುತ್ಯಾದಿಗಳಿಂದ ಪರಮಾರ್ಥವಾದ ಅದ್ವೈತವಸ್ತುವಿಗೆ ಭೇದವೂಯಿಲ್ಲವು.) ಅತಃ-ಇದರಿಂದ, ತವ-ನಿನಗೆ, ಬಂಧಃ-ಸಂಸಾರಬಂಧವು, ನ-ಇಲ್ಲವು. ಮೋಕ್ಷಶ್ಚ-ಮುಕ್ತಿಯೂ, ನೈವ-ಇಲ್ಲವೇ ಇಲ್ಲವು. ಯತಃ-ಯಾವಕಾರಣದಿಂದ, ಆತ್ಮನಃಬಂಧೋಮೋಕ್ಷಶ್ಚನಸ್ಯಾತಾಂ-ಅಸಂಗಾತ್ಮವಸ್ತುವಿಗೆ ಬಂಧಮೋಕ್ಷಗಳಿಲ್ಲವೋ, ಅತಃ-ಆಕಾರಣದಿಂದ, ತವ-ಮಾಯೋಪಾಧಿಯಿಂದೀಶ್ವರನಾಗಿ ತೋರುವ ನಿನಗೂ, ಬಂಧವೂ ಮೋಕ್ಷವೂಯಿಲ್ಲ. (ಆದರೆ ಜೀವಾತ್ಮರಹಾಗೆ ಈಶ್ವರನಾದ ನಿನಗೂ ಉಲೂಖಲದಲ್ಲಿ ಬಂಧವೂ ಯಮುನಾಪ್ರವಾಹದಲ್ಲಿ ಮುಕ್ತಿಯೂ ಕೇಳಿ ಕಾಣಲ್ಪಟ್ಟುದಿಲ್ಲವೋ ಎಂದರೆ ಆತ್ಮಂಗೆ ಬಂಧಮೋಕ್ಷಗಳು ವಾಸ್ತವಿಕಂಗಳಾಗಿ ಇಲ್ಲವು. ಇನ್ನು ಹೇಗೆಂದರೆ-) ತ್ವಯಿ-ನಿನ್ನಲ್ಲಿ. ನಿಕಾಮಃ-ಅತಿಶಯವಾದ, ನಃ-ನಮ್ಮ, ಅವಿವೇಕಃ-ಅಜ್ಞಾನವೇ, (ನಾವು) ಅನಾದ್ಯಜ್ಞಾನದಿಂದ ನಮ್ಮ ಸ್ವರೂಪವನ್ನು ವಿವೇಕಿಸಿಕೊಳ್ಳದೆ ಅಸಂಗಾತ್ಮವಸ್ತುವಿನಲ್ಲಿ ಮಾಯಾ ವಿದ್ಯಾಪ್ರಯುಕ್ತಗಳಾದ ಬಂಧಮೋಕ್ಷಗಳನ್ನು ಆರೋಪಿಸಿಕೊಂಡಿರುವೆವು) ॥೨೨॥ ತ್ವಯಾ-ನಿನ್ನಿಂದ, ಜಗತಃ-ಪ್ರಪಂಚದ, ಹಿತಾ

---

ರೂಪಂಗಳಿಂದ ತೋರುತ್ತೀಯ ॥೨೦॥ ಎಲೈ ಶ್ರೀಕೃಷ್ಣನೆ ! ನೀನು ರಜಸ್ಸು ಸತ್ವವು ತಮಸ್ಸು ಎಂಬ ಗುಣಾತ್ಮಕಂಗಳಾದ ಸ್ವಮಾಯಾಶಕ್ತಿಗಳಿಂದ ಜಗತ್ತಂ ಸೃಜಿಸುವಿ ರಕ್ಷಿಸುವಿ ಲಯವಂಮಾಡುವಿ, ಈಗುಣಂಗಳಿಂದಲೂ ಕರ್ಮಂಗಳಿಂದಲೂ ನೀನು ಬದ್ಧನಾಗುವುದಿಲ್ಲ. ಜ್ಞಾನಸ್ವರೂಪನಾದ ನಿನಗೆ ಬಂಧಕಾರಣವೂ ಅವಿದ್ಯೆಯೂಇಲ್ಲ ॥೨೧॥ ಆತ್ಮನಿಗೆ ದೇಹಾದ್ಯುಪಾಧಿಗಳು ಸತ್ಯವಾಗಿಲ್ಲದುದರಿಂದ ಜನ್ಮವಿಲ್ಲ,ತನ್ಮೂಲಕವಾದ ಭೇದವೂ ಇಲ್ಲ ಅನಿರ್ವಚನೀಯವಾದುದರಿಂ ಪ್ರಾತಿಭಾಸಿಕವೆನಿಸಿ ಮಿಥ್ಯೆಯಾದ ಕಾರಣದಿಂ ನಿನಗೆಂತೂ ಬಂಧವೂಇಲ್ಲ, ಮೋಕ್ಷವೂಇಲ್ಲ, ಆದರೂ ನಿಮ್ಮಸ್ವರೂಪಮಂ ತಿಳಿಯಲಾರದ ನಮ್ಮಸ್ವರೂಪಾಜ್ಞಾನದ ಅವಿವೇಕವೇ, ಸತ್ಯಾತ್ಮನಾದ ನಿನ್ನಲ್ಲಿ ಬಂಧಮೋಕ್ಷಂಗಳ ನಾರೋಪಿಸುವುದು ॥೨೨॥ ಅನಾದಿಸಿದ್ಧವಾದ ವೇದಮಾರ್ಗವು

ಬಾಧ್ಯೇತಪಾಷಂಡಪಥೈರಸದ್ಭಿಸ್ತದಾಭವಾನ್ಸತ್ತ್ವಗುಣಂಬಿಭರ್ತಿ ‖೨೩‖ಸತ್ವಂಪ್ರಭೋದ್ಯವಸುದೇ
ವಗೃಹೇವತೀರ್ಣಸ್ಸ್ವಾಂಶೇನಭಾರಮಪನೇತುಮಿಹಾಸಿಭೂಮೇಃ । ಅಕ್ಷೌಹಿಣೀಶತವಧೇನಸುರೇತರಾಂ
ಶರಾಜ್ಞಾಮಮುಷ್ಯಚಕುಲಸ್ಯಯಶೋವಿತನ್ವನ್ ‖೨೪‖ಅದ್ಯೇಶನೋವಸತಯಃಖಲುಭೂರಿಭಾಗಾ
ಯಸ್ಸರ್ವದೇವಪಿತೃಭೂತನೃದೇವಮೂರ್ತಿಃ।ಯತ್ಪಾದಶೌಚಸಲಿಲಂತ್ರಿಜಗತ್ಪುನಾತಿಸತ್ತ್ವಂಜಗದ್ಗು
ರುರಧೋಕ್ಷಜಯಾಃಪ್ರವಿಷ್ಟಃ ‖೨೫‖ ಕಃಪಂಡಿತಸ್ತ್ವದಪರಂಶರಣಂಸಮೀಯಾದ ಭಕ್ತಪ್ರಿಯಾದೃತ

---

ಯ-ರಕ್ಷಣೆಕ್ಕೋಸುಗ, ಉದಿತಃ-ಉಂಟಾಗಿರುವ, ಪುರಾಣಃ-ಅನಾದಿಯಾಗಿಯೂ ಶಾಶ್ವತವಾಗಿಯೂ ಇರುವ, ವೇದಪಥಃ-ವ್ಯಾವಹಾರಿಕಸತ್ಯವಾದ ವೇದಮಾರ್ಗವು, ಯದಾಯದಾ-ಯಾವಾಗಯಾವಾಗ, ಅಸದ್ಭಿಃ-ದುಷ್ಟಗಳಾದ ದುಷ್ಟಗಳಾದ,ಪಾಷಂಡಪಥೈಃ-ಅವೈದಿಕಮಾರ್ಗಗಳಿಂದ, ಬಾಧ್ಯೇತ-ಪೀಡಿಸಲ್ಪಡುವುದೋ, ತದಾತದಾ-ಆಗಾಗ, ಭವಾನ್-ಜಗತ್ಪಾಲಕನಾದ ವಿಷ್ಣುವೆನಿಸುವ ನೀನು, ಸತ್ವಗುಣಂ-ಸತ್ವವೆಂಬ ಮಾಯಾಗುಣವನ್ನು, ಬಿಭರ್ತಿ-ವಹಿಸುವಿ, (ಆರೋಪಿಸಿಕೊಳ್ಳುವಿ) ‖೨೩‖ ಪ್ರಭೋ-ಸಮರ್ಥನೇ! ಸತ್ವಂ-ಸತ್ವಗುಣಾಭಿಮಾನಿಪರಮೇಶ್ವರನಾದ ನೀನು, ಅದ್ಯ-ಈಗ, ಭೂಮೇಃ-ಭೂದೇವಿಯ, ಭಾರಂ-ಹೊರೆಯನ್ನು, ಅಪನೇತುಂ-ಪರಿಹರಿಸಲೋಸುಗ, ಸ್ವಾಂಶೇನ-ಸ್ವರೂಪಕಳೆಯಿಂದ, ವಸುದೇವಗೃಹೇ-ವಸುದೇವನ ಮನೆಯಲ್ಲಿ, ಅವತೀರ್ಣಃ ಕೃಷ್ಣಾವತಾರಮಾಡಿದವನು. ಅಸಿ-ಆಗಿರುವಿ. ಸುರೇತರಾಣಾಂ-ಸುರರಿಗಿಂತಲೂ ಇತರರಾದವರಾದ (ಅಸುರರ) ರಾಜ್ಞಾಂ-ರಾಜರ, ಅಕ್ಷೌಹಿಣೀಶತವಧೇನ-ನೂರಾರು ಅಕ್ಷೌಹಿಣಿಗಳ ಸೈನ್ಯದ ಸಂಹಾರದಿಂದ, ಅಮುಷ್ಯಕುಲಸ್ಯ-ಈ ಯಾದವಕುಲಕ್ಕೂ, ಯಶಃ-ಕೀರ್ತಿಯನ್ನು, ವಿತನ್ವನ್-ವಿಸ್ತಾರಗೊಳಿಸುವನಾಗುವಿ ‖೨೪‖ ಈಶ-ಪರಮೇಶ್ವರನಾದ, ಅಧೋಕ್ಷಜ-ಕೃಷ್ಣನೇ! ಯಃ ಯಾವವನು, ಸರ್ವ.. ಮೂರ್ತಿಃ-ಸರ್ವದೇವ-ಸಕಲದೇವತೆಗಳೂ, ಪಿತೃ-ಪಿತೃಗಳೂ,ಭೂತ-ಪ್ರಾಣಿಗಳೂ, ನೃದೇವ-ರಾಜರೂ, ಮೂರ್ತಿಃ-ಆಕಾರಗಳಾಗಿಉಳ್ಳವನೋ,ಯತ್ಪಾದಶೌಚಸಲಿಲಂ-ಯಾವವನಕಾಲನ್ನು ತೊಳೆದನೀರಾದ ಗಂಗೆಯು, ತ್ರಿಜಗತ್-ಸ್ವರ್ಗಮರ್ತ್ಯಪಾತಾಳಗಳನ್ನು ಪುನಾತಿ-ಪವಿತ್ರಗೊಳಿಸುತಲಿದೆಯೋ, ಸತ್ವಂ-ಆ ನೀನು, ಯಾಃ-ಯಾವವುಗಳನ್ನು, ಪ್ರವಿಷ್ಟಃ-ಬಂದು ಹೊಕ್ಕೆಯೋ, ತಾಃ-ಅಂಥಾವಾದ, ನಃವಸತಯಃ-ನಮ್ಮಮನೆಗಳು, ಅದ್ಯ-ಈಗ, ಭೂರಿಭಾಗಾಃಖಲು-ಬಹುಪುಣ್ಯಪೂಜ್ಯತೆಗಳುಳ್ಳವಲ್ಲವೆ ‖೨೫‖ ಭಕ್ತಪ್ರಿಯಾತ್-ಭಕ್ತರಿಗಿಷ್ಟನಾದ, ಋತಗಿರಃ-ಸತ್ಯವಚನವುಳ್ಳ, ಸುಹೃದಃ-ಮಿತ್ರನಾದ, ಕೃತಜ್ಞಾತ್-ಉಪಕಾರವಂ ಬಲ್ಲವನಾದ, ಯಃ-ಯಾವವನು, ಭಜತಃ-ತನ್ನಂಸೇವಿಸುವ, ಸುಹೃದಃ-ಮಿತ್ರನಿಗೆ, ಸರ್ವಾನ್-ಸಮಸ್ತಗಳಾದ, ಅಭಿಕಾಮಾನ್-ಮನೋರಥಗಳನ್ನೂ, ಆತ್ಮಾನಮಪಿ-ತನ್ನನ್ನು ಕೂಡ ದದಾತಿ-ಕೊಡುತಲಿರುವನೋ, ಯಸ್ಯ-ಯಾವವನಿಗೆ, ಉಪಚಯಾಪಚಯೌ-ವೃದ್ಧಿಕ್ಷಯಗಳು, ನ-ಇಲ್ಲವೋ, ತಸ್ಮಾತ್-ಅಂತವನಾದ, ತ್ವತ್-ನಿನಗಿಂತಲೂ, ಅಪರಂ-ಇತರನನ್ನು, (ಉತ್ತಮನಲ್ಲದ ಮತ್ತೊಬ್ಬನನ್ನು)ಕಃಪಂಡಿತಃ ಯಾವ ವಿದ್ವಾಂಸ

---

ಲೋಕಹಿತಾರ್ಥವಾಗಿ ನಿನ್ನಿಂದ ನಿರ್ಮಿಸಲ್ಪಟ್ಟಿದೆ. ಅಸಚ್ಛಾಸ್ತ್ರಂಗಳಾದ ಪಾಷಂಡ ಮಾರ್ಗಂಗಳಿಂದ ಆ ವೇದಮಾರ್ಗವು ಯಾವಾಗ ಬಾಧಿತವಾಗುವುದೋ ಆಗ ನೀನು ಸತ್ವಗುಣವನವಲಂಬಿಸಿ ಅವತರಿಸುವಿ ‖೨೩‖ ಅಂತಾ ನೀನು ಸ್ವಾಂಶದಿಂದ ವಸುದೇವನ ಮನೆಯಲ್ಲಿ ಭೂಭಾರಪರಿಹಾರಾರ್ಥವಾಗೀಅವತರಿಸಿ, ಮನುಷ್ಯನಾಗಿ ಹುಟ್ಟಿರುವ ಕ್ಷತ್ರಿಯರಸಂಬಂಧಿಗಳಾದ ಅಕ್ಷೌಹಿಣೀ ಶತಸಂಖ್ಯಾತಂಗಳಾದ ಸೇನೆಯಂ ಸಂಹರಿಸಿ ಸ್ವಕ್ಷತ್ರಿಯರಾದ ಯಾದವರವಂಶ ಕೀರ್ತಿಯನುಂಟುಮಾಡುವಿ ‖೨೪‖ಎಲೈಸ್ವಾಮಿಯೇ! ಸಮಸ್ತ ದೇವತೆಗಳು ಪಿತೃಗಳು ಭೂತಂಗಳು ಮನುಷ್ಯರು ಅರಸುಗಳು ಏತತ್ಸ್ವರೂಪವಾದ ಮೂರ್ತಿಯುಳ್ಳ ನೀನು ನಮ್ಮಮನೆಗಳಿಗೆ ಬಂದುದರಿಂದ ನಮ್ಮಗೃಹಂಗಳು ಪವಿತ್ರಂಗಳು, ಬಹುಭಾಗ್ಯಮುಳ್ಳವುಗಳು ನಿನ್ನಪಾದಪ್ರಕ್ಷಾಳನೋದಕವು ಲೋಕತ್ರಯವಂ ಪವಿತ್ರವಂಮಾಡುತ್ತೆ ಅಂತಾ ನೀನೇ ನಮ್ಮಮನೆಗಳಿಗೆ ಬಂದಮೇಲೆ ನಾವುಧನ್ಯರೆಂಬುವುದಕ್ಕೆ ಹೇಳತಕ್ಕದ್ದೇನು?‖೨೫‖ಭಕ್ತಪ್ರಿಯನಾದ ಸತ್ಯವಾದಿಯಾದ ಸರ್ವಸುಹೃತ್ತಾದ ಕೃತಜ್ಞನಾದ ನಿನ್ನಂ ಹೊರತು ಮತ್ತೊರ್ವನು ಬುದ್ಧಿವಂತನಾದವನು ಯಾವವನಂ ಭಜಿಸುವನು? ನೀನು ಭಜಿಸುವಜನರಿಗೆ ಸಮಸ್ತಕಾಮಂಗಳನಿತ್ತು ವೃದ್ಧಿಕ್ಷಯಂಗಳಿಂದ ರಹಿತವಾದ ನಿಜಸ್ವರೂಪವಂ ಕೊಡುವಿ ‖೨೬‖

ಗಿರಸ್ಸುಹೃದಃಕೃತಜ್ಞಾತ್ । ಸರ್ವಾನ್ ದದಾತಿಸುಹೃದೋಭಜತೋಭಿಕಾಮಾನಾತ್ಮಾನಮಪ್ಯುಪಚ ಯಾಪಚಯೌನಯಸ್ಯ॥೨೬॥ದಿಷ್ಟ್ಯಾಜನಾರ್ದನಭವಾನಿಹನಃಪ್ರತೀತೋಯೋಗೀಶ್ವರೈರಪಿದುರಾ ಪಗತಿಸ್ಸುರೇಶೈಃ । ಛಿಂಧ್ಯಾಶುನಸ್ಸುತಕಳತ್ರಧನಾಪ್ತಗೇಹದೇಹಾದಿ ಮೋಹರಶನಾಂಭವದೀಯಮಾ ಯಾಂ ॥೨೭॥ಶ್ರೀಶುಕಃ॥ಇತ್ಯರ್ಚಿತಸ್ಸಂಸ್ತುತಶ್ಚ ಭಕ್ತೇನಭಗವಾನ್ ಹರಿಃ । ಅಕ್ರೂರಂಸಸ್ಮಿತಂ ಪ್ರಾಹಗೀರ್ಭಿಸ್ಸಂಮೋಹಯನ್ನಿವ॥೨೮॥ ಶ್ರೀಭಗವಾನ್॥ತ್ವಂನೋಗುರುಃಪಿತೃವ್ಯಶ್ಚ ಶ್ಲಾಘ್ಯೋಬಂ ಧುಶ್ಚನಿತ್ಯದಾ । ವಯಂತುರಕ್ಷ್ಯಾಃಪೋಷ್ಯಾಶ್ಚ ಅನುಕಂಪ್ಯಾಃಪ್ರಜಾಹಿವಃ॥೨೯॥ಭವದ್ವಿಧಾಭಾಗ ವತಾಃನಿಷೇವ್ಯಾಅರ್ಹಸತ್ತಮಾಃ।ಶ್ರೇಯಸ್ಕಾಮೈರ್ನೃಭಿರ್ನಿತ್ಯಂದೇವಾಸ್ಸ್ವಾರ್ಥಾನಸಾಧವಃ॥೩೦॥

---

ನುತಾನೆ, ಶರಣಂ-ರಕ್ಷಕನನ್ನಾಗಿ,ನವಿಯಾತ್-ಸೇರುವನು? (ಪ್ರಸಕ್ತಿಯೆಂಗೆಯ್ವನು) ॥೨೬॥ ಹೇಜನಾರ್ದನ-ಎಲೈ ದು ಷ್ಟಶಿಕ್ಷಕನಾದ ಕೃಷ್ಣನೇ! ಸುರೇಶೈಃ-ದೇವಶ್ರೇಷ್ಠರಿಂದಲೂ, ಯೋಗೀಶ್ವರೈರಪಿ-ಯೋಗಿಶ್ರೇಷ್ಠರಿಂದಲೂಕೂಡ, ದುರಾ ಪಗತಿಃ-ಹೊಂದಲಶಕ್ಯವಾದ ದಾರಿಯುಳ್ಳ, ಭವಾನ್-ನೀನು, ನಃ-ಅಜ್ಞಾನಿಗಳಾದ ನಮಗೆ, ಇಹ-ಅಭಿಮಾನಿಕವಾದ ಮನೆಯಲ್ಲಿ, ದಿಷ್ಟ್ಯಾ-ಸುಖದಿಂದ, ಪ್ರತೀತಃ-ಗೋಚರನಾಗಿ ತೋರುತಲಿರುವಿ. ಆದ್ದರಿಂದ, ನಃ-ನಮಗೆ, ಸುತ ..ರಶನಾಂ-ಸುತ-ಮಕ್ಕ ಳು, ಕಳತ್ರ-ಹೆಂಡತಿ, ಧನ-ಸ್ವತ್ತು, ಆಪ್ತ-ಮಿತ್ರರು, ಗೇಹ-ಮನೆ, ದೇಹ-ಶರೀರ, ಆದಿ-ಮೊದಲಾದವುಗಳ, ಮೋಹ-ಅಜ್ಞಾ ನಾಭಿಮಾನಗಳೆಂಬ, ರಶನಾಂ-ಹಗ್ಗಗಳುಳ್ಳ, ಭವದೀಯಮಾಯಾಂ-ನಿನ್ನಮಾಯೆಯನ್ನು, ಆಶು-ವೇಗನೆ, ಛಿಂಧಿ-ಪರಿಮಾಪಾ ಕು॥೨೭॥ [ಶುಕವಾಕ್ಯವು] ಇತಿ-ಹೀಗೆ, ಭಕ್ತೇನ-ಸೇವಕನಿಂದ,ಅರ್ಚಿತಃ-ಪೂಜಿಸಲ್ಪಟ್ಟವನೂ, ಸಂಸ್ತುತಶ್ಚ-ಕೊಂಡಾ ಡಲ್ಪಟ್ಟವನೂ ಆದ, ಹರಿಃ-ಕೃಷ್ಣನು, ಗೀರ್ಭಿಃ-ಮಾತುಗಳಿಂದ, ಸಮ್ಮೋಹಯನ್ನಿವ-ಮೋಹಗೊಳಿಸುತಲಿರುವನಂತೆ, ಅ ಕ್ರೂರಂ-ಅಕ್ರೂರನಂಕುರಿತು, ಸಸ್ಮಿತಂ-ಕಿರುನಗೆಯಿಂ ಸಹಿತನಾಗೋಣಹೇಗೋ ಹಾಗೆ, ಪ್ರಾಹ-ಹೇಳಿದನು ॥೨೮॥ [ಭಗವದ್ವಾಕ್ಯವು.] ತ್ವಂ-ನೀನು, ನಃ-ನಮಗೆ, ಗುರುಃ-ಉಪದೇಶಕನಾದ ಹಿರಿಯನು, ಪಿತೃವ್ಯಶ್ಚ-ಚಿಕ್ಕಪ್ಪನೂ, ಶ್ಲಾಘ್ಯಃ- ಕೊಂಡಾಡಲ್ಪಡತಕ್ಕವನು, ಬಂಧುಶ್ಚ-ನಂಟನೂ ಆಗಿರುವಿ, ವಯಂತು-ನಾವಾದರೋ, ನಿತ್ಯದಾ-ಯಾವಾಗಲೂ, ವಃ-ನಿಮ್ಮಿಂ ದ, ರಕ್ಷ್ಯಾಃ-ಪಾಲಿಸಲ್ಪಡತಕ್ಕವರು, ಪೋಷ್ಯಾಶ್ಚ-ಸಲಹಲ್ಪಡತಕ್ಕವರೂ,ಅನುಕಂಪ್ಯಾಃ-ದಯೆಗೆಯ್ಯಲ್ಪಕ್ಕವರೂ ಆಗಿರುವೆ ವು. ವಃ-ನಿಮಗೆ, ಪ್ರಜಾಃಹಿ-ರೈತರಾಗಿರುವೆವಲ್ಲವೆ॥೨೯॥ಅರ್ಹಸತ್ತಮಾಃ-ಪೂಜ್ಯರಲ್ಲಿ ಬಹಳಶ್ರೇಷ್ಠರಾದ, ಭವದ್ವಿಧಾಃ- ನಿಮ್ಮಂಥಾ, ಭಾಗವತಾಃ-ಭಗವದ್ಭಕ್ತರು, ಶ್ರೇಯಸ್ಕಾಮೈಃ-ಕ್ಷೇಮವನ್ನು ಬಯಸುವರಾದ,ನೃಭಿಃ-ಮನುಷ್ಯರಿಂದ,ನಿತ್ಯಂ- ಯಾವಾಗಲೂ, ನಿಷೇವ್ಯಾಃ-ಸೇವಿಸಲ್ಪಡತಕ್ಕವರಾಗಿರುವರು. ದೇವಾಸ್ತು-ದೇವತೆಗಳಾದರೋ, ಸ್ವಾರ್ಥಾಃ-ಸ್ವಪ್ರಯೋಜ ನವುಳ್ಳವರು, ಸಾಧವಃ-ಸತ್ಪುರುಷರಾದರೋ, ನ-ಹಾಗಲ್ಲವು॥೩೦॥ ಅಮ್ಮಯಾನಿ-ಜಲರೂಪಗಳಾದವು, ತೀರ್ಥಾನಿ-ಪವಿತ್ರೋ ದಕಗಳು, ನ-ಅಲ್ಲವು, ಮೃಚ್ಛಿಲಾಮಯಾಃ-ಮಣ್ಣುಕಲ್ಲು ಆಗಿರುವವು, ದೇವಾಃ-ದೇವತೆಗಳು, ನ-ಅಲ್ಲವು, (ನದಿಗಳೂ ಬಿಂಬ

---

ಯೋಗೀಶ್ವರರಿಂದಲೂ ದೇವಪತಿಗಳಿಂದಲೂ ತಿಳಿಯಲಶಕ್ಯವಾದ ಸ್ವರೂಪವುಳ್ಳ ನೀನು ದೈವಬಲದಿಂದ ನ ಮಗೆ ಪ್ರಸನ್ನನಾಗಿ ಇರುವಿ. ಎಲೈಜನಾರ್ದನನೇ! ಪುತ್ರರು ಪತಿಗಳು ಧನವು ಮಿತ್ರರು ಗೃಹಂಗಳು ದೇ ಹವು ಮುಂತಾದವುಗಳಲ್ಲಿ ಮಮತಾ ಹಂಭಾವದಿಂದ ಮೋಹವನ್ನುಂಟುಮಾಡುವ ನಿನ್ನಮಾಯೆಯಂ ಛೇದಿಸಿ ನಮ್ಮಂ ರಕ್ಷಿಸು ॥೨೭॥ಎಂದು ಅಕ್ರೂರನಿಂದ ಪೂಜಿತನಾಗಿ ಸ್ತುತಿಸಲ್ಪಟ್ಟ ಭಗವಂತನಾದ ಶ್ರೀಕೃಷ್ಣನು ಮಧುರವಾಕ್ಕುಗಳಿಂದ ಮೋಹಿಸುವಂತೆ ಮಾಡುತ ಅಕ್ರೂರನಂ ಕುರಿತು ನುಡಿದನು ॥೨೮॥ಎಲೈ ಮಹಾತ್ಮ ನಾದ ಅಕ್ರೂರನೇ! ನೀನು ನಮಗೆ ಗುರುವು,ಚಿಕ್ಕಪ್ಪನು, ಶ್ಲಾಘ್ಯನಾದ ಬಂಧುವು, ನಾವು ನಿನ್ನಿಂದ ಪೋಷ ಣೆಯಂ ಮಾಡಿಸಿ ಕೊಳ್ಳಲ್ತಕ್ಕವರು,ನಾವೆಲ್ಲರೂ ನಿನ್ನಪುತ್ರರು,ನಮ್ಮಂನೀನು ದಯೆಮಾಡಿಕೊಂಡು ಬರುವನಾ ಗು ॥೨೯॥ಯೋಗ್ಯರಾದ ಶ್ರೇಯಸ್ಕಾಮರಾದ ಪುರುಷರಿಂದ ನಿಮ್ಮಂತಿಯ ಪರಮ ಭಾಗವತರು ಸೇವಿಸಲ್ಪ ಡಬೇಕು. ನಿಮ್ಮಂತಾ ಸಾಧುಜನರು ದೇವತೆಗಳಿಗೂ ಸೇವ್ಯರು, ದೇವತೆಗಳು ಸ್ವಾರ್ಥಪರರು, ಸಾಧುಗಳು ಪರಾರ್ಥವನ್ನೇ ಮಾಡುವವರು ॥೩೦॥ಜಲರೂಪಂಗಳಾದವು ತೀರ್ಥಂಗಳಲ್ಲ,ಮೃಚ್ಛಿಲಾರೂಪರಾದ ದೇವತೆಗಳು

ನಹ್ಯಮ್ಮಯಾನಿತೀರ್ಥಾನಿನದೇವಾಮೃಚ್ಛಿಲಾಮಯಾಃ| ತೇಪುನಂತ್ಯುರುಕಾಲೇನದರ್ಶನಾದೇವಸಾಧವಃ ||೩೧||ಸಭವಾನ್ಸುಹೃದಾಂವೈನಶ್ಶ್ರೇಯಾನ್ಶ್ರೇಯಶ್ಚಿಕೀರ್ಷಯಾ | ಜಿಜ್ಞಾಸಾರ್ಥಂಪಾಂಡವಾನಾಂಗಚ್ಛಸ್ವಗಜಸಾಹ್ವಯಮ್ ||೩೨|| ಪಿತರ್ಯುಪರತೇಬಾಲಾಸ್ಸಹಮಾತ್ರಾಸುದುಃಖಿತಾಃ |ಆನೀತಾಸ್ಸ್ವಪುರಂರಾಜ್ಞಾವಸಂತಇತಿಶುಶ್ರುಮಃ ||೩೩||ತೇಷುರಾಜಾಂಬಿಕಾಪುತ್ರೋಭ್ರಾತೃಪುತ್ರೇಷುದೀನಧೀಃ | ಸಮೋನವರ್ತತೇನೂನಂದುಷ್ಪುತ್ರವಶಗೋಂಧದೃಕ್||೩೪||ಗಚ್ಛಜಾನೀಹಿತದ್ವೃತ್ತಮಧುನಾಸಾಧ್ವಸಾಧುವಾ | ವಿಜ್ಞಾಯತದ್ವಿಧಾಸ್ಯಾಮೋಯಥಾಶಂಸುಹೃದಾಂಭವೇತ್||೩೫|| ಇತ್ಯ

---

ಮೂರ್ತಿಗಳೂ ಯಾಕೆ ಉಪಾಸ್ಯಗಳಲ್ಲವೆಂದರೆ-) ಯದ್ಯಪಿ-ತೇ-ಅವು, ಉರುಕಾಲೇನ-ಚಿರಕಾಲದಿಂದ, ಪುನಂತಿ-ಪವಿತ್ರಗೊಳಿಸುತ್ತಿವೆ, ಸಾಧವಸ್ತು-ಸತ್ಪುರುಷರಾದರೋ, ದರ್ಶನಾದೇವ-ನೋಡಿದಮಾತ್ರದಿಂದಲೇವೆ, (ಆಗಲೇ) ಪವಿತ್ರಗೊಳಿಸುವರು ||೩೧|| ಸಭವಾನ್-ಆ ನೀನು, ನಃ-ನಮ್ಮ, ಸುಹೃದಾಂ-ಮಿತ್ರರಾಗಿರುವವರಲ್ಲಿ, ಶ್ರೇಯಾನ್-ಶ್ರೇಷ್ಠನಾಗಿರುವಿ, ಆದ್ದರಿಂದ, ಪಾಂಡವಾನಾಂ-ಪಾಂಡವರ, ಶ್ರೇಯಶ್ಚಿಕೀರ್ಷಯಾ-ಶ್ರೇಯಸ್ಸನ್ನು ಮಾಡಲಪೇಕ್ಷೆಯಿಂದ, ಜಿಜ್ಞಾಸಾರ್ಥಂ-ಅವರಯೋಗಕ್ಷೇಮಗಳಂ ತಿಳಿಯಲೋಸುಗ, ಗಜಸಾಹ್ವಯಂ-ಗಜವೆಂಬ ಹೆಸರಿನಿಂಸಹಿತವಾದ, (ಹಸ್ತಿನಾಪುರವಂಕುರಿತು) ಗಚ್ಛಸ್ವ-ಹೋಗು. ಅಥವಾ-ಹೇಸ್ವ-ಎಲೈ ಪಮ್ಮವನೇ!! ಗಚ್ಛ-ಹೋಗು ||೩೨|| ಪಿತರಿ-ತಂದೆಯಾದ ಪಾಂಡುರಾಯನು, ಉಪರತೇ-ಸತ್ತುಹೋಗುತಲೂ, ಬಾಲಾಃ-ಹುಡುಗರಾದ ಪಾಂಡವರು, ಮಾತ್ರಾಸಹ-ತಾಯಿಯಾದ ಕುಂತಿಯೊಡನೆ, ಸುದುಃಖಿತಾಃ-ಬಹಳದುಃಖಿತರಾಗಿದ್ದು, ರಾಜ್ಞಾ-ಧೊರೆಯಿಂದ, ಸ್ವಪುರಂ-ತಮ್ಮಪಟ್ಟಣಕ್ಕೆ, ಆನೀತಾಸ್ಸಂತಃ-ತರಲ್ಪಟ್ಟವರಾಗಿ, ವಸಂತಇತಿ-ಇರುವರೆಂದು, ಶುಶ್ರುಮಃ-ಕೇಳುತಲಿರುವೆವು, (ವಸತೇ-ಆರ್ಷ-ವಸತಿ) ||೩೩|| ರಾಜಾ-ಧೊರೆಯಾದ, ಅಂಬಿಕಾಪುತ್ರಃ-ಧೃತರಾಷ್ಟ್ರನು, ಅಂಧದೃಕ್-ಕುರುಡಗಣ್ಣುಳ್ಳವನಾಗಿಯೂ, ದುಷ್ಪುತ್ರವಶಗಃ-ಕೆಟ್ಟಮಗನಾದದುರ್ಯೋಧನಂಗೆ ಅಧೀನನಾಗಿಯೂ ಇರುವುದರಿಂದ, ತೇಷು-ಆ, ಭ್ರಾತೃಪುತ್ರೇಷು-ತಮ್ಮನಮಕ್ಕಳಲ್ಲಿ, ದೀನಧೀಃ-ಜಡಬುದ್ಧಿಯುಳ್ಳವನಾದ್ದರಿಂದ, ಸಮಃ-ಸರಿಯಾದವನಾಗಿ, ನವರ್ತತೇ-ಇರುವುದಿಲ್ಲವು. ನೂನಂ-ನಿಶ್ಚಯವು. (ಎಂದು ಭಾವಿಸುವೆನು) ||೩೪|| ಗಚ್ಛ-ಹೋಗು, ತದ್ವೃತ್ತಂ-ಅವನ ನಡತೆಯನ್ನು, ಸಾಧು-ಸರಿಯಾದ್ದನ್ನಾಗಲೀ, ಅಸಾಧುವಾ-ಸರಿಯಲ್ಲದ್ದನ್ನಾಗಲೀ, ಜಾನೀಹಿ-ತಿಳಕೋ. ಅಧುನಾ-ಈಗ, ಅದರನ್ನು, ವಿಜ್ಞಾಯ-ತಿಳಕೊಂಡು, ಸುಹೃದಾಂ-ಮಿತ್ರರಿಗೆ, ಶಂ-ಸುಖವು, ಯಥಾ-ಹೇಗೆ, ಭವೇತ್-ಆಗುವುದೋ, ತಥಾ-ಹಾಗೆ, ವಿಧಾಸ್ಯಾಮಃ-ವಿಧಿಸಿಮಾಡುವೆವು ||೩೫|| ಇತಿ-ಹೀಗೆ, ಅಕ್ರೂರಂ-ಅಕ್ರೂರನನ್ನು, ಸಮಾದಿಶ್ಯ-ಆಜ್ಞಾಪಿಸಿ, ಈಶ್ವರಃ-ನಿಯಾಮಕನಾದ, ಭಗವಾನ್ಹರಿಃ-ಸರ್ವಜ್ಞನಾದ ಕೃಷ್ಣನು, ಸಂಕರ್ಷಣೋದ್ಧವಾಭ್ಯಾಂ-ರಾಮೋದ್ಧವರೊಡನೆ,

---

ದೇವತೆಗಳಲ್ಲ, ಅವುಗಳಂ ಸೇವಿಸಿದರೆ ಬಹುಕಾಲಾನಂತರದಲ್ಲಿ ಅನುಗ್ರಹವಂ ಮಾಡುವವು, ನಿಷ್ಕಾಮಿಗಳಾದ ಸಾಧುಗಳಾದ ಮಹಾತ್ಮರು ದರ್ಶನಮಾತ್ರದಿಂದ ಅನುಗ್ರಹವಂ ಮಾಡುವರು ||೩೧||ಎಲೈಅಕ್ರೂರನೇ! ನೀನು ನಮಗೆ ಮಿತ್ರರೊಳಗೆ ಅತಿಶ್ರೇಷ್ಠನು, ಅದರಿಂದ ಪಾಂಡವರಿಗೆ ಶ್ರೇಯಸ್ಸಂ ಮಾಡಲಿಚ್ಛೆಯಿಂದ ಅವರ ಯೋಗಕ್ಷೇಮವಂ ತಿಳಿಯುವುದಕ್ಕೋಸ್ಕರ ಹಸ್ತಿನಾಪುರಕ್ಕೆ ಹೋಗಬೇಕು ||೩೨|| ಆಪಾಂಡವರು ಮಾತೃಸಮೇತರಾಗಿ ಪಿತೃವಾದ ಪಾಂಡುರಾಯನು ಸ್ವರ್ಗಸ್ಥನಾದಮೇಲೆದುಃಖಿತರಾಗಿ ಅರಸಾದ ಧೃತರಾಷ್ಟ್ರನಿಂದ ಹಸ್ತಿನಾಪುರಕ್ಕೆ ಕರೆತರಲ್ಪಟ್ಟವರಾಗಿ ಅಲ್ಲಿಯೇ ಇರುವರೆಂದು ವರ್ತಮಾನವಂ ಕೇಳಿರುವೆನು ||೩೩||ಅಂಬಿಕಾ ಪುತ್ರನಾದ ಧೃತರಾಷ್ಟ್ರನು ದುಷ್ಟಪುತ್ರರಾದ ದುರ್ಯೋಧನಾದಿಗಳ ಸ್ವಾಧೀನನಾಗಿ ದೀನಬುದ್ಧಿಯಿಂದ ಭ್ರಾತೃಪುತ್ರರಾದ ಪಾಂಡವರಲ್ಲಿ ಸಮದೃಷ್ಟಿಯಿಂದಿರುವುದಿಲ್ಲ ||೩೪||ಆದುದರಿಂದ ನೀನು ಅಲ್ಲಿಗೆಹೋಗು, ಆಧೃತರಾಷ್ಟ್ರನ ನಡತೆಯು ಒಳ್ಳೆಯದುವೋ ಕೆಟ್ಟದುದೋ ತಿಳಿದವನಾಗು, ಆವಿವರವಂ ತಿಳಿದು ಸುಹೃತ್ತುಗಳಾದ ಪಾಂಡವರಿಗೆ ಹೇಗೆ ಸುಖವುಂಟಾಗಬೇಕೋ ಹಾಗೆ ಮಾಡುವ ||೩೫||ಎಂದು ಅಕ್ರೂರಂಗೆ ಆಜ್ಞಾಪಿಸಿ ಭಗವಂತ

ಕ್ರೂರಂಸಮಾದಿಶ್ಯಭಗವಾನ್ ಹರಿರೀಶ್ವರಃ ‖ ಸಂಕರ್ಷಣೋದ್ಧವಾಭ್ಯಾಂವೈತತಸ್ಸ್ವಭವನಂಯ
ಯೌ ... .. .. ... ... .. ... ... .. ‖೩೮‖

ಇತಿಶ್ರೀಮದ್ಭಾಗವತೇ ದಶಮಸ್ಕಂಧೇ ಅಷ್ಟಚತ್ವಾರಿಂಶೋಧ್ಯಾಯಃ

ಶ್ರೀಶುಕಃ‖ಸಗತ್ವಾಹಸ್ತಿನಪುರಂಕೌರವೇಂದ್ರಯಶೋಂಕಿತಮ್। ದದರ್ಶತತ್ರಾಂಬಿಕೇಯಂ
ಸಭೀಷ್ಮಂವಿದುರಂಪೃಥಾಮ್‖೧‖ಸಪುತ್ರಂಚೈವಬಾಹ್ಲೀಕಂಭಾರದ್ವಾಜಂಸಗೌತಮಮ್ । ಕರ್ಣಂ
ಸುಯೋಧನಂದ್ರೌಣಿಂಪಾಂಡವಾನ್ ಸುಹೃದೋಪರಾನ್ ‖೨‖ಯಥಾವದುಪಸಂಗಮ್ಯಬಂಧುಭಿರ್ಗಾಂ

---

ತತೋವೈ-ಆಮೇಲೆ, ಸ್ವಭವನಂ-ತನ್ನ ಮನೆಯನ್ನು, ಯಯೌ-ಸೇರಿದನು, ‖೩೮‖

ಇತಿಶ್ರೀಮದ್ಭಾಗವತೇದಶಮಸ್ಕಂಧೇಅಷ್ಟಚತ್ವಾರಿಂಶೋಧ್ಯಾಯಃ

೪೯ನೆಯ ಅಧ್ಯಾಯದ ಪ್ರತಿಪದಟೀಕೆ

[ಶುಕವಾಕ್ಯವು.] ಸಃ-ಆ ಅಕ್ರೂರನು, ಕೌರವೇಂದ್ರಯಶೋಂಕಿತಂ-ಕುರುರಾಯರ ಕೀರ್ತಿಯಿಂದ ಚಿಹ್ನಿತವಾದ, ಹಸ್ತಿನಪುರಂಗತ್ವಾ-ಹಸ್ತಿನಾನಗರಕ್ಕೆ ಹೋಗಿ, ಆಂಬಿಕೇಯಂ-ಅಂಬಿಕಾಪುತ್ರನಾದ ಧೃತರಾಷ್ಟ್ರನನ್ನು, ತತ್ರ-ಅಲ್ಲಿ, ದದರ್ಶ-ಕಂಡನು, ಸಭೀಷ್ಮಂ-ಭೀಷ್ಮಾಚಾರ್ಯನಿಂ ಸಹಿತನಾದ, ವಿದುರಂ-ವಿದುರನನ್ನೂ, ಪೃಥಾಂ-ಕುಂತಿಯನ್ನೂ ಕಂಡನು ‖೧‖ ಸಪುತ್ರಂ-ಪುತ್ರಸಹಿತನಾದ, ಬಾಹ್ಲೀಕಂಚೈವ-ಬಾಹ್ಲೀಕನನ್ನೂ, ಸಗೌತಮಂ-ಕೃಪಾಚಾರ್ಯನಿಂ ಸಹಿತನಾದ, ಭಾರದ್ವಾಜಂ-ದ್ರೋಣಾಚಾರ್ಯನನ್ನೂ, ಕರ್ಣಂ-ರಾಧೇಯನನ್ನೂ, ಸುಯೋಧನಂ-ದುರ್ಯೋಧನನನ್ನೂ, ದ್ರೌಣಿಂ-ಅಶ್ವತ್ಥಾಮನನ್ನೂ, ಪಾಂಡವಾನ್-ಪಾಂಡುಪುತ್ರರನ್ನೂ, ಅಪರಾನ್ ಸುಹೃದಃ-ಇತರರಾದ ಮಿತ್ರರನ್ನೂ ಕಂಡನು ‖೨‖ ಗಾಂ

---

ನಾದ ಶ್ರೀಕೃಷ್ಣನು ಬಲರಾಮನಿಂದಲೂ ಉದ್ಧವನಿಂದಲೂ ಸಹಿತನಾಗಿ ಸ್ವಗೃಹಕ್ಕೆ ಹೋದನು ‖೩೮‖

ಇಂತು ಶ್ರೀಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸಿದನೆಂದುಸೂತಪೌರಾಣಿಕನುನೈ
ಮಿಶಾರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಪೇಳಿದನೆಂಬಲ್ಲಿಗೆಶ್ರೀಮನ್ಮಹೀಶೂರ
ಪುರವರಾಧೀಶಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜ ವಿರಚಿತಮಾದ,ಶ್ರೀಕೃ
ಷ್ಣರಾಜವಾಣೀವಿಲಾಸಮೆಂಬಶ್ರೀಭಾಗವತಪುರಾಣದ ಕರ್ಣಾಟಭಾಷಾವ್ಯಾ
ಖ್ಯಾನದೊಳುದಶಮಸ್ಕಂಧದಲ್ಲಿ ಅಷ್ಟಚತ್ವಾರಿಂಶಾಧ್ಯಾಯಂ
ಸಂಪೂರ್ಣಮಾದುದು.



೪೯ನೆಯಅಧ್ಯಾಯವು.

ಶ್ರೀಧರೀಯಶ್ಲೋಕಃ‖ಊನಪಂಚಾಶತ್ತಮೇತುಗತ್ವಾಕ್ರೂರೋಗಜಾಹ್ವಯಂ।ರಾಜ್ಞಸ್ಸ್ವಭ್ರಾತೃಪುತ್ರೇಷುಬುಧ್ವಾವೈಷಮ್ಯಮಾಗಮತ್‖✝‖ನಾಲ್ವತ್ತೊಂಭತ್ತನೆಯ ಅಧ್ಯಾಯದಲ್ಲಿ ಅಕ್ರೂರನು ಶ್ರೀಕೃಷ್ಣನ ಆಜ್ಞೆಯಿಂದ ಹಸ್ತಿನಾಪುರವನೆಯ್ದಿ ಧೃತರಾಷ್ಟ್ರರಾಯನಿಗೆ ಪಾಂಡವರಲ್ಲಿರುವ ವೈಷಮ್ಯವಂನೋಡಿ ಮರಳಿ ಮಥುರಾ ಪಟ್ಟಣಕ್ಕೆ ಬಂದನೆಂಬರ್ಥವಂ ಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸುವನದೆಂತೆನೆ-

ಎಲೈಅರಸೇ! ಪರೀಕ್ಷಿದ್ರಾಯನೇ! ಆಅಕ್ರೂರನು ಕೌರವೇಂದ್ರರ ಯಶಸ್ಸಿನಿಂದ ಅಂಕಿತವಾದ ಹಸ್ತಿನಾಪುರಕ್ಕೆ ಹೋಗಿ ಆಪುರದಲ್ಲಿ ಧೃತರಾಷ್ಟ್ರನಂ ಭೀಷ್ಮನಂ ವಿದುರನಂ ಕುಂತಿಯಂ ನೋಡಿದನು ‖೧‖ ಬಾಹ್ಲೀಕನಂ ಸೋಮದತ್ತನಂ ದ್ರೋಣನಂ ಕೃಪನಂ ಕರ್ಣನಂ ದುರ್ಯೋಧನನು ಅಶ್ವತ್ಥಾಮನು ಪಾಂಡವರಂ ಮಿಗಿಲಾದ ಮಿತ್ರರಂ ಸಹ ಕಂಡನು‖೨‖ಗಾಂದಿನೀ ಪುತ್ರನಾದ ಅಕ್ರೂರನು ಬಳಿಕ ಯಥಾಯೋಗ್ಯವಾ

ದಿನೈಃಸುತೈಃ । ಸಪೃಷ್ಟಸ್ಸೈಸ್ಸುಹೃದ್ವಾರ್ತಾಂಸ್ವಯಂಚಾಪೃಚ್ಛದವ್ಯಯವ್‖೩‖ಉವಾಸಕತಿಚಿನ್ಮಾಸಾನ್ರಾಜ್ಞೋವೃತ್ತವಿದ್ವೃಕ್ಷಯಾ । ದುಷ್ಪ್ರಜಸ್ಯಾಲ್ಪಸಾರಸ್ಯಖಲಚ್ಛಂದಾನುವರ್ತಿನಃ ‖೪‖ ತೇಜ ಓಜೋಬಲಂವೀರ್ಯಂಪ್ರಶ್ರಯಾದೀಂಶ್ಚಸದ್ಗುಣಾನ್ । ಪ್ರಜಾನುರಾಗಂಪಾರ್ಥೇಷುನಸಹದ್ಭಿಶ್ಚಿಕೀರ್ಷಿತಮ್‖೫‖ಕೃತಂಚಧಾರ್ತರಾಷ್ಟ್ರೈರ್ಯದ್ಗರದಾನಾದ್ಯಪೇಶಲಮ್ । ಆಚಖ್ಯೌಸರ್ವಮೇವಾಸ್ಮೈಪೃಥಾ

---

ದಿನೈಃಸುತೈಃ-ಗಾಂದಿನಿಯಮಗನಾದ ಅಕ್ರೂರನು, ಯಥಾವತ್-ಉಚಿತವು ಹೇಗೋಹಾಗೆ, ಉಪಸಂಗಮ್ಯ-ಸಮೀಪದಲ್ಲಿಸೆರಿ, ಬಂಧುಭಿಃ-ನಂಟರಿಂದ, ಸುಹೃದಾಂವಾರ್ತಾಂ-ಮಿತ್ರರಸುದ್ದಿಯನ್ನು, ಪೃಷ್ಟಃ-ಕೇಳಲ್ಪಟ್ಟವನಾಗಿ. ಸಃ-ಅವನು, ಸ್ವಯಂಚ-ತಾನೂಕೂಡ, ಅವ್ಯಯಂ-ಕುಶಲವನ್ನು, ಅಪೃಚ್ಛತ್-ಬೆಸಗೊಂಡನು ‖೩‖ ರಾಜ್ಞಃ-ದೊರೆಯ, ವೃತ್ತವಿದ್ವೃಕ್ಷಯಾ-ನಡತೆಯನ್ನು ನೋಡುವ ಅಪೇಕ್ಷೆಯಿಂದ, ಕತಿಚಿನ್ಮಾಸಾನ್-ಕೆಲವುತಿಂಗಳಲ್ಲಿ, ಉವಾಸ ಅಲ್ಲಿದ್ದನು, ದುಷ್ಪ್ರಜಸ್ಯ-ದುಷ್ಟಸಂತಾನವುಳ್ಳವನಾದ, ಅಲ್ಪಸಾರಸ್ಯ-ಅಲ್ಪಧೈರ್ಯವುಳ್ಳವನಾದ, ಖಲಚ್ಛಂದಾನುವರ್ತಿನಃ-ದುಷ್ಟನಮನಸ್ಸನ್ನು ಅನುವರ್ತಿಸುವವನಾದ ಧೃತರಾಷ್ಟ್ರನ ‖೪‖ ನಡತೆಯನ್ನೂ, ಪಾರ್ಥೇಷು-ಕುಂತೀಪುತ್ರರಲ್ಲಿ, ತೇಜಃ-ಪ್ರತಾಪವನ್ನೂ, ಓಜಃ-ಅಸ್ತ್ರಶಸ್ತ್ರನೈಪುಣ್ಯವನ್ನೂ, ಬಲಂ-ಶಕ್ತಿಯನ್ನೂ, ವೀರ್ಯಂ-ಶೌರ್ಯವನ್ನೂ, ಪ್ರಶ್ರಯಾದೀನ್-ವಿನಯವುಂತಾದ ಸದ್ಗುಣಾಂಶ್ಚ-ಸುಗುಣಗಳನ್ನೂ, ಪ್ರಜಾನುರಾಗಂ-ಪ್ರಜೆಗಳಿಗಿರುವ ಅಕ್ಕರೆಯನ್ನೂ, ನಸಹದ್ಭಿಃ-ಸೈರಿಸದೇಯಿರುವ ದುರ್ಯೋಧನಾದಿಗಳಿಂದ, ಚಿಕೀರ್ಷಿತಂ-ಮಾಡಲೆಳಸಲ್ಪಟ್ಟ, ದುರಾಲೋಚನೆಯನ್ನೂ ‖೫‖ ಧಾರ್ತರಾಷ್ಟ್ರೈಃ-ಧೃತರಾಷ್ಟ್ರನಮಕ್ಕಳಿಂದ, ಕೃತಂಚ- ಮಾಡಲ್ಪಟ್ಟದ್ದೂ ಆದ, ಗರದಾನಾದಿ-ವಿಷವನ್ನು ಕುಡುವಿಕೆಮೊದಲಾದ, ಅಪೇಶಲಂ-ಅನ್ಯಾಯಕೃತ್ಯವನ್ನೂ ಸರ್ವಮೇವ-ಎಲ್ಲವನ್ನೂ, ಅಸ್ಮೈ-ಈ ಯಕ್ರೂರನಿಗೆ, ಪೃಥಾ-ಕುಂತಿಯೂ, ವಿದುರಶ್ಚ-ವಿದುರನೂ, ಆಚಖ್ಯಾವೇವ-ಹೇಳ

---

ಅಕ್ರೂರನು ಕೌರವರಂ ಪಾಂಡವರಂ ಕಾಣುವಿಕೆ.







ಗಿ ಆ ಕೌರವರಿಂದ ಸತ್ಕೃತನಾಗಿ ಯಾದವರ ಯೋಗಕ್ಷೇಮವಂ ಕೇಳಲ್ಪಟ್ಟವನಾಗಿ ಕೌರವರ ಯೋಗಕ್ಷೇಮವಂ ತಾನೂ ಪ್ರಶ್ನೆಂಗೆಯ್ದಂ ‖೩‖ಅನಂತರದಲ್ಲಿಅಲ್ಪಬಲಮುಳ್ಳವನಾದ ದುಷ್ಟರಾದ ಪುತ್ರರ ನಡತೆಯನ್ನೇ ಅನುವರ್ತಿಸುವನಾದ ದುಷ್ಪುತ್ರರುಳ್ಳವನಾದ ಧೃತರಾಷ್ಟ್ರನ ನಡತೆಯಂ ತಿಳಿಯ ಲಿಚ್ಛೆಯಿಂದ ಕೆಲವು ಮಾಸಂಗಳಂ ಅಲ್ಲಿಯೇ ವಾಸವಂ ಮಾಡಿದನು. ‖೪‖ಪಾಂಡವರ ತೇಜಸ್ಸಂ, ಓಜಸ್ಸಂ, ಬಲವಂ, ವೀರ್ಯಮಂ, ವಿನಯಾದಿಸಮಸ್ತ ಸದ್ಗುಣಂಗಳಂ, ಪಾಂಡವರಲ್ಲಿ ಪ್ರಜೆಗಳಿಗಿರುವ ಅನುರಾಗವಂ, ಸಹ ನೋಡಿಸಹಿಸಲಾರದೆ ಸಂಕಟಪಡುವ‖೫‖ಧೃತರಾಷ್ಟ್ರಪುತ್ರರಾದ ದುರ್ಯೋಧನಾದಿಗಳಿಂದ ಮಾಡಲ್ಪಟ್ಟ ವಿಷಮಿಶ್ರಾನ್ನದಾನವೂ

ಥಾವಿದುರಏವಚ ॥೧॥ ಪೃಥಾತುಭ್ರಾತರಂಪ್ರಾಪ್ತಮಕ್ರೂರಮುಪಸೃತ್ಯತಮ್ । ಉವಾಚಜನ್ಮನಿಲಯಂಸ್ಮರಂತ್ಯಶ್ರುಕಲೇಕ್ಷಣಾ ॥೨॥ ಅಪಿಸ್ಮರಂತಿನಸ್ಸೌಮ್ಯಪಿತರೌ ಭ್ರಾತರಶ್ಚಯೇ । ಭಗಿನ್ಯೋಭ್ರಾತೃಪುತ್ರಾಶ್ಚಜಾಮಯಸ್ಸಖ್ಯಏವಚ ॥೩॥ ಭ್ರಾತ್ರೇಯೋಭಗವಾನ್ಕೃಷ್ಣಶ್ಶರಣ್ಯೋಭಕ್ತವತ್ಸಲಃ । ಪೈತೃಷ್ವಸೇಯಾನ್ಸ್ಮರತಿರಾಮಶ್ಚಾಂಬುರುಹೇಕ್ಷಣಃ ॥೪॥ ಸಪತ್ನಮಧ್ಯೇಶೋಚಂತೀಂವೃಕಾಣಾಂಹ

---

ಲೀಹೇಳಿದನು ॥೧॥ ಪೃಥಾತು-ಕುಂತಿಯಾದರೋ, ಪ್ರಾಪ್ತಂ-ಬಂದಂಥಾ, ಭ್ರಾತರಂ-ತಮ್ಮನಾದ, ತಮಕ್ರೂರಂ-ಆ ಅಕ್ರೂರನನ್ನು, ಉಪಸೃತ್ಯ-ಸಮೀಪಿಸಿಕುಳಿತು, ಜನ್ಮನಿಲಯಂ-ತೌರುಮನೆಯನ್ನು, ಸ್ಮರಂತೀ-ನೆನಪುಗೊಳ್ಳುವಳಾಗಿ, ಅಶ್ರುಕಲೇಕ್ಷಣಾ-ಕಂಣೀರತಟಕುಗಳುಳ್ಳ ಕಂಗಳವಳಾಗಿ, ಉವಾಚ-ನುಡಿದಳು ॥೨॥ ಸೌಮ್ಯ-ಶಾಂತನೇ! ಪಿತರೌ-ತಾಯಿತಂದೆಗಳು, ಭ್ರಾತರಶ್ಚ-ಅಂಣತಮ್ಮಂದಿರೂ, ಭಗಿನ್ಯಃ-ಅಕ್ಕತಂಗಿಯರೂ, ಭ್ರಾತೃಪುತ್ರಾಶ್ಚ-ಅಂಣತಮ್ಮಂದಿರ ಮಕ್ಕಳೂ, ಜಾಮಯಃ-ಕುಲಸ್ತ್ರೀಯರೂ, ಸಖ್ಯಏವಚ-ಗೆಳತಿಯರೂ, ಮತ್ತೂ ಆಯಾ ವಾವಿವರಸೆಗಳುಳ್ಳವರೂ, ಯೇ-ಯಾರೋ, ತೇ-ಅವರು, ನೋಪಿ-ನಮ್ಮನ್ನೂ, ಸ್ಮರಂತಿ-ನೆನಪುಮಾಡುತ್ತಿದ್ದಾರೆಯೋ? ॥೩॥ ಭ್ರಾತ್ರೇಯಃ-ನಮ್ಮಣ್ಣನ ಮಗನಾದ, ಭಗವಾನ್-ಷಡ್ಗುಣೈಶ್ವರ್ಯಮುಳ್ಳವನಾದ, ಶರಣ್ಯಃ-ಪ್ರಪನ್ನರನ್ನು ರಕ್ಷಿಸುವವನಾದ, ಅಥವಾ ರಕ್ಷಕನಾಗತಕ್ಕವನಾದ, ಭಕ್ತವತ್ಸಲಃ-ಸೇವಕರಲ್ಲಿ ದಯೆಯುಳ್ಳವನಾದ, ಕೃಷ್ಣಃ-ಕೃಷ್ಣನೂ, ಅಂಬುರುಹೇಕ್ಷಣಃ-ಪದ್ಮಲೋಚನನಾದ, ರಾಮಶ್ಚ-ಬಲರಾಮನೂ, ಪೈತೃಷ್ವಸೇಯಾನ್-ಸೋದರತ್ತೆಯಮಕ್ಕಳನ್ನು, ಸ್ಮರತಿ-ನೆನಪುಗೊಳ್ಳುವನೋ? ॥೪॥ ವೃಕಾಣಾಂ-ತೋಳಗಳ, ಮಧ್ಯೇ-ನಡುವೆ, ಶೋಚಂತೀಂ-ಅಳುತಲಿರುವ, ಹರಿಣೀಮಿವ-ಹೆಂಣುಜಿಂಕೆಯಹಾಗೆ, ಸಪತ್ನಮಧ್ಯೇ-ವಿರೋಧಿಗಳಾದ ದಾಯಾದಿಗಳನ

---



ಕುಂತೀ ವಿದುರಾಕ್ರೂರರು.

ಸರ್ಪಂಗಳಿಂದ ಕಚ್ಚಿಸುವಿಕೆಯೂ ಗಂಗೆಯಲ್ಲಿ ಕಟ್ಟಿ ಭೀಮಸೇನನಂ ಕೆಡಹುವಿಕೆಯೂ ಮುಂತಾದ ಅಸ್ತ್ರೀಯ ವ್ಯಾಪಾರಂಗಳೆಲ್ಲವನು ಕುಂತಿಯು ವಿದುರನೂಸಹ ಅಕ್ರೂರಂಗೆ ಹೇಳಿದರು ॥೧॥ ಕುಂತಿಯು ಭ್ರಾತನಾದ ಅಕ್ರೂರನನ್ನು [illegible] ತವರುಮನೆಯಂ ಸ್ಮರಿಸಿಕೊಂಡು ಕಣ್ಣೀರಂ ತಂದುಕೊಂಡು ಮಾತನಾಡಿದಳು ॥೨॥ ಎಲೈಸೌಮ್ಯನಾದ ಅಕ್ರೂರನೇ! ನಮ್ಮ ತಂದೆಗಳು ಅಂಣ ತಮ್ಮಂದಿರು ಅಕ್ಕತಂಗಿಯರುಗಳು ಸೋದರಳಿಯಂದಿರು ನಮ್ಮ [illegible]ಗಬಂದ ಸೊಸೆಯಂದಿರು ಸಖಿಯರುಗಳು ಇವರೆಲ್ಲರೂ ನಮ್ಮಂ ಸ್ಮರಿಸುವರೋ ॥೩॥ ನಮ್ಮ ಅಂಣನ ಮಗನಾದ ಭಗವಂತನಾದ ಭಕ್ತವತ್ಸಲನಾದ ದೀನರಕ್ಷಕನಾದ ಶ್ರೀಕೃಷ್ಣನೂ, ಪದ್ಮನೇತ್ರನಾದ ಬಲರಾಮನೂ ಸೋದರತ್ತೆಯಾದ ನನ್ನ ಪುತ್ರರಾದ ಪಾಂಡವರಂ ಸ್ಮರಿಸುವರೋ? ॥೪॥ ಜ್ಞಾತಿಗಳ ನ

ರಿಣೀಮಿವ । ಸಾಂತ್ವಯಿಷ್ಯತಿಮಾಂವಾಕ್ಯೈಃಪಿತೃಹೀನಾಂಶ್ಚಬಾಲಕಾನ್ ॥೧೦॥ಕೃಷ್ಣಕೃಷ್ಣಮ
ಹಾಯೋಗಿನ್ವಿಶ್ವಾತ್ಮನ್ವಿಶ್ವಭಾವನ । ಪ್ರಪನ್ನಾಂಪಾಹಿಗೋವಿಂದಶಿಶುಭಿಶ್ಚಾವಸೀದತೀಮ್ ॥೧೧॥ನಾ
ನ್ಯತ್ತವಪದಾಂಭೋಜಾತ್ಪಶ್ಯಾಮಿಶರಣಂನೃಣಾಮ್ । ಬಿಭ್ಯತಾಂಮೃತ್ಯುಸಂಸಾರಾದೀಶ್ವರಸ್ಯಾಪ
ವರ್ಗಿಕಾತ್ ॥೧೨॥ನಮಃಕೃಷ್ಣಾಯಶುದ್ಧಾಯಬ್ರಹ್ಮಣೇಪರಮಾತ್ಮನೇ । ಯೋಗೇಶ್ವರಾಯಯೋಗಾ
ಯತ್ವಾಮಹಂಶರಣಂಗತಾ ॥೧೩॥ಇತ್ಯನುಸ್ಮೃತ್ಯಸ್ವಜನಂಕೃಷ್ಣಂಚಜಗದೀಶ್ವರಮ್ । ಪ್ರಾರುದ
ದ್ದುಃಖಿತಾರಾಜನ್ಭವತಾಂಪ್ರಪಿತಾಮಹೀ ॥೧೪॥ಸಮದುಃಖಸುಖೋಽಕ್ರೂರೋವಿದುರಶ್ಚಮಹಾಯ

---

ಡುವೆ, ಶೋಚಂತೀಂ-ದುಃಖಿಸುತಲಿರುವ, ಮಾಂ-ನನ್ನನ್ನೂ, ಪಿತೃಹೀನಾನ್-ತಂದೆಯಿಲ್ಲದ, ಬಾಲಕಾಂಶ್ಚ-ಹುಡುಗರನ್ನೂ, ವಾಕ್ಯೈಃ-ಮಾತುಗಳಿಂದ, ಸಾಂತ್ವಯಿಷ್ಯತಿ-ಸಮಾಧಾನಗೊಳಿಸುವನೋ? ॥೧೦॥ (ಕೃಷ್ಣಮಾಹಾತ್ಮ್ಯವನ್ನು ಕೇಳಿ ಬಲ್ಲವಳಾದ ಕುಂತಿಯು ಕೃಷ್ಣನಂ ಸ್ತುತಿಸುವಳು) ಕೃಷ್ಣ-ಜೀವಾತ್ಮರ ಅವಿದ್ಯಾಬಂಧವನ್ನು ಡುಗಿಸುವವನೇ! ಕೃಷ್ಣ-ನಾರಾಯಣನೇ! ಮಹಾಯೋಗಿನ್-ಮಹಾಯುಕ್ತ್ಯುಪಾಯಗಳುಳ್ಳವನೇ! ವಿಶ್ವಾತ್ಮನ್-ಪ್ರಪಂಚಕ್ಕಾತ್ಮನಾಗಿರುವವನೇ! ಪ್ರಪಂಚಮಯನೇ! ವಿಶ್ವಭಾವನ-ಎಲ್ಲರಿಂದಲೂ ಭಾವಿಸಲ್ಪಡುವವನೇ! ಪ್ರಪಂಚವನ್ನು ಭಾವಿಸಗೊಳಿಸುವವನೇ! ಗೋವಿಂದ-ಗೋವುಗಳಕ್ಷೇಮವಂಬಲ್ಲವನೇ! ಇಂದ್ರಿಯಗಳಿಗಗೋಚರನೇ! ಗೋಪಾಲನೇ! ಶಿಶುಭಿಶ್ಚ-ಮಕ್ಕಳೊಡನೆಯೂ, ಅವಸೀದತೀಂ-ಕಷ್ಟಪಡುತಲಿರುವಳಾದ, ಪ್ರಪನ್ನಾಂ-ನೀನೇಗತಿಯೆಂದು ನಂಬಿದವಳಾದ ನನ್ನನ್ನು, ಪಾಹಿ-ರಕ್ಷಿಸು ॥೧೧॥ ಮೃತ್ಯುಸಂಸಾರಾತ್-ಪ್ರಮಾದವೂ ಮರಣವೂಉಳ್ಳ ಸಂಸಾರವಹೆಸೆಯಿಂದ, ಬಿಭ್ಯತಾಂ-ಹೆದರುತಲಿರುವ, ನೃಣಾಂ-ಮನುಷ್ಯರಿಗೆ, ಈಶ್ವರಸ್ಯ-ಒಡೆಯನಾದ, ತವ-ನಿನ್ನ, ಅಪವರ್ಗಿಕಾತ್-ಮುಕ್ತಿಪ್ರದವಾದ, ಪದಾಂಭೋಜಾತ್-ಅಡಿದಾವರೆಗಿಂತಲೂ, ಅನ್ಯತ್-ಇತರವಾದ, ಶರಣಂ-ರಕ್ಷಕವನ್ನು; ನಪಶ್ಯಾಮಿ-ಕಾಣೆನು ॥೧೨॥ ಶುದ್ಧಾಯ-ಧರ್ಮಾತ್ಮನಾದ, ಬ್ರಹ್ಮಣೇ-ಪರಿಚ್ಛಿನ್ನನಲ್ಲದ, ಪರಮಾತ್ಮನೇ-ಜೀವಾತ್ಮರಿಗೆ ಸಖನಾದ, ಯೋಗೇಶ್ವರಾಯ-ಅಣಿಮಾದಿಸಿದ್ಧಿಗಳಿಂ ಕೂಡಿದವನಾದ, ಯೋಗಾಯ-ಜ್ಞಾನಾತ್ಮನಾದ, ಕೃಷ್ಣಾಯ-ಕೃಷ್ಣನಿಗೆ, ನಮಃ-ನಮಸ್ಕಾರವಾಗಲಿ, ತ್ವಾಂ-ನಿನ್ನನ್ನು, ಅಹಂ-ನಾನು, ಶರಣಂಗತಾ-ಶರಣುಹೊಕ್ಕವಳಾಗಿರುವೆನು ॥೧೩॥ ರಾಜನ್-ದೊರೆಯಾದ ಪರೀಕ್ಷಿತ್ತನೇ! ಭವತಾಂ-ನಿಮ್ಮ, ಪ್ರಪಿತಾಮಹೀ-ಮುತ್ತಜ್ಜಿಯಾದ ಕುಂತೀದೇವಿಯು, ಇತಿ-ಹೀಗೆ, ಸ್ವಜನಂ-ತನ್ನವರನ್ನೂ, ಜಗದೀಶ್ವರಂ-ಪ್ರಪಂಚಕ್ಕೊಡೆಯನಾದ, ಕೃಷ್ಣಂಚ-ಹರಿಯನ್ನೂ, ಅನುಸ್ಮೃತ್ಯ-ನೆನಪು ಮಾಡಿಕೊಂಡು, ದುಃಖಿತಾ-ಖೇದವುಳ್ಳವಳಾಗಿ, ಪ್ರಾರುದತ್-ಘಟ್ಟಿಯಾಗಿ ಅತ್ತಳು ॥೧೪॥ ಸಮದುಃಖಸುಖಃ-ಸಮವಾಗಿತೋ

---

ಡುವೆಸಿಕ್ಕಿ ತೋಳಗಳ ನಡುವೆ ಸಿಕ್ಕಿದ ಪುಲ್ಲೆಯಂತೆ ದುಃಖಂಗೊಂಡಿರುವ ನನ್ನನ್ನೂ, ತಂದೆ ಯಿಲ್ಲದವರಾದ ಈ ಹುಡುಗರನ್ನೂ, ಶ್ರೀಕೃಷ್ಣನುಒಳ್ಳೇಮಾತುಗಳಿಂದ ಸಮಾಧಾನ ಪಡಿಸುವನೇ ಏನು?॥೧೦॥(ಎಂದು ಕುಶಲ ಪ್ರಶ್ನೆಮಂ ಕೇಳಿ ಕುಂತಿಯು ಪರತತ್ವವಂ ತಿಳಿದವಳಾದುದರಿಂದ ಶ್ರೀಕೃಷ್ಣನಂ ಸ್ತುತಿಸಿದಳೆಂತೆನೆ-) ಎಲೈ ಮಹಾ ಯೋಗಿಯಾದ ಶ್ರೀಕೃಷ್ಣನೇ! ಸರ್ವಾತ್ಮಕನೇ! ಜಗದ್ರಕ್ಷಕನೇ! ಗೋವಿಂದನೇ! ಶರಣಾಗತಳಾಗಿ ಬಾಲಕರಾದ ಪುತ್ರರೊಡನೆ ದುಃಖಪಡುತ್ತ ಲಿರುವ ನನ್ನಂ ರಕ್ಷಿಸು ॥೧೧॥ಮೃತ್ಯುರೂಪವಾದ ಸಂಸಾರಭಯದಿಂದ ಪೀಡಿತರಾದ ಜನರಿಗೆ ಮೋಕ್ಷಪ್ರದವಾದ ನಿನ್ನ ಪಾದಪದ್ಮಮಂ ಹೊರತು ಮತ್ತೊಂದನ್ನು ನಾನು ರಕ್ಷಕವನ್ನಾಗಿ ಕಾಣುವುದಿಲ್ಲ ॥೧೨॥ಪರಮಾತ್ಮನಾದ ಯೋಗೇಶ್ವರನಾದ ಯೋಗರೂಪನಾದ ಶುದ್ಧನಾದ ಪರಬ್ರಹ್ಮನಾದ ಶ್ರೀಕೃಷ್ಣನೇ! ನಿನ್ನ ನಮಸ್ಕರಿಸುವೆನು. ನಿನ್ನನ್ನೇ ನಾನು ಮರೆಹೊಕ್ಕಿರುವೆನು ॥೧೩॥ಎಲೈ ಅರಸೇ! ಈಪ್ರಕಾರವಾಗಿ ಸ್ವಜನವಂ ಸ್ಮರಿಸಿಕೊಂಡು ಜಗದೀಶ್ವರನಾದ ಕೃಷ್ಣನಂ ಸ್ಮರಿಸಿಕೊಂಡು ದುಃಖಿತಳಾಗಿ ನಿನ್ನ ಪ್ರಪಿತಾಮಹಿಯಾದ ಕುಂತಿಯು ರೋದನಂ ಗೆಯ್ದಳು ॥೧೪॥ಸಮಗಳಾದ ಸುಖದುಃಖಂಗಳುಳ್ಳ ಮಹಾಯಶಸ್ವಿಗಳಾದ ಅಕ್ರೂರ ವಿದುರರು ಕುಂತಿಯಂ ಸಮಾಧಾನಂ ಗೆಯ್ದರೆಂತೆನೆ- ಎಲೈಕುಂತಿಯೇ!ನಿನ್ನ ಪುತ್ರರು ಸಾಕ್ಷಾದ್ಧರ್ಮಾದಿಗಳಿಂದ ಉತ್ಪನ್ನರಾದವರು, ಮಹಾ ಸಮರ್ಥರು, ನೀನು ವ್ಯಸನಪಡಬೇಡ ಎಂದು ಹೇಳಿ

ಕಾಃ । ಸಾಂತ್ವಯಾಮಾಸತುಃ ಕುಂತೀಂ ತತ್ಪುತ್ರೋತ್ಪತ್ತಿಹೇತುಭಿಃ ॥೧೫॥ ಯಾಸ್ಯನ್ರಾಜಾನಮಭ್ಯೇ
ತ್ಯವಿಷಮಂ ಪುತ್ರಲಾಲಸಂ । ಅವದತ್ಸುಹೃದಾಂ ಮಧ್ಯೇ ಬಂಧುಭಿಃ ಸೌಹೃದೋದಿತಂ ॥೧೬॥ ಅಕ್ರೂರಃ ॥
ಭೋಭೋ ವೈಚಿತ್ರವೀರ್ಯ ತ್ವಂ ಕುರೂಣಾಂ ಕೀರ್ತಿವರ್ಧನ । ಭ್ರಾತರ್ಯುಪರತೇ ಪಾಂಡಾವಧುನಾಸನಮಾ
ಸ್ಥಿತಃ ॥೧೭॥ ಧರ್ಮೇಣ ಪಾಲಯನ್ನುರ್ವೀಂ ಪ್ರಜಾಃ ಶೀಲೇನ ರಂಜಯನ್ । ವರ್ತಮಾನಸ್ಸಮಂ ಸ್ವೇಷು ಶ್ರೇ
ಯಃ ಕೀರ್ತಿಮವಾಪ್ಸ್ಯಸಿ ॥೧೮॥ ಅನ್ಯಥಾ ತ್ವಾಚರಂಲ್ಲೋಕೇ ಗರ್ಹಿತೋ ಯಾಸ್ಯಸೇ ತಮಃ । ತಸ್ಮಾತ್ಸ
ಮತ್ವೇ ವರ್ತಸ್ವ ಪಾಂಡವೇಷ್ವಾತ್ಮಜೇಷು ಚ ॥೧೯॥ ನೇಹ ಚಾತ್ಯಂತಸಂವಾಸಃ ಕಸ್ಯಚಿತ್ಕೇನಚಿತ್ಸಹ । ರಾ

---

ರುವ ದುಃಖವೂ ಸುಖವೂ ಉಳ್ಳವನಾದ, ಅಕ್ರೂರಃ-ಅಕ್ರೂರನೂ, ಮಹಾಯಶಾಃ- ಅಧಿಕಕೀರ್ತಿಯುಳ್ಳ, ವಿದುರಶ್ಚ-ವಿದುರನೂ ಕುಂತೀಂ-ಕುಂತೀದೇವಿಯನ್ನು, ತತ್ಪುತ್ರೋತ್ಪತ್ತಿಹೇತುಭಿಃ-ಆಕೆಗೆ ಮಕ್ಕಳು ಹುಟ್ಟಿದ್ದಕ್ಕೆ ಉಂಟಾದ ಕಾರಣಗಳಿಂದ, ಸಾಂತ್ವಯಾಮಾಸತುಃ-ಸಮಾಧಾನಗೊಳಿಸಿದರು ॥೧೫॥ ಯಾಸ್ಯನ್-ಹೊರಡುಬರಲೆಳಸಿದವನಾಗಿ, ಆಗ, ರಾಜಾನಂ ಅಭ್ಯೇತ್ಯ-ಧೊರೆಯಾದ, ಧೃತರಾಷ್ಟ್ರನ ಬಳಿಗೆ ಹೋಗಿ, ವಿಷಮಂ-ತಮ್ಮನ ಮಕ್ಕಳಲ್ಲಿ ಸರಿಯಲ್ಲದವನೂ, ಪುತ್ರಲಾಲಸಂ-ತನ್ನ ಮಕ್ಕಳಲ್ಲಿ ಅತಿಪ್ರೀತಿಯುಳ್ಳವನೂ ಆದ ಧೃತರಾಷ್ಟ್ರನಂ ಕುರಿತು, ಸುಹೃದಾಂ-ಮಿತ್ರರ, ಮಧ್ಯೇ-ನಡುವೆ, ಬಂಧುಭಿಃ-ನಂಟರಾದ ಯಾದವರಿಂದ, ಸೌಹೃದೋದಿತಂ-ಮಿತ್ರಭಾವದಿಂದ ಹೇಳಲ್ಪಟ್ಟಿರುವುದನ್ನು, ಅವದತ್-ಅನುವಾದಮಾಡಿ ಹೇಳಿದನು ॥೧೬॥ [ಅಕ್ರೂರವಚನವು.] ಭೋಭೋ ವೈಚಿತ್ರವೀರ್ಯ-ಎಲೈ ಎಲೈ ವಿಚಿತ್ರವೀರ್ಯನ ಮಗನೇ! ಕುರೂಣಾಂ-ಕುರುವಂಶದವರೊಳಗೆ, ಕೀರ್ತಿವರ್ಧನ-ಯಶಸ್ಸಂ ಬೆಳೆಯಿಸುವನೇ! ತ್ವಂ-ನೀನು, ಭ್ರಾತರಿ-ನಿನ್ನ ತಮ್ಮನಾದ, ಪಾಂಡೌ-ಪಾಂಡುರಾಯನು, ಉಪರತೇ ಸತಿ-ಸಾಕುಮಾಡಿಕೊಳ್ಳುತಲೂ (ವಿರಕ್ತನಾಗುತಲೂ) ಅಧುನಾ-ಈಗ, ಆಸನಂ-ಧೊರೆತನದ ಸಿಂಹಾಸನವನ್ನು, ಆಸ್ಥಿತಃ-ಪರಿಕುಳಿತವನಾಗಿರುವಿ ॥೧೭॥ ಧರ್ಮೇಣ-ವರ್ಣಾಶ್ರಮಧರ್ಮದೊಡನೆ, ಉರ್ವೀಂ-ಭೂಮಿಯನ್ನು, ಪಾಲಯನ್-ಪಾಲಿಸುವನಾಗಿಯೂ, ಪ್ರಜಾಃ-ಜನರನ್ನು, ಶೀಲೇನ-ಯೋಗ್ಯಸ್ವಭಾವದಿಂದ, ರಂಜಯನ್-ಅಕ್ಕರೆಗೊಳಿಸುವನಾಗಿಯೂ, ಸ್ವೇಷು-ತನ್ನವರಲ್ಲಿ, ಸಮಂ-ಸರಿಯಾಗಿ, ವರ್ತಮಾನಃ-ಇರುವನಾಗಿಯೂ, ಕೀರ್ತಿಂ-ಯಶಸ್ಸನ್ನು, ಅವಾಪ್ಸ್ಯಸಿ-ಹೊಂದುವಿ ॥೧೮॥ ಅನ್ಯಥಾ-ಬೇರೆಬಗೆಯಾಗಿ, ತಮಃ-ಅಂಧಂತಮೋನರಕವನ್ನು, ಯಾಸ್ಯಸೇ-ಹೊಂದಹೋಗುವಿ, ತಸ್ಮಾತ್-ಆದ್ದರಿಂದ, ಪಾಂಡವೇಷು-ಪಾಂಡುರಾಯನ ಪುತ್ರರಲ್ಲಿಯೂ, ಆತ್ಮಜೇಷು ಚ-ನಿನ್ನಿಂದ ಹುಟ್ಟಿದವರಲ್ಲಿಯೂ, ಸಮತ್ವೇ-ಸಮಭಾವದಲ್ಲಿ, ವರ್ತಸ್ವ-ಇರು ॥೧೯॥

---

ದರು ॥೧೫॥ ಅನಂತರದಲ್ಲಿ ಅಕ್ರೂರನು ಮಧುರಾಪುರಕ್ಕೆ ಹೋಗುವ ಯತ್ನವಂ ಮಾಡಿಕೊಂಡು ಧೃತರಾಷ್ಟ್ರನ ಮನೆಗೆ ಹೋಗಿ ವಿಷಮನಾಗಿ ಪುತ್ರಾಧೀನನಾದ ಧೃತರಾಷ್ಟ್ರನಂ ಕುರಿತು ಮಿತ್ರರಮಧ್ಯದಲ್ಲಿ ಬಂಧುಗಳಾದ ರಾಮಕೃಷ್ಣಾದಿಗಳಿಂ ಹೇಳಲ್ಪಟ್ಟ ಮಾತುಗಳಂ ಪೇಳಿದನು- ಅದೆಂತೆನೆ ॥೧೬॥ ಎಲೈ, ವಿಚಿತ್ರವೀರ್ಯ



ಧೃತರಾಷ್ಟ್ರಾಕ್ರೂರರು.

ಪುತ್ರನಾದ ಧೃತರಾಷ್ಟ್ರನೇ! ನೀನು ಕುರುವಂಶಸ್ಥರಾದ ಅರಸುಗಳಿಗೆ ಕೀರ್ತಿಯಂ ವೃದ್ಧಿಪಡಿಸುವವನು, ತಮ್ಮನಾದ ಪಾಂಡುರಾಯನು ಸ್ವರ್ಗಸ್ಥನಾದಮೇಲೆ ಸಿಂಹಾಸನಾರೂಢನಾದಿ ॥೧೭॥ ಧರ್ಮದಿಂದ ಭೂಮಿಯಂ ಪರಿಪಾಲಿಸುತ್ತಾ ಸಚ್ಚರಿತ್ರಂಗಳಿಂದ ಪ್ರಜೆಗಳಂ ಸಂತೋಷಪಡಿಸಿಕೊಂಡು ಸ್ವಜನರಲ್ಲಿ ಸಮದೃಷ್ಟಿಯುಳ್ಳವನಾಗಿದ್ದರೆ ಶ್ರೇಯಸ್ಸಂ ಕೀರ್ತಿಯಂ ಸಹ ಪಡೆಯುವಿ ॥೧೮॥ ಇದಕ್ಕೆ ವಿರುದ್ಧವಾಗಿ ಆಚರಿಸಿದವನಾದರೆ ಲೋಕನಿಂದಿತನಾಗಿ ತಮಸ್ಸನೆಯ್ದುವಿ, ಅದರಿಂದ ಪಾಂಡವರಲ್ಲಿಯೂ ನಿನ್ನ ಪುತ್ರರಲ್ಲಿಯೂ ಸಮಭಾವದಿಂದ ಇರುವನಾಗು ॥೧೯॥ ಲೋಕದಲ್ಲಿ ಯಾರಿಗಾದರೂ ಯಾರೊಡನೆಯಾದರೂ ನಿತ್ಯವಾದ ಸಂವಾಸವುಂಟಾಗಿ

ಜನ್ಮಪಿಸ್ವದೇಹೇನಕಿಮುಜಾಯಾತ್ಮಜಾದಿಭಿಃ ॥೨೦॥ ಏಕಃಪ್ರಸೂಯತೇಜಂತುರೇಕಏವಪ್ರಲೀಯತೇ ।
ಏಕೋನುಭುಙ್ಕ್ತೇಸುಕೃತಮೇಕಏವಚದುಷ್ಕೃತಮ್ ॥೨೧॥ಅಧರ್ಮೋಪಚಿತಂವಿತ್ತಂಹರಂತ್ಯನ್ಯೇಲ್ಪ
ಮೇಧಸಃ । ಸಂಭೋಜನೀಯಾಪದೇಶೈರ್ಜಲಾನೀವಜಲೌಕಸಃ ॥೨೨॥ ಪುಷ್ಣಾತಿಯಾನಧರ್ಮೇಣಸ್ವಬು
ದ್ಧ್ಯಾತಮಪಂಡಿತಮ್ । ತೇಕೃತಾರ್ಥಂಪ್ರಹಿಣ್ವಂತಿಪ್ರಾಣಾರಾಯಸ್ಸುತಾದಯಃ ॥೨೩॥ ಸ್ವಯಂ
ಕಿಲ್ಬಿಷಮಾದಾಯತೈಸ್ತ್ಯಕ್ತೋನಾರ್ಥಕೋವಿದಃ। ಅಸಿದ್ಧಾರ್ಥೋವಿಶತ್ಯಂಧಂಸ್ವಧರ್ಮವಿಮುಖಸ್ತ
ಮಃ ॥೨೪॥ತಸ್ಮಾಲ್ಲೋಕಮಿಮಂರಾಜನ್ಸ್ವಪ್ನಮಾಯಾಮನೋರಥಮ್ । ವೀಕ್ಷ್ಯಾಯಮ್ಯಾತ್ಮನಾ
ತ್ಮಾನಂಸಮಶ್ಶಾಂತೋಭವಪ್ರಭೋ ॥೨೫॥ಧೃತರಾಷ್ಟ್ರಃ । ಯಥಾವದತಿಕಲ್ಯಾಣೀಂವಾಚಂದಾನ

---

ಇಹಚ-ಈಲೋಕದಲ್ಲಿಯಾದರೋ, ಕಸ್ಯಚಿತ್-ಯಾರೊಬ್ಬನಿಗೂ, ಕೇನಚಿತ್‌ಸಹ-ಯಾವ ಪ್ರಾಣಿಯೊಡನೆಯೂ, ಅತ್ಯಂತಸಂ ವಾಸಃ-ಬಹಳವಾಗಿ ಚಿರಕಾಲ ಸೇರಿರುವಿಕೆ, ನ-ಇಲ್ಲವು. ರಾಜನ್-ಧೃತರಾಷ್ಟ್ರನೇ! ಸ್ವದೇಹೇನಾಪಿ-ತನ್ನ ಶರೀರದೊಡನೆ ಯಾದರೂ, ತನಗೆ ಸ್ಥಿರವಾಸವಿಲ್ಲವು. ಜಾಯಾತ್ಮಜಾದಿಭಿಃ-ಹೆಂಡಿರುಮಕ್ಕಳು ಮುಂತಾದವರೊಡನೆ, ಕಿಮು-ಚಿರಸಹವಾಸವಿಲ್ಲ ವೆಂದು ಯೇನು ಹೇಳತಕ್ಕದ್ದು? ॥೨೦॥ ಜಂತುಃ-ಪ್ರಾಣಿಯು, ಏಕಃಪ್ರಸೂಯತೇ-ಒಬ್ಬನೇ ಹೆರಲ್ಪಡುವನು, ಏಕಏವಪ್ರಲೀ ಯತೇ-ಒಬ್ಬನೇ ಸತ್ತುಹೋಗುವನು. ಏಕೋನುಭುಙ್ಕ್ತೇಸುಕೃತಂ-ಪುಣ್ಯವನ್ನು ಒಬ್ಬನೇ ಅನುಭವಿಸುವನು. ದುಷ್ಕೃತಂಚ ಏಕಏವಃ-ಪಾಪವನ್ನೂ ಒಬ್ಬನೇ ಅನುಭವಿಸುವನು. ಹೀಗಿರುವಲ್ಲಿ ॥೨೧॥ ಸಂಭೋಜನೀಯಾಪದೇಶೈಃ-ನನ್ನಿಂದ ಊಟಮಾಡಿಸ ಲ್ಪಡತಕ್ಕವರಿಗ್ಯಾರೆಂಬ ದಾರಪುತ್ರಾದಿಗಳ ನೆವದಿಂದ, ಅಲ್ಪಮೇಧಸಃ-ಮೂಢನಾದವನ, ಅಧರ್ಮೋಪಚಿತಂ-ಅನ್ಯಾಯಾ ರ್ಜಿತವಾಗಿ ಕೂಡಿಸಲ್ಪಟ್ಟದ್ದು, ವಿತ್ತಂ-ಧನವನ್ನು, ಜಲೌಕಸಃ-ಜಲಜಂತುವಿನ, ಜಲಾನಿ-ನೀರನ್ನು, ಅನ್ಯೇಇವ-ಹೆರವರು ಹೇ ಗೋಹಾಗೆ, ಪುತ್ರಾದಿಗಳು, ಹರಂತಿ-ಅಪಹರಿಸುವರು ॥೨೨॥ ಯಾನ್-ಯಾರನ್ನು, ಸ್ವಬುದ್ಧ್ಯಾ-ತನ್ನವರೆಂಬ ಬುದ್ಧಿಯಿಂದ, ಅಧರ್ಮೇಣಪುಷ್ಣಾತಿ-ಅನ್ಯಾಯಾರ್ಜಿತಧನದಿಂದ ಪೋಷಿಸುವನೋ, ತಂಅಪಂಡಿತಂ-ಆ ಮೂಢನನ್ನು, ಅಕೃತಾರ್ಥಂ- ಅನುಭವಿಸದೇ ಇರುವವನನ್ನೂ ಕೂಡ, ಪ್ರಾಣಾಃ-ಪ್ರಾಣಗಳು, ರಾಯಃ-ಧನಗಳು, ಸುತಾದಯಃ-ಪುತ್ರರು ಮೊದಲಾದವರು, ತೇ-ಇವರಿಂದ ಪೋಷಿಸಲ್ಪಟ್ಟದ್ದವರೆಲ್ಲರೂ, ಪ್ರಹಿಣ್ವಂತಿ-ಬಿಟ್ಟುಬಿಡುತಲಿರುವರು ॥೨೩॥ ಸ್ವಯಂ-ತಾನು, ಕಿಲ್ಬಿಷಮಾದಾ ಯ-ಪಾಪವನ್ನು ಕಟ್ಟಿಕೊಂಡು, ತೈಃ-ಅನ್ಯಾಯದಿಂದಲಾದರೂ ಸಂಪಾದಿಸಿದ ಧನಗಳಿಂ ತಾನು ಸಲಹಿದವರಿಂದ, ತ್ಯಕ್ತಃ- ತಾನೇ ಬಿಡಲ್ಪಟ್ಟವನಾದ, ಅನರ್ಥಕೋವಿದಃ-ಅಪ್ರಯೋಜಕಪಂಡಿತನು, ಅಸಿದ್ಧಾರ್ಥಃ-ತೆಂಬದೇ ಹೋದ ಬಯಕೆಯುಳ್ಳ ವನಾಗಿ, ಸ್ವಧರ್ಮವಿಮುಖಃ-ಸ್ವಧರ್ಮಾಚರಣವಿಲ್ಲದವನಾದ್ದರಿಂದ, ಅಂಧಂತಮಃ-ಕುರುಡುಗತ್ತಲೆಯೆಂಬ ನರಕವನ್ನು, ವಿ ಶತಿ-ಪ್ರವೇಶಿಸುವನು ॥೨೪॥ ರಾಜನ್-ಧೃತರಾಷ್ಟ್ರನೇ! ತಸ್ಮಾತ್-ಆದ್ದರಿಂದ, ಇಮಂಲೋಕಂ-ಈ ಪ್ರಪಂಚವನ್ನು, ಸ್ವಪ್ನ ಮಾಯಾಮನೋರಥಂ-ಕನಸಿನಹಾಗೂ ಇಂದ್ರಜಾಲದಹಾಗೂ ಮಿಥ್ಯಾಭೂತವಾದ ಬಯಕೆಗಳುಳ್ಳದ್ದನ್ನಾಗಿ, ವೀಕ್ಷ್ಯ-ಪರೀಕ್ಷಿ ಸಿನೋಡಿ, ಪ್ರಭೋ-ಸಮರ್ಥನಾದವನೇ। ಆತ್ಮನಾ-ಬುದ್ಧಿಯಿಂದ, ಆತ್ಮಾನಂ-ಮನಸ್ಸನ್ನು, ಆಯಮ್ಯ-ಬಿಗಿಹಿಡಿದು ನಿಗ್ರಹಿ

---

ವುದಿಲ್ಲ, ಸ್ವದೇಹವೇ ನಿತ್ಯವಲ್ಲ, ಎಲೆಅರಸೇ! ಪತ್ನೀ ಪುತ್ರಾದಿಗಳಂ ಕೇಳತಕ್ಕದ್ದೇನು॥೨೦॥ ಸ್ವಕರ್ಮವಶ ದಿಂದ ಒಬ್ಬನೇಹುಟ್ಟುವನು, ಒಬ್ಬನೇ ಮೃತನಾಗುವನು, ಒಬ್ಬನೇಸುಕೃತ ಫಲವನನುಭವಿಸುವನು, ಒಬ್ಬನೇ ಪಾಪ ಫಲವ ನನುಭವಿಸುವನು, ॥೨೧॥ದುರ್ಬುದ್ಧಿಯುಳ್ಳ ಪುರುಷನ ಅಧರ್ಮದಿಂದ ಸಂಪಾದಿತವಾದ ಧನ ಮಂ ಪುತ್ರಾದಿಗಳು "ನಾವು,ಪೋಷ್ಯರು ನಮ್ಮನ್ನು ಪೋಷಿಸಬೇಕು" ಎಂದು ಆಧನವನ್ನು ಮತ್ಸ್ಯಾದಿಗಳ ನೀರುಗಳನ್ನು ಹೇಗೋಹಾಗೆ ಅಪಹರಿಸುವರು ॥೨೨॥ಮೋಹಪಾಶ ಬದ್ಧನಾದಪುರುಷನು ಸಂಪಾದಿಸಲ್ಪಟ್ಟ ದ್ರವ್ಯದಿಂದ ಯಾರಂ ಪೋಷಿಸುವನೋ ಅವರು ಸ್ವಕಾರ್ಯವಾದ ಮೇಲೆ ಇವನು ತ್ಯಜಿಸುವರು. ಅವನ ಧ ನವೂ ಪತ್ನೀಪುತ್ರಾದಿಗಳೂ ಪ್ರಾಣಂಗಳುಸಹ ಅವನಂ ತ್ಯಾಗಂ ಗೆಯ್ವರು॥೨೩॥ಮತ್ತೆ ಯೇನೆಂದರೆ ಪಾಪಂಗ ಳಂ ಮಾಡಿ ಧನಾದಿಗಳಂ ಸಂಪಾದಿಸಿ ಸ್ವಜನರೆಂಬ ದುರ್ಬುದ್ಧಿಯಿಂದ ಅವರಿಗೆ ಕೊಟ್ಟು ತಾನು ಪಾಪಭಾಕ್ಕಾ ಗಿ ನರಕಾದಿಗಳಿಗೆ ತಾನೊಬ್ಬನೇ ಹೋಗುವನು. ಇವನಧನವನ್ನು ಅನುಭವಿಸಿದವನು ಸಂಗಡ ಹೋಗುವು ದಿಲ್ಲ॥೨೪॥ಎಲೈಅರಸಾದ ಧೃತರಾಷ್ಟ್ರನೇ! ಆದಕಾರಣದಿಂದ ಈಲೋಕವಂ ಸ್ವಪ್ನಮನೋರಥ ಛಾಯಾಪನ್ನ

ಪತೇ ಭವಾನ್ । ತಥಾನಯಾ ನ ತೃಪ್ಯಾಮಿ ಮರ್ತ್ಯಃ ಪ್ರಾಪ್ಯ ಯಥಾಮೃತಮ್ ॥೧೬॥ ತಥಾಪಿ ಸೂನೃತಾ ಸೌಮ್ಯ ಹೃದಿ ನ ಸ್ಥೀಯತೇ ಚಲೇ । ಪುತ್ರಾನುರಾಗವಿಷಮೇ ವಿದ್ಯುತ್ಸೌದಾಮನೀ ಯಥಾ ॥೧೭॥ ಈಶ್ವರಸ್ಯ ವಿಧಿಂ ಕೋ ನು ವಿಧುನೋತ್ಯನ್ಯಥಾ ಪುಮಾನ್ । ಭೂಮೇರ್ಭಾರಾವತಾರಾಯ ಯೋಽವತೀರ್ಣೋ ಯದೋಃ ಕುಲೇ ॥೧೮॥ ಯೋ ದುರ್ವಿಮರ್ಶಪಥಯಾ ನಿಜಮಾಯಯೇದಂ ಸೃಷ್ಟ್ವಾ ಗುಣಾನ್ ವಿಭಜತೇ ತದನುಪ್ರವಿಷ್ಟಃ । ತಸ್ಮೈ ನಮೋ ದುರವಬೋಧವಿಹಾರತಂತ್ರಸಂಸಾರಚಕ್ರಗತಯೇ ಪರಮೇಶ್ವರಾಯ ॥೧೯॥ ಶ್ರೀಶುಕಃ॥ ಇತ್ಯಭಿಪ್ರೇತ್ಯ ನೃಪತೇರಭಿಪ್ರಾಯಂ ಸ ಮಾಧವಃ । ಸುಹೃದ್ಭಿಃ ಸಮನುಜ್ಞಾತಃ ಪುನರ್ಯದುಪುರೀ

---

ಸಿ, ಸಮಃ-ಸರ್ವತ್ರ ಸಮಬುದ್ಧಿಯುಳ್ಳವನೂ, ಶಾಂತಃ-ರಾಗದ್ವೇಷಾದಿಗಳಿಲ್ಲದೇ ಸೌಮ್ಯನಾದವನೂ, ಭವ-ಆಗು ॥೧೫॥ [ಧೃತರಾಷ್ಟ್ರವಚನವು] ದಾನಪತೇ-ಅಕ್ರೂರನೇ! ಭವಾನ್-ನೀನು, ಯಥಾ-ಹೇಗೆ, ಕಲ್ಯಾಣೀಂವಾಚಂ-ಶುಭವಾದಮಾತನ್ನು, ವದತಿ-ಹೇಳುತ್ತಿರುವಿಯೋ, ತಥಾ-ಹಾಗೆ, ಅನಯಾ-ಈ ಮಾತಿನಿಂದ, ಮರ್ತ್ಯಃ-ಮನುಷ್ಯನು, ಅಮೃತಂಪ್ರಾಪ್ಯಯಥಾ-ಅಮೃತವನ್ನು ಹೊಂದಿಹೇಗೋ, ತಥಾ-ಹಾಗೆ, ನತೃಪ್ಯಾಮಿ-ತೃಪ್ತಿಹೊಂದದೇ ಯಿರುವೆನು ॥೧೬॥ ಸೌಮ್ಯ-ಶಾಂತಶೀಲನೇ! ತಥಾಪಿ-ಹಾಗಾದರೂ, ಸೂನೃತಾ-ಪ್ರಿಯವಾದಮಾತು, ಚಲೇ-ಚಂಚಲವಾಗಿಯೂ, ಪುತ್ರಾನುರಾಗವಿಷಮೇ-ನನ್ನ ಮಕ್ಕಳಲ್ಲಿ ಅಕ್ಕರೆಯಿಂದ ಬೇಸಿಯಾಗಿರುವ, ಹೃದಿ-ಮನಸ್ಸಿನಲ್ಲಿ, ಸೌದಾಮಿನೀ-ಸುದಾಮವೆಂಬ ಸ್ಫಟಿಕಗಿರಿಯಮೇಲೆ ಹೊಳೆದ, ವಿದ್ಯುತ್-ಮಿಂಚು, ಯಥಾ-ಹೇಗೋ, ತಥಾ-ಹಾಗೆ, ನಸ್ಥೀಯತೇ-ಸ್ಥಿರವಾಗಿ ನಿಲ್ಲುವುದಿಲ್ಲ ॥೧೭॥ ಯಃ-ಯಾವ ಕೃಷ್ಣನು, ಭೂಮೇಃ-ಭೂದೇವಿಯ, ಭಾರಾವತಾರಾಯ-ಭಾರವನ್ನಿಳಿಸಲೋಸುಗ, ಯದೋಃಕುಲೇ-ಯದುರಾಯನವಂಶದಲ್ಲಿ, ಅವತೀರ್ಣಃ-ಹುಟ್ಟಿದನೋ, ಈಶ್ವರಸ್ಯ-ಪರಮೇಶ್ವರನಾದ ಆ ಕೃಷ್ಣನ, ವಿಧಿಂ-ಆಜ್ಞೆಯಕಟ್ಟಳೆಯನ್ನು, ಕೋನುಪುಮಾನ್-ಯಾವ ಪುರುಷನುತಾನೇ, ಅನ್ಯಥಾ-ಬೇರೆಬಗೆಯಾಗಿ, ವಿಧುನೋತಿ-ಚಲಿಸಗೊಳಿಸುವನು ॥೧೮॥ ಯಃ-ಯಾವವನು, ದುರ್ವಿಮರ್ಶಪಥಯಾ-ಎಷ್ಟುಪ್ರಯಾಸದಿಂದಲಾದರೂ ವಿಚಾರಿಸಿ ತಿಳಿಯಲಸಾಧ್ಯವಾದ ದಾರಿಯುಳ್ಳ, ನಿಜಮಾಯಯಾ-ತನ್ನ ಮೋಹಶಕ್ತಿಯಿಂದ, ಇದಂ-ಈ ಜಗತ್ತನ್ನು, ಸೃಷ್ಟ್ವಾ-ಕಲ್ಪಿಸಿ, ತತ್-ಅವರಲ್ಲಿ, ಅನುಪ್ರವಿಷ್ಟಃ-ಜೀವಸಂಜ್ಞನಾಗಿಹೊಕ್ಕು ಅನುಪ್ರವೇಶಂಗೆಯ್ದು, ಗುಣಾನ್-ಪ್ರಾಕೃತಗುಣಂಗಳನ್ನು, ವಿಭಜತೇ-ದೇಹಾದ್ಯುಪಾಧಿ ಭೇದದಿಂದ ಬೇರೆಬೇರೆಯಾಗಿರುವಂತೆ ವಿಭಾಗಿಸುವನೋ, ದುರವಬೋಧವಿಹಾರತಂತ್ರಸಂಸಾರಚಕ್ರಗತಯೇ-ದುರವಬೋಧ-ತಿಳಿಯಲಶಕ್ಯವಾದ, ವಿಹಾರತಂತ್ರ-ಲೀಲಾಕಾರ್ಯವಾದ ಸಂಸಾರಚಕ್ರ-ಜನನಮರಣ ದುಃಖಪ್ರವಾಹಪರ್ಯಾಯದ, ಗತಯೇ-ಭ್ರಮಣವುಳ್ಳವನಾದ ತಸ್ಮೈಪರಮೇಶ್ವರಾಯ-ಆ ಪರಮಾತ್ಮನಿಗೆ, ನಮಃ-ನಮಸ್ಕಾರವಾಗಲಿ. (ಕುರುಡರಸಗೆ ಇಷ್ಟು ಜ್ಞಾನವು ವ್ಯಾಸನಾರದಾದಿಗಳಿಂದುಂಟಾಗಿದ್ದುದು) ॥೧೯॥ [ಶುಕವಾಕ್ಯವು] ಸಮಾಧವಃ-ಆ ಯಕ್ರೂರನು, (ಮಧುಪುರಿಯನಿವಾಸಿ) ನೃಪತೇಃ-ಧೊರೆಯ, ಅಭಿಪ್ರಾಯಂ-ಅಂತರಂಗಾಶಯವನ್ನು, ಇತಿ-ಹೀಗೆ, ಅಭಿಪ್ರೇತ್ಯ-ಅರಿತುಕೊಂಡು, ಸುಹೃದ್ಭಿಃ-ಮಿತ್ರರಿಂದ, ಸಮನುಜ್ಞಾತಸ್ಸನ್-ಒಪ್ಪಿಗೆಯಂಪಡೆದವನಾಗಿ, ಪುನಃ-ಮರಳಿಯೂ, ಯದುಪುರೀಂ-ಯಾದವರಾಜಧಾನಿಯನ್ನು ಕುರಿತು, ಅಗಾತ್-ಬಂದನು ॥೨೦॥ ಹೇ ಕೌರವ್ಯ-ಎಲೈ

---

ವನ್ನಾಗಿ ನೋಡಿ ಸ್ವಬುದ್ಧಿಯಿಂದ ಚಿತ್ತವಂ ನಿರೋಧಿಸಿ ಸರ್ವಸಮನಾಗಿ ಶಾಂತನಾಗಿರು ॥೧೫॥ ಎಂಬ ಅಕ್ರೂರನ ವಾಕ್ಯವಂ ಕೇಳಿ ಧೃತರಾಷ್ಟ್ರನು ನುಡಿದನದಂತೆನೆ- ಎಲೈ, ಅಕ್ರೂರನೇ ನೀನು ಶುಭವಾದ ಮಾತಂ ಪೇಳುವಿ, ನಾನುತೃಪ್ತನಾಗುವುದಿಲ್ಲ, ಮನುಷ್ಯನು ಅಮೃತವಂ ಪಡೆದಂತೆ ಮತ್ತೂ ನಿನ್ನ ಮಾತುಗಳಂ ಕೇಳಬೇಕೆಂಬ ಇಚ್ಛೆಯುಳ್ಳವನಾಗಿರುವೆನು ॥೧೬॥ ಎಲೈ ಸೌಮ್ಯನಾದ ಅಕ್ರೂರನೇ! ಸತ್ಯಪ್ರಿಯಮಾದ ಶುಭಕರಮಾದ ನಿನ್ನ ವಾಕ್ಕು ಪುತ್ರಾನುರಾಗದಿಂದ ವಿಷಮನಾಗಿ ಚಂಚಲನಾದ ನನ್ನ ಚಿತ್ತದಲ್ಲಿ ಸ್ಥಿರಮಾಗಿ ನಿಲ್ಲುವುದಿಲ್ಲ. ಮಿಂಚಿನಂತೆ ತಿರೋಹಿತಮಾಗುವುದು ॥೧೭॥ ಭೂಭಾರ ಪರಿಹಾರಾರ್ಥವಾಗಿ ಯದುಕುಲದಲ್ಲಿ ಅವತರಿಸಿರುವ ಭಗವಂತನ ಸಂಕಲ್ಪವಂ ಪರಿಹರಿಸುವುದಕ್ಕೆ ಯಾರುತಾನೆ ಸಮರ್ಥರು? ॥೧೮॥ ಯಾವ ಈಶ್ವರನು ತಿಳಿಯಲಶಕ್ಯಮಾದ ಮಾರ್ಗಮುಳ್ಳ ತನ್ನ ಮಾಯೆಯಿಂದ ಈ ಪ್ರಪಂಚವಂ ಸೃಷ್ಟಿಸಿ, ಆ ಜಗತ್ತಿನಲ್ಲಿ ಪ್ರವಿಷ್ಟನಾಗಿ ಗುಣಕರ್ಮಂಗಳಂ ವಿಭಾಗವಂ ಮಾಡುವನೋ; ತಿಳಿಯಲಶಕ್ಯಮಾದ ಕ್ರೀಡಾ ಪ್ರಧಾನಮಾದ ಸಂಸಾರ ಚಕ್ರಗತಿಯುಳ್ಳ ಆ ಪರಮೇಶ್ವರನಿಗೆ ನಮಸ್ಕಾರವು ॥೧೯॥ ಎಂದು ನುಡಿಯುತ್ತಲಿರುವ ಧೃತರಾಷ್ಟ್ರನ ಅಭಿಪ್ರಾಯವಂ

ಮಗಾತ್ ||೨೦|| ಶಶಂಸರಾಮಕೃಷ್ಣಾಭ್ಯಾಂಧೃತರಾಷ್ಟ್ರವಿಚೇಷ್ಟಿತಮ್ | ಪಾಂಡವಾನ್ಪ್ರತಿಕೌರವ್ಯ ಯದರ್ಥಂಪ್ರೇಷಿತಸ್ಸ್ವಯಮ್|| ||೨೧||

ಇತಿಶ್ರೀಮದ್ಭಾಗವತೆ ದಶಮಸ್ಕಂಧೆ ಏಕೋನಪಂಚಾಶತ್ತಮೋಧ್ಯಾಯಃ

ಪೂರ್ವಭಾಗಸ್ಸಮಾಪ್ತಃ



---

ಕೌರವಕುಲದಲ್ಲಿ ಹುಟ್ಟಿದಪರೀಕ್ಷಿತ್ತನೇ! ಸ್ವಯಂ-ತಾನು ಪಾಂಡವಾನ್ಪ್ರತಿ-ಪಾಂಡವರನ್ನುದ್ದೇಶಿಸಿ, ಯದರ್ಥಂ-ಯಾವ ಪ್ರಯೋಜನಕ್ಕೋಸುಗ, ಪ್ರೇಷಿತಃ-ಕಳುಹಿಸಲ್ಪಟ್ಟನೋ, ತತ್-ಆ, ಧೃತರಾಷ್ಟ್ರವಿಚೇಷ್ಟಿತಂ-ಧೃತರಾಷ್ಟ್ರನ ಕೆಡುಕನ್ನು, ರಾಮಕೃಷ್ಣಾಭ್ಯಾಂ-ರಾಮಕೃಷ್ಣರಿಗೆ. ಶಶಂಸ-ಶ್ಲಾಘಿಸಿ ಹೇಳಿದನು, ||೨೧||

ಇತಿಶ್ರೀಮದ್ಭಾಗವತೆ ದಶಮಸ್ಕಂಧೆ ಏಕೋನ ಪಂಚಾಶತ್ತಮೋಧ್ಯಾಯಃ

ಇಂತೆಂಬಲ್ಲಿಗೆ ಬ್ರಹ್ಮಶ್ರೀಮದ್ಬೆಂಗಳೂರು ಸಿದ್ಧಾಂತಿ ಸುಬ್ರಹ್ಮಣ್ಯಶಾಸ್ತ್ರಿಗಳಿಂದ ವಿರಚಿಸಲ್ಪಟ್ಟ ಶ್ರೀ ಭಾಗವತ ಪ್ರತಿಪದಟೀಕೆಯಲ್ಲಿ ದಶಮಸ್ಕಂಧದಲ್ಲಿ ಪೂರ್ವಭಾಗವು ಸಂಪೂರ್ಣವಾಯಿತು.

---

ತಿಳಿದು ಅಕ್ರೂರನು ಮಿತ್ರರಿಂದ ಅನುಜ್ಞಾತನಾಗಿ ಪುನಃ ಮಧುರಾ ಪುರಕ್ಕೆ ಬಂದನು ||೨೦|| ಪಾಂಡವರ ವಿಷಯದಲ್ಲಿರುವ ಧೃತರಾಷ್ಟ್ರನ ಚಿತ್ತವೃತ್ತಿಯಂ ರಾಮಕೃಷ್ಣರಸಂಗಡ ಅಕ್ರೂರನು ವಿಜ್ಞಾಪನಂಗೆಯ್ದನು ||೨೧||

ಇಂತು ಶ್ರೀಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸಿದನೆಂದು ಸೂತಪೌರಾಣಿಕನು ನೈಮಿಶಾರಣ್ಯವಾಸಿಗಳಾದ ಶೌನಕಾದಿ ಮಹರ್ಷಿಗಳಿಗೆ ಪೇಳಿದನೆಂಬಲ್ಲಿಗೆ-ಶ್ರೀಮನ್ಮಹೀಶೂರ ಪುರವರಾಧೀಶ ಶ್ರೀಚಾಮರಾಜ ತನುಜ ಶ್ರೀಮತ್ಕೃಷ್ಣರಾಜವಿರಚಿತಮಾದ "ಶ್ರೀಕೃಷ್ಣರಾಜ ವಾಣೀವಿಲಾಸ" ವೆಂಬ ಶ್ರೀ ಭಾಗವತ ಪುರಾಣದ ಕರ್ಣಾಟ ಭಾಷಾ ವ್ಯಾಖ್ಯಾನದಲ್ಲಿ ದಶಮಸ್ಕಂಧದೊಳು ಏಕೋನಪಂಚಾಶತ್ತಮಾಧ್ಯಾಯಂ ಸಂಪೂರ್ಣಮಾದುದು



ಜರಾಸಂಧಯುದ್ಧಯವನಾಗಮನಾದಿಕಥಾಪ್ರಾರಂಭಸಟ್ಟಃ

ಶ್ರೀಶುಕಃ॥ ಅಸ್ತಿಃಪ್ರಾಪ್ತಿಶ್ಚ ಕಂಸಸ್ಯಮಹಿಷ್ಯೌಭರತರ್ಷಭ । ಹತೇಭರ್ತರಿದುಃಖಾರ್ತೇಈಯತುಸ್ಸ್ಮಪಿತುರ್ಗೃಹಮ್ ॥೧॥ ಪಿತ್ರೇಮಗಧರಾಜಾಯಜರಾಸಂಧಾಯದುಃಖಿತೇ । ವೇದಯಾಂಚಕ್ರತುಸ್ಸರ್ವಮಾತ್ಮವೈಧವ್ಯಕಾರಣಮ್ ॥೨॥ಸತದಪ್ರಿಯಮಾಕರ್ಣ್ಯಶೋಕಾಮರ್ಷಯುತೋನೃಪ । ಅಯಾದವಾಂಮಹೀಂಕರ್ತುಂಚಕ್ರೇಪರಮಮುದ್ಯಮಮ್ ॥೩॥ಅಕ್ಷೌಹಿಣೀಭಿರ್ವಿಂಶತ್ಯಾತಿಸೃಭಿಶ್ಚಾಪಿಸಂವೃತಃ । ಯದುರಾಜಧಾನೀಂಮಥುರಾಂನ್ಯರುಣತ್ಸರ್ವತೋದಿಶಮ್ ॥೪॥ನಿರೀಕ್ಷ್ಯ ತದ್ಬಲಂಕೃಷ್ಣಉದ್ವೇಲಮಿವಸಾಗರಮ್ । ಸ್ವಪುರಂತೇನಸಂರುದ್ಧಂಸ್ವಜನಂಚಭಯಾಕುಲಮ್ ॥೫॥ಚಿಂತಯಾ

೫೦ನೆಯ ಅಧ್ಯಾಯ ಪ್ರತಿಪದಟೀಕೆ.

---

ಭರತರ್ಷಭ[ಶುಕವಾಕ್ಯವು.]ಭರತರ್ಷಭನೇ! ಕಂಸಸ್ಯ-ಕಂಸನ, ಮಹಿಷ್ಯೌ-ಪಟ್ಟವರಾಣಿಯರಾದ, ಅಸ್ತಿಃಪ್ರಾಪ್ತಿಶ್ಚ-ಅಸ್ತಿಯೆಂಬವಳೂ ಪ್ರಾಪ್ತಿಯೆಂಬವಳೂ, ಭರ್ತರಿಹತೇಸತಿ-ಗಂಡನು ಸಾಯುತಲೂ, ದುಃಖಾರ್ತೇ-ಕಷ್ಟದಿಂ ಪೀಡಿತೆಯರಾಗಿ, ಪಿತುರ್ಗೃಹಂ-ತೌರುಮನೆಯನ್ನು, ಈಯತುಃ-ಸೇರಿದರು ॥೧॥ ಮಗಧರಾಜಾಯ-ಮಗಧದೇಶಕ್ಕರಸಾದ, ಪಿತ್ರೇ-ತಂದೆಯಾದ ಜರಾಸಂಧಂಗೆ, ಆತ್ಮವೈಧವ್ಯಕಾರಣಂ-ತಮ್ಮ ಮುಂಡೆತನಕ್ಕುಂಟಾಗುವ ನಿಮಿತ್ತವನ್ನು, ದುಃಖಿತೇ-ದುಃಖವುಳ್ಳವರಾಗಿ, ವೇದಯಾಂಚಕ್ರತುಃ-ತಿಳಿಯಮಾಡಿದರು॥೨॥ನೃಪ-ಅರಸನೇ! ಸಃ-ಆಜರಾಸಂಧನು, ಅಪ್ರಿಯಂ-ಅನಿಷ್ಟವಾದ ತತ್-ಆ ವಾರ್ತೆಯನ್ನು, ಆಕರ್ಣ್ಯ-ಕೇಳಿ, ಶೋಕಾಮರ್ಷಯುತಃ-ದುಃಖದಿಂದಲೂ ಸಿಟ್ಟಿನಿಂದಲೂ ಕೂಡಿದವನಾಗಿ, ಮಹೀಂ-ಭೂಮಿಯನ್ನು, ಅಯಾದವಾಂ-ಯಾದವರೇ ಇಲ್ಲದ್ದನ್ನಾಗಿ, ಕರ್ತುಂ-ಮಾಡುವುದಕ್ಕೆ, ಪರಮಂ-ಅಧಿಕವಾದ, ಉದ್ಯಮಂ-ಉದ್ಯೋಗವನ್ನು, ಚಕ್ರೇ-ಮಾಡಿದನು ॥೩॥ ವಿಂಶತ್ಯಾ-೨೦, ತಿಸೃಭಿಶ್ಚ-೩, ಅಕ್ಷೌಹಿಣೀಭಿಃ-೨೩ ಅಕ್ಷೋಹಿಣಿಗಳ ಸೈನ್ಯದಿಂದ ಸಂವೃತಃ-ಬಳಸಲ್ಪಟ್ಟವನಾಗಿ, ಯದುರಾಜಧಾನೀಂ-ಯಾದವರಪ್ರಧಾನ ನಗರವಾದ, ಮಥುರಾಂ-ಮಥುರೆಯನ್ನು ಸರ್ವತೋದಿಶಂ-ಎಲ್ಲಕಡೆಗಳಲ್ಲಿಯೂ ನ್ಯರುಣತ್-ಮುತ್ತಿಗೆಹಾಕಿತಡೆದನ.॥೪॥ಕೃಷ್ಣಃ-ಹರಿಯು, ಉದ್ವೇಲಂ-ತಡಿಯಂ ಮೀರಿಬಂದ, ಸಾಗರಮಿವ-ಕಡಲಿನಹಾಗಿರುವ, ತದ್ಬಲಂ-ಆ ಸೈನ್ಯವನ್ನು, ತೇನ-ಅದರಿಂದ ಸಂರುದ್ಧಂ-ನಿರೋಧಿಸಲ್ಪಟ್ಟಿರುವ, ಸ್ವಪುರಂ-ತನ್ನ ನಗರವನ್ನು, ಭಯಾಕುಲಂ-ಅಂಜಿಕೆಯಿಂದ ಕಳವಳಗೊಳ್ಳುವ ಸ್ವಜನಂಚ-ತನ್ನ ಜನವನ್ನೂ, ನಿರೀಕ್ಷ್ಯ-ಚೆನ್ನಾಗಿ ನೋಡಿ ॥೫॥

* ೫೦ನೆಯ ಅಧ್ಯಾಯ. *

---

ಶ್ರೀಧರೀಯಶ್ಲೋಕಃ । ತತಃಪಂಚಾಶತ್ತಮೇತು ಜರಾಸಂಧಭಯಾದಿವ । ಕಾರಯಿತ್ವಾಂಬುಧೌ ದುರ್ಗಂ ತಂನಿನಾಯನಿಜಂ ಜನಂ ॥ ✝ ॥ಐವತ್ತನೆಯ ಅಧ್ಯಾಯದಲ್ಲಿ ಅನೇಕಾಕ್ಷೌಹಿಣೀ ಸೇನೆಗಳೊಡನೆ ಮಥುರಾಪಟ್ಟಣಕ್ಕೆ ಬಂದು ಅತ್ಯಂತೋಪದ್ರವವಂ ಮಾಡುತ್ತಲಿರುವ ಜರಾಸಂಧನ ಭಯದ ದೆಸೆಯಿಂದಲೋ ಎಂಬ ಹಾಗೆ ಸಮುದ್ರದ ಮಧ್ಯದಲ್ಲಿ ವಿಶ್ವಕರ್ಮನಿಂದ ದ್ವಾರಕಾ ನಾಮಕವಾದ ಪುರವಂ ನಿರ್ಮಾಣವಂ ಮಾಡಿಸಿ ಸ್ವಜನರಾದ ಯಾದವರನೆಲ್ಲರಂ ಆದ್ವಾರಕಾ ಪುರವನೆಯ್ದಿಸಿದನೆಂಬ ಅರ್ಥವಂ ಶ್ರೀಶುಕಮುನಿಯು ಪರೀಕ್ಷಿದ್ರಾಜನಂ ಕುರಿತು ನಿರೂಪಿಸುವನದೆಂತೆನೆ-

ಎಲೈ ಅರಸನೇ! ಕಂಸನು ಪರಲೋಕ ಯಾತ್ರೆಯಂ ಮಾಡಿದ ಮೇಲೆ ಅವನ ಪತ್ನಿಯರಾದ ಅಸ್ತಿ ಪ್ರಾಪ್ತಿಗಳೆಂಬ ಸ್ತ್ರೀಯರುಗಳು ದುಃಖಿತರಾಗಿ ತಮ್ಮತಂದೆಯಾದ ಜರಾಸಂಧನ ಮನೆಗೆಹೋಗಿ ॥೧॥ಮಗಧದೇಶಾಧಿಪತಿಯಾದ ತಂದೆಯಾದ ಜರಾಸಂಧನಂ ಕುರಿತು ತಮ್ಮವೈಧವ್ಯ ಕಾರಣವಾದ ಶ್ರೀಕೃಷ್ಣನ ವ್ಯಾಪಾರವನ್ನೆಲ್ಲವಂ ಪೇಳಿದರು॥೨॥ಜರಾಸಂಧನು ಅಪ್ರಿಯ ವಾರ್ತೆಯಂಕೇಳಿ ಶೋಕದಿಂದಲೂ ರೋಷದಿಂದಲೂ ಯುಕ್ತನಾಗಿ ಭೂಮಿಯಲ್ಲಿ ಯಾದವರೆಂಬ ಶಬ್ದವಿರದಂತೆ ಮಾಡಲೋಸುಗ ಪ್ರಯತ್ನಂಗೆಯ್ದನು ॥೩॥ ಆಜರಾಸಂಧನು ಇಪ್ಪತ್ತ ಮೂರು ಅಕ್ಷೌಹಿಣೀ ಸಂಖ್ಯೆಯುಳ್ಳ ಸೇನೆಗಳಂ ಕರೆದುಕೊಂಡು ಯಾದವರ ಆಸ್ಥಾನವಾದ ಮಥುರಾಪುರವನ್ನು ನಾಲ್ಕುದಿಕ್ಕುಗಳಲ್ಲಿ ಮುತ್ತಿಕೊಂಡನು ॥೪॥ಶ್ರೀಕೃಷ್ಣನು ಮೇರೆದಪ್ಪಿ ಬಂದ ಸಮುದ್ರದಂತಿರುವ ಆಸೇನೆಯಿಂದ ಪರಿವೃತವಾದ ಪುರವಂನೋಡಿ ಭಯಾಕುಲಿತರಾದ ಸ್ವಜನರನ್ನೂ ನೋಡಿ ॥೫॥ಲೀಲಾ-

ಮಾಸಭಗವಾನ್‌ಹರಿಃಕಾರಣಮಾನುಷಃ । ತದ್ದೇಶಕಾಲಾನುಗುಣಂಸ್ವಾವತಾರಪ್ರಯೋಜನ॥೬॥
ಹನಿಷ್ಯಾಮಿಬಲಂಹ್ಯೇತದ್ಭುವಿಭಾರಂಸಮಾಹಿತಮ್ । ಮಾಗಧೇನಸಮಾನೀತಂಪಶ್ಯತಾಂಸರ್ವಭೂಭುಜಾಮ್ ॥೭॥ ಅಕ್ಷೌಹಿಣೀಭಿಸ್ಸಂಖ್ಯಾತಂಭಟಾಶ್ವರಥಕುಂಜರೈಃ । ಮಾಗಧಸ್ತುನಹಂತವ್ಯೋಭೂಯಃಕರ್ತಾಬಲೋದ್ಯಮಮ್ ॥೮॥ಏತದರ್ಥೋವತಾರೋಯಂಭೂಭಾರಹರಣಾಯಮೇ । ಸಂರಕ್ಷಣಾಯಸಾಧೂನಾಂಕೃತೋನ್ಯೇಷಾಂವಧಾಯಚ ॥೯॥ಅನ್ಯೋಪಿಧರ್ಮರಕ್ಷಾಯೈದೇಹಸ್ಸಂಭ್ರಿಯತೇಮಯಾ । ವಿರಾಮಾಯಾಪ್ಯಧರ್ಮಸ್ಯಕಾಲೇಪ್ರಭವತಃಕ್ವಚಿತ್ ॥೧೦॥ಏವಂಧ್ಯಾಯತಿಗೋವಿಂದೇಆಕಾಶಾತ್ಸೂರ್ಯವರ್ಚಸೌ । ರಥಾವುಪಸ್ಥಿತೌಸದ್ಯಸ್ಸಸೂತೌಸಪರಿಚ್ಛದೌ ॥೧೧॥ಆಯುಧಾನಿಚದಿವ್ಯಾನಿ

---

ಕಾರಣಮಾನುಷಃ-ನಿಮಿತ್ತದಿಂದ ಮನುಷ್ಯನಾಗಿರುವ, ಭಗವಾನ್‌ಹರಿಃ-ಭಗವಂತನಾದ ಕೃಷ್ಣನು, ತದ್ದೇಶಕಾಲಾನುಗುಣಂ-ಆಸ್ಥಳಕ್ಕೂ ಸಮಯಕ್ಕೂ ತಕ್ಕದ್ದನ್ನು, ಸ್ವಾವತಾರಪ್ರಯೋಜನಂ-ತಾನು ಹುಟ್ಟಿದ್ದಕ್ಕೆ ಫಲವನ್ನು. ಚಿಂತಯಾಮಾಸ-ಯೋಚಿಸಿದನು ॥೬॥ ಭುವಿ-ಭೂಲೋಕದಲ್ಲಿ ಭಾರಂ-ಹೊರೆಯು, ಸಮಾಹಿತಂ-ಚನ್ನಾಗಿಸೇರಿಸಲ್ಪಟ್ಟಿದ್ದಾಗಿದೆ. ಹಿ-ಅಲ್ಲವೆ ಸರ್ವಭೂಭುಜಾಂ-ಎಲ್ಲಭೊರೆಗಳೂ, ಪಶ್ಯತಾಂಸತಾಂ-ನೋಡುತಲಿರುವರಾಗುತ್ತಿರಲು, ಏತದ್ಬಲಂಮಾಗಧೇನಸಮಾನೀತಂ ಜರಾಸಂಧನಿಂದ ತರಲ್ಪಟ್ಟಿರುವ ಈ ದಂಡನ್ನು, ಹನಿಷ್ಯಾಮಿ-ಕೊಲ್ಲುವೆನು ॥ ೭ ॥ ಭಟಾಶ್ವರಥಕುಂಜರೈಃ-ಕಾಲಾಳು ಕುದುರೆ ತೇರು ಆನೆಗಳೆಂಬ ಚತುರಂಗಗಳುಳ್ಳ, ಅಕ್ಷೌಹಿಣೀಭಿಃ-ದಂಡುಗಳಿಂದ, ಸಂಖ್ಯಾತಂ-ಲೆಕ್ಕಿಸಲ್ಪಟ್ಟ, ಬಲೋದ್ಯಮಂ ದಂಡನ್ನು ತರುವ ಉದ್ಯೋಗವನ್ನು, ಭೂಯಃ-ಮರಳಿಯು, ಕರ್ತಾ-ಮಾಡುವನಾಗಲಿ ಆದ್ದರಿಂದ ಮಾಗಧಸ್ತು-ಜರಾಸಂಧನಾದರೋ, ನಹಂತವ್ಯಃ-ಕೊಲ್ಲಲ್ಪಡತಕ್ಕವನಲ್ಲವು. (೨೧೮೭೦ ಆನೆಗಳೂ, ೨೧೮೭೦ ರಥಗಳೂ. ೬೫೬೧೦ ಕುದುರೆಗಳೂ, ೧೦೯೩೫೦ ಕಾಲಾಳು, ಅಂತು ೨೧೮೭೦೦ ಪ್ರಾಣಿಗಳಿರುವ ಸೈನ್ಯಕ್ಕೆ ಅಕ್ಷೌಹಿಣಿಯೆಂದು ಹೆಸರು) ॥೮॥ ಮೇ-ನನ್ನ, ಅಯಮವತಾರಃ-ಈ ಕೃಷ್ಣಾವತಾರವು, ಭೂಭಾರಹರಣಾಯ-ಭೂಮಿಯ ಭಾರವಂ ಹರಿಸಲೋಸುಗವೂ, ಸಾಧೂನಾಂರಕ್ಷಣಾಯ-ಸತ್ಪುರುಷರ ಪಾಲನಕ್ಕೋಸುಗವೂ, ಅನ್ಯೇಷಾಂ-ಇತರರಾದ ದುಷ್ಟರ, ವಧಾಯಚ- ಸಂಹಾರಕ್ಕೋಸುಗವೂ. ಏತದರ್ಥಃ-ಇದೇಪ್ರಯೋಜನವುಳ್ಳದ್ದಾಗಿ, ಕೃತಃ-ಮಾಡಲ್ಪಟ್ಟಿದೆ॥೯॥ಕ್ವಚಿತ್ಕಾಲೇ -ಒಂದಾನೊಂದು ಸಮಯದಲ್ಲಿ ಪ್ರಭವತಃ-ಪ್ರಬಲಿಸುತಲಿರುವ ಅಧರ್ಮಸ್ಯ-ಪಾಪದ, ವಿರಾಮಾಯ-ಶಾಂತಿಗೋಸುಗವೂ ಧರ್ಮರಕ್ಷಾಯೈಚ- ಧರ್ಮದರಕ್ಷಣಕ್ಕೋಸುಗವೂ ಅನ್ಯಃ-ಇತರವಾದ,ದೇಹೋಪಿ-ಅವತಾರವೂಕೂಡ,ಮಯಾ- ನನ್ನಿಂದ,ಸಂಭ್ರಿಯತೇಹಿ-ಧರಿಸಲ್ಪಡುವುದಲ್ಲವೆ॥೧೦॥ಗೋವಿಂದೇ-ಕೃಷ್ಣನು, ಏವಂ-ಹೀಗೆ, ಧ್ಯಾಯತಿಸತಿ-ಆಲೋಚಿಸುವನಾಗುತ್ತಿರಲು ,ಆಕಾಶಾತ್-ಅಂತರಿಕ್ಷದಿಂದ, ಸೂರ್ಯವರ್ಚಸೌ-ಸೂರ್ಯನಹಾಗೆಬೆಳಕುಳ್ಳವು ಸಸೂತೌ-ಸಾರಥಿಗಳಿಂಸಹಿತವಾದವು ಸಪರಿಚ್ಛದೌ-ಪರಿಕರಗಳಿಂಸಹಿತವಾದವೂ ಆದ,ರಥೌ-ತೇರುಗಳೆರಡು, ಸದ್ಯಃ-ಆಗಲೇ,ಉಪಸ್ಥಿತೌ-ಹತ್ತಿರಕ್ಕೆಬಂದುನಿಂತವು ॥೧೧॥ ದಿವ್ಯಾನಿ-ಬೆಳಗುತಲಿರುವ ಪುರಾಣಾನಿ-ಪುರಾತನಂಗಳಾದ,ಯದೃಚ್ಛಯಾ-ಆಗತಾನೆತಾನಾಗಿಬಂದ, ತಾನಿಆಯುಧಾನಿಚ-ಆಶಸ್ತ್ರಗಳನ್ನೂ,ದೃಷ್ಟ್ವಾ-ನೋಡಿ ಹೃಷೀಕೇ

---

ಮಾನುಷನಾದ ಭಗವಂತನಾದ ಶ್ರೀಕೃಷ್ಣನು ಆಕಾಲಕ್ಕೂ ಆದೇಶಕ್ಕೂ ಅನುಗುಣವಾದ ತನ್ನ ಅವತಾರದ ಪ್ರಯೋಜನವನ್ನು ಆಲೋಚಿಸಿದನು- ಎಂತೆಂದರೆ,- ॥೬॥ಜರಾಸಂಧನಿಂದ ತರಲ್ಪಟ್ಟ ಈಸೇನೆಯು ಭೂಭಾರವಾದುದರಿಂದ ಸಮಸ್ತ ಕ್ಷತ್ರಿಯರೂ ನೋಡುತ್ತಿರಲಾಗಿ ಅನೇಕಾಕ್ಷೌಹಿಣೀ ಸಂಖ್ಯಾತಮಾದ ಈಸೇನೆಯಂ ಮಾತ್ರವೆ ಈಗಸಂಹರಿಸುವೆನು ॥೭॥ಈಜರಾಸಂಧ ನನ್ನೀಗ ಸಂಹರಿಸುವುದಿಲ್ಲ. ಇವನು ಜೀವಂತನಾಗಿದ್ದರೆ ಕಾಲಾಳು ಕುದುರೆ ಆನೆ ತೇರುಗಳಿಂದ ಕೂಡಿದ ಇನ್ನೂ ಬಹು ಸೇನೆಗಳಂ ಸೇರಿಸುವನು, ಅದನ್ನೂ ಸಂಹರಿಸಿ ಭೂಭಾರವಂ ಪರಿಹರಿಸಬೇಕು ॥೮॥ ಈಭೂಭಾರ ಪರಿಹಾರಾರ್ಥವಾಗಿಯೇ ನಾನು ಅವತರಿಸಿರುವೆನು. ದುಷ್ಟನಿಗ್ರಹವಂ ಮಾಡಿ ಸತ್ಪುರುಷರು ರಕ್ಷಿಸಲೋಸುಗವೂ ನನ್ನ ಅವತಾರವು ॥೯॥ಧರ್ಮ ಸಂಸ್ಥಾಪನಕ್ಕೋಸುಗವು ಅಧರ್ಮವಂ ನಿಗ್ರಹಿಸುವುದಕ್ಕೋಸುಗವುಂ ನಾನು ಅವತರಿಸಿರುವೆನು ॥೧೦॥ಎಂದು ಶ್ರೀಕೃಷ್ಣನು ಚಿಂತಿಸುತ್ತಿರಲಾಗಿ, ಸಾರಥಿ ಸಮೇತಂಗಳಾಗಿ ಯುದ್ಧಸಾಧನಂಗಳಿಂದಲೂ ಯುಕ್ತಮಾದ ಸೂರ್ಯನಂತೆಬೆಳಗುವ ಎರಡು ತೇರುಗಳು ಆಕಾಶದಿಂದ ಬಂದಿಳಿದವು ॥೧೧॥ಪುರಾತನಂಗಳೂ ದಿವ್ಯಂಗಳೂ ಆದ ಆಯುಧಂಗ

ಪುರಾಣಾನಿಯದೃಚ್ಛಯಾ । ದೃಷ್ಟ್ವಾತಾನಿಹೃಷೀಕೇಶಸ್ಸಂಕರ್ಷಣಮಥಾಬ್ರವೀತ್॥೧೨॥ಪಶ್ಯಾದ್ಯವ್ಯಸನಂಪ್ರಾಪ್ತಂಯದೂನಾಂತ್ವಾವತಾಂಪ್ರಭೋ । ಏಷತೇರಥಆಯಾತೋದಯಿತಾನ್ಯಾಯುಧಾನಿಚ॥೧೩॥ಯಾನಮಾಸ್ಥಾಯಜಹ್ಯೇತದ್ವ್ಯಸನಾತ್ಸ್ವಾನ್‌ಸಮುದ್ಧರ । ಏತದರ್ಥಂಹಿನೌಜನ್ಮಸಾಧೂನಾಮೀಶಶರ್ಮಕೃತ್ ॥ ತ್ರಯೋವಿಂಶತ್ಯನೀಕಾಖ್ಯಂಭೂಮೇರ್ಭಾರಮಪಾಕುರು ॥೧೪॥ ಏವಂಸಮ್ಮಂತ್ರ್ಯ ದಾಶಾರ್ಹೌದಂಶಿತೌರಥಿನೌಪುರಾತ್। ನಿರ್ಜಗ್ಮತುಸ್ಸ್ವಾಯುಧಾಢ್ಯೌಬಲೇನಾಲ್ಪೀಯಸಾವೃತೌ॥೧೫॥ಶಂಖಂದಧ್ಮೌವಿನಿರ್ಗಮ್ಯಹರಿರ್ದಾರುಕಸಾರಥಿಃ । ತತೋಭೂತ್ಪರಸೈನ್ಯಾನಾಂಹೃದಿವಿತ್ರಾಸವೇಪಥುಃ ॥೧೬॥ತಾವಾಹಮಾಗಧೋವೀಕ್ಷ್ಯಹೇಕೃಷ್ಣಪುರುಷಾಧಮ ।ಗುಪ್ತನಚತ್ವಯಾಮಂದನಯೋತ್ಸ್ಯೇಯಾಹಿಬಂಧುಹನ್॥ ನತ್ವಯಾಯೋದ್ಧುಮಿಚ್ಛಾಮಿಬಾಲಕೇನೇಹಲಜ್ಜಯಾ॥೧೭॥

---

ಶಃ-ಕೃಷ್ಣನು. ಅಥ-ಆಮೇಲೆ ಸಂಕರ್ಷಣಂ-ಬಲರಾಮನಂಕುರಿತು ಅಬ್ರವೀತ್-ನುಡಿದನು॥ ೧೨॥ಪ್ರಭೋ-ಸಮರ್ಥನಾದಅಣ್ಣನೇ! ತ್ವಾವತಾಂ-ನೀನೇ ಪಾಲಕನಾಗಿಉಳ್ಳ, ಯದೂನಾಂ-ಯದುಕುಲದವರಿಗೆ, ಅದ್ಯ-ಈಗ ಪ್ರಾಪ್ತಂ-ಪಡೆಯಲ್ಪಟ್ಟಿರುವ, ವ್ಯಸನಂ ಚಿಂತೆಯನ್ನು ಕಷ್ಟವನ್ನು, ಪಶ್ಯ-ನೋಡು ತೇ-ನಿನಗೋಸ್ಕರ, ಏಷರಥಃ-ಈಬಂಡಿಯೂ ದಯಿತಾನಿ-ಪ್ರಿಯಗಳಾದ ಆಯುಧಾನಿಚ-ಅಸ್ತ್ರಶಸ್ತ್ರಗಳೂಕೂಡ, ಆಯಾತಃ- ಬಂದಿರುವುವು॥೧೩॥ಯಾನಂ-ವಾಹನವನ್ನು, ಆಸ್ಥಾಯ-ಏರಿಕೊಂಡು ಏತತ್-ಈ ಶತ್ರುಸೈನ್ಯವನ್ನು, ಜಹಿ- ಗೆಲ್ಲು ವ್ಯಸನಾತ್-ಸಂಕಟದದೆಸೆಯಿಂದ ಸ್ವಾನ್-ತನ್ನ ಜನರನ್ನು, ಸಮುದ್ಧರ-ಉದ್ಧರಿಸು ಸಾಧೂನಾಂ-ಸತ್ಪುರುಷರಿಗೆ, ಶರ್ಮಕೃತ್-ಸುಖವನ್ನುಮಾಡುವನಾದ ಈಶ-ಒಡೆಯನೇ! ನೌ-ನಮ್ಮ, ಜನ್ಮ-ಅವತಾರವು ಏತದರ್ಥಂಹಿ-ಇದಕ್ಕೋಸುಗವೇ ಅಲ್ಲವೆ, ತ್ರಯೋವಿಂಶತ್ಯನೀಕಾಖ್ಯಂ-೨೩ಅಕ್ಷೌಹಿಣಿಗಳಸೈನ್ಯವೆಂಬಹೆಸರುಳ್ಳ ಭೂಮೇರ್ಭಾರಂ-ಭೂಮಿಯಹೊರೆಯನ್ನು, ಅಪಾಕುರು-ಇಲ್ಲವಂತೆಮಾಡು॥೧೪॥ದಾಶಾರ್ಹೌ-ದಶಾರ್ಹಕುಲದಲ್ಲಿ ಹುಟ್ಟಿದರಾಮಕೃಷ್ಣರು, ಏವಂ-ಹೀಗೆ, ಸಮ್ಮಂತ್ರ್ಯ-ಆಲೋಚಿಸಿಕೊಂಡು ದಂಶಿತೌ-ಕವಚಸಹಿತರಾಗಿ, ರಥಿನೌ- ರಥವುಳ್ಳವರೂ, ಸ್ವಾಯುಧಾಢ್ಯೌ-ಉತ್ತಮಾಯುಧಗಳಿಂ ಸಂಪನ್ನರೂ ಅಲ್ಪೀಯಸಾಬಲೇನ-ಕೊಂಚದಂಡಿನಿಂದ ವೃತೌ-ಬಳಸಲ್ಪಟ್ಟವರೂಆಗಿ, ಪುರಾತ್-ಮಥುರಾನಗರದದೆಸೆಯಿಂದ, ನಿರ್ಜಗ್ಮತುಃ-ಹೊರಗೆಹೊರಟರು॥೧೫॥ದಾರುಕಸಾರಥಿಃ-ದಾರುಕನೇಬಂಡಿಯನ್ನ ಹೊಡೆಯಿಸುವವನಾಗಿವುಳ್ಳ, ಹರಿಃ-ಕೃಷ್ಣನು, ವಿನಿರ್ಗಮ್ಯ-ಹೊರಗೆಬಂದು ಶಂಖಂ-ಪಾಂಚಜನ್ಯವನ್ನು, ದಧ್ಮೌ-ಊದಿದನು ತತಃ- ಆ ಶಂಖಧ್ವನಿಯಿಂದ, ಪರಸೈನ್ಯಾನಾಂ-ಶತ್ರುಗಳದಂಡಿನವರ, ಹೃದಿ-ಮನಸ್ಸಿನಲ್ಲಿ, ವಿತ್ರಾಸವೇಪಥುಃ-ಹೆದರಿಕೆಯೂ ನಡುಕವೂ, ಅಭೂತ್-ಆಯಿತು ॥೧೬॥ ಮಾಗಧಃ-ಜರಾಸಂಧನು, ತೌವೀಕ್ಷ್ಯ-ಆ ರಾಮಕೃಷ್ಣರಂನೋಡಿ, ಪುರುಷಾಧಮ-ಮನುಷ್ಯರಲ್ಲಿ ನಿಕೃಷ್ಟನೇ ಕೃಷ್ಣನೇ! ಬಂಧುಹನ್-ನಂಟನಂಕೊಂದವನೇ! ಗುಪ್ತೇನ-ಗೋಕುಲದಲ್ಲಿ ಅಡಗಿದ್ದವನಾದ, ತ್ವಯಾ-ನಿನ್ನೊಡನೆ, ನಯೋತ್ಸ್ಯೇ-ಜಗಳಮಾಡಲಾರೆನು? ಮಂದ-ಮೂಢನೇ! ಯಾಹಿ-ಹೋಗು, (ಪಾಠಾಂತರ-ಬಾಲಕೇನ-ಹುಡುಗನಾದ ತ್ವಯಾ-ನಿನ್ನೊಡನೆ, ಯೋದ್ಧುಂ-ಕಾಳಗಮಾಡುವುದಕ್ಕೆ, ಇಹ-ಇಲ್ಲಿ. ಲಜ್ಜಯಾ-ನಾಚಿಕೆಯಿಂದ, ನೇಚ್ಛಾಮಿ-ಬಯಸೆನು) ॥೧೭॥ ರಾ

---

ಳೂ ತಾವಾಗಿ ಬಂದವು. ಅವುಗಳಂ ನೋಡಿ ಶ್ರೀಕೃಷ್ಣನು ಬಲರಾಮನಂ ಕುರಿತು ನುಡಿದನು ॥೧೨॥ ಎಲೈ ಅಣ್ಣನಾದ ಬಲರಾಮನೇ! ನಿನ್ನನ್ನೇ ನಂಬಿರುವ ಯಾದವರಿಗೆ ವ್ಯಸನವಂ ನೋಡಿದೆಯಾ? ಈರಥವೂ ಉತ್ತಮಂಗಳಾದ ಆಯುಧಂಗಳೂ ಸಹ ನಿನಗೆ ಬಂದಿರುವವು॥೧೩॥ಈರಥವ ನೇರಿಕೊಂಡು ಈಸೇನೆಯಂ ಸಂಹರಿಸು ಯಾದವರಂ ಉದ್ಧಾರವಂ ಮಾಡು; ಸಾಧುಗಳಿಗೆ ಸುಖಕರನಾದ ಬಲರಾಮನೇ! ಇದಕ್ಕೋಸುಗ ನಮ್ಮ ಅವತಾರವಲ್ಲವೆ? ಇಪ್ಪತ್ತುಮೂರು ಅಕ್ಷೌಹಿಣೀ ಸಂಖ್ಯಾಕವಾದ ಸೇನಾರೂಪವಾದ ಭೂಭಾರವಂ ಪರಿಹರಿಸು॥೧೪॥ ಎಂದು ರಾಮಕೃಷ್ಣರು ಆಲೋಚಿಸಿ ಕವಚಂಗಳಂ ಧರಿಸಿ ರಥಾರೂಢರಾಗಿ ಆಯುಧಂಗಳಂ ಧರಿಸಿಕೊಂಡು ಸ್ವಲ್ಪ ಸೇನೆಯಂ ತೆಗೆದುಕೊಂಡು ಪುರದಿಂದ ಹೊರಟರು ॥೧೫॥ದಾರುಕನೇ ಸಾರಥಿಯಾಗುಳ್ಳ ಶ್ರೀಕೃಷ್ಣನು ಹೊರಟು ಶಂಖ ಧ್ವನಿಯಂ ಗೆಯ್ದನು. ಆಶಂಖದ ಮಹಾ ಧ್ವನಿಯಿಂದ ಶತ್ರುಸೇನೆಗಳಲ್ಲಿ ಮಹಾ ಭಯದಿಂದ ಕಂಪವೂ ಚಿಂತೆಯೂ ಉಂಟಾಯಿತು॥೧೬॥ಜರಾಸಂಧನು ರಾಮ ಕೃಷ್ಣರಂ ನೋಡಿ ನುಡಿಯುವನು-ಅದೆಂತೆನೆ ಎಲೈ ಪುರುಷಾಧಮನಾದ ಕೃಷ್ಣನೇ! ಬಾಲಕನಾದ ನಿನ್ನೊಡನೆ ನಾನು ಲಜ್ಜೆಯಿಂದ ಯುದ್ಧವಂ ಮಾಡುವುದಿಲ್ಲ. ಮೂಢಬುದ್ಧಿಯುಳ್ಳವನೇ! ಗೋಪಾಲಕನಾದ ನಿನ್ನೊಡನೆ ನಾನು ಹೇಗೆ ಯುದ್ಧವಂ ಮಾಡಲಿ? ನೀ

ತ್ವಂತು ರಾಮ ಯದಿ ಶ್ರದ್ಧಾ ಯುಧ್ಯಸ್ವ ಧೈರ್ಯಮುದ್ವಹ। ಹಿತ್ವಾ ವಾ ಮಚ್ಛರೈಶ್ಛಿನ್ನಂ ದೇಹಂ ಸ್ವರ್ಯಾಹಿ ಮಾಂ ಜಹಿ ॥೧೮॥ ಶ್ರೀಭಗವಾನ್ ॥ ನ ವೈ ಶೂರಾ ವಿಕತ್ಥಂತೇ ದರ್ಶಯಂತ್ಯೇವ ಪೌರುಷಮ್ । ನ ಗೃಹ್ಣೀಮೋ ವಚೋ ರಾಜನ್ನಾತುರಸ್ಯ ಮುಮೂರ್ಷತಃ ॥೧೯॥ ಜರಾಸುತಸ್ತಾವಭಿಸೃತ್ಯ ಮಾಧವೌ ಮಹಾಬಲೌಘೇನ ಬಲೀಯಸಾವೃಣೋತ್ । ಸಸೈನ್ಯಯಾನಧ್ವಜವಾಜಿಸಾರಥೀ ಸೂರ್ಯಾನಲೌ ವಾಯುರಿವಾಭ್ರರೇಣುಭಿಃ ॥೨೦॥ ಸುಪರ್ಣತಾಳಧ್ವಜಚಿಹ್ನಿತೌ ರಥಾವಲಕ್ಷಯಂತ್ಯೋ ಹರಿರಾಮಯೋರ್ಮೃಧೇ । ಸ್ತ್ರಿಯಃ ಪುರಾಟ್ಟಾಲಕಹರ್ಮ್ಯಗೋಪುರಂ ಸಮಾಶ್ರಿತಾಸ್ಸಂಮುಮುಹುಃ ಶುಚಾರ್ಪಿತಾಃ ॥೨೧॥ ಹರಿಃ ಪರಾನೀಕಪಯೋಮುಚಾಂ ಮುಹುಃ ಶಿಲೀಮುಖಾತ್ಯುಲ್ಬಣವರ್ಷಪೀಡಿತಮ್ । ಸ್ವಸೈನ್ಯಮಾಲೋಕ್ಯ ಸುರಾಸುರಾರ್ಚಿತಂ ವ್ಯಸ್ಫೂರ್ಜಯಚ್ಛಾರ್ಙ್ಗಶರಾಸನೋತ್ತಮಮ್ ॥೨೨॥ ಗೃಹ್ಣನ್ನಿಷಂಗಾದಥ ಸಂದ

---

ಮ-ಬಲರಾಮನೇ! ತ್ವಂತು-ನೀನಾದರೋ, ಶ್ರದ್ಧಾಯದಿ-ಸ್ಥಿರಬುದ್ಧಿಯಿದ್ದರೆ, ಯುಧ್ಯಸ್ವ-ಜಗಳಮಾಡು, ಧೈರ್ಯಂ-ಅಚಾಂಚಲ್ಯವನ್ನು, ಉದ್ವಹ-ವಹಿಸು, ಮಚ್ಛರೈಃ-ನನ್ನ ಬಾಣಗಳಿಂದ, ಛಿನ್ನಂ-ಕತ್ತರಿಸಲ್ಪಟ್ಟ, ದೇಹಂ-ಶರೀರವನ್ನು, ಹಿತ್ವಾ-ಬಿಟ್ಟು, ಸ್ವಃ-ವೀರಸ್ವರ್ಗಕ್ಕೆ, ಯಾಹಿ-ಹೋಗು. ಮಾಂವಾ-ನನ್ನನ್ನಾದರೂ. ಜಹಿ-ಕೊಲ್ಲು ॥೧೮॥ [ಕೃಷ್ಣವಾಕ್ಯವು.] ಶೂರಾಃ-ವೀರರು, ನವಿಕತ್ಥಂತೇ-ವ್ಯರ್ಥವಾಗಿ ಪೌರುಷವನ್ನು ಹೇಳಿಕೊಳ್ಳುವುದಿಲ್ಲ. ಪೌರುಷಂ-ಪುರುಷಸಾಮರ್ಥ್ಯವನ್ನು, ದರ್ಶಯಂತ್ಯೇವ-ತೋರಿಸುತಲೇ ಯಿರುವರು, ರಾಜನ್-ಧೊರೆಯೇ! ಆತುರಸ್ಯ-ಅವಸರಗಾರನ, ಮುಮೂರ್ಷತಃ-ಸಾಯಲೆಳಸುವವನ, ವಚಃ-ಮಾತನ್ನು, ನಗೃಹ್ಣೀಮಃ-ನಾವು ಗ್ರಹಿಸುವುದಿಲ್ಲ ॥೧೯॥ ಜರಾಸುತಃ-ಜರೆಯಮಗನು, ತೌಮಾಧವೌ-ಆ ರಾಮಕೃಷ್ಣರನ್ನು, ಅಭಿಸೃತ್ಯ-ಇದಿರಿಸಿ, ಬಲೀಯಸಾ-ಬಲವತ್ತರವಾದ, ಮಹಾಬಲೌಘೇನ-ದೊಡ್ಡದಂಡಿನ ಗುಂಪಿನಿಂದ, ಸಸೈನ್ಯಯಾನಧ್ವಜವಾಜಿಸಾರಥೀ-ದಂಡು ವಾಹನ ಬಾವುಟೆ ಕುದುರೆ ಸಾರಥಿಗಳಿಂ ಸಹಿತನಾಗಿ, ವಾಯುಃ-ಗಾಳಿಯು, ಅಭ್ರರೇಣುಭಿಃ-ಮೇಘಗಳಿಂದಲೂ ಶಕಲಗಳಿಂದಲೂ, ಸೂರ್ಯಾನಲೌ-ಕ್ರಮವಾಗಿ ಸೂರ್ಯಾಗ್ನಿಗಳನ್ನು ಹೇಗೋಹಾಗೆ, ಅವೃಣೋತ್-ಮುತ್ತಿದನು ॥೨೦॥ ಸುಪರ್ಣತಾಳಧ್ವಜಚಿಹ್ನಿತೌ-ಗರುಡನವಳಿವಿನೆ ತಾಳವೃಕ್ಷದವಳಿವಿಗೆಗಳಿಂದ ಗುರುತುಮಾಡಲ್ಪಟ್ಟವುಗಳಾದ, ಹರಿರಾಮಯೋಃ-ಕೃಷ್ಣರಾಮರ, ರಥೌ-ತೇರುಗಳನ್ನು, ಮೃಧೇ ಯುದ್ಧದಲ್ಲಿ, ಅಲಕ್ಷಯಂತ್ಯಃ-ಕಾಣದೇಯಿರುವ, ಸ್ತ್ರಿಯಃ-ಹೆಂಗಸು, ಪುರಾಟ್ಟಾಲಕಹರ್ಮ್ಯಗೋಪುರಂ-ಪುರ-ಪಟ್ಟಣದ, ಅಟ್ಟಾಲಕ-ಮಂಚಿಗೆ, ಹರ್ಮ್ಯ-ಧನವಂತರ ಉಪ್ಪರಿಗೆ, ಗೋಪುರಂ ಊರಬಾಗಿಲುಗಳನ್ನು, ಸಮಾಶ್ರಿತಾಃ-ಏರಿದವರಾಗಿ, ಶುಚಾರ್ಪಿತಾಃ-ದುಃಖದಿಂದ ಕೂಡಿದವರಾಗಿ, ಸಂಮುಮುಹುಃ-ಮೋಹವನ್ನೈದಿದರು ॥೨೧॥ ಹರಿಃ-ಕೃಷ್ಣನು, ಪರಾನೀಕಪಯೋಮುಚಾಂ-ಶತ್ರುಸೈನ್ಯಗಳೆಂಬ ಮೇಘಗಳ, ಶಿಲೀಮುಖಾತ್ಯುಲ್ಬಣವರ್ಷಪೀಡಿತಂ- ಬಾಣಗಳೆಂಬ ಅತಿವೃಷ್ಟಿಯಿಂದ ಬಾಧಿಸಲ್ಪಟ್ಟಿರುವ, ಸ್ವಸೈನ್ಯಂ-ತನ್ನ ದಂಡವನ್ನು, ಆಲೋಕ್ಯ-ನೋಡಿ, ಸುರಾಸುರಾರ್ಚಿತಂ-ದೇವರ್ಕಳಿಂದಲೂ ದೈತ್ಯರಿಂದಲೂ ಪೂಜಿಸಲ್ಪಟ್ಟ, ಶಾರ್ಙ್ಗಶರಾಸನೋತ್ತಮಂ-ಶಾ

---

ನು ಸ್ವಜನರಂ ಸಂಹರಿಸು ಹೋಗು ॥೧೭॥ ಎಲೈ ಬಲರಾಮನೇ! ನಿನಗೆ ಶ್ರದ್ಧೆಯಿದ್ದರೆ ಯುದ್ಧಮಂ ಮಾಡು. ಧೈರ್ಯವ ನವಲಂಬಿಸು ನನ್ನ ಬಾಣಂಗಳಿಂ ಛೇದಿಸಲ್ಪಟ್ಟ ದೇಹಮಂ ಬಿಟ್ಟು ಸ್ವರ್ಗಕ್ಕೆ ಹೋಗು. ಇಲ್ಲದಿದ್ದರೆ ನನ್ನ ನಾದರೂ ಸಂಹರಿಸು ॥೧೮॥ ಎಂಬ ಜರಾಸಂಧನ ವಾಕ್ಯಮಂ ಕೇಳಿ ಭಗವಂತನು ನುಡಿದನು-ಎಲೈ ಜರಾಸಂಧನೇ! ಎಲೈ ಜರಾಸಂಧನೇ! ಶೂರರಾದವರು ಆತ್ಮಪೌರುಷಮಂ ಹೇಳಿಕೊಳ್ಳುವುದಿಲ್ಲ, ಪರಾಕ್ರಮವನ್ನೇ ತೋರಿಸುವರು. ಭಯದಿಂ ಪೀಡಿತನಾದ ನಿನ್ನ ಮಾತಂ ನಾವು ಗ್ರಹಿಸುವುದಿಲ್ಲ ॥೧೯॥ ಎಂಬ ಕೃಷ್ಣನ ವಾಕ್ಯಮಂ ಕೇಳಿ ಜರಾಸಂಧನು ಮಹಾಬಲಿಷ್ಠಮಾದ ಸೇನಾ ಸಮೂಹದೊಡನೆ ರಾಮಕೃಷ್ಣರನೆಯ್ದಿ ರಥಂಗಳಿಂದಲೂ ಗಜಂಗಳಿಂದಲೂ ತುರಗಂಗಳಿಂದಲೂ ಪಾದಚಾರಿಗಳಿಂದಲೂ ಯುಕ್ತನಾಗಿ ಸೂರ್ಯಾಗ್ನಿಗಳಂ ವಾಯುಮೇಘಂಗಳಿಂದಲೂ ಭೂರೇಣುಗಳಿಂದಲೂ ಮುಚ್ಚಿದಂತೆ ಮುತ್ತಿಕೊಂಡರು ॥೨೦॥ ಗರುಡಧ್ವಜದಿಂದಲೂ ತಾಳಧ್ವಜದಿಂದಲೂ ಅಂಕಿತಂಗಳಾದ ಕೃಷ್ಣರಾಮರ ರಥಂಗಳಂ ನೋಡುತ್ತಿರುವ ಪುರಸ್ತ್ರೀಯರುಗಳು ಗೋಪುರಂಗಳಲ್ಲಿಯೂ ಉಪ್ಪರಿಗಗಳಲ್ಲಿಯೂ ಮಾಳಿಗೆಗಳಲ್ಲಿಯೂ ಹತ್ತಿದವರಾಗಿ ನೋಡುತ ಶೋಕಪಟ್ಟರು ॥೨೧॥ ಶ್ರೀಕೃಷ್ಣನು ಶತ್ರುಸೈನ್ಯಂಗಳೆಂಬ ಮೇಘಂಗಳಿಂದ ವರ್ಷಿಸಲ್ಪಟ್ಟ ಬಾಣಂಗಳೆಂಬ ಉದಕಂಗಳಿಂದ ಪೀಡಿತವಾ

ಧಚ್ಪ್ಪರಾ೯ನ್ವಿಕ್ಷ್ರಪ್ಯಮುಂಚ೯ಶಿತಬಾಣಪೂಗಾ೯ | ನಿಘ್ನ೯ರಥಾ೯ಕುಂಜರವಾಜಿಪತ್ತೀರ್ನಿರಂತ
ರಂಯದ್ವದಲಾತಚಕ್ರಮ್ ||೨೩|| ನಿರ್ಭಿನ್ನಕುಂಭಾಃಕರಿಣೋನಿಪೇತುರನೇಕಶೋಽಶ್ವಾಶ್ಶರವೃಕ್ಣ
ಕಂಧರಾಃ | ರಥಾಹತಾಶ್ವಧ್ವಜಸೂತನಾಯಕಾಃಪದಾತಯಶ್ಛಿನ್ನಭುಜೋರುಕಂಧರಾಃ ||೨೪||
ಸಂಛಿದ್ಯಮಾನದ್ವಿಪದೇಭವಾಜಿನಾಮಂಗಪ್ರಸೂತಾಶ್ಶತಶೋಽಸೃಗಾಪಗಾಃ| ಭುಜಾಹಯಃಪೂರುಷ
ಶೀರ್ಷಕಚ್ಛಪಾಹತದ್ವಿಪದ್ವೀಪಹಯಗ್ರಹಾಕುಲಾಃ ||೨೫|| ಕರೋರುಮೀನಾನರಕೇಶಶೈವಲಾಧ
ನುಸ್ತರಂಗಾಯುಧಗುಲ್ಮಸಂಕುಲಾಃ | ಅಸೃಗ್ಧರಿಕಾವರ್ತಭಯಾನಕಾಮಹಾಮಣಿಪ್ರವೇಕಾಭರಣಾ

---

ರ್ಜವೆಂಬ ಶ್ರೇಷ್ಠವಾದ ಬಿಲ್ಲನ್ನು, ಮುಹುಃ-ಬಾರಿಬಾರಿಗೂ, ವ್ಯಸ್ಫೂರ್ಜಯತ್-ಟಂಕಾರಧ್ವನಿಗೊಳಿಸಿದನು ||೨೨|| ನಿರಂತ
ರಂ-ಯಾವಾಗಲೂ, ಅಲಾತಚಕ್ರಂ-ಪಂಜುಗಳ ರಾಟ್ನವನ್ನು, ಯದ್ವತ್-ಹೇಗೋ, ತದ್ವತ್-ಹಾಗೆ, ನಿಷಂಗಾತ್-ಬತ್ತಳಿಕೆ
ಯದೆಸೆಯಿಂದ, ಶರಾ೯-ಬಾಣಗಳನ್ನು, ಸಂದಧತ್-ಜೋಡಿಸುತಲಿರುವವನಾಗಿಯೂ, ವಿಕೃಷ್ಯ-ಎಳದು, ಶಿತಬಾಣಪೂಗಾ೯-
ಹರಿತಗಳಾದ ಕಣೆಗಳಗುಂಪುಗಳನ್ನು, ಮುಂಚ೯-ಬಿಡುತಲಿರುವವನಾಗಿಯೂ, ಅಥ-ಆಮೇಲೆ, ರಥಾ೯-ತೇರುಗಳನ್ನು, ಕುಂಜ
ರವಾಜಿಪತ್ತೀಃ-ಆನೆ ಕುದುರೆ ಕಾಲಾಳುಗಳನ್ನು, ನಿಘ್ನ೯-ಕೊಲ್ಲುತಲಿರುವನೂ ಆದನು ||೨೩|| ನಿರ್ಭಿನ್ನಕುಂಭಾಃ-ಸೀಳಲ್ಪಟ್ಟ
ಕುಂಭಸ್ಥಳಗಳುಳ್ಳ, ಕರಿಣಃ-ಆನೆಗಳು, ಶರವೃಕ್ಣಕಂಧರಾಃ-ಬಾಣಗಳಿಂದ ಹರಿಯಲ್ಪಟ್ಟ ಕೊರಳುಗಳುಳ್ಳ, ಅಶ್ವಾಃ-ಕುದುರೆ
ಗಳೂ, ಛಿನ್ನಭುಜೋರುಕಂಧರಾಃ-ಕತ್ತರಿಸಲ್ಪಟ್ಟ ತೋಳುಗಳೂ ತೊಡೆಗಳೂ ಕೊರಳುಗಳೂವುಳ್ಳ, ರಥಾಹತಾಶ್ವಧ್ವಜಸೂ
ತನಾಯಕಾಃ-ರಥಗಳ ಹೊಡೆಯಲ್ಪಟ್ಟ ಕುದುರೆಗಳ ಧ್ವಜಗಳ ಸಾರಥಿಗಳ ಒಡೆಯರೂ, ಪದಾತಯಃ-ಕಾಲಾಳುಗಳೂ. ಅನೇಕ
ಶಃ-ಬಹುವಾಗಿ, ನಿಪೇತುಃ-ಬಿದ್ದುಹೋದವು ||೨೪|| ಸಂಛಿದ್ಯಮಾನದ್ವಿಪದೇಭವಾಜಿನಾಂ-ಕತ್ತರಿಸಲ್ಪಡುತಲಿರುವ ಕಾಲಾಳು
ಆನೆ ಕುದುರೆಗಳ, ಅಂಗಪ್ರಸೂತಾಃ-ಮೈಯಿಂದ ಹುಟ್ಟಿದ, ಅಸೃಗಾಪಗಾಃ-ರಕ್ತಪ್ರವಾಹಗಳು, ಶತಶಃ-ನೂರಾರುಬಗೆಯಾಗಿ
ದ್ದವು. ಭುಜಾಹಯಃ-ಆ ಪ್ರವಾಹಗಳು, ತೋಳುಗಳೆಂಬ ನೀರುಹಾವುಗಳುಳ್ಳವೂ, ಪುರುಷಶೀರ್ಷಕಚ್ಛಪಾಃ-ಮನುಷ್ಯರತಲೆ
ಯೋಡುಗಳೆಂಬ ಆಮೆಗಳುಳ್ಳವೂ, ಹತದ್ವಿಪದ್ವೀಪ-ಕೊಲ್ಲಲ್ಪಟ್ಟ ಆನೆಗಳೇ ನಡುದಿನ್ನೆಗಳಾಗಿವುಳ್ಳವೂ, ಹಯಗ್ರಹಾಕುಲಾಃ-
ಕುದುರೆಗಳೆಂಬ ಮೊಸಳೆಗಳಿಂದ ಕಿಕ್ಕಿರಿದವುಗಳೂ ||೨೫|| ಕರೋರುಮೀನಾಃ-ಕೈಗಳೆಂಬ ದೊಡ್ಡಮೀನುಗಳುಳ್ಳವು, ನರಕೇಶ
ಶೈವಲಾಃ-ಮನುಷ್ಯರಕೂದಲೆಂಬ ಹಾವಸೆಯುಳ್ಳವೂ, ಧನುಸ್ತರಂಗಾಯುಧಗುಲ್ಮಸಂಕುಲಾಃ-ಬಿಲ್ಲುಗಳೆಂಬ ಅಲೆಗಳೂ ಆಯು
ಧಗಳೆಂಬ ಬಳ್ಳಿಹೊದರುಗಳೂ ಇವುಗಳಿಂದ ವ್ಯಾಪ್ತಗಳಾಗಿರುವವು. ಅಸೃಗ್ಧರಿಕಾವರ್ತಭಯಾನಕಾಃ-ಗುರಾಣಿಗಳೆಂಬ ಸು
ಳಿಕುಳಿಗಳಿಂದ ಭಯಂಕರಗಳೂ, ಮಹಾಮಣಿಪ್ರವೇಕ-ದೊಡ್ಡರತ್ನಶ್ರೇಷ್ಠಗಳುಳ್ಳ ಆಭರಣಗಳೆಂಬ, ಅಶ್ಮಶರ್ಕರಾಃ-ಕಲ್ಲುಗಳೂ

---

ದಸ್ವಸೇನೆಯಂ ನೋಡಿ ಸುರಾಸುರಾರ್ಚಿತಮಾದ ಶಾರ್ಙ ಧನುಸ್ಸಂ ಟಂಕಾರವಂ ಮಾಡಿದನು ||೨೨||
ಅನಂತರದಲ್ಲಿ ಶ್ರೀಕೃಷ್ಣನು ಬತ್ತಳಿಕೆಗಳಿಂದ ಬಾಣಂಗಳಂ ಗ್ರಹಿಸುವವನಾಗಿ, ಧನುವಂ ಸಂಧಾನವಂ
ಮಾಡುವವನಾಗಿ ಸೆಳದು ಬಾಣಂಗಳಂ ಬಿಡುವವನಾಗಿ ಶತ್ರುಗಳ ರಥಂಗಳಂ ಗಜಂಗಳಂ ಅಶ್ವಂಗಳಂ
ಪಾದಚಾರಿಗಳಂ ಸಹ ಸಂಹರಿಸುವನಾಗಿ ಅಲಾತ ಚಕ್ರದಂತೆ ತಿರುಗುತ ಸಂಚರಿಸಿದನು ||೨೩|| ಶ್ರೀಕೃಷ್ಣನ
ಬಾಣಂಗಳ ಪ್ರಹಾರಂಗಳಿಂದ ಕುಂಭಸ್ಥಳಂಗಳು ಒಡೆದು ಆನೆಗಳು ಬಿದ್ದವು. ಬಾಣಂಗಳಿಂದ ಕತ್ತರಿಸ
ಲ್ಪಟ್ಟ ಕಂಠಂಗಳುಳ್ಳ ಕುದುರೆಗಳು ಬಿದ್ದವು. ರಥಗಳು ಅದಕ್ಕೆ ಕಟ್ಟಿರುವ ಅಶ್ವಂಗಳು ಸಾರಥಿಗಳು ಧ್ವ
ಜಂಗಳು ಎಲ್ಲವೂ ಬಾಣಪೀಡಿತಂಗಳಾಗಿ ಬಿದ್ದವು. ಪಾದಚಾರಿಗಳು ಛೇದಿಸಲ್ಪಟ್ಟ ಭುಜಂಗಳು ಕಂಠಂಗಳು
ತೊಡೆಗಳು ಉಳ್ಳವರಾಗಿ ಬಿದ್ದರು ||೨೪|| ಛೇದಿಸಲ್ಪಟ್ಟ ಗಜಂಗಳು ತುರಗಂಗಳು ಪಾದಚಾರಿಗಳು ಇವುಗಳ
ಶರೀರದಿಂದ ಸ್ರವಿಸುವ ರಕ್ತನದಿಗಳು ನೂರುಪ್ರಕಾರವಾಗಿ ಪ್ರವಹಿಸಿದವು. ಆನದಿಗಳು ಎಂತಿಯವುಗಳೆಂದ
ರೆ-ಶೂರರ ಭುಜಂಗಳೆಂಬ ಸರ್ಪಂಗಳುಳ್ಳವು. ಶಿರಸ್ಸುಗಳೆಂಬ ಕೂರ್ಮಂಗಳುಳ್ಳವು. ಬಿದ್ದಿರುವ ಆನೆಗಳ ದೇಹಂ
ಗಳೆಂಬ ತಿಟ್ಟೆಗಳುಳ್ಳವು. ಅಶ್ವಂಗಳೆಂಬ ಮೊಸಳೆಗಳುಳ್ಳವು ||೨೫|| ಹಸ್ತಗಳೂ ತೊಡೆಗಳೂ ಮತ್ಸ್ಯಗಳಾಗಿವು
ಳ್ಳವು. ಕೇಶಂಗಳೆಂಬ ಹಾವಸೆಗಳೂ ಧನುಸ್ಸುಗಳೆಂಬ ತೆರೆಗಳು ಉಳ್ಳವಾಗಿ, ಆಯುಧಂಗಳೆಂಬ ಗುಲ್ಮಂಗಳು
ಗುರಾಣಿಗಳೆಂಬ ಸುಳಿಗಳುಳ್ಳವಾಗಿ, ಮಹಾ ರತ್ನಂಗಳೆಂಬ ಪುಡಿಕಲ್ಲುಗಳುಳ್ಳವಾಗಿ, ಭಯಂಕರಗಳಾದ ರಕ್ತ
ನದಿಗಳು ಪ್ರವಹಿಸಿದವು. ಈಪ್ರಕಾರವಾಗಿ ಶ್ರೀಕೃಷ್ಣ ರಾಮ ರೀರ್ವರಿಂದಲೂ ಸೃಷ್ಟಿಮಾಡಲ್ಪಟ್ಟ ರಕ್ತ

ಶ್ಮಶ್ರುಶರ್ಕರಾಃ । ಪ್ರವರ್ತಿತಾ ಭೀರುಭಯಾವಹಾ ಮೃಧೇ ಮನಸ್ವಿನಾಂ ಹರ್ಷಕರೀಃ ಪರಸ್ಪರಮ್ ॥೨೬॥ ವಿನಿಘ್ನತಾರೀನ್ ಮುಸಲೇನ ದುರ್ಮದಾನ್ ಸಂಕರ್ಷಣೇನಾಪರಿಮೇಯತೇಜಸಾ । ಬಲಂ ತದಂಗಾರ್ಣವದುರ್ಗಭೈರವಂ ದುರಂತಪಾರಂ ಮಗಧೇಂದ್ರಪಾಲಿತಮ್ । ಕ್ಷಯಂ ಪ್ರಣೀತಂ ವಸುದೇವಪುತ್ರಯೋರ್ವಿಕ್ರೀಡಿತಂ ತಜ್ಜಗದೀಶಯೋಃ ಪರಮ್ ॥೨೭॥ ಸ್ಥಿತ್ಯುದ್ಭವಾಂತಂ ಭುವನತ್ರಯಸ್ಯ ಯಸ್ಸಮೀಹತೇ ನಂತಗುಣಸ್ಸ್ವಲೀಲಯಾ । ನ ತಸ್ಯ ಚಿತ್ರಂ ಪರಪಕ್ಷನಿಗ್ರಹಸ್ತಥಾಪಿ ಮರ್ತ್ಯಾನುವಿಧಸ್ಯ ವರ್ಣ್ಯತೇ ॥ ಜಗ್ರಾಹ ವಿರಥೋ ರಾಮೋ ಜರಾಸಂಧಂ ಮಹಾಬಲಮ್ । ಹತಾನೀಕಾವಶಿಷ್ಟಾಸುಂ ಸಿಂಹಃ ಕ್ಷುದ್ರಮೃಗಂ ಯಥಾ ॥೨೯॥ ಬಧ್ಯಮಾನಂ ಹತಾರಾತಿಂ ಪಾಶೈರ್ವಾರುಣಮಾನುಷೈಃ । ವಾರಯಾಮಾಸ ಗೋವಿಂದಸ್ತೇನ ಕಾರ್ಯಚಿಕೀರ್ಷಯಾ ॥೩೦॥ ಸ ಮುಕ್ತೋ ಲೋಕನಾಥಾಭ್ಯಾಂ ವ್ರೀಡಿತೋ ವೀರಸಂಮತಃ ।

---

ಮರಳೂವುಳ್ಳವು). ಭೀರುಭಯಾವಹಾಃ-ಹೆದರುವವರಿಗೆ ಭಯವನ್ನು ಮಾಡುವವು, ಮನಸ್ವಿನಾಂ-ಧೈರ್ಯವಂತರಿಗೆ, ಹರ್ಷಕರೀಃ-ಸಂತೋಷವನ್ನು ಮಾಡುವವೂ,(ಹರ್ಷಕರ್ಯಃ) ಆಗಿ, ಪರಸ್ಪರಂ-ಅನ್ಯೋನ್ಯವಾಗಿ,ಪ್ರವರ್ತಿತಾಃ-ನಡೆಯಿಸಲ್ಪಟ್ಟವು॥೨೬॥ ಅಂಗ-ಅಯ್ಯಾ ಪರೀಕ್ಷಿದ್ರಾಯನೇ! ಮುಸಲೇನ-ಒನಕೆಯಿಂದ, ದುರ್ಮದಾನ್-ಕೆಟ್ಟಕೊಬ್ಬುಳ್ಳ, ಅರೀನ್-ಹಗೆಗಳನ್ನು, ವಿನಿಘ್ನತಾ-ಬಡಿಯುತಲಿರುವ, ಅಪರಿಮೇಯತೇಜಸಾ-ಅಳೆಯಲಳವಲ್ಲದ ಪರಾಕ್ರಮವುಳ್ಳ, ಸಂಕರ್ಷಣೇನ-ಬಲರಾಮನಿಂದ,ಅರ್ಣವದುರ್ಗಭೈರವಂ-ಸಮುದ್ರದಹಾಗೆ ಪ್ರವೇಶಿಸಲಳವಲ್ಲದ್ದೂ ಭಯಂಕರವೂ ಆದ, ದುರಂತಪಾರಂ-ಕೊನೆಯಿಲ್ಲದ ಆಳವುಳ್ಳ, ಮಗಧೇಂದ್ರಪಾಲಿತಂ-ಜರಾಸಂಧನಿಂದ ಆಳಲ್ಪಟ್ಟ, ತದ್ಬಲಂ-ಆ ಸೈನ್ಯವು, ಕ್ಷಯಂಪ್ರಣೀತಂ-ನಾಶವನ್ನೈದಿಸಲ್ಪಟ್ಟಿತು. ಜಗದೀಶಯೋಃ-ಪ್ರಪಂಚಕ್ಕೊಡೆಯರಾದ, ವಸುದೇವಪುತ್ರಯೋಃ-ವಸುದೇವನ ಕುಮಾರರ, ತದ್ವಿಕ್ರೀಡಿತಂ-ಆಯಾಟವು, ಪರಂ-ಅತ್ಯುತ್ತಮವಾದ್ದು ॥೨೭॥ ಯಃ-ಯಾವಪುರುಷನು, ಅನಂತಗುಣಃ-ಅಪರಿಮಿತಸುಗುಣಗಳುಳ್ಳವನಾಗಿ,ಸ್ವಲೀಲಯಾ-ತನ್ನ ವಿಲಾಸದಿಂದ, ಭುವನತ್ರಯಸ್ಯ-ಮೂರುಲೋಕಗಳುಳ್ಳ ಪ್ರಪಂಚದ, ಸ್ಥಿತ್ಯುದ್ಭವಾಂತಂ-ರಕ್ಷಣವನ್ನೂ ಸೃಷ್ಟಿಯನ್ನೂ ಸಂಹಾರವನ್ನೂ, ಸಮೀಹತೇ-ಬಯಸುವನೋ, ತಸ್ಯ-ಅಂಥಾ ಪುರುಷನ, ಪರಪಕ್ಷನಿಗ್ರಹಃ-ಶತ್ರುಗಳಕಡೆಯವರನ್ನು ನಿಗ್ರಹಿಸಿದ ವ್ಯಾಪಾರವು, ಚಿತ್ರಂನ-ಆಶ್ಚರ್ಯವಲ್ಲವು. ತಥಾಪಿ-ಹಾಗಾದರೂಕೂಡ, ಮರ್ತ್ಯಾನುವಿಧಸ್ಯ-ಮನುಷ್ಯರನ್ನು ಅನುಸರಿಸಿದಬಗೆಯುಳ್ಳವನ ಲೀಲೆಯು, ವರ್ಣ್ಯತೇ-ಬಂಣಿಸಲ್ಪಡುತಲಿದೆ ॥೨೮॥ ರಾಮಃ-ಬಲರಾಮನು, ಹತಾನೀಕಾವಶಿಷ್ಟಾಸುಂ-ಸತ್ತುಹೋದದಂಡಿನಲ್ಲಿ ಮಿಕ್ಕಪ್ರಾಣವುಳ್ಳವನೂ, ವಿರಥಂ-ರಥವಿಲ್ಲದವನೂ, ಆದರೂ, ಮಹಾಬಲಂ-ಹೆಚ್ಚು ಬಲವುಳ್ಳ, ಜರಾಸಂಧಂ-ಮಗಧರಾಜನನ್ನು, ಸಿಂಹಃ-ಸಿಂಗವು, ಕ್ಷುದ್ರಮೃಗಂ-ತುಚ್ಛವಾದ ಮೃಗವನ್ನು, ಯಥಾ-ಹೇಗೋ, ತಥಾ-ಹಾಗೆ, ಜಗ್ರಾಹ-ಹಿಡಿದನು ॥೨೯॥ ಹತಾರಾತಿಂ-ಮುನ್ನು ಕೊಲ್ಲಲ್ಪಟ್ಟ ಶತ್ರುಗಳುಳ್ಳವನಾದರೂ, ಈಗ, ವಾರುಣಮಾನುಷೈಃ-ವರುಣಸಂಕಲ್ಪಿತಗಳಾಗಿಯೂ ಮನುಷ್ಯರಿಂ ರಚಿತವೂಆದ, ಪಾಶೈಃ-ಹಗ್ಗಗಳಿಂದ, ಬಧ್ಯಮಾನಂ-ಕಟ್ಟಲ್ಪಡುತಲಿರುವ, ಜರಾಸಂಧನನ್ನು, ಗೋವಿಂದಃ-ಕೃಷ್ಣನು, ತೇನ-ಆ ಜರಾಸಂಧನ ನಿಮಿತ್ತದಿಂದ, ಕಾರ್ಯಚಿಕೀರ್ಷಯಾ-ಭೂಭಾರಹರಣಕಾರ್ಯವನ್ನು ಮಾಡಲುಬಯಕೆಯಿಂದ ವಾರಯಾಮಾಸ-ಕಟ್ಟಹಾಕಲ್ಪಡದಂತೆ ತಡೆದನು ॥೩೦॥ ಸಃ-ಆ ಜರಾಸಂಧನು, ಲೋ

---

ನದಿಗಳು ಮಹಾ ಮನಸ್ವಿಗಳಾದವರಿಗೆ ಸಂತೋಷ ಕರಂಗಳಾದವು ॥೨೬॥ಮುಸಲಾಯುಧದಿಂದ ಶತ್ರುಗಳಂ ಚೂರ್ಣೀಕರಿಸುವ ಪರಾಕ್ರಮ ಶಾಲಿಯಾದ ಬಲರಾಮನಿಂದಲೂ ರಕ್ತನದಿಗಳು ಉಂಟುಮಾಡಲ್ಪಟ್ಟವು. ಎಲೈ ಅರಸೇ! ಸಮುದ್ರದಂತೆ ಭಯಂಕರವಾದ ಜರಾಸಂಧನಿಂದ ರಕ್ಷಿತವಾದ ಮಹಾಸೇನೆಯು ವಸುದೇವನ ಪುತ್ರರಿಂದ ಕ್ಷಯವ ನೈದಿಸಲ್ಪಟ್ಟಿತು. ಅದು ಜಗದೀಶ್ವರರಾದ ರಾಮಕೃಷ್ಣರಿಗೆ ಕ್ರೀಡಾರೂಪವಾಗಿತ್ತು ॥೨೭॥ ಅನಂತಗುಣನಾದ ಯಾವ ಭಗವಂತನು ಲೋಕತ್ರಯದ ಸೃಷ್ಟಿ ಸ್ಥಿತಿ ಸಂಹಾರಂಗಳಂ ಲೀಲೆಯಿಂದಲೇ ಮಾಡುತ್ತಾನೆಯೋ ಅಂತಾ ಭಗವಂತನಿಗೆ ಶತ್ರುಸೇನೆಯ ನಿಗ್ರಹವು ಆಶ್ಚರ್ಯಕರವಲ್ಲ. ಆದರೂ ಮಾನುಷ ಲೀಲೆಯು ವರ್ಣಿಸಲ್ಪಡುತ್ತೆ ॥೨೮॥ವಿರಥನಾಗಿ ಸೇನೆಯಂ ಕಳೆದು ಕೊಂಡು ಪ್ರಾಣಮಾತ್ರದಿಂದಲೇ ಇರುವ ಮಹಾ ಬಲಿಷ್ಠನಾದ ಜರಾಸಂಧನಂ ಬಲರಾಮನು ಕ್ಷುದ್ರಮೃಗವಂ ಸಿಂಹದಂತೆ ಸೆರೆಹಿಡಿದನು ॥೨೯॥ ಆ ಜರಾಸಂಧನಂ ವಾರುಣ ಪಾಶಂಗಳಿಂದಲೂ ಮನುಷ್ಯ ಪಾಶಂಗಳಿಂದಲೂ ಬಲರಾಮನು ಕಟ್ಟುತ್ತಿರಲಾಗಿ ಶ್ರೀಕೃ

ವಿವಿಕ್ಷುಸ್ತಪಸೇರಣ್ಯಂವಾರಿತಃಪಥಿರಾಜಭಿಃ ॥೨೧॥ ವಾಕ್ಯೈಃಪವಿತ್ರಾರ್ಥಪದೈರ್ನಯನ್ಯೈಃಪ್ರಾ
ಕೃತೈರಪಿ । ಸ್ವಕರ್ಮಬಂಧಪ್ರಾಪ್ತೋಯಂಯದುಭಿಸ್ತೇಪರಾಭವಃ॥೨೨॥ ಹತೇಷುಸರ್ವಾನೀಕೇಷುನೃಪೋ
ಬಾರ್ಹದ್ರಥಸ್ತದಾ । ಉಪೇಕ್ಷಿತೋಭಗವತಾಮಗಧಾನ್ದುರ್ಮನಾಯಯೌ ॥೨೩॥ ಮುಕುಂದೋ
ಪ್ಯಕ್ಷತಬಲೋನಿಸ್ತೀರ್ಣಾರಿಬಲಾರ್ಣವಃ ।ವಿಕೀರ್ಯಮಾಣಃಕುಸುಮೈಸ್ತ್ರಿದಶೈರನುಮೋದಿತಃ॥೨೪॥
ಮಾಥುರೈರುಪಸಂಗಮ್ಯವಿಜ್ವರೈರ್ಮುದಿತಾತ್ಮಭಿಃ । ಉಪಗೀಯಮಾನವಿಜಯಸ್ಸೂತಮಾಗಧವಂ
ದಿಭಿಃ ॥೨೫॥ ಶಂಖದುಂದುಭಯೋನೇದುರ್ಭೇರೀತೂರ್ಯಾಣ್ಯನೇಕಶಃ । ವೀಣಾವೇಣುಮೃದಂಗಾನಿ
ಪುರಂಪ್ರವಿಶತಿಪ್ರಭೌ ॥೨೬॥ ಸಿಕ್ತಮಾರ್ಗಾಂಹೃಷ್ಟಜನಾಂಪತಾಕಾಭಿರಲಂಕೃತಾಂ । ನಿರ್ಘೋ

---

ಕನಾಥಾಭ್ಯಾಂ-ರಾಮಕೃಷ್ಣರಿಂದ, ಮುಕ್ತಃ-ಬಿಡಲ್ಪಟ್ಟವನಾಗಿ, ವೀರಸಂಮತಃ-ಶೂರನೆಂದು ಒಪ್ಪಿಗೆಯಾಗಿದ್ದವನಾದ್ದ ರಿಂದ, ವ್ರೀಡಿತಃ-ನಾಚಿಕೆಯುಂಟಾದವನಾಗಿ, ತಪಸೇ-ತಪವಂಗೆಯ್ಯಲೋಸುಗ, ಅರಣ್ಯಂವಿವಿಕ್ಷುಃ-ಕಾಡನ್ನು ಪ್ರವೇಶಿಸಲೆಳ ಸಿದವನಾಗಿ, ಪಥಿ-ದಾರಿಯಲ್ಲಿ, ರಾಜಭಿಃ-ದೊರೆಗಳಿಂದ, ವಾರಿತಃ-ಹೋಗದಂತೆ ತಡೆಯಲ್ಪಟ್ಟವನಾದನು ॥೨೧॥ ತೇ-ನಿನಗೆ, ಯದುಭಿಃ-ಯಾದವರಿಂದ, ಪರಾಭವಃ-ಅಪಜಯವು, ಸ್ವಕರ್ಮಬಂಧಃ-ನಿನ್ನ ಪ್ರಾರಬ್ಧಕರ್ಮದಪೆಸಯಿಂದಾದ, ಬಂಧನವೂ, ಪ್ರಾಪ್ತಃ-ಹೊಂದಲ್ಪಟ್ಟದ್ದಾಗಿಯೂ ಹೋಯಿತು, (ಹೀಗೆಯೇ ಯಿರುವುದಿಲ್ಲ ಇನ್ನು ಯೇಕೆಯೋಚಿಸುವಿ?) ಇತ್ಯಾದಿ-ಪ್ರಾ ಕೃತೈಃನಯೈರಪಿ-ಪಾಮರರ ನೀತಿವಾಕ್ಯಗಳಿಂದಲೂ, ಪವಿತ್ರಾರ್ಥಪದೈಃ-ಪರಿಶುದ್ಧಗಳಾದ ಶಬ್ದಗಳುಳ್ಳ, ವಾಕ್ಯೈಃ-ಮಾ ತುಗಳಿಂದಲೂ (ಜರಾಸಂಧನಂ ನಿಲ್ಲಿಸಿದರು.) ॥೨೨॥ ಸರ್ವಾನೀಕೇಷು-ದಂಡುಗಳೆಲ್ಲವೂ, ಹತೇಷು-ಕೊಲ್ಲಲ್ಪಟ್ಟವಾಗುತಿರಲು, ತದಾ-ಆಗ, ಬಾರ್ಹದ್ರಥಃ-ಬೃಹದ್ರಥರಾಯನಮಗನಾದ, ನೃಪಃ-ಜರಾಸಂಧನೆಂಬ ಅರಸು, ಭಗವತಾ-ಕೃಷ್ಣನಿಂದ, ಉಪೇ ಕ್ಷಿತಃ-ತಪ್ಪಿಸಿಕೊಂಡು ಹೋದರೆ ಹೋಗಲಿಯೆಂದು ಅಲಕ್ಷ್ಯವಾಗಿ ಬಿಡಲ್ಪಟ್ಟವನಾಗಿ, ದುರ್ಮನಾಃ-ದುಃಖಿಸುತಲಿರುವನಾ ಗಿ, ಮಗಧಾನ್-ಮಗಧದೇಶಗಳಂಕುರಿತು, ಯಯೌ-ತೆರಳಿದನು ॥೨೩॥ ಮುಕುಂದೋಪಿ-ಕೃಷ್ಣನೂಕೂಡ, ಅಕ್ಷತಬಲಃ-ಗಾ ಯವಿಲ್ಲದದಂಡುಳ್ಳವನಾಗಿಯೂ, ನಿಸ್ತೀರ್ಣಾರಿಬಲಾರ್ಣವಃ-ದಾಂಟಲ್ಪಟ್ಟ ಶತ್ರುಸೈನ್ಯವೆಂಬ ಸಮುದ್ರವುಳ್ಳವನಾಗಿಯೂ, ಕುಸುಮೈಃ-ಪುಷ್ಪಗಳಿಂದ, ವಿಕೀರ್ಯಮಾಣಃ-ಎರಚಲ್ಪಡುತಲಿರುವನಾಗಿಯೂ,ತ್ರಿದಶೈಃ-ದೇವತೆಗಳಿಂದ, ಅನುಮೋದಿತಃ- ಸಂತೋಷಗೊಳ್ಳಲ್ಪಟ್ಟವನಾಗಿಯೂ ॥೨೪॥ ಮಾಥುರೈಃ-ಮಧುರಾನಗರದಲ್ಲಿರುವರೊಡನೆ, ಉಪಸಂಗಮ್ಯ-ಸೇರಿ, ವಿಜ್ವರೈಃ- ರೋಗವಿಲ್ಲದ, ಮುದಿತಾತ್ಮಭಿಃ-ಸಂತುಷ್ಟಹೃದಯರಾದ, ತೈಃ-ಅವರಿಂದಲೂ, ಸೂತಮಾಗಧವಂದಿಭಿಃ-ಸೂತರು ಮಾಗಧ ರುವಂದಿಗಳೆಂಬ ಸ್ತುತಿಪಾಠಕರಿಂದ,ಉಪಗೀಯಮಾನವಿಜಯಃ-ಒಳಿಯಲ್ಲಿ ಹಾಡಲ್ಪಡುತಲಿರುವ ಜಯವುಳ್ಳವನಾಗಿ ಬಂದನು॥೨೫॥ ಪ್ರಭೌ-ಸಮರ್ಥನಾದ ಕೃಷ್ಣನು, ಪುರಂಪ್ರವಿಶತಿ-ನಗರವಂಪ್ರವೇಶಿಸುವನಾಗುತ್ತಿರಲು, ಶಂಖದುಂದುಭಯಃ-ಶಂಖಗಳೂ ದೊಡ್ಡಡೋಲುಗಳೂ, ಭೇರೀತೂರ್ಯಾಣಿ-ದೊಡ್ಡ ಡೋಲುಗಳೂ ತಮ್ಮಟಗಳೂ, ವೀಣಾವೇಣುಮೃದಂಗಾನಿ-ವೀಣೆಗ

---

ಷ್ಣನು ಭಾವಿಕಾರ್ಯವ ನಾಲೋಚಿಸಿ ಕಟ್ಟಬೇಡವೆಂದು ಜರಾಸಂಧನಂ ಬಿಡಿಸಿದನು ॥೨೦॥ಲೋಕನಾಥ ರಾದ ರಾಮಕೃಷ್ಣರಿಂದ ಬಿಡಿಸಲ್ಪಟ್ಟ ಜರಾಸಂಧನು ಲಜ್ಜಿತನಾಗಿ ತಪಸ್ಸಿಗೋಸುಗ ಸಂಕಲ್ಪವಂ ಮಾಡಿ ಹೋಗುತ್ತಿರುವ ಸಮಯದಲ್ಲಿ ಮಾರ್ಗದಲ್ಲಿ ಅರಸುಗಳಿಂದ ॥೨೧॥ ಪರಿಶುದ್ಧವಾದ ಅರ್ಥವುಳ್ಳ ನೀತಿವಾ ಕ್ಯಗಳಿಂದಲೂ ಲೌಕಿಕ ದೃಷ್ಟಾಂತಂಗಳಿಂದಲೂ ಧರ್ಮ ಬೋಧನೆಗಳಿಂದಲೂ ಬೋಧಿಸಲ್ಪಟ್ಟನು. ಅದೆಂ ತೆನೆ- ಎಲೈ, ಮಹಾರಾಜನಾದ ಜರಾಸಂಧನೇ! ಪೂರ್ವಕರ್ಮದಿಂದ ನಿನಗೆ ಅಲ್ಪ ಬಲರಾದ ಯಾದವರಿಂದ ಪರಾ ಭವ ಮುಂಟಾಯಿತು ॥೨೨॥ಆದರಿಂದ ನೀನು ಲಜ್ಜಿಪಡ ಕೆಲಸವಿಲ್ಲ. ಎಂದು ಬೋಧಿತನಾಗಿ ಸಮಸ್ತ ಸೈನ್ಯಾ ಗಳಂ ಕಳೆದುಕೊಂಡು ಕೃಷ್ಣನಿಂದುಪೇಕ್ಷಿತನಾಗಿ ವ್ಯಸನಯುಕ್ತನಾಗಿ ಹೊರಟುಹೋದನು ॥೨೩॥ಶ್ರೀಕೃ ಷ್ಣನು ತನ್ನ ಸೇನೆಯಂ ಸಂರಕ್ಷಿಸಿಕೊಂಡು ಶತ್ರುಗಳಂ ಸಂಹರಿಸಿ ದೇವತೆಗಳಿಂದ ಪುಷ್ಪವೃಷ್ಟಿಯಂ ಕರೆಯ್ಸಿ ಸಿಕೊಳ್ಳುತ್ತ ಶ್ಲಾಘಿತನಾದನು ॥೨೪॥ ವ್ಯಸನರಹಿತರಾದ ಸಂತೋಷಯುಕ್ತರಾದ ಮಧುರಾಪುರವಾಸಿಗಳಿಂದ ಸ್ತುತಿಸಲ್ಪಡುವನಾಗಿ ಸೂತಮಾಗಧರಿಂದ ಗಾನಂಗೆಯ್ಯಲ್ಪಟ್ಟ ಜಯವುಳ್ಳವನಾಗಿ ಹೊರಟುಬಂದನು ॥೨೫॥ ಪ್ರಭುವಾದ ಶ್ರೀಕೃಷ್ಣನು ಮಧುರಾಪುರಪ್ರವೇಶವಂ ಮಾಡುತ್ತಿರಲಾಗಿ ಶಂಖಗಳು ದುಂದುಭಿಗಳು ಧ್ವನಿಗೆ

ಷ್ಟಾಂಬ್ರಹ್ಮಘೋಷೇಣಕೌತುಕಾಬದ್ಧತೋರಣಾಮ್ ‖೩೭‖ ನಿಚೀಯಮಾನೋನಾರೀಭಿರ್ಮಾ
ಲ್ಯದಧ್ಯಕ್ಷತಾಂಕುರೈಃ । ನಿರೀಕ್ಷ್ಯಮಾಣಸ್ಸಸ್ನೇಹಂಪ್ರೀತ್ಯುತ್ಕಂಠಿತಲೋಚನೈಃ ‖೩೮‖ ಆಯೋ
ಧನಗತಂವಿತ್ತಮನಂತಂವೀರಭೂಷಣಮ್ । ಯದುರಾಜಾಯತತ್ಸರ್ವಮಾಹೃತಂಪ್ರಾದಿಶದ್ವಿಭುಃ ‖
ಏವಂಸಪ್ತದಶಕೃತ್ವಸ್ತಾವತ್ಯಕ್ಷೌಹಿಣೀಬಲಃ । ಯುಯುಧೇಮಾಗಧೋರಾಜಾಯದುಭಿಃಕೃಷ್ಣಪಾ
ಲಿತೈಃ ‖೪೦‖ ಅಕ್ಷಿಣ್ವಂಸ್ತದ್ಬಲಂಸರ್ವಂವೃಷ್ಣಯಃಕೃಷ್ಣತೇಜಸಾ । ಹತೇಷುಸ್ವೇಷ್ವನೀಕೇಷುತ್ಯ
ಕ್ತೋಯಾದರಿಭಿರ್ನೃಪ ‖೪೧‖ ಅಷ್ಟಾದಶಸಂಗ್ರಾಮಆಗಾಮಿನಿತದಂತರಾ । ನಾರದಪ್ರೇಷಿತೋ

---

ಳೂ ಅಲಗೋಜಿಗಳೂ ಮದ್ದಲೆಗಳೂ, ಅನೇಕಶಃ-ಹಲವುಬಗೆಯಾಗಿ, ನೇದುಃ-ಮೊಳಗಿದವು ‖೩೬‖ ಸಿಕ್ತಮಾರ್ಗಾಂ ಸಾರಿಸಲ್ಪಟ್ಟದಾರಿಯುಳ್ಳ, ಹೃಷ್ಟಜನಾಂ-ಸಂತಸಗೊಂಡ ಜನಗಳುಳ್ಳ, ಪತಾಕಾಭಿರಲಂಕೃತಾಂ-ಧ್ವಜಗಳಿಂದಲೂ ಮೇಲ್ಕಟ್ಟುಗಳಿಂದಲೂ ಸಿಂಗರಿಸಲ್ಪಟ್ಟ, ಬ್ರಹ್ಮಘೋಷೇಣನಿರ್ಘುಷ್ಟಾಂ-ವೇದಸ್ವರದಿಂದನಾದಿತವಾದ, ಕೌತುಕಾಬದ್ಧತೋರಣಾಂ-ಪ್ರಸಕ್ತಿಯಿಂದ ಕಟ್ಟಲ್ಪಟ್ಟ ಅಲಂಕಾರದ ಅಡ್ಡಪಟ್ಟಿಗೆಗಳುಳ್ಳ, ನಗರಿಯಂಪ್ರವೇಶಿಸಿ ‖೩೭‖ ನಾರೀಭಿಃ-ಹೆಂಗಳಿಂದ, ಮಾಲಾದಧ್ಯಕ್ಷತಾಂಕುರೈಃ-ಪುಷ್ಪಸರಗಳು ಮೊಸರು ಅಕ್ಷತತಂಡುಲಗಳು ಗರಿಕೆಮೊಳಕೆಗಳಿಂದ, ನಿಚೀಯಮಾನಃ-ಎರಚಲ್ಪಡುತಿರುವನಾಗಿ, ಪ್ರೀತ್ಯುತ್ಕಂಠಿತಲೋಚನೈಃ-ಪ್ರೇಮದಿಂದ ಹೆಚ್ಚು ಅಕ್ಕರೆಗೊಂಡಕಂಗಳಿಂದ, ಸಸ್ನೇಹಂ-ಸ್ನೇಹದೊಡನೆ, ನಿರೀಕ್ಷ್ಯಮಾಣಃ-ನೋಡಲ್ಪಡುತಲಿರುವನಾಗಿ ಪ್ರವೇಶಿಸಿದನು ‖೩೮‖ ವಿಭುಃ-ಪ್ರಭುವಾದ ಕೃಷ್ಣನು, ಆಯೋಧನಗತಂ-ರಣಭೂಮಿಯಲ್ಲಿದ್ದದ್ದೂ, ಆಹೃತಂ-ತಮ್ಮಿಂದ ತರಲ್ಪಟ್ಟದ್ದೂ ಆದ, ವೀರಭೂಷಣಂ-ಶೂರರ ಆಭರಣಗಳುಳ್ಳ, ತದ್ವಿತ್ತಂಸರ್ವಂ-ಆಧನವೆಲ್ಲವನ್ನೂ, ಯದುರಾಜಾಯ-ಯಾದವರಿಗೆರಸಾದ ಉಗ್ರಸೇನನಿಗೆ, ಪ್ರಾದಿಶತ್-ಕೊಟ್ಟನು ‖೩೯‖ ತಾವತಿ-ಅಷ್ಟುಸೋಲ್ವಿಕೆಯುಂಟಾದರೂ, ಅಕ್ಷೌಹಿಣೀಬಲಃ-ಅಕ್ಷೌಹಿಣಿಗಳ ಸೈನ್ಯಗಳುಳ್ಳ, ಮಾಗಧೋರಾಜಾ-ಜರಾಸಂಧನೆಂಬ ದೊರೆಯು, ಕೃಷ್ಣಪಾಲಿತೈಃ-ಕೃಷ್ಣನಿಂದ ರಕ್ಷಿಸಲ್ಪಟ್ಟವರಾದ, ಯದುಭಿಃ-ಯಾದವರೊಡನೆ, ಏವಂ-ಹೀಗೆಯೇ, ಸಪ್ತದಶಕೃತ್ವಃ-೧೭ ಬಾರಿಗಳು, ಯುಯುಧೇ-ಕಾದಿದನು ‖೪೦‖ ನೃಪ-ಪರೀಕ್ಷಿದ್ರಾಯನೇ! ಕೃಷ್ಣತೇಜಸಾ-ಕೃಷ್ಣನಸಾಮರ್ಥ್ಯದಿಂ ಕೂಡಿದವರಾದ, ವೃಷ್ಣಯಃ-ವೃಷ್ಣಿಕುಲದ ಯಾದವರು, ತದ್ಬಲಂಸರ್ವಂ-ಆ ಜರಾಸಂಧನಸೈನ್ಯವೆಲ್ಲವನ್ನೂ, ಅಕ್ಷಿಣ್ವನ್-ನಾಶಹೊಂದಿಸಿದರು, ಸ್ವೇಷುಅನೀಕೇಷು-ತನ್ನದಂಡುಗಳು, ಅರಿಭಿಃ-ಶತ್ರುಗಳಿಂದ, ಹತೇಷುಸತ್ಸು-ಕೊಲ್ಲಲ್ಪಟ್ಟವಾಗುತ್ತಿರಲು, ತ್ಯಕ್ತಃ-ತಾನುಮಾತ್ರ ಬಿಡಲ್ಪಟ್ಟವನಾಗಿ, ಜರಾಸಂಧನು, ಅಯಾತ್-ಹಿಂದಕ್ಕೆ ಹೋದನು ‖೪೧‖ ಅಷ್ಟಾದಶೇಸಂಗ್ರಾಮೇತು-ಹದಿನೆಂಟನೆಯಕಾಳಗವು, ಆಗಾಮಿನಿ-ಬರತಕ್ಕದ್ದಾಗಿರುವಲ್ಲಿ, ತದಂತರಾ-ಆನಡುವೆ, ನಾರದಪ್ರೇಷಿತಃ-ನಾರದನಿಂದ ಪ್ರೇರಿಸಿಕ

---

ಯ್ದುವು. ಭೇರಿಗಳು ವಾದ್ಯಂಗಳು ಅನೇಕಪ್ರಕಾರಂಗಳಾಗಿ ನಾದಂಗೆಯ್ದುವು. ವೀಣೆಗಳು ವೇಣುಗಳು ಮೃದಂಗಂಗಳು ಧ್ವನಿಗೆಯ್ದುವು ‖೩೬‖ ಆ ಪುರವು ಎಂತಿಯದೆಂದರೆ,--ಸುಗಂಧಜಲಂಗಳಿಂದ ಸೇಸೆಯಲ್ಪಟ್ಟ ಮಾರ್ಗಂಗಳುಳ್ಳದ್ದಾಗಿ ಸಂತುಷ್ಟವಾದ ಜನವುಳ್ಳದ್ದಾಗಿ ಪತಾಕಂಗಳಿಂದಲೂ ಅಲಂಕೃತಮಾಗಿ ಬ್ರಾಹ್ಮಣರವೇದಘೋಷಂಗಳಿಂದ ವ್ಯಾಪ್ತವಾಗಿ ಕುತೂಹಲದಿಂದ ಕಟ್ಟಲ್ಪಟ್ಟ ತೋರಣಂಗಳುಳ್ಳದ್ದಾಗಿ ಶೋಭಿಸುತ್ತಿತ್ತು ಪುಷ್ಪಂಗಳಿಂದಲೂ ದಧಿಯಿಂದಲೂ ಅಕ್ಷತಂಗಳಿಂದಲೂ ಸ್ತ್ರೀಯರಿಂದಲೂ ಪೂಜಿತನಾಗಿ ಪ್ರೀತಿಯಿಂದ ವಿಕಸಿತಂಗಳಾದ ನೇತ್ರಾಂಗಳುಳ್ಳ ಸ್ತ್ರೀಸಮೂಹದಿಂದ ನೋಡಿಸಿಕೊಳುತ ಆ ಪುರವಂ ಪ್ರವೇಶಿಸಿದನು ‖೩೮‖ ಯುದ್ಧರಂಗದಲ್ಲಿ ಸಿಕ್ಕಿದವರ ಶರೀರಂಗಳಿಂದ ಕಳಚಿಬಿದ್ದ ರತ್ನಭೂಷಣಂಗಳಂ ಅನೇಕ ಧನವಂಸಹ ತೆಗದುಕೊಂಡು ಬಂದು ಅರಸಾದ ಉಗ್ರಸೇನನಿಗೆ ಕೊಟ್ಟನು ‖೩೯‖ ಈರೀತಿಯಲ್ಲಿ ಜರಾಸಂಧನು ಪುನಶ್ಚ ಅಷ್ಟು ಅಕ್ಷೌಹಿಣೀಬಲವನ್ನು ತೆಗದುಕೊಂಡು ಬಂದು ಹದಿನೇಳುಸಲ ಶ್ರೀಕೃಷ್ಣನಿಂದ ಪಾಲಿತರಾದ ಯಾದವರೊಡನೆ ಕಾದಿದನು ‖೪೦‖ ಶ್ರೀಕೃಷ್ಣನ ಸಾಮರ್ಥ್ಯದಿಂದ ಯಾದವರು ಜರಾಸಂಧನ ಬಲವೆಲ್ಲವನ್ನೂ ನಾಶಮಾಡಿದರು, ಹೀಗೆ ತನ್ನ ಸೈನ್ಯವು ನಾಶವನ್ನು ಹೊಂದುತ್ತಿರುವಲ್ಲಿ ಜರಾಸಂಧನು ಯಾದವರಿಂದ ಬಿಡಲ್ಪಟ್ಟವನಾಗಿ ಹೋದನು ‖೪೧‖ ಪುನಶ್ಚ ಹದಿನೆಂಟನೆಯಸಲ ಜರಾಸಂಧನು ಸನ್ನಾಹವಂ ಮಾಡಿಕೊಂಡು ಬರುವದರೊಳೆ

ವೀರೋಯವನಃ ಪ್ರತ್ಯಪದ್ಯತ ॥೪೨॥ ರುರೋಧ ಮಥುರಾಮೇತ್ಯ ತಿಸೃಭಿರ್ಮ್ಲೇಚ್ಛಕೋಟಿಭಿಃ । ನೃಲೋಕೇ ಚಾಪ್ರತಿದ್ವಂದ್ವೋ ವೃಷ್ಣೀಂಛ್ರುತ್ವಾತ್ಮಸಮ್ಮಿತಾನ್ ॥೪೩॥ ತಂ ದೃಷ್ಟ್ವಾಚಿಂತಯತ್ಕೃಷ್ಣಸ್ಸಂಕರ್ಷಣಸಹಾಯವಾನ್ । ಅಹೋ ಯದೂನಾಂ ವೃಜಿನಂ ಪ್ರಾಪ್ತಂ ಹ್ಯುಭಯತೋ ಮಹತ್ ॥೪೪॥ ಯವನೋಯಂ ನಿರುಂಧೇಸ್ಮಾನದ್ಯ ತಾವನ್ಮಹಾಬಲಃ । ಮಾಗಧೋಪ್ಯದ್ಯ ವಾ ಶ್ವೋ ವಾ ಪರಶ್ವೋ ವಾಗಮಿಷ್ಯತಿ ॥೪೫॥ ಆವಯೋರ್ಯುಧ್ಯತೋರಸ್ಯ ಯದ್ಯಾಗಂತಾ ಜರಾಸುತಃ । ಬಂಧೂನ್ ಹನಿಷ್ಯತ್ಯಥವಾ ನೇಷ್ಯತೇ ಸ್ವಪುರಂ ಬಲೀ ॥೪೬॥ ತಸ್ಮಾದದ್ಯ ವಿಧಾಸ್ಯಾಮೋ ದುರ್ಗಂ ದ್ವಿಪದದುರ್ಗಮಮ್ । ತತ್ರ ಜ್ಞಾತೀನ್ಸಮಾಧಾಯ ಯವನಂ ಘಾತಯಾಮಹೇ ॥೪೭॥ ಇತಿ ಸಂಮಂತ್ರ್ಯ ಭಗವಾನ್ ದುರ್ಗಂ ದ್ವಾದಶಯೋಜನಮ್ । ಅಂತಸ್ಸಮುದ್ರೇ ನಗರಂ ಕೃತ್ಸ್ನಾದ್ಭುತಮಚೀಕರತ್ ॥೪೮॥ ದೃಶ್ಯತೇ

---

ಳುಹಿಸಲ್ಪಟ್ಟವನಾದ, ವೀರೋಯವನಃ-ಶೂರನಾದ ಕಾಲಯವನನು, ಪ್ರತ್ಯಪದ್ಯತ-ಅಕಸ್ಮಾತ್ತಾಗಿ ಬಂದನು॥೪೨॥ ನೃಲೋಕೇ-ಮನುಷ್ಯಲೋಕದಲ್ಲಿ, ಅಪ್ರತಿದ್ವಂದ್ವಃ-ತನಗೆ ಸರಿಯಾದ ಇದಿರಾಳಿಲ್ಲದವನಾಗಿ, ಆತ್ಮಸಮ್ಮಿತಾನ್ವೃಷ್ಣೀನ್-ತನ್ನೊಡನೆ ಸರಿಹೋಲಿಸಲ್ಪಟ್ಟವರನ್ನಾಗಿ ಯಾದವರನ್ನು ಕೇಳಿ, ತಿಸೃಭಿಃಮ್ಲೇಚ್ಛಕೋಟಿಭಿಃ-ಮೂರುಕೋಟಿಮಂದಿ ತುರುಕರೊಡನೆ, ಏತ್ಯ-ಬಂದು, ಮಥುರಾಂರುರೋಧ-ಮಥುರಾನಗರವನ್ನು ತಡೆದನು ॥೪೩॥ ಸಂಕರ್ಷಣಸಹಾಯವಾನ್-ಬಲರಾಮನೇ ಬತಾಸೆಯಾಗಿವುಳ್ಳ, ಕೃಷ್ಣಃ-ಕೃಷ್ಣನು, ತಂ-ಅವನನ್ನು, ದೃಷ್ಟ್ವಾ-ನೋಡಿ, ಅಚಿಂತಯತ್-ಯೋಚಿಸಿದನು ॥ ಅಹೋ-ಆಶ್ಚರ್ಯವು. ಯದೂನಾಂ-ಯಾದವರಿಗೆ, ಉಭಯತಃ-ಎರಡುಕಡೆಯಿಂದ, ೨ ಬಗೆಯಾಗಿ, ಮಹದ್ವೃಜಿನಂ-ದೊಡ್ಡಸಂಕಟವು ಪ್ರಾಪ್ತಂ-ಬಂದದ್ದಾಗಿದೆ ॥೪೪॥ ಅದ್ಯತರತ್-ಈಗಲಾದರೋ, ಮಹಾಬಲಃ-ಹೆಚ್ಚುಸೈನ್ಯವುಳ್ಳ, ಯವನೋಯಂ-ಕಾಲಯವನನೆಂಬ ಇವನು, ಅಸ್ಮಾನ್-ನಮ್ಮನ್ನು, ನಿರುಂಧೇ-ತಡೆದನು. ಮಾಗಧೋಪಿ-ಜರಾಸಂಧನೂಕೂಡ, ಅದ್ಯವಾ-ಈಗಲೇಯೋ, ಶ್ವೋವಾ-ನಾಳೆಯೋ, ಪರಶ್ವೋವಾ-ನಾಳಿದ್ದೋ, ಆಗಮಿಷ್ಯತಿ-ಬರುತ್ತಾನೆ ॥೪೫॥ ಆವಯೋಃ-ನಾವು, ಅಸ್ಯ-ಇವನೊಡನೆ, ಯುಧ್ಯತೋಸ್ಸತೋಃ-ಜಗಳವಾಡುವರಾಗುತ್ತಿರಲು, ಜರಾಸುತಃ-ಜರಾಸಂಧನು,ಆಗಂತಾಯದಿ-ಬಂದವನಾದರೆ, ಬಲೀ-ಬಲವಂತನಾದ್ದರಿಂದ, ಬಂಧೂನ್-ನಂಟರನ್ನು, ಹನಿಷ್ಯತಿ-ಕೊಲ್ಲುವನು, ಅಥವಾ-ಅಲ್ಲದಿದ್ದರೂ, ಸ್ವಪುರಂ-ತನ್ನ ನಗರವಂಕುರಿತು, ನೇಷ್ಯತಿ-ಒಯ್ಯುವನು ॥೪೬॥ ತಸ್ಮಾತ್-ಆದ್ದರಿಂದ, ಅದ್ಯ-ಈಗ, ದ್ವಿಪದದುರ್ಗಮಂ-ಮನುಷ್ಯರಿಗೆ ಪ್ರವೇಶಿಸಲಶಕ್ಯವಾದ, ದುರ್ಗಂ-ಕೋಟೆಯನ್ನು, ವಿಧಾಸ್ಯಾಮಃ-ಮಾಡುವೆವು, ತತ್ರ-ಆ ದುರ್ಗದಲ್ಲಿ, ಜ್ಞಾತೀನ್-ನಮ್ಮವರನ್ನು: ಸಮಾಧಾಯ-ನೆಮ್ಮದಿಯಾಗಿರಿಸಿ, ಯವನಂ-ಕಾಲಯವನನನ್ನು, ಘಾತಯಾಮಹೇ-ಕೊಲ್ಲಿಸುವೆವು॥೪೭॥ ಇತಿ-ಹೀಗೆ, ಸಂಮಂತ್ರ್ಯ-ಆಲೋಚಿಸಿಕೊಂಡು, ಭಗವಾನ್-ಷಡ್ಗುಣೈಶ್ವರ್ಯಸಂಪನ್ನನಾದ ಕೃಷ್ಣನು, ಅಂತಸ್ಸಮುದ್ರೇ-ಸಮುದ್ರದೊಳಗೆ,ಕೃತ್ಸ್ನಾದ್ಭುತಂ-ಎಲ್ಲವೂ ಆಶ್ಚರ್ಯವಾಗಿರುವ, ದ್ವಾದಶಯೋಜನಂ-೧೨ ಗಾವುದಪರಿಮಿತಿಯುಳ್ಳ, ದುರ್ಗಂ-ಪ್ರಯಾಸದಿಂದಲೂ ಪ್ರ

---

ಗಾಗಿ ನಾರದಋಷಿಯಿಂದ ಪ್ರೇರಿತನಾದ ಕಾಲಯವನನು ಬಂದನು ॥೪೨॥ ಮೂರುಕೋಟಿ ಮ್ಲೇಚ್ಛರಿಂದ ಸಮೇತನಾಗಿ ಬಂದು ಮಥುರಾಪುರವಂ ಮುತ್ತಿಕೊಂಡನು. ಲೋಕತ್ರಯದಲ್ಲಿಯೂ ತನಗೆ ಇದಿರಿಲ್ಲದ ಕಾಲಯವನನು ಯಾದವರಂ ತನಗೆ ಸಮಾನರನ್ನಾಗಿ ಕೇಳಿ ಬಂದನು ॥೪೩॥ ಆ ಕಾಲಯವನನಂ ನೋಡಿ ಶ್ರೀಕೃಷ್ಣನು ಬಲರಾಮಸಮೇತನಾಗಿ ಚಿಂತಿಸಿದನು. "ಯಾದವರಿಗೆ ಜರಾಸುಧನಿಂದಲೂ ಕಾಲಯವನನಿಂದಲೂ ಎರಡುಕಡೆಯಲ್ಲಿಯೂ ಮಹಾವ್ಯಸನವು ಪ್ರಾಪ್ತವಾಯಿತು॥೪೪॥ಈ ಕಾಲಯವನನು ಈಗ ಬಂದು ಪುರವಂಮುತ್ತಿಕೊಂಡಿರುವನು. ಜರಾಸಂಧನು ಈ ಹೊತ್ತೋ ನಾಳೆಯೋ ನಾಳಿದ್ದೋ ಬರುತ್ತಾನೆ ॥೪೫॥ ನಾವಿಬ್ಬರೂ ಕಾಲಯವನನೊಡನೆ ಯುದ್ಧವಂ ಮಾಡುತ್ತಿರಲಾಗಿ ಜರಾಸಂಧನು ಬಂದರೆ ನಮ್ಮ ಬಂಧುಗಳಾದ ಯಾದವರಂ ಸಂಹರಿಸುವನು. ಇಲ್ಲದಿದ್ದರೆ ಎಲ್ಲರನ್ನೂ ಸೆರೆಹಿಡಿದು ತನ್ನ ಪಟ್ಟಣಕ್ಕೆ ಸಾಗಿಸಿಕೊಂಡು ಹೋಗುವನು ॥೪೬॥ ಆ ಕಾರಣದಿಂ ಶತ್ರುಗಳಿಗೆ ಪ್ರವೇಶಯೋಗ್ಯವಲ್ಲದ ದುರ್ಗಸ್ಥಾನವಂ ನಿರ್ಮಿಸಿ ಅದರಲ್ಲಿ ಬಂಧುಗಳನ್ನೆಲ್ಲರಂ ನಿಲ್ಲಿಸಿ ನಾವು ಕಾಲಯವನನಂ ಸಂಹರಿಸುವೆವು" ಎಂದು ॥೪೭॥ ಆಲೋಚಿಸಿ ಭಗವಂತನು ಸಮುದ್ರಮಧ್ಯದಲ್ಲಿ ಸ

ಯತ್ರಹಿತ್ವಾಷ್ಟ್ರಂವಿಜ್ಞಾನಂಶಿಲ್ಪನೈಪುಣಮ್॥೪೯॥ರಥ್ಯಾಚತ್ವರವೀಥೀಭಿರ್ಯಥಾವಾಸ್ತುವಿನಿರ್ಮಿತಮ್। ಸುರದ್ರುಮಲತೋದ್ಯಾನವಿಚಿತ್ರೋಪವನಾನ್ವಿತಮ್॥೫೦॥ಹೇಮಶೃಂಗೈರ್ದಿವಿಸ್ಪೃಗ್ಭಿಸ್ಸ್ಫಾಟಿಕಾಟ್ಟಾಲಗೋಪುರೈಃ । ರಾಜತಾರಕುಟೈರ್ಜುಷ್ಟಂಹೈಮಕುಂಭೈಸ್ಸ್ವಲಂಕೃತೈಃ ॥೫೧॥ ರತ್ನಕೂಟೈರ್ಗೃಹೈರ್ಹೈಮೈರ್ಮಹಾಮರಕತಸ್ಥಲೈಃ । ವಾಸ್ತೋಷ್ಪತೀನಾಂಚಗೃಹೈರ್ವಲಭೀಭಿಶ್ಚ ನಿರ್ಮಿತಮ್ ॥ ಚಾತುರ್ವರ್ಣ್ಯಜನಾಕೀರ್ಣಂಯದುದೇವಗೃಹೋಲ್ಲಸತ್ ॥೫೨॥ ಸುಧರ್ಮಾಂಪಾರಿಜಾತಂಚಮಹೇಂದ್ರಃಪ್ರಾಹಿಣೋದ್ಧರೇಃ । ಯತ್ರಚಾವಸ್ಥಿತೋಮರ್ತ್ಯೋಮರ್ತ್ಯಧರ್ಮೈರ್ನಯುಜ್ಯತೆ ॥೫೩॥ ಶ್ಯಾಮೈಕಕರ್ಣಾನ್ವರುಣೋಹಯಾಂಚ್ಛುಕ್ಲಾನ್ಮನೋಜವಾನ್ । ದದೌಸಹಸ್ರ

---

ವೇಶಿಸಲಶಕ್ಯವಾದ, ನಗರಂ-ಪಟ್ಟಣವನ್ನು, ಅಚೀಕರತ್-ಮಾಡಿಸಿದನು ॥೪೮॥ ಯತ್ರ-ಯಾವುದರಲ್ಲಿ, ತ್ವಾಷ್ಟ್ರಂ-ತ್ವಷ್ಟೃಬ್ರಹ್ಮಸಂಬಂಧವಾದ, ಶಿಲ್ಪನೈಪುಣಂ-ಪಂಚಾಳಕೆಲಸದ ಜಾಣತನವುಳ್ಳ, ವಿಜ್ಞಾನಂ-ಪ್ರಜ್ಞೆಯು, ದೃಶ್ಯತೇಹಿ-ಕಾಣಲ್ಪಡುತಲಿದೆಯೋ? ॥೪೯॥ ರಥ್ಯಾಚತ್ವರವೀಥೀಭಿಃ-ರಥ್ಯಾ-ಮುಂಗಡೆಯರಾಜಮಾರ್ಗಗಳಿಂದಲೂ, ಚತ್ವರ-ಅಂಗಳಗಳಿಂದಲೂ, ವೀಥೀಭಿಃ-ಹಿಂದಣ ಉಪಮಾರ್ಗಗಳಿಂದಲೂ, ವಾಸ್ತುವಿನಿರ್ಮಿತಂ-ಮನೆಮುಂತಾದವುಗಳ ನಿರ್ಮಾಣವು, ಯಥಾ-ಹೇಗೆ ಹೇಳಲ್ಪಟ್ಟಿರುವುದೋ, ತಥಾ-ಹಾಗೆ ಅತಿಕ್ರಮಿಸದೆ, ಒಳಮನೆಗಳು ಒಳತೊಟ್ಟಿಗಳು ಮುಂತಾಗಿರುವಂತೆ, ಸುರ...ಅನ್ವಿತಂ-ಸುರದ್ರುಮ-ಕಲ್ಪವೃಕ್ಷಗಳೂ, ಲತಾ-ಬಳ್ಳಿಗಳೂಉಳ್ಳ, ಉದ್ಯಾನ-ವಿಹಾರವನಗಳಿಂದಲೂ, ವಿಚಿತ್ರ-ಅದ್ಭುತಗಳಾದ, ಉಪವನ-ಸಣ್ಣತೋಟಗಳಿಂದಲೂ, ಅನ್ವಿತಂ-ಕೂಡಿದಂತಾದ್ದು ॥೫೦॥ ಹೇಮಶೃಂಗೈಃ-ಬಂಗಾರದಶಿಖರಗಳುಳ್ಳ, ದಿವಿಸ್ಪೃಗ್ಭಿಃ-ಸ್ವರ್ಗವನ್ನು ಸೋಂಕುತಲಿರುವ, ಸ್ಫಾಟಿಕಾಟ್ಟಾಲಗೋಪುರೈಃ-ಪಳುಕಿನ ಮಂಚಿಕೆಗಳಿಂದಲೂ ಊರಬಾಕಲುಗಳಿಂದಲೂ, ರಾಜತಾರಕುಟೈಃ-ಬಂಗಾರದ ಮತ್ತು ಲೋಹದ ಕೊಟ್ಟಡಿಗಳಿಂದಲೂ, ಹೈಮಕುಂಭೈಃ-ಬಂಗಾರದ ಶಿಖರಗಳುಳ್ಳ,ಸ್ವಲಂಕೃತೈಃ-ಚೆನ್ನಾಗಿ ಅಲಂಕರಿಸಲ್ಪಟ್ಟಿರುವ ಅಶ್ವಶಾಲೆಮೊದಲಾದ ಕಟ್ಟಡಗಳಿಂದ, ಜುಷ್ಟಂ-ಸೇವಿಸಲ್ಪಟ್ಟಿರುವುದು ॥೫೧॥ ಮಹಾಮರಕತಸ್ಥಲೈಃ-ದೊಡ್ಡ ಪಚ್ಚೆಗಳುಳ್ಳ ನೆಲಗಳಿಂದಲೂ, ರತ್ನಕೂಟೈಃ-ರತ್ನಶಿಖರಗಳುಳ್ಳ, ಹೈಮೈರ್ಗೃಹೈಃ-ಬಂಗಾರದಮನೆಗಳಿಂದಲೂ, ವಾಸ್ತೋಷ್ಪತೀನಾಂ-ಗೃಹದೇವತೆಗಳ ಮತ್ತು ಗ್ರಾಮದೇವತೆಗಳ, ಗೃಹೈಶ್ಚ-ಆಲಯಗಳಿಂದಲೂ, ವಲಭೀಭಿಶ್ಚ-ಚಂದ್ರಶಾಲೆಗಳಿಂದಲೂ, ನಿರ್ಮಿತಂ-ಸಹಿತವಾಗಿ ರಚಿಸಲ್ಪಟ್ಟಿರುವುದು ॥ ಚಾತುರ್ವರ್ಣ್ಯಜನಾಕೀರ್ಣಂ-ನಾಲ್ಕು ಜಾತಿಯ ಜನಗಳಿಂದಲೂ ತುಂಬಿರುವುದೂ, ಯದುದೇವಗೃಹೋಲ್ಲಸತ್-ಯಾದವರಾಯನ ಅರಮನೆಯಿಂದ ಶೋಭಿಸುವುದೂ ಆಗಿತ್ತು ॥೫೨॥ ಮಹೇಂದ್ರಃ-ದೇವರಾಜನು, ಸುಧರ್ಮಾಂ-ದೇವಸಭೆಯನ್ನೂ, ಪಾರಿಜಾತಂಚ-ಕಲ್ಪವೃಕ್ಷವನ್ನೂ, ಹರೇಃ-ಕೃಷ್ಣನಿಗೆ, ಪ್ರಾಹಿಣೋತ್-ಕಳುಹಿಸಿದನು. ಯತ್ರ-ಯಾವ ದ್ವಾರಕಾನಗರದಲ್ಲಿ, ಅವಸ್ಥಿತಃ-ಇರುವ, ಮರ್ತ್ಯಶ್ಚ-ಮನುಷ್ಯನೂಕೂಡ, ಅಮರ್ತ್ಯಧರ್ಮೈಃ-ಅಮರಲಕ್ಷಣಗಳಿಂದ, ನಿಯುಜ್ಯತೇ-ಕೂಡಿಸಲ್ಪಡುವನೋ ॥೫೩॥ ತೋಯರಾಟ್-ಜಲಪತಿಯಾದ, ವರು

---

ಮಾಶ್ಚರ್ಯ ಸ್ಥಾನವಾದ ದ್ವಾದಶಯೋಜನಪ್ರಮಾಣವುಳ್ಳ ನಗರವಂ ನಿರ್ಮಾಣವಂ ಮಾಡಿಸಿದನು॥೪೮॥ ನಿಪುಣನಾದ ವಿಶ್ವಕರ್ಮನ ಶಿಲ್ಪಚಮತ್ಕಾರಂಗಳೆಲ್ಲವೂ ಅಲ್ಲಿಯೇ ಅಲ್ಲವೇ ಪ್ರಕಾಶಿಸುವುದು ॥೪೯॥ ರಾಯಬೀದಿಗಳೂ ಸಂಣಬೀದಿಗಳೂ ಅಂಗಳಂಗಳೂ ಯಥಾಯೋಗ್ಯವಾಗಿ ಪ್ರಕಾಶಿಸುವವು. ಕಲ್ಪವೃಕ್ಷ ಕಲ್ಪಲತೆಗಳುಳ್ಳ ಉದ್ಯಾನಂಗಳಿಂದಲೂ ವಿಚಿತ್ರಂಗಳಾದ ತೋಟಂಗಳಿಂದಲೂ ಶೋಭಿಸುತ್ತಿರುವುದು ॥೫೦॥ ಅಂತರಿಕ್ಷವ್ಯಾಪ್ತವಾದ ಸುವರ್ಣಶೃಂಗಂಗಳಿಂದಲೂ ಸ್ಫಟಿಕಮಯಂಗಳಾದ ಮಾಳಿಗೆಗಳಿಂದಲೂ ಸುವರ್ಣಕಲಶಂಗಳಿಂದಲಂಕೃತಂಗಳಾದ ಬೆಳ್ಳಿಯ ಮನೆಗಳಿಂದಲೂ ಹಿತ್ತಾಳೆಮನೆಗಳಿಂದಲೂ ಕುದುರೆಯಲಾಯಂಗಳಿಂದಲೂ ಗಜಬಂಧನಸ್ಥಾನಂಗಳಿಂದಲೂ ॥೫೧॥ ಪದ್ಮರಾಗಶಿಖರಂಗಳಿಂದಲೂ ಸ್ವರ್ಣಮಯಂಗಳಾದ ಪಚ್ಚೆಮಣಿಗಳಿಂದ ಹರಹಲ್ಪಟ್ಟ ದೇವಾಲಯಂಗಳಿಂದಲೂ ಚಂದ್ರಶಾಲೆಗಳಿಂದಲೂ ನಿರ್ಮಿಸಲ್ಪಟ್ಟಿರುವುದು ಚಾತುರ್ವರ್ಣದ ಜನರಿಂದಲೂ ಪೂರಿತವಾಗಿ ಯಾದವರ ಗೃಹಂಗಳಿಂದಲೂ ಒಪ್ಪುತ್ತಿರುವುದು ॥೫೨॥ ದೇವೇಂದ್ರನು ಸುಧರ್ಮನಾಮಕವಾದ ತನ್ನ ಆಸ್ಥಾನಮಂಟಪವನ್ನೂ ಪಾರಿಜಾತವನ್ನೂ ಶ್ರೀಕೃಷ್ಣನಿಗೆ ಕಳುಹಿಸಿದನು. ಎಲ್ಲಿರತಕ್ಕ ಮನುಷ್ಯನು ಕ್ಷುತ್ಪಿಪಾಸಾದಿಮನುಷ್ಯ ಧರ್ಮಂಗಳಂ ಬಿಡುವನೋ ಅಂತಾದ್ದು ಆಸಭೆಯು ॥೫೩॥

ಸಂಖ್ಯಾತಾನ್ ದೇವದೇವಾಯ ತಸ್ಮೈ ಯದುರಾಟ್ ॥೫೪॥ ಅಷ್ಟೌ ನಿಧಿಪತಿಃ ಕೋಶಾನ್ ಲೋಕಪಾಲೋ ನಿಜೋದ
ಯಾನ್ ॥ ತಥಾನ್ಯೇ ಲೋಕಪಾಲಾಶ್ಚ ದದುಸ್ಸ್ವಾಧಿಕೃತಂ ಧನಮ್ ॥೫೫॥ ಯದ್ಯದ್ಭಗವತಾ ದತ್ತಮಾ
ಧಿಪತ್ಯಂ ಸ್ವಸಿದ್ಧಯೇ । ಸರ್ವಂ ಪ್ರತ್ಯರ್ಪಯಾಮಾಸುರ್ಹರೌ ಭೂಮಿಂ ಗತೇ ನೃಪ ।೫೬॥ ತತ್ರ ಯೋ
ಗಪ್ರಭಾವೇನ ನೀತ್ವಾ ಸರ್ವಜನಂ ಹರಿಃ । ಪ್ರತ್ಯಾಗತ್ಯಾಥ ರಾಮೇಣ ಕೃಷ್ಣಸ್ಸಮನುಮಂತ್ರಿತಃ ॥ ನಿ
ರ್ಜಗಾಮ ಪುರದ್ವಾರಾತ್ಪದ್ಮಮಾಲೀ ನಿರಾಯುಧಃ ॥ ... ... ॥೫೭॥

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಪಂಚಾಶತ್ತಮೋಧ್ಯಾಯಃ

---

ಣಃ-ವರುಣನು, ದೇವದೇವಾಯ-ದೇವತೆಗಳಿಗೂ ದೇವನಾದ ಕೃಷ್ಣಂಗೆ, ಶ್ಯಾಮೈಕಕರ್ಣಾನ್-ಒಂದುಕಿವಿಮಾತ್ರ ಕಪ್ಪಾಗಿರುವ ಶುಕ್ಲಾನ್-ಎಲ್ಲವು ಬಿಳುಪಾಗಿರುವ, ಮನೋಜವಾನ್-ಮನಸ್ಸಿನಂತೆ ವೇಗವುಳ್ಳ, ಹಯಾನ್-ಅಶ್ವಮೇಧಯಾಗಕ್ಕೆ ಯೋಗ್ಯಂಗಳಾದ ಕುದುರೆಗಳನ್ನು, ಸಹಸ್ರಸಂಖ್ಯಾತಾನ್-ಸಾವಿರವಾಗಿ ಎಣಿಸಲ್ಪಟ್ಟವುಗಳನ್ನು, ದದೌ-ಕೊಟ್ಟನು. ॥೫೪॥ ನಿಧಿಪತಿಃ-ನಿಧಿನಿಕ್ಷೇಪಗಳಿಗೊಡೆಯನಾದ ಕುಬೇರನೆಂಬ, ಲೋಕಪಾಲಃ-ಲೋಕಾಧಿಪತಿಯು, ನಿಜೋದಯಾನ್-ತನ್ನ ಬಳಿಯಲ್ಲಿ ಹುಟ್ಟಿದ, ಅಷ್ಟೌಕೋಶಾನ್-ಎಂಟು ಬಕ್ಕಸ ಭಂಡಾರಗಳನ್ನೂ, ಅನ್ಯೇ ಲೋಕಪಾಲಾಶ್ಚ-ಇತರ ದಿಕ್ಪಾಲಕರೂ ಕೂಡ, ಸ್ವಾಧಿಕೃತಂ-ತಮ್ಮ ಅಧಿಕಾರಕ್ಕೊಳಗಾಗಿ ಮಾಡಲ್ಪಟ್ಟಿದ್ದ, ಧನಂ-ಭಾಗ್ಯವನ್ನು, ದದುಃ-ಕೊಟ್ಟರು ॥೫೫॥ ನೃಪ-ಪರೀಕ್ಷಿದ್ರಾಯನೇ! ಹರೌ-ನಾರಾಯಣನು, ಭೂಮಿಂ-ಭೂಲೋಕವಂ ಕುರಿತು, ಗತೇಸತಿ-ಅವತರಿಸಿಬಂದವನಾಗುತ್ತಲೂ, ಸ್ವಸಿದ್ಧಯೇ-ತಮ್ಮ ಅಧಿಕಾರಸಿದ್ಧಿಗೋಸುಗ, ಭಗವತಾ-ಭಗವಂತನಿಂದ, ಯದ್ಯದಾಧಿಪತ್ಯಂ-ಯಾವಯಾವ ಪ್ರಾಭವವು, ದತ್ತಂ-ತಮಗೆ ಕೊಡಲ್ಪಟ್ಟಿತ್ತೋ, ತತ್ಸರ್ವಂ-ಅದೆಲ್ಲವನ್ನೂ, ಪ್ರತ್ಯರ್ಪಯಾಮಾಸುಃ-ಮರಳಿ ಸಮರ್ಪಿಸಿದರು ॥೫೬॥ ಹರಿಃ-ಕೃಷ್ಣನು, ಯೋಗಪ್ರಭಾವೇನ-ತನ್ನ ಯೋಗಮಾಯಾಸಾಮರ್ಥ್ಯದಿಂದ, ಸರ್ವಜನಂ-ಮಥುರೆಯೊಳಗಿದ್ದವರೆಲ್ಲರನ್ನೂ, ತತ್ರನೀತ್ವಾ-ಆ ದ್ವಾರಕೆಯಲ್ಲಿ ಸೇರಿಸಿ, ಪ್ರತ್ಯಾಗತ್ಯ-ಮರಳಿಬಂದು, ಅಥ-ಆಮೇಲೆ, ರಾಮೇಣಸಹ-ಬಲರಾಮನೊಡನೆ, ಸಮನುಮಂತ್ರಿತಃ-ಚೆನ್ನಾಗಿ ಆಲೋಚಿಸಿಕೊಂಡವನಾದ, ಕೃಷ್ಣಃ-ಕೃಷ್ಣನು, ಪದ್ಮಮಾಲೀ-ಕಮಲಗಳ ಕಂಠಸರವುಳ್ಳವನಾಗಿಯೂ, ನಿರಾಯುಧಃ-ಆಯುಧವಿಲ್ಲದವನಾಗಿಯೂ, ಪುರದ್ವಾರಾತ್-ಊರಬಾಕಲದೆಸೆಯಿಂದ, ನಿರ್ಜಗಾಮ-ಹೊರನೆಬಂದನು. ॥೫೭॥

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಪಂಚಾಶತ್ತಮೋಧ್ಯಾಯಃ

---

ವರುಣನು ಶ್ಯಾಮವರ್ಣವಾದ ಒಂದು ಕಿವಿಯುಳ್ಳ ಶುಭ್ರವರ್ಣಂಗಳಾದ ದೇಹಂಗಳುಳ್ಳ ಮನೋವೇಗವುಳ್ಳ ಉತ್ತಮಾಶ್ವಂಗಳ ಸಾವಿರವಂ ಶ್ರೀಕೃಷ್ಣನಿಗೆ ಕೊಟ್ಟನು ॥೫೪॥ ಕುಬೇರನು ಅಕ್ಷಯಂಗಳಾದ ಎಂಟುನಿಧಿಗಳಂ ಕಳುಹಿಸಿದನು. ಮಿಗಿಲಾದ ಲೋಕಪಾಲಕರು ತಮ್ಮ ತಮ್ಮ ಧನಂಗಳಂ ಕಳುಹಿಸಿದರು ॥೫೫॥ ಪೂರ್ವದಲ್ಲಿ ದಿಕ್ಪಾಲಕರಿಗೆ ಆಧಿಪತ್ಯವಸಿತ್ತಾಗ ಭಗವಂತನಿಂದ ಯಾವಯಾವ ವಸ್ತುಗಳು ಕೊಡಲ್ಪಟ್ಟು ಇದ್ದವೋ ಆ ವಸ್ತುಗಳನೆಲ್ಲವಂ ಶ್ರೀಹರಿಯು ಭೂಮಿಯಲ್ಲಿ ಅವತರಿಸಿದ ಸಮಯದಲ್ಲಿ ಸ್ವಾಮಿಗೆ ಒಪ್ಪಿಸಿದರು ॥೫೬ ಭಗವಂತನಾದ ಶ್ರೀಕೃಷ್ಣನು ಆ ಪುರಕ್ಕೆ ಸ್ವಜನರೆಲ್ಲರಂ ಯೋಗಸಾಮರ್ಥ್ಯದಿಂದ ಕರೆದುಕೊಂಡು ಹೋಗಿ ಅಲ್ಲಿ ಇರಿಸಿಬಿಟ್ಟು ತಾನು ಪುನಶ್ಚ ಮಥುರಾಪಟ್ಟಣಕ್ಕೆ ಬಂದು ಬಲರಾಮನಿಗೆ ನೀನು ಇಲ್ಲಿ ಇದ್ದು ಪ್ರಜೆಗಳಂ ಪಾಲಿಸು ಎಂದು ಹೇಳಿಬಿಟ್ಟು ನಿರಾಯುಧನಾಗಿ ಪುರದ್ವಾರದಿಂದ ಹೊರಕ್ಕೆ ಹೊರಟು ಬಂದನು ॥೫೭॥

ಇಂತು ಶ್ರೀಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸಿದನೆಂದು ಸೂತಪೌರಾ
ಣಿಕನು ನೈಮಿಶಾರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಪೇಳಿದ
ನೆಂಬಲ್ಲಿಗೆ- ಶ್ರೀಮನ್ಮಹೀಶೂರಪುರವರಾಧೀಶ ಶ್ರೀಚಾಮರಾಜ
ತನುಜ ಶ್ರೀಮತ್ಕೃಷ್ಣರಾಜವಿರಚಿತಮಾದ ಶ್ರೀಕೃಷ್ಣ
ರಾಜವಾಣೀವಿಲಾಸಮೆಂಬ ಶ್ರೀಭಾಗವತಪುರಾಣದ ಕ
ರ್ಣಾಟಭಾಷಾವ್ಯಾಖ್ಯಾನದೊಳು ದಶಮಸ್ಕಂಧ
ದಲ್ಲಿ ೫೦ನೆಯ ಅಧ್ಯಾಯವು
ಸಂಪೂರ್ಣಮಾದುದು-



ಮುಚುಕುಂದಸ್ಯಶ್ರೀಕೃಷ್ಣಸುದರ್ಶನಾದಿಕಥಾಪ್ರಾರಂಭಃ

ಶ್ರೀಶುಕಃ॥ ತಂವಿಲೋಕ್ಯವಿನಿಷ್ಕ್ರಾಂತಮುಜ್ಜಿಹಾನಮಿವೋಡುಪಮ್ । ದರ್ಶನೀಯತಮಂಶ್ಯಾಮಂಪೀತಕೌಶೇಯವಾಸಸಮ್ ॥೧॥ ಶ್ರೀವತ್ಸವಕ್ಷಸಂಭ್ರಾಜತ್ಕೌಸ್ತುಭಾಮುಕ್ತಕಂಧರಮ್ । ಪೃಥುದೀರ್ಘಚತುರ್ಬಾಹುಂನವಕಂಜಾರುಣೇಕ್ಷಣಮ್ ॥೨॥ ನಿತ್ಯಂಪ್ರಮುದಿತಂಶ್ರೀಮತ್ಸುಕಪೋಲಂ ಶುಚಿಸ್ಮಿತಂ । ಮುಖಾರವಿಂದಂಬಿಭ್ರಾಣಂಸ್ಫುರನ್ಮಕರಕುಂಡಲಂ ॥೩॥ ವಾಸುದೇವೋಹ್ಯಯಮಿತಿಪುಮಾನ್ ಶ್ರೀವತ್ಸಲಾಂಛನಃ । ಚತುರ್ಭುಜೋರವಿಂದಾಕ್ಷೋವನಮಾಲ್ಯತಿಸುಂದರಃ ॥೪॥ ಲಕ್ಷಣೈ

---

೫೧ನೆಯ ಅಧ್ಯಾಯದ ಪ್ರತಿಪದಟೀಕೆ.

[ಶುಕವಾಕ್ಯವು] ವಿನಿಷ್ಕ್ರಾಂತಂ-ಊರಿಂದ ಹೊರಟುಬಂದವನೂ, ಉಜ್ಜಿಹಾನಂ-ಹಾರಿಹೋಗುತಲಿರುವನೂ, ಉಡುಪಮಿವ-ಚಂದ್ರನನ್ನು ಹೇಗೋ ಹಾಗೆ, ದರ್ಶನೀಯತಮಂ-ಬಹಳವಾಗಿ ನೋಡತಕ್ಕವನಾಗಿರುವನೂ, ಶ್ಯಾಮಂ-ಸುಂದರನೂ, (ಮತ್ತು ಕಪ್ಪಾದ) ಪೀತಕೌಶೇಯವಾಸಸಂ-ಹಸುರುಪಟ್ಟೆಯ ವಸ್ತ್ರವುಳ್ಳವನೂ ॥೧॥ ಶ್ರೀವತ್ಸವಕ್ಷಸಂ-ಐಶ್ವರ್ಯದವಚ್ಚೆಯು ಎದೆಯಲ್ಲಿಉಳ್ಳ, ಭ್ರಾಜತ್ಕೌಸ್ತುಭಾಮುಕ್ತಕಂಧರಂ-ಶೋಭಿಸುವ ಕೌಸ್ತುಭಮಾಣಿಕ್ಯದಿಂ ಕೂಡಿದ ಕೊರಳುಳ್ಳ, ಪೃಥುದೀರ್ಘಚತುರ್ಬಾಹುಂ-ತೋರವಾಗಿಯೂ ನೀಳವಾಗಿಯೂ ಇರುವ ನಾಲ್ಕು ತೋಳುಗಳುಳ್ಳ, ನವಕಂಜಾರುಣೇಕ್ಷಣಂ-ಹೊಸತಾವರೆಗಳಂತೆ ಕಂಗಳುಳ್ಳವನೂ ॥೨॥ ನಿತ್ಯಂಪ್ರಮುದಿತಂ-ಯಾವಾಗಲೂ ಸಂತೋಷವುಳ್ಳ, ಶ್ರೀಮತ್ಸುಕಪೋಲಂ-ಕಾಂತಿಯುಳ್ಳ ಸೊಗಸಾದ ಕೆನ್ನೆಗಳುಳ್ಳ, ಶುಚಿಸ್ಮಿತಂ-ಬಿಳುಪಾದನಗೆಯುಳ್ಳ, ಸ್ಫುರನ್ಮಕರಕುಂಡಲಂ-ಶೋಭಿಸುವಮಕರಾಕಾರವಾದ ಕಿವಿಯೊಡವೆಗಳುಳ್ಳ, ಮುಖಾರವಿಂದಂ-ವದನಕಮಲವನ್ನು, ಬಿಭ್ರಾಣಂ-ವಹಿಸಿರುವನೂ, ತಂ-ಆದ ಆ ಶ್ರೀಕೃಷ್ಣನಂ, ವಿಲೋಕ್ಯ-ನೋಡಿ ॥೩॥ ಅಯಂ-ಇವನು, ಶ್ರೀವತ್ಸಲಾಂಛನಃ-ಶ್ರೀವತ್ಸವೇ ಚಿಹ್ನವಾಗಿವುಳ್ಳ, ಚತುರ್ಭುಜಃ-ನಾಲ್ಕುತೋಳುಳ್ಳ, ವನಮಾಲೀ-ತುಲಸಿಯಹಾರವುಳ್ಳ, ಅತಿಸುಂದರಃ-ಬಹಳಚಲುವನಾದ, ಅಯಂಪುಮಾನ್-ಈ ಪುರುಷನು, ವಾಸುದೇವೋಹಿ-ವಸುದೇವನ ಮಗನಲ್ಲವೆ? ಇತಿ-ಹೀಗೆ ॥೪॥ ನಿರಾಯುಧಃ-ಆಯುಧವಿಲ್ಲದವನಾಗಿ, ಪದ್ಭ್ಯಾಂ-ಕಾಲುಗಳಿಂದ, ಚಲನ್-ನಡೆಯುತಲಿರುವನಾಗಿರುವನು. ನಾರದಪ್ರೋಕ್ತೈಃ-ನಾರದಮುನಿಯಿಂದ ಹೇಳಲ್ಪಟ್ಟಿರುವ, ಲಕ್ಷಣೈಃ-ಗುರ್ತುಗಳಿಂದ, ಅನ್ಯಃ-ಇತರನು, ನಭವಿತುಮರ್ಹತಿ-ಆಗಲ್ತಕ್ಕವನಲ್ಲವು. ಅನೇನ-ಇವನೊಡನೆ, ನಿರಾಯುಧಃ-ಆಯುಧವಿಲ್ಲದವನಾಗಿಯೇ, ಯೋತ್ಸ್ಯೇ-

---

ಶ್ರೀಧರೀಯಶ್ಲೋಕಃ॥ ಏಕಪಂಚಾಶತ್ತಮೇಹರ್ನ್ಮುಚುಕುಂದದೃಶಾಹರಿಃ । ಯವನಂಮುಚುಕುಂದೇನಸ್ತುತಸ್ಸನ್ನನ್ವಕಂಪತ ॥ ಐವತ್ತೊಂದನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ಮುಚುಕುಂದನ ನೇತ್ರತೇಜಸ್ಸಿನಿಂದ ಕಾಲಯವನನಂ ಸಂಹರಿಸಿ ಮುಚುಕುಂದನಿಂದ ಸ್ತುತಿಗೆಯ್ಯಲ್ಪಟ್ಟವನಾಗಿ ಆ ಮುಚುಕುಂದರಾಯನಿಗೆ ಅನುಗ್ರಹವಂಮಾಡಿದನೆಂಬರ್ಥವಂ ಶ್ರೀಶುಕಾಚಾರ್ಯನು ಪರೀಕ್ಷಿದ್ರಾಯನಂಕುರಿತು ನಿರೂಪಿಸುವದೆಂತೆನ್ನೆ—

ಎಲೈ ಅರಸೇ! ಅನಂತರದಲ್ಲಿ ಮಧುರಾಪುರದಿಂದ ನಿರಾಯುಧನಾಗಿ ಹೊರಟುಬರುತ್ತಿರುವ, ಉದಯಿಸಿಬರುವ ಪೂರ್ಣಚಂದ್ರನಂತೆ ನೋಡುವುದಕ್ಕೆ ಮನೋಹರನಾದ ಶಾಂತನಾದ ಪೀತಾಂಬರಧಾರಿಯಾದ ॥೧॥ ಶ್ರೀವತ್ಸ ಚಿಹ್ನಿತನಾದ ಹೊಳೆವ ಕೌಸ್ತುಭಮಣಿಯಿಂದ ಪ್ರಕಾಶಿಸುವಕಂಠವುಳ್ಳ, ಸ್ಥೂಲಂಗಳಾದ ದೀರ್ಘಂಗಳಾದ ನಾಲ್ಕು ಬಾಹುಗಳುಳ್ಳ, ಪದ್ಮಲೋಚನನಾದ ॥೨॥ ನಿರಂತರದಲ್ಲಿಯೂ ಪ್ರಮುದಿತವಾದ ಕಾಂತಿಯುಕ್ತವಾದ ಸುಂದರಕಪೋಲಗಳುಳ್ಳ, ಮುಗುಳುನಗೆಯುಳ್ಳ, ಮಕರಕುಂಡಲಧಾರಿಯಾದ, ದಿವ್ಯಮುಖವಂ ಧರಿಸಿರುವ ॥೩॥ ಶ್ರೀಕೃಷ್ಣನಂ ನೋಡಿ ಕಾಲಯವನನು ಈತನೇ ಸಾಕ್ಷಾದ್ವಾಸುದೇವನು. ಶ್ರೀವತ್ಸಲಾಂಛನನಾಗಿ ಚತುರ್ಭುಜನಾಗಿ ಪದ್ಮಲೋಚನನಾಗಿ ವನಮಾಲಾಲಂಕೃತನಾಗಿಯೂ ಇದ್ದಾನೆ. ॥೪॥ ನಾರದಋಷಿಯಿಂದ ಹೇಳಲ್ಪಟ್ಟ ಲಕ್ಷಣಂಗಳೆಲ್ಲವೂ ಈತನಲ್ಲಿಯೇ ಇರುವವಾದಕಾರಣದಿಂದ ಸಾಕ್ಷಾನ್ನಾರಾಯಣನೇಸರಿ ಮತ್ತೊಬ್ಬನಲ್ಲವು, ಎಂದು ನಿಶ್ಚಯಿಸಿ-ಈತನು ನಿರಾಯುಧನಾಗಿದ್ದಾನೆ ನಾನೂ ನಿರಾಯುಧನಾಗಿಯೇ ಈತನೊಡನೆ

ನಾರದಪ್ರೋಕ್ತೈರ್ನಾನ್ಯೋಭವಿತುಮರ್ಹತಿ|ನಿರಾಯುಧಶ್ಚಲನ್ ಪದ್ಭ್ಯಾಂಯೋತ್ಸ್ಯೇನೇನನಿರಾಯುಧಃ||೫||ಇತಿನಿಶ್ಚಿತ್ಯಯವನಃಪ್ರಾದ್ರವಂತಂಪರಾಙ್ಮುಖಮ್ | ಅನ್ವಧಾವಜ್ಜಿಘೃಕ್ಷುಸ್ತಂದುರಾಪಮಪಿಯೋಗಿನಾಮ್||೬||ಹಸ್ತಪ್ರಾಪ್ತಮಿವಾತ್ಮಾನಂಹರಿಣಾಸಪದೇಪದೇ | ನೀತೋದರ್ಶಯತಾದೂರಂಯವನೇಶೋದ್ರಿಕಂದರಮ್ ||೭||ಪಲಾಯನಂಯದುಕುಲೇಜಾತಸ್ಯತವನೋಚಿತಮ್ | ಇತಿಕ್ಷಿಪನ್ನನುಗತೋನೈನಂಪ್ರಾಪಹತಾಶುಭಃ ||೮|| ಏವಂಕ್ಷಿಪ್ತೋಪಿಭಗವಾನ್ಪ್ರಾವಿಶದ್ಗಿರಿಕಂದರಮ್ | ಸೋಪಿಪ್ರವಿಷ್ಟಸ್ತತ್ರಾನ್ಯಂಶಯಾನಂದದೃಶೇನರಮ್||೯||ನನ್ವಸೌದೂರಮಾನೀಯಶೇತೇಮಾಮಿಹಸಾಧುವತ್ | ಇತಿಮತ್ವಾಚ್ಯುತಂಮೂಢಸ್ತಂಪದಾಸಮತಾಡಯತ್ ||೧೦||ಸಉತ್ಥಾಯಚಿರಂಸುಪ್ತಃಶನೈರುನ್ಮೀಲ್ಯ

---

ಕಾಳಗಮಾಡುವೆನು ||೫||ಯವನಃ-ಕಾಲಯವನನು, ಇತಿ-ಹೀಗೆ, ನಿಶ್ಚಿತ್ಯ-ನಿರ್ಣಯಮಾಡಿಕೊಂಡು, ಪರಾಙ್ಮುಖಂ-ಅತ್ತಕಡೆಗೆ ಮೋರೆಮಾಡಿಕೊಂಡು,(ಬೆನ್ನು ತೋರಿಸುತ್ತ)ಪ್ರಾದ್ರವಂತಂ-ಓಡಿಹೋಗುತಲಿರುವ, ತಂ-ಆಕೃಷ್ಣನನ್ನು, ಯೋಗಿನಾಂ ದುರಾಪಮಪಿ-ಯೋಗಿಗಳಿಗೂ ದೊರೆಯತಕ್ಕವ ನಲ್ಲದವನನ್ನಾದರೂ, ಜಿಘೃಕ್ಷುಃ-ಹಿಡಿಯಲೆಳಸಿದವನಾಗಿ, ಅನ್ವಧಾವತ್-ಅಟ್ಟಿಕೊಂಡುಓಡಿದನು ||೬||ಸಯವನೇಶಃ-ಆಯವನರಾಜನು, ಪದೇಪದೇ-ಅಡಿಯಡಿಯಲ್ಲಿಯೂ, ಆತ್ಮಾನಂ-ತನ್ನನ್ನು, ಹಸ್ತಪ್ರಾಪ್ತಮಿವ-ಕೈಗೆಸಿಕ್ಕಿದವನನ್ನಾಗಿ, ದರ್ಶಯತಾ-ತೋರಿಸುತಲಿರುವ, ಹರಿಣಾ-ಕೃಷ್ಣನಿಂದ, ದೂರಂ-ಬಹುದೂರವಾದ, ಅದ್ರಿಕಂದರಂ-ಬೆಟ್ಟದಗವಿಯನ್ನು, ನೀತಃ-ಸೇರಿಸಲ್ಪಟ್ಟವನಾದನು ||೭||ಯದುಕುಲೇ-ಯಾದವರ ವಂಶದಲ್ಲಿ, ಜಾತಸ್ಯ-ಹುಟ್ಟಿದವನಾದ, ತವ-ನಿನಗೆ, ಪಲಾಯನಂ-ಓಡಿಹೋಗುವಿಕೆ, ನೋಚಿತಂ-ತಕ್ಕದ್ದಲ್ಲವು. ಇತಿ-ಹೀಗೆ, ಕ್ಷಿಪನ್-ಆಕ್ಷೇಪಿಸುತಲಿರುವನಾಗಿ, ಹತಾಶುಭಃ-ಕ್ಷೀಣಕಲ್ಮಷನಾದವರೂಕೂಡ ಏನಂ-ಈಕೃಷ್ಣನನ್ನು,ನಪ್ರಾಪ-ಹೊಂದಲಿಲ್ಲವು.(ಹಿಡಿಯಲಿಲ್ಲವು) ||೮|| ಭಗವಾನ್-ಕೃಷ್ಣನು, ಏವಂ-ಹೀಗೆ, ಕ್ಷಿಪ್ತೋಪಿ-ಆಕ್ಷೇಪಿಸಲ್ಪಟ್ಟವ ನಾದರೂಕೂಡ,ಗಿರಿಕಂದರಂ-ಗುಡ್ಡದಗವಿಯನ್ನು, ಪ್ರಾವಿಶತ್-ಹೊಕ್ಕನು. ಸೋಪಿ-ಆಕಾಲಯವನನೂ ಕೂಡ, ಪ್ರವಿಷ್ಟಃ-ಹೊಕ್ಕವನಾಗಿ, ತತ್ರ-ಆಗವಿಯಲ್ಲಿ, ಶಯಾನಂ-ಮಲಗಿರುವ, ಅನ್ಯಂನರಂ-ಇತರಮನುಷ್ಯನನ್ನು, ದದೃಶೇ-ಕಂಡನು ||೯||ಅಸೌ-ಇವನು, ಮಾಂ-ನನ್ನನ್ನು, ದೂರಂ-ಇಷ್ಟುದೂರವು, ಆನೀಯ-ತಂದು, ಇಹ-ಇಲ್ಲಿ, ಸಾಧುವತ್-ಸತ್ಪುರುಷನಹಾಗೆ, ಶೇತೇನನು-ಮಲಗಿರುವನಲ್ಲವೇ? ಇತಿ-ಹೀಗೆ, ಅಚ್ಯುತಂ ಮತ್ವಾ-ಕೃಷ್ಣನೆಂದು ತಿಳಕೊಂಡು, ಮೂಢಃ-ಅಜ್ಞಾನಿಯಾದ್ದರಿಂದ, ತಂ-ಆಮಲಗಿದ್ದ ಮನುಷ್ಯನನ್ನು, ಪದಾ-ಕಾಲಿನಿಂದ, ಸಮತಾಡಯತ್-ತುಳಿದೊದೆದನು ||೧೦||ಚಿರಂ-ಬಹುಕಾಲದಿಂದ, ಸುಪ್ತಃ-ನಿದ್ರಿಸುತ ಲಿದ್ದವನಾದ, ಸಃ-ಆಪುರುಷನು, ಉತ್ಥಾಯ-ಎದ್ದು, ಶನೈಃ-ಮೆಲ್ಲಗೆ, ಲೋಚನೇ-ಕಂಗಳನ್ನು, ಉನ್ಮೀಲ್ಯ-ತೆರದು, ದಿಶಃ-ದಿಕ್ಕುಗಳನ್ನು, ವಿಲೋಕಯನ್-ನೋಡುತಲಿರುವನಾಗಿ, ಪಾರ್ಶ್ವೇ-ಪಕ್ಕದಲ್ಲಿ, ಅವಸ್ಥಿತಂ-ನಿಂತಿರುವನಾದ, ತಂ-ಆಕಾಲಯವನನನ್ನು,ಅದ್ರಾಕ್ಷೀತ್-ನೋಡಿದನು||೧೧||

---

ಯುದ್ಧವಂಮಾಡುತ್ತೇನೆ ||೫|| ಎಂದು ಕಾಲಯವನನು ಪರಾಙ್ಮುಖನಾಗಿ ಓಡಿಹೋಗುತ್ತಲಿರುವ ಯೋಗಿಗಳಿಗೂ ಪಡೆಯ ಲಶಕ್ಯನಾದ ಶ್ರೀಕೃಷ್ಣನಂ ಹಿಡಿಯಲೋಸುಗ ಹಿಂದೆ ಅಟ್ಟಿಬಂದನು ||೬||ಶ್ರೀಕೃಷ್ಣನು ಅವನಿಂದ ಅಟ್ಟಿಸಿಕೊಂಡು ಅವನಕೈಗೆ ಸಿಕ್ಕದಂತಾಗಿ ಪುನಶ್ಚ ತಪ್ಪಿಸಿಕೊಂಡು ಬಹುದೂರ ಪರ್ಯಂತವೂ ಕಾಲಯವನನು ಕರೆದುಕೊಂಡುಹೋಗಿ ಒಂದುಪರ್ವತದ ಗುಹೆಯೊಳಕ್ಕೆ ಪ್ರವೇಶಿಸಿದನು||೭||ಹಿಂದ ಅಟ್ಟಿಹೋಗುತ್ತಲಿರುವ ಕಾಲಯವನನು ಎಲೈ, ಕೃಷ್ಣನೇ: ಯದುಕುಲದಲ್ಲಿ ಹುಟ್ಟಿದವನೇ! ನಿನಗೆ ಪಲಾಯನವು ಉಚಿತವಲ್ಲ, ನಿಲ್ಲು, ಎಂದು ಕೃಷ್ಣನಂ ಹೇಳನಂಗೆಯ್ಯುತ್ತಲೇ ಅಟ್ಟಿಹೋದನು ||೮||ಹಾಗೆ ಆದರೂ ಶ್ರೀಕೃಷ್ಣನು ಓಡಿಹೋಗಿ ಗುಹೆಯಂ ಪ್ರವೇಶಿಸಿದನು. ಆಕಾಲಯವನನು ಸಂಗಡಲೇ ಗುಹೆಯಂಹೊಕ್ಕು ಅಲ್ಲಿಮಲಗಿರುವ ಮತ್ತೊಬ್ಬನಾದ ಪುರುಷನಂ ಕಂಡನು ||೯||ಆಮೇಲೆ ಆಕಾಲಯವನನು ಈಕೃಷ್ಣನು ಓಡಿಬಂದು ನನ್ನಂದೂರವಾಗಿ ಯೆಳೆತಂದು ಇಲ್ಲಿಯೇನೂ ಅರಿಯದವನಂತೆ ಮಲಗಿದ್ದಾನೆ, ಎಂದು ತಿಳಿದು ಮಲಗಿರುವ ಪುರುಷನು ಕಾಲಿಂದೊದೆದನು||೧೦||ಬಹುಕಾಲದಿಂದ ಮಲಗಿದ್ದ ಆಪುರುಷನು ಯೆದ್ದು ಕಣ್ಣುಗಳನ್ನು ಉಜ್ಜಿಕೊಂಡು ಕಣ್ಣುಗಳಂ ತೆರದುದಿಕ್ಕುಗಳಂನೋಡಿ ಪಾರ್ಶ್ವದಲ್ಲಿನಿಂತಿರುವ ಕಾಲಯವನನಂ ನೋಡಿದನು ||೧೧||ಕೋಪಿಷ್ಠನಾ

ಲೋಚನೆ|ದಿಶೋವಿಲೋಕಯನ್ಪಾರ್ಶ್ವೇ ತಮದ್ರಾಕ್ಷೀದವಸ್ಥಿತಮ್||೧೧||ಸತಾವತ್ತಸ್ಯರುಷ್ಟಸ್ಯದೃಷ್ಟಿ ಪಾತೇನಭಾರತ| ದೇಹಜೇನಾಗ್ನಿನಾದಗ್ಧೋಭಸ್ಮಸಾದಭವತ್ಕ್ಷಣಾತ್||೧೨||ರಾಜೋವಾಚ| ಕೋನಾಮಸಪುಮಾನ್ಬ್ರಹ್ಮನ್ಕಸ್ಯಕಿಂವೀರ್ಯಏವವಾ | ಕಸ್ಮಾದ್ಗುಹಾಂಗತಶ್ಶಿಶ್ಯೇಕಿಂತೇಜೋಯವನಾರ್ದನಃ ||೧೩|| ಶ್ರೀಶುಕಃ|ಸಇಕ್ಷ್ವಾಕುಕುಲೇಜಾತೋಮಾಂಧಾತೃತನಯೋಮಹಾನ್ | ಮುಚುಕುಂದಇತಿಖ್ಯಾತೋ ಬ್ರಹ್ಮಣ್ಯಸ್ಸತ್ಯಸಂಗರಃ ||೧೪||ಸಂಯಾಚಿತಸ್ಸುರಗಣೈರಿಂದ್ರಾದ್ಯೈರಾತ್ಮರಕ್ಷಣೇ |ಅಸುರೇಭ್ಯಃಪರಿತ್ರಸ್ತೈಸ್ತದ್ರಕ್ಷಾಂಸೋಕರೋಚ್ಚಿರಮ್ ||೧೫|| ಲಬ್ಧ್ವಾಗುಹಂತೆಸ್ವಃಪಾಲಂಮುಚುಕುಂದಮಥಾಬ್ರುವನ್ |ರಾಜನ್ವಿರಮತಾಂಕೃಛ್ರಾದ್ಭವಾನ್ನಃಪರಿಪಾಲನಾತ್||೧೬||ನರಲೋಕಂಪರಿತ್ಯಜ್ಯರಾಜ್ಯಂ

---

ಹೇಭಾರತ-ಎಲೈಭರತವಂಶೋತ್ಪನ್ನನೇ! ಸತಾವತ್-ಆಕಾಲಯವನ ನಾದರೋ, ರುಷ್ಟಸ್ಯ-ರೋಷವುಳ್ಳವನಾದ, ತಸ್ಯ-ಆ ಪುರುಷನ, ದೃಷ್ಟಿಪಾತೇನ-ಕಣ್ಣುಬೀಳುವುದರಿಂದ, ದೇಹಜೇನ-ಶರೀರದಲ್ಲಿ ಹುಟ್ಟಿದ, ಅಗ್ನಿನಾ-ಬೆಂಕಿಯಿಂದ, ದಗ್ಧಃ-ಸುಡಲ್ಪಟ್ಟವನಾಗಿ, ಕ್ಷಣಾತ್-ನಿಮಿಷದಲ್ಲಿ, ಭಸ್ಮಸಾತ್ ಅಭವತ್-ಬೂದಿಯಾದನು ||೧೨||(ರಾಜಪ್ರಶ್ನವು.) ಬ್ರಹ್ಮನ್-ಬ್ರಾಹ್ಮಣನಾದ ಶುಕಮುನಿಯೇ! ಸಪುಮಾನ್ನಾಮ-ಆಪುರುಷನೆಂಬವನು, ಕಃ-ಯಾರು? ಕಸ್ಯವೀರ್ಯಂ-ಯಾವವನಮಗನು, ಕಿಂವಾ-ಏನದು ಅಥವಾ-ಕಿಂವೀರ್ಯಏವ-ಏನುಸಾಮರ್ಥ್ಯವುಳ್ಳವನು? ಕಸ್ಮಾತ್-ಯಾವನಿಮಿತ್ತದ ದೆಸೆಯಿಂದ, ಗುಹಾಂಗತಃ-ಗವಿಯನ್ನು ಸೇರಿದವನಾಗಿ, ಶಿಶ್ಯೇ-ಮಲಗಿದ್ದನು? ಯವನಾರ್ದನಃ-ಯವನನನ್ನು ನಾಶಮಾಡಿದವನು, ಕಿಂತೇಜಃ-ಯಾವತೇಜಸ್ಸು, ಅಥವಾ ಯಾರಮಗನು ||೧೩||(ಶುಕವಾಕ್ಯವು.)ಸಃ-ಅವನು, ಇಕ್ಷ್ವಾಕುಕುಲೇ-ಇಕ್ಷ್ವಾಕುರಾಯನ ವಂಶದಲ್ಲಿ, ಜಾತಃ-ಹುಟ್ಟಿದವನು, ಮಾಂಧಾತೃತನಯಃ-ಮಾಂಧಾತೃರಾಯನ ಮಗನಾದವನು, ಮಹಾನ್-ಮಹಾತ್ಮನಾದ, ಬ್ರಹ್ಮಣ್ಯಃ-ಬ್ರಹ್ಮವೇತ್ತನಾದ, ಸತ್ಯಸಂಗರಃ-ಸತ್ಯವಾದ ಯುದ್ಧವುಳ್ಳವನಾದ, ಮುಚುಕುಂದಇತಿ-ಮುಚುಕುಂದನೆಂದು, ಖ್ಯಾತಃ-ಪ್ರಸಿದ್ಧಿಯುಂಟಾದವನು ||೧೪||ಅಸುರೇಭ್ಯಃ-ದೈತ್ಯರಿಂದ, ಪರಿತ್ರಸ್ತೈಃ-ಹೆದರಿದವರಾದ, ಇಂದ್ರಾದ್ಯೈಃ-ಇಂದ್ರನು ಮೊದಲಾದ, ಸುರಗಣೈಃ-ದೇವಸಂಘಗಳಿಂದ, ಆತ್ಮರಕ್ಷಣೇ-ತಮ್ಮನ್ನು ರಕ್ಷಿಸುವ ವಿಷಯದಲ್ಲಿ, ಸಂಯಾಚಿತಃ-ಚನ್ನಾಗಿ ಪ್ರಾರ್ಥಿಸಲ್ಪಟ್ಟವನಾದ; ಸಃ-ಆಮುಚುಕುಂದರಾಯನು, ತದ್ರಕ್ಷಾಂ-ಆದೇವತೆಗಳ ರಕ್ಷಣವನ್ನು, ಚಿರಂ-ಬಹುಕಾಲವು, ಅಕರೋತ್-ಮಾಡಿದನು ||೧೫||ತೇ-ಆದೇವತೆಗಳು, ಗುಹಂ-ಕುಮಾರಸ್ವಾಮಿಯನ್ನು, ಸ್ವಃಪಾಲಂ-ಸ್ವರ್ಗಕ್ಕೆರಕ್ಷಕನನ್ನಾಗಿ, ಲಬ್ಧ್ವಾ-ಪಡೆದು, ಅಥ-ಆಮೇಲೆ, ಮುಚುಕುಂದಂ-ಮುಚುಕುಂದರಾಯನಂಕುರಿತು, ಅಬ್ರುವನ್-ಹೇಳಿದರು. ರಾಜನ್-ಎಲೈಭೊರೆಯಾದ ಮುಚುಕುಂದನೇ! ಕೃಛ್ರಾತ್-ಕಷ್ಟವಾದ, ನಃ-ನಮ್ಮ, ಪರಿಪಾಲನಾತ್-ಶೂರತಾರಕಾದಿ ದೈತ್ಯರದೆಸೆಯಿಂ ರಕ್ಷಿಸುವ ವ್ಯಾಪಾರದತ್ತಣಿಂ, ಭವಾನ್-ನೀನು, ವಿರಮತಾಂ-ಸುಮ್ಮನೆವಿಶ್ರಾಂತಿಯನ್ನೈದು ||೧೬||ವೀರ-ಶೂರನಾದ ಮುಚುಕುಂದನೇ! ನರಲೋ

---

ದ ಆಪುರುಷನಿಂದ ನೋಡಲ್ಪಟ್ಟು, ಅಕ್ಷಣದಲ್ಲಿಯೇ ಆಪುರುಷನ ದೃಷ್ಟಿಪಾತದಿಂದಾದ ದೇಹಜನ್ಯವಾದ ಅಗ್ನಿಯಿಂದ ದಗ್ಧನಾಗಿ ಕಾಲಯವನನು ಭಸ್ಮರೂಪನಾದನು ||೧೨||(ಎಂಬಶುಕಾಚಾರ್ಯನ ವಾಕ್ಯವಂಕೇಳಿ ಪರೀಕ್ಷಿದ್ರಾಯನು ಪ್ರಶ್ನೆಗೆಯ್ದನು) ಎಲೈಬ್ರಾಹ್ಮಣೋತ್ತಮನಾದ ಶುಕಾಚಾರ್ಯನೇ! ಮಲಗಿದ್ದ ಪುರುಷನು ಯಾರು? ಯಾರಮಗನು! ಎಂತಿಯ ಸಾಮರ್ಥ್ಯವುಳ್ಳವನು? ಕಾಲಯವನನಂ ಸಂಹರಿಸಿದ ಆತೇಜಸ್ಸು ಎಲ್ಲಿಯದು? ಯಾವಕಾರಣದಿಂದ ಗುಹೆಯಲ್ಲಿ ಮಲಗಿದ್ದನು?||೧೩||(ಎಂಬರಾಜವಾಕ್ಯವಂಕೇಳಿ ಶುಕಾಚಾರ್ಯನು ನುಡಿದನೆಂತೆನೆ-)ಎಲೈ, ಅರಸೇ! ಆಪುರುಷನು ಇಕ್ಷ್ವಾಕುರಾಯನ ವಂಶದಲ್ಲಿ ಹುಟ್ಟಿದವನು. ಮಾಂಧಾತೃ ರಾಜನ ಪುತ್ರನು. ಮಹಾತ್ಮನು. ಮುಚುಕುಂದನೆಂಬ ನಾಮಧೇಯವುಳ್ಳವನು. ಬ್ರಾಹ್ಮಣಪ್ರಿಯನು . ಸತ್ಯಪ್ರತಿಜ್ಞೆಯುಳ್ಳವನು ||೧೪|| ಅಸುರರಿಂದ ಭಗ್ನರಾಗಿ ರಕ್ಷಕರಂ ಕಾಣದೆಇರುವ ಇಂದ್ರಾದಿ ದೇವತೆಗಳಿಂದ ತಮ್ಮಂ ರಕ್ಷಿಸಲೋಸುಗ ಪ್ರಾರ್ಥಿತನಾಗಿ ಬಹುಕಾಲಪರ್ಯಂತವೂ ಅಸುರರಂ ಸಂಹರಿಸಿದೇವತೆಗಳಂ ಸಂರಕ್ಷಿಸಿದನು||೧೫|| ಅನಂತರದಲ್ಲಿ ಕುಮಾರಸ್ವಾಮಿಯಂ ದೇವಸೇನಾ ಪತಿಯನ್ನಾಗಿ ಪಡೆದು ದೇವತೆಗಳು ಮುಚುಕುಂದನಂ ಕುರಿತು ನುಡಿದರು- ಎಲೈಮಹಾ ವೀರನಾದ ಮುಚುಕುಂದರಾಯನೇ! ಮಹಾಕಷ್ಟವಂ ಪರಿಹರಿಸಿ ನೀನುನಮ್ಮಂ ರಕ್ಷಿಸಿದವನಾದೆ, ಇನ್ನು ಬಿಡು ||೧೬||ಭೂಲೋಕವಂ ಪರಿತ್ಯಜಿಸಿ ನಿಷ್ಕಂಟಕವಾದ ರಾಜ್ಯವಂ ಕೂಡ ಬಿಟ್ಟು ನ

**ಚಹತಕಂಟಕಮ್|ಅಸ್ಮಾನ್ಪಾಲಯತೋವೀರಕಾಮಾಸ್ತೇಸರ್ವಉಜ್ಝಿತಾಃ ||೧೭||ಸುತಾಮಹಿಷ್ಯೋಭವತೋಜ್ಞಾತಯೋಭೃತ್ಯಮಂತ್ರಿಣಃ|ಪ್ರಜಾಶ್ಚತುಲ್ಯಕಾಲೀಯಾನಾಧುನಾಸಂತಿಕಾಲಿತಾಃ||೧೮|| ಕಾಲೋಬಲೀಯಾನ್ಬಲಿನಾಂಭಗವಾನೀಶ್ವರೋವ್ಯಯಃ | ಪ್ರಜಾಃಕಾಲಯತೇಕ್ರೀಡನ್ಪಶುಪಾಲೋಯಥಾಪಶೂನ್||೧೯||ವರಂವೃಣೀಷ್ವಭದ್ರಂತೇಋತೇಕೈವಲ್ಯಮದ್ಯನಃ | ಏಕಏವೇಶ್ವರಸ್ತಸ್ಯಭಗವಾನ್ವಿಷ್ಣುರವ್ಯಯಃ||೨೦||ಏವಮುಕ್ತಸ್ಸವೈದೇವಾನಭಿವಾದ್ಯಮಹಾಯಶಾಃ | ಅಶಯಿಷ್ಟಗುಹಾವಿಷ್ಟೋನಿದ್ರಯಾದೇವದತ್ತಯಾ ||೨೧||ಯವನೇಭಸ್ಮಸಾನ್ನೀತೇಭಗವಾನ್ಸಾತ್ವತರ್ಷಭಃ | ಆತ್ಮಾನಂದರ್ಶಯಾಮಾಸಮುಚುಕುಂದಾಯಧೀಮತೇ||೨೨||ತಮಾಲೋಕ್ಯಘನಶ್ಯಾಮಂಪೀತಕೌಶೇಯವಾಸಸಮ್ |**

---

ಕಂ-ಮನುಷ್ಯಲೋಕವನ್ನು, ಹತಕಂಟಕಂ-ಕೊಲ್ಲಲ್ಪಟ್ಟ ಶತ್ರುಗಳುಳ್ಳ, ರಾಜ್ಯಂಚ-ಸೋತನವನ್ನೂ, ಪರಿತ್ಯಜ್ಯ-ಬಿಟ್ಟು ಅಸ್ಮಾನ್-ನಮ್ಮನ್ನು, ಪಾಲಯತಃ-ರಕ್ಷಿಸುತಲಿರುವ, ತೇ-ನಿನ್ನ, ಸರ್ವೇಕಾಮಾಃ-ಬಯಕೆಗಳೆಲ್ಲವೂ, ಉಜ್ಝಿತಾಃ-ಬಿಡಲ್ಪಟ್ಟು ಹೋದವು ||೧೭||ತುಲ್ಯಕಾಲೀಯಾಃ-ನಿನ್ನೊಡನೆ ಸಮಾನವಾದ ಕಾಲವುಳ್ಳವರಾದ, ಸುತಾಃ-ಮಕ್ಕಳು, ಮಹಿಷ್ಯಃ-ಪಟ್ಟಣಿಯರು, ಭವತಃ-ನಿನ್ನ, ಜ್ಞಾತಯಃ-ಗೋತ್ರಜರು, ಭೃತ್ಯಮಂತ್ರಿಣಃ-ಸೇವಕರೂ ಮಂತ್ರಿಗಳೂ, ಪ್ರಜಾಶ್ಚ-ದೇಶದಜನಗಳೂಕೂಡ, ಕಾಲಿತಾಃ-ಕಾಲವಶದಿಂಗತಿಸಿದವರಾದ್ದರಿಂದ, ಅಧುನಾ-ಈಗ, ನಸಂತಿ-ಇಲ್ಲವು ||೧೮|| ಬಲಿನಾಂ-ಬಲವುಳ್ಳವರೊಳಗೆ, ಬಲೀಯಾನ್-ಬಲವುಳ್ಳವನಾದ, ಭಗವಾನ್-ವೀರ್ಯವುಳ್ಳವನಾದ, ಅವ್ಯಯಃ-ನಾಶವಿಲ್ಲದವನಾದ, ಈಶ್ವರಃ-ಸರ್ವನಿಯಾಮಕನಾದ, ಕಾಲಃ-ಕಾಲವೆಂಬಪುರುಷನು, ಕ್ರೀಡನ್-ಆಡುತಲಿರುವನಾಗಿ,-ಪಶುಪಾಲಃ-ದನಗಳನ್ನು ಕಾಯುವವನು, ಪಶೂನ್ ಯಥಾ-ದನಗಳನ್ನು ಹೇಗೋ. ತಥಾ-ಹಾಗೆ, ಪ್ರಜಾಃ-ಪ್ರಾಣಿಗಳನ್ನು, ಕಾಲಯತೇ-ಅಟ್ಟುತಲಿರುವನು ||೧೯|| ತೇ-ನಿನಗೆ ಭದ್ರಂ-ಶುಭವಾಗಲಿ, ಕೈವಲ್ಯಂಋತೇ-ಮೋಕ್ಷವನ್ನುಹೊರತು, ನಃ-ನಮ್ಮಿಂದ, ವರಂ-ನಿನಗೆ ಬೇಕಾದ್ದನ್ನು, ಅದ್ಯ-ಈಗ, ವೃಣೀಷ್ವ-ಬಯಸು, ತಸ್ಯ-ಆಮೋಕ್ಷಕ್ಕೆ, ಈಶ್ವರಃ-ಒಡೆಯನಾದವನು, ಅವ್ಯಯಃ-ಅನಂತನಾದ, ಭಗವಾನ್-ಸರ್ವಜ್ಞನಾದ, ವಿಷ್ಣುರೇಕಏವ-ನಾರಾಯಣನೊಬ್ಬನೇ ಆಗಿರುವನು ||೨೦||ಏವಮುಕ್ತಃ-ಹೀಗೆಹೇಳಲ್ಪಟ್ಟವನಾದ, ಸವೈ-ಆಮುಚುಕುಂದನಾದರೋ, ಮಹಾಯಶಾಃ-ಮಹಾಕೀರ್ತಿಯುಳ್ಳವನಾಗಿ, ದೇವಾನ್-ದೇವತೆಗಳನ್ನು, ಅಭಿವಾದ್ಯ-ನಮಸ್ಕರಿಸಿ, ದೇವದತ್ತಯಾ ದೇವತೆಗಳಿಂದ ಕೊಡಲ್ಪಟ್ಟ, ನಿದ್ರಯಾ-ವಿಶ್ರಾಂತಿ ಸುಖವುಳ್ಳ ನಿದ್ದೆಯಿಂದ, ಗುಹಾವಿಷ್ಟಃ-ಗವಿಯಂಹೊಕ್ಕವನಾಗಿ, ಅಶಯಿಷ್ಟ-ಮಲಗಿದನು ||೨೧||ಯವನೇ-ಕಾಲಯವನನು, ಭಸ್ಮಸಾತ್-ಬೂದಿಯಾಗುವಿಕೆಯನ್ನು, ನೀತೇಸತಿ-ಹೊಂದಿಸಲ್ಪಟ್ಟವನಾಗುತಲೂ, ಭಗವಾನ್-ಭಗವಂತನಾದ, ಸಾತ್ವತರ್ಷಭಃ-ಯಾದವರಲ್ಲಿ ಶ್ರೇಷ್ಠನಾದ ಕೃಷ್ಣನು, ಧೀಮತೇ-ಭಕ್ತಿಜ್ಞಾನವುಳ್ಳ,-ಮುಚುಕುಂದಾಯ-ಮುಚುಕುಂದನಿಗೆ, ಆತ್ಮಾನಂ-ತನ್ನರೂಪವನ್ನು, ದರ್ಶಯಾಮಾಸ-ತೋರಿಸಿದನು ||೨೨|| ಘನಶ್ಯಾಮಂ

---

ಮ್ಮರಕ್ಷಣಾರ್ಥವಾಗಿ ಸಕಲಭೋಗಂಗಳಂ ಬಿಟ್ಟವನಾದೆ||೧೭||ಎಲೈಮುಚುಕುಂದರಾಯನೇ! ನಿನ್ನಪುತ್ರರುಪತ್ನಿಯರು ಜ್ಞಾತಿಗಳು ಮಂತ್ರಿಗಳುನಿನ್ನಸಮಾನ ವಯಸ್ಕರಾದಪ್ರಜೆಗಳುಇವರೆಲ್ಲರೂಕಾಲಾಧೀನರಾದರು||೧೮|| ಕಾಲಾತ್ಮಕನಾದ ಭಗವಂತನಾದ ಈಶ್ವರನು ಬಲಿಷ್ಠನಿಗೂ ಕೂಡ ಬಲಿಷ್ಠನಾದವನು. ಅಂಥಾ ಕಾಲಪುರುಷನು ಪ್ರಜೆಗಳಂ ಲೋಕಾಂತರಗಳಿಗೆ ಸಂಚಾರವಂ ಮಾಡಿಸುತ ಗೋಪಾಲಕನು ಗೋವುಗಳಂ ಸಂಚಾರವಂ ಮಾಡಿಸಿದಂತೆ ಕ್ರೀಡಿಸುತ್ತಾನೆ||೧೯||ಎಲೈಮುಚುಕುಂದನೇ! ಮೋಕ್ಷವಂ ಹೊರತಾಗಿ ಬೇಕಾದವರಂಗಳಂಕೇಳುವನಾಗು ನಾವುಕೊಡುತ್ತೇವೆ, ಈಶ್ವರನಾದ ಭಗವಂತನಾದ ಶ್ರೀ ಹರಿಯೊಬ್ಬನೇ ಮೋಕ್ಷವಂ ಕೊಡುವುದಕ್ಕೆ ಸಮರ್ಥನು.||೨೦||ಎಂದು ದೇವತೆಗಳಿಂ ಪೇಳಲ್ಪಟ್ಟುಮಹಾಕೀರ್ತಿಶಾಲಿಯಾದ ಮುಚುಕುಂದನುದೇವತೆಗಳಿಗೆ ನಮಸ್ಕರಿಸಿ ಗುಹೆಯಂ ಪ್ರವೇಶಿಸಿ ದೇವತೆಗಳಿಂದ ಕೊಡಲ್ಪಟ್ಟ ನಿದ್ರೆಯಿಂದ ಶಯನಂ ಗೆಯ್ದನು ||೨೧||ಎಲೈಅರಸೇ! ಈ ರೀತಿಯಲ್ಲಿ ಮುಚುಕುಂದನ ನೇತ್ರತೇಜಸ್ಸಿನಿಂದ ಕಾಲಯವನನು ಭಸ್ಮೀಭೂತನಾದಮೇಲೆ ಭಗವಂತನಾದ ಶ್ರೀಕೃಷ್ಣನು ಬುದ್ಧಿಶಾಲಿಯಾದ ಮುಚುಕುಂದನಿಗೆ ನಿಜಸ್ವರೂಪವಂ ತೋರಿಸಿದನು ||೨೨|| ನೀಲಮೇಘಶ್ಯಾಮನಾದ ಪೀತಕೌಶೇಯಧಾರಿಯಾದ ಶ್ರೀಕೃಷ್ಣನಂ ಸಾಕ್ಷಾದ್ಭಗವಂತನನ್ನಾಗಿ ಮುಚುಕುಂದನು ನೋಡಿದ

ಶ್ರೀವತ್ಸವಕ್ಷಸಂಭ್ರಾಜತ್ಕೌಸ್ತುಭೇನವಿರಾಜಿತಮ್ ‖೨೩‖ ಚತುರ್ಭುಜಂರೋಚಮಾನಂವೈಜಯಂತ್ಯಾಚಮಾಲಯಾ | ಚಾರುಪ್ರಸನ್ನವದನಂಸ್ಫುರನ್ಮಕರಕುಂಡಲಮ್ ‖೨೪‖ಪ್ರೇಕ್ಷಣೀಯಂತ್ರಿಲೋಕಸ್ಯಸಾನುರಾಗಸ್ಮಿತೇಕ್ಷಣಮ್। ಅಪೀಚ್ಯವಯಸಂಮತ್ತಮೃಗೇಂದ್ರೋದಾರವಿಕ್ರಮಮ್‖೨೫‖ಪರ್ಯಪೃಚ್ಛನ್ಮಹಾಬುದ್ಧಿಸ್ತೇಜಸಾತಸ್ಯಧರ್ಷಿತಃ | ಶಂಕಿತಶ್ಶನಕೈರ್ರಾಜನ್ದುರ್ಧರ್ಷಮಿವತೇಜಸಾ ‖೨೬‖ ಮುಚುಕುಂದಃ‖ಕೋಭವಾನಿಹಸಂಪ್ರಾಪ್ತೋವಿಪಿನೇಗಿರಿಗಹ್ವರೇ | ಪದ್ಭ್ಯಾಂಪದ್ಮಪಲಾಶಾಭ್ಯಾಂವಿಚರಸ್ಯುರುಕಂಟಕೇ ‖೨೭‖ಕಿಂಸ್ವಿತ್ತೇಜಸ್ವಿನಾಂತೇಜೋಭಗವಾಂಸ್ತ್ವಂವಿಭಾವಸುಃ | ಸೂರ್ಯಸ್ಸೋಮೋಮಹೇಂದ್ರೋವಾಲೋಕಪಾಲೋಪರೋಪಿವಾ ‖೨೮‖ಮನ್ಯೇತ್ವಾಂದೇವದೇವಾನಾಂತ್ರಯಾಣಾಂಪುರುಷ

---

ಮೇಘದಂತೆ ಕಪ್ಪಾದ, ಪೀತಕೌಶೇಯವಾಸಸಂ-ಹಳದಿಯಾದ ಪಟ್ಟೆಯುಡಿಗೆಯುಳ್ಳ, ಶ್ರೀವತ್ಸವಕ್ಷಸಂ-ಸಂಪತ್ತಿನ ಮಚ್ಚೆಯು ಯೆದೆಯಲ್ಲಿವುಳ್ಳ, ಭ್ರಾಜತ್ಕೌಸ್ತುಭೇನವಿರಾಜಿತಂ-ಬೆಳಗುತಲಿರುವ ಕೌಸ್ತುಭರತ್ನದಿಂದ ಹೊಳೆಯುತಲಿರುವ ‖೨೩‖ ಚತುರ್ಭುಜಂ-ನಾಲ್ಕು ತೋಳುಳ್ಳ, ವೈಜಯಂತ್ಯಾ-ವೈಜಯಂತೀ ಪದಕದಿಂದಲೂ, ವನಮಾಲಯಾ-ತುಲಸಿಯ ಮಾಲೆಯಿಂದಲೂ, ರೋಚಮಾನಂ ಪ್ರಕಾಶಿಸುತಲಿರುವ, ಚಾರುಪ್ರಸನ್ನವದನಂ-ಚಲುವಾಗಿಯೂ ನಿರ್ಮಲವಾಗಿಯೂ ಇರುವ ಮುಖವುಳ್ಳ, ಸ್ಫುರನ್ಮಕರಕುಂಡಲಂ-ಶೋಭಿಸುವ ನೆಗಳಿನ ಆಕಾರದ ಕರ್ಣಭೂಷಣವುಳ್ಳ ‖೨೪‖ತ್ರಿಲೋಕಸ್ಯ-ಮೂರುಲೋಕದವರಿಗೂ, ಪ್ರೇಕ್ಷಣೀಯಂ-ನೋಡತಕ್ಕವನಾದ, ಸಾನುರಾಗಸ್ಮಿತೇಕ್ಷಣಂ-ಅಕ್ಕರೆಯಿಂ ಕೂಡಿದ ಕಿರುನಗೆಯೂ ನೋಟವೂಉಳ್ಳ, ಅಪೀಚ್ಯವಯಸಂ-ಚಲುವಾದ ಪ್ರಾಯವುಳ್ಳ, ಮತ್ತಮೃಗೇಂದ್ರೋದಾರವಿಕ್ರಮಂ-ಮದಿಸಿದ ಸಿಂಹದಂತೆ ಗಂಭೀರವಾದ ನಡಿಕೆಯುಳ್ಳ, ಅಥವಾ ಧಾರಾಳವಾದ ಪರಾಕ್ರಮವುಳ್ಳ, ತಂ-ಆಕೃಷ್ಣನನ್ನು, ಆಲೋಕ್ಯ-ಚನ್ನಾಗಿ ನೋಡಿ‖೨೫‖ತಸ್ಯ-ಆಕೃಷ್ಣನ, ತೇಜಸಾ-ಬೆಳಕಿನಿಂದ, ಧರ್ಷಿತಃ-ತಿರಸ್ಕರಿಸಲ್ಪಟ್ಟವನಾದನು, ರಾಜನ್-ಪರೀಕ್ಷಿದ್ರಾಯನೇ! ತೇಜಸಾ-ಪ್ರಕಾಶದಿಂದ, ದುರ್ಧರ್ಷಂ-ತಿರಸ್ಕರಿಸಲಳವಲ್ಲದ, ತಂ-ಆಕೃಷ್ಣನನ್ನು ಕುರಿತು, ಶಂಕಿತಇವ-ಹೆದರಿದವನಾಗಿಯೂ, ಶನಕೈಃ-ಮೆಲ್ಲನೆ, ಮಹಾಬುದ್ಧಿಃ-ಅಧಿಕ ಪ್ರಜ್ಞೆಯುಳ್ಳವನಾದ್ದರಿಂದ, ಪರ್ಯಪೃಚ್ಛತ್-ಬೆಸಗೊಂಡನು‖೨೬‖(ಮುಚುಕುಂದವಾಕ್ಯವು) ಇಹ-ಇಲ್ಲಿಗೆ, ಸಂಪ್ರಾಪ್ತಃ-ಬಂದವನಾಗಿ, ಗಿರಿಗಹ್ವರೇ-ಬೆಟ್ಟದ ಗುಹೆಗಳುಳ್ಳ,ವಿಪಿನೇ-ಕಾಡಿನಲ್ಲಿ, ಉರುಕಂಟಕೇ-ಹೆಚ್ಚು ಮುಳ್ಳುಗಳುಳ್ಳ ಪ್ರಾಂತದಲ್ಲಿ, ಪದ್ಮಪಲಾಶಾಭ್ಯಾಂ-ಕಮಲ ದಳಗಳಂತಿರುವ, ಪದ್ಭ್ಯಾಂ-ಪಾದಗಳಿಂದ, ವಿಚರಸಿ-ತಿರುಗುತಲಿರುವಿ ಭವಾನ್ ಕಃ-ನೀನು ಯಾರು‖೨೭‖ತ್ವಂ-ನೀನು, ತೇಜಸ್ವಿನಾಂ-ಬೆಳಕುಳ್ಳವರೊಳಗೆ, ತೇಜಃ-ಬೆಳಕಾದವನಾದ, ಭಗವಾನ್-ಪರಮೇಶ್ವರನಾದ, ವಿಭಾವಸುಃ-ಲೋಕಪ್ರಕಾಶಕನಾದ, ಸೂರ್ಯಃ-ಆದಿತ್ಯನೋ, ಸೋಮಃ-ಚಂದ್ರನೋ, ಮಹೇಂದ್ರೋವಾ-ದೇವರಾಜನೋ, ಅಪರೋಲೋಕಪಾಲೋಪಿವಾ-ಇತರ ದಿಕ್ಪಾಲಕನೋ ‖೨೮‖ ಯತಃ ಯಾವಕಾರಣದಿಂದ, ಪ್ರದೀಪಃ-ದೊಡ್ಡ ದೀವಿಗೆಯು, ಪ್ರಭಯಾ-ಕಾಂತಿಯಿಂದ, ಯಥಾ-ಹೇಗೋ, ತಥಾ-ಹಾಗೆ, ಗುಹಾಧ್ವಾಂತಂ-ಗವಿಯ ಕತ್ತಲೆಯನ್ನು, ಬಾಧಸೇ-ನಾಶಮಾ

---

ನು.(ಆಭಗವಂತನು ಎಂತಿಯುವನೆಂದರೆ-)ಶ್ರೀವತ್ಸವೆಂಬ ಚಿಹ್ನದಿಂದ ಅಲಂಕೃತವಾದ ವಕ್ಷಸ್ಥಲವುಳ್ಳವನಾಗಿ, ಹೊಳೆಯುವಕೌಸ್ತುಭರತ್ನದಿಂ,ಪ್ರಕಾಶಿಸುವನಾಗಿ‖೨೩‖ನಾಲ್ಕುಭುಜಗಳುಳ್ಳವನಾಗಿ, ವೈಜಯಂತೀವನಮಾಲೆಯಿಂದ ಪ್ರಕಾಶಿಸುವನಾಗಿ' ಸುಂದರವಾದ ಪ್ರಸನ್ನವಾದ ಮುಖವುಳ್ಳವನಾಗಿ, ಹೊಳೆಯುವ ಕರ್ಣಕುಂಡಲಗಳಿಂದ ಶೋಭಿತನಾಗಿ‖೨೪‖ ಸರ್ವಲೋಕಂಗಳಿಗು ನೋಡುವದಕ್ಕೆ ಮನೋಹರನಾಗಿ, ,ಅನುರಾಗಯುಕ್ತವಾದಮಂದಸ್ಮಿತವುಳ್ಳನೋಟಗಳಿಂದರಮ್ಯನಾಗಿ, ದಿವ್ಯವಾದಯಶಸ್ಸಿನಿಂದಕಾಂತನಾಗಿ, ಸಿಂಹದಂತೆ ಉತ್ಕೃಷ್ಟವಾದಬಯ್ಯಾರದ ಗಮನವುಳ್ಳವನಾಗಿ ಇರುವನು.೨೫‖ಇಂತಾ ಭಗವಂತನು ನೋಡಿ ಆಮುಚುಕುಂದನು ಆಭಗವಂತನ ತೇಜಸ್ಸಿನಿಂದ ತಿರಸ್ಕೃತನಾಗಿ ಭಯಪಡುತ್ತ ಮೆಲ್ಲನೇಪ್ರಶ್ನೆಗೆಯ್ದನು ‖೨೬‖ ಎಲೈಮಹಾಪುರುಷನೇ!ಈಅರಣ್ಯದಲ್ಲಿ ಪರ್ವತದಗುಹೆಯಲ್ಲಿಬಂದು ಇರುವಿ, ನೀನುಯಾರು? ಪದ್ಮದಳಗಳಂತೆಕೋಮಲಂಗಳಾದ ಪಾದಗಳಿಂದ ಮುಳ್ಳುಗಳಿಂದ ವ್ಯಾಪ್ತವಾದ ಈಪ್ರದೇಶದಲ್ಲಿ ಸಂಚರಿಸುತ್ತೀಯೆ?‖೨೭‖ನೀನುತೇಜಸ್ವಿಗಳಾದವರೊಳಗೆ ಅಗ್ನಿಯೋ? ಭಗವಂತನಾದಸೂರ್ಯನೋ!ಮಹೇಂದ್ರನೋ! ಬೇರೆಯೊಬ್ಬಲೋಕಪಾಲಕನೋ!‖೨೮‖ನಿನ್ನನ್ನುನೋಡಿನಾನು ತ್ರಿಮೂರ್ತಿಗಳಾದಬ್ರಹ್ಮವಿಷ್ಣುಮಹೇಶ್ವರರೊಳಗೆ ಶ್ರೇಷ್ಠನಾದ ನಾರಾಯಣನನ್ನಾಗಿತಿಳಿಯುತ್ತೇನೆ

ರ್ಷಭ ವಾ । ಯದ್ವಾಧ್ವಾಂತಂಗುಹಾಯಾಂತಂಪ್ರದೀಪಃ ಪ್ರಭಯಾಯಥಾ ॥೨೯॥ ಶುಶ್ರೂಷತಾಮವ್ಯಲೀಕಮಸ್ಮಾಕಂನರಪುಂಗವ। ಸ್ವಜನ್ಮಕರ್ಮಗೋತ್ರಂವಾಕಥ್ಯತಾಂಯದಿರೋಚತೇ ॥೩೦॥ ವಯಂತುಪುರುಷವ್ಯಾಘ್ರಐಕ್ಷ್ವಾಕಾಃಕ್ಷತ್ರಬಂಧವಃ । ಮುಚುಕುಂದಇತಿಪ್ರೋಕ್ತೋಯೌವನಾಶ್ವಾತ್ಮಜಃಪ್ರಭೋ॥೩೧॥ಚಿರಪ್ರಜಾಗರಶ್ರಾಂತೋನಿದ್ರಯಾಪಹೃತೇಂದ್ರಿಯಃ । ಶಯೇಸ್ಮಿನ್ವಿಪಿನೇಕಾಮಂಕೇನಾಪ್ಯುತ್ಥಾಪಿತೋಽಧುನಾ॥೩೨॥ಸೋಽಪಿಭಸ್ಮೀಕೃತೋನೂನಮಾತ್ಮೀಯೇನೈವಪಾಪ್ಮನಾ।ಅನಂತರಂಭವಾನ್ ಶ್ರೀಮಾನ್ಲಕ್ಷಿತೋಽಮಿತ್ರಶಾಸನ ॥೩೩॥ ತೇಜಸಾತೇಽವಿಷಹ್ಯೇಣಭೂರಿದ್ರಷ್ಟುಂನಶಕ್ನುಮಃ। ತತೋವೈತ್ವಂಮಹಾಭಾಗಮಾನನೀಯೋಸಿದೇಹಿನಾಮ್ ॥೩೪॥ ಏವಂಸಂಭಾಷಿತೋರಾಜ್ಞಾಭಗವಾನ್ಭೂತಭಾ

---

ಡುತಲಿರುವೆಯೋ, ತತ್-ಆಕಾರಣದಿಂದ, ದೇವದೇವಾನಾಂ-ದೇವತೆಗಳಿಗೂ ದೇವರಾದ ತ್ರಯಾಣಾಂ ತ್ರಿಮೂರ್ತಿಗಳಲ್ಲಿ, ಪುರುಷರ್ಷಭಂ-ಪುರುಷೋತ್ತಮನಾದ ವಿಷ್ಣುವನ್ನಾಗಿ, ತ್ವಾಂ-ನಿನ್ನನ್ನು. ಮನ್ಯೇ-ತಿಳಿಯುವೆನು ॥೨೯॥ನರಪುಂಗವ-ಮನುಷ್ಯಶ್ರೇಷ್ಠನೇ! (ಪುರುಷೋತ್ತಮನೇ!) ಅವ್ಯಲೀಕಂ-ವಂಚನೆಯಿಲ್ಲದೆ(ದಿಟವಾಗಿ)ಶುಶ್ರೂಷತಾಂ-ಕೇಳಬಯಸುತಲಿರುವ, ಅಸ್ಮಾಕಂ-ನಮಗೆ, ಸ್ವಜನ್ಮ-ನಿನ್ನ ಜನ್ಮವು, ಕರ್ಮ-ಕೆಲಸವನ್ನು, ಗೋತ್ರಂವಾ-ಸಂತತಿಯೂ, ರೋಚತೇಯತಿ-ಇಷ್ಟವಾಗಿ ತೋರಿದರೆ, ಕಥ್ಯತಾಂ-ಹೇಳಲ್ಪಡಲಿ ॥೩೦॥ಪುರುಷವ್ಯಾಘ್ರ-ನರಶ್ರೇಷ್ಠನೇ। ವಯಂತು-ನಾವಾದರೋ, ಕ್ಷತ್ರಬಂಧವಃ-ಕ್ಷತ್ರಿಯರು ನಂಟರಾಗಿಉಳ್ಳ, ಐಕ್ಷ್ವಾಕಾಃ-ಇಕ್ಷ್ವಾಕುವಂಶದಲ್ಲಿ ಹುಟ್ಟಿದವರು. ಪ್ರಭೋ-ಸ್ವಾತಂತ್ರನೇ! ನಾನು, ಯೌವನಾಶ್ವಾತ್ಮಜಃ-ಯುವನಾಶ್ವನಮಗನಾದ ಮಾಂಧಾತನಮಗನು. ಆದ. ಮುಚುಕುಂದಇತಿ-ಮುಚುಕುಂದನೆಂದು, ಪ್ರೋಕ್ತಃ-ಹೇಳಲ್ಪಟ್ಟವನಾಗಿರುವೆನು ಚಿರಪ್ರಜಾಗರಃ-ಬಹುಕಾಲ ಎಚ್ಚರವಾಗಿದ್ದು, ಶ್ರಾಂತಃ-ಬಳಲಿದವನಾದ್ದರಿಂದ, ನಿದ್ರಯಾ-ನಿದ್ದೆಯಿಂದ, ಅಪಹೃತೇಂದ್ರಿಯಃ- ಕದಿಯಲ್ಪಟ್ಟ ಕಂಗಳುಳ್ಳವನಾಗಿ, ಅಸ್ಮಿನ್ ವಿಪಿನೇ-ಈಕಾಡಿನಲ್ಲಿ, ಕಾಮಂ-ಅಧಿಕವಾಗಿ, ಶಯೇ-ಮಲಗಿರುವೆನು. ಅಧುನಾ-ಈಗ, ಕೇನಾಪಿ-ಯಾವವನಿಂದಲೋ ಉತ್ಥಾಪಿತಃ-ಎಬ್ಬಿಸಲ್ಪಟ್ಟವನಾದೆನು ॥೩೨॥ಸೋಪಿ-ಅವನೂಕೂಡ, ಆತ್ಮೀಯೇನ-ತನ್ನದಾದ, ಪಾಪ್ಮನೈವ-ಪಾಪದಿಂದಲೇ, ಭಸ್ಮೀಕೃತಃ-ಬೂದಿಯಾಗಿ ಮಾಡಲ್ಪಟ್ಟನೆಂದು, ನೂನಂ-ತರ್ಕಿಸುವೆನು. ಅನಂತರಂ-ಆಮೇಲೆ(ಕೂಡಲೇ) ಅಮಿತ್ರಶಾಸನ-ಶತ್ರುಶಿಕ್ಷಕನೇ! ಶ್ರೀಮಾನ್-ಸಂಪತ್ತುಳ್ಳ, ಭವಾನ್-ನೀನು, ಲಕ್ಷಿತಃ-ನೋಡಲ್ಪಟ್ಟವನಾಗಿರುವಿ ॥೩೩॥ಹೇಮಹಾಭಾಗ-ಎಲೈಹೆಚ್ಚುಸಮ್ಮಾನವುಳ್ಳವನೇ। ತೇ-ನಿನ್ನ, ಅವಿಷಹ್ಯೇಣ-ಸಹಿಸಲಶಕ್ಯವಾಗಿರುವ, ತೇಜಸಾ-ಪ್ರಕಾಶದಿಂದ, ಭೂರಿ-ಬಹುವಾಗಿ, ದ್ರಷ್ಟುಂ-ನೋಡುವುದಕ್ಕೆ, ನಶಕ್ನುಮಃ-ಶಕ್ತರಾಗಲಾರೆವು. ತತಃ-ಆಕಾರಣದಿಂದ, ತ್ವಂ-ನೀನು ವೈ-ಪ್ರಸಿದ್ಧವಾಗಿ. ದೇಹಿನಾಂ-ಪ್ರಾಣಿಗಳಿಂದ, ಮಾನನೀಯಃ-ಮಾನಿಸಲ್ಪಡತಕ್ಕವನು, ಅಸಿ-ಆಗುತಲಿರುವಿ ॥೩೪॥ರಾಜ್ಞಾ-ಮುಚುಕುಂದ ರಾಯನಿಂದ, ಏವಂ-ಹೀಗೆ, ಸಂಭಾಷಿತಃ-ನುಡಿಯಲ್ಪಟ್ಟವನಾದ, ಭೂತಭಾವನಃ-ಪ್ರಾಣಿಗಳಿಗೆ ಬುದ್ಧಿಪ್ರಕಾಶಕನಾದ, ಭಗವಾನ್-ಕೃಷ್ಣನು, ಪ್ರಹಸನ್-ನಗುತ್ತ, ಮೇಘನಾದಗಂಭೀ

---

ದೀಪವು ಸ್ವಪ್ರಭೆಯಿಂದ ಅಂಧಕಾರವನ್ನಂತೆ ಗುಹಾಮಧ್ಯಗತವಾದ ಮಹಾಂಧಕಾರವಂ ನೀನು ನಿನ್ನ ದಿವ್ಯ ತೇಜಸ್ಸಿನಿಂದ ಪರಿಹರಿಸುತ್ತೀಯೆ ॥೨೯॥ಎಲೈಪುರುಷಶ್ರೇಷ್ಠನೇ! ಕೇಳಬೇಕೆಂಬಿಚ್ಛೆಯುಳ್ಳ ನನಗೆ ಯಥಾರ್ಥವಾಗಿ ನಿನ್ನ ಜನ್ಮವಂ ಕರ್ಮವಂ ಗೋತ್ರವು ಕೂಡ ಹೇಳುವನಾಗು ॥೩೦॥ಎಲೈಪುರುಷಶ್ರೇಷ್ಠನೇ! ನಾನಾದರೋ ಇಕ್ಷ್ವಾಕುವಂಶಸ್ಥನಾದವನು, ಕ್ಷತ್ರಿಯನು, ಯುವನಾಶ್ವನ ಪುತ್ರನಾದ ಮಾಂಧಾತೃವಿಗೆ ಮಗನಾದವನು, ಮುಚುಕುಂದನೆಂಬ ನಾಮಧೇಯವುಳ್ಳವನು ॥೩೧॥ಬಹುಕಾಲ ಜಾಗರದಿಂದ ಶ್ರಾಂತನಾಗಿ ನಿದ್ರೆಯಿಂದ ಪರವಶಂಗಳಾದ ಇಂದ್ರಿಯಂಗಳುಳ್ಳವನಾಗಿ ಈನಿರ್ಜನವಾದ ಗುಹೆಯಲ್ಲಿ ಶಯನಂಗೆಯ್ದಿರುವ ನನ್ನಂ ಯಾವನೋಬಂದು ಎಬ್ಬಿಸಿದನು ॥೩೨॥ಅಪುರುಷನು ತನ್ನಪಾಪದಿಂದಲೇ ಭಸ್ಮೀಭೂತನಾದನು. ಆಮೇಲೆ ಶ್ರೀಮಂತನಾದ ಶತ್ರುಸಂಹಾರಕನಾದನಿನ್ನಂ ನಾನುನೋಡಿದೆನು ॥೩೩॥ ನಿನ್ನತೇಜಸ್ಸಿನಿಂದ ಪ್ರತಿಹತನಾಗಿ ವಿಶೇಷವಾಗಿಕೇಳುವುದಕ್ಕೆ ಶಕ್ತನಲ್ಲ. ಎಲೈಮಹಾಭಾಗನೆ! ಸರ್ವಪ್ರಾಣಿಗಳಿಗೂ ಶ್ಲಾಘ್ಯನಾಗಿದ್ದೀಯೆ॥೩೪॥ ಎಂದುಮುಚುಕುಂದನಿಂದ ಬಹುಮಾನಿತನಾದಭಗವಂತನು ನಗುತ್ತಮೇಘದಂತೆಗಂಭೀರವಾದ ಮಾತುಗಳಿಂ

ವನಃ । ಪ್ರತ್ಯಾಹಪ್ರಹಸನ್ವಾಣ್ಯಾಮೇಘನಾದಗಭೀರಯಾ ॥೩೫॥ಶ್ರೀಭಗವಾನ್॥ಜನ್ಮಕರ್ಮಾಭಿಧಾ
ನಾನಿಸಂತಿಮೇಂಗಸಹಸ್ರಶಃ।ನಶಕ್ಯಂತೇಪ್ರಸಂಖ್ಯಾತುಮನಂತತ್ವಾನ್ಮಯಾಪಿಹಿ॥೩೬॥ಕ್ವಚಿದ್ರಜಾಂ
ಸಿವಿಮಮೇಪಾರ್ಥಿವಾನ್ಯುರುಜನ್ಮಭಿಃ।ಗುಣಕರ್ಮಾಭಿಧಾನಾನಿನಮೇಜನ್ಮಾನಿಕರ್ಹಿಚಿತ್॥೩೭॥ಕಾಲತ್ರ
ಯೋಪಪನ್ನಾನಿಜನ್ಮಕರ್ಮಾಣಿಮೇನೃಪ।ಅನುಕ್ರಮಂತೋನೈವಾಂತಂಗಚ್ಛಂತಿಪರಮರ್ಷಯಃ॥೩೮॥
ತಥಾಪ್ಯದ್ಯತನಾನ್ಯಂಗಶೃಣುಷ್ವಗದತೋಮಮ।ವಿಜ್ಞಾಪಿತೋವಿರಿಂಚೇನಪುರಾಹಂಧರ್ಮಗುಪ್ತಯೇ॥೩೯॥
ಭೂಮೇರ್ಭಾರಾಯಮಾಣಾನಾಮಸುರಾಣಾಂಕ್ಷಯಾಯಚ । ಅವತೀರ್ಣೋಯದುಕುಲೇಗೃಹಆನಕ
ದುಂದುಭೇಃ ॥೪೦॥ವದಂತಿವಾಸುದೇವೇತಿವಸುದೇವಸುತಂಹಿಮಾಮ್ ।ಕಾಲನೇಮಿರ್ಹತಃಕಂಸಃಪ್ರಲಂಬಾ

ರವಸಾ-ಗುಡುಗಿನಂತೆ ಗಂಭೀರವಾದ, ವಾಣ್ಯಾ-ಮಾತಿನಿಂದ, ಪ್ರತ್ಯಾಹ-ಪ್ರತ್ಯುತ್ತರವಂ ನುಡಿದನು॥೩೫॥[ಭಗವದ್ವಾಕ್ಯವು] ಅಂಗ-ಅಯ್ಯಾ! ಮೇ-ನನ್ನ, ಜನ್ಮಕರ್ಮಾಭಿಧಾನಾನಿ-ಉತ್ಪತ್ತಿಯನ್ನೂ ಕೆಲಸವನ್ನೂ ಅನುಸರಿಸಿದ ಹೆಸರುಗಳು, ಸಹಸ್ರಶಃ-ಸಾವಿರಾರು ಬಗೆಯಾಗಿ, ಸಂತಿ-ಇವೆ, ಅನಂತತ್ವಾತ್-ಕೊನೆಯಿಲ್ಲದ್ದರಿಂದ, ಮಯಾಪಿ-ನನಗೂಕೂಡ, ಪ್ರಸಂಖ್ಯಾತುಂ-ಇಷ್ಟೇಯೆಂದು ಲೆಕ್ಕಿಸುವುದಕ್ಕೆ, ನಶಕ್ಯಂತೇ-ಸಾಧ್ಯಂಗಳಾಗುವುದಿಲ್ಲ॥೩೬॥ಕ್ವಚಿತ್-ಎಲ್ಲಿಯಾದರೂ, ಕರ್ಹಿಚಿತ್-ಒಬ್ಬನಾದರೂ, ಉರುಜನ್ಮಭಿಃ-ಅನೇಕ ಜನ್ಮಗಳಿಂದ, ಪಾರ್ಥಿವಾನಿರಜಾಂಸಿ-ಭೂಲೋಕದಲ್ಲಿರುವ ಮಣ್ಣಿನ ಧೂಳುಗಳನ್ನು, ವಿಮಮೇ-ವಿಶೇಷವಾಗಿ ಲೆಕ್ಕಿಸುವೆನು. ಮೇ-ನನ್ನ, ಜನ್ಮಾನಿ-ಅವತಾರಗಳನ್ನೂ, ಗುಣಕರ್ಮಾಭಿಧಾನಾನಿ-ಗುಣಗಳನ್ನೂ, ಕ್ರಿಯೆಗಳನ್ನೂ ನಾಮಗಳನ್ನೂ, ನ-ಲೆಕ್ಕಿಸುವುದಿಲ್ಲವು॥೩೭॥ನೃಪ-ಅರಸನೇ! ಕಾಲತ್ರಯೋಪಪನ್ನಾನಿ-ಭೂತಭವಿಷ್ಯದ್ವರ್ತಮಾನಗಳೆಂಬ ಮೂರುಕಾಲಗಳಲ್ಲಿಯೂ ತಕ್ಕವುಗಳಾದ, ಮೇ-ನನ್ನ, ಜನ್ಮಕರ್ಮಾಣಿ-ಜನ್ಮವ್ಯಾಪಾರಗಳನ್ನು, ಅನುಕ್ರಮಂತಃ-ಎಣಿಸುತ ಲಿರುವರಾದ, ಪರಮರ್ಷಯಃ-ಮಹಾಋಷಿಗಳು, ಅಂತಂ-ತುದಿಯನ್ನು, ನಗಚ್ಛಂತ್ಯೇವ-ಮುಟ್ಟುವುದೇ ಯಿಲ್ಲವು॥೩೮॥ತಥಾಪಿ-ಹಾಗಾದರೂ, ಅಂಗ-ಪ್ರಿಯನೇ! ಗದತಃ-ಹೇಳುತಲಿರುವ, ಮಮ-ನನ್ನ, ಅದ್ಯತನಾನಿ-ಈಕಾಲದವುಗಳನ್ನು, ಶೃಣು-ಕೇಳು, ಅಹಂ-ನಾನು, ಪುರಾ-ಪೂರ್ವದಲ್ಲಿ, ಧರ್ಮಗುಪ್ತಯೇ-ಧರ್ಮವಂ ಪಾಲಿಸಲೋಸುಗ, ವಿರಿಂಚೇನ-ಸೃಷ್ಟಿಕರ್ತನಾದ ಬ್ರಹ್ಮನಿಂದ, ವಿಜ್ಞಾಪಿತಃ-ಪ್ರಾರ್ಥಿಸಲ್ಪಟ್ಟವನಾಗಿ॥೩೯॥ಭೂಮೇಃ-ಭೂಲೋಕಕ್ಕೆ, ಭಾರಾಯಮಾಣಾನಾಂ-ಹೊರೆಯಾಗಿ ಆಗಿರುವ, ಅಸುರಾಣಾಂ-ದೈತ್ಯರ, ಕ್ಷಯಾಯಚ-ನಾಶಕ್ಕೋಸುಗವೂ,(ಶಿಷ್ಟಪರಿಪಾಲನಕ್ಕೋಸುಗವೂ) ಯದುಕುಲೇ-ಯಾದವರ ವಂಶದಲ್ಲಿ, ಆನಕದುಂದುಭೇಃ-ವಸುದೇವನ, ಗೃಹೇ-ಮನೆಯಲ್ಲಿ,(ಪತ್ನಿಯಾದ ದೇವಕಿಯಲ್ಲಿ) ಅವತೀರ್ಣಃ-ಅವತರಿಸಿದವನಾದೆನು॥೪೦॥ವಸುದೇವಸುತಂ-ವಸುದೇವನ ಮಗನಾದ, ಮಾಂ-ನನ್ನನ್ನು, ವಾಸುದೇವೇತಿ-ವಾಸುದೇವನೆಂದು, ವದಂತಿಹಿ-ಹೇಳುತ ಲಿರುವರಲ್ಲವೆ? ಕಾಲನೇಮಿಃ-ಕಾಲನೇಮಿಯೆಂಬ ದೈತ್ಯನಾದ, ಕಂಸಃ-ಕಂಸನು, ಹತಃ-ಕೊಲ್ಲಲ್ಪಟ್ಟನು. ಸದ್ವಿಷಃ-ದ್ವೇಷಿಗಳಿಂ ಸಹಿತರಾದ, ಪ್ರಲಂಬಾದ್ಯಾಶ್ಚ-ಪ್ರಲಂಬನು ಮೊದಲಾದವರೂ ಕೂಡ, ಹತಾಃ-ಕೊಲ್ಲಲ್ಪಟ್ಟರು॥೪೧॥ರಾಜರ್ಷೇ-ಮುಚುಕುಂದರಾಯನೇ! ತೇ-ನಿನ್ನ, ತಿಗ್ಮಚಕ್ಷುಷಾ-ತೀಕ್ಷ್ಣವಾದ ದೃಷ್ಟಿಯಿಂದ, ಅಯಂಯವನ

ದನುಡಿದನು ॥೩೫॥ ಎಲೈಮುಚುಕುಂದನೇ।ಜನ್ಮಗಳುಕರ್ಮಗಳುನಾಮಧೇಯಂಗಳೂನನಗೆಅನೇಕಸಹಸ್ರಸಂಖ್ಯಾಕಂಗಳಾಗಿವೆ ನಾನುಅನಂತನಾದಕಾರಣದಿಂದ ನನ್ನಜನ್ಮಕರ್ಮಂಗಳಂ ಎಣಿಸುವುದಕ್ಕೆಆಗುವುದಿಲ್ಲ॥೩೬॥ ಅನೇಕಜನ್ಮಂಗಳನೆಯ್ದಿಭೂಮಿಯಧೂಳಿಗಳನ್ನಾದರೂಎಣಿಸಬಹುದು,ನನ್ನಗುಣಂಗಳಂಕರ್ಮಂಗಳಂಜನ್ಮಂಗಳಂನಾಮಂಗಳಂಎಣಿಸಲಾಗದು॥೩೭॥ಭೂತಭವಿಷ್ಯದ್ವರ್ತಮಾನಕಾಲಂಗಳಲ್ಲಿ ಉಂಟಾದನನ್ನಜನ್ಮಕರ್ಮನಾಮಧೇಯಂಗಳಂಯೆಣಿಸಿಪಾರವಂಕಾಣದೆಈಗಲೂಮಹರ್ಷಿಗಳುಚಿಂತಿಸುತ್ತಾರೆ॥೩೮॥ ಆದರೂಈಗ ಉಂಟಾದ ಜನ್ಮಕರ್ಮನಾಮ ಧೇಯಂಗಳಂಪೇಳುತ್ತೇನೆ- ಕೇಳೈಅರಸೇ! ನಾನುಪೂರ್ವದಲ್ಲಿ ಧರ್ಮರಕ್ಷಣಾರ್ಥವಾಗಿ ಬ್ರಹ್ಮನಿಂದಪ್ರಾರ್ಥಿಸಲ್ಪಟ್ಟು॥೩೯॥ ಭೂಭಾರರೂಪರಾದ ಅಸುರರಂ ಸಂಹರಿಸಲೋಸುಗ ಯದುಕುಲದಲ್ಲಿ ವಸುದೇವನ ಮನೆಯಲ್ಲಿ ಅವತರಿಸಿರುವೆನು॥೪೦॥ವಸುದೇವನ ಪುತ್ರನಾದ ಕಾರಣ ವಾಸುದೇವನೆಂದು ಕರೆಯುತ್ತಾರೆ. ಕಂಸರೂಪಿಯಾದ ಕಾಲನೇಮಿಯುಂ ಪ್ರಲಂಬಮುಂತಾದ ಅಸುರರಂ ನಾನುಸಂಹರಿಸಿದೆ

ದ್ಯಾಶ್ಚಸದ್ವಿದ್ವಿಷಃ॥೪೧॥ಅದ್ಯಾಯಂಯವನೋದಗ್ಧೋರಾಜಂಸ್ತೇತಿಗ್ಮಚಕ್ಷುಷಾ । ಸೋಽಹಂತವಾನುಗ್ರಹಾರ್ಥಂಗುಹಾಮೇತಾಮುಪಾಗತಃ॥೪೨॥ಪ್ರಾರ್ಥಿತಃಪ್ರಚುರಂಪೂರ್ವಂತ್ವಯಾಹಂಭಕ್ತವತ್ಸಲಃ॥ ವರಾನ್ವೃಣೀಷ್ವರಾಜರ್ಷೇಸರ್ವಾನ್ಕಾಮಾನ್ದದಾಮಿತೇ । ಮಾಂಪ್ರಪನ್ನೋಜನಃಕಶ್ಚಿನ್ನಭೂಯೋಽರ್ಹತಿಶೋಚಿತುಮ್॥೪೩॥ಶ್ರೀಶುಕಃ॥ ಇತ್ಯುಕ್ತಸ್ತಂಪ್ರಣಮ್ಯಾಹಮುಚುಕುಂದೋಮುದಾನ್ವಿತಃ । ಜ್ಞಾತ್ವಾನಾರಾಯಣಂದೇವಂಗರ್ಗವಾಕ್ಯಮನುಸ್ಮರನ್॥೪೪॥... ... ... ... ಮುಚುಕುಂದಃ॥ವಿಮೋಹಿತೋಽಯಂಜನಈಶಮಾಯಯಾತ್ವದೀಯಯಾತ್ವಾಂನಭಜತ್ಯನರ್ಥದೃಕ್ । ಸುಖಾಯದುಃಖಪ್ರಭವೇಷುಸಜ್ಜತೇಗೃಹೇಷುಯೋಷಿತ್ಪುರುಷಶ್ಚವಂಚಿತಃ॥೪೫॥ಲಬ್ಧ್ವಾಜನೋದುರ್ಲಭಮತ್ರಮಾನುಷಂಕಥಂಚಿದವ್ಯಂಗಮಯತ್ನತಸ್ತ್ವ । ಪಾದಾರವಿಂದಂನಭಜತ್ಯಸನ್ಮತಿರ್ಗೃ

---

ಶ್ಚ-ಈಕಾಲಯವನನೂ ಕೂಡ, ದಗ್ಧಃ-ಸುಡಲ್ಪಟ್ಟವನಾದನು, ಸೋಽಹಂ-ಆಶ್ರೀಕೃಷ್ಣನಾದ ನಾನು, ತವ-ನಿನ್ನ, ಅನುಗ್ರಹಾರ್ಥಂ-ರಕ್ಷಣಕ್ಕೋಸುಗ, ಏತಾಂಗುಹಾಂ-ಈಗವಿಯನ್ನು ಕುರಿತು, ಉಪಾಗತಃ-ಸಮೀಪಕ್ಕೆ ಬಂದಿರುವನಾದೆನು॥೪೨॥ ಪೂರ್ವಂ-ಮುಂಚೆ, ತ್ವಯಾ-ನಿನ್ನಿಂದ, ಪ್ರಚುರಂ-ಅಧಿಕವಾಗಿ, ಪ್ರಾರ್ಥಿತಃ-ಬಯಸಲ್ಪಟ್ಟವನಾಗಿ, ಭಕ್ತವತ್ಸಲಃ-ಭಕ್ತರಲ್ಲಿಪ್ರೇಮವುಳ್ಳವನಾದ್ದರಿಂದ, ರಾಜರ್ಷೇ-ರಾಜನಾಗಿಯೂ ಋಷಿಯಾಗಿಯೂ ಇರುವವನೇ! ತೇ-ನಿನಗೆ, ಸರ್ವಾನ್-ಕಾಮಾನ್-ಸಕಲವರಗಳನ್ನೂ, ದದಾಮಿ-ಕೊಡುತ್ತಲಿರುವೆನು. ವರಾನ್-ಇಷ್ಟಾರ್ಥಗಳನ್ನು, ವೃಣೀಷ್ವ-ಬಯಸು, ಮಾಂ-ನನ್ನನ್ನು, ಪ್ರಪನ್ನಃ-ರಕ್ಷಿಸೆಂದು ನಂಬಿದವನಾದ, ಕಶ್ಚಿತ್-ಒಬ್ಬನಾದರೂ, ಭೂಯಃ-ಮರಳಿಯೂ, ಶೋಚಿತುಂ-ದುಃಖಿಸುವುದಕ್ಕೆ, ನಾರ್ಹತಿ-ಯೋಗ್ಯನಾಗುವುದಿಲ್ಲವು ॥೪೩॥[ಶುಕವಾಕ್ಯವು.] ಇತಿ-ಹೀಗೆ,ಉಕ್ತಃ-ಹೇಳಲ್ಪಟ್ಟವನಾದ, ಮುಚುಕುಂದಃ-ಮುಚುಕುಂದನು, ಗರ್ಗವಾಕ್ಯಂ-ಗರ್ಗಮುನಿ ಹೇಳಿದ್ದ ಮಾತನ್ನು, ಅನುಸ್ಮರನ್-ನೆನಪುಗೊಳ್ಳುವನಾಗಿ, ಮುದಾನ್ವಿತಃ-ಸಂತಸದಿಂ ಕೂಡಿದವನಾಗಿ, ನಾರಾಯಣಂದೇವಂಜ್ಞಾತ್ವಾ-ನಾರಾಯಣ ದೇವರನ್ನಾಗಿ ತಿಳಿದುಕೊಂಡು, ತಂ-ಆಕೃಷ್ಣನನ್ನು, ಪ್ರಣಮ್ಯ-ನಮಸ್ಕರಿಸಿ, ಆಹ-ನುಡಿದನು ॥೪೪॥[ಮುಚುಕುಂದ ವಚನವು.] ಹೇಈಶ-ಎಲೈಸ್ವಾಮಿಯೇ! ಯೋಷಿತ್-ಹೆಂಣು, ಪುರುಷಶ್ಚ-ಗಂಡುಎಂಬ, ಅಯಂಜನಃ-ಈಪ್ರಾಣಿಲೋಕವು, ತ್ವದೀಯಯಾ-ನಿನ್ನದಾದ, ಮಾಯಯಾ-ಮೋಹಕಶಕ್ತಿಯಿಂದ, ವಿಮೋಹಿತಸ್ಸನ್-ಮೋಹಗೊಳಿಸಲ್ಪಟ್ಟದ್ದಾದ್ದರಿಂದಲೇ, ಅನರ್ಥದೃಕ್-ಸ್ವಪ್ರಯೋಜನವಂ ಕಾಣದೇ ಯಿರುವುದಾಗಿ, ಸುಖಾಯ-ಸ್ವರೂಪಸುಖಕ್ಕೆ, ವಂಚಿತಃ-ವಂಚಿಸಲ್ಪಟ್ಟದ್ದಾಗಿ, ತ್ವಾಂ-ನಿನ್ನನ್ನು, ನಭಜತಿ-ಪ್ರೀತಿಸುವುದಿಲ್ಲ. ದುಃಖಪ್ರಭವೇಷು-ದುಃಖವೇಫಲವಾಗಿಉಳ್ಳ, ಗೃಹೇಷು-ಮನೆ ಮೊದಲಾದವುಗಳಲ್ಲಿ, ಸಜ್ಜತೇ-ಮಮಕಾರದಿಂದ ಸಂಬಂಧಿಸುವನು. ॥೪೫॥ಅತ್ರ-ಈಸಂಸಾರದಲ್ಲಿ, ದುರ್ಲಭಂ-ದೊರೆಯ ತಕ್ಕದ್ದಲ್ಲದ, ಅವ್ಯಂಗಂ-ಅಂಗಲೋಪವಿಲ್ಲದ, ಮಾನುಷಂಜನ್ಮ-ಮನುಷ್ಯದೇಹವ

---

ನು ॥೪೧॥ಎಲೈಮುಚುಕುಂದರಾಯನೇ! ತೀಕ್ಷ್ಣವಾದ ನಿನ್ನನೇತ್ರತೇಜಸ್ಸಿನಿಂದ ಈಕಾಲಯವನನು ದಗ್ಧನಾದನು. ಆನಾನು ನಿನ್ನನ್ನನುಗ್ರಹಿಸ ಲೋಸುಗ ಈಗುಹೆಗೆಬಂದಿರುತ್ತೇನೆ॥೪೨॥ನೀನುಪೂರ್ವದಲ್ಲಿ ಬಹುವಾಗಿ ನನ್ನಂಆರಾಧಿಸಿಪ್ರಾರ್ಥಿಸಿಯಿದ್ದವನಾದ ಕಾರಣದಿಂದಭಕ್ತವಾತ್ಸಲ್ಯದಿಂದ ನಾನುಬಂದೆನು, ಎಲೈಅರಸೇ ವರಂಗಳಂಕೇಳು ಇಷ್ಟಂಗಳಾದ ಸಮಸ್ತ ವರಂಗಳಂ ಕೊಡುತ್ತೇನೆ. ನನ್ನಂಶರಣುಹೊಂದಿದ ಪುರುಷನು ಪುನಶ್ಶೋಕವಂ ಪಡೆಯುವುದಿಲ್ಲ ॥೪೩॥ಎಂದು ಭಗವಂತನಿಂದ ಹೇಳಲ್ಪಟ್ಟವನಾಗಿ ಮುಚುಕುಂದನು ಸಂತೋಷಯುಕ್ತನಾಗಿ "೨೮ನೆಯ ಯುಗದಲ್ಲಿ ಭಗವಂತನು ಅವತರಿಸುತ್ತಾನೆ" ಎಂದುಗರ್ಗಾಚಾರ್ಯನಿಂದ ಹೇಳಲ್ಪಟ್ಟ ವಾಕ್ಯವಂ ಸ್ಮರಿಸಿಕೊಂಡು ಶ್ರೀಕೃಷ್ಣನಂ ಸಾಕ್ಷಾನ್ನಾರಾಯಣನನ್ನಾಗಿ ತಿಳಿದು ನಮಸ್ಕರಿಸಿ ನುಡಿದನು ॥೪೪॥ಎಲೈಪರಮೇಶ್ವರನೇ! ನಿನ್ನಮಾಯೆಯಿಂದ ಮೋಹಿತವಾದ ಜನವುಅನಾತ್ಮವಸ್ತುಗಳಲ್ಲಿ ದೃಷ್ಟಿಯುಳ್ಳದ್ದಾಗಿ ನಿನ್ನಂ ಭಜಿಸುವುದಿಲ್ಲ. ಸ್ತ್ರೀಯಾಗಲೀ ಪುರುಷನಾಗಲೀ ಈಜನವು ದುಃಖಪ್ರದಂಗಳಾದ ಗೃಹಾದಿಗಳಲ್ಲಿ ಸುಖಭ್ರಾಂತಿಯಿಂದ ಆಸಕ್ತವಾಗುತ್ತೆ ॥೪೫॥ಜನವು ದುರ್ಲಭವಾದ ಮಾನುಷ ದೇಹವಂ ದೈವಪ್ರೇರಣದಿಂದ ಪಡೆದರೂ ದುಷ್ಟಬುದ್ಧಿಯುಳ್ಳದ್ದಾಗಿ ನಿನ್ನಂಭಜಿಸದೆ ಗೃಹಾದಿ ವಿಷಯಗಳೆಂಬ ಮಹಾಕೂಪದಲ್ಲಿ ಪಶು

ಹಾಂಧಕೂಪೇಪತಿತೋಯಥಾಪಶುಃ ॥೪೬॥ ಮಮೈಷಕಾಲೋಽಜಿತನಿಷ್ಫಲೋಗತೋರಾಜ್ಯಶ್ರಿಯೋನ್ನ
ದ್ಧಮದಸ್ಯಭೂಪತೇಃ ।ಮರ್ತ್ಯಾತ್ಮಬುದ್ಧೇಸ್ಸುತದಾರಕೋಶಭೂಷ್ವಾಸಜ್ಜಮಾನಸ್ಯದುರಂತಚಿಂತ
ಯಾ ॥೪೭॥ಕಳೇಬರೇಸ್ಮಿನ್ಘಟಕುಡ್ಯಸನ್ನಿಭೇನಿರೂಢಮಾನೋನರದೇವಇತ್ಯಹಮ್ । ವೃತೋರಥೇಭಾಶ್ವಪ
ದಾತ್ಯನೀಕಪೈರ್ಗಾಂಪರ್ಯಟಂಸ್ತ್ವಾಮಗಣಯ್ಯದುರ್ಮದಃ ॥೪೮॥ಪ್ರಮತ್ತಮುಚ್ಚೈರಿತಿಕೃತ್ಯ
ಚಿಂತಯಾಪ್ರವೃದ್ಧಲೋಭಂವಿಷಯೇಷುಲಾಲಸಮ್ । ತ್ವಮಪ್ರಮತ್ತಸ್ಸಹಸಾಭಿಪದ್ಯಸೇಕ್ಷುಲ್ಲೇಲಿ
ಹಾನೋಽಹಿರಿವಾಖುಮಂತಕಃ॥೪೯॥ಪುರಾರಥೈರ್ಹೇಮಪರಿಷ್ಕೃತೈಶ್ಚರನ್ಮತಂಗಜೈರ್ವಾನರದೇವಸಂ

---

ನ್ನು, ಅಯತ್ನತಃ-ಪ್ರಯತ್ನ ಮಾಡದೆ, ಕಥಂಚಿತ್-ಹೇಗೋ (ಅತಿಪ್ರಯಾಸದಿಂದ) ಲಬ್ಧ್ವಾ-ಹೊಂದಿಯೂ, ಜನಃ-ಪ್ರಾಣಿಯು, ಅಸನ್ಮತಿಃ-ಸದ್ಬುದ್ಧಿ ಯಿಲ್ಲದವನಾಗಿ, ಗೃಹಾಂಧಕೂಪೇ-ಮನೆಯೊಳಗಿನ ಕುರುಡು ಬಾವಿಯಲ್ಲಿ, ಪತಿತಃ ಬಿದ್ದ, ಪಶುರ್ಯಥಾ-ತಿರ್ಯಗ್ಜಂತುಹೇಗೋ, ತಥಾ-ಹಾಗೆ, ತವ-ನಿನ್ನ, ಪಾದಾರವಿಂದಂ-ಅಡಿದಾವರೆಯನ್ನು, ನಭಜತಿ-ಸೇವಿಸುವುದಿಲ್ಲವು ॥೪೬॥ಹೇಅಜಿತ-ಯಾರಿಂದಲೂ ಜಯಿಸಲ್ಪಡದ ಪರಮೇಶ್ವರನೇ! ರಾಜ್ಯಶ್ರಿಯಾ-ದೊರೆತನದ ಸಂಪತ್ತಿನಿಂದ, ಉನ್ನದ್ಧಮದಸ್ಯ-ಅಧಿಕವಾಗಿ ಕಟ್ಟಿಕೊಳ್ಳಲ್ಪಟ್ಟ ಗರ್ವವುಳ್ಳ, ಭೂಪತೇಃ-ದೊರೆಯಾದಂಥಾ-ಮರ್ತ್ಯಾತ್ಮಬುದ್ಧೇಃ-ಮನುಷ್ಯದೇಹವೇ ನಾನೆಂಬ ಬುದ್ಧಿಯುಳ್ಳಂಥಾ, ಸುತದಾರಕೋಶಭೂಷು-ಮಕ್ಕಳು ಹೆಂಡಿರು ಭಂಡಾರ ಭೂಮಿಗಳಲ್ಲಿ, ದುರಂತಚಿಂತಯಾ-ಕೊನೆಯಿಲ್ಲದ ಯೋಚನೆಯಿಂದ, ಆಸಜ್ಜಮಾನಸ್ಯ-ಅಭಿಮಾನ ಸಂಗಗೊಳ್ಳುತಲಿರುವ, ಮಮ-ನನ್ನ, ಏಷಕಾಲಃ-ಈ ಆಯುಷ್ಯವು, ನಿಷ್ಫಲಃ-ಪ್ರಯೋಜನ ವಿಲ್ಲದ್ದಾಗಿ, ಗತಃ-ಕಳೆದು ಹೋದದ್ದಾಯಿತು॥೪೭॥ ಘಟಕುಡ್ಯಸನ್ನಿಭೇ-ಮಡಿಕೆಗೂ ಗೋಡೆಗೂ ಸಮಾನವಾದ, ಅಸ್ಮಿನ್ಕಳೇಬರೇ-ಈದೇಹದಲ್ಲಿ, ನಿರೂಢಮಾನಃ-ನೆಲೆಗೊಂಡ ಅಭಿಮಾನವುಳ್ಳವನಾಗಿ, ಅಹಂ-ನಾನು, ನರದೇವಇತಿ-ಮನುಷ್ಯರಿ ಗೊಡೆಯನೆಂದು, ರಥೇಭಾಶ್ವಪದಾತ್ಯನೀಕಪೈಃ-ಚತುರಂಗ ಸೇನಾನಾಯಕರಿಂದ, ವೃತಃ-ಬಳಸಲ್ಪಟ್ಟವನಾಗಿ, ಗಾಂ-ಭೂಮಿಯಲ್ಲಿ, ಪರ್ಯಟನ್-ಸರ್ವತ್ರ ತಿರುಗುವನಾಗಿ, ತ್ವಾಂ-ನಿನ್ನನ್ನು, ಅಗಣಯ್ಯ-ಲಕ್ಕಿಸದೆ, ದುರ್ಮದಃ-ಕೆಟ್ಟ ಗರ್ವವುಳ್ಳವನಾದೆನು ॥೪೮॥ಇತಿ-ಹೀಗೆಯೇ, ಕೃತ್ಯಚಿಂತಯಾ-ಮಾಡತಕ್ಕ ಕೆಲಸಗಳ ಯೋಚನೆಯಿಂದ, ಪ್ರವೃದ್ಧಲೋಭಂ-ಬಹಳ ಹೆಚ್ಚಿದ ಆಶೆಯುಳ್ಳವನೂ, ವಿಷಯೇಷು-ಸಂಸಾರ ಭೋಗಗಳಲ್ಲಿ, ಲಾಲಸಂ-ಅತ್ಯಾಸಕ್ತನೂ, ಉಚ್ಚೈಃ-ಅಧಿಕವಾಗಿ, ಪ್ರಮತ್ತಂ-ಹೆಚ್ಚು ಮದವುಳ್ಳವನೂ ಆದವನನ್ನು ಅಪ್ರಮತ್ತಃ-ಪ್ರಮಾದ ವಿಲ್ಲದವನಾದ ತ್ವಂ-ನೀನು, ಕ್ಷುಲ್ಲೇಲಿಹಾನಃ-ಹಸಿವಿನಿಂದ ನಾಲಿಗೆಗಳಂ ನೆಕ್ಕುತಲಿರುವ, ಅಹಿಃ-ಸರ್ಪವು. ಆಖುಮಿವ-ಇಲಿಯನ್ನು ಹೇಗೋಹಾಗೆ, ಅಂತಕಃ-ನಾಶಕನಾದ ಮೃತ್ಯುವಾಗಿ, ಸಹಸಾ-ಬೇಗನೆ, ಅಭಿಪದ್ಯಸೇ-ಹಿಡಿಯುತಲಿರುವಿ ॥೪೯॥ಪುರಾ-ಪೂರ್ವದಲ್ಲಿ, ಹೇ

---

ವುತೃಣಾಚ್ಛಾದಿತವಾದ ಕೂಪದಲ್ಲಿ ಬೀಳುವಂತೆ ಬೀಳುತ್ತಾನೆ ॥೪೬॥ ಅಸ್ಥಿರವಾದ ದೇಹದಲ್ಲಿ ಆತ್ಮಬುದ್ಧಿಯುಳ್ಳವನಾಗಿ ಪತ್ನೀ ಪುತ್ರ ಗೃಹಕೋಶಾದಿಗಳಲ್ಲಿ ಆಸಕ್ತವಾದ ಬುದ್ಧಿಯುಳ್ಳವನಾಗಿ ರಾಜ್ಯಲಕ್ಷ್ಮಿಯಿಂದ ಮದಿಸಿರುವನಾಗಿ ಭೂಪತಿಯೆನಿಸಿಕೊಂಡು ದುರಹಂಕೃತನಾದ ನನಗೆ ಇದುವರೆಗೂ ನನ್ನ ಕಾಲವು ನಿಷ್ಫಲವಾಗಿ ಹೋಯಿತು॥೪೭॥ಎಲೈಭಗವಂತನೇ ದುರ್ಬುದ್ಧಿಯುಳ್ಳ ನಾನು ಮೃಣ್ಮಯಂಗಳಾದ ಘಟಕುಡ್ಯಂಗಳಿಗೆ ಸಮವಾದ ಈದೇಹದಲ್ಲಿ "ನಾನುಅರಸು" ಎಂಬ ಅಭಿಮಾನವುಳ್ಳವನಾಗಿ ರಥಂಗಳಿಂದಲೂ ಗಜಂಗಳಿಂದಲೂ ಅಶ್ವಂಗಳಿಂದಲೂ ಪಾದಚಾರಿಗಳಿಂದಲೂ ಯುಕ್ತಂಗಳಾದ ಸೈನ್ಯಂಗಳೊಡನೆ ಭೂಮಿಯಂ ಸಂಚರಿಸುವವನಾಗಿ ನಿನ್ನಂ ಗಣನೆಯಂ ಮಾಡದೆ ಕಾಲವಂ ವ್ಯರ್ಥವಾಗಿ ಕಳೆದೆನು ॥೪೮॥ ಎಲೈಸ್ವಾಮಿಯೇ! ಅಧಿಕವಾದ ಮನೋರಥ ಪರಂಪರೆಯನ್ನಾಲೋಚಿಸುತ ಪ್ರಮತ್ತನಾಗಿ ಅಭಿವೃದ್ಧವಾದ ಲೋಭವುಳ್ಳವನಾಗಿ ವಿಷಯಾಸಕ್ತನಾಗಿರುವ ಪುರುಷನಂ ಅಪ್ರಮತ್ತನಾದ ಅಂತಕನಾದ ನೀನು ಹಸಿವಿನಿಂದ ನಾಲಿಗೆಗಳಂ ನೀಡುತ್ತಲಿರುವ ಸರ್ಪವು ಮೂಷಿಕವನಂತೆ ಆಕ್ರಮಿಸುತ್ತೀಯೆ॥೪೯॥ಎಲೈಸ್ವಾಮಿಯೇ! ಯಾವಪುರುಷನು ಪ್ರಥಮದಲ್ಲಿ ಸುವರ್ಣಾಲಂಕೃತಂಗಳಾದ ರಥಂಗಳಿಂದಲೂ ಗಜಂಗಳಿಂದಲೂ ಅಶ್ವಂಗಳಿಂದಲೂ ಭಟರುಗಳಿಂದಲೂ ಸಂಚರಿಸುತ ಭೂಪತಿ ಯೆನಿಸಿಕೊಂಡು ನನಗೆ ಯಾರುಸರಿ ಯೆಂದಿರುತ್ತಾನೋ, ಆಪುರುಷನೇ ಅಪಾರಶಕ್ತಿಯುಳ್ಳ ಕಾ

ಜ್ಞಿತಃ । ಸಏವಕಾಲೇನದುರತ್ಯಯೇನತೇಕಳೇಬರೋವಿಟ್ಕ್ರಿಮಿಭಸ್ಮಸಂಜ್ಞಿತಃ ॥೫೦॥ನಿರ್ಜಿತ್ಯದಿಕ್ಚಕ್ರಮಭೂತವಿಗ್ರಹೋವರಾಸನಸ್ಥಃಸಮರಾಜವಂದಿತಃ । ಗೃಹೇಷುಮೈಥುನ್ಯಸುಖೇಷುಯೋಷಿತಾಂ ಕ್ರೀಡಾಮೃಗಃಪೂರುಷಈಶನೀಯತೇ ॥೫೧॥ಕರೋತಿಕರ್ಮಾಣಿತಪಸ್ಸುನಿಷ್ಠಿತೋನಿವೃತ್ತಭೋಗಸ್ತದಪೇಕ್ಷಯಾಸಕೃತ್ ಪುನಶ್ಚಭೂಯಾಸಮಹಂಸ್ವರಾಡಿತಿಪ್ರವೃದ್ಧತರ್ಷೋನಸುಖಾಯಕಲ್ಪತೇ॥೫೨॥ ಭವಾಪವರ್ಗೋಭ್ರಮತೋಯದಾಭವೇಜ್ಜನಸ್ಯತರ್ಹ್ಯಚ್ಯುತಸತ್ಸಮಾಗಮಃ। ಸತ್ಸಂಗಮೋಯರ್ಹಿ ತದೈವಸದ್ಗತೌಪರಾವರೇಶೇತ್ವಯಿಜಾಯತೇಮತಿಃ ॥೫೩॥ಮನ್ಯೇಮಮಾನುಗ್ರಹಈಶತೇಕೃತೋರಾಜ್ಯಾ

---

ಮುಪರಿಷ್ಕೃತೈಃ-ಭಂಗಾರದಿಂದ ಅಲಂಕರಿಸಲ್ಪಟ್ಟ ರಥೈಃ-ಬಂಡಿಗಳಿಂದಲೂ, ಮತಂಗಜೈಃ-ಆನೆಗಳಿಂದಲೂ, ಚರನ್-ತಿರುಗುತಲಿದ್ದ, ನರದೇವಸಂಜ್ಞಿತ -ದೊರೆಯೆಂಬ ಹೆಸರುಂಟಾದ ದೇಹವು ಯಾವುದೋ, ಸಏವಕಳೇಬರಃ-ಆಶರೀರವೇ, ದುರತ್ಯಯೇನ ಏನು ಪ್ರಯಾಸಪಟ್ಟರೂ ಮೀರಲಳವಲ್ಲದ, ತೇ-ನಿನ್ನ ಕಾಲೇನ-ಕಾಲಮೃತ್ಯುವಿನಿಂದ, ವಿಟ್ಕ್ರಿಮಿಭಸ್ಮ ಸಂಜ್ಞಿತಃ-ವಿಟ್-ಪಕ್ಷಿಯೋ, ಕ್ರಿಮಿ-ಹುಳಗಳೋ ಭಸ್ಮ-ಬೂದಿಯೋ, ಎಂಬ, ಸಂಜ್ಞಿತಃ-ಹೆಸರುಳ್ಳದ್ದಾಗುವುದು॥೫೦॥ ಹೇಈಶ-ಎಲೈಅಂತರ್ಯಾಮಿಯೇ। ದಿಕ್ಚಕ್ರಂ-ದಿಕ್ಕುಗಳ ಮಂಡಲವನ್ನು ನಿರ್ಜಿತ್ಯ-ಗೆದ್ದು. ಅಭೂತವಿಗ್ರಹಃ-ಯುದ್ಧವಿಲ್ಲದವನಾಗಿ, ವರಾಸನಸ್ಥಃ-ಸಿಂಹಾಸನದಲ್ಲಿ ಕುಳಿತವನೂ, ಸಮರಾಜವಂದಿತಃ-ಸರಿದೊರೆಗಳಿಂದ ನಮಸ್ಕರಿಸಲ್ಪಟ್ಟವನಾದರೂಕೂಡ, ಗೃಹೇಷು-ಮನೆಗಳಲ್ಲಿ. ಯೋಷಿತಾಂ-ಹೆಂಗಳ. ಮೈಥುನ್ಯಸುಖೇಷು-ಗ್ರಾಮ್ಯ ಭೋಗಗಳಲ್ಲಿ, ಕ್ರೀಡಾಮೃಗಃ-ಆಟದ ಮೃಗದಹಾಗೆ, ಪೂರುಷಃ-ಮನುಷ್ಯನು, ನೀಯತೇ-ಹೊಂದಿಸಲ್ಪಡುವನು, ಎಳೆಯಲ್ಪಡುವನು ॥೫೧॥ ತಪಸ್ಸು-ತಪಸ್ಸುಗಳಲ್ಲಿ, ನಿಷ್ಠಿತಃ-ಸ್ಥಿರಬುದ್ಧಿಯುಳ್ಳವನಾಗಿ, ನಿವೃತ್ತಭೋಗಃ-ಬಿಡಲ್ಪಟ್ಟ ಸುಖಗಳುಳ್ಳವನಾಗಿ, ಕರ್ಮಾಣಿ-ಯಜ್ಞದಾನ ಜಪಾದಿಗಳನ್ನು, ಕರೋತಿ-ಮಾಡುತಲಿರುವನು, ಸಕೃತ್-ಒಂದುಸಲ. ತದಪೇಕ್ಷಯಾ-ಆಭೋಗದ ಬಯಕೆಯಿಂದ ಪುನಶ್ಚ-ಮರಳಿಯೂ, ಅಹಂ-ನಾನು, ಸ್ವರಾಟ್-ಸ್ವರ್ಗಕ್ಕೊಡೆಯನು ಭೂಯಾಸಂ-ಆದೇನು, ಇತಿ-ಹೀಗೆ, ಪ್ರವೃದ್ಧತರ್ಷಃ-ಬಹಳಹೆಚ್ಚಿದ ಆಶೆಯುಳ್ಳವನಾಗಿ, ಸುಖಾಯ-ತೃಪ್ತಿಗೆ. ನಕಲ್ಪತೇ-ಸಾಕಾದವನಾಗುವುದಿಲ್ಲ॥೫೨॥ಭ್ರಮತಃ-ಸಂಸಾರ ಚಕ್ರದಲ್ಲಿ ತಿರುಗುತಲಿರುವ. ಜನಸ್ಯ-ಪ್ರಾಣಿಗೆ. ಯದಾ-ಯಾವಾಗ, ಸತ್ಸಮಾಗಮಃ-ಸತ್ಪುರುಷರ ಸಂಗತಿಯು, ಭವೇತ್-ಆಗುವುದೋ, ತರ್ಹಿ-ಆಗ, ಭವಾಪವರ್ಗಃ-ಸಂಸಾರದ ಮೋಕ್ಷವು, ಭವೇತ್-ಆಗುವುದು. ಅಚ್ಯುತ-ನಾಶವಿಲ್ಲದವನೇ। ಯರ್ಹಿ-ಯಾವಾಗ, ಸತ್ಸಂಗಮಃ-ಸತ್ಪುರುಷರ ಸಂಗತಿಯೋ. ತದೈವ-ಆಗಲೇ. ಸದ್ಗತೌ-ಸತ್ಪುರುಷರಿಗೆ ಗತಿಯಾದ, ಪರಾವರೇಶೇ-ಉತ್ತಮರಿಗೂ ಅಧಮರಿಗೂ ನಿಯಾಮಕನಾದ, ತ್ವಯಿ-ನಿನ್ನಲ್ಲಿ ಮತಿಃ-ಬುದ್ಧಿಯು. ಜಾಯತೇ-ಹುಟ್ಟುತಲಿದೆ ॥೫೩॥ ಸಾಧುಭಿಃ-ಸತ್ಪುರುಷರಾದ್ದರಿಂದಲೇ, ಏಕಚರ್ಯಯಾ-ಒಬ್ಬನಾಗಿ ತಿರುಗುವಿಕೆಯಿಂದ, ವನಂ-ಅರಣ್ಯವನ್ನು, ವಿವಕ್ಷದ್ಭಿಃ-ಪ್ರವೇಶಿಸಲೆಳಸುವ, ಅಖಂಡಭೂಮಿಪೈಃ-ಸಾರ್ವಭೌಮರಿಂದ, ಯಃ-ಯಾವರಾಜ್ಯ ವೈರಾಗ್ಯವು, ಪ್ರಾರ್ಥ್ಯತೇ-ಬಯಸಲ್ಪಡುವುದೋ, ಸಃ-ಅಂಥಾ, ರಾಜ್ಯಾನುಬಂಧಾಪಗಮಃ-ರಾಜ್ಯಸಂಬಂಧ ತಪ್ಪಿಹೋಗುವಿಕೆ, ಯದೃಚ್ಛಯಾ-ತಾನಾಗಿ,ಸ್ವೇ

---

ಲದಿಂದ ಅಚೇತನವಾದ ಶರೀರದಲ್ಲಿ ಗೃಧ್ರಾದಿಗಳಿಂದ ಭಕ್ಷಿತನಾಗಿ ಕ್ರಿಮಿವ್ಯಾಪ್ತನಾಗಿ ಭಸ್ಮರೂಪನೂ ಆದರೂ ಆಗುತ್ತಾನೆ |೫೦|ಯಾವಪುರುಷನು ದಿಕ್ಕುಗಳಂ ಜಯಿಸಿ ನಿಷ್ಕಂಟಕನಾಗಿ, ಯುದ್ಧಪ್ರಸಕ್ತಿರಹಿತನಾಗಿ, ಸಿಂಹಾಸನಾರೂಢನಾಗಿ, ಸಮಾನರಾದ ಅರಸುಗಳಿಂದ ನಮಸ್ಕೃತನಾಗಿ, ದಿವ್ಯಗೃಹಂಗಳಲ್ಲಿ ವಿಷಯಾಸಕ್ತನಾಗಿ, ಸ್ತ್ರೀಯರುಗಳಿಗೆ ಕ್ರೀಡಾಮೃಗನಾಗಿ, ಇರುತ್ತಾನೆಯೋ ಆಪುರುಷನುಕೂಡ ಕಾಲದಿಂದ ಚಲಿಸಲ್ಪಡುತ್ತಾನೆ॥ ಎಲೈಶ್ರೀಹರಿಯೇ! ಪುರುಷನು ತಪೋನಿಷ್ಠನಾಗಿ ಉತ್ತರತ್ರಮಹಾ ಭೋಗಾಪೇಕ್ಷೆಯಿಂದ, ವೀರ್ಯವಾನ ಭೋಗಂಗಳಲ್ಲಿ ಅಪೇಕ್ಷೆಯಂಬಿಟ್ಟು, ಕರ್ಮಂಗಳ ನಾಚರಿಸಿ ಪುನಶ್ಚ ನಾನು ಲೋಕಾಧಿಪತಿಯಾಗುತ್ತೇನೆಂಬ ಅಪೇಕ್ಷೆಯಿಂದ ಯುಕ್ತನಾಗಿ ಸುಖವನೆಯ್ದುವುದಿಲ್ಲ |೫೨|ಎಲೈಅಚ್ಯುತನೇ! ಪುರುಷನಿಗೆ ಯಾವಾಗ ಸತ್ಸಂಗತಿಯುಂಟಾಗುತ್ತೋ ಆಗ ಸಂಸಾರ ಬಂಧಮೋಕ್ಷವುಂಟಾಗುತ್ತೆ. ಯಾವಾಗ ಸತ್ಸಂಗತಿ ಯುಂಟಾಗುತ್ತೋ ಆಗ ಪರಮಾತ್ಮನಲ್ಲಿ ಬುದ್ಧಿಯುಂಟಾಗುವುದು॥೫೩|ಎಲೈಈಶ್ವರನೇ! ನನಗೆ ನಿನ್ನ ಅನುಗ್ರಹವು ಪೂರ್ವದಲ್ಲಿಯೇ ವುಂಟಾಯಿತೆಂದು ನಾನು ತಿಳಿಯುತ್ತೇನೆ- ಯಾವಕಾರಣದಿಂದಂದರೆ- ಅಖಂಡ ಭೂಮಂಡಲಾಧಿ

ನುಬಂಧಾಪಗಮೋಯದೃಚ್ಛಯಾ । ಯಃಪ್ರಾರ್ಥ್ಯತೇಸಾಧುಭಿರೇಕಚರ್ಯಯಾವನಂವಿವಿಕ್ಷದ್ಭಿರಖಂಡ ಭೂಮಿಪೈಃ॥೫೪॥ನಕಾಮಯೇನ್ಯಂತವಪಾದಸೇವನಾದಕಿಂಚನಪ್ರಾರ್ಥ್ಯತಮಾದ್ವರಂವಿಭೋ ।ಆರಾಧ್ಯಕಸ್ತ್ವಾಂಹ್ಯಪವರ್ಗದಂಹರೇವೃಣೀತಆರ್ಯೋವರಮಾತ್ಮಬಂಧನಮ್ ॥೫೫॥ ತಸ್ಮಾದ್ವಿಸೃಜ್ಯಾಶಿಷ ಈಶಸರ್ವತೋರಜಸ್ತಮಸ್ಸತ್ತ್ವಗುಣಾನುಬಂಧನಾಃ । ನಿರಂಜನಂನಿರ್ಗುಣಮದ್ವಯಂಪರಂತ್ವಾಂ ಜ್ಞಪ್ತಿಮಾತ್ರಂಪುರುಷಂವ್ರಜಾಮ್ಯಹಮ್ ॥೫೬॥ಚಿರಮಿಹವೃಜಿನಾರ್ತಸ್ತಪ್ಯಮಾನೋನುತಾಪೈರವಿತೃಪಷಡಮಿತ್ರೋಲಬ್ಧಶಾಂತಿಃಕಥಂಚಿತ್ । ಶರಣದಸಮುಪೇತಸ್ತ್ವತ್ಪದಾಬ್ಜಂಪರಾತ್ಮನ್ನಭಯಮೃತಮಶೋಕಂಪಾಹಿಮಾಪನ್ನಮೀಶ ॥೫೭॥ಶ್ರೀಕೃಷ್ಣಃ॥ ಸಾರ್ವಭೌಮಮಹಾರಾಜಮತಿಸ್ತೇವಿಮಲೋ

---

ಚ್ಛಯಿಂದ, ತೇ-ನಿನ್ನಿಂದ, ಕೃತಃ-ಮಾಡಲ್ಪಟ್ಟದ್ದು, ಮಮ-ನನ್ನ, ಅನುಗ್ರಹಃ-ರಕ್ಷಣವೆಂದು, ಮನ್ಯೇ-ತಿಳಿಯುವೆನು॥೫೪॥ ವಿಭೋ-ವ್ಯಾಪಕನಾದ ವಿಷ್ಣುವೇ! ಅಕಿಂಚನಪ್ರಾರ್ಥ್ಯತಮಾತ್-ಕಡುಬಡವರಿಂದ ಅತ್ಯಂತವಾಗಿ ಪ್ರಾರ್ಥಿಸಲ್ಪಡತಕ್ಕ, ತವ-ನಿನ್ನ, ಪಾದಸೇವನಾತ್-ಚರಣಾರಾಧನಕ್ಕಿಂತಲೂ, ಅನ್ಯಂ-ಇತರವನ್ನು, ವರಂ-ಶ್ರೇಷ್ಠವನ್ನಾಗಿ, ನಕಾಮಯೇ-ನಾನುಬಯಸುವುದಿಲ್ಲ. ಹರೇ-ಕೃಷ್ಣನೇ! ಕಃಆರ್ಯಃ-ಯಾವಉತ್ತಮ ಪುರುಷನು, ಅಪವರ್ಗದಂ-ಮೋಕ್ಷವಂ ಕುಡುವವನಾದ, ತ್ವಾಂ-ನಿನ್ನನ್ನು, ಆರಾಧ್ಯ-ಪೂಜಿಸಿ, ಅವರಂ-ಅನ್ಯವಾದ ಆತ್ಮಬಂಧನಂ-ತನಗೆ ಬಂಧಕವಾದ್ದನ್ನು ವೃಣೀತ-ಬಯಸುವನು? ॥೫೫॥ತಸ್ಮಾತ್-ಆಕಾರಣದಿಂದ, ಈಶ-ನಿಯಾಮಕನೇ! ರಜಸ್ತಮಸ್ಸತ್ವಗುಣಾನುಬಂಧನಾಃ-ರಾಜಸತಾಮಸಸಾತ್ವಿಕಗುಣ ಸಂಬಂಧಗಳುಳ್ಳ, ಆಶಿಷಃ-ಕಾಮುಗಳನ್ನು, ಸರ್ವತಃ-ಎಲ್ಲಾಬಗೆಗಳಿಂದಲೂ, ವಿಸೃಜ್ಯ-ಬಿಟ್ಟು, ನಿರಂಜನಂ-ನಿರ್ಲಿಪ್ತನಾದ, ನಿರ್ಗುಣಂ-ಗುಣಾಶ್ರಯನಲ್ಲದ, ಅದ್ವಯಂ-ಸಜಾತೀಯ ವಿಜಾತೀಯ ಸ್ವಗತ ಭೇದಗಳಿಲ್ಲದ, ಜ್ಞಪ್ತಿಮಾತ್ರಂ-ಕೇವಲ ಶುದ್ಧಚಿತ್ತಾದ, ಪರಂಪುರುಷಂ-ಪರಮಾತ್ಮನೆನಿಸುವ,ತ್ವಾಂ-ನಿನ್ನನ್ನು, ಅಹಂ-ನಾನು, ವ್ರಜಾಮಿ-ಸೇರುವೆನು॥೫೬॥ ಇಹ-ಈಸಂಸಾರದಲ್ಲಿ, ಚಿರಂ-ಬಹುಕಾಲವು, ವೃಜಿನಾರ್ತಃ-ಪಾಪಗಳಿಂ ಪೀಡಿತನೂ, ಅನುತಾಪೈಃ-ದುಃಖಗಳಿಂದ, ತಪ್ಯಮಾನಃ-ಕುದಿಸಲ್ಪಡುತ ಲಿರುವನೂಆಗಿ, ಕಥಂಚಿತ್-ಅತಿಪ್ರಯಾಸದಿಂದ, ಅವಿತೃಪಷಡಮಿತ್ರಃ-ಆಶೆಯುಡುಗದ ಅರಿಷಡ್ವರ್ಗ ವುಳ್ಳವನಾದರೂ, ಲಬ್ಧಶಾಂತಿಃ-ಹೊಂದಲ್ಪಟ್ಟ ಶಾಂತಿಗುಣ ವುಳ್ಳವನಾಗಿ, ಪರಾತ್ಮನ್-ಪರಮಾತ್ಮನೇ! ಶರಣದ, ರಕ್ಷಣವಂ ಕುಡುವನೇ! ಈಶ-ಒಡೆಯನೇ! ಅಭಯಂ-ಭಯವಿಲ್ಲದ, ಋತಂ-ಸತ್ಯವಾದ, ಅಶೋಕಂ ತ್ವತ್ಪದಾಬ್ಜಂ-ದುಃಖವಿಲ್ಲದ ನಿನ್ನಡಿದಾವರೆಯನ್ನು ಉಪೇತಃ-ಸೇರಿದವನಾದೆನು. ಆಪನ್ನಂ-ಆಪತ್ತುಳ್ಳವನಾದ, ಮಾಂ-ನನ್ನನ್ನು. ಪಾಹಿ-ಸಲಹು॥೫೭॥ [ಕೃಷ್ಣವಾಕ್ಯವು.] ಸಾರ್ವಭೌಮ-ಸಕಲಭೂಮಿಗೂ ಒಡೆಯನಾದ, ಮಹಾರಾಜ-ದೊರೆಯೇ! ವರ್ತ್ಯಕಾಮ್ಯಃ-ಶ್ರೇಷ್ಠ

---

ಪತಿಗಳಾದ ಮಹಾತ್ಮರಾದ ರಾಜರ್ಷಿಗಳಿಂದ ಯಾವ ರಾಜ್ಯತ್ಯಾಗವು ಅಪೇಕ್ಷಿಸಲ್ಪಡುತ್ತೆಯೋ ಅಂತಾ ತ್ಯಾಗವು ದೈವಾನುಗ್ರಹದಿಂದ ನನಗೆ ಉಂಟಾಯಿತು ॥೫೪॥ಎಲೈಭಗವಂತನೇ! ಅವಶ್ಯವಾಗಿ ಪ್ರಾರ್ಥಿಸುವುದಕ್ಕೆ ಯೋಗ್ಯವಾದ ನಿನ್ನ ಪಾದಸೇವನ ಕ್ಕಿಂತಲೂ ಅನ್ಯವಾದ ವರವಂ ನಾನು ಸ್ವಲ್ಪವನ್ನಾದರೂ ಅಪೇಕ್ಷಿಸುವುದಿಲ್ಲ. ಎಲೈಶ್ರೀಹರಿಯೇ! ಮೋಕ್ಷಪ್ರದನಾದ ನಿನ್ನನ್ನು ಆರಾಧಿಸಿಯೂ ಕೂಡ ಯಾವನಾದರೂ ಆತ್ಮಬಂಧಕವಾದ ತುಚ್ಛವಾದ ವರವನ್ನು ಅಪೇಕ್ಷಿಸುತ್ತಾನೆ?॥೫೫॥ಎಲೈಈಶ್ವರನೇ! ಆದಕಾರಣದಿಂದ ರಜಸ್ತಮಸ್ಸತ್ವಂಗಳಾದ ಗುಣಂಗಳಿಂದ ಕಲ್ಪಿತಂಗಳಾದ ಕಾಮ್ಯಫಲಾಪೇಕ್ಷೆಗಳಂ ಬಿಟ್ಟು ಅವರ್ಣರಹಿತನಾಗಿ ನಿರ್ಗುಣನಾಗಿ ದ್ವಿತೀಯವಸ್ತು ರಹಿತನಾಗಿ ಜ್ಞಾನಘನನಾದ ಪರಮಪುರುಷನಾದ ನಿನ್ನಂ ಶರಣು ಹೊಂದುತ್ತೇನೆ ॥೫೬॥ ಎಲೈ ಜ್ಞಾನಪ್ರದನಾದ ಸ್ವಾಮಿಯೇ! ನಾನು ಬಹುಕಾಲದಿಂದ ಕರ್ಮಫಲಂಗಳಿಂದ ಪೀಡಿತನಾಗಿ, ಪಶ್ಚಾತ್ತಪ್ತನಾಗಿ, ಅಶಾಂತಂಗಳಾದ ಶತ್ರುರೂಪಂಗಳಾದ ಇಂದ್ರಿಯಂಗಳುಳ್ಳವನಾಗಿ, ದೈವಕಟಾಕ್ಷದಿಂದ ಈಗಸ್ವಲ್ಪ ಶಾಂತನಾಗಿ ಭಯರಹಿತನಾಗಿ ಸತ್ಯವಾದ ಶೋಕನಾಶಕವಾದ ನಿನ್ನ ಪಾದವಂ ಶರಣುಹೊಂದಿಯಿದ್ದೇನೆ-ರಕ್ಷಿಸು ॥೫೭॥(ಎಂದು ಪ್ರಾರ್ಥಿಸುವ ಮುಚುಕುಂದನಂ ಕುರಿತು ಭಗವಂತನು ನುಡಿಯುವನು-)ಎಂತೆನೆ-ಎಲೈ ಸಾರ್ವಭೌಮನಾದ ಮಹಾರಾಜನೇ! ನಿನ್ನಬುದ್ಧಿಯು ನಿರ್ಮಲವಾದ್ದು, ಉತ್ಕೃಷ್ಟವಾದ್ದು, ಬೇಕಾದವರಂ

ರ್ಜಿತಾ । ವರೈಃಪ್ರಲೋಭಿತಸ್ಯಾಪಿನಕಾಮೈರ್ವಿಹತಾಯತಃ ॥೫೮॥ ಪ್ರಲೋಭಿತೋವರೈರ್ಯತ್ತ್ವ
ಮಪ್ರಮಾದಾಯವಿದ್ಧಿತತ್ । ನಧೀರ್ಮಯ್ಯೇಕಭಕ್ತಾನಾಮಾಶೀರ್ಭಿರ್ಭಿದ್ಯತೇಕ್ವಚಿತ್॥೫೯॥ ಯುಂ
ಜಾನಾನಾಮಭಕ್ತಾನಾಂಪ್ರಾಣಾಯಾಮಾದಿಭಿರ್ಮನಃ । ಅಕ್ಷೀಣವಾಸನಂರಾಜನ್ದೃಶ್ಯತೇಕ್ವಚಿದು
ತ್ಥಿತಮ್ ॥೬೦॥ ವಿಚರಸ್ವಮಹೀಂಕಾಮಂಮಯ್ಯಾವೇಶಿತಮಾನಸಃ । ಅಸ್ತ್ವೇವಂನಿತ್ಯದಾತುಭ್ಯಂ
ಭಕ್ತಿರ್ಮಯ್ಯನಪಾಯಿನೀ ॥೬೧॥ ಕ್ಷಾತ್ರಧರ್ಮಸ್ಥಿತೋಜಂತೂನ್ವಧೀರ್ಮೃಗಯಾದಿಭಿಃ । ಸಮಾಹಿತ
ಸ್ತತ್ತಪಸಾಜಹ್ಯಘಂಮದುಪಾಶ್ರಯಃ ॥೬೨॥ ಜನ್ಮನ್ಯನಂತರೇರಾಜನ್ಸರ್ವಭೂತಸುಹೃತ್ತಮಃ ।
ಭೂತ್ವಾದ್ವಿಜವರಸ್ತ್ವಂವೈಮಾಮುಪೈಷ್ಯಸಿಕೇವಲಮ್॥ ... ... ... ... ... ೬೩॥

-(ಇತಿಶ್ರೀಮದ್ಭಾಗವತೇ ದಶಮಸ್ಕಂಧೇ ಏಕಪಂಚಾಶತ್ತಮೋಽಧ್ಯಾಯಃ)-

---

ಗಳಾದ ವರಗಳಿಂದ, ಪ್ರಲೋಭಿತಸ್ಯಾಪಿ-ಆಶೆಗೊಳಿಸಲ್ಪಟ್ಟವನಾದ, ತೇ-ನಿನ್ನ, ಮತಿಃ-ಬುದ್ಧಿಯು, ಯತಃ-ಯಾವಕಾರಣದಿಂದ, ಊರ್ಜಿತಾ-ವೃದ್ಧಿಹೊಂದಿರುವುದು ॥೫೮॥ ತ್ವಂ-ನೀನು, ವರೈಃ-ಮನೋರಥಗಳಿಂದ, ಪ್ರಲೋಭಿತಇತಿಯತ್-ಆಶೆಗೊಳಿಸಲ್ಪಟ್ಟೆಯೆಂಬುವುದು ಯಾವುದೋ, ತತ್-ಅದರನ್ನು, ಅಪ್ರಮಾದಾಯ-ಜ್ಞಾನಕ್ಕೋಸುಗವೇಯೆಂದು, ವಿದ್ಧಿ-ತಿಳಿಕೋ, ಮಯಿ-ನನ್ನಲ್ಲಿ, ಏಕಭಕ್ತಾನಾಂ-ಮುಖ್ಯಭಕ್ತಿಯುಳ್ಳವರ, ಧೀಃ-ಬುದ್ಧಿಯು, ಕ್ವಚಿತ್-ಎಲ್ಲಿಯೂ, ಆಶೀರ್ಭಿಃ-ಬಯಕೆಗಳಿಂದ, ನಭಿದ್ಯತೇ-ಭೇದಗೊಳಿಸಲ್ಪಡುವುದಿಲ್ಲ॥೫೯॥ ಅಭಕ್ತಾನಾಂ-ಭಕ್ತರಲ್ಲದೇ ಇರುವವರಾಗಿ, ಪ್ರಾಣಾಯಾಮಾದಿಭಿಃ-ಪ್ರಾಣಾಯಾಮವೇ ಮೊದಲಾದ ಯೋಗಗಳಿಂದ, ಯುಂಜಾನಾನಾಂ-ಆತ್ಮೈಕ್ಯಾನುಸಂಧಾನ ಗೊಳ್ಳುವವರ, ಮನಃ-ಮನಸ್ಸು, ರಾಜನ್-ಅರಸೇ! ಅಕ್ಷೀಣವಾಸನಂ-ಕ್ಷೀಣಿಸಿಹೋಗದ ಕರ್ಮವಾಸನೆಯುಳ್ಳದ್ದಾದ್ದರಿಂದ, ಕ್ವಚಿತ್-ಒಂದುಕಡೆಯಲ್ಲಿ ಉತ್ಥಿತಂ-ಸಂಕಲ್ಪೋನ್ಮುಖವಾದ್ದಾಗಿ, ದೃಶ್ಯತೇ-ಕಾಣಲ್ಪಡುವುದು॥೬೦॥ ಮಯಿ-ನನ್ನಲ್ಲಿ, ಆವೇಶಿತ-ಹೊಗಿಸಲ್ಪಟ್ಟ, ಮಾನಸಃ-ಮನಸ್ಸುಳ್ಳವನಾಗಿ, ಕಾಮಂ-ಯಥೇಚ್ಛವಾಗಿ, ಮಹೀಂ-ಭೂಮಿಯಲ್ಲಿ, ವಿಚರಸ್ವ-ಸಂಚಾರಮಾಡು. ಮಯಿ-ನನ್ನಲ್ಲಿ, ಅನಪಾಯಿನೀ-ಬಿಟ್ಟುಹೋಗದೇಯಿರುವ, ಅಥವಾ ನಾಶವಿಲ್ಲದ, ಭಕ್ತಿಃ ಇಯಂ-ಈಪ್ರೀತಿಯು, ತುಭ್ಯಂ-ನಿನಗೆ, ನಿತ್ಯದಾ-ಸರ್ವಕಾಲಗಳಲ್ಲಿಯೂ, ಅಸ್ತು-ಆಗಲಿ ॥೬೧॥ ಕ್ಷಾತ್ರಧರ್ಮಸ್ಥಿತಃ-ಕ್ಷತ್ರಿಯ ವೃತ್ತಿಯಲ್ಲಿರುವ ನಾದ್ದರಿಂದ, ಮೃಗಯಾಭಿಃ ಬೇಟೆಮೊದಲಾದವುಗಳಿಂದ, ಜಂತೂನ್-ಪ್ರಾಣಿಗಳನ್ನು, ಅವಧೀಃ-ಕೊಂದಿರುವಿ. ಸಮಾಹಿತಃ-ಸಮಾಧಾನ ಗೊಂಡವನಾಗಿ, ಮದುಪಾಶ್ರಯಃ-ನಾನೇ ಆಧಾರವಾಗಿ ಉಳ್ಳವನಾಗಿ, ತದಘಂ-ಆಪಾಪವನ್ನು, ತಪಸಾ-ತಪಸ್ಸಿನಿಂದ, ಜಹಿ-ಗೆಲ್ಲು ॥೬೨॥ ರಾಜನ್-ಮುಚುಕುಂದ ರಾಯನೇ! ಅನಂತರೇಜನ್ಮನಿ-ಮುಂದಣ ಜನ್ಮದಲ್ಲಿಯೇ, ಸರ್ವಭೂತಸುಹೃತ್ತಮಃ-ಸಕಲಪ್ರಾಣಿಗಳಿಗೂ ಅತ್ಯಂತ ಮಿತ್ರನಾದ, ದ್ವಿಜವರಃ-ಬ್ರಾಹ್ಮಣ ಶ್ರೇಷ್ಠನು, ಭೂತ್ವಾ-ಆಗಿ, ತ್ವಂ-ನೀನು, ವೈ-ಪ್ರಸಿದ್ಧವಾಗಿ, ಮಾಂ ಕೇವಲಂ-ನನ್ನೊಬ್ಬನನ್ನೇ, ಉಪೈಷ್ಯಸಿ-ಸೇರುವಿ. ॥೬೩॥

ಇತಿಶ್ರೀಮದ್ಭಾಗವತೇ ದಶಮಸ್ಕಂಧೇ ಏಕಪಂಚಾಶತ್ತಮೋಽಧ್ಯಾಯಃ-

---

ಗಳಂ ಕೊಡುತ್ತೇನೆಂದರೂ ಆವರಗಳಿಗೆ ಆಶೆಯಂ ಮಾಡದೆ ದೃಢನಾಗಿರುವಿ, ಆಕಾರಣದಿಂದ ನೀನು ಧನ್ಯನು ॥೫೮॥ ಅಂಥಾ ನಿನಗೆ ವರಗಳಂ ಕೊಡುತ್ತೇನೆಂದು ಆಶೆಮಿತ್ತರೂ ಪ್ರಮಾದಕ್ಕೆ ಕಾರಣವಾಗುವುದಿಲ್ಲ. ಯಾತಕ್ಕೆಂದರೆ-ನನ್ನಲ್ಲಿ ಮುಖ್ಯಭಕ್ತರಾದವರಿಗೆ ಕಾಮ್ಯಫಲ ಭ್ರಾಂತಿಯಿಂದ ಬುದ್ಧಿಯು ಚಲಿಸುವುದಿಲ್ಲ॥೫೯॥ ಪ್ರಾಣಾಯಾಮಾದಿಗಳಿಂದ ಮನಸ್ಸಂ ಸ್ಥಿರೀಕರಿಸಲೋಸುಗ ಯೋಗವಂ ಸೇವಿಸುವ ಅಭಕ್ತರಾದ ಪುರುಷರಿಗೆ ವಾಸನಾಕ್ಷಯ ವಿಲ್ಲದ್ದರಿಂದ ಚಿತ್ತವು ಒಂದು ಕಾಲದಲ್ಲಿ ವಿಷಯಾಭಿಮುಖವಾಗುವುದು ॥೬೦॥ ಎಲೈ ಮುಚುಕುಂದನೇ! ನೀನು ನನ್ನಲ್ಲಿ ನಿಲ್ಲಿಸಲ್ಪಟ್ಟ ಚಿತ್ತವುಳ್ಳವನಾಗಿ ಭೂಮಿಯಲ್ಲಿ ಸಂಚರಿಸು. ನಿನಗೆ ನನ್ನಲ್ಲಿ ಭಕ್ತಿಯು ದೃಢವಾಗಿದೆ ॥೬೧॥ ಪೂರ್ವದಲ್ಲಿ ನೀನು ಕ್ಷತ್ರಧರ್ಮದಲ್ಲಿದ್ದು ಬೇಟೆಮೊದಲಾದ ವ್ಯಾಪಾರಂಗಳಿಂದ ಪ್ರಾಣಿಗಳಂ ಸಂಹರಿಸಿದವನಾದೆ, ಆಕಾರಣದಿಂದ ತಪಸ್ಸಿನಿಂದ ಸ್ಥಿರಚಿತ್ತನಾಗಿ ಆಪಾಪವಂ ಪರಿಹರಿಸಿ ಕೊಂಡವನಾಗು ॥೬೨॥ ಎಲೈ ಅರಸೇ! ಉತ್ತರಜನ್ಮದಲ್ಲಿ ಸರ್ವಭೂತ ಮಿತ್ರನಾದ ಬ್ರಾಹ್ಮಣೋತ್ತಮನಾಗಿ ಹುಟ್ಟಿ ನನ್ನನ್ನೈದುತ್ತೀಯೆ । ... ... ... ... ... ... ॥೬೩॥

|ಶ್ರೀಶುಕಃ|ಇತ್ಥಂಸೋನುಗ್ರಹೀತೋಂಗಕೃಷ್ಣೇನೇಕ್ಷ್ವಾಕುನಂದನಃ | ತಂಪರಿಕ್ರಮ್ಯಸನ್ನಮ್ಯ
ನಿಶ್ಚಕ್ರಾಮಗುಹಾಮುಖಾತ್ |೧| ಸವೀಕ್ಷ್ಯಕ್ಷುಲ್ಲಕಾನ್ಮರ್ತ್ಯಾನ್ಪಶೂನ್ವೀರುದ್ವನಸ್ಪತೀನ್|
ಮತ್ವಾಕಲಿಯುಗಂಪ್ರಾಪ್ತಂಜಗಾಮದಿಶಮುತ್ತರಾಮ್.|೨|ತಪಶ್ಶ್ರದ್ಧಯಾಯುತೋಧೀರೋನಿಸ್ಸಂಗೋ
ಮುಕ್ತಸಂಶಯಃ | ಸಮಾಧಾಯಮನಃಕೃಷ್ಣೇಪ್ರಾವಿಶದ್ಗಂಧಮಾದನಮ್ |೩|ಬದರ್ಯಾಶ್ರಮಮಾ

---

೫೧ನೆಯ ಅಧ್ಯಾಯದ ಪ್ರತಿಪದಟೀಕೆ.

[ಶುಕವಾಕ್ಯವು] ಅಂಗ-ಪ್ರಿಯನಾದ ಪರೀಕ್ಷಿದ್ರಾಯನೇ! ಇತ್ಥಂ-ಹೀಗೆ, ಕೃಷ್ಣೇನ-ವಾಸುದೇವನಿಂದ, ಅನುಗ್ರಹೀತಃ-ಅನುಗ್ರಹಿಸಲ್ಪಟ್ಟ ಇಕ್ಷ್ವಾಕುನಂದನಃ-ಇಕ್ಷ್ವಾಕು ವಂಶದವರನ್ನು ಸಂತೋಷ ಪಡಿಸುವನಾದ, ಸಃ-ಆಮುಚುಕುಂದ ರಾಯನು, ತಂ-ಆಕೃಷ್ಣನನ್ನು, ಪರಿಕ್ರಮ್ಯ-ಪ್ರದಕ್ಷಿಣವಂ ಗೆಯ್ದು, ಸನ್ನಮ್ಯ-ನಮಸ್ಕರಿಸಿ, ಗುಹಾಮುಖಾತ್-ಗವಿಯ ಬಾಕಲ ದೆಸೆಯಿಂದ, ನಿಶ್ಚಕ್ರಾಮ-ಹೊರಟು ಹೋದನು ॥೧॥ಸಃ-ಆಮುಚುಕುಂದನು, ಕ್ಷುಲ್ಲಕಾನ್-ಅಲ್ಪ ಪರಿಮಾಣವುಳ್ಳ, ಮರ್ತ್ಯಾನ್-ಮನುಷ್ಯರನ್ನೂ, ಪಶೂನ್-ಪಶುಗಳನ್ನೂ, ವೀರುದ್ವನಸ್ಪತೀನ್-ಬಳ್ಳಿಗಳನ್ನೂ ಗಿಡುಮರಗಳನ್ನೂ, ವೀಕ್ಷ್ಯ-ನೋಡಿ ಕಲಿಯುಗಂ-ನಾಲ್ಕನೆಯ ಪಾಪಕಾಲವನ್ನು, ಪ್ರಾಪ್ತಂ-ಬಂದಿರುವುದನ್ನಾಗಿ, ಮತ್ವಾ-ತಿಳಿದು, ಉತ್ತರಾಂ ದಿಶಂ-ಬಡಗಲ ಕಡೆಯಂ ಕುರಿತು, ಜಗಾಮ-ತೆರಳಿದನು ॥೨॥ತಪಃಶ್ರದ್ಧಯಾಯುತಃ-ತಪಸ್ಸಿನಲ್ಲಿ ಆವಶ್ಯಕ ಬುದ್ಧಿಯಿಂದ ಕೂಡಿದವನೂ, ಧೀರಃ-ನಿಶ್ಚಿತ ಬುದ್ಧಿಯುಳ್ಳವನೂ, ನಿಸ್ಸಂಗಃ-ಯಾವುದರಲ್ಲಿಯೂ ಅಭಿಮಾನವಿಲ್ಲದವನೂ, ಮುಕ್ತಸಂಶಯಃ-ಬಿಡಲ್ಪಟ್ಟ ಸಂದೇಹಂಗಳುಳ್ಳವನೂ, ಆದುದರಿಂದಲೇ, ಮನಃ-ಹೃದಯವನ್ನು, ಕೃಷ್ಣೇ-ಶ್ರೀಹರಿಯಲ್ಲಿ, ಸಮಾಧಾಯ-ನೆಲೆಗೊಳಿಸಿ, ಗಂಧಮಾದನಂ-ಗಂಧಮಾದನ ಪರ್ವತವನ್ನು, ಪ್ರಾವಿಶತ್-ಹೊಕ್ಕನು ॥೩॥ನರನಾರಾಯಣಾಲಯಂ-ನರರ್ಷಿಗೂ ನಾರಾಯಣ

---

ಇಂತು ಶ್ರೀಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸಿದನೆಂದು ಸೂತಪೌರಾಣಿಕನು ನೈ
ಮಿಶಾರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಪೇಳಿದನೆಂಬಲ್ಲಿಗೆ ಶ್ರೀಮನ್ಮಹೀಶೂರ
ಪುರವರಾಧೀಶ ಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜ ವಿರಚಿತಮಾದ ಶ್ರೀಕೃ
ಷ್ಣರಾಜವಾಣೀವಿಲಾಸಮೆಂಬ ಶ್ರೀಭಾಗವತಪುರಾಣದ ಕರ್ಣಾಟಭಾಷಾ
ವ್ಯಾಖ್ಯಾನದೊಳು ದಶಮಸ್ಕಂಧದಲ್ಲಿ ೫೧ನೆಯ ಅಧ್ಯಾಯವು
ಸಂಪೂರ್ಣಮಾದುದು.



೫೨ನೆಯ ಅಧ್ಯಾಯವು

ಶ್ರೀಧರೀಯಶ್ಲೋಕಃ|ದ್ವಿಪಂಚಾಶತ್ತಮೇಧಾವನ್ ಭಯಾದಿವಗತಃ ಪುರೀಂ| ಅನ್ವಮೋದತಸಂದೇಶಂ ರುಕ್ಮಿಣ್ಯಾದ್ವಿಜವರ್ಣಿತಂ|‡|ಐವತ್ತೆರಡನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ರಾಮಸಮೇತನಾಗಿ ಜರಾಸಂಧನ ಭಯದೆಸೆಯಿಂದಲೋ ಯೆಂಬಂತೆ ಪಲಾಯನಂ ಗೆಯ್ದು ದ್ವಾರಕಾ ಪುರಕ್ಕೆ ಸೇರಿ ರುಕ್ಮಿಣೀದೇವಿಯಿಂದ ಕಳುಹಿಸಲ್ಪಟ್ಟ ಬ್ರಾಹ್ಮಣನಿಂದ ಪೇಳಲ್ಪಟ್ಟ ಸ್ವಯಂವರ ವೃತ್ತಾಂತವಂ ಅನುಮೋದನಂ ಗೆಯ್ದನೆಂಬರ್ಥಂ ಶ್ರೀಶುಕಾಚಾರ್ಯನು ಪರೀಕ್ಷಿದ್ರಾಯನಂ ಕುರಿತು ನಿರೂಪಿಸುವನದೆಂತೆನೆ-

ಎಲೈ, ಪರೀಕ್ಷಿದ್ರಾಯನೇ! ಈರೀತಿಯಲ್ಲಿ ಶ್ರೀಕೃಷ್ಣನಿಂದ ಅನುಗ್ರಹೀತನಾದ ಮುಚುಕುಂದರಾಯನು ಶ್ರೀಕೃಷ್ಣನಿಗೆ ಪ್ರದಕ್ಷಿಣ ನಮಸ್ಕಾರಂಗೆಯ್ದು ಗುಹೆಯಿಂದ ಹೊರಟು ಹೋದನು |೧|ಆಮುಚುಕುಂದರಾಯನು ಸ್ವಲ್ಪ ಪ್ರಮಾಣವುಳ್ಳ ಪಶುಗಳಂ ಮನುಷ್ಯರಂ ಲತೆಗಳಂ ವೃಕ್ಷಂಗಳಂ ಸಹ ನೋಡಿ ಕಲಿಯುಗವು ಬಂತೆಂದು ತಿಳಿದು ಉತ್ತರದಿಕ್ಕಿಗೆ ಹೋದನು|೨| ತಪಸ್ಸಿನಲ್ಲಿ ಶ್ರದ್ಧಾವಂತನಾಗಿ ಧೀರನಾಗಿ ಸಂಗರಹಿತನಾಗಿ ಮುಕ್ತಸಂಶಯನಾಗಿ ಆಕೃಷ್ಣನಲ್ಲಿ ಚಿತ್ತವನರ್ಪಿಸಿ ಗಂಧಮಾದನ ಪರ್ವತವಂ ಕುರಿತು ಹೋದನು |೩|

ಸಾಧ್ಯನರನಾರಾಯಣಾಲಯಮ್ ।ಸರ್ವದ್ವಂದ್ವಸಹಶ್ಶಾಂತಸ್ತಪಸಾರಾಧಯದ್ಧರಿಮ್ ॥೪॥ಭಗವಾನ್ ಪುನರಾವ್ರಜ್ಯಮಧುರಾಂಯವನಾವೃತಾಮ್ । ಹತ್ವಾಮ್ಲೇಚ್ಛಬಲಂನಿನ್ಯೇತದೀಯಂದ್ವಾರಕಾಂಧನಮ್ ॥೫॥ನೀಯಮಾನೇಧನೇಗೋಭಿರ್ನೃಭಿಶ್ಚಾಚ್ಯುತಚೋದಿತೈಃ । ಆಜಗಾಮಜರಾಸಂಧಸ್ತ್ರಯೋವಿಂಶತ್ಯನೀಕಪಃ ॥೬॥ವಿಲೋಕ್ಯವೇಗರಭಸಂರಿಪುಸೈನ್ಯಸ್ಯಮಾಧವೌ। ಮನುಷ್ಯಚೇಷ್ಟಾಮಾಪನ್ನೌ ರಾಜನ್ ದುದ್ರುವತುರ್ದ್ರುತಮ್॥೭॥ ವಿಹಾಯವಿತ್ತಂಪ್ರಚುರಮಭೀತೌಭೀರುಭೀತವತ್।ಪದ್ಭ್ಯಾಂ ಪದ್ಮಪಲಾಶಾಭ್ಯಾಂಚೇರತುರ್ಬಹುಯೋಜನಮ್ ॥೮॥ಪಲಾಯಮಾನೌತೌದೃಷ್ಟ್ವಾಮಾಗಧಃಪ್ರಹಸನ್ ಬಲೀ। ಅನ್ವಧಾವದ್ರಥಾನೀಕೈರೀಶಯೋರಪ್ರಮಾಣವಿತ್॥೯॥ಪ್ರದ್ರುತ್ಯದೂರಮಶ್ರಾಂತೌತುಂ

---

ಋಷಿಗೂ ಮನೆಯಾಗಿರುವ, ಬದರ್ಯಾಶ್ರಮಂ-ಎಳಚೀ ಮರಗಳತೋಪಿನ ತಪೋಭೂಮಿಯನ್ನು, ಆಸಾದ್ಯ-ಸೇರಿ, ಸರ್ವದ್ವಂದ್ವಸಹಃ-ದ್ವೈತಮ ಖಗಳೆಲ್ಲವನ್ನೂ ಸಹಿಸುವನಾಗಿಯೂ, ಶಾಂತಃ-ಶುದ್ಧಚಿತ್ತನಾಗಿಯೂ, ತಪಸಾ-ಧ್ಯಾನಯೋಗದಿಂದ, ಹರಿಂ-ಪರಮಾತ್ಮನನ್ನು, ಆರಾಧಯತ್-ಪೂಜಿಸಿದನು ॥೪॥ಭಗವಾನ್-ಶ್ರೀಕೃಷ್ಣನು, ಯವನಾವೃತಾಂ ತುರುಷ್ಕರಿಂದ ಮುತ್ತಲ್ಪಟ್ಟಿರುವ, ಮಧುರಾಂ-ಮಧುರಾ ಪುರವಂ ಕುರಿತು, ಪುನಃ-ಮರಳಿಯೂ, ಆವ್ರಜ್ಯ-ಬಂದು, ಮ್ಲೇಚ್ಛಬಲಂ-ತುರುಕರದಂಡನ್ನು, ಹತ್ವಾ-ಕೊಂದು, ತದೀಯಂ-ಆದಂಡಿನವರದಾದ, ಧನಂ-ದ್ರವ್ಯವನ್ನು, ದ್ವಾರಕಾಂ-ಕುಶಸ್ಥಲೀನಗರವಂ ಕುರಿತು, ನಿನ್ಯೇ-ಕೊಂಡೊಯ್ದನು(ಸಾಗಿಸಿದನು)॥೫॥ಅಚ್ಯುತಚೋದಿತೈಃ-ಕೃಷ್ಣನಿಂದ ಪ್ರೇರಿಸಲ್ಪಟ್ಟ ನೃಭಿಃ-ಮನುಷ್ಯರಿಂದಲೂ, ಗೋಭಿಃ-ಎತ್ತುಗಳಿಂದಲೂ, ಧನೇ-ದ್ರವ್ಯವು, ನೀಯಮಾನೇಸತಿ-ಒಯ್ಯಲ್ಪಡುತ್ತಿರಲಾಗಿ, ತ್ರಯೋವಿಂಶತ್ಯನೀಕಪಃ-೨೩ ಅಕ್ಷೌಹಿಣಿಗಳಂದಂಡನ್ನು ಪಾಲಿಸುವವನಾದ, ಜರಾಸಂಧಃ-ಬೃಹದ್ರಥರಾಯನಮಗನು, ಆಜಗಾಮ-ಬಂದನು ॥೬॥ ರಾಜನ್-ಪರೀಕ್ಷಿದ್ರಾಯನೇ! ಮಾಧವೌ-ರಾಮಕೃಷ್ಣರು, ರಿಪುಸೈನ್ಯಸ್ಯ-ವೈರಿಗಳದಂಡಿನ, ವೇಗರಭಸಂ-ವೇಗದ ಉದ್ರೇಕವನ್ನು, ವಿಲೋಕ್ಯ-ಕಂಡು, ಮನುಷ್ಯಚೇಷ್ಟಾಂ-ಮನುಷ್ಯರ ಲೀಲೆಯನ್ನು, ಆಪನ್ನೌ-ಹೊಂದಿದವರಾದ್ದರಿಂದ, ದ್ರುತಂ-ಶೀಘ್ರವಾಗಿ, ದುದ್ರುವತುಃ-ಓಡಿಹೋದರು॥೭॥ಅಭೀತೌ-ಹೆದರುವವರಲ್ಲದ ರಾಮಕೃಷ್ಣರು, ಭೀರುಭೀತವತ್-ಹೆದರಿದವರಿಗಿಂತಲೂ ಹೆದರಿದವರಂತೆ, ಪದ್ಮಪಲಾಶಾಭ್ಯಾಂ-ತಾವರೆಯೆಸಳ್ಗಳಂತಿರುವ, ಪದ್ಭ್ಯಾಂ-ಪಾದಗಳಿಂದ, ಬಹುಯೋಜನಂ-ಹಲವುಗಾವುದವನ್ನು, ಚೇರತುಃ-ತಿರುಗಾಡಿದರು॥೮॥ಪಲಾಯಮಾನೌ-ಓಡಿಹೋಗುತ್ತಿರುವ, ತೌ-ಆರಾಮಕೃಷ್ಣರನ್ನು, ದೃಷ್ಟ್ವಾ-ನೋಡಿ, ಪ್ರಹಸನ್-ಅಪಹಾಸ್ಯವಂ ಗೆಯ್ಯುತಲಿರುವ, ಬಲೀ-ಬಲವಂತನಾದ, ಮಾಗಧಃ-ಮಗಧದೇಶಕ್ಕೆಪತಿಯಾದ ಜರಾಸಂಧನು, ಈಶಯೋಃ-ಜಗನ್ನಾಯಕರಾದ ರಾಮಕೃಷ್ಣರ, ಅಪ್ರಮಾಣವಿತ್-ಅಳವಂ ಬಲ್ಲವನಲ್ಲವಾದ್ದರಿಂದ, ರಥಾನೀಕೈಃ-ತೇರ್ಗಳದಂಡುಗಳೊಡನೆ, ಅನ್ವಧಾವತ್-ಬೆನ್ನಟ್ಟಿತರುಬಿದನು ॥೯॥ದೂರಂ-ದೂರದೇಶವಂಕುರಿತು ಪ್ರದ್ರುತ್ಯ-ಹೆಚ್ಚಾಗಿ ಓಡಿಹೋಗಿಯೂ, ಅಶ್ರಾಂತೌ-ಬಳಲಿದವರಲ್ಲದ ರಾಮಕೃಷ್ಣರು, ಯತ್ರ-ಯಾವಸ್ಥಳದಲ್ಲಿ, ಭಗವಾನ್-ಇಂದ್ರನು, ನಿತ್ಯದಾ-

---

ನರನಾರಾಯಣ ಋಷಿಗಳಿಗೆ ಆವಾಸಸ್ಥಾನವಾದಬದರಿಕಾಶ್ರಮವನ್ನೈದಿ ಸುಖ ದುಖಂಗಳಂ ಸಮವನ್ನಾಗಿಭಾವಿಸಿಶಾಂತನಾಗಿ ತಪಸ್ಸಿನಿಂದ ಶ್ರೀಹರಿಯಂ ಆರಾಧಿಸಿದನು॥೪॥ಭಗವಂತನಾದ ಶ್ರೀಕೃಷ್ಣನು ಪುನಃ ಮಧುರಾ ಪಟ್ಟಣಕ್ಕೆಬಂದು ಮ್ಲೇಚ್ಛಸಮೂಹಂಗಳಂ ಸಂಹರಿಸಿ ಅವರ ಧನವನೆಲ್ಲವಂ ದ್ವಾರಕೆಗೆ ಸಾಗಿಸಿದನು ॥೫॥ ಆಧನಂಗಳನೆಲ್ಲವಂ ಎತ್ತುಗಳ ಮೇಲೆಯೂ ಬಂಡಿಗಳ ಮೇಲೆಯೂ ಹೇರಿಸಿಕೊಂಡು ಶ್ರೀಕೃಷ್ಣ ಪ್ರೇರಿತರಾದ ರಾಜಭಟರು ದ್ವಾರಕಾನಗರಕ್ಕೆ ಹೋಗುವಾಗ ಜರಾಸಂಧನು ಇಪ್ಪತ್ತುಮೂರಕ್ಷೌಹಿಣೀ ಸೇನೆಗಳಿಂದ ಕೂಡಿಬಂದನು ॥೬॥ಎಲೈಅರಸನೇ! ಶ್ರೀರಾಮಕೃಷ್ಣರು ಶತ್ರುಸೇನೆಗಳ ವೇಗರಭಸವಂನೋಡಿ ಮನುಷ್ಯ ವ್ಯಾಪಾರವನಾಶ್ರಯಿಸಿ ಅತ್ಯಂತ ಭಯಪಟ್ಟವರಂತೆ॥೭॥ಬಹುಧನವನೆಲ್ಲವ ನಲ್ಲಿಯೇಬಿಟ್ಟು ಪದ್ಮದಳಂಗಳಂತೆ ಮೃದುವಾದ ಪಾದಂಗಳಿಂದ ಬಹುಯೋಜನ ದೂರವಾಗಿ ಪಲಾಯನಂ ಗೆಯ್ದರು॥೮॥ಆಗ ಆರಾಮಕೃಷ್ಣರ ಪ್ರಭಾವವಂ ಅರಿಯದ ಬಲಶಾಲಿಯಾದ ಜರಾಸಂಧನು, ಪಲಾಯನಂ ಗೆಯ್ಯುತ್ತಲಿರುವ ರಾಮಕೃಷ್ಣರಂ ನೋಡಿ ನಗುತ ಸೇನಾಸಮೇತನಾಗಿ ಬೆನ್ನಟ್ಟಿಹೋದನು॥೯॥ರಾಮಕೃಷ್ಣರು ಬಹುದೂರ ಪರ್ಯಂತರವೂ ಓಡಿಹೋಗಿ ಶಾಂತರಾಗದೆ ಉನ್ನತವಾದ,ಹನ್ನೊಂದು ಯೋಜನದ ಪ್ರಮಾಣವುಳ್ಳ ಪರ್ವತವನ್ನು ಏರಿದರು. ಆಪರ್ವತದಲ್ಲಿ ಭಗವಂತನಾದ ಪರ್ಜನ್ಯನು ವರ್ಷಿಸುತ ಲಿರುವುದರಿಂದ ಆಪರ್ವತಕ್ಕೆ ಪ್ರವರ್ಷಣವೆಂಬ ನಾಮಧೇಯ

ಗಮಾರುಹತಾಂಗಿರಿಮ್ |ಪ್ರವರ್ಷಣಾಖ್ಯಂಭಗವಾನ್ನಿತ್ಯದಾಯತ್ರವರ್ಷತಿ||೧೦||ಗಿರೌನಿಲೀನಾವಾ
ಜ್ಞಾಯನಾಧಿಗಮ್ಯಪದಂನೃಪ | ದದಾಹಗಿರಿಮೇಧೋಭಿಸ್ಸಮಂತಾದಗ್ನಿಮುತ್ಸೃಜನ್ ||೧೧||ತತಉ
ತ್ಪತ್ಯತರಸಾದಹ್ಯಮಾನತಟಾದುಭೌ | ದಶೈಕಯೋಜನೋತ್ತುಂಗಾನ್ನಿಪೇತತುರಧೋಭುವಿ ||೧೨||
ಅಲಕ್ಷ್ಯಮಾಣೌರಿಪುಣಾಸಾನುಗೇನಯದೂತ್ತಮೌ | ಸ್ವಪುರಂಪುನರಾಯಾತಾಂಸಮುದ್ರಪರಿಘಾಂ
ನೃಪ||೧೩||ಸೋಪಿದಗ್ಧಾವಿತಿಮೃಷಾಮನ್ವಾನೋಬಲಕೇಶವೌ|ಬಲಮಾಕೃಷ್ಯಸುಮಹಾನ್ಮಗಧಾನ್
ಮಾಗಧೋಯಯೌ|| ೧೪||ಅನರ್ತಾಧಿಪತಿಶ್ಶ್ರೀಮಾನ್ರೈವತೋರೇವತೀಂಸುತಾಮ್ | ಬ್ರಹ್ಮಣಾಚೋ
ದಿತಃಪ್ರಾದಾದ್ಬಲಾಯೇತಿಪುರೋದಿತಮ್||೧೫||ಭಗವಾನಪಿಗೋವಿಂದಉಪಯೇಮೇಕುರೂದ್ವಹ | ವೈದ

---

ಸರ್ವಕಾಲವಲ್ಲಿಯೂ, ವರ್ಷತಿ-ಮಳೆಯಂಸುರಿಸುತ್ತಿರುವನೋ, ಪ್ರವರ್ಷಣಾಖ್ಯಂ-ಪ್ರವರ್ಷಣವೆಂಬಹೆಸರುಳ್ಳ, ತಂಗಿರಿಂ-ಆ ಬೆಟ್ಟವನ್ನು, ಆರುಹತಾಂ-ಏರಿದರು ||೧೦||ನೃಪ-ಪರೀಕ್ಷಿದ್ರಾಯನೇ! ಗಿರೌ-ಪೂರ್ವೋಕ್ತವಾಗಿಯುಳ್ಳ ಬೆಟ್ಟದಲ್ಲಿ, ನಿಲೀನೌ-ಅಡಗಿಕೊಂಡಿರುವವರನ್ನಾಗಿ, ಅಜ್ಞಾಯ-ತಿಳಿದು, ಪದಂ-ಅವರಿರುವ ಸ್ಥಳವನ್ನು, ನಾಧಿಗಮ್ಯ-ಪಡೆಯದ, ಏಧೋಭಿಃ-ಸೌದೆಗಳಿಂದ, ಅಗ್ನಿಂ-ಬೆಂಕಿಯನ್ನು, ಉತ್ಸೃಜನ್-ಉಂಟುಮಾಡುವನಾಗಿ ಗಿರಿಂ-ಬೆಟ್ಟವನ್ನು, ಸಮಂತಾತ್-ಸುತ್ತಲೂ, ದದಾಹ-ಸುಟ್ಟನು||೧೧||ದಶೈಕಯೋಜನೋತ್ತುಂಗಾತ್-೧೧ಗಾವುದಗಳ ಉದ್ದವುಳ್ಳ ಎಂದರೆ ಹತ್ತುಗಾವುದಗಳಷ್ಟುದೊಡ್ಡದೂ ಒಂದುಗಾವುದದ ವೃದ್ಧವೂಉಳ್ಳ, ದಹ್ಯಮಾನತಟಾತ್-ಸುಡಲ್ಪಡುತಲಿರುವ ತಡಿಯುಳ್ಳ, ತತಃ-ಆಪ್ರವರ್ಷಣಗಿರಿಯ ದೆಸೆಯಿಂದ, ಉಭೌ-ರಾಮಕೃಷ್ಣರೀರ್ವರೂ, ತರಸಾ-ವೇಗದಿಂದ, ಉತ್ಪತ್ಯ-ಹಾರಿ, ಅಧೋಭುವಿ-ಕೆಳಗಣನೆಲದಲ್ಲಿ, ನಿಪೇತತುಃ-ಬಿದ್ದರು||೧೨||ನೃಪ-ಅರಸನೇ! ಸಾನುಗೇನ-ಅನುಸರಿಸಿ ಬಂದವರೊಡನೆ ಕೂಡಿದವನಾದ, ರಿಪುಣಾ-ವೈರಿಯಾದ ಜರಾಸಂಧನಿಂದ, ಅಲಕ್ಷ್ಯಮಾಣೌ-ನೋಡಲ್ಪಡದೆ ಇರುವರಾದ, ಯದೂತ್ತಮೌ-ಯಾದವರಲ್ಲಿ ಶ್ರೇಷ್ಠರಾದ ರಾಮಕೃಷ್ಣರು,ಸಮುದ್ರಪರಿಘಾಂ-ಕಡಲೇಕಂದಕವಾಗಿಉಳ್ಳ, ಸ್ವಪುರಂ-ತಮ್ಮನಗರವಾದ ದ್ವಾರಕೆಯಂ ಕುರಿತು,ಪುನಃ-ಮರಳಿಯೂ,ಆಯಾತಾಂ-ಬಂದರು||೧೩|| ಸೋಪಿ ಆಜರಾಸಂಧನೂಕೂಡ, ಬಲಕೇಶವೌ-ರಾಮಕೃಷ್ಣರನ್ನು, ದಗ್ಧಾವಿತಿ-ಸುಡಲ್ಪಟ್ಟವರೆಂದು, ಮೃಷಾ-ವ್ಯರ್ಥವಾಗಿ, ಮನ್ವಾನಃ-ತಿಳಿಯುತ್ತಿರುವನಾಗಿ, ಸುಮಹಾನ್-ಪ್ರಬಲನಾದ, ಮಾಗಧಃ-ಮಗಧಪತಿಯು, ಬಲಂ-ದಂಡನ್ನು, ಆಕೃಷ್ಯ-ಕರೆದುಕೊಂಡು, ಮಗಧಾನ್-ಮಗಧ ದೇಶಂಗಳಂ ಕುರಿತು, ಯಯೌ-ತೆರಳಿದನು ||೧೪|| ಆನರ್ತಾಧಿಪತಿಃ-ಆನರ್ತ ದೇಶಕ್ಕೊಡೆಯನಾದ, ಶ್ರೀಮಾನ್-ಸಂಪತ್ತುಳ್ಳವನಾದ, ರೈವತಃ-ರೈವತರಾಯನು, ಬ್ರಹ್ಮಣಾ-ಬ್ರಹ್ಮದೇವರಿಂದ, ಚೋದಿತಃ-ಪ್ರೇರಿಸಲ್ಪಟ್ಟವನಾಗಿ, ಸುತಾಂ-ತನ್ನಮಗಳಾದ, ರೇವತೀಂ-ರೇವತೀದೇವಿಯನ್ನು. ಬಲಾಯ-ಬಲರಾಮಂಗೆ, ಪ್ರಾದಾದಿತಿ-ಕೊಟ್ಟನೆಂದು,ಪುರಾ-ಪೂರ್ವದಲ್ಲಿ,ಉದಿತಂ-ನನ್ನಿಂದಹೇಳಲ್ಪಟ್ಟಿದೆ,(ನವಮಸ್ಕಂಧದಲ್ಲಿರೇವತೀವಿವಾಹವುವರ್ಣಿಸಲ್ಪಟ್ಟಿದೆ)||೧೫|| ಕುರೂದ್ವಹ-ಪರೀಕ್ಷಿದ್ರಾಯನೇ! ಭಗವಾನ್-ಷಡ್ಗುಣೈಶ್ವರ್ಯಸಂಪನ್ನನಾದ, ಗೋವಿಂದೋಪಿ-ಶ್ರೀಕೃಷ್ಣನೂಕೂಡ, ಶ್ರಿಯಃ-ಲಕ್ಷ್ಮೀದೇವಿಯ, ಮಾತ್ರಾಂ-ಅಂಶರೂಪಿಣಿಯಾದ, ಭೀಷ್ಮಕಸುತಾಂ-ಭೀಷ್ಮಕರಾಯನ ಮಗಳಾದ, ವೈದರ್ಭೀಂ-ವಿದರ್ಭರಾಜಪುತ್ರಿಯೆನಿಸುವ ರುಕ್ಮಿಣಿಯನ್ನು, ಸ್ವಯಂವರೇ-ಹೆಣ್ಣುತಾನಾಗಿ ಅಂಗೀಕರಿಸಿದಗಂಡು, ಇತರರಾಜರನ್ನುಗೆದ್ದು

---

ವುಂಟಾಗಿರುವುದು ||೧೦||ಅನಂತರದಲ್ಲಿ ಆಪರ್ವತದೊಳಗೆ ಔತುಕೊಂಡು ಇರುವ ರಾಮಕೃಷ್ಣರಂ ಕಾಣದೆ ಜರಾಸಂಧನು ಆಪರ್ವತದ ಸುತ್ತಲೂ ಕಾಷ್ಠಂಗಳಂ ರಾಶಿಹಾಕಿ ಅಗ್ನಿಪ್ರವೇಶಮಂ ಮಾಡಿಸಿ ದಹಿಸುವಂತೆ ಮಾಡಿದನು ||೧೧||ರಾಮಕೃಷ್ಣರು ಅಗ್ನಿಯಿಂದ ದಹಿಸಲ್ಪಡುತ್ತಲಿರುವ ಹನ್ನೊಂದು ಯೋಜನದ ಪ್ರಮಾಣವುಳ್ಳ ಆಪರ್ವತದಿಂದಭೂಮಿಗೆಧುಮುಕಿ ||೧೨||ಸೇನಾಸಮೇತನಾದ ಜರಾಸಂಧನ ಕಂಣಿಗೆ ಗೋಚರರಾಗದೆ ತಪ್ಪಿಸಿಕೊಂಡು ಸಮುದ್ರಮಧ್ಯದಲ್ಲಿರುವ ದ್ವಾರಕಾನಗರಕ್ಕೆ ಬಂದರು ||೧೩||ಆಜರಾಸಂಧನು ಆಪರ್ವತದಲ್ಲಿಯೇ ರಾಮಕೃಷ್ಣರು ದಗ್ಧರಾದರೆಂದು ಭ್ರಾಂತಿಯಿಂದ ತಿಳಿದುಕೊಂಡು ಸೇನಾಸಮೇತನಾಗಿ ಸ್ವದೇಶಕ್ಕೆಹೋದನು ||೧೪||ಎಲೈಆರಸೇ! ಆನರ್ತದೇಶಾಧಿಪತಿಯಾದ ಕಕುದ್ಮರಾಯನು ಬ್ರಹ್ಮನ ಅನುಜ್ಞೆಯಿಂದ ಪುತ್ರಿಯಾದ ರೇವತೀದೇವಿಯಂ ಬಲರಾಮನಿಗೆಕೊಟ್ಟನೆಂದು ಪೂರ್ವದಲ್ಲಿಯೇ ನನ್ನಿಂದ ಹೇಳಲ್ಪಟ್ಟದ್ದು ಸರಿಯಷ್ಟೆ?||೧೫||ಭಗವಂತನಾದ ಶ್ರೀಕೃಷ್ಣನು ವಿದರ್ಭದೇಶಾಧಿಪತಿಯಾದ ಭೀಷ್ಮಕರಾಯನ ಪುತ್ರಿಯಾದ ಸಾಕ್ಷಾಲ್ಲಕ್ಷ್ಮೀದೇವಿಯ ಅಂಶಳಾದ ರುಕ್ಮಿಣೀದೇವಿಯಂ ಸ್ವಯಂವರದಲ್ಲಿ ಅಪಹರಿಸಿಕೊಂಡುಬಂದು ವಿವಾಹವುಂಮಾ

ಭೀರ್ನ್‌ ಭೀಷ್ಮಕಸುತಾಂ ಶ್ರಿಯೋಮಾತ್ರಾಸ್ವಯಂವರೇ ॥೧೬॥ ಪ್ರಮಥ್ಯ ತರಸಾ ರಾಜ್ಞಃ ಸಾಲ್ವಾದೀನ್ ಚೈದ್ಯಪಕ್ಷಗಾನ್ । ಪಶ್ಯತಾಂ ಸರ್ವಲೋಕಾನಾಂ ತಾರ್ಕ್ಷ್ಯಪುತ್ರಸ್ಸುಧಾಮಿವ ॥೧೭॥ ರಾಜಾ ॥ ಭಗವಾನ್ ಭೀಷ್ಮಕಸುತಾಂ ರುಕ್ಮಿಣೀಂ ರುಚಿರಾನನಾಂ । ರಾಕ್ಷಸೇನ ವಿಧಾನೇನ ಉಪಯೇಮ ಇತಿ ಶ್ರುತಮ್ ॥೧೮॥ ಭಗವನ್ ಶ್ರೋತುಮಿಚ್ಛಾಮಿ ಕೃಷ್ಣಸ್ಯಾಮಿತತೇಜಸಃ । ರುಕ್ಮಿಣ್ಯಾ ಗ್ರಹಣಂ ಪಾಣೇಃ ಪ್ರಮಥ್ಯಾನ್ಯಾನ್ ಸ್ವಯಂವರೇ ॥ ಯಥಾ ಮಾಗಧಸಾಲ್ವಾದೀನ್ ಜಿತ್ವಾ ಕನ್ಯಾಮುಪಾಹರತ್ ॥೧೯॥ ಬ್ರಹ್ಮನ್ ವಿಷ್ಣುಕಥಾಃ ಪುಣ್ಯಾಃ ಮಾಧ್ವೀರ್ಲೋಕಮಲಾಪಹಾಃ । + ॥ ರುಕ್ಮಿಣೀಂ ಕಲ್ಯಾಣಕಥಾಪ್ರಾರಂಭಘಟ್ಟಃ ॥ + ಕೋ ನು ತೃಪ್ಯೇತ ಶೃಣ್ವಾನಃ ಶ್ರುತಜ್ಞೋ ನಿತ್ಯನೂತನಾಃ ॥೨೦॥ ಶ್ರೀಶುಕಃ ॥ ರಾಜಾಸೀದ್ಭೀಷ್ಮಕೋ ನಾ

ಆ ಹೆಣ್ಣನ್ನು ದಕ್ಕಿಸಿಕೊಳ್ಳಬೇಕಾದ ಕ್ಷತ್ರಿಯ ಸಂಪ್ರದಾಯದಲ್ಲಿ, ಚೈದ್ಯಪಕ್ಷಗಾನ್-ಶಿಶುಪಾಲನ ಕಡೆಯಂ ಹೊಂದಿದವರಾದ, ಸಾಲ್ವಾದೀನ್-ಸಾಲ್ವನು ಮೊದಲಾದ, ರಾಜ್ಞಃ-ಅರಸುಗಳನ್ನು, ಪ್ರಮಥ್ಯ-ಚೆನ್ನಾಗಿ ಹೊಡೆದು, ಸರ್ವಲೋಕಾನಾಂ-ಸಕಲ ಜನಂಗಳೂ, ಪಶ್ಯತಾಂ ಸತಾಂ-ನೋಡುವರಾಗುತ್ತಿರಲು, ತಾರ್ಕ್ಷ್ಯಪುತ್ರಃ-ಗರುಡನು, ಸುಧಾಮಿವ-ಅಮೃತವನ್ನು ತಂದಂತೆ, ತರಸಾ-ಬೇಗನೆ ತೆಗೆದುಕೊಂಡು ಹೋಗಿ, ಉಪಯೇಮೇ ಮದುವೆಮಾಡಿಕೊಂಡನು ॥೧೭॥ [ಪರೀಕ್ಷಿತ್ಪ್ರಶ್ನವು.] ಭಗವಾನ್-ಕೃಷ್ಣನು, ಭೀಷ್ಮಕಸುತಾಂ-ಭೀಷ್ಮಕರಾಯನ ಮಗಳಾದ, ರುಚಿರಾನನಾಂ-ಚೆಲುವಾದ ಮುಖವುಳ್ಳ, ರುಕ್ಮಿಣೀಂ-ರುಕ್ಮಿಣಿಯೆಂಬ ಕನ್ಯೆಯನ್ನು, ರಾಕ್ಷಸೇನ ವಿಧಾನೇನ-ಯುದ್ಧದಲ್ಲಿ ಇತರರಂ ಗೆದ್ದು ತರುವ ಕೆಲಸದಿಂದ, ಉಪಯೇಮೇ ಇತಿ-ಮದುವೆಮಾಡಿಕೊಂಡನೆಂದು, ಶ್ರುತಂ-ಮುಂಚೆಯೇ ಸಾಮಾನ್ಯವಾಗಿ ನನ್ನಿಂದ ಕೇಳಲ್ಪಟ್ಟಿದೆ ॥೧೮॥ ಭಗವನ್-ಸರ್ವಜ್ಞನಾದ ಶುಕಮುನಿಯೇ! ಅಮಿತತೇಜಸಃ-ಅಳೆಯಲ್ಪಡದ ಪರಾಕ್ರಮವುಳ್ಳ, ಕೃಷ್ಣಸ್ಯ-ಶ್ರೀಹರಿಯ, ಸಂಬಂಧವಾದ, ರುಕ್ಮಿಣ್ಯಾಃ ಪಾಣೇಃ ಗ್ರಹಣಂ-ರುಕ್ಮಿಣೀದೇವಿಯ ಕೈಯನ್ನು ಹಿಡಿದು ಕೊಳ್ಳೋಣವೆಂಬ ಮದುವೆಯನ್ನು, ಶ್ರೋತುಂ-ವಿಶೇಷವಾಗಿ ಕೇಳುವುದಕ್ಕೆ, ಇಚ್ಛಾಮಿ-ಬಯಸುತ್ತಿರುವೆನು ಸ್ವಯಂವರೇ-ಸ್ವಯಂವರ ಕ್ರಮದಲ್ಲಿ, ಅನ್ಯಾನ್-ಇತರರಾದ, ಮಗಧಸಾಲ್ವಾದೀನ್-ಜರಾಸಂಧನು ಸಾಲ್ವನು ಮೊದಲಾದವರನ್ನು, ಪ್ರಮಥ್ಯ-ಚೆನ್ನಾಗಿ ಹೊಡೆದು, ಜಿತ್ವಾ-ಗೆದ್ದು, ಕನ್ಯಾಂ-ರುಕ್ಮಿಣಿಯನ್ನು, ಯಥಾ-ಹೇಗೆ, ಉಪಾಹರತ್-ತೆಗೆದುಕೊಂಡು ಬಂದನು ॥೧೯॥ ಬ್ರಹ್ಮನ್-ಬ್ರಾಹ್ಮಣನಾದ ಶುಕನೇ! ಪುಣ್ಯಾಃ-ಮಹಾಫಲವುಳ್ಳ, ಮಾಧ್ವೀಃ-ಸಿಹಿಯಾದ, ಎಂದರೆ ಕಿವಿಗಳಿಗೆ ಸುಖವಾದ, ಲೋಕಮಲಾಪಹಾಃ-ಜನದ ಪಾಪಂಗಳಂ ಪರಿಹರಿಸುವ, ನಿತ್ಯನೂತನಾಃ-ಯಾವಾಗಲೂ ಹೊಸಹೊಸತಾಗಿ ಆಶ್ಚರ್ಯವೆನಿಸುವ, ವಿಷ್ಣುಕಥಾಃ-ಕೃಷ್ಣಚರಿತಂಗಳನ್ನು, ಶೃಣ್ವಾನಃ-ಕೇಳುತ್ತಿರುವನಾದ, ಶ್ರುತಜ್ಞಃ-ಕೇಳಲ್ಪಟ್ಟುದ್ದರಲ್ಲಿ ಸಾರವಂಬಲ್ಲ, ಕೋನು-ಯಾವ ಪುರುಷನು ತಾನೆ, ತೃಪ್ಯೇತ-ತೃಪ್ತಿಯನ್ನು ಪಡೆಯುವನು? ॥೨೦॥ [ಶ್ರೀಶುಕವಚನವು.] ವಿದರ್ಭಾಧಿಪತಿಃ-ವಿದರ್ಭದೇಶಕ್ಕೊಡೆಯನಾದ, ಮಹಾನ್ ರಾಜಾ-ದೊಡ್ಡ ಧೊರೆಯು, ಭೀಷ್ಮ

ಡಿಕೊಂಡನು ॥೧೬॥ ಶಿಶುಪಾಲನ ಪಕ್ಷವನ್ನು ಅವಲಂಬಿಸಿದ ಸಾಲ್ವಮುಂತಾದ ಕ್ಷತ್ರಿಯರಂ ಜಯಿಸಿ ಗರುಡನು ಅಮೃತವಂ ಅಪಹರಿಸಿದಂತೆ ರುಕ್ಮಿಣಿಯಂ ಅಪಹರಿಸಿಕೊಂಡು ಬಂದನು ॥೧೭॥ (ಎಂಬ ಶುಕವಾಕ್ಯವಂ ಕೇಳಿ ಅರಸು ಪ್ರಶ್ನೆಗೆಯ್ದನು)-ಭಗವಂತನಾದ ಶ್ರೀಕೃಷ್ಣನು ಭೀಷ್ಮಕನಪುತ್ರಿಯಾದ ಸುಂದರವಾದ ಮುಖವುಳ್ಳ ರುಕ್ಮಿಣಿಯಂ ರಾಕ್ಷಸ ವಿವಾಹದಿಂದ ಪಾಣಿಗ್ರಹಣವಂ ಮಾಡಿದನೆಂದು ಕೇಳಲ್ಪಟ್ಟಿದೆ ॥೧೮॥ (ಯುದ್ಧದಲ್ಲಿ ಕ್ಷತ್ರಿಯರಂ ಜಯಿಸಿ ಬಲಾತ್ಕಾರದಿಂದ ಕನ್ನೆಯಂ ಅಪಹರಿಸಿಕೊಂಡು ಬರೋಣವೇ ರಾಕ್ಷಸವಿವಾಹವೆನಿಸುವುದು) ಭಗವಂತನಾದ ಶುಕಾಚಾರ್ಯನೇ! ಅಮಿತ ತೇಜಸ್ಸುಳ್ಳ ಶ್ರೀಕೃಷ್ಣನು ಕ್ಷತ್ರಿಯರಂ ಪರಾಜಯವಂ ಮಾಡಿ ರುಕ್ಮಿಣಿಯ ಪಾಣಿಗ್ರಹಣಂ ಮಾಡಿದ ವೃತ್ತಾಂತವಂ ಕೇಳಲಿಚ್ಛೈಸುತ್ತೇನೆ. ಜರಾಸಂಧ ಸಾಲ್ವ ಮುಂತಾದ ಕ್ಷತ್ರಿಯರಂ ಶ್ರೀಕೃಷ್ಣನೊಬ್ಬನೇ ಹೇಗೆ ಜಯಿಸಿದನು? ॥೧೯॥ ಎಲೈ ಬ್ರಾಹ್ಮಣೋತ್ತಮನಾದ ಶುಕಾಚಾರ್ಯನೇ! ಪುಣ್ಯಕರಂಗಳಾದ ಲೋಕಂಗಳ ಪಾಪಂಗಳಂ ಪರಿಹರಿಸುವ ಶ್ರೋತ್ರಂಗಳಿಗೆ ಮಧುರಂಗಳಾದ ನಿತ್ಯನೂತನಂಗಳಾದ ಶ್ರೀಕೃಷ್ಣನ ಕಥೆಯಂ ಕೇಳುವ ಪುರುಷನು ಯಾವವನು ತೃಪ್ತಿಯಂ ಪಡೆದಾನು? ॥೨೦॥ (ಎಂಬ ರಾಜವಾಕ್ಯವಂ ಕೇಳಿ ಶುಕಾಚಾರ್ಯನುಡಿದನೆಂತೆನೆ)-ಎಲೈ ಅರಸೇ! ವಿದರ್ಭಪತಿಯಾದ ಮಹಾತ್ಮನಾದ ಭೀಷ್ಮನಾಮಕನಾದ ಅರಸು ಒಬ್ಬನಿದ್ದನು. ಆತನಿಗೆ ಐದುಮಂದಿ ಪುತ್ರರೂ ಒಬ್ಬಳು ಮಗಳೂ ಉಂಟಾದ

ಮನಿದರ್ಭಾಧಿಪತಿರ್ಮಹಾನ್ ॥ತಸ್ಯಪಂಚಾಭವನ್ಪುತ್ರಾಃಕನ್ಯೈಕಾಚವರಾನನಾ॥೨೧॥ರುಕ್ಮ್ಯಗ್ರ
ಜೋರುಕ್ಮರಥೋರುಕ್ಮಬಾಹುರನಂತರಃ । ರುಕ್ಮಕೇಶೋರುಕ್ಮಮಾಲೀರುಕ್ಮಿಣ್ಯೇಷಾಂಸ್ವಸಾಸತೀ ॥
ಸೋಪಶ್ರುತ್ಯಮುಕುಂದಸ್ಯರೂಪವೀರ್ಯಗುಣಶ್ರಿಯಃ । ಗೃಹಾಗತೈರ್ಗೀಯಮಾನಾಸ್ತಂಮೇನೆಸ
ದೃಶಂಪತಿಮ್॥೨೩॥ತಾಂಬುದ್ಧಿಲಕ್ಷಣೌದಾರ್ಯರೂಪಶೀಲಗುಣಾಶ್ರಯಾಮ್।ಕೃಷ್ಣಸ್ಸ್ವಸದೃಶೀಂ
ಭಾರ್ಯಾಂಸಮುದ್ವೋಢುಂಮನೋದಧೆ ॥೨೪॥ಬಂಧೂನಾಮಿಚ್ಛತಾಂದಾತುಂಕೃಷ್ಣಾಯಭಗಿನೀಂ
ನೃಪ । ತತೋನಿವಾರ್ಯಕೃಷ್ಣದ್ವಿಡ್ರುಕ್ಮೀಚೈದ್ಯಮಮನ್ಯತ ॥೨೫॥ತದವೇತ್ಯಾಸಿತಾಪಾಂಗೀವೈದ
ರ್ಭೀದುರ್ಮನಾಭೃಶಮ್। ವಿಚಿಂತ್ಯಾಪ್ತಂದ್ವಿಜಂಕಂಚಿತ್ಕೃಷ್ಣಾಯಪ್ರಾಹಿಣೋದ್ದ್ರುತಮ್॥೨೬॥

---

ಕೋನಾಮ-ಭೀಷ್ಮಕನೆಂದು ಪ್ರಸಿದ್ಧನು, ಆಸೀತ್-ಆದನು. ತಸ್ಯ-ಅವನಿಗೆ, ಪಂಚಪುತ್ರಾಃ-ಐವರು ಕುಮಾರರೂ, ವರಾನ ನಾ-ಶ್ರೇಷ್ಠವಾದ ಮುಖವುಳ್ಳ, ಏಕಾಕನ್ಯಾಚ-ಒಬ್ಬಮಗಳೂ, ಅಭವನ್-ಆದರು ॥೨೧॥ಅಗ್ರಜ -ಮೊದಲು ಹುಟ್ಟಿದವನು, ರುಕ್ಮೀ-ರುಕ್ಮಿಯೆಂಬವನು. ಅನಂತರಃ-ಆಮೇಲೆಹುಟ್ಟಿದವನು, ರುಕ್ಮರಥನು, ಬಳಿಕ ರುಕ್ಮಬಾಹುವು, ತರುವಾಯ ರುಕ್ಮಕೇ ಶನು, ಆಬಳಿಕ ರುಕ್ಮಮಾಲಿಯು, ಏಷಾಂ-ಇವರ, ಸ್ವಸಾ-ತಂಗಿಯಾದ, ಸತೀ-ಪತಿವ್ರತೆಯು, ರುಕ್ಮಿಣೀ-ರುಕ್ಮಿಣಿಯೆಂಬಾಕೆ ಆದಳು ॥೨೨॥ಸಾ-ಆ ರುಕ್ಮಿಣಿಯು, ಗೃಹಾಗತೈಃ-ತನ್ನ ಮನೆಗೆ ಬಂದವರಿಂದ, ಗೀಯಮಾನಾಃ-ಹಾಡಲ್ಪಡುತ್ತಿರುವ, ಮುಕುಂ ದಸ್ಯ-ಕೃಷ್ಣನ, ರೂಪವೀರ್ಯಗುಣಶ್ರಿಯಃ-ರೂಪ-ಚಲುವಿಕೆಯದ್ದೂ, ಸತ್ಸ್ವಭಾವವನ್ನೂ, ವೀರ್ಯ-ಸಾಮರ್ಥ್ಯವನ್ನೂ ಗುಣ-ಶೌರ್ಯೌದಾರ್ಯದಯಾದಿಗಳನ್ನೂ, ಶ್ರಿಯಃ-ಸಂಪತ್ತುಗಳನ್ನೂ, ಉಪಶ್ರುತ್ಯ-ಸಮೀಪದಲ್ಲಿಕೇಳಿ, ತಂ-ಆಕೃಷ್ಣನ ನ್ನು, ಸದೃಶಂ-ತನಗೆಸರಿಯಾದ, ಪತಿಂ-ಗಂಡನನ್ನಾಗಿ, ಮೇನೇ-ತಿಳಿದಳು ॥೨೩॥ಕೃಷ್ಣಃ-ಶ್ರೀಹರಿಯು, ಬುದ್ಧಿ ....ಶ್ರಯಾಂ- ಬುದ್ಧಿ-ನಿಶ್ಚಿತಶುದ್ಧಜ್ಞಾನಕ್ಕೂ, ಲಕ್ಷಣ-ಶುಭಚಿಹ್ನಗಳಿಗೂ, ಔದಾರ್ಯ-ಧಾರಾಳಿಕೆಗೂ, ರೂಪ-ಸೌಂದರ್ಯಾದಿಗಳಿಗೂ, ಶೀಲ-ಸತ್ಸ್ವಭಾವಕ್ಕೂ, ಗುಣ-ವಿನಯಾದಿ ಸುಗುಣಗಳಿಗೂ, ಆಶ್ರಯಾಂ-ಆಧಾರವಾಗಿರುವ, ತಾಂ-ಆರುಕ್ಮಿಣಿಯನ್ನು, ಸ್ವ ಸದೃಶೀಂ-ತನಗೆಸರಿಯಾದ, ಭಾರ್ಯಾಂ-ಹೆಂಡತಿಯನ್ನಾಗಿ ತಿಳಿದು,ಸಮುದ್ವೋಢುಂ-ಮದುವೆಮಾಡಿ ಕೊಳ್ಳುವುದಕ್ಕೆ, ಮನಃ ದಧೇ-ತಾತ್ಪರ್ಯವನ್ನು ವಹಿಸಿದನು॥೨೪॥ನೃಪ-ಪರೀಕ್ಷಿದ್ರಾಯನೇ! ಭಗಿನೀಂ-ತನ್ನ ತಂಗಿಯಾದ ರುಕ್ಮಿಣಿಯನ್ನು, ಕೃಷ್ಣಾ ಯ-ವಾಸುದೇವನಿಗೆ, ದಾತುಂ-ಕೊಡವುದಕ್ಕೆ,ಬಂಧೂನಾಂ-ತಾಯಿ ತಂದೆಮೊದಲಾದ ನಂಟರು, ಇಚ್ಛತಾಂ-ಬಯಸು ತ್ತಿರುವ ರಾಗುತ್ತಿರಲು ಕೃಷ್ಣದ್ವಿಟ್-ಕೃಷ್ಣನಿಗೆ ವಿರೋಧಿಯಾದ, ರುಕ್ಮೀ-ರುಕ್ಮಿಯೆಂಬವನು, ತತಃ-ಆಮೇಲೆ, ನಿವಾರ್ಯ- ಅವರನ್ನು ನಿಲ್ಲಿಸಿ, ಚೈದ್ಯಂ-ಶಿಶುಪಾಲನನ್ನು, ಅಮನ್ಯತ-ಆಕೆಗೆತಕ್ಕವರ ನನ್ನಾಗಿತಿಳಿದನು॥೨೫॥ಅಸಿತಾಪಾಂಗೀ-ಕಪ್ಪಾದಕ ಡೆಗಂಗಳುಳ್ಳ, ವೈದರ್ಭೀ-ರುಕ್ಮಿಣಿಯು, ತತ್-ಆಯಣ್ಣನ ಪ್ರಯತ್ನವನ್ನು, ಅವೇತ್ಯ-ತಿಳಿದು, ಭೃಶಂ-ಅಧಿಕವಾಗಿ, ದುರ್ಮ ನಾಃ-ದುಃಖವುಳ್ಳವಳಾಗಿ, ವಿಚಿಂತ್ಯ-ಆಲೋಚಿಸಿ, ಆಪ್ತಂ-ನಚ್ಚಿಕೆಯುಳ್ಳವನೂ ಯಥಾರ್ಥವಾದಿಯೂ ಆದ, ಕಂಚಿತ್ದ್ವಿಜಂ- ಓರ್ವ ಬ್ರಾಹ್ಮಣನನ್ನು, ಕೃಷ್ಣಾಯ-ಕೃಷ್ಣನಂ ಕರೆತರಲೋಸುಗ, ದ್ರುತಂ-ಶೀಘ್ರವಾಗಿ, ಪ್ರಾಹಿಣೋತ್-ಕಳುಹಿಸಿ ಕೊ ಟ್ಟಳು ॥೨೬॥ಸಃ-ಆಬ್ರಾಹ್ಮಣನು, ದ್ವಾರಕಾಂ-ಕುಶಸ್ಥಲೀನಗರವಂಕುರಿತು, ಸಮಭ್ಯೇತ್ಯ-ಸುಖವಾಗಿಬಂದು, ಪ್ರತಿಹಾರೈಃ-

---

ರು ॥೨೧॥ರುಕ್ಮಿಯು, ರುಕ್ಮರಥನು, ರುಕ್ಮಬಾಹು, ರುಕ್ಮಕೇಶ, ರುಕ್ಮಮಾಲಿ, ಯೆಂದು ಐವರುಂದಿಪುತ್ರರೂ; ಇವರತಂಗಿಯೇ ರುಕ್ಮಿಣೀದೇವಿ ॥೨೨॥ಆರುಕ್ಮಿಣೀದೇವಿಯು ಶ್ರೀಕೃಷ್ಣನ ಸೌಂದರ್ಯ, ಪರಾಕ್ರಮ, ಔದಾ ರ್ಯ, ಮೊದಲಾದ ಗುಣಸಂಪತ್ತುಗಳಂ ಮನೆಗೆಬರುವ ಜನರಿಂದ ಗಾನಂ ಗೆಯ್ಯಲ್ಪಡುವ ಸಮಯದಲ್ಲಿ ಕೇ ಳಿ ಆಕೃಷ್ಣನನ್ನೇ ತನಗೆ ಅನುರೂಪನಾದ ಪತಿಯನ್ನಾಗಿ ನಿಶ್ಚಯಿಸಿದಳು॥೨೩॥ಶ್ರೀಕೃಷ್ಣನೂ ಕೂಡ ಉತ್ತ ಮವಾದಬುದ್ಧಿಗೂ ಶುಭಲಕ್ಷಣಂಗಳಿಗೂ ಔದಾರ್ಯಕ್ಕೂ ಸೌಂದರ್ಯಕ್ಕೂ ಸಚರಿತ್ರಕ್ಕೂ ಸುಗುಣಂಗ ಳಿಗೂ ಆಶ್ರಯಳಾದ ರುಕ್ಮಿಣಿಯಂ ತನಗೆ ಅನುರೂಪಳಾದ ಪತ್ನಿಯನ್ನಾಗಿ ತಿಳಿದು ವಿವಾಹಮಂ ಮಾಡಿಕೊ ಳ್ಳಲೋಸುಗ ಮನಸ್ಸಂ ಮಾಡಿದನು ॥೨೪॥ಎಲೈಇರಸೇ! ಸ್ವಜನರು ಬಂಧುಗಳೂ ಎಲ್ಲರೂ ಸಮ್ಮತಿಸಿ ಶ್ರೀಕೃ ಷ್ಣನಿಗೆ ರುಕ್ಮಿಣಿಯಂಕೊಡ ಲಿಚ್ಛೈಸಿರಲು, ಕೃಷ್ಣದ್ವೇಷಿಯಾದ ರುಕ್ಮಿಯೆಂಬ ಜ್ಯೇಷ್ಠನು ಶಿಶುಪಾಲನಿಗ ತನ್ನ ತಂಗಿಯಾದ ರುಕ್ಮಿಣಿಯಂ ಕೊಡಲೋಸುಗ ನಿಶ್ಚಯಿಸಿ ಅಡ್ಡಿಯಂ ಮಾಡಿದನು ॥೨೫॥ ಆರುಕ್ಮಿಣಿಯು ಆಯರ್ಥವಂಕೇಳಿ ವ್ಯಸನಪಡುವವಳಾಗಿ ಮನಸ್ಸಿನಲ್ಲಿ ಆಲೋಚಿಸಿ ಆಪ್ತನಾದ ಒಬ್ಬಬ್ರಾಹ್ಮಣನಂ ಕರೆದು ಶ್ರೀ

ದ್ವಾರಕಾಂ ಸ ಸಮಭ್ಯೇತ್ಯ ಪ್ರತೀಹಾರೈಃ ಪ್ರವೇಶಿತಃ । ಅಪಶ್ಯದಾದ್ಯಂ ಪುರುಷಮಾಸೀನಂ ಕಾಂಚನಾಸ
ನೇ ॥ ೨೭ ॥ ದೃಷ್ಟ್ವಾ ಬ್ರಹ್ಮಣ್ಯದೇವಸ್ತಮವರುಹ್ಯ ನಿಜಾಸನಾತ್ । ಉಪವೇಶ್ಯಾರ್ಹಯಾಂಚಕ್ರೇ ಯಥಾತ್ಮಾ
ನಂ ದಿವೌಕಸಃ ॥ ೨೮ ॥ ತಂ ಭುಕ್ತವಂತಂ ವಿಶ್ರಾಂತಮುಪಗಮ್ಯ ಸತಾಂ ಗತಿಃ । ಪಾಣಿನಾಭಿಮೃಶನ್
ಪಾದಾವವ್ಯಗ್ರಸ್ತಮಪೃಚ್ಛತ ॥ ೨೯ ॥ ಶ್ರೀಕೃಷ್ಣಃ ॥ ಕಚ್ಚಿದ್ದ್ವಿಜವರಶ್ರೇಷ್ಠ ಧರ್ಮಸ್ತೇ ವೃದ್ಧಸ
ಮ್ಮತಃ । ವರ್ತತೇ ನಾತಿಕೃಚ್ಛ್ರೇಣ ಸಂತುಷ್ಟಮನಸಸ್ಸದಾ ॥ ೩೦ ॥ ಸಂತುಷ್ಟೋ ಯರ್ಹಿ ವರ್ತೇತ ಬ್ರಾಹ್ಮಣೋ
ಯೇನ ಕೇನಚಿತ್ । ಅಹೀಯಮಾನಸ್ಸ್ವಾದ್ಧರ್ಮಾತ್ಸ ಹ್ಯಸ್ಯಾಖಿಲಕಾಮಧುಕ್ ॥ ೩೧ ॥ ಅಸಂತುಷ್ಟೋ

---

ದ್ವಾರಪಾಲಕರಿಂದ, ಪ್ರವೇಶಿತಃ-ಒಳಕ್ಕೆ ಹೊಗಿಸಲ್ಪಟ್ಟವನಾಗಿ, ಕಾಂಚನಾಸನೇ-ಭಂಗಾರದ ಪೀಠದಲ್ಲಿ, ಆಸೀನಂ-ಕುಳಿತಿ
ರುವ, ಆದ್ಯಂ ಪುರುಷಂ-ಕಾರಣಮೂರ್ತಿಯಾದ ಕೃಷ್ಣನನ್ನು, ಅಪಶ್ಯತ್-ಕಂಡನು ॥ ೨೭ ॥ ಬ್ರಹ್ಮಣ್ಯದೇವಃ-ಬ್ರಾಹ್ಮಣರಿಗೊ
ಡೆಯನಾದ ಕೃಷ್ಣನು, ತಂ-ಆಬ್ರಾಹ್ಮಣನನ್ನು, ದೃಷ್ಟ್ವಾ-ನೋಡಿ (ಬ್ರಾಹ್ಮಣರೇ ದೇವರಾಗಿ ಉಳ್ಳವನಾದ್ದರಿಂದ) ಅವರು
ಹ್ಯ-ಪೀಠದಿಂದಿಳಿದು, ನಿಜಾಸನೇ-ತನ್ನ ಪೀಠದಲ್ಲಿ, ಉಪವೇಶ್ಯ-ಕುಳ್ಳಿರಿಸಿ, ದಿವೌಕಸಃ-ದೇವರ್ಕಳು ಆತ್ಮಾನಂ-ತನ್ನನ್ನು
(ಕೃಷ್ಣನನ್ನು) ಯಥಾ-ಹೇಗೋ, ತಥಾ-ಹಾಗೆ, ಅರ್ಹಯಾಂಚಕ್ರೇ-ಆತನಂ ಪೂಜಿಸಿದನು ॥ ೨೮ ॥ ಸತಾಂ-ಸತ್ಪುರುಷರಿಗೆ,
ಗತಿಃ-ಪ್ರಾಪ್ಯನಾದ, ಕೃಷ್ಣನು, ಭುಕ್ತವಂತಂ-ಊಟಮಾಡಿದವನಾಗಿ, ವಿಶ್ರಾಂತಂ-ಆಯಾಸವಂ ತೀರಿಸಿಕೊಂಡವನಾದ,
ಆಬ್ರಾಹ್ಮಣನನ್ನು, ಉಪಗಮ್ಯ-ಸಮೀಪಿಸಿಕುಳಿತು, ಪಾಣಿನಾ-ತನ್ನ ಕೈಯಿಂದ ಪಾದೌ-ಆತನ ಚರಣಗಳನ್ನು, ಅಭಿಮೃಶನ್-
ಹಿಸುಕುವನಾಗಿ, ಅವ್ಯಗ್ರಃ-ಆತುರವಿಲ್ಲದವನಾಗಿ ತಂ-ಆಬ್ರಾಹ್ಮಣನನ್ನು, ಅಪೃಚ್ಛತ-ಬೆಸಗೊಂಡನು ॥ ೨೯ ॥ [ಶ್ರೀಕೃ
ಷ್ಣವಚನವು.] ದ್ವಿಜವರಶ್ರೇಷ್ಠ-ಬ್ರಾಹ್ಮಣಶ್ರೇಷ್ಠರಲ್ಲಿ ಉತ್ತಮನಾದವನೇ! ಸದಾ-ಯಾವಾಗಲೂ, ಸಂತುಷ್ಟಮನಸಃ-
ತೃಪ್ತವಾದ ಹೃದಯಮುಳ್ಳ ತೇ-ನಿನ್ನ, ವೃದ್ಧಸಮ್ಮತಃ-ಹಿರಿಯರಿಗೊಪ್ಪಿಗೆಯಾದ, ಧರ್ಮಃ-ಅನುಷ್ಠಾನವು ಅತಿಕೃಚ್ಛ್ರೇ
ಣ-ಬಹಳ ಕಷ್ಟದೊಡನೆ, ನ ವರ್ತತೇ ಕಚ್ಚಿತ್-ಇರುವುದಿಲ್ಲವೋ ಹೇಗೆ? ॥ ೩೦ ॥ ಬ್ರಾಹ್ಮಣಃ-ವೇದಜ್ಞನಾದ ದ್ವಿಜನು, ಯೇನಕೇ
ನಚಿತ್-ಯಾವುದಾದರೊಂದರಿಂದ, ಸಂತುಷ್ಟಃ-ತೃಪ್ತನಾಗಿ, ವರ್ತೇತ ಯದಿ-ಇದ್ದವನಾದರೆ, ಸ್ವಾತ್ ಧರ್ಮಾತ್-ತನ್ನ ಧ
ರ್ಮದ ಪೆಸೆಯಿಂದ, ಅಹೀಯಮಾನಃ-ಬಿಡಲ್ಪಡದೆಯಿರುವವನಾಗುವನು. ಸಹಿ-ಆಸ್ವಧರ್ಮಾನುಷ್ಠಾನವಲ್ಲವೇ? ಅಸ್ಯ-ಈಬ್ರಾ
ಹ್ಮಣಂಗೆ, ಅಖಿಲಕಾಮಧುಕ್-ಸರ್ವೇಷ್ಟಾರ್ಥಗಳನ್ನೂ, ಕರೆಯುತ್ತಿರುವುದು ॥ ೩೧ ॥ ಸುರೇಶ್ವರೋಽಪಿ-ದೇವರ್ಕಳಿಗೊಡೆಯ
ನಾದರೂ, ಅಸಂತುಷ್ಟಃ-ತೃಪ್ತಿಗೊಳ್ಳದವನಾದರೆ, ಅಸಕೃತ್-ಬಾರಿಬಾರಿಗೂ, ಲೋಕಾನ್-ಜನರನ್ನು ಆಪ್ನೋತಿ-ಸೇವಿಸ
ಲ್ಪೋಗುವನು. ಅಥವಾ-ಲೋಕಾನ್-ಉತ್ತಮಲೋಕಂಗಳನ್ನು, ನಾಪ್ನೋತಿ-ಪಡೆಯುವನಾದರೂ ಪಡೆಯುವುದಿಲ್ಲವು. ಅಕಿಂ
ಚನೋಽಪಿ-ಕೊಂಚವೂ ಇಲ್ಲದ ಬಡವನಾದರೂ, ಸಂತುಷ್ಟಃ-ತೃಪ್ತನಾದರೆ, ಸರ್ವಾಂಗವಿಜ್ವರಃ-ಸಕಲಾವಯವಂಗಳಲ್ಲಿಯೂ

---

ಕೃಷ್ಣನ ಸಮೀಪಕ್ಕೆ ಕಳುಹಿದಳು ॥ ೨೬ ॥ ಆಬ್ರಾಹ್ಮಣನು ದ್ವಾರಕಾಪುರಕ್ಕೆ ಹೋಗಿ ದ್ವಾರಪಾಲಕರಿಂದ ಅಂ
ತಃಪುರಪ್ರವೇಶವಂ ಮಾಡಿಸಿಕೊಂಡು ಸುವರ್ಣಮಯ ಪೀಠದಮೇಲೆ ಕುಳಿತಿರುವ ಪುರಾಣಪುರುಷನಾದ ಶ್ರೀ
ಕೃಷ್ಣನಂ ಕಂಡನು ॥ ೨೭ ॥ ಬ್ರಾಹ್ಮಣಪ್ರಿಯನಾದ ಶ್ರೀಕೃಷ್ಣನು ಆಬ್ರಾಹ್ಮಣನಂ ನೋಡಿ ಶೀಘ್ರವಾಗಿ ಪೀ
ಠದಿಂದಿಳಿದು ಆಪೀಠದಮೇಲೆ ಬ್ರಾಹ್ಮಣನಂ ಕುಳ್ಳಿರಿಸಿ ತನ್ನಂ ದೇವತೆಗಳು ಪೂಜಿಸಿದಂತೆ ಪೂಜಿಸಿದನು ॥ ೨೮ ॥
ಅನಂತರದಲ್ಲಿ ಆಬ್ರಾಹ್ಮಣನಿಗೆ ಭೋಜನವಂ ಮಾಡಿಸಿ ವಿಶ್ರಮಿಸಿಕೊಳ್ಳುತ್ತಿರುವ ಆಬ್ರಾಹ್ಮಣನ ಸಮೀಪಕ್ಕೆ
ಹೋಗಿ ಆಬ್ರಾಹ್ಮಣನ ಪಾದಂಗಳಂ ತನ್ನ ಹಸ್ತಂಗಳಿಂದ ಮೃದುವಾಗಿ ಯೊತ್ತುತ್ತ ಶ್ರೀಕೃಷ್ಣನು ಕುಶಲಪ್ರ
ಶ್ನೆಗೆಯ್ದನದೆಂತೆನೆ ॥ ೨೯ ॥ ಎಲೈಬ್ರಾಹ್ಮಣಶ್ರೇಷ್ಠನೇ! ವೃದ್ಧಸಮ್ಮತವಾದ ನಿಮ್ಮ ಸ್ವಧರ್ಮವು ವೃದ್ಧಿಯನ್ನೈ
ದುತ್ತಿಯೇಯೇನು? ಸದಾ ಸಂತುಷ್ಟವಾದ ಮನಸ್ಸುಳ್ಳವನಾಗಿ ಕಷ್ಟವಿಲ್ಲದೆ ಸುಖವಾಗಿರುವೆಯಾ? ॥ ೩೦ ॥ ಬ್ರಾ
ಹ್ಮಣನು ಯದೃಚ್ಛಾಲಾಭದಿಂದ ಸಂತುಷ್ಟನಾಗಿ ಸ್ವಧರ್ಮವಂ ಬಿಡದೆಯಿದ್ದರೆ, ಆಬ್ರಾಹ್ಮಣನು ಸಮಸ್ತ
ಕಾಮಂಗಳಂ ಜನರಿಗೆ ಕುಡುವನಾಗುವನು ॥ ೩೧ ॥ ದೇವೇಂದ್ರನಾದರೂ ಸಂತುಷ್ಟನಲ್ಲದೆ ಯಿದ್ದರೆ ಅವನಿಗೆ ಸು
ಖವಿಲ್ಲ, ಯಾವ ಲೋಕಂಗಳೂ ಯಿಲ್ಲ. ದರಿದ್ರನಾದರೂ ಸಂತುಷ್ಟನಾದರೆ ಆರೋಗ್ಯಸಂಪನ್ನನಾಗಿ ಸುಖಿಯಾ

ಸಕೃಲ್ಲೋಕಾನ್ನಿಷ್ಕೃತ್ಯಪಿಸುರೇಶ್ವರಃ । ಅಕಿಂಚನೋಪಿಸಂತುಷ್ಟಶ್ಶೇತೆಸರ್ವಾಂಗವಿಜ್ವರಃ ॥೩೨॥ ವಿಪ್ರಾನ್ಸ್ವಲಾಭಸಂತುಷ್ಟಾನ್ಸಾಧೂನ್ಭೂತಸುಹೃತ್ತಮಾನ್ । ನಿರಹಂಕಾರಿಣಶ್ಶಾಂತಾನ್ನಮನ್ಯೆಶಿರಸಾಸಕೃತ್ ॥೩೩॥ ಕಚ್ಚಿದ್ವಃಕುಶಲಂಬ್ರಹ್ಮನ್ರಾಜತೋಯಸ್ಯಹಿಪ್ರಜಾಃ । ಸುಖಂವಸಂತಿ ವಿಷಯೆಪಾಲ್ಯಮಾನಾಸ್ಸಮೆಪ್ರಿಯಃ ॥೩೪॥ಯತಸ್ತ್ವಮಾಗತೋದುರ್ಗಂನಿಸ್ತೀರ್ಯೆಹಯದಿಚ್ಛಯಾ। ಸರ್ವಂನೋಬ್ರೂಹ್ಯಗುಹ್ಯಂಚೆತ್ಕಿಂಕಾರ್ಯಂಕರವಾಮತೆ ॥೩೫॥ ಏವಂಸಂಪೃಷ್ಟಸಂಪ್ರಶ್ನೋಬ್ರಾಹ್ಮಣಃಪರಮೇಷ್ಠಿನಾ । ಲೀಲಾಗೃಹೀತದೇಹೇನತಸ್ಮೈಸರ್ವಮವರ್ಣಯತ್॥೩೬॥ ವಿದರ್ಭಾಧಿಪತೇಃಪುತ್ರೀರುಕ್ಮಿಣೀತವಕಿಂಕರೀ । ವಿಜ್ಞಾಪಯತಿತೆಕಿಂಚಿತ್ಪ್ರಸ್ತುತೋದ್ವಾಹಮಂಗಳಾ॥೩೭॥ ತಯಾಸಂಪ್ರೇಷಿತೋಹಂತೆಸಕಾಶಂಭೀಷ್ಮಕಕನ್ಯಯಾ । ತಸ್ಯಾಸ್ಸಂದೇಶಮಾಕರ್ಣ್ಯಕ್ರಿಯತಾಂಯದನಂತರ

---

ತಾಪವು ಬಿಟ್ಟು ಹೋದವನಾಗಿ, ಶೇತೆ-ಸುಖವಾಗಿ ಮಲಗಿರುವನು ॥೩೨॥ ಸ್ವಲಾಭಸಂತುಷ್ಟಾನ್-ಸ್ವಲಾಭ-ತಾನಾಗಿಬಂದ ವಸ್ತುಗಳ ಲಾಭದಿಂದ, ಅಥವಾ ಆತ್ಮಲಾಭದಿಂದ, ಸಂತುಷ್ಟಾನ್-ತೃಪ್ತರಾದ, ಸಾಧೂನ್-ಸ್ವಧರ್ಮನಿಷ್ಠರಾದ, ಭೂತಸುಹೃತ್ತಮಾನ್-ಪ್ರಾಣಿಗಳಲ್ಲಿ ಅತ್ಯಂತಮಿತ್ರರಾದ, ನಿರಹಂಕಾರಿಣಃ-ಗರ್ವವಿಲ್ಲದವರಾದ, ಶಾಂತಾನ್-ಕಾಮಕ್ರೋಧಾದಿದೋಷಂಗಳಿಲ್ಲದವರಾದ, ವಿಪ್ರಾನ್-ಬ್ರಾಹ್ಮಣರನ್ನು, ಅಸಕೃತ್-ಹಲವುಬಾರಿ, ಶಿರಸಾ-ತಲೆಯಿಂದ ನಮಸ್ಯೇ-ಹೊಡಮಡುವೆನು ॥೩೩॥ಬ್ರಹ್ಮನ್-ಬ್ರಾಹ್ಮಣನೇ! ವಃ-ನಿಮಗೆ, ರಾಜತಃ-ದೊರೆಯುದೆಸೆಯಿಂದ, ಕುಶಲಂಕಚ್ಚಿತ್-ಕ್ಷೇಮವೋ ಏನು? ಯಸ್ಯ-ಯಾವದೊರೆಯ, ವಿಷಯೇ-ದೇಶದಲ್ಲಿ, ಪ್ರಜಾಃ-ಜನಂಗಳು, ಪಾಲ್ಯಮಾನಾಃ-ರಕ್ಷಿಸಲ್ಪಡುತ್ತಿರುವರಾಗಿ, ಸುಖಂ-ಅನಾಯಾಸವಾಗಿ, ವಸಂತಿ-ನೆಲೆಯಾಗಿರುವರೋ, ಸಃ-ಆದೊರೆಯು, ಮೇ-ನನಗೆ, ಪ್ರಿಯೋಹಿ-ಇಷ್ಟನಲ್ಲವೆ? ॥೩೪॥ತ್ವಂ-ನೀನು, ಯತಃ-ಯಾವದೇಶದ ದೆಸೆಯಿಂದ, ಯದಿಚ್ಛಯಾ-ಯಾವಬಯಕೆಯಿಂದ, ತ್ವಂ-ನೀನು, ದುರ್ಗಂ-ಜಲಧಿಯಿಂದ ಬರಲಶಕ್ಯವಾದ, ದಾರಿಯನ್ನು, ನಿಸ್ತೀರ್ಯ-ದಾಂಟಿ, ಇಹ-ಇಲ್ಲಿಗೆ, ಆಗತಃ-ಬಂದವನಾಗಿರುವೆಯೋ, ತತ್ಸರ್ವಂ-ಅದೆಲ್ಲವನ್ನೂ,ಅಗುಹ್ಯಂಚೇತ್-ಗೋಪ್ಯವಾಗದೆ ಇರುವುದಾದರೆ, ನಃ-ನಮಗೆ, ಬ್ರೂಹಿ-ಹೇಳು ಕಿಂಕಾರ್ಯಂ-ಯಾವಕೆಲಸವನ್ನು, ಕರವಾಮ-ನಾವುಮಾಡಬೇಕು? ॥೩೫॥ಲೀಲಾಗೃಹೀತದೇಹೇನ-ವಿಲಾಸದಿಂದಂಗೀಕರಿಸಲ್ಪಟ್ಟ, ಮನುಷ್ಯಾವತಾರದ ಲೀಲೆಯುಳ್ಳ, ಪರಮೇಷ್ಠಿನಾ-ಮುಕ್ತಸ್ಥಾನದಲ್ಲಿರುವ ಪರಮಾತ್ಮನಾದ ಕೃಷ್ಣನಿಂದ, ಏವಂ-ಹೀಗೆ, ಸಂಪೃಷ್ಟಸಂಪ್ರಶ್ನಃ-ಚನ್ನಾಗಿಕೇಳಲ್ಪಟ್ಟ ಕೇಳಲ್ಪಡತಕ್ಕ ಅರ್ಥವುಳ್ಳವನಾದ, ಬ್ರಾಹ್ಮಣಃ-ವಿಪ್ರನು, ತಸ್ಮೈ-ಆಕೃಷ್ಣನಿಗೆ, ಸರ್ವಂ-ಎಲ್ಲವನ್ನೂ, ಅವರ್ಣಯತ್-ಬಣ್ಣಿಸಿ ಹೇಳಿದನು ॥೩೬॥ವಿದರ್ಭಾಧಿಪತೇಃ-ವಿದರ್ಭದೇಶ ಕ್ಕೊಡೆಯನಾದ ಭೀಷ್ಮಕನ, ಪುತ್ರೀ-ಮಗಳಾದ, ರುಕ್ಮಿಣೀದೇವಿಯು, ಪ್ರಸ್ತುತೋದ್ವಾಹಮಂಗಳಾ-ಕೊಂಡಾಡಲ್ಪಡುತ್ತಿರುವ ವಿವಾಹಪ್ರಸ್ತುತ ಮುಳ್ಳವಳಾದ್ದರಿಂದ, ತವ-ನಿನಗೆ, ಕಿಂಕರೀ-ಸೇವಕಳಾಗಿ, ಕಿಂಚಿತ್-ಒಂದಾನೊಂದು ವಿಷಯವನ್ನು, ವಿಜ್ಞಾಪಯತಿ- ಅರಿಕೆಮಾಡುತ್ತಿರುವಳು ॥೩೭॥ ತಯಾ-ಆ,ಭೀಷ್ಮಕಸ್ಯ

---

ಗಿ ಮಲಗಿರುವನು ॥೩೨॥ಯದೃಚ್ಛಾ ಲಾಭಸಂತುಷ್ಟರಾಗಿ ಶಾಂತರಾಗಿ ಸಾಧುಗಳಾಗಿ ಪ್ರಾಣಿದಯಾಪರರಾಗಿ ಅಹಂಕಾರ ರಹಿತರಾಗಿ ಇರುವ ಬ್ರಾಹ್ಮಣರಂ ನಾನು ಬಾರಿಬಾರಿಗೂ ಶಿರಸ್ಸಿನಿಂದ ನಮಸ್ಕರಿಸುತ್ತೇನೆ ॥೩೩॥ ಎಲೈಬ್ರಾಹ್ಮಣನೇ ನಿಮ್ಮದೇಶದಿಂದನಿಮಗೆಕ್ಷೇಮವುಂಟೇಯೇನು - ಯಾವದೊರೆಯರಾಜ್ಯದಲ್ಲಿಜನರುಸುಖವಂತರಾಗಿರುತ್ತಾರೆಯೋ, ಅವರು ನನಗೆ ಪ್ರೀತಿಪಾತ್ರರು॥೩೪॥ಯಾವದೇಶದಿಂದ ದುರ್ಗಮವಾದ ಈಪುರಕ್ಕೆ ಬಂದವನಾದೆ? ಯಾವ ಕಾರ್ಯನಿಮಿತ್ತವಾಗಿ ಬರೋಣ ವಾಯಿತು? ರಹಸ್ಯ ವಲ್ಲದಿದ್ದರೆ ನನಗೆ ಹೇಳುವನಾಗು, ನಿನ್ನಕಾರ್ಯವಂ ನಾನು ಯಾವುದಂ ಮಾಡಲಿ? ॥೩೫॥ಎಂದು ಪರಮ ಪುರುಷನಾದ ಲೀಲಾ ಮಾನುಷನಾದ ಶ್ರೀಕೃಷ್ಣನಿಂದ ಪ್ರಶ್ನೆಗೆಯ್ಯಲ್ಪಟ್ಟ ಆಬ್ರಾಹ್ಮಣನು ಆಕೃಷ್ಣನಿಗೋಸ್ಕರ ಎಲ್ಲವೃತ್ತಾಂತವಂ ಹೇಳಿದನು ॥೩೬॥ಎಲೈಶ್ರೀಕೃಷ್ಣನೇ! ವಿದರ್ಭದೇಶಾಧಿಪತಿಯಾದ ಭೀಷ್ಮಕರಾಯನ ಪುತ್ರಿಯಾಗಿ ನಿನ್ನಕಿಂಕರಿಯಾದ ರುಕ್ಮಿಣಿಯು ವಿವಾಹಮಂಗಳವಂ ಯತ್ನಮಾಡಿಕೊಂಡು ನಿನಗೆ ವಿಜ್ಞಾಪಿಸುವಳು ॥೩೭॥ ಕರಾಯನ ಮಗಳಾದ ರುಕ್ಮಿಣೀದೇವಿಯಿಂದಕಳುಹಿಸಲ್ಪಟ್ಟವನು ನಾನಾಗಿರುತ್ತೇನೆ. ಆಕೆಯ ಸಂದೇಶವನ್ನು

ಮ್॥೩೮॥ರುಕ್ಮಿಣೀ॥ಶ್ರುತ್ವಾಗುಣಾನ್ಭುವನಸುಂದರಶೃಣ್ವತಾಂತೇನಿರ್ವಿಶ್ಯಕರ್ಣವಿವರೈರ್ಹರತೋಂ
ಗತಾಪಮ್ ॥ ರೂಪಂದೃಶಾಂದೃಶಿಮತಾಮಖಿಲಾರ್ಥಲಾಭಂತ್ವಯ್ಯಚ್ಯುತಾವಿಶತಿಚಿತ್ತಮಪತ್ರಪಂ
ಮೇ॥೩೯॥ಕಾತ್ವಾಮುಕುಂದಮಹತೀಕುಲರೂಪಶೀಲವಿದ್ಯಾವಯೋದ್ರವಿಣಧಾಮಭಿರಾತ್ಮತುಲ್ಯಮ್।
ಧೀರಾಪತಿಂಕುಲವತೀನವೃಣೀತಕನ್ಯಾಕಾಲೇನೃಸಿಂಹನರಲೋಕಮನೋಭಿರಾಮಮ್॥೪೦॥ತನ್ಮೇಭವಾನ್
ಖಲುವೃತಃಪತಿರಂಗಜಾಯಾಮಾತ್ಮಾರ್ಪಿತಶ್ಚಭವತೋತ್ರವಿಭೋವಿಧೇಹಿ।ಮಾವೀರಭಾಗಮಭಿಮರ್ಶ

---

ಯಾ-ಭೀಷ್ಮಕನ ಮಗಳಿನಿಂದ, ತೇ-ನಿನ್ನ. ಸಕಾಶಂ-ಸಮೀಪವಂ ಕುರಿತು, ಅಹಂ-ನಾನು, ಸಂಪ್ರೇಷಿತಃ-ಕಳುಹಿಸಲ್ಪಟ್ಟ ವನಾಗಿರುವೆನು. ತಸ್ಯಾಃ-ಆರುಕ್ಮಿಣಿಯ, ಸಂದೇಶಂ-ಹೇಳಿಕಳುಹಿಸಿದ ಮಾತನ್ನು, ಆಕರ್ಣ್ಯ-ಕೇಳಿ, ಅನಂತರಂ-ಕೂಡಲೇ ಮಾಡತಕ್ಕದ್ದು, ಯತ್-ಯಾವುದೋ, ತತ್-ಅದು, ಕ್ರಿಯತಾಂ-ನಿನ್ನಿಂದ ಮಾಡಲ್ಪಡಲಿ॥೩೮॥(ಎಂದುಹೇಳಿ ರುಕ್ಮಿಣಿಯುಬರೆದಿತ್ತ ಪತ್ರಿಕೆಯಂ ಕೊಟ್ಟನೆಂದು ಶ್ರೀಧರಾಭಿಪ್ರಾಯವು.)-[ರುಕ್ಮಿಣೀವಚನವು.] ಭುವನಸುಂದರ-ಲೋಕದೊಳಗಾಗಿ ಚೆಲುವನಾದ, ಅಚ್ಯುತ-ಚ್ಯುತಿಯಿಲ್ಲದಕೃಷ್ಣನೇ! ಶೃಣ್ವತಾಂ-ಕೇಳುವವರ, ಕರ್ಣವಿವರೈಃ-ಕಿವಿಗಳ ತೂತುಗಳಿಂದ, ನಿರ್ವಿಶ್ಯ-ಒಳಹೊಕ್ಕು, ಅಂಗತಾಪಂ-ಶರೀರದ ಜ್ವರವನ್ನು, ಹರತಃ-ಪರಿಹರಿಸುತ್ತಿರುವ, ತೇ-ನಿನ್ನ, ಗುಣಾನ್-ದಯಾದಿ ಸುಗುಣಂಗಳನ್ನೂ, ದೃಶಿಮತಾಂ-ಕಣ್ಣುಳ್ಳವರ, ದೃಶಾಂ-ಕಂಗಳಿಗೆ, ಅಖಿಲಾರ್ಥಲಾಭಂ-ಸಕಲಪ್ರಯೋಜನಗಳ ಸಂಪಾದನೆಯುಳ್ಳ, ರೂಪಂಚ-ಚೆಲುವಿಕೆಯನ್ನೂ, ಶ್ರುತ್ವಾ-ಕೇಳಿ, ಮೇ-ನನ್ನ, ಚಿತ್ತಂ-ಮನಸ್ಸು, ಅಪತ್ರಪಂ-ಬಿಟ್ಟುಹೋದ ನಾಚಿಕೆಯುಳ್ಳದ್ದಾಗಿ, ತ್ವಯಿ-ನಿನ್ನಲ್ಲಿ ಆವಿಶತಿ-ಪ್ರವೇಶಿಸುತ್ತಿದೆ॥೩೯॥(ಹೀಗೆಹೇಳುವುದು ಕುಲಕಾಂತೆಯರಿಗೆ ಭ್ರಷ್ಟಳವಿಟ್ಟತನವಾಗಿರುವುದೆಂದು ಶಂಕಿಸಬೇಡವೆಂಬ ತಾತ್ಪರ್ಯದಿಂ ಪೇಳುವಳು;-)ಮುಕುಂದ-ಕೃಷ್ಣನೇ! ಕುಲ... ಮಭಿಃ-ಕುಲ-ಜಾತಿಯಿಂದಲೂ ಸಂತತಿಯಿಂದಲೂ, ರೂಪ-ಆಕಾರದಿಂದಲೂ ಕೀರ್ತಿಯಿಂದಲೂ ಶೀಲ-ಸತ್ಸ್ವಭಾವದಿಂದಲೂ, ವಿದ್ಯಾ-ಜ್ಞಾನವಿಶೇಷ ಚಮತ್ಕಾರದಿಂದಲೂ, ವಯಃ-ಪ್ರಾಯದಿಂದಲೂ, ದ್ರವಿಣ-ಧನದಿಂದಲೂ, ಧಾಮಭಿಃ-ತೇಜಸ್ಸಿನಿಂದಲೂ, ಮನೆಯಿಂದಲೂ, ಮಹತೀ-ಉತ್ತಮಳಾದ, ಧೀರಾ-ಬುದ್ಧಿಯೂ ಧೈರ್ಯವೂವುಳ್ಳ, ಕುಲವತೀ-ಉತ್ತಮ ಜಾತಿಯುಳ್ಳವಳಾದ, ಕಾಕನ್ಯಾ-ಯಾವಮದುವೆಯಿಲ್ಲದ ಹುಡುಗಿಯುತಾನೆ, ಕಾಲೇ-ವಿವಾಹಪ್ರಸಕ್ತಿಯ ಸಮಯದಲ್ಲಿ, ನೃಸಿಂಹ-ನರಶ್ರೇಷ್ಠನೇ! ಆತ್ಮತುಲ್ಯಂ-ತನಗೆ ಸಮಾನನಾದ(ರೂಪವಿದ್ಯಾಶೀಲಾದಿಗಳಿಂದ ಅಸದೃಶನಾದ್ದರಿಂದ ತನಗೆ ತಾನೇ ಸಮಾನನಾದ) ನರಲೋಕಮನೋಭಿರಾಮಂ-ಮನುಷ್ಯಲೋಕದಲ್ಲಿ ಮನಸ್ಸಿಗೆ ಒಪ್ಪಿಗೆಯಾದವನಾದ ಸಂತೋಷಕರನಾದ, ತ್ವಾ-ನಿನ್ನನ್ನು, ಪತಿಂ-ಗಂಡನನ್ನಾಗಿ, ನವೃಣೀತ-ಒಪ್ಪಿಗೆಯಿಂದ ಬಯಸದೆಬಿಡುವಳಾದಾಳು?॥೪೦॥ಹೇಅಂಬುಜಾಕ್ಷ-ಎಲೈಕಮಲಲೋಚನನಾದ, ಅಂಗ-ಪ್ರಿಯನೇ! ತತ್-ಆಕಾರಣದಿಂದ ಭವಾನ್-ನೀನು ಪತಿಃ-ಗಂಡನೆಂದು, ಮೇ-ನನ್ನಿಂದ, ವೃತಃಖಲು-ಒಪ್ಪಿ ಬಯಸಲ್ಪಟ್ಟವನಾಗಿರುವೆಯಲ್ಲವೇ? ಆತ್ಮಾ-ನನ್ನದೇಹವು, ಭವತಃ-ನಿನಗೆ, ಅರ್ಪಿತಶ್ಚ-ಕೊಡಲ್ಪಟ್ಟದ್ದೂ ಆಗಿದೆ. ವಿಭೋ-ವ್ಯಾಪಕ ಶಕ್ತಿಯುಳ್ಳ ಪ್ರಭುವೇ! ಅತ್ರ-ಇಲ್ಲಿಗೆ ಬಂದು, ನನ್ನನ್ನು, ಭವತಃ-ನಿನ್ನ, ಜಾಯಾಂ-ಹೆಂಡತಿಯನ್ನಾಗಿ, ವಿಧೇಹಿ-ಮಾಡಿಕೋ, ಮೃಗಪತೇಃ-ಸಿಂಹದ, ಬಲಿಂ-ಉಪಹಾರ ದ್ರವ್ಯವನ್ನು, ಗೋಮಾಯುರಿವ-ನರಿಯಂತೆ, ಚೈದ್ಯಃ-ಶಿಶುಪಾಲನು, ವೀರಭಾಗಂ-ಶೂರನಾದ ನಿನ್ನ ಪಾಲಾಗ

---

ಕೇಳಿ ಅನಂತರದಲ್ಲಿ ಮಾಡಬೇಕಾದ್ದನ್ನು ಮಾಡು॥೩೮॥(ಎಂದು ರುಕ್ಮಿಣೀದೇವಿಯಿಂದ ರಹಸ್ಯದಲ್ಲಿ ಬರೆಯಲ್ಪಟ್ಟ ಪತ್ರವಂ ಶ್ರೀಕೃಷ್ಣನಿಗೆ ತೋರಿಸಿದನು. ಶ್ರೀಕೃಷ್ಣನ ಅನುಜ್ಞೆಯಿಂದ ಪತ್ರವನ್ನು ವಾಚಿಸಿದನೆಂತೆನೆ) ಲೋಕಸುಂದರನಾದ ಶ್ರೀಕೃಷ್ಣನೇ! ಕೇಳುವ ಜನರ ಶ್ರೋತ್ರಮಾರ್ಗದಿಂದ ಅಂತಃಪ್ರವೇಶವಂಮಾಡಿ ಸಮಸ್ತ ತಾಪಂಗಳಂ ಸಂಹರಿಸುವ ನಿನ್ನ ಗುಣಂಗಳಂ ಕೇಳಿ, ನೇತ್ರಂಗಳಿಗೆ ಮಹೋತ್ಸವರೂಪವಾದ ನಿನ್ನ ಸೌಂದರ್ಯವಂ ಸಹ ಕೇಳಿ, ನನ್ನ ಮನಸ್ಸು ಲಜ್ಜೆಯಂಬಿಟ್ಟು ನಿನ್ನಲ್ಲಿ ಲಗ್ನವಾಗಿದೆ॥೩೯॥ಎಲೈ ಪುರುಷಶ್ರೇಷ್ಠನಾದ ಶ್ರೀಕೃಷ್ಣನೇ! ಸತ್ಕುಲಪ್ರಸೂತಳಾದ ಬುದ್ಧಿಶಾಲಿಯಾದ ಕನ್ಯೆಯು ಯಾವಳುತಾನೆ ಕುಲದಿಂದಲೂ ಕಾಂತಿಯಿಂದಲೂ ಅಸದೃಶನಾದ ನಿನ್ನಂ ಪತಿಯನ್ನಾಗಿ ಕಾಮಿಸದೆಯಿರುತ್ತಾಳೆ?॥೪೦॥ಆದಕಾರಣದಿಂದ ನಾನು ನಿನ್ನಂ ಪತಿಯನ್ನಾಗಿ ವರಿಸಿದ್ದೇನೆ. ನನ್ನ ಮನಸ್ಸನ್ನು ನಿನ್ನಲ್ಲಿಯೇ ಇರಿಸಿರುವೆನು. ನನ್ನಂ ಪತ್ನಿಯನ್ನಾಗಿ ಮಾಡಿಕೊಂಡವನಾಗು, ಸಿಂಹಕ್ಕೆ ಯೋಗ್ಯವಾದ ವಸ್ತುವ ನರಿಯುಮುಟ್ಟದಂತೆ ವೀರನಿಗೆಸಲ್ಲತಕ್ಕ

ತುಚ್ಚೈದ್ಯಆರಾದ್ಗೋಮಾಯುವನ್ಮೃಗಪತೇರ್ಬಲಿಮಂಬುಜಾಕ್ಷ|೪೧|ಪೂರ್ತೇಷ್ಟದತ್ತನಿಯಮವ್ರತದೇ
ವವಿಪ್ರಗುರ್ವರ್ಚನಾದಿಭಿರಲಂಭಗವಾನ್‌ಪರೇಶಃ | ಆರಾಧಿತೋಯದಿಗದಾಗ್ರಜಏತ್ಯಪಾಣಿಂಗೃಹ್ಣಾತು
ಮೇನದಮಘೋಷಸುತಾದಯೋನ್ಯೇ |೪೨|ಶ್ವೋಭಾವಿನಿತ್ವಮಜಿತೋದ್ವಹನೇವಿದರ್ಭಾನ್‌ಗುಪ್ತಸ್ಸಮೇ
ತ್ಯಪೃತನಾಪತಿಭಿಃಪರೀತಃ | ನಿರ್ಮಥ್ಯಚೈದ್ಯಮಗಧೇಶಬಲಂಪ್ರಸಹ್ಯಮಾಂರಾಕ್ಷಸೇನವಿಧಿನೋದ್ವಹ
ವೀರ್ಯಶುಲ್ಕಾಮ್|೪೩|ಅಂತಃಪುರಾಂತರಚರೀಮನಿಹತ್ಯಬಂಧೂನ್‌ತ್ವಾಮುದ್ವಹೇಕಥಮಿತಿಪ್ರವದಾ
ಮ್ಯುಪಾಯಮ್ | ಪೂರ್ವೇದ್ಯುರಸ್ತಿಮಹತೀಕುಲದೇವಯಾತ್ರಾಯಸ್ಯಾಂಬಹಿರ್ನವವಧೂರ್ಗಿರಿಜಾಮು
ಪೇಯಾತ್ ||೪೪|ಯಸ್ಯಾಂಘ್ರಿಪಂಕಜರಜಸ್ಸ್ನಪನಂಮಹಾಂತೋವಾಂಛಂತ್ಯುಮಾಪತಿರಿವಾತ್ಮತಮೋ

---

ತಕ್ಕ ನನ್ನನ್ನು, ಮಾಭಿಮರ್ಶತು-ಸೋಂಕಬೇಡ ||೪೧||ಪೂರ್ತೇ...ದಿಭಿಃ-ಪೂರ್ತ-ಜಲಾಧಾರವಂ ಕಲ್ಪಿಸುವುದು ಮೊದಲಾದಧ ರ್ಮದಿಂದಲೂ, ಇಷ್ಟ-ಅಗ್ನಿಹೋತ್ರಾಚರಣಾದಿಗಳಿಂದಲೂ, ವ್ರತ-ಕೃಚ್ಛ್ರಚಾಂದ್ರಾಯಣಾದಿಗಳಿಂದಲೂ, ದೇವ-ದೇವತೆ ಗಳ, ವಿಪ್ರ-ಬ್ರಾಹ್ಮಣರ ಗುರು-ಪೂಜ್ಯರಾದ ಹಿರಿಯರ, ಅರ್ಚನಾದಿಭಿಃ-ಪೂಜೆಮೊದಲಾದವುಗಳಿಂದಲೂ, ಪರೇಶಃ-ಪರಮಾ ತ್ಮನಾದ, ಭಗವಾನ್-ಶ್ರೀಹರಿಯು, ಅಲಂ-ಪೂರ್ಣವಾಗಿ, ಆರಾಧಿತೋಯದಿ-ನನ್ನಿಂದ ಸೇವಿಸಲ್ಪಟ್ಟವನಾಗಿದ್ದರೆ ಗದಾಗ್ರ ಜಃ-ಗದನೆಂಬ ಯಾದವಂಗೆ ಅಣ್ಣನಾದ ಶ್ರೀಕೃಷ್ಣನು, ಏತ್ಯ-ಬಂದು, ಮೇ-ನನ್ನ, ಪಾಣಿಂ-ಕೈಯನ್ನು, ಗೃಹ್ಣಾತು-ಹಿಡಿ ದುಕೊಳ್ಳಲಿ, ದಮಘೋಷಸುತಾದಯಃ-ದಮಘೋಷನ ಮಗನಾದ ಶಿಶುಪಾಲನೇ ಮೊದಲಾಗಿವುಳ್ಳ, ಅನ್ಯೇ-ಇತರರು, ನ-ಬೇಡ||೪೨||ಹೇಅಜಿತ-ಎಲೈಸೋಲಲ್ಪಡದವನಲ್ಲದ ಕೃಷ್ಣನೇ! ಶ್ವಃ-ನಾಳೆ ಭಾವಿನಿ-ಆಗುವಂಥಾ,ಉದ್ವಹನೇ-ವಿವಾಹದಲ್ಲಿ,ತ್ವಂ-ನೀನು, ಗುಪ್ತಃ-ಯಾರಿಂದಲೂ ನೋಡಲ್ಪಡದೆ ಗುಟ್ಟಾದವನಾಗಿ, ವಿದರ್ಭಾನ್-ಆಂಧ್ರದೇಶಂಗಳಂ ಕುರಿತು (ಕುಂಡಿನೀನಗರ ಗುಂಟೂರು) ಸಮೇತ್ಯ-ಬಂದು ಪೃತನಾಪತಿಭಿಃ-ಸೇನಾನಾಯಕರಿಂದ, ಪರೀತಃ-ಬಳಸಲ್ಪಟ್ಟವನಾಗಿ, ಚೈದ್ಯಮಗಧೇಶಬ ಲಂ-ಶಿಶುಪಾಲ ಜರಾಸಂಧರ ದಂಡನ್ನು, ನಿರ್ಮಥ್ಯ-ಹೊಡದು ಕೆಡಹಿ, ಪ್ರಸಹ್ಯ-ಬಲಾತ್ಕರಿಸಿ, ರಾಕ್ಷಸೇನವಿಧಿನಾ-ರಾಕ್ಷಸವಿ ವಾಹದ ಕ್ರಿಯೆಯಿಂದ, ವೀರ್ಯಶುಲ್ಕಾಂ-ಶೌರ್ಯವೇ ಹೆಣ್ಣಿಗೆ ಕೊಡತಕ್ಕ ಧನವಾಗಿಉಳ್ಳ, ಮಾಂ-ನನ್ನನ್ನು, ಉದ್ವಹ-ಮದಿವೆಮಾಡಿಕೊ(ಎತ್ತಿಕೊಂಡುಹೋಗು) ||೪೩||ಬಂಧೂನ್-ನಂಟರನ್ನು, ಅನಿಹತ್ಯ-ಕೊಲ್ಲದೆ. ಅಂತಃಪುರಾಂತರಚರೀಂ-ರಾ ಣಿವಾಸದೊಳಗೆ ಸಂಚರಿಸುವ, ತ್ವಾಂ-ನಿನ್ನನ್ನು, ಕಥಮಿತ್ಯುದ್ವಹೇ-ಹೇಗೆಂದು ಮದಿವೆಮಾಡಿಕೊಳ್ಳುವಿ? ಎಂದುಶಂಕಿಸುವೆ ಯೋ? ಉಪಾಯಂ-ಸಾಧಕಯುಕ್ತಿಯನ್ನು, ಪ್ರವದಾಮಿ-ಚನ್ನಾಗಿ ಹೇಳುವೆನು. ಯಸ್ಯಾಂ-ಯಾವುದರಲ್ಲಿ, ನವವಧೂಃ-ಹೊ ಸತಾಗಿ ಮದವಣಿಗಿ ಯಾಗುವವಳು, ಬಹಿಃ-ಊರಹೊರಗಿರುವ, ಗಿರಿಜಾಂ-ಪಾರ್ವತೀ ದೇವಿಯಂ ಕುರಿತು ಉಪೇಯಾತ್-ಪೂ ಜಿಸಲು ಪೋಗುವಳೋ, ಮಹತೀ-ದೊಡ್ಡದಾದ, ಸಾ-ಅಂಥಾ, ಕುಲದೇವಯಾತ್ರಾ-ಮನೆಯದೇವರಬಳಿಗೆ ಪ್ರಯಾಣ ಮಾಡುವಿ ಕೆಯು, ಪೂರ್ವೇದ್ಯುಃ-ಮದುವೆಯಾಗುವ ದಿನಕ್ಕಿಂತಲೂ ಹಿಂದಣದ ಹಗಲಿನಲ್ಲಿ,ಅಸ್ತಿ-ಇರುವುದು ||೪೪||ಮಹಾಂತಃ-ದೊಡ್ಡವ

---

ಒಡೆಯೊಡದ ನನ್ನಂ ಶಿಶುಪಾಲನು ಮುಟ್ಟಬೇಡ |೪೧| ಇಷ್ಟ ಪೂರ್ತಾದಿ ಕರ್ಮಂಗಳಿಂದಲೂ ದಾನಂಗಳಿಂ ದಲೂ ವ್ರತನಿಯಮಂಗಳಿಂದಲೂ ದೇವ ಬ್ರಾಹ್ಮಣ ಗುರುಪೂಜಾದಿಗಳಿಂದಲೂ ಭಗವಂತನಾದ ಪರಮಪುರು ಷನಂ ನಾನುಪೂರ್ವದಲ್ಲಿ ಆರಾಧನಂ ಗೆಯ್ದಿದ್ದರೆ ಶ್ರೀಕೃಷ್ಣನುಬಂದು ನನ್ನ ಪಾಣಿಗ್ರಹವಂ ಮಾಡಲಿ. ಶಿಶು ಪಾಲನು ಮೊದಲಾದ ಮಿಗಿಲಾದವರು ನನ್ನ ನೆಯ್ದಬೇಡ |೪೨|ಎಲೈಶ್ರೀಕೃಷ್ಣನೇ! ನಾಳೇದಿವಸ ಸ್ವಯಂವರ ವಾಗುವಾಗ ನೀನು ಗುಪ್ತನಾಗಿಬಂದು ಆಮೇಲೆ ಸೇನೆಗಳಂ ಕೂಡಿಸಿಕೊಂಡು ಈವಿದರ್ಭ ದೇಶಕ್ಕೆಬಂದು ಶಿ ಶುಪಾಲ ಜರಾಸಂಧರ ಬಲವಂ ಮಥಿಸಿ ಬಲಾತ್ಕಾರವಾಗಿ ರಾಕ್ಷಸ ವಿವಾಹವಿಧಾನದಿಂದ ಪರಾಕ್ರಮವೇ ಶುಲ್ಕ ದ್ರವ್ಯವಾಗಿಉಳ್ಳ ನನ್ನಂ ವಿವಾಹವಂ ಮಾಡಿಕೊಂಡವನಾಗು |೪೩|ಅಂತಃಪುರದಲ್ಲಿರುವ ಜನರಂ ಸಂಹರಿಸದೆ ನನ್ನನ್ನಪಹರಿಸಿಕೊಂಡು ಹೋಗುವದಕ್ಕೆ ನಾನು ಉಪಾಯವಂ ಪೇಳುತ್ತೇನೆ-ಅದೆಂತೆನೆ-ವಿವಾಹದ ಪೂರ್ವ ದಿವಸದಲ್ಲಿ ಕುಲದೇವತಾ ಪೂಜಾರ್ಥವಾಗಿಊರಹೊರಗಿನ ಗೌರೀದೇವಸ್ಥಾನವಂ ಕುರಿತು ನಾನುಹೋಗುತ್ತೇ ನೆ. ಆಗ ನೀನುಬಂದು ನನ್ನನ್ನಪಹರಿಸಿಕೊಂಡು ಹೋಗುವನಾಗು ||೪೪||ಮಹಾತ್ಮರಾದ ಯೋಗಿಗಳೂ ಯಾ

ಪಹತ್ಯೈ | ಯರ್ಹ್ಯಂಬುಜಾಕ್ಷ ನಲಭೇಯ ಭವತ್ಪ್ರಸಾದಂ ಜಹ್ಯಾಮಸೂನ್ ವ್ರತಕೃಶಾನ್ ಶತಜನ್ಮಭಿ
ಸ್ಸ್ಯಾತ್ ||೪೩|| ಬ್ರಾಹ್ಮಣಃ || ಇತ್ಯೇತೇ ಗುಹ್ಯಸಂದೇಶಾ ಯದುದೇವ ಮಯಾಹೃತಾಃ | ವಿಮೃಶ್ಯ ಕರ್ತೃತ್ಯಂ
ಯಚ್ಚಾತ್ರ ಕ್ರಿಯತಾಂ ತದನಂತರಮ್ ... ... .. ... ||೪೪||
(-ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ದ್ವಿಪಂಚಾಶತ್ತಮೋಽಧ್ಯಾಯಃ-)

---

ಶಾಪವರು, ಆತ್ಮತಮೋಪಹತ್ಯೈ-ತಮ್ಮ ಅಜ್ಞಾನವಂ ಪರಿಹರಿಸಿ ಕೊಳ್ಳಲೋಸುಗ, ಉಮಾಪತಿರಿವ-ಗಿರಿಜಾ ರಮಣನಂತೆ, ಯ ಸ್ಯ-ಯಾವನಿನ್ನ, ಅಂಘ್ರಿಪಂಕಜರಜಸ್ಸ್ನಪನಂ-ಅಡಿದಾವರೆಗಳ ಧೂಳಿನಲ್ಲಿ ಸ್ನಾನವನ್ನು, ವಾಛಂತಿ -ಬಯಸುತ್ತಿರುವರೋ (ರುದ್ರನು ತಾಮಸತ್ವನಿವೃತ್ತಿಗಾಗಿ ಗಂಗೆಯಂಧರಿಸಿದನೆಂದು ವೈಷ್ಣವಹಾರ್ದವು) ಹೇಅಂಬುಜಾಕ್ಷ-ಎಲೈತಾವರೆ ಗಣ್ಣನೇ ಭವತ್ಪ್ರಸಾದಂ-ಆನಿನ್ನ ಅನುಗ್ರಹವನ್ನು, ನಲಭೇಯಯದಿ-ನಾನು ಹೊಂದದೆ ಯಿರುವಳಾದರೆ, ವ್ರತಕೃಶಾನ್ -ಉಪವಾಸಾ ದಿಗಳಿಂದ ಕ್ಷೀಣಿಸುತ್ತಿರುವ, ಅಸೂನ್-ಪ್ರಾಣಂಗಳನ್ನು, ಜಹ್ಯಾಂ-ಬಿಡುವೆನು (ಬಿಟ್ಟರೆ ಏನಾಗುವುದೆಂದರೆ) ಶತಜನ್ಮಭಿಃ-ನೂ ರುಸಲ ಹುಟ್ಟುವಿಕೆಗಳಿಂದಲಾದರೂ, ಸ್ಯಾತ್-ನಿನ್ನ ಪ್ರಸಾದವು ದೊರೆತದ್ದಾದೀತು||೪೩|| [ಬ್ರಾಹ್ಮಣವಚನವು] ಹೇಯದು ದೇವ-ಎಲೈಯಾದವರಿ ಗೊಡೆಯನಾದ ಶ್ರೀಕೃಷ್ಣನೇ! ಇತಿ-ಹೀಗೆ, ಏತೇಗುಹ್ಯಸಂದೇಶಾಃ-ಈಗುಟ್ಟಾಗಿಹೇಳಿ ಕಳುಹಿಸಲ್ಪಟ್ಟ ಮಾತುಗಳು, ಮಯಾ-ನನ್ನಿಂದ, ಆಹೃತಾಃ-ತರಲ್ಪಟ್ಟವಾದವು. ಅತ್ರ-ಈಗ, ಕೃತ್ಯಂ-ಮಾಡತಕ್ಕದ್ದು-ಯತ್-ಯಾವುದೋ, ತಚ್ಚ-ಅದರನ್ನೂ, ವಿಮೃಶ್ಯ-ವಿಚಾರಮಾಡಿ, ತತ್-ಅದು, ಅನಂತರಂ-ಅವಕಾಶವಿಲ್ಲದ್ದಾಗಿ, ಕ್ರಿಯತಾಂ-ಮಾಡಲ್ಪಡಲಿ||೪೪||
ಇಂತೆಂಬಲ್ಲಿಗೆ ಭಾಗವತ ಪ್ರತಿಶಬ್ದಾರ್ಥಬೋಧಿನಿಯಲ್ಲಿ ದಶಮಸ್ಕಂಧದೊಳು
೫೨ನೆಯ ಅಧ್ಯಾಯವು ಮುಗಿದುದು

---

ವನಿನ್ನ ಪಾದಪದ್ಮ ರಜಸ್ಸಿನಲ್ಲಿ ಸ್ನಾನವಂ ಪಾಪಪರಿಹಾರಾರ್ಥವಾಗಿ ಅಪೇಕ್ಷಿಸುತ್ತಾರೆಯೋ, ಎಲೈಅಂಬುಜಾಕ್ಷನೇ! ಅಂತಾನಿನ್ನ ಅನುಗ್ರಹವನ್ನು ನಾನು ಎಯ್ದದೆ ಹೋದರೆ ನೂರುಜನ್ಮಂಗಳಲ್ಲಿ ಯಾದರೂ ವ್ರತೋಪವಾಸಾದಿಗಳಿಂದ ಪ್ರಾಣಂಗಳಂ ಶೋಷಿಸುತ್ತೇನೆ, ಆಮೇಲಾದರೂ ನಿನ್ನ ಅನುಗ್ರಹವು ಬಂದೀತಲ್ಲವೆ? ||೪೩|| (ಎಂಬ ಪತ್ರಿಕಾರ್ಥವಂ ಶ್ರುತಪಡಿಸಿ ಬ್ರಾಹ್ಮಣನು ನುಡಿಯುವನು-) ಎಲೈಯದುಪತಿಯೇ! ಈಪ್ರಕಾರಂಗಳಾದ ರಹಸ್ಯ ಸಂದೇಶಂಗಳು ರುಕ್ಮಿಣೀದೇವಿಯಿಂದ ಕಳುಹಿಸಲ್ಪಟ್ಟ ನನ್ನಿಂದ ತಿಳಿಸಲ್ಪಟ್ಟವು. ಇನ್ನುಮೇಲೆ ಆಲೋಚಿಸಿ ಯಾವಕೆಲಸವು ಹೇಗೆ ಆಗಬೇಕೋ ಹಾಗೆ ಮಾಡತಕ್ಕದ್ದಾಗಿರುತ್ತೆ ... .. ||೪೪||

ಇಂತು ಶ್ರೀಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸಿದನೆಂದು ಸೂತಪೌರಾ
ಣಿಕನು ನೈಮಿಶಾರಣ್ಯವಾಸಿಗಳಾದ ಶೌನಕಾದಿ ಮಹರ್ಷಿಗಳಿಗೆ ಪೇಳಿದನೆಂಬಲ್ಲಿಗೆ-
ಶ್ರೀಮನ್ಮಹೀಶೂರ ಪುರವರಾಧೀಶ ಶ್ರೀಚಾಮರಾಜ ತನುಜ ಶ್ರೀಮತ್ಕೃಷ್ಣ
ರಾಜವಿರಚಿತಮಾದ "ಶ್ರೀಕೃಷ್ಣರಾಜ ವಾಣೀವಿಲಾಸ" ಮೆಂಬ ಶ್ರೀ
ಭಾಗವತ ಪುರಾಣದ ಕರ್ಣಾಟ ಭಾಷಾ ವ್ಯಾಖ್ಯಾನದಲ್ಲಿ ದಶ
ಮಸ್ಕಂಧದೊಳು ದ್ವಿಪಂಚಾಶತ್ತಮಾಧ್ಯಾಯಂ
ಸಂಪೂರ್ಣಮಾದುದು



ಶ್ರೀಶುಕಃ ॥ ವೈದರ್ಭ್ಯಾಸ್ಸತುಸಂದೇಶಂನಿಶಮ್ಯಯದುನಂದನಃ । ಪ್ರಗೃಹ್ಯಪಾಣಿನಾಪಾಣಿಂಪ್ರಹ ಸನ್ದ್ವಿಜಮಬ್ರವೀತ್ ॥೧॥ ಯಥಾಹಮಪಿತಚ್ಚಿತ್ತೋ ನಿದ್ರಾಂಚನಲಭೇನಿಶಿ ॥೨॥ ವೇದಾಹಂರುಕ್ಮಿಣಾದ್ವೇಷಾನ್ಮಮೋದ್ವಾಹೋನಿವಾರಿತಃ । ತಾಮಾನಯಿಷ್ಯಉನ್ಮಥ್ಯರಾಜನ್ಯಾಪಸದಾನ್ಮೃಧೇ । ಮತ್ಪರಾಮನವದ್ಯಾಂಗೀಮೇಧಸೋಗ್ನಿಶಿಖಾಮಿವ ॥೩॥ ಉದ್ವಾಹರ್ಕ್ಷಂಸವಿಜ್ಞಾಯರುಕ್ಮಿಣ್ಯಾಮಧುಸೂದನಃ । ರಥಸ್ಸಂಯುಜ್ಯತಾಮಾಶುದಾರುಕೇತ್ಯಾಹಸಾರಥಿಮ್ ॥೪॥ ಸಚಾಶ್ವೈಶ್ಶೈಬ್ಯಸುಗ್ರೀವಮೇಘಪುಷ್ಪಬಲಾಹಕೈಃ । ಯುಕ್ತಂರಥಮುಪಾನೀ

---

೫೩ನೆಯ ಅಧ್ಯಾಯದ ಪ್ರತಿಪದಾರ್ಥಬೋಧಿನಿ.

(ಶುಕವಾಕ್ಯವು.) ಸಯದುನಂದನಸ್ತು-ಆ ಕೃಷ್ಣನಾದರೋ, ವೈದರ್ಭ್ಯಾಃ-ರುಕ್ಮಿಣಿಯ, ಸಂದೇಶಂ-ಸುದ್ದಿಯನ್ನು, ನಿಶಮ್ಯ-ಕೇಳಿ, ಪಾಣಿನಾ-ತನ್ನ ಕೈಯಿಂದ, ಪಾಣಿಂ-ವಿಪ್ರನಕೈಯನ್ನು, ಪ್ರಗೃಹ್ಯ-ಹಿಡಿದು, ಪ್ರಹಸನ್-ನಗುತಿರುವನಾಗಿ, ದ್ವಿಜಂ-ವಿಪ್ರನಂಕುರಿತು, ಅಬ್ರವೀತ್-ನುಡಿವನು ॥೧॥ ರುಚಿರಾನನಾ-ಮನೋಹರವಾದ ಮುಖವುಳ್ಳ ರುಕ್ಮಿಣಿಯು, ಯಥಾ-ಹೇಗೆ, ಮಚ್ಚಿತ್ತಾ-ನನ್ನಲ್ಲಿ ಮನಸ್ಸುಳ್ಳವಳಾದ್ದರಿಂದ, ವಿನಿದ್ರಾ-ನಿದ್ದೆಯಿಲ್ಲದವಳೋ, ತಥಾ-ಹಾಗೆ, ಅಹಮಪಿ-ನಾನೂ ಕೂಡ, ತಚ್ಚಿತ್ತಃ-ಆಕೆಯಲ್ಲಿ ಮನಸ್ಸುಳ್ಳವನಾದ್ದರಿಂದ, ನಿಶಿ-ರಾತ್ರಿಯಲ್ಲಿ, ನಿದ್ರಾಂಚ-ನಿದ್ದೆಯನ್ನು, (ಚಕಾರದಿಂದ ಇತರ ಸ್ತ್ರೀಯರನ್ನು.) ನಲಭೇ-ಪಡೆಯದೇ ಇರುವೆನು ॥೨॥ ರುಕ್ಮಿಣಃ-ರುಕ್ಮಿಯೆಂಬವನ, ದ್ವೇಷಾತ್-ವಿರೋಧದಿಂದ, ಮಮ-ನನ್ನ, ಉದ್ವಾಹಃ-ಮದುವೆಯು, ನಿವಾರಿತಃ-ತಡೆಯಲ್ಪಟ್ಟಿತು ಅಹಂ-ನಾನು, ವೇದ-ಬಲ್ಲೆನು, ಮೃಧೇ-ಕಾಳಗದಲ್ಲಿ, ರಾಜನ್ಯಾಪಸದಾನ್-ಅರಸುಗಳಲ್ಲಿ ಹೀನರಾದ ಶಿಶುಪಾಲಜರಾಸಂಧಾದಿಗಳನ್ನು, ಉನ್ಮಥ್ಯ-ನಿಗ್ರಹಿಸಿ, ಮತ್ಪರಾಂ-ನನ್ನಲ್ಲಿ ಆಸಕ್ತಳಾದ, ಅನವದ್ಯಾಂಗೀಂ-ನಿರ್ದುಷ್ಟಮೂರ್ತಿಯಾದ, ತಾಂ-ಆರುಕ್ಮಿಣಿಯನ್ನು, ಏಧಸಃ-ಸೌದೆಯ ದೆಸೆಯಿಂದ, ಅಗ್ನಿಶಿಖಾಮಿವ-ಬೆಂಕಿಯ ಉರಿಯಂ ಕೊಳ್ಳುವಂತೆ, ಆನಯಿಷ್ಯೇ-ತೆಗೆದುಕೊಂಡು ಬರುವೆನು ॥೩॥ ಸಮಧುಸೂದನಃ-ಆ ಕೃಷ್ಣನು, ರುಕ್ಮಿಣ್ಯಾಃ-ರುಕ್ಮಿಣೀದೇವಿಯ, ಉದ್ವಾಹರ್ಕ್ಷಂ-(ನಾಳಿದ್ದು ರಾತ್ರಿಯಲ್ಲಿ) ಮದುವೆಯ ನಕ್ಷತ್ರವೆಂದು, ವಿಜ್ಞಾಯ-ಬ್ರಾಹ್ಮಣವಚನದಿಂದರಿತು, ದಾರುಕ-ದಾರುಕನೇ! ಆಶು-ಬೇಗನೇ, ರಥಃ-ನನ್ನ ತೇರು, ಸಂಯುಜ್ಯತಾಂ-ಸೇರಿಸಲ್ಪಡಲಿ, ಇತಿ-ಎಂದು, ಸಾರಥಿಂ-ಸೂತನಂಕುರಿತು, ಆಹ-ನುಡಿದನು ॥೪॥ ಸಚ-ಆ ದಾರುಕನೂ ಕೂಡ, ಶೈಬ್ಯವು, ಸುಗ್ರೀವವು, ಮೇಘಪುಷ್ಪವು, ಬಲಾಹಕವು, ಎಂಬ, ಅಶ್ವೈಃ-ಕುದು

---

(೫೩ನೆಯ ಅಧ್ಯಾಯವು.)

ಶ್ರೀಧರೀಯಶ್ಲೋಕಃ ॥ ತ್ರಿಪಂಚಾಶತ್ತಮೇಗತ್ವಾವಿದರ್ಭಾನ್ಸದ್ಭುತೇಹಿತಃ । ರುಕ್ಮಿಣೀಮಾಹರತ್ಕೃಷ್ಣೋವಿಮೃಷ್ಟಾಂದ್ವಿಷತಾಬಲಾತ್ ॥ ✝ ॥ ಐವತ್ತಮೂರನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ವಿದರ್ಭದೇಶಗಳನೆಯ್ದಿ ಮಹಾಸಾಹಸ ವ್ಯಾಪಾರವುಳ್ಳವನಾಗಿ ಶಿಶುಪಾಲ ಮೊದಲಾದ ಸಮಸ್ತ ದ್ವೇಷಿಗಳೂ ನೋಡುತಿರಲಾಗಿ ಬಲಾತ್ಕಾರದಿಂದ ರುಕ್ಮಿಣಿಯ ನಪಹರಿಸಿಕೊಂಡು ಬಂದನೆಂಬ ಅರ್ಥವಂ ಶ್ರೀಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸುವನದೆಂತೆನೆ-

ಎಲೈಅರಸೇ! ಈಪ್ರಕಾರವಾಗಿ ರುಕ್ಮಿಣಿಯ ಸಂದೇಶವಂಕೇಳಿ ಶ್ರೀಕೃಷ್ಣನು ಬ್ರಾಹ್ಮಣನಕೈಯಂ ಪಿಡಿದು ನಗುತನುಡಿದನು ॥೧॥ ಎಲೈಬ್ರಾಹ್ಮಣನೇ! ನಾನು ಅದೇರೀತಿಯಲ್ಲಿ ರಾತ್ರಿಗಳಲ್ಲಿ ಆಹಾರ ನಿದ್ರೆಗಳಂ ಬಿಟ್ಟಿರುವೆನು- ರುಕ್ಮಿಯೆಂಬವನ ದ್ವೇಷದಿಂದ ನನ್ನ ವಿವಾಹವು ಅಡ್ಡಿಮಾಡಲ್ಪಟ್ಟಿದೆ ಯೆಂಬ ಅರ್ಥವಂ ನಾನುಬಲ್ಲೆನು ॥೨॥ ಶಿಶುಪಾಲ ಜರಾಸಂಧ ಮುಂತಾದ ಕ್ಷತ್ರಿಯಾಧಮರಂ ಪ್ರಹರಿಸಿ ಪರಾಜಯವನ್ನೈದಿಸಿ ನನ್ನಲ್ಲಿ ಆಸಕ್ತಚಿತ್ತಳಾ ನಿರ್ದೋಷವಂಗಳಾಗಿ ಅವಯವಂಗಳುಳ್ಳ ಆರುಕ್ಮಿಣಿಯುಂ ಅರಣಿಕಾಷ್ಠದಿಂದ ಅಗ್ನಿಜ್ವಾಲೆಯನ್ನುಪಾದಿಯಲಿ ಕರೆದುಕೊಂಡು ಬರುತ್ತೇನೆ ॥೩॥ ಎಂದುಪೇಳಿ ಶ್ರೀಕೃಷ್ಣನು ರುಕ್ಮಿಣೀದೇವಿಯ ವಿವಾಹನಕ್ಷತ್ರವಂತಿಳಿದು ಸಾರಥಿಯಾದದಾರುಕನಂ ಕರೆದು ರಥಮಂ ಸನ್ನಾಹವಂ ಮಾಡೆಂದು ಆಜ್ಞಾಪಿಸಿದನು ॥೪॥ ಅದಾ

ಯ ತಸ್ಥೌ ಪ್ರಾಂಜಲಿರಗ್ರತಃ ॥೫॥ ಆರುಹ್ಯ ಸ್ಯಂದನಂ ಶೌರಿರ್ದ್ವಿಜಮಾರೋಪ್ಯ ತೂರ್ಣಗೈಃ । ಆನರ್ತಾದೇಕರಾತ್ರೇಣ ವಿದರ್ಭಾನಗಮದ್ಧಯೈಃ ॥೬॥ ರಾಜಾ ಸ ಕುಂಡಿನಪತಿಃ ಪುತ್ರಸ್ನೇಹವಶಂಗತಃ । ಶಿಶುಪಾಲಾಯ ತಾಂ ಕನ್ಯಾಂ ದಾಸ್ಯನ್ ಕರ್ಮಾಣ್ಯಕಾರಯತ್ ॥೭॥ ಪುರಂ ಸಂಮೃಷ್ಟಸಂಸಿಕ್ತಮಾರ್ಗರಥ್ಯಾಚತುಷ್ಪಥಮ್ । ಚಿತ್ರಧ್ವಜಪತಾಕಾಭಿಸ್ತೋರಣೈಃ ಸಮಲಂಕೃತಮ್ ॥೮॥ ಸ್ರಗ್ಗಂಧಮಾಲ್ಯಾಭರಣೈರ್ವಿರಜೋಂಬರಭೂಷಿತೈಃ । ಜುಷ್ಟಂ ಸ್ತ್ರೀಪುರುಷೈಃ ಶ್ರೀಮದ್ಗೃಹೈರಗರುಧೂಪಿತೈಃ ॥೯॥ ಪಿತೃದೇವಾನ್ ಸಮಭ್ಯರ್ಚ್ಯ ವಿಪ್ರಾಂಶ್ಚ ವಿಧಿವನ್ನೃಪ । ಭೋಜಯಿತ್ವಾ ಯಥಾನ್ಯಾಯಂ ವಾಚಯಾಮಾಸ ಮಂಗಳಮ್ ॥೧೦॥ ಸುಸ್ನಾತಾಂ ಸುದತೀಂ ಕನ್ಯಾಂ ಕೃತಕೌತುಕಮಂಗಳಾಮ್ । ಅಹತಾಂಶು

---

ಕೆಗಳಿಂದ, ಯುಕ್ತಂ-ಕೂಡಿದ, ರಥಂ-ತೇರನ್ನು, ಉಪಾನೀಯ-ಬಳಿಗೆ ತಂದು, ಅಗ್ರತಃ-ಮುಂಗಡೆಯಲ್ಲಿ, ಪ್ರಾಂಜಲಿಃ-ಜೋಡಿಸಿದ ಕೈಗಳುಳ್ಳವನಾಗಿ, ತಸ್ಥೌ-ನಿಂತನು ॥೫॥ ಶೌರಿಃ-ಕೃಷ್ಣನು, ಸ್ಯಂದನಂ-ತೇರನ್ನು, ಆರುಹ್ಯ-ಏರಿ, ದ್ವಿಜಂ-ವಿಪ್ರನನ್ನು, ಆರೋಪ್ಯ-ಏರಿಸಿಕೊಂಡು, ತೂರ್ಣಗೈಃ-ಬೇಗನಡೆಯುವ ಹಯೈಃ-ಕುದುರೆಗಳಿಂದ, ಏಕರಾತ್ರೇಣ-ಒಂದುರಾತ್ರಿಯಿಂದಲೇ, ಆನರ್ತಾತ್-ಆನರ್ತದೇಶವರ್ತ್ತಣಿಂ, (ಗುಜರಾತಿನಿಂದ,) ವಿದರ್ಭಾನ್-ವಿದರ್ಭದೇಶಗಳನ್ನು, ಅಗಮತ್-ಸೇರಿದನು ॥೬॥ ಕುಂಡಿನಪತಿಃ-ಕುಂಡಿನಪುರಿಗೊಡೆಯನಾದ, ಸರಾಜಾ-ಆ ಭೀಷ್ಮಕರಾಯನು, ಪುತ್ರಸ್ನೇಹವಶಂಗತಃ-ಮಗನಾದ ರುಕ್ಮಿಯಲ್ಲಿ ಅನುರಾಗಕ್ಕೆ ಅಧೀನತೆಯಂ ಹೊಂದಿದವನಾಗಿ, ತಾಂಕನ್ಯಾಂ-ಆ ರುಕ್ಮಿಣಿಯನ್ನು, ಶಿಶುಪಾಲಾಯ-ಚೇದಿರಾಜಂಗೆ, ದಾಸ್ಯನ್-ಕೊಡಲೆಳಸಿದವನಾಗಿ, ಕರ್ಮಾಣಿ-ಕೆಲಸಗಳನ್ನು, ಅಕಾರಯತ್-ಮಾಡಿಸಿದನು ॥೭॥ ಪುರಂ-ಕುಂಡಿನನಗರವು, ಸಂಪಥಂ ಸಂಮೃಷ್ಟ-ಗುಡಿಸಲ್ಪಟ್ಟ, ಸಂಸಿಕ್ತ-ಸಾರಿಸಲ್ಪಟ್ಟ, ಮಾರ್ಗ-ಸಣ್ಣದಾರಿಗಳು, ರಥ್ಯಾ-ಬಂಡಿದಾರಿಗಳು, ಚತುಷ್ಪಥಂ-ನಾಲ್ಕುಬೀದಿಗಳು ಸೇರಿದ ಚೌಕಗಳೂ ಉಳ್ಳದ್ದು, ಚಿತ್ರಧ್ವಜಪತಾಕಾಭಿಃ-ಹಲವುಬಣ್ಣದ ಪಳವಿಗೆಗಳ ವಸ್ತ್ರಂಗಳಿಂದಲೂ, ತೋರಣೈಃ-ಅಲಂಕಾರದಪಟ್ಟಿಕೆಗಳಿಂದಲೂ, ಸಮಲಂಕೃತಂ-ಚನ್ನಾಗಿ ಸಿಂಗರಿಸಲ್ಪಟ್ಟದ್ದಾಯಿತು ॥೮॥ ಸ್ರಗ್ಗಂಧಮಾಲ್ಯಾಭರಣೈಃ-ಪುಷ್ಪಹಾರಗಳಿಂದಲೂ ಪರಿಮಳಗಳಿಂದಲೂ ಪುಷ್ಪಗಳಿಂದಲೂ ಒಡವೆಗಳಿಂದಲೂ ಕೂಡಿದ, ವಿರಜೋಂಬರಭೂಷಿತೈಃ-ಕೊಳೆಯಿಲ್ಲದ ಶುದ್ಧವಸ್ತ್ರಗಳಿಂದಲಂಕೃತರಾದ, ಸ್ತ್ರೀಪುರುಷೈಃ-ಹೆಂಗುಸರಿಂದಲೂ ಗಂಡಸರಿಂದಲೂ, ಅಗರುಧೂಪಿತೈಃ-ಅಗರುಚಕ್ಕೆಗಳಿಂದ ಪರಿಮಳದ ಹೊಗೆಗೊಳಿಸಲ್ಪಟ್ಟ, ಶ್ರೀಮದ್ಗೃಹೈಃ-ಸಂಪತ್ತುಮನೆಗಳಿಂದಲೂ, ಜುಷ್ಟಂ-ಸೇವ್ಯವಾಗಿರುವುದಾಯಿತು ॥೯॥ ನೃಪ-ಪರೀಕ್ಷಿದ್ರಾಯನೇ! ಭೀಷ್ಮಕನು, ಪಿತೃದೇವಾನ್-ನಾಂದೀದೇವತೆಗಳನ್ನು, ಸಮಭ್ಯರ್ಚ್ಯ-ಚನ್ನಾಗಿಪೂಜಿಸಿ, ವಿಪ್ರಾಂಶ್ಚ-ಬ್ರಾಹ್ಮಣರನ್ನೂ, ವಿಧಿವತ್-ಯಥಾಶಾಸ್ತ್ರವಾಗಿ, ಭೋಜಯಿತ್ವಾ-ಊಟಮಾಡಿಸಿ, ಯಥಾನ್ಯಾಯಂ-ಶಾಸ್ತ್ರನ್ಯಾಯವನ್ನತಿಕ್ರಮಿಸದೆ, ಮಂಗಳಂ-ಪುಣ್ಯಾಹಸ್ವಸ್ತಿವಾಚನವನ್ನು, ವಾಚಯಾಮಾಸ-ಬ್ರಾಹ್ಮಣರಿಂದ ಹೇಳಿಸಿದನು ॥೧೦॥ ಸುಸ್ನಾತಾಂ-ಮಂಗಳಸ್ನಾನವಂ ಗೆಯ್ದು, ಸುದತೀಂ-ಶುಭ್ರವಾದ ಹಲ್ಲುಗಳುಳ್ಳ, ಅಹತಾಂಶುಕ

---

ರುಕನು ಸೈನ್ಯ ಸುಗ್ರೀವ ಮೇಘಪುಷ್ಪ ಬಲಾಹಕಂಗಳೆಂಬ ನಾಲ್ಕುಅಶ್ವಂಗಳಂ ರಥಕ್ಕೆ ಕಟ್ಟಿ ರಥವಂ ಸಿದ್ಧವಂಮಾಡಿ ಕೈಮುಗಿದುಕೊಂಡು ನಿಂತನು ॥೫॥ ಅನಂತರದಲ್ಲಿ ಶ್ರೀಕೃಷ್ಣನು ರಥವನ್ನೇರಿ ಬ್ರಾಹ್ಮಣನಂ ಕುಳ್ಳಿರಿಸಿಕೊಂಡು ವೇಗಶಾಲಿಗಳಾದ ಅಶ್ವಂಗಳಿಂದ ಒಂದುದಿವಸಕ್ಕೆ ಆನರ್ತದೇಶವಂದಾಂಟಿ ಮರುದಿವಸದಲ್ಲಿ ವಿದರ್ಭದೇಶವನ್ನು ಹೊಕ್ಕನು ॥೬॥ ಕುಂಡಿನ ಪುರಾಧಿಪತಿಯಾದ ಭೀಷ್ಮಕನು ಪುತ್ರಪ್ರೇಮ ಪರವಶನಾಗಿ ರುಕ್ಮಿಯೆಂಬ ಜ್ಯೇಷ್ಠಪುತ್ರನ ಚಿತ್ತಾನುಸಾರದಿಂದ ರುಕ್ಮಿಣಿಯಂ ಶಿಶುಪಾಲನಿಗೆ ಕೊಡಲೋಸುಗ ನಿಶ್ಚಯಮಂ ಮಾಡಿಕೊಂಡು ಚಪ್ಪರ ಮೇಲುಕಟ್ಟುಗಳು ದೇವತಾ ಪ್ರಾರ್ಥನೆಗಳು ಬ್ರಾಹ್ಮಣ ಸಂತರ್ಪಣೆಗಳು ಮುಂತಾದ ಶುಭಕಾರ್ಯಂಗಳಂ ಮಾಡಿಸಿದನು ॥೭॥ ಪುರದಲ್ಲಿ ರಾಜಬೀದಿಗಳಂ ಗುಡಿಸಿ ಗಂಧೋದಕಂಗಳಿಂ ಸೇಚನವಂಮಾಡಿ ಚಿತ್ರಧ್ವಜಪತಾಕೆಗಳಿಂದ ಅಲಂಕರಿಸಿ ತೋರಣಗಳಂ ಕಟ್ಟಿಸಿ ॥೮॥ ಸಮಸ್ತ ಗೃಹಗಳಲ್ಲಿಯೂ ಅಗರುಧೂಪಗಳಿಂದ ವಾಸನೆಯಂಕಟ್ಟಿಸಿ ದಿವ್ಯವಸ್ತ್ರಭೂಷಣ ಗಂಧಮಾಲ್ಯಾದಿಗಳಿಂದ ಅಲಂಕೃತರಾದ ಸ್ತ್ರೀಪುರುಷರಿಂದ ಯುಕ್ತವಾಗಿರ್ಪ ಆ ಪುರವಂ ಪ್ರವೇಶಿಸುವಂತೆ ಮಾಡಿಸಿದನು ॥೯॥ ಅನಂತರದಲ್ಲಿ ಪಿತೃಗಳಂ ದೇವತೆಗಳಂ ಪೂಜಿಸಿ ಯಥಾಶಾಸ್ತ್ರವಾಗಿ ಬ್ರಾಹ್ಮಣಸಮಾರಾಧನೆಯಂ ಮಾಡಿಸಿ ಸ್ವಸ್ತಿವಾಚನವಂ ಮಾಡಿಸಿದನು ॥೧೦॥

ಕಯೆಯುಗ್ಮೇನಭೂಷಿತಾಂಭೂಷಣೋತ್ತಮೈಃ ॥೧೧॥ ಚಕ್ರುಸ್ಸಾಮರ್ಗ್ಯಜುರ್ಮಂತ್ರೈರ್ವಧ್ವಾರಕ್ಷಾಂ ದ್ವಿಜೋತ್ತಮಾಃ । ಪುರೋಹಿತೋಥರ್ವವಿದ್ವೈಜುಹಾವಗ್ರಹಶಾಂತಯೇ ॥೧೨॥ ಹಿರಣ್ಯರೌಪ್ಯವಾಸಾಂಸಿತಿಲಾಂಶ್ಚಗುಡಮಿಶ್ರಿತಾನ್ । ಪ್ರಾದಾದ್ಧೇನೂಶ್ಚವಿಪ್ರೇಭ್ಯೋರಾಜಾವಿಧಿವಿದಾಂವರಃ ॥೧೩॥ ಏವಂ ಚೇದಿಪತೀರಾಜಾದಮಘೋಷಸ್ಸುತಾಯವೈ । ಕಾರಯಾಮಾಸಮಂತ್ರಜ್ಞೈಸ್ಸರ್ವಮಭ್ಯುದಯೋಚಿತಮ್ ॥೧೪॥ ಮದಚ್ಯುದ್ಭಿರ್ಗಜಾನೀಕೈಸ್ಸ್ಯಂದನೈರ್ಹೇಮಮಾಲಿಭಿಃ । ಪತ್ತ್ಯಶ್ವಸ್ಸಂಕುಲೈಸ್ಸೈನ್ಯೈಃ ಪರೀತಃ ಕುಂಡಿನಂಯಯೌ ॥೧೫॥ ತಂವಿದರ್ಭಾಧಿಪಸ್ಸಮ್ಯಕ್ಸಮಭ್ಯೇತ್ಯಾಭಿಪೂಜ್ಯಚ । ನಿವೆ

---

ಯುಗ್ಮೇನ-ಅಖಂಡವಾದ ೨ ಸಂಕಲಿಕೆವಸ್ತ್ರಗಳಿಂದಲೂ, ಭೂಷಣೋತ್ತಮೈಃ-ಆಭರಣಗಳಲ್ಲಿಶ್ರೇಷ್ಠವಾದವುಗಳಿಂದಲೂ ಭೂಷಿತಾಂ-ಅಲಂಕರಿಸಲ್ಪಟ್ಟ, ಕೃತಕೌತುಕಮಂಗಳಾಂ-ಮಾಡಿಸಲ್ಪಟ್ಟ ಕಂಕಣದ ಶುಭವುಳ್ಳ, ಕನ್ಯಾಂ-ಮದವಣಗಿತಿಯಂ ಕುರಿತು, (ಮಂಗಳವಾಚನವಂಗಯಿಸಿದನು) ॥೧೧॥ ದ್ವಿಜೋತ್ತಮಾಃ-ಬ್ರಾಹ್ಮಣರಲ್ಲಿಶ್ರೇಷ್ಠರು, ಸಾಮರ್ಗ್ಯಜುರ್ಮಂತ್ರೈಃ-ಸಾಮವೇದ ಋಗ್ವೇದ ಯಜುರ್ವೇದ ವಾಕ್ಯಗಳಿಂದ, ವಧ್ವಾಃ-ಮದುವೆಯಾಗತಕ್ಕ ಹೆಣ್ಣಿಗೆ, ರಕ್ಷಾಂ-ಕ್ಷೇಮಕರವಾದ ಕಂಕಣವನ್ನು, ಚಕ್ರುಃ-ಕಟ್ಟಿದರು. ಅಥರ್ವವಿತ್-ಅಥರ್ವಣವೇದವಂಬಲ್ಲ, ಪುರೋಹಿತಃ-ಯಾಜಕನಾದ ಆಚಾರ್ಯನು, ವೈ-ಪ್ರಸಿದ್ಧವಾಗಿ, ಗ್ರಹಶಾಂತಯೇ-ಕ್ರೂರಗ್ರಹಗಳಿಗೆ ಸೌಮ್ಯತೆಯುಂಟಾಗಲೋಸುಗ, ಜುಹಾವ-ಗ್ರಹಯಜ್ಞವೆಂಬ ಹೋಮವಂ ಮಾಡಿದನು ॥೧೨॥ ವಿಧಿವಿದಾಂ-ಮಾಡತಕ್ಕವಿಧಿಯಂ ಬಲ್ಲವರೊಳಗೆ, ವರಃ-ಶ್ರೇಷ್ಠನಾದ, ರಾಜಾ-ಭೀಷ್ಮಕನು, ವಿಪ್ರೇಭ್ಯಃ-ಬ್ರಾಹ್ಮಣರಿಗೆ, ಹಿರಣ್ಯರೌಪ್ಯವಾಸಾಂಸಿ-ಭಂಗಾರವನ್ನೂ, ಬೆಳ್ಳಿಯನ್ನೂ, ವಸ್ತ್ರಗಳನ್ನೂ, ಗುಡಮಿಶ್ರಿತಾನ್-ಬೆಲ್ಲದಿಂ ಬೆರಸಲ್ಪಟ್ಟ, ತಿಲಾಂಶ್ಚ-ಎಳ್ಳಿನ ಚಿಗುಳಿಗಳನ್ನೂ, ಧೇನೂಶ್ಚ-ಹಾಲಂಕರೆಯುವಾಕಳುಗಳನ್ನೂ, ಪ್ರಾದಾತ್-ಅಧಿಕವಾಗಿ ದಾನವಂಗೆಯ್ದನು ॥೧೩॥ ಏವಂ-ಹೀಗೆ, ಚೇದಿಪತಿಃ-ಚೇದಿದೇಶಕ್ಕೊಡೆಯನಾದ, ದಮಘೋಷೋರಾಜಾ-ದಮಘೋಷರಾಯನೂಕೂಡ, ಸುತಾಯ-ತನ್ನ ಮಗನಾದ ಶಿಶುಪಾಲಂಗೆ, ಮಂತ್ರಜ್ಞೈಃ-ವೇದಮಂತ್ರಗಳಂ ಬಲ್ಲವರಾದ, ಬ್ರಾಹ್ಮಣರಿಂದ, ಅಭ್ಯುದಯೋಚಿತಂ-ಕಲ್ಯಾಣಕ್ಕೆತಕ್ಕ, ಸರ್ವಂ-ಕ್ರಿಯಾಕಲಾಪವೆಲ್ಲವನ್ನೂ. ಕಾರಯಾಮಾಸ-ಮಾಡಿಸಿದನು ॥೧೪॥ (ಹೀಗೆ ಸ್ನಾತಕವ್ರತಾದಿಗಳಂ ತಮ್ಮ ನಗರದಲ್ಲಿ ಮಾಡಿಕೊಂಡು,) ಮದಚ್ಯುದ್ಭಿಃ-ಸೊಕ್ಕುಜಮರ್ಗಳಂ ಜಾರಿಸುತ್ತಿರುವ, ಗಜಾನೀಕೈಃ-ಆನೆಗಳ ದಂಡುಗಳೊಡನೆಯೂ, ಹೇಮಮಾಲಿಭಿಃ-ಚಿನ್ನದ ಸರಂಗಳುಳ್ಳ, ಸ್ಯಂದನೈಃ-ತೇರುಗಳೊಡನೆಯೂ, ಪತ್ತ್ಯಶ್ವೈಃ-ಕಾಲಾಳುಗಳಿಂದಲೂ, ಕುದುರೆಗಳಿಂದಲೂ, ಸಂಕುಲೈಃಸೈನ್ಯೈಃ-ಸಂಮರ್ದವಾಗಿ ಬರುವ ದಂಡುಗಳಿಂದಲೂ, ಪರೀತಃ-ಸುತ್ತಲೂ ಬಳಸಲ್ಪಟ್ಟವನಾಗಿ, ಕುಂಡಿನನಗರವಂ, ಯಯೌ-ಸೇರಿದನು ॥೧೫॥ ವಿದರ್ಭಾಧಿಪಃ-ವಿದರ್ಭದೇಶಕ್ಕೊಡೆಯನು, ತಂ-ಆ ಚೇದಿರಾಯನನ್ನು, ಸಮ್ಯಕ್-ಚನ್ನಾಗಿ, ಸಮಭ್ಯೇತ್ಯ-ಇದಿರ್ಗೊಂಡುಕರೆತಂದು, ಅಭಿಪೂಜ್ಯಚ-ಚನ್ನಾಗಿ ಸನ್ಮಾನಿಸಿ, ಮು

---

ರಮ್ಯವಾದ ದಂತಪಙ್ಕ್ತಿಯುಳ್ಳ ಪುತ್ರಿಯಾದ ರುಕ್ಮಿಣಿಗೆ ಮಂಗಳಸ್ನಾನವಂಮಾಡಿಸಿ ನೂತನವಸ್ತ್ರಂಗಳ ನುಡಿಸಿ ದಿವ್ಯಾಭರಣಂಗಳಂ ತೊಡಿಸಿ ಕಂಕಣ ಬಂಧವಂ ಮಾಡಿಸಿದನು ॥೧೧॥ ಮಂತ್ರಜ್ಞರಾದ ಬ್ರಾಹ್ಮಣರಿಂ ಋಗ್ಯಜುಸ್ಸಾಮ ಮಂತ್ರಗಳಿಂದ ರಕ್ಷಾಬಂಧವಂ ಮಾಡಿಸಿದನು. ಪುರೋಹಿತನು ಮಂತ್ರಜ್ಞರಾದ ಬ್ರಾಹ್ಮಣರೊಡನೆ ಸಹಿತನಾಗಿ ಗ್ರಹಯಜ್ಞವಂ ಮಾಡಿದನು ॥೧೨॥ ವಿಧಾನಜ್ಞರೊಳಗೆ ಶ್ರೇಷ್ಠನಾದ ಭೀಷ್ಮಕರಾಯನು ಗೋಭೂತಿಲ ಹಿರಣ್ಯಾಜ್ಯ ವಸ್ತ್ರಧಾನ್ಯಗುಡ ರಜತಲವಣಂಗಳೆಂಬ ದಶದಾನಂಗಳಂ ಮಾಡಿದನು ॥೧೩॥ ಅದೇರಿತಿಯಲ್ಲಿ ಚೇದಿದೇಶದ ಪತಿಯಾದ ದಮಘೋಷನುಪುತ್ರನಾದ ಶಿಶುಪಾಲನಿಗಾಗಿ ಮಂತ್ರಜ್ಞರಾದ ಬ್ರಾಹ್ಮಣರಿಂದ ಆಭ್ಯುದಯಿಕವಾದ ಶುಭಕಾರ್ಯವ ಮಾಡಿಸಿದನು ॥೧೪॥ ಅನಂತರದಲ್ಲಿ ಶಿಶುಪಾಲನು ಮದೋದಕಂಸ್ರವಿಸುತಲಿರುವ ಗಜಸಮೂಹಂಗಳೊಡನೆ, ಸುವರ್ಣ ಭೂಷಿತಂಗಳಾದ ರಥಸಮೂಹಂಗಳೊಡನೆಯೂ, ಪಾದಚಾರಿಗಳೊಡನೆಯೂ, ಸಮೇತನಾಗಿ ಮಹಾಸೇನಾ ಪರಿವೃತ್ತನಾಗಿ ಕುಂಡಿನ ಪುರಕ್ಕೆ ಬಂದನು ॥೧೫॥ ವಿದರ್ಭಪತಿಯಾದ ಭೀಷ್ಮಕನು ಶಿಶುಪಾಲನಂ ಇದಿರ್ಗೊಂಡು ಕರೆತಂದು ಪೂಜಿಸಿ ಬೇರೆಬಿಡದಿಯಂ ಮಾಡಿಸಿ ಅದರಲ್ಲಿಳಿಸಿದನು ॥೧೬॥ ಸಾಲ್ವನು ಜರಾಸಂಧನು ದಂತವಕ್ತ್ರನು ವಿದೂರಥನು ಪೌಂಡ್ರಕನು ಮೊದಲಾದ ಸಹಸ್ರ

ಶಯಾಮಾಸಮುದಾಕಲ್ಪಿತಾನ್ಯನಿವೇಶನೇ ।೧೬। ತತ್ರಸಾಲ್ವೋಜರಾಸಂಧೋದಂತವಕ್ತ್ರೋವಿದೂರಥಃ ।
ಆಜಗ್ಮುಶ್ಚೈದ್ಯಪಕ್ಷೀಯಾಃಪೌಂಡ್ರಕಾದ್ಯಾಸ್ಸಹಸ್ರಶಃ ।೧೭। ಕೃಷ್ಣರಾಮದ್ವಿಷೋಯತ್ತಾಃಕ
ನ್ಯಾಂಚೈದ್ಯಾಯಸಾಧಿತುಮ್ । ಯದ್ಯಾಗತ್ಯಹರೇತ್ಕೃಷ್ಣೋರಾಮಾದ್ಯೈರ್ಯದುಭಿರ್ವೃತಃ । ಯೋ
ತ್ಸ್ಯಾಮಸ್ಸಹಿತಾಸ್ತೇನಇತಿನಿಶ್ಚಿತಮಾನಸಾಃ ।೧೮। ಶ್ರುತ್ವೈತದ್ಭಗವಾನ್ರಾಮೋವಿಪಕ್ಷೀಯನೃ
ಪೋದ್ಯಮಮ್ । ಕೃಷ್ಣಂಚೈಕಂಗತಂಹರ್ತುಂಕನ್ಯಾಂಕಲಹಶಂಕಿತಃ ।೧೯। ಬಲೇನಮಹತಾಸಾರ್ಧಂ
ಭ್ರಾತೃಸ್ನೇಹಪರಿಪ್ಲುತಃ । ತ್ವರಿತಃಕುಂಡಿನಂಪ್ರಾಯಾದ್ಗಜಾಶ್ವರಥಪತ್ತಿಭಿಃ ।೨೦। ಭೀಷ್ಮಕನ್ಯಾ
ವರಾರೋಹಾಕಾಂಕ್ಷಂತ್ಯಾಗಮನಂಹರೇಃ । ಪ್ರತ್ಯಾಪತ್ತಿಮಪಶ್ಯಂತೀದ್ವಿಜಸ್ಯಾಚಿಂತಯತ್ತದಾ ।೨೧।

---

ದಾ-ಸಂತೋಷದಿಂದ, ಕಲ್ಪಿತಾನ್ಯನಿವೇಶನೇ-ಬಿಡದಿಗೆತಕ್ಕಂತೆ ಏರ್ಪಡಿಸಲ್ಪಟ್ಟ ಬೇರೆಮನೆಯಲ್ಲಿ, ನಿವೇಶಯಾಮಾಸ-ಬಿಡಾರ ಮಾಡಿಸಿದನು ॥೧೬॥ ತತ್ರ-ಆ ಕುಂಡಿನನಗರಕ್ಕೆ, ಸಾಲ್ವಃ-ಸಾಲ್ವನೆಂಬ ದೈತ್ಯನೂ, ಜರಾಸಂಧಃ-ಮಗಧರಾಯನೂ, ದಂತವಕ್ತ್ರನೆಂಬವನೂ, ವಿದೂರಥನೆಂಬವನೂ, ಪೌಂಡ್ರಕಾದ್ಯಾಃ-ಪೌಂಡ್ರಕವಾಸುದೇವನೆಂಬವನೇ ಮೊದಲಾದ, ಚೈದ್ಯಪಕ್ಷೀಯಾಃ-ಶಿಶುಪಾಲನಕಡೆಯವರು, ಸಹಸ್ರಶಃ-ಸಾವಿರಾರುಬಗೆಯಾಗಿ, ಆಜಗ್ಮುಃ-ಬಂದರು ॥೧೭॥ ಕೃಷ್ಣರಾಮದ್ವಿಷಃ-ಕೃಷ್ಣನನ್ನೂ ರಾಮನನ್ನೂ ವಿರೋಧಿಸುವರಾದ್ದರಿಂದಲೇ, ಯತ್ತಾಃ-ಪ್ರಯತ್ನಮುಳ್ಳವರಾಗಿ, ಕನ್ಯಾಂ-ಮದಣವತಿಯನ್ನು, ಚೈದ್ಯಾಯ-ಶಿಶುಪಾಲನಿಗೋಸುಗ, ಸಾಧಿತುಂ-ಸಂಪಾದಿಸಿ ಕೊಡುವುದಕ್ಕೆ, ರಾಮಾದ್ಯೈಃ--ಬಲರಾಮನುಮೊದಲಾದ, ಯದುಭಿಃ-ಯಾದವರಿಂದ, ವೃತಃ-ಬಳಸಲ್ಪಟ್ಟವನಾದ, ಕೃಷ್ಣಃ-ವಾಸುದೇವನು, ಆಗತ್ಯ-ಬಂದು, ಹರೇದ್ಯದಿ-ಕನ್ನೆಯನ್ನು ಅಪಹರಿಸುವನಾದರೇ, ಸಹಿತಾಃ-ನಾವೆಲ್ಲರೂ ಸೇರಿದವರಾಗಿ, ತೇನ-ಆಕೃಷ್ಣನೊಡನೆ, ಯೋತ್ಸ್ಯಾಮಇತಿ-ಕಾಳಗವಂ ಮಾಡೋಣವೆಂದು, ನಿಶ್ಚಿತಮಾನಸಾಃ-ನಿರ್ಣಯಿಸಲ್ಪಟ್ಟ ಮನಸ್ಸುಳ್ಳವರಾದರು ॥೧೮॥ ಭಗವಾನ್-ಷಾಡ್ಗುಣ್ಯಪೂರ್ಣನಾದ, ರಾಮಃ-ಬಲದೇವನು, ಏತತ್-ಈ, ವಿಪಕ್ಷೀಯನೃಪೋದ್ಯಮಂ-ವಿರೋಧಿಗಳಕಡೆಯವರಾದ ಅರಸುಗಳ ಪ್ರಯತ್ನವನ್ನು, ಶ್ರುತ್ವಾ--ಕೇಳಿ, ಕನ್ಯಾಂ-ಮದಣವತಿಯನ್ನು, ಹರ್ತುಂ-ಅಪಹರಿಸಿಕೊಂಡು ಬರುವುದಕ್ಕೆ, ಏಕಂಗತಂ-ಒಬ್ಬನೇಹೋಗಿರುವ, ಕೃಷ್ಣಂಚ-ಕೃಷ್ಣನನ್ನೂ, ಶ್ರುತ್ವಾ-ಕೇಳಿ, ಕಲಹಶಂಕಿತಃ-ಜಗಳವಾದೀತೆಂಬ ಸಂದೇಹವುಳ್ಳವನಾದ್ದರಿಂದಲೇ, ॥೧೯॥ ಭ್ರಾತೃಸ್ನೇಹಪರಿಪ್ಲುತಃ-ತಮ್ಮನಾದ ಕೃಷ್ಣನಲ್ಲಿ ಅನುರಾಗದಿಂದ ತೊಯ್ದವನಾಗಿ, ತ್ವರಿತಃ-ವೇಗವುಳ್ಳವನಾಗಿ, ಗಜಾಶ್ವರಥಪತ್ತಿಭಿಃ-ಆನೆ ಕುದುರೆ ತೇರು ಕಾಲಾಳುಗಳೆಂಬ ಚತುರಂಗಗಳಿಂದ, ಮಹತಾ-ದೊಡ್ಡದಾದ, ಬಲೇನಸಾರ್ಧಂ--ದಂಡಿನೊಡನೆಯೇ, ಕುಂಡಿನಂ-ಗುಂಟೂರನ್ನು, ಪ್ರಾಯಾತ್-ಸೇರಿದನು ॥೨೦॥ ವರಾರೋಹಾ-ಶ್ರೇಷ್ಠವಾದ ಆಸನವುಳ್ಳ, ಭೀಷ್ಮಕನ್ಯಾ-ರುಕ್ಮಿಣಿಯು (ಬೆಳಗಿನಜಾವದ ವರಾರೋಹಾಶಬ್ದದಿಂದ ಗಮ್ಯವಾಗುತ್ತೆ) ಹರೇಃ-ಕೃಷ್ಣನ, ಆಗಮನಂ-ಬರುವಿಕೆಯನ್ನು, ಕಾಂಕ್ಷಂತೀ-ಬಯಸುವವಳಾಗಿ, ದ್ವಿಜಸ್ಯ-ಸಂದೇಶಹಾರಿಯಾದ ಬ್ರಾಹ್ಮಣನ, ಪ್ರತ್ಯಾಪತ್ತಿಂ-ಮರಳಿ ಬರುವಿಕೆಯನ್ನು, ಅಪಶ್ಯಂತೀ-ಕಾಣದೇಯಿರುವವಳಾಗಿ, ತದಾ-ಆಗ, ಅಚಿಂತಯತ್--ಯೋಚಿಸಿದಳು ॥೨೧॥ ಅಲ್ಪರಾಧಸಃ-ಮಂದಭಾಗ್ಯಳಾದ,

---

ಸಂಖ್ಯಾಕರಾದ ಅರಸುಗಳು ಶಿಶುಪಾಲನಿಗೆ ಇದಿರಾಗಿಬಂದರು ।೧೭। ಶ್ರೀಕೃಷ್ಣ ರಾಮದ್ವೇಷಿಗಳಾದ ಈಜರಾಸಂಧಾದಿಗಳು ಯಾದವಬಲಸಮೇತರಾಗಿ ರಾಮಕೃಷ್ಣರುಬಂದು ರುಕ್ಮಿಣಿಯಂ ಅಪಹರಿಸಿಕೊಂಡು ಹೋಗುವರೆಂದು ಶಂಕಿತರಾಗಿ- ಶಿಶುಪಾಲನಿಗೆ ರುಕ್ಮಿಣಿಯಂ ಸಾಧಿಸಿಕೊಡಲೋಸುಗ ಬಂದವರಾದರು ।೧೮। ಆಗ ಭಗವಂತನಾದ ಬಲರಾಮನು ಭ್ರಾತೃವಾತ್ಸಲ್ಯದಿಂದ ಪರವಶನಾಗಿ ಏಕರಥದಿಂದ ಹೋಗಿರುವ ಶ್ರೀಕೃಷ್ಣನಂ ಚಿಂತಿಸಿ ಶತ್ರುಗಳಾದ ಜರಾಸಂಧಾದಿಗಳ ಪ್ರಯತ್ನವನ್ನೂ ಕೇಳಿ ಮಹಾ ಕಲಹವುನಡೆದೀತೆಂದು ತಿಳಿದು ।೧೯। ಹಸ್ತ್ಯಶ್ವರಥಪದಾತಿಗಳೆಂಬ ಚತುರಂಗ ಯುಕ್ತವಾದ ಮಹಾಸೈನ್ಯವು ಕರಕೊಂಡು ಅತಿತ್ವರೆಯಿಂದ ಬಂದನು ।೨೦। ಹೀಗಿರುವಲ್ಲಿ ಉದಯಕ್ಕಿಂತಲೂ ಮುಂಚೆಯೇ ಎದ್ದು ರುಕ್ಮಿಣಿಯು ಶ್ರೀಕೃಷ್ಣಾಗಮನವನ್ನೇ ನಿರೀಕ್ಷಿಸುತ ಬ್ರಾಹ್ಮಣನೂ ಬರಲಿಲ್ಲ, ಸಮಾಚಾರವೂ ತಿಳಿಯಲಿಲ್ಲವೆಂದು ಚಿಂತಿಸಿದಳು ।೨೧। ರಾತ್ರಿ ಸ್ವಲ್ಪವೇ ಉಳಿದಿದೆ, ಭಾಗ್ಯಹೀನಳಾದ ನನಗೆ ವಿವಾಹಯತ್ನ ವುಂಟಾಗಿದೆ, ಅರವಿಂದಾಕ್ಷನಾದ ಕೃಷ್ಣನಾದರೋ ಬರ

ಅಹೋತ್ರಿಯಾಮಾಂತರಿತಉದ್ವಾಹೋಮೇಲ್ಪರಾಧಸಃ। ನಾಗಚ್ಛತ್ಯರವಿಂದಾಕ್ಷೋನಾಹಂವೇದ್ಮ್ಯತ್ರಕಾರಣಮ್ ॥೨೨॥ ಸೋಪಿನಾವರ್ತತೆದ್ಯಾಪಿಮತ್ಸಂದೇಶಹರೋದ್ವಿಜಃ । ಅಪಿಮಯ್ಯನವದ್ಯಾತ್ಮಾದೃಷ್ಟ್ವಾಕಿಂಚಿಜ್ಜುಗುಪ್ಸಿತಮ್। ಮತ್ಪಾಣಿಗ್ರಹಣೇನೂನಂನಾಯಾತಿಹಿಕೃತೋದ್ಯಮಃ॥೨೩॥ ದುರ್ಭಗಾಯಾನಮೇದಾತಾನಾನುಕೂಲೋಮಹೇಶ್ವರಃ । ದೇವೀವಾವಿಮುಖೀಗೌರೀರುದ್ರಾಣೀಗಿರಿಜಾಸತೀ ॥೨೪॥ ಏವಂಚಿಂತಯತೀಬಾಲಾಗೋವಿಂದಹೃತಮಾನಸಾ । ನ್ಯಮೀಲಯತಕಾಲಜ್ಞಾನೇತ್ರೇಅಶ್ರುಕಲಾಕುಲೇ॥೨೫॥ ಏವಂವಧ್ವಾಃಪ್ರತೀಕ್ಷಂತ್ಯಾಃಗೋವಿಂದಾಗಮನಂನೃಪ । ವಾಮಊರುರ್ಭುಜೋನೇತ್ರಮಸ್ಫುರತ್ಪ್ರಿಯಶಂಸಿನಃ ॥೨೬॥ ಅಥಕೃಷ್ಣವಿನಿರ್ದಿಷ್ಟಸ್ಸಏವದ್ವಿಜಸತ್ತಮಃ । ಅಂತಃಪುರಚರೀಂದೆ

---

ಮೇ-ನನ್ನ, ಉದ್ವಾಹಃ-ಮದುವೆಯು, ತ್ರಿಯಾಮಾಂತರಿತಃ-ಮೂರುರಾತುಗಳ ಅವಕಾಶವುಳ್ಳದ್ದಾಗಿದೆ, ಅಹೋ-ಆಶ್ಚರ್ಯವು ಅರವಿಂದಾಕ್ಷಃ-ಕಮಲಲೋಚನನಾದ ಕೃಷ್ಣನು, ನಾಗಚ್ಛತಿ-ಬರುವುದಿಲ್ಲ. ಅತ್ರ-ಬಾರದೆಯಿರುವ ವಿಷಯದಲ್ಲಿ, ಕಾರಣಂ-ನಿಮಿತ್ತವನ್ನು, ಅಹಂ-ನಾನು, ನವೇದ್ಮಿ-ಅರಿಯದೆಇರುವೆನು ॥೨೨॥ ಸಃ-ಆ, ಮತ್ಸಂದೇಶಹರಃ-ನನ್ನ ಸುದ್ದಿಯಂ ತೆಗೆದುಕೊಂಡುಹೋಗಿರುವ, ದ್ವಿಜೋಪಿ-ಬ್ರಾಹ್ಮಣನೂಕೂಡ, ಅದ್ಯಾಪಿ-ಈಗಲೂ, ನಾವರ್ತತೇ-ಹಿಂತಿರುಗಿಬಾರದೆ ಯಿರುವನು. ಅನವದ್ಯಾತ್ಮಾ-ನಿರ್ದುಷ್ಟಮೂರ್ತಿಯಾದ, ಕೃಷ್ಣನು, ಮತ್ಪಾಣಿಗ್ರಹಣೇ-ನನ್ನ ಮದಿವೆಯವಿಷಯದಲ್ಲಿ, ಕಿಂಚಿತ್‌ಜುಗುಪ್ಸಿತಂ-ಕೊಂಚ ಯೇನೋ ಅಸಹ್ಯವನ್ನು, ದೃಷ್ಟ್ವಾ-ತಿಳಿದು, ಕೃತೋದ್ಯಮೋಪಿ-ಮಾಡಲ್ಪಟ್ಟ ಪ್ರಯತ್ನವುಳ್ಳವನಾದರೂ, ನಾಯಾತಿ-ಬಾರದೆ ಯಿರುವನು, ಹಿ-ಎಂದು, ನೂನಂ-ಊಹಿಸುವೆನು ॥೨೩॥ ದುರ್ಭಗಾಯಾಃ-ಮಂದಭಾಗ್ಯಳಾದ, ಮೇ-ನನಗೆ, ದಾತಾ-ಕೃಷ್ಣನಂ ತಂದುಕೊಡುವ ಬ್ರಾಹ್ಮಣನು, ನ-ಬರಲಿಲ್ಲವು. ಮಹೇಶ್ವರಃ-ದೊಡ್ಡ ದೇವರಾದ ಶಿವನು. ಅನುಕೂಲೋನ-ಸಹಾಯನಾಗಲಿಲ್ಲವು. ರುದ್ರಾಣೀ-ಶಿವಪತ್ನಿಯಾದ. ಗಿರಿಜಾ-ಹೈಮವತಿಯಾದ, ಸತೀ-ಪತಿವ್ರತೆಯಾದ, ಗೌರೀದೇವೀವಾ-ಶುಭ್ರವಾದ ಶಿವಶಕ್ತಿಯೂ, ವಿಮುಖೀ-ಪ್ರಸನ್ನಳಾಗಲಿಲ್ಲವು. ॥೨೪॥ ಏವಂ-ಹೀಗೆ, ಚಿಂತಯತೀ-ಆಲೋಚಿಸುತ್ತಿರುವ, ಬಾಲಾ-ಕನ್ಯೆಯಾದ ರುಕ್ಮಿಣಿಯು, ಕಾಲಜ್ಞಾ-ಹೊತ್ತಂ ಬಲ್ಲವಳಾದ್ದರಿಂದ, ಗೋವಿಂದಹೃತಮಾನಸಾ-ಕೃಷ್ಣನಿಂದ ಪರಿಹರಿಸಲ್ಪಟ್ಟಮನಸ್ಸುಳ್ಳವಳಾಗಿ, ಅಶ್ರುಕಲಾಕುಲೆ-ಕಣ್ಣೀರಿನ ಲೇಶಂಗಳಿಂ ಕದಡಿದ, ನೇತ್ರೇ-ಕಂಗಳನ್ನು, ನಿಮೀಲಯತ-ಮುಚ್ಚಿಕೊಂಡಳು॥೨೫॥ ನೃಪ-ಪರೀಕ್ಷಿದ್ರಾಯನೇ! ಏವಂ-ಹೀಗೆ, ಗೋವಿಂದಾಗಮನಂ-ಕೃಷ್ಣನಬರುವಿಕೆಯನ್ನು, ಪ್ರತೀಕ್ಷಂತ್ಯಾಃ-ಇದಿರುನೋಡುತ್ತಿರುವ, ವಧ್ವಾಃ-ಮದಣವತಿಯಾದ ರುಕ್ಮಿಣಿಯ, ವಾಮಊರುಃ-ಎಡತೊಡೆಯೂ, ವಾಮೋಭುಜಃ-ಎಡತೋಳೂ, ವಾಮಂನೇತ್ರಂ-ಎಡಗಣ್ಣೂ, ಅಸ್ಫುರತ್-ಅದುರಿತು. ಪ್ರಿಯಶಂಸಿನಃ-ಪ್ರಿಯವನ್ನು ಸೂಚಿಸುವ, ಈ ಶಕುನಂಗಳಾದವು ॥೨೬॥ ಅಥ-ಆ ಬಳಿಕ, ಕೃಷ್ಣವಿನಿರ್ದಿಷ್ಟಃ-ಕೃಷ್ಣನಿಂದ ಕಳುಹಿಸಲ್ಪಟ್ಟ, ಸದ್ವಿಜಸತ್ತಮಏವ-ಆಬ್ರಾಹ್ಮಣಶ್ರೇಷ್ಠನೇ, ಅಂತಃಪುರಚರೀಂ-ರಾಣಿವಾಸದಲ್ಲಿತಿರುಗುವ, ರಾಜಪುತ್ರೀಂ-ದೊರೆಯಮಗಳಾದ, ದೇವೀಂ-ರುಕ್ಮಿಣಿಯ

---

ಲಿಲ್ಲ, ಏನುನಿಮಿತ್ತವೋ ತಿಳಿಯಲಿಲ್ಲ ॥೨೨॥ ಶ್ರೀಕೃಷ್ಣನ ಸಮೀಪಕ್ಕೆಹೋದ ಬ್ರಾಹ್ಮಣನುಬರಲಿಲ್ಲ, ದೋಷರಹಿತನಾದ ಆಕೃಷ್ಣನು ನನ್ನಲ್ಲಿ ದೋಷವನ್ನೇನಾದರೂ ತಿಳಿದು ನನ್ನ ಪಾಣಿಗ್ರಹಣದಲ್ಲಿ ಪ್ರಯತ್ನವಂ ಮಾಡದೆ ಇಲ್ಲಿಗೆ ಬರುವುದಿಲ್ಲವೋ ಏನೋ? ॥೨೩॥ ಭಾಗ್ಯಹೀನಳಾದ ನನಗೆ ಬ್ರಾಹ್ಮಣನು ಅನುಕೂಲನಾಗಲಿಲ್ಲವೋ ಏನೋ, ಮಹೇಶ್ವರನು ನನಗೆ ಪ್ರಸನ್ನನಾಗಲಿಲ್ಲವೋ ಏನು? ರುದ್ರಾಣಿಯಾದ ಜಗದೀಶ್ವರಿಯಾದ ಗೌರೀದೇವಿಯು ನನ್ನಲ್ಲಿ ವಿಮುಖಳಾದಳೇನೋ ॥೨೪॥ ಎಂದುಚಿಂತಿಸುತ ಶ್ರೀಕೃಷ್ಣನಲ್ಲಿಯೇ ಆಸಕ್ತವಾದ ಚಿತ್ತವುಳ್ಳವಳಾಗಿ ರುಕ್ಮಿಣಿಯು ಕೃಷ್ಣಾಗಮನಕಾಲವನ್ನೇ ನಿರೀಕ್ಷಿಸಿ ಬಾಷ್ಪಪೂರ್ಣಂಗಳಾದ ನೇತ್ರಂಗಳಂ ಮುಚ್ಚಿಕೊಂಡಳು ॥೨೫॥ ಎಲೈಅರಸೇ! ಈರೀತಿಯಲ್ಲಿ ಶ್ರೀಕೃಷ್ಣಾಗಮನವನ್ನೇ ನಿರೀಕ್ಷಿಸುತ ರುಕ್ಮಿಣಿಯು ನಿದ್ರೆಯಿಲ್ಲವೆ ವ್ಯಸನ ಪಡುತಲಿರುವಾಗ ಆರುಕ್ಮಿಣಿಯ ಎಡದತೊಡೆಯು ಎಡದಭುಜವೂ ವಾಮನೇತ್ರವೂ ಈ ಮೂರು ಅಂಗಂಗಳೂ ಹಾರಿದವು ॥೨೬॥ ಎಲೈಅರಸೇ: ಸ್ತ್ರೀಯರುಗಳಿಗೆ ಎಡದ ಭಾಗದಲ್ಲಿಹಾರಿದರೆ ಶುಭವಾಗುವುದು. ಅನುತರದಲ್ಲಿ ಶ್ರೀಕೃಷ್ಣನಿಂದ ಕಳುಹಿಸಲ್ಪಟ್ಟ ಬ್ರಾಹ್ಮಣನು ಅಂತಃಪುರದಲ್ಲಿ ಸಂಚರಿಸುತಲಿ

ರ್ವೀಂ ರಾಜಪುತ್ರೀಂ ದದರ್ಶ ಹ ॥೨೭॥ ಸಾ ತಂ ಪ್ರಹೃಷ್ಟವದನಮವ್ಯಗ್ರಾತ್ಮಗತಿಂ ಸತೀ । ಆಲಕ್ಷ್ಯ
ಲಕ್ಷಣಾಭಿಜ್ಞಾ ಸಮಪೃಚ್ಛಚ್ಛುಚಿಸ್ಮಿತಾ ॥೨೮॥ ತಸ್ಯಾ ಆವೇದಯತ್ಪ್ರಾಪ್ತಂ ಶಶಂಸ ಯದುನಂದನ
ಮ್ । ಉಕ್ತಂ ಚ ಸತ್ಯವಚನಮಾತ್ಮೋಪನಯನಂ ಪ್ರತಿ ॥೨೯॥ ತಮಾಗತಂ ಸಮಾಜ್ಞಾಯ ವೈದರ್ಭೀ
ಹೃಷ್ಟಮಾನಸಾ । ನ ಪಶ್ಯಂತೀ ಬ್ರಾಹ್ಮಣಾಯ ಪ್ರಿಯಮನ್ಯನ್ನನಾಮ ಸಾ ॥೩೦॥ ಪ್ರಾಪ್ತೌ ಶ್ರುತ್ವಾ
ಸ್ವದುಹಿತುರುದ್ವಾಹಪ್ರೇಕ್ಷಣೋತ್ಸುಕೌ । ಅಭ್ಯಯಾತ್ತೂರ್ಯಘೋಷೇಣ ರಾಮಕೃಷ್ಣೌ ಸಮರ್ಹ
ಣೈಃ ॥೩೧॥ ಮಧುಪರ್ಕಮುಪಾನೀಯ ವಾಸಾಂಸಿ ವಿರಜಾಂಸಿ ಸಃ । ಉಪಾಯನಾನ್ಯಭೀಷ್ಟಾನಿ ವಿಧಿವ
ತ್ಸಮಪೂಜಯತ್ ॥೩೨॥ ತಯೋರ್ನಿವೇಶನಂ ಶ್ರೀಮದುಪಕಲ್ಪ್ಯ ಮಹಾಮತಿಃ । ಸಸೈನ್ಯಯೋಃ ಸಾನುಗ

---

ಸ್ನು, ದದರ್ಶ ಹ-ಕಂಡನು ॥೨೭॥ ಸಾ ಸತೀ-ಆ ಪತಿವ್ರತೆಯಾದ ರುಕ್ಮಿಣಿಯು, ಪ್ರಹೃಷ್ಟವದನಂ-ಸಂತೋಷವುಂಟಾದ ಮು
ಖವುಳ್ಳ, ಅವ್ಯಗ್ರಾತ್ಮಗತಿಂ-ಆತುರಗೊಳ್ಳದ ಮನಸ್ಸೂ ನಡಿಕೆಯೂ ಉಳ್ಳ, ತಂ-ಆ ಬ್ರಾಹ್ಮಣನನ್ನು, ಆಲಕ್ಷ್ಯ-ನೋಡಿ, ಲ
ಕ್ಷಣಾಭಿಜ್ಞಾ-ಭಾವಜ್ಞಾಪಕಚಿಹ್ನೆಗಳಂ ಬಲ್ಲವಳಾದ್ದರಿಂದ, ಶುಚಿಸ್ಮಿತಾ-ಶುಭ್ರವಾದ ನಗೆಯುಳ್ಳವಳಾಗಿ, ಸಮಪೃಚ್ಛತ್-ಚ
ನ್ನಾಗಿ ಬೆಸಗೊಂಡಳು ॥೨೮॥ ಯದುನಂದನಂ-ಯಾದವರಂ ಸಂತೋಷಗೊಳಿಸುವವನಾದ ಕೃಷ್ಣನನ್ನು, ಪ್ರಾಪ್ತಂ-ಬಂದಿರು
ವವನನ್ನಾಗಿ, ತಸ್ಯಾಃ-ಆ ರುಕ್ಮಿಣಿಗೆ, ಆವೇದಯತ್-ಚನ್ನಾಗಿ ತಿಳಿಸಿದನು. ಆತ್ಮೋಪನಯನಂ ಪ್ರತಿ-ರುಕ್ಮಿಣಿಯಂ ಕರೆದುಕೊಂ
ಡು ಹೋಗುವದರಂ ಕುರಿತು, ಉಕ್ತಂ-ಕೃಷ್ಣನಿಂದ ಹೇಳಲ್ಪಟ್ಟ, ಸತ್ಯವಚನಂ-ದಿಟವಾದ ಮಾತನ್ನು, ಶಶಂಸ-ಹೇಳಿದ
ನು ॥೨೯॥ ವೈದರ್ಭೀ-ರುಕ್ಮಿಣಿಯು, ತಂ-ಆ ಕೃಷ್ಣನನ್ನು, ಆಗತಂ-ಬರುವವನನ್ನಾಗಿ, ಸಮಾಜ್ಞಾಯ-ಚನ್ನಾಗಿ ತಿಳಿದು
ಹೃಷ್ಟಮಾನಸಾ-ಸಂತಸಗೊಂಡ ಮನಸ್ಸುಳ್ಳವಳಾದ್ದರಿಂದ, ಬ್ರಾಹ್ಮಣಾಯ-ಸಂತೋಷಸುದ್ದಿಯಂ ಪೇಳಿದ ಉಪಕಾರಿಯಾ
ದ ಬ್ರಾಹ್ಮಣಂಗೆ, ಪ್ರಿಯಂ-ಇಷ್ಟವಾದ ವಿಷಯವನ್ನು, ಅನ್ಯತ್-ಇತರವನ್ನು, ನಪಶ್ಯಂತೀ-ಕಾಣದೇ ಇರುವವಳಾಗಿ, ಸಾ-ಆ
ಕೆಯು, ನನಾಮ-ನಮಸ್ಕಾರವನ್ನೇ ಪ್ರತ್ಯುಪಕಾರವನ್ನಾಗಿ ಮಾಡಿದಳು ॥೩೦॥ (ಭೀಷ್ಮಕರಾಯನು) ಸ್ವದುಹಿತುಃ-ತನ್ನ
ಮಗಳ, ಉದ್ವಾಹಪ್ರೇಕ್ಷಣೋತ್ಸುಕೌ-ಮದುವೆಯಂ ನೋಡುವುದರಲ್ಲಿ ಅಪೇಕ್ಷೆಯುಳ್ಳ, ರಾಮಕೃಷ್ಣೌ-ಬಲರಾಮಕೃಷ್ಣರ
ನ್ನು, ಪ್ರಾಪ್ತೌ-ತನ್ನ ನಗರದ ಬಳಿಗೆ ಬಂದವರನ್ನಾಗಿ, ಶ್ರುತ್ವಾ-ಕೇಳಿ, ಸಮರ್ಹಣೈಃ-ಉಪಚಾರಂಗಳಾವಗಿಗಳೊಡನೆ, ತೂ
ರ್ಯಘೋಷೇಣ-ಚರ್ಮವಾದ್ಯಧ್ವನಿಯಿಂದ, ಅಭ್ಯಯಾತ್-ಕರೆತರಲಿದಿರಿಗೆ ಹೋದನು ॥೩೧॥ ಮಧುಪರ್ಕಂ-ಪೂಜೋಪಕರ
ಣನೈವೇದ್ಯವನ್ನೂ, ವಿರಜಾಂಸಿ-ಶುಭ್ರಂಗಳಾದ, ವಾಸಾಂಸಿ-ವಸ್ತ್ರಂಗಳನ್ನೂ, ಅಭೀಷ್ಟಾನಿ-ಪ್ರಿಯಂಗಳಾದ, ಉಪಾಯ
ನಾನಿ-ಕಾಣಿಕೆಗಳನ್ನೂ, ಉಪಾನೀಯ-ಸಂಗಡತೆಗೆಯಿಸಿಕೊಂಡು ಹೋಗಿ, ಸಃ-ಆ ಭೀಷ್ಮಕರಾಯನು, ವಿಧಿವತ್-ಬಂದವರಂ
ಪೂಜಿಸಬೇಕಾದ ಶಾಸ್ತ್ರವಿದ್ದಂತೆ, ಸಮಪೂಜಯತ್-ರಾಮಕೃಷ್ಣರಂ ಚನ್ನಾಗಿ ಪೂಜಿಸಿದನು ॥೩೨॥ ಮಹಾಮತಿಃ-ಅಧಿಕ
ಬುದ್ಧಿಯುಳ್ಳ ಭೀಷ್ಮಕನು, ಸಾನುಗಯೋಃ-ಸೇವಕರಿಂ ಸಹಿತರಾದ, ಸಸೈನ್ಯಯೋಃ-ಸೇನಾಸಮೇತರಾದ, ತಯೋಃ-ಆ ರಾ
ಮಕೃಷ್ಣರಿಗೆ, ಶ್ರೀಮತ್-ಸಂಪತ್ತುಳ್ಳ, ನಿವೇಶನಂ-ಮನೆಯನ್ನು, ಉಪಕಲ್ಪ್ಯ-ಬಿಡಾರವನ್ನಾಗಿ ಏರ್ಪಡಿಸಿಕೊಟ್ಟು, ಯ
ಥಾ-ಹೇಗೆ ಯೋಗ್ಯವೊ ಹಾಗೆ, ಆತಿಥ್ಯಂ-ಸಮಯಕ್ಕೆ ಬಂದವರಿಗೆ ಮಾಡಬೇಕಾದ ಸತ್ಕಾರವನ್ನು, ವಿದಧೇ-ಮಾಡಿದನು ॥೩೩॥

---

ರುವ ರಾಜಪುತ್ರಿಯಾದ ರುಕ್ಮಿಣಿಯಂ ಕಂಡನು ॥೨೭॥ ಆರುಕ್ಮಿಣಿಯು ಸಂತುಷ್ಟವಾದ ಮುಖವುಳ್ಳವನಾಗಿ
ಸ್ಥಿರಚಿತ್ತನಾಗಿರುವ ಆಬ್ರಾಹ್ಮಣನಂ ನೋಡಿ ದೂತಲಕ್ಷಣಂಗಳಿಂದ ಕಾರ್ಯವು ಶುಭವೆಂದುತಿಳಿದು ನಗುತ
ಬ್ರಾಹ್ಮಣನಂ ಕೇಳಿದಳು ॥೨೮॥ ಆಬ್ರಾಹ್ಮಣನು ಶ್ರೀಕೃಷ್ಣನು ಬಂದನೆಂದು ನುಡಿದನು. ಶ್ರೀಕೃಷ್ಣನಿಂದ
ಪೇಳಲ್ಪಟ್ಟ ಸತ್ಯವಾದಮಾತನ್ನೂ ಪೇಳಿದನು ॥೨೯॥ ರುಕ್ಮಿಣಿಯು ಶ್ರೀಕೃಷ್ಣನು ಬಂದನೆಂದುತಿಳಿದು ಸಂ
ತುಷ್ಟಳಾಗಿ ಆಬ್ರಾಹ್ಮಣನಿಗೋಸುಗ ಏನುಪಕಾರವಂ ಮಾಡಲಿಯೆಂದು ಆಲೋಚಿಸಿ ಚನ್ನಾಗಿ ನಮಸ್ಕಾ
ರಂಗೆಯ್ದಳು ॥೩೦॥ ಅನಂತರದಲ್ಲಿ ಭೀಷ್ಮಕನು ತನ್ನಪುತ್ರಿಯು ವಿವಾಹೋತ್ಸವವಂ ನೋಡಲೋಸುಗ ಶ್ರೀ
ಕೃಷ್ಣರಾಮರು ಬಂದಿದ್ದಾರೆಂದು ಇದಿರುಗೊಂಡು ಮಹಾವಿಭವದಿಂದ ಕರೆದುತಂದು ॥೩೧॥ ಮಧುಪರ್ಕವಂ
ಮಾಡಿ ದಿವ್ಯವಾದ ನೂತನ ವಸ್ತ್ರಂಗಳಂಕೊಟ್ಟು ಬೇಕಾದ ಕಾಣಿಕೆಗಳಿಂದ ಯಥಾ ಶಾಸ್ತ್ರವಾಗಿ ಪೂಜಿಸಿ
ದನು ॥೩೨॥ ಸೇನೆಗಳಿಂದಲೂ ಮಿತ್ರರಿಂದಲೂ ಯುಕ್ತರಾಗಿ ಬಂದಿರುವ ರಾಮಕೃಷ್ಣರಿಗೆ ಬಿಡದಿಯಂ ಕಲ್ಪಿಸಿ

ಯೋರಾತಿಥ್ಯಂವಿದಧೆಯಥಾ ‖೩೩‖ ಏವಂರಾಜ್ಞಾಂಸಮೇತಾನಾಂಯಥಾವೀರ್ಯಂಯಥಾವಯಃ । ಯಥಾ ಬಲಂಯಥಾವಿತ್ತಂಸರ್ವೈಃಕಾಮೈಸ್ಸಮರ್ಹಯತ್ ‖೩೪‖ ಕೃಷ್ಣಮಾಗತಮಾಕರ್ಣ್ಯ ವಿದರ್ಭಪುರ ವಾಸಿನಃ । ಆಗತ್ಯನೇತ್ರಾಂಜಲಿಭಿಃಪಪುಸ್ತನ್ಮುಖಪಂಕಜಂ ‖೩೫‖ ಅಸ್ಯೈವಭಾರ್ಯಾಭವಿತುಂರು ಕ್ಮಿಣ್ಯರ್ಹತಿನಾಪರಾ । ಅಸಾವಪ್ಯನವದ್ಯಾತ್ಮಾಭೈಷ್ಮ್ಯಾಸ್ಸಮುಚಿತಃಪತಿಃ ‖೩೬‖ ಕಿಂಚಿತ್ಸು ಚರಿತಂಯನ್ನಸ್ತೇನತುಷ್ಟಸ್ತ್ರಿಲೋಕಕೃತ್ ‖ಅನುಗೃಹ್ಣಾತುಗೃಹ್ಣಾತುವೈದರ್ಭ್ಯಾಃಪಾಣಿಮಚ್ಯು ತಃ ‖೩೭‖ಏವಂಪ್ರೇಮಕಲಾಬದ್ಧಾವದಂತಿಸ್ಮಪುರೌಕಸಃ । ಕನ್ಯಾಚಾಂತಃಪುರಾತ್ಪ್ರಾಗಾದ್ಭಟೈ ರ್ಗುಪ್ತಾಂಬಿಕಾಲಯಂ‖೩೮‖ಪದ್ಭ್ಯಾಂವಿನಿರ್ಯಯೌದ್ರಷ್ಟುಂಭವಾನ್ಯಾಃಪಾದಪಲ್ಲವಂ । ಸಾ

---

ಏವಂ-ಹೀಗೆಯೇ, ಸಮೇತಾನಾಂ-ಬಂದಂಥಾ, ರಾಜ್ಞಾಂ-ದೊರೆಗಳಿಗೆ, ಯಥಾವೀರ್ಯಂ-ಸಾಮರ್ಥ್ಯವು ಹೇಗೋ, ವಯೋ ಯಥಾ-ಪ್ರಾಯವು ಹೇಗೋ, ಬಲಂಯಥಾ-ಶಕ್ತಿಯು ಹೇಗೋ, ವಿತ್ತಂಯಥಾ-ಧನವು ಹೇಗೋ, (ವೀರ್ಯವಯೋಬಲವಿ ತ್ತಶಕ್ತಿಯನ್ನತಿಕ್ರಮಿಸದೇ) ಸರ್ವಕಾಮೈಃ-ಸಕಲೇಷ್ಟಾರ್ಥಂಗಳಿಂದಲೂ, ಸಮರ್ಹಯತ್-ಒಪ್ಪಿಗೆಯಂ ಗೆಯ್ದನು ‖೩೪‖ ಕೃಷ್ಣಂ-ವಾಸುದೇವನನ್ನು, ಆಗತಂ-ಬಂದವನನ್ನಾಗಿ,ಆಕರ್ಣ್ಯ-ಕೇಳಿ, ವಿದರ್ಭಪುರವಾಸಿನಃ--ಕುಂಡಿನೂರೊಕ್ಕಲವರು, ಆಗತ್ಯ-ಬಂದು, ನೇತ್ರಾಂಜಲಿಭಿಃ-ಕಂಗಳೆಂಬ ಬಗಸೆಗಳಿಂದ, ತನ್ಮುಖಪಂಕಜಂ-ಆ ಕೃಷ್ಣನ ಮೊಗದಾವರೆಯಂ, ಪಪುಃ-- ಕುಡಿದರು, (ಕಣ್ಣೆಂಬ ಬಗಸೆಯಿಂದ ಮುಖವೆಂಬ ತಾವರೆಯೊಳಗಿನ ಚಲುವಿಕೆಯೆಂಬ ಒಂಡನ್ನು ಕುಡಿದು ಸುಖಿಸಿದರೆಂದು ರೂಪಕಾಲಂಕಾರಗಮ್ಯತಾತ್ಪರ್ಯವು) ‖೩೫‖ ಅಸ್ಯ-ಈ ಕೃಷ್ಣನಿಗೆ, ಭಾರ್ಯಾ-ಪಟ್ಟದಹೆಂಡತಿಯು, ಭವಿತುಂ--ಆಗು ವುದಕ್ಕೆ, ರುಕ್ಮಿಣ್ಯೇವ-ರುಕ್ಮಿಣಿಯೇ, ಅರ್ಹತಿ-ಯೋಗ್ಯಳಾಗಿರುವಳು ಅಪರಾ-ಇತರಳು, ನ-ಅಲ್ಲವು, ಅನವದ್ಯಾತ್ಮಾ--ನಿ ರ್ದುಷ್ಟಮೂರ್ತಿಯಾದ, ಅಸಾವಪಿ-ಈ ಕೃಷ್ಣನೂಕೂಡ, ಭೈಷ್ಮ್ಯಾಃ-ಭೀಷ್ಮಕನಮಗಳಿಗೆ, ಸಮುಚಿತಃಪತಿಃ-ಯೋಗ್ಯ ನಾದ ಗಂಡನಾಗಿರುವನು ‖೩೬‖ ನಃ-ನಮ್ಮ, ಸುಚರಿತಂ-ಪುಣ್ಯವು, ಯತ್ಕಿಂಚಿತ್-ಯಾವುದುಕೊಂಚವಿದೆಯೋ, ತೇನ-ಅದ ರಿಂದ, ತ್ರಿಲೋಕಕೃತ್-ಮೂರುಲೋಕಂಗಳಂಸೃಷ್ಟಿಸಿದ ಬ್ರಹ್ಮನು, ವೈದರ್ಭ್ಯಾಃಪಾಣಿಂ-ರುಕ್ಮಿಣಿಯ ಕೈಯನ್ನು, ಅಚ್ಯು ತೋಗೃಹ್ಣಾತು-ಕೃಷ್ಣನು ಹಿಡಿಯಲಿ ಯೆಂದು, ಅನುಗೃಹ್ಣಾತು-ಅನುಗ್ರಹಿಸಲಿ ‖೩೭‖ ಪುರೌಕಸಃ-ನಗರವಾಸಿಗಳು, ಏ ವಂ-ಹೀಗೆ, ಪ್ರೇಮಕಲಾಬದ್ಧಾಃ-ಕೃಷ್ಣನಲ್ಲಿ ಸ್ನೇಹಲೇಶದಿಂದ ಬಿಗಿಯಲ್ಪಟ್ಟವರಾಗಿ, ವದಂತಿಸ್ಮ--ಹೇಳಿಕೊಳ್ಳುತಲಿದ್ದರು. ಕನ್ಯಾಚ-ಮದಣವತಿಯಾದ ರುಕ್ಮಿಣಿಯಾದರೋ. ಭಟೈಃ-ಶಿಪಾಯಿಗಳಿಂದ, ಗುಪ್ತಾ-ರಕ್ಷಿಸಲ್ಪಟ್ಟವಳಾಗಿ, ಅಂತಃಪುರಾತ್- ರಾಣಿವಾಸದದೆಸೆಯಿಂದ, ಅಂಬಿಕಾಲಯಂ-ಗೌರಿಯಗುಡಿಯಂಕುರಿತು, ಪ್ರಾಗಾತ್-ಹೊರಟಳು ‖೩೮‖ ಮುಕುಂದಚರಣಾಂ ಬುಜಂ-ಶ್ರೀಕೃಷ್ಣನಅಡಿದಾವರೆಯನ್ನು, ಸಮ್ಯಕ್-ಚನ್ನಾಗಿ, ಅನುಧ್ಯಾಯತೀ-ಭಾವಿಸಿನೆನವುಗೊಳ್ಳುವಳಾದ, ಸಾಚ-ಆರುಕ್ಮಿ ಣಿಯೂಕೂಡ, ಭವಾನ್ಯಾಃ-ರುದ್ರಾಣಿಯೊದಗೌರಿಯ. ಪಾದಪಲ್ಲವಂ-ಚಿಗುರಿನಂತಿರ್ಪಮೆಲ್ಲಡಿಯನ್ನು, ದ್ರಷ್ಟುಂ-ನೋಡುವುದ ಕ್ಕೆ, ಪದ್ಭ್ಯಾಂ-ಕಾಲುಗಳಿಂದ, ವಿನಿರ್ಯಯೌ- ನಡೆಯುತ್ತಹೊರಟಳು ‖ ೩೯ ‖ ಯತವಾಕ್-ನಿಗ್ರಹಿಸಲ್ಪಟ್ಟಮಾತುಳ್ಳವಳು.

---

ಯೆಲ್ಲರಿಗೂ ಆತಿಥ್ಯವಂ ಮಾಡಿದನು ‖೩೩‖ಅದೇರೀತಿಯಲ್ಲಿ ಬಂದಿರುವ ಸಮಸ್ತರಾದ ಅರಸುಗಳಿಗೂ ಯಥಾ ಯೋಗ್ಯವಾಗಿ ಪೂಜೆಯಂ ಮಾಡಿದನು ‖೩೪‖ವಿದರ್ಭಪುರವಾಸಿಗಳಾದ ಜನರು ಶ್ರೀಕೃಷ್ಣನು ಬಂದನೆಂದು ಕೇಳಿಬಂದು ಆಶ್ರೀಕೃಷ್ಣನ ಮುಖಕಮಲವಂ ನೇತ್ರಂಗಳಿಂದ ನೋಡಿದರು ‖೩೫‖ಈರುಕ್ಮಿಣಿಯು ಈಕೃ ಷ್ಣನಿಗೆ ಯೋಗ್ಯಳಾದಪತ್ನಿಯು, ಮತ್ತೊಬ್ಬಳು ಯೋಗ್ಯಳಲ್ಲ. ದೋಷರಹಿತನಾದ ಈಕೃಷ್ಣನು ನುಮ ರುಕ್ಮಿಣಿಗೆ ಅನುರೂಪನಾದಪತಿಯು ‖೩೬‖ನಾವು ಸ್ವಲ್ಪವಾದರೂ ಪುಣ್ಯವಂ ಮಾಡಿದ್ದರೆ ಆಪುಣ್ಯದಿಂದ ಈರು ಕ್ಮಿಣಿಯ ಪಾಣಿಗ್ರಹಣವಂ ಶ್ರೀಕೃಷ್ಣನೇಮಾಡುವಂತೆ ಬ್ರಹ್ಮನು ನಮ್ಮಂ ಅನುಗ್ರಹಿಸಲಿ ‖೩೭‖ ಎಂದು ಪುರವಾಸಿಗಳಾದ ಸ್ತ್ರೀಪುರುಷರೆಲ್ಲರೂ ಪ್ರಾರ್ಥಿಸಿದರು. ಆಗ ಪರಿವಾರ ಸಮೇತಳಾದ ರುಕ್ಮಿಣಿಯು ಅಂತಃ ಪುರದಿಂದ ಹೊರಟು ಗೌರೀದೇವಾಲಯವಂ ಕುರಿತು ಬಂದಳು ‖೩೮‖ ಆರುಕ್ಮಿಣಿಯು ಪಾದಚಾರಿಣಿಯಾಗಿ ಗೌರೀದೇವಿಯ ಪಾದಪದ್ಮವಂ ನೋಡಲೋಸುಗ ಶ್ರೀಕೃಷ್ಣನ ಪಾದಪದ್ಮವನ್ನೇ ಧ್ಯಾನಿಸುತ ‖೩೯‖ಮೌನ

ಚಾನುಧ್ಯಾಯಂತೀ ಮುಕುಂದಚರಣಾಂಬುಜಮ್ ॥೩೯॥ ಯತವಾಙ್ಮಾತೃಭಿಸ್ಸಾರ್ಧಂ ಸಖೀಭಿಃ ಪರಿವಾರಿತಾ । ಗುಪ್ತಾ ರಾಜಭಟೈಶ್ಶೂರೈಸ್ಸನ್ನದ್ಧೈರುದ್ಯತಾಯುಧೈಃ ॥೪೦॥ ಮೃದಂಗಶಂಖಪಣವಾಸ್ತೂರ್ಯಭೇರ್ಯಶ್ಚ ಜಘ್ನಿರೇ ॥೪೧॥ ನಾನೋಪಹಾರಬಲಿಭಿರ್ವಾರಮುಖ್ಯಾಸ್ಸಹಸ್ರಶಃ । ಸ್ರಗ್ಗಂಧವಸ್ತ್ರಾಭರಣೈರ್ದ್ವಿಜಪತ್ನ್ಯಸ್ಸ್ವಲಂಕೃತಾಃ ॥೪೨॥ ಗಾಯಂತಶ್ಚ ಸ್ತುವಂತಶ್ಚ ಗಾಯಕಾ ವಾದ್ಯವಾದಕಾಃ । ಪರಿವಾರ್ಯ ವಧೂಂ ಜಗ್ಮುಸ್ಸೂತಮಾಗಧವಂದಿನಃ ॥೪೩॥ ಆಸಾದ್ಯ ದೇವಸದನಂ ಧೌತಪಾದಕರಾಂಬುಜಾ । ಉಪಸ್ಪೃಶ್ಯ ಶುಚಿಶ್ಶಾಂತಾ ಪ್ರವಿವೇಶಾಂಬಿಕಾಂತಿಕಮ್ ॥೪೪॥ ತಾಂ ವೈ ಪ್ರವಯಸೋ ಬಾಲಾಂ ವಿಧಿಜ್ಞಾ ವಿಪ್ರಯೋಷಿತಃ । ಭವಾನೀಂ ವಂದಯಾಂಚಕ್ರುರ್ಭವಪತ್ನೀಂ ಭವಾನ್ವಿತಾಮ್ ॥೪೫॥ ನಮ

---

(ಮೌನವಾದ) ರುಕ್ಮಿಣಿಯು, ಮಾತೃಭಿಸ್ಸಾರ್ಧಂ-ತಾಯಿಯರೊಡನೆಕೂಡಿ, ಸಖೀಭಿಃ-ಗೆಳತಿಯರಿಂದ, ಪರಿವಾರಿತಾ-ಬಳಸಲ್ಪಟ್ಟವಳೂ, ಶೂರೈಃ-ವೀರರಾದ, ಸನ್ನದ್ಧೈಃ-ಪಟ್ಟೆಯುಂಬಿಗಿದು ಸಿದ್ಧರಾದ, ಉದ್ಯದಾಯುಧೈಃ- ಚನ್ನಾಗಿ ಎತ್ತಿ ಹಿಡಿದ ಆಯುಧಂಗಳುಳ್ಳವರಾದ, ರಾಜಭಟೈಃ-ಅರಮನೆಯ ಆಳುಗಳಿಂದ, ಗುಪ್ತಾ-ಪಾಲಿಸಲ್ಪಡುತ್ತಿರುವಳೂ ಆಗಿ, ಹೊರಟಳು ॥೪೦॥ ಮೃದಂಗ-ಮದ್ದಳೆ, ಶಂಖ-ಸಂಕು, ಪಣವ-ಡೋಲು, ತೂರ್ಯ-ತಮಟೆ, ಭೇರ್ಯಶ್ಚ-ಬರಡೋಲುಗಳೂ, ಜಘ್ನಿರೇ- ಹೊಡೆಯಲ್ಪಟ್ಟವು (ಮೊಳಗಿದವು) ॥೪೧॥ ವಾರಮುಖ್ಯಾಃ-ಸೂಳೆಯರು ಮೊದಲಾದವರು, ಸಹಸ್ರಶಃ-ಸಾವಿರಾರು ಬಗೆಯೊಗಿ, ನಾನೋಪಹಾರಬಲಿಭಿಃ-ಹಲವು ಬಗೆಯಾದ ಕಾಣಿಕೆಗಳೊಡನೆಯೂ, ಪೂಜಾದ್ರವ್ಯಗಳೊಡನೆಯೂ, ಸ್ವಲಂಕೃತಾಃ-ಸಿಂಗರಿಸಲ್ಪಟ್ಟ, ದ್ವಿಜಪತ್ನ್ಯಃ-ಬ್ರಾಹ್ಮಣಸ್ತ್ರೀಯರು, ಸ್ರಗ್ಗಂಧವಸ್ತ್ರಾಭರಣೈಃ-ಪುಷ್ಪಚಂದನವಸ್ತ್ರಾಲಂಕಾರಗಳೊಡನೆಯೂ ॥೪೨॥ ಗಾಯಂತಃ-ಹಾಡುತ್ತಿರುವ, ಗಾಯಕಾಃ-ಸಂಗೀತಗಾರರೂ, ಸ್ತುವಂತಶ್ಚ-ಹೊಗಳುತಲಿರುವ ಭಟ್ಟರೂ, ವಾದ್ಯವಾದಕಾಃ-ಮಂಗಳವಾದ್ಯಂಗಳಂ ಮೊಳಗಿಸುವವರೂ, ಸೂತಮಾಗಧವಂದಿನಃ-ಸೂತಜಾತಿಯವರೂ, ಮಗಧದೇಶದ ಹಾಡುಗಾರರೂ, ಸ್ತುತಿಪಾಠಕರೂ, ವಧೂಂ-ಮದಣಗಿತಿಯನ್ನು, ಪರಿವಾರ್ಯ-ಸುತ್ತುಗೊಂಡು, ಜಗ್ಮುಃ-ತೆರಳಿದರು ॥೪೩॥ ದೇವಸದನಂ-ಶಿವಾಲಯವನ್ನು, ಆಸಾದ್ಯ-ಸೇರಿ, ಧೌತಪಾದಕರಾಂಬುಜಾ--ತೊಳೆಯಲ್ಪಟ್ಟ ಅಡಿದಾವರೆಗಳೂ ಹಸ್ತಕಮಲಗಳೂ ಉಳ್ಳವಳಾಗಿ ಉಪಸ್ಪೃಶ್ಯ-ಶುದ್ಧಾಚಮನವಂಗೆಯ್ದು, ಶುಚಿಃ-ಪರಿಶುದ್ಧಳಾಗಿ, ಶಾಂತಾ-ಸಮಾಹಿತಚಿತ್ತಳಾಗಿ, ಅಂಬಿಕಾಂತಿಕಂ-ಗೌರೀಪ್ರತಿಮಾಸನ್ನಿಧಿಯನ್ನು, ಪ್ರವಿವೇಶ-ಹೊಕ್ಕಳು ॥೪೪॥ ಪ್ರವಯಸಃ-ಹೆಚ್ಚು ಪ್ರಾಯವುಳ್ಳ ಮುದುಕಿಯರಾದ, ವಿಧಿಜ್ಞಾಃ-ದೇವೀಪೂಜಾಕ್ರಮವಂ ಬಲ್ಲವರಾದ, ವಿಪ್ರಯೋಷಿತಃ-ಬ್ರಾಹ್ಮಣಮುತ್ತೈದೆಯರು, ಭವಾನ್ವಿತಾಂ-ಶಿವಸಹಿತಳಾದ, ಭವಪತ್ನೀಂ-ರುದ್ರಾಣಿಯಾದ ಭವಾನೀಂ-ಗೌರಿಯನ್ನು, ವಂದಯಾಂಚಕ್ರುಃ-ನಮಸ್ಕಾರದಿಂದ ಪೂಜೆಯಂ ಮಾಡಿದರು ॥೪೫॥ ಅಂಬಿಕೇ-ಲೋಕಮಾತೆಯಾದ ಗೌರಿಯೇ! ತ್ವಾಂ-ನಿನ್ನನ್ನು, ಸ್ವಸಂತಾನಯುತಂ-ತನ್ನ ಪುತ್ರನಾದ ಗಣೇಶಕುಮಾರಸಹಿ

---

ವ್ರತದಿಂದ ಮಾತೃಗಳೊಡನೆ ಸಖಿಯರಿಂ ದೊಡಗೂಡಿ ಖಡ್ಗಪಾಣಿಗಳಾದ ರಾಜಭಟರಿಂದ ರಕ್ಷಿತಳಾಗಿ, ಗೌರೀಸೇವಾರ್ಥವಾಗಿ ಹೊರಟಳು ॥೪೦॥ ಆಗ ಮೃದಂಗಗಳು ಶಂಖಗಳು ಡೋಲುಗಳು ಭೇರಿಗಳು ಧ್ವನಿಗೆಯ್ದವು ॥೪೧॥ (ಉತ್ತಮರಾದ ವೇಶ್ಯಾಸ್ತ್ರೀಯರು ಉಭಯಪಾರ್ಶ್ವಗಳಲ್ಲಿಯೂ ಸಾಲಾಗಿ ನಿಂತು ನಾಟ್ಯವಂ ಮಾಡಿದರು.) ರಾಜಭಟರುಗಳು ಬೇಕಾದ ಕಾಣಿಕೆಗಳಂ ಫಲಪುಷ್ಪಗಳಂ ಸಹಸ್ರಸಂಖ್ಯಾಕಂಗಳಾದ ತಟ್ಟೆಗಳಲ್ಲಿ ಇರಿಸಿಕೊಂಡು ಬಂದರು. ಬ್ರಾಹ್ಮಣರು ಮುತ್ತೈದೆಯರು ವಸ್ತ್ರಮಾಲ್ಯ ಭೂಷಣಂಗಳಿಂದ ಅಲಂಕೃತರಾಗಿ ॥೪೨॥ ಹಾಡುಗಳಂ ಹೇಳುತ್ತ ಬಂದರು. ಸೂತಮಾಗಧವಂದಿಗಳು ಹೊಗಳುತ ಬಂದರು. ॥೪೩॥ ಈರೀತಿಯಲ್ಲಿ, ದೇವಾಲಯಕ್ಕೆ ಹೋಗಿ ಹಸ್ತಪಾದಂಗಳಂ ಪ್ರಕ್ಷಾಳನಂಗೆಯ್ದು ಆಚಮನವಂ ಮಾಡಿ ಪರಿಶುದ್ಧಳಾಗಿ, ರುಕ್ಮಿಣಿಯು ಗೌರೀದೇವಿಯ ಸಮೀಪಕ್ಕೆ ಹೋದಳು ॥೪೪॥ ಆಗ ಪೂಜಾವಿಧಾನಜ್ಞರಾದ ವೃದ್ಧರಾದ ಮುತ್ತೈದೆಯರು ಆ ರುಕ್ಮಿಣೀದೇವಿಯಿಂದ ಪರಮೇಶ್ವರನ ಪತ್ನಿಯಹ ಗೌರಿದೇವಿಗೆ ನಮಸ್ಕಾರವಂ ಮಾಡಿಸಿದರು ॥೪೫॥ ಆಗ ರುಕ್ಮಿಣಿಯು ಪ್ರಾರ್ಥಿಸಿದ ಕ್ರಮವೆಂತೆನೆ-ಎಲೈ ಪಾರ್ವತೀದೇವಿಯೇ! ಲೋಕಮಾತೃವಾದ ನಿನ್ನಂ ನಮಸ್ಕರಿಸುತ್ತೇನೆ,

ಸ್ಯೇತ್ವಾಂಬಿಕೇಭೀಕ್ಷ್ಣಂಸ್ವಸಂತಾನಯುತಾಂಶಿವಾಮ್। ಭೂಯಾತ್ಪತಿರ್ಮೇಭಗವಾನ್ಕೃಷ್ಣಸ್ತದನುಮೋದತಾಮ್॥೪೬॥ಇತಿಸಂಪ್ರಾರ್ಥಯಂತೀತಾಂದೇವೀಂದೇವಮುಮಾಪತಿಮ್।ಪೂಜಯಾಮಾಸವಿಧಿವದ್ದ್ವಿಜಪತ್ನೀಪುರಸ್ಕೃತಮ್ ॥೪೭॥ ಅದ್ಭಿರ್ಗಂಧಾಕ್ಷತೈರ್ಧೂಪೈರ್ವಾಸಸ್ಸ್ರಙ್ಮಾಲ್ಯಭೂಷಣೈಃ । ನಾನೋಪಹಾರಬಲಿಭಿಃಪ್ರದೀಪಾವಳಿಭಿಃಪೃಥಕ್ ॥೪೮॥ವಿಪ್ರಸ್ತ್ರಿಯಃಪತಿಮತೀಸ್ತಥಾತೈಸ್ಸಮಪೂಜಯತ್ । ಲವಣಾಪೂಪತಾಂಬೂಲಕಂಠಸೂತ್ರಫಲೇಕ್ಷುಭಿಃ ॥೪೯॥ತಸ್ಯೈಸ್ತ್ರಿಯಸ್ತಾಃಪ್ರದದುಶ್ಶೇಷಾಂಯುಯುಜುರಾಶಿಷಃ । ತಾಭ್ಯೋದೇವ್ಯೈನಮಶ್ಚಕ್ರೇಶೇಷಾಂಚ ಜಗೃಹೇವಧೂಃ ॥೫೦॥ ಮುನಿವ್ರತಮಥತ್ಯಕ್ತ್ವಾನಿಶ್ಚಕ್ರಾಮಾಂಬಿಕಾಗೃಹಾತ್ । ಪ್ರಗೃಹ್ಯಪಾಣಿನಾಭೃತ್ಯಾಂರತ್ನಮುದ್ರೋ

---

ತನಾದ, ಶಿವಂ-ಮಹಾದೇವನನ್ನೂ, ಅಭೀಕ್ಷ್ಣಂ-ಅತಿಶಯವಾಗಿ, ನಮಸ್ಯೇ-ನಮಸ್ಕರಿಸುವೆನು. ಭಗವಾನ್ಕೃಷ್ಣಃ-ಭಗವಂತನಾದ ಕೃಷ್ಣನು, ಮೇ-ನನಗೆ, ಪತಿಃ-ಗಂಡನು, ಭೂಯಾತ್-ಆಗಲಿ, ತತ್-ಅದರನ್ನು, ಅನುಮೋದತಾಂ-ಒಪ್ಪಿ ಸಂತೋಷಿಸಲಿ॥೪೬॥ ಇತಿ-ಹೀಗೆ, ಸಂಪ್ರಾರ್ಥಯಂತೀ-ಹರಸಿಕೊಳ್ಳುತ್ತಿರುವಳಾದ ರುಕ್ಮಿಣಿಯು, ತಾಂದೇವೀಂ-ಆಗೌರಿದೇವಿಯನ್ನೂ,ಉಮಾಪತಿಂ-ಗೌರೀಪತಿಯಾದ ಶಂಕರನನ್ನೂ, ದ್ವಿಜಪತ್ನೀಪುರಸ್ಕೃತಂ-ಬ್ರಾಹ್ಮಣ ಸುವಾಸಿನಿಯರಂ ಮುಂದಿರಿಸಿಕೊಂಡು, ವಿಧಿವತ್-ಆಗಮಶಾಸ್ತ್ರಪ್ರಕಾರವಾಗಿ, ಪೂಜಯಾಮಾಸ-ಅರ್ಚಿಸಿದಳು ॥೪೭॥ ಅದ್ಭಿಃ-ಶುದ್ಧೋದಕಂಗಳಿಂದಲೂ, ಧೂಪೈಃ-ಪರಿಮಳದ ಹೊಗೆಗಳಿಂದಲೂ, ವಾಸಃಸ್ರಙ್ಮಾಲ್ಯಭೂಷಣೈಃ-ವಸ್ತ್ರಂಗಳಿಂದಲೂ ಪುಷ್ಪಗಳಿಂದಲೂ ಪುಷ್ಪಹಾರಂಗಳಿಂದಲೂ, ಆಭರಣಂಗಳಿಂದಲೂ, ನಾನೋಪಹಾರಬಲಿಭಿಃ-ಹಲವುಬಗೆಯಾದ ಕಾಣಿಕೆಗಳಿಂದಲೂ, ನೈವೇದ್ಯಗಳಿಂದಲೂ, ಪ್ರದೀಪಾವಳಿಭಿಃ-ಜ್ಯೋತಿರ್ನೀರಾಜನಂಗಳಿಂದಲೂ, ಪೃಥಕ್-ಬೇರೆಬೇರೆಯಾಗಿ, ಪೂಜಿಸಿದಳು ॥೪೮॥ ಪತಿಮತೀಃವಿಪ್ರಸ್ತ್ರಿಯಃ-ಬ್ರಾಹ್ಮಣರ ಮುತ್ತೈದೆಯರನ್ನೂ, ತಥಾ-ಹಾಗೆಯೇ, ತೈಃ-ಆ ಪೂಜಾದ್ರವ್ಯಗಳಿಂದಲೂ, ಲವಣಾಪೂಪ-ಉಪ್ಪಿನ ಕಜ್ಜಾಯ, (ಅಥವಾ)ಉಪ್ಪಿನ ಅತಿರಸಗಳೂ, ತಾಂಬೂಲ-ಅಡಿಕೆಲೆಯೂ, ಕಂಠಸೂತ್ರ-ಕರಿಯ ಮಣಿ ಚಿನ್ನದ ಬೊಟ್ಟಿನ ಮಂಗಳಸೂತ್ರವೂ, ಫಲ-ಹಣ್ಣುಗಳೂ, ಇಕ್ಷುಭಿಃ-ಕಬ್ಬಿನ ತುಂಡುಗಳೂ ಇತ್ಯಾದಿ ಬಾಗಿನಗಳಿಂದಲೂ, ಸಮಪೂಜಯತ್-ಚನ್ನಾಗಿ ಅರ್ಚಿಸಿದಳು ॥೪೯॥ ತಾಃಸ್ತ್ರಿಯಃ-ಆ ಮುತ್ತೈದೆಯರು, ತಸ್ಯೈ-ಆ ರುಕ್ಮಿಣಿಗೆ, ಶೇಷಾಂ-ಹರಗೌರೀಪ್ರಸಾದ ನಿರ್ಮಾಲ್ಯಪ್ರಸಾದಗಳನ್ನೂ, ಆಶಿಷಃ-ಹರಕೆಗಳನ್ನೂ, ಯುಯುಜುಃ-ಸೇರಿಸಿಕೊಟ್ಟರು. ವಧೂಃ-ಮದಣಗಿತಿಯು, ತಾಭ್ಯಃ-ಆ ಮುತ್ತೈದೆಯರಿಗೂ, ದೇವ್ಯೈ-ಗೌರಿದೇವಿಗೂ, ನಮಃ-ನಮಸ್ಕಾರವನ್ನು, ಚಕ್ರೇ-ಮಾಡಿದಳು ॥೫೦॥ ಅಥ-ಆ ಮೇಲೆ, ಮುನಿವ್ರತಂ-ಮಾತಾಡದೇ ಯಿರ್ದ ನಿಯಮವನ್ನು, ತ್ಯಕ್ತ್ವಾ-ಬಿಟ್ಟು, ಅಂಬಿಕಾಗೃಹಾತ್-ಗೌರಿಯ ಗುಡಿಯ ದೆಸೆಯಿಂದ, ನಿಶ್ಚಕ್ರಾಮ-ಹೊರಕ್ಕೆ ಬಂದಳು, ರತ್ನಮುದ್ರೋಪಶೋಭಿನಾ-ರನ್ನ ದುಂಗುರದಿಂ ಬೆಳಗುವ, ಪಾಣಿನಾ--

---

ಗಣಪತಿ ಕುಮಾರಸ್ವಾಮಿ ನಂದಿ ಮೊದಲಾದ ಪರಿವಾರ ಸಮೇತನಾದ ಪರಮೇಶ್ವರನಂ ನಮಸ್ಕರಿಸುತ್ತೇನೆ. ಭಗವಂತನಾದ ಶ್ರೀಕೃಷ್ಣನು ನನಗೆ ಪತಿಯಾಗಲಿ, ಆಯರ್ಥವಂ ನನಗೆ ಅನುಗ್ರಹಿಸು ॥೪೬॥ಎಂದು ಪಾರ್ವತೀಪರಮೇಶ್ವರರಂ ಪ್ರಾರ್ಥಿಸುವಳಾಗಿ ರುಕ್ಮಿಣಿಯು ಮುತ್ತೈದೆಯರೊಡನೆ ದೇವಿಯಂ ॥೪೭॥ ಗಂಧಾಕ್ಷತಧೂಪದೀಪ ನೈವೇದ್ಯ ತಾಂಬೂಲಂಗಳಿಂದ ಪೂಜಿಸಿದಳು. ದೇವಿಯ ಸಮೀಪದಲ್ಲಿ ದೀಪಗಳ ಪಙ್ಕ್ತಿಗಳಂ ಹೊಚ್ಚಿಸಿ ॥೪೮॥ಆಮೇಲೆ ಬ್ರಾಹ್ಮಣರನ್ನೂ ಮುತ್ತೈದೆಯರನ್ನೂ ಪೂಜಿಸಿದಳು. ಲವಣ ಅಪೂಪ ತಾಂಬೂಲ ಕಂಠಸೂತ್ರ ಫಲಂಗಳಿಂದಲೂ, ಇಕ್ಷುಖಂಡಂಗಳಿಂದಲೂ, ಪೂಜಿಸಿದಳು ॥೪೯॥ಮುತ್ತೈದೆಯರು ದೇವಿಯ ನಿರ್ಮಾಲ್ಯರೂಪವಾದ ಫಲಪುಷ್ಪಾದಿಗಳಂ ತೆಗದುಕೊಂಡು ಆಶೀರ್ವಾದ ಪೂರ್ವಕವಾಗಿ ರುಕ್ಮಿಣಿಗೆ ಕೊಟ್ಟರು. ಆರುಕ್ಮಿಣಿಯು ಮುತ್ತೈದೆಯರಿಗೆ ದ್ರವ್ಯದಕ್ಷಿಣೆಗಳಂ ಕೊಟ್ಟು ನಮಸ್ಕರಿಸಿದಳು. ದೇವೀನಿರ್ಮಾಲ್ಯವಂ ತಾನುಗ್ರಹಿಸಿದಳು ॥೫೦॥ಈರೀತಿಯಲ್ಲಿ ಆರುಕ್ಮಿಣೀದೇವಿಯು ಗೌರೀಪೂಜೆಯಂ ಮಾಡಿ ಮೌನವ್ರತವಂ ಪೂರ್ತಿಯಂ ಮಾಡಿ ದೇವಾಲಯದಿಂದ ಹೊರಟುಬಂದಳು. ರತ್ನಮಯಂಗಳಾದ ಉಂಗುರಗಳಿಂದ ಶೋಭಿತವಾದ

ಮಶೋಭಿನಾ॥೫೧॥ತಾಂದೇವಮಾಯಾಮಿವವೀರಮೋಹಿನೀಂಸುಮಧ್ಯಮಾಂಕುಂಡಲಮಂಡಿತಾನನಾಮ್।
ಶ್ಯಾಮಾಂನಿತಂಬಾರ್ಪಿತರತ್ನಮೇಖಲಾಂವ್ಯಂಜತ್ಸ್ತನೀಂಕುಂತಲಶಂಕಿತೇಕ್ಷಣಾಮ್ ॥೫೨॥ ಶುಚಿಸ್ಮಿ
ತಾಂಬಿಂಬಫಲಾಧರದ್ಯುತಿಶೋಣಾಯಮಾನದ್ವಿಜಕುಂದಕುಡ್ಮಲಾಮ್ । ಪದಾಚಲಂತೀಂಕಲಹಂ
ಸಗಾಮಿನೀಂಶಿಂಜತ್ಕಲಾನೂಪುರಧಾಮಶೋಭಿನಾ । ವಿಲೋಕ್ಯವೀರಾಮುಮುಹುಸ್ಸಮಾಗತಾಯ
ಶಸ್ವಿನಸ್ತತ್ಕೃತಹೃಚ್ಛಯಾರ್ದಿತಾಃ॥೫೩॥ ಯಾಂವೀಕ್ಷ್ಯತೇನೃಪತಯಸ್ತದುದಾರಹಾಸವ್ರೀಡಾ
ವಲೋಕಹೃತಚೇತಸಉಜ್ಝಿತಾಸ್ತ್ರಾಃ । ಪೇತುಃಕ್ಷಿತೌರಥಗಜಾಶ್ವಗತಾವಿಮೂಢಾಯಾತ್ರಾಚ್ಛಲೇನ
ಹರಯೇರ್ಪಯತೀಂಸ್ವಶೋಭಾಮ್ ॥೫೪॥ ಸೈವಂಶನೈಶ್ಚಲಯತೀಚರಣಾಬ್ಜಕೋಶೌಪ್ರಾಪ್ತಿಂತದಾಭ

ತನ್ನ ಕೈಯಿಂದ, ಭೃತ್ಯಾಂ-ಸೇವಕಳನ್ನು, ಪ್ರಗೃಹ್ಯ-ಹಿಡಿದುಕೊಂಡುಬಂದಳು ॥೫೧॥ ದೇವಮಾಯಾಮಿವ-ದೇವರಮಾಯಾ ಶಕ್ತಿಯಂತಿರುವ, ವೀರಮೋಹಿನೀಂ-ಶೂರರನ್ನು ಮೋಹಗೊಳಿಸುವ, ಸುಮಧ್ಯಮಾಂ-ಚೆಲುವಾದ ನೊಂಟವುಳ್ಳ, ಕುಂಡಲ ಮಂಡಿತಾನನಾಂ-ಓಲೆಗಳಿಂದಲಂಕೃತವಾದ ಮುಖವುಳ್ಳ, ಶ್ಯಾಮಾಂ-ಪ್ರಾಯಕ್ಕೆ ಬಂದವಳಾದ, ನಿತಂಬಾರ್ಪಿತರತ್ನಮೇಖ ಲಾಂ-ಕ್ರೋರವಾರದಲ್ಲಿರಿಸಲ್ಪಟ್ಟ ರನ್ನದ ಡಾಬುಳ್ಳ, ವ್ಯಂಜತ್ಸ್ತನೀಂ-ವ್ಯಕ್ತವಾದ ಮೊಲೆಗಳುಳ್ಳ, ಕುಂತಲಶಂಕಿತೇಕ್ಷಣಾಂ-- ಕುರುಳ್ಗಳತ್ತಣಿಂ ಚಪಲವಾದ ನೋಟಂಗಳುಳ್ಳ ॥೫೨॥ ಶುಚಿಸ್ಮಿತಾಂ-ಶುಭ್ರವಾದ ನಗೆಯುಳ್ಳ ಬಿಂಬಫಲಾಧರದ್ಯುತಿಭಿಃ- ತೊಂಡೆಯ ಹಣ್ಣಿನಂತಿರ್ಪ ತುಟಿಯ ಹೊಳಪುಗಳಿಂದ, ಶೋಣಾಯಮಾನಾ-ಕೆಂಪಾಗಿಇದ ದ್ವಿಜ ಹಲ್ಲುಗಳೆಂಬ, ಕುಂದಕುಡ್ಮ ಲಾಂ-ಮಾಘಮಾಸದ ಮಲ್ಲಿಗೆಯ ಮೊಗ್ಗುಗಳುಳ್ಳ, ಪದಾ-ಅಡಿಯಿಂದ, ಚಲಂತೀಂ-ನಡೆಯುತ್ತಿರುವ, ತಾಂ ಆ ರುಕ್ಮಿಣಿಯನ್ನು, ವಿಲೋಕ್ಯ-ನೋಡಿ, ಸಮಾಗತಾಃ-ಅಲ್ಲಿಗೆ ಬಂದಿದ್ದ, ಯಶಸ್ವಿನಃ-ಕೀರ್ತಿಯುಳ್ಳವರಾದ, ವೀರಾಃ-ಶೂರರು, ತತ್ಕೃತಹೃಚ್ಛ ಯಾರ್ದಿತಾಃ-ನೋಡಿದ್ದರಿಂ ಮಾಡಲ್ಪಟ್ಟಕಾಮನಿಂ ಪೀಡಿತರಾಗಿ, ಮುಮುಹುಃ-ಮೈ ಮರೆತರು ॥೫೩॥ ಯಾತ್ರಾಚ್ಛಲೇನ-ಗೌ ರೀಪೂಜೆಗೆ ಹೋಗೋಣವೆಂಬ ನೆಪದಿಂದ, ಸ್ವಶೋಭಾಂ-ತನ್ನ ಸೊಬಗನ್ನು, ಹರಯೇ-ಕೃಷ್ಣನಿಗೆ, ಅರ್ಪಯತೀಂ-ಒಪ್ಪಿಸು ತ್ತಿರುವ, ಯಾಂ-ಯಾವ ರುಕ್ಮಿಣಿಯನ್ನು, ವೀಕ್ಷ್ಯ-ನೋಡಿ, ತೇನೃಪತಯಃ-ಆ ದೊರೆಗಳು, ತತ್------ಚೇತಸಃ-ತತ್-ಆ ರುಕ್ಮಿಣಿಯ, ಉದಾರ-ಧಾರಾಳವಾದ, ಹಾಸ-ನಗೆಯಿಂದಲೂ, ವ್ರೀಡಾವಲೋಕ-ನಾಚಿಕೆಯುಳ್ಳ ನೋಟದಿಂದಲೂ, ಹೃತಚೇತ ಸಃ-ಅಪಹರಿಸಲ್ಪಟ್ಟಬುದ್ಧಿಯುಳ್ಳವರಾದ್ದರಿಂದಲೇ, ಉಜ್ಝಿತಾಸ್ತ್ರಾಃ-ಬಿಡಲ್ಪಟ್ಟ ಆಯುಧಂಗಳುಳ್ಳವರಾಗಿ, ವಿಮೂಢಾಃ- ಜ್ಞಾನವಿಲ್ಲದವರಾದ್ದರಿಂದ, ರಥಗಜಾಶ್ವಗತಾಃ-ತೇರುಗಳಲ್ಲಿಯೂ ಆನೆಗಳಲ್ಲಿಯೂ ಕುದುರೆಗಳಲ್ಲಿಯೂಇರುವರಾದರೂ, ಕ್ಷಿತೌ- ನೆಲದಲ್ಲಿ, ಪೇತುಃ-ಬಿದ್ದುಹೋದರೋ ॥೫೪॥ ಸಾ-ಆ ರುಕ್ಮಿಣಿಯು, ಚರಣಾಬ್ಜಕೋಶೌ-ಅಡಿಗಳೆಂಬ ತಾವರೆಯ ಮೊಗ್ಗುಗಳ ನ್ನು, ಶನೈಃ-ಮೆಲ್ಲಗೆ, ಏವಂ-ಹೀಗೆ,ಚಲಯತೀ-ಎತ್ತಿಡುವಳೂ, ತದಾ-ಆಗ,ಭಗವತಃ-ಕೃಷ್ಣನ, ಪ್ರಾಪ್ತಿಂ-ಲಾಭವನ್ನು, ಪ್ರ ಸಮೀಕ್ಷಮಾಣಾ-ಚೆನ್ನಾಗಿಇದಿರುನೋಡುವಳೂ ಆಗಿ, ವಾಮಕರಜೈಃ-ಎಡಗೈಯುಗುರುಗಳಿಂದ, ಅಲಕಾನ್-ಮುಂಗುರುಳ್ಗಳ ನ್ನು, ಉತ್ಸಾರ್ಯ-ಸವರಣೆಗೊಂಡು, ಅಪಾಂಗೈಃ-ಕುಡಿನೋಟಗಳಿಂದಲೂ, ಹ್ರಿಯಾ-ನಾಚಿಕೆಯಿಂದಲೂ, ಪ್ರಾಪ್ತಾನ್ನೃ

---

ಹಸ್ತದಿಂದ ಸಖಿಯಕೈಯಂ ಪಿಡಿದಳು |೫೧| (ಮಂದಗಮನದಿಂದ ಬರುತ್ತಿರುವ ರುಕ್ಮಿಣಿಯಂ ನೋಡಿ ಅರಸುಗಳು ಕಾಮಪೀಡಿತರಾದರು,ಎಂತೆನೆ) ವೀರರು ಮೋಹಿಸುವಂತೆ ಮಾಡುವ ದೇವಮಾಯೆಯೋ ಎಂಬಹಾಗೆ ಇರುವಳಾಗಿ ಸೂಕ್ಷ್ಮವಾದ ಮಧ್ಯಭಾಗವುಳ್ಳವಳಾಗಿ ಕುಂಡಲಂಗಳಿಂದ ಪ್ರಕಾಶಿಸುವ ಮುಖವುಳ್ಳವಳಾಗಿ ರತ್ನಮಯವಾದ ಒಡ್ಡ್ಯಾಣದಿಂದ ಶೋಭಿತವಾಗಿ ವ್ಯಕ್ತವಾಗಿರುವ ಕುಚಭಾರವುಳ್ಳವಳಾಗಿ ಮುಂಗುರುಳುಗಳಿಂದ ಭಯಪಡುತ ಲಿರುವಂತೆ ಚಪಲಂಗಳಾದ ದೃಷ್ಟಿಗಳುಳ್ಳವಳಾಗಿ ಬಿಂಬಫಲದಂತೆ ಕೆಂಪಾದಅಧರೋಷ್ಠಕಾಂತಿಯಿಂದ ವ್ಯಾಪ್ತಂಗಳಾಗಿ ದಾಡಿಮೀಬೀಜಗಳಂಬಂತೆ ಹೊಳೆಯುತಲಿರುವ ದಂತಪಙ್ಕ್ತಿಯುಳ್ಳವಳಾಗಿ, ಧ್ವನಿಗೆಯ್ಯುವಪಾದಾಭರಣಂಗಳಿಂದ ಭೂಷಿತಂಗಳಾದ ಪಾದಂಗಳಿಂದ ಮಂದವಾಗಿ ಹಂಸಗಮನಕ್ಕೆ ಸಮಾನವಾದ ಗಮನವುಳ್ಳವಳಾಗಿ ಬರುತಿರುವ ರುಕ್ಮಿಣಿಯಂ ನೋಡಿ |೫೩| ಅರಸುಗಳು ಮೋಹಿತರಾಗಿ ದೇವಾಲಯ ಯಾತ್ರಾ ವ್ಯಾಜದಿಂದ ಶ್ರೀಕೃಷ್ಣನಿಗೆ ತನ್ನ ದೇಹಸೌಂದರ್ಯವಂ ತೋರಿಸುತ ಬರುತ್ತಿರುವ ರುಕ್ಮಿಣಿಯಂ ನೋಡಿ ಪರವಶರಾಗಿ ರಥಗಜಾಶ್ವಾಂದೋಳಿಕಾದಿ ವಾಹನಂಗಳಂ ನೇರಿ ಬರುತ ತಂಮ ತಂಮ ವಾಹನಂಗಳ ದೆಸೆಯಿಂದ ಬೀಳುವರಾದರು |೫೪| ಆ ರುಕ್ಮಿಣಿಯು ಕಮಲದ ಮಗ್ಗುಗಳಂ ಕೈಲಿ ಪಿಡಿದು

ಶ್ರೀಶುಕಃ ॥ ಇತಿಸರ್ವೇಸುಸಂರಬ್ಧಾವಾಹಾನಾರುಹ್ಯದಂಶಿತಾಃ । ಸ್ವೈಸ್ವೈರ್ಬಲೈಃಪರಿಕ್ರಾಂ
ತಾಅನ್ವೀಯುರ್ಧೃತಕಾರ್ಮುಕಾಃ ॥೧॥ ತಾನಾಪತತಆಲೋಕ್ಯಯಾದವಾನೀಕಯೂಥಪಾಃ । ತ
ಸ್ಥುಸ್ತತ್ಸಂಮುಖಾರಾಜನ್ವಿಸ್ಫೂರ್ಯಸ್ವಧನೂಂಷಿತೇ ॥೨॥ ಅಶ್ವಪೃಷ್ಠೇಗಜಸ್ಕಂಧೇರಥೋಪಸ್ಥೇಚ
ಕೋವಿದಾಃ । ಮುಮುಚುಶ್ಶರವರ್ಷಾಣಿಮೇಘಾಅದ್ರಿಷ್ವಪೋಯಥಾ ॥೩॥ ಪತ್ಯುರ್ಬಲಂಶರಾಸಾ
ರೈಶ್ಛನ್ನಂವೀಕ್ಷ್ಯಸುಮಧ್ಯಮಾ । ಸವ್ರೀಡಮೈಕ್ಷತ್ತದ್ವಕ್ತ್ರಂಭಯವಿಹ್ವಲಲೋಚನಾ ॥೪॥ ಪ್ರಹ
ಸ್ಯಭಗವಾನಾಹಮಾಸ್ಮಭೈರ್ವಾಮಲೋಚನೆ । ವಿನಂಕ್ಷ್ಯತ್ಯಧುನೈವೈತತ್ತಾವಕೈಶ್ಶಾತ್ರವಂಬಲ

೫೪ನೆಯ ಅಧ್ಯಾಯದ ಪ್ರತಿಪದ ಶಬ್ದಾರ್ಥಬೋಧಿನಿ

[ಶ್ರೀಶುಕವಾಕ್ಯವು] ಇತಿ-ಹೀಗೆಂದುಕೊಂಡು, ಸರ್ವೇ-ಜರಾಸಂಧಾದಿಗಳೆಲ್ಲರೂ, ಸುಸಂರಬ್ಧಾಃ-ಸಿಟ್ಟುಳ್ಳವರಾಗಿಯೂ, ದಂಶಿತಾಃ-ಸನ್ನಾಹವಂ ಗೆಯ್ದವರಾಗಿಯೂ, ವಾಹಾನ್-ವಾಹನಂಗಳನ್ನು, ಆರುಹ್ಯ-ಏರಿ, ಸ್ವೈಸ್ವೈರ್ಬಲೈಃ-ತಂತಮ್ಮ ದಂಡುಗಳಿಂದ, ಪರಿಕ್ರಾಂತಾಃ-ಬಳಸಲ್ಪಟ್ಟವರೂ ಆಗಿ, ಧೃತಕಾರ್ಮುಕಾಃ-ಹಿಡಿಯಲ್ಪಟ್ಟ ಬಿಲ್ಲುಗಳುಳ್ಳವರಾಗಿ, ಅನ್ವೀಯುಃ-ಹಿಂದಟ್ಟಿಹೋದರು ॥೧॥ ರಾಜನ್-ಪರೀಕ್ಷಿದ್ರಾಯನೇ! ತೇ-ಆ, ಯಾದವಾನೀಕಯೂಥಪಾಃ-ಯಾದವರ ದಂಡಿನಲ್ಲಿ ಸಾಪಿನೀಪತಿಗಳು, ಆಪತತಃ-ತಂಮ ಮೇಲೆ ಕಾಳೆಗಕ್ಕೆ ಬರುತ್ತಿರುವ, ತಾನ್-ಆ ಜರಾಸಂಧಾದಿಗಳನ್ನು, ಆಲೋಕ್ಯ-ನೋಡಿ, ಸ್ವಧನೂಂಷಿ-ತಂಮ ಬಿಲ್ಲುಗಳನ್ನು, ವಿಸ್ಫಾರ್ಯ-ಮೊಳಗಿಸಿ, ತತ್ಸಂಮುಖಾಃ-ಅವರಿಗಿದಿರುತಿರುಗಿದವರಾಗಿ, ತಸ್ಥುಃ-ನಿಂತರು ॥೨॥ ಅಶ್ವಪೃಷ್ಠೇ-ಕುದುರೆಗಳ ಬೆನ್ನಿನಲ್ಲಿಯೂ ಗಜಸ್ಕಂಧೇ-ಆನೆಗಳ ಹೆಗಲಿನಲ್ಲಿಯೂ, ರಥೋಪಸ್ಥೇ-ತೇರಿನಡುವಿನ ಪೀಠದಮೇಲೂ, ಕೋವಿದಾಃ-ನಿಪುಣರಾದ ಶೂರರು, ಮೇಘಾಃ-ಮೋಡಂಗಳು, ಅದ್ರಿಷು-ಬೆಟ್ಟಗಳಲ್ಲಿ, ಅಪಃ-ನೀರುಗಳನ್ನು, ಯಥಾ-ಹೇಗೋ, ತಥಾ-ಹಾಗೆ, ಶರವರ್ಷಾಣಿ-ಸರಳಮಳೆಗಳನ್ನು, ಮುಮುಚುಃ-ಸುರಿಸಿದರು ॥೩॥ ಸುಮಧ್ಯಮಾ-ಚೆಲುವಾದ ಸೊಂಟವುಳ್ಳ ರುಕ್ಮಿಣಿಯು, ಶರಾಸಾರೈಃ-ವೈರಿಗಳಬಾಣಗಳ ಜಡಿಮಳೆಗಳಿಂದ, ಛನ್ನಂ-ಹೊದಿಸಲ್ಪಟ್ಟಿರುವ, ಪತ್ಯುಃ-ಗಂಡನಾದ ಕೃಷ್ಣನ, ಬಲಂ-ಸೇನೆಯನ್ನು, ವೀಕ್ಷ್ಯ-ನೋಡಿ, ಭಯವಿಹ್ವಲಲೋಚನಾ-ಹೆದರಿಕೆಯಿಂದ ಪಿಕಾರವುಳ್ಳ, ಕಂಗಳುಳ್ಳವಳಾಗಿ, ಸವ್ರೀಡಂ-ನಾಚಿಕೆಯಿಂದ ಸಹಿತವಾಗುವಂತೆ, ತದ್ವಕ್ತ್ರಂ-ಆ ಕೃಷ್ಣನ ಮುಖವನ್ನು, ಐಕ್ಷತ್-ನೋಡಿದಳು ॥೪॥ ವಾಮಲೋಚನೇ-ಚಲುವಾದ ಕಂಗಳುಳ್ಳವಳೇ! ಮಾಸ್ಮಭೈಃ-ಹೆದರಬೇಡ, ಏತತ್-ಈ, ಶಾತ್ರವಂಬಲಂ-ವೈರಿಗಳ ದಂಡು, ತಾ

೫೪ನೆಯಅಧ್ಯಾಯವು.

ಶ್ರೀಧರೀಯಶ್ಲೋಕಃ॥ ಚತುಃಪಂಚಾಶತ್ತಮೇತು ಜಿತ್ವಾರಾಜ್ಞೋವಿಪಕ್ಷಗಾನ್ । ರುಕ್ಮಿಣಂಚವಿಶೂಪ್ಯಾಥಭೈಷ್ಮ್ಯಾಃಕೃಷ್ಣೋಽಗ್ರಹೀತ್ಪಾಣಿಂಪುರೇ॥ ಟೀ॥ ೫೪ನೆಯ ಅಧ್ಯಾಯದಲ್ಲಿ, ಶ್ರೀಕೃಷ್ಣನು ರುಕ್ಮಿಣೀ ವಿವಾಹಾರ್ಥವಾಗಿ ಬಂದಿರುವ ಶತ್ರುಗಳಾದ ಅರಸುಗಳಂ ಜಯಿಸಿ ರುಕ್ಮಿಣೀದೇವಿಗೆ ಅಣ್ಣನಾದ ರುಕ್ಮಿಯೆಂಬವನಿಗೆ ಕ್ಷೌರವಂಮಾಡಿ ಅನಂತರದಲ್ಲಿ ದ್ವಾರಕೆಗೆಹೋಗಿ ಅಲ್ಲಿ ರುಕ್ಮಿಣೀವಿವಾಹವಂ ಮಾಡಿಕೊಂಡನೆಂಬ ಅರ್ಥವಂ ಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸುವನದೆಂತೆನೆ-

ಎಲೈ, ಅರಸೇ! ಯೀರೀತಿಯಾಗಿ ಜರಾಸಂಧಾದಿಗಳು ಸರ್ವಕ್ಷತ್ರಿಯರುಕೂಡ ವಾಹನಂಗಳನೇರಿ ಸಂರಂಭಯುಕ್ತರಾಗಿ ಬದ್ಧಕವಚರಾಗಿ, ತಮ್ಮತಮ್ಮ ಸೇನೆಗಳಂ ಕೂಡಿಸಿಕೊಂಡು ಧನುರ್ಧಾರಿಗಳಾಗಿ ಕೃಷ್ಣನಂ ಬೆನ್ನಟ್ಟಿಹೋದರು ॥೧॥ ಈರೀತಿಯಲ್ಲಿ ಬೆನ್ನಟ್ಟಿಬರುವ ಆರಾಜಸಮೂಹಂಗಳಂ ನೋಡಿ ಯಾದವ ಸೇನಾಪತಿಗಳು ಧನುಷ್ಟಂಕಾರವಂ ಮಾಡುತ್ತ ಅವರಿಗಿದಿರಾಗಿನಿಂತರು ॥೨॥ ಅಶ್ವಾರೋಹಣದಲ್ಲಿಯೂ ಗಜಾರೋಹಣದಲ್ಲಿಯೂ ರಥಾರೋಹಣದಲ್ಲಿಯೂಕೂಡ ಕುಶಲರಾದ ಜರಾಸಂಧಾದಿಗಳು ಪರ್ವತಂಗಳಲ್ಲಿ ಮೇಘಂಗಳು ವರ್ಷಧಾರೆಗಳನಂತೆ ಯಾದವರ ಸೇನಾಪತಿಗಳಮೇಲೆ ಬಾಣಂಗಳಂ ವರ್ಷಿಸಿದರು ॥೩॥ ಆಗ ರುಕ್ಮಿಣಿಯು ಬಾಣಗಳ ವೃಷ್ಟಿಯಿಂದ ವ್ಯಾಪ್ತವಾದ ಶ್ರೀಕೃಷ್ಣನ ಸೇನೆಯಂ ನೋಡಿ ಲಜ್ಜಿತಳಾಗಿ ಭಯದಿಂದ ವ್ಯಾಕುಲಳಾಗಿ ಶ್ರೀಕೃಷ್ಣನ ಮುಖವಂ ನೋಡಿದಳು ॥೪॥ ಆಗ ಆಕೃಷ್ಣನು ರುಕ್ಮಿಣಿಯಂ ಕುರಿತು ನುಡಿದನು, ಎಲೈರುಕ್ಮಿಣಿಯೇ!

ವಃ ॥೫॥ ತೇಷಾಂ ತದ್ವಿಕ್ರಮಂ ವೀರಾ ಗದಸಂಕರ್ಷಣಾದಯಃ। ಅಮೃಷ್ಯಮಾಣಾ ನಾರಾಚೈರ್ಜಘ್ನು ರ್ಹಯಗಜಾನ್ ರಥಾನ್ ॥೬॥ ಪೇತುಃ ಶಿರಾಂಸಿ ರಥಿನಾಮಶ್ವಿನಾಂ ಗಜಿನಾಂ ಭುವಿ ।ಸಕುಂಡಲಕಿರೀಟಾನಿ ಸೋಷ್ಣೀಷಾಣಿ ಚ ಕೋಟಿಶಃ ॥೭॥ ಹಸ್ತಾಸ್ಸಾಸಿಗದೇಷ್ವಾಸಾಃ ಕರಭಾ ಊರವೋಂಘ್ರಯಃ। ಅಶ್ವಾಶ್ವತರನಾಗೋಷ್ಟ್ರಖರಮರ್ತ್ಯಶಿರಾಂಸಿ ಚ ॥೮॥ ಹನ್ಯಮಾನಬಲಾನೀಕಾ ವೃಷ್ಣಿಭಿರ್ಜಯಕಾಂಕ್ಷಿಭಿಃ । ರಾಜಾನೋ ವಿಮುಖಾ ಜಗ್ಮುರ್ಜರಾಸಂಧಪುರೋಗಮಾಃ ॥೯॥ ಶಿಶುಪಾಲಂ ಸಮಭ್ಯೇತ್ಯ ಹೃತದಾರಮಿವಾತುರಮ್ । ನಷ್ಟತ್ವಿಷಂ ಗತೋತ್ಸಾಹಂ ಶುಷ್ಯದ್ವದನಮಬ್ರುವನ್ ॥೧೦॥ ಭೋಭೋ

---

ವಕ್ಷ್ಯೈಃ-ನಿಷ್ಕ್ರಮಿಸುವವರಾದ ಸೈನಿಕರಿಂದ, ಅಧುನೈವ-ಈಗಲೇ,ವಿಸಂಕ್ಷ್ಯತಿ-ವಿನಾಶವನ್ನು ಹೊಂದುತ್ತಿದೆ, ಎಂದು, ಭಗವಾನ್-ಕೃಷ್ಣನು, ಪ್ರಸನ್ನ-ನಕ್ಕು, ಆಹ-ನುಡಿದನು ॥೫॥ ವೀರಾಃ-ಶೂರರಾದ, ಗದಸಂಕರ್ಷಣಾದಯಃ-ಗದನು ಬಲರಾಮನು ಮೊದಲಾದ ಯಾದವರು, ತೇಷಾಂ-ಆ ಜರಾಸಂಧಾದಿಗಳ, ತದ್ವಿಕ್ರಮಂ-ಆ ಪರಾಕ್ರಮವನ್ನು, ಅಮೃಷ್ಯಮಾಣಾಃ-ಸೈರಿಸದೇ ಇರುವರಾಗಿ, ನಾರಾಚೈಃ-ನಾರಾಚಗಳೆಂಬ ಬಾಣಗಳಿಂದ, ಹಯಗಜಾನ್-ಕುದುರೆಗಳನ್ನೂ, ಆನೆಗಳನ್ನೂ, ರಥಾನ್-ತೇರುಗಳನ್ನೂ, ಜಘ್ನುಃ-ಹೊಡೆದರು ॥೬॥ ರಥಿನಾಂ-ರಥಿಕರ, ಅಶ್ವಿನಾಂ-ಸವಾರರ, ಗಜಿನಾಂ-ಆನೆಗಳುಳ್ಳ ಶೂರರ, ಸಕುಂಡಲಕಿರೀಟಾನಿ-ಕಿವಿಯೊಡವೆಗಳಿಂದಲೂ, ಶಿರೋಭೂಷಣಂಗಳಿಂದಲೂ, ಸಹಿತಂಗಳಾದ, ಸೋಷ್ಣೀಷಾಣಿಚ-ಪಾಗುಗಳಿಂದಲೂ ಕೂಡಿದ, ಶಿರಾಂಸಿ-ತಲೆಗಳು, ಕೋಟಿಶಃ-ಬಹುಸಂಖ್ಯಾಕಂಗಳಾಗಿ,ಭುವಿ-ನೆಲದಲ್ಲಿ, ಪೇತುಃ-ಬಿದ್ದವು ॥೭॥ ಸಾಸಿಗದೇಷ್ವಾಸಾಃ-ಕತ್ತಿಗಳಿಂದಲೂ ಕುಂತಗಳಿಂದಲೂ ಬಿಲ್ಲುಗಳಿಂದಲೂ ಸಹಿತಂಗಳಾದ, ಹಸ್ತಾಃ-ಕೈಗಳೂ, ಕರಭಾಃ-ಆನೆಯಸುಂಡಿಲಿನಂತಿರುವ, ಊರವಃ-ತೊಡೆಗಳೂ, ಅಂಘ್ರಯಃ-ಕಾಲುಗಳೂ, ಅಶ್ವಾ.. ....ಸಿಚ-ಅಶ್ವ-ಕುದುರೆಗಳ ಅಶ್ವತರ-ಹೇಸರಕತ್ತೆಗಳ, ನಾಗ-ಆನೆಗಳ, ಉಷ್ಟ್ರ-ಒಂಟೆಗಳ, ಖರ-ಕತ್ತೆಗಳ, ಮರ್ತ್ಯ-ಮನುಷ್ಯರ, ಶಿರಾಂಸಿಚ-ತಲೆಗಳೂ ಕೂಡ, [ಬಹುವಾಗಿ ಬಿದ್ದವು] ॥೮॥ ಜಯಕಾಂಕ್ಷಿಭಿಃ-ಗೆಲ್ಲುವುದಂ ಬಯಸುವರಾದ, ವೃಷ್ಣಿಭಿಃ-ಯಾದವರಿಂದ, ಹನ್ಯಮಾನಬಲಾನೀಕಾಃ-ಹೊಡೆಯಲ್ಪಡುತ್ತಿರುವ ದಂಡಿನ ಗುಂಪುಭಾಗಗಳುಳ್ಳವರಾದ, ಜರಾಸಂಧಪುರೋಗಮಾಃ-ಮಾಗಧನೇ ಅಗ್ರೇಸರನಾಗಿಉಳ್ಳ, ರಾಜಾನಃ-ಅರಸುಗಳು, ವಿಮುಖಾಃ-ಮೋರೆಗಳಂ ಹಿಂದಕ್ಕೆ ತಿರುಗಿಸಿಕೊಂಡವರಾಗಿ, ಜಗ್ಮುಃ-ತೆರಳಿದರು ॥೯॥ಹೃತದಾರಮಿವ-ಅಪಹರಿಸಲ್ಪಟ್ಟ ಹೆಂಡತಿಯುಳ್ಳವನಂತೆ, ಆತುರಂ-ಅವಸರಗೊಳ್ಳುತ್ತಿರುವಂಥಾ, ನಷ್ಟತ್ವಿಷಂ-ಹೀನಕಾಂತಿಯುಳ್ಳವನಾದಂಥಾ, ಗತೋತ್ಸಾಹಂ-ಕಳೆದುಹೋದ ಉತ್ಸಾಹವುಳ್ಳವನಾದಂಥಾ, ಶುಷ್ಯದ್ವದನಂ-ಒಣಗಿದ ಮೋರೆಯುಳ್ಳವನಾದಂಥಾ, ಶಿಶುಪಾಲನನ್ನು, ಸಮಭ್ಯೇತ್ಯ-ಸೇರಿ, ಅಬ್ರುವನ್-ಹೇಳಿದರು ॥೧೦॥ ಭೋಭೋಪುರುಷಶಾರ್ದೂಲ-ಎಲೆಯೆಲ ನರಶ್ರೇಷ್ಠನೇ! ಇದಂ-ಈ, ದೌರ್ಮನ

---

ನೀನುಭಯಪಡಬೇಡ, ನಿನ್ನ ಸೈನ್ಯಸ್ಥರಾದ ಶೂರರಾದ ಯಾದವರಿಂದ ಶತ್ರುಸೈನ್ಯವು ನಾಶವಂ ಹೊಂದಿಸಲ್ಪಡುತ್ತೆ॥೫॥ಎಂದು ಕೃಷ್ಣನು ನುಡಿಯುತಲಿರಲಾಗಿ ಬಲರಾಮನು ಗದನು ಮುಂತಾದ ಯಾದವರು ಶತ್ರುಗಳ ಪರಾಕ್ರಮವಂ ಸಹಿಸಲಾರದೆ ತಮ್ಮಬಾಣಂಗಳಿಂದ ಅಶ್ವಂಗಳಂ ರಥಂಗಳಂಪ್ರಹರಿಸಿದರು ॥೬॥ಶತ್ರುಸೇನೆಗಳಲ್ಲಿರಥಿಕರು ಗಜಾರೋಹಿಗಳು ಅಶ್ವಾರೋಹಿಗಳು ಮುಂತಾದ ಶೂರರ ಶಿರಸ್ಸುಗಳು ಕಿರೀಟಂಗಳಿಂದಲೂ ಕುಂಡಲಂಗಳಿಂದಲೂ ಸಮೇತಂಗಳಾಗಿ ಛೇದಿಸಲ್ಪಟ್ಟು ಭೂಮಿಯಲ್ಲಿ ಅನೇಕಕೋಟಿ ಸಂಖ್ಯಾಕಂಗಳಾಗಿ ಬಿದ್ದವು ॥೭॥ಖಡ್ಗಂಗಳಿಂದಲೂ ಗದೆಗಳಿಂದಲೂ ಧನುಸ್ಸುಗಳಿಂದಲೂ ಯುಕ್ತಂಗಳಾದ ಹಸ್ತಂಗಳೂ ತೊಡೆಗಳೂ ಬಾಹುಗಳೂ ಪಾದಂಗಳೂ ಕತ್ತರಿಸಲ್ಪಟ್ಟು ಅನೇಕ ಪ್ರಕಾರಂಗಳಾಗಿ ಭೂಮಿಯಲ್ಲಿ ಬಿದ್ದವು. ಅಶ್ವಗಳೂ ಗಜಗಳೂ ಹೇಸರಕತ್ತೆಗಳೂ ಪಾದಚಾರಿಗಳೂ ಇವುಗಳ ಶಿರಸ್ಸುಗಳೂ ಬಾಹುಗಳೂ ಮುಂತಾದ ಸರ್ವಾಂಗಂಗಳೂ ಕತ್ತರಿಸಲ್ಪಟ್ಟು ಬಿದ್ದವು॥೮॥ಈರೀತಿಯಲ್ಲಿ ಯಾದವ ಸೇನಾಪತಿಗಳಿಂದ ಛೇದಿಸಲ್ಪಟ್ಟವರಾಗಿ ಶತ್ರುಗಳಾದ ಅರಸುಗಳು ವಿಮುಖರಾಗಿ ಪಲಾಯನಂ ಗೆಯ್ದರು॥೯॥ವಿವರ್ಣಮುಖನಾಗಿ ಉತ್ಸಾಹಶೂನ್ಯನಾಗಿ ಒಣಗುತಲಿರುವ ಬಾಯಿಯುಳ್ಳವನಾಗಿ ಪರರಿಂದ ಅಪಹರಿಸಲ್ಪಟ್ಟ ಪತ್ನಿಯುಳ್ಳವನಂತೆ ವ್ಯಸನಪಡುತಲಿರುವ ಶಿಶುಪಾಲನಂಕುರಿತು ಭಗ್ನರಾದ ಅರಸುಗಳು ನುಡಿದರು॥೧೦॥ಎಲೈಪುರುಷಶ್ರೇಷ್ಠನಾದ ಶಿಶುಪಾಲನೇ! ಈದು

ಪುರುಷಶಾರ್ದೂಲದೌರ್ಮನಸ್ಯಮಿದಂತ್ಯಜ ।ನಪ್ರಿಯಾಪ್ರಿಯಯೋರಾಜನ್ನಿಷ್ಠಾದೇಹಿಷುದೃಶ್ಯತೇ॥೧೧॥
ಯಥಾದಾರುಮಯೀಯೋಷಿನ್ನೃತ್ಯತೇಕುಹಕೇಚ್ಛಯಾ।ಏವಮೀಶ್ವರತಂತ್ರೋಯಮೀಹತೇಸುಖದುಃ
ಖಯೋಃ ॥೧೨॥ಶೌರೇಸ್ಸಪ್ತದಶಾಹಂವೈಸಂಯುಗಾನಿಪರಾಜಿತಃ ।ತ್ರಯೋವಿಂಶತಿಭಿಸ್ಸೈನ್ಯೈರ್ಜಿ
ಗ್ಯಏಕಮಹಂಪರಮ್॥೧೩॥ತಥಾಪ್ಯಹಂನಶೋಚಾಮಿನಪ್ರಹೃಷ್ಯಾಮಿಕರ್ಹಿಚಿತ್ । ಕಾಲೇನದೈವಯು
ಕ್ತೇನಜಾನನ್ವಿದ್ರಾವಿತಂಜಗತ್ ॥೧೪॥ಅಧುನಾಪಿವಯಂಸರ್ವೇವೀರಯೂಥಪಯೂಥಪಾಃ । ಪರಾಜಿ
ತಾಃಫಲ್ಗುತಂತ್ರೈರ್ಯದುಭಿಃಕೃಷ್ಣಪಾಲಿತೈಃ ॥೧೫॥ರಿಪವೋಜಿಗ್ಯುರಧುನಾಕಾಲಆತ್ಮಾನುಸಾರಿಣಿ ।
ತದಾವಯಂಚಜೇಷ್ಯಾಮೋಯದಾಕಾಲಃಪ್ರದಕ್ಷಿಣಃ ॥೧೬॥ಏವಂಪ್ರಬೋಧಿತೋಮಿತ್ರೈಶ್ಚೈದ್ಯೋಗಾ

---

ಸ್ಯಂ-ದುಃಖಿಸುವಮನಸ್ಸುಳ್ಳತನವನ್ನು, ತ್ಯಜ-ಬಿಡು, ರಾಜನ್-ಧೊರೆಯೇ! ಪ್ರಿಯಾಪ್ರಿಯಯೋಃ-ಸುಖದುಃಖಗಳ,ನಿಷ್ಠಾಂ-ಚಲಿಸದೇ ಯಿರುವ ಸ್ಥಿತಿಯು, ದೇಹಿಷು-ಶರೀರ[illegible]ಪ್ರಾಣಿಗಳಲ್ಲಿ, ನದೃಶ್ಯತೇ-ಕಾಣಿಸುವುದಿಲ್ಲವು ॥೧೧॥ ದಾರುಮಯೀಯೋಷಿತ್-ಮರದ ಹೆಂಣುಗೊಂಬೆಯು, ಕುಹಕೇಚ್ಛಯಾ-ಕುಣಿಯಿಸುವವನಅಪೇಕ್ಷೆಯಿಂದ, ಯಥಾ-ಹೇಗೆ, ನೃತ್ಯತೇ-ಕುಣಿಯುತ್ತಿರುವುದೋ, ಏವಂ-ಹೀಗೆ, ಈಶ್ವರತಂತ್ರಃ-ಅಂತರ್ಯಾಮಿಯಾದ ದೇವರಿಗೆಅಧೀನನಾದ, ಅಯಂ ಈ ದೇಹಾಭಿಮಾನಿಯು, ಸುಖದುಃಖಯೋಃ-ಹರ್ಷವಿಷಾದಂಗಳಲ್ಲಿ, ಈಹತೇ-ಸಂಕಲ್ಪವುಳ್ಳವನಾಗುವನು ॥೧೨॥ ಅಹಂ-ನಾನು, ಶೌರೇಃ-ಕೃಷ್ಣನದೆಸೆಯಿಂದ, ಸಪ್ತದಶಾಹಂ- ೧೭ ದಿವಸಗಳಲ್ಲಿ, ಸಂಯುಗಾನಿ-ಕಾಳಗಂಗಳನ್ನು, ವೈ-ಪ್ರಕಟವಾಗಿ, ಪರಾಜಿತಃ-ಸೋತವನಾದೆನು ತ್ರಯೋವಿಂಶತಿಭಿಸ್ಸೈನ್ಯೈಃ-೨೩ ಅಕ್ಷೌಹಿಣಿಗಳ ದಂಡುಗಳಿಂದ, ಏಕಂಪರಂ-ಒಂದುಸಲದ ಕಾಳಗವನ್ನುಮಾತ್ರ, ಜಿಗ್ಯೇ-ಗೆದ್ದೆನು, ॥೧೩॥ ತಥಾಪಿ-ಹಾಗಾದಾಗ್ಯೂ, ಅಹಂ-ನಾನು, ದೈವಯುಕ್ತೇನ-ಕರ್ಮಪರಿಪಾಕದಿಂ ಕೂಡಿದ, ಕಾಲೇನ-ದಶಾಕಾಲದಿಂದ, ಜಗತ್-ಪ್ರಪಂಚವನ್ನು, ವಿದ್ರಾವಿತಂ-ಓಡಿಸಲ್ಪಡುತ್ತಿರುವುದನ್ನಾಗಿ, ಜಾನನ್-ತಿಳಿಯುತ್ತಿರುವನಾದ್ದರಿಂದ, ಕರ್ಹಿಚಿತ್-ಯಾವಾಗಲೂ, ನಶೋಚಾಮಿ-ದುಃಖಿಸುವುದಿಲ್ಲ, ನಪ್ರಹೃಷ್ಯಾಮಿ-ಸಂತೋಷಿಸುವುದೂ ಯಿಲ್ಲ ॥೧೪॥ ಅಧುನಾಪಿ-ಈಗಲೂಕೂಡ, ವೀರಯೂಥಪಯೂಥಪಾಃ-ಶೂರರಾದವರ ಗುಂಪುಗಳಿಗೊಡೆಯರಾದವರ ಗುಂಪುಗಳಂ ಪಾಲಿಸುವವರಾದ, ವಯಂಸರ್ವೇ-ನಾವೆಲ್ಲರೂ, ಫಲ್ಗುತಂತ್ರೈಃ-ಅಸಾರಪ್ರಯತ್ನವುಳ್ಳವರಾದವರೂ, ಕೃಷ್ಣಪಾಲಿತೈಃ-ವಾಸುದೇವನಿಂದ ರಕ್ಷಿಸಲ್ಪಟ್ಟವರಾದ, ಯದುಭಿಃ-ಯಾದವಸ್ತೋಮಿಕರಿಂದ, ಪರಾಜಿತಾಃ-ಸೋಲಿಸಲ್ಪಟ್ಟವರಾದೆವು ॥೧೫॥ ಕಾಲಃ-ಅನುಕೂಲದಶೆಯು, ಆತ್ಮಾನುಸಾರಿಣಿ-ಕೃಷ್ಣನನ್ನನುಸರಿಸಿದ್ದಾಗಲೂ, ಅಥವಾ-ಅವರನ್ನನುಸರಿಸಲು, ರಿಪವಃ-ವೈರಿಗಳು, ಅಧುನಾ-ಈಗ, ಜಿಗ್ಯುಃ-ಗೆದ್ದರು, ಯದಾ-ಯಾವಾಗ, ಕಾಲಃ-ಜಯುಸಮಯವು, ಪ್ರದಕ್ಷಿಣಃ-ನಮ್ಮಂಬಲಗೊಂಡು, ಅನುಕೂಲಿಸಿ ಬರುವುದೋ, ತದಾ-ಆಗ, ವಯಂಚ-ನಾವೂಕೂಡ, ಜೇಷ್ಯಾಮಃ-ಗೆಲ್ಲುವೆವು ॥೧೬॥ ಏವಂ-ಹೀಗೆ, ಮಿತ್ರೈಃ-ಗೆಳೆಯರಾದ ಜರಾಸಂಧಾದಿಗಳಿಂದ, ಬೋಧಿತಃ-ಎಚ್ಚರಿಸಲ್ಪಟ್ಟವನಾದ, ಚೈದ್ಯಃ-ಶಿಶುಪಾಲನು, ಸಾನುಗಃ-ಪರಿವಾರದಿಂ ಸ

---

ನಸ್ತಾಪವಂಬಿಡು, ಪ್ರಾಣಿಗಳಲ್ಲಿ ಸುಖದುಃಖಂಗಳಿಗೆ ಸರ್ವವೂ ಕಾಣಲ್ಪಡುವುದಿಲ್ಲ ॥೧೧॥ಮರದಬೊಂಬೆಗಳನ್ನು ಸೂತ್ರಧಾರನು ನರ್ತನವಂ ಮಾಡಿಸುವಂತೆ ಈ ಪ್ರಾಣಿಗಳನ್ನು ಈಶ್ವರನು ಚೇಷ್ಟೆಗಳಂ ಮಾಡಿಸುತ್ತಾನೆ ॥೧೨॥ ಎಂದು ಅರಸುಗಳು ಹೇಳುತ್ತಿರಲಾಗಿ, ಜರಾಸಂಧನು ಶಿಶುಪಾಲನಂಕುರಿತುನುಡಿದನು. ಎಲೈ ಶಿಶುಪಾಲನೇ! ನಾನು (೧೭)ಸಲ [೨೩] ಅಕ್ಷೌಹಿಣೀಸೇನೆಗಳೊಡನೆಶ್ರೀಕೃಷ್ಣನಿಂದ ಪರಾಜಿತನಾಗಿ ಪಲಾಯನಂ ಗೆಯ್ದೆನು. ಹದಿನೆಂಟನೆಯುಸಲ ನಾನು ಜಯಿಸಿಕೊಂಡು ಬಂದೆನು ॥೧೩॥ ಆಗ ವ್ಯಸನವೂ ಯಿಲ್ಲ, ಸಂತೋಷವೂ ಯಿಲ್ಲ, ಹರ್ಷಶೋಕಂಗಳಂ ಸಮವಾಗಿಭಾವಿಸುತ್ತೇನೆ. ದೈವವಶವಾದ ಕಾಲದಿಂದ ಜಗತ್ತು ಸುತ್ತಿಸಲ್ಪಡುತ್ತೆ ॥೧೪॥ ಮಹಾಸೇನಾಪತಿಗಳಾದ ನಾವು ಸ್ವಲ್ಪಬಲರಾದ ಕೃಷ್ಣಸಹಿತರಾದ ಯಾದವರಿಂದ ಪರಾಜಿತರಾದೆವು ॥೧೫॥ ಈಶ್ವರಾಧೀನವಾದ ಕಾಲಬಲದಿಂದ ಶತ್ರುಗಳಿಗೆ ಜಯವುಂಟಾಯಿತು. ನಮಗೂಕಾಲವು ಅನುಕೂಲವಾದರೆ ನಾವೂ ಜಯಿಸುತ್ತೇವೆ ॥೧೬॥ ಎಂದು ಮಿತ್ರರಾದ ಜರಾಸಂಧಾದಿಗಳಿಂದ ಬೋಧಿತನಾಗಿ, ಶಿಶುಪಾಲನುಹತಶೇಷವಾದ ಸೇನೆಗಳೊಡನೆ ಸ್ವಪುರಕ್ಕೆ ಹೋದನು. ಮಿಗಿಲಾದ ಅರಸುಗಳು ಅ

ತ್ಸಾನುಗಃಪುರಮ್ ।ಹತಶೇಷಾಃಪುನಸ್ತೇಪಿಯಯುಃಸ್ವಂಸ್ವಂಪುರಂನೃಪಾಃ॥೧೭॥ ರುಕ್ಮೀತುರಾಕ್ಷಸೋ
ದ್ವಾಹಂಕೃಷ್ಣದ್ವಿಡಸಹನ್ಸ್ವಸುಃ । ಪೃಷ್ಠತೋನ್ವಗಮತ್ಕೃಷ್ಣಮಕ್ಷೌಹಿಣ್ಯಾವೃತೋಬಲೀ॥೧೮॥
ರುಕ್ಮ್ಯಮರ್ಷೀಸುಸಂರಬ್ಧಶ್ಶೃಣ್ವತಾಂಸರ್ವಭೂಭುಜಾಮ್ । ಪ್ರತಿಜಜ್ಞೇಮಹಾಬಾಹುರ್ದಂಶಿ
ತಸ್ಸಶರಾಸನಃ॥೧೯॥ಅಹತ್ವಾಸಮರೇಕೃಷ್ಣಮಪ್ರತ್ಯೂಹ್ಯಚರುಕ್ಮಿಣೀಮ್ । ಕುಂಡಿನಂನಪ್ರವೇಕ್ಷ್ಯಾ
ಮಿಸತ್ಯಮೇತದ್ಬ್ರವೀಮಿವಃ॥೨೦॥ಇತ್ಯುಕ್ತ್ವಾರಥಮಾರುಹ್ಯಸಾರಥಿಂಪ್ರಾಹಸತ್ವರಃ।ಚೋದಯಾ
ಶ್ವಾನ್ಯತಃಕೃಷ್ಣಸ್ತೇನಮೇಸಂಯುಗೋಭವೇತ್ ॥೨೧। ಅದ್ಯಾಹಂನಿಶಿತೈರ್ಬಾಣೈರ್ಗೋಪಾಲಸ್ಯಸು

---

ಹಿತನಾಗಿ, ಪುರಂ-ಮಾಹಿಷ್ಮತೀನಗರವಂಕುರಿತು, ಅಗಾತ್-ಹೋದನು, ತೇನೃಪಾಃಪುನಃ-ಆದೊರೆಗಳಾದರೋ, ಹತಶೇಷಾಪಿ-
ಕೊಲ್ಲಲ್ಪಟ್ಟವರಲ್ಲಿ ಉಳಿದವರಾದರೂ, ಸ್ವಂಸ್ವಂಪುರಂ-ತಮ್ಮತಮ್ಮ ನಗರವಂ, ಯಯುಃ-ಸೇರಿದರು ॥೧೭॥ ಕೃಷ್ಣದ್ವಿಟ್-
ಕೃಷ್ಣನನ್ನು ದ್ವೇಷಿಸುವಂಥಾ, ರುಕ್ಮೀತು-ರುಕ್ಮಿರಾಜನಾದರೋ, ಸ್ವಸುಃ-ತಂಗಿಯಾದ ರುಕ್ಮಿಣಿಯ, ರಾಕ್ಷಸೋದ್ವಾ
ಹಂ-ಬಲಾತ್ಕಾರದಿಂ ದಪಹರಿಸಲ್ಪಟ್ಟಾಗುವ ಮದುವೆಯನ್ನು, ಅಸಹನ್-ಸೈರಿಸದೇ ಯಿರುವವನಾಗಿ, ಬಲೀ-ಬಲವುಳ್ಳವನಾದ್ದ
ರಿಂದ, ಅಕ್ಷೌಹಿಣ್ಯಾ-ದಂಡಿನಿಂದ,ವೃತಃ-ಬಳಸಲ್ಪಟ್ಟವನಾಗಿ, ಕೃಷ್ಣಂ-ವಾಸುದೇವನನ್ನು, ಪೃಷ್ಠತಃ-ಹಿಂಗಡೆಯಲ್ಲಿ, ಅ
ನ್ವಗಮತ್-ಅಟ್ಟಿಕೊಂಡುಹೋದನು ॥೧೮॥ ಅಮರ್ಷೀ-ಸಿಟ್ಟುಳ್ಳವನಾದ, ರುಕ್ಮೀ-ರುಕ್ಮಿರಾಯನು, ದಂಶಿತಃ-ಹಲ್ಲುಕಡಿಯು
ವನಾಗಿಯೂ, ಸಶರಾಸನಃ-ಬಿಲ್ಲಿನಿಂದಸಹಿತನಾಗಿಯೂ, ಸುಸಂರಬ್ಧ -ಚನ್ನಾದವೇಗವೂ ಪ್ರಯತ್ನವೂ ಉಳ್ಳವನಾಗಿಯೂ,
ಇರುವ, ಮಹಾಬಾಹುಃ-ದೊಡ್ಡ ತೋಳುಗಳುಳ್ಳವನೂ, ಎಂದರೆ ಪರಾಕ್ರಮಶಾಲಿಯಾದ್ದರಿಂದ, ಸರ್ವಭೂಭುಜಾಂ-ಎಲ್ಲಾ
ದೊರೆಗಳೂ, ಶೃಣ್ವತಾಂಸತಾಂ-ಕೇಳುವವರಾಗುತ್ತಿರಲು, ಪ್ರತಿಜಜ್ಞೇ-ಪ್ರತಿಜ್ಞೆಯಂ ಮಾಡಿದನು ॥೧೯॥ ಸಮರೇ-
ಕಾಳಗದಲ್ಲಿ, ಕೃಷ್ಣಂ-ವಾಸುದೇವನನ್ನು, ಅಹತ್ವಾ-ಕೊಲ್ಲದೆ, ರುಕ್ಮಿಣೀಂಚ-ತಂಗಿಯನ್ನೂ, ಅಪ್ರತ್ಯೂಹ್ಯ-ಬಿಡಿಸದೆ, ಕುಂ
ಡಿನಂ-ಗುಂಟೂರನ್ನು,ನಪ್ರವೇಕ್ಷ್ಯಾಮಿ- ಪ್ರವೇಶಿಸುವುದಿಲ್ಲ ಏತತ್-ಈ ಮಾತನ್ನು, ವಃ-ನಿಮಗೆ, ಸತ್ಯಂ-ದಿಟವನ್ನಾಗಿ,
(ಪ್ರಮಾಣವನ್ನಾಗಿ) ಬ್ರವೀಮಿ-ಹೇಳುವೆನು ॥೨೦॥ ಇತಿ-ಹೀಗೆ ಉಕ್ತ್ವಾ-ಹೇಳಿ, ರಥಂ-ತೇರನ್ನು, ಆರುಹ್ಯ-ಏರಿ, ಸತ್ವ
ರಃ-ತ್ವರೆಯಿಂದ ಸಹಿತನಾಗಿ, ಸಾರಥಿಂ-ಸೂತನಂಕುರಿತು, ಪ್ರಾಹ-ನುಡಿದನು ಕೃಷ್ಣಃ-ವಾಸುದೇವನು, ಯತಃ-ಯಾವ
ಕಡೆಯಲ್ಲಿರುವನೋ, ತತಃ-ಆ ಕಡೆಗೆ, ಅಶ್ವಾನ್-ಕುದುರೆಗಳನ್ನು,ಚೋದಯ-ಪ್ರೇರಿಸು, ತೇನ-ಆ ಕೃಷ್ಣನೊಡನೆ, ಮೇ-ನನ
ಗೆ, ಸಂಯುಗಃ-ಕಾಳಗವು, ಭವೇತ್-ಆಗುವುದು ॥೨೧॥ ಯೇನ-ಯಾವವನಿಂದ, ಮೇಸ್ವಸಾ-ನನ್ನ ತಂಗಿಯು, ಪ್ರಸಭಂ-ಬ
ಲಾತ್ಕಾರವಾಗಿ, ಹೃತಾ-ಅಪಹರಿಸಲ್ಪಟ್ಟಳೋ, ದುರ್ಮತೇಃ-ದುರ್ಬುದ್ಧಿ ಯುಳ್ಳ, ತಸ್ಯಗೋಪಾಲಸ್ಯ-ಆ ಗೊಲ್ಲರಗೊಡೆಯ
ನಾದ ಕೃಷ್ಣನ, ವೀರಮದಂ-ತಾನು ಶೂರನೆಂಬ ಗರ್ವವನ್ನು, ಅದ್ಯ-ಈಗ, ಅಹಂ-ನಾನು, ನಿಶಿತೈಃ-ಹರಿತಂಗಳಾದ, ಬಾ
ಣೈಃ-ಸರಳ್ಗಳಿಂದ, ನೇಷ್ಯೇ-ಕಸುಗೊಳ್ಳುವೆನು॥೨೨॥ ಹೀಗೆ, ವಿಕತ್ಥಮಾನಃ-ವ್ಯರ್ಥವಾಗಿ ಹೇಳಿಕೊಳ್ಳುವವನಾದ. ಕುಮತಿಃ-

---

ಪರೀತಿಯಾಗಿ ಹತಶೇಷಗಳಾದಸೇನೆಗಳೊಡನೆ ತಮ್ಮತಮ್ಮ ಪುರಗಳಿಗೆ ಹೋದರು ॥೧೭॥ ಕೃಷ್ಣದ್ವೇಷಿಯಾ
ದ ರುಕ್ಮಿಯೆಂಬವನುಮಾತ್ರವೇ ತಂಗಿಯಾದ ರುಕ್ಮಿಣಿಗೆ ರಾಕ್ಷಸವಿವಾಹವಂ ಸಹಿಸದೆ ಅಕ್ಷೌಹಿಣೀಯುತನಾಗಿ
ಬೆನ್ನಟ್ಟಿಹೋದನು ॥೧೮॥ ಆಗ ಮಹಾಭುಜಬಲಶಾಲಿಯಾದ ರುಕ್ಮಿಯು ಕ್ರೋಧಾವಿಷ್ಟನಾಗಿ, ಕನಕ ಕವಚ
ವಂ ತೊಟ್ಟು ಧನುರ್ಧಾರಿಯಾಗಿ ಸಮಸ್ತರಾದ ಅರಸುಗಳೂ ಕೇಳುತ್ತಿರಲು ಈ ರೀತಿಯಾಗಿ ಪ್ರತಿಜ್ಞೆಯಂ
ಮಾಡಿದನದೆಂತೆನೆ- ॥೧೯॥ ಎಲೈ ಅರಸುಗಳಿರಾ! ನಾನು ಯುದ್ಧದಲ್ಲಿ ಕೃಷ್ಣನಂಸಂಹರಿಸದೇ ರುಕ್ಮಿಣಿಯಂ
ಹಿಂದಕ್ಕೆ ಕರದುಕೊಂಡುಬಾರದೆ ಪುನಃ ಕುಂಡಿನನಗರವಂ ಪ್ರವೇಶಿಸುವುದಿಲ್ಲ.ಈಯರ್ಥವಂ ಸತ್ಯವಾಗಿ ನಿಮ
ಗೋಸ್ಕರ ಹೇಳುತ್ತೇನೆ ॥೨೦॥ ಎಂದು ಹೇಳಿ ಆ ರುಕ್ಮಿಯು ತನ್ನ ಸಾರಥಿಯಂ ಕುರಿತು ನುಡಿದನು. ಎಲೈ
ಸಾರಥಿಯೇ, ಕೃಷ್ಣನಿರುವಸ್ಥಳಕ್ಕೆ ರಥವ ನಡೆಯಿಸು ॥೨೧॥ ನನ್ನ ತಂಗಿಯನ್ನು ಅಪಹರಿಸಿಕೊಂಡು
ಹೋಗುವ ದುರ್ಬುದ್ಧಿಯುಳ್ಳ ಆ ಗೋಪಾಲನ ಗರ್ವವಂ ತೀಕ್ಷ್ಣಂಗಳಾದ ಬಾಣಂಗಳಿಂದ ಪರಿಹರಿಸುತ್ತೇ

ದುರ್ಮತಿಃ । ನೇಷ್ಯೇಽರಮದಂ ಯೇನ ಸ್ವಸಾ ಮೇ ಪ್ರಸಭಂ ಹೃತಾ ॥೨೨॥ ವಿಕತ್ಥಮಾನಃ ಕುಮತಿರೀಶ್ವರಸ್ಯಾಪ್ರಮಾಣವಿತ್ । ರಥೇನೈಕೇನ ಗೋವಿಂದಂ ತಿಷ್ಠ ತಿಷ್ಠೇತ್ಯುಪಾದ್ರವತ್ ॥೨೩॥ ಧನುರ್ವಿಕೃಷ್ಯ ಸುದೃಢಂ ಜಘ್ನೇ ಕೃಷ್ಣಂ ತ್ರಿಭಿಶ್ಶರೈಃ ॥೨೪॥ ಆಹ ಚೋರ ಕ್ಷಣಂ ತಿಷ್ಠ ಯದೂನಾಂ ಕುಲಪಾಂಸನ । ಕುತ್ರ ಯಾಸಿ ಸ್ವಸಾರಂ ಮೇ ಮುಷಿತ್ವಾ ಧ್ವಾಂಕ್ಷವದ್ಧವಿಃ ॥೨೫॥ ಹರಿಷ್ಯೇಽದ್ಯ ಮದಂ ಮಂದ ಮಾಯಿನಃ ಕೂಟಯೋಧಿನಃ । ಯಾವನ್ನ ಮೇ ಹತೋ ಬಾಣೈಶ್ಶಯೀಥಾ ಮುಂಚ ದಾರಿಕಾಮ್ ॥೨೬॥ ಸ್ಮಯನ್ ಕೃಷ್ಣೋ ಧನುಶ್ಛಿತ್ತ್ವಾ ಷಡ್ಭಿರ್ವಿವ್ಯಾಧ ರುಕ್ಮಿಣಮ್ । ಅಷ್ಟಭಿಶ್ಚತುರೋ ವಾಹಾನ್ ದ್ವಾಭ್ಯಾಂ ಸೂತಂ ಧ್ವಜಂ ತ್ರಿಭಿಃ ॥೨೭॥ ಸ ಚಾನ್ಯದ್ಧನುರಾದಾಯ ಕೃಷ್ಣಂ ವಿವ್ಯಾಧ ಪಂಚಭಿಃ । ತೈಸ್ತಾಡಿತಶ್ಶರೌಘೈಸ್ತು ಚಿಚ್ಛೇದ ಧನುರಚ್ಯುತಃ ॥೨೮॥ ಪುನರನ್ಯದುಪಾದತ್ತ ತದಪ್ಯಚ್ಛಿನದವ್ಯಯಃ । ಪರಿಘಂ ಪಟ್ಟಿಸಂ ಶೂಲಂ ಚ

---

ಕುತ್ಸಿತಬುದ್ಧಿಯುಳ್ಳವನಾದ, ರುಕ್ಮಿಯು, ಈಶ್ವರಸ್ಯ-ಜಗನ್ನಾಥನಾದ ಕೃಷ್ಣನ, ಅಪ್ರಮಾಣವಿತ್-ಅಳವಂ ಬಲ್ಲವನಲ್ಲವನಾದ್ದರಿಂದ, ಏಕೇನರಥೇನ-ಒಂದು ತೇರಿನಿಂದ, ಗೋವಿಂದಂ-ಕೃಷ್ಣನಂಕುರಿತು, ತಿಷ್ಠ ತಿಷ್ಠೇತಿ-ನಿಲ್ಲುನಿಲ್ಲೆಂದು, ಉಪಾದ್ರವತ್-ಅಟ್ಟಿಕೊಂಡು ಹೋದನು ॥೨೩॥ ಸುದೃಢಂ-ಬಹಳ ಗಟ್ಟಿಯಾದ, ಧನುಃ-ಬಿಲ್ಲನ್ನು, ವಿಕೃಷ್ಯ-ಸೆಳೆದು, ತ್ರಿಭಿಃಶರೈಃ-ಮೂರಂಬುಗಳಿಂದ, ಕೃಷ್ಣಂ-ವಾಸುದೇವನನ್ನು, ಜಘ್ನೇ-ಹೊಡೆದನು ॥೨೪॥ ಯದೂನಾಂ-ಯಾದವರೊಳಗೆ, ಕುಲಪಾಂಸನ-ವಂಶದೂಷಕನೇ! ಚೋರ-ಕಳ್ಳನೇ! ಕ್ಷಣಂ-ನಿಮುಷವು, ತಿಷ್ಠ-ನಿಂತುಕೊ, ಧ್ವಾಂಕ್ಷಃ-ಕಾಗೆಯು, ಹವಿರ್ವತ್-ಹೋಮದ್ರವ್ಯವನ್ನು ಹೇಗೋಹಾಗೆ, ಮೇ-ನನ್ನ, ಸ್ವಸಾರಂ-ತಂಗಿಯನ್ನು, ಮುಷಿತ್ವಾ-ಕದ್ದುಕೊಂಡು, ಕುತ್ರ-ಎಲ್ಲಿಗೆ, ಯಾಸಿ-ಹೋಗುವಿ? ಎಂದು, ಆಹ-ನುಡಿದನು ॥೨೫॥ ಮಂದ-ಮೂಢನೇ! ಮಾಯಿನಃ-ಮೋಸಗಾರನಾದ, ಕೂಟಯೋಧಿನಃ-ಸುಳ್ಳುಕಟ್ಟು ಜಗಳವಂ ಗೆಯ್ವನಾದ, ತೇ-ನಿನ್ನ, ಮದಂ-ಗರ್ವವನ್ನು, ಅದ್ಯ-ಈಗ, ಹನಿಷ್ಯೇ-ಕಳೆಯುವೆನು. ಯಾವತ್-ಯಾವವರೆಗೆ, ಮೇ-ನನ್ನ, ಬಾಣೈಃ-ಸರಳುಗಳಿಂದ, ಹತಃ-ಹೊಡೆಯಲ್ಪಟ್ಟವನಾಗಿ ನಶಯಿಥಾಃ-ಮಲಗದೆ ಯಿರುವೆಯೋ, ತಾವತ್-ಆಯೋಗಗಿ, ದಾರಿಕಾಂ-ಹುಡುಗಿಯನ್ನು, ಮುಂಚ-ಬಿಡು ॥೨೬॥ [ಆವನಿಂತೆನುತಲೂ] ಸ್ಮಯನ್-ಅಚ್ಚರಿಗೊಳ್ಳುವನಾಗಿ, ಕೃಷ್ಣಃ-ವಾಸುದೇವನು, ಧನುಃ-ಅವನ ಬಿಲ್ಲನ್ನು, ಛಿತ್ವಾ-ಕಡಿದು, ಷಡ್ಭಿಃ-ಆರಂಬುಗಳಿಂದ, ರುಕ್ಮಿಣಂ-ರುಕ್ಮಿರಾಯನನ್ನು, ಅಷ್ಟಭಿಃ-ಎಂಟಂಬುಗಳಿಂದ, ಚತುರಃವಾಹಾನ್-ನಾಲ್ಕು ಕುದುರೆಗಳನ್ನು, ದ್ವಾಭ್ಯಾಂ-ಎರಡಂಬುಗಳಿಂದ ಸೂತಂ-ಸಾರಥಿಯನ್ನೂ, ತ್ರಿಭಿಃ-ಮೂರಂಬುಗಳಿಂದ, ಧ್ವಜಂ-ಪಳವಿಗೆಯನ್ನೂ, ವಿವ್ಯಾಧ-ಹೊಡೆದನು ॥೨೮॥ ರುಕ್ಮಿಯು, ಪುನಃ-ಮರಳಿಯೂ, ಅನ್ಯತ್-ಬೇರೆ ಬಿಲ್ಲನ್ನು, ಉಪಾದತ್ತ-ತೆಗದುಕೊಂಡನು. ಅವ್ಯಯಃ-ನಾಶರಹಿತನಾದ ಕೃಷ್ಣನು, ತದಪಿ-ಆ ಬಿಲ್ಲನ್ನೂ, ಅಚ್ಛಿನತ್-ಕಡಿದುಹಾಕಿದನು. ಪರಿಘಂ-ಉಬ್ಬಲಮರವನ್ನೂ, ಪಟ್ಟಸಂ-ಪಟ್ಟಾಕತ್ತಿಯನ್ನೂ, ಶೂಲಂ-

---

ನೆ ॥೨೨॥ ಎಂದು ಈ ಪ್ರಕಾರವಾಗಿ ಪ್ರತಾಪವಂ ಹೇಳಿಕೊಳ್ಳುತ್ತ ಆ ಕೃಷ್ಣನ ಮಹಿಮೆಯನ್ನು ಅರಿಯದರುಕ್ಮಿಯು ಏಕರಥದಿಂದ ಕೃಷ್ಣನಂಕುರಿತು ನಿಲ್ಲುನಿಲ್ಲು, ಎಂದು ನುಡಿಯುತ ಹೋದನು ॥೨೩॥ ದೃಢವಾದಧನುಸ್ಸಂ ಜೇಗೆಯ್ದು ಮೂರು ಬಾಣಂಗಳಿಂದ ಶ್ರೀಕೃಷ್ಣನು ಪ್ರಹರಿಸಿ ನುಡಿದನು ॥೨೪॥ ಎಲೈ ಯಾದವಕುಲದೂಷಕನಾದ ಚೋರನಾದ ಗೋಪಾಲಕನೇ! ಕ್ಷಣಮಾತ್ರವು ನಿಲ್ಲು, ವಾಯಸವು ಹವಿಸ್ಸನ್ನು ಅಪಹರಿಸಿದಂತೆ ನನ್ನ ತಂಗಿಯನ್ನು ಅಪಹರಿಸಿಕೊಂಡು ಎಲ್ಲಿಗೆ ಹೋಗುತ್ತೀಯೆ? ॥೨೫॥ ಮಾಯಾವಿಯಾಗಿ ಕಪಟಯುದ್ಧವಂ ಮಾಡುವ ನಿನ್ನ ಮದವಂ ಪರಿಹರಿಸುತ್ತೇನೆ. ನನ್ನ ಬಾಣಂಗಳಿಂದ ಹತನಾಗಿ ಭೂಮಿಯಲ್ಲಿ ಶಯನಂ ಗೆಯುತ್ತೀಯೆ ॥೨೬॥ ಎಂಬ ರುಕ್ಮಿವಾಕ್ಯವಂ ಕೇಳಿ ಶ್ರೀಕೃಷ್ಣನು ನಗುತ ಅವನ ಧನುಸ್ಸಂ ಛೇದಿಸಿ ೬ ಬಾಣಂಗಳಿಂದ ಅವನಂ ಪ್ರಹರಿಸಿದನು. ಎಂಟುಬಾಣಂಗಳಿಂದ ನಾಲ್ಕುರಥಾಶ್ವಂಗಳಂ ಎರಡುಬಾಣಂಗಳಿಂದ ಸಾರಥಿಯಂ ಮೂರುಬಾಣಗಳಿಂದ ಧ್ವಜವಂಸಹ ಛೇದಿಸಿದನು ॥೨೭॥ ಆರುಕ್ಮಿಯು ಮತ್ತೊಂದು ಧನುಸ್ಸಂ ತೆಗದುಕೊಂಡು ಐದುಬಾಣಂಗಳಿಂದ ಶ್ರೀಕೃಷ್ಣನಂ ಪ್ರಹರಿಸಿದನು. ಆಬಾಣಗಳಿಂದ ಪೆಟ್ಟುಪಡದ ಶ್ರೀಕೃಷ್ಣನು ಬಾಣಸಮೂಹಗಳಿಂದ ಆಧನುಸ್ಸಂ ಛೇದಿಸಿದನು ॥೨೮॥ ರುಕ್ಮಿಯು ಪುನಃ ಮತ್ತೊಂದು ಧನುಸ್ಸಂ ತೆಗದುಕೊಂ

ರ್ಮ್ಮಾಸೀಃಶಕ್ತಿತೋಮರೌ ‖೧೯‖ಯದ್ಯದಾಯುಧಮಾದತ್ತತತ್ಸರ್ವಂಸೋಚ್ಛಿನದ್ವಿಭುಃ ‖೨೦‖ತತೋ ರಥಾದವಪ್ಲುತ್ಯಖಡ್ಗಪಾಣಿರ್ಜಿಘಾಂಸಯಾ । ಕೃಷ್ಣಮಭ್ಯದ್ರವತ್ಕ್ರುದ್ಧಃಪತಂಗಇವಪಾವಕಂ ‖೨೧‖ತಸ್ಯಚಾಪತತಃಖಡ್ಗಂತಿಲಶಶ್ಚರ್ಮಚೇಷುಭಿಃ ।ಛಿತ್ವಾಸಿಮಾದದೆತಿಗ್ಮಂರುಕ್ಮಿಣಂಹಂತುಮುದ್ಯತಃ‖೨೨‖ದೃಷ್ಟ್ವಾಭ್ರಾತುರ್ವಧೋದ್ಯೋಗಂರುಕ್ಮಿಣೀಭಯವಿಹ್ವಲಾ।ಪತಿತ್ವಾಪಾದಯೋರ್ಭರ್ತುರುವಾಚಕರುಣಂಸತೀ ‖೨೩‖ಯೋಗೇಶ್ವರಾಪ್ರಮೆಯಾತ್ಮನ್ದೇವದೇವಜಗತ್ಪತೆ । ಹಂತುಂನಾರ್ಹಸಿಕಲ್ಯಾಣಭ್ರಾತರಂಮೆಮಹಾಭುಜ ‖೨೪. ಶ್ರೀಶುಕಃ‖ ತಯಾಪರಿತ್ರಾಸವಿಕಂಪಿತಾಂಗಯಾಶುಚಾವಿಶು

---

ತಿವಿಗೋಲನ್ನೂ, ಚರ್ಮಾಸಿ–ಕತ್ತಿ ಗುರಾಣಿಗಳನ್ನೂ, ಶಕ್ತಿತೋಮರೌ–ಶಕ್ತ್ಯಾಯುಧವನ್ನೂ, ತೋಮರಾಯುಧವನ್ನೂ ‖೧೯‖ ಯದ್ಯತ್–ಯಾವಯಾವ, ಆಯುಧಂ–ಕೈದುವನ್ನು, ಆದತ್ತ–ರುಕ್ಮಿಯು ಹಿಡಿದನೋ, ತತ್ಸರ್ವಂಚ–ಅದೆಲ್ಲವನ್ನೂ ವಿಭುಃ–ವ್ಯಾಪಕನಾದ ಕೃಷ್ಣನು, ಅಚ್ಛಿನತ್–ಕಡಿದು ಹಾಕಿದನು ‖೨೦‖ ತತಃ–ಆ ಮೇಲೆ, ಕ್ರುದ್ಧಃ–ಸಿಟ್ಟುಗೊಂಡ ರುಕ್ಮಿಯು, ರಥಾತ್–ತೇರಿನ ಪೆಸೆಯಿಂದ ಅವಪ್ಲುತ್ಯ–ಕೆಳಕ್ಕೆ ಧುಮುಕಿ, ಖಡ್ಗಪಾಣಿಃ–ಕತ್ತಿಯು ಕೈಯಲ್ಲಿ ಉಳ್ಳವನಾಗಿ, ಜಿಘಾಂಸಯಾ–ಕೊಲ್ಲಬೇಕೆಂಬಿಚ್ಛೆಯಿಂದ, ಪತಂಗಃ–ಈಸಳೆಹುಳವು, ಪಾವಕಮಿವ–ಬೆಂಕಿಯನ್ನು ಹೇಗೋ ಹಾಗೆ, ಕೃಷ್ಣಂ–ವಾಸುದೇವನನ್ನು, ಅಭ್ಯದ್ರವತ್–ಇದಿರಿಸಿ ಹೋದನು ‖೨೧‖ ಆಪತತಃ–ಇದಿರುಬೀಳುತ್ತಿರುವ, ತಸ್ಯ–ಆ ರುಕ್ಮಿಯ, ಖಡ್ಗಂಚ–ಕತ್ತಿಯನ್ನೂ, ಚರ್ಮಚ–ಗುರಾಣಿಯನ್ನೂ, ಇಷುಭಿಃ–ಅಂಬುಗಳಿಂದ, ತಿಲಶಃ–ಎಳ್ಳಷ್ಟು ಎಳ್ಳಷ್ಟಾಗುವಂತೆ, ಛಿತ್ವಾ–ಕಡಿದುಹಾಕಿ, ರುಕ್ಮಿಣಂ–ರುಕ್ಮಿರಾಯನನ್ನು, ಹಂತುಂ–ಕೊಲ್ಲುವುದಕ್ಕೆ, ಉದ್ಯತಃ–ಪ್ರಯತ್ನವುಂಟಾದವನಾಗಿ, ತಿಗ್ಮಂ–ತೀಕ್ಷ್ಣವಾದ, ಅಸಿಂ–ನಂದಕವೆಂಬ ಖಡ್ಗವನ್ನು, ಆದದೇ–ಕೈಕೊಂಡನು ‖೨೨‖ ಸತೀ–ಪತಿವ್ರತೆಯಾದ, ರುಕ್ಮಿಣೀ–ವೈದರ್ಭಿಯು, ಭ್ರಾತುಃ–ಅಣ್ಣನಾದ ರುಕ್ಮಿಯ, ವಧೋದ್ಯೋಗಂ–ಮರಣಪ್ರಯತ್ನವನ್ನು, ದೃಷ್ಟ್ವಾ–ಕಂಡು, ಭಯವಿಹ್ವಲಾ–ಬೀತಿಯಿಂದ ವಿವಶಳಾಗಿ, ಭರ್ತುಃ–ಗಂಡನಾದ ಕೃಷ್ಣನ, ಪಾದಯೋಃ–ಕಾಲುಗಳಲ್ಲಿ, ಪತಿತ್ವಾ–ಬಿದ್ದು, ಕರುಣಂ–ದೈನ್ಯವಾಗಿ, ಉವಾಚ–ನುಡಿದಳು ‖೨೩‖ ಯೋಗೇಶ್ವರ–ಉಪಾಯಗಳಿಗೊಡೆಯನೇ! ಅಪ್ರಮೇಯಾತ್ಮನ್–ದಿಟವಾಗಿ ತಿಳಿಯಲಶಕ್ಯವಾದ ಸ್ವಭಾವವುಳ್ಳವನೇ! ದೇವದೇವ–ಪ್ರಭುಗಳಿಗೆ ಪ್ರಭುವಾದವನೇ! ಜಗತ್ಪತೇ–ಲೋಕಕ್ಕೊಡೆಯನೇ! ಕಲ್ಯಾಣ–ಶುಭವುಳ್ಳವನೇ! ಮಹಾಭುಜ–ಹೆಚ್ಚಾದ ತೋಳ್ಬಲವುಳ್ಳವನೇ! ಮೇ–ನನ್ನ, ಭ್ರಾತರಂ–ಅಣ್ಣನನ್ನು, ಹಂತುಂ–ಕೊಲ್ಲುವುದಕ್ಕೆ, ನಾರ್ಹಸಿ–ಯೋಗ್ಯನಾಗದೇ ಯಿರುವಿ ‖೨೪‖ [ಶುಕವಚನವು] ಪರಿತ್ರಾಸವಿಕಂಪಿತಾಂಗಯಾ–ಹೆದರಿಕೆಯಿಂದ ನಡುಗುವ ಮೈಯುಳ್ಳವಳಾದ, ಶುಚಾ–ಶೋಕದಿಂದ, ವಿಶುಷ್ಯನ್ಮುಖರುದ್ಧಕಂಠಯಾ–ಒಣಗುತ್ತಿರುವ ಮೋರೆಯಿಂ ಬಿಗಿದ ಕೊರಳೊಳುಳ್ಳವಳಾದ, ಕಾತರ್ಯವಿಸ್ರಂಸಿತಹೇಮಮಾಲಯಾ–ಭಯಚಾಂಚಲ್ಯದಿಂದ ಬಿಚ್ಚಿ ಜಾರಿಹೋದ ಚಿನ್ನದ ಉಡಿದಾರವುಳ್ಳವಳಾದ,

---

ಡು ಅದನ್ನೂ ಕೃಷ್ಣನು ಛೇದಿಸಲಾಗಿ ರುಕ್ಮಿಯು ಪರಿಘವಂ ಪಟ್ಟಿಸವಂ ಶೂಲವಂ ಶಕ್ತಿಯಂ ತೋಮರವಂ ‖೧೯‖ ಇನ್ನೂ ನಾನಾಪ್ರಕಾರಂಗಳಾದ ಯಾವಯಾವ ಆಯುಧಂಗಳಂ ಪ್ರಯೋಗಿಸಿದನೋ ಅದನೆಲ್ಲವಂ ಶ್ರೀಕೃಷ್ಣನು ಛೇದಿಸಿದನು ‖೨೦‖ ಆಮೇಲೆ ರುಕ್ಮಿಯು ರಥದಿಂದ ಧುಮುಕಿ ಖಡ್ಗವಂ ಧರಿಸಿಕೊಂಡು ಶ್ರೀಕೃಷ್ಣನಂ ಸಂಹರಿಸಲಿಚ್ಛೆಯಿಂದ ಕೋಪದೊಡನೆ ಪತಂಗವು ದೀಪದಮೇಲೆ ಬೀಳುವಂತೆ ಶ್ರೀಕೃಷ್ಣನಮೇಲೆ ಹೋದನು ‖೨೧‖ ಬರುತ್ತಲಿರುವ ಆ ರುಕ್ಮಿಯನ್ನು ಖಡ್ಗವನ್ನೂ ಗುರಾಣಿಯನ್ನೂ ಸಹ ಚೂರುಚೂರಾಗಿ ಛೇದಿಸಿ ಶ್ರೀಕೃಷ್ಣನು ಅವನಂ ಸಂಹರಿಸಲುದ್ಯುಕ್ತನಾಗಿ ಖಡ್ಗಧಾರಿಯಾಗಿ ಹೊರಡಲಿಚ್ಛೈಸಿದನು ‖೨೨‖ ಆಗ ರುಕ್ಮಿಣಿಯು ಅಣ್ಣನಾದ ರುಕ್ಮಿಯಂ ಸಂಹರಿಸಲುದ್ಯುಕ್ತನಾದ ಶ್ರೀಕೃಷ್ಣನಂನೋಡಿ ಭಯದಿಂದ ವ್ಯಾಕುಲಳಾಗಿ ಪತಿಯಾದ ಶ್ರೀಕೃಷ್ಣನ ಪಾದಂಗಳಲ್ಲಿ ಬಿದ್ದು ದೀನವಾಗಿ ನುಡಿದಳು ‖೨೩‖ ಎಲೈ ಯೋಗೇಶ್ವರನಾದ ಅಪಾರಮಹಿಮೆಯುಳ್ಳ ದೇವದೇವನಾದ ಜಗತ್ಪತಿಯಾದ ಶ್ರೀಕೃಷ್ಣನೇ! ನನ್ನ ಅಣ್ಣನಂ ಸಂಹರಿಸಬೇಡ ‖೨೪‖ ಎಂದು ಭಯದಿಂದ ನಡುಗುತಲಿರುವ ಅಂಗಂಗಳುಳ್ಳವಳಾಗಿ ದುಃಖದಿಂದ ಒಣಗುತಲಿರುವ ನಾಲಿಗೆಯುಳ್ಳವಳಾಗಿ ಕಾತರಭಾವದಿಂದ ಶಿಥಿಲವಾದ ಸುವರ್ಣಮಾಲಿಕೆಯುಳ್ಳವಳಾಗಿರುವ ರುಕ್ಮಿಣಿಯಿಂ ಗ್ರಹಿಸಲ್ಪಟ್ಟ ಪಾದವುಳ್ಳವನಾಗಿ

ಷ್ಯೇನ್ಮಾಖರುದ್ಧಕಂಠಯಾ । ಕಾತರ್ಯಾವಿಸ್ರಂಸಿತಹೇಮಮಾಲಯಾಗೃಹೀತಪಾದಃಕರುಣೋನ್ಯವ
ರ್ತತ ॥೩೫॥ ಚೈಲೇನಬಧ್ವಾತಮಸಾಧುಕಾರಿಣಂಸಶ್ಮಶ್ರುಕೇಶಂಪ್ರವಪನ್ವ್ಯರೂಪಯತ್ । ತಾವನ್ಮಮ
ರ್ದುಃಪರಸೈನ್ಯಮುದ್ಧತಂಯದುಪ್ರವೀರಾನಳಿನೀಂಯಥಾಗಜಾಃ ॥೩೬॥ ಕೃಷ್ಣಾಂತಿಕಮುಪವ್ರ
ಜ್ಯದದೃಶುಸ್ತತ್ರರುಕ್ಮಿಣಮ್ । ತಥಾಭೂತಂಹತಪ್ರಾಯಂದೃಷ್ಟ್ವಾಸಂಕರ್ಷಣೋವಿಭುಃ ॥ ವಿ
ಮುಚ್ಯಬದ್ಧಂಕರುಣೋಭಗವಾನ್ಕೃಷ್ಣಮಬ್ರವೀತ್ ॥೩೭॥ ಅಸಾಧ್ವಿದಂತ್ವಯಾಕೃಷ್ಣಕೃತಮ
ಸ್ಮಜ್ಜುಗುಪ್ಸಿತಮ್ । ವಪನಂಶ್ಮಶ್ರುಕೇಶಾನಾಂವೈರೂಪ್ಯಂಸುಹೃದೋವಧಃ ॥೩೮॥ ಮೈವಾಸ್ಮಾನ್
ಸಾಧ್ವ್ಯಸೂಯೇಥಾಭ್ರಾತುರ್ವೈರೂಪ್ಯಚಿಂತಯಾ । ಸುಖದುಃಖದೋನಚಾನ್ಯೋಸ್ತಿಯತಃಸ್ವಕೃತ

---

ತಯಾ-ಆ ರುಕ್ಮಿಣಿಯಿಂದ, ಗೃಹೀತಪಾದಃ-ಹಿಡಿಯಲ್ಪಟ್ಟ ಪಾದಗಳುಳ್ಳವನಾದ ಕೃಷ್ಣನು, ಕರುಣಃ-ದಯೆಯುಳ್ಳವನಾಗಿ, ನ್ಯವರ್ತತ-ಕೊಲ್ಲದೆ ಹಿಂದೆಗೆದನು ॥೩೫॥ ಚೈಲೇನ-ವಸ್ತ್ರದಿಂದ, ಅಸಾಧುಕಾರಿಣಂ-ಅಯೋಗ್ಯಕಾರ್ಯವಂ ಮಾಡಿದ, ತಂ-ಅವನನ್ನು, ಬಧ್ವಾ-ಧ್ವಜಸ್ತಂಭಕ್ಕೆ ಕಟ್ಟಿ, ಸಶ್ಮಶ್ರುಕೇಶಂ-ಮೀಸೆಗಳಿಂದಲೂ ತಲೆಕೂದಲುಗಳಿಂದಲೂ ಸಹಿತವಾಗು ವಂತೆ, ಪ್ರವಪನ್-ಬೋಳಿಸುವನಾಗಿ, ವ್ಯರೂಪಯತ್-ವಿಕಾರರೂಪವುಳ್ಳವನನ್ನಾಗಿ ಮಾಡಿದನು. ತಾವತ್-ಅಷ್ಟರೊಳ ಗಾಗಿ, ಯದುಪ್ರವೀರಾಃ-ಯಾದವರಲ್ಲಿ ಶ್ರೇಷ್ಠರಾದ ಬಲರಾಮಾದಿ ವೀರರು ಗಜಾಃ-ಆನೆಗಳು ನಳಿನೀಂಯಥಾ-ತಾವರೆಯ ದಂಟನ್ನು ಹೇಗೋಹಾಗೆ, ಉದ್ಧತಂಪರಸೈನ್ಯಂ-ಗರ್ವಿಸಿದ ವೈರಿಗಳ ದಂಡನ್ನು, ಮಮರ್ದುಃ-ಕುಟ್ಟಿದರು ॥೩೬॥ ಕೃಷ್ಣಾಂತಿಕಂ-ಕೃಷ್ಣನ ಬಳಿಯನ್ನು, ಉಪವ್ರಜ್ಯ-ಸಮೀಪಿಸಿ ಬಂದು, ತತ್ರ-ಅಲ್ಲಿ, ರುಕ್ಮಿಣಂ-ರುಕ್ಮಿರಾಯನನ್ನು, ದದೃಶುಃ-ನೋಡಿದರು ಭಗವಾನ್-ಷಡ್ಗುಣೈಶ್ವರ್ಯಸಂಪನ್ನನಾದ, ವಿಭುಃ-ಸ್ವತಂತ್ರನಾದ, ಸಂಕರ್ಷಣಃ-ಬಲರಾಮನು, ಬದ್ಧಂ-ಕಟ್ಟಲ್ಪಟ್ಟಿರುವ, ತಥಾಭೂತಂ-ಒಂದುಕಡೆಯ ಮೀಸೆಯೂ ಅರೆತಲೆಯ ಕೂದಲೂ ಬೋಳಿಸಲ್ಪಟ್ಟವನಾದ, ಹತಪ್ರಾಯಂ-ಕೊಲ್ಲಲ್ಪಟ್ಟವನಂತಾಗಿರುವ ರುಕ್ಮಿಯನ್ನು, ದೃಷ್ಟ್ವಾ-ನೋಡಿ, ಕರುಣಃ-ದಯೆಯುಳ್ಳವನಾಗಿ, ವಿಮುಚ್ಯ-ಕಟ್ಟುಗಳಂ ಬಿಚ್ಚಿ, ಕೃಷ್ಣಂ-ವಾಸುದೇವನಂಕುರಿತು, ಅಬ್ರವೀತ್-ನುಡಿದನು ॥೩೭॥ ಕೃಷ್ಣ-ವಾಸುದೇವನೇ ಅಸ್ಮತ್-ಈ ರುಕ್ಮಿಯ ವಿಷಯದಲ್ಲಿ, ಅಸಾಧು-ಸರಿಯಲ್ಲದ, ಇದಂಜುಗುಪ್ಸಿತಂ-ಈ ಅಸಹ್ಯವಾದ ಕೆಲಸವು, ತ್ವಯಾ-ನಿನ್ನಿಂದ, ಕೃತಂ-ಮಾಡಲ್ಪಟ್ಟಿತು. ಶ್ಮಶ್ರುಕೇಶಾನಾಂ-ಮೀಸೆಗಳನ್ನೂ, ತಲೆಕೂದಲುಗಳನ್ನೂ, ವಪನಂ-ಬೋಳಿಸೋಣವೂ, ವೈರೂಪ್ಯಂ-ವಿಕಾರರೂಪವುಂಟಾಗಿಸೋಣವೂ, ಸುಹೃದಃ-ಸರಿಯಾದ ಮನಸ್ಸುಳ್ಳವನಿಗೆ ವಧಃ-ಮರಣಪ್ರಾಯವಾಗಿರುವುದು ॥೩೮॥ ಹೇಸಾಧ್ವೀ-ಎಲೌ ಪತಿವ್ರತೆಯಾದರುಕ್ಮಿಣಿಯೇ! ಭ್ರಾತುಃ-ಅಣ್ಣನಿಗಾದ, ವೈರೂಪ್ಯಂ-ವಿಕಾರರೂಪವನ್ನುಕುರಿತು. ಚಿಂತಯಾ-ಚಿಂತೆ ಯಿಂದ, ಅಸ್ಮಾನ್-ನಮ್ಮಂಕುರಿತು, ಮ್ಯಾಸೂಯೇಥಾಃ-ಹೊಟ್ಟೆಕಿಚ್ಚು ಪಡಲೇಬೇಡ ಯತಃ-ಯಾವಕಾರಣದಿಂದ, ಪುಮಾನ್-ಪುರುಷನು.[ಆತ್ಮನು]ಸ್ವಕೃತಭುಕ್-ತನ್ನಿಂದ ಮಾಡಲ್ಪಟ್ಟದ್ದನ್ನೇಅನುಭವಿಸುವನೋ, ತತಃ-ಆಕಾರಣದಿಂದ

---

ಶ್ರೀಕೃಷ್ಣನು ದಯೆಯಿಂದ ಬಿಟ್ಟನು॥೩೫॥ಅನಂತರದಲ್ಲಿ ಶ್ರೀಕೃಷ್ಣನು ಅಕಾರ್ಯವಂಮಾಡಿ ರುಕ್ಮಿಯಂ ವಸ್ತ್ರದಿಂದ ಕಟ್ಟಿಹಾಕಿ ಕ್ಷೌರವಂ ಮಾಡಿ ವೈರೂಪ್ಯವನ್ನುಂಟುಮಾಡಿದನು ॥ಅದೆಂತೆನೆ-ಮಧ್ಯೇಮಧ್ಯೇ ಕೇಶಂಗಳಂಬಿಟ್ಟು ಸ್ವಲ್ಪಗಡ್ಡವಂ ಸ್ವಲ್ಪಮೀಸೆಯಂ ಬೋಳಿಸಿ ವಿಕಾರವನೆಯ್ದಿಸಿದನು. ಆಸಮಯದಲ್ಲಿ ಯಾದವರು ಅವನಸೇನೆಯಂ ಗಜಗಳು ಕಮಲಂಗಳಂ ಮಥಿಸಿದಂತೆ ಮಥಿಸಿದರು॥೩೬॥ಆಮೇಲೆ ಯಾದವರು ಶ್ರೀಕೃಷ್ಣನ ಸಮೀಪಕ್ಕೆಬಂದು ಆರುಕ್ಮಿಯಂ ನೋಡಿದರು. ಹಾಗೆ ವೈರೂಪ್ಯವನೆಯ್ದಿರುವ ಹತಪ್ರಾಯನಾದ ರುಕ್ಮಿಯಂ ನೋಡಿ ಬಲರಾಮನು. ದಯಾಪೂರ್ಣಚಿತ್ತನಾಗಿ ಕಟ್ಟುಗಳಂ ಬಿಡಿಸಿ ಶ್ರೀಕೃಷ್ಣನಂ ಕುರಿತು ನುಡಿದನು॥೩೭॥ ಎಲೈಕೃಷ್ಣನೇ! ಅಕಾರ್ಯವಂ ಮಾಡಿದವನಾದ, ಗಡ್ಡಮೀಸೆಗಳ ಕ್ಷೌರವು ಜುಗುಪ್ಸಿತವಾದದ್ದು, ಈವೈರೂಪ್ಯಕರಣವು ಮಿತ್ರನಿಗೆ ವಧಪ್ರಾಯವೇ ಸರಿಯೆಂದುಹೇಳಿ ರುಕ್ಮಿಣೀದೇವಿಗೆಸಮಾಧಾನವಂ ಮಾಡಿದನು॥೩೮॥ ಎಲೈಪತಿವ್ರತೆಯಾದ ರುಕ್ಮಿಣಿಯೇ! ಅಣ್ಣನಿಗೆ ವೈರೂಪ್ಯವುಂಟಾಯಿತೆಂದು ನೀನು ಅಸೂಯೆಪಡಬೇಡ, ಪು

ಭುಂಕ್ತೇ ಸ್ವಕೃತಂ ॥೩೯॥ ಬಂಧುರ್ವಧಾರ್ಹದೋಷೋಪಿನಬಂಧೋರ್ವಧಮರ್ಹತಿ । ತ್ಯಾಜ್ಯಸ್ಸ್ವೇನೈವದೋಷೇಣಹತಃಕಿಂಹನ್ಯತೇಪುನಃ ॥೪೦॥ ಕ್ಷತ್ರಿಯಾಣಾಮಯಂಧರ್ಮಃಪ್ರಜಾಪತಿವಿನಿರ್ಮಿತಃ । ಭ್ರಾತಾಪಿಭ್ರಾತರಂಹನ್ಯಾದ್ಯೇನಘೋರತರಸ್ತತಃ ॥೪೧॥ ರಾಜ್ಯಸ್ಯಭೂಮೇರ್ವಿತ್ತಸ್ಯಸ್ತ್ರಿಯೋಮಾನಸ್ಯತೇಜಸಃ । ಮಾನಿನೋನ್ಯಸ್ಯವಾಹೇತೋಃಶ್ರೀಮದಾಂಧಾಃಕ್ಷಿಪಂತಿಹಿ ॥೪೨॥ ತವೇಯಂವಿಷಮಾಬುದ್ಧಿಸ್ಸರ್ವಭೂತೇಷುದುರ್ಹೃದಾಮ್ । ಯನ್ಮನ್ಯಸೇಸದಾಭದ್ರಂಸುಹೃದಾಂಭದ್ರಮಜ್ಞವತ್ ॥೪೩॥ ಆತ್ಮಮೋಹೋನೃಣಾಮೇವಕಲ್ಪ್ಯ

ಸುಖದುಃಖಪ್ರದಃ-ತನಗೆಸುಖವನ್ನಾದರೂ ದುಃಖವನ್ನಾದರೂ ಕೊಡುವವರು, ಅನ್ಯೋನ-ತನಗಿಂತಲೂಇತರರಲ್ಲವು ॥೩೯॥ (ಕೃಷ್ಣನೇ!) ಬಂಧುಃ-ನಂಟನು, ವಧಾರ್ಹದೋಷೋಪಿ-ಮರಣದಂಡನೆಗೆ ತಕ್ಕ ತಪ್ಪಿತವುಳ್ಳವನಾದರೂ, ಬಂಧುಃ-ನಂಟನಾದ್ದರಿಂದ, ವಧಂ-ಮರಣದಂಡವನ್ನು ಅನುಭವಿಸುವುದಕ್ಕೆ, ನಾರ್ಹತಿ-ಯೋಗ್ಯನಾಗುವುದಿಲ್ಲವು, (ಮತ್ತೇನೆಂದರೆ-)ತ್ಯಾಜ್ಯಃ-ಬಿಡಲ್ಪಡತಕ್ಕವನಾಗುವನು. ಸ್ವೇನದೋಷೇಣೈವ-ಆ ಅಪರಾಧದಿಂದಲೇ, ಹತಃ-ಕೊಲ್ಲಲ್ಪಟ್ಟವನಾಗಿರುವನು ಪುನಃ-ಮರಳಿಯೂ, ಕಿಂಹನ್ಯತೇ-ಏನುಕೊಲ್ಲಲ್ಪಡುವನು ? ॥೪೦॥ [ಎಲೌ ರುಕ್ಮಿಣಿಯೇ!] ಅಯಂಧರ್ಮಃ-ಹೀಗೆ ಮಾಡುವ ಧರ್ಮವು, ಕ್ಷತ್ರಿಯಾಣಾಂ ಅರಸುಗಳಿಗೆ, ಪ್ರಜಾಪತಿವಿನಿರ್ಮಿತಃ-ಬ್ರಹ್ಮದೇವನಿಂದ ಕಲ್ಪಿಸಲ್ಪಟ್ಟಿರುವುದು. ಯೇನ-ಯಾವ ಕ್ಷತ್ರಧರ್ಮದಿಂದ, ಭ್ರಾತಾ-ಸೋದರನು, ಭ್ರಾತರಮಪಿ-ಸಹೋದರನಂ ಕೂಡ, ಹನ್ಯಾತ್-ಕೊಲ್ಲುವನೋ, ತತಃ-ಅದಕ್ಕಿಂತಲೂ, ಘೋರತರಃ-ಅತಿಕ್ರೂರವಾದ್ದು; ಯಾವುದುಂಟು ? ॥೪೧॥ (ಎಲೈ ಕೃಷ್ಣನೇ) ಮಾನಿನಃ-ಹೆಮ್ಮೆಯುಳ್ಳವರು, ಶ್ರೀಮದಾಂಧಾಃ-ಐಶ್ವರ್ಯದ ಮದದಿಂದ ಕುರುಡರಾಗಿ, ರಾಜ್ಯಸ್ಯ-ದೊರೆತನದ, ಭೂಮೇಃ-ರಾಷ್ಟ್ರದ ವಿತ್ತಸ್ಯ-ಧನದ, ಸ್ತ್ರಿಯಃ-ಹೆಂಣಿನ, ಮಾನಸ್ಯ-ತಾನು ದೊಡ್ಡವನೆನ್ನಿಸಿಕೊಳ್ಳಬೇಕೆಂಬುದರ, ತೇಜಸಃ-ಪರಾಕ್ರಮದ ಅನ್ಯಸ್ಯ-ಇತರವಾದ ಯಾವ ವಿಷಯದ, ಹೇತೋಃವಾ-ನಿಮಿತ್ತವ ದೆಸೆಯಿಂದಲಾದರೂ, ಕ್ಷಿಪಂತಿಹಿ-ಅನ್ಯರನ್ನು ಎತ್ತಿ ಹೊಡೆಯುವರಲ್ಲವೆ ॥೪೨॥ (ಎಲೌ ರುಕ್ಮಿಣಿಯೇ!) ಯತ್-ಯಾವಕಾರಣದಿಂದ, ಸರ್ವಭೂತೇಷು-ಸಕಲ ಪ್ರಾಣಿಗಳಲ್ಲಿಯೂ, ದುರ್ಹೃದಾಂ-ದುಷ್ಟಮನಸ್ಕರಾದ, ಅಂಣದಿರಿಗೆ, ಅಜ್ಞವತ್-ಮೂಢರಂತೆ, ಭದ್ರಂ-ಶುಭವನ್ನು, ಮನ್ಯಸೇ-ತಿಳಿಯುತ್ತಿರುವೆಯೋ, ಸುಹೃದಾಂ-ಮಿತ್ರರಾದ ಸತ್ಪುರುಷರಿಗೆ, ಅಭದ್ರಂ-ಅಮಂಗಳವಾಗುವುದೋ, ತತ್-ಆ ಕಾರಣದಿಂದ, ತೇ-ನಿನ್ನ, ಇಯಂಬುದ್ಧಿಃ-ಈ ವಿವೇಕವು, ವಿಷಮಾ ಸರಿಯಾದ್ದಲ್ಲವು ॥೪೩॥ [ಅದು ಯೇಕೆಂದರೆ] ಸುಹೃತ್-ಮಿತ್ರನೂ, ದುರ್ಹೃತ್-ಶತ್ರುವೂ, ಉದಾಸೀನಇತಿ-ಮಿತ್ರನೂ ಶತ್ರುವೂ ಅಲ್ಲದ, ಅಲಕ್ಷ್ಯನೆಂದು, ದೇಹಾತ್ಮಮಾನಿನಾಂ-ದೇಹವೇ ಆತ್ಮವೆಂಬ ಅಭಿಮಾನವುಳ್ಳ, ನೃಣಾಂ-ಮನುಷ್ಯರ, ಏಷಃ-ಈ,ಆತ್ಮಮೋಹಃ-ಸ್ವರೂಪಭ್ರಾಂತಿಯು, ದೇವಮಾಯಯಾ-ಈಶ್ವರನ ಆವರಣಶಕ್ತಿಯಿಂದ, ಕಲ್ಪ್ಯತೇ-ಪ್ರತಿಭಾನಗೊಳಿಸಲ್ಪಟ್ಟಿರು

ರುಷನಿಗೆ ಸುಖದುಃಖಂಗಳಂ ಕೊಡುವವನು ಬೇರೆಯಿಲ್ಲ ಸ್ವಕರ್ಮದಿಂದಲೇ ಅನುಭವಿಸುವನು ॥೩೯॥ ಎಂದು ಹೇಳಿ ಪುನಃ ಶ್ರೀಕೃಷ್ಣನಂ ಕುರಿತು ನುಡಿದನು, ಎಲಾ ಕೃಷ್ಣನೇ! ಬಂಧುವಾದವನು ಸಂಹಾರಕ್ಕೆ ಯೋಗ್ಯವಾದ ಅಪರಾಧವ ಮಾಡಿದರೂ ಆಬಂಧುವಂ ಸಂಹರಿಸಬಾರದು, ಅವನು ಸ್ವದೋಷದಿಂದ ಆಹತನಾದವನು, ಪುನಃ ಅವನಂ ಕೊಲ್ಲುವುದುಂಟೆ, ಎಂದುಹೇಳಿ ॥೪೦॥ ಪುನಃ ರುಕ್ಮಿಣಿಯಂ ಕುರಿತು ನುಡಿದನು, ಎಲೈ ರುಕ್ಮಿಣಿಯೇ! ಕ್ಷತ್ರಿಯ ಧರ್ಮವು ಬ್ರಹ್ಮನಿಂದಲೇ ನಿರ್ಮಿತವಾಗಿದೆ, ಅಣ್ಣನು ತಮ್ಮನನ್ನಾದರೂ ಸಂಹರಿಸುವನು. ಅದರಿಂದ ಕ್ಷತ್ರಿಯಧರ್ಮ ಘೋರವಾದದ್ದು ॥೪೧॥ ಎಂದುಹೇಳಿ, ಪುನಃ ಕೃಷ್ಣನಂ ಕುರಿತು ನುಡಿದನು, ಎಲೈ ಕೃಷ್ಣನೇ! ಮಾನಶಾಲಿಗಳಾದ ಶ್ರೀಮದಾಂಧರಾದ ಪುರುಷರು ರಾಜ್ಯನಿಮಿತ್ತವಾಗಿಯೂ ಭೂಮಿನಿಮಿತ್ತವಾಗಿಯೂ ಧನನಿಮಿತ್ತವಾಗಿಯೂ ಸ್ತ್ರೀನಿಮಿತ್ತವಾಗಿಯೂ, ಮಾನಕ್ಕೋಸುಗವಾಗಿಯೂ, ಪರಾಕ್ರಮಿ ಯೆನ್ನಿಸಿ ಕೊಳ್ಳಬೇಕೆಂಬ ನಿಮಿತ್ತವಾಗಿಯೂ, ಪರರಂ ಸಂಹರಿಸುತ್ತಾರೆ ॥೪೨॥ ಇದುನಮಗೆ ಸ್ವಧರ್ಮವು ಎಂದುಹೇಳಿ ಪುನಃ ರುಕ್ಮಿಣಿಯಂ ಕುರಿತು ನುಡಿದನು, ಎಲೈ ರುಕ್ಮಿಣಿಯೇ! ನಿನಗೆ ಬುದ್ಧಿಯು ವಿಷಮವಾಗಿದೆ, ಸಮಬುದ್ಧಿಯಿಲ್ಲ, ಅದೆಂತೆಂದರೆ-ನೀನು ಅಜ್ಞಳಂತೆ ಶತ್ರುಗಳಿಗೆ ಅಶುಭವನ್ನು ಅಪೇಕ್ಷಿಸುತ್ತೀಯೆ ಮಿತ್ರರಿಗೆ ಶುಭವನ್ನು ಅಪೇಕ್ಷಿಸುತ್ತೀಯೆ ॥೪೩॥ ದೈವಮಾಯೆಯಿಂದ ಮನುಷ್ಯರಿಗೆ ಈ ಅಜ್ಞಾನವು ಕಲ್ಪಿತವಾ

ತೇನೈವ ಮಾಯಯಾ ॥ ಸುಹೃನ್ಮಿತ್ರಾರ್ಯುದಾಸೀನಾ ಇತಿ ದೇಹಾತ್ಮಮಾನಿನಾಂ ॥೪೪॥ ಏಕ ಏವ ಪರೋ ಹ್ಯಾತ್ಮಾ
ಸರ್ವೇಷಾಮಪಿ ದೇಹಿನಾಮ್ । ನಾನೇವ ಗೃಹ್ಯತೇ ಮೂಢೈರ್ಯಥಾ ಜ್ಯೋತಿರ್ಯಥಾ ನಭಃ ॥೪೫॥ ದೇಹ ಆದ್ಯಂತವಾ
ನೇಷ ದ್ರವ್ಯಪ್ರಾಣಗುಣಾತ್ಮಕಃ । ಆತ್ಮನ್ಯವಿದ್ಯಯಾ ಕ್ಲೃಪ್ತಸ್ಸಂಸಾರಯತಿ ದೇಹಿನಂ ॥ ೪೬ ॥ ನಾತ್ಮನೋ
ನ್ಯೇನ ಸಂಯೋಗೋ ವಿಯೋಗಶ್ಚಾಸತಃ ಸತಿ । ತದ್ಧೇತುತ್ವಾತ್ತತ್ಪ್ರಸಿದ್ಧೇರ್ದೃಗ್ರೂಪಾಭ್ಯಾಂ ಯಥಾ
ರವೇಃ ॥೪೭ ಜನ್ಮಾದಯಸ್ತು ದೇಹಸ್ಯ ವಿಕ್ರಿಯಾ ಆತ್ಮನಃ ಕ್ವಚಿತ್ । ಕಲಾನಾಮಿವ ನೈವೇಂದೋರ್ಮೃತಿರ
ಸ್ಯ ಕುಹೂರಿವ ॥೪೮॥ ಯಥಾ ಶಯಾನ ಆತ್ಮಾನಂ ವಿಷಯಾನ್ ಫಲಮೇವ ಚ । ಅನುಭುಂಕ್ತೇ ಪ್ಯಸತ್ಯರ್ಥೇ

---

ವುದು. [ಇದು ಸತ್ಯವಲ್ಲವು] ॥೪೪॥ (ಪರಮಾರ್ಥವೇನೆಂದರೆ) ಸರ್ವೇಷಾಂ- ಸಮಸ್ತರಾದ ದೇಹಿನಾಮಪಿ-ಪ್ರಾಣಿಗಳಿ ಗೂ, ಪರಃ ಆತ್ಮಾ-ಪರಮಾತ್ಮನು [ಸ್ವರೂಪಚಿದ್ವಸ್ತುವು] ಏಕ ಏವ ಹಿ-ಒಬ್ಬನೇ ಅಲ್ಲವೆ ? ಜ್ಯೋತಿಃ-ನೀರುಗಳಲ್ಲಿ ಚಂದ್ರಾದಿ ಪ್ರಕಾಶಗಳು, ಯಥಾ-ಹೇಗೋ, ನಭಃ-ಘಟಮಠಾದಿಗಳಲ್ಲಿ ಆಕಾಶವೂ, ಯಥಾ-ಹೇಗೋ, ತಥಾ-ಹಾಗೆ, ನಾನೇವ-ಆತ್ಮ ವಸ್ತುವು ಹಲವು ಭೇದವಾಗಿರುವಂತೆ, ಮೂಢೈಃ-ಅಜ್ಞಾನಿಗಳಾದ ವ್ಯಕ್ತಿಗಳಿಂದ, ಗೃಹ್ಯತೇ-ಗ್ರಹಿಸಲ್ಪಡುವುದು ॥೪೫॥ ಆತ್ಮನಿ-ಸತ್ಯವಸ್ತುವಿನಲ್ಲಿ, ಅವಿದ್ಯಯಾ-ಅನಾದಿಭಾವಾಜ್ಞಾನದ ಅಭ್ಯಾಸದಿಂದ, ಕ್ಲೃಪ್ತಃ-ಆರೋಪಿತವಾದ, ದ್ರವ್ಯಪ್ರಾಣಗುಣಾತ್ಮಕಃ-ದ್ರವ್ಯ-ಅಧಿಭೂತವೂ, ಪ್ರಾಣ-ಇಂದ್ರಿಯಂಗಳೂ, ಗುಣ-ಶಬ್ದಾದಿ ವಿಷಯಂಗಳೂ, ಅಧಿದೈವವೂ, ಆತ್ಮಕಃ-ಉಪಾಧಿ ರೂಪವಾಗಿ ಉಳ್ಳದ್ದರಿಂದ, ಆದ್ಯಂತವಾನ್-ಜನ್ಮನಾಶಂಗಳುಳ್ಳ, ಏಷ ದೇಹಃ-ಈ ಸ್ಥೂಲ ಸೂಕ್ಷ್ಮ ಕಾರಣಾತ್ಮಕ ದೇಹವು, ದೇಹಿನಂ-ದೇಹತಾದಾತ್ಮ್ಯಾಧ್ಯಾಸವುಳ್ಳ ಆತ್ಮನನ್ನು, ಸಂಸಾರಯತಿ-ಜನನಮರಣ ದುಃಖಪ್ರವಾಹದಲ್ಲಿ ತಿರುಗಿಸುತ್ತಿದೆ ॥೪೬॥ ಹೇ ಸತಿ-ಎಲೌ ಪತಿವ್ರತೆಯೇ! ತದ್ಧೇತುತ್ವಾತ್-ತತ್-ಅನ್ಯವಾದ ಭೂತೇಂದ್ರಿಯಾದಿಗಳಿಗೆ, ಹೇತುತ್ವಾತ್-ಕಾರಣವಾದ್ದರಿಂದಲೂ, ತತ್ಪ್ರಸಿದ್ಧೇಃ-ಅವುಗಳ ಪ್ರಕಾಶಕ್ಕೆ ಕಾರಣವಾದ್ದರಿಂದಲೂ, ರವೇಃ- ಸೂರ್ಯನಿಗೆ, ದೃಗ್ರೂಪಾಭ್ಯಾಂ-ದೃಷ್ಟಿ ದೃಶ್ಯಗಳಿಂದ, ಯಥಾ-ಹೇಗೋ, ತಥಾ-ಹಾಗೆ, ಆತ್ಮನಃ-ಚಿದ್ವಸ್ತುವಿಗೆ, ಅಸತಾ-ಅಸತ್ಯವಾದ, ಅಚಿದ್ವಸ್ತುವಿನೊಡನೆ, ಸಂಯೋಗಃ-ಸಂಬಂಧವೂ, ವಿಯೋಗಶ್ಚ-ಬಿಡುಗಡೆಯೂ, ನ-ಇಲ್ಲವು ॥೪೭॥ ಜನ್ಮಾದಯಸ್ತು-ಜನನಮರಣಾದಿಗಳಾದರೋ, ದೇಹಸ್ಯ-ಶರೀರದ, ವಿಕ್ರಿಯಾಃ-ವಿಕಾರಂಗಳಾಗಿರುವವು. ಆತ್ಮನಃ-ಚೇತನಂಗೆ, ಕ್ವಚಿತ್-ಎಲ್ಲಿಯೂ, ನ-ಈ ವಿಕಾರಂಗಳಿಲ್ಲವು. ಕುಹೂರಿವ-ಅಮಾವಾಸ್ಯೆಯಲ್ಲಿ ಹೇಗೋ ಹಾಗೆ, ಕಲಾನಾಮೇವ-ಕಾಂತ್ಯಂಶಂಗಳಿಗೇವೆ, ಮೃತಿಃ-ಅದರ್ಶನವಾಗಿರುವುದು. ಅಸ್ಯೇಂದೋಃ-ಈ ಚಂದ್ರಂಗೆ, ನೈವ-ಹಾಗೆಯೇ ಇಲ್ಲವು ॥೪೮॥ ಶಯಾನಃ-ನಿದ್ರಿಸುವ ಪುರುಷನು, ಅರ್ಥೇ-ವ್ಯಾವ

---

ಗಿದೆ. ದೇಹವೇ ಆತ್ಮನೆಂಬ ಅಜ್ಞಾನಿಗಳಿಗೆ ಮಿತ್ರರು ಶತ್ರುಗಳು ಉದಾಸೀನರಾಗಿರುವರೆಂಬ ಪೃಥಗ್ಭಾವವು ಸ್ವಾಭಾವಿಕವು ॥೪೪॥ ಸರ್ವಪ್ರಾಣಿಗಳಲ್ಲಿ ಆತ್ಮನೊಬ್ಬನೇ ಆದರೂ ಅನೇಕದಂತೆ ತೋರುವನು, ಅದೆಂತೆಂದರೆ ಚಂದ್ರನೊಬ್ಬನೇ ಜಲದಲ್ಲಿ ಅನೇಕವಾಗಿ ತೋರುವನು. ಒಂದೇ ಆಕಾಶವು ಘಟಮಠಾದಿಗಳಲ್ಲಿ ಬೇರೆಬೇರೆಯಾಗಿ ತೋರುವುದು ॥೪೫॥ ಅಧಿಭೂತ ಅಧ್ಯಾತ್ಮ ಅಧಿರೂಪಂಗಳಾದ ದ್ರವ್ಯ ಪ್ರಾಣಗುಣಗಳ ಸಮಷ್ಟಿರೂಪವಾದ ದೇಹವು ಉತ್ಪತ್ತಿ ವಿನಾಶಂಗಳುಳ್ಳದ್ದು. ಅಜ್ಞಾನದಿಂದ ಆತ್ಮನಲ್ಲಿ ಕಲ್ಪಿತವಾಗಿ ಜೀವರುಗಳಂ ಸಂಸಾರಿಗಳನ್ನಾಗಿ ಮಾಡುತ್ತೆ ॥೪೬॥ ಎಲೌ ರುಕ್ಮಿಣಿಯೇ! ಆತ್ಮನಿಗೆ ಅಸದ್ರೂಪಗಳಾದ ದೇಹಾದಿಗಳಿಂದ ಸಂಯೋಗವೂ ಇಲ್ಲ ವಿಯೋಗವೂ ಇಲ್ಲ. ಆ ದೇಹಾದಿ ಪ್ರಕಾಶವು ದೃಗ್ರೂಪನಾದ ಆತ್ಮನ ದೆಸೆಯಿಂದಲೇ ಆಗುವುದು. ನೋಡುವ ದೃಕ್ಕು ನೋಡಿಸಿಕೊಳ್ಳುವ ರೂಪವೂ ಇವೆರಡಕ್ಕೂ ಸೂರ್ಯನಿಂದಲೇ ಪ್ರಕಾಶವುಂಟಾದಂತೆ ದ್ರಷ್ಟೃವಾದ ಆತ್ಮನಿಗೂ ದೃಶ್ಯಗಳಾದ ದೇಹಾದಿಗಳಿಗೂ ಆತ್ಮನಿಂದಲೇ ಪ್ರಕಾಶವು ॥೪೭॥ ಜನ್ಮಾದಿಗಳು ದೇಹಕ್ಕೇ ಹೊರತಾಗಿ ಆತ್ಮನಿಗೆ ವಿಕೃತಿಯೂ ಇಲ್ಲ. ಚಂದ್ರನಿಗೆ ಕಲಾಕ್ಷಯವಾದರೆ ಚಂದ್ರನು ಹೋದಂತೆಯೂ ಕಲೆಗಳು ಉಂಟಾದರೆ ಚಂದ್ರನು ಹುಟ್ಟಿದನೆಂದು ಹೇಗೋ ಹಾಗೆ ದೇಹನಿಷ್ಠಗಳಾದ ಉತ್ಪತ್ತಿ ವಿನಾಶಂಗಳು ಆತ್ಮನಲ್ಲಿ ತೋರುವವು ॥೪೮॥ ಪುರುಷನು ಶಯನಂಗೆಯ್ದು ನಿದ್ರೆಯಂ ಮಾಡುವಾಗ ಸ್ವಪ್ನದಲ್ಲಿ ಅವಿದ್ಯಮಾನಗಳಾದ ವಿಷಯಂಗಳನನುಭವಿಸುವಂತೆ ಹೇಗೆ ತಿಳಿದುಕೊಳ್ಳುತ್ತಾರೆಯೋ ಹಾಗೆ ಅಸದ್ರೂಪಂಗಳಾದ ವಿಷಯಾದಿಗಳನ್ನೆಲ್ಲಾ ಬುದ್ಧಿ ಸ್ವ

ತಥಾಪ್ನೋತ್ಯಬುಧೋಭವಮ್ ||೪೯|| ತಸ್ಮಾದಜ್ಞಾನಜಂಶೋಕಮಾತ್ಮಶೋಷವಿಮೋಹನಮ್ | ತತ್ತ್ವಜ್ಞಾನೇನನಿರ್ಹೃತ್ಯಸ್ವಸ್ಥಾಭವಶುಚಿಸ್ಮಿತೇ ||೫೦|| ಶ್ರೀಶುಕಃ || ಏವಂಭಗವತಾತನ್ವೀರಾಮೇಣಪ್ರತಿಬೋಧಿತಾ | ವೈಮನಸ್ಯಂಪರಿತ್ಯಜ್ಯಮನೋಬುದ್ಧ್ಯಾಸಮಾದಧೇ ||೫೧|| ಪ್ರಾಣಾವಶೇಷಉತ್ಸೃಷ್ಟೋರುಕ್ಮೀಹತಬಲಪ್ರಭಃ | ಸ್ಮರನ್ವಿರೂಪಕರಣಂವಿತಥಾತ್ಮಮನೋರಥಃ ||೫೨|| ಅಹತ್ವಾದುರ್ಮತಿಂಕೃಷ್ಣಮಪ್ರತ್ಯೂಹ್ಯಯವೀಯಸೀಮ್ | ಕುಂಡಿನಂನಪ್ರವೇಕ್ಷ್ಯಾಮೀತ್ಯುಕ್ತ್ವಾತತ್ರಾವಸದ್ರುಷಾ || ಯತ್ರಭೋಜಕಟಂನಾಮನಿವಾಸಾಯಾಭವತ್ಪುರಮ್ ||೫೩|| ಭಗವಾನ್ಭೀಷ್ಮಕಸುತಾಮೇವಂನಿರ್ಜಿತ್ಯಭೂಮಿಪಾನ್ |

ಶ್ರೀರುಕ್ಮಿಣೀದೇವ್ಯಾಃ ವಿವಾಹಘಟ್ಟಃ

---

ಹಾರಿಕವಿಷಯವು, ಅಸತ್ಯಪಿ-ಸತ್ಯವಾಗಿ ಇಲ್ಲದೆಯಿದ್ದರೂ, ಆತ್ಮಾನಂ-ಭೋಕ್ತಾರನನ್ನೂ, ವಿಷಯಾನ್-ಭೋಗ್ಯಾರ್ಥಗಳನ್ನೂ, ಫಲಂ-ಭೋಗವನ್ನೂ, ಎಂಬ ಪ್ರಾತಿಭಾಸಿಕವಿಷಯಗಳನ್ನೂ, ಯಥಾ-ಹೇಗೆ, ಅನುಭುಂಕ್ತೇ-ದಿಟವಾದಂತೆ ಕನಸಿನಲ್ಲಿ ಅನುಭವಿಸುತ್ತಿರುವನೋ, ತಥಾ-ಹಾಗೆ ಅಬುಧಃ-ಆತ್ಮಸ್ವರೂಪವನ್ನರಿಯದವನು, ಭವಂ-ಸಂಸಾರವನ್ನು, ಆಪ್ನೋತಿ ಹೊಂದುತ್ತಿದ್ದಾನೆ ||೪೯|| ತಸ್ಮಾತ್-ಆ ಕಾರಣದಿಂದ, ಅಜ್ಞಾನಜಂ-ಅಜ್ಞಾನದಿಂದ ಹುಟ್ಟಿದ, ಆತ್ಮಶೋಷವಿಮೋಹನಂ-ಮನಸ್ಸನ್ನೊಣಗಿಸುವ ಮತ್ತು ಮೋಹಗೊಳಿಸುವಂಥಾ, ಶೋಕಂ-ದುಃಖವನ್ನು, ತತ್ತ್ವಜ್ಞಾನೇನ-ಯಥಾರ್ಥವಾದ ಅರುಹಿನಿಂದ, ನಿರ್ಹೃತ್ಯ-ಹೋಗಲಾಡಿಸಿಕೊಂಡು, ಶುಚಿಸ್ಮಿತೇ-ಬಿಳುಪಾದ ನಗೆಯುಳ್ಳವಳೇ! ಸ್ವಸ್ಥಾ-ಸಮಾಹಿತಚಿತ್ತಳು, ಭವ-ಆಗು ||೫೦|| (ಶುಕಮುನಿವಚನವು) ತನ್ವೀ-ರುಕ್ಮಿಣಿಯು, ಭಗವತಾ-ಸರ್ವಜ್ಞನಾದ, ರಾಮೇಣ-ಬಲಭದ್ರನಿಂದ, ಏವಂ-ಹೀಗೆ, ಪ್ರತಿಬೋಧಿತಾ-ಅರುಹಿಸಲ್ಪಟ್ಟವಳಾಗಿ, ವೈಮನಸ್ಯಂ-ಅಸಮಾಧಾನವನ್ನು, ಪರಿತ್ಯಜ್ಯ-ತೊರೆದು, ಮನಃ-ಸಂದಿಗ್ಧವಾದ ಅಂತರಂಗವನ್ನು, ಬುದ್ಧ್ಯಾ-ಸಿದ್ಧಜ್ಞಾನದಿಂದ, ಸಮಾದಧೇ-ಸಮಾಧಾನಗೊಳಿಸಿಕೊಂಡಳು ||೫೧|| ಪ್ರಾಣಾವಶೇಷಃ-ಪ್ರಾಣಂಗಳೇ ಮಿಕ್ಕವುಗಳಾಗ ಉಳ್ಳವನಾಗಿ, ಉತ್ಸೃಷ್ಟಃ-ಬಿಡಲ್ಪಟ್ಟವನಾದ, ರುಕ್ಮೀ-ರುಕ್ಮಿರಾಯನು, ಹತಬಲಪ್ರಭಃ-ನಾಶಗೊಳಿಸಲ್ಪಟ್ಟ ಸೈನ್ಯವೂ ತೇಜಸ್ಸೂ ಉಳ್ಳವನಾಗಿಯೂ, ವಿರೂಪಕರಣಂ-ತನಗೆ ವಿಕಾರರೂಪವಂ ಮಾಡಿರುವುದನ್ನು, ಸ್ಮರನ್-ನೆನಪುಗೊಳ್ಳುವನಾಗಿಯೂ, ವಿತಥಾತ್ಮಮನೋರಥಃ-ವ್ಯರ್ಥವಾದ ಮನಸ್ಸಿನ ಸಂಕಲ್ಪಂಗಳುಳ್ಳವನಾಗಿಯೂ, ||೫೨|| ದುರ್ಮತಿಂ-ದುಷ್ಟಬುದ್ಧಿಯುಳ್ಳ, ಕೃಷ್ಣಂ-ವಾಸುದೇವನನ್ನು, ಅಹತ್ವಾ-ಕೊಲ್ಲದೆ, ಯವೀಯಸೀಂ-ತಂಗಿಯಾದ ರುಕ್ಮಿಣಿಯನ್ನು, ಅಪ್ರತ್ಯೂಹ್ಯ-ಹಿಂದಕ್ಕೆ ಕೊಂಡುಬಾರದೆ, ಕುಂಡಿನಂ-ಗುಂಡೂರನ್ನು, ನಪ್ರವೇಕ್ಷ್ಯಾಮಿ-ಪ್ರವೇಶಿಸುವುದಿಲ್ಲವು. ಇತ್ಯುಕ್ತ್ವಾ-ಹೀಗೆಹೇಳಿ, ರುಷಾ-ಸಿಟ್ಟಿನೊಡನೆ, ತತ್ರ-ಅಲ್ಲಿ, ಅವಸತ್-ವಾಸಂಗೆಯ್ದನು. ಯತ್ರ-ಯಾವ ಸ್ಥಳದಲ್ಲಿ, ಭೋಜಕಟಂನಾಮ-ಭೋಜಕಟವೆಂದು ಪ್ರಸಿದ್ಧವಾದ, ಪುರಂ-ನಗರವು, ನಿವಾಸಾಯ-ಇರುವುದಕ್ಕೆ, ಅಭವತ್-ಆಯಿತೋ ||೫೩|| ಕುರೂದ್ವಹ-ಕುರುಕುಲೋದ್ಧಾರಕನಾದ ಪರೀಕ್ಷಿತ್ತುವೇ! ಭಗವಾನ್-ಶ್ರೀಹರಿಯು, ಭೂಮಿಪಾನ್-ಧೊರೆಗಳನ್ನು, ನಿರ್ಜಿತ್ಯ-ಗೆದ್ದು, ಏವಂ-ಹೀಗೆ, ಭೀಷ್ಮಕಸುತಾಂ-ಭೀಷ್ಮಕರಾಯನ ಮಗಳನ್ನು, ಪುರಂ-ದ್ವಾರಕಾನಗರಕ್ಕೆ, ಆನೀಯ-ತಂದು, ವಿ

---

ರೂಪಜ್ಞಾನವಿಲ್ಲದ್ದರಿಂದ ಅಜ್ಞಾನಿಗಳು ಸಂಸಾರವ ನನುಭವಿಸುತ್ತಾರೆ ||೪೯|| ಎಲೈ ರುಕ್ಮಿಣಿಯೇ! ಆ ಕಾರಣದಿಂದ ದೇಹಶೋಷಕವಾದ ಮೋಹಕವಾದ ಅಜ್ಞಾನಜನ್ಯವಾದ ಶೋಕವ ತತ್ತ್ವಜ್ಞಾನದಿಂದ ಪರಿಹರಿಸಿಕೊಂಡು ಸ್ವಸ್ಥಳಾಗು ||೫೦|| ಎಂದು ಭಗವಂತನಾದ ಬಲರಾಮನಿಂದ ಬೋಧಿತಳಾಗಿ ರುಕ್ಮಿಣಿಯು ವೈಮನಸ್ಯವಂ ಬಿಟ್ಟು ಮನವ ಬುದ್ಧಿಯೊಡನೆ ಸೇರಿಸಿ ಸ್ವಸ್ಥಳಾದಳು ||೫೧|| ಪ್ರಾಣದೊಡನೆ ಬಿಡಲ್ಪಟ್ಟ ರುಕ್ಮಿಯು ದ್ವೇಷಿಗಳಾದ ಯಾದವರಿಂದ ಹತಪ್ರಾಯನಾಗಿ ವ್ಯರ್ಥಮನೋರಥನಾಗಿ ತನ್ನ ವೈರೂಪ್ಯವಂ ಸ್ಮರಿಸಿಕೊಂಡು ದುಃಖಿತನಾಗಿ ||೫೨|| ಭೋಜಕಟವೆಂಬ ನಾಮಧೇಯವುಳ್ಳ ಒಂದು ಮಹತ್ತಾದ ಪುರವಂ ನಿರ್ಮಿಸಿ "ನನ್ನ ತಂಗಿಯನ್ನು ಅಪಹರಿಸಿದ ದುರ್ಬುದ್ಧಿಯುಳ್ಳ ಆ ಕೃಷ್ಣನಂ ಸಂಹರಿಸದೆ ತಂಗಿಯಾದ ರುಕ್ಮಿಣಿಯಂ ಕರೆದುಕೊಂಡು ಬಾರದೆ ಕುಂಡಿನ ನಗರಪ್ರವೇಶವ ಮಾಡುವುದಿಲ್ಲವು" ಎಂದು ರೋಷದಿಂದ ಆ ಪುರದಲ್ಲಿ ವಾಸಂಗೆಯ್ದನು ||೫೩|| ಅನಂತರದಲ್ಲಿ ಭಗವಂತನಾದ ಶ್ರೀಕೃಷ್ಣನು ಸರ್ವಕ್ಷತ್ರಿಯರಂ ಜಯಿಸಿ ರುಕ್ಮಿಣಿಯಂ ತನ್ನ ಪುರಕ್ಕೆ ಕರೆದುಕೊಂಡು ಹೋಗಿ

ಪುರಮಾನೀಯವಿಧಿವದುಪಯೇಮೇಕುರೂದ್ವಹ ॥೫೪॥ ತದಾಮಹೋತ್ಸವೋನೄಣಾಂಯದುಪು
ರ್ಯಾಂಗೃಹೇಗೃಹೇ ॥ ಅಭೂದನನ್ಯಭಾವಾನಾಂಕೃಷ್ಣೇಯದುಪತೌನೃಪ ॥೫೫॥ನರಾನಾರ್ಯಶ್ಚಮುದಿ
ತಾಃಪ್ರಮೃಷ್ಟಮಣಿಕುಂಡಲಾಃ । ಪಾರಿಬರ್ಹಮುಪಾಜಹ್ರುರ್ವರಯೋಶ್ಚಿತ್ರವೇಷಯೋಃ ॥೫೬॥ ಸಾ
ವೃಷ್ಣಿಪುರ್ಯುತ್ತಭಿತೇಂದ್ರಕೇತುಭಿರ್ವಿಚಿತ್ರಮಾಲ್ಯಾಂಬರರತ್ನತೋರಣೈಃ । ಬಭೌಪ್ರತಿದ್ವಾರ್ಯುಪ
ಕ್ಲೃಪ್ತಮಂಗಳೈರಾಪೂರ್ಣಕುಂಭಾಗರುಧೂಪದೀಪಕೈಃ ॥೫೭॥ ಸಿಕ್ತಮಾರ್ಗಾಂಮದಚ್ಯುದ್ಭಿರಾ
ಹೂತಪ್ರೇಷ್ಠಭೂಭುಜಾಮ್ । ಗಜೈರ್ದ್ವಾಃಸುಪರಾಮೃಷ್ಟರಂಭಾಪೂಗೋಪಶೋಭಿತಾಮ್॥೫೮॥
ಕುರುಸೃಂಜಯಕೈಕೇಯವಿದರ್ಭಯದುಕುಂತಯಃ । ಮಿಥೋಮುಮುದಿರೇತಸ್ಮಿನ್ಸಂಭ್ರಮಾತ್ಪ

---

ಧಿವತ್-ಕ್ಷತ್ರಿಯವಿಧಿಪ್ರಕಾರ, ಉಪಯೇಮೇ-ಮದುವೆ ಮಾಡಿಕೊಂಡನು ॥೫೪॥ ನೃಪ-ಅರಸೇ! ತದಾ-ಆಗ, ಯದುಪುರ್ಯಾಂ-ಯಾದವನಗರವಾದ ದ್ವಾರಕೆಯಲ್ಲಿ, ಯದುಪತೌ-ಯಾದವರಿಗೊಡೆಯನಾದ, ಕೃಷ್ಣೇ-ವಾಸುದೇವನಲ್ಲಿ, ಅನನ್ಯಭಾವಾನಾಂ-ಅಭೇದಬುದ್ಧಿಯುಳ್ಳವರಾದ, ನೄಣಾಂ-ಮನುಷ್ಯರ, ಗೃಹೇಗೃಹೇ-ಮನೆಯಲ್ಲಿಯೂ, ಮಹೋತ್ಸವಃ-ದೊಡ್ಡ ಹಬ್ಬವು, ಅಭೂತ್-ಆಯಿತು ॥೫೫॥ ಪ್ರಮೃಷ್ಟಮಣಿಕುಂಡಲಾಃ-ಅತ್ಯುತ್ತಮವಾದ ರನ್ನದ ಕಿವಿಯೊಡವೆಗಳುಳ್ಳ, ಮುದಿತಾಃ-ಸಂತಸಮುಂಟಾದ, ನರಾನಾರ್ಯಶ್ಚ-ಗಂಡಸರೂ ಹೆಂಗಸರೂ, ಚಿತ್ರವೇಷಯೋಃ-ಅಚ್ಚರಿಕರವಾದ ಮದುವಣಿಗಾಲಂಕಾರವುಳ್ಳ, ವರಯೋಃ-ದಂಪತಿಗಳಿಗೆ, ಪಾರಿಬರ್ಹಂ-ಕೊಡತಕ್ಕ ಉಡುಗರೆಯನ್ನು ಉಪಾಜಹ್ರುಃ-ಕಾಣಿಕೆಯಾಗಿ ತಂದರು ॥೫೬॥ ಸಾವೃಷ್ಣಿಪುರೀ-ಆ ಯದುನಗರಿಯು, ಉತ್ತಭಿತೇಂದ್ರಕೇತುಭಿಃ-ಎತ್ತಲ್ಪಟ್ಟ ಇಂದ್ರಧ್ವಜಂಗಳಿಂದಲೂ, ವಿಚಿ. ... ತೋರಣೈಃ-ವಿಚಿತ್ರ-ಹಲವುಬಣ್ಣದ, ಮಾಲ್ಯ-ಪುಷ್ಪಸರಂಗಳೂ, ಅಂಬರ-ವಸ್ತ್ರಂಗಳೂ, ರತ್ನ-ಮಣಿಗಳೂ, ಉಳ್ಳ, ತೋರಣೈಃ-ಬಾಗಲಪಟ್ಟಿಕೆಗಳಿಂದಲೂ, ಉಪಕ್ಲೃಪ್ತಮಂಗಳೈಃ-ತಪ್ಪದೆ ಇರಿಸಲ್ಪಟ್ಟಅರಳು, ಗರಿಕೆ, ಹುವ್ವು, ಬಾಳೆ, ಬಾಳೆಯಕಂಬ ಮೊದಲಾದವುಗಳಿಂದಲೂ, ಆಪೂರ್ಣ-ಜಲದಿಂದಲೂ ಧಾನ್ಯಾದಿಗಳಿಂದಲೂ ತುಂಬಿದ, ಕುಂಭ-ಕಲಶಗಳಿಂದಲೂ, ಅಗರುಧೂಪ-ಅಗಿಲುಚಕ್ಕೆಗಳ ಪರಿಮಳದ ಹೊಗೆಗಳಿಂದಲೂ, ದೀಪಕೈಃ-ದೀವಿಗೆಗಳಿಂದಲೂ, ಪ್ರತಿದ್ವಾರಿ-ಬಾಕಲಬಾಕಲಗಳಲ್ಲಿಯೂ, ಬಭೌ-ಪ್ರಕಾಶಿಸಿತು ॥೫೭॥ ಆಹೂತಪ್ರೇಷ್ಠಭೂಭುಜಾಂ-ಕರೆಯಿಸಲ್ಪಟ್ಟ ಶ್ರೇಷ್ಠರಾದ ಅರಸುಗಳ, ಮದಚ್ಯುದ್ಭಿಃ-ಗಜೈಃ-ಮದೋದಕವಂ ಸುರಿಸುತ್ತಿರುವ ಆನೆಗಳಿಂದ, ಸಿಕ್ತಮಾರ್ಗಾಂ-ಚಿಮುಕಿಸಲ್ಪಟ್ಟ ದಾರಿಗಳುಳ್ಳಂಥಾ, ದ್ವಾಃಸು-ಬಾಗಿಲುಗಳಲ್ಲಿ, ಪರಾಮೃಷ್ಟ-ಸಾರಿಸಲ್ಪಟ್ಟದ್ದಾಗಿ, ರಂಭಾ-ಬಾಳೇಮರಗಳಿಂದಲೂ, ಪೂಗ-ಅಡಿಕೆ ಹೊಂಬಾಳೆ ಗೊನೆಗಳಿಂದಲೂ, ಉಪಶೋಭಿತಾಂ-ಅಲಂಕರಿಸಲ್ಪಟ್ಟದ್ದಾದ ॥೫೮॥ ನಗರಿಯಂ ಕಂಡು, ತಸ್ಮಿನ್-ಆ ನಗರದಲ್ಲಿ, ಸಂಭ್ರಮಾತ್-ಔತ್ಸುಕ್ಯದಿಂದ, ಓಡಾಡುತಿರುವ ಸಂಚರರೊಳಗೆ, ಕುರು ... ಕುಂತಯಃ-ಕುರುಗಳು, ಸೃಂಜಯರು, ಕೈಕೇಯರು, ವಿದರ್ಭರು, ಯದುಗಳು, ಕುಂತಿಗಳು ಎಂಬ ಆ ಯಾದೇಶದ ಅರಸುಗಳೂ, ದೊಡ್ಡ ಮನುಷ್ಯರೂ, ಸೇರಿ, ಮಿಥಃ-ಅನ್ಯೋನ್ಯವಾಗಿ, ಮುಮುದಿರೇ--

---

ಯಥಾಶಾಸ್ತ್ರವಾಗಿ ವಿವಾಹವಂ ಮಾಡಿಕೊಂಡನು ॥೫೪॥ಎಲೈಅರಸೇ! ಆಗ ಯಾದವರ ಆವಾಸಸ್ಥಾನವಾದ ದ್ವಾರಕೆಯಲ್ಲಿ ಶ್ರೀಕೃಷ್ಣನಲ್ಲಿ ಅಭೇದಭಾವನೆಯಿಂದ ಇರುವ ಪುರವಾಸಿಗಳಾದ ಜನರಿಗೆ ಮನೆಮನೆಗಳಲ್ಲಿಯೂ ಮಹೋತ್ಸವವಾಯಿತು ॥೫೫॥ ಉತ್ತಮಂಗಳಾದ ಕುಂಡಲಂಗಳಂ ಧರಿಸಿದವರಾಗಿ ಸ್ತ್ರೀಯರು ಪುರುಷರು ಸಂತುಷ್ಟರಾಗಿ ರುಕ್ಮಿಣೀ ಕೃಷ್ಣರಿಗೆ ಉಡುಗರೆಗಳಂ ಕೊಟ್ಟರು ॥೫೬॥ಆಗ ಶ್ರೀಕೃಷ್ಣ ವಿವಾಹೋತ್ಸವ ಕಾಲದಲ್ಲಿ ಆದ್ವಾರಕಾ ಪುರವು ಎತ್ತಿಕಟ್ಟಲ್ಪಟ್ಟ ಧ್ವಜವಿಶೇಷಂಗಳಿಂದಲೂ ಚಿತ್ರಗಳಾದ ಮಾಲ್ಯಗಳಿಂದಲೂ ರತ್ನಗಳಿಂದಲೂ ತೋರಣಂಗಳಿಂದಲೂ ಮತ್ತು ಪ್ರತಿಗೃಹದ್ವಾರಂಗಳಲ್ಲಿಯೂ ಕಲ್ಪಿಸಲ್ಪಟ್ಟ ಲಾಜಾಂಕುರ ಪುಷ್ಪಮುಖ ಶುಭದ್ರವ್ಯಂಗಳಿಂದಲೂ ಅಗರು ಧೂಪಂಗಳಿಂದಲೂಸಹ ಶೋಭಿತವಾಗಿ ಪ್ರಕಾಶಿಸಿತು ॥೫೭॥ ವಿವಾಹಾರ್ಥವಾಗಿಬಂದ ಅರಸುಗಳ ಆನೆಗಳ ಮದೋದಕಗಳಿಂದ ಬೀದಿಗಳು ನೆನೆಯಿಸಲ್ಪಟ್ಟವು ॥೫೮॥ಬಂದಿರುವ ಕೌರವರು ಸೃಂಜಯರು ಕೈಕೇಯರು ವಿದರ್ಭರು ಯಾದವರು ಕುಂತಿಗಳು ಎಲ್ಲರೂ ಪರಸ್ಪರವಾಗಿ ಸಂ

ವಿಧಾವತಾಮ್ ॥೫೯॥ ರುಕ್ಮಿಣ್ಯಾಹರಣಂಶ್ರುತ್ವಾಗೀಯಮಾನಂತತಸ್ತತಃ ।ರಾಜಾನೋರಾಜಕನ್ಯಾಶ್ಚಬಭೂವುರ್ಭೃಶವಿಸ್ಮಿತಾಃ॥೬೦॥ ದ್ವಾರಕಾಯಾಮಭೂದ್ರಾಜನ್ಮಹಾಮೋದಃಪುರೌಕಸಾಮ್। ರುಕ್ಮಿಣ್ಯಾರಮಯೋಪೇತಂದೃಷ್ಟ್ವಾಕೃಷ್ಣಂಶ್ರಿಯಃಪತಿಮ್ ॥ .. ... ॥೬೧॥

ಇತಿಶ್ರೀಮದ್ಭಾಗವತೆ ದಶಮಸ್ಕಂಧೆ ಚತುಃಪಂಚಾಶೋಽಧ್ಯಾಯಃ

---

ಸಂತೋಷಿಸಿದರು ॥೫೯॥ ತತಸ್ತತಃ-ಅಲ್ಲಲ್ಲಿ, ಗೀಯಮಾನಂ-ಹಾಡಲ್ಪಡುತ್ತಿರುವ, ರುಕ್ಮಿಣ್ಯಾಹರಣಂ-ರುಕ್ಮಿಣೀದೇವಿಯಂತಂದಕಥೆಯನ್ನು, ಶ್ರುತ್ವಾ-ಕೇಳಿ, ರಾಜಾನಃ-ಅರಸುಗಳು, ರಾಜಕನ್ಯಾಶ್ಚ-ಮದುವೆಯಿಲ್ಲದ ರಾಜಪುತ್ರಿಯರೂ, ಭೃಶವಿಸ್ಮಿತಾಃ-ಅಧಿಕವಾದ ಆಶ್ಚರ್ಯವುಳ್ಳವರಾದವರು. ಬಭೂವುಃ-ಆದರಂತೆ ॥೬೦॥ ರಾಜನ್-ಪರೀಕ್ಷಿದ್ರಾಯನೇ! ರಮಯಾ-ಲಕ್ಷ್ಮ್ಯಂಶದಿಂ ಅವತರಿಸಿದವಳಾದ, ರುಕ್ಮಿಣ್ಯಾ-ವೈದರ್ಭಿಯೊಡನೆ, ಉಪೇತಂ-ಕೂಡಿದವನಾದ, ಶ್ರಿಯಃಪತಿಂ-ಲಕ್ಷ್ಮಿಗೊಡೆಯನಪ್ಪ ನಾರಾಯಣನಾದ, ಕೃಷ್ಣಂ-ವಾಸುದೇವನನ್ನು, ದೃಷ್ಟ್ವಾ-ನೋಡಿ, ದ್ವಾರಕಾಯಾಂ-ಕುಶಸ್ಥಲೀನಗರದೊಳು, ಪುರೌಕಸಾಂ-ನಗರವಾಸಿಗಳಿಗ, ಮಹಾನ್ಮೋದಃ-ದೊಡ್ಡ ಸಂತೋಷವು, ಅಭೂತ್-ಆದುದು. . . . . ॥೬೧॥

ಇಂತೆಂಬಲ್ಲಿಗೆ ಭಾಗವತ ಪ್ರತಿಪದಾರ್ಥ ಬೋಧಿನಿಯೆಂಬ ಟೀಕೆಯೊಳು-ದಶಮಸ್ಕಂಧದಲ್ಲಿ-
೫೪ನೆಯ ಅಧ್ಯಾಯಂ ಮುಗಿದುದು

---

ತೋಷಪಟ್ಟರು ॥೫೯॥ ಶ್ರೀಕೃಷ್ಣನಿಂದ ಮಾಡಲ್ಪಟ್ಟ ರುಕ್ಮಿಣೀ ಹರಣವಂ ಕೇಳಿ ತತ್ತದ್ದೇಶವಾಸಿಗಳಾದ ಅರಸುಗಳೂ ರಾಜಕನ್ಯೆಯರೂ ಸಹ ಅತ್ಯಂತವಾಗಿ ಆಶ್ಚರ್ಯಪಟ್ಟರು ॥೬೦॥ ಸಾಕ್ಷಾಲ್ಲಕ್ಷ್ಮೀರೂಪಳಾದ ರುಕ್ಮಿಣಿಯೊಡನೆ ಯುಕ್ತನಾಗಿರುವ ಶ್ರೀಕೃಷ್ಣನಂ ನೋಡಿ ಪುರವಾಸಿಗಳಾದ ಸ್ತ್ರೀಪುರುಷರಿಗೆ ಮಹಾಸಂತೋಷವುಂಟಾಯಿತು ॥ ... ... ... ... ... ... ॥೬೧॥

ಇಂತು ಶ್ರೀಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸಿದನೆಂದುಸೂತಪೌರಾಣಿಕನುನೈ
ಮಿಶಾರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಪೇಳಿದನೆಂಬಲ್ಲಿಗೆಶ್ರೀಮನ್ಮಹೀಶೂರ
ಪುರವರಾಧೀಶಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜ ವಿರಚಿತಮಾದ,ಶ್ರೀಕೃ
ಷ್ಣರಾಜವಾಣೀವಿಲಾಸಮೆಂಬಶ್ರೀಭಾಗವತಪುರಾಣದ ಕರ್ಣಾಟಭಾಷಾ
ವ್ಯಾಖ್ಯಾನದೊಳುದಶಮಸ್ಕಂಧದಲ್ಲಿ ೫೪ನೆಯಅಧ್ಯಾಯಂ
ಸಂಪೂರ್ಣಮಾದುದು.

ಪ್ರದ್ಯುಮ್ನ ಜನನ ಶಂಬರಾಸುರವಧಾದಿ ಕಥಾಪ್ರಾರಂಭ ಘಟ್ಟಃ

ಶ್ರೀಶುಕಃ॥ ಕಾಮಸ್ತು ವಾಸುದೇವಾಂಶೋ ದಗ್ಧಃ ಪ್ರಾಗ್ರುದ್ರಮನ್ಯುನಾ । ದೇಹೋಪಪತ್ತಯೇ ಭೂಯಸ್ತಮೇವ ಪ್ರತ್ಯಪದ್ಯತ॥೧ ಸ ಏವ ಜಾತೋ ವೈದರ್ಭ್ಯಾಂ ಕೃಷ್ಣವೀರ್ಯಸಮುದ್ಭವಃ । ಪ್ರದ್ಯುಮ್ನ ಇತಿ ವಿಖ್ಯಾತಸ್ಸರ್ವತೋಽನವಮಃ ಪಿತುಃ ॥೨॥ ತಂ ಶಂಬರಃ ಕಾಮರೂಪೀ ಹೃತ್ವಾ ತೋಕಮನಿರ್ದಶಮ್ । ಸ ವಿದಿತ್ವಾತ್ಮನಶ್ಶತ್ರುಂ ಪ್ರಾಸ್ಯೋದನ್ವತ್ಯಗಾದ್ಗೃಹಮ್॥೩॥ ತನ್ನಿರ್ಜಗಾರ ಬಲವಾನ್ಮೀನಸ್ಸೋಽಪ್ಯ

---

೫೫ನೆಯ ಅಧ್ಯಾಯದ ಪ್ರತಿಶಬ್ದಾರ್ಥಬೋಧಿನಿಟೀಕೆ.

[ಶ್ರೀ ಶುಕವಚನವು.] ವಾಸುದೇವಾಂಶಃ-ವಾಸುದೇವನಿಂದಧಿಷ್ಠಿತವಾದ, ಚಿತ್ತದಿಂದ ಹುಟ್ಟಿ ಸೃಷ್ಟಿಗೆ ಹೆದ್ದರಿಂದ ವಾಸುದೇವನೆನಿಸುವ, ಕಾಮಸ್ತು-ಭಗವತ್ಸಂಕಲ್ಪಾತ್ಮಕನಾದ ಮನ್ಮಥನಾದರೋ, ಪ್ರಾಕ್-ಪೂರ್ವದಲ್ಲಿ, ರುದ್ರಮನ್ಯುನಾ-ಮಹೇಶ್ವರನ ಸಿಟ್ಟಿನಿಂದ, ದಗ್ಧಃ-ಸುಡಲ್ಪಟ್ಟವನಾದ್ದರಿಂದ, ಭೂಯಃ-ಮರಳಿಯೂ, ದೇಹೋಪಪತ್ತಯೇ-ಶರೀರಿಯಾಗಲು. ತಮೇವ-ವಾಸುದೇವನಾದ ಕೃಷ್ಣನನ್ನೇ, ಪ್ರತ್ಯಪದ್ಯತ-ಜಾಂಬವತ್ಯಾದಿಗಳ ವಿವಾಹಕ್ಕಿಂತಲೂ ಮುಂಚೆಯೇ ಸೇರಿದನು ॥೧॥ ಸಏವ-ಆ ಕಾಮನೇ, ಕೃಷ್ಣವೀರ್ಯಸಮುದ್ಭವಃ-ಕೃಷ್ಣನ ವೀರ್ಯದಿಂದ ಜನ್ಮವುಳ್ಳವನಾಗಿ, ವೈದರ್ಭ್ಯಾಂ-ರುಕ್ಮಿಣಿಯಲ್ಲಿ, ಜಾತಃ-ಹುಟ್ಟಿದವನಾಗಿ, ಸರ್ವತಃ-ಸಕಲಗುಣಗಳಿಂದಲೂ, ಪಿತುಃ-ತಂದೆಗಿಂತಲೂ, ಅನವಮಃ-ಕಡಮೆಯಿಲ್ಲದವನಾಗಿ, ಪ್ರದ್ಯುಮ್ನ ಇತಿ-ಪ್ರದ್ಯುಮ್ನನೆಂದು, ವಿಖ್ಯಾತಃ-ಹೆಸರುಗೊಂಡವನಾದನು ॥೨॥ ಶಂಬರಃ-ಶಂಬರಾಸುರನು, ಕಾಮರೂಪೀ-ಬಯಸಿದ ಆಕಾರವಂ ಪಡೆಯಲುಳ್ಳವನಾದ್ದರಿಂದ, ಅನಿರ್ದಶಂ-ಪುರುಡಿನ ಹತ್ತುದಿನಗಳನ್ನು ಕಳೆಯದಿರುವ, ತಂತೋಕಂ-ಆ ಮಗುವನ್ನು, ಹೃತ್ವಾ-ಅಪಹರಿಸಿಕೊಂಡುಹೋಗಿ, ಸಃ-ಅವನು, ಆತ್ಮನಃ-ತನ್ನ, ಶತ್ರುಂ-ವೈರಿಯನ್ನಾಗಿ, ವಿದಿತ್ವಾ-ತಿಳಿದು, ಉದನ್ವತಿ-ಸಮುದ್ರದಲ್ಲಿ, ಪ್ರಾಸ್ಯ-ಹಾಕಿ, ಗೃಹಂ-ತನ್ನ ಮನೆಯಂಕುರಿತು, ಅಗಾತ್-ಹೋದನು ॥೩॥ ಬಲವಾನ್-ಬಲವುಳ್ಳ, ಮೀನಃ-ದೊಡ್ಡ ಮತ್ಸ್ಯವು, ತಂ-ಆ ಶಿಶುವನ್ನು, ನಿರ್ಜಗಾರ-ನುಂಗಿತು. ಸೋಽಪಿ-ಆ ಮೀನೂಕೂಡ, ಅಪರೈಸ್ಸಹ-ಇತರಮೀನುಗಳೊಡನೆ, ವೃತಃ-ಬಳಸಲ್ಪಟ್ಟದ್ದಾಗಿ, ಮತ್ಸ್ಯಜೀವಿಭಿಃ-ಮೀನುಗಳಂಹಿಡಿದು

---

೫೫ನೆಯ ಅಧ್ಯಾಯವು

ಶ್ರೀಧರೀಯ ಶ್ಲೋಕಃ॥ ಪಂಚಪಂಚಾಶತ್ತಮೇ ತು ಪ್ರದ್ಯುಮ್ನೋ ಜನಿ ಕೃಷ್ಣತಃ । ಶಂಬರೇಣ ಹೃತಸ್ಸೋಽಥ ಹತ್ವಾ ತಂ ಕಾಂತಯಾಗಮತ್॥ ‡ ॥ಟೀ॥ ಐವತ್ತೈದನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನಿಗೆ ರುಕ್ಮಿಣೀ ಗರ್ಭದಲ್ಲಿ ಪ್ರದ್ಯುಮ್ನನೆಂಬ ಪುತ್ರನು ಜನಿಸಿದನು. ಶಂಬರನೆಂಬ ಅಸುರನು ಆಪ್ರದ್ಯುಮ್ನನನ್ನು ಅಪಹರಿಸಿಕೊಂಡು ಹೋಗಿ ಸಮುದ್ರದಲ್ಲಿ ಹಾಕಲಾಗಿ, ಆಶಿಶುವಂ ಒಂದುಮತ್ಸ್ಯವು ನುಂಗಲಾಗಿ, ಆಮತ್ಸ್ಯವಂ ಹಿಡಿದು ಮತ್ಸ್ಯಗ್ರಾಹಿಗಳು ಛೇದಿಸಲಾಗಿ, ಅದರ ಉದರದಲ್ಲಿದ್ದ ಆಶಿಶುವಂ ಶಂಬರನ ಪತ್ನಿಯಾದ ಮಾಯಾವತಿಗೆ ಒಪ್ಪಿಸಲಾಗಿ ಆಸಮಯದಲ್ಲಿ ನಾರದಮುನಿಯುಬಂದು ಆಮಾಯಾವತಿಗೆ ಈಶಿಶುವೇ ನಿನ್ನಪತಿಯೆಂದು ಹೇಳಲಾಗಿ ಪೂರ್ವದಲ್ಲಿ ರತಿದೇವಿಯಾದ ಮಾಯಾವತಿಯು ಆಪ್ರದ್ಯುಮ್ನನಂ ಪೋಷಿಸಿ ಆಪ್ರದ್ಯುಮ್ನನಿಂದ ಶಂಬರನಂ ಸಂಹಾರವಂಮಾಡಿಸಿ ಆಪತಿಯಾದ ಪ್ರದ್ಯುಮ್ನನೊಡನೆ ದ್ವಾರಕಾ ಪುರಕ್ಕೆ ಬಂದಳೆಂಬ ಅರ್ಥವ ಶ್ರೀಶುಕಮುನಿಯು ಪರೀಕ್ಷಿದ್ರಾಯನಂಕುರಿತು ನಿರೂಪಿಸುವನದೆಂತೆನೆ,-

ಎಲೈಅರಸೇ! ವಾಸುದೇವಾಂಶವಾದ ಕಾಮನು ಪೂರ್ವದಲ್ಲಿ ಪರಮೇಶ್ವರನ ಕೋಪದಿಂದ ದಗ್ಧನಾಗಿ ಪುನಶ್ಚ ದೇಹಪ್ರಾಪ್ತ್ಯರ್ಥವಾಗಿ ಆಭಗವಂತನನ್ನೇ ಎಯ್ದಿದನು ॥೧॥ ಆಕಾಮನು ರುಕ್ಮಿಣಿಯಲ್ಲಿ ಶ್ರೀಕೃಷ್ಣನಿಂದ ಪ್ರದ್ಯುಮ್ನನೆಂಬ ನಾಮಧೇಯದಿಂದ ಯುಕ್ತನಾಗಿ ತಂದೆಗೆ ಸಮಾನನಾಗಿ ಹುಟ್ಟಿದನು ॥೨॥ ಆಗ ಕಾಮರೂಪಿಯಾದ ಶಂಬರಾಸುರನು ಆಬಾಲಕನನ್ನು ಅಪಹರಿಸಿಕೊಂಡುಹೋಗಿ ತನಗೆ ಶತ್ರುವೆಂದು ತಿಳಿದುಕೊಂಡು ಸಮುದ್ರದಲ್ಲಿ ಹಾಕಿಬಿಟ್ಟು ಮನೆಗೆ ಹೋದನು ॥೩॥ ಸಮುದ್ರದಲ್ಲಿ ಮಹತ್ತಾದ ಮತ್ಸ್ಯವು ಆಶಿಶುವಂ ನುಂಗಿತು. ಅನಂತರದಲ್ಲಿ ಅನೇಕಮತ್ಸ್ಯಂಗಳೊಡನೆ ಆಮತ್ಸ್ಯವಂ ಬಲೆಹಾಕಿಹಿಡಿದು ಮತ್ಸ್ಯಗ್ರಾಹಿಗಳು ॥೪॥ ಅದ್ಭುತಂಪು ಶಂಬರನಿಗೆ ಕಾಣಿಕೆಯನ್ನಾಗಿ ಕೊಟ್ಟರು. ಆಮತ್ಸ್ಯವಂ ಸ್ವಯಂಪಾಕಿಗಳು ಅಡಿಗೆ

ಪತ್ನೈಸ್ಸಹ। ವೃತೋಜಾಲೇನಮಹತಾಗೃಹೀತೋಮತ್ಸ್ಯಜೀವಿಭಿಃ।೪।ತಂಶಂಬರಾಯಕೈವರ್ತಾ ಉಪಾಜಹ್ರುರುಪಾಯನಮ್ । ಸೂದಾಮಹಾನಸಂನೀತ್ವಾವದ್ಯನ್ಸ್ವಧಿತಿನಾದ್ಭುತಮ್ ।೫।ದೃಷ್ಟ್ವಾತದುದರೇಬಾಲಂಮಾಯಾವತ್ಯೈನ್ಯವೇದಯನ್ । ನಾರದೋಕಥಯತ್ಸರ್ವಂತಸ್ಯಾಶ್ಶಂಕಿತಚೇತಸಃ। ಬಾಲಸ್ಯತತ್ತ್ವಮುತ್ಪತ್ತಿಂಮತ್ಸ್ಯೋದರನಿವೇಶನಮ್ ।೬। ಸಾಚಕಾಮಸ್ಯವೈಪತ್ನೀರತಿರ್ನಾಮಯಶಸ್ವಿನೀ । ಪತ್ಯುರ್ನಿರ್ದಗ್ಧದೇಹಸ್ಯದೇಹೋತ್ಪತ್ತಿಂಸಿರೀಕ್ಷತೀ ।೭। ನಿರೂಪಿತಾಶಂಬರೇಣಸಾಸೂಪೌದನಸಾಧನೇ । ಸಾಚತಂಸುಂದರವರಂವಿಲೋಕ್ಯಮುದಿತಾನನಾ । ಕಾಮದೇವಂಶಿಶುಂಬುದ್ಧ್ವಾಚಕ್ರೇಸ್ನೇಹಂತದಾರ್ಭಕೇ ।೮। ನಾತಿದೀರ್ಘೇಣಕಾಲೇನಸಕಾರ್ಷ್ಣಿರೂಢಯೌವನಃ । ಜನಯಾಮಾಸನಾರೀಣಾಂವೀಕ್ಷಂತೀನಾಂಚವಿಭ್ರಮಮ್ ।೯। ಸಾತಂಪತಿಂಪದ್ಮದಳಾಯತೇಕ್ಷಣಂಪ್ರಲಂಬ

---

ಜೀವಿಸುವರಿಂದ, ಮಹತಾ-ದೊಡ್ಡದಾದ, ಜಾಲೇನ-ಬಲೆಯಿಂದ, ಗೃಹೀತಃ-ಹಿಡಿಯಲ್ಪಟ್ಟದ್ದಾಯಿತು ॥೪॥ ಕೈವರ್ತಾಃ-ಮೀನುಹಿಡಿಯುವವರು, ತಂ-ಆ ಮೀನನ್ನು, ಶಂಬರಾಯ-ಶಂಬರಾಸುರಂಗೆ, ಉಪಾಯನಂ-ಕಾಣಿಕೆಯನ್ನಾಗಿ, ಉಪಾಜಹ್ರುಃ-ತಂದುಕೊಟ್ಟರು. ಸೂದಾಃ-ಅಡಿಗೆಯವರು, ಮಹಾನಸಂ-ಪಾಕಶಾಲೆಗೆ, ನೀತ್ವಾ-ಕೊಂಡುಹೋಗಿ, ಸ್ವಧಿತಿನಾ-ಕತ್ತಿಯಿಂದ, ಅವದ್ಯನ್-ಕಡಿದರು ॥೫॥ ತದುದರೇ-ಆ ಮೀನಿನ ಹೊಟ್ಟೆಯಲ್ಲಿ, ಅದ್ಭುತಂ-ಆಶ್ಚರ್ಯವಾದ, ಬಾಲಂ-ಮಾನುಷಶಿಶುವನ್ನು, ದೃಷ್ಟ್ವಾ-ನೋಡಿ, ಮಾಯಾವತ್ಯೈ-ಮಾಯಾವತಿಯೆಂಬವಳಿಗೆ, ನ್ಯವೇದಯನ್-ಅರಿಕೆಮಾಡಿದರು. ಶಂಕಿತಚೇತಸಃ-ಸಂದಿಗ್ಧಹೃದಯಳಾದ, ತಸ್ಯಾಃ-ಆ ಮಾಯಾವತಿಗೆ, ಬಾಲಸ್ಯ-ಆ ಹುಡುಗನ, ತತ್ವಂ-ಯಥಾರ್ಥವನ್ನೂ, ಉತ್ಪತ್ತಿಂ-ಜನನವನ್ನೂ, ಮತ್ಸ್ಯೋದರನಿವೇಶನಂ-ಮೀನಿನ ಹೊಟ್ಟೆಯಲ್ಲಿರಿಸಲ್ಪಟ್ಟದ್ದನ್ನೂ, ನಾರದಃ-ನಾರದಮುನಿಯು, ಸರ್ವಂ-ಎಲ್ಲವನ್ನೂ, ಅಕಥಯತ್-ಹೇಳಿದನು ॥೬॥ ಸಾಚ-ಆ ಮಾಯಾವತಿಯೆಂಬವಳಾದರೋ, ಕಾಮಸ್ಯ-ಮನ್ಮಥನ, ಪತ್ನೀ-ಹೆಂಡತಿಯಾದ, ಯಶಸ್ವಿನೀ-ಕೀರ್ತಿಮತಿಯಾದ, ರತಿರ್ನಾಮ-ರತಿಯೆಂದುಪ್ರಸಿದ್ಧಳಾದವಳು, ನಿರ್ದಗ್ಧದೇಹಸ್ಯ-ಸುಡಲ್ಪಟ್ಟ ಮೈಯುಳ್ಳ, ಪತ್ಯುಃ-ಗಂಡನಾದ ಮನ್ಮಥನ, ದೇಹೋತ್ಪತ್ತಿಂ-ಶರೀರದ ಹುಟ್ಟುವಿಕೆಯನ್ನು. ಸಿರೀಕ್ಷತೀ-ಇದಿರುನೋಡುತ್ತಿರುವಳಾಗಿದ್ದಳು ॥೭॥ ಶಂಬರೇಣ-ಶಂಬರಾಸುರನಿಂದ, ಸಸೂಪೌದನಸಾಧನೇ-ತೊವ್ವೆ ಮೊದಲಾದ ಪರಿಕರಂಗಳಿಂ ಸಹಿತವಾದ ಅನ್ನವಂ ಸಿದ್ಧಪಡಿಸುವ ಕೆಲಸದಲ್ಲಿ, ನಿರೂಪಿತಾ-ಆಜ್ಞಾಪಿಸಲ್ಪಟ್ಟವಳಾಗಿದ್ದಳು ಸಾಚ-ಅವಳಾದರೋ, ಸುಂದರಂ-ಚಲುವನಾದ, ಶಿಶುಂ-ಮಗುವನ್ನು, ವಿಲೋಕ್ಯ-ಕಂಡು, ಮುದಿತಾನನಾ-ಸಂತೋಷಹುಟ್ಟಿದ ಮುಖವುಳ್ಳವಳಾಗಿ, ಕಾಮದೇವಂ-ಮನ್ಮಥನನ್ನಾಗಿ, ಬುದ್ಧ್ವಾ-ತಿಳಿದು, ತದಾ-ಆಗ, ಅರ್ಭಕೇ-ಮಗುವಿನಲ್ಲಿ, ಸ್ನೇಹಂ-ಅನುರಾಗವನ್ನು, ಚಕ್ರೇ-ಮಾಡಿದಳು ॥೮॥ ಸಕಾರ್ಷ್ಣಿಃ-ಆ ಕೃಷ್ಣನಮಗನು, ನಾತಿದೀರ್ಘೇಣ-ಅತ್ಯಂತಾಧಿಕವಲ್ಲದ, ಕಾಲೇನ-ಕೆಲವು ವರುಷಗಳ ವಯಸ್ಸಿನಿಂದಲೇ, ರೂಢಯೌವನಃ-ನೆಟ್ಟುಗೊಂಡ ಪ್ರಾಯಮುಳ್ಳವನಾಗಿ, ವೀಕ್ಷಂತೀನಾಂ-ನೋಡುತ್ತಿರುವ, ನಾರೀಣಾಂ-ಹೆಂಗಳಿಗೆ, ವಿಭ್ರಮಂ-ಕಾಮವಿಲಾಸವನ್ನೂ, ಜನಯಾಮಾಸ-ಹುಟ್ಟಿಸಿದನು ॥೯॥ ಅಂಗ-ಪ್ರಿಯನಾದ ಪರೀಕ್ಷಿದನೇ! ಸಾರತಿಃ-ಆ ರತೀದೇವಿಯು, ಪದ್ಮದಳಾಯತೇಕ್ಷಣಂ-ತಾವರೆಯೆಸಳಿನಂತ ನೀಳಂಗಳಾದ ಕಂಗಳುಳ್ಳಂಥಾ, ಪ್ರಲಂಬಬಾಹುಂ-ಉದ್ದವಾಗಿ ಜೋಲುವ ತೋ

---

ಯಮನೆಗೆ ತೆಗದುಕೊಂಡುಹೋಗಿ ಖಡ್ಗದಿಂದ ಛೇದಿಸಲಾಗಿ ॥೫॥ಅದರ ಉದರದಲ್ಲಿ ಬಾಲಕನಂನೋಡಿ ಶಂಬರನಪತ್ನಿಯಾದ ಮಾಯಾವತಿಯೆಂಬವಳಿಗೆ ತೋರಿಸಿದರು. ಆಗ ಮಾಯಾವತಿಯು ಶಂಕಿತಳಾಗಿರುವಾಗ ನಾರದಋಷಿಯು ಬಂದು ಆಶಿಶುವಿನ ಉತ್ಪತ್ತಿ ಕ್ರಮವನ್ನೆಲ್ಲವಂ ಪೇಳಿದನು ॥೬॥ಅವನು ಕಾಮನು ನಿನ್ನ ಪತಿಯು, ಎಂದು ನಾರದಋಷಿಯು ಪೇಳಿದನು. ಆಮಾಯಾವತಿಯೇ ಪೂರ್ವದಲ್ಲಿ ರತೀದೇವಿಯು, ತನ್ನ ಪತಿಗೆ ಪುನರ್ದೇಹಪ್ರಾಪ್ತಿಯನ್ನೇ ಪ್ರತೀಕ್ಷಿಸಿಕೊಂಡಿದ್ದಳು ॥೭॥ ‡ ॥ಅವಳು ಶಂಬರನಿಂದ ಪಾಕಕೃತ್ಯದಲ್ಲಿ ನಿರೂಪಿಸಲ್ಪಟ್ಟವಳಾಗಿ ಚಲುವನಾದ ಆಶಿಶುವಂ ನೋಡಿ ಕಾಮದೇವನೆಂದರಿತು ಸ್ನೇಹವಂ ಮಾಡಿದಳು ॥೮॥ ಆಪ್ರದ್ಯುಮ್ನನು ಕೆಲವುಕಾಲದಮೇಲೆ ಯೌವನ ಪ್ರಾದುರ್ಭಾವ ವುಳ್ಳವನಾಗಿ ನೋಡುವ ಸ್ತ್ರೀಯರಿಗೆಲ್ಲರಿಗೂ ಉಲ್ಲಾಸಕಾರಿಯಾದನು ॥೯॥ಅಂತಾ ಪ್ರದ್ಯುಮ್ನನಂ ನೋಡಿ ರತಿಯು ತನ್ನ ಪತಿಯನ್ನಾಗಿ ತಿಳಿದು ಅವನಲ್ಲಿ ಪ್ರೇಮದಿಂದ ಪದ್ಮದಳಾಕ್ಷನಾಗಿ ದೀರ್ಘಬಾಹುವಾಗಿ ಮನುಷ್ಯಲೋಕದಲ್ಲಿ ಬಹುಸುಂದರನಾಗಿರುವ ಪ್ರದ್ಯುಮ್ನನಂ ನೋ

ಬಾಹುಂ ನರದೇವಸುಂದರಮ್ । ಸವ್ರೀಡಹಾಸೋತ್ತಭಿತಭ್ರುವೇಕ್ಷತೀ ಪ್ರೀತ್ಯೋಪತಸ್ಥೇ ರತಿರಂಗಸೌ
ರತ್ಯೈಃ ।೧೦। ತಾಮಾಹ ಭಗವಾನ್ ಕಾರ್ಷ್ಣಿರ್ಮಾತಸ್ತೇ ಮತಿರನ್ಯಥಾ । ಮಾತೃಭಾವಮತಿಕ್ರಮ್ಯ ವ
ರ್ತಸೇ ಕಾಮಿನೀ ಯಥಾ ।೧೧। ರತಿಃ । ಭವಾನ್ನಾರಾಯಣಸುತಃ ಶಂಬರೇಣ ಹೃತೋ ಗೃಹಾತ್ । ಅಹಂ ತೇಽಧಿಕೃ
ತಾ ಪತ್ನೀ ರತಿಃ ಕಾಮೋ ಭವಾನ್ ಪ್ರಭೋ ।೧೨। ಏಷ ತ್ವಾನಿರ್ದಶಂ ಸಿಂಧಾವಕ್ಷಿಪಚ್ಛಂಬರೋಽಸುರಃ ।
ಮತ್ಸ್ಯೋಽಗ್ರಸೀತ್ತದುದರಾದಿಹ ಪ್ರಾಪ್ತೋ ಭವಾನ್ ಪ್ರಭೋ ।೧೩। ತಮಿಮಂ ಜಹಿ ದುರ್ಧರ್ಷಂ ದುರ್ಜ
ಯಂ ಶತ್ರುಮಾತ್ಮನಃ । ಮಾಯಾಶತವಿದಂ ತ್ವಂ ಚ ಮಾಯಾಭಿರ್ಮೋಹನಾದಿಭಿಃ ।೧೪। ಪರಿಶೋಚತಿ ತೇ

---

ಳುಗಳುಳ್ಳಂಥಾ, ನರದೇವಸುಂದರಂ-ಮನುಷ್ಯರಲ್ಲಿಯೂ ದೇವರ್ಕಳಲ್ಲಿಯೂ ಚೆಲುವನಾದಂಥಾ, ತಂ-ಆಹುಡುಗನನ್ನು, ಸವ್ರೀ...
ಭ್ರುವಾ-ಸವ್ರೀಡ-ನಾಚಿಕೆಯಿಂ ಸಹಿತವಾದ, ಹಾಸ-ನಗೆಯಿಂದ, ಉತ್ತಭಿತ-ಮೀಂಟಲ್ಪಟ್ಟ, ಭ್ರುವಾ-ಹುಬ್ಬಿನಿಂದ, ಈಕ್ಷ
ತೀ-ನೋಡುವವಳಾಗಿ, ಪ್ರೀತ್ಯಾ-ಅನುರಾಗದಿಂದ, ಸೌರತ್ಯೈಃ-ಸುರತಕ್ರೀಡಾಲಕ್ಷಣಗಳೊಡನೆ, ಪತಿಂ-ಗಂಡನಂ ಪುಭಾವಿಸಿ,
ಉಪತಸ್ಥೇ-ಸೇವಿಸುತ್ತಿದ್ದಳು ॥೧೦॥ ಭಗವಾನ್-ಐಶ್ವರ್ಯವುಳ್ಳ, ಕಾರ್ಷ್ಣಿಃ-ಕೃಷ್ಣನ ಮಗನು, ಮಾತಃ-ತಾಯಿಯೇ! ತೇ-
ನಿನ್ನ, ಮತಿಃ-ಬುದ್ಧಿಯು, ಅನ್ಯಥಾ-ಬೇರೆ ಬಗೆಯಾಗಿದೆ, ಮಾತೃಭಾವಂ-ತಾಯಿಯೆಂಬ ಭಿಪ್ರಾಯವನ್ನ, ಅತಿಕ್ರಮ್ಯ-ಮೀ
ರಿ, ಕಾಮಿನೀ ಯಥಾ-ಕಾಮವುಳ್ಳ ಹಾದರಗಿತ್ತಿಯಂತೆ, ವರ್ತಸೇ-ನಡೆಯುತ್ತಿರುವಿ, ಎಂದು ತಾಂ-ಅವಳಂ ಕುರಿತು, ಆಹ-ನುಡಿ
ದನು ॥೧೧॥ (ರತೀವಾಕ್ಯವು.) ಭವಾನ್-ನೀನು, ನಾರಾಯಣಸುತಃ-ಕೃಷ್ಣನ ಮಗನು, ಶಂಬರೇಣ-ಶಂಬರಾಸುರನಿಂದ,
ಗೃಹಾತ್-ಮನೆಯಿಂದ, ಹೃತಃ-ಅಪಹರಿಸಲ್ಪಟ್ಟವನು, ಅಹಂ-ನಾನು, ತೇ-ನಿನ್ನ, ಅಧಿಕೃತಾ-ಅಧಿಕಾರ ಪಲ್ಲಿರಿಸಲ್ಪಟ್ಟ, ಪತ್ನೀ
ಧರ್ಮದಿಂದಾದ ಹೆಂಡತಿಯಾದ ರತಿಯಾಗಿರುವೆನು ಪ್ರಭೋ-ಒಡೆಯನೇ! ಭವಾನ್-ನೀನು, ಕಾಮಃ-ಮನ್ಮಥನು ॥೧೨॥
ಪ್ರಭೋ-ಒಡೆಯನೇ! ಏಷಶಂಬರೋಽಸುರಃ-ಈ ಶಂಬರನೆಂಬ ದೈತ್ಯನು, ಅನಿರ್ದಶಂ-ಹತ್ತು ದಿನಗಳು ಕಳೆಯದೆಯಿರುವ,
ತ್ವಾ-ನಿನ್ನನ್ನು, ಸಿಂಧೌ-ಕಡಲಿನಲ್ಲಿ, ಪ್ರಾಕ್ಷಿಪತ್-ಎತ್ತಿಹಾಕಿದನು. ಮತ್ಸ್ಯಃ-ಮೀನು, ಅಗ್ರಸೀತ್-ನುಂಗಿತು. ತದುದ
ರಾತ್-ಅದರ ಹೊಟ್ಟೆಯೊಳಗಿನ ಡೆಸೆಯಿಂದ, ಭವಾನ್-ನೀನು, ಇಹ-ಇಲ್ಲಿಗೆ, ಪ್ರಾಪ್ತಃ-ಬಂದವನಾಗಿರುವಿ ॥೧೩॥ ದುರ್ಧರ್ಷಂ-
ತಿರಸ್ಕರಿಸಲಳವಲ್ಲದಂಥಾ, ದುರ್ಜಯಂ-ಪ್ರಯಾಸದಿಂದಲೂ ಗೆಲ್ಲಲಶಕ್ಯನಾದಂಥಾ, ಮಾಯಾಶತವಿದಂ-ನೂರಾರು ಮೋಸಗ
ಳಂ ಬಲ್ಲವನಾದಂಥಾ, ಆತ್ಮನಃಶತ್ರುಂ-ತನಗೆ ವೈರಿಯಾದಂಥಾ, ತಮಿಮಂ-ಆ ಈ ಶಂಬರನನ್ನು, ತ್ವಂಚ-ನೀನೂ ಕೂಡ,
ಮೋಹನಾದಿಭಿಃ-ಮೋಹಗೊಳಿಸುವಿಕೆಯೇ ಮೊದಲಾದ, ಮಾಯಾಭಿಃ-ವಂಚನಾವಿದ್ಯೆಗಳಿಂದ, ಜಹಿ-ಗೆಲ್ಲು ॥೧೪॥ ತೇ-ನಿನ್ನ,
ಮಾತಾ-ಹೆತ್ತತಾಯಿಯಾದ ರುಕ್ಮಿಣಿಯು, ಗತಪ್ರಜಾ-ಕೈತಪ್ಪಿಹೋದ ಮಗುವುಳ್ಳವಳಾದ್ದರಿಂದ, ಕುರರೀವ-ಕುರರಿಯೆಂಬ ಹಕ್ಕಿ
ಯಂತೆ, ಪರಿಶೋಚತಿ-ಅಳುತಿರುವಳು. ಪುತ್ರಸ್ನೇಹಾಕುಲಾ-ಕುಮಾರನಲ್ಲಿ ಅನುರಾಗದಿಂದ ಕದಡಿದ ಮನಸ್ಸುಳ್ಳವಳೂ, ದೀ

---

ಡಿ ಸಂತೋಷದಿಂದ ವಿಕಸಿತ ನೇತ್ರಳಾಗಿ, ಹಾವ ಭಾವ ವಿಲಾಸದಿಂದ ಅವನಂ ಮೋಹಿಸಿದಳು. ॥೧೦॥ ಆಗ ಭಗ
ಂತನಾದ ಪ್ರದ್ಯುಮ್ನನು ಆ ಮಾಯಾವತಿಯಂ ಕುರಿತು ನುಡಿದನು. ಅದೆಂತೆನೆ- ಎಲೌ ತಾಯೇ! ನಿನ್ನ ಬುದ್ಧಿ
ಯು ಮತ್ತೊಂದು ಪ್ರಕಾರವಾಗಿದೆ, ಮಾತೃಭಾವವಂ ಬಿಟ್ಟು ಕಾಮುಕಸ್ತ್ರೀಯಂತೆ ನನ್ನಲ್ಲಿ ನಿನ್ನ ಬುದ್ಧಿಯು
ಇರುವಹಾಗಿದೆ ।೧೧॥ ಎಂದು ನುಡಿದ ಪ್ರದ್ಯುಮ್ನನ ವಾಕ್ಯವಂ ಕೇಳಿ ಮಾಯಾವತಿಯು ಪತಿಯಾದ ಪ್ರದ್ಯುಮ್ನ
ನಂ ಕುರಿತು ಪೇಳಿದಳು. ಎಲೈ ಪುರುಷನೇ! ನೀನು ನಾರಾಯಣನ ಪುತ್ರನು. ಶಂಬರಾಸುರನಿಂದ ಬಲಾತ್ಕಾರದಿಂ
ದ ಅಪಹೃತನಾಗಿ ಇಲ್ಲಿಗೆ ಬಂದುಯಿದ್ದೀಯೆ, ನಾನು ನಿನ್ನ ಪತ್ನಿಯಾದ ರತಿಯು, ನೀನು ನನ್ನ ಪತಿಯಾದ ಕಾ
ಮನು ।೧೨। ಈ ಶಂಬರನು ಶಿಶುವಾದ ನಿನ್ನನ್ನು ಅಪಹರಿಸಿ ಕೊಂಡುಬಂದು ಸಮುದ್ರದಲ್ಲಿ ಹಾಕಿದನು. ಅಲ್ಲಿ
ಯೊಂದು ಮತ್ಸ್ಯವು ನಿನ್ನಂ ನುಂಗಿತು ಅಲ್ಲಿಂದ ನೀನು ಇಲ್ಲಿಗೆ ಬಂದವನಾದೆ ।೧೩॥ ಆ ಕಾರಣದಿಂದ ಜಯಿಸಲಶ
ಕ್ಯನಾಗಿ ನಿನಗೆ ಶತ್ರುವಾದ ಈ ಶಂಬರನಂ ಸಂಹರಿಸು. ಈ ಯಸುರನು ಮಾಯಾಶತವಂ ಬಲ್ಲವನು, ನೀನು ಅದೇ
ರೀತಿಯಲ್ಲಿ ಮಾಯೆಗಳಿಂದ ಅವನಂ ಮೋಹಿಸುವಂತೆ ಮಾಡಿ ಸಂಹರಿಸು ॥೧೪। ನಿನ್ನ ಮಾತೃವಾದ ರುಕ್ಮಿಣಿಯು
ಪುತ್ರನಾದ ನಿನ್ನಂ ಕಾಣದೆ ಕುರರಿಪಕ್ಷಿಯಂತೆ ರೋದನಂ ಗೆಯ್ಯುತ್ತಾಳೆ, ಪುತ್ರಸ್ನೇಹ ಪರವಶಳಾಗಿ ಕರುವಂ

ಮಾತಾಕುರರೀವಗತಪ್ರಜಾ । ಪುತ್ರಸ್ನೇಹಶುಚಾಕುಲಾದೀನಾವಿವತ್ಸಾಗೌರಿವಾತುರಾ॥೧೫॥ಆಭಾಷ್ಯೈವಂದದೌವಿದ್ಯಾಂಪ್ರದ್ಯುಮ್ನಾಯಮಹಾತ್ಮನೇ । ಮಾಯಾವತೀಮಹಾಮಾಯಾಂಸರ್ವಮಾಯಾವಿನಾಶಿನೀಮ್ ॥೧೬॥ ಸಚಶಂಬರಮಭ್ಯೇತ್ಯಸಂಯುಗಾಯಸಮಾಹ್ವಯತ್ । ಅವಿಷಹ್ಯೈಸ್ತಮಾಕ್ಷೇಪೈಃಕ್ಷಿಪನ್ಸಂಜನಯನ್ಕಲಿಮ್॥೧೭॥ಸೋಧಿಕ್ಷಿಪ್ತೋದುರ್ವಚೋಭಿಃಪದಾಹತಇವೋರಗಃ । ನಿಶ್ಚಕ್ರಾಮಗದಾಪಾಣಿರಮರ್ಷಾತ್ತಾಮ್ರಲೋಚನಃ॥೧೮॥ಗದಾಮಾವಿಧ್ಯತರಸಾಪ್ರದ್ಯುಮ್ನಾಯಮಹಾತ್ಮನೇ।ಪ್ರಕ್ಷಿಪ್ಯವ್ಯನದನ್ನಾದಂವಜ್ರನಿಷ್ಪೇಷನಿಷ್ಠುರಮ್॥೧೯॥ತಾಮಾಪತಂತೀಂಭಗವಾನ್ಪ್ರದ್ಯುಮ್ನೋಗದಯಾಗದಾಮ್।ಅಪಾಸ್ಯಶತ್ರವೇಕ್ರುದ್ಧಃಪ್ರಾಹಿಣೋತ್ಸ್ವಾಂಗದಾಂನರ್ದನ್॥೨೦॥ಸಚಮಾಯಾಂಸಮಾಶ್ರಿತ್ಯದೈತೇಯೀಂಮಯದರ್ಶಿತಾಮ್।ಮುಮೋಚಾಸ್ತ್ರಮಯಂವರ್ಷಂಕಾರ್ಷ್ಣೌವೈಹಾಯಸೋ

ಸಾ-ದುಃಖಿತಳೂಆದ್ದರಿಂದ, ವಿವತ್ಸಾ-ಹುಟ್ಟಿದಕರುವು ಬಳಿಯಲ್ಲಿಲ್ಲದ, ಗೌರಿವ-ಆಕಳಿನಂತೆ, ಆತುರಾ-ಆತುರಗೊಳ್ಳುವಳಾಗಿದ್ದಾಳೆ ॥೧೫॥ ಮಾಯಾವತೀ-ಮಾಯಗಾತಿಯಾದ ರತಿಯು, ಏವಂ-ಹೀಗೆ, ಆಭಾಷ್ಯ-ನುಡಿದು, ಸರ್ವಮಾಯಾವಿನಾಶಿನೀಂ-ಮೋಸದವಿದ್ಯೆಗಳನೆಲ್ಲವಂ ಪರಿಹರಿಸುವಂಥಾ, ಮಹಾಮಾಯಾಂ-ದೊಡ್ಡ ಮೋಸದವಿದ್ಯೆಯನ್ನು, ಮಹಾತ್ಮನೇ-ಅಧಿಕ ಬುದ್ಧಿಯುಳ್ಳವನಾದ, ಪ್ರದ್ಯುಮ್ನಾಯ-ಕೃಷ್ಣಪುತ್ರನಿಗೆ ದದೌ-ಕೊಟ್ಟಳು ॥೧೬॥ ಸಚ-ಆ ಪ್ರದ್ಯುಮ್ನನೂ, ಶಂಬರಮಭ್ಯೇತ್ಯ-ಶಂಬರಾಸುರನ ಬಳಿಗೆಯ್ದಿ, ಅವಿಷಹ್ಯೈಃ-ಸಹಿಸಕೂಡದಂಥಾ, ಆಕ್ಷೇಪೈಃ-ತಪ್ಪುಗಳನ್ನು ಪ್ರಕಾಶಗೊಳಿಸುವ ಮಾತುಗಳಿಂದ, ತಂ-ಆ ದೈತ್ಯನನ್ನು, ಕ್ಷಿಪನ್-ನಿಂದಿಸಿನುಡಿಯುವನಾದ್ದರಿಂದ, ಕಲಿಂ-ಕಲಹವಿರೋಧವನ್ನು, ಸಂಜನಯನ್-ಹುಟ್ಟಿಸುವವನಾಗಿ, ಸಂಯುಗಾಯ-ಕಾಳಗಕ್ಕೆ, ಸಮಾಹ್ವಯತ್-ಕರೆದನು ॥೧೭॥ ಸಃ-ಆ ಶಂಬರನು, ದುರ್ವಚೋಭಿಃ-ಕೆಟ್ಟಮಾತುಗಳಿಂದ, ಅಧಿಕ್ಷಿಪ್ತಃ-ಪಳಿದಾಡಲ್ಪಟ್ಟವನಾಗಿ, ಪದಾ-ಕಾಲಿನಿಂದ, ಆಹತಃ-ತುಳಿಯಲ್ಪಟ್ಟ, ಉರಗಇವ-ಸರ್ಪನಂತೆ, ಅಮರ್ಷಾತ್-ಸಿಟ್ಟಿನದೆಸೆಯಿಂದ, ತಾಮ್ರಲೋಚನಃ-ಕೆಂಪಾದ ಕಂಗಳುಳ್ಳವನಾಗಿ, ಗದಾಪಾಣಿಃ-ಗದೆಯು ಕೈಲಿ ಉಳ್ಳವನಾಗಿ, ನಿಶ್ಚಕ್ರಾಮ-ಯುದ್ಧಕ್ಕೆ ಹೊರಟನು ॥೧೮॥ ತರಸಾ-ವೇಗದಿಂದ, ಗದಾಂ-ಕುಂತಾಯುಧವನ್ನು, ಮಹಾತ್ಮನೇ--ಘನಶೀಲನಾದ, ಪ್ರದ್ಯುಮ್ನಾಯ-ಕೃಷ್ಣಪುತ್ರನಿಗೋಸುಗ, ಪ್ರಕ್ಷಿಪ್ಯ-ಬೀಸಿಟ್ಟು, ಆವಿಧ್ಯ-ನೋಯಿಸಿ, ವಜ್ರನಿಷ್ಪೇಷನಿಷ್ಠುರಂ-ಸಿಡಿಲು ಬಡಿಯುವಂತೆ ಕಠಿನವಾದ, ನಾದಂ-ಕೂಗನ್ನು, ವ್ಯನದತ್-ಕೂಗಿದನು ॥೧೯॥ ಭಗವಾನ್-ಸರ್ವಶಕ್ತನಾದ, ಪ್ರದ್ಯುಮ್ನಃ-ಕಾಮದೇವನು, ಆಪತಂತೀಂ-ಬರುತ್ತಿರುವ, ತಾಂಗದಾಂ-ಆ ಕುಂತವನ್ನು, ಗದಯಾ-ತನ್ನ ಕೊಂತದಿಂದ, ಅಪಾಸ್ಯ-ಹೊರತಟ್ಟಿ, ನರ್ದನ್-ಸಿಂಹನಾದವಂ ಗೆಯ್ವವನಾಗಿ, ಶತ್ರವೇ-ವೈರಿಯಾದ ಶಂಬರನಿಗೋಸುಗ, ಕ್ರುದ್ಧಃ-ಸಿಟ್ಟುಗೊಂಡವನಾಗಿ, ಸ್ವಾಂಗದಾಂ-ತನ್ನ ಗದಾಯುಧವನ್ನು, ಪ್ರಾಹಿಣೋತ್-ಪ್ರಯೋಗಿಸಿದನು ॥೨೦॥ ಮಯದರ್ಶಿತಾಂ-ಮಯಾಸುರನಿಂದ ತೋರಿಸಲ್ಪಟ್ಟ, ದೈತೇಯೀಂಮಾಯಾಂ-ರಕ್ಷೋಮಾಯಾವಿದ್ಯೆಯನ್ನು, ಸಮಾಶ್ರಿತ್ಯ-ಅವಲಂಬಿಸಿ, ವೈಹಾಯಸಃ-ಆಕಾಶಸಂಚಾರಿಯಾದ, ಸೋಸುರಶ್ಚ-ಆ ಶಂಬರದೈತ್ಯನೂಕೂಡ, ಅಸ್ತ್ರಮಯಂವರ್ಷಂ-ಸರಳಮಳೆಯನ್ನು, ಕಾರ್ಷ್ಣೌ-ಕೃಷ್ಣನಮಗನ

ಕಾಣದ ಗೋವಿನಂತೆ ವ್ಯಸನಪಡುತ ಲಿರುವಳು॥೧೫॥ಎಂದು ಪೇಳಿ ಮಾಯಾವತಿಯು ಮಹಾತ್ಮನಾದ ಪ್ರದ್ಯುಮ್ನನಿಗೆ ಸರ್ವಮಾಯೆಗಳಂಪರಿಹರಿಸುವ ಮಹಾವಿದ್ಯೆಯಂ ಪೇಳಿದಳು ॥೧೬॥ಅನಂತರದಲ್ಲಿ ಪ್ರದ್ಯುಮ್ನನು ಅಸಹ್ಯಗಳಾದ ದುರ್ಭಾಷೆಗಳಿಂದ ಶಂಬರನಿಗೆ ಕೋಪವಂಹುಟ್ಟಿಸಿ ಅವನಂ ಯುದ್ಧಕ್ಕೆ ಕರೆದನು ॥೧೭॥ಆಶಂಬರನು ಪ್ರದ್ಯುಮ್ನನ ದುರ್ಭಾಷೆಗಳಂ ಸಹಿಸದೆ ಕಾಲಿನಿಂದ ತುಳಿಯಲ್ಪಟ್ಟ ಸರ್ಪದಂತೆ ಕೋಪಿಷ್ಠನಾಗಿ ಗದಾಪಾಣಿಯಾಗಿ ಹೊರಟು ॥೧೮॥ಬಂದು ಮಹಾತ್ಮನಾದ ಪ್ರದ್ಯುಮ್ನನಮೇಲೆ ಗದೆಯಂ ಪ್ರಯೋಗಿಸಿ ಸಿಡಿಲಿನಂತೆ ಗರ್ಜಿಸಿದನು ॥೧೯॥ಭಗವಂತನಾದ ಪ್ರದ್ಯುಮ್ನನು ಬರುತ್ತಲಿರುವ ಆಗದೆಯಂ ತನ್ನಗದೆಯಿಂದ ಭಗ್ನವಂಮಾಡಿ ಗರ್ಜಿಸುತ್ತ ತನ್ನಗದೆಯಂ ಶಂಬರನಮೇಲೆ ಪ್ರಯೋಗಿಸಿದನು ॥೨೦॥ ಆಶಂಬರನು ಮಯನಿರ್ಮಿತವಾದ ಮಾಯೆಯನ್ನಾಶ್ರಯಿಸಿ ಅಂತರಿಕ್ಷದಲ್ಲಿದ್ದುಕೊಂಡು ಪ್ರದ್ಯುಮ್ನನಮೇಲೆ ಅಸ್ತ್ರವರ್ಷವಂ ಕರೆದನು ॥೨೧॥ರುಕ್ಮಿಣೀಪುತ್ರನಾದ ಮಹಾಧೀರನಾದ ಪ್ರದ್ಯುಮ್ನನು ಅಸ್ತ್ರವರ್ಷದಿಂದ ಪೀಡಿತನಾಗಿ ಸವು

ಸುರಃ||೨೧||ಬಾಧ್ಯಮಾನೋಸ್ತ್ರವರ್ಷೇಣ ರೌಕ್ಮಿಣೆಯೊ ಮಹಾರಥಃ| ಸತ್ವಾತ್ಮಿಕಾಂ ಮಹಾವಿದ್ಯಾಂ
ಸರ್ವಮಾಯೋಪಮರ್ದಿನೀಮ್||೨೨||ತತೋಗೌಹ್ಯಕಗಾಂಧರ್ವಪೈಶಾಚೌರಗರಾಕ್ಷಸೀಃ | ಪ್ರಾಯು
ಙ್ಕ್ತ ಶತಶೊದೈತ್ಯಃಕಾರ್ಷ್ಣಿರ್ವ್ಯಧಮಯತ್ಸತಾಃ ||೨೩|| ನಿಶಾತಮಸಿಮುದ್ಯಮ್ಯ ಸಕಿರೀಟಂ ಸಕುಂ
ಡಲಮ್ |ಶಂಬರಸ್ಯ ಶಿರಃ ಕಾಯಾತ್ತಾಮ್ರಶ್ಮಶ್ರ್ವೋಜಸಾಹರತ್ ||೨೪|| ಆಕೀರ್ಯಮಾಣೊ ದಿವಿಜೈಃ ಸ್ತುವ
ದ್ಭಿಃ ಕುಸುಮೋತ್ಕರೈಃ | ಭಾರ್ಯಯಾಂಬರಚಾರಿಣ್ಯಾ ಪುರಂ ನೀತೋ ವಿಹಾಯಸಾ ||೨೫|| ಅಂತಃಪುರ
ವರಂ ರಾಜನ್ ಲಲನಾಶತಸಂಕುಲಮ್ | ವಿವೇಶ ಪತ್ನ್ಯಾ ಗಗನಾದ್ವಿದ್ಯುತೇವ ಬಲಾಹಕಃ ||೨೬|| ತಂ ದೃ
ಷ್ಟ್ವಾ ಜಲದಶ್ಯಾಮಂ ಪೀತಕೌಶೆಯವಾಸಸಮ್ |ಪ್ರಲಂಬಬಾಹುಂ ತಾಮ್ರಾಕ್ಷಂ ಸುಸ್ಮಿತಂ ರುಚಿರಾ
ನನಮ್ ||೨೭|| ಅಲಂಕೃತಮುಖಾಂಭೋಜಂ ನೀಲವಕ್ರಾಲಕಾಳಿಭಿಃ| ಕೃಷ್ಣಂ ಮತ್ವಾ ಸ್ತ್ರಿಯೋ ಹ್ರೀ

---

ಲ್ಲಿ, ಮುಮೋಚ-ಸುರಿದನು ||೨೧|| ಅಸ್ತ್ರವರ್ಷೇಣ-ಸರಳಮಳೆಯಿಂದ, ಬಾಧ್ಯಮಾನಃ-ಪೀಡಿಸಲ್ಪಡುತ್ತಿರುವನಾದ ಮಹಾ
ರಥಃ-ದೊಡ್ಡ ತೇರುಳ್ಳ ವೀರನಾದ, ರೌಕ್ಮಿಣೇಯಃ-ರುಕ್ಮಿಣೀಮಗನು, ಸರ್ವಮಾಯೋಪಮರ್ದಿನೀಂ-ಸಕಲಮೋಸವಿದ್ಯೆಗಳ
ನ್ನೂ ನಾಶಮಾಡುವಂಥಾ-ಸತ್ವಾತ್ಮಿಕಾಂ-ಸಾತ್ವಿಕಗುಣದ ಸಾಮರ್ಥ್ಯಸ್ವರೂಪವಾದ, ಮಹಾವಿದ್ಯಾಂ-ಮಹಾಮಂತ್ರಜ್ಞಾ
ನವನ್ನು. ಹೊಂದಿದನು ||೨೨|| ತತಃ-ಅಬಳಿಕ, ದೈತ್ಯಃ-ಶಂಬರಾಸುರನು, ಗೌಹ್ಯಕ-ಗುಹ್ಯಕರೇ ದೇವತೆಗಳಾಗಿಉಳ್ಳ, ಗಾಂ
ಧರ್ವ-ಗಂಧರ್ವದೇವತಾಕಂಗಳಾದ, ಪೈಶಾಚ-ಪಿಶಾಚಪಾಲಿತಂಗಳಾದ; ಔರಗ-ಸರ್ಪದೇವತಾಕಂಗಳಾದ,ರಾಕ್ಷಸೀಃ -ರಕ್ಷೋ
ಮಾಯೆಗಳನ್ನು, ಶತಶಃ-ಹಲವುಬಗೆಯಾಗಿ,ಪ್ರಾಯುಂಙ್ಕ್ತ-ಪ್ರಯೋಗಿಸಿದನು ಸಕಾರ್ಷ್ಣಿಃ-ಆಕೃಷ್ಣನಮಗನು, ತಾಃ-ಆ
ಮಾಯೆಗಳನ್ನು, ವ್ಯಧಮಯತ್-ಊದಿದಂತೆ ತೂರಾಡಿದನು ||೨೩|| ನಿಶಾತಂ-ಬಹಳಹರಿತವಾದ, ಅಸಿಂ-ಕತ್ತಿಯನ್ನು, ಉದ್ಯ
ಮ್ಯ-ಎತ್ತಿಕೊಂಡು, ಸಕಿರೀಟಂ ಟೊಪ್ಪಿಗೆಯಿಂದಸಹಿತವಾದ, ಸಕುಂಡಲಂ-ಕಿವಿದೊಡವುಗಳೊಡಗೂಡಿದ, ತಾಮ್ರಶ್ಮಶ್ರು-ಕೆ
ಮ್ಮಾಸೆಗಳುಳ್ಳ, ತತ್-ಅಂಥಾ, ಶಂಬರಸ್ಯಶಿರಃ-ಶಂಬರಾಸುರನ ತಲೆಯನ್ನು, ಕಾಯಾತ್-ಶರೀರದಬದೆಸೆಯಿಂದ, ಜಹಾರ-ಅಪ
ಹರಿಸಿದನು ||೨೪|| ಸ್ತುವದ್ಭಿಃ-ಸ್ತೋತ್ರಮಂಗೆಯ್ವ, ದಿವಿಜೈಃ-ದೇವರ್ಕಳಿಂದ, ಕುಸುಮೋತ್ಕರೈಃ-ಪುಷ್ಪಪುಂಜಗಳಿಂದ, ಆ
ಕೀರ್ಯಮಾಣಃ-ಎರಚಲ್ಪಡುತ್ತಿರುವನಾಗಿ, ಅಂಬರಚಾರಿಣ್ಯಾ-ಆಕಾದಲ್ಲಿ ತಿರುಗುವಳಾದ, ಭಾರ್ಯಯಾ-ಹೆಂಡತಿಯಾದ ಮಾ
ಯಾವತಿಯಿಂದ, ವಿಹಾಯಸಾ-ಗಗನಮಾರ್ಗದಿಂದ,ಪುರಂ-ದ್ವಾರಕಾನಗರವನ್ನು, ನೀತಃ-ಹೊಂದಿಸಲ್ಪಟ್ಟವನಾದನು||೨೫||
ರಾಜನ್-ಪರೀಕ್ಷಿದ್ರಾಯನೇ! ಆ ಕಾಮನು, ಲಲನಾಶತಸಂಕುಲಂ-ಸ್ತ್ರೀಸಂಘಗಳಿಂ ವ್ಯಾಪ್ತವಾದ, ಅಂತಃಪುರವರಂ-ಶ್ರೇ
ಷ್ಠವಾದ ರಾಣಿವಾಸವನ್ನು, ವಿದ್ಯುತಾ-ಮಿಂಚಿನೊಡನೆ, ಬಲಾಹಕಇವ-ಮೇಘದಂತೆ, ಪತ್ನ್ಯಾ-ಹೆಂಡತಿಯೊಡಗೂಡಿ,
ಗಗನಾತ್-ಆಕಾಶದಿಂದ, ವಿವೇಶ-ಬಂದುಹೊಕ್ಕನು ||೨೬|| ಜಲದಶ್ಯಾಮಂ-ಮೋಡದಂತೆಕಪ್ಪಾದ, ಪೀತಕೌಶೇಯವಾಸಸಂ-
ಹಳದಿಯಾದ ಪಟ್ಟೆಯವಸ್ತ್ರವುಳ್ಳ, ಪ್ರಲಂಬಬಾಹುಂ-ಮೊಣಕಾಲವರೆಗೂ ನೀಳವಾದ ತೋಳುಗಳುಳ್ಳ, ತಾಮ್ರಾಕ್ಷಂ-ಕೆಂಪಾ

---

ಸ್ತ್ರಮಾಯಾನಾಶಕವಾದ ಸತ್ವಮಯವಾದ ಮಹಾಮಾಯೆಯಂ ಪ್ರಯೋಗಿಸಿದನು ||೨೨|| ಅನಂತರದಲ್ಲಿ ಶಂ
ಬರನು ಯಕ್ಷಮಾಯೆಗಳಂ ಗಂಧರ್ವಮಾಯೆಗಳಂ, ಸರ್ಪಮಾಯೆಗಳಂ, ರಾಕ್ಷಸಮಾಯೆಗಳಂಸಹ ಕಳುಹಿ
ಸಿದನು. ಆ ಮಾಯೆಗಳನೆಲ್ಲವಂ ಪ್ರದ್ಯುಮ್ನನು ಕ್ಷಣಮಾತ್ರದಲ್ಲಿ ಸಂಹರಿಸಿದನು ||೨೩|| ಆಮೇಲೆ ಪ್ರದ್ಯು
ಮ್ನನು ತೀಕ್ಷ್ಣವಾದ ಖಡ್ಗವಂ ತೆಗದುಕೊಂಡು ಕಿರೀಟಕುಂಡಲಸಮೇತವಾದ ಶಂಬರನ ಶಿರವಂ ಛೇದಿಸಿ ಕೆ
ಡಹಿದನು ||೨೪|| ಆಮೇಲೆ ದೇವತೆಗಳಿಂದ ಪುಷ್ಪವೃಷ್ಟಿಯುಂ ಕರೆಯಿಸಿಕೊಂಡು ಸ್ತುತಿಮಾಡಿಸಿಕೊಳ್ಳುತ್ತ
ಆಕಾಶಚಾರಿಣಿಯಾದ ಮಾಯಾವತಿಯಿಂದ ಆಕಾಶಮಾರ್ಗದಲ್ಲಿ ಕರಕೊಂಡು ಬರಲ್ಪಡುವನಾಗಿ ದ್ವಾರಕಾಪಟ್ಟ
ಣಕ್ಕೆ ಬಂದನು ||೨೫|| ಆ ಪ್ರದ್ಯುಮ್ನನು ಮಾಯಾವತಿಯೊಡನೆ ಮಿಂಚಿನೊಡನೆ ಮೇಘದಂತೆ ಹೊಳೆಯುತ
ಅನೇಕಸ್ತ್ರೀಸಂಕುಲವಾದ ಅಂತಃಪುರವಂ ಪ್ರವೇಶಿಸಿದನು ||೨೬|| ಅಂತಃಪುರದಲ್ಲಿ ಕೃಷ್ಣನ ಪತ್ನಿಯರು
ನೀಲಮೇಘಶ್ಯಾಮನಾಗಿ ಪೀತಾಂಬರಧಾರಿಯಾಗಿ ಆಜಾನುಬಾಹುವಾಗಿ ಕೆಂಪಾದನೇತ್ರಗಳುಳ್ಳವನಾಗಿ ಮಂದಸ್ಮಿ
ತವುಳ್ಳವನಾಗಿ ಮನೋಹರಂಗಳಾದ ಕುಂಡಲಂಗಳುಳ್ಳವನಾಗಿ ||೨೭|| ನೀಲಂಗಳಾದಮುಂಗುರುಳುಗಳಿಂದ ಅ

ತಾಸಿಲೀಯುಸ್ತತ್ರತತ್ರಹ ||೧೮|| ಅವಧಾರ್ಯಶನೈರೀಷದ್ವೈಲಕ್ಷಣ್ಯೇನಯೋಷಿತಃ | ಉಪಜಗ್ಮುಃ ಪ್ರಮುದಿತಾಸ್ಸಸ್ತ್ರೀರತ್ನಂಸುವಿಸ್ಮಿತಾಃ ||೧೯|| ಅಥತತ್ರಾಸಿತಾಪಾಂಗೀವೈದರ್ಭೀವಲ್ಗುಭಾಷಿಣೀ | ಅಸ್ಮರತ್ಸ್ವಸುತಂನಷ್ಟಂಸ್ನೇಹಸ್ನುತಪಯೋಧರಾ ||೨೦|| ಕೋನ್ವಯಂನರವೈಡೂರ್ಯಃಕಸ್ಯವಾಕಮಲೇಕ್ಷಣಃ | ಧೃತಃಕಯಾವಾಜಠರೇಕಯಾಲಬ್ಧೋಥಕೇನವಾ ||೨೧|| ಮಮಚಾಪ್ಯಾತ್ಮಜೋನಷ್ಟೋನೀತೋಯಂಸೂತಿಕಾಗೃಹಾತ್ | ಏತತ್ತುಲ್ಯವಯೋರೂಪೋಯದಿಜೀವತಿಕುತ್ರಚಿತ್ ||೨೨|| ಕಥಂತ್ವನೇನಸಂಪ್ರಾಪ್ತಂಸಾರೂಪ್ಯಂಶಾರ್ಙ್ಗಧನ್ವನಃ | ಆಕೃತ್ಯಾವಯವೈರ್ಗತ್ಯಾಸ್ವರಹಾಸಾವಲೋಕ

---

ಪಕಂಗಳುಳ್ಳ, ಸುಸ್ಮಿತಂ-ಚನ್ನಾಗಿ ಕಿರುನಗೆಯುಳ್ಳ, ರುಚಿರಾನನಂ-ಸೊಗಸಾದ ಮೋರೆಯುಳ್ಳ ||೧೭|| ನೀಲವಕ್ರಾಲಕಾಳಿಭಿಃ-ಕಪ್ಪಾದ ಗುಂಗುರುಕುರುಳುಗಳಿಂದ. ಅಲಂಕೃತಮುಖಾಂಭೋಜಂ-ಸಿಂಗರಿಸಲ್ಪಟ್ಟ ಮೊಗದಾವರೆಯುಳ್ಳ, ತಂ-ಅವನನ್ನು ದೃಷ್ಟ್ವಾ-ನೋಡಿ, ಕೃಷ್ಣಂ-ವಾಸುದೇವನನ್ನಾಗಿ, ಮತ್ವಾ-ತಿಳಿದು, ಸ್ತ್ರಿಯಃ-ಹೆಂಗಳು, ಹ್ರೀತಾಃ-ನಾಚಿಕೆಯಿಂ ಸಹಿತರಾಗಿ, ತತ್ರತತ್ರ-ಅಲ್ಲಲ್ಲಿ, ನಿಲೀಯುರ್ಹ-ಅಡಗಿಕೊಂಡರಂತೆ, ಅದ್ಭುತವು ||೧೮|| ಈಷದ್ವೈಲಕ್ಷಣ್ಯೇನ-ಕೃಷ್ಣನಿಗಿಂತಲೂ ಕೊಂಚಬೇರೆಯಾದ ಗುರ್ತಿನಿಂದ, ಶನೈಃ-ಮೆಲ್ಲನೆ, ಅವಧಾರ್ಯ-ಕೃಷ್ಣನಲ್ಲವೆಂದು ನಿಶ್ಚಯಿಸಿ, ಸುವಿಸ್ಮಿತಾಃ-ಚನ್ನಾಗಿ ದಆಶ್ಚರ್ಯಮುಳ್ಳವರಾಗಿ, ಪ್ರಮುದಿತಾಃ-ಹೆಚ್ಚು ಸಂತೋಷಮುಳ್ಳವರಾದ, ಯೋಷಿತಃ-ಹೆಂಗಳು, ಸಸ್ತ್ರೀರತ್ನಂ-ಶ್ರೇಷ್ಠಳಾದ ಹೆಂಣಿನಿಂದಸಹಿತನಾದ ಪ್ರದ್ಯುಮ್ನನ, ಉಪಜಗ್ಮುಃ-ಬಳಿಗೆಯ್ದಿದರು ||೧೯|| ಅಥ-ಆ ಬಳಿಕ, ತತ್ರ-ಅಲ್ಲಿ, ವಲ್ಗುಭಾಷಿಣೀ--ಮನೋಹರವಾಗಿ ನುಡಿಯುವವಳಾದ, ಅಸಿತಾಪಾಂಗೀ-ಕಪ್ಪಾದ ಕಡೆಗಂಗಳುಳ್ಳವಳಾದ, ವೈದರ್ಭೀ-ವಿದರ್ಭರಾಜಪುತ್ರಿಯು, ಸ್ನೇಹಸ್ನುತಪಯೋಧರಾ-ಪುತ್ರಾನುರಾಗದಿಂದ ಸೊರತುಗೊಂಡ ಮೊಲೆಗಳುಳ್ಳವಳಾಗಿ, ನಷ್ಟಂ-ಪುರುಡಿನಮನೆಯಿಂದಲೇ ಕಾಣದೇ ಹೋಗಿದ್ದ, ಸ್ವಸುತಂ-ತನ್ನ ಮಗನನ್ನು, ಅಸ್ಮರತ್-ನೆನಪುಗೊಂಡಳು ||೨೦|| ನರವೈಡೂರ್ಯಃ-ಪುರುಷಶ್ರೇಷ್ಠನಾದ, ಅಯಂ-ಇವನು, ಕೋನು-ಯಾವವನಾದಾನು? ಕಮಲೇಕ್ಷಣಃ-ತಾವರೆಗಣ್ಣನಾದ, ಅಯಂ-ಇವನು, ಕಸ್ಯವಾ-ಯಾರವನಾದಾನು ? ಕಯಾವಾ-ಯಾವವಳಿಂದ, ಜಠರೇ-ಬಸುರಲ್ಲಿ, ಧೃತಃ-ಹೊರಲ್ಪಟ್ಟವನಾದಾನು ? ಕಯಾ-ಯಾವಹೆಂಣಿನಿಂದ, ಕೇನವಾ-ಯಾವ ಗಂಡಿನಿಂದಲಾದರೂ, ಅಥ-ಹುಟ್ಟಿದಬಳಿಕ, ಲಬ್ಧಃ-ಪಡೆಯಲ್ಪಟ್ಟವನಾಗಿದ್ದಾನು? ||೨೧|| ಮಮಚಾಪಿ-ನನಗೂಕೂಡ, ಆತ್ಮಜಃ-ಮಗನು, ನಷ್ಟಃ-ಕಾಣದೆ ಹೋಗಿರುವನು, ಅಯಂ-ಇವನಂಥಾ ನನ್ನ ಮಗನು, ಸೂತಿಕಾಗೃಹಾತ್-ಪುರುಡಿನ ಮನೆಯತ್ತಣಿಂ-ನೀತಃ-ಹೊರಗೊಯ್ಯಲ್ಪಟ್ಟಿರುವನು, ಕುತ್ರಚಿತ್-ಎಲ್ಲಿಯಾದರೂ, ಜೀವತಿಯದಿ-ಬದುಕಿರುವನಾದರೆ, ಏತತ್ತುಲ್ಯವಯೋರೂಪಃ-ಇವನಿಗೆ ಸರಿಯಾದ ಪ್ರಾಯವೂ ಆಕಾರವೂ ಉಳ್ಳವನಾಗಿರುವನು ||೨೨|| ಆಕೃತ್ಯಾ-ಆಕಾರದಿಂದಲೂ, ಅವಯವೈಃ-ಅಂಗಗಳಿಂದಲೂ, ಗತ್ಯಾ-ಇಂದ್ರಿಯಚೇಷ್ಟೆಗಳಿಂದಲೂ, ಕಂಠಧ್ವನಿಯಿಂದಲೂ, ಹಾಸ-ನಗೆಯಿಂದಲೂ, ಅವಲೋಕನೈಃ-ನೋಟದಿಂದಲೂ, ಶಾರ್ಙ್ಗಧನ್ವನಃ-ಕೃಷ್ಣನ, ಸಾರೂಪ್ಯಂತು-ಸಮಾನರೂಪವುಳ್ಳತನವು, ಅನೇನ-ಇವನಿಂದ, ಕಥಂ-ಹೇಗೆ, ಸಂಪ್ರಾಪ್ತಂ-ಸರಿಯಾಗಿ ಹೊಂದಲ್ಪಟ್ಟದ್ದಾಗಿರುವುದು ? ||೨೩|| ಮೇ-ನನ್ನ, ಗರ್ಭಧೃತಃ-ಬಸುರಲ್ಲಿಹೊ

---

ಲಂಕೃತವಾದ ಮುಖವುಳ್ಳವನಾಗಿ ಬಂದಿರುವ ಪ್ರದ್ಯುಮ್ನನಂನೋಡಿ ಕೃಷ್ಣನೆಂದುತಿಳಿದು ಲಜ್ಜೆಯಿಂದ ಅಲ್ಲಲ್ಲಿ ಔತ್ತುಕೊಂಡರು ||೧೮|| ಅನಂತರದಲ್ಲಿಕೃಷ್ಣನಸ್ತ್ರೀಯರು ಆಯಾಲಕ್ಷಣಂಗಳಿಂದಕೃಷ್ಣನಲ್ಲವೆಂದುನಿಶ್ಚಯಿಸಿ ಎಲ್ಲರೂ ಹತ್ತಿರಕ್ಕೆಬಂದು ಸ್ತ್ರೀಸಮೇತನಾದ ಪ್ರದ್ಯುಮ್ನನಂ ನೋಡಿದರು ||೧೯|| ಆಗ, ಮಧುರಾಲಾಪವತಿಯಾದ ನೀಲಂಗಳಾದ ಕಡೆಗಂಣ ನೋಟಗಳುಳ್ಳ ರುಕ್ಮಿಣಿಯು ತನ್ನಪುತ್ರನಂ ಸ್ಮರಿಸಿಕೊಂಡು ಪುತ್ರಸ್ನೇಹದಿಂದ ಸೊರತುಕೊಂಡ ಸ್ತನವುಳ್ಳವಳಾಗಿ ನುಡಿದಳು ||೨೦|| ಅದೆಂತೆನೆ-ಈಪುರುಷಶ್ರೇಷ್ಠನು? ಯಾರಮಗನು? ಪದ್ಮಲೋಚನನಾಗಿದ್ದಾನೆ. ಯಾರಿಂದ ಪೋಷಿತನಾದನೋ ಯಾವವನಿಗೆ ಲಬ್ಧನಾದನೋ? ||೨೧|| ಸೂತಿಕಾಗೃಹದಿಂದ ಅಪಹರಿಸಲ್ಪಟ್ಟುಹೋದ ನನ್ನಪುತ್ರನು ಇವನಿಗೆ ಸಮಾನವಾದ ವಯಸ್ಸೂ ರೂಪವೂ ಉಳ್ಳವನು. ಆಪುರುಷನು ಎಲ್ಲಿಯಾದರೂ ಜೀವಿಸಿಕೊಂಡಿದ್ದರೆ ನೋಡಬೇಕು ||೨೨|| ಈಪುರುಷನಿಂದ ಶ್ರೀಕೃಷ್ಣನ ಸಾರೂಪ್ಯವು ಹೇಗೆಪಡೆಯಲ್ಪಟ್ಟಿತು? ಈಪುರುಷನು ಆಕೃತಿಯಿಂದಲೂ ಅಂಗಗಳಿಂದಲೂ ಗಮನದಿಂದಲೂ

ನ್ಯೈಃ ॥೩೩॥ ಸ ಏವ ವಾ ಭವೇನ್ನೂನಂ ಯೋ ಮೇ ಗರ್ಭೇ ಧೃತೋಽರ್ಭಕಃ । ಅಮುಷ್ಮಿನ್ ಪ್ರೀತಿರಧಿಕಾ ವಾಮಃ ಸ್ಫುರತಿ ಮೇ ಭುಜಃ ॥೩೪॥ ಏವಂ ಮೀಮಾಂಸಮಾನಾಯಾಂ ವೈದರ್ಭ್ಯಾಂ ದೇವಕೀಸುತಃ । ದೇವಕ್ಯಾನಕದುಂದುಭ್ಯಾಮುತ್ತಮಶ್ಲೋಕ ಆಗಮತ್ ॥೩೫॥ ವಿಜ್ಞಾತಾರ್ಥೋಽಪಿ ಭಗವಾಂಸ್ತೂಷ್ಣೀಮಾಸ ಜನಾರ್ದನಃ । ನಾರದೋಽಕಥಯತ್ಸರ್ವಂ ಶಂಬರಾಹರಣಾದಿಕಮ್ ॥೩೬॥ ತಚ್ಛ್ರುತ್ವಾ ಮಹದಾಶ್ಚರ್ಯಂ ಕೃಷ್ಣಾಂತಃಪುರಯೋಷಿತಃ । ಅಭ್ಯನಂದನ್ ಬಹೂನಬ್ದಾನ್ ನಷ್ಟಂ ಪುನರಿಹಾಗತಮ್ ॥೩೭॥ ದೇವಕೀ ವಸುದೇವಶ್ಚ ಕೃಷ್ಣರಾಮೌ ತಥಾ ಸ್ತ್ರಿಯಃ । ದಂಪತೀ ತೌ ಪರಿಷ್ವಜ್ಯ ರುಕ್ಮಿಣೀ ಚ ಯಯುರ್ಮುದಮ್ ॥೩೮॥ ನಷ್ಟಂ ಪ್ರದ್ಯುಮ್ನಮಾಯಾತಮಾಕರ್ಣ್ಯ ದ್ವಾರಕೌಕಸಃ । ಅಹೋ ಮೃತ ಇವಾಯಾತೋ ಬಾಲೋ ದಿ

---

ರಲ್ಪಟ್ಟವನು, ಯಃ-ಯಾವವನೋ, ಸಏವಾಸೌ-ಅವನೇ ಇವನು, ಭವೇತ್-ಆದಾನು, ಅಪ್ಪರಿಂದಲೇ. ಮೇ-ನನ್ನ, ಪ್ರೀತಿಃ-ಅನುರಾಗವು, ಅಮುಷ್ಮಿನ್-ಇವನಲ್ಲಿ, ಅಧಿಕಾ-ಹೆಚ್ಚಾಗಿರುವುದು ವಾಮಃಭುಜಃ-ಎಡತೋಳು, ಸ್ಫುರತಿ-ಕೆತ್ತುತ್ತಿರುವುದು ॥೩೪॥ ವೈದರ್ಭ್ಯಾಂ-ರುಕ್ಮಿಣಿಯು, ಏವಂ-ಹೀಗೆ, ಮೀಮಾಂಸಮಾನಾಯಾಂಸತ್ಯಾಂ-ವಿಚಾರ ಮಾಡುವಳಾಗುತ್ತಿರುವಲ್ಲಿ ಉತ್ತಮಶ್ಲೋಕಃ-ಶ್ರೇಷ್ಠನೆಂದು ಕೊಂಡಾಡಲ್ಪಟ್ಟ, ದೇವಕೀಸುತಃ-ದೇವಕಿಯಮಗನಾದ ಕೃಷ್ಣನು, ದೇವಕ್ಯಾನಕದುಂದುಭ್ಯಾಂಸಾಕಂ-ದೇವಕೀವಸುದೇವರೊಡನೆ, ಆಗಮತ್-ಬಂದನು ॥೩೫॥ ಭಗವಾನ್-ಸರ್ವಜ್ಞನಾದ, ಜನಾರ್ದನಃ-ಕೃಷ್ಣನು, ವಿಜ್ಞಾತಾರ್ಥೋಽಪಿ-ತಿಳಿಯಲ್ಪಟ್ಟ ವಿಷಯವುಳ್ಳವನಾದರೂ, ತೂಷ್ಣೀಂ-ಮೌನವಾಗಿ,ಆಸ-ಇರ್ದನು, ನಾರದಃ-ನಾರದಮುನಿಯುಬಂದು, ಶಂಬರಾಹರಣಾದಿಕಂ-ಶಂಬರಾಸುರನು ಮಗುವಂ ಕೊಂಡುಹೋದ್ದುಮೊದಲಾದ, ಸರ್ವಂ-ವಿಷಯವೆಲ್ಲವನ್ನೂ, ಅಕಥಯತ್-ವಿವರಿಸಿ ಹೇಳಿದನು ॥೩೬॥ ಕೃಷ್ಣಾಂತಃಪುರಯೋಷಿತಃ-ಕೃಷ್ಣನ ರಾಣಿವಾಸದ ಹೆಂಗಳು, ಮಹದಾಶ್ಚರ್ಯಂ-ಅತ್ಯದ್ಭುತವಾದ, ತತ್-ಆ ಕಾಮಚರಿತವನ್ನು, ಶ್ರುತ್ವಾ-ಕೇಳಿ ಬಹೂನಬ್ದಾನ್--ಹಲವುವರುಷಗಳಲ್ಲಿ, ನಷ್ಟಂ-ಕಾಣದೆ ಹೋಗಿದ್ದಂಥಾ, ಇಹ-ಇಲ್ಲಿಗೆ, ಪುನರಾಗತಂ-ಮರಳಿಯೂ ಬಂದಂಥಾ ಪ್ರದ್ಯುಮ್ನನಂ ಕುರಿತು, ಅಭ್ಯನಂದನ್-ಪ್ರತ್ಯಕ್ಷದಲ್ಲಿ ಸಂತೋಷಿಸಿದರು ॥೩೭॥ ದೇವಕೀ-ಕೃಷ್ಣನ ತಾಯಿಯೂ, ವಸುದೇವಶ್ಚ-ಕೃಷ್ಣನ ತಂದೆಯೂ, ಕೃಷ್ಣರಾಮೌ-ವಾಸುದೇವಬಲಭದ್ರರೂ, ತಥಾ-ಹಾಗೆ, ಸ್ತ್ರಿಯಃ-ರಾಣಿವಾಸದ ಹೆಂಗಳೂ, ರುಕ್ಮಿಣೀಚ-ಪಡೆದವಳಾದ ವೈದರ್ಭಿಯೂ, ತೌದಂಪತೀ-ಆಗಂಡಹೆಂಡಿರಾದ ಮಾಯಾವತೀಪ್ರದ್ಯುಮ್ನರನ್ನು, ಪರಿಷ್ವಜ್ಯ-ಅಪ್ಪಿಕೊಂಡು, ಮುದಂ-ಸಂತೋಷವನ್ನು, ಯಯುಃ-ಹೊಂದಿದರು ॥೩೮॥ ದ್ವಾರಕೌಕಸಃ-ದ್ವಾರಕೆಯಲ್ಲಿ ಮನೆಗಳುಳ್ಳವರು, ನಷ್ಟಂ-ಕಾಣದೇಹೋಗಿದ್ದ, ಪ್ರದ್ಯುಮ್ನಂ-ಕೃಷ್ಣಪುತ್ರನನ್ನು, ಆಯಾತಂ-ಬಂದವನನ್ನಾಗಿ, ಆಕರ್ಣ್ಯ-ಕೇಳಿ, ಅಹೋ-ಆಶ್ಚರ್ಯವು, ಬಾಲಃ-ಹುಡುಗನು, ಮೃತಇವ-ಸತ್ತುಹೋದವನಂತಾಗಿದ್ದು, ದಿಷ್ಟ್ಯಾ-ದೈವಯೋಗದಿಂದ, (ಕ್ಷೇಮವಾಗಿ,) ಆಯಾತಃ-ಬಂದವನಾದನು ಇತಿ-ಹೀಗೆಂದು, ಅಬ್ರುವಂಶ್ಚ-ನುಡಿದರು ॥೩೯॥ ಪಿತ್ರಾಸರೂಪನಿಜೇಶಭಾವಾಃ-ತಂದೆಗೆ ಸಮಾನನಾದ ಪ್ರದ್ಯುಮ್ನನಲ್ಲಿ ತಮ್ಮ ಗಂಡ

---

ಸ್ವರದಿಂದಲೂ ಹಾಸ್ಯದಿಂದಲೂ ನೋಟಗಳಿಂದಲೂ ಶ್ರೀಕೃಷ್ಣನನ್ನೇ ಹೋಲಿಯಿದ್ದಾನೆ ॥೩೩॥ ಇವನು ನನ್ನ ಗರ್ಭದಲ್ಲಿ ಧರಿಸಲ್ಪಟ್ಟ ಆಬಾಲಕನೇ ಆಗಿರಬಹುದು, ಇವನಲ್ಲಿ ನನ್ನ ಪ್ರೀತಿಯು ಅಧಿಕವಾಗಿದೆ. ವಾಮಭುಜವೂ ಅದುರುತ್ತಿದೆ ॥೩೪॥ ಎಂದು ರುಕ್ಮಿಣೀದೇವಿಯು ಚಿಂತಿಸುತಿರಲಾಗಿ ದೇವಕೀ ವಸುದೇವರೊಡನೆ ಸಮೇತನಾಗಿ ಶ್ರೀಕೃಷ್ಣನು ಅಲ್ಲಿಗೆಬಂದನು ॥೩೫॥ ಶ್ರೀಕೃಷ್ಣನು ಸರ್ವಜ್ಞನಾದರೂ ಸುಮ್ಮನೆಯಿದ್ದನು. ಆಗ ನಾರದಮುನಿಯು ಶಂಬರಾಸುರನಿಂದ ಅಪಹರಿಸಲ್ಪಟ್ಟ ವೃತ್ತಾಂತವನ್ನೆಲ್ಲವಂ ಹೇಳಿದನು. ॥೩೬॥ ಅತ್ಯಾಶ್ಚರ್ಯಕರವಾದ ಆವೃತ್ತಾಂತವಂ ಕೇಳಿ ಅಂತಃಪುರಸ್ತ್ರೀಯರು ಅತ್ಯಾಶ್ಚರ್ಯಪಟ್ಟು ಬಹುಕಾಲಕ್ಕೆ ಸಿಕ್ಕಿದ ಪುರುಷನಂನೋಡಿ ಸಂತೋಷಪಟ್ಟರು. ॥೩೭॥ ದೇವಕೀವಸುದೇವರೂ ರಾಮಕೃಷ್ಣರೂ ಮಿಕ್ಕಸ್ತ್ರೀಯರೂ ಎಲ್ಲರೂ ದಂಪತಿಗಳನ್ನು ಆಲಿಂಗನವು ಮಾಡಿಕೊಂಡರು. ರುಕ್ಮಿಣಿಯೂ ಸಂತೋಷಪಟ್ಟಳು ॥೩೮॥ ತಪ್ಪಿಹೋದ ಪ್ರದ್ಯುಮ್ನನು ಪುನಶ್ಚ ಬಂದನೆಂದು ಸಮಾಚಾರವಂ ಕೇಳಿ ದ್ವಾರಕಾ ವಾಸಿಗಳು ಮೃತನಾದ ಪುತ್ರನು ಪುನಶ್ಚ ಬದುಕಿದಂತೆ ಆಯಿತೆಂದು ಸಂತೋಷಪಟ್ಟರು ॥೩೯॥ ಕೃಷ್ಣನಿಗೆ ಸಮಾನವಾದ ಪ್ರದ್ಯುಮ್ನನಲ್ಲಿ ಶ್ರೀಕೃಷ್ಣ

ಪ್ಯ ಬ್ರತಿಜಾಬುದ್ಧಯಃ ॥೩೯॥ ಯಂವೈಮುಹುಃಪಿತೃಸರೂಪನಿಜೇಶಭಾವಾ ಸ್ತನ್ಮಾತರೋಯದಭಜ
ನ್ರಹಊಢಭಾವಾಃ । ಚಿತ್ರಾನತತ್ಖಲುರಮಾಸ್ಪದಬಿಂಬಬಿಂಬೆ ಕಾಮೆಸ್ಮರೆಕ್ಷವಿಷಯೆಕಿಮುತಾನ್ಯ
ನಾರ್ಯಃ॥ ... ... ... .. ... ... ॥೪೦॥

... ಇತಿ ಶ್ರೀಮದ್ಭಾಗವತೆ-ದಶಮಸ್ಕಂಧೆ-ಪಂಚಪಂಚಾಶೋಽಧ್ಯಾಯಃ ...

---

ಇವನೆಂಬ ಬುದ್ಧಿಯುಳ್ಳ ತನ್ಮಾತರಃ-ಆ ಪ್ರದ್ಯುಮ್ನನ ತಾಯಿಯರಾದ ಕೃಷ್ಣಪತ್ನಿಯರೂ ಕೂಡ, ಯತ್-ಯಾವಕಾರಣದಿಂದ, ಊಢಭಾವಾಃ-ಮರೆಸಲ್ಪಟ್ಟ ಅಭಿಪ್ರಾಯವುಳ್ಳವರಾಗಿ, ಯಂ-ಯಾವ ಪುರುಷನನ್ನು, ರಹಃ-ಏಕಾಂತದಲ್ಲಿ, ಪ್ರಸಿದ್ಧವಾಗಿ, ಮುಹುಃ-ಬಾರಿಬಾರಿಗೂ, ಅಭಜನ್-ಸೇವಿಸಿದರೋ, ತತ್-ಅದು, ನಚಿತ್ರಂಖಲು-ಆಶ್ಚರ್ಯವಲ್ಲವಷ್ಟೆ? ರಮಾಸ್ಪದಬಿಂಬಬಿಂಬೇ-ಲಕ್ಷ್ಮಿಗೆ ಆಶ್ರಯನಾದ ಕೃಷ್ಣಮೂರ್ತಿಗೆ ಪಡಿನೆಳಲಾಗಿರುವ, ಸ್ಮರೇ-ನೆನಪುಗೊಂಡಮಾತ್ರದಿಂದ ಕ್ಷೋಭಕನಾದ, ಕಾಮೇ-ಮನ್ಮಥನು, ಅಕ್ಷಿವಿಷಯೇಸತಿ-ಕಂಗಳಿಗೆ ಗೋಚರನಾಗುತ್ತಿರಲು, ಅನ್ಯನಾರ್ಯಃ-ಇತರಸ್ತ್ರೀಯರು (ಮೋಹಗೊಳ್ಳುವರೆಂಬುವುದು,) ಕಿಮುತ-ಏನು ಹೇಳತಕ್ಕದ್ದು॥ . . . . . . ॥೪೦॥

ಇಂತೆಂಬಲ್ಲಿಗೆ ಭಾಗವತ ಪ್ರತಿಶಬ್ದಾರ್ಥಬೋಧಿನೀ ಟೀಕೆಯಲ್ಲಿ ದಶಮಸ್ಕಂಧದೊಳು-
೫೫ನೆಯ ಅಧ್ಯಾಯಂ ಮುಗಿದುದು.

——**——

---

ಷ್ಣನೆಂಬ ಭ್ರಾಂತಿಯಿಂದ ಕೃಷ್ಣಪತ್ನಿಯರಾದ ಸ್ತ್ರೀಯರು ರಹಸ್ಯದಲ್ಲಿ ಮೋಹಿತರಾಗುವರು. ಅಂಥಾ ಸಾಕ್ಷಾನ್ಮನ್ಮಥನಂ ನೋಡಿದರೆ ಮಿಗಿಲಾದ ಸ್ತ್ರೀಯರುಗಳು ಮೋಹಿಸುವುದಕ್ಕೆ ಆಶ್ಚರ್ಯವೇನು? ॥೪೦॥

ಇಂತು ಶ್ರೀಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸಿದನೆಂದು ಸೂತಪೌರಾಣಿಕನು
ನೈಮಿಶಾರಣ್ಯವಾಸಿಗಳಾದ ಶೌನಕಾದಿ ಮಹರ್ಷಿಗಳಿಗೆ ಹೇಳಿದನೆಂಬಲ್ಲಿಗೆ-ಶ್ರೀಮನ್ಮಹೀ
ಶೂರಪುರವರಾಧೀಶ ಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜವಿರಚಿತಮಾದ
"ಶ್ರೀಕೃಷ್ಣರಾಜ ವಾಣೀವಿಲಾಸ"ವೆಂಬ ಶ್ರೀಭಾಗವತ ಪುರಾಣದ ಕ
ರ್ಣಾಟ ಭಾಷಾವ್ಯಾಖ್ಯಾನದಲ್ಲಿ ದಶಮಸ್ಕಂಧದೊಳು
ಪಂಚಪಂಚಾಶತ್ತಮಾಧ್ಯಾಯಂಮುಗಿದುದು
ಮಂಗಳಮಸ್ತು

ಸ್ಯಮಂತಕೋಪಾಖ್ಯಾನ ಕಥಾಪ್ರಾರಂಭಘಟ್ಟಃ.

ಶ್ರೀಶುಕಃ ॥ ಸತ್ರಾಜಿತಸ್ಸ್ವತನಯಾಂ ಕೃಷ್ಣಾಯ ಕೃತಕಿಲ್ಬಿಷಃ । ಸ್ಯಮಂತಕೇನ ಮಣಿನಾ ಸ್ವಯಮುದ್ಯಮ್ಯ ದತ್ತವಾನ್ ॥ ೧ ॥ ರಾಜಾ ॥ ಸತ್ರಾಜಿತಃ ಕಿಮಕರೋದ್ಬ್ರಹ್ಮನ್ ಕೃಷ್ಣಸ್ಯ ಕಿಲ್ಬಿಷಮ್ । ಸ್ಯಮಂತಕಃ ಕುತಸ್ತಸ್ಯ ಕಸ್ಮಾದ್ದತ್ತಾ ಸುತಾ ಹರೇಃ ॥ ೨ ॥ ಶ್ರೀಶುಕಃ ॥ ಆಸೀತ್ಸತ್ರಾಜಿತಸ್ಸೂರ್ಯೋ ಭಕ್ತಸ್ಯ ಪರಮಸ್ಸಖಾ । ಪ್ರೀತಸ್ತಸ್ಮೈ ಮಣಿಂ ಪ್ರಾದಾತ್ಸೂರ್ಯಸ್ತುಷ್ಟಸ್ಸ್ಯಮಂತಕಮ್ ॥ ೩ ॥ ಸ ತಂ ಬಿಭ್ರನ್ಮಣಿಂ ಕಂಠೇ ಭ್ರಾಜಮಾನೋ ಯಥಾ ರವಿಃ । ಪ್ರವಿಷ್ಟೋ ದ್ವಾರಕಾಂ ರಾಜನ್ ತೇಜ

---

ಐವತ್ತಾರನೆಯ ಅಧ್ಯಾಯದ ಪ್ರತಿಪದಾರ್ಥದೀಪಿಕೆ

[ಶುಕವಚನವು] ಸತ್ರಾಜಿತಃ-ಸತ್ರಾಜಿತನೆಂಬುವನು, ಕೃಷ್ಣಾಯ-ಕೃಷ್ಣನಿಗೆ, ಕೃತಕಿಲ್ಬಿಷಃ-ಮಾಡಲ್ಪಟ್ಟ ಅಪರಾಧವುಳ್ಳವನಾದ್ದರಿಂದ, ಸ್ವಯಂ ತಾನಾಗಿ, ಉದ್ಯಮ್ಯ ಪ್ರಯತ್ನಗೊಂಡು, ಸ್ಯಮಂತಕೇನ ಮಣಿನಾ ಸಹ-ಸ್ಯಮಂತಕವೆಂಬ ರತ್ನದೊಡಗೂಡಿ, ಸ್ವತನಯಾಂ-ತನ್ನ ಮಗಳಾದ ಸತ್ಯಭಾಮೆಯನ್ನು, ದತ್ತವಾನ್-ಕೊಟ್ಟವನಾದನು ॥೧॥ [ರಾಜಪ್ರಶ್ನವು] ಬ್ರಹ್ಮನ್-ಬ್ರಾಹ್ಮಣನಾದ ಶುಕನೇ! ಸತ್ರಾಜಿತಃ-ಸತ್ರಾಜಿತರಾಯನು, ಕೃಷ್ಣಸ್ಯ-ಕೃಷ್ಣನಿಗೆ, ಕಿಂ ಕಿಲ್ಬಿಷಂ-ಯಾವ ಪಾಪವನ್ನು, ಅಕರೋತ್-ಮಾಡಿದನು? ಸ್ಯಮಂತಕಃ-ಸ್ಯಮಂತಕಮಣಿಯು, ತಸ್ಯ-ಆ ಸತ್ರಾಜಿತನಿಗೆ, ಕುತಃ-ಎತ್ತಣಿಂ ಬಂದುದು - ಕಸ್ಮಾತ್-ಯಾವ ಕಾರಣದಿಂದ, ಸುತಾ-ಮಗಳಾದ ಸತ್ಯಭಾಮೆಯು, ಹರೇಃ-ಕೃಷ್ಣನಿಗೆ, ದತ್ತಾ-ಕೊಡಲ್ಪಟ್ಟಳು ॥೨॥ (ಶುಕವಚನವು) ಭಕ್ತಸ್ಯ-ಸೇವಕನಾದ, ಸತ್ರಾಜಿತಃ-ಸತ್ರಾಜಿತ್ತೆಂಬವನಿಗೆ, ಸೂರ್ಯಃ-ಆದಿತ್ಯನು, ಪರಮಃ-ಉತ್ಕೃಷ್ಟನಾದ, ಸಖಾ-ಗೆಳೆಯನು, ಆಸೀತ್-ಆದನು. ತುಷ್ಟಃ-ತೃಪ್ತನಾದ, ಸೂರ್ಯಃ-ಆದಿತ್ಯನು, ತಸ್ಮೈ-ಆ ಸತ್ರಾಜಿತ್ತಿಗೆ, ಸ್ಯಮಂತಕಂ ಮಣಿಂ-ಸ್ಯಮಂತಕವೆಂಬ ರತ್ನವನ್ನು, ಪ್ರೀತಃ-ಪ್ರೇಮವುಳ್ಳವನಾಗಿ, ಪ್ರಾದಾತ್-ಕೊಟ್ಟನು ॥೩॥ ರಾಜನ್-ಪರೀಕ್ಷಿತನೇ ಸಃ-ಆ ಸತ್ರಾಜಿತನು, ತಂ ಮಣಿಂ-ಆ ರತ್ನವನ್ನು, ಕಂಠೇ-ಕೊರಳಿನಲ್ಲಿ, ಬಿಭ್ರನ್-ಧರಿಸಿದವನಾದ್ದರಿಂದ, ರವಿಃ ಯಥಾ-ಸೂರ್ಯನು ಹೇಗೋ ಹಾಗೆ, ಭ್ರಾಜಮಾನಃ-ಬೆಳಗುತ್ತಿರುವವನಾಗಿ, ದ್ವಾರಕಾಂ-ಯದುಪುರಿಯ

---

ಐವತ್ತಾರನೆಯ ಅಧ್ಯಾಯವು.

ಶ್ರೀಧರೀಯ ಶ್ಲೋಕ॥ ಷಟ್ಪಂಚಾಶತ್ತಮೇ ಮಿಥ್ಯಾಭಿಯೋಗೇ ಮಣಿಮಾಹರತ್ । ಕನ್ಯಾಂ ಜಾಂಬವತೀಂ ಪ್ರಾಪ ಕೃಷ್ಣಸ್ಸತ್ರಾಜಿತಸ್ತಥಾ ॥ ಟೀ ॥ ಐವತ್ತಾರನೆಯ ಅಧ್ಯಾಯದಲ್ಲಿ ಮಿಥ್ಯಾಪವಾದಪರಿಹಾರಾರ್ಥವಾಗಿ ಶ್ರೀಕೃಷ್ಣದೇವನು ಅರಣ್ಯಪ್ರವೇಶವಂಮಾಡಿ ಜಾಂಬವಂತನಂ ಜಯಿಸಿ ಸ್ಯಮಂತಕಮಣಿಯಂ ತೆಗದುಕೊಂಡು ಜಾಂಬವಂತನ ಮಗಳಾದ ಜಾಂಬವತೀದೇವಿಯುಂ ಕರೆದುಕೊಂಡು ದ್ವಾರಕಾಪುರಕ್ಕೆ ಬಂದು ಅನಂತರದಲ್ಲಿ ಸತ್ರಾಜಿತ್ತುರಾಯನ ಮಗಳಾದ ಸತ್ಯಭಾಮೆಯುಂ ವಿವಾಹಮಂ ಮಾಡಿಕೊಂಡನು ಎಂಬರ್ಥವಂ ಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸುವನದೆಂತೆನೆ-

ಎಲೈ ಅರಸೇ! ಸತ್ರಾಜಿತುರಾಯನು ಭಗವಂತನಿಗೆ ಅಪರಾಧವಂಮಾಡಿ ಅಪರಾಧಶಾಂತ್ಯರ್ಥವಾಗಿ ಸ್ಯಮಂತಕಮಣಿಯೊಡನೆ ತನ್ನ ಪುತ್ರಿಯಾದ ಸತ್ಯಭಾಮೆಯನ್ನು ಶ್ರೀಕೃಷ್ಣನಿಗೋಸ್ಕರ ಕೊಟ್ಟನು ॥೧॥ ಎಂಬ ಶುಕಾಚಾರ್ಯನ ವಾಕ್ಯವಂ ಕೇಳಿ ಪರೀಕ್ಷಿದ್ರಾಯನು ಪ್ರಶ್ನೆಗೆಯ್ದ ನದೆಂತೆನೆ-- ಎಲೈ ಶುಕಾಚಾರ್ಯನೇ! ಸತ್ರಾಜಿದ್ರಾಯನು ಶ್ರೀಕೃಷ್ಣನಿಗೆ ಏನು ಅಪರಾಧವಂ ಮಾಡಿದನು? ಸತ್ರಾಜಿತ್ತಿಗೆ ಸ್ಯಮಂತಕಮಣಿ ಹೇಗೆ ಬಂತು? ಯಾವ ನಿಮಿತ್ತದಿಂದ ಮಗಳು ಶ್ರೀಕೃಷ್ಣನಿಗೆ ಕೊಟ್ಟನು ॥೨॥ ಎಂಬ ರಾಜವಾಕ್ಯವಂ ಕೇಳಿ ಶುಕಾಚಾರ್ಯನು ನಿರೂಪಿಸುವನದೆಂತೆನೆ- ಎಲೈ ಅರಸೇ! ಸತ್ರಾಜಿದ್ರಾಯನು ಸೂರ್ಯಭಕ್ತನಾದ ಕಾರಣದಿಂದ ಸೂರ್ಯನು ಭಕ್ತನಾದ ಆ ಸತ್ರಾಜಿದ್ರಾಯನಲ್ಲಿ ಮೈತ್ರಿಯು ನೆಯ್ದಿರುವನು. ಆ ಸೂರ್ಯನು ಸಂತುಷ್ಟನಾಗಿ ಸತ್ರಾಜಿದ್ರಾಯನಿಗೆ ಸ್ಯಮಂತಕವೆಂಬ ಮಹಾಮಣಿಯನ್ನು ಕೊಟ್ಟನು ॥೩॥ ಆ ಮಣಿಯು ಕಂಠದಲ್ಲಿ ಧರಿಸಿಕೊಂಡು ಸತ್ರಾಜಿದ್ರಾಯನು ದ್ವಾರಕಾಪುರಕ್ಕೆ ಬಂದನು. ಆ ಮಣಿಯ ಪ್ರಭೆಯಿಂದ ಸತ್ರಾಜಿದ್ರಾಯ

ಸಾನೋಪಲಕ್ಷಿತಃ ॥೪॥ ತಂವಿಲೋಕ್ಯಜನಾದೂರಾತ್ತೇಜಸಾಮುಷ್ಟದೃಷ್ಟಯಃ । ದೀವ್ಯತೇಕ್ಷೈರ್ಭಗವತೇಶಶಂಸುಸ್ಸೂರ್ಯಶಂಕಿತಾಃ ॥೫॥ ನಾರಾಯಣನಮಸ್ತೇಸ್ತುಶಂಖಚಕ್ರಗದಾಧರ । ದಾಮೋದರಾರವಿಂದಾಕ್ಷಗೋವಿಂದಯದುನಂದನ ॥೬॥ ಏಷಆಯಾತಿಸವಿತಾತ್ವಾಂದಿದೃಕ್ಷುರ್ಜಗತ್ಪತೇ । ಮುಷ್ಣನ್ಗಭಸ್ತಿಚಕ್ರೇಣನೃಣಾಂಚಕ್ಷೂಂಷಿತಿಗ್ಮಗುಃ ॥೭॥ ನನ್ವನ್ವಿಚ್ಛಂತಿತೇಮಾರ್ಗಂತ್ರಿಲೋಕ್ಯಾಂವಿಬುಧರ್ಷಭಾಃ । ಜ್ಞಾತ್ವಾದ್ಯಗೂಢಂಯದುಷುದ್ರಷ್ಟುಂತ್ವಾಂಯಾತ್ಯಜಃಪ್ರಭೋ ॥೮॥ ಶ್ರೀಶುಕಃ ॥ ನಿಶಮ್ಯಬಾಲವಚನಂಪ್ರಹಸ್ಯಾಂಬುಜಲೋಚನಃ । ಪ್ರಾಹನಾಸೌರವಿರ್ದೇವಸ್ಸತ್ರಾಜಿನ್ಮಣಿನಾಜ್ವಲನ್ ॥೯॥ ಸತ್ರಾಜಿತ್ಸ್ವಗೃಹಂಶ್ರೀಮತ್ಕೃತಕೌತುಕಮಂಗಳಮ್ । ಪ್ರವಿಶ್ಯದೇವಸದನೇ

---

ನ್ನು, ಪ್ರವಿಷ್ಟಃ-ಹೊಕ್ಕವನಾದವನೂ, ತೇಜಸಾ-ರತ್ನದ ಬೆಳಕಿನಿಂದ, ನೋಪಲಕ್ಷಿತಃ-ಸತ್ರಾಜಿತನೆಂದು ಕಾಣಲ್ಪಡಲಿಲ್ಲವು ॥೪॥ ಜನಾಃ-ನಾಗರಿಕರು, ತಂ-ಆ ರತ್ನವನ್ನು, ದೂರಾತ್-ದೂರದಿಂದ, ವಿಲೋಕ್ಯ-ನೋಡಿ, ತೇಜಸಾ-ಬೆಳಕಿನಿಂದ, ಮುಷ್ಟದೃಷ್ಟಯಃ-ಕವಿದ ದೃಷ್ಟಿಕಂಗಳುಳ್ಳವರಾಗಿ, ಸೂರ್ಯಶಂಕಿತಾಃ-ಸೂರ್ಯನು ಬರುತ್ತಿರುವನೆಂಬ ಸಂದೇಹವುಳ್ಳವರಾದ್ದರಿಂದ, ಅಕ್ಷೈಃ-ಪಗಡೆಗಳಿಂದ, ದೀವ್ಯತೇ-ಆಡುತ್ತಿರುವ, ಭಗವತೇ-ಸರ್ವಜ್ಞನಾದ ಕೃಷ್ಣನಿಗೆ, ಶಶಂಸುಃ-ಕೊಂಡಾಡಿಬಿನ್ನೈಸಿದರು ॥೫॥ ನಾರಾಯಣ-ಸರ್ವಾಂತರ್ಯಾಮಿಯಾದವಿಷ್ಣುವೇ! ಶಂಖಚಕ್ರಗದಾಧರ-ಪಾಂಚಜನ್ಯವನ್ನೂ ಸುದರ್ಶನವನ್ನೂ ಕೌಮೋದಕಿಯನ್ನೂ ಧರಿಸಿರುವವನೇ! ದಾಮೋದರ ಹಗ್ಗವು ಹೊಟ್ಟೆಯಮೇಲುಳ್ಳವನೇ! ಅರವಿಂದಾಕ್ಷ-ಕಮಲಲೋಚನನೇ! ಗೋವಿಂದ-ಗೋವುಗಳನ್ನೂ ಭೂಮಿಯನ್ನೂ ಪಾಲಿಸಲುಬಲ್ಲವನೇ! ಯದುನಂದನ-ಯಾದವರ ಸಂತೋಷಗೊಳಿಸುವವನೇ! ತೇ-ನಿನಗೆ, ನಮಃ-ನಮಸ್ಕಾರವು, ಅಸ್ತು-ಆಗಲಿ ॥೬॥ ಜಗತ್ಪತೇ-ಪ್ರಪಂಚಕ್ಕೊಡೆಯನಾದ ಕೃಷ್ಣನೇ! ಏಷಸವಿತಾ-ಈಸೂರ್ಯನು, ತಿಗ್ಮಗುಃ-ತೀಕ್ಷ್ಣಂಗಳಾದ ಕಿರಣಂಗಳುಳ್ಳವನಾದ್ದರಿಂದ, ಗಭಸ್ತಿಚಕ್ರೇಣ-ಕಿರಣಮಂಡಲದಿಂದ, ನೃಣಾಂ-ಮನುಷ್ಯರ, ಚಕ್ಷೂಂಷಿ-ಕಂಗಳನ್ನು, ಮುಷ್ಣನ್-ಅಪಹರಿಸುತ್ತಿರುವನಾಗಿ, ತ್ವಾಂ-ನಿನ್ನನ್ನು, ದಿದೃಕ್ಷುಃ-ನೋಡಲೆಳಸಿದವನಾದ್ದರಿಂದ, ಆಯಾತಿ-ಬರುತ್ತಿದಾನೆ ॥೭॥ ಪ್ರಭೋ-ಸ್ವತಂತ್ರನಾದ ಕೃಷ್ಣನೇ! ತ್ರಿಲೋಕ್ಯಾಂ-ಮೂರುಲೋಕಂಗಳಲ್ಲಿಯೂ, ವಿಬುಧರ್ಷಭಾಃ-ದೇವಶ್ರೇಷ್ಠರು ತೇ-ನಿನ್ನ, ಮಾರ್ಗಂ-ದಾರಿಯನ್ನು, ಅನ್ವಿಚ್ಛಂತಿನನು-ಅನುಸರಿಸಲು ಬಯಸುತ್ತಿರುವರಲ್ಲವೆ? ಅದ್ಯ-ಈಗ, ಯದುಷು-ಯಾದವರಲ್ಲಿ, ಗೂಢಂ-ಅಡಗಿರುವ, ತ್ವಾಂ-ನಿನ್ನನ್ನು, ಜ್ಞಾತ್ವಾ-ತಿಳಿದು, ದ್ರಷ್ಟುಂ ನೋಡಲೋಸುಗ. ಅಜಃ-ಸೂರ್ಯನು, ಯಾತಿ-ಬರುತಿರುವನು ॥೮॥ [ಶುಕವಚನವು] ಅಂಬುಜಲೋಚನಃ-ಕಮಲಾಕ್ಷನಾದ ಕೃಷ್ಣನು, ಬಾಲವಚನಂ-ಅಜ್ಞರಮಾತನ್ನು, ನಿಶಮ್ಯ-ಕೇಳಿ, ಪ್ರಹಸ್ಯ-ನಕ್ಕು, ಪ್ರಾಹ-ನುಡಿದನು, ಅಸೌ-ಇವನು, ರವಿರ್ದೇವೋನ-ಸೂರ್ಯದೇವನಲ್ಲವು. ಮಣಿನಾ-ರತ್ನದಿಂದ, ಜ್ವಲನ್-ಬೆಳಗುತ್ತಿರುವ, ಸತ್ರಾಜಿತ್-ಸತ್ರಾಜಿದ್ರಾಯನು ॥೯॥ ಸತ್ರಾಜಿ[illegible], ಶ್ರೀಮತ್-ಸಂಪತ್ತುಳ್ಳ, ಕೃತಕೌತುಕಮಂಗಳಂ-ಮಾಡಲ್ಪಟ್ಟ ಉತ್ಸವದಿಂದ ಶುಭಂಗಳುಳ್ಳ, ಸ್ವಗೃಹಂ-ತನ್ನ ಮನೆಯನ್ನು, ಪ್ರವಿಶ್ಯ-ಹೊಕ್ಕು, ದೇವಸದನೇ-ದೇವರಮನೆಯಲ್ಲಿ, ಮಣಿಂ-ಸ್ಯಮಂತಕವನ್ನು, ವಿಪ್ರೈಃ-

---

ನ ಕುರುಹು ತಿಳಿಯಲಿಲ್ಲ ॥೪॥ ಸೂರ್ಯನಂತೆ ಪ್ರಕಾಶಿಸುತ ಬರುತಲಿರುವ ಸತ್ರಾಜಿದ್ರಾಯನಂ ಪುರವಾಸಿಗಳಾದಜನರು ದೂರದಲ್ಲಿಯೇ ನೋಡಿ ಸೂರ್ಯನು ಬಂದನೆಂದು ತಿಳಿದು ಪಗಡೆಕಾಯಿಗಳನ್ನಾಡುತಲಿರುವ ಶ್ರೀಕೃಷ್ಣನಿಗೆ ಹೇಳಿದರು ॥೫॥ ಶಂಖಚಕ್ರಗದಾಧರನಾದ ನಾರಾಯಣನೇ! ನಿನಗೆ ನಮಸ್ಕಾರವು, ದಾಮೋದರನಾದ ಅರವಿಂದಾಕ್ಷನಾದ ಗೋವಿಂದನಾದ ಯಾದವಪತಿಯೇ! ಜಗತ್ಪತಿಯೇ ॥೬॥ ಸೂರ್ಯನು ನಿನ್ನ ನೋಡಲೋಸುಗ ಕಿರಣಸಮೂಹಗಳಿಂದ ಮನುಷ್ಯರ ಕಂಗಳಂ ಮುಚ್ಚಿಸುವವನಾಗಿ ಬರುತಿದ್ದಾನೆ ॥೭॥ ಎಲೈಪ್ರಭುವಾದ ಶ್ರೀಕೃಷ್ಣನೇ ಮಾನುಷಲೋಕದಲ್ಲಿ ಗೂಢನಾಗಿರುವ ನಿನ್ನಂ ನೋಡಲೋಸುಗ ದೇವತೆಗಳೆಲ್ಲರೂ ಅಪೇಕ್ಷಿಸುತ್ತಾರೆ, ಅದ್ದರಿಂದ ಸೂರ್ಯನು ಬರುತ್ತಲಿರುವನು ॥೮॥ ಎಂಬ ಬಾಲಕವಚನವಂ ಕೇಳಿ ಭಗವಂತನು ನಗುವನಾಗಿ ಮಾತನಾಡಿದನು, ಎಲೈ ಜನರುಗಳಿರಾ! ಈತನು ಸೂರ್ಯದೇವನಲ್ಲವು, ಮಣಿಯಿಂದ ಪ್ರಕಾಶಿಸುವ ಸತ್ರಾಜಿತರಾಯನು ಬರುತಲಿದ್ದಾನೆ ॥೯॥ ಎಂದು ಶ್ರೀಕೃಷ್ಣನು ನುಡಿಯುತ್ತಿರಲಾಗಿ ಅನಂತರದಲ್ಲಿ ಸತ್ರಾಜಿತರಾಯನು ಮನೆಗೆ ಬಂದು ಮಹೋತ್ಸವವಂ ಮಾಡಿ ಬ್ರಾಹ್ಮಣರೊಡನೆ ಸ್ವಸ್ತಿವಾಚನ ಪೂರ್ವಕವಾಗಿ

ಮಣಿಂ ವಿಪ್ರೈರ್ನ್ಯವೇಶಯತ್ ॥೧೦॥ ದಿನೇ ದಿನೇ ಸ್ವರ್ಣಭಾರಾನಷ್ಟೌ ಸ ಸೃಜತಿ ಪ್ರಭೋ ॥೧೧॥ ದುರ್ಭಿಕ್ಷಮಾರ್ಯರಿಷ್ಟಾನಿ ಸರ್ಪಾಧಿವ್ಯಾಧಯೋಽಶುಭಾಃ । ನ ಸಂತಿ ಮಾಯಿನಸ್ತತ್ರ ಯತ್ರಾಸ್ತೇಽಭ್ಯರ್ಚಿತೋ ಮಣಿಃ ॥೧೨॥ ಸ ಯಾಚಿತೋ ಮಣಿಂ ಕ್ವಾಪಿ ಯದುರಾಜಾಯ ಶೌರಿಣಾ । ನೈವಾರ್ಥಕಾಮುಕಃ ಪ್ರಾದಾದ್ಯಾಚ್ಞಾಭಂಗಮತರ್ಕಯನ್ ॥೧೩॥ ತಮೇಕದಾ ಮಣಿಂ ಕಂಠೇ ಪ್ರತಿಮುಚ್ಯ ಮಹಾಪ್ರಭಮ್ । ಪ್ರಸೇನೋ ಹಯಮಾರುಹ್ಯ ಮೃಗಯಾಂ ವ್ಯಚರದ್ವನೇ ॥೧೪॥ ಪ್ರಸೇನಂ ಸಹಯಂ ಹತ್ವಾ ಮಣಿಮಾಚ್ಛಿದ್ಯ ಕೇಸರೀ । ಗಿರಿಂ ವಿಶನ್ ಜಾಂಬವತಾ ನಿಹತೋ ಮಣಿಮಿಚ್ಛತಾ ॥೧೫॥ ಸೋಽಪಿ ಚಕ್ರೇ ಕುಮಾ

---

ಬ್ರಾಹ್ಮಣರೊಡನೆ, ನ್ಯವೇಶಯತ್-ಇರಿಸಿದನು ॥೧೦॥ ಪ್ರಭೋ-ಪರೀಕ್ಷಿತನೇ! ಸಃ-ಆ ಸ್ಯಮಂತಕಮಣಿಯು, ದಿನೇದಿನೇ-ಪ್ರತಿದಿವಸದಲ್ಲಿಯೂ, ಅಷ್ಟೌಸ್ವರ್ಣಭಾರಾನ್-೮ ಚಿನ್ನದ ಭಾರುವೆಗಳನ್ನು, ಸೃಜತಿ-ಹುಟ್ಟಿಸುತ್ತಿರುತ್ತದೆ ॥೧೧॥ ದುರ್ಭಿಕ್ಷಮಾರ್ಯರಿಷ್ಟಾನಿ-ಕ್ಷಾಮವೂ ಮಾರಿಕಾರೋಗಂಗಳೂ ಅನಿಷ್ಟಗಳೂ, ಸರ್ಪಾಧಿವ್ಯಾಧಯಃ-ಸರ್ಪಗಳಿಂದಾದ ಚಿತ್ತರೋಗಂಗಳೂ, ದೇಹರೋಗಂಗಳೂ, ಅಶುಭಾಃ-ಅಮಂಗಳಂಗಳೂ, ಮಾಯಿನಃ-ವಂಚಕರೂ, ಯತ್ರ-ಯಾವ ಸ್ಥಲದಲ್ಲಿ, ಮಣಿಃ-ರತ್ನವು, ಅಭ್ಯರ್ಚಿತಃ-ಪೂಜಿಸಲ್ಪಟ್ಟು, ಆಸ್ತೇ-ಇರುವುದೋ, ತತ್ರ-ಅಲ್ಲಿ, ನಸಂತಿ-ಇರುವುದಿಲ್ಲವು ॥೧೨॥ ಯದುರಾಜಾಯ-ಉಗ್ರಸೇನರಾಯನಿಗೋಸುಗ, ಶೌರಿಣಾ-ಕೃಷ್ಣನಿಂದ, ಮಣಿಂ-ರತ್ನವನ್ನು, ಯಾಚಿತಃ-ಬೇಡಲ್ಪಟ್ಟವನಾದ, ಸಃ-ಆ ಸತ್ರಾಜಿತನು, ಕ್ವಾಪಿ-ಎಲ್ಲಿಯೂ, ಅರ್ಥಕಾಮುಕಃ-ಧನವನ್ನೇ ಬಯಸುವನಾದ್ದರಿಂದ, ಯಾಚ್ಞಾಭಂಗಂ-ಹರಿಯು ಬೇಡಿದ್ದನ್ನು ಭಂಗಪಡಿಸಿದ ಪಾಪವನ್ನು, ಅತರ್ಕಯನ್-ವಿಚಾರಿಸದೇ ಯಿರುವನಾಗಿ, ನೈವಪ್ರಾದಾತ್-ಕೊಡಲೇ ಇಲ್ಲವು ॥೧೩॥ ಏಕದಾ-ಒಂದು ಸಮಯದಲ್ಲಿ, ಪ್ರಸೇನಃ-ಸತ್ರಾಜಿತ್ತಿನ ತಮ್ಮನಾದ ಪ್ರಸೇನನು, ಮಹಾಪ್ರಭಂ-ಅಧಿಕ ಕಾಂತಿಯುಳ್ಳ, ತಂಮಣಿಂ-ಆ ರತ್ನವನ್ನು, ಕಂಠೇ-ಕೊರಳಿನಲ್ಲಿ, ಪ್ರತಿಮುಚ್ಯ-ಕಟ್ಟಿಕೊಂಡು, ಹಯಂ-ಕುದುರೆಯನ್ನು, ಆರುಹ್ಯ-ಏರಿ, ವನೇ-ಕಾಡಿನಲ್ಲಿ, ಮೃಗಯಾಂ-ಬೇಂಟೆಯನ್ನು, ವ್ಯಚರತ್-ತಿರುಗಿದನು ॥೧೪॥ ಕೇಸರೀ-ಸಿಂಹವು, ಸಹಯಂ-ಕುದುರೆಯೊಡನೆ ಸಹಿತನಾದ ಪ್ರಸೇನನನ್ನು, ಹತ್ವಾ-ಕೊಂದು, ಮಣಿಂ-ರತ್ನವನ್ನು, ಆಚ್ಛಿದ್ಯ-ಕಚ್ಚಿಕೊಂಡು, ಗಿರಿಂ-ಬೆಟ್ಟವನ್ನು, ವಿಶನ್-ಹೊಗುತ್ತಿರುವುದಾಗಿ, ಮಣಿಂ-ಸ್ಯಮಂತಕವನ್ನು, ಇಚ್ಛತಾ-ಬಯಸುವನಾದ, ಜಾಂಬವತಾ-ಜಾಂಬವಂತನಿಂದ, ನಿಹತಃ-ಸಂಹರಿಸಲ್ಪಟ್ಟದ್ದಾಯಿತು ॥೧೫॥ ಸೋಽಪಿ-ಆ ಜಾಂಬವಂತನೂ ಕೂಡ, ಮಣಿಂ-ರತ್ನವನ್ನು, ಬಿಲೇ-ಗವಿಯಲ್ಲಿ, ಕುಮಾರಸ್ಯ-ಮಗನಿಗೆ, ಕ್ರೀಡನಕಂ-ಆಟದವಸ್ತುವನ್ನಾಗಿ, ಚಕ್ರೇ-ಮಾಡಿದನು. ಭ್ರಾತಾ-ಅಣ್ಣನಾದ, ಸತ್ರಾಜಿತ್-ಸತ್ರಾಜಿದ್ರಾಯನು, ಭ್ರಾತರಂ-ತಮ್ಮನಾದ ಪ್ರಸೇನನನ್ನು, ಅಪಶ್ಯನ್-ಕಾಣದೇಯಿರುವನಾಗಿ, ಮಣಿಗ್ರೀವಃ-ರತ್ನವು ಕಂಠದಲ್ಲಿ ಉಳ್ಳವನಾಗಿ, ವನಂಗತಃ-ಕಾಡಿಗೆಹೋದ, ಮಮಭ್ರಾತಾ-ನನ್ನ ತಮ್ಮನು, ಪ್ರಾಯಃ-ಬಹುಶಃ, ಕೃಷ್ಣೇನ-ಕೃಷ್ಣನಿಂದ, ನಿಹತಃ-ಕೊಲ್ಲಲ್ಪಟ್ಟವ

---

ದೇವಾರ್ಚನಗೃಹದಲ್ಲಿ ಆ ಮಣಿಯಂ ಇರಿಸಿ ಪೂಜಿಸಿದನು ॥೧೦॥ ಭಾರಪ್ರಮಾಣವೆಷ್ಟೋ, ಆ ಮಣಿಯು ಪ್ರತಿದಿವಸದಲ್ಲಿಯೂ ಎಂಟುಭಾರಪ್ರಮಾಣವುಳ್ಳ ಸುವರ್ಣವಂ ಕೊಡುವುದು ॥೧೧॥ (ಭಾರಪ್ರಮಾಣವೆಷ್ಟೆಂದರೆ ನಾಲ್ಕು ಭತ್ತದಕಾಳು ಕೂಡಿದರೆ ೧ ಗುಲಗಂಜೀತೂಕವು-೫ ಗುಲಗಂಜಿಯಾದರೆ ಒಂದು ಮಾಷವೆನಿಸಿಕೊಂಬುದು. ಮಾಷಂಗಳು ೮ ಆದರೆ ೧ಧರಣವು. ೮ ಧರಣಂಗಳಿಗೆ ಒಂದು ಕರ್ಷವು. ಇಂತಾ ಕರ್ಷಂಗಳು ೪ಕ್ಕೆ ೧ಪಲವು. ೧೦೦ ಪಲಕ್ಕೆ ೧ತುಲೆಯು. ೨೦ತುಲೆಗಳಾದರೆ ೧ಭಾರವು. ಇಂತಾ ಭಾರಂಗಳೆಂಟರನ್ನು ಆ ಸ್ಯಮಂತಕಮಣಿಯು ಪ್ರತಿದಿವಸದಲ್ಲಿಯೂ ಕೊಡುವುದು.) ಆ ಮಣಿಯು ಪೂಜೆಯಂ ಮಾಡಿಕೊಂಡಿದ್ದ ಸ್ಥಳದಲ್ಲಿ ದುರ್ಭಿಕ್ಷವೂ ಮೃತ್ಯುಭಯವೂ ಅರಿಷ್ಟಗಳೂ ವ್ಯಾಧಿಯೂ ಸರ್ಪಭಯವೂ ಮಾಯಾಕಪಟಂಗಳೂ ಇವು ಯಾವುವೂ ಇರುವುದಿಲ್ಲವು ॥೧೨॥ ಶ್ರೀಕೃಷ್ಣನು ಉಗ್ರಸೇನನಿಗೆ ಕೊಡಲೋಸುಗ ಆ ಮಣಿಯು ಸತ್ರಾಜಿತರಾಯನಂ ಕೇಳಿದನು. ಆ ಸತ್ರಾಜಿತನು ಧನಲೋಭದಿಂದ ಭಗವಂತನು ಕೇಳಿದರೂ ಕೊಡದೇ ಹೋದನು ॥೧೩॥ ಹೀಗಿರುವಲ್ಲಿ ಒಂದು ದಿವಸದೊಳಗೆ ಸತ್ರಾಜಿತನ ಭ್ರಾತೃವಾದ ಪ್ರಸೇನನು ಪ್ರಕಾಶಮಾನವಾದ ಆ ಮಣಿಯು ಕಂಠದಲ್ಲಿ ಧರಿಸಿಕೊಂಡು ಅಶ್ವಾರೂಢನಾಗಿ ಬೇಂಟೆಗೆ ಹೋದನು ॥೧೪॥ ಅರಣ್ಯದಲ್ಲಿ ಸಿಂಹವೊಂದು ಬಂದು ಆ ಪ್ರಸೇನನಂ ಅಶ್ವವಂಸಹ ಸಂಹರಿಸಿ ಮಣಿಯಂ ಅಪಹರಿಸಿಕೊಂಡು ಪರ್ವತಗುಹೆಗೆ ಹೋಗುವ ಸಮಯದಲ್ಲಿ ಜಾಂಬವಂತನು ಕಂಡು ಆ ಸಿಂಹವಂ ಸಂಹರಿಸಿ ॥೧೫॥ ಆ ಮಣಿಯಂ ತೆಗೆದುಕೊಂಡು ಹೋಗಿ ತನ್ನ ಕುಮಾರನಿಗೆ ಆ

ರಸ್ಯ ಮಣಿಂ ಕ್ರೀಡನಕಂ ಬಿಲೇ | ಅಪಶ್ಯನ್ ಭ್ರಾತರಂ ಭ್ರಾತಾ ಸತ್ರಾಜಿತ್ಪರ್ಯತಪ್ಯತ ||೧೬|| ಪ್ರಾಯಃ ಕೃಷ್ಣೇನ ನಿಹತೋ ಮಣಿಗ್ರೀವೋ ವನಂ ಗತಃ | ಭ್ರಾತಾ ಮಮೇತಿ ತಚ್ಛ್ರುತ್ವಾ ಕರ್ಣೇ ಕರ್ಣೇ ಜಪನ್ ಜನಾಃ ||೧೭|| ಭಗವಾಂಸ್ತದುಪಶ್ರುತ್ಯ ದುರ್ಯಶೋ ಲಿಪ್ತಮಾತ್ಮನಿ | ಮಾರ್ಷ್ಟುಂ ಪ್ರಸೇನಪದವೀಮನ್ವಪದ್ಯತ ನಾಗರೈಃ ||೧೮|| ಹತಂ ಪ್ರಸೇನಮಶ್ವಂ ಚ ವೀಕ್ಷ್ಯ ಕೇಸರಿಣಾ ವನೇ | ತಂ ಚಾದ್ರಿಪೃಷ್ಠೇ ನಿಹತಮೃಕ್ಷೇಣ ದದೃಶುರ್ಜನಾಃ ||೧೯|| ಋಕ್ಷರಾಜಬಿಲಂ ಭೀಮಮಂಧೇನ ತಮಸಾವೃತಮ್ | ಏಕೋ ವಿವೇಶ ಭಗವಾನವಸ್ಥಾಪ್ಯ ಬಹಿಃ ಪ್ರಜಾಃ ||೨೦|| ತತ್ರ ದೃಷ್ಟ್ವಾ ಮಣಿಶ್ರೇಷ್ಠಂ ಬಾಲಕ್ರೀಡನಕಂ ಕೃತಮ್ | ಹರ್ತುಂ ಕೃತಮತಿಸ್ತಸ್ಮಿನ್ನವತಸ್ಥೇಽರ್ಭಕಾಂತಿಕೇ ||೨೧|| ತಮಪೂರ್ವಂ ನರಂ ದೃಷ್ಟ್ವಾ

---

ನಾಗಿರಬಹುದು ಇತಿ ಹೀಗೆಂದು, ಪರ್ಯತಪ್ಯತ-ಸಂತಾಪಗೊಂಡನು ಜನಾಃ-ಜನಂಗಳು, ತತ್-ಆ ಸುದ್ದಿಯನ್ನು, ಶ್ರುತ್ವಾ-ಕೇಳಿ, ಕರ್ಣೇಕರ್ಣೇ-ಕಿವಿಕಿವಿಯಲ್ಲಿ, ಅಜಪನ್-ಮೆಲ್ಲಗೆ ಹೇಳಿಕೊಂಡರು ||೧೬||೧೭|| ಭಗವಾನ್-ಸಾರ್ವಜ್ಞ್ಯೈಶ್ವರ್ಯ ಮುಳ್ಳ ಕೃಷ್ಣನು, ತತ್-ಆ ಸುದ್ದಿಯನ್ನು, ಉಪಶ್ರುತ್ಯ-ಕೇಳಿ, ಆತ್ಮನಿ-ತನ್ನಲ್ಲಿ, ಲಿಪ್ತಂ-ಮೆತ್ತಿಕೊಂಡ, ದುರ್ಯಶಃ-ಅಪವಾದವನ್ನು, ಮಾರ್ಷ್ಟುಂ ತೊಡೆದುಕೊಳ್ಳಲೋಸುಗ, ನಾಗರೈಃ-ಪುರಜನಂಗಳೊಡನೆ, ಪ್ರಸೇನಪದವೀಂ-ಪ್ರಸೇನನು ಹೋದ ದಾರಿಯನ್ನು, ಅನ್ವಪದ್ಯತ-ಅನುಸರಿಸಿ ವಿಚಾರಿಸುತ್ತ ಹೊರಟನು ||೧೮|| ಜನಾಃ-ನಾಗರಿಕರು, ವನೇ-ಕಾಡಿನಲ್ಲಿ, ಸಾಶ್ವಂ-ಕುದುರೆಯಿಂದ ಸಹಿತನಾಗಿ, ಕೇಸರಿಣಾ-ಸಿಂಹದಿಂದ, ಹತಂ-ಕೊಂದುಹಾಕಲ್ಪಟ್ಟಿರುವ, ಪ್ರಸೇನಂ ಚ-ಪ್ರಸೇನನನ್ನೂ, ವೀಕ್ಷ್ಯ-ನೋಡಿ, ಅದ್ರಿಪೃಷ್ಠೇ-ಬೆಟ್ಟದ ಹಿಂಬದಿಯಲ್ಲಿ, ಋಕ್ಷೇಣ-ಕರಡಿಯಿಂದ, ನಿಹತಂ-ಕೊಲ್ಲಲ್ಪಟ್ಟ, ತಂ ಚ-ಆ ಸಿಂಹವನ್ನೂ, ದದೃಶುಃ-ನೋಡಿದರು ||೧೯|| ಭಗವಾನ್-ಭಗವಂತನಾದ ಕೃಷ್ಣನು, ಬಹಿಃ-ಹೊರಗೆ, ಪ್ರಜಾಃ-ನಾಗರಿಕರನ್ನು, ಅವಸ್ಥಾಪ್ಯ-ನಿಲ್ಲಿಸಿ, ಏಕ ಏವ-ತಾನೊಬ್ಬನೇ, ಅಂಧೇನ ತಮಸಾ-ಕುರುಡುಗತ್ತಲೆಯಿಂದ, ಆವೃತಂ-ಮುಚ್ಚಲ್ಪಟ್ಟಿರುವ, ಭೀಮಂ-ಭಯಂಕರವಾದ, ಋಕ್ಷರಾಜಬಿಲಂ-ಕರಡಿಯ ಬಿಲಕ್ಕೆಯನ್ನು, ವಿವೇಶ-ಹೊಕ್ಕನು ||೨೦|| ತತ್ರ-ಅಲ್ಲಿ, ಬಾಲಕ್ರೀಡನಕಂ-ಹುಡುಗನ ಆಟವಸ್ತುವಾಗಿ, ಕೃತಂ-ಮಾಡಲ್ಪಟ್ಟಿರುವ, ಮಣಿಶ್ರೇಷ್ಠಂ ರತ್ನೋತ್ತಮವನ್ನು, ದೃಷ್ಟ್ವಾ-ಕಂಡು, ಹರ್ತುಂ-ಅಪಹರಿಸುವುದಕ್ಕೆ, ಕೃತಮತಿಃ-ಮಾಡಲ್ಪಟ್ಟ ಬುದ್ಧಿಯುಳ್ಳವನಾಗಿ, ತಸ್ಮಿನ್-ಅಂಥಾ, ಅರ್ಭಕಾಂತಿಕೇ-ಹುಡುಗನ ಬಳಿಯಲ್ಲಿ, ಅವತಸ್ಥೇ-ನಿಂತನು ||೨೧|| ಅಪೂರ್ವಂ-ಪೂರ್ವದಲ್ಲಿ ನೋಡಲ್ಪಡದ, (ಆಶ್ಚರ್ಯವಾದ) ತಂ ನರಂ-ಆ ಮನುಷ್ಯರೂಪನಾದ ಕೃಷ್ಣನನ್ನು, ದೃಷ್ಟ್ವಾ-ನೋಡಿ, ಧಾತ್ರೀ-ಆ ಹುಡುಗನಂ ಸಲಹುವವಳು, ಭೀತವತ್-ಹೆದರಿದಂತೆ, ಚುಕ್ರೋಶ-ಕೂಗಿಕೊಂಡಳು. ತತ್ ಅದನ್ನು, ಶ್ರುತ್ವಾ-ಕೇಳಿ, ಕ್ರುದ್ಧಃ-ಸಿಟ್ಟುಗೊಂಡವನಾದ, ಬಲಿನಾಂ ವರಃ-ಬಲವಂತರೊಳಗೆ ಶ್ರೇಷ್ಠನಾದ, ಜಾಂಬವಾನ್-ಜಾಂಬವಂತನು, ಅಭ್ಯದ್ರವತ್-ಅಟ್ಟಿಕೊಂಡು ಬಂದನು ||೨೨|| ಸಃ ವೈ-ಆ ಜಾಂಬವಂತನಾದರೋ, ನಾನುಭಾ

---

ವುವುದಕ್ಕೆ ಕೊಟ್ಟನು, ಸತ್ರಾಜಿತನು ತನ್ನ ತಮ್ಮನಂ ಕಾಣದೇ ದುಃಖಿತನಾಗಿ ||೧೬|| ತನ್ನ ತಮ್ಮನಂ ಶ್ರೀಕೃಷ್ಣನೇ ಸಂಹರಿಸಿದನು ಎಂದು ನಿಶ್ಚಯಿಸಿ ಮಾತನಾಡಿಕೊಂಡ ವಾರ್ತೆಯಂ ಕೇಳಿ ಜನರು ಮೆಲ್ಲಗೆ ಮಾತನಾಡಿಕೊಂಡರು ||೧೭|| ಭಗವಂತನು ಈ ವೃತ್ತಾಂತವಂ ಕೇಳಿ ನಮಗೆ ಸುಮ್ಮನೆ ಅಪಕೀರ್ತಿ ಬಂತು ಎಂದು ಆಲೋಚಿಸಿ ಅಪಕೀರ್ತಿಪರಿಹಾರಾರ್ಥವಾಗಿ ಪುರವಾಸಿಗಳಾದ ಜನರಂ ಕರೆದುಕೊಂಡು ಪ್ರಸೇನನ ಮಾರ್ಗವಂ ಹುಡುಕಿಕೊಂಡು ಹೋಗಿ ||೧೮|| ಆ ಅರಣ್ಯದಲ್ಲಿ ಸಿಂಹದಿಂದ ಸಂಹೃತನಾದ ಪ್ರಸೇನನು ಕುದುರೆಯಂ ಸಹ ನೋಡಿ ಆಮೇಲೆ ಜಾಂಬವಂತನಿಂದ ಸಂಹೃತವಾದ ಸಿಂಹವನ್ನು ನೋಡಿ ಆ ಜನರಿಗೆ ತೋರಿಸಿದನು ||೧೯|| ಆಗ ಕೃಷ್ಣನು ಸಂಗಡಬಂದ ಜನರಂ ಹೊರಗೆ ನಿಲ್ಲಿಸಿಬಿಟ್ಟು ತಾನೊಬ್ಬನೇ ಅಂಧಕಾರವ್ಯಾಪ್ತವಾದ ಜಾಂಬವಂತನ ಗುಹೆಯಂ ಹೊಕ್ಕನು ||೨೦|| ಆ ಗುಹೆಯೊಳಗೆ ಬಾಲಕನ ಸಮೀಪದಲ್ಲಿರುವ ಆ ಮಣಿಯಂ ನೋಡಿ ಶ್ರೀಕೃಷ್ಣನು ಆ ಮಣಿಯಂ ತೆಗೆದುಕೊಂಡು ಬರಲೋಸುಗ ಅಲ್ಲಿ ನಿಂತನು ||೨೧|| ಅತ್ಯಾಶ್ಚರ್ಯಕರವಾದ ಅಂಗಸೌಷ್ಠವವುಳ್ಳ ಮಹಾಪುರುಷನಾದ ಶ್ರೀಕೃಷ್ಣನಂ ನೋಡಿ ಬಾಲಕನ ಮಾತೃವಾದವಳು ಒಬ್ಬಳು ಭಯದಿಂದ ಕೂಗಿದಳು. ಬಲಿಷ್ಠನಾದ ಜಾಂಬವಂತನು ಆ ಶಬ್ದವಂ ಕೇಳಿ ಓಡಿಬಂದು ಕ್ರೋಧದಿಂದೊಡನೆ ||೨೨|| ಶ್ರೀಕೃಷ್ಣನಸಂಗಡ ಯುದ್ಧವಂ ಮಾಡಿದನು. ಶ್ರೀಕೃಷ್ಣನ ಪ್ರಭಾವವಂ ಅರಿಯದೆ ಸಾಧಾರ

ಧಾತ್ರೀ ಚುಕ್ರೋಶ ಭೀತವತ್ । ತಚ್ಛ್ರುತ್ವಾಭ್ಯದ್ರವತ್ಕ್ರುದ್ಧೋ ಜಾಂಬವಾನ್ ಬಲಿನಾಂ ವರಃ ॥೨೨॥ ಸ ವೈ ಭಗವತಾ ತೇನ ಯುಯುಧೇ ಸ್ವಾಮಿನಾತ್ಮನಃ । ಪುರುಷಂ ಪ್ರಾಕೃತಂ ಮತ್ವಾ ಕುಪಿತೋ ನಾನುಭಾವವಿತ್ ॥೨೩॥ ದ್ವಂದ್ವಯುದ್ಧಂ ಸುತುಮುಲಮುಭಯೋರ್ವಿಜಿಗೀಷತೋಃ । ಆಯುಧಾಶ್ಮದ್ರುಮೈರ್ದೋರ್ಭಿಃ ಕ್ರವ್ಯಾರ್ಥೇ ಶ್ಯೇನಯೋರಿವ ॥೨೪॥ ಆಸೀತ್ತದಷ್ಟಾವಿಂಶಾಹಮಿತರೇತರಮುಷ್ಟಿಭಿಃ । ವಜ್ರನಿಷ್ಪೇಷಪರುಷೈರವಿಶ್ರಮಮಹರ್ನಿಶಮ್ ॥೨೫॥ ಕೃಷ್ಣಮುಷ್ಟಿವಿನಿಷ್ಪಾತನಿಷ್ಪಿಷ್ಟಾಂಗೋರುಬಂಧನಃ । ಕ್ಷೀಣಸತ್ವಸ್ಸ್ವಿನ್ನಗಾತ್ರಸ್ತಮಾಹಾತೀವ ವಿಸ್ಮಿತಃ ॥೨೬॥ ಜಾನೇ ತ್ವಾಂ ಸರ್ವಭೂತಾನಾಂ ಪ್ರಾಣ ಓಜಸ್ಸಹೋ ಬಲಮ್ । ವಿಷ್ಣುಂ ಪುರಾಣಪುರುಷಂ ಪ್ರಭವಿಷ್ಣುಮಧೀಶ್ವರಮ್ ॥೨೭॥ ತ್ವಂ ಹಿ ವಿಶ್ವಸೃಜಾಂ ಸ್ರಷ್ಟಾ ಸೃಷ್ಟಾನಾಮಪಿ ಯಚ್ಚ ಸತ್ । ಕಾಲಃ ಕಲಯತಾಮೀಶಃ ಪರ ಆತ್ಮಾ ತಥಾತ್ಮನಾಮ್ ॥೨೮॥ ಯಸ್ಯೇಷದುತ್ಕಲಿತರೋಷಕಟಾಕ್ಷಮೋಕ್ಷೈರ್ವರ್ತ್ಮಾದಿಶತ್ಕ್ಷುಭಿತನಕ್ರತಿಮಿಂಗಿ

---

ಭವವಿತ್-ಕೃಷ್ಣನ ಸಾಮರ್ಥ್ಯವಂ ಅರಿಯದವನಾದ್ದರಿಂದ, ಕುಪಿತಃ-ಸಿಟ್ಟುಗೊಂಡವನಾಗಿ, ಪ್ರಾಕೃತಂ ಪುರುಷಂ-ಸಾಧಾರಣ ಮನುಷ್ಯನನ್ನಾಗಿ, ಮತ್ವಾ-ತಿಳಿದು, ಆತ್ಮನಃ-ತನ್ನ, ಸ್ವಾಮಿನಾ-ಒಡೆಯನಾದ, ತೇನ ಭಗವತಾ-ಆ ಕೃಷ್ಣದೇವನೊಡನೆ, ಯುಯುಧೇ-ಕಾದಿದನು ॥೨೩॥ ಕ್ರವ್ಯಾರ್ಥೇ-ಮಾಂಸದ ಪ್ರಯೋಜನಕ್ಕೋಸುಗ, ಶ್ಯೇನಯೋರಿವ-ಗಿಡಗನ ಹಕ್ಕಿಗಳಿಗೆ ಹೇಗೋ ಹಾಗೆ, ವಿಜಿಗೀಷತೋಃ-ಗೆಲ್ಲಬಯಸುವವರಾದ, ಉಭಯೋಃ-ಕೃಷ್ಣಜಾಂಬವಂತರೀರ್ವರಿಗೂ, ಆಯುಧಾಶ್ಮದ್ರುಮೈಃ-ಕೈದುಗಳಿಂದಲೂ, ಕಲ್ಲುಗಳಿಂದಲೂ, ಮರಗಳಿಂದಲೂ, ದೋರ್ಭಿಃ-ತೋಳುಗಳಿಂದಲೂ, ಸುತುಮುಲಂ-ಬಹಳ ಭಯಂಕರವಾದ, ದ್ವಂದ್ವಯುದ್ಧಂ-ಜಂಟಿ ಕಾಳಗವು, ॥೨೪॥ ಆಸೀತ್-ಆಯಿತು. ತತ್-ಆ ಜಗಳವು, ವಜ್ರನಿಷ್ಪೇಷಪರುಷೈಃ-ಸಿಡಿಲೆರಗುವಂತೆ ಕಠಿನಂಗಳಾದ, ಇತರೇತರಮುಷ್ಟಿಭಿಃ-ಪರಸ್ಪರದ ಹಿಡಿಗುದ್ದುಗಳಿಂದ, ಅಹರ್ನಿಶಂ-ಹಗಲಿನಲ್ಲಿಯೂ ರಾತ್ರಿಯಲ್ಲಿಯೂ, ಅಷ್ಟಾವಿಂಶಾಹಂ-ಇಪ್ಪತ್ತೆಂಟುದಿನಗಳಲ್ಲಿ, ಆಯಿತು ॥೨೫॥ ಕೃಷ್ಣಸ್ಯ-ನಾರಾಯಣನ, ಮುಷ್ಟಿನಿಷ್ಪಾತೈಃ-ಹಿಡಿಗುದ್ದುಗಳಿಂದ, ನಿಷ್ಪಿಷ್ಟಾಂಗೋರುಬಂಧನಃ-ನಿಷ್ಪಿಷ್ಟ-ನುರಿಯಲ್ಪಟ್ಟ, ಅಂಗ-ಅವಯವಂಗಳೂ, ಊರು-ತೊಡೆಗಳೂ ಬಂಧನಃ-ಸಂಧಿಗಳೂ ಉಳ್ಳವನಾದ್ದರಿಂದ, ಕ್ಷೀಣಸತ್ವಃ-ಕುಂದುಗೊಂಡ ಸಾಮರ್ಥ್ಯವುಳ್ಳವನೂ, ಸ್ವಿನ್ನಗಾತ್ರಃ-ಬೆವರಿದ ಮೈಯುಳ್ಳವನೂ ಆದ ಜಾಂಬವಂತನು, ಅತೀವ-ಬಹಳವಾಗಿ, ವಿಸ್ಮಿತಃ-ಆಶ್ಚರ್ಯವುಳ್ಳವನಾಗಿ, ತಂ-ಆ ಕೃಷ್ಣನಂ ಕುರಿತು, ಆಹ-ನುಡಿದನು ॥೨೬॥ ತ್ವಾಂ-ನಿನ್ನನ್ನು, ಸರ್ವಭೂತಾನಾಂ-ಸಕಲಪ್ರಾಣಿಗಳಿಗೂ, ಪ್ರಾಣಃ-ಅಧ್ಯಾತ್ಮವಾದ ಶಕ್ತಿಯೂ, ಓಜಃ-ಇಂದ್ರಿಯಸಾಮರ್ಥ್ಯವೂ, ಸಹಃ-ಗುಂಡಿಗೆಯ ಘಟ್ಟಿತನವೂ, ಬಲಂ-ದೇಹತ್ರಾಣವೂ, ಆಗಿರುವಿಯೆನುತಲೂ, ವಿಷ್ಣುಂ-ವ್ಯಾಪಕನಾದ, ಪುರಾಣಪುರುಷಂ-ಕಾರಣಾತ್ಮನಾದ, ಪ್ರಭವಿಷ್ಣುಂ-ಸರ್ವಸಮರ್ಥನಾದ, ಅಧೀಶ್ವರಂ-ಒಡೆಯರಿಗೊಡೆಯನಾದ, ನಾರಾಯಣನೆನುತಲೂ, ಜಾನೇ-ಬಲ್ಲೆನು ॥೨೭॥ ಹಿ-ಯಾವಕಾರಣದಿಂದ, ತ್ವಂ-ನೀನು, ವಿಶ್ವಸೃಜಾಂ-ಪ್ರಪಂಚವನ್ನು ಸೃಷ್ಟಿಸುವ ಬ್ರಹ್ಮರಿಗೂ, ಸ್ರಷ್ಟಾ-ಸೃಷ್ಟಿಕರ್ತನೋ, ಸೃಷ್ಟಾನಾಮಪಿ-ಸೃಷ್ಟಿಸಲ್ಪಡತಕ್ಕ ಮಹದಾದಿತತ್ವಗಳಿಗೂ, ಸದ್ಯತ್-ಸತ್ತೆಯಾವುದೋ, ಕಲಯತಾಂ-ಕ್ರಿಯಾವಂತರಿಗೆ, ಈಶಃ-ಒಡೆಯನೂ, ಕಾಲಃ-ಉತ್ಪತ್ತಿಯುಳ್ಳ ವಸ್ತುಗಳಿಗಾಧಾ

---

ಣ ಮನುಷ್ಯನನ್ನಾಗಿ ತಿಳಿದುಕೊಂಡು ಯುದ್ಧವಂ ಮಾಡಿದನು ॥೨೩॥ ಜಯಿಸಲಿಚ್ಛೆಯುಳ್ಳ ಇಬ್ಬರಿಗೂ ಮಹಾಭಯಂಕರವಾಗಿ ದ್ವಂದ್ವಯುದ್ಧವುಂಟಾಯಿತು. ಮಾಂಸನಿಮಿತ್ತವಾಗಿ ಗಿಡಗನಹಕ್ಕಿಗಳಿಗೆ ಯುದ್ಧವಾದಂತೆ ಆಯುಧಗಳಿಂದಲೂ ಶಿಲಾವರ್ಷಗಳಿಂದಲೂ ಯುದ್ಧವಾಯಿತು ॥೨೪॥ ಇಪ್ಪತ್ತೆಂಟುದಿವಸಗಳ ಪರ್ಯಂತವೂ ಅನ್ಯೋನ್ಯವಾಗಿ ವಜ್ರಪ್ರಹಾರಂಗಳಿಗೆ ಸಮಾನವಾದ ಮುಷ್ಟಿಪ್ರಹಾರಗಳಿಂದ ವಿಶ್ರಮವಿಲ್ಲದೆ ಅವಿಚ್ಛಿನ್ನವಾಗಿ ಯುದ್ಧವಾಯಿತು ॥೨೫॥ ಶ್ರೀಕೃಷ್ಣನ ಮುಷ್ಟಿಪ್ರಹಾರಗಳಿಂದ ಶಿಥಿಲಂಗಳಾದ ಸಂಧಿಗಳೂ ಅಂಗಗಳೂ ಉಳ್ಳವನಾಗಿ ಕ್ಷೀಣಬಲನಾಗಿ ಬೆವರಿದ ಶರೀರವುಳ್ಳವನಾಗಿ ಜಾಂಬವಂತನು ಮೂರ್ಛಿತನಾಗಿ ಆ ಶ್ರೀಕೃಷ್ಣನಂ ಕುರಿತು ನುಡಿದನು ॥೨೬॥ ನಿನ್ನನ್ನು ಸಕಲ ಪ್ರಾಣಿಗಳಿಗೂ ಅಧ್ಯಾತ್ಮವಾದ ಶಕ್ತಿಯೂ ಕಾಯಬಲವೂ ಇಂದ್ರಿಯ ಬಲವೂ ಬುದ್ಧಿಬಲವೂ ಎಲ್ಲವೂ ನಿನಗೆ ಸರಿಯೆಂದು ತಿಳಿಯುತ್ತೇನೆ. ಪ್ರಭವಿಷ್ಣುವಾದ ಪುರಾಣಪುರುಷನಾದ ಸಾಕ್ಷಾದ್ವಿಷ್ಣುವೇ ನೀನೆಂದು ತಿಳಿಯುತ್ತೇನೆ ॥೨೭॥ ನೀನು ಸೃಷ್ಟಿಕರ್ತೃಗಳಾದ ಬ್ರಹ್ಮಾದಿಗಳಿಗೂ ಸ್ರಷ್ಟೃವಾದವನು. ಉತ್ತರತ್ರ ಹುಟ್ಟುವ ಭೂತಗಳಿಗೂ ಕಾರಣನಾದವನು. ನೀನೇ ಕಾಲ

ತಿಂಗಿಲೋಽಬ್ಧಿಃ। ಸೇತುಃ ಕೃತಸ್ಸ್ವಯಶ ಉಜ್ಜ್ವಲಿತಾ ಚ ಲಂಕಾ ರಕ್ಷಶ್ಶಿರಾಂಸಿ ಭುವಿ ಪೇತುರಿಷುಕ್ಷತಾನಿ ॥೨೯॥
ಇತಿ ವಿಜ್ಞಾತವಿಜ್ಞಾನ ಮೃಕ್ಷರಾಜಾನಮಚ್ಯುತಃ । ವ್ಯಾಜಹಾರ ಮಹಾರಾಜ ಭಗವಾನ್ ದೇವಕೀಸುತಃ ॥೩೦॥ ಅಭಿಮೃಶ್ಯಾರವಿಂದಾಕ್ಷಃ ಪಾಣಿನಾ ಶಂಕರೇಣ ತಂ । ಕೃಪಯಾ ಪರಯಾ ಭಕ್ತಂ ಮೇಘಗಂಭೀರಯಾ ಗಿರಾ ॥೩೧॥ ಮಣಿಹೇತೋರಿಹ ಪ್ರಾಪ್ತಾ ವಯಮೃಕ್ಷಪತೇ ಬಿಲಮ್ । ಮಿಥ್ಯಾಭಿಶಾಪಂ ಪ್ರಮೃಜನ್ನಾತ್ಮನೋ ಮಣಿನಾಮುನಾ ॥೩೨॥ ಇತ್ಯುಕ್ತಸ್ಸ್ವಾಂ ದುಹಿತರಂ ಕನ್ಯಾಂ ಜಾಂಬವತೀಂ ಮುದಾ। ಅರ್ಹಣಾರ್ಥಂ ಸ ಮಣಿನಾ ಕೃಷ್ಣಾಯೋಪಜಹಾರ ಹ ॥೩೩॥ ಅನ್ಯೈಸ್ಸಮಣಿಮುಖ್ಯೈಶ್ಚ ಪೂಜಿತೋ

ರಸ್ಸು [illegible] ಗೆ, ಅಸ್ವನಾಂ-ಜೀವಿಗಳಿಗೆ, ಪರಃ-ಉತ್ಕೃಷ್ಟನಾದ, ಆತ್ಮಾ-ಪುರುಷನೂ ಆಗಿರುವಿ ॥೨೮॥ ಯಸ್ಯ [illegible] ಉತ್ಕಲಿತ-ತೋರಿಸಲ್ಪಟ್ಟ, ರೋಷ-ಸಿಟ್ಟುಳ್ಳ, ಕಟಾಕ್ಷ-[illegible] ದಿಂದ, ಕ್ಷುಭಿತನಕ್ರತಿಮಿಂಗಿಲಃ-ಸಂಕಟಗೊಳಿಸಲ್ಪಟ್ಟ ಮೊಸಳೆಗಳುಳ್ಳ ದೊಡ್ಡ ಮೀನುಗಳುಳ್ಳ [illegible], ಅದಿಶ[illegible]-ಕೊಟ್ಟಿತೋ, ಅದರಲ್ಲಿ, ಸ್ವಯಶಃ-ತನ್ನ ಕೀರ್ತಿಯೋ, ಸೇತುಃ ಕೃತಃ-[illegible], ಲಂಕಾ-ಲಂಕೆಯೂ, ಉಜ್ಜ್ವಲಿತಾ-ಉರಿಸಲ್ಪಟ್ಟಿತೋ, ಇಷುಕ್ಷತಾನಿ-ಬಾಣಗಳಿಂದ ಛೇದಿಸಲ್ಪಟ್ಟ, ರಕ್ಷಶ್ಶಿರಾಂಸಿ-ರಾಕ್ಷಸರ ತಲೆಗಳು, ಭುವಿ-ನೆಲದಲ್ಲಿ, ಪೇತುಃ-ಬಿದ್ದವೋ, ತಂ ತ್ವಾಂ ಜಾನೇ-ಆ ನಿನ್ನನ್ನು ಅವ್ಯಸನ್ನಾಗಿ ತಿಳಿವ [illegible]-ಪರೀಕ್ಷಿತನೇ ! ಇತಿ-ಹೀಗೆ ವಿಜ್ಞಾತವಿಜ್ಞಾನಂ-ತಿಳಿಯಲ್ಪಟ್ಟ ಶಾಸ್ತ್ರಾನುಭವವುಳ್ಳ, ಋಕ್ಷರಾಜಾನಂ-ಕರಡಿಗಳಿಗೊಡೆಯನಾದ ಜಾಂಬವಂತನಂ ಕುರಿತು, ದೇವಕೀಸುತಃ-ದೇವಕಿಯ ಮಗನಾದ, ಭಗವಾನ್-ಸರ್ವಜ್ಞನಾದ, ಅಚ್ಯುತಃ-ಕೃಷ್ಣನು, ವ್ಯಾಜಹಾರ-ಹೇಳಿದನು ॥೩೦॥ ಅರವಿಂದಾಕ್ಷಃ-ಕಮಲಲೋಚನನಾದ ಕೃಷ್ಣನು, ಆದರೋ, ಶಂಕರೇಣ ಸುಖವನ್ನು ಮಾಡುವ, ಪಾಣಿನಾ-ಹಸ್ತದಿಂದ, ಅಭಿಮೃಶ್ಯ-ದೇಹವನ್ನು ಸವರಿ, ಭಕ್ತಂ-ಸೇವಕನಾದ, ತಂ-ಅಜಾಂಬವಂತನಂ ಕುರಿತು, ಕೃಪಯಾ-ದಯೆಯಿಂದ, ಮೇಘಗಂಭೀರಯಾ-ಗುಡಿಗಿನಂತೆ ಘನವಾದ, ಗಿರಾ-ಮಾತಿನಿಂದ, ಆಹ-ನುಡಿದನು ॥೩೧॥ ಋಕ್ಷಪ-ಕರಡಿಗಳಿಗೊಡೆಯನೇ! ವಯಂ-ನಾವು, ಮಣಿಹೇತೋಃ-ರತ್ನದನಿಮಿತ್ತದಿಂದ, ತೇ-ನಿನ್ನ, ಬಿಲಂ-ಗವಿಯಾಗಿರುವ, ಇಹ-ಇಲ್ಲಿಗೆ, ಪ್ರಾಪ್ತಾಃ-ಬಂದವರಾದೆವು, ಅಮುನಾ ಮಣಿನಾ-ಈ ರತ್ನದಿಂದ, ಆತ್ಮನಃ-ನನ್ನ, ಮಿಥ್ಯಾಭಿಶಾಪಂ-ಆರೋಪಿತವಾಗಿ ಬಂದಿರುವ ಪಳಿಯನ್ನು, ಪ್ರಮೃಜನ್-ತೊಡೆದುಕೊಳ್ಳುವನಾಗುವೆನು ॥೩೨॥ ಇತ್ಯುಕ್ತಃ-ಹೀಗೆ ಹೇಳಲ್ಪಟ್ಟ, ಸಃ-ಆ ಜಾಂಬವಂತನು, ಸ್ವಾಂ ದುಹಿತರಂ-ತನ್ನ ಮಗಳಾದ, ಕನ್ಯಾಂ-ಮದುವೆಯಿಲ್ಲದವಳಾದ, ಜಾಂಬವತೀಂ-ಜಾಂಬವತಿಯೆಂಬವಳನ್ನು, ಮಣಿನಾ ಸಹ-ಸ್ಯಮಂತಕರತ್ನದೊಡನೆ, ಕೃಷ್ಣಾಯ-ಶ್ರೀಹರಿಗೆ, ಅರ್ಹಣಾರ್ಥಂ-ಪೂಜಾರ್ಥವಾಗಿ, ಮುದಾ-ಸಂತೋಷದಿಂದ, ಹ-ಆಶ್ಚರ್ಯವಾಗಿ, ಉಪಜಹಾರ-ಕಾಣಿಕೆಯನ್ನಾಗಿ ಅರ್ಪಿಸಿದನು ॥೩೩॥ ಅನ್ಯೈಃ-ಇತರಂಗಳಾದ, ಮಣಿಮುಖ್ಯೈಶ್ಚ-ಶ್ರೇಷ್ಠವಸ್ತುಗಳಲ್ಲಿ ಮುಖ್ಯವಾದವುಗಳಿಂದಲೂ, ಪೂಜಿತಃ-ಅರ್ಚಿಸಲ್ಪಟ್ಟ, ಭಕ್ತವತ್ಸಲಃ-ಭಕ್ತರಲ್ಲಿದ

---

ಸ್ವರೂಪನು. ಜೀವರಿಗೆ ಅಂತರಾತ್ಮನು ॥೨೮॥ ಯಾವ ಮಹಾಪುರುಷನ ಸ್ವಲ್ಪ ಕೋಪದಿಂದ ಕೆಂಪಾದ ಕಟಾಕ್ಷಪಾತಗಳಿಂದ ಭಯಪಟ್ಟ ಸಮುದ್ರನು ಭಯಪೀಡಿತಂಗಳಾದ ನಕ್ರಮಕರಾದಿ ಜಲಚರಂಗಳುಳ್ಳವನಾಗಿ ಮಾರ್ಗವಂ ಕೊಟ್ಟ ಮೇಲೆ ಸೇತುವಂ ಕಟ್ಟಿ ಕಪಿಸೇನಾ ಸಮೇತನಾಗಿ ಸಮುದ್ರವಂ ದಾಂಟಿ ಲಂಕಾಪುರವಂ ನಾಶಮಾಡಿ ರಾವಣನ ಶಿರಸ್ಸುಗಳಂ ಬಾಣಗಳಿಂದ ಛೇದಿಸಿದನೋ ಅಂತಾ ಶ್ರೀರಾಮನೇ ನೀನೆಂದು ತಿಳಿಯುತ್ತೇನೇ ॥೨೯॥ ಎಂದು ಈರೀತಿಯಲ್ಲಿ ಭಗವಂತನ ಯಥಾರ್ಥವಂ ತಿಳಿದು ವಿಜ್ಞಾಪನಂ ಗೆಯ್ಯುತ್ತಲಿರುವ ಜಾಂಬವಂತನಂ ಕುರಿತು ಭಗವಂತನು ನುಡಿದನು ॥೩೦॥ ಭಕ್ತನಾದ ಜಾಂಬವಂತನಂ ಹಸ್ತದಿಂದ ಸ್ಪರ್ಶವಂ ಮಾಡಿ ಕೃಪೆಯಿಂದ ಭಗವಂತನು ಮೇಘದಂತೆ ಗಂಭೀರವಾದ ವಾಕ್ಯದಿಂದ ನುಡಿದನು ॥೩೧॥ ಅದೆಂತೆನೆ--ಎಲೈ ಋಕ್ಷಪತಿಯಾದ ಜಾಂಬವಂತನೇ! ಈ ಮಣಿನಿಮಿತ್ತವಾಗಿ ನಾವು ಇಲ್ಲಿಗೆ ಬಂದೆವು. ಈ ಮಣಿಯಿಂದ ನಮಗೆ ಮಿಥ್ಯಾಪವಾದಬಂದಿದೆ. ಅಪವಾದಪರಿಹಾರಾರ್ಥವಾಗಿ ಈ ಬಿಲಕ್ಕೆ ಬಂದೆವು ॥೩೨॥ ಎಂಬ ಶ್ರೀಕೃಷ್ಣವಾಕ್ಯವಂ ಕೇಳಿ ಜಾಂಬವಂತನು ಸಂತೋಷದಿಂದ ತನ್ನ ಪುತ್ರಿಯಾದ ಜಾಂಬವತಿಯಂ ಈ ಮಣಿಯಂ ಸಹ ಶ್ರೀಕೃಷ್ಣನಿಗೆ ಕಾಣಿಕೆಯ ರೂಪವಾಗಿ ಒಪ್ಪಿಸಿದನು ॥೩೩॥ ಬಿಲದ ಹೊರಗೆ ಇದ್ದ ಕೃಷ್ಣನ ಚಾರರಾದ ಜನರು ಶ್ರೀಕೃಷ್ಣನು ಬಿಲಪ್ರವೇಶವಂ ಮಾಡಿದ್ದು ಮೊದಲುಗೊಂಡು ೧೨ ದಿವಸಪರ್ಯಂತವೂ ನೋಡಿ ಶ್ರೀಕೃಷ್ಣನು ಹೊರಕ್ಕೆ ಬರಲಿಲ್ಲವೆಂ

ಭಕ್ತವತ್ಸಲಃ | ದದೌತಸ್ಮೈಪರಾಂಮುಕ್ತಿಂಪ್ರೀತ್ಯಾಜಾಂಬವತೇಹರಿಃ ||೩೪|| ಅದೃಷ್ಟ್ವಾನಿರ್ಗಮಂಶೌರೇಃಪ್ರವಿಷ್ಟಸ್ಯಬಿಲಂಜನಾಃ|ಪ್ರತೀಕ್ಷ್ಯದ್ವಾದಶಾಹಾನಿದುಃಖಿತಾಸ್ತುಪುರಂಯಯುಃ||೩೫|| ನಿಶಮ್ಯದೇವಕೀದೇವೀರುಕ್ಮಿಣ್ಯಾನಕದುಂದುಭಿಃ | ಸುಹೃದೋಜ್ಞಾತಯೋಽಶೋಚನ್‌ಬಿಲಾತ್ಕೃಷ್ಣಮನಿರ್ಗತಮ್ ||೩೬|| ಸತ್ರಾಜಿತಂಶಪಂತಸ್ತೇದುಃಖಿತಾದ್ವಾರಕೌಕಸಃ | ಉಪತಸ್ಥುಶ್ಚಂದ್ರಭಾಗಾಂದುರ್ಗಾಂಕೃಷ್ಣೋಪಲಬ್ಧಯೇ||೩೭|| ತೇಷಾಂತುದೇವ್ಯುಪಸ್ಥಾನಾತ್ಪ್ರತ್ಯಾದಿಷ್ಟಾಶಿಷಾಚಸಃ| ಪ್ರಾದುರ್ಬಭೂವಸಿದ್ಧಾರ್ಥಸ್ಸದಾರೋಹರ್ಷಯನ್ಹರಿಃ ||೩೮|| ಉಪಲಭ್ಯಹೃಷೀಕೇಶಂಮೃತಂ ಪುನರಿವಾಗತಂ | ಸಹಪತ್ನ್ಯಾಮಣಿಗ್ರೀವಂಸರ್ವೇಜಾತಮಹೋತ್ಸವಾಃ ||೩೯|| ಸತ್ರಾಜಿತಂಸಮಾಹೂಯಸಭಾಯಾಂರಾಜಸನ್ನಿಧೌ|ಪ್ರಾಪ್ತಿಂಚಾಖ್ಯಾಯಭಗವಾನ್ಮಣಿಂತಸ್ಮೈನ್ಯವೇದಯತ್ ||೪೦||

---

ಯೆಂಬುಳ್ಳ, ಸಹರಿಃ-ಆಕೃಷ್ಣನು, ಪ್ರೀತ್ಯಾ-ಪ್ರೀತಿಯಿಂದ, ತಸ್ಮೈಜಾಂಬವತೇ-ಆ ಜಾಂಬವಂತನಿಗೆ, ಪರಾಂ-ಉತ್ಕೃಷ್ಟವಾದ, ಮುಕ್ತಿಂ-ಮೋಕ್ಷವನ್ನು, ದದೌ-ಕೊಟ್ಟನು ||೩೪|| ಜನಾಃ-ಹೊರಗಿದ್ದ ದ್ವಾರಕಾಪುರದ ಜನಂಗಳು, ಬಿಲಂ-ಕರಡಿಯಬೊಕ್ಕೆಯನ್ನು, ಪ್ರವಿಷ್ಟಸ್ಯ-ಹೊಕ್ಕಂಥಾ, ಶೌರೇಃ-ಕೃಷ್ಣನ, ನಿರ್ಗಮಂ-ಹೊರಗೆಬರುವಿಕೆಯನ್ನು, ಅದೃಷ್ಟ್ವಾ-ಕಾಣದೆ, ದ್ವಾದಶಾಹಾನಿ-೧೨ದಿವಸಗಳಲ್ಲಿ, ಪ್ರತೀಕ್ಷ್ಯ-ದಾರಿನೋಡುತ್ತಿದ್ದು, ದುಃಖಿತಾಃ-ವ್ಯಥೆಯುಂಟಾದವರಾಗಿ, ಪುರಂ-ದ್ವಾರಕೆಯನ್ನು, ಯಯುಃ-ಸೇರಿದರು ||೩೫|| ದೇವಕೀದೇವೀ-ಕೃಷ್ಣನತಾಯಿಯೂ, ರುಕ್ಮಿಣೀ-ಕೃಷ್ಣನ ಹೆಂಡತಿಯೂ, ಆನಕದುಂದುಭಿಃ-ವಸುದೇವನೂ, ಸುಹೃದಃ-ಗೆಳೆಯರೂ, ಜ್ಞಾತಯಃ-ನೆಂಟರೂ, ಕೃಷ್ಣಂ-ಹರಿಯನ್ನು, ಬಿಲಾತ್-ಗವಿಯದೆಸೆಯಿಂದ, ಅನಿರ್ಗತಂ-ಹೊರಟುಬಾರದೆ ಯಿರುವವನನ್ನಾಗಿ, ನಿಶಮ್ಯ-ಕೇಳಿ, ಅಶೋಚನ್-ದುಃಖಿಸಿದರು ||೩೬|| ದ್ವಾರಕೌಕಸಃ-ದ್ವಾರಕೆಯಲ್ಲಿ ಮನೆಯುಳ್ಳ, ತೇ-ಅವರು, ದುಃಖಿತಾಃ-ಸಿಟ್ಟಿನಿಂ ಶಾಪವಗೊಡುವವರಾದ, ಸತ್ರಾಜಿತಂ-ಸತ್ರಾಜಿತ್ತನನ್ನು, ಶಪಂತಃ-ಬಯ್ಯುತಲಿರುವರಾಗಿ, ಕೃಷ್ಣೋಪಲಬ್ಧಯೇ-ಶ್ರೀಕೃಷ್ಣನಂ ಮರಳಿ ತಾವು ಪ್ರತ್ಯಕ್ಷವಾಗಿ ನೋಡಲೋಸುಗ, ಚಂದ್ರಭಾಗಾಂ-ಚಂದ್ರಭಾಗಾದೇವಿಯೆಂದು ಪ್ರಸಿದ್ಧಳಾದ, ದುರ್ಗಾಂ-ದುಃಖಸಂಕಟಪರಿಹಾರಕಳಾದ ಶಿವಶಕ್ತಿಯನ್ನು, ಉಪತಸ್ಥುಃ-ಭಜಿಸಿದರು ||೩೭|| ದೇವ್ಯುಪಸ್ಥಾನಾತ್-ದುರ್ಗಾದೇವಿಯನ್ನು ಭಜಿಸಿದ್ದರದೆಸೆಯಿಂದಲೂ, ಪ್ರತ್ಯಾದಿಷ್ಟಾಶಿಷಾಚ-ಕೃಷ್ಣನಂ ಕಾಣುವಿರೆಂದು ದೇವತೆಯಿಂದ ಕೊಡಲ್ಪಟ್ಟ ಆಶೀರ್ವಾದದಿಂದಲೂ, ಸಿದ್ಧಾರ್ಥಃ-ನೆರವೇರಿದ ಪ್ರಯೋಜನವುಳ್ಳವನಾದ, ಸದಾರಃ-ಹೆಂಡತಿಯಾದ ಜಾಂಬವತಿಯಿಂ ಸಹಿತನಾದ, ಸಹರಿಸ್ತು-ಆಕೃಷ್ಣನಾದರೋ ತೇಷಾಂ-ಆ ದ್ವಾರಕಾವಾಸಿಗಳಾದ ವಸುದೇವಾದಿಗಳಿಗೆ ಹರ್ಷಯನ್-ಸಂತೋಷವನ್ನುಂಟುಮಾಡುವನಾಗಿ, ಪ್ರಾದುರ್ಬಭೂವ-ಪ್ರತ್ಯಕ್ಷನಾದನು ||೩೮|| ಮೃತಂ-ಸತ್ತುಹೋಗಿದ್ದು, ಪುನಃ-ಮರಳಿಯೂ ಆಗತಮಿವ-ಬಂದವನಂತೆ ತೋರುವ ಹೃಷೀಕೇಶಂ-ಇಂದ್ರಿಯಗಳೊಡೆಯನಾದ ಕೃಷ್ಣನನ್ನು, ಪತ್ನ್ಯಾಸಹ-ಹೆಂಡತಿಯೊಡನೆಯೂ, ಮಣಿಗ್ರೀವಂ-ಸ್ಯಮಂತಕವು ಕೊರಳಲ್ಲಿ ಉಳ್ಳವನನ್ನಾಗಿಯೂ, ಉಪಲಭ್ಯ-ಪ್ರತ್ಯಕ್ಷವಾಗಿನೋಡಿ, ಸರ್ವೇ-ಎಲ್ಲರೂ, ಜಾತಮಹೋತ್ಸವಾಃ-ಉಂಟಾದ ದೊಡ್ಡ ಹಬ್ಬವುಳ್ಳವರಾದರು ||೩೯|| ಭಗವಾನ್-ಕೃಷ್ಣನು, ಸತ್ರಾಜಿತಂ-ಸತ್ರಾಜಿತನನ್ನು, ಸಮಾಹೂಯ-ಕರೆದು, ಸಭಾಯಾಂ-ಸಮಾಜದಲ್ಲಿ, ರಾಜಸನ್ನಿಧೌ-ಉಗ್ರಸೇನರಾಯನ ಬಳಿಯಲ್ಲಿ, ಪ್ರಾಪ್ತಿಂಚ-ರತ್ನವು ದೊರೆತ ಬಗೆಯನ್ನೂ, ಆಖ್ಯಾಯ-ತಿಳಿಯಹೇಳಿ, ಮಣಿಂ-ರತ್ನವನ್ನು, ತಸ್ಮೈ-ಆ ಸತ್ರಾಜಿತಂಗೆ, ನ್ಯವೇದಯತ್-ಕೊಟ್ಟನು ||೪೦|| ಸಚ-ಆ ಸತ್ರಾಜಿತನೂಕೂಡ, ವ್ರೀಡಿತಃ-ನಾಚಿಕೆಯುಂಟಾ

---

ದು ದುಃಖಿತರಾಗಿ ಊರಿಗೆ ಹೊರಟುಬಂದರು ||೩೫|| ದೇವಕೀದೇವಿಯೂ ವಸುದೇವನೂ ರುಕ್ಮಿಣೀದೇವಿಯೂ ಹಿರಿಗಿಳಾದ ಬಂಧುಗಳೆಲ್ಲರೂ ಈ ಸಮಾಚಾರವಂ ಕೇಳಿ ದುಃಖಪಟ್ಟರು ||೩೬|| ಸತ್ರಾಜಿತರಾಯನಂ ಬಯ್ಯುವರಾಗಿ ದ್ವಾರಕಾವಾಸಿಗಳು ಶ್ರೀಕೃಷ್ಣನು ಕ್ಷೇಮದಿಂದ ಬರುವದಕ್ಕೋಸುಗ ಮಹಾಮಾಯಾ ರೂಪಳಾದ ದುರ್ಗಾದೇವಿಯಂ ಪ್ರಾರ್ಥಿಸಿದರು ||೩೭|| ಈರೀತಿಯಲ್ಲಿ ದುರ್ಗಾದೇವಿಯಂ ಪ್ರಾರ್ಥಿಸುತಲಿರುವ ಆಜನರಿಗೆ ಇದಿರಾಗಿ ಸ್ತ್ರೀಸಮೇತನಾಗಿ ಶ್ರೀಕೃಷ್ಣನು ಆವಿರ್ಭೂತನಾದನು ||೩೮|| ಸ್ತ್ರೀಸಮೇತನಾಗಿ ಮಣಿಯಂ ಕಂಠದಲ್ಲಿ ಧರಿಸಿಕೊಂಡು ಬಂದ ಶ್ರೀಕೃಷ್ಣನಂ ನೋಡಿ ಎಲ್ಲರೂ ಮಹೋತ್ಸವವನೆಯ್ದಿದರು ||೩೯|| ಅನಂತರದಲ್ಲಿ ಭಗವಂತನು ರಾಜಸಭೆಯಲ್ಲಿ ಉಗ್ರಸೇನನಿಗೆ ಇದಿರಾಗಿ ಸತ್ರಾಜಿತರಾಯನಂ ಕರೆಯಿಸಿ ತಾನು ಹೋಗಿಬಂದ ವೃತ್ತಾಂತವಂ ಹೇಳಿ ಆ ಮಣಿಯಂ ಸತ್ರಾಜಿತರಾಯನಿಗೆ ಕೊಟ್ಟನು ||೪೦|| ಆ ಸತ್ರಾಜಿತನು ಲಜ್ಜೆಯಿಂದ ಶಿರವಂಬಾಗಿ ಪಶ್ಚಾತ್ತಪ್ತನಾಗಿ ಮನೆಗೆ ಬಂದು ಬಲವದ್ವಿರೋಧವಂ ಭಾವಿಸಿ ಈ ಅಪರಾಧವಂ

ಸಚಾತಿವ್ರೀಡಿತೋರತ್ನಂಗೃಹೀತ್ವಾವಾಙ್ಮುಖಃಸ್ಥಿತಃ । ಅನುತಪ್ಯಮಾನೋಭವನಮಗಮತ್ಸ್ವೇನ
ಪಾಪ್ಮನಾ ॥೪೧॥ ಸೋನುಧ್ಯಾಯಂಸ್ತದೇವಾಘಂಬಲವದ್ವಿಗ್ರಹಾಕುಲಃ । ಕಥಂಮೃಜಾಮ್ಯಾತ್ಮರ
ಜಃಪ್ರಸೀದೇದ್ವಾಚ್ಯುತಃಕಥಂ ॥೪೨॥ ಕಿಂಕೃತ್ವಾಸಾಧುಮಹ್ಯಂಸ್ಯಾನ್ನಶಪೇದ್ವಾಜನೋಯಥಾ ।
ಅದೀರ್ಘದರ್ಶನಂಕ್ಷುದ್ರಂಮೂಢಂ ದ್ರವಿಣಲೋಲುಪಂ ॥೪೩॥ ದಾಸ್ಯೇದುಹಿತರಂತಸ್ಮೈಸ್ತ್ರೀ
ರತ್ನಂರತ್ನಮೇವಚ । ಉಪಾಯೋಯಂಸಮೀಚೀನಸ್ತಸ್ಯಶಾಂತಿರ್ನಚಾನ್ಯಥಾ ॥೪೪॥ ಏವಂವ್ಯವ
ಸಿತೋಬುದ್ಧ್ಯಾಸತ್ರಾಜಿತ್ಸ್ವಸುತಾಂಶುಭಾಂ । ಮಣಿಂಚಸ್ವಯಮುದ್ಯಮ್ಯಕೃಷ್ಣಾಯೋಪಜ
ಹಾರಹ ॥೪೫॥ ತಾಂಸತ್ಯಭಾಮಾಂಭಗವಾನುಪಯೇಮೇಯಥಾವಿಧಿ । ಬಹುಭಿರ್ಯಾಚಿತಾಂಶೀಲ

---

ದವನಾಗಿ, ರತ್ನಂ-ಸ್ಯಮಂತಕವನ್ನು. ಗೃಹೀತ್ವಾ-ತೆಗೆದುಕೊಂಡು, ಅವಾಙ್ಮುಖಃ-ತಲೆತಗ್ಗಿಸಿಕೊಂಡವನಾಗಿ, ಸ್ಥಿತಃ-ನಿಂತನು. ಸ್ವೇನಪಾಪ್ಮನಾ-ತಾನು ಕೃಷ್ಣನಿಗೆ ಮಾಡಿದ ಅಪರಾಧದಿಂದ, ಅನುತಪ್ಯಮಾನಃ-ಪಶ್ಚಾತ್ತಾಪಪಡುತ್ತಿರುವವನಾಗಿ, ಭವನಂ-ಮನೆಯನ್ನು ಕುರಿತು, ಅಗಮತ್-ಹೋದನು ॥೪೧॥ ಸಃ-ಆ ಸತ್ರಾಜಿತನು, ತದಘಂಏವ-ಆ ಪಾಪವನ್ನೇ, ಅನುಧ್ಯಾಯನ್-ಚಿಂತಿಸುತ್ತಿರುವನಾಗಿ, ಬಲವದ್ವಿಗ್ರಹಾಕುಲಃ-ಬಲವಂತರೊಡನೆ ಕಲಹವಾದೀತೆಂದು ವ್ಯಾಕುಲನಾದ್ದರಿಂದ, ಆತ್ಮರಜಃ-ನನ್ನ ಮಲವಾದ ಅಪರಾಧವನ್ನು, ಕಥಂ-ಹೇಗೆ, ಮೃಜಾಮಿ-ತೊಡೆಕೊಳ್ಳುವೆನು ಅಚ್ಯುತೋವಾ-ಕೃಷ್ಣನೋ ಕೂಡ, ಕಥಂ-ಹೇಗೆ ಪ್ರಸೀದೇತ್-ಪ್ರಸನ್ನನಾದಾನು ? ॥೪೨॥ ಕಿಂಕೃತ್ವಾ-ಏನನ್ನು ಮಾಡಿದರೆ, ಮಹ್ಯಂ-ನನಗೆ, ಸಾಧುಸ್ಯಾತ್-ಸರಿಯಾದೀತು ? ಜನಃ-ಲೋಕವು, ಅದೀರ್ಘದರ್ಶನಂ-ದೂರಾಲೋಚನೆ ಯಿಲ್ಲದಂಥಾ, ಕ್ಷುದ್ರಂ-ಕೃಪಣನಾದಂಥಾ, ಮೂಢಂ-ಮಂದಮತಿಯಾದಂಥಾ. ದ್ರವಿಣಲೋಲುಪಂ-ಧನಾಸಕ್ತನಾದಂಥಾ ನನ್ನನ್ನು, ಯಥಾ-ಹೇಗೆ, ನಶಪೇತ್-ಬಯ್ಯದೆ ಯಿದ್ದೀತು ॥೪೩॥ ತಸ್ಮೈ-ಆ ಶ್ರೀಕೃಷ್ಣನಿಗೆ, ಸ್ತ್ರೀರತ್ನಂ-ಹೆಂಗಸರಲ್ಲಿ ಶ್ರೇಷ್ಠಳಾದ, ದುಹಿತರಂ-ಮಗಳನ್ನೂ, ರತ್ನಮೇವ ಚ-ಸ್ಯಮಂತಕಮಣಿಯನ್ನೂ, ದಾಸ್ಯೇ-ಕೊಡುವೆನು ಅಯಮುಪಾಯಃ-ಈ ಯುಕ್ತಿಸಾಧನವು, ಸಮೀಚೀನಃ-ಸರಿಯಾಗಿ ರುವುದು ತಸ್ಯ-ಆ ನನ್ನ ಅಪರಾಧಕ್ಕೆ, ಶಾಂತಿಶ್ಚ-ಪರಿಹಾರವೂ, ಅನ್ಯಥಾ-ಬೇರೆಬಗೆಯಾಗಿ, ನ-ಇಲ್ಲವು ॥೪೪॥ ಏವಂ-ಹೀಗೆ, ಬುದ್ಧ್ಯಾ-ಜ್ಞಾನದಿಂದ, ವ್ಯವಸಿತಃ-ವಿಚಾರನಿಶ್ಚಯವುಳ್ಳವನಾದ, ಸತ್ರಾಜಿತ್-ಸತ್ರಾಜಿತನೆಂಬುವನು, ಶುಭಾಂ-ಕಲ್ಯಾಣಿಯಾದ, ಸ್ವಸುತಾಂ-ತನ್ನ ಮಗಳನ್ನೂ, ಮಣಿಂಚ-ಸ್ಯಮಂತಕರತ್ನವನ್ನೂ, ಸ್ವಯಂ-ತಾನಾಗಿ, ಉದ್ಯಮ್ಯ-ಪ್ರಯತ್ನಗೊಂಡು, ಕೃಷ್ಣಾಯ-ಹರಿಗೆ. ಉಪಜಹಾರ-ಕಾಣಿಕೆಯಾಗಿ ಅರ್ಪಿಸಿದನು ॥೪೫॥ ಭಗವಾನ್-ಕೃಷ್ಣನು, ಬಹುಭಿಃ-ಹಲವು ಮಂದಿಯಿಂದ ಯಾಚಿತಾಂ-ಯಾಚಿಸಲ್ಪಟ್ಟವಳಂಥಾ, ಶೀಲ.. ಸ್ವಿತಾಂ--ಶೀಲ-ಸತ್ಸ್ವಭಾವದಿಂದಲೂ, ರೂಪ-ಚಲುವಿಕೆಯಿಂದಲೂ, ಔದಾರ್ಯ-ಧಾರಾಳತೆಯಿಂದಲೂ, ಗುಣ-ವಿನಯಾದಿಸುಗುಣಂಗಳಿಂದಲೂ, ಅನ್ವಿತಾಂ-ಕೂಡಿದಂಥಾ, ತಾಂ-ಆ ಸತ್ರಾಜಿತನ ಮಗಳಾದಂಥಾ, ಸತ್ಯಭಾಮಾಂ-ಯಥಾರ್ಥವೂ ಕಾಂತಿಯೂ ಲಕ್ಷ್ಮಿಯೂ ಉಳ್ಳ ಸತ್ಯಭಾಮಾದೇವಿಯನ್ನು ಯಥಾವಿಧಿ-ಕ್ಷತ್ರಿಯವಿಧಾನವನ್ನತಿಕ್ರಮಿಸದೆ, ಉಪಯೇಮೇ-ಮದುವೆ ಮಾಡಿಕೊಂಡನು ॥೪೬॥ ನೃಪ-ಸತ್ರಾಜಿದ್ರಾಯನೇ! ವಯಂ-ನಾವು, ಮಣಿಂ-ಸ್ಯಮಂತಕರತ್ನವನ್ನು, ನಪ್ರತೀಚ್ಛಾಮಃ-ಮರಳಿಯೂ ತೆಗೆದುಕೊಳ್ಳುವುದಕ್ಕೆ ಬಯಸುವುದಿಲ್ಲವು.

---

ನಾನು ಹೇಗೆ ಪರಿಹರಿಸಿಕೊಳ್ಳಬೇಕು? ಶ್ರೀಕೃಷ್ಣನಿಗೆ ನನ್ನಲ್ಲಿ ಹೇಗೆ ವಿಶ್ವಾಸಹುಟ್ಟೀತು ॥೪೨॥ ಏನುಮಾಡಿದರೆ ಈ ಯಪರಾಧ ಪರಿಹಾರವಾದೀತು ? ಜನರು ನನ್ನಂ ಹೇಗೆ ಬಯ್ಯದೇ ಇರುತ್ತಾರೆ? ದುರಾಲೋಚನೆಯುಮಾಡವ ದ್ರವ್ಯಲೋಭವುಳ್ಳವನಾಗಿ ಮೂಢನಾಗಿ ಕ್ಷುದ್ರನಾದ ನನ್ನಂ ಜನರು ಹೇಗೆ ದೂಷಣಗೆಯ್ಯದೇ ಇರುತ್ತಾರೆ ॥೪೩॥ ಆಕಾರಣದಿಂದ ನನ್ನ ಪುತ್ರಿಯಾದ ಸತ್ಯಭಾಮೆಯುಂ ಈ ಮಣಿಯುಂಸಹ ಶ್ರೀಕೃಷ್ಣನಿಗೆ ಕೊಡುತ್ತೇನೆ ಈಯುಪಾಯವೇ ಉತ್ತಮವಾದದ್ದು ॥೪೪॥ ಎಂದು ಆಲೋಚಿಸಿ ಸತ್ರಾಜಿತರಾಯನು ಶುಭಳಾದ ತನ್ನ ಪುತ್ರಿಯಾದ ಸತ್ಯಭಾಮೆಯುಂ ಸ್ಯಮಂತಕಮಣಿಯುಂಸಹ ಶ್ರೀಕೃಷ್ಣನಿಗೆ ಒಪ್ಪಿಸಿದನು. ಆಮೇಲೆ ಶ್ರೀಕೃಷ್ಣನು ಯಥಾಶಾಸ್ತ್ರವಿಧಿಯಾಗಿ ಸತ್ಯಭಾಮೆಯುಂ ವಿವಾಹವಂ ಮಾಡಿಕೊಂಡನು. ಆ ಸತ್ಯಭಾಮೆಯು ರೂಪೌದಾರ್ಯಗುಣಸಂಪನ್ನಳಾದಕಾರಣದಿಂ ಕೃತವರ್ಮಾದಿಗಳು ಬಹುಮಂದಿ ಆಸತ್ಯಭಾಮೆಯನ್ನು ಅಪೇಕ್ಷಿಸಿಕೊಂಡಿದ್ದರು. ಅಂತವಳಂ ಶ್ರೀಕೃಷ್ಣನು ವಿವಾಹವಂಮಾಡಿಕೊಂಡನು ॥೪೬॥ ಆ ಮೇಲೆ ಭಗವಂತನು ಸತ್ರಾಜಿತ್ರಾಯನುಂ ಕುರಿತು ನುಡಿದನು. ಎಲೈ ಸತ್ರಾಜಿತರಾಯನೇ! ಮಣಿಯು ನಿನಗೇ ಇರಲಿ. ನೀನು ಸೂರ್ಯಭಕ್ತನು, ನಿನಗೆ ಸೂರ್ಯನು ಕೊಟ್ಟದ್ದು ನಿನ್ನಲ್ಲೇ ಇರಲಿ, ನಾವು ಫಲಭಾಗಿಗಳು, ಎಂದು ಹೇಳೆ ಮ

ರೂಪೌದಾರ್ಯಗುಣಾನ್ವಿತಾನ್ ||೪೪|| ಭಗವಾನಾಹ ನ ಮಣಿಂ ಪ್ರತೀಚ್ಛಾಮೋ ವಯಂ ನೃಪ | ತವಾಸ್ತಾಂ
ದೇವಭಕ್ತಸ್ಯ ವಯಂ ಚ ಫಲಭಾಗಿನಃ || ೪೫ ||

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಷಟ್ಪಂಚಾಶೋಽಧ್ಯಾಯಃ

ಶ್ರೀಶುಕಃ | ವಿಜ್ಞಾತಾರ್ಥೋಽಪಿ ಭಗವಾನ್ ದಗ್ಧಾನಾಕರ್ಣ್ಯ ಪಾಂಡವಾನ್ | ಕುಂತೀಂ ಚ ಕುಲ್ಯಕ
ರಣೇ ಸಹರಾಮೋ ಯಯೌ ಕುರೂನ್ ||೧|| ಭೀಷ್ಮಂ ಕೃಪಂ ಸವಿದುರಂ ಗಾಂಧಾರೀಂ ದ್ರೋಣಮೇವ ಚ |

---

ದೇವಭಕ್ತಸ್ಯ-ಸೂರ್ಯಸೇವಕನಾದ, ತವ-ನಿನಗೆ, ಆಸ್ತಾಂ-ಇರಲಿ, ವಯಂಚ-ನಾವಾದರೋ, ಫಲಭಾಗಿನಃ-ಅದರ ಪ್ರ
ಯೋಜನವಾದ ಧನವಂ ಪಡೆಯುತ್ತಿರುವರಾಗುವೆವು. (ಅಪುತ್ರನಾದ ನಿನ್ನ ಧನವು ನಮ್ಮದೇ ಆಗುವುದೆಂಬ ಗೂಢಾಭಿಪ್ರಾ
ಯವು.) ಎಂದು, ಭಗವಾನ್-ಕೃಷ್ಣನು, ಆಹ-ನುಡಿದನು ||೪೫||

ಇಂತೆಂಬಲ್ಲಿಗೆ ಭಾಗವತ ಪ್ರತಿಶಬ್ದಾರ್ಥಬೋಧಿನೀಟೀಕೆಯ ೫೬ನೆಯ ಅಧ್ಯಾಯಂ ಮುಗಿದುದು.

೫೭ನೆಯ ಅಧ್ಯಾಯದ ಪ್ರತಿಶಬ್ದಾರ್ಥಬೋಧಿನೀ ಟೀಕೆ.

[ಶ್ರೀಶುಕವಚನವು.] ಭಗವಾನ್-ಶ್ರೀಕೃಷ್ಣನು, ವಿಜ್ಞಾತಾರ್ಥೋಽಪಿ-ತಿಳಿಯಲ್ಪಟ್ಟ ವಿಷಯವುಳ್ಳವನಾದರೂ, ಪಾಂಡ
ವಾನ್-ಪಾಂಡುಪುತ್ರರನ್ನು, ಕುಂತೀಂಚ-ಪೃಥಾದೇವಿಯನ್ನೂ, ದಗ್ಧಾನ್-ಅರಗಿನಮನೆಯಲ್ಲಿ ಸುಡಲ್ಪಟ್ಟುಹೋದವರನ್ನಾಗಿ,
ಆಕರ್ಣ್ಯ-ಕೇಳಿ, ಕುಲ್ಯಕರಣೇ-ಕುಲಕ್ಕೆ ಉಚಿತವಾದ ವ್ಯವಹಾರವಂ ನಡೆಯಿಸಲೋಸುಗ, ಸಹರಾಮಃ-ಬಲಭದ್ರನಿಂ ಸಹಿತ
ನಾಗಿ, ಕುರೂನ್-ಕೌರವರನ್ನು ಕುರಿತು, ಯಯೌ-ತೆರಳಿದನು ||೧|| ಭೀಷ್ಮಂ-ಶಾಂತನವನನ್ನೂ, ಸವಿದುರಂ-ವಿದುರನೆಂಬ ವಂ

---

ನಸ್ಸಿನಲ್ಲಿ ಈ ಸತ್ರಾಜಿತುರಾಯನು ಅಪುತ್ರನಾದವನು, ಇವನ ಧನವೆಲ್ಲವೂ ನಮಗೇ ಆಗುತ್ತೆ, ಎಂಬ ಗೂಢಾ
ಭಿಪ್ರಾಯವನ್ನಿಟ್ಟು ಶ್ರೀಭಗವಂತನು ಆ ಮಣಿಯಂ ಸತ್ರಾಜಿತರಾಯನಿಗೆ ಕೊಟ್ಟನು. ||೪೬||

ಇಂತು ಶ್ರೀಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸಿದನೆಂದು ಸೂತಪೌರಾಣಿಕನು ನೈಮಿ
ಶಾರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಪೇಳಿದನೆಂಬಲ್ಲಿಗೆ- ಶ್ರೀಮನ್ಮಹೀಶೂರಪುರ
ವರಾಧೀಶ ಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜವಿರಚಿತಮಾದ ಶ್ರೀಕೃಷ್ಣ
ರಾಜವಾಣೀವಿಲಾಸಮೆಂಬ ಶ್ರೀಭಾಗವತಪುರಾಣದ ಕರ್ಣಾಟಭಾಷಾವ್ಯಾಖ್ಯಾನ
ದೊಳು ದಶಮಸ್ಕಂಧದಲ್ಲಿ ೫೬ನೆಯ ಅಧ್ಯಾಯವು
ಸಂಪೂರ್ಣವಾದುದು.

೫೭ನೆಯ ಅಧ್ಯಾಯವು.

ಶ್ರೀಧರೀಯಶ್ಲೋಕಃ || ಸಪ್ತಪಂಚಾಶತ್ತಮೇ ತು ಪುನಶ್ಶತಧನೋರ್ವಧೇ | ಪ್ರಾಪ್ತಂ ಸ್ವದುರ್ಯಶೋ
ಮಾರ್ಷ್ಟಿ ಕೃಷ್ಣೋಽಕ್ರೂರಾಗತಾನ್ಮಣೇಃ ||೧|| ಟೀ|| ಐವತ್ತೇಳನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ಶತಧನ್ವ
ನೆಂಬ ಯಾದವನು ಸಂಹರಿಸಲಾಗಿ ಪುನಃ ಪ್ರಾಪ್ತವಾದ ಅಪಯಶಸ್ಸಂ ಪರಿಹರಿಸಿಕೊಳ್ಳಲೋಸುಗ ಕಾಶೀ
ಪಟ್ಟಣದಲ್ಲಿ ವಾಸವಂ ಮಾಡಿಕೊಂಡಿರುವ ಅಕ್ರೂರನು ಕರೆಯಿಸಿ ಅವನ ಅಧೀನದಲ್ಲಿದ್ದ ಸ್ಯಮಂತಕಮಣಿ
ಯಂ ತರಿಸಿ ಸಭಾಜನರಿಗೆ ತೋರಿಸಿ ಅಪಯಶಸ್ಸಂ ಪರಿಹರಿಸಿಕೊಂಡನು ಎಂಬರ್ಥವಂ ಶುಕಮುನಿಯು ಪರೀಕ್ಷಿ
ದ್ರಾಯನಂ ಕುರಿತು ನಿರೂಪಿಸುವನೆಂತೆನೆ,--

ಎಲೈ ಅರಸೇ! ಅನಂತರದಲ್ಲಿ ಭಗವಂತನಾದ ಶ್ರೀಕೃಷ್ಣನು ಲಾಕ್ಷಾಗೃಹದಲ್ಲಿ ಪಾಂಡವರು ಕುಂತಿಯೊ
ಡನೆ ದಗ್ಧರಾದರೆಂಬ ಸಮಾಚಾರವಂ ಕೇಳಿ ಬಲರಾಮಸಮೇತನಾಗಿ ಪಾಂಡವರ್ಬಿಲದ್ವಾರಮಾರ್ಗದಿಂದ ತಪ್ಪಿಸಿ
ಕೊಂಡು ಹೋದರು ಎಂಬ ಅರ್ಥವಂ ತಿಳಿದಿದ್ದಾಗ್ಯೂ ಲೋಕಾಪವಾದ ಪರಿಹಾರಾರ್ಥವಾಗಿ ಹಸ್ತಿನಾಪುರ
ಕ್ಕೆ ತೆರಳಿ ಹೋದನು ||೧|| ಆ ಪುರದಲ್ಲಿ ಭೀಷ್ಮರನ್ನು, ಧೃತರಾಷ್ಟ್ರನನ್ನು, ವಿದುರನನ್ನು, ಗಾಂಧಾರಿಯನ್ನು, ದ್ರೋ

ತುಲ್ಯದುಃಖೌ ಚ ಸಮಾಗಮ್ಯ ಹಾ ಕಷ್ಟಮಿತಿ ಶೋಚತುಃ ||೨|| ಲಬ್ಧ್ವೈತದಂತರಂ ರಾಜನ್ ಶತಧನ್ವಾನಮೂಚತುಃ | ಅಕ್ರೂರಕೃತವರ್ಮಾಣೌ ಮಣಿಃ ಕಸ್ಮಾನ್ನ ಗೃಹ್ಯತೇ ||೩|| ಯೋಽಸ್ಮಭ್ಯಂ ಸಂಪ್ರತಿಶ್ರುತ್ಯ ಕನ್ಯಾರತ್ನಂ ವಿಗರ್ಹ್ಯ ನಃ | ಕೃಷ್ಣಾಯಾದಾನ್ನ ಸತ್ರಾಜಿತ್ ಕಸ್ಮಾದ್ಭ್ರಾತರಮನ್ವಿಯಾತ್ ||೪|| ಏವಂ ಭಿನ್ನಮತಿಸ್ತಾಭ್ಯಾಂ ಸತ್ರಾಜಿತಮಸತ್ತಮಃ | ಶಯಾನಮವಧೀಲ್ಲೋಭಾತ್ಸಪಾಪಃ ಕ್ಷೀಣಜೀವಿತಃ ||೫|| ಸ್ತ್ರೀಣಾಂ ವಿಕ್ರೋಶಮಾನಾನಾಂ ಕ್ರಂದಂತೀನಾಮನಾಥವತ್ | ಹತ್ವಾ ಪಶೂನ್ ಸೌನಿಕವನ್ಮಣಿಮಾದಾಯ ಜಗ್ಮಿವಾನ್ ||೬|| ಸತ್ಯಭಾಮಾಪಿ ಪಿತರಂ ಹತಂ ವೀಕ್ಷ್ಯ ಶುಚಾರ್ಪಿತಾ | ವ್ಯಲಪ

---

ತ್ರಿಯಿಂ ಸಹಿತನಾದ ಸ್ವಯಂ-ಕುರುಡರಸನನ್ನೂ, ಗಾಂಧಾರೀಂ-ಗಾಂಧಾರಿಯೆಂಬ ರಾಣಿಯನ್ನೂ, ದ್ರೋಣಮೇವ ಚ-ದ್ರೋಣಾಚಾರ್ಯನನ್ನೂ, ಸಮಾಗಮ್ಯ-ಸೇರಿ, ತುಲ್ಯದುಃಖೌ-ಸಮಾನವ್ಯಥೆಯುಳ್ಳವರಾಗಿ, ಹಾ-ಅಯ್ಯೋ! ಕಷ್ಟಂ-ಪಾಂಡವರು ಕುಂತಿಯೂ ಹೋದದ್ದು ದುಃಖವಾಯಿತು, ಇತಿ-ಇಂತೆಂದು, ಶೋಚತುಃ ಶೋಕಿಸಿದರು ||೨|| ರಾಜನ್-ಪರೀಕ್ಷಿದ್ರಾಯನೇ! ತದಂತರಂ-ರಾಮಕೃಷ್ಣರು ನಗರದಲ್ಲಿಲ್ಲದ ಆ ಸಮಯವನ್ನು, ಲಬ್ಧ್ವಾ-ಪಡೆದು ಅಕ್ರೂರಕೃತವರ್ಮಾಣೌ-ಅಕ್ರೂರನು ಕೃತವರ್ಮನು ಎಂಬ ಯಾದವರೀರ್ವರೂ, ಶತಧನ್ವಾನಂ ಶತಧನ್ವನೆಂಬುವನ ಕುರಿತು, ಊಚತುಃ ನುಡಿದರು: ಮಣಿಃ-ಸ್ಯಮಂತಕವು, ಕಸ್ಮಾತ್-ಯಾವ ಕಾರಣದಿಂದ, ನಗೃಹ್ಯತೇ-ನಿನ್ನಿಂದ ಕಿತ್ತುಕೊಳ್ಳಲ್ಪಡದೆಯಿದೆ? ||೩|| ಯಃ ಸತ್ರಾಜಿತ್-ಯಾವ ಸತ್ರಾಜಿತನು, ಕನ್ಯಾರತ್ನಂ-ಕನ್ಯೆಯರಲ್ಲಿ ಶ್ರೇಷ್ಠಳಾದ ಸತ್ಯಭಾಮೆಯನ್ನು, ಅಸ್ಮಭ್ಯಂ-ನಮಗೆ ಕೊಡುವೆನೆಂದು, ಸಂಪ್ರತಿಶ್ರುತ್ಯ ವಾಙ್ನಿಶ್ಚಯವಂಗೆಯ್ದು, ಬಳಿಕ ನಃ-ನಮ್ಮನ್ನು, ವಿಗರ್ಹ್ಯ-ಬಲಾತ್ಕರಿಸಿ ತೊರೆದು, ಕೃಷ್ಣಾಯ ವಾಸುದೇವಂಗೆ, ಅದಾತ್-ಕೊಟ್ಟನೋ ಆ ಸತ್ರಾಜಿತ್ತು, ಭ್ರಾತರಂ-ತಮ್ಮನಾದ ಪ್ರಸೇನನ ಹಿಂದೆ ಕಸ್ಮಾತ್-ಯಾವ ಕಾರಣದಿಂದ, ನಾನ್ವಿಯಾತ್-ಹೋಗದೆಯಿದ್ದಾನು? (ಅವನು ಸತ್ತು ಹೋಗಲಿ ಯೆನುತ್ತಲೇ ಹೋಗಲಿಲ್ಲ) ||೪|| ಏವಂ-ಹೀಗೆ ತಾಭ್ಯಾಂ-ಅಕ್ರೂರಕೃತವರ್ಮರಿಂದ, ಭಿನ್ನಮತಿಃ-ಭೇದಿಸಲ್ಪಟ್ಟ ಬುದ್ಧಿಯುಳ್ಳವನಾದ ಅಸತ್ತಮಃ-ಅತ್ಯಂತದುಷ್ಟನಾದ ಪಾಪಃ-ಪಾಪಬುದ್ಧಿಯುಳ್ಳವನಾದ ಕ್ಷೀಣಜೀವಿತಃ-ಕೊರತೆಗೊಂಡ ಆಯುಷ್ಯವುಳ್ಳವನಾದ, ಸಃ-ಆ ಶತಧನ್ವನು. ಲೋಭಾತ್-ರತ್ನದ ಆಶೆಯಿಂದ, ಶಯಾನಂ-ಮಲಗಿದ್ದ, ಸತ್ರಾಜಿತನನ್ನು, ಅವಧೀತ್-ಕೊಂದುಹಾಕಿದನು ||೫|| ಸ್ತ್ರೀಣಾಂ-ಹೆಂಗಳು, ವಿಕ್ರೋಶಮಾನಾನಾಂ-ಕೂಗಿಕೊಳ್ಳುತ್ತಿರುವರೂ, ಅನಾಥವತ್-ದಿಕ್ಕಿಲ್ಲದವರಂತೆ, ಕ್ರಂದಂತೀನಾಂ ಸತೀನಾಂ-ಅಳುತಿರುವರೂ ಆಗುತ್ತಿರಲೂ, ಪಶುಂ-ಕುರಿಯನ್ನು, ಸೌನಿಕವತ್-ಕಟುಕರವನಂತೆ, ಸತ್ರಾಜಿತನನ್ನು, ಹತ್ವಾ-ಕೊಂದು, ಮಣಿಂ-ಸ್ಯಮಂತಕವನ್ನು, ಆದಾಯ-ತೆಗದುಕೊಂಡು, ಜಗ್ಮಿವಾನ್-ಹೋದವನಾದನು ||೬|| ಸತ್ಯಭಾಮಾಪಿ-ಸತ್ಯಭಾಮೆಯು ಕೂಡ, ಹತಂ-ಕೊಲ್ಲಲ್ಪಟ್ಟ ಪಿತರಂ-ತಂದೆಯನ್ನು, ವೀಕ್ಷ್ಯ-ನೋಡಿ, ಶುಚಾ-ಶೋಕದಿಂದ, ಅರ್ಪಿತಾ-ಒಪ್ಪಿಸಲ್ಪಟ್ಟವಳಾಗಿ, ಮುಹ್ಯತೀ-ಮೋಹಗೊಳ್ಳುವಳಾಗಿ, ಹಾ-ಅಯ್ಯೋ! ತಾತ ತಾತ-ತಂದೆಯೆ ತಂದೆಯೋ! ಹತಾಸ್ಮೀತಿ-ಕೊಲ್ಲಲ್ಪಟ್ಟವಳಾದೆನೆನುತಲೂ, ವ್ಯಲಪತ್-

---

ಣಾಚಾರ್ಯನಂ ಸಹ ಯೆಯ್ದಿ ರಾಮಕೃಷ್ಣರು ಬಹುದುಃಖಿತರಾಗಿ ಪಾಂಡವರಿಗೆ ಹೀಗೆ ವಿಪತ್ತು ಬರಬಹುದೇ ಎಂದು ಖಿನ್ನರಾಗಿ ನುಡಿದರು ||೨|| ಆ ಸಮಯದಲ್ಲಿ ಅಕ್ರೂರನು ಕೃತವರ್ಮನು ಇರ್ವರೂ ಕೂಡಿ ಶತಧನ್ವನಂ ಕುರಿತು ನುಡಿದರು, ಎಲೈ ಶತಧನ್ವನೇ! ಸತ್ರಾಜಿತರಾಯನಲ್ಲಿರುವ ಸ್ಯಮಂತಕಮಣಿಯಂ ಏನು ನಿಮಿತ್ತವಾಗಿ ನೀನು ಅಪಹರಿಸಲಿಲ್ಲ ||೩|| ಆ ದುಷ್ಟನಾದ ಸತ್ರಾಜಿತನು ಪುತ್ರಿಯಂ ಕುಡುತ್ತೇನೆಂದು ಮುಂಚೆ ಹೇಳಿ ಆಮೇಲೆ ನಮ್ಮಂ ಲಕ್ಷ್ಯಮಾಡದೆ ಕೃಷ್ಣನಿಗೆ ಕೊಟ್ಟನು. ಆದ್ದರಿಂದ ಆ ಸತ್ರಾಜಿತನು ತಮ್ಮನಾದ ಪ್ರಸೇನನ ಮಾರ್ಗವನೆಯ್ದಲಿ. ಅವನು ಸಂಹರಿಸಿ ಆ ಮಣಿಯಂ ಅಪಹರಿಸು ||೪|| ಎಂದು ಬೋಧಿಸಲ್ಪಟ್ಟ ದುಷ್ಟನಾದ ಶತಧನ್ವನು ಕ್ಷೀಣವಾದ ಆಯುಸ್ಸುಳ್ಳ ಪಾಪಿಷ್ಠನಾದ ಕಾರಣದಿಂದ ಮಲಗಿರುವ ಸತ್ರಾಜಿತನಂ ಮಣಿಯ ಲೋಭದಿಂದ ಸಂಹರಿಸಿದನು ||೫|| ಸ್ತ್ರೀಯರುಗಳು ಅನಾಥರಂತೆ ರೋದನಂಗೆಯ್ಯುತ್ತಲಿರುವಾಗಲೇ ಮಾಂಸವಿಕ್ರಯಿಯಾದ ಕಟುಗನು ಪಶುವಂ ಸಂಹರಿಸುವಂತೆ ಸತ್ರಾಜಿತರಾಯನಂ ಸಂಹರಿಸಿ ಆ ಮಣಿಯಂ ತೆಗದುಕೊಂಡು ಹೊರಟು ಹೋದನು ||೬|| ಸತ್ಯಭಾಮೆಯು ತಂದೆಯಾದ ಸತ್ರಾಜಿತರಾಯನು ಮೃತನಾದನೆಂದು ನೋಡಿ ಎಲೈ ತಂದೆಯೇ! ಎಲೈ ಅಪ್ಪಾ! ಎಂದು ಅಳುತ್ತ ಮೂರ್ಛಿತಳಾದಳು ||೭|| ಆಮೇಲೆ ಸತ್ಯಭಾಮೆ

ತಾತ ತಾತೇತಿ ಹಾ ಹತಾಸ್ಮೀತಿ ಮುಹ್ಯತೀ ‖೭‖ ತೈಲದ್ರೋಣ್ಯಾಂ ಮೃತಂ ಪ್ರಾಸ್ಯ ಜಗಾಮ ಗಜಸಾಹ್ವಯಮ್ । ಕೃಷ್ಣಾಯ ವಿದಿತಾರ್ಥಾಯ ತಪ್ತಾಚಖ್ಯೌ ಪಿತುರ್ವಧಮ್ ‖೮‖ ತದಾಕರ್ಣ್ಯೇಶ್ವರೌ ರಾಜನ್ನನುಸೃತ್ಯ ನೃಲೋಕತಾಮ್ । ಅಹೋ ನಃ ಪರಮಂ ಕಷ್ಟಮಿತ್ಯಸ್ರಾಕ್ಷೌ ವಿಲೇಪತುಃ ‖೯‖ ಆಗತ್ಯ ಭಗವಾಂಸ್ತಸ್ಮಾತ್ಸಭಾರ್ಯಃ ಸಾಗ್ರಜಃ ಪುರಮ್ । ಶತಧನ್ವಾನಮಾರೇಭೇ ಹಂತುಂ ಹರ್ತುಂ ಚ ತಂ ಮಣಿಮ್ ‖೧೦‖ ಸೋಪಿ ಕೃಷ್ಣೋದ್ಯಮಂ ಜ್ಞಾತ್ವಾ ಭೀತಃ ಪ್ರಾಣಪರೀಪ್ಸಯಾ । ಸಾಹಾಯ್ಯೇ ಕೃತವರ್ಮಾಣಮಯಾಚತ ಸ ಚಾಬ್ರವೀತ್ ‖೧೧‖ ನಾಹಮೀಶ್ವರಯೋಃ ಕುರ್ಯಾಂ ಹೇಳನಂ ರಾಮಕೃಷ್ಣಯೋಃ । ಕೋನು ಕ್ಷೇಮಾಯ ಕಲ್ಪೇತ ತಯೋರ್ವೃಜಿನಮಾಚರನ್ ‖೧೨‖ ಕಂಸಃ ಸಹಾನುಗೋಽಪೀತೋ ಯ

ವ್ಯರ್ಥವಚನಗಳನ್ನಾಡಿಯುತ್ತ, ಅತ್ತಳು ‖೭‖ ತೈಲದ್ರೋಣ್ಯಾಂ-ಎಣ್ಣೆಯ ದ್ರೋಣಿಯಲ್ಲಿ, ಮೃತಂ-ಹೆಣವನ್ನು, ಪ್ರಾಸ್ಯ-ಹಾಕಿ, ಗಜಸಾಹ್ವಯಂ-ಗಜವೆಂಬ ಹೆಸರಿನಿಂ ಕೂಡಿದ ನಗರವಂ ಕುರಿತು, ಜಗಾಮ-ತೆರಳಿದಳು, ತಪ್ತಾ-ಸಂತಾಪವುಳ್ಳವಳಾಗಿ, ವಿದಿತಾರ್ಥಾಯ-ಸ್ವತಃ ತಿಳಿಯಲ್ಪಟ್ಟಿರುವ ಸರ್ವಲೋಕವ್ಯಾಪಾರಂಗಳುಳ್ಳವನಾದ, ಕೃಷ್ಣಾಯ-ವಾಸುದೇವಂಗೆ, ಪಿತುಃ-ತನ್ನ ತಂದೆಯಾದ ಸತ್ರಾಜಿತ್ತಿನ, ವಧಂ-ಸಂಹಾರವನ್ನು, ಆಚಖ್ಯೌ-ವಿವರಿಸಿ ಹೇಳಿದಳು ‖೮‖ ರಾಜನ್-ಪರೀಕ್ಷಿತನೇ! ತತ್-ಆ ಮಾತನ್ನು, ಆಕರ್ಣ್ಯ-ಕೇಳಿ ಈಶ್ವರೌ-ಒಡೆಯರಾದ ರಾಮಕೃಷ್ಣರು, ನೃಲೋಕತಾಂ-ಮಾನುಷಭಾವವನ್ನು, ಅನುಸೃತ್ಯ-ಅನುಸರಿಸಿ ಅಹೋ-ಅಯ್ಯೋ, ನಃ-ನಮಗೆ, ಪರಮಂ ಕಷ್ಟಂ-ಹೆಚ್ಚಾದ ದುಃಖವಾಯಿತು, ಇತಿ-ಹೀಗೆಂದು, ಅಸ್ರಾಕ್ಷೌ-ನೀರುತುಂಬಿದ ಕಂಗಳುಳ್ಳವರಾಗಿ, ವಿಲೇಪತುಃ-ಅತ್ತರು ‖೯‖ ಭಗವಾನ್-ಕೃಷ್ಣನು, ಸಭಾರ್ಯಃ-ಹೆಂಡತಿಯಾದ ಸತ್ಯಭಾಮೆಯೊಡನೆ ಸಹಿತನಾಗಿಯೂ, ಸಾಗ್ರಜಃ-ಅಣ್ಣನಾದ ಬಲರಾಮನಿಂ ಸಹಿತನಾಗಿಯೂ, ತಸ್ಮಾತ್-ಆ ಗಜನಗರವದೆಸೆಯಿಂದ, ಪುರಂ-ದ್ವಾರಕಾನಗರವಂ ಕುರಿತು, ಆಗತ್ಯ-ಬಂದು, ಶತಧನ್ವಾನಂ-ಶತಧನ್ವನೆಂಬವನನ್ನು, ಹಂತುಂ-ಕೊಲ್ಲುವುದಕ್ಕೂ, ಆರೇಭೇ-ಉದ್ಯೋಗಿಸಿದನು ‖೧೦‖ ಸೋಪಿ-ಆ ಶತಧನ್ವನೂ ಕೂಡ, ಕೃಷ್ಣೋದ್ಯಮಂ-ವಾಸುದೇವನ ಪ್ರಯತ್ನವನ್ನು ಜ್ಞಾತ್ವಾ-ತಿಳಿದು, ಭೀತಃ-ಹೆದರಿದವನಾಗಿ ಪ್ರಾಣಪರೀಪ್ಸಯಾ-ಪ್ರಾಣಗಳನ್ನು ರಕ್ಷಿಸಿಕೊಳ್ಳಲಪೇಕ್ಷೆಯಿಂದ, ಕೃತವರ್ಮಾಣಂ-ಕೃತವರ್ಮನೆಂಬ ಯಾದವಸೇನಾಪತಿಯನ್ನು, ಸಾಹಾಯ್ಯಂ-ತನಗೆ ಬಲಕರನನ್ನಾಗಿ, ಅಯಾಚತ-ಬೇಡಿಕೊಂಡನು ಸಚ-ಆ ಕೃತವರ್ಮನೂ ಕೂಡ, ಅಬ್ರವೀತ್-ಹೇಳಿದನು ‖೧೧‖ ಈಶ್ವರಯೋಃ-ಒಡೆಯರಾದ, ರಾಮಕೃಷ್ಣಯೋಃ-ಬಲಭದ್ರಕೇಶವರ, ಹೇಳನಂ-ನಿಂದೆಯನ್ನು, ಅಹಂ-ನಾನು ನಕುರ್ಯಾಂ-ಮಾಡಲಾರೆನು, ತಯೋಃ-ಅವರ ವಿಷಯದಲ್ಲಿ, ವೃಜಿನಂ-ಅಪರಾಧವನ್ನು, ಆಚರನ್-ಮಾಡುವವನಾದ, ಕೋನು-ಯಾವ ಪುರುಷನು ತಾನೇ, ಕ್ಷೇಮಾಯ-ಶುಭವಾಗಿರುವುದಕ್ಕೆ ಕಲ್ಪೇತ-ಸಮರ್ಥನಾಗುವನು? ‖೧೨‖ ಸಹಾನುಗಃ-ಪರಿಜನಂಗಳಿಂ ಸಹಿತನಾದ, ಕಂಸಃ-ಕಂಸನು, ಯತ್-ಯಾವ, ದ್ವೇಷಾತ್-ಕೃಷ್ಣವಿರೋಧವದೆಸೆಯಿಂದ ಶ್ರಿಯಾ-ಐಶ್ವರ್ಯದಿಂದ, ತ್ಯಾಜಿತಃ-ಬಿಡಿಸಲ್ಪಟ್ಟವನಾಗಿ, ಅಪೀತಃ-ಸತ್ತುಹೋದನೋ, ಜರಾಸಂಧಃ-ಮಗಧರಾಯನ, ಸಪ್ತದಶಸಂಯುಗಾತ್-ಹದಿನೇಳು ಸಲದ ಕಾಳಗದದೆಸೆಯಿಂದ, ವಿರಥಃ-ತೇರಿಲ್ಲದವನಾಗಿ, ಗತಃ-ಓಡಿ

ಳು ತೈಲದ್ರೋಣಿಯಲ್ಲಿ ತಂದೆಯ ದೇಹವ ಇರಿಸಿ ತಾನು ಹಸ್ತಿನಾಪುರಕ್ಕೆ ಹೋದಳು. ಈ ಯರ್ಥವಂ ಮುನ್ನವೇ ತಿಳಿದಿರುವ ಸರ್ವಜ್ಞನಾದ ಶ್ರೀಕೃಷ್ಣನಿಗೋಸ್ಕರ ಸತ್ಯಭಾಮೆಯು ದುಃಖಿತಳಾಗಿ ಪಿತೃಸಂಹಾರವ ಹೇಳಿದಳು ‖೮‖ ಆ ವಾಕ್ಯವ ಕೇಳಿ ರಾಮಕೃಷ್ಣರು ಪ್ರಾಕೃತರಾದ ಮಾನುಷರ ರೀತಿಯನ್ನವಲಂಬಿಸಿ ಹಾ! ನಮಗೆ ಯೇನು ಕಷ್ಟವು ಬಂತೆಂದು ಬಾಷ್ಪನೇತ್ರರಾಗಿ ಶೋಕಪಟ್ಟರು ‖೯‖ ಅನಂತರದಲ್ಲಿ ಆ ಕೃಷ್ಣನು ರಾಮಸಮೇತನಾಗಿ ಸತ್ಯಭಾಮಾಯುಕ್ತನಾಗಿ ದ್ವಾರಕಾಪುರಕ್ಕೆ ಬಂದು ಶತಧನ್ವನಂ ಸಂಹರಿಸಲೋಸುಗ ಪ್ರಯತ್ನವ ಮಾಡಿದನು ‖೧೦‖ ಆ ಶತಧನ್ವನು ಶ್ರೀಕೃಷ್ಣನ ಪ್ರಯತ್ನವಂ ತಿಳಿದು ಭೀತನಾಗಿ ಜೀವವನುಳಿಸಿಕೊಳ್ಳಲೋಸುಗ ಕೃತವರ್ಮನಂ ಸಹಾಯಾರ್ಥವಾಗಿ ಕರೆದನು ‖೧೧‖ ಆಗ ಕೃತವರ್ಮನು ಹೇಳಿದನು. ಜಗದೀಶ್ವರರಾದ ರಾಮಕೃಷ್ಣರಿಗೆ ನಾನು ವಿರೋಧವ ಮಾಡುವುದಿಲ್ಲವು. ಶ್ರೀಕೃಷ್ಣರಾಮರಿಗೆ ಅಪರಾಧವಂ ಚಿಂತಿಸಿದವರು ಯಾರಾದರೂ ಕ್ಷೇಮವಂತರಾಗುತ್ತಾರೆಯೇ ‖೧೨‖ ಹರಿವಿರೋಧಿಯಾದ್ದರಿಂದ ಕಂಸನು ಸಪರಿವಾರನಾಗಿ ಹತನಾದನು. ಜರಾಸಂಧನು ಹದಿನೇಳಾವೃತ್ತಿ ಪರಾಜಿತನಾಗಿ ಓಡಿಹೋದನು ‖೧೩‖

ದ್ವೇಷಾತ್ತ್ಯಜಿತಶ್ರಿಯಾ । ಜರಾಸಂಧಸ್ಸಪ್ತದಶಸಂಯುಗಾದ್ವಿರಥೋಗತಃ ॥೧೩॥ ಪ್ರತ್ಯಾ
ಖ್ಯಾತಸ್ಸಚಾಕ್ರೂರಂಪಾರ್ಷ್ಣಿಗ್ರಾಹಮಯಾಚತ । ಸೋಪ್ಯಾಹಕೋವಿರುಧ್ಯೇತವಿದ್ವಾನೀಶ್ವರ
ಯೋರ್ಬಲಮ್ ॥೧೪॥ ಯಇದಂಲೀಲಯಾವಿಶ್ವಂಸೃಜತ್ಯವತಿಹಂತಿಚ । ಚೇಷ್ಟಾಂವಿಶ್ವಸೃಜೋಯ
ಸ್ಯನವಿದುರ್ಮೋಹಿತಾಜಯಾ ॥೧೫॥ ಯಸ್ಸಪ್ತಹಾಯನಶ್ಶೈಲಮುತ್ಪಾಟ್ಯೈಕೇನಪಾಣಿನಾ । ದಧಾರ
ಲೀಲಯಾಬಾಲಉಚ್ಛಿಲೀಂಧ್ರಮಿವಾರ್ಭಕಃ ॥೧೬॥ ನಮಸ್ತಸ್ಮೈಭಗವತೇಕೃಷ್ಣಾಯಾದ್ಭುತಕರ್ಮಣೇ ।
ಅನಂತಾಯಾದಿಭೂತಾಯಕೂಟಸ್ಥಾಯಾತ್ಮನೇನಮಃ ॥೧೭॥ ಪ್ರತ್ಯಾಖ್ಯಾತಸ್ಸತೇನಾಪಿಶತಧನ್ವಾಮ
ಹಾಮಣಿಮ್ । ತಸ್ಮಿನ್ನ್ಯಸ್ಯಾಶ್ವಮಾರುಹ್ಯಶತಯೋಜನಗಂಯಯೌ ॥೧೮॥ ಗರುಡಧ್ವಜಮಾರುಹ್ಯ

---

ಹೋದವನೋ, (ಆ ಕೃಷ್ಣನಿಗೆ ವಿರೋಧವನಾಚರಿಸುವುದಿಲ್ಲವು) ॥೧೩॥ ಪ್ರತ್ಯಾಖ್ಯಾತಃ-ಇಂತು ಕೃತವರ್ಮನಿಂ ತಿರಸ್ಕರಿಸಲ್ಪಟ್ಟ, ಸಃ-ಆ ಶತಧನ್ವನು, ಅಕ್ರೂರಂಚ-ಗಾಂದಿನೀಪುತ್ರನನ್ನೂ ಪಾರ್ಷ್ಣಿಗ್ರಾಹಂ-ಪಕ್ಕದಬಲವಾಗಿರುವಂತೆ, ಅಯಾಚತ-ಬೇಡಿಕೊಂಡನು. ಸೋಪಿ-ಆಯಕ್ರೂರನೂಕೂಡ, ಆಹ-ನುಡಿದನು, ವಿದ್ವಾನ್-ತಿಳಿದವನಾದ, ಕಃ-ಯಾವಪುರುಷನು, ಈಶ್ವರಯೋಃ-ನಿಯಾಮಕರಾದ ರಾಮಕೃಷ್ಣರ, ಬಲಂ-ಸಾಮರ್ಥ್ಯವನ್ನು, ವಿರುಧ್ಯೇತ-ವಿರೋಧಿಸುವನು ॥೧೪॥ ಯಃ-ಯಾವಪುರುಷನು, ಇದಂವಿಶ್ವಂ-ಈ ಪ್ರಪಂಚವನ್ನು, ಲೀಲಯಾ-ವಿಲಾಸದಿಂದ, ಸೃಜತಿ-ಹುಟ್ಟಿಸುವನೋ, ಅವತಿ-ರಕ್ಷಿಸುವನೋ ಹಂತಿಚ-ನಾಶವನ್ನೂ ಮಾಡುವನೋ, ಅಜಯಾ-ಮಾಯೆಯಿಂದ, ಮೋಹಿತಾಃ-ಅಜ್ಞಾನಗೊಳಿಸಲ್ಪಟ್ಟವರು, ವಿಶ್ವಸೃಜಃ-ಪ್ರಪಂಚವನ್ನು ಹುಟ್ಟಿಸುವ, ಯಸ್ಯ-ಯಾವಪುರುಷನ, ಚೇಷ್ಟಾಂ-ವ್ಯಾಪಾರವನ್ನು, ನವಿದುಃ-ಅರಿಯದಿರುವರೋ ॥೧೫॥ ಯಃ-ಯಾವಪುರುಷನು, ಸಪ್ತಹಾಯನಃ-ಏಳುವರುಷದ ಪ್ರಾಯವುಳ್ಳ, ಬಾಲಃ-ಹುಡುಗನಾದರೂ, ಏಕೇನಪಾಣಿನಾ-ಒಂದುಕೈಯಿಂದ, ಅರ್ಭಕಃ-ಹುಡುಗನು, ಉಚ್ಛಿಲೀಂಧ್ರಮಿವ-ದೊಡ್ಡ ಅಣಬೆಯನ್ನಂತೆ, ಶೈಲಂ-ಗೋವರ್ಧನಗಿರಿಯನ್ನು, ಉತ್ಪಾಟ್ಯ-ಕಿತ್ತು, ಲೀಲಯಾ-ವಿಲಾಸದಿಂದ, ದಧಾರ-ಹೊತ್ತನೋ ॥೧೬॥ ಅದ್ಭುತಕರ್ಮಣೇ-ಆಶ್ಚರ್ಯಕರಂಗಳಾದ ಕೆಲಸಗಳುಳ್ಳ, ಭಗವತೇ-ಷಡ್ಗುಣೈಶ್ವರ್ಯಸಂಪನ್ನನಾದ, ತಸ್ಮೈಕೃಷ್ಣಾಯ-ಆ ಕೃಷ್ಣನಿಗೆ, ನಮಃ-ನಮಸ್ಕಾರವಾಗಲಿ, ಅನಂತಾಯ-ನಾಶರಹಿತನಾದ, ಆದಿಭೂತಾಯ-ಪ್ರಪಂಚಸೃಷ್ಟ್ಯಾದಿಗಳಿಗೆ ಮೊದಲನೆಯವನಾದ, ಕೂಟಸ್ಥಾಯ-ಪಟ್ಟಡಿಯಗೂಟದಂತೆ ನಿರ್ವಿಕಾರನಾಗಿರುವನಾದ, ಆತ್ಮನೇ-ಚೈತನ್ಯರೂಪನಿಗೆ, ನಮಃ-ನಮಸ್ಕಾರವಾಗಲಿ ॥೧೭॥ ತೇನಾಪಿ-ಆಯಕ್ರೂರನಿಂದಲೂ, ಪ್ರತ್ಯಾಖ್ಯಾತಃ-ತಿರಸ್ಕರಿಸಲ್ಪಟ್ಟವನಾದ, ಸಃ-ಆ ಶತಧನ್ವನು, ಮಹಾಮಣಿಂ-ದೊಡ್ಡ ಸ್ಯಮಂತಕರತ್ನವನ್ನು, ತಸ್ಮಿನ್-ಆಯಕ್ರೂರನಲ್ಲಿ, ನ್ಯಸ್ಯ-ಇರಿಸಿ, ಶತಯೋಜನಗಂ-ದಿನಕ್ಕೆ ನೂರುಗಾವುದ ನಡೆಯುವಂಥಾ, ಅಶ್ವಂ-ಕುದುರೆಯನ್ನು, ಆರುಹ್ಯ-ಏರಿದವನಾಗಿ, ಯಯೌ-ತೆರಳಿದನು ॥೧೮॥ ರಾಜನ್-ಅರಸೇ! ರಾಮಜನಾರ್ದನೌ-ಬಲಕೇಶವರು, ಗರುಡಧ್ವಜಂ-ಗರುಡಪಕ್ಷಿಯು ಪತಾಕೆಯಲ್ಲಿಉಳ್ಳ, ರಥಂ-ತೇರನ್ನು, ಆರುಹ್ಯ-ಏರಿ, ಮಹಾವೇಗೈಃ-ಅಧಿಕವೇಗವುಳ್ಳ, ಅಶ್ವೈಃ-ಕುದುರೆಗಳಿಂದ, ಗುರುದ್ರುಹಂ-ಗುರುವಿಗೆ ದ್ರೋಹವಂಗೆಯ್ದ ಶತಧನ್ವನನ್ನು, ಅನ್ವಯಾತಾಂ-ಅಟ್ಟಿಕೊಂಡುಹೋದರು ॥೧೯॥ ಮಿಥಿಲಾಯಾಃ-ಮಿಥಿಲಾನ

---

ಎಂದು ಕೃತವರ್ಮನು ಹೇಳಲಾಗಿ ವಿಮುಖನಾದ ಶತಧನ್ವನು ಅಕ್ರೂರನಂ ಅದೇರೀತಿಯಲ್ಲಿ ಸಹಾಯಾರ್ಥವಾಗಿ ಕೇಳಿದನು, ಆಯಕ್ರೂರನು ಹೇಳಿದನು-ಎಲೈ ಶತಧನ್ವನೇ! ಬುದ್ಧಿವಂತನಾದಪುರುಷನು ಯಾವವನಾದಾಗ್ಯೂ ಜಗದೀಶ್ವರರಾದ ರಾಮಕೃಷ್ಣರಲ್ಲಿ ವಿರೋಧವನಾಚರಿಸುವನೇ ॥೧೪॥ ಯಾವ ಪರಮೇಶ್ವರನು ಈ ಜಗತ್ತಂ ಲೀಲೆಯಿಂದಲೇ ಸೃಷ್ಟಿಸುತ್ತಾನೆಯೋ, ಸಂಹರಿಸುತ್ತಾನೆಯೋ, ರಕ್ಷಿಸುತ್ತಾನೆಯೋ ಯಾವಈಶ್ವರನ ವ್ಯಾಪಾರವಂ ಮಾಯಾಮೋಹಿತರಾದ ಬ್ರಹ್ಮಾದಿಗಳೂಕೂಡ ಅರಿಯರೋ ॥೧೫॥ ಆಶ್ಚರ್ಯಚರಿತ್ರವುಳ್ಳ ಅನಂತನಾದ ಆದಿಪುರುಷನಾದ ಕೂಟಸ್ಥನಾದ ಪರಮಾತ್ಮನಾದ ಭಗವಂತನಾದ ಶ್ರೀಕೃಷ್ಣನಿಗೋಸ್ಕರ ನಮಸ್ಕಾರವು ॥೧೭॥ ಈರೀತಿಯಲ್ಲಿ ಅಕ್ರೂರನಿಂದಲೂ ನಿರಾಕರಿಸಲ್ಪಟ್ಟವನಾಗಿ ಶತಧನ್ವನು ಆಮಣಿಯಂ ಅಕ್ರೂರನ ವಶದಲ್ಲಿರಿಸಿಬಿಟ್ಟು ಅಶ್ವಾರೂಢನಾಗಿ ನೂರುಯೋಜನದೂರವಾಗಿ ಓಡಿದನು ॥೧೮॥ ಆಮೇಲೆ ಶ್ರೀರಾಮಕೃಷ್ಣರು ಗರುಡಧ್ವಜಯುಕ್ತವಾದ ರಥವನೇರಿಕೊಂಡು ಮಹಾವೇಗಶಾಲಿಗಳಾದ ಅಶ್ವಗಳಿಂದ ರಥವಂಓಡಿಸಿಕೊಂಡು ಗುರುದ್ರೋಹಿಯಾದ ಶತಧನ್ವನಂ ಅಟ್ಟಿಹೋದರು ॥೧೯॥ ಆಶತಧನ್ವನು ಮಿಥಿಲಾಪುರದಸಮೀಪ

ರಥಂ ರಾಮಜನಾರ್ದನೌ । ಅನ್ವಯಾತಾಂ ಮಹಾವೇಗೈರಶ್ವೈ ರಾಜನ್ಗುರುದ್ರುಹಮ್ ॥೧೯॥ ಮಿಥಿಲಾಯಾಮುಪವನೇ ವಿಸೃಜ್ಯ ಪತಿತಂ ಹಯಮ್ । ಪದ್ಭ್ಯಾಮಧಾವತ್ಸಂತ್ರಸ್ತಃ ಕೃಷ್ಣೋಽಪ್ಯನ್ವದ್ರವದ್ರುಷಾ ॥೨೦॥ ಪದಾತೇರ್ಭಗವಾಂಸ್ತಸ್ಯ ಪದಾತಿಸ್ತಿಗ್ಮನೇಮಿನಾ । ಚಕ್ರೇಣ ಶಿರ ಉತ್ಕೃತ್ಯ ವಾಸಸೋರ್ವ್ಯಚಿನೋನ್ಮಣಿಮ್ ॥೨೧॥ ಅಲಬ್ಧಮಣಿರಾಗತ್ಯ ಕೃಷ್ಣ ಆಹಾಗ್ರಜಾಂತಿಕಮ್ । ವೃಥಾ ಹತಃ ಶತಧನುರ್ಮಣಿಸ್ತತ್ರ ನ ವಿದ್ಯತೇ ॥೨೨॥ ತತ ಆಹ ಬಲೋ ನೂನಂ ಸ ಮಣಿಃ ಶತಧನ್ವನಾ । ಕಸ್ಮಿಂಶ್ಚಿತ್ಪುರುಷೇ ನ್ಯಸ್ತಸ್ತಮನ್ವೇಷ ಪುರಂ ವ್ರಜ ॥೨೩॥ ಅಹಂ ವೈದೇಹಮಿಚ್ಛಾಮಿ ದ್ರಷ್ಟುಂ ಪ್ರಿಯತಮಂ ಮಮ । ಇತ್ಯುಕ್ತ್ವಾ ಮಿಥಿಲಾಂ ರಾಜನ್ವಿವೇಶ ಯದುನಂದನಃ ॥೨೪॥ ತಂ ದೃಷ್ಟ್ವಾ ಸಹಸೋತ್ಥಾಯ ಮೈಥಿಲಃ ಪ್ರೀತಮಾ

---

ಗರದ, ಉಪವನೇ-ಊರುಮುಂದಣ ತೋಟದ ಬಳಿಯಲ್ಲಿ, ಪತಿತಂ-ಬಿದ್ದಂಥಾ ಹಯಂ-ಕುದುರೆಯನ್ನು, ವಿಸೃಜ್ಯ-ಬಿಟ್ಟು ಸಂತ್ರಸ್ತಃ-ಬೆದರಿದವನಾಗಿ ಹೆದರಿದವನಾಗಿ ಪದ್ಭ್ಯಾಂ-ಕಾಲುಗಳಿಂದ, ಅಧಾವತ್-ಓಡಿಹೋದನು. ಕೃಷ್ಣೋಽಪಿ-ವಾಸುದೇವನೂ ಕೂಡ, ರುಷಾ-ಸಿಟ್ಟಿನಿಂದ, ಅನ್ವದ್ರವತ್-ಅನುಸರಿಸಿ ಅಟ್ಟಿಕೊಂಡು ಹೋದನು ॥೨೦॥ ಪದಾತೇಃ-ಕಾಲುಗಳಿಂದ ನಡೆಯುವನಾದ, ಭಗವಾನ್-ಕೃಷ್ಣನು, ಪದಾತಿಃ-ಕಾಲುನಡೆಗಾರನಾದ, ತಸ್ಯ-ಆ ಶತಧನ್ವನ, ಶಿರಃ-ತಲೆಯನ್ನು, ತಿಗ್ಮನೇಮಿನಾ-ತೀಕ್ಷ್ಣವಾದ ಅಂಚುಳ್ಳ ಚಕ್ರೇಣ-ಸುದರ್ಶನವೆಂಬ ಆಯುಧದಿಂದ, ಉತ್ಕೃತ್ಯ-ಛೇದಿಸಿ, ವಾಸಸೋಃ-ಅವನುಟ್ಟುತೊಟ್ಟ ವಸ್ತ್ರಗಳಲ್ಲಿ, ಮಣಿಂ-ರತ್ನವನ್ನು, ವ್ಯಚಿನೋತ್-ಹುಡುಕಿದನು ॥೨೧॥ ಅಲಬ್ಧಮಣಿ -ಹೊಂದಲ್ಪಡದ ರತ್ನವುಳ್ಳ ಕೃಷ್ಣಃ-ಹರಿಯು, ಅಗ್ರಜಾಂತಿಕಂ-ಅಣ್ಣನ ಬಳಿಯಂ ಕುರಿತು, ಆಗತ್ಯ-ಬಂದು, ಶತಧನುಃ-ಶತಧನ್ವನು, ವೃಥಾ-ವ್ಯರ್ಥವಾಗಿ, ಹತಃ-ಕೊಲ್ಲಲ್ಪಟ್ಟವನಾದನು, ತತ್ರ-ಅಲ್ಲಿ, ಮಣಿಃ-ರತ್ನವು, ನವಿದ್ಯತೇ-ಇರುವುದಿಲ್ಲವು, ಎಂದು, ಆಹ-ನುಡಿದನು ॥೨೨॥ ತತಃ-ಆ ಬಳಿಕ, ಬಲಃ-ರಾಮನು, ಆಹ-ಹೇಳಿದನು, ನೂನಂ-ದಿಟವು? ಸ ಮಣಿಃ-ಆ ರತ್ನವು, ಶತಧನ್ವನಾ-ಶತಧನ್ವನಿಂದ, ಕಸ್ಮಿಂಶ್ಚಿತ್ಪುರುಷೇ-ಯಾರೊಬ್ಬ ಮನುಷ್ಯನಲ್ಲಿಯೋ, ನ್ಯಸ್ತಃ-ಇರಿಸಲ್ಪಟ್ಟಿರುವುದು ತಂ-ಅದನ್ನು ಅನ್ವೇಷ-ಹುಡುಕು, ಪುರಂ-ದ್ವಾರಕಾನಗರವಂ ಕುರಿತು, ವ್ರಜ-ಹೋಗು ॥೨೩॥ ಅಹಂ-ನಾನು, ಮಮ-ನನಗೆ, ಪ್ರಿಯತಮಂ-ಅತ್ಯಂತೇಷ್ಟನಾದ, ವೈದೇಹಂ-ವಿದೇಹರಾಜನನ್ನು, ದ್ರಷ್ಟುಂ-ನೋಡುವುದಕ್ಕೆ, ಇಚ್ಛಾಮಿ-ಬಯಸುವೆನು. ರಾಜನ್-ಪರೀಕ್ಷಿತನೇ! ಯದುನಂದನಃ-ಬಲರಾಮನು, ಇತ್ಯುಕ್ತ್ವಾ-ಇಂತು ಹೇಳಿ ಮಿಥಿಲಾಂ-ಮಿಥಿಲಾನಗರವನ್ನು, ವಿವೇಶ-ಹೊಕ್ಕನು ॥೨೪॥ ಮೈಥಿಲಃ-ಮಿಥಿಲಾನಗರದರಸನು, ತಂ-ಆ ಬಲರಾಮನನ್ನು, ದೃಷ್ಟ್ವಾ-ನೋಡಿ, ಸಹಸಾ-ಬೇಗದಿಂದ ಉತ್ಥಾಯ-ಎದ್ದು, ಪ್ರೀತಮಾನಸಃ-ಸಂತುಷ್ಟಹೃದಯನಾಗಿ, ಅರ್ಹಣ್ಯಂ-ಪೂಜ್ಯನಾದ ಬಲರಾಮನನ್ನು, ಸಮರ್ಹಣೈಃ-ಪೂಜೋಪಚಾರಗಳಿಂದ, ವಿಧಿವ

---

ಪದಲ್ಲಿ ಸೋತು ಬಿದ್ದ ಕುದುರೆಯಂ ಬಿಟ್ಟು ಕಾಲುಗಳಿಂದಲೇ ಓಡಿದನು. ಶ್ರೀಕೃಷ್ಣನು ಅಟ್ಟಿಕೊಂಡು ಹೋದನು ॥೨೦॥ ಆಮೇಲೆ ಶ್ರೀಕೃಷ್ಣನು ತೀಕ್ಷ್ಣಧಾರೆಯುಳ್ಳ ಚಕ್ರಾಯುಧದಿಂದ ಅವನ ಶಿರಸ್ಸಂ ಛೇದಿಸಿ ಅವನ ವಸ್ತ್ರಂಗಳಲ್ಲಿ ಮಣಿಯಂ ಹುಡುಕಿದನು ॥೨೧॥ (ಅಕ್ರೂರನ ವಶದಲ್ಲಿ ಮಣಿಯು ಇದೆಯೆಂಬರ್ಥವು ತಿಳಿದಿದ್ದರೂ ಬಲರಾಮವಂಚನಾರ್ಥವಾಗಿ ಮಣಿಯಂ ಹುಡುಕಿದಹಾಗೆ ನಟನವಂ ಮಾಡಿದನು.) ಅಲ್ಲಿ ಮಣಿಯಂ ಕಾಣದೆ ಬಲರಾಮನ ಸಮೀಪಕ್ಕೆ ಬಂದು ಕೃಷ್ಣನು ನುಡಿದನು. ಶತಧನ್ವನಂ ವ್ಯರ್ಥವಾಗಿ ಸಂಹರಿಸಿದೆ ಮಣಿಯು ಅವನಲ್ಲಿ ಇಲ್ಲ ॥೨೨॥ ಎಂಬ ಶ್ರೀಕೃಷ್ಣನ ವಾಕ್ಯವಂ ಕೇಳಿ ಬಲರಾಮನು ಶ್ರೀಕೃಷ್ಣನ ಕಪಟವಂ ತಿಳಿದು ಮನಸ್ಸಿನಲ್ಲಿ ಸ್ವಲ್ಪ ಕೋಪಯುಕ್ತನಾಗಿ ನುಡಿದನದೆಂತೆನೆ,- ಈ ಶತಧನ್ವನು ಓಡಿಬರುವಾಗ ಆ ಮಣಿಯಂ ಯಾವವನೋ ಒಬ್ಬ ಪುರುಷನ ವಶವಂ ಮಾಡಿ ಬಂದಿರಬಹುದು, ಅದರಿಂದ ನೀನೂ ಊರಿಗೆ ಹೋಗು, ಆ ಪುರುಷನಂ ಗೊತ್ತುಮಾಡು ॥೨೩॥ ನಾನು ನನ್ನ ಮಿತ್ರನಾದ ಮಿಥಿಲಾಧಿಪನಾದ ಜನಕನಂ ನೋಡಿ ಬರುತ್ತೇನೆ, ಎಂದು ಹೇಳಿ ಬಲರಾಮನು ಮಿಥಿಲಾಪುರಕ್ಕೆ ತೆರಳಿ ಹೋದನು ॥೨೪॥ ಆ ಜನಕನು ಬಲರಾಮನಂ ನೋಡಿ ಸಂತುಷ್ಟಮನಸ್ಕನಾಗಿ ಬೇಗನೆ ಎದ್ದು ಪ್ರತ್ಯುತ್ಥಾನಾದಿಗಳಂ ಮಾಡಿ ಪೂಜ್ಯನಾದ ಬಲರಾಮನಂ

ಮೋಹಾಃ ಹ್ಯುದ್ಭೂತ್ಯಾದೈವಿಕಭೌತಿಕಾಃ ||೩೦|| ಇತ್ಯಂಗೋಪದಿಶಂತ್ಯೇಕೇ ವಿಸ್ಮೃತ್ಯ ಪ್ರಾಗುದಾಹೃತಮ್ | ಮುನಿ
ವಾಸನಿವಾಸೇ ಕಿಂ ಘಟೇತಾರಿಷ್ಟದರ್ಶನಮ್ ||೩೧|| ದೇವೇಽವರ್ಷತಿ ಕಾಶೀಶಃ ಶ್ವಫಲ್ಕಾಯಾಗತಾಯ ವೈ |
ಸ್ವಸುತಾಂ ಗಾಂದಿನೀಂ ಪ್ರಾದಾತ್ತತೋಽವರ್ಷತ್ಸ್ಮ ಕಾಶಿಷು ||೩೨|| ತತ್ಸುತಸ್ತತ್ಪ್ರಭಾವೋಽಸಾವಕ್ರೂ
ರೋ ಯತ್ರ ಯತ್ರ ಹ | ದೇವೋಽಭಿವರ್ಷತೇ ತತ್ರ ನೋಪತಾಪಾ ನ ಮಾರಿಕಾಃ ||೩೩|| ಇತಿ ವೃದ್ಧವಚಃ ಶ್ರುತ್ವಾ
ನೈತಾವದಿಹ ಕಾರಣಮ್ | ಇತಿ ಮತ್ವಾ ಸಮಾನಾಯ್ಯ ಪ್ರಾಹಾಕ್ರೂರಂ ಜನಾರ್ದನಃ ||೩೪|| ಪೂಜಯಿತ್ವಾ
ಭಿಭಾಷ್ಯೈನಂ ಕಥಯಿತ್ವಾ ಪ್ರಿಯಾಃ ಕಥಾಃ | ವಿಜ್ಞಾತಾಖಿಲಚಿತ್ತಜ್ಞಃ ಸ್ಮಯಮಾನ ಉವಾಚ ಹ ||೩೫||

---

ಬಂಧಿಗಳಾದ, ದೈವಿಕಭೌತಿಕಾಃ-ದೇವಸಂಬಂಧಿಗಳಾದ, ಭೂತಸಂಬಂಧಿಗಳಾದ ತಾಪಾಃ-ಮೂರುಬಗೆಯ ತಾಪಂಗಳು, ಅರಿ
ಷ್ಟಾನಿ-ಅನಿಷ್ಟಂಗಳೂ, ಮುಹುಃ-ಬಾರಿಬಾರಿಗೂ, ಆಸನ್-ಆದವು ||೩೦|| ಅಂಗ-ಪರೀಕ್ಷಿದ್ರಾಯನೇ ಇತಿ-ಹೀಗೆ, ಏಕೇ-
ಕೆಲವರು, ಪ್ರಾಕ್-ಪೂರ್ವದಲ್ಲಿ, ಉದಾಹೃತಂ-ವಿವರಣವಾಗಿ ಹೇಳಲ್ಪಟ್ಟ, ಕೃಷ್ಣಮಾಹಾತ್ಮ್ಯವನ್ನು ವಿಸ್ಮೃತ್ಯ-ಮರ
ತು, ಉಪದಿಶಂತಿ-ಹೇಳುತ್ತಿರುವರು ಮುನಿವಾಸ-ಮುನಿಗಳ ಚಿತ್ತವೃತ್ತಿಗೆ ಆವಾಸಸ್ಥಾನನಾದ ಕೃಷ್ಣನ ನಿವಾಸೇ-ಸ್ಥಾನ
ವಾದ ದ್ವಾರಕೆಯಲ್ಲಿ, ಅರಿಷ್ಟದರ್ಶನಂ-ಉತ್ಪಾತಸೂಚನವು, ಘಟೇತ-ಉಂಟಾದೀತೇ? ||೩೧|| ದೇವೇ-ಪರ್ಜನ್ಯನು,
ಅವರ್ಷತಿಸತಿ-ಮಳೆ ಸುರಿಸದೆ ಹೋಗುತಲೂ, ಕಾಶೀಶಃ-ಕಾಶೀರಾಜನು, ಆಗತಾಯ-ಬಂದಂಥಾ, ಶ್ವಫಲ್ಕಾಯ-ಶ್ವಫಲ್ಕನೆಂ
ಬವನಿಗೆ, ತಾಂ-ಅಂಥಾ, ಸ್ವಸುತಾಂ-ತನ್ನ ಮಗಳಾದ, ಗಾಂದಿನೀಂ-ಗಾಂದಿನಿಯೆ ಒಬಳನ್ನು ಪ್ರಾದಾತ್-ಕೊಟ್ಟನು. ತ
ತಃ-ಶ್ವಫಲ್ಕನು ಬಂದಮೇಲೆ, ಕಾಶಿಷು-ಕಾಶೀದೇಶಗಳಲ್ಲಿ ಅವರ್ಷತ್ ಸ್ಮ-ಮಳೆ ಸುರಿಸಿದನಂತೆ ||೩೨|| ತತ್ಸುತಃ-ಆ ಶ್ವಫಲ್ಕ
ನಮಗನಾದ, ಅಸಾವಕ್ರೂರಃ-ಈ ಅಕ್ರೂರನು ತತ್ಪ್ರಭಾವಃ-ಅದೇಸಾಮರ್ಥ್ಯವುಳ್ಳವನು, ಸಃ-ಆ ಅಕ್ರೂರನು ಯತ್ರ
ಯತ್ರ-ಯಾವಯಾವ ಸ್ಥಲದಲ್ಲಿರುವನೋ ತತ್ರ ತತ್ರ-ಅಲ್ಲಲ್ಲಿ, ದೇವಃ-ಪರ್ಜನ್ಯನು, ಅಭಿವರ್ಷತೇ-ಮಳೆಯಂ ಸುರಿಸುವನು.
ಉಪತಾಪಾಃ-ಉಪದ್ರವಂಗಳು ನ-ಇಲ್ಲವು ಮಾರಿಕಾಃ-ಮಾರೀರೋಗಂಗಳು, ನ-ಇಲ್ಲವು ||೩೩|| ಇತಿ-ಹೀಗೆ, ವೃದ್ಧವಚಃ-
ಮುದುಕರ ಮಾತನ್ನು, ಶ್ರುತ್ವಾ-ಕೇಳಿ, ಇಹ-ಈ ವಿಷಯದಲ್ಲಿ, ಏತಾವತ್-ಇಷ್ಟುಮಾತ್ರವೇ, ಕಾರಣಂ-ನಿಮಿತ್ತವು, ನ-ಅಲ್ಲ
ವು, ಇತಿ-ಇಂತೆಂದು, ಜನಾರ್ದನಃ-ಕೃಷ್ಣನು, ಮತ್ವಾ-ಆಳುಗಳಿಂದ ಅಕ್ರೂರನನ್ನು, ಸಮಾನಾಯ್ಯ-ಕರೆಯಿಸಿಕೊಂಡು,
ಪ್ರಾಹ-ನುಡಿದನು ||೩೪|| ಏನಂ-ಈ ಅಕ್ರೂರನನ್ನು, ಪೂಜಯಿತ್ವಾ-ಉಪಚರಿಸಿ, ಅಭಿಭಾಷ್ಯ-ಮಾತಾಡಿಸಿ ಪ್ರಿಯಾಃ-ಇ
ಷ್ಟಂಗಳಾದ, ಕಥಾಃ-ಸಮಾಚಾರಗಳನ್ನು, ಕಥಯಿತ್ವಾ-ಹೇಳಿ, ವಿಜ್ಞಾತಾಖಿಲಚಿತ್ತಜ್ಞಃ-ತಿಳಿಯಲ್ಪಟ್ಟ ಎಲ್ಲವೂ ಉಳ್ಳವನಾ
ದ್ದರಿಂದಲೇ, ಅಕ್ರೂರನ ಚಿತ್ತವಂ ಬಲ್ಲವನಾದ್ದರಿಂದ, ಸ್ಮಯಮಾನಃ-ನಗುತಿರುವವನಾಗಿ, ಉವಾಚಹ-ನುಡಿದನು ||೩೫|| ದಾ

---

ವರು ಋಷಿಗಳು ಶ್ರೀಕೃಷ್ಣನು ಅಕ್ರೂರನಂ ಏಕೆ ಕರೆಯಿಸಿಕೊಳ್ಳುತ್ತಾನೆಂದರೆ ಮಹಾ ಪ್ರಭಾವನಾದ ಅ
ಕ್ರೂರನು ಹೊರಟುಹೋದದರಿಂದವಾಗಿ ದ್ವಾರಕಾ ನಗರದಲ್ಲಿ ಅನಿಷ್ಟಂಗಳುಂಟಾಗಿವೆ ರೋಗಾದ್ಯುಪದ್ರವಂ
ಗಳುಂಟಾಗಿವೆ. ಆದದರಿಂದ ಅಕ್ರೂರನಂ ಶ್ರೀಕೃಷ್ಣನು ಕರೆಯಿಸಿಕೊಳ್ಳುತ್ತಾನೆಂದು ನಿಶ್ಚಯಿಸಿದರು ||೩೦||
ಎಲೈ ಅದು ಯಥಾರ್ಥವಲ್ಲವು, ಸಾಕ್ಷಾದ್ಭಗವಂತನಾದ ಮುನಿಗಳಿಗೆ ಧ್ಯಾನಯೋಗ್ಯನಾದ ಪರಮಾತ್ಮನಾ
ದ ಶ್ರೀಕೃಷ್ಣನು ಇರುವಾಗ ಅನಿಷ್ಟಂಗಳು ಬಂದೀತೆಂಬ ವಾರ್ತೆಯು ಹೇಗೆ ಉಂಟಾಗುವುದು ||೩೧|| ಅ
ದು ಭಗವಂತನ ತಾತ್ಪರ್ಯವಲ್ಲವು. ಮತ್ತೆ ಕೆಲವರು ವೃದ್ಧರು ನುಡಿದರು. ಪೂರ್ವದಲ್ಲಿ ಕಾಶೀದೇಶದೊಳು
ಅನಾವೃಷ್ಟಿಯು ಪ್ರಾಪ್ತವಾಯಿತು, ಆಗ ಅಕ್ರೂರನ ತಂದೆಯಾದ ಶ್ವಫಲ್ಕನು ಕಾಶಿಗೆ ಹೋದನು ಆಮೇಲೆ
ಅನಾವೃಷ್ಟಿ ಪರಿಹಾರವಾಗಿ ಮಹಾವೃಷ್ಟಿ ಯುಂಟಾಯಿತು. ಆಗ ಕಾಶೀರಾಯನು ಸಂತೋಷದಿಂದ ತನ್ನ
ಮಗಳಾದ ಗಾಂದಿನಿಯನ್ನು ಶ್ವಫಲ್ಕನಿಗೆ ಕೊಟ್ಟನು ||೩೨|| ಆ ಕಾರಣದಿಂದ ಶ್ವಫಲ್ಕನ ಮಗನಾದ ಅಕ್ರೂರ
ನೂ ಮಹಾತ್ಮನೆಂದು ಹೇಳುತ್ತಿರುವೆ ||೩೩|| ವೃದ್ಧರವಾಕ್ಯಮಂ ಕೇಳಿ ಹಾಗೆಯೇ ಆಗಲಿ ಯೆಂದು ಶ್ರೀಕೃಷ್ಣನು
ದೂತನು ಕಳುಹಿಸಿ ಅಕ್ರೂರನಂ ಕರೆಯಿಸಿದನು ||೩೪|| ಆ ಅಕ್ರೂರನಂ ಬಹುಮಾನಿಸಿ ಕೆಲವು ವಸ್ತ್ರಾಭರ
ಣಂಗಳಂ ಕೊಟ್ಟು ಸರ್ವಜ್ಞನಾದ ಭಗವಂತನು ನಗುತ ನುಡಿದನು ||೩೫|| ಎಲೈ ದಾನಪತಿಯಾದ ಅಕ್ರೂ

ನನುದಾನಪತೇನ್ಯಸ್ತಸ್ತ್ವಯ್ಯಾಸ್ತೇಶತಧನ್ವನಾ । ಸ್ಯಮಂತಕಮಣಿಶ್ಶ್ರೀಮಾನ್ವಿದಿತಃಪೂರ್ವಮೇ
ವನಃ ॥೩೭॥ ಸತ್ರಾಜಿತೋಽನಪತ್ಯತ್ವಾದ್ಗೃಹ್ಣೀಯುರ್ದುಹಿತುಸ್ಸುತಾಃ । ದಾಯಂನಿನೀ
ಯಾಪಃಪಿಂಡಾನ್ವಿಮುಚ್ಯರ್ಣಂಚಶೇಷಿತಮ್ ॥೩೮॥ ತಥಾಪಿದುರ್ಧರಸ್ತ್ವನ್ಯೈಸ್ತ್ವಯ್ಯಾ
ಸ್ತಾಂಸುವ್ರತಮಣಿಃ । ಕಿಂತುಮಾಮಗ್ರಜಸ್ಸಮ್ಯಙ್ನಪ್ರತ್ಯೇತಿಮಣಿಂಪ್ರತಿ ॥೩೯॥ ದರ್ಶಯಸ್ವಮ
ಹಾಭಾಗಬಂಧೂನಾಂಶಾಂತಿಮಾವಹ । ಅವಿಚ್ಛಿನ್ನಾಮಖಾಸ್ತೇದ್ಯವರ್ತಂತೇರುಕ್ಮವೇದಯಃ ॥೪೦॥
ಏವಂಸಾಮಭಿರಾಲಬ್ಧಶ್ಶ್ವಫಲ್ಕತನಯೋಮಣಿಮ್ । ಆದಾಯವಾಸಸಾಚ್ಛನ್ನಂದದೌಸೂರ್ಯಸ
ಮಪ್ರಭಮ್ ॥೪೧॥ ಸ್ಯಮಂತಕಂದರ್ಶಯಿತ್ವಾಜ್ಞಾತಿಭ್ಯೋರಜಆತ್ಮನಃ । ವಿಮೃಜ್ಯಮಣಿನಾಭೂಯ

---

ನಪತೇ-ಧನದಾನಕ್ಕೊಡೆಯನಾದ ಅಕ್ರೂರನೇ! ಶ್ರೀಮಾನ್-ಸಂಪತ್ತುಳ್ಳ, ಸ್ಯಮಂತಕಮಣಿಃ-ಸ್ಯಮಂತಕವೆಂಬ ರತ್ನವು, ಶತಧನ್ವನಾ-ಶತಧನ್ವನೆಂಬವನಿಂದ, ತ್ವಯಿ-ನಿನ್ನಲ್ಲಿ ನ್ಯಸ್ತಃ-ಇರಿಸಲ್ಪಟ್ಟದ್ದಾಗಿ ಆಸ್ತೇನನು-ಇದೆಯಲ್ಲವೆ? ನಃ-ನಮ್ಮಿಂದ, ಪೂರ್ವಮೇವ-ಮುಂಚೆಯೇ ವಿದಿತಃ-ತಿಳಿಯಲ್ಪಟ್ಟಿರುವುದು ॥೩೭॥ ಸತ್ರಾಜಿತಃ-ಸತ್ರಾಜಿತನಿಗೆ, ಅನಪತ್ಯತ್ವಾತ್-ಗಂಡುಮಕ್ಕಳಿಲ್ಲದ್ದರಿಂದ ದುಹಿತುಃ-ಮಗಳ, ಸುತಾಃ-ಗಂಡುಮಕ್ಕಳು, ಅಪಃ-ಎಳ್ಳುನೀರನ್ನೂ, ಪಿಂಡಾನ್-ಬಲ್ಯನ್ನದ ಉಂಡೆಗಳನ್ನೂ, ನಿನೀಯ-ವಿಧಿಪ್ರಕಾರಕೊಟ್ಟು ಋಣಂಚ-ಮಾತಾಮಹನಸಾಲವನ್ನೂ, ವಿಮುಚ್ಯ-ತೀರಿಸಿ, ಶೇಷಿತಂ-ಮಿಗಿಸಲ್ಪಟ್ಟಂಥ, ದಾಯಂ-ಭಾಗವನ್ನು, ಗೃಹ್ಣೀಯುಃ-ತೆಗೆದುಕೊಳ್ಳುವರು ॥೩೮॥ ತಥಾಪಿ-ಹಾಗೆ ಸತ್ಯಭಾಮೆಯ ಮಕ್ಕಳಿಗೆ ಸಲ್ಲತಕ್ಕದ್ದಾದರೂ, ಮಣಿಃ-ಸ್ಯಮಂತಕರತ್ನವು, ಅನ್ಯೈಃ-ಇತರರಿಂದ, ದುರ್ಧರಃ-ರಕ್ಷಿಸಿಕೊಳ್ಳಲಶಕ್ಯವಾದ್ದಷ್ಟೆ? ಆದ್ದರಿಂದ, ಸುವ್ರತ-ಸರಿಯಾದ ನಿಯಮವುಳ್ಳ, ತ್ವಯಿ-ನಿನ್ನಲ್ಲಿ, ಆಸ್ತಾಂ-ಇರಲಿ, ಕಿಂತು-ಇನ್ನೇನೆಂದರೆ, ಮಮ-ನನ್ನ, ಅಗ್ರಜಃ-ಅಣ್ಣನಾದ ಬಲರಾಮನು, ಮಣಿಂಪ್ರತಿ-ಸ್ಯಮಂತಕರತ್ನವಿಷಯದಲ್ಲಿ, ಸಮ್ಯಕ್-ಚನ್ನಾಗಿ, ನಪ್ರತ್ಯೇತಿ-ನಂಬುವುದಿಲ್ಲವು ॥೩೯॥ ಮಹಾಭಾಗ-ಅಧಿಕ ಪೂಜ್ಯತೆಯುಳ್ಳವನೇ! ದರ್ಶಯಸ್ವ ರತ್ನವನ್ನು ನಿನ್ನಲ್ಲಿಯೇ ಇಟ್ಟುಕೊಂಡು ತೋರಿಸು, ಬಂಧೂನಾಂ-ನಂಟರಿಗೆ, ಶಾಂತಿಂ-ಸಮಾಧಾನವನ್ನು, ಆವಹ-ಮಾಡು, (ಮಣಿಯು ನಿನ್ನಲ್ಲಿಯೇ ಏಕಿರಬೇಕೆಂದರೆ,) ಅದ್ಯ-ಈಗ, ರುಕ್ಮವೇದಯಃ-ಚಿನ್ನದ ಜಗುಲಿಗಳುಳ್ಳ, ತೇ-ನಿನ್ನ, ಮಖಾಃ ಯಜ್ಞಂಗಳು, ಅವಿಚ್ಛಿನ್ನಾಃ-ಅವಕಾಶವಿಲ್ಲದವುಗಳಾಗಿ ವರ್ತಂತೇ-ನಡೆಯುತ್ತಿರುವವು. (ರತ್ನದಿಂ ಹುಟ್ಟುವ ಧನವು ಯಜ್ಞಗಳಿಗುಪಯೋಗಿಸುತ್ತೆ) ॥೪೦॥ ಏವಂ-ಹೀಗೆ. ಸಾಮಭಿಃ-ಸಮಾಧಾನವಚನಗಳಿಂದ, ಆಲಬ್ಧಃ-ನುಡಿಯೊಪ್ಪಿಸಲ್ಪಟ್ಟ, ಶ್ವಫಲ್ಕತನಯಃ-ಅಕ್ರೂರನು, ವಾಸಸಾ-ವಸ್ತ್ರದಿಂದ, ಛನ್ನಂ-ಮುಚ್ಚಲ್ಪಟ್ಟದ್ದ, ಮಣಿಂ-ರತ್ನವನ್ನು, ಆದಾಯ-ಹೊರಗೆ ತೆಗೆದು, ಸೂರ್ಯಸಮಪ್ರಭಂ-ಸೂರ್ಯನಿಗೆ ಸಮಾನವಾದ ಕಾಂತಿಯುಳ್ಳ ಅದರನ್ನು, ದದೌ-ಕೊಟ್ಟನು ॥೪೧॥ ಪ್ರಭುಃ-ಸಮರ್ಥನಾದ ಕೃಷ್ಣನು, ಸ್ಯಮಂತಕಂ-ರತ್ನವನ್ನು, ಜ್ಞಾತಿಭ್ಯಃ-ಸಂಬಂಧಿಗೆ, ದರ್ಶಯಿತ್ವಾ-ತೋರಿಸಿ, ಮಣಿನಾ-ರತ್ನದಿಂದ, ಆತ್ಮನಃ-ತನ್ನ, ರಜಃ-ಅಪವಾದದೋಷವನ್ನು, ವಿಮೃಜ್ಯ-ತೊಡೆದು ಹೋಗಲಾಡಿಸಿಕೊಂಡು, ಭೂಯಃ-ಮರಳಿಯೂ, ತಸ್ಮೈ-ಆ ಅಕ್ರೂರನಿಗೆ, ಪ್ರತ್ಯರ್ಪಯತ್-ಹಿಂದಕ್ಕೆ ಕೊಟ್ಟುಬಿಟ್ಟನು.

---

ರನೇ! ಸ್ಯಮಂತಕಮಣಿಯಂ ಶತಧನ್ವನು ನಿನ್ನ ವಶದಲ್ಲಿರಿಸಿದ್ದನೆಂಬ ಅರ್ಥವಂ ನಾವು ಮೊದಲೇ ತಿಳಿದಿದ್ದೆವು ॥೩೭॥ ಸತ್ರಾಜಿದ್ರಾಯನು ಅಪುತ್ರನಾದ್ದರಿಂದ ಅವನ ಸ್ವತ್ತು ದೌಹಿತ್ರರಿಗೆ ಸಲ್ಲತಕ್ಕದ್ದು. ಅಪುತ್ರನಾಗಿ ಸ್ವರ್ಗಸ್ಥನಾದಪುರುಷನ ಧನವು ಔರ್ಧ್ವದೈಹಿಕಕ್ರಿಯೆಗಳಿಗೆ ಉಪಯುಕ್ತವಾದ್ದಂ ಬಿಟ್ಟು ಉಳಿದ ದ್ರವ್ಯವಂ ದೌಹಿತ್ರರು ಗ್ರಹಿಸಬೇಕು ॥೩೮॥ ಶಾಸ್ತ್ರವು ಹಾಗೆ ಯಿದೆ ಯೆಂದು ದೊಡ್ಡವರು ಹೇಳುತ್ತಾರೆ. ಆದರೂ ಆ ಮಣಿಯು ನಿನ್ನಲ್ಲಿಯೇ ಇರಲಿ. ಆದರೆ ನಮ್ಮಣ್ಣನಂ ನೆಚ್ಚಿಸಲೋಸುಗ ಆ ಮಣಿಯಂ ತೋರಿಸು, ಬಂಧುಗಳಿಗೆ ದುಃಖವಂ ಪರಿಹರಿಸು, ಇಲ್ಲದಿದ್ದರೆ ನೀನು ಅನೇಕ ಯಾಗಂಗಳಂ ಮಾಡುವುದಕ್ಕೆ ದ್ರವ್ಯವು ನಿನಗೆ ಹೇಗೆ ಬಂದೀತು? ॥೪೦॥ ಎಂದು ಉಪಾಯೋಕ್ತಿಗಳಿಂದ ಕೇಳಲ್ಪಟ್ಟ ಅಕ್ರೂರನು ವಸ್ತ್ರದ ಸೆರಗಿನಲ್ಲಿದ್ದ ಸೂರ್ಯನಂತೆ ಬೆಳಗುವ ಮಣಿಯಂ ಬಿಚ್ಚಿಕೊಟ್ಟನು ॥೪೧॥ ಆ ಶ್ರೀಕೃಷ್ಣನು ಆ ಮಣಿಯಂ ಜ್ಞಾತಿಬಂಧುಗಳಿಗೆ ತೋರಿಸಿ ತನ್ನ ಅಪವಾದವಂ ಪರಿಹರಿಸಿಕೊಂಡು ಪುನಃ ಆಮಣಿಯಂ ಅಕ್ರೂರನಿಗೇನೇ ಕೊಟ್ಟನು.

ಸ್ತ್ಯಸ್ಮೃತಪ್ರತ್ಯರ್ಪಯತ್ಪ್ರಭುಃ ||೪೨|| ಯಸ್ತ್ವೇತದ್ಭಗವತಈಶ್ವರಸ್ಯವಿಷ್ಣೋರ್ವೀರ್ಯಾಢ್ಯಂವೃಜಿ
ನಹರಂಸುಮಂಗಳಂಚ | ಆಖ್ಯಾನಂಪಠತಿಶೃಣೋತ್ಯನುಸ್ಮರೇದ್ವಾದುಷ್ಕೀರ್ತಿಂದುರಿತಮಪೋಹ್ಯಯಾ
ತಿಶಾಂತಿಮ್ || ... ... ... ... ... ... |೪೩||

ಇತಿಶ್ರೀಮದ್ಭಾಗವತೇ ದಶಮಸ್ಕಂಧೆ ಸಪ್ತಪಂಚಾಶೋಧ್ಯಾಯಃ

---

||೪೨| ಯಃ-ಯಾವಪುರುಷನು, ಈಶ್ವರಸ್ಯ-ಜಗನ್ನಿಯಾಮಕನಾದ, ಭಗವತಃ-ಷಡ್ಗುಣೈಶ್ವರ್ಯಸಂಪನ್ನನಾದ, ವಿಷ್ಣೋಃ-ವ್ಯಾಪಕನಾದ ನಾರಾಯಣನ, ವೀರ್ಯಾಢ್ಯಂ-ಸಾಮರ್ಥ್ಯದಿಂ ಪೂರ್ಣವಾಗಿಯೂ, ವೃಜಿನಹರಂ-ಪಾಪವಂ ಪರಿಹರಿಸುವದಾಗಿಯೂ, ಸುಮಂಗಳಂಚ-ಶುಭಪ್ರದವಾಗಿಯೂ ಇರುವ, ಏತದಾಖ್ಯಾನಂ-ಈ ಕಥೆಯನ್ನು, ಪಠತಿ-ಪಾರಾಯಣವಂ ಗೆಯ್ವನೋ, ಶೃಣೋತಿ-ಕೇಳುವನೋ, ಅನುಸ್ಮರೇದ್ವಾ-ನೆನವುಗೊಳ್ವನೋ, ಸತು-ಆ ಪುರುಷನಾದರೋ, ದುಷ್ಕೀರ್ತಿಂ-ಅಪವಾದವನ್ನೂ, ದುರಿತಂ-ಪಾಪವನ್ನೂ, ಅಪೋಹ್ಯ-ಹೋಗಲಾಡಿಸಿಕೊಂಡು ಶಾಂತಿಂ-ಚಿತ್ತಸಮಾಧಾನವನ್ನು, ಯಾತಿ-ಹೊಂದುತ್ತಿರುವನು. ||೪೩||

ಇಂತೆಂಬಲ್ಲಿಗೆ ಭಾಗವತಪ್ರತಿಶಬ್ದಾರ್ಥಬೋಧಿನಿಯೆಂಬ ಟೀಕೆಯಲ್ಲಿ ದಶಮಸ್ಕಂಧದೊಳಗೆ-
೫೭ನೆಯ ಅಧ್ಯಾಯಂ ಸಂಪೂರ್ಣವಾದುದು.

---

||೪೨|| ಎಲೈ ಅರಸೇ! ಭಗವಂತನಾದ ಶ್ರೀಕೃಷ್ಣನ ಪರಾಕ್ರಮಯುಕ್ತವಾದ ಪಾಪಪರಿಹಾರಕವಾದಶುಭಪ್ರದವಾದ ಈ ಉಪಾಖ್ಯಾನವನ್ನು ಯಾವ ಪುರುಷನು ಪಠಿಸುವನೋ ಶ್ರವಣಂಗೆಯ್ವನೋ ಸ್ಮರಿಸುವನೋ ಆ ಪುರುಷನು ಅಪಕೀರ್ತಿಯುಂ ಪಾಪವಂಸಹ ಪರಿಹರಿಸಿಕೊಂಡು ಉಪಶಾಂತನಾಗುವನು ||೪೩||

ಇಂತು ಶ್ರೀಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸಿದನೆಂದು ಸೂತಪೌರಾಣಿಕನು
ನೈಮಿಶಾರಣ್ಯವಾಸಿಗಳಾದ ಶೌನಕಾದಿ ಮಹರ್ಷಿಗಳಿಗೆ ಪೇಳಿದನೆಂಬಲ್ಲಿಗೆ-ಶ್ರೀಮನ್ಮಹೀ
ಶೂರಪುರವರಾಧೀಶ ಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜವಿರಚಿತಮಾದ
"ಶ್ರೀಕೃಷ್ಣರಾಜ ವಾಣೀವಿಲಾಸ" ಮೆಂಬ ಶ್ರೀಭಾಗವತ ಪುರಾಣದ ಕ
ರ್ಣಾಟ ಭಾಷಾವ್ಯಾಖ್ಯಾನದಲ್ಲಿ ದಶಮಸ್ಕಂಧದೊಳು
ಸಪ್ತಪಂಚಾಶತ್ತಮಾಧ್ಯಾಯಂಮುಗಿದುದು.
ಮಂಗಳಮಸ್ತು



ಏಕದಾಪಾಂಡವಾನ್ ದ್ರಷ್ಟುಂಪ್ರತೀತಾನ್ ಪುರುಷೋತ್ತಮಃ ।ಇಂದ್ರಪ್ರಸ್ಥಂಗತಶ್ಶ್ರೀಮಾನ್ಯು
ಯುಧಾನಾದಿಭಿರ್ವೃತಃ ॥೧॥ ದೃಷ್ಟ್ವಾತಮಾಗತಂಪಾರ್ಥಾ ಮುಕುಂದಮಖಿಲೇಶ್ವರಮ್ । ಉತ್ತ
ಸ್ಥುರ್ಯುಗಪದ್ವೀರಾಃ ಪ್ರಾಣಾಮುಖ್ಯಮಿವಾಗತಮ್ ॥೨॥ಪರಿಷ್ವಜ್ಯಾಚ್ಯುತಂವೀರಾ ಅಂಗಸಂಗಹತೈ
ನಸಃ । ಸಾನುರಾಗಸ್ಮಿತಂವಕ್ತ್ರಂವೀಕ್ಷ್ಯತಸ್ಯಮುದಂಯಯುಃ॥೩॥ಯುಧಿಷ್ಠಿರಸ್ಯ ಭೀಮಸ್ಯ
ಕೃತ್ವಾಪಾದಾಭಿವಂದನಮ್ । ಫಲ್ಗುನಂಪರಿರಭ್ಯಾಥಯಮಾಭ್ಯಾಂಚಾಭಿವಾದಿತಃ ॥೪॥ ಪರಮಾಸನ

೫೮ನೆಯ ಅಧ್ಯಾಯದ ಪ್ರತಿಪದಟೀಕೆ

ಏಕದಾ-ಒಂದುಸಮಯದಲ್ಲಿ, ಪ್ರತೀತಾನ್-[ಅರಗಿನಮನೆಯಲ್ಲಿ ನಷ್ಟರಾಗಿಹೋಗಿದ್ದುದಾಗಿ ಪದೀರ್ಲ್ಯಾಣದಲ್ಲಿ] ಪ್ರಸಿ
ದ್ಧರಾಗಿ ಒಂದಿರುವ, ಪಾಂಡವಾನ್-ಪಾಂಡುಪುತ್ರರನ್ನು, ದ್ರಷ್ಟುಂ-ನೋಡಲೋಸುಗ ಶ್ರೀಮಾನ್-ಸಂಪತ್ತುಳ್ಳ, ಪುರುಷೋ
ತ್ತಮಃ-ಪರಮಾತ್ಮನಾದ ಕೃಷ್ಣನು ಯುಯುಧಾನಾದಿಭಿಃ-ಸಾತ್ಯಕಿಯೇ ಮೊದಲಾದವರಿಂದ, ವೃತಃ-ಒಡಗೊಳ್ಳಲ್ಪಟ್ಟವನಾಗಿ,
ಇಂದ್ರಪ್ರಸ್ಥಂ-ಇಂದ್ರಪ್ರಸ್ಥನಗರವಂಕುರಿತು, ಗತಃ-ಹೋದವನಾದನು ॥೧॥ ವೀರಾಃ ಶೂರರಾದ ಪಾರ್ಥಾಃ-ಕುಂತಿಯ
ಪುತ್ರರು ಅಖಿಲೇಶ್ವರಂ-ಸರ್ವನಿಯಾಮಕನಾದ, ತಂ ಮುಕುಂದಂ-ಆ ಕೃಷ್ಣನನ್ನು ಆಗತಂ-ಬಂದವನನ್ನಾಗಿ, ದೃಷ್ಟ್ವಾ-
ನೋಡಿ, ಪ್ರಾಣಾಃ-ಇಂದ್ರಿಯಂಗಳು, ಆಗತಂ-ಬಂದಂಥಾ, ಮುಖ್ಯಮಿವ ಶರೀರವೃತ್ತಿಯುಳ್ಳ ಪ್ರಾಣವನ್ನು ಹೇಗೋಹಾಗೆ,
ಯುಗಪತ್-ಏಕಕಾಲದಲ್ಲಿ, ಉತ್ತಸ್ಥುಃ-ಎದ್ದುನಿಂತು ಉಪಚರಿಸಿದರು ॥೨॥ ವೀರಾಃ-ಶೂರರಾದ ಪಾಂಡವರು, ಅಚ್ಯುತಂ-ಕೃ
ಷ್ಣನನ್ನು, ಪರಿಷ್ವಜ್ಯ-ಅಪ್ಪಿಕೊಂಡು, ಅಂಗಸಂಗಹತೈನಸಃ-ಮೈಸೋಂಕಿದ್ದರಿಂದ ಪರಿಹರಿಸಲ್ಪಟ್ಟ ಪಾಪವುಳ್ಳವರಾಗಿ,
ತಸ್ಯ-ಆ ಕೃಷ್ಣನ, ಸಾನುರಾಗಸ್ಮಿತಂ-ಪ್ರೇಮದಿಂದಲೂ ಕಿರುನಗೆಯಿಂದಲೂ ಕೂಡಿರುವ, ವಕ್ತ್ರಂ-ಮುಖವನ್ನು; ವೀಕ್ಷ್ಯ-
ನೋಡಿ, ಮುದಂ-ಸಂತೋಷವನ್ನು, ಯಯುಃ-ಹೊಂದಿದರು ॥೩॥ ಯುಧಿಷ್ಠಿರಸ್ಯ-ಧರ್ಮಜನ, ಭೀಮಸ್ಯ-ವೃಕೋದರನ,
ಪಾದಾಭಿವಂದನಂ-ಕಾಲುಗಳಿಗೆನಮಸ್ಕಾರವನ್ನು, ಕೃತ್ವಾ-ಮಾಡಿ, ಫಲ್ಗುನಂ-ಅರ್ಜುನನನ್ನು, ಪರಿರಭ್ಯ-ಅಪ್ಪಿಕೊಂಡು ಅಥ-
ಆ ಬಳಿಕ, ಯಮಾಭ್ಯಾಂಚ-ಅವಳಿಯಾದ ನಕುಲಸಹದೇವರಿಂದಲೂ, ಅಭಿವಾದಿತಃ-ನಮಸ್ಕರಿಸಲ್ಪಟ್ಟವನಾದನು ॥೪॥ ನವೋ
ಢಾ-ಹೊಸತಾಗಿಮದುವೆಯಾದವಳಾದ್ದರಿಂದ, ವ್ರೀಡಿತಾ-ನಾಚಿಕೆಯುಂಟಾದವಳಾದ, ಅನಿಂದಿತಾ-ಪರಿಶುದ್ಧಳಾದ, ಕೃಷ್ಣಾ-
ದ್ರೌಪದಿಯು, ಕಿಂಚಿತ್-ಕೊಂಚ, ಶನೈಃ-ಮೆಲ್ಲನೆ, ಏತ್ಯ-ಬಂದು, ಪರಮಾಸನಂ-ಉತ್ತಮಪೀಠದಲ್ಲಿ, ಆಸೀನಂ-ಕುಳ್ಳಿರ್ದ,

---

೫೮ನೆಯ ಅಧ್ಯಾಯವು.

ಶ್ರೀಧರೀಯಶ್ಲೋಕಃ ॥ ಅಷ್ಟಪಂಚಾಶತ್ತಮೇತು ಕೃಷ್ಣಃಪಂಚಕರೇಗ್ರಹೀತ್ । ಕಾಳಿಂದೀಂಮಿತ್ರ
ವಿಂದಾಂಚ ಸತ್ಯಾಂಭದ್ರಾಂಚಲಕ್ಷಣಾಂ ॥ ‡ ॥ಟೀ॥ ಐವತ್ತೆಂಟನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ಕಾಳಿಂ
ದೀದೇವಿಯನ್ನೂ ಮಿತ್ರವಿಂದಾದೇವಿಯನ್ನೂ ಸತ್ಯಾದೇವಿಯನ್ನೂ ಭದ್ರಾದೇವಿಯನ್ನೂ ಲಕ್ಷಣಾದೇವಿಯ
ನ್ನೂ, ಈಯೈದು ಮಂದಿಯನ್ನೂ ಪಾಣಿಗ್ರಹಣವಂ ಮಾಡಿಕೊಂಡನೆಂಬ ಅರ್ಥವ ಶುಕಾಚಾರ್ಯನು ಪರೀ
ಕ್ಷಿದ್ರಾಯನಂ ಕುರಿತು ನಿರೂಪಿಸುವನದೆಂತೆನೆ,

ಎಲೈಅರಸೇ! ಒಂದುಸಮಯದಲ್ಲಿ ಶ್ರೀಕೃಷ್ಣನು ಪಾಂಡವರಂ ನೋಡಲೋಸುಗ ಸಾತ್ಯಕಿ ಮೊದ
ಲಾದ ಸ್ವಜನರಿಂದ ಸಮೇತನಾಗಿ ಇಂದ್ರಪ್ರಸ್ಥಪುರಕ್ಕೆ ತೆರಳಿಹೋದನು ॥೧॥ ಸರ್ವೇಶ್ವರನಾದ ಮುಕುಂದ
ನಂನೋಡಿ ಪಾಂಡವರು ಇಂದ್ರಿಯಂಗಳು ಪ್ರಾಣವ ನಿದಿರುಗೊಂಡಂತೆ ಏಕಕಾಲದಲ್ಲಿ ಪ್ರತ್ಯುತ್ಥಾನಾರ್ಥವಾಗಿ
ಎದ್ದು ಇದಿರಾಗಿ ಬಂದರು॥೨॥ವೀರರಾದ ಪಾಂಡವರು ಅಚ್ಯುತನನ್ನು ಆಲಿಂಗನಂ ಗೆಯ್ದು ಭಗವಂತನ ಶರೀ
ರ ಸ್ಪರ್ಶದಿಂದ ಪರಿಧೃತಂಗಳಾದ ಸಮಸ್ತ ಪಾಪಗಳುಳ್ಳವರಾಗಿ ಅನುರಾಗ ಯುಕ್ತವಾದ ಮುಗುಳುನಗೆ
ಯುಳ್ಳ ಭಗವಂತನ ಮುಖವಂನೋಡಿ ಸಂತೋಷವ ನೆಯ್ದಿದರು ॥೩॥ ಶ್ರೀಕೃಷ್ಣನು ಯುಧಿಷ್ಠಿರನಂ ಭೀ
ಮಸೇನನಂ ಸಹ ನಮಸ್ಕರಿಸಿದನು. ಅರ್ಜುನನನ್ನೂ ಆಲಿಂಗನಂ ಗೆಯ್ದನು. ನಕುಲ ಸಹದೇವರಿಂದ ನಮ
ಸ್ಕೃತನಾದನು ॥೪॥ಉತ್ಕೃಷ್ಟವಾದ ಪೀಠದಲ್ಲಿ ಕುಳಿತಿರುವ ಶ್ರೀಕೃಷ್ಣನಂ ನಿರ್ದೋಷಳಾದ ನವೋಢೆ

ಮಾಸೀನಂಕೃಷ್ಣಾಕೃಷ್ಣಮಸಿಂದತಾ | ನವೋಢಾವ್ರೀಡಿತಾಕಿಂಚಿಚ್ಛನೈರೇತ್ಯಾಭ್ಯವಂದತ ||೫|| ತಥೈವಸಾತ್ಯಕಿಃಪಾರ್ಥೈಃಪೂಜಿತಶ್ಚಾಭಿವಂದಿತಃ | ನಿಷಸಾದಾಸನೇಽನ್ಯೇಚಪೂಜಿತಾಃಪರ್ಯುಪಾಸತ||೬||ಪೃಥಾಂಸಮಾಗತ್ಯಕೃತಾಭಿವಾದನಸ್ತಯಾತಿಹಾರ್ದಾರ್ದ್ರದೃಶಾಭಿರಂಭಿತಃ |ಆಪೃಷ್ಟವಾಂಸ್ತಾಂಕುಶಲಂಸಹಸ್ನುಷಾಂಪಿತೃಷ್ವಸಾರಂ ಪರಿಪೃಷ್ಟಬಾಂಧವಃ ||೭|| ತಮಾಹಪ್ರೇಮವೈಕ್ಲಬ್ಯರುದ್ಧಕಂಠಾಶ್ರುಲೋಚನಾ | ಸ್ಮರಂತೀತಾನ್ಬಹೂನ್ಕ್ಲೇಶಾನ್ಕ್ಲೇಶಾಪಾಯಾತ್ಮದರ್ಶನಂ ||೮|| ತದೈವಕುಶಲಂನೋಽಭೂತ್ಸನಾಥಾಸ್ತೇಕೃತಾವಯಂ | ಜ್ಞಾತೀನ್ನಃಸ್ಮರತಾಕೃಷ್ಣಭ್ರಾತಾಮೇಪ್ರೇಷಿತಸ್ತ್ವಯಾ||೯||ನತೇಽಸ್ತಿಸ್ವಪರಭ್ರಾಂತಿರ್ವಿಶ್ವಸ್ಯಸುಹೃದಾತ್ಮನಃ | ತಥಾಪಿಸ್ಮರತಾಂಶಶ್ವತ್ಕ್ಲೇಶಾನ್ಹಂ

ಕೃಷ್ಣಂ ಶ್ರೀಹರಿಯನ್ನು ಅಭ್ಯವಂದತ-ನಮಸ್ಕರಿಸಿದಳು ||೫|| ತಥೈವ-ಹಾಗೆಯೇ, ಸಾತ್ಯಕಿಃ-ಯುಯುಧಾನನು, ಪಾರ್ಥೈಃ ಪಾಂಡವರಿಂದ, ಪೂಜಿತ -ಉಪಚರಿಸಲ್ಪಟ್ಟವನಾಗಿಯೂ, ಅಭಿವಂದಿತಃ-ನಮಸ್ಕರಿಸಲ್ಪಟ್ಟವನಾಗಿ ಆಸನೇ-ಪೀಠದ ಮೇಲೆ ಗೆಯಲ್ಲಿ. ನಿಷಸಾದ-ಕುಳಿತನು ಅನ್ಯೇಚ-ಇತರರೂಕೂಡ ಪೂಜಿತಾಃ-ಸನ್ಮಾನಿಸಲ್ಪಟ್ಟವರಾಗಿ, ಪರ್ಯುಪಾಸತ-ಕೃಷ್ಣನಬಳಿಯಲ್ಲಿ ಸುತ್ತಲೂ ಕುಳಿತರು ||೬|| ಪೃಥಾಂ-ಕುಂತೀದೇವಿಯನ್ನು, ಸಮಾಗತ್ಯ-ಬಳಿಗೆ ಬಂದು, ಕೃತಾಭಿವಾದನಃ-ಮಾಡಲ್ಪಟ್ಟ ನಮಸ್ಕಾರವುಳ್ಳವನಾಗಿ, ಅತಿಹಾರ್ದಾರ್ದ್ರದೃಶಾ-ಸ್ನೇಹದಿಂ ನೀರುತುಂಬಿದ ಕಣ್ಣುಗಳುಳ್ಳ, ತಯಾ-ಆ ಕುಂತಿಯಿಂದ, ಅಭಿರಂಭಿತಃ-ಅಪ್ಪಿಕೊಳ್ಳಲ್ಪಟ್ಟವನಾಗಿಯೂ, ಪರಿಪೃಷ್ಟಬಾಂಧವಃ-ಕೇಳಲ್ಪಟ್ಟ ನಂಟರ ಕ್ಷೇಮವುಳ್ಳವನಾಗಿಯೂ ಸಹಸ್ನುಷಾಂ-ಸೊಸೆಯುಳ್ಳವಳಾದ, ಪಿತೃಷ್ವಸಾರಂ-ಸೋದರತ್ತೆಯಾದ, ತಾಂ-ಆ ಕುಂತಿಯನ್ನು, ಕುಶಲಂಆಪೃಷ್ಟವಾನ್-ಕ್ಷೇಮವಂ ಬೆಸಗೊಂಡನು ||೭|| ಪ್ರೇಮ. ಕಂಠಾ-ಪ್ರೇಮಪ್ರಯುಕ್ತದಿಂದಲೂ ವೈಕ್ಲಬ್ಯ-ದುಃಖದಿಂದಲೂ, ರುದ್ಧ-ಬಿಗಿಯಲ್ಪಟ್ಟ, ಕಂಠಾ-ಕತ್ತುಳ್ಳವಳೂ, ಅಶ್ರುಲೋಚನಾ-ನೀರುತುಂಬಿದ ಕಣ್ಣುಳ್ಳವಳೂ ಆಗಿ ತಾನ್ ಬಹೂನ್ ಕ್ಲೇಶಾನ್-ಆ ಹಲವು ಕಷ್ಟಗಳನ್ನು, ಸ್ಮರಂತೀ-ನೆನಪುಗೊಳ್ಳುವಳಾಗಿ, ಕ್ಲೇಶಾಪಾಯಾತ್ಮದರ್ಶನಂ-ದುಃಖಗಳನ್ನು ಹೋಗಲಾಡಿಸುವ ತನ್ನ ದರ್ಶನವುಳ್ಳ, ತಂ-ಆ ಕೃಷ್ಣನಂಕುರಿತು, ಆಹ-ನುಡಿದಳು ||೮|| ಕೃಷ್ಣ-ವಾಸುದೇವನೇ! ಜ್ಞಾತೀನ್ ನಃ-ನಂಟರಾದ ನಮ್ಮನ್ನು, ಸ್ಮರತಾ-ನೆನಪುಗೊಳ್ಳುವನಾದ, ತ್ವಯಾ-ನಿನ್ನಿಂದ, ಮೇ-ನನ್ನ, ಭ್ರಾತಾ-ಅಣ್ಣನು, ಪ್ರೇಷಿತಃ-ಕಳುಹಿಸಲ್ಪಟ್ಟನು. ತದೈವ-ಆಗಲೇ, ನಃ-ನಮಗೆ, ಕುಶಲಂ-ಕ್ಷೇಮವು, ಅಭೂತ್-ಆಯಿತು, ತೇ-ನಿನ್ನಿಂದ, ವಯಂ-ನಾವು, ಸನಾಥಾಃ-ಒಡೆಯನಿಂ ಸಹಿತರಾದವರಾಗಿ, ಕೃತಾಃ-ಮಾಡಲ್ಪಟ್ಟೆವು ||೯|| ವಿಶ್ವಸ್ಯ-ಪ್ರಪಂಚಕ್ಕೆ, ಸುಹೃದಾತ್ಮನಃ-ಮಿತ್ರನೂ ಸ್ವರೂಪಾತ್ಮನೂ ಆದ, ತೇ-ನಿನಗೆ ಸ್ವಪರಭ್ರಾಂತಿಃ-ತನ್ನವರು ಹೆರವರುಎಂಬ ಭೇದಭ್ರಮವು, ನಾಸ್ತಿ-ಇಲ್ಲವು, ತಥಾಪಿ-ಹಾಗೆ ಆದ್ಯೈತಿಯಾವರೂ, ಸ್ಮರತಾಂ-ನಿನ್ನಂ ನೆನಪುಗೊಳ್ಳುವವರ, ಹೃದಿ-ಮನಸ್ಸಿನಲ್ಲಿ, ಸ್ಥಿತಃ-ಇರುವವನಾಗಿ, ಕ್ಲೇಶಾನ್-ದುಃಖಗಳನ್ನು, ಶಶ್ವ

---

ಯಾದ ದ್ರೌಪದಿಯು ಸ್ವಲ್ಪಲಜ್ಜಿತಳಾಗಿ ಮೆಲ್ಲನೆಬಂದು ನಮಸ್ಕರಿಸಿದಳು ||೫||ಸಾತ್ಯಕಿಯು ಪಾಂಡವರಿಂದ ಪೂಜಿತನಾಗಿ ಉತ್ತಮವಾದ ಪೀಠದಲ್ಲಿ ಕುಳಿತನು. ಮಿಗಿಲಾದವರು ಅದೇರೀತಿಯಲ್ಲಿ ಪೂಜಿತರಾಗಿ ಪೀಠಂಗಳಲ್ಲಿ ಕುಳಿತರು ||೬||ಶ್ರೀಕೃಷ್ಣನು ಸೋದರತ್ತೆಯಾದ ಕುಂತಿಯುನೆಯ್ದಿ ನಮಸ್ಕರಿಸಿ ಅತಿಪ್ರೇಮಾರ್ದ್ರದೃಷ್ಟಿಯುಳ್ಳ ಆಕುಂತಿಯಿಂದ ನೋಡಲ್ಪಟ್ಟವನಾಗಿ ಕುಂತಿಯಿಂದ ಕೇಳಲ್ಪಟ್ಟ ಕುಶಲಪ್ರಶ್ನಕ್ಕೆ ಉತ್ತರವನ್ನಿತ್ತು ದ್ರೌಪದೀ ಸಮೇತಳಾದ ಕುಂತಿಯಂ ಕುರಿತು ಕುಶಲ ಪ್ರಶ್ನೆಯು ಮಾಡಿದನು ||೭|| ಆಕುಂತಿಯು ಪ್ರೇಮದಿಂದಲೂ ದುಃಖದಿಂದಲೂ ತಡೆಯಲ್ಪಟ್ಟ ಕಂಠಸ್ವರವುಳ್ಳವಳಾಗಿ ಬಾಷ್ಪಪೂರ್ಣ ನೇತ್ರಳಾಗಿ ತನಗೂ ತನ್ನ ಪುತ್ರರಿಗೂ ಪೂರ್ವದಲ್ಲಿ ಪ್ರಾಪ್ತಂಗಳಾದ ಕ್ಲೇಶಂಗಳಂ ಸ್ಮರಿಸಿಕೊಂಡು ಕ್ಲೇಶ ಪರಿಹಾರಕವಾದ ದರ್ಶನವುಳ್ಳ ಶ್ರೀಕೃಷ್ಣನಂ ಕುರಿತು ನುಡಿದಳು ||೮|| ಅದೆಂತೆನೆ-- ಎಲೈ, ಅಪ್ಪಾ ಕೃಷ್ಣನೇ! ನನ್ನ ತಮ್ಮನಾದ ಅಕ್ರೂರನಂ ನಮ್ಮಯೋಗ ಕ್ಷೇಮವಂ ವಿಚಾರಿಸಲೋಸುಗ ಯಾವಾಗ ನೀನು ಕಳುಹಿಸಿ ನಮಗೆ ಸುಖವನ್ನುಂಟುಮಾಡಿದೆಯೋ ಆಗಲೇ ನಮಗೆ ಕ್ಷೇಮ ವುಂಟಾಯಿತು ||೯|| ಎಲೈ ಶ್ರೀಕೃಷ್ಣನೇ! ಪರಮಾತ್ಮನಾದನಿನಗೆ ಪರಜನವೂ ಯಿಲ್ಲ, ಸ್ವಜನವೂ ಯಿಲ್ಲ, ಸರ್ವಲೋಕಂಗಳಿಗೂ ಅಂತರಾತ್ಮನಾದವನೂ ನೀನೇ, ಮಿತ್ರನಾದ

ಸಿಹೃದಿಸ್ಥಿತಃ ॥೧೦॥ ಯುಧಿಷ್ಠಿರಃ॥ ಕಿಂ ನ ಆಚರಿತಂ ಶ್ರೇಯೋ ನ ವೇದಾಹಮಧೀಶ್ವರ । ಯೋಗೇಶ್ವರಾಣಾಂ
ದುರ್ದರ್ಶೋ ಯನ್ನೋ ದೃಷ್ಟಃ ಕುಮೇಧಸಾಂ ॥೧೧॥ ಇತಿ ವೈ ವಾರ್ಷಿಕಾನ್ ಮಾಸಾನ್ ರಾಜ್ಞಾ ಸೋಽಭ್ಯ
ರ್ಥಿತಃ ಸುಖಂ । ಜನಯನ್ನಯನಾನಂದಮಿಂದ್ರಪ್ರಸ್ಥೌಕಸಾಂ ವಿಭುಃ ॥೧೨॥ ಏಕದಾ ರಥಮಾರು
ಹ್ಯ ವಿಜಯೋ ವಾನರಧ್ವಜಃ । ಗಾಂಡೀವಂ ಧನುರಾದಾಯ ತೂಣೌ ಚಾಕ್ಷಯಸಾಯಕೌ ॥೧೩॥ ಸಾಕಂ ಕೃ
ಷ್ಣೇನ ಸನ್ನದ್ಧೋ ವಿಹರ್ತುಂ ವಿಪಿನಂ ಮಹತ್ । ಬಹುವ್ಯಾಳಮೃಗಾಕೀರ್ಣಂ ಪ್ರಾವಿಶತ್ ಪರವೀರಹಾ ॥೧೪॥
ತತ್ರಾವಿಧ್ಯಚ್ಛರೈರ್ವ್ಯಾಘ್ರಾನ್ ಸೂಕರಾನ್ ಮಹಿಷಾನ್ ರುರೂನ್ । ಶರಭಾನ್ ಗವಯಾನ್ ಖಡ್ಗಾನ್ ಹ

---

ತ್-ಬಾರಿಬಾರಿಗೂ, ಹಂಸಿ-ನಾಶಗೊಳಿಸುವಿ ॥೧೦॥ (ಯುಧಿಷ್ಠಿರವಚನವು.) ಯೋಗೇಶ್ವರಾಣಾಂ--ಧ್ಯಾನಾದಿ ಯೋಗಸಿ
ದ್ಧರಿಗೂ, ದುರ್ದರ್ಶಃ-ಪ್ರಯಾಸದಿಂದಲೂ ನೋಡಲಶಕ್ಯನಾದ ಅಧೀಶ್ವರಃ-ಲೋಕೇಶ್ವರರಿಗೆ ಈಶ್ವರನಾದ ನೀನು, ಯ
ತ್-ಯಾವ ಕಾರಣಪದೆಸೆಯಿಂದ, ಕುಮೇಧಸಾಂ--ಕುತ್ಸಿತಬುದ್ಧಿಯುಳ್ಳವರಾದ, [ವಿಷಯಾಸಕ್ತ ಚಿತ್ತರಾದ,] ನಃ--ನಮ್ಮಿಂದ,
ದೃಷ್ಟಃ-ನೋಡಲ್ಪಟ್ಟವನಾದೆಯೋ, ತತ್ ಆ ಕಾರಣಪದೆಸೆಯಿಂದ, ಕಿಂ ಶ್ರೇಯಃ-ಯಾವ ಸುಕೃತವು, ನಃ-ನಮ್ಮಿಂದ,
ಆಚರಿತಂ-ಅನುಷ್ಠಿಸಲ್ಪಟ್ಟಿರುವುದೋ, ಅಹಂ-ನಾನು, ನವೇದ-ಅದನ್ನರಿಯೆನು ॥೧೧॥ ಇತಿ-ಹೀಗೆ ರಾಜ್ಞಾ-ಧರ್ಮರಾ
ಯನಿಂದ, ಅಭ್ಯರ್ಥಿತಃ-ಪ್ರಾರ್ಥಿಸಲ್ಪಟ್ಟ ಸವಿಭುಃ-ಆ ಸ್ವತಂತ್ರನಾದ ಕೃಷ್ಣನು, ಇಂದ್ರಪ್ರಸ್ಥೌಕಸಾಂ-ಇಂದ್ರ
ಪ್ರಸ್ಥನಗರವಾಸಿಗಳಿಗೆ, ವಾರ್ಷಿಕಾನ್ಮಾಸಾನ್-ಮಳೆಗಾಲದ ನಾಲ್ಕುತಿಂಗಳಲ್ಲಿ, ನಯನಾನಂದಂ-ಕಂಗಳಿಗೆ ಹಬ್ಬವನ್ನು, ಜನ
ಯನ್-ಹುಟ್ಟಿಸುವವನಾಗಿ, ಸುಖಂ-ಸಂತೋಷವಾಗಿದ್ದನು ॥೧೨॥ ಏಕದಾ-ಒಂದುಸಮಯದಲ್ಲಿ, ವಿಜಯಃ-ಅರ್ಜುನನು, ವಾ
ನರಧ್ವಜಃ-ಕಪಿಕೇತನನಾಗಿ, ರಥಂ-ತೇರನ್ನು, ಆರುಹ್ಯ-ಏರಿ, ಗಾಂಡೀವಂಧನುಃ-ಗಾಂಡೀವವೆಂಬ ಬಿಲ್ಲನ್ನು, ಅಕ್ಷಯಸಾಯ
ಕೌ-ಕೊರತೆಗೊಳ್ಳದಬಾಣಂಗಳುಳ್ಳ, ತೂಣೀಚ-ಬತ್ತಳಿಕೆಗಳನ್ನೂ, ಆದಾಯ-ತೆಗೆದುಕೊಂಡು, ॥೧೩॥ ಪರವೀರಹಾ-ಶತ್ರು
ಶೂರರನ್ನು ಸಂಹರಿಸುವನಾದ್ದರಿಂದ ಕೃಷ್ಣೇನಸಾಕಂ-ಕೃಷ್ಣನೊಡನೆ, ಸನ್ನದ್ಧಃ-ಬೇಂಟೆಗೆತಕ್ಕಂತೆ ಸಿದ್ಧನಾಗಿ, ವಿಹ
ರ್ತುಂ-ಕ್ರೀಡಿಸಲೋಸುಗ ಬಹುವ್ಯಾಳಮೃಗಾಕೀರ್ಣಂ-ಅನೇಕಸರ್ಪಗಳಿಂದಲೂ ದುಷ್ಟಗಜಂಗಳಿಂದಲೂ ಕ್ಷುದ್ರಜಂತುಗ
ಳಿಂದಲೂ ಮೃಗಗಳಿಂದಲೂ ವ್ಯಾಪ್ತವಾದ, ಮಹತ್ವಿಪಿನಂ-ಹೆಗ್ಗಾಡನ್ನು, ಪ್ರಾವಿಶತ್-ಹೊಕ್ಕನು ॥೧೪॥ ತತ್ರ-ಅಲ್ಲಿ, ವ್ಯಾ
ಘ್ರಾನ್-ಹೆಬ್ಬುಲಿಗಳನ್ನೂ, ಸೂಕರಾನ್-ಕಾಡುಹಂದಿಗಳನ್ನೂ, ಮಹಿಷಾನ್-ಕಾಡುಕೋಣಗಳನ್ನೂ, ರುರೂನ್-ಜಿಂಕೆಗಳ
ನ್ನೂ, ಶರಭಾನ್-ಸಿಂಹವಿರೋಧಿಗಳನ್ನೂ, ಅಥವಾ ಸಾಳುವದ ಹಕ್ಕಿಗಳನ್ನೂ, ಗವಯಾನ್-ಗೋವುಗಳಂತಿರ್ಪ ಗವಯಮೃ
ಗಗಳನ್ನೂ, ಖಡ್ಗಾನ್-ಗೇಂಡಾಮೃಗಗಳನ್ನೂ, ಹರಿಣಾನ್-ದುಪ್ಪಿಗಳನ್ನೂ, ಶಶಶಲ್ಯಕಾನ್-ಮೊಲಗಳನ್ನೂ ಮುಳ್ಳುಹಂದಿಗಳ
ನ್ನೂ, ಶರೈಃ-ಬಾಣಂಗಳಿಂದ, ಅವಿಧ್ಯತ್-ಹೊಡೆದುವೇಧಿಸಿದನು ॥೧೫॥ ಪರ್ವಣಿ-ಯಾಗಕಾಲವು, ಉಪಾಗತೇಸತಿ-ಹತ್ತಿರಕೆಬಂದ

---

ವನೂ ನೀನೇ, ಆದ್ದರಿಂದ ನಿನ್ನಂ ಸ್ಮರಿಸುವಜನರಿಗೆ ಅವರ ಹೃದಯಂಗಳಲ್ಲಿಯೇ ಇದ್ದುಕೊಂಡು ಶುಭವನ್ನುಂ
ಟುಮಾಡುತ್ತೀಯೆ ॥೧೦॥ (ಅವರ ಸರ್ವಕ್ಲೇಶಂಗಳಂಪರಿಹರಿಸುತ್ತೀಯೆ ಯೆಂದು ಕಾಂತಿಯು ಮಾತನಾಡಲಾಗಿ
ಧರ್ಮರಾಯನು ಶ್ರೀಕೃಷ್ಣನಂ ಕುರಿತು ನುಡಿದನು-) ಎಲೈ ಈಶ್ವರನೇ! ನಮ್ಮಿಂದ ಪೂರ್ವದಲ್ಲಿ ಯಾವಸು
ಕೃತವು ಆಚರಿಸಲ್ಪಟ್ಟಿತ್ತೋ ನಾವರಿಯೆವು; ಯೋಗೇಶ್ವರರಿಗೂ ಅಗೋಚರನಾದ ನೀನು ವಿಷಯಾಸಕ್ತವಾ
ದ ದುರ್ಬುದ್ಧಿಯುಳ್ಳ ನಮಗೆ ಪ್ರಸನ್ನನಾಗಿ ನಮ್ಮ ನೇತ್ರಗಳಂ ಸಂತೋಷಪಡಿಸುತ್ತೀಯೆ ॥೧೧॥ ಎಂದುಹೇಳಿ
ವರ್ಷಕಾಲ ನಾಲ್ಕುತಿಂಗಳೂ ಇಲ್ಲಿಯೇ ವಾಸವಂ ಮಾಡೆಂದು ಪ್ರಾರ್ಥಿಸುತಲಿರುವ ಧರ್ಮರಾಯನ ಪ್ರಾರ್ಥ
ನೆಯಿಂದ ಜನರಿಗೆ ನೇತ್ರೋತ್ಸವವನ್ನುಂಟುಮಾಡಿಕೊಂಡು ಆಯಿಂದ್ರಪ್ರಸ್ಥಪುರದಲ್ಲಿಯೇ ವಾಸಮಂ ಮಾಡಿ
ದನು ॥೧೨॥ ಒಂದುಸಮಯದಲ್ಲಿ ಅರ್ಜುನನು ವಾನರಧ್ವಜವುಳ್ಳ ರಥವನ್ನೇರಿಕೊಂಡು ಗಾಂಡೀವಧನುಸ್ಸಂ ಅಕ್ಷ
ಯಂಗಳಾದ ಬಾಣಂಗಳಿಂದ ಪೂರ್ಣಗಳಾದ ಬತ್ತಳಿಕೆಗಳಂ ಸಹ ಧರಿಸಿಕೊಂಡು ಶ್ರೀಕೃಷ್ಣನೊಡನೆ ಸಹಿ
ತನಾಗಿ ॥೧೩॥ ವಿಹರಿಸಲೋಸುಗ ಅನೇಕ ದುಷ್ಟಮೃಗಂಗಳಿಂ ಯುಕ್ತವಾದ ವಿಜನವಾದ ಮಹಾರಣ್ಯಕ್ಕೆ
ತೆರಳಿಹೋದನು ॥೧೪॥ ಅರ್ಜುನನು ಆಯರಣ್ಯದಲ್ಲಿ ಬಾಣಂಗಳಿಂದ ವ್ಯಾಘ್ರಂಗಳಂ ಮಹಿಷಂಗಳಂ ದುಮ್ಮ
ಗಂಗಳಂ ಶಲಭಗಳು ಗವಯಗಳಂ ಖಡ್ಗಮೃಗಗಳಂ ಹುಲ್ಲೆಗಳಂ ಮೊಲಗಳಂ ಶಲ್ಯಮೃಗಂಗಳಂಸಹ ॥೧೫॥

ದೇಹಸ್ಥಾಘಸಂಕ್ಷಯಃ ||೨೧|| ಕಾಳಿಂದೀತಿ ಸಮಾಖ್ಯಾತಾ ವಸಾಮಿ ಯಮುನಾಜಲೇ | ನಿರ್ಮಿತೇ ಭವನೇ ಪಿತ್ರಾ ಯಾವದಚ್ಯುತದರ್ಶನಮ್ ||೨೨|| ತಥಾವದದ್ಗುಡಾಕೇಶೋ ವಾಸುದೇವಾಯ ಸೋಽಪಿ ತಾಮ್ | ರಥಮಾರೋಪ್ಯ ತದ್ವಿದ್ವಾನ್ ಧರ್ಮರಾಜಮುಪಾಗಮತ್ ||೨೩|| ಯದೈವ ಕೃಷ್ಣಃ ಸಂದಿಷ್ಟಃ ಪಾರ್ಥಾನಾಂ ಪರಮಾದ್ಭುತಮ್ | ಕಾರಯಾಮಾಸ ನಗರಂ ವಿಚಿತ್ರಂ ವಿಶ್ವಕರ್ಮಣಾ ||೨೪|| ಭಗವಾಂಸ್ತತ್ರ ನಿವಸನ್ ಸ್ವಾನಾಂ ಪ್ರಿಯಚಿಕೀರ್ಷಯಾ | ಅಗ್ನಯೇ ಖಾಂಡವಂ ದಾತುಮರ್ಜುನಸ್ಯಾಸ ಸಾರಥಿಃ ||೨೫|| ಸೋಽಗ್ನಿಸ್ತುಷ್ಟೋ ಧನುರದಾದ್ಧಯಾನ್ ಶ್ವೇತಾನ್ ರಥಂ ನೃಪ | ಅರ್ಜುನಾಯಾಕ್ಷಯೌ ತೂಣೌ ವರ್ಮ ಚಾಭೇದ್ಯಮಸ್ತ್ರಿಭಿಃ ||೨೬|| ಮಯಶ್ಚ ಮೋಚಿತೋ ವಹ್ನೇಃ ಸಭಾಂ ಸಖ್ಯ ಉಪಾಹರತ್ | ಯಸ್ಮಿನ್ ದುರ್ಯೋಧನಸ್ಯಾಸೀ

---

ಮೋಕ್ಷಪ್ರದಾಯಕನಾದ ಜಗನ್ನಾಥ ಆ ಕೃಷ್ಣನು ಮೇ-ನನ್ನ ವಿಷಯದಲ್ಲಿ ತುಷ್ಯತಾಂ-ಸಂತೋಷಿಸಲಿ ||೨೧|| ಕಾಳಿಂದೀತಿ-ಕಾಳಿಂದಿಯೆಂದು, ಸಮಾಖ್ಯಾತಾ-ಹೆಸರಿಸಲ್ಪಟ್ಟವಳಾದ ನಾನು, ಪಿತ್ರಾ-ತಂದೆಯಾದ ಸೂರ್ಯನಿಂದ, ಯಮುನಾಜಲೇ-ಯಮುನಾನದಿಯ ನೀರಿನಲ್ಲಿ ನಿರ್ಮಿತೇ-ಸೃಷ್ಟಿಸಲ್ಪಟ್ಟಿರುವ, ಭವನೇ-ಮನೆಯಲ್ಲಿ, ಯಾವದಚ್ಯುತದರ್ಶನಂ-ಕೃಷ್ಣನನ್ನು ನೋಡುವವರೆಗೂ ವಸಾಮಿ-ವಾಸಂಗೆಯ್ಯುತ್ತಿರುವೆನು ||೨೨|| ಗುಡಾಕೇಶಃ-ಗುಂಗುರುಕೂದಲುಳ್ಳ ಅರ್ಜುನನು, ತಥಾ-ಆಕೆ ಹೇಳಿದಂತೆ ವಾಸುದೇವಾಯ ಕೃಷ್ಣನಿಗೆ, ಅವದತ್-ಹೇಳಿದನು, ಸೋಽಪಿ-ಆ ಕೃಷ್ಣನೂ ಕೂಡ, ತದ್ವಿದ್ವಾನ್-ಮುಂಚೆಯೇ ಆ ವಿಷಯವನ್ನು ಬಲ್ಲವನಾದ್ದರಿಂದ, ತಾಂ-ಆ ಕಾಳಿಂದೀದೇವಿಯನ್ನು, ರಥಮಾರೋಪ್ಯ-ತೇರನೇರಿಸಿಕೊಂಡು, ಧರ್ಮರಾಜಂ-ಯುಧಿಷ್ಠಿರನ, ಉಪಾಗಮತ್-ಬಳಿಗೆ ಬಂದನು ||೨೩|| ಯದೈವ-ಯಾವಾಗಲೇ, ಸಂದಿಷ್ಟಃ-ಪಾಂಡವರಿಂದ ಪ್ರಾರ್ಥಿತನಾದ, ಕೃಷ್ಣಃ-ಹರಿಯು ಪಾರ್ಥಾನಾಂ-ಪಾಂಡವರಿಗೆ, ವಿಚಿತ್ರಂ-ವಿಶೇಷಚಿತ್ರಂಗಳುಳ್ಳ, ಪರಮಾದ್ಭುತಂ-ಅತ್ಯಾಶ್ಚರ್ಯಕರವಾದ, ನಗರಂ-ಇಂದ್ರಪ್ರಸ್ಥಪುರವನ್ನು, ವಿಶ್ವಕರ್ಮಣಾ-ದೇವಶಿಲ್ಪಿಯಿಂದ ಕಾರಯಾಮಾಸ-ಮಾಡಿಸಿಕೊಟ್ಟನೋ ||೨೪|| ತತ್ರೈವ-ಆಗಲೇ ಭಗವಾನ್-ಕೃಷ್ಣನು, ತತ್ರ-ಅಲ್ಲಿ, ಸ್ವಾನಾಂ-ತನ್ನವರಾದ ಪಾಂಡವರಿಗೆ, ಪ್ರಿಯಚಿಕೀರ್ಷಯಾ-ಸುಖವಂಮಾಡಲಪೇಕ್ಷಿಸಿ, ನಿವಸನ್-ವಾಸಂಗೆಯ್ವವನಾಗಿ, ಅಗ್ನಯೇ-ಯಜ್ಞಪುರುಷನಿಗೆ, ಖಾಂಡವಂ-ಇಂದ್ರವನವನ್ನು. ದಾತುಂ-ಜನರಹಿತವಾಗಿ ಸುಡುತಿಕೊಡಲೋಸುಗ, ಅರ್ಜುನಸ್ಯ-ವಿಜಯನ, ಸಾರಥಿಃ-ಬಂಡಿಯಂ ನಡೆಯಿಸುವವನು, ಆಸ-ಆದನು ||೨೫|| ನೃಪ-ಪರೀಕ್ಷಿದ್ರಾಯನೆ! ಸೋಽಗ್ನಿಃ-ಆ ಯಜ್ಞಪುರುಷನು ತುಷ್ಟಃ-ತೃಪ್ತನಾಗಿ ಅರ್ಜುನಾಯ-ಪಾರ್ಥನಿಗೆ, ಧನುಃ-ಬಿಲ್ಲನ್ನೂ, ಶ್ವೇತಾನ್ ಹಯಾನ್-ಬಿಳಿಕುದುರೆಗಳನ್ನೂ. ರಥಂ-ತೇರನ್ನೂ, ಅಕ್ಷಯೌ-ಬಾಣಂಗಳು ಸವೆಯದೆಯಿರುವ, ತೂಣೀ-ಬತ್ತಳಿಕೆಗಳನ್ನೂ, ಅಸ್ತ್ರಿಭಿಃ-ಅಸ್ತ್ರವುಳ್ಳವರಿಂದ, ಅಭೇದ್ಯಂ-ಭೇದಿಸಲಶಕ್ಯವಾದ ವರ್ಮಚ-ಕವಚವನ್ನೂ, ಅದಾತ್-ಕೊಟ್ಟನು ||೨೬|| ಮಯಶ್ಚ-ರಾಕ್ಷಸಶಿಲ್ಪಿಯೂ ಕೂಡ, ವಹ್ನೇಃ-ಖಾಂಡವವನವಂ ಸುಡುವ ಬೆಂಕಿಯದೆಸೆಯಿಂದ, ಮೋಚಿತಃ-

---

ಗಿ ಅಪೇಕ್ಷಿಸುತ್ತಿಲ್ಲ ಅನಾಥರಕ್ಷಕನಾದ ಆ ಭಗವಂತನು ನನ್ನಲ್ಲಿ ಪ್ರಸನ್ನನಾಗಲಿ ||೨೧|| ನಾನು ಕಾಳಿಂದಿಯೆಂಬ ನಾಮಧೇಯವುಳ್ಳವಳು. ಈ ಯಮುನಾ ಜಲದಲ್ಲಿ ವಾಸವಂ ಮಾಡುವೆನು. ಸವಿತೃವಿಂದ ನಿರ್ಮಿತವಾದ ಗೃಹದಲ್ಲಿ ಭಗವಂತನ ದರ್ಶನವಾಗುವ ಪರ್ಯಂತವೂ ಇರುತ್ತೇನೆ ||೨೨|| ಎಂಬ ಕನ್ಯಾ ವಾಕ್ಯವಂ ಕೇಳಿ ಅರ್ಜುನನು ಕೃಷ್ಣನ ಸಮೀಕ್ಕೆ ಬಂದು ಆಯರ್ಥವನ್ನೆಲ್ಲವಂ ಹೇಳಿದನು. ಅದೆಲ್ಲವಂ ಮೊದಲೇ ತಿಳಿದಿರುವ ಶ್ರೀಕೃಷ್ಣನು ಆ ಕನ್ಯೆಯಂ ರಥದಮೇಲೆ ಕುಳ್ಳಿರಿಸಿಕೊಂಡು ಇಂದ್ರಪ್ರಸ್ಥ ಪುರಕ್ಕೆ ಬಂದು ಧರ್ಮರಾಯನ ಬಳಿಗೆಯ್ದಿದನು ||೨೩|| ಎಲೈ ಪರೀಕ್ಷಿದ್ರಾಯನೇ! ಪೂರ್ವದಲ್ಲಿ ರಾಜ್ಯವಿಭಾಗವು ಮಾಡಿಕೊಂಡು ಪಾಂಡವರು ಇಂದ್ರಪ್ರಸ್ಥಪುರಕ್ಕೆ ಹೋಗಿ ಬಹುಕಾಲದಿಂದ ಜನಶೂನ್ಯವಾಗಿರುವ ಆ ಪುರವಂ ನೋಡಿ ಶ್ರೀಕೃಷ್ಣನಂ ಕುರಿತು ವಿಜ್ಞಾಪಿಸಲಾಗಿ ಆ ಶ್ರೀಕೃಷ್ಣನು ಆ ಕ್ಷಣದಲ್ಲಿಯೇ ವಿಶ್ವಕರ್ಮನಂ ಕರೆಯಿಸಿ ಆ ಪುರವಂ ನಿರ್ಮಾಣವಂ ಮಾಡಿಸಿದನು ||೨೪|| ಭಗವಂತನು ಸ್ವಜನರಾದ ಪಾಂಡವರಿಗೆ ಹಿತಾರ್ಥವಾಗಿ ಆ ನಗರದಲ್ಲಿಯೇ ವಾಸವಂ ಮಾಡಿದವನಾಗಿ ಯಜ್ಞೇಶ್ವರನಿಗೆ ಖಾಂಡವವನವು ಕುಡತೋಸುಗ ಶ್ರೀಕೃಷ್ಣನು ಅರ್ಜುನಸಾರಥಿಯಾದನು ||೨೫|| ಆ ಯಜ್ಞೇಶ್ವರನು ಸಂತುಷ್ಟನಾಗಿ ಗಾಂಡೀವಧನುಸ್ಸಂ ಶ್ವೇತಾಶ್ವಂಗಳಂ ರಥಮುಸಹ ಅರ್ಜುನನಿಗೆ ಕೊಟ್ಟನು. ಅಕ್ಷಯವಂಗಳಾದ ಬತ್ತಳಿಕೆಗಳಂ ಅಭೇದ್ಯವಾದ ಕವಚವಂ ಸಹ ಕೊಟ್ಟನು ||೨೬|| ಖಾಂಡವವನವಂ

ಜ್ವಲಸ್ಥಲದೃಶಿಭ್ರಮಃ ||೨೭|| ಸತೇನಸಮನುಜ್ಞಾತಸ್ಸುಹೃದ್ಭಿಶ್ಚಾನುಮೋದಿತಃ| ಆಯಯೌದ್ವಾರಕಾಂಭೂಯಸ್ಸಾತ್ಯಕಿಪ್ರಮುಖೈರ್ವೃತಃ ||೨೮|| ಅಥೋಪಯೇಮೆಕಾಲಿಂದೀಂಸುಪುಣ್ಯರ್ತ್ವೃಕ್ಷ ಊರ್ಜಿತೇ । ವಿತನ್ವನ್ಪರಮಾನಂದಂಸ್ವಾನಾಂಪರಮಮಂಗಳಮ್ ||೨೯||ವಿಂದಾನುವಿಂದಾವಾವಂತ್ಯೌದುರ್ಯೋಧನವಶಾನುಗೌ । ಸ್ವಯಂವರೆಸ್ವಭಗಿನೀಂಕೃಷ್ಣೇಸಕ್ತಾಂನ್ಯಷೇಧತಾಮ್||೩೦||ರಾಜಾಧಿದೇವ್ಯಾಸ್ತನಯಾಂಮಿತ್ರವಿಂದಾಂಪಿತೃಷ್ವಸುಃ ಪ್ರಸಹ್ಯಹೃತವಾನ್ಕೃಷ್ಣೋರಾಜನ್‌ರಾಜ್ಞಾಂಪ್ರಪಶ್ಯತಾಮ್||೩೧||ನಗ್ನಜಿನ್ನಾಮಕೌಸಲ್ಯಆಸೀದ್ರಾಜಾತಿಧಾರ್ಮಿಕಃ |ತಸ್ಯಸತ್ಯಾಭವತ್ಕನ್ಯಾದೇವೀನಾ

---

ಬಹಿಸಲ್ಪಟ್ಟವನಾದ್ದರಿಂ, ಯಸ್ಮಿನ್-ಯಾವಸಭಾಮಂಟಪದಲ್ಲಿ, ದುರ್ಯೋಧನಸ್ಯ-ದುರ್ಯೋಧನಂಗೆ, ಜಲಸ್ಥಲದೃಶಿಭ್ರಮಃ-ನೀರಿನಲ್ಲಿಯೂ ನೆಲದಲ್ಲಿಯೂ ದೃಷ್ಟಿಗೆಭ್ರಾಂತಿಯು, ಆಸೀತ್-ಉಂಟಾಯಿತೋ ತಾಂ-ಆ ಸಭೆಯನ್ನು, ಸಖ್ಯೇ-ಮಿತ್ರನಾದಅರ್ಜುನಂಗೆ, ಉಪಾಹರತ್-ಕಾಣಿಕೆಯಾಗಿ ತಂದಿತ್ತನು ||೨೭|| ಸಃ-ಆ ಕೃಷ್ಣನು, ತೇನ-ಆ ಧರ್ಮರಾಯನಿಂದ, ಸಮನುಜ್ಞಾತಃ-ಚೆನ್ನಾಗಿ ಒಪ್ಪಿ ಅಪ್ಪಣೆಯು ಕೊಡಲ್ಪಟ್ಟವನೂ, ಸುಹೃದ್ಭಿಃ-ಅರ್ಜುನಾದಿ ಮಿತ್ರರಿಂದಲೂ ಅನುಮೋದಿತಃ-ಒಪ್ಪಿ ಸಂತೋಷಿಸಲ್ಪಟ್ಟವನೂಆದ್ದರಿಂದ, ಸಾತ್ಯಕಿಪ್ರಮುಖೈಃ-ಯುಯುಧಾನನು ಮೊದಲಾದವರಿಂದ, ವೃತಃ-ಬಳಸಲ್ಪಟ್ಟವನಾಗಿ, ಭೂಯಃ-ಮರಳಿಯೂ, ದ್ವಾರಕಾಂ-ಕುಶಸ್ಥಲಿಯಂಕುರಿತು, ಆಯಯೌ-ಬಂದನು ||೨೮|| ಅಥ-ಆ ಬಳಿಕ, ಊರ್ಜಿತೇ-ವೃದ್ಧಿಕರವಾದ, ಪುಣ್ಯರ್ತ್ವೃಕ್ಷೇ-ಪುಣ್ಯಕರವಾದ ವಸಂತಋತುವಿನ ಶುಭನಕ್ಷತ್ರದಲ್ಲಿ, ಸ್ವಾನಾಂ-ತನ್ನವರಿಗೆ, ಪರಮಮಂಗಳಂ-ಉತ್ತಮಶುಭವನ್ನೂ, ಪರಮಾನಂದಂ-ಉತ್ಕೃಷ್ಟಸಂತೋಷವನ್ನೂ, ವಿತನ್ವನ್-ಮಾಡುವನಾಗಿ, ಕಾಲಿಂದೀಂ-ಕಾಳಿಂದೀದೇವಿಯನ್ನು, ಉಪಯೇಮೇ-ಮದುವೆಮಾಡಿಕೊಂಡನು ||೨೯|| ದುರ್ಯೋಧನವಶಾನುಗೌ-ದುರ್ಯೋಧನಂಗೆ ಅಧೀನರಾಗಿ ಅನುಸರಿಸಿಹೋಗುವಂಥಾ, ಆವಂತ್ಯೌ-ಅವಂತೀನಗರದರಸುಗಳಾದ ವಿಂದಾನುವಿಂದರೆಂಬವರು ಸ್ವಯಂವರೇ-ಕ್ಷತ್ರಿಯವಿವಾಹದಲ್ಲಿ, ಕೃಷ್ಣೇ-ವಾಸುದೇವನೊಳು,ಸಕ್ತಾಂ-ಆಸಕ್ತಳಾದ,ಸ್ವಭಗಿನೀಂ-ತಮ್ಮತಂಗಿಯನ್ನು, ನ್ಯಷೇಧತಾಂ-ಬೇಡವೆಂದು ತಡೆದರು ||೩೦|| ಕೃಷ್ಣಃ-ವಾಸುದೇವನು, ಪಿತೃಷ್ವಸುಃ-ಸೋದರತ್ತೆಯವರಸಿಯಾದ, ರಾಜಾಧಿದೇವಿಯೆಂಬವಳ, ತನಯಾಂ-ಮಗಳಾದ, ಮಿತ್ರವಿಂದಾಂ-ಮಿತ್ರವಿಂದೆಯೆಂಬ ಕನ್ಯೆಯನ್ನು, ರಾಜ್ಞಾಂ-ದೊರೆಗಳು, ಪ್ರಪಶ್ಯತಾಂ-ನೋಡುತ್ತಿರುವಲ್ಲಿ, ಪ್ರಸಹ್ಯ-ಬಲಾತ್ಕರಿಸಿ, ಹೃತವಾನ್-ಅಪಹರಿಸಿದವನಾದನು ||೩೧|| ನೃಪ-ಪರೀಕ್ಷಿತನೇ! ಕೌಸಲ್ಯಃ-ಕೋಸಲದೇಶಪತಿಯಾದ, ಅತಿಧಾರ್ಮಿಕಃ-ಅತ್ಯಂತಪುಣ್ಯಶೀಲನಾದ, ರಾಜಾ-ದೊರೆಯು, ಆಸೀತ್-ಇದ್ದನು, ತಸ್ಯ-ಅವನ, ಕನ್ಯಾ-ಮಗಳು, ನಾಗ್ನಜಿತೀ-ನಾ

---

ದಹಿಸುವಕಾಲದಲ್ಲಿ ರಾಕ್ಷಸ ಶಿಲ್ಪಿಯಾದ ಮಯನಂ ರಕ್ಷಿಸಿದ ಅರ್ಜುನನಿಗೆ ಒಂದುಸಭೆಯಂ ಮಯನು ನಿರ್ಮಿಸಿಕೊಟ್ಟನು. ಆಸಭೆಯಲ್ಲಿ ದುರ್ಯೋಧನನಿಗೆ ಜಲದಲ್ಲಿ ಸ್ಥಲಭ್ರಾಂತಿಯೂ ಸ್ಥಲದಲ್ಲಿ ಜಲಭ್ರಾಂತಿಯೂ ಉಂಟಾಯಿತು ||೨೭|| ಅನಂತರದಲ್ಲಿ ಶ್ರೀಕೃಷ್ಣನು ಪಾಂಡವರಿಂದ ಅಪ್ಪಣೆಯಂ ತೆಗೆದುಕೊಂಡು ಮಿತ್ರರಿಂದ ಅನುಮೋದಿತನಾಗಿ ಸಾತ್ಯಕಿಮೊದಲಾದ ಸ್ವಜನರಿಂದ ಯುಕ್ತನಾಗಿ ಸಂತೋಷದಿಂದ ದ್ವಾರಕಾನಗರಕ್ಕೆ ಬಂದನು ||೨೮||ಆಮೇಲೆ ಶ್ರೀಕೃಷ್ಣನು ಶುಭನಕ್ಷತ್ರ ಶುಭದಿವಸ ಶುಭಲಗ್ನಯುಕ್ತವಾದ ಸುಮುಹೂರ್ತದಲ್ಲಿ ಸ್ವಜನರಿಗೆ ಆನಂದ ವನ್ನುಂಟುಮಾಡುವನಾಗಿ ಕಾಳಿಂದೀದೇವಿಯಂ ವಿವಾಹವಂಮಾಡಿಕೊಂಡನು||೨೯ ಎಲೈಅರಸೇ! ಅವಂತೀದೇಶ ಪತಿಗಳಾದ ದುರ್ಯೋಧನಮಿತ್ರರಾದ ವಿಂದಾನುವಿಂದರೀರ್ವರೂ ಇದ್ದರಷ್ಟೆ? ಅವರ ತಂಗಿಯಾದ ಮಿತ್ರವಿಂದಾದೇವಿಯು ಶ್ರೀಕೃಷ್ಣನಲ್ಲಿ ಲಗ್ನವಾದ ಮನಸ್ಸುಳ್ಳವಳಾಗಿ ಕೃಷ್ಣನಂ ವಿವಾಹಮಂ ಮಾಡಿಕೊಳ್ಳಬೇಕೆಂದು ಅಪೇಕ್ಷೆಯಿಂದಿರಲಾಗಿ ವಿಂದಾನುವಿಂದರು ಅಡ್ಡಿಮಾಡಿದರು||೩೦| ಶ್ರೀಕೃಷ್ಣನ ಸೋದರತ್ತೆಯಾದ ರಾಜಾಧಿದೇವಿಯಮಗಳಾದ ಮಿತ್ರವಿಂದಾದೇವಿಯಂ ಶ್ರೀಕೃಷ್ಣನು ಸರ್ವಕ್ಷತ್ರಿಯರೂ ನೋಡುತ್ತಿರಲಾಗಿ ಸ್ವಯಂವರ ಕಾಲದಲ್ಲಿ ಬಲಾತ್ಕಾರದಿಂದ ಅಪಹರಿಸಿಕೊಂಡು ಬಂದನು ||೩೧| ಎಲೈಅರಸೇ! ಕೋಸಲದೇಶ ಪತಿಯಾದ ಅಯೋಧ್ಯಾ ಪುರವಾಸಿಯಾದ ಧಾರ್ಮಿಕನಾದ ನಗ್ನಜಿತ್ತು ಯೆಂಬ ಅರಸಿದ್ದನು. ಆಯರಸಗೆ ಸತ್ಯಾದೇವಿಯೆಂಬ ಪುತ್ರಿಯು ನಗ್ನಜಿತ್ತಿಯೆಂದು ಪ್ರಸಿದ್ಧಳು ||೩೨||ಆಪುರದಲ್ಲಿ

ಗ್ನಜಿತೀನ್ನೃಪ॥೩೦॥ ನತಾಂಶೇಕುರ್ನೃಪಾ ವೋಢುಮಜಿತ್ವಾ ಸಪ್ತಗೋವೃಷಾನ್ । ತೀಕ್ಷ್ಣಶೃಂಗಾನ್
ಸುದುರ್ಧರ್ಷಾನ್ವೀರ್ಯಗಂಧಾಸಹಾನ್ ಖಲಾನ್॥೩೧॥ ತಾಂ ಶ್ರುತ್ವಾ ವೃಷಜಿಲ್ಲಭ್ಯಾಂ ಭಗವಾನ್ ಸಾತ್ವ
ತಾಂಪತಿಃ। ಜಗಾಮ ಕೌಸಲ್ಯಪುರಂ ಸೈನ್ಯೇನ ಮಹತಾ ವೃತಃ॥೩೨॥ ಸ ಕೋಸಲಪತಿಃ ಪ್ರೀತಃ ಪ್ರತ್ಯುತ್ಥಾ
ಯಾಸನಾದಿಭಿಃ । ಅರ್ಹಣೇನಾಪಿ ಗುರುಣಾ ಪೂಜಯನ್ ಪ್ರತಿನಂದಿತಃ ॥೩೩॥ ವರಂ ವಿಲೋಕ್ಯಾಭಿಮ
ತಂ ಧೃತಪ್ರಾಣಾ ನರೇಂದ್ರಕನ್ಯಾ ಚಕಮೇ ರಮಾಪತಿಮ್। ಭೂಯಾದಯಂ ಮೇ ಪತಿರಾಶಿಷೋಽಮಲಾಃ ಕರೋ
ತು ಸತ್ಯಾ ಯದಿ ಮೇ ಧೃತೋ ವ್ರತಃ ॥೩೪॥ ಅರ್ಚಿತಂ ಪುನರಿತ್ಯಾಹ ನಾರಾಯಣ ಜಗತ್ಪತೇ । ಆತ್ಮಾನಂದೇ

---

ಗ್ನಜಿತಿಯೆನುತಲೂ, ಸತ್ಯಾ-ಸತ್ಯಾದೇವಿಯೆಂತಲೂ, ಅಭವತ್-ಹೆಸರುಳ್ಳವಳಾಗಿದ್ದಳು ೩೦॥ ನೃಪಾಃ-ದೊರೆಗಳು. ತೀಕ್ಷ್ಣ
ಶೃಂಗಾನ್-ಹರಿತವಾದ ಕೊಂಬುಗಳುಳ್ಳವೂ, ಸುದುರ್ಧರ್ಷಾನ್-ತಿರಸ್ಕರಿಸಿ ಹಿಡಿಯಲಶಕ್ಯಂಗಳೂ, ವೀರಗಂಧಾಸಹಾನ್-ಶೂರ
ರವಾಸನೆಯನ್ನೂ ಸಹಿಸದೇ ಇರುವವೂ, ಖಲಾನ್-ದುಷ್ಟಂಗಳೂ ಆದ ಗೋವೃಷಾನ್-ಎತ್ತುಗಳ [illegible], ಸಪ್ತ-
ಏಳನ್ನು, ಅಜಿತ್ವಾ-ಗೆಲ್ಲದೇ, ಸತ್ಯಾಂ-ಸತ್ಯಾದೇವಿಯನ್ನು, ವೋಢುಂ ಮದುವೆಯಾಗುವುದಕ್ಕೆ, ನಶೇಕುಃ-ಸಮರ್ಥರಾಗಲಿಲ್ಲ
ವು ॥೩೧॥ ವೃಷಜಿಲ್ಲಭ್ಯಾಂ-ಎತ್ತುಗಳನ್ನು ಗೆದ್ದವನಿಂದ ಹೊಂದಲ್ಪಡತಕ್ಕವಳಾದ, ತಾಂ-ಆಸತ್ಯಾದೇವಿಯನ್ನು, ಸಾತ್ವತಾಂ
ಪತಿಃ-ಯಾದವರಿಗೊಡೆಯನಾದ, ಭಗವಾನ್-ಕೃಷ್ಣನು, ಶ್ರುತ್ವಾ-ಕೇಳಿ, ಮಹತಾಸೈನ್ಯೇನ ದೊಡ್ಡದಾದ ಸೈನ್ಯದಿಂದ ವೃತಃ-ಬಳ
ಸಲ್ಪಟ್ಟವನಾಗಿ, ಕೌಸಲ್ಯಪುರಂ-ಕೌಸಲ್ಯಪಟ್ಟಣವಂಕುರಿತು, ಜಗಾಮ-ಹೋದನು ॥೩೨॥ ಸಕೋಸಲಪತಿ -ಆನಗ್ನಜಿದ್ರಾ
ಜನು, ಪ್ರೀತಃ-ಸಂತುಷ್ಟನಾಗಿ, ಪ್ರತ್ಯುತ್ಥಾಯ-ಇದಿರುಗೊಂಡುಹೋಗಿ, ಆಸನಾದಿಭಿಃ-ಪೀಠಾದ್ಯುಪಚಾರಂಗಳಿಂದಲೂ,
ಗುರುಣಾ-ಅಧಿಕವಾದ ಅರ್ಹಣೇನಾಪಿ-ಪೂಜೆಯಿಂದಲೂ, ಪ್ರತಿನಂದಿತಃ-ಸಂತೋಷಪಡಿಸಲ್ಪಟ್ಟವನಾಗಿ ಅಪೂಜಯತ್-ಆ
ರಾಧಿಸಿದನು ॥೩೩॥ ಅಭಿಮತಂ-ಇಷ್ಟನಾದ, ವರಂ-ಗಂಡನನ್ನು, ವಿಲೋಕ್ಯ-ನೋಡಿ, ಧೃತಪ್ರಾಣಾ-ಧರಿಸಲ್ಪಟ್ಟ ಪ್ರಾಣವು
ಳ್ಳ, ನರೇಂದ್ರಕನ್ಯಾ-ನಾಗ್ನಜಿತೆಯು, ರಮಾಪತಿಂ-ರುಕ್ಮಿಣೀರಮಣನನ್ನು, ಚಕಮೇ ಬಯಸಿದಳು ಮೇ-ನನ್ನಿಂದ ವ್ರತಃ-
ನಿಯಮವು, ಧೃತಃ-ಧರಿಸಲ್ಪಟ್ಟಿದ್ದರೆ, ಅಯಂ-ಈ ಕೃಷ್ಣನು, ಮೇ-ನನಗೆ, ಪತಿಃ-ಗಂಡನ, ಭೂಯಾತ್-ಆಗಲಿ,
ಎಂತು, ಅಮಲಾಃ-ನಿರ್ಮಲಗಳಾದ ಆಶಿಷಃ-ಹರಕೆಗಳನ್ನು, ಸತ್ಯಾಃ-ದಿಟವಾದವುಗಳನ್ನಾಗಿ ಮಾಡಲಿ ॥೩೪॥ ಅರ್ಚಿತಂ-
ಪೂಜಿಸಲ್ಪಟ್ಟ, ಕೃಷ್ಣನಂಕುರಿತು, ಪುನಃ-ಮರಳಿಯೂ, ಇತಿ-ಹೀಗೆ, ಆಹ-ನುಡಿದನು. ನಾರಾಯಣ-ಕೃಷ್ಣನೇ! ಜಗತ್ಪ
ತೇ-ಪ್ರಪಂಚಕ್ಕೊಡೆಯನೇ! ಆತ್ಮಾನಂದೇನ-ಸ್ವರೂಪಸುಖದಿಂದ, ಪೂರ್ಣಸ್ಯ-ತುಂಬಿದವನಾದ ನಿನಗ, ಅಲ್ಪಕಂ-ಕೊಂಚ

---

ಮಹಾಸ್ಪರ್ಧಂಗಳು ಇರುವವು. ಅವು ಮಹಾಬಲಿಷ್ಠಂಗಳಾದವುಗಳು. [illegible] ಶೂರರ ಹೆಸರು ಕೇ
ಳಿದರೆ ಸಹಿಸುವುದಿಲ್ಲ. ಅವು ಎಂತಹ ಬಲಶಾಲಿಗಳಾದರೂ ನಿಗ್ರಹಿಸಲಸಾಧ್ಯಗಳಾಗಿರುವುವು. ಅವುಗಳಂ ಹಿ
ಡಿದು ಮೂಗುದಾರಂಗಳಂ ಹಾಕಿ ಯಾರು ಕಟ್ಟಿಹಾಕುತ್ತಾರೆಯೋ ಅವರಿಗೆ ನನ್ನ ಮಗಳಾದ ಸತ್ಯಾದೇವಿಯಂ
ಕೊಡುವೆನೆಂದು ನಗ್ನಜಿದ್ರಾಯನು ಪ್ರತಿಜ್ಞೆ ಮಾಡಿದ್ದರಿಂದ ಯಾವ ಅರಸುಗಳೂ ಆ ಸಾಹಸವಂ ಮಾಡಲಾರ
ದೆ ಆ ಸತ್ಯಾದೇವಿಯಂ ವಿವಾಹವಂ ಮಾಡಿಕೊಳ್ಳಲಿಲ್ಲ ॥೩೧॥ ಆದ್ದರಿಂದ ಶ್ರೀಕೃಷ್ಣನು ಸೇನಾಸ
ಮೇತನಾಗಿ ಕೋಸಲಪುರಕ್ಕೆ ತೆರಳಿಹೋದನು ॥೩೨॥ ಆ ಕೋಸಲ ಪುರಪತಿಯಾದ ನಗ್ನಜಿದ್ರಾಯನು ಕೃಷ್ಣ
ನಂ ನೋಡಿ ಸಂತೋಷದಿಂದ ಪ್ರತ್ಯುತ್ಥಾನಾದಿಗಳಿಂದ ಬಹುಮಾನವಂ ಮಾಡಿ ಅರ್ಘ್ಯಾದಿಗಳಿಂದ ಯಥಾಶಾ
ಸ್ತ್ರವಾಗಿ ಸತ್ಕರಿಸಿ ಪೂಜಿಸಿದನು ॥೩೩॥ ರಾಜಪುತ್ರಿಯಾದ ಸತ್ಯಾದೇವಿಯು ಲಕ್ಷ್ಮೀಪತಿಯಾದ ತನಗ ಅ
ನುರೂಪನಾದ ಅಭಿಮತನಾದ ಭಗವಂತನಾದ ಶ್ರೀಕೃಷ್ಣನನ್ನು ಅನುರೂಪನಾದ ಪತಿಯನ್ನಾಗಿ ನೋಡಿ ಆ
ಶ್ರೀಕೃಷ್ಣನನ್ನೇ ಕಾಮಿಸಿದಳು. ನಾನುಮಾಡಿದ ವ್ರತನಿಯಮವು ಸಫಲವಾದರೆ ಈ ಕೃಷ್ಣನೇ ನನಗೆ ಪತಿಯಾ
ಗಲೆಂದು ಪ್ರಾರ್ಥಿಸಿದಳು ॥೩೪॥ ಅನಂತರದಲ್ಲಿ ನಗ್ನಜಿದ್ರಾಯನು ಸತ್ಕೃತನಾದ ಶ್ರೀಕೃಷ್ಣನ ಕುರಿತು ನು
ಡಿದನು, ಎಲೈ ಜಗತ್ಪತಿಯಾದ ಶ್ರೀನಾರಾಯಣನೇ! ಆತ್ಮಾನಂದ ಪೂರ್ಣನಾದ ನಿನಗೆ ಸ್ವಲ್ಪವಾದ [illegible]

ನ್ಪೂರ್ಣಸ್ಯ ಕರವಾಣಿ ಕಿಮಲ್ಪಕಃ ‖೩೭‖ ಯತ್ಪಾದಪಂಕಜರಜಶ್ಶಿರಸಾ ಬಿಭರ್ತಿ ಶ್ರೀರಬ್ಜಜಸ್ಸಗಿರಿಶಸ್ಸಹಲೋಕಪಾಲೈಃ । ಲೀಲಾತನೂಸ್ಸ್ವಕೃತಸೇತುಪರೀಪ್ಸಯಾ ಯಃ ಕಾಲೇದಧತ್ಸ ಭಗವಾನ್ ಮಮ ಕೇನ ತುಷ್ಯೇತ ‖೩೮‖ ಶ್ರೀಶುಕಃ । ತಮಾಹ ಭಗವಾನ್ ಕೃಷ್ಣಃ ಕೃತಾಸನಪರಿಗ್ರಹಃ । ಮೇಘಗಂಭೀರಯಾ ವಾಚಾ ಸಸ್ಮಿತಂ ಕುರುನಂದನ ‖೩೯‖ ಶ್ರೀಭಗವಾನ್ । ನರೇಂದ್ರ ಯಾಚ್ಞಾ ಕವಿಭಿರ್ವಿಗರ್ಹಿತಾ ರಾಜನ್ಯಬಂಧೋರ್ನಿಜಧರ್ಮವರ್ತಿನಃ । ತಥಾಪಿ ಯಾಚೇ ತವ ಸೌಹೃದೇಚ್ಛಯಾ ಕನ್ಯಾಂ ತ್ವದೀಯಾಂ ನಹಿ ಶುಲ್ಕದಾ ವಯಮ್ ‖೪೦‖ ರಾಜಾ । ಕೋನ್ಯಸ್ತೇಭ್ಯಧಿಕೋ ನಾಥ ಕನ್ಯಾವರ ಇಹೇಪ್ಸಿತಃ । ಗುಣೈಕಧಾಮ್ನೋ ಯಸ್ಯಾಂಗೇ ಶ್ರೀರ್ವಸತ್ಯನಪಾಯಿನೀ ‖೪೧‖ ಕಿಂತ್ವಸ್ಮಾಭಿಃ ಕೃತಃ ಪೂರ್ವಂ ಸಮಯಸ್ಸಾತ್ವತರ್ಷಭ ।

ಪವನಾದ ನಾನು, ಕಿಂಕರವಾಣಿ-ಏನನ್ನು ಮಾಡುವೆನು ‖೩೭‖ ಯತ್ಪಾದಪಂಕಜರಜಃ-ಯಾವನ ಅಡಿದಾವರೆಗಳ ಧೂಳಿಯನ್ನು, ಶ್ರೀಃ-ಲಕ್ಷ್ಮಿಯು, ಅಬ್ಜಜಃ-ಬ್ರಹ್ಮನೂ, ಸಗಿರೀಶಃ-ಆ ರುದ್ರನೂ, ಲೋಕಪಾಲೈಸ್ಸಹ-ದಿಕ್ಪಾಲಕರೊಡನೆ, ಶಿರಸಾ-ತಲೆಯಿಂದ, ಬಿಭರ್ತಿ-ಧರಿಸುವನೋ, ಯಃ-ಯಾವವಿಷ್ಣುವು, ಸ್ವಕೃತಸೇತುಪರೀಪ್ಸಯಾ-ತನ್ನಿಂದ ಮಾಡಲ್ಪಟ್ಟ ಧರ್ಮದ ಕಟ್ಟೆಯನ್ನು ರಕ್ಷಿಸುವ ಅಪೇಕ್ಷೆಯಿಂದ, ಕಾಲೇ-ಧರ್ಮಗ್ಲಾನಿಯುಂಟಾದ ಸಮಯದಲ್ಲಿ ಲೀಲಾತನೂಃ-ಸ್ವೇಚ್ಛಾವತಾರಗಳನ್ನು, ದಧತ್-ಧರಿಸಿದನೋ. ಸಭಗವಾನ್-ಆ ಭಗವಂತನು, ಮಮ-ನನ್ನ ಕೇನ-ಯಾವ ಉಪಚಾರದಿಂದ, ತುಷ್ಯೇತ್-ಸಂತುಷ್ಟನಾದಾನು ‖೩೮‖ [ಶುಕವಚನವು] ಕುರುನಂದನ-ಪರೀಕ್ಷಿದ್ರಾಯನೇ! ಕೃತಾಸನಪರಿಗ್ರಹಃ-ಅಂಗೀಕರಿಸಲ್ಪಟ್ಟ ಪೀಠಾದ್ಯುಪಚಾರಂಗಳುಳ್ಳ, ಭಗವಾನ್ ಕೃಷ್ಣಃ-ಭಗವಂತನಾದ ಕೃಷ್ಣನು ತಂ-ಆ ನಗ್ನಜಿದ್ರಾಜನನ್ನು ಕುರಿತು, ಮೇಘಗಂಭೀರಯಾ-ಗುಡುಗಿನಂತೆ ಘನವಾದ, ವಾಚಾ-ಮಾತಿನಿಂದ, ಸಸ್ಮಿತಂ-ಕಿರುನಗೆಯಿಂ ಸಹಿತವಾಗಿ, ಆಹ-ನುಡಿದನು ‖೩೯‖ [ಭಗವದ್ವಚನವು] ನರೇಂದ್ರ-ದೊರೆಯೇ! ರಾಜನ್ಯಬಂಧೋಃ-ಕ್ಷತ್ರಿಯರಲ್ಲಿ ಅಧಮನಿಗೂಕೂಡ. ನಿಜಧರ್ಮವರ್ತಿನಃ-ಕ್ಷತ್ರಿಯಧರ್ಮದಲ್ಲಿರುವವನಿಗಾದರೇ, ಯಾಚ್ಞಾ-ಪರರನ್ನು ಬೇಡಿಕೊಳ್ಳುವವು, ವಿಗರ್ಹಿತಾ-ನಿಂದಿಸಲ್ಪಟ್ಟದ್ದಾಗಿರುವುದು. ತಥಾಪಿ-ಹಾಗಾದರೂ, ತವ-ನಿನ್ನ, ಸೌಹೃದೇಚ್ಛಯಾ-ಸ್ನೇಹದಬಯಕೆಯಿಂದ, ತ್ವದೀಯಾಂ ಕನ್ಯಾಂ-ನಿನ್ನ ಹೆಣ್ಣನ್ನು, ಯಾಚೇ-ಅರ್ಥಿಸುವೆನು. ವಯಂ-ನಾವು, ಶುಲ್ಕದಾಃ-ತೆರವೆಯುಪಣವಂ ಕೊಡುವವರು, ನಹಿ-ಅಲ್ಲವಷ್ಟೆ? ‖೪೦‖ (ನಗ್ನಜಿದ್ವಚನವು.) ನಾಥ-ಒಡೆಯನಾದ ಕೃಷ್ಣನೇ' ಗುಣೈಕಧಾಮ್ನಃ-ಸುಗುಣಂಗಳಿಗೆ ಮುಖ್ಯಸ್ಥಾನವಾದ, ಯಸ್ಯ-ಯಾವವನ, ಅಂಗೇ-ಶರೀರದಲ್ಲಿ, ಶ್ರೀಃ ಲಕ್ಷ್ಮಿಯು, ಅನಪಾಯಿನೀ-ಹಾನಿಯಿಲ್ಲದವಳಾಗಿ, ವಸತಿ-ಇರುವಳೋ, ತೇ-ಆ ನಿನಗೆ, ಅಭ್ಯಧಿಕಃ-ಅಧಿಕನಾದ ಅನ್ಯಃ-ಇತರನು, ಇಹ-ಇಲ್ಲಿ, ಈಪ್ಸಿತಃ-ಬಯಸಲ್ಪಟ್ಟ, ಕನ್ಯಾವರಃ-ಹೆಣ್ಣಿನಗಂಡು, ಕಃ-ಯಾವವನಿರುವನು ‖೪೧‖ ಕಿಂತು-ಮತ್ತೇನಂದರೆ, ಅಸ್ಮಾಭಿಃ-ನಮ್ಮಿಂದ, ಪೂರ್ವಂ-ಮುಂಚೆ, ಸಮಯಃ-ಪ್ರತಿಜ್ಞೆಯು, ಕೃತಃ-ಮಾಡಲ್ಪಟ್ಟಿದೆ, ಸಾತ್ವತರ್ಷಭ-ಯಾದವಶ್ರೇಷ್ಠನೇ. ಪುಂಸಾಂ-ಪುರುಷರ ವೀರ್ಯಪರೀಕ್ಷಾರ್ಥಂ-ಸಾಮರ್ಥ್ಯವಂಪರೀಕ್ಷಿಸಲೋಸುಗವೂ, ಕನ್ಯಾ

ನಾನು ಏನುಮಾಡುವೆನು ‖೩೭‖ ಯಾವವನ ಪಾದ ಪದ್ಮರಜಸ್ಸಂ ಲಕ್ಷ್ಮಿಯೂ ಬ್ರಹ್ಮನೂ ರುದ್ರನೂ ಲೋಕಪಾಲಕರು ಸಹ ಶಿರಸ್ಸಿನಲ್ಲಿ ಧರಿಸುತ್ತಾರೆಯೋ, ಯಾವಭಗವಂತನು ಸ್ವನಿರ್ಮಿತಗಳಾದ ಧರ್ಮಾಧರ್ಮಂಗಳ ವ್ಯವಸ್ಥೆಯಂ ಮಾಡಲೋಸುಗ ಲೀಲಾಮಾನುಷನಾಗಿ ತತ್ತದ್ಧರ್ಮ ವ್ಯವಸ್ಥೆಯಂ ಸ್ವೀಕರಿಸುತ್ತಾನೆಯೋ ಅಂತಾ ಭಗವಂತನು ಯಾವದರಿಂದ ಸಂತುಷ್ಟನಾಗುವನು ‖೩೮‖ ಎಂದು ಚಿಂತಿಸುತ್ತಿರುವ ನಗ್ನಜಿದ್ರಾಯನಂ ಕುರಿತು ಪೀಠದಲ್ಲಿ ಕುಳಿತುಕೊಂಡು ಮೇಘದಂತೆ ಗಂಭೀರವಾದ ವಾಕ್ಯದಿಂದ ಮುಗುಳು ನಗೆಯಿಂದ ಯುಕ್ತನಾಗಿ ನುಡಿದನು ‖೩೯‖ ಎಲೈ ದೊರೆಯೇ! ಸ್ವಧರ್ಮದಲ್ಲಿರುವ ಕ್ಷತ್ರಿಯರಿಗೆ ಯಾಚ್ಞಾವೃತ್ತಿಯು ನಿಂದಿತವಾದದ್ದೆಂದು ವಿದ್ವಾಂಸರು ಹೇಳಿದರು, ಆದರೂ ನಿನ್ನ ಮೈತ್ರಿಯಂ ಮಾಡಲಿಚ್ಛೆಯಿಂದ ನಾನು ನಿನ್ನಂ ಯಾಚಿಸುತ್ತೇನೆ. ನಿನ್ನ ಕನ್ಯೆಯಂ ನನಗೆ ಕೊಡುವನಾಗು. ನಾವು ದ್ರವ್ಯಾದಿಗಳಂ ಕೊಡುವವರಲ್ಲ ‖೪೦‖ ಎಂಬ ಕೃಷ್ಣವಾಕ್ಯವಂಕೇಳಿ ಅರಸು ನುಡಿದನು- ಎಲೈನಾಥನೇ! ನನ್ನ ಪುತ್ರಿಗೆ ನಿನಗಿಂತಲೂ ಶ್ರೇಷ್ಠನಾದವರನು ಯಾವವನಿರುವನು? ಸರ್ವಗುಣಾಕರನಾದ ನಿನ್ನ ವಕ್ಷಃಸ್ಥಳದಲ್ಲಿ ಸಾಕ್ಷಾಲ್ಲಕ್ಷ್ಮಿಯು ಎಡೆಬಿಡದೆ ಸರ್ವದಾ ವಾಸಂ ಗೆಯ್ಯುತ್ತಾಳೆ ‖೪೧‖ ಮತ್ತೆ ಯೇನೆಂದರೆ ಪೂರ್ವದಲ್ಲಿ ನನ್ನಿಂದ ಒಂದುಪ್ರತಿಜ್ಞೆಯು ಮಾಡಲ್ಪಟ್ಟಿದೆ, ಅದೇನೆಂದರೆ- ಶೂರಪುರುಷರ ಪರಾಕ್ರಮ ಪರೀಕ್ಷಾರ್ಥವಾಗಿ ನನ್ನ ಪುತ್ರಿಗೆ ವರಲಾಭಾರ್ಥವಾಗಿಯೂ ಒಂದು

ಲಬ್ಧ್ವಾ ಪತಿಂ ಪ್ರಿಯಮ್ | ಲೇಭಿರೇ ಪರಮಾನಂದಂ ಜಾತಶ್ಚ ಪರಮೋತ್ಸವಃ ||೪೮|| ಶಂಖಭೇರ್ಯಾನಕಾ ನೇದುರ್ಗೀತವಾದ್ಯದ್ವಿಜಾಶಿಷಃ | ನರಾ ನಾರ್ಯಃ ಪ್ರಮುದಿತಾಃ ಸುವಾಸಸ್ಸ್ರಗಲಂಕೃತಾಃ ||೪೯|| ಶತಂ ಧೇನುಸಹಸ್ರಾಣಾಂ ಪಾರಿಬರ್ಹಮದಾದ್ವಿಭುಃ | ಯುವತೀನಾಂ ತ್ರಿಸಾಹಸ್ರಂ ನಿಷ್ಕಗ್ರೀವಸುವಾಸಸಾಮ್ ||೫೦|| ನವನಾಗಸಹಸ್ರಾಣಿ ನಾಗಾಚ್ಛತಗುಣಾನ್ರಥಾನ್ | ರಥಾಚ್ಛತಗುಣಾನಶ್ವಾನಶ್ವಾಚ್ಛತಗುಣಾನ್ನರಾನ್ ||೫೧|| ದಂಪತೀ ರಥಮಾರೋಪ್ಯ ಮಹತ್ಯಾ ಸೇನಯಾ ವೃತೌ | ಸ್ನೇಹಪ್ರಕ್ಲಿನ್ನಹೃದಯೋ ಯಾಪಯಾಮಾಸ ಕೋಸಲಃ ||೫೨|| ಶ್ರುತ್ವೈತದ್ರುರುಧುರ್ಭೂಪಾ ನಯಂತಂ ಪಥಿ ಕನ್ಯಕಾಮ್ | ಭಗ್ನವೀರ್ಯಾಸ್ಸುದುರ್ಮರ್ಷಾ ಯದುಭಿರ್ಗೋವೃಷೈಃ ಪುರಾ ||೫೩|| ತಾನಸ್ಯತಶ್ಶರವ್ರಾತಾನ್ ಬಂಧುಪ್ರಿಯಕೃದರ್ಜುನಃ | ಗಾಂಡೀವೀ ಕಾಲಯಾಮಾಸ ಸಿಂಹಃ ಕ್ಷುದ್ರಮೃಗಾನಿವ ||೫೪|| ಪಾರಿಬರ್ಹಮು

---

ಲೇಭಿರೇ-ಪಡೆದರು, ಪರಮೋತ್ಸವಶ್ಚ-ದೊಡ್ಡ ವಿಭವವೂ, ಜಾತಃ-ಆಯಿತು ||೪೮|| ಶಂಖಭೇರ್ಯಾನಕಾಃ-ಶಂಖಗಳೂ ಭೇರಿಗಳೂ ತಮಟೆಗಳೂ. ನೇದುಃ-ಮೊಳಗಿದವು ಗೀತವಾದ್ಯದ್ವಿಜಾಶಿಷಃ-ಹಾಡುಗಳೂ ವಾದ್ಯಗಳೂ ಬ್ರಾಹ್ಮಣರ ಆಶೀರ್ವಾದಗಳೂ ಮೊಳಗಿದವು. ಸುವಾಸಸ್ಸ್ರಗಲಂಕೃತಾಃ--ಒಳ್ಳೆಯ ವಸ್ತ್ರಗಳಿಂದಲೂ ಪುಷ್ಪಮಾಲೆಗಳಿಂದಲೂ, ಸಿಂಗರಿಸಲ್ಪಟ್ಟ, ನಾರ್ಯಃ-ಪುರುಷರೂ ಸ್ತ್ರೀಯರೂ ಪ್ರಮುದಿತಾಃ-ಹೆಚ್ಚು ಸಂತೋಷವುಳ್ಳವರಾದರು ||೪೯|| ವಿಭುಃ-ಐಶ್ವರ್ಯವುಳ್ಳ, ನಗ್ನಜಿದ್ರಾಯನು, ಧೇನುಸಹಸ್ರಾಣಾಂ ಶತಂ-ಲಕ್ಷಗೋವುಗಳನ್ನೂ, ನಿಷ್ಕಗ್ರೀವಸುವಾಸಸಾಂ-ಚಿನ್ನದ ಪದಕಗಳ ಸರಗಳೂ ಉತ್ತಮ ವಸ್ತ್ರಗಳೂವುಳ್ಳ, ಯುವತೀನಾಂ ತ್ರಿಸಾಹಸ್ರಂ ಮೂರುಸಾವಿರಮಂದಿ ಪ್ರಾಯದ ಹೆಂಗಳನ್ನೂ, ಪಾರಿಬರ್ಹಂ-ಬಳುವಳಿಯನ್ನಾಗಿ ಅದಾತ್-ಕೊಟ್ಟನು ||೫೦|| ನವನಾಗಸಹಸ್ರಾಣಿ-ಸಾವಿರಗಜಗಳನ್ನೂ, ನಾಗಾತ್-ಆನೆಗಿಂತಲೂ ಶತಗುಣಾನ್-ನೂರರಷ್ಟು ಅಧಿಕವಾದ ರಥಾನ್-ಲಕ್ಷತೇರುಗಳನ್ನೂ ರಥಾತ್-ತೇರಿಗಿಂತಲೂ. ಶತಗುಣಾನ್-ನೂರಷ್ಟು ಅಧಿಕವಾದ, ಅಶ್ವಾನ್-(೯ಕೋಟಿ)ಕುದುರೆಗಳನ್ನೂ, ಅಶ್ವಾತ್-ಕುದುರೆಗಿಂತಲೂ, ಶತಗುಣಾನ್-ನೂರರಷ್ಟು ಅಧಿಕವಾದ, (೯೦೦ಕೋಟಿ) ನರಾನ್-ಮನುಷ್ಯರನ್ನೂ, ಬಳುವಳಿಯನ್ನಾಗಿ ಕೊಟ್ಟನು, (ಇಲ್ಲಿ ಶತಸಹಸ್ರಸಂಖ್ಯಾವಾಚಕಶಬ್ದಂಗಳಿಗೆ ಅರ್ಥಸಂಕೋಚವನ್ನು ಕಲ್ಪಿಸದಿದ್ದರೇ ಅತಿಶಯೋಕ್ತ್ಯಲಂಕಾರವೆನ್ನಬೇಕಾಗುವುದು ||೫೧|| ಕೋಸಲಃ-ಕೋಸಲದೇಶಕ್ಕೊಡೆಯನು, ಸ್ನೇಹಪ್ರಕ್ಲಿನ್ನಹೃದಯಃ-ಅನುರಾಗದಿಂದ ಆರ್ದ್ರವಾದ ಮನಸ್ಸುಳ್ಳವನಾಗಿ, ದಂಪತೀ-ಸತ್ಯಾಕೃಷ್ಣರನ್ನು, ರಥಂ-ತೇರನ್ನು, ಆರೋಪ್ಯ-ಏರಿಸಿ, ಮಹತ್ಯಾ ಸೇನಯಾ-ದೊಡ್ಡ ದಂಡಿನಿಂದ, ಆವೃತೌ-ಬಳಸಲ್ಪಟ್ಟವರನ್ನು, ಯಾಪಯಾಮಾಸ-ಕಳುಹಿಸಿಕೊಟ್ಟನು ||೫೨|| ಪುರಾ-ಪೂರ್ವಕಾಲದೊಳು, ಯದುಭಿಃ-ಯಾದವರಿಂದಲೂ, ಗೋವೃಷೈಃ-ಎತ್ತುಗಳಿಂದಲೂ, ಭಗ್ನವೀರ್ಯಾಃ-ಮುರಿಯಲ್ಪಟ್ಟ ಪರಾಕ್ರಮವುಳ್ಳವರಾದವರೂ, ಸುದುರ್ಮರ್ಷಾಃ-ಸೈರಣೆಯಿಲ್ಲದವರಾದ, ಭೂಪಾಃ-ದೊರೆಗಳು, ಏತತ್-ಈ ಸುದ್ದಿಯನ್ನು ಶ್ರುತ್ವಾ-ಕೇಳಿ, ಪಥಿ-ದಾರಿಯಲ್ಲಿ, ಕನ್ಯಕಾಂ-ಹೆಣ್ಣನ್ನು, ನಯಂತಂ-ಒಯ್ಯುತ್ತಿರುವ ಕೃಷ್ಣನನ್ನು, ರುರುಧುಃ-ತಡೆದರು. ಬಂಧುಪ್ರಿಯಕೃತ್-ನಂಟರಿಗಿಷ್ಟವಂಗೆಯ್ವ, ಅರ್ಜುನಃ-ಪಾರ್ಥನು, ಗಾಂಡೀವೀ-ಗಾಂಡೀವವೆಂಬ ಬಿಲ್ಲುಳ್ಳವನಾಗಿ, ಶರವ್ರಾತಾನ್-ಬಾಣಪುಂಜಗಳನ್ನು, ಅಸ್ಯತಃ-ಎಚ್ಚುತ್ತಿರುವ ಆ ದೊರೆಗಳನ್ನು, ಸಿಂಹಃ ಕ್ಷುದ್ರಮೃ

---

ಡ್ಡ ಉತ್ಸವವೂ ಆಯಿತು ||೪೮|| ಶಂಖಭೇರ್ಯಾದಿ ವಾದ್ಯಗಳು ಧ್ವನಿಗೆಯ್ದುವು. ನೃತ್ತ ಗೀತ ವಾದ್ಯಗಳು ವಿಜೃಂಭಿಸಿದುವು. ಬ್ರಾಹ್ಮಣರ ಆಶೀರ್ವಾದಗಳುಂಟಾದವು. ನರನಾರಿಯರು ದಿವ್ಯಾಲಂಕಾರ ಭೂಷಿತರಾಗಿ ಸಂತೋಷಪಟ್ಟರು ||೪೯|| ನಗ್ನಜಿದ್ರಾಯನು ಅಳಿಯನಾದ ಶ್ರೀಕೃಷ್ಣನಿಗೆ ಹತ್ತುಸಾವಿರಗೋವುಗಳಂ ಸುವರ್ಣಭೂಷಿತವಾದ ದಿವ್ಯವಸ್ತ್ರಧಾರಿಣಿಯರಾದ ಮೂರುಸಾವಿರ ದಾಸೀಜನರಂ ಕೊಟ್ಟನು ||೫೦|| ಒಂಭತ್ತುಸಾವಿರ ಆನೆಗಳಂ ಕೊಟ್ಟನು ಅದಕ್ಕಿಂತಲೂ ಶತಗುಣಿತಂಗಳಾದ ರಥಂಗಳಂ, ಅದಕ್ಕೆ ಶತಗುಣಿತಂಗಳಾದ ಅಶ್ವಂಗಳಂ, ಅದಕ್ಕೆ ಶತಗುಣಿತಂಗಳಾದ ಪಾದಚಾರಿ ಜನಗಳಂ ಸಹ ಶ್ರೀಕೃಷ್ಣನಿಗೆ ಕೊಟ್ಟನು ||೫೧|| ಅನಂತರದಲ್ಲಿ ನಗ್ನಜಿದ್ರಾಯನು ಅಳಿಯನಂ ಮಗಳಂ ಸಹ ರಥದಮೇಲೆ ಕುಳ್ಳಿರಿಸಿ ಮಹಾಸೇನಾಸಮೇತರಾದ ಆ ದಂಪತಿಗಳಂ ದ್ವಾರಕಾಪುರಕ್ಕೆ ಕಳುಹಿಸಿದನು ||೫೨|| ಪೂರ್ವದಲ್ಲಿ ಯಾದವರಿಂದ ಎತ್ತುಗಳಿಂದಲೂ ಪೆಟ್ಟುಬಿದ್ದು ಪರಾಜಿತರಾದವರೂ ಆ ಅರಸುಗಳು ಈ ಸಮಾಚಾರವಂ ಕೇಳಿ ಬಹು ಕ್ರೋಧದಿಂದ ಬಂದು ಕನ್ಯಾಸಮೇತನಾಗಿ ಹೋಗುತ್ತಲಿರುವ ಶ್ರೀಕೃಷ್ಣನಂ ತಡೆದರು ||೫೩|| ಆಪ್ರಕಾರವಾಗಿ ಬಂದು ಮುತ್ತಿಕೊಂಡು ಬಾಣಸ

ಪ್ರಾಗೃಹ್ಯ ದ್ವಾರಕಾಮೇತ್ಯ ಸತ್ಯಯಾ । ರೇಮೇ ಯದೂನಾಂ ವೃಷಭೋ ಭಗವಾನ್ ದೇವಕೀಸುತಃ ॥೫೫॥ ಶ್ರು
ತಕೀರ್ತೇಸ್ಸುತಾಂ ಭದ್ರಾಮುಪಯೇಮೇ ಪಿತೃಷ್ವಸುಃ । ಕೈಕೇಯೀಂ ಭ್ರಾತೃಭಿರ್ದತ್ತಾಂ ಕೃಷ್ಣಸ್ಸಂದ
ರ್ಶನಾದಿಭಿಃ ॥೫೬॥ ಸುತಾಂ ಚ ಮದ್ರಾಧಿಪತೇರ್ಲಕ್ಷ್ಮಣಾಂ ಲಕ್ಷಣೈರ್ಯುತಾಮ್ । ಸ್ವಯಂವರೇ ಜಹಾರೈ
ಕಸ್ಸ ಸುಪರ್ಣಸ್ಸುಧಾಮಿವ ॥೫೭॥ ಅನ್ಯಾಶ್ಚೈವಂವಿಧಾ ಭಾರ್ಯಾಃ ಕೃಷ್ಣಸ್ಯಾಸನ್ ಸಹಸ್ರಶಃ ।
ಭೌಮಂ ಹತ್ವಾ ತನ್ನಿರೋಧಾದಾಹೃತಾಶ್ಚಾರುದರ್ಶನಾಃ । ... ... ॥೫೮॥

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಅಷ್ಟಪಂಚಾಶೋಽಧ್ಯಾಯಃ

---

ಗಾನಿವ-ಮೃಗರಾಜನು ತುಚ್ಛಮೃಗಗಳನ್ನಂತೆ, ಅಶಯಾಮಾಸ-ಓಡಿಸಿದನು ॥೫೪॥ ಪಾರಿಬರ್ಹಂ-ಬಳುವಳಿಯನ್ನು, ಉಪಾ
ಗೃಹ್ಯ-ತೆಗೆದುಕೊಂಡು, ದ್ವಾರಕಾಂ-ಕುಶಸ್ಥಲಿಯನ್ನು ಕುರಿತು, ಏತ್ಯ-ಬಂದು, ಯದೂನಾಂ-ಯಾದವರೊಳಗೆ, ವೃಷ
ಭಃ-ಶ್ರೇಷ್ಠನಾದ, ದೇವಕೀಸುತಃ-ದೇವಕಿಯ ಮಗನಾದ, ಭಗವಾನ್-ಕೃಷ್ಣನು, ಸತ್ಯಯಾ-ಸತ್ಯಾದೇವಿಯೊಡನೆ, ರೇಮೇ-
ಕ್ರೀಡಿಸಿದನು ॥೫೫॥ ಪಿತೃಷ್ವಸುಃ-ಸೋದರತ್ತೆಯಾದ, ಶ್ರುತಕೀರ್ತೇಃ-ಶ್ರುತಕೀರ್ತಿಯೆಂಬವಳ, ಸುತಾಂ-ಮಗಳಾದ, ಕೈ
ಕೇಯೀಂ-ಕೇಕಯರಾಜಪುತ್ರಿಯಾದ, ಭ್ರಾತೃಭಿಃ ದತ್ತಾಂ-ಅಣ್ಣಂದಿರಿಂದ ಕೊಡಲ್ಪಟ್ಟವಳಾದ, ಭದ್ರಾಂ-ಭದ್ರಾದೇವಿಯನ್ನು,
ಕೃಷ್ಣಃ-ವಾಸುದೇವನು, ಸಂದರ್ಶನಾದಿಭಿಃ-ನೋಡುವುದು ಮೊದಲಾದ ಪರೀಕ್ಷೆಗಳಿಂದ, ಉಪಯೇಮೇ-ಮದುವೆಮಾಡಿಕೊಂ
ಡನು ॥೫೬॥ ಸಃ-ಆ ಕೃಷ್ಣನು, ಮದ್ರಾಧಿಪತೇಃ-ಮದ್ರದೇಶಕ್ಕೊಡೆಯನ, ಸುತಾಂ-ಮಗಳಾದ, ಲಕ್ಷಣೈರ್ಯುತಾಂ-ಶುಭಚಿ
ಹ್ನಗಳಿಂ ಕೂಡಿದ, ಲಕ್ಷ್ಮಣಾಂ-ಲಕ್ಷ್ಮಣಾದೇವಿಯನ್ನೂ, ಸ್ವಯಂವರೇ-ಸ್ವಯಂವರವಿವಾಹದಲ್ಲಿ, ಏಕಃ-ಒಬ್ಬನೇ, ಸುಪರ್ಣಃ-
ಗರುಡನು, ಸುಧಾಮಿವ-ಅಮೃತವನ್ನಂತೆ, ಜಹಾರ-ಅಪಹರಿಸಿ ತಂದನು ॥೫೭॥ ಭೌಮಂ-ಭೂಪುತ್ರನಾದ ನರಕಾಸುರನನ್ನು,
ಹತ್ವಾ-ಕೊಂದು, ತನ್ನಿರೋಧಾತ್-ಅವನ ಸೆರೆಯ ಮನೆಯಿಂದ, ಆಹೃತಾಃ-ಬಿಡಿಸಿ ತರಲ್ಪಟ್ಟ, ಚಾರುದರ್ಶನಾಃ-ಮನೋಹರ
ವಾದ ರೂಪವುಳ್ಳ, ಏವಂವಿಧಾಃ-ಇಂಥಾ ಬಗೆಯುಳ್ಳ, ಅನ್ಯಾ ಭಾರ್ಯಾಶ್ಚ-ಇತರ ಪತ್ನಿಯರೂ, ಕೃಷ್ಣಸ್ಯ-ವಿಷ್ಣುವಿಗೆ, ಸಹಸ್ರ
ಶಃ-ಸಾವಿರಾರು ಬಗೆಯಾಗಿ, [೧೬೦೦೦] ಆಸನ್-ಆದರು ॥೫೮॥

ಪ್ರತಿಶಬ್ದಾರ್ಥಬೋಧಿನಿಯೆಂಬ ಕರ್ಣಾಟಟೀಕೆಯೊಳು ದಶಮಸ್ಕಂಧದಲ್ಲಿ ೫೮ನೆಯ ಅಧ್ಯಾಯಂ ಮುಗಿದುದು.

---

ಮೂಹಂಗಳಂ ಪ್ರಯೋಗಿಸುವ ರಾಜಪುತ್ರರಂ ಶ್ರೀಕೃಷ್ಣಪ್ರಿಯನಾದ ಅರ್ಜುನನು ಗಾಂಡೀವ ಧನುಸ್ಸಂ
ಹೆದೆಗೇರಿಸಿ ಬಾಣಂಗಳಿಂದ ಸಿಂಹವು ಕ್ಷುದ್ರಮೃಗಂಗಳನಂತೆ ಅಟ್ಟಿದನು ॥೫೪॥ ದೇವಕೀ ಪುತ್ರನಾದ ಭಗವಂತ
ನು ಮಾವನಿಂದ ಕುಡಲ್ಪಟ್ಟ ಸಮಸ್ತ ಸೇನೆಗಳಂ ಕರೆದುಕೊಂಡು, ದ್ವಾರಕಾಪುರಕ್ಕೆ ಬಂದು ಸತ್ಯಾದೇವಿ
ಯೊಡನೆ ಆನಂದದಿಂದ ರಮಿಸಿದನು ॥೫೫॥ ಅನಂತರದಲ್ಲಿ ಶ್ರೀಕೃಷ್ಣನು ವಸುದೇವನ ತಂಗಿಯಾದ ಶ್ರುತಕೀ
ರ್ತಿಯ ಮಗಳಾದ ಭದ್ರಾದೇವಿಯುಂ ವಿವಾಹವಂ ಮಾಡಿಕೊಂಡನು. [ಸಂದರ್ಶನಮೊದಲಾದ] ಭ್ರಾತೃಗಳಿಂದ
ಕೊಡಲ್ಪಟ್ಟ ಭದ್ರಾದೇವಿಯ ಪಾಣಿಗ್ರಹಣವಂ ಮಾಡಿದನು ॥೫೬॥ ಎಲೈ ಪರೀಕ್ಷಿದ್ರಾಯನೇ! ಅನಂತರದಲ್ಲಿ ಮ
ದ್ರದೇಶಾಧಿಪತಿಯಾದ ಅರಸಿನ ಪುತ್ರಿಯಾದ ಲಕ್ಷಣಯುಕ್ತಳಾದ ಲಕ್ಷ್ಮಣಾದೇವಿಯಂ ಸ್ವಯಂವರದಲ್ಲಿ ಶ್ರೀ
ಕೃಷ್ಣನು ತಾನೊರ್ವನೆ ಪೋಗಿ ಗರುಡನಮೃತವಂ ತಂದಂತೆ ಬಲಾತ್ಕಾರದಿಂದ ಅಪಹರಿಸಿಕೊಂಡು ಬಂದ
ನು ॥೫೭॥ ಎಲೈ ಅರಸೇ! ಇದೇಪ್ರಕಾರವಾಗಿ ಇನ್ನೂ ಬಹುಮಂದಿ ಸಹಸ್ರಸಂಖ್ಯೆಯುಳ್ಳ ಸ್ತ್ರೀಯರುಗಳು ಶ್ರೀ
ಕೃಷ್ಣನಿಗೆ ಪತ್ನಿಯರಾದರು. ಭೂಪುತ್ರನಾದ ನರಕಾಸುರನಂ ಸಂಹರಿಸಿದಮೇಲೆ ಅವನ ಅಂತಃಪುರದಲ್ಲಿದ್ದ
ಅತಿಸೌಂದರ್ಯಶಾಲಿಗಳಾದ ಸ್ತ್ರೀಯರು ಶ್ರೀಕೃಷ್ಣನಿಗೆ ಪತ್ನಿಯರಾದರು ॥೫೮॥ ರುಕ್ಮಿಣಿಯು, ಜಾಂಬವ
ತಿಯು, ಸತ್ಯಭಾಮೆಯು. ಸತ್ಯಾದೇವಿಯು, ಭದ್ರಾದೇವಿಯು, ಲಕ್ಷ್ಮಣಾದೇವಿಯು, ಕಾಳಿಂದೀದೇವಿಯು, ಮಿ
ತ್ರವಿಂದಾದೇವಿಯು, ಈ ಎಂಟುಮಂದಿ ಸ್ತ್ರೀಯರೂ ಶ್ರೀಕೃಷ್ಣಂಗೆ ಪಟ್ಟಮಹಿಷಿಯರಾದರು ॥[illegible]॥

ಇಂತು ಶ್ರೀಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸಿದನೆಂದು ಸೂತಪೌರಾಣಿಕನು ನೈಮಿಶಾರ
ಣ್ಯವಾಸಿಗಳಾದ ಶೌನಕಾದಿ ಮಹರ್ಷಿಗಳಿಗೆ ಪೇಳಿದನೆಂಬಲ್ಲಿಗೆ-ಶ್ರೀಮನ್ಮಹೀಶೂರಪುರವರಾಧೀಶ ಶ್ರೀಚಾಮರಾ
ಜತನುಜ ಶ್ರೀಮತ್ಕೃಷ್ಣರಾಜವಿರಚಿತಮಾದ "ಶ್ರೀಕೃಷ್ಣರಾಜ ವಾಣೀವಿಲಾಸ"ವೆಂಬ ಶ್ರೀಭಾಗವತ ಪುರಾ
ಣದ ಕರ್ಣಾಟ ಭಾಷಾವ್ಯಾಖ್ಯಾನದಲ್ಲಿ ದಶಮಸ್ಕಂಧದೊಳು ಅಷ್ಟಪಂಚಾಶತ್ತಮಾಧ್ಯಾಯಂ ಮುಗಿದುದು.

(ನರಕಾಸುರವಧಕಥಾಪ್ರಾರಂಭಘಟ್ಟಃ)

ರಾಜಾ ॥ ಯಥಾ ಹತೋ ಭಗವತಾ ಭೌಮೋ ಯೇನ ಚ ತಾಃ ಸ್ತ್ರಿಯಃ । ನಿರುದ್ಧಾ ಏತದಾಚಕ್ಷ್ವ ವಿಕ್ರಮಂ ಶಾರ್ಙ್ಗಧನ್ವನಃ ॥೧॥ ಶ್ರೀಶುಕಃ ॥ ಇಂದ್ರೇಣ ಹೃತಛತ್ರೇಣ ಹೃತಕುಂಡಲಬಂಧುನಾ । ಹೃತಾಮರಾದ್ರಿಸ್ಥಾನೇನ ಜ್ಞಾಪಿತೋ ಭೌಮಚೇಷ್ಟಿತಮ್ ॥೨॥ ಸಭಾರ್ಯೋ ಗರುಡಾರೂಢಃ ಪ್ರಾಗ್ಜ್ಯೋತಿಷಪುರಂ ಯಯೌ । ಗಿರಿದುರ್ಗೈಃ ಶಸ್ತ್ರದುರ್ಗೈರ್ಜಲಾಗ್ನ್ಯನಿಲದುರ್ಗಮಮ್ ॥೩॥ ಮುರಪಾಶಾಯುತೈರ್ಘೋರೈ

೫೯ನೆಯ ಅಧ್ಯಾಯದ ಪ್ರತಿಪದ ಟೀಕೆ.

[ಪರೀಕ್ಷಿತ್ಪ್ರಶ್ನೆ.] ಭೌಮಃ-ನರಕಾಸುರನು, ಭಗವತಾ-ಕೃಷ್ಣನಿಂದ, ಯಥಾ-ಹೇಗೆ, ಹತಃ-ಕೊಲ್ಲಲ್ಪಟ್ಟನು? ತಾಃ ಸ್ತ್ರಿಯಃ-ಆ ಹೆಂಗಳು, ಯೇನ-ಯಾವವನಿಂದ, ನಿರುದ್ಧಾಃ-ತಡೆಯಲ್ಪಟ್ಟರು ಏತತ್-ಈ, ಶಾರ್ಙ್ಗಧನ್ವನಃ-ಕೃಷ್ಣನ, ವಿಕ್ರಮಂ-ಪರಾಕ್ರಮವನ್ನು, ಆಚಕ್ಷ್ವ-ಹೇಳು ॥೧॥ (ಶುಕವಚನವು.) ಹೃತಛತ್ರೇಣ-ಅಪಹರಿಸಲ್ಪಟ್ಟ ಕೊಡೆಯುಳ್ಳ, ಹೃತಕುಂಡಲಬಂಧುನಾ-ಅಪಹರಿಸಲ್ಪಟ್ಟ ಓಲೆಗಳುಳ್ಳ ತಾಯಿಯುಳ್ಳವನಾದ, ಹೃತಾಮರಾದ್ರಿಸ್ಥಾನೇನ-ಅಪಹರಿಸಲ್ಪಟ್ಟ ಮಣಿಪರ್ವತವುಳ್ಳವನಾದ, ಇಂದ್ರೇಣ-ದೇವರಾಜನಿಂದ, ಭೌಮಚೇಷ್ಟಿತಂ-ಭೂಪುತ್ರನಾದ ನರಕಾಸುರನ ಕೆಡುಕನ್ನು, ಜ್ಞಾಪಿತಃ ಬಿನ್ನೈಸಲ್ಪಟ್ಟವನಾಗಿ ॥೨॥ ಸಭಾರ್ಯಃ-ಹೆಂಡತಿಯಿಂದಸಹಿತನಾಗಿ, ಗರುಡಾರೂಢಃ-ಗರುಡನನ್ನು ಏರಿದವನಾಗಿ, ಪ್ರಾಗ್ಜ್ಯೋತಿಷಪುರಂ-ಪ್ರಾಗ್ಜ್ಯೋತಿಷವೆಂಬ ನಗರವನ್ನು, ಯಯೌ-ಸೇರಿದನು. ಗಿರಿದುರ್ಗೈಃ-ಬೆಟ್ಟಕೋಟೆಗಳಿಂದಲೂ, ಶಸ್ತ್ರದುರ್ಗೈಃ-ಆಯುಧಪ್ರಾಕಾರಗಳಿಂದಲೂ, ಜಲಾಗ್ನ್ಯನಿಲದುರ್ಗಮಂ-ನೀರಿನಿಂದಲೂ ಬೆಂಕಿಯಿಂದಲೂ ಗಾಳಿಯಿಂದಲೂ ಪ್ರವೇಶಿಸಲಶಕ್ಯವಾಗಿರುವ ॥೩॥ ದೃಢೈಃ-ಗಟ್ಟಿಯಾದ, ಘೋರೈಃ-ಭಯಂಕರಗಳಾದ, ಮುರಪಾಶಾಯುತೈಃ-ಮುರನೆಂಬವನ ಹತ್ತುಸಾವಿರ ಕಬ್ಬಿಣದ ಸರಪಳಿಗಳಿಂದಲೂ, ಸರ್ವತಃ-ಎಲ್ಲಕಡೆಗಳಲ್ಲಿಯೂ, ಆವೃತಂ-ಸುತ್ತಲ್ಪಟ್ಟಿರುವ, ದುರ್ಗಮಂ ಸೇರಿ ಗದಯಾ-ಕೌಮೋದಕಿಯಿಂದ, ಅದ್ರೀನ್-ಗಿರಿದುರ್ಗಗಳನ್ನು, ನಿರ್ಬಿಭೇದ-ಚನ್ನಾಗಿ ಭೇದಿಸಿದನು ಸಾಯಕೈಃ-ಬಾಣಂಗಳಿಂ

---

೫೯ನೆಯ ಅಧ್ಯಾಯವು.

ಶ್ರೀಧರೀಯಶ್ಲೋಕಃ । ಊನಷಷ್ಟಿತಮೇ ಭೌಮಂ ಹತ್ವಾ ತೇನಾಹೃತಾ ಹರಿಃ । ಕನ್ಯಾಸ್ಸಹಸ್ರಶಃ ಪ್ರಾಪ್ಯ ಪಾರಿಜಾತಂ ದಿವೋಽಹರತ್ ॥ ॥ ಟೀ ॥ ಐವತ್ತೊಂಭತ್ತನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ನರಕಾಸುರನನ್ನು ಸಂಹರಿಸಿ ಅವನಿಂದ ಅಪಹರಿಸಲ್ಪಟ್ಟು ಬಂದಿರುವ ಅನೇಕ ಸಹಸ್ರಸ್ತ್ರೀಯರಂ ವಿವಾಹವಂ ಮಾಡಿಕೊಂಡು ಸ್ವರ್ಗದೆಡೆಯಿಂದ ಪಾರಿಜಾತವೃಕ್ಷವನ್ನ ಪಹರಿಸಿಕೊಂಡು ಬಂದನೆಂಬ ಅರ್ಥವಂ ಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸುವನದೆಂತೆನೆ-

ಎಲೈ ಶುಕಾಚಾರ್ಯನೆ! ಭೂಪುತ್ರನಾದ ನರಕಾಸುರನು ಯಾವ ಪ್ರಕಾರವಾಗಿ ಭಗವಂತನಿಂದ ಹತನಾದನು? ಅವನಸ್ತ್ರೀಯರುಗಳಂ ಯಾವಕಾರಣದಿಂ ಭಗವಂತನು ಅಪಹರಿಸಿದನು? ಶಾರ್ಙ್ಗಧನುರ್ಧಾರಿಯಾದ ಭಗವಂತನ ವಿಕ್ರಮವಂ ವಿಸ್ತರದಿಂದ ನಿರೂಪಿಸು ॥೧॥ ಎಂಬ ರಾಜವಾಕ್ಯವಂ ಕೇಳಿ ಶುಕಾಚಾರ್ಯನು ನುಡಿದನು. ಎಲೈ ಅರಸೇ ನರಕಾಸುರನು ಇಂದ್ರನಛತ್ರವಂ ಇಂದ್ರನಮಾತೃವಾದ ಅದಿತಿದೇವಿಯ ಕರ್ಣಕುಂಡಲವಂ ವಿಹಾರಸ್ಥಾನವಾದ ಮರಕತಮಣಿ ಪರ್ವತವಂ ಸಹ ಅಪಹರಿಸಿದನು. ಆಗದೇವೇಂದ್ರನು ಶ್ರೀಕೃಷ್ಣನ ಸಮೀಪಕ್ಕೆ ಬಂದು ಆವೃತ್ತಾಂತವಂ ಪೇಳಿದನು ॥೨॥ ಅನಂತರದಲ್ಲಿ ಭಗವಂತನು ಗರುಡಾರೂಢನಾಗಿ ಸತ್ಯಭಾಮಾಸಮೇತನಾಗಿ ಪ್ರಾಗ್ಜ್ಯೋತಿಷಪುರವಂ ಕುರಿತು ತೆರಳಿದನು. ಪರ್ವತಪ್ರಾಕಾರಂಗಳಿಂದಲೂ ಶಸ್ತ್ರಪ್ರಾಕಾರಂಗಳಿಂದಲೂ ಜಲದುರ್ಗಗಳಿಂದಲೂ ಅಗ್ನಿಮಯವಾದ ಆವರಣಂಗಳಿಂದಲೂ ॥೩॥ ಕಬ್ಬಿಣದ ಸರಪಣಿಗಳಿಂದ ನಿರ್ಮಿತಗಳಾದ ಆವರಣಂಗಳಿಂದಲೂ ಎಲ್ಲಕಡೆಗಳಲ್ಲಿಯೂ ಆವೃತವಾಗಿರುವ ಪ್ರಾಗ್ಜ್ಯೋತಿಷಪುರಕ್ಕೆ ಹೋದರು. ಅಲ್ಲಿ ಶ್ರೀಕೃಷ್ಣನು ಗದೆಯಿಂದ ಪರ್ವತರೂಪಂಗಳಾದ ಆವರಣಂಗಳಂ ಬಾಣಂಗಳಿಂದ ಶಸ್ತ್ರಪ್ರಾಕಾರಂಗ

ಶಕ್ತೈರತಾಡಯತ್ತಸ್ಮೈ ಗದಾಂ ಸೋಽಪಿ ರುಷಾ ವ್ಯಮುಂಚತ ||೮|| ತಾಮಾಪತಂತೀಂ ಗದಯಾ ಗದಾಂ
ಮೃಧೇ ಗದಾಗ್ರಜೋ ನಿರ್ಬಿಭಿದೇ ಸಹಸ್ರಧಾ | ಉದ್ಯಮ್ಯ ಬಾಹೂನಭಿಧಾವತೋಽಜಿತಃ ಶಿರಾಂಸಿ ಚಕ್ರೇಣ ಜ
ಹಾರ ಲೀಲಯಾ || ವ್ಯಸುಃ ಪಪಾತಾಂಭಸಿ ಕೃತ್ತಶೀರ್ಷೋ ನಿಕೃತ್ತಶೃಂಗೋಽದ್ರಿರಿವೇಂದ್ರತೇಜಸಾ ||೧೦||
ತಸ್ಯಾತ್ಮಜಾಸ್ಸಪ್ತ ಪಿತುರ್ವಧಾತುರಾಃ ಪ್ರತಿಕ್ರಿಯಾಮರ್ಷಜುಷಸ್ಸಮುದ್ಯತಾಃ | ತಾಮ್ರೋಽಂತ
ರಿಕ್ಷಶ್ಶ್ರವಣೋ ವಿಭಾವಸುರ್ವಸುರ್ನಭಸ್ವಾನರುಣಶ್ಚ ಸಪ್ತಮಃ ||೧೧|| ಪೀಠಂ ಪುರಸ್ಕೃತ್ಯ ಚಮೂಪ
ತಿಂ ಮೃಧೇ ಭೌಮಪ್ರಯುಕ್ತಾ ನಿರಗುರ್ಧೃತಾಯುಧಾಃ | ಪ್ರಾಯುಂಜತಾಸಾದ್ಯ ಶರಾನಸೀನ್ ಗದಾಃ ಶ
ಕ್ತ್ಯೃಷ್ಟಿ ಶೂಲಾನ್ಯಜಿತೇ ರುಷೋಲ್ಬಣಾಃ ||೧೨|| ತಚ್ಛಸ್ತ್ರಕೂಟಂ ಭಗವಾನ್ ಸ್ವಮಾರ್ಗಣೈರಮೋಘ

---

ಬಾಣಂಗಳಿಂದ, ಮುಖೇಷು-ಮೋರೆಗಳಲ್ಲಿ, ಅತಾಡಯತ್-ಹೊಡೆದನು ಸೋಽಪಿ-ಆ ಮುರಾಸುರನೂಕೂಡ, ರುಷಾ-ಸಿಟ್ಟಿ
ನಿಂದ, ತಸ್ಮೈ-ಆ ಕೃಷ್ಣನಿಗೋಸುಗ, ಗದಾಂ-ಗದಾಯುಧವನ್ನು ವ್ಯಮುಂಚತ-ಪ್ರಯೋಗಿಸಿಬಿಟ್ಟನು ||೮|| ಗದಾಗ್ರಜಃ-
ಕೃಷ್ಣನು, ಮೃಧೇ-ಕಾಳಗದಲ್ಲಿ, ಆಪತಂತೀಂ-ಬಂದುಬೀಳುತ್ತಿರುವ, ತಾಂ ಗದಾಂ-ಆ ಗದೆಯನ್ನು ಗದಯಾ-ಕೌಮೋದಕಿ
ಯಿಂದ, ಸಹಸ್ರಧಾ-೧೦೦೦ ಹೋಳಾಗಿ, ನಿರ್ಬಿಭೇದ-ಛೇದಿಸಿದನು. ಅಜಿತಃ-ಎಲ್ಲಿಯೂ ಸೋತವನಲ್ಲದ ಕೃಷ್ಣನು, ಬಾ
ಹೂನುದ್ಯಮ್ಯಾಭಿಧಾವತಃ-ಹಸ್ತಂಗಳನ್ನೆತ್ತಿಕೊಂಡು ಬದಿಗೋಡಿಬರುತ್ತಿರುವ ಮುರನ, ಶಿರಾಂಸಿ-ತಲೆಗಳನ್ನು, ಚಕ್ರೇ
ಣ-ಸುದರ್ಶನದಿಂದ ಲೀಲಯಾ-ವಿಲಾಸದಿಂದ, ಜಹಾರ-ಅಪಹರಿಸಿದನು. ಇಂದ್ರತೇಜಸಾ-ಇಂದ್ರನ ಸಿಡಿಲಿನಿಂದ, ನಿಕೃ
ತ್ತಶೃಂಗಃ-ಕತ್ತರಿಸಲ್ಪಟ್ಟ ಶಿಖರಂಗಳುಳ್ಳ, ಅದ್ರಿರಿವ-ಬೆಟ್ಟದಂತೆ, ನಿಕೃತ್ತಶೀರ್ಷಃ-ಕಡಿಯಲ್ಪಟ್ಟ ತಲೆಗಳುಳ್ಳವನಾದ್ದರಿಂ
ದ, ವ್ಯಸುಃ-ಪ್ರಾಣಂಗಳುಹೋದ ಮುರಾಸುರನು ಅಂಭಸಿ-ನೀರಿನಲ್ಲಿ, ಪಪಾತ-ಬಿದ್ದನು ||೧೦|| ತಸ್ಯ-ಆ ಮುರಾಸುರನ,
ಸಪ್ತಾತ್ಮಜಾಃ-೭ ಮಂದಿ ಕುಮಾರರು, ಪಿತುಃ-ತಂದೆಯಾದ ಮುರನ, ವಧಾತುರಾಃ-ಮರಣದಿಂದ ಆತುರರಾದವರೂ, ಪ್ರ
ತಿಕ್ರಿಯಾಮರ್ಷಜುಷಃ-ಪ್ರತಿಯಾಗಿ ಮಾಡಬೇಕೆಂಬ ಸಿಟ್ಟನ್ನು ಹೊಂದಿದವರೂ ಅದ್ದರಿಂದ, ಸಮುದ್ಯತಾಃ-ಪ್ರಯತ್ನಗೊಂಡ
ವರಾದ, ತಾಮ್ರನು, ಅಂತರಿಕ್ಷನು, ಶ್ರವಣನು, ವಿಭಾವಸುವು, ವಸುವು, ನಭಸ್ವಂತನು, ಸಪ್ತಮಃ-ಏಳನೆಯವನಾದ, ಅರು
ಣನೆಂಬವನೂ ||೧೧|| ಭೌಮಪ್ರಯುಕ್ತಾಃ-ನರಕಾಸುರನಿಂದ ಪ್ರೇರಿಸಲ್ಪಟ್ಟವರಾಗಿ, ಚಮೂಪತಿಂ-ಸೇನಾನಾಯಕನಾದ, ಪೀ
ಠಂ-ಪೀಠಾಸುರನನ್ನು, ಪುರಸ್ಕೃತ್ಯ-ಮುಂದುಮಾಡಿಕೊಂಡು ಮೃಧೇ-ಯುದ್ಧವಿಷಯದಲ್ಲಿ, ಧೃತಾಯುಧಾಃ-ಧರಿಸಲ್ಪಟ್ಟ ಕೈ
ದುಗಳುಳ್ಳವರಾಗಿ, ನಿರಗುಃ-ಹೊರಹೊರಟರು. ರುಷಾ-ಸಿಟ್ಟಿನಿಂದ, ಉಲ್ಬಣಾಃ-ಉದ್ರೇಕವುಂಟಾದವರಾಗಿ, ಆಸಾದ್ಯ-ಹತ್ತಿರ
ಕ್ಕೆ ಬಂದು, ಶರಾನ್-ಬಾಣಂಗಳನ್ನೂ, ಅಸೀನ್-ಕತ್ತಿಗಳನ್ನೂ, ಗದಾಃ-ದೊಣೆಗಳನ್ನೂ, ಶಕ್ತ್ಯಾಯುಧಗಳನ್ನೂ, ಈಟಿಗ
ಳನ್ನೂ, ಶೂಲಗಳನ್ನೂ, ಅಜಿತೇ-ಕೃಷ್ಣನಿಗೋಸುಗ, ಪ್ರಾಯುಂಜತ-ಪ್ರಯೋಗಿಸಿದರು ||೧೨|| ಭಗವಾನ್-ಕೃಷ್ಣನು, ತ
ಚ್ಛಸ್ತ್ರಕೂಟಂ-ಆ ಕೈದುಗಳ ಗುಂಪನ್ನು, ಸ್ವಮಾರ್ಗಣೈಃ-ತನ್ನ ಸರಳುಗಳಿಂದ, ತಿಲಶಃ-ಎಳ್ಳಿನಷ್ಟಾಗುವಂತೆ. ಚಕರ್ತ

---

ಣಂಗಳಂ ಪ್ರಯೋಗಿಸಿದನು. ಆಮುರನು ಶ್ರೀಕೃಷ್ಣನ ಮೇಲೆ ಗದೆಯಂ ಪ್ರಯೋಗಿಸಿದನು|೮| ಶ್ರೀಕೃಷ್ಣ
ನು ಇದಿರಾಗಿ ಬರುತ್ತಿರುವ ಆಗದೆಯಂ ತನ್ನ ಗದೆಯಿಂದ ಸಹಸ್ರಭಾಗವಾಗಿ ಛೇದಿಸಿದನು. ಆಮೇಲೆ ಬಾಹುಗ
ಳಂ ಎತ್ತಿಕೊಂಡು ಪ್ರಹರಿಸಲೋಸುಗ ಬರುತ್ತಿರುವ ಆಮುರನ ಸಿರಸ್ಸುಗಳಂ ಚಕ್ರದಿಂದ ಛೇದಿಸಿದನು.
ಶ್ರೀಕೃಷ್ಣನಿಂದ ಛೇದಿಸಲ್ಪಟ್ಟ ಶಿರಸ್ಸುಗಳುಳ್ಳವನಾಗಿ ಆಮುರನು ನಿರ್ಜೀವನಾಗಿ ಇಂದ್ರನಿಂದ ಛೇದಿಸಲ್ಪ
ಟ್ಟ ಪರ್ವತದಂತೆ ಜಲದಲ್ಲಿ ಬಿದ್ದನು|೧೦| ಆಮುರನ ಪುತ್ರರು ಏಳುಮಂದಿಯೂ ಪಿತೃವಧದಿಂದ ದುಃಖಿತರಾಗಿ
ಪ್ರತಿಕ್ರಿಯೆಯಂ ಮಾಡಲಿಚ್ಛೆಯುಳ್ಳವರಾಗಿ ಮಹಾಕೋಪದಿಂದ ಹೊರಟರು. ತಾಮ್ರನು ಅಂತರಿಕ್ಷನು, ಶ್ರ
ವಣನು, ವಿಭಾವಸು, ವಸು, ನಭಸ್ವಂತನು, ಅರುಣನು, ಈಯೇಳು ಮಂದಿಯು |೧೧| ಸೇನಾಪತಿಯಾದ
ಪೀಠಾಸುರನಂ ಮುಂದು ಮಾಡಿಕೊಂಡು, ನರಕಾಸುರನಿಂದ ಪ್ರೇರಿತರಾಗಿ ಆಯುಧಂಗಳಂ ಧರಿಸಿಕೊಂಡು
ಹೊರಟುಬಂದರು| ಆಯಸುರರು ಶ್ರೀಕೃಷ್ಣನಲ್ಲಿ ಅಸ್ತ್ರಂಗಳಂ ಬಾಣಂಗಳಂ ಖಡ್ಗಂಗಳಂ ಗದೆಗಳಂ ಶಕ್ತಿ
ಗಳಂ ದೊಣೆಗಳಂ ಶೂಲಗಳಂ ಸಹ ಪ್ರಯೋಗಿಸಿದರು |೧೨| ಅಮೋಘ ಪರಾಕ್ರಮವುಳ್ಳ ಭಗವಂತನು ಅ

ವೀರ್ಯಸ್ತಿಲಶಶ್ಚಕರ್ತ್ತಹ ।ತಾನ್ವೀರಮುಖ್ಯಾನನಯದ್ಯಮಕ್ಷಯಂನಿಕೃತ್ತಶೀರ್ಷೋರುಭುಜಾಂಘ್ರಿವರ್ಮಣಃ ।೧೩।ಸ್ವಾನೀಕಪಾನಚ್ಯುತಚಕ್ರಸಾಯಕೈರ್ಮೃಧೇಹತಾಂಸನ್ನರಕೋಧರಾಸುತಃ। ನಿರೀಕ್ಷ್ಯದುರ್ಮರ್ಷಣಆಸ್ರವನ್ಮದೈರ್ಗಜೈಃಪಯೋಧಿಪ್ರಭವೈರ್ನಿರಾಕ್ರಮತ್॥೧೪।ದೃಷ್ಟ್ವಾಸಭಾರ್ಯಂಗರುಡೋಪರಿಸ್ಥಿತಂಸೂರ್ಯೋಪರಿಷ್ಟಾತ್ಸತಟಿದ್ಘನಂಯಥಾ।ಕೃಷ್ಣಂಸತಸ್ಮೈವ್ಯಸೃಜಚ್ಛತಘ್ನೀಂಯೋಧಾಶ್ಚಸರ್ವೇಯುಗಪತ್ಪ್ರವಿವ್ಯಧುಃ।೧೫। ತದ್ಭೌಮಸೈನ್ಯಂಭಗವಾನ್ಗದಾಗ್ರಜೋವಿಚಿತ್ರವಾಜೈರ್ನಿಶಿತೈಃಶಿಲೀಮುಖೈಃ । ನಿಕೃತ್ತಬಾಹೂರುಶಿರೋಧರವಿಗ್ರಹಂಚಕಾರತರ್ಹ್ಯೇವಹತಾಶ್ವಕುಂಜರಮ್।೧೬।ಯಾನಿಯೋಧೈಃಪ್ರಯುಕ್ತಾನಿಶಸ್ತ್ರಾಸ್ತ್ರಾಣಿಕುರೂದ್ವಹ । ಹರಿಸ್ತಾನ್ಯಚ್ಛಿನತ್ತೀ

ಹ-ಕೊಚ್ಚಿದನು. ಅಮೋಘವೀರ್ಯಃ-ವ್ಯರ್ಥವಾಗದಸಾಮರ್ಥ್ಯವುಳ್ಳ ಕೃಷ್ಣನು, ನಿಕೃತ್ತ-ಛೇದಿಸಲ್ಪಟ್ಟ. ಶೀರ್ಷ-ತಲೆಗಳೂ, ಊರು-ತೊಡೆಗಳೂ, ಭುಜ-ತೋಳುಗಳೂ ಅಂಘ್ರಿ-ಕಾಲುಗಳೂ, ವರ್ಮಣಃ-ಶರೀರವೂಉಳ್ಳ, ವೀರಮುಖ್ಯಾನ್-ಶೂರರಲ್ಲಿ ಮುಂದಾಳುಗಳಾದ, ತಾನ್-ಆ ಮುರನ ಮಕ್ಕಳನ್ನು, ಯಮಕ್ಷಯಂ-ಜವರಾಯನ ಮನೆಯನ್ನು, ಅನಯತ್-ಸೇರಿಸಿದನು ॥೧೩॥ ಅಚ್ಯುತಚಕ್ರಸಾಯಕೈಃ-ಕೃಷ್ಣನ ಚಕ್ರದಿಂದಲೂ. ಅಂಬುಗಳಿಂದಲೂ, ಮೃಧೇ-ಯುದ್ಧದಲ್ಲಿ, ಹತಾನ್-ಸಂಹರಿಸಲ್ಪಟ್ಟ, ತಾನ್‌ಸ್ವಾನೀಕಪಾನ್-ಆತನ ಸೇನಾಪತಿಗಳನ್ನು, ನಿರೀಕ್ಷ್ಯ-ನೋಡಿ, ಅಮರ್ಷಣಃ-ಸಿಟ್ಟುಂಟಾದವನಾದ, ಧರಾಸುತಃ-ಭೂಮಿಯ ಮಗನಾದ, ನರಕಃ-ನರಕಾಸುರನು, ಪಯೋಧಿಪ್ರಭವೈಃ-ಕಡಲಿನಲ್ಲಿ ಹುಟ್ಟಿದವುಗಳಾದ, ಆಸ್ರವನ್ಮದೈಃ-ಸುರಿಯುತ್ತಿರುವಸೊಕ್ಕು ಬೆಮರುಳ್ಳವಾದ, ಗಜೈಃ-ಆನೆಗಳೊಡನೆ ನಿರಾಕ್ರಮತ್-ಹೊರಟನು ॥೧೪॥ ಸೂರ್ಯೋಪರಿಷ್ಟಾತ್-ಸೂರ್ಯನಮೇಲ್ಗಡೆಯಲ್ಲಿ, ಪ್ರತಟಿದ್ಘನಂಯಥಾ-ದೊಡ್ಡ ಮಿಂಚು ಕಪ್ಪುಮೋಡವನ್ನು ಹೇಗೋಹಾಗೆ, ಗರುಡೋಪರಿ-ಗರುಡನಮೇಲೆ, ಸಭಾರ್ಯಂ-ಸತ್ಯಭಾಮಾಸಹಿತನಾಗಿ,ಸ್ಥಿತಂ-ಕುಳಿತಿರುವ,ಕೃಷ್ಣಂ-ವಾಸುದೇವನನ್ನು, ದೃಷ್ಟ್ವಾ-ನೋಡಿ, ಸಃ-ಆ ನರಕಾಸುರನು, ತಸ್ಮೈ-ಆ ಕೃಷ್ಣನಿಗೋಸುಗ, ಶತಘ್ನೀಂ-ಪಿರಂಗಿಯನ್ನು, ವ್ಯಸೃಜತ್-ಪ್ರಯೋಗಿಸಿಬಿಟ್ಟನು. ಸರ್ವೇಯೋಧಾಶ್ಚ-ಸೈನಿಕರೆಲ್ಲರೂ, ಯುಗಪತ್-ಏಕಕಾಲದಲ್ಲಿ, ಪ್ರವಿವ್ಯಧು-ಅಧಿಕವಾಗಿ ದುಃಖಿಸಿದರು ॥೧೫॥ ಗದಾಗ್ರಜಃ-ಗದನಿಗೆ ಅಂಣನಾದ, ಭಗವಾನ್-ನಾರಾಯಣನು, ತತ್‌ಭೌಮಸೈನ್ಯಂ-ಆ ನರಕಾಸುರನ ದಂಡನ್ನು, ವಿಚಿತ್ರವಾಜೈಃ-ಚಿತ್ರವರ್ಣದ ರೆಕ್ಕೆಗಳುಳ್ಳ, ನಿಶಿತೈಃ-ಕ್ರೂರಗಳಾದ, ಶಿಲೀಮುಖೈಃ-ಮೊನೆಗಣೆಗಳಿಂದ, ನಿಕೃತ್ತಬಾಹೂರುಶಿರೋಧರವಿಗ್ರಹಂ-ಕಡಿಯಲ್ಪಟ್ಟ ತೋಳುಗಳೂ ತೊಡೆಗಳೂ ಕೊರಳುಗಳೂ ದೇಹಂಗಳೂ ಉಳ್ಳಂಥಾದ್ದನ್ನಾಗಿಯೂ, ತರ್ಹ್ಯೇವ-ಆಗಲೇ, ಹತಾಶ್ವಕುಂಜರಂ-ಸಂಹರಿಸಲ್ಪಟ್ಟ ಆನೆಗಳೂ ಕುದುರೆಗಳೂಉಳ್ಳದ್ದನ್ನಾಗಿಯೂ, ಚಕಾರ-ಮಾಡಿದನು ॥೧೬॥ ಕುರೂದ್ವಹ-ಪರೀಕ್ಷಿದನೇ! ಯೋಧೈಃ-ಭಂಡಿನವರಿಂದ, ಯಾನಿಶಸ್ತ್ರಾಸ್ತ್ರಾಣಿ-ಯಾವ ಆಯುಧಂಗಳೂ ಬಾಣಂಗಳೂ, ಪ್ರಯುಕ್ತಾನಿ-

ವರಿಂದ ಪ್ರಯುಕ್ತಂಗಳಾದ ಆಯುಧಂಗಳಂ ತನ್ನ ಬಾಣಂಗಳಿಂದ ತುಮುರುತುಮುರಾಗಿ ಚೂರ್ಣೀಕರಿಸಿದನು. ವೀರಾಸುರನುಮುಂತಾದ ಆಯೆಂಟುಮಂದಿಯ ಬಾಹುಗಳಂ ಕಂಠಗಳಂ ಪಾದಂಗಳಂ ತೊಡೆಗಳಂಸಹ ಛೇದಿಸಿ ಆಯೆಂಟು ಮಂದಿಯಂ ಯಮಪುರ ಪ್ರವೇಶವಂ ಮಾಡಿಸಿದನು।೧೩॥ ಅಮೇಲೆ ಭೂಪುತ್ರನಾದ ನರಕಾಸುರನುಭಗವಂತನ ಚಕ್ರಾಯುಧದಿಂದಲೂ ಬಾಣಂಗಳಿಂದಲೂ ಛೇದಿಸಲ್ಪಟ್ಟು ನಾಶವನೆಯ್ದಿದ ತನ್ನ ಸೈನ್ಯಂಗಳಂ ನೋಡಿ ಬಹುಕೋಪಯುಕ್ತನಾಗಿ, ಸಮುದ್ರೋತ್ಪನ್ನಂಗಳಾದ ಮದಸ್ರಾವಿಗಳಾದ ಮದದಾನೆಗಳಿಂದ ಯುಕ್ತನಾಗಿ ಶ್ರೀಕೃಷ್ಣನಮೇಲೆ ಬಂದನು ॥೧೪। ಗರುಡನಮೇಲೆ ಸತ್ಯಭಾಮಾಸಮೇತನಾಗಿ ಕುಳಿತಿರುವ ಶ್ರೀಕೃಷ್ಣನಂ ಸೂರ್ಯನಮೇಲೆ ಮಿಂಚಿನಿಂದ ಕೂಡಿರುವ ನೀಲಮೇಘವನೆಂತಂತೆ ಕಂಡನು. ಆ ಕೃಷ್ಣನಮೇಲೆ ಶತಘ್ನಿಯೆಂಬ ಆಯುಧವಂ ಪ್ರಯೋಗಿಸಿದನು. ಅವನ ಭಟರೆಲ್ಲರೂ ಏಕಕಾಲದಲ್ಲಿ ಶ್ರೀಕೃಷ್ಣನಂ ಪ್ರಹರಿಸಿದರು ।೧೫। ಭಗವಂತನಾದ ಶ್ರೀಕೃಷ್ಣನು ವಿಚಿತ್ರಂಗಳಾದ ಪಕ್ಷಂಗಳುಳ್ಳ ಬಾಣಂಗಳಿಂದ ನರಕಾಸುರನ ಸೈನ್ಯವಂ ಛೇದಿಸಲ್ಪಟ್ಟ ವಾಹನಂಗಳೂ ತೊಡೆಗಳೂ ಕಂಠಗಳೂ ಶರೀರಗಳೂ ಉಳ್ಳದ್ದನ್ನಾಗಿ ಮಾಡಿದನು. ಆನೆಗಳಂ ಕುದುರೆಗಳಂಸಹ ಸಂಹರಿಸಿದನು ।೧೬। ತನ್ನ ರೆಕ್ಕೆಗಳಿಂದ ಗಜಗಳಂಸಂ

ಪರಮಾತ್ಮನ್ನಮೋಸ್ತುತೇ ‖೨೮‖ ತ್ವಂವೈಸಿಸೃಕ್ಷೂರಜಉತ್ಕಟಂಪ್ರಭೋತಮೋನಿರೋಧಾಯಬಿಭ ರ್ಷ್ಯಸಂವೃತಃ। ಸ್ಥಾನಾಯಸತ್ವಂಜಗತೋಜಗತ್ಪತೇಕಾಲಃಪ್ರಧಾನಂಪುರುಷೋಭವಾನ್ಪರಃ‖೨೯‖ ಅಹಂಪಯೋಜ್ಯೋತಿರಥಾನಿಲೋನಭೋ ಮಾತ್ರಾಣಿದೇವಾಮನಇಂದ್ರಿಯಾಣಿಚ । ಕರ್ತಾಮಹಾನಿ ತ್ಯಖಿಲಂಚರಾಚರಂತ್ವಯ್ಯದ್ವಿತೀಯೇಭಗವನ್ನಯಂಭ್ರಮಃ ‖೩೦‖ ತಸ್ಯಾತ್ಮಜೋಯಂತವಪಾದ ಪಂಕಜಂಭೀತಃಪ್ರಪನ್ನಾರ್ತಿಹರೋಪಸಾದಿತಃ । ತತ್ಪಾಲಯೈನಂಕುರುಹಸ್ತಪಂಕಜಂಶಿರಸ್ಯಮು ಷ್ಯಾಖಿಲಕಲ್ಮಷಾಪಹಂ ‖೩೧‖ ಶ್ರೀಶುಕಃ। ಇತಿಭೂಮ್ಯಾರ್ಚಿತೋವಾಗ್ಭಿರ್ಭಗವಾನ್ಭಕ್ತಿನಮ್ರ

ಅನಂತಶಕ್ತಯೇ-ಅಪರಿಮಿತಮಾಯಾಶಕ್ತಿಗಳುಳ್ಳಂಥಾ, ಬ್ರಹ್ಮಣೇ-ಹೆಚ್ಚಾದವಸ್ತುವಿಗೆ, ನಮಸ್ಕಾರವು ಪರಾವರಾತ್ಮನ್-ವ್ಯಾಪಕಂಗಳಿಗೂ ಅವ್ಯಾಪಕಂಗಳಿಗೂ ಚೈತನ್ಯವಾಗಿರುವನೇ। ಭೂತಾತ್ಮನ್-ಭೂತಂಗಳಲ್ಲಿ ಆತ್ಮವಾಗಿರುವನೇ! ಪರಮಾತ್ಮನ್-ಜೀವಾತ್ಮರಿಗೆ ಸ್ವರೂಪವಾದವನೇ! ತೇ-ನಿನಗೋಸುಗ, ನಮಃ-ನಮಸ್ಕಾರವು, ಅಸ್ತು-ಆಗಲಿ ‖೨೮‖ ಪ್ರಭೋ-ಒಡೆಯನೇ। ತ್ವಂವೈ-ನೀನೇ, ಸಿಸೃಕ್ಷುಃ-ಲೋಕವಂ ಹುಟ್ಟಿಸಲಪೇಕ್ಷಿಸಿದವನಾಗಿ, ಉತ್ಕಟಂರಜಃ-ಕಾರ್ಯಪರರಜೋಗುಣವನ್ನೂ, ಜಗತಃ-ಪ್ರಪಂಚದ, ನಿರೋಧಾಯ-ನಿಗ್ರಹಕ್ಕೋಸುಗ, ತಮಃ-ಇದ್ರಿಕ್ತವಾದ ತಮೋಗುಣವನ್ನೂ, ಸ್ಥಾನಾಯ-ಪ್ರಪಂಚದಸ್ಥಿತಿಗೋಸುಗ, ಉತ್ಕಟಂಸತ್ವಂ-ಅಧಿಕವಾದ ಸತ್ವಗುಣವನ್ನೂ, ಅಸಂವೃತಃ-ಮಾಯೆಯಿಂದ ಮರೆಯಲ್ಪಡದವನಾಗಿಯೇ, ಬಿಭರ್ಷಿ-ತ್ರಿಗುಣಂಗಳಧರಿಸಿ ತ್ರಿಮೂರ್ತಿಗಳಾಗಿರುವೆ, ಜಗತ್ಪತೇ-ಪ್ರಪಂಚಕ್ಕೊಡೆಯನೇ, ಭವಾನ್-ನೀನೇ ಕಾಲಃ-ಸರ್ವಾಧಾರವಾದ ಕಾಲತತ್ವವೂ, ಪ್ರಧಾನಂ-ಮೂಲಪ್ರಕೃತಿಯೂ, ಪರಃಪುರುಷಃ-ಪರಮಪುರುಷನೂ ಆಗಿರುವೆ ‖೨೯‖ ಭಗವನ್-ಭಗವಂತನಾದ ಕೃಷ್ಣನೇ! ಅಹಂ-ಭೂಮಿಯಾದ ನಾನು, ಪಯಃ-ಜಲವು, ಜ್ಯೋತಿಃ-ಅಗ್ನಿಯೂ, ಅನಿಲಃ-ಗಾಳಿಯೂ, ನಭಃ-ಆಕಾಶವೂ, ಮಾತ್ರಾಣಿ-ಶಬ್ದಾದಿ ತನ್ಮಾತ್ರಗುಣಂಗಳೂ, ಅಥ-ಬಳಿಕ, ದೇವಾಃ-ಇಂದ್ರಿಯಾಭಿಮಾನಿದೇವತೆಗಳೂ, ಮನಃ-ಅಂತಃಕರಣವೂ, ಇಂದ್ರಿಯಾಣಿಚ-ಕರಣಂಗಳೂ ಕರ್ತಾ-ದೇಹಾಭಿಮಾನಿಯಾದ ಜೀವನೂ ಮಹಾನ್-ಮಹತ್ತತ್ವವೂ, ಇತಿ-ಇಂತೆಂಬ, ಅಖಿಲಂ-ಸಮಸ್ತವಾದ, ಚರಾಚರಂ-ಸ್ಥಾವರಜಂಗಮವಾದ, ಜಿಪಚಿತ್ಪ್ರಪಂಚವು, ಅದ್ವಿತೀಯೇ-ಜಾತೀಯವಿಜಾತೀಯ ಸ್ವಗತಭೇದ ಶೂನ್ಯನಾದ, (ಎರಡನೆಯವಸ್ತುವಿಲ್ಲದ ಅದ್ವೈತವಾದ,) ತ್ವಯಿ-ನಿನ್ನಲ್ಲಿ, ಅಯಂ-ಈ ಭೇದಪ್ರಕಾರವು, ಭ್ರಮಃ-ಸ್ವರೂಪಾಜ್ಞಾನಪ್ರಯುಕ್ತವಾದ, ಭ್ರಾಂತಿಯಿಂದ್ದರಿಂದ ಪೃಥಕ್ಕಾಗಿ ತೋರುವುದು ಸತ್ಯವಲ್ಲವು ‖೩೦‖ ತಸ್ಯ-ಆ ನರಕಾಸುರನ, ಆತ್ಮಜಃ-ಮಗನಾದ ಅಯಂ-ಈ ಭಗದತ್ತನೆಂಬವನು ಭೀತಃ-ಹೆದರಿದವನಾದ್ದರಿಂದ, ಪ್ರಪನ್ನಾರ್ತಿಹರ-ನಂಬಿದವರ ದುಃಖಂಗಳಂಪರಿಹರಿಸುವವನೇ! ತವ-ನಿನ್ನ ಪಾದಪಂಕಜಂ-ಅಡಿದಾವರೆಯನ್ನು, ಉಪಸಾದಿತಃ-ಅಭಯಲಾಭಕ್ಕೋಸುಗ ನನ್ನಿಂದ ಸೇರಿಸಲ್ಪಟ್ಟವನಾಗಿರುವನು, ತತ್-ಆ ಕಾರಣದಿಂದ, ಏನಂ-ಇವನನ್ನು, ಪಾಲಯ-ರಕ್ಷಿಸು, ಅಮುಷ್ಯ-ಇವನ, ಶಿರಸಿ-ತಲೆಯಲ್ಲಿ, ಅಖಿಲಕಲ್ಮಷಾಪಹಂ-ಸಕಲ ದೋಷಪರಿಹಾರಕವಾದ, ಹಸ್ತಪಂಕಜಂ-ಕರಕಮಲವನ್ನು, ಕುರು-ಮಾಡು (ಇರಿಸು) ‖೩೧‖ [ಶುಕವಚನವು] ಇತಿ-ಹೀಗೆ, ಭಕ್ತಿನಮ್ರಯಾ-ಪ್ರೀತಿಯಿಂಬಗ್ಗಿದವಳಾದ ಭೂಮ್ಯಾ-ಭೂ

---

ಕಾರ್ಯಕಾರಣರೂಪನಾದ ಜಗದ್ರೂಪನಾದ ಪರಮಾತ್ಮನಾದ ನಿನಗೆನಮಸ್ಕಾರವು ‖೨೮‖ ಎಲೈಪ್ರಭುವಾದ ಶ್ರೀಕೃಷ್ಣನೇ! ನೀನುಪ್ರಪಂಚಸೃಷ್ಟಿಗೋಸ್ಕರ ರಜೋಗುಣವಂ ಧರಿಸುತ್ತೀಯೆ, ಲಯಾರ್ಥವಾಗಿತಮೋಗುಣವಂ ಆಶ್ರಯಿಸುವಿ, ರಕ್ಷಣಾರ್ಥವಾಗಿ ಸತ್ವಗುಣವಂ ಧರಿಸುವಿ. ಕಾಲವು,ಪ್ರಧಾನವು, ಪುರುಷನು. ಪರಮಾತ್ಮನೂ ನೀನೇಸರಿ‖೨೯‖ಎಲೈಭಗವಂತನೇ! ನಾನು ಜಲವು ತೇಜಸ್ಸುವಾಯುವು ಆಕಾಶವು ದೇವತೆಗಳು ಮನಸ್ಸುಇಂದ್ರಿಯಂಗಳು ಅಹಂಕಾರವು ಮಹತ್ತತ್ವವು ಇದುಸಮಸ್ತವೂ ದ್ವಿತೀಯವಸ್ತುರಹಿತನಾದನಿನ್ನಲ್ಲಿಯೇ ಅಂತರ್ಭೂತವು. ಭ್ರಮದಿಂದಪೃಥಕ್ಕಾಗಿ ತೋರುವ ದೇಹೊರತು ಪಾರಮಾರ್ಥವಲ್ಲವು ‖೩೦‖ಶರಣಾಗತರಕ್ಷಕನಾದ ಭಗವಂತನೆ! ಈಬಾಲಕನಾದ ಭಗದತ್ತನು ಆನರಕಾಸುರನ ಪುತ್ರನು. ಭೀತನಾಗಿ ನಿನ್ನಪಾದಮೂಲವಂ ಪಡೆದಿದ್ದಾನೆ.ಆಕಾರಣದಿಂದ ಇವನಶಿರಸ್ಸಿನಮೇಲೆ ಸರ್ವಪಾಪಪರಿಹಾರಕವಾದ ನಿನ್ನಹಸ್ತವಂ ಇರಿಸ್ಸುರಕ್ಷಿಸು ‖೩೧‖ ಎಲೈಅರಸೇ! ಈರೀತಿಯಲ್ಲಿ ಭಕ್ತಿನಮ್ರಳಾದ ಭೂದೇವಿಯಿಂದ ಸ್ತುತಿವಾಕ್ಯಗಳಿಂದಪ್ರ

ಯಾ | ದತ್ತ್ವಾಭಯಂ ಭೌಮಗೃಹಂ ಪ್ರಾವಿಶತ್ಸಕಲರ್ಧಿಮತ್ ||೩೦|| ತತ್ರ ರಾಜನ್ಯಕನ್ಯಾನಾಂ ಷಟ್ಸಹಸ್ರಾಧಿಕಾಯುತಂ | ಭೌಮಾಹೃತಾನಾಂ ವಿಕ್ರಮ್ಯ ರಾಜಭ್ಯೋ ದದೃಶೆ ಹರಿಃ ||೩೧|| ತಂ ಪ್ರವಿಷ್ಟಂ ಸ್ತ್ರಿಯೋ ವೀಕ್ಷ್ಯ ನರವರ್ಯಂ ವಿಮೋಹಿತಾಃ | ಮನಸಾ ವವ್ರಿರೇಽಭೀಷ್ಟಂ ಪತಿಂ ದೈವೋಪಸಾದಿತಂ ||೩೨|| ಭೂಯಾತ್ಪತಿರಯಂ ಮಹ್ಯಂ ಧಾತಾ ತದನುಮೋದತಾಂ | ಇತಿ ಸರ್ವಾಃ ಪೃಥಕ್ ಕೃಷ್ಣೇ ಭಾವೇನ ಹೃದಯಂ ದಧುಃ ||೩೩|| ತಾಃ ಪ್ರಾಹಿಣೋದ್ದ್ವಾರವತೀಂ ಸುಮೃಷ್ಟವಿರಜೋಂಬರಾಃ | ನರಯಾನೈರ್ಮಹಾಕೋಶಾನ್ ರಥಾಶ್ವಾನ್ ದ್ರವಿಣಂ ಮಹತ್ ||೩೪|| ಐರಾವತಕುಲೇಭಾಂಶ್ಚ ಚತುರ್ದಂತಾಂಸ್ತರಸ್ವಿನಃ | ಪಾಂಡುರಾಂಶ್ಚ ಚತುಷ್ಷಷ್ಟಿಂ ಪ್ರೇರಯಾಮಾಸ ಕೇಶವಃ ||೩೫|| ಗತ್ವಾ ಸುರೇಂದ್ರಭ

---

ದೇವಿಯಿಂದ, ವಾಗ್ಭಿಃ-ಸ್ತುತಿವಚನಂಗಳಿಂ, ಅರ್ಚಿತಃ-ಪೂಜಿಸಲ್ಪಟ್ಟ, ಭಗವಾನ್-ಕೃಷ್ಣನು, ಅಭಯಂ-ಭಯವಿಲ್ಲವೆಂಬ ಭರವಸವನ್ನು ದತ್ತ್ವಾ-ಕೊಟ್ಟು, ಸಕಲರ್ಧಿಮತ್-ಸಮಸ್ತೈಶ್ವರ್ಯಂಗಳುಳ್ಳ, ಭೌಮಗೃಹಂ-ನರಕನ ಮನೆಯನ್ನು, ಪ್ರಾವಿಶತ್-ಪ್ರಕಟವಾಗಿ ಹೊಕ್ಕನು ||೩೦|| ತತ್ರ-ಅಲ್ಲಿ ವಿಕ್ರಮ್ಯ-ಪರಾಕ್ರಮವಂತೋರಿ, ರಾಜಭ್ಯಃ-ಅರಸುಗಳಿದೆಸೆಯಿಂದ, ಭೌಮಾಹೃತಾನಾಂ-ನರಕನಿಂದ ಅಪಹರಿಸಿ ತರಲ್ಪಟ್ಟಿರುವ, ರಾಜನ್ಯಕನ್ಯಾನಾಂ-ಭೂಪಾಲಪುತ್ರಿಯರ, ಷಟ್ಸಹಸ್ರಾಧಿಕಾಯುತಂ-ಹದಿನಾರು ಸಾವಿರವನ್ನು, ಹರಿಃ-ಕೃಷ್ಣನು, ದದೃಶೇ-ನೋಡಿದನು ||೩೧|| ಪ್ರವಿಷ್ಟಂ-ಮನೆಯೊಳ್ ಹೊಕ್ಕಂಥಾ, ನರವರ್ಯಂ-ಪುರುಷಶ್ರೇಷ್ಠನಾದ, ತಂ-ಆ ಕೃಷ್ಣನನ್ನು, ವೀಕ್ಷ್ಯ-ನೋಡಿ, ವಿಮೋಹಿತಾಃ ವಿಶೇಷಮೋಹವುಳ್ಳವರಾದ, ಸ್ತ್ರಿಯಃ-ಹೆಂಗಳು, ಮನಸಾ-ಅಂತರಂಗದಿಂದ, ಅಭೀಷ್ಟಂ-ಒಪ್ಪಿಗೆಯಾದಂಥಾ, ದೈವೋಪಸಾದಿತಂ-ತಮ್ಮ ಅದೃಷ್ಟದಿಂದ ಕೂಡಲ್ಪಟ್ಟಂಥಾ ಪತಿಂ-ಗಂಡನನ್ನಾಗಿ, ವವ್ರಿರೇ-ಬಯಸಿದರು ||೩೨|| ಅಯಂ-ಈ ಕೃಷ್ಣನು, ಮಹ್ಯಂ-ನನಗೆ, ಪತಿಃ-ಗಂಡನು ಭೂಯಾತ್-ಆಗಲಿ, ಧಾತಾ-ದೇವರು, ತತ್-ಅದನ್ನು, ಅನುಮೋದತಾಂ-ಒಪ್ಪಿಕೊಳ್ಳಲಿ, ಇತಿ-ಹೀಗೆಂದು, ಸರ್ವಾಃ-ಹೆಂಗಳೆಲ್ಲರೂ, ಪೃಥಕ್-ಬೇರೆಬೇರೆ ಕೃಷ್ಣೇ-ವಾಸುದೇವನಲ್ಲಿ ಭಾವೇನ-ಪತಿಭಾವನೆಯಿಂದ, ಹೃದಯಂ ಅಂತರಂಗವನ್ನು, ದಧುಃ-ಇರಿಸಿದರು ||೩೩|| ಸುಮೃಷ್ಟವಿರಜೋಂಬರಾಃ-ನಿರ್ಮಲವಸ್ತ್ರಂಗಳುಳ್ಳ, ತಾಃ-ಹದಿನಾರು ಸಾವಿರ ಸ್ತ್ರೀಯರನ್ನು, ದ್ವಾರವತೀಂ-ದ್ವಾರಕೆಗೆ, ಪ್ರಾಹಿಣೋತ್-ಕಳುಹಿಸಿದನು, ಮಹಾಕೋಶಾನ್ ದೊಡ್ಡ ಧನದ ಬೊಕ್ಕಸಗಳನ್ನೂ, ರಥಾಶ್ವಾನ್-ತೇರು ಕುದುರೆಗಳನ್ನೂ, ಮಹತ್ ದ್ರವಿಣಂ-ಮಹಾಧನವನ್ನೂ, ನರಯಾನೈಃ-ಆಳುಗಳಿಂದಲೂ ವಾಹನಂಗಳಿಂದಲೂ, ದ್ವಾರಕೆಗೆ ಕಳುಹಿಸಿದನು ||೩೪|| ಕೇಶವಃ-ಕೃಷ್ಣನು, ಚತುರ್ದಂತಾನ್-ನಾಲ್ಕು ಹಲ್ಲುಗಳುಳ್ಳ, ತರಸ್ವಿನಃ-ವೇಗವುಳ್ಳ, ಪಾಂಡುರಾಂಶ್ಚ-ಬಿಳುಪುಳ್ಳ, ಚತುಃಷಷ್ಟಿಂ-೬೪ ಉಳ್ಳ, ಐರಾವತಕುಲೇಭಾಂಶ್ಚ-ಇಂದ್ರನಾನೆಯವಂಶದಲ್ಲಿಹುಟ್ಟಿದಾನೆಗಳನ್ನೂ, ಪ್ರೇರಯಾಮಾಸ-ಕಳುಹಿಸಿದನು ||೩೫|| ಸಪ್ರಿಯಃ-ಪ್ರಿಯಳಾದ ಸತ್ಯಭಾಮೆಯಿಂ ಸಹಿತನಾದ ಕೃಷ್ಣನು, ಸುರೇಂದ್ರಭವನಂ-ದೇವರಾಜನ ಮನೆಗೆ, ಗತ್ವಾ-ಹೋಗಿ, ಅದಿತ್ಯೈ-ಇಂದ್ರನ ತಾಯಿಯಾದ ಅದಿತಿದೇವಿಗೆ, ಕುಂಡಲೇ-ಓಲೆಗಳನ್ನು, ದತ್ವಾ-

---

ರ್ಚಿತನಾದ ಭಗವಂತನು ಆ ಭಗವತ್ನಿಗೆ ಅಭಯವನಿತ್ತು ಸಂಪದ್ಯುಕ್ತವಾದ ನರಕಾಸುರನ ಗೃಹವಂ ಪ್ರವೇಶಿಸಿದನು ||೩೦|| ಆ ಭಗವಂತನು ಆ ನರಕಾಸುರನ ಅಂತಃಪುರದಲ್ಲಿ ಅವನಿಂದ ಬಲಾತ್ಕಾರದಿಂ ಅಪಹರಿಸಿ ತಂದುಪಟ್ಟಿರಲ್ಪಟ್ಟ ರಾಜಕನ್ಯೆಯರು (೧೬೦೦೦) ಹದಿನಾರು ಸಾವಿರಮಂದಿ ಮೊದಲಾಗಿ ಅವರಂಕಂಡನು ||೩೧|| ಆ ಕನ್ಯೆಯರು ಅಂತಃಪುರವಂ ಪ್ರವೇಶಿಸಿದ ಪುರುಷಶ್ರೇಷ್ಠನಾದ ಶ್ರೀಕೃಷ್ಣನಂ ನೋಡಿ ಮನಸ್ಸಿನಲ್ಲಿ ಈ ಪುರುಷನೇ ನಮಗೆ ಯೋಗ್ಯನಾದ ಪತಿಯೆಂದೂ ನಮಗೆ ಅನುರೂಪನಾದ ಈ ಪುರುಷನು ದೈವವೇ ನಮಗೆ ತೋರಿಸಿತೆಂದು ಭಗವಂತನ ಸೌಂದರ್ಯವಂ ನೋಡಿ ಮೋಹಿತೆಯರಾಗಿ ನಿಶ್ಚಯಿಸಿದರು ||೩೨|| ಆ ಸ್ತ್ರೀಯರು ಪ್ರತ್ಯೇಕವಾಗಿ, ತಮ್ಮ ತಮ್ಮ ಮನಸ್ಸಿನಲ್ಲಿ ಈ ಪುರುಷನೇ ನಮಗೆ ಪತಿಯಾಗಲಿ ಬ್ರಹ್ಮನು ಈ ಯರ್ಥವಂ ಸಮ್ಮತಿಸಲಿ, ಎಂದು ಪ್ರಾರ್ಥಿಸಿದರು ||೩೩|| ಆಮೇಲೆ ಭಗವಂತನು ದಿವ್ಯದುಕೂಲ ಧಾರಿಗಳಾದ ಆ ಸ್ತ್ರೀಯರನೆಲ್ಲರಂ ಡೋಲಿಗಳಲ್ಲಿ ಹತ್ತಿಸಿ ದ್ವಾರಕಾಪುರಕ್ಕೆ ಕಳುಹಿಸಿದನು. ರಥಂಗಳಂ ಬೊಕ್ಕಸಂಗಳಂ ಸಹ ಕಳುಹಿಸಿದನು. ಅಶ್ವಂಗಳಂ ಮಹತ್ತಾದ ಧನವನ್ನೂ ಕಳುಹಿಸಿದನು ||೩೪|| ಐರಾವತಕುಲೋತ್ಪನ್ನಗಳಾದ ಚತುರ್ದಂತಗಳುಳ್ಳ ಶುಭ್ರವರ್ಣಂಗಳಾದ ದಿವ್ಯಗಜಂಗಳಂ ೬೪ ಕ್ಕಂ ಕಳುಹಿಸಿದನು ||೩೫|| ಆಮೇಲೆ ಸ್ವರ್ಗಕ್ಕೆ ಹೋಗಿ

ವನಂ ದತ್ತ್ವಾದಿತ್ಯೈ ಚ ಕುಂಡಲೇ। ಪೂಜಿತಸ್ತ್ರಿದಶೇಂದ್ರೇಣ ಮಹೇಂದ್ರಾಣ್ಯಾ ಚ ಸಪ್ರಿಯಃ ॥೩೮॥ ಚೋದಿತೋ ಭಾರ್ಯಯೋತ್ಪಾಟ್ಯ ಪಾರಿಜಾತಂ ಗರುತ್ಮತಿ ॥ ಆರೋಪ್ಯ ಸೇಂದ್ರಾನ್ ವಿಬುಧಾನ್ನಿರ್ಜಿತ್ಯೋಪಾನಯತ್ಪುರಮ್ ॥೩೯॥ ಸ್ಥಾಪಿತಸ್ಸತ್ಯಭಾಮಾಯಾ ಗೃಹೋದ್ಯಾನೋಪಶೋಭನಃ। ಅನ್ವಗುರ್ಭ್ರಮರಾಸ್ಸ್ವರ್ಗಾತ್ತದ್ಗಂಧಾಸವಲಂಪಟಾಃ ॥೪೦॥ ಯಯಾಚ ಆನಮ್ಯ ಕಿರೀಟಕೋಟಿಭಿಃ ಪಾದೌ ಸ್ಪೃಶನ್ನಚ್ಯುತಮರ್ಥಸಾಧನಮ್ । ಸಿದ್ಧಾರ್ಥ ಏತೇನ ವಿಗೃಹ್ಯತೇ ಮಹಾನಹೋ ಸುರಾಣಾಂ ಚ ತಮೋ ಧಿಗಾಢ್ಯತಾಮ್ ॥೪೧॥ ಅಥೋ ಮುಹೂರ್ತ ಏಕಸ್ಮಿನ್ನಾನಾಗಾರೇಷು ತಾಸ್ಸ್ತ್ರಿಯಃ । ಯಥೋಪಯೇಮೇ ಭಗವಾನ್ ತಾವದ್ರೂಪಧರೋಽವ್ಯಯಃ ॥೪೨॥ ಗೃಹೇಷು ತಾಸಾಮನಪಾಯ್ಯತರ್ಕಕೃನ್ನಿರಸ್ತಸಾಮ್ಯಾತಿಶಯೇಷ್ವವಸ್ಥಿತಃ।

ಕೊಟ್ಟು, ತ್ರಿದಶೇಂದ್ರೇಣ-ದೇವರಾಜನಿಂದಲೂ, ಮಹೇಂದ್ರಾಣ್ಯಾ ಚ-ಇಂದ್ರಪತ್ನಿಯಾದ ಶಚೀದೇವಿಯಿಂದಲೂ, ಪೂಜಿತಃ-ಆರಾಧಿಸಲ್ಪಟ್ಟವನಾದನು ॥೩೮॥ ಭಾರ್ಯಯಾ-ಸತ್ಯಭಾಮೆಯಿಂದ, ಚೋದಿತಃ-ಪ್ರೇರಿಸಲ್ಪಟ್ಟವನಾಗಿ, ಪಾರಿಜಾತಂ-ಕಲ್ಪವೃಕ್ಷವನ್ನು, ಉತ್ಪಾಟ್ಯ-ಕಿತ್ತು, ಗರುತ್ಮತಿ-ಗರುಡನಮೇಲೆ, ಆರೋಪ್ಯ-ಏರಿಸಿ, ಸೇಂದ್ರಾನ್ ವಿಬುಧಾನ್-ಇಂದ್ರನಿಂ ಕೂಡಿದ ದೇವರ್ಕಳನ್ನು, ನಿರ್ಜಿತ್ಯ-ಗೆದ್ದು, ಪುರಮುಪಾನಯತ್-ದ್ವಾರಕಾನಗರದ ಬಳಿಗೆ ತಂದನು ॥೩೯॥ ಯದ್ಗಂಧಾಸವಲಂಪಟಾಃ-ಯಾವ ಪಾರಿಜಾತವೃಕ್ಷದ ಪರಿಮಳದ ಜೇನಿನಲ್ಲಿ ಆಸಕ್ತಂಗಳಾದ, ಭ್ರಮರಾಃ-ತುಂಬಿಗಳು ಸ್ವರ್ಗಾತ್-ದೇವಲೋಕದಿಂದ ಅನ್ವಗುಃ-ಅನುಸರಿಸಿ ಬಂದವೋ, ಸಃ-ಆ ಕಲ್ಪವೃಕ್ಷವು, ಸತ್ಯಭಾಮಾಯಾಃ-ಸತ್ಯಭಾಮಾದೇವಿಯ, ಗೃಹೋದ್ಯಾನೋಪಶೋಭನಃ-ಮನೆಯತೋಂಟವನ್ನಲಂಕರಿಸುವುದಾಗಿ, ಸ್ಥಾಪಿತ-ನಟ್ಟಿಡಲ್ಪಟ್ಟಿತು ॥೪೦॥ ಏತೇನ-ಈ ಕೃಷ್ಣನಿಂದ, ಸಿದ್ಧಾರ್ಥಃ-ಪಡೆಯಲ್ಪಟ್ಟ ಪ್ರಯೋಜನವುಳ್ಳವನಾದ ಇಂದ್ರನು ಕಿರೀಟಕೋಟಿಭಿಃ-ಟೋಪಿಗೆಯ ಕೊನೆಗಳಿಂದ, ಆನಮ್ಯ-ಬಗ್ಗಿ, ಪಾದೌ-ಕಾಲುಗಳನ್ನು, ಸ್ಪೃಶನ್-ಮುಟ್ಟುವನಾಗಿ, ಅಚ್ಯುತಂ-ಕೃಷ್ಣನಂಕುರಿತು, ಅರ್ಥಸಾಧನಂ-ಸ್ವಪ್ರಯೋಜನಸಂಪಾದನವನ್ನು, ಯಯಾಚೇ-ಬೇಡಿಕೊಂಡವನಾದನು ಮಹಾನ್-ಅಂಥಾದೊಡ್ಡವನಾದ ಇಂದ್ರನೂಕೂಡ ವಿಗೃಹ್ಯತೇ-ಯುದ್ಧವಂ ಮಾಡುತ್ತಿರುವನು. ಅಹೋ-ಆಶ್ಚರ್ಯವು, ಸುರಾಣಾಂ-ದೇವರ್ಕಳ ತಮಃ-ಅಜ್ಞಾನವನ್ನೂ, ಆಢ್ಯತಾಂ ಚ-ಐಶ್ವರ್ಯಸಂಪನ್ನತೆಯನ್ನೂ, ಧಿಕ್-ನಿಂದಿಸು ॥೪೧॥ ಅಥೋ-ಅಬಳಿಕ, ಏಕಸ್ಮಿನ್ ಮುಹೂರ್ತೇ-ಒಂದು ತಾಸುಹೊತ್ತಿನ ಲಗ್ನದಲ್ಲಿಯೇ, ತಾಃ ಸ್ತ್ರಿಯಃ-ಆ ೧೬ ಸಾವಿರ ಹೆಂಗಸನ್ನು, ನಾನಾಗಾರೇಷು-ಹಲವುಬಗೆಯಾದ ೧೬ ಸಾವಿರ ಮನೆಗಳಲ್ಲಿ, ತಾವದ್ರೂಪಧರಃ-ಅಷ್ಟು ಆಕಾರಂಗಳನ್ನು ವಹಿಸಿದವನಾದ, ಅವ್ಯಯಃ-ನಾಶರಹಿತನಾದ. ಭಗವಾನ್-ಕೃಷ್ಣನು, ಯಥಾ-ಹೇಗೆ ವಿಧಿಯೋ ಹಾಗೆ, ಉಪಯೇಮೇ-ಮದುವೆಮಾಡಿಕೊಂಡನು ॥೪೨॥ ಅನಪಾಯಿ-ಅಪಾಯವಿಲ್ಲದವನಾಗಿ, ಅವಸ್ಥಿತಃ-ಇರುವ, ಅತರ್ಕ್ಯಕೃತ್-ಊಹಿಸಲಶಕ್ಯವಾದ ವ್ಯಾಪಾರಂಗಳಂ ಮಾಡುವನಾದ ಕೃಷ್ಣನು, ನಿರಸ್ತಸಾಮ್ಯಾತಿಶಯೇಷು-ಹೋಗಲಾಡಿಸಲ್ಪಟ್ಟ ಸರಿಯೂ ಹೆಚ್ಚೂ ಉಳ್ಳ [ಅಸದೃಶೋತ್ತಮಂಗಳಾದ] ತಾಸಾಂ ಗೃಹೇಷು-ಆ ಹೆಂಗಳ ಮನೆಗಳಲ್ಲಿ, ಗಾರ್ಹಕಮೇಧಿಕಾನ್-ಗೃ

---

ಅದಿತಿದೇವಿಯ ಕುಂಡಲಂಗಳಂ ಅದಿತಿಗೆಕೊಟ್ಟು, ಇಂದ್ರನಿಂದಲೂ ಶಚೀದೇವಿಯಿಂದಲೂ ಪ್ರಿಯೆಯೊಡನೆ ಪೂಜಿತನಾಗಿ ॥೩೮॥ ಸತ್ಯಭಾಮೆಯಿಂ ಪ್ರೇರಿತನಾದ ಶ್ರೀಕೃಷ್ಣನು ಪಾರಿಜಾತವೆಂಬ ಕಲ್ಪವೃಕ್ಷವಂ ಕಿತ್ತು ಗರುಡನ ಮೇಲೆ ಇರಿಸಿಕೊಂಡು ಇಂದ್ರಾದಿದೇವತೆಗಳಂ ಜಯಿಸಿ ಸ್ವಪುರಕ್ಕೆ ಬಂದನು ॥೩೯॥ ಸತ್ಯಭಾಮೆಯ ಗೃಹೋದ್ಯಾನದಲ್ಲಿ ಪಾರಿಜಾತವೃಕ್ಷವು ನಾಟಿಹಾಕಿದನು. ಸ್ವರ್ಗವಾಸಿಗಳಾದ ಭ್ರಮರಗಳು ಆ ಪಾರಿಜಾತಪುಷ್ಪಗಳ ಗಂಧಕ್ಕೆ ಆಸೆಪಟ್ಟು ಬಂದವು ॥೪೦॥ ಎಲೈ ಅರಸೇ! ಆ ದೇವೇಂದ್ರನು ಕಾರ್ಯಾರ್ಥವಾಗಿ ತನ್ನ ಕಿರೀಟಾಗ್ರದಿಂದ ಭಗವಂತನ ಪಾದಂಗಳಂ ಸ್ಪರ್ಶವಂ ಮಾಡಿ ಸ್ವಕಾರ್ಯವಂ ವಿಜ್ಞಾಪನಂಗೆಯ್ದು ಆ ಭಗವಂತನಿಂದ ಕಾರ್ಯವಂ ಮಾಡಿಕೊಂಡು ಆ ಶ್ರೀಕೃಷ್ಣನ ಸಂಗಡಲೇ ಯುದ್ಧವಂ ಮಾಡಿದನು, ದೇವತೆಗಳಿಗೆ ಅಜ್ಞಾನವೂ ಅಧಿಕವೇ. ಧನಮದವೂ ಅಧಿಕವೇ. ॥೪೧॥ ಅನಂತರದಲ್ಲಿ ಅವ್ಯಯನಾದ ಭಗವಂತನು ಏಕಮುಹೂರ್ತದಲ್ಲಿ ನಾನಾರೂಪಧಾರಿಯಾಗಿ ಯಥಾಶಾಸ್ತ್ರವಾಗಿ ಹದಿನಾರುಸಾವಿರ ಸ್ತ್ರೀಯರಂ ಪಾಣಿಗ್ರಹಣವಂ ಮಾಡಿಕೊಂಡನು ॥೪೨॥ ಊಹಿಸಲಶಕ್ಯವಾದ ಚರಿತ್ರೆಯುಳ್ಳ ಭಗವಂತನು ಅಸದೃಶವಿಭವಂಗಳುಳ್ಳ ಗೃಹಂಗಳಲ್ಲಿರುವ ಮಹಾಲಕ್ಷ್ಮಿಯ ಅಂಶಭೂತರಾದ

ರೇಮೇರಮಾಭಿರ್ನಿಜಧಾಮಸಂಪ್ಲುತೋಯಥೇತರೋಗಾರ್ಹಕಮೇಧಿಕಾಂಶ್ಚರನ್ ॥೪೩॥ ಇತ್ಥಂರಮಾಪತಿಮ
ವಾಪ್ಯಪತಿಂಸ್ತ್ರಿಯಸ್ತಾಬ್ರಹ್ಮಾದಯೋಪಿನವಿದುಃಪದವೀಂಯದೀಯಾಮ್ । ಭೇಜುರ್ಮುದಾವಿರ
ತಮೇಧಿತಯಾನುರಾಗಹಾಸಾವಲೋಕನವಸಂಗಮಜಲ್ಪಲಜ್ಜಾಃ ॥೪೪॥ ಪ್ರತ್ಯುದ್ಗಮಾದಗಭಯಾ
ಸನಪಾದಶೌಚತಾಂಬೂಲವಿಶ್ರಮಣವೀಜನಗಂಧಮಾಲ್ಯೈಃ। ಕೇಶಪ್ರಸಾರಶಯನಸ್ನಪನೋಪಹಾ
ರ್ಯೈರ್ದಾಸೀಶತಾಅಪಿವಿಭೋರ್ವಿದಧುಸ್ಮದಾಸ್ಯಮ್ ॥ .. ... ॥೪೫॥

ಇತಿಶ್ರೀಮದ್ಭಾಗವತೇ ದಶಮಸ್ಕಂಧೇ ಏಕೋನಷಷ್ಟಿತಮೋಽಧ್ಯಾಯಃ-

---

ಹಸ್ಥಾಶ್ರಮಕೃತ್ಯಗಳನ್ನು, ಚರನ್-ಆಚರಿಸುತ್ತಿರುವ, ಇತರೋಯಥಾ-ಪಾಮರನು ಹೇಗೋ ಹಾಗೆ, ನಿಜಧಾಮಸಂಪ್ಲುತಃ-ಸ್ವರೂಪಾನುಭವಪೂರ್ಣನಾದರೂ, ರಮಾಭಿಃ-ಲಕ್ಷ್ಮೀಸ್ವರೂಪಿಣಿಯರಾದ ಹೆಂಗಳೊಡನೆ, ರೇಮೇ-ಕ್ರೀಡಿಸಿದನು ॥೪೩॥ ತಾಃಸ್ತ್ರಿಯಃ-ಆ ಹೆಂಗಳು, ಯದೀಯಾಂಪದವೀಂ-ಯಾವವನ ದಾರಿಯನ್ನು, [ಅಥವಾ ಐಶ್ವರ್ಯವನ್ನು ] ಬ್ರಹ್ಮಾದಯೋಪಿ-ಬ್ರಹ್ಮಾದಿಗಳಾದವರುಕೂಡ ನವಿದುಃ-ತಿಳಿಯರೋ, ತಂರಮಾಪತಿಂ-ಆ ಲಕ್ಷ್ಮೀಶನನ್ನು, ಇತ್ಥಂ-ಹೀಗೆ, ಪತಿಂ-ಗಂಡನನ್ನಾಗಿ, ಅವಾಪ್ಯ-ಹೊಂದಿ, ಎಡೆಬಿಡದೆ, ಏಧಿತಯಾ-ವೃದ್ಧಿಹೊಂದಲ್ಪಟ್ಟ, ಮುದಾ-ಸಂತೋಷದಿಂದ, ಅನು---ಲಜ್ಜಾಃ ಅನುರಾಗ-ಅಕ್ಕರೆಯುಳ್ಳ, ಹಾಸ-ನಗೆ, ಅವಲೋಕನ ನೋಟಂಗಳೊಡನೆ, ನವಸಂಗಮ ಹೊಸಸಂಪರ್ಕದೊಳು, ಜಲ್ಪ-ಮಾತಾಡುವುದರಲ್ಲಿ, ಲಜ್ಜಾ -ನಾಚಿಕೆಯುಳ್ಳವರಾಗಿ, ಭೇಜುಃ-ಹೊಂದಿದರು ॥೪೪॥ ಪ್ರತ್ಯು---ಮಾಲ್ಯೈಃ-ಪ್ರತ್ಯುದ್ಗಮ-ಬರುವಾಗ ಇದಿರುಗೊಳ್ಳುವಿಕೆ, ಅದರ-ಪ್ರೀತಿಸುವಿಕೆ, ಭಯ-ಹೆದರುವಿಕೆ, ಆಸನ-ಪೀಠವನ್ನರ್ಪಿಸುವಿಕೆ, ಪಾದಶೌಚ-ಕಾಲುತೊಳೆಯುವಿಕೆ, ತಾಂಬೂಲ-ವೀಳ್ಯವನ್ನರ್ಪಿಸುವಿಕೆ,ವಿಶ್ರಮಣ-ಆಯಾಸಪರಿಹಾರೋಪಚಾರವಂಗೆಯ್ಯುವಿಕೆ,ವೀಜನ-ಗಾಳಿಯಂಬೀಸುವಿಕೆ, ಗಂಧಮಾಲ್ಯೈಃ ಪರಿಮಳಪುಷ್ಪ ಇವುಗಳಿಂದಲೂ, ಕೇಶ---ಹಾರ್ಯೈಃ-ಕೇಶಪ್ರಸಾರ-ಜುಟ್ಟನ್ನು ಹಿಕ್ಕಿಬಾಚುವಿಕೆ, ಶಯನ-ಹಾಸುವಿಕೆ, ಸ್ನಪನ-ನೀರೆರೆಯುವಿಕೆ,ಉಪಹಾರ್ಯೈಃ-ಭೋಗ್ಯವಸ್ತುಂಗಳಂ ಕಾಣಿಕೆಗಳನ್ನಾಗಿ ನೀಡುವಿಕೆಗಳಿಂದಲೂ, ದಾಸೀಶತಾಅಪಿ-ದಾಸಿಯರ ಗುಂಪುಗಳುಕೂಡ, ವಿಭೋಃ-ಒಡೆಯನಾದ ಕೃಷ್ಣನ, ದಾಸ್ಯಂ-ಸೇವೆಯನ್ನು, ವಿದಧುಸ್ಮ-ತಾವೇಮಾಡಿದರಲ್ಲವೆ ॥೪೫॥

ಇಂತೆಂಬಲ್ಲಿಗೆ ಭಾಗವತ ಪ್ರತಿಶಬ್ದಾರ್ಥಬೋಧಿನಿಯೆಂಬ ಟೀಕೆಯಲ್ಲಿ ದಶಮಸ್ಕಂಧದೊಳಗೆ
೫೯ನೆಯಅಧ್ಯಾಯಂಮುಗಿದುದು.

---

ಆಸ್ತ್ರೀಯರುಗಳೊಡನೆ ಗೃಹಸ್ಥಾಶ್ರಮ ಧರ್ಮಗಳನ್ನು ಆಚರಿಸುತ ವಿಹರಿಸಿದನು ॥೪೩॥ ಬ್ರಹ್ಮಾದಿಗಳೂ ಕೂಡ ಯಾವಭಗವಂತನ ಮಾರ್ಗವನರಿಯರೋ ಅಂತಾಭಗವಂತನಂ ಪತಿಯನ್ನಾಗಿ ಪಡೆದ ಆಸ್ತ್ರೀಯರು ಅನುರಾಗ ಪೂರ್ವಕವಾದ ನಗುವು ನೋಟಂಗಳು ನವಸಂಗಮ ಲಜ್ಜೆಯೂ ಉಳ್ಳವರಾಗಿ ಸುಖವ ನೆಯ್ದಿದರು ॥೪೪॥ ಆಸ್ತ್ರೀಯರು ಅನೇಕ ದಾಸೀಜನರುಳ್ಳವರಾದರೂ ಶ್ರೀಕೃಷ್ಣನಂ ತಾವೇಸೇವಿಸಿದರು. ಇದಿರಾಗಿ ಹೋಗಿ ಕರೆತರುವಿಕೆ, ಪೀಠವಂ ಕೊಡುವಿಕೆ, ಕಾಲುಗಳಂ ತೊಳೆಯುವಿಕೆ, ತಾಂಬೂಲಂಗಳಂ ನೀಡುವಿಕೆ, ಪಾದಹಸ್ತಗಳಿಗೆ ಉದಕವಂಕೊಡುವಿಕೆ, ಬೀಸುವಿಕೆ, ಗಂಧಲೇಪನವು, ಪುಷ್ಪಂಗಳಂ ಮುಡಿಸುವಿಕೆ, ಕೇಶಂಗಳಂ ಹಿಕ್ಕಿ ಸಿಕ್ಕುಬಿಡಿಸುವಿಕೆ, ಹಾಸಿಗೆಯಂಹಾಸುವಿಕೆ, ಸ್ನಾನಕ್ಕೆ ನೀರಂಕೊಡುವಿಕೆ,ಫಲಾಹಾರಕ್ಕೆ ತಂದೀಯುವಿಕೆ, ಎಡೆಹಾಕಿ ಭೋಜ್ಯಪದಾರ್ಥಂಗಳಂ ಬಡಿಸುವಿಕೆ,ಇವುಮುಂತಾದ ಉಪಚಾರಂಗಳಂತಾವೇಮಾಡಿದರು ॥೪೫॥

ಇಂತುಶ್ರೀಶುಕಮುನಿಯುಪರೀಕ್ಷಿದ್ರಾಯನಂಕುರಿತುನಿರೂಪಿಸಿದನೆಂದು ಸೂತಪೌರಾಣಿಕನುನೈಮಿ
ಶಾರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆಪೇಳಿದನೆಂಬಲ್ಲಿಗೆ- ಶ್ರೀಮನ್ಮಹೀಶೂರಪುರ
ವರಾಧೀಶ ಶ್ರೀಚಾಮರಾಜತನುಜಶ್ರೀಮತ್ಕೃಷ್ಣರಾಜವಿರಚಿತಮಾದಶ್ರೀಕೃಷ್ಣ
ರಾಜವಾಣೀವಿಲಾಸಮೆಂಬಶ್ರೀಭಾಗವತಪುರಾಣದಕರ್ಣಾಟಭಾಷಾವ್ಯಾಖ್ಯಾನ
ದೊಳುದಶಮಸ್ಕಂಧದಲ್ಲಿ ೫೯ನೆಯ ಅಧ್ಯಾಯವು
ಸಂಪೂರ್ಣವಾದುದು.

ಶ್ರೀಕೃಷ್ಣರುಕ್ಮಿಣೀದೇವ್ಯೋಃಪರಸ್ಪರನರ್ಮೋಕ್ತಿಪ್ರವಚನಘಟ್ಟಃ-

ಶ್ರೀಶುಕಃ॥ಕರ್ಹಿಚಿತ್ಸುಖಮಾಸೀನಂಸ್ವತಲ್ಪಸ್ಥಂಜಗದ್ಗುರುಮ್ । ಪತಿಂಪರ್ಯಚರದ್ಭೈಷ್ಮೀ ವ್ಯಜನೇನಸಖೀಜನೈಃ॥೧॥ ಯಸ್ತ್ವೇತಲ್ಲೀಲಯಾವಿಶ್ವಂಸೃಜತ್ಯತ್ತ್ಯವತೀಶ್ವರಃ । ಸಹಿಜಾತಸ್ಸ್ವಸೇತೂನಾಂಗೋಪೀಥಾಯಯದುಷ್ವಜಃ ॥೨॥ ತಸ್ಮಿನ್ನಂತರ್ಗೃಹೇಭ್ರಾಜನ್ಮುಕ್ತಾದಾಮವಿಲಂಬಿನಾ । ವಿರಾಜಿತೇವಿತಾನೇನದೀಪೈರ್ಮಣಿಮಯೈರಪಿ ॥೩॥ಮಲ್ಲಿಕಾದಾಮಭಿರ್ಧೂಪೈರ್ದ್ವಿರೇಫಕುಲನಾದಿತೇ । ಜಾಲರಂಧ್ರಪ್ರವಿಷ್ಟೈಶ್ಚಗೋಭಿಶ್ಚಂದ್ರಮಸೋಽಮಲೈಃ ॥೪॥ಪಾರಿಜಾತವನಾಮೋದವಾಯು

## ೬೦ನೆಯ ಅಧ್ಯಾಯದ ಪ್ರತಿಪದಟೀಕೆ.

[ಶುಕವಚನವು.] ಕರ್ಹಿಚಿತ್-ಒಂದಾನೊಂದು ಸಮಯದಲ್ಲಿ ಸ್ವತಲ್ಪಸ್ಥಂ-ತನ್ನ ಮಂಚದಲ್ಲಿರುವನಾಗಿ, ಸುಖಂ ಅನಾಯಾಸವಾಗಿ, ಆಸೀನಂ-ಕುಳಿತಿರುವ, ಜಗದ್ಗುರುಂ-ಪ್ರಪಂಚಕ್ಕೊಡೆಯನಾದ ಕೃಷ್ಣನನ್ನು, ಪತಿಂ-ತನ್ನಗಂಡನೆಂದು, ಭೈಷ್ಮೀ-ರುಕ್ಮಿಣಿಯು, ಸಖೀಜನೈಃ-ಗೆಳತಿಯರೊಡನೆ, ವ್ಯಜನೇನ-ಬೀಸಣಿಗೆಯಿಂದ, ಪರ್ಯಚರತ್-ಉಪಚರಿಸುತ್ತಿದ್ದಳು॥೧॥ಯಈಶ್ವರಃ-ಯಾವನಿಯಾಮಕನಾದದೇವರು, ಲೀಲಯಾ-ವಿಲಾಸದಿಂದ, ಏತದ್ವಿಶ್ವಂ-ಈ ಪ್ರಪಂಚವನ್ನು, ಸೃಜತಿ-ಹುಟ್ಟಿಸುವನೋ, ಅತ್ತಿ-ಭಕ್ಷಿಸುವನೋ, ಅವತಿ-ಪಾಲಿಸುವನೋ, ಅಜಃ-ಉತ್ಪತ್ತಿಯಿಲ್ಲದ, ಸಃ-ಆ ಈಶ್ವರನು, ಸ್ವಸೇತೂನಾಂ-ತನ್ನ ಧರ್ಮದ ಕಟ್ಟುಗಳ, ಗೋಪೀಥಾಯ-ರಕ್ಷಣಕ್ಕೋಸುಗ ಯದುಷು-ಯಾದವರಲ್ಲಿ, ಜಾತೋಹಿ-ಹುಟ್ಟಿರುವನಲ್ಲವೆ? ॥೨॥ ಭ್ರಾ... ಜನ್-ಭ್ರಾಜತ್-ಹೊಳೆಯುತ್ತಿರುವ, ಮುಕ್ತಾದಾಮ-ಮುತ್ತಿನ ಸರಗಳಿಂದ, ವಿಲಂಬಿನಾ-ಜೋಲಾಡಿಸಲ್ಪಟ್ಟಿರುವ, ವಿತಾನೇನ-ಮೇಲ್ಕಟ್ಟಿನಿಂದಲೂ, ಮಣಿಮಯೈರ್ದೀಪೈರಪಿ-ಸ್ವಯಂಪ್ರಕಾಶಗಳಾದ ರತ್ನದ ದೀವಿಗೆಗಳಿಂದಲೂ, ವಿರಾಜಿತೇ-ಹೊಳೆಯುತ್ತಿರುವ, ತಸ್ಮಿನ್-ಆ, ಅಂತರ್ಗೃಹೇ ಒಳಗಿನಮನೆಯಲ್ಲಿ ॥೩॥ ಮಲ್ಲಿಕಾದಾಮಭಿಃ-ಮಲ್ಲಿಗೆಯ ಹುವ್ವಿನ ಸರಗಳಿಂದಲೂ ಧೂಪೈ-ಪರಿಮಳದ ಹೊಗೆಗಳಿಂದಲೂ, ದ್ವಿರೇಫಕುಲನಾದಿತೇ-ತುಂಬಿಗಳ ಹಿಂಡುಗಳಿಂದ ಝೇಂಕರಿಸಲ್ಪಟ್ಟಿರುವಂಥಾ, ಜಾಲರಂಧ್ರಪ್ರವಿಷ್ಟೈಃ-ಗವಾಕ್ಷಗಳ ತೂತುಗಳಿಂದೊಳನುಗ್ಗಿದ, ಅಮಲೈಃ-ನಿರ್ಮಲವಾದ, ಚಂದ್ರಮಸೋಗೋಭಿಶ್ಚ-ಚಂದ್ರನ ಕಿರಣಗಳಿಂದಲೂ ॥೪॥ ಉದ್ಯಾನಶಾಲಿನಾ-ತೋಟದಲ್ಲಿ ಒಪ್ಪುತ್ತಿರುವ, ಪಾರಿಜಾತವನಾಮೋದವಾಯುನಾ-ಪಾರಿಜಾತ ವೃಕ್ಷಗಳ ತೋಂಟದ ಪರಿಮಳವುಳ್ಳ ಗಾಳಿಯಿಂದಲೂ, ಜಾಲರಂಧ್ರವಿಸರ್ಗತೈಃ-ಗವಾಕ್ಷಗಳ ತೂತುಗಳಿಂ ಹೊರಗಬಂದ, ಅಗರು

## ೬೦ನೇಯ ಅಧ್ಯಾಯವು

ಶ್ರೀಧರೀಯಶ್ಲೋಕಃ ॥ಅಥಷಷ್ಟಿತಮೇಕೃಷ್ಣಃಪರಿಹಾಸೇನರುಕ್ಮಿಣೀಂ । ಕೋಪಯಿತ್ವಾತತಃಪ್ರೇಮಕಲಹೇತಾಮಸಾಂತ್ವಯತ್॥ + ॥ ಟೀ॥ ಅರವತ್ತನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ಪರಿಹಾಸವಚನದಿಂದ ರುಕ್ಮಿಣೀದೇವಿಗೆ ಕೋಪವನ್ನುಂಟುಮಾಡಿ ಅಮೇಲೆ ಪ್ರಣಯ ಕಲಹ ಹುಂಟಾಗಲು ಪುನಃ ಆರುಕ್ಮಿಣಿಯಂ ತನ್ನಮಧುರ ವಚನಗಳಿಂದ ಸಮಾಧಾನ ಪಡಿಸಿದ ಸಂಬಂಧವಂ ಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸುವನದೆಂತೆನೆ,-

ಎಲೈ ಅರಸೇ! ಒಂದುಸಮಯದಲ್ಲಿ ರುಕ್ಮಿಣೀದೇವಿಯು ಹಾಸಿಗೆಯಮೇಲೆ ಕುಳಿತಿರುವ ಜಗದ್ಗುರುವಾದ ಪತಿಯಾದಶ್ರೀಕೃಷ್ಣನಂ ಸಖೀಜನರೊಡನೆಬೀಸಣಿಗೆಯಿಂಬೀಸುತ್ತಾ ಉಪಚರಿಸಿದಳು॥೧॥ಯಾವಈಶ್ವರನಾದ ಶ್ರೀಕೃಷ್ಣನು ಸಮಸ್ತ ಜಗತ್ತನ್ನೂ ಸೃಜಿಸುತ್ತಾನೆಯೋ, ಲೀಲೆಯಿಂದಲೇ ಸಂಹರಿಸುತ್ತಾನೆಯೋ, ರಕ್ಷಿಸುತ್ತಾನೆಯೋ, ಆಯೀಶ್ವರನು ಧರ್ಮಸಂಸ್ಥಾಪನಾರ್ಥವಾಗಿ ಯಾದವವಂಶದಲ್ಲಿ ಲೀಲಾಮಾನುಷನಾಗಿ ಅವತರಿಸಿರುವನು ॥೨॥ಆಗರ್ಭಗೃಹವೆಂತಾದ್ದೆಂದರೆ- ಪ್ರಕಾಶಿಸುವ ಮುತ್ತುಗಳ ಕುಚ್ಚುಗಳಿಂದ ಒಪ್ಪುವ ಮೇಲ್ಕಟ್ಟುಗಳಿಂದ ಯುಕ್ತವಾದ ರತ್ನದೀಪಗಳಿಂದಲೂ ಶೋಭಿತವಾಗಿ ॥೩॥ಭ್ರಮರ ಸಮೂಹಗಳಿಂದ ನಾದಿತವಾದ ಪುಷ್ಪಮಾಲೆಗಳಿಂದಲೂ ಧೂಪಂಗಳಿಂದಲೂ ಗವಾಕ್ಷಗಳಿಂದ ಬರುವ ಚಂದ್ರನ ಕಿರಣಂಗಳಿಂದಲೂ ॥೪॥ ಪಾರಿಜಾತವನದ ಪರಿಮಳವಂ ಅಪಹರಿಸಿಕೊಂಡುಬರುವ ಮಂದಮಾರುತನಿಂದಲೂ, ಗವಾಕ್ಷ ರಂಧ್ರಗಳಿಂದ

ನೋದ್ಯಾನಶಾಲಿನಾ । ಧೂಪೈರಾಗರುಭೀ ರಾಜನ್ ಜಾಲರಂಧ್ರವಿನಿರ್ಗತೈಃ ॥೫॥ ಪಯಃಫೇನನಿಭೇ ಶುಭ್ರೇ
ಪರ್ಯಂಕೇ ಕಶಿಪೂತ್ತಮೇ । ಉಪತಸ್ಥೇ ಸುಖಾಸೀನಂ ಜಗತಾಮೀಶ್ವರಂ ಪತಿಮ್ ॥೬॥ ವಾಲವ್ಯಜನಮಾ
ದಾಯ ರತ್ನದಂಡಂ ಸಖೀಕರಾತ್ । ತೇನ ವೀಜಯತೀ ದೇವೀ ಉಪಾಸಾಂಚಕ್ರ ಈಶ್ವರಮ್ ॥೭॥ ಸೋಪಾ
ಚ್ಯುತಂ ಕ್ವಣಯತೀ ಮಣಿನೂಪುರಾಭ್ಯಾಂ ರೇಜೇಂಗುಲೀಯವಲಯವ್ಯಜನಾಗ್ರಹಸ್ತಾ । ವಸ್ತ್ರಾಂ
ತಗೂಢಕುಚಕುಂಕುಮಶೋಣಹಾರಭಾಸಾ ನಿತಂಬಧೃತಯಾ ಚ ಪರಾರ್ಧ್ಯಕಾಂಚ್ಯಾ ॥೮॥ ತಾಂ ರೂಪಿ
ಣೀಂ ಶ್ರಿಯಮನನ್ಯಗತಿಂ ನಿರೀಕ್ಷ್ಯ ಯಾ ಲೀಲಯಾ ಧೃತತನೋರನುರೂಪರೂಪಾ । ಪ್ರೀತಃ ಸ್ಮಯನ್ನ
ಲಕಕುಂಡಲನಿಷ್ಕಕಂಠವಕ್ತ್ರೋಲ್ಲಸತ್ಸ್ಮಿತಸುಧಾಂ ಹರಿರಾಬಭಾಷೇ ॥೯॥ ಶ್ರೀಕೃಷ್ಣಃ ॥ ರಾಜಪುತ್ರೀ

---

ಭಿಃ-ಅಗಿಲುಚಕ್ಕೆಗಳಿಂದಾದ, ಧೂಪೈಃ-ಹೊಗೆಗಳಿಂದಲೂ, ರಾಜನ್-ಅರಸೇ! ॥೫॥ ಶೋಭಿತವಾದ, ಪಯಃಫೇನನಿಭೇ-ಹಾಲಿನ ನೊರೆಗೆ ಸಮಾನವಾದ, ಶುಭ್ರೇ-ಬಿಳುಪಾದ, ಕಶಿಪೂತ್ತಮೇ-ಅಂಚೆಯ ಪುಕ್ಕಳದ ಹಾಸಿಕೆಯಿಂದ ಶ್ರೇಷ್ಠವಾದ, ಪರ್ಯಂಕೇ-ಮಂಚದಲ್ಲಿ, ಸುಖಾಸೀನಂ-ಅನಾಯಾಸವಾಗಿ ಕುಳಿತಿರುವ, ಜಗತಾಮೀಶ್ವರಂ-ಲೋಕಂಗಳಿಗೊಡೆಯನಾದ, ಪತಿಂ-ಗಂಡನನ್ನು, ಉಪತಸ್ಥೇ-ಸೇವಿಸಿದಳು ॥೬॥ ಸಖೀಕರಾತ್-ಗೆಳತಿಯ ಕೈಯಿಂದ, ರತ್ನದಂಡಂ-ರತ್ನದ ಪಿಡಿಯುಳ್ಳ, ವಾಲವ್ಯಜನಂ-ಚಾಮರವನ್ನು, ಆದಾಯ-ತೆಗೆದುಕೊಂಡು, ತೇನ-ಅವರಿಂದ, ವೀಜಯತೀ-ಬೀಸುತಲಿರುವ, ದೇವೀ-ರಾಣಿಯು, ಈಶ್ವರಂ-ಒಡೆಯನನ್ನು, ಉಪಾಸಾಂಚಕ್ರೇ-ಸೇವಿಸಿದಳು ॥೭॥ ಸಾ-ಆ ರುಕ್ಮಿಣಿಯು, ಉಪಾಚ್ಯುತಂ ಕೃಷ್ಣನ ಬಳಿಯಲ್ಲಿ, ಮಣಿನೂಪುರಾಭ್ಯಾಂ-ರನ್ನದ ಕಾಲಂದಿಗೆಗಳಿಂದ, ಕ್ವಣಯತೀ-ಶಿಂಜಿತಧ್ವನಿಯಂ ಗೆಯ್ವವಳೂ, ಅಂಗುಲೀಯವಲಯ-ಉಂಗುರ ದುರಿಟು, ವ್ಯಜನ-ಬೀಸಣಿಗೆಯೂ, ಅಗ್ರಹಸ್ತಾ-ತುದಿಕೈಯಲಿ ಉಳ್ಳವಳೂ, ವಸ್ತ್ರಾಂತ-ಸೆರಗಿನಲ್ಲಿ, ಗೂಢ-ಅಡಗಿರುವ, ಕುಚ-ಮೊಲೆಗಳ, ಕುಂಕುಮ-ಕೇಸರದಿಂದ, ಶೋಣ-ಕೆಂಪಾದ, ಹಾರ-ಸರಗಳ, ಭಾಸಾ-ಕಾಂತಿಯಿಂದಲೂ, ನಿತಂಬಧೃತಯಾ-ಪೊರವಾರದಲ್ಲಿ ಧರಿಸಲ್ಪಟ್ಟ, ಪರಾರ್ಧ್ಯಕಾಂಚ್ಯಾ-ಹೆರವಳಿಂ ಬಯಸಲ್ತಕ್ಕ ಡಾಬಿನಿಂದಲೂ, ಕೂಡಿದವಳಾಗಿ, ರೇಜೇ-ಚೆಳಗಿದಳು ॥೮॥ ಯಾ-ಯಾವ ಲಕ್ಷ್ಮಿಯು, ಲೀಲಯಾ-ಸ್ವೇಚ್ಛಾವಿಲಾಸದಿಂದ, ಧೃತತನೋಃ-ಧರಿಸಲ್ಪಟ್ಟ ಅವತಾರರೂಪವುಳ್ಳ ವಿಷ್ಣುವಿಗೆ, ಅನುರೂಪರೂಪಾ-ಅನುಗುಣವಾಗಿ ತಕ್ಕ ಮೂರ್ತಿಯುಳ್ಳವಳೋ, ಅನನ್ಯಗತಿಂ-ತನ್ನಂ ಬಿಟ್ಟು ಬೇರೆ ಹೋಗಪೇಯಿರುವ, ಅಲಕ---ಸುಧಾಂ-ಅಲಕ-ಮುಂಗುರುಗಳಿಂದಲೂ, ಕುಂಡಲ-ತಾಟಂಕಗಳಿಂದಲೂ, ನಿಷ್ಕಕಂಠ-ವರಹಾಗಳ ಸರಗಳುಳ್ಳ ಕೊರಳಿನಿಂದಲೂ, ವಕ್ತ್ರ-ಮುಖದಿಂದಲೂ, ಉಲ್ಲಸತ್-ಶೋಭಿಸುವಳೂ, ಸ್ಮಿತಸುಧಾಂ-ಕಿರುನಗೆಯೆಂಬ ಅಮೃತವುಳ್ಳವಳೂ ಆದ, ರೂಪಿಣೀಂ ಶ್ರಿಯಂ-ಮೂರ್ತಿಯುಳ್ಳ ಲಕ್ಷ್ಮಿಯೇ ಆದ, ತಾಂ-ಆ ರುಕ್ಮಿಣಿಯಂ ಕುರಿತು, ಪ್ರೀತಃ-ಪ್ರೇಮವುಳ್ಳವನಾದ, ಹರಿಃ-ಕೃಷ್ಣನು, ಸ್ಮಯನ್-ಮಂದಹಾಸಗೊಳ್ಳುವವನಾಗಿ ಆಬಭಾಷೇ-ನುಡಿದನು ॥೯॥ (ಕೃಷ್ಣವಚನವು) ರಾಜಪುತ್ರಿ-ದೊರೆಯಮಗಳೇ! ರೂ

---

ಬರುವ ಅಗರು ಧೂಪಗಳಿಂದಲೂ, ಕೂಡಿ ಅತಿಮನೋಹರವಾಗಿರುವುದು ॥೫॥ ದಿವ್ಯವಾದ ಗರ್ಭದಗೃಹದಲ್ಲಿ ಕ್ಷೀರದ ನೊರೆಯಂತೆ ಶುಭವಾದ ಉತ್ತಮವಾದ ಹಾಸಿಗೆಯಲ್ಲಿ ಕುಳಿತಿರುವ ಶ್ರೀಕೃಷ್ಣನಂ ರುಕ್ಮಿಣಿಯು ಉಪಚರಿಸಿದಳು ॥೬॥ ಅಂತಾ ದಿವ್ಯಗೃಹದಲ್ಲಿ ರುಕ್ಮಿಣಿಯು ಸುವರ್ಣಮಯವಾದ ದಂಡವುಳ್ಳ ವಾಲವ್ಯಜನವಂ ಸಖಿಯ ಹಸ್ತದಿಂ ತೆಗೆದುಕೊಂಡು ಆ ವ್ಯಜನದಿಂದ ಬೀಸುತ್ತ ಶ್ರೀಕೃಷ್ಣನನುಪಚರಿಸಿದಳು ॥೭॥ ಆ ರುಕ್ಮಿಣಿಯು ಶ್ರೀಕೃಷ್ಣನ ಸಮೀಪದಲ್ಲಿ ರತ್ನಮಯಂಗಳಾದ ಕಾಲಂದಿಗೆಗಳಂ ಧ್ವನಿಗೆಯ್ಯುತ್ತ, ಉಂಗುರಂಗಳಿಂದಲೂ ಕಡಗಂಗಳಿಂದಲೂ ವ್ಯಜನದಿಂದಲೂ ಪ್ರಕಾಶಿಸುವ ಹಸ್ತವುಳ್ಳವಳಾಗಿ, ಸೀರೆಯ ಸೆರಗಿನಲ್ಲಿ ಗೂಢವಾದ ಕುಚಕುಂಭಯುಗ್ಮದಲ್ಲಿ ಪ್ರಕಾಶಿಸುವ ಕುಂಕುಮದಿಂ ಕೆಂಪಾದ ಮುತ್ತಿನಹಾರವುಳ್ಳ ವಕ್ಷಸ್ಥಳದಿಂ ಬಳುಕುವಳಾಗಿ, ನಡುವಿನಲ್ಲಿ ಹೊಳೆಯುವ ಒಡ್ಡಿಯಾಣದ ಕಾಂತಿಯಿಂದಲೂ ಪ್ರಕಾಶಿತಳಾಗಿ ಉಪಚರಿಸಿದಳು ॥೮॥ ಆ ಕೃಷ್ಣನು ಲೀಲೆಯಿಂದ ಧರಿಸಲ್ಪಟ್ಟ ಮಾನುಷ ವೇಷವುಳ್ಳ ತನಗೆ ಅನುರೂಪವಾದ ಸೌಂದರ್ಯವುಳ್ಳ, ಅನ್ಯರಿಗೆ ದುರ್ಲಭಳಾದ ಮಹಾಲಕ್ಷ್ಮಿಯ ರೂಪಳಾದ ರುಕ್ಮಿಣಿಯಂ ನೋಡಿ, ಕೇಶಂಗಳಿಂದಲೂ ಕುಂಡಲಂಗಳಿಂದಲೂ ಹಾರಂಗಳಿಂದಲೂ ಪ್ರಕಾಶಮಾನವಾದ ಮುಖದಲ್ಲಿ ಹೊಳೆಯುವ ಮುಗುಳುನಗೆಯೆಂಬ ಅಮೃತವುಳ್ಳ ಆ ರುಕ್ಮಿಣಿಯಂ ಕುರಿತು ನಗುತ ಮಾತನಾಡಿದನು ॥೯॥ ಎಲೈ ರಾಜಪುತ್ರಿಯಾದ ರುಕ್ಮಿಣಿಯೇ! ನೀನು ಪೂರ್ವದಲ್ಲಿ

ಪ್ಸಿತಾಭೂಪೈರ್ಲೋಕಪಾಲವಿಭೂತಿಭಿಃ । ಮಹಾನುಭಾವೈಶ್ಶ್ರೀಮದ್ಭೀರೂಪೌದಾರ್ಯಬಲೋರ್ಜಿತೈಃ ॥೧೦॥ ತಾನ್ಪ್ರಾಪ್ತಾನರ್ಥಿನೋಹಿತ್ವಾಚೈದ್ಯಾದೀನ್ಸ್ಮರದುರ್ಮದಾನ್ । ದತ್ತಾಭ್ರಾತ್ರಾಸ್ವಪಿತ್ರಾಚಕಸ್ಮಾನ್ನೋವವೃಷೇಽಸಮಾನ್ ॥೧೧॥ ರಾಜಭ್ಯೋಬಿಭ್ಯತಸ್ಸುಭ್ರುಸಮುದ್ರಂಶರಣಂಗತಾನ್ । ಬಲವದ್ಭಿಃಕೃತದ್ವೇಷಾನ್ಪ್ರಾಯಸ್ತ್ಯಕ್ತನೃಪಾಸನಾನ್ ॥೧೨॥ ಅಸ್ಪಷ್ಟವರ್ತ್ಮನಾಂಪುಂಸಾಮಲೋಕಪಥಮೀಯುಷಾಮ್ । ಆಸ್ಥಿತಾಃಪದವೀಂಸುಭ್ರುಪ್ರಾಯಸ್ಸೀದಂತಿಯೋಷಿತಃ ॥೧೩॥ ನಿಷ್ಕಿಂಚನಾವಯಂಶಶ್ವನ್ನಿಷ್ಕಿಂಚನಜನಪ್ರಿಯಾಃ । ತಸ್ಮಾತ್ಪ್ರಾಯೇಣನಹ್ಯಾಢ್ಯಾಮಾಂಭಜಂತಿಸುಮಧ್ಯಮೇ ॥೧೪॥ ಯಯೋರಾತ್ಮಸಮಂವಿತ್ತಂಜನ್ಮೈಶ್ವರ್ಯಾಕೃತಿರ್ಭವೇತ್ । ತಯೋರ್ವಿವಾಹೋಮೈತ್ರೀ

---

ಔದಾರ್ಯಬಲೋರ್ಜಿತೈಃ-ಚೆಲುವಿಕೆಯಿಂದಲೂ ಧಾರಾಳತೆಯಿಂದಲೂ ದೇಹಶಕ್ತಿಯಿಂದಲೂ ಅಧಿಕರಾದಂಥಾ, ಶ್ರೀಮದ್ಭಿಃ-ಸಂಪತ್ತುಳ್ಳವರಾದಂಥಾ, ಮಹಾನುಭಾವೈಃ-ಮಹಾಸಾಮರ್ಥ್ಯವುಳ್ಳಂಥಾ, ಲೋಕಪಾಲವಿಭೂತಿಭಿಃ-ದಿಕ್ಪಾಲಕರ ಐಶ್ವರ್ಯವುಳ್ಳಂಥಾ ಭೂಪೈಃ-ಭೂಪತಿಗಳಿಂದ, ಈಪ್ಸಿತಾ-ಬಯಸಲ್ಪಟ್ಟವಳಾಗಿರುವಿ ॥೧೦॥ ಸ್ಮರದುರ್ಮದಾನ್-ಕಾಮದಿಂದ ಹೆಚ್ಚುಕೊಬ್ಬುಳ್ಳವರಾದ್ದರಿಂದ, ಅರ್ಥಿನಃ-ನನ್ನ ಯಾಚಿಸುವರಾಗಿ, ಪ್ರಾಪ್ತಾನ್-ಬಂದಂಥಾ, ತಾನ್ಚೈದ್ಯಾದೀನ್-ಆ ಶಿಶುಪಾಲನು ಮೊದಲಾದವರನ್ನು ಹಿತ್ವಾ-ತೊರೆದು, ಭ್ರಾತ್ರಾ-ಅಣ್ಣನಿಂದಲೂ ಸ್ವಪಿತ್ರಾಚ-ನಿನ್ನ ತಂದೆಯಿಂದಲೂ ದತ್ತಾ-ಅವರಿಗೆ ಕೊಡಲ್ಪಟ್ಟವಳಾದರೂ, ಅಸಮಾನ್-ಸರಿಯಲ್ಲದೆಯಿರುವ, ನಃ-ನಮ್ಮನ್ನು, ಕಸ್ಮಾತ್-ಯಾವನಿಮಿತ್ತದ ದೆಸೆಯಿಂದ, ವವೃಷೇ-ಒಪ್ಪಿ ಬಯಸಿದವಳಾದೆ? ॥೧೧॥ ಸುಭ್ರು-ಚೆಲುವಾದ ಹುಬ್ಬುಗಳುಳ್ಳವಳೇ! ರಾಜಭ್ಯಃ-ಅರಸುಗಳದೆಸೆಯಿಂದ, ಬಿಭ್ಯತಃ-ಹೆದರಿದವರಾಗಿ, ಸಮುದ್ರಂ-ಕಡಲನ್ನು, ಶರಣಂಗತಾನ್-ರಕ್ಷಕವಾದ ಮನೆಯನ್ನಾಗಿ ಸೇರಿಕೊಂಡಿರುವಂಥಾ, ಬಲವದ್ಭಿಃ-ಸೈನ್ಯದಬಲವುಳ್ಳ ಜರಾಸಂಧಾದಿಗಳೊಡನೆ, ಕೃತದ್ವೇಷಾನ್-ಮಾಡಲ್ಪಟ್ಟ ವಿರೋಧವುಳ್ಳಂಥಾ, ಪ್ರಾಯಃ-ಸಹಜವಾಗಿ ತ್ಯಕ್ತನೃಪಾಸನಾನ್-ಬಿಡಲ್ಪಟ್ಟ ರಾಜಪೀಠಂಗಳುಳ್ಳಂಥಾ, ನಮ್ಮನ್ನು ಏಕೆ ಬಯಸಿದೆ ॥೧೨॥ ಅಸ್ಪಷ್ಟವರ್ತ್ಮನಾಂ-ಅಪ್ರಕಟವಾದ ದಾರಿಯುಳ್ಳಂಥಾ, ಅಲೋಕಪಥಮೀಯುಷಾಂ-ಲೋಕದ ಜನರ ದಾರಿಯನ್ನು ಹೊಂದದೆಯಿರುವ ಥಾ, ಪುಂಸಾಂ-ಪುರುಷರ, ಪದವೀಂ-ಮಾರ್ಗವನ್ನು, ಆಸ್ಥಿತಾಃ-ಆಶ್ರಯಿಸಿರುವ, ಯೋಷಿತಃ-ಹೆಂಗಳು, ಪ್ರಾಯಃ-ಬಹಳಃ-ಸೀದಂತಿ-ದುಃಖಿಸುತ್ತಿರುವರು, ಸುಭ್ರು-ಹೆಂಣೇ ॥೧೩॥ ವಯಂ-ನಾವು, ನಿಷ್ಕಿಂಚನಾಃ-ಏನೂ ಇಲ್ಲದ ದರಿದ್ರರಾಗಿರುವೆವು ಶಶ್ವತ್-ಬಾರಿಬಾರಿಗೂ ನಿಷ್ಕಿಂಚನಜನಪ್ರಿಯಾಃ-ಕಡುಬಡವರೇ ಪ್ರಿಯರಾಗಿವುಳ್ಳವರು, ಕಡುಬಡವರಿಗೆ ಪ್ರಿಯರಾದವರೂ ಆಗಿರುವೆವು, ಸುಮಧ್ಯಮೇ-ಚೆಲುವಾದ ಟೊಂಕವುಳ್ಳವಳೇ, ತಸ್ಮಾತ್-ಆ ಕಾರಣದದೆಸೆಯಿಂದ, ಪ್ರಾಯೇಣ-ಸಾಧಾರಣವಾಗಿ, ಆಢ್ಯಾಃ-ಧನವಂತರು, ಮಾಂ-ನನ್ನನ್ನು, ನಭಜಂತಿಹಿ-ಸೇವಿಸುವುದಿಲ್ಲವಷ್ಟೆ? ॥೧೪॥ ಯಯೋಃ-ಯಾವಕೂವರರಿಗೆ, ವಿತ್ತಂ-ಧನವೂ, ಜನ್ಮ

---

ಲೋಕಪಾಲಕರಿಗೆ ಸಮಾನವಾದ ಸಂಪತ್ತುಳ್ಳ ಮಹಾನುಭಾವರಾದ ಧನವಂತರಾದ, ಸೌಂದರ್ಯದಿಂದಲೂ ಔದಾರ್ಯದಿಂದಲೂ ಬಲದಿಂದಲೂ ಪ್ರಖ್ಯಾತರಾದ ಅರಸುಗಳಿಂದ ಅಪೇಕ್ಷಿಸಲ್ಪಟ್ಟವಳಾಗಿದ್ದೆಯಲ್ಲಾ ॥೧೦॥ ಕಾಮಮದದಿಂದ ಉದ್ಧತರಾಗಿ ನಿನ್ನನ್ನೇ ಅಪೇಕ್ಷಿಸಿಕೊಂಡು ಬಂದಿದ್ದ ಶಿಶುಪಾಲನು ಮೊದಲಾದ ಅರಸುಗಳಂಬಿಟ್ಟು ನಿನಗೆ ಸಮಾನರಲ್ಲದ ನಮ್ಮಂ ಏಕೆ ಅಪೇಕ್ಷಿಸಿದವಳಾದೆ ॥೧೧॥ ಶಿಶುಪಾಲನು ಜರಾಸಂಧನು ಮೊದಲಾದ ಅರಸುಗಳಿಗೆ ಭಯಪಟ್ಟು ಸಮುದ್ರಮಧ್ಯದಲ್ಲಿ ವಾಸವಂ ಮಾಡಿಕೊಂಡು ಬಲವದ್ವಿರೋಧದಿಂದಿಲ್ಲಿ ಸೇರಿಕೊಂಡಿರುವ ನಾವು, ಇದರಮೇಲೆ ಸಿಂಹಾಸನಾರೋಹಣಕ್ಕೂ ಯೋಗ್ಯರಲ್ಲವು ॥೧೨॥ ಒಬ್ಬರಿಗೂ ತಿಳಿಯದ ಆಚಾರವುಳ್ಳ ಲೋಕಮಾರ್ಗವಂಬಿಟ್ಟು ವಿರುದ್ಧಾಚರಣವಂ ಮಾಡುವ ಪುರುಷರ ಮಾರ್ಗವನನುಸರಿಸಿಕೊಂಡಿರುವ ಸ್ತ್ರೀಯರುಗಳು ವ್ಯಸನಪಡುವರು ॥೧೩॥ ಇಷ್ಟುಮಾತ್ರವೇ ಅಲ್ಲ. ನಾವು ನಿರ್ಧನರಾದವರಿಗೆ ಬೇಕಾದವರು, ಅದರಿಂದ ಧನಿಕರಾದವರು ನಮ್ಮಂ ಭಜಿಸುವುದೇ ಇಲ್ಲ ॥೧೪॥ ಯಾರಿಗೆ ಧನವೂ ಸಮವಾಗಿರುವುದೋ ವಯಸ್ಸೂ ಆಕೃತಿಯೂ ಐಶ್ವರ್ಯವೂ ಯಾರಿಗೆ ಸಮವಾಗಿರುವುದೋ ಅವರಿಗೆ ವಿವಾಹವೂ ಮೈತ್ರಿ

ಜನೋತ್ತಮಾಧಮಯೋಃಕ್ವಚಿತ್॥೧೫॥ವೈದರ್ಭ್ಯೇತದವಿಜ್ಞಾಯತ್ವಯಾದೀರ್ಘಸಮೀಕ್ಷಯಾ । ವೃ
ತಾವಯಂಗುಣೈರ್ಹೀನಾಭಿಕ್ಷುಭಿಶ್ಶ್ಲಾಘಿತಾಮುದಾ ॥೧೬॥ ಅಥಾತ್ಮನೋನುರೂಪಂವೈಭಜಸ್ವಪು
ರುಷರ್ಷಭಮ್ । ಯೇನತ್ವಮಾಶಿಷಸ್ಸತ್ಯಾಇಹಾಮುತ್ರಚಲಪ್ಸ್ಯಸೇ ॥೧೭॥ ಚೈದ್ಯಸಾಲ್ವಜರಾಸಂ
ಧದಂತವಕ್ತ್ರಾದಯೋನೃಪಾಃ ।ಮಮದ್ವಿಷಂತಿವಾಮೋರುರುಕ್ಮೀಚಾಪಿತವಾಗ್ರಜಃ ॥೧೮॥ತೇಷಾಂ
ವೀರ್ಯಮದಾಂಧಾನಾಂದೃಪ್ತಾನಾಂಸ್ಮಯನುತ್ತಯೇ । ಆನೀತಾಸಿಮಯಾತ್ವಂಚತೇಜೋಪಹರತಾಸ
ತಾಮ್ ॥೧೯॥ ಉದಾಸೀನಾವಯಂನೂನಂನಸ್ತ್ರ್ಯಪತ್ಯಾರ್ಥಕಾಮುಕಾಃ । ಆತ್ಮಲಬ್ಧ್ಯಾಸ್ಮಹೇ
ಪೂರ್ಣಾಗೇಹಯೋರ್ಜ್ಯೋತಿರಕ್ರಿಯಾಃ ॥೨೦॥ ಶ್ರೀಶುಕಃ॥ಏತಾವದುಕ್ತ್ವಾಭಗವಾನಾತ್ಮಾನಂವಲ್ಲ

---

ಕ್ವಯೋರ್ನ ಕ್ವಹಿ-ಧನವೂ ಒಡೆತನವೂ ರೂಪವೂ, ಆತ್ಮಸಮಂ-ತಮಗೆ ಸರಿಯಾದ್ದು, ಭವೇತ್-ಆಗಿರುವದೋ, ತಯೋಃ-
ಅವರೀರ್ವರಿಗೆ, ವಿವಾಹಃ-ಮದುವೆಯೂ ಮೈತ್ರೀ ಚ-ಸ್ನೇಹವೂ ಯುಕ್ತವಾಗುವುದು ಉತ್ತಮಾಧಮಯೋಃ-ಉತ್ಕೃಷ್ಟ
ರಿಗೂ ನಿಕೃಷ್ಟರಿಗೂ, ಕ್ವಚಿತ್-ಎಲ್ಲಿಯೂ, ನ-ಯುಕ್ತವಾಗುವದಿಲ್ಲ ॥೧೫॥ ವೈದರ್ಭಿ-ರುಕ್ಮಿಣಿಯೇ! ಏತತ್-ಇದರನ್ನು, ಅವಿ
ಜ್ಞಾಯ-ತಿಳಿಯದೇ, ಗುಣೈಃ-ಸತ್ವಾದಿಗುಣಗಳಿಂದ, ಹೀನಾಃ-ರಹಿತರಾಗಿಯೂ, ಭಿಕ್ಷುಭಿಃ ತಿರುಪಗಾರರಿಂದ, ಮುದಾ-ಸಂ
ತೋಷದಿಂ, ಶ್ಲಾಘಿತಾಃ-ಕೊಂಡಾಡಲ್ಪಟ್ಟವರಾಗಿಯೂ, ಇರುವ, ವಯಂ-ನಾವು, ಅದೀರ್ಘಸಮೀಕ್ಷಯಾ-ದೂರವಾದ ಆ
ಲೋಚನೆಯಿಲ್ಲದವಳಾದ, ತ್ವಯಾ-ನಿನ್ನಿಂದ, ವೃತಾಃ-ವರಿಸಲ್ಪಟ್ಟವರಾದೆವು ॥೧೬॥ ಅಥ-ಇನ್ನು ಮೇಲೆಯಾದರೂ,
ಯೇನ-ಯಾವ ಪುರುಷನಿಂದ, ಸತ್ಯಾಃ-ದಿಟವಾದ, ಆಶಿಷಃ-ಮನೋರಥಂಗಳನ್ನು, ಇಹ-ಈ ಲೋಕದಲ್ಲಿಯೂ, ಅಮುತ್ರ ಚ-ಪ
ರಲೋಕದಲ್ಲಿಯೂ, ಲಪ್ಸ್ಯಸೇ-ಪಡೆಯುವಿಯೋ. ತಂ-ಅಂಥಾ, ಆತ್ಮನಃ ಅನುರೂಪಂ-ನಿನಗೆ ತಕ್ಕವನಾದಂಥಾ, ಪುರುಷರ್ಷ
ಭಂ ಪುರುಷೋತ್ತಮನನ್ನು, ತ್ವಂ-ನೀನು, ವೈ-ಪ್ರಕಟವಾಗಿ, ಭಜಸ್ವ-ಪ್ರೀತಿಸು, ಸೇವಿಸು ॥೧೭॥ ವಾಮೋರು-ಮನೋ
ಹರಂಗಳಾದ ತೊಡೆಗಳುಳ್ಳವಳೇ! ಚೈದ್ಯ-ಶಿಶುಪಾಲನು, ಸಾಲ್ವನು, ಜರಾಸಂಧನು, ದಂತವಕ್ತ್ರನು, ಆದಯಃ-ಮೊದಲಾಗಿಉ
ಳ್ಳ, ನೃಪಾಃ-ಅರಸುಗಳೂ, ತವ-ನಿನ್ನ, ಅಗ್ರಜಃ-ಅಣ್ಣನಾದ, ರುಕ್ಮೀ ಚಾಪಿ-ರುಕ್ಮಿಯೆಂಬುವನೂ ಕೂಡ, ಮಮ-ನನ್ನನ್ನು, ದ್ವಿ
ಷಂತಿ-ವಿರೋಧಿಸುತ್ತಿರುವರು ॥೧೮॥ ವೀರ್ಯಮದಾಂಧಾನಾಂ-ಶೂರತ್ವದ ಕೊಬ್ಬಿನಿಂದ ಕುರುಡರಾದ, ದೃಪ್ತಾನಾಂ-ಗರ್ವ
ವುಂಟಾದವರಾದ, ತೇಷಾಂ-ಆ ಅರಸುಗಳ, ಸ್ಮಯನುತ್ತಯೇ-ಗರ್ವವಂ ಹೋಗಲಾಡಿಸಲೋಸುಗ, ಅಸತಾಂ-ದುಷ್ಟರ,
ತೇಜಃ-ಶಕ್ತಿಯನ್ನು, ಅಪಹರತಾ-ಕಿತ್ತುಕೊಳ್ಳುವ, ಮಯಾ-ನನ್ನಿಂದ, ತ್ವಂ-ನೀನೂ, ಆನೀತಾ-ತರಲ್ಪಟ್ಟವಳೂ, ಅಸಿ-ಆ
ಗಿರುವಿ ॥೧೯॥ ವಯಂ-ನಾವು, ನೂನಂ-ದಿಟವಾಗಿ, ಉದಾಸೀನಾಃ-ಅಲಕ್ಷ್ಯವಾಗಿರುವವರು ಸ್ತ್ರ್ಯಪತ್ಯಾರ್ಥಕಾಮುಕಾಃ-
ಹೆಂಗಳನ್ನೂ ಮಕ್ಕಳನ್ನೂ ಧನವನ್ನೂ ಬಯಸುವವರು, ನ-ಅಲ್ಲವು. ಆತ್ಮಲಬ್ಧ್ಯಾ-ನಮ್ಮ ಲಾಭದಿಂದಲೇ. ಪೂರ್ಣಾಃ-ತುಂ
ಬಿದವರಾಗಿಯೂ. ಗೇಹಯೋಃ-ಗೃಹದಲ್ಲಿಯೂ ದೇಹದಲ್ಲಿಯೂ, ಜ್ಯೋತಿರಕ್ರಿಯಾಃ-ದೀಪದಂತೆ ಕೆಲಸವಿಲ್ಲದೆ ಸಾಕ್ಷಿಮಾತ್ರ
ರಾದವರಾಗಿ ಆಸ್ಮಹೇ-ಇರುವೆವು ॥೨೦॥ ಭಗವಾನ್-ಸರ್ವಜ್ಞನಾದ ಕೃಷ್ಣನು, ಏತಾವತ್-ಇಷ್ಟುಮಾತ್ರವನ್ನು, ಉ

---

ಯೂ ಉಂಟಾಗುವುದು. ಉತ್ತಮಾಧಮಜನರಿಗೆ ಕೂಡಿಬರುವುದಿಲ್ಲ॥೧೫॥ರುಕ್ಮಿಣಿಯೇ! ಇದನರಿಯದೇ ದೂರಾ
ಲೋಚನೆಯಂ ಮಾಡದೆ ನೀನು ಗುಣಹೀನರಾಗಿ ಭಿಕ್ಷುಗಳಿಂದ ಶ್ಲಾಘಿತರಾದ ನಮ್ಮಂ ವ್ಯರ್ಥವಾಗಿ ಅಪೇಕ್ಷಿ
ಸಿದವಳಾದಿ ॥೧೬॥ ಆದಾಗ್ಯೂ ಈಗಲಾದರೂ ನಿನಗೆ ಅನುರೂಪನಾದ ಪುರುಷಶ್ರೇಷ್ಠನ ನೆಯ್ದುವವಳಾಗು.
ಯಾವ ಪುರುಷನಿಂದ ಇಹಲೋಕದಲ್ಲಿ ಪರಲೋಕದಲ್ಲಿಯೂ ಮನೋರಥಂಗಳ ನೆಯ್ದುವೆಯೋ ಅಂಥಾ ಪುರುಷ
ನನೆಯ್ದು ॥೧೭॥ ಶಿಶುಪಾಲನು, ದಂತವಕ್ತ್ರನು, ಸಾಲ್ವನು, ಜರಾಸಂಧನು ಮೊದಲಾದ ಕ್ಷತ್ರಿಯರು ನಿಮ್ಮಂ
ಣನಾದ ರುಕ್ಮಿಯುಂ ಸಹ ನನ್ನಲ್ಲಿ ದ್ವೇಷವಂ ಮಾಡುತ್ತಾರೆ ॥೧೮॥ ಶೌರ್ಯಮದಾಂಧರಾದ ಆ ಶಿಶುಪಾಲಾದಿ
ಗಳ ಗರ್ವಪರಿಹಾರಾರ್ಥವಾಗಿ ದುಷ್ಟರ ತೇಜಸ್ಸನ್ನು ಅಪಹರಿಸುವ ನಮ್ಮಿಂದ ನೀನು ತರಲ್ಪಟ್ಟವಳಾದೆ॥೧೯॥
ನಾವು ಯಥಾರ್ಥವಾಗಿ ಉದಾಸೀನರು. ಪತಿಪುತ್ರಧನಾದಿಗಳಲ್ಲಿ ಅಪೇಕ್ಷೆಯುಳ್ಳವರಲ್ಲ. ಆತ್ಮಲಾಭದಿಂದ
ಪೂರ್ಣರಾಗಿ ದೀಪಂಗಳಂತೆ ಸಾಕ್ಷಿಗಳಾಗಿ ಅಕ್ರಿಯಾವಂತರಾಗಿರುವರು ॥೨೦॥ ಎಂದು ಇಷ್ಟು ಮಾತ್ರವನ್ನೇ

ಭಾವಮಿವ|ಮನ್ಯಮಾನಾಮವಿಶ್ಲೇಷಾತ್ತದ್ದರ್ಪಘ್ನ ಉಪಾರಮತ್||೨೧||ಇತಿತ್ರಿಲೋಕಾಧಿಪತೇಸ್ತದಾ
ತ್ಮನಃಪ್ರಿಯಸ್ಯದೇವ್ಯಶ್ರುತಪೂರ್ವಮಪ್ರಿಯಮ್| ಆಶ್ರುತ್ಯಭೀತಾಹೃದಿಜಾತವೇಪಥುಶ್ಚಿಂತಾಂದುರಂ
ತಾಂರುದತೀಜಗಾಮಹ||೨೨||ಪದಾಸುಜಾತೇನನಖಾರುಣಶ್ರಿಯಾಭುವಂಲಿಖಂತ್ಯಶ್ರುಭಿರಂಜನಾಸಿ
ತೈಃ ಆಸಿಂಚತೀಕುಂಕುಮರೂಷಿತಸ್ತನೌತಸ್ಥಾವಧೋಮುಖ್ಯತಿದುಃಖರುದ್ಧವಾಕ್||೨೩||ತಸ್ಯಾ
ಸ್ಸುದುಃಖಭಯಶೋಕವಿನಷ್ಟಬುದ್ಧೇರ್ಹಸ್ತಾಚ್ಛ್ಲಥದ್ವಲಯತೋವ್ಯಜನಂಪಪಾತ| ದೇಹಶ್ಚ
ವಿಕ್ಲಬಧಿಯಸ್ಸಹಸೈವಮುಹ್ಯನ್ರಂಭೇವವಾತನಿಹತಾಪ್ರವಿಕೀರ್ಯಕೇಶಾನ್ ||೨೪|| ತಂದೃಷ್ಟ್ವಾಭಗ
ವಾನ್ಕೃಷ್ಣಃಪ್ರಿಯಾಯಾಃಪ್ರೇಮಬಂಧನಮ್ | ಹಾಸ್ಯಪ್ರೌಢಿಮಜಾನಂತ್ಯಾಃಕರುಣಸ್ಸೋನ್ವಕಂ

---

ಕ್ತ್ವಾ-ಹೇಳಿ, ಅವಿಶ್ಲೇಷಾತ್-ಗಂಡನಂ ಬಿಡದೇಯಿರುವುದರಿಂದ, ಆತ್ಮಾನಂ-ತನ್ನನ್ನೇ, ವಲ್ಲಭಾಮಿವ-ಗಂಡನಿಗೆ ಪ್ರಿಯಳಾ ಗಿರುವಳನಂತೆ, ಮನ್ಯಮಾನಾಂ-ತಿಳಿದುಕೊಂಡಿರುವ ರುಕ್ಮಿಣಿಯಂಕುರಿತು, ತದ್ದರ್ಪಘ್ನಃ-ಅಕೆಯಗರ್ವವಂ ಮುರಿಯುವನಾ ಗಿ, ಉಪಾರಮತ್-ಸುಮ್ಮನಾದನು ||೨೧|| ಇತಿ-ಹೀಗೆ, ಆತ್ಮನಃಪ್ರಿಯಸ್ಯ-ತನಗೆ ಇಷ್ಟನಾದ, (ಆನಂದಾತ್ಮನಾದ,) ತ್ರಿಲೋ ಕಾಧಿಪತೇಃ-ಮೂರುಲೋಕಂಗಳಿಗೊಡೆಯನಾದ ಕೃಷ್ಣನ, ಅಶ್ರುತಪೂರ್ವಂ-ಮುನ್ನು ಕೇಳಲ್ಪಡ ಇರುವ, ಅಪ್ರಿಯಂ-ಅ ನಿಷ್ಟವಾದ, ತತ್-ಆ ಮಾತನ್ನು, ಇತಿ-ಹೀಗೆ, ಆಶ್ರುತ್ಯ-ಕೇಳಿ, ಹೃದಿ-ಮನಸ್ಸಿನಲ್ಲಿ, ಭೀತಾ-ಹೆದರಿದವಳಾದ, ದೇವೀ-ರುಕ್ಮಿಣಿ ಯು, ಜಾತವೇಪಥುಃ-ನಡುಗುಹುಟ್ಟಿದವಳಾಗಿಯೂ, ರುದತೀ-ಅಳುವಳಾಗಿಯೂ, ದುರಂತಾಂ-ಕೊನೆಯಿಲ್ಲದ, ಚಿಂತಾಂ-ಹಳ ಹಳಿಯನ್ನು, ಜಗಾಮಹ-ಹೊಂದಿದಳು ||೨೨|| ನಖಾರುಣಶ್ರಿಯಾ-ಉಗುರುಗಳ ಕೆಂಪುಕಾಂತಿಯೊಡನೆ ಸುಜಾತೇನ-ಚನ್ನಾ ಗಿಹುಟ್ಟಿರುವ, ಪದಾ-ಕಾಲಿನಿಂದ ಭುವಂ-ನೆಲವನ್ನು, ಲಿಖಂತೀ-ಕೆರೆಯುತ್ತಿರುವಳೂ, ಅಂಜನಾಸಿತೈಃ-ಕಾಡಿಗೆಯಿಂದ ಕಪ ಪ್ಪಾಗಲ್ಪಟ್ಟ, ಅಶ್ರುಭಿಃ-ಕಣ್ಣೀರ್ಗಳಿಂದ, ಕುಂಕುಮರೂಷಿತೌ-ಕೇಸರಕರ್ದಮದಿಂ ವ್ಯಾಪ್ತಂಗಳಾದ, ಸ್ತನೌ-ಕುಚಗಳನ್ನು, ಆಸಿಂಚತೀ-ತೋಯಿಸುವಳೂ, ಅಧೋಮುಖೀ-ಕೆಳಗಡೆಗೆ ಮೋರೆಯುಳ್ಳವಳೂ, ಅತಿದುಃಖರುದ್ಧವಾಕ್-ಅಧಿಕವ್ಯಥೆಯಿಂದ ತಡೆಯಲ್ಪಟ್ಟ ಮಾತುಳ್ಳವಳೂಆಗಿ, ತಸ್ಥೌ-ನಿಂತಳು ||೨೩|| ಸುದುಃಖಭಯಶೋಕವಿನಷ್ಟಬುದ್ಧೇಃ-ವ್ಯಥೆ ಹೆದರಿಕೆ ಅಳುವು ಗಳಿಂದ ನಾಶವಾದ ವಿವೇಕವುಳ್ಳಂಥಾ, ತಸ್ಯಾಃ-ಆ ರುಕ್ಮಿಣಿಯ, ಶ್ಲಥದ್ವಲಯತಃ-ಜಾರಿದ ಬಳೆಗಳುಳ್ಳ, ಹಸ್ತಾತ್-ಕೈಯ ದೆಸೆ ಯಿಂದ, ವ್ಯಜನಂ-ಬೀಸಣಿಕೆಯು, ಪಪಾತ ಬಿದ್ದುದು ವಿಕ್ಲಬಧಿಯಃ-ದುಃಖಿತಬುದ್ಧಿಯುಳ್ಳವಳ, ದೇಹಶ್ಚ-ಶರೀರವೂ ಸಹ ಸಾ-ಬೇಗನೇ, ವಿಮುಹ್ಯನ್-ಅಜ್ಞಾನವನ್ನೈದಿದುದಾಗಿ, ಕೇಶಾನ್-ತಲೆಕೂದಲನ್ನು, ಪ್ರವಿಕೀರ್ಯ-ಕೆದರಿಕೊಂಡು, ವಾತನಿಹತ-ಗಾಳಿಯಿಂದ ಬಡಿಯಲ್ಪಟ್ಟ, ರಂಭೇವ-ಬಾಳೆಯಮರದಂತೆ, ಪಪಾತ-ಬಿದ್ದುದು||೨೪|| ಭಗವಾನ್-ಸರ್ವಜ್ಞನಾದ, ಸಕೃಷ್ಣಃ-

---

ನುಡಿದು ಭಗವಂತನು ನಿರಂತರಸಾನ್ನಿಧ್ಯದಿಂದ ಶ್ರೀಕೃಷ್ಣನಿಗೆ ತಾನೇ ಪ್ರೀತಿಪಾತ್ರಳೆಂದು ಗರ್ವಿತಳಾದ ರು ಕ್ಮಿಣಿಯ ಗರ್ವವಂ ಪರಿಹರಿಸಲೋಸುಗ ಈ ಮಾತಂ ನುಡಿದು ಸುಮ್ಮನೆಯಾದನು ||೨೧|| ಲೋಕತ್ರಯನಾ ಥನಾದ ಪತಿಯಾದ ಶ್ರೀಕೃಷ್ಣನಿಂದ ನುಡಿಯಲ್ಪಟ್ಟ ಕಠೋರವಾದ ಪೂರ್ವದಲ್ಲಿ ಕೇಳಲ್ಪಡದೇ ಯಿದ್ದ ವಾ ಕ್ಯವಂಕೇಳಿ ಭಯದಿಂದ ಕಂಪಿಸುತ ರೋದನಂಗೆಯ್ಯುತ್ತ ಅಪಾರಚಿಂತೆಯನೆಯ್ದಿದಳು ||೨೨|| ಆಗ ರುಕ್ಮಿ ಣಿಯು ಕೆಂಪಾದನಖಂಗಳಿಂ ಶೋಭಿಸುವ ಕೋಮಲವಾದ ಪಾದದಿಂದ ಭೂಮಿಯಂ ಬರೆಯುತ್ತ ಕಪ್ಪುಮಿ ಶ್ರಂಗಳಾದ ನೇತ್ರೋದಕಂಗಳಿಂದ ಕುಚಕುಂಭಂಗಳಂ ನೆನೆಯಿಸುತ ಅತಿದುಃಖದಿಂದ ಮಾತನಾಡುವುದಕ್ಕೆ ಗಂಟಲಸೆಲೆ ಬಿಗಿಯುತ್ತಿರಲಾಗಿ ಮಾತನಾಡದೆ ಶಿರವಂಬಾಗಿ ಸುಮ್ಮನೆನಿಂತಳು ||೨೩|| ಬಹುದುಃಖದಿಂದಲೂ ಭಯದಿಂದಲೂ ಶೋಕದಿಂದಲೂನಷ್ಟವಾದ ಪ್ರಜ್ಞೆಯುಳ್ಳಆರುಕ್ಮಿಣಿಯು ಶಿಥಿಲವಾದ ಕಡಗಂಗಳುಳ್ಳ ಹಸ್ತ ದಿಂದ ವ್ಯಜನವು ಜಾರಿಬೀಳಲಾಗಿ ಪ್ರಜ್ಞಾರಹಿತಳಾಗಿ ಶರೀರದ ಕೇಶಂಗಳು ಚದರಿಹೋಗಲಾಗಿ ವಾಯುವಿನಿಂ ದಚಲಿತವಾದ ಕದಳೀಸ್ತಂಬದಂತೆ ಕೆಳಕ್ಕೆಬಿದ್ದಳು ||೨೪|| ಹಾಸ್ಯಚಾತುರ್ಯವ ನರಿಯದ ಆರುಕ್ಮಿಣಿಯಪ್ರೇ ಮಾನುಬಂಧವಂನೋಡಿ ಶ್ರೀಕೃಷ್ಣನು ಆರುಕ್ಮಿಣಿಯಲ್ಲಿ ದಯೆಯಂ ಮಾಡಿದನು ||೨೫|| ಚತುರ್ಭುಜನಾದ

ಪತತ್ ||೧೫|| ಪರ್ಯಂಕಾದವರುಹ್ಯಾಶು ತಾಮುತ್ಥಾಪ್ಯ ಚತುರ್ಭುಜಃ । ಕೇಶಾನ್ ಸಮುಹ್ಯ ತದ್ವಕ್ತ್ರಂ
ಪ್ರಾಮೃಜತ್ಪದ್ಮಪಾಣಿನಾ ||೧೬|| ಪ್ರಮೃಜ್ಯಾಶ್ರುಕಳೇ ನೇತ್ರೇ ಸ್ತನೌ ಚೋಪಹತೌ ಶುಚಾ । ಆಶ್ಲಿಷ್ಯ ಬಾ
ಹುನಾ ರಾಜನ್ನನನ್ಯವಿಷಯಾಂ ಸತೀಮ್ ||೧೭|| ಸಾಂತ್ವಯಾಮಾಸ ಸಾಂತ್ವಜ್ಞಃ ಕೃಪಯಾ ಕೃಪಣಾಂ
ಪ್ರಭುಃ । ಹಾಸ್ಯಪ್ರೌಢಿಭ್ರಮಚ್ಚಿತ್ತಾಮತದರ್ಹಾಂ ಸತಾಂ ಗತಿಃ ||೧೮|| ಶ್ರೀಕೃಷ್ಣಃ ಮಾ ಮಾ ವೈ
ದರ್ಭ್ಯಸೂಯೇಥಾ ಜಾನೇ ತ್ವಾಂ ಮತ್ಪರಾಯಣಾಮ್ । ತ್ವದ್ವಚಃ ಶ್ರೋತುಕಾಮೇನ ಕ್ಷ್ವೇಲ್ಯಾಚರಿತಮಂಗ
ನೇ ||೧೯|| ಮುಖಂ ಚ ಪ್ರೇಮಸಂರಂಭಸ್ಫುರಿತಾಧರಮೀಕ್ಷಿತುಮ್ । ಕಟಾಕ್ಷೇಪಾರುಣಾಪಾಂಗಂ ಸುಂದರ
ಭ್ರುಕುಟೀತಟಮ್ ||೨೦|| ಅಯಂ ಹಿ ಪರಮೋ ಲಾಭೋ ಗೃಹೇಷು ಗೃಹಮೇಧಿನಾಮ್ । ಯನ್ನರ್ಮೈರ್ನೀಯ

---

ಆ ಹುಡಿಯು, ಹಾಸ್ಯಪ್ರೌಢಿಂ-ನಗೆಸರದಜಾಣ್ಮೆಯನ್ನು, ಅಜಾನಂತ್ಯಾಃ-ಅರಿಯದೆಯಿರುವ, ಪ್ರಿಯಾಯಾಃ-ಪತ್ನಿಯಾದ ರುಕ್ಮಿಣಿಯ, ತಂ-ಅಂಥಾ, ಪ್ರೇಮಬಂಧನಂ-ಸ್ನೇಹನಿರ್ಬಂಧವನ್ನು, ದೃಷ್ಟ್ವಾ-ನೋಡಿ, ಕರುಣಃ-ಅನುತಾಪವುಳ್ಳವನಾಗಿ, ಅನ್ವಕಂಪತ-ನಡುಗಿದ್ದನು ||೧೫|| ಆಶು-ಬೇಗನೆ, ಚತುರ್ಭುಜಃ-ನಾಲ್ಕು ತೋಳುಗಳುಳ್ಳವನಾದ ಕೃಷ್ಣನು, ಪರ್ಯಂಕಾತ್-ಮಂಚದಿಂದ, ಅವರುಹ್ಯ-ಇಳಿದು, ತಾಂ-ಆಕೆಯನ್ನು, ಉತ್ಥಾಪ್ಯ-ಎತ್ತಿ, ಕೇಶಾನ್-ತಲೆಕೂದಲನ್ನು, ಸಮುಹ್ಯ-ಹಿಕ್ಕಿಗಂಟಿಟ್ಟು, ತದ್ವಕ್ತ್ರಂ-ಆಕೆಯಮುಖವನ್ನು, ಪದ್ಮಪಾಣಿನಾ-ತಾವರೆಯಂತಿರ್ಪ ತನ್ನ ಕೈಯಿಂದ, ಪ್ರಾಮೃಜತ್-ಧೂಳಿಂತೊಡೆದನು ||೧೬|| ರಾಜನ್-ಧೊರೆಯೇ! ಅಶ್ರುಕಲೇ-ಕಣ್ಣೀರಿನ ತೊಟ್ಟುಗಳುಳ್ಳ, ನೇತ್ರೇ-ಕಂಗಳನ್ನೂ, ಶುಚಾ-ಶೋಕದಿಂದ, ಉಪಹತೌ-ಉಷ್ಕಂಗಳಾದ, ಸ್ತನೌ ಚ-ಮೊಲೆಗಳನ್ನೂ ಪ್ರಮೃಜ್ಯ-ಒರಸಿ, ಅನನ್ಯವಿಷಯಾಂ-ಬೇರೆಯಾವಗೋಚರವೂ ಇಲ್ಲದ, ಸತೀಂ-ಪತಿವ್ರತೆಯಾದ ರುಕ್ಮಿಣಿಯನ್ನು, ಬಾಹುನಾ-ತೋಳಿನಿಂದ, ಆಶ್ಲಿಷ್ಯ-ಅಪ್ಪಿಕೊಂಡು, ||೧೭|| ಪ್ರಭುಃ-ದೊರೆಯು, ಸತಾಂ-ಸತ್ಪುರುಷರಿಗೆ ಗತಿಃ-ಪ್ರಾಪ್ಯನು, ಸಾಂತ್ವಜ್ಞಃ-ಸಮಾಧಾನವಂ ಬಲ್ಲವನೂ ಆದ ಕೃಷ್ಣನು, ಹಾಸ್ಯಪ್ರೌಢೇಃ-ನಗೆಸರದ ಜಾಣ್ಮೆಯದೆಸೆಯಿಂದ, ಭ್ರಮಚ್ಚಿತ್ತಾಂ-ಭ್ರಾಂತಮನಸ್ಸುಳ್ಳ, ಅತದರ್ಹಾಂ-ಅದಕ್ಕೆ ಯೋಗ್ಯಳಲ್ಲದ, ಕೃಪಣಾಂ-ದೀನಳಾದ ರುಕ್ಮಿಣಿಯನ್ನು, ಕೃಪಯಾ-ದಯೆಯಿಂದ, ಸಾಂತ್ವಯಾಮಾಸ-ಸಮಾಧಾನಪಡಿಸಿದನು ||೧೮|| (ಕೃಷ್ಣವಚನವು) ವೈದರ್ಭಿ-ರುಕ್ಮಿಣಿಯೇ! ಮಾ-ನನ್ನಂ ಕುರಿತು, ಮಾ ಅಸೂಯೇಥಾಃ-ಅಸಹನವಂ ಗೊಳ್ಳಬೇಡ, ತ್ವಾಂ-ನಿನ್ನನ್ನು, ಮತ್ಪರಾಯಣಾಂ-ನಾನೇ ಉತ್ತಮಗತಿಯಾಗಿ ಉಳ್ಳವಳನ್ನಾಗಿ, ಜಾನೇ-ಬಲ್ಲೆನು, ಅಂಗನೇ-ಹೆಂಣೇ! ತ್ವದ್ವಚಃ-ನಿನ್ನ ಮಾತನ್ನು, ಶ್ರೋತುಕಾಮೇನ-ಕೇಳುವುದಕ್ಕೆ ಬಯಕೆಯುಳ್ಳ ನನ್ನಿಂದ, ಕ್ಷ್ವೇಲ್ಯಾ-ನರ್ಮಕ್ರೀಡೆಯಿಂದ, ಆಚರಿತಂ-ಹೀಗೆ ಹೇಳಲ್ಪಟ್ಟಿತು ||೧೯|| ಪ್ರೇಮಸಂರಂಭಸ್ಫುರಿತಾಧರಂ-ಸ್ನೇಹಾತಿಶಯದಿಂದ ಕದಲುವ ತುಟಿಯುಳ್ಳಂಥಾ, ಕಟಾಕ್ಷೇಪಾರುಣಾಪಾಂಗಂ-ಕುಡಿನೋಟಗಳಿಂದ ಕೆಂಪಾದ ಕುಡಿಗಂಗಳುಳ್ಳಂಥಾ, ಸುಂದರಭ್ರುಕುಟೀತಟಂ-ಚಲುವಾದ ಹುಬ್ಬುಗಳ ಗಂಟುಳ್ಳ, ಮುಖಂ ಚ-ಮೋರೆಯನ್ನೂ (ನೋಡಲೋಸುಗ ಹೀಗೆ ಹೇಳಿದೆನು) ||೨೦|| ಭೀರು-ಭಯಶೀಲಳಾದ, ಭಾಮಿನಿ-ಹೆಂಣೇ! ಯತ್-ಯಾವುದರಿಂದ ಪ್ರಿಯಯಾ ಇಷ್ಟ

---

ಶ್ರೀಕೃಷ್ಣನು ಮಂಚದಿಂದಿಳಿದು ಹಸ್ತಂಗಳಿಂದ ರುಕ್ಮಿಣಿಯ ಕೇಶಂಗಳಂ ನಖಂಗಳಿಂ ಹಿಕ್ಕಿ ಸರಿಯಾಗಿ ಕಟ್ಟಿ ಪದ್ಮಸಮಾನವಾದ ಹಸ್ತದಿಂದ ಮುಖವ ನೊರಸಿದನು ||೧೬|| ಬಾಷ್ಪಪೂರ್ಣಂಗಳಾದ ನೇತ್ರಂಗಳನ್ನು ನೇತ್ರೋದಕದಿಂ ನೆನೆಯಿಸಲ್ಪಟ್ಟ ಕುಚಂಗಳನ್ನೂ ಒರಸಿ, ಮುಖ್ಯಪತ್ನಿಯಾದ ರುಕ್ಮಿಣಿಯಂ ಬಾಹುಗಳಿಂದ ಅಪ್ಪಿಕೊಂಡು ||೧೭|| ಸಮಾಧಾನವಂ ಮಾಡಬಲ್ಲ- ಸತ್ಪುರುಷರಿಗೆ ಗತಿಯಾದ ಪ್ರಭುವಾದ ಕೃಷ್ಣನು ಕೃಪೆಯಿಂದ ಮುಗ್ಧೆಯೂ ಕೃಪಣಳೂ ಆದ ಆಕೆಯಂ ಸಮಾಧಾನಗೊಳಿಸಿದನದೆಂತೆನೆ- ||೧೮|| ಎಲೈ ರುಕ್ಮಿಣಿಯೇ! ನೀನು ನನ್ನಲ್ಲಿ ಅಸೂಯೆಪಡಬೇಡ ನನ್ನಲ್ಲಿಯೇ ಪರಮಾನುರಕ್ತಳಾಗಿರುವಿಯೆಂಬುದ ನಾನು ಬಲ್ಲೆನು, ಆದರೂ ನೀನೇನೆನ್ನುವಿಯೋ ಅದಂ ಕೇಳಬೇಕೆಂಬ ಇಚ್ಛೆಯಿಂದ ಕಪಟೋಕ್ತಿಗಳಂ ಪೇಳಿದೆನು ||೧೯|| ಪ್ರಣಯಕೋಪದಿಂದ ನಡುಗುತಲಿರುವ ಅಧರೋಷ್ಠವುಳ್ಳದ್ದಾಗಿ ಕೆಂಪಾದ ಕಡೆಗಂಣ ನೋಟಂಗಳಿಂದ ಸುಂದರವಾಗಿರುವ ವಕ್ರಗಳಾದ ಹುಬ್ಬುಗಳುಳ್ಳ ನಿನ್ನ ಮೊಗವ ನೋಡಲೋಸುಗ ಹೀಗೆ ನುಡಿದೆನು ||೨೦|| ಪತ್ನೀಸಮೇತರಾದ

ತೆಯಾ ಮಮಾಪಿ ಪ್ರಿಯಯಾ ಭೀರು ಭಾಮಿನಿ ‖ ಶ್ರೀಶುಕಃ ‖ ಸೈವಂ ಭಗವತಾ ರಾಜನ್ ವೈದರ್ಭೀ ಪರಿಸಾಂತ್ವಿತಾ । ಜ್ಞಾತ್ವಾ ತತ್ಪರಿಹಾಸೋಕ್ತಿಂ ಪ್ರಿಯತ್ಯಾಗಭಯಂ ಜಹೌ ‖೩೦‖ ಬಭಾಷ ಋಷಭಂ ಪುಂಸಾಂ ವೀಕ್ಷಂತೀ ಭಗವನ್ಮುಖಮ್ । ಸವ್ರೀಡಹಾಸರುಚಿರಸ್ನಿಗ್ಧಾಪಾಂಗೇನ ಭಾರತ ‖ ರುಕ್ಮಿಣೀ ಚಾರುಸರ್ವಾಂಗೀ ಸಾಕ್ಷಾಚ್ಛ್ರೀರನಪಾಯಿನೀ ‖೩೩‖ ರುಕ್ಮಿಣೀ ‖ ನನ್ವೇವಮೇತದರವಿಂದವಿಲೋಚನಾಹ ಯದ್ವೈ ಭವಾನ್ ಭಗವತೋಽಸದೃಶೀ ವಿಭೂಮ್ನಃ । ಕ್ವ ಸ್ವೇ ಮಹಿಮ್ನ್ಯಭಿರತೋ ಭಗವಾಂಸ್ತ್ರ್ಯಧೀಶಃ ಕ್ವಾಹಂ ಗುಣಪ್ರಕೃತಿರಜ್ಞಗೃಹೀತಪಾದಾ ‖೩೪‖ ಸತ್ಯಂ ಭಯಾದಿವ ಗುಣೇಭ್ಯ ಉರುಕ್ರಮಾಂತಃ ಶೇತೇ ಸಮುದ್ರ ಉಪಲಂಭನಮಾತ್ರ ಆತ್ಮಾ । ನಿತ್ಯಂ ಕದಿಂದ್ರಿಯಗಣೈಃ ಕೃತವಿಗ್ರಹಸ್ತ್ವಂ ತ್ವತ್ಸೇವಕೈರ್ನೃಪಪದಂ ವಿಧುತಂ ತ

---

ಪತ್ನಿಯೊಡನೆ, ನರ್ಮೋಕ್ತಿಭಿಃ-ಕ್ರೀಡಾವಚನಗಳಿಂದ ಯಾಮಾಃ-ಜಾವಹೊತ್ತು, ನೀಯಂತೇ-ಕಳೆಯಲ್ಪಡುವುದೋ, ಅಯಂಹಿ-ಇದು ಮಾತ್ರವೇ, ಗೃಹಮೇಧಿನಾಂ-ಗೃಹಸ್ಥರ, ಗೃಹೇಷು-ಮನೆಗಳಲ್ಲಿ, ಪರಮಃ-ಅಧಿಕವಾದ, ಲಾಭಃ-ಆದಾಯವಾಗಿರುವದು ‖೨೯‖ (ಶುಕವಚನವು.) ರಾಜನ್-ಪರೀಕ್ಷಿದ್ರಾಜನೇ ಏವಂ-ಹೀಗೆ, ಭಗವತಾ-ಕೃಷ್ಣನಿಂದ, ಪರಿಸಾಂತ್ವಿತಾ-ಸಮಾಧಾನಗೊಳಿಸಲ್ಪಟ್ಟ, ಸಾವೈದರ್ಭೀ-ಆ ರುಕ್ಮಿಣಿಯು, ತತ್-ಅವರನ್ನು, ಪರಿಹಾಸೋಕ್ತಿಂ-ನಗೆಸರಸವಾತನ್ನಾಗಿ, ಜ್ಞಾತ್ವಾ-ತಿಳಿದು,ಪ್ರಿಯತ್ಯಾಗಭಯಂ-ಗಂಡನು ತನ್ನಂ ಬಿಟ್ಟನೆಂಬ ಭಯವನ್ನು, ಜಹೌ-ತ್ಯಜಿಸಿದಳು ‖೩೦‖ ಭಾರತ-ಭರತಕುಲೋತ್ಪನ್ನನೇ! ಚಾರುಸರ್ವಾಂಗೀ-ಮನೋಹರವಾದ ಸಕಲಾವಯವಂಗಳುಳ್ಳ, ಅನಪಾಯಿನೀ-ಎಂದಿಗೂ ಗಂಡನಂ ಬಿಟ್ಟಿರುವಳಲ್ಲದ ಸಾಕ್ಷಾತ್-ಪ್ರತ್ಯಕ್ಷಳಾದ, ಶ್ರೀಃ-ಲಕ್ಷ್ಮಿಯಾಗಿರುವ, ರುಕ್ಮಿಣೀ-ವೈದರ್ಭಿಯು, ಸವ್ರೀಡ-ಸವ್ರೀಡ-ನಾಚಿಕೆಯಿಂ ಸಹಿತವಾದ, ಹಾಸ-ನಗೆಯಿಂದ, ರುಚಿರ-ಚಲುವಾದ, ಸ್ನಿಗ್ಧ-ಸ್ನೇಹವುಳ್ಳ, ಅಪಾಂಗೇನ-ಕಡೆಗಂಣಿನಿಂದ ಭಗವನ್ಮುಖಂ-ಕೃಷ್ಣನ ಮೊಗವನ್ನು, ವೀಕ್ಷಂತೀ-ನೋಡುವಳಾಗಿ, ಪುಂಸಾಂ-ಪುರುಷರಲ್ಲಿ, ಋಷಭಂ-ಉತ್ತಮನಾದ ಕೃಷ್ಣನಂ ಕುರಿತು ಬಭಾಷೇ-ಹೇಳಿದಳು ‖೩೩‖ (ರುಕ್ಮಿಣೀವಚನವು) ಹೇಅರವಿಂದವಿಲೋಚನ ಎಲೈ ಕಮಲಾಕ್ಷನೇ! ಭವಾನ್-ನೀನು ಯದಾಹ-ಯಾವುದರ ನ್ನು ಹೇಳಿದೆಯೋ, ತದೇತನ್ನು-ಆ ಇದೇ, ಏವಂನನು-ಹೀಗೆಯೇ ಅಲ್ಲವೇ? ವಿಭೂಮ್ನಃ-ಬಹಳ ದೊಡ್ಡವನಾದ, ಭಗವತಃ-ನಿನಗೆ, ಅಸದೃಶೀ-ಸಮಾನಳಾದವಳು, ನ ನಾನಲ್ಲನ, ತ್ರ್ಯಧೀಶಃ-ತ್ರಿಮೂರ್ತಿಗಳಿಗೂ ಒಡೆಯನಾದ, ಸ್ವೇಮಹಿಮ್ನಿ-ತನ್ನ ಮಹತ್ವದಲ್ಲಿಯೇ, ಅಭಿರತಃ-ಆನಂದಿಸುವನಾದ, ಭಗವಾನ್-ಷಡ್ಗುಣೈಶ್ವರ್ಯಸಂಪನ್ನನಾದ ನೀನು,ಕ್ವ-ಎಲ್ಲಿ, ಗುಣಪ್ರಕೃತಿಃ-ಸತ್ವಾದಿಗುಣಂಗಳಿಗೆ ಮೂಲಭೂತಳಾದ, ಅಜ್ಞಗೃಹೀತಪಾದಾ-ಮೂಢರಾದ ಬಹಿರ್ಮುಖರಿಂದ ಗ್ರಹಿಸಲ್ಪಟ್ಟ ಪಾದಂಗಳುಳ್ಳವಳಾದ, ಅಹಂ-ನಾನು, ಕ್ವ-ಎಲ್ಲಿ? ‖೩೪‖ ಹೇಉರುಕ್ರಮ-ಎಲೈ ಅಧಿಕವಾದ ಪಾದವಿನ್ಯಾಸವುಳ್ಳ ತ್ರಿವಿಕ್ರಮನೇ! ಗುಣೇ

---

ಗೃಹಸ್ಥಾಶ್ರಮಿಗಳಿಗೆ ಪತ್ನಿಯೊಡನೆ ವಿನೋದ ಹಾಸ್ಯಾಲಾಪಂಗಳಿಂದ ಕಾಲವಂ ಕಳೆಯುವುದೇ ಪರಮಸೌಖ್ಯವು ‖೨೯‖ ಈರೀತಿಯಲ್ಲಿ ವಿದರ್ಭರಾಜನ ಪುತ್ರಿಯಾದ ರುಕ್ಮಿಣಿಯು ಭಗವಂತನಾದ ಶ್ರೀಕೃಷ್ಣನಿಂದ ಸಮಾಧಾನವಂ ಮಾಡಲ್ಪಟ್ಟವಳಾಗಿ ಪರಿಹಾಸ ವಾಕ್ಯವನ್ನಾಗಿ ತಿಳಿದು ಶ್ರೀಕೃಷ್ಣನು ತನ್ನ ತ್ಯಾಗವಂ ಮಾಡುವನೆಂಬ ಭಯವಂ ಬಿಟ್ಟಳು ‖೩೦‖ ಆಮೇಲೆ ರುಕ್ಮಿಣಿಯು ಭಗವಂತನ ಮುಖವಂ ನೋಡಿ ಲಜ್ಜಾಯುಕ್ತವಾದ ನಗೆಯಿಂದಲೂ ಮನೋಹರವಾದ ಪ್ರೇಮಯುಕ್ತಂಗಳಾದ ನೋಟಂಗಳಿಂದಲೂ ಪುರುಷಶ್ರೇಷ್ಠನಾದ ಶ್ರೀಕೃಷ್ಣನಂ ಕುರಿತು ನುಡಿದಳು ‖೩೩‖ ಅದೆಂತೆನೆ- ಎಲೈ ಪದ್ಮಲೋಚನನೇ! ನಾನು ನಿನಗೆ ಅನುರೂಪಳಲ್ಲವೆಂದು ನೀನು ಪೇಳಿದ್ದು ಸತ್ಯವೇಸರಿ, ಸ್ವಕೀಯವಾದ ಮಹಿಮೆಯಲ್ಲಿ ರಮಿಸುವ ಮೂರ್ತಿತ್ರಯನಿಯಾಮಕನಾದ ನೀನೆಲ್ಲಿ? ಗುಣಾತ್ಮಕಳಾಗಿ ಅಜ್ಞರಾದವರಿಂ ಫಲಾಪೇಕ್ಷೆಗಳಿಂದ ನಮಸ್ಕರಿಸಲ್ಪಟ್ಟ ಪಾದವುಳ್ಳ ನಾನೆಲ್ಲಿ? ‖೩೪‖ ಕ್ಷತ್ರಿಯರ ಭಯದಿಂದ ಸಮುದ್ರಮಧ್ಯದಲ್ಲಿ ವಾಸವಂ ಮಾಡುತ್ತೇನೆಂದು ನೀನು ಪೇಳಿದ್ದು ಸತ್ಯವೇಸರಿ, ಶಬ್ದಾದಿವಿಷಯಂಗಳಿಂದ ಭಯಪಟ್ಟವನೆಂಬಹಾಗೆ ನೀನು ಸಮುದ್ರದಂತೆ ಅಗಾಧವಾದ ಪ್ರಾಣಿಹೃದಯ ಗುಹೆಯಲ್ಲಿ ಜ್ಞಾನಸ್ವರೂಪನಾಗಿ ಇಂದ್ರಿಯಂಗಳಿಗೆ ಅಗೋಚರನಾಗಿರುವಿ ದುಷ್ಟರಾದ ಜರಾಸಂಧಾದಿ ಬಲವಂತರೊಡನೆ ದ್ವೇಷವಂ ಮಾಡಿ ಕೊಂಡಿದ್ದೇನೆಂದು ನೀನು ಪೇಳಿದ್ದು ಸತ್ಯವೇಸರಿ. ಹ್ಯಾಗೆಂದರೆ- ನೀನು ನಿರಂತರದಲ್ಲಿಯೂ

ಮೋಂಧಮ್॥೩೫॥ ತ್ವತ್ಪಾದಪದ್ಮಮಕರಂದಜುಷಾಂಮುನೀನಾಂವರ್ತ್ಮಾಸ್ಫುಟಂನೃಪಶುಭಿರ್ನನು ದುರ್ವಿಭಾವ್ಯಮ್। ಯಸ್ಮಾದಲೌಕಿಕಮಪೀಹಿತಮೀಶ್ವರಸ್ಯಭೂಮಸ್ತವೇಹಿತಮಥೋಅನುಯೇಭವಂತಮ್॥೩೬॥ ನಿಷ್ಕಿಂಚನೋನನುಭವಾನ್ನಯತೋಸ್ತಿಕಿಂಚಿದ್ಯಸ್ಮೈಬಲಿಂಬಲಿಭುಜೋಪಿಹರಂತ್ಯಜಾದ್ಯಾಃ । ನತ್ವಾವಿದುಸ್ತ್ವಸುತೃಪೋಂತಕಮಾಢ್ಯತಾಂಧಾಃಪ್ರೇಷ್ಠೋಭವಾನ್ಬಲಿಭುಜಾಮಪಿತೇಪಿತುಭ್ಯಮ್॥೩೭॥ತ್ವಂವೈಸಮಸ್ತಪುರುಷಾರ್ಥಮಯಃಫಲಾತ್ಮಾಯದ್ವಾಂಛಯಾಸುಮತಯೋವಿಸೃಜಂತಿ

---

ಸ್ಯ-ಬ್ರಹ್ಮಾದಿಗುಣಂಗಳೆಂಬ ರಾಜರ ಬೆಸೆಯಿಂದ ,ಭಯಾದಿವ-ಭೀತಿಯಿಂದಲೋ ಎಂಬಂತೆ, ಅಂತಸ್ಸಮುದ್ರೇ-ಹೃದಯವೆಂಬ ಕಡಲಿನಲ್ಲಿ, ಉಪಲಂಭನಮಾತ್ರಂ-ಚೈತನ್ಯಘನನಾದ, ಆತ್ಮಾ-ಜೀವಸಾಕ್ಷಿಯಾಗಿ, ಶೇತೇ-ಮಲಗಿರುವಿ ಯೆಂಬುವು ದು, ಸತ್ಯಂ-ದಿಟವೆ, ನಿತ್ಯಂ-ಯಾವಾಗಲೂ, ಕದಿಂದ್ರಿಯಗುಣೈಃ-ಕುತ್ಸಿತಂಗಳಾದ ಇಂದ್ರಿಯ ಸಮೂಹಂಗಳೊಡನೆ, ತ್ವಂ-ನೀನು ಕೃತವಿಗ್ರಹಃ-ಮಾಡಲ್ಪಟ್ಟ ಯುದ್ಧವುಳ್ಳವನಾಗಿರುವಿ, ತ್ವತ್ಸೇವಕೈಃ-ನಿನ್ನ ಭಕ್ತರಿಂದ, ತಮೋಂಧಂ-ತಮೋಗುಣದಿಂದ ಕುರುಡಾದ, ನೃಪಪದಂ-ಪೆಸರೆತನವು, ವಿಧುತಂ-ಕೊಡಹಲ್ಪಟ್ಟಿರುವುದು ॥೩೫॥

ತ್ವತ್ಪಾದಪದ್ಮ-ನಿನ್ನ ಡಿದಾವರೆಗಳ, ಮಕರಂದಜುಷಾಂ-ಜೇನನ್ನು ಸೇವಿಸುವ, ಮುನೀನಾಂ-ಯೋಗಿಗಳ, ವರ್ತ್ಮ-ದಾರಿಯು, ಅಸ್ಫುಟಂ-ಪ್ರಕಟವಾಗದೆ ಇರುವುದು. ನೃಪಶುಭಿಃ-ನರಾಕಾರರಾದ ಪಶುಗಳಿಂದ ದುರ್ವಿಭಾವ್ಯಂನನು-ಊಹಿಸಲಶಕ್ಯವಾದ್ದಲ್ಲವೆ? ಯಸ್ಮಾತ್-ಯಾವ ಕಾರಣದಿಂ, ಭವಂತಂ-ನಿನ್ನನ್ನು, ಅನುಯೇ-ಅನುಸರಿಸುವ ಭಕ್ತರು ಯಾರೋ, ತೇಷಾಂ-ಅವರ, ಈಹಿತಮಪಿ-ಅಪೇಕ್ಷಿತವೂ ಕೂಡ, ಅಲೌಕಿಕಂ-ಲೋಕ ಸಂಬಂಧವಾದ್ದಲ್ಲವೋ ತಸ್ಮಾತ್-ಆ ಕಾರಣದಿಂದ, ಭೂಮ್ನಃ-ಬಹಳ ದೊಡ್ಡವನಾದ, ಈಶ್ವರಸ್ಯ-ಅಂತರ್ಯಾಮಿಯಾದ, ತವ-ನಿನ್ನ. ಈಹಿತಂ-ಸಂಕಲ್ಪಿತವನ್ನು, ಅಥೋ-ಇನ್ನು ನಿನು ಹೇಳತಕ್ಕದ್ದು? ॥೩೬॥ ಯತಃ-ಯಾವ ಕಾರಣದಿಂದ, ಕಿಂಚಿತ್-ನಿನಗಿಂತಲೂ ಅನ್ಯವಾದ ಕೊಂಚವೂ ನಾಸ್ತಿ-ಸತ್ಯವಾದ್ದಾಗಿಲ್ಲವೋ, ತತಃ-ಆ ಕಾರಣದಿಂದ, ಭವಾನ್-ನೀನು ನಿಷ್ಕಿಂಚನೋನನು-ಏನೂ ಇಲ್ಲದವನಲ್ಲವೆ (ಸರ್ವಿಶೇಷ ಚಿನ್ಮಾತ್ರ) ಮ್ರ ಬಲಿಭುಜಃ-ಭಕ್ತರ ಪೂಜೆಗಳನ್ನು ಪರಿಗ್ರಹಿಸುವ, ಅಜಾದ್ಯಾಅಪಿ-ಬ್ರಹ್ಮಾದಿಗಳೂ ಕೂಡ, ಯಸ್ಮೈ-ಯಾವವನಿಗೋಸ್ಕರ, ಬಲಿಂ-ಉಪಹಾರವನ್ನು, ಹರಂತಿ-ಅರ್ಪಿಸುತ್ತಿರುವರೋ, ತಂತ್ವಾ-ಆ ನಿನ್ನನ್ನು, ಅಂತಕಂ-ನಾಶಕನನ್ನಾಗಿ, ಆಢ್ಯತಾಂಧಾಃ-ಧನಿಕತ್ವದಿಂದ ಕುರುಡರಾದವರು, ನವಿದಂತಿ-ತಿಳಿಯುವುದಿಲ್ಲವು ಅಸುತೃಪಃ-ಪ್ರಾಣಂಗಳನ್ನೇ ತೃಪ್ತಿಗೊಳಿಸುವರಾಗುವರು. ಬಲಿಭುಜಾಮಪಿ-ಪೂಜ್ಯರಾದ ಬ್ರಹ್ಮಾದಿಗಳೊಳಗೆ, ಭವಾನ್-ನೀನು, ಪ್ರೇಷ್ಠಃ-ಅತಿಯನಾಗಿರುವಿ ತೇಪಿ-ಅವರೂ ಕೂಡ, ತುಭ್ಯಂ-ನಿನ್ನ ಪರಾಗಿರುವರು ॥೩೭॥ ತ್ವಂವೈ-ನೀನೇ, ಸಮಸ್ತ ಪುರುಷಾರ್ಥಮಯಃ-ಧರ್ಮಾದಿಸಕಲ ಪುರುಷಾರ್ಥಪ್ರಚುರನು- ಫಲಾತ್ಮಾ-ಸುಖಸ್ವರೂಪನೂ ಆಗಿರುವಿ, ಯದ್ವಾಂಛಯಾ-ಯಾವನಿನ್ನ ಸ್ವರೂಪಸುಖದ ಬಯಕೆಯಿಂದ, ಸುಮತಯಃ ಸುಜ್ಞಾನಿಗಳು, ಕೃತ್ಸ್ನಂ-ಸಮಸ್ತವನ್ನು, ವಿಸೃಜಂತಿ-ಬಿಡುವರೋ, (ಸನ್ಯಾಸಿಗಳಾಗುವರೋ) ತ

---

ಕುತ್ಸಿತಂಗಳಾದ ಇಂದ್ರಿಯಂಗಳೊಡನೆ ವಿರೋಧವಂ ಮಾಡುತ್ತೀಯೆ! ಎಲೈಕೃಷ್ಣನೇ! ನಾವು ಸಿಂಹಾಸನ ಯೋಗ್ಯರಲ್ಲವೆಂದು ನೀನು ಹೇಳಿದ್ದು ಸತ್ಯವೇಸರಿ. ನಿನ್ನಸೇವಕರಾದ ಭಕ್ತರಿಂದಲೂ ರಾಜ್ಯಾಧಿಪತ್ಯವು ಪಾಪಫಲಪ್ರದವಾಗಿ ಬಂಧಕ್ಕೆ ಕಾರಣವಾದದ್ದು. ಎಂದುಬಿಡಲ್ಪಟ್ಟಿದೆ. ಆರಾಜ್ಯಾಧಿಪತ್ಯವಂ ನೀನುಬಿಡುವುದುಹೇಳತಕ್ಕದ್ದೇನು? ॥೩೫॥ಒಬ್ಬರಿಗೂ ಗೋಚರವಲ್ಲದ ವ್ಯಾಪಾರವುಳ್ಳವರುಲೌಕಿಕ ವ್ಯಾಪಾರವಂ ಕಂಡವರಲ್ಲವೆಂದು ನೀನು ನುಡಿದದ್ದು ಸತ್ಯವೇಸರಿ. ಅದುಹೇಗೆಂದರೆ ಎಲೈಭಗವಂತನೇ! ನಿನ್ನ ಪಾದಪದ್ಮಮಕರಂದವಂಸೇವಿಸುವ ಋಷಿಗಳಮಾರ್ಗವುಕೂಡ ಅಗೋಚರವಾದದ್ದು,ಮನುಷ್ಯಪಶುಗಳಿಗೆಹೇಗೆಗೋಚರವಾದೀತು?ಎಲೈಈಶ್ವರನೇ ನಿನ್ನಂ ಯಾರು ಸೇವಿಸುತ್ತಾರೆಯೋ ಅವರಿಗೂಕೂಡ ಲೌಕಿಕವ್ಯಾಪಾರಂಗಳಿಲ್ಲ. ನಿನಗೆ ಹೇಳತಕ್ಕದ್ದೇನು? ॥೩೬॥ನಾವುದರಿದ್ರರೆಂದು ಹೇಳಿದಮಾತು ಸತ್ಯವೇಸರಿ, ನಿನಗಿಂತಲೂಬೇರೆಯೇನೂಇಲ್ಲಬ್ರಹ್ಮಾದಿಗಳುಕೂಡ ನಿನ್ನಂಪೂಜಿಮಾಡುತ್ತಾರೆ. ದರಿದ್ರರಿನನಗೆಬೇಕಾದವರೆಂದುಹೇಳಿದಮಾತುಸತ್ಯವೇಸರಿ, ಧನಿಕರಾದವರು ಮದಾಂಧರು ನಿನ್ನಂಭಜಿಸುವದಿಲ್ಲ, ಅವರಲ್ಲಿನಿನಗೆಪ್ರೇಮವೂಇಲ್ಲ. ದರಿದ್ರರೇನಿನ್ನಂ ಭಜಿಸುತ್ತಾರೇ,ಅವರಲ್ಲಿನಿನ

ಕೃತ್ಸ್ನಮ್॥ ತೇಷಾಂವಿಭೋಸಮುಚಿತೋಭವತಸ್ಸಮಾಜಃಪುಂಸಸ್ತ್ರಿಯಾಶ್ಚರತಯೋಸ್ಸುಖದುಃ
ಖಿನೋರ್ನ ॥೩೮॥ ತ್ವಂನ್ಯಸ್ತದಂಡಮುನಿಭಿರ್ಗದಿತಾನುಭಾವಆತ್ಮಾತ್ಮದಶ್ಚಜಗತಾಮಿತಿಮೇವೃತೋಸಿ।
ಹಿತ್ವಾಭವದ್ಭ್ರುವಉದೀರಿತಕಾಲವೇಗಧ್ವಸ್ತಾಶಿಷೋಬ್ಜಭವನಾಕಪತೀನ್ಕುತೋನ್ಯೇ ॥೩೯॥ ಜಾಡ್ಯಂ
ವಚಸ್ತವಗದಾಗ್ರಜಯಸ್ತುಭೂಪಾನ್ವಿದ್ರಾವ್ಯಶಾರ್ಙ್ಗನಿನದೇನಜಹರ್ಥಮಾಂತ್ವಮ್। ಸಿಂಹೋಯ
ಥಾಸ್ವಬಲಿಮೀಶಪಶೂನ್ಸ್ವಭಾಗಂತೇಭ್ಯೋಭಯಾದ್ಯದುದಧಿಂಶರಣಂಪ್ರಪನ್ನಃ ॥೪೦॥ ಯದ್ವಾಂಛ
ಯಾನೃಪಶಿಖಾಮಣಯೋಂಗವೈನ್ಯಜಾಯಂತನಾಹುಷಗಯಾದಯಐಕಪತ್ಯಮ್।ರಾಜ್ಯಂವಿಸೃಜ್ಯವಿ

---

ಸ್ವಭವತಃ-ಆ ನಿನ್ನ, ಸಮಾಜಃ-ಸಭೆಯು, ತೇಷಾಂ-ಅವರಿಗೆ ಸಮುಚಿತಃ-ತಕ್ಕದ್ದಾಗಿರುವುದು, ರತಯೋಃ-ಪರಸ್ಪರವಾಗಿ ಅನುರಕ್ತರಾದ, ಪುಂಸಃಸ್ತ್ರಿಯಾಶ್ಚ-ಗಂಡಿಗೂ ಹೆಣ್ಣಿಗೂ, ಸಮಾಜಃ-ಸೇರಿಕೆಯು, ಸಮುಚಿತಃ-ಯೋಗ್ಯವಾಗುವುದು,ಸುಖದುಃಖಿನೋಃ-ಸುಖವುಳ್ಳವರಿಗೂ ದುಃಖ ವುಳ್ಳವರಿಗೂ, ನ-ಸೇರಿಕೆಯು ತಕ್ಕದ್ದಲ್ಲವು. ॥೩೮॥ ನ್ಯಸ್ತದಂಡಮುನಿಭಿಃ-ವಿರಕ್ತರಾದಯೋಗಿಗಳಿಂದ, ಗದಿತಾನುಭಾವಃ- ಹೇಳಲ್ಪಟ್ಟಸಾಮರ್ಥ್ಯವುಳ್ಳ. ತ್ವಂ-ನೀನು, ಜಗತಾಂ-ಲೋಕಂಗಳಿಗೆ, ಆತ್ಮಾ-ಚೈತನ್ಯವೂ, ಆತ್ಮದಶ್ಚ-ಚೈತನ್ಯವಂ ಕೊಡುವವನೂ ಆಗಿರುವಿಯೆಂದು, ಭವದ್ಭ್ರುವಃ-ನಿನ್ನ ಹುಬ್ಬಿನಚೇಸೆಯಿಂದ, ಉದೀರಿತಾ-ಪ್ರೇರಿಸಲ್ಪಟ್ಟ, ಕಾಲ-ವೇಳೆಯ, ವೇಗ-ಪ್ರವಾಹದಿಂದ, ಧ್ವಸ್ತ-ಧ್ವಂಸಮಾಡಲ್ಪಟ್ಟ, ಆಶಿಷಃ-ಐಶ್ವರ್ಯಂಗಳುಳ್ಳ ಅಬ್ಜಭವನಾಕಪತೀನ್-ಬ್ರಹ್ಮೇಂದ್ರಾದಿಗಳನ್ನು, ಹಿತ್ವಾ-ಬಿಟ್ಟು, ಮೇ-ನನ್ನಿಂದ, ವೃತಃಅಸಿ-ನೀನು ಬಯಸಲ್ಪಟ್ಟವನಾದೆ, ಅನ್ಯೇ-ಇತರರು, ಕುತಃ-ಯಾವ ನಿಮಿತ್ತದಿಂದ ಬಯಸಲ್ಪಟ್ಟಾರು? ॥೩೯॥ ಗದಾಗ್ರಜ-ಕೃಷ್ಣನೇ! ತವ-ನಿನ್ನ, ವಚಃ-ಮಾತು, ಜಾಡ್ಯಂ-ಮೂಢತನವಾಗಿರುವುದು, ಯಃತ್ವಂ-ಯಾವನೀನು ಶಾರ್ಙ್ಗನಿನದೇನ-ಬಿಲ್ಲಿನ ಟಂಕಾರದಿಂದ, ಭೂಪಾನ್-ಜರಾಸಂಧನು ಮೊದಲಾದ ರಾಯರನ್ನು, ವಿದ್ರಾವ್ಯ-ಓಡಿಸಿ, ಪಶೂನ್-ಮೃಗಂಗಳನೋಡಿಸಿ, ಸಿಂಹಃ-ಸಿಂಗವು, ಸ್ವಬಲಿಂ-ತನ್ನ ಆಹಾರವನ್ನು, ಯಥಾ-ಹೇಗೋ, ತಥಾ-ಹಾಗೆ, ಸ್ವಭಾಗಂ-ನಿನ್ನ ಪಾಲಾಗಿರುವ, ಮಾಂ-ನನ್ನನ್ನು. ಜಹರ್ಥ-ಅಪಹರಿಸಿ ತಂದಿರುವಿ, ಈಶ-ಒಡೆಯನೇ! ಯತ್-ಯಾವ ಕಾರಣದಿಂದ, ತೇಭ್ಯಃ-ನಿನಗೆ ಸೋತೋಡಿದ ಅವರ ಹೆಸೆಯಿಂದಾದ ಭಯಾತ್-ಭೀತಿಯತ್ತಣಿಂ, ಉದಧಿಂ-ಕಡಲನ್ನು ಶರಣಂ-ರಕ್ಷಕವನ್ನಾಗಿ. ಪ್ರಪನ್ನಃ-ಸೇರಿದವನಾಗಿರುವೆ? ॥೪೦॥ ಯದ್ವಾಂಛಯಾ-ಯಾವ ನಿನ್ನ ಅಪೇಕ್ಷೆಯಿಂದ, ಅಂಗ-ವೇನರಾಯನ ತಂದೆಯಾದ ಅಂಗರಾಯನೂ ವೈನ್ಯ-ಪೃಥುರಾಯನೂ, ಜಾಯಂತ-ಭರತರಾಯನೂ, ನಾಹುಷ-ಯಯಾತಿಯೂ, ಗಯ-ಗಯರಾಯನೇ ಆದಯಃ-ಮೊದಲಾದ, ನೃಪಶಿಖಾಮಣಯಃ-ರಾಜಶ್ರೇಷ್ಠರು, ಪತ್ಯಂ-ಏಕಾಧಿಪತ್ಯವುಳ್ಳ, ರಾಜ್ಯಂ-ಧೊರೆತನವನ್ನು, ವಿಸೃಜ್ಯ-ಬಿಟ್ಟು, ವನಂ-ಅರ

---

ಗೆಪರಮಾನುಗ್ರಹವು, ಬ್ರಹ್ಮಾದಿಗಳು ಸಹಾಭಕ್ತಿಯಂ ಮಾಡುವುದಕ್ಕೆ ನೀನೇವಿಷಯನು ॥೩೭॥ಎಲೈಶ್ರೀಕೃಷ್ಣನೇ! ನೀನುಸಮಸ್ತ ಪುರುಷಾರ್ಥಂಗಳಾದ, ಫಲಂಗಳಸ್ವರೂಪನೂ. ಬುದ್ಧಿಮಂತರು ಯಾವಪುರುಷಾರ್ಥಾಪೇಕ್ಷೆಯಿಂದ ಸರ್ವ ವಂತ್ಯಜಿಸುತ್ತಾರೆಯೋ ಅಪುರುಷಾರ್ಥರೂಪನೂ, ಅಂಥಾಮಹಾಯೋಗಿಗಳಸಮಾಜದಲ್ಲಿರುವವನೂ, ಆದನೀನು ಕಾಮುಕರಾದ ಸ್ತ್ರೀಪುರುಷರಿಗೆ ಗೋಚರನಲ್ಲ ॥೩೮॥ಎಲೈಶ್ರೀಕೃಷ್ಣನೇ।ಸರ್ವ ಸಂತ್ಯಾಗವಂಮಾಡಿದ ಮುನಿಗಳಿಂದ ವರ್ಣಿಸಲ್ಪಟ್ಟ ಮಹಾತ್ಮ್ಯವುಳ್ಳವನೂ ಜಗತ್ತಿಗೆಅಂತರಾತ್ಮನೂ ಆದನೀನು ಸೇವಕರಿಗೆ ನಿಜಸ್ವರೂಪವಂ ಕುಡುತ್ತಿಯೆಂದು ತಿಳಿದು ನಿನ್ನನ್ನು ನಾನುಅಪೇಕ್ಷಿಸುವಳಾದೆನು. ನಿನ್ನಹುಬ್ಬುಗಳಪ್ರೇರಣ ದಿಂದಲೇವುಂಟಾದ ಕಾಲದಿಂದ ಪರಿಹೃತವಾದ ಐಶ್ವರ್ಯಾಯುಷ್ಯಗಳುಮುಂತಾದ ಫಲಂಗಳುಳ್ಳ ಬ್ರಹ್ಮಾದಿಗಳಂಬಿಟ್ಟುನಾನು ನಿನ್ನನ್ನೇ ಆಪೇಕ್ಷಿಸಿದೆನು ॥೩೯॥ ನಾನು ದುರಾಲೋಚನೆಯ ಮಾಡದೇಯಿದ್ದವಳಲ್ಲ, ಎಲೈ, ಈಶ್ವರನೇ।ನೀನುಧನುಷ್ಟಂಕಾರಶಬ್ದದಿಂದಲೇ ಜರಾಸಂಧಾದಿ ಕ್ಷತ್ರಿಯರಂ ಪಲಾಯನಂ ಗೆಯ್ಸಿ ಸಿಂಹವು ಕ್ಷುದ್ರಮೃಗಂಗಳಂ ಓಡಿಸಿ ತನ್ನವಸ್ತುವಂ ಹೇಗಸಾಧಿಸುವುದೋ ಅದೇರೀತಿಯಲ್ಲಿ ನನ್ನ ನಪಹರಿಸಿಕೊಂಡುಬಂದೆ. ಅಂತಾ ನೀನು ಕ್ಷತ್ರಿಯ ಭಯದಿಂದ ಸಮುದ್ರಮಧ್ಯದಲ್ಲಿ ವಾಸವಂ ಮಾಡುತ್ತೀನೆಯೆಂಬ ವಾಕ್ಯ ಅಸಂಗತವೇಸರಿ ॥೪೦॥ ಯಾವ ನಿನ್ನಂ ತಿಳಿಯಲಿಚ್ಛೆಯಿಂದ

ವಿಶುರ್ವನಮಂಬುಜಾಕ್ಷ ಸೀದಂತಿ ತೇನುಪದವೀಂ ತ ಇಹಾಸ್ಥಿತಾಃ ಕಿಮ್ ॥೪೧॥ ಕಾನ್ಯಂ ಶ್ರಯೇತ ತವ ಪಾದ
ಸರೋಜಗಂಧಮಾಘ್ರಾಯ ಸನ್ಮುಖರಿತಂ ಜನತಾಪವರ್ಗಮ್ । ಲಕ್ಷ್ಮ್ಯಾಲಯಂ ತ್ವವಿಗಣಯ್ಯ ಗುಣಾಲ
ಯಸ್ಯ ಮರ್ತ್ಯಾ ಸದೋರುಭಯಮರ್ಥವಿವಿಕ್ತದೃಷ್ಟಿಃ ॥೪೨॥ ತಂ ತ್ವಾನುರೂಪಮಭಜಂ ಜಗತಾಮಧೀ
ಶಮಾತ್ಮಾನಮತ್ರ ಚ ಪರತ್ರ ಚ ಕಾಮಪೂರಮ್ । ಸ್ಯಾನ್ಮೇ ತವಾಂಘ್ರಿರರಣಂ ಸೃತಿಭಿರ್ಭ್ರಮಂತ್ಯಾ ಯೋ
ವೈ ಭಜಂತಮುಪಯಾತ್ಯನೃತಾಪವರ್ಗಃ ॥೪೩॥ ತಸ್ಯಾಃ ಸ್ಯುರಚ್ಯುತ ನೃಪಾ ಭವತೋಪದಿಷ್ಟಾಃ ಸ್ತ್ರೀ
ಣಾಂ ಗೃಹೇಷು ಖರಗೋಶ್ವಬಿಡಾಲಭೃತ್ಯಾಃ । ಯತ್ಕರ್ಣಮೂಲಮರಿಕರ್ಷಣ ನೋಪಯಾಯಾದ್ಯುಷ್ಮ
ತ್ಕಥಾ ಹರವಿರಿಂಚಸಭಾಸು ಗೀತಾ ॥೪೪॥ ತ್ವಕ್ಶ್ಮಶ್ರುರೋಮನಖಕೇಶಪಿನದ್ಧಮಂತರ್ಮಾಂಸಾಸ್ಥಿರಕ್ತ

ಜ್ಯವನ್ನು, ವಿವಿಶುಃ-ಹೊಕ್ಕರೋ, ತೇ-ಅವರು, ಇಹ-ಇಲ್ಲಿ, ಸೀದಂತಿ ಕಿಂ-ದುಃಖಿಸುತ್ತಿರುವರೋ ಏನು? ಅಂಬುಜಾಕ್ಷ-ಕೃಷ್ಣನೇ! ತೇ-ಅವರು, ತೇ-ನಿನ್ನ, ಅನುಪದವೀಂ-ಮಾರ್ಗವನ್ನನುಸರಿಸಿ, ಆಸ್ಥಿತಾಃ-ಇರುವರು ॥೪೧॥ ಗುಣಾಲಯಸ್ಯ-ಅನಂತಕಲ್ಯಾಣಗುಣಂಗಳಿಗಾಧಾರನಾದ, ತವ-ನಿನ್ನ, ಸನ್ಮುಖರಿತಂ-ಸತ್ಪುರುಷರಿಂದ ಘೋಷಿಸಲ್ಪಟ್ಟ, ಜನತಾಪವರ್ಗಂ-ಜೀವಕೋಟಿಗೆ ಮೋಕ್ಷರೂಪವಾದ ಲಕ್ಷ್ಮ್ಯಾಲಯಂ-ಲಕ್ಷ್ಮಿಗೆ ಆವಾಸವಾದ, ಪಾದಸರೋಜಗಂಧಂ-ಅಡಿದಾವರೆಯ ಪರಿಮಳವನ್ನು, ಆಘ್ರಾಯ-ಅನುಭವಿಸಿ, ಕಾ ತು-ಯಾವ ಸ್ತ್ರೀಯು ತಾನೆ. ಅರ್ಥವಿವಿಕ್ತದೃಷ್ಟಿಃ-ಅನ್ಯವಿಷಯದಲ್ಲಿ ಏಕಾಂತಲಕ್ಷ್ಯವುಳ್ಳವಳಾಗಿ, ಅವಿಗಣಯ್ಯ-ನಿನ್ನ ಪಾದಗಂಧವನ್ನು ಲೆಕ್ಕಿಸದೆ, ಮರ್ತ್ಯಂ-ಮರಣಧರ್ಮವುಳ್ಳ, ಸದಾ-ಯಾವಾಗಲೂ, ಉರುಭಯಂ-ಅಧಿಕ ಭೀತಿಯುಳ್ಳ, ಅನ್ಯಂ-ಇತರನನ್ನು, ಶ್ರಯೇತ-ಆಶ್ರಯಿಸುವಳು? ॥೪೨॥ ಜಗತಾಂ-ಲೋಕಂಗಳಿಗೆ, ಅಧೀಶ-ಮಹಾಪ್ರಭುವೇ, ಅನುರೂಪಂ-ತಕ್ಕವನಾದ, ತಂ ತ್ವಾ-ಆ ನಿನ್ನನ್ನು, ಅತ್ರ ಚ-ಇಲ್ಲಿಯೂ, ಪರತ್ರ ಚ-ಪರಲೋಕದಲ್ಲಿಯೂ, ಕಾಮಪೂರಂ-ಮನೋರಥಂಗಳಂ ಪೂರ್ತಿಗೊಳಿಸುವ, ಆತ್ಮಾನಂ-ಪರಮಾತ್ಮನನ್ನಾಗಿ, ಅಭಜಂ-ಸೇವಿಸಿದೆನು. ಯೋ ವೈ-ಯಾವನೇ, ಅನೃತಾಪವರ್ಗಃ-ಮಿಥ್ಯಾಪ್ರಪಂಚಕ್ಕೆ ಮೋಕ್ಷಸ್ವರೂಪನಾಗಿ, ಭಜಂತಂ-ತನ್ನಂ ಸೇವಿಸುವವನನ್ನು ಉಪಯಾತಿ-ಬಳಿಸೇರುವನೋ, ತಸ್ಯ ತವ-ಆ ನಿನ್ನ, ಅಂಘ್ರಿಃ-ಚರಣವು, ಸೃತಿಭಿಃ-ಸಂಸಾರಂಗಳಿಂದ, ಭ್ರಮಂತ್ಯಾಃ-ತಿರುಗುತ್ತಿರುವ [ಭ್ರಾಂತಿಪಡುತ್ತಿರುವ] ಮೇ-ನನಗೆ, ಅರಣಂ-ಕ್ಷೇಮವಾದ ರಕ್ಷಕವು ಸ್ಯಾತ್-ಆದೀತು ॥೪೩॥ ಅರಿಕರ್ಷಣ-ಶತ್ರುಗಳನ್ನು ಕೃಶಗೊಳಿಸುವ, ಅಚ್ಯುತ-ಕೃಷ್ಣನೇ, ಹರವಿರಿಂಚಸಭಾಸು-ರುದ್ರಬ್ರಹ್ಮರ ಸಭೆಗಳಲ್ಲಿ, ಗೀತಾ-ಹಾಡಲ್ಪಟ್ಟ, ಯುಷ್ಮತ್ಕಥಾ-ನಿಮ್ಮ ಗುಣವರ್ಣನವು, ಯತ್ಕರ್ಣಮೂಲಂ-ಯಾವ ಕಿವಿಗಳ ಬುಡವನ್ನು ನೋಪಯಾಯಾತ್-ಬಳಿಸೇರದೇ ಹೋಗುವುದೋ, ತೇ-ಅಂತವರಾದ, ಗೃಹೇಷು-ಮನೆಗಳಲ್ಲಿ ಸ್ತ್ರೀಣಾಂ-ಹೆಂಗಳಿಗೆ ಖರಗೋಶ್ವಬಿಡಾಲಭೃತ್ಯಾಃ-ಕತ್ತೆಗಳಂತೆಯೂ ಎತ್ತುಗಳಂತೆಯೂ ಕುದುರೆಗಳಂತೆಯೂ ಬೆಕ್ಕುಗಳಂತೆಯೂ ಆಹಾರಜೀವಿಗಳಾದ ಸೇವಕರೆನಿಸುವ ಭವತಾ ಉಪದಿಷ್ಟಾಃ-ನಿನ್ನಿಂದ ಹೇಳಲ್ಪಟ್ಟವರಾದ, ನೃಪಾಃ-ಶಿಶುಪಾಲಾದಿ ದೊರೆಗಳು, ತಸ್ಯಾಃ-ಅವಳಿಗೆ ಸ್ಯುಃ-ಗಂಡಂದಿರಾದಾರು ॥೪೪॥ ತ್ವಕ್....

---

ಅಂಗರಾಯನು ಪೃಥುರಾಯನು ಭರತರಾಯನು ಯಯಾತಿ ರಾಯನು ಗಯರಾಯನು ಇವರು ಮುಂತಾದ ರಾಜಶ್ರೇಷ್ಠರು ಏಕಾಧಿಪತ್ಯ ಸಾಮ್ರಾಜ್ಯವಂ ಬಿಟ್ಟು ವನವಂ ಕುರಿತು ಹೋದರೋ, ಅವರೇನಾದರೂ ದುಃಖಪಟ್ಟರೇ? ಇಲ್ಲವಲ್ಲ ನಿನ್ನ ಸ್ಥಾನವನೆಯ್ದಿದರು ॥೪೧॥ ಎಲೈ ಶ್ರೀಕೃಷ್ಣನೇ! ಗುಣಪರಿಜ್ಞಾನವುಳ್ಳಯಾವ ಸ್ತ್ರೀಯು ಲೋಕಸಂತಾಪ ಪರಿಹಾರಕವಾದ ವಿದ್ವಾಂಸರಿಂದ ಶ್ಲಾಘಿತವಾದ ನಿನ್ನ ಪಾದಪದ್ಮಗಂಧವನ್ನು ಆಘ್ರಾಣಂ ಗೆಯ್ದುಕೊಳ್ಳದೆ, ಅಂತಾ ನಿನ್ನನ್ನತಿಕ್ರಮಿಸಿ ಮರಣ ಧರ್ಮವುಳ್ಳ ಅಪರಿಮಿತಭಯವುಳ್ಳ ಸಾಧಾರಣ ಮನುಷ್ಯನಂ ಅಪೇಕ್ಷಿಸುವಳಾದಾಳು? ॥೪೨॥ ಜಗತ್ತುಗಳಿಗೆ ನಾಥನಾದ ಇಹಲೋಕ ಪರಲೋಕಂಗಳಲ್ಲಿ ಇಷ್ಟಾರ್ಥಪೂರಕನಾದ ಅಂತರಾತ್ಮನಾದ ನಿನ್ನಂ ಅನುರೂಪನನ್ನಾಗಿ ತಿಳಿದನಾನು ನಿನ್ನನೆಯ್ದಿದೆನು. ಸೇವಕರ ಸಂಸಾರ ಬಂಧಮೋಚಕವಾದ ನಿನ್ನ ಪಾದಪದ್ಮವೇ ನನಗೆ ರಕ್ಷಕವಾಗಲಿ, ಸಂಸಾರಬದ್ಧಳಾಗಿ ಜನನಮರಣಾದಿ ರೂಪವಾದ ಮಹಾ ಸಂಸಾರದಲ್ಲಿ ಮಗ್ನಳಾಗಿರುವೆನು, ಎಲೈ ಸ್ವಾಮಿಯೇ ॥೪೩॥ ಬ್ರಹ್ಮಾದಿಗಳಿಂದ ಗಾನಂಗೆಯ್ಯಲ್ಪಡುವ ನಿನ್ನ ಚರಿತ್ರವು ಯಾವ ಸ್ತ್ರೀಯ ಶ್ರೋತ್ರಮಾರ್ಗವಂ ಪ್ರವೇಶಿಸಲಿಲ್ಲವೋ

ಕ್ರಿಮಿವಿಟ್ಕಫಪಿತ್ತವಾತಮ್ । ಜೀವಚ್ಛವಂ ಭಜತಿ ಕಾಂತಮತಿರ್ವಿಮೂಢಾ ಯಾ ತೇ ಪದಾಬ್ಜಮಕರಂದಮಜಿಘ್ರತೀ ಸ್ತ್ರೀ ॥೪೫॥ ಅಸ್ತ್ವಂಬುಜಾಕ್ಷ ಮಮ ತೇ ಚರಣಾನುರಾಗ ಆತ್ಮನ್ರತಸ್ಯ ಮಯಿ ಚಾನತಿರಿಕ್ತದೃಷ್ಟೇಃ । ಯರ್ಹ್ಯಸ್ಯ ವೃದ್ಧಯ ಉಪಾತ್ತರಜೋತಿಮಾತ್ರೋ ಮಾಮೀಕ್ಷಸೇ ತದು ಹ ನಃ ಪರಮಾನುಕಂಪಾ ॥೪೬॥ ನೈವಾಲೀಕಮಹಂ ಮನ್ಯೇ ವಚಸ್ತೇ ಮಧುಸೂದನ । ಅಂಬಾಯಾ ಇವ ಹಿ ಪ್ರಾಯಃ ಕನ್ಯಾಯಾಃ ಸ್ಯಾದ್ರತಿಃ ಕ್ವಚಿತ್ ॥೪೭॥ ವ್ಯೂಢಾಯಾಶ್ಚಾಪಿ ಪುಂಶ್ಚಲ್ಯಾ ಮನೋಽಭ್ಯೇತಿ ನವಂ ನವಮ್ । ಬುಧೋ

---

ನದ್ಧಂ-ತ್ವಕ್-ತೊವಲಿನಿಂದಲೂ, ಶ್ಮಶ್ರು-ಮೀಸೆಗಳಿಂದಲೂ, ಲೋಮ-ಸಣ್ಣಕೂದಲಿನಿಂದಲೂ, ನಖ-ಉಗುರುಗಳಿಂದಲೂ, ಕೇಶ-ದೊಡ್ಡ ಕೂದಲುಗಳಿಂದಲೂ, ಪಿನದ್ಧಂ-ಮುಚ್ಚಲ್ಪಟ್ಟಿರುವಂಥಾ, ಅಂತಃ-ಒಳಗೆ, ಮಾಂಸ-ಅಡಗೂ, ಅಸ್ಥಿ-ಮೂಳೆಗಳೂ, ರಕ್ತ-ಕೆನ್ನೀರೂ, ಕ್ರಿಮಿ-ಹುಳುಗಳೂ, ವಿಟ್-ಮಲವೂ, ಕಫ-ಶ್ಲೇಷ್ಮವೂ, ಪಿತ್ತ-ಕೊಬ್ಬು, ವಾತಂ-ಗಾಳಿಯೂ ಉಳ್ಳಂಥಾ, ಜೀವಚ್ಛವಂ-ಬದುಕಿರುವಹೆಣವನ್ನು, ಯಾ-ಯಾವವಳು, ತೇ-ನಿನ್ನ, ಪದಾಬ್ಜಮಕರಂದಂ-ಅಡಿದಾವರೆಯ ಜೇನನ್ನು, ಅಜಿಘ್ರತೀ-ಮೂಸಿನೋಡದೆ ಇರುವಳೋ, ಸಾವಿಮೂಢಾ-ಆ ಮುಗ್ಧೆಯೇ, ಕಾಂತಮತಿಃ-ಗಂಡನೆಂಬ ಬುದ್ಧಿಯುಳ್ಳವಳಾಗಿ, ಭಜತಿ-ಸೇವಿಸುವಳು ॥೪೫॥ ಹೇ ಅಂಬುಜಾಕ್ಷ-ಕೃಷ್ಣನೇ! ಆತ್ಮನ್-ನಿನ್ನಲ್ಲಿಯೇ, ರತಸ್ಯ-ಆಸಕ್ತನಾದ, ಮಯಿಚ-ನನ್ನಲ್ಲಿಯೂ, ಅನತಿರಿಕ್ತದೃಷ್ಟೇಃ-ಭಿನ್ನವಲ್ಲದ ಲಕ್ಷ್ಯವುಳ್ಳ, ತೇ-ನಿನ್ನ, ಚರಣಾನುರಾಗಃ-ಅಡಿಗಳಲ್ಲಿ ಸ್ನೇಹವು, ಮಮ-ನನಗೆ, ಅಸ್ತು-ಆಗಲಿ; ಯರ್ಹಿ-ಯಾವಾಗ; ಅಸ್ಯ-ಈ ಪ್ರಪಂಚದ, ವೃದ್ಧಯೇ-ಬೆಳವಳಿಗೆ ಗೋಸ್ಕರ, ಉಪಾತ್ತರಜೋತಿಮಾತ್ರಃ-ಹೊಂದಲ್ಪಟ್ಟ ರಜೋಗುಣದ ಆಧಿಕ್ಯವುಳ್ಳವನಾಗಿ, ಮಾಂ-ನನ್ನನ್ನು, ಈಕ್ಷಸೇ-ನೋಡುವೆಯೋ, ತದು-ಅದೇ, ನಃ-ನಮಗೆ ಹ-ಸಂತೋಷಕರವಾದ; ಪರಮಾನುಕಂಪಾ-ಅತ್ಯನುಗ್ರಹವಾಗಿರುವುದು ॥೪೬॥ ಮಧುಸೂದನ-ಕೃಷ್ಣನೇ! ತೇ-ನಿನ್ನ, ವಚಃ-ಮಾತನ್ನು, ಅಲೀಕಂ-ಸುಳ್ಳನ್ನಾಗಿ, ಅಹಂ-ನಾನು, ನೈವಮನ್ಯೇ-ಎಣಿಸುವದೇ ಇಲ್ಲವು. ಕ್ವಚಿತ್-ಎಲ್ಲಿಯಾದರೂ, ಕನ್ಯಾಯಾಃ-ಮದುವೆಯಿಲ್ಲದವಳಿಗೆ, ಪ್ರಾಯಃ-ಬಹುಳವಾಗಿ; ರತಿಃ-ಅನುರಾಗವು, ಅಂಬಾಯಾ ಇವ-ಅಂಬೆ ಯೆಂಬವಳಿಗಾದಂತೆ, ಸ್ಯಾತ್ ಹಿ-ಅನ್ಯಪುರುಷನಲ್ಲಿ ಆದೀತಲ್ಲವೆ? ॥೪೭॥ ವ್ಯೂಢಾಯಾಶ್ಚಾಪಿ-ಮದುವೆ ಮಾಡಿಕೊಳ್ಳಲ್ಪಟ್ಟವಳಾದರೂ, ಪುಂಶ್ಚಲ್ಯಾಃ-ಹಾದರಗಿ

---

ಆಸ್ತ್ರೀಗೆ ನಿನ್ನಿಂ ಹೇಳಲ್ಪಟ್ಟ ಜರಾಸಂಧಾದಿಗಳು ಪತಿಗಳಾಗಲಿ. ಆಜರಾಸಂಧಾದಿಗಳು ಎಂತಿಯುವರೆಂದರೆ ಗಾರ್ಧಭಂಗಳಂತೆ ಭಾರವಾಹಕರಾಗಿ, ವೃಷಭಂಗಳಂತೆ ಸರ್ವದಾ ದೇಹಪ್ರಯಾಸ ಪಡುವರಾಗಿ, ನಾಯಿಗಳಂತೆ ಅವಮಾನವ ನೆಯ್ದುವರಾಗಿ, ಮಾರ್ಜಾಲಂಗಳಂತೆ ದೀನರಾಗಿ, ಸ್ತ್ರೀಯರಿಗೆ ಧೀನರಾಗಿ, ಇರುವರು ॥೪೪॥ ಯಾವಸ್ತ್ರೀಯು ನಿನ್ನ ಪಾದಪದ್ಮ ಮಕರಂದವಂ ಆಘ್ರಾಣಂಗೆಯ್ಯದೆ ಇರುವಳೋ ಅಂತಿಯ ಮೂಢಸ್ತ್ರೀಯು; ತ್ವಕ್ಕಿನಿಂದಲೂ ಗಡ್ಡಮೀಸೆಗಳಿಂದಲೂ ರೋಮಂಗಳಿಂದಲೂ ಕೇಶಂಗಳಿಂದಲೂ ಕಟ್ಟಲ್ಪಟ್ಟ ಒಳಗೆ ಮಾಂಸದಿಂದಲೂ ಅಸ್ಥಿಗಳಿಂದಲೂ ಪುರೀಷದಿಂದಲೂ ಕ್ರಿಮಿಗಳಿಂದಲೂ ವಾತಪಿತ್ತಶ್ಲೇಷ್ಮಂಗಳಿಂದಲೂ ಪೂರಿತವಾದ ಜೀವಯುಕ್ತವಾದ ಶವನನ್ನು ಪತಿಯನ್ನಾಗಿ ಭ್ರಾಂತಿಯಿಂದ ಹಡೆಯುತ್ತಾಳೆ ॥೪೫॥ ಎಲೈಪದ್ಮಲೋಚನನೇ! ನಿನ್ನ ಪಾದಪದ್ಮದಲ್ಲಿಯೇ ನನಗನುರಾಗವಿರಲಿ. ಆತ್ಮಾರಾಮನಾಗಿ ನನ್ನಲ್ಲಿ ಇವಳು ಅನ್ಯಳಾದಸ್ತ್ರೀಯೆಂಬ ಭೇದ ಬುದ್ಧಿರಹಿತನಾದ ನಿನಗೆ ಅತಿರಕ್ತವಾದ ವಸ್ತುವಿಲ್ಲದಿದ್ದರೂ ಲೋಕರಕ್ಷಣಾರ್ಥವಾಗಿ ಗೃಹೀತವಾದ ಸುಂದರದೇಹವುಳ್ಳ ನೀನು ರಜೋಗುಣಪ್ರಧಾನವಾದ ಸಾನುರಾಗದಿಂದ ಯುಕ್ತವಾದ ದೃಷ್ಟಿಯಿಂದ ನನ್ನಂ ನೋಡುತ್ತೀಯಲ್ಲಾ, ಅದೇ ನನಗೆ ಪರಮಾನುಗ್ರಹವು. ॥೪೬॥ ಎಲೈ ಮಧುಸೂದನನಾದ ಶ್ರೀಕೃಷ್ಣಸ್ವಾಮಿಯೇ! ನಿನ್ನಿಂದ ಹೇಳಲ್ಪಡುವ ಅರ್ಥವು ಅನೃತವಲ್ಲ. ಲೋಕದಲ್ಲಿ ಕನ್ಯಾಜನರಿಗೆ ಯಾವನಾದರೂ ಒಬ್ಬನಲ್ಲಿ ಪ್ರೇಮವುಂಟಾಗುವುದು ಸತ್ಯವೇಸರಿ, ಕಾಶೀರಾಯನ ಪುತ್ರಿಯಾದ ಅಂಬೆ ಅಂಬಾಲಿಕೆ ಅಂಬಿಕೆ ಯೆಂಬ ಮೂರು ಪುತ್ರಿಯರೊಳಗೆ ಅಂಬೆಯೆಂಬವಳಿಗೆ ಸಾಲ್ವರಾಯನಲ್ಲಿ ಅಪೇಕ್ಷೆಯಿತ್ತು. ॥೪೭॥ ವಿವಾಹಿತಳಾದರೂ ಕನ್ಯೆ

ಸತೀಂನಬಿಭೃಯಾತ್ತಾಂಬಿಭ್ರದುಭಯಚ್ಯುತಃ ||೩೮|| ಶ್ರೀಭಗವಾನ್ | ಸಾಧ್ವ್ಯೇತಚ್ಛ್ರೋತುಕಾಮೈ
ಸ್ತ್ವಂರಾಜಪುತ್ರಿಪ್ರಲಂಭಿತಾ | ಮಯೋದಿತಂಯದನ್ವಾತ್ಥತತ್ಸರ್ವಂಸತ್ಯಮೇವಹಿ ||೩೯|| ಯಾನ್‌ಯಾನ್
ಕಾಮಯಸೇಕಾಮಾನ್ಮಯ್ಯಕಾಮಾಯಭಾಮಿನಿ | ಸಂತಿಹ್ಯೇಕಾಂತಭಕ್ತಾಯಾಸ್ತವಕಲ್ಯಾಣಿನಿತ್ಯ
ದಾ || ೪೦ || ಉಪಲಬ್ಧಂಪ್ರತಿಪ್ರೇಮಪಾತಿವ್ರತ್ಯಂಚತೇನಘೇ | ಯದ್ವಾಕ್ಯೈಶ್ಚಾಲ್ಯಮಾನಾಯಾನಧೀ
ರ್ಮಯ್ಯಪಕರ್ಷಿತಾ ||೪೧|| ಯೇಮಾಂಭಜಂತಿದಾಂಪತ್ಯೇತಪಸಾವ್ರತಚರ್ಯಯಾ | ಕಾಮಾತ್ಮಾನೋಪ
ವರ್ಗೇಶಂಮೋಹಿತಾಮಮಮಾಯಯಾ ||೪೨|| ಮಾಂಪ್ರಾಪ್ಯಮಾನಿನ್ಯಪವರ್ಗಸಂಪದಂವಾಂಛಂತಿಯೇ

---

ತ್ತಿಗೆ, ಮನಃ-ಹೃದಯವು, ನವಂನವಂ-ಹೊಸಹೊಸ ಪುರುಷರಂ ಕುರಿತು, ಅಭ್ಯೇತಿ-ಹೋಗುತ್ತಿದೆ. ಬುಧಃ-ವಿದ್ವಾಂಸನು, ಅಸತೀಂ-ಹಾದರಗಿತ್ತಿಯನ್ನು ನಬಿಭೃಯಾತ್-ಅನ್ನವಸ್ತ್ರಗಳಿಂದ ಪೋಷಿಸಬಾರದು, ತಾಂ-ಅವಳನ್ನು ಬಿಭ್ರತ್-ಪೋಷಿಸುವವನು, ಉಭಯಚ್ಯುತಃ-ಈ ಲೋಕದಿಂದಲೂ ಪರಲೋಕದಿಂದಲೂ ಜಾರಿಬೀಳುವ ನಾಗುತ್ತಾನೆ ||೩೮|| [ಭಗವದ್ವಚನವು] ಸಾಧ್ವಿ-ಪತಿವ್ರತೆಯಾದ, ರಾಜಪುತ್ರಿ-ದೊರೆಯ ಮಗಳೇ! ಏತತ್-ಈ ಮಾತನ್ನು, ಶ್ರೋತುಕಾಮೈಃ-ಕೇಳುವುದಕ್ಕೆ ಬಯಕೆಯುಳ್ಳ ನನ್ನಿಂದ, ಪ್ರಲಂಬಿತಾ-ಹಾಸ್ಯ ಮಾಡಲ್ಪಟ್ಟವಳಾಗಿರುವೆ, ಮಯಾ-ನನ್ನಿಂದ, ಉದಿತಮನು-ಹೇಳಲ್ಪಟ್ಟುದನ್ನನು, ಸರಿಸಿಯೋ, ಯದನ್ವಾತ್ಥ-ಯಾವುವರನ್ನು ಹೇಳಿದೆಯೋ, ತತ್ಸರ್ವಂ-ಅದೆಲ್ಲವೂ, ಸತ್ಯಮೇವಹಿ-ದಿಟವೇ ಅಲ್ಲವೇ ||೩೯|| ಕಲ್ಯಾಣಿ-ಶುಭವುಳ್ಳ ನೀನು, ನಿತ್ಯದಾ-ಯಾವಾಗಲೂ, ಮಯಿ-ನನ್ನ ವಿಷಯದಲ್ಲಿ, ಯಾನ್‌ಯಾನ್‌ಕಾಮಾನ್-ಯಾವಯಾವ ಬಯಕೆಗಳನ್ನು, ಕಾಮಯಸೇ-ಬಯಸುವೆಯೋ, ಭಾಮಿನಿ-ಮಾನವತಿಯೇ! ತೇ-ಆ ಬಯಕೆಗಳು, ಏಕಾಂತಭಕ್ತಾಯಾಃ-ರಹಸ್ಯವಾದ ಅದ್ವೈತಭಜನವುಳ್ಳ, ತವ-ನಿನ್ನ, ಅಕಾಮಾಯ-ಬಯಕೆಗಳಿಲ್ಲದೆ ಹೋಗುವುದಕ್ಕಾಗಿ ಸಂತಿಹಿ-ಇರುವವಲ್ಲವೆ ||೪೦|| ಅನಘೇ-ಪಾಪ ರಹಿತಳೇ! ಯತ್-ಯಾವ ಕಾರಣದಿಂದ, ವಾಕ್ಯೈಃ-ಮಾತುಗಳಿಂ, ಚಾಲ್ಯಮಾನಾಯಾಃ-ಚಂಚಲ ಗೊಳಿಸಲ್ಪಡುತ್ತಿರುವ ತೇ-ನಿನ್ನ, ಧೀಃ-ಬುದ್ಧಿಯು, ಮಯಿ-ನನ್ನಲ್ಲಿ, ನಾಪಕರ್ಷಿತಾ-ಸಂಕೋಚವಂ ಪಡೆಯಲಿಲ್ಲವೋ, ತತ್-ಆ ಕಾರಣದಿಂದ, ಪ್ರತಿಪ್ರೇಮ-ಪರಸ್ಪರ ಸ್ನೇಹವೂ, ಪಾತಿವ್ರತ್ಯಂಚ-ಗರುತತನವೂ, ಉಪಲಬ್ಧಂ-ತಿಳಿಯಲ್ಪಟ್ಟಿರುವುದು ||೪೧|| ಯೇ-ಯಾರು, ಕಾಮಾತ್ಮಾನಃ-ಕಾಮಬುದ್ಧಿಯುಳ್ಳವರಾಗಿ ದಾಂಪತ್ಯೇ-ದಂಪತಿಸೌಖ್ಯಕ್ಕೋಸುಗ, ತಪಸಾ-ಧ್ಯಾನದಿಂದಲೂ, ಅನಶನಾದಿ ಕಾಯಕ್ಲೇಶದಿಂದಲೂ, ವ್ರತಚರ್ಯಯಾ-ನಿಯಮಾಚರಣದಿಂದಲೂ, ಅಪವರ್ಗೇಶಂ-ಮೋಕ್ಷಕ್ಕೊಡೆಯನಾದ, ಮಾಂ-ನನ್ನನ್ನು, ಭಜಂತಿ-ಸೇವಿಸುವರೋ, ತೇ-ಅವರು ಮಮ-ನನ್ನ, ಮಾಯಯಾ-ಆ ಪರಶಕ್ತಿಯಿಂದ, ಮೋಹಿತಾಃ-ಅಜ್ಞಾನಗೊಳಿಸಲ್ಪಟ್ಟಿರುವರು ||೪೨|| ಮಾನಿನಿ-ಮಾನವತಿಯೇ! ಅಪವರ್ಗಸಂಪದಂ-ಮೋಕ್ಷದೊಡನೆ ಸಂಪತ್ತುಗಳೂ ಉಳ್ಳ ಮಾಂ

---

ಯು ವ್ಯಭಿಚಾರಿಣಿಯಾದರೆ ಅವಳಿಗೆ ನೂತನ ನೂತನ ಪುರುಷನಲ್ಲಿಯೂ ಅಪೇಕ್ಷೆಯಿರುವುದು. ಅಂತಹ ವ್ಯಭಿಚಾರಿಣಿಯನ್ನು ಬುದ್ಧಿವಂತನಾದ ಪುರುಷನಾದ ಪತಿಯು ಪೋಷಿಸಬಾರದು. ಪೋಷಿಸುವನಾದರೆ ಇಹಲೋಕ ಪರಲೋಕಂಗಳಿಂದ ಚ್ಯುತನಾಗುವನು ||೩೮|| ಎಂಬ ರುಕ್ಮಿಣಿಯ ವಾಕ್ಯವಂ ಕೇಳಿ ಭಗವಂತನು ನಿರೂಪಿಸುವನು- ಎಲೌ ಪತಿವ್ರತೆಯಾದ ರುಕ್ಮಿಣಿಯೇ! ಈ ಯರ್ಥವ ನೀನು ಹೇಳುತ್ತೀಯೆ, ಈ ಯರ್ಥವ ಕೇಳಬೇಕೆಂಬ ಇಚ್ಛೆಯಿಂದ ನಿನ್ನಂ ನಾನು ಪರಿಹಾಸಂ ಗೈದೆನು. ನನ್ನಿಂದ ಹೇಳಲ್ಪಟ್ಟ ಅರ್ಥವನೆಲ್ಲವಂ ನೀನು ಅನುವಾದವಂ ಮಾಡಿದ್ದು ಸತ್ಯವೇಸರಿ ||೩೯|| ಎಲೈ ರುಕ್ಮಿಣಿಯೇ! ಮೋಕ್ಷಪ್ರಾಪ್ತಿಗೋಸುಗ ನನ್ನಲ್ಲಿ ಯಾವ ಇಷ್ಟಾರ್ಥಂಗಳನಪೇಕ್ಷಿಸುತ್ತೀಯೆ? ಆ ಯಿಷ್ಟಾರ್ಥಂಗಳಂ ನನ್ನಲ್ಲಿಯೇ ಏಕಾಂತಭಕ್ತಳಾದ ನಿನಗೆ ಸಿದ್ಧಗಳಾಗಿವೆ ||೪೦|| ಎಲೈ ಪತಿವ್ರತೆಯೇ! ನಿನಗೆ ಪತಿಯಾದ ನನ್ನಲ್ಲಿರುವ ಪ್ರೇಮಾತಿಶಯವಂ ತಿಳಿದೆನು, ನಿನ್ನ ಪಾತಿವ್ರತ್ಯವಂ ತಿಳಿದೆನು, ನಾನು ನಾನಾಪ್ರಕಾರಂಗಳಾದ ಚಾತುರ್ಯಯುಕ್ತಂಗಳಾದ ವಾಕ್ಯಂಗಳಂ ನಾನು ಹೇಳಿದರೂ ನಿನ್ನ ಬುದ್ಧಿಯು ನನ್ನಲ್ಲಿ ಉಪೇಕ್ಷೆಯಂ ಮಾಡಿ ಅನ್ಯಪುರುಷನ ವಿಷಯವಾಗಿ ಚಲಿಸಲಿಲ್ಲ ||೪೧|| ಯಾವ ಜನರು ಸ್ತ್ರೀಪುರುಷರ ಸಂಭೋಗ ಸುಖಾರ್ಥವಾಗಿ ತಪಸ್ಸಿನಿಂದಲೂ ಬ್ರಹ್ಮಚರ್ಯದಿಂದಲೂ ಕಾಮಬುದ್ಧಿಯಿಂದಲೂ ನನ್ನ ಭಜಿಸುತ್ತಾರೆಯೋ ಅವರು ನನ್ನ ಮಾಯೆಯಿಂದ ಮೋಹಿತರಾದವರು ||೪೨|| ಎಲೈ ರುಕ್ಮಿಣಿಯೇ! ಮೋಕ್ಷ

ಸಂಪದಏವ ತತ್ಪ್ರತೀಮ್ ॥ ತೇ ಮಂದಭಾಗ್ಯಾ ನಿರಯೇಽಪಿ ಯೇ ನೃಣಾಂ ಮಾತ್ರಾತ್ಮಕತ್ವಾನ್ನಿರಯಸ್ಸುಸಂಗ
ಮಃ ॥೫೩॥ ದಿಷ್ಟ್ಯಾ ಗೃಹೇಶ್ವರ್ಯಸಕೃನ್ಮಯಿ ತ್ವಯಾ ಕೃತಾನುವೃತ್ತಿರ್ಭವಮೋಚನೀ ಖಲೈಃ । ಸುದು
ಷ್ಕರಾಸೌ ಸುತರಾಂ ದುರಾಶಿಷೋ ಹ್ಯಸುಂಭರಾಯಾ ನಿಕೃತಿಂ ಜುಷಸ್ಸ್ತ್ರಿಯಃ ॥೫೪॥ ನ ತ್ವಾದೃಶೀಂ
ಪ್ರಣಯಿನೀಂ ಗೃಹಿಣೀಂ ಗೃಹೇಷು ಪಶ್ಯಾಮಿ ಮಾನಿನಿ ಯಯಾ ಸ್ವವಿವಾಹಕಾಲೇ । ಪ್ರಾಪ್ತಾನ್ನೃಪಾನ
ವಿಗಣಯ್ಯ ರಹೋಹರೋ ಮೇ ಪ್ರಸ್ಥಾಪಿತೋ ದ್ವಿಜ ಉಪಶ್ರುತಸತ್ಕಥಸ್ಯ ॥೫೫॥ ಭ್ರಾತುರ್ವಿರೂಪಕರಣಂ
ಯುಧಿ ನಿರ್ಜಿತಸ್ಯ ಪ್ರೋದ್ವಾಹಪರ್ವಣಿ ಚ ತದ್ವಧಮಕ್ಷಗೋಷ್ಠ್ಯಾಮ್ । ದುಃಖಂ ಸಮುತ್ಥಮಸಹೋಽ
ಸ್ಮದಯೋಗಭೀತ್ಯಾ ನೈವಾಬ್ರವೀಃ ಕಿಮಪಿ ತೇನ ವಯಂ ಜಿತಾಸ್ತೇ ॥೫೬॥ ದೂತಸ್ತ್ವಯಾತ್ಮಲಭನೇ ಸು

---

ನನ್ನನ್ನು, ಪ್ರಾಪ್ಯ-ಸೇರಿ, ತತ್ಪ್ರತೀಂ-ಆ ಸಂಪತ್ತುಗಳಿಗೂ ಒಡೆಯನಾದ ನನ್ನನ್ನು. ಯೇ-ಯಾವ ಭಕ್ತರು, ಸಂಪದಏವ-ವಿ
ಷಯ ಭೋಗಂಗಳನ್ನೇ, ವಾಂಛಂತಿ-ಬಯಸುವರೋ, ತೇ-ಅವರು ಮಂದಭಾಗ್ಯಾಃ-ಹೀನಪುಣ್ಯರಾಗಿರುವರು, ಯೇ-ಯಾ
ವ ವಿಷಯ ಭೋಗಂಗಳು, ನಿರಯೇಽಪಿ-ನರಕದಲ್ಲಿಯೂ ಇರುವವೋ, ಮಾತ್ರಾತ್ಮಕತ್ವಾತ್-ವಿಷಯಸುಖರೂಪವಾದ್ದರಿಂದಲೆ,
ನಿರಯಃ-ನರಕವು, ಸುಸಂಗಮಃ-ಸುಲಭವಾಗಿರುವುದು ॥೫೩॥ ಗೃಹೇಶ್ವರಿ-ಗೃಹಸ್ವಾಮಿನಿಯೇ! ದಿಷ್ಟ್ಯಾ-ಪುಣ್ಯದಿಂದ. ದಿ
ಷ್ಟ್ಯಾ-ಶುಭವಾಗಿ, ತ್ವಯಾ-ನಿನ್ನಿಂದ, ಭವಮೋಚನೀ-ಸಂಸಾರಮೋಕ್ಷಪ್ರದವಾದ, ಅನುವೃತ್ತಿಃ-ಸೇವೆಯು. ತ್ವಯಾ-ನಿ
ನ್ನಿಂದ, ಮಯಿ-ನನ್ನಲ್ಲಿ, ಅಸಕೃತ್-ಹಲವುಬಾರಿ, ಕೃತಾ-ಮಾಡಲ್ಪಟ್ಟಿರುವುದು ಅಸೌ-ಇಂಥಾ ಅನುವರ್ತನವು, ಖ
ಲೈಃ-ದುಷ್ಟರಿಂದ, ಸುದುಷ್ಕರಾ-ಮಾಡಲ್ಪಡಲಸಾಧ್ಯವಾಗಿರುವುದು, ದುರಾಶಿಷಃ-ದುರಾಶೆಯುಳ್ಳ, ಅಸುಂಭರಾಯಾಃ-
ಹೊಟ್ಟೆಯಂ ಹೊರೆಕೊಳ್ಳುವ, ನಿಕೃತಿಂಜುಷಃ-ವಂಚನವಂ ಹೊಂದಿರುವ, ಸ್ತ್ರಿಯಾಃ-ಹೆಂಗಸಿಗೆ, ಸುತರಾಂ-ಸಂಪೂರ್ಣವಾ
ಗಿ, ಇಂಥಾ ಅನುವರ್ತನವು ಅಸಾಧ್ಯವಾಗಿರುವುದು ॥೫೪॥ ಮಾನಿನಿ-ಮಾನವತಿಯೇ! ಯಯಾ-ಆವ ನಿನ್ನಿಂದ, ಸ್ವವಿವಾಹ
ಕಾಲೇ-ತನ್ನ ಮದುವೆಯ ಹೊತ್ತಿನಲ್ಲಿ, ಪ್ರಾಪ್ತಾನ್-ಬಂದ, ನೃಪಾನ್-ದೊರೆಗಳನ್ನು, ಅವಿಗಣಯ್ಯ-ಲೆಕ್ಕಿಸದೆ, ಉಪಶ್ರುತಸ
ತ್ಕಥಸ್ಯ-ಕೇಳಲ್ಪಟ್ಟ ಸುಚರಿತ್ರವುಳ್ಳ, ಮೇ-ನನ್ನ ಬಳಿಗೆ, ರಹಃ-ಏಕಾಂತವಾಗಿ, ದ್ವಿಜಃ-ಸಂದೇಶಹರನಾದ ಬ್ರಾಹ್ಮಣನು,
ಪ್ರಸ್ಥಾಪಿತಃ-ಕಳುಹಿಸಲ್ಪಟ್ಟನೋ, ಅಹೋ-ಆಶ್ಚರ್ಯವು, ತಾಂ-ಅಂಥಾ, ತ್ವಾದೃಶೀಂ-ನಿನ್ನಂಥವಳಾದ, ಪ್ರಣಯಿನೀಂ-
ಪ್ರೀತಿಯುಳ್ಳವಳಾದ, ಗೃಹಿಣೀಂ-ಮನೆಗೊಡತಿಯನ್ನು, ಗೃಹೇಷು-ಮನೆಗಳಲ್ಲಿ, ನಪಶ್ಯಾಮಿ-ಕಾಣೆನು ॥೫೫॥ ಯುಧಿ-ಕಾಳಗ
ದಲ್ಲಿ, ನಿರ್ಜಿತಸ್ಯ-ಸೋಲಿಸಲ್ಪಟ್ಟ, ಭ್ರಾತುಃ-ನಿನ್ನಣ್ಣನಾದ ರುಕ್ಮಿಗೆ, ವಿರೂಪಕರಣಂ-ವಿಕಾರರೂಪವಂ ಮಾಡಿದ್ದನ್ನು,
ಪ್ರೋದ್ವಾಹಪರ್ವಣಿ-ಅನಿರುದ್ಧನ ಮದುವೆಯ ಉತ್ಸವದಲ್ಲಿ, ಅಕ್ಷಗೋಷ್ಠ್ಯಾಂ-ಪಗಡೆಯ ಸಭೆಯೊಳು, ತದ್ವಧಂ ಚ-ಆ ರು
ಕ್ಮಿಯಂ ಕೊಂದುದನ್ನೂ, ಸಮುತ್ಥಂ-ಅವುಗಳ ನೆನಪಿನಿಂದ ಹುಟ್ಟಿದ, ದುಃಖಂ-ಕಷ್ಟವನ್ನೂ, ಅಸ್ಮದಯೋಗಭೀತ್ಯಾ-ನಂ
ಮ ಅಗಲುವಿಕೆಯೆಂಬ ಭಯದಿಂದ, ಅಸಹಃ-ಸೈರಿಸಿದವಳಾದಿ, ಕಿಮಪಿ-ಯಾವ ಮಾತನ್ನೂ, ನೈವಾಬ್ರವೀಃ-ಹೇಳಲೇ ಇಲ್ಲವು, ತೇ

---

ವು ಸಮಸ್ತ ಸಂಪತ್ತುಗಳಿಗೂ ಒಡೆಯನಾದ ನನ್ನಂ ಭಜಿಸಿದಾಗ್ಯೂ ನನ್ನಂ ಬಿಟ್ಟು ಸಂಪತ್ತುಗಳನ್ನು
ಮಾತ್ರವೇ ಯಾರು ಅಪೇಕ್ಷಿಸುತ್ತಾರೆಯೋ ಆ ಜನರು ಪುಣ್ಯಹೀನರೂ, ವಿಷಯಸುಖಾಪೇಕ್ಷಿಗಳಾಗಿ ವಿಷಯರೂ
ಪಂಗಳಾದ ನರಕಂಗಳನ್ನೇ ಅನುಭವಿಸುತ್ತಾರೆ ॥೫೩॥ ಎಲೌ ಗೃಹನಾಥಳಾದ ರುಕ್ಮಿಣಿಯೇ! ದುರ್ಜನರಿಗೂ
ದುರ್ಲಭವಾದ ಫಲಾಭಿಸಂಧಿರಹಿತವಾದ ನಿಷ್ಕಾಮಸಾನುವೃತ್ತಿಯು ಮತ್ತು ಯಾತಕ್ಕೆಂದರೆ- ದುಷ್ಟಾ
ಭಿಪ್ರಾಯವುಳ್ಳವಳಾಗಿ, ಪ್ರಾಣತೃಪ್ತಿಯಲ್ಲಿ ಅಪೇಕ್ಷೆಯುಳ್ಳವಳಾಗಿ ವಂಚಕಳಾದ ದುಷ್ಟಸ್ತ್ರೀಗೆ ಅತಿದುರ್ಲ
ಭವಾದ್ದು ॥೫೪॥ ಎಲೌ ಮಾನಶಾಲಿಯಾದ ರುಕ್ಮಿಣಿಯೇ! ನನ್ನ ಸಮಾನಳಾಗಿ ಪ್ರೇಮಯುಕ್ತಳಾದ ಗೃಹಗಳಲ್ಲಿ
ಶುಭಕರ್ಮಸಾಧಕಳಾದ ಸ್ತ್ರೀಯಂ ನಾನೆಲ್ಲಿಯೂ ಕಾಣುವುದಿಲ್ಲ. ನೀನು ವಿವಾಹ ಕಾಲದಲ್ಲಿ ಬಂದಿರುವ ಜ
ರಾಸಂಧಾದಿಗಳಂ ಗಣನೆಯಂ ಮಾಡದೆ ಪರೋಕ್ಷದಲ್ಲಿ ನನ್ನ ಸತ್ಕಥೆಗಳನಂ ಕೇಳಿದ ಮಾತ್ರದಿಂದ ನನ್ನಲ್ಲಿ ಚಿ
ತ್ತವನಿರಿಸಿ ಬ್ರಾಹ್ಮಣನಂ ನನ್ನ ಸವಿಾಪಕ್ಕೆ ಕಳುಹಿಸಿದೆಯಲ್ಲ ॥೫೫॥ ಅನಂತರದಲ್ಲಿ ಯುದ್ಧದೊಳಗೆ ಪರಾಜಿ
ತನಾದ ಭ್ರಾತೃವಾದ ರುಕ್ಮಿಯ ವೈರೂಪ್ಯಕರಣವಂ ತದನಂತರದಲ್ಲಿ ಅನಿರುದ್ಧನ ವಿವಾಹೋತ್ಸವದಲ್ಲಿ ದ್ಯೂ
ತಸಭೆಯಲ್ಲಿ ಆ ರುಕ್ಮಿಯೆಂಬ ನಿನ್ನ ಅಗ್ರಜನ ಸಂಹಾರವಂ ಸಹ ನೋಡಿ ಉತ್ಪನ್ನವಾದ ಮಹಾ ದುಃಖವಂ
ಸಹ ನೀನು ಸಹಿಸಿದವಳಾದೆಯಲ್ಲಾ, ನಾನು ಪರಿತ್ಯಾಗವಂ ಮಾಡುವೆನೆಂಬ ಭಯದಿಂದ ಏನನ್ನೂ ಮಾತನಾಡದ

ವಿಭಜ್ಯ ಮಂತ್ರಃ ಪ್ರಸ್ಥಾಪಿತೋ ಮಯಿ ಚಿರಾಯತಿ ಶೂನ್ಯಮೇತತ್ । ಮತ್ವಾ ಜಿಹಾಸ ಇದಮಂಗಮನ
ನ್ಯಯೋಗ್ಯಂ ತಿಷ್ಠೇತ ತತ್ತ್ವಯಿ ವಯಂ ಪ್ರತಿನಂದಯಾಮಃ ॥೫೭॥ ಶ್ರೀಶುಕಃ ॥ ಏವಂ ಸೌರತಸಲ್ಲಾಪೈ
ರ್ಭಗವಾನ್ ದೇವಕೀಸುತಃ । ಸ್ವರತೋ ರಮಯಾ ರೇಮೇ ನರಲೋಕಂ ವಿಡಂಬಯನ್ ॥೫೮॥ ಅಥಾನ್ಯಾಸಾ
ಮಪಿ ವಿಭುರ್ಗೃಹೇಷು ಗೃಹವಾನಿವ । ಆಸ್ಥಿತೋ ಗೃಹಮೇಧೀಯಾನ್ ಧರ್ಮಾನ್ ಲೋಕಗುರುರ್ಹರಿಃ ॥೫೯॥
ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಷಷ್ಟಿತಮೋಧ್ಯಾಯಃ

---

ನ-ಅವರಿಂದ, ವಯಂ-ನಾವು, ಜಿತಾಃ-ನಿನ್ನಿಂದ ಗೆಲ್ಲಲ್ಪಟ್ಟವರು, ಸ್ಮಃ-ಆಗಿರುವೆವು ॥೫೬॥ ಆತ್ಮಲಭನೇ-ನನ್ನ ಲಾಭಕ್ಕೋಸುಗ ತ್ವಯಾ-ನಿನ್ನಿಂದ, ಸುವಿಭಕ್ತಮಂತ್ರಃ-ಚನ್ನಾಗಿ ವಿವರಿಸಿ ನನಗೆ ತಿಳಿಸಲ್ಪಟ್ಟ ನಿನ್ನ ಆಲೋಚನೆಯುಳ್ಳ, ದೂತಃ-ಸುದ್ದಿಯಂ ಹೇಳುವ ವಿಪ್ರನು, ಪ್ರಸ್ಥಾಪಿತಃ-ಕಳುಹಿಸಲ್ಪಟ್ಟನು, ಮಯಿ-ನಾನು, ಚಿರಾಯತಿಸತಿ-ತಾವಕಾಶವಂ ಮಾಡುವವನಾಗುತ್ತಿರಲು, ಏತತ್-ಈ ಜಗತ್ತನ್ನು, ಶೂನ್ಯಂ-ಶೂನ್ಯವನ್ನಾಗಿ, ಮತ್ವಾ-ತಿಳಿದು, ಅನನ್ಯಯೋಗ್ಯಂ-ನಿನಗಿಂತಲೂ ಹೆರವರಿಗೆ ತಕ್ಕುದಲ್ಲದ, ಇದಮಂಗಂ-ಈ ನಿನ್ನ ಶರೀರವನ್ನು, ಅಜಿಹಾಸಃ-ತೊರೆಯ ಬಯಸಿದವಳಾದೆ ತತ್-ಆ ಯುಪಕಾರಕರ್ಮವು, ತ್ವಯ್ಯೇವ-ನಿನ್ನಲ್ಲಿಯೇ, ತಿಷ್ಠೇತ-ಇದ್ದೀತು (ಅದಕ್ಕೆ ಪ್ರತ್ಯುಪಕಾರವಂ ಮಾಡುವದಕ್ಕಿಲ್ಲವಾದ್ದರಿಂದ, ವಯಂ-ನಾವು, ಪ್ರತಿನಂದಯಾಮಃ-ಅದಕ್ಕೆ ಪ್ರತಿಯಾಗಿ ಸಂತೋಷಿಸುವೆವು ॥೫೭॥ [ಶುಕವಚನವು] ಭಗವಾನ್-ಸರ್ವಜ್ಞನಾದ, ದೇವಕೀಸುತಃ-ಕೃಷ್ಣನು, ಸ್ವರತೋಪಿ-ಸ್ವರೂಪಾತ್ಮನಲ್ಲಿ ಕ್ರೀಡಿಸುತ್ತಿರುವನಾದರೂ, ಏವಂ-ಹೀಗೆ, ಸೌರತಸಲ್ಲಾಪೈಃ-ರತಿಕ್ರೀಡಾ ಸಂಭಾಷಣಂಗಳಿಂದ, ನರಲೋಕಂ-ಮನುಷ್ಯಲೋಕವನ್ನು, ವಿಡಂಬಯನ್-ಅನುಸರಿಸುವನಾಗಿ, ರಮಯಾ-ಲಕ್ಷ್ಮಿಯಾದ ರುಕ್ಮಿಣಿಯೊಡನೆ, ರೇಮೇ-ಕ್ರೀಡಿಸಿದನು ॥೫೮॥ ವಿಭುಃ-ವ್ಯಾಪಕಪ್ರಭುವಾದ, ಲೋಕಗುರುಃ-ಪ್ರಪಂಚಕ್ಕುಪದೇಶಕನಾದ, ಹರಿಃ-ಕೃಷ್ಣನು, ಅಥ-ಆಬಳಿಕ. ಅನ್ಯಾಸಾಂ-ಇತರ ಹೆಂಗಳ, ಗೃಹೇಷ್ವಪಿ-ಮನೆಗಳಲ್ಲಿಯೂ, ಗೃಹವಾನಿವ-ಮನೆಯುಳ್ಳವನಂತೆ ಗೃಹಮೇಧೀಯಾನ್-ಗೃಹಸ್ಥನಿಗೆ ಸಂಬಂಧಿಸಿದ, ಧರ್ಮಾನ್-ಅಗ್ನಿಹೋತ್ರಾತಿಥಿ ಸತ್ಕಾರ-ಪ್ರಜೋತ್ಪಾದನಾದಿಗಳನ್ನು, ಆಸ್ಥಿತಃ-ಆಶ್ರಯಿಸಿರುವನಾದನು ॥೫೯॥

ಇಂತೆಂಬಲ್ಲಿಗೆ ಭಾಗವತ ಪ್ರತಿಶಬ್ದಾರ್ಥ ಬೋಧಿನಿಯೆಂಬ ಟೀಕೆಯಲ್ಲಿ ದಶಮಸ್ಕಂಧದೊಳಗೆ
೬೦ನೆಯ ಅಧ್ಯಾಯಂ ಮುಗಿದುದು

---

ಸುಮ್ಮನೆ ಬಿಟ್ಟೆಯಲ್ಲಾ, ಆದ್ದರಿಂದ ನಿನ್ನ ನಡತೆಯಿಂದಲೇ ನಾವು ನಿನಗೆ ಸ್ವಾಧೀನರು ॥೫೬॥ ಇಷ್ಟು ಮಾತ್ರವಲ್ಲ ನೀನು ನನ್ನಂ ಪತಿಯನ್ನಾಗಿ ಒಯ್ಯುವದಕ್ಕೋಸುಗ ಆಲೋಚನೆಯಂ ಮಾಡಿ ನಾನು ಬೇಗ ಬಾರದೆ ವಿಳಂಬವಂ ಮಾಡಲಾಗಿ, ನನ್ನ ಸಮೀಪಕ್ಕೆ ದೂತನಂ ಕಳುಹಿಸಿದೆಯಲ್ಲಾ, ಆಗ "ಎಲೈ ಪದ್ಮಾಕ್ಷನೇ! ನಿನ್ನನುಗ್ರಹವಂ ನಾನು ಪಡೆಯದ ಪಕ್ಷದಲ್ಲಿ ಅನ್ಯರಿಗೆ ಯೋಗ್ಯವಲ್ಲದ ಈ ದೇಹವಂ ತ್ಯಾಗವಂ ಮಾಡುತ್ತೇನೆ." ಎಂದು ದೂತಮುಖದಿಂದ ನನ್ನಂ ಕುರಿತು ಹೇಳಿಕಳುಹಿಸಿದೆಯಲ್ಲಾ, ಆ ಪ್ರಕಾರವಾದ ನಿನ್ನ ಉಪಕಾರಕ್ಕೆ ಪ್ರತ್ಯುಪಕಾರವಂ ಏನಂ ಮಾಡುವೆವು. ನಾವು ಸುಮ್ಮನೆ ಮಾತುಗಳಿಂದ ನಿನ್ನಂ ಸಂತೋಷಪಡಿಸುತ್ತೇವೆ ॥೫೭॥ ಭಗವಂತನಾದ ಶ್ರೀಕೃಷ್ಣನು ಈರೀತಿಯಲ್ಲಿ ಇಷ್ಟಾಲಾಪಂಗಳಿಂದ ಆತ್ಮಾರಾಮನಾದರೂ ರುಕ್ಮಿಣಿಯೊಡನೆ ಗೃಹಂಗಳಲ್ಲಿ ಗೃಹಸ್ಥನಂತೆ ರಮಿಸಿದನು ॥೫೮॥ ಈರೀತಿಯಲ್ಲಿ ಮಿಗಿಲಾದ ಪತ್ನಿಯರುಗಳ ಮನೆಯಲ್ಲಿಯೂ ಗೃಹಸ್ಥಾಶ್ರಮವುಳ್ಳವನಾದ ಪುರುಷನಂತೆ ಲೋಕಗುರುವಾದ ಶ್ರೀಹರಿಯು ಗೃಹಸ್ಥಾಶ್ರಮ ಧರ್ಮಂಗಳನಾಚರಿಸಿ ಸಂತೋಷಪಡಿಸಿದನು ॥ ... ... ... .. .. ... ॥೫೯॥

ಇಂತು ಶ್ರೀಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸಿದನೆಂದು ಸೂತಪೌರಾಣಿ-
ಕನು ನೈಮಿಶಾರಣ್ಯವಾಸಿಗಳಾದ ಶೌನಕಾದಿ ಮಹರ್ಷಿಗಳಿಗೆ ಹೇಳಿದನೆಂಬಲ್ಲಿಗೆ-ಶ್ರೀ
ಮನ್ಮಹೀಶೂರಪುರವರಾಧೀಶ ಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜ
ವಿರಚಿತಮಾದ "ಶ್ರೀಕೃಷ್ಣರಾಜ ವಾಣೀವಿಲಾಸ"ವೆಂಬ ಶ್ರೀಭಾಗವತ
ಪುರಾಣದ ಕರ್ಣಾಟ ಭಾಷಾವ್ಯಾಖ್ಯಾನದಲ್ಲಿ ದಶಮಸ್ಕಂಧದೊ
ಳು ಅಷ್ಟಪಂಚಾಶತ್ತಮಾಧ್ಯಾಯಂ ಮುಗಿದುದು.

ಶ್ರೀಶುಕಃ॥ ಏಕೈಕಶಸ್ತಾಃ ಕೃಷ್ಣಸ್ಯ ಪುತ್ರಾನ್ ದಶ ದಶಾಬಲಾಃ । ಅಜೀಜನನ್ನನವಮಾನ್ ಪಿತುಸ್ಸರ್ವಾತ್ಮಸಂಪದಾ ॥೧॥ ಗೃಹಾದನಪಗಂ ವೀಕ್ಷ್ಯ ರಾಜಪುತ್ರ್ಯೋಽಚ್ಯುತಂ ಸ್ಥಿತಮ್ । ಸ್ವಂ ಸ್ವಂ ಪ್ರಿಯಂ ಸತಪ್ರೇಷ್ಠಂ ನ ತತ್ತ್ವವಿದಸ್ಸ್ತ್ರಿಯಃ ॥೨॥ ಚಾರ್ವಬ್ಜಕೋಶವದನಾಯತಬಾಹುನೇತ್ರಸಪ್ರೇಮಹಾಸರಸವೀಕ್ಷಿತವಲ್ಗುಜಲ್ಪೈಃ ಸಮ್ಮೋಹಿತಾ ಭಗವತೋ ನ ಮನೋ ವಿಜೇತುಂ ಸ್ವೈರ್ವಿಭ್ರಮೈಸ್ಸಮಶಕನ್ ವನಿತಾ ವಿಭೂಮ್ನಃ ॥೩॥ ಸ್ಮಾಯಾವಲೋಕಲವದರ್ಶಿತಭಾವಹಾರಿಭ್ರೂಮಂಡಲಪ್ರಹಿತಸೌರತಮಂತ್ರಶೌಂಡೈಃ । ಪತ್ನ್ಯಸ್ತು ಷೋಡಶಸಹಸ್ರಮನಂಗಬಾಣೈರ್ಯಸ್ಯೇಂದ್ರಿಯಂ ವಿ

---

೬೧ನೆಯ ಅಧ್ಯಾಯದ ಪ್ರತಿಪದಟೀಕ.

[ಶ್ರೀಶುಕವಚನವು.] ತಾಃ ಅಬಲಾಃ-ಆ ಹೆಂಗಳು, ಸರ್ವಾತ್ಮಸಂಪದಾ-ಸಮಸ್ತವಾದ ತಮ್ಮಲ್ಲಿರುವ ಭಾಗ್ಯದಿಂದ, ಪಿತುಃ-ತಂದೆಗಿಂತಲೂ, ಅನವಮಾನ್-ಕಡಮೆಯಾಗದೆ ಯಿರುವ, ದಶದಶ-ಹತ್ತುಹತ್ತುಮಂದಿಯಾದ, ಕೃಷ್ಣಸ್ಯ ಪುತ್ರಾನ್--ಕೃಷ್ಣನ ಕುಮಾರರನ್ನು ಏಕೈಕಶಃ-ಒಬ್ಬೊಬ್ಬಳಾಗಿ ಅಜೀಜನನ್-ಹಡೆದರು ॥೧॥ ರಾಜಪುತ್ರ್ಯಃ-ಕ್ಷತ್ರಿಯಕನ್ಯೆಯರು. ಗೃಹಾತ್-ತಮ್ಮ ಮನೆಯತ್ತಣಿಂ, ಅನಪಗಂ-ಹೊರಗೆ ಹೋಗದೆಯಿರುವನಾಗಿ, ಸ್ಥಿತಂ-ಇರುವಂಥಾ, ಅಚ್ಯುತಂ-ಕೃಷ್ಣನನ್ನು, ವೀಕ್ಷ್ಯ-ನೋಡಿ, ಸ್ವಂ ಸ್ವಂ-ತಮ್ಮತಮ್ಮ, ಪ್ರೇಷ್ಠಂ-ಪ್ರಿಯಪುರುಷರನ್ನಾಗಿ, ಸ್ವಮಂಸತ-ತಿಳಿದರು. ಸ್ತ್ರಿಯಃ-ಹೆಂಗಸರು, ತತ್ತ್ವವಿದಃ-ಆ ಕೃಷ್ಣನ ಯಥಾರ್ಥ್ಯವಂ ಬಲ್ಲವರು, ನ-ಆಗಲಿಲ್ಲವು ॥೨॥ ಚಾರು---ಜಲ್ಪೈಃ-ಚಾರು-ಮನೋಹರವಾದ, ಅಬ್ಜಕೋಶ-ತಾವರೆಯ ಮಗ್ಗಿನಂತಿರುವ, ವದನ-ಮುಖ ದಿಂದಲೂ, ಆಯತಬಾಹು-ನೀಳವಾದ ತೋಳುಗಳಿಂದಲೂ ನೇತ್ರ-ಕಂಗಳಿಂದಲೂ ಸಪ್ರೇಮ-ಅನುರಾಗದಿಂ ಸಹಿತವಾದ, ಹಾಸರಸ-ನಗೆಯಸುಖವುಳ್ಳ ವೀಕ್ಷಿತ-ನೋಟಂಗಳಿಂದಲೂ, ವಲ್ಗು-ಮನೋಹರವಾದ, ಜಲ್ಪೈಃ-ಮಾತುಗಳಿಂದಲೂ, ಸ್ವೈಃ ವಿಭ್ರಮೈಃ-ತಮ್ಮ ವಿಲಾಸಗಳಿಂದ, ವಿಭೂಮ್ನಃ-ಬಹಳ ದೊಡ್ಡವನಾದ, ಭಗವತ -ಭಗವಂತನ ದೆಸೆಯಿಂದ ಸಂಮೋಹಿತಾಃ-ಮೋಹಗೊಳಿಸಲ್ಪಟ್ಟ ವನಿತಾಃ-ಹೆಂಗಸೊ. ಮನಃ-ಕೃಷ್ಣನ ಹೃದಯವನ್ನು, ವಿಜೇತುಂ-ಗೆಲ್ಲುವುದಕ್ಕೆ, ನಸಮಶಕನ್-ಸಮರ್ಥರಾಗಲಿಲ್ಲವು ॥೩॥ ಷೋಡಶಸಹಸ್ರಂ-೧೬ ಸಾವಿರವಾದ, ಪತ್ನ್ಯಸ್ತು-ಕೃಷ್ಣನ ಮಡದಿಯರಾದರೋ ಸ್ಮಾಯ---ಶೌಂಡೈಃ-ಸ್ಮಾಯಾವಲೋಕ-ಕಿರುನಗೆಯಿಂಕೂಡಿದ ನೋಟದ, ಲವ-ಅಂಶದಿಂದ, ದರ್ಶಿತ-ತೋರಿಸಲ್ಪಟ್ಟ, ಭಾವ-ತಾತ್ಪರ್ಯದಿಂದ, ಹಾರಿ-ಮನೋಹರವಾದ, ಭ್ರೂಮಂಡಲ-ಹುಬ್ಬುಗಳ ಚಕ್ರದಿಂದ,

---

೬೧ನೆಯ ಅಧ್ಯಾಯವು.

ಶ್ರೀಧರೀಯಶ್ಲೋಕಃ॥ ಏಕಷಷ್ಟಿತಮೇ ಶೌರೇಃ ಪುತ್ರಪೌತ್ರಾದಿಸಂತತಿಃ । ಅನಿರುದ್ಧವಿವಾಹೇ ಚ ರುಕ್ಮಿಣೋ ರಾಮತೋ ವಧಃ ॥ ಟೀ॥ ಅರವತ್ತೊಂದನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನ ಪುತ್ರಪೌತ್ರಾದಿ ಸಂತತಿಯು, ಅನಿರುದ್ಧನ ವಿವಾಹದಲ್ಲಿ ಬಲರಾಮನಿಂದ ರುಕ್ಮಿಯು ಹತನಾದನೆಂಬ ಅರ್ಥವೂ, ಪರೀಕ್ಷಿದ್ರಾಯನಂ ಕುರಿತು ಶುಕಾಚಾರ್ಯನಿಂದ ನಿರೂಪಿಸಲ್ಪಡುವ ಪ್ರಕಾರವೆಂತೆನ್ನೆ,--

ಎಲೈ ಪರೀಕ್ಷಿದ್ರಾಯನೇ! ಆ ಶ್ರೀಕೃಷ್ಣನ ಪತ್ನಿಯರು ಒಬ್ಬೊಬ್ಬರಾಗಿ ತಮ್ಮಲ್ಲಿರುವ ಸಮಸ್ತವಾದ ಗುಣ ಸಮೃದ್ಧಿಯಿಂದ ತಂದೆಯಾದ ಕೃಷ್ಣದೇವನಿಗಿಂತಲೂ ನ್ಯೂನವಲ್ಲದಿರುವ ಹತ್ತು ಹತ್ತುಮಂದಿ ಪುತ್ರರಂ ಪಡೆದರು ॥೧॥ ಆ ಶ್ರೀಕೃಷ್ಣನ ಆತ್ಮಾರಾಮತ್ವವನರಿಯದೆ ಯಿರುವ ರಾಜಪುತ್ರಿಯರಾದ ಆ ಶ್ರೀಕೃಷ್ಣನ ಸ್ತ್ರೀಯರು ತಮ್ಮತಮ್ಮ ಗೃಹದ ದೆಸೆಯಿಂದ ಹೊರಕ್ಕೆ ಹೋಗದೇಯಿರುವ ಶ್ರೀಕೃಷ್ಣನಂ ನೋಡಿ ಪ್ರತ್ಯೇಕ ಪ್ರತ್ಯೇಕವಾಗಿ ತಮ್ಮ ಶ್ರೀಕೃಷ್ಣನಿಗೆ ಅತಿಪ್ರೀತಿ ವಿಷಯರನ್ನಾಗಿ ತಿಳಿದರು ॥೨॥ ಭಗವಂತನ ಮನೋಹರವಾದ ಪದ್ಮಕೋಶದಂತಿರುವ ಮುಖದಿಂದ ದೀರ್ಘಗಳಾದ ಭುಜಗಳಿಂದಲೂ ನೇತ್ರಂಗಳಿಂದಲೂ ಪ್ರೇಮಯುಕ್ತವಾದ ಹಾಸ್ಯಸ್ವರ ದೊಡಗೂಡಿರುವ ಸವಿನೋಟಗಳಿಂದಲೂ ಮಧುರ ವಚನಗಳಿಂದಲೂ ಮೋಹಯುಕ್ತರಾಗಿ ಮಾಡಲ್ಪಟ್ಟ ಆ ಶ್ರೀಕೃಷ್ಣನ ಸ್ತ್ರೀಯರು ಸ್ವಕೀಯಂಗಳಾದ ಅನೇಕ ವಿಲಾಸಂಗಳಿಂದ ಪರಿಪೂರ್ಣನಾದ ಆ ಶ್ರೀಕೃಷ್ಣನ ಮನಸ್ಸನ್ನು ಅಪಹರಿಸಲೋಸುಗ ಸಮರ್ಥರಾಗಲಿಲ್ಲ ॥೩॥ ಹದಿನಾ

ಮಥಿತುಂಕರಣೈರ್ನಶೇಕುಃ ॥೪॥ ಇತ್ಥಂರಮಾಪತಿಮವಾಪ್ಯಪತಿಂಸ್ತ್ರಿಯಸ್ತಾಬ್ರಹ್ಮಾದಯೋಪಿನ
ವಿದುಃಪದವೀಂಯದೀಯಾಂ । ಭೇಜುರ್ಮುದಾವಿರತಮೇಧಿತಯಾನುರಾಗಹಾಸಾವಲೋಕನವಸಂಗಮ
ಲಾಲಸಾದ್ಯಂ ॥೫॥ ಪ್ರತ್ಯುದ್ಗಮಾಸನವರಾರ್ಹಣಪಾದಶೌಚತಾಂಬೂಲವಿಶ್ರಮಣವೀಜನಗಂ
ಧಮಾಲ್ಯೈಃ । ಕೇಶಪ್ರಸಾರಶಯನಸ್ನಪನೋಪಹಾರ್ಯೈರ್ದಾಸೀಶತಾಅಪಿವಿಭೋರ್ವಿದಧುಸ್ಮದಾಸ್ಯ
ಮ್ ॥೬॥ ಯಾಸ್ಸ್ವರ್ಚಿತಂಸ್ವಭವನೇಷ್ವಧಿರೂಢಭಾವೈರ್ಲಕ್ಷ್ಮ್ಯೈಕಧಾಮರಜಸಾಪ್ಲುತವೀಕ್ಷಣೇನ ।
ಐಕ್ಷನ್ನತಾಅಪಿಪತಿಂನಚತಾಃಕಟಾಕ್ಷೈಃಸ್ಥೂಣಾಂತರೇಣನವಸಂಗಮಲಜ್ಜಯೈಕ್ಷನ್ ॥೭॥ ರಾಮಾ

---

ಸುರತಮಂತ್ರ-ರತ್ಯಾಲೋಚನೆಗಳಲ್ಲಿ, ಶೌಂಡೈಃ-ಸಮರ್ಥಂಗಳಾದ, ಅನಂಗಬಾಣೈಃ-ಮನ್ಮಥನ ಸರಳುಗಳಂತಿರ್ಪ, ಕರಣೈಃ
ಇಂದ್ರಿಯಂಗಳಿಂದ ಅಥವಾ ಸಾಧನಂಗಳಿಂದ, ಯಸ್ಯ-ಯಾವಕೃಷ್ಣನ, ಇಂದ್ರಿಯಂ-ವೀರ್ಯವನ್ನು, ವಿಮಥಿತುಂ-ಚಲ
ನಗೊಳಿಸುವುದಕ್ಕೆ, ಅಥವಾ ಕ್ಷೋಭಗೊಳಿಸುವುದಕ್ಕೆ, ನಶೇಕುಃ-ಸಮರ್ಥರಾಗಲಿಲ್ಲವೋ ॥೪॥ ಬ್ರಹ್ಮಾದಯೋಪಿ-ಬ್ರಹ್ಮನು
ಮೊದಲಾದವರೂ ಕೂಡ, ಯದೀಯಾಂ ಪದವೀಂ-ಯಾವವನದಾದ ಮಾರ್ಗವನ್ನು ನವಿದುಃ-ಅರಿಯರೋ, ತಂ-ಅಂಥಾ, ರ
ಮಾಪತಿಂ-ಮಾಧವನನ್ನು, ಪತಿಂ-ಗಂಡನನ್ನಾಗಿ, ಅವಾಪ್ಯ-ಪಡೆದು, ತಾಃಸ್ತ್ರಿಯಃ-ಆಹೆಂಗಳು ಅವಿರತಂ-ಎಡೆಬಿಡದೆ, ಏಧಿ
ತಯಾ-ವೃದ್ಧಿಗೊಳಿಸಲ್ಪಟ್ಟ, ಅನು ...ದ್ಯಂ-ಅನುರಾಗ-ಸ್ನೇಹವೂ, ಹಾಸ-ನಗೆಯೂ, ಅವಲೋಕ-ನೋಟವೂ, ನವಸಂಗಮ-
ಹೊಸಸಂಭೋಗವು, ಲಾಲಸ-ಆಸಕ್ತಿಯೂ, ಆದ್ಯಂ-ಮೊದಲಾದ್ದರನ್ನು ಭೇಜುಃ-ಹೊಂದಿದರು, ಪ್ರತ್ಯುದ್ಗಮ-ಇದಿರುಗೊಳ್ಳುವಿ
ಕೆ, ಆಸನ-ಗದ್ದುಗೆಯಂ ನೀಡುವಿಕೆ, ವರಾರ್ಹಣ-ಶ್ರೇಷ್ಠವಾದ ಪೂಜೆ, ಪಾದಶೌಚ-ಕಾಲುತೊಳೆಯುವಿಕೆ, ತಾಂಬೂಲ-ವೀಳ್ಯವಂ
ನೀಡುವಿಕ, ವಿಶ್ರಮಣ-ಆಯಾಸವಂ ಪರಿಹರಿಸುವಿಕೆ, ವೀಜನ-ಗಾಳಿಯಂ ಬೀಸುವಿಕೆ, ಗಂಧಮಾಲ್ಯೈಃ-ಪರಿಮಳಪುಷ್ಪಂಗಳ
ನರ್ಪಿಸುವಿಕೆಗಳಿಂದಲೂ, ಕೇಶ. .ಹಾರ್ಯೈಃ-ಕೇಶಪ್ರಸಾರ-ಕುರುಳ್ಗಳಂ ಹಿಕ್ಕಿ ಸರಿಗೊಳಿಸುವಿಕೆ, ಶಯನ-ಹಾಸಿಕೆಯಂ ಹಾಸು
ವಿಕೆ, ಸ್ನಪನ-ನೀರೆರೆಯುವಿಕೆ, ಉಪಹಾರ್ಯೈಃ-ಭಕ್ಷ್ಯಾದಿಗಳಂ ಸಮರ್ಪಿಸುವಿಕೆ ಗಳಿಂದಲೂ, ದಾಸೀಶತಾ ಅಪಿ- ದಾಸಿಯರುಗಳುಂ
ಬ್ರುಗಳೂಕೂಡ, ವಿಭೋಃ-ಒಡೆಯನಾದ ಕೃಷ್ಣನ, ದಾಸ್ಯಂ-ಕೈಂಕರ್ಯವನ್ನು, ವಿದಧುಃಸ್ಮ ಸ್ವಯಂ ಮಾಡಿದರಲ್ಲವೆ ॥೬॥
ಅಧಿರೂಢಭಾವೈಃ-ಆರೂಢ ಬುದ್ಧಿಯುಳ್ಳ ಯೋಗಸಿದ್ಧರಿಂದ, ಸ್ವಭವನೇಷು-ತಮ್ಮತಮ್ಮ ದೇಹಂಗಳಲ್ಲಿ, ಸ್ವರ್ಚಿತಂ-ಚ
ನ್ನಾಗಿ ಪೂಜಿಸಲ್ಪಟ್ಟಂಥಾ, ಲಕ್ಷ್ಮ್ಯೈಕಧಾಮ-ಲಕ್ಷ್ಮಿಗೆ ಮುಖ್ಯಸ್ಥಾನವಾದ, ಪತಿಮಪಿ-ಸರ್ವೇಶ್ವರನಾದ ಗಂಡನಂ ಕೂಡ,
ಯಾಃ-ಯಾವಹೆಂಗಳು, ರಜಸಾ-ರಜೋಗುಣದಿಂದ, ಆಪ್ಲುತವೀಕ್ಷಣೇನ-ವ್ಯಾಪ್ತವಾದ ದೃಷ್ಟಿಯಿಂದ, ಮತಾವಪಿ-ಬುದ್ಧಿಯ
ಲ್ಲಿಯೂ, ನೈಕ್ಷನ್-ನೋಡಲಿಲ್ಲವೋ ತಾಃ-ಆಹೆಂಗಳೂ ಕೂಡ, ನವಸಂಗಮಲಜ್ಜಯಾ-ಹೊಸಸಂಪರ್ಕದ ನಾಚಿಕೆಯಿಂದ,
ಸ್ಥೂಣಾಂತರೇಣ-ಕಂಭದಮರೆಯಿಂದ ಕಟಾಕ್ಷೈಃ-ಕುಡಿನೋಟಗಳಿಂ, ಐಕ್ಷನ್-ನೋಡಿದರು ॥೭॥ ಗೃಹೇ-ಮನೆಯಲ್ಲಿ, ಪುರ

---

ತು ಸಾವಿರಮಂದಿ ಯಾದರೂ ಆ ಶ್ರೀಕೃಷ್ಣಪತ್ನಿಯರು ಗೂಢಹಾಸದೊಡನೆ ಯುಕ್ತವಾದ ಕಟಾಕ್ಷದಿಂ ಸೂ
ಚಿಸಲ್ಪಟ್ಟ ಅಭಿಪ್ರಾಯದಿಂದ ಮನೋಹರವಾದ ಭ್ರೂಮಂಡಲದಿಂದ ಪ್ರೇರಿಸಲ್ಪಟ್ಟ ಸುರತ ಸಂಬಂಧಿಗಳಾ
ದ ಮಂತ್ರಗಳಲ್ಲಿ ನಿಪುಣಂಗಳಾದ ಮನ್ಮಥ ಬಾಣಂಗಳಂ ಮತ್ತು ಕಾಮಶಾಸ್ತ್ರ ಪ್ರಸಿದ್ಧಂಗಳಾದ ಇತರಕೇ
ಳೀ ಸಾಧನಂಗಳಿಂದಲೂ ಆ ಶ್ರೀಕೃಷ್ಣನ ಮನಸ್ಸಂ ವಿಕಾರ ಯುಕ್ತವನ್ನಾಗಿ ಮಾಡಲೋಸುಗ ಸಮರ್ಥ
ರಾಗಲಿಲ್ಲ ॥೪॥ ಬ್ರಹ್ಮಾದಿ ದೇವತೆಗಳೂ ಕೂಡ ಯಾವವನ ಮಾರ್ಗವನರಿಯರೋ ಅಂತಾ ಲಕ್ಷ್ಮೀಪತಿಯಾದ
ಶ್ರೀಕೃಷ್ಣನಂ ಆ ಸ್ತ್ರೀಯರು ಪತಿಭಾವದಿಂ ಪಡೆದು ನಿರಂತರದಲ್ಲಿಯೂ ವೃದ್ಧಿಹೊಂದಿರುವ ಪ್ರೀತಿಯಿಂದ
ಈ ರೀತಿಯಾದ ಅನುರಾಗದಿಂ ಪುಟ್ಟಿದ ಮುಗುಳುನಗೆಯೂ ಸವಿನೋಟವೂ ನೂತನ ಸಂಗಮದಲ್ಲಿ ಅತ್ಯಂ
ತವಾದ ಅಭಿಲಾಷೆಯೂ ಮೊದಲಾದ ವಿಲಾಸಗಳ ಸಮೂಹವ ನೆಯ್ದಿದರು ॥೫॥ ಮತ್ತು ಅನೇಕ ಸಹಸ್ರಸಂ
ಖ್ಯೆಯುಳ್ಳ ದಾಸಿಯರು ಸಹ ಇದಿರುಗೊಳ್ಳುವಿಕೆಯಿಂದಲೂ, ಅನುಸರಿಸು ವುದರಿಂದಲೂ, ರತ್ನಪೀಠ ಸಮೂಹ
ದಿಂ ಪಾದಪ್ರಕ್ಷಾಳನಂ ಗೆಯ್ಯುವುದರಿಂದಲೂ, ವ್ಯಜನಾದಿಗಳಂ ಪಿಡಿದು ಬೀಸುವುದರಿಂದಲೂ, ಗಂಧಪುಷ್ಪಂಗ
ಳಿಂದಲೂ, ಕೇಶಾಲಂಕಾರದಿಂದಲೂ, ಉತ್ತಮಶಯನ ಸಮರ್ಪಣದಿಂದಲೂ, ಅಭ್ಯಂಜನದಿಂದಲೂ, ಉಪ
ಹಾರಂಗಳಿಂದಲೂ, ವ್ಯಾಪಕನಾದ ಆ ಶ್ರೀಕೃಷ್ಣದೇವನಿಗೆ ಉಪಚಾರಂ ಗೆಯ್ದರು ॥೬॥೭॥೮॥ ಪೂರ್ವೋಕ್ತ

ಗೃಹೇವಿಹರತಃಪುರತಃಕರಾಭ್ಯಾಂಬದ್ಧೇಕ್ಷಣಾಸ್ಸ್ವದಯಿತಸ್ಯಮುದಾಹಸಂತ್ಯಃ । ಗೋತ್ರಾಂತರಾಣ್ಯಭಿದಧುರ್ನತುಪೂರುಷಸ್ಯಕ್ಲೇಶಾಪಹಾನ್ಯಪಿತದಂಗಜಭಂಗಭೀತಾಃ॥ತಾಸಾಂಯಾದಶಪುತ್ರಾಣಾಂಕೃಷ್ಣಸ್ತ್ರೀಣಾಂಪುರೋದಿತಾಃ।ಅಷ್ಟೌಮಹಿಷ್ಯಸ್ತತ್ಪುತ್ರಾನ್ಪ್ರದ್ಯುಮ್ನಾದೀನ್ಗೃಣಾಮಿತೇ॥೯॥ಚಾರುಧೇಷ್ಣಸ್ಸುಧೇಷ್ಣಶ್ಚಚಾರುದೇಹಶ್ಚವೀರ್ಯವಾನ್ । ಸುಚಾರುಶ್ಚಾರುಗುಪ್ತಶ್ಚಭದ್ರಚಾರುಸ್ತಥಾಪರಃ ॥೧೦॥ಚಾರುಭದ್ರೋವಿಚಾರುಶ್ಚಚಾರುಶ್ಚದಶಮೋಹರೇಃ । ಪ್ರದ್ಯುಮ್ನಪ್ರಮುಖಾಜಾತಾರುಕ್ಮಿಣ್ಯಾನವಮಾಃಪಿತುಃ ॥೧೧॥ ಭಾನುಸ್ಸುಭಾನುಸ್ಸ್ವರ್ಭಾನುಃಪ್ರಭಾನುರ್ಭಾನುಮಾಂಸ್ತಥಾ । ಚಂದ್ರಭಾನುರ್ಬೃಹದ್ಭಾನೂರವಿಭಾನುಸ್ತಥಾಷ್ಟಮಃ॥೧೨॥ಶ್ರೀಭಾನುಃಪ್ರತಿಭಾನುಶ್ಚಸತ್ಯಭಾಮಾತ್ಮಜಾದಶ । ಸಾಂಬಸ್ಸುಮಿತ್ರಃಪುರುಜಿಚ್ಛತಜಿಚ್ಚಸಹಸ್ರಜಿತ್॥೧೩॥ವಿಜಯಶ್ಚಿತ್ರಕೇತುಶ್ಚಕೀರ್ತಿಮಾನ್ದ್ರವಿಣಃಕ್ರತುಃ । ಜಾಂಬವತ್ಯಾಸ್ಸುತಾಹ್ಯೇತೇಸಾಂಬಾದ್ಯಾಃಪಿತೃಸಂಮತಾಃ॥೧೪॥ಭಾನು

ತಃ-ಮುಂಗಡೆಯೊಳು, ವಿಹರತಃ-ಕ್ರೀಡಿಸುತ್ತಿರುವ, ಸ್ವದಯಿತಸ್ಯ-ತಮ್ಮವಲ್ಲಭನಾದ ಕೃಷ್ಣನ, ಕರಾಭ್ಯಾಂ-ಕೈಗಳಿಂದ, ಬದ್ಧೇಕ್ಷಣಾಃ-ಕಟ್ಟಲ್ಪಟ್ಟ ಕಂಗಳುಳ್ಳವರಾದ, ರಾಮಾಃ-ಹೆಂಗಳು, ಮುದಾ-ಸಂತೋಷದಿಂದ, ಹಸಂತ್ಯಃ-ನಗುತಿರುವರಾಗಿ, ಗೋತ್ರಾಂತರಾಣಿ-ಬೇರೆ ಹೆಸರುಗಳನ್ನು, ಅಭಿದಧುಃ-ಹೇಳಿದರು. ತದಂಗಜಭಂಗಭೀತಾಃ-ಆಕೃಷ್ಣನಲ್ಲಿ ಕಾಮದ ಹಾನಿಯಾದೀತೆಂದು ಹೆದರಿದವರಾದ್ದರಿಂದ, ಪೂರುಷಸ್ಯ-ಪುರುಷನಾದ ಕೃಷ್ಣನ, ಕ್ಲೇಶಾಪಹಾನ್ಯಪಿ-ದುಃಖಂಗಳಂ ಪರಿಹರಿಸುವ ಹೆಸರುಗಳನ್ನಾದರೂ, ನಾಭಿದಧುಃ-ಹೇಳಲಿಲ್ಲವು ॥೮॥ದಶಪುತ್ರಾಣಾಂ-ಹತ್ತುಹತ್ತುಮಂದಿ ಕುಮಾರರುಳ್ಳ, ತಾಸಾಂಕೃಷ್ಣಸ್ತ್ರೀಣಾಂ-ಆಕೃಷ್ಣನ ಮಡದಿಯರೊಳಗೆ, ಯಾಃಅಷ್ಟೌಮಹಿಷ್ಯಃ-ಯಾವ ಎಂಟುಮಂದಿ ಪಟ್ಟದ ರಾಣಿಯರು ಪುರಾ-ಪೂರ್ವದಲ್ಲಿ, ಉದಿತಾಃ-ಹೇಳಲ್ಪಟ್ಟಿರುವರೋ, ತತ್ಪುತ್ರಾನ್-ಅವರ ಕುಮಾರರಾದ, ಪ್ರದ್ಯುಮ್ನಾದೀನ್-ಕಾಮನು ಮೊದಲಾದವರನ್ನು, ತೇ-ನಿನಗೆ, ಗೃಣಾಮಿ-ಹೇಳುವೆನು॥೯॥ಚಾರುದೇಷ್ಣನು-ಸುದೇಷ್ಣನು, ಚಾರುದೇಹನು, ವೀರ್ಯವಾನ್-ಸಾಮರ್ಥ್ಯವುಳ್ಳ, ಸುಚಾರುವು, ಚಾರುಗುಪ್ತನು, ಭದ್ರಚಾರುವು, ತಥಾ-ಹಾಗೆ, ಅಪರಃ-ಮತ್ತೊಬ್ಬನಾದ ॥೧೦॥ ಚಾರುಭದ್ರನು, ವಿಚಾರುವು, ದಶಮಃ-ಹತ್ತನೆಯವನಾದ ಚಾರುವು, ಪ್ರದ್ಯುಮ್ನಪ್ರಮುಖಾಃ-ಪ್ರದ್ಯುಮ್ನನು ಮೊದಲಾದವರು, ಪಿತುಃ-ತಂದೆಯಾದ, ಹರೇಃ-ಕೃಷ್ಣನಿಗಿಂತಲೂ, ಅನವಮಾಃ-ಕಡಮೆಯಿಲ್ಲದವರಾಗಿ, ರುಕ್ಮಿಣ್ಯಾಃ-ರುಕ್ಮಿಣೀದೇವಿಯಿಂದ, ಜಾತಾಃ-ಹುಟ್ಟಿದವರಾದರು ॥೧೧॥ಭಾನುವು ಸುಭಾನುವು, ಸ್ವರ್ಭಾನುವು, ಪ್ರಭಾನುವು, ಭಾನುಮಂತನು, ಚಂದ್ರಭಾನುವು, ಬೃಹದ್ಭಾನುವು, ಅಷ್ಟಮಃ-ಎಂಟನೆಯವನಾದ, ರವಿಭಾನುವು॥೧೨॥ಶ್ರೀಭಾನುವು, ಪ್ರತಿಭಾನುವು, ಎಂಬ, ದಶ-ಹತ್ತುಮಂದಿಯೂ, ಸತ್ಯಭಾಮಾತ್ಮಜಾಃ-ಸತ್ಯಭಾಮೆಯ ಕುಮಾರರು॥ ಸಾಂಬನು, ಸುಮಿತ್ರನು, ಪುರುಜಿತ್ತು, ಶತಜಿತ್ತು, ಸಹಸ್ರಜಿತ್ತು ॥೧೩॥ ವಿಜಯನು, ಚಿತ್ರಕೇತುವು, ಕೀರ್ತಿಮಂತನು, ದ್ರವಿಣನು, ಕ್ರತುವು, ಏತೇ-ಈ, ಸಾಂಬಾದ್ಯಾಃ-ಸಾಂ

ಗಳು ॥*॥ ಹತ್ತು ಹತ್ತುಮಂದಿ ಪುತ್ರರುಳ್ಳ ಆ ಶ್ರೀಕೃಷ್ಣಸ್ತ್ರೀಯರಲ್ಲಿ ಯಾವ ರುಕ್ಮಿಣಿಮೊದಲಾದ ಅಷ್ಟಮಹಿಷಿಯರು ಪೂರ್ವದಲ್ಲಿ ನಿನ್ನಿಂ ಪೇಳಲ್ಪಟ್ಟರೋ ಅವರಲ್ಲಿ ಕೃಷ್ಣನ ದೆಸೆಯಿಂದ ಜನಿಸಿರುವ ಪ್ರದ್ಯುಮ್ನ ಮೊದಲಾದ ಪುತ್ರರಲ್ಲಿ ವಿವರಣಮಂ ನಿನಗೆ ಪೇಳುವನಾಗುತ್ತೇನೆ ॥೯॥ ಚಾರುದೇಷ್ಣನು, ಸುದೇಷ್ಣನು, ಸಮರ್ಥನಾದ ಚಾರುದೇಹನನು, ಸುಚಾರು, ಚಾರುಗುಪ್ತನು,ಭದ್ರಚಾರು॥೧೦॥ಚಾರುಭದ್ರನು, ವಿಚಾರು,ಚಾರುಮಂತನುಪ್ರದ್ಯುಮ್ನನೇ, ಸರ್ವಜ್ಯೇಷ್ಠನಾಗಿಉಳ್ಳ ತಂದೆಯಾದ ಕೃಷ್ಣದೇವನಿಗೆ ಸಮಾನರಾದ ಈ ಹತ್ತುಮಂದಿ ಪುತ್ರರೂ ರುಕ್ಮಿಣೀದೇವಿಯಲ್ಲಿ ಜನಿಸಿದರು ॥೧೧॥ಭಾನುವು, ಸುಭಾನುವು, ಸ್ವರ್ಭಾನುವು, ಪ್ರಭಾನುವು, ಭಾನುಮಂತನು, ಚಂದ್ರಭಾನುವು, ಬೃಹದ್ಭಾನುವು, ರವಿಭಾನು, ಶ್ರೀಭಾನು, ಪ್ರತಿಭಾನುವು, ಈಹತ್ತುಮಂದಿಯೂ ಸತ್ಯಭಾಮೆಯ ಪುತ್ರರು ॥೧೨॥ ಸಾಂಬನು, ಸುಮಿತ್ರನು, ಪುರುಜಿತ್ತು ಶತಜಿತ್ತು ಸಹಸ್ರಜಿತ್ತು ॥೧೩॥ ವಿಜಯನು, ಚಿತ್ರಕೇತುವು, ಕೀರ್ತಿಮಂತನು, ದ್ರವಿಣನು, ಕ್ರತುವು, ತಂದೆಗೆ ಯಿಷ್ಟ

ಶ್ಚಾಂದ್ರೋಶ್ವಸೇನಶ್ಚಿತ್ರಗುರ್ವೇಗವಾನ್ ವೃಷಃ । ಆಮಶ್ಶಂಕುರ್ವಸುಶ್ಶ್ರೀಮಾನ್ ಕ್ರತುರ್ನಾಗ್ನಜಿತೇ
ಸ್ಸುತಾಃ॥೧೫॥ಶ್ರುತಃಕವಿರ್ವೃಷೋವೀರಸ್ಸುಬಾಹುರ್ಭದ್ರ ಏಕಲಃ। ಶಾಂತಿರ್ದರ್ಶಃಪೂರ್ಣಮಾಸಃ
ಕಾಳಿಂದ್ಯಾಸ್ಸೋಮಕೋವರಃ ॥೧೬॥ ಪ್ರಘೋಷೋಗಾತ್ರವಾನ್ ಸಿಂಹೋಬಲಃಪ್ರಬಲಊರ್ಧ್ವಗಃ।
ಮಾದ್ರ್ಯಾಸ್ಸುತಾಮಹಾಶಕ್ತಿಸ್ಸಹಸ್ತೇಜೋಪರಾಜಿತಃ ॥೧೭॥ ವೃಕೋರ್ಕೋನಿಲೋಗೃಧ್ರೋವರ್ಧ
ನ್ನೋನಾಥಏವಚ। ಮಹಾಶಃಪಾವನೋವಹ್ನಿರ್ಮಿತ್ರವಿಂದಾತ್ಮಜಾಸ್ಸುಧೀಃ॥ ೧೮॥ ಸಂಗ್ರಾಮಜಿದ್ಬೃ
ಹತ್ಸೇನಃಶೂರಃಪ್ರಹರಣೋರಿಜಿತ್ । ಯಜ್ಞಸ್ಸುಭದ್ರೋ ಭದ್ರಾಯಾವಾಮಆಯುಶ್ಚ ಸತ್ಯಕಃ ॥೧೯॥
ದೀಪ್ತಿಮಾಂಸ್ತಾಮ್ರತಪ್ತಾದ್ಯಾರೋಹಿಣ್ಯಾಸ್ತನಯಾಹರೇಃ ॥೨೦॥ ಪ್ರದ್ಯುಮ್ನಾಚ್ಚಾನಿರುದ್ಧೋಭೂ
ದ್ರುಕ್ಮವತ್ಯಾಂಮಹಾಬಲಃ । ಪುತ್ರ್ಯಾಂತುರುಕ್ಮಿಣೋರಾಜನ್ನಾಮ್ನಾಭೋಜಕಟಪುರೆ॥೨೧॥ ಏತೆ

---

ಬನು ಮೊದಲಾದವರು, ಪಿತೃಸಮ್ಮತಾಃ-ತಂದೆಯಂತೆ ಒಪ್ಪಿಗೆಯಾದ, ಜಾಂಬವತ್ಯಾಸ್ಸುತಾಃ-ಜಾಂಬವತಿಯ ಪುತ್ರರು॥೧೪॥ ಭಾನುವು, ಚಂದ್ರನು, ಅಶ್ವಸೇನನು ಚಿತ್ರಗುವು, ವೇಗವಂತನು, ವೃಷನು, ಆಮನು, ಶಂಕುವು, ವಸುವು, ಶ್ರೀಮಂತನು, ಕ್ರತುವು ಎಂಬವರು, ನಾಗ್ನಜಿತೇಃ-ಸತ್ಯಾದೇವಿಯ, ಸುತಾಃ-ಪುತ್ರರು ॥೧೫॥ ಶ್ರುತನು, ಕವಿಯು ವೃಷನು, ವೀರಃ-ಶೂರನಾದ, ಸುಬಾಹುವು, ಭದ್ರನು, ಏಕಲನು, ಶಾಂತಿಯು, ದರ್ಶನು ಪೂರ್ಣಮಾಸನು, ಅವರಃ ಕಿರಿಯವನಾದ ಸೋಮಕನೆಂಬವರು, ಕಾಳಿಂದ್ಯಾಃ-ಕಾಳಿಂದೀ ದೇವಿಯ ಪುತ್ರರು ॥೧೬॥ ಪ್ರಘೋಷನು, ಗಾತ್ರವಂತನು, ಸಿಂಹನು,ಬಲನು, ಪ್ರಬಲನು ಊರ್ಧ್ವಗನು, ಮಹಾಶಕ್ತಿಯು, ಸಹನು ತೇಜನು, ಅಪರಾಜಿತನು, ಎಂಬವರು, ಮಾದ್ರ್ಯಾಃ ಮಾದ್ರಾದೇವಿಯ, ಸುತಾಃ-ಪುತ್ರರ ॥೧೭॥ ವೃಕನು, ಅರ್ಕನು, ಅನಿಲನು, ಗೃಧ್ರನು ವರ್ಧನ್ನನು, ನಾಥನು, ಮಹಾಶನು, ಪಾವನನು ವಹ್ನಿಯು, ಸುಧಿಯು, ಎಂಬವರು, ಮಿತ್ರವಿಂದಾತ್ಮಜಾಃ-ಮಿತ್ರವಿಂದಾ ಪುತ್ರರು ॥೧೮॥ ಸಂಗ್ರಾಮಜಿತ್ತು ಬೃಹತ್ಸೇನನು, ಶೂರನು, ಪ್ರಹರಣನು, ಅರಿಜಿತ್ತು, ಯಜ್ಞನು, ಸುಭದ್ರನು, ವಾಮನು, ಆಯುವು, ಸತ್ಯಕನು, ಎಂಬವರು ಭದ್ರಾದೇವಿಯ ಪುತ್ರರು॥೧೯॥ ದೀಪ್ತಿಮಂತನು, ತಾಮ್ರತಪ್ತನು, ಆದ್ಯಾಃ-ಮೊದಲಾಗಿಉಳ್ಳ, ಹರೇಃ-ಕೃಷ್ಣನ ದೆಸೆಯಿಂದಾದ, ರೋಹಿಣ್ಯಾಸ್ತನಯಾಃ-ರೋಹಿಣೀ ದೇವಿಯ ಪುತ್ರರು ॥೨೦॥ ರಾಜನ್-ಪರೀಕ್ಷಿದರಸನೇ! ಭೋಜಕಟೇಪುರೇ-ಭೋಜಕಟವೆಂಬ ನಗರದಲ್ಲಿ, ರುಕ್ಮಿಣಃ-ರುಕ್ಮಿಯ, ಪುತ್ರ್ಯಾಂ-ಮಗಳಾದ, ರುಕ್ಮವತ್ಯಾಂತು-ರುಕ್ಮವತಿಯೆಂಬವಳಲ್ಲಿ ಆದರೋ ಪ್ರದ್ಯುಮ್ನಸ್ಯ-ಪ್ರದ್ಯುಮ್ನನಿಗೆ, ಪುತ್ರನು, ನಾಮ್ನಾ-ಹೆಸರಿಂದ, ಅನಿರುದ್ಧಃ-ಅನಿರುದ್ಧನೆಂಬವನು, ಮಹಾಬಲಃ-ಅಧಿಕಶಕ್ತಿಯುಳ್ಳವನಾಗಿ, ಅಭೂತ್-ಆದನು ॥೨೧॥ ನೃಪ-ಪರೀಕ್ಷಿದನೇ! ಏತೇಷಾಂ-ಇವರಿಗೆ, ಪುತ್ರಪೌತ್ರಾಶ್ಚ-ಮಕ್ಕಳೂ ಮೊಮ್ಮಕ್ಕ

---

ಳಾದ ಈ ಹತ್ತುಮಂದಿಯೂ, ಜಾಂಬವತಿಯ ಪುತ್ರರು ॥೧೪॥ ಭಾನುವು, ಚಂದ್ರನು, ಅಶ್ವಸೇನನು, ಚಿತ್ರಗು, ವೇಗವಂತನು, ವೃಷಭನು, ಆಮನು ಶಂಕುವು, ವಸು ಶ್ರೀಮಂತನು, ಕ್ರತು ಇವರು ನಗ್ನಜಿತ್ತಿಯ ಪುತ್ರರು ॥೧೫॥ ಶ್ರುತನು, ಕವಿ, ವೃಷನು, ವೀರನು, ಸುಬಾಹು, ಭದ್ರನು ಏಕಲನು, ಶಾಂತಿ, ದರ್ಶನು, ಪೂರ್ಣಮಾಸನು, ಸೋಮಕನು, ಇವರು ಕಾಳಿಂದಿಯ ಪುತ್ರರು ॥೧೬॥ ಪ್ರಘೋಷನು, ಗಾತ್ರವಂತನು, ಸಿಂಹನು, ಬಲನು, ಪ್ರಬಲನು, ಊರ್ಧ್ವಗನು, ಮಹಾಶಕ್ತಿ, ಸಹನು, ತೇಜಸ್ಸು, ಅಪರಾಜಿತನು, ಇವರು ಲಕ್ಷಣೆಯ ಪುತ್ರರು ॥೧೭॥ ವೃಕನು, ಅರ್ಕನು, ಅನಿಲನು, ಗೃಧ್ರನು ವರ್ಧನ್ನನು ನಾಥನು, ಮಹಾಶ, ಪಾವನನು, ವಹ್ನಿ, ಸುಧಿ, ಇವರು ಮಿತ್ರವಿಂದಾ ಪುತ್ರರು ॥೧೮॥ ಸಂಗ್ರಾಮಜಿತ್ತು, ಬೃಹತ್ಸೇನನು, ಶೂರನು ಪ್ರಹರಣನು, ಅರಿಜಿತ್ತು, ಯಜ್ಞನು, ಸುಭದ್ರನು, ವಾಮನು, ಆಯುಸ್ಸು, ಸತ್ಯಕನು ಇವರು ಭದ್ರಾದೇವಿಯ ಪುತ್ರರು ॥೧೯॥ ದೀಪ್ತಿಮಂತನು ತಾಮ್ರತಪ್ತನು, ಮೊದಲಾದವರು ರೋಹಿಣೀ ದೇವಿಯಲ್ಲಿ ಕೃಷ್ಣನ ಪುತ್ರರು ॥೨೦॥ ಪ್ರದ್ಯುಮ್ನನ ದೆಸೆಯಿಂದ ರುಕ್ಮಿರಾಯನ ಪುತ್ರಿಯಾದ ರುಕ್ಮವತಿಯಲ್ಲಿ ಭೋಜಕಟವೆಂಬ ಪಟ್ಟಣದಲ್ಲಿ ಮಹಾ ಬಲನಾದ ಅನಿರುದ್ಧನೆಂಬ ಪುತ್ರನು ಜನಿಸಿದನು ॥೨೧॥ ಎಲೈ ಅರಸೇ! ಕೇಳು, ಈ ಕೃಷ್ಣನ ಪುತ್ರರಿಗೆ ಅನೇಕಕೋಟಿ ಪುತ್ರಪೌತ್ರರು ಜನಿಸಿದರು. ಈ ಕೃಷ್ಣನ ಪುತ್ರರಿಗೆ ೧೬ ಸಾವಿರಮಂದಿ ತಾ

ಷಾಂಪುತ್ರಪೌತ್ರಾಶ್ಚ ಬಭೂವುಃ ಕೋಟಿಶೋ ನೃಪ । ಮಾತರಃ ಕೃಷ್ಣಜಾತಾನಾಂ ಸಹಸ್ರಾಣಿ ಷೋಡಶ ||೧|| ರಾಜಾ|| ಕಥಂ ರುಕ್ಮ್ಯರಿಪುತ್ರಾಯ ಪ್ರಾದಾದ್ದುಹಿತರಂ ಯುಧಿ । ಕೃಷ್ಣೇನ ಪರಿಭೂತಸ್ತಂ ಹಂತುಂ ರಂಧ್ರಂ ಪ್ರತೀಕ್ಷತೇ ||೨|| ಏತದಾಖ್ಯಾಹಿ ಮೇ ವಿದ್ವನ್ ದ್ವಿಷೋರ್ವೈವಾಹಿಕಂ ಮಿಥಃ ||೩|| ಅನಾಗತಮತೀತಂ ಚ ವರ್ತಮಾನಮತೀಂದ್ರಿಯಮ್ । ವಿಪ್ರಕೃಷ್ಟಂ ವ್ಯವಹಿತಂ ಸಮ್ಯಕ್ಪಶ್ಯಂತಿ ಯೋಗಿನಃ ||೪|| ಶ್ರೀಶುಕಃ|| ಯದ್ಯಪ್ಯನುಸ್ಮರನ್ವೈರಂ ರುಕ್ಮೀ ಕೃಷ್ಣಾವಮಾನಿತಃ । ವ್ಯತರದ್ಭಾಗಿನೇಯಾಯ ಸುತಾಂ ಕುರ್ವನ್ ಸ್ವಸುಃ ಪ್ರಿಯಂ ||೫|| ವೃತಸ್ಸ್ವಯಂವರೇ ಸಾಕ್ಷಾದನಂಗೋಂಗಯುತ

ಅನಿರುದ್ಧವಿವಾಹೇ ಶ್ರೀಬಲರಾಮಕೃತರುಕ್ಮಿವಧಾದಿಕಥಾ ಪ್ರಾರಂಭಘಟ್ಟಃ

---

ಕೂಡ, ಕೋಟಿಶಃ-ಕೋಟಿಸಂಖ್ಯೆಗಳಾಗಿ, ಬಭೂವುಃ-ಆದರಂತೆ. ಕೃಷ್ಣಜಾತಾನಾಂ-ಕೃಷ್ಣನಿಂದ ಹುಟ್ಟಿದವರ, ಮಾತರಃ-ತಾಯಿಯರು, ಷೋಡಶಸಹಸ್ರಾಣಿ-೧೬ಸಾವಿರಂಗಳು ||೧|| [ರಾಜಪ್ರಶ್ನೆವು.] ಯುಧಿ-ಕಾಳಗದಲ್ಲಿ, ಕೃಷ್ಣೇನ-ಹರಿಯಿಂದ, ಪರಿಭೂತಃ ತಿರಸ್ಕರಿಸಲ್ಪಟ್ಟವನಾದ್ದರಿಂದ, ತಂ-ಆಕೃಷ್ಣನನ್ನು. ಹಂತುಂ-ಕೊಲ್ಲುವುದಕ್ಕೆ, ರಂಧ್ರಂ-ಅವಕಾಶವನ್ನು, ಪ್ರತೀಕ್ಷತೇ-ನಿರೀಕ್ಷಿಸುತ್ತಿರುವನು ರುಕ್ಮೀ-ಅಂಥಾ ರುಕ್ಮಿಯು, ಅರಿಪುತ್ರಾಯ-ವೈರಿಯಾದ ಕೃಷ್ಣನಮಗನಿಗೆ ದುಹಿತರಂ-ಮಗಳನ್ನು, ಕಥಂ-ಹೇಗೆ, ಪ್ರಾದಾತ್-ಕೊಟ್ಟನು ||೨|| ವಿದ್ವನ್-ಬಲ್ಲವನಾದ ಶುಕಮುನಿಯೇ! ದ್ವಿಷೋಃ-ವಿರೋಧಿಗಳ, ಮಿಥಃ-ಪರಸ್ಪರವಾದ, ಏತದ್ವೈವಾಹಿಕಂ-ಈಮದುವೆಯ ಕಥೆಯನ್ನು, ಮೇ-ನನಗೆ, ಆಖ್ಯಾಹಿ-ಹೇಳು ||೩|| ಯೋಗಿನಃ-ಧ್ಯಾನಭಾವ ನಾದ್ಯಭ್ಯಾಸಮುಳ್ಳವರು, ಅನಾಗತಂ-ಬಾರದೆ ಯಿರುವ ಭವಿಷ್ಯದ್ವಿಷಯವನ್ನೂ, ಅತೀತಂಚ-ಕಳಿದು ಹೋದ್ದನ್ನೂ, ವರ್ತಮಾನಂ-ನಡೆಯುತ್ತಿರುವುದನ್ನೂ, ಅತೀಂದ್ರಿಯಂ-ಪ್ರತ್ಯಕ್ಷವಲ್ಲದ್ದನ್ನೂ, ವಿಪ್ರಕೃಷ್ಟಂ-ದೂರದಲ್ಲಿರುವುದನ್ನೂ, ವ್ಯವಹಿತಂ-ಬಿಟ್ಟುಹೋಗಿರುವುದನ್ನೂ, ಸಮ್ಯಕ್-ಚನ್ನಾಗಿ, ಪಶ್ಯಂತಿ-ನೋಡುತ್ತಿರುವರು||೪|| [ಶುಕವಚನವು] ಕೃಷ್ಣಾವಮಾನಿತಃ-ಕೃಷ್ಣನಿಂದ ಅವಮಾನ ಗೊಳಿಸಲ್ಪಟ್ಟವ ನಾದ್ದರಿಂದ, ವೈರಂ-ವಿರೋಧವನ್ನು. ಅನುಸ್ಮರನ್-ನೆನಪುಗೊಳ್ಳುತ್ತಿರುವವನು, ಯದ್ಯಪಿ-ಆಹುದಾದರೂ, ಸ್ವಸುಃ-ತಂಗಿಯಾದ ರುಕ್ಮಿಣಿಗೆ, ಪ್ರಿಯಂ-ಸಂತೋಷವನ್ನು, ಕುರ್ವನ್ ಮಾಡುವವನಾಗಿ ಸುತಾಂ ತನ್ನಮಗಳನ್ನು, ಭಾಗಿನೇಯಾಯ-ಸೋದರಳಿಯನಾದ ಪ್ರದ್ಯುಮ್ನಂಗೆ, ವ್ಯತರತ್-ಕೊಟ್ಟನು||೫||ಅಂಗಯುತಃ-ಶರೀರದಿಂ ಕೂಡಿದವನಾಗಿ, ಸಾಕ್ಷಾತ್ ಪ್ರತ್ಯಕ್ಷನಾಗಿರುವ ಅನಂಗಃ-ಮನ್ಮಥನು, ತಯಾ-ಆರುಕ್ಮವತಿಯಿಂದ, ವೃತಃ-ವರಿಸಲ್ಪಟ್ಟವನಾಗಿ, ಯುಧಿ-ಕಾಳಗದಲ್ಲಿ, ಸಮೇತಾನ್-ಕೂಡಿದಂಥಾ, ರಾಜ್ಞಃ-ಧೊರೆಗಳನ್ನು, ಏಕರ

---

ಯಿಗಳೆಂಬ ಶುಕಾಚಾರ್ಯನ ವಾಕ್ಯವಂ ಕೇಳಿ ಪರೀಕ್ಷಿದ್ರಾಯನು ಪ್ರಶ್ನೆಗೆಯ್ದನ ದೆಂತೆನೆ ||೧|| ಎಲೈಶುಕಮುನಿಯೇ! ಯಾವ ರುಕ್ಮಿರಾಯನು ಯುದ್ಧದಲ್ಲಿ ಕೃಷ್ಣನಿಂದ ಅತ್ಯಂತವಾಗಿ ತಿರಸ್ಕರಿಸಲ್ಪಟ್ಟವನಾಗಿ ಆ ಕೃಷ್ಣನಂ ಸಂಹರಿಸಲೋಸುಗ ರಂಧ್ರವಂ ಹುಡುಕುತ್ತಲಿದ್ದನೋ ಅಂತಾ ರುಕ್ಮಿರಾಯನು ಶತ್ರುಪುತ್ರನಾದ ಪ್ರದ್ಯುಮ್ನನಿಗೆ ತನ್ನ ಪುತ್ರಿಯನ್ನು ಎಂತುಕೊಟ್ಟನು? ||೨|| ಎಲೈ ಸರ್ವಜ್ಞನೇ! ಅನ್ಯೋನ್ಯ ಶತ್ರುಗಳಾದ ಕೃಷ್ಣರುಕ್ಮಿಗಳಿಗೆ ಪರಸ್ಪರ ವಿವಾಹ ಸಂಬಂಧವು ಹೇಗೆ ಉಂಟಾಯಿತು ? ನಿರೂಪಿಸುವನಾಗು||೩|| ಜ್ಞಾನಿಗಳು ಭೂತಭವಿಷ್ಯದ್ವರ್ತಮಾನಾರ್ಥಗಳಂ ಮತ್ತು ನಮ್ಮಂಥಾವರ ಇಂದ್ರಿಯಂಗಳಿಗೆ ಗೋಚರವಾಗದೇಯಿರುವ ಅರ್ಥವಂ ದೂರದೇಶದಲ್ಲಿ ಇರುವ ಅರ್ಥವಂ ಕೂಡ ಮರೆಮಾಡಲ್ಪಟ್ಟಿರುವ ಅರ್ಥವಂ ನೋಡುತಲಿರುವರು ||೪|| ಎಂಬ ರಾಜವಚನವಂ ಕೇಳಿ ಶುಕಮುನಿಯು ಉತ್ತರವ ನಿತ್ತನದೆಂತೆನೆ-ಎಲೈ ಅರಸೇ! ಹರಂತು ವೈರಿಯಾದರೂ ರುಕ್ಮಿಯು ತಂಗಿಯ ಸ್ನೇಹದಿಂದ ಮಗಳಂ ಸೋದರಳಿಯಂಗೆ ಕೊಟ್ಟನು ||೫|| ಸ್ವಯಂ ವರಕಾಲದಲ್ಲಿ ಪ್ರದ್ಯುಮ್ನನು ಆ ರುಕ್ಮವತೀ ದೇವಿಯಿಂದ ವರಿಸಲ್ಪಟ್ಟವನಾಗಿ ಆ ಕಾಲದಲ್ಲಿ ಗುಂಪು

ಸ್ತ್ವಯಾ । ರಾಜ್ಞಸ್ಸಮೇತಾನ್ನಿರ್ಜಿತ್ಯಜಹಾರೈಕರಥೋಯುಧಿ ॥೨೨॥ ರುಕ್ಮಿಣ್ಯಾಸ್ತನಯಾಂರಾ
ಜನ್ ಕೃತವರ್ಮಸುತೋಬಲೀ । ಉಪಯೇಮೇವಿಶಾಲಾಕ್ಷೀಂಕನ್ಯಾಂಚಾರುಮತೀಂಕಿಲ ॥೨೪॥ ದೌಹಿ
ತ್ರಾಯಾನಿರುದ್ಧಾಯಪೌತ್ರೀಂರುಕ್ಮ್ಯದದಾದ್ಧರೇಃ । ರೋಚನಾಂಬದ್ಧವೈರೋಽಪಿಸ್ವಸುಃಪ್ರಿಯ
ಚಿಕೀರ್ಷಯಾ ॥ ಜಾನನ್ನಧರ್ಮಂತದ್ಯೌನಂಸ್ನೇಹಪಾಶಾನುಬಂಧನಃ ॥೨೫॥ ತಸ್ಮಿನ್ನಭ್ಯುದ
ಯೇರಾಜನ್ ರುಕ್ಮಿಣೀರಾಮಕೇಶವೌ । ಪುರಂಭೋಜಕಟಂಜಗ್ಮುಸ್ಸಾಂಬಪ್ರದ್ಯುಮ್ನಕಾದಯಃ ॥೨೬॥
ತಸ್ಮಿನ್ನಿರ್ವೃತ್ತಉದ್ವಾಹೇಕಾಳಿಂಗಪ್ರಮುಖಾನೃಪಾಃ । ದೃಪ್ತಾಸ್ತೇರುಕ್ಮಿಣಂಪ್ರೋಚುರ್ಬಲಮ
ಕ್ಷೈರ್ವಿನಿರ್ಜಯ ॥೨೭॥ ಅನಕ್ಷಜ್ಞೋಹ್ಯಯಂರಾಜನ್ನಪಿತದ್ವ್ಯಸನಂಮಹತ್ । ಇತ್ಯುಕ್ತೋಬ

---

ಥಃ-ಒಬ್ಬ ರಥಿಕನಾಗಿಯೇ ನಿರ್ಜಿತ್ಯ-ಗೆದ್ದು, ಜಹಾರ-ಅಪಹರಿಸಿದನು॥೨೨॥ರುಕ್ಮಿಣ್ಯಾಃ-ರುಕ್ಮಿಣೀದೇವಿಯ, ತನಯಾಂ-ಮಗಳಾ ದ, ಚಾರುಮತೀಂ-ಚಾರುಮತಿ ಯೆಂಬವಳನ್ನು, ಬಲೀ-ಬಲವಂತನಾದ ಕೃತವರ್ಮಸುತಃ-ಕೃತವರ್ಮನಮಗನಾದ, ವಿಶಾಲಾಕ್ಷ ನೆಂಬವನು, ಉಪಯೇಮೇ ಕಿಲ-ಮದುವೆ ಯಾದ ನಲ್ಲವೆ?॥೨೪॥ತದ್ಯೌನಂ-ಆವಿರೋಧಿಗಳ ಯೌವನಸಂಬಂಧವನ್ನು, ಅಧರ್ಮಂ- ಅಯೋಗ್ಯವನ್ನಾಗಿ, ಜಾನನ್ನಪಿ-ತಿಳಿದವನಾದರೂ ಸ್ನೇಹಪಾಶಾನುಬಂಧನಃ-ಅನುರಾಗವೆಂಬ ಹಗ್ಗದ ಕಟ್ಟುಳ್ಳ, ರುಕ್ಮೀ-ರುಕ್ಮಿ ರಾಯನು ಹರೇಃ-ಕೃಷ್ಣನೊಡನೆ, ಬದ್ಧವೈರೋಽಪಿ-ಬಿಗಿಯಲ್ಪಟ್ಟ ದ್ವೇಷವುಳ್ಳವನಾದರೂ, ಸ್ವಸುಃ-ತಂಗಿಯಾದ ರುಕ್ಮಿಣಿಗೆ, ಪ್ರಿಯಚಿಕೀರ್ಷಯಾ-ಸಂತೋಷವಂ ಮಾಡಲಪೇಕ್ಷೆಯಿಂದ, ಪೌತ್ರೀಂ-ತನ್ನ ಮಗನ ಮಗಳಾದ, ರೋಚನಾಂ-ರೋಚನಾದೇವಿಯ ನ್ನು ದೌಹಿತ್ರಾಯ-ತನ್ನ ಮಗಳ ಮಗನಾದ, ಅನಿರುದ್ಧಾಯ-ಅನಿರುದ್ಧನಿಗೆ, ಅದದಾತ್-ಕೊಟ್ಟನು॥೨೫॥ರಾಜನ್-ಪರೀಕ್ಷಿತನೇ! ತಸ್ಮಿನ್ ಅಭ್ಯುದಯೇ-ಆ ಮದುವೆಯಲ್ಲಿ, ರುಕ್ಮಿಣೀ-ರುಕ್ಮಿಣಿಯೂ, ರಾಮಕೇಶವೌ-ರಾಮಕೇಶವರೂ, ಸಾಂಬಪ್ರದ್ಯುಮ್ನಕಾದಯಃ- ಸಾಂಬನು, ಪ್ರದ್ಯುಮ್ನನು, ಮೊದಲಾದವರೂ, ಭೋಜಕಟವೆಂಬ ಪುರವಂ ಕುರಿತು, ಜಗ್ಮುಃ-ತೆರಳಿದರು॥೨೬॥ತಸ್ಮಿನ್ ಉದ್ವಾಹೇ- ಆ ಮದುವೆಯು, ನಿರ್ವೃತ್ತೇ ಸತಿ-ನೆರವೇರಿದ್ದಾಗುತಲೂ, ದೃಪ್ತಾಃ-ಗರ್ವಿತರಾದ, ಕಾಳಿಂಗಪ್ರಮುಖಾಃ-ಕಾಳಿಂಗನು ಮೊದ ಲಾದ, ನೃಪಾಃ-ದೊರೆಗಳು, ಬಲಂ-ಬಲರಾಮನನ್ನು, ಅಕ್ಷೈಃ-ಪಾಚಿಕಗಳಿಂದ, ವಿನಿರ್ಜಯ-ಗೆಲ್ಲು ಎಂದು, ರುಕ್ಮಿಣಂ-ರುಕ್ಮಿಣಿಯಂ ಕು ರಿತು, ಪ್ರೋಚುಃ-ನುಡಿದರು॥೨೭॥ರಾಜನ್-ದೊರೆಯೇ! ಅಯಂ-ಈ ಬಲರಾಮನು, ಅನಕ್ಷಜ್ಞೋಹಿ-ಪಗಡೆಯಾಡುವುದಂ ಬಲ್ಲವನಲ್ಲವ ಷ್ಟೆ? ತದ್ವ್ಯಸನಮಪಿ-ಆಯಾಟವೂ ಕೂಡ, ಮಹತ್-ದೊಡ್ಡದಾಗಿರುವುದು, ಇತಿ-ಹೀಗೆ, ಉಕ್ತಃ-ಹೇಳಲ್ಪಟ್ಟವನಾದ, ರುಕ್ಮಿ

---

ಗೂಡಿರುವ ಅರಸುಗಳಂ ಜಯಿಸಿ ಒಂದೇ ರಥವುಳ್ಳವನಾಗಿ ಆ ರುಕ್ಮವತಿಯನ್ನು ಅಪಹರಿಸಿದನು ॥೨೨॥ ಅದೇ ರೀತಿಯಲ್ಲಿ ಸಮಸ್ತರಾದ ಶ್ರೀ ಕೃಷ್ಣಪತ್ನಿಯರಲ್ಲಿ ಕ್ರಮದಿಂದ ಒಬ್ಬೊಬ್ಬ ಪುತ್ರಿಯು ಜನಿಸಿದಳು. ಆಹೆಂ ಣುಮಕ್ಕಳಲ್ಲಿ ಕೃತವರ್ಮ ಪುತ್ರನಾದ ಬಲಶಾಲಿಯಾದ ಅರಸೊಬ್ಬನು ರುಕ್ಮಿಣೀದೇವಿಗೆ ಪುತ್ರಿಯಾದ ವಿಶಾ ಲ ನೇತ್ರಯುಕ್ತಳಾದ ಚಾರುಮತಿಯೆಂಬ ಕನ್ಯೆಯಂ ವಿವಾಹವಂ ಮಾಡಿಕೊಂಡನು ॥೨೪॥ ಅನಂತರದ ಲ್ಲಿ ರುಕ್ಮಿರಾಯನು ಕೃಷ್ಣನಲ್ಲಿ ವೈರವುಳ್ಳವನಾದರೂ ಶತ್ರುಗಳಲ್ಲಿ ತಮಗುಂಟಾದ ಆ ವಿವಾಹಸಂಬಂಧವಂ ಲೋ ಕವಿರೋಧದಿಂದಲೂ ಶಾಸ್ತ್ರವಿರೋಧದಿಂದಲೂ ಅಧರ್ಮವನ್ನಾಗಿ ತಿಳಿಯುತಲಿರುವ ಸಾದಾಗ್ಯ ಸ್ನೇಹ ಪಾಶದಿಂದ ಬದ್ಧನಾಗಿ ತಂಗಿಯಾದ ರುಕ್ಮಿಣೀದೇವಿಗೆ ಪ್ರಿಯವಂ ಮಾಡುವ ಇಚ್ಛೆಯಿಂದ ದೌಹಿತ್ರನಾದ ಅನಿ ರುದ್ಧನಿಗೋಸ್ಕರ ಮೊಮ್ಮಗಳಾದ ರೋಚನಾ ದೇವಿಯಂ ಕೊಟ್ಟನು ॥೨೫॥ ಎಲೈ ಅರಸೇ! ಅನಿರುದ್ಧನ ವಿವಾಹೋತ್ಸವದಲ್ಲಿ ಶ್ರೀರಾಮಕೃಷ್ಣರೂ ರುಕ್ಮಿಣೀ ದೇವಿಯೂ ಸಾಂಬ ಪ್ರದ್ಯುಮ್ನ ಮೊದಲಾದ ಶ್ರೀಕೃ ಷ್ಣಪುತ್ರರೂ ಸಹ ಭೋಜಕಟವೆಂಬ ಪಟ್ಟಣವ ನೆಯ್ದಿದರು ॥೨೬॥ ಆ ಪಟ್ಟಣದಲ್ಲಿ ಅನಿರುದ್ಧನ ಆ ವಿವಾಹೋ ತ್ಸವವು ಬೆಳೆದಂತಿಯುದಾಗಲು ಗರ್ವಿತರಾದ ಕಳಿಂಗನೇ ಪ್ರಮುಖನಾಗಿಯೆಲ್ಲ ಅರಸುಗಳು ರುಕ್ಮಿರಾಯ ನಂ ಕುರಿತು ಎಲೈ ಅರಸೇ! ಈ ಬಲರಾಮನು ಪಗಡೆಯಾಟವಂ ತಿಳಿಯದವನಾದರೂ ಅವನಿಗೆ ಆ ಪಗಡೆಯಾ ಟದಲ್ಲಿ ಅತ್ಯಂತಾಪೇಕ್ಷೆಯಿರುವುದರಿಂದ ಈ ಬಲರಾಮನಂ ಪಗಡೆಯಾಟದಿಂದ ಜಯಿಸುವನಾಗೆಂದು ನುಡಿದ

ಲಮಾಹೂಯತೇನಾಕ್ಷೈರುಕ್ಮ್ಯಧೀವ್ಯತ ॥೩೦॥ ಶತಂಸಹಸ್ರಮಯುತಂರಾಮಸ್ತತ್ರಾದದೇಪಣಂ। ತಂತುರುಕ್ಮ್ಯಜಯತ್ತತ್ರ ಕಾಳಿಂಗಃಪ್ರಾಹಸದ್ಬಲಂ ॥ ದಂತಾನ್ಸಂದರ್ಶಯನ್ನುಚ್ಚೈರ್ನಾಮೃಷ್ಯತ್ತದ್ಧಲಾಯುಧಃ॥೩೩॥ ತತೋಲಕ್ಷಂರುಕ್ಮ್ಯಗೃಹ್ಣಾದ್ಗ್ಲಹಂತತ್ರಾಜಯದ್ಬಲಃ ।ಜಿತವಾನಹಮಿತ್ಯಾಹರುಕ್ಮೀಕೈತವಮಾಶ್ರಿತಃ ॥೩೪॥ ಮನ್ಯುನಾಕ್ಷುಭಿತಃಶ್ರೀಮಾನ್ಸಮುದ್ರಇವಪರ್ವಣಿ । ಜಾತ್ಯಾರುಣಾಕ್ಷೋತಿರುಷಾನ್ಯರ್ಬುದಂಗ್ಲಹಮಾದದೆ ॥೩೫॥ ತಂಚಾಪಿಜಿತವಾನ್ರಾಮೋಧರ್ಮೇಣಚ್ಛಲಮಾಶ್ರಿತಃ । ರುಕ್ಮೀಜಿತಂಮಯಾತ್ರೇಮೇವದಂತುಪ್ರಾಶ್ನಿಕಾಇತಿ ॥೩೬॥ ತದಾಬ್ರವೀನ್ನಭೋವಾಣೀಬಲೇನೈವಜಿತೋಗ್ಲಹಃ । ಧರ್ಮತೋವಚನೇನೈವರುಕ್ಮೀವದತಿವೈಮೃಷಾ ॥೩೭॥

---

ಯು, ಬಲಂ-ಬಲಭದ್ರನನ್ನು, ಆಹೂಯ-ಕರೆದು, ತೇನ-ಅವನೊಡನೆ, ಅಕ್ಷೈಃ-ಪಾಚಿಕೆಗಳಿಂದ, ಅಧೀವ್ಯತ-ಆಡಿದನು ॥೩೦॥ ಶತಂ-ನೂರನ್ನು, ಸಹಸ್ರಂ-ಸಾವಿರವನ್ನೂ, ಅಯುತಂ-ಹತ್ತುಸಾವಿರವನ್ನೂ, ಪಣಂ-ಶುಲ್ಕದ್ರವ್ಯವನ್ನಾಗಿ, ತತ್ರ-ಅಲ್ಲಿ-ರಾಮಃ-ಬಲಭದ್ರನು, ಆದದೇ-ತಂದಿಟ್ಟನು, ರುಕ್ಮೀತು-ರುಕ್ಮಿಯಾದರೋ, ತಂ-ಅದರನ್ನು, ಅಜಯತ್-ಗೆದ್ದುಕೊಂಡನು. ತತ್ರ ಅಲ್ಲಿ, ಕಾಳಿಂಗಃ-ಕಳಿಂಗನೆಂಬವನು, ದಂತಾನ್-ಹಲ್ಲುಗಳನ್ನು ಸಂದರ್ಶಯನ್-ತೋರಿಸುವನಾಗಿ, ಬಲಂ-ಬಲಭದ್ರನಂಕುರಿತು, ಉಚ್ಚೈಃ-ಅಧಿಕಸ್ವರವಾಗಿ, ಪ್ರಾಹಸತ್-ನಕ್ಕನು, ಹಲಾಯುಧಃ-ಬಲರಾಮನು, ತತ್-ಅದರನ್ನು, ನಾಮೃಷ್ಯತ್-ಸೈರಿಸಲಿಲ್ಲವು ॥೩೩॥ತತಃ-ಆಮೇಲೆ, ರುಕ್ಮಿಯು, ಲಕ್ಷಂ-ನೂರುಸಾವಿರ ಧನವನ್ನು, ಗ್ಲಹಂ-ಜೂಜಿನೊಡ್ಡನ್ನಾಗಿ, ಅಗೃಹ್ಣಾತ್-ಹಿಡಿದನು. ತತ್ರ-ಆಯೊಟದಲ್ಲಿ, ಬಲಃ-ರಾಮನು, ಅಜಯತ್-ಗೆದ್ದನು ರುಕ್ಮೀ-ರುಕ್ಮಿರಾಯನು, ಕೈತವಂ-ಮೋಸವನ್ನು, ಆಶ್ರಿತಃ-ಅವಲಂಬಿಸಿದವನಾಗಿ, ಅಹಂ-ನಾನು, ಜಿತವಾನ್-ಗೆದ್ದವನೆಂದು, ಆಹ-ನುಡಿದನು ॥೩೪॥ ಶ್ರೀಮಾನ್-ಸಂಪತ್ತುಳ್ಳ ರಾಮನು, ಪರ್ವಣಿ-ದರ್ಶಪೌರ್ಣಮಾಸಕಾಲದಲ್ಲಿ, ಸಮುದ್ರಇವ-ಕಡಲಿನಂತೆ, ಮನ್ಯುನಾ-ಸಿಟ್ಟುಸಿಂದ, ಕ್ಷುಭಿತಃ-ಅಂತರಂಗದ ಚಲನೆಯುಳ್ಳವ ನಾದ್ದರಿಂದ, ಜಾತ್ಯಾ-ಸ್ವಭಾವದಿಂದ, ಅರುಣಾಕ್ಷಃ-ಕೆಂಗಣ್ಣುಗಳುಳ್ಳವನಾಗಿ, ಅತಿರುಷಾ-ಬಹಳಸಿಟ್ಟಿನಿಂದ, ಅರ್ಬುದಂ-ಹತ್ತುಕೋಟಿ ಧನವನ್ನು, ಗ್ಲಹಂ-ಪಂದ್ಯವನ್ನಾಗಿ, ಆದದೇ-ತೆಗದಿಟ್ಟನು ॥೩೫॥ರಾಮಃ-ಬಲಭದ್ರನು, ತಂಚಾಪಿ-ಅದರನ್ನೂ, ಧರ್ಮೇಣ-ನ್ಯಾಯದಿಂದ, ಜಿತವಾನ್-ಗೆದ್ದವನಾದನು ಛಲಂ ವಂಚನವನ್ನು, ಆಶ್ರಿತಃ ಅವಲಂಬಿಸಿದವನಾದ, ರುಕ್ಮೀ ರುಕ್ಮಿರಾಯನು, ಮಯಾ-ನನ್ನಿಂದ, ಜಿತಂ-ಗೆಲ್ಲಲ್ಪಟ್ಟಿದೆ, ಅತ್ರ-ಇಲ್ಲಿರುವ, ಇಮೇಪ್ರಾಶ್ನಿಕಾಃ-ಸಾಜೋಮಿಸರು, ವದಂತು-ಹೇಳಲಿ ಇತಿ-ಇಂತೆಂದನು ॥೩೬॥ತದಾ-ಆಗ, ಧರ್ಮತಃ-ನ್ಯಾಯದಿಂದ, ಬಲೇನೈವ-ಬಲಭದ್ರನಿಂದಲೇ, ಗ್ಲ

---

ರು ॥೩೧॥ ಆಗ ಈ ರೀತಿಯಲ್ಲಿ ಅರಸುಗಳಿಂದ ಪ್ರೇಳಲ್ಪಟ್ಟ ರುಕ್ಮಿರಾಯನು ಬಲರಾಮನಂ ಕರೆಯಿಸಿ ಅವನೊಡನೆ ಪಗಡೆಯನಾಡಿದನು ॥೩೦॥ ಆಗ ಬಲರಾಮನು ಪಗಡೆಯಾಟದಲ್ಲಿ ನೂರು ಸಾವಿರ ಹತ್ತುಸಾವಿರವೆಂದುಈ ರೀತಿಯಾಗಿ, ಪಣದ್ರವ್ಯವ ನಂಗೀಕರಿಸಿದನು. ಅನಂತರದಲ್ಲಿ ರುಕ್ಮಿರಾಯನು ಬಲದೇವನಂ ಜಯಿಸಿದನು. ಆಗ ಕಳಿಂಗನೆಂಬ ಅರಸು ಬಹುಪ್ರಕಾರದಿಂ ಬಲರಾಮನಂ ನೋಡಿ ನಕ್ಕನು ಬಲರಾಮನು ಅವನ ಪರಿಹಾಸವಂ ಸಹಿಸಲಿಲ್ಲ ॥೩೩॥ ಅನಂತರದಲ್ಲಿ ರುಕ್ಮಿಯು ಲಕ್ಷವರಹಾಗಳಂ ಪಣದ್ರವ್ಯವನ್ನಾಗಿ ಕಲ್ಪಿಸಿದನು. ಆಗ ಬಲರಾಮನು ರುಕ್ಮಿಯಂ ಜಯಿಸಿದನು ಆ ಕಾಲದಲ್ಲಿ ರುಕ್ಮಿಯು ಕಪಟಕೃತ್ಯವನ್ನಾಶ್ರಯಿಸಿ ನಾನೇ ಗೆದ್ದೆನೆಂದು ಹೇಳಿಕೊಂಡನು ॥೩೪॥ ಆ ಮೇಲೆ ಪರ್ವ ಕಾಲದಲ್ಲಿ ಜಲದಿಂದ ಸಮುದ್ರದಂತೆ ರಕ್ತವರ್ಣ ಯುಕ್ತಂಗಳಾದ ನೇತ್ರಂಗಳುಳ್ಳ ಬಲರಾಮನು ಹತ್ತು ಕೋಟಿ ದ್ರವ್ಯಮಂ ಪಣವನ್ನಾಗಿ ಕಲ್ಪಿಸಿದನು ॥೩೫॥ ಆಗಲೂ ಬಲರಾಮನೇ ಧರ್ಮಮಾರ್ಗದಿಂದ ಆ ದ್ರವ್ಯವಂ ಗೆದ್ದನು. ರುಕ್ಮಿಯು ಆಗಲೂ ಮರಳಿ ಕಪಟಕೃತ್ಯವನಾಶ್ರಯಿಸಿ ಈ ಪಣದ್ರವ್ಯವು ನನ್ನಿಂದಲೇ ಜಯಿಸಲ್ಪಟ್ಟಿತು. ಸತ್ಯವೋ ಅಸತ್ಯವೋ ಇಲ್ಲಿರುವ ಮಧ್ಯಸ್ಥರು ಹೇಳಲಿಯೆಂದು ನುಡಿದನು ॥೩೬॥ ಆ ಕಾಲದಲ್ಲಿ ಆಕಾಶವಾಣಿಯು ಬಲರಾಮನಿಂದಲೇ ಪಣದ್ರವ್ಯವುಧರ್ಮದಿಂದ ಜಯಿಸಲ್ಪಟ್ಟಿದ್ದೆ ಈ ರುಕ್ಮಿಯು ವಚನಮಾತ್ರದಿಂದ ತಾನು ಜಯಿಸಿದನೆಂದು ಅನೃತವಂ ನುಡಿ

ತಾಮನಾದೃತ್ಯ ವೈದರ್ಭೋ ದುಷ್ಟರಾಜನ್ಯಚೋದಿತಃ । ಸಂಕರ್ಷಣಂ ಪರಿಹಸನ್ ಬಭಾಷೇ ಕಾಲಚೋದಿತಃ ॥೩೪॥ ನೈವಾಕ್ಷಕೋವಿದಾ ಯೂಯಂ ಗೋಪಾಲಾ ವನಗೋಚರಾಃ । ಅಕ್ಷೈರ್ದೀವ್ಯಂತಿ ರಾಜಾನೋ ಬಾಣೈಶ್ಚ ನ ಭವಾದೃಶಾಃ ॥೩೫॥ ರುಕ್ಮಿಣೈವಮಧಿಕ್ಷಿಪ್ತೋ ರಾಜಭಿಶ್ಚೋಪಹಾಸಿತಃ । ಕ್ರುದ್ಧಃ ಪರಿಘಮುದ್ಯಮ್ಯ ಜಘ್ನೇ ತಂ ನೃಮ್ಣಸಂಸದಿ ॥೩೬॥ ಕಳಿಂಗರಾಜಂ ತರಸಾ ಗೃಹೀತ್ವಾ ದಶಮೇ ಪದೇ । ದಂತಾನಪಾತಯತ್ ಕ್ರುದ್ಧೋ ಯೋಹಸದ್ವಿವೃತೈರ್ದ್ವಿಜೈಃ ॥೩೭॥ ಅನ್ಯೇ ನಿರ್ಭಿನ್ನಬಾಹೂರುಶಿರಸೋ ರುಧಿರೋಕ್ಷಿತಾಃ । ರಾಜಾನೋ ದುದ್ರುವುರ್ಭೀತಾ ಬಲೇನ ಪರಿಘಾರ್ದಿತಾಃ ॥೩೮॥ ನಿಹತೇ ರುಕ್ಮಿಣಿ ಸ್ಯಾಲೇ

---

ಹಃ-ಪಣವು, ಜಿತಃ-ಗೆಲ್ಲಲ್ಪಟ್ಟದ್ದಾಗಿದೆ. ರುಕ್ಮೀ-ರುಕ್ಮಿರಾಯನು, ವಚಸೇನೈವ-ಮಾತಿನಿಂದಲೇ, ಮೃಷಾ-ಸಟೆಯನ್ನು, ವದತಿ-ಹೇಳುತ್ತಿರುವನೆಂದು, ನಭೋವಾಣೀ-ಆಕಾಶವಾಕ್ಯ, ಅಬ್ರವೀತ್-ನುಡಿದುದು ॥೩೩॥ ತಾಂ-ಆಗಗನವಾಣಿಯನ್ನು, ಅನಾದೃತ್ಯ-ಆದರಿಸದೆ, ವೈದರ್ಭಃ-ವಿದರ್ಭದೇಶ ಪತಿಯಾದ ರುಕ್ಮಿಯು, ದುಷ್ಟರಾಜನ್ಯಚೋದಿತಃ-ಕೆಟ್ಟವರಾದ ಅರಸುಗಳಿಂದ ಪ್ರೇರಿತನಾಗಿಯೂ, ಕಾಲಚೋದಿತಃ-ಮೃತ್ಯುವಿನಿಂದ ಪ್ರೇರಿತನಾಗಿಯೂ, ಸಂಕರ್ಷಣಂ-ಬಲರಾಮನಂ ಕುರಿತು, ಹಸನ್-ನಗುವನಾಗಿ, ಬಭಾಷೇ-ನುಡಿದನು ॥೩೪॥ ವನಗೋಚರಾಃ-ಕಾಡುಗಳಲ್ಲಿ ಕಾಣಿಸುವವರಾದ ಗೋಪಾಲಾಃ-ದನಗಳಂ ಮೇಯಿಸುವರಾದ, ಯೂಯಂ-ನೀವು, ಅಕ್ಷಕೋವಿದಾಃ-ಪಗಡೆಯಲ್ಲಿ ಜಾಣರು, ನೈವ-ಅಲ್ಲವೇ ಅಲ್ಲವು. ರಾಜಾನಃ-ದೊರೆಗಳು, ಅಕ್ಷೈಃ-ನೆತ್ತಗಳಿಂದಲೂ, ಬಾಣೈಶ್ಚ-ಅಂಬುಗಳಿಂದಲೂ, ದೀವ್ಯಂತಿ-ಆಡುತ್ತಿರುವರು ಭವಾದೃಶಾಃ-ನಿಮ್ಮಂಥಾವರು, ನ-ಹಾಗಲ್ಲವು ॥೩೫॥ ಏವಂ-ಹೀಗೆ, ರುಕ್ಮಿಣಾ-ರುಕ್ಮಿಯಿಂದ, ಅಧಿಕ್ಷಿಪ್ತಃ-ಅಲಕ್ಷ್ಯವಾಗಿ ಆಕ್ಷೇಪಿಸಿ ನುಡಿಯಲ್ಪಟ್ಟವನೂ, ರಾಜಭಿಶ್ಚ-ದೊರೆಗಳಿಂದಲೂ, ಉಪಹಾಸಿತಃ-ಹಾಸ್ಯಮಾಡಲ್ಪಟ್ಟವನೂ, ಆದ್ದರಿಂದ, ಕ್ರುದ್ಧಃ-ಸಿಟ್ಟುಂಟಾದ ಬಲದೇವನು, ಪರಿಘಂ-ಉಬ್ಬಲು ದೊಣ್ಣೆಯನ್ನು, ಉದ್ಯಮ್ಯ-ಎತ್ತಿಕೊಂಡು, ನೃಮ್ಣಸಂಸದಿ-ಕಲ್ಯಾಣದ ಸಭೆಯಲ್ಲಿರುವ, ತಂ-ಆರುಕ್ಮಿಯನ್ನು, ಜಘ್ನೇ-ಹೊಡೆದು ಕೊಂದನು ॥೩೬॥ ತರಸಾ-ವೇಗದಿಂದ, ಕಳಿಂಗರಾಜಂ-ಕಾಳಿಂಗನನ್ನು, ದಶಮೇಪದೇ-ಹತ್ತನೆಯ ಹೆಜ್ಜೆಯಲ್ಲಿ, ಗೃಹೀತ್ವಾ ಹಿಡಿದು, ಕ್ರುದ್ಧಃ-ಸಿಟ್ಟುಳ್ಳವನಾಗಿ, ಯಃ-ಯಾವವನು, ವಿವೃತೈಃ ದ್ವಿಜೈಃ-ತೆರೆಯಲ್ಪಟ್ಟ ಹಲ್ಲುಗಳಿಂದ, ಅಹಸತ್-ನಕ್ಕಿದ್ದನೋ, ತಸ್ಯ-ಅವನ, ದಂತಾನ್-ಹಲ್ಲುಗಳನ್ನು, ಅಪಾತಯತ್-ಉದಿರಿಸಿದನು ॥೩೭॥ ಬಲೇನ-ರಾಮನಿಂದ, ಪರಿಘಾರ್ದಿತಾಃ-ದೊಣ್ಣೆಯಿಂದ ಹೊಡೆಯಲ್ಪಟ್ಟ, ನಿರ್ಭಿನ್ನಬಾಹೂರುಶಿರಸಃ-ಒಡೆದುಹೋದ ತೋಳುಗಳೂ ತೊಡೆಗಳೂ ತಲೆಗಳೂ ಉಳ್ಳವರಾದ್ದರಿಂದ, ರುಧಿರೋಕ್ಷಿತಾಃ-ರಕ್ತದಿಂದ ಚೆಲ್ಲಲ್ಪಟ್ಟವರೂ, ಭೀತಾಃ-ಹೆದರಿದವರೂ ಆದ, ಅನ್ಯೇ ರಾಜಾನಃ-ಇತರರಾಜರೂ, ದುದ್ರುವುಃ-ಓಡಿಹೋದರು ॥೩೮॥

---

ಯುತಲಿರುವನೆಂದು ಹೇಳಿದನು ॥೩೩॥ ಆಗ ರುಕ್ಮಿರಾಯನು ಆಕಾಶ ವಾಣಿಯಂ ತಿರಸ್ಕರಿಸಿ ದುಷ್ಟರಾದ ಅರಸುಗಳಿಂದಲೂ ಮೃತ್ಯುವಿನಿಂದಲೂ ಪ್ರೇರಿಸಲ್ಪಟ್ಟವನಾಗಿ ಶ್ರೀ ಬಲರಾಮನಂ ಕುರಿತು ತಿರಸ್ಕಾರವಚನಮಂ ನುಡಿದನ ದೆಂತೆನೆ ॥೩೪॥ ಎಲೈ ಬಲರಾಮನೇ! ಗೋಪಾಲಕರಾಗಿ ವನಭೂಮಿಯಲ್ಲಿ ಸಂಚರಿಸುತಲಿರುವ ನೀವು ಪಗಡೆಯಾಟದಲ್ಲಿ ನಿಪುಣರಲ್ಲವು. ಅರಸುಗಳು ಪಗಡೆಯಿಂದಲೂ ಬಾಣಂಗಳಿಂದಲೂ ಕ್ರೀಡಿಸುವರೇ ಹೊರತು ನಿಮ್ಮಂತಾವರು ಅದಕ್ಕೆ ಯೋಗ್ಯರಲ್ಲವು ॥೩೫॥ ಎಂದು ಈರೀತಿಯಾಗಿ ತಿರಸ್ಕರಿಸಲ್ಪಟ್ಟ ಬಲದೇವನು ಅತಿಕ್ರೋಧಯುಕ್ತನಾಗಿ ಪರಿಘಾಯುಧದಿಂದ ಆ ವಿವಾಹ ಸಭೆಯಲ್ಲಿರುವ ರುಕ್ಮಿಯಂ ಸಂಹರಿಸಿದನು ॥೩೬॥ ಮತ್ತು ಶ್ರೀಬಲರಾಮನು ಯಾವ ಕಳಿಂಗನು ಹಲ್ಲುಗಳಂ ತೆರಕೊಂಡು ತನ್ನಂ ಹಾಸ್ಯಂಗೆಯ್ದನೋ ಅವನಂ ಹತ್ತನೆಯ ಹೆಜ್ಜೆಯಲ್ಲಿ ವೇಗದಿಂ ಹಿಡಿದು ಸಿಟ್ಟನಿಂ ಬಡಿದು ಹಲ್ಲುಗಳಂ ಮುರಿದನು ॥೩೭॥ ಮತ್ತು ಆಗ ಬಲರಾಮನಿಂ ಪರಿಘಾಯುಧದಿಂದ ಹೊಡೆಯಲ್ಪಟ್ಟವರಾದ್ದರಿಂದ ಛಿನ್ನಂಗಳಾದ ಭುಜಂಗಳು ತೊಡೆಗಳು ಶಿರಸ್ಸುಗಳು ಉಳ್ಳವರಾಗಿ ರಕ್ತಂಗಳಿಂದ ನೆನೆಯಲ್ಪಟ್ಟ ಶರೀರಂಗಳುಳ್ಳವರಾಗಿ ಮಿಕ್ಕ ಅರಸುಗಳೆಲ್ಲರೂ ಭೀತರಾಗಿ ಓಡಿಹೋದರು ॥೩೮॥ ಬಳಿಕ ಕೃಷ್ಣನು ತನಗೆ ಶಾಲಕನಾದ ರುಕ್ಮಿಯು ಸಂಹೃತನಾಗುತಲೂ ರುಕ್ಮಿಣಿಗೆ ಬಲರಾಮನಲ್ಲಿ ಪ್ರೇಮಭಂಗ ವುಂಟಾದೀತೆಂಬ ಶಂಕೆಯಿಂದ ಒಳ್ಳೇ ಮಾತನ್ನಾದರೂ ಅಲ್ಲದ ಮಾತನ್ನಾ

ನಾಬ್ರವೀತ್ಸಾಧ್ವಸಾಧುವಾ | ರುಕ್ಮಿಣೀಬಲಯೋರಾಜನ್ಸ್ನೇಹಭಂಗಭಯಾದ್ಧರಿಃ ॥೪೩॥ ತತೋನಿರುದ್ಧಂಸಹಸೂರ್ಯಯಾವರಂರಥಂಸಮಾರೋಪ್ಯಯಯುಃಕುಶಸ್ಥಲೀಂ | ರಾಮಾದಯೋಭೋಜಕಟಾದ್ದಶಾರ್ಹಾಃಸಿದ್ಧಾಖಿಲಾರ್ಥಾಮಧುಸೂದನಾಶ್ರಯಾಃ ॥ ॥೪೪॥

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಏಕಷಷ್ಟಿತಮೋಽಧ್ಯಾಯಃ.

---

ಶ್ಯಾಲೇ-ಹೆಂಡತಿಯ ಸೋದರನಾದ, ರುಕ್ಮಿಣಿ-ರುಕ್ಮಿರಾಯನು, ನಿಹತೇಸತಿ-ಕೊಲ್ಲಲ್ಪಟ್ಟವನಾಗುತಲೂ, ಹರಿಃ-ಕೃಷ್ಣನು, ರುಕ್ಮಿಣೀಬಲಯೋಃ-ರುಕ್ಮಿಣಿಗೂ ರಾಮನಿಗೂ, ಸ್ನೇಹಭಂಗಭಯಾತ್-ಪ್ರೀತಿಯು ಕಟ್ಟೀತೆಂಬ ಭೀತಿಯಿಂದ, ಸಾಧ್ವಸಾಧುವಾ-ಸರಿಯೆಂದಾಗಲೀ ಸರಿಯಲ್ಲವೆಂದಾಗಲೀ, ನಾಬ್ರವೀತ್-ಹೇಳಲಿಲ್ಲವು. ರಾಜನ್-ಪರೀಕ್ಷಿದನೇ ॥೪೩॥ ತತಃ-ಆಮೇಲೆ, ಮಧುಸೂದನಾಶ್ರಯಾಃ-ಕೃಷ್ಣ ಅವಲಂಬನವುಳ್ಳ, ಸಿದ್ಧಾಖಿಲಾರ್ಥಾಃ-ಸಫಲವಾದ ಸಕಲಪ್ರಯೋಜನಂಗಳುಳ್ಳ, ರಾಮಾದಯಃ-ಬಲಭದ್ರನು ಮೊದಲಾದ, ದಾಶಾರ್ಹಾಃ-ಯಾದವರು, ಅನಿರುದ್ಧಂ-ಪ್ರದ್ಯುಮ್ನನಮಗನಾದ. ವರಂ-ಮದವಣಿಗನನ್ನು, ಸೂರ್ಯಯಾಸಹ-ಹೊಸಮದವಣಿತಿಯೊಡನೆ, ರಥಂಸಮಾರೋಪ್ಯ-ತೇರನೇರಿಸಿಕೊಂಡು, ಭೋಜಕಟಾತ್-ಭೋಜಕಟ ನಗರಪತ್ತಣಂ ಹೊರಟು, ಕುಶಸ್ಥಲೀಂ-ದ್ವಾರಕೆಯನ್ನು ಯಯುಃ-ಸೇರಿದರು ॥೪೪॥

ಇಂತೆಂಬಲ್ಲಿಗೆ ಭಾಗವತ ಪ್ರತಿಶಬ್ದಾರ್ಥಬೋಧಿನಿಯೆಂಬ ಟೀಕೆಯಲ್ಲಿ ದಶಮಸ್ಕಂಧದೊಳು ೬೧ನೆಯ ಅಧ್ಯಾಯಂ ಮುಗಿದುದು

---

ದರೂ ನುಡಿಯದೆ ಸುಮ್ಮನಿದ್ದನು ॥೪೩॥ ಅನಂತರದಲ್ಲಿ ಕೃಷ್ಣನೇ ಆಶ್ರಯನಾಗಿ ವುಳ್ಳ ರಾಮಾದಿಯಾದವರು ಶತ್ರುವಧಾದಿ ಸರ್ವೇಷ್ಟಾರ್ಥಂಗಳಂ ಪಡೆದವರಾಗಿ ವರನಾದ ಅನಿರುದ್ಧನಂ ಮದವಣಿತಿಯಾದ ರೋಚನಾದೇವಿಯೊಡನೆ ರಥವನ್ನೇರಿಸಿಕೊಂಡು ಭೋಜಕಟವೆಂಬ ಪಟ್ಟಣದ ದೆಸೆಯಿಂ ಬಂದು ದ್ವಾರಕಾನಗರಕ್ಕೆ ಪ್ರವೇಶವಂ ಮಾಡಿದರು ॥ ॥೪೪॥

ಇಂತು ಶ್ರೀಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸಿದನೆಂದು ಸೂತಪೌರಾಣಿಕನು ನೈಮಿಶಾರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಪೇಳಿದನೆಂಬಲ್ಲಿಗೆ- ಶ್ರೀಮನ್ಮಹೀಶೂರಪುರವರಾಧೀಶ ಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜವಿರಚಿತಮಾದ ಶ್ರೀಕೃಷ್ಣರಾಜವಾಣೀವಿಲಾಸಮೆಂಬ ಶ್ರೀಭಾಗವತಪುರಾಣದ ಕರ್ಣಾಟಭಾಷಾವ್ಯಾಖ್ಯಾನದೊಳು ದಶಮಸ್ಕಂಧದಲ್ಲಿ ೬೧ನೆಯ ಅಧ್ಯಾಯವು ಸಂಪೂರ್ಣಮಾದುದು.



ಶ್ರೀಶುಕಃ॥ ಬಾಣಃಪುತ್ರಶತಜ್ಯೇಷ್ಠೋಬಲೇರಾಸೀನ್ಮಹಾತ್ಮನಃ । ಸಹಸ್ರಬಾಹುರ್ವಾದ್ಯೇನತಾಂಡವೇ ತೋಷಯನ್ಮೃಡಮ್॥೧॥ ಭಗವಾನ್ಸರ್ವಭೂತೇಶಃಶರಣ್ಯೋಭಕ್ತವತ್ಸಲಃ । ವರೇಣಛಂದಯಾಮಾಸ ಸತಂವವ್ರೇಪುರಾಧಿಪಂ ॥೨॥ ಸಏಕದಾಹಗಿರಿಶಂಪಾರ್ಶ್ವಸ್ಥಂವೀಕ್ಷ್ಯದುರ್ಮದಃ । ಕಿರೀಟೇನಾರ್ಕ ವರ್ಣೇನಸಂಸ್ಪೃಶಂಸ್ತತ್ಪದಾಂಬುಜಂ ॥೩॥ ನಮಸ್ಯೇತ್ವಾಂಮಹಾದೇವಲೋಕಾನಾಂಗುರುಮೀಶ್ವ ರಂ । ಪುಂಸಾಮಪೂರ್ಣಕಾಮಾನಾಂಕಾಮಪೂರಾಮರಾಂಘ್ರಿಪಂ ॥೪॥ ದೋಸ್ಸಹಸ್ರಂತ್ವಯಾದ

---

೬೩ನೆಯ ಅಧ್ಯಾಯದ ಪ್ರತಿಪದಟೀಕೆ-

[ಶುಕವಚನವು] ಮಹಾತ್ಮನಃ-ಮಹಾಬುದ್ಧಿಯುಳ್ಳ, ಬಲೇಃ-ಬಲಿಚಕ್ರವರ್ತಿಯ, ಪುತ್ರಶತಜ್ಯೇಷ್ಠಃ-ನೂರುಮಂದಿಕುಮಾರರಲ್ಲಿ ಹಿರಿಯನಾದ, ಬಾಣಃ-ಬಾಣಾಸುರನು, ಸಹಸ್ರಬಾಹುಃ-ಸಾವಿರ ತೋಳುಗಳುಳ್ಳವನು, ಆಸೀತ್-ಇದನು, ವಾದ್ಯೇನ-ವಾದ್ಯನಾದದಿಂದ, ತಾಂಡವೇ-ನರ್ತನದಲ್ಲಿ, ಮೃಡಂ-ಶಂಕರನನ್ನು, ಅತೋಷಯತ್-ಸಂತೋಷಪಡಿಸಿದನು॥೧॥ ಸರ್ವಭೂತೇಶಃ-ಸಕಲಪ್ರಾಣಿಗಳಿಗೊಡೆಯನಾದ, ಶರಣ್ಯಃ ರಕ್ಷಕನಾಗಿ ಸೇವಿಸಲ್ಪಡತಕ್ಕವನಾದ, ಭಕ್ತವತ್ಸಲಃ-ಸೇವಕರಲ್ಲಿ ದಯೆಯುಳ್ಳವನಾದ, ಭಗವಾನ್-ಷಡ್ಗುಣೈಶ್ವರ್ಯ ಸಂಪನ್ನನಾದ ಪರಮೇಶ್ವರನು, ವರೇಣ-ಮನೋರಥದಿಂದ, ಛಂದಯಾಮಾಸ ಬಯಸುವಂತೆ ಮಾಡಿದನು ಸಃ-ಆಬಾಣನು, ತಂ-ಆಮೃಡನನ್ನು, ಪುರಾಧಿಪಂ-ತನ್ನನಗರವಂಪಾಲಿಸುವವನನ್ನಾಗಿ, ವವ್ರೇ-ಬಯಸಿದನು॥೨॥ ಸಃ-ಆಬಾಣನು, ದುರ್ಮದಃ-ಕೆಟ್ಟ ಕೊಬ್ಬುಳ್ಳವನಾಗಿ, ಏಕದಾ-ಒಂದುಸಮಯದಲ್ಲಿ ಪಾರ್ಶ್ವಸ್ಥಂ-ಪಕ್ಕದಲ್ಲಿರುವ, ಗಿರಿಶಂ-ಶಿವನನ್ನು, ವೀಕ್ಷ್ಯ-ನೋಡಿ, ಅರ್ಕವರ್ಣೇನ-ಸೂರ್ಯನಬಣ್ಣವುಳ್ಳ, ಕಿರೀಟೇನ-ಶಿರೋಭೂಷಣದಿಂದ, ತತ್ಪದಾಂಬುಜಂ-ಆಶಂಕರನ ಅಡಿದಾವರೆಯನ್ನು, ಸಂಸ್ಪೃಶನ್-ಸೋಂಕುವವನಾಗಿ, ಆಹ-ನುಡಿದನು ॥೩॥ ಮಹಾದೇವ-ದೊಡ್ಡದೇವರೇ! ಲೋಕಾನಾಂ-ಹದಿನಾಲ್ಕುಲೋಕಗಳ ಪ್ರಾಣಿಗಳಿಗೂ, ಗುರುಂ-ಅಜ್ಞಾನಪರಿಹಾರಕನಾಗಿಯೂ ಪೂಜ್ಯನಾಗಿಯೂ, ಈಶ್ವರಂ-ನಿಯಾಮಕನಾಗಿಯೂ, ಅಪೂರ್ಣಕಾಮಾನಾಂ-ತುಂಬದೆಯಿರುವ ಮನೋರಥಂಗಳುಳ್ಳ, ಪುಂಸಾಂ-ಪುರುಷರಿಗೆ, ಕಾಮಪೂರಾಮರಾಂಘ್ರಿಪಂ-

---

## ೬೩ನೆಯ ಅಧ್ಯಾಯವು.

ಶ್ರೀಧರೀಯಶ್ಲೋಕಃ॥ ತ್ರಿಷಷ್ಟಿತಮೇಪ್ರೋಕ್ತಂ ಅನಿರುದ್ಧಸ್ಯರೋಧನಂ । ಕನ್ಯಾಯಾಂರಮಮಾಣಸ್ಯಬಾಣೇನಬಹುಬಾಹುನಾ ॥೧॥ ॥ಟೀ॥ ಅರವತ್ತಮೂರನೆಯ ಅಧ್ಯಾಯದಲ್ಲಿ ಕನ್ಯೆಯಾದ ತನ್ನ ಪುತ್ರಿಯೊಡನೆ ರಮಿಸುತ್ತಲಿರುವ ಅನಿರುದ್ಧನಂ ಸಹಸ್ರಬಾಹುಗಳುಳ್ಳ ಬಾಣಾಸುರನು ಅಡ್ಡಗಟ್ಟಿಸಿದನೆಂಬ ಅರ್ಥವಂ ಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸುವನಂತೆನೆ;-

ಮೊದಲು ಪರೀಕ್ಷಿದ್ರಾಯನು ಶುಕಮುನಿಯಂ ಪ್ರಶ್ನೆಗೆಯ್ವನು ಎಲೈ ಶುಕಾಚಾರ್ಯನೇ! ಅನಿರುದ್ಧನು ಬಾಣಾಸುರನ ಪುತ್ರಿಯಾದ ಉಷಾದೇವಿಯಂ ಮದುವೆಯಾಗುತ್ತಿರಲು ಆಗ ಕೃಷ್ಣರುದ್ರರಿಗೆ ಪರಸ್ಪರಭಯಂಕರವಾದ ಮಹಾಯುದ್ಧವು ಉಂಟಾಯಿತೆಂದು ॥‡॥ ಕೇಳಿಯಿರುವುದಂ ಸಮಗ್ರವಾಗಿ ನಿರೂಪಿಸುವನಾಗೆಂಬ ರಾಜವಚನವಂ ಕೇಳಿ ಶುಕಮುನಿಯು ಪೇಳುವನು ॥೧॥ ಅರಸೇ ಕೇಳು, ಮಹಾತ್ಮನಾದ ಬಲಿಯ ನೂರ್ವರು ಪುತ್ರರಲ್ಲಿ ಬಾಣನು ಜ್ಯೇಷ್ಠನು, ಸಾವಿರ ತೋಳುಗಳುಳ್ಳ ಅವನು ಮಹಾ ತಾಂಡವಸಮಯದಲ್ಲಿ ವಾದ್ಯಗಳಿಂದ ಪರಮೇಶ್ವರನಂ ಸಂತೋಷ ಪಡಿಸಿದನು ॥೧॥ ಬಳಿಕ ಸರ್ವಭೂತ ನಿಯಾಮಕನಾದ ಶರಣ್ಯನಾದ ಭಕ್ತವತ್ಸಲನಾದ ಪರಮೇಶ್ವರನು ಬಾಣನಂ ವರಪ್ರದಾನದಿಂದ ಸಂತೋಷಪಡಿಸಿದನು. ಆ ಬಾಣನು ಪರಮೇಶ್ವರನು ಕುರಿತು ನೀನು ನನ್ನ ಪುರಕ್ಕೆ ಪಾಲಕನಾಗಬೇಕೆಂದು ವರವ ಬೇಡಿಕೊಂಡನು ॥೨॥ ಆಮೇಲೆ ಬಾಣನು ಒಂದು ಸಮಯದಲ್ಲಿ ಪರಾಕ್ರಮದಿಂದ ಅತಿಮತ್ತನಾಗಿ ಪಾರ್ಶ್ವದಲ್ಲಿರುವ ಪರಮೇಶ್ವರನು ಕುರಿತು ತನ್ನ ಸೂರ್ಯವರ್ಣವಾದ ಕಿರೀಟದಿಂದ ಹರನ ಪಾದಪದ್ಮವ ಸೋಂಕಿ ಈರೀತಿಯಾಗಿ ನುಡಿದನು ॥೩॥ ಮಹಾದೇವನೇ ಲೋಕಗುರುವಾಗಿ ಈಶ್ವರನಾಗಿ ಭಕ್ತರ ಮನೋರಥಂಗಳು ಪೂರೈಸುವಲ್ಲಿ ಕಲ್ಪವೃಕ್ಷವಾಗಿರು

ತ್ತಂ ಪರಂ ಭಾರಾಯ ಮೇಽಭವತ್ । ತ್ರಿಲೋಕ್ಯಾಂ ಪ್ರತಿಯೋದ್ಧಾರಂ ನ ಲಭೇ ತ್ವದೃತೇ ಸಮಂ ॥೫॥ ಕಂಡೂತ್ಯಾ ನಿಭೃತೈರ್ದೋರ್ಭಿರ್ಯುಯುತ್ಸುರ್ದಿಗ್ಗಜಾನಹಂ । ಆದ್ಯಾಯಾಂ ಚೂರ್ಣಯನ್ನದ್ರೀನ್ ಭೀತಾಸ್ತೇಽಪಿ ಪ್ರದುದ್ರುವುಃ ॥೬॥ ತಚ್ಛ್ರುತ್ವಾ ಭಗವಾನ್ ಕ್ರುದ್ಧಃ ಕೇತುಸ್ತೇ ಭಜ್ಯತೇ ಯದಾ । ತ್ವದ್ದರ್ಪಘ್ನಂ ಭವೇನ್ಮೂಢ ಸಂಯುಗಂ ಮತ್ಸಮೇನ ತೇ ॥೭॥ ಇತ್ಯುಕ್ತಃ ಕುಮತಿರ್ಹೃಷ್ಟಃ ಸ್ವಗೃಹಂ ಪ್ರಾವಿಶ

ಉಷಾಪರಿಣಯಕಥಾ ಪ್ರಾರಂಭಃ ಷಟ್ಕಃ.

ನ್ನೃಪ । ಪ್ರತೀಕ್ಷನ್ ಗಿರಿಶಾದೇಶಂ ಸ್ವವೀರ್ಯನಶನಂ ಕುಧೀಃ ॥೮॥ ತಸ್ಯೋಷಾ ನಾಮ ದುಹಿತಾ ಸ್ವಪ್ನೇ ಪ್ರಾದ್ಯುಮ್ನಿನಾ ರತಿಂ । ಕನ್ಯಾಲಭತ ಕಾಂತೇನ ಪ್ರಾಗದೃಷ್ಟಶ್ರುತೇನ ಸಾ ॥೯॥ ಸಾ ತತ್ರ ತಮಪಶ್ಯಂ

ಕಾಮುಗಳನ್ನು ಪೂರೈಸುವುದಕ್ಕೆ ಕಲ್ಪವೃಕ್ಷವಾಗಿರುವ, ತ್ವಾಂ-ನಿನ್ನನ್ನು, ನಮಸ್ಯೇ-ನಮಸ್ಕಾರಂ ಗೆಯ್ವೆನು. ॥೪॥ ತ್ವಯಾ-ನಿನ್ನಿಂದ, ದತ್ತಂ-ಕೊಡಲ್ಪಟ್ಟ ದೋಸ್ಸಹಸ್ರಂ-ತೋಳುಗಳ ಸಾವಿರವು, ಮೇ-ನನಗೆ, ಭಾರಾಯ ಪರಂ-ಹೊರೆಗೆ ಮಾತ್ರವೇ, ಅಭವತ್-ಆಯಿತು. ತ್ರಿಲೋಕ್ಯಾಂ-ಮೂರು ಲೋಕಗಳಲ್ಲಿಯೂ, ತ್ವದೃತೇ-ನಿನ್ನಂ ಹೊರತು, ಸಮಂ-ನನಗೆ ಸರಿಯಾದ, ಪ್ರತಿಯೋದ್ಧಾರಂ-ಇದಿರಿಸಿ ಹೋರುವವರನ್ನು, ನಲಭೇ-ಪಡೆಯದೆಯಿರುವೆನು ॥೫॥ ಅಹಂ-ನಾನು, ಕಂಡೂತ್ಯಾ-ತುರಿಯಿಂದ, ನಿಭೃತೈಃ-ಭರಿಸಲ್ಪಟ್ಟಿರುವ, ದೋರ್ಭಿಃ-ತೋಳುಗಳಿಂದ, ದಿಗ್ಗಜಾನ್-ದಿಕ್ಕುಗಳ ಆನೆಗಳನ್ನು, ಯುಯುತ್ಸುಃ-ಕಾದಲೆಳಸಿ, ಆದ್ಯಾ-ಈಗ, ಅದ್ರೀನ್-ಬೆಟ್ಟಗಳನ್ನು, ಚೂರ್ಣಯನ್-ಪುಡಿಮಾಡುವನಾಗಿ, ಆಯಾಂ-ಬಂದೆನು, ತೇಪಿ-ಆ ದಿಗ್ಗಜಂಗಳೂ ಕೂಡ, ಭೀತಾಃ-ಹೆದರಿದವಾಗಿ, ಪ್ರದುದ್ರುವುಃ-ಓಡಿಹೋದವು ॥೬॥ ತತ್-ಆ ಮಾತನ್ನು, ಶ್ರುತ್ವಾ-ಕೇಳಿ, ಕ್ರುದ್ಧಃ-ಸಿಟ್ಟುಂಟಾದ, ಭಗವಾನ್-ಸರ್ವಜ್ಞನಾದ ರುದ್ರನು, ಮೂಢ-ಅಜ್ಞನೇ! ತೇ-ನಿನ್ನ, ಕೇತುಃ-ಧ್ವಜವು, ಯದಾ-ಯಾವಾಗ, ಭಜ್ಯತೇ-ಮುರಿಯುವುದೋ, ತದಾ-ಆಗ, ಮತ್ಸಮೇನ-ನನ್ನೊಡನೆ ಸಮಾನನಾದ ವಿಷ್ಣುವಿನಿಂದ, ತೇ-ನಿನಗೆ, ತ್ವದ್ದರ್ಪಘ್ನಂ-ನಿನ್ನ ಗರ್ವವಂ ಮುರಿಯುವ, ಸಂಯುಗಂ-ಕಾಳಗವು, ಭವೇತ್-ಆದೀತು ॥೭॥ ನೃಪನೇ! ಇತ್ಯುಕ್ತಃ-ಹೀಗೆ ರುದ್ರನಿಂದ ಹೇಳಲ್ಪಟ್ಟವನಾದರೂ, ಕುಮತಿಃ-ದುರ್ಬುದ್ಧಿಯುಳ್ಳ ಬಾಣನು, ಹೃಷ್ಟಃ-ಸಂತೋಷ ಹುಟ್ಟಿದವನಾಗಿ, ಗಿರಿಶಾದೇಶಂ-ಶಿವನ ಅಜ್ಞೆಯನ್ನೂ, ಸ್ವವೀರ್ಯನಶನಂ-ತನ್ನ ಪರಾಕ್ರಮ ಮದನಾಶವನ್ನೂ, ಪ್ರತೀಕ್ಷನ್-ಇದಿರುನೋಡುತ್ತ, ಕುಧೀಃ-ಕುತ್ಸಿತಜ್ಞಾನವುಳ್ಳವನಾಗಿ, ಸ್ವಗೃಹಂ-ತನ್ನ ಮನೆಯನ್ನು, ಪ್ರಾವಿಶತ್-ಹೊಕ್ಕನು ॥೮॥ ತಸ್ಯ-ಆ ಬಾಣನ, ದುಹಿತಾ-ಮಗಳಾದ, ಉಷಾನಾಮ-ಉಷೆಯೆಂದು ಪ್ರಸಿದ್ಧಳಾದ, ಸಾ ಕನ್ಯಾ-ಆ ಹೆಂಣು, ಪ್ರಾಕ್-ಮುಂಚೆ, ಅದೃಷ್ಟಶ್ರುತೇನ-ನೋಡಲ್ಪಡದವನೂ ಕೇಳಲ್ಪಡದವನೂ ಆದ ಪ್ರಾದ್ಯುಮ್ನಿನಾ-ಪ್ರದ್ಯುಮ್ನನ ಮಗನಾದ ಅನಿರುದ್ಧನೆಂಬ, ಕಾಂತೇನ-ಗಂಡನಿಂದ, ಸ್ವಪ್ನೇ-ಕನಸಿನಲ್ಲಿ, ರತಿಂ-ಭೋಗವನ್ನು, ಅಲಭತ-ಪಡೆ

ವ ನಿನ್ನಂ ನಮಸ್ಕರಿಸುತಲಿರ್ದೇನೆ ॥೪॥ ಯಾವ ಕಾರಣದಿಂ ಮೂರು ಲೋಕಂಗಳಲ್ಲಿಯೂ ನಿನ್ನೊಬ್ಬನಂ ಹೊರತು ಸಮನಾಗಿ ಇದಿರಾಂತು ಯುದ್ಧಂಗೆಯ್ವ ಮತ್ತೊಬ್ಬ ಪುರುಷನಂ ನಾನು ಕಾಣಲಿಲ್ಲವೋ ಆ ಕಾರಣದಿಂದ ನನ್ನ ಭುಜಸಹಸ್ರವು ಭಾರಮಾತ್ರವೇ ಫಲವುಳ್ಳದ್ದಾಗಿರುವುದು ॥೫॥ ಕೊಬ್ಬಿನಿಂದ ತುರಿಸುತಲಿರುವ ಈ ತುಂಬಿದ ತೋಳುಗಳಿಂದ ನಾನು ಯುದ್ಧವಂ ಗೆಯ್ಯಲಿಚ್ಛೆಯುಳ್ಳವನಾಗಿ ಬೆಟ್ಟಂಗಳಂ ಪುಡಿಮಾಡಿ, ದಿಗ್ಗಜಂಗಳಬಳಿಗೆ ನುಗ್ಗುತಲೂ ಅವು ಹೆದರಿ ಯೋಡಿದವು ॥೬॥ ಎಂಬ ಬಾಣವಚನವಂ ಕೇಳಿ ಈಶ್ವರನು ಕೋಪಯುಕ್ತನಾಗಿ ಎಲಾ ಮೂಢನೇ! ಯಾವಾಗ ನಿನ್ನ ರಥಧ್ವಜವು ಭಗ್ನವಾಗುವುದೋ ಆಗ ನನಗೆ ಸಮಾನನಾದ ಪುರುಷನಿಂದ ನಿನ್ನ ಮದವಂ ಪರಿಹರಿಸುವ ಯುದ್ಧವು ನಿನಗುಂಟಾಗುವುದೆಂದು ಹೇಳಿದನು ॥೭॥ ಅನಂತರದಲ್ಲಿ ದುರ್ಬುದ್ಧಿಯುಳ್ಳ ಬಾಣಾಸುರನು ಶ್ರೀಶಿವನಿಂದ ನಿರೂಪಿಸಲ್ಪಟ್ಟವನಾಗಿ ಸಂತೋಷಿಸುತ್ತ ತನ್ನ ಗೃಹವಂ ಪ್ರವೇಶಿಸಿ ತನ್ನ ಮದಕ್ಕೆ ನಾಶಕರವಾದ ಧ್ವಜಭಂಗವು ಯಾವಾಗ ಉಂಟಾದೀತೆಂದು ನಿರೀಕ್ಷಿಸುತಲಿದ್ದನು ॥೮॥ ಹೀಗಿರುವಲ್ಲಿ ಕನ್ಯೆಯಾದ ಉಷಾದೇವಿಯೆಂಬ ಬಾಣಪುತ್ರಿಯು ಮನೋಹರನಾದ ಪೂರ್ವದಲ್ಲಿ ನೋಡಿಯೂ ಕೇಳಿಯೂ ಅರಿಯದ ಅನಿರುದ್ಧನೊಡನೆ ಸ್ವಪ್ನದಲ್ಲಿ ರತಿಯಂ ಪಡೆದಳು ॥೯॥ ಆಮೇಲೆ ಉಷೆಯು ಎಚ್ಚರು

ತೀಕ್ವಾಸಿಕಾಂತೇತಿವಾದಿನೀ | ಸಖೀನಾಂಮಧ್ಯಉತ್ತಸ್ಥೌವಿಹ್ವಲಾವ್ರೀಡಿತಾಭೃಶಮ್ ||೧೦|| ಬಾಣಸ್ಯಮಂತ್ರೀಕುಂಭಾಂಡಶ್ಚಿತ್ರಲೇಖಾಚತತ್ಸುತಾ ಸಖ್ಯಪೃಚ್ಛತ್ಸಖೀಂಭೂಷಾಂಕೌತೂಹಲ. ಸಮನ್ವಿತಾ ||೧೧|| ಕಾಂತ್ವಂಮೃಗಯಸೆಸುಭ್ರು ಕೀದೃಶಸ್ತೆಮನೋರಥಃ | ಹಸ್ತಗ್ರಾಹಂನತೇದ್ಯಾಪಿರಾಜಪುತ್ರ್ಯುಪಲಕ್ಷಯೆ ೧೨||ಉಷಾ|| ದೃಷ್ಟಃಕಶ್ಚಿನ್ನರಸ್ಸ್ವಪ್ನೆಶ್ಯಾಮಃಕಮಲಲೋಚನಃ | ಪೀತವಾಸಾಬೃಹದ್ಬಾಹುರ್ಯೋಷಿತಾಂಹೃದಯಂಗಮಃ ||೧೩|| ತಮಹಂಮೃಗಯೇಕಾಂತಂಪಾಯಯಿತ್ವಾಧರಂಮಧು | ಕ್ವಾಪಿಯಾತಸ್ಸ್ಪೃಹಯತೀಂಕ್ಷಿಪ್ತ್ವಾಮಾಂವೃಜಿನಾರ್ಣವೆ ||೧೪||ಚಿತ್ರಲೇಖಾ|| ವ್ಯಸನಂತೆಪಕರ್ಷಾಮಿತ್ರಿಲೋಕ್ಯಾಂಯದಿಭಾವ್ಯತೆ | ತಮಾನೆಷ್ಯೆನರಂಯಸ್ತೆಮನೋಹ

---

ಹಳು ||೯|| ಸಾ-ಆಯುಷೆಯು, ತತ್ರ-ಆಹಾಸಿಗೆಯಲ್ಲಿ ತಂ-ಅನಿರುದ್ಧನನ್ನು ಅಪಶ್ಯಂತೀ-ಕಾಣದೆಯಿರುವಳಾಗಿ ಕಾಂತ-ಗಂಡನೇ! ಕ್ವಾಸಿ-ಎಲ್ಲಿರುವಿ? ಇತಿ-ಎಂದು, ವಾದಿನೀ-ಹೇಳುವಳಾಗಿ, ಸಖೀನಾಂ-ಗೆಳತಿಯರ, ಮಧ್ಯೆ-ನಡುವೆ, ಉತ್ತಸ್ಥೌ-ನಿದ್ರೆಯಿಂದೆದ್ದಳು. ಆದರಿಂದ, ವಿಹ್ವಲಾ-ಚಿತ್ತದ ಅಸ್ವಾಧೀನತೆಯುಳ್ಳವಳೂ, ಭೃಶಂ-ಅಧಿಕವಾಗಿ, ವ್ರೀಡಿತಾ-ನಾಚಿಕೆಹುಟ್ಟಿದವಳೂ, ಆದಳು||೧೦||ಬಾಣಸ್ಯ-ಬಾಣಾಸುರನ, ಮಂತ್ರೀ-ಪ್ರಧಾನಾಧಿಕಾರಿಯು, ಕುಂಭಾಂಡಃ-ಕುಂಭಾಂಡ ನೆಂಬವನಿದ್ದನು, ತತ್ಸುತಾ-ಅವನ ಮಗಳು ಚಿತ್ರಲೇಖಾಚ-ಚಿತ್ರಲೇಖೆಯೆಂಬವಳೂ, ಸಖೀ-ಗೆಳತಿಯಾದ್ದರಿಂದ, ಕೌತೂಹಲಸಮನ್ವಿತಾ-ಉತ್ಸಾಹದಿಂದ ಕೂಡಿದವಳಾಗಿ, ಸಖೀಂ-ಗೆಳತಿಯಾದ, ಉಷಾಂ-ಬಾಣನ ಮಗಳನ್ನು ಅಪೃಚ್ಛತ್-ಬೆಸಗೊಂಡಳು ||೧೧|| ಸುಭ್ರು-ಸುಂದರಿಯಾದ ರಾಜಪುತ್ರಿಯೇ! ಕಾಂತಂ-ಗಂಡನನ್ನು ಮೃಗಯಸೇ-ಹುಡುಕುತ್ತಿರುವಿ, ತೇ-ನಿನ್ನ, ಮನೋರಥಃ-ಬಯಕೆಯು, ಕೀದೃಶಃ-ಎಂತಿಯದು? ತೇ-ನಿನ್ನಗೆ, ಹಸ್ತಗ್ರಾಹಂ-ಕೈಹಿಡಿದಗಂಡನನ್ನು, ಅದ್ಯಾಪಿ-ಈಗಲೂ, ನೋಪಲಕ್ಷಯೇ ಕಾಣೆನು ||೧೨|| (ಉಷಾ ವಚನವು.) ಶ್ಯಾಮಃ-ಕೊಂಚ ಕಪ್ಪುಳ್ಳ ನಡುವಾದ್ರಿಯದವನೂ, ಕಮಲಲೋಚನಃ-ತಾವರೆಗಳಂತೆ ಕಂಗಳುಳ್ಳವನೂ ಪೀತವಾಸಾಃ-ಪೀತಾಂಬರವುಳ್ಳವನೂ, ಬೃಹದ್ಬಾಹುಃ-ಹೊಡ್ಡತೋಳುಗಳುಳ್ಳವನೂ, ಯೋಷಿತಾಂ-ಹೆಂಗಳ, ಹೃದಯಂಗಮಃ-ಮನಸ್ಸಿನಲ್ಲಿ,ಪ್ರವೇಶಿಸಲುಳ್ಳವನೂ, ಆದ, ಕಶ್ಚಿನ್ನರಃ-ಯಾರೋಮನುಷ್ಯ ನೋರ್ವನು, ಸ್ವಪ್ನೇ-ಕನಸಿನಲ್ಲಿ, ದೃಷ್ಟಃ-ನೋಡಲ್ಪಟ್ಟನು. ಮಧು-ಸೀಯಾದ, ಅಧರಂ-ತುಟಿಯನ್ನು, ಪಾಯಯಿತ್ವಾ-ಕುಡಿಹಿಸಿ, ಸ್ಪೃಹಯತೀಂ-ಅಪೇಕ್ಷಿಸುತ್ತಿರುವ, ಮಾಂ-ನನ್ನನ್ನು, ವೃಜಿನಾರ್ಣವೇ-ಪಾಪದ ಕಡಲಿನಲ್ಲಿ,ಕ್ಷಿಪ್ತ್ವಾ-ಹಾಕಿ, ಕ್ವಾಪಿ-ಎಲ್ಲಿಯೋ,ಯಾತಃ-ಹೋದನು, ತಂಕಾಂತಂ-ಆಗಂಡನನ್ನು, ಮೃಗಯೇ-ಹುಡುಕುತ್ತಿರುವೆನು ||೧೪||(ಚಿತ್ರಲೇಖಾವಚನವು.)ತೇ-ನಿನ್ನ,ವ್ಯಸನಂ-ದುಃಖವನ್ನು,

---

ಗೊಂಡು ಅಲ್ಲಿ ಅನಿರುದ್ಧನಂ ಕಾಣದೆ ಕಾಂತನೇ ಎಲ್ಲಿರುವಿ? ಎಂದು ನುಡಿಯುತ ಅತ್ಯಂತ ಲಜ್ಜಿತಳಾಗಿ ಸಖಿಯರ ಮಧ್ಯದಲ್ಲಿ ಮೇಲಕ್ಕೆದ್ದಳು ||೧೦|| ಆಗ ಬಾಣನ ಮಂತ್ರಿಯಾದ ಕುಂಭಾಂಡಕನ ಮಗಳು ಚಿತ್ರಲೇಖೆಯೆಂಬ ಸಖಿಯು ಕುತೂಹಲದಿಂದ ತನ್ನ ಸಖಿಯಾದ ಉಷೆಯಂ ಕುರಿತು ಈ ರೀತಿಯಾಗಿ ಪ್ರಶ್ನೆಗೈದ್ದಳು ||೧೧|| ಸಖಿಯೇ! ನೀನು ಕಾಂತನಂ ಹುಡುಕುವಿ, ನಿನ್ನ ಮನೋಗತನಾದವನು ಎಂತವನು, ರಾಜಪುತ್ರಿಯೇ ಈಗಲೂ ನಿನ್ನ ಪತಿಯಂ ನಾನು ಕಾಣೆನು ||೧೨|| ಇಂತೆಂಬವಳಂ ವಚನವ ಕೇಳಿ ಉಷೆಯು ನುಡಿದಳು ಸಖಿಯೆ! ಸ್ವಪ್ನದಲ್ಲಿ ಶ್ಯಾಮಲ ವರ್ಣನಾದ ಕಮಲಂಗಳಂತೆ ನೇತ್ರಂಗಳುಳ್ಳ ಪೀತಾಂಬರವನ್ನುಟ್ಟ ದೀರ್ಘಭುಜಗಳುಳ್ಳ ಸೌಂದರ್ಯದಿಂದ ಸ್ತ್ರೀಯರ ಹೃದಯವನೆಯ್ದುವ ಪುರುಷನೋರ್ವನು ನನ್ನಿಂದ ಕಾಣಲ್ಪಟ್ಟನು ||೧೩|| ಈಗ ಆತನಂ ಹುಡುಕುತಲಿದ್ದೇನೆ. ನನಗೆ ಅಧರಾಮೃತ ಪಾನವಂಗೆಯಿಸಿ ತನ್ನಂ ಅಪೇಕ್ಷಿಸುತಲಿರುವ ನನ್ನಂ ದುಃಖ ಸಮುದ್ರದಲ್ಲಿ ಮುಳುಗಿಸಿ ಯೆಲ್ಲಿಹೋದನೋ ಕಾಣೆನು ||೧೪|| ಎಂಬ ಉಷೆಯ ವಚನವ ಕೇಳಿ ಚಿತ್ರಲೇಖೆಯು ನುಡಿದಳು. ಉಷೆಯೇ! ನಿನ್ನ ವ್ಯಸನವಂ ನಾನು ಪರಿಹರಿಸುವೆನು ಮೂರುಲೋಕಂಗಳಲ್ಲಿಯೂ ನಿನ್ನ ಕಾಂತನು ನನ್ನ ಬುದ್ಧಿಗೆ ಎಲ್ಲಿಯಾದರೂ ಗೋಚರನಾದರೆ ಅವನಂ ಕರೆದು ತರುವೆನು,

ತಾಂತಮಾದಿಶ ॥೧೫॥ ಇತ್ಯುಕ್ತ್ವಾ ದೇವಗಂಧರ್ವಸಿದ್ಧಚಾರಣಪನ್ನಗಾನ್ । ದೈತ್ಯಾನ್ವಿದ್ಯಾಧರಾನ್ಯಕ್ಷಾನ್ಮನುಜಾಂಶ್ಚ ಯಥಾಲಿಖತ್ ॥೧೬॥ ಮನುಜೇಷು ಚ ಸಾ ವೃಷ್ಣೀನ್ ಶೂರಮಾನಕದುಂದುಭಿಮ್ । ವ್ಯಲಿಖದ್ರಾಮಕೃಷ್ಣೌ ಚ ಪ್ರದ್ಯುಮ್ನಂ ವೀಕ್ಷ್ಯ ಲಜ್ಜಿತಾ ॥೧೭॥ ಅನಿರುದ್ಧಂ ವಿಲಿಖಿತಂ ವೀಕ್ಷ್ಯೋಷಾವಾಙ್ಮುಖೀ ಸ್ಥಿತಾ । ಸೋಽಸಾವಸಾವಿತಿ ಪ್ರಾಹ ಸ್ಮಯಮಾನಾ ಮಹೀಪತೇ ॥೧೮॥ ಚಿತ್ರಲೇಖಾ ತಮಾಜ್ಞಾಯ ಪೌತ್ರಂ ಕೃಷ್ಣಸ್ಯ ಯೋಗಿನೀ । ಯಯೌ ವಿಹಾಯಸಾ ರಾಜನ್ ದ್ವಾರಕಾಂ ಕೃಷ್ಣಪಾಲಿತಾಮ್ ॥೧೯॥ ತತ್ರ ಸುಪ್ತಂ ಸುಪರ್ಯಂಕೇ ಪ್ರಾದ್ಯುಮ್ನಿಂ ಯೋಗಮಾಸ್ಥಿತಾ । ಗೃಹೀತ್ವಾ ಶೋಣಿತಪುರಂ ಸಖ್ಯೈ ಪ್ರಿಯಮದರ್ಶಯತ್ ॥೨೦॥ ಸಾ ಚ ತಂ ಸುಂದರವರಂ ವಿಲೋಕ್ಯ ಮುದಿತಾನನಾ ।

ಅಪಕರ್ಷಯಿ-ಕಿತ್ತುಕೊಳ್ಳುವನು, ತ್ರಿಲೋಕ್ಯಾಂ-ಮೂರು ಲೋಕಂಗಳಲ್ಲಿಯೂ, ಭವತ್ಯೇವ ವಿ-ನಿನ್ನ ಹಾಗೆ ಇರುವ?, ತಂನರಂ-ಆ ಪುರುಷನನ್ನು, ಅನ್ವೇಷ್ಯೇ-ಹುಡುಕುವೆನು, ತೇ-ನಿನ್ನ, ಮನೋಹರ್ತಾ-ಚಿತ್ತವನ್ನು ಅಪಹರಿಸಿದವನು, ಯಃ-ಯಾವನೋ, ತಂ-ಅವನನ್ನು, ಆದಿಶ-ಹೇಳು ॥೧೫॥ ಇತ್ಯುಕ್ತ್ವಾ-ಹೀಗೆಹೇಳಿ, ದೇವಾನ್-ದೇವರನ್ನೂ, ಗಂಧರ್ವಾನ್-ಗಂಧರ್ವರನ್ನೂ, ಸಿದ್ಧಾನ್-ಸಿದ್ಧರನ್ನೂ, ಚಾರಣಾನ್-ಚಾರಣರನ್ನೂ, ಪನ್ನಗಾನ್-ಸರ್ಪಗಳನ್ನೂ, ದೈತ್ಯಾನ್-ದೈತ್ಯರನ್ನೂ, ವಿದ್ಯಾಧರಾನ್-ವಿದ್ಯಾಧರರನ್ನೂ, ಯಕ್ಷಾನ್-ಯಕ್ಷರನ್ನೂ, ಮನುಜಾಂಶ್ಚ-ಮನುಷ್ಯರನ್ನೂ, ಯಥಾ-ಯಾರುಯಾರು ಹೇಗೆಹೇಗೆ ಇರುವರೋ, ತಥಾ-ಹಾಗೆ, ಅಲಿಖತ್-ಚಿತ್ರವಂ ಬರೆದಳು ॥೧೬॥ ಮನುಜೇಷು ಚ-ಮನುಷ್ಯರಲ್ಲಿಯೂ, ಸಾ-ಆ ಚಿತ್ರಲೇಖೆಯು, ವೃಷ್ಣೀನ್-ವೃಷ್ಣಿಗಳೆಂಬ ಯಾದವರನ್ನೂ, ಶೂರಂ-ಶೂರನೆಂಬ ಅರಸನನ್ನೂ, ಆನಕದುಂದುಭಿಂ-ವಸುದೇವನನ್ನೂ, ರಾಮಕೃಷ್ಣೌ ಚ-ಬಲಕೇಶವರನ್ನೂ, ವ್ಯಲಿಖತ್-ಬರೆದಳು. ವಿಲಿಖಿತಂ-ಬರೆಯಲ್ಪಟ್ಟ, ಪ್ರದ್ಯುಮ್ನಂ-ಕಾಮದೇವನನ್ನು, ವೀಕ್ಷ್ಯ-ನೋಡಿ, ಲಜ್ಜಿತಾ-ನಾಚಿಕೆಯುಳ್ಳವಳಾದಳು ॥೧೭॥ ಮಹೀಪತೇ-ಪರೀಕ್ಷಿತನೇ! ವಿಲಿಖಿತಂ-ಬರೆಯಲ್ಪಟ್ಟ, ಅನಿರುದ್ಧಂ-ಅನಿರುದ್ಧಮೂರ್ತಿಯನ್ನು, ವೀಕ್ಷ್ಯ-ನೋಡಿ, ಉಷಾ-ಉಷಾದೇವಿಯೂ, ಅವಾಙ್ಮುಖೀ-ಕೆಳಗೆಬಾಗಿದ ಮೋರೆಯುಳ್ಳವಳಾಗಿ, ಸ್ಥಿತಾ-ನಿಂತವಳಾಗಿ, ಸ್ಮಯಮಾನಾ-ಆಶ್ಚರ್ಯಪಡುತ್ತ ನಗುವವಳೂ ಆಗಿ, ಸೋಽಸಾವಿತಿ-ಅವನೇ ಇವನೆಂದು, ಪ್ರಾಹ-ನುಡಿದಳು ॥೧೮॥ ಚಿತ್ರಲೇಖಾ ಮಂತ್ರಿಪುತ್ರಿಯು, ತಂ-ಆ ಪುರುಷನನ್ನು, ಕೃಷ್ಣಸ್ಯ-ವಾಸುದೇವನ ಪೌತ್ರಂ-ಮಗನ ಮಗನನ್ನಾಗಿ ಆಜ್ಞಾಯ-ತಿಳಿದು, ಯೋಗಿನೀ-ಉಪಾಯವುಳ್ಳವಳಾದ್ದರಿಂದ, ಕೃಷ್ಣಪಾಲಿತಾಂ-ಕೃಷ್ಣನಿಂದ ರಕ್ಷಿಸಲ್ಪಟ್ಟ, ದ್ವಾರಕಾಂ-ಕುಶಸ್ಥಲೀನಗರವನ್ನು, ವಿಹಾಯಸಾ-ಆಕಾಶ ಮಾರ್ಗದಿಂದ, ಯಯೌ-ಸೇರಿದಳು. ರಾಜನ್-ಪರೀಕ್ಷಿತನೇ! ॥೧೯॥ ತತ್ರ-ಅಲ್ಲಿ, ಸುಪರ್ಯಂಕೇ-ಮನೋಹರವಾದ ಮಂಚದಲ್ಲಿ, ಸುಪ್ತಂ-ಮಲಗಿದ್ದ, ಪ್ರಾದ್ಯುಮ್ನಿಂ-ಪ್ರದ್ಯುಮ್ನನ ಮಗನನ್ನು, ಯೋಗಮಾಸ್ಥಿತಾ-ಯೋಗಶಕ್ತಿಯನವಲಂಬಿಸಿದವಳಾಗಿ, ಗೃಹೀತ್ವಾ-ತೆಗೆದುಕೊಂಡು, ಶೋಣಿತಪುರಂ ಶೋಣಿತ ನಗರವಂ ಕುರಿತು ಒಯ್ದು, ಸಖ್ಯೈ-ಗೆಳತಿಯಾದ ಉಷೆಗೆ ಪ್ರಿಯಂ-ವಲ್ಲಭನನ್ನು, ಅದರ್ಶಯತ್-ತೋರಿಸಿದಳು, ಸಾ ಚ-ಆ ಉಷೆಯೂ, ತಂಸುಂದರವರಂ-ಆ ಚೆಲುವನಾ

---

ನಿನ್ನ ಹುವಸ್ಸನ್ನು ಅಪಹರಿಸಿದವನು ತಿಳಿಸುವವಳಾಗುವೆನು ॥ ೧೫॥ ಬಳಿಕ ಚಿತ್ರಲೇಖೆಯು ದೇವಗಂಧರ್ವ ಸಿದ್ಧ ಚಾರಣ ಸರ್ಪಾಧಿಪತಿಗಳಂ ದೈತ್ಯರಂ ವಿದ್ಯಾಧರರಂ ಯಕ್ಷರಂ ಮನುಷ್ಯರಂ ಸಹ ಭಾವಚಿತ್ರಪಟಗಳಂ ಬರೆದಳು ॥೧೬॥ ಚಿತ್ರಲೇಖೆಯು ಮನುಷ್ಯರಲ್ಲಿ ಯಾದವರೊಳು ಶೂರ ವಸುದೇವ ರಾಮಕೃಷ್ಣರು ಮೊದಲಾದವರಂ ತೋರಿಸಿದಳು. ಚಿತ್ರದಲ್ಲಿ ಯಾದವರೊಳು ಬರೆಯಲ್ಪಟ್ಟ ಪ್ರದ್ಯುಮ್ನನಂನೋಡಿ ಉಷೆಯು ಇವನೇ ಮಾವನೆಂದು ಲಜ್ಜಾಯುಕ್ತಳಾದಳು ॥೧೭॥ ಬಳಿಕ ಉಷೆಯು ಚಿತ್ರಲಿಖಿತನಾದ ಅನಿರುದ್ಧನಂ ಕಂಡು ನಾಚಿಕೆಯಿಂದ ತಲೆಯಂ ಬಾಗಿಸಿ ನಗುತ ಈತನೇ ಕಾಂತನೆಂದು ನುಡಿದಳು ॥೧೮॥ ಅನಂತರದಲ್ಲಿ ಯೋಗಸಿದ್ಧಳಾದ ಚಿತ್ರಲೇಖೆಯು ಅನಿರುದ್ಧನಂ ಶ್ರೀಕೃಷ್ಣನ ಮೊಮ್ಮಗನನ್ನಾಗಿ ತಿಳಿದು ಆಕಾಶ ಮಾರ್ಗದಿಂದ ಕೃಷ್ಣಪಾಲಿತವಾದ ದ್ವಾರಕೆಯ ನೈದಿದಳು ॥೧೯॥ ಬಳಿಕ ಚಿತ್ರಲೇಖೆಯು ದ್ವಾರಕೆಯಲ್ಲಿ ರಮಣೀಯವಾದ ಮಂಚದೊಳು ನಿದ್ರೆಗೈವ ಅನಿರುದ್ಧನಂ ತೆಗೆದುಕೊಂಡು ಯೋಗಬಲದಿಂದ ಶೋಣಿತಪುರಕ್ಕೈದಿ ಸಖಿಯಾದ ಉಷೆಗೆ ತೋರಿಸಿದಳು ॥೨೦॥ ಅನಂತರದಲ್ಲಿ ಉಷೆಯು ಸುಂದರನಾದ ವರನಂನೋಡಿ ಸಂತುಷ್ಟವಾದ ಮುಖ

ದುಷ್ಪ್ರೇಕ್ಷ್ಯೇಸ್ವಗೃಹೇಪುಂಭೀರೇಮೇಪ್ರಾದ್ಯುಮ್ನಿನಾಸಮಮ್ ॥೨೧॥ ಪರಾರ್ಧ್ಯವಾಸಸ್ಸ್ರಗ್ಗಂಧ ಧೂಪದೀಪಾಸನಾದಿಭಿಃ । ಪಾನಭೋಜನಭಕ್ಷ್ಯೈಶ್ಚವಾಕ್ಯೈಶ್ಶುಶ್ರೂಷಣಾರ್ಚಿತಃ ॥೨೨॥ ಗೂಢಃಕನ್ಯಾಪುರೇಶಶ್ವತ್ಪ್ರವೃದ್ಧಸ್ನೇಹಯಾತಯಾ । ನಾಹರ್ಗಣಾನ್ಸಬುಬುಧೇಹ್ಯುಷಯಾಪಹೃತೇಂದ್ರಿಯಃ ॥೨೩॥ ತಾಂತಥಾಯದುವೀರೇಣಭುಜ್ಯಮಾನಾಂಹತವ್ರತಾಮ್ । ಹೇತುಭಿರ್ಲಕ್ಷಯಾಂಚಕ್ರುರಾಪ್ರೀತಾಂದುರವಚ್ಛದೈಃ ॥೨೪॥ ಭಟಾಆವೇದಯಾಂಚಕ್ರೂರಾಜಂಸ್ತೇದುಹಿತುರ್ವಯಮ್। ವಿಚೇಷ್ಟಿತಂಲಕ್ಷಯಾಮಕನ್ಯಾಯಾಃಕುಲದೂಷಣಮ್ ॥೨೫॥ ಅನಪಾಯಿಭಿರಸ್ಮಾಭಿರ್ಗುಪ್ತಾ

---

ದೆಗಂಡನನ್ನು, ವಿಲೋಕ್ಯ-ನೋಡಿ, ಮುದಿತಾನನಾ-ಸಂತೋಷಗೊಂಡಿದಮೊಗವುಳ್ಳವಳಾಗಿ, ಪುಂಭಿಃ-ಪುರುಷರಿಂದ, ದುಷ್ಪ್ರೇಕ್ಷ್ಯೇ-ನೋಡುವುದಕ್ಕೂ ಅಶಕ್ಯವಾದ, ಸ್ವಗೃಹೇ-ತನ್ನ ಮನೆಯಲ್ಲಿ, ಪ್ರಾದ್ಯುಮ್ನಿನಾಸಮಂ ಅನಿರುದ್ಧನೊಡನೆ, ರೇಮೇ-ಕ್ರೀಡಿಸಿದಳು ॥೨೧॥ ಪರಾರ್ಧ್ಯ------ದಿಭಿಃ-ಪರಾರ್ಧ್ಯ-ಶ್ರೇಷ್ಠವಾದ, ವಾಸಃ-ವಸ್ತ್ರಗಳು, ಸ್ರಕ್-ಪುಷ್ಪಮಾಲೆಗಳು, ಗಂಧ-ಪರಿಮಳವು, ಧೂಪ-ಗಂಧದಹೊಗೆ, ದೀಪ-ದೀಪಗಳು, ಆಸನ-ಹಾಸಿಗೆ, ಅಥವಾ ಗದ್ದುಗೆ, ಆದಿಭಿಃ-ಮೊದಲಾದವುಗಳಿಂದಲೂ, ಪಾನಭೋಜನಭಕ್ಷ್ಯೈಶ್ಚ-ಕುಡಿಯತಕ್ಕ ಉಣ್ಣತಕ್ಕ ತಿನ್ನತಕ್ಕ ಆಹಾರಗಳಿಂದಲೂ ವಾಕ್ಯೈಃ-ಪ್ರಿಯವಚನಗಳಿಂದಲೂ, ಶುಶ್ರೂಷಣಾರ್ಚಿತಃ-ಸೇವೆಯಿಂದ ಉಪಚರಿಸಲ್ಪಟ್ಟವನಾಗಿ ॥೨೨॥ ಕನ್ಯಾಪುರೇ-ಮದುವೆಯಿಲ್ಲದಹುಡುಗಿಯರ ಅಂತಃಪುರದಲ್ಲಿ, ಗೂಢಃ-ಅಪ್ರಕಟವಾಗಿರುವನಾಗಿ, ಶಶ್ವತ್-ಯಾವಾಗಲೂ, ಪ್ರವೃದ್ಧಸ್ನೇಹಯಾ-ಹೆಚ್ಚಿದ ಅನುರಾಗವುಳ್ಳ, ತಯಾ ಉಷಯಾ-ಅಂಥಾ ಉಷಾದೇವಿಯಿಂದ ಅಪಹೃತೇಂದ್ರಿಯಃ-ಸ್ವಾಧೀನಗೊಳಿಸಿಕೊಳ್ಳಲ್ಪಟ್ಟ ಕರಣಹೃದಯಂಗಳುಳ್ಳವನಾದ ಸಃ-ಅನಿರುದ್ಧನು, ಅಹರ್ಗಣಾನ್-ದಿನಸಂಘಗಳನ್ನು ನಬುಬುಧೇ-ತಿಳಿಯಲಿಲ್ಲವು. ॥೨೩॥ಯದುವೀರೇಣ-ಯಾದವರಲ್ಲಿ ಶೂರನಾದ ಅನಿರುದ್ಧನಿಂದ ಭುಜ್ಯಮಾನಾಂ ಅನುಭವಿಸಲ್ಪಡುತ್ತಿರುವ ಆದ್ದರಿಂದ, ಹತವ್ರತಾಂ-ಕೆಟ್ಟುಹೋದ ಕನ್ಯಾನಿಯಮವುಳ್ಳ, ತಾಂ-ಉಷಾದೇವಿಯನ್ನು, ದುರವಚ್ಛದೈಃ-ಮುಚ್ಚಲಶಕ್ಯಂಗಳಾದ, ಹೇತುಭಿಃ-ಚಿಹ್ನೆಗಳಿಂದ, ಆಪ್ರೀತಾಂ-ಅತಿಸಂತುಷ್ಟಳನ್ನಾಗಿ, ಲಕ್ಷಯಾಂಚಕ್ರುಃ-ಗುರುತುಹಿಡಿದರು ॥೨೪॥ಭಟಾಃ-ಕಾವಲಿನವರಾಗಿದ್ದ ಭಟಗಳು, ರಾಜನ್-ದೊರೆಯಾದ ಬಾಣನೇ! ಕನ್ಯಾಯಾಃ-ಮದುವೆಯಿಲ್ಲದವಳಾದ, ತೇದುಹಿತುಃ-ನಿನ್ನ ಮಗಳಾದ ಉಷೆಯ, ವಿಚೇಷ್ಟಿತಂ ಕೆಟ್ಟನಡತೆಯನ್ನು, ಕುಲದೂಷಣಂ-ವಂಶಕ್ಕೆ ಪಳಿಪಂ ತರುವುದನ್ನಾಗಿ, ವಯಂ ನಾವು, ಲಕ್ಷಯಾಮ-ಕಾಣುತ್ತಿರುವೆವು, ಆವೇದಯಾಂಚಕ್ರುಃ-ಅರಿಕೆಮಾಡಿದರು॥೨೫॥ಪ್ರಭೋ-ಒಡೆಯನೇ! ಸ್ವಗೃಹೇ-ತನ್ನಮನೆಯಲ್ಲಿ ಅನಪಾಯಿಭಿಃ-ಬಿಟ್ಟುಹೋಗದೆಯಿರುವ ಅಸ್ಮಾಭಿಃ-ನಮ್ಮಿಂದ, ಗುಪ್ತಾಯಾಃ-ಕಾಯಲ್ಪಟ್ಟವಳಾದ್ದರಿಂದ, ಪುಂಭಿಃ-ಪುರುಷರಿಂದ, ದುಷ್ಪ್ರೇಕ್ಷ್ಯಾಯಾಃ-ಪ್ರಯಾಸದಿಂದಲೂ ನೋಡಲಶಕ್ಯಳಾಗಿರುವ, ಕನ್ಯಾಯಾಃ-ಮದುವೆಯಿಲ್ಲದವಳಿಗೆ ಆಗಿರುವ, ದೂಷಣಂ-ನಿಂದಾಕರವನ್ನು, ನವಿದ್ಮಹೇ-ನಾವರಿಯೆವು. ಎಂ

---

ವುಳ್ಳವಳಾಗಿ ಪುರುಷರಿಂದ ನೋಡಲಶಕ್ಯವಾದ ತನ್ನ ಗೃಹದಲ್ಲಿ ಅನಿರುದ್ಧನೊಡನೆ ರಮಿಸಿದಳು ॥೨೧॥ ಅನಿರುದ್ಧನು ಅಲ್ಲಿ ಅಮೂಲ್ಯಗಳಾದ ವಸ್ತ್ರ ಪುಷ್ಪಮಾಲ್ಯ ಗಂಧ ಧೂಪ ದೀಪ ಪೀಠಾದಿಗಳಿಂದಲೂ ಪಾನಭೋಜನಾ ಭ್ಯಂಜನಗಳಿಂದಲೂ ಪ್ರಿಯವಚನಗಳಿಂದಲೂ ಶುಶ್ರೂಷಣಪೂರ್ವಕವಾಗಿ ಪೂಜಿಸಲ್ಪಡುತ್ತಿದ್ದನು॥೨೨॥ ಈ ರೀತಿಯಾಗಿ ಶೋಣಿತ ಪುರದಲ್ಲಿ ಗೂಢನಾಗಿರುವ ಅನಿರುದ್ಧನು ಪ್ರತಿದಿನದಲ್ಲಿಯೂ ವೃದ್ಧಿಹೊಂದುವಸ್ನೇಹವುಳ್ಳ ಉಷಾದೇವಿಯಿಂದ ಅಪಹರಿಸಲ್ಪಟ್ಟ ಇಂದ್ರಿಯಂಗಳುಳ್ಳವನಾಗಿ ಕಳೆದುಹೋದ ದಿನಂಗಳಂ ತಿಳಿಯುಲಿಲ್ಲವು ॥೨೩॥ ಹಾಗೆ ಅನಿರುದ್ಧನಿಂದ ಭೋಗಿಸಲ್ಪಟ್ಟವಳಾಗಿ ನಷ್ಟವಾದ ಕನ್ಯಾವ್ರತವುಳ್ಳ ಅತಿಸಂತುಷ್ಟೆಯುಳ್ಳಾದ ಉಷೆಯ ವ್ಯಾಪಾರವಂ ಗೃಹಪಾಲಕರಾದ ಭೃತ್ಯರು ಮರೆಮಾಚಲಶಕ್ಯವಾದ ಚಿಹ್ನೆಗಳಿಂದ ತಿಳಿದರು ॥೨೪॥ ಅನಂತರದಲ್ಲಿ ಭಟರು ಬಾಣನ ಬಳಿಗೆಯ್ದಿ ಅರಸೇ! ಕನ್ಯೆಯಾದ ನಿನ್ನ ಪುತ್ರಿಯ ವ್ಯಾಪಾರವಂ ಕುಲದೂಷಕವನ್ನಾಗಿಯೂ ಶಾಸ್ತ್ರ ವಿರುದ್ಧವನ್ನಾಗಿಯೂ, ಕಾಣುತ್ತೇವೆ ॥೨೫॥ ಪ್ರಮಾದ ರಹಿತರಾದ ನಮ್ಮಿಂದ ಗೃಹದಲ್ಲಿ ರಕ್ಷಿಸಲ್ಪಡುತ್ತಲಿರುವ ಮತ್ತು ಅನ್ಯರಿಂದ ನೋಡಲಶಕ್ಯಳಾದ ಕನ್ಯೆಯಾದ ಉಷೆಗೆ ಪುರುಷ

## ಬಾಣಾಸುರಯುದ್ಧ ಕಥಾಪ್ರಾರಂಭಘಟ್ಟಃ.

ಶ್ರೀಶುಕಃ॥ ಅಪಶ್ಯತಾಂಚಾನಿರುದ್ಧಂ ತದ್ಬಂಧೂನಾಂಚ ಭಾರತ। ಚತ್ವಾರೋವಾರ್ಷಿಕಾಮಾಸಾ ವ್ಯತೀಯುರನುಶೋಚತಾಮ್ ॥೧॥ ನಾರದಾತ್ತದುಪಾಕರ್ಣ್ಯ ವಾರ್ತಾಂ ಬದ್ಧಸ್ಯ ಕರ್ಮ ಚ। ಪ್ರಯಯುಃ ಶೋಣಿತಪುರಂ ವೃಷ್ಣಯಃ ಕೃಷ್ಣದೈವತಾಃ ॥೨॥ ಪ್ರದ್ಯುಮ್ನೋ ಯುಯುಧಾನಶ್ಚ ಗದಸ್ಸಾಂಬೋಥ ಸಾರಣಃ। ನಂದೋಪನಂದಭದ್ರಾದ್ಯಾ ರಾಮಕೃಷ್ಣಾನುವರ್ತಿನಃ ॥೩॥ ಅಕ್ಷೌಹಿಣೀಭಿರ್ದ್ವಾ

---

### ೬೩ ನೇ ಅಧ್ಯಾಯದ ಪ್ರತಿಪದ ಟೀಕೆ.

ಶ್ರೀ ಶುಕವಚನವು ಭಾರತ-ಪರೀಕ್ಷಿದ್ರಾಯನೇ! ಅನಿರುದ್ಧಂಚ- ಅನಿರುದ್ಧನನ್ನೂ, ಅಪಶ್ಯತಾಂ-ಕಾಣದೆಯಿರುವರಾದ್ದರಿಂದ, ಅನುಶೋಚತಾಂ-ಪಶ್ಚಾತ್ತಾಪ ಪಡುತ್ತಿರುವ, ತದ್ಬಂಧೂನಾಂ-ಅನಿರುದ್ಧನ ನಂಟರಾದ ವಸುದೇವ ರಾಮಕೃಷ್ಣ ಪ್ರದ್ಯುಮ್ನಾದಿಗಳಿಗೆ, ವಾರ್ಷಿಕಾಃಮಾಸಾಃಚತ್ವಾರಃ-ಮಳೆಗಾಲದ ನಾಲ್ಕು ತಿಂಗಳು ವ್ಯತೀಯುಃ-ಕಳೆದುಹೋದವು ॥ ನಾರದಾತ್-ನಾರದಮುನಿಯ ದೆಸೆಯಿಂದ, ಬದ್ಧಸ್ಯ-ಕಟ್ಟಲ್ಪಟ್ಟಿರುವ ಅನಿರುದ್ಧನ, ವಾರ್ತಾಂ-ಸುದ್ದಿಯನ್ನೂ, ತತ್ಕರ್ಮಚ-ಆ ಕೆಲಸವನ್ನೂ, ಉಪಾಕರ್ಣ್ಯ-ಕೇಳಿ, ಕೃಷ್ಣಪಾಲಿತಾಃ-ಕೃಷ್ಣನಿಂದ ರಕ್ಷಿಸಲ್ಪಟ್ಟ, ವೃಷ್ಣಯಃ-ಯಾದವರು, ಶೋಣಿತಪುರಂ-ಮಹಾಬಲಿ ಪುರವಂಕುರಿತು, ಪ್ರಯಯುಃ-ತೆರಳಿದರು ॥೨॥ ಪ್ರದ್ಯುಮ್ನಃ-ಕಾಮದೇವನು, ಯುಯುಧಾನಶ್ಚ-ಸಾತ್ಯಕಿಯು. ಗದಃ-ಕೃಷ್ಣನತಮ್ಮನು, ಸಾಂಬಃ-ಜಾಂಬವಂತೀ ಕುಮಾರನು. ಅಥ-ಒಳಿಕ, ಸಾರಣನು, ನಂದನನು ಭದ್ರನು ಆದ್ಯಾಃ-ಮೊದಲಾದ ವೃಷ್ಣಿಗಳು, ರಾಮಕೃಷ್ಣಾನುವರ್ತಿನಃ-ಬಲಕೇಶವರನ್ನನುವರ್ತಿಸುವರಾಗಿ ॥೩॥ ದ್ವಾದಶಾಭಿಃ ಅಕ್ಷೌ

---

### ೬೩ ನೇ ಅಧ್ಯಾಯವು.

———ಃ*ಃ———

ಶ್ರೀಧರೀಯಶ್ಲೋಕಃ॥ ತ್ರಿಯುಕ್ಷಷ್ಟಿತಮೇ ನಾಥಬಾಣಯಾದವಸಂಗರೇ। ಸ್ತುತಿರ್ಜ್ವರೇಣ ರಾವೇಣ ಬಾಣಬಾಹುಭಿದೋಹರೇಃ॥ ಟೀ॥ ಅರವತ್ತ ಮೂರನೆಯ ಅಧ್ಯಾಯದಲ್ಲಿ ಯಾದವರಿಗೂ ಬಾಣಾಸುರನಿಗೂ ಪರಸ್ಪರ ಯುದ್ಧ ವುಂಟಾದಲ್ಲಿ ರುದ್ರನಿರ್ಮಿತವಾದ ಮಹೇಶ್ವರ ಜ್ವರವು ಕೃಷ್ಣನಿರ್ಮಿತವಾದ ವೈಷ್ಣವ ಜ್ವರದಿಂದ ಪೀಡಿತವಾಗಿ ಶ್ರೀಕೃಷ್ಣನಂ-ಸ್ತುತಿಸಿತೆಂಬರ್ಥವಂ ಅನಂತರದಲ್ಲಿ ಕೃಷ್ಣನು ಬಾಣಾಸುರನ ಭುಜಂಗಳಂ ಛೇದಿಸುತಿರಲು ಆಗ ಶ್ರೀ ರುದ್ರದೇವನು ಸಹ ಶ್ರೀಕೃಷ್ಣದೇವನು-ಸ್ತುತಿಸಿದ ನೆಂಬರ್ಥವನ್ನು ಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸುವನೆಂತೆನ್ನೆ--ಎಲೈ ಪರೀಕ್ಷಿದ್ರಾಯನೇ! ಇಂತಿರಲು ಬಳಿಕ ಅನಿರುದ್ಧನಂ ಕಾಣದೆ ದುಃಖಿಸುತಿರುವ ಅನಿರುದ್ಧನ ಬಂಧುಗಳಿಗೆ ನಾಲ್ಕು ವರುಷಂಗಳೂ ಮೂರುಮಾಸಂಗಳುಂ ಕಳೆದು ಹೋದಬಳಿಕ ॥೧॥ ಕೃಷ್ಣನೇ ದೇವರಾಗಿ ಉಳ್ಳಯಾದವರು ನಾರದಮುನಿಯ ದೆಸೆಯಿಂದ ಬಾಣಾಸುರಸಂಬಂಧಿಸಲ್ಪಟ್ಟಿರುವ ಅನಿರುದ್ಧನ ವೃತ್ತಾಂತವಂ ಅಲ್ಲಿ ನಡೆದ ಯುದ್ಧವ್ಯಾಪಾರವಂ ಸಹ ಕೇಳಿ ಶೋಣಿತಪುರವನೆಯ್ದಿದರು ॥೨॥ ಪ್ರದ್ಯುಮ್ನನು, ಯುಯುಧಾನನು, ಗದನು, ಸಾಂಬನು, ಸಾರಣನು ಮತ್ತು ಶ್ರೀ ರಾಮಕೃಷ್ಣರ ನನುವರ್ತಿಸಿಕೊಂಡಿರುವ ನಂದ ಉಪನಂದ ಭದ್ರಾದಿಗಳುಂ ಕೂಡ ಆ ಬಾಣನ ಪುರವನೆಯ್ದಿದರು. ಸಮಸ್ತಯಾದವರಿಗಿಂತಲೂ ಪೂರ್ವದಲ್ಲಿಯೇ ಶ್ರೀ ರಾಮಕೃಷ್ಣರೀರ್ವರೂ ಸರ್ವಜ್ಞರಾದ್ದರಿಂದ ಅನಿರುದ್ಧನ ವೃತ್ತಾಂತವಂ ತಿಳಿದು ಶೋಣಿತಪುರವನೆಯ್ದಿದರು ॥೩॥ ಅನಂತರದಲ್ಲಿ ಯಾದವಶ್ರೇಷ್ಠರು ಹನ್ನೆ

ದಶಭಿಸ್ಸಮೇತಾಸ್ಸರ್ವತೋದಿಶಮ್ | ರುರುಧುರ್ಬಾಣನಗರಂ ಸಮಂತಾತ್ಸಾತ್ವತರ್ಷಭಾಃ ||೪|| ಭಜ್ಯ-
ಮಾನಪುರೋದ್ಯಾನಪ್ರಾಕಾರಾಟ್ಟಾಲಗೋಪುರಮ್ | ಪ್ರೇಕ್ಷಮಾಣೋ ರುಷಾವಿಷ್ಟಸ್ತುಲ್ಯಸೈನ್ಯೋ-
ಽಭಿನಿರ್ಯಯೌ ||೫|| ಬಾಣಾರ್ಥಂ ಭಗವಾನ್ ರುದ್ರಸ್ಸಸುತೈಃ ಪ್ರಮಥೈರ್ವೃತಃ | ಆರುಹ್ಯ ನಂದಿವೃಷ-
ಭಂ ಯುಯುಧೇ ರಾಮಕೃಷ್ಣಯೋಃ ||೬|| ಆಸೀತ್ಸುತುಮುಲಂ ಯುದ್ಧಮದ್ಭುತಂ ರೋಮಹರ್ಷಣಮ್ |
ಕೃಷ್ಣಶಂಕರಯೋ ರಾಜನ್ ಪ್ರದ್ಯುಮ್ನಗುಹಯೋರಪಿ ||೭|| ಕುಂಭಾಂಡಕೂಪಕರ್ಣಾಭ್ಯಾಂ ಬಲೇನ
ಸಹ ಸಂಯುಗಃ | ಸಾಂಬಸ್ಯ ಬಾಣಪುತ್ರೇಣ ಬಾಣೇನ ಸಹ ಸಾತ್ಯಕೇಃ ||೮|| ಬ್ರಹ್ಮಾದಯಸ್ಸುರಾಧೀ-

---

ಶೌಹಿಣೀಭಿಃ-ಹನ್ನೆರಡ ಕ್ಷೌಹಿಣಿಗಳ ದಂಡಿನಿಂದ, ಸಮೇತಾಃ-ಕೂಡಿದವರಾದ, ಸಾತ್ವತರ್ಷಭಾಃ-ಯಾದವಶ್ರೇಷ್ಠರು, ಬಾಣ-
ನಗರಂ-ಶೋಣಿತಪುರವನ್ನು, ಸರ್ವತೋದಿಶಂ-ಎಲ್ಲಕಡೆಗಳಲ್ಲಿಯೂ, ಸಮಂತಾತ್-ಸಂಪೂರ್ಣವಾಗಿ, ರುರುಧುಃ-ಮುತ್ತಿಗೆ
ಹಾಕಿದರು ||೪|| ಬಾಣನು ತನ್ನ ನಗರವನ್ನು, ಭಜ್ಯ .. ಪುರಂ-ಭಜ್ಯಮಾನ-ಮುರಿಯಲ್ಪಡುತಿರುವ, ಪುರೋದ್ಯಾನ- ಊರಿನತೋ-
ಟಗಳು, ಪ್ರಾಕಾರ-ಕೋಟೆಯು, ಅಟ್ಟಾಲ-ಬುರುಜುಗಳು, (ಕೊತ್ತಳ) ಗೋಪುರಂ-ಪುರದ್ವಾರದ ವಿಮಾನಂಗಳೂ, ಉಳ್ಳ-
ದ್ದನ್ನಾಗಿ, ಪ್ರೇಕ್ಷಮಾಣಃ-ನೋಡುತ್ತಿರುವರಾದ್ದರಿಂದ, ರುಷಾ-ಸಿಟ್ಟಿನಿಂದ, ಆವಿಷ್ಟಃ-ಪ್ರವೇಶಿಸಲ್ಪಟ್ಟವನಾಗಿ, ತುಲ್ಯಸೈ-
ನ್ಯಃ-ಯಾದವರ ಸೈನ್ಯಕ್ಕೆ ಸರಿಯಾದಷ್ಟು ದಂಡುಳ್ಳವನಾಗಿ, ಅಭಿನಿರ್ಯಯೌ-ಹೊರಕ್ಕೆ ಬಂದನು ||೫|| ಭಗವಾನ್-ಪರಮೇಶ್ವ-
ರನಾದ, ರುದ್ರಃ-ರುದ್ರನು, ಬಾಣಾರ್ಥಂ-ಭಕ್ತನಾದ ಬಾಣನಿಗೋಸುಗ, ಸಸುತೈಃ-ಪುತ್ರರಿಂದ ಸಹಿತರಾದ, ಪ್ರ-
ಮಥೈಃ-ಸಮಾಜಕರಿಂದ, ವೃತಃ-ಬಳಸಲ್ಪಟ್ಟವನಾಗಿ, ನಂದಿವೃಷಭಂ-ನಂದೀಶ್ವರನಾದ ಬಸವನನ್ನು, ಆರುಹ್ಯ-ಏರಿ, ರಾ-
ಮಕೃಷ್ಣಯೋಃ-ಬಲಕೇಶವರೊಡನೆ, ಯುಯುಧೇ-ಕಾದಿದನು ||೬|| ರಾಜನ್-ಪರೀಕ್ಷಿದ್ರಾಯನೇ ! ಕೃಷ್ಣಶಂಕರಯೋಃ- ಹರಿಹ-
ರಾಂಶಗಳಿಗೂ, ಪ್ರದ್ಯುಮ್ನಗುಹಯೋಃ-ಕಾಮದೇವ ಸೇನಾನಿಗಳಿಗೂ, ಸುತುಮುಲಂ-ಬಹಳ ದೊಂಬಿಯಾದ, ರೋಮಹರ್ಷ-
ಣಂ-ಕೇಳುವವರಿಗೆ ರೋಮಾಂಚವನ್ನಾಗಿಸುವ, ಅದ್ಭುತಂ-ಆಶ್ಚರ್ಯಕರವಾದ, ಯುದ್ಧಂ-ಕಾಳಗವು, ಆಸೀತ್- ಆದುದು||
ಕುಂಭಾಂಡಕೂಪಕರ್ಣಾಭ್ಯಾಂ-ಕುಂಭಾಂಡನೊಡನೆಯೂ ಕೂಪಕರ್ಣನೊಡನೆಯೂ, ಸಹ, ಬಲಸ್ಯ-ರಾಮನಿಗೂ, ಸಾಂಬಸ್ಯ-
ಕೃಷ್ಣಪುತ್ರನಿಗೆ ಬಾಣಪುತ್ರೇಣ-ಬಾಣಾಸುರನ ಮಗನೊಡನೆಯೂ, ಸಾತ್ಯಕೇಃ-ಯುಯುಧಾನನಿಗೆ, ಬಾಣೇನಸಹ -ಬಲಿಪುತ್ರ-
ನೊಡನೆಯು, ಸಂಯುಗಃ-ಜಗಳವಾಯಿತು. ||೮|| ಬ್ರಹ್ಮಾದಯಃ-ಚತುರ್ಮುಖನು ಮೊದಲಾದ, ಸುರಾಧೀಶಾಃ-ದೇವನಾಯ-

---

ರಡು ಕ್ಷೌಹಿಣಿಗಳ ಸೈನ್ಯದೊಡನೆ ಶೋಣಿತಪುರವ ನಾಲ್ಕು ಕಡೆಯಲ್ಲಿಯೂ ಸುತ್ತಿಕೊಂಡು ಮುತ್ತಿಗೆ ಹಾಕಿದ-
ರು ||೪|| ಬಳಿಕ ಬಾಣಾಸುರನು ಭಗ್ನಗೊಳಿಸಲ್ಪಟ್ಟ ಪುರೋದ್ಯಾನಂಗಳಂ ಪ್ರಾಕಾರಂಗಳಂ ಅಲಂಗಗಳು ಪುರ-
ದ್ವಾರಂಗಳಂ ನರ ನೋಡಿ ಕ್ರೋಧದಿಂದ ವ್ಯಾಪ್ತನಾಗಿ ಆಯಾದವರ ಸೇನಾಸಮಾನವಾದ ಸೇನೆಯುಳ್ಳವನಾ-
ಗಿ ಪುರದಿಂದ ಹೊರಕ್ಕೆ ಹೊರಟನು ||೫|| ಅನಂತರದಲ್ಲಿ ಭಗವಂತನಾದ ರುದ್ರನು ಬಾಣಾಸುರನಿಗೋಸುಗ ಕು-
ಮಾರಸ್ವಾಮಿ ಯೊಡಗೂಡಿರುವ ಪ್ರಮಥಗಣಗಳಿಂ ಪರಿವೃತನಾಗಿ ಮಹಾವೃಷಭವನೇರಿ ರಾಮಕೃಷ್ಣರೊಡನೆ
ಯುದ್ಧಂ ಗೈಯ್ದನು ||೬|| ಆಗ ಕೃಷ್ಣರುದ್ರರಿಗೂ ಪ್ರದ್ಯುಮ್ನಸ್ಕಂದರಿಗೂ ಸಹ ಭಯಂಕರವಾದ ಆಶ್ಚರ್ಯ-
ಕರವಾದ ರೋಮಾಂಚವನ್ನುಂಟುಮಾಡುವ ಯುದ್ಧವು ಬೆಳೆದಂತಾದ್ದಾಯಿತು ||೭|| ಮತ್ತು ಕುಂಭಾಂಡಕೂ-
ಪಕರ್ಣರೆಂಬ ಬಾಣನ ಮಂತ್ರಿಗಳೊಡನೆ ಕೂಡಿ ಸಾತ್ಯಕಿ ಯುದ್ಧಂಗೆಯ್ದನು ||೮|| ಆಗ ಬ್ರಹ್ಮನು ಮೊದಲಾ

ಶ್ಚಾಮುನಯಸ್ಸಿದ್ಧಚಾರಣಾಃ । ಗಂಧರ್ವಾಪ್ಸರಸೋಯಕ್ಷಾವಿಮಾನೈರ್ದ್ರಷ್ಟುಮಾಗಮನ್ ॥೯॥ ಶಂಕರಾನುಚರಾನ್‌ಶೌರಿರ್ಭೂತಪ್ರೇತಾನ್ ಸಗುಹ್ಯಕಾನ್ । ಡಾಕಿನೀರ್ಯಾತುಧಾನಾಂಶ್ಚ ಭೇತಾಳಾನ್ ಸವಿನಾಯಕಾನ್ ॥೧೦॥ ಭೂತಮಾತೃಪಿಶಾಚಾಂಶ್ಚ ಕೂಶ್ಮಾಂಡಾನ್ ಬ್ರಹ್ಮರಾಕ್ಷಸಾನ್ । ದ್ರಾವಯಾಮಾಸತೀಕ್ಷ್ಣಾಗ್ರೈಃ ಶರೈಃ ಶಾರ್ಙ್ಗಧನುಶ್ಚ್ಯುತೈಃ ॥೧೧॥ ಪೃಥಗ್ವಿಧಾನಿಪ್ರಾಯುಙ್ಕ್ತ ಪಿನಾಕ್ಯಸ್ತ್ರಾಣಿಶಾರ್ಙ್ಗಿಣಿ । ಪ್ರತ್ಯಸ್ತ್ರೈಃ ಶಮಯಾಮಾಸ ಶಾರ್ಙ್ಗಪಾಣಿರವಿಸ್ಮಿತಃ ॥೧೨॥ ಬ್ರಹ್ಮಾಸ್ತ್ರಸ್ಯಚ ಬ್ರಹ್ಮಾಸ್ತ್ರಂವಾಯವ್ಯಸ್ಯಚಪಾರ್ವತಮ್ । ಆಗ್ನೇಯಸ್ಯಚಪಾರ್ಜನ್ಯಂನೈಜಂಪಾಶುಪತಸ್ಯಚ ॥ ಮೋಹಯಿತ್ವಾಥಗಿರಿಶಂಜೃಂಭಣಾಸ್ತ್ರೇಣಜೃಂಭಿತಮ್ । ಬಾಣಸ್ಯಪೃತನಾಂಶೌರಿರ್ಜಘಾನಾಸಿಗದೆ

---

ಶ್ಚರೂ ಮುನಯಃ-ನಾರದಾದಿಮುನಿಗಳೂ, ಸಿದ್ಧರೂ, ಚಾರಣರೂ, ಗಂಧರ್ವರೂ, ಅಪ್ಸರಸರೂ, ಯಕ್ಷರೂ, ವಿಮಾನೈಃ-ವಿಮಾನಗಳಿಂದ, ದ್ರಷ್ಟುಂಆಗಮನ್-ನೋಡುವುದಕ್ಕೆ ಬಂದರು.॥೯॥ ಶೌರಿಃ-ಕೃಷ್ಣನು ಶಂಕರಾನುಚರಾನ್-ರುದ್ರನಿಗೆ ಸೇವಕರಾದ, ಭೂತಪ್ರೇತಾನ್-ದೆವ್ವಗಳನ್ನೂ ಪಿಶಾಚ ವಿಶೇಷಗಳನ್ನೂ, ಸಗುಹ್ಯಕಾನ್-ಗುಹ್ಯಕರಿಂದ ಸಹಿತರಾದ, ಡಾಕಿನೀರ್ಯಾತುಧಾನಾಂಶ್ಚ-ಡಾಕಿನೀದೇವತೆಗಳನ್ನೂ ರಾಕ್ಷಸರನ್ನೂ, ಭೇತಾಳಾನ್-ಸಾಹಸ ಗ್ರಹಗಳನ್ನೂ, ಸವಿನಾಯಕಾನ್-ವಿಘ್ನಕಾರಿದೇವತೆಗಳಿಂದಸಹಿತರಾದ ॥೧೦॥ ಭೂತಮಾತೃಪಿಶಾಚಾಂಶ್ಚ-ಭೂತಗ್ರಹಗಳನ್ನೂ, ಮಾತೃಕಾದೇವತೆಗಳನ್ನು, ಕುಶ್ಮಾಂಡಗ್ರಹಗಳನ್ನು, ಬ್ರಹ್ಮರಾಕ್ಷಸರನ್ನೂ, ಶಾರ್ಙ್ಗಧನುಶ್ಚ್ಯುತೈಃ-ಶಾರ್ಙ್ಗವೆಂಬ ಬಿಲ್ಲಿನಿಂದ ಬಿಡಲ್ಪಟ್ಟ, ತೀಕ್ಷ್ಣಾಗ್ರೈಃ-ಕ್ರೂರವಾದ ಕೊನೆಗಳುಳ್ಳ, ಶರೈಃ-ಕಣೆಗಳಿಂದ, ದ್ರಾವಯಾಮಾಸ-ಓಡಿಸಿದನು.॥೧೧॥ ಪಿನಾಕೀ-ಪಿನಾಕವೆಂಬಬಿಲ್ಲುಳ್ಳ ರುದ್ರನು, ಪೃಥಗ್ವಿಧಾನಿ-ಬೇರೆಬಗೆಯುಳ್ಳ, ಅಸ್ತ್ರಾಣಿ-ಮಂತ್ರಬಾಣಂಗಳನ್ನು ಶಾರ್ಙ್ಗಿಣಿ-ಶಾರ್ಙ್ಗವೆಂಬ ಬಿಲ್ಲುಳ್ಳಕೃಷ್ಣನಿಗೋಸುಗ, ಪ್ರಾಯುಙ್ಕ್ತ-ಪ್ರಯೋಗಿಸಿದನು. ಶಾರ್ಙ್ಗಪಾಣಿಃ-ಕೃಷ್ಣನು, ಅವಿಸ್ಮಿತಃ-ಆಶ್ಚರ್ಯಪಡದೆ ಯಿರುವನಾಗಿ, ಪ್ರತ್ಯಸ್ತ್ರೈಃ-ಪ್ರತಿಬಾಣಗಳಿಂದ, ಶಮಯಾಮಾಸ- ಶಾಂತಿಗೊಳಿಸಿದನು ॥೧೨॥ ಬ್ರಹ್ಮಾಸ್ತ್ರಸ್ಯಚಬ್ರಹ್ಮಾಸ್ತ್ರಂ-ವೇದದಬಾಣಕ್ಕೆ ವೇದದಬಾಣವನ್ನೂ, ವಾಯುವ್ಯಸ್ಯಚಪಾರ್ವತಂ-ಗಾಳಿಯಅಸ್ತ್ರಕ್ಕೆ ಬೆಟ್ಟದಅಸ್ತ್ರವನ್ನೂ, ಆಗ್ನೇಯಸ್ಯಚಪಾರ್ಜನ್ಯಂ-ಬೆಂಕಿಯಅಸ್ತ್ರಕ್ಕೆ ನೀರಿನ ಅಸ್ತ್ರವನ್ನೂ, ಪಾಶುಪತಾಸ್ತ್ರಕ್ಕೆ ತನ್ನನಾರಾಯಣಾಸ್ತ್ರವನ್ನೂ, ಪ್ರಯೋಗಿಸಿ ತಡೆದನು ॥೧೩॥ ಅಥ-ಆ ಬಳಿಕ, ಶೌರಿಃ-ಕೃಷ್ಣನು, ಜೃಂಭಣಾಸ್ತ್ರೇಣ-ಆಕಳಿಸುವ ಅಸ್ತ್ರದಿಂದ, ಜೃಂಭಿತಂ-ಆಕಳಿಕೆಹುಟ್ಟಿದ ಗಿರಿಶಂ-ರುದ್ರನನ್ನು, ಮೋಹಯಿತ್ವಾ-ಮರುಹುಗೊಳಿಸಿ, ಬಾಣಸ್ಯ-ಬಾಣನ, ಪೃತನಾಂ-ಸೇನೆಯನ್ನು, ಅಸಿಗದೇಷುಭಿಃ-ಕತ್ತಿಯಿಂದಲೂ ಗದೆಯಿಂದಲೂ ಬಾಣಗಳಿಂದಲೂ ಹೊಡೆದ

---

ದ ದೇವಶ್ರೇಷ್ಠರು ಮುನಿಗಳು ದೇವಚಾರಣ ಗಂಧರ್ವರು ಅಪ್ಸರಸ್ತ್ರೀಯರು ಯಕ್ಷರೂ ಸಹಾ ಆ ಮಹಾಯುದ್ಧವು ನೋಡಲೋಸುಗ ವಿಮಾನಗಳಿಂದ ಆವಿರ್ಭವಿಸಿದರು ॥೯॥ ಅನಂತರದಲ್ಲಿ ಶ್ರೀ ಕೃಷ್ಣನು ಶಿವಕಿಂಕರರಾದ ಭೂತಪ್ರಮಥ ಗುಹ್ಯಕರಂ ಡಾಕಿನಿಯರಂ ಯಾತುಧಾನಕರಂ ಮತ್ತು ವಿನಾಯಕರಂ ಕೂಡಿರುವವೇತಾಳಗಳಂ ॥೧೦॥ ಪ್ರೇತರಂ ಮಾತೃಗಳಂ ಪಿಶಾಚರಂ ಕೂಶ್ಮಾಂಡರಂ ಬ್ರಹ್ಮರಾಕ್ಷಸರಂ ಸಹ ತಮ್ಮ ಶಾರ್ಙಧನುಸ್ಸಿಗೆ ಹೆದೆಯನೇರಿಸಿ ಬಿಡಲ್ಪಟ್ಟ ತೀಕ್ಷ್ಣಗಳಾದ ಅಗ್ರಗಳುಳ್ಳ ಬಾಣಗಳಿಂದ ಪರಿಹರಿಸಿ ಓಡಿಸಿದನು ॥೧೧॥ ಆಮೇಲೆ ರುದ್ರನು ಪಿನಾಕವೆಂಬ ತನ್ನ ಧನುಸ್ಸಂಧರಿಸಿ ಶ್ರೀ ಕೃಷ್ಣನಿಗೋಸುಗ ಪ್ರತ್ಯೇಕ ಪ್ರತ್ಯೇಕವಾಗಿ ದಿವ್ಯಾಸ್ತ್ರಂಗಳಂ ಪ್ರಯೋಗಿಸಿದನು. ಆಗ ಕೃಷ್ಣನು ಆಶ್ಚರ್ಯಪಡದೆ ಅವುಗಳಂ ಪ್ರತ್ಯಸ್ತ್ರಂಗಳಿಂದ ನಿವಾರಿಸಿದನು ॥೧೨॥ ಅದೆಂತೆನೆ ಬ್ರಹ್ಮಾಸ್ತ್ರಕ್ಕೆ ಬ್ರಹ್ಮಾಸ್ತ್ರವಂ ವಾಯುವ್ಯಕ್ಕೆ ಪಾರ್ವತವಂ, ಆಗ್ನೇಯಕ್ಕೆ ಪಾರ್ಜನ್ಯವಂ, ಪಾಶುಪತಾಸ್ತ್ರಕ್ಕೆ ನಾರಾಯಣಾಸ್ತ್ರವಂ ಸಹ ಪ್ರಯೋಗಿಸಿದನು ॥೧೩॥ ಮತ್ತು ಕೃಷ್ಣನು ಜೃಂಭಣಾಸ್ತ್ರದಿಂ ರುದ್ರನಂ ಸ್ತಂಭಿಸಿ ಮೋಹಿತನಂ ಗೆಯ್ದು ಖಡ್ಗಗದಾಬಾಣಂಗಳಿಂ ಆ ಬಾಣನ ಸೇನೆಯಂ

ಷೋಭಿಃ ‖೧೪‖ ಸ್ಕಂದಃಪ್ರದ್ಯುಮ್ನಬಾಣೌಘೈರರ್ದ್ಯಮಾನಸ್ಸಮಂತತಃ । ಅಸೃಗ್ವಿಮುಂಚನ್ ಗಾತ್ರೇಭ್ಯಶ್ಶಿಖಿನಾಽಪಾದ್ರವದ್ರಣಾತ್ ‖೧೫‖ ಕುಂಭಾಂಡಃಕೂಪಕರ್ಣಶ್ಚ ಪೇತತುರ್ಮುಸಲಾರ್ದಿತೌ । ದುದ್ರುವುಸ್ತದನೀಕಾನಿ ಹತನಾಥಾನಿಸರ್ವತಃ ‖೧೬‖ ವಿಶೀರ್ಯಮಾಣಸ್ವಬಲಂದೃಷ್ಟ್ವಾಬಾಣೋಽತ್ಯಮರ್ಷಣಃ । ಕೃಷ್ಣಮಭ್ಯದ್ರವತ್ಸಂಖ್ಯೇರಥೀಹಿತ್ವೈವಸಾತ್ಯಕಿಮ್ ‖೧೭‖ ಧನೂಂಷ್ಯಾಕೃಷ್ಯಯುಗಪದ್ಬಾಣಃಪಂಚಶತಾನಿವೈ । ಏಕೈಕಸ್ಮಿನ್ ಶರೌದ್ವೌದ್ವೌಸಂದಧೇರಣಕೋವಿದಃ ‖೧೮‖ ತಾನಿಚಿಚ್ಛೇದಭಗವಾನ್ ಧನೂಂಷಿಯುಗಪದ್ಧರಿಃ । ಸಾರಥಿಂರಥಮಶ್ವಾಂಶ್ಚಹತ್ವಾಶಂಖಮಪೂರಯತ್ ‖೧೯‖ ತನ್ಮಾತಾಕೋಟರಾನಾಮನಗ್ನಾಮುಕ್ತಶಿರೋರುಹಾ । ಪುರೋಽವತಸ್ಥೇಕೃಷ್ಣಸ್ಯಪುತ್ರಪ್ರಾಣರಿರಕ್ಷಯಾ ‖

---

ನು. ‖೧೪‖ ಸ್ಕಂದಃ-ಗುಹನು, ಪ್ರದ್ಯುಮ್ನ ಬಾಣೌಘೈಃ-ಪ್ರದ್ಯುಮ್ನನ ಬಾಣಸಂಘಗಳಿಂದ, ಸಮಂತತಃ-ಸಂಪೂರ್ಣವಾಗಿ, ಅರ್ದ್ಯಮಾನಃ-ಪೀಡಿಸಲ್ಪಡುವನಾಗಿ, ಗಾತ್ರೇಭ್ಯಃ-ಮುಖ್ಯವಯವಂಗಳ ದೆಸೆಯಿಂದ, ಅಸೃಕ್-ರಕ್ತವನ್ನು, ವಿಮುಂಚನ್-ಬಿಡುತಿರುವನಾಗಿ, ಶಿಖಿನಾ-ನವಿಲುವಾಹನದಿಂದ, ರಣಾತ್‌ಅಪಾದ್ರವತ್-ಕಾಳಗದತ್ತಣಿಂ ಓಡಿದನು ‖೧೫‖ ಕುಂಭಾಂಡನೂ ಕೂಪಕರ್ಣನೂ, ಮುಸಲಾರ್ದಿತೌ-ರಾಮನ ಒನಕೆಯಿಂದ ಪೀಡಿಸಲ್ಪಟ್ಟವರಾಗಿ, ಪೇತತುಃ- ಬಿದ್ದುಹೋದರು. ಹತನಾಥಾನಿ-ಕೊಲ್ಲಲ್ಪಟ್ಟ ನಾಯಕರುಳ್ಳ, ತದನೀಕಾನಿ-ಆ ಬಾಣನ ದಂಡುಗಳು, ಸರ್ವತಃ-ಎಲ್ಲಕಡೆಗಳಿಗೂ, ದುದ್ರುವುಃ-ಓಡಿದವು ‖೧೬‖ ವಿಶೀರ್ಯಮಾಣಂ-ಶಿಥಿಲವಾಗುತ್ತಿರುವ, ಸ್ವಬಲಂ-ತನ್ನ ದಂಡನ್ನು, ದೃಷ್ಟ್ವಾ-ನೋಡಿ, ಅತ್ಯಮರ್ಷಣಃ-ಬಹಳ ಸಿಟ್ಟುಳ್ಳಂಥಾದ, ಬಾಣಃ-ಬಲಿಪುತ್ರನು, ಸಂಖ್ಯೇ-ಕಾಳಗದಲ್ಲಿ. ಸಾತ್ಯಕಿಂ-ಶೈನೇಯನನ್ನು, ಹಿತ್ವೈವ-ಬಿಡಲೇಬಿಟ್ಟು, ರಥೀ-ತೇರುಳ್ಳವನಾಗಿ, ಕೃಷ್ಣಂ-ವಾಸುದೇವನನ್ನು, ಅಭ್ಯದ್ರವತ್-ಇದಿರಟ್ಟಿದನು ‖೧೭‖ ರಣಕೋವಿದಃ-ಯುದ್ಧದಲ್ಲಿ ಪಂಡಿತನಾದ, ಬಾಣನು, ಪಂಚಶತಾನಿಧನೂಂಷಿ ೫೦೦ ಬಿಲ್ಲುಗಳನ್ನು, ಯುಗಪತ್-ಏಕಕಾಲದಲ್ಲಿ, ಆಕೃಷ್ಯ-ಎಳೆದು, ಏಕೈಕಸ್ಮಿನ್-ಒಂದೊಂದು ಬಿಲ್ಲಿನಲ್ಲಿ, ದ್ವೌದ್ವೌಶರೌ-ಎರಡೆರಡಂಬುಗಳನ್ನು, ಸಂದಧೇ-ಜೋಡಿಸಿದನು ‖೧೮‖ ಭಗವಾನ್‌ಹರಿಃ-ಸರ್ವಜ್ಞನಾದ ಕೃಷ್ಣನು, ತಾನಿಧನೂಂಷಿ-ಆ ಬಿಲ್ಲುಗಳನ್ನು, ಯುಗಪತ್-ಏಕಕಾಲದಲ್ಲಿ, ಚಿಚ್ಛೇದ-ಕಡಿದನು, ಸಾರಥಿಂ- ತೇರಂ ನಡೆಯಿಸುವವನನ್ನೂ, ರಥಂ-ತೇರನ್ನೂ, ಅಶ್ವಾಂಶ್ಚ-ಕುದುರೆಗಳನ್ನೂ, ಹತ್ವಾ-ನಾಶಮಾಡಿ, ಶಂಖಂ-ಜಯಸೂಚಕವಾದ ಪಾಂಚಜನ್ಯವನ್ನು, ಅಪೂರಯತ್-ತುಂಬಲೂದಿದನು ‖೧೯‖ ಕೋಟರಾನಾಮ-ಕೋಟರೆಯೆಂಬ ಪ್ರಸಿದ್ಧಳಾದ, ತನ್ಮಾತಾ-ಆ ಬಾಣನತಾಯಿ [ಸಿಂಧ್ಯಾವಳಿಯೆನತಿ], ನಗ್ನಾ-ಬೆತ್ತಲೆಯಾದವಳೂ, ಮುಕ್ತಶಿರೋರುಹಾ-ಬಿಚ್ಚಲ್ಪಟ್ಟ ಕೂದಲುಳ್ಳವಳೂ ಆಗಿ, ಪುತ್ರಪ್ರಾಣರಿರಕ್ಷಯಾ-ಮಗನ ಪ್ರಾಣಂಗಳನ್ನು ರಕ್ಷಿಸಲಪೇಕ್ಷೆಯಿಂದ, ಕೃಷ್ಣಸ್ಯ-ವಿಷ್ಣುವಿನ, ಪುರಃ-ಮುಂಗಡೆಯಲ್ಲಿ, ಅವತಸ್ಥೇ-ನಿಂತಳು ‖೨೦‖

---

ಪ್ರಹರಿಸಿದನು ‖೧೪‖ ಸ್ಕಂದನು ಪ್ರದ್ಯುಮ್ನನ ಬಾಣಂಗಳಿಂ ಪೀಡಿತನಾಗಿ ಅವಯವಂಗಳಿಂ ರಕ್ತವಂ ಸೋರಿಸುತ ಮಯೂರವಾಹನವನೇರಿ ಯುದ್ಧರಂಗದಿಂದ ಹಿಂದಕ್ಕೆ ತಿರುಗಿದನು ‖೧೫‖ ಕುಂಭಾಂಡಕೂಪಕರ್ಣರಿಬ್ಬರೂ ಸಾತ್ಯಕಿಯಿಂದ ಮುಸಲಕ ಯುದ್ಧದಿಂದ ಕೊಲ್ಲಲ್ಪಟ್ಟವರಾಗಿ ಕೆಳಕ್ಕೆಬಿದ್ದರು. ಆಗ ನಷ್ಟರಾದ ನಾಥರುಳ್ಳ ಅವರಸೇನೆಗಳು ನಾಲ್ಕುಕಡೆಯಲ್ಲಿಯೂ ಓಡಿದವು ‖೧೬‖ ಅನಂತರದಲ್ಲಿ ಬಾಣಾಸುರನು ಭಗ್ನವಾದ ತನ್ನಸೇನೆಯಂನೋಡಿ ಸಹಿಸದೆ ಯುದ್ಧದಲ್ಲಿ ಸಾತ್ಯಕಿಯಂಬಿಟ್ಟು ಕೃಷ್ಣನನಟ್ಟಿಕೊಂಡು ಹೋದನು ‖೧೭‖ ಆಗ ಯುದ್ಧದಲ್ಲಿ ದುರ್ಮದನಾದ ಬಾಣಾಸುರನು ಏಕಕಾಲದಲ್ಲಿ ಐನೂರು ಹಸ್ತಗಳಿಂದ ಐನೂರು ಧನುಸ್ಸುಗಳಂ ಪಿಡಿದು ಒಂದೊಂದರಿಂದ ಎರಡೆರಡು ಬಾಣಂಗಳಂ ಪ್ರಯೋಗಿಸಿದನು ‖೧೮‖ ಕೃಷ್ಣನು ಏಕಕಾಲದಲ್ಲಿ ಅವನ ಧನುಸ್ಸುಗಳಂ ಛೇದಿಸಿ ಮತ್ತು ಸಾರಥಿಯುಂ ರಥಮಂ ಅಶ್ವಂಗಳಂಸಹ ಸಂಹರಿಸಿ ವಿಜಯಶಂಖಮಂ ಪೂರಿಸಿದನು ‖೧೯‖ ಬಳಿಕ ಕೋಟರೆಯೆಂಬ ಹೆಸರುಳ್ಳ ಬಾಣನತಾಯಿ ತನ್ನಪುತ್ರನ ಪ್ರಾಣಂಗಳಂ ರಕ್ಷಿಸಲಿಚ್ಛೆಯಿಂದ ದಿಗಂಬರಳಾಗಿ ತಲೆಕೂದಲುಗಳಂ ಚದರಿಸಿಕೊಂಡು ಶ್ರೀಕೃಷ್ಣನ ಮುಂಗಡೆಯಲ್ಲಿ ಬಂದುನಿಂತಳು ‖೨೦‖ ಆಗ

ಶೋಜ್ವರಃ | ಶರಣಾರ್ಥೀಹೃಷೀಕೇಶಂತುಷ್ಟಾವಪ್ರಯತಾಂಜಲಿಃ ||೨೪|| ಮಾಹೇಶ್ವರಜ್ವರಃ||ನಮಾಮಿ
ತ್ವಾನಂತಶಕ್ತಿಂಪರೇಶಂಸರ್ವಾತ್ಮಾನಂಕೇವಲಂಜ್ಞಪ್ತಿಮಾತ್ರಮ್ | ವಿಶ್ವೋತ್ಪತ್ತಿಸ್ಥಾನಸಂರೋಧಹೇ
ತುಂಯತ್ತದ್ಬ್ರಹ್ಮಬ್ರಹ್ಮಲಿಂಗಂಪ್ರಶಾಂತಮ್ ||೨೫|| ಕಾಲೋದೈವಂಕರ್ಮಜೀವಃಸ್ವಭಾವೋದ್ರ
ವ್ಯಂಕ್ಷೇತ್ರಂಪ್ರಾಣಆತ್ಮಾವಿಕಾರಃ| ತತ್ಸಂಘಾತೋಬೀಜರೋಹಪ್ರವಾಹಸ್ತ್ವನ್ಮಾಯೈಷಾತನ್ನಿಷೇಧಂ
ಪ್ರಪದ್ಯೇ ||೨೬|| ನಾನಾಭಾವೈರ್ಲೀಲಯೈವೋಪಪನ್ನೈರ್ದೇವಾನ್ಸಾಧೂನ್ಲೋಕಸೇತೂನ್ಬಿಭರ್ಷಿ|

---

ರಕ್ಷಣವನ್ನು, ಅಲಬ್ಧ್ವಾ-ಪಡೆಯದೆ, ಭೀತಃ-ಹೆದರಿದ, ಮಾಹೇಶ್ವರೋಜ್ವರಃ-ರೌದ್ರಸಂತಾಪಶಕ್ತಿಯು, ಶರಣಾರ್ಥೀ-ರಕ್ಷಣವಂ ಬಯಸುವುದಾಗಿ, ಪ್ರಯತಾಂಜಲಿಃ-ಯತ್ನಪೂರ್ವಕವಾಗಿ ಕೈಜೋಡಿಸಿಕೊಂಡದ್ದಾಗಿ, ಹೃಷೀಕೇಶಂ-ಇಂದ್ರಿಯಂಗಳಿಗೊಡೆಯನಾದ ಕೃಷ್ಣನನ್ನು, ತುಷ್ಟಾವ-ಕೊಂಡಾಡಿತು ||೨೪|| [ಜ್ವರವಚನವು] ಯತ್-ಯಾವವಸ್ತುವು, ಬ್ರಹ್ಮಲಿಂಗಂ-ಬ್ರಹ್ಮವಸ್ತುವಿನ ಗುರ್ತುಗಳ್ಳ, ಪ್ರಶಾಂತಂ-ಪ್ರಾಕೃತದೋಷಂಗಳಿಲ್ಲದ, ಬ್ರಹ್ಮ-ದೇವತಾತ್ವದಿಂದಕ್ಕೆ ಲಕ್ಷ್ಯವಸ್ತುವೋ, ತತ್-ಆ ವಸ್ತುವೇ ಆದ ಅನಂತಶಕ್ತಿಂ-ಕೊನೆಯಿಲ್ಲದ ಸಾಮರ್ಥ್ಯವುಳ್ಳವನಾದ, ಪರೇಶಂ-ಪರಮಾತ್ಮನಾದ, ಕೇವಲಂ-ನಿಗರ್ಣಾದ್ವೈತವಸ್ತುವಾದ, ಜ್ಞಪ್ತಿಮಾತ್ರಂ-ನಿರ್ವಿಕಲ್ಪಕಜ್ಞಾನ ರೂಪದಿಂದಿರುವ, ವಿಶ್ವೋತ್ಪತ್ತಿಸ್ಥಾನಸಂರೋಧಹೇತುಂ-ಜಗತ್ತಿನ ಸೃಷ್ಟಿಸ್ಥಿತಿಲಯಂಗಳಿಗೆ ಕಾರಣವಾದ ತ್ವಾ-ನಿನ್ನನ್ನು, ನಮಾಮಿ-ನಮಸ್ಕರಿಸುವೆನು ||೨೫|| ಕಾಲಃ-ಜನ್ಯವಾತ್ರಕ್ಕೆ ಆಧಾರವಾದ ಕಾಲತತ್ವವೂ, ದೈವಂ-ಅದೃಷ್ಟವೂ, ಕರ್ಮ-ಕ್ರಿಯೆಯೂ, ಜೀವಃ-ಚಿದಾಭಾಸನೂ, ಸ್ವಭಾವಃ-ಸಹಜಶೀಲವೂ, ದ್ರವ್ಯಂ-ಸಗುಣವಸ್ತುಗಳೂ, ಯಜ್ಞಸಾಧನಂಗಳೂ, ಕ್ಷೇತ್ರಂ ಶರೀರವೂ, ಪ್ರಾಣಃ-ಅಧ್ಯಾತ್ಮವೂ, ಆತ್ಮಾ-ದೇಹಾಭಿಮಾನಿಯೂ, ವಿಕಾರಃ-ಮಾನಸಭಾವವೂ, ಅಥವಾ ಭೂತಪರಿಣಾಮವೂ ತತ್ಸಂಘಾತಃ-ಇವುಗಳ ಸೇರಿಕೆಯಾದ ಸಮಷ್ಟಿಯೂ, ಬೀಜರೋಹಪ್ರವಾಹಃ-ಕಾರಣದಿಂದ ಕಾರ್ಯಹುಟ್ಟುವುದೆಂಬ ಪರಂಪರೆಯೂ, ಏಷಾ-ಇವೆಲ್ಲವೂ, ತ್ವನ್ಮಾಯಾ-ನಿನ್ನ ಮೋಹನವಾಗಿರುವವು. (ಆದ್ದರಿಂದ ಮಿಥ್ಯಾಭೂತವು) ತನ್ನಿಷೇಧಂ-ಆ ಮಿಥ್ಯಾಪ್ರಪಂಚವಿಲ್ಲದನಿಸುವ, ಅಧಿಷ್ಠಾನ-ಸತ್ತಾಮಾತ್ರವಾದ ನಿನ್ನನ್ನು, ಪ್ರಪದ್ಯೇ-ಸೆಚ್ಚಿಸೇರಿಸುವೆನು ||೨೬|| ಲೀಲಯೈವ-ವಿಲಾಸದಿಂದಲೇ, ಉಪಪನ್ನೈಃ-ಪೂರ್ಣಂಗಳಾಗಿರುವ, ನಾನಾಭಾವೈಃ-ಹಲವುರೂಪಂಗಳಿಂದ, ದೇವತೆಗಳನ್ನೂ, ಸಾಧೂನ್-ಸತ್ಪುರುಷರನ್ನೂ, ಲೋಕಸೇತೂನ್-ಲೋಕರಕ್ಷಣದ ಕಟ್ಟೆಗಳಾದ ಧರ್ಮಮಾರ್ಗಗಳನ್ನೂ, ಬಿಭರ್ಷಿ-ಪೋಷಿಸುತ್ತಿರುವಿ. ಉನ್ಮಾರ್ಗಾನ್-ವೇದಮಾರ್ಗವಂ ಮೀರಿದವರಾದ, ಹಿಂಸಯಾವರ್ತಮಾನಾನ್-ಪರರಂಪೀಡಿಸುವುದ ರೊಡನೆಯಿರುವವರನ್ನು, ಹಂಸಿ-ಕೊಲ್ಲುತ್ತಿರುವ, ತೇ-ನಿ

---

ಶರಣಾರ್ಥಿಯಾಗಿ ಅಂಜಲಿಬಂಧವಂಗೆಯ್ದುಕೊಂಡು ಶ್ರೀಕೃಷ್ಣನಂ ಸ್ತುತಿಸಿತು ||೨೪|| ಅದೆಂತೆನೆ-ಎಲೈಶ್ರೀಹರಿಯೇ| ಅನಂತಶಕ್ತಿಗಳುಳ್ಳವನಾಗಿ ಸರ್ವರಿಗೂ ಆತ್ಮನಾಗಿರುವೆಯಾದ್ದರಿಂದ ಬ್ರಹ್ಮಾದಿಗಳಿಗೂ ನಿಯಾಮಕನಾದ ಶುದ್ಧನಾದ ಜ್ಞಾನಮಾತ್ರಸ್ವರೂಪನಾದ ಮತ್ತು ಪ್ರಪಂಚದ ಉತ್ಪತ್ತಿಸ್ಥಿತಿಲಯಂಗಳಿಗೆ ಕಾರಣನಾದ ವೇದದಿಂ ಪ್ರಕಾಶಂಗೆಯ್ಯಲ್ಪಡುವ ಪರಬ್ರಹ್ಮಸ್ವರೂಪನಾದ ಸರ್ವವಿಕಾರರಹಿತನಾದ್ದರಿಂದ ವೇದದಿಂದಲೂ ಪ್ರತ್ಯಕ್ಷವಾಗಿ ನಿರೂಪಿಸಲಶಕ್ಯನಾದ ನಿನ್ನಂ ನಾನುನಮಸ್ಕರಿಸುತ್ತೇನೆ ||೨೫|| ಕ್ಷೋಭಕವಾದಕಾಲವು ನಿಮಿತ್ತನಾದ ಕರ್ಮವು ದೈವವು ಆಕರ್ಮಂಗಳ ಸಂಸ್ಕಾರವುಳ್ಳ ಜೀವನು ಸೂಕ್ಷ್ಮಭೂತಂಗಳು ಶರೀರವು ಸೂತ್ರಾತ್ಮಕವಾದ ಪ್ರಾಣವು ಅಹಂಕಾರವು ಏಕಾದಶೇಂದ್ರಿಯಂಗಳು ಪಂಚಮಹಾಭೂತಂಗಳುಸಹ ೧೬ವಿಕಾರಂಗಳು ಅವುಗಳು ಸಂಘಾತರೂಪವಾದ ಆದೇಹವು ಅದರಿಂದುಂಟಾದ ಅಂಕುರರೂಪವಾದದೇಹವೂ, ಆಮೇಲೆ ಪುನಃ ಅದೇರೀತಿಯಲ್ಲಿ ಯುಂಟಾಗುವುದಾದಕಾರಣದಿಂ ಬೀಜಾಂಕುರಂಗಳಂತೆಯಿರುವ ಸಂಸಾರಪ್ರವಾಹವು ಈಸಮಸ್ತವೂ ನಿನ್ನ ಮಾಯೆಯೇ ಹೊರತು ಮತ್ತೊಂದಲ್ಲ. ಆಮಾಯೆಗೂ ಅವಧಿಸ್ಥಾನವಾದನಿನ್ನಂ ಶರಣುಹೊಂದುತ್ತೇನೆ||೨೬
ಎಲೈಹರಿಯೇ| ನಿನ್ನಲೀಲೆಯಿಂದ ಅಂಗೀಕರಿಸಲ್ಪಟ್ಟ ಅನೇಕಪ್ರಕಾರಂಗಳಾದ ಮತ್ಸ್ಯಾದ್ಯವತಾರಂಗಳಿಂ ದೇವತೆಗಳಂಪಾಲಿಸುತ್ತ ಅವರಿಗೋಸ್ಕರವಾಗಿ ವರ್ಣಾಶ್ರಮಧರ್ಮಂಗಳಂ ಪಾಲಿಸಲೋಸುಗಅನುಷ್ಠಾನಪರರಾದ

ಹಂಸ್ಯನ್ಯಾಸ್ಮರ್ತ್ಯಾನ್ಹಿಂಸಯಾವರ್ತ್ತಮಾನಾನ್ಜನ್ಮೈತತ್ತೇಭಾರಹಾರಾಯಭೂಮೇಃ ॥೨೮॥ ತಪ್ತೋ
ಹಂತೇತೇಜಸಾದುಸ್ಸಹೇನಶಾಂತೋಗ್ರೇಣಾತ್ಯುಲ್ಬಣೇನಜ್ವರೇಣ । ತಾವತ್ತಾಪೋದೇಹಿನಾಂತೇಂಘ್ರಿಮೂಲಂ
ನೋಸೇವೇರನ್ಯಾವದಾಶಾನುಬದ್ಧಾಃ ॥೨೯॥ ಶ್ರೀಭಗವಾನ್ ॥ ತ್ರಿಶಿರಸ್ತೇಪ್ರಸನ್ನೋಹಂವ್ಯೇತುತೇಮಜ್ಜ್ವ
ರಾದ್ಭಯಮ್ ॥ ಯೋನೌಸ್ಮರತಿಸಂವಾದಂತಸ್ಯತ್ವನ್ನಭವೇದ್ಭಯಮ್ ॥೩೦॥ ಇತ್ಯುಕ್ತೋಚ್ಯುತ
ಮಾನಮ್ಯಗತೋಮಾಹೇಶ್ವರೋಜ್ವರಃ । ಬಾಣಸ್ತುರಥಮಾರೂಢಃಪ್ರಾಗಾದ್ಯೋತ್ಸ್ಯನ್ಜನಾರ್ದನಮ್ ॥

---

ನ್ನ, ಏತಜ್ಜನ್ಮ-ಈ ಅವತಾರವು, ಭೂಮೇಃ-ಭೂದೇವಿಯ, ಭಾರಹಾರಾಯ-ಹೊರೆಯನ್ನಿಳಿಸಲೋಸುಗವೇ ಆಗಿರುವುದು. ತೇ-ನಿನ್ನ, ತೇಜಸಾ-ಸಾಮರ್ಥ್ಯಾಂಶವಾದ, (ನಿನ್ನಿಂದ ಹುಟ್ಟಿಸಲ್ಪಟ್ಟ) ದುಸ್ಸಹೇನ-ಸೈರಿಸಕೂಡದ, ಶಾಂತೋಗ್ರೇಣ-ಅಡಗಿದ ಉಷ್ಣವುಳ್ಳ, ಅತ್ಯುಲ್ಬಣೇನ-ಅಧಿಕವಾಗಿ ಕೆರಳಿದ, ಜ್ವರೇಣ-ಶೀತಜ್ವರದಿಂದ, ಅಹಂ-ಪಿತ್ತಜ್ವರವಾದ ನಾನು, ತಪ್ತಃ-ಸಂತಾಪವುಳ್ಳವನಾಗಿರುವೆನು. ಆಶಾನುಬದ್ಧಾಃ-ಅಪೇಕ್ಷೆಯಿಂದ ಕಟ್ಟಲ್ಪಟ್ಟವರಾದವರು, ಯಾವತ್-ಯಾವವರೆಗೂ, ತೇ-ನಿನ್ನ, ಅಂಘ್ರಿಮೂಲಂ-ಅಡಿಗಳ ಬುಡವನ್ನು ನೋಸೇವೇರನ್-ಭಜಿಸದೆ ಇರುವರೋ, ತಾವತ್-ಆವರೆಗೂ, ದೇಹಿನಾಂ-ಪ್ರಾಣಿಗಳಿಗೆ, ತಾಪಃ-ಸಂತಾಪವಿರುವುದು ॥೨೯॥ (ಭಗವದ್ವಚನವು) ತ್ರಿಶಿರಃ-ಮೂರುತಲೆಗಳುಳ್ಳ ರೌದ್ರವಾದ ಪಿತ್ತಜ್ವರವೇ! ಅಹಂ-ನಾನು, ತೇ-ನಿನಗೆ, ಪ್ರಸನ್ನಃ-ಅನುಗ್ರಹಕನಾಗಿರುವೆನು. ಮಜ್ಜ್ವರಾತ್-ನನ್ನ ಶೀತಜ್ವರದ ದೆಸೆಯಿಂದ, ತೇ - ಪಿತ್ತಜ್ವರವಾದ ನಿನಗೆ, ಭಯಂ-ಭೀತಿಯು, ವ್ಯೇತು-ಬಿಟ್ಟುಹೋಗಲಿ. (ಬ್ರಾಹ್ಮ್ಯವಾದ ವಾತಜ್ವರ ಭಯವಂತಿಲ್ಲ) ಯಃ-ಯಾವಪುರುಷನು, ನೌ-ನಮ್ಮಿಬ್ಬರ, ಸಂವಾದಂ-ಸಂಭಾಷಣವನ್ನು, ಸ್ಮರತಿ-ನೆನಪುಗೊಳ್ಳುವನೋ, ತಸ್ಯ-ಅವನಿಗೆ, ತ್ವತ್-ನಿನ್ನದೆಸೆಯಿಂದ, ಭಯಂ-ಹೆದರಿಕೆಯು, ನಭವೇತ್-ಆಗದೆ ಇರಲಿ ॥೩೦॥ ಇತ್ಯುಕ್ತಃ-ಹೀಗೆ ಹೇಳಲ್ಪಟ್ಟ, ಮಾಹೇಶ್ವರಃ ಜ್ವರಃ-ರೌದ್ರಸಂತಾಪಶಕ್ತಿಯು, ಅಚ್ಯುತಂ-ಕೃಷ್ಣನನ್ನು, ಆನಮ್ಯ-ಪೊಡಮಟ್ಟು, ಗತಃ-ಹೋದುದು, ಬಾಣಸ್ತು-ಬಲಿಪುತ್ರನಾದರೋ, ರಥಂ-ತೇರನ್ನು, ಆರೂಢಃ-ಏರಿದವನಾಗಿ, ಯೋತ್ಸ್ಯನ್-ಕಾಳಗಮಾಡಲೆಳಸಿ, ಜನಾರ್ದನಂ-ದುಷ್ಟರನ್ನು ಪೀಡಿಸುವನಾದ ಕೃಷ್ಣನಂಕುರಿತು, ಪ್ರಾಗಾತ್-ಬಂದನು ॥೩೧॥ ತತಃ-ಆ ಮೇಲೆ, ಬಾಹುಸಹಸ್ರೇಣ-ತೋಳುಗಳಸಾವಿರದಿಂದ,

---

ಸತ್ಪುರುಷರಂ ಪಾಲಿಸುತ್ತ ಇರುವಿ. ಮತ್ತು ಸ್ವಜನ ರಕ್ಷಾರ್ಥವಾಗಿಯೂ ಹಿಂಸಾವ್ಯಾಪಾರದಲ್ಲಿ ಆಸಕ್ತರಾದ ದುಷ್ಟರಾದ ಶಿಶುಪಾಲಾದಿಗಳಂ ಸಂಹರಿಸುತಲಿದ್ದೀಯೆ. ಆದ್ದರಿಂದ ನಿನ್ನ ಯೀಲೀಲಾವತಾರವು ಭೂಭಾರನಿವೃತ್ತಿಗೋಸುವ ವುಂಟಾಯಿತೇ ಹೊರತು ನೀನೊಬ್ಬರಿಗೂ ಪುತ್ರನಲ್ಲ. ನೀನು ಸರ್ವೋಪಾಧಿರಹಿತನೇಸರಿ ॥೨೮॥ ಎಲೈಸ್ವಾಮಿಯೇ! ನಿನ್ನಿಂದ ನಿರ್ಮಿಸಲ್ಪಟ್ಟದ್ದಾಗಿ ಸಹಿಸಲಶಕ್ಯವಾಗಿರುವ ಶೀತಜ್ವರದಿಂದ ನಾನು ಅತ್ಯಂತವಾಗಿ ತಪಿಸಲ್ಪಟ್ಟದ್ದಾದೆನು. ಪ್ರಾಣಿಗಳು ಎಷ್ಟುಪರ್ಯಂತವೂ ಕಾಮಪಾಶಬದ್ಧರಾಗಿ ನಿನ್ನಪಾದಪಂ ಸೇವಿಸುವುದಿಲ್ಲವೋ ಅಷ್ಟುಪರ್ಯಂತವೇ ಪ್ರಾಣಿಗಳಿಗೆ ಸಂತಾಪ ವುಂಟಾಗುವುದು. ನಿನ್ನಸೇವೆಯಲ್ಲಿ ಪ್ರವರ್ತಿಸಿದವರಿಗೆ ಸಂತಾಪವುಂಟಾಗುವುದು ಉಚಿತವಲ್ಲವಲ್ಲವೆ ॥೨೯॥ ಎಂದೀರೀತಿಯಲ್ಲಿ ಮಾಹೇಶ್ವರಜ್ವರದಿಂದ ಗೆಯ್ಯಲ್ಪಟ್ಟಸ್ತುತಿಯಂ ಕೇಳಿ ಶ್ರೀಕೃಷ್ಣನು ನುಡಿದನು. ಎಲೈ ಮಾಹೇಶ್ವರಜ್ವರವೇ! ನಿನಗೆ ನಾನುಪ್ರಸನ್ನನಾದೆನು. ವೈಷ್ಣವ ಜ್ವರದದೆಸೆಯಿಂದ ನಿನಗೆ ಭಯವುಂಟಾಗಲಿ, ಅದು ಹೋಗಲಿ. ಯಾವಪುರುಷನು ನಮ್ಮಿಬ್ಬರಿಗೂ ಉಂಟಾದ ಈಪರಸ್ಪರಸಂವಾದವಂ ಸ್ಮರಿಸುವನೋ ಅವನಿಗೆ ನಿನ್ನಿಂದ ಭಯವುಂಟಾಗಬೇಡ, ನೀನು ನನ್ನಾಜ್ಞೆಯಂ ಪಾಲಿಸುತ ಸುಖದಿಂ ಲೋಕದಲ್ಲಿ ಸಂಚರಿಸುವನಾಗು ॥೩೦॥ ಎಂದೀರೀತಿಯಾಗಿ ಶ್ರೀಕೃಷ್ಣನಿಂದಾಜ್ಞಾಪಿಸಲ್ಪಟ್ಟ ಮಾಹೇಶ್ವರಜ್ವರವು ಶ್ರೀಕೃಷ್ಣನಿಗೆ ನಮಸ್ಕರಿಸಿ ಅಲ್ಲಿಂದ ತೆರಳಿಹೋಯಿತು. ಆಗ ಬಾಣಾಸುರನು ಪುನಾರಥವನೇರಿ ಶೋಣಿತಪುರದಿಂದ ಯುದ್ಧಂಗೆಯ್ಯಲೋಸುಗ ಶ್ರೀಕೃಷ್ಣನಂಕುರಿತುಬಂದನು ॥೩೧॥ ಎಲೈಅರಸೇ! ಅನಂತರದಲ್ಲಿ ಬಾಣಾಸುರನು ಸಹಸ್ರಭುಜಂಗಳಿಂದ ನಾನಾಪ್ರಕಾರಂಗಳಾದ ಆಯುಧಂಗಳಂ ಪಿಡಿದವನಾ

ತತೋ ಬಾಹುಸಹಸ್ರೇಣ ನಾನಾಯುಧಧರೋ ಬಲೀ । ಮುಮೋಚ ಪರಮಕ್ರುದ್ಧೋ ಬಾಣಾಂಶ್ಚಕ್ರಾಯುಧೇ ನೃಪ ॥೩೨॥ ತಸ್ಯಾಸ್ಯತೋಸ್ತ್ರಾಣ್ಯಸಕೃಚ್ಚಕ್ರೇಣ ಕ್ಷುರನೇಮಿನಾ । ಚಿಚ್ಛೇದ ಭಗವಾನ್ ಬಾಹೂನ್ ಶಾಖಾ ಇವ ವನಸ್ಪತೇಃ ॥೩೩॥ ಬಾಹುಷು ಛಿದ್ಯಮಾನೇಷು ಬಾಣಸ್ಯ ಭಗವಾನ್ ಭವಃ । ಭಕ್ತಾನುಕಂಪ್ಯುಪವ್ರಜ್ಯ ಚಕ್ರಾಯುಧಮಭಾಷತ ॥ ಶ್ರೀರುದ್ರ ಉ ॥ ತ್ವಂ ಹಿ ಬ್ರಹ್ಮ ಪರಂ ಜ್ಯೋತಿರ್ಗೂಢಂ ಬ್ರಹ್ಮಣಿ ವಾಙ್ಮಯೇ । ಯಂ ಪಶ್ಯಂತ್ಯಮಲಾತ್ಮಾನ ಆಕಾಶಮಿವ ಕೇವಲಮ್ ॥೩೪॥ ನಾಭಿರ್ನಭೋಗ್ನಿರ್ಮುಖಮಂಬು ರೇತೋ ದ್ಯೌಃ ಶೀರ್ಷಮಾಶಾಃ ಶ್ರುತಿರಂಘ್ರಿರುರ್ವೀ । ಚಂದ್ರೋ ಮನೋ ಯಸ್ಯ ದೃಗರ್ಕ ಆತ್ಮಾ ಅಹಂ ಸಮು

---

ನಾನಾಯುಧಧರಃ-ಹಲವು ಕೈದುಗಳಂ ಹಿಡಿದವನಾದ್ದರಿಂದ, ಬಲೀ-ಬಲವುಳ್ಳ ಬಾಣನು, ಪರಮಕ್ರುದ್ಧಃ-ಬಹಳ ಸಿಟ್ಟುಳ್ಳವನಾಗಿ, ಚಕ್ರಾಯುಧೇ-ಕೃಷ್ಣನಲ್ಲಿ, ಬಾಣಾನ್-ಅಂಬುಗಳನ್ನು, ಮುಮೋಚ-ಬಿಟ್ಟನು, ನೃಪ-ಪರೀಕ್ಷಿತನೇ ॥೩೨॥ ಭಗವಾನ್-ಕೃಷ್ಣನು, ಅಸ್ತ್ರಾಣಿ-ಆಯುಧಂಗಳನ್ನು, ಅಸ್ಯತಃ-ಎಸೆಯುತ್ತಿರುವ, ತಸ್ಯ-ಆ ಬಾಣನ, ಬಾಹೂನ್-ತೋಳುಗಳನ್ನು, ಕ್ಷುರನೇಮಿನಾ-ಚೂರಿಯಂತೆ ಅಂಚುಳ್ಳ, ಚಕ್ರೇಣ-ಚಕ್ರಾಯುಧದಿಂದ, ವನಸ್ಪತೇಃ ಶಾಖಾ ಇವ-ಮರದ ಕೊಂಬೆಗಳನಂತೆ, ಅಸಕೃತ್-ಬಹಳಸಲ, ಚಿಚ್ಛೇದ-ಕಡಿದನು ॥೩೩॥ ಬಾಣಸ್ಯ-ಬಾಣಾಸುರನ ಬಾಹುಷು-ತೋಳುಗಳು, ಛಿದ್ಯಮಾನೇಷು-ಕಡಿಯಲ್ಪಡುತ್ತಿರಲಾಗಿ, ಭಗವಾನ್-ಸರ್ವಜ್ಞನಾದ, (ಷಡ್ಗುಣೈಶ್ವರ್ಯಪೂರ್ಣನಾದ, ಭವಃ-ರುದ್ರನು, ಭಕ್ತಾನುಕಂಪೀ-ಸೇವಕನಾದ ಬಾಣನಲ್ಲಿ ದಯೆಯುಳ್ಳವನಾದ್ದರಿಂದ, ಉಪವ್ರಜ್ಯ-ಹತ್ತಿರಕ್ಕೆ ಬಂದು, ಚಕ್ರಾಯುಧಂ-ಕೃಷ್ಣನನ್ನು ಕುರಿತು, ಅಭಾಷತ-ಹೇಳಿದನು॥ (ರುದ್ರವಚನವು) ವಾಙ್ಮಯೇ ಬ್ರಹ್ಮಣಿ-ಉಪನಿಷದ್ರೂಪವಾದ ಪ್ರಣವನಾದದಲ್ಲಿ, ಗೂಢಂ-ಅಡಗಿರುವ, ಜ್ಯೋತಿಃ-ಜ್ಞಾನವಾದ, ಪರಬ್ರಹ್ಮ-ಪರಮಾತ್ಮವಸ್ತು, ತ್ವಂಹಿ-ನೀನಲ್ಲವೆ ? ಅಮಲಾತ್ಮಾನಃ-ನಿರ್ಮಲಚಿತ್ತರಾದ ಜ್ಞಾನಿಗಳು, ಯಂ-ವಾಕ್ಕುಗಳಿಗೆ ಅವಿಷಯವಾದ ಯಾವ ನಿರ್ಗುಣಬ್ರಹ್ಮವನ್ನು, ಆಕಾಶಮಿವ-ಗಗನದಂತೆ, ಕೇವಲಂ-ನಿರ್ವಿಶೇಷಾದ್ವೈತವನ್ನಾಗಿ, ಪಶ್ಯಂತಿ-ತಿಳಿಯುವರೋ, ತತ್-ಅದೂ ಕೂಡ, ತ್ವಂಹಿ-ನೀನೇ ಅಲ್ಲವೆ? ॥೩೪॥ ಯಸ್ಯ-ಯಾವವನಿಗೆ, ನಭಃ-ಆಕಾಶವು, ನಾಭಿಃ-ಹೊಕ್ಕಳು, ಅಗ್ನಿಃ-ತೇಜಸ್ಸು, ಮುಖಂ-ಬಾಯಿ, ಅಂಬು-ಜಲವು, ರೇತಃ-ಶುಕ್ಲವು, ದ್ಯೌಃ-ಅಂತರಿಕ್ಷವು, ಶೀರ್ಷಂ-ತಲೆಯು, ಆಶಾಃ-ದಿಕ್ಕುಗಳು, ಶ್ರುತಿಃ-ಕಿವಿಯು, ಉರ್ವೀ-ಭೂಮಿಯು, ಅಂಘ್ರಿಃ-ಕಾಲು, ಚಂದ್ರಃ-ಸೋಮನು, ಮನಃ-ಮನಸ್ಸು, ಅ

---

ಗಿ ಅತಿಕ್ರೋಧಯುಕ್ತನಾಗಿ ಶ್ರೀಕೃಷ್ಣನಮೇಲೆ ಬಾಣಂಗಳಂ ಬಿಟ್ಟನು ॥೩೨॥ ಶ್ರೀ ಕೃಷ್ಣನು ಬಾರಿಬಾರಿಗೂ ಅಸ್ತ್ರಂಗಳಂ ಪ್ರಯೋಗಿಸುತಲಿರುವ ಬಾಣಾಸುರನ ಭುಜಂಗಳಂ ಕ್ಷುರದಂತೆ ಅತಿ ತೀಕ್ಷ್ಣವಾದ ಅಂಚುಳ್ಳ ಚಕ್ರಾಯುಧದಿಂದ ವೃಕ್ಷದ ಶಾಖೆಗಳನೆಂತಂತೆ ಛೇದಿಸಿದನು ॥೩೩॥ ಈ ರೀತಿಯಲ್ಲಿ ಶ್ರೀ ಕೃಷ್ಣನಿಂದ ಬಾ



ಣಾಸುರನ ಭುಜಂಗಳು ಛೇದಿಸಲ್ಪಡುತ್ತಿರಲು ಭಗವಂತನಾದ ಶ್ರೀ ರುದ್ರನು ಭಕ್ತನಾದ ಬಾಣಾಸುರನಲ್ಲಿ ಅತ್ಯಂತ ದಯೆಯುಳ್ಳವನಾಗಿ ಸಮೀಪಕ್ಕೆ ಬಂದು ಶ್ರೀ ಕೃಷ್ಣನಂ ಕುರಿತು ಈರೀತಿಯಿಂದ ಸ್ತುತಿಸಿದ ನದೆಂತೆನೆ-॥೩೪॥ ಎಲೈ ಶ್ರೀ ಕೃಷ್ಣನೇ! ಸೂರ್ಯಾದಿ ಜ್ಯೋತಿಸ್ಸುಗಳಿಗೂ ಪ್ರಕಾಶಕನಾದ ಕಾರಣ ಪರಂ ಜ್ಯೋತಿಸ್ವರೂಪನಾಗಿ ವೇದಂಗಳಿಗೂ ಗೋಚರನಾಗದೆ ಗೂಢನಾಗಿರುವ ಪರ ಬ್ರಹ್ಮವೇ ನೀನು. ಮತ್ತು ಶುದ್ಧರಾದ ಪುರುಷರು ಆಕಾಶದಂತೆ ಸಂಗರಹಿತನಾದ ಯಾವ ನಿನ್ನಂ ನೋಡುತಲಿರುವರೋ ಆ ನಿನ್ನನ್ನೆದುರಿಸಿರುವ ಈ ಬಾಣನು ಯುದ್ಧಂಗೆಯ್ದನೆಂಬುವುದು ಆಶ್ಚರ್ಯವಲ್ಲ ॥೩೫॥ ನಿರ್ಗುಣವಾದ ನಿನ್ನ ಸ್ವರೂಪ ಮಾತ್ರವೇ ತಿಳಿಯ

ದ್ರೋ ಜಠರಂ ಭುಜ ಇಂದ್ರಃ ॥೩೬॥ ರೋಮಾಣಿ ಯಸ್ಯೌಷಧಯೋಽಂಬುವಾಹಾಃ ಕೇಶಾ ವಿರಿಂಚೋ ಧಿಷಣಾ ವಿಸರ್ಗಃ । ಪ್ರಜಾಪತಿರ್ಹೃದಯಂ ಯಸ್ಯ ಧರ್ಮಃ ಸ ವೈ ಭವಾನ್ ಪುರುಷೋ ಲೋಕಕಲ್ಪಃ ॥೩೭॥ ತವಾವತಾರೋಽಯಮಕುಂಠಧಾಮನ್ ಧರ್ಮಸ್ಯ ಗುಪ್ತ್ಯೈ ಜಗತೋ ಭವಾಯ । ವಯಂ ಚ ಸರ್ವೇ ಭವತಾನುಭಾವಿತಾ ವಿಭಾವಯಾಮೋ ಭುವನಾನಿ ಸಪ್ತ ॥೩೮॥ ತ್ವಮೇಕ ಆದ್ಯಃ ಪುರುಷೋಽದ್ವಿತೀಯಸ್ತುರ್ಯಸ್ಸ್ವದೃಗ್ಘೇತುರಹೇತುರೀಶಃ । ಪ್ರತೀಯಸೇಽಥಾಪಿ ಯಥಾವಿಕಾರಂ ಸ್ವಮಾಯಯಾ ಸರ್ವಗುಣಪ್ರಸಿದ್ಧ್ಯೈ ॥೩೯॥ ಯಥೈವ ಸೂರ್ಯಃ ಪಿಹಿತಶ್ಛಾಯಯಾ ಸ್ವಯಾ ಛಾಯಾಂ ಚ ರೂಪಾಣಿ ಚ ಸಂಚಕಾಸ್ತಿ । ಏವಂ ಗುಣೇನಾಪಿಹಿತೋ

---

ಅರ್ಕಃ-ಸೂರ್ಯನು, ದೃಕ್-ಕಣ್ಣು, ಅಹಂ-ನಾನಾದ ರುದ್ರನು, ಆತ್ಮಾ-ಅಹಂಕಾರವು, ಸಮುದ್ರಃ-ಕಡಲು ಜಠರಂ-ಹೊಟ್ಟೆಯು, ಇಂದ್ರಃ-ಇಂದ್ರನು, ಭುಜಾ-ತೋಳು, ಆಗಿರುವವನೋ ॥೩೬॥ ಯಸ್ಯ-ಯಾವವನ, ರೋಮಾಣಿ-ಸಣ್ಣಕೂದಲು, ಓಷಧಯಃ-ಪೈರುಗಳೋ, ಕೇಶಾಃ-ಕೂದಲು, ಅಂಬುವಾಹಾಃ-ಮೇಘಂಗಳೋ, ಧಿಷಣಾ-ಬುದ್ಧಿಯು, ವಿರಿಂಚಃ- ಚತುರ್ಮುಖನೋ. ವಿಸರ್ಗಃ-ಶಿಶ್ನವು, ಪ್ರಜಾಪತಿಃ-ಸೃಷ್ಟಿದೇವತೆಯೋ, ಯಸ್ಯ-ಯಾವವನ, ಹೃದಯಂ-ಗುಂಡಿಗೆಯು, ಧರ್ಮಃ-ಧರ್ಮದೇವತೆಯೋ, ಲೋಕಕಲ್ಪಃ-ಪ್ರಪಂಚಸ್ವರೂಪನಾದ, ಸಃಪುರುಷಃ-ಆ ವಿರಾಟ್ಪುರುಷನೂ, ಭವಾನ್ವೈ-ನೀನೆಅಲ್ಲವೇ ? ॥೩೭॥ ಅಕುಂಠಧಾಮನ್-ಅಪ್ರಚ್ಯುತ ಸ್ವರೂಪನೇ, ತವ-ನಿನ್ನ, ಅಯಮವತಾರಃ-ಈ ಕೃಷ್ಣರೂಪವು, ಧರ್ಮಸ್ಯ-ಪುಣ್ಯದ, ಗುಪ್ತ್ಯೈ-ರಕ್ಷಣಕ್ಕೋಸುಗವೂ, ಜಗತಃ-ಪ್ರಪಂಚದ, ಭವಾಯ-ಕ್ಷೇಮಕ್ಕೋಸುಗವೂ, ಆಗಿರುವದು. ವಯಂಸರ್ವೇಚ-ನಾವೆಲ್ಲರೂ, ಭವತಾ-ನಿನ್ನಿಂದ, ಅನುಭಾವಿತಾಃ-ಪಾಲಿಸಲ್ಪಟ್ಟವರಾಗಿ, ಸಪ್ತಭುವನಾನಿ-೭ ಲೋಕಂಗಳನ್ನೂ, ವಿಭಾವಯಾಮಃ-ಪಾಲಿಸುವೆವು ॥೩೮॥ ತ್ವಂ-ನೀನು, ಏಕಃ-ದ್ವಿತೀಯಸತ್ಯವಸ್ತುವಿಲ್ಲದವನು, ಆದ್ಯಃಪುರುಷಃ-ಪ್ರಥಮಶರೀರಿಯು. ಅದ್ವಿತೀಯಃ-ಸಮಾನಾಧಿಕವಸ್ತ್ವಂತರವಿಲ್ಲದವನು, ತುರ್ಯಃ-ಮೂರ್ತಿತ್ರಯಾತೀತನಾದ ಕಾರಣಶಿವನು, ಸ್ವದೃಕ್-ಸ್ವರೂಪಾನುಭವವುಳ್ಳವನು, ಹೇತುಃ-ಜಗಜ್ಜನ್ಮಾದಿಗಳಿಗೆ ಕಾರಣವಾದವನು. ಅಹೇತುಃ-ಹೇತುತ್ವೋಪಾಧಿಯಿಲ್ಲದವನು ಅಥವಾ ಕಾರ್ಯವಲ್ಲದವನು. ಈಶಃ-ಅಂತರ್ಯಾಮಿಯು, ಅಥವಾ ನಿಯಾಮಕನು, ಆಗಿಪ್ರತೀಯಸೇ-ತೋರುತ್ತಿರುವಿ ಅಥಾಪಿ ಇಹಶವೇ ದಿಯೂ, ಸ್ವಮಾಯಯಾ-ನಿನ್ನ ಮೋಹಕಶಕ್ತಿಯಿಂದ, ಸರ್ವಗುಣಪ್ರಸಿದ್ಧ್ಯೈ-ಸತ್ವಾದಿನಿಕಲ ಪ್ರಾಕೃತಗುಣಂಗಳ ಪ್ರಖ್ಯಾತಿಗೋಸುಗ, ಯಥಾವಿಕಾರಂ-ಪ್ರಾಕೃತವಿಕಾರಂಗಳನ್ನತಿಕ್ರಮಿಸದೆ, ಪ್ರತೀಯಸೇ-ತೋರುತ್ತಿರುವಿ ॥೩೯॥ ಭೂಮನ್-ಬಹ

---

ಳ ಶಕ್ಯವೇ ಅಲ್ಲ, ನಿನ್ನ ವಿರಾಡ್ರೂಪವು ಕೂಡ ತಿಳಿಯಲು ಶಕ್ಯವೆಂದು ಸ್ತುತಿಸುವನೆಂತೆನೆ-ಯಾವ ವಿರಾಟ್ಪುರುಷನಿಗೆ ಅಂತರಿಕ್ಷವು ನಾಭಿಯೋ ಅಗ್ನಿಯೇ ಮುಖವೋ ಜಲವೇ ರೇತಸ್ಸೋ ಸ್ವರ್ಗವೇ ಶಿರಸ್ಸೋ ದಿಕ್ಕುಗಳೇ ಶ್ರೋತ್ರಂಗಳೋ ಭೂಮಿಯೇ ಪಾದವೋ ಚಂದ್ರನೇ ಮನಸ್ಸೋ ಸೂರ್ಯನೇ ಚಕ್ಷುಸ್ಸೋ ನಾನೇ ಅಹಂಕಾರವೋ ಸಮುದ್ರವೇ ಉದರವೋ ಇಂದ್ರನೇ ಭುಜವೋ ॥೩೬॥ ಮತ್ತು ಯಾವವನಿಗೆ ಓಷಧಿಗಳೇ ರೋಮಂಗಳೋ ಮೇಘಂಗಳೇ ಕೇಶಂಗಳೋ ಬ್ರಹ್ಮದೇವನೇ ಬುದ್ಧಿಯೋ ಪ್ರಜೇಶ್ವರನೇ ಮೇಢ್ರವೋ ಧರ್ಮವೇ ಹೃದಯವೋ, ಈರೀತಿಯಾಗಿ ಲೋಕಂಗಳಲ್ಲಿ ಕಲ್ಪಿತವಾದ ಅಂತಾವಿರಾಟ್ಪುರುಷನು ಕೂಡ ನೀನಲ್ಲವೆ? ॥೩೭॥ ಚ್ಯುತಿಯಿಲ್ಲದೆಯಿರುವ ಸ್ವರೂಪವುಳ್ಳ ಎಲೈ ಶ್ರೀಕೃಷ್ಣನೇ! ನಿನ್ನ ಅವತಾರವು ಧರ್ಮರಕ್ಷಣಾರ್ಥವಾಗಿ ಜಗತ್ತಿನ ಅಭ್ಯುದಯಕ್ಕೋಸ್ಕರವಾಗಿಯೂ ಉಂಟಾಯಿತು. ಲೋಕಪಾಲಕರಾದ ನಾವೆಲ್ಲರೂ ನಿನ್ನಿಂದಪಾಲಿಸಲ್ಪಟ್ಟವರಾಗಿ ಸಮಸ್ತಲೋಕಂಗಳಂ ಪಾಲಿಸುತಲಿದ್ದೇವೆ ॥೩೮॥ ಮತ್ತು ನೀನು ಅವಸ್ಥಾತ್ರಯ ಯುಕ್ತವಾದ ಸಮಸ್ತ ಪುರುಷರಿಗೂ ಮೂಲಪ್ರಕೃತಿ ರೂಪನಾದ್ದರಿಂದ ಸಜಾತೀಯ ಭೇದರಹಿತನಾಗಿ, ಸರ್ವಕ್ಕೂ ಕಾರಣನಾದ್ದರಿಂದ ವಿಜಾತೀಯ ಭೇದರಹಿತನಾಗಿ, ಮತ್ತು ಸ್ವಯಂ ಕಾರಣನಾದ್ದರಿಂದ ಈಶ್ವರನಾಗಿ ಸಾಕ್ಷಿಯಾಗಿ ಸ್ವಪ್ರಕಾಶನಾಗಿ ಸಹ ಇದ್ದರೂ ಸರ್ವ ವಿಷಯಂಗಳಂ ಪ್ರಕಾಶಂಗೆಯ್ಯಲೋಸುಗ ಮಾಯೆಯಿಂ ವಿಕಾರಭೇದಂಗಳಿಂ ನಾನಾಪ್ರಕಾರವಾಗಿ ತೋರುತಲಿರುವಿ ॥೩೯॥ ಮತ್ತು ಯಾವರೀತಿಯಿಂ ಸೂರ್ಯನು ಮೇಘರೂ

ಗುಣಾಂಸ್ತ್ವಮಾತ್ಮಪ್ರದೀಪೋಗುಣಿನಶ್ಚಭೂಮನ್ ||೪೦||ಯನ್ಮಾಯಯಾಮೋಹಿತಧಿಯಃಪುತ್ರದಾರಗೃಹಾದಿಷು | ಉನ್ಮಜ್ಜಂತಿನಿಮಜ್ಜಂತಿಪ್ರಸಕ್ತಾವೃಜಿನಾರ್ಣವೇ ||೪೧|| ದೇವದತ್ತಮಿಮಂಲಬ್ಧ್ವಾನೃಲೋಕಮಜಿತೇಂದ್ರಿಯಃ | ಯೋನಾದ್ರಿಯೇತತ್ವತ್ಪಾದೌಸಶೋಚ್ಯೋಹ್ಯಾತ್ಮವಂಚಕಃ||೪೨||ಯಸ್ತ್ವಾಂವಿಸೃಜತೇಮರ್ತ್ಯಆತ್ಮಾನಂಪ್ರಿಯಮೀಶ್ವರಮ್ | ವಿಪರ್ಯಯೇಂದ್ರಿಯಾರ್ಥಾರ್ಥಂವಿಷಮತ್ತ್ಯಮೃತಂತ್ಯಜನ್ ||೪೩|| ಅಹಂಬ್ರಹ್ಮಾಚವಿಬುಧಾಮುನಯಶ್ಚಾಮಲಾಶಯಾಃ | ಸರ್ವಾತ್ಮನಾಪ್ರಪನ್ನಾಸ್ತ್ವಾ

---

ಛಾದಿತೋಪ್ಯವನೇ! ಸೂರ್ಯಃ-ಆದಿತ್ಯನು, ಸ್ವಯಂ-ತಾನು, ಘನೈಃ-ಮೇಘಗಳಿಂದ, ಪಿಹಿತಃ-ಮುಚ್ಚಲ್ಪಟ್ಟವನಾಗಿ, ಯಥಾ-ಹೇಗೆ, ಛಾಯಾಂಚ-ನೆಳಲನ್ನೂ, ರೂಪಾಣಿಚ-ದ್ರವ್ಯಗುಣಾದಿಗಳನ್ನೂ, ಸಂಚಕಾಸ್ತ್ಯೇವ-ಬೆಳಗಿಸುತ್ತಲೇ ಇರುವನೋ, ಏವಂ-ಹೀಗೆ, ಆತ್ಮಪ್ರದೀಪಃ-ಸ್ವಪ್ರಕಾಶನಾದ, ತ್ವಂ-ನೀನು, ಗುಣೇನ-ಜೀವರಿಗೆ ಆವರಕವಾದ ಅಹಂಕಾರದಿಂದ, ಅಪಿಹಿತಃ-ಭೇದವೃಷ್ಟಿಯಿಂದ ಮುಚ್ಚಲ್ಪಟ್ಟವನಾಗಿ, ಗುಣಾನ್-ಸತ್ವಾದ್ಯುಪಾಧಿಗಳನ್ನೂ, ಗುಣಿನಶ್ಚ-ಉಪಹಿತರಾದ ಜೀವರನ್ನೂ, ಬೆಳಗಿಸುತ್ತಿರುವಿ||೪೦||ಯನ್ಮಾಯಯಾಮೋಹಿತಧಿಯಃ-ಯಾವನಿನ್ನ ಮಾಯೆಯಿಂದಮೋಹಿಸಲ್ಪಟ್ಟಬುದ್ಧಿಯುಳ್ಳವರು, ಪುತ್ರದಾರಗೃಹಾದಿಷು-ಮಕ್ಕಳು ಹೆಂಡಿರು ಮನೆಮೊದಲಾದವುಗಳಲ್ಲಿ, ಪ್ರಸಕ್ತಾಃ-ಸಂಬಂಧವುಂಟಾದವರಾಗಿ, ವೃಜಿನಾರ್ಣವೇ-ದುರಿತವಕಡಲಿನಲ್ಲಿ, ಉನ್ಮಜ್ಜಂತಿ-ತೇಲುವರು,ನಿಮಜ್ಜಂತಿ-ಮುಳುಗುತ್ತಿರುವರು||೪೧||ದೇವದತ್ತಂ-ದೇವರಾದನಿನ್ನಿಂದಕೊಡಲ್ಪಟ್ಟಿರುವ, ಇಮಂನೃಲೋಕಂ-ಈ ಮರ್ತ್ಯಲೋಕವನ್ನು, ಲಬ್ಧ್ವಾ-ಪಡೆದು, ಯಃ-ಯಾವಪುರುಷನು, ಅಜಿತೇಂದ್ರಿಯಃ-ನಿಗ್ರಹಿಸಲ್ಪಡದ ಇಂದ್ರಿಯಂಗಳುಳ್ಳವನಾಗಿ, ತ್ವತ್ಪಾದೌ-ನಿನ್ನ ಚರಣಗಳನ್ನು, ನಾದ್ರಿಯೇತ-ಆದರಿಸದೆಬಿಡುವನೋ, ಆತ್ಮವಂಚಕಃ-ತನ್ನನ್ನೇ ಮೋಸಗೊಳಿಸಿಕೊಳ್ಳುವನಾದ, ಸಃ-ಆ ಪುರುಷನು, ಶೋಚ್ಯೋಹಿ-ಅಯ್ಯೋ ಕೆಟ್ಟುಹೋಗುವನೆಂದು ಅನುತಾಪಗೊಳ್ಳಲ್ಪಡತಕ್ಕವನಲ್ಲವೆ?||೪೨|| ಯೋಮರ್ತ್ಯಃ-ಯಾವಮನುಷ್ಯನು, ವಿಪರ್ಯಯೇಂದ್ರಿಯಾರ್ಥಾರ್ಥಂ-ವಿಪರ್ಯಯ- ವ್ಯತ್ಯಸ್ತಂಗಳಾದ, ಎಂದರೆ ಆತ್ಮವಲ್ಲದ ಪ್ರಿಯನಲ್ಲ ಈಶ್ವರನಲ್ಲ, ಇಂದ್ರಿಯಾರ್ಥಾರ್ಥಂ-ಪುತ್ರಾದಿಗಳಿಗೋಸುಗವು, ಆತ್ಮಾನಂ-ತನಗೆಚೈತನ್ಯವಾಗಿರುವ, ಎಂದರೆ ಸಚ್ಚಿತ್ತಾದ, ಪ್ರಿಯಂ-ಆನಂದವಾದ, ಈಶ್ವರ_ಪರಮೇಶ್ವರನಾದ ನಿನ್ನನ್ನು, ವಿಸೃಜತೇ-ಪರಿತ್ಯಜಿಸುವನೋ, ಸಃ-ಆ ಪುರುಷನು, ಅಮೃತಂ-ಮರಣರಹಿತವಾದ ವಸ್ತುವನ್ನು, ವಿಷಮಿತಿ-ಮರಣಕರವಸ್ತುವೆಂದರಿತು, ತ್ಯಜನ್-ಬಿಡುವವನಂತಾಗುವನು ||೪೩|| ಅಹಂ-ನಾನು, ಬ್ರಹ್ಮಾಚ-ಚತುರ್ಮುಖನೂ, ವಿಬುಧಾಃ-ದೇವರ್ಕಳೂ, ಅಮಲಾಶಯಾಃ-ನಿ

---

ಪವಾದ ತನ್ನ ಛಾಯೆಯಿಂದ ಅನ್ಯದೃಷ್ಟಿಯಿಂದ ಆಚ್ಛಾದನಂ ಗೆಯ್ಯಲ್ಪಟ್ಟವನಾದರೂ ಆಮೇಘರೂಪವಾದ ಛಾಯೆಯಿಂ ಮೇಘದಿಂ ಮರೆಮಾಡಲ್ಪಟ್ಟ ಘಟಾದಿಗಳಂ ಸಹಪ್ರಕಾಶಂಗೆಯ್ಯುತಲಿದ್ದಾನೆಯೋ ಅದೇರೀತಿಯಾಗಿ ನೀನು ಸ್ವಕಾರ್ಯವಾದ ಜಗತ್ತಿಗೆ ಆವರಣರೂಪವಾದ ಅಹಂಕಾರದಿಂದ ಜೀವದೃಷ್ಟಿಯಿಂದಾಚ್ಛಾದನಂಗೆಯ್ಯಲ್ಪಟ್ಟವನಾದರೂ ಪ್ರಕಾಶನನ್ನಾಗಿ ಸತ್ವಾದ್ಯುಪಾಧಿಗಳಂ ತದುಪಾಧಿಯುಕ್ತರಾದ ಜೀವರಂ ಸಹಪ್ರಕಾಶಂಗೆಯ್ಯುತ್ತಲಿರುವೆ. ಆದಕಾರಣದಿಂದ ಸರ್ವಸಾಕ್ಷಿಯಾದ ನಿನಗೆ ಸಂಸಾರಬಂಧವಿಲ್ಲ||೪೦|| ಯಾವನಿನ್ನ ಮಾಯೆಯಿಂದ ಮೋಹಿಸಲ್ಪಟ್ಟ ಬುದ್ಧಿಯುಳ್ಳಪುರುಷನು ಪತ್ನೀಪುತ್ರಗೃಹಾದಿಗಳಲ್ಲಿ ಅತ್ಯಂತಾಸಕ್ತರಾಗಿ ದುಃಖಸಮುದ್ರದಲ್ಲಿ ತೇಲುತಲೂ ಮುಳುಗುತಲೂ ಇರುವರೋ ಅಂತಾನಿನಗೆ ಎಂತು ಸಂಸಾರ ಬಂಧವುಂಟಾಗುವುದು? ||೪೧|| ಎಂದೀರೀತಿಯಲ್ಲಿ ಜೀವೇಶ್ವರವ್ಯವಸ್ಥೆಯಂ ನಿರೂಪಿಸಿ ಹರಿಯಂ ಸೇವಿಸದೆಯಿರುವ ಪುರುಷನಂ ನಿಂದಿಸುವನವೆಂತೆನೆ-ಕರ್ಮಾಧ್ಯಕ್ಷನಾದ ನಿನ್ನಿಂದಕೊಡಲ್ಪಟ್ಟಈಮನುಷ್ಯದೇಹವಂ ಪಡೆದವನಾದರೂ ಯಾವಪುರುಷನು ಜಿತೇಂದ್ರಿಯನಲ್ಲವೆ ನಿನ್ನಪಾದಂಗಳಂ ಸೇವಿಸದೆ ಯಿರುವನೋ ಆತ್ಮವಂಚಕನಾದ_ಆಪುರುಷನೇ ದುಃಖಿಸಲು ಯೋಗ್ಯನಲ್ಲವೆ?||೪೨||ಯಾವಪುರುಷನು ಅನಾತ್ಮವಾಗಿ ಅಪ್ರಿಯಂಗಳಾಗಿ ಅಸ್ವತಂತ್ರಂಗಳಾಗಿಯೂ ಇರುವವಾದಕಾರಣದಿಂ ವಿಪರೀತಂಗಳಾದ ಪುತ್ರಾದಿ ವಿಷಯಂಗಳಿಗೋಸುಗ ಆತ್ಮನಾದ ಪ್ರಿಯನಾದ ಸ್ವತಂತ್ರನಾದ ನಿನ್ನಂ ತ್ಯಜಿಸುತಲಿರುವನೋ, ಆಪುರುಷನು ಅಮೃತವಂಬಿಟ್ಟು ವಿಷವಂ ಪಾನಂಗೆಯ್ಯುತಲಿರುವನು ||೪೩|| ನಾನೂಬ್ರ

ಮಾತ್ಮಾನಂಪ್ರಿಯಮೀಶ್ವರಮ್ ॥೪೪॥ ತ್ವಂಹಿಜಗತ್ಸ್ಥಿತ್ಯುದಯಾಂತಹೇತುಃಸಮಃಪ್ರಶಾಂತಃಸು ಹೃದಾತ್ಮದೈವಮ್ । ಅನನ್ಯಮೇಕಂಜಗದಾತ್ಮಕೇತಂಭವಾಪವರ್ಗಾಯಭಜಾಮದೇವ॥೪೫॥ ಅಯಂಮ ಮೇಷ್ಟೋದಯಿತೋನುವರ್ತೀಮಯಾಭಯಂದತ್ತಮಮುಷ್ಯದೇವ । ಸಂಪಾದ್ಯತಾಂತದ್ಭವತಃಪ್ರಸಾ ದೋಯಥಾಹಿತೇದೈತ್ಯಪತೌಪ್ರಸಾದಃ ॥೪೬॥ ಶ್ರೀಭಗವಾನ್॥ ಯದಾತ್ಥಭಗವಂಸ್ತ್ವಂನಃಕರವಾಮಪ್ರಿ ಯಂತವ । ಭವತೋಯದ್ವ್ಯವಸಿತಂತನ್ಮೇಸಾಧ್ವನುಮೋದಿತಮ್ ॥೪೭॥ ಅವಧ್ಯೋಯಂಮಮಾಪ್ಯೇಷ

---

ರ್ಮಲ ಹೃದಯರಾದ, ಮುನಯಃ-ಜ್ಞಾನಿಗಳೂ, ಪ್ರೇಷ್ಠಂ-ಅತ್ಯಂತಅತಿಶಯನಾದ, ಈಶ್ವರಂ-ನಿಯಾಮಕನಾದ, ಆತ್ಮಾ ನಂ-ಸ್ವಸ್ವರೂಪವಾಗಿರುವ, ತ್ವಾಂ-ನಿನ್ನನ್ನು, ಸರ್ವಾತ್ಮನಾ-ಸಕಲಭಾವದಿಂದ, ಪ್ರಪನ್ನಾಃ-ನಂಬಿ ಸೇರಿದವರಾಗಿರುವೆವು॥ ದೇವ-ಆತ್ಮಕ್ರೀಡನೆ, ಜಗತ್‌ಸ್ಥಿತ್ಯುದಯಾಂತಹೇತುಃ-ಪ್ರಪಂಚದ ಪಾಲನೆಗೂ ಸೃಷ್ಟಿಗೂ ನಾಶಕ್ಕೂ ಕಾರಣನಾದ, ಸ ಮಃ-ಎಲ್ಲರಲ್ಲಿಯೂ ಸಮನಾಗಿರುವ, ಪ್ರಶಾಂತಃ-ದೋಷಂಗಳಿಲ್ಲದೆ ಸಮಾಧಾನವಾದ, ಸುಹೃದಾತ್ಮದೈವಂ-ಬುದ್ಧಿಪ್ರೇರ ಕನಾದ್ದರಿಂದ ಸ್ನೇಹಿತನೂ, ಸರ್ವಾತ್ಮಕನಾದ್ದರಿಂದ ಆತ್ಮನೂ, ಈಶ್ವರನಾದ್ದರಿಂದ ದೇವರೂ ಆದ, ಜಗದಾತ್ಮಕೇತಂ-ಲೋ ಕಂಗಳಿಗೂ ಆತ್ಮರಿಗೂ ಅಧಿಷ್ಠಾನವಾದ, ಅನನ್ಯಂ-ಸಜಾತೀಯ ವಿಜಾತೀಯಭೇದ ರಹಿತನಾದ ಏಕಂ-ಸ್ವಗತಭೇದಶೂ ನ್ಯನಾದ, (ಓರ್ವನಾದ) ತಂತ್ವಾ-ಆ ನಿನ್ನನ್ನು, ಭವಾಪವರ್ಗಾಯ-ಸಂಸಾರದ ಮೋಕ್ಷಕ್ಕೋಸುಗ, ಭಜಾಮ-ಸೇವಿಸುವೆವು॥ ದೇವ ಕೃಷ್ಣನೇ? ಅಯಂ-ಈ ಬಾಣನು, ಮಮ-ನನಗೆ, ಇಷ್ಟಃ-ಬೇಕಾದವನು, ದಯಿತಃ-ನನ್ನ ದಯೆಯಿಂದ ಕೂಡಿದವನು, ಅ ನುವರ್ತೀ-ನನ್ನನ್ನು ಅನುಸರಿಸಿಕೊಂಡಿರುವವನು ಮಯಾ-ನನ್ನಿಂದ, ಅಮುಷ್ಯ-ಇವನಿಗೆ, ಅಭಯಂ-ಕ್ಷೇಮವು, ದತ್ತಂ-ಕೊ ಡಲ್ಪಟ್ಟಿದೆ, ತೇ-ನಿನ್ನ, ಪ್ರಸಾದಃ-ಅನುಗ್ರಹವು, ದೈತ್ಯಪತೌ-ಪ್ರಹ್ಲಾದನಲ್ಲಿ, ಯಥಾ-ಹೇಗೋ, ತಥಾ-ಹಾಗೆ, ಭವತಃ-ನಿ ನ್ನ, ಪ್ರಸಾದಃ-ಅನುಗ್ರಹವು, ಸಂಪಾದ್ಯತಾಂ-ಇವನಿಂದಲೂ ಪಡೆಕೊಳ್ಳಲ್ಪಡಲಿ ॥೪೬॥ (ಭಗವದ್ವಾಕ್ಯವು) ಭಗವನ್- ಸರ್ವಜ್ಞನಾದ ಪರಮೇಶ್ವರನೇ, ತ್ವಂ-ನೀನು, ನಃ-ನಮ್ಮಂಕುರಿತು, ಯತ್-ಯಾವುದರನ್ನು, ಆತ್ಥ-ಹೇಳಿದೆಯೋ, ತತ್-ಅ, ತವಪ್ರಿಯಂ-ನಿನ್ನ ಇಷ್ಟವನ್ನು, ಕರವಾಮ-ಮಾಡುವೆವು, ಭವತಾ-ನಿನ್ನಿಂದ, ಯತ್-ಯಾವದು, ವ್ಯವಸಿತಂ-ವಿಚಾರದಿಂದ ನಿ ಶ್ಚಯಿಸಲ್ಪಟ್ಟಿದೆಯೋ, ತತ್-ಅದು-ನನ್ನಿಂದ, ಸಾಧು-ಚನ್ನಾಗಿ, ಅನುಮೋದಿತಂ-ಒಪ್ಪಿಕೊಳ್ಳಲ್ಪಟ್ಟಿದೆ ॥೪೭॥ ವೈರೋ ಚನಿಸುತಃ-ಪ್ರಹ್ಲಾದನಮಗನಾದ ವಿರೋಚನಮಗನಾದ ಬಲಿಯಮಗನಾದವನು, ಅಯಮಸುರಃ-ಈ ಬಾಣಾಸುರನು, ಏ

---

ಹ್ಮದೇವನೂ ನಿರ್ಮಲವಾದ ಅಂತಃಕರಣವುಳ್ಳ ಬ್ರಹ್ಮದೇವನೂ ಮುನಿಗಳೂಕೂಡ ಆತ್ಮನಾಗಿ ಅತಿಪ್ರಿಯನಾಗಿ ಈಶ್ವರನಾಗಿಯೂ ಇರುವನಿನ್ನಂ ಸರ್ವಭಾವದಿಂದಲೂ ಶರಣುಹೊಂದುತಲಿರುವೆವು ॥೪೪॥ ಮತ್ತು ಜಗತ್ತಿನಉ ತ್ಪತ್ತಿಸ್ಥಿತಿಲಯಂಗಳಿಗೆ ಕಾರಣನಾದ ಉಪಶಾಂತನಾದ್ದರಿಂದ ಸರ್ವತಸ್ಸಮನಾದ ಬುದ್ಧಿಪ್ರೇರಕನಾದ್ದರಿಂ ಮಿ ತ್ರರೂಪನಾದ ಸರ್ವಾತ್ಮಕನಾದ್ದರಿಂ ಆತ್ಮನಾದ ಈಶ್ವರನೂಆದ ಮತ್ತು ನಿನಗಿಂತಲೂ ಮತ್ತೊಬ್ಬಪೂಜ್ಯನಿಲ್ಲ ದೆಯಿರುವ ಮತ್ತು ಅದ್ವಿತೀಯನಾದ ಲೋಕಂಗಳಿಗೂ ಜೀವರಿಗೂ ಅಧಿಷ್ಠಾನಭೂತನಾದ ಇಂತಾದದೇವೋತ್ತ ಮನಾದ ನಿನ್ನಂ ನಾವು ಸಂಸಾರ ಮೋಕ್ಷಕ್ಕೋಸುಗ ಭಜಿಸುತ್ತೇವೆ ॥೪೫॥ ಎಲೈಶ್ರೀಹರಿಯೇ! ಬಾಣಾಸುರನು ನನ್ನನ್ನನುಸರಿಸಿಕೊಂಡಿರುವ ನಾದ್ದರಿಂದ ನನಗೆ ಭಕ್ತನಾದವನು. ಮತ್ತು ನನ್ನಿಂದ ಇವನಿಗೆ ವರಕೊಡಲ್ಪಟ್ಟಿ ತ್ತು, ಆಕಾರಣದಿಂದ ಈಗಯಾವರೀತಿಯಿಂ ಪ್ರಹ್ಲಾದನಲ್ಲಿ ನಿನಗೆ ಪ್ರಸಾದಉಂಟಾಯಿತೋ ಅದೇರೀತಿಯಿಂದ ಇ ವನಲ್ಲಿ ನಿನಗೆ ಪ್ರಸಾದ ಉಂಟಾಗಲಿ ॥೪೬॥ ಎಂದು ಶ್ರೀರುದ್ರನಿಂ ಸ್ತುತಿಸಲ್ಪಟ್ಟ ಶ್ರೀಕೃಷ್ಣದೇವನು ಶ್ರೀರುದ್ರ ದೇವನಂ ಕುರಿತು ಹೇಳಿದನೆಂತೆನೆ- ಎಲೈಭಗವಂತನಾದ ಶ್ರೀರುದ್ರನೇ! ನಮ್ಮಂಕುರಿತು ಯಾವ ಅರ್ಥವಂ ಹೇಳಿದೆಯೋ ನಿನಗೆ ಪ್ರಿಯವಾದರ್ಥವಂ ನಾವೂಮಾಡುವರಾಗುವೆವು. ನಿನ್ನವ್ಯಾಪಾರವು ನಮ್ಮಿಂದ ಸಮ್ಮತಿಸ ಲ್ಪಟ್ಟಿತು ॥೪೭॥ ಈಬಾಣಾಸುರನು ನನ್ನಭಕ್ತನಾದ ಬಲಿಗೆ ಪುತ್ರನಾದ್ದರಿಂದಲೂ ಮತ್ತು ಪ್ರಹ್ಲಾದನಿಗೋ ಸ್ಕರ ನಿನ್ನ ವಂಶವು ವಧಿಸಲು ಯೋಗ್ಯವಾಗಬೇಡವೆಂದು. ನನ್ನಿಂದಲೂ ವರಕೊಡಲ್ಪಟ್ಟಿರುವುದರಿಂದಲೂ, ನೆ

ವೈರೋಚನಿಸುತೋಽಸುರಃ । ಪ್ರಹ್ಲಾದಾಯವರೋದತ್ತೋನವಧ್ಯೋಮೇತ್ವದನ್ವಯಃ ॥೪೭॥ ದರ್ಪೋಪ
ಶಮನಾಯಾಸ್ಯಪ್ರವೃಕ್ಣಾಬಾಹವೋಮಯಾ । ಸೂದಿತಂಚಬಲಂಭೂರಿಯಚ್ಚಭಾರಾಯಿತಂಭುವಃ॥
ಚತ್ವಾರೋಽಸ್ಯಭುಜಾಶ್ಶಿಷ್ಟಾಭವಿಷ್ಯತ್ಯಜರಾಮರಃ । ಪಾರ್ಷದಮುಖ್ಯೋಭವತೋನಕುತಶ್ಚಿದ್ಭಯೋ
ಸುರಃ ॥೫೦॥ ಇತಿಲಬ್ಧ್ವಾಭಯಂಕೃಷ್ಣಂಪ್ರಣಮ್ಯಶಿರಸಾಸುರಃ । ಪ್ರಾದ್ಯುಮ್ನಿಂರಥಮಾರೋಪ್ಯ
ಸವಧ್ವಾಸಮುಪಾನಯತ್ ॥೫೧॥ ಅಕ್ಷೌಹಿಣ್ಯಾಪರಿವೃತಂಸುವಾಸಸಮಲಂಕೃತಮ್ । ಸಪತ್ನೀಕಂ
ಪುರಸ್ಕೃತ್ಯಯಯೌರುದ್ರಾನುಮೋದಿತಃ ॥೫೨॥ ಸ್ವರಾಜಧಾನೀಂಸಮಲಂಕೃತಾಂಧ್ವಜೈಸ್ಸತೋರಣೈ-
ರ್ಭೂಷಿತಮಾರ್ಗಚತ್ವರಾಮ್ । ವಿವೇಶಶಂಖಾನಕದುಂದುಭಿಸ್ವನೈರಭ್ಯುದ್ಯತಃಪೌರಸುಹೃದ್ದ್ವಿಜಾ

---

ಷಃ-ಇವನು, ಮಯಾಪಿ-ನನ್ನಿಂದಲೂ, ಅವಧ್ಯಃ-ಕೊಲ್ಲಲ್ಪಡತಕ್ಕವನಲ್ಲವು. ತ್ವದನ್ವಯಃ-ನಿನ್ನ ಸಂತತಿಯು, ಮೇ- ನನ್ನಿಂದ, ನವಧ್ಯಃ-ಕೊಲ್ಲಲ್ಪಡತಕ್ಕದ್ದಲ್ಲವೆಂಬ, ವರಃ-ಮನೋರಥವು, ಪ್ರಹ್ಲಾದಾಯ-ಹಿರಣ್ಯಕಶಿಪುವಿನ ಮಗನಿಗೆ, ದತ್ತಃ-ನನ್ನಿಂದ ಕೊಡಲ್ಪಟ್ಟಿದೆ ॥೪೭॥ ಅಸ್ಯ-ಈ ಬಾಣಾಸುರನ, ದರ್ಪೋಪಶಮನಾಯ-ಗರ್ವವ ನಡಗಿಸಲೋಸುಗ, ಬಾಹವಃ-ತೋಳುಗಳು, ಮಯಾ-ನನ್ನಿಂದ, ಪ್ರವೃಕ್ಣಾಃ-ಛೇದಿಸಲ್ಪಟ್ಟವಾಗಿವೆ ಯತ್-ಯಾವದು, ಭುವಃ-ಭೂಮಿಗೆ, ಭಾರಾಯಿತಂ-ಹೊರೆಯಾಗಿತ್ತೋ, ಭೂರಿ-ಬಹುವಾದ, ತದ್ಬಲಂಚ-ಆ ಸೈನ್ಯವೂಕೂಡ, ಸೂದಿತಂ-ನಾಶಗೊಳಿಸಲ್ಪಟ್ಟಿತು ॥೪೮॥ ಅಸ್ಯ-ಇವನ, ಚತ್ವಾರೋಭುಜಾಃ-ನಾಲ್ಕು ತೋಳುಗಳು, ಶಿಷ್ಟಾಃ-ಮಿಕ್ಕಿರುವವು. ಅಸುರಃ-ಬಾಣನು ಸುರನಲ್ಲದವನಾದರೂ, ಅಜರಾಮರಃ-ಮುದಿತನವೂ ಮರಣವೂ ಇಲ್ಲದವನೂ, ಭವತಃ-ನಿನ್ನ, ಪಾರ್ಷದಮುಖ್ಯಃ-ಸಭಿಕರಲ್ಲಿ ಪ್ರಧಾನನೂ, ನಕುತಶ್ಚಿದ್ಭಯಃ-ಯಾವುದರ ದೆಸೆಯಿಂದಲೂ ಭೀತಿಯಿಲ್ಲದವನು, ಭವಿಷ್ಯತಿ-ಆಗುತ್ತಾನೆ. ॥೫೦॥ ಇತಿ-ಹೀಗೆ, ಅಭಯಂ-ಕ್ಷೇಮವನ್ನು, ಲಬ್ಧ್ವಾ-ಪಡೆದು, ಅಸುರಃ-ಬಾಣನು, ಕೃಷ್ಣಂ-ಹರಿಯನ್ನು, ಶಿರಸಾ-ತಲೆಯಿಂದ, ಪ್ರಣಮ್ಯ-ನಮಸ್ಕರಿಸಿ, ತಂಪ್ರಾದ್ಯುಮ್ನಿಂ-ಆ ಅನಿರುದ್ಧನನ್ನು, ಸವಧ್ವಾ-ಕಾಂತೆಯಾದ ಉಷೆಯೊಡನೆ, ರಥಂ-ತೇರನ್ನು, ಆರೋಪ್ಯ-ಏರಿಸಿ, ಉಪಾನಯತ್-ಬಳಿಗೆ ತಂದನು ॥೫೧॥ (ಕೃಷ್ಣನು) ಅಕ್ಷೌಹಿಣ್ಯಾ-ಸೇನೆಯಿಂದ, ಪರಿವೃತಂ-ಬಳಸಲ್ಪಟ್ಟಿರುವ, ಸುವಾಸಸಂ-ಶುಭ್ರವಸ್ತ್ರಗಳುಳ್ಳ, ಸಮಲಂಕೃತಂ-ಚನ್ನಾಗಿಸಿಂಗರಿಸಲ್ಪಟ್ಟಿರುವ, ಸಪತ್ನೀಕಂ-ಹೆಂಡತಿಯಿಂದ ಸಹಿತನಾದ, ಅನಿರುದ್ಧನನ್ನು, ಪುರಸ್ಕೃತ್ಯ-ಮುಂಗಡೆಯಲ್ಲಿ ಮಾಡಿಕೊಂಡು, ರುದ್ರಾನುಮೋದಿತಃ-ರುದ್ರನಿಂದ ಒಪ್ಪಿಕೊಳ್ಳಲ್ಪಟ್ಟವನಾಗಿ, ಯಯೌ-ತೆರಳಿದನು॥೫೨॥ ಸಃ-ಆ ಕೃಷ್ಣನು, ಧ್ವಜೈಃ-ಕೇತುಪತಾಕೆಗಳಿಂದ, ಸಮಲಂಕೃತಾಂ-ಚನ್ನಾಗಿ ಅಲಂಕರಿಸಲ್ಪಟ್ಟಿರುವಂಥಾ, ತೋರಣೈಃ-ಬಾಗಿಲವಟ್ಟಿಕೆಗಳಿಂದ, ಭೂಷಿತಮಾರ್ಗಚತ್ವರಾಂ-ಅಲಂಕರಿಸಲ್ಪಟ್ಟ ದಾರಿಗಳೂ ಮಂಗಡಗಳೂ ಉಳ್ಳಂಥಾ, ಸ್ವರಾಜಧಾನೀಂ-

---

ನ್ನಿಂದಲೂ ಸಂಹರಿಸಲುಯೋಗ್ಯನಲ್ಲ ॥೪೭॥ ಮತ್ತೆ ಯೇನೆಂದರೆ ಈ ಬಾಣನ ಗರ್ವವಂ ಪರಿಹರಿಸಲೋಸುಗ ನನ್ನಿಂದ ಇವನಭುಜಂಗಳು ಛೇದಿಸಲ್ಪಟ್ಟವು. ಮತ್ತು ಭೂಮಿಗೆಭಾರವಾಗಿರುವ ಅಧಿಕವಾದ ಇವನ ಸೇನೆಯೂ ಸಂಹರಿಸಲ್ಪಟ್ಟಿತು॥೪೮॥ ಈಬಾಣನಿಗೆ ನಾಲ್ಕು ಭುಜಂಗಳು ಅವಶಿಷ್ಟಂಗಳಾಗಿ ನಿಲ್ಲುತಲಿವೆ. ಮತ್ತು ಯೀಬಾಣನು ಜರಾಮರಣರಹಿತನಾಗಿ, ಯಾವುದರಿಂದಲೂ ಭಯವಿಲ್ಲದೆ ನಿನ್ನ ಗಣಪಾಲಕರಲ್ಲಿ ಮುಖ್ಯನಾಗಿಯೂ ಇರುವನು ॥೫೦॥ ಎಲೈಪರೀಕ್ಷಿದ್ರಾಯನೇ! ಕೇಳು. ಆಬಾಣಾಸುರನು ಈರೀತಿಯಾಗಿ ಕೃಷ್ಣನದೆಸೆಯಿಂದ ಅಭಯವಂ ಪಡೆದು ಶ್ರೀಕೃಷ್ಣನಂ ಶಿರಸ್ಸಿನಿಂದ ನಮಸ್ಕರಿಸಿದನು. ಅನಿರುದ್ಧನಂ ಉಷಾದೇವಿಯೊಡನೆ ರಥವನ್ನೇರಿಸಿಕೊಂಡು ಶ್ರೀಕೃಷ್ಣನ ಸಮೀಪಕ್ಕೆ ಕರೆದುತಂದನು ॥೫೧॥ ಅನಂತರದಲ್ಲಿ ಶ್ರೀಕೃಷ್ಣನು ಅಕ್ಷೌಹಿಣಿಯಾದ ಯಾದವಸೇನೆಯಿಂದ ಸುತ್ತಿಕೊಳ್ಳಲ್ಪಟ್ಟ, ಮತ್ತು ದಿವ್ಯವಸ್ತ್ರವನುಟ್ಟಿರುವ ಅಲಂಕೃತಳಾದ ಪತ್ನಿಯೊಡನೆ ಯುಕ್ತನಾದ, ಅನಿರುದ್ಧನಂ ಮುಂದುಮಾಡಿಕೊಂಡು ಶ್ರೀರುದ್ರದೇವನಿಂದ ಸನ್ಮಾನಿತಸಲ್ಪಟ್ಟವನಾಗಿ ಅಲ್ಲಿಂದ ತೆರಳಿದನು ॥೫೨॥ ಅನಂತರದಲ್ಲಿ ಶ್ರೀಕೃಷ್ಣನು ಧ್ವಜಂಗಳಿಂದಲೂ ಶುಭಕರಂಗಳಾದ ತೋರಣಂಗಳಿಂದಲೂ ಮತ್ತು ಗಂಧೋದಕಾದಿಗಳಿಂದ ನೆನೆಸಲ್ಪಟ್ಟ ರಾಜಮಾರ್ಗಳಿಂದಲೂ ಅಂಗಳಂಗಳಿಂದಲೂ ಯುಕ್ತವಾಗಿ ಅಲಂಕರಿಸ

ತ್ರಿಭಿಃ ॥೨೩॥ ಯಏತತ್ಕೃಷ್ಣವಿಜಯಂಶಂಕರೇಣಚಸಂಯುಗಂ । ಸಂಸ್ಮರೇತ್ಪ್ರಾತರುತ್ಥಾಯನತ
ಸ್ಯಸ್ಯಾತ್ಪರಾಜಯಃ॥ ... ... ... ... ... ॥೨೪॥

-ಇತಿಶ್ರೀಮದ್ಭಾಗವತೇ-ದಶಮಸ್ಕಂಧೇ-ತ್ರಿಷಷ್ಟಿತಮೋಧ್ಯಾಯಃ-

ನೃಗೋಪಾಖ್ಯಾನಕಥಾಪ್ರಾರಂಭಘಟ್ಟಃ

ಶ್ರೀಶುಕಃ॥ ಏಕದೋಪವನಂಜಗ್ಮೂರಾಜನ್ ಯದುಕುಮಾರಕಾಃ ।ವಿಹರ್ತುಂಸಾಂಬಪ್ರದ್ಯುಮ್ನ

---

ತನ್ನ ಪ್ರಧಾನ ನಗರವಾದ ದ್ವಾರಕೆಯನ್ನು, ಪೌರಸುಹೃದ್ದ್ವಿಜಾತಿಭಿಃ-। ನಾಗರಿಕರಿಂದಲೂ ಮಿತ್ರರಿಂದಲೂ ಬ್ರಾಹ್ಮಣರಿಂದಲೂ, ಶಂಖಾನಕದುಂದುಭಿಸ್ವನೈಃ-ಶಂಖಗಳ ತಮಟಗಳ ಭೇರಿಗಳ ಶಬ್ದಗಳೊಡನೆ, ಅಭ್ಯುದ್ಗತಃ-ಇದಿರ್ಗೊಳ್ಳಲ್ಪಟ್ಟವನಾಗಿ, ವಿವೇಶ-ಹೊಕ್ಕನು ॥೨೩॥ ಯಃ-ಯಾವಪುರುಷನು, ಏತತ್-ಈ,ಕೃಷ್ಣವಿಜಯಂ-ಕೃಷ್ಣನ ವಿಶೇಷವಾದ ಉತ್ಕರ್ಷವನ್ನೂ, ಶಂಕರೇಣ-ಕಾರ್ಯರುದ್ರನೊಡನೆ, ಸಂಯುಗಂಚ-ಕಾಳಗವನ್ನೂ, ಪ್ರಾತಃ-ಬೆಳಗ್ಗೆ, ಉತ್ಥಾಯ-ಎದ್ದು, ಸಂಸ್ಮರೇತ್-ಚನ್ನಾಗಿನೆನಪುಗೊಳ್ಳುವನೋ?, ತಸ್ಯ-ಆ ಪುರುಷನಿಗೆ, ಪರಾಜಯಃ-ಭಂಗವು, ನಸ್ಯಾತ್-ಆಗಲಾರದು. ॥೨೪॥

ಇಂತೆಂಬಲ್ಲಿಗೆ ಭಾಗವತ ಪ್ರತಿಶಬ್ದಾರ್ಥ ಬೋಧಿನಿಯೆಂಬ ಟೀಕೆಯೊಳು, ದಶಮಸ್ಕಂಧ
ದೋಳ್ ೬೩ನೆಯ ಅಧ್ಯಾಯಂ ಮುಗಿದುದು

---

## ೬೪ ನೇ ಅಧ್ಯಾಯದ ಪ್ರತಿಪದಟೀಕೆ.

(ಶ್ರೀಶುಕವಾಕ್ಯವು) ರಾಜನ್-ಪರೀಕ್ಷಿದ್ರಾಯನೇ!, ಏಕದಾ-ಒಂದುಸಮಯದಲ್ಲಿ, ಸಾಂಬನೂ, ಪ್ರದ್ಯುಮ್ನನೂ, ಚಾರುಭಾನುವೂ, ಗದನೂ, ಆದಯಃ-ಮೊದಲಾದ, ಯದುಕುಮಾರಕಾಃ-ಯಾದವ ಹುಡುಗರು, ವಿಹರ್ತುಂ-ವಿನೋದಿಸಲೋಸು

---

ಲ್ಪಟ್ಟ ದ್ವಾರಕಾನಗರವಂ, ಶಂಖಭೇರಿಪಟಹಧ್ವನಿಗಳೊಡನೆ ಆಪುರದ ಮಿತ್ರರಿಂ ಬ್ರಾಹ್ಮಣರಿಂ ಇದಿರ್ಗೊಂಡು ಪೂಜಿಸಲ್ಪಟ್ಟವನಾಗಿ ಪ್ರವೇಶಿಸಿದನು ॥೨೩॥ ಯಾವಪುರುಷನು ಪ್ರಾತಃಕಾಲದಲ್ಲಿಯೆದ್ದು ಶ್ರೀಕೃಷ್ಣವಿಜಯಮಂ ಶ್ರೀರುದ್ರನೊಡನೆ ಯುದ್ಧಮಂ ಸಹ ಸ್ಮರಿಸುವನೋ ಆಪುರುಷನಿಗೆ ಶತ್ರುಗಳಿಂದ ಪರಾಜಯ ವುಂಟಾಗಲಾ ರದು॥ ... ... ... ... ... ... ॥೨೪॥

ಇಂತು ಶ್ರೀಶುಕಮುನಿಯು ಪರೀಕ್ಷಿದ್ರಾಯನಂಕುರಿತು ನಿರೂಪಿಸಿದನೆಂದು ಸೂತಪೌರಾಣಿ
ಕನು ನೈಮಿಶಾರಣ್ಯವಾಸಿಗಳಾದ ಶೌನಕಾದಿ ಮಹರ್ಷಿಗಳಿಗೆ ಪೇಳಿದನೆಂಬಲ್ಲಿಗೆ-ಶ್ರೀ
ಮನ್ಮಹಿಸೂರ ಪುರವರಾಧೀಶ ಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜ
ವಿರಚಿತಮಾದ "ಶ್ರೀಕೃಷ್ಣರಾಜ ವಾಣೀವಿಲಾಸ,, ಮೆಂಬ ಶ್ರೀಭಾಗ
ವತ ಪುರಾಣದ ಕರ್ಣಾಟ ಭಾಷಾವ್ಯಾಖ್ಯಾನದಲ್ಲಿ ದಶಮಸ್ಕಂಧ
ದೊಳು ೬೩ನೇಅಧ್ಯಾಯವು ಸಂಪೂರ್ಣವು.

---

## ೬೪ನೆಯಅಧ್ಯಾಯವು.

ಶ್ರೀಧರೀಯಶ್ಲೋಕಃ॥ ಚತುಷ್ಷಷ್ಟಿತಮೇಕೃಷ್ಣೋನೃಗಂಪಾಪಾದಮೋಚಯತ್। ಬ್ರಹ್ಮಸ್ವಹಾರಿದೋಷೋಕ್ತ್ಯಾರಾಜ್ಞೋದ್ಯಪಾತ್ಯನಶಿಕ್ಷಯತ್॥ % ॥ಟೀ॥ ಅರವತ್ತನಾಲ್ಕನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ದತ್ತಾಪಹಾರದೋಷದಿಂದ ನೃಗರಾಯನಿಗೆ ಪ್ರಾಪ್ತವಾದ ಮಹಾಪಾಪವಂ ಪರಿಹರಿಸಿ ಅವನಿಗೆ ಉತ್ತಮಗತಿಯ

ಚಾರುಭಾನುಗದಾದಯಃ ॥೧॥ ಕ್ರೀಡಿತ್ವಾಸುಚಿರಂತತ್ರವಿಚಿನ್ವಂತಃಪಿಪಾಸಿತಾಃ । ಜಲಂನಿರುದಕೆ ಕೂಪೆದದೃಶುಸ್ಸತ್ತ್ವಮದ್ಭುತಮ್ ॥೨॥ಕೃಕಲಾಸಂಗಿರಿನಿಭಂವೀಕ್ಷ್ಯವಿಸ್ಮಿತಚೆತಸಃ । ತಸ್ಯಚೊದ್ಧರಣೆಯತ್ನಂಚಕ್ರುಸ್ತೆಕೃಪಯಾನ್ವಿತಾಃ ॥೩॥ ಚಾರ್ಮಭಿಸ್ತಾಂತವೈಃಪಾಶೈರ್ಬದ್ಧ್ವಾಪತಿತಮರ್ಭಕಾಃ । ನಾಶಕ್ನುವನ್ಸಮುದ್ಧರ್ತುಂಕೃಷ್ಣಾಯಾಚಖ್ಯುರುತ್ಸುಕಾಃ ॥೪॥ ತತ್ರಾಗತ್ಯಾರವಿಂದಾಕ್ಷೊಭಗವಾನ್ವಿಶ್ವಭಾವನಃ । ವೀಕ್ಷ್ಯೊಜ್ಜಹಾರವಾಮೆನತಂಕರೆಣಸಲೀಲಯಾ ॥೫॥ಸಉತ್ತಮಶ್ಲೊಕಕರಾಭಿಮೃಷ್ಟೊವಿಹಾಯಸದ್ಯಃಕೃಕಲಾಸರೂಪಮ್ ।ಸಂತಪ್ತಚಾಮೀಕರಚಾರುವರ್ಣಸ್ಸ್ವರ್ಗ್ಯ

---

ಗ, ಉಪವನಂ-ಊರಮುಂದಣ ತೋಟವಂಕುರಿತು, ಜಗ್ಮುಃ-ತೆರಳಿದರು ॥೧॥ ತತ್ರ-ಅಲ್ಲಿ, ಸುಚಿರಂ-ಬಹಳ ಹೊತ್ತು, ಕ್ರೀಡಿತ್ವಾ-ಆಡಿ, ಪಿಪಾಸಿತಾಃ-ನೀರಡಿಕೆಯುಳ್ಳವರಾಗಿ, ಜಲಂ-ನೀರನ್ನು, ವಿಚಿನ್ವಂತಃ-ಹುಡುಕುತ್ತಿರುವವರಾಗಿ, ನಿರುದಕೇ-ನೀರಿಲ್ಲದೆಯಿರುವ, ಕೂಪೇ-ಭಾವಿಯಲ್ಲಿ, ಅದ್ಭುತಂ-ಆಶ್ಚರ್ಯವಾದ, ಸತ್ವಂ-ಪ್ರಾಣಿಯನ್ನು ದದೃಶುಃ-ಕಂಡರು ॥೨॥ ತೇ-ಆಯದುಕುಮಾರರು, ಗಿರಿನಿಭಂ-ಬೆಟ್ಟದ ಗುಂಡಿಗೆಸಮಾನವಾದ, ಕೃಕಲಾಸಂ-ಹೊಂಟೆಗೊದ್ದೆಯನ್ನು. ವೀಕ್ಷ್ಯ-ನೋಡಿ, ವಿಸ್ಮಿತಚೇತಸಃ-ಆಶ್ಚರ್ಯಹುಟ್ಟಿದ ಮನಸ್ಸುಳ್ಳವರಾಗಿ, ತಸ್ಯ-ಅದರನ್ನು, ಉದ್ಧರಣೇ-ಎತ್ತುವುದರಲ್ಲಿ, ಕೃಪಯಾನ್ವಿತಾಃ- ಕರುಣೆಯಿಂದ ಸಹಿತರಾಗಿ, ಯತ್ನಂ-ಉದ್ಯೋಗವನ್ನು, ಚಕ್ರುಃ-ಮಾಡಿದರು ॥೩॥ ಅರ್ಭಕಾಃ-ಹುಡುಗರು ಪತಿತಂ-ಬಿದ್ದಿರುವ ಕೃಕಲಾಸನನ್ನು ಚಾರ್ಮಭಿಃ-ತೊಗಲ ಮಣಿಗಳಿಂದಲೂ, ತಾಂತವೈಃಪಾಶೈಃ-ನೂಲಹಗ್ಗಗಳಿಂದಲೂ, ಬದ್ಧ್ವಾ-ಕಟ್ಟಿ, ಸಮುದ್ಧರ್ತುಂ-ಎತ್ತುವುದಕ್ಕೆ, ನಾಶಕ್ನುವನ್-ಸಮರ್ಥರಾಗಲಿಲ್ಲವು. ಉತ್ಸುಕಾಃ- (ಅತ್ಯಾಸಕ್ತಿ) ಆಶ್ಚರ್ಯವುಳ್ಳವರಾಗಿ, ಕೃಷ್ಣಾಯ-ಕೃಷ್ಣಂಗೆ ಆಚಖ್ಯುಃ-ಹೇಳಿದರು ॥೪॥ ವಿಶ್ವಭಾವನಃ- ಪ್ರಪಂಚವನ್ನು ಕಾಯ್ವ, ಭಗವಾನ್-ಸರ್ವಜ್ಞನಾದ, ಅರವಿಂದಾಕ್ಷಃ-ಪದ್ಮನೇತ್ರನಾದ, ಸಃ-ಆ ಕೃಷ್ಣನು, ತತ್ರ-ಅಲ್ಲಿಗೆ, ಗತ್ವಾ-ಹೋಗಿ, ವೀಕ್ಷ್ಯ-ನೋಡಿ, ವಾಮೇನಕರೇಣ- ಎಡಗೈಯಿಂದ, ಲೀಲಯಾ-ವಿಲಾಸದಿಂದ, ತಂ-ಆ ತೊಂಟೆಗೊದ್ದೆಯನ್ನು, ಉಜ್ಜಹಾರ-ಎತ್ತಿಹಾಕಿದನು ॥೫॥ ಸಃ-ಆ ತೊಣ್ಣೆಕೇತನು, ಉತ್ತಮಶ್ಲೋಕಕರಾಭಿಮೃಷ್ಟಃ-ಶ್ರೇಷ್ಠನೆಂದು ಶ್ಲಾಘಿಸಲ್ಪಟ್ಟಕೃಷ್ಣನಕೈಯಿಂದಸೋಂಕಲ್ಪಟ್ಟವನಾದ್ದರಿಂದ ಸದ್ಯಃ-ಆಗಲೇ, ಕೃಕಲಾಸರೂಪಂ-ಓತೀಕೇತನ ಆಕಾರವನ್ನು, ವಿಹಾಯ-ತೊರೆದು, ಸಂತಪ್ತಚಾಮೀಕರಚಾರುವರ್ಣಃ- ಪುಟವಿಟ್ಟ ಬಂಗಾರದಂತೆ ಮನೋಹರವಾದ ಬಣ್ಣವುಳ್ಳವನೂ, ಅದ್ಭುತಾಲಂಕರಣಾಂಬರಸ್ರಕ್-ಆಶ್ಚರ್ಯವಾದ ಅಲಂಕಾರವೂ, ವಸ್ತ್ರಗಳೂ ಪುಷ್ಪಮಾಲೆಗಳೂ ಉಳ್ಳವನೂಆದ, ಸ್ವರ್ಗೀ- (ಸ್ವರ್ಗವುಳ್ಳವನು) ದೇವರೂಪನಾದನು ॥೬॥ ಮುಕುಂ

---

ನಿತ್ತು ಬ್ರಹ್ಮಸ್ವಾಪಹಾರದಿಂದ ಮಹಾದೋಷವುಂಟಾಗುವುದೆಂಬರ್ಥವಂ ಪೇಳುವುದರಿಂದ ಗರ್ವಿತರಾದ ಅರಸುಗಳಂ ಶಿಕ್ಷಿಸಿದನೆಂದು ಶ್ರೀಶುಕಮುನಿಯು ಪರೀಕ್ಷಿದ್ರಾಯನಂಕುರಿತು ನಿರೂಪಿಸುವನೆಂತೆನೆ-

ಕೇಳೈರಾಯನೇ! ಒಂದುಸಮಯದಲ್ಲಿ ಸಾಂಬ ಪ್ರದ್ಯುಮ್ನ ಚಾರುಭಾನು ಗದರೇ ಮೊದಲಾದ ಯದುಕುಮಾರರು ಕ್ರೀಡಿಸಲೋಸುಗ ಉದ್ಯಾನವನೆಯ್ದಿದರು ॥೧॥ ಬಳಿಕ ಸಾಂಬಾದಿಗಳು ಉಪವನದಲ್ಲಿ ಬಹುಕಾಲವು ಕ್ರೀಡಿಸಿ ಬಾಯಾರಿಕೆಯಿಂದ ಜಲವು ಹುಡುಕುವರಾಗಿ ನಿರ್ಜಲವಾದ ಭಾವಿಯಲ್ಲಿ ಆಶ್ಚರ್ಯಕರವಾದ ಪ್ರಾಣಿಯನೊಂದಂಕಂಡರು ॥೨॥ಯದುಕುಮಾರರು ಪರ್ವತಕ್ಕೆ ಸಮಾನವಾದ ಆಹೆಂಟೇಗೊದ್ದವಂಕಂಡು ಆಶ್ಚರ್ಯಯುಕ್ತವಾದ ಮನಸ್ಸುಳ್ಳವರಾಗಿಯೂ ದಯಾಯುಕ್ತರಾಗಿಯೂ ಆಪ್ರಾಣಿಯಂ ಕೂಪದಿಂದ ಯೆತ್ತುವ ಯತ್ನಂಗೆಯ್ದರು॥೩॥ ತೊಗಲಮಣಿಗಳಿಂದಲೂ ನೂಲಹಗ್ಗಂಗಳಿಂದಲೂ ಆಕೃಕಲಾಸವಂಕಟ್ಟಿ ಅಲ್ಲಿಂದೆತ್ತಲೋಸುಗ ಬಾಲಕರು ಸಮರ್ಥರಾಗದೆ ಆಬಗೆಯಂ ಕೃಷ್ಣಂಗರಿಕೆಗೆಯ್ದರು ॥೪॥ ಬಳಿಕ ಜಗತ್ಕಾರಣನಾದ ಭಗವಂತನಾದ ಶ್ರೀಕೃಷ್ಣನು ಅಲ್ಲಿಗೆಹೋಗಿ ಅದಂನೋಡಿ ಎಡಗೈಯಿಂದ ಲೀಲೆಯಿಂದೆತ್ತಿಹಾಕಿದನು॥೫॥ಆಪ್ರಾಣಿಯು ಶ್ರೀಹರಿಯಹಸ್ತದಿಂದ ಸೋಂಕಲ್ಪಟ್ಟು ಆಗಲೇ ಕೃಕಲಾಸರೂಪವಂಬಿಟ್ಟು ಕುಂದಣದಂತೆ ಹೊಳೆಯುವ ಬಣ್ಣವುಳ್ಳ ಆಶ್ಚರ್ಯಕರಂಗಳಾದ ಭೂಷಣಂಗಳೂ ವಸ್ತ್ರಗಳೂ ಮಾಲಿಕೆಗಳೂ ಉಳ್ಳ ದೇವರೂಪವಂಧರಿಸಿತು॥೬॥ಆಮೇಲೆ

ದ್ಭೂತಾಲಂಕರಣಾಂಬರಸ್ರಕ್ ॥೬॥ ಸಪೃಷ್ಟೋವಿದ್ವಾನಪಿತಸ್ಯದಾನಂಜನೇಷುವಿಖ್ಯಾಪಯಿತುಂಮುಕುಂ
ದಃ । ಕಸ್ತ್ವಂಮಹಾಭಾಗವರೇಣ್ಯರೂಪೋದೇವೋತ್ತಮಂತ್ವಾಂಗಣಯಾಮಿನೂನಮ್ ॥೭॥ ದಶಾಮಿಮಾಂ
ವಾಕತಮೇನಕರ್ಮಣಾಸಂಪ್ರಾಪಿತೋಸಿಹ್ಯತದರ್ಹಸುಭದ್ರ। ಆತ್ಮಾನಮಾಖ್ಯಾಹಿವಿವಿತ್ಸತಾಂನೋಯ
ನ್ಮನ್ಯಸೇನಃಕ್ಷಮಮತ್ರವಕ್ತುಮ್ ॥೮॥ ಶ್ರೀಶುಕಃ॥ಇತಿಸ್ಮರಾಜಾಸಂಪೃಷ್ಟಃಕೃಷ್ಣೇನಾನಂದಮೂ
ರ್ತಿನಾ । ಮಾಧವಂಪ್ರಣಿಪತ್ಯಾಹಕಿರೀಟೇನಾರ್ಕವರ್ಚಸಾ ॥೯॥ನೃಗಃ॥ನೃಗೋನಾಮನರೇಂದ್ರೋಹಮಿ
ಕ್ಷ್ವಾಕುತನಯಃಪ್ರಭೋ॥ದಾನೇಷ್ವಾಖ್ಯಾಯಮಾನೇಷುಯದಿತೇಕರ್ಣಮಸ್ಪೃಶಮ್ ॥೧೦॥ಕಿಂನುತೇವಿದಿ

---

ದಃ-ಮೋಕ್ಷಪ್ರದಾಯಕನಾದ ಕೃಷ್ಣನು, ತಸ್ಯ-ಅವನ, ದಾನಂ-ಜನ್ಮಾಂತರದ ದಾನಕರ್ಮವನ್ನು, ವಿದ್ವಾನಪಿ ಬಲ್ಲವನಾದರೂ, ಜನೇಷು-ಲೋಕಂಗಳಲ್ಲಿ, ವಿಖ್ಯಾಪಯಿತುಂ-ಪ್ರಸಿದ್ಧಿಗೊಳಿಸಲೋಸುಗ, ಸಪೃಷ್ಟಃ-ಕೇಳಿದನು ॥ ಮಹಾಭಾಗ-ದೊಡ್ಡ ಭಾಗ್ಯವುಳ್ಳವನೇ, ವರೇಣ್ಯರೂಪಃ-ಶ್ರೇಷ್ಠವಾದ ಆಕಾರವುಳ್ಳ, ತ್ವಂ-ನೀನು, ಕಃ-ಯಾವನು, ತ್ವಾಂ-ನಿನ್ನನ್ನು, ನೂನಂ-ನಿಜವಾಗಿ, ದೇವೋತ್ತಮಂ-ದೇವರ್ಕಳಲ್ಲಿ ಶ್ರೇಷ್ಠನನ್ನಾಗಿ, ಗಣಯಾಮಿ-ಎಣಿಸುವೆವು ॥೭॥ ಕತಮೇನ ಕರ್ಮಣಾ-ಯಾವ ಪಾಪಕೃತ್ಯದಿಂದ, ಇಮಾಂ ದಶಾಂ-ಈ ತಿರ್ಯಗವಸ್ಥೆಯನ್ನು, ಅತದರ್ಹಃ ಸುಭದ್ರಃ-ಅದಕ್ಕೆ ಯೋಗ್ಯವಲ್ಲದ ಚಲುವಾದ ಕಾಂತಿಯುಳ್ಳವನಾದರೂ, ಸಂಪ್ರಾಪಿತೋಸಿ-ಹೊಂದಿಸಲ್ಪಟ್ಟವನಾಗಿರುವೆ, ಯತ್-ಯಾವುದರನ್ನು, ವಕ್ತುಂ-ಹೇಳುವುದಕ್ಕೆ, ಕ್ಷಮಂ-ತಕ್ಕುದನ್ನಾಗಿ, ಮನ್ಯಸೇ-ತಿಳಿಯುವೆಯೋ, ತತ್-ಅದನ್ನು, ವಿವಿತ್ಸತಾಂ-ತಿಳಿಯಲಪೇಕ್ಷಿಸುವ, ನಃ-ನಮಗೆ, ಆತ್ಮಾನಂ-ನಿನ್ನನ್ನು, ಆಖ್ಯಾಹಿ-ತಿಳಿಯಲ್ಪೇಳು ॥೮॥ [ಶುಕವಚನವು] ಇತಿ ಸ್ಮ-ಹೀಗೆಂದು, ರಾಜಾ-ನೃಗರಾಯನು, ಆನಂದಮೂರ್ತಿನಾ-ಸುಖರೂಪನಾದ, ಕೃಷ್ಣೇನ-ವಿಷ್ಣುವಿನಿಂದ, ಸಂಪೃಷ್ಟಃ-ಕೇಳಲ್ಪಟ್ಟವನಾದ್ದರಿಂದ, ಅರ್ಕವರ್ಚಸಾ-ಸೂರ್ಯನಂತೆ ಕಾಂತಿಯುಳ್ಳ, ಕಿರೀಟೇನ-ಶಿರೋಭೂಷಣದಿಂದ, ಪ್ರಣಿಪತ್ಯ-ಚನ್ನಾಗಿ ಕುಂಬಿಟ್ಟು, ಆಹ-ನುಡಿದನು ॥೯॥ (ನೃಗವಚನವು) ಪ್ರಭೋ-ಸಮರ್ಥನಾದ ಕೃಷ್ಣನೇ! ಅಹಂ-ನಾನು, ಇಕ್ಷ್ವಾಕುತನಯಃ-ಇಕ್ಷ್ವಾಕುರಾಯನ ಮಗನಾದ, ನೃಗೋನಾಮ-ನೃಗನೆಂದು ಪ್ರಸಿದ್ಧನಾದ, ನರೇಂದ್ರಃ-ದೊರೆಯಾಗಿದ್ದೆನು. ದಾನೇಷು- ದಾನಕರ್ಮಂಗಳು, ಆಖ್ಯಾಯಮಾನೇಷು-ಹೇಳಲ್ಪಡುವವಾಗುತ್ತಿರುವಲ್ಲಿ, ಯದಿ-ಅಥವಾ, ತೇ-ನಿನ್ನ, ಕರ್ಣಂ-ಕಿವಿಯನ್ನು, ಅಸ್ಪೃಶಂ- ಮುಟ್ಟಿದವನಾಗಿರುವೆನು ॥ ನಾಥ-ಒಡೆಯನೇ! ಸರ್ವಭೂತಾತ್ಮಸಾಕ್ಷಿಣಃ-ಸಕಲಪ್ರಾಣಿಗಳ ಮನಸ್ಸುಗಳನ್ನು ನೋಡುತ್ತಿರುವನಾದ, ತೇ-ನಿನಗೆ, ಅವಿ

---

ಅದರ ವೃತ್ತಾಂತವಂ ಬಲ್ಲವನಾದರೂ ಕೃಷ್ಣನು ಜನರಿಗೆ ಪ್ರಕಾಶಗೆಯ್ಯಲೋಸುಗ ಆದಿವ್ಯಪುರುಷನಂ ಕೇಳಿದನೆಂತೆನೆ. ಎಲೈ ಭಾಗ್ಯವಂತನಾದ ಪುರುಷಶ್ರೇಷ್ಠನೇ! ನೀನು ಯಾರು? ದಿಟವಾಗಿ ನಿನ್ನ ದೇವಶ್ರೇಷ್ಠನನ್ನಾಗಿ ತಿಳಿಯುತಲಿರುವೆವು ॥೭॥ ಎಲೈ ಪುರುಷನೇ! ನೀನು ಯಾವ ಕರ್ಮದಿಂದ ನಿನಗೆ ಯೋಗ್ಯವಲ್ಲದ ಅಂತಪ್ಪ ದುರ್ದಸೆಗೆ ಒಯ್ದಿಸಲ್ಪಟ್ಟೆ? ಆವೃತ್ತಾಂತವಂ ನಮಗೆ ತಿಳಿಸತಕ್ಕದ್ದಾದರೆ ಪೇಳು ಎಂದನು ॥೮॥ ಶುಭಕರವಾದ ಚರಿತ್ರವುಳ್ಳ ಕೃಷ್ಣನಿಂದೆ ಪ್ರಶ್ನೆಗೆಯ್ಯಲ್ಪಟ್ಟ ನೃಗರಾಯನು ಸೂರ್ಯನಂತೆ ಕಾಂತಿಯುಳ್ಳ ಕಿರೀಟದಿಂ . ನಮಸ್ಕರಿಸಿ. ಬಿನ್ನೈಸಿದನೆಂತೆನೆ ॥೯॥ ಪ್ರಭುವಾದ ಶ್ರೀಹರಿಯೇ! ಇಕ್ಷ್ವಾಕುಪುತ್ರನಾದ ನೃಗನೆಂದು ನನ್ನಂ ತಿಳಿಯುವನಾಗು, ಬಹುತರವಾಗಿ ದಾತಾರರಲ್ಲಿ ನಾನು ಜನರ ಶ್ರೋತ್ರವಾಗಸವನೆಯ್ದಿದವನಾಗಿದ್ದೆನು ॥೧೦॥ ಸ್ವಾಮಿಯೆಲೈ ಸರ್ವಭೂತಗಳ ಬುದ್ಧಿಗೆ ಸಾಕ್ಷಿಯಾಗಿ ಕಾಲದಿಂ ನಷ್ಟವಾಗದೆಯಿರುವ ಜ್ಞಾನವುಳ್ಳ ನಿನಗೆ ತಿಳಿಯದೇ ಯಿರುವುದೇನುಂ

ತಂನಾಥಸರ್ವಭೂತಾತ್ಮಸಾಕ್ಷಿಣಃ|ಕಾಲೇನಾವ್ಯಾಹತದೃಶೋವಕ್ಷ್ಯೇಥಾಪಿತವಾಜ್ಞಯಾ||೧೧||ಯಾವತ್ಯ
ಸ್ಸಿಕತಾಭೂಮೇರ್ಯಾವತ್ಯೋದಿವಿತಾರಕಾಃ|ಯಾವತ್ಯೋವರ್ಷಧಾರಾಶ್ಚ ತಾವತೀರದದಾಂಗಾಃ ||೧೨||
ಪಯಸ್ವಿನೀಸ್ತರುಣೀಶ್ಶೀಲರೂಪಗುಣೋಪಪನ್ನಾಃಕಪಿಲಾಹೇಮಶೃಂಗಾಃ | ನ್ಯಾಯಾರ್ಜಿತಾರೌಪ್ಯ
ಖುರಾಸ್ಸವತ್ಸಾಃದುಕೂಲಮಾಲ್ಯಾಭರಣಾಸ್ತ್ವದಾಮಹಮ್||೧೩||ಸ್ವಲಂಕೃತೇಭ್ಯೋಗುಣಶೀಲವದ್ಭ್ಯ
ಸ್ಸೀದತ್ಕುಟುಂಬೇಭ್ಯಋತವ್ರತೇಭ್ಯಃ । ತಪಶ್ಶ್ರುತಬ್ರಹ್ಮವದಾನ್ಯಸದ್ಭ್ಯಃಪ್ರಾದಾಂಯುವಭ್ಯೋ
ದ್ವಿಜಪುಂಗವೇಭ್ಯಃ||೧೪|| ಗೋಭೂಹಿರಣ್ಯಾಯತನಾಶ್ವಹಸ್ತಿನಃಕನ್ಯಾಸ್ಸದಾಸೀಸ್ತಿಲರೂಪ್ಯಶಯ್ಯಾಃ|

---

ವಿದಿತಂ-ತಿಳಿಯದೆ ಇರುವದು, ಕಿಮ್ನು-ಏನುಂಟು, ಕಾಲೇನ-ಕಾಲದೋಷದಿಂದ, ಅವ್ಯಾಹತದೃಶಃ-ಭಂಗವಿಲ್ಲದ ಜ್ಞಾನವುಳ್ಳವನಾದ, ತವ-ನಿನ್ನ, ಆಜ್ಞಯಾ-ಅಪ್ಪಣೆಯಿಂದ, ಅಥಾಪಿ-ಹಾಗಾದರೂ, ವಕ್ಷ್ಯೇ-ಹೇಳುವೆನು ||೧೧|| ಭೂಮೇಃ-ನೆಲದ, ಸಿಕತಾಃ-ಮರಳುಗಳು, ಯಾವತ್ಯಃ-ಎಷ್ಟುಂಟೋ, ದಿವಿ-ಅಂತರಿಕ್ಷದಲ್ಲಿ, ತಾರಕಾ-ಚುಕ್ಕೆಗಳು, ಯಾವತ್ಯ-ಎಷ್ಟುಂಟೋ, ವರ್ಷಧಾರಾಶ್ಚ-ಮಳೆಯ ಹನಿಗಳು, ಯಾವತ್ಯಃ-ಎಷ್ಟುಂಟೋ ತಾವತೀಃಗಾಃ-ಅಷ್ಟು ಆಕಳನ್ನು, ಅದದಾಂ-ಕೊಟ್ಟೆನು ||೧೨|| ಅಹಂ-ನಾನು, ಪಯಸ್ವಿನೀಃ-ಹಾಲುಕರೆಯುವ, ತರುಣೀಃ ಪ್ರಾಯವುಳ್ಳ, ಶೀಲರೂಪಗುಣೋಪಪನ್ನಾಃ-ಸ್ವಭಾವದಿಂದಲೂ, ಆಕಾರದಿಂದಲೂ ಸುಗುಣಗಳಿಂದಲೂ ಪೂರ್ಣಂಗಳಾದ, ನ್ಯಾಯಾರ್ಜಿತಾಃ-ನ್ಯಾಯದಿಂದ ಸಂಪಾದಿಸಲ್ಪಟ್ಟವಾದ, ಹೇಮಶೃಂಗಾಃ-ಚಿನ್ನದ ಕೊಂಬುಗಳುಳ್ಳ, ರೌಪ್ಯಖುರಾಃ-ಬೆಳ್ಳಿಯಗೊರಸು ಕೊಳಗುಗಳುಳ್ಳ, ಸವತ್ಸಾಃ-ಕರುಗಳಿಂದ ಸಹಿತಂಗಳಾದ, ದುಕೂಲಮಾಲ್ಯಾಭರಣಾಃ-ವಸ್ತ್ರಾಲಂಕಾರ ಭೂಷಣಂಗಳುಳ್ಳ, ಕಪಿಲಾಃ-ಕಪಿಲವರ್ಣದ ಗೋವುಗಳನ್ನು, ಅದಾಂ-ಕೊಟ್ಟೆನು|| ಸ್ವಲಂಕೃತೇಭ್ಯಃ-ಚನ್ನಾಗಿ ಸಿಂಗರಿಸಲ್ಪಟ್ಟ, ಗುಣಶೀಲವದ್ಭ್ಯಃ-ಸುಗುಣಂಗಳೂ ಸತ್ಸ್ವಭಾವವೂ ವುಳ್ಳ, ಸೀದತ್ಕುಟುಂಬೇಭ್ಯಃ-ಶ್ರಮಪಡುವ ಪೋಷ್ಯವರ್ಗವುಳ್ಳ, ಋತವ್ರತೇಭ್ಯಃ-ಸತ್ಯದ ನಿಯಮವುಳ್ಳ, ತಪಶ್ಶ್ರುತಬ್ರಹ್ಮವದಾನ್ಯಸದ್ಭ್ಯಃ-ತಪಸ್ಸೂ ವೇದಾಧ್ಯಯನವೂ ಬ್ರಹ್ಮಜ್ಞಾನವೂ ದಾತೃತ್ವವೂವುಳ್ಳ, ಯುವಭ್ಯಃ-ಪ್ರಾಯದವರಾದ, ದ್ವಿಜಪುಂಗವೇಭ್ಯಃ-ವಿಪ್ರಶ್ರೇಷ್ಠರಿಗೆ, ಪ್ರಾದಾಂ-ಕೊಟ್ಟೆನು ||೧೪|| ಗೋಭೂಮಿಹಿರಣ್ಯಾಯತನಾಶ್ವಹಸ್ತಿನಃ-ಆಕಳು, ಭೂಮಿ-ಭಂಗಾರ, ಮನೆ,

---





ಟುಂ ಆದರೂ ನಿನ್ನ ಆಜ್ಞೆಯಿಂದ ನನ್ನ ಸುದ್ದಿಯಂ ಬಿನ್ನೈಸುವೆನು||೧೧|| ಶ್ರೀಕೃಷ್ಣನೇ! ಭೂಮಿಯಲ್ಲಿಮಣಲು ಎಷ್ಟಿವೆಯೋ ಅಂತರಿಕ್ಷದಲ್ಲಿ ನಕ್ಷತ್ರಂಗಳೆಷ್ಟಿವೆಯೋ ವರ್ಷ ಧಾರೆಗಳೆಷ್ಟುಂಟೋ ಅಷ್ಟು ಸಂಖ್ಯೆಯುಳ್ಳವೆಂಬಂತೆ ಅಪರಿಮಿತವಾಗಿ ಉತ್ತಮಗೋದಾನಂಗಳಂ ನಾನು ಮಾಡಿದೆನು||೧೨||ಹೆಚ್ಚು ಹಾಲುಕರೆಯುವ ಪ್ರಾಯವುಳ್ಳ ರೂಪಶೀಲ ಗುಣಯುಕ್ತಂಗಳಾದ ಕಪಿಲಾ ಗೋವುಗಳನ್ನು ಭಂಗಾರದ ಕೊಂಬುಗಳು ಬೆಳ್ಳಿಯಗೊರಸುಗಳು ನ್ಯಾಯದಿಂ ಸಂಪಾದಿಸಲ್ಪಟ್ಟ ಕರುಗಳು ವಸ್ತ್ರಾಲಂಕಾರಮಾಲಿಕೆಗಳು ಉಳ್ಳಂತೆ ಅಲಂಕರಿಸಿ ದಾನಗೆಯ್ದೆನು ||೧೩||ಅಲಂಕೃತರಾದ ಗುಣಶೀಲಯುಕ್ತರಾದ ದರಿದ್ರದಿಂ ಕಷ್ಟಪಡುವ ಪತ್ನೀಪುತ್ರಾದಿಗಳುಳ್ಳ ಡಂಭವಿಲ್ಲದ ಆಚಾರವುಳ್ಳ ತಪಸ್ಸಿನಿಂ ಪ್ರಖ್ಯಾತರಾದ ವೇದಾಧ್ಯಯನಶೀಲರಾದ ಸಾತ್ವಿಕರಾದ ಯೌವನಸ್ಥರಾದ ಬ್ರಾಹ್ಮಣರಿಗೆ ||೧೪|| ಗೋಭೂಧನಗೃಹಾಶ್ವಗಜಂಗಳಂ ದಾಸಿಯರೊಡನೆ ಯುಕ್ತವಾದ ಕನ್ಯೆಯರಂ ತಿಲರಜ

ವಾಸಾಂಸಿರತ್ನಾನಿಪರಿಚ್ಛದಾನ್ರಥಾನಿಷ್ಟಂಯಜ್ಞೈಶ್ಚರಿತಂಚಪೂರ್ತಮ್ ॥೧೪॥ ಕಸ್ಯಚಿದ್ದ್ವಿಜಮುಖ್ಯಸ್ಯಭ್ರಷ್ಟಾಗೌರ್ಮಮಗೋಧನೇ । ಸಂಪೃಕ್ತಾಽವಿದುಷಾಸಾಚಮಯಾದತ್ತಾದ್ವಿಜಾತಯೇ॥ತಾಂನೀಯಮಾನಾಂತತ್ಸ್ವಾಮೀದೃಷ್ಟ್ವೋವಾಚಮಮೇತಿತಮ್। ಮಮೇತಿಪ್ರತಿಗ್ರಾಹ್ಯಾಹನೃಗೋಮೇದತ್ತವಾನಿತಿ॥೧೬॥ವಿಪ್ರೌವಿವದಮಾನೌಮಾಮೂಚತುಸ್ಸ್ವಾರ್ಥಸಾಧಕೌ। ಭವಾನ್‌ದಾತಾಪಹರ್ತೇತಿತಚ್ಛ್ರುತ್ವಾಮೇಭವದ್ಭ್ರಮಃ॥೧೭॥ಅನುನೀತಾವುಭೌವಿಪ್ರೌಧರ್ಮಕೃಚ್ಛ್ರಗತೇನವೈ ।ಗವಾಂಲಕ್ಷಂಪ್ರಕೃಷ್ಟಾನಾಂದಾಸ್ಯಾಮ್ಯೇಷಾಪ್ರದೀಯತಾಮ್ ॥೧೮॥ ಭವಂತಾವನುಗೃಹ್ಣೀತಾಂಕಿಂಕರಸ್ಯಾವಿಜಾನತಃ ।

---

ಕುದುರೆ ಆನೆಗಳನ್ನೂ, ಸದಾಸೀಃ-ದಾಸಿಯರಿಂ ಸಹಿತರಾದ, ಕನ್ಯಾಃ-ಮದುವೆಯಿಲ್ಲದ ಹುಡುಗಿಯರನ್ನೂ, ತಿಲರೂಪ್ಯಶಯ್ಯಾಃ-ಎಳ್ಳು ಬೆಳ್ಳಿ ಹಾಸಿಗೆಗಳನ್ನೂ, ವಾಸಾಂಸಿ-ವಸ್ತ್ರಗಳನ್ನೂ, ರತ್ನಾನಿ-ಮಣಿಗಳನ್ನೂ ಶ್ರೇಷ್ಠವಸ್ತುಗಳನ್ನೂ, ಸಪರಿಚ್ಛದಾನ್-ಗೌಸಣಿಗೆ ಮೊದಲಾದ ಪರಿಕರಂಗಳನ್ನೂ, ರಥಾನ್-ತೇರುಗಳನ್ನೂ ಕೊಟ್ಟೆನು. ಯಜ್ಞೈಃ-ಯಾಗಂಗಳು, ಇಷ್ಟಂ-ಆಚರಿಸಲ್ಪಟ್ಟವು, ಪೂರ್ತಂಚ-ಕೆರೆ ಭಾವಿ ಕಾಲುವೆ ಮುಂತಾದ ಧರ್ಮವೂ, ಚರಿತಂ-ಮಾಡಲ್ಪಟ್ಟಿತು ॥೧೪॥ ಕಸ್ಯಚಿತ್-ಒಬ್ಬಾನೊಬ್ಬನಾದ, ದ್ವಿಜಮುಖ್ಯಸ್ಯ-ಬ್ರಾಹ್ಮಣಶ್ರೇಷ್ಠನ, ಗೌಃ-ಆಕಳು, ಭ್ರಷ್ಟಾ- ತಪ್ಪಿಸಿಕೊಂಡದ್ದಾಗಿ, ಮಮ-ನನ್ನ, ಗೋಧನೇ-ಪಶುಸಂಪತ್ತಿನಲ್ಲಿ, ಸಂಪೃಕ್ತಾಃ-ಬೆರತುಕೊಂಡಿತು. ಅವಿದುಷಾ-ಅರಿಯದೆ ಇರುವ ಮಯಾ-ನನ್ನಿಂದ, ಸಾಚ-ಆಬ್ರಾಹ್ಮಣನ ಗೋವೂಕೂಡ, ದ್ವಿಜಾತಯೇ-ಮತ್ತೊರ್ವ ಬ್ರಾಹ್ಮಣರಿಗೆ, ದತ್ತಾ-ಕೊಡಲ್ಪಟ್ಟಿತು ॥೧೫॥ ನೀಯಮಾನಾಂ-ಒಯ್ಯಲ್ಪಡುತ್ತಿರುವ, ತಾಂ-ಆ ಗೋವನ್ನು, ದೃಷ್ಟ್ವಾ-ನೋಡಿ, ತತ್ಸ್ವಾಮೀ-ಅದಕ್ಕೊಡೆಯನಾದ ವಿಪ್ರನು, ಮಮೇತಿ-ನನ್ನದೆಂದು, ತಂ-ಒಯ್ಯುತ್ತಿರುವ ಆ ಬ್ರಾಹ್ಮಣನಂ ಕುರಿತು, ಉವಾಚ-ನುಡಿದನು, ಪ್ರತಿಗ್ರಾಹೀ-ದಾನವಂ ಪಿಡಿದೊಯ್ಯುತ್ತಿರುವವನು, ಮೇ-ನನಗೆ, ನೃಗೊದತ್ತವಾನ್-ನೃಗರಾಯನು ಕೊಟ್ಟನು, ಇತಿ-ಹೀಗೆನುತಲೂ, ಮಮೇತಿ-ಆದ್ದರಿಂದ ನನ್ನದೆನುತಲೂ, ಆಹಾ-ನುಡಿವನು ॥೧೬॥ ವಿವದಮಾನೌ-ವಿವಾದವಂ ಗೆಯ್ಯುತ್ತಿರುವ, ವಿಪ್ರೌ-ಆ ದ್ವಿಜರೀರ್ವರೂ, ಸ್ವಾರ್ಥಸಾಧಕೌ-ತಮ್ಮತಮ್ಮ ಪ್ರಯೋಜನವಂ ಸಾಧಿಸಿಕೊಳ್ಳಲುಳ್ಳವರಾಗಿ, ಮಾಂ-ನನ್ನಂಕುರಿತು, ಭವಾನ್-ನೀನು, ದಾತಾ-ಕೊಟ್ಟವನೆನುತಲೂ, ಅಪಹರ್ತೇತಿ-ಕಿತ್ತುಕೊಂಡವನೆನುತಲೂ, ಊಚತುಃ-ಹೇಳಿದರು, ತತ್-ಆ ಮಾತನ್ನು, ಶ್ರುತ್ವಾ-ಕೇಳಿ, ಮೇ-ನನಗೆ, ಭ್ರಮಃ-ಭ್ರಾಂತಿಯು, ಅಭವತ್-ಆಯಿತು ॥೧೭॥ ಧರ್ಮಕೃಚ್ಛ್ರಗತೇನ-ಧರ್ಮದಲ್ಲಿ ಕಷ್ಟವನ್ನು ಹೊಂದಿರುವ, ಮೇ-ನನ್ನಿಂದ, ಉಭೌ ವಿಪ್ರೌ-ಈರ್ವರಾದ ಆ ಬ್ರಾಹ್ಮಣರೂ, ಅನುನೀತೌ-ನ್ಯಾಯವಾಗಿ ಅನುಸರಿಸಿ ಕೇಳಿಕೊಳ್ಳಲ್ಪಟ್ಟರು ॥ ಹೇಗೆಂದರೆ,-ಪ್ರಕೃಷ್ಟಾನಾಂ-ಇದಕ್ಕಿಂತಲೂ ಉತ್ತಮಂಗಳಾದ, ಗವಾಂ-ಆ ಕಳ, ಲಕ್ಷಂ-ನೂರುಸಾವಿರವನ್ನು, ದಾಸ್ಯಾಮಿ-ಕೊಡುತ್ತಿರುವೆನು. ಏಷಾ-ಈಯಾಕಳು, ಪ್ರದೀಯತಾಂ-ಕೊಡಲಿ ॥೧೮॥ ಅವಿಜಾನತಃ-ಅರಿಯದೆ ಇರುವ, ಕಿಂಕರಸ್ಯ-ಸೇವಕನಾ

---

ತ ಕುದುರೆ ಆನೆಯಾನಂಗಳಂ ವಸ್ತ್ರರತ್ನಗೃಹೋಪಕರಣಂಗಳಂ ರಥಂಗಳಂ ಸಹ ದಾನಂಗೆಯ್ದು ನನ್ನಿಂದ ಯಜ್ಞಗಳು ಮಾಡಲ್ಪಟ್ಟವು. ವಾಪೀಕೂಪಾದಿ ಧರ್ಮಗಳೂ ರಚಿಸಲ್ಪಟ್ಟವು ॥೧೪॥ ಹೀಗಿರಲು ಪ್ರತಿಗ್ರಹಪರಾಙ್ಮುಖನಾದ ಬ್ರಾಹ್ಮಣನಗೋವು ತಪ್ಪಿಸಿಕೊಂಡದ್ದಾಗಿ ನನ್ನ ಗೋಸಮೂಹದಲ್ಲಿ ಕೂಡಿಯಿತ್ತು. ಅದನರಿಯದೆ ನಾನು ಆಗೋವಂ ಮತ್ತೊರ್ವ ಬ್ರಾಹ್ಮಣಂಗೆ ಕೊಟ್ಟೆನು ॥೧೫॥ ಬಳಿಕ ಅವನಿಂದ ತನ್ನಾಶ್ರಮವನ್ನು ಎಯ್ದಿಸಲ್ಪಡುತ್ತಿರುವಾಗ, ಸ್ವತ್ವಕರ್ತನಾದ ಬ್ರಾಹ್ಮಣನು ನೋಡಿ ಇದು ನನ್ನದೆಂದು ನುಡಿಯೆ, ಪ್ರತಿಗ್ರಹಕರ್ತನಾದ ಬ್ರಾಹ್ಮಣನು ತನಗೆ ನೃಗರಾಯನು ಕೊಟ್ಟದ್ದೆಂದು ಹೇಳಿದನು ॥೧೬॥ ಅನಂತರದಲ್ಲಿ ಆಬ್ರಾಹ್ಮಣರಿಬ್ಬರೂ ವಿವಾದಂಗೆಯ್ಯುತ್ತ ನನ್ನ ಸಮೀಪವನೆಯ್ದಿ ಪ್ರತಿಗ್ರಹಕರ್ತನು ನೀನು ದಾತನೆನುತಲೂ ಸ್ವತ್ವಕರ್ತನು ನೀನು ಅಪಹರಿಸಿದವನೆನುತಲೂ ನನ್ನಂ ನುಡಿದರು. ಅದಂ ಕೇಳಿ ನನಗೆ ಭ್ರಾಂತಿಯುಂಟಾಯಿತು ॥೧೭॥ ಬಳಿಕ ಧರ್ಮಸಂಕಟದಲ್ಲಿ ಸಿಕ್ಕಿಕೊಂಡು ಅವರಿಬ್ಬರನ್ನೂ ಪ್ರಾರ್ಥಿಸಿದೆನೆಂತೆನೆ- ಎಲೈ ಬ್ರಾಹ್ಮಣರಿರಾ! ಒಂದೇ ಹಸಿಗೆಯುಳ್ಳ ಲಕ್ಷಗೋವುಗಳಂ ನಾನು ಕೊಡುತ್ತೇನೆ, ಈಗೋವಂ ಪುನಃ ನನಗೆ ಕೊಡುವರಾಗಿರಿ, ತಿಳಿಯದೆಯಿರುವ ನಿಂಮ ಕಿಂಕರನಾದ ನನ್ನಂ ಅನುಗ್ರಹಿಸಿರಿ, ॥೧೮॥ ಧರ್ಮಸಂಕಟದಿಂದ ಅಶುಚಿಯಾದ ನರಕದಲ್ಲಿ ಬೀಳುತಲಿರುವನನ್ನಂ ಉದ್ಧರಿಸಿರಿ, ಎಂ

ಸಮುದ್ಧರತಂಮಾಂಕೃಚ್ಛ್ರಾತ್ಪತಂತಂನಿರಯೇಶುಭೇ||೨೦||ನಾಹಂಪ್ರತೀಚ್ಛೇವೈರಾಜನ್ನಿತ್ಯುಕ್ತ್ವಾ
ಸ್ವಾಮ್ಯಪಾಕ್ರಮತ್| ನಾನ್ಯದ್ಗವಾಮಪ್ಯಯುತಮಿಚ್ಛಾಮೀತ್ಯಪರೋಯಯೌ ||೨೧||ಏತಸ್ಮಿನ್ನಂತ
ರೇಯಾಮ್ಯೈರ್ದೂತೈರ್ನೀತೋಯಮಕ್ಷಯಂ | ಯಮೇನಪೃಷ್ಟಸ್ತತ್ರಾಹಂದೇವದೇವಜಗತ್ಪತೇ||೨೨||
ಪೂರ್ವಂತ್ವಮಶುಭಂಭುಂಕ್ಷ್ವಉತಾಹೋನೃಪತೇಶುಭಮ್ | ನಾಂತಂದಾನಸ್ಯಭವತಃಪಶ್ಯೇಲೋಕಸ್ಯಭಾ
ಸ್ವತಃ ||೨೩||ಪೂರ್ವಂದೇವಾಶುಭಂಭುಂಜಇತಿಪ್ರಾಹಪತೇತಿಸಃ | ತಾವದದ್ರಾಕ್ಷಮಾತ್ಮಾನಂಕೃಕಲಾ
ಸಂಪತನ್ಪ್ರಭೋ ||೨೪||ಬ್ರಹ್ಮಣ್ಯಸ್ಯವದಾನ್ಯಸ್ಯತವದಾಸಸ್ಯಕೇಶವ | ಸ್ಮೃತಿರ್ನಾದ್ಯಾಪಿವಿಧ್ವಸ್ತಾ
ಭವತ್ಸಂದರ್ಶನಾರ್ಥಿನಃ ||೨೫|| ಸತ್ವಂಕಥಂಮಮವಿಭೋಕ್ಷಪಥಃಪರಾತ್ಮಾಯೋಗೀಶ್ವರೈಃಶ್ರುತಿದೃ

---

ದನಿಗೆ, ಭವಂತೌ-ನೀವೀರ್ವರೂ, ಅನುಗೃಹ್ಣೀತಾಂ-ಅನುಗ್ರಹವಂ ಮಾಡಿರಿ. ಅಶುಭೇ-ಅಮಂಗಲವಾದ, ನಿರಯೇ-ನರಕ
ದಲ್ಲಿ, ಪತಂತಂ-ಬೀಳುತ್ತಿರುವ, ಮಾಂ-ನನ್ನನ್ನು, ಕೃಚ್ಛ್ರಾತ್-ಕಷ್ಟದದೆಶೆಯಿಂದ, ಸಮುದ್ಧರತಂ-ನೀವೀರ್ವರೂಎತ್ತಿರಿ||೨೦||
ರಾಜನ್-ಧೊರೆಯೇ, ಅಹಂ-ನಾನು, ನಪ್ರತೀಚ್ಛೇವೈ-ನಿನ್ನ ಲಕ್ಷಗೋವುಗಳನ್ನು ಬಯಸುವುದೇ ಇಲ್ಲವು. ಇತ್ಯುಕ್ತ್ವಾ- ಹೀಗೆ
ಹೇಳಿ, ಸ್ವಾಮೀ-ಗೋಸ್ವಾಂತವುಳ್ಳವನು, ಅಪಾಕ್ರಮತ್-ಹಿಂದನೆಕ್ಕೆಹೋದನು ಇತರತ್-ಇದಂಹೊರತು ಬೇರೆಯಾದ, ಗವಾ
ಮಯುತಮಪಿ-ಗೋವುಗಳ ಹತ್ತುಸಾವಿರವನ್ನಾದರೂ, ನೇಚ್ಛಾಮೀತಿ-ಬಯಸುವುದಿಲ್ಲವೆಂದು, ಅಪರಃ-ಮತ್ತೊರ್ವನು,ಯ
ಯೌ-ತೆರಳಿದನು ||೨೧|| ಏತಸ್ಮಿನ್ನಂತರೇ-ಈ ಯವಕಾಶದಲ್ಲಿ,ಯಾಮ್ಯೈಃದೂತೈಃ-ಯಮನ ಆಳುಗಳಿಂದ, ಯಮಕ್ಷಯಂ-
ಯಮನ ಮನೆಯನ್ನು, ನೀತಃ-ಹೊಂದಿಸಲ್ಪಟ್ಟ, ಅಹಂ-ನಾನು, ತತ್ರ-ಅಲ್ಲಿ, ದೇವದೇವ-ದೇವರಿಗೆ ದೇವನಾದ, ಜಗತ್ಪತೇ-ವಿ
ಶ್ವನಾಧನೇ ! ಯಮೇನ-ಯಮನಿಂದ, ಪೃಷ್ಟಃ-ಕೇಳಲ್ಪಟ್ಟೆನು ||೨೨|| ತ್ವಂ-ನೀನು ಪೂರ್ವಂ-ಮುಂಚೆ, ಅಶುಭಂ-ಪಾಪ
ವನ್ನು, ಭುಂಕ್ಷ್ವ-ಅನುಭವಿಸು, ನೃಪತೇ-ಧೊರೆಯೇ,ಉತಾಹೋ-ಅಲ್ಲದಿದ್ದರೆ, ಶುಭಂ-ಪುಣ್ಯವಂಅನುಭವಿಸುವೆಯೋ ? ಭವ
ತಃ-ನಿನ್ನ, ದಾನಸ್ಯ-ದಾನದಿಂದಾದ, ಭಾಸ್ವತಃ-ಪ್ರಕಾಶಿಸುವ, ಲೋಕಸ್ಯ-ಪುಣ್ಯಲೋಕದ, ಅಂತಃ-ಕಡೆಯನ್ನು, ನಪಶ್ಯೇ-
ಕಾಣೆನು, ಎಂದನು|| ದೇವ-ಯಮದೇವನೇ, ಪೂರ್ವಂ-ಮುಂಚೆ, ಅಶುಭಂ-ಪಾಪವನ್ನು, ಭುಂಜೇ-ಅನುಭವಿಸುವೆನು, ಇತಿ-
ಹೀಗೆಹೇಳಿದೆನು, ಸಃ-ಅವನು-ಪತೇತಿ-ಬೀಳೆಂದು, ಪ್ರಾಹ-ನುಡಿದನು. ಪ್ರಭೋ-ಒಡೆಯನಾದ ಕೃಷ್ಣನೇ ! ತಾವತ್-ಅಷ್ಟ
ರಲ್ಲಿ, ಪತನ್-ಬೀಳುತ್ತಿರುವನಾಗಿ, ಆತ್ಮಾನಂ-ನನ್ನನ್ನು, ಕೃಕಲಾಸಂ-ಹೆಂಟೆ ಗೊದ್ದನ್ನಾಗಿ, ಅದ್ರಾಕ್ಷಂ-ಕಂಡೆನು||೨೪||ಕೇಶ
ವ-ಕೃಷ್ಣನೇ, ಭವತ್ಸಂದರ್ಶನಾರ್ಥಿನಃ-ನಿನ್ನದರ್ಶನವಂ ಬಯಸುವ, ತವದಾಸಸ್ಯ-ನಿನ್ನ ಸೇವಕನಾದ ನನಗೆ, ಬ್ರಹ್ಮಣ್ಯಸ್ಯ-
ಬ್ರಾಹ್ಮಣಪ್ರಿಯನಾದ, ವದಾನ್ಯಸ್ಯ-ಬಹುದಾತಾರನಾದ, ನಿನ್ನ-ಸ್ಮೃತಿಃ-ನೆನಪು, ಅದ್ಯಾಪಿ-ಈಗಲೂಕೂಡ, ನವಿಧ್ವಸ್ತಾ-
ನಾಶವುಳ್ಳದ್ದಾಗಲಿಲ್ಲವು ||೨೫|| ವಿಭೋ-ವ್ಯಾಪಕನಾದ ಪ್ರಭುವೇ, ಯೋಗೀಶ್ವರೈಃ-ಯೋಗಿಗಳಲ್ಲಿ ಶ್ರೇಷ್ಠರಾದವರಿಂದ,

---

ದು ನಾನು ಪ್ರಾರ್ಥಿಸಿದೆನು. ಬಳಿಕ ಸ್ವತ್ತುಕರ್ತನಾದ ದ್ವಿಜನು ಕೋಪದಿಂದ ತಾನು ಲಕ್ಷಗೋವುಗಳಂ ಪ್ರತಿ
ಗ್ರಹಿಸುವುದಿಲ್ಲವೆಂದು ಹೇಳಿತೆರಳಿದನು ||೨೦||ಪ್ರತಿಗ್ರಹಕರ್ತನಾದ ದ್ವಿಜನು ದುರಾಗ್ರಹದಿಂದ ನನ್ನಂಕುರಿತು
ಎಲೈ ಅರಸೇ! ಈಗೋವಂಬಿಟ್ಟು ಲಕ್ಷಗೋವುಗಳಮೇಲೆ ಇನ್ನೂ ಹತ್ತು ಸಾವಿರಗೋವುಗಳಂಕೊಟ್ಟರೂ ಅ
ವುಗಳನ್ನಾ ನೊಲ್ಲೆನೆಂದು ತೆರಳಿದನು ||೨೧|| ಜಗತ್ಪತಿಯಾದ ದೇವೋತ್ತಮನಾದ ಶ್ರೀಕೃಷ್ಣನೇ ಹೀಗಿರು
ಲು ನಾನು ಯಮದೂತರಿಂದ ಯಮಪುರವನೆಯ್ದಿಸಲ್ಪಟ್ಟವನಾಗಿ ಅಲ್ಲಿಯಮನಿಂದ ಹೀಗೆ ಕೇಳಲ್ಪಟ್ಟೆನು||೨೨||
ಎಂತೆನೆ- ಎಲೈಅರಸೇ! ಮುಂಚೆ ಪಾಪಫಲವನನುಭವಿಸುವೆಯೋ? ಅಲ್ಲದೆ ಪುಣ್ಯಫಲವನನುಭವಿಸುವಿಯೋ? ನಿನ್ನ
ದಾನಧರ್ಮಗಳಿಂ ಸಾಧಿಸಲ್ಪಟ್ಟ ಪ್ರಕಾಶವುಳ್ಳ ಪುಣ್ಯಲೋಕಗಳಿಗೆ ಅಂತವಂಕಾಣೆನೆಂದನು ||೨೩||ಯಮನಂಕು
ರಿತು ನಾನು ಮೊದಲು ಪಾಪಫಲವನನುಭವಿಸುತ್ತೇನೆಂದು ಹೇಳುತಲೂ ಆಯಮನು ಹಾಗೆಯೇಆಗಲಿ ನೀನುಭೂ
ಮಿಯಲ್ಲಿ ಬೀಳುವನಾಗೆಂದನು||೨೪||ಅಲ್ಲಿಂದ ಬೀಳುತಲಿರುವ ನಾನು ನನ್ನನ್ನು ಹೆಂಟೆಗೋದವನ್ನಾಗಿ ಕಂಡೆನು.
ಎಲೈಶ್ರೀಕೃಷ್ಣನೆ! ಬ್ರಾಹ್ಮಣಪ್ರಿಯನಾಗಿ ದಾತೃವಾಗಿ ನಿನ್ನದಾಸನಾಗಿ ನಿನ್ನದರ್ಶನವನ್ನೇ ಅಪೇಕ್ಷಿಸುವವನಾ
ದ್ದರಿಂದ ಅಂತಾನನಗೆ ಆಸ್ಮರಣವು ನಷ್ಟವಾಗಲಿಲ್ಲ ||೨೫|| ಪ್ರಭುವಾದ ಶ್ರೀಕೃಷ್ಣನೇ! ನೀನು ಪರಮಾತ್ಮನಾ

ಶಾಮಲಹೃದ್ವಿಭಾವ್ಯಃ । ಸಾಕ್ಷಾದಧೋಕ್ಷಜಉರುವ್ಯಸನಾಂಧಬುದ್ಧೇಸ್ಸ್ಯಾದೇವದೃಶ್ಯಇಹಯಸ್ಯಭ
ವಾಪವರ್ಗಃ ॥೨೬॥ದೇವದೇವಜಗನ್ನಾಥಗೋವಿಂದಪುರುಷೋತ್ತಮ । ನಾರಾಯಣಹೃಷೀಕೇಶಪುಣ್ಯಶ್ಲೋ
ಕಾಚ್ಯುತಾವ್ಯಯ ॥೨೭॥ ಅನುಜಾನೀಹಿಮಾಂಕೃಷ್ಣಯಾಂತಂದೇವಗತಿಂಪ್ರಭೋ । ಯತ್ರಕ್ವಾಪಿಸ
ತಶ್ಚೇತೋಭೂಯಾನ್ಮೇತ್ವತ್ಪದಾಸ್ಪದಮ್ ॥೨೮॥ ನಮಸ್ತೇಸರ್ವಭಾವಾಯಬ್ರಹ್ಮಣೇನಂತಶಕ್ತಯೇ ।
ವಾಸುದೇವಾಯಕೃಷ್ಣಾಯಯೋಗಾನಾಂಪತಯೇನಮಃ॥೨೯॥ಇತ್ಯುಕ್ತ್ವಾತಂಪರಿಕ್ರಮ್ಯಪಾದೌಸ್ಪೃ
ಷ್ಟ್ವಾಸ್ವಮೌಳಿನಾ । ಅನುಜ್ಞಾತೋವಿಮಾನಾಗ್ರ್ಯಮಾರುಹತ್ಪಶ್ಯತಾಂನೃಣಾಮ್॥೩೦॥ ಕೃಷ್ಣಃಪ

---

ಸ್ಮೃತಿದೃಶಾ-ವೇದಾಂತಜ್ಞಾನದಿಂದ, ಅಮಲಹೃದ್ವಿಭಾವ್ಯಃ-ನಿರ್ಮಲಚಿತ್ತದಲ್ಲಿ ಧ್ಯಾನಿಸಲ್ಪಡತಕ್ಕವನಾದ, ಅಧೋಕ್ಷಜಃ-ಇಂದ್ರಿಯಜ್ಞಾನವನ್ನು ಅಧಃಕರಿಸಿದವನಾದ, ಪರಾತ್ಮಾ-ಪರಮಾತ್ಮನಾದ, ಯಸ್ಯಭವಾಪವರ್ಗಃ-ಯಾವಪುರುಷನಿಗೆ ಸಂಸಾರಮೋಕ್ಷವಾಗತಕ್ಕದ್ದೋ ತಸ್ಯದೃಶ್ಯಃ-ಅವನಿಗೆ ಕಾಣಿಸತಕ್ಕವನಾದ, ಸತ್ವಂ-ಆ ನೀನು, ಉರುವ್ಯಸನಾಂಧಬುದ್ಧೇಃ- ಅಧಿಕದುಃಖಗಳಿಂದ ಮೂಢವಿವೇಕನಾದ ನನಗೆ, ಇಹೈವ-ಇಲ್ಲಿಯೇ, ಸಾಕ್ಷಾತ್-ಪ್ರತ್ಯಕ್ಷನಾದವನು, ಕಥಂಸ್ಯಾತ್-ಹೇಗಾದಿಯೋ॥೨೬॥ ದೇವದೇವ-ದೇವರ್ಕಳಿಗೆ ದೇವರಾದವನೇ ! ಜಗನ್ನಾಥ-ವಿಶ್ವೇಶ್ವರನೇ, ಗೋವಿಂದ-ಗೋವುಗಳನ್ನೂ ಭೂಮಿಯನ್ನೂ ಪಾಲಿಸುವವನೇ, ಪುರುಷೋತ್ತಮ-ಪರಮಾತ್ಮನೇ, ನಾರಾಯಣ-ಸರ್ವಭೂತಂಗಳಲ್ಲಿಯೂ ಇರುವವನೇ, ಹೃಷೀಕೇಶ-ಇಂದ್ರಿಯಂಗಳಿಗೆ ನಿಯಾಮಕನೇ, ಪುಣ್ಯಶ್ಲೋಕ-ಪುಣ್ಯಪುರುಷನೆಂದು ಕೊಂಡಾಡಲ್ಪಟ್ಟವನೇ, ಅಚ್ಯುತ-ಹಾನಿಯಿಲ್ಲದವನೇ, ಅವ್ಯಯ-ನಾಶರಹಿತನೇ ॥೨೭॥ ಕೃಷ್ಣ-ಅವಿದ್ಯಾಬಂಧವನ್ನು ಉತ್ತುಮುಕ್ತಿಯ ಬೆಳೆಯಿಡುವವನೆ, ಪ್ರಭೋ-ಒಡೆಯನೇ, ದೇವಗತಿಂ-ದೇವರ್ಕಳ ಪದವಿಯಂ ಕುರಿತು, ಯಾಂತಂ ಹೋಗುತ್ತಿರುವ, ಮಾಂ-ನನ್ನನ್ನು, ಅನುಜಾನೀಹಿ- ಅಪ್ಪಣೆಕೊಟ್ಟು ಕಳುಹಿಸು, ಯತ್ರಕ್ವಾಪಿ-ಎಲ್ಲಿಯಾದರೂ, ಸತಃ-ಇರುವ, ಮೇ-ನನ್ನ, ಚೇತಃ-ಮನಸ್ಸು, ತ್ವತ್ಪದಾಸ್ಪದಂ-ನಿನ್ನ ಚರಣಗಳ ಆಶ್ರಯವುಳ್ಳದ್ದು, ಭೂಯಾತ್-ಆಗಲಿ ॥೨೮॥ ಸರ್ವಭಾವಾಯ-ಸರ್ವರೂಪನಾಗುವ, ಬ್ರಹ್ಮಣೇ-ವ್ಯಾಪಕನಾಗಿ ವೃದ್ಧಿಹೊಂದಿದ, ಅನಂತಶಕ್ತಯೇ-ಅಪರಿಮಿತ ಸಾಮರ್ಥ್ಯಂಗಳುಳ್ಳ, ವಾಸುದೇವಾಯ-ಸರ್ವಾಧಿಷ್ಠಾನನಾದ ಸರ್ವವ್ಯಾಪಕನಾದ, ಯೋಗಾನಾಂಪತಯೇ-ಧ್ಯಾನೋಪಾಯಾದಿಗಳಿ ಗೊಡೆಯನಾದ, ಕೃಷ್ಣಾಯ-ಭೂಪ್ರಾಣಿಗಳಿಗೆ ನಿರ್ವೃತಿದಾಯಕನಾದ ಪರಮಾತ್ಮನಾದ, ತೇ-ನಿನಗೆ, ನಮಃ-ನಮಸ್ಕಾರವು, ॥೨೯॥ ಇತ್ಯುಕ್ತ್ವಾ-ಹೀಗೆಹೇಳಿ, ತಂ-ಆ ಕೃಷ್ಣನನ್ನು, ಪರಿಕ್ರಮ್ಯ-ಬಲಗೊಂಡು, ಸ್ವಮೌಳಿನಾ-ತನ್ನ ತಲೆಯಿಂದ, ಪಾದೌ-ಕೃಷ್ಣನಚರಣಗಳನ್ನು, ಸ್ಪೃಷ್ಟ್ವಾ-ಸೋಂಕಿ, ಅನುಜ್ಞಾತಃ-ಅಪ್ಪಣೆಯಂಕೊಂಡವನಾಗಿ, ನೃಣಾಂಪಶ್ಯತಾಂ-ಮನುಷ್ಯರು ನೋಡುತ್ತಿರಲಾಗಿ, ವಿಮಾನಾಗ್ರ್ಯಂ-ಗಗನ ರಥಗಳಲ್ಲಿ ಶ್ರೇಷ್ಠವಾದ್ದನ್ನು, ಆರುಹತ್-ಏರಿದನು ॥೩೦॥ ದೇವಕೀಸುತಃ-ದೇವಕಿಯಮಗನಾದ, ಬ್ರಹ್ಮಣ್ಯದೇವಃ-ಬ್ರಾಹ್ಮಣರನ್ನು ಸಂತೋಷಪಡಿ

---

ದ್ದರಿಂದ ಯೋಗೀಶ್ವರರಿಂ ಉಪನಿಷತ್ತೆಂಬ ಕಂಗಳಿಂ ನಿರ್ಮಲವಾದ ಹೃದಯದಲ್ಲಿ ಭಾವಿಸಿ ನೋಡಲ್ಪಡತಕ್ಕವನಾಗಿರುವಿ. ಇಂದ್ರಿಯಜನ್ಯಜ್ಞಾನವಂ ಅಧೋಭಾಗದಲ್ಲಿ ತಿರಸ್ಕರಿಸುವ ನೀನು ಯಾವಪುರುಷನಿಗೆ ಸಂಸಾರನಿವೃತ್ತಿಯುಂಟಾಗತಕ್ಕದ್ದೋ ಅಂತವನಿಗೆ ಮಾತ್ರದೃಶ್ಯನಾದೀಯೇ? ಇಂತಾ ಕೃಕಲಾಸಜನ್ಮದಿಂದುಂಟಾದ ದುಃಖದಿಂ ಮೂಢವಾದ ಬುದ್ಧಿಯುಳ್ಳ ನನಗೆ ಜಗದೀಶ್ವರನಾದ ನೀನು ಪ್ರತ್ಯಕ್ಷನಾದದ್ದು ಆಶ್ಚರ್ಯವೇಸರಿ॥೨೬॥ ದೇವೋತ್ತಮನೇ! ಜಗತ್ಪತಿಯೇ ಗೋವಿಂದನೇ ಪುರುಷೋತ್ತಮನಾದ ನಾರಾಯಣನಾದ ಹೃಷಿಕೇಶನಾದ ಸುಜನರಿಂ ಶ್ಲಾಘಿಸಲ್ಪಡುವ ಅಚ್ಯುತನಾದ ಅವ್ಯಯನಾದ ಶ್ರೀಕೃಷ್ಣನೇ! ॥೨೭॥ದೇವಲೋಕವನೈದ್ದಲೋಸುಗ ನನ್ನಂ ಆಜ್ಞಾಪಿಸುವನಾಗು, ನಾನೆಲ್ಲಿದ್ದರೂ ನನ್ನ ಮನಸ್ಸು ನಿನ್ನ ಪಾದಾರವಿಂದದ ಧ್ಯಾನದಲ್ಲಿಯೇ ಆಸಕ್ತವಾಗಿರುವಂತೆ ಅನುಗ್ರಹಿಸು ॥೨೮॥ಸರ್ವಪ್ರಪಂಚೋತ್ಪತ್ತಿಗೆ ಕಾರಣನು, ಬ್ರಹ್ಮರೂಪನು, ಅನಂತಶಕ್ತಿಗಳುಳ್ಳ ವಾಸುದೇವನು, ಇಷ್ಟಾಪೂರ್ತಕರ್ಮಂಗಳಿಗೆ ಫಲಪ್ರದನೂ, ಆದ ಶ್ರೀಕೃಷ್ಣನೇ ನಿನಗೆ ನಮಸ್ಕಾರವು॥೨೯॥ ಎಲೈಪರೀಕ್ಷಿದ್ರಾಯನೇ! ಆನೃಗರಾಯನು ಇಂತು ಶ್ರೀಕೃಷ್ಣಂಗೆ ಬಿನ್ನವಿಸಿ ಪ್ರದಕ್ಷಿಣಂಗೆಯ್ದು ತನ್ನ ಕಿರೀಟದಿಂ ಕೃಷ್ಣನ ಪಾದಪದ್ಮಂಗಳಿಗೆ ನಮಸ್ಕರಿಸಿ ಆಜ್ಞಾಪ್ತನಾಗಿ ಎಲ್ಲರೂನೋಡುತ್ತಿರಲು ಉತ್ತಮವಿಮಾನವನ್ನೇರಿ ಸ್ವರ್ಗಕ್ಕೆ ಹೋದನು॥೩೦॥ಆಮೇಲೆ ದೇವಕೀಪುತ್ರನೂ, ಬ್ರಾಹ್ಮಣಪ್ರಿಯನೂ, ದೇವೋತ್ತಮನೂ, ಧರ್ಮಾ

ರಿಜನಂಪ್ರಾಹಭಗವಾನ್ದೇವಕೀಸುತಃ । ಬ್ರಹ್ಮಣ್ಯದೇವೋಧರ್ಮಾತ್ಮಾರಾಜನ್ಯಾನನುಶಿಕ್ಷಯನ್ ॥೩೧॥
ದುರ್ಜರಂಬತಬ್ರಹ್ಮಸ್ವಂಭುಕ್ತಮಗ್ನೇರ್ಮನಾಗಪಿ । ತೇಜೀಯಸೋಽಪಿಕಿಮುತರಾಜ್ಞಾಮೀಶ್ವರಮಾ
ನಿನಾಮ್ ॥೩೨॥ನಾಹಂಹಾಲಾಹಲಂಮನ್ಯೇವಿಷಂಯಸ್ಯಪ್ರತಿಕ್ರಿಯಾ । ಬ್ರಹ್ಮಸ್ವಂಹಿವಿಷಂಪ್ರೋಕ್ತಂ
ನಾಸ್ಯಪ್ರತಿವಿಧಿರ್ಭುವಿ॥೩೩॥ ಹಿನಸ್ತಿವಿಷಮತ್ತಾರಂವಹ್ನಿರದ್ಭಿಃಪ್ರಶಾಮ್ಯತಿ । ಕುಲಂಸಮೂಲಂದ
ಹತಿಬ್ರಹ್ಮಸ್ವಾರಣಿಪಾವಕಃ ॥೩೪ ಬ್ರಹ್ಮಸ್ವಂದುರನುಜ್ಞಾತಂಭುಕ್ತಂಹಂತಿತ್ರಿಪೂರುಷಮ್ ॥ಪ್ರ
ಸಹ್ಯತುಬಲಾದ್ಭುಕ್ತಂದಶಪೂರ್ವಾನ್ದಶಾಪರಾನ್ ॥೩೫॥ರಾಜಾನೋರಾಜಲಕ್ಷ್ಮ್ಯಾಂಧಾನಾತ್ಮಪಾತಂವಿ

---

ಸುವನಾದ, ಧರ್ಮಾತ್ಮಾ-ಪುಣ್ಯಮೂರ್ತಿಯಾದ, ಭಗವಾನ್-ಸರ್ವಜ್ಞನಾದ, ಕೃಷ್ಣಃ-ಹರಿಯು, ರಾಜನ್ಯಾನ್-ಪಟ್ಟಾಭಿಷಿಕ್ತ ರಾದ ದೊರೆಗಳಿಗೆ, ಅನುಶಿಕ್ಷಯನ್-ಬುದ್ಧಿಯಂ ಕಲಿಸುವವನಾಗಿ, ಪರಿಜನಂ-ಸೇವಕಜನವಂ ಕುರಿತು, ಪ್ರಾಹ-ನುಡಿದನು॥೩೧॥ ಬತ-ಖೇದವು, ಮನಾಕ್-ಸ್ವಲ್ಪವೇ, ಭುಕ್ತಮಪಿ-ತಿನ್ನಲ್ಪಟ್ಟದ್ದಾದರೂ ಬ್ರಹ್ಮಸ್ವಂ-ಬ್ರಾಹ್ಮಣನ ಸ್ವತ್ತು, ಅಗ್ನೇಃ-ಬೆಂಕಿ ಗಿಂತಲೂ, ತೇಜೀಯಸಃಅಪಿ-ಅತಿತೇಜಸ್ಸುಳ್ಳವನಿಗೂ. ದುರ್ಜರಂ-ಪ್ರಯಾಸದಿಂದಲೂ, ಜೀರ್ಣಿಸುವಕ್ಕವುದಿಲ್ಲವು, ಈಶ್ವರ ಮಾನಿನಾಂ-ನಾವು ಪ್ರಭುಗಳೆಂಬ ಗರ್ವವುಳ್ಳ ರಾಜ್ಞಾಂ-ಅರಸುಗಳಿಗೆ ಜೀರ್ಣಿಸುವುದಲ್ಲವೆಂದು, ಕಿಮುತ-ಏನುಹೇಳತಕ್ಕದ್ದು? ಯಸ್ಯ-ಯಾವುದಕ್ಕೆ, ಪ್ರತಿಕ್ರಿಯಾ-ಶಾಮಕವಾದ ಮದ್ದುಂಟೋ, ತತ್-ಹಾಲಾಹಲಂ-ಆ ವಿಷವನ್ನು, ವಿಷಂ-ಪ್ರಾಣಹಾರಕವ ನ್ನಾಗಿ, ಅಹಂನಮನ್ಯೇ-ನಾನು ತಿಳಿಯುವುದಿಲ್ಲ, ಬ್ರಹ್ಮಸ್ವಂಹಿ-ಬ್ರಾಹ್ಮಣನಸ್ವತ್ತುವಲ್ಲವೆ? ವಿಷಂ-ವಿಷವೆಂದು,ಪ್ರೋಕ್ತಂ-ಹೇ ಳಲ್ಪಟ್ಟಿದೆ. ಭುವಿ-ಭೂಮಿಯಲ್ಲಿ, ಅಸ್ಯ-ಇದಕ್ಕೆ, ಪ್ರತಿವಿಧಿಃ-ಪ್ರತೀಕಾರವು, ನ-ಇಲ್ಲವು ॥೩೩॥ ವಿಷಂ-ಗರಳವು, ಅತ್ತಾ ರಂ-ತಿನ್ನುವವನನ್ನು, ಹಿನಸ್ತಿ-ಹಿಂಸೆಪಡಿಸುತ್ತೆ, ವಹ್ನಿಃ-ಬೆಂಕಿಯು, ಅದ್ಭಿಃ-ನೀರುಗಳಿಂದ, ಪ್ರಶಾಮ್ಯತಿ- ನಂದಿಹೋಗುತ್ತೆ, ಬ್ರಹ್ಮಸ್ವಾರಣಿಪಾವಕಃ-ಬ್ರಾಹ್ಮಣರ ಸ್ವತ್ತೆಂಬ ಅರಣಿಯಿಂದಹುಟ್ಟಿದ ಬೆಂಕಿಯು, ಕುಲಂ-ಅಪಹರಿಸಿತಿನ್ನುವನ ವಂಶವನ್ನು, ಸಮೂಲಂ-ಬುಡಸಹಿತವಾಗಿ, ದಹತಿ-ಸುಡುತ್ತಿದೆ ॥೩೪॥ ಬ್ರಹ್ಮಸ್ವಂ-ಬ್ರಾಹ್ಮಣರಸ್ವತ್ತು, ದುರನುಜ್ಞಾತಂ-ಅಪ್ಪಣೆಕೊಡಲ್ಪ ಡದೆ ಇರುವದಾಗಿ, ಭುಕ್ತಂ-ಅನುಭವಿಸಲ್ಪಟ್ಟದ್ದಾದರೆ, ತ್ರಿಪೂರುಷಂ-ಮೂರುತಲಾಂತರಗಳ ಕುಲವನ್ನು, ಹಂತಿ-ಕೊಲ್ಲುತ್ತಿ ದೆ, ಪ್ರಸಹ್ಯ-ನಿಗ್ರಹಿಸಿ, ಬಲಾತ್-ಬಲಾತ್ಕಾರದಿಂದ, ಭುಕ್ತಂತು-ಅನುಭವಿಸಲ್ಪಟ್ಟದ್ದಾದರೋ ಪೂರ್ವಾನ್‌ದಶ-ಹಿಂದಣದ ಹ ತ್ತು ತಲಾಂತರಗಳನ್ನೂ, ಅಪರಾನ್‌ದಶ-ಮುಂದಣದಹತ್ತು ತಲಾಂತರಗಳನ್ನೂ, ಹಂತಿ-ಕೊಲ್ಲುತ್ತಿದೆ ॥೩೫॥ ರಾಜಾನಃ- ಅರಸುಗಳು, ರಾಜಲಕ್ಷ್ಮ್ಯಾ-ದೊರೆತನದ ಸಂಪತ್ತಿನಿಂದ, ಆತ್ಮಪಾತಂ-ತಮ್ಮ ಬೀಳುವಿಕೆಯನ್ನು, ನವಿಚಕ್ಷತೇ- ತಿಳಿದುಕೊಳ್ಳು

---

ತ್ಮನೂ, ಭಗವಂತನೂ, ಆದ ಶ್ರೀಕೃಷ್ಣನು ಲೋಕದಲ್ಲಿರುವ ಅರಸುಗಳಂ ಶಿಕ್ಷಿಸಲೋಸುಗ ಪರಿಜನರಂ ಕುರಿ ತು ವಚನವಂ ನಿರೂಪಿಸಿದನೆಂತೆನೆ॥೩೧॥ಎಲೈಪುರುಷರಿರಾ! ಬ್ರಾಹ್ಮಣನಸ್ವತ್ತು ಸ್ವಲ್ಪವಾದರೂ ಭುಜಿಸಲ್ಪಟ್ಟರೆ ಅದು ಅಗ್ನಿಗೆಸಮಾನವಾದ ತೇಜಸ್ಸುಳ್ಳ ಪುರುಷನಿಗೂಕೂಡ ಜೀರ್ಣಿಸುವದಿಲ್ಲ. ಹೀಗಿರುವಲ್ಲಿ ನಾವೇ ಯಿಶ್ವ ರರೆಂದು ದುರಹಂಕಾರವುಳ್ಳ ಅರಸುಗಳಿಗೆ ಅದು ಜೀರ್ಣಿಸುವುದಿಲ್ಲವೆಂದು ಹೇಳತಕ್ಕದ್ದೇನು? ॥೩೨॥ ವಿಷಕ್ಕೆ ಪ್ರತಿಕ್ರಿಯೆಯುಂಟಾದ್ದರಿಂದ ಅದರನ್ನು ವಿಷವೆಂದು ತಿಳಿಯುವುದಿಲ್ಲ, ಬ್ರಹ್ಮಸ್ವವಾದರೋ ಪ್ರತಿಕ್ರಿಯೆಯಿಲ್ಲದ ವಿಷವಾಗಿರುತ್ತೆ ॥೩೩॥ ವಿಷವು ತನ್ನನ್ನು ಭಕ್ಷಿಸಿದವನನ್ನೋರ್‍ವನನ್ನೇ ಸಂಹರಿಸುತ್ತೆ, ಬೆಂಕಿಯೂ ನೀರಿನಿಂ ದ ಶಾಂತವಾಗುತ್ತೆ. ಬ್ರಹ್ಮಸ್ವವೆಂಬ ಅರಣಿಯಿಂದ ಹುಟ್ಟಿದ ಅಗ್ನಿಯಾದರೋ ವಂಶವನ್ನೂಕೂಡ ಸಹ ಮೂಲವಾಗಿ ಸುಟ್ಟುಬಿಡುತ್ತೆ ॥೩೪॥ ಯಥಾವಿಧಿಯಾಗಿ ಬ್ರಾಹ್ಮಣರ ಸಮ್ಮತಿಯಿಲ್ಲದೆ ಭುಂಜಿಸಲ್ಪಟ್ಟ ಬ್ರಹ್ಮಸ್ವ ತ್ವವು ಭುಂಜಿಸಿದವನ ಪುತ್ರಪೌತ್ರರಂಸಹ ಕೊಲ್ಲುತಲಿದೆ. ರಾಜಾಶ್ರಯದಿಂದ ಬಲಾತ್ಕರಿಸಿ ಅನುಭವಿಸಲ್ಪಟ್ಟ ಬ್ರಹ್ಮಸ್ವತ್ತಾದರೋ ಅನುಭವಿಸಿದವನ ಕುಲದಲ್ಲಿ ಹತ್ತುಮಂದಿ ಪೂರ್ವಪುರುಷರನ್ನೂ ಹತ್ತುಮಂದಿ ಉತ್ತರ ಪುರುಷರನ್ನೂ ಹೀಗೆ ಇಂತಲಾಂತರಗಳನ್ನು ಸುಟ್ಟುಬಿಡುತ್ತೆ॥೩೫॥ಯಾವಪುರುಷರು ಬ್ರಹ್ಮಸ್ವತ್ತನ್ನು ಅಪೇ ಕ್ಷಿಸುವರೋ ಅವರು ನರಕವನ್ನೇ ಚನ್ನಾಗಿ ಅಪೇಕ್ಷಿಸುವರು. ಆದ್ದರಿಂದ ಅಜ್ಞಾನಿಗಳಾಗಿ ರಾಜ್ಯಲಕ್ಷ್ಮಿಯಿಂದ

(೩೬)

ಚಕ್ಷತೇ | ನಿರಯಂಯೋಽಭಿಮನ್ಯಂತೇಬ್ರಹ್ಮಸ್ವಂಸಾಧುಬಾಲಿಶಾಃ ||೩೬|| ಗೃಹ್ಣಂತಿಯಾವತಃಪಾಂಸೂನ್ಕ್ರುದತಾಮಶ್ರುಬಿಂದವಃ | ವಿಪ್ರಾಣಾಂಹೃತವಿತ್ತಾನಾಂವದಾನ್ಯಾನಾಂಕುಟುಂಬಿನಾಮ್ ||೩೭|| ರಾಜಾನೋರಾಜಕುಲ್ಯಾಶ್ಚತಾವತೋಽಬ್ದಾನ್ನಿರಂಕುಶಾಃ | ಕುಂಭೀಪಾಕೇಷುಪಚ್ಯಂತೇಬ್ರಹ್ಮದಾಯಾಪಹಾರಿಣಃ ||೩೮|| ಸ್ವದತ್ತಾಂಪರದತ್ತಾಂವಾಬ್ರಹ್ಮವೃತ್ತಿಂಹರೇತಯಃ | ಷಷ್ಟಿರ್ವರ್ಷಸಹಸ್ರಾಣಿವಿಷ್ಠಾಯಾಂಜಾಯತೇಕ್ರಿಮಿಃ ||೩೯|| ಮಾಮೇಬ್ರಹ್ಮಧನಂಭೂಯಾದ್ಯದ್ಗೃಧ್ವಾಲ್ಪಾಯುಷೋನೃಪಾಃ |ಪರಾಜಿತಾಶ್ಚ್ಯುತಾರಾಜ್ಯಾದ್ಭವಂತ್ಯುದ್ವೇಗಿನೋಹಿಯಃ ||೪೦|| ವಿಪ್ರಂಕೃತಾಗಸಮಪಿನೈವದ್ರುಹ್ಯತಮಾಮಕಾಃ | ಘ್ನಂತಂಬಹುಶಪಂತಂವಾನಮಸ್ಕುರುತನಿತ್ಯಶಃ ||೪೧|| ಯಥಾಹಂಪ್ರಣಮೇವಿಪ್ರಾನನುಕಾ

---

ವುದಿಲ್ಲ. ಯೇ-ಯಾವಅರಸುಗಳು, ಬ್ರಹ್ಮಸ್ವಂ-ಬ್ರಾಹ್ಮಣರಸ್ವತ್ತನ್ನು, ಅಭಿಮನ್ಯಂತೇ-ಬಯಸುತ್ತಿರುವರೋ, ತೇ-ಅವರು, ಸಾಧು-ಚೆನ್ನಾಗಿ, ಬಾಲಿಶಾಃ-ಮೂಢರಾದ್ದರಿಂದ, ನಿರಯೇ-ನರಕದಲ್ಲಿ, ಬೀಳುವರು ||೩೬|| ವದಾನ್ಯಾನಾಂ-ದಾನಶೀಲರಾದ, ಕುಟುಂಬಿನಾಂ-ಪೋಷ್ಯವುಳ್ಳವರಾದ, ಹೃತವಿತ್ತಾನಾಂ-ಇತರರಿಂದ ಅಪಹರಿಸಲ್ಪಟ್ಟ ಧನವುಳ್ಳವರಾದ್ದರಿಂದ ರುದತಾಂ-ಅಳುತ್ತಿರುವ, ವಿಪ್ರಾಣಾಂ-ಬ್ರಾಹ್ಮಣರ, ಅಶ್ರುಬಿಂದವಃ-ಕಣ್ಣೀರಿನ ತೊಟ್ಟುಗಳು, ಯಾವತಃಪಾಂಸೂನ್- ಎಷ್ಟುಧೂಳಿಗಳನ್ನು, ಗೃಹ್ಣಂತಿ-ಹೀರುತ್ತಿವೆಯೋ ||೩೭|| ರಾಜಾನಃ-ದೊರೆಗಳಾಗಲೀ, ರಾಜಕುಲ್ಯಾಶ್ಚ-ಕ್ಷತ್ರಿಯವಂಶದಲ್ಲಿ ಹುಟ್ಟಿದವರಾಗಲೀ,ನಿರಂಕುಶಾಃ-ತಡೆಇಲ್ಲದವರಾಗಿ, ಬ್ರಹ್ಮದಾಯಾಪಹಾರಿಣಃ-ಬ್ರಾಹ್ಮಣರಪಾಲನ್ನು ತೆಗದುಕೊಳ್ಳುವರಾಗುವರೋ, ತೇ-ಅವರು,ಕುಂಭೀಪಾಕೇಷು-ಗಡಿಗೆಯಲ್ಲಿ ಅಕ್ಕಿಯು ಕುದಿಸಲ್ಪಡುವಂತೆ ಪ್ರಾಣಿಗಳನ್ನು ಕುದಿಯಿಸುವ ನರಕಂಗಳಲ್ಲಿ, ತಾವತಃಅಬ್ದಾನ್-ಅಷ್ಟುವರ್ಷಗಳು, ಪಚ್ಯಂತೇ-ಬೇಯಿಸಲ್ಪಡುವರು ||೩೮|| ಯಃ-ಯಾವವನು, ಸ್ವದತ್ತಾಂ-ತನ್ನಿಂದ ಕೊಡಲ್ಪಟ್ಟದ್ದನ್ನಾಗಲೀ, ಪರದತ್ತಾಂವಾ-ಅನ್ಯರಿಂದ ಕೊಡಲ್ಪಟ್ಟದ್ದನ್ನಾಗಲಿ, ಬ್ರಹ್ಮವೃತ್ತಿಂ-ಬ್ರಾಹ್ಮಣನ ಜೀವನೋಪಾಯವನ್ನು, ಹರೇತ-ಅಪಹರಿಸುವನೋ, ಸಃ-ಅವನು, ವರ್ಷಸಹಸ್ರಾಣಿಷಷ್ಟಿಂ-೬೦ ಸಾವಿರವರ್ಷಗಳು, ವಿಷ್ಠಾಯಾಂ-ಅಮೇಧ್ಯದಲ್ಲಿ, ಕ್ರಿಮಿಃ- ಹುಳುವಾಗಿ, ಜಾಯತೇ-ಹುಟ್ಟುವನು ||೩೯|| ಯತ್ನೃಪಾಃ-ಯಾವಕಾರಣದಿಂದ ಯಾವದೊರೆಗಳು ಯದ್ಗೃಧ್ವಾ-ಯಾವಬ್ರಾಹ್ಮಣ ಸ್ವತ್ತನ್ನುಅಪೇಕ್ಷಿಸಿ, ಅಲ್ಪಾಯುಷಃ-ಸ್ವಲ್ಪವಾದ ಜೀವಿತಕಾಲವುಳ್ಳವರೂ, ಪರಾಜಿತಾಃ- ಸೋಲುವಿಕೆ ಯುಂಟಾದವರೂ, ರಾಜ್ಯಾತ್-ದೊರೆತನದ ದೆಸೆಯಿಂದ, ಚ್ಯುತಾಃ-ಜಾರಿದವರೂ, ಉದ್ವೇಗಿನಃ-ಭಯಚಾಂಚಲ್ಯವುಳ್ಳವರೂ, ಭವಂತಿ-ಆಗುವರೋ, ಆ ಕಾರಣದಿಂದ. ಮೇ-ನನಗೆ, ಬ್ರಹ್ಮಧನಂ-ಬ್ರಾಹ್ಮಣರಸ್ವತ್ತು, ಮಾಭೂಯಾತ್-ಆಗಬೇಡ ||೪೦|| ಕೃತಾಗಸಮಪಿ-ಮಾಡಲ್ಪಟ್ಟ ಅಪರಾಧವುಳ್ಳವರಾದರೂ, ವಿಪ್ರಂ-ಬ್ರಾಹ್ಮಣನನ್ನು, ಮಾಮಿಕಾಃ-ನನ್ನವರೇ, ನೈವದ್ರುಹ್ಯತ-ಅಪಕಾರಗೊಳಿಸದಿರಿ, ಘ್ನಂತಂ-ಹೊಡೆಯುವವನನ್ನಾಗಲೀ, ಬಹು-ಬಹಳವಾಗಿ, ಶಪಂತಂವಾ-ಬಯ್ಯುತ್ತಿರುವವನನ್ನಾಗಲೀ, ನಿತ್ಯಶಃ-ಯಾ

---

ಕುರುಡರಹಾಗಿರುವ ಅರಸುಗಳು ತಮಗೆ ಬ್ರಹ್ಮದ್ರೋಹದಿಂದುಂಟಾಗುವ ನರಕವನ್ನು ತಿಳಿಯುವುದಿಲ್ಲ ||೩೬|| ಅಪಹರಿಸಲ್ಪಟ್ಟ ಜೀವನಗಳುಳ್ಳ ಉದಾರಿಗಳಾದ ಕುಟುಂಬಿಕರಾದ ಮತ್ತೊಂದು ಜೀವನೋಪಾಯವಿಲ್ಲದೆ ದುಃಖಿಸುತ್ತಲಿರುವ ಬ್ರಾಹ್ಮಣರ ನೇತ್ರೋದಕಬಿಂದುಗಳು ಭೂಮಿಯಲ್ಲಿ ಎಷ್ಟುರೇಣುಗಳಂ ಗ್ರಹಿಸುವವೋ, ||೩೭|| ಅಷ್ಟು ಸಂವತ್ಸರಗಳು ಬ್ರಾಹ್ಮಣರ ಜೀವನ ವೃತ್ತಿಗಳಂ ಅಪಹರಿಸಿರುವ ಕರ್ಮಭ್ರಷ್ಟರಾದ ಅರಸುಗಳು ಕುಂಭೀಪಾಕವೆಂಬ ಮಹಾನರಕದಲ್ಲಿ ಯಮಕಿಂಕರರಿಂದ ಪಾಕಂಗೆಯ್ಯಲ್ಪಡುವರು ||೩೮|| ಯಾವಅರಸು ತನ್ನಿಂದ ಅನ್ಯರಿಂದಲಾದರೂ ಕೊಡಲ್ಪಟ್ಟ ಬ್ರಾಹ್ಮಣವೃತ್ತಿಯನ್ನು ಅಪಹರಿಸುತಲಿರುವನೋ, ಆಪುರುಷನು ಅರವತ್ತು ಸಾವಿರವರುಷಂಗಳು ಮಲದಲ್ಲಿ ಕ್ರಿಮಿಯಾಗಿರುವನು ||೩೯|| ಭೂಮಿಯಲ್ಲಿ ಅರಸುಗಳು ಯಾವಬ್ರಾಹ್ಮಣನ ಧನವನ್ನು ಅಪೇಕ್ಷಿಸಿದರೆ ಅಲ್ಪಾಯುಷ್ಯವುಳ್ಳವರಾಗಿ ಶತ್ರುಗಳಿಂದ ಸೋಲಿಸಲ್ಪಟ್ಟವರಾಗಿ ರಾಜ್ಯಭ್ರಷ್ಟರಾಗಿ ಅನಂತರದಲ್ಲಿ ಕ್ರೂರಂಗಳಾದ ಸರ್ಪಂಗಳಾಗಿ ಹುಟ್ಟುವರೋ, ಅಂತಾಬ್ರಾಹ್ಮಣನ ಸ್ವತ್ತು ನನಗೂ ಎಂದಿಗೂ ಸಂಭವಿಸಬೇಡ ||೪೦|| ಎಲೈಪರಿಜನಂಗಳಿರಾ! ಕೇಳಿರಿ, ಬ್ರಾಹ್ಮಣನು ಅಪರಾಧಿಯಾದಾಗ್ಯೂ ಅವನಿಗೆ ನೀವು ದ್ರೋಹವಂ ಮಾಡಬೇಡಿರಿ ಮತ್ತು ನಿಮ್ಮಂ ಪ್ರಹರಿಸುತಲೂ ಅತ್ಯಂತವಾಗಿ ಶಪಿಸುತಲೂ ಇರುವ ಬ್ರಾಹ್ಮಣನಂ

ಲಂಸಮಾಹಿತಃ । ತಥಾನಮತಯೂಯಂಚಯೊನ್ಯಥಾಮೆಸದಂಡಭಾಕ್ ॥೪೨॥ ಬ್ರಾಹ್ಮಣಾರ್ಥೋ
ಹ್ಯಪಹೃತೋಹರ್ತಾರಂಪಾತಯತ್ಯಧಃ । ಅಜಾನಂತಮಪಿಹ್ಯೇನಂನೃಗಂಬ್ರಾಹ್ಮಣಗೌರಿವ॥೪೩॥ಏವಂ
ವಿಶ್ರಾವ್ಯಭಗವಾನ್ಮುಕುಂದೋದ್ವಾರಕಾಪ್ರಜಾಃ।ಪಾವನಸ್ಸರ್ವಲೋಕಾನಾಂವಿವೇಶನಿಜಮಂದಿರಮ್॥೪೪
ಇತಿಶ್ರೀಮದ್ಭಾಗವತೇ-ದಶಮಸ್ಕಂಧೇ-ಚತುಷ್ಷಷ್ಟಿತಮೋಧ್ಯಾಯಃ-

---

ವಾಗಲೂ, ನಮಸ್ಕುರುತ-ನಮಸ್ಕಾರವಂ ಮಾಡಿರಿ ॥೪೧॥ ಅಹಂ-ನಾನು, ಅನುಕಾಲಂ-ಪ್ರತಿ ಸಂಧ್ಯಾಕಾಲದಲ್ಲಿಯೂ, ಸಮಾಹಿತಃ-ಸಮಾಧಾನವುಳ್ಳವನಾಗಿ, ವಿಪ್ರಾನ್-ಬ್ರಾಹ್ಮಣರನ್ನು, ಪ್ರಣಮೇ-ನಮಸ್ಕರಿಸುವೆನೋ, ತಥಾ-ಹಾಗೆ, ಯೂಯಂಚ-ನೀವುಗಳೂ, ನಮತ-ನಮಸ್ಕಾರವಂ ಮಾಡಿರಿ. ಯಃ-ಯಾವವನು, ಅನ್ಯಥಾ-ಹಾಗಲ್ಲದೆ ಬೇರೆಬಗೆಯಾಗುವನೋ, ಸಃ- ಅವನ್ನು, ಮೇ-ನನ್ನಿಂದ, ದಂಡಭಾಕ್-ಶಿಕ್ಷೆಯಂಹೊಂದುವ ನಾಗುವನು ॥೪೨॥ ಅಪಹೃತಃ-ಅಪಹರಿಸಲ್ಪಟ್ಟ, ಬ್ರಾಹ್ಮಣಾರ್ಥಃ-ಬ್ರಾಹ್ಮಣನಸ್ವತ್ತು, ಬ್ರಾಹ್ಮಣಗೌಃ-ಬ್ರಾಹ್ಮಣನಗೋವು, ಅಜಾನಂತಮಪಿ-ಅರಿಯದೆ ಇರುವದಕ್ಕಾದರೂ, ಏನಂನೃಗಮಿವ-ಈ ನೃಗರಾಯನನ್ನು ಹೇಗೋ ಹಾಗೆ, ಹರ್ತಾರಂ-ಅಪಹರಿಸಿದವನನ್ನು, ಅಧಃ-ಕಳಗೆ, ಪಾತಯತಿ- ಕೆಡಹುತ್ತಿದೆ ॥೪೩॥ ಸರ್ವಲೋಕಾನಾಂ-ಸಕಲಪ್ರಾಣಿಗಳಿಗೂ, ಪಾವನಃ-ಪರಿಶುದ್ಧಿಕರನಾದ, ಭಗವಾನ್-ಸರ್ವಜ್ಞನಾದ, ಮುಕುಂದಃ-ಕೃಷ್ಣನು, ದ್ವಾರಕಾಪ್ರಜಾಃ-ದ್ವಾರಕೆಯ ಜನಂಗಳನ್ನು, ಏವಂ-ಹೀಗೆ, ವಿಶ್ರಾವ್ಯ-ಕೇಳಿಸಿ, ನಿಜಮಂದಿರಂ-ತನ್ನ ಮನೆಯನ್ನು, ವಿವೇಶ-ಹೊಕ್ಕನು. ॥೪೪॥

ಇಂತೆಂಬಲ್ಲಿಗೆ ಭಾಗವತ ಪ್ರತಿಶಬ್ದಾರ್ಥ ಬೋಧಿನಿಯೆಂಬ ಟೀಕೆಯಲ್ಲಿ ದಶಮಸ್ಕಂ
ಧದೊಳಗೆ ೬೪ ನೆಯ ಅಧ್ಯಾಯವಂ ಮುಗಿದುದು.

---

ಕೂಡ ನೀವು ನಿರಂತರವೂ ನಮಸ್ಕರಿಸುವರಾಗಿರಿ ॥೪೧॥ ನಾನು ನಿರಂತರವೂ ಯಾವರೀತಿಯಿಂದ ಏಕಾಗ್ರಚಿತ್ತನಾಗಿ ಬ್ರಾಹ್ಮಣರಿಗೆ ನಮಸ್ಕರಿಸುತಲಿರುವೆನೋ, ಅದೇರೀತಿಯಿಂದ ನೀವೆಲ್ಲರೂಕೂಡ ಬ್ರಾಹ್ಮಣರಿಗೆ ನಮಸ್ಕರಿಸುವರಾಗಿರಿ. ಯಾವಪುರುಷನು ಇದಕ್ಕೆ ತಪ್ಪುವನೋ ಅವನು ನನ್ನ ದಂಡನೆಗೆ ಯೋಗ್ಯನಾಗುವನು ॥೪೨॥ ಬ್ರಾಹ್ಮಣನಗೋವಂ ತಿಳಿಯದೇ ಯಿರುವ ಈನೃಗರಾಯನಂ ಕೂಡ ನರಕದಲ್ಲಿ ಕೆಡಹಿದಹಾಗೆ ಬ್ರಾಹ್ಮಣಸ್ವತ್ತನ್ನು ಅಪಹರಿಸಿದ ಪುರುಷನನ್ನು ಯಾರನ್ನಾದರೂ ನರಕದಲ್ಲಿ ಕೆಡುಹುವುದು ॥೪೩॥ ಈರೀತಿಯಿಂದ ಜಗತ್ಪಾವನನಾದ ಭಗವಂತನಾದ ಶ್ರೀಕೃಷ್ಣದೇವನು ದ್ವಾರಕಾಪುರ ವಾಸಿಗಳಾದ ಪ್ರಜೆಗಳಿಗೆ ಧರ್ಮಸ್ವರೂಪವನ್ನು ಶ್ರವಣಂಗೆಯ್ಸಿ ತನ್ನಗೃಹವಂ ಪ್ರವೇಶಿಸಿದನು. ॥ ... ... ... .. ॥೪೪॥

ಇಂತು ಶ್ರೀಶುಕಮುನಿಯು ಪರೀಕ್ಷಿದ್ರಾಯನಂಕುರಿತು ನಿರೂಪಿಸಿದನೆಂದು ಸೂತಪೌರಾಣಿ
ಕನು ನೈಮಿಶಾರಣ್ಯವಾಸಿಗಳಾದ ಶೌನಕಾದಿ ಮಹರ್ಷಿಗಳಿಗೆ ಪೇಳಿದನೆಂಬಲ್ಲಿಗೆ-ಶ್ರೀ
ಮನ್ಮಹಿಶೂರ ಪುರವರಾಧೀಶ ಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜ
ವಿರಚಿತಮಾದ "ಶ್ರೀಕೃಷ್ಣರಾಜ ವಾಣೀವಿಲಾಸ,, ಮೆಂಬ ಶ್ರೀಭಾಗ
ವತ ಪುರಾಣದ ಕರ್ಣಾಟ ಭಾಷಾವ್ಯಾಖ್ಯಾನದಲ್ಲಿ ದಶಮಸ್ಕಂಧ
ದೊಳು ೬೪ನೇಅಧ್ಯಾಯವು ಸಂಪೂರ್ಣವು.

ಬಲರಾಮಸ್ಯಪುನರ್ನಂದವ್ರಜಗಮನಾದಿಕಥಾಪ್ರಾರಂಭಃ

ಶ್ರೀಶುಕಃ ‖ ಬಲಭದ್ರಃ ಕುರುಶ್ರೇಷ್ಠ ಭಗವಾನ್ ರಥಮಾಸ್ಥಿತಃ ‖ ಸುಹೃದ್ದಿದೃಕ್ಷುರುತ್ಕಂಠಃ ಪ್ರಯಯೌ ನಂದಗೋಕುಲಮ್ ‖೧‖ ಪರಿಷ್ವಕ್ತಶ್ಚಿರೋತ್ಕಂಠೈರ್ಗೋಪೈರ್ಗೋಪೀಭಿರೇವಚ ‖ ರಾಮೋಭಿವಾದ್ಯಪಿತರಾವಾಶೀರ್ಭಿರಭಿನಂದಿತಃ ‖೨‖ ಚಿರಂನಃಪಾಹಿದಾಶಾರ್ಹಸಾನುಜೋಜಗದೀಶ್ವರ ‖ ಇತ್ಯಾರೋಪ್ಯಾಂಕಮಾಲಿಂಗ್ಯನೇತ್ರೈಃ ಸಿಷಿಚತುರ್ಜಲೈಃ ‖೩‖ ಗೋಪವೃದ್ಧಾಂಶ್ಚವಿಧಿವದಭಿವಂದ್ಯಾಭಿವಂದಿತಃ ‖ ಯಥಾವಯೋಯಥಾಸಖ್ಯಂಯಥಾಸಂಬಂಧಮಾತ್ಮನಃ ‖೪‖ ಸಮುಪೇತ್ಯಾಥಗೋಪಾಲಾನ್ಹಾಸ್ಯಹಸ್ತಗ್ರಹಾ

---

೬೫ ನೇ ಅಧ್ಯಾಯದ ಪ್ರತಿಪದಟೀಕೆ.

[ಶ್ರೀಶುಕವಚನವು.] ಕುರುಶ್ರೇಷ್ಠ-ಕೌರವರಲ್ಲಿ ಉತ್ತಮನಾದ ಪರೀಕ್ಷಿದನೇ, ಭಗವಾನ್- ಐಶ್ವರ್ಯಸಂಪನ್ನನಾದ, ಬಲಭದ್ರಃ-ಕೃಷ್ಣನಅಣ್ಣನು, ಸುಹೃದ್ದಿದೃಕ್ಷುಃ-ನಂಟರಾದ ಗೋಪರನ್ನು ನೋಡಲಳಸಿದವನಾದ್ದರಿಂದ, ಉತ್ಕಂಠಃ-ಅತ್ಯಾಸಕ್ತಿಯುಳ್ಳವನಾಗಿ, ರಥಂ-ತೇರನ್ನು, ಆಸ್ಥಿತಃ-ಏರಿದವನಾಗಿ, ನಂದಗೋಕುಲಂ-ಗೊಲ್ಲರಹಳ್ಳಿಯಂ ಕುರಿತು, ಪ್ರಯಯೌ-ತೆರಳಿಸೇರಿಸಿದನು ‖೧‖ ಚಿರೋತ್ಕಂಠೈಃ-ಬಹುಕಾಲದಿಂದಾಸಕ್ತರಾದ ಗೋಪೈಃ-ಗೊಲ್ಲರಿಂದಲೂ, ಗೋಪೀಭಿರೇವಚ-ಗೊಲ್ಲತಿಯರಿಂದಲೂ, ಪರಿಷ್ವಕ್ತಃ-ಅಪ್ಪಿಕೊಳ್ಳಲ್ಪಟ್ಟವನಾದ, ರಾಮಃ-ಬಲದೇವನು, ಪಿತರೌ-ತಾಯಿತಂದೆಗಳಾದ ಯಶೋದಾನಂದರನ್ನು, ಅಭಿವಾದ್ಯ-ನಮಸ್ಕರಿಸಿ ಆಶೀರ್ಭಿಃ-ಹರಕೆಗಳಿಂದ, ಅಭಿನಂದಿತಃ-ಸಂತೋಷಗೊಳಿಸಲ್ಪಟ್ಟವನಾದನು ‖೨‖ ಜಗದೀಶ್ವರ-ಲೋಕಕ್ಕೊಡೆಯನಾದ ದಾಶಾರ್ಹ-ದಶಾರ್ಹರೆಂಬ ಯಾದವರಕುಲದಲ್ಲಿ ಹುಟ್ಟಿದವನಾದ ರಾಮನೇ, ಸಾನುಜಃ-ತಮ್ಮನಾದ ಕೃಷ್ಣನಿಂ ಸಹಿತನಾದನೀನು ಚಿರಂ-ಬಹುಕಾಲವು, ನಃ-ನಮ್ಮನ್ನು, ಪಾಹಿ-ಪಾಲಿಸು, ಇತಿ-ಹೀಗೆಂದು, ಬಲರಾಮನನ್ನು, ಅಂಕಮಾರೋಪ್ಯ-ತೊಡೆಯಮೇಲೆ ಕುಳ್ಳಿರಿಸಿಕೊಂಡು, ಆಲಿಂಗ್ಯ-ಅಪ್ಪಿಕೊಂಡು, ನೇತ್ರೈಃ-ಕಂಗಳಿಂದ, ಸಿಷಿಚತುಃ-ತೋಯಿಸಿದರು ‖೩‖ ಆತ್ಮನಃ-ತನಗೆ, ಯಥಾಸಂಬಂಧಂ-ಇರುವಸಂಬಂಧವನ್ನತಿಕ್ರಮಿಸದೆ, ಯಥಾಸಖ್ಯಂ-ಗೆಳೆತನವನ್ನು, ಮೀರದೆ-ಯಥಾವಯಃ-ಪ್ರಾಯವನ್ನು ಅತಿಕ್ರಮಿಸದೆ, ವಿಧಿವತ್-ನ್ಯಾಯಪ್ರಕಾರವಾಗಿ. ಗೋಪವೃದ್ಧಾಂಶ್ಚ-ಗೊಲ್ಲರಲ್ಲಿ ಹಿರಿಯರನ್ನೂ, ಅಭಿವಂದ್ಯ-ನಮಸ್ಕರಿಸಿ, ಅಭಿವಂದಿತಃ-ನಮಸ್ಕರಿಸಲ್ಪಟ್ಟನು ‖೪‖ ಅಥ-ಆಬಳಿಕ, ಗೋಪಾಲಾಃ-

---

೬೫ನೆಯಅಧ್ಯಾಯವು.

ಶ್ರೀಧರೀಯಶ್ಲೋಕಃ ‖ ಪಂಚಷಷ್ಟಿತಮೇರಾಮಃ ಕ್ರೀಗೋಕುಲಮಾಗತಃ ‖ ರಮಮಾಣಸ್ತುಗೋಪೀಭಿಃಕಾಳಿಂದ್ಯಾಃಕರ್ಷಣಂಮದಾತ್ ‖ ‖ಟೀ‖ ಅರವತ್ತೈದನೆಯ ಅಧ್ಯಾಯದಲ್ಲಿ ಬಲರಾಮನು ಗೋಕುಲವನೆಯ್ದಿ ಗೋಪಿಯರೊಡನೆ ಕ್ರೀಡಿಸುತ ತನ್ನ ಹಲಾಯುಧದಿಂದ ಯಮುನೆಯಂ ಸೆಳೆದನೆಂಬರ್ಥಮಂ ಶ್ರೀಶುಕಮುನಿಯು ಪರೀಕ್ಷಿದ್ರಾಯನಂಕುರಿತು ನಿರೂಪಿಸುವನದೆಂತೆನೆ-

ಎಲೈಅರಸೇ! ಕೇಳು ಅನಂತರದಲ್ಲಿ ಭಗವಂತನಾದ ಬಲರಾಮನು ರಥವನೇರಿ ಮಿತ್ರರಂ ನೋಡಲಿಚ್ಛೆಯುಳ್ಳವನಾಗಿ ನಂದಗೋಕುಲವನೆಯ್ದಿದನು ‖೧‖ ಅನಂತರದಲ್ಲಿ ಬಲರಾಮನು ಬಹುಕಾಲದಿ ನೋಡಲಪೇಕ್ಷಿಸುತ್ತಲಿರುವ ಗೋಪಾಲರಿಂದಲೂ ಗೋಪಿಯರಿಂದಲೂ ಕೂಡ ಆಲಿಂಗನಂ ಗೆಯ್ಯಲ್ಪಟ್ಟವನಾಗಿ ಯಶೋದಾನಂದರಿಗೆ ಅಭಿವಾದನಂಗೆಯ್ದು ಅವರಆಶೀರ್ವಾದಂಗಳಿಂ ಸಂತೋಷಯುಕ್ತನಾದನು ‖೨‖ ಆಯಾಶೀರ್ವಾದಂಗಳಂ ವಿವರಿಸುವನೆಂತೆನೆ- ಎಲೈಜಗದೀಶ್ವರನಾದ ಹರಿಯೇ! ನೀನು ನಿನ್ನ ತಮ್ಮನೊಡನೆ ಕೂಡಿದವನಾಗಿ ಅನೇಕಕಾಲವು ನಮ್ಮಂ ರಕ್ಷಿಸುವನಾಗೆಂದು ಯಶೋದಾನಂದರು ಆಶೀರ್ವಾದಂಗೆಯ್ದು ತೊಡೆಯಮೇಲೆ ಕುಳ್ಳಿರಿಸಿಕೊಂಡು ಆಲಿಂಗನಂಗೆಯ್ದು ಆನಂದಬಾಷ್ಪಗಳಿಂದ ರಾಮನಿಗೆ ಅಭಿಷೇಕವಂ ಮಾಡಿದರು ‖೩‖ ಆಗ ಬಲರಾಮನು ವೃದ್ಧರಾದ ಗೋಪಾಲರಿಗೆ ಅಭಿವಾದನಂಗೆಯ್ದು ಕನಿಷ್ಠರಾದ ಗೋಪಾಲಕರಿಂ ತಾನುನ್ನು ಅಭಿವಾದನಂ ಗೆಯ್ಸಿಕೊಳ್ಳಲ್ಪಟ್ಟನು ‖೪‖ ಅನಂತರದಲ್ಲಿ ಶ್ರೀರಾಮನು ಅವರವರ ವಯಸ್ಸಿಗೆ ಮಿತ್ರತ್ವಕ್ಕೆ ತನ್ನ ಸಂಬಂಧಕ್ಕೆ ಸಹ ಅನುಗು

ದಿಭಿಃ । ವಿಶ್ರಾಂತಂಸುಖಮಾಸೀನಂಪಪ್ರಚ್ಛುಃಪರ್ಯುಪಾಗತಾಃ॥೫॥ಪೃಷ್ಟಾಶ್ಚಾನಾಮಯಂಪ್ರೀತಾಃ ಪ್ರೇಮಗದ್ಗದಯಾಗಿರಾ।ಕೃಷ್ಣೇಕಮಲಪತ್ರಾಕ್ಷೇಸನ್ನ್ಯಸ್ತಾಖಿಲರಾಧಸಃ॥ ತೇಸರ್ವೇಸ್ವೇಷುತಂರಾಮಂ ತೇಚತೇನಾಪ್ಯನಾಮಯಮ್॥೬॥ಕಚ್ಚಿನ್ನೋಬಾಂಧವಾರಾಮಸರ್ವೇಕುಶಲಮಾಸತೇ । ಕಚ್ಚಿತ್ಸ್ಮರಥನೋ ರಾಮಯೂಯಂದಾರಸುತಾನ್ವಿತಾಃ॥೭॥ದಿಷ್ಟ್ಯಾಕಂಸೋಹತಃಪಾಪೋದಿಷ್ಟ್ಯಾಮುಕ್ತಾಸ್ಸುಹೃಜ್ಜನಾಃ । ನಿಹತ್ಯನಿರ್ಜಿತ್ಯರಿಪೂನ್ದಿಷ್ಟ್ಯಾದುರ್ಗಂಸಮಾಶ್ರಿತಾಃ॥೮॥ ಗೋಪ್ಯೋಹಸಂತ್ಯಃಪಪ್ರಚ್ಛೂ ರಾಮಸಂದರ್ಶನಾದೃತಾಃ । ಕಚ್ಚಿದಾಸ್ತೇಸುಖಂಕೃಷ್ಣಃಪುರಸ್ತ್ರೀಜನವಲ್ಲಭಃ॥೯॥ ಕಚ್ಚಿತ್ಸ್ಮರ

---

ಗೋಪುಗಳಂ ಮೇಯಿಸುವವರು, ಸಮುಪೇತ್ಯ-ಬಂದು, ಹಾಸ್ಯಹಸ್ತಗ್ರಹಾದಿಭಿಃ-ನಗೆಸರಸಹಸ್ತ ಕೈಹಿಡಿದುಕೊಳ್ಳುವಿಕೆ ಮೊದಲಾದವುಗಳಿಂದ, ವಿಶ್ರಾಂತಂ-ಬಳಲಿಕೆಯಿಲ್ಲದವನಾಗಿ, ಸುಖಂ-ಸಂತೋಷವಾಗಿ, ಆಸೀನಂ-ಕುಳಿತಿರುವ ರಾಮನನ್ನು, ಪರ್ಯುಪಾಗತಾಃ-ಸುತ್ತಲೂ ಸೇರಿದವರಾಗಿ, ಪಪ್ರಚ್ಛುಃ-ಕೇಳಿದರು ॥೫॥ ಅನಾಮಯಂ-ಆರೋಗ್ಯವನ್ನು, ಪೃಷ್ಟಾ-ಕೇಳಲ್ಪಟ್ಟವರಾದ್ದರಿಂದ, ಪ್ರೀತಾಃ-ಪ್ರೀತಿಯುಂಟಾದವರಾಗಿಯೂ, ಕಮಲಪತ್ರಾಕ್ಷೇ-ತಾವರೆಯೆಸಳಗಳಂತೆ ಕಂಗಳೂ ತಾವರೆಯೆಲೆಯಂತೆ ಮೈಯುಳ್ಳ ಕೃಷ್ಣನ, ಪಾದದಲ್ಲಿ ಸನ್ನ್ಯಸ್ತಾಖಿಲರಾಧಸಃ-ಬಿಡಲ್ಪಟ್ಟ ಸರ್ವವಿಷಯಂಗಳುಳ್ಳವರಾದ, ತೇಸರ್ವೇ-ಅವರೆಲ್ಲರೂ, ಪ್ರೇಮಗದ್ಗದಯಾ ಸ್ನೇಹದಿಂದ ಬಿಗ್ಗುತ್ತಿರುವ, ಗಿರಾ-ಮಾತಿನಿಂದ, ಸ್ವೇಷು-ತಮ್ಮಲ್ಲಿ, ತಂರಾಮಂ-ಆ ಬಲದೇವನನ್ನೂ, ತಾನಾಗಿ-ಅವನಿಂದಲೂ, ತೇಚ-ಅವರೂಕೂಡ, ಅನಾಮಯಂ-ಆರೋಗ್ಯವಂ ಕೇಳಲ್ಪಟ್ಟರು ॥೬॥ ರಾಮ-ಬಲಭದ್ರನೇ, ನಃ-ನಮ್ಮ, ಬಾಂಧವಾಸ್ಸರ್ವೇ-ನಂಟರೆಲ್ಲರೂ, ಕುಶಲಂ-ಕ್ಷೇಮವಾಗಿ, ಆಸತೇಕಚ್ಚಿತ್-ಇರುವರೋ ಏನು! ರಾಮ-ಬಲದೇವನೇ, ದಾರಸುತಾನ್ವಿತಾಃ-ಹೆಂಡಿರು ಮಕ್ಕಳಿಂ ಕೂಡಿದವರಾದ, ಯೂಯಂ-ನೀವು, ನಃ-ನಮ್ಮನ್ನು, ಸ್ಮರಥಕಚ್ಚಿತ್-ನೆನಪುಗೊಳ್ಳುತ್ತೀರ ವಿರೋ ಏನು ॥೭॥ ಪಾಪಃ-ದುಷ್ಕೃತವುಳ್ಳ, ಕಂಸಃ-ಕಂಸಾಸುರನು ದಿಷ್ಟ್ಯಾ-ದೈವಯೋಗದಿಂದ, (ಕ್ಷೇಮವಾಗಿ) ಹತಃ-ಕೊಲ್ಲಲ್ಪಟ್ಟನು, ಸುಹೃಜ್ಜನಾಃ-ಮಿತ್ರಜನಂಗಳು ದಿಷ್ಟ್ಯಾ-ದೈವಯೋಗದ ದೆಸೆಯಿಂದ, ಮುಕ್ತಾಃ-ಸೆರೆಯಿಂ ಬಿಡಲ್ಪಟ್ಟವರಾದರು ರಿಪೂನ್-ವೈರಿಗಳನ್ನು, ನಿಹತ್ಯ-ಕೊಂದು, ನಿರ್ಜಿತ್ಯ-ಗೆದ್ದು, ದಿಷ್ಟ್ಯಾ-ಪುಣ್ಯದಿಂದ, ದುರ್ಗಂ-ವೈರಿಗಳಿಗೆ ಪ್ರವೇಶಿಸಲಶಕ್ಯವಾಗಿ, ಸಮುದ್ರದಿಂ ಬಳಸಲ್ಪಟ್ಟಿರುವ ಕೋಟೆಸ್ಥಳಿಯನ್ನು, ಸಮಾಶ್ರಿತಾಃ-ಸೇರಿರುವವರಾದಿರಿ ॥೮॥ ಗೋಪ್ಯಃ-ಗೊಲ್ಲತಿಯರು, ರಾಮಸಂದರ್ಶನಾದೃತಾಃ-ರಾಮನಂ ನೋಡಿ ಆದರಿಸಲ್ಪಟ್ಟವರಾದ್ದರಿಂದ, ಹಸಂತ್ಯಃ-ನಗುತಿರುವರಾಗಿ, ಪಪ್ರಚ್ಛುಃ-ಕೇಳಿದರು. ಪುರಸ್ತ್ರೀಜನವಲ್ಲಭಃ-ನಗರದಲ್ಲಿರುವ ಹೆಂಗಳಿಗೆ ಪ್ರಿಯನಾದ, ಕೃಷ್ಣಃ-ವಾಸುದೇವನು, ಸುಖಂ-ಸಂತೋಷವಾಗಿ, ಆಸ್ತೇಕಚ್ಚಿತ್-ಇರುವನೋ ಏನು ॥೯॥ ಬಂಧೂನ್-ನಂಟರನ್ನೂ, ಪಿತರಂ-ತಂದೆಯನ್ನೂ, ಮಾತರಂ-ತಾಯಿಯನ್ನೂ, ನಃ-ನಮ್ಮನ್ನೂ, ಸ್ಮರತಿವಾಕಚ್ಚಿತ್-ನೆನಪುಗೊಳ್ಳುತ್ತಿರುವನೋ ಏನು, ಮಹಾಭುಜಃ-ದೊಡ್ಡತೋಳುಗಳುಳ್ಳ ಕೃಷ್ಣನು, ಅಸ್ಮಾಕಂ-ನಮ್ಮ, ಅನುಸೇವಾಮಪಿ-ಪರಿಚರ್ಯೆಯನ್ನೂ, ಸ್ಮ

---

ಣ್ಯವಾಗುವಂತೆ ಆಯಾಯ ಗೋಪಾಲಕರನೆಯ್ದಿ ಪರಿಹಾಸ ಹಸ್ತಗ್ರಹಣಾದಿಗಳಿಂ ಬಹುಮಾನವಂಗೆಯ್ದನು ॥೫॥ ಅನಂತರದಲ್ಲಿ ವಿಶ್ರಾಂತನಾಗಿ ಕುಳಿತಿರುವ ಆರಾಮನಂಕುರಿತು ಗೋಪಾಲಕರೆಲ್ಲರೂ ಯಾದವಾದಿಗಳಲ್ಲಿ ಆರೋಗ್ಯಾದಿಗಳಂ ಕೇಳಿದರು ॥೬॥ ಶ್ರೀಕೃಷ್ಣನ ಪಾದಾರವಿಂದವ ನೆಯ್ದಲೋಸುಗ ತ್ಯಜಿಸಲ್ಪಟ್ಟ ಸಮಸ್ತ ವಿಷಯಂಗಳುಳ್ಳ ಪ್ರೀತಿಯುಕ್ತರಾದ ಆಗೋಪಾಲಕರುಕೂಡ ಪ್ರೇಮದಿಂ ಗದ್ಗದಸ್ವರಯುಕ್ತವಾದ ವಚನದಿಂದ ಆರೋಗ್ಯವಂ ಕೇಳಲ್ಪಟ್ಟರು ॥೭॥ ಮತ್ತು ಗೋಪಾಲಕರು ರಾಮನಂ ಪ್ರಶ್ನೆಗೆಯ್ದರದೆಂತೆನೆ- ಎಲೈರಾಮನೇ! ಅಲ್ಲಿ ನಮ್ಮ ಬಂಧುಗಳೆಲ್ಲರೂ ಕ್ಷೇಮದಿಂದಿದಾರೆಯೋ ಏನು? ಪತ್ನೀಪುತ್ರರೊಡನೆ ಕೂಡಿರುವನೀವು ನಮ್ಮಂ ಸ್ಮರಿಸುವಿರೋ ಏನು? ॥೮॥ ಎಲೈರಾಮನೇ! ದೈವಯೋಗದಿಂದ ಪಾಪಿಯಾದ ಕಂಸನು ನಿಮ್ಮಿಂದ ಸಂಹರಿಸಲ್ಪಟ್ಟನು ದೈವಯೋಗದಿಂದಲೇ ಮಿತ್ರಜನರು ಬಂಧನದಿಂದ ಬಿಡಿಸಲ್ಪಟ್ಟರು. ॥೯॥ ದೈವಯೋಗದಿಂದಲೇ ಶತ್ರುಗಳಂ ಸಂಹರಿಸಿ ಕೆಲವರಂ ಜಯಿಸಿ ದುರ್ಗರೂಪವಾದ ದ್ವಾರಕಾಪುರವಂ ನೀವು ಆಶ್ರಯಿಸಿದಂತವರಾದಿರಿ. ॥೧೦॥ ಅಮ್ಮೋಟಿ

ತಿವಾಬಂಧೂನ್ ಪಿತರಂಮಾತರಂಚಸಃ ॥ ಅಪಿವಾಸ್ಮರತೇಸ್ಮಾಕಮನುಸೇವಾಂಮಹಾಭುಜಃ ॥೧೦॥ ಮಾ
ತರಂಪಿತರಂಭ್ರಾತೄನ್ ಪತೀನ್ ಪುತ್ರಾನ್ ಸ್ವಸೄರಪಿ । ಯದರ್ಥೇತ್ಯಕ್ಷ್ಮದಾಶಾರ್ಹ ದುಸ್ತ್ಯಜಾನ್
ಸ್ವಜನಾನ್ ಪ್ರಭೋ ॥೧೧॥ ತಾನಸ್ಸದ್ಯಃಪರಿತ್ಯಜ್ಯಗತಸ್ಸಂಛಿನ್ನಸೌಹೃದಃ । ಕಥಂನುತಾದೃಶಂಸ್ತ್ರೀ
ಭಿರ್ನಶ್ರದ್ಧೀಯೇತಭಾಷಿತಮ್ ॥೧೨॥ ಕಥಂನುಗೃಹ್ಣಂತ್ಯನವಸ್ಥಿತಾತ್ಮನೋವಚಃಕೃತಘ್ನಸ್ಯಬು
ಧಾಃಪುರಸ್ತ್ರಿಯಃ । ಗೃಹ್ಣಂತಿವೈಚಿತ್ರಕಥಸ್ಯಸುಂದರಸ್ಮಿತಾವಲೋಕೋಚ್ಛ್ವಸಿತಸ್ಮರಾತುರಾಃ ॥೧೩॥
ಕಿಂನಸ್ತತ್ಕಥಯಾಗೋಪ್ಯಃಕಥಾಃಕಥಯತಾಪರಾಃ । ಯಾತ್ಯಸ್ಮಾಭಿರ್ವಿನಾಕಾಲೋಯದಿತಸ್ಯತಥೈವ
ನಃ ॥೧೪॥ ಇತಿಪ್ರಹಸಿತಂಶೌರೇರ್ಜಲ್ಪಿತಂಚಾರುವೀಕ್ಷಿತಮ್ । ಗತಿಂಪ್ರೇಮಪರಿಷ್ವಂಗಂಸ್ಮರಂತ್ಯೋರು

---

ರತೇವಾ-ನೆನಪುಗೊಳ್ಳುವನೋ ॥೧೦ ದಾಶಾರ್ಹ-ದಶಾರ್ಹಕುಲಜನಾದ, ಪ್ರಭೋ-ಒಡೆಯನಾದ ಬಲರಾಮನೇ, ಯದ
ರ್ಥೇ-ಯಾವಕೃಷ್ಣನಿಗೋಸುಗ, ಮಾತರಂ-ತಾಯಿಯನ್ನೂ, ಪಿತರಂ-ತಂದೆಯನ್ನೂ, ಭ್ರಾತೄನ್-ಸೋದರರನ್ನೂ, ಪತೀನ್-
ಗಂಡಂದಿರನ್ನೂ, ಪುತ್ರಾನ್-ಮಕ್ಕಳನ್ನೂ, ಸ್ವಸೄರಪಿ-ತಂಗಿಯರನ್ನೂ. ದುಸ್ತ್ಯಜಾನ್-ಬಿಡಕೂಡದ, ಸ್ವಜನಾನ್ -ನಂಟ
ರನ್ನೂ, ಅತ್ಯಾಕ್ಷ್ಮ-ಬಿಟ್ಟೆವೋ ॥೧೧॥ ತಾಃನಃ-ಅಂತಿಯನಮ್ಮನ್ನು, ಸದ್ಯಃ-ಆಗಲೇ, ಪರಿತ್ಯಜ್ಯ-ಬಿಟ್ಟು, ಸಂಛಿನ್ನಸೌ
ಹೃದಃ-ಹರಿಯಲ್ಪಟ್ಟ ಸ್ನೇಹವುಳ್ಳವನಾಗಿ, ಗತಃ-ಹೋಗಿಬಿಟ್ಟನು, ತಾದೃಶಂಭಾಷಿತಂ ಅಂಥಾ ಮಾತು, ಸ್ತ್ರೀಭಿಃ-ಹೆಂಗಳಿಂ
ದ, ಕಥನ್ನು-ಹೇಗತಾನೆ, ನಶ್ರದ್ಧೀಯೇತ-ನಂಬಲ್ಪಡದೆಹೋದೀತು ॥೧೨॥ ಬುಧಾಃ-ಅರಿತವರಾದ, ಪುರಸ್ತ್ರಿಯಃ-ನಗರದ
ಹೆಂಗಳು, ಅನವಸ್ಥಿತಾತ್ಮನಃ-ಅವ್ಯವಸ್ಥಿತಚಿತ್ತನಾದ, ಕೃತಘ್ನಸ್ಯ-ಉಪಕಾರವಂ ಮರೆಯುವನಾದ, ಕೃಷ್ಣನ, ವಚಃ-ಮಾ
ತನ್ನು, ಕಥನ್ನು-ಹೇಗೆತಾನೆ, ಗೃಹ್ಣಂತಿ-ನಂಬಿಗ್ರಹಿಸುವರು, ಚಿತ್ರಕಥಸ್ಯ-ಚಿತ್ರವಾಗಿ ಕಥೆಗಳಂಪೇಳುವ ಕೃಷ್ಣನ, ಸುಂದ
ರ. ಆತುರಾಃ-ಸುಂದರ-ಚಲುವಾದ, ಸ್ಮಿತ-ಕಿರುನಗೆಯುಳ್ಳ, ಅವಲೋಕ-ನೋಟದಿಂದ, ಉಚ್ಛ್ವಸಿತ-ಕ್ಷುಭಿತವಾದ, ಸ್ಮರ-
ಕಾಮದಿಂದ, ಆತುರಾಃ-ಅವಸರಗೊಳ್ಳುವ ಹೆಂಗಳೊಕೂಡ, ಗೃಹ್ಣಂತಿವೈ-ಗ್ರಹಿಸುವರೋ, [ವಿಕಲ್ಪದಿಂಗ್ರಹಿಸುವರು]॥೧೩॥
ಗೋಪ್ಯಃ-ಗೊಲ್ಲತಿಯರೇ, ತತ್ಕಥಯಾ-ಅವನಗುಣ ವರ್ಣನದಿಂದ, ನಃ-ನಮಗೆ, ಕಿಂ-ಏನುಪ್ರಯೋಜನವು ? ಅಪರಾಃಕಥಾಃ-
ಬೇರೆ ಮಾತುಗಳನ್ನು, ಕಥಯತ-ಹೇಳಿರಿ, ಅಸ್ಮಾಭಿರ್ವಿನಾ-ನಮ್ಮಗಳಂಹೊರತು, ತಸ್ಯ-ಅವನಿಗೆ, ಕಾಲೋಯಾತಿಯದಿ-ಹೊ
ತ್ತುಹೋಗುವುದಾದರೆ, ನಃ-ನಮಗೂ, ತಥೈವ-ಹಾಗೆಯೇ ॥೧೪॥ ಇತಿ-ಹೀಗೆಂದು, ಶೌರೇಃ-ಕೃಷ್ಣನ, ಪ್ರಹಸಿತಂ-ನಗೆ

---

ಬಲರಾಮನ ದರ್ಶನದಿಂ ಆದರಣೆಯೊಡಗೂಡಿರುವ ಗೋಪಿಯರು ನಗುತ ರಾಮನಂಕುರಿತು ಈರೀತಿಯಲ್ಲಿ ಕೇಳಿ
ದರದೆಂತೆನೆ- ಎಲೈಸ್ವಾಮಿಯೇ ದ್ವಾರಕಾಪುರದಲ್ಲಿರುವ ಸ್ತ್ರೀಯರುಗಳಿಗೆ ಅತಿಪ್ರಿಯನಾದ ಶ್ರೀಕೃಷ್ಣನು ಸು
ಖದಿಂದ ಯಿದ್ದಾನೆಯೇ ಏನು? ॥೧೧॥ ಎಲೈಪ್ರಭುವಾದರಾಮನೇ! ಮಾತಾಪಿತೃಗಳಂ ಅಣ್ಣತಮ್ಮಂದಿರಂ ಪುತ್ರ
ರಂ ಪತಿಗಳುಂ ಅತ್ತೆಮಾವಂದಿರಂ ಮತ್ತು ತ್ಯಜಿಸಲಶಕ್ಯರಾದ ಬಂಧುಗಳಂ ಕೂಡ ಯಾವವನಿಗೋಸ್ಕರ ನಾವು
ತ್ಯಾಗಂಗೆಯ್ದೆವೋ ॥೧೨॥ ಆಶ್ರೀಕೃಷ್ಣನು ಅಂತಾ ನಮ್ಮಂ ಆಕ್ಷಣದಲ್ಲಿಯೇ ಪರಿತ್ಯಾಗಂಗೆಯ್ದು ತ್ಯಜಿಸಲ್ಪ
ಟ್ಟ ಸ್ನೇಹವುಳ್ಳವನಾಗಿ ಇಲ್ಲಿಂದ ತೆರಳಿಹೋದನು. ಸ್ತ್ರೀಯರುಗಳಾದ ನಮ್ಮಿಂದ ಶ್ರೀಕೃಷ್ಣನ ಅಂತಾ ಸವಿ
ಯಾದ ವಚನವು ಎಂತುಪ್ರಮಾಣವೆಂದು ಅಂಗೀಕರಿಸಲ್ಪಡದೇ ಹೋಗುವುದು, ಆಕಾರಣದಿಂದ ಆಶ್ರೀಕೃಷ್ಣನೊ
ಡನೆ ವಿಶ್ವಾಸಂಗೆಯ್ದೆವು ॥೧೩॥ ಎಂದೀರೀತಿಯಲ್ಲಿ ಕೆಲವರು ಗೋಪಿಯರುನುಡಿಯಲು ಮತ್ತೆಕೆಲವರು ನುಡಿಯು
ವರು- ಎಲೈರಾಮನೇ! ಚತುರೆಯರಾದ ಆದ್ವಾರಕಾಪುರದ ಸ್ತ್ರೀಯರುಗಳು ಚಪಲಚಿತ್ತನಾದ ಕೃತಘ್ನನಾದ
ಆಶ್ರೀಕೃಷ್ಣವಚನವಂ ಎಂತು ಅಂಗೀಕರಿಸುತ್ತಲಿದ್ದಾರೆ ಎಂಬ ವಚನವಂ ಕೇಳಿ, ಮತ್ತೂ ಕೆಲವರು ನುಡಿಯು
ವರು- ಎಲೈಗೋಪಿಯರೇ ದ್ವಾರಕಾಪುರದಲ್ಲಿರುವ ಆಸ್ತ್ರೀಯರು ಸುಂದರವಾದ ಮುಗುಳುನಗೆಯುಳ್ಳ ಅವನ
ನೋಟದಿಂದ ವೃದ್ಧಿಹೊಂದಿರುವ ಮನ್ಮಥನಿಂದ ಪೀಡಿಸಲ್ಪಟ್ಟವರಾಗಿ ಮಧುರವಚನಂಗಳಲ್ಲಿ ಚತುರನಾದ ಶ್ರೀ
ಕೃಷ್ಣನ ಸವಿನುಡಿಗಳಂ ಅಂಗೀಕರಿಸುವರೋಏನೊ ಮತ್ತೆ ಕೆಲವರು ನುಡಿವರು ॥೧೪॥ ಎಲೈಗೋಪಿಯರೇ!

ರುದುಸ್ಸ್ತ್ರಿಯಃ ॥೧೫॥ ಸಂಕರ್ಷಣಸ್ತಾಃಕೃಷ್ಣಸ್ಯಸಂದೇಶೈರ್ಹೃದಯಂಗಮೈಃ । ಸಾಂತ್ವಯಾಮಾಸಭಗವಾನ್ನಾನಾನುನಯಕೋವಿದಃ ॥೧೬॥ ದ್ವೌಮಾಸೌತತ್ರಚಾವಾತ್ಸೀನ್ಮಧುಂಮಾಧವಮೇವಚ । ರಾಮಃಕ್ಷಪಾಸುಭಗವಾನ್‌ಗೋಪೀನಾಂರತಿಮಾವಹನ್ ॥೧೭॥ ಪೂರ್ಣಚಂದ್ರಕಳಾಮೃಷ್ಟೇಕೌಮುದೀಗಂಧವಾಯುನಾ । ಯಮುನೋಪವನೇರೇಮೇಸೇವಿತಸ್ತ್ರೀಗಣೈರ್ವೃತಃ ॥೧೮॥ ವರುಣಪ್ರೇರಿತಾದೇವೀ ವಾರುಣೀವೃಕ್ಷಕೋಟರಾತ್ । ಪತಂತೀತದ್ವನಂಸರ್ವಂಸ್ವಗಂಧೇನಾಧ್ಯವಾಸಯತ್ ॥೧೯॥ ತಂಗಂಧಂ ಮಧುಧಾರಾಯಾವಾಯುನೋಪಹೃತಂಬಲಃ । ಆಘ್ರಾಯೋಪಗತಸ್ತತ್ರಲಲನಾಭಿಃಪಪೌಸಮಮ್ ॥೨೦॥

---

ಯನ್ನೂ, ಜಲ್ಪಿತಂ-ಭಾಷಣವನ್ನೂ, ಚಾರು-ಮನೋಹರವಾದ, ವೀಕ್ಷಿತಂ-ನೋಟವನ್ನೂ, ಗತಿಂ- ನಡತೆಯನ್ನೂ, ಪ್ರೇಮಪರಿಷ್ವಂಗಂ-ಸ್ನೇಹಾಲಿಂಗನವನ್ನೂ, ಸ್ಮರಂತ್ಯಃ-ನೆನಪುಗೊಳ್ಳುತ್ತಿರುವರಾದ್ದರಿಂದ ಸ್ತ್ರಿಯಃ-ಹೆಂಗಳು, ರುರುದುಃ-ಅತ್ತರು ॥ ಭಗವಾನ್-ಸರ್ವಜ್ಞನಾದ, ಸಂಕರ್ಷಣಃ-ಬಲರಾಮನು, ಹೃದಯಂಗಮೈಃ-ಮನೋಹರಂಗಳಾದ, ಕೃಷ್ಣಸ್ಯಸಂದೇಶೈಃ-ಕೃಷ್ಣನು ಹೇಳಿಕಳುಹಿಸಿದ ಮಾತುಗಳಿಂದ, ನಾನಾನುನಯಕೋವಿದಃ-ಹಲವು ಸಮಾಧಾನಗಳಲ್ಲಿ ಜಾಣನಾಗಿ, ತಾಃ-ಆ ಗೊಲ್ಲತಿಯರನ್ನು, ಸಾಂತ್ವಯಾಮಾಸ-ಸಮಾಧಾನ ಪಡಿಸಿದನು ॥೧೬॥ ಭಗವಾನ್-ಈಶ್ವರನಾದ, ರಾಮಃ-ಬಲದೇವನು, ಕ್ಷಪಾಸು-ರಾತ್ರಿಗಳಲ್ಲಿ, ಗೋಪೀನಾಂ-ಬೇರೆ ಗೊಲ್ಲತಿಯರಿಗೆ, ರತಿಂ-ಅನುರಾಗವನ್ನೂ, ಆವಹನ್-ಮಾಡುತ್ತಿರುವನಾದ,ಮಧುಂ-ಚೈತ್ರದಲ್ಲಿ,ಮಾಧವಮೇವಚ-ವೈಶಾಖದಲ್ಲಿಯೂ, ದ್ವೌಮಾಸೌ-ಎರಡುತಿಂಗಳಲ್ಲಿ, ತತ್ರಚ-ಆನಂದಗೋಕುಲದಲ್ಲಿಯೂ, ಅವಾತ್ಸೀತ್-ಇದ್ದನು॥ ಪೂರ್ಣಚಂದ್ರಕಳಾಮೃಷ್ಟೇ-ತುಂಬಿದಚಂದ್ರನ ಕಿರಣಂಗಳಿಂದ ಉಜ್ವಲಿತವಾದಂಥಾ, ಕೌಮುದೀಗಂಧವಾಯುನಾ- ಬಿಳುಸ್ನೈದಿಲೆಗಳ ಪರಿಮಳದಗಾಳಿಯಿಂದ, ಸೇವಿತೇ-ಉಪಚರಿಸಲ್ಪಟ್ಟಂಥಾ, ಯಮುನೋಪವನೇ-ಕಾಳಿಂದೀನದಿಯ ಸಮೀಪದ ತೋಂಟದಲ್ಲಿ, ಸ್ತ್ರೀಗಣೈಃ-ಹೆಂಗಳ ಗುಂಪುಗಳಿಂದ, ವೃತಃ-ಬಳಸಲ್ಪಟ್ಟವನಾಗಿ, ರೇಮೇ-ಕ್ರೀಡಿಸಿದನು ॥೧೮॥ ವರುಣಪ್ರೇರಿತಾ-ಸಿಂಧುರಾಜನಿಂದ ಪ್ರೇರಿಸಲ್ಪಟ್ಟ, ವಾರುಣೀದೇವಿ-ಅಮೃತದತಂಗಿಯಾದ ಮದಿರಾದೇವತೆಯು, ವೃಕ್ಷಕೋಟರಾತ್- ಮರದ ಪೊಟರೆಯಿಂದ, ಪತಂತೀ-ಬೀಳುತ್ತಿರುವುದಾಗಿ, ಸ್ವಗಂಧೇನ-ತನ್ನ ಕಂಪಿನಿಂದ, ತದ್ವನಂಸರ್ವಂ-ಆ ತೋಂಟಪಲ್ಲವನ್ನೂ, ಅಧ್ಯವಾಸಯತ್-ಪರಿಮಳಿಸಗೊಳಿಸಿತು ॥೧೯॥ ಬಲಃ-ರಾಮನು, ವಾಯುನಾ-ಗಾಳಿಯಿಂದ, ಉಪಹೃತಂ-ಚಳಿಗ ತರಲ್ಪಟ್ಟ ಮಧುಧಾರಾಯಾಃ-ಮದ್ಯಾಸಾರದ, ತಂಗಂಧಂ-ಆ ಪರಿಮಳವನ್ನು, ಆಘ್ರಾಯ-ಮೂಸಿನೋಡಿ, ತತ್ರ-ಅಲ್ಲಿಗೆ, ಉಪಗತಃ-ಹೋದವನಾಗಿ, ಲಲನಾಭಿಸ್ಸಮಂ-ಹೆಂಗಳೊಡನೆ, ಪಪೌ-ಕುಡಿದನು॥೨೦॥ ವನಿತಾಶೋಭಿಮಂಡಲೇ-ಹೆಂಗಳಿಂ ಬೆಳಗುವ

---

ಆಕೃಷ್ಣನಕಥೆಯಿಂದ ನಮಗೇನುಫಲವು? ಮತ್ತೊಂದು ಕಥೆಯಂ ಕೇಳುವರಾಗಿ, ಯಾವರೀತಿಯಿಂ ನಮ್ಮಂ ಹೊರತು ಆಕೃಷ್ಣನಿಗೆ ಕಾಲವು ಕಳೆಯುತಲಿದೆಯೋ, ಅದೇರೀತಿಯಿಂದ ನಮಗೂ ಅವನಂ ಹೊರತು ಕಾಲವು ಕಳೆಯುತ್ತಲಿದೆಯೆಂದು ॥೧೫॥ ಗೋಪಿಯರೆಲ್ಲರೂ ಶ್ರೀಕೃಷ್ಣನ ಮುಗುಳುನಗೆಯಂ ಮಧುರವಚನಂಗಳಂ ಸವಿನೋಟವಂ ವಿಲಾಸಗಮನವಂ ಪ್ರೇಮಯುಕ್ತವಾದ ಆಲಿಂಗನವಂ ಸ್ಮರಿಸುತ್ತ ದುಃಖಿಸಿದರು ॥೧೬॥ ಅನಂತರದಲ್ಲಿ ಭಗವಂತನಾದ ನಾನಾಪ್ರಕಾರಂಗಳುಳ್ಳ ಮಧುರವಚನಂಗಳಲ್ಲಿ ನಿಪುಣನಾದ ಬಲಭದ್ರನು ಶ್ರೀಕೃಷ್ಣನು ಹೇಳಿಕಳುಹಿಸಿದ ಮನೋಹರಂಗಳಾದ ವಚನಂಗಳಿಂದ ಆಗೋಪಸ್ತ್ರೀಯರಂ ಸಮಾಧಾನಂಗೆಯ್ದನು ॥೧೭॥ ಅನಂತರದಲ್ಲಿ ರಾಮನು ಗೋಕುಲದಲ್ಲಿ ಚೈತ್ರವೈಶಾಖಂಗಳೆಂಬ ಎರಡುತಿಂಗಳ ಪರ್ಯಂತವು ಆವಸಂತಕಾಲದ ರಾತ್ರಿಗಳಲ್ಲಿ ಗೋಪಿಯರಿಗೆ ರತಿಯನ್ನುಂಟುಮಾಡುತ್ತ ವಾಸವಂಗೆಯ್ದನು ॥೧೮॥ ಅನಂತರದಲ್ಲಿ ಬಲರಾಮನು ಪೂರ್ಣಚಂದ್ರಕಿರಣಂಗಳಿಂ ಪ್ರಕಾಶಯುಕ್ತವಾಗಿ ಮಾಡಲ್ಪಟ್ಟ ನೈದಿಲೆಪುಷ್ಪಗಳ ಪರಿಮಳದಿಂದ ಯುಕ್ತವಾದ ವಾಯುವಿನಿಂದ ರಮಣೀಯವಾದ ಯಮುನಾತೀರದಲ್ಲಿ ಇರುವ ಉಪವನದಲ್ಲಿ ಗೋಪಸ್ತ್ರೀಸಮೂಹಂಗಳಿಂ ಸ್ತುತಿಸಲ್ಪಟ್ಟವನಾಗಿ ಕ್ರೀಡಿಸಿದನು ॥೧೯॥ ಅನಂತರದಲ್ಲಿ ವಾರುಣಿಯೆಂಬ ಮದ್ಯದೇವತೆಯು ವರುಣನಿಂಪ್ರೇರಿಸಲ್ಪಟ್ಟವಳಾಗಿ ವೃಕ್ಷದ ಪೊಟರೆಯದೆಸೆಯಿಂ ಬೀಳುತ್ತಲಿರುವಳಾಗಿ ಸಮಸ್ತವಾದ ಆಯಮುನಾವನವಂ ತನ್ನಗಂಧದಿಂದ ಪರಿಮಳಯುಕ್ತವನ್ನಾಗಿ ಮಾಡಿದಳು ॥೨೦॥ ಅನಂತರದಲ್ಲಿ ವಾಯುವಿನಿಂದ ಸಮೀಪವನೆಯ್ದಿಸಲ್ಪಟ್ಟಮ

ಉಪಗೀಯಮಾನಉದ್ಗಾಯನ್ವನಿತಾಶೋಭಿಮಂಡಲೇ । ರೇಜೇ ಕರೇಣುಯೂಥೇಶೋ ಮಾಹೇಂದ್ರ ಇವವಾರಣಃ ॥೨೧॥ ನೇದುರ್ದುಂದುಭಯೋವ್ಯೋಮ್ನಿವವೃಷುಃಕುಸುಮೈರ್ಮುದಾ । ಗಂಧರ್ವಾಮುನಯೋ ರಾಮಂತದ್ವೀರ್ಯೈರೀಡಿರೇತದಾ ॥೨೨॥ ಉಪಗೀಯಮಾನಚರಿತೋವನಿತಾಭಿರ್ಹಲಾಯುಧಃ। ವನೇಷುವ್ಯಚರತ್ಕ್ಷೀಬೋಮದವಿಹ್ವಲಲೋಚನಃ ॥೨೩॥ ಸ್ರಗ್ವ್ಯೇಕಕುಂಡಲೋಮತ್ತೋವೈಜಯಂತ್ಯಾಚಮಾಲಯಾ । ಬಿಭ್ರತ್ಸ್ಮಿತಮುಖಾಂಭೋಜಂಸ್ವೇದಪ್ರಾಲೇಯಭೂಷಿತಮ್ ॥೨೪॥ ಸಆಜುಹಾವಯಮುನಾಂಜಲಕ್ರೀಡಾರ್ಥಮೀಶ್ವರಃ । ನಿಜಂವಾಕ್ಯಮನಾದೃತ್ಯಮತ್ತಇತ್ಯಾಪಗಾಂಬಲಃ । ಅನಾಗತಾಂಹಲಾಗ್ರೇಣಕುಪಿತೋವಿಚಕರ್ಷಹ ॥೨೫॥ ಪಾಪೇತ್ವಂಮಾಮವಜ್ಞಾಯಯನ್ನಾಯಾಸಿಮಯಾಹುತಾ

---

ಡಲದಲ್ಲಿ, ಉಪಗೀಯಮಾನಃ-ಹಾಡಲ್ಪಡುತ್ತಿರುವನಾಗಿ, ಉದ್ಗಾಯನ್-ಘಟ್ಟಿಯಾಗಿ ಹಾಡುವನೂ ಆಗಿ, ಕರೇಣುಯೂಥೇಶಃ-ಹೆಣ್ಣಾನೆಗಳ ಹಿಂಡಿಗೊಡೆಯನಾದ, ಮಾಹೇಂದ್ರೋವಾರಣಇವ-ಇಂದ್ರನಪಟ್ಟದಾನೆಯಾದ ಐರಾವತದಂತೆ, ರೇಜೇ-ಬೆಳಗಿದನು ॥೨೧॥ ವ್ಯೋಮ್ನಿ-ಅಂತರಿಕ್ಷದಲ್ಲಿ, ದುಂದುಭಯಃ-ಭೇರಿಗಳು, ನೇದುಃ-ಮೊಳಗಿದವು, ಗಂಧರ್ವಾಃ-ದೇವಗಾಯಕರೂ, ಮುನಯಃ-ದೇವರ್ಷಿಗಳೂ, ಮುದಾ-ಸಂತೋಷದಿಂದ, ಕುಸುಮೈಃ-ಪುಷ್ಪಗಳಿಂದ, ವವೃಷುಃ-ಮಳೆಯಂಸುರಿಸಿದರು, ರಾಮಂ- ಬಲಭದ್ರನನ್ನು, ತದ್ವೀರ್ಯೈಃ-ಅವನ ಪರಾಕ್ರಮಗಳಿಂದ, ಈಡಿರೇ-ಸ್ತುತಿಸಿದರು ॥೨೨॥ ವನಿತಾಭಿಃ-ಹೆಂಗಳಿಂದ, ಉಪಗೀಯಮಾನಚರಿತಃ-ಹಾಡಲ್ಪಟ್ಟ ಚರಿತ್ರಂಗಳುಳ್ಳ, ಹಲಾಯುಧಃ-ಬಲದೇವನು, ಕ್ಷೀಬಃ-ಮತ್ತನಾಗಿಯೂ, ಮದವಿಹ್ವಲಲೋಚನಃ-ಸೊಕ್ಕಿನಿಂದ ಕಲುಷಂಗಳಾದ ಕಂಗಳುಳ್ಳವನಾಗಿ, ವನೇಷು-ತೋಂಟಗಳಲ್ಲಿ, ವ್ಯಚರತ್-ವಿನೋದವಾಗಿ ತಿರುಗಿದನು ॥೨೩॥ ಸ್ರಗ್ವೀ-ಪುಷ್ಪಮಾಲೆಗಳುಳ್ಳವನೂ, ಏಕಕುಂಡಲಃ-ಮುಖ್ಯವಾದ ಕಿವಿಯೋಲೆಗಳುಳ್ಳವನೂ, ಮತ್ತಂ-ಮದಿಸಿದವನೂ, ವೈಜಯಂತ್ಯಾಮಾಲಯಾಚ-ವೈಜಯಂತಿಯೆಂಬ ಮಾಲಿಕೆಯೊಡನೆಯೂ, ಸ್ವೇದಪ್ರಾಲೇಯಭೂಷಿತಂ-ಬೆವರೆಂಬ ಮಂಜಿನಿಂದಲಂಕರಿಸಲ್ಪಟ್ಟ, ಸ್ಮಿತಮುಖಾಂಭೋಜಂ-ಕಿರುನಗೆಯುಳ್ಳ ಮೊಗದಾವರೆಯನ್ನು, ಬಿಭ್ರತ್-ವಹಿಸಿದವನಾಗಿ ॥೨೪॥ ಸಃ-ಆ ಬಲರಾಮನು, ಈಶ್ವರಃ-ಸ್ವತಂತ್ರನಾದ್ದರಿಂದ, ಜಲಕ್ರೀಡಾರ್ಥಂ-ನೀರಾಟಕ್ಕೋಸುಗ, ಯಮುನಾಂ- ಕಾಳಿಂದೀನದಿಯನ್ನು, ಆಜುಹಾವ-ಕರೆದನು. ಬಲಃ-ರಾಮನು, ನಿಜವಾಕ್ಯಂ-ತನ್ನನುಡಿಯನ್ನು, ಮತ್ತಇತಿ-ಇವನುಸೊಕ್ಕಿದವನೆಂದು, ಅನಾದೃತ್ಯ-ಆದರಿಸದೆ, ಅನಾಗತಾಂ-ಬಾರದೆಯಿರುವ, ಆಪಗಾಂ-ಯಮುನಾ ನದಿಯನ್ನು, ಹಲಾಗ್ರೇಣ-ನೇಗಿಲತುದಿಯಿಂದ, ಕುಪಿತಃ-ಸಿಟ್ಟುಗೊಂಡಾದವನಾಗಿ, ವಿಚಕರ್ಷಹ-ಎಳೆದನು ॥೨೫॥ ಪಾಪೇ-ಪಾಪಿಷ್ಠಳಾದ ಯಮುನೆಯೇ! ತ್ವಂ-ನೀನು, ಯತ್- ಯಾವಕಾರಣದಿಂದ, ಮಯಾ-ನನ್ನಿಂದ, ಆಹುತಾ-ಕರೆಯಲ್ಪಟ್ಟವಳಾದರೂ, ಮಾಂ-ನನ್ನನ್ನು, ಅವಜ್ಞಾಯ-ಅಲಕ್ಷ್ಯವಾಗಿ ಯೆಣಿಸಿ, ನಾಯಾಸಿ-ಬಾರದೆ ಯಿರುವೆಯೋ, ತತ್-ಆ ಕಾರಣದಿಂದ, ಕಾಮಚಾರಿಣೀಂ-ಸ್ವೇಚ್ಛೆಯಾಗಿ ಹೋಗುತ್ತಿರುವಂಥಾ, ತ್ವಾಂ-ನಿನ್ನನ್ನು, ಲಾಂಗ

---

ದ್ಯಥಾರೆಯು ಆನಂದವನಾಘ್ರಾಣಿಸಿ ಅಲ್ಲಿಗೆಹೋದವನಾಗಿ ಆಗೋಪಿಯರೊಡನೆ ಆಮದ್ಯವಂಪಾನಂಗೆಯ್ದನು ॥೨೦॥ ಅನಂತರದಲ್ಲಿ ರಾಮನು ಗೋಪಸ್ತ್ರೀಯರುಗಳಿಂ ಸಮೀಪದಲ್ಲಿ ಗಾನಂ ಗೆಯ್ಯಲ್ಪಡುತ್ತಲಿರುವನಾಗಿ ತಾನು ಗಾನಂಗೆಯ್ಯುತ ಅನೇಕರಾದ ಗೋಪಿಯರ ಸಮೂಹದಲ್ಲಿ ಹೆಣ್ಣಾನೆಗಳಸಮೂಹದಲ್ಲಿ ಐರಾವತದಂತೆ ಬಹಳ ಪ್ರಕಾಶಿಸಿದನು ॥೨೧॥ ಮತ್ತು ಆಬಲರಾಮನು ಗೋಪಿಯರಿಂದ ಗಾನಂಗೆಯ್ಯಲ್ಪಡುತ್ತಲಿರುವ, ತನ್ನ ಚರಿತ್ರೆಯುಳ್ಳವನಾಗಿ ಮತ್ತನಾಗಿ ಮದದಿಂ ವ್ಯಾಕುಲಂಗಳಾದ ನೇತ್ರಂಗಳುಳ್ಳವನಾಗಿಯೂ ಯಮುನಾವನದಲ್ಲಿ ಸಂಚರಿಸಿದನು ॥೨೩॥ ಮತ್ತು ಉತ್ತಮೋತ್ತಮಂಗಳಾದ ರತ್ನಹಾರಂಗಳುಳ್ಳ, ಕುಂಡಲವಂಧರಿಸಿರುವ, ಮತ್ತು ವೈಜಯಂತಿಯೆಂಬವನಮಾಲೆಯೊಡನೆ ಶೋಭಿಸುತ್ತಲಿರುವ, ಮತ್ತು ಬೆವರೆಂಬ ಹಿಮದಿಂದಲಂಕೃತವಾದ, ಮಂದಹಾಸಯುಕ್ತವಾದ ಮುಖಪದ್ಮವಂ ಧರಿಸಿರುವ ಮತ್ತನಾದ ॥೨೪॥ ಶ್ರೀರಾಮನು ಜಲಕ್ರೀಡಾರ್ಥವಾಗಿ ಯಮುನೆಯಂ ಕರೆದನು. ಅನಂತರದಲ್ಲಿ ಇವನು ಮತ್ತನೆಂದು ತನ್ನವಚನವಂ ನಿರಾಕರಿಸಿ ಬರದೇಯಿರುವ ಯಮುನೆಯಂ ಕೋಪಯುಕ್ತನಾಗಿ ನೇಗಲಿನ ಕೊನೆಯಿಂದ ಸೆಳೆದನು ॥೨೫॥ ಎಲೈದುಷ್ಟಳಾದ ಯಮುನೆಯೇ! ನೀನು ನನ್ನಿಂ

ಷ್ಯುತಾ |ನೇಷ್ಯೇತ್ವಾಂಲಾಂಗಲಾಗ್ರೇಣಶತಧಾಕಾಮಚಾರಿಣೀಮ್||೨೬||ಏವಂನಿರ್ಭರ್ತ್ಸಿತಾಭೀತಾಯಮುನಾಯದುನಂದನಮ್ | ಉವಾಚಚಕಿತಾವಾಚಂಪತಿತಾಪಾದಯೋರ್ನೃಪ||೨೭||ಯಮುನಾ||ರಾಮರಾಮಮಹಾಬಾಹೋನಜಾನೇತವವಿಕ್ರಮಮ್ |ಯಸ್ಯೈಕಾಂಶೇನವಿಧೃತಾಜಗತೀಜಗತಃಪತೇ||೨೮||ಪರಂಭಾವಂಭಗವತೋಭಗವನ್ಮಾಮಜಾನತೀಮ್ | ಮೋಕ್ತುಮರ್ಹಸಿವಿಶ್ವಾತ್ಮನ್ಪ್ರಪನ್ನಾಂಭಕ್ತವತ್ಸಲ||೨೯|| ತತೋವ್ಯಮುಂಚದ್ಯಮುನಾಂಯಾಚಿತೋಭಗವಾನ್ಬಲಃ | ವಿಜಗಾಹೇಜಲಂಸ್ತ್ರೀಭಿಃ ಕರೇಣುಭಿರಿವೇಭರಾಟ್||೩೦||ಕಾಮಂವಿಹೃತ್ಯಸಲಿಲಾದುತ್ತೀರ್ಣಾಯಾಸಿತಾಂಬರೇ | ಭೂಷಣಾನಿಮಹಾರ್ಹಾಣಿದದೌಕಾಂತಿಃಶುಭಾಂಸ್ರಜಮ್ ||೩೧|| ವಸಿತ್ವಾವಾಸಸೀನೀಲೇಮಾಲಾಮಾಮುಚ್ಯಕಾಂಚನೀಂ|

---

ಲಾಗ್ರೇಣ-ನೇಗಿಲತುದಿಯಿಂದ, ಶತಧಾ-ನೂರುಬಗೆಯಾಗಿ, ನೇಷ್ಯೇ-ಕೊಂಡೊಯ್ವೆನು ||೨೬|| ನೃಪ-ಪರೀಕ್ಷಿತನೇ! ಏವಂ-ಹೀಗೆ, ನಿರ್ಭರ್ತ್ಸಿತಾ-ಪಳಿದಾಡಲ್ಪಟ್ಟವಳಾದ್ದರಿಂದ, ಭೀತಾ-ಹೆದರಿದ, ಯಮುನಾ-ಕಾಳಿಂದಿಯು, ಪಾದಯೋಃ-ಕಾಲುಗಳಲ್ಲಿ, ಪತಿತಾ-ಬಿದ್ದವಳಾಗಿ, ಯದುನಂದನಂ-ರಾಮನಂಕುರಿತು, ಚಕಿತಾಂವಾಚಂ-ಹೆದರಿದನುಡಿಯನ್ನು, ಉವಾಚ-ನುಡಿದಳು||೨೭|| (ಯಮುನಾವಚನವು) ಮಹಾಬಾಹೋ-ದೊಡ್ಡತೋಳುಗಳುಳ್ಳವನೇ! ಜಗತಃ-ಲೋಕಕ್ಕೆ, ಪತೇ-ಒಡೆಯನೇ, ರಾಮ-ಕ್ರೀಡಿಸುವವನೇ, ರಾಮ-ಬಲರಾಮನೆ! ಯಸ್ಯ-ಯಾವವನ, ಏಕಾಂಶೇನ-ಒಂದುಕಲೆಯಿಂದ ಜಗತೀ-ಭೂಮಿಯು, ವಿಧೃತಾ-ಧರಿಸಲ್ಪಟ್ಟಿದೆಯೋ, ತಸ್ಯತವ-ಆ ನಿನ್ನ, ವಿಕ್ರಮಂ-ಸಾಮರ್ಥ್ಯವನ್ನು, ನಜಾನೇ-ಅರಿಯೆನು||೨೮|| ಭಗವನ್ -ಸರ್ವಜ್ಞನಾಗಿಯೂ ಈಶ್ವರನಾಗಿಯೂ, ವಿಶ್ವಾತ್ಮನ್-ಪ್ರಪಂಚಕ್ಕಾತ್ಮನಾಗಿಯೂ, ಭಕ್ತವತ್ಸಲ-ಸೇವಕರಲ್ಲಿ ದಯೆಯುಳ್ಳವನೂ ಆದರಾಮನೇ, ಭಗವತಃ-ಸ್ವಾಮಿಯಾದ ನಿನ್ನ, ಪರಂಭಾವಂ-ಉತ್ಕೃಷ್ಟವನ್ನು, ಅಜಾನತೀಂ-ಅರಿಯದೆ ಇರುವಳಾದ, ಪ್ರಪನ್ನಾಂ-ರಕ್ಷಿಸಹೇಳಿ ನಿನ್ನಂನಂಬಿದವಳಾದ, ಮಾಂ-ನನ್ನನ್ನು, ಮೋಕ್ತುಂ-ಬಿಡುವುದಕ್ಕೆ, ಅರ್ಹಸಿ-ತಕ್ಕವನಾಗುವಿ ||೨೯|| ತತಃ-ಆಮೇಲೆ, ಯಾಚಿತಃ-ಪ್ರಾರ್ಥಿಸಲ್ಪಟ್ಟ, ಭಗವಾನ್-ಸರ್ವಜ್ಞನಾದ, ಬಲಃ-ರಾಮನು, ಯಮುನಾಂ-ಕಾಳಿಂದಿಯನ್ನು, ವ್ಯಮುಂಚತ್-ಬಿಟ್ಟನು, ಇಭರಾಟ್-ಗಜರಾಜನು, ಕರೇಣುಭಿರಿವ-ಹೆಣ್ಣಾನೆಗಳೊಡನೆಯಂತೆ, ಸ್ತ್ರೀಭಿಃ-ಹೆಂಗಳೊಡನೆ, ಜಲಂ-ನೀರನ್ನು, ವಿಜಗಾಹೆ-ಹೊಕ್ಕನು ||೩೦|| ಕಾಮಂ-ಸ್ವೇಚ್ಛೆಯಾಗಿ, ವಿಹೃತ್ಯ-ಕ್ರೀಡಿಸಿ, ಸಲಿಲಾತ್-ನೀರಿನ ದೆಸೆಯಿಂದ, ಉತ್ತೀರ್ಣಾಯ-ತಡಿಗೇರಿ ಬಂದವನಾದ ಬಲದೇವಂಗೆ, ಕಾಂತಿಃ-ಲಕ್ಷ್ಮೀದೇವಿಯು, ಅಸಿತಾಂಬರೇ - ನೀಲವಸ್ತ್ರಂಗಳನೆರಡರನ್ನು, ಮಹಾರ್ಹಾಣಿ-ದೊಡ್ಡವರಿಗೆ ತಕ್ಕ, ಭೂಷಣಾನಿ-ಆಭರಣಂಗಳನ್ನೂ, ಶುಭಾಂ-ಮಂಗಳಕರವಾದ, ಸ್ರಜಂ-ಕಮಲಮಾಲಿಕಯನ್ನೂ, ದದೌ-ವರುಣಪ್ರೇರಿತಳಾಗಿ ಕೊಟ್ಟಳು ||೩೧|| ನೀಲೇವಾಸಸೀ-ಕಪ್ಪಾದ ಎರಡುವಸ್ತ್ರಗಳನ್ನು, ವಸಿತ್ವಾ-ಧರಿಸಿ-ಕಾಂಚನೀಂಮಾಲಾಂ-ಭಂಗಾರದ ಹಾರವನ್ನೂ, ಆಮುಚ್ಯ-ಹಾಕಿಕೊಂಡು, ಲಿಪ್ತಃ-ಗಂಧದಿಂ ಬಳಿಯಲ್ಪಟ್ಟು, ಸ್ವಲಂಕೃತಃ

---

ದ ಕರೆಯಲ್ಪಟ್ಟವಳಾದರೂ ಯಾವಕಾರಣದಿಂದ ನನ್ನಂ ತಿರಸ್ಕರಿಸಿ ಬರುವಳಾಗುವದಿಲ್ಲವೋ ಆಕಾರಣದಿಂ ಸ್ವತಂತ್ರಳಾದ ನಿನ್ನಂ ನಾನು ನೇಗಲಿನಕೊನೆಯಿಂದ ಸಹಸ್ರಪ್ರಕಾರವಾಗಿ ಭೇದಿಸುವನಾಗುತ್ತೇನೆ ||೨೬|| ಅನಂತರದಲ್ಲಿ ಯಮುನೆಯು ಈರೀತಿಯಾಗಿ ಬಲರಾಮನಂಕುರಿತು ಧಿಕ್ಕರಿಸದವಳಾದ್ದರಿಂದ ಭಯಪಟ್ಟು ಕಂಪಿಸುತ ಪಾದಂಗಳಲ್ಲಿ ಬಿದ್ದು ಇಂತು ವಿಜ್ಞಾಪಿಸಿದಳು ||೨೭|| ಜಗತ್ಪತಿಯಾದ ಮಹಾಬಲವುಳ್ಳ ಎಲೈಶ್ರೀರಾಮನೇ ಯಾವನಿನ್ನ ಅಂಶಭೂತನಾದ ಶೇಷನಿಂದ ಸಮಸ್ತ ಭೂಮಿಯೂ ಧರಿಸಲ್ಪಟ್ಟಿದೆಯೋ ಅಂತಾನಿನ್ನ ಪರಾಕ್ರಮವಂ ನಾನರಿಯೆನು ||೨೮|| ಸರ್ವಾತ್ಮಕನಾದ ಭಕ್ತವತ್ಸಲನಾದ ಹರಿಯೇ! ಭಗವಂತನಾದ ನಿನ್ನ ಉತ್ಕೃಷ್ಟಪ್ರಭಾವವನ್ನು ಅರಿಯದೆಯಿರುವಳಾದ ಮತ್ತು ಶರಣುಹೊಂದಿರುವ ನನ್ನಂ ಬಿಡುವನಾಗು||೨೯|| ಎಂದು ಯಮುನೆಯಿಂದ ಯಾಚಿಸಲ್ಪಟ್ಟವನಾಗಿ ಅನಂತರದಲ್ಲಿ ಬಲರಾಮನು ಯಮುನೆಯಂಬಿಟ್ಟು ಹೆಣ್ಣಾನೆಗಳೊಡನೆ ಗಜೇಂದ್ರನಂತೆ ಆಗೋಪಿಯರೊಡಗೂಡಿ ಯಮುನಾಜಲವಂ ಪ್ರವೇಶಿಸಿದನು ||೩೦|| ಅನಂತರದಲ್ಲಿ ಮನಸ್ಸುಬಂದಂತೆ ಜಲಕ್ರೀಡೆಯಂಗೆಯ್ದು ತೀರವನೆಯ್ದಿರುವ ಬಲರಾಮನಿಗೋಸುಗ ಲಕ್ಷ್ಮಿಯು ನೀಲದುಕೂಲಂಗಳಂ ಬೆಲೆಯಿಲ್ಲದ ಭೂಷಣಂಗಳಂ ಶುಭಕರವಾದ ಮಾಲೆಯಂಸಹ ಇತ್ತಳು ||೩೧|| ಆಮೇಲೆ ರಾಮನು ನೀಲಾಂಬರಗಳನುಟ್ಟು

ರೇಜೇಸ್ವಲಂಕೃತೋಲಿಪ್ತೋ ಮಹೇಂದ್ರ ಇವವಾರಣಃ ‖೩೩‖ ಅದ್ಯಾಪಿದೃಶ್ಯತೇರಾಜನ್ ಯಮುನಾಕೃಷ್ಟವರ್ತ್ಮನಾ ‖ ಬಲಸ್ಯಾನಂತವೀರ್ಯಸ್ಯವೀರ್ಯಂಸೂಚಯತೀವಹಿ ‖೩೩‖ ಏವಂಸರ್ವಾನಿಶಾಯಾತಾಏಕೇವರಮತೋವ್ರಜೆ ‖ ರಾಮಸ್ಯಾಕ್ಷಿಪ್ತಚಿತ್ತಸ್ಯಮಾಧುರ್ಯೈರ್ವ್ರಜಯೋಷಿತಾಂ ‖ ‖೩೮‖

ಇತಿಶ್ರೀಮದ್ಭಾಗವತೆ-ದಶಮಸ್ಕಂಧೆ-ಪಂಚಷಷ್ಟಿತಮೋಧ್ಯಾಯಃ-

---

ಚನ್ನಾಗಿ ಸಿಂಗರಿಸಲ್ಪಟ್ಟವನಾಗಿ, ಮಾಹೇಂದ್ರೋವಾರಣಇವ ಇಂದ್ರನ ಆನೆಯಾದ ಐರಾವತದಂತೆ, ರೇಜೆ-ಬೆಳಗಿದನು ‖ ರಾಜನ್-ಪರೀಕ್ಷಿದ್ರಾಯನೇ. ಕೃಷ್ಟವರ್ತ್ಮನಾ-ಎಳೆಯಲ್ಪಟ್ಟ ದಾರಿಯೊಡನೆ, ಯಮುನಾ-ಕಾಳಿಂದೀ ನದಿಯು, ಅನಂತವೀರ್ಯಸ್ಯ-ಅಪರಿಮಿತ ಪರಾಕ್ರಮವುಳ್ಳ, ಬಲಸ್ಯ-ರಾಮನ, ವೀರ್ಯಂ-ಸಾಮರ್ಥ್ಯವನ್ನು, ಸೂಚಯತೀವ-ಸೂಕ್ಷ್ಮವಾಗಿ ತಿಳಿಸುತ್ತಿರುವಳಂತೆ, ಅದ್ಯಾಪಿ-ಈಗಲೂ ಕೂಡ, ದೃಶ್ಯತೇಹಿ-ಕಾಣಿಸುತ್ತಿದೆಯಲ್ಲವೆ ‖೩೩‖ ಏವಂ-ಹೀಗೆ, ವ್ರಜಯೋಷಿತಾಂ-ಗೋಕುಲದ ಹೆಂಗಳ, ಮಾಧುರ್ಯೈಃ-ಸುಖಕರವಾದ ವಿಲಾಸಂಗಳಿಂದ, ಆಕ್ಷಿಪ್ತಚಿತ್ತಸ್ಯ-ಅಪಹರಿಸಲ್ಪಟ್ಟ ಹೃದಯವುಳ್ಳವನಾಗಿ, ವ್ರಜೇ-ಗೋಕುಲದಲ್ಲಿ, ರಮತಃ-ಕ್ರೀಡಿಸುತ್ತಿರುವ, ರಾಮಸ್ಯ-ಬಲದೇವನ, ಸರ್ವಾಃನಿಶಾಃ-ಎಲ್ಲಾ ರಾತ್ರಿಗಳು, ಏಕೇವ-ಒಂದು ರಾತ್ರಿಯಂತೆ, ಯಾತಾಃ-ಕಳೆದುಹೋದವು. ‖೩೪‖

ಇಂತೆಂಬಲ್ಲಿಗೆ ಭಾಗವತ ಪ್ರತಿಶಬ್ದಾರ್ಥಬೋಧಿನಿಯೆಂಬ, ಟೀಕೆಯಲ್ಲಿ ದಶಮಸ್ಕಂಧದೊ
ಳು ೬೫ ನೇಯ ಅಧ್ಯಾಯವುಮುಗಿದುದು.

---

ಸುವರ್ಣಮಯವಾದ ಮಾಲೆಯಂ ಕಂಠದಲ್ಲಿಧರಿಸಿ ಅಲಂಕೃತನಾಗಿ ಚಂದನಾದಿಗಳಿಂದ ಅನುಲೇಪನಂಗೆಯ್ಯಲ್ಪಟ್ಟವನಾಗಿ ಐರಾವತದಂತೆ ಪ್ರಕಾಶಿಸಿದನು ‖೩೨‖ ಎಲೈಅರಸೇ! ಕೇಳು, ಯಮುನೆಯು ಈಗಲೂಕೂಡ ಸೆಳೆಯಲ್ಪಟ್ಟಂತೆ ಕಾಣುತಲಿರುವ ಮಾರ್ಗದಿಂದ ಅಪಾರಮಹಿಮನಾದ ಶ್ರೀಬಲರಾಮನ ಸಾಮರ್ಥ್ಯವಂ ಸೂಚಿಸುವಳಂತೆ ಕಾಣಲ್ಪಡುತ್ತಇರುವಳಲ್ಲವೆ? ಆನಂದಗೋಕುಲದಲ್ಲಿ ಗೋಪಿಯರ ವಿಲಾಸಗಳಿಂದ ಅಪಹರಿಸಲ್ಪಟ್ಟ ಮನಸ್ಸುಳ್ಳವನಾಗಿ ರಮಿಸುತಲಿರುವ ಬಲರಾಮನಿಗೆ ಈರೀತಿಯಾಗಿ ಸಮಸ್ತರಾತ್ರಿಗಳೂ ಒಂದುರಾತ್ರಿಯಂತೆ ಕಳೆದವು‖ ... ... ... ... ... ... ... ‖೩೪‖

ಇಂತುಶ್ರೀಶುಕಮುನಿಯು ಪರೀಕ್ಷಿದ್ರಾಯನಂಕುರಿತು ನಿರೂಪಿಸಿದನೆಂದು ಸೂತಪೌ
ರಾಣಿಕನುನೈಮಿಶಾರಣ್ಯವಾಸಿಗಳಾದ ಶೌನಕಾದಿ ಮಹರ್ಷಿಗಳಿಗೆ ಪೇಳಿದನೆಂ
ಬಲ್ಲಿಗೆ ಶ್ರೀಮನ್ಮಹಿಶೂರಪುರವರಾಧೀಶ ಶ್ರೀಚಾಮರಾಜತನುಜ ಶ್ರೀಮ
ತ್ಕೃಷ್ಣರಾಜವಿರಚಿತವಾದ "ಶ್ರೀಕೃಷ್ಣರಾಜವಾಣೀವಿಲಾಸ,,
ಮೆಂಬ ಶ್ರೀ ಭಾಗವತಪುರಾಣದ ಕರ್ಣಾಟ ಭಾಷಾವ್ಯಾ
ಖ್ಯಾನದಲ್ಲಿ ದಶಮಸ್ಕಂಧದೊಳುಅರವತ್ತೈದನೆಯ
ಅಧ್ಯಾಯಂ ಮುಗಿದುದು.

ಶ್ರೀಕೃಷ್ಣಕೃತಪೌಂಡ್ರಕಕಾಶೀರಾಜವಧಾದಿಕಥಾಪ್ರಾರಂಭಘಟ್ಟಃ-

ಶ್ರೀಶುಕಃ॥ ನಂದವ್ರಜಂಗತೇರಾಮೇಕರೂಶಾಧಿಪತಿರ್ನೃಪ। ವಾಸುದೇವೋಹಮಿತ್ಯಜ್ಞೋದೂತಂಕೃಷ್ಣಾಯಪ್ರಾಹಿಣೋತ್॥೧॥ ತ್ವಂವಾಸುದೇವೋಭಗವಾನವತೀರ್ಣೋಜಗತ್ಪತಿಃ। ಇತಿಪ್ರಸ್ತೋಭಿತೋಬಾಲೈರ್ಮೇನಸ್ವಾತ್ಮಾನಮಚ್ಯುತಮ್॥೨॥ ದೂತಂಚಪ್ರಾಹಿಣೋನ್ಮಂದಃಕೃಷ್ಣಾಯಾವ್ಯಕ್ತವರ್ತ್ಮನೇ। ದ್ವಾರಕಾಯಾಂಯಥಾಬಾಲೋನೃಪೋಬಾಲಕೃತೋಬುಧಃ॥೩॥ ದೂತಸ್ತುದ್ವಾರಕಾಮೇತ್ಯಸಭಾಯಾಮಾಸ್ಥಿತಂಪ್ರಭುಮ್। ಕೃಷ್ಣಂಕಮಲಪತ್ರಾಕ್ಷಂರಾಜಸಂದೇಶಮಬ್ರವೀತ್॥೪॥ ಕಾರೂಶಃ॥ ವಾಸು

---

೬೬ ನೆಯ ಅಧ್ಯಾಯದ ಪ್ರತಿಪದಟೀಕೆಯು.

(ಶುಕವಚನವು) ನೃಪ-ಪರೀಕ್ಷಿತನೇ, ರಾಮೇ-ಬಲಭದ್ರನು,ನಂದವ್ರಜಂ-ಗೋಕುಲವಂಕುರಿತು, ಗತೇಸತಿ-ಹೋದವನಾಗುತಲೂ, ಕರೂಶಾಧಿಪತಿಃ-ಕರೂಶದೇಶಕ್ಕೊಡೆಯನಾದ ಪೌಂಡ್ರಕನು, ಅಜ್ಞಃ-ಮೂಢನಾದ್ದರಿಂದ, ಅಹಂ-ತಾನು, ವಾಸುದೇವೇತಿ-ವಿಷ್ಣುವೆಂದು, ದೂತಂ-ಸಂದೇಶಹಾರಿಯನ್ನು, ಕೃಷ್ಣಾಯ-ಕೃಷ್ಣನಿಗೋಸುಗ, ಪ್ರಾಹಿಣೋತ್-ಕಳುಹಿದನು॥೧॥ಜಗತ್ಪತಿಃ ಲೋಕಕ್ಕೊಡೆಯನಾದ,ಭಗವಾನ್-ಭಗವಂತನಾದ, ವಾಸುದೇವಃ-ವಿಷ್ಣುವು, ಅವತೀರ್ಣಃ-ಅವತಾರಂಗೆಯ್ದವನಾಗಿ, ತ್ವಂ-ನೀನಾಗಿರುವಿ, ಇತಿ-ಹೀಗೆಂದು, ಬಾಲೈಃ-ಮೂಢರಿಂದ, ಪ್ರಸ್ತೋಭಿತಃ-ಸ್ತೋತ್ರದಿಂದಪ್ರೋತ್ಸಾಹಗೊಳಿಸಲ್ಪಟ್ಟವನಾಗಿ, ಸ್ವಾತ್ಮಾನಂ-ತನ್ನ ಶರೀರವನ್ನೇ, ಅಚ್ಯುತಂ-ವಿಷ್ಣುಮೂರ್ತಿಯನ್ನಾಗಿ, ಮೇನೆ-ತಿಳಿದನು॥೨॥ಮಂದಃ-ಮೂಢನಾದ ಪೌಂಡ್ರಕನು, ಬಾಲಕೃತಃ-ಹುಡುಗರಿಂದಮಾಡಲ್ಪಟ್ಟ, ನೃಪಃ-ಆಟದ ಧೊರೆಯಾದ, ಅಬುಧಃ-ಅರಿಯದೆಯಿರುವನಾದ, ಬಾಲಃ-ಹುಡುಗನು, ಯಥಾಹೇಗೋ,ತಥಾ--ಹಾಗೆ, ಅವ್ಯಕ್ತವರ್ತ್ಮನೇ-ಅಪ್ರಕಟಗತಿಯುಳ್ಳ, ಕೃಷ್ಣಾಯ-ಶ್ರೀಹರಿಗೋಸುಗ, ದೂತಂಚ-ಸಂದೇಶಹಾರಿಯನ್ನೂ, ಪ್ರಾಹಿಣೋತ್-ಕಳುಹಿದನು ॥೩॥ ದೂತಸ್ತು-ಸಂದೇಶಹಾರಿಯಾದರೋ, ದ್ವಾರಕಾಂ-ಕುಶಲಸ್ಥಲಿಯಂಕುರಿತು, ಏತ್ಯ-ಬಂದು, ಸಭಾಯಾಂ-ಓಲಗದಲ್ಲಿ, ಆಸ್ಥಿತಂ-ಕುಳಿತಿರುವ, ಪ್ರಭುಂ-ಒಡೆಯನಾದ, ಕಮಲಪತ್ರಾಕ್ಷಂ-ತಾವರೆಯೆಸಳ್ಗಳಂತೆಕಂಗಳೂ ತಾವರೆಯೆಲೆಯಂತೆವಿಸ್ತಿಯೂ ಉಳ್ಳವನಾದ, ಕೃಷ್ಣಂ-ನಾರಾಯಣನಂ ಕುರಿತು, ರಾಜಸಂದೇಶಂ-ಕಾರೂಶರಾಜನಮಾತನ್ನು, ಅಬ್ರವೀತ್-ಹೇಳಿದನು॥೪॥ (ಕಾರೂಶವಚನವು.) ಭೂತಾನಾಂ- ಪ್ರಾಣಿಗಳನ್ನು, ಅನುಕಂಪಾರ್ಥಂ-ಕರುಣಿಸಲೋಸುಗ, ಅವತೀರ್ಣಃ-ಅವತಾರವಂಗೆಯ್ದಿರುವ, ವಾಸುದೇವಃ-ವಿಷ್ಣುವು, ಅಹಮೇಕಏವ- ನಾ

---

೬೬ನೆಯಅಧ್ಯಾಯವು.

ಶ್ರೀಧರೀಯಶ್ಲೋಕಃ ॥ ಷಡ್ಯುಕ್‌ಷಷ್ಟಿತಮೇಕಾಶೀಂಗತ್ವಾಹನ್‌ಪೌಂಡ್ರಕಂಹರಿಃ। ತನ್ಮಿತ್ರಂಚತತೋವೃತ್ತಂಸುದಕ್ಷಿಣವಧಾದಿಕಂ ॥%॥ ಅರವತ್ತಾರನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ಕಾಶೀಪುರವನೆಯ್ದಿ ಪೌಂಡ್ರಕನಂ ಅವನ ಮಿತ್ರನಂ ಸಹ ಸಂಹರಿಸಿದ ನೆಂಬ ವೃತ್ತಾಂತವಂ ಮತ್ತು ಸುದಕ್ಷಿಣವಧಾದಿಗಳಂ ಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸುವನದೆಂತೆನೆ!-

ಎಲೈಅರಸೇ! ಕೇಳು, ಬಲರಾಮನು ನಂದಗೋಕುಲವನ್ನೈದುತ್ತಿರಲು ಕರೂಷದೇಶಾಧಿಪತಿಯಾದ ಅಜ್ಞನಾದ ಪೌಂಡ್ರಕನು ತಾನೇವಾಸುದೇವನೆಂದು ಕೃಷ್ಣನಿಗೋಸುಗ ದೂತನಂ ಕಳುಹಿದನು॥೧॥ ಮತ್ತು ಆಪೌಂಡ್ರಕನು ತಾನೇವಾಸುದೇವನು, ತಾನೇಜಗತ್ಪತಿಯು, ತಾನೇಭಗವಂತನು, ತಾನೇಲೀಲೆಯಿಂದವತರಿಸಿದವನು,ಎಂದುಕೂಡಅಜ್ಞರಾದಜನರಿಂ ಸ್ತುತಿಯಿಂ ಪ್ರೋತ್ಸಾಹಿಸಲ್ಪಟ್ಟವನಾಗಿತನ್ನನ್ನೇ ಶ್ರೀಹರಿಯನ್ನಾಗಿತಿಳಿದನು॥೨॥ ಮತ್ತು ಯಾವರೀತಿಯಿಂದ ಕ್ರೀಡಾಕಾಲದಲ್ಲಿ ಬಾಲಕರಿಂದ ಒಬ್ಬಬಾಲಕನು ರಾಜಭಾವದಿಂ ಕಲ್ಪಿಸಲ್ಪಡುವನೋ ಅದೇರೀತಿಯಲ್ಲಿ ಅಜ್ಞರಿಂದ ರಾಜಭಾವದಿಂ ಕಲ್ಪಿಸಲ್ಪಟ್ಟವನಾಗಿಯೂ ಮೂಢನಾಗಿಯೂಇರುವ ಆಪೌಂಡ್ರಕನು ದ್ವಾರಕಾಪುರವಂ ಕುರಿತು ಅಸ್ಫುಟವಾದ ಸಂಗತಿಯುಳ್ಳ ಶ್ರೀಕೃಷ್ಣನಿಗೋಸುಗ ದೂತನಂ ಕಳುಹಿಸಿದನು ॥೩॥ ಅನಂತರದಲ್ಲಿ ಆದೂತನು ದ್ವಾರಕಾಪುರವನೆಯ್ದಿ ಮಹಾ ಸಭೆಯಲ್ಲಿ ಕುಳಿತಿರುವ ಪ್ರಭುವಾದ ಪದ್ಮದಳಕ್ಕೆ ಸಮಾನವಾದ ನೇತ್ರಂಗಳುಳ್ಳ ಶ್ರೀಕೃಷ್ಣನಂಕುರಿತು ಆಪೌಂಡ್ರಕನು ಪೇಳಿದ ವೃತ್ತಾಂತವಂ ತಿಳಿಸಿದನದೆಂತೆನೆ ॥೪॥ ಲೋಕಂಗಳ ನನುಗ್ರಹಿಸಲೋಸುಗ ಅವತರಿಸಿರುವ ಶ್ರೀವಾಸುದೇವನು ನಾನೊಬ್ಬನೇ

ದೇವೋವತೀರ್ಣೋಹಮೇಕಏವನಚಾಪರಃ|ಭೂತಾನಾಮನುಕಂಪಾರ್ಥಂತ್ವಂತುಮಿಥ್ಯಾಭಿಧಾಂತ್ಯಜ||೫||
ಯಾನಿತ್ವಮಸ್ಮಚ್ಚಿಹ್ನಾನಿಮೌಢ್ಯಾದ್ಬಿಭರ್ಷ್ಯಭೀತವತ್| ತ್ಯಕ್ತ್ವೈಹಿಮಾಂತ್ವಂಶರಣಂನೋಚೇದ್ದೇ
ಹಿಮಮಾಹವಮ್||೬|| ಶ್ರೀಶುಕಃ|| ವಿಕತ್ಥನಂತದಾಕರ್ಣ್ಯಪೌಂಡ್ರಕಸ್ಯಾಲ್ಪಮೇಧಸಃ | ಉಗ್ರಸೇನಾ
ದಯಸ್ಸಭ್ಯಾಉಚ್ಚಕೈರ್ಜಹಸುಸ್ತದಾ ||೭||ಉವಾಚದೂತಂಭಗವಾನ್ಪರಿಹಾಸಕಥಾಮನು | ಉ
ತ್ಸ್ರಕ್ಷ್ಯೇಮೂಢಚಿಹ್ನಾನಿಯೈಸ್ತ್ವಮೇವಂವಿಕತ್ಥಸೇ||೮||ಮುಖಂಯದಾಪಿಧಾಯಾಜ್ಞಕಂಕಗೃಧ್ರ
ವಟೈರ್ವೃತಃ | ಶಯಿಷ್ಯಸೇಹತಸ್ತತ್ರಭವಿತಾಶರಣಂಶುನಾಮ್ ||೯||ಇತಿದೂತಸ್ತಮಾಕ್ಷೇಪಂಸ್ವಾಮಿ
ನೇಸರ್ವಮಾಹರತ್ | ಕೃಷ್ಣೋಪಿರಥಮಾಸ್ಥಾಯಕಾಶೀಮುಪಜಗಾಮಹ ||೧೦|| ಪೌಂಡ್ರಕೋಪಿತದು

---

ನೋರ್ವನೇಯೆ. ಅಪರಶ್ಚನ-ಮತ್ತೋರ್ವನೂ ಇಲ್ಲವು, ತ್ವಂತು-ನೀನಾದರೋ, ಮಿಥ್ಯಾಭಿಧಾಂ-ಸುಳ್ಳುಹೆಸರನ್ನು, ತ್ಯಜ-
ಬಿಡು ||೫|| ತ್ವಂ-ನೀನು, ಮೌಢ್ಯಾತ್-ಮೂಢತ್ವದ ದೆಸೆಯಿಂದ, ಯಾನಿ-ಯಾವ, ಅಸ್ಮಚ್ಚಿಹ್ನಾನಿ- ನಮ್ಮಗುರುತುಗಳಾದ,
ಶಂಖಚಕ್ರಾದಿಗಳನ್ನು, ಅಭೀತವತ್-ಹೆದರಿದವನಲ್ಲಪಂತೆ, ಬಿಭರ್ಷಿ-ಧರಿಸಿರುವೆಯೋ. ತಾನಿ-ಅವುಗಳನ್ನು, ತ್ಯಕ್ತ್ವಾ- ಹಟ್ಟು,
ತ್ವಂ-ನೀನು, ಮಾಂ-ನನ್ನನ್ನು, ಶರಣಂ-ರಕ್ಷಕನೆಂದು ಭಾವಿಸಿ, ಏಹಿ-ಬಾ, ನೋಚೇತ್-ಇಲ್ಲದಿದ್ದರೆ, ಮಮ-ನನಗೆ, ಆಹವಂ-
ಯುದ್ಧವನ್ನು, ದೇಹಿ-ಕೊಡು, ||೬|| [ಶುಕವಚನವು] ಅಲ್ಪಮೇಧಸಃ-ಕೊಂಚಬುದ್ಧಿಯುಳ್ಳ, ಪೌಂಡ್ರಕಸ್ಯ-ಕಾರೂಶನ,ತದ್ವಿ
ಕತ್ಥನಂ-ಆವ್ಯರ್ಥವಾದ ಆತ್ಮಶ್ಲಾಘನವನ್ನು, ಆಕರ್ಣ್ಯ-ಕೇಳಿ, ತದಾ-ಆಗ, ಉಗ್ರಸೇನಾದಯಃ-ಉಗ್ರಸೇನನುಮೊದಲಾದ, ಸ
ಭ್ಯಾಃ-ಸಭಿಕರು, ಉಚ್ಚಕೈಃ-ಘಟ್ಟಿಯಾಗಿ, ಜಹಸುಃ-ನಕ್ಕರು ||೭|| ಪರಿಹಾಸಕಥಾಮನು-ಹಾಸ್ಯಪ್ರಸ್ತಾವವಾದ ಕೂಡ
ಲೇ, ಭಗವಾನ್-ಕೃಷ್ಣನು, ಮೂಢ-ಅಜ್ಞನಾದಕರೂಶನೇ, ತ್ವಂ-ನೀನು, ಯೈಃ-ಯಾವುಗಳೊಡನೆ. ಏವಂ-ಹೀಗೆ, ವಿಕತ್ಥ
ಸೇ-ವ್ಯರ್ಥವಾಗಿ ಆತ್ಮಸ್ತುತಿಮಾಡಿಕೊಳ್ಳುವೆಯೋ, ತಾನಿಚಿಹ್ನಾನಿ-ಆಗುರುತುಗಳನ್ನು, ಉತ್ಸ್ರಕ್ಷ್ಯೇ-ಬಿಡಿಸುವೆನು. ಎಂದು,ದೂ
ತಂ-ಸಂದೇಶಹಾರಿಯಂ ಕುರಿತು, ಉವಾಚ-ನುಡಿದನು ||೮|| ಅಜ್ಞ-ಮೂಢನೇ, ಯದಾ-ಯಾವಾಗ, ಹತಃ-ಕೊಲ್ಲಲ್ಪಟ್ಟ
ವನಾಗಿ, ಮುಖಂ-ಮೋರೆಯನ್ನು, ಪಿಧಾಯ-ಮುಚ್ಚಿಕೊಂಡು. ಕಂಕಗೃಧ್ರವಟೈಃ-ಗೂಗೆ ಹದ್ದು ಹಕ್ಕಿಗಳಿಂದ, ವೃತಃ-ಬಳಸ
ಲ್ಪಟ್ಟವನಾಗಿ, ಶಯಿಷ್ಯಸೇ-ಮಲಗುವೆಯೋ, ತದಾ-ಆಗ, ತತ್ರ-ಅಲ್ಲಿ, ಶುನಾಂ-ನಾಯಿಗಳಿಗೆ, ಶರಣಂ-ಆಶ್ರಯನು, ಭವಿ
ತಾ-ಆಗುವಿ ||೯|| ದೂತಃ-ಸಂದೇಶಹಾರಿಯು ಇತಿ-ಹೀಗೆ, ತಮಾಕ್ಷೇಪಂ-ಆ ತಿರಸ್ಕಾರವಚವನ್ನು, ಸರ್ವಂ-ಎಲ್ಲವನ್ನೂ,ಸ್ವಾ
ಮಿನೇ-ತನ್ನೊಡೆಯನಾದ ಪೌಂಡ್ರಕನಿಗೆ ಆಹರತ್-ಕೊಂಡುಹೋಗಿ ತಿಳಿಸಿದನು, ಕೃಷ್ಣೋಪಿ-ಶ್ರೀಹರಿಯೂಕೂಡ, ರಥಂ-
ತೇರನ್ನು, ಆಸ್ಥಾಯ-ಏರಿ, ಕಾಶೀಮುಪ-ಕಾಶೀನಗರದಬಳಿಗೆ, ಜಗಾಮಹ-ಹೋದನು ||೧೦|| ಮಹಾರಥಃ - ಯುದ್ಧಸಮ

---

ರ್ಥರತು ಮತ್ತೊಬ್ಬನಲ್ಲ. ನೀನು ಅನೃತವಾದ ವಾಸುದೇವನೆಂಬ ನಾಮಧೇಯವಂ ಬಿಡುವನಾಗು ||೫||
ಮತ್ತು ನೀನು ಅಜ್ಞಾನದಿಂ ಭಯವಿಲ್ಲದೆ ನಮ್ಮ ಯಾವಶಂಖಚಕ್ರಾದಿಚಿಹ್ನಗಳಂ ಧರಿಸಿಯಿದ್ದೀಯೋ ಆಚಿಹ್ನ
ಗಳಂ ಬಿಟ್ಟು ನನ್ನಂ ಶರಣುಹೊಂದುವನಾಗು. ಇಲ್ಲದಿದ್ದರೆ ನಮಗೆ ಯುದ್ಧವ ಕುಡುವನಾಗು ಎಂದು ಆದೂ
ತನು ಪೌಂಡ್ರಕನ ವೃತ್ತಾಂತವಂ ತಿಳಿಸುತಲು, ||೬|| ಅರಸೇಕೇಳು, ಆಗ ಉಗ್ರಸೇನಾದಿಸಭಿಕರು ಅಲ್ಪಬುದ್ಧಿ
ಯುಳ್ಳ ಪೌಂಡ್ರಕನ ಸ್ತೋತ್ರವಾದ ಮಾತಂಕೇಳಿ ಗಟ್ಟಿಯಾಗಿನಕ್ಕರು ||೭|| ಭಗವಂತನಾದ ಕೃಷ್ಣನು ಪ್ರ
ಸ್ತಾವಾನಂತರದಲ್ಲಿ ಆದೂತನಂಕುರಿತು ಪೌಂಡ್ರಕನಿಗೆ ಹೇಳತಕ್ಕವಚನವಂ ಪೇಳಿದನೆಂತೆನೆ- ಎಲೈಮೂಢನೇ
ಯಾವಚಕ್ರಾದಿ ಚಿಹ್ನಗಳಿಂದ ನೀನು ಆತ್ಮಸ್ತುತಿಯಿಂ ಗೆಯ್ಯುತಲಿರುವೆಯೋ ಆಚಿಹ್ನಂಗಳಂ ನಿನ್ನಲ್ಲಿಯೇ ತ್ಯಾ
ಗಂ ಗೊಳಿಸುವವನಾಗುತ್ತೇನೆ ||೮|| ಎಲೈಅಜ್ಞನೇ! ನೀನುಯುದ್ಧದಲ್ಲಿ ನನ್ನಿಂದ ಸಂಹರಿಸಲ್ಪಟ್ಟವನಾಗಿ ಆತ್ಮ
ಪ್ರಶಂಸೆಯಂ ಗೆಯ್ಯುವ ಆಮುಖವಂ ಮುಚ್ಚಿಕೊಂಡು ಕಂಕಗೃಧ್ರಬಲಾಹಕಗಳೆಂಬ ಪಕ್ಷಿಗಳಿಂ ಸುತ್ತಿಕೊಳ್ಳ
ಲ್ಪಟ್ಟವನಾಗಿ ಭೂಮಿಯಲ್ಲಿ ಮಲಗಿಕೊಂಡು ಶುನಕಗಳಿಗೆ ಆಶ್ರಯನಾಗುತ್ತೀಯೆ, ಎಂದು ಪೌಂಡ್ರಕನಿಗೆ ಹೇ
ಳುವಂತೆ ಆದೂತನಿಗೆ ಆಜ್ಞಾಪಿಸಿದನು ||೯|| ಬಳಿಕ ಆದೂತನು ಅಲ್ಲಿಂದಹೋಗಿ ಶ್ರೀಕೃಷ್ಣನು ಹೇಳಿದ ತಿರಸ್ಕಾ
ರವಂ ಸಮಗ್ರವಾಗಿ ಪೌಂಡ್ರಕನಿಗೆ ತಿಳಿಸಿದನು,ಆಗಕೃಷ್ಣನುಕೂಡ ರಥವನೇರಿ ಕಾಶೀಪುರವನೆಯ್ದಿದನು||೧೦||

ದ್ಯೋಗಮುಪಲಭ್ಯಮಹಾರಥಃ । ಅಕ್ಷೌಹಿಣೀಭ್ಯಾಂಸಂಯುಕ್ತೋನಿಶ್ಚಕ್ರಾಮಪುರಾದ್ದ್ರುತಮ್ ॥
ತಸ್ಯಕಾಶೀಪತಿರ್ಮಿತ್ರಂಪಾರ್ಷ್ಣಿಗ್ರಾಹೋಽನ್ವಯಾನ್ನೃಪ । ಅಕ್ಷೌಹಿಣೀಭಿಸ್ತಿಸೃಭಿರಪಶ್ಯತ್ಪೌಂಡ್ರ
ಕಂಹರಿಃ ॥೧೨॥ ಶಂಖಾರ್ಯಸಿಗದಾಶಾರ್ಙ್ಗಶ್ರೀವತ್ಸಾದ್ಯುಪಲಕ್ಷಿತಮ್ । ಬಿಭ್ರಾಣಂಕೌಸ್ತುಭಮಣಿಂ
ವನಮಾಲಾವಿಭೂಷಿತಮ್ ॥೧೩॥ ಕೌಶೇಯವಾಸಸೀಪೀತೇವಸಾನಂಗರುಡಧ್ವಜಮ್ । ಅಮೂಲ್ಯಮೌ
ಳ್ಯಾಭರಣಂಸ್ಫುರನ್ಮಕರಕುಂಡಲಮ್॥೧೪॥ದೃಷ್ಟ್ವಾತಮಾತ್ಮನಾತುಲ್ಯಂವೇಷಂಕೃತ್ರಿಮಮಾಶ್ರಿತಮ್।
ಯಥಾನಟಂರಂಗಗತಂವಿಜಹಾಸಭೃಶಂಹರಿಃ ॥೧೫॥ ಶೂಲೈರ್ಗದಾಭಿಃಪರಿಘೈಶ್ಶಕ್ತ್ಯೃಷ್ಟಿಪ್ರಾಸತೋ
ಮರೈಃ । ಅಸಿಭಿಃಪಟ್ಟಿಸೈರ್ಬಾಣೈಃಪ್ರಾಹರನ್ನರಯೋಹರಿಮ್ ॥೧೬॥ ಕೃಷ್ಣಸ್ತುತತ್ಪೌಂಡ್ರಕಕಾ

---

ರ್ಥನಾದ, ಪೌಂಡ್ರಕೋಪೀ-ಕಾರೂಶನೂಕೂಡ, ತದುದ್ಯೋಗಂ-ಆ ಕೃಷ್ಣನ ಪ್ರಯತ್ನವನ್ನು, ಉಪಲಭ್ಯ-ತಿಳಿದು, ಅಕ್ಷೌಹಿ
ಣೀಭ್ಯಾಂ-ಎರಡಕ್ಷೌಹಿಣಿಗಳ ದಂಡಿನೊಡನೆ, ಸಂಯುಕ್ತಃ-ಕೂಡಿದವನಾಗಿ ದ್ರುತಂ-ಬೇಗನೆ, ಪುರಾತ್-ತನ್ನ ಮಿತ್ರನ ನಗರ
ವಾದ ಕಾಶಿಯುದೆಸೆಯಿಂದ, ನಿಶ್ಚಕ್ರಾಮ-ಹೊರಹೊರಟನು ॥೧೧॥ ನೃಪ-ಪರೀಕ್ಷಿದ್ರಾಯನೇ, ತಸ್ಯ-ಆಕಾರೂಶ ದೇಶದರಾಯ
ನಾದ ಪೌಂಡ್ರನಿಗೆ, ಮಿತ್ರಂ-ಗೆಳೆಯನಾದ, ಕಾಶೀಪತಿಃ-ಕಾಶೀರಾಯನು, ಪಾರ್ಷ್ಣಿಗ್ರಾಹಃ-ಹಿಂಬಲವಾಗಿ, ತಿಸೃಭಿರಕ್ಷೌಹಿಣೀ
ಭಿಃ-ಮೂರಕ್ಷೌಹಿಣಿಗಳಸೇನೆಯೊಡನೆ, ಅನ್ವಯಾತ್-ಅನುಸರಿಸಿಬಂದನು, ಹರಿಃ-ಕೃಷ್ಣನು, ಪೌಂಡ್ರಕಂ-ಕಾರೂಶನನ್ನೂ, ಅಪ
ಶ್ಯತ್-ಕಂಡನು॥೧೨॥ಶಂಖಾ .. ಲಕ್ಷಿತಂ-ಶಂಖ-ಪಾಂಚಜನ್ಯ, ಅರಿ-ಚಕ್ರ, ಅಸಿ-ಖಡ್ಗ, ಗದಾ-ಗದೆ, ಶಾರ್ಙ್ಗ-ಬಿಲ್ಲು, ಶ್ರೀವತ್ಸ-
ಲಕ್ಷ್ಮಿಯಮಚ್ಚೆ-ಆದಿ-ಮೊದಲಾದವುಗಳಿಂದ, ಉಪಲಕ್ಷಿತಂ-ಕೂಡಿದಂಥಾ, ಕೌಸ್ತುಭಮಣಿಂ-ಕೌಸ್ತುಭವೆಂಬ ರತ್ನವನ್ನು, ಬಿ
ಭ್ರಾಣಂ-ಧರಿಸಿದವನಾದಂಥಾ, ವನಮಾಲಾವಿಭೂಷಿತಂ-ತುಳಸಿಯಮಾಲೆಯಿಂದಲಂಕೃತನಾದಂಥಾ ॥೧೩॥ಪೀತೇ-ಹಳದಿಯಾದ,
ಕೌಶೇಯವಾಸಸೀ-ಪಟ್ಟೆಯವಸ್ತ್ರಗಳೆರಡರನ್ನು, ವಸಾನಂ-ಹೊದ್ದು ಉಟ್ಟು ಇರುವಂಥಾ, ಗರುಡಧ್ವಜಂ-ಗರುಡನಪಟವಿಗೆ
ಯುಳ್ಳಂಥಾ, ಅಮೂಲ್ಯಮೌಳ್ಯಾಭರಣಂ-ಬೆಲೆಯಿಲ್ಲದತಲೆದೊಡವು(ಕಿರೀಟ) ವುಳ್ಳಂಥಾ,ಸ್ಫುರನ್ಮಕರಕುಂಡಲಂ-ಶೋಭಿಸುವಮ
ಕರಾಕಾರವಾದಕಿವಿದೊಡವುಗಳುಳ್ಳಂಥಾ॥೧೪॥ಆತ್ಮನಾ-ತನ್ನೊಡನೆ, ತುಲ್ಯಂ-ಸಮಾನವಾದ, ಕೃತ್ರಿಮಂವೇಷಂ-ಕಲ್ಪಿತವಾದಅ
ಲಂಕಾರವನ್ನು, ಆಶ್ರಿತಂ-ಮಾಡಿಸಿರುವಂಥಾ, ರಂಗಗತಂ-ನಾಟ್ಯಸ್ಥಲವನ್ನುಹೊಂದಿದ, ನಟಂಯಥಾ-ಆಟಗಾರನುಹೇಗೋಹಾಗಿ
ರುವಂಥಾ ತಂ-ಆಪೌಂಡ್ರಕನನ್ನು, ದೃಷ್ಟ್ವಾ-ನೋಡಿ, ಹರಿಃ-ಕೃಷ್ಣನು, ಭೃಶಂ-ಅಧಿಕವಾಗಿ, ವಿಜಹಾಸ-ನಕ್ಕನು॥೧೫॥ಶೂ
ಲೈಃ-ಕವಲುಗೋಲುಗಳಿಂದಲೂ, ಗದಾಭಿಃ-ಮೋದುದೊಣ್ಣೆಗಳಿಂದಲೂ,ಪರಿಘೈಃ-ಉಬ್ಬಿಲದೊಣ್ಣೆಗಳಿಂದಲೂ, ಶಕ್ತಿ-ಶಕ್ತ್ಯಾ
ಯುಧ,ಋಷ್ಟಿ-ಈಟಿ, ಪ್ರಾಸ-ಭಲ್ಲೆ, ತೋಮರೈಃ-ಮುದ್ಗರಗಳಿಂದಲೂ, ಅಸಿಭಿಃ-ಕತ್ತಿಗಳಿಂದಲೂ, ಪಟ್ಟಿಸೈಃ-ಪಟ್ಟಾಕತ್ತಿಗ
ಳಿಂದಲೂ, ಬಾಣೈಃ-ಅಂಬುಗಳಿಂದಲೂ, ಅರಯಃ-ವೈರಿಗಳು, ಹರಿಂ-ಕೃಷ್ಣನನ್ನು, ಪ್ರಾಹರನ್-ಹೊಡೆದರು॥೧೬॥ಕೃಷ್ಣಸ್ತು-

---

ಮಹಾರಥಿಕನಾದ ಪೌಂಡ್ರಕನೂ ಕೃಷ್ಣನಯುದ್ಧ ಸನ್ನಾಹವಂತಿಳಿದು ಎರಡಕ್ಷೌಹಿಣಿಗಳೊಡನೆ ಶೀಘ್ರವಾಗಿ
ಕಾಶೀಯಿಂದ ಹೊರಟನು ॥೧೧॥ ಮತ್ತು ಅವನಿಗೆ ಮಿತ್ರನಾದ ಕಾಶೀಪುರದರಸು ಪೌಂಡ್ರಕಂಗೆ ಸಹಾಯಕನಾ
ಗಿ ಮೂರಕ್ಷೌಹಿಣಿಗಳೊಡನೆ ಹೊರಟನು. ಆಮೇಲೆಕೃಷ್ಣನು॥೧೨॥ ಶಂಖ ಚಕ್ರ ಗದೆ ಶಾರ್ಙ್ಗ ಶ್ರೀವತ್ಸ, ಇವು
ಮೊದಲಾದ ಚಿಹ್ನೆಗಳೊಡನೆ ಯುಕ್ತನಾಗಿ ಕೌಸ್ತುಭ ಮಣಿಯಂಧರಿಸಿ ವನಮಾಲೆಯಿಂದಲಂಕೃತನಾಗಿ ॥೧೩॥
ಪೀತಾಂಬರಗಳನ್ನುಟ್ಟು ಕೃತ್ರಿಮನಾದ ಗರುಡನಂ ಧ್ವಜದಲ್ಲಿರಿಸಿಕೊಂಡು ಬೆಲೆಯಿಲ್ಲದಿರುವ ಕಿರೀಟಾಭರಣಂಗ
ಳುಳ್ಳವನಾಗಿ ಹೊಳೆಯುವ ಮಕರ ಕುಂಡಲಂಗಳುಳ್ಳ, ಆಪೌಂಡ್ರಕನಂಕಂಡನು॥೧೪॥ ಬಳಿಕ ಶ್ರೀಕೃಷ್ಣನು ತ
ನಗೆ ಸಮಾನವಾದ ಅಲಂಕಾರವುಳ್ಳ ಕೃತ್ರಿಮಗರುಡನನ್ನೇರಿದ ನಾಟ್ಯಸ್ಥಾನದ ನಟನಂತೆ ಯುದ್ಧರಂಗಕ್ಕೆ
ಬಂದ ಪೌಂಡ್ರಕನಂ ನೋಡಿ ಅತ್ಯಂತವಾಗಿ ನಕ್ಕನು ॥೧೫॥ ಶತ್ರುಭಟರು ಶೂಲಂಗಳಿಂ ಗದೆಗಳಿಂ ಶಕ್ತಿಗಳಿಂ
ಪ್ರಾಸಂಗಳಿಂ ತೋಮರಂಗಳಿಂ ಖಡ್ಗಂಗಳಿಂ ಕಠಾರಿಗಳಿಂ ಬಾಣಂಗಳಿಂ ಕೂಡ ಕೃಷ್ಣನಂ ಪ್ರಹರಿಸಿದರು॥೧೬॥
ಆಮೇಲೆ ಕೃಷ್ಣನು ಗಜಾಶ್ವರಥಪದಾತಿಗಳೆಂಬ ಚತುರಂಗಗಳೊಡನೆ ಯುಕ್ತವಾದ ಆಪೌಂಡ್ರಕ ಕಾಶೀರಾಜರ

ಶಿರಾಜಯೋರ್ಬಲಂ ಗಜಸ್ಯಂದನವಾಜಿಪತ್ತಿಮತ್ | ಗದಾಸಿಚಕ್ರೇಷುಭಿರಾರ್ದಯದ್ಭೃಶಂ ಯಥಾ ಯುಗಾಂತೇ ಹುತಭುಕ್ಪೃಥಕ್ಪ್ರಜಾಃ ||೧೭|| ಆಯೋಧನಂ ತದ್ರಥವಾಜಿಕುಂಜರದ್ವಿಪತ್ಖರೋಷ್ಟ್ರೈರರಿಣಾವಖಂಡಿತೈಃ | ಬಭೌ ಚಿತಂ ಮೋದವಹಂ ಮನಸ್ವಿನಾಮಾಕ್ರೀಡನಂ ಭೂತಪತೇರಿವೋಲ್ಬಣಮ್ ||೧೮|| ಅಥಾಹ ಪೌಂಡ್ರಕಂ ಶೌರಿರ್ಭೋ ಭೋ ಪೌಂಡ್ರಕ ಯದ್ಭವಾನ್ | ದೂತವಾಕ್ಯೇನ ಮಾಮಾಹ ತಾನ್ಯಸ್ತ್ರಾಣ್ಯುತ್ಸೃಜಾಮಿ ತೇ ||೧೯|| ತ್ಯಾಜಯಿಷ್ಯೇಽಭಿಧಾನಂ ಮೇ ಯತ್ತ್ವಯಾಜ್ಞ ಮೃಷಾ ಧೃತಮ್ | ವ್ರಜಾಮಿ ಶರಣಂ ತೇಽದ್ಯ ಯದಿ ನೇಚ್ಛಾಮಿ ಸಂಯುಗಮ್ ||೨೦|| ಇತಿ ಕ್ಷಿಪ್ತ್ವಾ ಶಿತೈರ್ಬಾಣೈರ್ವಿರಥೀಕೃತ್ಯ ಪೌಂಡ್ರಕಮ್ | ಶಿರೋಽವೃಶ್ಚದ್ರಥಾಂಗೇನ ವಜ್ರೇಣೇಂದ್ರೋ ಯಥಾ ಗಿರೇಃ ||೨೧|| ತಥಾ ಕಾಶೀಪತೇಃ ಕಾಯಾಚ್ಛಿರ ಉ

---

ಶ್ರೀಹರಿಯಾದರೋ, ಯುಗಾಂತೇ-ಪ್ರಳಯಕಾಲದಲ್ಲಿ, ಹುತಭುಕ್-ಅಗ್ನಿಯು, ಪ್ರಜಾಃ-ಜನಂಗಳನ್ನು, ಪೃಥಕ್- ಬೇರೆಬೇರೆ ಯಥಾ-ಹೇಗೋ, ತಥಾ-ಹಾಗೆ, ಗಜಸ್ಯಂದನವಾಜಿಪತ್ತಿಮತ್-ಆನೆ ತೇರು ಕುದುರೆ ಕಾಲಾಳುಗಳುಳ್ಳ, ಪೌಂಡ್ರಕಕಾಶಿರಾಜಯೋಃ-ಕಾರೂಶಕಾಶೀಪತಿಗಳ, ತದ್ಬಲಂ-ಆ ದಂಡವನ್ನು, ಗದಾಸಿಚಕ್ರೇಷುಭಿಃ-ಗದೆನಂದಕ ಸುದರ್ಶನ ಬಾಣಗಳಿಂದ, ಭೃಶಂ-ಅಧಿಕವಾಗಿ, ಅರ್ದಯತ್-ಪೀಡಿಸಿದನು. ತದಾಯೋಧನಂ-ಆ ಯುದ್ಧವು ಅರಿಣಾ-ಚಕ್ರದಿಂದ, ಖಂಡಿತೈಃ-ಭೇದಿಸಲ್ಪಟ್ಟ, ವಾಜಿಕುಂಜರ ದ್ವಿಪತ್ಖರೋಷ್ಟ್ರೈಃ-ಕುದುರೆಆನೆ ಆಳು ಹೇಸರಕತ್ತೆ ಒಂಟೆಗಳಿಂದ, ಚಿತಂ-ಹೇರಲ್ಪಟ್ಟದ್ದಾಗಿ, ಭೂತಪತೇಃ-ಸ್ಮಶಾನ ರುದ್ರನ, ಉಲ್ಬಣಂ-ಅಧಿಕವಾದ, ಆಕ್ರೀಡನಮಿವ ಕ್ರೀಡಾಸ್ಥಾನದಂತೆ, ಮನಸ್ವಿನಾಂ-ಧೀರರಿಗಳಿಗೆ, ಮೋದವಹಂ-ಸಂತೋಷವಂ ಧರಿಸುವುದಾಗಿ, ಬಭೌ-ಪ್ರಕಾಶಿಸಿತು ||೧೮|| ಅಥ-ಆ ಮೇಲೆ, ಶೌರಿಃ-ಕೃಷ್ಣನು, ಪೌಂಡ್ರಕಂ-ಕಾರೂಶನಂ ಕುರಿತು, ಆಹ-ನುಡಿದನು, ಭೋಭೋಪೌಂಡ್ರಕ-ಎಲೆಎಲೆ ಕಾರೂಶನೇ, ಭವಾನ್-ನೀನು, ದೂತವಾಕ್ಯೇನ-ಸಂದೇಶಹಾರಿಯ ವಚನದಿಂದ, ಮಾಂ-ನನ್ನ ಕುರಿತು, ಯತ್-ಯಾವುದರನ್ನು, ಆಹ-ಹೇಳಿದೆಯೋ, ತೇ-ನಿನ್ನ, ತಾನ್ಯಸ್ತ್ರಾಣಿ-ಆಕೈದುಗಳನ್ನು, ಉತ್ಸೃಜಾಮಿ-ಬಿಡುವೆನು ||೧೯|| ಅಜ್ಞ-ಮೂಢನೇ! ಮೃಷಾ-ವ್ಯರ್ಥವಾಗಿ, ತ್ವಯಾ-ನಿನ್ನಿಂದ, ಧೃತಂ- ಧರಿಸಲ್ಪಟ್ಟಿರುವ, ಮೇ-ನನ್ನ, ಅಭಿಧಾನಂ-ವಾಸುದೇವನೆಂಬ ಹೆಸರು, ಯತ್-ಯಾವುದೋ, ತತ್-ಅದರನ್ನು, ತ್ಯಾಜಯಿಷ್ಯೇ-ಬಿಡಿಸುವೆನು. ಅದ್ಯ-ಈಗ, ಸಂಯುಗಂ-ಕಾಳಗವನ್ನು, ನೇಚ್ಛಾಮಿಯದಿ-ನಾನು ಬಯಸದೆಹೋದರೆ, ತೇ-ನಿನ್ನ, ಶರಣಂ-ರಕ್ಷಣವನ್ನು, ವ್ರಜಾಮಿ-ಸೇರುವೆನು ||೨೦|| ಇತಿ-ಹೀಗೆಹೇಳಿ, ಶಿತೈಃ-ಹರಿತಂಗಳಾದ, ಬಾಣೈಃ-ಅಂಬುಗಳಿಂದ, ಕ್ಷಿಪ್ತ್ವಾ-ಎತ್ತಿಹೊಡೆದು, ಪೌಂಡ್ರಕಂ-ಕಾರೂಶನನ್ನು, ವಿರಥೀಕೃತ್ಯ-ತೇರಿಲ್ಲದವನನ್ನಾಗಿ ಮಾಡಿ, ಇಂದ್ರಃ-ದೇವರಾಜನು, ವಜ್ರೇಣ-ಸಿಡಿಲಿನಿಂದ, ಗಿರೇರ್ಯಥಾ-ಬೆಟ್ಟಕ್ಕೆ ಹೇಗೋ ಹಾಗೆ, ರಥಾಂಗೇನ-ಚಕ್ರದಿಂದ, ಶಿರಃ-ಅವನತಲೆಯನ್ನು, ಅವೃಶ್ಚತ್-ಕಡಿದನು ||ತಥಾ-ಹಾಗೆ, ಕಾಶೀಪತೇಃ-ಕಾಶೀರಾಯನ, ಶಿರಃ-ತಲೆಯನ್ನು, ಉತ್ಕೃತ್ಯ-ಕತ್ತರಿಸಿಹಾರಿಸಿ, ಕಾಯಾತ್-ಅವನ ಮೈಯಿಂದ,

---

ಮಹಾಸೇನೆಯಂ ಗದಾ ಖಡ್ಗ ಚಕ್ರಬಾಣಂಗಳಿಂ ಯುಗಾಂತದಲ್ಲಿ ಚತುರ್ವಿಧ ಭೂತಸಮೂಹವಂ ಕಾಲಾಗ್ನಿಯಂತೆ ನಿಶ್ಶೇಷವಾಗಿ ಸಂಹರಿಸಿದನು ||೧೭|| ಆಗ ಶ್ರೀಕೃಷ್ಣನ ಚಕ್ರದಿಂ ಭೇದಿಸಲ್ಪಟ್ಟ ರಥಾಶ್ವಗಜಪದಾತಿಗಳಿಂ ಖರೋಷ್ಟ್ರಂಗಳಿಂ ವ್ಯಾಪಿಸಲ್ಪಟ್ಟದ್ದಾಗಿ ಮಾನವಂತರಾದ ಶೂರರಿಗೆ ಸಂತೋಷಕರವಾಗಿಯೂ ಇರುವ ಆಯುದ್ಧಸ್ಥಾನವು ಕಲ್ಪಾಂತದಲ್ಲಿ ರುದ್ರಕ್ರೀಡಾಸ್ಥಾನದಂತೆ ಪ್ರಕಾಶಿಸಿತು ||೧೮|| ಆಮೇಲೆ ಶ್ರೀಕೃಷ್ಣನು ಪೌಂಡ್ರಕನಂ ಕುರಿತು ಎಲಾ! ದೂತಮುಖದಿಂದ ಯಾವಅರ್ಥವಂ ನನಗೆಪೇಳಿದೆಯೋ ಅದಕ್ಕೋಸುಗ ಅಸ್ತ್ರಂಗಳಂ ಬಿಡುವನಾಗುತ್ತೇನೆ ||೧೯|| ಎಲಾ, ಮೂಢನೇ! ನಿನ್ನಿಂದ ಅನ್ಯಾಯವಾಗಿ ಸಲಿಸಲ್ಪಟ್ಟ ವಾಸುದೇವನೆಂಬ ನಾಮವನ್ನು ಈಗಬಿಡಿಸುವೆನು. ನಾನು ಅಸಮರ್ಥತೆಯಿಂದ ಯುದ್ಧವಂ ಮಾಡದೆಯಿದ್ದರೆ ಆಗ ಮೂಢನಾದ ನಿನ್ನಂ ಶರಣು ಹೊಂದುವೆನು ||೨೦|| ಅನಂತರದಲ್ಲಿ ಶ್ರೀಕೃಷ್ಣನು ತೀಕ್ಷ್ಣಂಗಳಾದ ಬಾಣಂಗಳಿಂ ಪೌಂಡ್ರಕನಂ ರಥಹೀನನಂಗೆಯ್ದು ಇಂದ್ರನುವಜ್ರಾಯುಧದಿಂದಪರ್ವತಶಿಖರಂಗಳಂ ಭೇದಿಸಿದಂತೆ ಚಕ್ರಾಯುದದಿಂದ ಪೌಂಡ್ರಕನ ಶಿರಸ್ಸಂ ಭೇದಿಸಿದನು ||೨೧|| ಮತ್ತಂ ಶ್ರೀಕೃಷ್ಣನು ಹಾಗೆಯೆ ಬಾಣಂಗಳಿಂದ ಕಾಶಿಯರಾಯನ ಶಿ

ತ್ಕೃತ್ಯಪತ್ರಿಭಿಃ । ವ್ಯಪಾತಯತ್ತಾಂಕಾಶಿಪುರ್ಯಾಂಪದ್ಮಕೋಶಮಿವಾನಿಲಃ ॥೨೨॥ ಏವಂಮತ್ಸರಿಣಂಹ
ತ್ವಾಪೌಂಡ್ರಕಂಸಸಖಂಹರಿಃ। ದ್ವಾರಕಾಮಾವಿಶತ್ಸಿದ್ಧೈರ್ಗೀಯಮಾನಕಥಾಮೃತಃ॥೨೩॥ಸನಿತ್ಯಂ
ಭಗವದ್ಧ್ಯಾನಪ್ರಧ್ವಸ್ತಾಖಿಲಬಂಧನಃ । ಬಿಭ್ರಾಣಶ್ಚಹರೇರಾಜನ್ ಸ್ವರೂಪಂತನ್ಮಯೋಭವತ್ ॥೨೪॥
ಶಿರಃಪತಿತಮಾಲೋಕ್ಯರಾಜದ್ವಾರಿಸಕುಂಡಲಮ್। ಕಿಮಿದಂಕಸ್ಯವಾವಕ್ತ್ರಮಿತಿಸಂಶಿಶಿರೇಜನಾಃ॥೨೫॥
ರಾಜ್ಞಃಕಾಶೀಪತೇರ್ಜ್ಞಾತ್ವಾಮಹಿಷ್ಯಃಪುತ್ರಬಾಂಧವಾಃ । ಪೌರಾಶ್ಚಹಾಹತಾರಾಜನ್ನಾಥನಾಥೇತಿ
ಚಾರುದನ್ ॥೨೬॥ಸುದಕ್ಷಿಣಸ್ತಸ್ಯಸುತಃಕೃತ್ವಾಸಂಸ್ಥಾವಿಧಿಂಪಿತುಃ । ನಿಹತ್ಯಪಿತೃಹಂತಾರಂಯಾ
ಸ್ಯಾಮ್ಯಪಚಿತಿಂಪಿತುಃ॥೨೭॥ಇತ್ಯಾತ್ಮನಾಭಿಸಂಧಾಯಸೋಪಾಧ್ಯಾಯೋಮಹೇಶ್ವರಮ್ ।ಸುದಕ್ಷಿಣೋ

---

ಕಾಶೀಪುರ್ಯಾಂ-ಕಾಶೀನಗರದಲ್ಲಿ, ಅನಿಲಃ-ಗಾಳಿಯು, ಪದ್ಮಕೋಶಮಿವ-ತಾವರೆಯ ಮೊಗ್ಗನಂತೆ, ವ್ಯಪಾತಯತ್- ಕೆಡಹಿದ ನು ॥೨೨॥ ಹರಿಃ-ಕೃಷ್ಣನು, ಏವಂ-ಹೀಗೆ, ಮತ್ಸರಿಣಂ-ಹೊಟ್ಟೆಕಿಚ್ಚುಳ್ಳ, ಸಸಖಂ-ಗೆಳೆಯನಿಂ ಕೂಡಿದ, ಪೌಂಡ್ರಕಂ-ಕಾರೂಶನನ್ನು, ಹತ್ವಾ-ಕೊಂದು, ಸಿದ್ಧೈಃ-ಸಿದ್ಧರೆಂಬ ದೇವರ್ಕಳಿಂದ, ಗೀಯಮಾನಕಥಾಮೃತಃ-ಕೊಂಡಾಡಲ್ಪಡುತ್ತಿರುವ ಅಮೃತದಂಥಾ ಚರಿತ್ರೆಯುಳ್ಳವನಾಗಿ, ದ್ವಾರಕಾಂ-ಕುಶಸ್ಥಲೀನಗರವನ್ನು, ಆವಿಶತ್-ಹೊಕ್ಕನು ॥೨೩॥ರಾಜನ್-ಪರೀಕ್ಷಿದ್ರಾಯನೇ, ಸಃ-ಆ ಪೌಂಡ್ರಕನು, ನಿತ್ಯಂ-ಸರ್ವಕಾಲದಲ್ಲಿಯೂ, ಭಗವಾನ್-ಕೃಷ್ಣನ, ಧ್ಯಾನ-ಭಾವನೆಯಿಂದ, ಪ್ರಧ್ವಸ್ತ- ನಾಶಗೊಳಿಸಲ್ಪಟ್ಟ, ಅಖಿಲಬಂಧನಃ-ಸಮಸ್ತ ಬಂಧಕಂಗಳೂ ಉಳ್ಳವನೂ, ಹರೇಃ-ಕೃಷ್ಣನ, ಸ್ವರೂಪಂ-ಮೂರ್ತಿಯವೇಷವನ್ನು, ಬಿಭ್ರಾಣಶ್ಚ-ಧರಿಸಿದವನೂ ಆಗಿದ್ದುದ್ದರಿಂದ, ತನ್ಮಯಃ-ಆ ಕೃಷ್ಣಸಾರೂಪ್ಯವಂ ಪಡೆದವನು, ಅಭೂತ್-ಆದನು ॥೨೪॥ ರಾಜದ್ವಾರಿ-ಅರಮನೆಯ ಬಾಗಲಿನಲ್ಲಿ, ಪತಿತಂ-ಬಿದ್ದಂಥಾ, ಸಕುಂಡಲಂ-ಕರ್ಣಭೂಷಣಂಗಳಿಂದ ಸಹಿತವಾದ, ಶಿರಃ-ತಲೆಯನ್ನು, ಆಲೋಕ್ಯ-ನೋಡಿ, ಕಿಮಿದಂ-ಇದೇನು ? ಕಸ್ಯವಾವಕ್ತ್ರಂ-ಯಾವವನತಲೆಯು, ಇತಿ-ಹೀಗೆಂದು, ಜನಾಃ-ನಾಗರಿಕರು, ಸಂಶಿಶಿರೇ-ಸಂದೇಹಗೊಂಡರು ॥೨೫॥ ರಾಜನ್-ಪರೀಕ್ಷಿತನೇ! ಕಾಶಿಪತೇಃರಾಜ್ಞಃ-ಕಾಶಿಗೊಡೆಯನಾದ ರಾಯನ ತಲೆಯೆಂದು ಜ್ಞಾತ್ವಾ-ತಿಳಿದು, ಮಹಿಷ್ಯಃ-ರಾಣಿಯರೂ, ಪುತ್ರಬಾಂಧವಾಃ-ಮಕ್ಕಳೂ ನಂಟರೂ, ಪೌರಾಶ್ಚ-ನಾಗರೀಕರೂ, ನಾಥನಾಥ-ಒಡೆಯನೇ ಒಡೆಯನೇ, ಹಾ-ಅಯ್ಯೋ, ಹತಾಃಇತಿಚ-ಕೊಲ್ಲಲ್ಪಟ್ಟವರಾದೆವೆನುತಲೂ, ಅರುದನ್-ಅತ್ತರು ॥೨೬॥ ತಸ್ಯ-ಆ ಕಾಶೀರಾಯನ, ಸುತಃ-ಮಗನಾದ, ಸುದಕ್ಷಿಣಃ-ಸುದಕ್ಷಿಣನೆಂಬವನು, ಪಿತುಃ-ತಂದೆಯ, ಸಂಸ್ಥಾವಿಧಿಂ-ಪ್ರೇತಕರ್ಮವನ್ನು, ಕೃತ್ವಾ-ಮಾಡಿ, ಪಿತೃಹಂತಾರಂ-ತನ್ನ ತಂದೆಯಂಕೊಂದವನನ್ನು, ನಿಹತ್ಯ-ಕೊಂದು, ಪಿತುಃ-ತಂದೆಯ, ಅಪಚಿತಿಂ- ಆನೃಣ್ಯವನ್ನು, ಯಾಸ್ಯಾಮಿ-ಹೊಂದುವೆನು ॥೨೭॥ ಇತಿ-ಹೀಗೆಂದು, ಆತ್ಮನಾ-ಬುದ್ಧಿಯಿಂದ, ಅಭಿಸಂಧಾಯ- ಫಲಾಪೇಕ್ಷೆಗೊಂಡು ಸೋಪಾಧ್ಯಾಯಃ-ಪುರೋಹಿತನಿಂಸಹಿತನಾದ, ಸುದಕ್ಷಿಣಃ-ಸುದಕ್ಷಿಣನೆಂಬವನು, ಪರಮೇಣ-ಉತ್ತಮವಾದ, ಸಮಾಧಿನಾ-

---

ಸ್ಸನ್ನೂ ಛೇದಿಸಿ ಪದ್ಮಕೋಶವಂ ವಾಯುವಿನಂತೆ ಕಾಶೀಪುರದಲ್ಲಿ ಕೆಡಹಿದನು ॥೨೨॥ ಬಳಿಕ ಶ್ರೀಕೃಷ್ಣನು ಪೌಂಡ್ರಕನನ್ನೂ ಅವನ ಮಿತ್ರನಾದ ಕಾಶೀರಾಯನಂ ಸಹ ಸಂಹರಿಸಿದ್ದರಿಂದ ಗಾನಂ ಗೆಯ್ಯಲ್ಪಡುವ ಚರಿತ್ರೆವುಳ್ಳವನಾಗಿ ದ್ವಾರಕಾಪುರವಂ ಪ್ರವೇಶಿಸಿದನು ॥೨೩॥ ಅರಸಾದ ಪರೀಕ್ಷಿದ್ರಾಯನೇ! ಕೇಳು, ನಿರಂತರದಲ್ಲಿಯೂ ಭಗವಂತನಧ್ಯಾನದಿಂ ಪರಿಹರಿಸಲ್ಪಟ್ಟ ಬಂಧಂಗಳುಳ್ಳವನಾಗಿ ಶ್ರೀಹರಿಯ ರೂಪವಂ ಧರಿಸಿದ್ದ ಪೌಂಡ್ರಕನು ಶ್ರೀಹರಿಯಿಂದಲೇ ಸಂಹೃತನಾಗಿ ಶ್ರೀಹರಿಯ ಸಾಯುಜ್ಯವನೆಯ್ದಿದನು॥೨೪॥ ಅನಂತರದಲ್ಲಿ ಕಾಶೀಪುರಸ್ಥರಾದ ಜನರು ರಾಜದ್ವಾರದಲ್ಲಿ ಬಿದ್ದಿರುವ ಕುಂಡಲಯುಕ್ತವಾದ ಶಿರಸ್ಸಂನೋಡಿಇದೇನೆಂದು ಈಶಿರಸ್ಸುಯಾರದೆಂದು ಕೂಡಿ ಸಂಶಯಂಗೆಯ್ದರು ॥೨೫॥ ಬಳಿಕ ಕಾಶೀರಾಯನ ಪತ್ನಿಯರು ಬಾಂಧವರು ಪುರಜನರು ಸಹ ಅರಸಿನ ವೃತ್ತಾಂತವಂಕೇಳಿ ಅನಾಥರಾಗಿ ನಾಥನೇಯೆಂದು ದುಃಖಿಸಿದರು ॥೨೬॥ ಬಳಿಕ ಕಾಶೀರಾಯನ ಪುತ್ರನಾದ ಅತಿದಾತೃವಾದ ಸುದಕ್ಷಿಣನು ತಂದೆಗೆ ಸ್ವರ್ಗಸಾಧಕವಾದ ಕರ್ಮಮಂಗೆಯ್ದು ತನ್ನ ಪಿತೃವಿಗೆವೈರಿಯಾದ ಕೃಷ್ಣನ ಸಂಹರಿಸಿ ಸಂತೋಷವನ್ನುಂಟುಮಾಡುವೆನೆಂದು ॥೨೭॥ ನಿಶ್ಚಯಿಸಿಕೊಂಡು ಪುರೋಹಿತನೊ

ರ್ಚಯಾಮಾಸಪರಮೇಣಸಮಾಧಿನಾ ‖೧೮‖ ಪ್ರೀತೋವಿಮುಕ್ತೋಭಗವಾಂಸ್ತಸ್ಮೈವರಮದಾದ್ಭವಃ|ಪಿ
ತೃಹಂತೃವಧೋಪಾಯಂಸವವ್ರೇವರಮೀಶಿತುಃ‖೧೯‖ ಸುದಕ್ಷಿಣಾಗ್ನಿಂಪರಿಚರಬ್ರಾಹ್ಮಣೈಸ್ಸಹಋತ್ವಿ
ಜಮ್ | ಅಭಿಚಾರವಿಧಾನೇನಸಚಾಗ್ನಿಃಪ್ರಮಥೈರ್ವೃತಃ ‖ ಸಾಧಯಿಷ್ಯತಿಸಂಕಲ್ಪಮಬ್ರಹ್ಮಣ್ಯೇಪ್ರ
ಯೋಜಿತಃ ‖೨೦‖ಇತ್ಯಾದಿಷ್ಟಸ್ತಥಾಚಕ್ರೇಕೃಷ್ಣಾಯಾಭಿಚರನ್ವ್ರತೀ ‖೨೧‖ತತೋಗ್ನಿರುತ್ಥಿತಃಕುಂ
ಡಾನ್ಮೂರ್ತಿಮಾನತಿಭೀಷಣಃ |ತಪ್ತತಾಮ್ರಶಿಖಾಶ್ಮಶ್ರುರಂಗಾರೋದ್ಗಾರಿಲೋಚನಃ‖೨೨‖ದಂಷ್ಟ್ರೋ
ಗ್ರಭ್ರುಕುಟೀದಂಡಕಠೋರಾಸ್ಯಸ್ಸ್ವಜಿಹ್ವಯಾ | ಆಲಿಹನ್ಸೃಕ್ವಿಣೀನಗ್ನೋವಿಧುನ್ವನ್ತ್ರಿಶಿಖಂ
ಜ್ವಲನ್‖೨೩‖ಪದ್ಭ್ಯಾಂತಾಳಪ್ರಮಾಣಾಭ್ಯಾಂಕಂಪಯನ್ನವನೀತಲಮ್ |ಸೋಭ್ಯಧಾವದ್ವೃತೋಭೂ

---

ಯೋಗದಿಂದ, ಮಹೇಶ್ವರಂ-ಮಹಾದೇವನನ್ನು, ಅರ್ಚಯಾಮಾಸ-ಪೂಜಿಸಿದನು ‖೧೮‖ ಪ್ರೀತಃ-ಪ್ರೀತಿಯುಳ್ಳವನಾದ, ಅ
ವಿಮುಕ್ತಃ-ಮುಕ್ತಿ ಇಲ್ಲದವರಿಲ್ಲದವನಾದ, ಭಗವಾನ್-ಷಡ್ಗುಣೈಶ್ವರ್ಯ ಸಂಪನ್ನನಾದ, ಭವಃ-ಶಿವನು,ತಸ್ಮೈ-ಆ ಸುದಕ್ಷಿಣಂಗೆ,
ವರಮದಾತ್-ಬೇಕಾದ್ದನ್ನು ಬೇಡಿಕೊಳ್ಳುವಂತೆ ಅಪ್ಪಣೆಯಂ ಕೊಟ್ಟನು. ಸಃ-ಆ ಸುದಕ್ಷಿಣನು ಪಿತೃಹಂತೃವಧೋಪಾಯಂ-
ತನ್ನ ತಂದೆಯಂಕೊಂದವನಂ ಕೊಲ್ಲುವದಕ್ಕುಪಾಯವನ್ನು, ವರಂ-ವರವನ್ನು, ಈಶಿತುಃ-ಈಶ್ವರನ ಬೆಸೆಯಿಂದ, ವವ್ರೇ-
ಬಯಸಿದನು ‖೧೯‖ ಸುದಕ್ಷಿಣ-ಸುದಕ್ಷಿಣನೇ, ಋತ್ವಿಜಂ-ಯಜ್ಞಸಾಧಕನಾದ, ಅಗ್ನಿಂ -ದಕ್ಷಿಣಾಗ್ನಿಯನ್ನು, ಅಭಿಚಾರವಿ
ಧಾನೇನ-ಶತ್ರುಮಾರಣಪ್ರಯೋಗದಿಂದ, ಬ್ರಾಹ್ಮಣೈಸ್ಸಹ-ಬ್ರಾಹ್ಮಣರೊಡನೆ, ಪರಿಚರ-ಪೂಜಿಸಿದವನಾಗು. ಸೋಗ್ನಿಶ್ಚ- ಆ
ಯಗ್ನಿಯೂಕೂಡ, ಪ್ರಮಥೈಃ-ರುದ್ರಸಭಿಕರಿಂದ, ವೃತಃ-ಬಳಸಲ್ಪಟ್ಟವನಾಗಿ, ಅಬ್ರಹ್ಮಣ್ಯೇ-ಬ್ರಾಹ್ಮಣಭಕ್ತಿಯಿಲ್ಲದ,ಬ್ರ
ಹ್ಮಜ್ಞಾನವಿಲ್ಲದ ಪುರುಷನಲ್ಲಿ, ಪ್ರಯೋಜಿತಃ-ಪ್ರಯೋಗಿಸಲ್ಪಟ್ಟುದಾದರೆ, ಸಂಕಲ್ಪಂ-ಮನೋರಥವನ್ನು, ಸಾಧಯಿಷ್ಯತಿ-
ಸಂಪಾದಿಸಿ ಕೊಡುವುದು ‖೨೦‖ ಇತಿ-ಹೀಗೆ, ಆದಿಷ್ಟಃ-ರುದ್ರನಿಂದ ಹೇಳಲ್ಪಟ್ಟವನಾದ, ಸುದಕ್ಷಿಣನು, ಕೃಷ್ಣಾಯ-ಕೃಷ್ಣ
ನಿಗೋಸುಗ, ಅಭಿಚರನ್-ಮಾರಣ ಹೋಮವಂಗೆಯ್ವನಾಗಿ, ವ್ರತೀ-ದೀಕ್ಷಾನಿಯಮವುಳ್ಳವನಾಗಿ, ತಥಾ-ರುದ್ರನು ಪೇಳಿದಂ
ತೆ, ಚಕ್ರೇ-ಮಾಡಿದನು ‖೨೧‖ ತತಃ-ಆ ಮೇಲೆ, ಕುಂಡಾತ್-ಹೋಮದ ಗೊಂಡದಿಂದ, ಉತ್ಥಿತಃ-ಎದ್ದಂಥಾ, ಅಗ್ನಿಃ-ದಕ್ಷಿಣಾ
ಗ್ನಿಯು, ಮೂರ್ತಿಮಾನ್-ರೂಪವುಳ್ಳವನಾಗಿ, ಅತಿಭೀಷಣಃ-ಅತ್ಯಂತ ಭಯಂಕರನೂ, ತಪ್ತತಾಮ್ರಶಿಖಾಶ್ಮಶ್ರುಃ-ಸುಟ್ಟುಕೆಂ
ಪಾಗಿರುವ ಜುಟ್ಟುಮೀಸೆಗಳೂ ಉಳ್ಳವನೂ, ಅಂಗಾರೋದ್ಗಾರಿಲೋಚನಃ-ಬೆಂಕಿಯ ಕೆಂಡಗಳಂ ಕಾರುವಕಂಗಳುಳ್ಳವನೂ‖೨೨‖
ದಂಷ್ಟ್ರೋಗ್ರಭ್ರುಕುಟೀದಂಡಕಠೋರಾಸ್ಯಃ-ದಂಷ್ಟ್ರೋಗ್ರ-ದಾಡೆಹಲ್ಲುಗಳಿಂ ಕ್ರೂರವಾಗಿಯೂ, ಭ್ರುಕುಟೀದಂಡಕಠೋರ-
ಕೋಲುಗಳಂತಿರ್ಪಹುಬ್ಬುಗಳಿಂ ಕಠಿನವಾಗಿಯೂ ಇರುವ, ಆಸ್ಯಃ-ಬಾಯಿಯುಳ್ಳವನೂ, ಜಿಹ್ವಯಾ-ನಾಲಿಗೆಯಿಂದ,ಸೃಕ್ವಿಣೀ-
ಕಟವಾಯಿಗಳನ್ನು, ಅಲಿಹನ್-ನೆಕ್ಕಿಕೊಳ್ಳುತಲಿರುವನು, ನಗ್ನಃ-ಬಟ್ಟೆಇಲ್ಲದವನೂ, ತ್ರಿಶಿಖಂ-ಮುಕ್ಕವಲುಗೋಲನ್ನು, ವಿಧು
ನ್ವನ್-ಝಳಪಿಸುತ್ತಿರುವನೂ, ಜ್ವಲನ್-ಉರಿಯುತ್ತಿರುವನೂ ‖೨೩‖ ತಾಳಪ್ರಮಾಣಾಭ್ಯಾಂ-ತಾಳೆಯಮರದ ಉದ್ದವುಳ್ಳ, ಪ

---

ಡನೆ ಸಮಾಧಿಯಿಂದ ಪರಮೇಶ್ವರನಂ ಪೂಜಿಸಿದನು‖೧೮‖ಪರಮೇಶ್ವರನು ಸಂತುಷ್ಟನಾಗಿ ಸುದಕ್ಷಿಣನಂಕುರಿತು
ವರವಂ ವರಿಸೆನುತಲೂ ಅವನು ಶ್ರೀಕೃಷ್ಣನ ವಧೋಪಾಯವನ್ನೇ ವರವನ್ನಾಗಿ ಬೇಡಿದನು ‖೧೯‖ಈಶ್ವರನು
ಅದಂಕೇಳಿ ಸುದಕ್ಷಿಣನೇ! ಋತ್ವಿಜನಂತೆ ನಿನ್ನ ಆಜ್ಞೆಯನ್ನಾಚರಿಸುವ ದಕ್ಷಿಣಾಗ್ನಿಯಂ ಬ್ರಾಹ್ಮಣರೊಡನೆ ಅ
ಭಿಚಾರವಿಧಾನದಿಂದ ಪೂಜಿಸಿದರೆ ಅಗ್ನಿಯು ಪ್ರಮಥಗಣ ಪರಿವೃತನಾಗಿ‖೨೦‖ ಬ್ರಾಹ್ಮಣಪ್ರಿಯನಲ್ಲದೇಯಿರುವ
ಪುರುಷನಲ್ಲಿ ನಿನ್ನಿಂದ ಪ್ರಯೋಗಿಸಲ್ಪಟ್ಟವನಾಗಿ ನಿನ್ನ ಯಿಷ್ಟಾರ್ಥವಂ ಸಾಧಿಸುವನೆಂದು ನುಡಿದನು ‖ ಸುದ
ಕ್ಷಿಣನು ನಿಯಮಯುಕ್ತನಾಗಿ ಕೃಷ್ಣನಿಗೋಸುಗ ಅಭಿಚಾರ ಕರ್ಮವಂಗೆಯ್ದು ದಕ್ಷಿಣಾಗ್ನಿಯಂ ಪೂಜಿಸಿದ
ನು‖೨೧‖ ಆಮೇಲೆ ಹೋಮಕುಂಡದಿಂದ ಅಗ್ನಿಯು ಭಯಂಕರವಾದ ಆಕೃತಿಯೊಡನೆ ತಪ್ತವಾದ ತಾಮ್ರದಂ
ತೆ ಕೆಂಪಾದ ಶಿಖೆ ಗಡ್ಡಮೀಸೆಗಳುಳ್ಳವನಾಗಿ ಕೆಂಡಗಳುಳ್ಳ ನೇತ್ರಗಳುಳ್ಳವನಾಗಿ‖೨೨‖ಕೋರೆದಾಡೆಗಳಿಂ ಭಯಂ
ಕರವಾದ ಹುಬ್ಬುಗಂಟುಗಳಿಂ ಕ್ರೂರವಾದ ಮುಖವುಳ್ಳವನಾಗಿ ನಾಲಿಗೆಗಳಿಂ ಕಟವಾಯಿಗಳಂ ನೆಕ್ಕುತ ದಿಗಂಬ
ರನಾಗಿ ತ್ರಿಶೂಲವಂ ತಿರುಹುತ ಚಲಿಸುತಲೂ ‖೨೩‖ ತಾಳವೃಕ್ಷಪ್ರಮಾಣಂಗಳಾದ ಪಾದಂಗಳಿಂ ಭೂಮಿಯಂ

ತ್ಯೈರ್ದ್ವಾರಕಾಂಪ್ರದಹನ್ದಿಶಃ॥೩೪॥ ತಮಾಭಿಚಾರದಹನಮಾಯಾಂತಂದ್ವಾರಕೌಕಸಃ । ವಿಲೋಕ್ಯ
ತತ್ರಸುಸ್ಸರ್ವೇವನದಾಹೇಯಥಾಮೃಗಾಃ ॥೩೫॥ ಅಕ್ಷೈಸ್ಸಭಾಯಾಂಕ್ರೀಡಂತಂಭಗವಂತಂಭಯಾತು
ರಾಃ । ತ್ರಾಹಿತ್ರಾಹಿತ್ರಿಲೋಕೇಶವಹ್ನೇಃಪ್ರದಹತಃಪುರಮ್॥೩೬॥ಶ್ರುತ್ವಾತಜ್ಜನವೈಕ್ಲಬ್ಯಂದೃಷ್ಟ್ವಾ
ಸ್ವಾನಾಂಚಸಾಧ್ವಸಮ್ । ಶರಣ್ಯಸ್ಸಂಪ್ರಹಸ್ಯಾಹಮಾಭೈಷ್ಟೇತ್ಯವಿತಾಸ್ಮ್ಯಹಮ್॥೩೭॥ಸರ್ವಸ್ಯಾಂ
ತರ್ಬಹಿಸ್ಸಾಕ್ಷೀಕೃತ್ಯಾಂಮಾಹೇಶ್ವರೀಂವಿಭುಃ । ವಿಜ್ಞಾಯತದ್ವಿಘಾತಾರ್ಥಂಪಾರ್ಶ್ವಸ್ಥಂಚಕ್ರಮಾದಿ
ಶತ್ ॥೩೮॥ ತತ್ಸೂರ್ಯಕೋಟಿಪ್ರತಿಮಂಸುದರ್ಶನಂಜಾಜ್ವಲ್ಯಮಾನಂಪ್ರಳಯಾನಲಪ್ರಭಮ್ । ಸ್ವತೇ

---

ಪಾದ್ಭ್ಯಾಂ-ಕಾಲುಗಳಿಂದ, ಅವನೀತಲಂ-ನೆಲದಸ್ಥಲವನ್ನು, ಕಂಪಯನ್-ನಡುಗಿಸುತಲಿರುವನು. ಭೂತೈಃ- ಪಿಶಾಚಗಳಿಂದ, ವೃತಃ-ಬಳಸಲ್ಪಟ್ಟವನೂ, ಆದ, ಸಃ-ಆಅಭಿಚಾರಿಕಾಗ್ನಿಯು, ದ್ವಾರಕಾಂ-ಕುಶಸ್ಥಲೀನಗರವನ್ನು, ಪ್ರದಹನ್,ಸುಡುತಿರುವದಾಗಿ, ದಿಶಃ-ದಿಕ್ಕುಗಳನ್ನು ವ್ಯಾಪಿಸಿ, ಅಭ್ಯಧಾವತ್-ಇದಿರಟ್ಟಿಬಂದುದು ॥೩೪॥ ಆಯಾಂತಂ-ಬರುತಿರುವ, ತಂ-ಅಂಥಾ, ಅಭಿಚಾರದಹನಂ-ಮಾಟದ ಬೆಂಕಿಯನ್ನು, ವಿಲೋಕ್ಯ-ನೋಡಿ, ದ್ವಾರಕೌಕಸಸ್ಸರ್ವೇ-ದ್ವಾರಕೆಯಲ್ಲಿ ಮನೆಯುಳ್ಳವರೆಲ್ಲರೂ, ವನದಾಹೇ-ಕಾಡುಸುಡುವಲ್ಲಿ, ಮೃಗಾಯಥಾ-ಮೃಗಂಗಳು ಹೇಗೋಹಾಗೆ, ತತ್ರಸುಃ-ಹೆದರಿದರು ॥೩೫॥ ಭಯಾತುರಾಃ-ಭೀತಿಯಿಂದ ಅವಸರ ಗೊಳ್ಳುವರಾಗಿ, ಸಭಾಯಾಂ-ಓಲಗದಶಾಲೆಯಲ್ಲಿ, ಅಕ್ಷೈಃ-ನೆತ್ತಗಳಿಂದ, ಕ್ರೀಡಂತಂ -ಆಡುತ್ತಿರುವ, ಭಗವಂತಂ-ಸರ್ವಜ್ಞನಾದಕೃಷ್ಣನಂಕುರಿತು,ತ್ರಿಲೋಕೇಶ-ಮೂರು ಲೋಕಂಗಳಿಗೊಡೆಯನೇ, ಪುರಂ-ನಗರವನ್ನು, ಪ್ರದಹತಃ-ಸುಡುತಿರುವ, ವಹ್ನೇಃ-ಬೆಂಕಿಯ ದೆಸೆಯಿಂದ, ತ್ರಾಹಿತ್ರಾಹಿ-ರಕ್ಷಿಸುರಕ್ಷಿಸೆಂದರು ॥೩೬॥ ತತ್-ಆ, ಜನವೈಕ್ಲಬ್ಯಂ-ಪ್ರಜೆಗಳದುಃಖವನ್ನೂ, ಶ್ರುತ್ವಾ-ಕೇಳಿ,ಸ್ವಾನಾಂ-ತನ್ನವರ,ಸಾಧ್ವಸಂಚ-ಭೀತಿಯನ್ನೂ,ದೃಷ್ಟ್ವಾ-ನೋಡಿ, ಶರಣ್ಯಃ- ರಕ್ಷಕನಾದಕೃಷ್ಣನು ಸಂಪ್ರಹಸ್ಯ-ಅಧಿಕವಾಗಿ ನಕ್ಕು, ಮಾಭೈಷ್ಟ-ಹೆದರಬೇಡಿರಿ, ಅವಿತಾ-ರಕ್ಷಕನು, ಅಹಮಸ್ಮಿ-ನಾನಾಗಿರುವೆನು, ಇತಿ-ಹೀಗೆಂದು, ಆಹ-ನುಡಿದನು॥೩೭॥ಸರ್ವಸ್ಯ-ಪ್ರಪಂಚವೆಲ್ಲಕ್ಕೂ. ಅಂತರ್ಬಹಿಃ-ಒಳಗೂ ಹೊರಗೂ, ಸಾಕ್ಷೀ-ದ್ರಷ್ಟೃರನಾಗಿರುವ,ವಿಭುಃ-ವ್ಯಾಪಕನಾದ ಕೃಷ್ಣನು, ಮಾಹೇಶ್ವರೀಂ-ರುದ್ರಸಂಬಂಧವಾದ, ಕೃತ್ಯಾಂ-ಮಾಟದ ದೇವತೆಯನ್ನಾಗಿ,ವಿಜ್ಞಾಯ-ತಿಳಿದುಕೊಂಡು, ತದ್ವಿಘಾತಾರ್ಥಂ-ಅದರ ನಾಶಕ್ಕೋಸುಗ, ಪಾರ್ಶ್ವಸ್ಥಂ-ತನ್ನಪಕ್ಕದಲ್ಲಿರುವ, ಚಕ್ರಂ-ಚಕ್ರಾಯುಧವನ್ನು, ಆದಿಶತ್-ಆಜ್ಞಾಪಿಸಿದನು॥೩೮॥ ತತ್-ಅಂಥಾ, ಸೂರ್ಯಕೋಟಿಪ್ರತಿಮಂ-ಕೋಟಿಸೂರ್ಯರಿಗೆ ಸಮಾನವಾದ, ಸುದರ್ಶನಂ-ಚನ್ನಾಗಿ ನೋಡಲ್ಪಡತಕ್ಕದ್ದಾದ, ಜಾಜ್ವಲ್ಯಮಾನಂ-ಚನ್ನಾಗಿ ಉರಿಯುತ್ತಿರುವುದಾದ, ಪ್ರಳಯಾನಲಪ್ರಭಂ-ಪ್ರಳಯಕಾಲದ ಬೆಂಕಿಯಂತೆ ಕಾಂತಿಯುಳ್ಳದ್ದಾದ, ಸ್ವತೇಜಸಾ-ತನ್ನ ಬೆಳಕಿನಿಂದ, ಖಂ-ಆಕಾಶವನ್ನೂ, ಕಕುಭಃ-ದಿಕ್ಕುಗಳನ್ನೂ, ರೋದಸೀ- ಭೂಮ್ಯಂತರಿಕ್ಷಗಳನ್ನೂ ವ್ಯಾಪಿಸಿದಂಥಾ, ಚಕ್ರಂ-ಚಕ್ರಾಯುಧವಾದ, ಮುಕುಂದಾಸ್ತ್ರಂ-ಕೃಷ್ಣನ ಕೈದುವು,ಅಥ-ಆ ಬಳಿಕ, ಅಗ್ನಿಂ-

---

ನಡುಗಿಸುತ ಭೂತಗಣಂಗಳಿಂ ಸುತ್ತಿಕೊಳ್ಳಲ್ಪಟ್ಟವನಾಗಿ ದಿಕ್ಕುಗಳಂ ದಹಿಸುತ ದ್ವಾರಕಾಪುರವಂ ಕುರಿತು ಓಡಿದನು ॥೩೪॥ ಅನಂತರದಲ್ಲಿ ದ್ವಾರಕಾಪುರದ ಜನರು ಬರುತ್ತಿರುವ ಅಭಿಚಾರಿಕ ಕೃತ್ಯಾಗ್ನಿಯಂ ಕಂಡು ಮೃಗಗಳು ವನದಹನದೊಳಗೆ ಹೇಗೋ ಹಾಗೆ ಭಯಪಟ್ಟರು ॥೩೫॥ ಜನರು ರಾಜಸಭೆಯಲ್ಲಿ ಪಗಡೆಯಾಡುತಲಿರುವ ಕೃಷ್ಣನಂ ಕುರಿತು ಭಯಪೀಡಿತರಾಗಿ ತ್ರಿಲೋಕೇಶ್ವರನೇ! ದಹಿಸುತಲಿರುವ ಅಗ್ನಿಯ ದೆಸೆಯಿಂದ ದ್ವಾರಕಾಪುರವಂ ರಕ್ಷಿಸೆಂದು ಬಿನ್ನೈಸಿದರು ॥೩೬॥ ಬಳಿಕ ರಕ್ಷಕನಾದ ಶ್ರೀಕೃಷ್ಣನು ಆಜನಂಗಳ ದೀನವಚನವಂ ಕೇಳಿ ಬಂಧುಗಳ ಭಯವಂ ನೋಡಿ ನಕ್ಕು ಜನಗಳಿರಾ! ಭಯಪಡಬೇಡಿರಿ ನಾನು ರಕ್ಷಿಸುವೆನೆಂದಭಯವಿತ್ತನು॥೩೭॥ ಸರ್ವಪ್ರಪಂಚದೊಳಗೂ ಹೊರಗೂ ಸಾಕ್ಷಿರೂಪನಾಗಿರುವ ಶ್ರೀಕೃಷ್ಣನು ಈಶ್ವರಪ್ರಯುಕ್ತವಾದ ಅಗ್ನಿಯಂ ಪರಿಹರಿಸಲೋಸುಗ ಪಾರ್ಶ್ವದಲ್ಲಿರುವ ಚಕ್ರಕ್ಕೆ ಆಜ್ಞಾಪಿಸಿದನು ॥೩೮॥ ಕೋಟಿಸೂರ್ಯಸಮಾನವಾದ ಆಚಕ್ರವು ಶ್ರೀಕೃಷ್ಣನ ಆಜ್ಞೆಯಿಂದ ಜ್ವಲಿಸುವ ಪ್ರಳಯಾಗ್ನಿಗೆ ಸಮಾನವಾದ ಕಾಂತಿಯುಳ್ಳದ್ದಾಗಿ ತನ್ನ ತೇಜಸ್ಸಿನಿಂದ ಆಕಾಶವಂ ದಿಕ್ಕುಗಳಂ ಭೂಲೋಕ ಸ್ವರ್ಗಲೋಕಂಗಳಂ ಸಹ ಪ್ರಕಾಶಂಗೆಯ್ಯುತ್ತ, ಆಯಗ್ನಿಯಂ

ಜನಕಾಖಂಕಕುಭೋಥರೋದಸೀಂಚಕ್ರಂಮುಕುಂದಾಸ್ತ್ರಮಥಾಗ್ನಿಮರ್ದಯತ್ ‖೩೯‖ ಕೃತ್ಯಾನಲಃ ಪ್ರತಿಹತಸ್ಸರಥಾಂಗಪಾಣೇರಸ್ತ್ರೌಜಸಾನೃಪವಿಭಗ್ನಮುಖೋನಿವೃತ್ತಃ|ವಾರಾಣಸೀಂಪ್ರತಿಸಮೇತ್ಯ ಸುಪಕ್ಷಿಣಂತಂಸರ್ತ್ವಿಗ್ಜನಂಸಮದಹತ್ಸ್ವಕೃತೋಭಿಚಾರಃ ‖೪೦‖ ಚಕ್ರಂತುವಿಷ್ಣೋಸ್ತದನುಪ್ರವಿಷ್ಟಂವಾರಾಣಸೀಂಸಾಟ್ಟಸಭಾಲಯಾಪಣಾಮ್ | ಸಗೋಪುರಾಟ್ಟಾಲಕಗೋಷ್ಠಗೋಕುಲಾಂಸಕೋಶಹಸ್ತ್ಯಶ್ವರಥಾನ್ನಶಾಲಾಮ್‖೪೧‖ ದಗ್ಧ್ವಾವಾರಾಣಸೀಂಸರ್ವಾಂವಿಷ್ಣೋಶ್ಚಕ್ರಂಸುದರ್ಶನಮ್ | ಭೂಯಃಪಾರ್ಶ್ವಮುಪಾತಿಷ್ಠತ್ಕೃಷ್ಣಸ್ಯಾಕ್ಲಿಷ್ಟಕರ್ಮಣಃ ‖೪೨‖ ಯಏತಚ್ಛ್ರಾವಯೇನ್ಮರ್ತ್ಯಉತ್ತಮಶ್ಲೋಕವಿಕ್ರಮಮ್ |ಸಮಾಹಿತೋವಾಶೃಣುಯಾತ್ಸರ್ವಪಾಪೈಃಪ್ರಮುಚ್ಯತೇ‖ ... ‖೪೩‖

ಇತಿಶ್ರೀಮದ್ಭಾಗವತೇ-ದಶಮಸ್ಕಂಧೇ-ಷಟ್ಷಷ್ಟಿತಮೋಧ್ಯಾಯಃ-

---

ಬೆಂಕಿಯನ್ನು, ಅರ್ದಯತ್-ಪೀಡಿಸಿತು ‖೩೯‖ ನೃಪ-ಪರೀಕ್ಷಿದ್ರಾಯನೇ ರಥಾಂಗಪಾಣೇಃ-ಚಕ್ರಹಸ್ತನಾದ ಕೃಷ್ಣನ,ಅಸ್ತ್ರೌಜಸಾ-ಆಯುಧದ ಸಾಮರ್ಥ್ಯದಿಂದ, ಪ್ರತಿಹತಃ-ಪ್ರತಿಯಾಗಿ ಹೊಡೆಯಲ್ಪಟ್ಟದ್ದರಿಂದ,ವಿಭಗ್ನಮುಖಃ-ಒಡೆದುಹೋದಮೋರೆಯುಳ್ಳದ್ದಾದ, ಕೃತ್ಯಾನಲಃ-ಮಾಟದ ಬೆಂಕಿಯು, ನಿವೃತ್ತಃ-ಹಿಂತಿರುಗಿದ್ದಾಗಿ, ವಾರಾಣಸೀಂಪ್ರತಿ-ಕಾಶೀನಗರಿಯಂಕುರಿತು, ಸಮೇತ್ಯ-ಬಂದು, ಸ್ವಕೃತಃ-ತನ್ನಿಂದಲೇ ಮಾಡಲ್ಪಟ್ಟ, ಅಭಿಚಾರಃ-ಪರದ್ರೋಹವಾದ್ದರಿಂದ, ಸರ್ತ್ವಿಗ್ಜನಂ- ಯಜ್ಞಸಾಧಕರಿಂ ಸಹಿತನಾದ, ತಂಸುದಕ್ಷಿಣಂ-ಆಸುದಕ್ಷಿಣನನ್ನು, ಸಮದಹತ್-ಚೆನ್ನಾಗಿ ಸುಟ್ಟಿತು ‖೪೦‖ ವಿಷ್ಣೋಃಚಕ್ರಂತು-ಕೃಷ್ಣನ ಚಕ್ರಾಯುಧವಾದರೋ,ತದನು-ಕೂಡಲೇ, ವಾರಾಣಸೀಂ ಕಾಶಿಯನ್ನು, ಪ್ರವಿಷ್ಟಂ-ಹೊಕ್ಕದ್ದಾಗಿ,ಸಾಟ್ಟಸಭಾಲಯಾಪಣಾಂ-ಮಂಚಿಗೆ ಸಭೆ ಮನೆ ಅಂಗಡಿಗಳಿಂ ಸಹಿತವಾದ,ಸಗೋಪುರಾಟ್ಟಾಲಕಗೋಷ್ಠಗೋಕುಲಂ- ಊರಬಾಗಲುಮೇಲು ಮಚ್ಚುಗಳ ಕೊಟ್ಟಿಗೆಗಳು ಗೋಧನಂಗಳಿಂ ಸಹಿತವಾದ, ಸಕೋಶಹಸ್ತ್ಯಶ್ವರಥಾನ್ನ ಶಾಲಾಂ-ಧನಶಾಲೆ, ಉಗ್ರಾಣಗಜಶಾಲೆ ಅಶ್ವಶಾಲೆ ರಥಶಾಲೆ ಪಾಕಶಾಲೆಗಳಿಂದ ಸಹಿತವಾದ ‖೪೧‖ ವಾರಣಸೀಂಸರ್ವಾಂ-ವರುಣೆಅಸಿ ಯೆಂಬನದಿಗಳ ನಡುವೆಯಿರುವ ಹರದಾರಿಯ ಕಾಶೀನಗರವೆಲ್ಲವನ್ನೂ, ದಗ್ಧ್ವಾ-ಸುಟ್ಟು, ಸುದರ್ಶನಂ-ಸುದರ್ಶನ ಮಂತ್ರದೇವತೆಯಾದ, ವಿಷ್ಣೋಶ್ಚಕ್ರಂ-ವಿಷ್ಣುವಿನ ಚಕ್ರಾಯುಧವೆಂಬ ಪ್ರಣವಾಸ್ತ್ರವು,ಅಕ್ಲಿಷ್ಟಕರ್ಮಣಃ-ಕ್ಲೇಶವಿಲ್ಲದ ಕೆಲಸವುಳ್ಳ,ಕೃಷ್ಣಸ್ಯ-ಅವಿದ್ಯಾಬಂಧಮೋಚಕನಾದ ಶ್ರೀಹರಿಯ, ಪಾರ್ಶ್ವಂ-ಮಗ್ಗುಲನ್ನು, ಭೂಯಃ-ಮರಳಿಯೂ, ಉಪಾತಿಷ್ಠತ್-ಸಮೀಪಿಸಿ ಸೇರಿನಿಂತಿತು ‖ ಕೃಷ್ಣನ ಗುರುಗಳಾದ ಸಾಂದೀಪನಾದಿ ಸತ್ಪುರುಷರೂ ಗೋವುಗಳೂ ಸಿರಪರಾಧರೂ ಅಲ್ಲಿದ್ದರೂಕೂಡ ಕಾಶೀನಗರವನ್ನು ಪ್ರಳಯಾಗ್ನಿಯಂತೆ ಸುಟ್ಟದ್ದು ಅಲ್ಲಿರುವರೆಲ್ಲರಿಗೂ ಮುಕ್ತಿಪ್ರದವಾದ್ದರಿಂದ ಕೃಷ್ಣನ ಆಕರ್ಮವು ಅಕ್ಲಿಷ್ಟವೆಂದು ತಾತ್ಪರ್ಯವು ‖೪೨‖ ಯೋಮರ್ತ್ಯಃ-ಯಾವ ಪುರುಷನು, ಏತತ್-ಈ, ಉತ್ತಮಶ್ಲೋಕವಿಕ್ರಮಂ-ಸರ್ವಶ್ರೇಷ್ಠನೆಂದು ಕೊಂಡಾಡಲ್ಪಟ್ಟ ಕೃಷ್ಣನಸಾಮರ್ಥ್ಯವನ್ನು, ಸಮಾಹಿತಃ-ಸಮಾಧಾನ ಮುಳ್ಳವನಾಗಿ ಶ್ರಾವಯೇತ್-ಶ್ರವಣಗೊಳಿಸುವನೋ, ಶೃಣುಯಾದ್ವಾ-ಕೇಳುವನೋ, ಸಃ-ಆ ಪುರುಷನು, ಸರ್ವಪಾಪೈಃ-ಸಕಲದುರಿತಂಗಳಿಂದಲೂ, ಪ್ರಮುಚ್ಯತೇ-ಚನ್ನಾಗಿ ಬಿಡಲ್ಪಡುವನು ‖೪೩‖

ಇಂತೆಂಬಲ್ಲಿಗೆ ಭಾಗವತ ಪ್ರತಿಶಬ್ದಾರ್ಥ ಬೋಧಿನಿಯೆಂಬ ಟೀಕೆಯಲ್ಲಿ ದಶಮಸ್ಕಂಧದೊಳಗೆ ೬೬ ನೆಯ ಅಧ್ಯಾಯವಂ ಮುಗಿದುದು.

---

ಪೀಡಿಸಿತು ‖೩೯‖ಆಭಿಚಾರಿಕ ಕೃತ್ಯಾಗ್ನಿಯು ಕೃಷ್ಣನ ಚಕ್ರಾಯುಧದ ತೇಜಸ್ಸಿನಿಂದ ಶೀಘ್ರವಾಗಿ ಪೀಡಿಸಲ್ಪಟ್ಟು ಭಗ್ನಮುಖವಾಗಿ ಹಿಂದಕ್ಕೆತಿರುಗಿ ಕಾಶೀಪುರವನೆಯ್ದಿ, ಋತ್ವಿಕ್ಕುಗಳಿಂ ಕೂಡಿರುವ ಆಸುದಕ್ಷಿಣನನ್ನೇ ಚೆನ್ನಾಗಿ ದಹಿಸಿತು ‖೪೦‖ ಅನಂತರದಲ್ಲಿ ಶ್ರೀಕೃಷ್ಣನ ಆಚಕ್ರಾಯುಧವೂಕೂಡ ಅಗ್ನಿಯಹಿಂದೆಯೇ ಕಾಶೀಪುರವಂಹೊಕ್ಕು ಕೋಂಟೆಯಮೇಲಿರುವ ಮಂಚಗಳೊಡನೆ ಸಭಾಸ್ಥಾನಂಗಳೊಡನೆ ಅಂಗಡಿಬೀದಿಗಳು ಗೃಹಂಗಳು ಪುರದ್ವಾರಂಗಳು ಕೊತ್ತಲಂಗಳು ಕೋಶಗೃಹಂಗಳು ಗಜ ರಥಾಶ್ವಾಯುಧ ಶಾಲೆಗಳು ಇವುಗಳಿಂಕೂಡಿ ಆಕಾಶೀಪುರವಂ ಸಮಗ್ರವಾಗಿ ದಹಿಸಿತು‖೪೧‖ಪುನಃ ಮನೋಹರವಾದ ಚರಿತ್ರವುಳ್ಳ ಆಶ್ರೀಕೃಷ್ಣನ ಪಾರ್ಶ್ವದಲ್ಲಿಯೇ ಬಂದು ನಿಂತದ್ದಾಯಿತು ‖೪೨‖ ಯಾವಪುರುಷನು ಶ್ರೀಕೃಷ್ಣನ ಪರಾಕ್ರಮವಂ ಪುರುಷರಿಗೆ ಶ್ರವಣಂಗೆಯ್ಯುವನೋ ಮತ್ತು ತಾನು ಏಕಾಗ್ರಚಿತ್ತನಾಗಿ ಶ್ರವಣಂಗೆಯ್ವನೋ ಆಪುರುಷನು ಸಮಸ್ತ ಪಾಪಂಗಳಿಂ ಮುಕ್ತನಾಗುವನು ‖೪೩‖ ದಶಮಸ್ಕಂಧದೊಳು ೬೬ನೇಅಧ್ಯಾಯವು ಸಂಪೂರ್ಣವು.

-*ಬಲರಾಮಕೃತದ್ವಿವಿದವಧಕಥಾಪ್ರಾರಂಭಘಟ್ಟಃ*-

ರಾಜಾ॥ ಭೂಯೋಹಂ ಶ್ರೋತುಮಿಚ್ಛಾಮಿರಾಮಸ್ಯಾದ್ಭುತಕರ್ಮಣಃ । ಅನಂತಸ್ಯಾಪ್ರಮೇಯಸ್ಯ ಯದನ್ಯತ್ಕೃತವಾನ್ವಿಭುಃ॥೧॥ಶ್ರೀಶುಕಃ॥ನರಕಸ್ಯಸಖಾಕಶ್ಚಿದ್ದ್ವಿವಿದೋನಾಮವಾನರಃ। ಸುಗ್ರೀವಸಚಿವಸ್ಸೋಥಭ್ರಾತಾಮೈಂದಸ್ಯವೀರ್ಯವಾನ್ ॥೨॥ ಸಖ್ಯುಸ್ಸೋಪಚಿತಿಂಕುರ್ವನ್ವಾನರೋರಾಷ್ಟ್ರವಿಪ್ಲವಮ್ । ಪುರಗ್ರಾಮಾಕರಾನ್ಘೋಷಾನದಹದ್ವಹ್ನಿಮುತ್ಸೃಜನ್॥೩॥ ಕ್ವಚಿತ್ಸಶೈಲಾನುತ್ಪಾಟ್ಯತೈರ್ದೇಶಾನ್ ಸಮಚೂರ್ಣಯತ್ । ಆನರ್ತಾನ್ಸುತರಾಮೇವಂಯತ್ರಾಸ್ತೇಮಿತ್ರಹಾಹರಿಃ ॥೪॥ ಕ್ವಚಿ

---

೬೭ ನೇ ಅಧ್ಯಾಯದ ಪ್ರತಿಪದಟೀಕೆ.

(ಪರೀಕ್ಷಿತ್ಪ್ರಶ್ನವು.) ಅಹಂ-ನಾನು, ಅಪ್ರಮೇಯಸ್ಯ-ತಿಳಿಯಲಾಗದವನಾದ, ಅನಂತಸ್ಯ-ನಾಶರಹಿತನಾದ ಶೇಷನಾದ, ಅದ್ಭುತಕರ್ಮಣಃ-ಆಶ್ಚರ್ಯ ವ್ಯಾಪಾರವುಳ್ಳ, ರಾಮಸ್ಯ-ಬಲದೇವನ ಕಥೆಯನ್ನು ಭೂಯಃ-ಮರಳಿಯೂ, ಶ್ರೋತುಂ-ಕೇಳುವುದಕ್ಕೆ, ಇಚ್ಛಾಮಿ-ಬಯಸುವೆನು. ವಿಭುಃ-ವ್ಯಾಪಕನಾದ ರಾಮನು ಅನ್ಯತ್-ಕೃತವಾನ್-ಬೇರೆಯಾವುದನ್ನು ಮಾಡಿದವನಾಗಿರುವನೋ ಅದರನ್ನೂ ಕೇಳಲೆಳಸುವೆನು ॥೧॥ [ಶುಕವಚನವು] ನರಕಸ್ಯ-ನರಕಾಸುರನ, ಸಖಾ-ಮಿತ್ರನಾದ, ಕಶ್ಚಿತ್-ಒರ್ವನಾದ, ದ್ವಿವಿದೋನಾಮ-ದ್ವಿವಿದನೆಂದು ಪ್ರಸಿದ್ಧನಾದ, ಸುಗ್ರೀವಸಚಿವಃ-ಸುಗ್ರೀವನಮಂತ್ರಿಯಾದ, ಮೈಂದಸ್ಯ ಭ್ರಾತಾ-ಮೈಂದನೆಂಬವನ ತಮ್ಮನಾದ, ವಾನರಃ-ಕಪಿಯು, ವೀರ್ಯವಾನ್-ಸಾಮರ್ಥ್ಯವುಳ್ಳವನಾಗಿದ್ದನು, ಸಃ ಆದ್ವಿವಿದನು, ಅಥ-ಬಳಿಕ ॥೨॥ ಸಖ್ಯುಃ-ಗೆಳೆಯನಾದ ನರಕಾಸುರಂಗೆ, ಅಪಚಿತಿಂ ಪ್ರತ್ಯುಪಕಾರವನ್ನು, ಕುರ್ವನ್-ಮಾಡುವವನಾಗಿ, ವಾನರಃ-ಕಪಿಯು, ರಾಷ್ಟ್ರವಿಪ್ಲವಂ-ರಾಜ್ಯಕ್ಕೆ ಉಪದ್ರವನ್ನು ಮಾಡುವನಾಗಿ, ಪುರಗ್ರಾಮಾಕರಾನ್-ನಗರಂಗಳನ್ನೂ ಹಳ್ಳಿಗಳನ್ನೂ ಜನಾವಾಸಂಗಳನ್ನೂ, ಘೋಷಾನ್-ಗೊಲ್ಲರವಾಳ್ಯಗಳನ್ನೂ, ವಹ್ನಿಮುತ್ಸೃಜನ್-ಬೆಂಕಿಯನಿಕ್ಕುವನಾಗಿ, ಅದಹತ್-ಸುಟ್ಟನು ॥೩॥ ಸಃ-ಆ ದ್ವಿವಿದನು, ಕ್ವಚಿತ್-ಒಂದು ಸಮಯದಲ್ಲಿ, ಶೈಲಾನ್-ಬೆಟ್ಟದ ಕಲ್ಲುಗಳನ್ನು, ಉತ್ಪಾಟ್ಯ-ಕಿತ್ತು, ತೈಃ- ಅವುಗಳಿಂದ, ದೇಶಾನ್-ರಾಷ್ಟ್ರಂಗಳನ್ನು, ಸಮಚೂರ್ಣಯತ್-ಪುಡಿಮಾಡಿದನು. ಯತ್ರ-ಯಾವ ದೇಶದಲ್ಲಿ, ಅಮಿತ್ರಹಾ- ವಿರೋಧಿಗಳಂ ಕೊಲ್ಲುವನಾದ, ಹರಿಃ-ಕೃಷ್ಣನು, ಆಸ್ತೇ-ಇರುವನೋ, ಆನರ್ತಾನ್-ಅಂಥಾ ಅನರ್ತದೇಶಂಗಳಲ್ಲಿ, ಏವಂ-ಹೀಗೆ, ಸುತರಾಂ-ಇನ್ನೂ ಅಧಿಕವಾಗಿ ಚೇಷ್ಟೆಮಾಡಿದನು ॥೪॥ ಕ್ವಚಿತ್-ಒಂದು ಸಮಯದಲ್ಲಿ, ಸಮುದ್ರಮಧ್ಯಸ್ಥಃ- ಕಡಲಿನನಡುವೆಯ

---

೬೭ನೆಯಅಧ್ಯಾಯವು.

ಶ್ರೀಧರೀಯಶ್ಲೋಕಃ॥ ಸಪ್ತಷಷ್ಟಿತಮೇರಾಮೋ ಗಿರೌರೈವತಕೇಮದಾತ್ । ಸ್ವೈರಂಯುವತಿಭಿಃಕ್ರೀಡನ್ನವಧೀದ್ದ್ವಿವಿದಂಬಲಃ ॥✝॥ಟೀ॥ಅರವತ್ತೇಳನೆಯ ಅಧ್ಯಾಯದಲ್ಲಿ ಬಲರಾಮನು ಮದದಿಂದ ರೈವತಕಪರ್ವತದಲ್ಲಿ ಮನಸ್ಸುಬಂದಂತೆ ಸ್ತ್ರೀಯರೊಡನೆ ಕ್ರೀಡಿಸುತಲಿರುವನಾಗಿ ದುಷ್ಟನಾದ ದ್ವಿವಿದನಂ ಸಂಹರಿಸಿದನೆಂಬ ಅರ್ಥವಂ ಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸುವನದೆಂತೆನೆ-

ಮೊದಲು ಅರಸು ಶುಕಮುನಿಯಂ ಪ್ರಶ್ನೆಗೆಯ್ವನು ಎಲೈಶುಕಾಚಾರ್ಯನೇ! ಬಲರಾಮನು ಬೇರೆ ಯಾವ ವ್ಯಾಪಾರವಂ ಗೆಯ್ದನೋ ಆಶ್ಚರ್ಯಕರವಾದಚರಿತ್ರೆಯುಳ್ಳಅನಂತನಾದಅಪ್ರಮೇಯನಾದರಾಮನ ಅಂತಾಚರಿತ್ರವಂ ಕೇಳಲು ನಾನು ಇಚ್ಛೈಸುತಲಿರುವೆನು ॥೧॥ ಎಂಬ ವಚನವಂಕೇಳಿ ಶುಕಮುನಿಯು ನಿರೂಪಿಸುವನು. ಎಲೈಅರಸೇಕೇಳು ನರಕಾಸುರನಿಗೆ ಮಿತ್ರನಾದ ಸುಗ್ರೀವನಿಗೆ ಮಂತ್ರಿಯಾದ ಮೈಂದನಿಗೆ ತಮ್ಮನಾದ ಪರಾಕ್ರಮವಂತನಾದ ದ್ವಿವಿದನೆಂಬ ವಾನರನಿದ್ದನು ॥೨॥ ಆದ್ವಿವಿದನು ಮಿತ್ರನಾದ ನರಕಾಸುರನ ಋಣವಂ ಕಳೆಯಲೋಸುಗ ದೇಶಕ್ಕೆ ಉಪದ್ರವವಾಗುವಂತೆ ಪುರಂಗಳಂ ಗ್ರಾಮಂಗಳಂ ಆಕರಂಗಳಂ ಹಳ್ಳಿಗಳಂಸಹ ಕಿಚ್ಚಿಟ್ಟು ಉರಿಸಿದನು ॥೩॥ಮತ್ತು ದ್ವಿವಿದನು ಒಂದುಸಮಯದಲ್ಲಿ ಪರ್ವತಂಗಳಂಕಿತ್ತು ಅವುಗಳಿಂದ ದೇಶಂಗಳಂ ಚೂರ್ಣಂಗೆಯ್ದನು. ಆನರ್ತದೇಶಂಗಳಲ್ಲಿ ತನಗೆ ಮಿತ್ರನಾಗಿದ್ದ ನರಕಾಸುರನಂ ಸಂಹರಿಸಿದ ಶ್ರೀಕೃಷ್ಣನು ವಾಸಂಗೆಯ್ವುದರಿಂದ ಆನರ್ತದೇಶಂಗಳನೆಯ್ದಿ ಅತ್ಯಂತವಾಗಿ ಅವುಗಳಂ ಉಪದ್ರವಪಡಿಸಿದನು॥೪॥ಮತ್ತು ಸಮು

ತ್ಸಮುದ್ರಮಧ್ಯಸ್ಥೋದೋರ್ಭ್ಯಾಮುದ್ಧೃತ್ಯತಜ್ಜಲಮ್ । ದೇಶಾನ್ನಾಗಾಯುತಪ್ರಾಣೋವೇಲಾಕೂಲೇನ್ಯಮಜ್ಜಯತ್ ॥೫॥ ಆಶ್ರಮಾನೃಷಿಮುಖ್ಯಾನಾಂಕೃತ್ವಾಭಗ್ನವನಸ್ಪತೀನ್ । ಅದೂಷಯಚ್ಛಕೃನ್ಮೂತ್ರೈರಗ್ನೀನ್ವೈತಾನಿಕಾನ್ಖಲಃ ॥೬॥ ಪುರುಷಾನ್ಯೋಷಿತೋದೃಪ್ತಃಕ್ಷ್ಮಾಭೃದ್ದ್ರೋಣೀಗುಹಾಸುಸಃ । ನಿಕ್ಷಿಪ್ಯಚಾಪ್ಯಧಾಚ್ಛೈಲೈಃಪೇಶಸ್ಕಾರೀವಕೀಟಕಮ್ ॥೭॥ ಏವಂದೇಶಾನ್ವಿಪ್ರಕುರ್ವನ್ದೂಷಯಂಶ್ಚಕುಲಸ್ತ್ರಿಯಃ । ಶ್ರುತ್ವಾಸುಲಲಿತಂಗೀತಂಗಿರಿಂರೈವತಕಂಯಯೌ ॥೮॥ ತತ್ರಾಪಶ್ಯದ್ಯದುಪತಿಂರಾಮಂಪುಷ್ಕರಮಾಲಿನಮ್ । ಸುದರ್ಶನೀಯಸರ್ವಾಂಗಂಲಲನಾಯೂಥಮಧ್ಯಗಮ್ ॥೯॥ ಗಾಯಂತಂವಾರುಣೀಂಪೀತ್ವಾಮದವಿಹ್ವಲಲೋಚನಮ್ । ವಿಭ್ರಾಜಮಾನಂವಪುಷಾಪ್ರಭಿನ್ನಮಿವವಾರಣಮ್ ॥೧೦॥ ದುಷ್ಟಶ್ಶಾಖಾಮೃಗಶ್ಶಾಖಾಮಾರೂಢಃಕಂಪಯನ್ದ್ರುಮಾನ್ । ಚಕ್ರೇಕಿಲಕಿಲಾಶಬ್ದ

---

ರುವನಾಗಿ, ನಾಗಾಯುತಪ್ರಾಣಃ-ಹತ್ತುಸಾವಿರ ಆನೆಗಳ ಬಲವುಳ್ಳವನಾದ್ದರಿಂದ, ದೋರ್ಭ್ಯಾಂ-ತೋಳುಗಳಿಂದ, ತಜ್ಜಲಂ-ಆ ನೀರನ್ನು, ಉದ್ಧೃತ್ಯ-ಎತ್ತಿ, ವೇಲಾಕೂಲೇ-ತಡಿಯದಡದಲ್ಲಿ, ದೇಶಾನ್-ರಾಷ್ಟ್ರಂಗಳನ್ನು, ನ್ಯಮಜ್ಜಯತ್-ಮುಳುಗಿಸಿದನು ॥೫॥ ಖಲಃ-ದುಷ್ಟನಾದ ದ್ವಿವಿದನು, ಋಷಿಮುಖ್ಯಾನಾಂ-ಋಷಿಗಳಲ್ಲಿ ಶ್ರೇಷ್ಠರಾದವರ, ಆಶ್ರಮಾನ್-ಆ ವಾಸಪ್ರದೇಶಗಳನ್ನು, ಭಗ್ನವನಸ್ಪತೀನ್-ಮುರಿದ ಮರಗಳುಳ್ಳವನ್ನಾಗಿ, ಕೃತ್ವಾ-ಮಾಡಿ, ವೈತಾನಿಕಾನಗ್ನೀನ್-ಶ್ರೌತಾಗ್ನಿಗಳನ್ನು, ಶಕೃನ್ಮೂತ್ರೈಃ-ಮಲಮೂತ್ರಗಳಿಂದ, ಅದೂಷಯತ್-ಕೆಡಿಸಿದನು ॥೬॥ ದೃಪ್ತಃ-ಗರ್ವಿತನಾದ, ಸಃ-ಆ ದ್ವಿವಿದನು, ಪುರುಷಾನ್-ಗಂಡುಸರನ್ನೂ, ಯೋಷಿತಃ-ಹೆಂಗಳನ್ನೂ, ಕ್ಷ್ಮಾಭೃದ್ದ್ರೋಣೀಗುಹಾಸು-ಬೆಟ್ಟದ ತಪ್ಪಲಿನ ಗವಿಗಳಲ್ಲಿ, ನಿಕ್ಷಿಪ್ಯ-ಇರಿಸಿ, ಪೇಶಸ್ಕಾರೀ-ಕಣಜದ ಹುಳವು, ಕೀಟಕಮಿವ-ಹುಳವನಂತೆ ಶೈಲೈಃ-ಗಿರಿಶಿಖರಗಳಿಂದ, ಅಪ್ಯಧಾತ್-ಮುಚ್ಚಿದನು ॥೭॥ ಏವಂ-ಹೀಗೆ, ದೇಶಾನ್-ರಾಷ್ಟ್ರಂಗಳನ್ನು, ವಿಪ್ರಕುರ್ವನ್-ಅಪಕಾರ ಗೊಳಿಸುವನಾಗಿಯೂ, ಕುಲಸ್ತ್ರಿಯಃ-ಸದ್ವಂಶದಹೆಂಗಳನ್ನು, ದೂಷಯಂಶ್ಚ-ಕೆಡಿಸುವನಾಗಿಯೂ, ಸುಲಲಿತಂ-ಬಹಳ ಕೋಮಲವಾದ, ಗೀತಂ-ಹಾಡನ್ನು, ಶ್ರುತ್ವಾ-ಕೇಳಿ, ರೈವತಕಂಗಿರಿಂ-ರೈವತಕವೆಂಬ ಬೆಟ್ಟವನ್ನು, ಯಯೌ-ಸೇರಿದನು ॥೮॥ ತತ್ರ-ಆ ರೈವತಕಾದ್ರಿಯಲ್ಲಿ, ಲಲನಾಯೂಥಮಧ್ಯಗಂ-ಹೆಂಗಳ ಹಿಂಡಿನನಡುವೆಯಿರುವ, ಸುದರ್ಶನೀಯಸರ್ವಾಂಗಂ-ಚಲುವಾದಸಕಲಾವಯವಂಗಳುಳ್ಳ, ಪುಷ್ಕರಮಾಲಿನಂ-ತಾವರೆದಂಡೆಯುಳ್ಳ, ಯದುಪತಿಂ-ಯಾದವರಿಗೊಡೆಯನಾದ, ರಾಮಂ-ಬಲದೇವನನ್ನು, ಅಪಶ್ಯತ್-ಕಂಡನು ॥೯॥ ವಾರುಣೀಂ-ಹೆಂಡವನ್ನು, ಪೀತ್ವಾ-ಕುಡಿದು, ಮದವಿಹ್ವಲಲೋಚನಂ-ಕೈಪಿನಿಂದ ಕದಡಿದಕಂಗಳುಳ್ಳವನೂ, ಗಾಯಂತಂ-ಹಾಡುತ್ತಿರುವನೂ, ವಪುಷಾ-ದೇಹದಿಂದ, ವಿಭ್ರಾಜಮಾನಂ-ಹೊಳೆಯುತ್ತಿರುವನೂ, ಪ್ರಭಿನ್ನಂವಾರಣಮಿವ-ಮದಿಸಿದ ಆನೆಯಂತಿರುವವನೂ ಆದ, ರಾಮನಂನೋಡಿ, ॥೧೧॥ ದುಷ್ಟಃ-ಕೆಡುಕನಾದ, ಶಾಖಾಮೃಗಃ-ಕೋತಿಯು, ಶಾಖಾಂ-ಕೊಂಬೆಯನ್ನೂ, ಆರೂಢಃ-ಏರಿ

---

ಸಾವಿರ ಗಜಂಗಳ ಬಲವುಳ್ಳ ಆದ್ವಿವಿದನು ಒಂದುಸಮಯದಲ್ಲಿ ಸಮುದ್ರದ ಜಲಮಧ್ಯದಲ್ಲಿನಿಂತು ಭುಜಂಗಳಿಂದ ಆಜಲವನೆರಚಿ ಸಮುದ್ರತೀರದಲ್ಲಿರುವ ದೇಶಂಗಳಂ ಮುಳುಗಿಸಿದನು ॥೫॥ ಮತ್ತು ದುಷ್ಟನಾದ ಆದ್ವಿವಿದನು ಋಷಿಶ್ರೇಷ್ಠರ ಆಶ್ರಮಂಗಳಲ್ಲಿ ವೃಕ್ಷಂಗಳಂ ಮುರಿದು ಅಗ್ನಿಗಳಲ್ಲಿ ಮಲಮೂತ್ರವಿಸರ್ಜನಂಗೆಯ್ದನು ॥೬॥ ಮತ್ತು ಮತ್ತನಾದ ಆವಾನರನು ಕ್ರಿಮಿಯುನ್ನು ತುಂಬಿಯುಹಾಗೆ ಸ್ತ್ರೀಪುರುಷರಂ ಪರ್ವತದ ಕಮರಿಗಳಲ್ಲಿರುವ ಗುಹೆಗಳಲ್ಲಿಕೂಡಿ ಆಪರ್ವತದ ಶಿಖರಂಗಳಂ ಮುಚ್ಚಿದನು ॥೭॥ ಈರೀತಿಯಿಂದ ದೇಶಂಗಳಂ ಪೀಡಿಸುತಲಿರುವ ಮತ್ತು ಕುಲಸ್ತ್ರೀಯರ ಮಾನಭಂಗವಂ ಗೆಯ್ವುತ್ತಲಿರುವ ದ್ವಿವಿದನು ಒಂದುಸಮಯದಲ್ಲಿ ಮನೋಹರವಾದ ಗಾನವಂಕೇಳಿ ರೈವತಕ ಪರ್ವತವನೆಯ್ದಿದನು ॥೮॥ ಅಲ್ಲಿ ದ್ವಿವಿದನು ಕಮಲಮಾಲೆಯಂಧರಿಸಿ ನೋಡಲ್ತಕ್ಕ ಅವಯವಂಗಳುಳ್ಳ ಸ್ತ್ರೀಸಹಸ್ರದ ಮಧ್ಯದಲ್ಲಿ ಕುಳಿತಿರುವ, ॥೯॥ ಮದ್ಯಪಾನವಂ ಮಾಡಿ ಹಾಡುತಲಿರುವ, ಮದದಿಂದ ಜಡವಾದ ಕಂಣುಗಳುಳ್ಳ ಶರೀರದಿಂದ ಹೊಳೆಯುತಲಿರುವ, ಮದದಾನೆಯಂತೆ ಮತ್ತನಾಗಿಯೂ ಇರುವ, ಯಾದವಶ್ರೇಷ್ಠನಾದ ಬಲರಾಮನಂಕಂಡನು ॥೧೦॥ ಅನಂತರದಲ್ಲಿ ದುಷ್ಟನಾದ ಆದ್ವಿವಿದನು ವೃಕ್ಷಂಗಳ ಶಾಖೆಯನ್ನೇರಿ ವೃಕ್ಷಂಗಳಂ ಕಂಪಿಸುವಂತೆ ಮಾಡುತ ತನ್ನಂ ಪ್ರಕಾಶಂಗೆಯ್ವುತ್ತ ಕಿಲಕಿಲ ಶಬ್ದವಂಮಾಡಿದನು ॥೧೧॥

ಮಾತ್ಮಾನಂಸಂಪ್ರದರ್ಶಯನ್ ।೧೧॥ತಸ್ಯಧಾರ್ಷ್ಟ್ಯಂಕಪೇರ್ವೀಕ್ಷ್ಯತರುಣ್ಯೋಜಾತಿಚಾಪಲಾಃ । ಹಾಸ್ಯಪ್ರಿಯಾವಿಜಹಸುರ್ಬಲದೇವಪರಿಗ್ರಹಾಃ ॥೧೨॥ತಾಹೇಲಯಾಮಾಸಕಪಿರ್ಭ್ರೂಕ್ಷೇಪೈಸ್ಸಂಮುಖಾದಿಭಿಃ। ದರ್ಶಯನ್ಸ್ವಗುದಂತಾಸಾಂರಾಮಸ್ಯಚನಿರೀಕ್ಷತಃ॥೧೩॥ತಂಗ್ರಾವ್ಣಾಪ್ರಹರತ್ಕ್ರುದ್ಧೋಬಲಃಪ್ರಹರತಾಂವರಃ । ಸವಂಚಯಿತ್ವಾಗ್ರಾವಾಣಂಮದಿರಾಕಲಶಂಕಪಿಃ ॥ ಗೃಹೀತ್ವಾಹೇಲಯಾಮಾಸಧೂರ್ತಸ್ತಂಕೋಪಯನ್ಹಸನ್॥೧೪॥ನಿರ್ಭಿದ್ಯಕಲಶಂದುಷ್ಟೋವಾಸಾಂಸ್ಯಾಸ್ಫಾಲಯದ್ಬಲಮ್ । ಕದರ್ಥೀಕೃತ್ಯಬಲವಾನ್ವಿಪ್ರಚಕ್ರೇಮದೋದ್ಧತಃ ॥೧೫॥ ತಂತಸ್ಯಾವಿನಯಂದೃಷ್ಟ್ವಾದೇಶಾಂಶ್ಚತದು

---

ದಾಗಿಯೂ, ದ್ರುಮಾನ್-ಮರಗಳನ್ನು, ಕಂಪಯನ್-ಅಲ್ಲಾಡಿಸುವುದಾಗಿಯೂ, ಆತ್ಮಾನಂ-ತನ್ನನ್ನು, ಸಂಪ್ರದರ್ಶಯನ್-ತೋರಿಸುವುದಾಗಿಯು,ಕಿಲಕಿಲಾಶಬ್ದಂ-ಕಿಲಕಿಲಧ್ವನಿಯನ್ನು, ಚಕ್ರೇ-ಮಾಡಿತು॥೧೧॥ತಸ್ಯಕಪೇಃ-ಆ ಕೋತಿಯ,ಧಾರ್ಷ್ಟ್ಯಂ-ದಿಟ್ಟತನವನ್ನು, ವೀಕ್ಷ್ಯ-ನೋಡಿ, ತರುಣ್ಯಃ-ಪ್ರಾಯದಹೆಂಗಳು, ಜಾತಿಚಾಪಲಾಃ-ಸ್ತ್ರೀ ಸ್ವಭಾವದಿಂದ ಚಂಚಲೆಯರೂ, ಹಾಸ್ಯಪ್ರಿಯಾಃ-ನಗೆಸರ ವಿಷ್ಟವಾದವರೂ, ಬಲದೇವಪರಿಗ್ರಹಾಃ-ರಾಮಪತ್ನಿಯರೂ ಆದ್ದರಿಂದ, ವಿಜಹಸುಃ-ನಕ್ಕರು ॥೧೨॥ ಕಪಿಃ-ದ್ವಿವಿದನು, ರಾಮಸ್ಯನಿರೀಕ್ಷತಸ್ಸತಃ-ರಾಮನು ನೋಡುವವನಾಗುತ್ತಿರಲು, ತಾಸಾಂ-ಆಹೆಂಗಳಿಗೆ. ಸ್ವಗುದಂ-ತನ್ನತಿಕವನ್ನು, ದರ್ಶಯನ್-ತೋರಿಸುವನಾಗಿ, ಸಮ್ಮುಖಾದಿಭಿಃ-ಇದಿರಿಗೆಮೋರೆ ತೋರಿಸುವುದು ಮೊದಲಾದವುಗಳಿಂದಲೂ, ಭ್ರೂವಿಕ್ಷೇಪೈಃ-ಹುಬ್ಬುಗಳಂಹಾರಿಸಿ ಅಣಕಿಸುವಿಕೆಗಳಿಂದಲೂ, ತಾಃ-ಆ ಹೆಂಗಳನ್ನು, ಹೇಲಯಾಮಾಸ-ಅವಮಾನ ಗೊಳಿಸಿದನು ॥ ಪ್ರಹರತಾಂ-ಹೊಡೆಯುವವರಲ್ಲಿ, ವರಃ-ಶ್ರೇಷ್ಠನಾದ, ಬಲಃ-ರಾಮನು, ಕ್ರುದ್ಧಃ ಸಿಟ್ಟುಗೊಂಡವನಾಗಿ, ಗ್ರಾವ್ಣಾ-ಕಲ್ಲಿನಿಂದ, ತಂ-ಆ ಕಪಿಯನ್ನು, ಪ್ರಾಹರತ್-ಹೊಡೆದನು, ಸಃಕಪಿಃ-ಆ ವಾನರನು, ಗ್ರಾವಾಣಂ-ಕಲ್ಲನ್ನು, ವಂಚಯಿತ್ವಾ-ತಪ್ಪಿಸಿಕೊಂಡು, ಮದಿರಾಕಲಶಂ-ಹೆಂಡದ ಕೊಡವನ್ನು, ಗೃಹೀತ್ವಾ-ತೆಗದುಕೊಂಡು ಧೂರ್ತಃ-ವಂಚಕನಾಗಿ॥ಹಸನ್-ನಗುವನಾದ್ದರಿಂದ, ತಂ-ಆ ರಾಮನನ್ನು, ಕೋಪಯನ್-ಸಿಟ್ಟುಗೊಳಿಸುವನಾಗಿ, ಹೇಳಯಾಮಾಸ-ಅವಮಾನ ಮಾಡಿದನು ॥೧೪॥ ದುಷ್ಟಃ-ಕೆಡುಕನಾದ ವಾನರನು, ಕಲಶಂ-ಹೆಂಡದಕೊಡವನ್ನು, ನಿರ್ಭಿದ್ಯ-ಒಡೆಗುಟ್ಟಿ, ಬಲವಾನ್-ಬಲವುಳ್ಳವನಾದ್ದರಿಂದ, ಬಲಂ-ಬಲರಾಮನನ್ನು, ಕದರ್ಥೀಕೃತ್ಯ-ತಿರಸ್ಕರಿಸಿ, ಮದೋದ್ಧತಃ-ಕೊಬ್ಬಿನಿಂದ ಅಧಿಕನಾಗಿ, ವಾಸಾಂಸಿ-ಹೆಂಗಳ ಸೀರೆಗಳನ್ನು, ಆಸ್ಫಾಲಯತ್-ಸೆಳೆದು ಹರಿದನು. ವಿಪ್ರಚಕ್ರೇ-ಹೀಗೆಅಪಕಾರವಂ ಗೆಯ್ದನು॥೧೫॥ ತಂ-ಅವನನ್ನು, ತಸ್ಯ-ಅವನ, ಅವಿನಯಂ-ಗರ್ವವನ್ನೂ, ತದುಪದ್ರುತಾನ್-ಅವನಿಂದುಪದ್ರವಗೊಳಿಸಲ್ಪಟ್ಟ, ದೇಶಾಂಶ್ಚ-ರಾಷ್ಟ್ರಂಗಳನ್ನೂ, ದೃಷ್ಟ್ವಾಪಿ-ನೋಡಿ, ಕ್ರುದ್ಧಂ-ಸಿಟ್ಟುಗೊಂಡ ರಾಮನು, ಅರಿಜಿಘಾಂಸಯಾ-ವೈರಿಯ ಕೊಲ್ಲಲಪೇಕ್ಷೆಯಿಂದ, ಮುಸಲಂ-ಒನಕೆಯನ್ನೂ, ಹಲಂ

---

ಸ್ವಭಾವದಿಂದಲೇ ಚಪಲರಾದ ಮತ್ತು ಹಾಸ್ಯಪ್ರಿಯರಾದ ಬಲಭದ್ರನಿಂ ಪರಿಗ್ರಹಿಸಲ್ಪಟ್ಟಿರುವ ಆಸ್ತ್ರೀಯರು ಕಪಿಯಧೈರ್ಯವಂನೋಡಿ ನಕ್ಕರು ॥೧೨॥ಆಕಪಿಯು ನೋಡುತ್ತಲಿರುವ ರಾಮನಂ ಲೆಕ್ಕಿಸದೆ ಆಹೆಂಗಳಿಗೆ ತನ್ನ ಗುದಸ್ಥಾನವಂ ತೋರಿಸುವುದಾಗಿ, ಮತ್ತು ಭ್ರೂವಿಕ್ಷೇಪಂಗಳಿಂ ಮುಖವಿಕಾರಂಗಳಿಂ ಆಸ್ತ್ರೀಯರಂ ಅವಮಾನಂ ಗೆಯ್ದುದು॥೧೩॥ಅನಂತರದಲ್ಲಿ ಶೂರರೊಳಗೆ ಶ್ರೇಷ್ಠನಾದ ಬಲರಾಮನು ಅತಿಕೋಪಯುಕ್ತನಾಗಿ ಪಾಷಾಣದಿಂ ಆಕಪಿಯಂ ಪ್ರಹರಿಸಿದನು. ಧೂರ್ತನಾದ ಆಕಪಿಯು ಕಲ್ಲಿನಪೆಟ್ಟನ್ನು ತಪ್ಪಿಸಿಕೊಂಡು ಮದ್ಯಕಲಶವಂ॥೧೪॥ ಗ್ರಹಿಸಿ ಆರಾಮನಿಗೆ ಕೋಪವನ್ನುಂಟುಮಾಡುತಲೂ ನಗುತಲೂ ಆಹೆಂಡದ ಕೊಡವನೊಡೆದು ಆಹೆಂಗಳ ವಸ್ತ್ರಂಗಳಂ ಸೆಳೆದು ಹರಿದನು. ಮತ್ತು ಬಲವಂತನಾದ ಆ ಕಪಿಯು ಮದೋದ್ಧತನಾಗಿ ಆರಾಮನಂ ತೃಣೀಕರಿಸಿ ತಿರಸ್ಕಾರಂಗೆಯ್ದನು ॥೧೫॥ ಅನಂತರದಲ್ಲಿ ಬಲರಾಮನು ಆಕಪಿಯ ದುಷ್ಟತನವನ್ನೂ ಅವನಿಂದ ಪೀಡಿತಂಗಳಾಗ ದೇಶಂಗಳನ್ನೂ ನೋಡಿ ಕೋಪಯುಕ್ತನಾಗಿ ಶತ್ರುವಂ ಸಂಹರಿಸಲಿಚ್ಛೆಯಿಂದ ಹಲಮುಸಲಾಯುಧಗಳನ್ನು ಪಿಡಿದನು॥೧೬॥ ಮಹಾಪರಾಕ್ರಮವಂತನಾದ ದ್ವಿವಿದನುಕೂಡ ಕೈಯಿಂದ ಸಾಲವೃಕ್ಷವಂಕಿತ್ತುಕೊಂಡು ವೇಗದಿಂದಲೇ ಇದಿರಿಗೆಹೋಗಿ ಆವೃಕ್ಷವಂ ರಾಮನ ಶಿರಸ್ಸಿನಲ್ಲಿ ಕೆಡಹಿದನು ॥೧೭॥ ಅನಂತರದಲ್ಲಿ ಶ್ರೀ

ಪದಾತ್ರಾನ್ | ಕ್ರುದ್ಧೋಮುಸಲಮಾದತ್ತಹಲಂಚಾರಿಜಿಘಾಂಸಯಾ ||೧೬|| ದ್ವಿವಿದೋಪಿಮಹಾವೀರ್ಯಸ್ಸಾಲಮುತ್ಪಾಟ್ಯಪಾಣಿನಾ | ಅಭ್ಯೇತ್ಯತರಸಾತೇನಬಲಂಮೂರ್ಧನ್ಯತಾಡಯತ್ ||೧೭|| ತಂತುಸಂಕರ್ಷಣೋಮೂರ್ಧ್ನಿಗತಂತಮಚಲೋಯಥಾ | ಪ್ರತಿಜಗ್ರಾಹಭಗವಾನ್ ಸುನಂದೇನಾಹನಚ್ಚತಮ್ ||೧೮|| ಮುಸಲಾಹತಮಸ್ತಿಷ್ಕೋವಿರೇಜೇರಕ್ತಧಾರಯಾ | ಗಿರಿರ್ಯಥಾಗೈರಿಕಯಾಪ್ರಹಾರಂನಾನುಚಿಂತಯನ್ || ಪುನರನ್ಯಂಸಮುತ್ಕ್ಷಿಪ್ಯಕೃತ್ವಾನಿಷ್ಪತ್ರಮೋಜಸಾ | ತೇನಾಹನತ್ಸುಸಂಕ್ರುದ್ಧಸ್ತಂಬಲಶ್ಶತಧಾಚ್ಛಿನತ್ ||೨೦|| ತತೋನ್ಯಮುತ್ಪಾಟ್ಯಜಘ್ನೇತಂಚಾಪಿಶತಧಾಚ್ಛಿನತ್ ||೨೧|| ಏವಂಯುಧ್ಯನ್ಭಗವತಾಭಗ್ನೇತಸ್ಮಿನ್ಪುನಃಪುನಃ | ಆಕೃಷ್ಯಸರ್ವತೋವೃಕ್ಷಾನ್ನಿರ್ವೃಕ್ಷಮಕರೋದ್ವನಮ್ ||೨೨|| ತತೋಮುಂಚ

---

ಚ-ನೇಗಿಲನ್ನು, ಆದತ್ತ-ತೆಗೆದುಕೊಂಡನು ||೧೬|| ದ್ವಿವಿದೋಪಿ-ವಾನರನೂ ಕೂಡ, ಮಹಾವೀರ್ಯಃ-ಅಧಿಕಸಾಮರ್ಥ್ಯವುಳ್ಳವನಾದ್ದರಿಂದ, ಪಾಣಿನಾ-ಕೈಯಿಂದ, ಸಾಲಂ-ಮರವನ್ನು, ಉತ್ಪಾಟ್ಯ-ಕಿತ್ತುಕೊಂಡು, ತರಸಾ-ವೇಗದಿಂದ, ಅಭ್ಯೇತ್ಯ-ಇದಿರಿಗೆ ಬಂದು, ತೇನ-ಅಮರದಿಂದ, ಬಲಂ-ರಾಮನನ್ನು, ಮೂರ್ಧನಿ-ತಲೆಯಲ್ಲಿ, ಅತಾಡಯತ್-ಹೊಡೆದನು ||೧೭|| ಮೂರ್ಧ್ನಿ-ತಲೆಯಲ್ಲಿ, ಆಪತಂತಂ-ಬೀಳುತ್ತಿರುವ, ತಂತು-ಆ ಮರವನ್ನಾದರೋ, ಭಗವಾನ್-ಈಶ್ವರನಾದ, ಸಂಕರ್ಷಣಃ-ಶೇಷಮೂರ್ತಿಯಾದರಾಮನು, ಅಚಲೋಯಥಾ-ಬೆಟ್ಟವು ಹೇಗೋಹಾಗೆ, ಪ್ರತಿಜಗ್ರಾಹ-ಅಂಗೀಕರಿಸಿದನು. ಸುನಂದೇನ-ಸುನಂದವೆಂಬ ಮುಸಲಾಯುಧದಿಂದ, ತಂಚ-ಆ ಕಪಿಯನ್ನು, ಆಹನತ್-ಹೊಡೆದನು ||೧೮|| ಮುಸಲಾಹತಮಸ್ತಿಷ್ಕಃ-ಒನಕೆಯಿಂದ ಬಡಿಯಲ್ಪಟ್ಟ ಮೆದಡುಳ್ಳವನಾಗಿ, ರಕ್ತಧಾರಯಾ-ಕೆನ್ನೀರಿನ ಪ್ರವಾಹದಿಂದ, ಗೈರಿಕಯಾ-ಕಾವಿಮಣ್ಣಿನ ಸೀರಿನಿಂದ, ಗಿರಿರ್ಯಥಾ-ಬೆಟ್ಟವುಹೇಗೋ ಹಾಗೆ, ವಿರೇಜೇ-ಬೆಳಗಿದನು, ಪ್ರಹಾರಂ-ಪೆಟ್ಟನ್ನು, ನಾನುಚಿಂತಯನ್-ಲೆಕ್ಕಿಸದವನಾಗಿ ||೧೯|| ಓಜಸಾ-ಸಾಮರ್ಥ್ಯದಿಂದ, ಅನ್ಯಂ-ಮತ್ತೊಂದು ಮರವನ್ನು, ಪುನಃ-ಮರಳಿಯೂ, ಸಮುತ್ಕ್ಷಿಪ್ಯ-ಕಿತ್ತಿತ್ತಿಕೊಂಡು, ನಿಷ್ಪತ್ರಂ-ಎಲೆಗಳಿಲ್ಲದ್ದನ್ನಾಗಿ, ಕೃತ್ವಾ-ಮಾಡಿ, ಸಂಕ್ರುದ್ಧಃ-ಸಿಟ್ಟುಗೊಂಡವನಾಗಿ, ತೇನ-ಆ ಮರದಿಂದ, ಆಹನತ್-ಹೊಡೆದನು, ಬಲಃ-ರಾಮನು, ತಂ-ಆ ಮರವನ್ನು, ಶತಧಾ-ನೂರುಬಗೆಯಾಗಿ, ಅಚ್ಛಿನತ್-ಕಡಿದನು ||೨೦|| ತತಃ-ಆ ಮೇಲೆ, ಅನ್ಯಂ-ಮತ್ತೊಂದುಮರವನ್ನು, ಉತ್ಪಾಟ್ಯ-ಕಿತ್ತು, ಜಘ್ನೇ-ಹೊಡೆದನು, ತಂಚಾಪಿ-ಅದರನ್ನೂ, ಶತಧಾ-ಹಲವುಬಗೆಯಾಗಿ, ಅಚ್ಛಿನತ್-ಛೇದಿಸಿದನು ||೨೧|| ಏವಂ-ಹೀಗೆ, ಭಗವತಾ-ಈಶ್ವರನಾದ ಬಲರಾಮನೊಡನೆ, ಯುಧ್ಯನ್-ಕಾದುವನಾಗಿ, ತಸ್ಮಿನ್-ಆಮರವು, ಪುನಃಪುನಃ-ಮರಳಿಮರಳಿಯೂ, ಭಗ್ನೇಸತಿ-ಮುರಿದದ್ದಾಗುತಲೂ, ಸರ್ವತಃ-ಎಲ್ಲಕಡೆಗಳಿಂದಲೂ, ವೃಕ್ಷಾನ್-ಗಿಡಗಳನ್ನು, ಆಕೃಷ್ಯ-ಎಳೆಕೊಂಡು, ವನಂ-ತೋಪನ್ನು, ನಿರ್ವೃಕ್ಷಂ-ಮರಂಗಳಿಲ್ಲದ್ದನ್ನಾಗಿ, ಅಕರೋತ್-ಮಾಡಿದನು ||೨೨|| ತತಃ-ಆಮೇಲೆ, ಅಮರ್ಷಿತಃ-ಸಿಟ್ಟುಹುಟ್ಟಿದವನಾದಕಪಿಯು, ಬಲಸ್ಯ-ರಾಮನ, ಉಪರಿ-ಮೇಲೆ, ಶಿಲಾವರ್ಷಂ-ಕಲ್ಲಿನಮಳೆಯನ್ನು, ಅಮುಂಚತ್-ಬಿಟ್ಟನು, ಮುಸಲಾಯುಧಃ-ಒನಕೆಯೇಕೈದುವಾಗಿಉಳ್ಳರಾಮನು, ತತ್ಸರ್ವಂ-ಅದೆಲ್ಲವನ್ನೂ, ಲೀಲಯಾ-ವಿಲಾಸದಿಂದ,

---

ರಾಮನು ತಲೆಯಮೇಲೆ ಬೀಳುತಲಿರುವ ಬೆಟ್ಟದಂತಾ ಹೆಮ್ಮರವನ್ನು ಹಿಡಕೊಂಡು ಮುಸಲದಿಂದ ದ್ವಿವಿದನಂ ಬಡಿದನು ||೧೮|| ಒನಿಕೆಯಿಂದ ಹೊಡೆಯಲ್ಪಟ್ಟ ತಲೆಯೊಡದು ದ್ವಿವಿದನು ಆಪೆಟ್ಟನ್ನು ಲೆಕ್ಕಿಸದೆ ಕೆಂಪಾದ ಗೈರಿಕಧಾತುವಿನಿಂದ ಪರ್ವತದಂತೆ ರಕ್ತಧಾರೆಯಿಂದ ಪ್ರಕಾಶಿಸಿದನು ||೧೯|| ಪುನಶ್ಚ ಆದ್ವಿವಿದನು ಮತ್ತೊಂದು ಮರವಂ ಕಿತ್ತು ಪರಾಕ್ರಮದಿಂದ ಎಲೆಗಳಂ ಸವರಿ ಅದರಿಂದ ರಾಮನಂ ಬಡಿಯಲಾಗಿ ಬಲದೇವನು ಕ್ರೋಧಯುಕ್ತನಾಗಿ ಆಮರವಂ ಸಾವಿರಬಗೆಯಾಗಿ ಕಡಿದನು ||೨೦|| ದ್ವಿವಿದನು ಮತ್ತೊಂದು ವೃಕ್ಷವಂ ಕಿತ್ತು ಅದರಿಂದ ಮರಳಿ ರಾಮನಂ ಪ್ರಹರಿಸಿದನು. ಅದನ್ನೂ ನೂರುತುಂಡಾಗಿ ರಾಮನು ಛೇದಿಸಿದನು ||೨೧|| ಭಗವಂತನಾದ ರಾಮನೊಡನೆ ಈರೀತಿಯಾಗಿ ಯುದ್ಧಂಗೆಯ್ಯುತಲಿರುವ ದ್ವಿವಿದನು ಪ್ರಹರಿಸಿದ ವೃಕ್ಷಂಗಳು ಭಗ್ನಂಗಳಾಗಿ ಹೋಗುತ್ತಿರಲು ಮರಳಿ ಮರಳಿ ನಾಲ್ಕುಕಡೆಯಲ್ಲಿಯೂ ಇರುವ ವೃಕ್ಷಂಗಳಂ ಕಿತ್ತು ಆವನವಂ ವೃಕ್ಷರಹಿತವನ್ನಾಗಿ ಮಾಡಿದನು ||೨೨|| ಅನಂತರದಲ್ಲಿ ದ್ವಿವಿದನು ಕೋಪಯುಕ್ತನಾಗಿ ಆರಾಮನಮೇಲೆ ಕಲ್ಲುಗಳ ಮಳೆಯಂ

ಚ್ಛಿಲಾವರ್ಷಂಬಲಸ್ಯೋಪರ್ಯಮರ್ಷಿತಃ । ತತ್ಸರ್ವಂಚೂರ್ಣಯಾಮಾಸಲೀಲಯಾಮುಸಲಾಯುಧಃ॥೨೩॥ಸ್ವಬಾಹೂತಾಳಸಂಕಾಶೌಮುಷ್ಟೀಕೃತ್ಯಕಪೀಶ್ವರಃ।ಆಸಾದ್ಯರೋಹಿಣೀಪುತ್ರಂತಾಭ್ಯಾಂವಕ್ಷಸ್ಯರೂರುಜತ್॥೨೪॥ಯಾದವೇಂದ್ರೋಪಿತಂದೋರ್ಭ್ಯಾಂತ್ಯಕ್ತ್ವಾಮುಸಲಲಾಂಗಲೇ।ಜತ್ರಾವಭ್ಯರ್ದಯತ್ಕ್ರುದ್ಧಸ್ಸೋಪತದ್ರುಧಿರಂವಮನ್॥೨೫॥ಚಕಂಪೇತೇನಪತತಾಸಟಂಕಸ್ಸವನಸ್ಪತಿಃ।ಪರ್ವತಃಕುರುಶಾರ್ದೂಲವಾಯುನಾನೌರಿವಾಂಭಸಿ॥೨೬॥ಜಯಶಬ್ದೋನಮಶ್ಶಬ್ದಸ್ಸಾಧುಸಾಧ್ವಿತಿಚಾಂಬರೇ।ಸುರಸಿದ್ಧಮುನೀಂದ್ರಾಣಾಮಾಸೀತ್ಕುಸುಮವರ್ಷಿಣಾಮ್॥೨೭॥ಏವಂನಿಹತ್ಯದ್ವಿವಿದಂಜಗದ್ವ್ಯತಿಕರಾವಹಮ್।ಸಂಸ್ತೂಯಮಾನೋಭಗವಾನ್ಜನೈಸ್ಸ್ವಪುರಮಾವಿಶತ್॥ ... ...॥೨೮॥

ಇತಿಶ್ರೀಮದ್ಭಾಗವತೇ-ದಶಮಸ್ಕಂಧೇ-ಸಪ್ತಷಷ್ಟಿತಮೋಧ್ಯಾಯಃ

---

ಚೂರ್ಣಯಾಮಾಸ-ಪುಡಿಗುಟ್ಟಿದನು॥೨೩॥ ಕಪೀಶ್ವರಃ-ದ್ವಿವಿದನು, ತಾಳಸಂಕಾಶೌ-ತಾಳೆಯಮರಗಳಿಗೆ ಸಮಾನಂಗಳಾದ, ಸ್ವಬಾಹೂ-ತನ್ನ ತೋಳುಗಳನ್ನು, ಮುಷ್ಟೀಕೃತ್ಯ-ಹಿಡಿಹಿಡಿದು, ಆಸಾದ್ಯ-ಹತ್ತಿರಕ್ಕೆಬಂದು, ತಾಭ್ಯಾಂ-ಅವುಗಳಿಂದ, ರೋಹಿಣೀಪುತ್ರಂ-ರೋಹಿಣೀದೇವಿಯಮಗನಾದ ರಾಮನನ್ನು, ವಕ್ಷಸಿ-ಎದೆಯಲ್ಲಿ, ಅರೂರುಜತ್-ಹೊಡೆದನು॥೨೪॥ ಯಾದವೇಂದ್ರೋಪಿ-ಯದುಪತಿಯಾದರಾಮನೂಕೂಡ, ಮುಸಲಲಾಂಗಲೇ-ಒನಕೆಯನ್ನೂ ನೇಗಿಲನ್ನೂ. ತ್ಯಕ್ತ್ವಾ-ಬಿಟ್ಟು, ಕ್ರುದ್ಧಃ-ಸಿಟ್ಟುಗೊಂಡವನಾಗಿ, ದೋರ್ಭ್ಯಾಂ-ತೋಳುಗಳಿಂದ, ತಂ-ಆಕಪಿಯನ್ನು, ಜತ್ರೌ-ಗೋಮಾಳದಲ್ಲಿ, ಅಭ್ಯರ್ದಯತ್-ಪೀಡಿಸಿದನು, ಸಃ-ಆಕಪಿಯು, ರುಧಿರಂ-ರಕ್ತವನ್ನು, ವಮನ್-ಕಾರುವವನಾಗಿ, ಅಪತತ್-ಬಿದ್ದನು॥೨೫॥ ಕುರುಶಾರ್ದೂಲ-ಕುರುಶ್ರೇಷ್ಠನಾದಪರೀಕ್ಷಿತನೇ! ಪತತಾ-ಬೀಳುತ್ತಿರುವ, ತೇನ-ಆಕಪಿಯಿಂದ, ಸಟಂಕಃ-ನೀರಪೊಣೆಗಳಿಂಸಹಿತವಾದ, ಸವನಸ್ಪತಿಃ-ವೃಕ್ಷಗಳಿಂಸಹಿತವಾದ, ಪರ್ವತಃ-ರೈವತಕಾದ್ರಿಯು, ವಾಯುನಾ-ಗಾಳಿಯಿಂದ, ಅಂಭಸಿ-ನೀರಿನಲ್ಲಿರುವ, ನೌರಿವ-ಹಡಗಿನಂತೆ, ಚಕಂಪೇ-ನಡುಗಿತು॥೨೬॥ ಅಂಬರೇ-ಆಕಾಶದಲ್ಲಿ, ಕುಸುಮವರ್ಷಿಣಾಂ-ಹೂಮಳೆಯಂಸುರಿಸುವ ಸುರಸಿದ್ಧಮುನೀಂದ್ರಾಣಾಂ-ದೇವರ್ಕಳ ಸಿದ್ಧರಮುನೀಶ್ವರರ, ಸಾಧುಸಾಧ್ವಿತಿ-ಚೆನ್ನಾಯಿತುಚೆನ್ನಾಯಿತೆಂದು, ಜಯಶಬ್ದಃ-ಸರ್ವೋತ್ತಮನೆನಿಸುಎಂಬಮಾತೂ, ನಮಶ್ಶಬ್ದಃ-ನಿನಗೆನಮಸ್ಕಾರವೆಂಬಮಾತೂ, ಆಸೀತ್-ಉಂಟಾಯಿತು॥೨೭॥ ಭಗವಾನ್-ಐಶ್ವರ್ಯಪೂರ್ಣರಾಮನು, ಜಗದ್ವ್ಯತಿಕರಾವಹಂ-ಲೋಕಕ್ಕುಪದ್ರವವಂಮಾಡುವ, ದ್ವಿವಿದಂ-ದ್ವಿವಿದನೆಂಬವಾನರನನ್ನು, ಏವಂ-ಹೀಗೆ ನಿಹತ್ಯ-ಕೊಂದು, ಜನೈಃ-ಪ್ರಜೆಗಳಿಂದ, ಸಂಸ್ತೂಯಮಾನಃ-ಚೆನ್ನಾಗಿಕೊಂಡಾಡಲ್ಪಡುತಿರುವನಾಗಿ, ಸ್ವಪುರಂ-ತನ್ನ ದ್ವಾರಕಾನಗರವನ್ನು, ಆವಿಶತ್-ಹೊಕ್ಕನು. ॥೨೮॥

ಇಂತೆಂಬಲ್ಲಿಗೆ ಭಾಗವತ ಪ್ರತಿಶಬ್ದಾರ್ಥಬೋಧಿನಿಯೆಂಬ ಕರ್ಣಾಟಟೀಕೆಯಲ್ಲಿ
ದಶಮಸ್ಕಂಧದೊಳು ೬೭ನೆಯಅಧ್ಯಾಯಂಮುಗಿದುದು.

---

ಸುರಿಸಿದನು. ಆಗಶ್ರೀರಾಮನು ಮುಸಲಾಯುಧವಂಧರಿಸಿಲೀಲೆಯಿಂದಲೇ ಆಶಿಲಾವರ್ಷವಂ ಪುಡಿಗುಟ್ಟಿದನು॥೨೩॥ ಆಗ ದ್ವಿವಿದನು ತಾಳವೃಕ್ಷಕ್ಕೆ ಸಮಾನಂಗಳಾದ ತನ್ನ ತೋಳುಗಳಿಂದ ಮುಷ್ಟಿಗಳಂ ಧರಿಸಿ ರಾಮನ ಬಳಿಗೆಬಂದು ಎದೆಯಮೇಲೆ ಗುದ್ದಿದನು॥೨೪॥ ರಾಮನುಕೂಡ ಹಲಮುಸಲಂಗಳಂ ಬಿಟ್ಟು ಸಿಟ್ಟಿನಿಂದ ತನ್ನ ತೋಳುಗಳಿಂದಲೇ ಆದ್ವಿವಿದನಂ ಕಂಠಭುಜಮೂಲಪ್ರದೇಶಂಗಳಲ್ಲಿ ಬಲವಾಗಿ ಪ್ರಹರಿಸಲಾಗಿ ಆದ್ವಿವಿದನು ರಕ್ತವಂ ಕಾರುತ ನೆಲದಲ್ಲಿಬಿದ್ದನು॥೨೫॥ ಎಲೈರಾಯನೇ! ಆಗ ಕೆಳಗೆಬೀಳುತಲಿರುವ ಆದ್ವಿವಿದನಿಂದ ರೈವತಕಪರ್ವತವು ಜಲಯುಕ್ತಗಳಾದ ರಂಧ್ರಗಳುಳ್ಳದ್ದಾಗಿಯೂ ವೃಕ್ಷಗಳುಳ್ಳದ್ದಾಗಿಯೂ ದೊಡ್ಡಗಾಳಿಯಿಂದ ನೀರೊಳಗೆ ಚಲಿಸುವ ಹಡಗಿನಂತೆ ಕಂಪಿಸಿದ್ದಾಯಿತು॥೨೬॥ ಆಗ ಅಂತರಿಕ್ಷದಲ್ಲಿ ಪುಷ್ಪವರ್ಷವಂ ವರ್ಷಿಸುತಲಿರುವ ಸಿದ್ಧಮುನಿದೇವಶ್ರೇಷ್ಠರ ಜಯಶಬ್ದವೂ ನಮಶ್ಶಬ್ದವೂ ಈದುಷ್ಟ ಸಂಹಾರವು ಬಹುಚೆನ್ನಾಯಿತೆಂಬಶಬ್ದವೂ ಆವಿರ್ಭವಿಸಿತು॥೨೭॥ಭಗವಂತನಾದ ಬಲರಾಮನು ಲೋಕವಂ ನಾಶಂಗೆಯ್ಯುತಲಿದ್ದ ದ್ವಿವಿದನಂ ಈರೀತಿಯಿಂದ ಸಂಹರಿಸಿ ಸಮಸ್ತಜನರಿಂದಲೂ ಸ್ತೋತ್ರಂಗೆಯ್ಯಲ್ಪಡುತಲಿರುವನಾಗಿ ದ್ವಾರಕಾ ಪುರವನೆಯ್ದಿದನು. ॥೨೮॥

## ದಶಮಸ್ಕಂಧೆ ಅಷ್ಟಷಷ್ಟಿತಮೋಽಧ್ಯಾಯಃ

ಬಲರಾಮಕೃತಹಸ್ತಿನಾಪುರಕರ್ಷಣಾದಿಕಥಾಪ್ರಾರಂಭಃ-

ಶ್ರೀಶುಕಃ॥ದುರ್ಯೋಧನಸುತಾಂರಾಜನ್ಲಕ್ಷಣಾಂಸಮಿತಿಂಜಯಃ । ಸ್ವಯಂವರಸ್ಥಾಮಹರತ್ಸಾಂಬೋಜಾಂಬವತೀಸುತಃ॥೧॥ಕೌರವಾಃಕುಪಿತಾಊಚುರ್ದುರ್ವಿನೀತೋಯಮರ್ಭಕಃ । ಕದರ್ಥೀಕೃತ್ಯ ನಃಕನ್ಯಾಮಕಾಮಾಮಹರದ್ಬಲಾತ್ ॥೨॥ಬಧ್ನೀತೇಮಂದುರ್ವಿನೀತಂಕಿಂಕರಿಷ್ಯಂತಿವೃಷ್ಣಯಃ । ಯೇಽಸ್ಮತ್ಪ್ರಸಾದೋಪಚಿತಾಂದತ್ತಾಂನೋಭುಂಜತೇಮಹೀಮ್ ॥೩॥ನಿಗೃಹೀತಂಸುತಂಶ್ರುತ್ವಾಯದ್ಯೇಷ್ಯಂ

೬೮ನೆಯಅಧ್ಯಾಯದ ಪ್ರತಿಪದಟೀಕೆ.

[ಶುಕವಾಕ್ಯವು-] ರಾಜನ್-ಪರೀಕ್ಷಿತನೇ! ಸಮಿತಿಂಜಯಃ-ಸಂಘಯುದ್ಧವಂಗೆಲ್ಲುವನಾದ, ಜಾಂಬವತೀಸುತಃ-ಜಾಂಬವತಿಯಮಗನಾದ, ಸಾಂಬಃ-ಸಾಂಬನೆಂಬಕೃಷ್ಣಪುತ್ರನು ದುರ್ಯೋಧನಸುತಾಂ-ಸುಯೋಧನರಾಯನಮಗಳಾದ, ಸ್ವಯಂವರಸ್ಥಾಂ-ಸ್ವಯಂವರಕ್ಕೆಸಿದ್ಧವಾಗಿರುವ, ಲಕ್ಷಣಾಂ-ಲಕ್ಷಣೆಯೆಂಬಕನ್ನೆಯನ್ನು, ಅಹರತ್-ಬಲಾತ್ಕರಿಸಿತಂದನು ॥೧॥ ಕುಪಿತಾಃ-ಸಿಟ್ಟುಗೊಂಡಾದವರಾದ, ಕೌರವಾಃ-ದುರ್ಯೋಧನಾದಿಗಳು, ಊಚುಃ-ಹೇಳಿದರು,ಅಯಮರ್ಭಕಃ-ಈಹುಡುಗನು ದುರ್ವಿನೀತಃ-ವಿನಯವಿಲ್ಲದಕೆಡುಕನು, ನಃ ನಮ್ಮನ್ನು, ಕದರ್ಥೀಕೃತ್ಯ-ಕೃಪಣರಂಮಾಡಿ,ಅಕಾಮಾಂ-ಬಯಕೆಯಿಲ್ಲದ, ಕನ್ಯಾಂ-ಹುಡುಗಿಯನ್ನು, ಬಲಾತ್-ಸಾಮರ್ಥ್ಯದಬೆಸೆಯಿಂದ, ಅಹರತ್-ಅಪಹರಿಸಿದನು॥ ॥ ದುರ್ವಿನೀತಂ-ದುಷ್ಟನ್ಯಾಯವುಳ್ಳ, ಏನಂ-ಇವನನ್ನು, ಬಧ್ನೀತ-ಕಟ್ಟಿರಿ, ಯೇ-ಯಾರು, ಅಸ್ಮತ್ಪ್ರಸಾದೋಪಚಿತಾಂ-ನಮ್ಮಅನುಗ್ರಹದಿಂದವೃದ್ಧಿಗೊಳಿಸಲ್ಪಟ್ಟ, ದತ್ತಾಂ-ನಮ್ಮಿಂದಕೊಡಲ್ಪಟ್ಟ, ನಃಮಹೀಂ-ನಮ್ಮಭೂಮಿಯನ್ನು, ತೇವೃಷ್ಣಯಃ-ಆಯಾದವರು, ಕಿಂಕರಿಷ್ಯಂತಿ-ಏನುಮಾಡುವರು ॥೩॥ ನಿಗೃಹೀತಂ-ಶಿಕ್ಷಿಸಿಹಿಡಿಯಲ್ಪಟ್ಟ, ಸುತಂ-ತಮ್ಮಮಗನನ್ನು, ಶ್ರುತ್ವಾ-ಕೇಳಿ, ವೃಷ್ಣಯಃ-ಯಾದವರು, ಇಹ-ಇಲ್ಲಿ

ಇಂತು ಶ್ರೀಶುಕಮುನಿಯು ಪರೀಕ್ಷಿದರಾಯನಂಕುರಿತು ನಿರೂಪಿಸಿದನೆಂದು ಸೂತಪೌರಾಣಿಕನು ನೈಮಿಶಾರಣ್ಯವಾಸಿಗಳಾದ ಶೌನಕಾದಿ ಮಹರ್ಷಿಗಳಿಗೆ ಪೇಳಿದನೆಂಬಲ್ಲಿಗೆ-ಶ್ರೀಮನ್ಮಹೀಶೂರ ಪುರವರಾಧೀಶ ಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜ ವಿರಚಿತವಾದ "ಶ್ರೀಕೃಷ್ಣರಾಜ ವಾಣೀವಿಲಾಸ,, ಮೆಂಬ ಶ್ರೀಭಾಗವತ ಪುರಾಣದಕರ್ಣಾಟಕ ಭಾಷಾವ್ಯಾಖ್ಯಾನದಲ್ಲಿ

೬೭ನೆಯಅಧ್ಯಾಯಂಮುಗಿದುದು.

೬೮ ನೆಅಧ್ಯಾಯವು.

ಶ್ರೀಧರೀಯಶ್ಲೋಕಃ ॥ಅಷ್ಟಷಷ್ಟಿತಮೇಸಾಂಬೇನಿಬದ್ಧೇಕೌರವೈರ್ಯುಧಿ! ತದ್ವಿಮೋಕ್ಷಾಯರಾಮೇಣ ಗಜಾಹ್ವಯ ವಿಕರ್ಷಣಂ॥ಟೀ॥ ಅರವತ್ತೆಂಟನೆಯ ಅಧ್ಯಾಯದಲ್ಲಿ ಸಾಂಬನು ಕೌರವರಿಂದ ಯುದ್ಧದಲ್ಲಿ ಬಂಧಿಸಲ್ಪಡುತಲೂ ಅವನಂ ಬಿಡಿಸಲೋಸುಗ ಬಲರಾಮನು ನೇಗಿಲಿನಿಂದ ಹಸ್ತಿನಾಪುರವಂ ಸೆಳದನೆಂದು ಶುಕಮುನಿಯು ಪರೀಕ್ಷಿದ್ರಾಯಂಗೆ ನಿರೂಪಿಸುವನದೆಂತೆನೆ-

ಎಲೈ, ಅರಸೇ! ಯುದ್ಧದಲ್ಲಿ ಜಯಶೀಲನಾದ ಜಾಂಬವತೀ ಪುತ್ರನಾದ ಸಾಂಬನು ಸ್ವಯಂವರ ಮಹೋತ್ಸವದಲ್ಲಿ ದುರ್ಯೋಧನನ ಪುತ್ರಿಯಾದಲಕ್ಷಣಾ ದೇವಿಯನ್ನು ಅಪಹರಿಸಿದನು ॥೧॥ ಅನಂತರದಲ್ಲಿ ಕೌರವರು ಕೋಪಯುಕ್ತರಾದ ದುಷ್ಟನಾದ ಸಾಂಬನು ನಮ್ಮಂ ತೃಣೀಕರಿಸಿ ತನ್ನಂ ಬಯಸದೆಯಿರುವ ನಮ್ಮ ಕನ್ಯೆಯಂ ಬಲಾತ್ಕಾರದಿಂದ ಅಪಹರಿಸಿದ್ದರಿಂದ॥೨॥ಈ ಸಾಂಬನಂ ಬಂಧಿಸುವರಾಗಿರಿ, ಯಾವಯಾದವರು ನಮ್ಮ ಪ್ರಸಾದದಿಂದ ಸಂಪಾದಿಸಲ್ಪಟ್ಟ ನಮ್ಮಿಂದಕೊಡಲ್ಪಟ್ಟ ನಮ್ಮ ಭೂಮಿಯನು ಆಳುತಲಿರುವರೋ ಆಯಾದವರು ನಮ್ಮನ್ನು ಏನು ಮಾಡುವರು॥೩॥ ಆ ಯಾದವರು ನಮ್ಮಿಂದ ಬಂಧಿಸಲ್ಪಟ್ಟ ತಮ್ಮ ಪುತ್ರನಾದ ಸಾಂಬನಂಕೇ

ತೀಹವೃಷ್ಣಯಃ । ಭಗ್ನದರ್ಪಾಶ್ಶಮಂಯಾಂತಿಪ್ರಾಣಾಇವಸುಸಂಯತಾಃ ॥೪॥ ಇತಿಕರ್ಣಶ್ಶಲೋ ಭೂರಿರ್ಯಜ್ಞಕೇತುಸ್ಸುಯೋಧನಃ ।ಸಾಂಬಮಾರೇಭಿರೇಬದ್ಧುಂಕುರುವೃದ್ಧಾನುಮೋದಿತಾಃ॥೫॥ದೃಷ್ಟ್ವಾನುಧಾವತಸ್ಸಾಂಬೋಧಾರ್ತರಾಷ್ಟ್ರಾನ್ಮಹಾರಥಃ । ಪ್ರಗೃಹ್ಯರುಚಿರಂಚಾಪಂತಸ್ಥೌಸಿಂಹಇವೈಕಲಃ ॥೬॥ ತೇತಂಜಿಘೃಕ್ಷವಃಕ್ರುದ್ಧಾಸ್ತಿಷ್ಠತಿಷ್ಠೇತಿಭಾಷಿಣಃ।ಆಸಾದ್ಯಧನ್ವಿನೋಬಾಣೈಃಕರ್ಣಾಗ್ರಣ್ಯಸ್ಸಮಾಕಿರನ್॥೭॥ ಸೋತಿವಿದ್ಧಃಕುರುಶ್ರೇಷ್ಠಕುರುಭಿರ್ಯದುನಂದನಃ । ನಾಮೃಷ್ಯತ್ತದಚಿಂತ್ಯಾರ್ಭಸ್ಸಿಂಹಃಕ್ಷುದ್ರಮೃಗೈರಿವ॥೮॥ವಿಷ್ಫಾರ್ಯರುಚಿರಂಚಾಪಂಸರ್ವಾನ್ವಿವ್ಯಾಧಸಾಯಕೈಃ । ಕರ್ಣಾದೀನ್ ಷಡ್ರಥಾನ್ವೀಕ್ಷ್ಯತಾವದ್ಭಿರ್ಯುಗಪತ್ಪೃಥಕ್ ॥೯॥ ಚತುರ್ಭಿಶ್ಚತುರೋವಾಹಾನೇಕೈಕೇನಚಸಾರಥೀನ್।

---

ಗೆ, ಏಷ್ಯಂತಿಯದಿ-ಬರುವರಾದರೆ, ಸುಸಂಯತಾಃ-ಬಿಗಿಹಿಡಿಯಲ್ಪಟ್ಟ, ಪ್ರಾಣಾಇವ-ಪ್ರಾಣವಾಯುಗಳಂತೆ, ಭಗ್ನದರ್ಪಾಃ-ಮುರಿದಗರ್ವವುಳ್ಳವರಾಗಿ, ಶಮಂ-ಶಾಂತಿಯನ್ನು, ಯಾಂತಿ-ಹೊಂದುವರು ॥೪॥ ಇತಿ-ಹೀಗೆಂದು, ಕರ್ಣಃ-ಕರ್ಣನು, ಶಲಃ-ಶಲನು, ಭೂರಿಃ-ಭೂರಿಯೆಂಬವನು, ಯಜ್ಞಕೇತುಃ-ಯಜ್ಞಕೇತುವೆಂಬವನು, ಸುಯೋಧನಃ-ದುರ್ಯೋಧನನು, ಇವರು, ಕುರುವೃದ್ಧಾನುಮೋದಿತಾಃ-ಭೀಷ್ಮನಿಂದ ಸಮ್ಮತಿಸಲ್ಪಟ್ಟವರಾಗಿಆದ್ದರೂ, ಸಾಂಬಂ-ಕೃಷ್ಣಪುತ್ರನನ್ನು, ಬದ್ಧುಂ-ಕಟ್ಟುವುದಕ್ಕೆ, ಆರೇಭಿರೇ-ತೊಡಗಿದರು॥೫॥ ಮಹಾರಥಃ-ದೊಡ್ಡ ಜಗಳವುಳ್ಳ, ಸಾಂಬಃ-ಜಾಂಬವತೀಪುತ್ರನು, ಅನುಧಾವತಃ-ಹಿಂಪಟ್ಟಿ ಬರುತಿರುವ, ಧಾರ್ತರಾಷ್ಟ್ರಾನ್-ಧೃತರಾಷ್ಟ್ರನ ಪುತ್ರರನ್ನು, ದೃಷ್ಟ್ವಾ-ನೋಡಿ, ರುಚಿರಂ-ಚಲುವಾದ, ಚಾಪಂ-ಬಿಲ್ಲನ್ನು, ಪ್ರಗೃಹ್ಯ-ಗಟ್ಟಿಯಾಗಿ ಹಿಡಿದು, ಸಿಂಹ ಇವ-ಸಿಂಗದಂತೆ' ಏಕಲಃ-ಒಬ್ಬನೇ, ತಸ್ಥೌ-ಚಲಿಸದೆ ನಿಂತನು ॥೬॥ ಕರ್ಣಾಗ್ರಣ್ಯಃ-ಕರ್ಣನೇ ಮುಂದಾಳಾಗಿ ಉಳ್ಳವರೂ, ಧನ್ವಿನಃ-ಬಿಲ್ಲುಳ್ಳವರೂ, ತಂ- ಆ ಸಾಂಬನನ್ನು, ಜಿಘೃಕ್ಷವಃ-ಹಿಡಿಯಲೆಳಸಿದವರೂ, ಕ್ರುದ್ಧಾಃ-ಸಿಟ್ಟುಗೊಂಡವರೂ, ತಿಷ್ಠ ತಿಷ್ಠೇತಿ ಭಾಷಿಣಃ-ನಿಲ್ಲು ನಿಲ್ಲೆಂದು ನುಡಿಯುವವರೂ ಆದ, ತೇ-ಆ ಕೌರವರು, ಆಸಾದ್ಯ-ಹತ್ತಿರಕ್ಕೆ ಬಂದು, ಬಾಣೈಃ-ಅಂಬುಗಳಿಂದ, ಸಮಾಕಿರನ್-ಚೆಲ್ಲಿ ಹೊಡೆದರು॥೭॥ ಕುರುಶ್ರೇಷ್ಠ-ಕೌರವೋತ್ತಮನಾದ ಪರೀಕ್ಷಿದ್ರಾಜನೇ, ಯದುನಂದನಃ- ಯಾದವರಿಗೆ ಸಂತೋಷಕನಾದ, ಸೋಽಚಿಂತ್ಯಾರ್ಭಃ-ಭಗವಂತನ ಆಪುಡುಗನಾದ ಸಾಂಬನು, ಕ್ಷುದ್ರಮೃಗೈಃ-ತುಚ್ಛಜಂತುಗಳಿಂದ, ಸಿಂಹಇವ-ಸಿಂಗನಂತೆ, ಕುರುಭಿಃ-ಕೌರವರಿಂದ, ಅತಿವಿದ್ಧಃ-ಅಧಿಕವಾಗಿ ಪೀಡಿಸಲ್ಪಟ್ಟವನಾದರೂ, ತತ್-ಅದರನ್ನು, ನಾಮೃಷ್ಯತ್-ಸೈರಿಸಲಿಲ್ಲವು॥೮॥ರುಚಿರಂ-ಚೆಲುವಾದ, ಚಾಪಂ-ಬಿಲ್ಲನ್ನು, ವಿಷ್ಫಾರ್ಯ-ನುಡಿಸಿ, ಕರ್ಣಾದೀನ್-ಕರ್ಣನುಮೊದಲಾಗಿವುಳ್ಳ, ಷಡ್ರಥಾನ್ ಸರ್ವಾನ್-ಆರುಮಂದಿರಥಿಕರೆಲ್ಲರನ್ನೂ, ವೀಕ್ಷ್ಯ-ನೋಡಿ, ತಾವದ್ಭಿಸ್ಸಾಯಕೈಃ-ಅಷ್ಟು ಬಾಣಗಳಿಂದ, ಪೃಥಕ್-ಬೇರೆಯಾಗಿ, ಯುಗಪತ್-ಏಕಕಾಲದಲ್ಲಿ, ವಿವ್ಯಾಧ-ನೋಯಿಸಿದನು ॥೯॥ ಚತುರ್ಭಿಃ-ನಾಲ್ಕುಕಣೆಗ

---

ಳ ಇಲ್ಲಿಗೆ ಬಂದರೆ ಆ ಕ್ಷಣದಲ್ಲಿ ನಷ್ಟವಾದ ದರ್ಪವುಳ್ಳವರಾಗಿ ಪ್ರಾಣಾಯಾಮಾದಿಗಳಿಂದ ನಿಗ್ರಹಿಸಲ್ಪಟ್ಟ ಇಂದ್ರಿಯಗಳಂತೆ ಉಪಶಾಂತಿಯನ್ನೆಯ್ದುವರು॥೪॥ ಆ ಮೇಲೆ ಹೀಗೆ ನಿಶ್ಚಯಿಸಿ ಕರ್ಣನು ಶಲ್ಯನು ಭೂರಿಶ್ರವನು ಯಜ್ಞಕೇತುವು ದುರ್ಯೋಧನನು ಭೀಷ್ಮನು ಸಹಿತವಾಗಿಆರು ಮಂದಿಯಾದ ಈವೀರರು ಭೀಷ್ಮನಿಂದಸಮ್ಮತಿಸಲ್ಪಟ್ಟವರಾಗಿಸಾಂಬನಂ ಬಾಧಿಸಲೋಸುಗ ಪ್ರಯತ್ನವಂಗೆಯ್ದರು॥೫॥ಅನಂತರದಲ್ಲಿ ಮಹಾರಥಿಕನಾದಸಾಂಬನು ತನ್ನನ್ನಟ್ಟಿ ಕೊಂಡು ಬರುವ ಕೌರವರನ್ನೋಡಿ ಬಿಲ್ಲಂಪಿಡಿದು ಹುಲ್ಲೆಗಳಿದಿರಿಗೆ ಸಿಂಹ ದಂತೆನಿಂತನು ॥೬॥ ಆಗ ಕರ್ಣನು ಮೊದಲಾದ ೬ ಮಂದಿ ವೀರರು ಸಾಂಬನಂ ಹಿಡಿಯ ಲಿಚ್ಛೆಯುಳ್ಳವರಾಗಿ ಕೋಪದಿಂದ ನಿಲ್ಲು ನಿಲ್ಲೆನ್ನುತ ಧನುರ್ಧಾರಿಗಳಾಗಿ ಬಾಣಂಗಳಿಂ ಪ್ರಹರಿಸಿದರು ॥೭॥ ಎಲೈ ಅರಸೇ ಕೇಳು, ಕೋಪಯುಕ್ತನಾದ ಸಾಂಬನು ಕೂಡ ಸಿಂಹವು ನೀಚ ಮೃಗಂಗಳಿಂ ಗೆಯ್ಯಲ್ಪಟ್ಟ ಅವಮಾನವಂ ಸಹಿಸದೆಯಿರುವ ಹಾಗೆ ಕೌರವರಿಂ ಗೆಯ್ಯಲ್ಪಟ್ಟ ಅವಮಾನವಂ ಸಹಿಸಲಿಲ್ಲ॥೮॥ ಆಗ ಸಾಂಬನು ಧನುಷ್ಟಂಕಾರ ವಂಗೆಯ್ದು ಆರುಮಂದಿಯಾದ ಕರ್ಣಾದಿಗಳಂ ಧನುರ್ಬಾಣಂಗಳಿಂದ ಪ್ರತ್ಯೇಕ ಪ್ರತ್ಯೇಕವಾಗಿ ಏಕ ಕಾಲದಲ್ಲಿ ಪ್ರಹರಿಸಿದನು॥೯॥ಮತ್ತು ಸಾಂಬನು ನಾಲ್ಕು ನಾಲ್ಕು ಬಾಣಂಗಳಿಂ ಅವರ ರಥಕ್ಕೆ ನಾಲ್ಕು ನಾಲ್ಕು ಕುದುರೆಗಳಂ, ಒಂದೊಂದು ಬಾ

ರಥಿನಶ್ಚ ಮಹೇಷ್ವಾಸಾಸ್ತಸ್ಯತತ್ತೇಭ್ಯಪೂಜಯನ್ ‖ ತಂತುತೇವಿರಥಂಚಕ್ರುಶ್ಚತ್ವಾರಶ್ಚತುರೋಹಯಾನ್ ‖
ಏಕಂಸ್ತುಸಾರಥಿಂಜಘ್ನೇಚಿಚ್ಛೇದಾನ್ಯಃಶರಾಸನಮ್ ‖ ೧೧ ‖ ತಂಬದ್ಧ್ವಾವಿರಥೀಕೃತ್ಯಕೃಚ್ಛ್ರೇಣಕುರವೋ
ಯುಧಿ । ಕುಮಾರಂಸ್ವಸ್ಯಕನ್ಯಾಂಚಸ್ವಪುರಂಜಯಿನೋಽವಿಶನ್ ‖ ೧೨ ‖ ತಚ್ಛ್ರುತ್ವಾನಾರದೇನೋಕ್ತಂ
ರಾಜನ್ಸಂಜಾತಮನ್ಯವಃ । ಕುರೂನ್ಪ್ರತ್ಯುದ್ಯಮಂಚಕ್ರುರುಗ್ರಸೇನಪ್ರಚೋದಿತಾಃ ‖ ೧೩ ‖ ಸಾಂತ್ವ
ಯಿತ್ವಾತುತಾನ್ರಾಮಸ್ಸನ್ನದ್ಧಾನ್ವೃಷ್ಣಿಪುಂಗವಃ । ನೈಚ್ಛತ್ಕುರೂಣಾಂವೃಷ್ಣೀನಾಂಕಲಿಂಕಲಿ
ಮಲಾಪಹಃ ‖ ೧೪ ‖ ಜಗಾಮಹಸ್ತಿನಪುರಂರಥೇನಾದಿತ್ಯವರ್ಚಸಾ । ಬ್ರಾಹ್ಮಣೈಃಕುಲವೃದ್ಧೈಶ್ಚವೃತ
ಶ್ಚಂದ್ರಇವಗ್ರಹೈಃ ‖ ೧೫ ‖ ಗತ್ವಾಗಜಾಹ್ವಯಂರಾಮೋಬಾಹ್ಯೋಪವನಮಾಶ್ರಿತಃ । ಉದ್ಧವಂಪ್ರೇಷ

---

ಳಿಂದ, ಚತುರೋವಾಹಾನ್-ನಾಲ್ಕುಕುದುರೆಗಳನ್ನೂ, ಏಕೈಕೇನ-ಒಂದೊಂದುಬಾಣದಿಂದ, ಸಾರಥೀಂಶ್ಚ-ತೇರನ್ನು ನಡೆಯಿ ಸುವವರನ್ನೂ ಹೊಡೆದನು. ಮಹೇಷ್ವಾಸಾಃ-ದೊಡ್ಡಬಿಲ್ಲುಗಳುಳ್ಳ, ರಥಿನಶ್ಚ-ರಥಿಕರೂ ಆದ, ತೇ-ಆ ಕರ್ಣಾದಿಗಳಾರ್ವರೂ, ತಸ್ಯ-ಆ ಸಾಂಬನ, ತತ್-ಆ ಸಾಹಸವನ್ನು, ಅಭ್ಯಪೂಜಯನ್-ಕೊಂಡಾಡಿದರು ‖ ೧೦ ‖ ತೇ-ಅವರು, ತಂತು-ಅವನನ್ನಾದರೋ, ವಿರಥಂ-ರಥವಿಲ್ಲದವನನ್ನಾಗಿ, ಚಕ್ರುಃ-ಮಾಡಿದರು. ಚತ್ವಾರಃ-ನಾಲ್ವರೂ, ಚತುರಃಹಯಾನ್-ನಾಲ್ಕು ಕುದುರೆಗಳನ್ನೂ, ಜಘ್ನುಃ-ಹೊಡೆದರು. ಸಾರಥಿಂತು-ಸಾರಥಿಯನ್ನಾದರೋ, ಏಕಃ-ಓರ್ವನು, ಜಘ್ನೇ-ಕೊಂದನು. ಅನ್ಯಃ-ಮತ್ತೋರ್ವನು, ಶರಾಸನಂ-ಬಿಲ್ಲನ್ನು, ಚಿಚ್ಛೇದ-ಕಡಿದನು ‖ ೧೧ ‖ ಕುರವಃ-ಕೌರವರು, ಯುಧಿ-ಕಾಳಗದಲ್ಲಿ, ತಂ-ಆ ಸಾಂಬನನ್ನು, ವಿರಥೀಕೃತ್ಯ-ರಥವಿಲ್ಲದವನನ್ನಾಗಿಮಾಡಿ, ಕೃಚ್ಛ್ರೇಣ-ಕಷ್ಟದಿಂದ, ಬಧ್ವಾ-ಕಟ್ಟಿ ಕುಮಾರಂ-ಆ ಹುಡುಗನನ್ನೂ, ಸ್ವಸ್ಯ-ದುರ್ಯೋಧನನ, ಕನ್ಯಾಂಚ-ಮಗಳನ್ನೂ, ನೀತ್ವಾ-ಕರಕೊಂಡು, ಜಯಿನಃ-ಜಯವುಳ್ಳವರಾಗಿ, ಸ್ವಪುರಂ-ತಮ್ಮ ನಗರವನ್ನು. ಅವಿಶನ್-ಹೊಕ್ಕರು ‖ ೧೨ ‖ ರಾಜನ್-ಪರೀಕ್ಷಿತನೇ! ನಾರದೇನ-ನಾರದಮುನಿಯಿಂದ, ಉಕ್ತಂ-ಹೇಳಲ್ಪಟ್ಟ, ತತ್-ಆ ಸುದ್ದಿಯನ್ನು, ಶ್ರುತ್ವಾ-ಕೇಳಿ, ಸಂಜಾತಮನ್ಯವಃ-ಉಂಟಾದ ಸಿಟ್ಟುಳ್ಳವರಾಗಿ, ಉಗ್ರಸೇನಪ್ರಚೋದಿತಾಃ-ಉಗ್ರಸೇನರಾಯನಿಂದ ಪ್ರೇರಿಸಲ್ಪಟ್ಟ ಯಾದವರು, ಕುರೂನ್ಪ್ರತಿ-ಕೌರವರನ್ನು ಕುರಿತು, ಉದ್ಯಮಂ-ಯುದ್ಧಪ್ರಯತ್ನವನ್ನು. ಚಕ್ರುಃ-ಮಾಡಿದರು ‖ ೧೩ ‖ ವೃಷ್ಣಿಪುಂಗವಃ-ಯಾದವರಲ್ಲಿ ಶ್ರೇಷ್ಠನಾದ, ರಾಮಃ-ಬಲಭದ್ರನು, ಕಲಿಮಲಾಪಹಃ-ಕಲಹದೋಷವನ್ನು ಪರಿಹರಿಸುವವನಾದ್ದರಿಂದ, ತಾನ್ಸನ್ನದ್ಧಾನ್-ಯುದ್ಧೋದ್ಯುಕ್ತರಾದ ಆ ಯಾದವರನ್ನು, ಸಾಂತ್ವಯಿತ್ವಾ-ಸಮಾಧಾನಗೊಳಿಸಿ, ವೃಷ್ಣೀನಾಂ-ಯಾದವರಿಗೆ, ಕುರೂಣಾಂ-ಕೌರವರೊಡನೆ, ಕಲಿಂ-ಕಲಹವನ್ನು, ನೈಚ್ಛತ್-ಬಯಸಲಿಲ್ಲವು ‖ ೧೪ ‖ ಗ್ರಹೈಃ-ಕುಜಾದಿಗ್ರಹಗಳಿಂದ, ವೃತಃ-ಬಳಸಲ್ಪಟ್ಟವನಾದ, ಚಂದ್ರಇವ-ಚಂದ್ರನಂತೆ, ಬ್ರಾಹ್ಮಣೈಃ-ವಿಪ್ರರಿಂದಲೂ, ಕುಲವೃದ್ಧೈಶ್ಚ-ಯಾದವರಲ್ಲಿ ಹಿರಿಯರಿಂದಲೂ, ಬಳಸಲ್ಪಟ್ಟವನಾಗಿ, ಆದಿತ್ಯವರ್ಚಸಾ-ಸೂರ್ಯನಂತೆ ಕಾಂತಿಯುಳ್ಳ, ರಥೇನ-ತೇರಿನಿಂದ, ಹಸ್ತಿನಪುರಂ-ಗಜನಗರವಂ ಕುರಿತು, ಜಗಾಮ-ತೆರಳಿದನು ‖ ೧೫ ‖ ಗಜಾಹ್ವಯಂ-ಗಜವೆಂಬ ಹೆಸರುಳ್ಳ ನಗರವನ್ನು, ಗತ್ವಾ-ಸೇರಿ, ಬಾಹ್ಯೋಪವನಂ-ಹೊರಗಣ ತೋಟ

---

ಣದಿಂದ ಒಬ್ಬೊಬ್ಬ ಸಾರಥಿಯಂ ಮಹಾವೀರರಾದ ರಥಿಕರಂ ಸಹ ಪ್ರಹರಿಸಿದನು ‖ ೧೦ ‖ ಆಗ ಕರ್ಣಾದಿಗಳು ಸಾಂಬನ ಯುದ್ಧವ್ಯಾಪಾರವಂನೋಡಿ ಸಮ್ಮಾನಂಗೆಯ್ದರು. ಬಳಿಕ ನಾಲ್ಕುಮಂದಿ ರಥಿಕರು ಸಾಂಬನ ನಾಲ್ಕು ರಥಾಶ್ವಂಗಳಂಕೊಂದು ಅವನಂ ವಿರಥನಂ ಮಾಡಿದರು. ಮತ್ತೊಬ್ಬ ರಥಿಕನು ಅವನ ಸಾರಥಿಯಂ ಕೊಂದನು ಮತ್ತೊಬ್ಬನು ಅವನ ಬಿಲ್ಲಂಮುರಿದನು ‖ ೧೧ ‖ ಆಮೇಲೆ ಆ ಕೌರವರು ಈ ರೀತಿಯಾದ ಯುದ್ಧದಲ್ಲಿ ಸಾಂಬನಂ ರಥಹೀನನಂಗೆಯ್ದು ಅತಿಪ್ರಯಾಸದಿಂದ ಅವನಂಬಂಧಿಸಿ ಜಯವುಳ್ಳವರಾಗಿ ಸಾಂಬನಂ ಲಕ್ಷಣಾದೇವಿಯಂಸಹ ಹಸ್ತಿನಾಪುರಕ್ಕೆ ಒಯ್ದರು ‖ ೧೨ ‖ ಎಲೈ ಅರಸೇ! ಅನಂತರದಲ್ಲಿ ಯಾದವರು ನಾರದಮುನಿಯಿಂ ಪೇಳಲ್ಪಟ್ಟ ಸಾಂಬನ ವೃತ್ತಾಂತವಂಕೇಳಿ ಕ್ರೋಧಯುಕ್ತರಾಗಿ ಉಗ್ರಸೇನರಾಯನಿಂದ ಪ್ರೇರಿಸಲ್ಪಟ್ಟವರಾಗಿ ಕೌರವರಂ ಜಯಿಸಲು ಪ್ರಯತ್ನಂಗೆಯ್ದರು ‖ ೧೩ ‖ ಕಲಿಕಲ್ಮಷವಂ ಪರಿಹರಿಸುವ ಬಲರಾಮನು ಕೌರವರಿಗೂ ಯಾದವರಿಗೂ ಪರಸ್ಪರವಾಗಿ ಸಂಭವಿಸುವ ಯುದ್ಧವಂ ಸಮ್ಮತಿಸದವನಾದಕಾರಣದಿಂದ ಯುದ್ಧಸನ್ನದ್ಧರಾದ-ಆ ಯಾದವರಂ ಸಮಾಧಾನಂಗೆಯ್ದನು ‖ ೧೪ ‖ ಗ್ರಹಂಗಳಿಂ ಸೂರ್ಯನಂತೆ ಬ್ರಾಹ್ಮಣರಿಂ ಕುಲವೃದ್ಧರಿಂಸಹ ಸುತ್ತಿಗೊಳ್ಳಲ್ಪಟ್ಟವನಾಗಿ ಸೂರ್ಯತೇಜಸ್ಸಿಗೆ ಸಮಾನವಾದ ತೇಜಸ್ಸುಳ್ಳ ರಥದಿಂದ ಹಸ್ತಿನಾಪುರವ ನೆಯ್ದಿದನು ‖ ೧೫ ‖

ಯಾಮಾಸಧೃತರಾಷ್ಟ್ರಂಬುಭುತ್ಸಯಾ ॥೧೬॥ ಸೋಽಭಿವಂದ್ಯಾಂಬಿಕಾಪುತ್ರಂಭೀಷ್ಮಂದ್ರೋಣಂಸ ಬಾಹ್ಲಿಕಮ್ । ದುರ್ಯೋಧನಂಚವಿಧಿವದ್ರಾಮಮಾಗತಮಬ್ರವೀತ್ ॥೧೭॥ ತೇಽತಿಪ್ರೀತಾಸ್ಸಮಾಕರ್ಣ್ಯ ಪ್ರಾಪ್ತಂರಾಮಂಸುಹೃತ್ತಮಮ್ । ತಮರ್ಚಯಿತ್ವಾಭಿಯಯುಸ್ಸರ್ವೇಮಂಗಳಪಾಣಯಃ ॥೧೮॥ತಂ ಸಂಗಮ್ಯಯಥಾನ್ಯಾಯ್ಯಂಗಾಮರ್ಘ್ಯಂಚನ್ಯವೇದಯನ್ । ತೇಷಾಂಯೇತತ್ಪ್ರಭಾವಜ್ಞಾಃಪ್ರಣೇಮುಶ್ಶಿ ರಸಾಬಲಮ್ ॥೧೯॥ಬಂಧೂನ್ಕುಶಲಿನೋದೃಷ್ಟ್ವಾಪೃಷ್ಟ್ವಾಶಿವಮನಾಮಯಮ್ । ಪರಸ್ಪರಮಥೋ ರಾಮೋಬಭಾಷೇಽವಿಕ್ಲಬಂವಚಃ ॥೨೦॥ ಉಗ್ರಸೇನಃಕ್ಷಿತೀಶೋಯದ್ಯುಷ್ಮಾನಾಜ್ಞಾಪಯತ್ಪ್ರಭುಃ । ತದವ್ಯಗ್ರಧಿಯಶ್ಶ್ರುತ್ವಾಕುರುಧ್ವಮವಿಲಂಬಿತಮ್ ॥೨೧॥ಯದ್ಯೂಯಂಬಹವಸ್ತ್ವೇಕಂಜಿತ್ವಾಧರ್ಮ

---

ವನ್ನು, ಆಶ್ರಿತಃ-ಸೇರಿದವನಾದ, ರಾಮಃ-ಬಲಭದ್ರನು, ಬುಭುತ್ಸಯಾ-ತಿಳಿಯಲಪೇಕ್ಷೆಯಿಂದ, ಉದ್ಧವಂ-ಉದ್ಧವನೆಂಬವನೆನ್ನು, ಧೃತರಾಷ್ಟ್ರಂ-ಧೃತರಾಷ್ಟ್ರರಾಯನಂಕುರಿತು, ಪ್ರೇಷಯಾಮಾಸ-ಕಳುಹಿಸಿಕೊಟ್ಟನು ॥೧೬॥ಸಃ-ಆವುದ್ಧವನು, ಅಂಬಿಕಾಪುತ್ರಂ-ಅಂಬಿಕೆಯಮಗನಾದಧೃತರಾಷ್ಟ್ರನನ್ನೂ, ಭೀಷ್ಮಂ-ಶಾಂತನವನನ್ನೂ. ದ್ರೋಣಂ-ಭಾರದ್ವಾಜನನ್ನೂ, ಸಬಾಹ್ಲಿಕಂ-ಬಾಹ್ಲಿಕನೊಡನೆಸಹಿತನಾದ, ದುರ್ಯೋಧನಂಚ-ಸುಯೋಧನನನ್ನೂ, ವಿಧಿವತ್-ಶಾಸ್ತ್ರವನ್ನು ಅತಿಕ್ರಮಿಸದೆ, ಅಭಿವಂದ್ಯ-ನಮಸ್ಕರಿಸಿ, ರಾಮಂ-ಬಲಭದ್ರನನ್ನು, ಆಗತಂ-ಬಂದವನನ್ನಾಗಿ, ಅಬ್ರವೀತ್-ಹೇಳಿದನು॥೧೭॥ ಸುಹೃತ್ತಮಂ-ಅತ್ಯಂತಮಿತ್ರನಾದ, ರಾಮಂ-ಬಲಭದ್ರನನ್ನು, ಪ್ರಾಪ್ತಂ-ಬಂದವನನ್ನಾಗಿ. ಸಮಾಕರ್ಣ್ಯ-ಚನ್ನಾಗಿಕೇಳಿ, ಅತಿಪ್ರೀತಾಃ-ಅಧಿಕಪ್ರೇಮವುಳ್ಳವರಾದ, ತೇ-ಆಕೌರವರು, ತಂ-ಆಉದ್ಧವನನ್ನು, ಅರ್ಚಯಿತ್ವಾ-ಪೂಜಿಸಿ, ಸರ್ವೇ-ಎಲ್ಲರೂ, ಮಂಗಳಪಾಣಯಃ-ಶುಭಕರದ್ರವ್ಯಂಗಳುಕೈಗಳಲ್ಲಿಉಳ್ಳವರಾಗಿ, ಅಭಿಯಯುಃ-ರಾಮನಇದಿರಿಗೆಹೋದರು॥೧೮॥ತಂ-ಆರಾಮನನ್ನು, ಯಥಾನ್ಯಾಯ್ಯಂ-ನ್ಯಾಯಸಿದ್ಧವಾದ್ದನ್ನು ಅತಿಕ್ರಮಿಸದೆ, ಸಂಗಮ್ಯ-ಇದಿರುಗೊಂಡು, ಗಾಂ-ಆಕಳನ್ನೂ, ಅರ್ಘ್ಯಂಚ-ಪೂಜಾದ್ರವ್ಯವನ್ನೂ, ನ್ಯವೇದಯನ್-ಅರ್ಪಿಸಿದರು. ತೇಷಾಂ ಆಕೌರವರೊಳಗೆ, ತತ್ಪ್ರಭಾವಜ್ಞಾಃ-ಆಬಲರಾಮನಸಾಮರ್ಥ್ಯವಂಬಲ್ಲವರು, ಯೇ-ಯಾರೋ, ತೇ-ಅವರು, ಶಿರಸಾ-ತಲೆಯಿಂದ, ಬಲಂ-ರಾಮನನ್ನು, ಪ್ರಣೇಮುಃ-ನಮಸ್ಕರಿಸಿದರು ॥೧೯॥ಕುಶಲಿನಃ-ಕ್ಷೇಮವುಳ್ಳ, ಬಂಧೂನ್-ನಂಟರನ್ನು, ದೃಷ್ಟ್ವಾ-ಕಂಡು, ಪರಸ್ಪರಂ-ಅನ್ಯೋನ್ಯವಾಗಿ, ಅನಾಮಯಂ-ಆರೋಗ್ಯವನ್ನೂ, ಶಿವಂ-ಶುಭವನ್ನೂ, ಪೃಷ್ಟ್ವಾ-ಬೆಸಗೊಂಡು, ಅಥೋ-ಆಬಳಿಕ, ರಾಮಃ-ಬಲದೇವನು, ಅವಿಕ್ಲಬಂ-ದೈನ್ಯವಿಲ್ಲದ, ವಚಃ-ನುಡಿಯನ್ನು, ಬಭಾಷೇ-ನುಡಿದನು ॥೨೦॥ ಪ್ರಭುಃ-ಸ್ವತಂತ್ರನಾದ, ಉಗ್ರಸೇನಃಕ್ಷಿತೀಶಃ-ಉಗ್ರಸೇನರಾಯನು, ಯುಷ್ಮಾನ್-ನಿಮ್ಮಂಕುರಿತು, ಯತ್-ಯಾವುದರನ್ನು, ಆಜ್ಞಾಪಯತ್-ಆಜ್ಞಾಪಿಸಿದನೋ, ತತ್-ಅದರನ್ನು, ಶ್ರುತ್ವಾ-ಕೇಳಿ, ಅವ್ಯಗ್ರಧಿಯಃ-ಆತುರಗೊಳ್ಳದಬುದ್ಧಿಯುಳ್ಳವರಾಗಿ, ಅವಿಲಂಬಿತಂ-ಕಾಲಹರಣವಿಲ್ಲದೆ, ಕುರುಧ್ವಂ-ಮಾಡಿರಿ॥೨೧॥ಯೂಯಂ-ನೀವು,

---

ಆಮೇಲೆ ರಾಮನು ಹಸ್ತಿನಾಪುರದ ಹೊರಗೆಯಿರುವ ಉದ್ಯಾನವನದಲ್ಲಿ ನಿಂತವನಾಗಿ ಧೃತರಾಷ್ಟ್ರರಾಯನಂಕುರಿತು ಅವನ ತಾತ್ಪರ್ಯವಂ ತಿಳಿಯಲಿಚ್ಛೆಯಿಂದ ಉದ್ಧವನಂ ಕಳುಹಿಸಿದನು ॥೧೬॥ ಆಯುದ್ಧವನು ಹಸ್ತಿನಾಪುರವನೆಯ್ದಿ ಧೃತರಾಷ್ಟ್ರರಾಯನಂ ಭೀಷ್ಮನಂ ಬಾಹ್ಲಿಕನೊಡನೆ ಯುಕ್ತನಾದ ದ್ರೋಣನಂ ದುರ್ಯೋಧನನಂ ಸಹಕುರಿತು ಯಥಾವಿಧಿಯಾಗಿ ಅಭಿವಾದನವಂಗೆಯ್ದು ಬಲರಾಮನು ಬಂದಿರುವನೆಂದು ನುಡಿದನು॥೧೭॥ ಆಗ ಧೃತರಾಷ್ಟ್ರಾದಿಗಳೆಲ್ಲರೂ ಬಂದಿರುವ ರಾಮನಂ ಕೇಳಿ ಸಂತೋಷಯುಕ್ತರಾಗಿ ಉದ್ಧವನಂ ವಿಧಿಯಿಂದ ಪೂಜಿಸಿ ಉಪಹಾರದ್ರವ್ಯಂಗಳಂ ಹಸ್ತಂಗಳಲ್ಲಿರಿಸಿಕೊಂಡವರಾಗಿ ॥೧೮॥ ನ್ಯಾಯಪೂರ್ವಕವಾಗಿ ಆಬಲರಾಮನ ನಿದಿರ್ಗೊಂಡು ಕುಶಲಪ್ರಶ್ನೆಯಂಮಾಡಿ ಅರ್ಘ್ಯವಂ ಸಮರ್ಪಿಸಿದರು. ಆಮೇಲೆ ಧೃತರಾಷ್ಟ್ರಾದಿಗಳೆಲ್ಲರೂ ತಾವುವೃದ್ಧರಾದಾಗ್ಯೂ ರಾಮನ ಪ್ರಭಾವವಂ ತಿಳಿದವರಾದಕಾರಣದಿಂದ ನಮಸ್ಕರಿಸಿದರು॥೧೯॥ ಆಗಬಲರಾಮನು ಅನ್ಯೋನ್ಯ ಯೋಗಕ್ಷೇಮ ಪ್ರಶ್ನೆಯಂಗೆಯ್ದು ಆವರಿಂದ ಹೇಳಲ್ಪಟ್ಟ ಬಂಧುಗಳ ಯೋಗಕ್ಷೇಮಂಗಳಂಕೇಳಿ ಧೈರ್ಯಯುಕ್ತವಾದ ವಚನವಂ ಈರೀತಿಯಿಂದ ಪೇಳಿದನೆಂತೆನೆ॥೨೦॥ ಎಲೈಕೌರವರೇ! ಕೇಳಿ, ರಾಜಶ್ರೇಷ್ಠನಾದ ಉಗ್ರಸೇನರಾಯನು ಆವ ಅರ್ಥವನಾಜ್ಞಾಪಿಸಿದನೋ ಆಯರ್ಥವನ್ನು ನೀವು ಏಕಾಗ್ರಚಿತ್ತರಾಗಿ ಕೇ

ಣಧಾರ್ಮಿಕಮ್ । ಅಬಧ್ನೀತಾಥ ತನ್ಮೃಷ್ಯೇ ಬಂಧೂನಾಮೈಕ್ಯಕಾಮ್ಯಯಾ ॥೨೨॥ ಶ್ರೀಶುಕಃ । ವೀರ್ಯ ಶೌರ್ಯಬಲೋನ್ನದ್ಧಮಾತ್ಮಶಕ್ತಿಸಮಂ ವಚಃ । ಕುರವೋ ಬಲದೇವಸ್ಯ ನಿಶಮ್ಯೋಚುಃ ಪ್ರಕೋಪಿತಾಃ ॥೨೩॥ ಅಹೋ ಮಹಚ್ಚಿತ್ರಮಿದಂ ಕಾಲಗತ್ಯಾ ದುರಂತಯಾ । ಆರುರುಕ್ಷತ್ಯುಪಾನದ್ವೈ ಶಿರೋ ಮುಕುಟಸೇವಿತಮ್ ॥೨೪॥ ಏತೇ ಯೌನೇನ ಸಂಬಂಧಾಃ ಸಹಶಯ್ಯಾಸನಾಶನಾಃ । ವೃಷ್ಣಯಸ್ತುಲ್ಯತಾಂ ನೀತಾ ಅಸ್ಮದ್ದತ್ತನೃಪಾಸನಾಃ ॥೨೫॥ ಚಾಮರವ್ಯಜನೇ ಶಂಖಮಾತಪತ್ರಂ ಚ ಪಾಂಡರಮ್ । ಕಿರೀಟಮಾಸನಂ ಶಯ್ಯಾಂ ಭುಂಜಂತ್ಯಸ್ಮದುಪೇಕ್ಷಯಾ ॥೨೬॥ ಅಲಂ ಯದೂನಾಂ ನರದೇವಲಾಂಛನೈರ್ದಾತುಃ ಪ್ರತೀಪೈಃ ಫಣಿನಾಮಿವಾಮೃತಮ್ । ಯೇಽಸ್ಮತ್ಪ್ರಸಾದೋಪಚಿತಾ ಹಿ ಯಾದವಾ ಆಜ್ಞಾಪಯಂತ್ಯದ್ಯ ಗತತ್ರಪಾ ಬತ ॥೨೭॥

---

ಬಹವಃ-ಬಹುಮಂದಿಯಾಗಿ, ಸೇರಿ, ಧಾರ್ಮಿಕಂ-ಧರ್ಮಿಷ್ಠನಾದ, ಏಕಂ-ಒಬ್ಬನನ್ನು, ಅಧರ್ಮೇಣ-ಅನ್ಯಾಯದಿಂದ, ಜಿತ್ವಾ-ಗೆದ್ದು, ಅಬಧ್ನೀತ-ಯದಿ-ಕಟ್ಟಿದವರಾದರೂ, ಅಥ-ಹಾಗೆ ನೀವು ಮಾಡಿದ ಮೇಲೆಯೂ, ಬಂಧೂನಾಂ-ನಂಟರ, ಐಕ್ಯಕಾಮ್ಯಯಾ-ಅಭೇದದ ಬಯಕೆಯಿಂದ, ತತ್-ಆ ನಿಮ್ಮ ಅಪರಾಧವನ್ನು, ಮೃಷ್ಯೇ-ಸೈರಿಸುತ್ತಿರುವೆನು (ತಂ-ಆ ಸಾಂಬನನ್ನು, ಆಶು-ಬೇಗನೆ, ಆನೀಯ-ತಂದು, ಸಮರ್ಪಯತ-ನಮಗೊಪ್ಪಿಸಿರಿ.) ॥೨೨॥ [ಶುಕವಚನವು.] ಕುರುವಃ-ಕೌರವರು, ವೀರ್ಯಶೌರ್ಯಬಲೋನ್ನದ್ಧಂ-ವೀರತ್ವದಿಂದಲೂ, ಉತ್ಸಾಹದಿಂದಲೂ ಸಾಮರ್ಥ್ಯದಿಂದಲೂ ತಡೆಯಿಲ್ಲದೆಯಿರುವಂಥಾ, ಆತ್ಮಶಕ್ತಿಸಮಂ-ಕೃಷ್ಣಸಾಮರ್ಥ್ಯಕ್ಕೆ ಸಮಾನವಾದ, ಅಥವಾ ತನ್ನ ಸಾಮರ್ಥ್ಯಕ್ಕನುರೂಪವಾದ, ಬಲದೇವಸ್ಯ ವಚಃ-ಬಲರಾಮನ ಮಾತನ್ನು ನಿಶಮ್ಯ-ಕೇಳಿ, ಪ್ರಕೋಪಿತಾಃ-ಸಿಟ್ಟುಳ್ಳವರಾಗಿ ಮಾಡಲ್ಪಟ್ಟವರಾದ್ದರಿಂದ, ಊಚುಃ-ನುಡಿದರು ॥೨೩॥ ದುರಂತಯಾ-ಹಾನಿಯಿಲ್ಲದ, ಕಾಲಗತ್ಯಾ-ಕಾಲದ ನಡತೆಯಿಂದ, ಉಪಾನತ್-ಪಾದರಕ್ಷೆಯು, ಮುಕುಟಸೇವಿತಂ-ಕಿರೀಟದಿಂದಲುಪಾಸಿತವಾದ, ಶಿರಃ-ತಲೆಯನ್ನು, ಆರುರುಕ್ಷತಿ-ಏರಲೆಳಸುತ್ತಿದೆ. ಇದಂ-ಇದು, ಮಹಚ್ಚಿತ್ರಂ-ದೊಡ್ಡ ಅದ್ಭುತವಾಗಿದೆ. ಅಹೋ-ಆಶ್ಚರ್ಯವು ॥೨೪॥ ಏತೇ-ಈ ಯಾದವರು, ಯೌನೇನ-ಕುಂತೀವಿವಾಹದಿಂದ, ಸಂಬದ್ಧಾಃ-ನಮ್ಮ ಸಂಬಂಧವುಳ್ಳವರಾಗಿ, ಸಹಶಯ್ಯಾಸನಾಶನಾಃ-ನಮ್ಮೊಡನೆ ಹಾಸಿಗೆಯೂ ಪೀಠವೂ ಊಟವೂ ಉಳ್ಳವರಾದ, ವೃಷ್ಣಯಃ-ವೃಷ್ಣಿಕುಲದವರು, ಅಸ್ಮದ್ದತ್ತನೃಪಾಸನಾಃ-ನಮ್ಮಿಂದ ಕೊಡಲ್ಪಟ್ಟ ಅರಸುಗದ್ದುಗೆಯುಳ್ಳವರಾಗಿ, ತುಲ್ಯತಾಂ-ನಮ್ಮೊಡನೆ ಸರಿಯಾಗುವಿಕೆಯನ್ನು, ನೀತಾಃ-ನಮ್ಮಿಂದಲೇ ಹೊಂದಿಸಲ್ಪಟ್ಟವರಾದರು ॥೨೫॥ ಅಂತವರು, ಅಸ್ಮದುಪೇಕ್ಷಯಾ-ನಮ್ಮ ಅಲಕ್ಷ್ಯದಿಂದ, ಚಾಮರವ್ಯಜನೇ-ಚಮರಮೃಗದ ಬಾಲದ ಬೀಸಣಿಗೆಗಳನ್ನೂ, ಶಂಖಂ-ಜಯಶಂಖವನ್ನೂ, ಪಾಂಡುರಮಾತಪತ್ರಂಚ-ಬಿಳುಗೊಡೆಯನ್ನೂ, ಕಿರೀಟಂ-ರಾಜಯೋಗ್ಯವಾದ ಟೊಪ್ಪಿಗೆಯನ್ನೂ, ಆಸನಂ-ಸಿಂಹಪೀಠವನ್ನೂ, ಶಯ್ಯಾಂ-ರಾಜಾರ್ಹವಾದ ಹಾಸಿಗೆಯನ್ನೂ, ಭುಂಜಂತಿ-ಅನುಭವಿಸುತ್ತಿದಾರೆ ॥೨೬॥

---

ಠಿ, ಆಲಸ್ಯವನ್ನು ಮಾಡದೆ, ಆ ಯಾರ್ಥವನಾಚರಿಸುವರಾಗಿರಿ, ಅದೆಂತೆನೆ ॥೨೧॥ ಎಲೈ ಕೌರವರೇ! ಬಹು ಮಂದಿಯಾದ ನೀವು ಧಾರ್ಮಿಕನಾದ ಒಬ್ಬನಾದ ಸಾಂಬನಂ ನೀವು ಅಧರ್ಮದಿಂದ ಜಯಿಸಿ ಬಂಧಿಸಿರುವರಾದರಿಯೆಂಬುವುದಾವುದುಂಟೋ ಆ ಯಾರ್ಥವು ಕೂಡ ನಾನು ಬಂಧುಗಳು ಒಂದಾಗಿರಬೇಕೆಂಬ ಇಚ್ಛೆಯಿಂದ ಸಹಿಸುತ್ತಲಿವೇನೆ- ಶೀಘ್ರದಿಂ ಕರೆತಂದು ಆ ಸಾಂಬನು ನನಗೆ ಸಮರ್ಪಿಸುವರಾಗಿ, ಎಂಬ ಉಗ್ರಸೇನರಾಯನವಾಕ್ಯವಂ ಈ ರೀತಿಯಿಂದ ಬಲರಾಮ ನುಡಿಯಲು ॥೨೨॥ ಆಗ ಕೌರವರು ಪ್ರಭಾವೋತ್ಸಾಹ ಬಲಗಳಿಂದ ಉದ್ಧತವಾದ ತನ್ನ ಶಕ್ತಿಗೆ ಅನುಗುಣವಾದ ಆ ಬಲರಾಮನ ವಚನವಂ ಕೇಳಿ ಅತಿ ಕೋಪಯುಕ್ತರಾಗಿ ಯೀ ರೀತಿಯಿಂ ನುಡಿದರೆಂತೆನೆ- ॥೨೩॥ ಎಲೈ ನೋಡಿದಿರಾ! ಪಾದರಕ್ಷೆಯು ಕಿರೀಟದಿಂ ಸೇವಿಸಲ್ಪಡುತ್ತಲಿರುವ ಶಿರಸ್ಸಂ ಆರೋಹಣಂಗೆಯ್ಯಲಿಚ್ಛೈಸುತ್ತಲಿದೆ. ಕಾಲಗತಿಯಿಂದಲ ತಿಕ್ರಮಿಸಲಶಕ್ಯವಾದ ಈ ವ್ಯಾಪಾರವೂ ಆಶ್ಚರ್ಯವಲ್ಲವೆ ನಮ್ಮ ಆಜ್ಞಾನುಸಾರಿಗಳಾದ ಯಾದವರು ಈಗ ನಮಗೆ ಅಜ್ಞಾಪಿಸುವರಾದರು ॥೨೪॥ ಈ ಯಾದವರು ತಮ್ಮ ಕುಲದಲ್ಲಿ ಜನಿಸಿದ ಒಬ್ಬ ಕುಂತಿಯಂ ಕೊಟ್ಟು ನಮ್ಮ ಸಂಬಂಧವಂ ಮಾಡಿದವರಾದ ಕಾರಣದಿಂದ ನಮ್ಮೊಡನೆ ಸಹಶಯನವು ಪೀಠವು ಸಹ ಭೋಜನವು ಉಳ್ಳವರಾಗಿ ನಮ್ಮಿಂದ ಕೊಡಲ್ಪಟ್ಟ ಸಿಂಹಾಸನವುಳ್ಳವರಾಗಿ ಈಗ ನಮ್ಮ ಸಮಾನತ್ವವನೆಯ್ದಿಸಲ್ಪಟ್ಟರು ॥೨೫॥ ಮತ್ತು ಈ ಯಾದವರು ನಮಗೆ ಆಗ್ರಹವಿಲ್ಲದೆ ಯಿರು

ಕಥಮಿಂದ್ರೋಽಪಿ ಕುರುಭಿರ್ಭೀಷ್ಮದ್ರೋಣಾರ್ಜುನಾದಿಭಿಃ । ಅದತ್ತಮವರುಂಧೀತ ಸಿಂಹಗ್ರಸ್ತಮಿವೋ
ರಣಃ ॥ [ನಾತಃ ಪರಂ ಹ್ಯುಗ್ರಸೇನೋ ರಾಜಾ ಭವಿತುಮರ್ಹತಿ] ॥೨೮॥ ಶ್ರೀಶುಕಃ ॥ ಜನ್ಮಬಂಧುಶ್ರಿ
ಯೋನ್ನದ್ಧಮದಾಸ್ತೇ ಭರತರ್ಷಭ । ಆಶ್ರಾವ್ಯ ರಾಮಂ ದುರ್ವಾಚ್ಯಮಸಭ್ಯಾಃ ಪುರಮಾವಿಶನ್ ॥೨೯॥
ದೃಷ್ಟ್ವಾ ಕುರೂಣಾಂ ದೌಶ್ಶೀಲ್ಯಂ ಶ್ರುತ್ವಾವಾಚ್ಯಾನಿ ಚಾಚ್ಯುತಃ । ಅವೋಚತ್ಕೋಪಸಂರಬ್ಧೋ ದುಷ್ಪ್ರೇ
ಕ್ಷ್ಯಃ ಪ್ರಹಸನ್ಮುಹುಃ ॥೩೦॥ ನೂನಂ ನಾನಾಮದೋನ್ನದ್ಧಾಃ ಶಾಂತಿಂ ನೇಚ್ಛಂತ್ಯಸಾಧವಃ । ತೇಷಾಂ ಹಿ

---

ಯೇ-ಯಾದವಾಃ-ಯಾವ ಯಾದವರು, ನಃ-ನಮ್ಮ, ಪ್ರಸಾದೋಪಚಿತಾಃ-ಅನುಗ್ರಹದಿಂದ ವೃದ್ಧಿಹೊಂದಿಸಲ್ಪಟ್ಟವರೋ, ತೇ-ಅ
ವರು, ಅದ್ಯ-ಈಗ, ಗತತ್ರಪಾಃ-ಬಿಟ್ಟುಹೋದ ನಾಚಿಕೆಯುಳ್ಳವರಾಗಿ, ನಃ-ನಮ್ಮನ್ನು, ಆಜ್ಞಾಪಯಂತಿ-ಆಜ್ಞಾಪಿಸುತ್ತಿರುವರು,ಬತ-
ಇದು ಕಷ್ಟವಾಗಿದೆ. (ಆದ್ದರಿಂದ) ದಾತುಃ-ಕೊಟ್ಟವನಿಗೆ, ಪ್ರತೀಪಾಚರಿತೋದ್ಧತಾತ್ಮನಾಂ-ವಿರೋಧವನ್ನು ಆಚರಿಸುವುದರಲ್ಲಿ
ಗರ್ವಿಸಿದ ಮನಸ್ಸುಳ್ಳವರಾದ, ಯದೂನಾಂ-ಯಾದವರಿಗೆ, ನರದೇವಲಾಂಛನೈಃ-ದೊರೆಗಳ ಗುರುತುಗಳಾದ ಚಿಹ್ನೆಗಳಿಂದ,ಅಲಂ-
ಇನ್ನು ಸಾಕು॥೨೭॥ಸಿಂಹಗ್ರಸ್ತಂ-ಸಿಂಗನಿಂದ ತಿನ್ನಲ್ಪಡುತ್ತಿರುವ ಆಹಾರವನ್ನು, ಉರಣಇವ-ಕುರಿಯಂತೆ,ಭೀಷ್ಮದ್ರೋಣಾರ್ಜು
ನಾದಿಭಿಃ-ಭೀಷ್ಮನು ದ್ರೋಣನು ಅರ್ಜುನನು ಮೊದಲಾದ, ಕುರುಭಿಃ-ಕೌರವರಿಂದ, ಅದತ್ತಂ-ಕೊಡಲ್ಪಡದೆ ಇರುವುದನ್ನು ಇಂ
ದ್ರೋಽಪಿ-ದೇವರಾಜನಾದರೂ, ಕಥಮವರುಂಧೀತ-ಹೇಗೆ ತೆಗೆದುಕೊಂಡಾನು? ಇತಃಪರಂ-ಇನ್ನು ಮೇಲೆ, ಉಗ್ರಸೇನಃ-ಉ
ಗ್ರಸೇನನೆಂಬವನು, ರಾಜಾಭವಿತುಂ-ದೊರೆಯಾಗಿರುವುದಕ್ಕೆ, ನಾರ್ಹತಿ-ಯೋಗ್ಯನಾಗುವುದಿಲ್ಲ॥೨೮॥ [ಶುಕವಚನವು.] ಭರತ
ರ್ಷಭ-ಭರತಕುಲದವರಲ್ಲಿ ಶ್ರೇಷ್ಠನಾದ ಪರೀಕ್ಷಿತನೆ! ಜನ್ಮಬಂಧುಶ್ರಿಯಾ-ಹುಟ್ಟುವಿಕೆಯಿಂದಲೂ ನಂಟತನದಿಂದಲೂ ಕೂಡಿದ
ಐಶ್ವರ್ಯದಿಂದ, ಉನ್ನದ್ಧಮದಾಃ-ಉತ್ಕಟವಾದ ಗರ್ವವುಳ್ಳ, ಅಸಭ್ಯಾಃ-ಸಾಧುಸಮಾಜಕ್ಕೆ ಯೋಗ್ಯರಲ್ಲದ, ತೇ-ಆ ಕೌರವರು,
ರಾಮಂ-ಬಲದೇವನಂ ಕುರಿತು,ದುರ್ವಾಚ್ಯಂ-ಹೇಳತಕ್ಕದ್ದಲ್ಲದ ದುರ್ಭಾಷೆಯನ್ನು,ಆಶ್ರಾವ್ಯ-ಕೇಳುವಂತೆ ಮಾಡಿ, ಪುರಂ-ಗಜನಗ
ರವನ್ನು, ಪ್ರಾವಿಶನ್-ಹೊಕ್ಕರು॥೨೯॥ಅಚ್ಯುತಃ-ಭಂಗವಿಲ್ಲದವನಾದ ಬಲದೇವನು,ಕುರೂಣಾಂ-ಕೌರವರ, ದೌಶ್ಶೀಲ್ಯಂ-ದುಷ್ಟ
ಸ್ವಭಾವವನ್ನು, ದೃಷ್ಟ್ವಾ-ನೋಡಿ,ಅವಾಚ್ಯಾನಿ-ಹೇಳಬಾರದ ಮಾತುಗಳನ್ನೂ,ಶ್ರುತ್ವಾ-ಕೇಳಿ, ಕೋಪಸಂರಬ್ಧಃ-ಸಿಟ್ಟಿನಿಂದ
ಬಹಳ ಕೆರಳಿದ ಕಂಗಳುಳ್ಳವನಾದ್ದರಿಂದ,ದುಷ್ಪ್ರೇಕ್ಷ್ಯಃ-ಇತರರಿಂದ ನೋಡಲ್ಪಡುವದಕ್ಕೆ ಅಶಕ್ಯನಾಗಿ,ಮುಹುಃ-ಮರಳಿಮರಳಿಯೂ,
ಪ್ರಹಸನ್-ಅಧಿಕವಾಗಿ ನಗುತ್ತಿರುವನಾಗಿ, ಅವೋಚತ್-ನುಡಿದನು॥೩೦॥ನಾನಾಮದೋನ್ನದ್ಧಾಃ-ಹಲವು ಬಗೆಯಾದ ಗರ್ವಗಳಿಂದ

---

ವುದರಿಂದ ಚಾಮರವ್ಯಜನಗಳಂ ಜಯಶಂಖಮಂ ಶ್ವೇತಛತ್ರಮಂ ಕಿರೀಟಮಂ ಸಿಂಹಾಸನಮಂ ಉಲ್ಲಾಸಮಂ ಸಹ
ಅನುಭವಿಸುತಲಿರುವರು॥೨೬॥ ಮತ್ತು ಯಾವ ಯಾದವರು ನಮ್ಮ ಪ್ರಸಾದದಿಂದ ವೃದ್ಧಿ ಹೊಂದಿ ಈಗ ಲಜ್ಜೆ
ಯಿಲ್ಲದವರಾಗಿ, ಕಟ ಕಟಾ! ನಮ್ಮಂ ಆಜ್ಞಾಪಿಸುತ್ತಲಿರುವರೋ ಆ ಯಾದವರಿಗೆ ನಮ್ಮಿಂದ ಕೊಡಲ್ಪಟ್ಟ ಚಾ
ಮರಾದಿರಾಜ ಚಿಹ್ನಂಗಳು ಸರ್ಪಗಳಿಗೆ ಕೊಡಲ್ಪಟ್ಟ ಅಮೃತಗಳು ಕೊಟ್ಟವನಿಗೆ ಪ್ರತಿಕೂಲಗಳು ಆಗುತ್ತದೆ
ಯಾದ ಕಾರಣದಿಂ ಇನ್ನು ಮೇಲೆ ಅವರಿಗೆ ಚಾಮರಾದಿ ಚಿಹ್ನಂಗಳು ಸಾಕು॥೨೭॥ ಮತ್ತು ಕುರಿಯು ಸಿಂಹದಿಂ
ದ ಗ್ರಾಸಂ ಗೆಯ್ಯಲ್ಪಟ್ಟ ವಸ್ತುವಂ ಎಂತು ಸ್ವೀಕರಿಸಲು ಸಮರ್ಥವಾಗಲಾರದೋ ಆ ರೀತಿಯಿಂದ ಕೂಡ
ಭೀಷ್ಮದ್ರೋಣಾರ್ಜುನರು ಮೊದಲಾಗಿಯುಳ್ಳ ಕೌರವರಿಂದ ಕೊಡಲ್ಪಡದೇ ಇರುವ ಸಾಂಬನಂ ಪುನಃ ಕಳೆದು
ಕೊಂಡು ಹೋಗಲು ಸಮರ್ಥನಲ್ಲ- ಈ ರೀತಿಯಾಗಿರುವಲ್ಲಿ ಅಲ್ಪ ಬಲವುಳ್ಳ ಯಾದವರು ಪುನಃ ಸಾಂಬನಂ ಕ
ಳೆದು ಕೊಂಡು ಹೋಗಲು ಯೆಂತು ಸಮರ್ಥರಾಗುವರು?॥೨೮॥ ಎಲೈ ಅರಸೇ? ದುರ್ಜನರಾದ ಕೌರವರು
ಜನ್ಮದಿಂ ಬಂಧುಗಳಿಂದಲೂ ಕೂಡಿರುವ ಮಹಾಸಂಪತ್ತಿನಿಂದ ಅಮಿತವಾದ ಮದವುಳ್ಳವರಾಗಿ ಬಲರಾಮನಂ ಕು
ರಿತು ಈ ರೀತಿಯಾಗಿ ಕಠಿನವಾದ ವಾಕ್ಯವಂ ನುಡಿದು ಹಸ್ತಿನಾಪುರವಂ ಪ್ರವೇಶಿಸಿದರು॥೨೯॥ಅನಂತರದಲ್ಲಿ ಶ್ರೀ
ರಾಮನು ಆ ಕೌರವರ ದುಷ್ಟತನವ ನೋಡಿ ಅವರ ದುರ್ವಾಕ್ಯಂಗಳಂ ಸಹ ಕೇಳಿ ಕೋಪಯುಕ್ತನಾಗಿ ಪ
ರಾಕ್ರಮದಿ ನೋಡಲಶಕ್ಯನಾಗಿ ಬಾರಿ ಬಾರಿಗೂ ನಗುತ ಈ ರೀತಿಯಾಗಿ ನುಡಿದನದೆಂತೆನೆ॥೩೦॥ ಧನಕುಲಾದಿಗ

ಪ್ರಶಮೋ ದಂಡಃ ಪಶೂನಾಂ ಲಗುಡೋ ಯಥಾ ॥೩೧॥ ಅಹೋ ಯದೂನ್ ಸುಸಂರಬ್ಧಾನ್ ಕೃಷ್ಣಂ ಚ ಕುಪಿತಂ
ಶನೈಃ । ಸಾಂತ್ವಯಿತ್ವಾಹಮೇತೇಷಾಂ ಶಮಮಿಚ್ಛನ್ನಿಹಾಗತಃ ॥೩೨॥ ತ ಇಮೇ ಮಂದಮತಯಃ ಕಲಹಾ
ಭಿರತಾಃ ಖಲಾಃ । ತಂ ಮಾಮವಜ್ಞಾಯ ಮುಹುರ್ದುರ್ಭಾಷಾನ್ ಮಾನಿನೋಽಬ್ರುವನ್ ॥೩೩॥ ನೋಗ್ರಸೇ
ನಃ ಕಿಲ ವಿಭುರ್ಭೋಜವೃಷ್ಣ್ಯಂಧಕೇಶ್ವರಃ । ಶಕ್ರಾದಯೋ ಲೋಕಪಾಲಾ ಯಸ್ಯಾದೇಶಾನುವರ್ತಿನಃ ॥೩೪॥
ಸುಧರ್ಮಾಕ್ರಮ್ಯತೇ ಯೇನ ಪಾರಿಜಾತೋಽಮರಾಂಘ್ರಿಪಃ । ಆಹೃತ್ಯ ಭುಜ್ಯತೇ ಸೋಽಸೌ ನ ಕಿಲಾಧ್ಯಾಸನಾ
ರ್ಹಣಃ ॥೩೫॥ ಯಸ್ಯ ಪಾದಯುಗಂ ಸಾಕ್ಷಾಚ್ಛ್ರೀರುಪಾಸ್ತೇಽಖಿಲೇಶ್ವರೀ । ಸ ನಾರ್ಹತಿ ಕಿಲ ಶ್ರೀಶೋ ನರ

---

ಹೆಮ್ಮೆಗೊಂಡವರಾದ, ಅಸಾಧವಃ-ದುರ್ಜನರು, ಶಾಂತಿಂ-ಸಮಾಧಾನವನ್ನು, ನೇಚ್ಛಂತಿ-ಬಯಸುವುದಿಲ್ಲ. ನೂನಂ-ನಿಶ್ಚಯವೆಂದು ಭಾವಿಸುತ್ತೇನೆ. ಪಶೂನಾಂ-ಮೂಢಜಂತುಗಳಿಗೆ, ಲಗುಡೋ ಯಥಾ-ದೊಣ್ಣೆಯ ಪೆಟ್ಟು ಹೇಗೋ ಹಾಗೆ, ತೇಷಾಂ-ಆ ದುರ್ಜನರಿಗೆ, ದಂಡಃ-ಶಿಕ್ಷೆಯೇ, ಪ್ರಶಮೋ ಹಿ-ಶಾಂತಿಕರವಾಗಿರುವುದಲ್ಲವೆ ॥೩೧॥ ಅಹೋ-ಆಶ್ಚರ್ಯವು. ಸುಸಂರಬ್ಧಾನ್-ಚೆನ್ನಾಗಿ ಯುದ್ಧೋದ್ಯೋಗವಂಗೈಯುತ್ತಿರುವ, ಯದೂನ್-ಯಾದವರನ್ನೂ, ಕುಪಿತಂ-ಸಿಟ್ಟುಂಟಾದ, ಕೃಷ್ಣಂ ಚ-ಹರಿಯನ್ನೂ, ಅಹಂ-ನಾನು, ಶನೈಃ-ಮೆಲ್ಲಗೆ, ಸಾಂತ್ವಯಿತ್ವಾ-ಸಮಾಧಾನಗೊಳಿಸಿ, ಏತೇಷಾಂ-ಈ ಕೌರವರ ವಿಷಯದಲ್ಲಿ, ಶಮಂ-ಸಮಾಧಾನವನ್ನು, ಇಚ್ಛನ್-ಬಯಸಿದವನಾಗಿ, ಇಹ-ಇಲ್ಲಿಗೆ, ಆಗತಃ-ಬಂದವನಾದೆನು ॥೩೨॥ ತ ಇಮೇ-ಆ ಈ ಕೌರವರು, ಮಂದಮತಯಃ-ಅಲ್ಪಬುದ್ಧಿಗಳೂ, ಕಲಹಾಭಿರತಾಃ-ಜಗಳದಲ್ಲಿ ಆಸಕ್ತರೂ, ಖಲಾಃ-ದುಷ್ಟರೂ, ಮಾನಿನಃ-ಗರ್ವವುಳ್ಳವರೂ ಆದ್ದರಿಂದ ತಂ ಮಾಂ-ಆ ನನ್ನನ್ನು, ಅವಜ್ಞಾಯ-ಅವಮಾನಗೊಳಿಸಿ, ದುರ್ಭಾಷಾನ್-ಕೆಟ್ಟನುಡಿಗಳನ್ನು, ಅಬ್ರುವನ್-ನುಡಿದರು ॥೩೩॥ ಶಕ್ರಾದಯಃ-ಇಂದ್ರನು ಮೊದಲಾದ, ಲೋಕಪಾಲಾಃ-ಭುವನಾಧಿಪತಿಗಳು, ಯಸ್ಯ-ಯಾವರಾಯನ, ಆದೇಶಾನುವರ್ತಿನಃ-ಆಜ್ಞೆಯನ್ನು ಅನುವರ್ತಿಸಿರುವರೋ, ಸ ಉಗ್ರಸೇನಃ-ಆ ಉಗ್ರಸೇನರಾಯನು, ಭೋಜವೃಷ್ಣ್ಯಂಧಕೇಶ್ವರಃ-ಭೋಜರಿಗೂ ವೃಷ್ಣಿಗಳಿಗೂ ಅಂಧಕರಿಗೂ ಒಡೆಯನಾದರೂ, ವಿಭುಃ-ದೊರೆಯು, ನ ಕಿಲ-ಅಲ್ಲವಂತೆ, ॥೩೪॥ ಯೇನ-ಯಾವವನಿಂದ, ಸುಧರ್ಮಾ-ದೇವಸಭೆಯು, ಆಕ್ರಮ್ಯತೇ-ಮೆಟ್ಟಿಕೊಳ್ಳಲ್ಪಡುವುದೋ, ಅಮರಾಂಘ್ರಿಪಃ-ದೇವವೃಕ್ಷವಾದ, ಪಾರಿಜಾತಃ-ಪಾರಿಜಾತವು, ಆಹೃತ್ಯ-ಬಲಾತ್ಕಾರದಿಂದಪಹರಿಸಿ, ಭುಜ್ಯತೇ-ಅನುಭವಿಸಲ್ಪಡುತ್ತಿದೆಯೋ, ಸೋಽಸೌ-ಆ ಈ ಉಗ್ರಸೇನರಾಯನು, ಅಧ್ಯಾಸನಾರ್ಹಣಃ-ರಾಜಪೀಠಸಮ್ಮಾನವುಳ್ಳವನು, ನ ಕಿಲ-ಅಲ್ಲವಂತೆ ॥೩೫॥ ಅಖಿಲೇಶ್ವರೀ-ಎಲ್ಲರಿಗೂ ಒಡತಿಯಾದ, ಶ್ರೀಃ-ಲಕ್ಷ್ಮೀದೇವಿಯು, ಯಸ್ಯ-ಯಾವವನ, ಪಾದಯುಗಂ-ಅಡಿಗಳೆರಡರನ್ನೂ, ಸಾಕ್ಷಾತ್-ಪ್ರತ್ಯಕ್ಷವಾಗಿ, ಉಪಾಸ್ತೇ-ಸೇವಿಸುತ್ತಿರುವಳೋ, ಸ ಶ್ರೀಶಃ-

---

ಳಿಂದುಂಟಾದ ನಾನಾ ವಿಧಂಗಳಾದ ಗರ್ವಂಗಳಿಂದುದ್ಧತರಾದ ದುಷ್ಟರು ಶಾಂತಿಯಂ ನಿಶ್ಚಯಿಸುವುದಿಲ್ಲ ಆ ಕಾರಣದಿಂದ ಪಶುಗಳಿಗೆ ದಂಡದಂತೆ ದುಷ್ಟರಿಗೆ ನಿಗ್ರಹವೇ ನಿಶ್ಚಯವಾಗಿ ಉಪಶಾಂತಿಯಂ ಕಲ್ಪಿಸುವುದು ॥೩೧॥ ಎಲೈ ನೋಡಿದಿರಾ, ನಾನು ಯುದ್ಧಸನ್ನದ್ಧರಾದ ಯಾದವರಂ ಕೋಪಯುಕ್ತನಾದ ಕೃಷ್ಣನಂ ಸಹ ಮೆಲ್ಲಮೆಲ್ಲನೆ ಸಮಾಧಾನಂಗೆಯ್ದು ಈ ಕೌರವರ ಸಂಧಿಯಂ ಅಪೇಕ್ಷಿಸುತಲಿರುವವನಾಗಿ ಇಲ್ಲಿಗೆ ಬಂದವನಾದೆನು ॥೩೨॥ ಈಗಲೀ ಕೌರವರು ಮೂಢವಾದ ಬುದ್ಧಿಯುಳ್ಳವರಾಗಿ ಕಲಹದಲ್ಲಿಯೆ ಆಸಕ್ತರಾಗಿ ಗರ್ವಿತರಾಗಿಯೂ ಆನನ್ನಂ ತಿರಸ್ಕರಿಸಿ ಬಾರಿ ಬಾರಿಗೂ ದುರ್ವಚನಂಗಳಂ ನುಡಿದರದೆಂತೆನೆ ॥೩೩॥ ಇಂದ್ರಾದಿ ಲೋಕಪಾಲಕರು ಕೂಡ ಯಾವವನ ಆಜ್ಞಾಪಾಲಕರಾಗಿರುವರೋ, ಭೋಜರಿಗೆ ವೃಷ್ಣಿಗಳಿಗೆ ಅಂಧಕರಿಗೂ ಕೂಡ ನಿಯಾಮಕನಾದ ಅಂತಾ ಉಗ್ರಸೇನರಾಯನೂ ಕೂಡ ಇವರಂ ಕುರಿತು ಆಜ್ಞಾಪಿಸುವುದಕ್ಕೆ ಸಮರ್ಥನಲ್ಲವಲ್ಲ ॥೩೪॥ ಮತ್ತು ಯಾವವನಿಂ ಸುಧರ್ಮೆಯೆಂಬ ದೇವಸಭಾಸ್ಥಾನವು ಆಕ್ರಮಿಸಲ್ಪಟ್ಟಿದೆಯೋ, ಯಾವವನಿಂದ ಪಾರಿಜಾತವೆಂಬ ದೇವತಾ ವೃಕ್ಷವು ಸ್ವರ್ಗದಿಂದ ತಂದು ಅನುಭವಿಸಲ್ಪಡುತಲಿದೆಯೋ, ಅಂತಾ ಶ್ರೀಕೃಷ್ಣನೂ ಕೂಡ ಸಿಂಹಾಸನಕ್ಕೆ ಯೋಗ್ಯನಲ್ಲವಲ್ಲ ॥೩೫॥ ಮತ್ತು ಸರ್ವೇಶ್ವರಿಯಾದ ಸಾಕ್ಷಾಲ್ಲಕ್ಷ್ಮಿಯು ಯಾವವನ ಪಾದಯುಗ್ಮವಂ ಸೇವಿಸುತಿರುವಳೋ ಅಂತಾ ಲಕ್ಷ್ಮೀಪತಿಯಾದ ಶ್ರೀಕೃಷ್ಣನಿಗೆ ಛತ್ರಚಾಮರಾದಿ ಚಿಹ್ನಂಗಳಾಗುವುದಿಲ್ಲವಂತೆ

ಜೇನಪರಿಚ್ಛದಾನ್ ॥೩೬॥ ಯಸ್ಯಾಂಘ್ರಿಪಂಕಜರಜೋಖಿಲಲೋಕಪಾಲೈರ್ಮೌಳ್ಯುತ್ತಮೈರ್ಧೃತಮುಪಾಸಿತತೀರ್ಥತೀರ್ಥಮ್ । ಬ್ರಹ್ಮಾಭವೋಹಮಪಿಯಸ್ಯಕಲಾಃಕಲಾಯಾಃ ಶ್ರೀಶ್ಚೋದ್ವಹೇಮಚಿರಮಸ್ಯನೃಪಾಸನಂಕ್ವ ॥೩೭॥ ಭುಂಜತೇಕುರುಭಿರ್ದತ್ತಂಭೂಖಂಡಂಕಿಲವೃಷ್ಣಯಃ। ಉಪಾನಹಃಕಿಲವಯಂಸ್ವಯಂತುಕುರವಶ್ಶಿರಃ ॥೩೮॥ ಅಹೋಐಶ್ವರ್ಯಮತ್ತಾನಾಂಮತ್ತಾನಾಮಿವಮಾನಿನಾಮ್ । ಅಸಂಬದ್ಧಾಗಿರೋರೂಕ್ಷಾಃಕಸ್ಸಹೇತಾನುಶಾಸಿತಾ ॥೩೯॥ ಅದ್ಯನಿಷ್ಕೌರವಾಮುರ್ವೀಂಕರಿಷ್ಯಾಮೀತ್ಯಮರ್ಷಿತಃ । ಗೃಹೀತ್ವಾಹಲಮುತ್ತಸ್ಥೌದಹನ್ನಿವಜಗತ್ತ್ರಯಮ್ ॥೪೦॥ ಲಾಂಗಲಾಗ್ರೇಣನಗರಮುದ್ವಿದಾರ್ಯ

---

ಆಲಕ್ಷ್ಮೀಪತಿಯಾದಕೃಷ್ಣನೂಕೂಡ, ನರದೇವಪರಿಚ್ಛದಾನ್-ರಾಜಚಿಹ್ನೆಗಳಾದವಿರುವಗಳನ್ನು, ನಾರ್ಹತಿಕಿಲ-ಪಡೆಯುವುದಕ್ಕೆಯೋಗ್ಯನಾಗಲ್ಲವಂತೆ ॥೩೬॥ ಉಪಾಸಿತತೀರ್ಥತೀರ್ಥಂ-ಸೇವಿಸಲ್ಪಟ್ಟ ಪುಣ್ಯಜಲಂಗಳಿಗೂ ಯೋಗಿಗಳಿಗೂ ಪವಿತ್ರಕರವಾದ, ಯಸ್ಯ-ಯಾವಕೃಷ್ಣನ, ಅಂಘ್ರಿಪಂಕಜರಜಃ-ಅಡಿದಾವರೆಗಳಧೂಳಿ, ಅಖಿಲಲೋಕಪಾಲೈಃ-ಸಕಲದಿಕ್ಪಾಲಕನುರಂಬವಲೂ, ಮೌಳ್ಯುತ್ತಮೈಃ-ಶ್ರೇಷ್ಠಂಗಳಾದ ಕಿರೀಟಂಗಳುಳ್ಳ ತಲೆಗಳಿಂದ, ಧೃತಂ-ಧರಿಸಲ್ಪಟ್ಟಿದೆಯೋ, ಬ್ರಹ್ಮಾ-ಚತುರ್ಮುಖನೂ ಭವಃ-ರುದ್ರನೂ, ಅಹಮಪಿ-ಶೇಷನಾದನಾನೂ, ಶ್ರೀಶ್ಚ-ಲಕ್ಷ್ಮಿಯುಕೂಡ. ಯಸ್ಯ-ಯಾವವನ, ಕಲಾಯಾಃ-ವಿಭೂತ್ಯಂಶದ, ಕಲಾಃ-ಭಾಗಗಳನ್ನು, ಚಿರಂ-ಬಹುಕಾಲವು, ಉದ್ವಹೇಮ-ಧರಿಸುತ್ತಿರುವೆವೋ, ಅಸ್ಯ-ಆಯೀಶ್ರೀಕೃಷ್ಣಂಗೆ, ನೃಪಾಸನಂ-ರಾಜಪೀಠವು, ಕ್ವ-ಎಲ್ಲಿರುವುದು ॥೩೭॥ ವೃಷ್ಣಯಃ-ಯಾದವರು, ಕುರುಭಿರ್ದತ್ತಂ-ಕೌರವರಿಂದ ಕೊಡಲ್ಪಟ್ಟ, ಭೂಖಂಡಂ-ನೆಲದಭಾಗವನ್ನು, ಭುಂಜತೇಕಿಲ-ಅನುಭವಿಸುತ್ತಿರುವರಂತೆ, ವಯಂ-ನಾವು, ಉಪಾನಹಃಕಿಲ-ಕೆರವಂತೆ, ಕುರುವಸ್ತು-ಕೌರವರಾದರೋ, ಸ್ವಯಂ-ತಾವೇ, ಶಿರಃ-ತಲೆಯಂತೆ ॥೩೮॥ ಅಹೋ ಆಶ್ಚರ್ಯವು, ಐಶ್ವರ್ಯಮತ್ತಾನಾಂ-ಐಶ್ವರ್ಯಮದದಿಂದ ಕೊಬ್ಬಿದವರಾದ, ಮತ್ತಾನಾಮಿವ-ಹುಚ್ಚುಹಿಡಿದಿರುವ, ಮಾನಿನಾಂ-ಹೆಮ್ಮೆಯುಳ್ಳವರ, ರೂಕ್ಷಾಃ-ಕಠಿನಂಗಳಾದ, ಅಸಂಬದ್ಧಗಿರಃ-ಅಸಂಗತವಾದಮಾತುಗಳನ್ನು, ಅನುಶಾಸಿತಾ-ಶಿಕ್ಷಕನಾದ, ಕಃ-ಯಾವಪುರುಷನು, ಸಹೇತ-ಸೈರಿಸಿಕೊಂಡಾನು ॥೩೯॥ ಅದ್ಯ-ಈಗ, ಉರ್ವೀಂ-ಭೂಮಿಯನ್ನು, ನಿಷ್ಕೌರವಾಂ-ಕೌರವರಿಲ್ಲದ್ದನ್ನಾಗಿ, ಕರಿಷ್ಯಾಮಿ-ಮಾಡುವೆನು, ಇತಿ-ಹೀಗೆಂದು, ಅಮರ್ಷಿತಃ-ಸಿಟ್ಟುಂಟಾದರಾಮನು, ಹಲಂ-ನೇಗಿಲನ್ನು, ಗೃಹೀತ್ವಾ-ತೆಕ್ಕೊಂಡು, ಜಗತ್ತ್ರಯಂ-ಮೂರುಲೋಕಂಗಳನ್ನೂ, ದಹನ್ನಿವ-ಸುಡುತಿರುವನಂತೆ, ಉತ್ತಸ್ಥೌ-ಎದ್ದುನಿಂತನು ॥೪೦॥ ಆಬಲರಾಮನು, ಅಮರ್ಷಿತಃ-ಸಿಟ್ಟುಂಟಾದವನಾಗಿ, ಲಾಂಗಲಾಗ್ರೇಣ-ನೇಗಿಲತುದಿಯಿಂದ, ಗಜಾಹ್ವಯಂನಗರಂ-ಹಾಸ್ತಿನಪುರವನ್ನು, ಉದ್ವಿದಾರ್ಯ-ಅಗಿದು, ಗಂಗಾಯಾಂ-ಭಾಗೀರಥಿಯಲ್ಲಿ, ಪ್ರಹರಿಷ್ಯನ್-ಹಾಕಿಬಿಡುವನಾಗಿ, ವಿಚಕರ್ಷ-ಎಳೆದನು ॥೪೧॥ ಗಂಗಾಯಾಂ-ಗಂಗೆಯಲ್ಲಿ, ಪತತ್-ಬೀಳುತ್ತಿರುವ, ನ

---

ಕಟ ಕಟಾ! ನೋಡಿದಿರಾ ॥೩೬॥ ಮತ್ತು ಇಂದ್ರಾದಿ ಸಮಸ್ತ ಲೋಕ ಪಾಲಕರು ಕಿರೀಟ ಯುಕ್ತಂಗಳಾದ ಶಿರಸ್ಸುಗಳಿಂಧರಿಸಲ್ಪಟ್ಟದ್ದಾಗಿ, ಸಮಸ್ತರಿಂ ಸೇವಿಸಲ್ಪಡುವ ಗಂಗಾ ನದಿಗೂ ಕೂಡ ತೀರ್ಥತ್ವಕ್ಕೆ ಕಾರಣವಾಗಿಯೂ, ಇರುವ ಯಾವವನ ಪಾದ ಪದ್ಮರಜಸ್ಸಂ ಯಾವವನ ಅಂಶಾಂಶ ಭೂತರಾದ ಬ್ರಹ್ಮ ರುದ್ರ ಲಕ್ಷ್ಮಿಗಳು ನಾನು ಈ ನಾವೆಲ್ಲರೂ ಬಹು ಕಾಲದಿಂದ ವಹಿಸುತಲಿರುವೆವೋ, ಅಂತಾ ಯಿಾ ಶ್ರೀಕೃಷ್ಣನಿಗೆ ಸಿಂಹಾಸನವೆಲ್ಲಿ ಬರುವುದು? ॥೩೭॥ ಮತ್ತು ಕೌರವರಿಂ ಕುಡಲ್ಪಟ್ಟ ಭೂಮಂಡಲವಂ ಯಾದವರು ಆಳುತಲಿದಾರೆಯಲ್ಲ-ಮತ್ತು ನಾವು ಪಾದರಕ್ಷೆಗಳಂತೆ, ಕೌರವರಾದರೋ ಶಿರಸ್ಸುಗಳಾಗುತಲಿದಾರೆ ಯಂತೆ, ಕೇಳಿದಿರಾ? ॥೩೮॥ ಮದ್ಯಾದಿಗಳಿಂ ಮದಿಸಿರುವಂತೆ, ಐಶ್ವರ್ಯದಿಂ ಮತ್ತರಾದ ಗರ್ವಿತರಾದ ಕೌರವರ ಕಠಿನಗಳಾದ ಅಯಾ ಸಂಬಂಧ ವಚನಂಗಳಂ ಯಾವ ಪುರುಷನು ತಾನು ಶಿಕ್ಷಕನಾಗಿಯೂ ಸಹಿಸುವನಾದಾನು ಕಟ ಕಟಾ ॥೩೯॥ ಈಗ ಭೂಮಿಯಂ ಕೌರವರಿಂರಹಿತವಾದ್ದನ್ನಾಗಿ ಮಾಡುತ್ತೇನೆ. ಎಂದು ಈ ರೀತಿಯಲ್ಲಿ ಅತ್ಯಂತ ಕೋಪಯುಕ್ತನಾದ ಬಲರಾಮನು ಮೂರು ಲೋಕಂಗಳಂದಹಿಸುವನಂತೆ ಹಲಾಯುಧವಂ ಪಿಡಿದು ಮೇಲಕ್ಕೆ ಯೆದ್ದನು ॥೪೦॥ ಅನಂತರದಲ್ಲಿ ರಾಮನು ಕೋಪಯುಕ್ತನಾಗಿ ಆ ಹಸ್ತಿನಾಪುರವಂ ಗಂಗೆಯಲ್ಲಿ ಕೆಡಹುವನಾಗಿ ದಕ್ಷಿಣಭಾಗದಲ್ಲಿ ಕೋಟೆಯು ಬಾಡದೊ

ಗಜಾಹ್ವಯಂ।ವಿಚಕರ್ಷಸಗಂಗಾಯಾಂಪ್ರಹರಿಷ್ಯನ್ನಮರ್ಷಿತಃ॥೪೧॥ಜಲಯಾನಮಿವಾಘೂರ್ಣಂ
ಗಂಗಾಯಾಂನಗರಂಪತತ್ ।ಆಕೃಷ್ಯಮಾಣಮಾಲೋಕ್ಯಕೌರವಾಜಾತಸಂಭ್ರಮಾಃ ॥ ತಮೇವಶರಣಂ
ಜಗ್ಮುಸ್ಸಕುಟುಂಬಾಜಿಜೀ*ವಿಷವಃ॥೪೨॥ಸಲಕ್ಷ್ಮಣಂಪುರಸ್ಕೃತ್ಯಸಾಂಬಂಪ್ರಾಂಜಲಯೋಬ್ರುವನ್ ।
ರಾಮರಾಮಾಖಿಲಾಧಾರಪ್ರಭಾವಂನವಿದಾಮತೇ॥೪೩॥ಮೂಢಾನಾಂನಃಕುಬುದ್ಧೀನಾಂಕ್ಷಂತುಮರ್ಹ
ಸ್ಯಧೀಶ್ವರ । ಸ್ಥಿತ್ಯುತ್ಪತ್ತ್ಯಪ್ಯಯಾನಾಂತ್ವಮೇಕೋಹೇತುರ್ನಿರಾಶ್ರಯಃ ॥ಲೋಕಾನ್ಕ್ರೀಡನಕಾನೀ
ಶಕ್ರೀಡತಸ್ತೇವದಂತ್ಯಜಾಃ ॥೪೪॥ ತ್ವಮೇವಮೂರ್ಧ್ನೀದಮನಂತಲೀಲಯಾಭೂಮಂಡಲಂ*ಬಿಭರ್ಷಿಸ
ಹಸ್ರಮೂರ್ಧನ್ । ಅಂತೇಚಯಸ್ಸ್ವಾತ್ಮನಿರುದ್ಧವಿಶ್ವಶ್ಶೇಷೇಽದ್ವಿತೀಯಃಪರಿಶಿಷ್ಯಮಾಣಃ ॥೪೫॥

---

ಗರಂ-ಗಜಪುರವು, ಜಲಯಾನಮಿವ-ಹರಿಗೋಲಿನಂತೆ, ಆಘೂರ್ಣಂ-ತಿರುಗುತ್ತಿರುವುದಾಗಿ, ಆಕೃಷ್ಯಮಾಣಂ ಎಳೆಯಲ್ಪಡುತ್ತಿರುವುದನ್ನು, ಆಲೋಕ್ಯ-ನೋಡಿ ಜಾತಸಂಭ್ರಮಾಃ-ಉಂಟಾದತ್ವರೆಯೂ ಭಯವೂ ಉಳ್ಳವರಾದ, ಕೌರವಾಃ-ಕೌರವರು, ಜಿಜೀವಿಷವಃ-ಬದುಕಲೆಳಸಿದವರಾಗಿ ಸಕುಟುಂಬಾಃ-ಪೋಷ್ಯವರ್ಗಗಳಿಂ ಸಹಿತರಾಗಿ, ತಮೇವ-ಆಬಲದೇವನನ್ನೇ, ಶರಣಂ-ರಕ್ಷಕನನ್ನಾಗಿಭಾವಿಸಿ, ಜಗ್ಮುಃ-ಅವನಬಳಿಗೆಯ್ದಿದರು ॥೪೨॥ ಪ್ರಾಂಜಲಯಃ-ಕೈಗಳಂಜೋಡಿಸಿಕೊಂಡವರಾದಕೌರವರು, ಸಲಕ್ಷ್ಮಣಂ-ಲಕ್ಷಣಾದೇವಿಯಿಂ ಸಹಿತನಾದ, ಸಾಂಬಂ-ಜಾಂಬವತೀ ಪುತ್ರನನ್ನು, ಪುರಸ್ಕೃತ್ಯ-ಬಲರಾಮನಮುಂದೆತಂದುಬಿಟ್ಟು, ಅಬ್ರುವನ್-ನುಡಿದರು. ಅಖಿಲಾಧಾರ-ಸರ್ವಕ್ಕೂ ಆಶ್ರಯನಾದ, ರಾಮ-ಆತ್ಮನಲ್ಲಿ ಸುಖಿಸುತ್ತಿರುವವನಾದ, ರಾಮ-ಬಲದೇವನೇ! ತೇ-ನಿನ್ನ, ಪ್ರಭಾವಂ-ಸಾಮರ್ಥ್ಯವನ್ನು, ನವಿದಾಮ-ಅರಿಯೆವು ॥೪೩॥ ಅಧೀಶ್ವರ-ಒಡೆಯರಿಗೊಡೆಯನೇ! ಮೂಢಾನಾಂ-ಅಜ್ಞಾನಿಗಳಾದ, ಕುಬುದ್ಧೀನಾಂ-ದುರ್ಬುದ್ಧಿಯುಳ್ಳವರಾದ, ನಃ-ನಮ್ಮವಿಷಯದಲ್ಲಿ, ಕ್ಷಂತುಂ-ಸೈರಿಸುವುದಕ್ಕೆ ಅರ್ಹಸಿ-ಯೋಗ್ಯನಾಗುವಿ. ತ್ವಮೇಕಃ-ನೀನೊಬ್ಬನೇ, ಸ್ಥಿತ್ಯುತ್ಪತ್ತ್ಯಪ್ಯಯಾನಾಂ-ಪ್ರಪಂಚದ ರಕ್ಷಣಕ್ಕೂ ಸೃಷ್ಟಿಗೂ ನಾಶಕ್ಕೂ, ಹೇತುಃ-ಕಾರಣವಾದವನು, ನಿರಾಶ್ರಯಃ-ಬೇರೆ ಆಧಾರವಿಲ್ಲದವನು, ಈಶ-ಒಡೆಯನೇ ಅಜಾಃ-ಋಷಿಗಳು, ಕ್ರೀಡತಃ-ಆಡುತ್ತಿರುವ, ತೇ-ನಿನ್ನ, ಕ್ರೀಡನಕಾನ್-ಆಟದ ಸಾಮಗ್ರಿಗಳನ್ನಾಗಿ. ಲೋಕಾನ್-ಭುವನಗಳನ್ನು, ವದಂತಿ-ಹೇಳುತ್ತಿದ್ದಾರೆ॥೪೪॥ಸಹಸ್ರ ಮೂರ್ಧನ್-ಸಾವಿರ ತಲೆಗಳುಳ್ಳ, ಅನಂತ-ನಾಶರಹಿತನಾದ ಸಂಕರ್ಷಣನೇ ಇದಂ ಭೂಮಂಡಲಂ-ಈ ಭೂಗೋಳವನ್ನೂ, ತ್ವಮೇವ-ನೀನೇ, ಮೂರ್ಧ್ನಿ-ತಲೆಯಲ್ಲಿ, ಲೀಲಯಾ-ವಿಲಾಸದಿಂದ, ಬಿಭರ್ಷಿ-ಧರಿಸುತ್ತಿರುವಿ, ಅಂತೇಚ-ಪ್ರಳಯದಲ್ಲಿಯೂ, ಯಃ-ಯಾವ ಪುರುಷನಾದನೀನು, ಸ್ವಾತ್ಮನಿ-ತನ್ನ ಸ್ವರೂಪದಲ್ಲಿ, ನಿರುದ್ಧವಿಶ್ವಃ-ಅಡಗಿದ ಪ್ರಪಂಚವುಳ್ಳವನಾದ್ದರಿಂದ, ಪರಿಶಿಷ್ಯಮಾಣಃ-ಒಬ್ಬನೇ ಮಿಕ್ಕವನಾಗಿಯೂ, ಅದ್ವಿತೀಯಃ-ಎರಡನೆಯ ವಸ್ತುವಿಲ್ಲದವನಾಗಿಯೂ, ಶೇಷೇಚ-ಮಲಗುತ್ತಲೂ ಇರುವೆಯೋ॥೪೫॥ಬಲ-ಬಲಭದ್ರನೇ ಸರ್ವೇಷಾಂ-ಎಲ್ಲರ, ಶಿಕ್ಷಾರ್ಥಂ-ನಿಗ್ರಹಕ್ಕೋಸ್ಕರ, ತೇ-ನಿನ್ನ, ಕೋಪಃ-ಸಿ

---

ಳಿಗೆ ನೆಡಲ್ಪಟ್ಟ ನೇಗಲಿನ ಅಗ್ರದಿಂ ಸೆಳೆದನು ॥೪೧॥ ಬಳಿಕ ಕೌರವರು ರಾಮನಿಂದ ಸೆಳೆಯಲ್ಪಡುತ್ತಲಿರುವವರಾದ ಕಾರಣದಿಂದ ಹಡಗಿನಂತೆ ಗಂಗೆಯಲ್ಲಿ ವ್ಯಾಕುಲವಾಗಿ ಬೀಳುತ್ತಲಿರುವ ಹಸ್ತಿನಾಪುರವಂ ನೋಡಿ ಅತ್ಯಂತ ಭಯವುಳ್ಳವರಾಗಿ, ಮತ್ತು ಕುಟುಂಬ ಯುಕ್ತರಾಗಿ ॥೪೨॥ ಜೀವಿಸಲಿಚ್ಛೆಯುಳ್ಳವರಾಗಿ ಲಕ್ಷ್ಮಣಾದೇವಿಯಿಂದ ಯುಕ್ತನಾದ ಸಾಂಬನಂ ಮುಂದುಗಡೆಯಲ್ಲಿರಿಸಿಕೊಂಡು ಅಂಜಲಿ ಬಂಧ ಯುಕ್ತರಾಗಿ ಪ್ರಭುವಾದ ಆ ರಾಮನನ್ನೇ ಶರಣುಹೊಂದಿದರು- ಸಕಲ ಲೋಕಂಗಳಿಗೂ ಆಧಾರಭೂತನಾದ ಎಲೈ, ರಾಮನೇ! ಎಲೈ, ರಾಮನೇ! ನಿನ್ನ ಪ್ರಭಾವವಂ ನಾವು ತಿಳಿದವರಲ್ಲ ॥೪೩॥ ನಿಂದಿತವಾದ ಬುದ್ಧಿಯುಳ್ಳ ಮೂಢರಾದ ನಮ್ಮ ಅಪರಾಧವಂ ನೀನು ಕ್ಷಮಿಸುವವನಾಗು ಎಲೈ ಯೀಶ್ವರನೇ! ಆಶ್ರಯರಹಿತನಾದ ನೀನೊಬ್ಬನೇ ಜಗತ್ತಿನ ಉತ್ಪತ್ತಿಸ್ಥಿತಿಲಯಂಗಳಿಗೆ ಕಾರಣನಾಗುತ್ತೀಯೆ, ಮತ್ತು ಕ್ರೀಡಿಸುತ್ತಲಿರುವ ನಿನಗೆ ಈ ಲೋಕಂಗಳಂ ಕ್ರೀಡಾಸ್ಥಾನಂಗಳನ್ನಾಗಿ ಋಷಿಗಳು ಹೇಳುತ್ತಲಿರುವರು ॥೪೪॥ ಸಹಸ್ರ ಶಿರಸ್ಸುಗಳುಳ್ಳ ಎಲೈ ಅನಂತನೇ! ಲೀಲೆಯಿಂದಲೇ ಒಂದು ಶಿರಸ್ಸಿನಲ್ಲಿ ಈ ಭೂಮಂಡಲವು ಧರಿಸಿರುವಿ, ಮತ್ತು ಪ್ರಳಯ ಕಾಲದಲ್ಲಿ ಯಾವವನು ತನ್ನಲ್ಲಿ ಉಪಸಂಹಾರಂಗೆಯ್ಯಲ್ಪಟ್ಟ ಸಮಸ್ತ ಲೋಕಂಗಳುಳ್ಳವನಾಗಿ ಅದ್ವಿತೀಯನಾಗಿ ಶೇಷಶಯನದಲ್ಲಿ ಒಬ್ಬನೇ ಅವಶಿಷ್ಟನಾಗಿ ನಿಲ್ಲುವನೋ ಆ ಆದಿನಾರಾಯಣನು ನೀನಾಗುತಲಿರುವಿ ॥೪೫॥ ಮತ್ತು ಸತ್ವ

ಕೋಪಸ್ತೇಬಲಶಿಕ್ಷಾರ್ಥಂಸರ್ವೇಷಾಂನಚಮತ್ಸರಾತ್ । ಬಿಭ್ರತೋಭಗವನ್ಸತ್ತ್ವಂಕ್ಷಿತಿಪಾಲನತತ್ಪರಃ॥
ನಮಸ್ತೇಸರ್ವಭೂತಾತ್ಮನ್ಸರ್ವಶಕ್ತಿಧರಾವ್ಯಯ । ವಿಶ್ವಕರ್ಮನ್ನಮಸ್ತೇಸ್ತುತ್ವಾಂವಯಂಶರಣಂಗ
ತಾಃ॥೪೬॥ಏವಂಪ್ರಪನ್ನೈಸ್ಸಂವಿಗ್ನೈರ್ವೇಪಮಾನಾಯನೈರ್ಬಲಃ । ಪ್ರಸಾದಿತಸ್ಸುಪ್ರಸನ್ನೋ ಮಾ
ಭೈಷ್ಟೇತ್ಯಭಯಂದದೌ ॥೪೭॥ ದುರ್ಯೋಧನಃಪಾರಿಬರ್ಹಂಕುಂಜರಾನ್‌ಷಷ್ಟಿಹಾಯನಾನ್ । ದದೌ
ದ್ವಾದಶಸಾಹಸ್ರಮಯುತಾನಿತುರಂಗಮಾನ್ ॥೪೮॥ರಥಾನಾಂಷಟ್ಸಹಸ್ರಾಣಿರೌಕ್ಮಾಣಾಂಸೂರ್ಯವ
ರ್ಚಸಾಮ್।ದಾಸೀನಾಂನಿಷ್ಕಕಂಠೀನಾಂಸಹಸ್ರಂದುಹಿತೃವತ್ಸಲಃ॥೪೯॥ಪ್ರತಿಗೃಹ್ಯತುತತ್ಸರ್ವಂಭಗ

---

ಟ್ಟಾಗಿರುವುದು, ಭಗವನ್-ಷಡ್ಗುಣೈಶ್ವರ್ಯ ಸಂಪನ್ನನೇ, ಕ್ಷಿತಿಪಾಲನತತ್ಪರಃ-ಭೂಮಿಯನ್ನು ರಕ್ಷಿಸುವುದರಲ್ಲಿ ಆಸಕ್ತನಾದವನೇ ಸತ್ವಂ-ಸತ್ವ ಗುಣವನ್ನು, ಬಿಭ್ರತಃ-ಧರಿಸಿರುವ, ತೇ-ನಿನ್ನ, ಸಿಟ್ಟು ಮತ್ಸರಾತ್-ಹೊಟ್ಟೆಕಿಚ್ಚಿನ ದೆಸೆಯಿಂದ,ನ-ಅಲ್ಲವು ॥೪೬॥ ಸರ್ವ ಭೂತಾತ್ಮನ್-ಸಕಲ ಪ್ರಾಣಿಗಳಿಗೂ ಆತ್ಮನಾಗಿರುವನೇ ತೇ-ನಿನಗೆ, ನಮಃ-ನಮಸ್ಕಾರವಾಗಲಿ, ಸರ್ವ ಶಕ್ತಿಧರ-ಸಕಲ ಸಾಮರ್ಥ್ಯಂಗಳಂ ವಹಿಸಿದವನೇ, ಅವ್ಯಯ-ನಾಶರಹಿತನೇ, ವಿಶ್ವಕರ್ಮನ್-ಪ್ರಪಂಚವಂ ಮಾಡಿದವನೇ, ತೇ-ನಿನಗೆ, ನಮಃ-ಪ್ರಣಾಮವು, ಅಸ್ತು-ಆಗಲಿ, ವಯಂ-ನಾವು, ತ್ವಾಂ-ನಿನ್ನನ್ನು, ಶರಣಂ-ರಕ್ಷಕನನ್ನಾಗಿ. ಗತಾಃ-ಸೇರ್ಚಿ ಬಂದವರಾಗಿರುವೆವು ॥೪೭॥ ಏವಂ-ಹೀಗೆ, ಪ್ರಪನ್ನೈಃ-ಶರಣಾಗತರಾದಂಥಾ, ಸಂವಿಗ್ನೈಃ-ಅತಿಭಯಚಂಚಲರಾದ, ವೇಪಮಾನಾಯನೈಃ-ನಡುಗುತ್ತಿರುವ ನಗರವುಳ್ಳಂಥಾ, ಕೌರವರಿಂದ, ಪ್ರಸಾದಿತಃ-ಪ್ರಾರ್ಥಿಸಲ್ಪಟ್ಟವನಾದ, ಬಲಃ-ರಾಮನುಸುಪ್ರಸನ್ನಃ-ಚನ್ನಾಗಿ ಅನುಗ್ರಹವುಳ್ಳವನಾಗಿ, ಮಾಭೈಷ್ಟೇತಿ-ಹೆದರಬೇಡಿರೆಂದು, ಅಭಯಂ-ಭಯವಿಲ್ಲದೆಯಿರುವವರವನ್ನು, ದದೌ-ಕೊಟ್ಟನು॥೪೮॥ ದುರ್ಯೋಧನಃ-ಕುರುರಾಯನು, ಷಷ್ಟಿಹಾಯನಾನ್-೬೦ವರುಷಗಳಪ್ರಾಯವುಳ್ಳ, ಕುಂಜರಾನ್-ಆನೆಗಳನ್ನು, ದ್ವಾದಶಸಹಸ್ರಂ-೧೨ಸಾವಿರವನ್ನೂ, ತುರಂಗಮಾನ್-ಬೇಗನಡೆಯುವಕುದುರೆಗಳನ್ನು, ಅಯುತಾನಿ-೧೦ಸಾವಿರವನ್ನೂ, ಪಾರಿಬರ್ಹಂ-ಮಗಳಿಗೆಬಳುವಳಿಯನ್ನಾಗಿ, ದದೌ-ಕೊಟ್ಟನು ॥೪೯॥ ದುಹಿತೃವತ್ಸಲಃ-ಮಗಳಲ್ಲಿಪ್ರೀತಿಯುಳ್ಳದುರ್ಯೋಧನನು, ಸೂರ್ಯವರ್ಚಸಾಂ-ಸೂರ್ಯನಂತೆ ಕಾಂತಿಯುಳ್ಳ, ರೌಕ್ಮಾಣಾಂರಥಾನಾಂ-ಚಿನ್ನದತೇರುಗಳ, ಷಟ್ಸಹಸ್ರಾಣಿ-೬ಸಾವಿರಂಗಳನ್ನೂ ನಿಷ್ಕಕಂಠೀನಾಂ-ಭಂಗಾರದವರಹಾಗಳಸರಂಗಳು ಕೊರಳಲ್ಲಿವುಳ್ಳ, ದಾಸೀನಾಂ-ದಾದಿಯರ, ಸಹಸ್ರಂ-ಸಾವಿರವನ್ನೂ,ದದೌ-ಕೊಟ್ಟನು ॥೫೦॥ ಭಗವಾನ್-ಈಶ್ವರನಾದ, ಸಾತ್ವತರ್ಷಭಃ-ಯಾದವಶ್ರೇಷ್ಠನಾದ ಬಲರಾಮನು, ತತ್ಸರ್ವಂತು-ಅದೆಲ್ಲವನ್ನೂ, ಪ್ರತಿಗೃಹ್ಯ-ತೆಗದುಕೊಂಡು, ಸಸುತಃ-ಪುತ್ರನಾದಸಾಂಬನಿಂ ಸಹಿತನಾಗಿಯೂ, ಸಸ್ನುಷಃ-ಸೊಸೆಯಾದಲಕ್ಷಣೆ

---

ಗುಣವಂಧರಿಸುತ್ತಲಿರುವ ನಿನ್ನ ಲೋಕಂಗಳ ಸ್ಥಿತಿಪಾಲನಂಗಳಲ್ಲಿ ತಾತ್ಪರ್ಯವುಳ್ಳ ಕೋಪವು ದುಷ್ಟನಿಗ್ರಹಾರ್ಥವೇ ಹೊರತು, ದ್ವೇಷ ಪ್ರಯುಕ್ತವಲ್ಲ, ಮತ್ಸರ ಪ್ರಯುಕ್ತವೂ ಅಲ್ಲ ॥೪೬॥ ಸರ್ವ ಭೂತಗಳಿಗೂ ಆತ್ಮನಾಗಿ ಸಮಸ್ತ ಶಕ್ತಿಗಳಂ ಧರಿಸಿದವನಾಗಿ ವ್ಯಯರಹಿತನಾಗಿ ಪ್ರಪಂಚವೆಂಬ ವ್ಯಾಪಾರವುಳ್ಳವನಾಗಿಯೂ ಇರುವ ಎಲೈ ಹರಿಯೇ! ನಿನಗೆ ನಮಸ್ಕಾರವಾಗಲಿ, ನಾವು ನಿನ್ನಂ ಶರಣು ಹೊಂದಿದೆವು ಎಂದೀ ರೀತಿಯಲ್ಲಿ ಕೌರವರು ರಾಮನಂ ಸ್ತುತಿಸಿದರು ॥೪೭॥ ಅನಂತರದಲ್ಲಿ ಈ ರೀತಿಯಾಗಿ ಶರಣು ಹೊಂದಿರುವ ಅತಿಭೀತರಾದ ಮತ್ತು ಕಂಪಿಸುತ್ತಲಿರುವ ತಮ್ಮ ಪಟ್ಟಣವುಳ್ಳ ಕೌರವರಿಂ ಸ್ತುತಿಸಲ್ಪಡುತ್ತಲಿರುವ ರಾಮನು ಸಂತುಷ್ಟನಾಗಿ ಪ್ರಸನ್ನನಾಗಿ ಭಯಪಡುವರಾಗ ಬೇಡಿ ಯೆಂದವರಿಗೆ ಅಭಯವನ್ನಿತ್ತನು ॥೪೮॥ ಆಗ ಮಗಳಲ್ಲಿ ಅತಿವಾತ್ಸಲ್ಯವುಳ್ಳ ದುರ್ಯೋಧನನು ಅರವತ್ತು ವರುಷಗಳ ವಯಸ್ಸುಳ್ಳ ಸಾವಿರದ ಯಿನ್ನೂರು ಗಜಂಗಳಂ, ಲಕ್ಷಯಿಪ್ಪತ್ತು ಸಾವಿರ ದಶ್ವಂಗಳಂ, ॥೪೯॥ ಸುವರ್ಣಮಯವಾದ ಸೂರ್ಯತೇಜಸ್ಸಿಗೆ ಸಮಾನವಾದ ತೇಜಸ್ಸುಳ್ಳ, ಆರು ಸಾವಿರ ರಥಂಗಳಂ, ಮತ್ತು ಕಂಠಂಗಳಲ್ಲಿ ಉತ್ತಮ ಹಾರಂಗಳಂ ಧರಿಸಿರುವ ಸಾವಿರ ಮಂದಿ ದಾಸಿಯರಂ, ಇತ್ಯಾದಿ ಪದಾರ್ಥಗಳಂ ಸಹ ಮಗಳಿಗೆ ಕೊಟ್ಟನು ॥೫೦॥ ಅನಂತರದಲ್ಲಿ ಯಾದವ ಶ್ರೇಷ್ಠನಾದ ರಾಮನು ಸಮಸ್ತವಾದ ಆಯಪ ಹಾರ ದ್ರವ್ಯವಂ ಪರಿಗ್ರಹಿಸಿ, ಆ ಕೌರವರಿಂ ಶ್ಲಾಘಿಸಲ್ಪಟ್ಟವನಾಗಿ ಸೊಸೆ ಯೊಡನೆ ಪುತ್ರ ನೊಡನೆ

ವಾಃ ಸಾತ್ವತರ್ಷಭಃ । ಸಸುತಸ್ಸಸ್ನುಷಃ ಪ್ರಾಯಾತ್ಸುಹೃದ್ಭಿರಭಿನಂದಿತಃ॥೪೧॥ ತತಃ ಪ್ರವಿಷ್ಟ
ಸ್ಸ್ವಪುರಂ ಹಲಾಯುಧಸ್ಸಮೇತ್ಯ ಬಂಧೂನನುರಕ್ತಚೇತಸಃ । ಶಶಂಸ ಸರ್ವಂ ಯದುಪುಂಗವಾನಾಂ ಮ
ಧ್ಯೆ ಸಭಾಯಾಂ ಕುರುಷು ಸ್ವಚೇಷ್ಟಿತಮ್ ॥೪೨॥ ಅದ್ಯಾಪಿ ವಃ ಪುರಂ ಹ್ಯೇತತ್ಸೂಚಯದ್ರಾಮವಿಕ್ರಮ
ಮ್ । ಸಮುನ್ನತಂ ದಕ್ಷಿಣತೋ ಗಂಗಾಯಾಮನುದೃಶ್ಯತೆ ... ... ॥೪೩॥
ಇತಿ ಶ್ರೀಮದ್ಭಾಗವತೆ ದಶಮಸ್ಕಂಧೆ ಅಷ್ಟಷಷ್ಟಿತಮೋಧ್ಯಾಯಃ

---

ಯಿಃ ಸಮೇತನಾಗಿಯೂ, ಸುಹೃದ್ಭಿಃ-ಮಿತ್ರರಿಂದ, ಅಭಿನಂದಿತಃ-ಸಂತೋಷಗೊಳಿಸಲ್ಪಟ್ಟವನಾಗಿಯೂ, ಪ್ರಾಯಾತ್-ಪಯಣಗೊಂಡನು ॥೪೧॥ ತತಃ-ಆಮೇಲೆ, ಸ್ವಪುರಂ-ತನ್ನ ದ್ವಾರಕಾಪುರಿಯನ್ನು, ಪ್ರವಿಷ್ಟಃ-ಹೊಕ್ಕವನಾದ, ಹಲಾಯುಧಃ-ನೇಗಿಲಕೈದುಗಾರನಾದ ರಾಮನು, ಅನುರಕ್ತಚೇತಸಃ-ಅಕ್ಕರೆಗೊಂಡ ಮನಸ್ಸುಳ್ಳವರಾದ, ಬಂಧೂನ್-ನಂಟರನ್ನು, ಸಮೇತ್ಯ-ಹೊಂದಿ, ಯದುಪುಂಗವಾನಾಂ-ಯಾದವಶ್ರೇಷ್ಠರ, ಸಭಾಯಾಂ ಮಧ್ಯೇ-ಓಲಗದಲ್ಲಿ ನಡುವೆ, ಕುರುಷು-ಕೌರವರವಿಷಯದಲ್ಲಿ, ಸ್ವಚೇಷ್ಟಿತಂ ಸರ್ವಂ-ತನ್ನ ಕೆಲಸವೆಲ್ಲವನ್ನೂ, ಶಶಂಸ-ಶ್ಲಾಘಿಸಿಹೇಳಿದನು ॥೪೨॥ ಎಲೈ ಪರೀಕ್ಷಿತನೇ! ವಃ-ನಿಮ್ಮ, ಏತತ್ಪುರಂ-ಈ ಗಜನಗರವು, ಅದ್ಯಾಪಿ-ಈಗಲೂ ಕೂಡ, ರಾಮವಿಕ್ರಮಂ-ಬಲದೇವನ ಸಾಮರ್ಥ್ಯವನ್ನು, ಸೂಚಯತ್-ಸೂಕ್ಷ್ಮವಾಗಿ ತಿಳಿಸುತ್ತಿರುವುದಾಗಿ, ದಕ್ಷಿಣತಃ-ಟೆಂಕಲಕಡೆಗೆ, ಸಮುನ್ನತಂ-ಬಹಳ ತಿಟ್ಟೆಯಾದ್ದಾಗಿ, ಗಂಗಾಯಾಂ-ಭಾಗೀರಥಿಯಲ್ಲಿರುವಂತೆ, ದೃಶ್ಯತೇ ಹಿನನು-ಕಾಣಿಸುತ್ತಿದೆಯಲ್ಲವೆ ॥ ॥೪೩॥

ಇಂತೆಂಬಲ್ಲಿಗೆ ಶ್ರೀಭಾಗವತ ಪ್ರತಿಶಬ್ದಾರ್ಥಬೋಧಿನಿಯೆಂಬ
ಕರ್ಣಾಟಟೀಕೆಯಲ್ಲಿ ೬೮ನೆಯ ಅಧ್ಯಾಯಂ ಮುಗಿದುದು

---

ಯೂ ಕೂಡ ಯುಕ್ತನಾಗಿ ಆ ಹಸ್ತಿನಾಪುರದ ದೆಸೆ ಯಿಂದ ತೆರಳಿದನು ॥೪೧॥ ಅನಂತರದಲ್ಲಿ ರಾಮನು ದ್ವಾರಕಾಪುರವಂ ಪ್ರವೇಶಂಗೆಯ್ದವನಾಗಿ ಅನುರಾಗ ಯುಕ್ತರಾದ ಮನಸ್ಸುಳ್ಳ ಬಂಧುಗಳನೆಯ್ದಿ ಯಾದವ ಶ್ರೇಷ್ಠರ ಸಭಾಮಧ್ಯದಲ್ಲಿ ನಡೆದ ತನ್ನ ಸಮಸ್ತ ವ್ಯಾಪಾರವಂ ಪೇಳಿದನು ॥೪೨॥ ಎಲೈ ಅರಸೇ! ಕೇಳು ಈಗಲೂ ನಿಮ್ಮ ಹಸ್ತಿನಾಪುರವು ಬಲ ರಾಮನ ಪರಾಕ್ರಮವಂ ಸೂಚಿಸುತ್ತ ದಕ್ಷಿಣ ಭಾಗದಲ್ಲಿ ಉನ್ನತವಾಗಿ ಗಂಗಾ ತೀರದಲ್ಲಿ ಕಾಣಲ್ಪಡುತ್ತಲಿದೆ. ॥೪೩॥

ಇಂತು ಶ್ರೀಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸಿದನೆಂದು ಸೂತಪೌರಾಣಿ
ಕನು ನೈಮಿಶಾರಣ್ಯವಾಸಿಗಳಾದ ಶೌನಕಾದಿ ಮಹರ್ಷಿಗಳಿಗೆ ಪೇಳಿದನೆಂಬಲ್ಲಿಗೆ-ಶ್ರೀ
ಮನ್ಮಹೀಶೂರ ಪುರವರಾಧೀಶ ಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜ
ವಿರಚಿತಮಾದ "ಶ್ರೀಕೃಷ್ಣರಾಜ ವಾಣೀವಿಲಾಸ" ಮೆಂಬ ಶ್ರೀಭಾಗ
ವತ ಪುರಾಣದ ಕರ್ಣಾಟ ಭಾಷಾವ್ಯಾಖ್ಯಾನದಲ್ಲಿ
೬೮ನೆಯ ಅಧ್ಯಾಯವು ಮುಗಿದುದು.



ಶ್ರೀಕೃಷ್ಣಂಪ್ರತಿನಾರದಾಗಮನಕಥಾಪ್ರಾರಂಭಘಟ್ಟಃ

ಶ್ರೀಶುಕಃ॥ ನರಕಂನಿಹತಂಶ್ರುತ್ವಾತಥೋದ್ವಾಹಂಚಯೋಷಿತಾಮ್ । ಕೃಷ್ಣೇನೈಕೇನಬಹ್ವೀನಾಂತಂ ದಿದೃಕ್ಷುಸ್ಸ್ಮನಾರದಃ ॥೧॥ ಚಿತ್ರಂಬತೈತದೇಕೇನವಪುಷಾಯುಗಪತ್ಪೃಥಕ್ । ಗೃಹೇಷುದ್ವ್ಯಷ್ಟಸಾಹಸ್ರಂಸ್ತ್ರಿಯಏಕಉದಾವಹತ್ ॥೨॥ ಇತ್ಯುತ್ಸುಕೋದ್ವಾರವತೀಂದೇವರ್ಷಿರ್ದ್ರಷ್ಟುಮಾಗಮತ್ । ಪುಷ್ಪಿತೋಪವನಾರಾಮದ್ವಿಜಾಳಿಕುಲನಾದಿತಾಮ್ ॥೩॥ ಉತ್ಫುಲ್ಲೇಂದೀವರಾಂಭೋಜಕಲ್ಹಾರಕುಮುದೋತ್ಪಲೈಃ । ಛುರಿತೇಷುಸರಸ್ಸೂಚ್ಚೈಃಕೂಜಿತಾಂಹಂಸಸಾರಸೈಃ ॥೪॥ ಪ್ರಾಸಾದಲಕ್ಷೈರ್ನವಭಿ

---

೬೯ನೆಯಅಧ್ಯಾಯದಪ್ರತಿಪದಟೀಕೆ.

[ಶ್ರೀಶುಕವಾಕ್ಯವು.] ನರಕಂ-ನರಕಾಸುರನನ್ನು, ನಿಹತಂ-ಕೊಲ್ಲಲ್ಪಟ್ಟವನನ್ನಾಗಿ, ಶ್ರುತ್ವಾ-ಕೇಳಿ, ತಥಾ-ಹಾಗೆ, ಏಕೇನಕೃಷ್ಣೇನ-ಓರ್ವನಾದಕೃಷ್ಣನಿಂದಲೇ, ಬಹ್ವೀನಾಂಯೋಷಿತಾಂ-ಹಲವು ಹೆಂಗಳ, ಉದ್ವಾಹಂಚ-ಮದುವೆಯಾದ್ದನ್ನೂ, ಶ್ರುತ್ವಾ-ಕೇಳಿ, ನಾರದಃ-ನಾರದಮುನಿಯು, ತಂ-ಆಕೃಷ್ಣನನ್ನು, ದಿದೃಕ್ಷುಃಸ್ಮ-ನೋಡಲಪೇಕ್ಷಿಸಿದವನಾದನು ॥೧॥ ಏಕೇನವಪುಷಾ-ಒಂದುಶರೀರದಿಂದ, ಯುಗಪತ್-ಏಕಕಾಲದಲ್ಲಿ, ಪೃಥಕ್‌ಗೃಹೇಷು-ಬೇರೆಮನೆಗಳಲ್ಲಿ, ಏಕಃ-ಓರ್ವನೇ, ದ್ವ್ಯಷ್ಟಸಾಹಸ್ರಂಸ್ತ್ರಿಯಃ-ಹದಿನಾರುಸಾವಿರವಾದ ಹೆಂಗಳನ್ನು, ಉದಾವಹತ್-ಮದುವೆಯಾದನು. ಏತತ್-ಇದು, ಚಿತ್ರಂ-ಆಶ್ಚರ್ಯವು ಬತ-ಸಂತೋಷವು ॥೨॥ ಇತ್ಯುತ್ಸುಕಃ-ಅತ್ಯಂತಕುತೂಹಲಮುಂಟಾದ, ದೇವರ್ಷಿಃ-ನಾರದನು, ದ್ವಾರಕಾಂ-ಕುಶಸ್ಥಲೀನಗರವನ್ನು, ದ್ರಷ್ಟುಂ-ನೋಡಲೋಸುಗ, ಆಗಮತ್-ಬಂದನು. ಪುಷ್ಪಿತ-..ನಾದಿತಾಂ-ಪುಷ್ಪಿತ-ಹೂಬಿಟ್ಟ, ಉಪವನ-ಊರಹೊರಗಣತೋಟಗಳಲ್ಲಿಯೂ, ಆರಾಮ-ಉದ್ಯಾನವನಗಳಲ್ಲಿಯೂ, ದ್ವಿಜ-ಹಕ್ಕಿಗಳ, ಅಳಿ-ತುಂಬಿಗಳ, ಕುಲ-ಹಿಂಡುಗಳಿಂದ, ನಾದಿತಾಂ-ಶಬ್ದಾಯಮಾನವಾದಂಥಾ ॥೩॥ ಉತ್ಫುಲ್ಲ-ಅರಳಿದ, ಇಂದೀವರ-ಕನ್ನೈದಿಲೆ, ಅಂಭೋಜ-ತಾವರೆ, ಕಲ್ಹಾರ-ಸೌಗಂಧಿಕ, ಕುಮುದ, ಬಿಳುನೈದಿಲೆ, ಉತ್ಪಲೈಃ-ಅಲ್ಲಿಹುವ್ವುಗಳಿಂದ, ಛುರಿತೇಷು-ವ್ಯಾಪ್ತಂಗಳಾದ, ಸರಸ್ಸು-ಕೊಳಂಗಳಲ್ಲಿ, ಹಂಸಸಾರಸೈಃ-ಅಂಚೆಗಳಿಂದಲೂ ನೀರ್ವಕ್ಕಿಗಳಿಂದಲೂ, ಉಚ್ಚೈಃ-ಅಧಿಕವಾಗಿ, ಕೂಜಿತಾಂ-ಕಲಕಲಮುಂಟಾದ ॥೪॥

---

೬೯ನೆಯಅಧ್ಯಾಯವು.

ಶ್ರೀಧರೀಯಶ್ಲೋಕಃ॥ ಏಕೋನಸಪ್ತತಿತಮೇಗಾರ್ಹಸ್ಥ್ಯಂಪ್ರತಿಮಂದಿರಂ । ಕೃಷ್ಣಸ್ಯನಾರದೋ ದೃಷ್ಟ್ವಾವಿಸ್ಮಿತೋಽಗಾತ್ತತಸ್ಸ್ತುವನ್ ॥ಶ್ರೀ॥ಟೀ॥ ಅರವತ್ತೊಂಭತ್ತನೆಯ ಅಧ್ಯಾಯದಲ್ಲಿ ನಾರದಮಹಾಮುನಿಯು ಪತ್ನೀಪರಿಗ್ರಹದಲ್ಲಿಯೂ ಸಂಸಾರಿಯಾಗಿರುವ ಶ್ರೀಕೃಷ್ಣನಂನೋಡಿ ಆಶ್ಚರ್ಯಪಟ್ಟು ಸ್ತುತಿಸಿದವನಾಗಿ ತೆರಳಿದನೆಂಬರ್ಥವಂ ಶುಕಮುನಿಯು ಪರೀಕ್ಷಿದ್ರಾಯನಂಕುರಿತು ನಿರೂಪಿಸುವನದೆಂತೆನೆ-

ಎಲೈ, ಅರಸೇ! ಕೇಳು, ನಾರದಮುನಿಯು ಸಂಹರಿಸಲ್ಪಟ್ಟ ನರಕಾಸುರನಂ, ಅದೇರೀತಿಯಲ್ಲಿ ಶ್ರೀಕೃಷ್ಣನೋರ್ವನಿಂದಲೇ ಗೆಯ್ಯಲ್ಪಟ್ಟ ಆನರಕಾಸುರನ ಪುರದಲ್ಲಿರುವ ಹದಿನಾರುಸಾವಿರಮಂದಿ ಸ್ತ್ರೀಯರುಗಳ ವಿವಾಹಮಂ, ಕೇಳಿ ಅದಂನೋಡಲಿಚ್ಛೈಸಿದನದೆಂತೆನೆ- ॥೧॥ ಶ್ರೀಕೃಷ್ಣನೋರ್ವನೇ ಒಂದುಶರೀರದಿಂ ಅನೇಕ ಗೃಹಂಗಳೊಳಗೆ ಏಕಕಾಲದಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ ಹದಿನಾರುಸಾವಿರಮಂದಿ ಸ್ತ್ರೀಯರಂ ವಿವಾಹಂಮಾಡಿಕೊಂಡನೆಂಬುವುದು ಅವುದುಂಟೋ, ಇದು ಪರಮಾಶ್ಚರ್ಯಕರವು ॥೨॥ ಎಂದೀರೀತಿಯಲ್ಲಿ ಕುತೂಹಲಯುಕ್ತನಾದ ನಾರದಮುನಿಯು ಅದಂ ನೋಡಲಿಚ್ಛೆಯುಳ್ಳವನಾಗಿ ದ್ವಾರಕಾಪುರವ ನೆಯ್ದಿದನು.ಆದ್ವಾರಕಾಪುರವೆಂತಿಯದೆಂದರೆ- ಪುಷ್ಪಯುಕ್ತವಾದಉಪವನಂಗಳಲ್ಲಿಯೂ ಉದ್ಯಾನವನಂಗಳಲ್ಲಿಯೂ ಇರುವ ಪಕ್ಕಿಬಾತಿಗಳ ತಂಡಂಗಳಿಂ ಧ್ವನಿಗೆಯ್ಯಲ್ಪಡುತ್ತಲಿರುವುದಾಗಿ ॥೩॥ ವಿಕಾಸಯುಕ್ತಂಗಳಾದ ಕನ್ನೈದಿಲೆಗಳು ಕಮಲಗಳು ಕಲ್ಹಾರಂಗಳು ಬಿಳುನೈದಿಲೆಗಳು ಇವುಗಳಿಂ ವ್ಯಾಪ್ತಂಗಳಾದ ಸರಸ್ಸುಗಳಲ್ಲಿ ಹಂಸಸಾರಸಪಕ್ಷಿಗಳಿಂದಲೂ ಗಟ್ಟಿಯಾಗಿಧ್ವನಿಗೆಯ್ಯಲ್ಪಡುತ್ತಲಿರುವುದಾಗಿ ॥೪॥ ಸ್ಫಟಿಕಮಯಂಗಳೂ ರಜತಮಯಂಗಳೂಆದ ಮತ್ತು ಉತ್ತಮಂಗಂ

ಜುಷ್ಟಾಂಸ್ಫಾಟಿಕರಾಜತೈಃ । ಮಹಾಮರಕತಪ್ರಖ್ಯೈಸ್ಸ್ವರ್ಣರತ್ನಪರಿಚ್ಛದೈಃ ॥೪॥ ವಿಭಕ್ತರಥ್ಯಾಪಥಚತ್ವರಾಪಣೈಶ್ಶಾಲಾಸಭಾಭೀ ರುಚಿರಾಂ ಸುರಾಲಯೈಃ । ಸಂಸಿಕ್ತಮಾರ್ಗಾಂಗಣವೀಥಿದೇಹಳೀಂ ಪತತ್ಪತಾಕಾಧ್ವಜವಾರಿತಾತಪಾಮ್ ॥೫॥ ತಸ್ಯಾಮಂತಃಪುರಂ ಶ್ರೀಮದರ್ಚಿತಂ ಸರ್ವಧಿಷ್ಣ್ಯಪೈಃ । ಹರೇಸ್ಸ್ವಕೌಶಲಂ ಯತ್ರ ತ್ವಷ್ಟ್ರಾ ಕಾರ್ತ್ಸ್ನ್ಯೇನ ದರ್ಶಿತಮ್ ॥೬॥ ತತ್ರ ಷೋಡಶಭಿಸ್ಸದ್ಮಸಹಸ್ರೈಸ್ಸಮಲಂಕೃತಮ್ । ವಿವೇಶೈಕತಮಂ ಶೌರೇಃ ಪತ್ನೀನಾಂ ಭವನಂ ಮಹತ್ ॥೭॥ ವಿಷ್ಟಬ್ಧಂ ವಿದ್ರುಮಸ್ತಂಭೈರ್ವೈಡೂರ್ಯಫಲಕೋತ್ತಮೈಃ । ಇಂದ್ರನೀಲಮಯೈಃ ಕುಡ್ಯೈರ್ಜಗತ್ಯಾ ಚಾಹತತ್ವಿಷಾ ॥೮॥ ವಿತಾನೈ

---

ಸ್ವರ್ಣರತ್ನಪರಿಚ್ಛದೈಃ-ಚಿನ್ನದ ರನ್ನದ ಪರಿಕರಂಗಳುಳ್ಳ, ಮಹಾಮರಕತಪ್ರಖ್ಯೈಃ-ದೊಡ್ಡ ಪಚ್ಚೆಗಳಿಂದೆ ಪ್ರಕಾಶಿಸುವ, ಸ್ಫಾಟಿಕರಾಜತೈಃ-ಪಳುಕಿನಿಂದಲೂ ಬೆಳ್ಳಿಯಿಂದಲೂ ರಚಿಸಲ್ಪಟ್ಟಿರುವ, ನವಭಿಃಪ್ರಾಸಾದಲಕ್ಷೈಃ-ಒಂಭತ್ತು ಲಕ್ಷದ ಉಪ್ಪರಿಗೆಯ ಮನೆಗಳಿಂದ ಜುಷ್ಟಾಂ-ಕೂಡಿದಂಥಾ ॥೪॥ ವಿಭಕ್ತ-ವಿಂಗಡವಾದ, ರಥ್ಯಾಪಥ-ತೇರುಬೀದಿಗಳಿಂದಲೂ, ಚತ್ವರ-ಮುಂಗಳಗಳಿಂದಲೂ, ಆಪಣೈಃ-ಅಂಗಡಿಗಳಿಂದಲೂ ಶಾಲಾಸಭಾಭಿಃ-ಸಾಲೆಗಳಿಂದಲೂ ಆಸ್ಥಾನಗೃಹಂಗಳಿಂದಲೂ, ಸುರಾಲಯೈಃ-ದೇವರಗುಡಿಗಳಿಂದಲೂ, ರುಚಿರಾಂ-ಮನೋಹರವಾದ, ಸಂಸಿಕ್ತಮಾರ್ಗಾಂ-ಸಾರಿಸಲ್ಪಟ್ಟ ಬೀದಿಗಳುಳ್ಳ, ಗಣವೀಥಿದೇಹಳೀಂ ಗುಂಪಾದ ಬೀದಿಗಳ ಅಂಗಳಂಗಳುಳ್ಳ, ಪತತ್ಪತಾಕಾ-ಜೋಲುವ ಪಾವಡೆಗಳುಳ್ಳ, ಧ್ವಜ-ಪಳವಿಗೆಗಳಿಂದ, ವಾರಿತ-ತಡೆಯಲ್ಪಟ್ಟ, ಆತಪಾಂ-ಬಿಸಿಲುಳ್ಳ, ದ್ವಾರಕೆಯೆಂಬ ಪುರಿಯ ತುಬಂದನು ॥೫॥ ತಸ್ಯಾಂ-ಆ ದ್ವಾರಕಾನಗರದಲ್ಲಿ, ಸರ್ವಧಿಷ್ಣ್ಯಪೈಃ-ಸಕಲಲೋಕಪಾಲಕರಿಂದಲೂ, ಅರ್ಚಿತಂ-ಪೂಜಿಸಲ್ಪಟ್ಟಂಥಾ, ಶ್ರೀಮತ್-ಸಂಪತ್ತುಳ್ಳಂಥಾ, ಯತ್ರ-ಯಾವ ಮನೆಯಲ್ಲಿ, ತ್ವಷ್ಟ್ರಾ-ವಿಶ್ವಕರ್ಮನೆಂಬ ದೇವಶಿಲ್ಪಿಯಿಂದ, ಕಾರ್ತ್ಸ್ನ್ಯೇನ-ಪೂರ್ಣವಾಗಿ, ಸ್ವಕೌಶಲಂ-ತನ್ನ ಜಾಣ್ಮೆಯು, ದರ್ಶಿತಂ-ತೋರಿಸಲ್ಪಟ್ಟಿದೆಯೋ, ಹರೇಃ-ಕೃಷ್ಣನ, ತದಂತಃಪುರಂ-ಆ ರಾಣಿವಾಸದ ಮನೆಯು, ಪ್ರಕಾಶಿಸುವುದು ॥೬॥ ತತ್ರ-ಆ ಕೃಷ್ಣಾಂತಃಪುರದಲ್ಲಿ, ಷೋಡಶಭಿಃಸದ್ಮಸಹಸ್ರೈಃ-ಹದಿನಾರು ಸಾವಿರ ಮನೆಗಳಿಂದ, ಸಮಲಂಕೃತಂ-ಚನ್ನಾಗಿ ಸಿಂಗರಿಸಲ್ಪಟ್ಟಿರುವ, ಏಕತಮಂ-ಹಲವು ಮನೆಗಳಲ್ಲಿ ಒಂದಾಗಿರುವ, ಶೌರೇಃ-ಕೃಷ್ಣನ, ಪತ್ನೀನಾಂ-ಹೆಂಡಿರ, ಮಹದ್ಭವನಂ-ದೊಡ್ಡ ಮನೆಯು ಪ್ರಕಾಶಿಸುವುದು ॥೭॥ ವೈಡೂರ್ಯಫಲಕೋತ್ತಮೈಃ-ವೈಡೂರ್ಯಮಣಿಗಳ ಶ್ರೇಷ್ಠಂಗಳಾದ ಹಲಿಗೆಗಳುಳ್ಳ, ವಿದ್ರುಮಸ್ತಂಭೈಃ-ಹವಳದ ಕಂಬಗಳಿಂದ, ವಿಷ್ಟಬ್ಧಂ-ಹೊರಲ್ಪಟ್ಟಿರುವುದು, ಇಂದ್ರನೀಲಮಯೈಃ-ಹರಿನೀಲರತ್ನ ಪ್ರಚುರಂಗಳಾದ, ಕುಡ್ಯೈಃ-ಗೋಡೆಗಳಿಂದಲೂ, ಅಹತತ್ವಿಷಾ-ಅರ್ಜಿತವಾದ ಕಾಂತಿಯುಳ್ಳ, ಜಗತ್ಯಾ-ಭೂಮಿಯಿಂದಲೂ ಅಥವಾ ನೆಲಕಟ್ಟಿನಿಂದಲೂ, ಉಪಲಕ್ಷಿತಂ-ಕೂಡಿರುವುದು ॥೮॥

---

ಳಾದ ಮರಕತಮಣಿಗಳಿಂ ಪ್ರಕಾಶಂಗೆಯ್ಯಲ್ಪಡುತಲಿರುವ ಸುವರ್ಣರತ್ನಮಯಂಗಳಾದ ಉಪಕರಣಂಗಳುಳ್ಳ, ಇಂತಪ್ಪ ಒಂಭತ್ತು ಲಕ್ಷ ದರಮನೆಗಳಿಂ ಶೋಭಿತವಾಗಿ ॥೪॥ ವಿಂಗಡಿಸಲ್ಪಟ್ಟ ರಾಜಮಾರ್ಗಂಗಳಿಂ ಅಂಗಡಿಬೀದಿಗಳಿಂ ಗಜಾಶ್ವಾದಿಶಾಲೆಗಳಿಂ ಸಭಾಸ್ಥಾನಂಗಳಿಂ ದೇವಾಲಯಂಗಳಿಂದಲೂ ಶೋಭಿತವಾದ ಪರಿಮಳಯುಕ್ತವಾದ ಜಲದಿಂದ ನೆನೆಸಲ್ಪಟ್ಟ ರಾಜಮಾರ್ಗಂಗಳು ಅಂಗಳಂಗಳು ಬೀದಿಗಳು ಹೊಸ್ತಿಲುಗಳೂ ಸಹ ಉಳ್ಳದ್ದಾಗಿ, ಚಲಿಸುತ್ತಲಿರುವ ಧ್ವಜಪತಾಕಂಗಳಿಂ ತೋರೆಯಲ್ಪಟ್ಟ ಬಿಸಲುಗಳುಳ್ಳದ್ದಾಗಿಯೂ, ಇರುವ ಇಂತಪ್ಪ ದ್ವಾರಕಾಪುರವಂ ನಾರದಮುನಿಯು ಪ್ರವೇಶಿಸಿದನು ॥೫॥ ಅನಂತರವಲ್ಲಿ ನಾರದಮುನಿಯು ಯಾವ ಅಂತಃಪುರದಲ್ಲಿ ವಿಶ್ವಕರ್ಮನಿಂದ ತನ್ನ ಶಿಲ್ಪಚಾತುರ್ಯವು ಸಮಗ್ರವಾಗಿ ತೋರಿಸಲ್ಪಟ್ಟಿದೆಯೋ. ಅಂತಾ ರಮಣೀಯವಾಗಿ ಕಾಂತಿಯುಕ್ತವಾಗಿ ಇಂದ್ರಾದಿಲೋಕಪಾಲಕರಿಂ ಸೇವಿಸಲ್ಪಡುತಲಿರುವುದಾಗಿ ೧೬ ಸಾವಿರ ಗೃಹಂಗಳಿಂದ ಅಲಂಕರಿಸಲ್ಪಟ್ಟದ್ದಾಗಿರುವ ॥೬॥ ಶ್ರೀಕೃಷ್ಣನ ಅಂತಃಪುರವಂ ಪ್ರವೇಶಂಗೆಯ್ದು ಆ ಯಂತಃಪುರದಲ್ಲಿ ಶ್ರೀಕೃಷ್ಣನ ಪತ್ನಿಯರ ಹದಿನಾರು ಸಾವಿರ ಗೃಹಂಗಳಲ್ಲಿ ಮಹತ್ತಾದ ಒಂದು ಗೃಹವಂ ಪ್ರವೇಶಿಸಿದನು ॥೭॥ ಆ ಗೃಹವೆಂತಿಯೆಂದರೆ ಹವಳಂಗಳಿಂ ರಚಿಸಲ್ಪಟ್ಟ ಸ್ತಂಭಂಗಳಿಂ ಧರಿಸಲ್ಪಡುತ್ತಲಿರುವ ವೈಡೂರ್ಯಮಯಂಗಳಾದ ಉತ್ತಮಂಗಳಾದ ಬೋದಿಗೆ ಹಲಗೆಗಳಿಂ ಇಂದ್ರನೀಲಮಯಂಗಳಾದ ಗೋಡೆಗಳಿಂ ಹುತ್ತು ಪ್ರಕಾಶಮಾನವಾದ ಇಂದ್ರನೀಲವಾದ ಭೂಮಿಯಿಂದಲೂ ಶೋಭಿತವಾಗಿ ॥೮॥ ವಿಶ್ವಕರ್ಮನಿಂ ನಿರ್ಮಿಸಲ್ಪಟ್ಟದ್ದಾಗಿ ನಾನಾಪ್ರಕಾರವಾಗಿ ಜೋಲು

ನಿರ್ಮಿತೈಸ್ತ್ವಷ್ಟ್ರಾಮುಕ್ತಾದಾಮವಿಲಂಬಿಭಿಃ।ದಾಂತೈರಾಸನಪರ್ಯಂಕೈರ್ಮಣ್ಯುತ್ತಮಪರಿಷ್ಕೃ
ತೈಃ ॥೧೦॥ದಾಸೀಭಿರ್ನಿಷ್ಕಕಂಠೀಭಿಸ್ಸುವಾಸೋಭಿರಲಂಕೃತಮ್ । ಪುಂಭಿಸ್ಸಕಂಚುಕೋಷ್ಣೀಷಸು
ವಸ್ತ್ರಮಣಿಕುಂಡಲೈಃ॥೧೧॥ರತ್ನಪ್ರದೀಪನಿಕರದ್ಯುತಿಭಿರ್ನಿರಸ್ತಧ್ವಾಂತಂವಿಚಿತ್ರವಲಭೀಷುಶಿಖಂ
ಡಿನೋಂಗ । ನೃತ್ಯಂತಿಯತ್ರವಿಹಿತಾಗರುಧೂಪಮಕ್ಷೈರ್ನಿರ್ಯಾತಮೀಕ್ಷ್ಯಘನಬುದ್ಧಯಉನ್ನ
ದಂತಃ॥೧೨॥ ತಸ್ಮಿನ್ಸಮಾನಗುಣರೂಪವಯಸ್ಸುವೇಷದಾಸೀಸಹಸ್ರಯುತಯಾನುಸವಂಗೃಹಿಣ್ಯಾ।
ವಿಪ್ರೋದದರ್ಶಚಮರವ್ಯಜನೇನರುಕ್ಮದಂಡೇನಸಾತ್ವತಪತಿಂಪರಿವೀಜಯಂತ್ಯಾ॥೧೩॥ತಂಸನ್ನಿರೀಕ್ಷ್ಯ

---

ತ್ವಷ್ಟ್ರಾ-ದೇವಶಿಲ್ಪಿಯಿಂದ, ನಿರ್ಮಿತೈಃ-ರಚಿಸಲ್ಪಟ್ಟಿರುವ, ಮುಕ್ತಾದಾಮವಿಲಂಬಿಭಿಃ-ಮುತ್ತಿನಸರಂಗಳು ಜೋಲುತ್ತಿರುವ ವಿತಾನೈಃ-ಮೇಲ್ಕಟ್ಟುಗಳಿಂದಲೂ, ಮಣ್ಯುತ್ತಮಪರಿಷ್ಕೃತೈಃ-ರತ್ನಂಗಳಲ್ಲಿ ಶ್ರೇಷ್ಠಂಗಳಿಂದಭೂಷಿತಂಗಳಾದ, ದಾಂತೈಃ-ದಂತದಿಂದ ಮಾಡಲ್ಪಟ್ಟವಾದ, ಆಸನಪರ್ಯಂಕೈಃ- ಪೀಠಂಗಳಿಂದಲೂ ಮಂಚಗಳಿಂದಲೂ, ಉಪಲಕ್ಷಿತಂ-ಕೂಡಿರುವುದು॥೧೦॥ ಸುವಾಸೋಭಿಃ-ಉತ್ತಮವಸ್ತ್ರಂಗಳುಳ್ಳ, ನಿಷ್ಕಕಂಠೀಭಿಃ-ಚಿನ್ನದಪದಕಹಾರಗಳು ಕೊರಳಲ್ಲಿವುಳ್ಳ, ದಾಸೀಭಿಃ-ಸೇವಕಿಯರಿಂದಲೂ, ಸಕಂಚುಕ-ಕವಚದಿಂ, ಉಷ್ಣೀಷ-ಪಾಗಿನಿಂ-ಸುವಸ್ತ್ರ-ಮೇಲ್ವಾವುಡೆಯಿಂ, ಮಣಿಕುಂಡಲ-ರನ್ನದಕಿವಿಯೊಡವುಗಳಿಂ ಸಹಿತರಾದ, ಪುಂಭಿಃ-ಗಂಡಾಳುಗಳಿಂದಲೂ, ಉಪಲಕ್ಷಿತಂ-ಕೂಡಿರುವುದು॥೧೧॥ ಅಂಗ-ಎಲೈಪರೀಕ್ಷಿತನೇ! ಯತ್ರ-ಯಾವಗೃಹದಲ್ಲಿ, ವಿಚಿತ್ರವಲಭೀಷು-ಅದ್ಭುತಂಗಳಾದ ಲೋವೆಗಳಲ್ಲಿ, ನಿರ್ಯಾತಂ-ಹೊರಕ್ಕೆಹೊರಡುತ್ತಿರುವ, ವಿಹಿತಾಗರುಧೂಪಂ-ಯೋಗ್ಯವಾದ ಅಗಿಲುಚಕ್ಕೆಗಳ ಹೊಗೆಯನ್ನು, ಅಕ್ಷೈಃ-ಕಂಗಳಿಂದ, ಈಕ್ಷ್ಯ-ನೋಡಿ, ಶಿಖಂಡಿನಃ-ನವಿಲುಗಳು, ಘನಬುದ್ಧಯಃ-ಮೇಘವೆಂಬಬುದ್ಧಿಯುಳ್ಳವಾಗಿ, ಉನ್ನದಂತಃ-ಕೇಕಾಧ್ವನಿಯಂಗೆಯ್ವವಾಗಿ, ನೃತ್ಯಂತಿ-ಕುಣಿಯುತ್ತಲಿವೆಯೋ, ತತ್-ಅಂಥಾ, ರತ್ನಪ್ರದೀಪನಿಕರದ್ಯುತಿಭಿಃ-ಮಣಿದೀಪಿಕೆಗಳಸಮೂಹದ ಕಾಂತಿಗಳಿಂದ, ನಿರಸ್ತಧ್ವಾಂತಂ-ಹೊರಡಿಸಲ್ಪಟ್ಟ ಕತ್ತಲೆಯುಳ್ಳದ್ದಾಗಿರುವುದು॥೧೨॥ತಸ್ಮಿನ್-ಆಯಂತಃಪುರದಲ್ಲಿ, ಸಮಾನ-ಸರಿಯಾದ, ಗುಣ-ಗಾಂಭೀರ್ಯಾದಿಗುಣಗಳು, ರೂಪ-ಚಲುವಿಕೆಯೂ, ವಯಃ-ಪ್ರಾಯವೂ, ಸುವೇಷ-ಅಲಂಕಾರವೂ ಉಳ್ಳ, ದಾಸೀಸಹಸ್ರ-ಹಲವುದಾದಿಯರಿಂದ, ಯುತಯಾ-ಕೂಡಿಯಿರುವಂಥಾ; ಅನುಸವಂ-ಪ್ರತಿಸಮಯದಲ್ಲಿಯೂ, ರುಕ್ಮದಂಡೇನ-ಚಿನ್ನದಹಿಡಿಯುಳ್ಳ, ಚಮರವ್ಯಜನೇನ-ಚಾಮರದಬೀಸಣಿಗೆಯಿಂದ, ಪರಿವೀಜಯಂತ್ಯಾ-ಬೀಸುತ್ತಿರುವಂಥಾ, ಗೃಹಿಣ್ಯಾ-ಮಡದಿಯಾದ ರುಕ್ಮಿಣಿಯೊಡನೆ ಸಹಿತನಾದ, ಸಾತ್ವತಪತಿಂ-ಯದುನಾಥನಾದಕೃಷ್ಣನನ್ನು, ವಿಪ್ರಃ-ನಾರದನೆಂಬಬ್ರಾಹ್ಮಣನು, ದದರ್ಶ-ಕಂಡನು॥೧೩॥ ತಂ ಆನಾರದಮುನಿಯನ್ನು, ಸನ್ನಿರೀಕ್ಷ್ಯ-ಚನ್ನಾಗಿನೋಡಿ,ಭಗವಾನ್-ಶ್ರೀಕೃಷ್ಣನು, ಶ್ರೀಪರ್ಯಂಕತಃ-ಲಕ್ಷ್ಮೀದೇವಿಯಮಂಚದಹಸೆಯಿಂದ

---

ತ್ತಲಿರುವ ಮುತ್ತಿನಹಾರಂಗಳುಳ್ಳ ಮೇಲ್ಕಟ್ಟುಗಳಿಂ ಮತ್ತು ಉತ್ಕೃಷ್ಟಂಗಳಾದ ರತ್ನಂಗಳಿಂ ಕೆತ್ತಲ್ಪಟ್ಟ ದಂತಮಯಂಗಳಾದ ಮಣಿಗಳಿಂ ಮಂಚಂಗಳಿಂದಲೂ ಶೋಭಿತವಾಗಿ॥೧೦॥ ಮತ್ತು ಕಂಠಗಳಲ್ಲಿ ಉತ್ತಮಹಾರಂಗಳಂಧರಿಸಿ ದಿವ್ಯವಸ್ತ್ರಂಗಳನುಟ್ಟಿರುವ ದಾಸಿಯರಿಂದಲೂ ಅಲಂಕರಿಸಲ್ಪಟ್ಟದ್ದಾಗಿ, ರಮಣೀಯಂಗಳಾದ ಅಂಗಿಪಾಗುಗಳುಳ್ಳ ದಿವ್ಯವಸ್ತ್ರಂಗಳುಳ್ಳ ರತ್ನಕುಂಡಲಂಗಳಿಂ ಧರಿಸಿರುವ ಪುರುಷರಿಂದಲೂ ಶೋಭಿತವಾಗಿ॥೧೧॥ಮತ್ತು ದಿವ್ಯಮಾಣಿಕ್ಯಂಗಳೆಂಬ ದೀಪಂಗಳಪಙ್ತಿಸಮೂಹಂಗಳ ಕಾಂತಿಯಿಂ ಪರಿಹರಿಸಲ್ಪಟ್ಟ ಅಂಧಕಾರವುಳ್ಳದ್ದಾಗಿಯೂ ಇರುವ ಯಾವಗೃಹದಲ್ಲಿ ವಿಚಿತ್ರವಾದ ಲೋವೆಗಳಲ್ಲಿ ಕುಳಿತಿರುವ ನವಿಲುಗಳು ಗವಾಕ್ಷಂಗಳಿಂಬರುವ ಅಗರುಧೂಪಮನೋಡಿ ಇದು ಮೇಘವೆಂಬ ಬುದ್ಧಿಯುಳ್ಳವಾಗಿ ಗಟ್ಟಿಯಾಗಿ ಧ್ವನಿಗೆಯ್ವುತ ನರ್ತನಂಗೆಯ್ಯುತ್ತಲಿವೆಯೋ॥೧೨॥ಅಂತಪ್ಪ ಗೃಹವಂ ನಾರದಮುನಿಯು ಪ್ರವೇಶಂಗೆಯ್ದು ಆಗೃಹದಲ್ಲಿ ಸಮಾನವಾದ ಗುಣರೂಪವಯಸ್ಸುಗಳು ದಿವ್ಯವಾದ ಅಲಂಕಾರಗಳೊಕೂಡಿರುವ ಸಾವಿರದಾಸಿಯರೊಡನೆ ಯುಕ್ತಂಗಳಾಗಿ ಸುವರ್ಣದಂಡವುಳ್ಳ ಚಾಮರದಿಂದ ನಿರಂತರವೂ ಬೀಸುತ್ತಲಿರುವ ರುಕ್ಮಿಣಿಯೊಡನೆ ಯುಕ್ತವಾಗಿ ಕುಳಿತಿರುವ ಶ್ರೀಕೃಷ್ಣನಂ ಕಂಡನು ॥೧೩॥ ಅನಂತರದಲ್ಲಿ ಸಮಸ್ತ ಧರ್ಮಪಾಲಕರಲ್ಲಿ ಶ್ರೇಷ್ಠನಾದ ಶ್ರೀಕೃಷ್ಣನು ಆನಾರದಮುನಿಯಂ ಕಂಡನು. ಆರುಕ್ಮಿಣಿಯ ಮಂಚದಹಸೆಯಿಂದ ಶೀಘ್ರದಿಂದ ಎದ್ದವನಾಗಿ ಅಂಜಲಿಬಂಧಯುಕ್ತ

ಭಗವಾನ್ಸಹಸೋತ್ಥಿತಶ್ಶ್ರೀಪರ್ಯಂಕತಸ್ಸಕಲಧರ್ಮಭೃತಾಂವರಿಷ್ಠಃ। ಆನಮ್ಯಪಾದಯುಗಳಂಶಿರಸಾಕಿರೀಟಜುಷ್ಟೇನಸಾಂಜಲಿರವೀವಿಶದಾಸನೇಸ್ವೇ ॥೧೪॥ ತಸ್ಯಾವನಿಜ್ಯಚರಣೌತದಪಸ್ಸ್ವಮೂರ್ಧ್ನಾಬಿಭ್ರಜ್ಜಗದ್ಗುರುತರೋಪಿಸತಾಂಪತಿರ್ಹಿ। ಬ್ರಹ್ಮಣ್ಯದೇವಇತಿಯದ್ಗುಣನಾಮಯುಕ್ತಂತಸ್ಯೈವಯಚ್ಚರಣಶೌಚಮಶೇಷತೀರ್ಥಮ್ ॥೧೫॥ ಸಂಪೂಜ್ಯದೇವಋಷಿವರ್ಯಮೃಷಿಃಪುರಾಣೋನಾರಾಯಣೋನರಸಖೋವಿಧಿನೋದಿತೇನ। ವಾಣ್ಯಾಭಿಭಾಷ್ಯಮಿತಯಾಮೃತಜುಷ್ಟಯಾತಂಪ್ರಾಹಪ್ರಭೋಭಗವತೇಕಿಮವಾಮ ಕಂತೇ॥೧೬॥ ಶ್ರೀನಾರದಃ॥ನೈವಾದ್ಭುತಂತ್ವಯಿವಿಭೋಖಿಲಲೋಕನಾಥೇಮೈತ್ರೀಜನೇಷುಸಕಲೇಷುದಮಃ

---

ಸಹಸಾ-ವೇಗದಿಂದ, ಉತ್ಥಿತಃ-ಎದ್ದವನಾಗಿ, ಸಕಲಧರ್ಮಭೃತಾಂ-ಸಮಸ್ತಂಗಳಾದ ವರ್ಣಾಶ್ರಮ ಧರ್ಮಂಗಳಂ ಪೋಷಿಸುವರೊಳಗೆ, ವರಿಷ್ಠಃ-ಶ್ರೇಷ್ಠನಾದ್ದರಿಂದ, ಕಿರೀಟಜುಷ್ಟೇನ-ಕಿರೀಟದಿಂದಲಂಕೃತವಾದ, ಶಿರಸಾ-ತನ್ನ ತಲೆಯಿಂದ, ಪಾದಯುಗಳೇ-ನಾರದನಅಡಿಗಳೆರಡರಲ್ಲಿ, ಆನಮ್ಯ-ನಮಸ್ಕರಿಸಿ, ಸಾಂಜಲಿಃ-ಜೋಡಿಸಿದ ಕೈಗಳಿಂಸಹಿತನಾಗಿ, ಸ್ವೇಆಸನೇ-ತನ್ನ ಪೀಠದಲ್ಲಿ, ಅವೀವಿಶತ್-ಕುಳ್ಳಿರಿಸಿದನು ॥೧೪॥ ಜಗದ್ಗುರುತರೋಪಿ-ಪ್ರಪಂಚಕ್ಕಿಂತಲೂ ಬಹಳದೊಡ್ಡವನಾದರೂ, ಯತ್-ಯಾವಕಾರಣದಿಂದ, ಕೃಷ್ಣನು, ತಸ್ಯ-ಆನಾರದನ, ಚರಣೌ-ಪಾದಗಳನ್ನು, ಅವನಿಜ್ಯ-ತೊಳೆದು, ತದಪಃ-ಆಚರಣತೀರ್ಥವನ್ನು, ಸ್ವಮೂರ್ಧ್ನಾ-ತನ್ನ ತಲೆಯಿಂದ, ಬಿಭ್ರತ್-ಧರಿಸಿದವನಾದನೋ, ತತ್-ಆಕಾರಣದಿಂದ, ಸತಾಂ-ಸತ್ಪುರುಷರಿಗೆ, ಪತಿರ್ಹಿ-ಒಡೆಯನಾಗಿರುವನಲ್ಲವೆ? ಯಚ್ಚರಣಶೌಚಂ-ಯಾವವನ ಕಾಲುತೊಳೆದ ನೀರಾದಗಂಗೆಯು, ಅಶೇಷತೀರ್ಥಂ-ಸಕಲಶುದ್ಧಿಕರವಾದ ಪುಣ್ಯಜಲವಾಗಿರುವುದೋ, ತಸ್ಯೈವ-ಆಮಹಾವಿಷ್ಣುವಾದ ಕೃಷ್ಣನಿಗೇವೇ, ಬ್ರಹ್ಮಣ್ಯದೇವಇತಿ-ಬ್ರಾಹ್ಮಣಶ್ರೇಷ್ಠರೇ ದೇವರಾಗಿಉಳ್ಳವನೆಂಬ, ಅಥವಾ ಬ್ರಾಹ್ಮಣರಿಗೆ ದೇವರಾಗಿರುವನೆಂಬ, ಗುಣನಾಮ-ಗುಣಗಳಿಂದ ಮಾಡಲ್ಪಟ್ಟಹೆಸರು, ಯುಕ್ತಂ-ಸರಿಯಾಗಿರುವುದು ॥೧೫॥ ನರಸಖಃ-ನರರ್ಷಿಯೆಂಬ ಅರ್ಜುನಂಗೆ ಗೆಳೆಯನಾದ, ಪುರಾಣಃ-ಪುರಾತನನಾದ, ನಾರಾಯಣಋಷಿಃ-ಧರ್ಮಪುತ್ರನಾದ ನಾರಾಯಣಋಷಿಯೇಎಂಬ ಶ್ರೀಕೃಷ್ಣನು, ದೇವರ್ಷಿವರ್ಯಂ-ದೇವಲೋಕದಋಷಿಗಳಲ್ಲಿ ಶ್ರೇಷ್ಠನಾದ ನಾರದನನ್ನು, ವಿಧಿನಾ-ಶಾಸ್ತ್ರದಿಂದ, ಉದಿತೇನ-ಹೇಳಲ್ಪಟ್ಟಿರುವಕ್ರಮದಿಂದ, ಸಂಪೂಜ್ಯ-ಚೆನ್ನಾಗಿಉಪಚರಿಸಿ, ತಂ-ಆತನಂ ಕುರಿತು, ಅಮೃತಜುಷ್ಟಯಾ-ಅಮೃತದಿಂದ ಸೇವಿಸಲ್ಪಟ್ಟ, ಮಿತಯಾವಾಣ್ಯಾ-ಪ್ರಕೃತೋಚಿತವಾದಷ್ಟುಭಾಷೆಯಿಂದ, ಅಭಿಭಾಷ್ಯ-ಯೋಗಕ್ಷೇಮಂಗಳಂವಿಚಾರಿಸಿ, ಪ್ರಾಹ-ನುಡಿದನು, ಪ್ರಭೋ-ಒಡೆಯನಾದನಾರದನೇ! ಭಗವತೇ-ಸರ್ವಜ್ಞನಾದ, ತೇ-ನಿನಗೆ, ಕಿಂಕರವಾಮ ನಾವೇನಂಮಾಡಲಾಪುವೆವು ॥೧೬॥ [ಇಂತೆಂದಕೃಷ್ಣಂಗೆನಾರದಂಪೇಳುವನು.] ಉರುಗಾಯ-ಉತ್ತಮನೆಂದು ಕೊಂಡಾಡಲ್ಪಟ್ಟವನೇ! ಅಖಿಲಲೋಕನಾಥ-ಸಕಲಭುವನೇಶ್ವರನೇ! ವಿಭೋ-ವ್ಯಾಪನಾದವಿಷ್ಣುವೇ! ಜನೇಷುಸಕಲೇಷು-ಪ್ರಾಣಿಗಳೆಲ್ಲರಲ್ಲಿಯೂ, ತೇ-ನಿನ್ನ, ಮೈತ್ರೀ-ವಾತ್ಸಲ್ಯವೂ, ಖಲಾನಾಂ-ದುಷ್ಟರೊಳಗೆ, ದಮಃ-ಶಿಕ್ಷಣವೂ, ತ್ವಯಿ-ನಿನ್ನಲ್ಲಿ

---

ನಾಗಿ ಕಿರೀಟದಿಂ ಸೇವಿತವಾದ ಶಿರಸ್ಸಿನಿಂ ಅವನಪಾದಯುಗ್ಮವಂ ನಮಸ್ಕರಿಸಿ ಆಮುನಿಯಂ ತನ್ನ ದಿವ್ಯಪೀಠದಲ್ಲಿ ಕುಳ್ಳಿರಿಸಿದವನಾದನು ॥೧೪॥ ಯಾವವನಪಾದ ಪ್ರಕ್ಷಾಳನಜಲರೂಪವಾದ ಗಂಗೆಯು ಸಮಸ್ತತೀರ್ಥರೂಪವಾಗಿದೆಯೋ ಅಂತಾ ಶ್ರೀಕೃಷ್ಣನು ತಾನು ಜಗದ್ಗುರುವಾದರೂ ಧರ್ಮಪಾಲಕರಿಗೆ ಅಧಿಪತಿಯಾದುದರಿಂದ ಮತ್ತು ಗುಣಂಗಳಿಂ ಕಲ್ಪಿತವಾದ ಬ್ರಹ್ಮಣ್ಯದೇವನೆಂಬ ಯಾವನಾಮಧೇಯವುಂಟೋ ಆನಾಮಧೇಯವು ಅವನಿಗೆ ಉಚಿತವಾದ್ದರಿಂದ ಆನಾರದಮುನಿಯ ಪಾದಂಗಳಂ ಪ್ರಕ್ಷಾಳನಂಗೆಯ್ದು ಅಪಾದೋದಕವಂ ತನ್ನ ಶಿರಸ್ಸಿನಿಂದ ಧರಿಸಿದನು ॥೧೫॥ ಅನಂತರದಲ್ಲಿ ಪುರಾಣಪುರುಷನಾದ ಆದಿಮುನಿಯಾದ ನರನೆಂಬಋಷಿಗೆ ಮಿತ್ರನಾದ ನಾರಾಯಣನಾದ ಶ್ರೀಕೃಷ್ಣನು ಉಕ್ತವಿಧಿಯಿಂ ನಾರದಮುನಿಯಂ ಪೂಜಿಸಿ ಅಮೃತಮಯವಾದ ಅಮಿತವಾಕ್ಯದಿಂದ ದೈವಯೋಗದಿಂ ನಿಮ್ಮ ಆಗಮನವುಂಟಾಯಿತೆಂದು ಪ್ರಿಯವಚನವಂಪೇಳಿ, ಎಲೈ ಸಮರ್ಥನಾದಮುನಿಯೇ! ಪೂಜ್ಯನಾದ ನಿನಗೋಸ್ಕರ ನಾವು ಆವುದಂಗೆಯ್ವರಾಗಬೇಕೆಂದು ನುಡಿದನು ॥೧೬॥ ಆಗ ನಾರದಮುನಿಯು ಪೇಳಿದನದೆಂತೆನೆ ಎಲೈಕೃಷ್ಣನೇ ಸ್ಥಿತಿರಕ್ಷಣಂಗಳಿಂ ಜಗತ್ತಿನ ಶ್ರೇಯಸ್ಸಿಗೋಸುಗ ನಿನ್ನ ಯಿಾ

ಖಿಲಾನಾಮ್ । ನಿಶ್ಶ್ರೇಯಸಾಯಜಗತಃಸ್ಥಿತಿರಕ್ಷಣಾಭ್ಯಾಂಸ್ವೈರಾವತಾರಉರುಗಾಯವಿದಾಮಸುಷ್ಠು ॥೧೭॥ದೃಷ್ಟಂತವಾಂಘ್ರಿಯುಗಳಂಜನತಾಪವರ್ಗಂಬ್ರಹ್ಮಾದಿಭಿರ್ಹೃದಿವಿಚಿಂತ್ಯಮಗಾಧಬೋಧೈಃ । ಸಂಸಾರಕೂಪಪತಿತೋತ್ತರಣಾವಲಂಬಂಧ್ಯಾಯಂಶ್ಚರಾಮ್ಯನುಗೃಹಾಣಯಥಾಸ್ಮೃತಿಸ್ಸ್ಯಾತ್॥೧೮॥ತತೋನ್ಯದಾವಿಶದ್ಗೇಹಂಕೃಷ್ಣಪತ್ನ್ಯಾಸ್ಸನಾರದಃ। ಯೋಗೇಶ್ವರೇಶ್ವರಸ್ಯಾಂಗಯೋಗಮಾಯಾವಿವಿತ್ಸಯಾ ॥೧೯॥ದೀವ್ಯಂತಮಕ್ಷೈಸ್ತತ್ರಾಪಿಪ್ರಿಯಯಾಚೋದ್ಧವೇನಚ । ಪೂಜಿತಃಪರಯಾಭಕ್ತ್ಯಾಪ್ರತ್ಯುತ್ಥಾನಾಸನಾದಿಭಿಃ॥೨೦॥ ಪೃಷ್ಟಶ್ಚಾವಿದುಷೇವಾಸಾಕದಾಯಾತೋಭವಾನಿತಿ । ಕ್ರಿಯತೆಕಿಂನು

---

ಅದ್ಭುತಂನೈವ-ಆಶ್ಚರ್ಯವೇಅಲ್ಲವು. ತೇ-ನಿನ್ನ, ಸ್ವೈರಾವತಾರಃ-ಸ್ವೇಚ್ಛಾವತಾರವು, ಜಗತಃ-ಪ್ರಪಂಚದ, ಸ್ಥಿತಿರಕ್ಷಣಾಭ್ಯಾಂ-ಧಾರಣಪಾಲನಂಗಳೊಡನೆ, ನಿಶ್ಶ್ರೇಯಸಾಯ-ಮೋಕ್ಷಕ್ಕೋಸುಗವೇಎಂದು, ವಯಂ-ನಾವು, ಸುಷ್ಠು-ಚನ್ನಾಗಿ, ವಿದಾಮ-ತಿಳಿಯುತ್ತಿರುವೆವು ॥೧೭॥ಜನತಾಪವರ್ಗಂ-ಜನಸಮೂಹಕ್ಕೆ ಮುಕ್ತಿನಿಮಿತ್ತವಾದಂಥಾ, ಅಗಾಧಬೋಧೈಃ-ಅಧಿಕಜ್ಞಾನವುಳ್ಳ, ಬ್ರಹ್ಮಾದಿಭಿಃ-ಬ್ರಹ್ಮನುಮೊದಲಾದವರಿಂದ, ಹೃದಿ-ಚಿತ್ತದಲ್ಲಿ, ವಿಚಿಂತ್ಯಂ-ಧ್ಯಾನಿಸಲ್ಪಡತಕ್ಕಂಥಾ, ಸಂಸಾರಕೂಪಪತಿತೋತ್ತರಣಾವಲಂಬಂ-ಜನನಮರಣದುಃಖವೆಂಬ ಭಾವಿಯಲ್ಲಿಬಿದ್ದವರು ಎದ್ದುಬರುವುದಕ್ಕೆ ಆಧಾರೋಪಾಯವಾಗಿರುವಂಥಾ, ತವ-ನಿನ್ನ, ಅಂಘ್ರಿಯುಗಳಂ-ಚರಣಯುಗ್ಮವು, ದೃಷ್ಟಂ-ನೋಡಲ್ಪಟ್ಟಿತು. ಧ್ಯಾಯನ್-ಅದರನ್ನು ಭಾವಿಸುತ್ತಿರುವನಾಗಿ, ಚರಾಮಿ-ತಿರುಗುತ್ತಿರುವೆನು. ಸ್ಮೃತಿಃ-ಈನೆನಪು. ಯಥಾಸ್ಯಾತ್-ಹೇಗೆನನಗುಂಟಾದೀತೋ, ತಥಾ-ಹಾಗೆ, ಅನುಗೃಹಾಣ-ದಯೆಮಾಡು ॥೧೮॥ ಅಂಗ-ಪರೀಕ್ಷಿತನೇ! ಸನಾರದಃ-ಆನಾರದಮುನಿಯು, ಯೋಗೇಶ್ವರೇಶ್ವರಸ್ಯ-ಧ್ಯಾನೋಪಾಯಸಿದ್ಧಗಳಿಂ ಸಮರ್ಥರಾದವರಿಗೊಡೆಯನಾದಕೃಷ್ಣನ, ಯೋಗಮಾಯಾವಿವಿತ್ಸಯಾ-ಉಪಾಯದಮೋಹಕಶಕ್ತಿಯಂ ತಿಳಿಯಬೇಕೆಂಬ ಬಯಕೆಯಿಂದ, ತತಃ-ಆಬಳಿಕ, ಅನ್ಯತ್-ಮತ್ತೊಂದಾದ, ಕೃಷ್ಣಪತ್ನ್ಯಾಃಗೇಹಂ-ಕೃಷ್ಣನಮಡದಿಯಮನೆಯನ್ನು, ಆವಿಶತ್-ಹೊಕ್ಕನು ॥೧೯॥ ತತ್ರಾಪಿ-ಆಮನೆಯಲ್ಲಿಯೂ, ಪ್ರಿಯಯಾ-ಪತ್ನಿಯೊಡನೆಯೂ, ಉದ್ಧವೇನಚ-ಉದ್ಧವನೆಂಬಭಕ್ತನೊಡನೆಯೂ, ಅಕ್ಷೈಃ-ನೆತ್ತಗಳಿಂದ, ದೀವ್ಯಂತಂ-ಪಗಡೆಯಾಡುತಿರುವವನಂಕಂಡನು ಪರಯಾಭಕ್ತ್ಯಾ-ಉತ್ತಮವಾದ ಪ್ರೀತಿಯಿಂದ, ಪ್ರತ್ಯುತ್ಥಾನಾಸನಾದಿಭಿಃ-ಇದಿರೆದ್ದುಬಂದು ಗದ್ದುಗೆಯಂನೀಡುವುದು ಮೊದಲಾದ ಉಪಚಾರಂಗಳಿಂದ, ಪೂಜಿತಶ್ಚ-ಆರಾಧಿಸಲ್ಪಟ್ಟವನೂಆದನು ॥೨೦॥ ಅಸೌ-ಈನಾರದನು, ಅವಿದುಷೇವ-ಅರಿಯದೇ ಯಿರುವವನಂತಿರುವಕೃಷ್ಣನಿಂದ, ಪೃಷ್ಟಶ್ಚ-ಕೇಳಲ್ಪಟ್ಟವನೂಆದನು. ಭವಾನ್-ನೀನು ಕದಾ-ಯಾವಾಗ, ಆಯಾತಃ-ಬಂದವನಾಗಿರುವಿ? ಪೂರ್ಣಾನಾಂ-ತುಂಬಿದವರಾದನಿಮಗೆ, ಅಪೂರ್ಣೈಃ-ತುಂಬಿದವರಲ್ಲದ, ಅಸ್ಮದಾದಿಭಿಃ-ನಾವುಮೊದಲಾದವರುಗಳಿಂದ, ಕಿನ್ನುಕ್ರಿಯತೇ-ಏನುಉಪಚಾರವಾ

---

ವಿಲಾಸಾವತಾರವುಂಟಾಯಿತೆಂದು ನಾವು ಚನ್ನಾಗಿ ತಿಳಿದಿರುವೆ ವಾಕಾರಣದಿಂದ ಸಕಲಲೋಕನಾಥನಾದ ನಿನ್ನಲ್ಲಿ ಸಕಲ ಜನಮಿತ್ರತ್ವವೂ ದುಷ್ಟರ ನಿಗ್ರಹವೂ ಸಹ ಇರುವುದು ಆಶ್ಚರ್ಯವಲ್ಲ ॥೧೭॥ಎಲೈಹರಿಯೇ! ಜನಸಮೂಹಕ್ಕೆ ಮೋಕ್ಷರೂಪವಾದ ಮತ್ತುಅಮಿತಜ್ಞಾನವುಳ್ಳ ಬ್ರಹ್ಮಾದಿಗಳಿಂದಲೂ ಹೃದಯದಲ್ಲಿ ಭಾವಿಸಲುಯೋಗ್ಯವಾದ ಮತ್ತು ಸಂಸಾರವೆಂಬ ಕೂಪದಲ್ಲಿ ಬಿದ್ದಿರುವ ಪ್ರಾಣಿಗಳು ದಾಂಟುವದಕ್ಕೆ ಆಶ್ರಯವಾದ ಇಂತಪ್ಪ ನಿನ್ನಪಾದ ಯುಗ್ಮವು ನನ್ನಿಂದ ಕಾಣಲ್ಪಟ್ಟಿತು, ಆಕಾರಣದಿಂದ ನಾನು ಕೃತಾರ್ಥನಾದೆನು, ಆದರೂ ಆಪಾದಸ್ಮೃತಿಯು ನಿರಂತರವೂ ನನಗೆಂತಿರುವುದೋ ಆರೀತಿಯಿಂದ ಅನುಗ್ರಹಿಸುವವನಾಗು, ಅನಂತರದಲ್ಲಿ ಆಪಾದಯುಗ್ಮವು ನಿರಂತರದಲ್ಲಿಯೂ ಧ್ಯಾನಂಗೆಯ್ಯುತಲೇ ಸಂಚರಿಸುವವನಾಗುವೆನೆಂದು ವಿಜ್ಞಾಪಿಸಿದನು ॥೧೮॥ ಎಲೈಪರೀಕ್ಷಿದ್ರಾಯನೇ! ಕೇಳು? ಅನಂತರದಲ್ಲಿ ನಾರದನು ಯೋಗೇಶ್ವರನಾದ ಶ್ರೀಹರಿಯ ಯೋಗಮಾಯೆಯಂ ತಿಳಿಯಲಿಚ್ಛೆಯಿಂದ ಶ್ರೀಕೃಷ್ಣನ ಪತ್ನಿಯಾದ ಮತ್ತೊಬ್ಬಳ ಗೃಹವಂ ಪ್ರವೇಶಿಸಿದನು॥೧೯॥ ನಾರದಮುನಿಯು ಆಗೃಹದಲ್ಲಿ ಪತ್ನಿಯೊಡನೆಯೂ ಉದ್ಧವನೊಡನೆಯೂ ಕೂಡ ಪಗಡೆಯನಾಡುತ್ತಲಿರುವ ಶ್ರೀಕೃಷ್ಣನಂನೋಡಿ ಪ್ರತ್ಯುತ್ಥಾನಪೀಠಾದಿಗಳಿಂ ಪರಮಭಕ್ತಿಯಿಂ ಪೂಜಿಸಲ್ಪಟ್ಟನು ॥೨೦॥ ಮತ್ತು ಈನಾರದನು ತಿಳಿಯದವ

ಪೂರ್ಣಾನಾಮಪ್ತಕಾಮಾನಾಂ-ರಸ್ಮದಾದಿಭಿಃ ||೨೧|| ತಥಾಪಿಬ್ರೂಹಿನೋಬ್ರಹ್ಮನ್ ಜನ್ಮೈತಚ್ಛೋಭನಂಕುರು | ಸತುವಿಸ್ಮಿತಉತ್ಥಾಯತೂಷ್ಣೀಮನ್ಯದಗಾದ್ಗೃಹಮ್ ||೨೨|| ತತ್ರಾಪ್ಯಚಷ್ಟಗೋವಿಂದಂಲಾಲಯಂತಂಸುತಾಂಛಿಶೂನ್ | ತತೋನ್ಯಸ್ಮಿನ್‌ಗೃಹೇಪಶ್ಯನ್ಮಜ್ಜನಾಯಕೃತೋದ್ಯಮಮ್ ||೨೩|| ಜುಹ್ವಂತಂಚವಿತಾನಾಗ್ನೀನ್‌ಯಜಂತಂಪಂಚಭಿರ್ಮಖೈಃ | ಭೋಜಯಂತಂದ್ವಿಜಾನ್‌ಕ್ವಾಪಿಭುಂಜಾನಮವಶೇಷಿತಮ್ || ಕ್ವಾಪಿಸಂಧ್ಯಾಮುಪಾಸೀನಂಜಪಂತಂಬ್ರಹ್ಮವಾಗ್ಯತಮ್ | ಏಕತ್ರಚಾಸಿಚರ್ಮಾಭ್ಯಾಂಚರಂತಮಸಿವರ್ತ್ಮಸು ||೨೫|| ಅಶ್ವೈರಶ್ವೈರ್ಗಜೈಃಕ್ವಾಪಿವಿಚರಂತಂಗದಾಗ್ರಜಮ್ | ಕ್ವಚಿಚ್ಛಯಾನಂಪರ್ಯಂ

---

ಡಲ್ಪಡುತ್ತೆ, ಇತಿ-ಇಂತೆನುತಲೂ ||೨೧|| ಬ್ರಹ್ಮನ್-ಬ್ರಾಹ್ಮಣನಾದನಾರದನೇ! ತಥಾಪಿ-ಹಾಗಾದರೂ, ನಃ-ನಮಗೆ, ಬ್ರೂಹಿ-ಹೇಳು, ಏತಜ್ಜನ್ಮ-ಈನಮ್ಮಹುಟ್ಟುವಿಕೆಯನ್ನು, ಶೋಭನಂ-ಶುಭವುಳ್ಳದ್ದನ್ನಾಗಿ, ಕುರು-ಮಾಡು ಎನುತಲೂಕೇಳಲ್ಪಟ್ಟನು, ಸತು-ಆನಾರದನಾದರೋ, ವಿಸ್ಮಿತಃ-ಆಶ್ಚರ್ಯವುಂಟಾದವನಾಗಿ, ಉತ್ಥಾಯ-ಎದ್ದು, ತೂಷ್ಣೀಂ-ಸುಮ್ಮನೇ, ಅನ್ಯದ್ಗೃಹಂ-ಮತ್ತೊಂದುಮನೆಯುಂಕುರಿತು, ಅಗಾತ್-ಹೋದನು ||೨೨|| ತತ್ರಾಪಿ-ಆಮನೆಯಲ್ಲಿಯೂ, ಸುತಾನ್-ಮಕ್ಕಳಾದ, ಶಿಶೂನ್ ಬಾಲಕರನ್ನು, ಲಾಲಯಂತಂ-ಪ್ರೀತಿಸುತಲಿರುವ, ಗೋವಿಂದಂ-ಕೃಷ್ಣನನ್ನು, ಅಚಷ್ಟ-ಕಂಡನು, ತತಃ-ಅದಕ್ಕಿಂತಲೂ, ಅನ್ಯಸ್ಮಿನ್-ಬೇರೆಯಾದ, ಗೃಹೇ-ಮನೆಯಲ್ಲಿ, ಮಜ್ಜನಾಯ-ಸ್ನಾಯಲೋಸುಗ ಕೃತೋದ್ಯಮಂ-ಮಾಡಲ್ಪಟ್ಟ ಪ್ರಯತ್ನವುಳ್ಳ ಕೃಷ್ಣನನ್ನು, ಅಪಶ್ಯತ್-ನೋಡಿದನು ||೨೩|| ವಿತಾನಾಗ್ನೀನ್-ಆಹವನೀಯಾದಿವೈದಿಕಾಗ್ನಿಗಳಲ್ಲಿ, ಜುಹ್ವಂತಂಚ-ಹೋಮಮಾಡುತ್ತಿರುವವನನ್ನೂ, ಪಂಚಭಿರ್ಮಖೈಃ-ದಾರಾದಿಪಂಚಮಹಾಯಜ್ಞಗಳಿಂದ, ಯಜಂತಂ-ದೇವಪ್ರೀತಿಗೆಯ್ಯುತ್ತಿರುವನನ್ನೂ ದ್ವಿಜಾನ್-ಬ್ರಾಹ್ಮಣರನ್ನು, ಭೋಜಯಂತಂಚ-ಊಟಮಾಡಿಸುತ್ತಿರವನನ್ನೂ, ಕ್ವಾಪಿ-ಎಲ್ಲಿಯೋಒಂದುಕಡೆ, ಅವಶೇಷಿತಂ-ವೈಶ್ವದೇವಬ್ರಾಹ್ಮಣಪೂಜೆಯೆಂಬ ಯಜ್ಞದಲ್ಲಿ ಮಿಕ್ಕಹವಿಸ್ಸನ್ನು, ಭುಂಜಾನಂ-ಉಣ್ಣುತ್ತಿರುವಕೃಷ್ಣನನ್ನೂ ||೨೪|| ಕ್ವಾಪಿ-ಒಂದಾನೊಂದುಸ್ಥಲದಲ್ಲಿ, ಸಂಧ್ಯಾಂ-ಸಂಧ್ಯಾಕರ್ಮವನ್ನು, ಉಪಾಸೀನಂ-ಅನುಷ್ಠಿಸುತ್ತಿರುವನನ್ನೂ, ವಾಗ್ಯತಂ-ಲೋಕವ್ಯವಹಾರದಲ್ಲಿ ಮೌನವುಳ್ಳವನಾಗಿ, ಬ್ರಹ್ಮ-ವೇದಮಂತ್ರವನ್ನು, ಜಪಂತಂ-ಪಠಿಸುತ್ತಿರುವನನ್ನೂ, ಏಕತ್ರ-ಒಂದುಕಡೆಯಲ್ಲಿ, ವರ್ತ್ಮಸು-ದಾರಿಗಳೊಳು, ಅಸಿಚರ್ಮಭ್ಯಾಂ-ಕತ್ತಿಗುರಾಣಿಗಳೊಡನೆ, ಚರಂತಮಪಿ-ತಿರುಗುತ್ತಿರುವನನ್ನೂ ||೨೫|| ಕ್ವಾಪಿ-ಎಲ್ಲಿಯೋ ಒಂದುಕಡೆಯಲ್ಲಿ, ಅಶ್ವೈಃ-ಕುದುರೆಗಳಿಂದಲೂ, ರಥೈಃ-ತೇರುಗಳಿಂದಲೂ, ಗಜೈಃ-ಆನೆಗಳಿಂದಲೂ, ಚರಂತಂ-ಸಂಚರಿಸುತ್ತಿರುವ, ಗದಾಗ್ರಜಂ-ಕೃಷ್ಣನನ್ನೂ, ಕ್ವಚಿತ್-ಒಂದೆಡೆಯಲ್ಲಿ, ಪರ್ಯಂಕೇ-ಮಂಚದೊಳು, ಶಯಾನಂ-ಮಲಗಿರುವನನ್ನೂ, ವಂ

---

ನೆಂತೆಯಿರುವ ಶ್ರೀಕೃಷ್ಣನಿಂ " ನೀನು ಯಾವಾಗಬಂದೆ? ಪೂರ್ಣವಾದ ನಿಮ್ಮಂಥವರಿಗೆ ಅಪೂರ್ಣರಾದ ನಮ್ಮಂಥವರಿಂದ ಏನುಮಾಡಲ್ಪಡುವುದು? ||೨೧|| ಎಲೈಮುನಿಯೇ! ಆದರೂ ಬಂದಕಾರ್ಯವಂ ನನಗೆ ನಿರೂಪಿಸು ನನ್ನ ಜನ್ಮವಂ ಸಫಲಂಗೆಯ್ವನಾಗು, ಎಂದು ಪ್ರಶ್ನೆಗೆಯ್ಯಲ್ಪಟ್ಟನು. ಬಳಿಕ ನಾರದಮುನಿಯು ಶ್ರೀಕೃಷ್ಣನ ವಚನವಂ ಕೇಳಿ ಅಚ್ಚರಿಗೊಂಡು ಮೌನದಿಂದೆದ್ದು ಮತ್ತೊಂದು ಗೃಹವನೆಯ್ದಿದನು ||೨೨|| ನಾರದನು ಆಗೃಹದಲ್ಲಿಯೂ ಶ್ರೀಕೃಷ್ಣನಂ ಶಿಶುಗಳಾದ ಪುತ್ರರಂ ಲಾಲಿಸುತಲಿರುವನನ್ನಾಗಿ ಕಂಡನು. ಆಮೇಲೆ ಮತ್ತೊಂದುಮನೆಯಲ್ಲಿ ಶ್ರೀಕೃಷ್ಣನು ಸ್ನಾನಕ್ಕೆ ಪ್ರಯತ್ನಂ ಗೆಯ್ಯುತಲಿರುವವನನ್ನಾಗಿ ಕಂಡನು ||೨೩|| ಮತ್ತು ನಾರದನು ಶ್ರೀಕೃಷ್ಣನಂ ಒಂದುಕಡೆಯಲ್ಲಿ ಅಗ್ನಿಹೋತ್ರ ಹೋಮಂಗಳಂ ಗೆಯ್ವನನ್ನಾಗಿಕಂಡನು. ಮತ್ತೊಂದೆಡೆಯೊಳು ಪಂಚಮಹಾಯಜ್ಞಂಗಳಂ ಗೆಯ್ವನನ್ನಾಗಿಯೂ, ಇನ್ನೊಂದುಕಡೆಯೊಳು ಬ್ರಾಹ್ಮಣರಿಗೆ ಭೋಜನವಂ ಮಾಡಿಸುವನನ್ನಾಗಿಯೂ, ಇನ್ನೊಂದು ಸ್ಥಲದಲ್ಲಿ ಬ್ರಾಹ್ಮಣ ಭುಕ್ತಶೇಷವನ್ನು ಭುಜಿಸುತಲಿರುವನನ್ನಾಗಿಯೂ ಕಂಡನು ||೨೪|| ಮತ್ತು ಒಂದೆಡೆಯೊಳು ಸಂಧ್ಯಾವಂದನವಂ, ಮತ್ತೊಂದೆಡೆಯೊಳು ಮೌನವ್ರತವಂ ಗಾಯತ್ರೀಜಪವಂ, ಇನ್ನೊಂದುಗೃಹದಲ್ಲಿ ಖಡ್ಗಾದ್ಯಾಯುಧಪರಿಹಾರವಂ, ಮಾಡುತ್ತಿರುವನನ್ನಾಗಿಯೂ ||೨೫|| ಮತ್ತು ಅಶ್ವಗಜರಥಾದಿಗಳಿಂ ಬೇರೆಬೇರೆ ಸಂಚರಿಸುತಲಿರುವವನನ್ನಾಗಿಯೂ, ಮತ್ತೊಂದುಮನೆಯಲ್ಲಿ ಮಂಚದೊಳು ಮಲಗಿ

ಕೈಸ್ತೂಯಮಾನಂಚವಂದಿಭಿಃ ‖೨೬‖ ಮಂತ್ರಯಂತಂಚಕಸ್ಮಿಂಶ್ಚಿನ್ಮಂತ್ರಿಭಿಶ್ಚೋದ್ಧವಾದಿಭಿಃ । ಜಲಕ್ರೀಡಾರತಂಕ್ವಾಪಿವಾರಮುಖ್ಯಾಭಿರಾವೃತಮ್ ‖೨೭‖ ಕುತ್ರಚಿದ್ದ್ವಿಜಮುಖ್ಯೇಭ್ಯೋದದತಂಗಾಸ್ಸ್ವಲಂಕೃತಾಃ । ಇತಿಹಾಸಪುರಾಣಾನಿಶೃಣ್ವಂತಂಮಂಗಳಾನಿಚ ‖೨೮‖ ಹಸಂತಂಹಾಸ್ಯಕಥಯಾಕದಾಚಿತ್ಪ್ರಿಯಯಾಗೃಹೇ । ಕ್ವಾಪಿಧರ್ಮಂಸೇವಮಾನಮರ್ಥಕಾಮೌಚಕುತ್ರಚಿತ್ ‖೨೯‖ ಧ್ಯಾಯಂತಮೇಕಮಾತ್ಮಾನಂಪುರುಷಂಪ್ರಕೃತೇಃಪರಮ್ । ಶುಶ್ರೂಷಂತಂಗುರೂನ್ಕ್ವಾಪಿಕಾಮೈರ್ಭೋಗೈಸ್ಸಪರ್ಯಯಾ ‖೩೦‖ ಕುರ್ವಂತಂವಿಗ್ರಹಂಕೈಶ್ಚಿತ್ಸಂಧಿಂಚಾನ್ಯತ್ರಕೇಶವಮ್ । ಕುತ್ರಾಪಿಸಹರಾಮೇಣಚಿಂತಯಂ

---

ದಿಭಿಃ-ಸ್ತುತಿಪಾಠಕರಿಂದ, ಸ್ತೂಯಮಾನಂಚ-ಕೊಂಡಾಡಲ್ಪಡುತಿರುವನನ್ನೂ ‖೨೬‖ ಕಸ್ಮಿಂಶ್ಚಿತ್-ಒಂದಾನೊಂದೆಡೆಯೊಳು, ಉದ್ಧವಾದಿಭಿಃ-ಉದ್ಧವನು ಮೊದಲಾಗಿವುಳ್ಳ, ಮಂತ್ರಿಭಿಶ್ಚ-ಆಲೋಚಕರೊಡನೆಯೂ, ಮಂತ್ರಯಂತಂಚ-ಆಲೋಚಿಸುತ್ತಿರುವನನ್ನೂ, ಕ್ವಾಪಿ-ಒಂದೆಡೆಯೊಳು, ವಾರಮುಖ್ಯಾಭಿಃ-ಸೂಳೆಯರು ಮೊದಲಾದ ಹೆಂಗಳೊಡನೆ, ಆವೃತಂ-ಬಳಸಲ್ಪಟ್ಟಿರುವನನ್ನೂ, ಜಲಕ್ರೀಡಾರತಂ-ನೀರಾಟದಲ್ಲಿ ಆಸಕ್ತನಾಗಿರುವನನ್ನೂ ‖೨೭‖ ಕುತ್ರಚಿತ್-ಒಂದುಸ್ಥಲದಲ್ಲಿ, ದ್ವಿಜಮುಖ್ಯೇಭ್ಯಃ-ಬ್ರಾಹ್ಮಣಶ್ರೇಷ್ಠರಿಗೆ, ಸ್ವಲಂಕೃತಾಃ-ಚನ್ನಾಗಿ ಸಿಂಗರಿಸಲ್ಪಟ್ಟ, ಗಾಃ-ಗೋವುಗಳನ್ನು, ದದತಂ-ಕೊಡುತಿರುವನನ್ನು, ಇತಿಹಾಸಪುರಾಣಾನಿ-ಪೂರ್ವಕಥೆಗಳನ್ನೂ ಪುರಾಣವಾರ್ತೆಗಳನ್ನೂ, ಮಂಗಳಾನಿಚ-ಶುಭವಾದಸುದ್ದಿಗಳನ್ನೂ, ಶೃಣ್ವಂತಂ ಕೇಳುತ್ತಿರುವಕೃಷ್ಣನನ್ನು ‖೨೮‖ ಕದಾಚಿತ್-ಒಂದಾನೊಂದುಸಮಯದಲ್ಲಿ, ಗೃಹೇ-ಮನೆಯೊಳಗೆ, ಪ್ರಿಯಯಾ-ಪತ್ನಿಯೊಡನೆ, ಹಾಸ್ಯಕಥಯಾ-ನಗೆಸರದಪ್ರಸಂಗದಿಂದ, ಹಸಂತಂ-ನಗುತ್ತಿರುವನನ್ನೂ, ಕ್ವಾಪಿ-ಒಂದುಸ್ಥಳದಲ್ಲಿ, ಧರ್ಮಂ-ಪುಣ್ಯಕಾರ್ಯವನ್ನು, ಸೇವಮಾನಂ-ಆಚರಿಸುತ್ತಿರುವನನ್ನೂ, ಕುತ್ರಚಿತ್-ಒಂದೆಡೆಯೊಳು, ಅರ್ಥಕಾಮೌಚ-ಧನಭೋಗಂಗಳನ್ನೂ, ಸೇವಮಾನಂ-ಸಂಪಾದಿಸಿಕೊಳ್ಳುತ್ತಿರುವಕೃಷ್ಣನನ್ನೂ ‖೨೯‖ ಏಕತ್ರ-ಒಂದುಸ್ಥಳದಲ್ಲಿ, ಪ್ರಕೃತೇಃ-ಮಾಯೆಗಿಂತಲೂ, ಪರಂ ಉತ್ಕೃಷ್ಟನಾದ, ಪುರುಷಂ-ಬ್ರಹ್ಮವನ್ನಾಗಿ, ಆತ್ಮಾನಂ-ಶಾರೀರಕನಾದ ಪ್ರತ್ಯಗಾತ್ಮನನ್ನು, ಧ್ಯಾಯಂತಂ-ಐಕ್ಯಾನುಸಂಧಾನದಿಂದ ಭಾವಿಸುತ್ತಿರುವ ಯೋಗಿಯಾದಕೃಷ್ಣನನ್ನೂ, ಕ್ವಾಪಿ-ಎಲ್ಲಿಯೋ ಒಂದೆಡೆಯೊಳು, ಕಾಮೈಃ-ಬೇಕಾದವಸ್ತುಗಳಿಂದಲೂ, ಭೋಗೈಃ-ಸುಖಂಗಳಿಂದಲೂ, ಸಪರ್ಯಯಾ-ಪೂಜೆಯಿಂದಲೂ, ಗುರೂನ್-ತನ್ನ ಅಜ್ಞಾನವಂ ಪರಿಹರಿಸುವ ಹಿರಿಯನನ್ನು, ಶುಶ್ರೂಷಂತಂ-ಸೇವಿಸುತ್ತಿರುವಕೃಷ್ಣನನ್ನೂ ‖೩೦‖ ಅನ್ಯತ್ರ-ಮತ್ತೊಂದುಕಡೆಯಲ್ಲಿ, ಕೈಶ್ಚಿತ್-ಕೆಲವರೊಡನೆ, ವಿಗ್ರಹಂ-ಜಗಳವನ್ನೂ, ಕೈಶ್ಚಿತ್-ಕೆಲವರೊಡನೆ, ಸಂಧಿಂಚ-ಸಮಾಧಾನವನ್ನೂ, ಕುರ್ವಂತಂ-ಮಾಡುತ್ತಿರುವ, ಕೇಶವಂ-ಕೃಷ್ಣನನ್ನೂ, ಕುತ್ರಾಪಿ-ಎಲ್ಲಿಯೋ ಒಂದುಕಡೆಯಲ್ಲಿ, ರಾಮೇಣಸಹ-ಬಲಭದ್ರನೊಡನೆ, ಸತಾಂ-ಸತ್ಪುರುಷರ, ಶಿವಂ-ಭದ್ರವನ್ನು, ಚಿಂತಯಂತಂ-ಆಲೋಚಿಸುತಿರುವನನ್ನೂ ‖೩೧‖ ಪುತ್ರಾಣಾಂ-ಗಂಡುಮಕ್ಕಳಿಗೂ, ದುಹಿತೄಣಾಂಚ-ಹೆಣ್ಣುಮಕ್ಕಳಿಗೂ,

---

ರುವನನ್ನಾಗಿಯೂ, ಬೇರೆಯೊಂದು ಭವನದಲ್ಲಿ ಸ್ತುತಿಪಾಠಕರಿಂ ಸ್ತುತಿಸಲ್ಪಡುವನನ್ನಾಗಿಯೂ, ‖೨೬‖ ಇನ್ನೊಂದೆಡೆಯೊಳು ಉದ್ಧವಾದಿ ಮಂತ್ರಿಗಳೊಡನೆ ಮಂತ್ರಾಲೋಚನೆಯು ಮಾಡುತಲಿರುವನನ್ನಾಗಿಯೂ ಮತ್ತೊಂದು ಗೃಹದಲ್ಲಿ ವೇದಂಗಳಿಂದ ಸ್ತುತಿಸಲ್ಪಡುತಲಿರುವನನ್ನಾಗಿಯೂ, ಇನ್ನೊಂದು ತಾವಿನಲ್ಲಿ ಜಲಕ್ರೀಡಾಸಕ್ತನನ್ನಾಗಿಯೂ, ‖೨೭‖ ಮತ್ತೊಂದು ಗೃಹದಲ್ಲಿ ಅಲಂಕೃತ ಗೋವುಗಳಂ ಬ್ರಾಹ್ಮಣರಿಗೆ ದಾನಂಗೆಯ್ವನನ್ನಾಗಿಯೂ, ಇತಿಹಾಸ ಪುರಾಣಾದಿಗಳಂ ಶ್ರವಣಂಗೆಯ್ವನನ್ನಾಗಿಯೂ, ‖೨೮‖ ಅನ್ಯತ್ರ ಕಾಂತೆಯೊಡನೆ ಹಾಸ್ಯಕಥಾಸಕ್ತನಾಗಿ ನಗುತಲಿರುವನಂ, ಅಪರತ್ರ ಧರ್ಮಾಚರಣ ಶೀಲನಂ, ಇತರತ್ರ ಅರ್ಥಕಾಮಸೇವಿಯುಂ, ‖೨೯‖ ಒಂದು ಕಡೆಯಲ್ಲಿ ಪ್ರಕೃತಿಗೆ ಪರನಾದ ಪರಮ ಪುರುಷನಾದ ಆತ್ಮನಂ ಧ್ಯಾನಂಗೆಯ್ವನನ್ನಾಗಿಯೂ, ಮತ್ತೊಂದು ಗೃಹದಲ್ಲಿ ಇಷ್ಟಾರ್ಥ ಭೋಗಂಗಳಂ ಗುರುಶುಶ್ರೂಷೆಯಂ ಮಾಡುವನನ್ನಾಗಿಯೂ ‖೩೦‖ ಮತ್ತೊಂದು ಕಡೆಯಲ್ಲಿ ಕೆಲವರೊಡನೆ ಕಲಹಂಗೆಯ್ವನನ್ನಾಗಿಯೂ, ಒಂದು ಕಡೆಯಲ್ಲಿ ಬಲರಾಮನೊಡನೆ ಸ್ವಜನರ ಕ್ಷೇಮವನ್ನು ವಿಚಾರಿಸುವನನ್ನಾಗಿಯೂ, ‖೩೧‖ ಮತ್ತು ಪುತ್ರರಿಗೆ ಪುತ್ರಿಯರಿಗೂ ಉಚಿತ ಕಾಲದಲ್ಲಿ ಅವರ

ತಂಸತಾಂಶಿವಮ್ ‖೨೯‖ ಪುತ್ರಾಣಾಂದುಹಿತೄಣಾಂ ಚಕಾಲೇವಿಧ್ಯುಪಯಾಪನಮ್ ದಾರೈರ್ವರೈಸ್ತತ್ಸ
ದೃಶೈಃಕಲ್ಪಯಂತಂವಿಭೂತಿಭಿಃ ‖೩೦‖ ಪ್ರಸ್ಥಾಪನೋಪಾನಯನೈರಪತ್ಯಾನಾಂಮಹೋತ್ಸವಾನ್ ।
ವೀಕ್ಷ್ಯಯೋಗೇಶ್ವರೇಶಸ್ಯಯೇಷಾಂಲೋಕಾವಿಸಿಸ್ಮಿರೆ ‖೩೧‖ ಯಜಂತಂಸಕಲಾನ್ದೇವಾನ್ ಕ್ವಚಿತ್ಕ್ರತು
ಭಿರೂರ್ಜಿತೈಃ। ಪೂರ್ತಯಂತಂಕ್ವಚಿದ್ಧರ್ಮಂಕೂಪಾರಾಮಾಲಯಾದಿಭಿಃ‖೩೨‖ಚರಂತಂಮೃಗಯಾಂ
ಕ್ವಾಪಿಹಯಮಾರುಹ್ಯಸೈಂಧವಮ್ ।ಘ್ನಂತಂತತಃಪಶೂನ್ಮೇಧ್ಯಾನ್ಪರೀತಂಯದುಪುಂಗವೈಃ‖೩೩‖
ಅವ್ಯಕ್ತಲಿಂಗಂಪ್ರಕೃತಿಷ್ವಂತಃಪುರಚರಾದಿಷು।ಕ್ವಚಿಚ್ಚರಂತಂಗೇಹೇಷುತತ್ತದ್ಭಾವಬುಭುತ್ಸಯಾ‖

---

ಕಾಲೇ-ಯೋಗ್ಯವಯಸ್ಸಿನಲ್ಲಿ, ವಿಧ್ಯುಪಯಾಪನಂ-ಶಾಸ್ತ್ರೋಕ್ತವಿಧಾನದಿಂದ ಉಪನಯನವಿವಾಹಾದಿಗಳನ್ನೂ, ತತ್ಸದೃಶೈಃ-ಅವರಿಗೆಸರಿಯಾದ, ದಾರೈಃ-ಹೆಂಡತಿಯರಿಂದಲೂ, ವರೈಃ-ಗಂಡಂದಿರಿಂದಲೂ, ವಿಭೂತಿಭಿಃ-ವಿಭವಗಳೊಡನೆ, ಕಲ್ಪಯಂತಂ-ಘಟಿಸಗೊಳಿಸುತ್ತಿರುವ ಕೃಷ್ಣನನ್ನೂ ‖೩೦‖ ಯೋಗೇಶ್ವರೇಶಸ್ಯ-ಉಪಾಯಶಕ್ತಿಗಳೊಡೆಯರಿಗಧಿಪನಾದಕೃಷ್ಣನ, ಯೇಷಾಂ-ಯಾವ, ಅಪತ್ಯಾನಾಂ-ಮಕ್ಕಳ, ಮಹೋತ್ಸವಾನ್-ವೈಭವಗಳನ್ನು, ವೀಕ್ಷ್ಯ-ನೋಡಿ, ಲೋಕಾಃ-ಜನಂಗಳು, ವಿಸಿಸ್ಮಿರೇ-ವಿಸ್ಮಯಪಡೆದರೋ? ತೇಷಾಂ-ಆಮಕ್ಕಳಿಗೆ ಪ್ರಸ್ಥಾಪನೋಪಾನಯನೈಃ-ಪ್ರಸ್ಥಾಪನ-ಹೆಮ್ಮಕ್ಕಳನ್ನೂ ಅಳಿಯಂದಿರನ್ನೂ ಕಳುಹಿಸಿಕೊಡುವಿಕೆ, ಉಪಾನಯನ-ಮರಳಿಕರತರುವಿಕೆಗಳಿಂದ, ಮಹೋತ್ಸವಗಳನ್ನು ಕಲ್ಪಿಸುತ್ತಿರುವಕೃಷ್ಣನನ್ನೂ ‖೩೧‖ ಕ್ವಚಿತ್-ಒಂದೆಡೆಯಲ್ಲಿ, ಊರ್ಜಿತೈಃ-ಸಮೃದ್ಧಂಗಳಾದ, ಕ್ರತುಭಿಃ-ಯಜ್ಞಗಳಿಂದ, ಸಕಲಾನ್‌ದೇವಾನ್-ಸಮಸ್ತದೇವತೆಗಳನ್ನೂ, ಯಜಂತಂ-ಪೂಜಿಸುತ್ತಿರುವಕೃಷ್ಣನನ್ನೂ, ಕ್ವಚಿತ್-ಒಂದಾನೊಂದೆಡೆಯೊಳು, ಕೂಪಾರಾಮಾಲಯಾದಿಭಿಃ-ಭಾವಿಗಳು ತೋಟಗಳು ಮನೆಗಳು ಮೊದಲಾದವುಗಳಿಂದ, ಧರ್ಮಂ-ಪುಣ್ಯವನ್ನು, ಪೂರ್ತಯಂತಂ-ತುಂಬಿಸುತ್ತಿರುವಕೃಷ್ಣನನ್ನೂ ‖೩೨‖ ಕ್ವಾಪಿ-ಒಂದುಸ್ಥಳದಲ್ಲಿ, ಸೈಂಧವಂ-ಸಿಂಧುದೇಶದಲ್ಲಿಹುಟ್ಟಿದ, ಹಯಂ-ಕುದುರೆಯನ್ನು, ಆರುಹ್ಯ-ಏರಿ, ಮೃಗಯಾಂಚರಂತಂ-ಬೇಂಟೆಯನ್ನು ಆಡುತ್ತಿರುವಕೃಷ್ಣನನ್ನೂ, ತತಃ-ಅದರದೆಸೆಯಿಂದ, ಮೇಧ್ಯಾನ್-ಶುದ್ಧಂಗಳಾದ, ಪಶೂನ್-ಯಜ್ಞಾರ್ಹಜಂತುಗಳನ್ನು, ಘ್ನಂತಂ-ಕೊಲ್ಲುತ್ತಿರುವ ಕೃಷ್ಣನನ್ನು, ಯದುಪುಂಗವೈಃ-ಯಾದವಶ್ರೇಷ್ಠರಿಂದ, ಪರೀತಂ-ಬಳಸಲ್ಪಟ್ಟಿರುವಕೃಷ್ಣನನ್ನೂ ‖೩೩‖ ಅಂತಃಪುರಚರಾದಿಷು-ರಾಣಿವಾಸದಲ್ಲಿ ತಿರುಗುವವರೇಮೊದಲಾದ, ಪ್ರಕೃತಿಷು-ಪಾಮರಜನಂಗಳಲ್ಲಿ, ಅವ್ಯಕ್ತಲಿಂಗಂ-ಈಶ್ವರಚಿಹ್ನಂಗಳು ಪ್ರಕಟವಾಗದಂತೆ ಬೇರೆವೇಷದಿಂದ ಅಡಗಿರುವನಾಗಿ, ಕ್ವಚಿತ್-ಒಂದೆಡೆಯೊಳು, ಗೇಹೇಷು-ಮನೆಗಳಲ್ಲಿ, ಚರಂತಂಚ-ತಿರುಗುತ್ತಿರುವ ಕೃಷ್ಣನನ್ನೂ ಕಂಡನು, ತತ್ತದ್ಭಾವಬುಭುತ್ಸಯಾ-ಆಯಾರೂಪಲೀಲಾದಿಗಳನ್ನು ತಿಳಿವ

---

ವರಿಗೆ ತಕ್ಕ ಕನ್ಯಾವರ ನಿಶ್ಚಯಂಗೆಯ್ದು ಯಥಾವಿಧಿಯಿಂದ ವೈಭವ ದೊಡನೆ ವಿವಾಹಂಗಳಂ ಬೆಳಸುತಲಿರುವನನ್ನಾಗಿಯೂ ‖೩೦‖ ಯೋಗೇಶ್ವರನಾದ ಶ್ರೀಕೃಷ್ಣನ ಯಾವ ಹೆಣ್ಣು ಮಕ್ಕಳು ಅಳಿಯಂದಿರು ಮೊದಲಾದವರ ಮಹೋತ್ಸವಂ ಗಳಂ ನೋಡಿ ಲೋಕಂಗಳಲ್ಲಿರುವ ಸಮಸ್ತ ಜನರೂ ಆಶ್ಚರ್ಯ ಪಟ್ಟರೋ ಆ ಹೆಣ್ಣುಮಕ್ಕಳು ಅಳಿಯಂದಿರು ಮೊದಲಾದವರಂ ತನ್ನ ಗೃಹದಿಂದ ಅವರವರ ಗೃಹಂಗಳಿಗೆ ಕಳುಹಿಸುವುದು ಮರಳಿಕರತರುವುದು ಸನ್ಮಾನಿಸುವುದು ಆರೈವುದು ಇಂತಾಲೋಕವಿಡಂಬನವಾದ ಆಶ್ಚರ್ಯಕರವಾದ ಮಹೋತ್ಸವಂಗಳಂ ಕಲ್ಪಿಸುತಲಿರುವನನ್ನಾಗಿಯೂ ಕಂಡನು ‖೩೧‖ ಮತ್ತು ನಾರದನು ಶ್ರೀಕೃಷ್ಣನಂ ಒಂದು ಗೃಹದಲ್ಲಿ ಉತ್ಕೃಷ್ಟಂಗಳಾದ ಕ್ರತುಗಳಿಂ ಸಕಲ ದೇವತೆಗಳಂ ಸಂತೋಷಪಡಿಸುತಲಿರುವನನ್ನಾಗಿ, ಮತ್ತೊಂದು ಗೃಹದಲ್ಲಿ ಕೂಪೋದ್ಯಾನ ದೇವಾಲಯಾದಿ ಪ್ರತಿಷ್ಠಾಪನ ರೂಪವಾದ ಪೂರ್ತವೆಂಬ ಧರ್ಮವನ್ನು ಆಚರಿಸುತ್ತಲಿರುವನನ್ನಾಗಿಯೂ, ‖೩೨‖ ಮತ್ತೊಂದು ಕಡೆಯಲ್ಲಿ ಸಿಂಧು ದೇಶದಲ್ಲಿ ಹುಟ್ಟಿದ ಉತ್ತಮಾಶ್ವವನೇರಿ ಬೇಂಟೆಯಾಡುತ ಯಾದವ ಶ್ರೇಷ್ಠರಿಂ ಬಳಸಲ್ಪಟ್ಟವನಾಗಿ ಶ್ರೇಷ್ಠಂಗಳಾದ ಮೃಗಂಗಳಂ ಸಂಹರಿಸುತಲಿರುವನನ್ನಾಗಿಯೂ ‖೩೩‖ ಇನ್ನೊಂದು ಕಡೆಯಲ್ಲಿ ಕೃಷ್ಣನಂ ರಾಜ್ಯಮಂತ್ರಣದಲ್ಲಿಯೂ ಅಂತಃ ಪುರಗೃಹಾದಿಗಳಲ್ಲಿಯೂ ಅವರವರ ಆಶಯಂಗಳಂ ತಿಳಿಯಲಿಚ್ಛೆಯಿಂದ ಮತ್ತೊಂದು ವೇಷದಿಂದ ಆಚ್ಛಾದನಂಗೆಯ್ಯಲ್ಪಟ್ಟು ಸಂಚರಿಸುತ್ತಲಿರು

ಅಥೋವಾಚಹೃಷೀಕೇಶಂನಾರದಃಪ್ರಹಸನ್ನಿವ । ಯೋಗಮಾಯೋದಯಂವೀಕ್ಷ್ಯಮಾನುಷೀಮೀಯು
ಷೋಗತಿಮ್ ॥೩೭॥ ವಿದಾಮಯೋಗಮಾಯಾಂತೇದುರ್ದರ್ಶಾಮಪಿಯೋಗಿನಾಮ್ । ಯೋಗೇಶ್ವರಾತ್ಮನ್ನಿ
ರ್ಭಾತಾಂಭವತ್ಪಾದನಿಷೇವಯಾ ॥೩೮॥ ಅನುಜಾನೀಹಿಮಾಂಕೃಷ್ಣಲೋಕಾಂಸ್ತೇಯಶಸಾಪ್ಲುತಾನ್ ।
ಪರ್ಯಟಾಮಿತವೋದ್ಗಾಯನ್ ಲೀಲಾಭುವನಪಾವನೀಃ ॥೩೯॥ ಶ್ರೀಭಗವಾನ್ । ಬ್ರಹ್ಮನ್ ಧರ್ಮಸ್ಯವಕ್ತಾ
ಹಂಕರ್ತಾತದನುಮೋದಿತಾ । ತಚ್ಛಿಕ್ಷಯನ್ ಲೋಕಮಿಮಮಾಸ್ಥಿತಃಪುತ್ರಮಾಖಿದಃ ॥೪೦॥ ಶ್ರೀಶುಕಃ ॥

---

ಕೊಳ್ಳಬೇಕೆಂಬ ಬಯಕೆಯಿಂದ ॥೩೬॥ ಅಥ-ಆಮೇಲೆ, ನಾರದಃ-ದೇವಋಷಿಯು, ಯೋಗಮಾಯೋದಯಂ-ಜಗನ್ಮೋಹಕಕೋಪಾಯತಂತ್ರಾವಿರ್ಭಾವವನ್ನು, ವೀಕ್ಷ್ಯ-ನೋಡಿ, ಮಾನುಷೀಂಗತಿಂ-ಮನುಷ್ಯಲೀಲೆಯನ್ನು, ಈಯುಷಃ-ಹೊಂದಿರುವ, ಹೃಷೀಕೇಶಂ-ಇಂದ್ರಿಯಾಧಿಪನಾದಿದೇವಕ್ಕಳಿಗೊಡೆಯನಾದ ಕೃಷ್ಣನನ್ನು ಕುರಿತು, ಪ್ರಹಸನ್ನಿವ-ಪ್ರಕಟವಾಗಿ ನಗುತ್ತಿರುವನಂತೆ, ಉವಾಚ-ನುಡಿದನು ॥೩೭॥ ಹೇಯೋಗೇಶ್ವರ-ಎಲೈ ಮಹಾಮಾಯೆಗೊಡೆಯನೇ! ಯೋಗಿನಾಮಪಿ-ನಿನ್ನ ಧ್ಯಾನವುಳ್ಳವರಿಗೂ ಕೂಡ, ದುರ್ದರ್ಶಾಂ-ನೋಡುವುದಕ್ಕೆ ಸಾಧ್ಯವಾಗದೆ ಇರುವ, ತೇ-ನಿನ್ನ, ಯೋಗಮಾಯಾಃ-ಜಗನ್ಮೋಹಕೋಪಾಯಶಕ್ತಿಯನ್ನು, ಭವತ್ಪಾದನಿಷೇವಯಾ-ನಿನ್ನ ಚರಣಂಗಳಂ ಸೇವಿಸಿದ್ದರಿಂದ, ಆತ್ಮನ್-ನನ್ನ ಮನಸ್ಸಿನಲ್ಲಿ, ಅಥವಾ ನಿನ್ನ ಸ್ವರೂಪದಲ್ಲಿ, ನಿರ್ಭಾತಾಂ-ಸತ್ಯವಾಗಿಲ್ಲದಿದ್ದರೂ ಪ್ರಾತಿಭಾಸಿಕವಾಗಿ ತೋರುತ್ತಿರುವ ಮಿಥ್ಯೆಯನ್ನಾಗಿ, ವಿದಾಮ-ತಿಳಿಯುತ್ತಿರುವೆವು (ಅಷ್ಟೇ ಹೊರತು ಸತ್ಯವಾದ ನಿನ್ನ ಪಾರಮಾರ್ಥಿಕಾದ್ವೈತವನ್ನು ಅರಿತವರಾಗಲಿಲ್ಲವೆಂದು ಭಾವವು.) ॥೩೮॥ ಹೇಕೃಷ್ಣ-ಅವಿದ್ಯಾಬಂಧಪರಿಹಾರಕನಾದ ಈಶ್ವರನೇ! ಮಾಂ-ನಿನ್ನ ಲೀಲಾಮಾನುಷನಟನದಿಂದ ಮೋಹಗೊಳ್ಳುತ್ತಿರುವನನ್ನನ್ನು, ಅನುಜಾನೀಹಿ-ಹೊರಟುಹೋಗುವುದಕ್ಕೆ ಸಮ್ಮತಿಸು. ಭುವನಪಾವನೀಃ-ಲೋಕಂಗಳಂ ಶುದ್ಧಿಗೊಳಿಸುತ್ತಿರುವ, ತವಲೀಲಾಃ-ನಿನ್ನ ವಿಲಾಸಗಳನ್ನು, ಉದ್ಗಾಯನ್-ಘಟ್ಟಿಯಾಗಿ ಹಾಡುತ್ತಿರುವನಾಗಿ, ತೇಯಶಸಾ-ನಿನ್ನ ಕೀರ್ತಿಯಿಂದ, ಆಪ್ಲುತಾನ್-ಮುಳುಗಿರುವ, ಲೋಕಾನ್-ಭುವನಂಗಳಲ್ಲಿ, ಪರ್ಯಟಾಮಿ-ತಿರುಗುತ್ತಿರುವೆನು ॥೩೯॥ [ಭಗವದ್ವಚನವು] ಬ್ರಹ್ಮನ್-ಬ್ರಾಹ್ಮಣನೇ! ಅಹಂ-ನಾನು, ಧರ್ಮಸ್ಯ-ವರ್ಣಾಶ್ರಮಧರ್ಮವನ್ನು, ವಕ್ತಾ-ಹೇಳುವವನೂ, ಕರ್ತಾ-ಮಾಡುವವನೂ, ತದನುಮೋದಿತಾ-ಅದರನ್ನನುಸರಿಸಿ ಸಂತೋಷಿಸುವವನೂ, ಆಗಿದ್ದೇನೆ. ತತ್-ಆ ಕಾರಣದಿಂದ, ಇಮಂಲೋಕಂ-ಈ ನರಲೋಕದ ಪ್ರಾಣಿವರ್ಗವನ್ನು, ಶಿಕ್ಷಯನ್-ನನ್ನಂತೆ ನೀವು ಧರ್ಮಬದ್ಧರಾಗಿ ಆಚರಿಸಿರಿಯೆಂದು ಬುದ್ಧಿಕಲಿಸುವನಾಗಿ, ಆಸ್ಥಿತಃ-ಧರ್ಮಾನುಷ್ಠಾನಂಗೆಯ್ಯುತ್ತಿರುವನಾಗಿರ್ಪೆನು ಪುತ್ರ-ಮಗುವಾದ ನಾರದನೇ! ಮಾಖಿದಃ-ತತ್ವವಂ ತಿಳಿಸದೆ ಮೋಹಗೊಳಿಸಲ್ಪಟ್ಟಿರುವೆಯೆಂದು ದುಃಖಿಸಬೇಡ ॥೪೦॥ (ಶುಕವಚನವು.) ಇತಿ-ಈ ಮೇರೆ, ಆದಿಷ್ಟಾನ್-ಹೇಳಲ್ಪಟ್ಟ, ಗೃಹಮೇಧಿನಾಂಸದ್ಧರ್ಮಾನ್-ಗೃಹಸ್ಥಾಶ್ರಮಿಗಳ ಉತ್ತಮಧರ್ಮಗಳನ್ನು, ಆಚರಂತಂ-ಅನುಷ್ಠಿ

---

ವನನ್ನಾಗಿಯೂ ಕಂಡನು ॥೩೬॥ ಅನಂತರದಲ್ಲಿ ನಾರದಮುನಿಯು ಮನುಷ್ಯಲೀಲೆಯನ್ನೆಯ್ದಿರುವ ಶ್ರೀಹರಿಯ ಯೋಗಮಾಯಾ ಪ್ರಭಾವವಂ ಈ ರೀತಿಯಿಂದ ನೋಡಿ ನಗುತ್ತ ಶ್ರೀಕೃಷ್ಣನಂ ಕುರಿತಿಂತು ನುಡಿದನು ॥೩೭॥ ಎಲೈ ಯೋಗೇಶ್ವರನಾದ ಶ್ರೀಕೃಷ್ಣನೇ! ಯೋಗಿಗಳಿಗೂ ಕೂಡ ನೋಡಲಶಕ್ಯವಾದ ಮತ್ತು ನಿನ್ನ ಪಾದಸೇವೆಯಿಂದ ನನ್ನ ಮನಸ್ಸಿನಲ್ಲಿ ವ್ಯಕ್ತವಾದ ನಿನ್ನ ಯೋಗಮಾಯೆಯನ್ನು ಮಾತ್ರವೇ ನಾವು ತಿಳಿದವರಾದೆವೇ ಹೊರತು ನಿನ್ನ ತತ್ವವನ್ನು ನಾವು ಅರಿತವರಾಗಲಿಲ್ಲ ॥೩೮॥ ಎಲೈ ಶ್ರೀಕೃಷ್ಣನೇ! ನನ್ನನ್ನು ಆಜ್ಞಾಪಿಸುವನಾಗು, ನಾನು ಲೋಕಪಾವನವಾದ ನಿನ್ನ ಲೀಲೆಯನ್ನು ಗಾನಂಗೈಯುತ ನಿನ್ನ ಮನಸ್ಸಿನಿಂದ ವ್ಯಾಪ್ತಂಗಳಾದ ಲೋಕಂಗಳೊಳು ಸಂಚರಿಸುವನಾಗುವೆನು ॥೩೯॥ ಇಂತೆಂಬ ನಾರದನ ಬಿನ್ನಹವಂ ಕೇಳಿ ಶ್ರೀಭಗವಂತನು ನುಡಿದನದೆಂತೆನೆ ಎಲೈ ಮುನಿಯೇ! ಧರ್ಮವನ್ನು ಉಪದೇಶಂಗೆಯ್ವನೂ, ಅದರನ್ನು ಅನುಷ್ಠಾನಂಗೆಯ್ವನೂ, ಮತ್ತು ಅದಂ ನೋಡಿ ಸಂತೋಷಿಸುವವನೂ, ನಾನೇ ಆಗಿರುವುದರಿಂದ ಲೋಕವನ್ನು ಶಿಕ್ಷಿಸುವನಾಗಿ ಈ ಲೋಕಧರ್ಮಲ್ಲಿದ್ದೇನೆಯೇ ಹೊರತು ಇದು ಪರಮಾರ್ಥವಲ್ಲವು. ಎಲೈ ಮಗುವಾದ ನಾರದನೇ ಆ ಕಾರಣದಿಂದ ನೀನು ಮೋಹವನೆಯ್ದಬೇಡ ॥೪೦॥ ಎಲೈ ಪರೀಕ್ಷಿದ್ರಾಯನೇ ಕೇಳು, ಹೀಗೆ ಭಗವಂತನಿಂದ ಈ ರೀತಿಯಲ್ಲಿ ಅನು

ಇತ್ಯಾಚರಂತಂ ಸದ್ಧರ್ಮಾನ್ ಪಾವನಾನ್ ಗೃಹಮೇಧಿನಾಮ್ । ತಮೇವ ಸರ್ವಗೇಹೇಷು ಸಂತಮೇಕಂ ದದರ್ಶ ಹ ‖ ಕೃಷ್ಣಸ್ಯಾನಂತವೀರ್ಯಸ್ಯ ಯೋಗಮಾಯಾಮಹೋದಯಮ್ । ಮುಹುರ್ದೃಷ್ಟ್ವಾ ಮುನಿರ್ಭೂದ್ವಿಸ್ಮಿತೋ ಜಾತಕೌತುಕಃ ‖೪೧‖ ಇತ್ಯರ್ಥಕಾಮಧರ್ಮೇಷು ಕೃಷ್ಣೇನ ಶ್ರದ್ಧಿತಾತ್ಮನಾ । ಸಮ್ಯಕ್ ಸಭಾಜಿತಃ ಪ್ರೀತಸ್ತಮೇವಾನುಸ್ಮರನ್ ಯಯೌ ‖೪೨‖ ಏವಂ ಮನುಷ್ಯಪದವೀಮನುವರ್ತಮಾನೋ ನಾರಾಯಣೋಖಿಲಭವಾಯ ಗೃಹೀತಶಕ್ತಿಃ । ರೇಮೇಂಗ ಷೋಡಶಸಹಸ್ರವರಾಂಗನಾನಾಂ ಸವ್ರೀಡಸೌಹೃದನಿರೀಕ್ಷಣಹಾಸಜುಷ್ಟಃ ‖೪೪‖ ಯಾನೀಹ ವಿಶ್ವವಿಲಯೋದ್ಭವವೃತ್ತಿಹೇತುಃ ಕರ್ಮಾಣ್ಯನನ್ಯವಿಷಯಾಣಿ ಹರಿಶ್ಚಕಾ

---

ಸುತ್ತಿರುವ, ತಮೇಕಮೇವ-ಆಕೃಷ್ಣನೊಬ್ಬನನ್ನೇ, ಸರ್ವಗೇಹೇಷು-ಎಲ್ಲಾ ಮನೆಗಳಲ್ಲಿಯೂ, ಸಂತಂ-ಇರುವವನನ್ನಾಗಿ, ದದರ್ಶ-ಕಂಡನು, ಹ-ಆಶ್ಚರ್ಯವು ‖೪೦‖ ಮುನಿಃ-ಪಂಡಿತನಾದ ದೇವಋಷಿಯು. ಅನಂತವೀರ್ಯಸ್ಯ-ಅಪರಿಮಿತಸಾಮರ್ಥ್ಯವುಳ್ಳ, ಕೃಷ್ಣಸ್ಯ-ಪರಮೇಶ್ವರನಾದ ವಿಷ್ಣುವಿನ, ಯೋಗಮಾಯಾಮಹೋದಯಂ-ಜಗನ್ಮೋಹಕೋಪಾಯತಂತ್ರಾವಿಷ್ಕರಣವನ್ನು, ಮುಹುಃ-ಮರಳಿಮರಳಿಯೂ, ದೃಷ್ಟ್ವಾ-ನೋಡಿ-ವಿಸ್ಮಿತಃ-ಅದ್ಭುತವುಂಟಾದವನೂ. ಜಾತಕೌತುಕಃ-ತತ್ವಾರ್ಥತಿಯಲಿಚ್ಛೆ ಹುಟ್ಟಿದವನೂ, ಅಭೂತ್-ಆದನು ‖೪೧‖ ಇತಿ-ಹೀಗೆ, ಅರ್ಥಕಾಮಧರ್ಮೇಷು-ಅರ್ಥ-ಧನಾದ್ಯುಪಭೋಗಂಗಳ, ಕಾಮ-ವಿಷಯಾನಂದಾನುಭವಗಳ, ಧರ್ಮೇಷು-ವರ್ಣಾಶ್ರಮಧರ್ಮಂಗಳ, ಸಂಪಾದನಂಗಳಲ್ಲಿ, ಶ್ರದ್ಧಿತಾತ್ಮನಾ-ಅವಶ್ಯವಾಗಿ ನೆಚ್ಚಿನಲ್ಪಟ್ಟ ಮನಸ್ಸುಳ್ಳವನಂತಿರುವ ಕೃಷ್ಣೇನ-ವಾಸುದೇವಮೂರ್ತಿಯಾದ ವಿಷ್ಣುವಿನಿಂದ, ಸಮ್ಯಕ್-ಚನ್ನಾಗಿ, ಸಭಾಜಿತಃ-ಉಪಚರಿಸಲ್ಪಟ್ಟವನಾದ್ದರಿಂದ, ಪ್ರೀತಃ-ಪ್ರಿಯವುಳ್ಳವನಾದ ನಾರದನು, ತಮೇವ-ಆಕೃಷ್ಣನನ್ನೇ, ಅನುಸ್ಮರನ್-ಪ್ರತಿಕ್ಷಣದಲ್ಲಿಯೂ ಬಿಡದೆ ನೆನಪುಗೊಳ್ಳುತ್ತಿರುವನಾಗಿ, ಯಯೌ-ತೆರಳಿದನು ‖೪೨‖ ಅಂಗ-ಅಯ್ಯ ಪರೀಕ್ಷಿದ್ರಾಯನೇ! ಏವಂ-ಹೀಗೆ, ಮನುಷ್ಯಪದವೀಂ-ಮಾನುಷಮಾರ್ಗವನ್ನು, ಅನುವರ್ತಮಾನಃ-ಅನುಸರಿಸಿರುವವನೂ, ಅಖಿಲಭವಾಯ-ಸಮಸ್ತಪ್ರಪಂಚದ ಉತ್ಪತ್ತಿಗೋಸುಗ, ಗೃಹೀತಶಕ್ತಿಃ-ಅಂಗೀಕರಿಸಲ್ಪಟ್ಟ ನಾನಾಮೂರ್ತಿಗಳುಳ್ಳ, ನಾರಾಯಣಃ-ಸರ್ವಾತ್ಮನಾದ ಕೃಷ್ಣನು, ಷೋಡಶಸಹಸ್ರವರಾಂಗನಾನಾಂ-೧೬ ಸಾವಿರವಾದ ಉತ್ತಮಸ್ತ್ರೀಯರ, ಸವ್ರೀಡಸೌಹೃದನಿರೀಕ್ಷಣಹಾಸಜುಷ್ಟಃ-ನಾಚಿಕೆಯಿಂದಲೂ ಸ್ನೇಹದಿಂದಲೂ ಸಹಿತವಾದ ನೋಟದಿಂದಲೂ ನಗೆಯಿಂದಲೂ ಸೇವಿಸಿ ಪ್ರೀತಿಸಲ್ಪಟ್ಟವನಾಗಿ, ರೇಮೇ-ಕ್ರೀಡಿಸಿದನು ‖೪೪‖ ವಿಶ್ವವಿಲಯೋದ್ಭವವೃತ್ತಿಹೇತುಃ-ಪ್ರಪಂಚದ ನಾಶಕ್ಕೂ ಸೃಷ್ಟಿಗೂ ಜೀವಿಸಿರುವುದಕ್ಕೂ ಕಾರಣನಾದ, ಹರಿಃ-ಕೃಷ್ಣನು, ಅನನ್ಯವಿಷಯಾಣಿ-ಇತರರಿಗೆ ಸಾಧಾರಣಂಗಳಲ್ಲದ, ಯಾನಿಕರ್ಮಾಣಿ ಯಾವ ಕಲಸಗಳನ್ನು, ಇಹ-ಈಲೋಕದಲ್ಲಿ, ಚಕಾರ-ಮಾಡಿದನೋ ತಾನಿ-ಆಕರ್ಮಗಳನ್ನು, ಯಃ-ಯಾವಪುರುಷನು, ಗಾಯತಿ-ಹಾಡುವನೋ, ಶೃಣೋತಿ-ಕೇಳುವನೋ, ಅನುಮೋದತೇವಾ-ಹ

---

ಗ್ರಹಿಸಲ್ಪಟ್ಟ ಆ ನಾರದಮುನಿಯು ಆ ಸಮಸ್ತ ಗೃಹಂಗಳಲ್ಲಿಯೂ ಗೃಹಸ್ಥರಿಗೆ ಉಚಿತಂಗಳೆನಿಪ ಸದ್ಧರ್ಮಂಗಳನ್ನು ಈ ರೀತಿಯಾಗಿ ಆಚರಿಸುತಲಿರುವ ಆ ಶ್ರೀಕೃಷ್ಣನನ್ನು ಒಬ್ಬನನ್ನೇ ನೋಡಿದನು ‖೪೦‖ ಅನಂತರದಲ್ಲಿ ಭಾವಿಸಲಶಕ್ಯವಾದ ಮಾಹಾತ್ಮ್ಯವುಳ್ಳ ಶ್ರೀಕೃಷ್ಣನ ಯೋಗಮಾಯಾ ಪ್ರಭಾವವಂ ಬಾರಿ ಬಾರಿಗೂ ನೋಡಿ ಕುತೂಹಲಯುಕ್ತನಾದ ನಾರದಮುನಿಯು ಆಶ್ಚರ್ಯಪಟ್ಟನು ‖೪೧‖ ‡ ‖ ಇಂತು ತ್ರಿವರ್ಗದಲ್ಲಿ ಶ್ರದ್ಧೆಗೊಳಿಸಲ್ಪಟ್ಟ ಶ್ರೀಕೃಷ್ಣನಿಂ ಸನ್ಮಾನಿತನಾದ ನಾರದಮುನಿಯು ಸುಪ್ರೀತನಾಗಿ ಆಕೃಷ್ಣನನ್ನೇ ಸ್ಮರಿಸುತ ತೆರಳಿದನು ‖೪೨‖ ಎಲೈ ಅರಸೇ! ಕೇಳು, ಸಮಸ್ತಪ್ರಪಂಚದ ಉತ್ಪತ್ತಿಗೋಸುಗ ಪರಿಗ್ರಹಿಸಲ್ಪಟ್ಟ ನಾನಾವಿಧಮೂರ್ತಿಗಳುಳ್ಳ, ಮತ್ತು ಮನುಷ್ಯರ ರೀತಿಯನ್ನು ಅನುವರ್ತಿಸಿಕೊಂಡಿರುವ ಶ್ರೀನಾರಾಯಣನು-ಈಪ್ರಕಾರವಾಗಿ ಉತ್ತಮವಾದ ಹದಿನಾರುಸಾವಿರಮಂದಿ ಸ್ತ್ರೀಯರ ಲಜ್ಜೆಯೊಡನೆ ಕೂಡಿರುವ ಸ್ನೇಹದಿಂದುಂಟಾದ ಸವಿನೋಟಂಗಳಿಂದಲೂ, ಮುಗುಳುನಗೆಗಳಿಂದಲೂ, ಸೇವಿಸಲ್ಪಟ್ಟವನಾಗಿ ರಮಿಸಿದನು ‖೪೪‖ ಎಲೈ ಅರಸೇ! ಕೇಳು, ಪ್ರಪಂಚದ ಉತ್ಪತ್ತಿಸ್ಥಿತಿಲಯಂಗಳಿಗೆ ಕಾರಣನಾದ ಶ್ರೀಹರಿಯು ಈಪ್ರಪಂಚದಲ್ಲಿ ಅಸಾಧಾರಣಂಗಳಾದ ಯಾವ

ಶ್ರೀಯಃಸ್ತಾನಿ ಗಾಯತಿ ಶೃಣೋತ್ಯನುಮೋದತೇ ವಾ ಭಕ್ತಿರ್ಭವೇದ್ಭಗವತಿ ಹ್ಯಪವರ್ಗಮಾರ್ಗೇ ‖ ‖೪೫‖
ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಏಕೋನಸಪ್ತತಿತಮೋಽಧ್ಯಾಯಃ
ಶ್ರೀಶುಕಃ ‖ ಅಥೋಷಸ್ಯುಪವೃತ್ತಾಯಾಂ ಕುಕ್ಕುಟಾನ್ ಕೂಜತೋಽಶಪನ್ । ಗೃಹೀತಕಂಠ್ಯಃ ಪತಿಭಿರ್ಮಾಧವ್ಯೋ ವಿರಹಾತುರಾಃ ‖೧‖ ವಯಾಂಸ್ಯರೂರುವನ್ ಕೃಷ್ಣಂ ಬೋಧಯಂತೀವ ವಂದಿನಃ । ಗಾಯ

ನ್ನಾಗಿವೆಯೆಂದು ಸಂತೋಷಿಸುವನೋ, ತಸ್ಯ-ಆ ಮನುಷ್ಯನಿಗೆ, ಅಪವರ್ಗಮಾರ್ಗೇ-ಮುಕ್ತಿಗೆ ದಾರಿಯಾಗಿರುವ, ಭಗವತಿ-ಷಡ್ಗುಣೈಶ್ವರಸಂಪನ್ನನಾದ ಕೃಷ್ಣನಲ್ಲಿ, ಭಕ್ತಿಃ-ಅವಿಚ್ಛಿನ್ನಪ್ರೀತಿಯು, ಭವೇತ್-ಉಂಟಾಗುವದು। ‖೪೫‖

ಇಂತೆಂಬಲ್ಲಿಗೆ ಶ್ರೀಮದ್ಭಾಗವತ ಪ್ರತಿಪದಾರ್ಥಬೋಧಿನಿಯೊಳು ದಶಮಸ್ಕಂಧದಲ್ಲಿ
೬೯ನೆಯ ಅಧ್ಯಾಯಂ ಮುಗಿದುದು.
೭೦ನೆಯ ಅಧ್ಯಾಯದ ಪ್ರತಿಪದಟೀಕೆ.

ಅಥ-ಆಹ್ನಿಕಾಧಿಕಾರಸಿದ್ಧ್ಯನಂತರದಲ್ಲಿ, ಉಷಸಿ-ಉಷಃಕಾಲವೆಂಬ ರಾತ್ರಿಯ ಕಡೆಯ ಯಾಮದ ಪ್ರಥಮಭಾಗವು ಉಪವೃತ್ತಾಯಾಂ ಸತ್ಯಾಂ-ಸಮೀಪವಾಗುತ್ತಿರಲಲ್ಲಿ, ಪತಿಭಿಃ-ಗಂಡಂದಿರಾದ ಕೃಷ್ಣರಿಂದ, ಗೃಹೀತಕಂಠ್ಯಃ-ಅಪ್ಪಿಕೊಳ್ಳಲ್ಪಟ್ಟ ಕೊರಳ್ಗಳುಳ್ಳವರಾದ, ಮಾಧವ್ಯಃ-ಕೃಷ್ಣಪತ್ನಿಯರು, ವಿರಹಾತುರಾಃ-ಕೃಷ್ಣನಂ ಅಗಲಬೇಕಾಗುವದೆಂಬ ಶಂಕೆಯಿಂದ ಆತುರಪಡುವರಾಗಿ, ಕೂಜತಃ-ಕೂಗುತಲಿರುವ, ಕುಕ್ಕುಟಾನ್-ಕೋಳಿಗಳನ್ನು, ಅಶಪನ್-ಇಷ್ಟುಬೇಗ ಕೂಗಿದವೆಂದು ಬಯ್ದರು ‖೧‖ ಮಂದಾರವನವಾಯುಭಿಃ-ಪಾರಿಜಾತವೃಕ್ಷಗಳ ತೋಟದ ಗಾಳಿಗಳೊಡನೆ, ಅಳಿಷು-ತುಂಬಿಗಳು, ಗಾಯತ್ಸು ಸತ್ಸು-ಹಾಡುವವಾಗುತ್ತಿರಲಾಗಿ, ಅನಿದ್ರಾಣಿ-ನಿದ್ರೆಯಿಲ್ಲವವುಗಳಾದ, ವಯಾಂಸಿ-ಪಕ್ಷಿಗಳು, ವಂದಿನಃ ಇವ-ಸ್ತುತಿಪಾಠಕರಂತೆ, ಕೃಷ್ಣಂ-ಶ್ರೀಹ

ವ್ಯಾಪಾರಂಗಳನ್ನು, ಆಚರಿಸಿದನೋ ಅಂತಪ್ಪ ಚರಿತ್ರಂಗಳಂ ಯಾವ ಪುರುಷನು ಗಾನಂಗೆಯ್ಯುತಲಿರುವನೋ, ಯಾವನನುಶ್ಲಾಘಿಸುತಲಿರುವನೋ, ಆ ಪುರುಷನಿಗೆ ಮೋಕ್ಷಪ್ರದನಾದ ಭಗವಂತನಲ್ಲಿ ಭಕ್ತಿಯುಂಟಾಗುವದು ‖೪೫‖

ಇಂತು ಶ್ರೀಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸಿದನೆಂದು ಸೂತಪೌರಾಣಿ
ಕನು ನೈಮಿಶಾರಣ್ಯವಾಸಿಗಳಾದ ಶೌನಕಾದಿ ಮಹರ್ಷಿಗಳಿಗೆ ಪೇಳಿದನೆಂಬಲ್ಲಿಗೆ-ಶ್ರೀ
ಮನ್ಮಹೀಶೂರ ಪುರವರಾಧೀಶ ಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜ
ವಿರಚಿತಮಾದ "ಶ್ರೀಕೃಷ್ಣರಾಜ ವಾಣೀವಿಲಾಸ" ಮೆಂಬ ಶ್ರೀಭಾಗ
ವತ ಪುರಾಣದ ಕರ್ಣಾಟ ಭಾಷಾವ್ಯಾಖ್ಯಾನದಲ್ಲಿ
೬೯ನೆಯ ಅಧ್ಯಾಯವು ಮುಗಿದುದು.

ಶ್ರೀಧರೀಯಶ್ಲೋಕಃ ‖ ತತಸ್ತು ಸಪ್ತತಿತಮೇ ಕೃಷ್ಣಸ್ಯಾಹ್ನಿಕಕರ್ಮಣಿ । ದೂತನಾರದಯೋಃ ಕಾರ್ಯೇ ಮಂತ್ರಿ ಮಂತ್ರವಿಚಾರಣಾ ‖ ✝ ‖ಟೀ‖ ಎಪ್ಪತ್ತನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ಆಹ್ನಿಕವ್ಯಾಪಾರಮಂ ಮಾಡಿಕೊಂಡು ಆ ಸ್ಥಾನದಲ್ಲಿ ಬಂದು ಕುಳಿತಿರಲಾಗಿ ಜರಾಸಂಧನಿಂದೆ ಬದ್ಧರಾದ ಅರಸುಗಳಿಂದ ಕಳುಹಿಸಲ್ಪಟ್ಟ ದೂತನ ವಾಕ್ಯಮಂ ಕೇಳಿ ಅನಂತರದಲ್ಲಿ ನಾರದ ಋಷಿಯ ವಾಕ್ಯಮಂ ಕೇಳಿ ಉದ್ಧವನು ಮೊದಲಾದ ಮಂತ್ರಿಗಳೊಡನೆ ಮಂತ್ರಾಲೋಚನೆಯಂಗೆಯ್ದನೆಂಬರ್ಥಮಂ ಶ್ರೀಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸುವನದೆಂತೆನೆ.

ಎಲೈ, ಪರೀಕ್ಷಿದ್ರಾಯನೇ! ಅನಂತರದಲ್ಲಿ ತಮ್ಮ ತಮ್ಮ ಗೃಹಂಗಳಲ್ಲಿ ಪತಿರೂಪದಿಂ ತಮ್ಮೊಡನೆ ರಮಿಸುತಲಿರುವ ಅನೇಕರಾದ ಕೃಷ್ಣರೊಡನೆಆಲಿಂಗನಂಗೆಯ್ಯಲ್ಪಟ್ಟ ಕಂಠಂಗಳುಳ್ಳ ಶ್ರೀಕೃಷ್ಣನ ಪತ್ನಿಯರು ಉಷಃಕಾಲವು ಪ್ರಾಪ್ತವಾಗುತಿರಲು ಕುಕ್ಕುಟಂಗಳ ಧ್ವನಿಯಂ ಕೇಳಿ ವಿರಹದಿಂ ಪೀಡಿಸಲ್ಪಟ್ಟವರಾಗಿ ಆ ಕುಕ್ಕುಟಂಗಳಂ ಶಪಿಸಿದರು ‖೧‖ ಮಂದಾರ ವನಂಗಳ ವಾಯುಗಳಿಂದ ತುಂಬಿಗಳು ಗಾನಂಗೆಯ್ಯುತ್ತಿರಲು ಪಕ್ಷಿಗಳು, ವಂ

ತ್ಸ್ವಾಲಿಷ್ವನಿದಾಘ್ನಿಮಂದಾರವನವಾಯುಭಿಃ ॥೨॥ ಮುಹೂರ್ತಂತಂತುವೈದರ್ಭೀನಾಮೃಷ್ಯದತಿಶೋಭನಮ್ । ಪರಿರಂಭಣವಿಶ್ಲೇಷಾತ್ಪ್ರಿಯಬಾಹ್ವಂತರಂಗತಾ ॥೩॥ ಬ್ರಾಹ್ಮೇಮುಹೂರ್ತಉತ್ಥಾಯವಾರ್ಯುಪಸ್ಪೃಶ್ಯಮಾಧವಃ । ದಧ್ಯೌಪ್ರಸನ್ನಕರಣಆತ್ಮಾನಂತಮಸಃಪರಮ್ ॥೪॥ ಏಕಂಸ್ವಯಂಜ್ಯೋತಿರನನ್ಯಮವ್ಯಯಂಸ್ವಸಂಸ್ಥಯಾನಿತ್ಯನಿರಸ್ತಕಲ್ಮಷಮ್ । ಬ್ರಹ್ಮಾಖ್ಯಮಸ್ಯೋದ್ಭವನಾಶಹೇತುಭಿಸ್ಸ್ವಶಕ್ತಿಭಿರ್ಲಕ್ಷಿತಭಾವನಿರ್ವೃತಿಮ್ ॥೫॥ ಅಥಾಪ್ಲುತೋಂಭಸ್ಯಮಲೇಯಥಾವಿಧಿಕ್ರಿಯಾಕಲಾಪಂ ಪರಿಧಾಯವಾಸಸೀ । ಚಕಾರಸಂಧ್ಯೋಪಗಮಾದಿಸತ್ತಮೋಹುತಾನಲೋಬ್ರಹ್ಮಜಜಾಪವಾಗ್ಯತಃ ॥೬॥

---

ರಿಯನ್ನು, ಬೋಧಯಂತೀವ-ಎಚ್ಚರಗೊಳಿಸುತ್ತಿವೆಯೋ ಎಂಬಹಾಗೆ, ಅರೂರುವನ್-ಕೂಗಿದವು ॥೨॥ ವೈದರ್ಭೀ ತು-ರುಕ್ಮಿಣಿಯಾದರೋ, ಪ್ರಿಯಬಾಹ್ವಂತರಂ-ಕೃಷ್ಣನತೋಳುಗಳ ಮಧ್ಯವನ್ನು, ಗತಾ-ಸೇರಿಯಿದ್ದವಳಾದ್ದರಿಂದ, ಪರಿರಂಭಣವಿಶ್ಲೇಷಾತ್-ಆಲಿಂಗನವು ತಪ್ಪಿಹೋಗುವುದರದೆಸೆಯಿಂದ, ತಂಮುಹೂರ್ತಂ-ಆಸಮಯವನ್ನು, ಅತಿಶೋಭನಂ-ಬಹಳಶುಭಕರವನ್ನಾದರೂ ಕೂಡ, ನಾಮೃಷ್ಯತ್-ಸೈರಿಸಲಿಲ್ಲವು ॥೩॥ ಮಾಧವಃ-ಶ್ರೀಕೃಷ್ಣನು, ಬ್ರಾಹ್ಮೇಮುಹೂರ್ತೇ-ಬ್ರಹ್ಮಾನುಸಂಧಾನಯೋಗ್ಯವಾದ ಸಮಯದಲ್ಲಿ, ಉತ್ಥಾಯ-ಎದ್ದು, ವಾರಿ-ನೀರನ್ನು, ಉಪಸ್ಪೃಶ್ಯ-ಸೋಂಕಿ, (ಜಲಶುದ್ಧಿಮಾಡಿಕೊಂಡು) ಪ್ರಸನ್ನಕರಣಃ-ನಿರ್ಮಲೇಂದ್ರಿಯಂಗಳುಳ್ಳವನಾಗಿ, ತಮಸಃ-ಅನಾದಿಭಾವಾಜ್ಞಾನಕ್ಕಿಂತಲೂ, ಪರಂ-ಇತರವಾದ, ಆತ್ಮಾನಂ-ಸ್ವರೂಪಾತ್ಮವನ್ನು ದಧ್ಯೌ-ಧ್ಯಾನಮಾಡಿದನು ॥೪॥ ಏಕಂ-ಅಖಂಡವಾದ, ಅನನ್ಯಂ-ನಿರುಪಾಧಿಕವಾದ, ಅವ್ಯಯಂ-ನಿತ್ಯವಾದ, ಸ್ವಯಂಜ್ಯೋತಿಃ-ಸ್ವಪ್ರಕಾಶವಾದ, ನಿತ್ಯನಿವೃತ್ತಕಲ್ಮಷಂ-ಯಾವಾಗಲೂ ಅವಿದ್ಯಾದೋಷವಂಹೊರತಟ್ಟಿದ, ಅಸ್ಯ-ಈಪ್ರಪಂಚದ, ಉದ್ಭವನಾದಿಹೇತುಭಿಃ-ಸೃಷ್ಟ್ಯಾದಿಗಳಿಗೆನಿಮಿತ್ತಂಗಳಾದ, ಸ್ವಶಕ್ತಿಭಿಃ-ನಿಜಸಾಮರ್ಥ್ಯಗಳಿಂದ, ಲಕ್ಷಿತಭಾವನಿರ್ವೃತಿಂ-ತೋರಿಸಲ್ಪಟ್ಟ ಸದ್ಭಾವವೂ ಆನಂದವೂಉಳ್ಳ, ಬ್ರಹ್ಮಾಖ್ಯಂ-ಬ್ರಹ್ಮವೆಂಬ ಹೆಸರುಳ್ಳಸ್ವರೂಪಚೈತನ್ಯವನ್ನು, ದಧ್ಯೌ-ಅನುಸಂಧಾನಂಗೆಯ್ದನು ॥೫॥ ಅಥ-ಆತ್ಮಾನುಸಂಧಾನವಂಮಾಡಿದಬಳಿಕ, ಸತ್ತಮಃ-ಸತ್ಪುರುಷರಲ್ಲಿ ಶ್ರೇಷ್ಠನಾದಕೃಷ್ಣನು, ವಾಗ್ಯತಸ್ಸನ್-ವಚನನಿಯಮವುಳ್ಳವನಾಗಿ, ಅಮಲೇ-ಶುದ್ಧವಾದ, ಅಂಭಸಿ-ನೀರಿನಲ್ಲಿ, ಆಪ್ಲುತಃ-ಮಿಂದವನಾಗಿ, ವಾಸಸೀ-ಮಡಿಗಳನ್ನು, ಪರಿಧಾಯ-ಧರಿಸಿಕೊಂಡು, ಸಂಧ್ಯೋಪಗಮಾದಿ-ಸಂಧ್ಯೋಪಾಸನವೇ ಮೊದಲಾದ, ಕ್ರಿಯಾಕಲಾಪಂ-ಪ್ರಾತರಾಹ್ನಿಕಕರ್ಮವನ್ನು, ಯಥಾವಿಧಿ-ಶಾಸ್ತ್ರೋಕ್ತವೆಂತೋ ಅಂತು, ಚಕಾರ-ಮಾಡಿದನು. ಹುತಾನಲಃ-ಕಾಣ್ವಶಾಖೆಯವನಾದ್ದರಿಂದ ಸೂರ್ಯೋದಯಕ್ಕಿಂತಲೂ ಮುಂಚೆಯೇ ಹೋಮಮಾಡಲ್ಪಟ್ಟ ಅಗ್ನಿಯುಳ್ಳವನಾಗಿ, ಬ್ರಹ್ಮ-ಗಾಯತ್ರೀಮಂತ್ರವನ್ನು, ಜಜಾಪ-ಜಪಿಸಿದನು ॥೬॥ ಉದ್ಯಂತಂ-ಉದಯವಾಗುತ್ತಿರುವ, ಅರ್ಕಂ-ಸೂರ್ಯನನ್ನು, ಉಪಸ್ಥಾಯ-ಇದಿರ್ಗೊಂಡುಪ್ರಾರ್ಥಿಸಿ, ಆತ್ಮನಃ-ತನ್ನ, ಕಲಾಃ-ಅಂಶಗಳಾದ, ದೇವಾನ್-ದೇವತೆಗಳನ್ನು, ಋಷೀನ್-ಋಷಿಗಳನ್ನು, ಪಿತೄನ್-ಪಿತೃಗಳನ್ನು, ತರ್ಪಯಿತ್ವಾ-ತರ್ಪಣದಿಂದತೃ

---

ಪ್ತರಂಗೊಂಡು ಸ್ತುತಿಪಾಠಕರಂತೆ ಶ್ರೀಕೃಷ್ಣನಂ ಎಬ್ಬಿಸುತ ಅತಿಶಯದಿಂ ಧ್ವನಿಗೆಯ್ದುವು ॥೨॥ ಆಗ ಶ್ರೀ ಕೃಷ್ಣನು ವಕ್ಷಃಸ್ಥಲವನೆಯ್ದಿರುವ ರುಕ್ಮಿಣೀ ದೇವಿಯು ಆ ಬ್ರಾಹ್ಮೀ ಮುಹೂರ್ತ ಅತಿಶುಭಕರವಾದರೂ ಅದರಲ್ಲಿ ಆಕೃಷ್ಣನ ಆಲಿಂಗನಕ್ಕೆ ಉಂಟಾಗುವ ವಿಘ್ನವನ್ನಾಲೋಚಿಸುವಳಾದ್ದರಿಂ ಅಂಥಾ ಮುಹೂರ್ತದಲ್ಲಿರೋಷಯುಕ್ತಳಾದಳು ॥೩॥ ಅನಂತರದಲ್ಲಿ ಶ್ರೀಕೃಷ್ಣನು ಬ್ರಾಹ್ಮೀ ಮುಹೂರ್ತದಲ್ಲಿ ಹಾಸಿಗೆ ಯಿಂದೆದ್ದು ಹಸ್ತಪಾದಪ್ರಕ್ಷಾಳನ ಪೂರ್ವಕವಾಗಿ ಶುದ್ಧಾಚಮನಂಗೆಯ್ದು ಪ್ರಸನ್ನವಾದ ಮನಸ್ಸುಳ್ಳವನಾಗಿ ಮಾಯಾತೀತನಾದಆತ್ಮನಂ ಧ್ಯಾನಂಗೆಯ್ದನು. ಮತ್ತು ಉಪಾಧಿರಹಿತನಾದ್ದರಿಂ ಅಖಂಡರೂಪನಾಗಿ ನಿತ್ಯನಾಗಿ ಚಿಚ್ಛಕ್ತಿಯಿಂ ನಿರಂತರದಲ್ಲಿಯೂ ಪರಿವೃತನಾದ್ದರಿಂದ ಸ್ವಯಂ ಪ್ರಕಾಶನಾಗಿ ಈ ಪ್ರಪಂಚದ ಉತ್ಪತ್ತಿನಾಶಂಗಳಿಗೆ ಕಾರಣಂಗಳಾದ ತನ್ನ ಶಕ್ತಿಗಳಿಂ ಕಾಣಲ್ಪಡುವನಾಗಿ ಸತ್ವರೂಪನಾಗಿ ಆನಂದ ಸ್ವರೂಪನಾಗಿ ಬ್ರಹ್ಮನೆಂಬ ನಾಮಧೇಯವುಳ್ಳವನಾಗಿಯೂ ಇರುವ ಪರಮಾತ್ಮನಂ ಧ್ಯಾನಂಗೆಯ್ದನು ॥೫॥ ಅನಂತರದಲ್ಲಿ ಶ್ರೀ ಕೃಷ್ಣನು ವಿಧಿಪೂರ್ವಕವಾಗಿ ಜಲದಲ್ಲಿ ಸ್ನಾನಂಗೆಯ್ದವನಾಗಿ ದಿವ್ಯ ವಸ್ತ್ರಂಗಳನುಟ್ಟು, ಸಂಧ್ಯಾವಂದನೆ ಮೊದಲಾದ ನಿತ್ಯ ಕರ್ಮಕಲಾಪವಂಗೆಯ್ದು, ಅಗ್ನಿಯಲ್ಲಿ ಹೋಮವನಾಚರಿಸಿ ಮೌನದಿಂಗಾಯತ್ರಿಯಂ ಜಪಿಸಿದನು ॥೬॥ ಆತ್ಮಜ್ಞನಾದ ಶ್ರೀ ಕೃ

ಉಪಸ್ಥಾಯಾರ್ಕಮುದ್ಯಂತಂತರ್ಪಯಿತ್ವಾತ್ಮನಃಕಲಾಃ । ದೇವಾನೃಷೀನ್ಪಿತೄನ್ವೃದ್ಧಾನ್ವಿ
ಪ್ರಾನಭ್ಯರ್ಚ್ಯಚಾತ್ಮವಾನ್ ‖೭‖ ಧೇನೂನಾಂರುಕ್ಮಶೃಂಗೀಣಾಂಸಾಧ್ವೀನಾಂಮೌಕ್ತಿಕಸ್ರಜಾಮ್ ।
ಪಯಸ್ವಿನೀನಾಂಗೃಷ್ಟೀನಾಂಸವತ್ಸಾನಾಂಸುವಾಸಸಾಮ್ ‖೮‖ ದದೌರೌಪ್ಯಖುರಾಗ್ರಾಣಾಂಕ್ಷೌ
ಮಾಜಿನತಿಲೈಸ್ಸಹ । ಅಲಂಕೃತೇಭ್ಯೋವಿಪ್ರೇಭ್ಯೋದ್ವಂದ್ವಂದ್ವಂದ್ವಂದಿನೇದಿನೇ ‖೯‖ ಗೋವಿಪ್ರದೇವತಾ
ವೃದ್ಧಾನ್ಗುರೂನ್ಭೂತಾನಿಸರ್ವಶಃ । ನಮಸ್ಕೃತ್ಯಾತ್ಮಸಂಭೂತೀರ್ಮಂಗಳಾನಿಸಮಸ್ಪೃಶತ್ ‖೧೦‖
ಆತ್ಮಾನಂಭೂಷಯಾಮಾಸನರಲೋಕವಿಭೂಷಣಮ್ । ವಾಸೋಭಿರ್ಭೂಷಣೈಸ್ಸ್ವೀಯೈರ್ದಿವ್ಯಸ್ರ
ಗನುಲೇಪನೈಃ ‖೧೧‖ ಅವೇಕ್ಷ್ಯಾಜ್ಯಂತಥಾದರ್ಶಂಗೋವೃಷದ್ವಿಜದೇವತಾಃ । ಕಾಮಾಂಶ್ಚಸರ್ವವರ್ಣಾನ್

---

ಪ್ಪಿಗೊಳಿಸಿ, ಆತ್ಮವಾನ್-ಆಸ್ತಿಕ್ಯವುಳ್ಳವನಾಗಿ, ವೃದ್ಧಾನ್-ಹಿರಿಯರಾದ, ವಿಪ್ರಾನ್-ಬ್ರಾಹ್ಮಣರನ್ನು, ಅಭ್ಯರ್ಚ್ಯ-ಚೆನ್ನಾಗಿಪೂಜಿಸಿ ‖೭‖ ರುಕ್ಮಶೃಂಗೀಣಾಂ-ಚಿನ್ನದಕೊಂಬುಗಳುಳ್ಳ, ಮೌಕ್ತಿಕಸ್ರಜಾಂ-ಮುತ್ತಿನಹಾರಂಗಳುಳ್ಳ, ಸುವಾಸಸಾಂ-ಉತ್ತಮವಸ್ತ್ರಂಗಳುಳ್ಳ, ಗೃಷ್ಟೀನಾಂ-ಚೊಚ್ಚಲುಹೆರಿಗೆಯುಳ್ಳ, ಸವತ್ಸಾನಾಂ-ಕರುಗಳಿಂದ ಸಹಿತಂಗಳಾದ, ಪಯಸ್ವಿನೀನಾಂ-ಹೆಚ್ಚಾಗಿಹಾಲುಳ್ಳ ‖೮‖ ರೌಪ್ಯಖುರಾಗ್ರಾಣಾಂ-ಬೆಳ್ಳಿಯಕೊಳಗುಕೊನೆಗಳುಳ್ಳ, ಧೇನೂನಾಂ-ಆಕಳುಗಳ, ದ್ವಂದ್ವಂದ್ವಂದ್ವಂ-ದಂಪತಿಗಳನ್ನು, ದಿನೇದಿನೇ-ಪ್ರತಿದಿನವಲ್ಲಿಯೂ, ಅಲಂಕೃತೇಭ್ಯಃ-ಪೂಜಿಸಲ್ಪಟ್ಟ, ವಿಪ್ರೇಭ್ಯಃ-ಬ್ರಾಹ್ಮಣರಿಗೆ, ಕ್ಷೌಮಾಜಿನತಿಲೈಸ್ಸಹ-ಪಟ್ಟೆಮಡಿಕೃಷ್ಣಾಜಿನವೆಳ್ಳುಗಳೊಡನೆ, ದದೌ-ಕೊಟ್ಟನು ‖೯‖ ಗೋವಿಪ್ರದೇವತಾವೃದ್ಧಾನ್-ವೃಷಭಂಗಳನ್ನೂ ಬ್ರಾಹ್ಮಣರನ್ನೂ ದೇವಮೂರ್ತಿಗಳನ್ನೂ ಹಿರಿಯರನ್ನೂ, ಗುರೂನ್-ಜ್ಞಾನೋಪದೇಶಕರನ್ನೂ. ಭೂತಾನಿ-ಆಕಾಶಾದಿಮಹಾಭೂತಂಗಳನ್ನೂ ಸರ್ವಶಃ-ಹಲವುಬಗೆಯಾಗಿ, ನಮಸ್ಕೃತ್ಯ-ಪೊಡಮಟ್ಟು, ಆತ್ಮಸಂಭೂತೀಃ-ತನ್ನ ಐಶ್ವರ್ಯರೂಪಂಗಳಾದ. ಮಂಗಳಾನಿ-ಕಪಿಲಾದಿಶುಭವಸ್ತುಗಳನ್ನು, ಸಮಸ್ಪೃಶತ್-ಸ್ಪರ್ಶಮಾಡಿದನು ‖೧೦‖ ನರಲೋಕವಿಭೂಷಣಂ-ಮನುಷ್ಯಲೋಕಕ್ಕೆ ಆಭರಣಪ್ರಾಯವಾಗಿರುವ, ಆತ್ಮಾನಂ-ತನ್ನದೇಹವನ್ನು, ಸ್ವೀಯೈಃ-ತನ್ನದಾದ, ವಾಸೋಭಿಃ-ವಸ್ತ್ರಗಳಿಂದಲೂ, ಭೂಷಣೈಃ-ಆಭರಣಗಳಿಂದಲೂ, ದಿವ್ಯಸ್ರಗನುಲೇಪನೈಃ-ದೇವಯೋಗ್ಯಂಗಳಾದ ಪುಷ್ಪಮಾಲೆಗಳಿಂದಲೂ, ಪರಿಮಳಾಂಗರಾಗಗಳಿಂದಲೂ, ಭೂಷಯಾಮಾಸ-ಅಲಂಕರಿಸಿಕೊಂಡನು ‖೧೧‖ ಆಜ್ಯಂ-ತುಪ್ಪವನ್ನು, ಅವೇಕ್ಷ್ಯ-ನೋಡಿ, ತಥಾ-ಹಾಗೆಯೇ, ಆದರ್ಶಂ-ಕನ್ನಡಿಯನ್ನು, ಗೋವೃಷದ್ವಿಜದೇವತಾಃ-ಆಕಳು ಎತ್ತು ಪಾರ್ವರು ದೇವರ್ಕಳುಗಳನ್ನೂ, ವೀಕ್ಷ್ಯ-ನೋಡಿ, ಸರ್ವವರ್ಣಾನಾಂ-ಎಲ್ಲಾಜಾತಿಗಳವರಿಗೂ, ಕಾಮಾಂಶ್ಚ-ಅವರವರಬಯಕೆಗಳನ್ನೂ, ಪ್ರದಾಪ್ಯ-ಕೊಡಿಸಿ, ಪ್ರಾಕೃತೈಃಕಾಮೈಃ-ಐಹಿಕಭೋಗಂಗಳಿಂದ, ಪ್ರ

---

ಷ್ಣನು ಜಪಾನಂತರದಲ್ಲಿ ಉದಯಿಸುತ್ತಲಿರುವ ಸೂರ್ಯನಂ ಉಪಸ್ಥಾನಂಗೆಯ್ದು ತನ್ನ ಅಂಶಭೂತವಾದದೇವರ್ಷಿ ಪಿತೃಗಳಿಗೆ ಜಲಂಗಳಿಂ ತರ್ಪಣಂಗೆಯ್ದು ಬ್ರಾಹ್ಮಣರಂ ಪೂಜಿಸಿ ‖೭‖ ಸುವರ್ಣಮಯಂಗಳಾದ ಶೃಂಗಂಗಳುಳ್ಳ ಸಾಧುಗಳಾದ ಮುಕ್ತಾಹಾರಂಗಳಿಂ ಶೋಭಿತಗಳಾದ ಅಧಿಕ ಕ್ಷೀರಂಗಳಂ ಕುಡುವ ಒಂದೇಹೆರಿಗೆಯುಳ್ಳ ಕರುಗಳೊಡನೆ ಯುಕ್ತಂಗಳಾದ ಉತ್ತಮ ವಸ್ತ್ರಂಗಳಿಂದ ಲಂಕೃತಗಳಾದ ‖೮‖ ಮತ್ತು ರಜತಮಯಂಗಳಾದ ಗೊರಸುಗಳ ಅಗ್ರಂಗಳುಳ್ಳ ಹದಿಮೂರು ಸಾವಿರದ ಯೆಂಭತ್ತು ನಾಲ್ಕು ಗೋವುಗಳಂ ವಸ್ತ್ರಾಜಿನತಿಲಂಗಳಂ ಕೂಡ ಅಲಂಕರಿಸಲ್ಪಟ್ಟ ಬ್ರಾಹ್ಮಣರಿಗೋಸ್ಕರ ಇದೇ ರೀತಿಯಲ್ಲಿ ಪ್ರತಿಗೃಹದಲ್ಲಿಯೂ ಕೊಟ್ಟನು ‖೯‖ ಅನಂತರದಲ್ಲಿ ಶ್ರೀ ಕೃಷ್ಣನು ಗೋವುಗಳಂ ದ್ವಿಜರಂ ದೇವತೆಗಳಂ ವೃದ್ಧರಂ ಗುರುಗಳಂ ಸಮಸ್ತ ಭೂತಂಗಳಂ ಮತ್ತು ತನ್ನ ವಿಭೂತಿ ಮೂರ್ತಿಗಳಂ ಸಹ ನಮಸ್ಕರಿಸಿ ಕಪಿಲ ಗೋವು ಮೊದಲಾದ್ದಂ ಸ್ಪರ್ಶಿಸಿದನು ‖೧೦‖ ಅನಂತರದಲ್ಲಿ ಶ್ರೀ ಕೃಷ್ಣನು ಭೂಲೋಕಕ್ಕೆ ಭೂಷಣರೂಪವಾದ ತನ್ನಂ ಸ್ವಕೀಯಂಗಳಾದ ಪೀತಾಂಬರಂಗಳಿಂ ಕೌಸ್ತುಭ ಮೊದಲಾದ ಭೂಷಣಂಗಳಿಂದಲೂ ದಿವ್ಯ ಮಾಲ್ಯಂಗಳಿಂದಲೂ ದಿವ್ಯಾನುಲೇಪನಂಗಳಿಂದಲೂ ಅಲಂಕರಿಸಿ ಕೊಂಡನು ‖೧೧‖ ಅನಂತರದಲ್ಲಿ ಶ್ರೀ ಕೃಷ್ಣನು ಆಜ್ಯದಲ್ಲಿ ತನ್ನ ಮುಖವಂ ನೋಡಿ ಆಮೇಲೆ ದರ್ಪಣವಂ ಗೋವೃಷಭಧ್ವಜ ದೇವತೆಗಳಂ ದ್ವಿಜರಂ ಸಹ ನೋಡಿ ಸರ್ವ ವರ್ಣಸ್ಥರಿಗೂ ಪಟ್ಟಣದಲ್ಲಿ

ಸಂಪೌರಾಂತಃಪುರವಾಸಿನಾಮ್ | ಪ್ರದಾಪ್ಯ ಪ್ರಕೃತೀಃ ಕಾಮೈಃ ಪರಿತೋಷ್ಯ ಪ್ರತ್ಯನಂದತ ॥೧೨॥ ಸಂವಿಭಜ್ಯಾಗ್ರತೋ ವಿಪ್ರಾನ್ ಸ್ರಕ್ತಾಂಬೂಲಾನುಲೇಪನೈಃ | ಸುಹೃದಃ ಪ್ರಕೃತೀರ್ದಾರಾನುಪಾಯುಂಕ್ತ ತತಸ್ಸ್ವಯಮ್ ॥೧೩॥ ತಾವತ್ಸೂತ ಉಪಾನೀಯ ಸ್ಯಂದನಂ ಪರಮಾದ್ಭುತಮ್ | ಸುಗ್ರೀವಾದ್ಯೈರ್ಹಯೈರ್ಯುಕ್ತಂ ಪ್ರಣಮ್ಯಾವಸ್ಥಿತೋಗ್ರತಃ ॥೧೪॥ ಗೃಹೀತ್ವಾ ಪಾಣಿನಾ ಪಾಣಿಂ ಸಾರಥೇಸ್ತಮಥಾರುಹತ್ | ಸಾತ್ಯಕ್ಯುದ್ಧವಸಂಯುಕ್ತಃ ಪೂರ್ವಾದ್ರಿಮಿವ ಭಾಸ್ಕರಃ ॥೧೫॥ ಈಕ್ಷಿತೋಂತಃಪುರಸ್ತ್ರೀಣಾಂ ಸವ್ರೀಡಪ್ರೇಮವೀಕ್ಷಿತೈಃ | ಕೃಚ್ಛ್ರಾದ್ವಿಸೃಷ್ಟೋ ನಿರಗಾಜ್ಜಾತಹಾಸೋ ಹರನ್ಮನಃ ॥೧೬॥ ಏವಂ ಸ ಸರ್ವದಾರಾಣಾಂ ಗೃಹೇಭ್ಯೋ ಭಗವಾನ್ವಿಭುಃ | ನಾನಾರೂಪೋ ವಿನಿರ್ಗತ್ಯ ಏಕರೂಪಸ್ಸಭಾಂ ಯಯೌ ॥೧೭॥ ಸು

ತೋಷ್ಯ-ಸಂತೋಷಪಡಿಸಿ, ಪ್ರತ್ಯನಂದತ-ತಾನು ಸಂತೋಷಿಸಿದನು ॥೧೨॥ ಅಗ್ರತಃ-ಮುಂಚೆ ವಿಪ್ರಾನ್-ಬ್ರಾಹ್ಮಣರನ್ನೂ, ಬಳಿಕ, ಸುಹೃದಃ-ಮಿತ್ರರನ್ನೂ, ಪ್ರಕೃತೀಃ-ಪ್ರಜೆಗಳನ್ನೂ, ದಾರಾನ್-ಹೆಂಡಿರನ್ನೂ, ಸ್ರಕ್ತಾಂಬೂಲಾನುಲೇಪನೈಃ-ಪುಷ್ಪವೀಳ್ಯಗಂಧಗಳಿಂದ, ಸಂವಿಭಜ್ಯ-ಹಂಚಿಕೆಪ್ರಕಾರ ಉಪಚರಿಸಿ, ತತಃ-ಆಮೇಲೆ, ಸ್ವಯಂ-ತಾನು, ಉಪಾಯುಂಕ್ತ-ಭೋಗಾರ್ಥವಾಗಿ ಗ್ರಹಿಸಿದನು ॥೧೩॥ ತಾವತ್-ಅಷ್ಟರಲ್ಲಿ ಸೂತಃ-ಸಾರಥಿಯಾದ ದಾರುಕನು ಸುಗ್ರೀವಾದ್ಯೈಃ-ಸೈನ್ಯ ಸುಗ್ರೀವ ಮೇಘಪುಷ್ಪ ಬಲಾಹಕಗಳೆಂಬ, ಹಯೈಃ-ಕುದುರೆಗಳಿಂದ, ಯುಕ್ತಂ-ಕೂಡಿದಂಥಾ, ಪರಮಾದ್ಭುತಂ-ಅತ್ಯಂತಾಶ್ಚರ್ಯಕರವಾದ, ಸ್ಯಂದನಂ-ರಥವನ್ನು, ಉಪಾನೀಯ-ಹತ್ತಿರಕ್ಕೆ ತಂದು, ಪ್ರಣಮ್ಯ-ನಮಸ್ಕರಿಸಿ, ಅಗ್ರತಃ-ಮುಂಗಡೆಯಲ್ಲಿ, ಅವಸ್ಥಿತಃ-ನಿಂತವನಾದನು ॥೧೪॥ ಸಾರಥೇಃ-ದಾರುಕನ, ಪಾಣಿಂ-ಕೈಯನ್ನು, ಪಾಣಿನಾ-ತನ್ನ ಕೈಯಿಂದ, ಗೃಹೀತ್ವಾ-ಹಿಡಿದುಕೊಂಡು, ಸಾತ್ಯಕ್ಯುದ್ಧವಸಂಯುಕ್ತಃ-ಯುಯುಧಾನನೊಡನೆಯೂ ಉದ್ಧವನೊಡನೆಯೂ ಕೂಡಿದವನಾಗಿ, ಭಾಸ್ಕರಃ ಪೂರ್ವಾದ್ರಿಂ ಇವ-ಸೂರ್ಯನು ಉದಯಪರ್ವತವನ್ನು ಹೇಗೋ ಹಾಗೆ, ತಂ-ಆ ರಥವನ್ನು, ಆರುಹತ್-ಏರಿದನು ಅಥ-ಆ ಬಳಿಕ ॥೧೫॥ ಅಂತಃಪುರಸ್ತ್ರೀಣಾಂ-ರಾಣಿವಾಸದ ಹೆಂಗಳ, ಸವ್ರೀಡಪ್ರೇಮವೀಕ್ಷಿತೈಃ-ನಾಚಿಕೆಯಿಂ ಸಹಿತವಾದ ಪ್ರೀತಿಯ ನೋಟಗಳಿಂದ, ಈಕ್ಷಿತಃ-ನೋಡಲ್ಪಟ್ಟವನಾಗಿ, ಜಾತಹಾಸಃ-ಉಂಟಾದ ನಗೆಯುಳ್ಳವನಾದ್ದರಿಂದಲೇ, ಮನಃ-ಅವರ ಹೃದಯವನ್ನು, ಹರನ್-ಅಪಹರಿಸುವನಾಗಿಯೂ ಕೃಚ್ಛ್ರಾತ್-ಕೃಷ್ಣನಂ ಬಿಟ್ಟು ಕಳುಹಿಸಲಾರದ ಶ್ರಮದಿಂದ, ವಿಸೃಷ್ಟಃ-ಬಿಟ್ಟು ಕಳುಹಲ್ಪಟ್ಟವನಾಗಿ, ನಿರಗಾತ್-ಹೊರಹೊರಟನು ॥೧೬॥ ಏವಂ-ಹೀಗೆ, ಭಗವಾನ್-ಐಶ್ವರ್ಯಪೂರ್ಣನಾದ, ವಿಭುಃ-ವ್ಯಾಪಕನಾದ, ಸಃ-ಆ ವಿಷ್ಣುವು, ನಾನಾರೂಪಃ-ಹಲವು ಮೂರ್ತಿಗಳುಳ್ಳವನಾಗಿ, ಸರ್ವದಾರಾಣಾಂ-ಹೆಂಡತಿಯರೆಲ್ಲರ, ಗೃಹೇಭ್ಯಃ-ಮನೆಗಳ ದೆಸೆಯಿಂದ, ವಿನಿರ್ಗತ್ಯ-ಹೊರಕ್ಕೆ ಬಂದು, ಏಕ

ವ ಜನರಿಗೂ ಅಂತಃಪುರದಲ್ಲಿರುವ ಜನರಿಗೂ ಸಹ ಇಷ್ಟಾರ್ಥಂಗಳನಿತ್ತು ಮತ್ತು ಮಂತ್ರಿ ಮೊದಲಾದ ಸಾಮಾಜಿಕರ ಇಷ್ಟಾರ್ಥಂಗಳಂ ಕೊಟ್ಟು ಅವರನ್ನು ಸಂತೋಷಪಡಿಸಿ ಸಂತೋಷಪಟ್ಟನು ॥೧೨॥ ಮತ್ತು ಶ್ರೀಕೃಷ್ಣನು ಪುಷ್ಪಮಾಲ್ಯ ತಾಂಬೂಲಾನುಲೇಪನಂಗಳಂ ಮೊದಲು ಬ್ರಾಹ್ಮಣರಿಗೋಸ್ಕರ ಕೊಟ್ಟು ಅನಂತರದಲ್ಲಿ ಮಿತ್ರರಿಗೆ ಮಂತ್ರಿ ಮೊದಲಾದ ಸಾಮಾಜಿಕರಿಗೂ ಪತ್ನಿಯರಿಗೂ ಸಹ ಆ ಮಾಲ್ಯಾದಿ ವಸ್ತುಗಳಂ ಕೊಟ್ಟು ತಾನನುಭವಿಸಿದನು ॥೧೩॥ ಅಷ್ಟರೊಳಗೆ ದಾರುಕನೆಂಬ ಸಾರಥಿಯು ಸುಗ್ರೀವ ಮೊದಲಾದ ಅಶ್ವಂಗಳೊಡನೆ ಯುಕ್ತವಾಗಿ ಪರಮಾಶ್ಚರ್ಯಕರವಾಗಿರುವ ರಥವಂ ಶ್ರೀಕೃಷ್ಣನ ಸಮೀಪದಲ್ಲಿ ನಿಲ್ಲಿಸಿ ನಮಸ್ಕಾರಂಗೆಯ್ದು ಮುಂಗಡೆಯಲ್ಲಿ ನಿಂತನು ॥೧೪॥ ಅನಂತರದಲ್ಲಿ ಆ ಕೃಷ್ಣನು ತನ್ನ ಹಸ್ತದಿಂ ಸಾರಥಿಯ ಹಸ್ತವನವಲಂಬಿಸಿಕೊಂಡು ಉದ್ಧವಸಾತ್ಯಕಿಗಳೊಡನೆ ಯುಕ್ತನಾಗಿ ಉದಯಪರ್ವತವಂ ಸೂರ್ಯನಂತೆ ಆ ದಿವ್ಯರಥವನೇರಿದನು ॥೧೫॥ ಶ್ರೀಕೃಷ್ಣನು ಅಂತಃಪುರದಲ್ಲಿರುವ ಸ್ತ್ರೀಯರುಗಳ ಲಜ್ಜೆಯೊಡನೆಯೂ ಪ್ರೇಮದೊಡನೆಯೂ ಕೂಡಿರುವ ಸವಿನೋಟದಿಂ ನೋಡಲ್ಪಡುತ್ತಲಿರುವವನಾಗಿ ನಗುತ ಅವರ ಮನಸ್ಸಂ ಅಪಹರಿಸುತ್ತಲೂ ತೆರಳಿದನು ॥೧೬॥ ಭಗವಂತನಾದ ವ್ಯಾಪಕನಾದ ಆ ಶ್ರೀಕೃಷ್ಣನು ಈ ರೀತಿಯಿಂದ ಆ ಸಮಸ್ತ ಪತ್ನಿಯರುಗಳ ಗೃಹದ ದೆಸೆಯಿಂದ ಪ್ರತ್ಯೇಕ ಪ್ರತ್ಯೇಕವಾಗಿ ಅನೇಕ ರೂಪಗಳುಳ್ಳವನಾಗಿ ಹೊರಟು, ಆ ಮೇಲೆ ಯೊಂದೇ ರೂಪವುಳ್ಳವನಾಗಿ

ಧರ್ಮಾಖ್ಯಾಂಸಭಾಂಸರ್ವೈರ್ವೃಷ್ಣಿಭಿಃಪರೀ
ಯಃ ॥೧೮॥ ಅಥೋಪವಿಷ್ಟಃಪರಮಾಸನೇವಿಭು
ನೃಸಿಂಹೈರ್ಯದುಭಿರ್ಯದೂತ್ತಮೋಯಥೋಡುರಾಟ್
ರಾಜನ್ನಾನಾಹಾಸ್ಯರಸೈರ್ವಿಭುಮ್ ।ಉಪತಸ್ಥುರ್ನ...
ಮೃದಂಗವೀಣಾಮುರಜವೇಣುತಾಳದರಸ್ವನೈಃ । ನನೃತುರ್ಜಗುಸ್ತುಷ್ಟುವುಶ್ಚ...
ನಃ॥೨೧॥ತತ್ರಾಹುರ್ಬ್ರಾಹ್ಮಣಾಃಕೇಚಿದಾಸೀನಾಬ್ರಹ್ಮವಾದಿನಃ । ಪೂರ್ವೇಷಾಂಪುಣ್ಯಯಶಸಾಂರಾ
ಜ್ಞಾಂಚಾಕಥಯನ್ಕಥಾಃ ॥೨೨॥ ತತ್ರೈಕಃಪುರುಷೋರಾಜನ್ನಾಗತೋಽಪೂರ್ವದರ್ಶನಃ ।ವಿಜ್ಞಾಪಿತೋ

---

ರೂಪಃ-ಒಂದೇರೂಪವುಳ್ಳವನಾಗಿ, ಸಭಾಂ-ಓಲಗವನ್ನು ಕುರಿತು, ಯಯೌ-ಸೇರಿದನು॥೧೭॥ ಅಂಗ-ಆಯ್ಯಾಪರೀಕ್ಷಿತನೇ! ಯ ನ್ನಿವಿಷ್ಟಾನಾಂ-ಯಾವ ಸಭೆಯಲ್ಲಿ ಕುಳಿತಿರುವವರಿಗೆ, ಷಡೂರ್ಮಯಃ-ಹಸಿವು ನೀರಡಿಕೆ ಶೋಕ ಮೋಹ ಮುದಿತನ ಮರಣಗಳೆಂಬ ೬ ಅವಸ್ಥೆಗಳು, ನಸಂತಿ-ಇರುವುದಿಲ್ಲವೋ, ತಾಂ-ಅಂಥಾ, ಸುಧರ್ಮಾಖ್ಯಾಂ-ಸುಧರ್ಮೆಯೆಂಬ ಹೆಸರುಳ್ಳ, ಸಭಾಂ-ಓಲಗವ ನ್ನು, ಸರ್ವೈರ್ವೃಷ್ಣಿಭಿಃ ಪರಿವಾರಿತಸ್ಸನ್-ಯಾದವರೆಲ್ಲರಿಂ ಬಳಸಲ್ಪಟ್ಟವನಾಗಿ,ಪ್ರಾವಿಶತ್-ಹೊಕ್ಕನು॥೧೮॥ ಅಥ-ಆ ಮೇಲೆ, ಪರಮಾಸನೇ-ಶ್ರೇಷ್ಠವಾದಗದ್ದುಗೆಯಲ್ಲಿ, ಉಪವಿಷ್ಟಃ-ಕುಳಿತವನಾಗಿಯೂ, ನೃಸಿಂಹೈಃ-ನರಶ್ರೇಷ್ಠರಾದ, ಯದುಭಿಃ-ಯಾದ ವರಿಂದ, ವೃತಃ-ಬಳಸಲ್ಪಟ್ಟವನಾಗಿಯೂ, ಯದೂತ್ತಮಃ-ಯಾದವರಲ್ಲಿ ಉತ್ತಮನಾಗಿಯೂ ಇರುವ, ವಿಭುಃ-ಪ್ರಭುವಾದಕೃ ಷ್ಣನು, ಸ್ವಭಾಸಾ-ತನ್ನ ಕಾಂತಿಯಿಂ, ಕಕುಭಃ-ದೆಸೆಗಳನ್ನು, ಅವಭಾಸಯನ್-ಬೆಳಗುತ್ತಿರುವನಾಗಿ, ದಿವಿ-ಆಕಾಶದಲ್ಲಿ, ತಾರ ಕಾಗಣೈಃ-ಚುಕ್ಕಿಗಳಗುಂಪುಗಳೊಡನೆ, ಉಡುರಾಜಃ-ನಕ್ಷತ್ರಪತಿಯಾದಚಂದ್ರನು, ಯಥಾ-ಹೇಗೋ,ತಥಾ-ಹಾಗೆ, ಬಭೌ-ಬೆಳ ಗಿದನು ॥೧೯॥ ರಾಜನ್-ಅರಸೇ! ತತ್ರ-ಆಸಭೆಯಲ್ಲಿ, ಉಪಮಂತ್ರಿಣಃ-ಸಮಿಾಪದಲ್ಲಿರತಕ್ಕ ಆಲೋಚಕರೂ, ನಟಾಚಾರ್ಯಾಃ-ಭರ ತಪ್ರವರ್ತಕರೂ, ನಾನಾಹಾಸ್ಯರಸೈಃ-ಹಲವುಬಗೆಯಾದ ನಕಲೀವಿನೋದಗಳಿಂದಲೂ, ನರ್ತಕ್ಯಃ-ನಟಿಯರು, ತಾಂಡವೈಃ ಕುಣಿ ದಾಟಗಳಿಂದಲೂ, ಪೃಥಕ್-ಬೇರೆಬೇರೆಯಾಗಿ, ವಿಭುಂ-ಒಡೆಯನಾದಕೃಷ್ಣನನ್ನು, ಉಪತಸ್ಥುಃ-ಸೇವಿಸುತಲಿದ್ದರು ॥೨೦॥ ಸೂತಮಾಗಧವಂದಿನಃ-ಸೂತಜಾತಿಯವರೂ ಮಗಧದೇಶದವರೂ ಆದ ಗಾಯಕರೂ ಸ್ತುತಿಪಾಠಕರೂ, ಮೃದಂಗ ...ಸ್ವನೈಃ- ಮದ್ದಳೆ, ವೀಣೆ, ಡೋಲು, ಕೊಳಲು, ತಾಳ, ಶಂಖ, ಮೊದಲಾದವುಗಳ ಶಬ್ದಗಳೊಡನೆ, ಜಗುಃ-ಹಾಡಿದರು, ತುಷ್ಟುವುಃ-ಸ್ತೋ ತ್ರಮಾಡಿದರು, ನನೃತುಃ-ಕುಣಿದರು॥೨೧॥ ತತ್ರ-ಆಸಭೆಯಲ್ಲಿ, ಆಸೀನಾಃ-ಕುಳಿತಿರುವರಾದ, ಬ್ರಹ್ಮವಾದಿನಃ-ವೇದಪಾಠಕರಾದ ಕೇಚಿದ್ಬ್ರಾಹ್ಮಣಾಃ-ಕೆಲವರು ಬ್ರಾಹ್ಮಣರು, ಆಹುಃ-ಆಶೀರ್ವಾದಂಗಳಂ ಪೇಳ್ದರು, ಪುಣ್ಯಯಶಸಾಂ-ಸುಕೃತಕೀರ್ತಿಗಳುಳ್ಳ

---

ಸ್ಥಾನವನೆಯ್ದಿದನು ॥೧೭॥ ಯಾವ ಸಭೆಯಲ್ಲಿ ಪ್ರವೇಶಿಸಿದವರಿಗೆ ಕ್ಷುತ್ತೃಷ್ಣೆಗಳು ಶೋಕ ಮೋಹಂಗಳು ಜನ್ಮ ಮರಣಂಗಳೆಂಬ ಷಡೂರ್ಮಿಗಳಿರಲಾರವೋ,ಸುಧರ್ಮೆಯೆಂಬ ನಾಮಧೇಯವುಳ್ಳ ದಿವ್ಯವಾದ ಆಸಭೆಯಂ ಶ್ರೀ ಕೃಷ್ಣನು ಯಾದವರಿಂ ಸ್ತುತಿಸಲ್ಪಟ್ಟವನಾಗಿ ಪ್ರವೇಶಿಸಿದನು ॥೧೮॥ ಆ ದಿವ್ಯಸಭೆಯಲ್ಲಿ ಸಿಂಹಾಸನದಲ್ಲಿ ಕುಳಿತಿ ರುವ ವ್ಯಾಪಕನಾದ ಮತ್ತು ತನ್ನ ಕಾಂತಿಯಿಂದ ದಿಕ್ಕುಗಳಂ ಪ್ರಕಾಶಂಗೆಯ್ಯುತ್ತಲಿರುವ ಶ್ರೀಕೃಷ್ಣನು ಪುರು ಷ ಶ್ರೇಷ್ಠರಾದ ಯಾದವರಿಂ ಸ್ತುತಿಸಿ ಕೊಳ್ಳಲ್ಪಟ್ಟವನಾಗಿ ಅಂತರಿಕ್ಷದಲ್ಲಿ ನಕ್ಷತ್ರ ಸಮೂಹಂಗಳಿಂ ಸ್ತುತಿಸಿ ಗೊಳ್ಳಲ್ಪಟ್ಟ ಚಂದ್ರನಂತೆ ಪ್ರಕಾಶಿಸಿದನು ॥೧೯॥ ಎಲೈ ಅರಸೇ! ಕೇಳು ಅಲ್ಲಿ ಪರಿಹಾಸಕ ಜನರು ನಾನಾ ವಿ ಧಂಗಳಾದ ಹಾಸ್ಯರಸಂಗಳಿಂ, ಮತ್ತು ನಾಟ್ಯಾಚಾರ್ಯರು ನರ್ತಕಿಯರು ಸಹ ತಮ್ಮ ತಮ್ಮ ಸಮೂಹಗ ಳೊಡನೆ ನಾಟ್ಯಂಗಳಿಂದಲೂ ಶ್ರೀಕೃಷ್ಣನಂ ಸಂ[illegible] ಪಡಿಸಿದರು ॥೨೦॥ಮತ್ತು ಸೂತರು ಮಾಗಧರು ಸ್ತುತಿ ಪಾಠಕರು ಸಹ ಮೃದಂಗವೀಣಾವೇಣು ಶಂಖ ತಾಳ ನಾದಂಗಳಿಂ ಕೆಲವರು ನರ್ತನಂಗೆಯ್ದರು, ಕೆಲವ ರು ಗಾನಂಗೆಯ್ದರು, ಕೆಲವರು ಸ್ತೋತ್ರ ರು ॥೨೧॥ ಮತ್ತು ಆ ಸಭೆಯಲ್ಲಿ ಕುಳಿತಿರುವ ಕೆಲವು ಮಂದಿ ಬ್ರಾಹ್ಮಣರು ವೇದ ಮಂತ್ರಂಗಳಂ ಪಠಿ ರು. ಮಾತನಾಡುವುದರಲ್ಲಿ ನಿಪುಣರಾದ ಕೆಲವರು ಬ್ರಾಹ್ಮಣರು

ನಿಹಜೀವಿತಾಶಾಂಸದ್ಯಶ್ಛಿನತ್ತ್ಯನಿಮಿಷಾಯನಮೋಸ್ತುತಸ್ಮೈ ॥೨೭॥ ಲೋಕೇಭವಾನ್ಭಗವತಃಕಲಯಾವತೀರ್ಣಸ್ಸದ್ರಕ್ಷಣಾಯಖಲನಿಗ್ರಹಣಾಯಚಾನ್ಯಃ । ಕಶ್ಚಿತ್ತ್ವದೀಯಮತಿಯಾತಿನಿದೇಶಮೀಶಕಿಂವಾಜನಸ್ಸ್ವಕೃತಮೃಚ್ಛತಿತನ್ನವಿದ್ಮಃ ॥೨೮॥ ಸ್ವಪ್ನಾಯಿತಂನೃಪಸುಖಂಪರತಂತ್ರಮೀಶಶಶ್ವದ್ಭಯೇನಮೃತಕೇನಧುರಂವಹಾಮಃ । ಹಿತ್ವಾಯದಾತ್ಮನಿಸುಖಂತ್ವದನೀಹಲಭ್ಯಂಕ್ಲಿಶ್ಯಾಮಹೇಽತಿಕೃಪಣಾಸ್ತವಮಾಯಯೇಹ ॥೨೯॥ ತನ್ನೋಭವಾನ್ಪ್ರಣತಶೋಕಹರಾಂಘ್ರಿಯುಗ್ಮೋಬದ್ಧಾನ್ವಿಯುಂಕ್ಷ್ವಮಗಧಾಹ್ವಯಕರ್ಮಪಾಶಾತ್ । ಯೋಭೂಭುಜೋಽಯುತಮತಂಗಜವೀರ್ಯಮೇಕೋಬಿಭ್ರ

---

ಜೀವಿತಾಶಾಂ-ಪ್ರಾಣಾಪೇಕ್ಷೆಯನ್ನು, ಸದ್ಯಃ-ತತ್ಕಾಲದಲ್ಲಿ, ಛಿನತ್ತಿ-ಕಡಿದುಹಾಕುವನೋ, ತಸ್ಮೈ-ಅಂಥಾ, ಅನಿಮಿಷಾಯ-ದೇವರಾದನಿನಗೆ, ನಮಃ-ನಮಸ್ಕಾರವು, ಅಸ್ತು-ಆಗಲಿ ॥೨೭॥ ಹೇಈಶ-ಎಲೈಸ್ವಾಮಿಯೇ ಭವಾನ್-ನೀನು, ಸದ್ರಕ್ಷಣಾಯ-ಶಿಷ್ಟಪರಿಪಾಲನಕ್ಕೋಸುಗವೂ, ಖಲನಿಗ್ರಹಣಾಯಚ-ದುಷ್ಟಶಿಕ್ಷಣಕ್ಕೋಸುಗವೂ, ಭಗವತಃ-ನಾರಾಯಣನ, ಕಲಯಾ-ಅಂಶದಿಂದ, ಲೋಕೇ-ನರಲೋಕದಲ್ಲಿ, ಅವತೀರ್ಣಃ-ಆವಿರ್ಭವಿಸಿದವನಾಗಿರುವಿ, ಅನ್ಯಃ-ಇತರಬುದ್ಧಿಯುಳ್ಳವನಾದ, ಕಶ್ಚಿತ್-ಒಬ್ಬ ಆತ್ಮನು, ತ್ವದೀಯಂ-ನಿನ್ನದಾದ, ನಿದೇಶಂ-ಶ್ರುತಿಸ್ಮೃತಿರೂಪವಾದಆಜ್ಞೆಯನ್ನು, ಅತಿಯಾತಿ-ಅತಿಕ್ರಮಿಸುತ್ತಿರುವನು. ಜನಃ ಪ್ರಾಣಿಯು, ಸ್ವಕೃತಂ-ತನ್ನಿಂದಮಾಡಲ್ಪಟ್ಟ ಕರ್ಮಫಲವನ್ನು, ಕಿಮೃಚ್ಛತಿವಾ-ಯಾವುದರನ್ನು ಹೊಂದುವುದೋ ತತ್-ಆ ಪ್ರಾಣಿಕರ್ಮಗತಿಯನ್ನು, ನವಿದ್ಮಃ-ಅರಿಯದೆಯಿರುವೆವು ॥೨೮॥ ಈಶ-ಸ್ವಾಮಿಯೇ, ಪರತಂತ್ರಂ-ಅನ್ಯಾಧೀನವಾದ, ನೃಪಸುಖಂ-ದೊರೆತನದ ಸಂತೋಷವು, ಸ್ವಪ್ನಾಯಿತಂ-ಕನಸಿನಂತಾಗಿರುವುದು, ಶಶ್ವದ್ಭಯೇನ-ಬಾರಿಬಾರಿಗೂ ಹೆದರಿಕೆಯುಳ್ಳದ್ದಾದ್ದರಿಂದ, ಮೃತಕೇನ-ಹೆಣದಂತಿರುವಶರೀರದಿಂದ, ಧುರಂ-ಹೆಂಡಿರುಮಕ್ಕಳುಮೊದಲಾದವರ ಚಿಂತಾರೂಪವಾದಭಾರವನ್ನು ವಹಾಮಃ-ಹೊರುತಲಿರುವೆವು, ಯತ್-ಯಾವಕಾರಣದಿಂದ, ಅನೀಹಲಭ್ಯಂ-ನಿಷ್ಕಾಮದಿಂದ ಹೊಂದಲ್ಪಡತಕ್ಕ, ಆತ್ಮನಿಸುಖಂ ತನ್ನೊಳಗಿರುವ ಸ್ವರೂಪಾನಂದವನ್ನು, ತ್ವತ್-ನಿನ್ನದೆಸೆಯಿಂದ, ಹೊಂದದೆ, ಹಿತ್ವಾ-ಬಿಟ್ಟು, ತವ-ನಿನ್ನ, ಮಾಯಯಾ-ಮೋಹಕಶಕ್ತಿಯಿಂದ, ಇಹ-ಈಸಂಸಾರದಲ್ಲಿ, ಅತಿಕೃಪಣಾಃ-ಅತ್ಯಂತಲುಬ್ಧರಾಗಿ, ಕ್ಲಿಶ್ಯಾಮಹೇ-ಕ್ಲೇಶಗಳಂ ಹೊಂದುತ್ತಿದ್ದೇವೆಯೋ ॥೨೯॥ ತತ್-ಆಕಾರಣದಿಂದ, ಪ್ರಣತಶೋಕಹರಾಂಘ್ರಿಯುಗ್ಮಃ-ಶರಣಾಗತರ ದುಃಖಂಗಳಂ ಪರಿಹರಿಸುವ ಪಾದಂಗಳಿರದುಳ್ಳ, ಭವಾನ್-ನೀನು, ಬದ್ಧಾನ್-ಬಂಧನವಂಹೊಂದಿರುವ, ನಃ-ನಮ್ಮನ್ನು, ಮಗಧಾಹ್ವಯಕರ್ಮಪಾಶಾತ್-ಜರಾಸಂಧನೆಂಬಹೆಸರುಳ್ಳ ಕರ್ಮವೆಂಬಹಗ್ಗದದೆಸೆಯಿಂದ, ವಿಯುಂಕ್ಷ್ವ-ಬಿಡಿಸು, ಯಃ-ಯಾವಜರಾಸಂಧನು, ಮೃಧೇ-ಯುದ್ಧದಲ್ಲಿ. ತ್ವಯಾ ನಿ

---

ನಿನಗೋಸ್ಕರ ನಮಸ್ಕಾರವು ॥೨೭॥ ಎಲೈ ಈಶ್ವರನೇ! ಲೋಕನಾಥನಾದ ನೀನು ಸುಜನರಕ್ಷಣಾರ್ಥವಾಗಿ ದುಷ್ಟ ಜನ ನಿಗ್ರಹಾರ್ಥವಾಗಿಯೂ ಈ ಲೋಕದಲ್ಲಿ ಅಂಶೆಯಿಂದ ಅವತರಿಸಿದವನಾದ್ದೇ ಉಂಟಾದರೆ ನಮಗೆ ದುಃಖವಿಲ್ಲದೆ ಹೋಗುವುದು. ನಾವಾದರೋ ದುಃಖಿಸುತಲಿದ್ದೇವೆ, ಆದ್ದರಿಂದ ಜರಾಸಂಧ ಮೊದಲಾದ ಕೆಲವುದುಷ್ಟರು ನಿನ್ನ ಆಜ್ಞೆಯಂ ಕೂಡ ಅತಿಕ್ರಮಿಸುತಲಿರುವರೋ ಅಲ್ಲದೆ ಜನರು ನಿನ್ನಿಂದ ರಕ್ಷಿಸಲ್ಪಟ್ಟವರಾದರೂ ಸ್ವಕರ್ಮ ಜನ್ಯವಾದ ದುಃಖವನೆಯ್ದುವರೇ ಆಗುತಲಿರುವರೋ, ಅಯರ್ಥವಂ ನಾವರಿಯೆವು ॥೨೮॥ ಎಲೈ ಈಶ್ವರನೇ ರಾಜ ಭೋಗವಿಷಯ ಸಾಧ್ಯವಾದ್ದರಿಂದ ನಮಗೆ ಸ್ವಪ್ನ ಪ್ರಾಯವಾಯಿತು. ಮತ್ತು ನಾವು ಪ್ರತಿಕ್ಷಣದಲ್ಲಿಯೂ ಭಯಯುಕ್ತವಾದ ಮೃತಪ್ರಾಯವಾದ ಶರೀರದಿಂದಲೂ, ಈ ಪತ್ನೀಪುತ್ರಾದಿ ವಿಷಯಕವಾದ ಚಿಂತೆಯಂ ಮಾತ್ರವೇ ವಹಿಸುತಲಿರುವೆವು. ನಿನ್ನ ದೆಸೆಯಿಂದ ನಿಷ್ಕಾಮವಾಗಿ ಪಡೆಯತಕ್ಕದ್ದಾಗಿ ನಿನ್ನಲ್ಲಿಯೇ ಸ್ವತಸ್ಸಿದ್ಧವಾಗಿಯೂ ಇರುವ ಯಾವ ಸುಖವುಂಟೋ ಆ ಮುಕ್ತಿರೂಪವಾದ ಸುಖವಂ ನಾವು ಅಪೇಕ್ಷಿಸಿದವರಾಗಿ ನಿನ್ನ ಮಾಯೆ ಯಿಂದ ಅತಿದೀನರಾಗಿ ದುಃಖಿಸುತಲಿರುವೆವು ॥೨೯॥ ಆ ಕಾರಣದಿಂ ಎಲೈ ಹರಿಯೇ! ಜರಾಸಂಧನೋರ್ವನೇ ಹತ್ತು ಸಾವಿರ ಗಜಗಳ ಬಲವಂ ಧರಿಸಿರುವನಾಗಿ ತನ್ನ ಗೃಹದಲ್ಲಿ ಅರಸುಗಳಾದ ನಮ್ಮಂ ಕುರಿಗಳಂ ಸಿಂಹದಂತೆ ನಿರೋಧಂಗೆಯ್ದನು. ಆ ಜರಾಸಂಧನೆಂಬ ಹೆಸರುಳ್ಳ ಕರ್ಮಪಾಶದಿಂದ ಕಟ್ಟಲ್ಪಟ್ಟ ನಮ್ಮಂ ಭ

ದುಃಖಶೋಕ ಭವನೆಮ್ಮ ಗರಾಡಿಮಾಜಾರ್ ||೩೦|| ಯೋವೈತ್ವಯಾದ್ವಿನವಕೃತ್ವಉದಾತ್ತಚಕ್ರಭಗ್ನೋಮೃಧೇಖಲುಭವಂತಮನಂತವೀರ್ಯಮ್ | ಜಿತ್ವಾನೃಲೋಕನಿರತಂಸಕೃದೂಢದರ್ಪೋಯುಷ್ಮತ್ಪ್ರಜಾರುಜತಿನೋಽಜಿತತದ್ವಿಧೇಹಿ ||೩೧|| ಇತಿಮಾಗಧಸಂರುದ್ಧಾಭವದ್ದರ್ಶನಕಾಂಕ್ಷಿಣಃ | ಪ್ರಪನ್ನಾಃಪಾದಮೂಲಂತೇದೀನಾನಾಂಶಂವಿಧೀಯತಾಮ್ ||೩೨|| ಶ್ರೀಶುಕಃ||ರಾಜದೂತೇಬ್ರುವತ್ಯೇವಂದೇವರ್ಷಿಃಪರಮದ್ಯುತಿಃ | ಬಿಭ್ರತ್ಪಿಂಗಜಟಾಭಾರಂಪ್ರಾದುರಾಸೀದ್ಯಥಾರವಿಃ ||೩೩|| ತಂದೃಷ್ಟ್ವಾಭಗವಾನ್ಕೃಷ್ಣಸ್ಸರ್ವಲೋಕೇಶ್ವರೇಶ್ವರಃ | ವವಂದಉತ್ಥಿತಶ್ಶೀರ್ಷ್ಣಾಸಸಭ್ಯಸ್ಸಾನುಗೋಮುದಾ ||೩೪|| ಸಭಾಜಯಿತ್ವಾವಿಧಿವತ್ಕೃತಾಸನಪರಿಗ್ರಹಮ್ | ಬಭಾಷೆಸೂನೃತೈರ್ವಾಕ್ಯೈಶ್ಶ್ರದ್ಧಯಾತರ್ಪಯನ್ಮು

---

ನ್ನಿಂದ, ತ್ರಿನವಕೃತ್ವಃ-೧೮ಸಲ, ವೈ-ಪ್ರಸಿದ್ಧವಾಗಿ, ಭಗ್ನಃಖಲು-ಭಂಗಪಡಿಸಲ್ಪಟ್ಟವನಾದನಲ್ಲವೆ, ಸಃ-ಆಜರಾಸಂಧನು, ಅನಂತವೀರ್ಯಂ-ತುದಿಯಿಲ್ಲದ ಸಾಮರ್ಥ್ಯವುಳ್ಳವನಾದರೂ, ನೃಲೋಕನಿರತಂ-ನರಲೋಕದಲ್ಲಿ ಆಸಕ್ತನಾಗಿರುವ, ಭವಂತಂ ನಿನ್ನನ್ನು, ಸಕೃತ್-ಒಂದುಸಲದಲ್ಲಿ ಜಿತ್ವಾ-ಗೆದ್ದು, ಊಢದರ್ಪಃ-ವಹಿಸಲ್ಪಟ್ಟದರ್ಪವುಳ್ಳವನಾಗಿ, ಯುಷ್ಮತ್ಪ್ರಜಾಃ-ನಿಮ್ಮ ಕೈತರಾದ, ನಃ-ನಮ್ಮನ್ನು, ರುಜತಿ-ಪೀಡಿಸುತ್ತಿರುವನು, ಹೇಅಜಿತ-ಎಲೈಸೋಲಿಸಲ್ಪಡದೆಯಿರುವ ಜಯಶೀಲನೇ! ಉದಾತ್ತಚಕ್ರ-ಹೆಚ್ಚಾಗಿಧರಿಸಲ್ಪಟ್ಟಿರುವ ಚಕ್ರಾಯುಧವುಳ್ಳವನೇ, ತತ್-ಅವನದುಷ್ಕೃತನಕ್ಕೆ ತಕ್ಕಶಿಕ್ಷೆಯನ್ನು, ವಿಧೇಹಿ-ಮಾಡು ||೩೧|| ಇತಿ-ಹೀಗೆ, ಮಾಗಧಸಂರುದ್ಧಾಃ-ಜರಾಸಂಧನಿಂದ ತಡೆಯಲ್ಪಟ್ಟ ಅರಸುಗಳು ಭವದ್ದರ್ಶನಕಾಂಕ್ಷಿಣಃ-ನಿನ್ನಸಾಕ್ಷಾತ್ಕಾರವಂ ಬಯಸುವರಾದ್ದರಿಂದ, ತೇ-ನಿನ್ನ, ಪಾದಮೂಲಂ-ಅಡಿಗಳಬುಡವನ್ನು, ಪ್ರಪನ್ನಾಃ-ಶರಣುಹೊಂದಿದವರಾದರು, ದೀನಾನಾಂ-ಬಡವರಾದ ಆಥೊರೆಗೆಳಿಗೆ, ಶಂ-ಸುಖವು, ವಿಧೀಯತಾಂ-ಮಾಡಲ್ಪಡಲಿ ||೩೨|| [ಶುಕವಚನವು] ರಾಜದೂತೇ-ಅರಸುಗಳದೂತನು, ಏವಂ-ಹೀಗೆ, ಬ್ರುವತಿಸತಿ-ನುಡಿಯುತ್ತಿರುವ ನಾಗುತ್ತಿರಲು, ಪಿಂಗಜಟಾಭಾರಂ-ಹಳದಿಯಜಡೆಗಳ ಹೊರೆಯನ್ನು, ಬಿಭ್ರತ್-ಹೊತ್ತಿರುವಂಥಾ, ಪರಮದ್ಯುತಿಃ-ಉತ್ಕೃಷ್ಟಕಾಂತಿಯುಳ್ಳ, ದೇವರ್ಷಿಃ-ನಾರದನು, ರವಿರ್ಯಥಾ-ಸೂರ್ಯನುಹೇಗೋ ಹಾಗೆ, ಪ್ರಾದುರಾಸೀತ್-ಪ್ರತ್ಯಕ್ಷನಾದನು||೩೩||ಸರ್ವಲೋಕೇಶ್ವರೇಶ್ವರಃ-ಎಲ್ಲಾಲೋಕಗಳಿಗೂ ಪಾಲಕರಾದ ದೇವತೆಗಳಿಗೂ ಸ್ವಾಮಿಯಾದ, ಭಗವಾನ್-ಸರ್ವಜ್ಞನಾದ, ಕೃಷ್ಣಃ-ಶ್ರೀಹರಿಯು, ತಂ-ಆನಾರದನನ್ನು, ದೃಷ್ಟ್ವಾ-ಕಂಡು, ಸಾನುಗಃ-ಅನುಸಾರಿಗಳಿಂಸಹಿತನಾಗಿ, ಸಸಭ್ಯಃ-ಸಭಿಕರಿಂಸಮೇತನಾಗಿ, ಮುದಾ-ಸಂತೋಷದಿಂದ, ಉತ್ಥಿತಃ-ಎದ್ದವನಾಗಿ, ಶೀರ್ಷ್ಣಾ ತಲೆಯಿಂದ, ವವಂದೇ-ಪ್ರಣಾಮಂಗೆಯ್ದನು ||೩೪|| ಮುನಿಂ-ನಾರದನನ್ನು, ವಿಧಿವತ್-ಯಥಾಶಾಸ್ತ್ರವಾಗಿ, ಸಭಾಜಯಿತ್ವಾ-ಸತ್ಕರಿಸಿ, ಕೃತಾಸನಪರಿಗ್ರಹಂ-ಮಾಡಲ್ಪಟ್ಟ ಪೀಠಾಂಗೀಕಾರವುಳ್ಳ, ಆಮುನಿಯನ್ನು, ಶ್ರದ್ಧಯಾ-ವಿಶ್ವಾಸದಿಂದ,ತರ್ಪಯನ್

---

ಕ್ತರ ಶೋಕವಂ ಪರಿಹರಿಸುವ ಪಾದಯುಗ್ಮವುಳ್ಳ ನೀನು ಆ ಬಂಧನದಿಂದ ಬಿಡಿಸುವನಾಗು ||೩೦|| ಎಲೈ ಚಕ್ರಪಾಣಿಯಾದ ಶ್ರೀ ಕೃಷ್ಣನೇ ಯಾವ ಜರಾಸಂಧನು ನಿನ್ನೊಡನೆ ಹದಿನೆಂಟುಸಲ ಯುದ್ಧಪ್ರಸಕ್ತಿ ಯಾಗುತ್ತಿರಲು ನಿನ್ನಿಂದ ಹದಿನೇಳು ಸಲ ಸೋಲಿಸಲ್ಪಟ್ಟವನಾಗಿ ಬಳಿಕ ಅಪರಿಮಿತ ಸಾಮರ್ಥ್ಯವುಳ್ಳವನಾಗಿ ನಿಮ್ಮ ಪ್ರಜೆಗಳಾದ ನಮ್ಮಂ ಪೀಡಿಸುತಲಿರುವನೋ ಆ ಜರಾಸಂಧನ ವಿಷಯದಲ್ಲಿ ಯಾವುದು ಯುಕ್ತವೋ ಅದಂಗೆಯ್ವನಾಗು ||೩೧|| ಇಂತೆಂದು ಅರಸುಗಳ ವಿಜ್ಞಾಪನೆಯಂ ತಿಳಿಸಿ ದೂತನು ಹೇಳುವನೆಂತೆನೆ, ಶ್ರೀ ಕೃಷ್ಣನೇ! ಜರಾಸಂಧನಿಂದ ನಿರುದ್ಧರಾದ ನಿನ್ನ ದರ್ಶನವಂ ಬಯಸುವ ಅರಸುಗಳು ಇಂತು ಬಿನ್ನೈಸಿ ನಿನ್ನ ಪಾದಯುಗ್ಮವಂ ಶರಣು ಹೊಂದಿದರು, ದೀನರಾದ ಅವರಿಗೆ ಸುಖವಂ ಕಲ್ಪಿಸು ||೩೨|| ಎಲೈ ಪರೀಕ್ಷಿದ್ರಾಯನೇ ಆ ರಾಜ ದೂತನು, ಈ ಪರಿಯಿಂದ ಪೇಳುತಿರಲು ಹೊಂಬಣ್ಣದ ಜಟಾಸಮೂಹವುಳ್ಳ ಅಪರಿಮಿತ ಕಾಂತಿಯುಳ್ಳ ನಾರದ ಮುನಿಯು ಸೂರ್ಯನಂತೆ ಆ ವಿರ್ಭವಿಸಿದನು ||೩೩||ಬಳಿಕ ಸರ್ವ ಲೋಕಗಳಿಗೂ ಈಶ್ವರನಾದ ಬ್ರಹ್ಮಾದಿಗಳಿಗೂ ನಿಯಾಮಕನಾದ ಭಗವಂತನಾದ ಶ್ರೀ ಕೃಷ್ಣನು ಆ ನಾರದ ಮುನಿಯಂ ಕಂಡು ಸಾಮಾಜಿಕಪರಿಜನರೊಡನೆ ಸಂತಸದಿಂ ಪ್ರತ್ಯುತ್ಥಾನಂಗೆಯ್ದು ಶಿರವಂ ಬಾಗಿ, ನಮಸ್ಕರಿಸಿದನು||೩೪|| ಆ ಮೇಲೆ ಪೀಠದಲ್ಲಿ ಕುಳಿತ ನಾರದನಂ ವಿಧಿಪ್ರ

ನಿವ್‌ ॥೩೫॥ ಅಪಿಸ್ವಿದದ್ಯಲೋಕಾನಾಂತ್ರಯಾಣಾಮಕುತೋಭಯಮ್ । ನನುಭೂಯಾನ್ ಭಗವತೋಲೋಕಾನ್ ಪರ್ಯಟತೋಗುಣಃ ॥೩೬॥ ನಹಿತೇವಿದಿತಂಕಿಂಚಿಲ್ಲೋಕೇಷ್ವೀಶ್ವರಕರ್ತೃಷು । ಅಥಪೃಚ್ಛಾಮಹೇಯುಷ್ಮಾನ್ ಪಾಂಡವಾನಾಂಚಿಕೀರ್ಷಿತಮ್ ॥೩೭॥ ನಾರದಃ॥ ದೃಷ್ಟಾಮಯಾತೇಬಹುಶೋದುರತ್ಯಯಾಮಾಯಾವಿಭೋವಿಶ್ವಸೃಜಶ್ಚಮಾಯಿನಃ । ಭೂತೇಷುಭೂಮಂಶ್ಚರತಸ್ಸ್ವಶಕ್ತಿಭಿರ್ವಹ್ನೇರಿವಚ್ಛನ್ನರುಚೋನಮೇದ್ಭುತಮ್ ॥೩೮॥ ತವೇಹಿತಂಕೋರ್ಹತಿಸಾಧುವೇದಿತುಂಸ್ವಮಾಯಯೇದಂಸೃಜತೋನಿ

---

ತೃಪ್ತಿಗೊಳಿಸುವನಾಗಿ, ಸೂನೃತೈಃವಾಕ್ಯೈಃ-ಸತ್ಯವಚನಗಳಿಂದ, ಬಭಾಷೇ-ಮಾತನಾಡಿದನು॥೩೫॥ ಭಗವತಃ-ಸರ್ವಜ್ಞನಾದ, ಲೋಕಾನ್-ಚತುರ್ದಶಭುವನಗಳನ್ನು, ಪರ್ಯಟತಃ-ತಿರುಗುತಲಿರುವನಿನಗೆ, ಗುಣಃ-ಎಲ್ಲ ಸಂಬಲ್ಲಲಾಭವು, ಭೂಯಾನ್ನನು-ಅಧಿಕವಾದ್ದಲ್ಲವೆ? ಅದ್ಯ-ಈಗ, ತ್ರಯಾಣಾಂಲೋಕಾನಾಮಪಿ-ಸ್ವರ್ಗಮರ್ತ್ಯಪಾತಾಳಗಳೆಂಬ ಮೂರುಲೋಕಗಳಿಗೂ,ಅಕುತೋಭಯಂಸ್ವಿತ್-ಯಾವುದರಿಂದಲೂ ಭೀತಿಯಿಲ್ಲದೇ ಯಿರುವುದೋ ಏನು?॥೩೬॥ ಈಶ್ವರಕರ್ತೃಷು-ದೇವರೇಕರ್ತನಾಗಿವುಳ್ಳ, ಲೋಕೇಷು-ಭುವನಂಗಳಲ್ಲಿ, ತೇ-ನಿನಗೆ, ಅವಿದಿತಂ-ತಿಳಿಯದೇ ಇರುವುದು, ಕಿಂಚಿತ್-ಕೊಂಚವಾದರೂ, ನಹಿ-ಇಲ್ಲವಷ್ಟೆ; ಅಥ-ಹಾಗಾದಮೇಲೆ, ಯುಷ್ಮಾನ್-ನಿಮ್ಮನ್ನು ಕುರಿತು, ಪಾಂಡವಾನಾಂ-ಪಾಂಡುಪುತ್ರರಾದ ಧರ್ಮಾದಿಗಳ, ಚಿಕೀರ್ಷಿತಂ-ಸಂಕಲ್ಪಿತವ್ಯವಸಾಯವನ್ನು, ಪೃಚ್ಛಾಮಹೇ-ಬೆಸಗೊಳ್ಳುವೆವು. ॥೩೭॥ [ನಾರದವಚನವು.] ವಿಶ್ವಸೃಜಶ್ಚ-ಪ್ರಪಂಚಸೃಷ್ಟಿಕರ್ತನಾದ ಬ್ರಹ್ಮನಿಗೂ, ಮಾಯಿನಃ-ಮೋಹಕನಾದ, ತೇ-ನಿನ್ನ, ದುರತ್ಯಯಾ-ಮೀರಲಶಕ್ಯವಾದ, ಬಹುಶಃಮಾಯಾ-ಅಧಿಕವಾದಮೋಹಕಶಕ್ತಿಯು, ಮಯಾ-ನನ್ನಿಂದ. ದೃಷ್ಟಾ-ನೋಡಲ್ಪಟ್ಟಿದೆ, ಭೂಮನ್-ವಿಶ್ವಾತಿಶಯನಾದ, ವಿಭೋ-ವ್ಯಾಪಕವಸ್ತುವೇ, ಭೂತೇಷು-ಪೃಥಿವ್ಯಾದಿಭೂತಗಳಲ್ಲಿ, ಛನ್ನರುಚಃ-ಅಡಗಿದಕಾಂತಿಯುಳ್ಳ, ವಹ್ನೇರಿವ-ಬೆಂಕಿಗೆಹೇಗೋಹಾಗೆ, ಸ್ವಶಕ್ತಿಭಿಃ-ನಿನ್ನ ಸಚ್ಚಿದಾನಂದಾದಿಶಕ್ತಿಗಳಿಂದ, ಭೂತೇಷು-ಚಿದಚಿದ್ವಸ್ತುಗಳಲ್ಲಿ, ಚರತಃ-ತಿರುಗುತಲಿರುವನಿನ್ನ, ವಿಷಯದಲ್ಲಿ, ಮೇ-ನನಗೆ ಅದ್ಭುತಂ-ಆಶ್ಚರ್ಯವು, ನ-ಇಲ್ಲವು॥೩೮॥ ಯತ್-ಯಾವಜಗತ್ತು, ವಿದ್ಯಮಾನಾತ್ಮತಯಾ ಸತ್ಯವಾಗಿರುವ ರೂಪವುಳ್ಳುದರಹಾಗೆ, ಅವಭಾಸತೇ-ತೋರುತ್ತಿರುವುದೋ, ತದಿದಂ-ಆಯಿಾಜಗತ್ತನ್ನು, ಸ್ವಮಾಯಯಾ-ಇಲ್ಲದ್ದನ್ನು ಇರುವಂತೆತೋರಿಸುವಮೋಹಕಶಕ್ತಿಯಿಂದ, ಸೃಜತಃ-ಕಲ್ಪಿಸುತ್ತಿರುವ,ನಿಯಚ್ಛತಃ-ನಿಯಮಿಸುತ್ತಿರುವ, ತವ-ನಿನ್ನ,ಈಹಿತಂ-ಅಭಿಪ್ರಾಯವನ್ನು, ಸಾಧು-ಚೆನ್ನಾಗಿ, ವೇದಿತುಂ-ತಿಳಿದುಕೊಳ್ಳುವುದಕ್ಕೆ, ಕೋರ್ಹತಿ-ಯಾವವನುಸಮರ್ಥನಾಗುವನು॥ ಸ್ವವಿಲಕ್ಷಣಾತ್ಮನೇ-ಸ್ವರೂಪದಿಂದ ಸರ್ವಕ್ಕಿಂತಲೂ ವಿಲಕ್ಷಣನಾದ ಆತ್ಮನೆನಿಸುವ, ಎಂದರೆ ಅಚಿಂತ್ಯನಾದ, ತಸ್ಮೈತೇ-ಆನಿನಗೋಸುಗ, ನಮಃ-ನ

---

ಕಾರ ಪೂಜಿಸಿ ಶ್ರದ್ಧೆಯಿಂಸಂತೋಷಪಡಿಸಿ ಸತ್ಯವಚನಂಗಳಿಂ ನುಡಿದನೆಂತೆನೆ ॥೩೫॥ ಎಲೈ ಮುನಿಯೇ ಈಗ ಮೂರು ಲೋಕಂಗಳಿಗೂ ಕ್ಷೇಮವೋ ಏನು? ಪೂಜ್ಯನಾದ ನೀನು ತ್ರಿಲೋಕ ಸಂಚಾರಿಯಾದ್ದರಿಂದ ನಮಗೆಸರ್ವ ಲೋಕ ವೃತ್ತಾಂತವೂ ತಿಳಿಯು ಬರುವದು ಪರಮಲಾಭವಲ್ಲವೆ ॥೩೬॥ ಎಲೈ ಮುನಿಯೇ ಈಶ್ವರನೇ ಕರ್ತೃವಾಗಿ ಯುಳ್ಳ ಲೋಕಂಗಳಲ್ಲಿ ಸ್ವಲ್ಪವಾದರೂ ನಿನಗೆ ತಿಳಿಯದೆ ಯಿರುವ ವ್ಯಾಪಾರ ವಿಲ್ಲ ವಷ್ಟೆ ಆದ್ದರಿಂದ ನಿನ್ನಂ ಕುರಿತು ಪಾಂಡವರ ವೃತ್ತಾಂತವಂ ಕೇಳುತ್ತೇವೆ ॥೩೭॥ ಎಂದು ಶ್ರೀ ಕೃಷ್ಣನಿಂ ಪ್ರಶ್ನೆಗೆಯ್ಯಲ್ಪಟ್ಟ ನಾರದನು ಪೇಳಿದನೆಂತೆನೆ-ವ್ಯಾಪಕನಾದ ಶ್ರೀ ಕೃಷ್ಣನೇ! ಬ್ರಹ್ಮ ದೇವನಿಗೂ ಮೋಹವನ್ನುಂಟು ಮಾಡುವನಾಗಿ ಸ್ವಕೀಯಂಗಳಾದ ಅವಿದ್ಯಾದಿ ಶಕ್ತಿಗಳಿಂದ ಲೋಕಂಗಳಲ್ಲಿ ಅಂತರ್ಯಾಮಿ ರೂಪದಿಂದಿರುವನಾಗಿ, ಸರ್ವ ಭೂತಂಗಳಲ್ಲಿಯೂ ಅಗ್ನಿಯಂತೆ ಸ್ವಶಕ್ತಿಗಳಿಂದಲೇ ಮುಚ್ಚಿ ಕೊಳ್ಳಲ್ಪಟ್ಟ ಪ್ರಕಾಶವುಳ್ಳವನಾಗಿರುವ ನಿನ್ನ ಅತಿಕ್ರಮಿಸಲಶಕ್ಯವಾದ ಮಾಯೆಯು ನನ್ನಿಂದ ಬಹು ಪ್ರಕಾರವಾಗಿ ಕಾಣಲ್ಪಟ್ಟಿತಾದ್ದರಿಂದನಿನ್ನಲ್ಲೂ ಪಾಂಡವರ ಕ್ಷೇಮ ವೃತ್ತಾಂತ ಪ್ರಶ್ನಾದಿಗಳು ಆಶ್ಚರ್ಯಕರಂಗಳಲ್ಲವು ॥೩೮॥ ಯಾವ ಜಗತ್ತು ತಾನು ವಸ್ತುತಃ ಇಲ್ಲದೆ ಯಿದ್ದರೂ ನಿನ್ನ ಮಾಯೆಯಿಂ ಇರುವಂತೆ ತೋರುತಲಿದೆಯೋ ಅಂತಾ ಯಿಾ ಜಗತ್ತಂ ಸ್ವಮಾಯೆಯಿಂ ಸೃಜಿಸುತಲಿರುವವನಾಗಿ ಪುನಃ ಸಂಹರಿಸುತಲೂ ಇರುವಂತಾ ನಿನ್ನ ವ್ಯಾಪಾರವಂ ಯಾವವನು ಚೆನ್ನಾಗಿ ತಿಳಿಯಲುಯೋ

ಯೋಽಚ್ಛಿತಃ | ಯದ್ವಿದ್ಯಮಾನಾತ್ಮತಯಾವಭಾಸತೇತಸ್ಮೈನಮಸ್ತೇಸ್ವವಿಲಕ್ಷಣಾತ್ಮನೇ ॥೩೯॥ ಜೀವ
ಸ್ಯಯಸ್ಸಂಸರತೋಪಿಮೋಕ್ಷಣಂನಜಾನತೋನರ್ಥವಹಾಚ್ಛರೀರತಃ ।ಲೀಲಾವತಾರೈಸ್ಸ್ವಯಶಃಪ್ರದೀ
ಪಕಂಪ್ರಾಜ್ವಾಲಯತ್ತ್ವಾಂತಮಹಂಪ್ರಪದ್ಯೇ॥೪೦॥ಅಥಾಪ್ಯಾಶ್ರಾವಯೇಬ್ರಹ್ಮನ್ನರಲೋಕವಿಡಂಬನಮ್|
ರಾಜ್ಞಃಪೈತೃಷ್ವಸೇಯಸ್ಯಭಕ್ತಸ್ಯಚಚಿಕೀರ್ಷಿತಮ್ ॥೪೧॥ಯಕ್ಷ್ಯತೇತ್ವಾಂಮಖೇಂದ್ರೇಣರಾಜಸೂ
ಯೇನಪಾಂಡವಃ | ಪಾರಮೇಷ್ಠ್ಯಕಾಮೋನೃಪತಿಸ್ತದ್ಭವಾನನುಮೋದತಾಮ್ ॥೪೨॥ತಸ್ಮಿನ್ದೇವಕ್ರತು
ವರೇಭವಂತಂವೈಸುರಾದಯಃ| ದಿದೃಕ್ಷವಸ್ಸಮೇಷ್ಯಂತಿರಾಜಾನಶ್ಚಯಶಸ್ವಿನಃ॥೪೩॥ಶ್ರವಣಾತ್ಕೀರ್ತ

---

ಮಸ್ಕಾರವಾಗಲಿ (ಪೊಡಮಡುವೆನು) ॥೩೯॥ ಯಃ-ಯಾವವನು, ಅನರ್ಥವಹಾತ್-ಅವಿದ್ಯೆಯೆಂಬ ಕತ್ತಲಿನಿಂದ ಮುಸುಕಲ್ಪಟ್ಟ ದ್ದಾಗಿ ಅನರ್ಥಗಳನ್ನುಮಾಡುತ್ತಿರುವ, ಶರೀರತಃ-ದೇಹೋಪಾಧಿನಿಮಿತ್ತದಿಂದ, ಸಂಸರತಃ-ಜನನಮರಣದುಃಖಪ್ರವಾಹದಲ್ಲಿ ಸಿ ಲುಕುತ್ತಿರುವನಾದರೂ, ಅದೇಶರೀರದಿಂದ, ವಿಮೋಕ್ಷಣಂ-ಸಂಸಾರದಿಂ ತಪ್ಪಿಸಿಕೊಳ್ಳುವ ಉಪಾಯವನ್ನು, ನಜಾನತಃ-ತಿಳಿಯ ದೇಇರುವ, ಜೀವಸ್ಯ-ದೇಹಾಭಿಮಾನಿಯಾದಆತ್ಮನಿಗೆ, ಲೀಲಾವತಾರೈಃ-ಐಚ್ಛಿಕಂಗಳಾದಮತ್ಸ್ಯಾದ್ಯವತಾರಂಗಳಿಂದ, ಸ್ವಯ ಶಃಪ್ರದೀಪಕಂ-ತನ್ನಕೀರ್ತಿಯೆಂಬ ದೊಡ್ಡದೀಪವನ್ನು, ಪ್ರಾಜ್ವಾಲಯತ್-ಚನ್ನಾಗಿ ಬೆಳಗಿಸಿದನೋ, ತಂತ್ವಾಂ-ಆನಿನ್ನನ್ನು ಅಹಂ-ನಾನು, ಪ್ರಪದ್ಯೇ-ಶರಣುಹೊಂದುವೆನು ॥೪೦॥ ಬ್ರಹ್ಮನ್-ಪರಮಾತ್ಮನೇ! ಅಥಾಪಿ-ಹೀಗಾದಮೇಲೆಯೂ, ನರಲೋಕವಿ ಡಂಬನಂ-ಮನುಷ್ಯಲೋಕಾನುಸರಣದ ನಟನೆಯುಳ್ಳ ನಿನ್ನಂಕುರಿತು, ಪೈತೃಷ್ವಸೇಯಸ್ಯ-ನಿನ್ನ ಸೋದರತ್ತೆಯಮಗನಾದ, ಭ ಕ್ತಸ್ಯಚ-ನಿನ್ನಪ್ರಿಯಸೇವಕನೂಆದ, ರಾಜ್ಞಃ-ಧರ್ಮರಾಯನ,ಚಿಕೀರ್ಷಿತಂಚ-ಸಂಕಲ್ಪಿತವ್ಯವಸಾಯವನ್ನೂ, ಆಶ್ರಾವಯೇ-ಕೊಂಚಶ್ರವಣಮಾಡಿಸುವೆನು ॥೪೧॥ ಪಾರಮೇಷ್ಠ್ಯಕಾಮಃ-ಸರ್ವೋತ್ತಮಸ್ಥಿತಿಯಂಬಯಸುವನಾದ, ನೃಪತಿಃ-ಧೊರೆಯಾದ ಪಾಂಡವಃ-ಪಾಂಡುಪುತ್ರನಾದ ಧರ್ಮಜನು, ಮಖೇಂದ್ರೇಣ-ಯಜ್ಞಗಳಲ್ಲಿ ಶ್ರೇಷ್ಠವಾದ, ರಾಜಸೂಯೇನ-ರಾಜಸೂಯವೆಂ ಬಯಾಗದಿಂದ, ತ್ವಾಂ-ನಿನ್ನನ್ನುಕುರಿತು, ಯಕ್ಷ್ಯತೇ-ಪೂಜಿಸುವನು. ತತ್-ಅದರನ್ನು, ಭವಾನ್-ನೀನು, ಅನುಮೋದತಾಂ-ಅನುಸರಿಸಿ ಸಂತೋಷಿಸ್ಸೈ॥೪೨॥ದೇವ-ಕೃಷ್ಣಸ್ವಾಮಿಯೇ, ತಸ್ಮಿನ್ ಕ್ರತುವರೇ-ಆ ಯಜ್ಞಶ್ರೇಷ್ಠದಲ್ಲಿ, ಭವಂತಂ-ನಿನ್ನನ್ನು,ವೈ-ಪ್ರತ್ಯಕ್ಷವಾಗಿ, ದಿದೃಕ್ಷವಃ-ನೋಡಲೆಳಸುವರಾದ, ಸುರಾದಯಃ-ದೇವರ್ಕಳುಮೊದಲಾದವರೂ, ಯಶಸ್ವಿನಃ-ಕೀರ್ತಿಮಂತರಾದ, ರಾಜಾನಶ್ಚ-ಧೊರೆಗಳೂ, ಸಮೇಷ್ಯಂತಿ-ಬರುವರು॥೪೩॥ ಈಶ-ನಿಯಾಮಕನಾದಕೃಷ್ಣನೇ, ಬ್ರಹ್ಮಮಯಸ್ಯ-ವೇದಮೂರ್ತಿ ಯಾದ, ತೇ-ನಿನ್ನ, ಶ್ರವಣಾತ್-ನಾಮಶ್ರವಣದಿಂದಲೂ, ಕೀರ್ತನಾತ್-ಗುಣಕಥನದಿಂದಲೂ, ಧ್ಯಾನಾತ್-ರೂಪಸಂಭಾವನೆ

---

ಗ್ಯನಾಗುವನು? ॥೩೯॥ ನೀನು ನಿಜ ಸ್ವರೂಪದಿಂ ಚಿಂತಿಸಲಶಕ್ಯನಾದ್ದರಿಂದ ನಿನಗೋಸ್ಕರ ನಾವು ನಮಸ್ಕಾ ರ ಮಾತ್ರವಂ ಗೆಯ್ಯುವವರಾಗುತ್ತೇವೆ. ಮತ್ತು ಅ ವಿದ್ಯೆಯೆಂಬ ಅಂಧಕಾರವು ಅಚ್ಛಾದನಂ ಗೆಯ್ಯುತಲಿರುವ ಜೀವನಾಗಿ, ಆಯ ವಿದ್ಯಾತಮಸ್ಸಿನಿಂದಲೇ ಆ ಶರೀರದ ದೆಸೆಯಿಂದ ಮುಕ್ತನಾಗುವ ಉಪಾಯವನರಿಯದವನಾ ಗಿಯೂ ಇರುವ ಜೀವಾತ್ಮನ ಮುಕ್ತಿಗೋಸುಗ ಯಾವನು ಲೀಲಾವತಾರಂಗಳಿಂ ತನ್ನ ಚರಿತ್ರವೆಂಬ ದೀಪ ವಂ ಪ್ರಕಾಶಂಗೆಯ್ದನೋ ಅಂತಾ ನಿನ್ನಂ ನಾನು ಶರಣು ಹೊಂದುತ್ತೇನೆ ॥೪೦॥ ಎಲೈ ಪರಮಾತ್ಮನಾದ ಶ್ರೀಕೃ ಷ್ಣನೇ, ಆದರೂ ಮಾನುಷ್ಯ ಲೋಕವ್ಯಾಪಾರವಂ ಅನುಸರಿಸುತಲಿರುವ ನಿನ್ನಂ ಕುರಿತು ಸೋದರತ್ತೆಯ ಮಗ ಭಕ್ತನೂ ಆದ ಧರ್ಮರಾಯನ ವೃತ್ತಾಂತವಂ ನಾನು ತಿಳಿಸುವನಾಗುತ್ತೇನೆ ॥೪೧॥ಎಲೈ ಸ್ವಾಮಿಯೇ, ಧರ್ಮ ರಾಯನು ಬ್ರಹ್ಮ ಲೋಕವಂ ಪಡೆಯ ಲಿಚ್ಛೆಯುಳ್ಳವನಾಗಿ ಕ್ರತು ಶ್ರೇಷ್ಠವಾದ ರಾಜಸೂಯ ಯಾಗದಿಂ ನಿ ನ್ನಂ ಪೂಜಿಸುವನಾಗುವನು॥ ಅದಂ ನೀನು ಶ್ಲಾಘಿಸುವನಾಗು ॥೪೨॥ ಎಲೈ ಹರಿಯೇ, ರಾಜಸೂಯ ಯಾಗದ ಲ್ಲಿ ದೇವಾದಿಗಳು ಮತ್ತು ಕೀರ್ತಿಮಂತರಾದ ಅರಸುಗಳು ಕೂಡ ನಿನ್ನಂ ನೋಡಲಿಚ್ಛೆಯುಳ್ಳವರಾಗಿ ಬರುವ ರಾಗುತ್ತಾರೆ ॥೪೩॥ ಎಲೈ ಶ್ರೀ ಹರಿಯೇ ಅಂತ್ಯಜರು ಕೂಡ ನಿನ್ನ ನಾಮಸ್ಮರಣದಿಂ ಕೀರ್ತನದಿಂ ಧ್ಯಾನದಿಂದ ಲೂ ಪರಿಶುದ್ಧರಾಗುತ್ತಲಿರುವಲ್ಲಿ ಸಾಕ್ಷಾದ್ಬ್ರಹ್ಮ ರೂಪನಾದ ನಿನ್ನ ದರ್ಶನವು ಅಂಗ ಸ್ಪರ್ಶವು ಸಹ ಉಳ್ಳವ

ಸಾದ್ಧ್ಯನಾತ್ಪೂಯಂತೇಂತ್ಯಾವಸಾಯಿನಃ । ತತ್ರ ಬ್ರಹ್ಮಮಯಸ್ಯೈಶ ಕಿಮುತೇಕ್ಷಾಭಿಮರ್ಶಿನಃ ||೪೪||
ಯಸ್ಯಾಮಲಂ ದಿವಿ ಯಶಃ ಪ್ರಥಿತಂ ರಸಾಯಾಂ ಭೂಮೌ ಚ ತೇ ಭುವನಮಂಗಳ ದಿಗ್ವಿತಾನಮ್ । ಮಂದಾ
ಕಿನೀತಿ ದಿವಿ ಭೋಗವತೀತಿ ಚಾಧೋ ಗಂಗೇತಿ ಚೇಹ ಚರಣಾಂಬು ಪುನಾತಿ ವಿಶ್ವಮ್ ||೪೫|| ಶ್ರೀಶುಕಃ|| ತತ್ರ ತೇ
ಷ್ವಾತ್ಮಪಕ್ಷೇಷ್ವಗೃಹ್ಣತ್ಸು ಜಿಗೀಷಯಾ । ವಾಚಃ ಪೇಶೈಃ ಸ್ಮಯನ್ ಭೃತ್ಯಮುದ್ಧವಂ ಪ್ರಾಹ ಕೇಶವಃ ||೪೬||
ತ್ವಂ ಹಿ ನಃ ಪರಮಂ ಚಕ್ಷುಃ ಸುಹೃನ್ಮಂತ್ರಾರ್ಥತತ್ತ್ವವಿತ್ । ಅಥಾತ್ರ ಬ್ರೂಹ್ಯನುಷ್ಠೇಯಂ ಶ್ರದ್ಧಯಾ
ಕರವಾಮ ತತ್ ||೪೭|| ಇತ್ಯುಪಾಮಂತ್ರಿತೋ ಭರ್ತ್ರಾ ಸರ್ವಜ್ಞೇನಾಪಿ ಮುಗ್ಧವತ್ । ಸಂದೇಶಂ ಶಿರಸಾದಾ

---

ಯಿಂದಲೂ, ಅಂತ್ಯಾವಸಾಯಿನೋಽಪಿ-ಶ್ವಪಚರೂ ಕೂಡ, ಪೂಯಂತೇ-ಪರಿಶುದ್ಧರಾಗಿ ಮಾಡಲ್ಪಡುವರು. ತತ್ರ-ಅಲ್ಲಿ, ಈಕ್ಷಾಭಿಮ
ರ್ಶಿನಃ-ನಿನ್ನ ದರ್ಶನವೂ ಸ್ಪರ್ಶವೂ ಉಳ್ಳವರು, ಕಿಮುತ-ಪರಿಶುದ್ಧರಾಗಿ ಮಾಡಲ್ಪಡುವರೆಂಬುವುದನ್ನು ಏನು ಹೇಳತಕ್ಕದ್ದು ||೪೪||
ಯಸ್ಯ-ಯಾವವನ, ಭುವನಮಂಗಳ ದಿಗ್ವಿತಾನಂ-ಲೋಕಕ್ಕೆ ಶುಭಕರವಾಗಿ ದಿಕ್ಕುಗಳಿಗೆ ಮೇಲ್ಕಟ್ಟುಗಳಂತೆ ಅಲಂಕಾರವಾದ,
ಅಮಲಂ-ನಿರ್ಮಲವಾದ, ಯಶಃ-ಕೀರ್ತಿಯು, ದಿವಿ-ಸ್ವರ್ಗದಲ್ಲಿಯೂ, ರಸಾಯಾಂ-ರಸಾತಲವೆಂಬ ಪಾತಾಳದಲ್ಲಿಯೂ, ಭೂ
ಮೌ ಚ-ಭೂಮಿಯಲ್ಲಿಯೂ, ಪ್ರಥಿತಂ-ಪ್ರಖ್ಯಾತವಾಗಿರುವುದೋ, ಹಾಗೆಯೇ, ತಸ್ಯ ತೇ-ಆ ನಿನ್ನ ಚರಣಾಂಬು-ಪಾದತೀರ್ಥವು
ದಿವಿ-ಸ್ವರ್ಗದಲ್ಲಿ, ಮಂದಾಕಿನೀತಿ-ಮಂದಾಕಿನೀ ನದಿಯೆನುತಲೂ, ಅಧಃ-ಕೆಳಗಣಲೋಕದಲ್ಲಿ, ಭೋಗವತೀತಿ ಚ-ಭೋಗವತೀ ನದಿ
ಯೆನುತಲೂ, ಇಹ-ಈ ಭೂಲೋಕದಲ್ಲಿ, ಗಂಗೇತಿ ಚ-ಗಂಗಾನದಿಯೆನುತಲೂ, ವಿಶ್ವಂ-ಪ್ರಪಂಚವನ್ನು, ಪುನಾತಿ-ಪರಿಶುದ್ಧವ
ನ್ನಾಗಿ ಮಾಡುತ್ತಿದೆ ||೪೫|| [ಶುಕವಚನವು] ತತ್ರ-ಆ ಸಭೆಯಲ್ಲಿ, ಆತ್ಮಪಕ್ಷೇಷು-ತನ್ನ ಕಡೆಯವರಾದ, ತೇಷು-ಆ ಯಾದವರು,
ಜಿಗೀಷಯಾ-ಜರಾಸಂಧನಂ ಗೆಲ್ಲಬೇಕೆಂಬ ಅಪೇಕ್ಷೆಯಿಂದ, ಅಗೃಹ್ಣತ್ಸು-ಧರ್ಮರಾಯನ ರಾಜಸೂಯಕ್ಕೆ ಹೋಗಬೇಕೆಂ
ಬುವುದನ್ನು, ಅನುಮೋದಿಸದೇ ಹೋದವರಾಗುತ್ತಿರಲು, ಕೇಶವಃ-ಶ್ರೀಕೃಷ್ಣನು, ವಾಚಃ ಪೇಶೈಃ-ಚಮತ್ಕಾರವಾದ ನುಡಿಗಳಿಂದ
ಸ್ಮಯನ್-ಆಶ್ಚರ್ಯಪಡಿಸುವನಾಗಿ, ಭೃತ್ಯಂ-ಸೇವಕನಾದ, ಉದ್ಧವಂ-ಉದ್ಧವನೆಂಬ ಮಂತ್ರಿಯಂ ಕುರಿತು, ಪ್ರಾಹ-ನುಡಿ
ದನು ||೪೬|| ತ್ವಂ-ನೀನು, ನಃ-ನಮಗೆ, ಪರಮಂ-ಉತ್ಕೃಷ್ಟವಾದ, ಚಕ್ಷುಃ ಹಿ-ಕಣ್ಣಾಗಿರುವೆಯಲ್ಲವೆ ಸುಹೃತ್-ಸ್ನೇಹಿತನೂ,
ಒಳ್ಳೆಯ ಮನಸ್ಸುಳ್ಳವನೂ, ಮಂತ್ರಾರ್ಥತತ್ತ್ವವಿತ್-ಆಲೋಚನೆಗಳ ಮತ್ತು ಪ್ರಯೋಜನಗಳ ಯಥಾರ್ಥ್ಯಗಳನ್ನೂ ಬಲ್ಲವನೂ,
ಆಗಿರುವಿ. ಅಥ-ಹೀಗಾದ ಮೇಲೆ, ಅತ್ರ-ಜರಾಸಂಧನ ಮೇಲೆ ಯುದ್ಧಕ್ಕೆ ಹೋಗಬೇಕೋ ಧರ್ಮರಾಯನ ಯಜ್ಞಕ್ಕೆ ಹೋಗಬೇಕೋ
ಎಂಬ ಈ ಸಂದಿಗ್ಧವಿಷಯದಲ್ಲಿ. ಅನುಷ್ಠೇಯಂ-ನಮ್ಮಿಂದ ಆಚರಿಸಲ್ಪಡತಕ್ಕದ್ದನ್ನು, ಬ್ರೂಹಿ-ಹೇಳು॥ ತತ್-ನೀನು ಹೇಳಿದ ಆಪ
ರನ್ನು, ಶ್ರದ್ಧಯಾ-ವಿಶ್ವಾಸದಿಂದ, ಕರವಾಮ-ಮಾಡುವೆವು ||೪೭|| ಸರ್ವಜ್ಞೇನಾಪಿ-ಎಲ್ಲವಂ ಬಲ್ಲವನಾದರೂ, ಮುಗ್ಧವತ್-
ಮೂಢನಂತಿರುವ, ಭರ್ತ್ರಾ-ಒಡೆಯನಾದ ಕೃಷ್ಣನಿಂದ, ಇತಿ-ಇಂತು, ಉಪಾಮಂತ್ರಿತಃ-ಆಲೋಚಿಸಲ್ಪಟ್ಟವನಾದ, ಉದ್ಧ

---

ರಾದ ಪುರುಷರು ಕೃತಾರ್ಥರಾಗುವರು. ಎಂದು ಏನು ಹೇಳತಕ್ಕದ್ದು ||೪೪|| ಸಕಲಲೋಕಂಗಳಿಗೂ ಮಂಗಳರೂ
ಪನಾದ ಎಲೈ ಶ್ರೀಕೃಷ್ಣನೇ! ಸ್ವರ್ಗದಲ್ಲಿ ಪಾತಾಳದಲ್ಲಿ ಭೂಮಿಯಲ್ಲಿಯೂ ಪ್ರಸಿದ್ಧವಾಗಿ ದಿಕ್ಪಾಲಕಲೋಕಂಗ
ಳಿಗೆ ಮೇಲ್ಕಟ್ಟಿನಂತೆ ಅಲಂಕಾರವಾಗಿ ನಿರ್ಮಲವಾಗಿಯೂ ಇರುವ ನಿನ್ನ ಯಶಸ್ಸು ಸ್ವರ್ಗದಲ್ಲಿ ಮಂದಾಕಿನಿ
ಯೆಂದು ಪಾತಾಳದಲ್ಲಿ ಭೋಗವತಿಯೆಂದು ಭೂಲೋಕದಲ್ಲಿ ಗಂಗೆಯೆಂದು ಕೂಡ ಪ್ರಸಿದ್ಧವಾದ ನಿನ್ನ ಪಾದೋ
ದಕವು ಸಹ ಪ್ರಪಂಚವಂ ಪಾವನಂಗೆಯ್ಯುತಲಿದೆ. ಆ ನಿನ್ನ ಆಗಮನದಿಂದ ಜನರಿಗೆ ಸಮಸ್ತ ಶುಭವುಂಟಾಗುವುದು ||೪೫||
ಎಂದು ಈ ರೀತಿಯಾಗಿ ನಾರದಮುನಿಯಿಂದ ಹೇಳಲ್ಪಡುತಲಿರುವಾಗ ಅಲ್ಲಿರುವ ಯಾದವರು ಜರಾಸಂಧನಂ ಜ
ಯಿಸಲಿಚ್ಛೆಯಿಂ ತ್ವರೆಪಡುತಲಿರುವ ಕಾರಣದಿಂದ ಆ ನಾರದವಚನವಂ ಸಮ್ಮತಿಪಡದೆ ಯಿರುವವರಾಗುತ್ತಿರಲು ಶ್ರೀ
ಕೃಷ್ಣನು ನಗುತ ಭೃತ್ಯನಾದ ಉದ್ಧವನಂ ಕುರಿತು ಮಧುರವಚನಗಳಿಂದ ಈ ರೀತಿಯಾಗಿ ನುಡಿದನದೆಂತೆನೆ ||೪೬||
ಎಲೈ ಉದ್ಧವನೇ! ನೀನು ಮಂತ್ರಸಾಧ್ಯಂಗಳಾದ ಅರ್ಥಗಳ ಪರಿಪಾಕವಂ ತಿಳಿದವನಾದ್ದರಿಂದ ನಮಗೆ ಉತ್ಕೃ
ಷ್ಟವಾದ ನೇತ್ರಸ್ವರೂಪನೂ ಆಪ್ತನೂ ಆಗಿದ್ದೀಯೆ. ಅದರಿಂದ ಈಗ ನಾವು ಮಾಡತಕ್ಕ ವ್ಯಾಪಾರವನ್ನು ಹೇ
ಳು. ನಾವು ಶ್ರದ್ಧೆಯಿಂದ ಆ ಕಾರ್ಯವನ್ನು ಆಚರಿಸುವರಾಗುತ್ತೇವೆ ||೪೭|| ಎಲೈ ಪರೀಕ್ಷಿದ್ರಾಯನೇ ಸರ್ವಜ್ಞನಾದ

ಯಾಉದ್ಧವಃಪ್ರತ್ಯಭಾಷತ॥ ... ... ... ... ॥೪೯॥

ಇತಿಶ್ರೀಮದ್ಭಾಗವತೇ ದಶಮಸ್ಕಂಧೇ ಸಪ್ತತಿತಮೋಽಧ್ಯಾಯಃ

ಯುಧಿಷ್ಠಿರಾನುಷ್ಠೀಯಮಾನರಾಜಸೂಯದರ್ಶನಾರ್ಥಂಶ್ರೀಕೃಷ್ಣಪ್ರಸ್ಥಾನಘಟ್ಟಃ-

ಶ್ರೀಶುಕಃ॥ ಇತ್ಯುದೀರಿತಮಾಕರ್ಣ್ಯದೇವರ್ಷೇರುದ್ಧವೋಽಬ್ರವೀತ್ ।ಸಭ್ಯಾನಾಂಮತಮಾಜ್ಞಾಯ

ಕೃಷ್ಣಸ್ಯಚಮಹಾಮತಿಃ॥೧॥ ಯದುಕ್ತಮೃಷಿಣಾದೇವಸಾಚಿವ್ಯಂಯಕ್ಷ್ಯತಸ್ತ್ವಯಾ । ಕಾರ್ಯಂಪೈ

---

ವಃ-ಗಾವಲ್ಗಣಿಯು, ಸಂದೇಶಂ-ಕೃಷ್ಣಾಜ್ಞೆಯನ್ನು, ಶಿರಸಾ-ತಲೆಯಿಂದ, ಆದಾಯ-ಗ್ರಹಿಸಿ, ಪ್ರತ್ಯಭಾಷತ-ಪ್ರತ್ಯುತ್ತರವಂನುಡಿದನು। ॥೪೯॥

ಇಂತೆಂಬಲ್ಲಿಗೆ ಭಾಗವತಪ್ರತಿಶಬ್ದಾರ್ಥಬೋಧಿನಿಯೊಳು ದಶಮಸ್ಕಂಧದಲ್ಲಿ
೭೦ನೆಯ ಅಧ್ಯಾಯಂಮುಗಿದುದು.

---

೭೧ನೆಯಅಧ್ಯಾಯದ ಪ್ರತಿಪದಟೀಕೆ.

[ಶುಕವಚನವು] ಇತಿ-ಹೀಗೆ, ದೇವರ್ಷೇಃ-ನಾರದನ, ಉದೀರಿತಂ-ವಚನವನ್ನು, ಆಕರ್ಣ್ಯ-ಕೇಳಿ, ಮಹಾಮತಿಃ-ಅಧಿಕಬುದ್ಧಿಯುಳ್ಳ, ಉದ್ಧವಃ-ಉದ್ಧವನೆಂಬಮಂತ್ರಿಯು, ಸಭ್ಯಾನಾಂ-ಸಭೆಯಲ್ಲಿರುವವರ ಕೃಷ್ಣಸ್ಯಚ-ಮತ್ತು ಕೃಷ್ಣನ, ಮತಂ-ಅಭಿಪ್ರಾಯವನ್ನು, ಆಜ್ಞಾಯ-ತಿಳಿದು, ಅಬ್ರವೀತ್-ನುಡಿದನು ॥೧॥ ದೇವ-ಕೃಷ್ಣಸ್ವಾಮಿಯೇ ಋಷಿಣಾ-ನಾರದನಿಂದ, ಯತ್-

---

ರೂ ಮೂಢನಂತೆ ನಟಿಸುವ ತನ್ನ ಸ್ವಾಮಿಯಾದ ಶ್ರೀಕೃಷ್ಣನಿಂದ ಈರೀತಿಯಾಗಿ ಪ್ರಶ್ನೆಗೆಯ್ಯಲ್ಪಟ್ಟವನಾದ ಉದ್ಧವನು ಶ್ರೀಕೃಷ್ಣ ಆಜ್ಞೆಯನ್ನು ಶಿರಸ್ಸಿನಿಂದ ವಹಿಸಿ ಈರೀತಿಯಾಗಿ ನುಡಿದನು. ॥೪೯॥

ಇಂತು ಶ್ರೀಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸಿದನೆಂದುಸೂತಪೌ
ರಾಣಿಕನು ನೈಮಿಶಾರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಪೇಳಿದನೆಂ
ಬಲ್ಲಿಗೆ-ಶ್ರೀಮನ್ಮಹೀಶೂರ ಪುರವರಾಧೀಶ ಶ್ರೀಚಾಮರಾಜತನುಜಶ್ರೀ
ಮತ್ಕೃಷ್ಣರಾಜ ವಿರಚಿತಮಾದ ಶ್ರೀಕೃಷ್ಣರಾಜವಾಣೀವಿಲಾಸ
ಮೆಂಬಶ್ರೀಭಾಗವತ ಪುರಾಣದಕರ್ಣಾಟಭಾಷಾವ್ಯಾಖ್ಯಾನದಲ್ಲಿ
೭೦ನೆಅಧ್ಯಾಯಂಮುಗಿದುದು-



೭೧ನೆಯಅಧ್ಯಾಯವು.

ಶ್ರೀಧರೀಯಶ್ಲೋಕಃ ॥ ಅಥೈಕಸಪ್ತತಿತಮೇಹ್ಯುದ್ಧವಸ್ಯತುಮಂತ್ರತಃ । ಇಂದ್ರಪ್ರಸ್ಥಂಗತೇಕೃಷ್ಣೇಪಾರ್ಥಾನಾಂಪರಮೋತ್ಸವಃ ॥ ‡ ॥ಟೀ॥ ಎಪ್ಪತ್ತೊಂದನೆಯಅಧ್ಯಾಯದಲ್ಲಿ ಉದ್ಧವನ ಮಂತ್ರಾಲೋಚನೆಯಿಂದ ಶ್ರೀಕೃಷ್ಣನು ಇಂದ್ರಪ್ರಸ್ಥಪುರವನ್ನೈದಿದವನಾಗುತ್ತಿರಲು ಪಾಂಡವರಿಗೆ ಮಹತ್ತಾದ ಉತ್ಸವ ವುಂಟಾಯಿತೆಂಬರ್ಥವಂ ಶುಕಮುನಿಯು ಪರೀಕ್ಷಿದ್ರಾಯನಂಕುರಿತು ನಿರೂಪಿಸುವನದೆಂತೆನೆ,-

ಎಲೈ, ಪರೀಕ್ಷಿದ್ರಾಯನೇ। ಅನಂತರದಲ್ಲಿ ಮಹಾಬುದ್ಧಿವಂತನಾದ ಉದ್ಧವನು ಆಶ್ರೀಕೃಷ್ಣನ ಸಭೆಯಲ್ಲಿ ಈರೀತಿಯಿಂದ ನಾರದಮುನಿ ಹೇಳಿದವಚನವಂ ಕೇಳಿ ಸಾಮಾಜಿಕರತಾತ್ಪರ್ಯವನ್ನು ಶ್ರೀಕೃಷ್ಣನತಾತ್ಪರ್ಯಮು ಸಹ ತಿಳಿದವನಾಗಿ ಇಂತುಪೇಳ್ದನೆಂತೆನೆ-॥೧॥ಎಲೈ, ಶ್ರೀಕೃಷ್ಣನೇ। ಮಹಾಯಾಗಂ ಗೆಯ್ಯುವ ನೋ

ತೃಷ್ವಸ್ರೇಯಸ್ಯ ರಕ್ಷಾ ಚ ಶರಣ್ಯೈಷಿಣಾಮ್ ॥೩॥ ಯಷ್ಟವ್ಯಂ ರಾಜಸೂಯೇನ ದಿಕ್ಚಕ್ರಜಯಿನಾ ವಿಭೋ । ತತೋ ಜರಾಸಂಧವಧ ಉಭಯಾರ್ಥೋ ಮತೋ ಹಿ ನಃ ॥೪॥ ಅಸ್ಮಾಕಂ ಚ ಮಹಾನರ್ಥೋ ಹ್ಯೇತೇನೈವ ಭವಿಷ್ಯತಿ । ಯಶಶ್ಚ ತವ ಗೋವಿಂದ ರಾಜ್ಞೋ ಬಂಧಾದ್ವಿಮುಂಚತಃ ॥೫॥ ಸ ವೈ ದುರ್ವಿಷಹೋ ರಾಜಾ ನಾಗಾಯುತಸಮೋ ಬಲೇ । ಬಲಿನಾಮಪಿ ಚಾನ್ಯೇಷಾಂ ಭೀಮಂ ಸಮಬಲಂ ವಿನಾ ॥೬॥ ದ್ವೈರಥೇ ಸ ತು ಜೇತವ್ಯೋ ನ ಶತಾಕ್ಷೌಹಿಣೀಯುತಃ । ಬ್ರಹ್ಮಣ್ಯೋಽಭ್ಯರ್ಥಿತೋ ವಿಪ್ರೈರ್ನ ಪ್ರತ್ಯಾಖ್ಯಾತಿ ಕರ್ಹಿಚಿತ್ ॥೭॥ ಬ್ರಹ್ಮ

ಯಾವುದು, ಉಕ್ತಂ-ಹೇಳಲ್ಪಟ್ಟಿತೋ, ತತ್-ಅದೇ ಆದಂಥಾ, ಶರಣ್ಯೈಷಿಣಾಂ-ರಕ್ಷಣವನ್ನು ಬಯಸುವವರ, ರಕ್ಷಾ ಚ- ಪಾಲನವೂ ಆದಂಥಾ, ಪೈತೃಷ್ವಸ್ರೇಯಸ್ಯ-ಸೋದರತ್ತೆಯ ಮಗನಾದ, ಯಕ್ಷ್ಯತಃ-ರಾಜಸೂಯಯಾಗವಂ ಮಾಡಲೆಳಸಿದ ಧರ್ಮರಾಯನಿಗೂ, ಸಾಚಿವ್ಯಂ-ಸಹಾಯವು, ತ್ವಯಾ-ನಿನ್ನಿಂದ, ಕಾರ್ಯಂ-ಮಾಡಲ್ಪಡತಕ್ಕದ್ದು ॥೩॥ ವಿಭೋ-ಕೃಷ್ಣಸ್ವಾಮಿಯೇ, ದಿಕ್ಚಕ್ರಜಯಿನಾ-ದೆಸೆಗಳಮಂಡಲವನ್ನು ಗೆದ್ದ ದೊರೆಯಿಂದ, ರಾಜಸೂಯೇನ ಯಷ್ಟವ್ಯಂ-ರಾಜಸೂಯವಿಧಾನದಿಂದ ಯಾಗ ಮಾಡತಕ್ಕದ್ದಾಗಿರುತ್ತೆ. ತತಃ-ಆದರದೆಸೆಯಿಂದ, ಜರಾಸಂಧವಧಃ-ಜರಾಸಂಧನ ಸಂಹಾರವಾಗುವುದು, ಅಮುತಃ-ಈ ಧರ್ಮರಾಯನ ಯಜ್ಞಕ್ಕೆ ಸಹಾಯಮಾಡುವುದರಿಂದ, ನಃ-ನಮಗೆ, ಉಭಯಾರ್ಥೋ ಹಿ-ಎರಡು ಪ್ರಯೋಜನಗಳೂ ಉಂಟಾಗುವವಷ್ಟೆ ॥೪॥ ಅಸ್ಮಾಕಂ ಚ-ನಮಗೂ, ಮಹಾನ್-ದೊಡ್ಡ, ಅರ್ಥಃ-ಪ್ರಯೋಜನವು, ಅನೇನೈವ-ಇದರಿಂದಲೇ, ಭವಿಷ್ಯತಿ ಹಿ-ಆಗುತ್ತೆಯಲ್ಲವೆ, ಗೋವಿಂದ-ಕೃಷ್ಣನೇ, ರಾಜ್ಞಃ-ಅರಸುಗಳನ್ನು, ಬಂಧಾತ್-ಜರಾಸಂಧನ ಸೆರೆಯಿಂದ, ವಿಮುಂಚತಃ-ಬಿಡಿಸುತಲಿರುವ, ತವ-ನಿನಗೆ, ಯಶಶ್ಚ-ಕೀರ್ತಿಯೂ ಆಗುವುದು ॥೫॥ ಬಲಿನಾಂ-ಬಲವಂತರಾದ, ಅನ್ಯೇಷಾಂ-ಇತರರು, ಸತಾಮಪಿ-ಇರುತಿದ್ದರೂ, ಸಮಬಲಂ-ಸರಿಯಾದ ಬಲವುಳ್ಳ, ಭೀಮಂ ವಿನಾ-ಭೀಮಸೇನನಂ ಹೊರತು, ಬಲೇ-ಸಾಮರ್ಥ್ಯದಲ್ಲಿ, ನಾಗಾಯುತಸಮಃ-ಆನೆಗಳ ಹತ್ತು ಸಾವಿರದೊಡನೆ ಸರಿಯಾದ, ಸ ರಾಜಾ-ಆ ಜರಾಸಂಧನೆಂಬ ದೊರೆಯು, ವೈ-ಪ್ರಸಿದ್ಧನಾಗಿ, ದುರ್ವಿಷಹಃ-ಪ್ರಯಾಸದಿಂದಲೂ ಸೈರಿಸಲಶಕ್ಯನು ॥೬॥ ಸ ತು-ಆ ಜರಾಸಂಧನಾದರೋ, ದ್ವೈರಥೇ-ದ್ವಂದ್ವಯುದ್ಧದಲ್ಲಿ, ಜೇತವ್ಯಃ-ಗೆಲ್ಲಲ್ಪಡತಕ್ಕವನು, ಶತಾಕ್ಷೌಹಿಣೀಯುತಃ-ನೂರು ೧೦೦ ಅಕ್ಷೌಹಿಣಿಗಳಿಂದ ಕೂಡಿದವನಾದರೋ, ನ ಜೇತವ್ಯಃ-ಗೆಲ್ಲಲ್ಪಡತಕ್ಕವನಲ್ಲವು. ಬ್ರಹ್ಮಣ್ಯಃ- ಬ್ರಾಹ್ಮಣಪ್ರಿಯನಾದ್ದರಿಂದ, ವಿಪ್ರೈಃ-ಬ್ರಾಹ್ಮಣರಿಂದ, ಅಭ್ಯರ್ಥಿತಃ-ಪ್ರಾರ್ಥಿಸಲ್ಪಟ್ಟವನಾದರೆ, ಕರ್ಹಿಚಿತ್ ಎಲ್ಲಿಯೂ ಯಾವಾಗಲೂ, ನ ಪ್ರತ್ಯಾಖ್ಯಾತಿ-ತಿರಸ್ಕರಿಸುವುದಿಲ್ಲವು ॥೭॥ ವೃಕೋದರಃ-ಭೀಮನು, ಬ್ರಹ್ಮವೇಷಧರಃ-ಬ್ರಾಹ್ಮಣನ ವೇಷವನ್ನು

ದರತ್ತೆಯಮಗನಾದ ಧರ್ಮರಾಯನಿಗೆ ನಿನ್ನಿಂದ ಸಹಾಯಮಾಡಲ್ಪಡತಕ್ಕದ್ದೆಂದು ನಾರದಮುನಿಯು ಹೇಳಿದರ್ಥವು ಅವಶ್ಯವಾಗಿ ಮಾಡತಕ್ಕದ್ದೇಸರಿ. ಜರಾಸಂಧನಿಂದ ಪೀಡಿತರಾಗಿ ಶರಣಾಗತರಾದ ಅರಸುಗಳ ರಕ್ಷಣವೂ ನಿನ್ನಿಂದ ಮಾಡಲ್ಪಡತಕ್ಕದ್ದೇ ಆಗಿದೆ ॥೩॥ ಎಲೈ ಶ್ರೀಹರಿಯೇ! ದಿಙ್ಮಂಡಲವಂ ಜಯಿಸಿರುವ ಮಹಾವೀರನಾದ ಅರಸಿನಿಂದಲೇ ರಾಜಸೂಯಯಾಗವು ಮಾಡಲ್ಪಡತಕ್ಕದ್ದಾಗಿರುವುದು. ಆದ್ದರಿಂದ ದಿಗ್ವಿಜಯವೆಂಬ ನಿಮಿತ್ತದಿಂದಲೇ ಜರಾಸಂಧನು ಜಯಿಸಲ್ಪಡುತಿರಲು ರಾಜಸೂಯಯಾಗವೂ ಶರಣಾಗತರಕ್ಷಣವೂ ಉಭಯಾರ್ಥಗಳೂ ಸಿದ್ಧಿಸುವವೆಂದು ನನಗೆ ತೋರುತಲಿದೆ ॥೪॥ ನಮಗೂ ಈ ಜರಾಸಂಧನಂ ಜಯಿಸುವುದರಿಂದಲೇ ಮಹತ್ತಾದ ಫಲವು ಉಂಟಾಗುತ್ತಲಿದೆ. ಮತ್ತು ಗಿರಿವ್ರಜದುರ್ಗದಲ್ಲಿ ಬಂಧಿಸಲ್ಪಟ್ಟಿರುವ ಅರಸುಗಳಂ ಆ ಬಂಧನದ ದೆಸೆಯಿಂದ ಬಿಡಿಸುತಲಿರುವ ನಿನಗೂ ಕೀರ್ತಿಯುಂಟಾಗುತಲಿದೆ ॥೫॥ ಬಲದಲ್ಲಿ ಹತ್ತು ಸಾವಿರಾನೆಗಳಿಗೆ ಸಮಾನನಾದ ಜರಾಸಂಧನು ಅವನಿಗಿಂತಲೂ ಬಲಶಾಲಿಗಳಾದ ಜನರಿದ್ದರೂ ಕೂಡ ಸಮಬಲನಾದ ಭೀಮನಂ ಹೊರತು ಅನ್ಯರಾದ ಅರಸುಗಳಿಂದ ಜಯಿಸಲಶಕ್ಯನಾಗಿರುವನು ॥೬॥ ಮತ್ತು ದ್ವಂದ್ವಯುದ್ಧದಿಂದ ಆ ಜರಾಸಂಧನು ಜಯಿಸಲ್ಪಡತಕ್ಕವನೇ ಹೊರತು ಅವನು ಯುದ್ಧದಲ್ಲಿ ಒಬ್ಬನೇ ಬಾರದೆ ೧೦೦ ಅಕ್ಷೌಹಿಣಿಗಳ ಸೇನೆಯಿಂ ಬಳಸಲ್ಪಟ್ಟವನಾಗಿ ಬಂದರೆ ಆಗ ಅವನಂ ಜಯಿಸುವುದು ಯಾರಿಗೂ ಶಕ್ಯವಲ್ಲವು. ಇದಕ್ಕೆ ಉಪಾಯವೇನೆಂದರೆ-ಆ ಜರಾಸಂಧನು ಬ್ರಾಹ್ಮಣಪ್ರಿಯನಾದ್ದರಿಂದ ಅವನನ್ನು ಬ್ರಾಹ್ಮಣರು ಹೋಗಿ ಯಾಚಿಸುವಲ್ಲಿ ಯಾವಾಗಲೂ ಅವರನ್ನು ತಿರಸ್ಕರಿಸುವವನಾಗುವುದಿಲ್ಲ ॥೭॥ ಆ ಕಾರಣದಿಂದ ಭೀಮನು ಬ್ರಾಹ್ಮಣವೇಷವಂ ಧರಿಸಿಕೊಂಡವನಾಗಿ ಅವನನೈದಿ ದ್ವಂದ್ವ

ವೇದಧರೋಽಸ್ತ್ವಾ ತಂ ಭಿಕ್ಷೇತ ತವ ಕೋದರಃ । ಹನಿಷ್ಯತಿ ನ ಸಂದೇಹೋ ದ್ವೈರಥೇ ತವ ಸಂನಿಧೌ ॥೭॥ ನಿಮಿತ್ತಂ ಪರಮೇಶಸ್ಯ ವಿಶ್ವಸರ್ಗನಿರೋಧಯೋಃ । ಹಿರಣ್ಯಗರ್ಭಃ ಶರ್ವಶ್ಚ ಕಾಲಸ್ಯಾರೂಪಿಣಸ್ತವ ॥೮॥ ಗಾಯಂತಿ ತೇ ವಿಶದಕರ್ಮ ಗೃಹೇಷು ದೇವ್ಯೋ ರಾಜ್ಞಾಂ ಸ್ವಶತ್ರುವಧಮಾತ್ಮವಿಮೋಕ್ಷಣಂ ಚ । ಗೋಪ್ಯಶ್ಚ ಕುಂಜರಪತೇರ್ಜನಕಾತ್ಮಜಾಯಾಃ ಪಿತ್ರೋಶ್ಚ ಲಬ್ಧಶರಣಾ ಮುನಯೋ ವಯಂ ಚ ॥೯॥ ಜರಾಸಂಧವಧಃ ಕೃಷ್ಣ ಭೂ

---

ಧರಿಸಿದವನಾಗಿ, ಗತ್ವಾ-ಹೋಗಿ, ತಂ-ಆ ಜರಾಸಂಧನನ್ನು, ಭಿಕ್ಷೇತ-ಬೇಡಿಕೊಳ್ಳಬೇಕು, ತವ-ನಿನ್ನ, ಸನ್ನಿಧೌ- ಹತ್ತಿರದಲ್ಲಿ, ದ್ವೈರಥೇ-ದ್ವಂದ್ವಯುದ್ಧದೊಳು, ತಂ-ಆ ಜರಾಸಂಧನನ್ನು, ಹನಿಷ್ಯತಿ-ಕೊಲ್ಲುವನು, ಸಂದೇಹೋ ನ-ಸಂಶಯವಿಲ್ಲವು ॥೭॥ ಅರೂಪಿಣಃ-ಆಕಾರವಿಲ್ಲದವನಾದರೂ, ಈಶಸ್ಯ-ಜಗತ್ತಿಗೆ ನಿಯಾಮಕನಾಗಿರುವ, ಕಾಲಸ್ಯ-ಮಹಾಕಾಲಸ್ವರೂಪನಾದ, ತವಪರಂ-ನಿನಗಾದರೋ. ವಿಶ್ವಸರ್ಗನಿರೋಧಯೋಃ-ಪ್ರಪಂಚಸೃಷ್ಟಿಸಂಹಾರಗಳಲ್ಲಿ, ಹಿರಣ್ಯಗರ್ಭಃ-ಚತುರ್ಮುಖಬ್ರಹ್ಮನೂ, ಶರ್ವಶ್ಚ-ರುದ್ರನೂ, ನಿಮಿತ್ತಂ-ಸಾಧನಮಾತ್ರರಾಗಿರುವರು ॥೮॥ ರಾಜ್ಞಾಂ ದೇವ್ಯಃ-ರಾಜಪತ್ನಿಯರು, ಗೃಹೇಷು-ತಮ್ಮ ಮನೆಗಳಲ್ಲಿ, ತೇ-ನಿನ್ನ, ವಿಶದಕರ್ಮ-ಪ್ರಕಟವ್ಯಾಪಾರವಾದ, ಸ್ವಶತ್ರುವಧಂ-ತಮ್ಮ ಹಗೆಯಾದ ಜರಾಸಂಧನ ಸಂಹಾರವನ್ನೂ, ಆತ್ಮವಿಮೋಕ್ಷಣಂ ಚ-ತಮ್ಮ ಗಂಡಂದಿರಾದ ಅರಸರ ಸೆರೆಯ ಬಿಡುಗಡೆಯನ್ನೂ, ಗಾಯಂತಿ-ಹಾಡುತ್ತಿರುವರು. ಗೋಪ್ಯಶ್ಚ-ಗೊಲ್ಲತಿಯರೂ, ಶಂಖಚೂಡನ ಸಂಹಾರವನ್ನೂ, ಅವನ ಸೆರೆಯಿಂದ ತಮ್ಮನ್ನು ಬಿಡಿಸಿ ತಂದದ್ದನ್ನೂ ಹಾಡುತ್ತಿರುವರು. ನಿನ್ನ ಅವತಾರಾಂತರದಲ್ಲಿ, ಕುಂಜರಪತೇಃ-ಗಜೇಂದ್ರನಿಗೆ, ನೆಗಳೆಸೆರೆಯಿಂದಾದ ಮೋಕ್ಷವನ್ನೂ, ಜನಕಾತ್ಮಜಾಯಾಃ-ಸೀತಾದೇವಿಗೆ, ರಾವಣನ ಸೆರೆಯಿಂದ ಬಿಡುಗಡೆಯನ್ನೂ, ಹಾಡುತ್ತಿರುವರು. ಈ ಅವತಾರದಲ್ಲಿಯೇ, ಪಿತ್ರೋಶ್ಚ-ನಿನ್ನ ತಾಯಿ ತಂದೆಯರಾದ, ದೇವಕೀವಸುದೇವರಿಗೆ, ಕಂಸನ ಸೆರೆಯಿಂದ ಬಿಡುಗಡೆಯನ್ನೂ, ಹಾಡುತ್ತಿರುವರು ಲಬ್ಧಶರಣಾಃ-ಹೊಂದಲ್ಪಟ್ಟ ರಕ್ಷಕನುಳ್ಳ, ಮುನಯಃ-ಋಷಿಗಳು, ನಿನ್ನ ಪ್ರಕಟವ್ಯಾಪಾರವನ್ನು ಹಾಡುತ್ತಿರುವರು. ವಯಂ ಚ-ನಾವೂ ಕೂಡ, ನಿನ್ನಿಂದಾದ ಆತ್ಮಮೋಕ್ಷಣ ವ್ಯಾಪಾರವನ್ನೂ ಹಾಡುತ್ತಿರುವೆವು ॥೯॥ ಕೃಷ್ಣ-ಶ್ರೀಹರಿಯೆ! ಜರಾಸಂಧವಧಃ-ಜರಾಸಂಧನ ಸಂಹಾರವು, ಭೂರ್ಯರ್ಥಾಯ-ಬಹುಪ್ರಯೋಜನಕ್ಕೋಸುಗ, ಉಪಕಲ್ಪ್ಯತೇ-ಸಿದ್ಧಪಡಿಸಲ್ಪಡುವುದು, ಪ್ರಾಯಃ-ಬಹುಶಃ ಸಾಧಾರಣವಾಗಿ, ಪಾಕವಿಪಾಕೇನ-ಪುಣ್ಯಪಾಪಗಳ ಫಲಕಾಲದಿಂದ, ಅವರವರಿಗಾಗತಕ್ಕ ರಕ್ಷಣವೂ ಶಿಕ್ಷಣವೂ ಆಗುವದು ಕ್ರತುಃ- ಯಜ್ಞವು, (ದೇವಪೂಜೆಯು) ತವ ಚ-ನಿನಗೂ, ಅಭಿಮತಃ-ಸಮ್ಮತವಾಗಿರುವುದು [ಅರಸುಗಳ ಪುಣ್ಯದಿಂದಲೇ ಸಾಯುವರು. ಪಾಂಡವರಿಗೆ ಪುಣ್ಯಕೀರ್ತಿಗಳೂ ದೇವರ್ಕಳಿಗೆ ಪೂಜೆಯೂ, ಉಂಟಾಗುವ ಯಜ್ಞವು ನಿನಗೂ ಇಷ್ಟವಾದ್ದು ಆದ್ದರಿಂದ ಯಜ್ಞಕ್ಕೆ ನೀ

---

ಯುದ್ಧವನ್ನು ಯಾಚಿಸಿದರೆ ಆಗ ದ್ವಂದ್ವಯುದ್ಧವುಂಟಾಗಿ ನಿನ್ನ ಸನ್ನಿಧಾನಬಲದಿಂದ ಭೀಮನು ಜರಾಸಂಧನಂ ಜಯಿಸುವನು. ಈ ಅರ್ಥದಲ್ಲಿ ಸಂದೇಹವಿಲ್ಲವು ॥೭॥ ರೂಪರಹಿತನಾಗಿಯೂ ಕಾಲಸ್ವರೂಪನಾಗಿಯೂ ಇರುವ ಈಶ್ವರನಾದ ನಿನಗೆ ಪ್ರಪಂಚದಲ್ಲಿ ಸೃಷ್ಟಿಕರ್ಮದೊಳು ಬ್ರಹ್ಮದೇವನು ಯಾವರೀತಿಯಿಂದ ನಿಮಿತ್ತಮಾತ್ರನಾಗಿರುವನೋ, ಆ ಪ್ರಪಂಚದ ಸಂಹಾರಕರ್ಮದಲ್ಲಿ ನಿನಗೆ ರುದ್ರನೂ ಸಹ ನಿಮಿತ್ತಮಾತ್ರನಾಗಿ ಅವನಂ ಜಯಿಸುವನಾಗನೋ ಏನು ॥೮॥ ಎಲೈ ಹರಿಯೇ! ಜರಾಸಂಧನಿಂದ ನಿರೋಧಗೆಯ್ಯಲ್ಪಟ್ಟ ಅರಸುಗಳ ಪತ್ನಿಯರು ಮುನ್ನ ಗೋಪಿಯರು ಯಾವರೀತಿಯಿಂದ ತಾವು ಶಂಖಚೂಡನಿಂ ಅಪಹರಿಸಲ್ಪಟ್ಟಾಗ ನಿನ್ನಿಂದ ಅವನು ಕೊಲ್ಲಲ್ಪಟ್ಟು ತಮ್ಮ ವಿಮೋಚನೆಯಂ ಅಪೇಕ್ಷಿಸುತ ನಿನ್ನಂ ಕುರಿತು ಗಾನಂ ಗೆಯ್ದಂತೆ ತಮ್ಮ ತಮ್ಮ ಗೃಹಂಗಳಲ್ಲಿ ಪುತ್ರಲಾಲನಾದಿವ್ಯಾಪಾರಂಗಳಲ್ಲಿ, ಎಲೈ ಪುತ್ರನೇ! ದುಃಖಿಸಬೇಡ ಶ್ರೀಕೃಷ್ಣನು ನಮ್ಮ ಶತ್ರುವಾದ ಜರಾಸಂಧನಂ ಕೊಲ್ಲುತ್ತಾನೆ, ನಮ್ಮ ಪತಿಗಳಂ ಬಿಡಿಸುತ್ತಾನೆಂದು ರಮಣೀಯವಾದ ನಿನ್ನ ಚರಿತ್ರವಂ ಹಾಡುತಲಿರುವರು. ನಾವೂ ಶರಣಾಗತರಾದ ಋಷಿಗಳೂ ಕೂಡ ಮೊಸಳೆಯ ಸೆರೆಯಿಂದ ಗಜೇಂದ್ರನನ್ನೂ ರಾವಣನ ಸೆರೆಯಿಂದ ಸೀತೆಯನ್ನೂ ಕಂಸನ ಸೆರೆಯಿಂದ ದೇವಕೀವಸುದೇವರಂ ಸಹ ಬಿಡಿಸಿದ ನಿನ್ನ ಚರಿತ್ರವಂ ಗಾನಂಗೆಯ್ಯುತಲಿರುವೆವಾದ್ದರಿಂದ ಈ ರೀತಿಯಾಗಿರುವ ಆ ರಾಜಪತ್ನಿಯರ ಸಂಕಲ್ಪವಂ ದಯೆಯಿಂದ ನೀನು ಪೂರಯಿಸುವನಾಗು ॥೯॥ ಎಲೈ ಶ್ರೀಕೃಷ್ಣನೇ! ಆ ಜರಾಸಂಧನವಧೆಯು ಅನೇಕಕಾರ್ಯಗಳಿಗೆ ಸಾಧನವಾಗುತಲಿದೆ, ಅರಸುಗಳ ಪುಣ್ಯಪರಿಪಾಕದಿಂದ ಜರಾ

ರ್ಯೈರ್ಭ್ಯೋಪಕಲ್ಪ್ಯತೇ । ಪ್ರಾಯಃಪಾಕವಿಪಾಕೇನತವಚಾಭಿಮತಃಕ್ರತುಃ ॥೧೦॥ ಶ್ರೀಶುಕಃ॥ ಇತ್ಯು
ದ್ಧವವಚೋರಾಜನ್ಸರ್ವತೋಭದ್ರಮಚ್ಯುತಮ್ । ದೇವರ್ಷಿರ್ಯದುವೃದ್ಧಾಶ್ಚಕೃಷ್ಣಶ್ಚಪ್ರತ್ಯಪೂಜ
ಯನ್॥೧೧॥ ಅಥಾದಿಶತ್ಪ್ರಯಾಣಾಯಭಗವಾನ್ದೇವಕೀಸುತಃ । ಭೃತ್ಯಾನ್ದಾರುಕಜೈತ್ರಾದೀನನು
ಜ್ಞಾಪ್ಯಗುರೂನ್ವಿಭುಃ ॥೧೨॥ ನಿರ್ಗಮಯ್ಯಾವರೋಧಾನ್ಸ್ವಾನ್ಸಸುತಾನ್ಸಪರಿಚ್ಛದಾನ್ । ಸಂಕರ್ಷ
ಣಮನುಜ್ಞಾಪ್ಯಯದುರಾಜಂಚಶತ್ರುಹನ್ ॥ ಸೂತೋಪನೀತಂಸ್ವರಥಮಾರೋಹದ್ಗರುಡಧ್ವಜಃ॥೧೩॥
ಪುರೋರಥದ್ವಿಪಭಟಸಾದಿನಾಯಕೈಃಕರಾಳಯಾಪರಿವೃತಆತ್ಮಸೇನಯಾ।ಮೃದಂಗಭೇರ್ಯಾನಕಶಂಖಗೋ
ಮುಖೈಃಪ್ರಘೋಷಘೋಷಿತಕಕುಭೋನಿರಾಕ್ರಮತ್॥೧೪॥ ನೃವಾಜಿಕಾಂಚನಶಿಬಿಕಾಭಿರಚ್ಯುತಂಸಹಾ

---

ನು ಹೋದರೆ ಸರ್ವಾರ್ಥಗಳು ಸಿದ್ಧಿಸುತ್ತವೆ, ಎಂದು ಭಾವವು] ॥೧೦॥ (ಶುಕವಚನವು) ರಾಜನ್-ಪರೀಕ್ಷಿದ್ರಾಯನೇ, ಇತಿ-ಹೀಗೆ, ಉಪಪತ್ತಿಂ-ಉಪಪತ್ತಿಯುಂಟಾದ್ದರಿಂದ ತಪ್ಪಿಹೋಗದಂಥಾ, ಸರ್ವತೋಭದ್ರಂ- ಎಲ್ಲಾಬಗೆಯಿಂದಲೂ ಮಂಗಳವಾಗಿರುವ, ಉದ್ಧವವಚಃ-ಉದ್ಧವನೆಂಬ ಮಂತ್ರಿಯಮಾತನ್ನು, ದೇವರ್ಷಿಃ-ನಾರದನೂ, ಯದುವೃದ್ಧಾಶ್ಚ-ಯಾದವರಲ್ಲಿ ಜ್ಞಾನಾಧಿಕರೂ, ಕೃಷ್ಣಶ್ಚ-ಶ್ರೀವಾಸುದೇವನೂ, ಪ್ರತ್ಯಪೂಜಯನ್-ಶ್ಲಾಘಿಸಿದರು ॥೧೧॥ ಅಥ-ಆ ಮೇಲೆ ಭಗವಾನ್- ಭಗವಂತನಾದ, ದೇವಕೀಸುತಃ-ಕೃಷ್ಣನು, ವಿಭುಃ-ತಾನೇ ಸ್ವತಂತ್ರನಾದರೂ, ಗುರೂನ್-ಹಿರಿಯರನ್ನು, ಅನುಜ್ಞಾಪ್ಯ-ಒಪ್ಪಿಸಿ ಅಪ್ಪಣೆಯಂಪಡೆದು, ದಾರುಕಜೈತ್ರಾದೀನ್-ದಾರುಕನೆಂಬ ಸಾರಥಿ, ಜೈತ್ರನೆಂಬ ಸೇನಾಪತಿ, ಮೊದಲಾದ ಭೃತ್ಯಾನ್-ಸೇವಕರನ್ನು, ಪ್ರಯಾಣಾಯ-ತನ್ನ ಪಯಣಕ್ಕೋಸುಗ, ಅದಿಶತ್-ಆಜ್ಞೆಯನಿತ್ತನು॥೧೨॥ ಶತ್ರುಹನ್-ವಿರೋಧಿಗಳನ್ನು ಗೆಲ್ಲುವನಾದ ಪರೀಕ್ಷಿತನೇ ! ಕೇಳು. ಗರುಡಧ್ವಜಃ-ಶ್ರೀಕೃಷ್ಣನು, ಸಸುತಾನ್-ಮಕ್ಕಳಿಂದ ಸಹಿತರಾದ, ಸಪರಿಚ್ಛದಾನ್- ಸಾಮಗ್ರಿಗಳಿಂದ ಸಹಿತರಾದ, ಸ್ವಾನ್ಅವರೋಧಾನ್-ತನ್ನ ರಾಣಿವಾಸದ ಹೆಂಗಳನ್ನೂ, ನಿರ್ಗಮಯ್ಯ-ಪ್ರಯಾಣಮಾಡಿಸಿ, ಸಂಕರ್ಷಣಂ-ಬಲರಾಮನನ್ನೂ, ಯದುರಾಜಂಚ-ಉಗ್ರಸೇನನನ್ನೂ, ಅನುಜ್ಞಾಪ್ಯ-ಸಮ್ಮತಿಗೊಳಿಸಿ ಅಪ್ಪಣೆಯಂಪಡೆದುಕೊಂಡು, ಸೂತೋಪನೀತಂ-ಸಾರಥಿಯಿಂದ ಹತ್ತಿರಕ್ಕೆ ತರಲ್ಪಟ್ಟ, ಸ್ವರಥಂ-ತನ್ನ ತೇರನ್ನು, ಆರೋಹತ್-ಏರಿದನು ॥೧೩॥ ಪುರಃ- ಮುಂಗಡೆಯಲ್ಲಿ, ರಥ-ತೇರುಗಳಿಂದಲೂ, ದ್ವಿಪ-ಆನೆಗಳಿಂದಲೂ, ಭಟ-ಶೂರರಿಂದಲೂ, ಸಾದಿ-ಸವಾರರಿಂದಲೂ, ನಾಯಕೈಃ- ಸೇನಾನಿಯಾಮಕರಿಂದಲೂ, ಕರಾಳಯಾ-ಭಯಂಕರವಾದ, ಅಥವಾ-ವಿಶಾಲವಾದ, ಆತ್ಮಸೇನಯಾ-ತನ್ನ ದಂಡಿನಿಂದ, ಪರಿವೃತಃ-ಬಳಸಲ್ಪಟ್ಟವನಾಗಿಯೂ, ಮೃದಂಗ-ಮದ್ದಳೆ, ಭೇರಿ-ಬರಡೋಲು, ಆನಕ-ತಮಟೆ, ಶಂಖ-ಶಂಖು, ಗೋಮುಖೈಃ- ಕೊಂಬುಮೊದಲಾದವುಗಳಿಂದ, ಪ್ರಘೋಷಿತಕಕುಭಃ-ಹೆಚ್ಚು ಧ್ವನಿಯಿಂದ ಮೊರೆಯುತ್ತಿರುವ ದೆಸೆಗಳುಳ್ಳವನಾಗಿಯೂ, ನಿರಾಕ್ರಮತ್-ಹೊರಟನು ॥೧೪॥ ವರಾಂಬರಾಭರಣವಿಲೇಪನಸ್ರಜಃ-ಶ್ರೇಷ್ಠವಾದ ವಸ್ತ್ರಾಲಂಕಾರ ಗಂಧ ಪುಷ್ಪಮಾಲೆಗಳುಳ್ಳಂಥಾ, ಅಸಿಚರ್ಮಪಾಣಿಭಿಃ-ಕತ್ತಿ ಗುರಾಣಿಗಳು ಕೈಗಳಲ್ಲಿಉಳ್ಳ, ನೃಭಿಃ-ಆಳುಗಳಿಂದ, ಸುಸಂವೃತಾಃ-ಚನ್ನಾಗಿ ಬಳಸಲ್ಪಟ್ಟಿರುವಂಥಾ, ನೃವಾಜಿ

---

ಸಂಧಾದಿಗಳ ಪಾಪಪರಿಪಾಕದಿಂದಲೂ ಈರಾಜಸೂಯಯಾಗವು ನಿನಗೂ ಬಹುತರವಾಗಿ ಸಮ್ಮತವಾಗುತಲಿದೆ॥೧೦॥ ಎಂದು ಈರೀತಿಯಾಗಿ ಉದ್ಧವನಿಂದ ಹೇಳಲ್ಪಟ್ಟ ಸರ್ವಪ್ರಕಾರದಿಂದಲೂ ಶುಭಕರವಾದ ವೃದ್ಧಿಕರವಾದ ಈ ವಚನವಂಕೇಳಿ ನಾರದನೂ ವೃದ್ಧರಾದ ಯಾದವರೂ ಶ್ರೀಕೃಷ್ಣನೂಸಹ ಯುಕ್ತವಾಗಿದೆಯೆಂದು ಶ್ಲಾಘಿಸಿದರು ॥೧೧॥ ಅನಂತರದಲ್ಲಿ ಭಗವಂತನಾದ ಶ್ರೀಕೃಷ್ಣನು ತಂದೆತಾಯಿಗಳು ಮೊದಲಾದ ಗುರುಜನರಿಗೆ ವಿಜ್ಞಾಪನಂಗೆಯ್ದು ಪ್ರಯಾಣಕ್ಕೋಸುಗ ದಾರುಕ ಜೈತ್ರಾದಿಗಳನ್ನು ಆಜ್ಞಾಪಿಸಿದನು ॥೧೨॥ ಬಳಿಕ ಶ್ರೀಕೃಷ್ಣನು ಪುತ್ರರೊಡನೆ ಪರಿವಾರದೊಡನೆಯೂ ಯುಕ್ತರಾದ ತನ್ನ ಪತ್ನಿಯರನ್ನೂ ಪ್ರಯಾಣಂಗೆಯ್ಸಿ ಬಲರಾಮನನ್ನೂ ಉಗ್ರಸೇನನನ್ನೂ ಅನುಜ್ಞೆಯಂಕೇಳಿ ಸಾರಥಿಯಿಂ ತರಲ್ಪಟ್ಟ ಗರುಡಧ್ವಜವುಳ್ಳ ತನ್ನ ರಥವನೇರಿ॥೧೩॥ ಅನೇಕಂಗಳಾದ ರಥಗಜಪದಾತಿಗಳಿಂದಲೂ ಅಶ್ವಗಳಿಂದಲೂ ಸಾರಥಿಗಳಿಂದಲೂ ರಥಿಕರಿಂದಲೂ ಭಯಂಕರವಾದ ಸೇನೆಯಿಂ ಸುತ್ತಿಕೊಳ್ಳಲ್ಪಟ್ಟವನಾಗಿ ಮೃದಂಗ ಭೇರೀ ಶಂಖಾದಿ ವಾದ್ಯಂಗಳ ಘೋಷದಿಂದ ಧ್ವನಿಗೆಯ್ಸಲ್ಪಟ್ಟ ದಿಗ್ದೇಶಂಗಳುಳ್ಳವನಾಗಿ ಹೊರಟನು ॥೧೪॥ ಆಮೇಲೆ ಪತಿವ್ರತೆಯರಾದ ಶ್ರೀಕೃಷ್ಣಪತ್ನಿಯರು ಪುತ್ರರಿಂ ಸಹಿತ

ತ್ಮಜಾಃ ಪತಿಮನುಸುವ್ರತಾ ಯಯುಃ | ವರಾಂಬರಾಭರಣವಿಲೇಪನಸ್ರಜಸ್ಸುಸಂವೃತಾ ನೃಭಿರಸಿಚರ್ಮಪಾಣಿಭಿಃ ||೧೫|| ನರೋಷ್ಟ್ರಗೋಮಹಿಷಖರಾಶ್ವತರ್ಯನಃಕರೇಣುಭಿಃ ಪರಿಜನವಾರಯೋಷಿತಃ | ಸ್ವಲಂಕೃತಾಃ ಕಟಕುಟಿಕಂಬಳಾಂಬರಾದ್ಯುಪಸ್ಕರಾ ಯಯುರಧಿಯುಜ್ಯ ಸರ್ವಶಃ ||೧೬|| ಬಲಂ ಬೃಹದ್ಧ್ವಜಪಟಛತ್ರಚಾಮರೈರ್ವರಾಯುಧಾಭರಣಕಿರೀಟವರ್ಮಭಿಃ | ದಿವಾಂಶುಭಿಸ್ತುಮುಲರವಂ ಬಭೌ ರವೇರ್ಯಥಾರ್ಣವಃ ಕ್ಷುಭಿತತಿಮಿಂಗಿಲೋರ್ಮಿಭಿಃ ||೧೭|| ಅಥೋ ಮುನಿರ್ಯದುಪತಿನಾ ಸಭಾಜಿತಃ ಪ್ರಣಮ್ಯ ತಂ ಹೃದಿ ವಿದಧದ್ವಿಹಾಯಸಾ | ನಿಶಾಮ್ಯ ತದ್ವ್ಯವಸಿತಮಾಹೃತಾರ್ಹಣೋ ಮುಕುಂದಸಂದರ್ಶನನಿರ್ವೃತೇಂದ್ರಿಯಃ ||

---

ಕಾಂಚನಶಿಬಿಕಾಭಿಃ-ಸಿಬಿಗೆಗಳು, ಕುದುರೆಗಳು, ಭಂಗಾರದ ಅಂದಳಗಳು, ಇವುಗಳಿಂ ಸಹಿತರಾದಂಥಾ, ಸಹಾತ್ಮಜಾಃ-ಮಕ್ಕಳಿಂದ ಸಹಿತರಾದಂಥಾ, ಪತಿಂ-ಗಂಡನಾದ, ಅಚ್ಯುತಂ-ಕೃಷ್ಣನನ್ನು, ಅನುಸುವ್ರತಾಃ-ಅನುಸರಿಸಿದ ಪಾತಿವ್ರತ್ಯನಿಯಮವುಳ್ಳಂಥಾ, ರಾಣಿವಾಸದ ಹೆಂಗಳು, ಯಯುಃ-ತೆರಳಿದರು ||೧೫|| ಪರಿಜನವಾರಯೋಷಿತಃ-ಪರಿಚಾರಕರೂ ಸೂಳೆಯರೂ, ಪರಿವಾರದವರೂ, ನರ....ಣುಭಿಃ-ನರ-ಆಳು, ಉಷ್ಟ್ರ-ಒಂಟೆ, ಗೋ-ಎತ್ತು ಆಕಳು, ಮಹಿಷ-ಕೋಣ, ಖರ-ಕತ್ತೆ, ಅಶ್ವತರೀ-ಹೇಸರಗತ್ತೆ, ಅನಃ-ಬಂಡಿ, ಕರೇಣುಭಿಃ-ಹೆಣ್ಣಾನೆಗಳೊಡನೆಯೂ, ಕಟ..ಉಪಸ್ಕರಾಃ-ಕಟ-ಚಾಪೆ, ಕುಟಿ-ಗುಡಾರ, ಕಂಬಳ-ಕಂಬಳಿ, ಅಂಬರ-ಅರಿವೆ, ಆದಿ-ಮೊದಲಾದ, ಉಪಸ್ಕರಾಃ-ಸಾಮಗ್ರಿಗಳುಳ್ಳವರೂ, ಸ್ವಲಂಕೃತಾಃ-ಚನ್ನಾಗಿ ಸಿಂಗರಿಸಲ್ಪಟ್ಟವರೂ, ಆಗಿ, ಸರ್ವಶಃ-ಎಲ್ಲಾ ಬಗೆಯಿಂದಲೂ, ಅಧಿಯುಜ್ಯ-ಚನ್ನಾಗಿ ಕಟ್ಟಿಕೊಂಡು, ಯಯುಃ-ತೆರಳಿದರು ||೧೬|| ಬೃಹತ್-ಮರ್ತ್ಯೈಃ-ಬೃಹತ್-ದೊಡ್ಡ, ಧ್ವಜಪಟ-ಪಳವಿಗೆಯು ಪಾವುಡೆ, ಛತ್ರ-ಸತ್ತಿಗೆ, ಚಾಮರೈಃ-ಚೌರಿಗಳಿಂದಲೂ, ವರಾಯುಧಾಭರಣಕಿರೀಟವರ್ಮಭಿಃ-ಶ್ರೇಷ್ಠವಾದ ಕೈದುಗಳೂ, ಅಲಂಕಾರಗಳೂ ಕಿರೀಟಗಳೂ ಕವಚಗಳೂ ಉಳ್ಳವರಿಂದಲೂ, ತುಮುಲರವಂ-ಸಂದಣಿಯಾದ ಗೌಜುಳ್ಳ, ಬಲಂ-ದಂಡು, ರವೇಃ-ಸೂರ್ಯನ, ಅಂಶುಭಿಃ-ಕಿರಣಗಳಿಂದ, ದಿವಾ-ಹಗಲೂ, ಕ್ಷುಭಿತತಿಮಿಂಗಿಲೋರ್ಮಿಭಿಃ-ತೊಂದರೆಗೊಳಿಸಲ್ಪಟ್ಟ ಹೆಮೀನುಗಳುಳ್ಳ, ಅಲೆಗಳಿಂದ, ಅರ್ಣವಃ-ಕಡಲೂ, ಯಥಾ-ಹೇಗೋ, ತಥಾ-ಹಾಗೆ, ಬಭೌ-ಪ್ರಕಾಶಿಸಿತು ||೧೭|| ಅಥೋ-ಆ ಮೇಲೆ, ಮುನಿಃ-ನಾರದನು, ಯದುಪತಿನಾ-ಕೃಷ್ಣನಿಂದ, ಸಭಾಜಿತಃ-ಸತ್ಕರಿಸಲ್ಪಟ್ಟವನಾಗಿ, ತಂ-ಆ ಕೃಷ್ಣನನ್ನು, ಪ್ರಣಮ್ಯ-ನಮಸ್ಕರಿಸಿ, ಹೃದಿ-ತನ್ನ ಮನಸ್ಸಿನಲ್ಲಿ, ವಿದಧತ್-ಧ್ಯೇಯ ಮೂರ್ತಿಯನ್ನಾಗಿರಿಸಿಕೊಂಡು, ಆಹೃತಾರ್ಹಣಃ-ಅಂಗೀಕರಿಸಲ್ಪಟ್ಟ ಸಮ್ಮಾನವುಳ್ಳವನಾಗಿಯೂ, ತದ್ವ್ಯವಸಿತಂ-ಆ ಕೃಷ್ಣನ ಉದ್ಯೋಗವನ್ನು, ನಿಶಾಮ್ಯ-ನೋಡಿ, ಮುಕುಂದಸಂದರ್ಶನನಿರ್ವೃತೇಂದ್ರಿಯಃ-ಕೃಷ್ಣನಂ ಕಂಡುದರಿಂದ ನಿರ್ವ್ಯಾಪಾರವಾಗಿ ಸುಖಿಸುವ ಇಂದ್ರಿಯಂಗಳುಳ್ಳವನಾಗಿ, ವಿಹಾಯಸಾ-ಆಕಾಶಮಾರ್ಗದಿಂದ ತೆರಳಿದನು ||೧೮|| ಭಗವಾನ್-ಕೃಷ್ಣನು, ರಾಜದೂತಂ-ಅರಸುಗಳ ದೂತನಂ ಕುರಿ

---

ರಾಗಿ ಉತ್ತಮವಸ್ತ್ರಾಭರಣಾನುಲೇಪನಾದಿ ಅಲಂಕಾರವುಳ್ಳವರಾಗಿ ಖಡ್ಗಖೇಟಕಂಗಳಂ ಧರಿಸಿದ ವೀರರಿಂ ಪರಿವೃತೆಯರಾಗಿ ಅಂದಳ ಕುದುರೆ ಮುಂತಾದ ಯಾನಂಗಳಿಂ ಪತಿಯಾದ ಕೃಷ್ಣನ ಹಿಂಗಡೆಯಲ್ಲಿ ತೆರಳಿದರು ||೧೫|| ಮತ್ತು ದಾಸಿಯರು ವೇಶ್ಯೆಯರು ಭೃತ್ಯರು ಅಲಂಕಾರಯುಕ್ತರಾಗಿ ಚಾಪೆ ಮೊದಲಾದ ತೃಣಗಳಿಂದ ರಚಿಸಲ್ಪಟ್ಟ ವಸ್ತುಗಳು, ವಸ್ತ್ರಕಂಬಳಾದಿಗಳಿಂ ರಚಿಸಲ್ಪಟ್ಟ ಸರವತ್ತಿಗೆಗಳು ಮಿಕ್ಕ ಸಾಮಾನುಗಳು ಸಹ ಉಳ್ಳವರಾಗಿ ಆ ಸಾಮಗ್ರಿಗಳಂ ಎತ್ತು ಮೊದಲಾದ ಪಶುಗಳಲ್ಲಿ ದೃಢವಾಗಿ ಕಟ್ಟಿಸಿಕೊಂಡು ನರಯಾನಂಗಳಿಂದಲೂ ಒಂಟೆಗಳಿಂದಲೂ ವೃಷಮಹಿಷಂಗಳಿಂದಲೂ ಹೇಸರಕತ್ತೆಗಳಿಂದಲೂ ಬಂಡಿಗಳಿಂದಲೂ ಹೆಣ್ಣಾನೆಗಳಿಂದಲೂ ತೆರಳಿದರು ||೧೬|| ದಿಕ್ಕುಗಳಲ್ಲಿ ಸರ್ವತ್ರವ್ಯಾಪಕವಾದ ಧ್ವನಿಯುಳ್ಳದ್ದಾಗಿ ಮಹತ್ತಾದ ಶ್ರೀಕೃಷ್ಣನ ಸೇನೆಯು ಎಂತು ಸಮುದ್ರಂಗಳು ವ್ಯಾಕುಲಂಗಳಾದ ಮಹಾಮತ್ಸ್ಯಂಗಳಿಂದಲೂ ತರಂಗಂಗಳಿಂದಲೂ ಪ್ರಕಾಶಿಸುವುವೋ ಆರೀತಿಯಾಗಿ ಧ್ವಜಪತಾಕ ಛತ್ರಚಾಮರಂಗಳಿಂದಲೂ ಉತ್ತಮವಾದ ಆಯುಧಾಭರಣಕಿರೀಟಕವಚಂಗಳಿಂದಲೂ ಹಗಲಿನಲ್ಲಿಯೂ ಸೂರ್ಯಕಿರಣಂಗಳಿಂದ ಪ್ರಕಾಶಿಸಿದವಾದವು ||೧೭|| ಅನಂತರದಲ್ಲಿ ನಾರದಮುನಿಯು ಶ್ರೀಕೃಷ್ಣನಿಂ ಪೂಜಿಸಲ್ಪಟ್ಟವನಾಗಿ ಶ್ರೀಕೃಷ್ಣನಂ ಹೃದಯದಲ್ಲಿ ಭಾವಿಸುತ್ತ ನಮಸ್ಕರಿಸಿ ಆ ಶ್ರೀಕೃಷ್ಣನಿಂದ ನಿಶ್ಚಯಿಸಲ್ಪಟ್ಟರ್ಥಪಂಕ್ತಿಯಲಿ, ಶ್ರೀಕೃಷ್ಣನದರ್ಶನದಿಂ ಸಂತೋಷಪಟ್ಟು ಸುಖಯುಕ್ತಂಗಳಾದ ಇಂದ್ರಿಯಂಗಳುಳ್ಳವನಾಗಿ ಆಕಾಶಮಾರ್ಗದಿಂದ ತೆರಳಿದನು ||೧೮|| ಆ ಸಮಯದಲ್ಲಿ ಶ್ರೀಕೃಷ್ಣನು ರಾಜದೂತನಂ

ರಾಜದೂತಮುವಾಚೇದಂಭಗವಾನ್ ಪ್ರೀಣಯನ್ಗಿರಾ । ಮಾಭೈಷ್ಟ ದೂತಭದ್ರಂವೋಘಾತಯಿಷ್ಯಾಮಿಮಾಗಧಮ್ ॥೧೯॥ ಇತ್ಯುಕ್ತಃಪ್ರಸ್ಥಿತೋದೂತೋಯಥಾವದವದನ್ನೃಪಾನ್ । ತೇಽಪಿಸಂದರ್ಶನಂಶೌರೇಃಪ್ರತ್ಯೈಕ್ಷನ್ಯನ್ಮುಮುಕ್ಷವಃ॥೨೦॥ಆನರ್ತಸೌವೀರಕುರೂಂಸ್ತೀರ್ತ್ವಾವಿನಶನಂಹರಿಃ। ಗಿರೀನ್ನದೀರತೀಯಾಯಪುರಗ್ರಾಮವ್ರಜಾಕರಾನ್॥೨೧॥ತತೋದೃಷದ್ವತೀಂತೀರ್ತ್ವಾಮುಕುಂದೋಽಥಸರಸ್ವತೀಮ್ । ಪಾಂಚಾಲಾನಥಮತ್ಸ್ಯಾಂಶ್ಚಶಕ್ರಪ್ರಸ್ಥಮುಪಾಗಮತ್ ॥೨೨॥ ತಮುಪಾಗತಮಾಕರ್ಣ್ಯ ಪ್ರೀತೋದುರ್ದರ್ಶನಂನೃಣಾಮ್ । ಅಜಾತಶತ್ರುರ್ನಿರಗಾತ್ಸೋಪಾಧ್ಯಾಯಸ್ಸುಹೃದ್ವೃತಃ ॥೨೩॥ಗೀ

---

ತ್ರು, ಗಿರಾ-ಮಾತಿನಿಂದ, ಪ್ರೀಣಯನ್-ಪ್ರೀತಿಯನ್ನುಂಟುಮಾಡುವನಾಗಿ, ಇದಂ-ಈ ಮುಂದೆಹೇಳುವಮಾತನ್ನು, ಉವಾಚ-ನುಡಿದನು, ದೂತ-ಸಮಾಚಾರವಂತಂದವನೇ ! ವಃ-ನಿಮಗೆ, ಭದ್ರಂ-ಶುಭವಾಗುವದು, ಮಾಗಧಂ-ಜರಾಸಂಧನನ್ನು, ಘಾತಯಿಷ್ಯಾಮಿ-ಕೊಲ್ಲಿಸುವೆನು, ಮಾಭೈಷ್ಟ-ಹೆದರಬೇಡಿರಿ ॥೧೯॥ ಇತ್ಯುಕ್ತಃ-ಹೀಗೆಹೇಳಲ್ಪಟ್ಟ, ದೂತಃ- ಸಂದೇಶಹಾರಿಯಾದ ಆಳು, ಪ್ರಸ್ಥಿತಃ-ತೆರಳಿದವನಾಗಿ, ನೃಪಾನ್-ಅರಸುಗಳಂಕುರಿತು, ಯಥಾವತ್-ಹೇಗೆಕೃಷ್ಣನುಹೇಳಿದನೋ ಹಾಗೆ, ಹೇಗೆನಡೆಯಿತೋಹಾಗೆ, ಅವದತ್-ಹೇಳಿದನು, ಮುಮುಕ್ಷವಃ-ಸಂಸಾರಮೋಕ್ಷವಂ ಬಯಸುವವರು, ಯತ್-ಯಾವುದರನ್ನು ಬಯಸುವರೋ, ತತ್-ಅಂಥಾ, ಶೌರೇಸ್ಸಂದರ್ಶನಂ-ಕೃಷ್ಣನಸಾಕ್ಷಾತ್ಕಾರವನ್ನು, ತೇಽಪಿ-ಆಜರಾಸಂಧನಸೆರೆಯಲ್ಲಿರುವವರು ಕೂಡ, ಪ್ರತ್ಯೈಕ್ಷನ್-ಮುಮುಕ್ಷುಗಳಾಗಿ ಇದಿರುನೋಡುತ್ತಿದ್ದರು ॥೨೦॥ ಹರಿಃ-ಕೃಷ್ಣನು, ಆನರ್ತಸೌವೀರಕುರೂನ್-ಆನರ್ತಸೌವೀರಕುರುದೇಶಗಳನ್ನೂ, ವಿನಶನಂ-ಕುರುಕ್ಷೇತ್ರವನ್ನು,ತೀರ್ತ್ವಾ-ದಾಟಿ, ಗಿರೀನ್-ರೈವತಕಾದಿ ಪರ್ವತಗಳನ್ನೂ, ನದೀಃ-ಯಮುನಾಗಂಗಾದಿನದಿಗಳನ್ನೂ, ಪುರಗ್ರಾಮವ್ರಜಾಕರಾನ್-ಪಟ್ಟಣಗಳನ್ನೂ ಹಳ್ಳಿಗಳನ್ನೂ ಗೊಲ್ಲರದೊಡ್ಡಿಗಳನ್ನೂ, ಕಣಿಗಳು ಮೊದಲಾದಸ್ಥಳಗಳನ್ನೂ, ಅತೀಯಾಯ-ಅತಿಕ್ರಮಿಸಿಹೋದನು॥೨೧॥ಮುಕುಂದಃ-ಕೃಷ್ಣನು, ತತಃ-ಆ ಮೇಲೆ, ದೃಷದ್ವತೀಂ-ದೃಷದ್ವತೀನದಿಯನ್ನು, ತೀರ್ತ್ವಾ-ದಾಟಿ, ಅಥ-ಆ ಮೇಲೆ, ಸರಸ್ವತೀಂ-ಸರಸ್ವತೀನದಿಯನ್ನೂ, ಪಾಂಚಾಲಾನ್-ಪಾಂಚಾಲದೇಶಗಳನ್ನೂ, ಅಥ-ಆ ಮೇಲೆ, ಮತ್ಸ್ಯಾಂಶ್ಚ-ಮತ್ಸ್ಯದೇಶಗಳನ್ನೂ ದಾಂಟಿ, ಶಕ್ರಪ್ರಸ್ಥಂ-ಇಂದ್ರಪ್ರಸ್ಥನಗರವನ್ನು, ಉಪಾಗಮತ್-ಬಳಿಸೇರಿಬಂದನು॥೨೨॥ಅಜಾತಶತ್ರುಃ-ಧರ್ಮರಾಯನು, ನೃಣಾಂ-ಮನುಷ್ಯರಿಗೆ, ದುರ್ದರ್ಶನಂ-ಕಷ್ಟಸಾಧ್ಯವಾದ ಸಾಕ್ಷಾತ್ಕಾರವುಳ್ಳ, ತಂ-ಆ ಶ್ರೀಕೃಷ್ಣನನ್ನು, ಉಪಾಗತಂ-ಹತ್ತಿರಕ್ಕೆ ಬಂದವನನ್ನಾಗಿ, ಆಕರ್ಣ್ಯ-ಕೇಳಿ, ಪ್ರೀತಿಯುಂಟಾದವನಾಗಿ, ಸೋಪಾಧ್ಯಾಯಃ-ಪುರೋಹಿತನಿಂದ ಸಹಿತನಾಗಿಯೂ, ಸುಹೃದ್ವೃತಃ-ಸಹೃದಯರಿಂದ ಬಳಸಲ್ಪಟ್ಟವನಾಗಿಯೂ, ನಿರಗಾತ್-ಹೊರಹೊರಟನು ॥೨೩॥ ಸಃ-ಆ ಧರ್ಮರಾಯನು, ಗೀತವಾದಿತ್ರಘೋಷೇಣ-ಸಂಗೀತವಾದ್ಯಗಳ ಶಬ್ದದಿಂದ

---

ಕುರಿತು ಮಧುರವಚನಂಗಳಿಂದ ಸಂತೋಷಪಡಿಸುತ್ತ, ಎಲೈದೂತನೇ! ನಿಮಗೆಕ್ಷೇಮವುಂಟಾಗಲಿ, ನಾನಾ ಜರಾಸಂಧನಂ ಸಂಹರಿಸುತ್ತೇನೆಂದು ಈವಚನವಂನುಡಿದನು ॥೧೯॥ ಆರಾಜದೂತನು ಶ್ರೀಕೃಷ್ಣನಿಂದ ಈರೀತಿಯಾಗಿ ನಿರೂಪಿಸಲ್ಪಟ್ಟವನಾಗಿ ಆಯರಸುಗಳಿಗೆ ಶ್ರೀಕೃಷ್ಣನಿಂದ ನಿರೂಪಿಸಲ್ಪಟ್ಟ ಅರ್ಥವಂ ವಿಸ್ತರಿಸಿ ತಿಳಿಸಿದನು. ಆಯರಸುಗಳು ದೂತನವಚನವಂಕೇಳಿ ಸಂತೋಷಪಟ್ಟು ತಮಗೆ ವಿಮೋಚನವಂ ಅಪೇಕ್ಷಿಸುತ್ತ ಆಶ್ರೀಕೃಷ್ಣನ ಆಗಮನವಂ ನಿರೀಕ್ಷಿಸಿದರು॥೨೦॥ ಅನಂತರದಲ್ಲಿ ಶ್ರೀಕೃಷ್ಣನು ಆನರ್ತ ಸೌವೀರದೇಶಂಗಳಂ ಪರ್ವತಂಗಳಂ ನದಿಗಳಂ ಪಟ್ಟಣಂಗಳಂ ಪ್ರಸಿದ್ಧಗ್ರಾಮಂಗಳಂ ಹಳ್ಳಿಗಳಂ ಸುವರ್ಣಾದ್ಯುತ್ಪತ್ತಿ ಸ್ಥಾನಂಗಳಂ ಸಹ ದಾಂಟಿ ಕುರುಕ್ಷೇತ್ರವನ್ನತಿಕ್ರಮಿಸಿ ಮುಂದಕ್ಕೆ ತೆರಳಿದನು ॥೨೧॥ ಅನಂತರದಲ್ಲಿ ಶ್ರೀಕೃಷ್ಣನು ದೃಷದ್ವತಿಯೆಂಬ ನದಿಯಂ ಸರಸ್ವತಿಯೆಂಬನದಿಯಂ ಪಾಂಚಾಲದೇಶಂಗಳಂ ಮತ್ಸ್ಯದೇಶಂಗಳಂಸಹದಾಂಟಿ ಇಂದ್ರಪ್ರಸ್ಥವೆಂಬ ಪಟ್ಟಣವನೆಯ್ದಿದನು ॥೨೨॥ ಆಬಳಿಕ ಧರ್ಮರಾಯನು ಮನುಷ್ಯರಿಂ ನೋಡಲಶಕ್ಯವಾದ ಶ್ರೀಕೃಷ್ಣನು ತಮ್ಮಪಟ್ಟಣಕ್ಕೆ ಬಂದನೆಂಬ ಸುದ್ದಿಯಂಕೇಳಿ ಸಂತಸಗೊಂಡು ಪುರೋಹಿತರೊಡನೆ ಮಿತ್ರರೊಡನೆಯೂ ಕೂಡಿದವನಾಗಿ ಪಟ್ಟಣದಿಂ ಹೊರಟನು ॥೨೩॥ಗೀತವಾದ್ಯಘೋಷದಿಂದ ಅತ್ಯಂತವಾದ ವೇದಘೋಷ

ತವಾದಿತ್ರಘೋಷೇಣಬ್ರಹ್ಮಘೋಷೇಣಭೂಯಸಾ। ಅಭ್ಯಯಾತ್ಸಹೃಷೀಕೇಶಂಪ್ರಾಣಾಃಪ್ರಾಣಮಿವಾ
ಗತಮ್॥೨೪॥ದೃಷ್ಟ್ವಾವಿಕ್ಲಿನ್ನಹೃದಯಃಕೃಷ್ಣಂಸ್ನೇಹೇನಪಾಂಡವಃ।ಚಿರಾದ್ದೃಷ್ಟಂಪ್ರಿಯತಮಂಸಸ
ಸ್ವಜೇಸ್ಮಪುನಃಪುನಃ॥೨೫॥ದೋರ್ಭ್ಯಾಂಪರಿಷ್ವಜ್ಯರಮಾಮಲಾಲಯಂಮುಕುಂದಗಾತ್ರಂನೃಪತಿರ್ಹ
ತಾಶುಭಃ । ಲೇಭೇಪರಾಂನಿರ್ವೃತಿಮಶ್ರುಲೋಚನೋಹೃಷ್ಯತ್ತನುರ್ವಿಸ್ಮೃತಲೋಕವಿಭ್ರಮಃ ॥೨೬॥ತಂ
ಮಾತುಲೇಯಂಪರಿರಭ್ಯನಿರ್ವೃತೋಭೀಮಸ್ಸ್ಮಯನ್ಪ್ರೇಮಜಲಾಕುಲೇಂದ್ರಿಯಃ।ಯಮೌಕಿರೀಟೀಚ
ಸುಹೃತ್ತಮಂಮುದಾಪ್ರವೃದ್ಧಬಾಷ್ಪಾಃಪರಿರೇಭಿರೇಚ್ಯುತಮ್ ॥ಯುಧಿಷ್ಠಿರಸ್ಯಭೀಮಸ್ಯಕೃತ್ವಾಪಾ
ದಾಭಿವಂದನಮ್।ಅರ್ಜುನೇನಪರಿಷ್ವಕ್ತೋಯಮಾಭ್ಯಾಮಭಿವಂದಿತಃ॥೨೮॥ಬ್ರಾಹ್ಮಣೇಭ್ಯೋನಮಸ್ಕೃ

---

ಲೂ, ಭೂಯಸಾ-ಅಧಿಕವಾದ, ಬ್ರಹ್ಮಘೋಷೇಣ-ವೇದಧ್ವನಿಯೊಡನೆಯೂ, ಆಗತಂ-ಬಂದ,ಹೃಷೀಕೇಶಂ-ಇಂದ್ರಿಯಗಳಿಗೊಡೆಯನಾದ ಕೃಷ್ಣನನ್ನು, ಪ್ರಾಣಾಃಪ್ರಾಣಮಿವ-ಇಂದ್ರಿಯಂಗಳು ಮುಖ್ಯಪ್ರಾಣವನ್ನು ಹೇಗೋ ಹಾಗೆ, ಅಭ್ಯಯಾತ್- ಇದಿರುಗೊಂಡನು ॥೨೪॥ ಪಾಂಡವಃ-ಧರ್ಮರಾಯನು, ಕೃಷ್ಣಂ- ಶ್ರೀಹರಿಯನ್ನು, ದೃಷ್ಟ್ವಾ-ನೋಡಿ,ಸ್ನೇಹೇನ-ಅನುರಾಗದಿಂದ, ವಿಕ್ಲಿನ್ನಹೃದಯಃ-ಆರ್ದ್ರವಾದ ಅಂತಃಕರಣವುಳ್ಳವನಾಗಿ, ಚಿರಾತ್-ಬಹುಕಾಲಕ್ಕೆ, ದೃಷ್ಟಂ- ನೋಡಲ್ಪಟ್ಟವನಾದ, ಪ್ರಿಯತಮಂ-ಅತ್ಯಂತಪ್ರಿಯನಾದ ಕೃಷ್ಣನನ್ನು, ಪುನಃ-ಮರಳಿಮರಳಿಯೂ, ಸಸ್ವಜೇಸ್ಮ-ಅಪ್ಪಿಕೊಂಡನಲ್ಲವೆ ॥೨೫॥ ನೃಪತಿಃ-ಧರ್ಮರಾಯನು, ರಮಾಮಲಾಲಯಂ-ಲಕ್ಷ್ಮಿಗೆನಿರ್ಮಲವಾದ ಮನೆಯಾಗಿರುವ, ಮುಕುಂದಗಾತ್ರಂ- ಕೃಷ್ಣಮೂರ್ತಿಯನ್ನು, ದೋರ್ಭ್ಯಾಂ-ತನ್ನ ತೋಳುಗಳಿಂದ,ಪರಿಷ್ವಜ್ಯ-ಅಪ್ಪಿಕೊಂಡು, ಹತಾಶುಭಃ-ಧ್ವಸ್ತಪಾಪನಾದ್ದರಿಂದ,ಅಶ್ರುಲೋಚನಃ-ಆನಂದಬಾಷ್ಪಂಗಳು ಕಂಗಳಲ್ಲಿ ಉಳ್ಳವನೂ, ಹೃಷ್ಯತ್ತನುಃ-ಉಬ್ಬಿದಮೈಯುಳ್ಳವನೂ, ವಿಸ್ಮೃತಲೋಕವಿಭ್ರಮಃ- ಮರೆಯಲ್ಪಟ್ಟ ಲೋಕಭ್ರಾಂತಿಯುಳ್ಳವನೂ, ಆಗಿ,ಪರಾಂನಿರ್ವೃತಿಂ-ಉತ್ಕೃಷ್ಟವಾದ ಸುಖವನ್ನು, ಲೇಭೇ-ಪಡೆದನು।೨೬॥ಭೀಮಃ-ಭೀಮಸೇನನು, ಮಾತುಲೇಯಂ-ಸೋದರಮಾವನ ಮಗನಾದ, ತಂ-ಆ ಕೃಷ್ಣನನ್ನು, ಪರಿರಭ್ಯ-ಆಲಿಂಗಿಸಿಕೊಂಡು, ನಿರ್ವೃತಃ-ಸುಖಿತನಾಗಿ,ಸ್ಮಯನ್-ಆಶ್ಚರ್ಯಗೊಳ್ಳುವನಾಗುತ್ತ,ಪ್ರೇಮಜಲಾಕುಲೇಂದ್ರಿಯಃ-ಆನಂದಬಾಷ್ಪಗಳಿಂದವ್ಯಾಪ್ತವಾದಕಂಗಳುಳ್ಳವನಾದನು, ಯಮೌ-ನಕುಲ ಸಹದೇವರೂ, ಕಿರೀಟೀಚ-ಅರ್ಜುನನೂ, ಸುಹೃತ್ತಮಂ-ಅತ್ಯಂತಮಿತ್ರನಾದ, ಅಚ್ಯುತಂ-ಕೃಷ್ಣನನ್ನು, ಮುದಾ-ಸಂತೋಷದಿಂದ, ಪ್ರವೃದ್ಧಬಾಷ್ಪಾಃ-ಹೆಚ್ಚಿದಕಣ್ಣೀರುಳ್ಳವರಾಗಿ,ಪರಿರೇಭಿರೇ-ಅಪ್ಪಿಕೊಂಡರು॥ ಯುಧಿಷ್ಠಿರಸ್ಯ-ಧರ್ಮಜನಿಗೂ, ಭೀಮಸ್ಯ-ಭೀಮನಿಗೂ, ಪಾದಾಭಿವಂದನಂ-ಕಾಲುಗಳಿಗೆ ನಮಸ್ಕಾರವನ್ನು,ಕೃತ್ವಾ-ಮಾಡಿ,ಅರ್ಜುನೇನ-ಕಿರೀಟಿಯಿಂದ, ಪರಿಷ್ವಕ್ತಃ-ಅಪ್ಪಿಕೊಳ್ಳಲ್ಪಟ್ಟವನಾಗಿ, ಯಮಾಭ್ಯಾಂ-ನಕುಲ ಸಹದೇವರಿಂದ,ಅಭಿವಂದಿತಃ-ನಮಸ್ಕರಿಸಲ್ಪಟ್ಟವನಾದನು ॥೨೮॥ಬ್ರಾಹ್ಮಣೇಭ್ಯಃ-ವಿಪ್ರರಿಗೂ, ವೃದ್ಧೇಭ್ಯಶ್ಚ-ಹಿರಿಯರಿಗೂ, ಯಥಾರ್ಹತಃ-ತಕ್ಕಂತೆ,ನಮಸ್ಕೃ

---

ದಿಂದಲೂ ಮುಖ್ಯವಾದ ಪ್ರಾಣವಂ ಇಂದ್ರಿಯಗಳಂತೆ ಶ್ರೀಕೃಷ್ಣನಂ ಆದರಣದಿಂ ದಿದಿರ್ಗೊಂಡರು ॥೨೪॥ ಆಮೇಲೆ ಧರ್ಮರಾಯನು ಬಹುಕಾಲಕ್ಕಾಗಿ ದೃಷ್ಟಿವಿಷಯನಾಗಿರುವ ಅತ್ಯಂತಪ್ರಿಯನಾದ ಶ್ರೀಕೃಷ್ಣನಂ ಕಂಡು ಸ್ನೇಹದಿಂದ ದ್ರವಿಸಿದ ಹೃದಯವುಳ್ಳವನಾಗಿ ಬಾರಿಬಾರಿಗೂ ಆಲಿಂಗನಂ ಗೆಯ್ದನು ॥೨೫॥ ಮತ್ತು ಧರ್ಮರಾಯನು ಲಕ್ಷ್ಮಿಗೆ ಉತ್ತಮ ಗೃಹಸ್ವರೂಪವಾದ ಶ್ರೀಕೃಷ್ಣನ ಶರೀರವಂ ಭುಜಂಗಳಿಂದ ಆಲಿಂಗನಂಗೆಯ್ದು ಪಾಪರಹಿತನಾಗಿ ಆನಂದ ಬಾಷ್ಪಗಳ ನೇತ್ರಂಗಳವುಳ್ಳವನಾಗಿ ರೋಮಾಂಚಯುಕ್ತನಾಗಿ ಲೋಕವ್ಯಾಪಾರವಂ ಮರೆತನು ॥೨೬॥ ಅನಂತರದಲ್ಲಿ ಭೀಮನು ಸೋದರಮಾವನಮಗನಾದ ಶ್ರೀಕೃಷ್ಣನಂ ತಾನು ಪ್ರೇಮದಿಂ ವ್ಯಾಕುಲಂಗಳಾದ ಇಂದ್ರಿಯಂಗಳುಳ್ಳವನಾಗಿ ಆಲಿಂಗನಂಗೆಯ್ದು ಆನಂದವಂ ಪಡೆದನು. ಅರ್ಜುನನೂಕೂಡ ಅತಿಮಿತ್ರನಾದ ಶ್ರೀಕೃಷ್ಣನಂ ಸಂತೋಷಪಡಿಂದೆಯ್ದಿದನು. ಈರೀತಿಯಲ್ಲಿ ಎಲ್ಲರೂ ಆನಂದಬಾಷ್ಪಂಗಳಿಂ ಪೂರ್ಣಂಗಳಾದ ನೇತ್ರಂಗಳುಳ್ಳವರಾಗಿ ಶ್ರೀಕೃಷ್ಣನಂ ಆಲಿಂಗನವಂಗೆಯ್ದರು ॥೨೭॥ ಆಶ್ರೀಕೃಷ್ಣನು ಅರ್ಜುನನಿಂದ ಅಪ್ಪಿಕೊಳ್ಳಲ್ಪಟ್ಟವನಾಗಿ ನಕುಲಸಹದೇವರಿಂದ ಅಭಿವಾದನಂ ಗೆಯ್ಯಲ್ಪಟ್ಟವನಾಗಿ ತಾನು ಭೀಮನಿಗೂ ಧರ್ಮರಾಯನಿಗೂ ನಮಸ್ಕಾರಂ ಮಾಡಿದನು ॥೨೮॥ ಬ್ರಾಹ್ಮಣರಿಗೂ ವೃದ್ಧರಿಗೂ ಯಥೋಚಿತವಾಗಿ ನಮಸ್ಕರಿ

... ಮಾನಿತೋಪಮಾನಯಾಮಾಸಕುರುಸೃಂಜಯಕೇಕಯಾನ್ ‖೨೯‖ಸೂತಮಾಗಧ... ಸ್ತೂಯಮಾನೋಪಮಂತ್ರಿಣಃ‖ ಮೃದಂಗಶಂಖಪಟಹವೀಣಾಪಣವವೇಣುಭಿಃ | ಬ್ರಾಹ್ಮಣಾಶ್ಚಾರವಿಂದಾಕ್ಷಂತುಷ್ಟುವುರ್ನನೃತುರ್ಜಗುಃ ‖೩೦‖ ಏವಂಸುಹೃದ್ಭಿಃಪರ್ಯಸ್ತಃಪುಣ್ಯಶ್ಲೋಕ ಶಿಖಾಮಣಿಃ | ಸಂಸ್ತೂಯಮಾನೋಭಗವಾನ್ವಿವೇಶಾಲಂಕೃತಂಪುರಮ್ ‖೩೧‖ ಸಂಸಿಕ್ತವರ್ತ್ಮಕರಿಣಾಂಮದಗಂಧತೋಯೈಶ್ಚಿತ್ರಧ್ವಜೈಃಕನಕತೋರಣಪೂರ್ಣಕುಂಭೈಃ | ಮೃಷ್ಟಾತ್ಮಭಿರ್ನವದುಕೂಲ ವಿಭೂಷಣಸ್ರಗ್ಗಂಧೈರ್ನೃಭಿರ್ಯುವತಿಭಿಶ್ಚವಿರಾಜಮಾನಮ್‖೩೨‖ ಉದ್ದೀಪ್ತಪಬಲಿಭಿಃಪ್ರತಿಸದ್ಮಜಾಲನಿರ್ಯಾತಧೂಪರುಚಿರಂವಿಲಸತ್ಪತಾಕಮ್ |ಮೂರ್ಧನ್ಯಹೇಮಕಲಶೈರಜತೋರುಶೃಂಗೈರ್ಜುಷ್ಟಂದದ

---

ತ್ಮ-ಪೂರವಟುಟ್ಟು, ಮಾನಿತಃ-ಸನ್ಮಾನಿಸಲ್ಪಟ್ಟವನಾಗಿ, ಕುರುಸೃಂಜಯಕೇಕಯಾನ್-ಕೌರವರನ್ನೂ ಸೃಂಜಯರನ್ನೂ ಕೇಕಯರನ್ನೂ, ಮಾನಯಾಮಾಸ-ಸನ್ಮಾನಗೊಳಿಸಿದನು ‖೨೯‖ ಸೂತಮಾಗಧಗಂಧರ್ವಾಃ-ಸೂತಜಾತಿಯವರೂ, ಮಗಧದೇಶದವರೂ ಗಾಯಕರೂ, ವಂದಿನಶ್ಚ-ಸ್ತುತಿಪಾಠಕರೂ, ಉಪಮಂತ್ರಿಣಃ-ಸಚಿವರಸಚಿವರೂ, ಮೃದಂಗಶಂಖಪಟಹವೀಣಾಪಣವವೇಣುಭಿಃ-ಮದ್ದಳೆ, ಸಂಕು, ತಮಟೆ, ವೀಣೆ, ಡೋಲು, ಕೊಳಲುಗಳಿಂದಲೂ, ಬ್ರಾಹ್ಮಣಾಶ್ಚ-ಬ್ರಾಹ್ಮಣರೂ, ಅರವಿಂದಾಕ್ಷಂ-ಕಮಲಲೋಚನನಾದ ಕೃಷ್ಣನನ್ನು, ತುಷ್ಟುವುಃ-ಕೊಂಡಾಡಿದರು, ನನೃತುಃ-ಕುಣಿದರು, ಜಗುಃ-ಆಡಿದರು ‖೩೦‖ ಏವಂ-ಹೀಗೆ, ಸುಹೃದ್ಭಿಃ-ಮಿತ್ರರಿಂದ, ಪರ್ಯಸ್ತಃ-ಪರಿವೃತನೂ, ಪುಣ್ಯಶ್ಲೋಕಶಿಖಾಮಣಿಃ-ಪುಣ್ಯವಂತರೆಂದು ಶ್ಲಾಘಿಸಲ್ಪಟ್ಟವರಲ್ಲಿ ಶ್ರೇಷ್ಠನೂ, ಸ್ತೂಯಮಾನಃ-ಸ್ತೋತ್ರಮಾಡಲ್ಪಡುತಲಿರುವನೂಆದ, ಭಗವಾನ್-ಶ್ರೀಕೃಷ್ಣನು, ಅಲಂಕೃತಂ-ಸಿಂಗರಿಸಲ್ಪಟ್ಟ, ಪುರಂ-ಇಂದ್ರಪ್ರಸ್ಥ ನಗರವನ್ನು, ವಿವೇಶ-ಹೊಕ್ಕನು‖೩೧‖ ಕರಿಣಾಂ-ಆನೆಗಳ, ಮದಗಂಧತೋಯೈಃ-ಸೊಕ್ಕುಸೊಗಡಿನ ಬೆಮರುನೀರುಗಳಿಂದ, ಸಂಸಿಕ್ತವರ್ತ್ಮ-ಸಾರಿಸಲ್ಪಟ್ಟಮಾರ್ಗವುಳ್ಳದ್ದೂ, ಚಿತ್ರಧ್ವಜೈಃ-ಆಶ್ಚರ್ಯಕರವಾದ ಪಳವಿಗೆಗಳಿಂದಲೂ, ಕನಕತೋರಣಪೂರ್ಣಕುಂಭೈಃ-ಭಂಗಾರದ ಅಲಂಕಾರದ ಪಟ್ಟಿಕೆಗಳಿಂದಲೂ, ತುಂಬಿದಕೊಡಗಳಿಂದಲೂ, ನವದುಕೂಲ ವಿಭೂಷಣಸ್ರಗ್ಗಂಧೈಃ-ಹೊಸಬಟ್ಟೆಗಳಿಂದಲೂ ಆಭರಣಗಳೂ ಪುಷ್ಪಮಾಲೆಗಳೂ ಪರಿಮಳಂಗಳೂ ಉಳ್ಳ, ಮೃಷ್ಟಾತ್ಮಭಿಃ-ಸಂತುಷ್ಟಹೃದಯರಾದ, ನೃಭಿಃ-ಮನುಷ್ಯರಿಂದಲೂ, ಯುವತಿಭಿಶ್ಚ-ಪ್ರಾಯದಹೆಂಗಳಿಂದಲೂ, ವಿರಾಜಮಾನಂ-ವಿಶೇಷವಾಗಿ ಬೆಳಗುತ್ತಿರುವುದೂ ‖೩೨‖ ಉದ್ದೀಪ್ತದೀಪಬಲಿಭಿಃ-ಉರಿಯುತ್ತಿರುವ ದೀವಿಗೆಗಳಿಂದಲೂ, ಬಲಿದ್ರವ್ಯಗಳಿಂದಲೂ, ಕೂಡಿದ್ದು, ಪ್ರತಿಸದ್ಮಜಾಲನಿರ್ಯಾತಧೂಪರುಚಿತಂ-ಪ್ರತಿಗೃಹದ ಗವಾಕ್ಷಗಳಿಂದ ಹೊರಡುವಹೊಗೆಗಳಿಂದ ಮನೋಹರವಾದ್ದು, ವಿಲಸತ್ಪತಾಕಂ-ಶೋಭಿಸುವ ಮೇಲ್ಕಟ್ಟುಗಳುಳ್ಳದ್ದೂ, ಮೂರ್ಧನ್ಯಹೇಮಕಲಶೈಃ-ಮೇಲಿರುವ ಚಿನ್ನದಕಲಶಂಗಳುಳ್ಳ, ರ

---

ಸಿ ಅವರಿಂದ ಬಹುಮಾನಿತನಾಗಿ ಕೌರವಸೃಂಜಯ ಕೇಕಯದೇಶಾಧಿಪತಿಗಳಾದ ಅರಸರನ್ನು ಬಹುಮಾನಿಸಿದನು ‖೨೯‖ ಮತ್ತು ಸೂತಮಾಗಧಗಾಯಕರು ಸ್ತೋತ್ರಪಾಠಕರು ಪರಿಹಾಸಕರು ಸಹ ಮೃದಂಗ ಶಂಖ ಪಟಹ ವೀಣಾ ಪಣವ ವೇಣುವಾದ್ಯಂಗಳಿಂ ಕೃಷ್ಣನಂ ಸ್ತುತಿಸಿದರು, ನರ್ತನಂಗೆಯ್ದರು. ಗಾನಂಗೆಯ್ದರು. ಆಗಬ್ರಾಹ್ಮಣರೂಕೂಡ ಶ್ರೀಕೃಷ್ಣನಂ ಸ್ತುತಿಸಿದರು ‖೩೦‖ ಭಗವಂತನಾದ ಶ್ರೀಕೃಷ್ಣನು ಈರೀತಿಯಾಗಿ ಮಿತ್ರರಿಂ ಬಹುಮಾನಂಗೆಯ್ಯಲ್ಪಟ್ಟವನಾಗಿಸ್ತುತಿಸಲ್ಪಡುತಅಲಂಕರಿಸಲ್ಪಟ್ಟಇಂದ್ರಪ್ರಸ್ಥಪುರವಂ ಪ್ರವೇಶಿಸಿದನು‖೩೧‖ ಆಪುರವೆಂತಿಯದೆಂದೊಡೆ- ಆನೆಗಳ ಪರಿಮಳಿಸುವ ಮದೋದಕದಿಂ ತೋಯಿಸಲ್ಪಟ್ಟ ರಾಜಮಾರ್ಗವುಳ್ಳದ್ದು. ವಿಚಿತ್ರವಾದ ಧ್ವಜಂಗಳಿಂ ಸುವರ್ಣಮಯ ತೋರಣಂಗಳಿಂ ಪೂರ್ಣಕುಂಭಂಗಳಿಂ ಸ್ನಾನದಿಂ ನಿರ್ಮಲಗಳಾದ ಶರೀರಂಗಳುಳ್ಳ ನೂತನ ವಸ್ತ್ರಾಭರಣ ಗಂಧಮಾಲ್ಯಂಗಳುಳ್ಳ ಪುರುಷರಿಂ ಸ್ತ್ರೀಯರಿಂದಲೂ ಹೊಳೆಯುತ್ತಿರುವುದು ‖೩೨‖ ಪ್ರಕಾಶಯುಕ್ತಂಗಳಾದ ದೀಪಂಗಳಿಂ ಪುಷ್ಪಸಮೂಹಂಗಳಿಂದಲೂ ಮನೋಹರವಾಗಿ ಪ್ರತಿಗೃಹದಲ್ಲಿಯೂ ಗವಾಕ್ಷಗಳೆಡೆಯಿಂದ ಬರುತಲಿರುವ ಧೂಪಂಗಳಿಂದಲೂ ಮಣಿಮಯವಾಗಿ ಹೊಳೆಯುತಲಿರುವ ಪತಾಕವುಳ್ಳದ್ದಾಗಿ ಉಪರಿಭಾಗದಲ್ಲಿ ಪ್ರಕಾಶಿಸುವ ಸುವರ್ಣ ಶಿಖರಂಗಳುಳ್ಳ ರಜತಮಯಗಳಾದ ಸ್ಥೂಲಗಳಾದ

ರ್ಯಭವನೈಃಕುರುರಾಜಧಾಮ ||೩೩|| ಪ್ರಾಪ್ತಂನಿಶಮ್ಯನರಲೋಚನಪಾನಪಾತ್ರಮೌತ್ಸುಕ್ಯವಿಶ್ಲಥಿತ
ಕೇಶದುಕೂಲಬಂಧಾಃ । ಸದ್ಯೋವಿಸೃಜ್ಯಗೃಹಕರ್ಮಪತೀಂಶ್ಚತಲ್ಪೇದ್ರಷ್ಟುಂಯಯುರ್ಯುವತಯಃಸ್ಮನ
ರೇಂದ್ರಮಾರ್ಗೇ ||೩೪|| ತಸ್ಮಿನ್ಸುಸಂಕುಲಇಭಾಶ್ವರಥದ್ವಿಪದ್ಭಿಃಕೃಷ್ಣಂಸಭಾರ್ಯಮುಪಲಭ್ಯಗೃಹಾಧಿ
ರೂಢಾಃ ।ನಾರ್ಯೋವಿಕೀರ್ಯಕುಸುಮೈರ್ಮನಸೋಪಗೂಹ್ಯಸುಸ್ವಾಗತಂವಿದಧುರುತ್ಸ್ಮಯವೀಕ್ಷಿತೇನ||
ಊಚುಃಸ್ತ್ರಿಯಃಪಥಿನಿರೀಕ್ಷ್ಯಮುಕುಂದಪತ್ನೀಸ್ತಾರಾಯಥೋಡುಪಸಹಾಃಕಿಮಕಾರ್ಯಮೂಭಿಃ|
ಯಚ್ಚಕ್ಷುಷಾಂಪುರುಷಮೌಳಿರುದಾರಹಾಸಲೀಲಾವಲೋಕಕಲಯೋತ್ಸವಮಾತನೋತಿ||೩೬|| ತತ್ರತ

ಚತೋರುಶೃಂಗೈಃ-ಬೆಳ್ಳಿಯದೊಡ್ಡಶಿಖರಗಳುಳ್ಳ, ಭವನೈಃ-ಮನೆಗಳಿಂದ, ಜುಷ್ಟಂ-ಸೇವಿತವಾದ್ದಾದ, ಕುರುರಾಜಧಾಮ-ಕೌರವ ರಾಜಧಾನಿಯನ್ನು, ದದರ್ಶ-ಕಂಡನು||೩೩|| ನರಲೋಚನಪಾನಪಾತ್ರಂ-ಮನುಷ್ಯರಕಂಗಳಿಗೆ ಸೌಂದರ್ಯರಸವಂ ಕುಡಿಯಲಿಕ್ಕೆ ಪಾತ್ರವಾಗಿರುವ ಕೃಷ್ಣನನ್ನು, ಪ್ರಾಪ್ತಂ-ಬಂದವನನ್ನಾಗಿ ನಿಶಮ್ಯ-ಕೇಳಿ, ಔತ್ಸುಕ್ಯವಿಶ್ಲಥಿತಕೇಶದುಕೂಲಬಂಧಾಃ-ಅತ್ಯಾಸಕ್ತಿಯಿಂದ ಬಿಚ್ಚಿಹೋದ ಕೂದಲಗಂಟೂ ಸೀರೆಯಗಂಟೂ ಉಳ್ಳಂಥಾ, ಯುವತಯಶ್ಚ-ಪ್ರಾಯದಹೆಂಗಳೂ, ಸದ್ಯಃ-ಆಗಲೇ, ಗೃಹಕರ್ಮ-ಮನೆಯಕೆಲಸವನ್ನು, ವಿಸೃಜ್ಯ-ಬಿಟ್ಟು, ಪತೀಂಶ್ಚ-ಗಂಡಂದಿರನ್ನೂ, ತಲ್ಪೇ-ಹಾಸಿಗೆಯಲ್ಲಿಬಿಟ್ಟು,ದ್ರಷ್ಟುಂ-ಕೃಷ್ಣನಂನೋಡಲೋಸುಗ, ನರೇಂದ್ರಮಾರ್ಗೇ-ಅರಸುಬೀದಿಯಲ್ಲಿ, ಯಯುಃ-ಬಂದರು ||೩೪|| ಇಭಾಶ್ವರಥದ್ವಿಪದ್ಭಿಃ-ಆನೆಕುದುರೆತೇರು, ಆಳುಗಳಿಂದ, ಸುಸಂಕುಲೇ-ಸಮ್ಮರ್ದವಾಗಿರುವ, ತಸ್ಮಿನ್-ಆ ರಾಜಮಾರ್ಗದಲ್ಲಿ, ಸಭಾರ್ಯಂ-ಪತ್ನಿಯರಿಂಸಹಿತನಾದ, ಕೃಷ್ಣಂ-ಹರಿಯನ್ನು, ಉಪಲಭ್ಯ-ತಿಳಿದು ನಾರ್ಯಃ-ಹೆಂಗಳು, ಗೃಹಾದಿರೂಢಾಃ-ಮನೆಗಳನ್ನು ಏರಿದವರಾಗಿ, ಕುಸುಮೈಃ-ಪುಷ್ಪಗಳಿಂದ, ವಿಕೀರ್ಯ-ಚೆಲ್ಲಿ, ಮನಸಾ-ಹೃದಯದಿಂದ,ಉಪಗೂಹ್ಯ-ಮುಚ್ಚಿಕೊಂಡು, ಉತ್ಸ್ಮಯವೀಕ್ಷಣೇನ-ನಗೆನೋಟದಿಂದ, ಸುಸ್ವಾಗತಂ-ಸುಖಾಗಮನಪ್ರಶ್ನಾದಿಪ್ರಿಯವನ್ನು, ವಿದಧುಃ-ಮಾಡಿದರು ||೩೫|| ಸ್ತ್ರಿಯಃ-ಪುರದ ಹೆಂಗಳು,ಪಥಿ-ದಾರಿಯಲ್ಲಿ, ಉಡುಪಸಹಾಃ-ಚಂದ್ರಸಹಚರಿಯರಾದ,ತಾರಾಃಯಥಾ-ನಕ್ಷತ್ರಗಳು ಹೇಗೋಹಾಗಿರುವ, ಮುಕುಂದಪತ್ನೀಃ-ಕೃಷ್ಣನ ಹೆಂಡಿರನ್ನು, ನಿರೀಕ್ಷ್ಯ-ನೋಡಿ,ಊಚುಃ-ನುಡಿದರು, ಪುರುಷಮೌಳಿಃ-ಪುರುಷರಿಗೆ ಶಿರೋಭೂಷಣವಾದ ಕೃಷ್ಣನು, ಉದಾರಹಾಸಲೀಲಾವಲೋಕಕಲಯಾ-ಧಾರಾಳವಾದ ನಗೆಯವಿಲಾಸದ ಕಿರುನೋಟದಿಂದ,ಯಚ್ಚಕ್ಷುಷಾಂ-ಯಾವ ಹೆಂಗಳಕಂಗಳಿಗೆ, ಸುಖಂ-ಆನಂದವನ್ನು, ಆತನೋತಿ-ವಿಸ್ತಾರವಾಗಿ ಮಾಡುತ್ತಿರುವನೋ, ಅಮೂಭಿಃ-ಆಯಾ ಕೃಷ್ಣಪತ್ನಿಯರಿಂದ, ಕಿಂ-ಯಾವಪುಣ್ಯವು, ಅಕಾರಿ-ಮಾಡಲ್ಪಟ್ಟಿತು ||೩೬|| ಪೌರಾಃ-ಪುರವಾಸಿಗಳಾದ, ಶ್ರೇಣಿಮುಖ್ಯಾಃ-ಒಂದೊಂದು

ಆಶಿಖರಂಗಳ ಕೆಳಗಿನಭೂಮಿಯುಳ್ಳ ಅನೇಕಗೃಹಗಳಿಂದ ಆಶ್ರಯಿಸಲ್ಪಟ್ಟದ್ದಾಗಿರುವ ಇಂದ್ರಸ್ಥಪುರವಂಕಂಡನು ||೩೩|| ಅನಂತರದಲ್ಲಿ ಆಪುರಸ್ತ್ರೀಯರು ಪುರುಷರಿಂದಲೂ ಆದರಣೆಯೊಡಗೂಡಿದ ನೇತ್ರದಿಂ ನೋಡಲು ಯೋಗ್ಯನಾಗಿರುವ ಶ್ರೀಕೃಷ್ಣನು ಬಂದನೆಂಬ ವೃತ್ತಾಂತಮಂಕೇಳಿ ಉತ್ಕಂಠೆಯಿಂದ ಸಡಲಿದ ಕೇಶಬಂಧವೂ ಉಡಿಗಂಟೂ ಉಳ್ಳವರಾಗಿ ಆಕ್ಷಣದಲ್ಲಿಯೇ ಗೃಹವ್ಯಾಪಾರವನ್ನೂ ಹಾಸಿಗೆಯಲ್ಲಿ ಪತಿಗಳನ್ನೂ ಬಿಟ್ಟು ಶ್ರೀಕೃಷ್ಣನಂ ನೋಡಲೋಸುಗ ರಾಜಮಾರ್ಗವನೆಯ್ದಿದರು ||೩೪|| ಆಗ ಪುರಸ್ತ್ರೀಯರು ಉಪ್ಪರಿಗೆಗಳನ್ನೇರಿ ಅತಿ ನಿಬಿಡವಾದ ಗಜಾಶ್ವರಥಪದಾತಿಗಳೊಡನೆ ಯುಕ್ತನಾಗಿ ಪತ್ನಿಯರೊಡಗೂಡಿದ ಶ್ರೀಕೃಷ್ಣನಂಕಂಡು ಅವನಮೇಲೆಪುಷ್ಪಗಳನೆರಚಿ ಮನಸ್ಸಿನಿಂದ ಆಲಿಂಗನಂಗೆಯ್ದು ತಮ್ಮ ಮುದಹಾಸಯುಕ್ತವಾದ ಸವಿನೋಟದಿಂದಲೇ ಕುಶಲಪ್ರಶ್ನಮೊದಲಾದ ಉಪಚಾರಗಳ ನಾಚರಿಸಿದರು ||೩೫|| ಮತ್ತು ರಾಜಮಾರ್ಗದಲ್ಲಿ ಆಸ್ತ್ರೀಯರು ನಕ್ಷತ್ರಗಳಂತೆ ಹೊಳಹೊಳೆಯುತಲಿರುವ ಶ್ರೀಕೃಷ್ಣಪತ್ನಿಯರಂನೋಡಿ ಶ್ರೀಕೃಷ್ಣನು ಮನೋಹರಗಳಾದ ಮಂದಹಾಸ ಲಜ್ಜಾಕಟಾಕ್ಷಗಳ ಸೊಬಗಿನಿಂದ ನಿರಂತರದಲ್ಲಿಯೂ ಯಾರನೇತ್ರಂಗಳಿಗೆ ಉತ್ಸವವನ್ನುಂಟುಮಾಡುತಲಿಹಾನೆಯೋ ಅಂತಾ ಕೃಷ್ಣನ ಪತ್ನಿಯರಿಂದಎಂತಿಯ ಪುಣ್ಯವು ಮಾಡಲ್ಪಟ್ಟಿತೋತಿಳಿಯಲಿಲ್ಲವೆಂದು ಪೇಳಿದರು||೩೬||
ಆಗ ಅಲ್ಲಲ್ಲಿ ಪಟ್ಟಣದಜನರು ಆಯಾಜಾತಿಯ ಘಣಂಗಳಲ್ಲಿ ಮುಖ್ಯರಾದ ಪುರುಷರು ಸಹ ಫಲಪುಷ್ಪಾದಿ ಮಂಗ

ತ್ರೋಸಂಗಮ್ಯ ಪೌರಾ ಮಂಗಳಪಾಣಯಃ । ಚಕ್ರುಸ್ಸಪರ್ಯಾಂ ಕೃಷ್ಣಾಯ ಶ್ರೇಣಿಮುಖ್ಯಾ ಹತೈನಸಃ ॥೩೭॥ ಅಂತಃಪುರಜನೈಃ ಪ್ರೀತ್ಯಾ ಮುಕುಂದಃ ಫುಲ್ಲಲೋಚನೈಃ । ಸಸಂಭ್ರಮೈರಭ್ಯುಪೇತಃ ಪ್ರಾವಿಶದ್ರಾಜಮಂದಿರಮ್ ॥೩೮॥ ಪೃಥಾ ವಿಲೋಕ್ಯ ಭ್ರಾತ್ರೇಯಂ ಕೃಷ್ಣಂ ತ್ರಿಭುವನೇಶ್ವರಮ್ । ಪ್ರೀತಾತ್ಮೋತ್ಥಾಯ ಪರ್ಯಂಕಾತ್ಸಸ್ನುಷಾ ಪರಿಷಸ್ವಜೇ ॥೩೯॥ ಗೋವಿಂದಂ ಗೃಹಮಾನೀಯ ದೇವದೇವೇಶಮಾದೃತಃ । ಪೂಜಾಯಾಂ ನಾವಿದತ್ಕೃತ್ಯಂ ಪ್ರಮೋದೋಪಹತೋ ನೃಪಃ ॥೪೦॥ ಪಿತೃಷ್ವಸುರ್ಗುರುಸ್ತ್ರೀಣಾಂ ಕೃಷ್ಣಶ್ಚಕ್ರೇಽಭಿವಾದನಮ್ । ಸ್ವಯಂ ಚ ಕೃಷ್ಣಯಾ ರಾಜನ್ ಭಗಿನ್ಯಾ ಚಾಭಿವಾದಿತಃ ॥೪೧॥ ಶ್ವಶ್ರ್ವಾ ಸಂಚೋದಿತಾ ಕೃಷ್ಣಾ ಕೃಷ್ಣಪತ್ನೀಸ್ತು ಸರ್ವಶಃ । ಆನರ್ಚ ರುಕ್ಮಿಣೀಂ ಸತ್ಯಾಂ ಭದ್ರಾಂ ಜಾಂಬವತೀಂ ತಥಾ ॥೪೨॥

---

ಶಿಲ್ಪದಿಂದ ಜೀವಿಸುವವರ ಗುಂಪುಗಳಲ್ಲಿ ಮುಖ್ಯರಾದವರೂ, ಹತೈನಸಃ-ಧ್ವಸ್ತಪಾಪರೂ, ತತ್ರತತ್ರ-ಅಲ್ಲಲ್ಲಿ, ಉಪಸಂಗಮ್ಯ-ಹತ್ತಿರಕ್ಕೆ ಬಂದು, ಮಂಗಳಪಾಣಯಃ-ಮಂಗಳದ್ರವ್ಯಗಳು ಕೈಗಳಲ್ಲಿ ಉಳ್ಳವರಾಗಿ, ಕೃಷ್ಣಾಯ-ಹರಿಗೆ, ಸಪರ್ಯಾಂ-ಸತ್ಕಾರವನ್ನು, ಚಕ್ರುಃ-ಮಾಡಿದರಂತೆ ॥೩೭॥ ಫುಲ್ಲಲೋಚನೈಃ-ಅರಳಿದ ಕಂಗಳುಳ್ಳಂಥಾ, ಸಸಂಭ್ರಮೈಃ-ಅವಸರದ ಗತಿಯಿಂ ಕೂಡಿದಂಥಾ, ಅಂತಃಪುರಜನೈಃ-ರಾಣಿವಾಸದ ಜನಗಳಿಂದ, ಪ್ರೀತ್ಯಾ-ಪ್ರೇಮದೊಡನೆ, ಅಭ್ಯುಪೇತಃ-ಇದಿರುಗೊಳ್ಳಲ್ಪಟ್ಟ, ಮುಕುಂದಃ-ಕೃಷ್ಣನು, ರಾಜಮಂದಿರಂ-ಅರಮನೆಯನ್ನು, ಪ್ರಾವಿಶತ್-ಹೊಕ್ಕನು ॥೩೮॥ ಸಸ್ನುಷಾ-ಸೊಸೆಯರಿಂ ಸಹಿತಳಾದ, ಪೃಥಾ-ಕುಂತೀದೇವಿಯು, ಭ್ರಾತ್ರೇಯಂ-ಅಣ್ಣನ ಮಗನಾದವರೂ, ತ್ರಿಭುವನೇಶ್ವರಂ-ಮೂರು ಲೋಕಗಳಿಗೊಡೆಯನಾದ, ಕೃಷ್ಣಂ-ಹರಿಯನ್ನು, ವಿಲೋಕ್ಯ-ನೋಡಿ, ಪ್ರೀತಾತ್ಮಾ-ಪ್ರಿಯವುಂಟಾದ ಹೃದಯವುಳ್ಳವಳಾಗಿ, ಪರ್ಯಂಕಾತ್-ಮಂಚದ ದೆಸೆಯಿಂದ, ಉತ್ಥಾಯ-ಎದ್ದು, ಪರಿಷಸ್ವಜೇ-ಅಪ್ಪಿಕೊಂಡಳು ॥೩೯॥ ನೃಪಃ-ಧರ್ಮರಾಯನು, ದೇವದೇವೇಶಂ-ದೇವತೆಗಳಿಗೆ ದೇವರಾದವರಿಗೂ ಪ್ರಭುವಾದ, ಗೋವಿಂದಂ-ಕೃಷ್ಣನನ್ನು, ಗೃಹಮಾನೀಯ-ತನ್ನ ಮನೆಗೆ ಕರತಂದು, ಆದೃತಃ-ಆದರವುಂಟಾದವನಾಗಿ, ಪ್ರಮೋದೋಪಹತಃ-ಹೆಚ್ಚು ಸಂತೋಷದಿಂದ ಬಡಿಯಲ್ಪಟ್ಟವನಾಗಿ, ಪೂಜಾಯಾಂ-ಕೃಷ್ಣನಿಗೆ ಮಾಡತಕ್ಕ ಸತ್ಕಾರದಲ್ಲಿ, ಕೃತ್ಯಂ-ತಾನು ಮಾಡತಕ್ಕ ಕೆಲಸವನ್ನು, ನಾವಿದತ್-ತಿಳಿಯಲಿಲ್ಲವು ॥೪೦॥ ಕೃಷ್ಣಃ-ಹರಿಯು, ಪಿತೃಷ್ವಸುಃ-ಸೋದರತ್ತೆಗೂ, ಗುರುಸ್ತ್ರೀಣಾಂ-ಹಿರಿಯರಾದ ಹೆಂಗಳಿಗೂ, ಅಭಿವಾದನಂ-ನಮಸ್ಕಾರವನ್ನು, ಚಕ್ರೇ-ಮಾಡಿದನು, ರಾಜನ್- ಪರೀಕ್ಷಿತನೇ ! ಸ್ವಯಂ ಚ-ತಾನೂ ಕೂಡ, ಕೃಷ್ಣಯಾ-ದ್ರೌಪದಿಯಿಂದಲೂ, ಭಗಿನ್ಯಾ ಚ-ತಂಗಿಯಾದ ಸುಭದ್ರೆಯಿಂದಲೂ, ಅಭಿವಾದಿತಃ-ನಮಸ್ಕರಿಸಲ್ಪಟ್ಟವನಾದನು ॥೪೧॥ ಶ್ವಶ್ರ್ವಾ-ಅತ್ತೆಯಿಂದ, ಸಂಚೋದಿತಾ-ಪ್ರೇರಿತಳಾದ, ಕೃಷ್ಣಾ- ದ್ರೌಪದಿಯು, ಕೃಷ್ಣಪತ್ನೀಸ್ತು-ಕೃಷ್ಣನ ಹೆಂಡಿರನ್ನಾದರೋ, ಸರ್ವಶಃ-ಎಲ್ಲಾ ಬಗೆಯಿಂದಲೂ, ಆನರ್ಚ-ಪೂಜಿಸಿದಳು, ರುಕ್ಮಿಣೀಂ-ಪಟ್ಟದರಾಣಿಯನ್ನೂ, ಸತ್ಯಾಂ-ಸತ್ಯಾದೇವಿಯನ್ನೂ, ಭದ್ರಾದೇವಿಯನ್ನೂ, ತಥಾ-ಹಾಗೆ, ಜಾಂಬವತಿಯನ್ನೂ ॥೪೨॥

---

ಳದ್ರವ್ಯಗಳಂ ಹಸ್ತಂಗಳಲ್ಲಿರಿಸಿಕೊಂಡು ಸಮೀಪಕ್ಕೆ ಬಂದು ಶ್ರೀಕೃಷ್ಣನಿಗೋಸುಗ ಪೂಜೆಯಂಗೆಯ್ದು ಪಾಪರಹಿತರಾದರು ॥೩೭॥ ಆಮೇಲೆ ಶ್ರೀಕೃಷ್ಣನು ವಿಕಸಿತಂಗಳಾದ ನೇತ್ರಂಗಳುಳ್ಳವನಾಗಿ ತ್ವರೆಯೊಡಗೂಡಿರುವ ಧರ್ಮರಾಯನ ಅಂತಃಪುರದ ಜನರಂ ಅತ್ಯಂತಪ್ರಿಯದಿಂದ ಇದಿರುಗೊಂಡು ಕರೆತರಲ್ಪಟ್ಟು ರಾಜಗೃಹವಂ ಪ್ರವೇಶಿಸಿದನು ॥೩೮॥ ಬಳಿಕ ದ್ರೌಪದಿಯೊಡಗೂಡಿದವಳಾಗಿ ಕುಂತಿಯು ತ್ರಿಲೋಕನಾಥನಾದ ಸೋದರಳಿಯನಾದ ಶ್ರೀಕೃಷ್ಣನಂ ಕಂಡು ಸಂತೋಷಯುಕ್ತವಾದ ಮನಸ್ಸುಳ್ಳವಳಾಗಿ ಮಂಚದ ದೆಸೆಯಿಂದ ಎದ್ದು ಪ್ರೀತಿಯಿಂದ ಶ್ರೀಕೃಷ್ಣನನ್ನು ಆಲಿಂಗನಂಗೆಯ್ದಳು ॥೩೯॥ ಆಗ ಧರ್ಮರಾಯನು ಬ್ರಾಹ್ಮಣಾದಿಗಳಿಗೂ ಈಶ್ವರನಾದ ಶ್ರೀಕೃಷ್ಣನಂ ಗೃಹವನೆಯ್ದಿಸಿ ಆದರದಿಂದ ಪೂಜಿಸುತ ಆ ಕಾಲದಲ್ಲಿ ಆನಂದದಿಂ ಪರವಶನಾತ ಆ ಪೂಜಾಪ್ರಕಾರದಲ್ಲಿ ಮಾಡತಕ್ಕ ವಿಶೇಷವನ್ನು ಅರಿತವನಾಗಲಿಲ್ಲ ॥೪೦॥ ಆಗ ಶ್ರೀಕೃಷ್ಣನು ಸೋದರತ್ತೆಯಾದ ಕುಂತೀದೇವಿಗೆ ಗುರುಪತ್ನಿಯರಿಗೆ ಸಹ ಅಭಿವಾದನಂಗೆಯ್ದು ತಾನು ದ್ರೌಪದಿಯಿಂ ತನ್ನ ತಂಗಿಯಾದ ಸುಭದ್ರೆಯಿಂದಲೂ ಅಭಿವಾದನಂಗೆಯ್ಯಲ್ಪಟ್ಟನು ॥೪೧॥ ಅನಂತರದಲ್ಲಿ ದ್ರೌಪದಿಯು ಕುಂತಿಯಿಂದ ಪ್ರೇರಿಸಲ್ಪಟ್ಟವಳಾಗಿ ರುಕ್ಮಿಣಿಯಂ ಸತ್ಯಭಾಮೆಯಂ ಭದ್ರೆಯಂ ಜಾಂಬವತಿಯಂ ॥೪೨॥ ಪತಿವ್ರತೆಯಾದ ಕಾಳಿಂದಿಯಂ ಮಿತ್ರವಿಂದೆಯಂ ಶೈಬ್ಯೆಯಂ ಸ

ಕಾಳಿಂದೀಂ ಮಿತ್ರವಿಂದಾಂಚ ಶೈಬ್ಯಾಂ ನಾಗ್ನಜಿತೀಂ ಸತೀಮ್ । ಅನ್ಯಾಶ್ಚಾಭ್ಯಾಗತಾ ಯಾಸ್ತಾ ವಾಸಸ್ಸ್ರಙ್ಮಂಡನಾದಿಭಿಃ ॥೪೩॥ ಸುಖಂ ನಿವಾಸಯಾಮಾಸ ಧರ್ಮರಾಜೋ ಜನಾರ್ದನಮ್ । ಸಸೈನ್ಯಂ ಸಾನುಗಾಮಾತ್ಯಂ ಸಭಾರ್ಯಂ ಚ ನವಂ ನವಮ್ ॥೪೪॥ ತರ್ಪಯಿತ್ವಾ ಖಾಂಡವೇನ ವಹ್ನಿಂ ಫಲ್ಗುನಸಂಯುತಃ । ಮೋಚಯಿತ್ವಾ ಮಯಂ ಯೇನ ರಾಜ್ಞೇ ದಿವ್ಯಾ ಸಭಾ ಕೃತಾ ॥೪೫॥ ಉವಾಸ ಕತಿಚಿನ್ಮಾಸಾನ್ ರಾಜ್ಞಃ ಪ್ರಿಯಚಿಕೀರ್ಷಯಾ । ವಿಹರನ್ ರಥಮಾರುಹ್ಯ ಫಲ್ಗುನೇನ ಬಲೈರ್ವೃತಃ ॥ ... ... ॥೪೬॥

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಏಕಸಪ್ತತಿತಮೋಽಧ್ಯಾಯಃ

ಕಾಳಿಂದಿಯನ್ನೂ, ಮಿತ್ರವಿಂದೆಯನ್ನೂ, ಶೈಬ್ಯೆಯನ್ನೂ, ನಗ್ನಜಿದ್ರಾಯನ ಮಗಳಾದ, ಸತೀಂ ಪತಿವ್ರತೆಯಾದ ಲಕ್ಷಣಾದೇವಿಯನ್ನೂ, ತತ್ರ-ಅಲ್ಲಿ, ಅಭ್ಯಾಗತಾಃ-ಒಂದಿರುವ, ಅನ್ಯಾಶ್ಚ-ಇತರೆಯರಾದವರು, ಯಾಃ -ಯಾವ ಕೃಷ್ಣಪತ್ನಿಯರಿದ್ದರೋ, ತಾಃ-ಅವರನ್ನೂ, ವಾಸಸ್ಸ್ರಙ್ಮಂಡನಾದಿಭಿಃ-ವಸ್ತ್ರ ಪುಷ್ಪಮಾಲಾಲಂಕಾರವೊದಲಾದವುಗಳಿಂದ, ಪೂಜಿಸಿದಳು ॥೪೩॥ ಧರ್ಮರಾಜಃ-ಧರ್ಮರಾಯನು, ಸಸೈನ್ಯಂ-ದಂಡಿನಿಂದ ಸಹಿತನಾದ, ಸಾನುಗಾಮಾತ್ಯಂ-ಸಂಗಡ ಬಂದವರಿಂದಲೂ ಮಂತ್ರಿಗಳಿಂದಲೂ ಸಹಿತನಾದ, ಸಭಾರ್ಯಂ ಚ-ಪತ್ನಿಯರಿಂದಲೂ ಕೂಡಿದವನಾದ, ಜನಾರ್ದನಂ-ಕೃಷ್ಣನನ್ನು, ನವಂನವಂ-ಪ್ರತಿದಿನದಲ್ಲಿಯೂ ಹೊಸಹೊಸತಾಗುವಂತೆ, ಸುಖಂ-ಸಂತೋಷವಾಗಿ, ನಿವಾಸಯಾಮಾಸ-ಇರಿಸಿಕೊಂಡಿದ್ದನು ॥೪೪॥ ಯಃ-ಯಾವ ಕೃಷ್ಣನು, ಫಲ್ಗುನಸಂಯುತಃ-ಅರ್ಜುನನೊಡಗೂಡಿದವನಾಗಿ ಇದ್ದನೋ, ಖಾಂಡವೇನ-ಖಾಂಡವವೆಂಬ ವನದಿಂದ, ವಹ್ನಿಂ-ಅಗ್ನಿಯನ್ನು, ತರ್ಪಯಿತ್ವಾ-ತೃಪ್ತಿಗೊಳಿಸಿ, ಮಯಂ-ಅಲ್ಲಿದ್ದ ಮಯಾಸುರನನ್ನು, ಮೋಚಯಿತ್ವಾ-ಅಗ್ನಿಭಯದಿಂದ ಬಿಡಿಸಿ, ಯೇನ-ಯಾವ ಕೃಷ್ಣನಿಂದ. ರಾಜ್ಞೇ-ಧರ್ಮರಾಯನಿಗೋಸುಗ, ದಿವ್ಯಾ ಸಭಾ-ದೇವಯೋಗ್ಯವಾದ ಸಭಾಮಂಟಪವು, ಕೃತಾ-ಮಯನನ್ನು ಪ್ರೇರಿಸಿ ಮಾಡಲ್ಪಟ್ಟಿತೋ, ಧರ್ಮರಾಯನು ಆ ಕೃಷ್ಣನನ್ನು ಸುಖವಾಗಿರಿಸಿಕೊಂಡಿದ್ದನು ॥೪೫॥ ಕೃಷ್ಣಃ-ವಾಸುದೇವನು, ರಾಜ್ಞಃ-ಧೊರೆಗೆ ಪ್ರಿಯಚಿಕೀರ್ಷಯಾ-ಪ್ರಿಯವನ್ನು ಮಾಡಲಪೇಕ್ಷೆಯಿಂದ, ಫಲ್ಗುನೇನ-ಅರ್ಜುನನೊಡನೆ ರಥಂ-ತೇರನ್ನು, ಆರುಹ್ಯ-ಏರಿ, ಬಲೈಃ-ಸೇನೆಗಳಿಂದ, ವೃತಃ-ಬಳಸಲ್ಪಟ್ಟವನಾಗಿ, ವಿಹರನ್-ತಿರುಗುವನಾಗುತ್ತ, ಕತಿಚಿತ್ ಮಾಸಾನ್-ಕೆಲವು ತಿಂಗಳ್ಗಳಲ್ಲಿ, ಉವಾಸ-ಅಲ್ಲಿದ್ದನು. ॥೪೬॥

ಇಂತು ಭಾಗವತ ಪ್ರತಿಶಬ್ದಾರ್ಥ ಬೋಧಿನಿಯೊಳು ದಶಮಸ್ಕಂಧದಲ್ಲಿ

೭೧ ನೆಯ ಅಧ್ಯಾಯಂ ಮುಗಿದುದು.

---

ತ್ಯಾದೇವಿಯುಂ ಈರೀತಿಯಾಗಿಯೇ ಸಮಸ್ತರಾದ ಕೃಷ್ಣಪತ್ನಿಯರನ್ನೂ ವಸ್ತ್ರಮಾಲ್ಯಗಂಧಾದಿಗಳಿಂದ ಪೂಜಿಸಿದಳು ॥೪೩॥ ಧರ್ಮರಾಯನು ಸೇನೆಗಳೊಡನೆ ಮಂತ್ರಿಗಳೊಡನೆ ಪುರೋಹಿತರೊಡನೆ ಪತ್ನಿಯರೊಡನೆಯೂ ಯುಕ್ತನಾಗಿರುವ ಶ್ರೀಕೃಷ್ಣನಂ ಪ್ರತಿದಿನದಲ್ಲಿಯೂ ಹೊಸಹೊಸತಾಗಿ ಉಪಚರಿಸುತ ಸುಖದಿಂದಿರಿಸಿಕೊಂಡಿದ್ದನು ॥೪೪॥ ಯಾವವನು ಪ್ರೇಮದಿಂದ ನಿರಂತರವೂ ಅರ್ಜುನನೊಡನೆ ಕೂಡಿದ್ದನೋ ಮತ್ತು ಯಾವವನು ಅರ್ಜುನನಿಗೆ ಸಹಾಯವಾಗುತ ಖಾಂಡವವನದಿಂದ ಅಗ್ನಿಯಂ ಸಂತೋಷಪಡಿಸಿ ಆಸಮಯದಲ್ಲಿ ಮಯನಂ ವಿಪತ್ತಿನಿಂ ಬಿಡಿಸಿ ಅವನಂ ಪ್ರೇರಿಸಿ ಅವನಿಂದ ಧರ್ಮರಾಯನಿಗೋಸುಗ ದಿವ್ಯವಾದ ಸಭಾಸ್ಥಾನವಂ ಮಾಡಿಸಿದವನೋ ಅಂತಾ ಶ್ರೀಕೃಷ್ಣನಂ ಧರ್ಮರಾಯನು ಸುಖದಿಂದ ತನ್ನ ಅರಮನೆಯಲ್ಲಿ ವಾಸಂಗೆಯ್ಸಿದನು ॥೪೫॥ ಶ್ರೀಕೃಷ್ಣನು ಆಪಟ್ಟಣದಲ್ಲಿ ಧರ್ಮರಾಯನಿಗೆ ಪ್ರಿಯಮಂ ಮಾಡಲಿಚ್ಛೆಯಿಂದ ಅರ್ಜುನನೊಡಗೂಡಿ ರಥವನೇರಿ ಭಟರಿಂ ಸುತ್ತಿಕೊಳ್ಳಲ್ಪಟ್ಟವನಾಗಿ ವಿಹಾರಂಗೆಯ್ಯುತ ಕೆಲವು ಮಾಸಂಗಳು ವಾಸಂಗೆಯ್ದನು ॥ ॥೪೬॥

ಇಂತು ಶ್ರೀಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸಿದನೆಂದು ಸೂತಪೌರಾಣಿಕನು ನೈಮಿಶಾರಣ್ಯವಾಸಿಗಳಾದ ಶೌನಕಾದಿ ಮಹರ್ಷಿಗಳಿಗೆ ಪೇಳಿದನೆಂಬಲ್ಲಿಗೆ ಶ್ರೀಮನ್ಮಹೀಶೂರ ಪುರವರಾಧೀಶ ಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜ ವಿರಚಿತಮಾದ “ ಶ್ರೀಕೃಷ್ಣರಾಜ ವಾಣೀವಿಲಾಸ„ ಮೆಂಬ ಶ್ರೀಭಾಗವತ ಪುರಾಣದ ಕರ್ಣಾಟಭಾಷಾವ್ಯಾಖ್ಯಾನದಲ್ಲಿ

೭೧ನೆಯ ಅಧ್ಯಾಯವು ಮುಗಿದುದು.

ದಿಗ್ವಿಜಯಜರಾಸಂಧವಧಾದಿಕಥಾಪ್ರಾರಂಭಃ ಷಟ್ಕಃ-

ಶ್ರೀಶುಕಃ॥ ಏಕದಾತುಸಭಾಮಧ್ಯೇಹ್ಯಾಸ್ಥಿತೋಮುನಿಭಿರ್ವೃತಃ । ಬ್ರಾಹ್ಮಣೈಃಕ್ಷತ್ರಿಯೈರ್ವೈಶ್ಯೈರ್ಭ್ರಾತೃಭಿಶ್ಚಯುಧಿಷ್ಠಿರಃ ॥೧॥ಆಚಾರ್ಯೈಃಕುಲವೃದ್ಧೈಶ್ಚಜ್ಞಾತಿಸಂಬಂಧಿಬಾಂಧವೈಃ । ಶೃಣ್ವತಾಮೇವಚೈತೇಷಾಮಾಭಾಷ್ಯೇದಮುವಾಚಹ ॥೨॥ಯುಧಿಷ್ಠಿರಃ॥ಕ್ರತುರಾಜೇನಗೋವಿಂದ ರಾಜಸೂಯೇನಪಾವನೀಃ । ಯಕ್ಷ್ಯೇವಿಭೂತೀರ್ಭವತಸ್ತತ್ಸಂಪಾದಯನಃಪ್ರಭೋ ॥೩॥ ತ್ವತ್ಪಾದುಕೇ ಅವಿರತಂಪರಿಯೇಚರಂತಿಧ್ಯಾಯಂತ್ಯಭದ್ರನಶನಂಸುಧಿಯೋಗೃಣಂತಿ ।ವಿಂದಂತಿತೇಕಮಲನಾಭಭವಾಪವ

೭೨ ನೆಯ ಅಧ್ಯಾಯವು.

ಏಕದಾತು-ಒಂದು ಸಮಯದಲ್ಲಾದರೋ, ಸಭಾಮಧ್ಯೇ-ಇಂದ್ರಪ್ರಸ್ಥದ ಸಭೆಯನಡುವೆ, ಆಸ್ಥಿತಃ-ಸಿಂಹಾಸನದಲ್ಲಿ ಕುಳಿತಿರುವ, ಯುಧಿಷ್ಠಿರಃ-ಧರ್ಮರಾಯನು, ಮುನಿಭಿಃ-ಮನನಶೀಲರಿಂದಲೂ, ಬ್ರಾಹ್ಮಣೈಃ-ವಿಪ್ರರಿಂದಲೂ, ಕ್ಷತ್ರಿಯೈಃ-ಅರಸುಗಳಿಂದಲೂ, ವೈಶ್ಯೈಃ-ವರ್ತಕರಿಂದಲೂ, ಭ್ರಾತೃಭಿಶ್ಚ-ಸೋದರರಿಂದಲೂ॥೧॥ಆಚಾರ್ಯೈಃ-ಪುರೋಹಿತರಿಂದಲೂ, ಕುಲವೃದ್ಧೈಃ-ತನ್ನವಂಶದಲ್ಲಿ ಹಿರಿಯರಾದವರಿಂದಲೂ, ಜ್ಞಾತಿಸಂಬಂಧಿಬಾಂಧವೈಶ್ಚ-ಸಗೋತ್ರರಿಂದಲೂ ದೇಹಸಂಬಂಧವುಳ್ಳವರಿಂದಲೂ ಅವರವರ ನಂಟರಿಂದಲೂ, ವೃತಸ್ಸನ್-ಬಳಸಲ್ಪಟ್ಟವನಾಗಿ, ಏತೇಷಾಂ-ಇವರೆಲ್ಲರೂ, ಶೃಣ್ವತಾಂಸತಾಮೇವ-ಕೇಳುತ್ತಿರುವರೇ ಆಗುತ್ತಿರುವಲ್ಲಿ, ಏನಂ-ಈ ಶ್ರೀಕೃಷ್ಣನನ್ನು, ಆಭಾಷ್ಯ-ಎಲೈ ಭಕ್ತವತ್ಸಲನೇ ಎಂದು ಸಂಬೋಧಿಸಿ, ಹ-ಪ್ರಸಿದ್ಧವಾಗಿ, ಉವಾಚ-ನುಡಿದನು॥೨॥ ಹೇಗೋವಿಂದ-ಎಲೈ ಕೃಷ್ಣನೇ! ಕ್ರತುರಾಜೇನ-ಯಜ್ಞಗಳಲ್ಲಿ ಶ್ರೇಷ್ಠವಾದ, ರಾಜಸೂಯೇನ-ರಾಜಸೂಯವೆಂಬಯಾಗದಿಂದ. ಭವತಃ-ನಿನ್ನ, ಪಾವನೀಃ-ಪರಿಶುದ್ಧಗಳಾದ,ವಿಭೂತೀಃ-ಲೀಲೈಶ್ವರ್ಯಗಳನ್ನು, ಯಕ್ಷ್ಯೇ-ಪೂಜಿಸುವೆನು, ಪ್ರಭೋ-ಒಡೆಯನಾದವನೇ, ತತ್-ಆ ಪುಣ್ಯವನ್ನು, ನಃ-ನಮಗೆ, ಸಂಪಾದಯ-ಉಂಟುಮಾಡು ॥೩॥ಹೇಈಶ-ಎಲೈ ನಿಯಾಮಕನೇ ! ಯೇ-ಯಾರು, ಅಭದ್ರನಶನೇ-ಅಮಂಗಳವನ್ನು ನಾಶಮಾಡುವಂಥಾ, ತ್ವತ್ಪಾದುಕೇ-ನಿನ್ನ ಪಾವುಗೆಗಳನ್ನು, ಅವಿರತಂ-ಎಡೆಬಿಡದೆ, ಪರಿಚರಂತಿ-ದೇಹದಿಂದ ಸೇವಿಸುವರೋ, ಸುಧಿಯಃ-ಒಳ್ಳೆಯಬುದ್ಧಿಯುಳ್ಳವರಾಗಿ, ಧ್ಯಾಯಂತಿ-

೭೨ನೆಯಅಧ್ಯಾಯವು.

ಶ್ರೀಧರೀಯಶ್ಲೋಕಃ । ತತೋದ್ವಿಸಪ್ತತಿತಮೇ ರಾಜ್ಞಾ ಕಾರ್ಯೇ ನಿವೇದಿತೇ । ದುರ್ಜಯಂಮಾಗಧಂ ಬುಧ್ವಾಭೀಮೇನಾಘಾತಯದ್ಧರಿಃ ॥ + ॥ಟೀ॥ ಎಪ್ಪತ್ತೆರಡನೆಯ ಅಧ್ಯಾಯದಲ್ಲಿ ಧರ್ಮರಾಯನಿಂದ ಶ್ರೀಕೃಷ್ಣನಂಕುರಿತು ಪ್ರಕೃತಕಾರ್ಯವು ತಿಳಿಸಲ್ಪಟ್ಟದ್ದಾಗುತ್ತಿರಲು ಶ್ರೀಕೃಷ್ಣನು ಜರಾಸಂಧನಂ ಜಯಿಸಲಶಕ್ಯನನ್ನಾಗಿ ತಿಳಿದು ಭೀಮನಿಂದ ಅವನಂ ಸಂಹಾರಂ ಗೆಯ್ಸಿದನೆಂಬ ಅರ್ಥವಂ ಶ್ರೀಶುಕಾಚಾರ್ಯನು ಪರೀಕ್ಷಿದ್ರಾಯನಂ ಕುರಿತು ನಿರೂಪಿಸುವನೆಂತೆನೆ-

ಎಲೈ, ಪರೀಕ್ಷಿದ್ರಾಯನೇ! ಕೇಳು, ಒಂದುಸಮಯದಲ್ಲಿ ಆ ಸ್ಥಾನಮಧ್ಯದೊಳಗೆ ಧರ್ಮರಾಯನು ಮುನಿಗಳಿಂ ಬ್ರಹ್ಮಕ್ಷತ್ರಿಯ ವೈಶ್ಯರಿಂ ತಮ್ಮಂದಿರಿಂದಲೂ ॥೧॥ ಆಚಾರ್ಯರಿಂ ಕುಲವೃದ್ಧರಿಂ ಜ್ಞಾನಿಗಳಿಂ ಬಂಧುಜನರಿಂದಲೂ ಆಶ್ರಯಿಸಲ್ಪಟ್ಟವನಾಗಿ ಸಿಂಹಾಸನದಲ್ಲಿ ಕುಳಿತಿರುವಾಗ ಶ್ರೀಕೃಷ್ಣ ನಿನ್ನೋರ್ವನಿಂ ಹೊರತು ಮತ್ತೆಯೋರ್ವರಿಂ ತನಗಿಷ್ಟವಾದ ಕಾರ್ಯವು ಸಾಧಿಸಲಶಕ್ಯವೆಂದು ನಿಶ್ಚಯಿಸಿಕೊಂಡಿರುವ ನಾದುದರಿಂದ ಕೇಳುತಲಿರುವ ಮಿಕ್ಕವರಂ ಲೆಕ್ಕಿಸದೆ ಎಲೈಭಕ್ತವತ್ಸಲನಾದ ಶ್ರೀಕೃಷ್ಣನೇ! ಎಂದು ಸಂಬೋಧಿಸಿ ವಿಜ್ಞಾಪಿಸುವನೆಂತೆನೆ ॥೨॥ ಶ್ರೀಕೃಷ್ಣನೇ! ಕೇಳು, ನಾನು ಕ್ರತುಶ್ರೇಷ್ಠವಾದ ರಾಜಸೂಯದಿಂ ಪಾವನಂಗಳಾದ ಇಂದ್ರಾದಿರೂಪಂಗಳಾದ ನಿನ್ನಯಂಶಮೂರ್ತಿಗಳಂ ಪೂಜಿಸುವೆನೆಂದು ಸಂಕಲ್ಪಿಸಿಯಿರುವೆನು. ನಮ್ಮ ಆಮನೋರಥವಂ ನೀನು ಪೂರಯಿಸುವನಾಗು.॥೩॥ ಎಲೈಪದ್ಮನಾಭನೇ! ಯಾವಜ್ಞಾನಿಗಳು ಅಶುಭಪರಿಹಾರಕಂಗಳಾದ ನಿನ್ನ ಪಾದಂಗಳಂ ನಿರಂತರದಲ್ಲಿಯೂ ಕಾಯದಿಂ ಸೇವಿಸುತಲಿರುವರೋ ಅಪುರುಷರೇ ಮುಕ್ತಿಯಂ ಪಡೆಯುತಲಿರು

ರ್ಗಾಪವರ್ಗಮಾಶಾಸತೆಯುತಆಶಿಷಈಶನಾನ್ಯೇ ||೪|| ತದ್ದೇವದೇವಭವತಶ್ಚರಣಾರವಿಂದಸೇವಾನುಭಾವಮಿಹಪಶ್ಯ ತುಲೋಕಏಷಃ | ಯೇತ್ವಾಂಭಜಂತಿನಭಜಂತ್ಯುತವೋಭಯೇಷಾಂನಿಷ್ಠಾಂಪ್ರದರ್ಶಯವಿಭೋಕುರುಸೃಂಜಯಾನಾಮ್ ||೫|| ನಬ್ರಹ್ಮಣಸ್ಸ್ವಪರಭೇದಮತಿಸ್ತವಸ್ಯಾತ್ಸರ್ವಾತ್ಮನಸ್ಸಮದೃಶಸ್ಸ್ವಸುಖಾನುಭೂತೇಃ | ಸಂಸೇವತಾಂಸುರತರೋರಿವತೇಪ್ರಸಾದಸ್ಸೇವಾನುರೂಪಉದಯೋನವಿಪರ್ಯಯೋತ್ರ ||೬|| ಶ್ರೀಭಗವಾನ್ || ಸಮ್ಯಗ್ವ್ಯವಸಿತಂರಾಜನ್ಭವತಾಶತ್ರುಕರ್ಶನ | ಕಲ್ಯಾಣೀಯೇನತೇಕೀರ್ತಿರ್ಲೋಕಾನನುಭವಿ

---

ಭಾವಿಸುತ್ತಿರುವರೋ, ಗೃಣಂತಿ-ಮಾತಿನಿಂದ ಕೊಂಡಾಡುತ್ತಿರುವರೋ, ಕಮಲನಾಭ-ಪದ್ಮನಾಭನಾದ ಕೃಷ್ಣನೇ ! ತೇ-ಅವರು, ಭವಾಪವರ್ಗಂ-ಸಂಸಾರದ ಬಿಡುಗಡೆಯನ್ನು, ವಿಂದಂತಿ-ಅನುಭವಿಸುವರು. ತೇ-ಅವರು, ಆಶಾಸತೇಯದಿ- ಅಪೇಕ್ಷಿಸುವರಾದರೆ, ಆಶಿಷೋಪಿ-ಮನೋರಥ ಶ್ರೇಯಸ್ಸುಗಳನ್ನೂ, ವಿಂದಂತಿ-ಅನುಭವಿಸುವರು. ಅನ್ಯೇ-ಇತರರಾದ ಚಕ್ರವರ್ತಿಗಳೂ ಕೂಡ, ನವಿಂದಂತಿ-ಅನುಭವಿಸುವುದಿಲ್ಲವು ||೪|| ದೇವದೇವ-ದೇವತೆಗಳಿಗೆ ದೇವರಾದಕೃಷ್ಣನೇ ! ತತ್-ಆ ಕಾರಣದಿಂದ, ಏಷಲೋಕಃ-ಈ ಜನವು, ಭವತಃ-ನಿನ್ನ, ಚರಣಾರವಿಂದ ಸೇವಾನುಭಾವಂ-ಅಡಿದಾವರೆಗಳನ್ನು ಸೇವಿಸಿದ್ದರ ಸಾಮರ್ಥ್ಯವನ್ನು, ಇಹ-ಇಲ್ಲಿ, ಪಶ್ಯತು-ನೋಡಲಿ, ವಿಭೋ-ವ್ಯಾಪಕನಾದ ಕೃಷ್ಣನೇ, ಯೇ-ಯಾರು, ತ್ವಾಂ-ನಿನ್ನನ್ನು, ಭಜಂತಿ-ಪ್ರೀತಿಯಿಂದ ಸೇವಿಸುವರೋ, ಉತವಾ-ಅಲ್ಲದಿದ್ದರೆ, ನಭಜಂತಿ-ಕರ್ಮಾದಿಪ್ರಾಧಾನ್ಯದಿಂದ ನಿನ್ನಂಸೇವಿಸುವುದಿಲ್ಲವೋ, ಉಭಯೇಷಾಂ-ಹಾಗೆ ಎರಡುಬಗೆಯಾಗಿರುವ, ಕುರುಸೃಂಜಯಾನಾಂ-ಕುರುಕುಲದವರಿಗೂ ಸೃಂಜಯ ಕುಲದವರಿಗೂ, ನಿಷ್ಠಾಂ-ನಿನ್ನಸ್ಥಿತಿಯನ್ನು, ಪ್ರದರ್ಶಯ-ಪ್ರಕಟವಾಗಿ ತೋರಿಸು, ||೫|| ಬ್ರಹ್ಮಣಃ-ನಿರುಪಾಧಿಕ ಚೈತನ್ಯವಾದ, ಸರ್ವಾತ್ಮನಃ-ಸಕಲ ಪ್ರಾಣಿಗಳ ಆತ್ಮವಾದ, ಸಮದೃಶಃ-ಸಮವಾಗಿ ನೋಡುತ್ತಿರುವ ಸಾಕ್ಷಿಯಾದ, ಸ್ವಸುಖಾನುಭೂತೇಃ- ಸ್ವರೂಪಸುಖವನ್ನೇ ಅನುಭವಿಸುತ್ತಿರುವನಾದಂಥಾ, ತವ-ನಿನಗೆ, ಸ್ವಪರಭೇದಮತಿಃ-ತಾನು ಇತರರೆಂಬ ಭೇದಬುದ್ಧಿಯು, ನಸ್ಯಾತ್-ಇಲ್ಲದೆಹೋಗಲಿ, [ಆದರೂ] ಸಂಸೇವತಾಂ-ನಿನ್ನನ್ನು ಚನ್ನಾಗಿ ಸೇವಿಸುವರಿಗೇನೇ, ಸುರತರೋರಿವ-ಕಲ್ಪವೃಕ್ಷದ ದೆಸೆಯಿಂದ ಹೇಗೋ ಹಾಗೆ, ಸೇವಾನುರೂಪಉದಯಃ-ಸೇವೆಗೆತಕ್ಕ ಫಲವುಳ್ಳ, ತೇಪ್ರಸಾದಃ-ನಿನ್ನ ಅನುಗ್ರಹವುಂಟಾಗುವುದು. ಅತ್ರ-ಈ ವಿಷಯದಲ್ಲಿ, ವಿಪರ್ಯಯಃ-ವ್ಯತ್ಯಾಸವು, ನ-ಇಲ್ಲವು ||೬|| (ಶ್ರೀಕೃಷ್ಣನು ಹೇಳುವನು) ಶತ್ರುಕರ್ಶನ-ಹಗೆಗಳನ್ನು ಸಂಹರಿಸುವಂಥಾ, ರಾಜನ್-ಧರ್ಮರಾಯನೇ, ಭವತಾ-ನಿನ್ನಿಂದ, ಸಮ್ಯಕ್-ಚನ್ನಾಗಿ, ವ್ಯವಸಿತಂ-ವಿಚಾರಮಾಡಲ್ಪಟ್ಟಿದೆ. ಯೇನ-

---

ವರು. ಮತ್ತು ಇಷ್ಟಾರ್ಥಂಗಳಂ ಬಯಸುವರಾದರೆ ಅವುಗಳಂಕೂಡ ಅವರೇಪಡೆಯುವರಲ್ಲದೆ ಅನ್ಯರು ಚಕ್ರವರ್ತಿಗಳಾದರೂ ಪಡೆಯಲಾರರು ||೪|| ಎಲೈದೇವೋತ್ತಮನೇ! ಆಕಾರಣದಿಂ ದೀಲೋಕವು ಈಗ ನಿನ್ನಪಾದಾರವಿಂದಂಗಳ ಸೇವಾಪ್ರಭಾವವಂ ಪ್ರತ್ಯಕ್ಷವಾಗಿ ನೋಡಲಿ. ಈರೀತಿಯಾಗಿ ನಿನ್ನಸೇವೆಯೇ ಸರ್ವಾರ್ಥಸಾಧಕವೆಂದು ನಿಶ್ಚಯಿಸಲ್ಪಟ್ಟಿದೆ. ಆದರೂ ಕರ್ಮದಲ್ಲಿಯೇ ಆಸಕ್ತರಾದ ಯಾದವಕುರುಸೃಂಜಯ ದೇಶಸ್ಥರಾದ ಕೆಲವರು ಅರಸುಗಳು ನಿನ್ನಭಕ್ತಿಯಂ ಪರಮಪುರುಷಾರ್ಥಕ್ಕೆ ಮುಖ್ಯಸಾಧಕವನ್ನಾಗಿ ತಿಳಿಯುವುದಿಲ್ಲವೋ ಅವರಿಗೂ, ಮತ್ತುಯಾರು ಅಜ್ಞಾನನಿವೃತ್ತಿಗೋಸುಗ ನಿನ್ನಂ ಸೇವಿಸುತಲಿರುವರೋ, ಯಾರು ನಿನ್ನಂ ಸೇವಿಸುವುದಿಲ್ಲವೊ, ಅವರೆಲ್ಲರಿಗೂಕೂಡ ನಿನ್ನಮಹಿಮೆಯಂ ತೋರಿಸುವನಾಗು ||೫|| ಎಲೈಶ್ರೀಹರಿಯೇ! ನಿರುಪಾಧಿಕನಾಗಿ ಸಮಸ್ತ ಪ್ರಪಂಚಕ್ಕೂ ಆತ್ಮರೂಪನಾಗಿ ಸಮದೃಷ್ಟಿಯುಳ್ಳವನಾಗಿ ನಿಜಾನಂದವನನುಭವಿಸುವನಾಗಿಯೂ ಇರುವವನಾದಕಾರಣದಿಂ. ನಿನಗೆ ಇವನು ಸ್ವಕೀಯನು ಇವನುಪರಕೀಯನು ಎಂಬಭೇದಬುದ್ಧಿಯು ಇಲ್ಲವೇಯಿಲ್ಲ. ಆದಾಗ್ಯೂ ಯಾವರೀತಿಯಾಗಿ ಕಲ್ಪವೃಕ್ಷಕ್ಕೆ ರಾಗಾದಿಗಳಿಲ್ಲದಿದ್ದರೂ ಅದಕ್ಕೆ ತನ್ನಸೇವಕರಲ್ಲಿ ಹೊರತು ಅನ್ಯರಲ್ಲಿ ಫಲದಾತೃತ್ವವಿಲ್ಲವೋ ಅದೇರೀತಿಯಾಗಿ ಸೇವಕರಿಗೆ ಮಾತ್ರವೇ ನಿನ್ನಪ್ರಸಾದವುಂಟಾಗುವುದೇಹೊರತು ಅನ್ಯರಿಗಿಲ್ಲ. ಆಸೇವಕರಲ್ಲಿಯೂ ಅವರಸೇವೆಗೆ ಅನುಗುಣವಾಗಿಯೇ ಫಲಪ್ರಾಪ್ತಿಯುಂಟಾಗುವುದು. ಆಕಾರಣದಿಂದ. ನಿನಗೆ ವೈಷಮ್ಯವೂಇಲ್ಲ ||೬|| ಎಂದು ಈರೀತಿಯಾಗಿ ಧರ್ಮರಾಯನಿಂದ ಮಾಡಲ್ಪಟ್ಟ ವಿಜ್ಞಾಪನೆಯಂ

ಷ್ಯತಿ ‖೭‖ ಋಷೀಣಾಂಪಿತೃದೇವಾನಾಂಸುಹೃದಾಮಪಿನಃಪ್ರಭೋ । ಸರ್ವೇಷಾಮಪಿಭೂತಾನಾಮೀಪ್ಸಿ
ತಃಕ್ರತುರಾಡಯಮ್‖೮‖ ವಿಜಿತ್ಯನೃಪತೀನ್ಸರ್ವಾನ್ಕೃತ್ವಾಚಜಗತೀಂವಶೇ । ಸಂಭೃತ್ಯಸರ್ವಸಂಭಾ
ರಾನಾಹರಸ್ವಮಹಾಕ್ರತುಮ್‖೯‖ಯಏತೇಭ್ರಾತರೋರಾಜನ್ಲೋಕಪಾಲಾಂಶಸಂಭವಾಃ।ಜಿತೋಸ್ಮ್ಯಾ
ತ್ಮವತಾತೇಹಂದುರ್ಜಯೋಯೋಕೃತಾತ್ಮಭಿಃ ‖೧೦‖ ನಕಶ್ಚಿನ್ಮತ್ಪರಂಲೋಕೇತೇಜಸಾಯಶಸಾಶ್ರಿಯಾ ।
ವಿಭೂತಿಭಿರ್ವಾಭಿಭವೇದ್ದೇವೋಪಿಕಿಮುಪಾರ್ಥಿವಾಃ ‖೧೧‖ ಶ್ರೀಶುಕಃ‖ನಿಶಮ್ಯಭಗವದ್ಗೀತಂಪ್ರೀತಃಫು

---

ಯಾವರಾಜಸೂಯದಿಂದ, ಕಲ್ಯಾಣೀ-ಮಂಗಳಕರವಾದ, ತೇಕೀರ್ತಿಃ-ನಿನ್ನ ಹೆಸರುವಾಸಿಯು,ಲೋಕಾನ್-ಭುವನಗಳನ್ನು, ಅನು
ಭವಿಷ್ಯತಿ-ವ್ಯಾಪಿಸುವುದೋ ‖೭‖ ಪ್ರಭೋ-ಧೊರೆಯೇ! ಋಷೀಣಾಂ-ಮಹರ್ಷಿಗಳಿಗೂ, ಪಿತೃದೇವಾನಾಂ- ಪಿತೃದೇ
ವತೆಗಳಿಗೂ, ಸುಹೃದಾಂ-ಮಿತ್ರರಿಗೂ, ನೋಪಿ-ನಮಗೂ, ಸರ್ವೇಷಾಂಭೂತಾನಾಮಪಿ-ಸಕಲಪ್ರಾಣಿಗಳಿಗೂ, ಅಯಂಕ್ರ
ತುರಾಟ್-ಈ ಯಾಗಶ್ರೇಷ್ಠವು, ಈಪ್ಸಿತಃ-ಅಪೇಕ್ಷಿತವಾಗಿರುವುದು ‖೮‖ ಸರ್ವಾನ್ನೃಪತೀನ್-ಸಮಸ್ತರಾಜರನ್ನು, ವಿಜಿ
ತ್ಯ-ಗೆದ್ದು, ಜಗತೀಂ-ಭೂಮಿಯನ್ನು, ವಶೇ-ಸ್ವಾಧೀನದಲ್ಲಿ, ಕೃತ್ವಾ-ಮಾಡಿ, ಸರ್ವಸಂಭಾರಾಂಶ್ಚ-ಸಕಲಸಾಮಗ್ರಿಗಳನ್ನೂ,
ಸಂಭೃತ್ಯ-ಸೇರಿಸಿಕೊಂಡು, ಮಹಾಕ್ರತುಂ-ದೊಡ್ಡಯಜ್ಞವನ್ನು, ಆಹರಸ್ವ-ಸಂಪಾದಿಸಿಕೋ ‖೯‖ ರಾಜನ್-ಅರಸೇ! ಯೇ
ಭ್ರಾತರಃ-ಯಾವನಿನ್ನ ಸೋದರರುಂಟೋ, ಏತೇ-ಆಯಾ ಭೀಮಾರ್ಜುನಾದಿಗಳು, ಲೋಕಪಾಲಾಂಶಸಂಭವಾಃ- ವಾಯ್ವಿಂ
ದ್ರಾದಿ ದೇವತೆಗಳ ಭಾಗಗಳಿಂದ ಹುಟ್ಟಿದವರು ಯಃ-ಯಾವನಾನು, ಅಕೃತಾತ್ಮಭಿಃ- ಜಿತೇಂದ್ರಿಯರಲ್ಲದವರಿಂದ, ದುರ್ಜ
ಯಃ-ಜಯಿಸಲ್ಪಡದೇ ಇರುವೆನೋ, ಸೋಹಂಚ-ಆನಾನೂಕೂಡ, ಆತ್ಮವತಾ-ಜಿತಬುದ್ಧಿಯುಳ್ಳ, ತೇ-ನಿನ್ನಿಂದ, ಜಿತಃ-ಗೆಲ್ಲಲ್ಪ
ಟ್ಟವನು, ಅಸ್ಮಿ-ಆಗಿರುವೆನು ‖೧೦‖ ಲೋಕೇ-ಪ್ರಪಂಚದಲ್ಲಿ, ಕಶ್ಚಿದ್ದೇವೋಪಿ-ಒಬ್ಬ ದೇವರಾದರೂ, ಮತ್ಪರಂ-ನನ್ನಲ್ಲಿ ಆ
ಸಕ್ತನಾದ ಭಕ್ತನನ್ನು, ತೇಜಸಾ-ಪರಾಕ್ರಮದಿಂದಲೂ, ಯಶಸಾ-ಕೀರ್ತಿಯಿಂದಲೂ, ಶ್ರಿಯಾ-ಕಾಂತಿಯಿಂದಲೂ, ವಿಭೂತಿಭಿ
ರ್ವಾ-ಐಶ್ವರ್ಯಗಳಿಂದಲಾದರೂ, ನಾಭಿಭವೇತ್-ತಿರಸ್ಕರಿಸಲಾರನು, ಪಾರ್ಥಿವಾಃ-ಅರಸರು, ಕಿಮು-ಏನುಹೇಳತಕ್ಕವರಾಗಿರು
ವರು ‖೧೧‖ (ಶ್ರೀಶುಕರುಹೇಳುವರು) ಭಗವದ್ಗೀತಂ-ಹೀಗೆ ಕೃಷ್ಣನಿಂದ ಹೇಳಲ್ಪಟ್ಟದ್ದನ್ನು, ನಿಶಮ್ಯ-ಕೇಳಿ,ಪ್ರೀತಃ-ಪ್ರೀ
ತಿಯುಂಟಾದವ ನಾದ್ದರಿಂದಲೇ, ಫುಲ್ಲಮುಖಾಂಬುಜಃ-ಅರಳಿದ ಮೊಗದಾವರೆಯುಳ್ಳವನಾದ ಧರ್ಮರಾಯನು, ವಿಷ್ಣುತೇಜೋ
ಪಬೃಂಹಿತಾನ್-ಕೃಷ್ಣನಸಾಮರ್ಥ್ಯದಿಂದ ವೃದ್ಧಿಗೊಳಿಸಲ್ಪಟ್ಟವರಾದ, ಭ್ರಾತೄನ್-ತಮ್ಮಂದಿರನ್ನು, ದಿಗ್ವಿಜಯೇ-ದಿಕ್ಕುಗ

---

ಕೇಳಿ ಶ್ರೀಕೃಷ್ಣನು ನಿರೂಪಿಸುವನೆಂತೆಂದು-ಎಲೈ, ಶತ್ರುಸಂಹಾರಕನಾದ ಧರ್ಮರಾಯನೇ! ಕೇಳು, ಯಾವಯಾ
ಗಸಂಕಲ್ಪದಿಂದ ನಿನ್ನ ಶುಭಕರವಾದ ಕೀರ್ತಿಯು ಸಮಸ್ತಲೋಕಂಗಳಲ್ಲಿ ವ್ಯಾಪಿಸುವುದೋ ಆಪ್ರಕಾರವಾಗಿ
ನೀನು ಯಾಗಸಂಕಲ್ಪವಂ ಚೆನ್ನಾಗಿಮಾಡಿದವನಾದೆ. ಎಂತೆಂದರೆ ‖೭‖ ಎಲೈಅರಸೇ! ಋಷಿಗಳಿಗೂ ದೇವತೆಗಳಿ
ಗೂ ಆಪ್ತರಾದನಮಗೂ ಸಮಸ್ತಭೂತಂಗಳಿಗೂ ಈರಾಜಸೂಯಯಾಗವು ಅಪೇಕ್ಷಿತವಾಗಿಯದು ‖೮‖ ನೀನು
ಸಮಸ್ತ ಭೂತಂಗಳೆಂಜಯಿಸಿ ಭೂಮಿಯಂಸ್ವಾಧೀನಂಗೆಯ್ದು ಸಮಸ್ತಂಗಳಾದ ಯಜ್ಞಸಾಮಗ್ರಿಗಳಂ ಸಂ
ಪಾದಿಸಿ ಮಹಾಕ್ರತುವನ್ನು ಆಚರಿಸುವನಾಗು ‖೯‖ ನಿನ್ನ ಈತಮ್ಮಂದಿರು ಇಂದ್ರಾದಿಲೋಕಪಾಲಕರ ಅಂಶಗ
ಳಿಂ ಜನಿಸಿದರು. ಮತ್ತು ಯಾವ ನಾನು ಜಿತೇಂದ್ರಿಯರಲ್ಲದೆ ಯಿರುವ ಪುರುಷರಿಂ ಜಯಿಸಲಶಕ್ಯನೋ ಅಂತಪ್ಪ
ನಾನು ಜಿತೇಂದ್ರಿಯನಾದ ನಿನ್ನಿಂದ ಜಯಿಸಲ್ಪಟ್ಟಿರುವೆನು ‖೧೦‖ ಲೋಕದಲ್ಲಿ ದೇವನಾದಾಗ್ಯೂ ನನ್ನ
ಭಕ್ತನಾದ ಪುರುಷನಂ ಪ್ರಭಾವದಿಂದಲೂ ಕೀರ್ತಿಯಿಂದಲೂ ಐಶ್ವರ್ಯದಿಂದಲೂ ಸಾಮಗ್ರಿಗಳಿಂದಲೂ ತಿರ
ಸ್ಕರಿಸಲಾರನು. ಹೀಗಿರುವಲ್ಲಿ ನನ್ನಭಕ್ತನಂ ಮನುಷ್ಯಮಾತ್ರರಾದ ಅರಸುಗಳು ತಿರಸ್ಕರಿಸಲಾರರೆಂದು ಏ
ನು ಹೇಳತಕ್ಕದ್ದು! ‖೧೧‖ ಎಂದು ಭಗವಂತನಿಂದ ನಿರೂಪಿಸಲ್ಪಟ್ಟ ವಚನವಂ ಕೇಳಿ ಧರ್ಮರಾಯನುಸಂತೋ
ಷಪಟ್ಟು ವಿಕಸಿತವಾದ ಮುಖಪದ್ಮವುಳ್ಳವನಾಗಿ ವಿಷ್ಣುವಿನ ತೇಜಸ್ಸಿನಿಂದ ವೃದ್ಧಿಹೊಂದಿಸಲ್ಪಟ್ಟಿರುವತಮ್ಮಂ
ದಿರಂ ದಿಗ್ವಿಜಯಕ್ಕೋಸುಗ ಆಜ್ಞಾಪಿಸಿದನೆಂತೆನೆ ‖೧೨‖ ಆಗ ಧರ್ಮರಾಯನು ತಮ್ಮನಾದ ಸಹದೇವನಂ ಸೃಂ

ಲ್ಲನುಮುಖಾಂಬುಜಃ । ಭ್ರಾತೄನ್ ದಿಗ್ವಿಜಯೆಯುಙ್ಕ್ತ ಕೃಷ್ಣಾನಿರ್ವಿಷ್ಟೋಪಬೃಂಹಿತಾನ್ ॥೧೨॥ ಸಹದೇವಂದಕ್ಷಿಣಸ್ಯಾಮಾದಿಶತ್ಸಹಸೃಂಜಯೈಃ । ದಿಶಿಪ್ರತೀಚ್ಯಾಂನಕುಲಮುದೀಚ್ಯಾಂಸವ್ಯಸಾಚಿನಂ ॥ ಪ್ರಾಚ್ಯಾಂವೃಕೋದರಂಮತ್ಸ್ಯೈಃಕೇಕಯೈಃಸಹಮದ್ರಕೈಃ ॥೧೩॥ ತೇವಿಜಿತ್ಯನೃಪಾನ್ವೀರಾಆಜಹ್ರುರ್ದಿಗ್ಭ್ಯಓಜಸಾ । ಅಜಾತಶತ್ರವೇಭೂರಿದ್ರವಿಣಂನೃಪಯಕ್ಷ್ಯತೇ ॥೧೪॥ ಶ್ರುತ್ವಾಜಿತಂಜರಾಸಂಧಂನೃಪತೇರ್ಧ್ಯಾಯತೋಹರಿಃ॥ಆಹೋಪಾಯಂತಮೇವಾದ್ಯಉದ್ಧವೋಯಮುವಾಚಹ ॥೧೫॥ ಭೀಮಸೇನೋರ್ಜುನಃಕೃಷ್ಣೋಬ್ರಹ್ಮಲಿಂಗಧರಾಸ್ತ್ರಯಃ । ಜಗ್ಮುರ್ಗಿರಿವ್ರಜಂತಾತಬೃಹದ್ರಥಸುತೋಯತಃ ॥೧೬॥ ತಂಗತ್ವಾತಿಥ್ಯವೇಳಾಯಾಂಗೃಹೇಷುಗೃಹಮೇಧಿನಮ್ । ಬ್ರಹ್ಮಣ್ಯಂಸಮಯಾಚಂತರಾಜನ್ಯಾಬ್ರಹ್ಮಲಿಂಗಿನಃ॥೧೭॥ರಾಜನ್ವಿದ್ಧ್ಯತಿಥೀನಸ್ಮಾನರ್ಥಿನೋದೂರಮಾಗತಾನ್ । ತನ್ನಃಪ್ರಯ

---

ರನ್ನುಗೆಲ್ಲುವವಿಷಯದಲ್ಲಿ, ಅಯುಙ್ಕ್ತ-ಆಜ್ಞಾಪಿಸಿದನು ॥೧೨॥ ಸೃಂಜಯೈಸ್ಸಹ-ಸೃಂಜಯರೆಂಬ ಅರಸುಗಳೊಡನೆ, ಸಹದೇವಂ-ಸಹದೇವನೆಂಬ ತಮ್ಮನನ್ನು, ಪಕ್ಷಿಣಸ್ಯಾಂ-ತೆಂಕಲಕಡೆಯಲ್ಲಿ, ಆದಿಶತ್-ಆಜ್ಞಾಪಿಸಿದನು, ಮತ್ಸ್ಯೈಸ್ಸಹ-ಮತ್ಸ್ಯದೇಶದವರೊಡನೆ ಕೂಡಿದ, ನಕುಲಂ-ನಕುಲನನ್ನು, ಪ್ರತೀಚ್ಯಾಂದಿಶಿ-ಪಡುವಲಕಡೆಯಲ್ಲಿ(ಗೆಯ್ದುಬರುವುದಕ್ಕೆ) ಆಜ್ಞಾಪಿಸಿದನು,ಕೇಕಯೈಸ್ಸಹ-ಕೇಕಯದೇಶ ದರಸುಗಳೊಡನೆ, ಸವ್ಯಸಾಚಿನಂ-ಅರ್ಜುನನನ್ನು, ಉದೀಚ್ಯಾಂ-ಬಡಕಲಕಡೆಯಲ್ಲಿಯೂ,(ಜಯಿಸಲು) ಆದಿಶತ್-ಆಜ್ಞಾಪಿಸಿದನು ॥೧೩॥ ನೃಪ-ಅರಸನಾದ ಪರೀಕ್ಷಿತನೇ ಕೇಳು, ತೇ-ಆತಮ್ಮಂದಿರು ವೀರಾನ್-ಶೂರರಾದ, ನೃಪಾನ್ ಅರಸುಗಳನ್ನು, ವಿಜಿತ್ಯ-ಗೆದ್ದು, ಓಜಸಾ-ಪರಾಕ್ರಮದಿಂದ, ಯಕ್ಷ್ಯತೇ-ಯಾಗಮಾಡುತ್ತಿರುವ, ಅಜಾತಶತ್ರವೇ-ಧರ್ಮರಾಯಂಗೆ, ಭೂರಿದ್ರವಿಣಂ-ಬಹುಧನವನ್ನು, ದಿಗ್ಭ್ಯಃ-ದೆಸೆಗಳ ಕಡೆಯಿಂದ, ಆಜಹ್ರುಃ-ತಂದಿತ್ತರು ॥೧೪॥ ಆದ್ಯಃ-ಆದಿಪುರುಷನಾದ, ಹರಿಃ-ಕೃಷ್ಣನು ಜರಾಸಂಧಂ-ಬಾರ್ಹದ್ರಥಿರಾಜನನ್ನು, ಅಜಿತಂ-ಗೆಲ್ಲಲ್ಪಡದೇ ಇರುವನನ್ನಾಗಿ, ಶ್ರುತ್ವಾ-ಕೇಳಿ, ಧ್ಯಾಯತಃ-ಆಲೋಚಿಸುತ್ತಿರುವ, ನೃಪತೇಃ-ಅರಸನಿಗೆ, ಉದ್ಧವೋಯಮುವಾಚ-ಉದ್ಧವನು ಯಾವುದರನ್ನು ಹೇಳಿದ್ದನೋ, ತಮುಪಾಯಮೇವ-ಆಯುಕ್ತಿಯನ್ನೇ, ಆಹ-ಪೇಳ್ದನು ॥೧೫॥ ತತಃ-ಬಳಿಕ, ತಾತ-ಅಯ್ಯಾ ಪರೀಕ್ಷಿತನೇ, ಭೀಮಸೇನಃ-ಭೀಮನೂ, ಅರ್ಜುನಃ-ಅರ್ಜುನನೂ, ಕೃಷ್ಣಃ-ಕೃಷ್ಣನೂ, ಬ್ರಹ್ಮಲಿಂಗಧರಾಃ-ಬ್ರಾಹ್ಮಣರ ಗುರುತುಗಳನ್ನು ಧರಿಸಿಕೊಂಡವರಾಗಿ, ಬೃಹದ್ರಥಸುತಃ-ಬೃಹದ್ರಥರಾಜನ ಮಗನಾದ ಜರಾಸಂಧನು,ಯತಃ-ಎಲ್ಲಿರುವನೋ, ತತೋಗಿರಿವ್ರಜಂ-ಆ ಗಿರಿವ್ರಜನಗರವನ್ನು ಕುರಿತು, ತೆರಳ್ದರು ॥೧೬॥ ಗೃಹಮೇಧಿನಂ-ಗೃಹಸ್ಥಶ್ರೇಷ್ಠನಾದ, ಬ್ರಹ್ಮಣ್ಯಂ-ಬ್ರಾಹ್ಮಣಪ್ರಿಯನಾದ, ಗೃಹೇಷು-ಮನೆಗಳಲ್ಲಿರುವಂಥಾ, ತಂ-ಆ ಜರಾಸಂಧನನ್ನು,ಆತಿಥ್ಯವೇಳಾಯಾಂ-ಅತಿಥಿಸತ್ಕಾರ ಸಮಯದಲ್ಲಿ, ಗತ್ವಾ-ಹೋಗಿ, ಬ್ರಹ್ಮಲಿಂಗಿನಃ-ಬ್ರಾಹ್ಮಣವೇಷವುಳ್ಳ, ರಾಜನ್ಯಾಃ-ಪಟ್ಟಾಭಿಷಿಕ್ತರಾಜರಾದ, ಭೀಮಾರ್ಜುನ ಕೃಷ್ಣರು, ಸಮಯಾಚಂತ-ಚನ್ನಾಗಿಬೇಡಿಕೊಂಡರು ॥೧೭॥ ರಾಜನ್-ಎಲೈ ಮಗಧರಾಯನೇ । ದೂರಂ-ದೂರದೇಶವನ್ನು ಕುರಿತು, ಆಗತಾನ್-ಬಂದಿರುವರಾದ, ಅಸ್ಮಾನ್-

---

ಜಯದೇಶಸ್ಥರಾದ ಅರಸುಗಳೊಡಗೂಡಿಸಿ ದಕ್ಷಿಣದಿಕ್ಕಿಗೂ, ನಕುಲನಂ ಮತ್ಸ್ಯದೇಶಸ್ಥರಾದ ಅರಸುಗಳೊಡಗೂಡಿಸಿ ಪಶ್ಚಿಮದಿಕ್ಕಿಗೂ, ಅರ್ಜುನನಂ ಕೇಕಯದೇಶಸ್ಥರಾದ ಅರಸುಗಳೊಡಗೂಡಿಸಿ ಉತ್ತರದಿಕ್ಕಿಗೂ, ಭೀಮನಂ ಮದ್ರದೇಶಸ್ಥರಾದ ಅರಸುಗಳೊಡಗೂಡಿಸಿ ಪೂರ್ವದಿಕ್ಕಿಗೂಸಹ ಕಳುಹಿಸಿದನು॥೧೩॥ ಎಲೈಅರಸೇ ಕೇಳು, ಅನಂತರದಲ್ಲಿ ವೀರರಾದ ಆಭೀಮಾದಿಗಳು ಪರಾಕ್ರಮದಿಂ ದಲ್ಲಲ್ಲಿರುವ ಭೂಪತಿಗಳಂ ಜಯಿಸಿ ಆಯಾದಿಕ್ಕುಗಳದೆಸೆಯಿಂದ ಯಜಮಾನನಾದ ಧರ್ಮರಾಯನಿಗೋಸುಗ ಅಧಿಕವಾದಧನವಂ ತಂದೊಪ್ಪಿಸಿದರು ॥೧೪॥ಅನಂತರದಲ್ಲಿ ಜರಾಸಂಧನು ಜಯಿಸಲಿಲ್ಲವೆಂಬ ಅರ್ಥವಂ ಭೀಮಾದಿಗಳ ದೆಸೆಯಿಂದಕೇಳಿ ಚಿಂತಿಸುತಿರಲು ಆಗ ಆದಿಪುರುಷನಾದ ಶ್ರೀಕೃಷ್ಣನು ಪೂರ್ವದಲ್ಲಿ ಜರಾಸಂಧನ ವಧೆಗೋಸುಗ ಉದ್ಧವನು ಯಾವಉಪಾಯವಂ ಪೇಳಿದನೋ ಅದರನ್ನು ನಿರೂಪಿಸಿದನು॥೧೫॥ ಬಳಿಕ ಭೀಮನೂ ಅರ್ಜುನನೂ ಶ್ರೀಕೃಷ್ಣನು ಇವರುಮೂವರೂಬ್ರಾಹ್ಮಣವೇಷಗಳಂ ಧರಿಸಿದವರಾಗಿ ಜರಾಸಂಧನಿರುವ ಗಿರಿವ್ರಜವೆಂಬ ಪಟ್ಟಣವನೆಯ್ದಿದರು॥೧೬॥ ಆಮೇಲೆ ಕ್ಷತ್ರರಾದ ಆಭೀಮಾದಿಗಳು ಬ್ರಾಹ್ಮಣವೇಷಧಾರಿಗಳಾಗಿ ಆತಿಥ್ಯಸಮಯದಲ್ಲಿ ಬ್ರಾಹ್ಮಣಪ್ರಿಯನಾದ ಆಜರಾಸಂ

ಚ್ಛಭದ್ರಂತೇಯದ್ವಯಂಕಾಮಯಾಮಹೇ॥೧೮॥ ಕಿಂದುರ್ಮರ್ಷಂತಿತಿಕ್ಷೂಣಾಂಕಿಮಕಾರ್ಯಮಸಾಧುಭಿಃ । ಕಿಮದೇಯಂವದಾನ್ಯಾನಾಂಕಃಪರಸ್ಸಮದರ್ಶಿನಾಮ್ ॥೧೯॥ ಯೋನಿತ್ಯೇನಶರೀರೇಣಸತಾಂಗೇಯಂಯಶೋಧ್ರುವಮ್ । ನಚಿನೋತಿಸ್ವಯಂಕಲ್ಯಸ್ಸವಾಚ್ಯಶ್ಶೋಚ್ಯಏವಸಃ॥೨೦॥ ಹರಿಶ್ಚಂದ್ರೋರಂತಿದೇವಉಂಛವೃತ್ತಿಶ್ಶಿಬಿರ್ಬಲಿಃ।ವ್ಯಾಧಃಕಪೋತೋಬಹವೋಹ್ಯಧ್ರುವೇಣಧ್ರುವಂಗತಾಃ॥೨೧॥ಶ್ರೀಶುಕಃ॥

---

ನಮ್ಮಗಳನ್ನು, ಅರ್ಥಿನಃ-ಯಾಚಕರನ್ನಾಗಿ, ವಿದ್ಧಿ-ತಿಳಿಯುಕೋ, ವಯಂ-ನಾವು, ಯತ್-ಯಾವುದರನ್ನು, ಕಾಮಯಾಮಹೇ-ಬಯಸುವೆವೋ, ತತ್-ಅದರನ್ನು, ನಃ-ನಮಗೆ, ಪ್ರಯಚ್ಛ-ಚನ್ನಾಗಿಕೊಡು, ತೇ-ನಿನಗೆ, ಭದ್ರಂ-ಶುಭವಾಗುವದು॥೧೮॥ತಿತಿಕ್ಷೂಣಾಂ-ಸೈರಿಸುವ ಸ್ವಭಾವವುಳ್ಳವರಿಗೆ, ದುರ್ಮರ್ಷಂಕಿಂ-ಸೈರಿಸಲಾಗದೆ ಯಿರುವದಾವುದುಂಟು, ಅಸಾಧುಭಿಃ-ಅಯೋಗ್ಯರಿಂದ, ಅಕಾರ್ಯಂ-ಮಾಡಲ್ಪಡಕೂಡದ್ದು, ಕಿಂ-ಯಾವುದುಂಟು, ವದಾನ್ಯಾನಾಂ-ಅಧಿಕದಾನ ಶೀಲರಿಗೆ, ಅದೇಯಂ-ಕೊಡತಕ್ಕದ್ದಲ್ಲದೆ ಯಿರುವುದು, ಕಿಂ-ಯಾವುದಿದೆ, ಸಮದರ್ಶಿನಾಂ-ಸಮವಾಗಿ ನೋಡುವವರಿಗೆ, ಪರಃ ಹೆರವನು, ಕಃ-ಯಾವನಿರುವನು ॥೧೯॥ ಯಃ-ಯಾವ ಪುರುಷನು, ಸ್ವಯಂ-ತಾನು, ಕಲ್ಯಃ-ಸಮರ್ಥನಾದರೂಕೊಡ, ಅನಿತ್ಯೇನ-ಅಶಾಶ್ವತವಾದ, ಶರೀರೇಣ-ದೇಹದಿಂದ, ಸತಾಂ-ಸತ್ಪುರುಷರಿಗೆ, ಗೇಯಂ-ಗಾನಯೋಗ್ಯವಾದ, ಧ್ರುವಂ-ಶಾಶ್ವತವಾದ, ಯಶಃ-ಕೀರ್ತಿಯನ್ನು, ನಚಿನೋತಿ-ಸಂಪಾದಿಸುವುದಿಲ್ಲವೋ, ಸಃ-ಆ ಪುರುಷನು, ನಃ-ನಮಗೆ, ವಾಚ್ಯಃ-ಹೀಗಳೆಯಲ್ಪಡತಕ್ಕವನು, ಶೋಚ್ಯಏವ-ಅಳಲ್ಪಡತಕ್ಕವನೇ ಸರಿ ॥೨೦॥ ಹರಿಶ್ಚಂದ್ರಃ-ಹರಿಶ್ಚಂದ್ರರಾಯನೂ, ರಂತಿದೇವಃ-ರಂತಿದೇವನೆಂಬವನೂ,ಉಂಛವೃತ್ತಿಃ-ಕಾಳನ್ನು ಆರಿಸಿಕೊಂಡು ಜೀವಿಸುತ್ತಿದ್ದಮುದ್ಗಲನೆಂಬವನೂ, ಶಿಬಿಃ-ಶಿಬಿಚಕ್ರವರ್ತಿಯೂ, ಬಲಿಃ-ಬಲಿಚಕ್ರವರ್ತಿಯೂ, ವ್ಯಾಧಃ-ಬೇಡರವನೂ, ಕಪೋತಃ-ಪಾರಿವದಹಕ್ಕಿಯೂ, ಬಹವಃ-ಬಹುಮಂದಿ, ಅಧ್ರುವೇಣ-ಅನಿತ್ಯವಾದ ಶರೀರದಿಂದ; ಧ್ರುವಂ-ಶಾಶ್ವತವಾದ ಸ್ವರ್ಗವನ್ನು, ಗತಾಃ-ಹೊಂದಿದವರಲ್ಲವೆ ॥೨೧॥ (ಜರಾಸಂಧನು)ಸ್ವರೈಃ-ಧ್ವನಿವಿಶೇಷಗಳಿಂದಲೂ, ತೈಃ-ಅಂ

---

ಧನನೆಯ್ದಿ ಈರೀತಿಯಾಗಿ ಚನ್ನಾಗಿಯಾಚಿಸಿದರು-ಅದೆಂತೆನೆ ॥೧೭॥ ಎಲೈಅರಸೇ! ಅತಿಥಿಗಳಾದ ನಮ್ಮಂ ದೂರದೇಶದಪಸೆಯಿಂದ ಬಂದಿರುವ ಯಾಚಕರನ್ನಾಗಿ ತಿಳಿಯುವನಾಗು. ನಿನಗೆ ಶುಭವುಂಟಾಗಲಿ, ಆವುದಂನಾವು ಇಚ್ಛೈಸುತ್ತಲಿರುವೆವೋ ಆನಮ್ಮಿಷ್ಟಾರ್ಥವಂ ನಮಗೆ ಕೊಡುವನಾಗು॥೧೮॥ ಎಲೈ, ಜರಾಸಂಧನೇ! ಕೇಳ್ಳಯಾವರೀತಿಯಿಂದ ಅದು ದುರ್ಜನರಿಗೆ ಅಕಾರ್ಯವೆಂದು ನಿಷಿದ್ಧವಾದುದಲ್ಲವೋ ಅದೇರೀತಿಯಿಂದ ಕ್ಷಮಾವಂತರಿಗೆ ಸಹಿಸಲಶಕ್ಯವಾದು ಹಾಗೆಯೇ ಅತ್ಯಂತದಾತೃಗಳಿಗೆ ಕೊಡಲಶಕ್ಯವಾದುದಿಲ್ಲ. ಸಮದೃಷ್ಟಿಯುಳ್ಳವನಿಗಾದರೋ ಹೆರವನೇ ಇಲ್ಲ ॥ ॥ ಯಾವಪುರುಷನು ತಾನು ಸಮರ್ಥನಾದರೂ ಅನಿತ್ಯವಾದ ಶರೀರದಿಂ ಶಾಶ್ವತವಾದ ಸತ್ಪುರುಷರಿಂ ಶ್ಲಾಘಿಸಲ್ಪಡತಕ್ಕ ಕೀರ್ತಿಯಂ ಸಂಪಾದಿಸುವುದಿಲ್ಲವೋ ಅವನಂ ನಿಂದಿಸಬೇಕು, ಮತ್ತು ದುಃಖಪಡಿಸಬೇಕು ॥೨೦॥ ಎಲೈಜರಾಸಂಧನೇ! ಪೂರ್ವದಲ್ಲಿ ಹರಿಶ್ಚಂದ್ರರಾಯನು ವಿಶ್ವಾಮಿತ್ರನ ಸಾಲವು ತಾನುತೀರಿಸಿಕೊಳ್ಳಲೋಸುಗ ಪತ್ನೀಪುತ್ರಾದಿಸಮಸ್ತವಸ್ತುಗಳಂ ಮಾರಿಬಿಟ್ಟು ತಾನು ಚಂಡಾಲತ್ವವು ಅನುಭವಿಸಿದನಾದನೋ, ಅವನು ದೈನ್ಯಪಟ್ಟವನಾಗದೆ ಅಯೋಧ್ಯಾಪುರವಾಸಿಗಳಾದ ಜನರೊಡಗೂಡಿ ಸ್ವರ್ಗವನೆಯ್ದಿದನು. ಅದೇರೀತಿಯಾಗಿ ಪೂರ್ವದೊಳು ರಂತಿದೇವನೆಂಬಅರಸು ತನ್ನಪತ್ನೀಪುತ್ರಾದಿಗಳೊಡಗೂಡಿ ೪೮ದಿನಂಗಳು ಜೀವನಾರ್ಥವಾಗಿ ಜಲವಂಸಹಪಡೆಯದವನಾಗದೆಯಿದ್ದು, ಅನಂತರದಲ್ಲಿ ಅತಿಪ್ರಯಾಸದಿಂ ಪಡೆಯಲ್ಪಟ್ಟ ಜಲವಂಕೂಡ ಆಕಾಲದಲ್ಲಿ ಜಲಾರ್ಥಿಗಳಾಗಿಬಂದಿರುವ ಬ್ರಾಹ್ಮಣರಿಗಿತ್ತು ತಾನು ಸಕುಟುಂಬನಾಗಿ ಉಪವಾಸಂಗೆಯ್ದು ಬ್ರಹ್ಮಲೋಕವನೆಯ್ದಿದನು. ಅದೇರೀತಿಯಲ್ಲಿ ಮುದ್ಗಲನೆಂಬಋಷಿಯು ಆರುತಿಂಗಳು ಅನ್ನೋದಕಾದಿಗಳಿಲ್ಲದೆ ಕ್ಷೀಣನಾಗಿ ಪತ್ನೀಪುತ್ರರುಳ್ಳವನು ಅತಿಥಿಗಳಿಗೆ ಆತಿಥ್ಯವಂಗೆಯ್ದವನಾದುದರಿಂದ ಬ್ರಹ್ಮಲೋಕವನೆಯ್ದಿದನು. ಅದೇರೀತಿ ಉ ಶರಣುಹೊಂದಿರುವ ಕಪೋತಪಕ್ಷಿಯಂ ರಕ್ಷಿಸಲೋಸುಗ ತನ್ನ ಮಾಂಸವಂ ಗಿಡಗನಿಗಿತ್ತು ಸ್ವ ನು. ಅದೇರೀತಿಯಿಂದ ಬಲಿಚಕ್ರವರ್ತಿಯು ಬ್ರಾಹ್ಮಣರೂಪವಂಧರಿಸಿ

ಸ್ವರೈರಾಕೃತಿಭಿಸ್ತೈಸ್ತು ಪ್ರಕೋಷ್ಠೈರ್ಜ್ಯಾಹತೈರಪಿ । ರಾಜನ್ಯಬಂಧೂನ್ವಿಜ್ಞಾಯ ದೃಷ್ಟಪೂರ್ವಾನಚಿಂತಯತ್ ॥೨೦॥ ರಾಜನ್ಯಬಂಧವೋಹ್ಯೇತೇ ಬ್ರಹ್ಮಲಿಂಗಾನಿ ಬಿಭ್ರತಿ । ದದಾಮಿ ಭಿಕ್ಷಿತಂ ತೇಭ್ಯ ಆತ್ಮಾನಮಪಿ ದುಸ್ತ್ಯಜಮ್ ॥೨೧॥ ಬಲೇರ್ನು ಶ್ರೂಯತೇ ಕೀರ್ತಿರ್ವಿತತಾ ದಿಕ್ಷ್ವಕಲ್ಮಷಾ । ಐಶ್ವರ್ಯಾದ್ಭ್ರಂಶಿತಸ್ಯಾಪಿ ವಿಪ್ರವ್ಯಾಜೇನ ವಿಷ್ಣುನಾ ॥೨೨॥ ಶ್ರಿಯಂ ಜಿಹೀರ್ಷತೇಂದ್ರಸ್ಯ ವಿಷ್ಣವೇ ದ್ವಿಜರೂಪಿಣೇ । ಜಾನನ್ನಪಿ ಮಹೀಂ ಪ್ರಾದಾದ್ವಾರ್ಯಮಾಣೋಪಿ ದೈತ್ಯರಾಟ್ ॥೨೩॥ ಜೀವತಾ ಬ್ರಾಹ್ಮಣಾರ್ಥಾಯ ಕೋ

---

ಧಾರಾಜಯೋಗ್ಯಂಗಳಾದ, ಆಕೃತಿಭಿಃ-ಆ ಆಕಾರಗಳಿಂದಲೂ, ಜ್ಯಾಹತೈಃ-ಬಿಲ್ಲಿನದೆಶೆಯಿಂದ ಬಡಿಯಲ್ಪಟ್ಟಿರುವ, ಪ್ರಕೋಷ್ಠೈಃ-ಹಿಂಗೈಗಳಿಂದಲೂ, ತಾನ್-ಆ ಯಾಚಕರನ್ನು, ದೃಷ್ಟಪೂರ್ವಾನ್-ಪೂರ್ವದೊಳು ದ್ರೌಪದೀಸ್ವಯಂವರಾದಿ ಕಾಲಗಳಲಿ, ತನ್ನಿಂದ ನೋಡಲ್ಪಟ್ಟವರಾಗಿರುವ, ರಾಜನ್ಯಬಂಧೂನ್-ಕ್ಷತ್ರಿಯರನ್ನಾಗಿ, ವಿಜ್ಞಾಯ-ತಿಳಿದು, ಅಚಿಂತಯತ್-ಯೋಚಿಸಿದನು ॥೨೦॥ ಏತೇ-ಇವರು, ರಾಜನ್ಯಬಂಧವೋಹಿ-ಅರಸುಮಕ್ಕಳಲ್ಲವೆ. (ಆದರೂ) ಬ್ರಹ್ಮಲಿಂಗಾನಿ-ಬ್ರಾಹ್ಮಣರ ಚಿಹ್ನೆಗಳನ್ನು, ಬಿಭ್ರತಿ-ಧರಿಸಿಯಿದ್ದಾರೆ, ತೇಭ್ಯಃ-ಅವರಿಗೆ, ದುಸ್ತ್ಯಜಂ-ಬಿಡಕೂಡದಂಥಾ, ಆತ್ಮಾನಮಪಿ-ಪ್ರಾಣವನ್ನಾದರೂ, ಭಿಕ್ಷಿತಂ-ಅವರ ಮನೋರಥವನ್ನು, ದದಾಮಿ-ಕೊಡುವೆನು ॥೨೧॥ ಬಲೇಃ-ಬಲಿಚಕ್ರವರ್ತಿಯ, ಕೀರ್ತಿಃ-ಹೆಸರುವಾಸಿಯು, ದಿಕ್ಷು-ದೆಸೆಗಳಲ್ಲಿ, ವಿತತಾ-ವ್ಯಾಪಕವಾದ್ದಾಗಿಯೂ, ಅಕಲ್ಮಷಾ-ದೋಷವಿಲ್ಲದ್ದಾಗಿಯೂ, ಶ್ರೂಯತೇನು-ಕೇಳಲ್ಪಡುತ್ತಿದೆಯಷ್ಟೆ, ಸೋಪಿ-ಆ ಬಲಿಚಕ್ರವರ್ತಿಯೂ ಕೂಡ, ವಿಪ್ರವ್ಯಾಜೇನ-ಬ್ರಾಹ್ಮಣನೆಂಬ ನೆವವುಳ್ಳ, ವಿಷ್ಣುನಾ-ವಿಷ್ಣುವಿನಿಂದ, ಐಶ್ವರ್ಯಾತ್-ಒಡೆತನದ ದೆಸೆಯಿಂದ, ಭ್ರಂಶಿತಃ-ಜಾರಿಸಲ್ಪಟ್ಟವನಾದನು ॥೨೨॥ ದೈತ್ಯರಾಟ್-ದೈತ್ಯರಿಗರಸಾದ ಬಲಿಯು, ಜಾನನ್ನಪಿ-ತಿಳಿದವನಾದರೂ, ಇಂದ್ರಸ್ಯ-ಇಂದ್ರನ, ಶ್ರಿಯಂ-ಐಶ್ವರ್ಯವನ್ನು, ಜಿಹೀರ್ಷತೇ-ತನ್ನಿಂದ ಅಪಹರಿಸಲೆಳಸಿದಂಥಾ, ದ್ವಿಜರೂಪಿಣೇ-ವಾಮನ ಬ್ರಾಹ್ಮಣರೂಪವುಳ್ಳ, ವಿಷ್ಣವೇ-ಉಪೇಂದ್ರನಿಗೆ, ಮಹೀಂ-ಭೂಮಿಯನ್ನು, ವಾರ್ಯಮಾಣೋಪಿ-ಶುಕ್ರನಿಂದ ತಡೆಯಲ್ಪಡುತಿರುವನಾದರೂ, ಪ್ರಾದಾತ್-ಕೊಟ್ಟನು ॥೨೩॥ ಪತಮಾನೇನ-ಬಿದ್ದುಹೋಗುತ್ತಿರುವಂಥಾ, ಬ್ರಾ

---

ಣುವ ಶ್ರೀಹರಿಗೋಸುಗ ಸರ್ವಸ್ವವನಿತ್ತು, ಆ ಶ್ರೀಹರಿಯನ್ನೇ ತನ್ನ ಅಧೀನಪಡಿಸಿಕೊಂಡನು. ಅದೇರೀತಿಯಿಂದ ಪೂರ್ವದೊಳಗೊಂದು ಕಪೋತಪಕ್ಷಿಯು ಅತಿಥಿಯಾಗಿಬಂದ ಕಿರಾತನಿಗೋಸುಗ ಸ್ತ್ರೀಪಕ್ಷಿಯೊಡಗೂಡಿರುವ ತನ್ನ ಮಾಂಸವನಿತ್ತು ಆಕ್ಷಣದಲ್ಲಿಯೇ ವಿಮಾನದಿಂ ಸ್ವರ್ಗವನೆಯ್ದಿತು. ಬಳಿಕ ಆ ಕಿರಾತನುಕೂಡ ಆ ಪಕ್ಷಿಗಳ ಸತ್ವಗುಣವನ್ನೋಡಿ ತಾನು ಪಶ್ಚಾತ್ತಪ್ತನಾಗಿ ~~ಮಹಾಪ್ರಸ್ಥಾನವನೆಯ್ದಿ ಅಗ್ನಿಯಿಂ~~ ಲ್ಪಟ್ಟ ದೇಹವುಳ್ಳವನಾಗಿ ಪಾಪರಹಿತನಾಗಿ ಸ್ವರ್ಗವನೆಯ್ದಿದನು. ಅದೇರೀತಿಯಿಂದ ಅನ್ಯರಾದ ವ ಪುರುಷರುಕೂಡ ಅಶಾಶ್ವತವಾದ ಶರೀರದಿಂ ಶಾಶ್ವತವಾದ ಲೋಕವನೆಯ್ದಿದರು ॥೧೯॥ ಎಲೈ ಪರೀಕ್ಷಿದ್ರಾಯನೇ! ಕೇಳು, ಭೀಮಾದಿಗಳು ಧರ್ಮಸ್ವರೂಪವಂ ಪೇಳುತಲಿರಲು ಆ ಜರಾಸಂಧನು ಇವರ ಸ್ವರಗಳಿಂದಲೂ ಆಕೃತಿಗಳಿಂದಲೂ ಮತ್ತು ಹೆದೆಯಂ ಸೆಳೆದು ಜಡ್ಡುಗಟ್ಟಿರುವ ಹಸ್ತಂಗಳಿಂದಲೂ ಆ ಭೀಮಾದಿಗಳಂ ಪೂರ್ವದಲ್ಲಿ ನೋಡಲ್ಪಟ್ಟ ಅರಸುಗಳನ್ನಾಗಿ ತಿಳಿದು ಈರೀತಿಯಾಗಿ ಚಿಂತಿಸಿದನೆಂತೆನೆ? ॥೨೦॥ ಕ್ಷತ್ರಿಯರಾದ ಈ ಮೂವರೂ ಬ್ರಾಹ್ಮಣವೇಷವಂಧರಿಸಿಕೊಂಡು ಬಂದಿರುವರು, ತ್ಯಾಗಮಂಗೆಯ್ಯಲುತಕ್ಕದ್ದಲ್ಲದ ನನ್ನ ಪ್ರಾಣವು ಈಗ ಇವರಿಂದ ಯಾಚಿಸಲ್ಪಟ್ಟತಾಗಿ ಅದನ್ನೂ ಕೂಡ ಇವರಿಗೋಸುಗ ಕುಡುವನಾಗುವೆನು ॥೨೧॥ ಪೂರ್ವದಲ್ಲಿ ಬ್ರಾಹ್ಮಣವೇಷವಂ ಧರಿಸಿಬಂದ ವಾಮನಮೂರ್ತಿಯಿಂ ಬಲಿಯು ತ್ರಿಲೋಕಸಾಮ್ರಾಜ್ಯದಿಂದ ಭ್ರಷ್ಟನಾಗಿ ಮಾಡಲ್ಪಟ್ಟರೂ ಆ ಬಲಿಯ ನಿರ್ದುಷ್ಟವಾದ ಕೀರ್ತಿಯು ಈಗಲೂ ದಿಕ್ಕುದಿಕ್ಕುಗಳಲ್ಲಿಯೂ ಅತಿವಿಸ್ತಾರವಾಗಿ ಕೇಳಲ್ಪಡುತಲಿದೆಯಲ್ಲವೆ ॥೨೨॥ ಇಂದ್ರನ ತ್ರಿಲೋಕಸಾಮ್ರಾಜ್ಯವಂ ಸಾಧಿಸಿಕೊಡಲಿಚ್ಛೈಸುತಲಿರುವನಾಗಿ ಬ್ರಾಹ್ಮಣವೇಷವಂಧರಿಸಿರುವ ವಾಮನಮೂರ್ತಿಯಾದ ಶ್ರೀಹರಿಗೋಸುಗ ಬಲಿಚಕ್ರವರ್ತಿಯು ಶುಕ್ರಾಚಾರ್ಯನಿಂದ ಅ ವರೂ ಶ್ರೀವಿಷ್ಣು
ವೇ ಇವನಾಗಿಬಂದಿರುವನೆಂದು ತಿಳಿದಿರುವನಾದರೂ ಭೂಮಿಯನಿತ್ತನಲ್ಲ: ತ್ಯವಾದ ಶರೀರದಿಂದ ಬ್ರಾ

ಸ್ವಾರ್ಥಃ ಕ್ಷತ್ರಬಂಧುನಾ । ದೇಹೇನಪತಮಾನೇನನೇಹತಾವಿಪುಲಂಯಶಃ ‖೨೬‖ ಇತ್ಯುದಾರಮತಿಃ ಪ್ರಾಹ
ಕೃಷ್ಣಾರ್ಜುನವೃಕೋದರಾನ್ । ಹೇವಿಪ್ರಾಃ ವ್ರಿಯತಾಂಕಾಮೋದಾಸ್ಯಾಮ್ಯಾತ್ಮಶಿರೋಽಪಿವಃ ‖೨೭‖
ಶ್ರೀಭಗವಾನ್ ‖ಯುದ್ಧಂನೋದೇಹಿರಾಜೇಂದ್ರದ್ವಂದ್ವಶೋಯದಿಮನ್ಯಸೇ ।ಯುದ್ಧಾರ್ಥಿನೋವಯಂ
ಪ್ರಾಪ್ತಾರಾಜನ್ಯಾನಾನ್ಯಕಾಂಕ್ಷಿಣಃ‖೨೮‖ಅಸೌವೃಕೋದರಃಪಾರ್ಥಸ್ತಸ್ಯಭ್ರಾತಾರ್ಜುನೋಹ್ಯಯ
ಮ್ । ಅನಯೋರ್ಮಾತುಲೇಯಂಮಾಂಕೃಷ್ಣಂಜಾನೀಹಿತೇರಿಪುಮ್ ‖೨೯‖ ಏವಮಾವೇದಿತೋರಾಜಾಜಹಾ
ಸೋಚ್ಚೈಃಸ್ಮಮಾಗಧಃ । ಆಹಚಾಮರ್ಷಿತೋಮಂದಾಃಯುದ್ಧಂತರ್ಹಿದದಾಮಿವಃ‖೩೦‖ನತ್ವಯಾ

---

ಹ್ಮಣಾರ್ಥಾಯ-ಬ್ರಾಹ್ಮಣನ ಪ್ರಯೋಜನಕ್ಕೋಸುಗ, ವಿಪುಲಂಯಶಃ-ವಿಸ್ತಾರವಾದ ಕೀರ್ತಿಯನ್ನು, ನೇಹತಾ-ಬಯಸದೆಯಿ ರುವಂಥಾ, ಕ್ಷತ್ರಬಂಧುನಾದೇಹೇನ-ಕ್ಷತ್ರಿಯಶರೀರದಿಂದ, ಕೋನ್ವರ್ಥಃ-ಯಾವಪ್ರಯೋಜನತಾನೆ ಇರುವುದು ‖೨೬‖ ಇತಿ-ಹೀಗೆ, ಉದಾರಮತಿಃ-ಧಾರಾಳವಾದಬುದ್ಧಿಯುಳ್ಳ ಜರಾಸಂಧನು, ಕೃಷ್ಣಾರ್ಜುನವೃಕೋದರಾನ್-ಕೃಷ್ಣಾರ್ಜುನ ಭೀಮರನ್ನು ಕುರಿತು, ಹೇವಿಪ್ರಾಃ-ಎಲೈ ಬ್ರಾಹ್ಮಣರುಗಳಿರಾ ! ಕಾಮಃ-ಇಷ್ಟಾರ್ಥವು, ವ್ರಿಯತಾಂ-ಬಯಸಲ್ಪಡಲಿ, ಆತ್ಮಶಿರೋಽಪಿ-ನನ್ನ ತಲೆಯನ್ನಾದರೂ, ವಃ-ನಿಮಗೆ, ದಾಸ್ಯಾಮಿ-ಕೊಡುವೆನು ‖೨೭‖ ರಾಜೇಂದ್ರ-ರಾಜಶ್ರೇಷ್ಠನಾದ ಜರಾಸಂಧನೇ, ತ್ವಂ-ನೀನು, ಮನ್ಯಸೇಯದಿ-ಒಪ್ಪಿಕೊಳ್ಳುವಿಯಾದರೆ, ನಃ-ನಮಗೆ, ದ್ವಂದ್ವಂಯುದ್ಧಂ-ಇಬ್ಬಿಬ್ಬರೇ ಜಗಳವಾಡುವುದನ್ನು, ದೇಹಿ-ಕೊಡು, ವಯಂ-ನಾವು, ಯುದ್ಧಾರ್ಥಿನಃ-ಯುದ್ಧವನ್ನು ಬಯಸಿದವರಾಗಿ, ಪ್ರಾಪ್ತಾಃ-ಬಂದಂಥಾ, ರಾಜನ್ಯಾಃ-ಕ್ಷತ್ರಿಯರಾಗಿರುವೆವು. ಅನ್ಯಕಾಂಕ್ಷಿಣಃ-ಇತರವನ್ನು ಬಯಸುವಂಥವರು, ನ-ಅಲ್ಲವು ‖೨೮‖ ಅಸೌ-ಇವನು, ವೃಕೋದರಃ- ತೋಳನಂತೆಹೊಟ್ಟೆಯುಳ್ಳವನಾದ, ಪಾರ್ಥಃ-ಕುಂತಿಯಮಗನಾದ ಭೀಮನು, ಅಯಂ-ಇವನು, ತಸ್ಯ-ಆ ಭೀಮನಿಗೆ, ಭ್ರಾತಾ-ತಮ್ಮನಾದ, ಅರ್ಜುನೋಹಿ-ಅರ್ಜುನನಲ್ಲವೆ ? ಮಾಂ-ನನ್ನನ್ನು, ಅನಯೋಃ-ಈ ಭೀಮಾರ್ಜುನರಿಗೆ, ಮಾತುಲೇಯಂ-ಸೋದರಮಾವನಮಗನಾದ, ತೇರಿಪುಂ-ನಿನಗೆ ಶತ್ರುವಾದ, ಕೃಷ್ಣಂ-ವಾಸುದೇವನನ್ನಾಗಿ, ಜಾನೀಹಿ-ತಿಳಿದುಕೋ ‖೨೯‖ ಏವಂ-ಹೀಗೆ ಆವೇದಿತಃ-ತಿಳುಹಿಸಲ್ಪಟ್ಟವನಾದ, ಮಾಗಧೋರಾಜಾ-ಜರಾಸಂಧನು, ಉಚ್ಚೈಃ-ಘಟ್ಟಿಯಾಗಿ, ಜಹಸಸ್ಮ-ನಕ್ಕನು. ಅಮರ್ಷಿತಃ-ಸಿಟ್ಟುಗೊಂಡವನಾಗಿ, ಆಹಚ-ನುಡಿಯಲೂನುಡಿದನು. ಹೇಮಂದಾಃ-ಎಲೈ ಮೂಢರುಗಳಿರಾ, ತರ್ಹಿ-ಆದರೆ, ವಃ-ನಿಮಗೆ, ಯುದ್ಧಂ-ದ್ವಂದ್ವಯುದ್ಧವನ್ನು, ದದಾಮಿ-ಕೊಡುವೆನು ‖೩೦‖ (ಕೃಷ್ಣನೇ!) ವಿಕ್ಲಬಚೇತಸಾ – ನಪುಂಸಕಬುದ್ಧಿ

---

ಹ್ಮಣರಿಗೋಸುಗ ಇಷ್ಟಾರ್ಥಂಗಳನಿತ್ತು ವಿಸ್ತಾರವಾದ ಯಶಸ್ಸನ್ನು ಸಂಪಾದಿಸುವನಾಗದೆ ಜೀವಿಸುತಲಿರುವ ಕ್ಷತ್ರಿಯಾಧಮನಿಂದ ಯಾವಪುರುಷಾರ್ಥವುತಾನೆ ಸಾಧಿಸಲ್ಪಟ್ಟದ್ದಾಗುತ್ತೆ?‖೨೬‖ ಇಂತೆಂದುಕೊಂಡು ಉತ್ಕೃಷ್ಟವಾದ ಬುದ್ಧಿ ಯುಳ್ಳವನಾದ ಜರಾಸಂಧನು ಈರೀತಿಯಾಗಿ ಮನಸ್ಸಿನಲ್ಲಿ ನಿಶ್ಚಯಿಸಿ ಶ್ರೀ ಕೃಷ್ಣ ಭೀಮಾರ್ಜುನರಂ ಕುರಿತು ಎಲೈ ಬ್ರಾಹ್ಮಣರಿರಾ! ನೀವು ಇಷ್ಟವಾದ ಅರ್ಥವಂ ಯಾಚಿಸುವರಾಗಿರಿ, ನನ್ನ ಶಿರಸ್ಸನ್ನಾದರೂ ನಿಮಗೆ ಕೊಡುವನಾಗುವೆನು ಎಂದು ಪೇಳಿದನು ‖೨೭‖ ಈ ಜರಾಸಂಧನ ವಚನವಂ ಕೇಳಿ ಶ್ರೀ ಕೃಷ್ಣನು ಪೇಳುವನದೆಂತೆನೆ, ಎಲೈ ರಾಜ ಶ್ರೇಷ್ಠನೇ! ನಮ್ಮ ಯಿಷ್ಟಾರ್ಥವಂ ನೀನು ಕೊಡಲಿಚ್ಛೈಸುವನಾದರ ಈಗ ನಮಗೆ ದ್ವಂದ್ವ ಯುದ್ಧವಂ ಕೊಡುವನಾಗು, ನಾವು ಕ್ಷತ್ರಿಯರಾದ ಕಾರಣದಿಂ ಯುದ್ಧಾಪೇಕ್ಷೆಯಿಂದ ಬಂದಿರುವೆವೇ ಹೊರತು ಅನ್ಯಾರ್ಥಿಗಳಾಗಿ ಬಂದವರಲ್ಲವು ‖೨೮‖ ಮತ್ತು ಎಲೈ ಅರಸೇ ಕೇಳು ಇವನು ಕುಂತಿದೇವಿಗೆ ಪುತ್ರನಾದ ಭೀಮನು, ಇವನು ಅವನ ತಮ್ಮನಾದ ಅರ್ಜುನನು, ಇವರೀರ್ವರಿಗೂ ಸೋದರ ಮಾವನ ಮಗನಾದ ನನ್ನಂ ನಿನಗೆ ವೈರಿಯಾದ ಕೃಷ್ಣನನ್ನಾಗಿ ತಿಳಿಯುವನಾಗು ‖೨೯‖ ಎಂದು ಶ್ರೀ ಕೃಷ್ಣನಿಂ ವಿವರಿಸಲ್ಪಟ್ಟವನಾಗಿ ಜರಾಸಂಧನು ಗಟ್ಟಿಯಾಗಿನಕ್ಕು ಕೋಪಯುಕ್ತನಾಗಿ, ಎಲೈಮೂಢರೇ! ನಿಮಗೆದ್ವಂದ್ವಯುದ್ಧವಂ ಕೊಡುವವನಾಗುವೆನು ‖೩೦‖ ಎಲಾಕೃಷ್ಣನೇ! ಕೇಳು, ಯಾವಕಾರಣದಿಂದ ನೀನು ನನಗೆಹೆದರಿ ನಿನ್ನಮಧುರಾಪಟ್ಟಣವಂಬಿಟ್ಟು ಸಮುದ್ರವಂ ಶರಣುಹೊಂದಿದೆಯೋ ಆಕಾರಣದಿಂದ ಯುದ್ಧದಲ್ಲಿ ಧೈರ್ಯವಿಲ್ಲದವನಾದ

ಭೀರುಣಾಯೋತ್ಸ್ಯೇಯುಧಿವಿಕ್ಲಬಚೇತಸಾ| ಮಥುರಾಂಸ್ವಪುರೀಂತ್ಯಕ್ತ್ವಾಸಮುದ್ರಂಶರಣಂಗತಃ|| ಅಯಂತುವಯಸಾತುಲ್ಯೋನಾತಿಸತ್ತ್ವೋನಮೇಸಮಃ | ಅರ್ಜುನೋನಭವೇದ್ಯೋದ್ಧಾಭೀಮಸ್ತುಲ್ಯಬಲೋಮಮ ||೩೨|| ಇತ್ಯುಕ್ತ್ವಾಭೀಮಸೇನಾಯಪ್ರಾದಾಯಮಹತೀಂಗದಾಮ್ | ದ್ವಿತೀಯಾಂಸ್ವಯಮಾದಾಯನಿರ್ಜಗಾಮಪುರಾದ್ಬಹಿಃ ||೩೩|| ತತಸ್ಸಮೇಖಲೇವೀರೌಸಂಯುಕ್ತಾವಿತರೇತರಮ್ | ಜಘ್ನತುರ್ವಜ್ರಕಲ್ಪಾಭ್ಯಾಂಗದಾಭ್ಯಾಂರಣದುರ್ಮದೌ ||೩೪|| ಮಂಡಲಾನಿವಿಚಿತ್ರಾಣಿಸವ್ಯಂದಕ್ಷಿಣಮೇವಚ | ಚರತೋಶ್ಶುಶುಭೇಯುದ್ಧಂನಟಯೋರಿವರಂಗಿಣೋಃ ||೩೫||ತತಶ್ಚಟಚಟಾಶಬ್ದೋವಜ್ರನಿಷ್ಪೇಷಸನ್ನಿಭಃ |ಗದಯೋಃಕ್ಷಿಪ್ತಯೋರಾಜನ್ದಂತಯೋರಿವದಂತಿನೋಃ||೩೬||ತೇವೈಗದೇಭುಜಜವೇನನಿಪಾತ್ಯಮಾ

---

ಯುಳ್ಳ, ಯುಧಿಭೀರುಣಾ-ಯುದ್ಧದಲ್ಲಿ ಭಯಶೀಲನಾದ, ತ್ವಯಾ-ನಿನ್ನೊಡನೆ, ನಯೋತ್ಸ್ಯೇ-ನಾನುಕಾಳಗ ಮಾಡುವುದಿಲ್ಲ.[ನೀನಾದರೋ) ಸ್ವಪುರೀಂ-ತನ್ನನಗರವಾದ, ಮಥುರಾಂ-ಮಥುರಾಪುರವನ್ನು, ತ್ಯಕ್ತ್ವಾ-ಬಿಟ್ಟು, ಸಮುದ್ರಂ-ಕಡಲನ್ನು, ಶರಣಂಗತಃ-ರಕ್ಷಕವನ್ನಾಗಿ ಹೊಂದಿದವನಾಗಿರುವಿ ||೩೧|| ಅಯಂ-ಅರ್ಜುನಸ್ತು-ಈ ಅರ್ಜುನನಾದರೋ, ವಯಸಾ-ಪ್ರಾಯದಿಂದ, ಅತುಲ್ಯಃ-ಸರಿಯಾದವನಲ್ಲವು. ನಾತಿಸತ್ತ್ವಃ-ಅಧಿಕದೇಹ ಬಲವುಳ್ಳವನಲ್ಲವು, (ಆದ್ದರಿಂದ) ಮೇ-ನನಗೆ, ನಸಮಃ-ಸರಿಯಲ್ಲವು, ಆದ್ದರಿಂದ, ಯೋದ್ಧಾ-ಸಮಯುದ್ಧಮಾಡುವವನು ನಭವೇತ್-ಆಗಲಾರನು. ತುಲ್ಯಬಲಃ-ಸಮಾನ ಬಲವುಳ್ಳಂಥಾ, ಭೀಮಃ-ಭೀಮನು, ಮಮ-ನನ್ನೊಡನೆ, ಯೋದ್ಧಾ-ಯುದ್ಧಮಾಡುವವನು, ಭವೇತ್-ಆದಾನು ||೩೨|| ಇತಿ-ಹೀಗೆ, ಉಕ್ತ್ವಾ-ಹೇಳಿ, ಭೀಮಸೇನಾಯ-ಭೀಮಂಗೆ, ಮಹತೀಂ-ತೋರವಾದ,ಗದಾಂ-ಗುದಿದೊಣ್ಣೆಯನ್ನು, ಪ್ರದಾಯ-ಕೊಟ್ಟು,ದ್ವಿತೀಯಾಂ-ಎರಡನೆಯದನ್ನು, ಸ್ವಯಂ-ತಾನು, ಆದಾಯ-ತೆಗೆದುಕೊಂಡು, ಪುರಾತ್-ಪಟ್ಟಣದ ದೆಸೆಯಿಂದ, ಬಹಿಃ-ಹೊರಗೆ, ನಿರ್ಜಗಾಮ-ಹೊರಟುಬಂದನು ||೩೩|| ತತಃ-ಆ ಬಳಿಕ, ಸಮೇ-ಸಮಮಟ್ಟವಾದ, ಖಲೇ-ಯುದ್ಧದಕಣದಲ್ಲಿ, ಇತರೇತರಂ-ಪರಸ್ಪರವಾಗಿ, ಸಂಯುಕ್ತೌ-ಕೂಡಿದಂಥಾ, ವೀರೌ-ಶೂರರಾದ ಭೀಮಜರಾಸಂಧರು, ರಣದುರ್ಮದೌ-ಯುದ್ಧದಲ್ಲಿ ಕೆಡುಕೊಬ್ಬುಳ್ಳವರಾದ್ದರಿಂದ, ವಜ್ರಕಲ್ಪಾಭ್ಯಾಂ-ಸಿಡಿಲಿಗೆ ಕೊಂಚಕಡಮೆಯಾಗಿರುವ, ಗದಾಭ್ಯಾಂ-ಗುದಿಕೋಲುಗಳಿಂದ, ಜಘ್ನತುಃ- ಬಡಿದಾಡಿದರು ||೩೪|| ಸವ್ಯಂ-ಎಡದಲ್ಲಿಯೂ, ದಕ್ಷಿಣಮೇವಚ-ಬಲದಲ್ಲಿಯೂ, ವಿಚಿತ್ರಾಣಿ-ಆಶ್ಚರ್ಯಕರಗಳಾದ, ಮಂಡಲಾನಿ-ಸುತ್ತುಗಳನ್ನು, ಚರತೋಃ-ಬಳಸಿ ತಿರುಗುತ್ತಿರುವ, ಭೀಮಜರಾಸಂಧರ, ಯುದ್ಧಂ-ಕಾಳಗವು, ರಂಗಿಣೋಃ- ನಾಟ್ಯರಂಗವುಳ್ಳ, ನಟಯೋರಿವ-ಕುಣಿದಾಡುವರಿಗೆ ಹೇಗೋಹಾಗೇ, ಶುಶುಭೇ-ಬೆಳಗಿತು ||೩೫|| ರಾಜನ್-ಪರೀಕ್ಷಿದ್ರಾಯನೇ, ತತಃ-ಆ ಮೇಲೆ, ಕ್ಷಿಪ್ತಯೋಃ-ಎಸೆಯಲ್ಪಟ್ಟ, ಗದಯೋಃ-ಗುದಿಕೋಲುಗಳ, ವಜ್ರನಿಷ್ಪೇಷಸನ್ನಿಭಃ-ಸಿಡಿಲಬಡಿದಾಟಕ್ಕೆ ಸಮಾನವಾದ, ಚಟಚಟಾಶಬ್ದಃ-ಚಟಚಟವೆಂಬಸಪ್ಪಳು, ದಂತಿನೋಃ-ಆನೆಗಳ, ದಂತಯೋರಿವ-ಕೊಂಬುಗಳ ಬಡಿದಾಟದಂತೆ, ಶೋಭಿಸಿತು ||೩೬||

---

ಭಯಶೀಲನಾದ ನಿನ್ನೊಡನೆ ನಾನು ದ್ವಂದ್ವಯುದ್ಧವಂ ಗೆಯ್ಯುವುದಿಲ್ಲ||೩೧|| ಈಯರ್ಜುನನಾದರೋ ಸಮಾನವಾದವಯಸ್ಸು ಇಲ್ಲದವನು, ಮತ್ತು ಅತ್ಯಂತ ದೇಹಬಲಶಾಲಿಯೂ ಅಲ್ಲನು. ಆದ್ದರಿಂದ ಇವನೊಡನೆ ದ್ವಂದ್ವಯುದ್ಧವಂ ಗೆಯ್ವನಲ್ಲ ಭೀಮನು ನನಗೆ ಸಮಾನಬಲವುಳ್ಳವನಾದುದರಿಂದ, ಇವನು ನನ್ನೊಡನೆ ಯುದ್ಧಂಗೆಯ್ವನಾಗಲಿ ||೩೨|| ಎಂದು ಜರಾಸಂಧನು ಶ್ರೀಕೃಷ್ಣನಂ ಕುರಿತು ಪೇಳಿ ಭೀಮನಿಗೊಂದು ಮಹಾಗದೆಯಂ ತಾನೆಯಿತ್ತು ಮತ್ತೊಂದುಗದೆಯಂ ತಾನುಪಿಡಿದು ಯುದ್ಧಕ್ಕೋಸುಗ ಪಟ್ಟಣದಿಂಹೊರಕ್ಕೆಹೊರಟುಬಂದನು||೩೩ ಆಮೇಲೆ ಯುದ್ಧಭೂಮಿಯಲ್ಲಿ ಪರಸ್ಪರವಾಗಿ ಯುದ್ಧದಲ್ಲಿ ಸಹಿಸಲಶಕ್ಯವಾದ ಮದವುಳ್ಳವರಾದ ಭೀಮಜರಾಸಂಧರು ವಜ್ರಾಯುಧಕ್ಕೆ ಸಮಾನಂಗಳಾದ ಗದೆಗಳಿಂದ ದ್ವಂದ್ವಯುದ್ಧಂಗೆಯ್ದರು ||೩೪|| ಮತ್ತು ಬಲಕ್ಕೂ ಎಡಕ್ಕೂ ಚಿತ್ರವಿಚಿತ್ರಗಳಾದ ಯುದ್ಧಗತಿಭೇದಂಗಳಂ ತೋರಿಸುತ ಸುತ್ತುತಲಿರುವ ಭೀಮಜರಾಸಂಧರ ಯುದ್ಧವು ರಂಗಸ್ಥಾನವನೆಯ್ದಿರುವ ನಟರಯುದ್ಧದಂತೆ ಪ್ರಕಾಶಿಸಿತು. ||೩೫|| ಅನಂತರದಲ್ಲಿ ಪರಸ್ಪರವಾಗಿ ಪ್ರಯೋಗಿಸಲ್ಪಟ್ಟ ಗದೆಗಳ ಅನ್ಯೋನ್ಯ ಘಾತದಿಂದಪುಟ್ಟಿದ ಸಿಡಿಲಿಗೆ ಸಮಾನವಾದ ಚಟಚಟಧ್ವನಿಯು ಅನ್ಯೋನ್ಯವಾಗಿ ಹೋರುತಲಿರುವ ಎರಡು ಮದದಾನೆಗಳ ದಂತಘಟ್ಟನ ಧ್ವನಿಯಂತೆ ವೃದ್ಧಿಯನೆಯ್ದಿತು||೩೬||ಮತ್ತು

ನೌ ಅನ್ಯೋನ್ಯತೋಂಸಕಟಿಪಾದಕರೋರುಜತ್ರು | ಚೂರ್ಣೀಬಭೂವತುರುಪೇತ್ಯ ಯಥಾರ್ಕಶಾಖೇ ಸಂಯುಧ್ಯತೋರ್ದ್ವಿರದಯೋರಿವ ದೀಪ್ತಮನ್ವ್ಯೋಃ ||೩೭|| ಇತ್ಥಂ ತಯೋಃ ಪ್ರಹತಯೋರ್ಗದಯೋರ್ನೃವೀರೌ ಕ್ರುದ್ಧೌ ಸ್ವಮುಷ್ಟಿಭಿರಯಸ್ಸ್ಪರ್ಶೈರಪಿಷ್ಟಾಮ್ | ಶಬ್ದಸ್ತಯೋಃ ಪ್ರಹರತೋರಿಭಯೋರಿವಾಸೀನ್ನಿರ್ಘಾತವಜ್ರಪರುಷಸ್ತಲತಾಡನೋತ್ಥಃ ||೩೮|| ತಯೋರೇವಂ ಪ್ರಹರತೋಸ್ಸಮಶಿಕ್ಷಾಬಲೌಜಸೋಃ | ನಿರ್ವಿಶೇಷಮಭೂದ್ಯುದ್ಧಮಕ್ಷೀಣಬಲಯೋರ್ನೃಪ ||೩೯|| ಶತ್ರೋರ್ಜನ್ಮಮೃತೀ ವಿದ್ವಾನ್ ಜೀವಿತಂ ಚ ಜರಾಕೃತಮ್ | ಪಾರ್ಥಮಾಪ್ಯಾಯಯನ್ ಸ್ವೇನ ತೇಜಸಾಚಿಂತಯದ್ಧರಿಃ ||೪೦|| ಸಂಚಿಂತ್ಯಾ

---

ಸಂಯುಧ್ಯತೋಃ-ಚನ್ನಾಗಿ ಹೋರುತ್ತಿರುವಂಥಾ, ದೀಪ್ತಮನ್ವ್ಯೋಃ-ಕೆರಳಿದ ಸಿಟ್ಟುಳ್ಳಂಥಾ, ದ್ವಿರದಯೋಃಇವ- ಆನೆಗಳಹಾಗಿರುವ ಭೀಮಜರಾಸಂಧರಿಂದ, ಅನ್ಯೋನ್ಯತಃ-ಪರಸ್ಪರವಾಗಿ, ಭುಜಬಲೇನ-ತೋಳಬಲದಿಂದ, ನಿಪಾತ್ಯಮಾನೇ-ಹೊಯ್ಯಲ್ಪಡುತ್ತಿರುವ, ವೈ-ಪ್ರಸಿದ್ಧಂಗಳಾದ, ತೇಗದೇ-ಆ ಗುದಿಕೋಲುಗಳು, ಅಂಸಕಟಿಪಾದ ಕರೋರುಜತ್ರು-ಹೆಗಲು ಸೊಂಟ ಕಾಲು ಕೈ ತೊಡೆ ಭುಜ ಸಂಧಿಗಳನ್ನು, ಉಪೇತ್ಯ-ಹೊಂದಿ, ಅರ್ಕಶಾಖೇಯಥಾ-ಎಕ್ಕದಬರಲು ಹೇಗೋ ಹಾಗೆ, ಚೂರ್ಣೀಬಭೂವತುಃ-ಪುಡಿಯಾದವು ||೩೭|| ಇತ್ಥಂ-ಹೀಗೆ, ತಯೋರ್ಗದಯೋಃ-ಆ ಗದಾಯುಧಂಗಳು, ಪ್ರಹತಯೋಸ್ಸತೋಃ-ಮುರಿಯಲ್ಪಟ್ಟು ಹೋದವಾಗಲೂ, ಕ್ರುದ್ಧೌ-ಸಿಟ್ಟುಳ್ಳವರಾದ, ನೃವೀರೌ-ನರಶ್ರೇಷ್ಠರು,ಅಯಸ್ಸ್ಪರ್ಶೈಃ-ಉಕ್ಕಿನಸ್ಪರ್ಶವಾದ, ಸ್ವಮುಷ್ಟಿಭಿಃ-ತಮ್ಮ ಹಿಡಿಗಳಿಂದ, ಅಪಿಷ್ಟಾಂ-ಗುದ್ದಾಡಿದರು. ತಯೋಃ-ಆ ಭೀಮಜರಾಸಂಧರ, ತಲತಾಡನೋತ್ಥಃ- ಅಂಗೈಪೆಟ್ಟುಗಳಿಂದಹುಟ್ಟಿದ, ನಿರ್ಘಾತವಜ್ರಪರುಷಃ-ಎರಗಿದ ಸಿಡಿಲಿನಂತೆ ಕಠಿನವಾದ, ಶಬ್ದಃ-ಧ್ವನಿಯು, ಪ್ರಹರತೋಃ-ಹೋರಾಡುತ್ತಿರುವ, ಇಭಯೋರಿವ-ಆನೆಗಳ ಶಬ್ದದಂತೆ, ಆಸೀತ್-ಆಪುದು ||೩೮|| ನೃಪ- ಪರೀಕ್ಷಿದ್ರಾಯನೇ, ಏವಂ-ಹೀಗೆ, ಪ್ರಹರತೋಃ-ಹೊಡದಾಡುತ್ತಿರುವ,ಸಮಶಿಕ್ಷಾಬಲೌಜಸೋಃ-ಸರಿಯಾದ ಅಭ್ಯಾಸವೂ ಬಲವೂ ಪರಾಕ್ರಮವೂ ಉಳ್ಳ, ಅಕ್ಷೀಣಬಲಯೋಃ-ಕೊರತೆಗೊಳ್ಳದ ಶಕ್ತಿಯುಳ್ಳ, ತಯೋಃ-ಆ ಭೀಮಜರಾಸಂಧರ, ಯುದ್ಧಂ-ಕಾಳಗವು, ನಿರ್ವಿಶೇಷಂ-ಭೇದಜ್ಞಾಪಕವಿಲ್ಲದ್ದು, ಅಭೂತ್-ಆಪುದು ||೩೯|| ಹರಿಃ-ಕೃಷ್ಣನು, ಶತ್ರೋಃ-ವೈರಿಯಾದ ಜರಾಸಂಧನ, ಜನ್ಮಮೃತೀ-ಜನನಮರಣಗಳನ್ನೂ, ಜರಾಕೃತಂ- ಜರೆಯೆಂಬವಳಿಂದ ಮಾಡಲ್ಪಟ್ಟಿರುವ, ಜೀವಿತಂಚ-ಪ್ರಾಣಧಾರಣವನ್ನೂ, ವಿದ್ವಾನ್-ತಿಳಿದಿರುವನಾದ್ದರಿಂದ, ಸ್ವೇನತೇಜಸಾ-ತನ್ನ ಶಕ್ತಿಯಿಂದ, ಪಾರ್ಥಂ-ಕುಂತೀಪುತ್ರನಾದ ಭೀಮನನ್ನು, ಆಪ್ಯಾಯಯನ್-ಸಪ್ರಾಣಿಸ ಗೊಳಿಸುವನಾಗಿ, ಅಚಿಂತಯತ್-ಯೋಚಿಸಿದನು ||೪೦|| ಅಮೋಘದರ್ಶನಃ-ಸಾರ್ಥಕವಾದ ಜ್ಞಾನವುಳ್ಳಂಥಾ. ಕೃಷ್ಣನು, ಅರಿವಧೋಪಾಯಂ-ಶತ್ರುವಿನಸಂಹಾರ

---

ಪ್ರಜ್ವಲಿಸುವ ಸಿಟ್ಟುಳ್ಳವಾಗಿ ಕಾದುತ್ತಲಿರುವ ಎರಡಾನೆಗಳಿಂದ ಎಕ್ಕದ ಮರದಕೊಂಬೆಗಳು ಪುಡಿಪುಡಿಯಾಗಿ ಹೋಗುವಂತೆ ಅವರೀರ್ವರ ಅಪ್ಪಳಿಸುವಿಕೆಯಿಂದ ಗದೆಗಳು ಅವರ ಹೆಗಲು ಟೊಂಕ ಹಸ್ತಪಾದಂಗಳಂ ಕಂಠಮೂಲಂಗಳಂ ಸಹ ತಗುಲಿ ಚೂರ್ಣಂಗಳಾದವು ||೩೭|| ಹೀಗೆ ಗದೆಗಳು ಭಗ್ನಗಳಾಗುತ್ತಿರಲು ಅತಿಕೋಪವುಳ್ಳಭೀಮಜರಾಸಂಧರು ಉಕ್ಕಿನಗುಂಡುಗಳಂತೆ ಕಠಿನಸ್ಪರ್ಶವುಳ್ಳ ತಮ್ಮಹಿಡಿಗಳಿಂದ ಪರಸ್ಪರವಾಗಿ ಬಡಿದಾಡುತ್ತ ಮದದಾನೆಗಳಂತೆ ಕಾದಾಡುತ್ತ ಅವರ ಮುಷ್ಟಿತಾಡನಂಗಳಿಂ ಸಿಡಿಲಿನಂತೆ ನಿಷ್ಠುರಧ್ವನಿಹುಟ್ಟುತಲಿತ್ತು ||೩೮|| ಎಲೈಅರಸೇ ಕೇಳು, ಹೀಗೆ ಅನ್ಯೋನ್ಯವಾಗಿ ಪ್ರಹರಿಸುವ ಸಮಾನವಾದ ಯುದ್ಧವಿದ್ಯಾಭ್ಯಾಸವೂ ದೇಹಬಲವೂ ಸಾಮರ್ಥ್ಯವೂ ವುಳ್ಳ ತಗ್ಗದೆಯಿರುವ ವೇಗವುಳ್ಳ ಭೀಮಜರಾಸಂಧರಯುದ್ಧವು ಪರಸ್ಪರವಿಶೇಷವಿಲ್ಲದಂತೆ ಬೆಳೆಯುತಲಿತ್ತು ||೩೯|| ‡ ಈರೀತಿಯಾಗಿ ದ್ವಂದ್ವಯುದ್ಧವಂ ಗೆಯ್ಯುತಲಿರುವ ಆಭೀಮಜರಾಸಂಧರಿಗೆ ಯುದ್ಧಭೂಮಿಯಲ್ಲಿ ಇಪ್ಪತ್ತೇಳುದಿನಂಗಳು ಕಳೆದವಾದವು.| ಅನಂತರದಲ್ಲಿ ಜರಾಸಂಧನಜನ್ಮವು ಖಂಡದ್ವಯಯೋಗರೂಪವಾದುದೆಂಬರ್ಥವಂ ಪುನಃ ಅದೇದೇಹವು ಖಂಡವಾಗುವಿಕೆಯೇ ಮೃತಿಯೆಂಬ ಅರ್ಥವಂಕೂಡ ತಿಳಿದಿರುವಶ್ರೀಕೃಷ್ಣನು ತನ್ನ ಪ್ರಭಾವದಿಂ ಭೀಮನಿಗೆ ಶಕ್ತಿಯನುಂಟುಮಾಡುತ ಜರೆಯೆಂಬರಾಕ್ಷಸಿಯಿಂದ ಇವನು ಜೀವಿಸಿರುವನೆಂಬರ್ಥವನ್ನೂ ತಿಳಿದು, ಈಜರಾಸಂಧನು ಎಂತು ಸೋಲಲ್ಪಡುವನೆಂದು ಚಿಂತಿಸಿದನು ||೪೦|| ಅನಂ

ರಿಪೋಃಪಾಯಂಭೀಮಸ್ಯಾಮೋಘದರ್ಶನಃ । ದರ್ಶಯಾಮಾಸವಿಟಪಂಪಾಟಯನ್ನಿವಸಂಜ್ಞಯಾ॥
ತದ್ವಿಜ್ಞಾಯಮಹಾಸತ್ವೋಭೀಮಃಪ್ರಹರತಾಂವರಃ । ಗೃಹೀತ್ವಾಪಾದಯೋಶ್ಶತ್ರುಂಪಾತಯಾಮಾಸ
ಭೂತಲೆ ‖೪೨‖ ಏಕಂಪಾದಂಪದಾಕ್ರಮ್ಯದೋರ್ಭ್ಯಾಮನ್ಯಂಪ್ರಗೃಹ್ಯಸಃ । ಗುದತಃಪಾಟಯಾಮಾ
ಸಶಾಖಾಮಿವಮಹಾಗಜಃ ‖೪೩‖ ಏಕಪಾದೋರುವೃಷಣಕಟಿಪೃಷ್ಠಸ್ತನಾಂಸಕೇ । ಏಕಬಾಹ್ವಕ್ಷಿಭ್ರೂ
ಕರ್ಣೇಶಕಲೇದದೃಶುಃಪ್ರಜಾಃ‖೪೪‖ ಹಾಹಾಕಾರೋಮಹಾನಾಸೀನ್ನಿಹತೇಮಗಧೇಶ್ವರೆ । ಪೂಜಯಾಮಾಸ
ತುರ್ಭೀಮಂಪರಿರಭ್ಯಜಯಾಚ್ಯುತೌ ‖೪೫‖ ಸಹದೇವಂತತ್ತನಯಂಭಗವಾನ್ ಭೂತಭಾವನಃ ।ಅಭ್ಯ

ಕ್ಕೆ ಯುಕ್ತಿಯನ್ನು, ಸಂಚಿಂತ್ಯ-ಚನ್ನಾಗಿ ಯೋಚಿಸಿ, ವಿಟಪಂ-ಮರದ ಕೊಂಬೆಯನ್ನು ಪಾಟಯನ್ನಿವ-ಸೀಳುವವನಹಾಗೆ, ಸಂಜ್ಞಯಾ-ಅಂಗಚೇಷ್ಟಾಸೂಚನಯಿಂದ, ಭೀಮಸ್ಯ-ಭೀಮಂಗೆ, ದರ್ಶಯಾಮಾಸ-ತೋರಿಸಿದನು ‖೪೧‖ ಪ್ರಹರತಾಂ- ಕಾಳಗ ಮಾಡುವರಲ್ಲಿ ವರಃ-ಶ್ರೇಷ್ಠನಾದ, ಮಹಾಸತ್ವಃ-ಮಹಾಬಲವುಳ್ಳವನಾದ, ಭೀಮಃ-ಭೀಮನು, ತತ್-ಆ ಕೃಷ್ಣನು ತೋರಿಸಿದ ಉಪಾಯವನ್ನು, ವಿಜ್ಞಾಯ-ತಿಳಿದುಕೊಂಡು, ಶತ್ರುಂ-ಜರಾಸಂಧನನ್ನು, ಪಾದಯೋಃ-ಕಾಲುಗಳಲ್ಲಿ, ಗೃಹೀತ್ವಾ - ಹಿಡಿದು, ಭೂತಲೇ-ನೆಲದಲ್ಲಿ, ಪಾತಯಾಮಾಸ-ಕೆಡಹಿದನು ‖೪೨‖ ಸಃ-ಆ ಭೀಮನು, ಏಕಪಾದಂ-ಒಂದುಕಾಲನ್ನು, ಪದಾ-ತನ್ನ ಕಾಲಿನಿಂದ, ಆಕ್ರಮ್ಯ-ಮೆಟ್ಟಿಕೊಂಡು, ಅನ್ಯಂ-ಮತ್ತೊಂದುಕಾಲನ್ನು, ದೋರ್ಭ್ಯಾಂ-ತನ್ನ ತೋಳುಗಳಿಂದ, ಪ್ರಗೃಹ್ಯ-ಬಲವಾಗಿಹಿಡಿದು, ಮಹಾಗಜಃ-ದೊಡ್ಡ ಆನೆಯು, ಶಾಖಾಮಿವ-ಕೊಂಬೆಯನ್ನು ಹೇಗೋಹಾಗೆ, ಗುದತಃ-ಕಿಶದಿಂದ, ಪಾಟಯಾಮಾಸ-ಸಿಗುಳಿದನು ‖೪೩‖ ಪ್ರಜಾಃ-ಜನಂಗಳು, ಏಕ...ಸಕೇ-ಏಕ-ಒಂದಾದ, ಪಾದ-ಕಾಲು, ಊರು-ತೊಡೆ ವೃಷಣ ತರುಡು, ಕಟಿ-ಟೊಂಕ, ಪೃಷ್ಠ-ಬೆನ್ನು, ಸ್ತನ-ಮೊಲೆ, ಅಂಸಕೇ-ಭುಜದಬುಡ, ಇವುಉಳ್ಳಂಥಾ, ಏಕಬಾಹ್ವಕ್ಷಿಭ್ರೂಕರ್ಣೇ-ಒಂದುತೋಳು ಕಣ್ಣು ಹುಬ್ಬು ಕಿವಿಗಳುಳ್ಳಂಥಾ, ಶಕಲೇ-ಶರೀರದ ಸೀಳುಗಳನ್ನು, ದದೃಶುಃ-ಕಂಡರು ‖೪೪‖ ಮಗಧೇಶ್ವರೇ-ಮಗಧರಾಯನು, ನಿಹತೇಸತಿ-ಕೊಲ್ಲಲ್ಪಟ್ಟವನಾಗುತಲೂ, ಮಹಾನ್-ದೊಡ್ಡದಾದ, ಹಾಹಾಕಾರಃ-ಹಾಹಾಎಂಬ ಗೌಜು, ಆಸೀತ್-ಆಯಿತು. ಜಯಾಚ್ಯುತೌ-ಅರ್ಜುನ ಕೃಷ್ಣರು, ಭೀಮಂ-ಭೀಮನನ್ನು, ಪರಿರಭ್ಯ-ಅಪ್ಪಿಕೊಂಡು, ಪೂಜಯಾಮಾಸತುಃ-ಸನ್ಮಾನಿಸಿದರು ‖೪೫‖ ಭೂತಭಾವನಃ-ಪ್ರಾಣಿಗಳನ್ನು ಸಂಭಾವಿಸುವಂಥಾ, ಪ್ರಭುಃ-ಸಮರ್ಥನಾದಂಥಾ, ಅಮೇಯಾತ್ಮಾ-ಅಪ್ರಮೇಯಸ್ವಭಾವನಾದ, ಭಗವಾನ್-ಕೃಷ್ಣನು, ತತ್ತನಯಂ-ಆ ಜರಾಸಂಧನಮಗನಾದ, ಸಹದೇವಂ- ಸಹದೇವನೆಂಬವನನ್ನು, ಮಗಧಾನಾಂ-ಮಗಧದೇಶದವರಿಗೆ, ಪತಿಂ-ಈಶ್ವರನನ್ನಾಗಿ, ಅಭ್ಯಷಿಂಚತ್-ಪಟ್ಟಾಭಿಷೇಕ ಗೊಳಿಸಿದನು ‖೪೬‖ ಸಃ-ಅಸಹ

ತರದಲ್ಲಿ ಸಫಲವಾದ ದರ್ಶನವುಳ್ಳ ಶ್ರೀಕೃಷ್ಣನು ಈರೀತಿಯಾಗಿ ಮನಸ್ಸಿನಲ್ಲಿ ಚಿಂತಿಸಿ ಒಂದುಶಾಖೆಯಂ ಹಸ್ತದಿಂತೆಗದುಕೊಂಡು ಹೀಗೆಯೇ ಅವನಂ ಸೀಳೆಂದು ಸಂಜ್ಞೆಯಿಂದ ಆಶಾಖೆಯಂಸೀಳಿ ಭೀಮನಿಗೆ ಶತ್ರುಸಂಹಾರದ ಉಪಾಯವಂ ತೋರಿಸಿದನು ‖೪೧‖ ಆಗ ಮಹಾಬಲನಾದ ಯುದ್ಧದಲ್ಲಿ ಶ್ರೇಷ್ಠನಾದ ಭೀಮನು ಕೃಷ್ಣನ ಆಸಂಜ್ಞೆಯನರಿತು ಜರಾಸಂಧನಂ ಕಾಲುಗಳಂ ಹಿಡಿದೆಳದು ಭೂಮಿಯಲ್ಲಿ ಕೆಡಹಿದನು‖೪೨‖ ಮತ್ತು ಭೀಮನು ಅವನ ಒಂದುಕಾಲನ್ನು ತನ್ನ ಒಂದುಪಾದದಿಂಮೆಟ್ಟಿಕೊಂಡು ತನ್ನಭುಜಂಗಳಿಂದ ಮತ್ತೊಂದುಕಾಲನ್ನು ಹಿಡಿದು ಆನೆಯು ಮರದಕೊಂಬೆಯಂಸೀಳುವಂತೆ ಗುದಸ್ಥಾನದಿಂದ ಅವನಂ ಹೋಳಾಗಿ ಸೀಳಿದನು‖೪೩‖ಆಗ ಜನರು ಒಂದುಪಾದವೂ ಒಂದುತೊಡೆಯೂ ಒಂದುವೃಷಣವೂ ಒಂದುಕಟಿಯೂ ಒಂದುಪೃಷ್ಠವೂ ಒಂದುಹೆಗಲೂ ಒಂದುಭುಜವೂ ಒಂದುನೇತ್ರವೂ ಒಂದುಶ್ರೋತ್ರವೂ ಉಳ್ಳ ಜರಾಸಂಧನ ದೇಹದ ಖಂಡಗಳೆರಡರನ್ನೂ ನೋಡಿದರು ‖೪೪‖ ಈರೀತಿಯಾಗಿ ಜರಾಸಂಧನು ಭೀಮನಿಂದ ಸಂಹರಿಸಲ್ಪಟ್ಟವನಾಗುತ್ತಿರಲು ಹಾಹಾಕಾರವುಂಟಾಯಿತು. ಆಗ ಶ್ರೀಕೃಷ್ಣಾರ್ಜುನರು ಭೀಮನನ್ನು ಆಲಿಂಗನಂಗೆಯ್ದು ಪೂಜಿಸಿದರು‖೪೫‖ಭೀಮನು ಕೃಷ್ಣನಿಂದ ಆಲಿಂಗಿಸಲ್ಪಟ್ಟವನಾಗಿ ಯುದ್ಧಶ್ರಮವಂ ನೀಗಿದನು. ಆಗ ಸಕಲಭೂತಂಗಳಿಗೂ ಕಾರಣನಾದ ಅಪರಿಚ್ಛಿನ್ನವಾದ ಸ್ವರೂಪವುಳ್ಳ ಪ್ರಭುವಾದ ಶ್ರೀಕೃಷ್ಣನು ಜರಾಸಂಧನ ಪುತ್ರನಾದ ಸಹದೇವನಿಗೆ ಮಗಧದೇಶಂಗಳ ಅ

ಭಿಂಚದಮೆಯಾತ್ಮಾಮಗಧಾನಾಂಪತಿಂಪ್ರಭುಃ ||೪೮|| ಮೋಚಯಾಮಾಸರಾಜನ್ಯಾನ್ಸಂರುದ್ಧಾನ್
ಮಾಗಧೇನಸಃ ... ... ... ... ... ||೪೯||

ಇತಿಶ್ರೀಮದ್ಭಾಗವತೇ-ದಶಮಸ್ಕಂಧೇ-ದ್ವಿಸಪ್ತತಿತಮೋಧ್ಯಾಯಃ-

ಶ್ರೀಶುಕಃ||ಅಯುತೇದ್ವೇಶತಾನ್ಯಷ್ಟೌಲೀಲಯಾಯುಧಿನಿರ್ಜಿತಾಃ | ತೇನಿರ್ಗತಾಗಿರಿದ್ರೋಣ್ಯಾಂಮಲಿ
ನಾಮಲವಾಸಸಃ||೧|| ಕ್ಷುತ್ಕ್ಷಾಮಾಶ್ಶುಷ್ಕವದನಾಸ್ಸಂರೋಧಪರಿಕರ್ಶಿತಾಃ |ದದೃಶುಸ್ತೇಘನಶ್ಯಾಮಂ

---

ಹೇವನು, ಮಾಗಧೇನ-ಜರಾಸಂಧನಿಂದ, ಸಂರುದ್ಧಾನ್-ತಡೆಯಲ್ಪಟ್ಟಿದ್ದ, ರಾಜನ್ಯಾನ್-ಅರಸುಗಳನ್ನು, ಮೋಚಯಾಮಾಸ-ಬಿ
ಡಿಸಿದನು ||೪೯||

ಇಂತೆಂಬಲ್ಲಿಗೆ ಭಾಗವತಪ್ರತಿಶಬ್ದಾರ್ಥಬೋಧಿನಿಯೊಳು ದಶಮಸ್ಕಂಧದಲ್ಲಿ
೭೨ನೆಯಅಧ್ಯಾಯಂಮುಗಿದುದು.

---

೭೩ನೆಯಅಧ್ಯಾಯದ ಪ್ರತಿಪದಟೀಕೆ.

ಅಯುತೇದ್ವೇ-೨೦ ಸಾವಿರದ, ಶತಾನ್ಯಷ್ಟ-೮೦೦ ಮಂದಿಯಾದ, ಲೀಲಯಾ-ಜರಾಸಂಧನವಿನೋದದಿಂದ, ಯುಧಿ-ಕಾಳಗದಲ್ಲಿ, ನಿರ್ಜಿತಾಃ-ಗೆಲ್ಲಲ್ಪಟ್ಟವರಾದ, ಗಿರಿದ್ರೋಣ್ಯಾಂ-ಗಿರಿವ್ರಜದದ್ರೋಣಿಯಲ್ಲಿ ಸಂರೋಧಪರಿಕರ್ಶಿತಾಃ-ಬಂಧನದಿಂದನವ ದವರಾದ, ಕ್ಷುತ್ಕ್ಷಾಮಾಃ-ಹಸಿವಿನಿಂಕೃಶರಾದ, ಶುಷ್ಕವದನಾಃ-ಒಣಗಿದ ಮೋರೆಗಳುಳ್ಳವರಾದ, ಮಲಿನಾಃ-ಕೊಳಕಾದ, ಮಲ ವಾಸಸಃ-ಕೊಳೆವಾವಡೆಗಳುಳ್ಳವರಾದ, ತೇ-ಆ ರಾಯರು, ನಿರ್ಗತಾಸ್ಸಂತಃ-ಹೊರಗೆಬಿಡಲ್ಪಟ್ಟು ಬಂದವರಾಗಿ, ಘನಶ್ಯಾಮಂ-

---

ಧಿಪತ್ಯವಂ ಕೊಟ್ಟು ಸಿಂಹಾಸನದಲ್ಲಿ ಪಟ್ಟಾಭಿಷೇಕಂಗೆಯ್ದನು ||೪೮|| ಅವನು ಶ್ರೀಕೃಷ್ಣನ ಆಜ್ಞೆಯಿಂದ ಜ
ರಾಸಂಧನಿಂ ಸೆರೆಯಲ್ಲಿಡಲ್ಪಟ್ಟಿದ್ದರಾಜನ್ಯರನ್ನು ಬಿಡಿಸಿದನು. ... ... ... ||೪೯||

ಇಂತು ಶ್ರೀಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸಿದನೆಂದುಸೂತಪೌ
ರಾಣಿಕನು ನೈಮಿಶಾರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಪೇಳಿದನೆಂ
ಬಲ್ಲಿಗೆ-ಶ್ರೀಮನ್ಮಹೀಶೂರ ಪುರವರಾಧೀಶ ಶ್ರೀಚಾಮರಾಜತನುಜಶ್ರೀ
ಮತ್ಕೃಷ್ಣರಾಜ ವಿರಚಿತಮಾದ ಶ್ರೀಕೃಷ್ಣರಾಜವಾಣೀವಿಲಾಸ
ಮೆಂಬಶ್ರೀಭಾಗವತ ಪುರಾಣದಕರ್ಣಾಟಭಾಷಾವ್ಯಾಖ್ಯಾನದಲ್ಲಿ
೭೨ನೆಅಧ್ಯಾಯಂಮುಗಿದುದು



ಶ್ರೀಧರೀಯಶ್ಲೋಕಃ|| ತತಸ್ತ್ರಿಸಪ್ತತಿತಮೇಮೋಚಯಿತ್ವಾನೃಪಾನ್ಹರಿಃ | ವರಾರ್ಹಭೋಗೈಃ ಸ್ವಾ ನ್ ದೇಶಾನ್ಪ್ರಸ್ಥಾಪ್ಯಪುನ ರಾಗಮತ್||೧|| ಟೀ|| ೭೩ನೆಯ ಅಧ್ಯಾಯದಲ್ಲಿ ಶ್ರೀ ಕೃಷ್ಣನು ಆ ಜರಾಸಂಧ ನಿಂದ ನಿರೋಧಂಗೆಯ್ಯಲ್ಪಟ್ಟ ಅರಸುಗಳಿಂ ಸೆರೆಯಿಂದ ಬಿಡಿಸಿ ಉತ್ಕೃಷ್ಟಭೋಗಂಗಳಿಂದ ಸಂತೋಷಪಡಿ ಸಿ ಅವರವರ ದೇಶಂಗಳಿಗೆ ಕಳುಹಿಸಿ ತಾನು ಪುನಃ ಬಂದನೆಂಬರ್ಥವಂ ಶುಕಮುನಿಯು ಪರೀಕ್ಷಿದ್ರಾಯಂಗೆ ನಿ ರೂಪಿಸಿ ಹೇಳುವನೆಂತೆನೆ,- ಎಲೈ ಪರೀಕ್ಷಿತ್ತನೇ! ಕೇಳು, ಅನಂತರದಲ್ಲಿ ಮುನ್ನ ಜರಾಸಂಧನಿಂ ಯುದ್ಧದೊಳು ಲೀಲಾಮಾತ್ರದಿಂ ಜಯಿಸಿ ತರಲ್ಪಟ್ಟು ದುರ್ಗದಲ್ಲಿ ನಿರುದ್ಧರಾಗಿರುವ ೨೦ ಸಾವಿರದ ೮ನೂರು ಮಂದಿ ರಾಯ ರು |೧| ಬಹಳ ಮಲಿನರಾಗಿ ಮಾಸಿದವಸ್ತ್ರಗಳನುಟ್ಟು ಹಸಿವಿನಿಂದ ಕೃಶರಾಗಿ ಒಣಗಿದ ಮೋರೆಯುವರಾಗಿ

ಪೀತಕೌಶೇಯವಾಸಸಮ್ ‖೨‖ ಶ್ರೀವತ್ಸಾಂಕಂಚತುರ್ಬಾಹುಂಪದ್ಮಪತ್ರಾಯತೇಕ್ಷಣಮ್ | ಚಾರುಪ್ರಸನ್ನವದನಂಸ್ಫುರನ್ಮಕರಕುಂಡಲಮ್ ‖೩‖ ಪದ್ಮಹಸ್ತಂಗದಾಶಂಖರಥಾಂಗೈರುಪಲಕ್ಷಿತಮ್ | ಕಿರೀಟಹಾರಕಟಕಕಟಿಸೂತ್ರಾಂಗದಾನ್ವಿತಮ್ ‖೪‖ ಭ್ರಾಜದ್ವರಮಣಿಗ್ರೀವಂನಿವೀತಂಚವನಮಾಲಯಾ | ಪಿಬಂತಇವಚಕ್ಷುರ್ಭ್ಯಾಂಲಿಹಂತಇವಜಿಹ್ವಯಾ ‖೫‖ ಜಿಘ್ರಂತಇವನಾಸಾಭ್ಯಾಂರಂಭಂತಇವಬಾಹುನಾ | ಪ್ರಣೇಮುರ್ಹತಪಾಪ್ಮಾನೋಮೂರ್ಧಭಿಃಪಾದಯೋರ್ಹರೇಃ ‖೬‖ ಕೃಷ್ಣಸಂದರ್ಶನಹ್ಲಾದಧ್ವಸ್ತಸಂರೋಧನಕ್ಲಮಾಃ | ಪ್ರಶಶಂಸುರ್ಹೃಷೀಕೇಶಂಗೀರ್ಭಿಃಪ್ರಾಂಜಲಯೋನೃಪಾಃ ‖೭‖ ರಾಜಾನಃ ‖ ನಮಸ್ತೇದೇ

---

ಮೇಘವಂತೆಕಪ್ಪಾದ, ಪೀತಕೌಶೇಯವಾಸಸಂ-ಹಸುರುಪಟ್ಟೆ ಯುಡಿಗೆಯುಳ್ಳ, ಕೃಷ್ಣನಂದದೃಶುಃ-ಕಂಡರು ‖೧-೨‖ ಶ್ರೀವತ್ಸಾಂಕಂ-ಶ್ರೀವತ್ಸವೆಂಬ ಮಚ್ಚೆಯುಳ್ಳ, ಚತುರ್ಬಾಹುಂ-ನಾಲ್ಕು ತೋಳುಳ್ಳ, ಪದ್ಮಪತ್ರಾಯತೇಕ್ಷಣಂ- ತಾವರೆಯೆಸಳಿನಂತೆ ನೀಳವಾದ ಕಂಗಳುಳ್ಳ, ಚಾರುಪ್ರಸನ್ನವದನಂ-ಮನೋಹರವಾದ ನಿರ್ಮಲವಾದ ಮುಖವುಳ್ಳ, ಸ್ಫುರನ್ಮಕರಕುಂಡಲಂ -ಶೋಭಿಸುವಮೊಸಳೆಯ ಆಕಾರದ ಕಿವಿ ಯೋಲೆಗಳುಳ್ಳ, ಪದ್ಮಹಸ್ತಂ-ತಾವರೆಯು ಕೈಯಲ್ಲುಳ್ಳ, ಗದಾಶಂಖರಥಾಂಗೈಃ_ಗದೆ ಶಂಖಚಕ್ರಗಳಿಂದ, ಉಪಲಕ್ಷಿತಂ-ಕೂಡಿದವನಾದ, ಕಿರೀಟ.. ಅನ್ವಿತಂ-ಕಿರೀಟ-ಶಿರೋಭೂಷಣದಿಂದಲೂ, ಹಾರ- ಕಂಠಸರದಿಂದಲೂ, ಕಟಕ-ಕೈಕಡಗಗಳಿಂದಲೂ, ಕಟಿಸೂತ್ರ-ಉಡಿದಾರದಿಂದಲೂ, ಅಂಗದ-ತೋಳುಬಂದಿಗಳಿಂದಲೂ, ಅನ್ವಿತಂ- ಕೂಡಿದವನಾದ ‖೪‖ ಭ್ರಾಜದ್ವರಮಣಿಗ್ರೀವಂ-ಬೆಳಗುತ್ತಿರುವ ಶ್ರೇಷ್ಠವಾದ ರತ್ನವು ಕೊರಳಲ್ಲಿಯುಳ್ಳ, ವನಮಾಲಯಾ-ತುಲಸಿಯ ದಂಡೆಯಿಂದ, ನಿವೀತಂಚ-ಇಳಿಹಾಕಲ್ಪಟ್ಟವನೂ ಆದ, ಕೃಷ್ಣನನ್ನು, ಚಕ್ಷುರ್ಭ್ಯಾಂ-ಕಂಗಳಿಂದ, ಪಿಬಂತಇವ- ಕುಡಿಯುತ್ತಿರುವರಂತೆಯೂ, ಜಿಹ್ವಯಾ-ನಾಲಿಗೆಯಿಂದ, ಲಿಹಂತಇವ-ನೆಕ್ಕುತ್ತಿರುವರಂತೆಯು ‖೫‖ ನಾಸಾಭ್ಯಾಂ-ಮೂಗುಗಳಿಂದ, ಜಿಘ್ರಂತಇವ ಮೂಸುತ್ತಿರುವರಂತೆಯೂ, ಬಾಹುನಾ-ತೋಳಿನಿಂದ, ರಂಭಂತಇವ-ಅಪ್ಪುತ್ತಿರುವರಂತೆಯೂ ಹತಪಾಪ್ಮಾನಃ-ನಾಶಪಡಿಸಲ್ಪಟ್ಟ ಪಾಪವುಳ್ಳವರಾಗಿ, ಹರೇಃ-ಕೃಷ್ಣನ, ಪಾದಯೋಃ-ಅಡಿಗಳಲ್ಲಿ, ಮೂರ್ಧಭಿಃ-ತಲೆಗಳಿಂದ, ಪ್ರಣೇಮುಃ-ಪೊಡಮಟ್ಟರು‖೬‖ ಕೃಷ್ಣ....ಕ್ಲಮಾಃ-ಕೃಷ್ಣಸಂದರ್ಶನ-ಕೃಷ್ಣನಂನೋಡುವಿಕೆಯಿಂದಾದ, ಆಹ್ಲಾದ-ಸಂತೋಷದಿಂದ, ಧ್ವಸ್ತ-ನಾಶಪಡಿಸಲ್ಪಟ್ಟ, ಸಂರೋಧನಕ್ಲಮಾಃ-ಸೆರೆಯಕಷ್ಟವುಳ್ಳವರಾದ, ನೃಪಾಃ-ಅರಸರು, ಪ್ರಾಂಜಲಯಃ-ಜೋಡಿಸಿದ ಕೈಗಳುಳ್ಳವರಾಗಿ,ಹೃಷೀಕೇಶಂ_ಕೃಷ್ಣನನ್ನು, ಗೀರ್ಭಿಃ-ಮಾತುಗಳಿಂದ, ಪ್ರಶಶಂಸುಃ-ಕೊಂಡಾಡಿದರು ‖೭‖ ದೇವದೇವೇಶ - ದೇವತೆಗಳಿಗೆದೇವರ್ಕಳೆನಿಪರಿಗೂ ನಿಯಾಮಕನೇ, ಪ್ರಪನ್ನಾರ್ತಿಹರ-ಶರಣಾಗತರ ಪೀಡೆಯನ್ನು ಪರಿಹರಿಸುವವನೇ, ಅವ್ಯಯ- ನಾಶರಹಿತನೇ, ಕೃಷ್ಣ-ವಾಸುದೇವನೇ, ತೇ-ನಿನಗೆ, ನಮಃ-ನಮಸ್ಕಾರವು, ಘೋರಸಂಸೃತೇಃ-ಭಯಂಕರವಾದ ಸಂಸಾರದಿಂದೆಸೆಯಿಂದ, ನಿ

---

ನಿರ್ಬಂಧದಿಂ ತಲೆ ಬೆಳಸಿ ಕೊಂಡಿರುವ ಅರಸುಗಳೆಲ್ಲರೂ ಪರ್ವತದ ಗವಿಯಿಂದ ಹೊರಕ್ಕೆ ಹೊರಟು ಬಂದು ಮೇಘದಂತೆ ಶ್ಯಾಮಲವರ್ಣನಾಗಿ ಪೀತಾಂಬರವನುಟ್ಟಿರುವ ‖೨‖ ಶ್ರೀವತ್ಸಚಿಹ್ನವುಳ್ಳ ಚತುರ್ಭುಜಂಗಳುಳ್ಳ ಕಮಲಗರ್ಭದಂತೆ ಕೆಂಪಾದ ಕಂಗಳುಳ್ಳ ಮನೋಹರವಾದ ಮುಖವುಳ್ಳ ಹೊಳೆಯುವ ಮಕರಕುಂಡಲಂಗಳುಳ್ಳ ‖೩‖ ಹಸ್ತದಿಂ ಪದ್ಮವಂ ಪಿಡಿದಿರುವ ಗದಾಶಂಖ ಚಕ್ರಗಳಿಂ ಶೋಭಿತನಾದ,ಕಿರೀಟ ಹಾರ ಕಡಗ ಕಟಿಸೂತ್ರ ತೋಳ್ ಬಂದಿಗಳಿಂ ಯುಕ್ತನಾದ ‖೪‖ ಪ್ರಕಾಶಿಸುವ ಕೌಸ್ತುಭರತ್ನವಂ ಕಂಠದಲ್ಲಿ ಧರಿಸಿದ, ವನಮಾಲೆಯಿಂ ಭೂಷಿತನಾದ, ಶ್ರೀ ಕೃಷ್ಣನಂ ಕಂಡರು ‖೫‖ ಆಮೇಲೆ ಅರಸುಗಳೆಲ್ಲರೂ ಶ್ರೀ ಕೃಷ್ಣನಂ ನೇತ್ರಂಗಳಿಂ ಪಾನಂಗೆಯ್ವರಂತೆಯೂ ನಾಲಿಗೆಯಿಂ ರುಚಿಸುವರಂತೆಯೂ ಮೂಗಿನಿಂ ಆಘ್ರಾಣಿಸುವರಂತೆಯೂ ಭುಜಂಗಳಿಂ ಅಪ್ಪಿಕೊಳ್ಳುವರಂತೆಯೂ ‖೬‖ ಪಾಪರಹಿತರಾಗಿ ಶ್ರೀ ವಾಸುದೇವನ ಪಾದಂಗಳಿಗೆ ತಮ್ಮ ಶಿರಸ್ಸುಗಳಿಂ ನಮಸ್ಕರಿಸಿದರು ಮತ್ತು ಶ್ರೀ ಕೃಷ್ಣ ದರ್ಶನದಿಂ ಪುಟ್ಟಿದ ಆನಂದ ವಿಶೇಷದಿಂದ ಪರಿಹರಿಸಲ್ಪಟ್ಟ ತಮ್ಮ ನಿರ್ಬಂಧದ ಮಹಾಶ್ರಮವುಳ್ಳವರಾಗಿ ಅಂಜಲಿಬಂಧವಂಗೆಯ್ದು ಶ್ರೀ ಕೃಷ್ಣನಂ ವಾಕ್ಯಂಗಳಿಂ ಸ್ತುತಿಸಿದರು ‖೭‖ ಎಲ್ಲೈದೇವದೇವನಾದ ಈಶ್ವರನಾದ ಭಕ್ತರ ಆರ್ತಿಯಂ ಪರಿಹರಿಸುವ ನಿತ್ಯನಾದ ಕೃಷ್ಣನೇ ನಿನಗೆ ನಮಸ್ಕಾರವು.ಶರಣಾಗತರಾಗಿ ಬಹಳ ಖಿನ್ನರಾಗಿದ್ದು ಸೆರೆಯಿಂ ಬಿಡಿಸಲ್ಪಟ್ಟಿರುವ ನಮ್ಮನ್ನು ಭಯಂಕರವಾದ ಸಂಸಾರ ಬಂಧದೆಸೆ

ವೇವೇಶಪ್ರಪನ್ನಾರ್ತಿಹರಾವ್ಯಯ । ಪ್ರಪನ್ನಾನ್ಪಾಹಿನಃಕೃಷ್ಣನಿರ್ವಿಣ್ಣಾನ್ಘೋರಸಂಸೃತೇಃ ॥೮॥ನೈ
ನಂನಾಥಾನ್ವಸೂಯಾಮೋಮಾಗಧಂಮಧುಸೂದನ । ಅನುಗ್ರಹೋಯದ್ಭವತೋರಾಜ್ಞಾಂರಾಜ್ಯಚ್ಯು
ತಿರ್ವಿಭೋ ॥೯॥ ರಾಜ್ಯೈಶ್ವರ್ಯಮದೋನ್ನದ್ಧೋನಶ್ರೇಯೋವಿಂದತೇನೃಪಃ । ತ್ವನ್ಮಾಯಾಮೋಹಿತೋನಿ
ತ್ಯಾಮನ್ಯತೇಸಂಪದೋಽಚಲಾಃ ॥೧೦॥ ಮೃಗತೃಷ್ಣಾಂಯಥಾಬಾಲಾಮನ್ಯಂತಉದಕಾಶಯಮ್ । ಏ
ವಂವೈಕಾರಿಕೀಂಮಾಯಾಮಯುಕ್ತಾವಸ್ತುಚಕ್ಷತೇ ॥೧೧॥ವಯಂಪುರಾಶ್ರೀಮದನಷ್ಟಬುದ್ಧಯೋಜಿ
ಗೀಷಯಾಸ್ಯಾಇತರೇತರಸ್ಪೃಧಃ।ಘ್ನಂತಃಪ್ರಜಾಸ್ಸ್ವಾಅತಿನಿರ್ಘೃಣಾಃಪ್ರಭೋಮೃತ್ಯುಂಪುರಸ್ತ್ವಾ
ಽವಿಗಣಯ್ಯದುರ್ಮದಾಃ ॥೧೨॥ ತಏವಕೃಷ್ಣಾದ್ಯಗಭೀರರಂಹಸಾದುರಂತವೀರ್ಯೇಣವಿಚಾಲಿತಾಶ್ರಿ)

---

ರ್ವಿಣ್ಣಾನ್-ವಿರಕ್ತರಾದ್ದರಿಂದಲೇ, ಪ್ರಪನ್ನಾನ್-ನಿನ್ನಂ ಶರಣುಹೊಕ್ಕವರಾದ ನಃ-ನಮ್ಮನ್ನು, ಪಾಹಿ-ರಕ್ಷಿಸು ॥೮॥ ನಾಥ-ಪ್ರಭುವೇ ! ಮಧುಸೂದನ-ಮಧುವೆಂಬದೈತ್ಯನಂ ಕೊಂದವಿಷ್ಣುವೇ, ವಿಭೋ-ವ್ಯಾಪಕನಾದ ಕೃಷ್ಣನೇ, ಯತ್-ಯಾವಕಾರಣದಿಂದ, ರಾಜ್ಞಾಂ-ಅರಸುಗಳಾದ ನಮಗೆ, ರಾಜ್ಯಚ್ಯುತಿಃ-ಇದ್ದರಾಜ್ಯ ತಪ್ಪಿಹೋದ್ದು, ಭವತಃ-ನಿನ್ನ, ಅನುಗ್ರಹಃ-ಪ್ರಸಾದವಾಗಿರುವುದೋ, ತತ್-ಆ ಕಾರಣದಿಂದ, ಏನಂಮಾಗಧಂ-ಈ ಜರಾಸಂಧನಂ ಕುರಿತು, ನಾನ್ವಸೂಯಾಮಃ-ಹೊಟ್ಟೆಕಿಚ್ಚುಪಡದೆ ಇರುವೆವು ॥೯॥ ರಾಜ್ಯೈಶ್ವರ್ಯಮದೋನ್ನದ್ಧಃ-ಧೊರೆತನದ ಪ್ರಾಭವದಗರ್ವದಿಂದ ಹೆಚ್ಚಿದವನಾದ, ನೃಪಃ-ಧೊರೆಯು, ಶ್ರೇಯಃ-ಶುಭವನ್ನು, ನವಿಂದತೇ-ಅನುಭವಿಸುವುದಿಲ್ಲ. ತ್ವನ್ಮಾಯಾಮೋಹಿತಃ-ನಿನ್ನ ಮೋಹನಶಕ್ತಿಯಿಂದ ಮರಹುಗೊಳಿಸಲ್ಪಟ್ಟವನಾಗಿ, ಚಂಚಲಾಸ್ಸಂಪದಃ-ಅನಿತ್ಯಂಗಳಾದ ಭಾಗ್ಯಗಳನ್ನು, ನಿತ್ಯಾಮನ್ಯತೇ-ಶಾಶ್ವತಗಳೆಂದು ತಿಳಿಯುವನು॥ ಬಾಲಾಃ-ಪಟುಜ್ಞಾನಿಗಳಲ್ಲದವರು, ಮೃಗತೃಷ್ಣಾಂ-ಬಿಸಿಲ್ಗುದುರೆಯನ್ನು, ಉದಕಾಶಯಂ-ಜಲಾಧಾರವನ್ನಾಗಿ, ಯಥಾ-ಹೇಗೆ,ಮನ್ಯಂತೇ-ತಿಳಿಯುತ್ತಿರುವರೋ, ತಥಾ-ಹಾಗೆ ಭ್ರಾಂತಿಗೊಂಡು, ಏವಂ-ಈರೀತಿಯಾಗಿ, ಅಯುಕ್ತಾಃ-ನಿನ್ನಯೋಗವಿಲ್ಲದ ಲೌಕಿಕರು, ವೈಕಾರಿಕೀಂ-ವಿಕಾರಕರವಾದ, ಮಾಯಾಂ-ಪ್ರಪಂಚವನ್ನು, ವಸ್ತು-ಸತ್ಯಪದಾರ್ಥವನ್ನಾಗಿ, ಚಕ್ಷತೇ-ಹೇಳುತ್ತಿರುವರು ॥೧೧॥ ಪುರಾ-ಪೂರ್ವದಲ್ಲಿ, ವಯಂ-ನಾವು, ಶ್ರೀಮದನಷ್ಟಬುದ್ಧಯಃ-ಸಂಪತ್ತಿನಗರ್ವದಿಂದ ನಾಶವಾದ ತಿಳುವಳಿಕೆಯುಳ್ಳವರಾದ್ದರಿಂದ, ಅಸ್ಯಾಃ-ಈ ಭೂಮಿಯನ್ನು. ಜಿಗೀಷಯಾ-ಗೆಲ್ಲಬೇಕೆಂಬ ಬಯಕೆಯಿಂದ, ಇತರೇತರಸ್ಪೃಧಃ-ಪರಸ್ಪರಸ್ಪರ್ಧೆಯುಳ್ಳವರಾಗಿ, ಪ್ರಭೋ-ಒಡೆಯನೇ, ಪುರಃ-ಮುಂದೆ, ಮೃತ್ಯುಂ-ನಾಶಕನಾಗಿರುವ, ತ್ವಾ-ನಿನ್ನನ್ನು. ಅವಿಗಣಯ್ಯ- ಲೆಕ್ಕಿಸದೆ, ದುರ್ಮದಾಃ-ಕೆಡುಕೊಬ್ಬುಳ್ಳವರಾಗಿ, ಅತಿನಿರ್ಘೃಣಾಃ-ಬಹಳದಯೆಯಿಲ್ಲದವರಾದ್ದರಿಂದ, ಸ್ವಾಃಪ್ರಜಾಃ-ನಮ್ಮಜನಗಳನ್ನೇ, ಘ್ನಂತಃ-ಕೊಲ್ಲುತ್ತಿರುವರಾಗಿದ್ದೆವು ॥೧೨॥ ಹೇಕೃಷ್ಣ-ಎಲೈ ಕೃಷ್ಣನೇ, ತಏವ-ಅಂತವರಾಗಿದ್ದನಾವೇ, ಗಭೀರರಂಹಸಾ-ಆಳವಾದ ವೇಗವುಳ್ಳ, ದುರಂತವೀರ್ಯೇಣ-ಕೊನೆಯಿಲ್ಲದ ಶಕ್ತಿಯುಳ್ಳ, ಭವತಸ್ತನ್ವಾ-ನಿನ್ನಮೂರ್ತಿಯಾದ, ಕಾಲೇ

---

ಯಿಂದಲೂ ಬಿಡಿಸುವನಾಗು ॥೮॥ ಎಲೈ ಲೋಕನಾಥನಾದ ಕೃಷ್ಣನೇ! ಯಾವ ಕಾರಣದಿಂ ರಾಜ್ಯಭ್ರಂಶವೂ ಕೂಡ ನಮಗೆ ಅನುಗ್ರಹವಾಯಿತೋ ಆ ಕಾರಣದಿಂದ ಜರಾಸಂಧನಲ್ಲಿ ನಾವು ದೋಷವನೆಣಿಸುವುದಿಲ್ಲವು ॥೯॥ ಮತ್ತು ರಾಜ್ಯದಿಂದಲೂ ಐಶ್ವರ್ಯದಿಂದಲೂ ಪುಟ್ಟಿದ ಮದದಿಂದ ಧರ್ಮ ಮರ್ಯಾದೆಯನ್ನು ಅತಿಕ್ರಮಿಸಿ ನಡೆಯುವ ಅರಸು ಶ್ರೇಯಸ್ಸನ್ನು ಹೊಂದುವುದಿಲ್ಲ, ನಿನ್ನ ಮಾಯೆಯಿಂದ ಮೋಹಯುಕ್ತರಾಗಿ ಅತಿಚಪಲಂಗಳಾದ ಸಂಪತ್ತು ಶಾಶ್ವತಂಗಳನ್ನಾಗಿ ತಿಳಿಯುತ್ತಾನೆ॥೧೦॥ಎಂತು ಬಾಲಕರು ಬಿಸಿಲ ತೋರೆಯಂ ನೋಡಿ ತಟಾಕವೆಂದು ತಿಳಿಯುವರೋ ಅಂತು ಅವಿವೇಕಿಗಳು ಸೃಷ್ಟ್ಯಾದಿ ವಿಕಾರವನೆಯ್ದಿರುವ ನಿನ್ನ ಮಾಯೆಯಂಪರತತ್ವವೆನ್ನಾಗಿ ಪೇಳುವರು ॥೧೧॥ ಎಲೈ ಶ್ರೀ ಕೃಷ್ಣನೇ! ಪೂರ್ವದಲ್ಲಿ ಐಶ್ವರ್ಯ ಮದದಿಂದ ನಷ್ಟ ಬುದ್ಧಿಗಳಾದ ನಾವು ಈಭೂಮಿಯಂ ಜಯಿಸಲಿಚ್ಛೆಯಿಂದ ಪರಸ್ಪರಕಲಹಂ ಗೆಯ್ಯುತಲಿರುವರಾಗಿ ಅತ್ಯಂತ ನಿರ್ದಯರಾಗಿ ಪ್ರಜೆಗಳಂ ಹಿಂಸೆಪಡಿಸುತ್ತ ಮುಂಗಡೆಯಲ್ಲಿರುವ ನಿನ್ನಂ ಲೆಕ್ಕಿಸದೆ ಅತ್ಯಂತ ಮತ್ತರಾಗಿದ್ದೆವು ॥೧೨॥ ಈಗ ನಿನ್ನ ಮೂರ್ತಿಯಾದ ಅತ್ಯಂತ ವೇಗವುಳ್ಳ ಅಪಾರವಾದ ಪ್ರಭಾವವುಳ್ಳ ಕಾಲದಿಂದ ಐಶ್ವರ್ಯಭ್ರಷ್ಟರಾಗಿ ಮಾ

ಯೋಃ । ಕಾಲೇನತನ್ಯಾಭವತೋನುಕಂಪಯಾವಿನಷ್ಟದರ್ಪಾಶ್ಚರಣೌಸ್ಮರಾಮತೇ ॥೧೩॥ ಅಥೋನರಾ ಜ್ಯಂಮೃಗತೃಷ್ಣರೂಪಿತಂದೇಹೇನಶಶ್ವತ್ಪತತಾರುಜಾಂಭುವಾ । ಉಪಾಸಿತವ್ಯಂಸ್ಪೃಹಯಾಮಹೇವಿ ಭೋಕ್ರಿಯಾಫಲಂಪ್ರೇತ್ಯಚಕರ್ಣರೋಚನಮ್ ॥೧೪॥ ತನ್ನಸ್ತ್ವಮಾದಿಶೋಪಾಯಂಯೇನತೇಚರಣಾಬ್ಜ ಯೋಃ । ಸ್ಮೃತಿರ್ಯಥಾನವಿರಮೇದಪಿಸಂಸರತಾಮಿಹ ॥೧೫॥ ಕೃಷ್ಣಾಯವಾಸುದೇವಾಯಹರಯೇಪರಮಾ ತ್ಮನೇ । ಪ್ರಣತಕ್ಲೇಶನಾಶಾಯಗೋವಿಂದಾಯನಮೋನಮಃ ॥೧೬॥ ಸಂಸ್ತೂಯಮಾನೋಭಗವಾನ್ರಾಜ ಭಿರ್ಮುಕ್ತಬಂಧನೈಃ । ತಾನಾಹಕರುಣಸ್ತಾತಶರಣ್ಯಶ್ಲಕ್ಷ್ಣಯಾಗಿರಾ ॥೧೭॥ ಶ್ರೀಕೃಷ್ಣಃ ॥ ಅದ್ಯ

---

ನ-ಸಮಯುತತ್ವದಿಂದ, ಶ್ರಿಯೋವಿಚಾಲಿತಾಃ-ಸಂಪತ್ತಿನಿಂದ ತಪ್ಪಿಸಲ್ಪಟ್ಟವರಾದ್ದರಿಂದ, ಅನುಕಂಪಯಾ-ನಿನ್ನ ಕೃಪೆಯಿಂ ದ, ವಿನಷ್ಟದರ್ಪಾಃ-ನಾಶವಾದಗರ್ವವುಳ್ಳವರಾಗಿ, ಅದ್ಯ-ಈಗ, ತೇ-ನಿನ್ನ, ಚರಣೌ-ಪಾದಗಳನ್ನು, ಸ್ಮರಾಮಃ- ನೆನಪುಗೊಳ್ಳು ವೆವು ॥೧೩॥ ಅಥೋ-ಇನ್ನುಮೇಲೆ, ಮೃಗತೃಷ್ಣರೂಪಿತಂ-ಬಿಸಿಲ್ಗುದುರೆಯೊಡನೆ ಸಮಾನವಾದ, ರಾಜ್ಯಂ-ಧೊರೆತನವನ್ನು, ಶಶ್ವತ್ಪತತಃ-ಬಾರಿಬಾರಿಗೂ ಬಿದ್ದುಹೋಗುವಂಥಾ, ರುಜಾಂಭುವಾ-ರೋಗಗಳಿಗೆ ತೌರುಮನೆಯಾದಂಥಾ,ದೇಹೇನ-ಶರೀರದಿಂ ದ, ಉಪಾಸಿತವ್ಯಂ-ಸೇವಿಸಲ್ಪಡತಕ್ಕದ್ದನ್ನಾಗಿ ನಸ್ಪೃಹಯಾಮಹೇ-ನಾವು ಬಯಸುವುದಿಲ್ಲವು. ವಿಭೋ- ವ್ಯಾಪಕನಾದ ಕೃಷ್ಣನೇ, ಪ್ರೇತ್ಯಚ-ನಾವುಸತ್ತೂಕೂಡ, ಕರ್ಣರೋಚನಂ-ಕಿವಿಗಳಿಗೆಮಾತ್ರ ರುಚಿಯನ್ನುಂಟುಮಾಡುವ,ಕರ್ಮಫಲಂಚ- ಪುಣ್ಯಕರ್ಮಕ್ಕೆ ಪ್ರಯೋಜನವಾದ ಸ್ವರ್ಗಾದಿಭೋಗವನ್ನೂ ಕೂಡ, ಉಪಾಸಿತವ್ಯಂ-ಸೇವಿಸಲ್ಪಡತಕ್ಕದ್ದನ್ನಾಗಿ, ನಸ್ಪೃ ಹಯಾಮಹೇ-ಬಯಸೆವು ॥೧೪॥ ತತ್-ಆಕಾರಣದಿಂದ. ಇಹ-ಈ ಲೋಕದಲ್ಲಿ, ಸಂಸರತಾಂ-ಸಂಸಾರಮಾಡುತ್ತಿರುವ ನಮ್ಮ, ಸ್ಮೃತಿಃ-ನೆನಪು, ಯೇನ-ಯಾವುದರಿಂದ, ತೇ-ನಿನ್ನ, ಚರಣಾಬ್ಜಯೋಃ-ಅಡಿದಾವರೆಗಳಲ್ಲಿ, ಯಥಾ-ಹೇಗೆ, ನವಿರಮೇತ್- ವಿ ರಾಮವನ್ನು ಹೊಂದಲಾರದೋ, ತಥಾ-ಹಾಗೆ, ತಮುಪಾಯಂ-ಆ ಯುಕ್ತಿಯನ್ನು, ತ್ವಂ-ನೀನು, ನಃ-ನಮಗೆ, ಆದಿಶ-ಆಜ್ಞಾಪಿ ಸು ॥೧೫॥ ವಾಸುದೇವಾಯ-ವಸುದೇವಪುತ್ರನಾದ, [ಸರ್ವಭೂತಗಳಿಗೂ ಅವಾಸವಾದ, ಮತ್ತು ಸರ್ವಭೂತಗಳಲ್ಲಿಯೂ ವಾಸಮಾಡುತ್ತಿರುವ] ಹರಯೇ-ಕಷ್ಟಗಳನ್ನು ಹರಿಸುವನಾದ, ಪರಮಾತ್ಮನೇ । ಪರಮೇಶ್ವರನಾದ, ಪ್ರಣತಕ್ಲೇಶನಾಶಾ ಯ-ಭಕ್ತರ ಕಷ್ಟಗಳನ್ನು ಪರಿಹರಿಸುವನಾದ, ಗೋವಿಂದಾಯ-ಗೋಪಾಲನಾದ [ವೇದವೇದ್ಯನಾದ] ಕೃಷ್ಣಾಯ-ಅವಿದ್ಯಾ ಬಂಧಮೋಚಕನಾದ ನಿನಗೆ, ನಮೋನಮಃ-ಮತ್ತುಮತ್ತು ನಮಸ್ಕಾರವು. (ಸಮಾಪ್ತ್ಯೈಕ್ಯಾನುಸಂಧಾನವಾಗಲಿ) ॥೧೬॥ತಾ ತ-ಅಯ್ಯಾ ಪರೀಕ್ಷಿತನೇ, ಮುಕ್ತಬಂಧನೈಃ-ಬಿಡಲ್ಪಟ್ಟ ಸೆರೆಯುಳ್ಳವರಾದ, ರಾಜಭಿಃ-ಅರಸುಗಳಿಂದ, ಸಂಸ್ತೂಯಮಾನಃ-ಹೀ ಗೆ ಕೊಂಡಾಡಲ್ಪಡುತಿರುವನಾದ, ಭಗವಾನ್-ಷಡ್ಗುಣೈಶ್ವರ್ಯಸಂಪನ್ನನಾದ ಕೃಷ್ಣನು, ಕರುಣಃ-ಕೃಪಾವಂತನೂ,ಶರಣ್ಯಃ- ಭಕ ರಕ್ಷಕನೂ ಆದ್ದರಿಂದ, ಶ್ಲಕ್ಷ್ಣಯಾ-ನಯವಾದ, ಗಿರಾ-ನುಡಿಯಿಂದ, ತಾನ್-ಆ ರಾಜರನ್ನು ಕುರಿತು, ಆಹ-ಪೇಳಿದನು ॥೧೭॥

---

ಡಲ್ಪಟ್ಟವಾದ್ದರಿಂದ ಗರ್ವಮುಡುಗಿದವರಾಗಿ ನಿನ್ನ ದಯೆಯಿಂದ ನಿನ್ನ ಪಾದಂಗಳಂ ಸ್ಮರಿಸುತಲಿರುವೆವು ॥೧೩॥ ಎಲೈ ಸ್ವಾಮಿಯೇ, ಪ್ರತಿಕ್ಷಣದಲ್ಲಿಯೂ ಕ್ಷೀಣವಾಗುತಲಿರುವ ಮತ್ತು ರೋಗಂಗಳಿಗೆ ಉತ್ಪತ್ತಿ ಸ್ಥಾನವಾದಈ ದೇಹದಿಂ ಈ ಲೋಕದಲ್ಲಿ ಅನುಭವಿಸಲು ಯೋಗ್ಯವಾಗಿ ಬಿಸಿಲು ದೊರೆಗೆ ಸಮಾನವಾಗಿಯೂ ಇರುವ ರಾಜ್ಯ ವಂ ಮತ್ತು ಈ ದೇಹದಿಂ ಕೂಡ ಬಿಟ್ಟು ಪರಲೋಕದಲ್ಲಿಯೂ ಶ್ರೋತ್ರಂಗಳಿಗೆ ಅಭಿರುಚಿಯಂಪುಟ್ಟಿಸುವಂತ ಹುದಾಗಿಯೂ ಇರುವ ಸ್ವರ್ಗಭೋಗವಂ ಕೂಡ ನಾವು ಇನ್ನು ಮೇಲೆ ಅಪೇಕ್ಷಿಸುವುದಿಲ್ಲ ॥೧೪॥ ಎಲೈ ಶ್ರೀ ಹರಿಯೇ, ಈ ಲೋಕದಲ್ಲಿ ಸಂಸಾರಿಗಳಾದರೂ ನಮಗೆ ಉಪಾಯದಿಂದನಿನ್ನ ಪಾದಾರವಿಂದ ಸ್ಮೃತಿ ಯು ವಿಚ್ಛೇದವಿಲ್ಲದಂತಿರುವ ಉಪಾಯವನ್ನು ನಮಗೆ ಉಪದೇಶಂಗೆಯ್ವನಾಗು ॥೧೫॥ ಶ್ರೀ ಕೃಷ್ಣನೇ, ವಾ ಸುದೇವನೇ, ಹರಿಯೇ, ಪರಮಾತ್ಮನೇ, ಗೋವಿಂದನೇ ನಿನಗೆ ನಮಸ್ಕಾರವು, ನಮಸ್ಕಾರವು, ಭಕ್ತರದುಃ ಖವಂ ಪರಿಹರಿಸುವವನೇ, ॥೧೬॥ ಎಲೈ ಪರೀಕ್ಷಿದ್ರಾಯನೇ, ಬಂಧನದಿಂ ಮುಕ್ತರಾದ ಅರಸುಗಳಿಂದಈ ರೀತಿ ಯಿಂ ಸ್ತುತಿಗೆಯ್ಯಲ್ಪಟ್ಟವನಾಗಿ ದಯಾಶೀಲನಾದ ರಕ್ಷಕನಾದ ಶ್ರೀ ಕೃಷ್ಣನು ಮನೋಹರವಾದ ವಾಕ್ಯ ದಿಂದ ಅರಸುಗಳಂ ಕುರಿತು ಈ ರೀತಿಯಾಗಿ ನಿರೂಪಿಸಿದ ನೆಂತೆನೆ ॥೧೭॥ ಎಲೈ ಅರಸುಗಳಿರಾ, ನಿಮ್ಮಿಂದ

ಪ್ರಭೃತಿವೋಭೂಪಾಮಯ್ಯಾತ್ಮನ್ಯಖಿಲೇಶ್ವರೇ|ಸುದೃಢಾಜಾಯತೇಭಕ್ತಿರ್ಬಾಢಮಾಶಂಸಿತಂತಥಾ॥೧೮॥ ದಿಷ್ಟ್ಯಾವ್ಯವಸಿತಂಭೂಪಾಭವಂತಋತಭಾಷಿಣಃ | ಶ್ರಿಯೈಶ್ವರ್ಯಮದೋನ್ನಾಹಂಪಶ್ಯೈಹ್ಯುನ್ಮಾದಕಂ ನೃಣಾಮ್॥೧೯॥ ಹೈಹಯೋನಹುಷೋವೇನೋರಾವಣೋನರಕೋಽಪರೇ | ಶ್ರೀಮದಾದ್ಭ್ರಂಶಿತಾಃಸ್ಥಾನಾದ್ದೇವದೈತ್ಯನರೇಶ್ವರಾಃ॥೨೦॥ ಭವಂತಏತದ್ವಿಜ್ಞಾಯದೇಹಾದ್ಯುತ್ಪಾದ್ಯಮಂತವತ್ | ಮಾಂಭಜಂತೋಽಧ್ವರೈರ್ಯುಕ್ತಾಃಪ್ರಜಾಧರ್ಮೇಣರಕ್ಷಥ॥೨೧॥ ಸಂತನ್ವಂತಃಪ್ರಜಾತಂತೂನ್ಸುಖಂದುಃಖಂಭವಾಭವೌ | ಪ್ರಾ

---

ಯೇ-ಭೂಪಾಃ-ಎಲೈ ಅರಸುಗಳಿರಾ, ಅದ್ಯಪ್ರಭೃತಿ-ಇದು ಮೊದಲ್ಗೊಂಡು, ವಃ-ನಿಮಗೆ, ಆತ್ಮನಿ-ಸ್ವರೂಪವಾದಂಥಾ, ಅಖಿಲೇಶ್ವರೇ-ಎಲ್ಲರಿಗೂ ನಿಯಾಮಕನಾದಂಥಾ, ಮಯಿ-ನನ್ನಲ್ಲಿ, ಭಕ್ತಿಃ-ಪ್ರೀತಿಯು, ಸುದೃಢಾ-ಗಟ್ಟಿಯಾದ್ದು, ಜಾಯತೇ-ಹುಟ್ಟುತ್ತೆ, ತಥಾ-ಹಾಗೆಯೇ, ಆಶಂಸಿತಂ-ನಿಮ್ಮಿಂದ ಶ್ಲಾಘಿಸಲ್ಪಟ್ಟದ್ದು, ಬಾಢಂ-ನಿಶ್ಚಿತವಾಗುವದು ॥೧೮॥ ಭೂಪಾಃ-ಅರಸುಗಳಿರಾ! ವ್ಯವಸಿತಂ-ನಿಮ್ಮಿಂದ ಸಂಕಲ್ಪಿಸಲ್ಪಟ್ಟದ್ದು, ದಿಷ್ಟ್ಯಾ-ಶುಭವಾಗಿರುವುದು, ಭವಂತಃ-ನೀವುಗಳು, ಋತಭಾಷಿಣಃ- ಸತ್ಯವನ್ನು ನುಡಿಯುತ್ತಿರುವವರು, ಶ್ರಿಯಾ-ಸಂಪತ್ತಿನಿಂದ, ಐಶ್ವರ್ಯಮದೋನ್ನಾಹಂ-ಪ್ರಾಭವದ ಗರ್ವದಿಂದಾದ ಹೆಚ್ಚಿಕೆಯನ್ನು, ನೃಣಾಂ-ಮನುಷ್ಯರಿಗೆ, ಉನ್ಮಾದಕಂ-ಹುಚ್ಚು ಹಿಡಿಸುವುದನ್ನಾಗಿ, ಪಶ್ಯೇ-ಕಾಣುವೆನಲ್ಲವೆ ॥೧೯॥ ಹೈಹಯಃ-ಕಾರ್ತವೀರ್ಯಾರ್ಜುನನು, ನಹುಷಃ-ನಹುಷರಾಯನು, ವೇನಃ-ವೇನರಾಯನು, ರಾವಣಃ-ದಶಕಂಠ ದೈತ್ಯನು, ನರಕಃ-ನರಕಾಸುರನು, ಅಪರೇ-ಇತರರಾದ, ದೇವದೈತ್ಯನರೇಶ್ವರಾಃ-ದೇವದಾನವಮನುಷ್ಯರಲ್ಲಿ, ಪ್ರಭುಗಳಾದವರು, ಶ್ರೀಮದಾತ್-ಸಂಪತ್ತಿನ ಹೆಮ್ಮೆಯಿಂದ, ಸ್ಥಾನಾತ್-ತಮ್ಮ ಪದವಿಯ ದೆಸೆಯಿಂದ, ಭ್ರಂಶಿತಾಃ-ಉರುಳಿಸಲ್ಪಟ್ಟವರಾದರು ॥೨೦॥ ಉತ್ಪಾದ್ಯಂ-ಹುಟ್ಟಿಸಲ್ಪಡಲು ಯೋಗ್ಯವಾದ್ದರಿಂದ, ದೇಹಾದಿ-ಶರೀರವೊದಲಾದ ಜಗತ್ತು, ಅಂತವತ್-ನಾಶವುಳ್ಳದ್ದು ಏತತ್-ಎಂಬ ಇದನ್ನು, ಭವಂತಃ-ನೀವು, ವಿಜ್ಞಾಯ-ತಿಳಿದು, ಅಧ್ವರೈಃ-ಯಜ್ಞಗಳಿಂದ, ಯುಕ್ತಾಃ-ನನ್ನಲ್ಲಿ ಕರ್ಮಯೋಗಾದಿಗಳುಳ್ಳವರಾಗಿ, ಮಾಂ-ನನ್ನನ್ನು, ಭಜಂತಃ-ಪ್ರೀತಿಯಿಂದ ಸೇವಿಸುವವರಾಗಿ, ಧರ್ಮೇಣ-ವರ್ಣಾಶ್ರಮಧರ್ಮದಿಂದ, ಪ್ರಜಾಃ-ಜನರನ್ನು, ರಕ್ಷಥ- ಪಾಲಿಸಿರಿ॥ ಪ್ರಜಾತಂತೂನ್-ಸಂತಾನಪರಂಪರೆಗಳನ್ನು, ಸಂತನ್ವಂತಃ-ವೃದ್ಧಿಗೊಳಿಸುವವರಾಗಿ, ಸುಖದುಃಖೇ- ಹರ್ಷವಿಷಾದಗಳನ್ನೂ,

---

ಅಪೇಕ್ಷಿಸಲ್ಪಟ್ಟಂತೆ ನಿಶ್ಚಯವಾಗಿ ಇದು ಮೊದಲ್ಗೊಂಡು ಸರ್ವೇಶ್ವರನಾದ ಆತ್ಮರೂಪನಾದ ನನ್ನಲ್ಲಿ ನಿಮಗೆ ದೃಢಭಕ್ತಿಯುಂಟಾಗಲಿ ॥೧೮॥ ನನ್ನ ಸೇವೆಯೇ ಮಾಡತಕ್ಕದ್ದೆಂದು ನಿಮ್ಮಿಂದ ಸಂಕಲ್ಪಿಸಲ್ಪಟ್ಟ ರಾಪಿಕೆಯು ನಿಮಗೆ ಬಹುಶುಭಕರವು, ನೀವು ಯಥಾರ್ಥವಾದಿಗಳು, ನಾನು ಪುರುಷರ ಪ್ರಯತ್ನ ಸಂಪತ್ತುಗಳ ಮದದಿಂದುಂಟಾದ ಸ್ವೇಚ್ಛಾ ಸಂಚಾರವಂ ಮೋಹವನ್ನಾಗಿ ತಿಳಿಯುತಲಿರುವೆನು ॥೧೯॥ ಎಂದು ನಿರೂಪಿಸಿ ಈ ಯರ್ಥದಲ್ಲಿ ದೃಷ್ಟಾಂತವಂ ಹೇಳುವನು- ಚಕ್ರವರ್ತಿಯಾದ ಕಾರ್ತವೀರ್ಯನು ಪೂರ್ವದಲ್ಲಿ ಬಲಾತ್ಕಾರದಿಂ ಪರಶುರಾಮನ ತಂದೆಯಾದ ಜಮದಗ್ನಿಮುನಿಯ ಕಾಮಧೇನುವನ್ನು ಅಪಹರಿಸಿದ್ದರಿಂದ ಪುತ್ರಸಹಿತನಾಗಿ ಆ ಪರಶುರಾಮನಿಂದ ಸಂಹರಿಸಲ್ಪಟ್ಟನು. ಮತ್ತು ನಹುಷರಾಯನು ಇಂದ್ರಪದವಿಯನೈದ್ದಿ ಶಚೀದೇವಿಯಲ್ಲಿ ಆಸಕ್ತನಾಗಿ ಋಷಿಗಳಿಂದ ತನ್ನ ಪಲ್ಲಕ್ಕಿಯಂ ಹೊರಿಸುತ ಋಷಿಶಾಪವಂ ಪಡೆದು ಇಂದ್ರನ ಐಶ್ವರ್ಯದಿಂ ಭ್ರಷ್ಟನಾಗಿ ಅಜಗರ ಸರ್ಪವಾದನು. ಮತ್ತು ವೇನನೆಂಬ ಅರಸು ಮತ್ತನಾಗಿ ಋಷಿಗಳಂ ತಿರಸ್ಕರಿಸುತ ಆ ಋಷಿಗಳಿಂ ಹುಂಕಾರ ಮಾತ್ರದಿಂದಲೇ ಸಂಹರಿಸಲ್ಪಟ್ಟನು. ಮತ್ತು ರಾವಣನು ಸೀತೆಯಂ ಕಾಮಿಸುವನಾಗಿ ರಾಮನಿಂದ ಸಂಹರಿಸಲ್ಪಟ್ಟನು. ಮತ್ತು ನರಕಾಸುರನು ಅದಿತಿ ದೇವಿಯ ಕರ್ಣಾಭರಣಂಗಳು ಮೊದಲಾದ ವಸ್ತುಗಳನಪಹರಿಸಿದ್ದರಿಂದ ನನ್ನಿಂದಲೇ ಕೊಲ್ಲಲ್ಪಟ್ಟನು. ಅನ್ಯರಾದ ದೇವತೆಗಳೂ ದೈತ್ಯರೂ ಭೂಪತಿಗಳೂ ಕೂಡ ಹಲವರು, ಹಾಗೆಯೇ ಐಶ್ವರ್ಯ ಮದದಿಂದ ಸ್ಥಾನಭ್ರಷ್ಟರಾಗಿ ನಾಶವನೈದಿದರು ॥೨೦॥ ಆದ್ದರಿಂದ ನೀವು ಜನ್ಮವುಳ್ಳ ದೇಹಾದಿ ಪದಾರ್ಥಂಗಳಂ ಸರ್ವಥಂ ನಾಶವುಳ್ಳವನ್ನಾಗಿ ತಿಳಿದು ಪ್ರಮತ್ತರಾಗದೆ ಯಜ್ಞಂಗಳಿಂದ ನನ್ನಂ ಪೂಜಿಸುವರಾಗಿ ಧರ್ಮದಿಂದ ಪ್ರಜೆಗಳಂ ಪಾಲಿಸಿರಿ ॥೨೧॥ ಮತ್ತು ನೀವು ಪುತ್ರಾದಿ ಸಂತತಿಗ

ಪ್ರಾಪ್ತಂ ಪ್ರಾಪ್ತಂ ಚ ಸೇವಂತೋ ಮಚ್ಚಿತ್ತಾ ವಿಚರಿಷ್ಯಥ ॥೨೧॥ ಉದಾಸೀನಾಶ್ಚ ದೇಹಾದಾವಾತ್ಮಾರಾಮಾ ಧೃತವ್ರತಾಃ । ಮಯ್ಯಾವೇಶ್ಯ ಮನಸ್ಸಮ್ಯಙ್ಮಾಮಂತೇ ಬ್ರಹ್ಮ ಯಾಸ್ಯಥ ॥೨೨॥ ಶ್ರೀಶುಕಃ ॥ ಇತ್ಯಾದಿಶ್ಯ ನೃಪಾನ್ ಕೃಷ್ಣೋ ಭಗವಾನ್ ಭುವನೇಶ್ವರಃ । ತೇಷಾಂ ನ್ಯಯುಂಕ್ತ ಪುರುಷಾನ್ ಸ್ತ್ರಿಯೋ ಮಜ್ಜನಕರ್ಮಣಿ ॥೨೩॥ ಸಪರ್ಯಾಂ ಕಾರಯಾಮಾಸ ಸಹದೇವೇನ ಭಾರತ । ನರದೇವೋಚಿತೈರ್ವಸ್ತ್ರೈರ್ಭೂಷಣೈಸ್ಸ್ರಗ್ವಿಲೇಪನೈಃ ॥೨೪॥ ಭೋಜಯಿತ್ವಾ ವರಾನ್ನೇನ ಸುಸ್ನಾತಾನ್ ಸಮಲಂಕೃತಾನ್ । ಭೋಗೈಶ್ಚ ವಿವಿಧೈರ್ಯುಕ್ತಾನ್ ತಾಂಬೂಲಾದ್ಯೈರ್ನೃಪೋಚಿತೈಃ ॥೨೫॥ ತೇ ಪೂಜಿತಾ ಮುಕುಂದೇನ ರಾಜಾನೋ ಮೃಷ್ಟ

---

ಭವಾಭವೌ-ಜನನಮರಣಗಳನ್ನೂ, ಪ್ರಾಪ್ತಂ ಪ್ರಾಪ್ತಂ ಚ-ಕಾಲಕರ್ಮವಶವಾಗಿ ಬಂದು ಬಂದದ್ದನ್ನು, ಸೇವಂತಃ-ಅನುಭವಿಸುವರಾಗುತ್ತ, ಮಚ್ಚಿತ್ತಾಃ-ತನ್ನಲ್ಲಿ ಬುದ್ಧಿಯುಳ್ಳವರಾಗಿ, ವಿಚರಿಷ್ಯಥ-ನಡೆಯುಕೊಳ್ಳಿರಿ ॥೨೧॥ ದೇಹಾದೌ-ಶರೀರಾದಿಪ್ರಪಂಚದಲ್ಲಿ, ಉದಾಸೀನಾಃ-ಉಪೇಕ್ಷೆಯುಳ್ಳವರಾಗಿಯೂ, ಆತ್ಮಾರಾಮಾಃ-ಸ್ವರೂಪಾನುಭವದಲ್ಲಿ ಸಂತೋಷಿಸುವರಾಗಿಯೂ, ಧೃತವ್ರತಾಃ-ಧರಿಸಲ್ಪಟ್ಟ ನಿಯಮವುಳ್ಳವರಾಗಿಯೂ, ಮನಃ-ಚಿತ್ತವನ್ನು, ಮಯಿ-ನನ್ನಲ್ಲಿ, ಸಮ್ಯಕ್-ಚೆನ್ನಾಗಿ, ಆವೇಶ್ಯ-ಪ್ರವೇಶಗೊಳಿಸಿ, ಅಂತೇ-ದೇಹಾವಸಾನದಲ್ಲಿ, ಬ್ರಹ್ಮ-ಪರಮಾತ್ಮನಾದ, ಮಾಂ-ನನ್ನನ್ನು, ಯಾಸ್ಯಥ-ಸೇರುವಿರಿ ॥೨೨॥ ಭುವನೇಶ್ವರಃ-ಲೋಕನಿಯಾಮಕನಾದ, ಭಗವಾನ್-ಷಡ್ಗುಣೈಶ್ವರ್ಯಪೂರ್ಣನು, ಕೃಷ್ಣಃ-ನಾರಾಯಣನು, ಇತಿ-ಹೀಗೆಂದು, ನೃಪಾನ್-ರಾಜರನ್ನು, ಆದಿಶ್ಯ-ಆಜ್ಞಾಪಿಸಿ, ತೇಷಾಂ-ಆ ರಾಜರ, ಮಜ್ಜನಕರ್ಮಣಿ-ಮಂಗಳಸ್ನಾನಕಾರ್ಯದಲ್ಲಿ, ಪುರುಷಾನ್-ಸೇವಕರಾದ ಗಂಡಸರನ್ನೂ, ಸ್ತ್ರಿಯಃ-ಹೆಂಗಸರನ್ನೂ, ನ್ಯಯುಂಕ್ತ-ನಿಯೋಗಿಸಿದನು ॥೨೩॥ ಭಾರತ-ಭರತವಂಶೋತ್ಪನ್ನನಾದ ಪರೀಕ್ಷಿತನೇ । ನರದೇವೋಚಿತೈಃ-ಅರಸರಿಗೆ ಯೋಗ್ಯಂಗಳಾದ, ವಸ್ತ್ರೈಃ-ಬಟ್ಟೆಗಳಿಂದಲೂ, ಭೂಷಣೈಃ-ಆಭರಣಗಳಿಂದಲೂ, ಸ್ರಗ್ವಿಲೇಪನೈಃ ಪುಷ್ಪಹಾರಗಂಧಗಳಿಂದಲೂ, ಸಪರ್ಯಾಂ-ಪೂಜೋಪಚಾರವನ್ನು ಸಹದೇವೇನ-ಜರಾಸಂಧನಮಗನಿಂದ, ಕಾರಯಾಮಾಸ-ಮಾಡಿಸಿದನು ॥೨೪॥ ಸುಸ್ನಾತಾನ್-ಚೆನ್ನಾಗಿ ಮಿಂದಂಥ, ಸಮಲಂಕೃತಾನ್-ಚೆನ್ನಾಗಿ ಅಲಂಕರಿಸಲ್ಪಟ್ಟಂಥ, ನೃಪೋಚಿತೈಃ-ರಾಜಯೋಗ್ಯಂಗಳಾದ, ತಾಂಬೂಲಾದ್ಯೈಃ-ವೀಳ್ಯವೊದಲಾದ, ಭೋಗೈಶ್ಚ-ವಿಷಯಸುಖಗಳಿಂದಲೂ, ಯುಕ್ತಾನ್-ಕೂಡಿದ ಅರಸುಗಳನ್ನು, ವರಾನ್ನೇನ-ಶ್ರೇಷ್ಠವಾದ ಆಹಾರದಿಂದ, ಭೋಜಯಿತ್ವಾ-ಊಟಮಾಡಿಸಿ, [ಸಮ್ಮಾನಿಸಗೊಳಿಸಿದನು] ॥೨೫॥ ತೇ ರಾಜಾನಃ-ಆ ದೊರೆಗಳು, ಮುಕುಂದೇನ-ಮೋಕ್ಷದಾಯಕನಾದ ಕೃಷ್ಣನಿಂದ, ಪೂಜಿತಾಃ- ಸಮ್ಮಾನಿಸಲ್ಪಟ್ಟವರಾದ್ದರಿಂದ, ಮೃಷ್ಟಕುಂಡಲಾಃ-ಹೆಚ್ಚು ಬೆಲೆಯುಳ್ಳ ಕರ್ಣಾಭರಣಂಗಳುಳ್ಳವರಾಗಿ, ಕ್ಲೇಶಾತ್-ಕಷ್ಟವದೆಶೆಯಿಂದ, ಮೋಚಿತಾಃ-ಬಿಡಿಸಲ್ಪಟ್ಟವರಾಗಿ, ಪ್ರಾವೃಡಂತೇ-ಮಳೆಗಾಲದ ತುದಿಯಲ್ಲಿ, ಗ್ರಹಾಃ-ಸೂರ್ಯಾದಿಗ್ರಹಗಳು, ಯಥಾ-ಹೇ

---

ಳಂ ವೃದ್ಧಿ ಹೊಂದಿಸುತ್ತ ಕಾಲವಶವಾಗಿ ಪ್ರಾಪ್ತಂಗಳಪ್ಪ ಸುಖದುಃಖಂಗಳಂ ಜನ್ಮಮರಣಂಗಳಂ ಸಹಸಮಬುದ್ಧಿಯಿಂದ ಅನುಭವಿಸುತ್ತ ನನ್ನಲ್ಲಿಯೇ ಚಿತ್ತವನ್ನಿರಿಸಿ ಸಂಚರಿಸುವರಾಗಿರಿ ॥೨೧॥ ಮತ್ತು ದೇಹಾದಿಗಳಲ್ಲಿ ಉದಾಸೀನರಾಗಿ ಆತ್ಮಾರಾಮರಾಗಿ ವ್ರತಬದ್ಧರಾಗಿ ನನ್ನಲ್ಲಿ ಮನಮಂ ಚೆನ್ನಾಗಿ ನಿಲ್ಲಿಸಿ ಅಂತ್ಯ ಕಾಲದಲ್ಲಿ ಬ್ರಹ್ಮರೂಪನಾದ ನನ್ನ ನೈದುವರಾಗಿರಿ. ॥೨೨॥ ಎಲೈ ಪರೀಕ್ಷಿದ್ರಾಯನೇ! ಇಂತು ಲೋಕನಾಥನಾದ ಭಗವಂತನಾದ ಶ್ರೀ ಕೃಷ್ಣನು ತತ್ತ್ವೋಪದೇಶದಿಂ ಆ ಭೂಪತಿಗಳನ್ನು ಅನುಗ್ರಹಿಸಿ ಅವರಿಗೆ ಅಭ್ಯಂಜನ ಸ್ನಾನಾದಿಗಳಂ ಮಾಡಿಸಲೋಸುಗ ಪುರುಷರಂ ಸ್ತ್ರೀಯರಂ ಸಹ ಆಜ್ಞಾಪಿಸಿದನು ॥೨೩॥ ಮತ್ತು ಶ್ರೀ ಕೃಷ್ಣನು ಸಹದೇವನಿಂದ ರಾಜಯೋಗ್ಯಂಗಳಾದ ವಸ್ತ್ರಂಗಳಂ ಭೂಷಣಮಾಲ್ಯ ವಿಲೇಪನಂಗಳಿಂದಲೂ ಆ ಯರಸುಗಳಿಗೆ ಪೂಜೆಯಂಗೆಯ್ಸಿದನು. ॥೨೪॥ ಮತ್ತು ಶ್ರೀ ಕೃಷ್ಣನು ಅಭ್ಯಂಜನ ಸ್ನಾನವಂಗೆಯ್ದಿರುವ ಚೆನ್ನಾಗಿ ಅಲಂಕೃತರಾದ ನಾನಾ ವಿಧಂಗಳಾದ ರಾಜ ಭೋಗಂಗಳೊಡನೆಯುಕ್ತರಾದ ಆ ಯರಸುಗಳಿಗೆ ಮೃಷ್ಟಾನ್ನ ಭೋಜನಮಂ ಮಾಡಿಸಿ ಪುನಃ ಸಹದೇವನಿಂದ ರಾಜಯೋಗ್ಯಂಗಳಾದ ತಾಂಬೂಲಾದಿಗಳಿಂ ಅವರಿಗೆ ಪೂಜೆಯಂಗೆಯ್ಸಿದನು ॥೨೫॥ ಈ ರೀತಿಯಾಗಿ ಶ್ರೀ ಕೃಷ್ಣನಿಂದ ಸಮ್ಮಾನಂಗೆಯ್ಯಲ್ಪಟ್ಟವರಾಗಿ ಮತ್ತು ಅತಿ ಪ್ರಕಾಶಯುಕ್ತಂಗಳಾ

ಶೋಣಿತಾಃ | ವಿರೇಜುರ್ಮೋಚಿತಾಃ ಕ್ಷ್ಮಾಭ್ರಾತ್ಪ್ರಾವೃಡಂತೇಯಥಾಗ್ರಹಾಃ ||೨೭|| ರಥಾನ್ಸದಶ್ವಾ
ನಾರೋಪ್ಯಮಣಿಕಾಂಚನಭೂಷಿತಾನ್ |ಪ್ರೀಣೀಯಸೂನೃತೈರ್ವಾಕ್ಯೈಸ್ಸ್ವದೇಶಾನ್ಪ್ರತ್ಯಯಾಪ
ಯತ್ ||೨೮|| ತಏವಂಮೋಚಿತಾಃಕೃಚ್ಛ್ರಾತ್ಕೃಷ್ಣೇನಸುಮಹಾತ್ಮನಾ | ಯಯುಸ್ತಮೇವಧ್ಯಾಯಂ
ತಃಕೃತಾನಿಚಜಗತ್ಪತೇಃ ||೨೯|| ಜಗದುಃಪ್ರಕೃತಿಭ್ಯಸ್ತೇಮಹಾಪುರುಷಚೇಷ್ಟಿತಮ್ ||ಯಥಾನ್ವಶಾ
ಸದ್ಭಗವಾನ್ತಥಾಚಕ್ರುರತಂದ್ರಿತಾಃ ||೩೦|| ಜರಾಸಂಧಂಘಾತಯಿತ್ವಾಭೀಮಸೇನೇನಕೇಶವಃ | ಪಾ
ರ್ಥಾಭ್ಯಾಂಸಂಯುತಃಪ್ರಾಯಾತ್ಸಹದೇವೇನಪೂಜಿತಃ||೩೧|| ಗತ್ವಾತೇಖಾಂಡವಪ್ರಸ್ಥಂಶಂಖಾನ್ದಧ್ಮು

ಗೋ, ತಥಾ-ಹಾಗೆ, ವಿರೇಜುಃ-ವಿಶೇಷವಾಗಿ ಬೆಳಗಿದರು ||೨೭|| ಮಣಿಕಾಂಚನಭೂಷಿತಾನ್-ರತ್ನದಿಂದಲೂ ಸಿಂಗರಿಸಲ್ಪಟ್ಟ,
ಸದಶ್ವಾನ್-ಮೇಲಾದ ಕುದುರೆಗಳುಳ್ಳ, ರಥಾನ್-ತೇರುಗಳನ್ನು, ಆರೋಪ್ಯ-ಏರಿಸಿ, ಸೂನೃತೈರ್ವಾಕ್ಯೈಃ-ಸತ್ಯಪ್ರಿಯವಚ
ನಗಳಿಂದ, ಪ್ರೀಣೀಯ-ಪ್ರೀಯಪಡಿಸಿ, ಸ್ವದೇಶಾನ್ಪತಿ-ಅವರವರ ದೇಶಗಳನ್ನು ಕುರಿತು, ಅಯಾಪಯತ್-ಕಳುಹಿಸಿದನು ||೨೮||
ತೇ-ಆ ದೊರೆಗಳು, ಮಹಾತ್ಮನಾ-ಉದಾರಹೃದಯನಾದ, ಕೃಷ್ಣೇನ-ನಾರಾಯಣನಿಂದ, ಕೃಚ್ಛ್ರಾತ್-ಕಷ್ಟದೆಸೆಯಿಂದ||
ಏವಂ-ಹೀಗೆ, ಮೋಚಿತಾಃ -ಬಿಡಲ್ಪಟ್ಟವರಾದ್ದರಿಂದಲೇ, ತಮೇವ-ಆ ಕೃಷ್ಣನನ್ನೇ, ಜಗತ್ಪತೇಃ-ಕೃಷ್ಣನ ಕೃತಾನಿಚ-
ಉಪಕಾರಗಳನ್ನೂ, ಧ್ಯಾಯಂತಃ-ಭಾವಿಸುತ್ತಿರುವರಾಗಿ, ಯಯುಃ-ತೆರಳಿದರು ||೨೯|| ತೇ-ಆ ದೊರೆಗಳು, ಮಹಾಪುರುಷ
ಚೇಷ್ಟಿತಂ-ಪರಮಾತ್ಮನಾದ ಕೃಷ್ಣನ ಲೀಲೆಯನ್ನು, ಪ್ರಕೃತಿಭ್ಯಃ-ಪ್ರಜೆಗಳಿಗೂ ಮಂತ್ರಿಗಳಿಗೂ, ಜಗದುಃ- ಹೇಳಿದರು,
ಭಗವಾನ್-ಸರ್ವಜ್ಞನಾದ ಕೃಷ್ಣನು, ಯಥಾ-ಹೇಗೆ, ಅನ್ವಶಾಸತ್-ಆಜ್ಞಾಪಿಸಿದನೋ, ತಥಾ-ಹಾಗೆ, ಅತಂದ್ರಿತಾಃ- ಜಾ
ಗರೂಕರಾಗಿ, ಚಕ್ರುಃ ಮಾಡಿದರು ||೩೦|| ಕೇಶವಃ-ಕೃಷ್ಣನು, ಜರಾಸಂಧಂ-ಮಗಧರಾಯನನ್ನು, ಭೀಮಸೇನೇನ-ಭೀಮ
ನಿಂದ, ಘಾತಯಿತ್ವಾ-ಕೊಲ್ಲಿಸಿ, ಪಾರ್ಥಾಭ್ಯಾಂ-ಭೀಮಾರ್ಜುನರೊಡನೆ, ಸಂಯುತಃ-ಕೂಡಿದವನಾಗಿ, ಸಹದೇವೇನ-ಜರಾಸಂ
ಧನ ಮಗನಿಂದ, ಪೂಜಿತಃ-ಉಪಚರಿಸಲ್ಪಟ್ಟವನಾಗಿ, ಪ್ರಾಯಾತ್-ಪ್ರಯಾಣಮಾಡಿದನು ||೩೧|| ತೇ-ಆ ಕೃಷ್ಣಭೀಮಾರ್ಜುನ
ರು, ಜಿತಾರಯಃ-ಗೆಲ್ಲಲ್ಪಟ್ಟ ಶತ್ರುಗಳುಳ್ಳವರಾದ್ದರಿಂದ, ಸುಹೃದಾಂ-ವಿರೋಧಿಗಳಿಗೆ ಅಸುಖಾವಹಾಃ-ಕಷ್ಟವಂ ಮಾ
ಡುತ್ತಿರುವವರೂ, ಸ್ವಸುಹೃದಃ-ತಮ್ಮ ಮಿತ್ರರನ್ನು, ಹರ್ಷಯಂತಃ-ಸಂತೋಷಪಡಿಸುವರೂ ಆಗಿ, ಖಾಂಡವಪ್ರಸ್ಥಂ-ಇಂ
ದ್ರಪ್ರಸ್ಥನಗರವನ್ನು, ಗತ್ವಾ-ಸೇರಿ, ಶಂಖಾನ್-ಪಾಂಚಜನ್ಯಪೌಂಡ್ರದೇವದತ್ತಗಳೆಂಬ ಶಂಖಗಳನ್ನು, ದಧ್ಮುಃ- ಊದಿದ
ರು ||೩೨|| ತತ್-ಆ ಜಯಶಂಖಧ್ವನಿಯನ್ನು, ಶ್ರುತ್ವಾ-ಕೇಳಿ, ಪ್ರೀತಮನಸಃ-ಸಂತುಷ್ಟಹೃದಯರಾದ, ಇಂದ್ರಪ್ರಸ್ಥನಿ

ದ ಕುಂಡಲಂಗಳುಳ್ಳವರಾಗಿ ಕ್ಲೇಶದ ದೆಸೆಯಿಂದ ಬಿಡಿಸಲ್ಪಟ್ಟವರಾಗಿ ಆ ಅರಸುಗಳು ಶರತ್ಕಾಲದಲ್ಲಿರುವ ಚಂ
ದ್ರಾದಿಗ್ರಹಂಗಳಂತೆ ಪ್ರಕಾಶಿಸಿದರು ||೨೭|| ಆಮೇಲೆ ಆ ಶ್ರೀ ಕೃಷ್ಣನು ಉತ್ತಮಾಶ್ವಂಗಳಿಂ ಯುಕ್ತಂಗ
ಳಾದ ಮಣಿಗಳಿಂದಲೂ ಸುವರ್ಣಗಳಿಂದಲೂ ಅಲಂಕರಿಸಲ್ಪಟ್ಟ ರಥಂಗಳನೇರುವಂತೆ ಮಾಡಿಸಿ ಪ್ರಿಯಂಗಳಾಗಿ
ಯೂ ಸತ್ಯಂಗಳಾಗಿಯೂ ಇರುವ ವಚನಂಗಳಿಂದ ಅವರನ್ನು ಸಂತೋಷ ಪಡಿಸಿ ಅವರವರ ದೇಶಂಗಳಿಗೆ ಕಳು
ಹಿಸಿದನು ||೨೮|| ಆ ಭೂಪತಿಗಳು ಮಹಾತ್ಮನಾದ ಶ್ರೀ ಕೃಷ್ಣನಿಂದ ಕಷ್ಟದ ದೆಸೆಯಿಂ ಬಿಡಿಸಲ್ಪಟ್ಟವರಾಗಿ
ಶ್ರೀ ಕೃಷ್ಣನನ್ನೂ ಲೋಕನಾಥನಾದ ಆತನ ಚರಿತ್ರಗಳನ್ನೂ ಧ್ಯಾನಂಗೆಯ್ಯುತ ತಮ್ಮ ತಮ್ಮ ದೇಶಂಗಳಂ
ಸೇರಿದರು ||೨೯|| ಮಂತ್ರಿಗಳು ಮೊದಲಾದ ಸಾಮಾಜಿಕರಿಗೆ ಆ ಶ್ರೀ ಕೃಷ್ಣನ ವ್ಯಾಪಾರವಂ ತಿಳಿಸಿತಮಗೆ ಶ್ರೀ
ಕೃಷ್ಣನು ಉಪದೇಶಂಗೆಯ್ದಂತೆ ಆಲಸ್ಯವಂ ಬಿಟ್ಟು ಆಚರಿಸುವರಾದರು ||೩೦|| ಅನಂತರದಲ್ಲಿ ಶ್ರೀ ಕೃ
ಷ್ಣನು ಭೀಮ ಸೇನ ನಿಂದಿಂತು ಜರಾಸಂಧ ಸಂಹಾರಂಗೆಯ್ಸಿ ಜರಾಸಂಧನ ಪುತ್ರನಾದ ಸಹ ದೇವನಿಂದ ತಾ
ನೂ ಪೂಜಿಸಲ್ಪಟ್ಟವನಾಗಿ ಭೀಮಾರ್ಜುನ ರೊಡನೆ ಮರಳಿ ಗಿರಿವ್ರಜಮಂ ತೆರಳಿದನು ||೩೧|| ಬಳಿಕ ಜರಾಸಂಧ
ಜಯಿಸಿರುವ ಶ್ರೀ ಕೃಷ್ಣ ಭೀಮಾರ್ಜುನರು ಇಂದ್ರ ಪ್ರಸ್ಥಪುರವನೆಯ್ದಿ ತಮ್ಮ ಮಿತ್ರರಂ ಸಂತೋಷಪಡಿಸಿ
ಡಿಸುತಲೂ ಶತ್ರುಗಳಿಗೆ ದುಃಖವನ್ನುಂಟು ಮಾಡುತಲೂ ಜಯಕರಂಗಳಾದ ಪಾಂಚಜನ್ಯಪೌಂಡ್ರ ದೇವದತ್ತ

ರ್ಜಿತಾಕರಯಃ । ಹರ್ಷಯಂತಸ್ಸ್ವಸುಹೃದೋದುರ್ಹೃದಾಂಚಾಸುಖಾವಹಾಃ ॥೩೦॥ ತಚ್ಛ್ರುತ್ವಾಪ್ರೀತಮನಸಇಂದ್ರಪ್ರಸ್ಥನಿವಾಸಿನಃ ಮೇನಿರೇಮಾಗಧಂಶಾಂತಂರಾಜಾಚಾಪ್ತಮನೋರಥ ॥೩೩॥ ಅಭಿವಂದ್ಯಾಥರಾಜಾನಂಭೀಮಾರ್ಜುನಜನಾರ್ದನಾಃ । ಸರ್ವಮಾಶ್ರಾವಯಾಂಚಕ್ರುರಾತ್ಮನಾಯದನುಷ್ಠಿತಮ್ ॥೩೪॥ ನಿಶಮ್ಯಧರ್ಮರಾಜಸ್ತತ್ಕೇಶವೇನಾನುಕಂಪಿತಃ । ಆನಂದಾಶ್ರುಕಲಾಮುಂಚನ್ಪ್ರೇಮ್ಣಾನೋವಾಚಕಿಂಚನ ॥೩೫॥

ಇತಿದಶಮಸ್ಕಂಧೇ-ತ್ರಿಸಪ್ತತಿತಮೋಧ್ಯಾಯಃ-

---

ವಾಸಿನಃ-ಇಂದ್ರಪ್ರಸ್ಥನಗರದಲ್ಲಿರುವ ಜನಗಳು, ಮಾಗಧಂ-ಜರಾಸಂಧನನ್ನು, ಶಾಂತಂ-ಅಳಿದವನನ್ನಾಗಿ, ಮೇನಿರೇ-ತಿಳಿದರು. ರಾಜಾಚ-ಧರ್ಮರಾಯನೂ ಕೂಡ, ಆಪ್ತಮನೋರಥಃ-ಪಡೆಯಲ್ಪಟ್ಟ ಇಷ್ಟಾರ್ಥವುಳ್ಳವನಾದನು ॥೩೩॥ ಅಥ-ಆ ಮೇಲೆ, ಭೀಮಾರ್ಜುನಜನಾರ್ದನಾಃ-ಭೀಮನೂ ಅರ್ಜುನನೂ ಕೃಷ್ಣನೂ, ರಾಜಾನಂ-ಧರ್ಮರಾಯನನ್ನು, ಅಭಿವಂದ್ಯ-ನಮಸ್ಕರಿಸಿ, ಆತ್ಮನಾ-ತಮ್ಮಿಂದ (ಕೃಷ್ಣನಿಂದ, ಯತ್-ಯಾವುದು, ಅನುಷ್ಠಿತಂ-ಆಚರಿಸಲ್ಪಟ್ಟಿತೋ, ತತ್ಸರ್ವಂ-ಅದೆಲ್ಲವನ್ನೂ, ಆಶ್ರಾವಯಾಂಚಕ್ರುಃ-ಕೇಳುವಂತೆ ಮಾಡಿದರು ॥೩೪॥ ಧರ್ಮರಾಜಸ್ತು-ಯುಧಿಷ್ಠಿರರಾಯನಾದರೋ, ನಿಶಮ್ಯ-ಇವರು ಹೇಳಿದ್ದನ್ನು ಕೇಳಿ, ಕೇಶವೇನ-ಕೃಷ್ಣನಿಂದ, ಅನುಕಂಪಿತಃ-ಕರುಣಿಸಲ್ಪಟ್ಟವರಾದ್ದರಿಂದ, ಆನಂದಾಶ್ರುಕಲಾಃ-ಸಂತೋಷದ ಕಣ್ಣೀರು ತೊಟ್ಟುಗಳನ್ನು, ಮುಂಚನ್-ಬಿಡುತಿರುವನಾಗಿ, ಪ್ರೇಮ್ಣಾ-ಪ್ರಿಯತ್ವದಿಂದ, ಕಿಂಚನ-ಕೊಂಚವನ್ನಾದರೂ, ನೋವಾಚ-ನುಡಿಯಲಿಲ್ಲವು ॥೩೫॥

ಇಂತು ಭಾಗವತ ಪ್ರತಿಶಬ್ದಾರ್ಥ ಬೋಧಿನಿಯೊಳು ದಶಮಸ್ಕಂದಲ್ಲಿ

೭೩ ನೆಯ ಅಧ್ಯಾಯಂ ಮುಗಿದುದು.

---

ಶಂಖಂಗಳಂ ಪೂರಿಸಿದರು ॥೩೦॥ ಆ ಯಿಂದ್ರಪ್ರಸ್ಥಪುರವಾಸಿಗಳಾದ ಜನರು ಜಯಶಂಖಘೋಷವಂ ಕೇಳಿ ಸಂತುಷ್ಟಚಿತ್ತರಾಗಿ ಜರಾಸಂಧನು ಸಂಹರಿಸಲ್ಪಟ್ಟನೆಂದು ತಿಳಿಸಿದರು. ಆಗ ಧರ್ಮರಾಯನು ಕೂಡ ಪಡೆಯಲ್ಪಟ್ಟ ಮನೋರಥವುಳ್ಳವನಾದನು ॥೩೩॥ ಅನಂತರದಲ್ಲಿ ಶ್ರೀ ಕೃಷ್ಣ ಭೀಮಾರ್ಜುನರು ಧರ್ಮರಾಯನಿಗೆ ಅಭಿವಾದನಂಗೆಯ್ದು ತಮ್ಮಿಂದ ಮಾಡಿಸಲ್ಪಟ್ಟ ಸಮಸ್ತ ವ್ಯಾಪಾರವಂ ತಿಳಿಸಿದರು ॥೩೪॥ ಆಗ ಧರ್ಮರಾಯನು ಶ್ರೀ ಕೃಷ್ಣನಿಂದ ಪೇಳಲ್ಪಟ್ಟ ವೃತ್ತಾಂತವಂ ಕೇಳಿ ಆನಂದ ಬಾಷ್ಪಬಿಂದುಗಳಂ ಬಿಡುತ ಪ್ರೇಮಾತಿಶಯದಿಂದ ಸ್ವಲ್ಪವನ್ನಾದರೂ ಪೇಳಿದವನಾಗಲಿಲ್ಲ ॥✝॥ ॥೩೫॥

ಇಂತು ಶ್ರೀಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸಿದನೆಂದು ಸೂತಪೌರಾಣಿಕನು ನೈಮಿಶಾರಣ್ಯ ವಾಸಿಗಳಾದ ಶೌನಕಾದಿ ಮಹರ್ಷಿಗಳಿಗೆ ಪೇಳಿದನೆಂಬಲ್ಲಿಗೆ ಶ್ರೀ ಮಸ್ಮಹೀಶೂರ ಪುರವರಾಧೀಶ ಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜ ವಿರಚಿತಮಾದ "ಶ್ರೀಕೃಷ್ಣರಾಜ ವಾಣೀವಿಲಾಸ"ಮೆಂಬ ಶ್ರೀಭಾಗವತ ಪುರಾಣದ ಕರ್ಣಾಟಭಾಷಾವ್ಯಾಖ್ಯಾನದಲ್ಲಿ ದಶಮಸ್ಕಂಧದ ೭೩ನೆಯಅಧ್ಯಾಯಂಮುಗಿದುದು.



ಶ್ರೀಶುಕಃ॥ ಏವಂಯುಧಿಷ್ಠಿರೋರಾಜಾಜರಾಸಂಧವಧಂವಿಭೋಃ।ಕೃಷ್ಣಸ್ಯಚಾನುಭಾವಂ ತಂಶ್ರುತ್ವಾಪ್ರೀತಸ್ತಮಬ್ರವೀತ್॥೧॥ ಯುಧಿಷ್ಠಿರಃ॥ ಯೇಸ್ಯುಸ್ತ್ರೈಲೋಕ್ಯಗುರವಸ್ಸರ್ವೇಲೋಕಾಸ್ಸಹೇಶ್ವರಾಃ।ವಹಂತಿದುರ್ಲಭಂಲಬ್ಧ್ವಾಶಿರಸೈವಾನುಶಾಸನಮ್॥೨॥ ಸಭವಾನರವಿಂದಾಕ್ಷದೀನಾನಾಮಿಹಮಾನಿನಾಮ್। ಧತ್ತೇನುಶಾಸನಂಭೂಮಂಸ್ತದತ್ಯಂತವಿಡಂಬನಮ್॥೩॥ ನಹ್ಯೇಕಸ್ಯಾದ್ವಿತೀಯಸ್ಯಬ್ರಹ್ಮಣಃಪರಮಾತ್ಮನಃ।ಕರ್ಮಭಿರ್ವರ್ಧತೇತೇಜೋಹ್ರಸತೇವಾಯಥಾರವೇಃ॥೪॥ ನಚತೇಜಿ

---

೭೪ ನೆಯ ಅಧ್ಯಾಯದ ಪ್ರತಿಪದ ಟೀಕೆ.

ಏವಂ-ಹೀಗೆ, ಯುಧಿಷ್ಠಿರೋರಾಜಾ-ಧರ್ಮರಾಯನು, ಜರಾಸಂಧವಧಂ-ಜರಾಸಂಧನ ಸಂಹಾರವನ್ನು, ವಿಭೋಃಕೃಷ್ಣಸ್ಯ-ವ್ಯಾಪಕನಾದ ಕೃಷ್ಣನ, ತಮನುಭಾವಂಚ-ಅಸಾಮರ್ಥ್ಯವನ್ನೂ, ಶ್ರುತ್ವಾ-ಕೇಳಿ, ಪ್ರೀತಃ-ಪ್ರಿಯವುಂಟಾದವನಾಗಿ ತಂ-ಆ ಕೃಷ್ಣನಂಕುರಿತು, ಅಬ್ರವೀತ್-ನುಡಿದನು ।೧।ತ್ರೈಲೋಕ್ಯಗುರವಃ-ಮೂರುಲೋಕಂಗಳಿಗೂ ಹಿರಿಯರಾದವರು, ಯೇಸ್ಯುಃ-ಯಾರುಆಗುವರೋ, ಸಹೇಶ್ವರಾಃ-ಅಧಿಪತಿಗಳಿಂ ಕೂಡಿದ, ಲೋಕಾಃ-ಭುವನಗಳು, ಸರ್ವೇ-ಎಲ್ಲವೂ, ದುರ್ಲಭಂ-ದೊರೆಯುವುದು ಪ್ರಯಾಸವಾದ, ಅನುಶಾಶನಂ-ನಿನ್ನ ಆಜ್ಞೆಯನ್ನು, ಲಬ್ಧ್ವಾ-ಪಡೆದು, ಶಿರಸೈವ-ತಲೆಯಿಂದಲೇ, ವಹಂತಿ-ಧರಿಸುತ್ತಿದಾರೆ ॥೨॥ ಅರವಿಂದಾಕ್ಷ-ಕಮಲ ಲೋಚನನೇ, ಸಭವಾನ್-ಆ ನೀನು, ಇಹ-ಇಲ್ಲಿ, ದೀನಾನಾಂ-ಬಡವರಾದವರೂ, ಮಾನಿನಾಂ-ಗರ್ವವುಳ್ಳವರಾದ ನಮ್ಮ, ಅನುಶಾಸನಂ-ಆಜ್ಞೆಯನ್ನು, ಧತ್ತೇ-ಧರಿಸುತ್ತಿದ್ದೀಯೆ. ಭೂಮನ್-ಸರ್ವೋತ್ತಮನೇ, ತತ್-ಅದು, ಅತ್ಯಂತವಿಡಂಬನಂ-ಬಹಳ ನಟನೆಯಾಗಿರುವುದು ॥೩॥ ರವೇಃಯಥಾ-ಸೂರ್ಯನಿಗೆ ಹೇಗೋಹಾಗೆ, ಏಕಸ್ಯ- ಓರ್ವನಾದ, ಅದ್ವಿತೀಯಸ್ಯ-ಎರಡನೆಯವ ನಿಲ್ಲದ, ಬ್ರಹ್ಮಣಃ-ವ್ಯಾಪಕನಾದ, ಪರಮಾತ್ಮನಃ-ಪರಮೇಶ್ವರನಾದ ನಿನ್ನ, ತೇಜಃ-ಸಾಮರ್ಥ್ಯವೆಂಬ ಬೆಳಕು, ಕರ್ಮಭಿಃ-ಕೆಲಸಗಳಿಂದ, ನವರ್ಧತೇ-ಹೆಚ್ಚುವುದಿಲ್ಲ. ನಹ್ರಸತೇವಾಹಿ-ಕೊರತೆಗೊಳ್ಳುವದೂ ಇಲ್ಲವಷ್ಟೆ ॥೪॥ ಅಜಿತ-ಜಯಿಸಲ್ಪಡದೆ ಇರುವ, ಮಾಧವ-ಕೃಷ್ಣನೇ, ತೇ-ನಿನ್ನ,ಭಕ್ತಾನಾಂಚ-ಭಕ್ತರಿಗೂಕೂಡ, ಪಶೂನಾಮಿವ

---

೭೪ ನೇಯ ಅಧ್ಯಾಯವು.

ಶ್ರೀಧರೀಯಶ್ಲೋಕಃ॥ ಚತುರ್ಸಪ್ತತಿತಮೇ ರಾಜಸೂಯಕ್ರತೌ ದ್ವಿಜೈಃ। ಅಗ್ರಪೂಜಾಪ್ರಸಂಗೇನ ಚೈದ್ಯಘಾತಾದಿವರ್ಣ್ಯತೇ ॥೧॥ಟೀ॥ ಎಪ್ಪತ್ತು ನಾಲ್ಕನೆಯ ಅಧ್ಯಾಯದಲ್ಲಿ ರಾಜಸೂಯಯಾಗವಾಗುವ ಸಮಯದಲ್ಲಿ ಅಗ್ರಪೂಜಾಪ್ರಸಂಗದಿಂ ಶಿಶುಪಾಲನವಧೆ ಮೊದಲಾದ್ದರನ್ನು ಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸುವನದೆಂತೆನೆ,--

ಎಲೈ, ಪರೀಕ್ಷಿದ್ರಾಯನೇ! ಕೇಳು ಹೀಗೆ ಧರ್ಮರಾಯನು ಜರಾಸಂಧನ ವಧೆಯಾದವೃತ್ತಾಂತವನ್ನೂ ವ್ಯಾಪಕನಾದ ಕೃಷ್ಣನ ಪ್ರಭಾವವನ್ನೂ ಕೇಳಿ ಆ ಕೃಷ್ಣನು ತನ್ನ ಆಜ್ಞಾಧಾರಕನಾಗಿರುವುದಂ ನೋಡಿ ಅತ್ಯಂತ ಸಂತೋಷಪಟ್ಟು ಶ್ರೀಕೃಷ್ಣನಂ ಕುರಿತು ವಿಜ್ಞಾಪಿಸಿದನೆಂತೆನೆ ॥೧॥ ಎಲೈ ಶ್ರೀಕೃಷ್ಣನೇ। ಯಾರುಮೂರು ಲೋಕಂಗಳಿಗೂ ಗುರುಗಳಾಗಿರುವರೋ ಆಸನಕಾದಿಗಳೂ ಸಮಸ್ತ ಲೋಕಪಾಲಕರೂ ಕೂಡ ನಿನ್ನಯಾಜ್ಞೆಯಂ ತಮ್ಮಭಾಗ್ಯದಿಂ ಪಡೆಯಲ್ಪಟ್ಟಿತೆಂದು ಬಹುಮಾನದಿಂ ತಲೆಯೊಳಾಂತು ಇರುವರು ॥೨॥ ಎಲೈಶ್ರೀಕೃಷ್ಣನೇ ಅಂತಾ ಪರಮೇಶ್ವರನಾದ ನೀನು ದೀನರಾದ ನಮ್ಮಂತವರುಗಳ ಅನುಜ್ಞೆಯಂ ವಹಿಸುತಲಿರುವಿಯೆಂಬುವದು ನಿನಗೆ ತಕ್ಕದ್ದಲ್ಲವು ॥೩॥ಒಬ್ಬನೇ ಆಗಿ ಸಮಾನರಿಲ್ಲದೆ ಸರ್ವಜೀವರಿಗೂ ನಿಯಾಮಕರನಾಗಿ ಬ್ರಹ್ಮನಾಗಿಯೂ ಇರುವನಿನಗೆ ಅನ್ಯನ ಆಜ್ಞಾಧಾರಿತ್ವವು ಸಹ ಮಾಯಾಕಲ್ಪಿತವೇ ಹೊರತು ವಸ್ತುತಃ ಅಲ್ಲವಾದ ಕಾರಣದಿಂದ ಸೂರ್ಯನಿಗೆ ಉದಯಸ್ತಾದಿ ಕರ್ಮಂಗಳಿಂ ತೇಜೋವೃದ್ಧಿ ಕ್ಷಯಂಗಳಿಲ್ಲದಂತೆ ಅನ್ಯರನ್ನು ಅನುಗ್ರಹಿಸುವಿಕೆಯೇ ಫಲವಾಗಿ ಉಳ್ಳ ಈ ಕರ್ಮಂಗಳಿಂದ ನಿನ್ನ ತೇಜಸ್ಸು ವೃದ್ಧಿ ಹೊಂದುವುದೂ ಇಲ್ಲ ಕ್ಷಯಿಸುವುದೂ ಇಲ್ಲ ॥೪॥ ಅನ್ಯರಿಗೆ ಭೇದಬುದ್ಧಿಯುಂಟಾಗುವಂತೆ ನೀನು ನಿನ್ನದೆಂಬ ಶರೀರ ವಿಷಯಕವಾ

ತ್ವದ್ಭಕ್ತಾನಾಂ ಮಮಾಹಮಿತಿ ಮಾಧವ । ತ್ವಂ ತವೇತಿ ಚ ನಾನಾಧೀಃ ಪಶೂನಾಮಿವ ವೈಕೃತಾ ॥೫॥ ಇತ್ಯುಕ್ತ್ವಾ ಯಜ್ಞಿಯೇ ಕಾಲೇ ವವ್ರೇ ಯುಕ್ತಾನ್ ಸ ಋತ್ವಿಜಃ । ಕೃಷ್ಣಾನುಮೋದಿತಃ ಪಾರ್ಥೋ ಬ್ರಾಹ್ಮಣಾನ್ ಬ್ರಹ್ಮವಾದಿನಃ ॥೬॥ ದ್ವೈಪಾಯನೋ ಭರದ್ವಾಜಸ್ಸುಮಂತುರ್ಗೌತಮೋಽಸಿತಃ । ವಸಿಷ್ಠಶ್ಚ್ಯವನಃ ಕಣ್ವೋ ಮೈತ್ರೇಯಃ ಕವಷಸ್ತ್ರಿತಃ ॥೭॥ ವಿಶ್ವಾಮಿತ್ರೋ ವಾಮದೇವಸ್ಸುಮತಿರ್ಜೈಮಿನಿಃ ಕ್ರತುಃ । ಪೈಲಃ ಪರಾಶರೋ ಗರ್ಗೋ ವೈಶಂಪಾಯನ ಏವ ಚ ॥೮॥ ದುರ್ವಾಸಾಃ ಕಶ್ಯಪೋ ಧೌಮ್ಯೋ ರಾಮೋ ಭಾರ್ಗವ ಆಸುರಿಃ । ವೀತಿಹೋತ್ರೋ ಮಧುಚ್ಛಂದೋ ವೀರಸೇನೋಽಕೃತವ್ರಣಃ ॥೯॥ ಉಪಹೂತಾಸ್ತಥಾ ಚಾನ್ಯೇ ಭೀಷ್ಮದ್ರೋಣಕೃಪಾದಯಃ । ಧೃತರಾಷ್ಟ್ರಸ್ಸಹಸುತೋ ವಿದುರಶ್ಚ ಮಹಾಮತಿಃ ॥೧೦॥ ಬ್ರಾಹ್ಮಣಾಃ ಕ್ಷ

---

ಪಶುಗಳಿಗಿರುವಂತೆ, ವೈಕೃತಾ-ಶರೀರವಿಷಯವಾದ, ಮಮಾಹಮಿತಿ-ನನ್ನದು ನಾನುಯೆಂಬ, ತ್ವಂ ತವೇತಿ ಚ-ನೀನು ನಿನ್ನದುಯೆಂಬ, ನಾನಾಧೀಃ-ಭೇದಬುದ್ಧಿಯು, ನ-ಇಲ್ಲವು, ಇತ್ಯುಕ್ತ್ವಾ-ಹೀಗೆಹೇಳಿ, ಕೃಷ್ಣಾನುಮೋದಿತಃ-ಕೃಷ್ಣನಿಂದ ಸಂತೋಷಪಡಿಸಲ್ಪಟ್ಟವನಾದ, ಸಪಾರ್ಥಃ-ಆ ಧರ್ಮರಾಯನು, ಯಜ್ಞಿಯೇ ಕಾಲೇ-ಯಾಗಕ್ಕೆ ಯೋಗ್ಯವಾದ ಸಮಯದಲ್ಲಿ, ಬ್ರಹ್ಮವಾದಿನಃ-ವೇದವನ್ನು ಹೇಳುತ್ತಿರುವ, ಬ್ರಾಹ್ಮಣಾನ್-ಬ್ರಹ್ಮಜ್ಞಾನಿಗಳಾದ ವಿಪ್ರರನ್ನು, ಯುಕ್ತಾನ್-ಯಜ್ಞಕ್ಕೆಸಂಬಂಧಿಸಿದ ಋತ್ವಿಜಃ-ಕಾರ್ಯಕಾರಿಗಳನ್ನಾಗಿ, ವವ್ರೇ-ಅಂಗೀಕರಿಸಿದನು ॥೬॥ ದ್ವೈಪಾಯನಃ-ವ್ಯಾಸನು, ಭರದ್ವಾಜಃ-ಆಂಗೀರಸನು, ಸುಮಂತುಃ-ಸುಮಂತುವೆಂಬವನು, ಗೌತಮಃ-ಗೌತಮನ ಮಗನು, ಅಸಿತಃ-ಅಸಿತನೆಂಬ ದೇವರ್ಷಿ, ವಸಿಷ್ಠಃ-ಬ್ರಹ್ಮಪುತ್ರನು, ಚ್ಯವನನು, ಕಣ್ವನು, ಮೈತ್ರೇಯನು, ಕವಷನು, ತ್ರಿತನು ॥೭॥ ವಿಶ್ವಾಮಿತ್ರನು, ವಾಮದೇವನು, ಸುಮತಿಯು, ಜೈಮಿನಿಯು, ಕ್ರತುವು, ಪೈಲನು, ಪರಾಶರನು, ಗರ್ಗನು, ವೈಶಂಪಾಯನನು ॥೮॥ ದೂರ್ವಾಸನು, ಕಶ್ಯಪನು ಧೌಮ್ಯನು, ಭಾರ್ಗವೋ ರಾಮಃ-ಪರಶುರಾಮನು, ಆಸುರಿಯು, ವೀತಿಹೊತ್ರನು, ಮಧುಚ್ಛಂದನು, ವೀರಸೇನನು, ಅಕೃತವ್ರಣನು ॥೯॥ ಉಪಹೂತಾಃ-ಕರೆಯಲ್ಪಟ್ಟರು. ತಥಾ-ಹಾಗೆ, ಅನ್ಯೇ ಚ-ಇತರರೂ, ಭೀಷ್ಮದ್ರೋಣಕೃಪಾದಯಃ-ಭೀಷ್ಮನೂ ದ್ರೋಣನೂ ಕೃಪನೂ ಮೊದಲಾದವರೂ, ಧೃತರಾಷ್ಟ್ರಃ-ಕುರುಡ ರಾಜ, ಸಹಸುತಃ-ಪುತ್ರರಿಂದೊಡಗೂಡಿದವನಾಗಿಯೂ, ಮಹಾಮತಿಃ-ಅಧಿಕಬುದ್ಧಿಯುಳ್ಳ ವಿದುರಶ್ಚ-ವಿದುರನೆಂಬ ಮಂತ್ರಿಯೂ ॥೧೦॥ ಬ್ರಾಹ್ಮಣಾಃ-ವಿಪ್ರರೂ, ಕ್ಷತ್ರಿಯಾಃ-ಅರಸರೂ, ವೈಶ್ಯಾಃ-ವರ್ತಕರೂ, ಶೂದ್ರಾಃ-ಶೂದ್ರರೂ, ಸರ್ವರಾಜಾಃ-ಎಲ್ಲ ದೊರೆಗಳೂ, ರಾಜ್ಞಾಂ-ದೊರೆಗಳ, ಪ್ರಕೃತಯಃ-ಮಂತ್ರಿಗಳೂ ಪ್ರಜೆಗಳೂ, ತತ್ರ-ಅಲ್ಲಿ, ಆಯಯುಃ-ಬಂದರು, ನೃಪ-ಪರೀಕ್ಷಿತನೇ ॥೧೧॥ ತತಃ-ಆ ಬಳಿಕ, ತೇ ಬ್ರಾಹ್ಮಣಾಃ-ಆ ಋತ್ವಿಕ್ಕುಗ

---

ದ ಭೇದಬುದ್ಧಿಯೂ ಕೂಡ ನಿನ್ನ ಭಕ್ತರಿಗುಂಟಾಗುವುದಿಲ್ಲ. ಹೀಗಿರುವಲ್ಲಿ ನಿನಗೇ ಭೇದಬುದ್ಧಿಯಿಲ್ಲವೆಂದು ಮರಳಿ ಹೇಳಬೇಕೆ? ॥೫॥ ಎಂದು ಧರ್ಮರಾಯನು ವಿಜ್ಞಾಪಿಸಿ ಕೃಷ್ಣನಿಂದ ಶ್ಲಾಘಿಸಲ್ಪಟ್ಟವನಾಗಿ ಯಜ್ಞಕ್ಕುಚಿತವಾದ ವಸಂತಕಾಲದಲ್ಲಿ ಜ್ಞಾನಿಗಳಾಗಿ ವೇದಾಧ್ಯಯನ ಶೀಲರಾಗಿರುವ ಬ್ರಾಹ್ಮಣರಂ ಹೋತೃಮೊದಲಾದ ಋತ್ವಿಜರನ್ನಾಗಿ ವರಿಸಿದನು ॥೬॥ ವ್ಯಾಸನು, ಭರದ್ವಾಜನು, ಸುಮಂತುವು, ಗೌತಮನು, ಅಸಿತನು, ವಶಿಷ್ಠನು, ಚ್ಯವನನು, ಕಣ್ವನು, ಮೈತ್ರೇಯನು, ಕಶ್ಯಪನು, ತ್ರಿತನೂ ॥೭॥ ವಿಶ್ವಾಮಿತ್ರನು, ವಾಮದೇವನು, ಸುಮತಿಯು, ಜೈಮಿನಿಯು, ಕ್ರತುವು, ಐಲನು, ಪರಾಶರನು, ಅಗಸ್ತ್ಯನು, ವೈಶಂಪಾಯನನು, ಅಥರ್ವನು, ಕಾಶ್ಯಪನು, ಪರಶುರಾಮನು, ಧೌಮ್ಯನು, ಆಸುರಿಯು, ವೀತಿಹೋತ್ರನು, ಮಧುಚ್ಛಂದನು, ವೀರಸೇನನು, ಅಕೃತವ್ರಣನು ॥೮॥ ವ್ಯಾಸನು, ಇವರೇ ಮೊದಲಾಗಿವುಳ್ಳ ಋಷಿಗಳಂ ಋತ್ವಿಕ್ಕುಗಳನ್ನಾಗಿ ವರಿಸಿದನು ॥೯॥ ಮತ್ತು ಆಗ ದ್ರೋಣಭೀಷ್ಮಕೃಪಾದಿಗಳೂ ಪುತ್ರಯುಕ್ತನಾದ ಧೃತರಾಷ್ಟ್ರನೂ ಬುದ್ಧಿಶಾಲಿಯಾದ ವಿದುರನೂ ಇವರೇ ಮೊದಲಾದ ಕಡಮೆ ಬಂಧುಗಳೂ ಕೂಡ ಧರ್ಮರಾಯನಿಂ ಕರೆಯಿಸಲ್ಪಟ್ಟವರಾಗಿ ಯಜ್ಞವಂ ನೋಡಲಿಚ್ಛೆಯಿಂದ ಇಂದ್ರಪ್ರಸ್ಥ ಪಟ್ಟಣವನೈದಿದರು ॥೧೦॥ ಮತ್ತು ಬ್ರಾಹ್ಮಣರು ಕ್ಷತ್ರಿಯರು ವೈಶ್ಯರು ಶೂದ್ರರು ಸಮಸ್ತಭೂಪತಿಗಳೂ ಅವರಮಂತ್ರಿಗಳು ಮೊದಲಾದ ಸಾಮಾಜಿಕರೂ ಸಹ ರಾಜಸೂಯ ಯಾಗವಂ

ತ್ರಿಯಸ್ತಾವೈಶ್ಯಾಶ್ಶೂದ್ರಾ ಯಜ್ಞದಿದೃಕ್ಷವಃ । ತತ್ರೇಯುಸ್ಸರ್ವರಾಜಾನೋ ರಾಜ್ಞಾಂ ಪ್ರಕೃತಯೋ ನೃಪ ॥
ತತಸ್ತೇ ದೇವಯಜನಂ ಬ್ರಾಹ್ಮಣಾಸ್ಸ್ವರ್ಣಲಾಂಗಲೈಃ । ಕೃಷ್ಟ್ವಾ ತತ್ರ ಯಥಾಮ್ನಾತಂ ದೀಕ್ಷಯಾಂ
ಚಕ್ರಿರೇ ನೃಪಮ್ ॥೧೨॥ ಹೈಮಾಃ ಕಿಲೋಪಕರಣಾ ವರುಣಸ್ಯ ಯಥಾ ಪುರಾ ॥೧೩॥ ಇಂದ್ರಾದಯೋ ಲೋಕ
ಪಾಲಾ ವಿರಿಂಚಿಭವಸಂಯುತಾಃ । ಸಗಣಾಸ್ಸಿದ್ಧಗಂಧರ್ವವಿದ್ಯಾಧರಮಹೋರಗಾಃ ॥೧೪॥ ಮುನಯೋ
ಯಕ್ಷರಕ್ಷಾಂಸಿ ಖಗಕಿಂನರಚಾರಣಾಃ । ರಾಜಾನಶ್ಚ ಸಮಾಹೂತಾ ರಾಜಪತ್ನ್ಯಶ್ಚ ಸರ್ವಶಃ ॥೧೫॥ ರಾಜ
ಸೂಯಂ ಸಮೀಯುಸ್ಸ್ಮ ರಾಜ್ಞಃ ಪಾಂಡುಸುತಸ್ಯ ವೈ । ಮೇನಿರೇ ಕೃಷ್ಣಭಕ್ತಸ್ಯ ಸೂಪಪನ್ನಮವಿಸ್ಮಿತಾಃ ॥

ಶಿಶುಪಾಲವಧಕಥಾಪ್ರಾರಂಭಃ ಷಟ್ಪ್ಟ ಃ -

ಅಯಾಜಯನ್ ಮಹಾರಾಜಂ ಯಾಜಕಾ ದೇವವರ್ಚಸಃ । ರಾಜಸೂಯೇನ ವಿಧಿವತ್ಪ್ರಾಚೇತಸಮಿವಾಮ

---

ಳು, ಸ್ವರ್ಣಲಾಂಗಲೈಃ-ಚಿಂನದ ನೇಗಿಲುಗಳಿಂದ, ದೇವಯಜನಂ-ಯಜ್ಞಭೂಮಿಯನ್ನು, ಕೃಷ್ಟ್ವಾ-ಉತ್ತು, ತತ್ರ-ಆ ಭೂಮಿಯಲ್ಲಿ, ಯಥಾಮ್ನಾತಂ-ವೇದದಲ್ಲಿ ಹೇಳಲ್ಪಟ್ಟಿರುವುದನ್ನತಿಕ್ರಮಿಸದೆ, ನೃಪಂ-ಧರ್ಮರಾಯನನ್ನು, ದೀಕ್ಷಯಾಂಚಕ್ರಿರೇ-ಯಜ್ಞನಿಯಮವುಳ್ಳವನನ್ನಾಗಿ ಮಾಡಿದರು ॥೧೨॥ ಪುರಾ-ಪೂರ್ವದಲ್ಲಿ, ವರುಣಸ್ಯ-ಯಜಮಾನನಾಗಿದ್ದ ವರುಣದೇವನಿಗೆ, ಯಥಾ-ಹೇಗೆಯೋ, ತಥಾ-ಹಾಗೆಯೇ, ಉಪಕರಣಾಃ-ಯಜ್ಞಸಾಮಗ್ರಿಗಳು, ಹೈಮಾಃಕಿಲ-ಭಂಗಾರದವುಗಳೇ ಆಗಿದ್ದುವಷ್ಟೆ ॥೧೩॥ ಇಂದ್ರಾದಯಃ-ದೇವೇಂದ್ರನೇ ಮೊದಲಾದ, ಲೋಕಪಾಲಾಃ-ದಿಕ್ಪಾಲಕರೂ, ವಿರಿಂಚಿಭವಸಂಯುತಾಃ-ಬ್ರಹ್ಮರುದ್ರರಿಂದ ಕೂಡಿದವರಾಗಿಯೂ, ಸಗಣಾಃ-ಸಂಘಸಹಿತರಾದ ಅಥವಾ ಗಣದೇವತೆಗಳಿಂದ ಕೂಡಿದ ಸಿದ್ಧರೂ ಗಂಧರ್ವರೂ ವಿದ್ಯಾಧರರೂ ದೊಡ್ಡ ಸರ್ಪಗಳೂ ॥೧೪॥ ಮುನಯಃ-ಋಷಿಗಳೂ, ಯಕ್ಷರಕ್ಷಾಂಸಿ-ಯಕ್ಷರೂ ರಾಕ್ಷಸರೂ, ಖಗಕಿನ್ನರಚಾರಿಣಾಃ- ಅಂತರಿಕ್ಷದಲ್ಲಿ ತಿರುಗುವವರೂ, ಕಿನ್ನರರೂ, ಚಾರಣರೂ, ಎಂಬವರೂ, ರಾಜಾನಶ -ಅರಸುಗಳೂ, ರಾಜಪತ್ನ್ಯಶ್ಚ-ರಾಣಿಯರೂ, ಸರ್ವಶಃ-ಎಲ್ಲಾ ಕಡೆಯಿಂದಲೂ, ಸಮಾಹೂತಾಃ-ಚೆನ್ನಾಗಿ ಕರೆಯಲ್ಪಟ್ಟವರಾಗಿ ॥೧೫॥ ಪಾಂಡುಸುತಸ್ಯ-ಪಾಂಡುರಾಜನ, ವೈ-ಪ್ರಸಿದ್ಧವಾದ, ರಾಜಸೂಯಂ-ರಾಜಸೂಯಯಾಗವನ್ನು ಕುರಿತು, ಸಮೀಯುಃಸ್ಮ-ಬಂದರು. ಹೇ ಕೃಷ್ಣಭಕ್ತಸ್ಯ-ಕೃಷ್ಣನಿಗೆ ಭಕ್ತನಾದ ಧರ್ಮರಾಯನ (ಯಜ್ಞವನ್ನು) ಅವಿಸ್ಮಿತಾಃ-ಅಶ್ಚರ್ಯವಿಲ್ಲದವರಾಗಿ, ಸೂಪಪನ್ನಂ-ಸಮೃದ್ಧವನ್ನಾಗಿ, ಮೇನಿರೇ-ತಿಳಿದರು ॥೧೬॥ ದೇವವರ್ಚಸಃ-ದೇವತೆಗಳಂತೆ ಕಾಂತಿಯುಳ್ಳ, ಯಾಜಕಾಃ-ಋತ್ವಿಕ್ಕುಗಳು ಅಮರಾಃ-ದೇವರ್ಕಳು, ಪ್ರಾಚೇತಸಮಿವ-ವರುಣನನ್ನು ಹೇಗೋ ಹಾಗೆ, ಮಹಾರಾಜಂ-ಧರ್ಮರಾಯನನ್ನು, ರಾಜಸೂಯೇನ-ರಾಜಸೂಯ

---

ನೋಡಲಿಚ್ಛೆಯುಳ್ಳವರಾಗಿ ಆಪುರವನೈದಿದರು ॥೧೧॥ ಅನಂತರದಲ್ಲಿ ಬ್ರಾಹ್ಮಣರು ಯಜ್ಞಭೂಮಿಯಂ ಸುವರ್ಣಮಯಂಗಳಾದ ನೇಗಿಲುಗಳಿಂದ ಚನ್ನಾಗಿ ಶೋಧಿಸಿ ಆಭೂಮಿಯಲ್ಲಿ ರಚಿಸಲ್ಪಟ್ಟ ಶಾಲೆಯಲ್ಲಿ ಧರ್ಮರಾಯನಿಗೆ ಶಾಸ್ತ್ರೋಕ್ತವಾಗಿ ದೀಕ್ಷೆಯಂಗೈಸಿದರು ॥೧೨॥ ಮತ್ತು ವರುಣನ ರಾಜಸೂಯ ಯಾಗದಲ್ಲಿ ಯಾವ ರೀತಿಯಲ್ಲಿ ಸುವರ್ಣಮಯಂಗಳಾಗಿ ಯಾಗೋಪಕರಣಂಗಳು ರಚಿಸಲ್ಪಟ್ಟವೋ ಅದೇರೀತಿಯಲ್ಲಿ ಧರ್ಮರಾಯನ ರಾಜಸೂಯದೊಳಗೆ ಸಮಸ್ತಂಗಳಾದ ಯಜ್ಞೋಪಕರಣಂಗಳೂ ಸುವರ್ಣದಿಂ ರಚಿಸಲ್ಪಟ್ಟಂತವುಗಳಾದವು ॥೧೩॥ ಮತ್ತು ಆಗ ಇಂದ್ರಾದಿಲೋಕಪಾಲಕರು ಬ್ರಹ್ಮರುದ್ರಾದಿ ದೇವಸಮೂಹಂಗಳು ತಮ್ಮತಮ್ಮ ಗಣಗಳೊಡನೆ ಯುಕ್ತರಾಗಿ ಸಿದ್ಧಗಂಧರ್ವವಿದ್ಯಾಧರ ಸರ್ಪಾಧಿಪತಿಗಳು ಮುನಿಗಳು ಯಕ್ಷರಾಕ್ಷಸರು ಖಗ ಕಿನ್ನರಚಾರಣರು ॥೧೪॥ ಮತ್ತು ಅರಸಿನಿಂದ ಕರೆಯಿಸಲ್ಪಟ್ಟ ಸಮಸ್ತ ಭೂಪತಿಗಳು ಸಮಸ್ತ ರಾಜಪತ್ನಿಯರು ಸಹ ತಮ್ಮತಮ್ಮ ಪರಿವಾರಂಗಳೊಡಗೂಡಿಬಂದು ॥೧೫॥ ಶ್ರೀಕೃಷ್ಣನ ಭಕ್ತನಾದ ಧರ್ಮರಾಯನ ಯಜ್ಞವಿಧಾನವಂನೋಡಿ ಆಶ್ಚರ್ಯಪಟ್ಟವರಾಗದೆ ಈಯರಸಿಗೆ ಈಕ್ರತು ಯುಕ್ತವಾಗಿರುವುದೆಂದು ತಿಳಿದರು ॥೧೬॥ ಅನಂತರದಲ್ಲಿ ದೇವತೆಗಳಂತೆ ತೇಜೋವಂತರಾದ ಋತ್ವಿಕ್ಕುಗಳು ಪೂರ್ವದಲ್ಲಿ ದೇವತೆಗಳು ವರುಣನಿಂದ ಯಾವರೀತಿಯಲ್ಲಿ ರಾಜಸೂಯ ಯಾಗವಂಮಾಡಿಸಿದರೋ ಅದೇರೀತಿಯಲ್ಲಿ ಧರ್ಮರಾಯನಿಂದ ವಿಧಿಯುಕ್ತವಾಗಿದಾ

ರಾಃ ||೧೭|| ಸುತ್ಯೇಹನ್ಯವನೀಪಾಲೋಯಾಜಕಾನ್ಸದಸಸ್ಪತೀನ್ | ಅಪೂಜಯನ್ಮಹಾಭಾಗಾನ್ಯ
ಥಾವತ್ಸುಸಮಾಹಿತಃ ||೧೮|| ಸದಸ್ಯಾಗ್ರ್ಯಾರ್ಹಣಾರ್ಹಂವೈವಿಮೃಶಂತಸ್ಸಭಾಸದಃ | ನಾಧ್ಯಗಚ್ಛನ್ನ
ನೈಕಾಂತ್ಯಾತ್ಸಹದೇವಸ್ತದಾಬ್ರವೀತ್ ||೧೯|| ಅರ್ಹತಿಹ್ಯಚ್ಯುತಶ್ಶ್ರೈಷ್ಠ್ಯಂಭಗವಾನ್ಸಾತ್ವತಾಂ
ಪತಿಃ | ಏಷವೈದೇವತಾಸ್ಸರ್ವಾದೇಶಕಾಲಧನಾದಯಃ ||೨೦|| ಯದಾತ್ಮಕಮಿದಂವಿಶ್ವಂಕ್ರತವಶ್ಚಯದಾ
ತ್ಮಕಾಃ | ಅಗ್ನಿರಾಹುತಯೋಮಂತ್ರಾಸ್ಸಾಂಖ್ಯಂಯೋಗಶ್ಚಯತ್ಪರಃ ||೨೧|| ಏಕಏವಾದ್ವಿತೀಯೋ
ಸಾವೈತದಾತ್ಮ್ಯಮಿದಂಜಗತ್ | ಆತ್ಮನಾತ್ಮಾಶ್ರಯಸ್ಸಭ್ಯಾಸ್ಸೃಜತ್ಯವತಿಹಂತ್ಯಜಃ ||೨೨|| ವಿವಿ

---

ಯಾಗವಿಂದ, ವಿಧಿವತ್-ಶಾಸ್ತ್ರೋಕ್ತ ರೀತಿಯನ್ನತಿಕ್ರಮಿಸದೆ ಅಯಾಜಯನ್-ಯಜ್ಞಮಾಡ ಗೊಳಿಸಿದರು ||೧೭|| ಸುತ್ಯೇಹ
ನಿ-ಸೋಮಾಭಿಷವದಿನದಲ್ಲಿ, ಅವನೀಪಾಲಃ-ಧರ್ಮರಾಯನು, ಯಥಾವತ್-ಹೇಗೆ ನಡೆಯಿಸತಕ್ಕದೋ ಅದರಂತೆ, ಸುಸಮಾಹಿತಃ-
ಚನ್ನಾಗಿ ಸಮಾಧಾನವುಂಟಾದವನಾಗಿ, ಮಹಾಭಾಗಾನ್-ಅಧಿಕಪೂಜ್ಯತೆಯುಳ್ಳ, ಯಾಜಕಾನ್-ಋತ್ವಿಕ್ಕುಗಳನ್ನೂ, ಸದಸಸ್ಪ
ತೀನ್-ಸಭಾನಾಯಕರನ್ನೂ, ಅಪೂಜಯತ್-ಪೂಜಿಸಿದನು ||೧೮|| ಸದಸಿ-ಸಭೆಯಲ್ಲಿ, ಅಗ್ರ್ಯಾರ್ಹಣಾರ್ಹಂ-ಅಗ್ರಪೂಜೆಗೆಯೋ
ಗ್ಯನಾದವನನ್ನು, ವೈ-ಪ್ರಕಟವಾಗಿ, ವಿಮೃಶಂತಃ-ವಿಚಾರಿಸುತಲಿರುವ, ಸಭಾಸದಃ-ಸಭೆಯಲ್ಲಿ ಕುಳಿತಿರುವ ಜನಗಳು, ಅನೈ
ಕಾಂತ್ಯಾತ್-ಒಬ್ಬನಲ್ಲಿ ನಿಶ್ಚಯತೋರದ್ದರಿಂದ (ಅಥವಾ ಬಹುಮಂದಿಯಲ್ಲಿ ಯೋಗ್ಯತೆ ತೋರುವುದರಿಂದ) ನಾಧ್ಯಗಚ್ಛನ್-
ನಿಶ್ಚಯವನ್ನು ಪಡೆಯಲಿಲ್ಲ. ತದಾ-ಆಗ, ಸಹದೇವಃ-ಪಾಂಡವರಲ್ಲಿ ಕಿರಿಯನು, ಅಬ್ರವೀತ್-ನುಡಿದನು ||೧೯|| ಸಾತ್ವತಾಂಪ
ತಿಃ-ಯಾದವರಿಗೊಡೆಯನಾದ, ಭಗವಾನ್-ಸರ್ವಜ್ಞನಾದ, ಅಚ್ಯುತಃ-ಕೃಷ್ಣನು, ಶ್ರೈಷ್ಠ್ಯಂ-ಉತ್ತಮತ್ವವನ್ನು, ಅರ್ಹತಿ
ಹಿ-ಪಡೆಯಲುತಕ್ಕವನಾಗಿರುವನಲ್ಲವೆ? ಏಷವೈ-ಈ ಕೃಷ್ಣನೇ, ಸರ್ವದೇವತಾಃ-ಸಕಲದೇವತೆಗಳಿಗೂ, ದೇಶಕಾಲಧನಾದಯಃ-
ಸ್ಥಲವೂ ಹೊತ್ತೂ ದ್ರವ್ಯವೂ ಮೊದಲಾದ ಸಾಧನಗಳಾಗಿರುವನು ||೨೦|| ಇದಂವಿಶ್ವಂ-ಈ ಪ್ರಪಂಚವೆಲ್ಲವೂ ಯದಾತ್ಮಕಂ-
ಕೃಷ್ಣನೇ ಆತ್ಮನಾಗಿವುಳ್ಳದ್ದೋ, ಕ್ರತವಶ್ಚ-ಯಜ್ಞಗಳೂಕೂಡ. ಯದಾತ್ಮಕಾಃ- ಯಾವಕೃಷ್ಣನೇ ಆತ್ಮನಾಗಿವುಳ್ಳ
ದ್ದೋ, ಚ-ಯಜ್ಞಗಳೂ ಕೂಡ, ಯದಾತ್ಮಕಾಃ-ಯಾವ ಕೃಷ್ಣನೇ ಮೂರ್ತಿಯಾಗಿ ಅಥವಾ ಧ್ಯಾತಿಯಾಗಿಉಳ್ಳವೋ,
ಅಗ್ನಿಃ-ಯಜ್ಞೇಶ್ವರನು, ಆಹುತಯಃ-ಹವಿಸ್ಸುಗಳೂ, ಮಂತ್ರಾಃ-ವೇದವಚನಂಗಳೂ, ಸಾಂಖ್ಯಂ ಜ್ಞಾನವೂ, ಯೋಗಶ್ಚ-
ಉಪಾಸನೆಯೂ, ಯತ್ಪರಃ-ಯಾವಕೃಷ್ಣನೇ ಮುಖ್ಯವಾಗಿಉಳ್ಳವೋ, ಅಥವಾ ಯಾವಕೃಷ್ಣನಲ್ಲಿಆಸಕ್ತಗಳಾಗಿರುವವೋ ||೨೧||
ಅಸೌ-ಆ ಶ್ರೀಕೃಷ್ಣನು, ಏಕಏವ-ಒಬ್ಬನೇ, ಅದ್ವಿತೀಯಃ-ಎರಡನೆಯ ವಸ್ತುವಿಲ್ಲದವನು, ಇದಂಜಗತ್-ಈ ಪ್ರಪಂಚವು,
ಏತದಾತ್ಮ್ಯಂ-ಈತನ ಸದ್ಭಾವವೇ ಸದ್ಭಾವವಾಗಿ ಉಳ್ಳದ್ದು. ಸಭ್ಯಾಃ-ಎಲೈ ಸಭಿಕರಾದವರೇ, ಅಜಃ- ಉತ್ಪತ್ತಿಇಲ್ಲದವ
ನಾದ ಕೃಷ್ಣನು, ಆತ್ಮನಾತ್ಮಾಶ್ರಯಃ_ಜೀವಾಜೀವಾದ್ರವ್ಯಂಗಳಿಗೆ ಅಧಿಷ್ಠಾನವಾಗಿರುವನು. ಸೃಜತಿ-ಜಗವಂಪುಟ್ಟಿಸುವ
ನು, ಅವತಿ-ಪಾಲಿಸುವನು, ಹಂತಿ-ಕೊಲ್ಲುವನು (ಆತ್ಮನಾತ್ಮಾಶ್ರಯಃ-ಎಂಬಪಾಠದಲ್ಲಿ, ಆತ್ಮನಾ-ತನ್ನಿಂದ, ಆತ್ಮಾಶ್ರಯಃ-ತ

---

ಜಮಾಯಮಂ ಮಾಡಿಸಿದರು ||೧೭|| ಧರ್ಮರಾಯನು ಸುತ್ಯಾಹಸ್ಸಿನಲ್ಲಿಯೇ ಏಕಾಗ್ರಚಿತ್ತನಾಗಿ ಋತ್ವಿಕ್ಕರಂ
ಆಯಜ್ಞಸಭೆಯಲ್ಲಿರುವ ಮಹಾತ್ಮರಂಸಹ ಅವರವರ ಯೋಗ್ಯತಾನು ಸಾರವಾಗಿ ಪೂಜಿಸಿದನು ||೧೮|| ಆಗ
ಆಸಭೆಯಲ್ಲಿರುವ ಮುನಿಗಳು ಅಲ್ಲಿಯಾವವನು ಅಗ್ರಪೂಜೆಗೆ ಯೋಗ್ಯನೆಂದು ಚಿಂತಿಸುತಲಿರುವವರಾದರೂ, ಅಲ್ಲಿ
ಬಹುಮಂದಿ ಯೋಗ್ಯರಿರುವವರಾದಕಾರಣದಿಂದ ಇವನೇ ಅಗ್ರಪೂಜಾಯೋಗ್ಯನೆಂದು ನಿಶ್ಚಯಿಸುವವರಾಗಲಿಲ್ಲ. ಆ
ಕಾಲದಲ್ಲಿ ಶ್ರೀಕೃಷ್ಣನ ಪ್ರಭಾವವಂ ತಿಳಿದಿರುವ ಸಹದೇವನು ಆಯಾಗಸಭೆಯಲ್ಲಿನಿಂತು ಈರೀತಿಯಾಗಿ ನುಡಿದ
ನದೆಂತೆನೆ- ||೧೯|| ಎಲೈ, ಸಭಾಜನರುಗಳಿರಾ! ಕೇಳಿರಿ ಯಾದವಶ್ರೇಷ್ಠನಾದ ಶ್ರೀಕೃಷ್ಣನೇ ಸಕಲದೇವಸ್ವರೂಪ
ನು, ದೇಶಕಾಲಧನಸ್ವರೂಪನೂ, ಆದ್ದರಿಂದ ಅಗ್ರಪೂಜೆಗೆ ಯೋಗ್ಯನು ||೨೦|| ಮತ್ತು ಈಪ್ರಪಂಚವು ಯಾವ
ವನಸ್ವರೂಪವೋ, ಕ್ರತುಗಳೂಕೂಡ ಯಾವವನಸ್ವರೂಪಂಗಳೋ, ಅಗ್ನಿಯೂ ಆಹುತಿಯೂ ಮಂತ್ರಗಳೂಸಹ
ಯಾವವನ ಸ್ವರೂಪಂಗಳೋ, ಜ್ಞಾನಶಾಸ್ತ್ರಂಗಳು ಉಪಾಸನಾಶಾಸ್ತ್ರಂಗಳು ಸಹ ಇವೆರಡೂ ಯಾವವನ ತತ್ವ
ವಂ ತಿಳಿಯುವುದಕ್ಕೆ ಸಾಧನಂಗಳಾಗುತ್ತವೆಯೋ, ಅಂತಾ ಶ್ರೀಕೃಷ್ಣನೇ ಅಗ್ರಪೂಜೆಗೂ ಯೋಗ್ಯನು ||೨೧||

ಭಾನೀಹಕರ್ಮಾಣಿಜನಯನ್ಯದಪೇಕ್ಷಯಾ। ಈಹತೇಯದಯಂಸರ್ವಶ್ಶ್ರೇಯೋಧರ್ಮಾದಿಲಕ್ಷಣಮ್ ॥೨೨॥ ತಸ್ಮಾತ್ಕೃಷ್ಣಾಯಮಹತೇದೀಯತಾಂಪರಮಾರ್ಹಣಮ್ । ಏವಂಚೇತ್ಸರ್ವಭೂತಾನಾಮಾತ್ಮನಶ್ಚಾರ್ಹಣಂಭವೇತ್ ॥೨೩॥ ಸರ್ವಭೂತಾತ್ಮಭೂತಾಯಕೃಷ್ಣಾಯಾನನ್ಯದರ್ಶಿನೇ । ದೇಯಂದಾಂತಾಯಪೂರ್ಣಾಯದತ್ತಸ್ಯಾನಂತ್ಯಮಿಚ್ಛತಾ ॥೨೪॥ ಇತ್ಯುಕ್ತ್ವಾಸಹದೇವೋಭೂತ್ತೂಷ್ಣೀಂಕೃಷ್ಣಾನುಭಾವವಿತ್ । ತಚ್ಛ್ರುತ್ವಾತುಷ್ಟುವುಸ್ಸರ್ವೇಸಾಧುಸಾಧ್ವಿತಿಸತ್ತಮಾಃ ॥೨೫॥ ಶ್ರುತ್ವಾದ್ವಿಜೇರಿತಂರಾಜಾಜ್ಞಾತ್ವಾಹಾರ್ದಂಸಭಾಸದಾಮ್ । ಸಮರ್ಹಯದ್ಧೃಷೀಕೇಶಂಪ್ರೀತಃಪ್ರಣಯವಿಹ್ವಲಃ ॥೨೬॥ ತತ್ಪಾ

---

ನ್ನ ಆಧಾರವುಳ್ಳವನು, ಎಂದರೆ ಇತರಾಪೇಕ್ಷೆ ಇಲ್ಲದವನೆಂದು ಭಾವವು ॥೨೧॥ ಅಯಂಸರ್ವಃ-ಈ ಸಮಸ್ತಜನವೂ, ಯದಪೇಕ್ಷಯಾ-ಯಾವಕೃಷ್ಣನ ಅನುಗ್ರಹದಿಂದ, ಇಹ-ಈ ಲೋಕದಲ್ಲಿ, ವಿವಿಧಾನಿಕರ್ಮಾಣಿ-ತಪಸ್ಸುಯೋಗ ಮೊದಲಾದ ಸಕಲ ಕ್ರಿಯೆಗಳನ್ನೂ, ಜನಯನ್-ಮಾಡುತ್ತಿರುವುದಾಗಿ, ಯತ್-ಯಾವಕೃಷ್ಣನ ದೆಸೆಯಿಂದ, ಧರ್ಮಾದಿಲಕ್ಷಣಂ-ಧರ್ಮವೇ ಮೊದಲಾದ ಗುರುತುಳ್ಳ, ಶ್ರೇಯಃ-ಪುರುಷಾರ್ಥಸುಖವನ್ನು, ಈಹತೇ-ಸಾಧಿಸುತ್ತಿರುವುದೋ ॥೨೨॥ ತಸ್ಮಾತ್-ಆ ಕಾರಣದಿಂದ, ಮಹತೇ-ದೊಡ್ಡವನಾದ, ಕೃಷ್ಣಾಯ-ಈ ವಾಸುದೇವನಿಗೆ, ಪರಮಾರ್ಹಣಂ-ಉತ್ತಮವಾದ ಪೂಜೆಯು, ದೀಯತಾಂ-ಕೊಡಲ್ಪಡಲಿ, ಏವಂಚೇತ್-ಹೀಗಾದರೆ, ಸರ್ವಭೂತಾನಾಂ-ಸಕಲಪ್ರಾಣಿಗಳ, ಆತ್ಮನಶ್ಚ-ಚೈತನ್ಯಕ್ಕೂ, ಅರ್ಹಣಂ-ಸಮ್ಮಾನವು, ಭವೇತ್-ಆದೀತು ॥೨೩॥ ದತ್ತಸ್ಯ-ಕೊಡಲ್ಪಟ್ಟದಾನಕ್ಕೆ, ಆನಂತ್ಯಂ-ನಿತ್ಯತ್ವವನ್ನು, ಇಚ್ಛತಾ-ಬಯಸುವ ಪುರುಷನಿಂದ, ಸರ್ವಭೂತಾತ್ಮಭೂತಾಯ-ಸಕಲಪ್ರಾಣಿಗಳಿಗೂ ಚೈತನ್ಯವಾಗಿರುವ, ಅನನ್ಯದರ್ಶಿನೇ-ತನಗಿಂತಲೂ ಇತರವಂ ಕಾಣದೆ ಇರುವನಾದ್ದರಿಂದ, ಪೂರ್ಣಾಯ-ಅದ್ವೈತಸಿದ್ಧನಾದ, ದಾಂತಾಯ-ಜಿತೇಂದ್ರಿಯನಾದ, ಕೃಷ್ಣಾಯ-ವಾಸುದೇವನಿಗೆ, ದೇಯಂ-ಅಗ್ರಸಮ್ಮಾನವು ಕೊಡತಕ್ಕದ್ದಾಗಿದೆ ॥೨೪॥ ಇತ್ಯುಕ್ತ್ವಾ-ಹೀಗೆಹೇಳಿ, ಸಹದೇವಃ-ಪಾಂಡವರಲ್ಲಿ ಕಿರಿಯನು, ಕೃಷ್ಣಾನುಭಾವವಿತ್-ಕೃಷ್ಣನ ಮಹಿಮೆಯಂ ಬಲ್ಲವನಾದ್ದರಿಂದ, ತೂಷ್ಣೀಮಭೂತ್-ಇನ್ನೇನೂ ಹೇಳದೆ ಸುಮ್ಮನಾದನು, ಸತ್ತಮಾಃ-ಸತ್ಪುರುಷರಲ್ಲಿ ಬಹಳಶ್ರೇಷ್ಠರಾದವರು, ಸರ್ವೇ-ಎಲ್ಲರೂ, ತತ್-ಆ ಮಾತನ್ನು, ಶ್ರುತ್ವಾ-ಕೇಳಿ, ಸಾಧುಸಾಧ್ವಿತಿ-ಚನ್ನಾಗಿದೆ ಚನ್ನಾಗಿದೆಯೆಂದು, ತುಷ್ಟುವುಃ-ಸ್ತೋತ್ರಮಾಡಿದರು ॥೨೫॥ ರಾಜಾ-ಧರ್ಮರಾಯನು, ದ್ವಿಜೇರಿತಂ-ಬ್ರಾಹ್ಮಣರಿಂದ ಹೇಳಲ್ಪ

---

ಎಲೈ ಸಭಾಜನರೇ! ಕೇಳಿ, ಶ್ರೀಕೃಷ್ಣನು ಏಕರೂಪನಾಗಿ ಅದ್ವಿತೀಯನಾಗಿಯೂ ಇಹನು. ಮತ್ತು ಈಜಗತ್ತೂ ಈಶ್ರೀಕೃಷ್ಣನೇ ಆತ್ಮನಾಗಿವುಳ್ಳದ್ದು. ಈಕೃಷ್ಣನು ಪರಾಪೇಕ್ಷೆಯಿಲ್ಲದವನಾಗಿ ತಾನು ಜನ್ಮರಹಿತನಾಗಿಯೂ ಈಜಗತ್ತನ್ನು ಸೃಜಿಸುತ್ತ ಪಾಲಿಸುತ್ತ ಸಂಹರಿಸುತ್ತಲೂ ಇರುವನು ॥೨೧॥ ಮತ್ತು ಈಸಮಸ್ತಜನರೂ ಯಾವನ ಅನುಗ್ರಹದಿಂದ ಈಲೋಕಗಳಲ್ಲಿ ಅನೇಕವಿಧಂಗಳಾದ ತಪೋಯೋಗಾದಿ ಕರ್ಮಂಗಳಂ ಅನುಷ್ಠಾನಂಗೆಯ್ಯುತ ಯಾವಕಾರಣದಿಂದ ಧರ್ಮಾದಿರೂಪವಾದ ಶ್ರೇಯಸ್ಸಂ ಸಂಪಾದಿಸುತಲಿರುವರೋ ॥೨೨॥ ಆಕಾರಣದಿಂದ ಮಹಾತ್ಮನಾದ ಶ್ರೀಕೃಷ್ಣನಿಗೋಸುಗವೇ ಅಗ್ರಪೂಜೆಯಂ ಗೆಯ್ಯಲು ಯೋಗ್ಯವು. ಆದ್ದರಿಂದ ಈವೊಬ್ಬ ಶ್ರೀಕೃಷ್ಣನಿಗೆ ಅಗ್ರಪೂಜೆಯು ಮಾಡಲ್ಪಟ್ಟಂತೆ ಆದರೆ ಆತ್ಮನೂ ಸಕಲಭೂತಂಗಳೂಸಹ ಪೂಜಿಸಲ್ಪಟ್ಟಂತೆವುಗಳಾಗುವವು ॥೨೩॥ ತನ್ನಿಂದ ಕೊಡಲ್ಪಟ್ಟದ್ರವ್ಯವು ಅಪರಿಮಿತವಾಗಬೇಕೆಂದು ನಿಶ್ಚಯಿಸುತ್ತಲಿರುವ ಪುರುಷನಿಂದ ಸರ್ವಭೂತಂಗಳಿಗೂ ಆತ್ಮರೂಪನಾಗಿ ಮತ್ತು ನಿರಾಕರಿಸಲ್ಪಟ್ಟ ಭೇದವುಳ್ಳವನಾಗಿ ಶಾಂತನಾಗಿ ಪೂರ್ಣನಾಗಿಯೂ ಇರುವ ಶ್ರೀಕೃಷ್ಣನಿಗೋಸ್ಕರವೇ ಪೂಜೆಯು ಮಾಡಲ್ಪಡತಕ್ಕದ್ದು ॥೨೪॥ ಎಲೈ, ಪರೀಕ್ಷಿದ್ರಾಯನೇ ಕೇಳು, ಶ್ರೀಕೃಷ್ಣನ ಪ್ರಭಾವವಂ ತಿಳಿದಿರುವ ಸಹದೇವನು ಈರೀತಿಯಾಗಿ ಸಭಾಜನರಂ ಕುರಿತು ಹೇಳಿ ಸುಮ್ಮನಾದನು. ಆಗ ಅಲ್ಲಿರುವ ಸರ್ವಜನರೂ ಆಸಹದೇವನ ವಾಕ್ಯವಂ ಕೇಳಿ ಚನ್ನಾಯಿತು ಚನ್ನಾಯಿತೆಂದು ಆವಚನವಂ ಶ್ಲಾಘಿಸಿದರು ॥೨೫॥ ಆಗ ಧರ್ಮರಾಯನು ಆಬ್ರಾಹ್ಮಣರಿಂದ ಹೇಳಲ್ಪಟ್ಟ ಆಶ್ಲಾಘಾವಚನವಂ ಕೇಳಿ ಸಭಾಜನರ ಅಭಿಪ್ರಾಯವಂ ಸಹ ತಿಳಿದು ಸ್ನೇಹದಿಂದಕೂಡಿ ಸಂತೋಷಯುಕ್ತನಾಗಿ ಪರವಶನಾಗಿ ಮೊದಲು ಶ್ರೀ

ದಾವವನಿಜ್ಯಾಪಶ್ಶಿರಸಾಲೋಕಪಾವನೀಃ|ಸಭಾರ್ಯಸ್ಸಾನುಜಾಮಾತ್ಯಸ್ಸಕುಟುಂಬೋವಹನ್ಮುದಾ ||
ವಾಸೋಭಿಃ ಪೀತಕೌಶೇಯೈರ್ಭೂಷಣೈಶ್ಚಮಹಾಧನೈಃ | ಭೂಷಯಿತ್ವಾಶ್ರುಪೂರ್ಣಾಕ್ಷೋನಾಶಕತ್ಸ
ಮವೇಕ್ಷಿತುಮ್ ||೨೯|| ಇತ್ಥಂಸಭಾಜಿತಂವೀಕ್ಷ್ಯಸರ್ವೇಪ್ರಾಂಜಲಯೋನೃಪಾಃ | ನಮೋಜಯೇತಿನೇಮು
ಸ್ತಂನಿಪೇತುಃಪುಷ್ಪವೃಷ್ಟಯಃ||೩೦|| ಇತ್ಥಂನಿಶಮ್ಯದಮಘೋಷಸುತಸ್ಸ್ವಪೀಠಾದುತ್ಥಾಯಕೃಷ್ಣ
ಗುಣವರ್ಣನಜಾತಮನ್ಯುಃ | ಉತ್ಕ್ಷಿಪ್ಯಬಾಹುಮಿದಮಾಹಸದಸ್ಯಮರ್ಷೀಸಂಶ್ರಾವಯನ್ಭಗವತೇ
ಪರುಷಾಣ್ಯಭೀತಃ||೩೧|| ಈಶೋದುರತ್ಯಯಃಕಾಲಇತಿಸತ್ಯವತೀಶ್ರುತಿಃ | ವೃದ್ಧಾನಾಮಪಿಯದ್ಬು

---

ದ್ಧಿವನ್ನು, ಶ್ರುತ್ವಾ-ಕೇಳಿ; ಸಭಾಸದಾಂ-ಸಭೆಯಲ್ಲಿ ಕುಳಿತಿರುವವರ, ಹಾರ್ದಂ-ಹೃದ್ಗತಾಭಿಪ್ರಾಯವನ್ನು, ಜ್ಞಾತ್ವಾ-ತಿಳಿದು ಕೊಂಡು, ಪ್ರೀತಃ-ಪ್ರೀತಿಯುಳ್ಳವನಾದ್ದರಿಂದ, ಪ್ರಣಯವಿಹ್ವಲಃ-ಸ್ನೇಹದಿಂದ ಪರವಶನಾಗಿ ಹೃಷೀಕೇಶಂ-ಕೃಷ್ಣನನ್ನು, ಸಮರ್ಹಯತ್-ಸಮ್ಮಾನಿಸಿದನು ||೨೭|| ತತ್ಪಾದೌ-ಆ ಕೃಷ್ಣನಪಾದಗಳನ್ನು, ಅವನಿಜ್ಯ-ಪ್ರಕ್ಷಾಳನಮಾಡಿ,ಲೋಕಪಾವನೀಃ-ಲೋಕವನ್ನು ಪರಿಶುದ್ಧಗೊಳಿಸುವಂಥಾ, ಅಪಃ-ಚರಣತೀರ್ಥೋದಕಗಳನ್ನು, ಸಭಾರ್ಯಃ-ಪತ್ನೀಸಹಿತನಾಗಿಯೂ, ಸಾನು ಜಾಮಾತ್ಯಃ-ತಮ್ಮಂದಿರೊಡನೆ, ಮತ್ತು ಮಂತ್ರಿಗಳೊಡನೆ ಸಹಿತನಾಗಿಯೂ, ಸಕುಟುಂಬಃ-ಪೋಷ್ಯವರ್ಗದೊಡಗೂಡಿದವನಾ ಗಿಯೂ, ಮುದಾ-ಸಂತೋಷದಿಂದ, ಶಿರಸಾ-ತಲೆಯಿಂದ, ಅವಹತ್-ಧರಿಸಿಕೊಂಡನು ||೨೮|| ಪೀತಕೌಶೇಯೈಃ- ಹಸುರುಪ ಟ್ಟೆಯಾದ, ವಾಸೋಭಿಃ-ವಸ್ತ್ರಗಳಿಂದಲೂ, ಮಹಾಧನೈಃ-ಹೆಚ್ಚು ಬೆಲೆಯುಳ್ಳ, ಭೂಷಣೈಶ್ಚ- ಆಭರಣಗಳಿಂದಲೂ, ಭೂಷಯಿ ತ್ವಾ-ಅಲಂಕರಿಸಿ, ಅಶ್ರುಪೂರ್ಣಾಕ್ಷಃ-ಸಂತೋಷದ ನೀರಿನಿಂದ ತುಂಬಿದ ಕಂಗಳುಳ್ಳವನಾದ್ದರಿಂದ, ಸಮವೇಕ್ಷಿತುಂ- ಕೃಷ್ಣ ನಂಚನ್ನಾಗಿ ನೋಡುವುದಕ್ಕೆ, ನಾಶಕತ್-ಶಕ್ತನಾಗಲಿಲ್ಲವು ||೨೯|| ಇತ್ಥಂ-ಹೀಗೆ, ಸಭಾಜಿತಂ-ಸಮ್ಮಾನಿಸಲ್ಪಟ್ಟ ಕೃಷ್ಣನ ನ್ನು, ವೀಕ್ಷ್ಯ-ನೋಡಿ, ಸರ್ವೇನೃಪಾಃ-ಅರಸುಗಳೆಲ್ಲರೂ, ಪ್ರಾಂಜಲಯಃ-ಜೋಡಿಸಿದಕೈಗಳ ನೆತ್ತಿಕೊಂಡವರಾಗಿ, ನಮಃ-ಕೃಷ್ಣಂಗೆ ನಮಸ್ಕಾರವು. ಜಯ-ಕೃಷ್ಣನೇ ಸರ್ವೋತ್ತಮನಾಗಿರು. ಇತಿ-ಹೀಗೆಂದು, ತಂ-ಆ ಕೃಷ್ಣನನ್ನು, ನೇಮುಃ-ನಮಸ್ಕರಿಸಿದರು ಆಗ, ಪುಷ್ಪವೃಷ್ಟಯಃ-ಹೂವುಗಳ ಮಳೆಗಳು, ನಿಪೇತುಃ-ಸುರಿದವು ||೩೦|| ಇತ್ಥಂ-ಹೀಗಾದ್ದನ್ನು, ನಿಶ ಮ್ಯ-ನೋಡಿ,ದಮಘೋಷಸುತಃ-ದಮಘೋಷನಮಗನಾದ ಶಿಶುಪಾಲನು, ಕೃಷ್ಣಗುಣವರ್ಣನಜಾತಮನ್ಯುಃ-ಕೃಷ್ಣನ ಗುಣಗಳ ನ್ನು ಬಣ್ಣಿಸುವದರಿಂದ ಹುಟ್ಟಿದ ಸಿಟ್ಟುಳ್ಳವನಾದ್ದರಿಂದಲೇ, ಸ್ವಪೀಠಾತ್-ತನ್ನಗದ್ದುಗೆಯ ದೆಸೆಯಿಂದ, ಉತ್ಥಾಯ- ಎ ದ್ದು, ಬಾಹುಂ-ತೋಳನ್ನು, ಉತ್ಕ್ಷಿಪ್ಯ-ಎತ್ತಿಕೊಂಡು, ಸದಸಿ-ಸಭೆಯಲ್ಲಿ, ಅಮರ್ಷೀ-ಸೈರಣೆಯಿಲ್ಲದವನು, ಅಭೀತಃ-ಅಂಜಿ ಕೆ ಇಲ್ಲವವನೂ ಆದ್ದರಿಂದ, ಭಗವತೇ-ಕೃಷ್ಣಂಗೆ, ಪರುಷಾಣಿ-ಕ್ರೂರವಚನಗಳನ್ನು, ಸಂಶ್ರಾವಯನ್-ಚನ್ನಾಗಿ ಕೇಳಗೊಳಿ ಸುವನಾಗಿ, ಇದಂ-ಮುಂದೆ ಹೇಳಲ್ಪಡುವ ಮಾತನ್ನು, ಆಹ-ನುಡಿದನು ||೩೧|| ಈಶಃ-ನಿಯಾಮಕವಾದ, ಕಾಲಃ-ಸಮಯವು,

---

ಕೃಷ್ಣನಂ ಪೂಜಿಸಿದನು ||೨೭|| ಅದೆಂತೆನೆ, ಧರ್ಮರಾಯನು ಶ್ರೀಕೃಷ್ಣನ ಪಾದಪದ್ಮಂಗಳಂ ಪ್ರಕ್ಷಾಳನಂಗೆ ಯ್ದು ಲೋಕಪಾವನಂಗಳಾದ ಆಪಾದೋದಕಂಗಳಂ ಪತ್ನಿಯೊಡನೆ ತಮ್ಮಂದಿರೊಡನೆ ಮಂತ್ರಿಗಳೊಡನೆ ಬಂ ಧುಗಳೊಡನೆಕೂಡ ತನ್ನ ಶಿರಸ್ಸಿನಲ್ಲಿ ಸಂತೋಷದಿಂದ ಧರಿಸಿದನು ||೨೮|| ಮತ್ತು ಧರ್ಮರಾಯನು ಪೀತಾಂ ಬರಂಗಳಿಂ ಬೆಲೆಯಿಲ್ಲದ ಭೂಷಣಂಗಳಿಂದಲೂ ಶ್ರೀಕೃಷ್ಣನ ನಲಂಕರಿಸಿ ಆನಂದಬಾಷ್ಪಂಗಳಿಂ ಪರಿಪೂರ್ಣಂಗ ಳಾದ ನೇತ್ರಂಗಳುಳ್ಳವನಾದ್ದರಿಂದಲೇ ಆ ಶ್ರೀಕೃಷ್ಣನಂ ಚನ್ನಾಗಿನೋಡಲು ಸಮರ್ಥನಾಗಲಿಲ್ಲವು ||೨೯|| ಆಗ ಅ ಲ್ಲಿರುವ ಸಮಸ್ತಜನರೂ ಈರೀತಿಯಲ್ಲಿ ಧರ್ಮರಾಯನಿಂದ ಪೂಜಿಸಲ್ಪಟ್ಟ ಶ್ರೀಕೃಷ್ಣನಂ ನೋಡಿ ಅಂಜಲಿ ಯುಕ್ತರಾಗಿ ನಮೋಜಯ ನಮೋಜಯಎಂದು ಶ್ರೀಕೃಷ್ಣನಿಗೆ ನಮಸ್ಕರಿಸಿದರು, ಮತ್ತು ಆಗ ದಿವ್ಯಂಗಳಾದ ಪುಷ್ಪವರ್ಷಗಳು ಸುರಿದವಾದವು ||೩೦|| ಆಸಮಯದಲ್ಲಿ ಶಿಶುಪಾಲನು ಈರೀತಿಯಾಗಿ ಸಭಾಜನರು ಮಾಡುವ ಸ್ತೋತ್ರಾದಿಗಳಂ ಕೇಳಿ ಶ್ರೀಕೃಷ್ಣನ ಗುಣವರ್ಣನದಿಂ ಹುಟ್ಟಿದ ಕೋಪವುಳ್ಳವನಾಗಿ ಸಹಿಸಲಾರದೆ ತನ್ನ ಪೀ ಠದಿಂದೆದ್ದು ಭುಜವನೆತ್ತಿ ಆಸಭೆಯಲ್ಲಿ ಭಯವಿಲ್ಲದೆ ಈರೀತಿಯಾಗಿ ದುರ್ವಚನಂಗಳಂ ಶ್ರೀಕೃಷ್ಣನಿಗೆ ಶ್ರವಣಂ ಗೆಯ್ಸಿದನದೆಂತೆನೆ,||೩೧|| ಎಲೈಸಭಾಜನರುಗಳಿರಾ! ಕೇಳಿ; ಯಾವಕಾರಣದಿಂ ದೊಡ್ಡವರ ಬುದ್ಧಿಯುಕೊಡ ಬಾ

ದ್ಧಿರ್ಬಾಲವಾಕ್ಯೈರ್ವಿಭಿದ್ಯತೇ ‖೩೦‖ ಯೋಽಯಂಪಾತ್ರವಿದಾಂಶ್ರೇಷ್ಠಾಮಾವೋಬುದ್ಧ್ಯಂಬಾಲಭಾಷಿ
ತಮ್ | ಸದಸಸ್ಪತಯಸ್ಸರ್ವೇಕೃಷ್ಣೋಯತ್ಸಮ್ಮತೋಽರ್ಹಣೇ ೩೧‖ ತಪೋವಿದ್ಯಾವ್ರತಧರಾನ್ ಜ್ಞಾನ
ವಿಧ್ವಸ್ತಕಲ್ಮಷಾನ್ | ಪರಮರ್ಷೀನ್ಬ್ರಹ್ಮನಿಷ್ಠಾನ್ ಲೋಕಪಾಲೈಶ್ಚಪೂಜಿತಾನ್ ‖೩೨‖ಸದಸಸ್ಪತೀ
ನತಿಕ್ರಮ್ಯಗೋಪೋಯಂಕುಲಪಾಂಸನಃ | ಯಥಾಕಾಕಃಪುರೋಡಾಶಂಸಪರ್ಯಾಂಕಥಮರ್ಹತಿ ‖೩೩‖
ವರ್ಣಾಶ್ರಮಕುಲಾಪೇತಸ್ಸರ್ವಧರ್ಮಬಹಿಷ್ಕೃತಃ|ಸ್ವೈರವರ್ತೀಗುಣೈರ್ಹೀನಸ್ಸಪರ್ಯಾಂಕಥಮರ್ಹ
ತಿ‖೩೪‖ಯಯಾತಿನೈಷಾಂಹಿಕುಲಂಶಪ್ತಂಸದ್ಭಿರ್ಬಹಿಷ್ಕೃತಮ್। ವೃಥಾಪಾನರತಂಶಶ್ವತ್ಸಪರ್ಯಾಂ

---

ದುರತ್ಯಯಃ-ವಿಚಾರಿಸಲಾಗದದ್ದು, ಇತಿ-ಹೀಗೆಂಬ, ಶ್ರುತಿಃ-ಕೇಳ್ವಿಕೆಯು, ಸತ್ಯವತೀ-ಯಥಾರ್ಥವುಳ್ಳದ್ದು, ಯತಃ-ಯಾವಕಾರಣ
ದಿಂದ, ವೃದ್ಧಾನಾಂ-ಹಿರಿಯರಾದವರ, ಬುದ್ಧಿರಪಿ-ಜ್ಞಾನವೂಕೂಡ, ಬಾಲವಾಕ್ಯೈಃ-ಮೂಢರಮಾತುಗಳಿಂದ, ವಿಭಿದ್ಯತೇ-ಭೇ
ದಿಸಲ್ಪಡುತ್ತಿದೆಯೋ ‖೩೦‖ ಯತ್-ಯಾವಮಾತಿನಿಂದ, ಕೃಷ್ಣಃ-ವಸುದೇವನ ಮಗನು ಅರ್ಹಣೇ-ಅಗ್ರಪೂಜೆಯಲ್ಲಿ ಸಮ್ಮ
ತಃ-ಒಪ್ಪಿಗೆಯಾಗುವನೋ, ತದ್ಬಾಲಭಾಷಿತಂ-ಆ ಹುಡುಗರಮಾತನ್ನು, ಪಾತ್ರವಿದಾಂ-ಯೋಗ್ಯರನ್ನು ಬಲ್ಲವರಲ್ಲಿ ಯೋಽಯಂ-
ನೀವು, ಶ್ರೇಷ್ಠಾಃ-ಉತ್ತಮರಾದ್ದರಿಂದಲೂ, ಸದಸಸ್ಪತಯಃ-ಸಭಾಪತಿಗಳಾದ್ದರಿಂದಲೂ, ಸರ್ವೇ-ಎಲ್ಲರೂ, ಮಾಮಬುದ್ಧ್ವಂ
ನೆಚ್ಚಬೇಡಿರಿ ‖೩೧‖ ತಪೋವಿದ್ಯಾವ್ರತಧರಾನ್-ಧ್ಯಾನಜ್ಞಾನನಿಯಮಾದಿಗಳಲ್ಲಿ ಆಸಕ್ತರಾದಂಥಾ, ಜ್ಞಾನವಿಧ್ವಸ್ತಕಲ್ಮಷಾನ್-
ಜ್ಞಾನದಿಂದ ನಾಶಮಾಡಲ್ಪಟ್ಟ ಪಾಪವುಳ್ಳವರಾದಂಥಾ, ಬ್ರಹ್ಮನಿಷ್ಠಾನ್-ವೇದದಲ್ಲಿ ಅಥವಾ ಆತ್ಮನಲ್ಲಿ ಸ್ಥಿತಪ್ರಜ್ಞರಾದಂಥಾ,
ಲೋಕಪಾಲೈಃ-ದಿಕ್ಪತಿಗಳಿಂದ, ಪೂಜಿತಾಂಶ್ಚ-ಸಮ್ಮಾನಿತರಾದಂಥಾ, ಪರಮರ್ಷೀನ್-ಮಹರ್ಷಿಗಳನ್ನೂ ‖೩೨‖ ಸದಸಸ್ಪ
ತೀನ್-ಸಭಾನಾಯಕರನ್ನೂ, ಅತಿಕ್ರಮ್ಯ-ಮೀರಿ, ಕುಲಪಾಂಸನಃ-ವಂಶದೂಷಕನಾದಂಥಾ, [ಕುಲ-ಕುತ್ಸಿತವಾದ ವೇದವಿರು
ದ್ಧಾರ್ಥವಂ ಪೇಳುವ ಪಾಷಂಡರನ್ನು, ಅಂಸನಃ-ಘಾತಿಸುವವನಾದ) ಗೋಪಃ-ಗೊಲ್ಲನಾದ (ವೇದಗಳಿಗೂ ಭೂಮಿಗೂ ಪಾಲಕನಾ
ದ) ಅಯಂ-ಈ ಕೃಷ್ಣನು, ಕಾಕಃ-ಕಾಗೆಯೂ [ಅಕಾಃ-ಕಃ-ಸುಖವೂ, ಅಕ-ದುಃಖವೂ ಇಲ್ಲದ ಆಪ್ತಕಾಮನಾದ] ಪುರೋಡಾ
ಶಂ-ದೇವಯೋಗ್ಯವಾದ ಹವಿಸ್ಸನ್ನು, ಯಥಾ-ಹೇಗೋ, ತಥಾ-ಹಾಗೆ, ಸಪರ್ಯಾಂ-ಅಗ್ರಪೂಜೆಯನ್ನು, ಕಥಂ-ಹೇಗೆ, ಅರ್ಹ
ತಿ-ಪಡೆಯಲು ಯೋಗ್ಯನಾಗುವನು, (ದೇವಯೋಗ್ಯವಾದ ಈ ಪೂಜೆಯೇ ಅವನಿಗೆ ಸಾಲದು. ಆತ್ಮಾರ್ಪಣಕ್ಕೂ ಅವನೇ ತ
ಕ್ಕವನೆಂದು ಅಂತರಂಗತಾತ್ಪರ್ಯವು ವ್ಯಾಖ್ಯಾನಕಲ್ಪಿತವಾಗಿದೆ) ‖೩೩‖ ವರ್ಣಾಶ್ರಮಕುಲಾಪೇತಃ-ಜಾತಿಕ್ರಿಯಾವಂಶ ಧರ್ಮ
ಗಳಿಲ್ಲದವನು, ಸರ್ವಧರ್ಮಬಹಿಷ್ಕೃತಃ-ಎಲ್ಲಾಧರ್ಮಗಳಿಂದಲೂ ಹೊರಚ್ಚುಮಾಡಲ್ಪಟ್ಟವನೂ, ಸ್ವೈರವರ್ತೀ-ಸ್ವೇಚ್ಛೆಯಾಗಿ
ರುವವನೂ, ಗುಣೈರ್ಹೀನಃ-ಗುಣಗಳಿಂದ ರಹಿತನೂ, ಆದ (ಬ್ರಹ್ಮದಲ್ಲಿಯಾವ ಧರ್ಮವಿಶೇಷಗಳೂ ಇಲ್ಲವು,) ಕೃಷ್ಣನು, ಸ
ಪರ್ಯಾಂ-ಅಗ್ರಪೂಜೆಯನ್ನು, ಕಥಮರ್ಹತಿ-ಹೇಗೆಪಡೆಯಲ್ಹಕ್ಕವನು ‖೩೪‖ ಏಷಾಂ-ಇವರ, ಕುಲಂ-ವಂಶವು, ಯಯಾತಿನಾ

---

ಲಕನ ವಚನಂಗಳಿಂ ಭೇದಿಸಲ್ಪಡುತ್ತಲಿದೆಯೋ ಆಕಾರಣದಿಂದ ಕಾಲವು ಸ್ವತಂತ್ರವಾದದ್ದು, ಮತ್ತು ಅತಿಕ್ರ
ಮಿಸಲಶಕ್ಯವಾದ್ದೆಂದು ಪೇಳುವ ಶ್ರುತಿಯೂ ಸತ್ಯವಾದದ್ದಾದಿತು ‖೩೦‖ ಎಲೈಸಭಾಜನರೇ ಕೇಳಿ, ಕೇಳಿ, ಪಾತ್ರಸ್ವ
ರೂಪವ ತಿಳಿದವರಲ್ಲಿ ಉತ್ತಮರಾದ ನೀವೆಲ್ಲರೂ ಕೃಷ್ಣನೇ ಅಗ್ರಪೂಜೆಗೆ ಯೋಗ್ಯನಾದವನೆಂದು ಬಾಲಕನಾದ
ಸಹದೇವನಿಂದ ಪೇಳಲ್ಪಟ್ಟ ಯಾವವಚನವುಂಟೋ ಆವಚನವಂ ಸಮ್ಮತಿಸಬೇಡಿ ‖೩೧‖ ಅದೇತಕೆಂದರೆ,-ತಪೋ
ವಿದ್ಯಾವ್ರತಂಗಳೇ ಧನಂಗಳಾಗಿ ಯುಳ್ಳವರಾಗಿ ಜ್ಞಾನದಿಂ ನಿರಾಕರಿಸಲ್ಪಟ್ಟ ಪಾಪವುಳ್ಳವರಾಗಿ ಬ್ರಹ್ಮನಿಷ್ಠರಾ
ಗಿ ಇಂದ್ರಾದಿಲೋಕಪಾಲಕರಿಂದ ಪೂಜಿಸಲ್ಪಟ್ಟವರಾಗಿಯೂ ಇರುವ‖೩೨‖ಸಭಾನಾಯಕರಾದ ಬ್ರಹ್ಮರ್ಷಿಗಳಂ
ಉಲ್ಲಂಘಿಸಿ ಕುಲದೂಷಕನಾದ ಗೋಪಾಲಕನು ಯಾವರೀತಿಯಿಂದವಾಯಸವು ಪುರೋಡಾಶಕ್ಕೆಯೋಗ್ಯವಲ್ಲವೋ
ಆರೀತಿಯಿಂದೆಂತು ಅಗ್ರಪೂಜೆಗೆ ಯೋಗ್ಯನಾಗುವನು?‖೩೩‖ ಮತ್ತು ವರ್ಣಾಶ್ರಮ ಕುಲರಹಿತನಾಗಿ ಸಮಸ್ತ
ಧರ್ಮಂಗಳಿಂ ಭ್ರಷ್ಟನಾಗಿ ಮನಸ್ಸುಬಂದಂತೆ ನಡೆಯುವವನಾಗಿ ಸಮಸ್ತಗುಣಂಗಳಿಂ ಹೀನನಾಗಿಯೂ ಇರುವ
ಇಂತಪ್ಪ ಶ್ರೀಕೃಷ್ಣನು ಎಂತು ಪೂಜೆಗೆಯೋಗ್ಯನಾಗುವನು? ‖೩೪‖ ಮತ್ತು ಇವರಕುಲವು ಯಯಾತಿರಾಯ

ಕಥಮರ್ಹತಿ॥೩೩॥ ಬ್ರಹ್ಮರ್ಷಿಸೇವಿತಾನ್ ದೇಶಾನ್ ಹಿತ್ವೈತೇಬ್ರಹ್ಮವರ್ಚಸಮ್ । ಸಮುದ್ರಂದುರ್ಗ ಮಾಶ್ರಿತ್ಯಬಾಧಂತೇದಸ್ಯವಃಪ್ರಜಾಃ॥೩೪॥ ಏವಮಾದೀನ್ಯಭದ್ರಾಣಿಬಭಾಷೇನಷ್ಟಮಂಗಳಃ । ನೋ ವಾಚಕಿಂಚಿದ್ಭಗವಾನ್ಯಥಾಸಿಂಹಶ್ಶಿವಾರುತಮ್ ॥೩೫॥ ಶ್ರೀಶುಕಃ॥ ಭಗವನ್ನಿಂದನಂಶ್ರುತ್ವಾದು ಸ್ಸಹಂತತ್ಸಭಾಸದಃ । ಕರ್ಣೌಪಿಧಾಯನಿರ್ಜಗ್ಮುಶ್ಶಪಂತಶ್ಚೇದಿಪಂರುಷಾ ॥೪೦॥ ನಿಂದಾಂಭಗವತ ಶ್ಶೃಣ್ವಂತತ್ಪರಸ್ಯಜನಸ್ಯವಾ ।ತತೋನಾಪೈತಿಯಸ್ಸೋಪಿಯಾತ್ಯಧಸ್ಸುಕೃತಾಚ್ಚ್ಯುತಃ॥೪೧॥ತತಃ

---

ಯಯಾತಿರಾಯನಿಂದ, ಶಪ್ತಂಪಿ-ಸಿಂಹಾಸನ ಯೋಗ್ಯವಲ್ಲವೆಂದು, ಶಾಪಿಸಲ್ಪಟ್ಟಿರುವವಲ್ಲವೆ, ಸದ್ಭಿಃ-ಸತ್ಪುರುಷರಿಂದ, ಬಹಿಷ್ಕೃತಂ-ಹೊರಚ್ಚುಮಾಡಲ್ಪಟ್ಟದ್ದು, ವೃಥಾ-ವ್ಯರ್ಥವಾಗಿ, ಪಾನರತಂ-ಹೆಂಡಕುಡಿಯುವದರಲ್ಲಿ ಆಸಕ್ತವಾದದ್ದು [ಕಾಕ್ವರ್ಥದಿಂದ ಈ ದೋಷಗಳಿಲ್ಲವೆಂದು ಹಾರ್ದವು) ಇಂಥಾ ಕುಲದವನು, ಶಶ್ವತ್- ಬಾರಿಬಾರಿಗೂ, ಸಪರ್ಯಾಂ-ಪೂಜೆಯನ್ನು, ಕಥಮರ್ಹತಿ-ಹೇಗೆ ಪಡೆಯಲ್ತಕ್ಕವನು ॥೩೩॥ ಏತೇ-ಈ ಯಾದವರು, ಬ್ರಹ್ಮರ್ಷಿಸೇವಿತಾನ್-ಬ್ರಾಹ್ಮಣರಾದ ಋಷಿಗಳಿಂದ ವಾಸಗೊಂಡಿರಲ್ಪಟ್ಟ, ದೇಶಾನ್-ಭೂಭಾಗಗಳನ್ನು, ಹಿತ್ವಾ-ಬಿಟ್ಟು, ಅಬ್ರಹ್ಮವರ್ಚಸಂ-ಬ್ರಾಹ್ಮಣತೇಜಸ್ಸಿಲ್ಲದ, ದುರ್ಗಂ-ಪ್ರಯಾಸದಿಂದಲೂ ಹೋಗುವುದಕ್ಕೆಶಕ್ಯವಲ್ಲದ, ಸಮುದ್ರಂ-ಪಡುವಲಕಡಲನ್ನು, ಆಶ್ರಿತ್ಯ-ಸೇರಿಕೊಂಡು,ದಸ್ಯವಃ-ಕಳ್ಳರಾಗಿ, ಪ್ರಜಾಃ- ಜನರನ್ನು, ಬಾಧಂತೇ-ಪೀಡಿಸುತ್ತಿರುವರು (ಅಬ್ರಹ್ಮವರ್ಚಸಂ-ಬ್ರಹ್ಮವರ್ಚಸ್ಸಿಲ್ಲದ ಪಾಷಂಡತನವನ್ನುಬಿಟ್ಟು ಧರ್ಮಸೂಕ್ಷ್ಮವನ್ನರಿಯದೆ ಕಳ್ಳರಂತೆ ಪ್ರಜೆಗಳನ್ನು ಬಾಧಿಸದೆ ಬ್ರಹ್ಮರ್ಷಿಗಳಿರುವ ದೇಶದಲ್ಲಿರುವುದರಿಂದ ಯಾದವರಿಗಿಂತಲೂ ಯಾರು ಧಾರ್ಮಿಕರಿರುವರೆಂದು ಪರುಷವಾಕ್ಯಕ್ಕೆ ತಾತ್ವಿಕಾಭಿಪ್ರಾಯಕಲ್ಪನವು] ॥೩೪॥ಏವಮಾದೀನಿ-ಹೀಗೆಂಬುದೇ ಮೊದಲಾದ, ಅಭದ್ರಾಣಿ-ಅಶುಭವಾಕ್ಯಗಳನ್ನು, ನಷ್ಟಮಂಗಳಃ-ಕ್ಷೀಣಪುಣ್ಯನಾದ್ದರಿಂದ, ಬಭಾಷೇ-ನುಡಿದನು. ಸಿಂಹಃ-ಸಿಂಗವು, ಶಿವಾರುತಂ-ನರಿಯಕೂಗನ್ನು, ಯಥಾ-ಕೇಳಿ ಹೇಗಿರುವುದೋ ಹಾಗೆ, ಭಗವಾನ್-ಕೃಷ್ಣನು, ಕಿಂಚಿತ್- ಕುಂಚವನ್ನಾದರೂ, ನೋವಾಚ-ಹೇಳಲಿಲ್ಲವು ॥೩೫॥ದುಸ್ಸಹಂ-ಕೇಳಕೂಡದ, ಭಗವನ್ನಿಂದನಂ-ಕೃಷ್ಣನ ದೂಷಣವನ್ನು,ಶ್ರುತ್ವಾ-ಕೇಳಿ,ತತ್ಸಭಾಸದಃ-ಆ ಸಭೆಯಲ್ಲಿ ಕುಳಿತಿರುವವರು, ಕರ್ಣೌ-ಕಿವಿಗಳನ್ನು, ಪಿಧಾಯ-ಮುಚ್ಚಿಕೊಂಡು, ರುಷಾ-ಸಿಟ್ಟಿನಿಂದ, ಚೇದಿಪಂ- ಶಿಶುಪಾಲನನ್ನು, ಶಪಂತಃ-ಬಯ್ಯುತ್ತಿರುವರಾಗಿ, ನಿರ್ಜಗ್ಮುಃ-ಹೊರಕ್ಕೆ ಹೋದರು ॥೪೦॥ ಭಗವತಃ-ವಿಷ್ಣುವಿನ, ತತ್ಪರಸ್ಯ-ವಿಷ್ಣುಪರಾಯಣನಾದ, ಜನಸ್ಯವಾ-ಭಾಗವತನ, ನಿಂದಾಂ-ದೂಷಣವನ್ನು: ಶ್ರುತ್ವಾ-ಕೇಳಿ, ಯಃ-ಯಾವವನು, ತತಃ-ಆಸ್ಥಲದ ದೆಸೆಯಿಂದ, ನಾಪೈತಿ-ಎದ್ದುಬರುವುದಿಲ್ಲವೋ, ಸೋಪಿ-ಅವನುಕೂಡ, ಸುಕೃತಾತ್-ಪುಣ್ಯದ ದೆಸೆಯಿಂದ, ಚ್ಯುತಃ-ಜಾರಿದವನಾಗಿ, ಅಧಃ-ಕೆಳಗಣಪಾಪಲೋಕವನ್ನು, ಯಾತಿ-ಹೊಂದುವನು ॥೪೧॥ತತಃ-ಆ ಮೇಲೆ, ಪಾಂಡುಸುತಾಃ- ಪಾಂಡುರಾಯನ

---

ನಿಂದ ನಿಮಗೆ ಸಿಂಹಾಸನಾಧಿಪತ್ಯವಿಲ್ಲದೆ ಹೋಗಲೆಂದು ಶಪಿಸಲ್ಪಟ್ಟದ್ದು, ಸತ್ಪುರುಷರಿಂ ನಿಂದಿಸಲ್ಪಟ್ಟದ್ದು ನಿರಂತರವಲ್ಲಿಯೂ ವ್ಯರ್ಥವಾಗಿ ಮದ್ಯಪಾನದಲ್ಲಿಯೂ ಆಸಕ್ತವಾಗಿರುವುದು. ಆಕಾರಣದಿಂದ ಈಕೃಷ್ಣನು ಎಂತು ಪೂಜಾಯೋಗ್ಯನಾಗುವನು? ॥೩೩॥ ಈಯಾದವರು ಬ್ರಹ್ಮರ್ಷಿಗಳಿಂ ಸೇವಿಸಲ್ಪಟ್ಟ ದೇಶಂಗಳಂ ಬಿಟ್ಟು ಬ್ರಾಹ್ಮಣ್ಯಕ್ಕೆ ಯೋಗ್ಯವಲ್ಲದೆಯಿರುವ ಸಮುದ್ರವೆಂಬ ದುರ್ಗವನಾಶ್ರಯಿಸಿ ಚೋರರಾಗಿ ಪ್ರಜೆಗಳಂ ಬಾಧಿಸುತಲಿರುವರು ॥೩೪॥ ಎಲೈಪರೀಕ್ಷಿದ್ರಾಯನೇ, ಕೇಳು, ನಷ್ಟವಾದ ಶುಭವುಳ್ಳ ಶಿಶುಪಾಲನು ಈರೀತಿಯಿಂದಿವು ಮೊದಲಾದ ಅಧರ್ಮವಚನಂಗಳಂ ಪೇಳಿದನು,ಆಗ ಯಾವರೀತಿಯಿಂದ ಸಿಂಹವುನರಿಯಶಬ್ದವಂಕೇಳಿ ಸುಮ್ಮನೆಯಿರುವುದೋ ಅದೇರೀತಿಯಲ್ಲಿ ಶ್ರೀಭಗವಂತನಾದ ಶ್ರೀಕೃಷ್ಣನು ಸ್ವಲ್ಪವಾದರೂ ನುಡಿದವನಾಗದೆ ಸುಮ್ಮನೆಯಿದ್ದನು ॥೩೫॥ ಆಗ ಸಭೆಯಲ್ಲಿರುವ ಮಹಾತ್ಮರು ಸಹಿಸಲಶಕ್ಯವಾದ ಭಗವಂತನ ನಿಂದೆಯಂಕೇಳಿ ಕೋಪದಿಂ ಶಿಶುಪಾಲನಂ ಶಪಿಸುತ ಶ್ರೋತ್ರಂಗಳಂಮುಚ್ಚಿಕೊಂಡು ಆಯಜ್ಞಶಾಲೆಯ ದೆಸೆಯಿಂದಹೊರಕ್ಕೆತೆರಳಿದರು॥೪೦॥ ಎಲೈಅರಸೇಕೇಳು ಯಾವಪುರುಷನು ಭಗವಂತನ ನಿಂದೆಯಂ ಭಗವದ್ಭಕ್ತರ ನಿಂದೆಯನಾದರೂ ಕೇಳುತ ಅಲ್ಲಿಂದ ಹೋಗದೆಯಿರುವನೋ ಆಪುರುಷನು ಕೂಡ ಸುಖದಿಂ ಭ್ರಷ್ಟನಾಗಿ ನರಕವನೆಯ್ದುವನು, ಆಕಾರಣದಿಂ ಧರ್ಮಜ್ಞರಾದ ಆಸಭಾಜನರು ಆಸಭೆಯಿಂದ ಹೊರಕ್ಕೆ ಹೋದರು ॥೪೧॥ ಅನಂತರದಲ್ಲಿ ಪಾಂಡವರು ಮತ್ಸ್ಯಸೃಂ

ಪಾಂಡುಸುತಾಃ ಕ್ರುದ್ಧಾ ಮತ್ಸ್ಯಕೇಕಯಸೃಂಜಯಾಃ । ಉದಾಯುಧಾಸ್ಸಮುತ್ತಸ್ಥುಶ್ಶಿಶುಪಾಲಜಿಘಾಂಸವಃ ॥೪೧॥ ತತಶ್ಚೈದ್ಯಸ್ತ್ವಸಂಭ್ರಾಂತೋ ಜಗೃಹೇ ಖಡ್ಗಚರ್ಮಣೀ । ಭರ್ತ್ಸಯನ್ ಕೃಷ್ಣಪಕ್ಷೀಯಾನ್ ರಾಜ್ಞಸ್ಸದಸಿ ಭಾರತ ॥೪೨॥ ತಾವದುತ್ಥಾಯ ಭಗವಾನ್ ಸ್ವಾನ್ನಿವಾರ್ಯ ಸ್ವಯಂ ರುಷಾ । ಶಿರಃ ಕ್ಷುರಾಂತಚಕ್ರೇಣ ಜಹಾರಾಪತತೋ ರಿಪೋಃ ॥೪೩॥ ಶಬ್ದಃ ಕೋಲಾಹಲೋಽಪ್ಯಾಸೀಚ್ಛಿಶುಪಾಲೇ ಹತೇ ಮಹಾನ್ । ತಸ್ಯಾನುಯಾಯಿನೋ ಭೂಪಾ ದುದ್ರುವುರ್ಜೀವಿತೈಷಿಣಃ ॥೪೪॥ ಚೈದ್ಯದೇಹೋತ್ಥಿತಂ ಜ್ಯೋತಿರ್ವಾಸುದೇವಮುಪಾವಿಶತ್ । ಪಶ್ಯತಾಂ ಸರ್ವಭೂತಾನಾಮುಲ್ಕೇವ ಭುವಿ ಖಾಚ್ಚ್ಯುತಾ ॥೪೫॥ ಜನ್ಮತ್ರಯಾನು

---

ಮಕ್ಕಳೂ, ಮತ್ಸ್ಯಕೇಕಯಸೃಂಜಯಾಃ-ಮತ್ಸ್ಯದೇಶದವರೂ ಕೇಕಯರೂ ಎಂಬ ಅರಸುಗಳು, ಕ್ರುದ್ಧಾಃ-ಸಿಟ್ಟುಗೊಂಡವರಾದ್ದರಿಂದ, ಉದಾಯುಧಾಃ-ಎತ್ತಿದ ಆಯುಧಂಗಳುಳ್ಳವರಾಗಿ, ಶಿಶುಪಾಲಜಿಘಾಂಸವಃ-ಶಿಶುಪಾಲನಂ ಕೊಲ್ಲಬಯಸುವವರಾಗಿ, ಸಮುತ್ತಸ್ಥುಃ-ಚನ್ನಾಗಿ ಯೆದ್ದುನಿಂತರು ॥೪೧॥ ಭಾರತ-ಪರೀಕ್ಷಿತನೇ, ತತಃ-ಆ ಮೇಲೆ, ಚೈದ್ಯಸ್ತು- ಶಿಶುಪಾಲನಾದರೋ, ರಾಜ್ಞಃ-ಧರ್ಮರಾಯನ, ಸದಸಿ-ಸಭೆಯಲ್ಲಿ, ಅಸಂಭ್ರಾಂತಃ-ಭಯವಿಲ್ಲದವನಾಗಿ, ಕೃಷ್ಣಪಕ್ಷೀಯಾನ್-ಕೃಷ್ಣನಕಡೆಯವರನ್ನು, ಭರ್ತ್ಸಯನ್-ಹೆದರಿಸುವನಾಗಿ, ಖಡ್ಗಚರ್ಮಣೀ-ಕತ್ತಿಗುರಾಣಿಗಳನ್ನು, ಜಗೃಹೇ-ಹಿಡಿದನು ॥೪೨॥ ತಾವತ್-ಅಷ್ಟರಲ್ಲಿ, ಭಗವಾನ್-ಕೃಷ್ಣನು, ಉತ್ಥಾಯ-ಮೇಲಕ್ಕೆದ್ದು, ಸ್ವಾನ್-ತನ್ನವರನ್ನು, ನಿವಾರ್ಯ-ತಡೆದು, ರುಷಾ-ಸಿಟ್ಟಿನಿಂದ, ಸ್ವಯಂ-ತಾನೇ, [ನನ್ನದ್ವಾರಪಾಲಕನಾದ ಜಯನು ನನ್ನೊಡನೆ ಸಮಾನಬಲವುಳ್ಳವನಾದ್ದರಿಂದ ಈಶಿಶುಪಾಲನು ಇವರೆಲ್ಲರನ್ನೂ ಕೊಂದಾನು, ಆದ್ದರಿಂದ ನಾನೇ ಬೇಗ ಇವನಂ ಕೊಲ್ಲಬೇಕೆಂದು] ಆಪತತಃ-ತನ್ನ ಮೇಲೆ ಬರುತ್ತಿರುವ, ರಿಪೋಃ- ವೈರಿಯಾದ ಶಿಶುಪಾಲನ, ಶಿರಃ-ತಲೆಯನ್ನು, ಕ್ಷುರಾಂತಚಕ್ರೇಣ-ಕತ್ತಿಗಳ ಅಂಚುಳ್ಳ ಚಕ್ರಾಯುಧದಿಂದ, ಜಹಾರ-ಅಪಹರಿಸಿದನು॥ ಶಿಶುಪಾಲೇ-ಶಿಶುಪಾಲನು, ಹತೇಸತಿ-ಕೊಲ್ಲಲ್ಪಟ್ಟವನಾಗುತಲೂ, ಮಹಾನ್ಕೋಲಾಹಲಶ್ಶಬ್ದಃ-ದೊಡ್ಡ ಗುಲ್ಲಾದ ಸಪ್ಪಳು, ಆಸೀತ್-ಉಂಟಾಯಿತು, ತಸ್ಯ-ಆ ಶಿಶುಪಾಲನ, ಅನುಯಾಯಿನಃ-ಸಂಗಡ ಬಂದವರಾದ, ಭೂಪಾಃ-ರಾಯರು, ಜೀವಿತೈಷಿಣಃ-ಪ್ರಾಣವಂ ಬಯಸುವರಾದ್ದರಿಂದ, ದುದ್ರುವುಃ-ಓಡಿಹೋದರು ॥೪೪॥ ಸರ್ವಭೂತಾನಾಂ-ಸಕಲಪ್ರಾಣಿಗಳೂ, ಪಶ್ಯತಾಂಸತಾಂ-ನೋಡುತ್ತಿರುವರಾಗುತ್ತಿರುವಲ್ಲಿ, ಖಾತ್-ಆಕಾಶದಿಂದ, ಭುವಿ-ನೆಲದಲ್ಲಿ, ಚ್ಯುತಾ-ಜಾರಿಬಿದ್ದ, ಉಲ್ಕೇವ-ಕೊಳ್ಳಿಯಂತೆ, ಚೈದ್ಯದೇಹೋತ್ಥಿತಂ-ಶಿಶುಪಾಲನ ಮೈಯಿಂದ ಹೊರಟಂಥಾ, ಜ್ಯೋತಿಃ-ಬೆಳಕು, ವಾಸುದೇವಂ-ಕೃಷ್ಣನನ್ನು, ಉಪಾವಿಶತ್-ಸೇರಿತು ॥೪೫॥ ಜನ್ಮತ್ರಯ-ಮೂರು ಜನ್ಮಗಳಲ್ಲಿ, ಅನುಗುಣಿತ-ಅನುಸರಿಸಿಬಂದ, ವೈರ- ವಿರೋಧದಿಂದ, ಸಂರಬ್ಧಯಾ-

---

ಜಯ ಕೇಕಯ ದೇಶಾಧಿಪತಿಗಳಾದ ಅರಸರುಗಳುಕೂಡ ಅತಿಕೋಪಯುಕ್ತರಾಗಿ ಶಿಶುಪಾಲನಂ ಸಂಹರಿಸಲಿಚ್ಛೆಯಿಂದ ಆಯುಧಂಗಳಂ ಪಿಡಿದಿದ್ದರು ॥೪೧॥ ಅನಂತರದಲ್ಲಿ ಶಿಶುಪಾಲನು ಭಯಪಡದೆ ಆಧರ್ಮರಾಯನ ಸಭೆಯಲ್ಲಿ ಕೃಷ್ಣನಲ್ಲಿ ಪಕ್ಷಪಾತವುಳ್ಳಜನರಂ ಭಯಪಡಿಸುತ ಖಡ್ಗಚರ್ಮಂಗಳಂ ಧರಿಸಿದನು ॥೪೨॥ ಅಷ್ಟರಲ್ಲಿ ಶ್ರೀಕೃಷ್ಣನು ತನ್ನ ಮನಸ್ಸಿನಲ್ಲಿ ನನ್ನದ್ವಾರಪಾಲಕನಾದ ಈ ಶಿಶುಪಾಲನು ನನಗೆ ಸಮಾನವಾದ ಬಲವುಳ್ಳವನಾದುದರಿಂದ ಈ ನನ್ನ ಭಕ್ತರಾದ ಪಾಂಡವರನ್ನು ಸಂಹರಿಸುವನಾದ ಕಾರಣದಿಂ ಶೀಘ್ರದಿಂದಿವನಂ ನಾನೇ ಸಂಹರಿಸುವನಾಗುತ್ತೇನೆಂದು ಆಲೋಚಿಸಿ ಯುದ್ಧದಲ್ಲಿ ಸನ್ನದ್ಧರಾದ ಆಪಾಂಡವರಂ ಅಡ್ಡಿಗೆಯ್ದು ಅತಿಕೋಪದಿಂದ ತಾನು ಅತಿಶೀಕ್ಷ್ಣಂಗಳಾದ ಅಗ್ರಂಗಳುಳ್ಳ ಚಕ್ರಾಯುಧದಿಂ ದಿದಿರಾಗಿಬರುವ ಆಶಿಶುಪಾಲನ ಶಿರಸ್ಸಂ ಛೇದಿಸಿದನು ॥೪೩॥ ಅನಂತರದಲ್ಲಿ ಶ್ರೀಕೃಷ್ಣನಿಂದ ಈ ರೀತಿಯಾಗಿ ಶಿಶುಪಾಲನು ಸಂಹೃತನಾಗುತ್ತಿರಲು ಮಹತ್ತಾದ ಕೋಲಾಹಲ ಶಬ್ದವು ಉಂಟಾದ್ದಾಯಿತು. ಆಗ ಶಿಶುಪಾಲನ ಸಂಗಡ ಬಂದಿರುವ ಜಯವನಪೇಕ್ಷಿಸುತಲಿರುವ ಭೂಪತಿಗಳು ಭಯದಿಂದೋಡಿದರು ॥೪೪॥ ಆಗ ಶಿಶುಪಾಲನ ದೇಹದ ದೆಸೆಯಿಂದ ಎದ್ದಿರುವ ಒಂದು ತೇಜಸ್ಸು ಅಂತರಿಕ್ಷದಿಂದ ಬೀಳುತ್ತಲಿರುವ ಕೊಳ್ಳಿಯಂತೆ ಪ್ರಕಾಶಿಸುತ ಸಮಸ್ತ ಭೂತಂಗಳು ನೋಡುತ್ತಿರಲು ಶ್ರೀ ಕೃಷ್ಣನಲ್ಲಿಯೇ ಪ್ರವೇಶಿಸುವಂತೆಯೆ ದಾಯಿತು ॥೪೫॥ ಇಂತಾದ ದೂಷಕನಾದ ಶಿಶುಪಾಲನು ಶ್ರೀಕೃಷ್ಣನಲ್ಲಿ ಎಂತು

ಗುಣಿತ ವೈರಸಂರಬ್ಧಯಾ ಧಿಯಾ । ಧ್ಯಾಯಂಸ್ತನ್ಮಯತಾಂ ನೀತೋ ಭಾವೋ ಹಿ ಭವಕಾರಣಂ ॥೪೭॥ ಋತ್ವಿಗ್ಭ್ಯಸ್ಸಸದಸ್ಯೇಭ್ಯೋ ದಕ್ಷಿಣಾಂ ವಿಪುಲಾಮದಾತ್ । ಸರ್ವಾನ್ಸಂಪೂಜ್ಯ ವಿಧಿವಚ್ಚಕ್ರೇऽವಭೃಥಮೇಕರಾಟ್ ॥೪೮॥ ಸಾಧಯಿತ್ವಾ ಕ್ರತುಂ ರಾಜ್ಞಃ ಕೃಷ್ಣೋ ಯೋಗೇಶ್ವರೇಶ್ವರಃ । ಉವಾಸ ಕತಿಚಿನ್ಮಾಸಾನ್ ಸುಹೃದ್ಭಿರಭಿಯಾಚಿತಃ ॥೪೯॥ ತತೋऽನುಜ್ಞಾಪ್ಯ ರಾಜಾನಮನಿಚ್ಛಂತಮಪೀಶ್ವರಃ । ಯಯೌ ಸಭಾರ್ಯಸ್ಸಾಮಾತ್ಯಸ್ಸ್ವಪುರಂ ದೇವಕೀಸುತಃ ॥೫೦॥ ವರ್ಣಿತಂ ತದುಪಾಖ್ಯಾನಂ ಮಯಾ ತೇ ಬಹುವಿಸ್ತರಂ । ವೈಕುಂಠವಾಸಿನೋರ್ಜನ್ಮ ವಿಪ್ರಶಾಪಾತ್ಪುನಃ ಪುನಃ ॥೫೧॥ ರಾಜಸೂಯಾವಭೃಥ್ಯೇನ ಸ್ನಾತೋ ರಾಜಾ ಯುಧಿ

---

ಆವೇಶಿಸಲ್ಪಟ್ಟ, ಧಿಯಾ-ಬುದ್ಧಿಯಿಂದ, ಧ್ಯಾಯನ್-ಧ್ಯಾನಿಸುವವನಾಗಿ, ತನ್ಮಯತಾಂ-ತತ್ಸಾರೂಪ್ಯವನ್ನು (ವೈಕುಂಠದ್ವಾರಪಾಲಕ ರೂಪವನ್ನು) ನೀತಃ-ಹೊಂದಿಸಲ್ಪಟ್ಟನು. ಭಾವಃ-ಭಾವನೆಯು, ಭವಕಾರಣಂಹಿ-ಜನ್ಮಕ್ಕೆ ನಿಮಿತ್ತವಲ್ಲವೆ ॥೪೭॥ ಏಕರಾಟ್-ಮುಖ್ಯರಾಜನಾದ ಧರ್ಮಜನು, ಸಸದಸ್ಯೇಭ್ಯಃ-ಸಭಾಪತಿಗಳಿಂ ಕೂಡಿದ, ಋತ್ವಿಗ್ಭ್ಯಃ-ಯಾಜಕರಿಗೆ, ವಿಪುಲಾಂ-ವಿಸ್ತಾರವಾದ, ದಕ್ಷಿಣಾಂ-ಅರ್ಹಣದ್ರವ್ಯವನ್ನು, ಅದಾತ್-ಕೊಟ್ಟನು, ಸರ್ವಾನ್- ಎಲ್ಲರನ್ನೂ, ಸಂಪೂಜ್ಯ-ಚನ್ನಾಗಿ ಸನ್ಮಾನಿಸಿ, ವಿಧಿವತ್-ಯಥಾಶಾಸ್ತ್ರವಾಗಿ, ಅವಭೃಥಂ-ಯಜ್ಞಪೂರ್ತಿಸ್ನಾನಕರ್ಮವನ್ನು, ಚಕ್ರೇ ಮಾಡಿದನು ॥೪೮॥ ಯೋಗೇಶ್ವರೇಶ್ವರಃ-ಕರ್ಮಕೌಶಲದಿಂ ಕೂಡಿದವರಿಗೆ ಒಡೆಯನಾದ, ಕೃಷ್ಣಃ-ವಾಸುದೇವನು, ರಾಜ್ಞಃ-ಧರ್ಮಜನ, ಕ್ರತುಂ- ರಾಜಸೂಯವನ್ನು, ಸಾಧಯಿತ್ವಾ-ಸಂಪಾದಿಸಿಕೊಟ್ಟು, ಸುಹೃದ್ಭಿಃ-ಮಿತ್ರರಿಂದ, ಅಭಿಯಾಚಿತಃ-ಪ್ರಾರ್ಥಿಸಲ್ಪಟ್ಟವನಾಗಿ, ಕತಿಚಿನ್ಮಾಸಾನ್-ಕೆಲವು ತಿಂಗಳು, ಉವಾಸ-ಅಲ್ಲಿಯೇ ಇದ್ದನು ॥೪೯॥ ತತಃ-ಆ ಮೇಲೆ, ಅನಿಚ್ಛಂತಂ-ಬಿಡುವುದಕ್ಕೆ ಇಚ್ಛೆಯಿಲ್ಲದವನಾದ, ರಾಜಾನಮಪಿ-ಧರ್ಮರಾಯನನ್ನೂ, ಅನುಜ್ಞಾಪ್ಯ- ಅಪ್ಪಣೆಕೊಡಗೊಳಿಸಿ, ಈಶ್ವರಃ-ನಿಯಾಮಕನಾದ, ದೇವಕೀಸುತಃ-ಕೃಷ್ಣನು, ಸಭಾರ್ಯಃ-ಪತ್ನೀಸಹಿತನಾಗಿ, ಸಾಮಾತ್ಯಃ-ಮಂತ್ರಿಗಳಿಂ ಸಮೇತನಾಗಿ, ಸ್ವಪುರಂ-ದ್ವಾರಕೆಯನ್ನು ಕುರಿತು, ಯಯೌ-ತೆರಳಿದನು ॥೫೦॥ (ಎಲೈ ಪರೀಕ್ಷಿತನೇ) ವಿಪ್ರಶಾಪಾತ್-ಬ್ರಾಹ್ಮಣರಾದ ಸನಕಾದಿಗಳ ಶಾಪದಿಂದ, ವೈಕುಂಠವಾಸಿನಃ-ವೈಕುಂಠದಲ್ಲಿದ್ದ ಜಯನಿಗೆ, ಪುನಃಪುನಃ-ಮರಳಿಮರಳಿಯೂ ಸಂಭವಿಸಿದ, ಜನ್ಮ-ಹಿರಣ್ಯಕಶಿಪು, ರಾವಣ-ಶಿಶುಪಾಲರೂಪದಿಂದ ಹುಟ್ಟಿದುದು, ತದುಪಾಖ್ಯಾನಂ-ಅವರ ಕಥೆಯೂ, ತೇ-ನಿನಗಾಗಿ, ಮಯಾ-ನನ್ನಿಂದ ಬಹುವಿಸ್ತರಂ-ಬಹಳ ವಿಸ್ತಾರವುಳ್ಳದ್ದಾಗಿ, ವರ್ಣಿತಂ-ಬಣ್ಣಿಸಲ್ಪಟ್ಟದ್ದಾಗಿದೆ ॥೫೧॥ ರಾಜಸೂಯಾವಭೃಥ್ಯೇನ-ಯಜ್ಞಾಂತದ ಮಂಗಳ ಕರ್ಮದೊಡನೆ,

---

ಐಕ್ಯವಂ ಪಡೆದನೆಂಬಲ್ಲಿ ಉತ್ತರವ ನೀವನದೆಂತೆನ್ನೆ-ಎಲೈ ಅರಸೇ! ಕೇಳು ಶಿಶುಪಾಲನು ಮೂರುಜನ್ಮದಲ್ಲಿಯೂ ಬದ್ಧ ಹೊಂದಿದ ವೈರದಿಂ ಪರಿಪೂರ್ಣವಾದ ಬುದ್ಧಿಯಿಂದ ಶ್ರೀಕೃಷ್ಣನಂ ಧ್ಯಾನಂಗೈಯುತ್ತಿರುವವನಾಗಿ ಆ ಭಗವಂತನ ಸ್ವರೂಪವನೆಯ್ದಿದನು ಎಲೈ ಅರಸನೇ ಕೇಳು, ಲೋಕದಲ್ಲಿ ಭಾವನೆಯೇ ಭಾವನಾವಿಷಯವಾದ ವಸ್ತುವಾಗಿ ಜನಿಸುವುದಕ್ಕೆ ಕಾರಣವಲ್ಲವೆ, ಆ ಕಾರಣದಿಂದ ಶಿಶುಪಾಲನು ಜನ್ಮಪ್ರಭೃತಿಯಾಗಿ ವೈರದಿಂ ಶ್ರೀಕೃಷ್ಣನನ್ನೇ ಭಾವಿಸುತ ಲಿರುವವನಾದ್ದರಿಂದ ದುಷ್ಟನಾದರೂ ಶ್ರೀಕೃಷ್ಣನ ಭಾವನಾಸಾಮರ್ಥ್ಯದಿಂದ ಶ್ರೀಕೃಷ್ಣನಲ್ಲಿಯೇ ಐಕ್ಯವನೆಯ್ದಿ ದ್ವಾರಪಾಲಕತ್ವವ ನೆಯ್ದಿದನು ॥೪೭॥ ಅನಂತರದಲ್ಲಿ ಸಾರ್ವಭೌಮನಾದ ಧರ್ಮರಾಯನು ಋತ್ವಿಕ್ಕರಿಗೋಸುಗ ಆ ಸಭೆಯಲ್ಲಿರು ಬ್ರಾಹ್ಮಣರಿಗೋಸುಗವೂ ಅಮಿತವಾದ ದಕ್ಷಿಣೆಯನಿತ್ತು ವಿಧ್ಯುಕ್ತವಾಗಿ ಸಮಸ್ತರಂ ಪೂಜಿಸಿದನು. ಅವಭೃಥಸ್ನಾನವನಾಚರಿಸಿದನು ॥೪೮॥ ಯೋಗೇಶ್ವರನಾದ ಶ್ರೀ ಕೃಷ್ಣನು ಈ ರೀತಿಯಾಗಿ ಧರ್ಮರಾಯನ ರಾಜಸೂಯಯಾಗವು ಪೂರ್ತಿಗೆಯ್ದು ಮಿತ್ರರಿಂ ಪ್ರಾರ್ಥಿಸಲ್ಪಟ್ಟವನಾಗಿ ಕೆಲವು ಮಾಸಂಗಳು ಆಯಿಂದ್ರಪ್ರಸ್ಥಪುರದಲ್ಲಿ ವಾಸಂಗೆಯ್ದನು ॥೪೯॥ ಅನಂತರದಲ್ಲಿ ಶ್ರೀ ಕೃಷ್ಣನು ಧರ್ಮರಾಯನಿಗೆ ತಾನು ತೆರಳಿಹೋಗುವದು ಅಸಮ್ಮತವಾದರೂ ಆ ಧರ್ಮರಾಯನಂ ಕೇಳಿ ಪತ್ನಿಯರೊಡನೆ ಮಂತ್ರಿಗಳೊಡನೆಯೂ ಕೂಡ ದ್ವಾರಕಾಪುರವನೆಯ್ದಿದನು ॥೫೦॥ ಎಲೈ ಅರಸೇ ಕೇಳು ! ಅತ್ಯಂತವಿಸ್ತಾರವಾದ ಆ ಶ್ರೀಕೃಷ್ಣನ ಉಪಾಖ್ಯಾನವು ಮತ್ತು ವೈಕುಂಠವಾಸಿಗಳಾದ ಜಯವಿಜಯರಿಗೆ ಋಷಿಶಾಪದಿಂದ ಬಾರಿ ಬಾರಿಗೂ ಉಂಟಾದ ಜನ್ಮವೃತ್ತಾಂತವು ಸಹ ನಿನಗೆ ನಿರೂಪಿಸಲ್ಪಟ್ಟಿತು ॥೫೧॥ ಎಲೈ ಅರಸೇ ಕೇಳು, ಅನಂತ

ಧಿಷ್ಠಿರಃ । ಬ್ರಹ್ಮಕ್ಷತ್ರಸಭಾಮಧ್ಯೇ ಶುಶುಭೇ ದೇವರಾಡಿವ ॥೫೦॥ ರಾಜ್ಞಾ ಸಭಾಜಿತಾಃ ಸರ್ವೇ ಸುರಮಾನವ ಖೇಚರಾಃ । ಕೃಷ್ಣಂ ಕ್ರತುಂ ಚ ಶಂಸಂತಸ್ಸ್ವಧಾಮಾನಿ ಮುದಾ ಯಯುಃ ॥೫೧॥ ದುರ್ಯೋಧನಮೃತೇ ಪಾಪಂ ಕಲಿಂ ಕುರುಕುಲಾಮಯಮ್ । ಯೋ ನ ಸೇಹೇ ಶ್ರಿಯಂ ಸ್ಫೀತಾಂ ದೃಷ್ಟ್ವಾ ಪಾಂಡುಸುತಸ್ಯ ತಾಮ್ ॥೫೨॥ ಯ ಇದಂ ಕೀರ್ತಯೇದ್ವಿಷ್ಣೋಃ ಕರ್ಮ ಚೈದ್ಯವಧಾದಿಕಮ್ । ರಾಜ್ಞಾಂ ಮೋಕ್ಷಂ ವಿತಾನಂ ಚ ಸರ್ವಪಾಪೈಃ ಪ್ರಮುಚ್ಯತೇ ॥ ... ... ... ... ... ॥೫೩॥

ಇತಿ ಶ್ರೀಮದ್ಭಾಗವತೇ-ದಶಮಸ್ಕಂಧೇ-ಚತುಸ್ಸಪ್ತತಿತಮೋಽಧ್ಯಾಯಃ-

---

ಸ್ನಾತಃ-ಮಿಂದವನಾದ, ಯುಧಿಷ್ಠಿರೋ ರಾಜಾ-ಧರ್ಮರಾಯನು, ಬ್ರಹ್ಮಕ್ಷತ್ರಸಭಾಮಧ್ಯೇ-ಬ್ರಾಹ್ಮಣರ ಮತ್ತು ಕ್ಷತ್ರಿಯರ ಸಮಾಜದ ನಡುವೆ, ದೇವರಾಡಿವ-ಇಂದ್ರನಂತೆ, ಶುಶುಭೇ-ಬೆಳಗಿದನು ॥೫೦॥ ರಾಜ್ಞಾ-ಧರ್ಮರಾಯನಿಂದ, ಸಭಾಜಿತಾಃ- ಸನ್ಮಾನಿಸಲ್ಪಟ್ಟವರಾದ, ಸುರಮಾನವಖೇಚರಾಃ-ದೇವತೆಗಳೂ ಮನುಷ್ಯರೂ ಗಗನಚಾರಿಗಳೂ, ಸರ್ವೇ-ಎಲ್ಲರೂ ಕೃಷ್ಣಂ-ವಾಸುದೇವನನ್ನೂ, ಕ್ರತುಂಚ-ರಾಜಸೂಯವನ್ನೂ, ಮುದಾ-ಸಂತೋಷದಿಂದ, ಶಂಸಂತಃ-ಸ್ತುತಿಸುವರಾಗುತ್ತ, ಸ್ವಧಾಮಾನಿ-ತಮ್ಮ ಸ್ಥಳಗಳನ್ನು, ಯಯುಃ-ಸೇರಿದರು॥೫೧॥ ಯಃ-ಯಾವವನು, ಪಾಂಡುಸುತಸ್ಯ-ಧರ್ಮರಾಯನ ತಾಂ-ಅಂಥಾ, ಸ್ಫೀತಾಂ-ಸಮೃದ್ಧವಾದ, ಶ್ರಿಯಂ-ಸಂಪತ್ತನ್ನು, ದೃಷ್ಟ್ವಾ-ನೋಡಿ, ನಸೇಹೇ-ಸೈರಿಸಲಿಲ್ಲವೋ, ತಂ-ಅಂಥಾ, ಪಾಪಂ-ಪಾಪಿಷ್ಠನಾದ, ಕುರುಕುಲಾಮಯಂ-ಕುರುರಾಯನವಂಶಕ್ಕೆ ರೋಗವಾಗಿರುವ, ಕಲಿಂ-ಕಲಹಕಾರಿಯಾದ (ಕಲಿಪುರುಷಾಂಶವಾದ) ದುರ್ಯೋಧನಂ ಋತೇ-ಸುಯೋಧನ ರಾಯನಂ ಹೊರತು[ಮಿಕ್ಕವರೆಲ್ಲರೂ ತೆರಳಿದರು]॥೫೨॥ ಯಃ-ಯಾವ ಪುರುಷನು, ಚೈದ್ಯವಧಾದಿಕಂ-ಶಿಶುಪಾಲನ ಸಂಹಾರಮೊದಲಾದ, ವಿಷ್ಣೋಃ ಕರ್ಮ-ಕೃಷ್ಣನ ಕೆಲಸವನ್ನು, ರಾಜ್ಞಾಂ-ಅರಸುಗಳ, ಮೋಕ್ಷಂ-ಬಿಡುಗಡೆಯನ್ನು, ವಿತಾನಂಚ-ಯಜ್ಞವನ್ನೂ, ಎಂಬ, ಇದಂ-ಈ ಪುರಾಣವನ್ನು, ಕೀರ್ತಯೇತ್-ಪಠಿಸುವನೋ, ಸಃ-ಆ ಪುರುಷನು, ಸರ್ವಪಾಪೈಃ-ಸಕಲಪಾತಕಂಗಳಿಂದಲೂ, ಪ್ರಮುಚ್ಯತೇ-ಚೆನ್ನಾಗಿ ಬಿಡಲ್ಪಡುವನು ॥೫೩॥

ಇಂತೆಂಬಲ್ಲಿಗೆ ಭಾಗವತಪ್ರತಿಶಬ್ದಾರ್ಥಬೋಧಿನಿಯೊಳು ದಶಮಸ್ಕಂಧದಲ್ಲಿ
೭೪ನೆಯ ಅಧ್ಯಾಯಂ ಮುಗಿದುದು.

---

ರದಲ್ಲಿ ಧರ್ಮರಾಯನ ರಾಜಸೂಯಯಾಗ ಪೂರ್ತಿಯಾಗುತ್ತಿರಲು ಅವಭೃಥಸ್ನಾನಂ ಗೈದು ಬ್ರಾಹ್ಮಣ ಕ್ಷತ್ರಿಯರ ಸಭಾಮಧ್ಯದಲ್ಲಿ ದೇವೇಂದ್ರನಂತೆ ಪ್ರಕಾಶಿಸಿದನು ॥೫೦॥ ಅನಂತರದಲ್ಲಿ ದೇವತೆಗಳು ಮಾನವರು ಖೇಚರರು ಇವರೆಲ್ಲರೂ ಧರ್ಮರಾಯನಿಂದ ಪೂಜಿಸಲ್ಪಟ್ಟವರಾಗಿ ಶ್ರೀಕೃಷ್ಣನಂ ಆಯಾಗವಂ ಸಹ ಶ್ಲಾಘಿಸುತಲಿರುವರಾಗಿ ಪುನಃ ತಮ್ಮತಮ್ಮ ಸ್ಥಾನಂಗಳಂ ಸಂತೋಷದಿಂ ದೈದಿದರು ॥೫೧॥ ಆಗ ಯಾವವನು ಧರ್ಮರಾಯನ ವೃದ್ಧಿಹೊಂದಿರುವ ಆ ಸಂಪತ್ತಂ ನೋಡಿ ಸಹಿಸಿದವನಾಗಲಿಲ್ಲವೋ, ಅಂತಿಯ ಪಾಪಿಷ್ಠನಾದ ಕುರುವಂಶಕ್ಕೆ ನಾಶಕನಾದ ಕಲಿಸ್ವರೂಪನಾದ ಆ ದುರ್ಯೋಧನ ನೊರ್ವನುಮಾತ್ರವೇ ಶ್ರೀಕೃಷ್ಣನಂ ಆ ಯಾಗವಂ ಸಹ ಶ್ಲಾಘಿಸಿದವನಾಗಲಿಲ್ಲ. ಮಿಕ್ಕ ಸಮಸ್ತಜನರೂ ಶ್ಲಾಘಿಸಿದರು ॥೫೨॥ ಎಲೈ ಪರೀಕ್ಷಿದ್ರಾಯನೇ ಯಾವ ಪುರುಷನು ಶಿಶುಪಾಲನ ವಧೆಮೊದಲಾದ ಈ ಸಮಸ್ತ ಶ್ರೀಕೃಷ್ಣ ಚಾರಿತ್ರಂ ಮತ್ತು ಅರಸುಗಳ ಬಂಧಮೋಚನವಂ ರಾಜಸೂಯ ಪ್ರಸ್ತಾವಮಂ ಸಹ ಕೀರ್ತನಂಗೆಯ್ವನೋ ಆ ಪುರುಷನು ಸಮಸ್ತ ಪಾಪಂಗಳಿಂ ಮುಕ್ತನಾಗುವನು ... ... ... ॥೫೩॥

ಇಂತು ಶ್ರೀಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸಿದನೆಂದು ಸೂತಪೌರಾಣಿ
ಕನು ನೈಮಿಶಾರಣ್ಯವಾಸಿಗಳಾದ ಶೌನಕಾದಿ ಮಹರ್ಷಿಗಳಿಗೆ ಪೇಳಿದನೆಂಬಲ್ಲಿಗೆ ಶ್ರೀ
ಮನ್ಮಹೀಶೂರ ಪುರವರಾಧೀಶ ಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜ
ವಿರಚಿತಮಾದ ‘‘ಶ್ರೀಕೃಷ್ಣರಾಜ ವಾಣೀವಿಲಾಸ’’ ಮೆಂಬ ಶ್ರೀಭಾಗವತ
ಪುರಾಣದ ಕರ್ಣಾಟಭಾಷಾವ್ಯಾಖ್ಯಾನದಲ್ಲಿ ದಶಮಸ್ಕಂಧದ
೭೪ನೆಯಧ್ಯಾಯಂ ಮುಗಿದುದು.

ರಾಜಾ॥ ಅಜಾತಶತ್ರೋಸ್ತಂ ದೃಷ್ಟ್ವಾ ರಾಜಸೂಯಮಹೋದಯಮ್ । ಸರ್ವೇ ಮುಮುದಿರೇ ಬ್ರಹ್ಮನ್ ನೃದೇವಾ ಯೇ ಸಮಾಗತಾಃ ॥೧॥ ದುರ್ಯೋಧನಂ ವರ್ಜಯಿತ್ವಾ ರಾಜಾನಮೃಷಯಸ್ಸುರಾಃ । ಇತಿ ಶ್ರುತಂ ನೋ ಭಗವನ್ ತತ್ರ ಕಾರಣಮುಚ್ಯತಾಮ್ ॥೨॥ ಶ್ರೀಶುಕಃ॥ ಪಿತಾಮಹಸ್ಯ ತೇ ಯಜ್ಞೇ ರಾಜಸೂಯೇ ಮಹಾತ್ಮನಃ । ಬಾಂಧವಾಃ ಪರಿಚರ್ಯಾಯಾಂ ತಸ್ಯಾಸನ್ ಪ್ರೇಮಬಂಧನಾಃ ॥೩॥ ಭೀಮೋ ಮಹಾನಸಾಧ್ಯಕ್ಷೋ ಧನಾಧ್ಯಕ್ಷಸ್ಸುಯೋಧನಃ । ಸಹದೇವಸ್ತು ಪೂಜಾಯಾಂ ನಕುಲೋ ದ್ರವ್ಯಸಾಧನೇ ॥೪॥ ಸತಾಂ ಶುಶ್ರೂಷ

---

೭೫ನೆಯ ಅಧ್ಯಾಯದ ಪ್ರತಿಪದಟೀಕೆ.

ಬ್ರಹ್ಮನ್-ಬ್ರಾಹ್ಮಣನಾದ ಶುಕಮುನಿಯೇ, ಯೇ ನೃದೇವಾಃ-ಯಾವರಾಯರು, ಸಮಾಗತಾಃ-ಬಂದವರಾಗಿದ್ದರೋ, ತೇ ಸರ್ವೇ-ಅವರೆಲ್ಲರೂ, ಅಜಾತಶತ್ರೋಃ-ಧರ್ಮರಾಯನ, ತಂ-ಅಂಥಾ, ರಾಜಸೂಯಮಹೋದಯಂ-ಯಜ್ಞದ ದೊಡ್ಡ ಪ್ರಯೋಜನವನ್ನು, ದೃಷ್ಟ್ವಾ-ನೋಡಿ, ಮುಮುದಿರೇ-ಸಂತೋಷಿಸಿದರು ॥೧॥ ದುರ್ಯೋಧನಂ ರಾಜಾನಂ-ದುರ್ಯೋಧನ ರಾಯನನ್ನು, ವರ್ಜಯಿತ್ವಾ-ಬಿಟ್ಟು, ಋಷಯಃ-ವ್ಯಾಸಾದಿಮುನಿಗಳೂ, ಸುರಾಃ-ದೇವರ್ಕಳೂ, (ಸಂತೋಷಿಸಿದರು) ಇತಿ-ಹೀಗೆಂದು, ನಃ-ನಮ್ಮಿಂದ, ಶ್ರುತಂ-ಕೇಳಲ್ಪಟ್ಟಿದೆ. ಭಗವನ್-ತ್ರಿಕಾಲಜ್ಞನಾದ ಶುಕಮುನಿಯೇ, ಅತ್ರ-ಹೀಗಾದ್ದಕ್ಕೆ, ಕಾರಣಂ-ನಿಮಿತ್ತವು, ಉಚ್ಯತಾಂ-ಹೇಳಲ್ಪಡಲಿ ॥೨॥ ಎಲೈ ಪರೀಕ್ಷಿತನೇ! ತೇ-ನಿನ್ನ, ಪಿತಾಮಹಸ್ಯ-ತಂದೆಗೆ ಹಿರಿತಂದೆಯಾದ, ಮಹಾತ್ಮನಃ-ಮಹಾನುಭಾವನಾದ ಧರ್ಮರಾಯನ, ರಾಜಸೂಯಯಜ್ಞೇ-ರಾಜಸೂಯಯಾಗದಲ್ಲಿ, ತಸ್ಯ-ಆತನ, ಬಾಂಧವಾಃ - ದೇಹಾನುಬಂಧಿಗಳೂ, ಪ್ರೇಮಬಾಂಧವಾಃ-ಸ್ನೇಹಾನುಬಂಧಿಗಳೂ, ಪರಿಚರ್ಯಾಯಾಂ-ಸೇವಾವೃತ್ತಿಯಲ್ಲಿ, ಆಸನ್- ಆಗಿದ್ದರು॥ ಭೀಮಃ-ಭೀಮನು, ಮಹಾನಸಾಧ್ಯಕ್ಷಃ-ಅಡಿಗೆಯಮನೆಯಲ್ಲಿ ವಿಚಾರಕನೂ, ಸುಯೋಧನಃ-ದುರ್ಯೋಧನನು, ಧನಾಧ್ಯಕ್ಷಃ-ಹೊನ್ನಿನ ವಿಚಾರಕನೂ, ಸಹದೇವಸ್ತು-ಸಹದೇವನಾದರೋ ಪೂಜಾಯಾಂ-ಸನ್ಮಾನಿಸುವುದರಲ್ಲಿ ವಿಚಾರಕನು, ದ್ರವ್ಯಸಾಧನೇ-ಪದಾರ್ಥಗಳನ್ನು ಅಣಿಸುವುದರಲ್ಲಿ, ನಕುಲಃ-ನಕುಲನು ವಿಚಾರಕನೂ] ಆಗಿದ್ದರು ॥೪॥ ಸತಾಂ-ಸತ್ಪುರುಷರ, ಶುಶ್ರೂಷ

---

೭೫ ನೆಯ ಅಧ್ಯಾಯವು.

ಶ್ರೀಧರೀಯ ಶ್ಲೋಕಃ॥ ಪಂಚಸಪ್ತತಿತಮೇ ಯಜ್ಞಾವಭೃಥಸಂಭ್ರಮಃ । ಸುಯೋಧನಸ್ಯ ಚಾಕ್ಷಾಂತ್ಯಾ ಮಾನಭಂಗೋ ದೃಶಿಭ್ರಮಾತ್ ॥ ಟೀ॥ ೭೫ನೆಯ ಅಧ್ಯಾಯದಲ್ಲಿ ರಾಜಸೂಯದ ಅವಭೃಥಸ್ನಾನವಾದ ಕ್ರಮವಂ ಧರ್ಮರಾಯನ ಅಂಥಾ ಯಜ್ಞವೈಭವವಂ ಆ ಸಂಪತ್ತಂ ಸಹ ನೋಡಿ ದುರ್ಯೋಧನನಿಗೆ ಅಸೂಯೆಯುಂಟಾಯಿತೆಂದು ಮತ್ತು ಅವನು ಅರಮನೆಯಲ್ಲಿ ಜಲದೊಳಗೆ ಇದು ಸ್ಥಲವೆಂಬ ಭ್ರಾಂತಿಯಿಂ ಬೀಳ್ದುದರಿಂದೆ ಮಾನಭಂಗವಾಯಿತೆಂದು ಸಹ ಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸುವನದೆಂತೆನೆ-

ಮೊದಲು ಧರ್ಮರಾಯನಲ್ಲಿ ದುರ್ಯೋಧನನಿಗೆ ಅಸೂಯೆಯುಂಟಾಗುವುದಕ್ಕೆ ನಿಮಿತ್ತವೇನೆಂದು ಪರೀಕ್ಷಿದ್ರಾಯನು ಪ್ರಶ್ನೆಗೆಯ್ವನು-ಎಲೈ ಶುಕಮುನಿಯೇ ಆಗ ಬಂದಿರುವ ಅರಸುಗಳೆಲ್ಲರೂ ಋಷಿಗಳೂ ದೇವತೆಗಳೂ ಸಹ ಧರ್ಮರಾಯನ ಆ ರಾಜಸೂಯ ಮಹೋತ್ಸವವಂ ನೋಡಿ ಸಂತೋಷಪಟ್ಟರು. ದುರ್ಯೋಧನನೊರ್ವನು ಮಾತ್ರವೇ ಸಂತೋಷಪಡಲಿಲ್ಲವೆಂದು ನೀನು ನಿರೂಪಿಸಿದವನಾದೆ ॥೧॥ ಆಗ ದುರ್ಯೋಧನನಿಗೆ ಧರ್ಮರಾಯನಲ್ಲಿ ದುಃಖವುಂಟಾಗುವುದಕ್ಕೆ ನಿಮಿತ್ತವನ್ನು ನೀನು ನಿರೂಪಿಸುವನಾಗು ॥೨॥ ಎಂಬ ರಾಜವಾಕ್ಯವಂ ಕೇಳಿ ಶುಕಮುನಿಯು ಪೇಳಲೊತ್ತಗಿದನೆಂತನೆ,- ಎಲೈ ಅರಸೇ ಕೇಳು, ನಿನ್ನ ಹೆತ್ತಜ್ಜನಾದ ಮಹಾತ್ಮನಾದ ಧರ್ಮರಾಯನ ರಾಜಸೂಯಯಾಗದಲ್ಲಿ ಬಂಧುಗಳಾದ ಅರಸುಗಳು ಪ್ರೇಮದಿಂದ ಬದ್ಧರಾಗಿ ಧರ್ಮರಾಯನ ಸೇವೆಯಲ್ಲಿ ಉದ್ಯುಕ್ತರಾದರು ॥೩॥ ಆಗ ಭೀಮನು ಪಾಕಶಾಲೆಗೆ ಅಧಿಪತಿಯಾದನು. ದುರ್ಯೋಧನನೇ ಧನಕ್ಕೆ ಅಧಿಪತಿಯಾದನು. ಸಹದೇವನು ಯಾಗಕ್ಕೆ ಬಂದವರಂ ಬಹುಮಾನಂಗೆಯ್ವುದರಲ್ಲಿ ಉದ್ಯುಕ್ತನಾದನು. ನಕುಲನು ಸಮಸ್ತ ಪದಾರ್ಥಂಗಳಂ ಸಂಪಾದಿಸುವುದರಲ್ಲಿ ಉದ್ಯುಕ್ತನಾದನು ॥೪॥ ಅರ್ಜುನನು

ಕ್ಷೇ ಜಿಷ್ಣುಃ ಕೃಷ್ಣಃ ಪಾದಾವನೇಜನೇ ॥ ಪರಿವೇಷಣೇ ದ್ರುಪದಜಃ ಕರ್ಣೋ ದಾನೇ ಮಹಾಮನಾಃ ॥ ಯುಯುಧಾನೋ ವಿಕರ್ಣಶ್ಚ ಹಾರ್ದಿಕ್ಯೋ ವಿದುರಾದಯಃ । ಬಾಹ್ಲೀಕಪುತ್ರಾ ಭೂರ್ಯಾದ್ಯಾ ಯೇ ಚ ಸಂತರ್ದನಾದಯಃ ॥೪॥ ನಿರೂಪಿತಾ ಮಹಾಯಜ್ಞೇ ನಾನಾಕರ್ಮಸು ತೇ ತದಾ । ಪ್ರವರ್ತಂತೇ ಸ್ಮ ರಾಜೇಂದ್ರ ರಾಜ್ಞಃ ಪ್ರಿಯಚಿಕೀರ್ಷವಃ ॥೫॥ ಋತ್ವಿಕ್ಸದಸ್ಯಬಹುವಿತ್ಸು ಸುಹೃತ್ತಮೇಷು ಸ್ವಿಷ್ಟೇಷು ಸೂನೃತಸಮರ್ಹಣದಕ್ಷಿಣಾಭಿಃ । ಚೈದ್ಯೇ ಚ ಸಾತ್ವತಪತೇಶ್ಚರಣಂ ಪ್ರವಿಷ್ಟೇ ಚಕ್ರುಸ್ತತಸ್ತ್ವವಭೃಥಸ್ನಪನಂ ದ್ಯುನದ್ಯಾಮ್ ॥೬॥ ಮೃದಂಗಶಂಖಪಣವಾಸ್ತೂರ್ಯಾಶ್ಚಾನಕಗೋಮುಖಾಃ । ವಾದಿತ್ರಾಣಿ ವಿಚಿತ್ರಾಣಿ ನೇದುರಾವಭೃಥೋತ್ಸವೇ ॥೭॥

---

ಕ್ಷೇ-ಸೇವೆಯಲ್ಲಿ, ಜಿಷ್ಣುಃ-ಅರ್ಜುನನೂ, ಪಾದಾವನೇಜನೇ-ಕಾಲುಗಳನ್ನು ತೊಳೆಯುವುದರಲ್ಲಿ, ಕೃಷ್ಣಃ-ವಾಸುದೇವನೂ, ಪರಿವೇಷಣೇ-ಬಡಿಸುವುದರಲ್ಲಿ, ದ್ರುಪದಜಃ-ಧೃಷ್ಟದ್ಯುಮ್ನನೂ, ಮಹಾಮನಾಃ-ಉದಾರಬುದ್ಧಿಯುಳ್ಳ, ಕರ್ಣಃ-ರಾಧೇಯನು, ದಾನೇ-ಕೊಡುವುದರಲ್ಲಿಯೂ, ಮುಖ್ಯವಿಚಾರಕರಾಗಿದ್ದರು ॥೩॥ ಯುಯುಧಾನನೂ, ವಿಕರ್ಣನೂ, ಹಾರ್ದಿಕ್ಯನೂ, ವಿದುರನೂ ಮೊದಲಾದವರು, ಬಾಹ್ಲೀಕನ ಮಕ್ಕಳಾದ ಭೂರ್ಯಾದ್ಯಾಃ-ಭೂರಿಶ್ರವನೇ ಮೊದಲಾದವರೂ ಸಂತರ್ದನಾದಯಃ-ಸಂತರ್ದನನೇ ಮೊದಲಾದವರೂ, ಯೇ ಚ-ಯಾರಾರಿದ್ದರೋ ಅವರೆಲ್ಲರೂ ॥೪॥ ರಾಜೇಂದ್ರ-ರಾಜಶ್ರೇಷ್ಠನಾದ ಪರೀಕ್ಷಿತನೇ, ಮಹಾಯಜ್ಞೇ-ದೊಡ್ಡ ಯಾಗದಲ್ಲಿ, ನಾನಾಕರ್ಮಸು-ಹಲವು ಕೆಲಸಗಳಲ್ಲಿ, ನಿರೂಪಿತಾಃ-ಅವರೆಲ್ಲರೂ ಆಜ್ಞಾಪಿಸಲ್ಪಟ್ಟವರಾಗಿ, ರಾಜ್ಞಃ ಪ್ರಿಯಚಿಕೀರ್ಷವಃ-ಯುಧಿಷ್ಠಿರಂಗೆ ಸಂತೋಷವನ್ನು ಮಾಡಲೆಳಸಿದವರಾಗಿ ಪ್ರವರ್ತಂತೇ ಸ್ಮ-ಇರುತಿದ್ದವಪ್ಟು ॥೫॥ ಋತ್ವಿಕ್ಸದಸ್ಯಬಹುವಿತ್ಸು-ಯಾಜಕರೂ ಸಭೆಯಲ್ಲಿ ಕುಳಿತವರೂ ಬಹಳ ತಿಳಿದವರೂ, ಸುಹೃತ್ತಮೇಷು-ಅಲಂಕಾರಾದಿಗಳಿಂದಲೂ ಸಮ್ಮಾನ ಧನಗಳಿಂದಲೂ, ಸ್ವಿಷ್ಟೇಷು ಸತ್ಸು-ಪೂಜಿಸಲ್ಪಟ್ಟವರಾಗುತಲೂ, ತತಃ-ಆ ಮೇಲೆ, ಚೈದ್ಯೇ ಚ-ಶಿಶುಪಾಲನು, ಸಾತ್ವತಪತೇಃ-ಯದುನಾಥನಾದ ಕೃಷ್ಣನ, ಚರಣಂ-ಪಾದವನ್ನು, ಪ್ರವಿಷ್ಟೇ ಸತಿ-ಹೊಕ್ಕವನಾಗುತಲೂ, ತತಃ-ಆ ಬಳಿಕ, ದ್ಯುನದ್ಯಾಂ-ಗಂಗೆಯಲ್ಲಿ, ಅವಭೃಥಸ್ನಪನಂ-ಯಜ್ಞಾತೀರ್ಥಸ್ನಾನವನ್ನು, ಚಕ್ರುಃ-ಮಾಡಿದರು ॥೬॥ ಅವಭೃಥೋತ್ಸವೇ-ಅವಭೃಥವೆಂಬ ಮಂಗಳಸ್ನಾನದ ಹಬ್ಬದಲ್ಲಿ, ಮೃದಂಗಶಂಖಪಣವಾಃ-ಮದ್ದಳೆ ಸಂಕು ಡೋಲೂ, ತೂರ್ಯಾಶ್ಚ-ತಮಟೆಗಳೂ, ಆನಕಗೋಮುಖಾಃ-ಬರತಮಟೆಗಳು, ಚರ್ಮವಾದ್ಯಗಳೂ, ಶೃಂಗವಾದ್ಯಗಳೂ ಊದುವವಾದ್ಯಗಳೂ, ವಿಚಿತ್ರಾಣಿ-ಆಶ್ಚರ್ಯಕರಗಳಾದ, ವಾದಿತ್ರಾಣಿ-ಬಾರಿಸಲ್ಪಡತಕ್ಕ ವಾದ್ಯಗಳೂ, ನೇದುಃ-ಮೊಳಗಿದವು ॥೭॥ ನರ್ತಕ್ಯಃ-ಕುಣಿಯುತಕ್ಕ ಹೆಂಗಸರು, ಹೃಷ್ಟಾಃ-ಸಂತುಷ್ಟೆಯರಾಗಿ ನನೃತುಃ-ಕುಣಿದರು. ಗಾಯಕಾಃ-ಹಾಡುವವರು, ಯೂಥಶಃ-ಗುಂಪುಗಳಾಗಿ, ಜಗುಃ-ಹಾಡಿದ

---

ಬಂದಿರುವ ಮಹಾತ್ಮರಿಗೆ ಗಂಧಲೇಪನಾದಿಗಳಂ ಮಾಡುವುದರಲ್ಲಿಯೂ ಶ್ರೀಕೃಷ್ಣನು ಅವರಿಗೆ ಪಾದಪ್ರಕ್ಷಾಳನಂಗೆಯ್ವುದರಲ್ಲಿಯೂ ದ್ರುಪದರಾಯನ ಮಗನು ಭಕ್ಷ್ಯಭೋಜ್ಯಾದಿಗಳಂ ಬಡಿಸುವುದರಲ್ಲಿಯೂ, ಕರ್ಣನು ಮಹಾತ್ಮರಿಗೆ ಇಷ್ಟಾರ್ಥಂಗಳಂ ದಾನಂಗೆಯ್ವುದರಲ್ಲಿಯೂ, ಅಧಿಕೃತರಾದರು ॥೩॥ ಮತ್ತು ಯುಯುಧಾನನು ವಿಕರ್ಣನು ಹಾರ್ದಿಕ್ಯನು ವಿದುರನು ಮೊದಲಾದವರೂ ಭೂರಿಶ್ರವಾದಿಗಳೂ ಬಾಹ್ಲೀಕದೇಶಾಧಿಪತಿಯ ಪುತ್ರರೂ ಸಂತರ್ದನಾದಿಗಳೂ ಕೂಡ ॥೪॥ ಧರ್ಮರಾಯನ ಆ ಮಹಾಯಾಗದಲ್ಲಿ ಆಜ್ಞಾಪಿಸಲ್ಪಟ್ಟವರಾಗಿ ಅರಸಿಗೆ ಪ್ರಿಯವನ್ನಾಚರಿಸಲಿಚ್ಛೆಯಿಂ ನಿರಂತರವೂ ನಾನಾಪ್ರಕಾರಂಗಳಾದ ಕೆಲಸಂಗಳಲ್ಲಿ ಪ್ರವರ್ತಿಸಿದರು ॥೫॥ ಆಗ ಧರ್ಮರಾಯನಿಂದ ಋತ್ವಿಜರು ಸಭೆಯಲ್ಲಿರುವ ಜನರು ಸರ್ವಜ್ಞರಾದ ಮುನಿಗಳು ಕೂಡ ಪ್ರಿಯವಚನಂಗಳಿಂ ಭೂಷಣಾದಿಗಳಿಂ ದಕ್ಷಿಣೆಗಳಿಂದಲೂ ಕೂಡ ಚೆನ್ನಾಗಿ ಪೂಜಿಸಲ್ಪಟ್ಟವರಾಗುತ್ತಿರಲು ಶಿಶುಪಾಲನು ಶ್ರೀಕೃಷ್ಣನ ಚರಣದಲ್ಲಿ ಐಕ್ಯವಾದ ಬಳಿಕ ಗಂಗಾನದಿಯ ಜಲದಲ್ಲಿ ಧರ್ಮರಾಯನು ಮೊದಲಾದವರು ಅವಭೃಥಸ್ನಾನಂಗೆಯ್ದರು ॥೬॥ ಅದೆಂತೆನೆ ಆ ಮಹೋತ್ಸವದಲ್ಲಿ ಮೃದಂಗ ಶಂಖ ಪಣವ ಭೇರಿ ಆನಕ ಗೋಮುಖಂಗಳು ಮೊದಲಾದ ವಿಚಿತ್ರವಾದ್ಯಂಗಳು ಮೊಳಗಿದವು ॥೭॥ ಮತ್ತು ನರ್ತಕಿಯರು ಸಂತೋಷದಿಂ ನರ್ತನಂಗೆಯ್ದರು. ಗಾಯಕರು ಗುಂಪುಗುಂಪಾಗಿ ನಿಂತು ಗಾನಂಗೆಯ್ದರು. ಅವರ ವೀಣಾಗಾನ ವೇಣುಗಾನಂಗಳ ಧ್ವನಿಯೂ ತಾಳಧ್ವನಿಯೂ ಸಹ ಸ್ವರ್ಗವನ್ನೆ

ನರ್ತಕೋನನೃತುರ್ಹೃಷ್ಟಾ ಗಾಯಕಾಯೂಥಶೋಜಗುಃ । ವೀಣಾವೇಣುತಲೋನ್ನಾದಸ್ತೇಷಾಂಸದಿವಮಸ್ಪೃಶತ್॥೧೦॥ಚಿತ್ರಧ್ವಜಪತಾಕಾಗ್ರೈರಿಭೇಂದ್ರಸ್ಯಂದನಾರ್ವಭಿಃ । ಸ್ವಲಂಕೃತೈರ್ಭಟೈರ್ಭೂಪಾನಿರ್ಯಯೂರುಕ್ಮಮಾಲಿನಃ ॥೧೧॥ ಯದುಸೃಂಜಯಕಾಂಭೋಜಕುರುಕೇಕಯಕೋಸಲಾಃ । ಕಂಪಯಂತೋಭುವಂಸೈನ್ಯೈರ್ಯಜಮಾನಪುರಸ್ಸರಾಃ ॥೧೨॥ ಸದಸ್ಯರ್ತ್ವಿಗ್ದ್ವಿಜಶ್ರೇಷ್ಠಾಬ್ರಹ್ಮಘೋಷೇಣಭೂಯಸಾ । ದೇವರ್ಷಿಪಿತೃಗಂಧರ್ವಾಸ್ತುಷ್ಟುವುಃಪುಷ್ಪವರ್ಷಿಣಃ ॥೧೩॥ ಸ್ವಲಂಕೃತಾನರಾನಾರ್ಯೋಗಂಧಸ್ರಗ್ಭೂಷಣಾಂಬರೈಃ । ವಿಲಿಂಪತ್ಯೋಭಿಷಿಂಚಂತ್ಯೋವಿಜಹ್ರುರ್ವಿವಿಧೈರಸೈಃ॥೧೪॥ತೈಲಗೋರಸಗಂಧೋದಹರಿದ್ರಾಸಾಂದ್ರಕುಂಕುಮೈಃ । ಪುಂಭಿರ್ಲಿಪ್ತಾಃಪ್ರಲಿಂಪಂತ್ಯೋವಿಜಹ್ರುರ್ವಾರ

---

ರು. ತೇಷಾಂ-ಅವರ್ಗ್ಗಳ, ಸಃ-ಅಂಥಾ, ವೀಣಾವೇಣುತಲೋನ್ನಾದಃ-ವೀಣೆಕೊಳಲು ಚಪ್ಪಾಳೆಗಳ ದೊಡ್ಡಶಬ್ದವು, ದಿವಂ-ಅಂತರಿಕ್ಷವನ್ನು, ಅಸ್ಪೃಶತ್-ಮುಟ್ಟಿತು ॥೧೦॥ ಚಿತ್ರಧ್ವಜಪತಾಕಾಗ್ರೈಃ-ಹಲವುಬಣ್ಣದಿಂದ ಆಶ್ಚರ್ಯಕರವಾದ ಪಳವಿಗೆಗಳ ಮೇಲ್ಕಟ್ಟುಗಳ ತುದಿಗಳುಳ್ಳ, ಇಭೇಂದ್ರಸ್ಯಂದನಾರ್ವಭಿಃ-ಉತ್ತಮವಾದ ಆನೆ ತೇರು ಕುದುರೆಗಳೊಡನೆಯೂ, ಸ್ವಲಂಕೃತೈಃ-ಚನ್ನಾಗಿ ಸಿಂಗರಿಸಲ್ಪಟ್ಟ, ಭಟೈಃ-ಆಳುಗಳೊಡನೆಯೂ, ರುಕ್ಮಮಾಲಿನಃ-ಚಿನ್ನದ ಸರಗಳುಳ್ಳ, ಭೂಪಾಃ-ಅರಸರು, ನಿರ್ಯಯುಃ-ಹೊರಹೊರಟರು ॥೧೧॥ ಯಾದವರೂ, ಸೃಂಜಯರೂ, ಕಾಂಭೋಜರೂ, ಕೌರವರೂ, ಕೇಕಯರೂ, ಕೋಸಲರು,ಎಂಬರನರು ಯಜಮಾನಪುರಸ್ಸರಾಃ-ಮುಂದೆ ನಡೆಯುವ ಯಜಮಾನನಾದ ಧರ್ಮಜನುಳ್ಳವರಾಗಿ, ಸೈನ್ಯೈಃ-ತಮ್ಮದಂಡುಗಳಿಂದ, ಭುವಂ-ನೆಲವನ್ನು, ಕಂಪಯಂತಃ-ನಡುಗಿಸುವರಾಗಿ, ಹೊರಟರು ॥೧೨॥ ಸದಸ್ಯರ್ತ್ವಿಗ್ದ್ವಿಜಶ್ರೇಷ್ಠಾಃ-ಸಭಾಜನಂಗಳೂ ಯಾಜಕರೂ ಬ್ರಾಹ್ಮಣರಲ್ಲಿ ಶ್ರೇಷ್ಠರೂ, ಭೂಯಸಾ-ಬಹಳವಾದ, ಬ್ರಹ್ಮಘೋಷೇಣ-ವೇದಧ್ವನಿಯೊಡನೆ ಹೊರಟರು. ಪುಷ್ಪವರ್ಷಿಣಃ-ಹೂವಿನ ಮಳೆಯಂ ಸುರಿಸುತ್ತಿರುವ, ದೇವರ್ಷಿಪಿತೃಗಂಧರ್ವಾಃ-ದೇವರ್ಕಳೂ ಋಷಿಗನೂ ಪಿತೃಗಳೂ ಗಂಧರ್ವರೆಂಬ ಗಾಯಕರೂ, ತುಷ್ಟುವುಃ-ಸ್ತೋತ್ರಮಾಡಿದರು ॥೧೩॥ ಗಂಧಸ್ರಗ್ಭೂಷಣಾಂಬರೈಃ-ಪರಿಮಳಾಂಗರಾಗ ಪುಷ್ಪಹಾರ ಆಭರಣ ವಸ್ತ್ರಗಳಿಂದ, ಸ್ವಲಂಕೃತಾಃ-ಚನ್ನಾಗಿ ಸಿಂಗರಿಸಲ್ಪಟ್ಟವರಾದ, ನರಾಃ-ಪುರುಷರೂ, ನಾರ್ಯಃ- ಹೆಂಗಳೂ, ವಿವಿಧೈಃರಸೈಃ-ಹಲವುಬಗೆಯ ಸುದ್ರವಗಳಿಂದ, ವಿಲಿಂಪತ್ಯಃ-ಬಳಿದಾಡುವರಾಗಿಯೂ, ಅಭಿಷಿಂಚಂತ್ಯಃ- ಮಿಾಯಿಸುವರಾಗಿಯೂ, ವಿಜಹ್ರುಃ-ವಿನೋದಿಸಿದರು ॥೧೪॥ ಪುಂಭಿಃ-ಪುರುಷರಿಂದ, ತೈಲ-ಎಳ್ಳೆಣ್ಣೆ, ಗೋರಸ-ಹಾಲು ಬೆಣ್ಣೆ ತುಪ್ಪ ಗಂಧೋದ-ಪನ್ನೀರು ಚಂದನೋದಕ, ಹರಿದ್ರಾ-ಅರಸಿನ, ಸಾಂದ್ರ-ಘನವಾದ, ಕುಂಕುಮೈಃ-ಕೇಸರಿಬಿಲ್ಲೆಗಳಿಂದ, ಲಿಪ್ತಾಃ-ಬಳಿಯಲ್ಪಟ್ಟವರಾಗಿಯೂ, ಪ್ರಲಿಂಪಂತ್ಯಃ-ಚನ್ನಾಗಿ ಬಳಿದಾಡುವರಾಗಿಯೂ ಇರುವ, ವಾರಯೋಷಿತಃ-ಸೂಳೆ ಹೆಂಗಳ್ಳು,ವಿಜ

---

ಹ್ರಿದ್ದಿತು ॥೧೦॥ ಆಗ ಧರ್ಮರಾಯಮೊದಲಾದವರು ವಿಚಿತ್ರಧ್ವಜಪತಾಕಂಗಳುಳ್ಳ ಗಜಶ್ರೇಷ್ಠಂಗಳು ರಥಂಗಳು ಅಶ್ವಂಗಳು ಅಲಂಕಾರಯುಕ್ತರಾದ ಭಟರುಸಹ ಇವೆಂಬ ಚತುರಂಗಗಳೊಡನೆ ಯುಕ್ತಂಗಳಾದ ಸೇನೆಗಳೊಡಗೂಡಿ ಸುವರ್ಣಮಯಂಗಳಾದ ಹಾರಂಗಳುಳ್ಳವರಾಗಿ ಅವಭೃಥಸ್ನಾನಕ್ಕೋಸುಗ ಯಾಗಶಾಲೆಯಿಂದ ಹೊರಟರು ॥೧೧॥ ಆಗ ಯಾದವರು ಸೃಂಜಯರು ಕಾಂಭೋಜರು ಕೇಕಯರು ಕೋಸಲರು ಭೂಪತಿಗಳುಸಹ ಯಾಗಕರ್ತನಾದ ಧರ್ಮರಾಯನಂ ಮುಂದಿಟ್ಟುಕೊಂಡು ಸೇನೆಗಳಿಂ ಭೂಮಿಯಂ ಕಂಪಿಸುವಂತೆ ಮಾಡುತ ತೆರಳಿದರು ॥೧೨॥ ಮತ್ತು ಸಭಾಜನರು ಋತ್ವಿಜರು ಮಿಕ್ಕ ಬ್ರಾಹ್ಮಣ ಶ್ರೇಷ್ಠರುಸಹ ಅಧಿಕವಾದ ವೇದಘೋಷದೊಡನೆ ತೆರಳಿದರು. ಆಗ ದೇವರ್ಷಿ ಪಿತೃಗಂಧರ್ವರು ಪುಷ್ಪವರ್ಷಂಗಳಂ ಕರೆಯುತ ಧರ್ಮರಾಯನಂ ಸ್ತೋತ್ರಂಗೆಯ್ದರು ॥೧೩॥ ಮತ್ತು ಗಂಧ ಪುಷ್ಪ ಮಾಲ್ಯ ಭೂಷಣ ದಿವ್ಯವಸ್ತ್ರಂಗಳಿಂ ಅಲಂಕರಿಸಲ್ಪಟ್ಟವರಾಗಿ ಪುರುಷರು ಸ್ತ್ರೀಯರುಗಳುಸಹ ಪರಸ್ಪರವಾಗಿ ಗಂಧಾದಿಲೇಪನಂಗೆಯ್ವುತ್ತ ಜಲಂಗಳಿಂ ಪರಸ್ಪರವಾಗಿ ಅಭಿಷೇಕಂಗೆಯ್ವುತ್ತಲೂ ನಾನಾವಿಧಂಗಳಾದ ರಸಂಗಳಿಂದ ಕ್ರೀಡಿಸಿದರು ॥೧೪॥ ಆಗ ವೇಶ್ಯಾಸ್ತ್ರೀಯರೂಕೂಡ ತೈಲಕ್ಷೀರ ಗಂಧೋದಕಂಗಳಿಂ ಹರಿದ್ರೆಯಿಂದಲೂ ನಿಬಿಡಂಗಳಾದ ಕುಂಕುಮಂಗಳಿಂದಲೂ ತಾವುಪುರುಷರಿಂ

ಯೋಷಿತಃ ॥೧೫॥ ಗುಪ್ತಾನೃಭಿರ್ನಿರಗಮನ್ನುಪಲಬ್ಧುಮೇತದ್ದೇವ್ಯೋಯಥಾದಿವಿವಿಮಾನವರೈರ್ನೃದೇವ್ಯಃ । ತಾಮಾತುಲೇಯಸಖಿಭಿಃಕಿಲಸಿಚ್ಯಮಾನಾಃಸವ್ರೀಡಹಾಸವಿಕಸದ್ವದನಾವಿರೇಜುಃ ॥೧೬॥ ತಾದೇವರಾನುತಸಖೀನ್ಸಿಷಿಚುರ್ದೃತೀಭಿಃಕ್ಲಿನ್ನಾಂಬರಾವಿವೃತಗಾತ್ರಕುಚೋರುಮಧ್ಯಾಃ । ಔತ್ಸುಕ್ಯಮುಕ್ತಕಬರಚ್ಯವಮಾನಮಾಲ್ಯಾಃಕ್ಷೋಭಂದಧುರ್ಮಲಧಿಯಾಂರುಚಿರೈರ್ವಿಹಾರೈಃ ॥೧೭॥ ಸಸಮ್ರಾಡ್ರಥಮಾರುಹ್ಯಸದಶ್ವಂರುಕ್ಮಮಾಲಿನಮ್ । ವ್ಯರೋಚತಸ್ವಪತ್ನೀಭಿಃಕ್ರಿಯಾಭಿಃಕ್ರತುರಾಡಿವ ॥೧೮॥ ಪತ್ನೀಸಂಯಾಜಾವಭೃಥ್ಯೈಶ್ಚರಿತ್ವಾತೇತಮೃತ್ವಿಜಃ । ಆಚಾಂತಂಸ್ನಾಪಯಾಂಚಕ್ರುರ್ಗಂಗಾಯಾಂಸ

---

ಹ್ರುಃ-ವಿನೋದಿಸಿದರು ॥೧೫॥ ದಿವಿ-ಅಂತರಿಕ್ಷದಲ್ಲಿ, ಏತತ್-ಈ ಯುತ್ಸವವನ್ನು, ಉಪಲಬ್ಧುಂ-ಪ್ರತ್ಯಕ್ಷವಾಗಿ ಅನುಭವಿಸುವುದಕ್ಕೆ, ವಿಮಾನವರೈಃ-ಶ್ರೇಷ್ಠಂಗಳಾದ ಗಗನರಥಗಳೊಡನೆ, ದೇವ್ಯಃ-ದೇವಸ್ತ್ರೀಯರು, ಯಥಾ-ಹೇಗೆಬಂದರೋ, ತಥಾ-ಹಾಗೆ, ನೃಭಿಃ-ಆಳುಗಳಿಂದ, ಗುಪ್ತಾಃ-ರಕ್ಷಿಸಲ್ಪಟ್ಟ, ನೃದೇವ್ಯಃ-ಅರಸಿಯರು, ನಿರಗಮನ್-ಹೊರಟರು, ತಾಃ-ಆ ರಾಣಿಯರು, ಮಾತುಲೇಯಸಖಿಭಿಃ-ಸೋದರ ಮಾವನಮಕ್ಕಳಿಂದಲೂ, ಗೆಳೆಯರಿಂದಲೂ, ಸಿಚ್ಯಮಾನಾಃ-ನೀರು ಹುಯ್ಯಲ್ಪಡುವವರಾದ್ದರಿಂದ, ಸವ್ರೀಡ-ನಾಚಿಕೆಯಿಂಕೂಡಿದ, ಹಾಸ-ನಗೆಯಿಂದ, ವಿಕಸದ್ವದನಾಃ-ಅರಳಿದ ಮುಖವುಳ್ಳವರಾಗಿ, ವಿರೇಜುಃ-ಬೆಳಗಿದರು ॥೧೬॥ ತಾಃ-ಆ ಸ್ತ್ರೀಯರು, ದೇವರಾನ್-ಮೈದುನರನ್ನೂ, ಉತ-ಮತ್ತು, ಸಖೀನ್-ಗೆಳೆಯರನ್ನೂ, ದೃತೀಭಿಃ-ಜಲಯಂತ್ರಗಳಿಂದ, ಸಿಷಿಚುಃ-ತೋಯಿಸಿದರು. ಕ್ಲಿನ್ನಾಂಬರಾಃ-ಒದ್ದೆಯರಿವೆಯುಳ್ಳವರಾದ್ದರಿಂದ, ವಿವೃತಗಾತ್ರಕುಚೋರುಮಧ್ಯಾಃ-ಸ್ಪಷ್ಟವಾಗಿ ಕಾಣಿಸುತ್ತಿರುವ ಮೈಮೊಲೆ ತೊಡೆ ಸೊಂಟಗಳುಳ್ಳವರೂ, ಔತ್ಸುಕ್ಯ- ಉಲ್ಲಾಸದಿಂದ, ಮುಕ್ತ-ಜಗುಳಿದ, ಕಬರ-ತುರುಬುಗಳಿಂದ, ಚ್ಯವಮಾನ-ಜಾರುತ್ತಿರುವ, ಮಾಲ್ಯಾಃ-ಪುಷ್ಪಸರಗಳುಳ್ಳವರೂ, ಆದ್ದರಿಂದ, ರುಚಿರೈಃ- ಮನೋಹರಂಗಳಾದ, ವಿಹಾರೈಃ-ವಿಲಾಸಕ್ರೀಡೆಗಳಿಂದ, ಮಲಧಿಯಾಂ-ಕಶ್ಮಲಬುದ್ಧಿಗಳಾದ ಕಾಮಿಗಳಿಗೆ, ಕ್ಷೋಭಂ-ಮನ್ಮಥಸಂತಾಪವನ್ನು, ದಧುಃ-ಧರಿಸಗೊಳಿಸಿದರು ॥೧೭॥ ಸಸಮ್ರಾಟ್-ಆ ಯುಧಿಷ್ಠಿರ ಚಕ್ರವರ್ತಿಯು, ರುಕ್ಮಮಾಲಿನಂ-ಚಿನ್ನದಸರಗಳುಳ್ಳ, ಸದಶ್ವಂ-ಮೇಲಾದ ಕುದುರೆಗಳುಳ್ಳ, ರಥಂ-ತೇರನ್ನು, ಆರುಹ್ಯ-ಏರಿ, ಕ್ರತುರಾಟ್-ರಾಜಸೂಯ ಯಾಗವು, ಕ್ರಿಯಾಭಿರಿವ-ಅಂಗಕರ್ಮಗಳೊಡಗೂಡಿದಂತೆ, ಸ್ವಪತ್ನೀಭಿಃ-ತನ್ನ ಹೆಂಡಿರೊಡನೆ, ವ್ಯರೋಚತ-ವಿಶೇಷವಾಗಿ ಪ್ರಕಾಶಿಸಿದನು ॥೧೮॥ ಋತ್ವಿಜಃ- ಯಾಜಕರು, ಪತ್ನೀಸಂಯಾಜಾವಭೃಥ್ಯೈಃ-ಪತ್ನಿಸಂಯಾಜವು, ಅವಭೃಥವು ಎಂಬ ಅಂಗಕರ್ಮಗಳಿಗೆ ಸಂಬಂಧಿಸಿದ ಕ್ರಿಯೆಗಳಿಂ

---

ಲೇಪಿಸಲ್ಪಟ್ಟವರಾಗಿ ಪುನಃ ತೈಲಾದಿಗಳಿಂ ಪುರುಷರಿಗೆ ಲೇಪನಂಗೆಯ್ವುತ ಕ್ರೀಡಿಸಿದರು ॥೧೫॥ ಯಾವರೀತಿಯಿಂ ದೇವತಾಸ್ತ್ರೀಯರು ಅವಭೃಥಸ್ನಾನಮಹೋತ್ಸವಮಂ ನೋಡಲೋಸುಗ ಅಂತರಿಕ್ಷದಲ್ಲಿ ಉತ್ತಮ ವಿಮಾನಂಗಳಿಂ ತೆರಳಿಬಂದರೋ ಅದೇರೀತಿಯಲ್ಲಿ ರಾಜಪತ್ನಿಯರೂ ಪುರುಷರಿಂ ರಕ್ಷಿಸಲ್ಪಟ್ಟವರಾಗಿ ವಾಹನಗಳಿಂ ತೆರಳಿ ಬಂದರು. ಮತ್ತು ರಾಜಪತ್ನಿಯರು ಸೋದರಮಾವಂದಿರ ಮಕ್ಕಳಿಂ ಸರ್ವರಿಂ ಸುತ್ತಲೂ ಜಲಾದಿಗಳಿಂ ಅಭಿಷೇಕಂಗೆಯಲ್ಪಡುತ್ತ ಲಜ್ಜೆಯೊಡನೆ ಕೂಡಿದನಗೆಯಿಂದ ವಿಕಾಸಯುಕ್ತಂಗಳಾದ ಮುಖಂಗಳುಳ್ಳವರಾಗಿ ಪ್ರಕಾಶಿಸಿದರು ॥೧೬॥ ಮತ್ತು ಆಗ ನೆನೆದಿರುವ ವಸ್ತ್ರಂಗಳುಳ್ಳವರಾದ ಕಾರಣದಿಂ ವ್ಯಕ್ತವಾಗಿ ಕಾಣಲ್ಪಡುತ್ತಲಿರುವ ಶರೀರದ ಕುಚಂಗಳೂ ತೊಡೆಗಳೂ ಮಧ್ಯಪ್ರದೇಶವೂಸಹ ಉಳ್ಳವರಾಗಿ ಆರಾಜಪತ್ನಿಯರು ಉತ್ಸಾಹದಿಂ ಸಡಲಿದ ತುರುಬುಗಳಿಂ ಜಾರಿಬೀಳುತಲಿರುವ ಪುಷ್ಪಮಾಲೆಗಳುಳ್ಳವರಾಗಿ ಭಾವಮೈದಂದಿರಂ ಸಖಿಯರಂಸಹ ಚರ್ಮಮಯಂಗಳಾದ ಜಲವಂ ಎರಚಲು ಯೋಗ್ಯಂಗಳಾದ ಯಂತ್ರವಿಶೇಷಂಗಳಿಂ ಅಭಿಷೇಕಂಗೆಯ್ವುತ ಮನೋಹರಂಗಳಾದ ತಮ್ಮಕ್ರೀಡೆಗಳಿಂ ಕಾಮುಕರಿಗೆ ಚಿತ್ತವಿಕಾರವನುಂಟುಮಾಡಿದರು ॥೧೭॥ ಆಗ ಧರ್ಮರಾಯನು ಉತ್ತಮಾಶ್ವಂಗಳೊಡನೆಯುಕ್ತನಾಗಿ ಸುವರ್ಣಮಯಂಗಳಾದ ಹಾರಂಗಳಿಂ ಅಲಂಕೃತನಾಗಿಯೂ ರಥವನ್ನೇರಿ ಪತ್ನಿಯರೊಡಗೂಡಿದವನಾಗಿ ರಾಜಸೂಯಯಾಗವೇ ಅಂಗಭೂತಂಗಳಾದ ಕರ್ಮಂಗಳೊಡನೆಕೂಡಿ ಶರೀರಯುಕ್ತವಾಗಿ ಪ್ರಕಾಶಿಸಿದಂತೆ ಪ್ರಕಾಶಿಸಿದನು ॥೧೮॥ ಅನಂತರದಲ್ಲಿ ಋತ್ವಿಜರು ಪತ್ನೀಸಂಯಾಜಮೆಂಬ

ಹಕೃಷ್ಣಯಾ ‖೧೯‖ ದೇವದುಂದುಭಯೋನೇದುರ್ನರದುಂದುಭಿಭಿಸ್ಸಹ । ಮುಮುಚುಃಪುಷ್ಪವರ್ಷಾಣಿದೇವರ್ಷಿಪಿತೃಮಾನವಾಃ ‖೨೦‖ ಸಸ್ನುಸ್ತತ್ರತತಸ್ಸರ್ವೇವರ್ಣಾಶ್ರಮಯುತಾಜನಾಃ । ಮಹಾಪಾತಕ್ಯಪಿಯತಸ್ಸದ್ಯೋಮುಚ್ಯೇತಕಿಲ್ಬಿಷಾತ್ ‖೨೧‖ ಅಥರಾಜಾಹತೇಕ್ಷೌಮೇಪರಿಧಾಯಸ್ವಲಂಕೃತಃ ।ಋತ್ವಿಕ್ಸದಸ್ಯವಿಪ್ರಾದೀನಾನರ್ಚಾಭರಣಾಂಬರೈಃ‖೨೨‖ಬಂಧುಜ್ಞಾತಿನ್ನೃಪಾನ್ಮಿತ್ರಸುಹೃದೋನ್ಯಾಂಶ್ಚಸರ್ವಶಃ । ಅಭೀಕ್ಷ್ಣಂಪೂಜಯಾಮಾಸನಾರಾಯಣಪರೋನೃಪಃ ‖೨೩‖ ಸರ್ವೇಜನಾಸ್ಸುರರುಚೋಮಣಿಕುಂಡಲಸ್ರಗುಷ್ಣೀಷಕಂಚುಕದುಕೂಲಮಹಾರ್ಘ್ಯಹಾರಾಃ । ನಾರ್ಯಶ್ಚಕುಂಡಲಯುಗಾಲ

---

ದ, ಚರಿತ್ವಾ-ಅನುಷ್ಠಾನವಂ ಗೈದು ತೇ-ಅವರು, ಆಚಾಂತಂ-ಶುದ್ಧಾಚಮನವಂ ಮಾಡಿದ, ತಂ ಆ ಧರ್ಮಜನನ್ನು, ಕೃಷ್ಣಯಾಸಹ ದ್ರೌಪತಿಯೊಡನೆ, ಗಂಗಾಯಾಂ-ಭಾಗೀರಥೀನದಿಯಲ್ಲಿ, ಸ್ನಾಪಯಾಂಚಕ್ರುಃ-ಸ್ನಾನಮಾಡಿಸಿದರು ‖೧೯‖ ದೇವದುಂದುಭಯಃ-ದೇವರ್ಕಳಭೇರೀವಾದ್ಯಂಗಳು, ನರದುಂದುಭಿಭಿಸ್ಸಹ-ಮನುಷ್ಯರ ಬರಡೋಲುಗಳೊಡನೆ, ನೇದುಃ - ಮೊಳಗಿದವು- ದೇವರ್ಷಿಪಿತೃಮಾನವಾಃ-ದೇವತೆಗಳೂ ಋಷಿಗಳೂ ಪಿತೃಗಳೂ ಮನುಷ್ಯರೂ ಪುಷ್ಪವರ್ಷಾಣಿ-ಹೂಮಳೆಯನ್ನು, ಮುಮುಚುಃ-ಚೆಲ್ಲಿದರು ‖೨೦‖ ಮಹಾಪಾತಕ್ಯಪಿ-ಬ್ರಹ್ಮಹತ್ಯಾದಿ ಮಹಾಪಾಪಂಗಳ ಳ್ಳವನಾದರೂ, ಯತಃ-ಯಾವಅವಭೃಥ ಸ್ನಾನದಿಂದ, ಸದ್ಯಃ-ಆಗಲೇ, ಕಿಲ್ಬಿಷಾತ್-ಪಾಪದ ದೆಸೆಯಿಂದ, ಮುಚ್ಯೇತ-ಬಿಡಲ್ಪಡುವನೋ, ತತ್ರ-ಅಂಥಾ ಅವಭೃಥೋತ್ಸವದಲ್ಲಿ, ವರ್ಣಾಶ್ರಮಯುತಾಃ-ಜಾತಿಧರ್ಮ ಆಶ್ರಮಧರ್ಮಗಳುಳ್ಳ, ಸರ್ವೇಜನಾಃ-ಎಲ್ಲಾಜನಂಗಳೂ, ತತಃ-ಯಜಮಾನಸ್ನಾನವಾದಬಳಿಕ, ತತ್ರ-ಆ ತೀರ್ಥದಲ್ಲಿ, ಸಸ್ನುಃ-ಸ್ನಾನಮಾಡಿದರು ‖೨೧‖ ಅಥ-ಆ ಮೇಲೆ, ರಾಜಾ-ಧರ್ಮರಾಯನು, ಅಹತೇ- ಹರಿಯಲ್ಪಡದೇ ಅಖಂಡವಾದ, ಕ್ಷೌಮೇ-ಉತ್ತಮ ವಸ್ತ್ರಗಳನ್ನು, ಪರಿಧಾಯ-ಉಟ್ಟುಕೊಂಡು, ಸ್ವಲಂಕೃತಃ-ಚೆನ್ನಾಗಿ ಸಿಂಗರಿಸಲ್ಪಟ್ಟವನಾಗಿ, ಋತ್ವಿಕ್ಸದಸ್ಯವಿಪ್ರಾದೀನ್-ಯಾಜಕರು ಸಭಿಕರು ಬ್ರಾಹ್ಮಣರು ಮೊದಲಾದವರನ್ನು, ಆಭರಣಾಂಬರೈಃ-ಭೂಷಣವಸ್ತ್ರಗಳಿಂದ, ಆನರ್ಚ-ಪೂಜಿಸಿದನು ‖೨೨‖ ನಾರಾಯಣಪರಃ-ಕೃಷ್ಣನೇ ಸರ್ವೋತ್ತಮನೆಂದು ತಿಳಿದಿರುವ, ನೃಪಃ-ಧರ್ಮರಾಯನು, ಬಂಧುಜ್ಞಾತಿನ್ನೃಪಾನ್-ನಂಟರೂ ದಾಯಾದಿಗಳೂ ಆದ, ಅರಸುಗಳನ್ನೂ, ಮಿತ್ರಸುಹೃದಃ-ಗೆಳೆಯರನ್ನೂ ಸತ್ಪುರುಷರನ್ನೂ, ಅನ್ಯಾಂಶ್ಚ-ಇತರರನ್ನೂ, ಸರ್ವಶಃ-ಎಲ್ಲಾಬಗೆಯಾಗಿಯೂ, ಅಭೀಕ್ಷ್ಣಂ-ಅಧಿಕವಾಗಿ, ಪೂಜಯಾಮಾಸ-ಉಪಚರಿಸಿದನು ‖೨೩‖ ಮಣಿ ... ಹಾರಾಃ-ಮಣಿಕುಂಡಲ-ರನ್ನದ ಕಿವಿದೊಡವುಗಳು, ಸ್ರಕ್-ಪುಷ್ಪಮಾಲೆಗಳು, ಉಷ್ಣೀಷ-ಪಾಗು, ಕಂಚುಕ-ಅಂಗಿ, ದುಕೂಲ-ಉತ್ತಮವಸ್ತ್ರ, ಮಹಾರ್ಘ್ಯಹಾರಾಃ-ಹೆಚ್ಚುಬೆಲೆಯುಳ್ಳ ಕಂಠಸರಗಳೂ ಉಳ್ಳವರಾದ್ದರಿಂದ, ಸುರರುಚಃ-ದೇವರ್ಕಳ ಕಾಂತಿಯುಳ್ಳ, ಸರ್ವೇಜನಾಃ-ಸಕಲಪುರುಷರೂ, ಕುಂಡಲ .. ಶ್ರಿಯಃ- ಕುಂಡಲಯುಗ-ತಾಟಕಂಗಳೆರಡರಿಂ

---

ಯಾಗವಿಶೇಷವಂ ಅವಭೃಥಸಂಬಂಧಿಗಳಾದ ಕರ್ಮಂಗಳಂಸಹ ಸಮಗ್ರವಾಗಿ ಅನುಷ್ಠಾನಂಗೆಯ್ದು ಆಚಮನಂಗೆಯ್ದಿರುವ ಧರ್ಮರಾಯನಿಗೆ ದ್ರೌಪದಿಯೊಡನೆ ಗಂಗೆಯಿಂದ ಅವಭೃಥಸ್ನಾನಂ ಗೆಯ್ಸಿದರು ‖೧೯‖ ಆಗ ಮನುಷ್ಯಲೋಕಕ್ಕೆ ಯೋಗ್ಯಂಗಳಾದ ಭೇರಿಗಳೊಡನೆ ದೇವಲೋಕದ ಭೇರಿಗಳೂಕೂಡ ಧ್ವನಿಗೆಯ್ದುವು. ಮತ್ತು ದೇವರ್ಷಿಪಿತೃಗಳೂ ನರರೂ ಪುಷ್ಪವರ್ಷಂಗಳಂ ಕರೆದರು ‖೨೦‖ ಆಮೇಲೆ ಯಾವ ಅವಭೃಥಸ್ನಾನದಲ್ಲಿ ಮಹಾಪಾತಕಯುಕ್ತನಾದ ಪುರುಷನೂಕೂಡ ಆಕ್ಷಣದಲ್ಲಿ ಆಪಾಪದದೆಸೆಯಿಂದ ಮುಕ್ತನಾಗುವನೋ ಅಂತಪ್ಪ ಅವಭೃಥತೀರ್ಥದಲ್ಲಿ ವರ್ಣಾಶ್ರಮನಿಷ್ಠರಾದ ಜನರೆಲ್ಲರೂ ಸ್ನಾನಂಗೆಯ್ದರು ‖೨೧‖ ಆಮೇಲೆ ಧರ್ಮರಾಯನು ನೂತನವಸ್ತ್ರಂಗಳನುಟ್ಟು ಸರ್ವಾಲಂಕಾರ ಯುಕ್ತನಾಗಿ ಭೂಷಣಂಗಳಿಂದಲೂ ವಸ್ತ್ರಂಗಳಿಂದಲೂ ಋತ್ವಿಜರಂ ಸಭಾಜನರಂ ಮಿಕ್ಕ ಬ್ರಾಹ್ಮಣಾದಿಗಳಂಸಹ ಪೂಜಿಸಿದರು ‖೨೨‖ ಶ್ರೀನಾರಾಯಣನಲ್ಲಿ ಪರಮಭಕ್ತಿಯುಳ್ಳ ಆ ಧರ್ಮರಾಯನು ಅವಭೃಥೋತ್ಸವದಲ್ಲಿ ಬಂಧುಗಳೂ ಜ್ಞಾತಿಗಳೂ ಶತ್ರುಗಳೂ ಮಿತ್ರರೂ ಮಿಕ್ಕಸಮಸ್ತಜನರೂ ಇವರೆಲ್ಲರನ್ನೂ ಅತಿಶಯದಿಂ ಪೂಜಿಸಿದನು‖೨೩‖ ಆಗ ಸರ್ವರೂ ದೇವತೆಗಳಂತೆ ಕಾಂತಿಯುಳ್ಳವರಾಗಿ ರತ್ನಮಯಂಗಳಾದ ಕುಂಡಲಂಗಳು ಮಾಲೆಗಳು ಪಾಗುಗಳು ಅಂಗಿಗಳುಸೂಕ್ಷ್ಮವಸ್ತ್ರಂಗಳು ಅಮೂಲ್ಯಂಗಳಾದ

ಕಬೃಂದಜುಷ್ಟವಕ್ತ್ರಶ್ರಿಯಃ ಕನಕಮೇಖಲಯಾ ವಿರೇಜುಃ ‖೧೮‖ ಅಥರ್ತ್ವಿಜೋ ಮಹಾತ್ಮಾನಸ್ಸದಸ್ಯಾ ಬ್ರಹ್ಮವಾದಿನಃ । ವಿಪ್ರಕ್ಷತ್ರಿಯವಿಟ್ಛೂದ್ರಾ ರಾಜಾನೋ ಯೇ ಸಮಾಗತಾಃ ‖೧೯‖ ದೇವರ್ಷಿಪಿತೃಭೂತಾನಿ ಲೋಕಪಾಲಾಸ್ಸಹಾನುಗಾಃ । ಪೂಜಿತಾಸ್ತಮನುಜ್ಞಾಪ್ಯ ಸ್ವಧಾಮಾನಿ ಯಯುರ್ಮುದಾ ‖೨೦‖ ಹರಿದಾಸಸ್ಯ ರಾಜರ್ಷೇ ರಾಜಸೂಯಮಹೋದಯಮ್ । ನೈವಾತೃಪ್ಯನ್ಪ್ರಶಂಸಂತಃ ಪಿಬನ್ಮರ್ತ್ಯೋಽಮೃತಂ ಯಥಾ ‖೨೧‖ ತತೋ ಯುಧಿಷ್ಠಿರೋ ರಾಜಾ ಸುಹೃತ್ಸಂಬಂಧಿಬಾಂಧವಾನ್ । ಪ್ರೇಮ್ಣಾ ನಿವಾರಯಾಮಾಸ ಕೃಷ್ಣಂ ಚ ತ್ಯಾಗಕಾತರಃ ‖೨೨‖ ಭಗವಾನಪಿ ತತ್ರಾಂಗ ನ್ಯವಾತ್ಸೀತ್ತತ್ಪ್ರಿಯಂಕರಃ । ಪ್ರ

---

ದಲೂ, ಅಲಕಬೃಂದ-ಕೂದಲಗುಂಪಿನಿಂದಲೂ, ಜುಷ್ಟ-ಸೇವಿಸಲ್ಪಟ್ಟ, ವಕ್ತ್ರಶ್ರಿಯಃ-ಮುಖಕಾಂತಿಯುಳ್ಳವರೂ, ಕನಕಮೇಖಲಯಾ-ಚಿನ್ನದ ಡಾಬಿನೊಡಗೂಡಿದವರೂ, ಆದನಾರ್ಯಶ್ಚ ಹೆಂಗಳೂ, ವಿರೇಜುಃ-ವಿಶೇಷವಾಗಿ ಹೊಳೆದರು ‖೧೮‖ ಅಥ-ಆ ಬಳಿಕ, ಋತ್ವಿಜಃ-ಯಾಜಕರಾದ, ಮಹಾತ್ಮಾನಃ-ಮಹಾನುಭಾವರೂ, ಬ್ರಹ್ಮವಾದಿನಃ-ವೇದವನ್ನು ಪಠಿಸುತ್ತಿರುವ, ಸದಸ್ಯಾಃ-ಸಭಾಪತಿಗಳೂ, ವಿಪ್ರಕ್ಷತ್ರಿಯವಿಟ್ಛೂದ್ರಾಃ-ಹಾರುವರೂ, ಅರಸರೂ ಹರದರೂ ಶೂದ್ರರೂ, ರಾಜಾನಃ-ಆಳುವವರೂ, ಯೇ ಸಮಾಗತಾಃ-ಯಾರು ಬಂದಿದ್ದರೋ ಅವರೂ ‖೧೯‖ ದೇವರ್ಷಿಪಿತೃಭೂತಾನಿ-ದೇವರ್ಕಳೂ, ಮುನಿಗಳೂ ಪಿತೃದೇವತೆಗಳೂ ಪ್ರಾಣಿಗಳೂ, ಸಹಾನುಗಾಃ-ಸಂಗಡಬಂದವರೊಡಗೂಡಿ, ಲೋಕಪಾಲಾಃ-ದಿಕ್ಪತಿಗಳೂ ಪೂಜಿತಾಃ-ಉಪಚರಿಸಲ್ಪಟ್ಟವರಾಗಿ, ಮುದಾ-ಸಂತೋಷಮೊಡನೆ, ತಂ-ಆ ಧರ್ಮರಾಯನನ್ನು, ಅನುಜ್ಞಾಪ್ಯ-ಒಪ್ಪಿಸಿ ಅಪ್ಪಣೆಪಡೆದು, ಸ್ವಧಾಮಾನಿ-ತಮ್ಮ ಸ್ಥಲಗಳನ್ನು, ಕುರಿತು, ಯಯುಃ-ತೆರಳಿದರು ‖೨೦‖ ಹರಿದಾಸಸ್ಯ-ಕೃಷ್ಣಂಗೆ ಸೇವಕನಾದ, ರಾಜರ್ಷೇಃ- ರಾಜನೂ ಋಷಿಯೂ ಆದ ಯುಧಿಷ್ಠಿರನ, ರಾಜಸೂಯಮಹೋದಯಂ-ರಾಜಸೂಯ ಯಾಗವೆಂಬ ಮಹಾಪುಣ್ಯಲಾಭವನ್ನು, ಪ್ರಶಂಸಂತಃ-ಕೊಂಡಾಡುತ್ತಲಿರುವರು, ಅಮೃತಂ ಪಿಬನ್ ಮರ್ತ್ಯೋ ಯಥಾ-ಅಮೃತವಂ ಕುಡಿದ ಮನುಷ್ಯನಂತೆ, ನೈವಾತೃಪ್ಯನ್-ಸಾಕೆಂಬ ತೃಪ್ತಿಗೊಳ್ಳಲೇ ಇಲ್ಲವು ‖೨೧‖ ತತಃ-ಆ ವೇಳೆ, ರಾಜಾ ಯುಧಿಷ್ಠಿರಃ-ಧೊರೆಯಾದ ಧರ್ಮಜನು, ತ್ಯಾಗಕಾತರಃ-ಬಿಟ್ಟಿರುವುದಕ್ಕೆ ಭಯಚಂಚಲನಾದ್ದರಿಂದ, ಸುಹೃತ್ಸಂಬಂಧಿಬಾಂಧವಾನ್-ಮಿತ್ರರನ್ನೂ ದೇಹಸಂಬಂಧಿಗಳನ್ನೂ ಕುಲದನಂಟರನ್ನೂ ಕೃಷ್ಣಂಚ-ವಾಸುದೇವನನ್ನೂ, ಪ್ರೇಮ್ಣಾ-ಸ್ನೇಹದಿಂದ, ನಿವಾರಯಾಮಾಸ-ಇರಿಸಿಕೊಂಡನು ‖೨೨‖ ಭಗವಾನಪಿ-ಶ್ರೀಕೃಷ್ಣನೂ ಕೂಡ, ಯದುವೀರಾಂಶ್ಚ-ಯಾದವರಲ್ಲಿ ಶೂರರಾದವರನ್ನೂ ಕೂಡ, ಸಾಂಬಾದೀಂಶ್ಚ-ಸಾಂಬನೇ ಮೊದಲಾದ ತನ್ನ ಪುತ್ರರನ್ನೂ, ಕುಶಸ್ಥಲೀಂ-ದ್ವಾರಕಾನಗರವನ್ನು ಕುರಿತು, ಪ್ರಸ್ಥಾಪ್ಯ-ಪ್ರಯಾಣಮಾಡಿಸಿ, ತತ್ರ-ಆ ಇಂದ್ರಪ್ರಸ್ಥಪುರ

---

ಹಾರಂಗಳು ಸಹ ಉಳ್ಳವರಾಗಿ ಪ್ರಕಾಶಿಸಿದರು. ಮತ್ತಂ ಸ್ತ್ರೀಯರು ಉತ್ಸವದಲ್ಲಿ ವಾಲೆಜೋಡುಗಳಿಂ ಮುಂಗುರುಳುಂಗಳ ಸಮೂಹದಿಂ ಶೋಭಿತವಾದ ಮುಖಕಾಂತಿಯಿಂ ಸುವರ್ಣಮಯವಾದ ಒಡ್ಡ್ಯಾಣದಿಂದಲೂ ಪ್ರಕಾಶಿಸಿದರು ‖೧೮‖ ಅನಂತರದಲ್ಲಿ ವೇದಾಧ್ಯಯನ ನಿಪುಣರಾದ ಜ್ಞಾನಿಗಳಾಗಿಯೂ ಇರುವ ಋತ್ವಿಜರು, ಸಭಾಜನರು, ಮಿಕ್ಕ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರು, ಮತ್ತು ದೇಶಾಂತರಗಳಿಂದ ಬಂದಿರುವ ಅರಸುಗಳು ‖೧೯‖ ದೇವರ್ಷಿ ಪಿತೃಭೂತಾದಿ ಲೋಕಪಾಲಕರೂ ಅವರವರ ಪರಿಜನರು ಸಹ ಧರ್ಮರಾಯನಿಂ ಚನ್ನಾಗಿ ಪೂಜಿಸಲ್ಪಟ್ಟವರಾಗಿ ಅಪ್ಪಣೆಯಂ ತೆಗದುಕೊಂಡು ತಮ್ಮ ತಮ್ಮ ಆಸ್ಥಾನಂಗಳ ನೈದಿದರು ‖೨೦‖ ಅಮೃತವಂ ಪಾನಂಗೆಯ್ಯುತಲಿರುವವನಾಗಿ ಪುರುಷನು ಎಂತು ತೃಪ್ತಿಯನೆಯ್ದುವುದಿಲ್ಲವೋ ಅಂತು ಸಮಸ್ತಜನರೂ ಶ್ರೀಹರಿಭಕ್ತನಾದ ಶ್ರೇಷ್ಠನಾದ ಧರ್ಮರಾಜನ ರಾಜಸೂಯ ಮಹೋತ್ಸವಮಂ ಶ್ಲಾಘಿಸುತಲಿರುವವರಾಗಿ ತೃಪ್ತಿಯನೆಯ್ದಲಿಲ್ಲ ‖೨೧‖ ಅನಂತರದಲ್ಲಿ ಧರ್ಮರಾಯನು ಬಂದಿರುವ ಮಿತ್ರರಂ ಸಂಬಂಧಿಗಳಂ ಜ್ಞಾತಿಗಳಂ ಶ್ರೀ ಕೃಷ್ಣನಂ ಸಹ ಬಿಡಲಾರದೆ ಪ್ರೇಮದಿಂದಾ ಯಿಂದ್ರಪ್ರಸ್ಥಪಟ್ಟಣದಲ್ಲಿಯೇ ಕೆಲವು ದಿನಂಗಳು ಇರಿಸಿ ಕೊಂಡಿದ್ದನು ‖೨೨‖ ಆಗ ಶ್ರೀ ಕೃಷ್ಣನೂ ಕೂಡ ಧರ್ಮರಾಯನಿಗೆ ಪ್ರಿಯವಂ ಮಾಡುವನಾಗಿ ಸಾಂಬ ಮೊದಲಾದ ಯಾದವ ಶ್ರೇಷ್ಠರಂ ದ್ವಾರಕಾಪುರಕ್ಕೆ ಕಳುಹಿಸಿ ತಾನಿಂದ್ರಪ್ರಸ್ಥಪಟ್ಟಣದಲ್ಲಿ ಕೆಲವು ದಿವಸಂಗಳಿದ್ದನು ‖೨೩‖ ಎಲೈ ಅರಸೇ

ಸ್ತ್ಯಾಪ್ಯಯುದುವೀರಾಂಕ್ಷಸಾಂಬಾದೀಂಕ್ಷ ಕುಶಸ್ಥಲೀಮ್ ‖೨೯‖ ಇತ್ಥಂಧರ್ಮಸುತೋರಾಜಾ ಮನೋರ
ಥಮಹಾರ್ಣವಮ್ । ಸುದುಸ್ತರಂಸಮುತ್ತೀರ್ಯಕೃಷ್ಣೇನಾಸೀದ್ಗತಜ್ವರಃ ‖೩೦‖ ಏಕದಾಂತಃಪುರೇತ
ಸ್ಯವೀಕ್ಷ್ಯದುರ್ಯೋಧನಶ್ಶ್ರಿಯಮ್। ಅತಪ್ಯದ್ರಾಜಸೂಯಸ್ಯಮಹತ್ವಂಚಾಚ್ಯುತಾತ್ಮನಃ ‖೩೧‖
ಯಸ್ಮಿನ್ನರೇಂದ್ರದಿತಿಜೇಂದ್ರಸುರೇಂದ್ರಲಕ್ಷ್ಮೀರ್ನಾನಾವಿಭಾಂತಿಕಿಲವಿಶ್ವಸೃಜೋಪಕ್ಲೃಪ್ತಾಃ । ತಾಭಿಃ
ಪತೀನ್ ದ್ರುಪದರಾಜಸುತೋಪತಸ್ಥೇಯಸ್ಯಾಂವಿಷಕ್ತಹೃದಯಃಕುರುರಾಡತಪ್ಯತ್ ‖೩೨‖ ಯಸ್ಮಿಂ
ಸ್ತದಾಯದುಪತೇರ್ಮಹಿಷೀಸಹಸ್ರಂಶ್ರೋಣೀಭರೇಣಶನಕೈಃಕ್ವಣದಂಘ್ರಿಶೋಭಮ್ । ಮಧ್ಯೇಸುಚಾ
ರುಕುಚಕುಂಕುಮಶೋಣಹಾರಂಶ್ರೀಮನ್ಮುಖಂಚಲಕುಂಡಲಕುಂತಲಾಢ್ಯಮ್ ‖೩೩‖ ಸಭಾಯಾಂ

---

ಪೊಳು, ತತ್ಪ್ರಿಯಂಕರಃ-ಆ ಪಾಂಡವರಿಗೆ ಪ್ರೀತಿಯಂಮಾಡುವನಾಗಿ, ಅಬ್ದಂ-ಸಂವತ್ಸರವು, ನ್ಯವಾತ್ಸೀತ್-ಸಿಂತಿದ್ದನು‖
ಇತ್ಥಂ-ಹೀಗೆ, ಧರ್ಮಸುತೋರಾಜಾ-ಧರ್ಮರಾಯನು, ಸುದುಸ್ತರಂ-ಸುಲಭವಾಗಿ ದಾಂಟಲಾಗದ, ಮನೋರಥಮಹಾರ್ಣವಂ-
ಬಯಕೆಯೆಂಬ ಹೆಗ್ಗಡಲನ್ನು, ಕೃಷ್ಣೇನ-ವಾಸುದೇವನೆಂಬ ಸಹಾಯದಿಂದ, ಸಮುತ್ತೀರ್ಯ-ಕಡೆಹಾಯದ್ದು-ಗತಜ್ವರಃ- ನಿ
ಶ್ಚಿಂತನು, ಆಸೀತ್-ಆದನು ‖೩೦‖ ಏಕದಾ-ಒಂದುಕಾಲದಲ್ಲಿ, ದುರ್ಯೋಧನಃ-ಸುಯೋಧನರಾಯನು, ಅಂತಃಪುರೇ-ಅರಮ
ನೆಯೊಳು-ಅಚ್ಯುತಾತ್ಮನಃ-ಕೃಷ್ಣನಲ್ಲಿ ಮನಸ್ಸುಳ್ಳ, ತಸ್ಯ-ಆಧರ್ಮರಾಯನ, ಶ್ರಿಯಂ-ಸಂಪತ್ತನ್ನು, ರಾಜಸೂಯಸ್ಯ-ಯ
ಜ್ಞದ, ಮಹತ್ವಂಚ-ದೊಡ್ಡಸ್ತಿಕೆಯನ್ನೂ, ವೀಕ್ಷ್ಯ-ನೋಡಿ, ಅತಪ್ಯತ್-ಹೊಟ್ಟೆಕಿಚ್ಚುಪಟ್ಟನು ‖೩೧‖ ಯಸ್ಯಾಂ-ಯಾವದ
ರಲ್ಲಿ ವಿಷಕ್ತಹೃದಯಃ-ಸಂಬಂಧಿಸಿದ ಮನಸ್ಸುಳ್ಳವನಾದ, ಕುರುರಾಟ್-ದುರ್ಯೋಧನನು ಅತಪ್ಯತ್-ಸಂತಾಪಗೊಂಡನೋ,
ಸಾದ್ರುಪದರಾಜಸುತಾ-ಆ ದ್ರೌಪದೀದೇವಿಯು, ಯಸ್ಮಿನ್-ಯಾವ ಸಭೆಯಲ್ಲಿ,ವಿಶ್ವಸೃಜಾ-ವಿಶ್ವಕರ್ಮನಿಂದ, ಉಪಕ್ಲೃಪ್ತಾಃ-
ವಿರಚಿಸಲ್ಪಟ್ಟ, ನರೇಂದ್ರದಿತಿಜೇಂದ್ರಸುರೇಂದ್ರಲಕ್ಷ್ಮೀಃ-ಮನುಷ್ಯರಾಕ್ಷಸದೇವರಾಜರ ಸಂಪತ್ತುಗಳು; ನಾನಾ- ಹಲವು
ಬಗೆಯಾಗಿ, ವಿಭಾಂತಿ-ವಿಶೇಷನಾಗಿ ಬೆಳಗುತ್ತಿವೆಯೋ, ತಾಭಿಃಕಿಲ-ಅವುಗಳೊಡನೆಯಲ್ಲವೆ, ಪತೀನ್-ಗಂಡಂದಿರಾದ ಪಾಂ
ಡವರನ್ನು, ಉಪತಸ್ಥೇ-ಸಮೀಪದಲ್ಲಿ ಸೇವಿಸುತ್ತಿದ್ದಳು ‖೩೨‖ ತಥಾ-ಅಗ, ಯಸ್ಮಿನ್-ಯಾವಸಭಾಮಂಟಪದಲ್ಲಿ ಶ್ರೋಣೀಭ
ರೇಣ-ಪೃಷ್ಠಭಾರದ ಭಾರದಿಂದ, ಶನಕೈಃ-ಮೆಲ್ಲನೆ, ಕ್ವಣದಂಘ್ರಿಶೋಭಂ-ಭೂಷಣಧ್ವನಿಗೊಳಿಸುವ ಅಡಿಗಳ ಸೊಬಗುಳ್ಳಂಥಾ
ಮಧ್ಯೇಸುಚಾರು-ಸೊಂಟದಲ್ಲಿ ಸೊಗಸಾದಂಥಾ, ಕುಚಕುಂಕುಮಶೋಣಹಾರಂ-ಮೊಲೆಗಳ ಕುಂಕುಮದ ಹುಡಿಯಿಂದ ಕೆಂಪಾ
ದ ಮಾಲೆಗಳುಳ್ಳಂಥಾ, ಚಲಕುಂಡಲಕುಂತಲಾಢ್ಯಂ-ತುಲುಕಾಡುತ್ತಿರುವ ರನ್ನದೋಲೆಗಳಿಂದಲೂ ಕುರುಳ್ಗಳಿಂದಲೂ ಸಂಪನ್ನ
ವಾದಂಥಾ, ಶ್ರೀಮನ್ಮುಖಂಚ-ಕಾಂತಿಯುಳ್ಳ ಮೋರೆಯುಳ್ಳಂಥಾ, ಯದುಪತೇರ್ಮಹಿಷೀಸಹಸ್ರಂ-ಕೃಷ್ಣನಪತ್ನಿಯರ ಸಮೂ

---

ಕೇಳು ಈ ರೀತಿಯಾಗಿ ಧರ್ಮರಾಯನು ದಾಂಟಲಶಕ್ಯವಾದ ತನ್ನ ಮನೋರಥವೆಂಬ ಮಹಾಸಮುದ್ರವಂ ಶ್ರೀ
ಕೃಷ್ಣನು ಗ್ರಹದಿಂದಾಂಟ ಚಿಂತಾರಹಿತನಾದನು ‖೩೦‖ ಈರೀತಿಯಿಂದಿರಲು ಒಂದು ಸಮಯದಲ್ಲಿ ದುರ್ಯೋ
ಧನನು ಶ್ರೀ ಹರಿಯಲ್ಲಿ ಮನಸ್ಸುಳ್ಳ ಆ ಧರ್ಮರಾಯನ ಅಂತಃಪುರದಲ್ಲಿರುವ ಸಂಪತ್ತನ್ನು ಆ ರಾಜಸೂಯಯಾಗ
ದ ವೈಭವವಂ ಸಹ ನೋಡಿ ಸಂತಾಪ ಪಟ್ಟನು. ‖೩೧‖ ಯಾವ ಸಭೆಯಲ್ಲಿ ನರಾಧಿಪತಿಗಳು ದೈತ್ಯಾಧಿಪತಿಗಳು
ಇಂದ್ರಾದಿ ದೇವತೆಗಳು ಇವರುಗಳ ನಾನಾವಿಭವಂಗಳಾದ ಸಂಪತ್ತು ಮಯನಿಂದ ಶಿಲ್ಪಚಾತುರ್ಯದಿಂ ರಚಿ
ಸಲ್ಪಟ್ಟಿರುವ ಕಾರಣದಿಂ ಹೊಳೆಯುತಲಿರುವ ಸಕಲ ಸಂಪತ್ತುಗಳೊಡನೆ ದ್ರೌಪದಿಯು ಪತಿಯಾದ ಧರ್ಮರಾ
ಯನಂ ಸೇವಿಸಿದಳೋ ಮತ್ತು ದುರ್ಯೋಧನನು ಯಾವ ಸಭಾಸ್ಥಾನದಲ್ಲಿ ಆಸಕ್ತವಾದ ಮನಸ್ಸುಳ್ಳವನಾಗಿ
ಸಂತಾಪ ಪಟ್ಟನೋ ‖೩೨‖ ಮತ್ತು ಯಾವ ಸಭಾಸ್ಥಾನದಲ್ಲಿ ಕಟಿಪಶ್ಚಾದ್ಭಾಗಂಗಳ ಭಾರದಿಂ ಮೆಲ್ಲಮೆಲ್ಲನೆ
ಧ್ವನಿಗೆಯ್ಯುತಲಿರುವ ಪಾದಂಗಳಿಂ ಶೋಭಿತವಾದ ಮನೋಹರವಾದ ಮಧ್ಯಪ್ರದೇಶ ವರಾಗಿ ಸ್ತನಂಗಳಲ್ಲಿ
ರುವ ಕುಂಕುಮದಿಂ ಕೆಂಪಾಗಿರುವ ಹಾರಂಗಳುಳ್ಳವರಾಗಿ ಕಾಂತಿಯುಕ್ತಂಗಳಾದ ಂಗಳುಳ್ಳವರಾಗಿ ಚ
ಲಿಸುತಲಿರುವ ವಾಲೆಗಳೊಡನೆ ಮುಂಗುರುಳುಗಳೊಡನೆಯೂ ಶೋಭಿತವಾಗಿರುವ ಅನೇಕ ಸಹಸ್ರ ಸಂಖ್ಯೆಯು

ಮಯವಿದ್ಯಾಯಾಂ ಕ್ವಾಪಿ ಧರ್ಮಸುತೋ ವಿರಾಟ್ । ವೃತೋಽನುಜೈರ್ಬಂಧುಭಿಶ್ಚ ಕೃಷ್ಣೇನಾಪಿ ಸ್ವಚಕ್ಷು
ಷಾ ॥೩೪॥ ಆಸೀನಃ ಕಾಂಚನೇ ಸಾಕ್ಷಾದಾಸನೇ ಮಘವಾನಿವ । ಪಾರಮೇಷ್ಠ್ಯಶ್ರಿಯಾ ಜುಷ್ಟಃ ಸ್ತೂಯ
ಮಾನಶ್ಚ ವಂದಿಭಿಃ ॥೩೫॥ ತತ್ರ ದುರ್ಯೋಧನೋ ಮಾನೀ ಸಹಿತೋ ಭ್ರಾತೃಭಿರ್ನೃಪ । ಕಿರೀಟಮಾಲೀ ನ್ಯ
ವಿಶದಸಿಹಸ್ತಃ ಕ್ಷಿಪನ್ ರುಷಾ ॥೩೬॥ ಸ್ಥಲೇಽಭ್ಯಗೃಹ್ಣಾದ್ವಸ್ತ್ರಾಂತಂ ಜಲಂ ಮತ್ವಾ ಸ್ಥಲೇಽಪತತ್ । ಜಲೇ
ಚ ಸ್ಥಲವದ್ಭ್ರಾಂತ್ಯಾ ಮಯಮಾಯಾವಿಮೋಹಿತಃ ॥೩೭॥ ಜಹಾಸ ಭೀಮಸ್ತಂ ದೃಷ್ಟ್ವಾ ಸ್ತ್ರಿಯೋ
ನೃಪತಯೋಽಪರೇ । ನಿವಾರ್ಯಮಾಣಾ ಅಪ್ಯಂಗ ರಾಜ್ಞಾ ಕೃಷ್ಣಾನುಮೋದಿತಾಃ ॥೩೮॥ ಸ ವ್ರೀಡಿತೋಽವಾಗ್ವ

---

ದನೋ, ಇತ್ಯಾದಿ ॥೩೩॥ ಮಯವಿದ್ಯಾಯಾಂ-ಮಯನೆಂಬ ದೇವಶಿಲ್ಪಿಯ ಶಿಲ್ಪವಿದ್ಯಾಚಮತ್ಕಾರವುಳ್ಳ, ತಸ್ಯಾಂ ಸಭಾಯಾಂ- ಆ ಸಭೆಯಲ್ಲಿ, ವಿರಾಟ್-ಮಹಾಪ್ರಭುವಾದ, ಧರ್ಮಸುತಃ-ಧರ್ಮರಾಯನು, ಕ್ವಾಪಿ-ಒಂದಾನೊಂದು ಸಮಯದಲ್ಲಿ, ಅನುಜೈಃ-ತಮ್ಮಂದಿರಿಂದಲೂ, ಬಂಧುಭಿಶ್ಚ-ನಂಟರಿಂದಲೂ, ಸ್ವಚಕ್ಷುಷಾ-ತನ್ನ ಕಣ್ಣಾಗಿರುವ, ಕೃಷ್ಣೇನಾಪಿ-ವಾಸುದೇವನಿಂದಲೂ, ವೃತಃ-ಬಳಸಲ್ಪಟ್ಟವನಾಗಿ (ವಿರೇಜೇ) ಪ್ರಕಾಶಿಸಿದನು ॥೩೪॥ ಸಾಕ್ಷಾತ್-ಪ್ರತ್ಯಕ್ಷನಾದ, ಮಘವಾನಿವ-ಇಂದ್ರನಂತೆ, ಕಾಂಚನೇ ಆಸನೇ-ಚಿನ್ನದ ಗದ್ದುಗೆಯಲ್ಲಿ, ಆಸೀನಃ-ಕುಳಿತಿರುವವನೂ, ಪಾರಮೇಷ್ಠ್ಯಶ್ರಿಯಾ-ಸರ್ವೋತ್ತಮ ಪ್ರಭುಸಂಪತ್ತಿನಿಂದ, ಜುಷ್ಟಃ-ಸೇವಿತನಾಗಿಯೂ, ವಂದಿಭಿಃ-ಸ್ತುತಿಪಾಠಕರಿಂದ, ಸ್ತೂಯಮಾನಶ್ಚ- ಕೊಂಡಾಡಲ್ಪಡುತಿರುವನಾಗಿಯೂ ಬೆಳಗಿದನು ॥೩೫॥ ನೃಪ-ಪರೀಕ್ಷಿದ್ರಾಯನೇ, ತತ್ರ-ಆ ಸಭೆಯಲ್ಲಿ ಮಾನೀ-ಅಹಂಕಾರವುಳ್ಳವನೂ, ಕಿರೀಟಮಾಲೀ -ಶಿರೋಭೂಷಣವೂ ಕಂಠಭೂಷಣವೂ ಉಳ್ಳಂಥಾ, ದುರ್ಯೋಧನಃ-ಸುಯೋಧನರಾಯನು, ಅಸಿಹಸ್ತಃ-ಖಡ್ಗಪಾಣಿಯಾಗಿ, ರುಷಾ-ಸಿಟ್ಟಿನಿಂದ, ಕ್ಷಿಪನ್-ಬಾಗಿಲು ಕಾಯುವವರನ್ನು ಗದ್ದರಿಸುವವನಾಗಿ, ಭ್ರಾತೃಭಿಸ್ಸಹಿತಃ-ದುಶ್ಯಾಸನನು ಮೊದಲಾದ ತಮ್ಮಂದಿರೊಡಗೂಡಿದವನಾಗಿ, ನ್ಯವಿಶತ್-ಪ್ರವೇಶಿಸಿದನು ॥೩೬॥ ಮಯಮಾಯಾವಿಮೋಹಿತಃ-ಮಯನೆಂಬವನ ಕುಹಕಶಿಲ್ಪದಿಂದ ಮರಹುಗೊಳಿಸಲ್ಪಟ್ಟವನಾದ್ದರಿಂದ, ಸ್ಥಲೇ-ಅಂತಃಪುರದಲ್ಲಿ, ಸ್ಥಲೇ-ನೆಲದಮೇಲೆ, ಜಲಂ ಮತ್ವಾ-ನೀರೆಂದು ಭ್ರಮಿಸಿ, ವಸ್ತ್ರಾಂತಂ - ಬಟ್ಟೆಯ ಸೆರಗಂ, ಅಭ್ಯಗೃಹ್ಣಾತ್-ಎತ್ತಿಕೊಂಡನು. ಜಲೇ ಚ-ನೀರಿನಲ್ಲಿಯೂ, ಸ್ಥಲವದ್ಭ್ರಾಂತ್ಯಾ-ನೆಲವೆಂಬ ಭ್ರಮೆಯಿಂದ, ಅಪತತ್-ಬಿದ್ದನು ॥೩೭॥ ಅಂಗ-ಅಯ್ಯಾ ಪರೀಕ್ಷಿತನೇ! ಭೀಮಃ ಭೀಮಸೇನನು, ತಂ-ಆ ದುರ್ಯೋಧನನನ್ನು. ದೃಷ್ಟ್ವಾ-ನೋಡಿ, ಜಹಾಸ-ಚೆಚ್ಚಾಗಿ ನಕ್ಕನು, ಕೃಷ್ಣಾನುಮೋದಿತಾಃ-ಕೃಷ್ಣನಿಂದ ಉಲ್ಲಾಸಗೊಳಿಸಲ್ಪಟ್ಟವರಾದ್ದರಿಂದ, ಸ್ತ್ರಿಯಃ-ಹೆಂಗಳೂ, ಅಪರೇ-ಇತರರಾದ, ನೃಪತಯಃ-ದೊರೆಗಳೂ, ರಾಜ್ಞಾ-ಧರ್ಮರಾಯನಿಂದ, ನಿವಾರ್ಯಮಾಣಾ ಅಪಿ-ಬೇಡವೆಂದು ತಡೆಯಲ್ಪಡುತಿರುವರಾದರೂ, ಜಹಸುಃ-ನಕ್ಕರು ॥೩೮॥ ಸಃ-ದುರ್ಯೋಧನನು, ವ್ರೀಡಿತಃ- ನಾಚಿಕೆಗೊಂ

---

ಳ್ಳ ಶ್ರೀ ಕೃಷ್ಣಪತ್ನಿಯರು ಆ ರಾಜಸೂಯಯಾಗಮಹೋತ್ಸವ ಕಾಲದಲ್ಲಿ ಪ್ರಕಾಶಿಸಿದಂತವರಾದರೋ ॥೩೩॥ ಅಂತಿಯ ಮಯನಿರ್ಮಿತವಾದ ಸಭಾಸ್ಥಾನದಲ್ಲಿ ಧರ್ಮರಾಯನು ಬಂದ ಸಮಯದಲ್ಲಿ ತಮ್ಮ ತಮ್ಮಂದಿರಿಂ ಬಂಧುಗಳಿಂ ತನಗೆ ಹಿತವನ್ನೂ ಅಹಿತವನ್ನೂ ಸಹ ತಿಳಿಸುವ ಶ್ರೀ ಕೃಷ್ಣನಿಂದಲೂ ಸುತ್ತಿಕೊಳ್ಳಲ್ಪಟ್ಟವನಾಗಿ ಪ್ರಕಾಶಿಸಿದನು ॥೩೪॥ ಸಾಕ್ಷಾದ್ದೇವೇಂದ್ರನಂತೆ ಸುವರ್ಣಮಯವಾದ ಸಿಂಹಾಸನದಲ್ಲಿ ಕುಳಿತಿರುವ ಧರ್ಮರಾಯನು ಸಾರ್ವಭೌಮಸಾಮ್ರಾಜ್ಯಲಕ್ಷ್ಮಿಯಿಂದ ಸೇವಿಸಲ್ಪಟ್ಟವನಾಗಿ ಸ್ತುತಿಪಾಠಕರಿಂ ಸ್ತುತಿಸಲ್ಪಡುತ ಪ್ರಕಾಶಿಸಿದನು ॥೩೫॥ ಆ ಕಾಲದಲ್ಲಿ ತನ್ನ ತಮ್ಮಂದಿರಿಂ ಪರಿವೃತನಾಗಿ ಕಿರೀಟಮಂ ಮಾಲೆಗಳಂ ಸಹ ಧರಿಸಿರುವವನಾಗಿ ಅಹಂಕಾರಯುಕ್ತನಾಗಿಯೂ ಇರುವ ದುರ್ಯೋಧನನು ಖಡ್ಗಹಸ್ತನಾಗಿ ಕೋಪದಿಂ ದ್ವಾರಪಾಲಕರಂ ಧಿಕ್ಕರಿಸುತ ಆ ಸಭಾಸ್ಥಾನಮಂ ಪ್ರವೇಶಿಸಿದನು ॥೩೬॥ ಆಗ ದುರ್ಯೋಧನನು ಮಯನ ಮಾಯೆಯಿಂದ ಮೋಹಿಸಲ್ಪಟ್ಟವನಾಗಿ ಸ್ಥಲದಲ್ಲಿ ಇದು ಜಲವೆಂಬ ಭ್ರಾಂತಿಯಿಂದ ಹೊದ್ದಿರುವ ವಸ್ತ್ರದ ಸೆರಗಂ ಮುದುರಿ ಕೊಂಡನು. ಮತ್ತು ಜಲದಲ್ಲಿ ಇದು ಸ್ಥಲವೆಂಬ ಭ್ರಾಂತಿಯಿಂ ಬಿದ್ದನು ॥೩೭॥ ಆಗ ಭೀಮನೂ ಸ್ತ್ರೀಯರೂ ಮತ್ತೂ ಅನ್ಯರಾದ ಅರಸುಗಳೂ ಸಹ ಧರ್ಮರಾಯನಿಂ ನಗಬೇಡಿರೆಂದು ಅಡ್ಡಗೆಯಿಸಲ್ಪಟ್ಟವರಾದರೂ ಶ್ರೀ ಕೃಷ್ಣನಿಂ ಪ್ರೇರಿತರಾಗಿ ಆ ದುರ್ಯೋಧನನು ನೋಡಿ ಚೆನ್ನಾಗಿ ನಕ್ಕರು ॥೩೮॥ ಆಗ ಲಜ್ಜಾಯುಕ್ತನಾದ್ದರಿಂದಮು

ದನೋರುಷಾಜ್ವಲನ್ನಿಷ್ಕ್ರಮ್ಯ ತೂಷ್ಣೀಂ ಪ್ರಯಯೌ ಗಜಾಹ್ವಯಮ್ ।ಹಾಹೇತಿ ಶಬ್ದಸ್ಸುಮಹಾನ
ಭೂತ್ಸತಾಮಜಾತಶತ್ರುರ್ವಿಮನಾ ಇವಾಭವತ್ ॥೩೯॥ ಬಭೂವ ತೂಷ್ಣೀಂ ಭಗವಾನ್ ಭುವೋಭಾರಂ ಜಿ
ಹೀರ್ಷುಃ ಕಿಲ ಭ್ರಮತಿಸ್ಮ ಯದ್ದೃಶಾ ॥೪೦॥ ಏತತ್ತೇಭಿಹಿತಂ ರಾಜನ್ ಯತ್ಪೃಷ್ಟೋಹಮಿಹ ಯತ್ತ್ವಯಾ ।
ಸುಯೋಧನಸ್ಯ ದೌರಾತ್ಮ್ಯಂ ರಾಜಸೂಯೇ ಮಹಾಕ್ರತೌ ॥ ... ... ॥೪೧॥

ಇತಿ ಶ್ರೀಮದ್ಭಾಗವತೇ-ದಶಮಸ್ಕಂಧೇ-ಪಂಚಸಪ್ತತಿತಮೋಽಧ್ಯಾಯಃ-

---

ವನಾದ್ದರಿಂದಲೇ, ಅವಾಗ್ವದನಃ-ಬಾಗ್ಗಿದ ಮೋರೆಯುಳ್ಳವನಾಗಿಯೂ, ರುಷಾ-ಸಿಟ್ಟಿನಿಂದ, ಜ್ವಲನ್- ಉರಿಯುತ್ತಿರುವನಾಗಿಯೂ, ತೂಷ್ಣೀಂ-ಸುಮ್ಮಗೆ, ನಿಷ್ಕ್ರಮ್ಯ-ಹೊರಗೆ ಬಂದು, ಗಜಾಹ್ವಯಂ-ಹಸ್ತಿನಪುರವನ್ನು, ಪ್ರಯಯೌ-ಸೇರಿದನು ಸತಾಂ-ಸತ್ಪುರುಷರ, ಹಾಹೇತಿಶಬ್ದಃ-ಹಾಹಾ ಯೆಂಬ ಅನುತಾಪಧ್ವನಿಯು, ಸುಮಹಾನ್-ಬಹಳ ಹೆಚ್ಚಾದ್ದು.ಅಭೂತ್-ಆಯಿತು, ಅಜಾತಶತ್ರುಃ-ಧರ್ಮರಾಯನು, ವಿಮನಾ ಇವ-ಮನಸ್ಸಿಲ್ಲದವನಂತೆ, ಅಭವತ್-ಆದನು ॥೩೯॥ ಯದ್ದೃಶಾ-ಯಾವಕೃಷ್ಣನದೃಷ್ಟಿಮಾತ್ರದಿಂದ ಏಷಃ-ಈ ದುರ್ಯೋಧನನು, ಭ್ರಮತಿಸ್ಮ-ಸ್ಥಲಜಲಭ್ರಾಂತಿಗೊಂಡನೋ, ಸಭಗವಾನ್-ಆ ಶ್ರೀಕೃಷ್ಣನು, ಭುವಃ-ಭೂಮಿಯ, ಭರಂ-ಭಾರವನ್ನು, ಜಿಹೀರ್ಷುಃ-ಹರಿಸಲೆಳಸಿದವನಾದ್ದರಿಂದ, ತೂಷ್ಣೀಂಬಭೂವ-ಮಾತಾಡದೆ ಯಿರುವನಾದನು ॥೪೦॥ ರಾಜನ್-ಪರೀಕ್ಷಿದ್ರಾಯನೇ ತ್ವಯಾ-ನಿನ್ನಿಂದ,ಅಹಂ-ನಾನು, ಇಹ-ಇಲ್ಲಿ, ಯತ್-ಯಾವುದನ್ನು, ಪೃಷ್ಟಃ-ಕೇಳಲ್ಪಟ್ಟವನಾದೆನೋ, ತತ್-ರಾಜಸೂಯೇ, ಮಹಾಕ್ರತೌ-ಆ ರಾಜಸೂಯವೆಂಬ ದೊಡ್ಡಯಜ್ಞದಲ್ಲಿ, ಸುಯೋಧನಸ್ಯ-ದುರ್ಯೋಧನನ, ಏತದ್ದೌರಾತ್ಮ್ಯಂ-ಈ ದುಷ್ಟಸ್ವಭಾವವು, ತೇ-ನಿನಗೆ, ಅಭಿಹಿತಂ-ಹೇಳಲ್ಪಟ್ಟಿತು ॥೪೧॥

ಇಂತು ಭಾಗವತ ಪ್ರತಿಶಬ್ದಾರ್ಥ ಬೋಧಿನಿಯೊಳು ದಶಮಸ್ಕಂಧಲ್ಲಿ
೭೫ ನೆಯ ಅಧ್ಯಾಯಂ ಮುಗಿದುದು.

---

ಖವಂ ಬಗ್ಗಿಸಿ ಕೊಂಡಿರುವ ಆ ದುರ್ಯೋಧನನು ಕೋಪದಿಂ ಜ್ವಲಿಸುತ ಮೌನದಿಂ ಅಲ್ಲಿಂದ ಹೊರಕ್ಕೆ ಬಂದು ಆಗಲೇ ಹಸ್ತಿನಾಪುರವನೆಯ್ದಿದನು॥ಆಗ ಅಲ್ಲಿರುವ ಜನರು ಹಾಹಾ ಯೆಂದು ಮಹತ್ತಾದ ಶಬ್ದಂಗೆಯ್ದರು. ಧರ್ಮರಾಯನು ಚಿಂತಾಯುಕ್ತನಾದನು ।೩೯॥ಯಾವವನ ದೃಷ್ಟಿಯಿಂದ ದುರ್ಯೋಧನನು ಆಗ ಭ್ರಾಂತಿಯನೈದಿದನೋ ಭೂಭಾರವ ಪರಿಹರಿಸಲಿಚ್ಛೆಯುಳ್ಳ ಅಂತಪ್ಪ ಶ್ರೀ ಕೃಷ್ಣನು ಈಗ ಸಂಪಾದಿಸಲ್ಪಟ್ಟ ಕಲಹಬೀಜದಿಂ ಕೌರವರಂ ಸಂಹಾರಂಗೆಯ್ವನಾಗುವೆನೆಂದು ತಿಳಿದು ಸುಮ್ಮನೆಯಿದ್ದನು ॥೪೦॥ ಎಲೈ ಪರೀಕ್ಷಿದ್ರಾಯನೇ ನಾನು ನಿನ್ನಿಂದ ಯಾವ ಅರ್ಥವಂ ಪ್ರಶ್ನೆಗೆಯ್ಯಲ್ಪಟ್ಟೆನೋ, ರಾಜಸೂಯ ಯಾಗದಲ್ಲಿ ದುರ್ಯೋಧನನಿಗೆ ಅಸೂಯೆ ಯುಂಟಾಗುವುದಕ್ಕೆ ನಿಮಿತ್ತವಾದ ಆ ಸಮಸ್ತ ವೃತ್ತಾಂತವೂ ನನ್ನಿಂದ ನಿನಗೋಸುಗ ನಿರೂಪಿಸಲ್ಪಟ್ಟಿತು ॥೪೧॥ ॥ ‡ ॥

ಇಂತು ಶ್ರೀಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸಿದನೆಂದು ಸೂತಪೌ
ರಾಣಿಕನು ನೈಮಿಶಾರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಪೇಳಿದನೆಂ
ಬಲ್ಲಿಗೆ-ಶ್ರೀಮನ್ಮಹೀಶೂರ ಪುರವರಾಧೀಶ ಶ್ರೀಚಾಮರಾಜತನುಜಶ್ರೀ
ಮತ್ಕೃಷ್ಣರಾಜ ವಿರಚಿತಮಾದ ಶ್ರೀಕೃಷ್ಣರಾಜವಾಣೀವಿಲಾಸ
ಮೆಂಬ ಶ್ರೀಭಾಗವತ ಪುರಾಣದ ಕರ್ಣಾಟಭಾಷಾವ್ಯಾಖ್ಯಾನದಲ್ಲಿ
೭೫ನೆ ಅಧ್ಯಾಯಂ ಮುಗಿದುದು



ಸಾಲ್ವವಧಕಥಾಪ್ರಾರಂಭಃ ಟ್ಟಃ-

ಶ್ರೀಶುಕಃ॥ಅಥಾನ್ಯದಪಿಕೃಷ್ಣಸ್ಯಶೃಣುಕರ್ಮಾದ್ಭುತಂನೃಪ । ಕ್ರೀಡಾನರಶರೀರಸ್ಯಯಥಾಸೌ ಭಪತಿರ್ಹತಃ ॥೧॥ ಶಿಶುಪಾಲಸಖಸ್ಸಾಲ್ವೋರುಕ್ಮಿಣ್ಯುದ್ವಾಹಆಗತೈಃ ।ಯದುಭಿರ್ನಿರ್ಜಿತಸ್ಸಂಖ್ಯೇಜರಾಸಂಧಾದಯಸ್ತಥಾ ॥೨॥ಸಾಲ್ವಃಪ್ರತಿಜ್ಞಾಮಕರೋಚ್ಛೃಣ್ವತಾಂಸರ್ವಭೂಭುಜಾಮ್ । ಅಯಾದವಾಂಕರಿಷ್ಯೇಕ್ಷ್ಮಾಂಪೌರುಷಂಮಮಪಶ್ಯತ ॥೩॥ಇತಿಮೂಢಃಪ್ರತಿಜ್ಞಾಯದೇವಂಪಶುಪತಿಂಪ್ರಭುಮ್। ಆರಾಧಯಾಮಾಸನೃಪಃಪಾಂಸುಮುಷ್ಟಿಂಸಕೃದ್ಗ್ರಸನ್॥೪॥ ಸಂವತ್ಸರಾಂತೇಭಗವಾನಾಶುತೋಷಉ

---

೭೬ ನೆಯ ಅಧ್ಯಾಯದ ಪ್ರತಿಪದಟೀಕೆ.

ನೃಪ-ಪರೀಕ್ಷಿದ್ರಾಯನೇ, ಕ್ರೀಡಾನರಶರೀರಸ್ಯ-ಲೀಲಾಮಾನುಷ ವಿಗ್ರಹನಾದ, ಕೃಷ್ಣನಿಂದ. ಸೌಭಪತಿಃ-ಸಾಲ್ವನು, ಯಥಾ-ಹೇಗೆ, ಹತಃ-ಕೊಲ್ಲಲ್ಪಟ್ಟನೋ, ತಥಾ-ಅಂಥಾವಿಧವಾದ. ಅದ್ಭುತಂ-ಆಶ್ಚರ್ಯಕರವಾದ, ಕೃಷ್ಣಸ್ಯ-ಕೃಷ್ಣನ, ಅನ್ಯತ್ಕರ್ಮಾಪಿ-ಬೇರೆಕೆಲಸವನ್ನೂ, ಅಥ-ಇನ್ನುಮೇಲೆ, ಶೃಣು-ಕೇಳು॥೧॥ಶಿಶುಪಾಲಸಖಃ-ಶಿಶುಪಾಲನ ಗೆಳೆಯನಾದ ಸಾಲ್ವಃ-ಸಾಲ್ವನೆಂಬವನೂ, ರುಕ್ಮಿಣ್ಯುದ್ವಾಹೇ-ರುಕ್ಮಿಣೀದೇವಿಯ ಮದುವೆಯಲ್ಲಿ, ಆಗತೈಃ-ಬಂದಂಥಾ, ಯದುಭಿಃ-ಯಾದವರಿಂದ, ಸಂಖ್ಯೇ-ಯುದ್ಧದಲ್ಲಿ, ನಿರ್ಜಿತಃ-ಸೋಲಿಸಲ್ಪಟ್ಟನು. ತಥಾ-ಅವನಂತೆಯೇ, ಜರಾಸಂಧಾದಯಃ-ಜರಾಸಂಧನು ಮೊದಲಾದವರೂ ಸೋಲಿಸಲ್ಪಟ್ಟವರಾದರು ॥೨॥ ಸಾಲ್ವಃ-ಸೌಭಪತಿಯು, ಸರ್ವಭೂಭುಜಾಂ-ಶೃಣ್ವತಾಂಸತಾಂ-ಎಲ್ಲಾಭೂರೆಗಳೂ ಕೇಳುತ್ತಿರುವಲ್ಲಿ, ಮಮಪೌರುಷಂ-ನನ್ನ ಗಂಡುಸುತನವನ್ನು, ಪಶ್ಯತ-ನೋಡಿರಿ, ಕ್ಷ್ಮಾಂ-ಭೂಮಿಯನ್ನು,ಅಯಾದವಾಂ-ಯಾದವರಿಲ್ಲದ್ದನ್ನಾಗಿ, ಕರಿಷ್ಯೇ-ಮಾಡುವೆನು, ಇತಿ-ಹೀಗೆ, ಪ್ರತಿಜ್ಞಾಂ-ಶಪಥವನ್ನು, ಅಕರೋತ್-ಮಾಡಿದನು॥ ॥ ಮೂಢಃ-ಭಗವನ್ಮಾಹಾತ್ಮ್ಯವನ್ನರಿಯದವನು, ಇತಿ-ಹೀಗೆ, ಪ್ರತಿಜ್ಞಾಯ-ಶಪಥವಂಗೈದು, ಸನೃಪಃ-ಆ ಸಾಲ್ವರಾಯನು, ಸಕೃತ್-ಒಂದುಹೊತ್ತು ಮಾತ್ರವೇ, ಪಾಂಸುಮುಷ್ಟಿಂ-ಹಿಡಿಮರಳನ್ನು,ಗ್ರಸನ್-ತಿನ್ನುವನಾಗಿ, ಪ್ರಭುಂ-ಸ್ವತಂತ್ರನಾದ ಪಶುಪತಿಂ-ಸಕಲಪ್ರಾಣಿಗಳಿಗೂ ನಿಯಾಮಕನಾದ, ದೇವಂ-ಮಹಾದೇವನನ್ನು, ಆರಾಧಯಾಮಾಸ-ಪೂಜಿಸಿದನು ॥೪॥ ಸಂವತ್ಸರಾಂತೇ-

---

೭೬ನೆಯಅಧ್ಯಾಯವು.

ಶ್ರೀಧರೀಯಶ್ಲೋಕಃ॥ತತಷ್ಷಟ್ಸಪ್ತತಿತಮೇವೃಷ್ಣಿಸಾಲ್ವಮಹಾಮೃಧೇ।ದ್ಯುಮದ್ಗದಾಪ್ರಹಾರೇಣ ರಣಾತ್ಪ್ರದ್ಯುಮ್ನನಿರ್ಗಮಃ॥ % ॥ಟೀ॥ಎಪ್ಪತ್ತಾರನೆಯ ಅಧ್ಯಾಯದಲ್ಲಿ ವೃಷ್ಣಿಸಾಲ್ವರಯುದ್ಧದೊಳು ಸಾಲ್ವನಮಂತ್ರಿಯಾದ ದ್ಯುಮಂತನಗದಾಪ್ರಹಾರದಿಂ ಪ್ರದ್ಯುಮ್ನನು ಮೂರ್ಛಿತನಾಗಲು ಪ್ರದ್ಯುಮ್ನನ ಸಾರಥಿಯು ಪ್ರದ್ಯುಮ್ನನಂ ಆಚೆಗೆಕರೆದುಕೊಂಡು ಹೋದನೆಂಬರ್ಥವಂ ಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸುವನೆಂತೆನೆ:-

ಎಲೈ, ಅರಸನೇ! ಕೇಳು? ಕ್ರೀಡಾರ್ಥವಾಗಿ ಮನುಷ್ಯಶರೀರವಂ ಧರಿಸಿರುವ ಶ್ರೀಕೃಷ್ಣನ ಆಶ್ಚರ್ಯಕರವಾದ ಮತ್ತೊಂದು ಚರಿತ್ರವಂ ಪೇಳುವೆನು. ಸಾಲ್ವನೆಂಬರಸು ಶ್ರೀಕೃಷ್ಣನಿಂದ ಸಂಹರಿಸಲ್ಪಟ್ಟ ಬಗೆಯಾಕೇಳೈ॥೧॥ ಪೂರ್ವದಲ್ಲಿ ಶಿಶುಪಾಲನಿಗೆ ಮಿತ್ರನಾದ ಸಾಲ್ವನು ರುಕ್ಮಿಣೀದೇವಿಯ ವಿವಾಹದಲ್ಲಿ ಬಂದವನಾಗಿ ಯಾದವರಿಂದ ಯುದ್ಧದಲ್ಲಿ ಜಯಿಸಲ್ಪಟ್ಟನು ॥೨॥ಅಸ್ತುಮಯದಲ್ಲಿ ಸಕಲಭೂತಂಗಳೂ ಕೇಳುತ್ತಿರಲು ಸಾಲ್ವನು ಈ ಭೂಮಿಯಂ ಯಾದವರಿಂದ ರಹಿತವಾದುದನಾಗಿ ಮಾಡುವೆನು, ನನ್ನ ಸಾಮರ್ಥ್ಯವಂ ನೋಡುವರಾಗಿ, ಎಂದು ಪ್ರತಿಜ್ಞೆಯಂಗೆಯ್ದನು ॥೩॥ ಮೂಢನಾದಸಾಲ್ವನು ಈರೀತಿಯಾಗಿ ಪ್ರತಿಜ್ಞೆಯಂಮಾಡಿ ಅನಂತರದಲ್ಲಿ ಪ್ರತಿದಿನದಲ್ಲಿಯೂ ಒಂದುಬಾರಿ ಮುಷ್ಟಿಮಿತವಾದ ಧೂಳಿಯಂಭಕ್ಷಿಸುತ ಪಶುಪತಿಯಾದ ಪರಮೇಶ್ವರನಂ ಪೂಜಿಸಿದನು ॥೪॥ ಆಗ ಭಗವಂತನಾದ ಪರಮೇಶ್ವರನು ಶೀಘ್ರದಿಂ ಸಂತೋಷಪಡುವನಾದರೂ ಶ್ರೀಕೃಷ್ಣವಿರೋಧಿಯಾದುದರಿಂದ ಸಾಲ್ವನಲ್ಲಿ ಶೀಘ್ರದಿಂ ಪ್ರಸಾದಂಗೆಯ್ಯನಾಗದೆ ಸಂವತ್ಸರಾಂತದಲ್ಲಿ ಪ್ರತ್ಯಕ್ಷನಾಗಿ ಶರಣಾಗತನಾದ

ಮಾಪತಿಃ ॥ ವರೇಣಚ್ಛಂದಯಾಮಾಸಸಾಲ್ವಂಶರಣಮಾಗತಮ್ ॥೫॥ ದೇವಾಸುರಮನುಷ್ಯಾಣಾಂಗಂಧರ್ವೋರಗರಕ್ಷಸಾಮ್ । ಅಭೇದ್ಯಂಕಾಮಗಂವವ್ರೇಸಯಾ ನಂವೃಷ್ಣಿಭೀಷಣಮ್ ॥೬॥ ತಥೇತಿಗಿರಿಶಾದಿಷ್ಟೋಮಯಃಪರಪುರಂಜಯಃ । ಪುರಂನಿರ್ಮಾಯಸಾಲ್ವಾಯಪ್ರಾದಾತ್ಸೌಭಮಯಸ್ಮಯಮ್ ॥೭॥ ಸಲಬ್ಧ್ವಾಕಾಮಗಂಯಾನಂತಮೋಧಾಮದುರಾಸದಮ್ । ಯಯೌದ್ವಾರವತೀಂಸಾಲ್ವೋವೈರಂಕೃಷ್ಣಕೃತಂಸ್ಮರನ್ ॥೮॥ ನಿರುಧ್ಯಸೇನಯಾಸಾಲ್ವೋಮಹತ್ಯಾಭರತರ್ಷಭ । ಪುರೀಂಬಭಂಜೋಪವನಾನ್ಯುದ್ಯಾನಾನಿಚಸರ್ವಶಃ ॥೯॥ ಸಗೋಪುರಾಣಿದ್ವಾರಾಣಿಪ್ರಾಸಾದಾಟ್ಟಾಲತೋಲಿಕಾಃ । ವಿಹಾರಾನ್ಸವಿಮಾನಾಗ್ರ್ಯಾನ್ನಿಪೇತುಶ್ಶಸ್ತ್ರವೃಷ್ಟಯಃ ॥೧೦॥ ಶಿಲಾದ್ರುಮಾಶ್ಚಾಶನಯಸ್ಸರ್ಪಾಆಸಾರಶರ್ಕರಾಃ । ಪ್ರಚಂಡಶ್ಚ

---

ಸಂವತ್ಸರದ ಕಡೆಯಲ್ಲಿ, ಆಶುತೋಷಃ-ಬೇಗಸಂತೋಷಪಡುವವನಾದ, ಭಗವಾನ್-ಷಡ್ಗುಣೈಶ್ವರ್ಯ ಸಂಪನ್ನನಾದ, ಅಥವಾ ಸರ್ವಜ್ಞನಾದ, ಉಮಾಪತಿಃ-ಗೌರೀನಾಥನು, ಶರಣಮಾಗತಂ-ತನ್ನನ್ನು ರಕ್ಷಕನೆಂದೆಳಸಿಬಂದವನಾದ, ಸಾಲ್ವಂ-ಸಾಲ್ವರಾಯನನ್ನು, ವರೇಣ-ಬೇಕಾದ ಕಾಮದಿಂದ, ಛಂದಯಾಮಾಸ-ಬಯಸಿಕೊಳಿಸಿದನು ॥೫॥ ಸಃ-ಸಾಲ್ವನು, ದೇವಾಸುರಮನುಷ್ಯಾಣಾಂ-ದೇವರ್ಕಳಿಗೂ ದೈತ್ಯರಿಗೂ, ಮಾನವರಿಗೂ, ಗಂಧರ್ವೋರಗರಕ್ಷಸಾಂ-ಗಂಧರ್ವರಿಗೂ, ಸರ್ಪಗಳಿಗೂ ರಾಕ್ಷಸರಿಗೂ, ಅಭೇದ್ಯಂ-ಭೇದಿಸುವುದಕ್ಕೆ ಶಕ್ಯವಲ್ಲದ, ಕಾಮಗಂ-ಬಯಸಿದಕಡೆಗೆ ಹೋಗುವಂಥಾ, ವೃಷ್ಣಿಭೀಷಣಂ-ಯಾದವರಿಗೆ ಭಯಂಕರವಾದ, ಯಾನಂ-ವಾಹನವನ್ನು, ವವ್ರೇ-ಬಯಸಿದನು ॥೬॥ ತಥೇತಿ-ಆಗಲೆಂದು, ಗಿರಿಶಾದಿಷ್ಟಃ-ರುದ್ರನಿಂದ,ಆಜ್ಞಾಪಿಸಲ್ಪಟ್ಟವನಾದ್ದರಿಂದ, ಪರಪುರಂಜಯಃ-ವೈರಿಗಳ ನಗರವನ್ನು ಗೆಲ್ಲುವವನಾದ, ಮಯಃ-ಮಯನೆಂಬ ದೈತ್ಯಶಿಲ್ಪಿಯು,ಅಯಸ್ಮಯಂ-ಲೋಹವಿಕಾರವಾದ, ಸೌಭಂ-ಸೌಭವೆಂಬ ಹೆಸರುಳ್ಳ, ಪುರಂ-ನಗರವನ್ನು, ನಿರ್ಮಾಯ-ಹುಟ್ಟಿಸಿ, ಸಾಲ್ವನೆಂಬವನಿಗೆ, ಪ್ರಾದಾತ್-ಕೊಟ್ಟನು ॥೭॥ ಸಃ-ಅಂಥಾ, ಸಾಲ್ವಃ-ಸಾಲ್ವನೆಂಬವನು, ಕೃಷ್ಣಕೃತಂ-ಕೃಷ್ಣನಿಂದ ಮಾಡಲ್ಪಟ್ಟ, ವೈರಂ-ವಿರೋಧವನ್ನು, ಸ್ಮರನ್-ನೆನಪುಗೊಳ್ಳುವನಾಗಿ, ಕಾಮಗಂ-ಬಯಸಿದಕಡೆಗೆ ಹೋಗುವಂಥಾ, ತಮೋಧಾಮ-ಕತ್ತಲೆಗಾಶ್ರಯವಾದ, ದುರಾಸದಂ-ಇತರರಿಂದ ಪ್ರವೇಶಿಸಲಾಗದ, ಯಾನಂ-ವಾಹನವನ್ನು,ಲಬ್ಧ್ವಾ-ಸಂಪಾದಿಸಿಕೊಂಡು, ದ್ವಾರಕಾನಗರವಂ ಕುರಿತು, ಯಯೌ-ತೆರಳಿದನು ॥೮॥ ಭರತರ್ಷಭ-ಪರೀಕ್ಷಿತನೇ, ಸಾಲ್ವಃ-ಸಾಲ್ವನು, ಮಹತ್ಯಾಸೇನಯಾ- ದೊಡ್ಡದಂಡಿನೊಡನೆ, ಪುರೀಂ-ದ್ವಾರಕೆಯನ್ನು, ನಿರುಧ್ಯ-ತಡೆದು, ಉದ್ಯಾನಾನಿ-ತೋಟಗಳನ್ನೂ, ಉಪವನಾನಿಚ- ಬಳಿಯಣತೋಟಗಳನ್ನೂ, ಸರ್ವಶಃ-ಎಲ್ಲಾಬಗೆಯಿಂದಲೂ, ಬಭಂಜ-ಮುರಿದನು ॥೯॥ ಸಗೋಪುರಾಣಿ-ಗೋಪುರಗಳಿಂದ ಸಹಿತವಾದ, ದ್ವಾರಾಣಿ-ಬಾಗಿಲುಗಳನ್ನು, ಪ್ರಾಸಾದಾಟ್ಟಾಲತೋಲಿಕಾಃ-ಉಪ್ಪರಿಗೆ ಮನೆಗಳನ್ನೂ ಮೇಲ್ಮಚ್ಚುಗಳನ್ನೂ,ವಿಹಾರಾನ್-ಕ್ರೀಡಾಸ್ಥಾನಗಳನ್ನೂ, ಮುರಿದನು. ವಿಮಾನಾಗ್ರ್ಯಾತ್-ಸೌಭವೆಂಬ ಆಕಾಶಪುರದಿಂದ, ಶಸ್ತ್ರವೃಷ್ಟಯಃ-ಕೈದುಮಳೆಗಳು, ನಿಪೇತುಃ-ಬಿ

---

ಸಾಲ್ವನಂಕುರಿತು ಎಲೈವರವಂ ಯಾಚಿಸುವನಾಗೆಂದು ಪೇಳಿದನು ॥೪॥ ಆಸಾಲ್ವನು ಪರಮೇಶ್ವರನಂಕುರಿತು ದೇವದೈತ್ಯಮನುಷ್ಯರಿಂ ಮತ್ತು ಗಂಧರ್ವೋರಗ ರಾಕ್ಷಸರಿಂದಲೂ ಭೇದಿಸಲಶಕ್ಯವಾಗಿ ಇಷ್ಟೈಇದ್ದಂತೆ ಚಂಚರಿಸುವುದಾಗಿ ಯಾದವರಿಗೆ ಭಯಂಕರವಾಗಿಯೂ ಇರುವ ಒಂದು ವಿಮಾನವಂ ವರಿಸಿದನು॥೬॥ ಆಗ ಪರಮೇಶ್ವರನು ಹಾಗೆಯೇ ಆಗಲೆಂದು ವರವನಿತ್ತನು. ಆಮೇಲೆ ಮಯನು ಶ್ರೀಪರಮೇಶ್ವರನಿಂದ ಆಜ್ಞಾಪಿಸಲ್ಪಟ್ಟವನಾಗಿ ಶತ್ರುಗಳಂಜಯಿಸುವ ಸೌಭವೆಂಬನಾಮಧೇಯವುಳ್ಳ ಲೋಹಮಯವಾದ ವಿಮಾನವಂಸೃಜಿಸಿ ಸಾಲ್ವನಿಗಿತ್ತನು ॥೭॥ ಅನಂತರದಲ್ಲಿ ಸಾಲ್ವನು ಕಾಮಚಾರಿಯಾಗಿ ಅಂಧಕಾರಕ್ಕೆ ಆಶ್ರಯವಾಗಿ ಅನ್ಯರಿಂಹೊಂದಲಶಕ್ಯವಾದ ವಿಮಾನವಂಪಡೆದು ಯಾದವರಿಂಗೆಯ್ಯಲ್ಪಟ್ಟ ವೈರವಂ ಸ್ಮರಿಸುತ್ತಲಿರುವನಾಗಿ ದ್ವಾರಕಾಪುರವನೆಯ್ದಿದನು ॥೮॥ಎಲೈ ಅರಸೇ ಕೇಳು, ಅನಂತರದಲ್ಲಿ ಸಾಲ್ವನುಮಹತ್ತಾದಸೇನೆಯಿಂದ ಆದ್ವಾರಕಾಪುರವಂ ನಿರೋಧಂಗೆಯ್ದು ಆಪುರವ ಮತ್ತು ಸುತ್ತಲಿರುವ ವನಂಗಳಂ ಉದ್ಯಾನಂಗಳಂಸಹ ಮುರಿದನು ॥೯॥ ಪುರದ್ವಾರಂಗಳಂ ಹೊರಗಿರುವ ದ್ವಾರಂಗಳಂ ರಾಜಗೃಹಂಗಳಂ ಚಂದ್ರಶಾಲೆಗಳಂ ಅದರಸುತ್ತಲಿರುವ ಗೋಡೆಗಳಂ ಕ್ರೀಡಾಸ್ಥಾನಂಗಳಂಸಹ ಮುರಿದನು. ವರಲಬ್ಧವಾದ ಉತ್ತಮವಾದ ಆವಿಮಾನದವೆಸೆಯಿಂದ ಶಸ್ತ್ರವರ್ಷಂಗಳು ॥೧೦॥ ಪಾಷಾಣಂಗಳು

ಕ್ರವಾತೋಽಭೂದ್ರಜಸಾಚ್ಛಾದಿತಾದಿಶಃ ||೧೧|| ಇತ್ಯರ್ದ್ಯಮಾನಾಸೌಭೇನಕೃಷ್ಣಸ್ಯನಗರೀಭೃಶಂ |
ನಾಭ್ಯಪದ್ಯತಶಂರಾಜನ್ ತ್ರಿಪುರೇಣಯಥಾಮಹೀ ||೧೨|| ಪ್ರದ್ಯುಮ್ನೋಭಗವಾನ್ ವೀಕ್ಷ್ಯಬಾಧ್ಯಮಾ
ನಾನಿಜಾಃಪ್ರಜಾಃ | ಮಾಭೈಷ್ಟೇತ್ಯಭ್ಯಯಾದ್ವೀರೋರಥಾರೂಢೋಮಹಾರಥಃ ||೧೩|| ಸಾತ್ಯಕಿಶ್ಚಾರು
ದೇಷ್ಣಶ್ಚಸಾಂಬೋಕ್ರೂರಸ್ಸಹಾನುಜೈಃ | ಹಾರ್ದಿಕ್ಯೋಭಾನುವಿಂದಶ್ಚಗದಶ್ಚಶುಕಸಾರಣೌ ||೧೪||
ಅಪರೇಚಮಹೇಷ್ವಾಸಾರಥಯೂಥಪಯೂಥಪಾಃ | ನಿರ್ಯಯುರ್ದಂಶಿತಾಗುಪ್ತಾರಥೇಭಾಶ್ವಪದಾ
ತಿಭಿಃ ||೧೫|| ತತಃಪ್ರವವೃತೇಯುದ್ಧಂಶಾಲ್ವಾನಾಂಯದುಭಿಸ್ಸಹ | ಯಥಾಸುರಾಣಾಂವಿಬುಧೈ
ಸ್ತುಮುಲಂರೋಮಹರ್ಷಣಮ್ ||೧೬|| ತಾಶ್ಚಸೌಭಪತೇರ್ಮಾಯಾದಿವ್ಯಾಸ್ತ್ರೈ ರುಕ್ಮಿಣೀಸುತಃ | ಕ್ಷ

---

ಪ್ಲವು ||೧೦|| ಶಿಲಾಃ-ಕಲ್ಲುಗಳೂ, ದ್ರುಮಾಶ್ಚ-ಮರಗಳೂ, ಅಶನಯಃ-ಸಿಡಿಲುಗಳೂ, ಸರ್ಪಾಃ-ಸಮಸ್ತಗಳಾದ, ಆಸಾರಶರ್ಕರಾಃ-ಪರಂಪರೆಯಾಗಿ ಬೀಳುವಮರಳುಗಳೂ, ಪ್ರಚಂಡಃ-ಅತಿಕ್ರೂರವಾದ, ಚಕ್ರವಾತಃ ಸುಂಟರಗಾಳಿಯೂ, ಅಭೂತ್-ಯಿತು. ದಿಶಃ-ದಿಕ್ಕುಗಳು, ರಜಸಾ-ಧೂಳಿನಿಂದ, ಆಚ್ಛಾದಿತಾಃ-ಹೊದ್ದಿಸಲ್ಪಟ್ಟವು ||೧೧|| ರಾಜನ್-ಪರೀಕ್ಷಿತನೇ, ಮಹೀ-ಭೂಮಿಯು, ತ್ರಿಪುರೇಣ-ಮೂರು ನಗರಗಳಿಂದ, ಯಥಾ-ಹೇಗೋ, ತಥಾ-ಹಾಗೆ, ಸೌಭೇನ-ಸಾಲ್ವನ ವಿಮಾನದಿಂದ, ಇತಿ-ಹೀಗೆ ಅರ್ದ್ಯಮಾನಾ-ಪೀಡಿಸಲ್ಪಡುತಿರುವ, ಕೃಷ್ಣಸ್ಯನಗರೀ-ದ್ವಾರಕೆಯು, ಭೃಶಂ-ಅಧಿಕವಾಗಿ, ಶಂ-ಸುಖವನ್ನು, ನಾಭ್ಯಪದ್ಯತ-ಹೊಂದಲಿಲ್ಲವು ||೧೨|| ಭಗವಾನ್-ಐಶ್ವರ್ಯವುಳ್ಳ, ಪ್ರದ್ಯುಮ್ನಃ-ಕೃಷ್ಣಪುತ್ರನು, ಬಾಧ್ಯಮಾನಾಃ-ಪೀಡಿಸಲ್ಪಡುತ್ತಿರುವ, ನಿಜಾಃಪ್ರಜಾಃ-ತನ್ನ ರೈತರನ್ನು, ವೀಕ್ಷ್ಯ-ನೋಡಿ, ಮಾಭೈಷ್ಟೇತಿ-ಹೆದರಬೇಡಿರೆಂದ ಭಯವಿತ್ತು, ವೀರಃ-ಶೂರನಾದ, ಮಹಾರಥಃ-ರಥಿಕರಲ್ಲಿ ಅಧಿಕನಾದ್ದರಿಂದ, ರಥಾರೂಢಃ-ತೇರನ್ನೇರಿದವರಾಗಿ, ಅಭ್ಯಯಾತ್-ಯುದ್ಧಕ್ಕೆಹೊರಟನು ||೧೩|| ಸಾತ್ಯಕಿಃ-ಶೈನೇಯನೂ, ಚಾರುದೇಷ್ಣಶ್ಚ-ಸತ್ಯಭಾಮೆಯಮಗನೂ, ಸಾಂಬಃ-ಜಾಂಬವತಿಯ ಮಗನೂ, ಅಕ್ರೂರನೂ, ಹಾರ್ದಿಕ್ಯನೂ, ಭಾನುವಿಂದನೂ, ಗದನೂ, ಶುಕನೂ, ಸಾರಣನೂ, ಸಹಾನುಜೈಃ-ತಮ್ಮಂದಿರೊಡಗೂಡಿ ||೧೪|| ಅಪರೇ-ಇತರರಾದ, ಮಹೇಷ್ವಾಸಾಶ್ಚ-ದೊಡ್ಡಬಿಲ್ಲುಗಳುಳ್ಳವರೂ, ರಥಯೂಥಪಯೂಥಪಾಃ-ತೇರುಗಳ ಗುಂಪುಗಳಿಗೊಡೆಯರಿಗಧಿಪತಿಗಳಾದವರು, ದಂಶಿತಾಃ-ತಟಿಕಚ್ಚಿಕೊಂಡವರಾಗಿ, ರಥೇಭಾಶ್ವಪದಾತಿಭಿಃ-ಚತುರಂಗ ಸೈನ್ಯಗಳಿಂದ, ಗುಪ್ತಾಃ-ಪಾಲಿಸಲ್ಪಟ್ಟವರಾಗಿ. ನಿರ್ಯಯುಃ-ಹೊರಹೊರಟರು ||೧೫|| ತತಃ-ಆ ಮೇಲೆ, ಶಾಲ್ವಾನಾಂ-ಸಾಲ್ವರಿಗೆ, ಯದುಭಿಸ್ಸಹ-ಯಾದವರೊಡನೆ, ಅಸುರಾಣಾಂ-ದೈತ್ಯರಿಗೆ, ವಿಬುಧೈರ್ಯಥಾ-ದೇವತೆಗಳಿಗೆ ಹೇಗೋಹಾಗೆ, ರೋಮಹರ್ಷಣಂ-ಭಯಂಕರವಾದ, ತುಮುಲಂಯುದ್ಧಂ-ಜೊಂಬಿಜಗಳವು, ಪ್ರವವೃತೇ-ನಡೆಯಿತು ||೧೬|| ರುಕ್ಮಿಣೀಸುತಃ-ಪ್ರದ್ಯುಮ್ನನು, ಸೌಭಪತೇಃ-ಸಾಲ್ವನು, ತಾಃಮಾಯಾಶ್ಚ-ಆ ಮಾ

---

ವೃಕ್ಷಂಗಳು ಸಿಡಿಲುಗಳು ಸರ್ಪಂಗಳು ಜಲಧಾರೆಗಳುಬೀಳುವಂತೆ ಆನೆವರಲುಗಳು ಸಹ ಸುರಿಸಲ್ಪಟ್ಟು ಮತ್ತು ಸುಂಟರಗಾಳಿಯು ಬೀಸಿದಂತಿಯದಾಗಲು, ದಿಕ್ಕುಗಳಿಂದ ಆಚ್ಛಾದಿತಂಗೆಯಲ್ಪಟ್ಟು ||೧೧|| ಆಗ ಈರೀತಿಯಿಂದ ಭೂಮಿಯು ತ್ರಿಪುರಂಗಳಿಂ ಸುಖವನೆಯ್ದಲಿಲ್ಲವೋ ಆರೀತಿಯಾಗಿ ಸಾಲ್ವನವಿಮಾನದಿಂ ಅತ್ಯಂತಭಗ್ನವಾಗಿಮಾಡಲ್ಪಟ್ಟ ದ್ವಾರಕಾಪುರವು ಸುಖವನೆಯ್ದಲಿಲ್ಲ ||೧೨|| ಆಗ ಭಗವಂತನಾದ ಮಹಾರಥನಾದ ಪ್ರದ್ಯುಮ್ನನು ಸಂಹಾರಂಗೆಯ್ಯಲ್ಪಡುತಲಿರುವ ಸ್ವಕೀಯರಾದ ಪ್ರಜೆಗಳಂನೋಡಿ ಭಯಪಡುವರಾಗಬೇಡಿಯೆಂದು ಅವರಿಗೆ ಭಯವನಿತ್ತು ತೆರಳಿದನು ||೧೩|| ಆಗ ಸಾತ್ಯಕಿಯು, ಚಾರುದೇಷ್ಣನು, ಸುದೇಷ್ಣನು, ಅಕ್ರೂರನು, ಅಕ್ರೂರನತಮ್ಮನಾದ ಹಾರ್ದಿಕ್ಯನು, ಭಾನುವಿಂದನು, ಗದನು, ಶುಕಸಾರಣರು ||೧೪|| ಮತ್ತು ಮಹತ್ತಾದ ಧನುಸ್ಸಂಧಿಸಿರುವ ರಥಸಮೂಹಂಗಳಿಗೆ ಅಧಿಪತಿಗಳಾದ ಶೂರರಿಗೂ ನಿಯಾಮಕರಾದ ಕವಚಧಾರಿಗಳಾದ ಅರಸುಗಳು ಕೂಡ ರಥಾಶ್ವಗಜಪದಾತಿಗಳಿಂದ ರಕ್ಷಿಸಲ್ಪಡುತ್ತಲಿರುವರಾಗಿ ಯುದ್ಧಕ್ಕೋಸುಗ ತೆರಳಿದರು ||೧೫|| ಅನಂತರದಲ್ಲಿ ಈರೀತಿಯಿಂ ದೇವತೆಗಳೊಡನೆ ದೈತ್ಯರಿಗೆ ಯುದ್ಧವುಂಟಾಗುದೋ, ಆರೀತಿಯಿಂ ಸಾಲ್ವದೇಶಸ್ಥರಾದ ಅರಸುಗಳಿಗೆ ಯಾದವರೊಡನೆ ವ್ಯಾಕುಲವೊಡನೆ ಭಯಂಕರವಾದ ಯುದ್ಧವು ನಡೆದಂತಿಯದಾಯಿತು ||೧೬|| ಆಗ

ಣೇನನಾಶಯಾಮಾಸನೈಶಂತಮಇವೋಷ್ಣಗುಃ ॥೧೭॥ ವಿವ್ಯಾಧಪಂಚವಿಂಶತ್ಯಾಸ್ವರ್ಣಪುಂಖೈರ
ಯೋಮುಖೈಃ ।ಸಾಲ್ವಸಧ್ವಜಿನೀಪಾಲಂಶರೈಸ್ಸನ್ನತಪರ್ವಭಿಃ ॥೧೮॥ ಶರೇಣಾತಾಡಯತ್ಸಾಲ್ವ
ಮೇಕೈಕೇನಾಸ್ಯಸೈನಿಕಾನ್ । ದಶಭಿರ್ದಶಭಿರ್ನೇತ್ರೄನ್ವಾಹನಾನಿತ್ರಿಭಿಸ್ತ್ರಿಭಿಃ ॥೧೯॥ ತದದ್ಭುತಂಮ
ಹತ್ಕರ್ಮಪ್ರದ್ಯುಮ್ನಸ್ಯಮಹಾತ್ಮನಃ । ದೃಷ್ಟ್ವಾತಂಪೂಜಯಾಮಾಸುಸ್ಸರ್ವೇಸ್ವಪರಸೈನಿಕಾಃ॥೨೦॥
ಬಹುರೂಪೈಕರೂಪಂತದ್ದೃಶ್ಯತೇನಚದೃಶ್ಯತೇ । ಮಾಯಾಮಯಂಮಯಕೃತಂದುರ್ವಿಭಾವ್ಯಂಪರೈರ
ಭೂತ್॥೨೧॥ಕ್ವಚಿದ್ಭೂಮೌಕ್ವಚಿದ್ವ್ಯೋಮ್ನಿಗಿರಿಮೂರ್ಧ್ನಿಜಲೇಕ್ವಚಿತ್।ಅಲಾತಚಕ್ರವದ್ಭ್ರಾಮ್ಯ
ತ್ಸೌಭಂತದ್ದುರವಸ್ಥಿತಮ್॥೨೨॥ಯತ್ರಯತ್ರೋಪಲಕ್ಷ್ಯೇತಸಸೌಭಸ್ಸಹಸೈನಿಕಃ । ಸಾಲ್ವಸ್ತತಸ್ತ

---

ಚನೆಗಳನ್ನೂ, ದಿವ್ಯಾಸ್ತ್ರೈಃ-ದೇವಶಸ್ತ್ರಂಗಳಿಂದ, ಉಷ್ಣಗುಃ-ಸೂರ್ಯನು, ನೈಶಂತಮಇವ-ಇರುಳ ಕತ್ತಲೆಯನ್ನಂತೆ ಕ್ಷಣೇನ ನಿಮಿಷದಲ್ಲಿ, ನಾಶಯಾಮಾಸ-ಧ್ವಂಸಮಾಡಿದನು ॥೧೭॥ ಸ್ವರ್ಣಪುಂಖೈಃ-ಚಿನ್ನದ ಗರಿಗಳುಳ್ಳ, ಅಯೋಮುಖೈಃ-ಉಕ್ಕಿನ ಅಲಗುಗಳುಳ್ಳ, ಸನ್ನತಪರ್ವಭಿಃ-ಬಗ್ಗಿದ ಗಿಣ್ಣುಗಳುಳ್ಳ, ಪಂಚವಿಂಶತ್ಯಾಶರೈಃ-೨೫ ಬಾಣಗಳಿಂದ, ಸಾಲ್ವಸ್ಯ-ಸಾಲ್ವನ, ಧ್ವಜಿನೀಪಾಲಂ-ದಳವಾಯಿಯನ್ನು, ವಿವ್ಯಾಧ-ನೋಯಿಸಿದನು ॥೧೮॥ ಸಾಲ್ವಂ-ಸಾಲ್ವನನ್ನು, ಶರೇಣ-ಬಾಣದಿಂದ, ಅಸ್ಯ- ಅವನ, ಸೈನಿಕಾನ್-ದಂಡಿನವರನ್ನು, ಏಕೈಕೇನ-ಒಂದೊಂದು ಬಾಣದಿಂದಲೂ, ನೇತ್ರೄನ್-ಸೇನಾಪತಿಗಳನ್ನೂ, ದಶಭಿರ್ದಶಭಿಃ- ಪತ್ತುಹತ್ತು ಕಣೆಗಳಿಂದಲೂ, ವಾಹನಾನಿ-ಯಾನಗಳನ್ನು, ತ್ರಿಭಿಸ್ತ್ರಿಭಿಃ-ಮೂರುಮೂರು ಸರಳುಗಳಿಂದಲೂ, ಅತಾಡಯತ್-ಹೊಡೆದನು ॥೧೯॥ ಮಹಾತ್ಮನಃ-ಶ್ರೇಷ್ಠಬುದ್ಧಿಯುಳ್ಳ. ಪ್ರದ್ಯುಮ್ನಸ್ಯ-ಪ್ರದ್ಯುಮ್ನನ, ತತ್-ಆ, ಅದ್ಭುತಂ-ಆಶ್ಚರ್ಯವಾದ, ಮಹತ್ಕರ್ಮ-ದೊಡ್ಡಕೆಲಸವನ್ನು, ದೃಷ್ಟ್ವಾ-ನೋಡಿ, ತಂ-ಆ ಪ್ರದ್ಯುಮ್ನನನ್ನು, ಸ್ವಪರಸೈನಿಕಾಃ-ತನ್ನ ದಂಡಿನವರೂ ಹಗೆಯ ದಂಡಿನವರೂ, ಸರ್ವೇ-ಎಲ್ಲರೂ, ಪೂಜಯಾಮಾಸುಃ-ಸನ್ಮಾನಿಸಿದರು ॥೨೦॥ ಬಹುರೂಪೈಕರೂಪಂ- ಹಲವಾಕಾರವುಳ್ಳದ್ದೂ ಒಂದಾಕಾರವುಳ್ಳದ್ದೂ ಆದ, ತತ್-ಆಸೌಭನಗರವು, ಮಾಯಾಮಯಂ-ಮೋಸಹೆಚ್ಚು ಉಳ್ಳದ್ದಾಗಿಯೂ ಭ್ರಾಂತಿಜನಕವಾಗಿಯೂ, ಪರೈಃ-ಇತರರಿಂದ, ದುರ್ವಿಭಾವ್ಯಂ-ತರ್ಕಿಸಲ್ಪಡಲಶಕ್ಯವಾದ್ದೂ ಆಗಿ, ಮಯಕೃತಂ-ಮಯಾಸುರನಿಂದಮಾಡಲ್ಪಟ್ಟದ್ದು, ಅಭೂತ್-ಆಯಿತು. ತತ್-ಅದು, ದೃಶ್ಯತೇ-ಕಾಣಿಸುವುದು, ನದೃಶ್ಯತೇಚ-ಕಾಣಲ್ಪಡುವುದೂ ಇಲ್ಲ ॥೨೧॥ ಕ್ವಚಿತ್-ಒಂದುಕಾಲದಲ್ಲಿ ಭೂಮೌ-ನೆಲದಲ್ಲಿಯೂ, ಕ್ವಚಿತ್-ಮತ್ತೊಂದು ಕಾಲದಲ್ಲಿ,ವ್ಯೋಮ್ನಿ, ಆಕಾಶದಲ್ಲಿಯೂ, ಗಿರಿಮೂರ್ಧ್ನಿ-ಬೆಟ್ಟದ ಶಿಖರದಲ್ಲಿಯೂ, ಕ್ವಚಿತ್-ಒಂದು ಹೊತ್ತಿನಲ್ಲಿ ಜಲೇ-ನೀರಿನಲ್ಲಿಯೂ, ಅಲಾತಚಕ್ರವತ್- ಉರುಟಾಗಿತಿರುಗುತ್ತಿರುವ ಕೊಳ್ಳಿಯಂತೆ, ಭ್ರಾಮ್ಯತ್-ತಿರುಗುತ್ತಿರುವ, ತತ್ಸೌಭಂ-ಆ ನಗರವು, ದುರವಸ್ಥಿತಂ-ದುರೂಹವಾದ ನಿಲುಕಡೆಯುಳ್ಳದ್ದಾಗಿದೆ॥೨೨॥

---

ಪ್ರದ್ಯುಮ್ನನು ದಿವ್ಯಾಸ್ತ್ರಂಗಳಿಂ ಕ್ಷಣದಿಂ ಆಸಾಲ್ವನ ಮಾಯೆಯಿಂ ಅಂಧಕಾರವಂ ಸಹ ಸೂರ್ಯನಂತೆ ನಾಶಂಗೆಯ್ದನು. ॥೧೭॥ ಮತ್ತು ಪ್ರದ್ಯುಮ್ನನು ಸುವರ್ಣಮಯಂಗಳಾದ ಮೊಲೆಗಳಿಂದ ಉಕ್ಕಿನಿಂ ರಚಿಸಲ್ಪಟ್ಟ ಅಲಗುಗಳುಳ್ಳ ತಗ್ಗಿರುವ ಗೆಣ್ಣುಗಳುಳ್ಳ ಇಪ್ಪತ್ತೈದು ಬಾಣಗಳಿಂ ಸಾಲ್ವನ ಸೇನಾಪತಿಯಂ ಪ್ರಹರಿಸಿದನು ॥೧೮॥ ಮತ್ತು ಪ್ರದ್ಯುಮ್ನನು ಅನೇಕಬಾಣಂಗಳಿಂ ಸಾಲ್ವನಂ ಪ್ರಹರಿಸಿದನು, ಒಂದೊಂದು ಬಾಣದಿಂ ಭಟರಂ ಹತ್ತುಹತ್ತು ಬಾಣಂಗಳಿಂ ಸೇನಾಪತಿಗಳಂ ಮೂರುಮೂರು ಬಾಣಂಗಳಿಂ ಸಹ ವಾಹನಂಗಳಂ ಪ್ರಹರಿಸಿದನು ॥೧೯॥ ಆ ಕಾಲದಲ್ಲಿ ಉಭಯಸೇನೆಯಲ್ಲಿರುವ ಶೂರರೆಲ್ಲರೂ ಮಹಾತ್ಮನಾದ ಪ್ರದ್ಯುಮ್ನನ ಆಶ್ಚರ್ಯಕರವಾದ ಆಯುದ್ಧವ್ಯಾಪಾರವಂ ನೋಡಿ ಪ್ರದ್ಯುಮ್ನನಂ ಸಂಮಾನಂಗೆಯ್ದರು॥೨೦॥ ಆಗ ಮಯನಿಂ ನಿರ್ಮಿತವಾದ ಮಾಯಾಮಯವಾದ ಆಸಾಲ್ವನ ವಿಮಾನವು ಒಂದುವೇಳೆಯಲ್ಲಿ ಅನೇಕರೂಪವಾಗಿ ಒಂದುವೇಳೆಯಲ್ಲಿ ಕಾಣಿಸಲ್ಪಡುತ ಒಂದುಕಾಲದಲ್ಲಿ ಕಾಣಲ್ಪಡದೇ ಸಹ ಇರುತ್ತ ಅನ್ಯರಿಂದ ಊಹಿಸಲಶಕ್ಯವಾಗುತ್ತಿತ್ತು ॥೨೧॥ ಮತ್ತು ಆಸೌಭವೆಂಬ ವಿಮಾನವು ಒಂದುವೇಳೆ ಪರ್ವತದ ಶಿಖರದಲ್ಲಿ ಒಂದುವೇಳೆ ಜಲದಲ್ಲಿ ಈರೀತಿಯು ಅಲಾತಚಕ್ರದಂತೆ ತಿರುಗುತ್ತ ಒಂದುಕಡೆಯಲ್ಲಿಯೂ ನಿಲ್ಲದೆ ತಿರುಗುತ್ತಲಿರುವುದಾಯಿತು ॥೨೨॥ ಆವಿಮಾನದೊಡನೆ ಸೇನಾಜನರೊಡ

ತೋಽಮುಂಚಛ್ಛರಾನ್ ಸಾತ್ವತಯೂಥಪಾಃ ॥೨೩॥ ಶರೈರಗ್ನ್ಯರ್ಕಸಂಸ್ಪರ್ಶೈರಾಶೀವಿಷದುರಾಸದೈಃ।
ಪಾಟ್ಯಮಾನಪುರಾನೀಕಸ್ಸಾಲ್ವೋಮುಹ್ಯತ್ಪರೇರಿತೈಃ ॥೨೪॥ ಸಾಲ್ವಾನೀಕಪಶಸ್ತ್ರೌಘೈರ್ವೃಷ್ಣಿ
ವೀರಾಭೃಶಾರ್ದಿತಾಃ । ನ ತತ್ಯಜೂರಣಂಸ್ವಂಸ್ವಂಲೋಕದ್ವಯಜಿಗೀಷವಃ ॥೨೫॥ ಸಾಲ್ವಾಮಾ
ತ್ಯೋದ್ಯುಮಾನ್ನಾಮ ಪ್ರದ್ಯುಮ್ನಂ ಪ್ರಾಕ್ಪ್ರಪೀಡಿತಃ । ಆಸಾದ್ಯಗದಯಾಮೌರ್ವ್ಯಾ ವ್ಯಾಹತ್ಯವ್ಯ
ನದದ್ಬಲೀ ॥೨೬॥ ತಂದ್ಯುಮದ್ಗದಯಾಶೀರ್ಣವಕ್ಷಸ್ಥಲಮರಿಂದಮಮ್ । ಅಪೋವಾಹರಣಾತ್ಸೂತೋ
ಧರ್ಮವಿದ್ದಾರುಕಾತ್ಮಜಃ ॥೨೭॥ ಲಬ್ಧಸಂಜ್ಞೋಮುಹೂರ್ತೇನ ಕಾರ್ಷ್ಣಿಸ್ಸಾರಥಿಮಬ್ರವೀತ್ । ಅ

---

ಸಸೌಭಃ-ಸೌಭವಿಮಾನದಿಂ ಸಹಿತನಾದ, ಸಹಸೈನಿಕಃ-ದಂಡಿನಜನಗಳಿಂ ಕೂಡಿದವನಾದ, ಸಾಲ್ವಃ-ಸಾಲ್ವರಾಜನು, ಯತ್ರ ಯತ್ರ-ಎಲ್ಲಿಯೆಲ್ಲಿ, ಉಪಲಕ್ಷ್ಯೇತ-ಕಾಣಿಸುವನೋ, ತತಸ್ತತಃ-ಅಲ್ಲಿಯಲ್ಲಿ, ಸಾತ್ವತಯೂಥಪಾಃ-ಯಾದವಸೇನಾಪತಿಗಳು, ಶರಾನ್-ಬಾಣಂಗಳನ್ನು, ಅಮುಂಚನ್-ಬಿಟ್ಟರು ॥೨೩॥ ಆಶೀವಿಷದುರಾಸದೈಃ-ಸರ್ಪದಂತೆ ಸೋಂಕಲಸದಳವಾದ, ಅಗ್ನ್ಯರ್ಕಸಂಸ್ಪರ್ಶೈಃ-ಬೆಂಕಿಯನ್ನೂ ಸೂರ್ಯನನ್ನೂ ಸೋಂಕಿದಂತಾಗುವ ಪರೇರಿತೈಃ-ವೈರಿಗಳಾದ ಯಾದವರಿಂ ಪ್ರಯೋಗಿಸಲ್ಪಟ್ಟ, ಶರೈಃ-ಬಾಣಗಳಿಂದ, ಪಾಟ್ಯಮಾನಪುರಾನೀಕಃ-ಸೀಳಲ್ಪಡುತ್ತಿರುವ ಸೌಭನಗರದ ಸೇನೆಯುಳ್ಳವನಾದ, ಸಾಲ್ವಃ-ಸಾಲ್ವನು, ಅಮುಹ್ಯತ್-ಮೋಹಗೊಂಡನು ॥೨೪॥ ಸಾಲ್ವಾನೀಕಪಶಸ್ತ್ರೌಘೈಃ-ಸಾಲ್ವನ ಸೇನಾಪತಿಗಳಆಯುಧಗಳಿಂದಲೂ ಬಾಣಗಳಿಂದಲೂ, ಭೃಶಾರ್ದಿತಾಃ-ಅಧಿಕವಾಗಿ ಪೀಡಿಸಲ್ಪಟ್ಟ, ವೃಷ್ಣಿವೀರಾಃ-ಯಾದವಶೂರರು, ಲೋಕದ್ವಯಜಿಗೀಷವಃ-ಇಹಪರಗಳನ್ನು ಗೆಲ್ಲಬಯಸಿದವರಾದ್ದರಿಂದ, ಸ್ವಂಸ್ವಂರಣಂ-ತಮ್ಮತಮ್ಮಯುದ್ಧವನ್ನು, ನತತ್ಯಜುಃ-ಬಿಡಲಿಲ್ಲ ॥೨೫॥ ಪ್ರಾಕ್-ಪೂರ್ವದಲ್ಲಿ, ಪ್ರಪೀಡಿತಃ-ಹೆಚ್ಚಾಗಿ ನೋಯಿಸಲ್ಪಟ್ಟ, ದ್ಯುಮಾನ್ನಾಮ-ದ್ಯುಮಂತನೆಂದು ಪ್ರಸಿದ್ಧನಾದ, ಸಾಲ್ವಾಮಾತ್ಯಃ-ಸಾಲ್ವನಮಂತ್ರಿಯು, ಪ್ರದ್ಯುಮ್ನಂ-ಕೃಷ್ಣನಮಗನನ್ನು, ಆಸಾದ್ಯ-ತಗುಲಿ, ಮೌರ್ವ್ಯಾ-ಕಬ್ಬಿಣದ, ಗದಯಾ-ಗದಾಯುಧದಿಂದ, ವ್ಯಾಹತ್ಯ-ಹೊಡೆದು, ಬಲೀ-ಬಲವಂತನಾದ್ದರಿಂದ, ವ್ಯನದತ್-ವಿಶೇಷವಾಗಿ ಕೂಗಿದನು ॥೨೬॥ ಧರ್ಮವಿತ್-ಯುದ್ಧಧರ್ಮವನ್ನು ಬಲ್ಲ, ದಾರುಕಾತ್ಮಜಃ-ಕೃಷ್ಣನ ಸಾರಥಿಯಮಗನಾದ, ಸೂತಃ-ಪ್ರದ್ಯುಮ್ನನಸಾರಥಿಯು, ದ್ಯುಮದ್ಗದಯಾ-ದ್ಯುಮಂತನಗದಾಯುಧದಿಂದ, ಶೀರ್ಣವಕ್ಷಸ್ಥಳಂ-ಸೀಳಿದ ಯೆದೆಯುಳ್ಳ, ಅರಿಂದಮಂ-ಅವೈರಿಗಳನ್ನು, ಅಣಗಿಸುವನಾದ, ತಂ-ಆ ಪ್ರದ್ಯುಮ್ನನನ್ನು, ರಣಾತ್-ಯುದ್ಧದ ದೆಸೆಯಿಂದ, ಅಪೋವಾಹ-ಹಿಂದಕ್ಕೊಯ್ದನು ॥೨೭॥ ಮೂಹೂರ್ತೇನ-ತಾಸುಹೊತ್ತಿನಿಂದ, ಲಬ್ಧಸಂಜ್ಞಃ-ಪಡೆಯಲ್ಪಟ್ಟ ಅರಿವುಳ್ಳವನಾದ, ಕಾರ್ಷ್ಣಿಃ-ಕೃಷ್ಣನಮಗನು, ಸಾರಥಿಂ-ದಾರುಕನಮಗನಂ ಕುರಿತು, ಅಬ್ರವೀತ್-ನುಡಿದನು, ಹೇಸೂತ-ಎಲೈ ಸಾರಥಿಯೇ, ರಣಾತ್-ಯುದ್ಧದ ದೆಸೆಯಿಂದ, ಮೇ-ನನ್ನನ್ನು, ಅಪಕರ್ಷಣಂ-ಹಿಂ

---

ನೆಯೂ ಕೂಡಿರುವ ಆಸಾಲ್ವನು ಎಲ್ಲಿಕಾಣಲ್ಪಡುವನೋ ಅಲ್ಲಿಯಾದವರು ಬಾಣಂಗಳಂ ಪ್ರಯೋಗಿಸಿದರು ॥೨೩॥ ಆಗ ಸಾಲ್ವನು ದಹಿಸುವನಾಗಿ ಸೂರ್ಯನಂತೆ ಏಕಕಾಲದಲ್ಲಿ ಸರ್ವತ್ರಸ್ಪರ್ಶವುಳ್ಳವನಾಗಿ ಸರ್ಪಗಳಂತೆ ಒಂದುಕಡೆಯಲ್ಲಿ ತಗುಲಿದಮಾತ್ರದಿಂದ ಶತ್ರುಗಳಂ ಸಂಹರಿಸುವನಾಗಿ ಸಹಿಸಲಶಕ್ಯಂಗಳಾಗಿಯೂ ಇರುವ ಯಾದವರಿಂ ಬಿಡಲ್ಪಟ್ಟ ಬಾಣಂಗಳಿಂ ಸೀಳಲ್ಪಡುತಲಿರುವ ತನ್ನವಿಮಾನವೂ ಸೇನೆಗಳುಕೂಡವುಳ್ಳವನಾಗಿ ಮೋಹವನೈದಿದನು ॥೨೪॥ ಆಗ ಶೂರರಾದ ಯಾದವರು ಸಾಲ್ವನ ಸೇನಾಪತಿಗಳಿಂದ ಬಿಡಲ್ಪಟ್ಟ ಶಸ್ತ್ರಸಮೂಹಂಗಳಿಂ ಅತ್ಯಂತವಾಗಿ ಕೊಲ್ಲಲ್ಪಟ್ಟವರಾದರೂ ಇಹಲೋಕಪರಲೋಕಂಗಳಂ ಜಯಿಸಲಿಚ್ಛೆಯುಳ್ಳವರಾಗಿ ತಮ್ಮತಮ್ಮ ಯುದ್ಧಭೂಮಿಯಂ ಬಿಟ್ಟವರಾಗಲಿಲ್ಲ ॥೨೫॥ ಆಗ ಪೂರ್ವದಲ್ಲಿ ಪ್ರದ್ಯುಮ್ನನಿಂ ಪೀಡಿಸಲ್ಪಟ್ಟ ದ್ಯುಮಂತನೆಂಬ ಸಾಲ್ವನಮಂತ್ರಿಯುಬಂದು ಉಕ್ಕಿನಿಂ ರಚಿಸಲ್ಪಟ್ಟ ಗದೆಯಿಂ ಪ್ರದ್ಯುಮ್ನನಂ ಪ್ರಹರಿಸಿ ಸಿಂಹನಾದಂಗೆಯ್ದನು ॥೨೬॥ ಆಗ ಧರ್ಮಜ್ಞನಾದ ದಾರುಕಪುತ್ರನಾದ ಸಾರಥಿಯು ದ್ಯುಮಂತನಂ ಗದೆಯಿಂ ಸೀಳಲ್ಪಟ್ಟ ವಕ್ಷಸ್ಥಳವುಳ್ಳ ಪ್ರದ್ಯುಮ್ನನು ಯುದ್ಧದದೆಸೆಯಿಂದ ಆಚೆಗೆ ಕರೆದುಕೊಂಡುಹೋದನು ॥೨೭॥ ಅನಂತರದಲ್ಲಿ ಒಂದು ಮುಹೂರ್ತದಿಂ ಪುನಃ ಪ್ರಜ್ಞೆಯನೈದಿರುವ ಪ್ರದ್ಯುಮ್ನನು ಸಾರಥಿಯಂ ಕುರಿತು ಈರೀತಿಯಾಗಿ ನು

ಹೋಽಸಾಧ್ವಿದಂಸೂತಯದ್ರಣಾನ್ಮೇಽಪಕರ್ಷಣಮ್ ॥೨೮॥ ನಯದೂನಾಂಕುಲೇ ಜಾತಶ್ಶೂರೋಯಾತಿ
ರಣಾಚ್ಚ್ಯುತಃ । ವಿನಾಮತ್ಕ್ಲೀಬಚಿತ್ತೇನಸೂತೇನಪ್ರಾಪ್ತಕಿಲ್ಬಿಷಾತ್ ॥೨೯॥ ಕಿಂನುವಕ್ಷ್ಯೇಭಿಸಂಗಮ್ಯ
ಪಿತರೌರಾಮಕೇಶವೌ । ಯುದ್ಧಾದ್ಧರ್ಮಾದ್ಯಪಕ್ರಾಂತಃಪೃಷ್ಟಸ್ತತ್ರಾತ್ಮನಃಕ್ಷಮಮ್ ॥೩೦॥ ವ್ಯ
ಕ್ತಂಮೇಕಥಯಿಷ್ಯಂತಿಹಸಂತ್ಯೋಭ್ರಾತೃಜಾಮಯಃ । ಕ್ಲೈಬ್ಯಂಕಥಂಕಥಂವೀರತವಾನ್ಯೈಃಕಥ್ಯ
ತಾಂಮೃಧೇ ॥೩೧॥ ಸೂತಃ ॥ ಧರ್ಮಂವಿಜಾನತಾಯುಷ್ಮನ್ಕೃತಮೇತನ್ಮಯಾವಿಭೋ । ಸೂತಃಕೃಚ್ಛ್ರಗತಂ
ರಕ್ಷೇದ್ರಥಿನಂಸಾರಥಿಂರಥೀ ॥೩೨॥ ಏತದ್ವಿದಿತ್ವಾತುಭವಾನ್ಮಯಾಪೋವಾಹಿತೋರಣಾತ್ । ಉಪಸೃಷ್ಟಃ
ಪರೇಣೇತಿಮೂರ್ಛಿತೋಗದಯಾಹತಃ ॥೩೩॥

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಷಟ್ಸಪ್ತತಿತಮೋಧ್ಯಾಯಃ.

ಪಕ್ಕೆ ಯೆಳೆದುತಂದವನ್ನು, ಯತ್-ಯಾವುದೋ, ತದಿದಂ-ಆ ಯೀಕೆಲಸವು, ಅಸಾಧು-ಸರಿಯಾದ್ದಲ್ಲವು. ಅಹೋ-ದುಃಖಕರವಾ
ಷ್ಟು ॥೨೮॥ ಕ್ಲೀಬಚಿತ್ತೇನ-ನಪುಂಸಕಬುದ್ಧಿಯುಳ್ಳ, ಸೂತೇನ-ಸಾರಥಿಯಿಂದ, ಪ್ರಾಪ್ತಕಿಲ್ಬಿಷಾತ್-ಹೊಂದಲ್ಪಟ್ಟ ಅಪಕೀ
ರ್ತಿಯುಳ್ಳವನಾದ,ಮತ್ವಿನಾ-ನನ್ನಂಹೊರತು, ಯದೂನಾಂ-ಯಾದವರ, ಕುಲೇ-ವಂಶದಲ್ಲಿ, ಜಾತಃ-ಹುಟ್ಟಿದವನಾಗಿ,ರಣವಿಚ್ಯು
ತಃ-ಯುದ್ಧದಲ್ಲಿಹಿಂದೆಗೆದವನು, ನಶ್ರೂಯತೇ-ಕೇಳಲ್ಪಡುವುದಿಲ್ಲ ॥೨೯॥ ಧರ್ಮ್ಯಾತ್-ಸ್ವಧರ್ಮಸಿದ್ಧವಾದ, ಯುದ್ಧಾತ್-
ಕಾಳಗದ ಹೆಸೆಯಿಂದ, ಅಪಕ್ರಾಂತಃ-ಹಿಂದಕ್ಕೆ ಬಂದವನಾದವನು,ಪಿತರೌ-ತಂದೆಗಳಾದ,ರಾಮಕೇಶವೌ- ರಾಮಕೃಷ್ಣರನ್ನು,
ಅಭಿಸಂಗಮ್ಯ-ಇದಿರಿಗೆ ಸೇರಿ, ತತ್ರ-ಅಲ್ಲಿ, ಪೃಷ್ಟಃ-ಕೇಳಲ್ಪಟ್ಟವನಾಗಿ, ಆತ್ಮನಃ-ನನಗೆ, ಕ್ಷಮಂ-ಯೋಗ್ಯವಾದ, ಕಿನ್ನು-
ಯಾವಮಾತನ್ನು, ವಕ್ಷ್ಯೇ-ಹೇಳುವೆನು॥೩೦॥ಭ್ರಾತೃಜಾಮಯಃ-ತಮ್ಮಂದಿರೂತಂಗಿಯರೂ, ಹಸಂತ್ಯಃ-ನಗುತಿರುವರಾಗಿ, ಮೇ-
ನನ್ನ, ಕ್ಲೈಬ್ಯಂ-ನಪುಂಸಕತನವನ್ನು, ವ್ಯಕ್ತಂ-ಸ್ಪಷ್ಟವಾಗಿ,ಕಥಯಿಷ್ಯಂತಿ-ಹೇಳುವರು ವೀರ-ಶೂರನಾದವನೇ, ಅನ್ಯೈಃ-
ವೈರಿಗಳೊಡನೆ, ಮೃಧೇ-ಯುದ್ಧದಲ್ಲಿ, ತವ-ನಿನಗೆ, ಕಥಂಕಥಂ-ಹೇಗೇ ಹೇಗೆನಡೆಯಿತೆನ್ನುವರು ॥೩೧॥ ಆಯುಷ್ಮನ್-ಬದು
ಕತಕ್ಕವನಾದ ಪ್ರದ್ಯುಮ್ನನೆ, ಪ್ರಭುವೇ-ಧರ್ಮಂ-ಸಾರಥಿಯ ಧರ್ಮವನ್ನು, ವಿಜಾನತಾ-ತಿಳಿದಿರುವ, ಮಯಾ-ನನ್ನಿಂದ, ಏ
ತತ್-ಈ ಕೆಲಸವು, ಕೃತಂ-ಮಾಡಲ್ಪಟ್ಟಿತು. ಸೂತಃ-ಸಾರಥಿಯಾದವನು, ಕೃಚ್ಛ್ರಗತಂ-ಕಷ್ಟದಲ್ಲಿ ಸಿಕ್ಕಿದ, ರಥಿನಂ- ರಥಿಕ
ನನ್ನು, ರಕ್ಷೇತ್-ಪಾಲಿಸಬೇಕು ರಥೀ-ರಥಿಕನು, ಸಾರಥಿಂ-ಸೂತನನ್ನು ರಕ್ಷಿಸಬೇಕು ॥೩೨॥ ಏತತ್-ಈ ಧರ್ಮವನ್ನು,ವಿ
ದಿತ್ವಾ-ತಿಳಿದು, ಭವಾಂಸ್ತು-ನೀನಾದರೋ, ಪರೇಣ-ವೈರಿಯಿಂದ, ಗದಯಾ-ಗದಾಯುಧದಿಂದ,ಹತಃ-ಬಡಿಯಲ್ಪಟ್ಟವನಾದ್ದರಿಂ
ದ, ಉಪಸೃಷ್ಟಃ-ಉಪದ್ರವಗೊಳಿಸಲ್ಪಟ್ಟವನಾಗಿ, ಮೂರ್ಛಿತಇತಿ-ಮೈಮರೆತಿರುವಿಯೆಂದು, ರಣಾತ್-ಯುದ್ಧದಹೆಸೆಯಿಂ
ದ, ಮಯಾ-ನನ್ನಿಂದ, ಅಪೋವಾಹಿತಃ-ಹಿಂದಕ್ಕೆ ತರಲ್ಪಟ್ಟವನಾಗಿರುವಿ ॥೩೩॥ ೭೬ ನೆಯ ಅಧ್ಯಾಯವು ಮುಗಿದುದು

ಡಿದನದೆಂತೆನೆ,- ಎಲೈಸಾರಥಿಯೇ! ಯುದ್ಧಸ್ಥಾನದ ಹೆಸೆಯಿಂದ ಹಿಂದಕ್ಕೆ ಹೋಗುವುದು ಆವುದುಂಟೋ ಅ
ದು ಉಚಿತವಲ್ಲ ॥೨೮॥ ಅಧೈರ್ಯ ಯುಕ್ತವಾದ ಮನಸ್ಸುಳ್ಳ ಸಾರಥಿಯಾದ ನಿನ್ನಿಂದ ಪಾಪವನೆಯ್ದಿರುವ ನ
ನ್ನೊಬ್ಬನು ಹೊರತು ಯಾದವರಕುಲದಲ್ಲಿ ಜನಿಸಿರುವ ಪುರುಷನೋರ್ವನಾದರೂ ಯುದ್ಧದಲ್ಲಿ ವಿಮುಖನಾದ
ನೆಂದು ಕೇಳಲ್ಪಡಲಿಲ್ಲ ॥೨೯॥ ಮತ್ತು ಯುದ್ಧಧರ್ಮದಿಂದ ಭ್ರಷ್ಟನಾದ ನಾನು ತಂದೆಗಳಾದ ರಾಮಕೃಷ್ಣರ
ಪಾರ್ಶ್ವವನೆಯ್ದಿ ಅವರಿಂ ಪ್ರಶ್ನೆಗೆಯ್ಯಲ್ಪಟ್ಟವನಾದರೆ ಆಗ ನನಗೆ ಯೋಗ್ಯವಾದ ಯಾವವಚನವಂಪೇಳಲಿ ॥೩೦॥
ಮತ್ತು ಆಂಣತಮ್ಮಂದಿರ ಪತ್ನಿಯರು ಯುದ್ಧದಲ್ಲಿ ಶತ್ರುಗಳಿಂ ನಿನಗೆ ಉಂಟಾದ ಧೈರ್ಯವಂಕೇಳಿ ಹಾ
ಸ್ಯವಂಗೆಯ್ವುತ ಎಲೈ, ವೀರನೇ! ಆತ್ಮಪೌರುಷವಂ ಬಹಳವಾಗಿ ಹೇಳಿಕೊಳ್ಳುತಲಿರುವವನಿಗೆ ಯುದ್ಧದಲ್ಲಿ ಪ
ರಾಜಯವುಂಟಾಯಿತೇ? ಎಂದುಪೇಳಿದವರಾಗುತ್ತಾರೆಂದು ಈರೀತಿಯಾಗಿ ಪ್ರದ್ಯುಮ್ನನು ನುಡಿಯಲು ಆಗ
ಸಾರಥಿಯು ಪೇಳಿದನೆಂತೆನೆ ॥೩೧॥ ಎಲೈಆಯುಷ್ಮಂತನಾದ ಪ್ರದ್ಯುಮ್ನನೇ! ಕೇಳು, ರಥದಲ್ಲಿರುವ ಸಾರಥಿಯು
ಕಷ್ಟವನೆಯ್ದಿರುವ ಸ್ವಾಮಿಯಂ ರಥದೊಡನೆ ರಕ್ಷಿಸಬೇಕೆಂಬ ಧರ್ಮವಂ ತಿಳಿದಿರುವ ನನ್ನಿಂದ ಈಕಾರ್ಯವು
ಮಾಡಲ್ಪಟ್ಟಿತಾದ ಕಾರಣದಿಂ ದಿದು ಅನುಚಿತವಲ್ಲ ॥೩೨॥ ನೀನು ಶತ್ರುವಿನಿಂ ಗದೆಯಿಂ ಪ್ರಹರಿಸಲ್ಪಟ್ಟವನಾಗಿ
ಮೂರ್ಛಿತನಾಗಿ ವ್ಯಥೆಯನೆಯ್ದಿದವನಾದೆ ಯೆಂಬರ್ಥವಂ ತಿಳಿದನಾನು ಯುದ್ಧರಂಗದ ಹೆಸೆಯಿಂ ಹಿಂದಕ್ಕೆ ನಿ
ನ್ನ ಕರೆದುಕೊಂಡುಹೋದವನಾದೆನು ॥೩೩॥ ಎಂದು ಸಾರಥಿಯು ಪ್ರದ್ಯುಮ್ನನಂಕುರಿತು ನುಡಿದನೆಂಬರ್ಥವು

ಶ್ರೀಶ್ಲೋಕಃ॥ ಸತೂಪಸ್ಪೃಶ್ಯಸಲಿಲಂದಂಶಿತೋಧೃತಕಾರ್ಮುಕಃ।ನಯಮಾಂದ್ಯುಮತಃಪಾರ್ಶ್ವಂ ವೀರಸ್ಯೇತ್ಯಾಹಸಾರಥಿಮ್ ॥೧॥ ವಿಧಮಂತಂಸ್ವಸೈನ್ಯಾನಿದ್ಯುಮಂತಂರುಕ್ಮಿಣೀಸುತಃ । ಪ್ರತಿಹತ್ಯಪ್ರತ್ಯವಿಧ್ಯನ್ನಾರಾಚೈರಷ್ಟಭಿಸ್ಸ್ಮಯನ್ ॥೨॥ ಚತುರ್ಭಿಶ್ಚತುರೋವಾಹಾನ್ ಸೂತಮೇಕೇನಚಾಹನತ್ । ದ್ವಾಭ್ಯಾಂಧನುಶ್ಚಕೇತುಂಚದ್ಯುಮತೋನ್ಯೇನವೈಶಿರಃ ॥೩॥ ಗದಸಾತ್ಯಕಿಸಾಂಬಾದ್ಯಾಜಘ್ನುಸ್ಸೌಭಪತೇರ್ಬಲಮ್ । ಪೇತುಸ್ಸಮುದ್ರೇಸೌಭೇಯಾಸ್ಸರ್ವೇಸಂಛಿನ್ನಕಂಧರಾಃ ॥೪॥ ಏವಂಯು

೭೭ ನೆಯ ಅಧ್ಯಾಯದ ಪ್ರತಿಪದ ಟೀಕೆ.

ಸತು-ಆ ಪ್ರದ್ಯುಮ್ನನಾದರೋ, ಸಲಿಲಂ-ನೀರನ್ನು, ಉಪಸ್ಪೃಶ್ಯ-ಸೋಂಕಿಸಿಂದು, ದಂಶಿತಃ -ಯುದ್ಧಕ್ಕೆಸಿದ್ಧನಾಗಿ, ಧೃತಕಾರ್ಮುಕಃ-ಹಿಡಿಯಲ್ಪಟ್ಟ ಬಿಲ್ಲುಳ್ಳವನಾಗಿ, ಮಾಂ-ನನ್ನನ್ನು, ವೀರಸ್ಯ-ಶೂರನಾದ, ದ್ಯುಮತಃ-ದ್ಯುಮಂತನ, ಪಾರ್ಶ್ವಂ-ಪಕ್ಕವನ್ನು, ನಯ-ಸೇರಿಸು, ಇತಿ-ಹೀಗೆಂದು, ಸಾರಥಿಂ-ಸೂತನಂ ಕುರಿತು,ಆಹ-ನುಡಿದನು ॥೧॥ ರುಕ್ಮಿಣೀಸುತಃ-ಪ್ರದ್ಯುಮ್ನನು, ಸ್ವಸೈನ್ಯಾನಿ-ತನ್ನ ದಂಡುಗಳನ್ನು, ವಿಧಮಂತಂ_ಬಾಧಿಸುತ್ತಿರುವ,ದ್ಯುಮಂತಂ-ದ್ಯುಮಂತನನ್ನು, ಪ್ರತಿಹತ್ಯ-ತಡೆದು, ಸ್ಮಯನ್-ಗರ್ವಿಸುವವನಾಗಿ, ಅಷ್ಟಭಿರ್ನಾರಾಚೈಃ-೮ ನಾರಸಬಾಣಗಳಿಂದ, ಪ್ರತ್ಯವಿಧ್ಯತ್ -ಹೊಡೆದುನೋಯಿಸಿದನು ॥೨॥ ಅವುಗಳಲ್ಲಿಚತುರ್ಭಿಃ-ನಾಲ್ಕು ಬಾಣಗಳಿಂದ, ಸೂತಂ-ಸಾರಥಿಯನ್ನೂ, ದ್ವಾಭ್ಯಾಂ-ಎರಡುಕಣೆಗಳಿಂದ ಧನುಶ್ಚಕೇತುಂಚ-ಬಿಲ್ಲನ್ನೂ ಪತಾಕೆಯನ್ನೂ, ಅನ್ಯೇನ-ಮತ್ತೊಂದುಸರಳಿನಿಂದ, ದ್ಯುಮತಶ್ಶಿರಶ್ಚ-ದ್ಯುಮಂತನ ತಲೆಯನ್ನೂ, ಅಹನತ್-ಕೊಂದನು ॥೩॥ ಗದಸಾತ್ಯಕಿಸಾಂಬಾದ್ಯಾಃ-ಕೃಷ್ಣನತಮ್ಮಂದಿರಾದ ಗದನೂ ಸಾತ್ಯಕಿಯೂ, ಮಕ್ಕಳಾದ ಸಾಂಬನೇ ಮೊದಲಾದವರು, ಸೌಭಪತೇಃ-ಸಾಲ್ವನ, ಬಲಂ-ದಂಡನ್ನು, ಜಘ್ನುಃ-ಹೊಡೆದರು ಸೌಭೇಯಾಸ್ಸರ್ವೇ-ಸೌಭದಲ್ಲಿದ್ದವರೆಲ್ಲರೂ,ಸಂಛಿನ್ನಕಂಧರಾಃ-ಅರಿಯಲ್ಪಟ್ಟ ಕೊರಳುಳ್ಳವರಾದ್ದರಿಂದ, ಸಮುದ್ರೇ-ಕಡಲಿನಲ್ಲಿ, ಪೇತುಃ-ಬಿದ್ದುಹೋದರು ॥೪॥ ಏವಂ-ಹೀ

ಇಂತು ಶ್ರೀಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸಿದನೆಂದು ಸೂತಪೌರಾಣಿಕನು ನೈಮಿಶಾರಣ್ಯವಾಸಿಗಳಾದ ಶೌನಕಾದಿ ಮಹರ್ಷಿಗಳಿಗೆ ಪೇಳಿದನೆಂಬಲ್ಲಿಗೆಶ್ರೀ ಮನ್ಮಹೀಶೂರ ಪುರವರಾಧೀಶ ಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜವಿರಚಿತಮಾದ "ಶ್ರೀಕೃಷ್ಣರಾಜವಾಣೀವಿಲಾಸ,,ಮೆಂಬ ಶ್ರೀಭಾಗವತಪುರಾಣದ ಕರ್ಣಾಟಭಾಷಾವ್ಯಾಖ್ಯಾನದಲ್ಲಿ ದಶಮಸ್ಕಂಧದ ೭೬ನೆಯಧ್ಯಾಯಂ ಮುಗಿದುದು.

## ೭೭ನೆಯ ಅಧ್ಯಾಯವು.

ಶ್ರೀಧರೀಯಶ್ಲೋಕಃ ॥ ಸಪ್ತಸಪ್ತತಿತಮೇನಾನಾಮಾಯಾವಿಚಕ್ಷಣಃ । ಕೃಷ್ಣೇನಾಗತ್ಯಸಾಲ್ವಸ್ತುಹತಸ್ಸೌಭಂಚಚೂರ್ಣಿತಂ ॥೧॥ ಟೀ॥ ಎಪ್ಪತ್ತೇಳನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ಧರ್ಮರಾಯನ ರಾಜಸೂಯಯಾಗವಂ ಮಾಡಿಸಿ ಅಲ್ಲಿಂದ ದ್ವಾರಕಾಪಟ್ಟಣಕ್ಕೆ ಬಂದು ಸಮಸ್ತಮಾಯಾವಿಚಕ್ಷಣನಾದ ಸಾಲ್ವನೊಡನೆ ಯುದ್ಧಮಂಗೆಯ್ದು ಸೌಭನಾಮಕನಾದ ಆಸಾಲ್ವನವಿಮಾನವಂ ಚೂರ್ಣೀಕರಿಸಿ ಆಸಾಲ್ವನಂ ಸಹ ಸಂಹರಿಸಿದನೆಂಬರ್ಥವಂ ಶ್ರೀಶುಕಮುನಿಯು ಪರೀಕ್ಷಿದ್ರಾಯನುಂ ಕುರಿತು ನಿರೂಪಿಸುವನದೆಂತೆನೆ,-

ಎಲೈ, ಪರೀಕ್ಷಿದ್ರಾಯನೇ! ಕೇಳು ಅನಂತರದಲ್ಲಿ ಪ್ರದ್ಯುಮ್ನನು ಆಚಮನಂಗೆಯ್ದು ಪುನಃ ಯುದ್ಧಸನ್ನದ್ಧನಾಗಿ ಧನುಸ್ಸಂ ಪಿಡಿದು ಎಲೈ ಸಾರಥಿಯೇ ವೀರನಾದ ದ್ಯುಮಂತನ ಪಾರ್ಶ್ವವಂ ನನ್ನಂ ಎಯ್ದಿಸುವಾತೆಗೆಂದು ಸಾರಥಿಗೆ ಆಜ್ಞಾಪಿಸಿದನು ॥೧॥ ಅನಂತರದಲ್ಲಿ ಪ್ರದ್ಯುಮ್ನನು ತನ್ನ ಸೇನೆಗಳಂ ಕಂಪಿಸುವಂತೆ ಮಾಡುತ್ತಲಿರುವ ದ್ಯುಮಂತನಂ ತಡೆದು ಗರ್ವಿತನಾಗಿ ಎಂಟು ಬಾಣಂಗಳಿಂ ಪ್ರಹರಿಸಿದನು ॥೨॥ ಆಯೆಂಟುಬಾಣಂಗಳಲ್ಲಿ ನಾಲ್ಕು ಬಾಣಂಗಳಿಂ ನಾಲ್ಕು ಅಶ್ವಂಗಳಲ್ಲಿ ಒಂದುಬಾಣದಿಂ ಸಾರಥಿಯಂ ಎರಡುಬಾಣಂಗಳಿಂ ಧನುಸ್ಸಂ ಧ್ವಜವಂ ಸಹ ಮತ್ತೊಂದುಬಾಣದಿಂ ದ್ಯುಮಂತನ ಶಿರಸ್ಸನ್ನೂ ಛೇದಿಸಿದನು ॥೩॥ ಆಗ ಗದನು ಸಾತ್ಯಕಿ ಸಾಂಬನೇ ಮೊದಲಾದ ಯಾದವರು ನಾನಾಶಸ್ತ್ರಂಗಳಿಂ ಆಸಾಲ್ವನ ಸೇನೆಯಂ ಪ್ರಹರಿಸಿದರು. ಆಸಮಯದಲ್ಲಿ ಮಯನಿರ್ಮಿತವಾದ ಆವಿಮಾನದಲ್ಲಿರುವ ಸಮಸ್ತಜನರೂ ಛೇದಿಸಲ್ಪಟ್ಟ ಕಂಠಗಳುಳ್ಳವರಾಗಿ ಸಮುದ್ರದಲ್ಲಿಬಿದ್ದರು ॥

ದೂನಾಂಸಾಲ್ವಾನಾಂಜಘ್ನತಾಮಿತರೇತರಮ್ | ಯುದ್ಧಂತ್ರಿನವರಾತ್ರಂತದಭೂತ್ತುಮುಲಮುಲ್ಬಣಮ್ ||೫|| ಇಂದ್ರಪ್ರಸ್ಥಂಗತಃಕೃಷ್ಣಆಹೂತೋಧರ್ಮಸೂನುನಾ | ರಾಜಸೂಯೇಚನಿರ್ವೃತ್ತೇಶಿಶುಪಾಲೇಚಸಂಸ್ಥಿತೇ ||೬|| ಕುರುವೃದ್ಧಾನನುಜ್ಞಾಪ್ಯಮುನೀಂಶ್ಚಸಸುತಾಂಪೃಥಾಮ್ | ನಿಮಿತ್ತಾನ್ಯತಿಘೋರಾಣಿಪಶ್ಯನ್ದ್ವಾರವತೀಂಯಯೌ ||೭|| ಆಹಚಾಹಮಿಹಾಯಾತಆರ್ಯಮಿಶ್ರಾಭಿಸಂಗತಃ | ರಾಜನ್ಯಾಶ್ಚೈದ್ಯಪಕ್ಷೀಯಾನೂನಂಹನ್ಯುಃಪುರೀಂಮಮ ||೮|| ವೀಕ್ಷ್ಯತತ್ಕದನಂಸ್ವಾನಾಂನಿರೂಪ್ಯಪುರರಕ್ಷಣಮ್ | ಸೌಭಂಚಸಾಲ್ವರಾಜಂಚದಾರುಕಂಪ್ರಾಹಕೇಶವಃ ||೯|| ರಥಂಪ್ರಾಪಯಮೇಸೂತಸಾಲ್ವಸ್ಯಾಂತಿಕಮಾಶುವೈ | ಸಂಭ್ರಮಸ್ತೇನಕರ್ತವ್ಯೋಮಾಯಾವೀಸೌಭರಾಡಯಮ್ ||೧೦|| ಇತ್ಯುಕ್ತಶ್ಚೋದ

---

ಗೆ, ಇತರೇತರಂ-ಪರಸ್ಪರವಾಗಿ, ಜಘ್ನತಾಂ ಬಡಿದಾಡುತ್ತಿರುವ, ಯದೂನಾಂಸಾಲ್ವಾನಾಂಚ-ಯಾದವರಿಗೂ ಸಾಲ್ವರಿಗೂ, ಉಲ್ಬಣಂ-ಘೋರವಾದ, ತುಮುಲಂ-ದೊಂಬಿಯಾದ, ಯುದ್ಧಂ-ಜಗಳವು, ತ್ರಿಣವರಾತ್ರಂ-೨೭ ದಿನವು, ಅಭೂತ್-ಆಯಿತು||೫|| ಧರ್ಮಸೂನುನಾ-ಯುಧಿಷ್ಠಿರನಿಂದ, ಆಹೂತಃ-ಕರೆಯಲ್ಪಟ್ಟವನಾದ್ದರಿಂದ, ಇಂದ್ರಪ್ರಸ್ಥಂಗತಃ- ಇಂದ್ರಪ್ರಸ್ಥ ನಗರಕ್ಕೆ ಹೋಗಿದ್ದ, ಕೃಷ್ಣಃ-ವಾಸುದೇವನು, ರಾಜಸೂಯೇಚ-ಯಜ್ಞವೂ, ನಿರ್ವೃತ್ತೇ-ನೆರವೇರುತಲೂ, ಶಿಶುಪಾಲೇಚ-ದಮಘೋಷನಮಗನೂ, ಸಂಸ್ಥಿತೇ-ಮರಣವನ್ನು ಹೊಂದುತಲೂ||೬||ಕುರುವೃದ್ಧಾನ್-ಕುರುಗಳಲ್ಲಿ ಹಿರಿಯರನ್ನೂ, ಮುನೀಂಶ್ಚ-ಋಷಿಗಳನ್ನೂ, ಸಸುತಾಂ-ಪಾಂಡವರೊಡಗೂಡಿದ, ಪೃಥಾಂ-ಕುಂತಿಯನ್ನೂ, ಅನುಜ್ಞಾಪ್ಯ-ಸಮ್ಮತಿಪಡಿಸಿ, ಅತಿಘೋರಾಣಿ-ಬಹುಕ್ರೂರಂಗಳಾದ,ನಿಮಿತ್ತಾನಿ-ಶಕುನಂಗಳನ್ನು,ಪಶ್ಯನ್-ನೋಡುತಲಿರುವನಾಗಿ,ದ್ವಾರವತೀಂ-ಕುಶಸ್ಥಲೀನಗರವನ್ನು, ಯಯೌ-ಸೇರಿದನು||೭||ಆರ್ಯಮಿಶ್ರಾಭಿಸಂಗತಃ-ಬಲರಾಮನೊಡನೆಯೂ ಗೆಳೆಯರೊಡನೆಯೂ ಸಂಗತನಾದ, ಅಹಂ ನಾನು, ಇಹ-ಇಂದ್ರಪ್ರಸ್ಥಕ್ಕೆ, ಆಯಾತಃ-ಬಂದವನಾದೆನು ಚೈದ್ಯಪಕ್ಷೀಯಾಃ-ಶಿಶುಪಾಲನ ಕಡೆಯವರಾದ, ರಾಜನ್ಯಾಃ-ದೊರೆಗಳು ಮಮಪುರೀಂ-ನನ್ನ ನಗರವನ್ನು,ಹನ್ಯುಃ-ನಾಶಮಾಡುವರು, ಎಂದು, ನೂನಂ-ಶಂಕಿಸುವೆನೆಂದು, ಆಹಚ-ಎಂದುಕೊಂಡನು||೮||ಕೇಶವಃ-ಕೃಷ್ಣನು, ಸ್ವಾನಾಂ-ತನ್ನವರಾದ ಯಾದವರಿಗೆ, ತತ್ಕದನಂ-ಉಂಟಾದಲಜನಗಳನ್ನು, ವೀಕ್ಷ್ಯ-ನೋಡಿ, ಪುರರಕ್ಷಣಂ-ದ್ವಾರಕೆಯ ಪಾಲಿಸುವುದನ್ನು, ನಿರೂಪ್ಯ-ರಾಮಂಗೆಪೇಳಿ,ಸಾಲ್ವರಾಜಂಚ-ಸಾಲ್ವನನ್ನೂ, ಸೌಭಂಚ-ಸೌಭವಿಮಾನವನ್ನೂ, ವೀಕ್ಷ್ಯ-ನೋಡಿ, ದಾರುಕಂ-ಸಾರಥಿಯಂಕುರಿತು, ಪ್ರಾಹ-ಪೇಳಿದನು||೯||ಸೂತ-ಸಾರಥಿಯೇ,ಮೇ-ನನ್ನ,ರಥಂ-ತೇರನ್ನು, ಸಾಲ್ವಸ್ಯ-ಸಾಲ್ವನ, ಅಂತಿಕಂ-ಸಮೀಪವನ್ನು, ವೈ-ಪ್ರಕಟವಾಗಿ, ಆಶು-ಬೇಗನೆ, ಪ್ರಾಪಯ-ಹೊಂದಿಸು, ಅಯಂಸೌಭರಾಟ್-ಈಸಾಲ್ವನು, ಮಾಯಾವೀ-ಮೋಸಗಾರನು, ತೇ-ನಿನ್ನಿಂದ, ಸಂಭ್ರಮಃ-ಭ್ರಾಂತಿಯು, ನಕರ್ತವ್ಯಃ-ಮಾಡಲ್ಪಡತಕ್ಕದ್ದಲ್ಲವು ||೧೦||

---

ಎಲೈ ಅರಸೇ! ಕೇಳು, ಈ ರೀತಿಯಾಗಿ ಒಬ್ಬರೊಬ್ಬರು ಪ್ರಹರಿಸುತಲಿರುವ ಯಾದವರಿಗೂ ಸಾಲ್ವದೇಶಸ್ಥರಾದ ಅರಸುಗಳಿಗೂ ಕೂಡ ೨೭ ದಿವಸಂಗಳು ವ್ಯಾಕುಲವಾದ ಭಯಂಕರವಾದ ಯುದ್ಧವು ಬೆಳದಂಥಾದ್ದಾಯಿತು ||೫|| ಧರ್ಮರಾಯನಿಂದ ಯಾಗಾರ್ಥವಾಗಿ ಕರೆತರಲ್ಪಟ್ಟ ಶ್ರೀಕೃಷ್ಣನು ಇಂದ್ರಪ್ರಸ್ಥಪುರವನೆಯ್ದಿ ಆರಾಜಸೂಯಯಾಗವಂ ಪೂರ್ತಿಯಾಗಲು ಶಿಶುಪಾಲನೂ ಕೂಡ ತನ್ನ ಚರಣದಲ್ಲಿ ಐಕ್ಯವಾಗಬಳಿಕ ||೬|| ಭೀಷ್ಮಾದಿಗಳಂ ಮುನಿಗಳಂ ಪುತ್ರಸಹಿತಳಾದ ಕುಂತೀದೇವಿಯಂಸಹ ಅಪ್ಪಣೆಕೇಳಿ, ಅತಿಭಯಂಕರಗಳಾದ ಶಕುನಂಗಳಂನೋಡುತ ದ್ವಾರಕಾಪುರವನೆಯ್ದಿದನು||೭|| ಆಗ ಶ್ರೀಕೃಷ್ಣನು ಮಾರ್ಗದಲ್ಲಿ ದುರ್ನಿಮಿತ್ತಗಳಾದ ದರ್ಶನದಿಂ ವ್ಯಾಕುಲವಾದ ಮನಸ್ಸುಳ್ಳವನಾಗಿ ತಾನೇ ಚಿಂತಿಸುವನದೆಂತೆನೆ- ಶಿಶುಪಾಲನ ಸಂಬಂಧಿಗಳಾದ ಅರಸುಗಳು ನಿಶ್ಚಯವಾಗಿ ನಮ್ಮಪಟ್ಟಣವಂ ಧ್ವಂಸಂಗೆಯ್ವರಾಗುವರು. ನಾನಾದರೋ ಅಣ್ಣನಾದ ಬಲರಾಮನೊಡನೆ ಈಯಿಂದ್ರಪ್ರಸ್ಥಕ್ಕೆ ಬಂದವನಾದೆನೆಂದು ಮನದಲ್ಲಿ ಚಿಂತಿಸುವನಾಗಿ||೮||ದ್ವಾರಕಾಪುರವನೆಯ್ದಿ ಯಾದವರಯುದ್ಧವಂ ನೋಡಿ ಸೌಭವೆಂಬ ಆವಿಮಾನವಂ ಸಹನೋಡಿ ಪುರರಕ್ಷಣಾರ್ಥವಾಗಿ ಬಲರಾಮನಂಕುರಿತು ವಿಜ್ಞಾಪಿಸಿ ಸಾರಥಿಯಾದ ದಾರುಕನಂಕುರಿತು ಈ ರೀತಿಯಾಗಿ ನುಡಿದನದೆಂತೆನೆ ||೯|| ಎಲೈದಾರುಕನೇ! ಶೀಘ್ರದಿಂದ ನನ್ನ ರಥವಂ ಸಾಲ್ವನ ಸಮೀಪಕ್ಕೆಯ್ದಿಸುವನಾಗು, ಈತನು ಸಾಲ್ವನು, ಮಾಯಾವಂತನು, ಎಂದು ಹೆದರುವನಾಗಬೇಡ ||೧೦||

ಚೋದಯಾಮಾಸರಥಮಾಸ್ಥಾಯದಾರುಕಃ । ವಿಶಂತಂದದೃಶುಸ್ಸರ್ವೇಸ್ವೇಪರೇಚಾರುಣಾನುಜಂ ॥೧೧॥ ಸಾಲ್ವಶ್ಚಕೃಷ್ಣಮಾಲೋಕ್ಯಹತಪ್ರಾಯಬಲೇಶ್ವರಃ । ಪ್ರಾಹಿಣೋತ್ಕೃಷ್ಣಸೂತಾಯ ಶಕ್ತಿಂಭೀಮಸ್ವನಾಂ ಮೃಧೇ ॥೧೨॥ ತಾಮಾಪತಂತೀಂನಭಸಿಮಹೋಲ್ಕಾಮಿವರಂಹಸಾ । ಭಾಸಯಂತೀಂದಿಶಶ್ಶೌರಿಸ್ಸಾಯಕೈಶ್ಶತಧಾಚ್ಛಿನತ್ ॥೧೩॥ ತಂಚಷೋಡಶಭಿರ್ಬಾಣೈರ್ವಿದ್ಧ್ವಾಸೌಭಂಚಖೇಭ್ರಮತ್ । ಅವಿಧ್ಯಚ್ಛರಸಂದೋಹೈಃಖಂಸೂರ್ಯಇವರಶ್ಮಿಭಿಃ ॥೧೪॥ ಸಾಲ್ವಶ್ಶೌರೇಸ್ತುದೋಸ್ಸವ್ಯಂಸಶಾರ್ಙ್ಗಂಶಾರ್ಙ್ಗಧನ್ವನಃ। ಬಿಭೇದನ್ಯಪತದ್ಧಸ್ತಾಚ್ಛಾರ್ಙ್ಗಮಾಸೀತ್ತದದ್ಭುತಮ್ ॥೧೫॥ ಹಾಹಾಕಾರೋಮಹಾನಾಸೀದ್ಭೂತಾನಾಂತತ್ರಪಶ್ಯತಾಂ । ನಿನದ್ಯಸೌಭರಾಡುಚ್ಚೈರಿದಮಾಹಜನಾರ್ದನಮ್ ॥೧೬॥ಯತ್ತ್ವಯಾಮೂ

ಇತ್ಯುಕ್ತಃ-ಹೀಗೆಹೇಳಲ್ಪಟ್ಟ, ದಾರುಕಃ-ಸಾರಥಿಯು, ರಥಂ-ಕೃಷ್ಣನತೇರನ್ನು, ಆಸ್ಥಾಯ-ಏರಿಕೊಂಡು ಚೋದಯಾಮಾಸ-ನಡೆಯಿಸಿದನು, ಸ್ವೇ-ತನ್ನವರಾದ ಯಾದವರೂ, ಪರೇಚ-ವೈರಿಗಳಾದ ಸಾಲ್ವನಕಡೆಯವರೂ, ಸರ್ವೇ-ಎಲ್ಲರೂ, ವಿಶಂತಂ-ಹೊಕ್ಕುಬರುತಲಿರುವ, ಅರುಣಾನುಜಂ-ಧ್ವಜದಲ್ಲಿರುವ ಗರುಡನನ್ನು, ದದೃಶುಃ-ಕಂಡರು ॥೧೧॥ ಸಾಲ್ವಶ್ಚ- ಸಾಲ್ವನಾದರೋ, ಕೃಷ್ಣಂ-ವಾಸುದೇವನನ್ನು, ಆಲೋಕ್ಯ-ನೋಡಿ, ಹತಪ್ರಾಯಬಲೇಶ್ವರಃ-ಸತ್ತಂತಾದ ಸೈನ್ಯಕ್ಕೊಡೆಯನಾದ್ದರಿಂದ, ಮೃಧೇ-ಯುದ್ಧದಲ್ಲಿ, ಭೀಮಸ್ವನಾಂ-ಹೆದರಿಸುವ ಧ್ವನಿಯುಳ್ಳ, ಶಕ್ತಿಂ-ಶಕ್ತ್ಯಾಯುಧವನ್ನು, ಕೃಷ್ಣಸೂತಾಯ-ದಾರುಕನಿಗೋಸುಗ ಪ್ರಾಹಿಣೋತ್-ಪ್ರಯೋಗಿಸಿದನು ॥೧೨॥ ನಭಸಿ-ಆಕಾಶದಲ್ಲಿ, ರಂಹಸಾ-ವೇಗದಿಂದ, ಮಹೋಲ್ಕಾಮಿವ- ದೊಡ್ಡಕೊಳ್ಳಿಯಂತೆ, ಆಪತಂತೀಂ-ಬೀಳುತಲಿರುವಂಥಾ, ದಿಶಃ-ದಿಕ್ಕುಗಳನ್ನು, ಭಾಸಯಂತೀಂ-ಬೆಳಗುತ್ತಿರುವ, ತಾಂ-ಆ ಶಕ್ತ್ಯಾಯುಧವನ್ನು, ಶೌರಿಃ-ಕೃಷ್ಣನು, ಸಾಯಕೈಃ-ಬಾಣಗಳಿಂದ, ಶತಧಾ-ನೂರುಬಗೆಯಾಗಿ, ಅಚ್ಛಿನತ್-ಕಡಿದು ಹಾಕಿದನು ॥೧೩॥ ತಂಚ-ಆಸಾಲ್ವನನ್ನೂ, ಷೋಡಶಭಿರ್ಬಾಣೈಃ-೧೬ ಸರಳುಗಳಿಂದ, ವಿದ್ಧ್ವಾ-ನೋಯಿಸಿ, ಖೇ-ಆಕಾಶದಲ್ಲಿ, ಭ್ರಮತ್-ತಿರುಗುತ್ತಿರುವ, ಸೌಭಂಚ-ಸೌಭವಿಮಾನವನ್ನೂ, ಶರಸಂದೋಹೈಃ-ಬಾಣ ಸಮೂಹಗಳಿಂದ, ಸೂರ್ಯಃ-ಆದಿತ್ಯನು, ಖಂ-ಆಕಾಶವನ್ನು, ರಶ್ಮಿಭಿರಿವ-ಕಿರಣಗಳಿಂದ ಹೇಗೋಹಾಗೆ, ಅವಿಧ್ಯತ್-ವೇಧಿಸಿದನು ॥೧೪॥ ಸಾಲ್ವಸ್ತು-ಸಾಲ್ವನಾದರೋ, ಶಾರ್ಙ್ಗಧನ್ವನಃ-ಶಾರ್ಙ್ಗವೆಂಬ ಬಿಲ್ಲುಳ್ಳ, ಶೌರೇಃ ಕೃಷ್ಣನ, ಸಶಾರ್ಙ್ಗಂ-ಬಿಲ್ಲಿನಿಂದ ಸಹಿತವಾದ, ಸವ್ಯಂದೋಃ-ಎಡತೋಳನ್ನು, ಬಿಭೇದ- ಭೇದಿಸಿದನು. ಹಸ್ತಾತ್-ಕೈಯಿಂದ, ಶಾರ್ಙ್ಗಂ-ಕೃಷ್ಣನಬಿಲ್ಲು, ನ್ಯಪತತ್-ಬಿದ್ದಿತು, ತತ್-ಹಾಗೆ ಬಿದ್ದದ್ದು, ಅದ್ಭುತಂ-ಆಶ್ಚರ್ಯವು, ಆಸೀತ್-ಆಯಿತು ॥೧೫॥ ತತ್ರ-ಅಲ್ಲಿ, ಪಶ್ಯತಾಂ-ನೋಡುತ್ತಿರುವ, ಭೂತಾನಾಂ-ಪ್ರಾಣಿಗಳ, ಹಾಹಾಕಾರಃ-ಹಾಹಾಯೆಂಬ ಶಬ್ದವು, ಮಹಾನ್-ಅಧಿಕವಾದ್ದು, ಆಸೀತ್-ಆಯಿತು. ಸೌಭರಾಟ್-ಸಾಲ್ವನು, ಉಚ್ಚೈಃ-ಅಧಿಕವಾಗಿ, ನಿನದ್ಯ-ಕೂಗಿ, ಜನಾರ್ದನಂ-ಕೃಷ್ಣನಂಕುರಿತು, ಇದಂ-ಈ ಮಾತನ್ನು, ಆಹ-ನುಡಿದನು ॥೧೬॥ ಮೂಢ-ವಿವೇಕವಿಲ್ಲದ ಕೃಷ್ಣನೇ, ಈಕ್ಷತಾಂ-

ಈರೀತಿಯಾಗಿ ಶ್ರೀಕೃಷ್ಣನಿಂದ ಆಜ್ಞಾಪಿಸಲ್ಪಟ್ಟ ದಾರುಕನು ರಥದಲ್ಲಿ ಚೆನ್ನಾಗಿಕುಳಿತುಕೊಂಡು ಆರಥವು ಚೆನ್ನಾಗಿ ನಡೆಯಿಸಿದನು. ಆಗ ಎಲ್ಲರೂ ಆರಥಧ್ವಜದಲ್ಲಿರುವ ಗರುಡನಂಕಂಡರು ॥೧೧॥ ಆಗ ಯುದ್ಧದಲ್ಲಿ ಬಹುತರವಾಗಿ ನಷ್ಟವಾದ ಸೇನೆಗೆ ನಾಯಕನಾದ ಸಾಲ್ವನು ಆಶ್ರೀಕೃಷ್ಣನಂನೋಡಿಯು ಸಾರಥಿಯಾದ ದಾರುಕನಿಗೋಸುಗ ಭಯಂಕರವಾದ ಶಬ್ದವುಳ್ಳ ಶಕ್ತಿಯೆಂಬ ಆಯುಧವಂ ಪ್ರಯೋಗಿಸಿದನು॥೧೨॥ ಶ್ರೀಕೃಷ್ಣನು ಮಹತ್ತಾದ ಕೊಳ್ಳಿಯಂತೆ ದಿಕ್ಕುಗಳಂ ಪ್ರಕಾಶಂಗೆಯ್ವುತ ವೇಗದಿಂದ ಅಂತರಿಕ್ಷದಲ್ಲಿ ಬರುತಲಿರುವ ಆಶಕ್ತಿಯಂ ॥೧೩॥ ಸಾಲ್ವನುಸಹ ೧೬ ಬಾಣಂಗಳಿಂದ ಪ್ರಹರಿಸಿ ಅಂತರಿಕ್ಷದಲ್ಲಿ ಸುತ್ತುತಲಿರುವ ಸೌಭವೆಂಬ ಆವಿಮಾನವಂ ಅನೇಕಗಳಾದ ಬಾಣಸಮೂಹಂಗಳಿಂ ಸೂರ್ಯನು ಎಂತು ಕಿರಣಂಗಳಿಂ ಆಕಾಶವಂ ವ್ಯಾಪಿಸುವನೋ ಆರೀತಿಯಾಗಿ ಭೇದಿಸಿದನು ॥೧೪॥ ಆಗ ಸಾಲ್ವನು ಯುದ್ಧದಲ್ಲಿ ಶಾರ್ಙ್ಗಪಾಣಿಯಾದ ಶ್ರೀಕೃಷ್ಣನ ಶಾರ್ಙ್ಗವೆಂಬ ಧನುಸ್ಸು ಕೆಳಕ್ಕೆ ಬಿದ್ದಂತಾದ್ದಾಯಿತು. ಅದು ಆಶ್ಚರ್ಯಕರವಾಯಿತು ॥೧೫॥ ಮತ್ತು ಅಲ್ಲಿಯುದ್ಧವಂನೋಡುತಲಿರುವ ದೇವಾದಿಗಳು ಹಾಹಾಕಾರವಂಮಾಡಿದರು. ಅನಂತರದಲ್ಲಿ ಗಟ್ಟಿಯಾಗಿ ಸಾಲ್ವನು ಸಿಂಹನಾದವಂಗೆಯ್ದು ಶ್ರೀಕೃಷ್ಣನುಕುರಿತು ಈವಚನವು ಪೇಳಿದನೆಂತೆನೆ॥೧೬॥ಎಲೈಮೂಢನೇ! ಯಾವನೀನು ನನ್ನಮಿತ್ರ

ಧರಸ್ಸಖ್ಯುರ್ಭಾರ್ಯಾ ತ್ವಯಾಪಹೃತೇಕ್ಷತಾಂ।ಪ್ರಮತ್ತಸ್ಸ ಸಭಾಮಧ್ಯೇ ತ್ವಯಾ ವ್ಯಾಪಾದಿತಸ್ಸಖಾ॥೧೭
ತಂತ್ವಾದ್ಯನಿಶಿತೈರ್ಬಾಣೈರಪರಾಜಿತಮಾನಿನಂ । ನಯಾಮ್ಯಪುನರಾವೃತ್ತಿಂಯದಿತಿಷ್ಠೇರ್ಮಮಾ
ಗ್ರತಃ॥೧೮॥ಶ್ರೀಕೃಷ್ಣಃ॥ ವೃಥಾತ್ವಂಕತ್ಥಸೇಮಂದನಪಶ್ಯಸ್ಯಂತಿಕೇಂತಕಂ । ಪೌರುಷಂದರ್ಶಯಂ
ತಿಸ್ಮಶೂರಾನಬಹುಭಾಷಿಣಃ॥೧೯॥ ಇತ್ಯುಕ್ತ್ವಾಭಗವಾನ್ಸಾಲ್ವಂಗದಯಾಭೀಮವೇಗಯಾ । ತತಾ
ಡಜತ್ರೌಸಂಕ್ರುದ್ಧಸ್ಸಚಕಂಪೇವಮನ್ನಸೃಕ್ ॥೨೦॥ಗದಾಯಾಂಸಂನಿವೃತ್ತಾಯಾಂಸಾಲ್ವಸ್ತ್ವಂತ
ರಧೀಯತ ॥೨೧॥ ತತೋಮುಹೂರ್ತಆಗತ್ಯಪುರುಷಶ್ಶಿರಸಾಚ್ಯುತಮ್ ।ದೇವಕ್ಯಾಪ್ರಹಿತೋಸ್ಮೀತಿನ
ತ್ವಾಪ್ರಾಹವಚೋರುದನ್ ॥೨೨॥ ಕೃಷ್ಣಕೃಷ್ಣಮಹಾಬಾಹೋಪಿತಾತೇಪಿತೃವತ್ಸಲ । ಬದ್ಧ್ವಾಪನೀತ

---

ನೋಡುತ್ತಿರುವ ನಃ-ನಮ್ಮ, ಸಖ್ಯುಃ-ಮಿತ್ರನಾದ ಶಿಶುಪಾಲನ ಭಾರ್ಯಾ-ಹೆಂಡತಿಯಾದ ರುಕ್ಮಿಣಿಯು, ತ್ವಯಾ-ನಿನ್ನಿಂದ, ಯತ್-ಯಾವಕಾರಣದಿಂದ, ಅಪಹೃತಾ-ಕದಿಯಲ್ಪಟ್ಟಳೋ, ಸಃ-ಅಂಥವನಾದ ನೀನಾದರೋ, ಪ್ರಮತ್ತಃ-ಹೆಚ್ಚುಗರ್ವವುಳ್ಳವನು ಸಭಾಮಧ್ಯೇ ಧರ್ಮರಾಯನ ಸಭೆಯನಡುವೆ, ಸಖಾ-ನನ್ನ ಮಿತ್ರನಾದ ಶಿಶುಪಾಲನು, ತ್ವಯಾ-ನಿನ್ನಿಂದ, ವ್ಯಾಪಾದಿತಃ-ಸಾಯಕೊಲ್ಲಲ್ಪಟ್ಟನು ॥೧೭॥ ಅದ್ಯ-ಈಗ, ಅಪರಾಜಿತಮಾನಿನಂ-ಸೋತವನಾದರೂ ಸೋತವನಲ್ಲವೆಂಬ ಗರ್ವವುಳ್ಳಂಥಾ, ತಂತ್ವಾ-ಆ ನಿನ್ನನ್ನು, ಮಮಾಗ್ರತಃ-ನನ್ನ ಮುಂದೆ, ತಿಷ್ಠೇರ್ಯದಿ-ನಿಂತಿಯಾದರೆ, ಅಪುನರಾವೃತ್ತಿಂ-ಮರಳಿಬಾರದೆ ಇರುವ ಮರಣವನ್ನು, ನಯಾಮಿ-ಹೊಂದಿಸುವೆನು ॥೧೮॥ ಮಂದ-ಅಲಸನಾದ ಸಾಲ್ವನೇ, ತ್ವಂ-ನೀನು, ವೃಥಾ-ವ್ಯರ್ಥವಾಗಿ, ಕತ್ಥಸೇ-ಆತ್ಮಸ್ತುತಿಮಾಡಿಕೊಳ್ಳುವಿ. ಅಂತಿಕೇ-ಹತ್ತಿರದಲ್ಲಿರುವ, ಅಂತಕಂ-ಮೃತ್ಯುವನ್ನು, ನಪಶ್ಯಸಿ-ನೋಡದೆ ಇರುವಿ. ಶೂರಾಃ-ಸಾಮರ್ಥ್ಯವುಳ್ಳವರು, ಪೌರುಷಂ-ಗಂಡಿಕೆಯನ್ನು, ದರ್ಶಯಂತಿಸ್ಮ-ತೋರಿಸುತ್ತಿರುವರಲ್ಲವೇ? ಬಹುಭಾಷಿಣೋನ-ಹೆಚ್ಚು ಹರಟುವವರಲ್ಲವು ॥೧೯॥ ಇತ್ಯುಕ್ತ್ವಾ-ಹೀಗೆ ಹೇಳಿ, ಭಗವಾನ್-ಕೃಷ್ಣನು, ಸಾಲ್ವಂ-ಸೌಭಪತಿಯನ್ನು, ಭೀಮವೇಗಯಾ-ಭಯಂಕರವಾದ ವೇಗವುಳ್ಳ, ಗದಯಾ-ಗದಾಯುಧದಿಂದ, ಸಂಕ್ರುದ್ಧಃ-ಸಿಟ್ಟುಗೊಂಡವನಾಗಿ, ಜತ್ರೌ-ಕಿವಿಯ ಬುಡದಲ್ಲಿ, ತತಾಡ-ಬಡಿದನು ಸಃ-ಆ ಸಾಲ್ವನು, ಅಸೃಕ್-ರಕ್ತವನ್ನು, ವಮನ್-ಕಾರುವನಾಗಿ, ಚಕಂಪೇ-ನಡುಗಿದನು॥೨೦॥ಗದಾಯಾಂ-ಗದಾಯುಧವು, ಸನ್ನಿವೃತ್ತಾಯಾಂ-ಜಾರಿಹೋಗುತಲೂ ಸಾಲ್ವಸ್ತು-ಸಾಲ್ವನಾದರೋ, ಅಂತರಧೀಯತ-ಕಾಣಿಸಿದೆ(ಅಡಗಿದನು॥೨೧॥ ತತಃ-ಆಮೇಲೆ, ಮುಹೂರ್ತೇ-ತಾಸುಹೊತ್ತಿನಲ್ಲಿ. ಪುರುಷಃ-ಆಳು, ಆಗತ್ಯ-ಬಂದು, ಶಿರಸಾ-ತಲೆಯಿಂದ, ಅಚ್ಯುತಂ-ಕೃಷ್ಣನನ್ನು, ನತ್ವಾ-ನಮಸ್ಕರಿಸಿ, ದೇವಕ್ಯಾ-ನಿನ್ನ ತಾಯಿಯಿಂದ, ಪ್ರೇಷಿತಃ-ಕಳುಹಲ್ಪಟ್ಟವನು, ಅಸ್ಮೀತಿ-ಆದೆನೆಂದು, ರುದನ್-ಅಳುತಿರುವನಾಗಿ, ವಚಃ-ಮಾತನ್ನು, ಪ್ರಾಹ-ಹೇಳಿದನು ॥೨೨॥ ಪಿತೃವತ್ಸಲ-ತಂದೆಯಲ್ಲಿ ಪ್ರೀತಿಯುಳ್ಳವನೇ, ಮಹಾಬಾಹೋ-ಉದ್ದವಾದ ತೋಳುಗಳುಳ್ಳ ಶೂರನೇ, ಕೃಷ್ಣಕೃಷ್ಣ-ಕೃಷ್ಣನೇ ಕೃಷ್ಣನೇ, ತೇ-ನಿನ್ನ, ಪಿತಾ-ತಂದೆಯಾದ ವಸುದೇವನು, ಸಾ

---

ನಾದ ಶಿಶುಪಾಲನ ಹೆಂಡತಿಯನ್ನೂ ಅಪಹರಿಸಿ ಅವನನ್ನೂ ಸಂಹರಿಸಿದೆಯೋ॥೧೭॥ ಅಂತಪ್ಪ ನೀನು ಈಗ ನನ್ನಿದಿರಿಗೆ ನಿಂತವನಾದರೆ ತೀಕ್ಷ್ಣಂಗಳಾದ ಬಾಣಂಗಳಿಂ ಎಲ್ಲಿಯೂ ನಾನು ಪರಾಜಿತನಲ್ಲವೆಂಬ ದುರಭಿಮಾನವುಳ್ಳನಿನ್ನಂ ಮೃತ್ಯುವನೆಯ್ದಿಸುವನಾಗುವೆನು॥೧೮॥ಎಂಬ ಸಾಲ್ವನ ವಾಕ್ಯವಂ ಕೇಳಿ ಶ್ರೀಕೃಷ್ಣನು ಪೇಳುವನದೆಂತೆನೆ ಎಲೈ ಮೂಢನೇ ನೀನು ವ್ಯರ್ಥವಾಗಿ ಆತ್ಮಪ್ರಶಂಸೆಯಂ ಗಯ್ವಿಯೋ ಹೊರತು ಸಮೀಪದಲ್ಲಿರುವ ಯಮನನ್ನು ನೋಡುವನಾಗುವುದಿಲ್ಲ. ಲೋಕದಲ್ಲಿ ಶೂರರು ತಮ್ಮ ಪರಾಕ್ರಮವಂ ತೋರಿಸುವರೇ ಹೊರತು ಈರೀತಿಯಾಗಿ ಬಹಳ ಮಾತುಗಳನ್ನು ಆಡುವುದಿಲ್ಲ॥೧೯॥ ಎಂದು ಪೇಳಿ ಶ್ರೀಕೃಷ್ಣನು ಕೋಪಯುಕ್ತನಾಗಿ ಭಯಂಕರವಾದ ಗದೆಯಿಂದ ಸಾಲ್ವನಂ ಕೊಂದನು. ಆಸಾಲ್ವನು ರಕ್ತವಂ ಕಾರುತ ಕಂಪಿಸಿದನು ॥೨೦॥ ಆಗ ಆಗದಾಯುಧವು ಪುನಃ ಶ್ರೀಕೃಷ್ಣನ ಸಮೀಪವನೆಯ್ದಿದಂತಾದ್ದು ಆಗುತ್ತಿರಲು ಸಾಲ್ವನು ಅಂತರ್ಧಾನವನೆಯ್ದಿದನು ॥೨೧॥ ಅನಂತರದಲ್ಲಿ ಒಂದು ಮುಹೂರ್ತದೊಳು ಒಬ್ಬ ಪುರುಷನು ಬಂದು ಶಿರಸ್ಸಿನಿಂದ ಶ್ರೀಕೃಷ್ಣನಿಗೆ ನಮಸ್ಕರಿಸಿ ದೇವಕೀದೇವಿಯಿಂದ ಕಳುಹಿಸಲ್ಪಟ್ಟವನಾದೆನೆಂದು ಈರೀತಿಯಾಗಿ ದುಃಖಿಸುತ ನುಡಿದನದೆಂತೆನೆ॥೨೨॥ ಮಹಾಯೋಗಿಯಾಗಿ ತಂದೆಯಲ್ಲಿ ಅತಿಭಕ್ತಿಯುಕ್ತನಾಗಿಯೂ ಇರುವ ಶ್ರೀಕೃಷ್ಣನೇ, ತಂದೆಯಾದ ವಸುದೇವನಂ ಸಾ

ಲ್ವೇನಸೌನಿಕೇನಯಥಾಪಶುಃ ॥೨೩॥ ನಿಶಮ್ಯವಿಪ್ರಿಯಂಕೃಷ್ಣೋಮಾನುಷೀಂಪ್ರಕೃತಿಂಗತಃ । ವಿ
ಮನಾಘೃಣೀಸ್ನೇಹಾದ್ಬಭಾಷೇಪ್ರಾಕೃತೋಯಥಾ ॥೨೪॥ ಕಥಂರಾಮಮಸಂಮತ್ತಂಜಿತ್ವಾಜಿ
ಯ್ಯಂಸುರಾಸುರೈಃ । ಸಾಲ್ವೇನಾಲ್ಪೀಯಸಾನೀತಃಪಿತಾಮೇಬಲವಾನ್ವಿಧಿಃ ॥೨೫॥ ಇತಿಬ್ರುವಾಣೇಗೋ
ವಿಂದೇಸೌಭರಾಟ್ಪ್ರತ್ಯುಪಸ್ಥಿತಃ । ವಸುದೇವಮಿವಾನೀಯಕೃಷ್ಣಂಚೇದಮುವಾಚಹ ॥೨೬॥ ಏಷತೇಜ
ನಿತಾನೀತೋಯದರ್ಥಂವಿಹಜೀವಸಿ । ವಧಿಷ್ಯೇವೀಕ್ಷತಸ್ತೇಮುಮೀಶಶ್ಚೇತ್ಪಾಹಿಬಾಲಿಶ ॥೨೭॥ ಏವಂ
ನಿರ್ಭರ್ತ್ಸ್ಯಮಾಯಾವೀಖಡ್ಗೇನಾನಕದುಂದುಭೇಃ । ಉತ್ಕೃತ್ಯಶಿರಆದಾಯಖಸ್ಥಂಸೌಭಂಸಮಾವಿ
ಶತ್ ॥೨೮॥ ತತೋಮುಹೂರ್ತಂಪ್ರಕೃತಾವುಪಪ್ಲುತಸ್ಸ್ವಬೋಧಆಸ್ತೇಸ್ವಜನಾನುಷಂಗತಃ । ಮ

---

ಲ್ವೇನ-ಸೌಭರಾಜನಿಂದ, ಪಶುಸ್ಸೌನಿಕೇನಯಥಾ-ಗೋವು ಕಟುಕರವನಿಂದ ಹೇಗೋ ಹಾಗೆ, ಬದ್ಧ್ವಾ-ಕಟ್ಟಿ, ಅಪನೀತಃ-ಒಯ್ಯಲ್ಪಟ್ಟನು ॥೨೩॥ ಕೃಷ್ಣಃ-ವಾಸುದೇವನು, ವಿಪ್ರಿಯಂ-ಅನಿಷ್ಟವಚನವನ್ನು, ನಿಶಮ್ಯ-ಕೇಳಿ, ಮಾನುಷೀಂಪ್ರಕೃತಿಂಗತಃ-ಮನುಷ್ಯಸ್ವಭಾವವನ್ನು ಹೊಂದಿದವನಾದ್ದರಿಂದ, ವಿಮನಸ್ಕಃ-ದುಃಖಿಸುವ ಹೃದಯವುಳ್ಳವನೂ, ಘೃಣೀ-ದಯೆಯುಳ್ಳವನೂ ಆಗಿ, ಸ್ನೇಹಾತ್-ಪಿತೃವಾತ್ಸಲ್ಯದಿಂದ, ಪ್ರಾಕೃತೋಯಥಾ-ಪಾಮರ ಮನುಷ್ಯನು ಹೇಗೋ ಹಾಗೆ, ಬಭಾಷೇ-ನುಡಿದನು ॥೨೪॥ ಅಸಂಮತ್ತಂ-ಚೆನ್ನಾಗಿ ಕೈಬಿಡದೆ ಮಾಡದೆಯಿರುವ (ಜಾಗರೂಕನಾದ) ಸುರಾಸುರೈಃ-ದೇವದೈತ್ಯರಿಂದಲೂ, ಅಜೇಯಂ-ಗೆಲ್ಲಲ್ಪಡುವುದಕ್ಕೆ ಯೋಗ್ಯನಲ್ಲದ ರಾಮಂ-ಬಲಭದ್ರನನ್ನು, ಜಿತ್ವಾ-ಗೆದ್ದು, ಮೇಪಿತಾ-ನನ್ನ ತಂದೆಯು. ಅಲ್ಪೀಯಸಾ-ನೀಚನಾದ, ಸಾಲ್ವೇನ-ಸೌಭರಾಜನಿಂದ, ಕಥಂನೀತಃ-ಹೇಗೆ ಒಯ್ಯಲ್ಪಟ್ಟನು, ವಿಧಿಃ-ಪ್ರಾರಬ್ಧಕರ್ಮವು, ಬಲವಾನ್-ಪುರುಷಶಕ್ತಿಗಿಂತಲೂ ಬಲವುಳ್ಳದ್ದು ॥೨೫॥ ಗೋವಿಂದೇ-ಕೃಷ್ಣನು, ಇತಿ-ಹೀಗೆ, ಬ್ರುವಾಣೇಸತಿ-ಹೇಳುತ್ತಿರುವನಾಗುತ್ತಿರುವಲ್ಲಿ, ಸೌಭರಾಟ್-ಸಾಲ್ವನು, ವಸುದೇವಮಿವ-ವಸುದೇವನಂ ತಿರುವಪುರುಷನನ್ನು, ಆನೀಯ-ಹಿಡಿತಂದು, ಪ್ರತ್ಯುಪಸ್ಥಿತಃ-ಇದಿರಿಗೆ ನಿಂತವನಾಗಿ, ಕೃಷ್ಣಂ-ವಾಸುದೇವನಂ ಕುರಿತು, ಇದಂಚ-ಈ ಮಾತನ್ನೂ, ಉವಾಚಹ-ನುಡಿದನಲ್ಲವೆ ॥೨೬॥ ಬಾಲಿಶ-ಮೂಢಕೃಷ್ಣನೆ ಯದರ್ಥಂ-ಯಾರಿಗೋಸ್ಕರ, ಜೀವಸಿ-ಬದುಕಿರುವೆಯೋ, ಏಷಃ-ಆಯಿಗಾ, ತೇಜನಿತಾ-ನಿನ್ನ ತಂದೆಯು, ನೀತಃ-ಹಿಡಿತರಲ್ಪಟ್ಟಿರುವನು, ಅಮುಂ-ಇವನನ್ನು, ತೇವೀಕ್ಷತಃ-ನೀನು ನೋಡುತ್ತಿರುವಲ್ಲಿ, ವಧಿಷ್ಯೇ-ಕೊಂದುಹಾಕುವೆನು ಈಶಶ್ಚೇತ್-ನೀನು ಸಮರ್ಥನಾದರೆ, ಪಾಹಿ-ರಕ್ಷಿಸು ॥೨೭॥ ಏವಂ-ಹೀಗೆ, ನಿರ್ಭರ್ತ್ಸ್ಯ-ಹೆದರಿಸಿ, ಮಾಯಾವೀ-ಮೋಸವುಳ್ಳವನಾದ, ಸಾಲ್ವನು, ಆನಕದುಂದುಭೇಃ-ವಸುದೇವನ, ಶಿರಃ-ತಲೆಯನ್ನು, ಖಡ್ಗೇನ-ಕತ್ತಿಯಿಂದ, ಉತ್ಕೃತ್ಯ-ಕೊಯ್ದು, ಆದಾಯ-ತೆಗೆದುಕೊಂಡು, ಖಸ್ಥಂ-ಆಕಾಶದಲ್ಲಿರುವ, ಸೌಭಂ-ವಿಮಾನವನ್ನು, ಸಮಾವಿಶತ್-ಹೊಕ್ಕನು ॥೨೮॥ ತತಃ-ಆ ಮೇಲೆ, ಮುಹೂರ್ತಂ-ತಾಸುಹೊ

---

ಲ್ವನು ಯಾವರೀತಿಯಿಂದ ಕಟುಕನು ಕುರಿಯಂ ಬಂಧಿಸಿ ಅಪಹರಿಸುವನೋ ಅದೇರೀತಿಯಿಂ ಬಂಧಿಸಿ ಅಪಹರಿಸಿದನು ॥೨೩॥ ಎಂಬ ಅಪ್ರಿಯವಾದ ಆಪುರುಷವಚನವಂ ಕೇಳಿ ಮಾನುಷಸ್ವಭಾವವನೆಯ್ದಿರುವ ಶ್ರೀಕೃಷ್ಣನು ದಯಾಶೀಲನಾದ್ದರಿಂದ ಖಿನ್ನನಾಗಿ ಸ್ನೇಹದಿಂ ಪಾಮರರಂತೆ ನುಡಿದನದೆಂತೆನೆ ॥೨೪॥ ಎಲೈ ಮಹಾಬಲಶಾಲಿಯಾಗಿ ದೇವತೆಗಳಿಂದ ದೈತ್ಯರಿಂದಲೂ ಜಯಿಸಲಶಕ್ಯನಾಗಿರುವ ಬಲರಾಮನಂ ಜಯಿಸಿ ಅಲ್ಪಬಲನಾದ ಸಾಲ್ವನು ನಮ್ಮ ತಂದೆಯನ್ನು ಎಂತು ಅಪಹರಿಸಿದನು? ಕಟಕಟಾ! ದೈವವು ಬಲವಂತವಾದ್ದು, ಎಂದು ॥೨೫॥ ಶ್ರೀಕೃಷ್ಣನು ಹೇಳುತಲಿರಲು ಆಗ ಸಾಲ್ವನು ವಸುದೇವನಂ ಕರೆದುಕೊಂಡು ಬಂದು ಶ್ರೀಕೃಷ್ಣನಿಗೆ ಇದಿರಾಗಿ ನಿಂತು ನುಡಿದನದೆಂತೆನೆ ॥೨೬॥ ಎಲೈ ಶ್ರೀಕೃಷ್ಣನೇ, ನೀನು ಯಾವವನಿಗೋಸುಗ ಈ ಲೋಕದಲ್ಲಿ ಜೀವಿಸುತಲಿರುವೆಯೋ ನಿನ್ನ ತಂದೆಯಾದ ಅಂತಪ್ಪ ವಸುದೇವನಂ ನಾನು ಅಪಹರಿಸಿದೆನು. ಎಲೈ ಮೂರ್ಖನೇ, ನೀನು ನೋಡುತ್ತಿರಲು ಇವನಂ ಸಂಹರಿಸುವನಾಗುವೆನು, ನೀನು ಸಮರ್ಥನಾದರೆ ಇವನಂ ರಕ್ಷಿಸುವನಾಗೆಂದು ॥೨೭॥ ಮಾಯಾವಿಯಾದ ಸಾಲ್ವನು ಈರೀತಿಯಾಗಿ ಭಯಪಡಿಸಿ ಖಡ್ಗದಿಂದ ವಸುದೇವನ ಶಿರಸ್ಸಂ ಛೇದಿಸಿ ಆ ಶಿರಸ್ಸಂ ತೆಗೆದುಕೊಂಡು ಅಂತರಿಕ್ಷದಲ್ಲಿರುವ ಆ ವಿಮಾನವ ಪ್ರವೇಶಿಸಿದನು ॥೨೮॥ ಅನಂತರದಲ್ಲಿ ಶ್ರೀಕೃಷ್ಣನು ಸ್ವತಸ್ಸಿದ್ಧವಾದ ದಿವ್ಯಜ್ಞಾನ

ಹಾನುಭಾವಸ್ತದಬುಧ್ಯತಾಸುರೀಂಮಾಯಾಂಸಸಾಲ್ವಪ್ರಹಿತಾಂಮಯೋದಿತಾಮ್ ‖೨೯‖ ನತತ್ರದೂ
ತಂನಪಿತುಃಕಳೇಬರಂಪ್ರಬುದ್ಧಆಜೌಸಮಪಶ್ಯದಚ್ಯುತಃ ।ಸ್ವಾಪ್ನಂಯಥಾಚಾಂಬರಚಾರಿಣಂರಿಪುಂ
ಸೌಭಸ್ಥಮಾಲೋಕ್ಯನಿಹಂತುಮುದ್ಯತಃ ‖೩೦‖ಏವಂವದಂತಿರಾಜರ್ಷೇಋಷಯಃಕೇಚನಾನ್ವಿತಾಃ।ಯ
ತ್ಸ್ವವಾಚೋವಿರುಧ್ಯೇರನ್ನೂನಂತೇನಸ್ಮರಂತ್ಯುತ ‖೩೧‖ಕ್ವಶೋಕಮೋಹೌಸ್ನೇಹೋವಾಭಯಂವಾಜ್ಞಾನ

---

ತ್ತು, ಸ್ವಬೋಧಃ-ಸ್ವತಸ್ಸಿದ್ಧಜ್ಞಾನವುಳ್ಳವನಾದರೂ, ಸ್ವಜನಾನುಷಂಗತಃ-ಅಭಿಮಾನಿಕಬಂಧುಗಳಲ್ಲಿ ಸ್ನೇಹ ಸಂಬಂಧದಿಂದ, ಪ್ರಕೃತೌ-ಮನುಷ್ಯಸ್ವಭಾವದಲ್ಲಿ, ಉಪಪ್ಲುತಃ-ಮುಳುಗಿದವನಾಗಿ, ಆಸ್ತ-ಇದ್ದನು, ತತಃ-ಆ ಮೇಲೆ, ಮಹಾನುಭಾವಃ-ಅಧಿಕಸಾಮರ್ಥ್ಯವುಳ್ಳವನಾದ, ಸಃ-ಆ ಕೃಷ್ಣನು, ತತ್-ಆ ಕೃತ್ಯವೆಲ್ಲವನ್ನೂ, ಮಯೋದಿತಾಂ-ಮಯಾಸುರನಿಂದ ನಿರ್ಮಿಸಲ್ಪಟ್ಟ, ಸಾಲ್ವಪ್ರಹಿತಾಂ-ಸಾಲ್ವರಾಜನಿಂದ ಪ್ರಯೋಗಿಸಲ್ಪಟ್ಟ, ಆಸುರೀಂಮಾಯಾಂ-ದೈತ್ಯವಂಚಕವಿದ್ಯೆಯನ್ನಾಗಿ, ಅಬುಧ್ಯತ-ತಿಳಿದನು ‖೨೯‖ ಆಜೌ-ಯುದ್ಧದಲ್ಲಿ, ಪ್ರಬುದ್ಧಃ-ಎಚ್ಚರುಗೊಂಡವನಾದ, ಅಚ್ಯುತಃ-ಕೃಷ್ಣನು, ಸ್ವಾಪ್ನಂಯಥಾ-ಕನಸಿನ ಪ್ರಪಂಚವನ್ನು ಹೇಗೋ ಹಾಗೆ, ತತ್ರ-ಅಲ್ಲಿ, ದೂತಂ-ಆಳನ್ನೂ, ಪಿತುಃ-ತಂದೆಯ, ಕಳೇಬರಂಚ-ಹೆಣವನ್ನೂ, ಯತ್-ಯಾವಕಾರಣದಿಂದ, ನಾಪಶ್ಯತ್-ಕಾಣಲಿಲ್ಲವೋ, ತತ್-ಆ ಕಾರಣದಿಂದ, ಸೌಭಸ್ಥಂ-ವಿಮಾನದಲ್ಲಿರುವನಾಗಿ, ಅಂಬರಚಾರಿಣಂ-ಅಂತರಿಕ್ಷದಲ್ಲಿ ತಿರುಗುತ್ತಿರುವನಾದ, ರಿಪುಂಚ-ವೈರಿಯಾದ ಸಾಲ್ವನನ್ನೂ, ಆಲೋಕ್ಯ-ನೋಡಿ, ನಿಹಂತುಂ-ಕೊಲ್ಲುವುದಕ್ಕೆ, ಉದ್ಯತಃ-ಉದ್ಯೋಗವುಂಟಾದವನಾದನು ‖೩೦‖ ರಾಜರ್ಷೇ-ರಾಜನೂ, ಋಷಿಯೂಆದ ಪರೀಕ್ಷಿತನೇ, ಕೇಚ-ಕೆಲವರಾದ, ಋಷಯಃ-ಮುನಿಗಳೂ, ನಾನ್ವಿತಾಃ-ಪೂರ್ವಾಪರ ವಾಕ್ಯಗಳಿಗೆ ಅನ್ವಯವಿಲ್ಲದವರಾಗಿ, ಏವಂ-ಹೀಗೆ, ವದಂತಿ-ಹೇಳುವರು ಯತ್-ಯಾವಕಾರಣದಿಂದ, ಸ್ವವಾಚಃ-ತಮ್ಮಮಾತುಗಳೇ, ವಿರುಧ್ಯೇರನ್-ವಿರೋಧಿಸುವವೋ, ತತ್-ಆಕಾರಣದಿಂದ, ತೇ-ಆ ಮುನಿಗಳು, ನಸ್ಮರಂತೀತಿ-ಪೌರ್ವಾಪರ್ಯವನ್ನು ನೆನಪುಗೊಳ್ಳುವುದಿಲ್ಲವೆಂದು, ನೂನಂ-ತರ್ಕಿಸುವೆನು ‖೩೧‖

---

ವುಳ್ಳವನಾದರೂ ಒಂದು ಮುಹೂರ್ತಪರ್ಯಂತವೂ ಮಾನುಷಭಾವದಲ್ಲಿ ಮಗ್ನನಾಗಿದ್ದು, ಆಮೇಲೆ ಮಹಾನುಭಾವನಾದ್ದರಿಂದಈಸಮಸ್ತವ್ಯಾಪಾರವೂ ಮಯನ ಉಪದೇಶದಿಂದ ಸಾಲ್ವನಿಂ ಪ್ರಯೋಗಿಸಲ್ಪಟ್ಟ ಆಸುರಮಾಯೆಯೇಹೊರತು ಆದೂತನು ದ್ವಾರಕಾಪಟ್ಟಣದಿಂದ ಬಂದವನಲ್ಲ. ಈಸಾಲ್ವನೂ ತಂದೆಯಾದವಸುದೇವನಂ ಯಥಾರ್ಥವಾಗಿ ಸಂಹರಿಸಲೂ ಇಲ್ಲವೆಂದು ತಿಳಿದನು‖೨೯‖ ಬಳಿಕ ಯಾವರೀತಿಯಿಂದ ಪುರುಷನು ಸ್ವಪ್ನದಲ್ಲಿ ಕಂಡ ಪ್ರಪಂಚವಂ ಜಾಗ್ರದವಸ್ಥೆಯಲ್ಲಿ ಕಾಣುವುದಿಲ್ಲವೋ ಅದೇರೀತಿಯಾಗಿ ಶ್ರೀಕೃಷ್ಣನು ಜ್ಞಾನಯುಕ್ತನಾಗಿ ಆಗ ಯುದ್ಧದಲ್ಲಿ ಕಾಣಲ್ಪಟ್ಟ ಆದೂತನನ್ನೂ ತಂದೆಯ ಆಕಳೇಬರವಂ ಸಹ ಕಾಣಲಿಲ್ಲ. ಮತ್ತೇನೆಂದರೆ- ಸೌಭವೆಂಬ ವಿಮಾನದಲ್ಲಿರುವ ದೇವಶತ್ರುವಾದ ಆಸಾಲ್ವನಂನೋಡಿ ಅವನಂ ಸಂಹರಿಸಲು ಸನ್ನದ್ಧನಾದನು‖೩೦‖ಶ್ರೀಕೃಷ್ಣನು ರಾಜಸೂಯಯಾಗಕ್ಕೆ ಹೋಗುವಾಗ ದ್ವಾರಕಾಪುರ ರಕ್ಷಾರ್ಥವಾಗಿ ಬಲರಾಮನಂಕುರಿತು ವಿಜ್ಞಾಪಿಸಿ ಇಂದ್ರಪ್ರಸ್ಥಪುರವನೈದಿದನೆಂದು ಹೇಳಿದ್ದರಿಂದ ಶ್ರೀಕೃಷ್ಣನು ಬಲರಾಮನೊಡನೆ ರಾಜಸೂಯಯಾಗಕ್ಕೋಸುಗ ತೆರಳಿದನೆಂಬರ್ಥವು, ಅಸಂಗತವು, ಮತ್ತು ಶ್ರೀಕೃಷ್ಣನು ಕಾಮ್ಯಕವನದಲ್ಲಿರುವ ಪಾಂಡವರಂಕುರಿತು ಸಾಲ್ವನೊಡನೆ ಯುದ್ಧಗೆಯ್ವುದರಲ್ಲಿ ಆಸಕ್ತನಾದ ನನ್ನಿಂದ ನಿಮ್ಮದ್ಯೂತವಿಚಾರವು ತಿಳಿಯಲ್ಪಡಲಿಲ್ಲವೆಂದು ಪಾಂಡವರಂ ಸಮಾಧಾನಂಗೆಯ್ವನೆಂದು ವ್ಯಾಸವಚನವಿರುವುದರಿಂದ ಶ್ರೀಕೃಷ್ಣನು ಇಂದ್ರಪ್ರಸ್ಥ ಪುರದಲ್ಲಿರುವಾಗ ಸಾಲ್ವನು ದ್ವಾರಕಾಪುರಕ್ಕೆ ಬಂದನೆಂಬರ್ಥವುಸಹ ಅಸಂಗತವೆಂದು ಈರೀತಿಯಾಗಿ ಶಂಕಿಸಲು ಆಗಶುಕಮುನಿಯು ಪರೀಕ್ಷಿದ್ರಾಜನಂಕುರಿತು ನಿರೂಪಿಸುವನೆಂತೆನೆ- ಎಲೈಅರಸೇ, ಕೇಳು, ಕೆಲವರು ಋಷಿಗಳು ಯಾವಯಾವ ಅರ್ಥದಲ್ಲಿ ತಮ್ಮವಾಕ್ಯಗಳು ವಿರೋಧಿಸುವವೋ ಆಯರ್ಥವಂ ಸಂಗಡಲೇ ಸ್ಮರಿಸುವುದಿಲ್ಲ ವಾದಕಾರಣದಿಂ ಪೂರ್ವೋತ್ತರ ಸಂದರ್ಭದಲ್ಲಿ ಅನುಸಂಧಾನ ರಹಿತವಾಗಿ ಈರೀತಿಯಿಂದ ಅಸಂಗತವಾದ ಅರ್ಥವಂ ಹೇಳುತಲಿದ್ದಾರೆಹೊರತು ಮತ್ತೊಂದಲ್ಲವು ‖೩೧‖ ಎಲೈಅರಸೇ. ಶ್ರೀಕೃಷ್ಣನಲ್ಲಿ ಶೋಕಮೋಹಾದಿಗಳು ಸಂಭವಿಸಲಾರ

ಸಂಭವಮ್ । ಕ್ವಚಾಖಂಡಿತವಿಜ್ಞಾನಜ್ಞಾನೈಶ್ವರ್ಯಸ್ಸುರೇಡಿತಃ ॥೩೨॥ ಯತ್ಪಾದಸೇವೋರ್ಜಿತಯಾತ್ಮ
ವಿದ್ಯಯಾಹಿನ್ವಂತ್ಯನಾದ್ಯಾತ್ಮವಿಪರ್ಯಯಗ್ರಹಮ್ । ಲಭಂತಆತ್ಮೀಯಮನಂತಮೈಶ್ವರಂಕುತೋನು
ಮೋಹಃಪರಮಸ್ಯಸದ್ಗತೇಃ ॥೩೩॥ ತಂಶಸ್ತ್ರಪೂಗೈಃಪ್ರಹರಂತಮೋಜಸಾಸಾಲ್ವಂಶರೈಶ್ಶೌರಿರಮೋಘ
ವಿಕ್ರಮಃ । ವಿದ್ಧ್ವಾಚ್ಛಿನದ್ವರ್ಮಧನುಶ್ಶಿರೋಮಣಿಂಸೌಭಂಚಶತ್ರೋರ್ಗದಯಾರುರೋಜಹ ॥೩೪॥
ತತ್ಕೃಷ್ಣಹಸ್ತೇರಿತಯಾವಿಚೂರ್ಣಿತಂಪಪಾತತೋಯೇಗದಯಾಸಹಸ್ರಧಾ । ವಿಸೃಜ್ಯತದ್ಭೂತಲಮಾ

---

ಶೋಕಮೋಹೌ-ದುಃಖವೂ ಮರಹೂ, ಸ್ನೇಹೋವಾ-ಪ್ರೀಮವಾಗಲೀ, ಕ್ವ ಎಲ್ಲಿಯವು, ಅಜ್ಞಾನಸಂಭವಂ-ಅಜ್ಞಾನದಿಂದ ಹುಟ್ಟಿದ, ಭಯಂವಾ-ಭೀತಿಯಾಗಲಿ, ಕ್ವ-ಎಲ್ಲಿಯದು, ಸುರೇಡಿತಃ-ದೇವತೆಗಳಿಂದ ಸ್ತುತಿಮಾಡಲ್ಪಟ್ಟವನಾದ, ಅಖಂಡಿತವಿಜ್ಞಾನಜ್ಞಾನೈಶ್ವರ್ಯಃ-ಪೂರ್ಣವಾದ ಶಾಸ್ತ್ರಜ್ಞಾನವೂ ಸ್ವರೂಪಾನುಭವವೂ ಐಶ್ವರ್ಯವೂ ಉಳ್ಳಕೃಷ್ಣನು, ಕ್ವಚ-ಎಲ್ಲಿತಾನೆ ॥೩೨॥ ಯತ್ಪಾದಸೇವೋರ್ಜಿತಯಾ-ಯಾವಕೃಷ್ಣನಪಾದಭಜನದಿಂದ ವೃದ್ಧಿಹೊಂದಿದ, ಆತ್ಮವಿದ್ಯಯಾ-ಆತ್ಮಜ್ಞಾನದಿಂದ, ಅನಾದ್ಯಾತ್ಮವಿಪರ್ಯಯಗ್ರಹಂ-ಅನಾದಿಯಾದ ಆತ್ಮಭ್ರಾಂತಿಜ್ಞಾನವನ್ನು, ಹಿನ್ವಂತಿ-ಬಿಡುವರೋ, ಆತ್ಮೀಯಂ-ಸ್ವರೂಪಸಂಬಂಧವಾದ, ಅನಂತಂ-ನಿತ್ಯವಾದ, ಐಶ್ವರಂ-ಐಶ್ವರ್ಯವನ್ನು, ಲಭಂತೇ-ಪಡೆಯುವರೋ, ಸದ್ಗತೇಃ-ಸತ್ಪುರುಷರಿಗೆ ಪ್ರಾಪ್ಯನಾದ, ಪರಮಸ್ಯ-ಪರಮಾತ್ಮನಾದ, ತಸ್ಯ-ಆ ಕೃಷ್ಣನಿಗೆ, ಮೋಹಃ-ಮರಹು, ಕುತೋನು-ಎತ್ತಣದು ತಾನೆ ॥೩೩॥ ಅಮೋಘವಿಕ್ರಮಃ-ವ್ಯರ್ಥವಾದ ಸಾಮರ್ಥ್ಯವುಳ್ಳ, ಶೌರಿಃ-ಕೃಷ್ಣನು, ಓಜಸಾ-ಸಾಮರ್ಥ್ಯದಿಂದ, ಶಸ್ತ್ರಪೂಗೈಃ- ಬಾಣಸಮೂಹಗಳಿಂದ, ಪ್ರಹರಂತಂ-ಹೊಡೆಯುತಲಿರುವ ತಂಸಾಲ್ವಂ-ಆ ಸಾಲ್ವನನ್ನು, ಶರೈಃ-ಅಂಬುಗಳಿಂದ, ವಿದ್ಧ್ವಾ-ನೋಯಿಸಿ, ವರ್ಮ-ಕವಚವನ್ನೂ, ಧನುಶ್ಶಿರೋಮಣಿಂ-ಶ್ರೇಷ್ಠವಾದ ಬಿಲ್ಲನ್ನೂ, ಅಚ್ಛಿನತ್-ಛೇದಿಸಿದನು, ಶತ್ರೋಃ-ವೈರಿಯ, ಸೌಭಂಚ-ವಿಮಾನವನ್ನೂ, ಗದಯಾ-ಗದಾಯುಧದಿಂದ, ರುರೋಜಹ-ಭಗ್ನಗೊಳಿಸಿದನು ॥೩೪॥ ತತ್-ಆಸೌಭವಿಮಾನವು, ಕೃಷ್ಣಹಸ್ತೇರಿತಯಾ-ಕೃಷ್ಣನಕೈಯಿಂದ ಪ್ರಯೋಗಿಸಲ್ಪಟ್ಟ, ಗದಯಾ-ಕೌಮೋದಕಿಯಿಂದ, ಸಹಸ್ರಧಾ-ಸಾವಿರಬಗೆಯಾಗಿ, ವಿಚೂರ್ಣಿತಂ-ಪುಡಿಗುಟ್ಟಲ್ಪಟ್ಟದ್ದರಿಂದ, ತೋಯೇ-ನೀರಿನಲ್ಲಿ, ಪಪಾತ-ಬಿದ್ದುಹೋಯಿತು ಸಾಲ್ವಃ-ಸೌಭರಾಜನು, ತತ್- ಆ ಸೌಭವನ್ನು, ವಿಸೃಜ್ಯ-ಬಿಟ್ಟು, ಭೂತಲಂ-ನೆಲವಲ್ಲಿ, ಆಸ್ಥಿತಃ-ನಿಂತವನಾಗಿ, ಗದಾಂ-ಗದಾಯುಧವನ್ನು, ಆದಾಯ-ತೆಗೆದುಕೊಂಡು,

---

ವು. ಅದೆಂತೆನೆ ಅಜ್ಞರಲ್ಲಿಹುಟ್ಟುವ ಶೋಕಮೋಹಂಗಳೂ ಸ್ನೇಹವೂ ದುರ್ನಿಮಿತ್ತದಿಂ ಪುಟ್ಟು ಭಯವಾದರೂ ಚಿತ್ತಧರ್ಮಂಗಳಲ್ಲಿ ಪರಿಪೂರ್ಣಂಗಳಾದ ಸ್ವರೂಪಜ್ಞಾನಬಾಹ್ಯವಿಷಯ ಜ್ಞಾನೈಶ್ವರ್ಯವುಳ್ಳವನಾಗಿ ಈಶ್ವರನಾಗಿಯೂ ಇರುವ ಶ್ರೀಕೃಷ್ಣನಲ್ಲಿ ಅಜ್ಞಾನಕಲ್ಪಿತಂಗಳಾಗಿ ತೋರುವವೇಹೊರತು ವಸ್ತುತಃಇಲ್ಲವು ॥೩೨॥ ಮತ್ತು ಋಷಿಗಳು ಯಾವ ಶ್ರೀ ಕೃಷ್ಣನ ಪಾದ ಸೇವನೆಯಿಂದ ಸಂಪೂರ್ಣವಾದ ಆತ್ಮವಿದ್ಯೆಯಿಂದ ಅನಾದಿಯಾಗಿ ನಾನು ಕೃಶನು, ನಾನು ಸುಖಿಯು, ನಾನು ದುಃಖಿಯು, ಎಂದು ಈ ರೀತಿಯಾಗಿ ದೇಹವೇನಾನೆಂಬದಾಗಿರುವ ಅಭಿಮಾನವಂ ನೀಗಿಯದ್ದು ಅನಂತರದಲ್ಲಿ ನಿಜವಾದ ನಾಶರಹಿತವಾದ ಈಶ್ವರ ಸ್ಥಾನವಂ ಪಡೆಯುತಲಿರುವರೋ, ಅಂತಾ ಸತ್ಪುರುಷರಿಗೆ ಪರಮಗತಿರೂಪನಾದ ಆ ಶ್ರೀ ಕೃಷ್ಣನಲ್ಲಿ ಎಂತು ಮೋಹವುಂಟಾಗುವುದು! ಆ ಕಾರಣದಿಂದ ಶ್ರೀ ಕೃಷ್ಣನಲ್ಲಿ ಮೋಹವುಂಟಾಯಿತೆಂಬ ವಚನವು ಅಸತ್ಯವೇ ಸರಿ ॥೩೩॥ ಈ ಯರ್ಥವಂ ಮಾತ್ರ ಅಸತ್ಯವೆಂದು ನಿರೂಪಿಸುವನದೆಂತೆನೆ-ಅನಂತರದಲ್ಲಿ ಅಮೋಘವಾದ ಪರಾಕ್ರಮವುಳ್ಳ ಶ್ರೀ ಕೃಷ್ಣನು ಆಗ ಶೌರ್ಯದಿಂದ ಶಸ್ತ್ರಸಮೂಹಂಗಳಿಂ ತನ್ನ ಸೇನೆಯಂ ಪ್ರಹರಿಸುತಲಿರುವ ಸಾಲ್ವನಂ ತಾನುಬಾಣಂಗಳಿಂ ಪ್ರಹರಿಸಿ ಅವನ ಕವಚವಂ ಧನುಸ್ಸಂ ಶಿರೋಮಾಣಿಕ್ಯವಂ ಸಹ ಛೇದಿಸಿದನು. ಮತ್ತು ಗದೆಯಿಂದ ಸಾಲ್ವನೆಂಬ ವೈರಿಯಂ ಅವನ ಸೌಭವೆಂಬ ಆ ವಿಮಾನವಂ ಸಹ ಮುರಿದನು ॥೩೪॥ ಅನಂತರದಲ್ಲಿ ಆ ವಿಮಾನವು ಶ್ರೀ ಕೃಷ್ಣನ ಹಸ್ತದಿಂ ಎಸೆಯಲ್ಪಟ್ಟ ಗದೆಯಿಂ ಸಹಸ್ರ ಪ್ರಕಾರವಾಗಿ ಚೂರ್ಣೀಕರಿಸಲ್ಪಟ್ಟದ್ದಾಗಿ ಸಮುದ್ರದಲ್ಲಿ ಬಿದ್ದು ಹೋಯಿತು. ಆ ಸಾಲ್ವನು ಆ ವಿಮಾನವಂ ಬಿಟ್ಟು ಭೂಮಿಯಲ್ಲಿ ನಿಂತವನಾಗಿ ಗದೆಯಂ ಹಿಡಿ

ಸ್ಥಿತೋಗದಾಮಾದಾಯಸಾಲ್ವೋಹರಿಮಭ್ಯಗಾದ್ದ್ರುತಮ್ ॥೩೫॥ ಅಥಾಪತತಸ್ಸಗದಂತಸ್ಯಬಾಹುಂಭ
ಲ್ಲೇನಛಿತ್ವಾಥರಥಾಂಗಮದ್ಭುತಮ್ ।ವಧಾಯಸಾಲ್ವಸ್ಯಲಯಾರ್ಕಸನ್ನಿಭಂಬಿಭ್ರದ್ಬಭೌಸಾರ್ಕಇ
ವೋದಯಾಚಲಃ ॥೩೬॥ ಜಹಾರತಸ್ಯೈವಶಿರಸ್ಸಕುಂಡಲಂಕಿರೀಟಯುಕ್ತಂಪುರುಮಾಯಿನೋಹರಿಃ।ವ
ಜ್ರೇಣವೃತ್ರಸ್ಯಯಥಾಪುರಂದರೋಬಭೂವಹಾಹೇತಿವಚಸ್ತದಾನೃಣಾಮ್॥೩೭॥ತಸ್ಮಿನ್ನಿಪತಿತೇಪಾಪೇಸೌ
ಭೇಚಗದಯಾಹತೇ।ನಿನದುರ್ದುಂದುಭಯೋನೆದುಸ್ತದಾದೇವಗಣೇರಿತಾಃ॥ ಸಖೀನಾಮಪಚಿತಿಂಕುರ್ವನ್ದಂ
ತವಕ್ರೋರುಷಾಭ್ಯಗಾತ್ ... ... ॥೩೮॥

...ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಸಪ್ತಸಪ್ತತಿತಮೋಧ್ಯಾಯಃ...

---

ದ್ರುತಂ-ಬೇಗನೇ, ಹರಿಂ-ಕೃಷ್ಣನನ್ನು, ಅಭ್ಯಗಾತ್-ಇದಿರಿಸಿಹೋದನು ॥೩೫॥ ಅಥ-ಆ ಮೇಲೆ, ಆಪತತಃ-ಅಟ್ಟಿಕೊಂಡು ಬರುತ್ತಿರುವ, ತಸ್ಯ-ಆಸಾಲ್ವನ, ಸಗದಂ-ಗದಾಸಹಿತವಾದ, ಬಾಹುಂ-ತೋಳನ್ನು, ಭಲ್ಲೇನ-ಭಲ್ಲಾಯುಧದಿಂದ, ಛಿತ್ವಾ-ಕತ್ತರಿಸಿ, ಸಾಲ್ವಸ್ಯ-ಸಾಲ್ವನ, ವಧಾಯ-ಸಂಹಾರಕ್ಕೋಸುಗ, ಲಯಾರ್ಕಸನ್ನಿಭಂ-ಪ್ರಳಯಕಾಲದ ಸೂರ್ಯನೊಡನೆ ಸಮಾನವಾದ, ಅದ್ಭುತಂ-ಆಶ್ಚರ್ಯವಾದ, ರಥಾಂಗಂ-ಚಕ್ರಾಯುಧವನ್ನು, ಬಿಭ್ರತ್-ಧರಿಸಿದ ಕೃಷ್ಣನು, ಸಾರ್ಕಃ-ಸೂರ್ಯನೊಡಗೂಡಿದ, ಉದಯಾಚಲಇವ-ಮೂಡಲಗುಡ್ಡದಂತೆ, ಬಭೌ-ಬೆಳಗಿದನು ॥೩೬॥ ಹರಿಃ-ಕೃಷ್ಣನು ತೇನೈವ-ಆ ಚಕ್ರದಿಂದಲೇ, ಪುರುಮಾಯಿನಃ-ಅಧಿಕಮೋಸವುಳ್ಳ ಸಾಲ್ವನ, ಕಿರೀಟಯುಕ್ತಂ-ಟೊಪ್ಪಿಗೆಯಿಂದಕೂಡಿದ, ಸಕುಂಡಲಂ-ಕರ್ಣಾಭರಣಸಹಿತವಾದ, ಶಿರಃ-ತಲೆಯನ್ನು, ಪುರಂದರಃ-ಇಂದ್ರನು, ವಜ್ರೇಣ-ಸಿಡಿಲಿನಿಂದ, ವೃತ್ರಸ್ಯಯಥಾ-ವೃತ್ರಾಸುರನ ತಲೆಯಂ ಹೇಗೋಹಾಗೆ, ಜಹಾರ-ಅಪಹರಿಸಿದನು. ತದಾ-ಆಗ, ನೃಣಾಂ-ಮನುಷ್ಯರ, ಹಾಹೇತಿವಚಃ-ಹಾಹಾಕಾರವು, ಬಭೂವ-ಉಂಟಾಯಿತು ॥೩೭॥ ಪಾಪೇ-ದುಷ್ಕೃತವುಳ್ಳವನಾದ, ತಸ್ಮಿನ್-ಆ ಸಾಲ್ವನು, ನಿಪತಿತೇ-ಬಿದ್ದುಹೋಗುತ್ತಿರುವಲ್ಲಿ, ಸೌಭೇಚ-ಸೌಭವಿಮಾನವೂ, ಗದಯಾ-ಗದಾಯುಧದಿಂದ, ಹತೇ-ಮುರಿಯಲ್ಪಟ್ಟದ್ದಾಗುವಲ್ಲಿ, ತದಾ-ಆಗ, ದೇವಗಣೇರಿತಾಃ-ದೇವರ್ಕಳ ಗುಂಪುಗಳಿಂದ ಪ್ರೇರಿಸಲ್ಪಟ್ಟ, ದುಂದುಭಯಃ-ದೇವವಾದ್ಯಗಳು ದಿವಿ-ಸ್ವರ್ಗದಲ್ಲಿ, ನೇದುಃ-ಮೊಳಗಿದವು, ದಂತವಕ್ರಃ-ದಂತವಕ್ರನೆಂಬವನು, ಸಖೀನಾಂ-ಮಿತ್ರರಾದ ದೈತ್ಯರಿಗೆ, ಅಪಚಿತಿಂ-ಹಗೆತೀರಿಸಿಕೊಂಡ ಉಪಕಾರವನ್ನು, ಕುರ್ವನ್-ಮಾಡುವವನಾಗಿ, ರುಷಾ-ಸಿಟ್ಟಿನಿಂದ, ಅಭ್ಯಗಾತ್-ಬಂದನು ॥೩೮॥

ಇಂತು ಭಾಗವತ ಪ್ರತಿಶಬ್ದಾರ್ಥಬೋಧಿನಿಯೊಳು ದಶಮಸ್ಕಂಧದಲ್ಲಿ ೭೭ ನೆಯ ಅಧ್ಯಾಯಂ ಮುಗಿದುದು.

---

ದು ಶೀಘ್ರದಿಂದ ಶ್ರೀ ಕೃಷ್ಣನಿಗೆ ಇದಿರಾಗಿ ನಡದನು ॥೩೫॥ ಅನಂತರದಲ್ಲಿ ಶ್ರೀ ಕೃಷ್ಣನು ಗದೆಯಂ ಪಿಡಿದಿದಿರಾಗಿ ಬರುತಲಿರುವ ಸಾಲ್ವನ ಭುಜವಂ ಭಲ್ಲಾಯುಧದಿಂ ಛೇದಿಸಿ ಸಾಲ್ವನಸಂಹಾರಕ್ಕೋಸುಗ ಪ್ರಳಯಕಾಲದಲ್ಲಿರುವ ಸೂರ್ಯನಿಗೆ ಸಮಾನವಾದ ಆಶ್ಚರ್ಯಕರವಾದ ಚಕ್ರಾಯುಧವ ಧರಿಸಿದವನಾಗಿ ಸೂರ್ಯನೊಡಗೂಡಿರುವ ಉದಯ ಪರ್ವತದಂತೆ ಪ್ರಕಾಶಿಸಿದನು ॥೩೬॥ ಆಮೇಲೆ ಯಾವ ರೀತಿಯಿಂದ ಇಂದ್ರನು ವಜ್ರಾಯುಧದಿಂ ವೃತ್ರಾಸುರನ ಶಿರವಂ ಛೇದಿಸಿದನೋ ಅದೇ ರೀತಿಯಿಂದ ಶ್ರೀ ಕೃಷ್ಣನು ಚಕ್ರಾಯುಧದಿಂದ ಮಾಯಾವಂತನಾದ ಸಾಲ್ವನ ಕಿರೀಟ ಕುಂಡಲಯುಕ್ತವಾದ ಶಿರವ ಛೇದಿಸಿದನು. ಆಗ ಸಮಸ್ತರೂ ಹಾಹಾಕಾರಂಗೆಯ್ದರು ॥೩೭॥ ಎಲೈ, ಅರಸೇ! ಪಾಪಿಯಾದ ಆ ಸಾಲ್ವನು ಭೂಮಿಯಲ್ಲಿ ಬಿದ್ದು ಹೋಗುತಲೂ ಸೌಭವೆಂಬ ವಿಮಾನವು ಕೂಡ ಗದೆಯಿಂದ ಭಗ್ನವಾಗುತ್ತಿರಲು ಅಂತರಿಕ್ಷದಲ್ಲಿ ದೇವ ಸಮೂಹಂಗಳಿಂದ ಮೊಳಗಿಸಲ್ಪಟ್ಟ ಭೇರಿಗಳು ಅತ್ಯಂತವಾಗಿ ಧ್ವನಿಗೆಯ್ದವು ॥ ‡ ॥೩೮॥

ಇಂತು ಶ್ರೀಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸಿದನೆಂದುಸೂತಪೌ
ರಾಣಿಕನು ನೈಮಿಶಾರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಪೇಳಿದನೆಂಬಲ್ಲಿಗೆ-ಶ್ರೀ
ಮನ್ಮಹೀಶೂರ ಪುರವರಾಧೀಶ ಶ್ರೀಚಾಮರಾಜತನುಜಶ್ರೀಮತ್ಕೃಷ್ಣರಾಜವಿರಚಿ
ತವಾದ ಶ್ರೀಕೃಷ್ಣರಾಜವಾಣೀವಿಲಾಸಮೆಂಬಶ್ರೀಭಾಗವತ ಪುರಾಣದಕ
ರ್ಣಾಟಭಾಷಾವ್ಯಾಖ್ಯಾನದಲ್ಲಿ ೭೭ನೆ ಅಧ್ಯಾಯಂಮುಗಿದುದು।

ದಂತವಕ್ರವಿಡೂರಥವಧಾದಿಕಥಾ ಪ್ರಾರಂಭಃ ಷಟ್ಕಃ.

ಶ್ರೀಶುಕಃ॥ ಶಿಶುಪಾಲಸ್ಯಸಾಲ್ವಸ್ಯಪೌಂಡ್ರಕಸ್ಯಾಪಿದುರ್ಮತೇಃ ।ಪರಲೋಕಗತಾನಾಂಚಕುರ್ವ್ವನ್ಪಾ ರೋಕ್ಷ್ಯಸೌಹೃದಮ್ ॥೧॥ಏಕಃಪದಾತಿಸ್ಸನ್ನದ್ಧಗದಾಪಾಣಿಃಪ್ರಕಂಪಯನ್ ।ಪದ್ಭ್ಯಾಮಿಮಾಂ ಮಹಾರಾಜಮಹಾಸತ್ವೋವ್ಯದೃಶ್ಯತ॥೨॥ ತಂತದಾಯಾಂತಮಾಲೋಕ್ಯಗದಾಮಾದಾಯಸತ್ವರಃ । ಅ ವಪ್ಲುತ್ಯರಥಾತ್ಕೃಷ್ಣಸ್ಸಿಂಧುಂವೇಲೇವಪ್ರತ್ಯಧಾತ್ ॥೩॥ಗದಾಮುದ್ಯಮ್ಯಕಾರೂಶೋಮುಕುಂದಂ ಪ್ರಾಹದುರ್ಮದಃ । ದಿಷ್ಟ್ಯಾದಿಷ್ಟ್ಯಾಭವಾನದ್ಯಮಮದೃಷ್ಟಿಪಥಂಗತಃ ॥೪॥ ತ್ವಂಮಾತುಲೇಯೋನಃ

---

೭೮ ನೆಯ ಅಧ್ಯಾಯದ ಪ್ರತಿಪದಟೀಕೆ.

ಶಿಶುಪಾಲಸ್ಯ-ಶಿಶುಪಾಲನಿಗೂ, ಸಾಲ್ವಸ್ಯ-ಸಾಲ್ವನಿಗೂ, ದುರ್ಮತೇಃ-ದುಷ್ಟಬುದ್ಧಿಯುಳ್ಳ, ಪೌಂಡ್ರಕಸ್ಯಾಪಿ-ಪೌಂ ಡ್ರಕವಾಸುದೇವನಿಗೂ, ಪರಲೋಕಗತಾನಾಂಚ-ಸತ್ತ ತನ್ನವರೆಲ್ಲರಿಗೂ, ಪಾರೋಕ್ಷ್ಯಸೌಹೃದಂ-ಪರಲೋಕ ಸ್ನೇಹಕಾರ್ಯ ವನ್ನು, ಕುರ್ವ್ವನ್-ಮಾಡುವವನಾಗಿ ॥೧॥ ಏಕಃ-ಓರ್ವನೇ, ಪದಾತಿಃ-ಕಾಲಾಳಾಗಿಯೂ, ಸನ್ನದ್ಧಃ-ಪಟ್ಟಿಯಂಬಿಗಿದವನಾಗಿ ಯೂ, ಗದಾಪಾಣಿಃ-ಗದೆಯು ಕೈಯಲ್ಲಿಉಳ್ಳವನಾಗಿಯೂ, ಪದ್ಭ್ಯಾಂ-ಕಾಲುಗಳಿಂದ, ಮಹೀಂ-ನೆಲವನ್ನು, ಪ್ರಕಂಪಯನ್-ಅ ದರಿಸುತ್ತಿರುವವನಾಗಿಯೂ, ಮಹಾಸತ್ವಃ-ಹೆಚ್ಚು ಬಲವುಳ್ಳ ದಂತವಕ್ರನು, ಅಧ್ಯದೃಶ್ಯತ-ಕೃಷ್ಣನಿದಿರಿಗೆಕಾಣಿಸಿದನು, ಮಹಾ ರಾಜ-ಕೇಳೈ ಪರೀಕ್ಷಿದ್ರಾಯನೇ ॥೨॥ ತದಾ-ಆಗ, ಆಯಾಂತಂ-ಬರುತಿರುವ, ತಂ-ಆ ದಂತವಕ್ರನನ್ನು, ಆಲೋಕ್ಯ-ನೋ ಡಿ, ಕೃಷ್ಣಃ-ವಾಸುದೇವನು, ಸತ್ವರಃ-ವೇಗಪೊಡಗೂಡಿದವನಾಗಿ, ರಥಾತ್-ತೇರಿನಿಂದ, ಅವಪ್ಲುತ್ಯ-ದುಮ್ಮಿಕ್ಕಿ, ಗದಾಂ- ಕೌಮೋದಕಿಯನ್ನು, ಆದಾಯ-ತೆಗೆದುಕೊಂಡು, ವೇಲಾ-ತಡಿಯು, ಸಿಂಧುಮಿವ-ಕಡಲನ್ನು ಹೇಗೋಹಾಗೆ, ಪ್ರತ್ಯಧಾತ್-ತ ಡೆದು ನಿಲ್ಲಿಸಿದನು ॥೩॥ ಕಾರೂಶಃ-ಕರೂಷವಂಶದಲ್ಲಿ ಹುಟ್ಟಿದದಂತವಕ್ರನು, ದುರ್ಮದಃ-ಕೆಟ್ಟಕೊಬ್ಬುಳ್ಳವನಾದ್ದರಿಂದ,ಗ ದಾಂ-ಆಯುಧವನ್ನು, ಉದ್ಯಮ್ಯ-ಎತ್ತಿಕೊಂಡು, ಮುಕುಂದಂ-ಕೃಷ್ಣನನ್ನು ಕುರಿತು, ಪ್ರಾಹ-ನುಡಿದನು. ದಿಷ್ಟ್ಯಾದಿಷ್ಟ್ಯಾ- ದೈವಯೋಗದಿಂದಲೇ ದೈವಯೋಗದಿಂದಲೇ, ಭವಾನ್-ನೀನು, ಅದ್ಯ-ಈಗ, ಮಮ-ನನ್ನ, ದೃಷ್ಟಿಪಥಂ-ಕಣ್ಣಿನದಾರಿಯನ್ನು, ಗತಃ-ಹೊಂದಿದವನಾಗಿ (ಅಂತರಂಗಾರ್ಥವು-ವಿಜಯನೆಂಬ ವೈಕುಂಠದ್ವಾರಪಾಲಕನು ಶಾಪಕಾಲತೀರಿದ್ದರಿಂದ ಮದವಿಲ್ಲದ ವನಾಗಿ ಮೋಕ್ಷದಾಯಕನಾದ ವಿಷ್ಣುವಂಕುರಿತು ಈಗನನಗೆ ದರ್ಶನವಂಕೊಟ್ಟೆ) ಎಂದನು॥೪॥ ಕೃಷ್ಣ-ವಾಸುದೇವನೇ,ತ್ವಂ ನೀನು, ನಮಗೆ, ಮಾತುಲೇಯಃ-ಸೋದರಮಾವನಮಗನಾದರೂ, ಮಿತ್ರಧ್ರುಕ್- ಸ್ನೇಹಿತರಿಗೆ ದ್ರೋಹಮಾಡಿದವನಾದ್ದರಿಂ,

---

೭೮ನೆಯ ಅಧ್ಯಾಯವು.

ಶ್ರೀ ಧರೀಯಶ್ಲೋಕಃ॥ ತತೋಽಷ್ಟಸಪ್ತತಿತಮೇದಂತವಕ್ತ್ರವಿಡೂರಥೌ। ಹತ್ವಾಹರಿಃ ಪುರೇರೇಮೇ ರಾಮಸ್ಸೂತಂತತೋವಧೀತ್ ॥%॥ಟೀ॥ಎಪ್ಪತೆಂಟನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ದಂತವಕ್ರವಿಡೂರಥರಂ ಸಂಹರಿಸಿ ದ್ವಾರಕಾಪುರದಲ್ಲಿ ಪೂರ್ವ್ವದಂತೆ ರಮಿಸಿದನೆಂಬರ್ಥವನ್ನೂ ಅನಂತರದಲ್ಲಿ ಬಲರಾಮನು ಸೂತಪೌರಾಣಿ ಕನು ಸಂಹರಿಸಿದನೆಂಬ ವೃತ್ತಾಂತವಂಸಹ ಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸುವನದೆಂತೆನೆ,

ಎಲೈ, ಅರಸೇ! ಕೇಳು, ಶಿಶುಪಾಲನಿಗೂ ಸಾಲ್ವನಿಗೂ ದುರ್ಬುದ್ಧಿಯುಳ್ಳ ಪೌಂಡ್ರಕನಿಗೂ ಸಹ ಮಿತ್ರನಾ ದ ಮಹಾಬಲಶಾಲಿಯಾದ ದಂತವಕ್ರನೆಂಬವನು ಸ್ವರ್ಗವನೈದ್ದಿರುವ ಅವರೆಲ್ಲರಿಗೂ ಪರಲೋಕಕ್ಕಾಗಿ ಮಾಡತಕ್ಕ ಮಿತ್ರಕಾರ್ಯವಂ ಗೆಯ್ವವನಾಗಿ ॥೧॥ ತಾನೋರ್ವನೇ ಪಾದಚಾರಿಯಾಗಿ ಅತ್ಯಂತ ಕೋಪಯುಕ್ತನಾಗಿ ಗದೆ ಯಂಪಿಡಿದು ಪಾದವಿನ್ಯಾಸಂಗಳಿಂ ಭೂಮಿಯಂ ಕಂಪಿಸುವಂತೆ ಮಾಡುತ ಕಾಣಲ್ಪಟ್ಟನು॥೨॥ಅನಂತರದಲ್ಲಿ ಶ್ರೀ ಕೃಷ್ಣನು ಅರ್ತಿಯಾಗಿ ಬರುತ್ತಿರುವ ದಂತವಕ್ರನಂನೋಡಿ ಅತಿತ್ವರೆಯಿಂದ ತಾನೂ ಗದೆಯಂಪಿಡಿದು ರಥದಿಂದೆ ಯಿಂದಿಳಿದು ಸಮುದ್ರವನ್ನು ತಟವದಂತೆ ತಡೆದನು॥೩॥ ಆಗ ಕರೂಶ ದೇಶಾಧಿಪತಿಯಾದ ದಂತವಕ್ರನು ಅತ್ಯಂ ತಮತ್ತನಾಗಿ ಗದೆಯನೆತ್ತಿಕೊಂಡು ಶ್ರೀಕೃಷ್ಣನಂ ಕುರಿತು ನುಡಿದನು. ಅದೆಂತೆನೆ ॥೪॥ ಎಲೈಶ್ರೀಕೃಷ್ಣನೇ

ಕೃಷ್ಣಮಿತ್ರಧ್ರುಗ್ದಿಷ್ಟ್ಯಾ ಮಾಂಜಿಘಾಂಸಸಿ। ಅತಸ್ತ್ವಾಂಗದಯಾಮಂದಹನಿಷ್ಯೇವಜ್ರಕಲ್ಪಯಾ॥೫॥ ತರ್ಹ್ಯಾನೃಣ್ಯಮುಪೈಮ್ಯಜ್ಞಮಿತ್ರಾಣಾಂಮಿತ್ರವತ್ಸಲಃ ।ಬಂಧುರೂಪಮರಿಂಹತ್ವಾವ್ಯಾಧಿಂದೇಹಚರಂಯಥಾ ॥೬॥ ಏವಂರೂಕ್ಷೈಸ್ತುದನ್ವಾಕ್ಯೈಃಕೃಷ್ಣಂತೋತ್ರೈರಿವದ್ವಿಪಮ್ ।ಗದಯಾತಾಡಯನ್ಮೂರ್ಧ್ನಿಸಿಂಹವದ್ವ್ಯನದಚ್ಚಸಃ ॥೭॥ ಗದಯಾಭಿಹತೋಪ್ಯಾಜೌನಚಚಾಲಯದೂದ್ವಹಃ । ಕೃಷ್ಣೋಪಿತಮಹನ್ಗುರ್ವ್ಯಾಕೌಮೋದಕ್ಯಾಸ್ತನಾಂತರೇ ॥೮॥ಗಾಢನಿರ್ಭಿನ್ನಹೃದಯಉದ್ವಮನ್ರುಧಿರಂಮುಖಾತ್ । ಪ್ರಸಾರ್ಯಕೇಶಬಾಹ್ವಂಘ್ರೀನ್ಧರಣ್ಯಾಂನ್ಯಪತದ್ವ್ಯಸುಃ॥೯॥ತತಸ್ಸೂಕ್ಷ್ಮತರಂ

---

ಮಾಂ-ನನ್ನನ್ನು, ಜಿಘಾಂಸಸಿ-ಕೊಲ್ಲಲೆಳಸುವಿ, ಮಂದ-ಆಲಸ್ಯಗಾರನೇ, ಅತಃ-ಆ ಕಾರಣದಿಂದ,ವಜ್ರಕಲ್ಪಯಾ-ಸಿಡಿಲಿಗೆಕೊಂಚಕಡಮೆಯಾದ, ಗದಯಾ-ಗದಾಯುಧದಿಂದ, ತ್ವಾಂ-ನಿನ್ನನ್ನು. ಹನಿಷ್ಯೇ-ಕೊಲ್ಲುತ್ತೇನೆ ॥೫॥ ಅಜ್ಞ-ಮೂಢನಾದಕೃಷ್ಣನೇ, ತರ್ಹಿ-ಆದರೆ, ಬಂಧುರೂಪಂ-ನಂಟನಾಗಿರುವ, ಅರಿಂ-ಹಗೆಯನ್ನು, ದೇಹಚರಂ-ಮೈಯಲ್ಲಿರುವ, ವ್ಯಾಧಿಂಯಥಾ-ರೋಗವನ್ನು ಹೇಗೋಹಾಗೆ, ಹತ್ವಾ-ಕೊಂದು, ಮಿತ್ರವತ್ಸಲಃ-ಸ್ನೇಹಿತರಲ್ಲಿ ಪ್ರೀತಿಯುಳ್ಳವನಾದ್ದರಿಂದ, ಮಿತ್ರಾಣಾಂ- ಸ್ನೇಹಿತರ, ಆನೃಣ್ಯಂ-ಋಣತೀರಿಸಿಕೊಳ್ಳುವಿಕೆಯನ್ನು, ಉಪೈಮಿ-ಹೊಂದುವೆನು ॥೬॥ ಏವಂ-ಹೀಗೆ, ರೂಕ್ಷೈಃವಾಕ್ಯೈಃ- ಪರುಷವಚನಗಳಿಂದ, ಕೃಷ್ಣಂ-ವಾಸುದೇವನನ್ನು, ತೋತ್ರೈಃದ್ವಿಪಮಿವ-ಅಂಕುಶಗಳಿಂದ ಆನೆಯನ್ನು ಹೇಗೋಹಾಗೆ, ತುದನ್-ಚುಚ್ಚುವನಾಗಿ, ಸಃ-ಆದಂತವಕ್ರನು, ಗದಯಾ-ಗದಾಯುಧದಿಂದ, ಮೂರ್ಧ್ನಿ-ತಲೆಯಲ್ಲಿ, ಅತಾಡಯತ್-ಹೊಡೆದನು ಸಿಂಹವತ್-ಸಿಂಗನಂತೆ, ವ್ಯನದಚ್ಚ-ಬೊಬ್ಬೆಯನ್ನೂ, ಹಾಕಿದನು ॥೭॥ ಯದೂದ್ವಹಃ-ಯಾದವರಿಗೆ ರಕ್ಷಕನು, ಆಜೌ-ಯುದ್ಧದಲ್ಲಿ, ಗದಯಾ-ಗದಾಯುಧದಿಂದ, ಅಭಿಹತೋಽಪಿ-ಬಡಿಯಲ್ಪಟ್ಟವನಾದರೂ, ನಚಚಾಲ-ಕದಲಲಿಲ್ಲವು. ಕೃಷ್ಣೋಽಪಿ-ಕೃಷ್ಣನೂಕೂಡ, ಗುರ್ವ್ಯಾ-ಭಾರವಾದ, ಕೌಮೋದಕ್ಯಾ-ಗದೆಯಿಂದ, ತಂ-ಆದಂತವಕ್ರನನ್ನು, ಸ್ತನಾಂತರೇ, ಎದೆಯನಡುವೆ, ಅಹನ್-ಹೊಡೆದನು ॥೮॥ ಗಾಢಂ-ಘಟ್ಟಿಯಾಗಿ, ನಿರ್ಭಿನ್ನಹೃದಯಃ-ಸೀಳಿದ ಎದೆಯುಳ್ಳವನಾದ್ದರಿಂದ, ಮುಖಾತ್- ಬಾಯಿಯ ದೆಸೆಯಿಂದ, ರುಧಿರಂ-ರಕ್ತವನ್ನು, ಉದ್ವಮನ್-ಕಾರುವನಾಗಿ, ಕೇಶಬಾಹ್ವಂಘ್ರೀನ್-ಕೂದಲನ್ನೂ, ತೋಳುಗಳನ್ನೂ ಕಾಲುಗಳನ್ನೂ, ಪ್ರಸಾರ್ಯ-ಚಾಚಿಕೊಂಡು, ವ್ಯಸುಃ-ಪ್ರಾಣವಿಲ್ಲದವನಾಗಿ, ಧರಣ್ಯಾಂ-ನೆಲದಲ್ಲಿ, ನ್ಯಪತತ್-ಬಿದ್ದನು ॥೯॥ ತತಃ-ಆಮೇಲೆ, ನೃಪ-ಪರೀಕ್ಷಿತನೇ, ಚೈದ್ಯಪತೇಃಯಥಾ-ಶಿಶುಪಾಲನಿಗೆ ಹೇಗೋಹಾಗೆ, ಸರ್ವಭೂತಾನಾಂಪಶ್ಯತಾಂ-ಸಕಲಪ್ರಾಣಿಗಳು ನೋಡುತ್ತಿರುವಲ್ಲಿ, ಸೂಕ್ಷ್ಮತರಂಜ್ಯೋತಿಃ- ಬಹಳಸಣ್ಣಬೆಳಕು, ಅದ್ಭುತಂ-ಆಶ್ಚರ್ಯವಾಗಿ, ಕೃಷ್ಣಂ- ನಾರಾಯಣ

---

ಈಗ ನೀನು ನನ್ನದೃಷ್ಟಿಮಾರ್ಗಕ್ಕೆ ಗೋಚರನಾದ್ದು ಚನ್ನಾಯಿತು. ನೀನು ನಮಗೆ ಬಂಧುವಾದರೂ ನನ್ನ ಮಿತ್ರರಾದ ಶಿಶುಪಾಲಾದಿಗಳಂ ಸಂಹರಿಸಿದವನಾಗಿ ನನ್ನಂಕೂಡ ಸಂಹರಿಸುತ್ತೀಯೆ ॥೫॥ ಆಕಾರಣದಿಂದ ಎಲಾ ಮೂಢನೇ! ಮೈಯಲ್ಲಿ ಪ್ರವರ್ತಿಸುವ ವ್ಯಾಧಿಯಂನೋಡಿ ಇಲ್ಲಿ ಬಂಧುರೂಪನಾಗಿ ಶತ್ರುವಾಗಿಯೂ ಇರುವ ನಿನ್ನಂ ಸಂಹರಿಸಿ ಶಿಶುಪಾಲನ ಋಣದಿಂ ಸಾಲ್ವಮೊದಲಾದ ಮಿತ್ರರ ಋಣದಿಂದಲೂ ಮುಕ್ತನಾಗುವೆನು ॥೬॥ಎಂದು ದಂತವಕ್ರನು ತೀಕ್ಷ್ಣಂಗಳಾದ ವಾಕ್ಯಂಗಳಿಂದ ಅಂಕುಶಂಗಳಿಂ ಆನೆಯಂನೋಯಿಪಾದಿಯಲ್ಲಿಶ್ರೀಕೃಷ್ಣನಂ ಪೀಡಿಸುತ ಗದೆಯಿಂ ಶ್ರೀಕೃಷ್ಣನ ಶಿರಸ್ಸಂ ಪ್ರಹರಿಸಿ ಸಿಂಹನಾದಂ ಗೆಯ್ದನು ॥೭॥ ಆಗ ಶ್ರೀಕೃಷ್ಣನು ಯುದ್ಧದಲ್ಲಿ ಆಗದೆಯಿಂದ ಪ್ರಹರಿಸಲ್ಪಟ್ಟವನಾದರೂ ಚಲಿಸುವನಾಗಲಿಲ್ಲ. ಶ್ರೀಕೃಷ್ಣನೂ ಕೌಮೋದಕಿಯೆಂಬ ಮಹಾಗದೆಯಿಂ ಆದಂತವಕ್ರನ ವಕ್ಷಸ್ಥಲವಂ ಪ್ರಹರಿಸಿದನು ॥೮॥ ಆದಂತವಕ್ರನು ಆಗದೆಯಿಂ ಅತ್ಯಂತ ಭೇದಿಸಲ್ಪಟ್ಟ ವಕ್ಷಸ್ಥಲವುಳ್ಳವನಾಗಿ ಮುಖದಿಂದ ರಕ್ತವಂಕಾರುತ, ಕೇಶಂಗಳಂ ಭುಜಂಗಳಂ ಪಾದಂಗಳಂಸಹ ಹರಡಿಕೊಂಡು ಪ್ರಾಣರಹಿತನಾಗಿ ಭೂಮಿಯಲ್ಲಿ ಬಿದ್ದನು ॥೯॥ ಆಸಮಯದಲ್ಲಿ ಅವನ ಶರೀರದದೆಸೆಯಿಂದ ಅತಿಸೂಕ್ಷ್ಮವಾದ ಆಶ್ಚರ್ಯಕರವಾದ ಒಂದು ತೇಜಸ್ಸು ಹೊರಟು ಶಿಶುಪಾಲನ ವಧೆಯಲ್ಲಿ ಎಂತುಅವನದೇಹದಿಂದ ಒಂದುತೇಜಸ್ಸು ಶ್ರೀಕೃಷ್ಣನಲ್ಲಿ ಐಕ್ಯವನೆಯ್ದಿತೋ ಅದೇರೀತಿಯಲ್ಲಿ ಸಕಲಭೂತಂಗಳೂ ನೋಡುತ್ತಿರಲಾಗಿ ಶ್ರೀಕೃಷ್ಣನಲ್ಲಿ ಐ

ಜ್ಯೋತಿಃ ಕೃಷ್ಣಂ ಸಮಾವಿಶದದ್ಭುತಮ್ । ಪಶ್ಯತಾಂ ಸರ್ವಭೂತಾನಾಂ ಯಥಾ ಚೈದ್ಯವಧೇ ನೃಪ ॥೧೦॥ ವಿದೂರಥಸ್ತು ತದ್ಭ್ರಾತಾ ಭ್ರಾತೃಶೋಕಪರಿಪ್ಲುತಃ । ಆಗಚ್ಛದಸಿಚರ್ಮಾಭ್ಯಾಮುಚ್ಛ್ವಸಂಸ್ತಜ್ಜಿಘಾಂಸಯಾ ॥ ತಸ್ಯ ಚಾಪತತಃ ಕೃಷ್ಣಶ್ಚಕ್ರೇಣ ಕ್ಷುರನೇಮಿನಾ । ಶಿರೋ ಜಹಾರ ರಾಜೇಂದ್ರ ಸಕಿರೀಟಂ ಸಕುಂಡಲಮ್ ॥೧೨॥ ಏವಂ ಸೌಭಂ ಚ ಸಾಲ್ವಂ ಚ ದಂತವಕ್ರಂ ವಿದೂರಥಮ್ । ಹತ್ವಾ ದುರ್ವಿಷಹಾನನ್ಯೈರೀಡಿತಃ ಸುರಮಾನವೈಃ ॥೧೩॥ ಮುನಿಭಿಃ ಸಿದ್ಧಗಂಧರ್ವೈರ್ವಿದ್ಯಾಧರಮಹೋರಗೈಃ । ಅಪ್ಸರೋಭಿಃ ಪಿತೃಗಣೈರ್ಯಕ್ಷೈಃ ಕಿನ್ನರಚಾರಣೈಃ ॥೧೪॥ ಉಪಗೀಯಮಾನವಿಜಯಃ ಕುಸುಮೈರಭಿವರ್ಷಿತಃ । ವೃತಶ್ಚ ವೃಷ್ಣಿಪ್ರವರೈರ್ವಿವೇಶಾಲಂಕೃತಾಂ ಪುರೀಮ್ ॥೧೫॥ ಏವಂ ಯೋಗೇಶ್ವರಃ ಕೃಷ್ಣೋ ಭಗವಾನ್ ಜಗದೀಶ್ವರಃ । ಈಯತೇ

---

ನನ್ನು, ಆವಿಶತ್-ಹೊಕ್ಕಿತು ॥೧೦॥ ತದ್ಭ್ರಾತಾ-ಅವನ ತಮ್ಮನಾದ, ವಿದೂರಥಸ್ತು-ವಿದೂರಥನಾದರೋ, ಭ್ರಾತೃಶೋಕಪರಿಪ್ಲುತಃ-ಅಣ್ಣನ ದುಃಖದಲ್ಲಿ ಮುಳುಗಿದವನಾಗಿ, ಉಚ್ಛ್ವಸನ್-ಗರ್ವವುಳ್ಳವನಾದ್ದರಿಂದ, ತಜ್ಜಿಘಾಂಸಯಾ-ಕೃಷ್ಣನಂ ಕೊಲ್ಲಬೇಕೆಂಬ ಇಚ್ಛೆಯಿಂದ, ಅಸಿಚರ್ಮಾಭ್ಯಾಂ-ಕತ್ತಿ ಗುರಾಣಿಗಳೊಡನೆ, ಆಗಚ್ಛತ್-ಬಂದನು ॥೧೧॥ ರಾಜೇಂದ್ರ-ಪರೀಕ್ಷಿತನೇ, ಕೃಷ್ಣಃ-ವಾಸುದೇವನು, ತತಃ-ಆ ಮೇಲೆ, ಆಪತತಃ-ಮೇಲೆಬೀಳುತ್ತಿರುವ, ತಸ್ಯ-ಅವನ, ಸಕುಂಡಲಂ-ಕರ್ಣಭೂಷಣಸಹಿತವಾದ, ಸಕಿರೀಟಂ-ಟೊಪ್ಪಿಗೆಯಿಂ ಕೂಡಿರುವ, ಶಿರಶ್ಚ-ತಲೆಯನ್ನು, ಕ್ಷುರನೇಮಿನಾ-ಕತ್ತಿಗಳ ಅಂಚುಳ್ಳ, ಚಕ್ರೇಣ-ಚಕ್ರಾಯುಧದಿಂದ ಜಹಾರ-ಅರಿದುಕೊಂಡನು ॥೧೨॥ ಏವಂ-ಹೀಗೆ, ಸಸೌಭಂ-ಸೌಭವಿಮಾನದಿಂ ಕೂಡಿದವನಾದ, ಸಾಲ್ವಂಚ-ಸಾಲ್ವರಾಯನನ್ನೂ, ದಂತವಕ್ರಂ-ದಂತವಕ್ರರಾಯನನ್ನೂ, ವಿದೂರಥಂ-ಅವನ ತಮ್ಮನನ್ನೂ, ದುರ್ವಿಷಹಾನ್-ಸೈರಿಸಲಾಗದಂಥಾ, ಅನ್ಯಾನಪಿ-ಇತರರನ್ನೂ, ಹತ್ವಾ-ಕೊಂದು, ಸುರಮಾನವೈಃ-ದೇವರ್ಕಳಿಂದಲೂ ಮನುಷ್ಯರಿಂದಲೂ, ಈಡಿತಃ-ಸ್ತುತಿಸಲ್ಪಟ್ಟವನಾದನು ॥ ಮುನಿಭಿಃ-ಜ್ಞಾನಿಗಳಿಂದಲೂ, ಸಿದ್ಧಗಂಧರ್ವೈಃ-ಸಿದ್ಧರಿಂದಲೂ ಗಂಧರ್ವರಿಂದಲೂ, ವಿದ್ಯಾಧರಮಹೋರಗೈಃ-ವಿದ್ಯಾಧರರಿಂದಲೂ ಮಹಾಸರ್ಪಗಳಿಂದಲೂ, ಅಪ್ಸರೋಭಿಃ-ದೇವರ್ಕಳ ಸೂಳೆಯರಿಂದಲೂ, ಪಿತೃಗಣೈಃ-ವಸುರುದ್ರಾದಿತ್ಯಸಂಘಗಳಿಂದಲೂ, ಯಕ್ಷೈಃ-ಯಕ್ಷರೆಂಬವರಿಂದಲೂ, ಕಿನ್ನರಚಾರಣೈಃ-ಕಿನ್ನರರು ಚಾರಣರುಎಂಬ ದೇವಯೋನಿವಿಶೇಷಗಳಿಂದಲೂ ॥೧೪॥ ಉಪಗೀಯಮಾನವಿಜಯಃ-ಹಾಡಲ್ಪಡುತ್ತಿರುವ ಗೆಲ್ಲುವಿಕೆಯುಳ್ಳವನಾಗಿಯೂ, ಕುಸುಮೈಃ-ಪುಷ್ಪಗಳಿಂದ, ಅಭಿವರ್ಷಿತಃ-ಮಳೆ ಸುರಿದಂತೆ ಚೆಲ್ಲಲ್ಪಟ್ಟವನಾಗಿಯೂ, ವೃಷ್ಣಿಪ್ರವರೈಃ-ಯಾದವರಲ್ಲಿ ಶ್ರೇಷ್ಠರಿಂದ, ವೃತಶ್ಚ-ಬಳಸಲ್ಪಟ್ಟವನಾಗಿಯೂ, ಅಲಂಕೃತಾಂ-ಸಿಂಗರಿಸಲ್ಪಟ್ಟ, ಪುರೀಂ-ದ್ವಾರಕೆಯನ್ನು, ವಿವೇಶ-ಹೊಕ್ಕನು ॥೧೫॥ ಯೋಗೇಶ್ವರಃ-ಕರ್ಮಕೌಶಲ್ಯದಿಂ ಜೊದಯನಾದ, ಜಗದೀಶ್ವರಃ-ಸಕಲಲೋಕಪ್ರಭುವಾದ, ಭಗವಾನ್-ಷಡ್ಗುಣೈಶ್ವರ್ಯಸಂಪನ್ನನಾದ, ಸ ಕೃಷ್ಣಃ-ಆ ವಾಸುದೇವನು,

---

ಕ್ಯವನೆಯ್ದಿತು ॥೧೦॥ ಅನಂತರದಲ್ಲಿ ದಂತವಕ್ರನಿಗೆ ತಮ್ಮನಾದ ವಿದೂರಥನು ಭ್ರಾತೃಶೋಕದಿಂ ಪೀಡಿತನಾಗಿ ನಿಟ್ಟುಸುರಂ ಬಿಡುತ ಖಡ್ಗಚರ್ಮಂಗಳಂ ಪಿಡಿದು ಆ ಶ್ರೀಕೃಷ್ಣನಂ ಸಂಹರಿಸಲಿಚ್ಛೆಯಿಂದ ಬಂದನು ॥೧೧॥ ಆಗ ಶ್ರೀಕೃಷ್ಣನು ಕ್ಷುರದಂತೆ ತೀಕ್ಷ್ಣಂಗಳಾದ ಅಂಚುಗಳುಳ್ಳ ಚಕ್ರದಿಂದ ಆ ರೀತಿಯಾಗಿ ಬರುತಲಿರುವ ಆ ವಿದೂರಥನ ಕಿರೀಟಕುಂಡಲಗಳೊಡನೆ ಹೊಳೆಯುತಲಿರುವ ಶಿರಸ್ಸಂ ಛೇದಿಸಿದನು ॥೧೨॥ ಎಲೈ ಅರಸೇ, ಕೇಳು, ಶ್ರೀಕೃಷ್ಣನು ಈ ರೀತಿಯಾಗಿ ಆ ಸೌಭವೆಂಬುವದರೊಡನೆ ಸಾಲ್ವನಂ ದಂತವಕ್ರನಂ, ದಂತವಕ್ರನ ತಮ್ಮನಾದ ವಿದೂರಥನಂ ಸಹ, ಸಂಹರಿಸಿ ಅನ್ಯರಾದ ದುಷ್ಟರನ್ನೂ ಕೊಂದು ದೇವತೆಗಳಿಂ ಮನುಷ್ಯರಿಂ ॥೧೩॥ ಮುನಿಗಳಿಂದಲೂ ಸಿದ್ಧಗಂಧರ್ವವಿದ್ಯಾಧರ ಸರ್ಪಾಧಿಪತಿಗಳಿಂದಲೂ ಅಪ್ಸರಸ್ತ್ರೀಯರಿಂದಲೂ ಪಿತೃದೇವತಾಸಮೂಹಂಗಳಿಂದಲೂ ಯಕ್ಷಕಿನ್ನರ ಚಾರಣರಿಂದಲೂ ಸ್ತುತಿಸಲ್ಪಟ್ಟವನಾಗಿ ॥೧೪॥ ಗಾನಂಗೆಯ್ಯಲ್ಪಡುತಲಿರುವ ವಿಜಯ ಪ್ರಸ್ತಾಪವುಳ್ಳವನಾಗಿ ದಿವ್ಯ ಪುಷ್ಪವರ್ಷಗಳಿಂ ವರ್ಷಿಸಲ್ಪಟ್ಟವನಾಗಿಯೂ ಯಾದವಶ್ರೇಷ್ಠರೊಡಗೂಡಿ ಅಲಂಕರಿಸಲ್ಪಟ್ಟ ದ್ವಾರಕಾಪುರವಂ ಪ್ರವೇಶಿಸಿದನು ॥೧೫॥ ಎಲೈ ಅರಸೇ, ಯೋಗೇಶ್ವರನಾದ ಜಗದೀಶ್ವರನಾದ ಶ್ರೀಕೃಷ್ಣನು ಈ ರೀತಿಯಿಂದ ಬಲವಂತನಾಗಿ ನಿತ್ಯವಾದ ಜಯವುಳ್ಳವನಾದಾಗ್ಯೂ ಆ ಸ್ವಾಮಿಯು ಪಶುದೃಷ್ಟಿಯುಳ್ಳ ಮೂಢ

ಪಶುದೃಷ್ಟೀನಾಂ ನಿರ್ಜಿತೋ ಜಯತೀತಿ ಸಃ ॥೧೬॥ ಶ್ರುತ್ವಾ ಯುದ್ಧೋದ್ಯಮಂ ರಾಮಃ ಕುರೂಣಾಂ ಸಹ ಪಾಂಡವೈಃ । ತೀರ್ಥಾಭಿಷೇಕವ್ಯಾಜೇನ ಮಧ್ಯಸ್ಥಃ ಪ್ರಯಯೌ ಕಿಲ ॥೧೭॥ ಸ್ನಾತ್ವಾ ಪ್ರಭಾಸೇ ಸಂತ

ಬಲರಾಮಕೃತತೀರ್ಥಯಾತ್ರಾಸೂತವಧಾದಿಕಥಾಪ್ರಾರಂಭಃ

ರ್ಪ್ಯ ದೇವರ್ಷಿಪಿತೃಮಾನವಾನ್ । ಸರಸ್ವತೀಂ ಪ್ರತಿಸ್ರೋತಾಂ ಯಯೌ ಬ್ರಾಹ್ಮಣಸಂವೃತಃ ॥೧೮॥ ಪೃಥೂದಕಂ ಬಿಂದುಸರಸ್ತೃಣಕೂಲಂ ಸುದರ್ಶನಮ್ । ವಿಶಾಲಂ ಬ್ರಹ್ಮತೀರ್ಥಂ ಚ ಚಕ್ರಂ ಪ್ರಾಚೀಂ ಸರಸ್ವತೀಮ್ ॥೧೯॥ ಯಮುನಾಮನು ಯಾನ್ಯೇವ ಗಂಗಾಮನು ಚ ಭಾರತ । ಜಗಾಮ ನೈಮಿಶಂ ಯತ್ರ ಋಷಯಸ್ಸತ್ರಮಾಸತೇ ॥೨೦॥ ತಮಾಗತಮಭಿಪ್ರೇತ್ಯ ಮುನಯೋ ದೀರ್ಘಸತ್ರಿಣಃ । ಅಭಿಗಮ್ಯ ಯ

---

ಪಶುದೃಷ್ಟೀನಾಂ-ಪಶುಗಳಂತೆ ನೋಡುತ್ತಿರುವ ಪಾಮರರಿಗೆ, ನಿರ್ಜಿತಃ-ಸೋತನು. ಜಯತಿ-ಗೆದ್ದನು, ಇತಿ-ಹೀಗೆ ಕಾಣುತ್ತ-ತೋರುತ್ತಿರುವನು॥೧೬॥ ರಾಮಃ-ಬಲರಾಮನು, ಪಾಂಡವೈಸ್ಸಹ-ಪಾಂಡವರೊಡನೆ, ಕುರೂಣಾಂ-ಕೌರವರಿಗುಂಟಾದ, ಯುದ್ಧೋದ್ಯಮಂ-ಜಗಳದಪ್ರಯತ್ನವನ್ನು, ಶ್ರುತ್ವಾ-ಕೇಳಿ, ಮಧ್ಯಸ್ಥಃ-ಉಭಯಪಕ್ಷಗಳಿಗೂ ನಡುವೆಯಿರುವನಾದ್ದರಿಂದ, ತೀರ್ಥಾಭಿಷೇಕವ್ಯಾಜೇನ-ತೀರ್ಥಸ್ನಾನ ಮಾಡುವೆನೆಂಬ ನೆವಣದಿಂದ ಪ್ರಯಯೌ ಕಿಲ-ತೆರಳಿದನಷ್ಟೆ ॥೧೭॥ ಪ್ರಭಾಸೇ-ಪ್ರಭಾಸಕ್ಷೇತ್ರದಲ್ಲಿ, ಸ್ನಾತ್ವಾ-ಮಿಂದು, ದೇವರ್ಷಿಪಿತೃಮಾನವಾನ್-ದೇವರ್ಕಳನ್ನೂ ಋಷಿಗಳನ್ನೂ ಪಿತೃಗಳನ್ನೂ ಮನುಷ್ಯರನ್ನೂ, ಸಂತರ್ಪ್ಯ-ತೃಪ್ತಿಗೊಳಿಸಿ, ಪ್ರತಿಸ್ರೋತಾಂ-ಹಿಂದಕ್ಕೆ ಬರುತಿರುವ, ಸರಸ್ವತೀಂ-ಸರಸ್ವತೀನದಿಯಂ ಕುರಿತು, ಬ್ರಾಹ್ಮಣಸಂವೃತಃ-ವಿಪ್ರರಿಂಬಳಸಲ್ಪಟ್ಟವನಾಗಿ ಯಯೌ-ತೆರಳಿದನು ॥೧೮॥ ಪೃಥೂದಕಂ-ಪೃಥೂದಕ ತೀರ್ಥವನ್ನೂ, ಬಿಂದುಸರಃ-ಗಂಗಾಮೂಲವನ್ನೂ, ತೃಣಕೂಲಂ-ಹುಲ್ಲುತಡಿಯೆಂಬ ತೀರ್ಥವನ್ನೂ, ಸುದರ್ಶನಂ-ಸುದರ್ಶನ ತೀರ್ಥವನ್ನೂ, ವಿಶಾಲತೀರ್ಥವನ್ನೂ, ಬ್ರಹ್ಮತೀರ್ಥವನ್ನೂ, ಚಕ್ರತೀರ್ಥವನ್ನೂ, ಪ್ರಾಚೀಂ-ಪೂರ್ವವಾಹಿನಿಯಾದ, ಸರಸ್ವತೀಂ-ಸರಸ್ವತೀತೀರ್ಥವನ್ನೂ ॥೧೯॥ ಭಾರತ-ಪರೀಕ್ಷಿತನೇ, ಯಮುನಾಮನು-ಕಾಳಿಂದೀನದಿಯನ್ನನುಸರಿಸಿ, ಗಂಗಾಮನು ಚ-ಭಾಗೀರಥೀನದಿಯನ್ನನುಸರಿಸಿಯೂ, ಯಾನ್ಯೇವ-ಯಾವಯಾವ ತೀರ್ಥಗಳಿವೆಯೋ ಅವೆಲ್ಲವನ್ನೂ, ಯತ್ರ-ಯಾವಸ್ಥಲದಲ್ಲಿ, ಋಷಯಃ-ಶೌನಕಾದಿ ಮುನಿಗಳು, ಸತ್ರಂ-ಸತ್ರಯಾಗವನ್ನು ಮಾಡುತ್ತಾ, ಆಸತೇ-ಇರುವರೋ, ತನ್ನೈಮಿಶಂ-ಆ ನೈಮಿಶಾರಣ್ಯವನ್ನೂ ಜಗಾಮ-ಹೊಂದಿದನು ॥೨೦॥ ಆಗತಂ-ಬಂದವನಾದ. ತಂ-ಆ ಪುರುಷನನ್ನು, ಅಭಿಪ್ರೇತ್ಯ-ಬಲರಾಮನೆಂದರಿತು, ಮುನಯಃ-ಶೌನಕಾದಿಮಹರ್ಷಿಗಳು, ದೀರ್ಘಸತ್ರಿಣಃ-ಚಿರಕಾಲ ನಡೆಯುತಕ್ಕ ಸತ್ರಯಾಗ ನಿಯಮವುಳ್ಳವರಾದವರೂ, ಅಭಿಗಮ್ಯ-ಇದಿರಿಗೆಬಂ

---

ರಿಗೆ ಒಂದುವೇಳೆಯಲ್ಲಿ ಅನ್ಯರಿಂದ ಜಯಿಸಲ್ಪಡುವನಂತೆಯೂ ಒಂದುವೇಳೆ ತಾನು ಅನ್ಯರಂ ಜಯಿಸುವಂತೆಯೂ ತೋರುತಲಿರುವನೇಹೊರತು ವಸ್ತುತಃ ಶ್ರೀಕೃಷ್ಣದೇವನಿಗೆ ಜಯಪರಾಜಯಾದಿಗಳಿಲ್ಲ॥೧೬॥ಎಲೈ ಅರಸನೇ ಕೇಳು ಅನಂತರದಲ್ಲಿ ಬಲರಾಮನು ಪಾಂಡವರೊಡನೆ ಕೌರವರು ಯುದ್ಧಸನ್ನದ್ಧರಾಗುತ್ತಿರುವ ವೃತ್ತಾಂತವಂ ಕೇಳಿ ಆಯುಭಯಪಕ್ಷಂಗಳೆಲ್ಲಿಯೂ ಸಮನಾಗಿರುವವನಾದುದರಿಂದ ತಾನು ಒಬ್ಬರಿಗೂ ಸಹಾಯನಾಗಿ ಹೋಗದೆ ತೀರ್ಥಯಾತ್ರೆಯೆಂಬ ವ್ಯಾಜದಿಂದ ಆಯಾಕ್ಷೇತ್ರಂಗಳಂ ಕುರಿತು ತೆರಳಿದನು ॥೧೭॥ ಅನಂತರದಲ್ಲಿ ಶ್ರೀರಾಮನು ಪ್ರಭಾಸವೆಂಬ ತೀರ್ಥದಲ್ಲಿ ಸ್ನಾನಂಗೆಯ್ದು ದೇವರ್ಷಿಪಿತೃತರ್ಪಣವಂ ಮಾಡಿ ಬ್ರಾಹ್ಮಣರೊಡನೆ ಯುಕ್ತನಾಗಿ ಪಶ್ಚಿಮವಾಹಿನಿಯೆಂಬ ಸರಸ್ವತೀ ನದಿಯನೆಯ್ದಿದನು॥೧೮॥ಮತ್ತು ರಾಮನು ಪೃಥೂದಕವೆಂಬ ತೀರ್ಥವನ್ನೂ ಬಿಂದುಸರಸ್ಸನ್ನೂ ತೃಣಕೂಲವೆಂಬ ತೀರ್ಥವನ್ನೂ ಸುದರ್ಶನತೀರ್ಥವನ್ನೂ ವಿಶಾಲತೀರ್ಥವನ್ನೂ ಬ್ರಹ್ಮತೀರ್ಥವನ್ನೂ ಚಕ್ರತೀರ್ಥವನ್ನೂ ಪೂರ್ವವಾಹಿನಿಯಾದ ಸರಸ್ವತಿಯನ್ನೂ॥೧೯॥ ಮತ್ತು ಯಮುನಾತೀರ್ಥದಲ್ಲಿಯೂ ಗಂಗಾತೀರ್ಥದಲ್ಲಿಯೂ ಯಾವಯಾವತೀರ್ಥಂಗಳಿರುವವೋ ಆಯಾತೀರ್ಥಂಗಳನನೆಯ್ದಿ ಅಲ್ಲಲ್ಲಿ ಸ್ನಾನಾದಿಗಳಂ ಮಾಡಿ ಅನಂತರದಲ್ಲಿ ಎಲ್ಲಿ ಶೌನಕಾದಿಋಷಿಗಳು ಸತ್ರಯಾಗದೀಕ್ಷಿತರಾಗಿದ್ದರೋ ಆ ನೈಮಿಶಾರಣ್ಯವನೆಯ್ದಿದನು ॥೨೦॥ ಅಲ್ಲಿ ದೀರ್ಘಕಾಲದಿಂದ ಸಾಧಿಸತಕ್ಕ ಸತ್ರಯಾಗವನ್ನು ಸಂಕಲ್ಪಿಸಿ ಕೊಂಡಿರುವ ಋಷಿ

ಥಾನ್ಯಾಯ್ಯಂ ಪ್ರಣಮ್ಯೋತ್ಥಾಯ ಚಾರ್ಚಯನ್ ॥೨೧॥ ಸೋರ್ಚಿತಸ್ಸಪರೀವಾರಃ ಕೃತಾಸನಪರಿಗ್ರಹಃ । ರೋಮಹರ್ಷಣಮಾಸೀನಂ ಮಹರ್ಷೇಶ್ಶಿಷ್ಯಮೈಕ್ಷತ ॥೨೨॥ ಅಪ್ರತ್ಯುತ್ಥಾಯಿನಂ ಸೂತಮಕೃತಪ್ರಹ್ವಣಾಂಜಲಿಂ । ಅಧ್ಯಾಸೀನಂಚ ತಾನ್ವಿಪ್ರಾಂಶ್ಚುಕೋಪೋದ್ವೀಕ್ಷ್ಯ ಮಾಧವಃ ॥೨೩॥ ಕಸ್ಮಾದಸಾವಿಮಾನ್ವಿಪ್ರಾನಧ್ಯಾಸ್ತೇ ಪ್ರತಿಲೋಮಜಃ । ಧರ್ಮಪಾಲಾಂಸ್ತಥೈವಾಸ್ಮಾನ್ವಧಮರ್ಹತಿ ದುರ್ಮತಿಃ ॥ ಋಷೇರ್ಭಗವತೋ ಭೂತ್ವಾ ಶಿಷ್ಯೋಧೀತ್ಯ ಬಹೂನಿ ಚ । ಸೇತಿಹಾಸಪುರಾಣಾನಿ ಧರ್ಮಶಾಸ್ತ್ರಾಣಿ ಸರ್ವಶಃ ॥ ಅದಾಂತಸ್ಯಾವಿನೀತಸ್ಯ ವೃಥಾಪಂಡಿತಮಾನಿನಃ । ನ ಗುಣಾಯ ಭವಂತಿ ಸ್ಮ ನಟಸ್ಯೇವಾಜಿತಾತ್ಮನಃ ॥೨೬

---

ಪು, ಯಥಾನ್ಯಾಯ್ಯಂ-ನ್ಯಾಯ ಹೇಗೋ ಹಾಗೆ, ಪ್ರಣಮ್ಯ-ನಮಸ್ಕರಿಸಿ, ಉತ್ಥಾಯ ಚ-ಎದ್ದುಕೊಂಡು, ಅರ್ಚಯನ್-ಪೂಜಿಸಿದರು ॥೨೧॥ ಸಪರೀವಾರಃ-ಅನುಯಾಯಿಗಳಿಂದ ಸಹಿತನಾಗಿ, ಕೃತಾಸನಪರಿಗ್ರಹಃ-ಅಂಗೀಕರಿಸಲ್ಪಟ್ಟ ಗದ್ದುಗೆಯುಳ್ಳವನಾಗಿ, ಅರ್ಚಿತಃ-ಪೂಜಿಸಲ್ಪಟ್ಟ, ಸಃ-ಆ ಬಲರಾಮನು, ಆಸೀನಂ-ಕುಳಿತಿರುವಂಥಾ, ಮಹರ್ಷೇಃ ಶಿಷ್ಯಂ-ವ್ಯಾಸಮುನಿಯ ಶಿಷ್ಯನಾದ, ರೋಮಹರ್ಷಣಂ-ಸೂತಪೌರಾಣಿಕನನ್ನು, ಐಕ್ಷತ-ಕಂಡನು ॥೨೨॥ ಅಪ್ರತ್ಯುತ್ಥಾಯಿನಂ-ಎದ್ದು ಮುಂದೆ ನಿಲ್ಲದಂಥಾ, ಅಕೃತಪ್ರಹ್ವಣಾಂಜಲಿಂ-ಬಗ್ಗಿ ಕೈಜೋಡಿಸದೆ ಇರುವಂಥಾ, ಅಧ್ಯಾಸೀನಂಚ-ಕುಳಿತಿರುವಂಥಾ, ಸೂತಂ-ಸೂತನನ್ನು, ಉದ್ವೀಕ್ಷ್ಯ-ನೋಡಿ, ಮಾಧವಃ-ಮಧುಕುಲದಲ್ಲಿ ಜನಿಸಿದ ಬಲರಾಮನು ತಾನ್ವಿಪ್ರಾನ್-ಆ ಶೌನಕಾದಿ ಬ್ರಾಹ್ಮಣರ ಕುರಿತು ಚುಕೋಪ-ಸಿಟ್ಟುಗೊಂಡನು ॥೨೩॥ ಕಸ್ಮಾತ್-ಯಾವಕಾರಣದಿಂದ, ಪ್ರತಿಲೋಮಜಃ-ಉತ್ತಮಕ್ಷೇತ್ರದಲ್ಲಿ ನೀಚಬೀಜದಿಂದ ಹುಟ್ಟಿದವನಾದ, ಅಸೌ-ಈ ಸೂತನು, ಇಮಾನ್ವಿಪ್ರಾನ್-ಈ ಬ್ರಾಹ್ಮಣರ ನಡುವೆ, ಅಧ್ಯಾಸ್ತೇ-ಆಸನದಲ್ಲಿ ಕುಳಿತಿರುವನು, ಧರ್ಮಪಾಲಾನ್-ವರ್ಣಾಶ್ರಮಧರ್ಮವನ್ನು ಪಾಲಿಸುವವರಾದ, ಅಸ್ಮಾನ್-ನಮ್ಮನ್ನೂ, ತಥೈವ-ಹಾಗೆಯೇ ಅಲಕ್ಷ್ಯಮಾಡಿದನು ದುರ್ಮತಿಃ-ಹೀಗೆ ದುಷ್ಟಬುದ್ಧಿಯುಳ್ಳವನಾದ್ದರಿಂದ, ವಧಂ-ಮರಣದಂಡನವನ್ನು, ಅರ್ಹತಿ-ಪಡೆಯಲ್ತಕ್ಕವನಾಗಿರುವನು ॥೨೪॥ ಭಗವತಃ-ಸರ್ವಜ್ಞನಾದ, ಋಷೇಃ-ವ್ಯಾಸಮುನಿಗೆ, ಶಿಷ್ಯೋಭೂತ್ವಾ-ಶಿಷ್ಯನಾಗಿ, ಬಹೂನಿಚ-ಅನೇಕವಾದ, ಸೇತಿಹಾಸಪುರಾಣಾನಿ-ಇತಿಹಾಸ ಪುರಾಣಗಳಿಂದ ಸಹಿತವಾದ, ಧರ್ಮಶಾಸ್ತ್ರಾಣಿಚ-ಸ್ಮೃತಿಶಾಸ್ತ್ರಗಳನ್ನೂ, ಸರ್ವಶಃ-ಸಂಪೂರ್ಣವಾಗಿ, ಅಧೀತ್ಯ-ಕಲಿತು ॥೨೫॥ ಅದಾಂತಸ್ಯ-ಇಂದ್ರಿಯ ನಿಗ್ರಹವಿಲ್ಲದ, ಅವಿನೀತಸ್ಯ-ವಿನಯವುಂಟಾದವನಲ್ಲದ, ವೃಥಾ-ವ್ಯರ್ಥವಾಗಿ, ಪಂಡಿತಮಾನಿನಃ ತಾನು ಪಂಡಿತನೆಂಬ ಗರ್ವವುಳ್ಳವನಾದ, ಅಜಿತಾತ್ಮನಃ-ಬುದ್ಧಿ ಸ್ವಾಧೀನವಿಲ್ಲದ, ಈ ಸೂತನ ನಡತೆಗಳು, ನಟಸ್ಯೇವ-ನಟ್ಟುವನ ನಡತೆಗಳಂತೆ, ಗುಣಾಯ-ಪೂಜ್ಯತೆಗೆ, ನಭವಂತಿಸ್ಮ-ಆಗುವುದಿಲ್ಲವಷ್ಟೆ, ॥೨೬॥ ಅಸ್ಮಿನ್ಲೋಕೇ-

---

ಗಳು ಶ್ರೀರಾಮನು ಬಂದನೆಂಬ ಮತಿಳಿದು ಸಂತೋಷಪಟ್ಟು ಯಥಾಯೋಗ್ಯನಾಗಿ ಶ್ರೀರಾಮನಿಗೆ ಪ್ರತ್ಯುತ್ಥಾನವಂಗೆಯ್ದು ನಮಸ್ಕರಿಸಿ ಅರ್ಘ್ಯಾದಿಗಳಿಂ ಪೂಜಿಸಿದರು ॥೨೧॥ ಅನಂತರದಲ್ಲಿ ಶ್ರೀರಾಮನು ಅಲ್ಲಿ ವ್ಯಾಸಶಿಷ್ಯನಾದ ರೋಮಹರ್ಷಣನೆಂಬ ಪೌರಾಣಿಕನು ಕ್ಷತ್ರಿಯನಿಂದ ಬ್ರಾಹ್ಮಣಸ್ತ್ರೀಯಲ್ಲಿ ಜನಿಸಿದವನಾದಕಾರಣದಿಂ ಸೂತಜಾತಿಯವನಾದಾಗ್ಯೂ ॥೨೨॥ ತನಗೆ ಪ್ರತ್ಯುತ್ಥಾನ ನಮಸ್ಕಾರಂಗಳಂ ಅಜಲಿಬಂಧವನ್ನಾದರೂ ಮಾಡದೆ ಆ ಶೌನಕಾದಿಋಷಿಗಳಿಗಿಂತಲೂ ಉನ್ನತವಾದ ಪೀಠದಲ್ಲಿ ಕುಳಿತಿರುವುದಂ ನೋಡಿ ಕೋಪಯುಕ್ತನಾಗಿ ಆಗ ಈ ರೀತಿಯಾಗಿ ಹೇಳಿದನದೆಂತೆನೆ,- ॥೨೩॥ ಎಲೈ ಈ ಸೂತಜಾತಿಯವನಾದ ರೋಮಹರ್ಷಣನು ಯಾವಕಾರಣದಿಂ ಈ ಋಷಿಗಳಗಿಂತಲೂ ಉನ್ನತವಾದ ಪೀಠದಲ್ಲಿ ಕುಳಿತು ಧರ್ಮಪಾಲಕನಾದ ನಮ್ಮಂ ಸಹ ಪ್ರತ್ಯುತ್ಥಾನಾದಿಗಳಂಗೆಯ್ಯದೆ ತಿರಸ್ಕರಿಸಿದನೋ ಆ ಕಾರಣದಿಂದ ಈ ದುರ್ಬುದ್ಧಿಯುಳ್ಳ ಸೂತಪೌರಾಣಿಕನು ನಮ್ಮಿಂದ ಸಂಹರಿಸಲು ಯೋಗ್ಯನಾಗುತ್ತಾನೆ ॥೨೪॥ ಆವನು ತಿಳಿಯದವನಾದ್ದರಿಂದ ತಿರಸ್ಕರಿಸಿದನೆಂಬುವಲ್ಲಿ ನ್ಯಾಯವೇನು ಎಂತೆನೆ । ಎಲೈ, ಈ ಸೂತನು ಪೂಜ್ಯನಾದ ವ್ಯಾಸಮುನಿಗೆ ಶಿಷ್ಯನಾಗಿ ಇತಿಹಾಸಪುರಾಣಂಗಳೊಡನೆ ಕೂಡಿರುವ ಅನೇಕಗಳಾದ ಸಮಸ್ತ ಶಾಸ್ತ್ರಂಗಳನ್ನಧ್ಯಯನಂಗೆಯ್ದವನಾದಾಗ್ಯೂ ॥೨೫॥ ಜಿತೇಂದ್ರಿಯನಲ್ಲದೆ ವಿನಯರಹಿತನಾಗಿ ವ್ಯರ್ಥವಾಗಿ ನಾನೇ ಪಂಡಿತನೆಂಬ ಅಹಂಕಾರವುಳ್ಳವನಾಗಿಯೂ ಇರುವ ಈ ಸೂತನ ಅಂತಾ ಶಾಸ್ತ್ರಾಧ್ಯಯನಾದಿಗಳೂ ವಿಷಯಾಸಕ್ತನಾದ ನಟನವಿದ್ಯದಂತೆ ಗುಣರೂಪದಿಂ ಪರಿಣಮಿಸಲಿಲ್ಲ ॥೨೬॥ ಮತ್ತಂ, ಲೋಕದಲ್ಲಿ

ಏತದರ್ಥೋಹಿ ಲೋಕೇಸ್ಮಿನ್ನವತಾರೋ ಮಯಾಕೃತಃ । ವಧ್ಯಾಮೇ ಧರ್ಮಧ್ವಜಿನಸ್ತೇಹಿ ಪಾತಕಿನೋಧಿಕಾಃ॥
ಏತಾವದುಕ್ತ್ವಾ ಭಗವಾನ್ನಿವೃತ್ತೋಸದ್ವಧಾದಪಿ । ಭಾವಿತ್ವಾತ್ತಂ ಕುಶಾಗ್ರೇಣ ಕರಸ್ಥೇನಾಹನತ್ಪ್ರ
ಭುಃ ॥ ೨೮ ॥ ಹಾ ಹೇತಿವಾದಿನಸ್ಸರ್ವೇ ಮುನಯಃ ಖಿನ್ನಮಾನಸಾಃ । ಊಚುಸ್ಸಂಕರ್ಷಣಂ ದೇವಮಧರ್ಮ
ಸ್ತೇ ಕೃತಃ ಪ್ರಭೋ ॥ ೨೯ ॥ ಅಸ್ಯ ಬ್ರಹ್ಮಾಸನಂ ದತ್ತಮಸ್ಮಾಭಿರ್ಯದುನಂದನ । ಆಯುಶ್ಚಾತ್ಮಾಕ್ಲ
ಮಂ ತಾವದ್ಯಾವತ್ಸತ್ರಂ ಸಮಾಪ್ಯತೇ ॥ ೩೦ ॥ ಅಜಾನತೈವಾಚರಿತಸ್ತ್ವಯಾ ಬ್ರಹ್ಮವಧೋ ಯಥಾ । ಯೋ
ಗೇಶ್ವರಸ್ಯ ಭವತೋ ನಾಮ್ನಾಯೋಪಿ ನಿಯಾಮಕಃ ॥ ೩೧ ॥ ಯದ್ಯೇತದ್ಬ್ರಹ್ಮಹತ್ಯಾಯಾಃ ಪಾವನಂ ಲೋಕ

---

ಈ ಭೂಮಿಯಲ್ಲಿ, ಮಯಾ-ನನ್ನಿಂದ, ಕೃತಃ-ಮಾಡಲ್ಪಟ್ಟ, ಅವತಾರಃ-ಆ ವಿಚಾರವು, ಏತದರ್ಥೋಹಿ-ಇಂಥಾದರಿಗೋಸುಗವೇ ಅಲ್ಲವೇ, ಧರ್ಮಧ್ವಜಿನಃ-ಧರ್ಮದ ಗುರುತುಗಳುಳ್ಳವರಾಗಿ ಅಧರ್ಮವನ್ನಾಚರಿಸುವವರನ್ನು, ವಧ್ಯಾಮೇ-ಸಂಹರಿಸುವೆನು, ತೇ-ಅವರು, ಅಧಿಕಾಃಪಾತಕಿನೋಹಿ-ಹೆಚ್ಚುಪಾಪ ವುಳ್ಳವರಲ್ಲವೆ ॥೨೭॥ ಭಗವಾನ್-ಸರ್ವಜ್ಞನಾದ ರಾಮನು, ಏತಾವದುಕ್ತ್ವಾ-ಇಷ್ಟುಮಾತ್ರ ಹೇಳಿ ಸದ್ವಧಾತ್-ಸತ್ಪುರುಷರನ್ನು ಸಂಹರಿಸುವ ಪಾಪಕೃತ್ಯದದೆಸೆಯಿಂದ, ನಿವೃತ್ತೋಪಿ- ತಪ್ಪಿಸಿಕೊಂಡು ಬಿಟ್ಟರುವನಾದರೂಕೂಡ, ಪ್ರಭುಃ-ಸ್ವತಂತ್ರನಾದ್ದರಿಂದ, ಭಾವಿತ್ವಾತ್-ಹಾಗೆ ನಡಿಯಬೇಕಾದ ಭವಿಷ್ಯತ್ಕಾಲಕರ್ಮಗಳ ನಿಮಿತ್ತದಿಂದ, ಕರಸ್ಥೇನ-ಕೈಯಲ್ಲಿದ್ದ, ಕುಶಾಗ್ರೇಣ-ದರ್ಭೆಯಹುಲ್ಲಿನ ಕೊನೆಯಿಂದ, ತಂ-ಆ ಸೂತನನ್ನು, ಅಹನತ್-ಹೊಡೆದನು ॥೨೮॥ಹಾಹೇತಿವಾದಿನಃ-ಹಾಹಾಯೆಂದು ಹೇಳುತ್ತಿರುವಂಥಾ ಖಿನ್ನಮಾನಸಾಃ-ದುಃಖಿತಹೃದಯರಾದ, ಮುನಯಸ್ಸರ್ವೇ-ಋಷಿಗಳೆಲ್ಲರೂ, ಸಂಕರ್ಷಣಂದೇವಂ-ಬಲದೇವನಂ ಕುರಿತು, ಊಚುಃ-ನುಡಿದರು ಪ್ರಭೋ-ಸ್ವತಂತ್ರನೇ, ತೇ-ನಿನ್ನಿಂದ, ಅಧರ್ಮಃ-ಪಾಪವು, ಕೃತಃ-ಮಾಡಲ್ಪಟ್ಟದ್ದಾಯಿತು ॥೨೯॥ ಯದುನಂದನ-ಯಾದವರನ್ನು ಸಂತೋಷಪಡಿಸುವವನೇ ಅಸ್ಮಾಭಿಃ-ನಮ್ಮಿಂದ, ಅಸ್ಯ-ಈ ಸೂತಂಗೆ, ಬ್ರಹ್ಮಾಸನಂ-ಬ್ರಾಹ್ಮಣಯೋಗ್ಯವಾದ ಆಚಾರ್ಯಪೀಠವು, ಆಯುಶ್ಚ-ಬದ್ಧಿರತತ್ಕಾಲವೂ, ಅಕ್ಲಮಂಚ-ಅನಾಯಾಸವೂ, ಸತ್ರಂ ಯಾವತ್ಸಮಾಪ್ಯತೇ-ಸತ್ರಯಾಗವು ಯಾವಕಾಲಕ್ಕೆ ಮುಗಿಯುವುದೋ, ತಾವತ್-ಆ ಕಾಲದವರೆಗೂ ದತ್ತಂ-ಕೊಡಲ್ಪಟ್ಟಿದೆ ॥೩೦॥ ಯೋಗೇಶ್ವರಸ್ಯ-ಕರ್ಮಕೌಶಲ್ಯದಿಂ ಕೂಡಿದವನಾದ, ಭವತಃ-ನಿನಗೆ, ಆಮ್ನಾಯೋಪಿ-ವೇದವೂಕೂಡ, ಯಥಾ-ಹೇಗೆ, ನನಿಯಾಮಕೋಭವೇತ್-ಶಿಕ್ಷಕವಾಗಲಾರದೋ, ತಥಾ-ಹಾಗೆ, ಅಜಾನತೇವ-ತಿಳಿಯದೆ ಇರುವವನಿಂದ ಹೇಗೋಹಾಗೇ, ತ್ವಯಾ-ನಿನ್ನಿಂದ, ಬ್ರಹ್ಮವಧಃ-ಬ್ರಹ್ಮಹತ್ಯಾಪಾಪವು, ಆಚರಿತಃ-ಮಾಡಲ್ಪಟ್ಟಿತು ॥೩೧॥ ಲೋಕಪಾವನ-ಲೋಕಕ್ಕೆ ಪರಿಶುದ್ಧಿಕರನಾದ ಬಲರಾಮನೇ, ಭವಾನ್-ನೀನು, ಏತದ್ಬ್ರಹ್ಮ

---

ಮಹಾತ್ಮರ ಚಿಹ್ನಂಗಳಂ ಧರಿಸಿರುವ ದುಷ್ಟರಂ ಮಹಾಪಾತಕಿಗಳಿಗಿಂತಲೂ ಅಧಿಕವಾದ ಕಾರಣದಿಂದ ಅವರು ನನ್ನಿಂದ ಸಂಹರಿಸಲು ಯೋಗ್ಯರು. ಅಂತಾದುಷ್ಟರು ಸಂಹರಿಸಲೋಸುಗವೇ ನಾನವತರಿಸಿದವನಾದೆನು॥೨೭॥ ಎಲೈಅರಸೇ! ಕೇಳು, ಭಗವಂತನಾದ ಶ್ರೀರಾಮನು ಇಷ್ಟುಮಾತ್ರ ವಚನವಂಪೇಳಿ ತಾನುದುಷ್ಟರ ಸಂಹಾರ ದೆಸೆಯಿಂದ ಪರಾಙ್ಮುಖನಾದಾಗ್ಯೂ ಭಾವಿಕಾರ್ಯಾನುಸ್ಮರಣದಿಂ ಹಸ್ತದಲ್ಲಿರುವ ದರ್ಭೆಯ ಅಗ್ರದಿಂದಲೇ ಆಸೂತನಂ ಸಂಹರಿಸಿದನು ॥೨೮॥ ಅನಂತರದಲ್ಲಿ ಋಷಿಗಳೆಲ್ಲರೂ ದುಃಖಿತವಾದ ಮನಸ್ಸುಳ್ಳವರಾಗಿ ಹಾಹಾಕಾರವಂಮಾಡುತ ಬಲರಾಮನಂಕುರಿತು ಇಂತುನುಡಿದರದೆಂತೆನೆ, ಎಲೈಶ್ರೀರಾಮನೇ! ಈಗ ನೀನು ಅಧರ್ಮವನಾಚರಿಸಿದವನಾದೆ ॥೨೯॥ ಅದೆಂತೆಂದರೆ- ಎಲೈಶ್ರೀರಾಮನೇ, ಎದುವರೆಗೂ ಈ ಸತ್ರಯಾಗವು ಪೂರ್ತಿಯಾಗುವುದೋ ಅಷ್ಟುಕಾಲಪರ್ಯಂತವೂ ಪುರಾಣವು ಪೇಳುವದಕ್ಕೋಸುಗ ಈಸೂತಪೌರಾಣಿಕನಿಗೆ ನಾವು ಬ್ರಹ್ಮಾಸನವಂ ಶರೀರಶ್ರಮವಿಲ್ಲದಂತೆ ಆಯುಷ್ಯವಂ ಸಹ ಕೊಟ್ಟೆವು॥೩೦॥ಆಕಾರಣದಿಂ ನೀನೀಯರ್ಥವನರಿಯದೆ ಬ್ರಾಹ್ಮಣವಧೆಯಂ ಚನ್ನಾಗಿ ಮಾಡಿದವನಾದೆ. ಎಲೈಲೋಕಪಾವನನೇ, ಯೋಗೀಶ್ವರನಾದ ಈಶ್ವರನಾದ ನಿನಗೆ ಬ್ರಾಹ್ಮಣನು ಸಂಹರಿಸಿಸಲು ಯೋಗ್ಯನಲ್ಲವೆಂದು ಹೇಳುವ ಶ್ರುತಿಯುಕೂಡ ನಿಯಾಮಕವಲ್ಲ, ಆದಾಗ್ಯೂ ಈಬ್ರಹ್ಮಹತ್ಯೆಗೆ ಪ್ರಾಯಶ್ಚಿತ್ತವಂ ॥೩೧॥ ಅನ್ಯರಿಂ ಪ್ರೇರಿಸಲ್ಪಟ್ಟವನಾಗದೆ ನೀನೇ ಆಚರಿಸುವನಾದರೆ ಲೋಕದಲ್ಲಿ ಜನ

ಪಾವನಂ । ಚರಿಷ್ಯತಿಭವಾನ್ ಲೋಕಸಂಗ್ರಹೇನಾನ್ಯಚೋದಿತಃ॥೩೦॥ ಶ್ರೀಭಗವಾನ್ ।ಚರಿಷ್ಯೇವಧನಿರ್ವೇಷಂಲೋಕಾನುಗ್ರಹಕಾಮ್ಯಯಾ ।ನಿಯಮಃಪ್ರಥಮೇಕಲ್ಪೇಯಾವಾನ್ ಸತುವಿಧೀಯತಾಂ ॥೩೧॥ದೀರ್ಘಮಾಯುರ್ಬತೈತಸ್ಯಸತ್ವಮಿಂದ್ರಿಯಮೇವಚ । ಆಶಾಸಿತಂಯತ್ತದ್ಬ್ರೂತಸಾಧಯೇಯೋಗಮಾಯಯಾ ॥೩೨॥ ಋಷಯಃ॥ ಅಸ್ತ್ರಸ್ಯತವವೀರ್ಯಸ್ಯಮೃತ್ಯೋರಸ್ಮಾಕಮೇವಚ । ಯಥಾಭವೇದ್ವಚಸ್ಸತ್ಯಂತಥಾರಾಮವಿಧೀಯತಾಂ ॥೩೩॥ ರಾಮ ॥ ಆತ್ಮಾವೈಪುತ್ರಉತ್ಪನ್ನ ಇತಿವೇದಾನುಶಾಸನಮ್ ।ತಸ್ಮಾದಸ್ಯಭವೇದ್ವಕ್ತಾ ಆಯುರಿಂದ್ರಿಯಸತ್ವವಾನ್ ॥೩೪॥ ಕಿಂವಃಕಾಮೋಮುನಿಶ್ರೇಷ್ಠಾ

ಇತಿಭಾವಾರ್ಥ ದೀಪಿಕಾಯಾಂಅಷ್ಟಸಪ್ತತಿತಮಾಧ್ಯಾಯವ್ಯಾಖ್ಯಾ

ಹತ್ಯಾಯಾಃ-ಈ ಬ್ರಹ್ಮಹತ್ಯಾದೋಷಕ್ಕೆ, ಪಾವನಂ-ಶುದ್ಧಿಕರವಾದಪ್ರಾಯಶ್ಚಿತ್ತವನ್ನು, ನಾನ್ಯಚೋದಿತಃ-ಇತರರಿಂದಪ್ರೇರಿಸಲ್ಪಡದೆ ಇರುವನಾಗಿ, ಆಚರಿಷ್ಯತಿಯದಿ-ಮಾಡಿದವನಾದರೆ, ಲೋಕಸಂಗ್ರಹೇ-ಜನರಸವ್ಯವಹಾರದಲ್ಲಿ, ಭವಿಷ್ಯತಿ- ಆಗುತ್ತಲಿರುವಿ ॥೩೦॥ ಲೋಕಾನುಗ್ರಹಕಾಮ್ಯಯಾ-ಜನಂಗಳ ಅನುಗ್ರಹಿಪ ಬಯಕೆಯಿಂದ, ವಧನಿರ್ವೇಷಂ-ಹತ್ಯಾದೋಷಕ್ಕೆ ಪ್ರಾಯಶ್ಚಿತ್ತವನ್ನು, ಚರಿಷ್ಯೇ-ಮಾಡುವೆನು. ಸನಿಯಮಸ್ತು-ಆ ಪ್ರಾಯಶ್ಚಿತ್ತದ ಕಟ್ಟಳೆಯಾದರೋ, ಪ್ರಥಮೇಕಲ್ಪೇ- ಮುಖ್ಯಪಕ್ಷದಲ್ಲಿ, ಯಾವಾನ್-ಎಷ್ಟರದೋ, ತಾವಾನ್-ಅಷ್ಟರದು, ವಿಧೀಯತಾಂ-ಮಾಡಬೇಕೆಂದು ವಿಧಿಸಲ್ಪಡಲಿ ॥೩೧॥ಬತ-ಆಹಾ ಮುನಿಗಳಿರಾ! ಏತಸ್ಯ-ಈ ಸೂತಂಗೆ, ದೀರ್ಘಮಾಯುಃ-ಬಹುಕಾಲವು ಬದುಕಿರುವಿಕೆಯೂ ಸತ್ವಂ-ಸಾಮರ್ಥ್ಯವೂ, ಇಂದ್ರಿಯಮೇವಚ-ಕರಣಪಾಟವವೂ, ಚ-ಇನ್ನೂ, ಯತ್-ಯಾವುದು, ಆಶಾಸಿತಂ-ನಿಮ್ಮಿಂದಪೇಕ್ಷಿತವಾಗಿದೆಯೋ, ತತ್-ಅದೆಲ್ಲವನ್ನೂ, ಬ್ರೂತ-ಹೇಳಿರಿ. ಯೋಗಮಾಯಯಾ-ಆತ್ಮಧ್ಯಾನ ಪ್ರಯುಕ್ತವಾದ ಯತ್ನೋಪಾಯಕೌಶಲವಿದ್ಯಾ ಸಾಮರ್ಥ್ಯದಿಂದ, ಸಾಧಯೇ-ಸಂಪಾದಿಸಿಕೊಡುವೆನು ॥೩೨॥ ರಾಮ-ಬಲಭದ್ರನೇ, ತವ-ನಿನ್ನ, ವೀರ್ಯಸ್ಯ-ಸಾಮರ್ಥ್ಯಕ್ಕೂ ಅಸ್ತ್ರಸ್ಯ- ಸಂಹಾರಮಂತ್ರಕ್ಕೂ, ಮೃತ್ಯೋಃ-ಮರಣದೇವತೆಗೂ, ಅಸ್ಮಾಕಮೇವಚ-ನಮಗೂ, ವಚಃ-ಮಾತು. ಸತ್ಯಂ-ದಿಟವಾದ್ದು, ಯಥಾ-ಹೇಗೆ, ಭವೇತ್-ಆದೀತೋ, ತಥಾ-ಹಾಗೆ, ವಿಧೀಯತಾಂ-ಕಟ್ಟಳೆಯಾಗಿ ನಿರ್ಣಯಿಸಲ್ಪಡಲಿ ॥೩೩॥ ಎಲೈ ಮುನಿಗಳಿರಾ, ಉತ್ಪನ್ನಃಪುತ್ರಃ-ಹುಟ್ಟಿದಮಗನು, ಆತ್ಮಾವೈ-ತಂದೆಯಚೇತನವೇ, ಇತಿ-ಹೀಗೆಂದು, ವೇದಾನುಶಾಸನಂ-ವೇದಶಿಕ್ಷಾವಚನವಿದೆ. ತಸ್ಮಾತ್-ಆ ಕಾರಣದಿಂದ, ಅಸ್ಯ-ಈ ಸೂತನಮಗನಾದ ಉಗ್ರಶ್ರವನು, ಆಯುರಿಂದ್ರಿಯಸತ್ವವಾನ್-ಚಿರವಾದ ಜೀವಿತಕಾಲವೂ ಕರಣಪಟುತ್ವವೂ ಸಾಮರ್ಥ್ಯವೂ ಉಳ್ಳ, ವಕ್ತಾ-ಪುರಾಣವಾಚಕನು, ಭವೇತ್-ಆದಾನು ॥೩೪॥ ಮುನಿಶ್ರೇಷ್ಠಾಃ-ಎ

ರೂಕೂಡ ಭೀತರಾಗಿ ಬ್ರಹ್ಮಹತ್ಯಾದಿಗಳಿಗೆ ಪ್ರಾಯಶ್ಚಿತ್ತವಂಗೆಯ್ವರು, ಇಲ್ಲದೆಹೋದರೆ ಮನಸ್ಸುಬಂದಂತೆ ನಡೆವರಾಗಿ ಭ್ರಷ್ಟರಾಗುವರು॥೩೦॥ ಎಂದುಶೌನಕಾದಿಗಳಿಂ ಪೇಳಲ್ಪಟ್ಟ ವಚನವಂ ಕೇಳಿ ಶ್ರೀರಾಮನು ನುಡಿಯುವನದೆಂತೆನೆ- ಎಲೈಋಷಿಗಳಿರಾ! ಲೋಕಂಗಳಂ ಅನುಗ್ರಹಿಸಲಿಚ್ಛೆಯಿಂದ ಸೂತಮುನಿಯ ಸಂಹಾರಕ್ಕೆ ನಾನು ಪ್ರಾಯಶ್ಚಿತ್ತವನ್ನಾಚರಿಸುವವನಾಗುವೆನು. ಆಪ್ರಾಯಶ್ಚಿತ್ತಕ್ಕೆ ಮುಖ್ಯಪಕ್ಷದಲ್ಲಿ ಎಷ್ಟುನಿಯಮವಿಧೆಯೋ ಅಷ್ಟುನಿಯಮವಂ ನೀವು ನನಗೆನಿರೂಪಿಸುವರಾಗಿ, ಆಮೇಲೆ ಆಪ್ರಾಯಶ್ಚಿತ್ತವಂ ನಾನಾಚರಿಸುವವನಾಗುವೆನು ॥೩೧॥ ಎಲೈಬ್ರಾಹ್ಮಣರೇ! ಮತ್ತು ಸೂತಮುನಿಗೆ ದೀರ್ಘವಾದ ಆಯುಷ್ಯವು, ಬಲವು, ಇಂದ್ರಿಯವು, ಆಯಿಂದ್ರಿಯಶಕ್ತಿಯು, ಮತ್ತು ಅನ್ಯವಾದದ್ದು ಯಾವುದುನಿಮ್ಮಿಂದ ಇಚ್ಛಿಸಲ್ಪಟ್ಟದಿಯೋ ಅದಂಕೂಡನೀವೇಪೇಳುವರಾಗಿ, ಅದೆಲ್ಲವಂ ಯೋಗಮಾಯೆಯಿಂದ ಈಸೂತನಿಗೆ ಸಾಧಿಸಿಕೊಡುವನಾಗುವೆನು ॥೩೨॥ಎಂದುಶ್ರೀರಾಮನಿಂ ಪೇಳಲ್ಪಟ್ಟ ವಚನವಂಕೇಳಿ ಋಷಿಗಳು ಪೇಳ್ವರದೆಂತೆನೆ- ಎಲೈಶ್ರೀರಾಮನೇ, ನಿನ್ನಅಸ್ತ್ರವು, ಸಾಮರ್ಥ್ಯವು, ಅವುಗಳಿಂದುಂಟಾದ ಮೃತ್ಯುವು, ನಮ್ಮವಚನವೂಕೂಡ, ಎಂತು ಸತ್ಯವಾಗುವುದೋ ಆರೀತಿಯಿಂದ ಮಾಡುವನಾಗು ॥೩೩॥ ಎಂದಾಋಷಿಗಳ ವಾಕ್ಯವಂಕೇಳಿ ಶ್ರೀರಾಮನು ಪೇಳುವನದೆಂತೆನೆ- ಎಲೈಋಷಿಗಳಿರಾ; ಕೇಳಿ ಪುರುಷನು ತಾನೇ ಪುತ್ರರೂಪನಾಗಿ ಜನಿಸುವನೆಂದು ಶ್ರುತಿಯುಪೇಳುತ್ತಲಿದೆಯಾದುದರಿಂದ ಈ ರೋಮಹರ್ಷಣನಿಗೆ ಉತ್ಕೃಷ್ಟವಾದ ಆಯುಸ್ಸು ಬಲವು ಸಾಮರ್ಥ್ಯವುಸಹ ವುಳ್ಳ ಉಗ್ರಶ್ರವಸ್ಸೆಂಬ ಪುತ್ರನುಪುಟ್ಟಿ ನಿಮಗೆ ಪುರಾಣಂಗಳಂ ಪೇಳುವನಾಗುವನು. ॥೩೪॥ ಎಲೈಜ್ಞಾನಿಗಳಿರಾ, ಮತ್ತು ನೀವು ನಿಮಗೆಯೇನಿ

ಬ್ರೂತನೋಂಕರವಾಣ್ಯಥ । ಅಜಾನತಶ್ಚಾಪಚಿತಿಂಯಥಾನೋಚಿಂತ್ಯತಾಂಬುಧಾಃ॥೩೭॥ ಋಷಯಃ॥
ಇಲ್ವಲಸ್ಯಸುತೋಘೋರಃಬಲ್ವಲೋನಾಮದಾನವಃ।ಸದೂಷಯತಿನಸ್ಸತ್ರಮೇತ್ಯಪರ್ವಣಿಪರ್ವಣಿ॥೩೮॥
ತಂಪಾಪಂಜಹಿದಾಶಾರ್ಹತನ್ನಶ್ಶುಶ್ರೂಷಣಂಪರಮ್ । ಪೂಯಶೋಣಿತವಿಣ್ಮೂತ್ರಸುರಾಮಾಂಸಾಭಿವ
ರ್ಷಿಣಮ್ ॥೩೯॥ ತತಶ್ಚ ಭಾರತಂವರ್ಷಂಪರೀತ್ಯಸುಸಮಾಹಿತಃ। ಚರಿತ್ವಾದ್ವಾದಶಮಾಸಾಂಸ್ತೀ
ರ್ಥಸ್ನಾಯೀವಿಶುಧ್ಯಸೆ ... ... ॥೪೦॥

ಇತಿಶ್ರೀಮದ್ಭಾಗವತೆ-ದಶಮಸ್ಕಂಧೆ-ಅಷ್ಟಸಪ್ತತಿತಮೋಽಧ್ಯಾಯಃ-

---

ಲೈ ಋಷ್ಯುತ್ತಮರೇ, ವಃ-ನಿಮಗೆ, ಕಿಂಕಾಮಃ-ಏನುಬಯಕೆಯುಂಟೋ ನಾಂ-ನನ್ನಂಕುರಿತು, ಬ್ರೂತ-ಹೇಳಿರಿ, ಅಥ-ಇನ್ನುಮೇಲೆ, ಕರವಾಣಿ-ಮಾಡುವೆನು ಅಪಚಿತಿಂ-ಪ್ರಾಯಶ್ಚಿತ್ತವನ್ನು, ಅಜಾನತಃ-ಅರಿಯದೇಇರುವ, ನೇ-ನನಗೆ, ಯಥಾ-ಹೇಗೆ ನಡೆಯತಕ್ಕದ್ದೋ, ಬುಧಾಃ-ಎಲೈ ವಿದ್ವಾಂಸರುಗಳಿರಾ, ತಥಾ-ಹಾಗೆ, ಚಿಂತ್ಯತಾಂ-ಆಲೋಚಿಸಲ್ಪಡಲಿ ॥೩೭॥ ಎಲೈ ರಾಮನೇ, ಇಲ್ವಲಸ್ಯ-ಇಲ್ವಲನೆಂಬ ದಾನವನ, ಸುತಃ-ಮಗನಾದ, ಘೋರಃ-ಕ್ರೂರನಾದ, ಬಲ್ವಲೋನಾಮ-ಬಲ್ವಲನೆಂದು ಪ್ರಸಿದ್ಧನಾದ, ಸದಾನವಃ-ಆರಾಕ್ಷಸನು, ಪರ್ವಣಿಪರ್ವಣಿ-ಪ್ರತಿಪರ್ವಕಾಲದಲ್ಲಿಯೂ, ನಃ-ನಮ್ಮ, ಸತ್ರಂ- ಸತ್ರಯಾಗವನ್ನು ಕುರಿತು, ಏತ್ಯ-ಬಂದು, ದೂಷಯತಿ-ಕೆಡಿಸುತ್ತಿರುವನು ॥೩೮॥ ಪೂಯಶೋಣಿತವಿಣ್ಮೂತ್ರಸುರಾಮಾಂಸಾಭಿವರ್ಷಿಣಂ-ಕೆಟ್ಟನೀರು ಕೆನ್ನೀರು ಮಲಮೂತ್ರಗಳು ಹೆಂಡ ಬಾಡು ಇವುಗಳನ್ನು ಸುರಿಯುವಂಥಾ, ಪಾಪಂ-ಪಾತಕಿಯಾದ, ತಂ-ಆ ಬಲ್ವಲನನ್ನು, ಜಹಿ-ನಿಗ್ರಹಿಸು ದಾಶಾರ್ಹ-ಯದುಶ್ರೇಷ್ಠನೇ, ತತ್-ಅದು, ನಃ-ನಮಗೆ, ಪರಂ-ಉತ್ಕೃಷ್ಟವಾದ, ಶುಶ್ರೂಷಣಂ-ಸೇವೆಯಾಗಿರುವುದು ॥೩೯॥ ತತಶ್ಚ-ಆ ಮೇಲೆ, ಭಾರತಂವರ್ಷಂ-ಭರತಖಂಡವನ್ನು, ಪರೀತ್ಯ-ಸುತ್ತಿಬಂದು, ಸುಸಮಾಹಿತಃ- ಚನ್ನಾಗಿ ಸಮಾಧಾನ ವುಂಟಾದವನಾಗಿ, ದ್ವಾದಶಮಾಸಾನ್-೧೨ ತಿಂಗಳಲ್ಲಿ, ಚರಿತ್ವಾ-ವ್ರತವನ್ನುಆಚರಿಸಿ,ತೀರ್ಥಸ್ನಾಯೀ-ಪುಣ್ಯೋದಕಗಳಲ್ಲಿ ಮಿಂದುವವನಾಗಿ,ವಿಶುಧ್ಯಸೇ-ಸ್ವರೂಪವನ್ನರಿತವನಾಗುವಿ. ॥೪೦॥

ಇಂತೆಂಬಲ್ಲಿಗೆ ಭಾಗವತ ಪ್ರತಿಶಬ್ದಾರ್ಥ ಬೋಧಿನಿಯಲ್ಲಿ ದಶಮಸ್ಕಂದದೊಳು
೭೮ ನೆಯ ಅಧ್ಯಾಯಂ ಮುಗಿದುದು.

---

ಷ್ಟಾರ್ಥವಿದೆಯೋ ಅದು ಪೇಳುವರಾಗಿರಿ ಅದಂಕೇಳುವನಾಗುತ್ತೇನೆ.ಆಯಿಷ್ಟಾರ್ಥವೆಂಬ ಬ್ರಹ್ಮದಂಡವಂ ನೀವುಧರಿಸಿ ಗ್ರಹಿಸಿ ಬ್ರಹ್ಮಹತ್ಯೆಗೆ ಪ್ರಾಯಶ್ಚಿತ್ತವನರಿಯದೆ ಯಿರುವವನನಗೆ ಶಾಸ್ತ್ರೋಕ್ತವಾಗಿ ಪ್ರಾಯಶ್ಚಿತ್ತವಂ ವಿಧಿಸುವರಾಗಿ, ॥೩೭॥ ಎಂಬಶ್ರೀರಾಮನ ವಚನವಂಕೇಳಿ ಋಷಿಗಳು ತಮ್ಮ ಯಿಷ್ಟಾರ್ಥವಂ ಪ್ರಾರ್ಥಿಸುವರೆಂತೆನೆ- ಎಲೈಶ್ರೀರಾಮನೇ, ಇಲ್ವಲನೆಂಬದಾನವನಿಗೆ ಪುತ್ರನಾದ ಭಯಂಕರನಾದ ಬಲ್ವಲನೆಂಬ ಆದಾನವನು ಪ್ರತಿಪರ್ವಕಾಲದಲ್ಲಿಯೂ ಬಂದು ನಮ್ಮ ಸತ್ರಯಾಗವಂ ಬಾಧಿಸುತಲಿರುವನು॥೩೮॥ ಆಕಾರಣದಿಂದ ಯಜ್ಞಭೂಮಿಯಲ್ಲಿ ಕೀವು, ರಕ್ತ, ಮಲ, ಮೂತ್ರ, ಗಳಂವರ್ಷಿಸುತ್ತಲಿರುವ ಪಾಪಿಷ್ಠನಾದ ಆಬಲ್ವಲನಂ ಸಂಹರಿಸುವನಾಗು, ಅದೇ ನಮಗೆ ಪರಮವಾದ ಇಷ್ಟಾರ್ಥವು, ಅದಂ ಸಾಧಿಸುವನಾಗು ॥೩೯॥ ಅನಂತರದಲ್ಲಿ ನೀನು ಕಾಮಕ್ರೋಧರಹಿತನಾಗಿ ಒಂದು ಭೂಪ್ರದಕ್ಷಿಣಂಗೆಯ್ದು ಭರತವರ್ಷದ ಆಯಾಯ ತೀರ್ಥಂಗಳಲ್ಲಿ ಸ್ನಾನಂಗಳಂ ಗೆಯ್ದವನಾಗಿ ಕೃಛ್ರಂಗಳ ನಾಚರಿಸಿದರೆ ಪರಿಶುದ್ಧನಾಗುವಿ,॥೪೦॥ಎಂದು ಋಷಿಗಳು ಶ್ರೀರಾಮನಂ ಕುರಿತುಪೇಳಿದರು- ಇಂತು ಶ್ರೀಶುಕಮುನಿಯು ಪರೀಕ್ಷಿದ್ರಾಯನಂಕುರಿತು ನಿರೂಪಿಸಿದನೆಂದುಸೂತಪೌರಾಣಿಕನು ನೈಮಿ

ಶಾರಣ್ಯ ವಾಸಿಗಳಾದ ಶೌನಕಾದಿ ಮಹರ್ಷಿಗಳಿಗೆ ಪೇಳಿದನೆಂಬಲ್ಲಿಗೆಶ್ರೀ ಮನ್ಮಹೀಶೂರ ಪುರವರಾ
ಧೀಶ ಶ್ರೀಚಾಮರಾಜತನುಜ ಶ್ರೀಮತ್ಕೃಷ್ಣರಾಜವಿರಚಿತಮಾದ“ಶ್ರೀಕೃಷ್ಣರಾಜ ವಾಣೀ
ವಿಲಾಸ„ಮೆಂಬ ಶ್ರೀಭಾಗವತಪುರಾಣದ ಕರ್ಣಾಟಭಾಷಾವ್ಯಾಖ್ಯಾನದಲ್ಲಿ ದಶಮಸ್ಕಂಧದ
೭೮ನೇಯಧ್ಯಾಯಂಮುಗಿದುದು.

ಶ್ರೀಶುಕಃ ॥ ತತಃಪರ್ವಣ್ಯುಪಾವೃತ್ತೇಪ್ರಚಂಡಃಪಾಂಸುವರ್ಷಣಃ । ಭೀಮೋವಾಯುರಭೂದ್ರಾಜನ್ಪೂತಿಗಂಧಶ್ಚಸರ್ವಶಃ ॥೧॥ ತತೋಽಮೇಧ್ಯಮಯಂವರ್ಷಂಪಲ್ವಲೇನವಿನಿರ್ಮಿತಮ್ । ಅಭವದ್ಯಜ್ಞಶಾಲಾಯಾಂಸೋಽನ್ವದೃಶ್ಯತಶೂಲಧೃಕ್ ॥೨॥ ತಂವಿಲೋಕ್ಯಬೃಹತ್ಕಾಯಂಭಿನ್ನಾಂಜನಚಯೋಪಮಮ್ । ತಪ್ತತಾಮ್ರಶಿಖಾಶ್ಮಶ್ರುಂದಂಷ್ಟ್ರೋಗ್ರಭ್ರುಕುಟೀಮುಖಮ್॥೩॥ ಸಸ್ಮಾರಮುಸಲಂರಾಮಃಪರಸೈನ್ಯವಿದಾರಣಮ್।ಹಲಂಚದೈತ್ಯದಮನಂತೇತೂರ್ಣಮುಪತಸ್ಥತುಃ ॥೪॥ ತಮಾಕೃಷ್ಯಹಲಾ

೭೯ನೆಯ ಅಧ್ಯಾಯದ ಪ್ರತಿಪದಟೀಕೆ.

ರಾಜನ್-ಪರೀಕ್ಷಿತನೇ! ತತಃ-ಆ ಮೇಲೆ, ಪರ್ವಣಿ-ಪರ್ವಕಾಲವು, ಉಪಾವೃತ್ತೇ-ಬರುತಲೂ, ಪ್ರಚಂಡಃ-ಬಲವಾದ, ಪಾಂಸುವರ್ಷಣಃ-ಧೂಳನ್ನು ಸುರಿಯುವ, ಭೀಮಃ-ಭಯಂಕರವಾದ, ವಾಯುಃ-ಗಾಳಿಯು, ಸರ್ವಶಃ-ಎಲ್ಲಾ ಕಡೆಯಲ್ಲಿಯೂ, ಪೂತಿಗಂಧಶ್ಚ-ಕೆಟ್ಟ ಕಂಪೂ, ಅಭವತ್-ಆಯಿತು ॥೧॥ ತತಃ-ಆ ಮೇಲೆ, ಯಜ್ಞಶಾಲಾಯಾಂ-ಯಾಗಮಂಟಪದಲ್ಲಿ, ಪಲ್ವಲೇನ ವಿನಿರ್ಮಿತಂ-ಪಲ್ವಲನಿಂದುಂಟುಮಾಡಲ್ಪಟ್ಟ, ಅಮೇಧ್ಯಮಯಂವರ್ಷಂ-ಮಲವೃಷ್ಟಿಯು, ಅಭವತ್-ಆಯಿತು, ಸೋಽಪಿ -ಆ ಪಲ್ವಲನೂಕೂಡ, ಶೂಲಧೃಕ್-ಮುಮ್ಮೊನೆಯ ಕವಲುಗೋಲಂ ಪಿಡಿದವನಾಗಿ, ಅದೃಶ್ಯತ-ಕಾಣಲ್ಪಟ್ಟನು ॥೨॥ ಬೃಹತ್ಕಾಯಂ-ದೊಡ್ಡ ಮೈಯುಳ್ಳ, ಭಿನ್ನಾಂಜನಚಯೋಪಮಂ-ಜಿರಿದ ಕಾಡಿಗೆಯ ಗುಡ್ಡವು ಸಮಾನವಾಗಿವುಳ್ಳಂಥಾ, ತಪ್ತತಾಮ್ರಶಿಖಾಶ್ಮಶ್ರುಂ-ಸುಟ್ಟ ತಾಮ್ರದಂತಿರುವ ತಲೆಕೂದಲು ಗಡ್ಡ ಮೀಸೆಗಳೂ ಉಳ್ಳಂಥಾ, ದಂಷ್ಟ್ರೋಗ್ರಭ್ರುಕುಟೀಮುಖಂ-ದಾಡೆಹಲ್ಲುಗಳೂ ಕ್ರೂರವಾದ ಹುಬ್ಬುಗಳೂಉಳ್ಳ ಮೋರೆಯುಳ್ಳವನಾದ, ತಂ-ಆ ಪಲ್ವಲನನ್ನು, ವಿಲೋಕ್ಯ-ನೋಡಿ ॥೩॥ ರಾಮಃ-ಬಲಭದ್ರನು, ಪರಸೈನ್ಯವಿದಾರಣಂ-ವೈರಿಗಳ ದಂಡನ್ನು ಸೀಳುವಂಥಾ, ಮುಸಲಂ-ಒನಿಕೆಯನ್ನೂ, ದೈತ್ಯದಮನಂ-ದಿತಿಪುತ್ರರನ್ನು ಅಣಗಿಸುವಂಥಾ, ಹಲಂಚ-ನೇಗಿಲನ್ನೂ, ಸಸ್ಮಾರ-ನೆನಪುಗೊಂಡನು. ತೇ-ಅವೆರಡೂ, ತೂರ್ಣಂ-ಬೇಗನೆ, ಉಪತಸ್ಥತುಃ-ಹತ್ತಿರ ಬಂದುನಿಂತವು ॥೪॥ ಬಲಃ-ರಾಮನು, ಗಗನೇಚರಂ-ಅಂತರಿಕ್ಷದಲ್ಲಿ ತಿರುಗುವ, ತಂಪಲ್ವಲಂ-ಆ ದೈತ್ಯನನ್ನು, ಹಲಾಗ್ರೇಣ-ನೇಗಿಲ ತುದಿಯಿಂದ, ಆಕೃಷ್ಯ-ಎಳಕೊಂಡು, ಕ್ರುದ್ಧಃ-ಸಿಟ್ಟುಳ್ಳವನಾಗಿ, ಮುಸಲೇನ-ಒನಿಕೆಯಿಂದ, ಬ್ರಹ್ಮದ್ರುಹಂ-ಬ್ರಾಹ್ಮ

೭೯ನೆಯಅಧ್ಯಾಯವು.

ಶ್ರೀಧರೀಯಶ್ಲೋಕಃ ॥ ಊನಾಶೀತಿತಮೇರಾಮಃಪಲ್ವಲಂದ್ವಿಜತುಷ್ಟಯೇ । ನಿಹತ್ಯತೀರ್ಥಸ್ನಾನಾದ್ಯೈಃಸೂತಹತ್ಯಾಮಪಾನುದತ್ ॥%॥ಟೀ॥ ಇಪ್ಪತ್ತೊಂಭತ್ತನೆಯಅಧ್ಯಾಯದಲ್ಲಿ ಬಲರಾಮಸ್ವಾಮಿಯು ಯಜ್ಞವಿಘಾತಕನಾದ ಪಲ್ವಲನೆಂಬ ಅಸುರನಂ ಬ್ರಾಹ್ಮಣಪ್ರೀತ್ಯರ್ಥವಾಗಿ ಸಂಹರಿಸಿ ತೀರ್ಥಸ್ನಾನಾದಿಗಳಿಂ ಸೂತಪೌರಾಣಿಕನಂ ಸಂಹರಿಸಿದ ಪಾಪವಂ ಪರಿಹರಿಸಿಕೊಂಡನೆಂಬರ್ಥವಂ ಶ್ರೀಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸುವನದೆಂತೆನೆ!-

ಎಲೈ, ಅರಸನೇ! ಕೇಳು, ಈರೀತಿಯಾಗಿ ಋಷಿಗಳು ಬಲರಾಮನಿಗೆ ಪ್ರಾಯಶ್ಚಿತ್ತವ ವಿಧಿಸಿ ಸತ್ರಯಾಗನಿಷ್ಠರಾಗಿರಲು ಅನಂತರದಲ್ಲಿ ಪುನಃ ಪರ್ವಕಾಲವು ಪ್ರಾಪ್ತವಾಗುತಲೂ ಧೂಳಿಗಳಂ ವರ್ಷಿಸುತ ಭಯಂಕರವಾಗಿ ಮತ್ತು ನಾಲ್ಕು ಕಡೆಯಲ್ಲಿಯೂ ದುರ್ಗಂಧಯುಕ್ತವಾದ ಪ್ರಚಂಡವಾಯುವು ಬೀಸಿತು ॥೧॥ ಅನಂತರದಲ್ಲಿ ಆಪಲ್ವಲನಿಂ ಯಜ್ಞಶಾಲೆಯಲ್ಲಿ ಅಮೇಧ್ಯವರ್ಷವು ಕಲ್ಪಿಸಲ್ಪಟ್ಟಿತು. ಆಗ ಶೂಲವಂ ಧರಿಸಿದ ಪಲ್ವಲನೂ ಕಾಣಲ್ಪಟ್ಟನು ॥೨॥ ಅನಂತರದಲ್ಲಿ ಮಹಾಶರೀರವುಳ್ಳವನಾಗಿ ಸೀಳಲ್ಪಟ್ಟ ಅಂಜನದ ಗುಡ್ಡದಂತೆ ನೀಲವರ್ಣಯುಕ್ತನಾಗಿ ಸುಡಲ್ಪಟ್ಟ ತಾಮ್ರದಂತೆ ಕೆಂಪಾಗಿರುವ ಜುಟ್ಟು ಗಡ್ಡ ಮೀಸೆಗಳುಳ್ಳ ಕೋರೆದಾಡೆಗಳಿಂ ಭಯಂಕರವಾದ ಹುಬ್ಬುಗಂಟಿನ ಮೋರೆಯುಳ್ಳ ಅವನಂ ನೋಡಿ ಬಲರಾಮನು ॥೩॥ ಆಗ ಶತ್ರುಸಂಹಾರಕವಾದ ಮುಸಲಾಯುಧವನ್ನೂ ದೈತ್ಯನಾಶಕವಾದ ಹಲಾಯುಧವನ್ನೂ ಸ್ಮರಿಸಿದನು. ಆಯಾಯುಧಗಳೆರಡೂ ಶೀಘ್ರದಿಂ ಬಂದು ಶ್ರೀರಾಮನ ಸಮೀಪದಲ್ಲಿ ನಿಂತವು. ॥೪॥ ಆಗ ರಾಮನು ಹಲದಕೊನೆಯಿಂದ ಅಂತರಿಕ್ಷದಲ್ಲಿ ಚಲಿಸುವ ಬ್ರಾಹ್ಮಣಶತ್ರು

ಗ್ರೇಣಪಲ್ವಲಂಗಗನೇಚರಮ್ | ಮುಸಲೇನಾಹನತ್ಕ್ರುದ್ಧೋಮೂರ್ಧ್ನಿಬ್ರಹ್ಮದ್ರುಹಂಬಲಃ||೫||ಸೋಽಪತದ್ಭುವಿನಿರ್ಭಿನ್ನಲಲಾಟೋಽಸೃಕ್ಸಮುತ್ಸೃಜನ್ | ಮುಂಚನ್ನಾರ್ತಸ್ವರಂಶೈಲೋಯಥಾವಜ್ರಹತೋಽರುಣಃ ||೬|| ಸಂಸ್ತುತ್ಯಮುನಯೋರಾಮಂಪ್ರಯುಜ್ಯಾವಿತಥಾಶಿಷಃ | ಅಭ್ಯಷಿಂಚನ್ಮಹಾಭಾಗಂವೃತ್ರಘ್ನಂವಿಬುಧಾಯಥಾ ||೭||ವೈಜಯಂತೀಂದದುರ್ಮಾಲಾಂಶ್ರೀಧಾಮಾಮ್ಲಾನಪಂಕಜಾಮ್|ರಾಮಾಯವಾಸಸೀದಿವ್ಯೇದಿವ್ಯಾನ್ಯಾಭರಣಾನಿಚ||೮||ಅಥತೈರಭ್ಯನುಜ್ಞಾತಃಕೌಶಿಕೀಮೇತ್ಯಬ್ರಾಹ್ಮಣೈಃ| ಸ್ನಾತ್ವಾಸರೋವರಮಗಾದ್ಯತಸ್ಸರಯುರಾಸ್ರವತ್ ||೯|| ಅನುಸ್ರೋತೇನಸರಯೂಂಪ್ರಯಾಗಮುಪಗಮ್ಯಸಃ |ಸ್ನಾತ್ವಾಸಂತರ್ಪ್ಯದೇವಾದೀನ್ಜಗಾಮಪುಲಹಾಶ್ರಮಮ್||೧೦||ಗೋಮತೀಂಗಂಡಕೀಂ

---

ಣದ್ರೋಹಿಯಾದ ಅವನನ್ನು, ಮೂರ್ಧ್ನಿ-ತಲೆಯಲ್ಲಿ, ಅಹನತ್-ಬಡಿದನು ||೫|| ಸಃ-ಆ ದೈತ್ಯನು, ನಿರ್ಭಿನ್ನಲಲಾಟಃ-ಒಡೆಯಲ್ಪಟ್ಟ ಹಣೆಯುಳ್ಳವನಾದ್ದರಿಂದ, ಅಸೃಕ್-ರಕ್ತವನ್ನು, ಸಮುತ್ಸೃಜನ್-ಕಾರುವನಾಗಿಯೂ, ಆರ್ತಸ್ವರಂ- ಅಳುಕೂಗನ್ನು, ಮುಂಚನ್-ಸೊರಬಿಡುವನಾಗಿಯೂ, ವಜ್ರಹತಃ-ಸಿಡಿಲಿನಿಂದ ಬಡಿಯಲ್ಪಟ್ಟ, ಅರುಣಶ್ಶೈಲೋಯಥಾ-ಕೆಂಪುಗುಡ್ಡಹೇಗೋಹಾಗೆ, ಭುವಿ-ನೆಲದಲ್ಲಿ, ಅಪತತ್-ಬಿದ್ದನು ||೬|| ಮುನಯಃ-ಋಷಿಗಳು, ರಾಮಂ-ಬಲಭದ್ರನನ್ನು, ಸಂಸ್ತುತ್ಯ-ಕೊಂಡಾಡಿ, ಅವಿತಥಾಃ-ವ್ಯರ್ಥಂಗಳಾಗದ, ಆಶಿಷಃ-ಹರಕೆಗಳನ್ನು, ಪ್ರಯುಜ್ಯ-ಪ್ರಯೋಗಿಸಿ, ಮಹಾಭಾಗಂ-ಹೆಚ್ಚು ಪೂಜ್ಯತೆಯುಳ್ಳ ರಾಮನನ್ನು, ವಿಬುಧಾಃ-ದೇವರ್ಕಳು, ವೃತ್ರಘ್ನಂಯಥಾ-ವೃತ್ರಾಸುರನನ್ನುಕೊಂದ ಇಂದ್ರನನ್ನು ಹೇಗೋಹಾಗೆ, ಅಭ್ಯಷಿಂಚನ್-ಶುದ್ಧಸ್ನಾನವಂಮಾಡಿಸಿದರು ||೭|| ಶ್ರೀಧಾಮಾಮ್ಲಾನಪಂಕಜಾಂ-ಕಾಂತಿಗಳಿಗೆ ನೆಲೆಯಾಗಿಯೂ ಬಾಡದೆಯೂಇರುವ ತಾವರೆಗಳುಳ್ಳ, ವೈಜಯಂತೀಂಮಾಲಾಂ-ವೈಜಯಂತಿಯೆಂಬ ಹಾರವನ್ನೂ, ದಿವ್ಯೇವಾಸಸಿ- ಬೆಳಗುತ್ತಿರುವವಸ್ತ್ರಗಳನ್ನೂ, ದಿವ್ಯಾನ್ಯಾಭರಣಾನಿಚ-ಪ್ರಕಾಶಿಸುವ ಅಲಂಕಾರಗಳನ್ನೂ, ರಾಮಾಯ-ಬಲದೇವಂಗೆ, ದದುಃ-ಕೊಟ್ಟರು||೮|| ಅಥ-ಆ ಬಳಿಕ, ತೈಃ-ಆ ಮಹರ್ಷಿಗಳಿಂದ, ಅಭ್ಯನುಜ್ಞಾತಃ-ಅಪ್ಪಣೆಕೊಂಡವನಾಗಿ, ಬ್ರಾಹ್ಮಣೈಃ-ವಿಪ್ರರೊಡನೆ, ಕೌಶಿಕೀಮೇತ್ಯ-ಕೌಷಿಕಿನದಿಗ ಬಂದು, ಸ್ನಾತ್ವಾ-ಮಿಂದು, ಯತಃ-ಯಾವುದರದೆಸೆಯಿಂದ, ಸರಯುಃ-ಸರಯೂನದಿಯೂ, ಆಸ್ರವತ್-ಹರಿಯಲ್ತೊಡಗಿತೋ, ತತ್-ಅಂಥಾ, ಸರೋವರಂ-ಶ್ರೇಷ್ಠವಾದ ಕೊಳವನ್ನು ಕುರಿತು, ಅಗಾತ್-ಹೋದನು ||೯|| ಸರಯೂಮನುಸ್ರೋತೇನ-ಸರಯೂಪ್ರವಾಹದ ಸಂಗಡಲೇ, ಪ್ರಯಾಗಂ-ಗಂಗಾಯಮುನಾಸಂಗಮಸ್ಥಲವನ್ನು, ಉಪಗಮ್ಯ-ಸೇರಿ, ಸಃ-ಆ ಬಲರಾಮನು, ಸ್ನಾತ್ವಾ-ಮಿಂದು, ದೇವಾದೀನ್-ದೇವರ್ಷಿಪಿತೃಗಳನ್ನು, ಸಂತರ್ಪ್ಯ-ತೃಪ್ತಿಗೊಳಿಸಿ, ಪುಲಹಾಶ್ರಮಂಜಗಾಮ-ಪುಲಹಮುನಿಯಆಶ್ರಮಕ್ಕೆಬರವನು, ||೧೦|| ಗೋಮತೀಂ-ಗೋಮತೀನದಿಯಲ್ಲಿಯೂ, ಗಂಡಕೀಂ-ಗಂಡಕೀನದಿಯಲ್ಲಿಯೂ,

---

ವಾದ ಪಲ್ವಲನಂ ಸೆಳೆದುಕೊಂಡು ಸಿಟ್ಟಿನಿಂದ ಅವನತಲೆಯಮೇಲೆ ಮುಸಲದಿಂ ತಾಡಿಸಿದನು ||೫|| ಆಬಳಿಕಮುಸಲದಿಂದ ಭೇದಿಸಲ್ಪಟ್ಟ ಹಣೆಯುಳ್ಳವನಾಗಿ ರಕ್ತವಂ ಸೋರಿಸುತ ಅದರಿಂ ಕೆಂಪಾದ ಮೈಯುಳ್ಳವನಾಗಿ ಪಲ್ವಲನು ಕಾವಿಮಣ್ಣಿನಿಂದ ಕೆಂಪಾಗಿರುವ ಬೆಟ್ಟವು ಸಿಡಿಲಿನಿಂದ ಬಡಿಯಲ್ಪಟ್ಟು ಕೆಳಕೆ ಬೀಳುವಂತೆ ಆರ್ತಸ್ವರದಿಂ ಕೂಗುತ್ತ ನೆಲದಲ್ಲಿ ಬಿದ್ದುಹೋದನು||೬|| ಆಮೇಲೆ ಋಷಿಗಳು ಬಲರಾಮನಂ ಸ್ತುತಿಸಿ ಯಥಾರ್ಥವಾದ ಆಶೀರ್ವಾದಂಗಳಂ ಪ್ರಯೋಗಿಸಿ ವೃತ್ರಸಂಹಾರಕನಾದ ಇಂದ್ರನಿಗೆ ದೇವತೆಗಳು ಅಭಿಷೇಕಂಗೆಯ್ವಂತೆ ಪಲ್ವಲಸಂಹಾರಕನಾದ ರಾಮನಿಗೆ ಅಭಿಷೇಕಂಗೆಯ್ದರು ||೭|| ಆಗ ಋಷಿಗಳು ಲಕ್ಷ್ಮಿಗೆ ಆಸ್ಥಾನವಾದ ಎಂದಿಗೂ ಕಂದದೇಇರುವ ಕಮಲಂಗಳುಳ್ಳ ವೈಜಯಂತಿಯೆಂಬ ದಿವ್ಯಮಾಲೆಯನ್ನೂ ದಿವ್ಯವಸ್ತ್ರಾಭರಣಗಳನ್ನೂ ಬಲರಾಮನಿಗೆಕೊಟ್ಟರು ||೮|| ರಾಮನು ಮುನಿಗಳಿಂದ ಆಜ್ಞಾಪಿಸಲ್ಪಟ್ಟವನಾಗಿ ಬ್ರಾಹ್ಮಣರಿಂ ಕೂಡಗೂಡಿ ಕೌಶಿಕೀನದಿಯನೆಯ್ದಿ ಅಲ್ಲಿ ಸ್ನಾನಂಗೆಯ್ದು ಆಮೇಲೆ ಯಾವಸರಸ್ಸಿನಿಂದ ಸರಯೂನದಿಯುಹುಟ್ಟಿ ಪ್ರವಹಿಸುವುದೋ ಅಂತಾ ಮಾನಸಸರೋವರವನೆಯ್ದಿದನು ||೯|| ಆಮೇಲೆ ರಾಮನು ಸರಯೂನದಿಯನನುಸರಿಸಿ ಕ್ರಮವಾಗಿ ಪ್ರಯಾಗಕ್ಷೇತ್ರನನೆಯ್ದಿ ತ್ರಿವೇಣೀ ಸ್ನಾನವಂಗೆಯ್ದು ದೇವರ್ಷಿಪಿತೃತರ್ಪಣವಂಮಾಡಿ ಪುಲಹಮುನಿಯ ಆಶ್ರಮಕ್ಕೆ ಬಂದು ||೧೦|| ಗೋಮತಿ ಗಂಡಕಿ ವಿಪಾಶೆ ಶೋಣಭದ್ರೆ ನದಿಗಳಲ್ಲಿ ಸ್ನಾನಂಗಳಂಮಾಡಿ ಗಯಾಕ್ಷೇತ್ರವಂಸೇರಿ

ಸ್ನಾತ್ವಾವಿಪಾಶಾಂಶೋಣಆಪ್ಲುತಃ।ಗಯಾಂಗತ್ವಾಪಿತೄನಿಷ್ಟ್ವಾಗಂಗಾಸಾಗರಸಂಗಮೇ॥೧೧॥ಉ
ಪಸ್ಪೃಶ್ಯಮಹೇಂದ್ರಾದ್ರೌರಾಮಂದೃಷ್ಟ್ವಾಭಿವಾದ್ಯಚ॥ಸಪ್ತಗೋದಾವರೀಂವೇಣೀಂಪಂಪಾಂಭೀಮರ
ಥೀಂತತಃ॥೧೨॥ಸ್ಕಂದಂದೃಷ್ಟ್ವಾಯಯೌರಾಮಃಶ್ರೀಶೈಲಂಗಿರಿಶಾಲಯಂ।ದ್ರಾವಿಡೇಷುಮಹಾಪು
ಣ್ಯಂದೃಷ್ಟ್ವಾದ್ರಿಂವೇಂಕಟಂಪ್ರಭುಃ॥೧೩॥ ಕಾಮಕೋಷ್ಣೀಂಪುರೀಂಕಾಂಚೀಂಕಾವೇರೀಂಚಸರಿದ್ವರಾಂ।
ಶ್ರೀರಂಗಾಖ್ಯಂಮಹಾಪುಣ್ಯಂಯತ್ರಸನ್ನಿಹಿತೋಹರಿಃ॥೧೪॥ಋಷಭಾದ್ರಿಂಹರೇಃಕ್ಷೇತ್ರಂದಕ್ಷಿಣಾಂಮಧುರಾಂ
ತಥಾ।ಸಾಮುದ್ರಂಸೇತುಮಗಮನ್ಮಹಾಪಾತಕನಾಶನಂ॥ತತ್ರಾಯುತಮದಾದ್ಧೇನೂರ್ಬ್ರಾಹ್ಮಣೇಭ್ಯೋ
ಹಲಾಯುಧಃ।ಕೃತಮಾಲಾಂತಾಮ್ರಪರ್ಣೀಂಮಲಯಂಚಕುಲಾಚಲಂ॥೧೬॥ತತ್ರಾಗಸ್ತ್ಯಂಸಮಾ

---

ಸ್ನಾತ್ವಾ-ಮಿಂದು, ವಿಪಾಶಾಂ- ವಿಪಾಶಾನದಿಯಲ್ಲಿಯೂ, ಶೋಣೇ- ಶೋಣನದದಲ್ಲಿಯೂ, ಆಪ್ಲುತಃ- ಮುಳುಗಿದವನಾಗಿ, ಗಯಾಂಗತ್ವಾ-ಗಯೆಗೆಹೋಗಿ, ಪಿತೄನಿಷ್ಟ್ವಾ-ಪಿತೃಗಳಿಗೆ ಶ್ರಾದ್ಧಮಾಡಿ, ಗಂಗಾಸಾಗರಸಂಗಮೇ-ಭಾಗೀರಥಿಯು ಕಡಲಿಗೆ ಸೇರುವ ಸ್ಥಲದಲ್ಲಿಯೂ ॥೧೧॥ ಉಪಸ್ಪೃಶ್ಯ-ಸ್ನಾನಮಾಡಿ, ಮಹೇಂದ್ರಾದ್ರೌ-ಮಹೇಂದ್ರಪರ್ವತದಲ್ಲಿ, ರಾಮಃ-ಪರಶುರಾಮನನ್ನು, ದೃಷ್ಟ್ವಾ-ನೋಡಿ, ಅಭಿವಾದ್ಯಚ-ನಮಸ್ಕಾರವನ್ನೂಮಾಡಿ, ಸಪ್ತಗೋದಾವರೀಂ-ಏಳುಬಗೆಯಾಗಿ ಹರಿಯುವ ಗೋದಾನದಿಯಲ್ಲಿಯೂ, ವೇಣೀಂ-ಕೃಷ್ಣಾನದಿಯಲ್ಲಿಯೂ, ಪಂಪಾಂ-ತುಂಗಭದ್ರಾನದಿಯ ಪಂಪಾಸರಸ್ಸಿನಲ್ಲಿಯೂ, ಭೀಮರಥೀಂ-ಚಂದ್ರಭಾಗಾನದಿಯಲ್ಲಿಯೂ, ಮಿಂದು, ತತಃ-ಆ ಮೇಲೆ ॥೧೨॥ ಸ್ಕಂದಂ-ಸೊಂಡೂರು ಕುಮಾರಸ್ವಾಮಿಯನ್ನು, ಇಷ್ಟ್ವಾ-ಪೂಜಿಸಿ, ರಾಮಃ-ಬಲಭದ್ರನು, ಗಿರಿಶಾಲಯಂ-ಮಲ್ಲಿಕಾರ್ಜುನೇಶ್ವರನಿಗೆ ಮನೆಯಾದ, ಶ್ರೀಶೈಲಂ -ಶ್ರೀಗಿರಿಯನ್ನು, ಯಯೌ-ಹೊಂದಿದನು. ದ್ರಾವಿಡೇಷು-ದಕ್ಷಿಣದೇಶಗಳಲ್ಲಿ, ವೇಂಕಟಮದ್ರಿಂ-ಪಾಪವನ್ನು ದಹಿಸುವಶೇಷಾಚಲವನ್ನೂ, ಪ್ರಭುಂ-ವೇಂಕಟೇಶ್ವರನನ್ನೂ, ದೃಷ್ಟ್ವಾ-ನೋಡಿ ॥೧೩॥ ಕಾಮಕೋಷ್ಣೀಪುರೀಂ-ಕಾಮಾಕ್ಷಿಯ ನಗರಿಯಾದ, ಕಾಂಚೀಂ-ಕಾಂಚೀನಗರವನ್ನೂ, ಸರಿದ್ವರಾಂ-ಹೊಳೆಗಳಲ್ಲಿ ಶ್ರೇಷ್ಠವಾದ, ಕಾವೇರೀಂಚ-ಕಾವೇರೀನದಿಯನ್ನೂ, ಯತ್ರ-ಎಲ್ಲಿ, ಹರಿಃ-ವಿಷ್ಣುವು, ಸನ್ನಿಹಿತಃ-ರಂಗನಾಥರೂಪದಿಂದ ಅಭಿವ್ಯಕ್ತನಾಗಿರುವನೋ ಮಹಾಪುಣ್ಯಂ ಹೆಚ್ಚು ಸುಕೃತವುಳ್ಳ, ಶ್ರೀರಂಗಾಖ್ಯಂ-ಶ್ರೀರಂಗವೆಂಬ ಹೆಸರುಳ್ಳ, ಕ್ಷೇತ್ರವನ್ನೂ ॥೧೪॥ ಹರಿಕ್ಷೇತ್ರಂ-ವಿಷ್ಣುಸ್ಥಲವಾದ, ವೃಷಭಾದ್ರಿಂ- ಋಷಭಾಚಲವನ್ನೂ, ತಥಾ-ಹಾಗೆ, ದಕ್ಷಿಣಾಂಮಧುರಾಂ-ತೆಂಕಲಮಧುರಾಪುರವನ್ನೂ, ಮಹಾಪಾತಕನಾಶನಂ-ದೊಡ್ಡ ಪಾಪಗಳನ್ನು, ಪರಿಹರಿಸುವ, ಸಮುದ್ರಸೇತುಂ-ರಾಮೇಶ್ವರವನ್ನೂ, ಅಗಮತ್-ಹೋಗಿಸೇರಿದನು ॥೧೫॥ ಹಲಾಯುಧಃ-ಬಲರಾಮನು, ತತ್ರ-ಆ ಸೇತುವಿನಲ್ಲಿ, ಬ್ರಾಹ್ಮಣೇಭ್ಯಃ-ವಿಪ್ರರಿಗೆ, ಅಯುತಂಧೇನೂಃ-೧೦ ಸಾವಿರ ಗೋವುಗಳನ್ನು,ಅದಾತ್-ಕೊಟ್ಟನು. ಕೃತಮಾಲಾಂ-ಕೃತಮಾಲಾನದಿಯನ್ನೂ, ತಾಮ್ರಪರ್ಣೀಂ - ತಾಮ್ರಪರ್ಣೀನದಿಯನ್ನೂ, ಕುಲಾಚಲಂ-ಕುಲಪರ್ವತವಾದ, ಮಲಯಂ-ಚಂದನಗಿರಿಯನ್ನೂ ಸೇವಿಸಿದನು ॥೧೬॥ ತತ್ರ-ಅಲ್ಲಿ, ಸಮಾಸೀನಂ-ಕುಳಿತಿರುವ ಅಗಸ್ತ್ಯಂ-ಅಗಸ್ತ್ಯಮುನಿಯನ್ನು,ನಮ

---

ಪಿತೃಗಳಿಗೆ ಮೋಕ್ಷಸಾಧಕಧರ್ಮಂಗಳಂಮಾಡಿ ಅಲ್ಲಿಂದ ಗಂಗಾಸಾಗರಸಂಗಮವನೆಯ್ದಿದನು॥೧೧॥ಅಲ್ಲಿ ಸ್ನಾನಂಗೆಯ್ದು ಸಮುದ್ರತೀರದಲ್ಲಿರುವ ಮಹೇಂದ್ರಪರ್ವತದಲ್ಲಿ ಪರಶುರಾಮನಂಕಂಡು ಅಭಿವಾದನಂಗೆಯ್ದು ಅಲ್ಲಿಂದ ಏಳುಬಗೆಯಾಗಿ ಪ್ರವಹಿಸುತಲಿರುವ ಗೋದಾವರಿಯನ್ನೂ, ಅಲ್ಲಿಂದ ಪಿನಾಕಿನಿಯನ್ನೂ, ಪಂಪಾಸರಸ್ಸನ್ನೂ, ಭೀಮರಥಿಯನ್ನೂ, ಎಯ್ದಿ ಮಹಾನದಿಗಳಲ್ಲಿ ಸ್ನಾನಂಗಳಂಮಾಡಿ॥೧೨॥ ಮತ್ತು ಶ್ರೀರಾಮನು ಸ್ಕಂದಪರ್ವತವನೆಯ್ದಿ ಅಲ್ಲಿ ಕುಮಾರಸ್ವಾಮಿಯ ದರ್ಶನವಂಗೆಯ್ದು ಅಲ್ಲಿಂದ ಪರಮೇಶ್ವರನಿಗೆ ಆವಾಸಸ್ಥಾನವಾದ ಶ್ರೀಶೈಲಪರ್ವತವನೆಯ್ದಿ ಅಲ್ಲಿಂದ ದ್ರಾವಿಡದೇಶಂಗಳಲ್ಲಿ ಮಹಾಪುಣ್ಯಕರವಾದ ವೇಂಕಟಾದ್ರಿಯಂನೋಡಿ ॥೧೩॥ ಅಲ್ಲಿಂದ ಕಾಮಕೋಟಿ ಪೀಠವಾದ ಕಾಂಚೀಪುರವನೆಯ್ದಿ, ಅಲ್ಲಿಂದ ಸರ್ವನದೀಶ್ರೇಷ್ಠವಾದ ಕಾವೇರಿಯನೆಯ್ದಿ, ಯಾವಕ್ಷೇತ್ರದಲ್ಲಿ ಶ್ರೀಹರಿಯು ಪ್ರತ್ಯಕ್ಷನಾಗಿರುವನೋ ಪುಣ್ಯಕರವಾದ ಆಶ್ರೀರಂಗವನೆಯ್ದಿ,॥೧೪॥ಅಲ್ಲಿಂದ ವಿಷ್ಣುಕ್ಷೇತ್ರವಾದ ವೃಷಭಾದ್ರಿಯಂ ದಕ್ಷಿಣದೇಶದಲ್ಲಿರುವ ಮಧುರಾಪುರವನ್ನೂ ಹೊಂದಿ, ಮಹಾಪಾತಕಂಗಳಂ ಪರಿಹರಿಸುವ ರಾಮಸೇತುವನೆಯ್ದಿದನು ॥೧೫॥ ಮತ್ತು ಅಲ್ಲಿ ಬಲರಾಮನು ಬ್ರಾಹ್ಮಣರಿಗೆ ಹತ್ತುಸಾವಿರಗೋವುಗ

ಸೀನಂ ನಮಸ್ಕೃತ್ವಾಭಿವಾದ್ಯ ಚ। ಯೋಜಿತಸ್ತೇನ ಚಾಶೀರ್ಭಿರನುಜ್ಞಾತೋ ಗತೋಽರ್ಣವಮ್। ದಕ್ಷಿಣಂ ತ
ತ್ರ ಕನ್ಯಾಖ್ಯಾಂ ದುರ್ಗಾಂ ದೇವೀಂ ದದರ್ಶ ಸಃ ॥೧೭॥ ತತಃ ಫಾಲ್ಗುನಮಾಸಾದ್ಯ ಪಂಚಾಪ್ಸರಸಮುತ್ತಮ
ಮ್। ವಿಷ್ಣುಸ್ಸನ್ನಿಹಿತೋ ಯತ್ರ ಸ್ನಾತ್ವಾಸ್ಪರ್ಶದ್ಗವಾಯುತಮ್ ॥೧೮॥ ತತೋಽತಿವ್ರಜ್ಯ ಭಗವಾನ್ ಕೇರ
ಳಾನ್ ಸೋಮಗರ್ತಕಾನ್। ಗೋಕರ್ಣಾಖ್ಯಂ ಶಿವಕ್ಷೇತ್ರಂ ಸಾನ್ನಿಧ್ಯಂ ಯತ್ರ ಧೂರ್ಜಟೇಃ ॥೧೯॥ ಆರ್ಯಾಂ
ದ್ವೈಪಾಯನೀಂ ದೃಷ್ಟ್ವಾ ಶೂರ್ಪಾರಕಮಗಾದ್ಬಲಃ। ತಾಪೀಂ ಪಯೋಷ್ಣೀಂ ನಿರ್ವಿಂಧ್ಯಾಮುಪಸ್ಪೃ
ಶ್ಯಾಥ ದಂಡಕಮ್ ॥೨೦॥ ಪ್ರವಿಶ್ಯ ರೇವಾಮಗಮದ್ಯತ್ರ ಮಾಹಿಷ್ಮತೀ ಪುರೀ। ಮನುತೀರ್ಥಮುಪಸ್ಪೃಶ್ಯ
ಪ್ರಭಾಸಂ ಪುನರಾಗಮತ್ ॥ ಶ್ರುತ್ವಾ ದ್ವಿಜೈಃ ಕಥ್ಯಮಾನಂ ಕುರುಪಾಂಡವಸಂಯುಗೇ। ಸರ್ವರಾಜನ್ಯನಿಧ

---

ಸ್ಕೃತ್ವಾ-ಪೊಡಮಟ್ಟು, ಅಭಿವಾದ್ಯ ಚ ಪಾದಸ್ಪರ್ಶನವಂ ಮಾಡಿ, ತೇನ-ಆ ಮುನಿಯಿಂದ, ಆಶೀರ್ಭಿಃ-ಹರಕೆಗಳಿಂದ, ಯೋಜಿ
ತಃ-ಕೂಡಿಸಲ್ಪಟ್ಟವನಾಗಿ, ಅನುಜ್ಞಾತಃ-ಅಪ್ಪಣೆ ಕೊಡಲ್ಪಟ್ಟವನಾಗಿ, ಅರ್ಣವಂ-ದಕ್ಷಿಣಸಮುದ್ರವನ್ನು, ಗತಃ- ಸೇರಿದನು
ತತ್ರ-ಅಲ್ಲಿ, ಕನ್ಯಾಖ್ಯಾಂ ದುರ್ಗಾಂ-ಕನ್ಯಾಕುಮಾರಿಯೆಂಬ, ದೇವೀಂ-ದುರ್ಗಾದೇವತೆಯನ್ನೂ, ಸಃ-ಆ ಬಲರಾಮನು, ದದ
ರ್ಶ-ಕಂಡನು ॥೧೭॥ ತತಃ-ಅಲ್ಲಿಂದ, ಫಾಲ್ಗುನಂ-ಅನಂತಶಯನ ಕ್ಷೇತ್ರವನ್ನು, ಆಸಾದ್ಯ-ಸೇರಿ, ಉತ್ತಮಂ- ಶ್ರೇಷ್ಠವಾದ,
ಪಂಚಾಪ್ಸರಸಂ-೫ ಅಚ್ಚರಿಯರ ಕೊಳಂಗಳನ್ನೂ ಸೇರಿ, ಯತ್ರ-ಎಲ್ಲಿ, ವಿಷ್ಣುಃ-ಪದ್ಮನಾಭನು, ಸನ್ನಿಹಿತಃ-ಸಾನ್ನಿಧ್ಯಕೊಂ
ಡಿರುವನೋ, ತತ್ರ-ಅಲ್ಲಿ, ಸ್ನಾತ್ವಾ-ಮಿಂದು, ಗವಾಯುತಂ-೧೦೦೦೦ ಆಕಳನ್ನು, ಅಸ್ಪರ್ಶತ್-ದಾನವಿತ್ತನು ॥೧೮॥ ಭಗ
ವಾನ್-ಶ್ರೀಮಂತನಾದ ಬಲದೇವನು, ತತಃ-ಅಲ್ಲಿಂದ, ಅತಿವ್ರಜ್ಯ-ಅಧಿಕವಾಗಿ ಪಯಣಗೊಂಡು, ಕೇರಳಾನ್-ಮಳಯಾಳದೇಶಗ
ಳನ್ನೂ, ಸೇರಿ-ಅಲ್ಲಿಂದ, ಯತ್ರ-ಯಾವಸ್ಥಳದಲ್ಲಿ, ಧೂರ್ಜಟೇಃ-ಗಂಗಾಧರನ,ಸಾನ್ನಿಧ್ಯಂ-ಸನ್ನಿಧಾನವಿರುವುದೋ, ಶಿವಕ್ಷೇ
ತ್ರಂ-ಮಹಾಬಲೇಶ್ವರನ ಪುಣ್ಯಭೂಮಿಯಾದ, ಗೋಕರ್ಣಾಖ್ಯಂ-ಗೋಕರ್ಣವೆಂಬ ಹೆಸರುಳ್ಳಕ್ಷೇತ್ರವನ್ನು ॥೧೯॥ ದ್ವೈಪಾಯ
ನೀಂ-ದ್ವೀಪವಾಸಿನಿಯಾದ, ಆರ್ಯಾಂ-ಶಿವಶಕ್ತಿಯನ್ನೂ, ದೃಷ್ಟ್ವಾ-ನೋಡಿ, ಬಲಃ-ರಾಮನು, ಶೂರ್ಪಾರಕಂ-ಶೂರ್ಪಾರಕವೆಂ
ಬಕ್ಷೇತ್ರವನ್ನು,ಅಗಾತ್-ಸೇರಿದನು,ತಾಪೀಂ-ತಾಪೀನದಿಯಲ್ಲಿಯೂ,ಪಯೋಷ್ಣೀಂ-ಪಯೋಷ್ಣೀನದಿಯಲ್ಲಿಯೂ,ನಿರ್ವಿಂಧ್ಯಾಂ-
ನಿರ್ವಿಂಧ್ಯಾನದಿಯಲ್ಲಿಯೂ, ಉಪಸ್ಪೃಶ್ಯ- ಸ್ನಾನಾಚಮನಂಗಳಂಮಾಡಿ, ಅಥ-ಆ ಮೇಲೆ,ದಂಡಕಂ-ದಂಡಕಾರಣ್ಯವನ್ನು ॥೨೦॥
ಪ್ರವಿಶ್ಯ-ಹೊಕ್ಕು, ಯತ್ರ-ಎಲ್ಲಿ, ಮಾಹಿಷ್ಮತೀಪುರೀ-ಮಾಹಿಷ್ಮತೀನಗರ ವಿರುವುದೋ, ರೇವಾಂ-ಆ ನರ್ಮದಾನದಿಯನ್ನೂ॥
ಅಗಮತ್-ಸೇರಿದನು. ಮನುತೀರ್ಥಂ-ಮನುಗಳ ತೀರ್ಥವನ್ನು, ಉಪಸ್ಪೃಶ್ಯ-ಸ್ಪರ್ಶಮಾಡಿ, ಪುನಃ-ಮರಳಿಯೂ ಪ್ರಭಾ
ಸಂ-ಪ್ರಭಾಸಕ್ಷೇತ್ರವನ್ನು ಕುರಿತು, ಆಗಮತ್-ಬಂದನು ॥೨೧॥ ದ್ವಿಜೈಃ-ಬ್ರಾಹ್ಮಣರಿಂದ, ಕಥ್ಯಮಾನಂ- ಹೇಳಲ್ಪಡುತ್ತಿ
ರುವ, ಕುರುಪಾಂಡವಸಂಯುಗೇ-ಕೌರವಪಾಂಡವರ ಕಾಳಗದೊಳಗಾದ, ಸರ್ವರಾಜನ್ಯನಿಧನಂ-ಎಲ್ಲಾ ಅರಸುಗಳ ನಾಶವನ್ನೂ

---

ಳನ್ನಿತ್ತು ಅಲ್ಲಿಂದ ಕೃತಮಾಲಾನದಿಯಂ ತಾಮ್ರಪರ್ಣೀನದಿಯಂ ಮಲಯಪರ್ವತವಂ ಸಹ ಕಂಡನು ॥೧೬॥ ರಾಮ
ನು ಮಲಯಪರ್ವತದಲ್ಲಿ ಅಗಸ್ತ್ಯಮುನಿಗೆ ಅಭಿವಾದನಂಗೆಯ್ದು ಆತನಿಂ ಪ್ರಯೋಗಿಸಲ್ಪಟ್ಟ ಆಶೀರ್ವಾದಂಗಳಂ
ಪರಿಗ್ರಹಿಸಿ ಆಮುನಿಯಿಂದ ಆಜ್ಞಾಪಿಸಲ್ಪಟ್ಟವನಾಗಿ ದಕ್ಷಿಣಸಮುದ್ರವನೆಯ್ದಿದನು ರಾಮನು ದಕ್ಷಿಣದೇಶದಲ್ಲಿರುವ
ಕನ್ಯಾಕುಮಾರೀ ದುರ್ಗಾದೇವಿಯ ದರ್ಶನಂಗೆಯ್ದು ॥೧೭॥ ಅಲ್ಲಿಂದ ಯಾವಕ್ಷೇತ್ರದಲ್ಲಿ ಶ್ರೀವಿಷ್ಣುವು ಪ್ರತ್ಯಕ್ಷನಾ
ಗಿರುವನೋ ಅಂತಪ್ಪ ಅನಂತಶಯನವನೆಯ್ದಿ ಅಲ್ಲಿ ಉತ್ತಮವಾದ ಪಂಚಾಪ್ಸರವೆಂಬ ತೀರ್ಥದಲ್ಲಿ ಸ್ನಾನಂಗೆಯ್ದು
ಬ್ರಾಹ್ಮಣರಿಗೆ (೧೦೦೦೦) ಗೋದಾನಂಗಳಂಮಾಡಿ ॥೧೮॥ ಅಲ್ಲಿಂದಿರಲಿ ಕೇರಳದೇಶವಂ ತ್ರಿಗರ್ತದೇಶಂಗಳಂ
ಸಹ ದಾಂಟಿ ॥೧೯॥ ಅನಂತರದಲ್ಲಿ ಯಾವಕ್ಷೇತ್ರದೊಳಗೆ ಶ್ರೀಪರಮೇಶ್ವರನು ಪ್ರತ್ಯಕ್ಷನಾಗಿರುವನೋ ಅಂತಾ ಗೋ
ಕರ್ಣಕ್ಷೇತ್ರವನೆಯ್ದಿ ಅಲ್ಲಿ ಶ್ರೀಗೋಕರ್ಣೇಶ್ವರನಂ ದ್ವೈಪಾಯನಿಯೆಂಬ ಪಾರ್ವತೀದೇವಿಯನುಂ ಸಹ ದರ್ಶನಂ
ಗೆಯ್ದು, ಶೂರ್ಪಾರಕವೆಂಬ ಸ್ಥಾನವನೆಯ್ದಿ ॥೨೦॥ ಅಲ್ಲಿಂದ ತಾಪೀನದಿ ಪಯೋಷ್ಣಿ ನಿರ್ವಿಂಧ್ಯೆಗಳೆಂಬ ನದಿಗಳ
ಲ್ಲಿ ಮಿಂದು ಆಚಮನಂಗೆಯ್ದು ಅಲ್ಲಿಂದ ದಂಡಕಾರಣ್ಯವಂ ಪೊಕ್ಕು ಯಾವ ನದೀ ತೀರದಲ್ಲಿ ಮಾಹಿಷ್ಮತೀಪಟ್ಟ
ಣವಿರುವುದೋ ಅಂತಾ ನರ್ಮದಾ ನದಿಯನೆಯ್ದಿ, ॥೨೧॥ ಅಲ್ಲಿ ಮನುತೀರ್ಥದೊಳು ಆಚಮನಂಗೆಯ್ದು ಪು

ಸ್ತುಭಾರಂಮೇನೇಹೃತಂಭುವಃ||೨೧||ಸಭೀಮದುರ್ಯೋಧನಯೋರ್ಗದಾಭ್ಯಾಂಯುಧ್ಯತೋರ್ಮೃಧೇ|ವಾರಯಿಷ್ಯನ್ವಿನಶನಂಜಗಾಮಯದುನಂದನಃ||೨೨||ಯುಧಿಷ್ಠಿರಸ್ತುತಂದೃಷ್ಟ್ವಾಯಮೌಕೃಷ್ಣಾರ್ಜುನಾವಪಿ|ಅಭಿವಾದ್ಯಾಭವಂಸ್ತೂಷ್ಣೀಂಕಿಂವಿವಕ್ಷುರಿಹಾಗತಃ||೨೩||ಗದಾಪಾಣೀಉಭೌದೃಷ್ಟ್ವಾಸಂರಬ್ಧೌವಿಜಯೈಷಿಣೌ|ಮಂಡಲಾನಿವಿಚಿತ್ರಾಣಿಚರಂತಾವಿದಮಬ್ರವೀತ್||೨೪||ಯುವಾಂತುಲ್ಯಬಲೌವೀರೌಹೇರಾಜನ್ಹೇವೃಕೋದರ|ಏಕಂಪ್ರಾಣಾಧಿಕಂಮನ್ಯೇಉತೈಕಂಶಿಕ್ಷಯಾಧಿಕಮ್||೨೫||ತಸ್ಮಾದೇಕತರಸ್ಯೇಹಯುವಯೋಸ್ಸಮವೀರ್ಯಯೋಃ|ನಲಕ್ಷ್ಯತೇಜಯೋಽನ್ಯೋವಾವಿರಮತ್ವಫಲೋರಣಃ ||೨೬|| ನತದ್ವಾಕ್ಯಂಜಗೃಹತುರ್ಬದ್ಧವೈರೌನೃಪಾರ್ಥವತ್|ಅನುಸ್ಮರಂತಾವನ್ಯೋನ್ಯಂದುರುಕ್ತಂದುಷ್ಕೃ

---

ಶ್ರುತ್ವಾ-ಕೇಳಿ, ಭುವಃ-ಭೂಮಿಯ, ಭಾರಂ-ಹೊರೆಯನ್ನು, ಹೃತಂ-ಅಪಹರಿಸಲ್ಪಟ್ಟದ್ದನ್ನಾಗಿ, ಮೇನೇ-ತಿಳಿದನು ||೨೧|| ಸ ಯದುನಂದನಃ-ಆ ಬಲರಾಮನು, ಮೃಧೇ-ಯುದ್ಧದಲ್ಲಿ, ಭೀಮದುರ್ಯೋಧನಯೋಃ-ಭೀಮನೂ ದುರ್ಯೋಧನನೂ, ಗದಾಭ್ಯಾಂ-ಗದಾಯುಧಗಳಿಂದ, ಯುಧ್ಯತೋಸ್ಸತೋಃ-ಕಾಳಗಮಾಡುತ್ತಿರುವಲ್ಲಿ, ವಾರಯಿಷ್ಯನ್-ತಪ್ಪಿಸಲ್ಬಯಸುವವನಾಗಿ, ವಿನಶನಂ-ಕುರುಕ್ಷೇತ್ರವಂ ಕುರಿತು, ಜಗಾಮ-ತೆರಳಿದನು ||೨೨|| ಯುಧಿಷ್ಠಿರಸ್ತು-ಧರ್ಮರಾಯನೂ, ಕೃಷ್ಣಾರ್ಜುನಾವಪಿ-ಕೃಷ್ಣನೂ ಅರ್ಜುನನೂ, ಯಮೌ-ನಕುಲ ಸಹದೇವರೂ, ತಂ-ಆ ಬಲರಾಮನನ್ನು, ದೃಷ್ಟ್ವಾ-ನೋಡಿ, ಅಭಿವಾದ್ಯ-ನಮಸ್ಕಾರವಂಗೆಯ್ದು, ಕಿಂವಿವಕ್ಷುಃ-ಏನನ್ನು ಹೇಳಲಪೇಕ್ಷಿಸುವವನಾಗಿ, ಇಹ-ಇಲ್ಲಿ, ಆಗತಃ-ಬಂದಿರುವನೋ ಎಂದು, ತೂಷ್ಣೀಂ-ಸುಮ್ಮನೆ, ಅಭವನ್-ಆದರು ||೨೩|| ಗದಾಪಾಣೀ-ಗದೆಗಳು ಕೈಗಳಲ್ಲಿಉಳ್ಳಂಥಾ, ಸಂರಬ್ಧೌ-ಸನ್ನದ್ಧರಾದಂಥಾ, ವಿಜಯೈಷಿಣೌ-ಜಯವನ್ನು ಬಯಸುವಂಥಾ, ಉಭೌ-ಇರ್ವರನ್ನೂ, ದೃಷ್ಟ್ವಾ-ನೋಡಿ, ವಿಚಿತ್ರಾಣಿ-ಆಶ್ಚರ್ಯಕರಂಗಳಾದ, ಮಂಡಲಾನಿ-ಸುತ್ತುಗಳನ್ನು, ಚರಂತೌ-ತಿರುಗುತಲಿರುವ ಅವರನ್ನು ಕುರಿತು, ಇದಂ-ಈ ಮಾತನ್ನು, ಅಬ್ರವೀತ್-ನುಡಿದನು ||೨೪|| ಹೇರಾಜನ್-ಎಲೈ ದುರ್ಯೋಧನರಾಯನೇ, ಹೇ ವೃಕೋದರ-ಎಲಾ ಭೀಮನೇ, ವೀರೌ-ಶೂರರಾದ, ಯುವಾಂ-ನೀವೀರ್ವರೂ, ತುಲ್ಯಬಲೌ-ಸಮಾನವಾದ ಬಲವುಳ್ಳವರಾಗಿರುವಿರಿ. ನಿಮ್ಮಿರ್ವರೊಳು, ಏಕಂ-ಓರ್ವನಾದ ಭೀಮನನ್ನು,ಪ್ರಾಣಾಧಿಕಂ-ದೇಹಬಲದಿಂದ ಹೆಚ್ಚಾದವನನ್ನಾಗಿಯೂ, ಮನ್ಯೇ-ತಿಳಿಯುತ್ತಿರುವೆನು ||೨೫|| ತಸ್ಮಾತ್-ಆ ಕಾರಣದಿಂದ, ಸಮವೀರ್ಯಯೋಃ-ಸರಿಯಾದಬಲವುಳ್ಳ, ಯುವಯೋಃ-ನಿಮ್ಮಿರ್ವರಲ್ಲಿ, ಇಹ-ಇಲ್ಲಿ, ಏಕತರಸ್ಯ-ಒಬ್ಬನಿಗೆಮಾತ್ರವೇ, ಜಯೋವಾ-ಗೆಲ್ವಿಕೆಯಾದರೂ, ಅನ್ಯೋವಾ-ಸೋಲುವಿಕೆಯಾದರೂ, ನಲಕ್ಷ್ಯತೇ-ಕಾಣಿಸುವುದಿಲ್ಲ. ಅಫಲಃ-ಪ್ರಯೋಜನವಿಲ್ಲದ, ರಣಃ-ಯುದ್ಧವು, ವಿರಮತು-ನಿಂತು ಹೋಗಲಿ ||೨೬|| ನೃಪ-ಪರೀಕ್ಷಿದ್ರಾಯನೇ, ಅರ್ಥವತ್-ಅರ್ಥವುಳ್ಳದ್ದಾಗಿ, ಅನ್ಯೋನ್ಯಂ-ಪರಸ್ಪರವಾಗಿ ಎಂದಂದುಕೊಂ

---

ನೃ ಪ್ರಭಾಸ ತೀರ್ಥವನೆಯ್ದಿದನು. ಅಲ್ಲಿ ಕೌರವ ಪಾಂಡವರ ಯುದ್ಧದೊಳು ||೨೧|| ಸಮಸ್ತ ಭೂಪತಿಗಳೂ ಹತರಾದರೆಂದು ಬ್ರಾಹ್ಮಣರಿಂ ಪೇಳಲ್ಪಡುತಲಿರುವ ವೃತ್ತಾಂತವಂ ಕೇಳಿ, ಭೂಭಾರವು ಪರಿಹರಿಸಲ್ಪಟ್ಟಿತೆಂದು ತಿಳಿದು ಆಗ ರಣದಲ್ಲಿ ಗದೆಗಳಿಂ ಪರಸ್ಪರವಾಗಿ ಯುದ್ಧಂಗೆಯ್ವುತಲಿರುವ ಭೀಮ ದುರ್ಯೋಧನರಂ ||೨೨|| ಇನ್ನು ಮೇಲೆ ಯುದ್ಧವು ಸಾಕೆಂದು ತಡೆಯಲೋಸುಗ ಕುರುಕ್ಷೇತ್ರದಲ್ಲಿಗೆ ಹೋದನು. ಆಗ ಧರ್ಮರಾಯನೂ ನಕುಲಸಹದೇವರೂ ಕೃಷ್ಣಾರ್ಜುನರೂ ಸಹ ರಾಮನಂ ನೋಡಿ ಅಭಿವಾದನಂಗೆಯ್ದು ಈಗ ಯಾವ ಅರ್ಥವಂ ಪೇಳುವನೋ ಎಂಬ ಭಯದಿಂ ಸುಮ್ಮನೆ ಯಿದ್ದರು ||೨೩|| ಆಗ ರಾಮನು ಗದೆಗಳಂ ಪಿಡಿದು ಯುದ್ಧಸನ್ನದ್ಧರಾಗಿ ಜಯವನಪೇಕ್ಷಿಸುತ ವಿಚಿತ್ರವಾದ ಮಂಡಲಗತಿಗಳಿಂದ ರಣದಲ್ಲಿ ಸಂಚರಿಸುತಲಿರುವ ಆ ಭೀಮ ದುರ್ಯೋಧನರಂ ನೋಡಿ ಇಂತು ಪೇಳ್ದನೆಂದನು-||೨೪|| ಎಲೈ ಅರಸಾದ ದುರ್ಯೋಧನನೇ! ಎಲೈ, ಭೀಮನೇ! ಕೇಳಿರಿ, ನೀವಿರ್ವರೂ ಸಮಾನ ಬಲವುಳ್ಳವರು, ಮತ್ತು ವೀರರಾದವರು, ನಿಮ್ಮಿರ್ವರಲ್ಲಿ ನನ್ನ ಪ್ರಾಣಕ್ಕಿಂತಲೂ ಪ್ರಿಯನಾದವನು. ಈ ದುರ್ಯೋಧನನು ನನ್ನ ಶಿಷ್ಯರಲ್ಲಿ ಇಷ್ಟನಾದವನೆಂದು ಕೂಡ ತಿಳಿಯುತಲಿರುವೆನಾದ್ದರಿಂದ ||೨೫|| ಸಮಪರಾಕ್ರಮವುಳ್ಳ ನಿಮ್ಮಿರ್ವರಲ್ಲಿ ಯಾರೋರ್ವರಿಗೂ ಯುದ್ಧದೊಳು ಜಯವಾದರೂ ಪರಾಜಯವಾದರೂ ಕಾಣಲ್ಪಡುವುದಿಲ್ಲವಾಗಿ ಇನ್ನು ಮೇಲೆ ನಿಷ್ಫಲವಾದವು ಸಾಕು, ||೨೬|| ಎಂದಾತ

ತಾನಿಚ ||೨೮|| ದಿಷ್ಟಂತದನುಮನ್ವಾನೋರಾಮೋದ್ವಾರವತೀಂಯಯೌ| ಉಗ್ರಸೇನಾದಿಭಿಃಪ್ರೀ
ತೈರ್ಜ್ಞಾತಿಭಿಸ್ಸಮುಪಾಗತಃ||೨೯||ತಂಪುನರ್ನೈಮಿಶಂಪ್ರಾಪ್ತಮೃಷಯೋಽಯಾಜಯನ್ಮುದಾ|
ಕ್ರತ್ವಂಗಂಕ್ರತುಭಿಸ್ಸರ್ವೈರ್ನಿವೃತ್ತಾಖಿಲವಿಗ್ರಹಮ್||೩೦||ತೇಭ್ಯೋವಿಶುದ್ಧಂವಿಜ್ಞಾನಂಭಗವಾನ್ವ್ಯ
ತರದ್ವಿಭುಃ| ಯೇನೈವಾತ್ಮನ್ಯದೋವಿಶ್ವಮಾತ್ಮಾನಂವಿಶ್ವಗಂವಿದುಃ||೩೧|| ಸ್ವಪತ್ನ್ಯಾವಭೃಥಸ್ನಾ
ತೋಜ್ಞಾತಿಬಂಧುಸುಹೃದ್ವೃತಃ|ರೇಜೇಸ್ವಜ್ಯೋತ್ಸ್ನಯೇವೇಂದುಸ್ಸುವಾಸಾಸ್ಸುಷ್ಠ್ವಲಂಕೃತಃ||೩೨||

---

ಡ, ಮರುಕ್ತಂ-ಕೆಟ್ಟನುಡಿಯನ್ನೂ, ದುಷ್ಕೃತಾನಿಚ-ಕೆಡುಕೆಲಸಗಳನ್ನೂ, ಅನುಸ್ಮರಂತೌ-ನೆನಪುಗೊಳ್ಳುವರಾದ್ದರಿಂದ, ಬ
ದ್ಧವೈರೌ-ಸ್ಥಿರವಾಗಿ ಕಟ್ಟಲ್ಪಟ್ಟ ಹಗೆತನವುಳ್ಳವರಾದ, ಭೀಮದುರ್ಯೋಧನರು, ತದ್ವಾಕ್ಯಂ-ಆ ಬಲರಾಮನ ನುಡಿಯ
ನ್ನು, ನಜಗೃಹತುಃ ಅಂಗೀಕರಿಸಲಿಲ್ಲವು ||೨೮|| ರಾಮಃ-ಬಲಭದ್ರನು, ತತ್-ಆ ಜಗಳನ್ನು, ದಿಷ್ಟಂ- ದೈವಕೃತವನ್ನಾಗಿ,
ಮನ್ವಾನಃ-ತಿಳಿಯುವನಾಗುತ್ತ, ದ್ವಾರವತೀಂ-ಕುಶಸ್ಥಲಿಯನ್ನು, ಯಯೌ-ಸೇರಿದನು. ಉಗ್ರಸೇನಾದಿಭಿಃ-ಉಗ್ರಸೇನರಾ
ಜನೇ ಮೊದಲಾದ, ಪ್ರೀತೈಃ-ಪ್ರೀತಿಯುಂಟಾದವರಾದ, ಜ್ಞಾತಿಭಿಃ-ಬಂಧುಗಳಿಂದ, ಸಮುಪಾಗತಃ-ಹತ್ತಿರಕ್ಕೆ ಬಂದು ವಿಚಾರಿ
ಸಲ್ಪಟ್ಟವನಾದನು ||೨೯|| ಋಷಯಃ-ಶೌನಕಾದಿಗಳು, ಪುನಃ-ಮರಳಿಯೂ, ನೈಮಿಶಂ-ನೈಮಿಶಾರಣ್ಯವನ್ನು ಕುರಿತು, ಪ್ರಾ
ಪ್ತಂ-ಬಂದಂಥಾ, ಕ್ರತ್ವಂಗಂ-ಯಜ್ಞಮೂರ್ತಿಯಾದಂಥಾ, ನಿವೃತ್ತಾಖಿಲವಿಗ್ರಹಂ-ತೀರಿಸಲ್ಪಟ್ಟ ಎಲ್ಲಜಗಳಗಳುಳ್ಳಂಥಾ, ತಂ-
ಆ ಬಲರಾಮನನ್ನು, ಮುದಾ-ಸಂತೋಷದಿಂದ, ಸರ್ವೈಃ-ಎಲ್ಲರೂ, ಕ್ರತುಭಿಃ-ಯಾಗಗಳಿಂದ, ಅಯಾಜಯನ್-ದೇವಪೂಜೆಯಂ
ಮಾಡಿಸಿದರು ||೩೦|| ಯೇನೈವ-ಯಾವುದರಿಂದಲೇ, ಆತ್ಮನಿ-ಅಧಿಷ್ಠಾನವಸ್ತುವಿನಲ್ಲಿ ಅದೋವಿಶ್ವಂ ಈ ಪ್ರಪಂಚವನ್ನು, ಆ
ತ್ಮಾನಂ-ಆತ್ಮವಸ್ತುವನ್ನು, ವಿಶ್ವಗಂ ಪ್ರಪಂಚದಲ್ಲಿ ವ್ಯಾಪಿಸಿಇರುವವನನ್ನಾಗಿಯೂ, ವಿದುಃ-ತಿಳಿಯುವರೋ, ತತ್-ಅಂಥಾ,
ಶುದ್ಧಂವಿಜ್ಞಾನಂ-ನಿರ್ಮಲವಾದ ಶಾಸ್ತ್ರಜ್ಞಾನವನ್ನೂ, ತೇಭ್ಯಃ-ಅವರುಗಳಿಗೆ, ವ್ಯತರತ್-ಕೊಟ್ಟನು ||೩೧|| ಸಪತ್ನ್ಯಾ-ತನ್ನ
ಮಡದಿಯಾದ, ರೇವತೀದೇವಿಯೊಡನೆ, ಅವಭೃಥಸ್ನಾತಃ-ಯಜ್ಞಾಂತಂಗಳ ಸ್ನಾನವಂ ಗೆಯ್ದವನಾಗಿ, ಸುವಾಸಾಃ-ಉತ್ತಮವ
ಸ್ತ್ರಗಳುಳ್ಳವನೂ, ಸುಷ್ಠು-ಚೆನ್ನಾಗಿ, ಅಲಂಕೃತಃ-ಸಿಂಗರಿಸಲ್ಪಟ್ಟವನೂ ಆಗಿ, ಜ್ಞಾತಿಬಂಧುಸುಹೃದ್ವೃತಃ-ದಾಯಾದರಿಂದ
ಲೂ ನಂಟರಿಂದಲೂ ಮಿತ್ರರಿಂದಲೂ ಬಳಸಲ್ಪಟ್ಟವನಾಗಿ, ಸವಾಸಾಃ-ಶ್ರೇಷ್ಠವಸ್ತ್ರವುಳ್ಳವನಾಗಿಯೂ, ಸುಷ್ಠು-ಚೆನ್ನಾ
ಗಿ, ಅಲಂಕೃತಃ-ಸಿಂಗರಿಸಲ್ಪಟ್ಟವನೂ ಆದ್ದರಿಂದ, ಇಂದುಃ-ಚಂದ್ರನು, ಸ್ವಜ್ಯೋತ್ಸ್ನಯೇವ-ತನ್ನ ಬೆಳದಿಂಗಳೊಡನೆಯಂ
ತೆಯೇ, ರೇಜೇ-ಬೆಳಗಿದನು ||೩೨|| ಬಲಶಾಲಿನಃ-ಬಲದಿಂದೊಪ್ಪುವಂಥಾ, ಅನಂತಸ್ಯ-ನಾಶವಿಲ್ಲದ ಸಂಕರ್ಷಣರೂಪನಾದ, ಅ

---

ರೀತಿಯಾಗಿ ಶ್ರೀ ರಾಮನಿಂದ ನಿರೂಪಿಸಲ್ಪಟ್ಟ ನೆಸ್ಟವಾದ ವಾಕ್ಯವ ಕೇಳಿ ಭೀಮ ದುರ್ಯೋಧನರು ಪರಸ್ಪ
ರವಾಗಿ ಪೇಳಲ್ಪಟ್ಟ ದುರ್ವಾಕ್ಯಗಳನ್ನೂ ಮಾಡಲ್ಪಟ್ಟ ದುಷ್ಕೃತ್ಯಂಗಳಂ ಸಹ ಸ್ಮರಿಸಿ ಕೊಳ್ಳುತ ವೈರದಿಂ
ಬದ್ಧರಾಗಿಯೇ ಆ ಶ್ರೀ ರಾಮನ ವಾಕ್ಯವನಂಗೀಕರಿಸಿದವರಾಗಲಿಲ್ಲವು ||೨೮|| ಅನಂತರದಲ್ಲಿ ಆ ರಾಮನು ಭೀ
ಮ ದುರ್ಯೋಧನರು ತನ್ನ ಮಾತನ್ನು ಅಂಗೀಕರಿಸದೆ ಮರಳಿ ಯುದ್ಧದಲ್ಲಿ ಸನ್ನದ್ಧರಾಗುತಲೂ ಅವರವ ಪ್ರಾ
ಚೀನ ಕರ್ಮಫಲವೇ ಎಂದು ತಿಳಿದು ದ್ವಾರಕಾಪುರವನೆಯ್ದಿ ಸಂತುಷ್ಟರಾದ ಉಗ್ರಸೇನ ಮೊದಲಾದ ಬಂಧುಗ
ಳೊಡನೆ ಸೇರಿದನು ||೨೯|| ಅನಂತರದಲ್ಲಿ ಪುನಃ ನೈಮಿಶಾರಣ್ಯವನೆಯ್ದಿದವನಾಗಿ ಯಜ್ಞ ಮೂರ್ತಿಯಾಗಿ ಸ
ಮಸ್ತ ಯುದ್ಧ ವ್ಯಾಪಾರವಂ ಬಿಟ್ಟಿರುವ ಶ್ರೀ ರಾಮನಿಂದ ಅಲ್ಲಿರ್ದ ಋಷಿಗಳು ಸಮಸ್ತ ಕ್ರತುಗಳನ್ನೂ
ಮಾಡಿಸಿದರು ||೩೦|| ಆಗ ಸರ್ವ ವ್ಯಾಪಕನಾದ ಶ್ರೀ ಬಲರಾಮನು ಯಾವ ಜ್ಞಾನದಿಂದಲೇ ಅಧಿಷ್ಠಾನರೂಪವಾ
ದ ಆತ್ಮನಲ್ಲಿ ಈ ಪ್ರಪಂಚವನ್ನೂ ಆ ಪ್ರಪಂಚದಲ್ಲಿ ಸರ್ವತ್ರ ಅನುವರ್ತಿಸಿ ಕೊಂಡಿರುವ ಆತ್ಮನಂ ಸಹ ನೋ
ಡುವರೋ ಅಂತಾ ಪರಿಶುದ್ಧವಾದ ಆತ್ಮನ ತತ್ವಜ್ಞಾನವಂ ಆ ಮುನಿಗಳಿಗೋಸುಗ ಉಪದೇಶಂಗೆಯ್ದನು ||೩೧||
ಅನಂತರದಲ್ಲಿ ಶ್ರೀ ರಾಮನು ಜ್ಞಾತಿಬಂಧು ಮಿತ್ರರಿಂ ಸ್ತುತಿಸಲ್ಪಟ್ಟವನಾಗಿ ತನ್ನ ಪತ್ನಿಯೊಡನೆ ಅವಭೃಥಸ್ನಾ
ನವಂಗೆಯ್ದು ದಿವ್ಯ ವಸ್ತ್ರವನುಟ್ಟು ದಿವ್ಯಾಲಂಕಾರ ಭೂಷಿತನಾಗಿ ಚಂದ್ರಿಕೆಯೊಡನೆ ಚಂದ್ರನಂತೆ ಪತ್ನಿಯೊ
ಡನೆ ಪ್ರಕಾಶಿಸಿದನು||೩೨||ಎಲೈ ಅರಸೇ ಕೇಳು ಬಲವಂತನಾದ ಅನಂತನಾದ ಅಪ್ರಮೇಯನಾದ ಮಾಯೆಯಿಂ

ಈದೃಗ್ವಿಧಾನ್ಯಸಂಖ್ಯಾನಿಬಲಸ್ಯಬಲಶಾಲಿನಃ | ಅನಂತಸ್ಯಾಪ್ರಮೇಯಸ್ಯಮಾಯಾಮರ್ತ್ಯಸ್ಯಸಂತಿ
ಹಿ ||೩೩|| ಯೋನುಸ್ಮರತಿರಾಮಸ್ಯಕರ್ಮಾಣ್ಯದ್ಭುತಕರ್ಮಣಃ | ಸಾಯಂಪ್ರಾತರನಂತಸ್ಯವಿಷ್ಣೋಸ್ಸ
ದಯಿತೋಭವೇತ್|| ... ... ... ... . ||೩೪||

ಇತಿಶ್ರೀಮದ್ಭಾಗವತೇ-ದಶಮಸ್ಕಂಧೇ-ಏಕೋನಾಶೀತಿತಮೋಽಧ್ಯಾಯಃ-

ಕುಚೇಲೋಪಾಖ್ಯಾನಕಥಾಪ್ರಾರಂಭಃ-

ರಾಜಾ|| ಭಗವನ್ಯಾನಿಚಾನ್ಯಾನಿಮುಕುಂದಸ್ಯಮಹಾತ್ಮನಃ | ವೀರ್ಯಾಣ್ಯನಂತವೀರ್ಯಸ್ಯಶ್ರೋ

---

ಪ್ರಮೇಯಸ್ಯ-ದಿಟವಾಗಿ ತಿಳಿಯಲಳವಲ್ಲದ, ಮಾಯಾಮರ್ತ್ಯಸ್ಯ-ವಂಚನೆಯಿಂದ ಮನುಷ್ಯನಾಗಿ ತೋರುತ್ತಿರುವ, ಬಲಸ್ಯ-ಬಲರಾಮನ, ಅಸಂಖ್ಯಾನಿ-ಲೆಕ್ಕವಿಲ್ಲದೆ ಇರುವ, ಈದೃಗ್ವಿಧಾನಿ-ಇಂಥಾಬಗೆಯುಳ್ಳ ಕೆಲಸಗಳು, ಇರುವವಲ್ಲವೆ ||೩೩|| ಯಃ-ಯಾವಪುರುಷನು,-ಅದ್ಭುತಕರ್ಮಣಃ-ಆಶ್ಚರ್ಯಕ್ರಿಯೆಗಳುಳ್ಳ, ವಿಷ್ಣೋಃ-ವ್ಯಾಪಕನಾದ, ಅನಂತಸ್ಯ-ನಾಶರಹಿತನಾದ ಶೇಷನಾಗಿರುವ, ರಾಮಸ್ಯ-ಬಲದೇವನ, ಕರ್ಮಾಣಿ-ಕೆಲಸಗಳನ್ನು, ಯಃ-ಯಾವ ಪುರುಷನು, ಸಾಯಂಪ್ರಾತಃ-ಸಂಜೆಯಲ್ಲಿಯೂ ಬೆಳಿಗಿನಲ್ಲಿಯೂ, ಅನುಸ್ಮರತಿ-ನೆನಪುಗೊಳ್ಳುತ್ತಿರುವನೋ, ಸಃ-ಆ ಮನುಷ್ಯನು,ವಿಷ್ಣೋಃ-ನಾರಾಯಣಂಗೆ, ದಯಿತಃ-ಪ್ರಿಯನಾದವನು, ಭವೇತ್-ಆದಾನು ||೩೪||

ಇಂತೆಂಬಲ್ಲಿಗೆ ಭಾಗವತ ಪ್ರತಿಶಬ್ದಾರ್ಥ ಬೋಧಿನಿಯಲ್ಲಿ ದಶಮಸ್ಕಂಧದೊಳು
೭೯ನೆಯ ಅಧ್ಯಾಯಂ ಮುಗಿದುದು.

೮೦ ನೆಯ ಅಧ್ಯಾಯದಪ್ರತಿಪದ ಟೀಕೆ.

ಪ್ರಭೋ-ಸ್ವತಂತ್ರನಾದ, ಭಗವನ್-ಜ್ಞಾನೈಶ್ವರ್ಯವುಳ್ಳ ಶುಕಮುನಿಯೇ ! ಅಹಂ-ನಾನು, ಅನಂತವೀರ್ಯಸ್ಯ-ಅಪರಿಮಿತಶಕ್ತಿಯುಳ್ಳ, ಮಹಾತ್ಮನಃ-ಮಹಾನುಭಾವನಾದ, ಮುಕುಂದಸ್ಯ-ಕೃಷ್ಣನ, ಅನ್ಯಾನಿ-ಇತರಗಳಾದ, ವೀರ್ಯಾಣಿ-ಸಾ

---

ಮನುಷ್ಯರೂಪವಂತಾಳಿರುವ ಶ್ರೀಬಲಭದ್ರನ ಸಂಖ್ಯೆಯಿಲ್ಲವೆಯಿರುವ ದಿವ್ಯಚರಿತ್ರಗಳು ಅನೇಕಂಗಳಿವೆ||೩೩||
ಯಾವಪುರುಷನು ಆಶ್ಚರ್ಯಕರಂಗಳಾದ ವ್ಯಾಪಾರಂಗಳುಳ್ಳ ಶ್ರೀರಾಮನ ದಿವ್ಯಚರಿತ್ರಂಗಳಂ ಸಾಯಂಪ್ರಾತಃ
ಕಾಲಗಳಲ್ಲಿ ಸ್ಮರಿಸುವನೋ ಆಪುರುಷನು ಶ್ರೀಹರಿಗೆ ಅತ್ಯಂತ ಪ್ರೀತಿಪಾತ್ರನಾಗುವನು. ||೩೪||

ಇಂತು ಶ್ರೀಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸಿದನೆಂದುಸೂತಪೌರಾಣಿಕನು ನೈಮಿಶಾರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಪೇಳಿದನೆಂಬಲ್ಲಿಗೆ-ಶ್ರೀಮನ್ಮಹೀಶೂರ ಪುರವರಾಧೀಶ ಶ್ರೀಚಾಮರಾಜತನುಜಶ್ರೀಮತ್ಕೃಷ್ಣರಾಜ ವಿರಚಿತಮಾದ ಶ್ರೀಕೃಷ್ಣರಾಜವಾಣೀವಿಲಾಸಮೆಂಬ ಶ್ರೀಭಾಗವತ ಪುರಾಣದಕರ್ಣಾಟಭಾಷಾವ್ಯಾಖ್ಯಾನದಲ್ಲಿ೭೯ನೆಅಧ್ಯಾಯಂಮುಗಿದುದು|

---

೮೦ನೆಯಅಧ್ಯಾಯವು.

ಶ್ರೀಧರೀಯಶ್ಲೋಕಃ || ಅಥಾಶೀತಿತಮೇಕೃಷ್ಣಃಶ್ರೀದಾಮಾನಂಗೃಹಾಗತಂ | ಸಂಪೂಜ್ಯಾಪೃಚ್ಛದರ್ಥೇಪ್ಸುಂಗುರುವಾಸಕಥಾಂಮುದಾ ||೧|| ಟೀ|| ಎಂಭತ್ತನೆಯಅಧ್ಯಾಯದಲ್ಲಿ ಶ್ರೀಕೃಷ್ಣನು ತನ್ನಗೃಹವನೆಯ್ದಿರುವ ಧನವನಪೇಕ್ಷಿಸುವ ಮಿತ್ರನಾದ ಶ್ರೀದಾಮನಂಪೂಜಿಸಿ ಸಂತೋಷದಿಂದ ಅವನಂಕುರಿತು ಗುರುಗೃಹವಾಸದವೃತ್ತಾಂತಮಂ ಪ್ರಶ್ನೆಗೆಯ್ದನೆಂದು ಶ್ರೀಶುಕಾಚಾರ್ಯನು ಪರೀಕ್ಷಿದ್ರಾಯನಂಕುರಿತು ನಿರೂಪಿಸುವನದೆಂತೆನೆ_

ಮೊದಲು ಪರೀಕ್ಷಿದ್ರಾಯನು ಬಲರಾಮನಚರಿತ್ರಂಗಳಂಕೇಳಿ ಮರಳಿಯುಂಶುಕಮುನಿಯಂಕುರಿತು ಶ್ರೀಕೃಷ್ಣನ ಚರಿತ್ರಂಗಳಂ ಪ್ರಶ್ನೆಗೆಯ್ದನು- ಎಲೈಸಮರ್ಥನಾದ ಶುಕಮುನಿಯೇ| ಮಹಾತ್ಮನಾದಅಮಿತಸಾಮರ್ಥ್ಯ

ತುಮಿಚ್ಛಾಮ್ಯಹಂಪ್ರಭೋ ॥೧॥ ಕೋನುಶ್ರುತ್ವಾಸಕೃದ್ಬ್ರಹ್ಮನ್ನುತ್ತಮಶ್ಲೋಕಸತ್ಕಥಾಃ । ವಿರಮೇತ
ವಿಶೇಷಜ್ಞೋವಿಷಣ್ಣಃ ಕಾಮಮಾರ್ಗಣೈಃ ॥೨॥ ಸಾವಾಗನಂತಸ್ಯಗುಣಾನ್ಗೃಣೀತೇಕರೌಚತತ್ಕರ್ಮಕರೌ
ಮನಶ್ಚ । ಸ್ಮರೇದ್ವಸಂತಂಸ್ಥಿರಜಂಗಮೇಷುಶೃಣೋತಿತತ್ಪುಣ್ಯಕಥಾಸ್ಸಕರ್ಣಃ ॥೩॥ ಶಿರಸ್ತುತಸ್ಯೋಭಯ
ಲಿಂಗಮಾನಮೇತ್ತದೇವಯತ್ಪಶ್ಯತಿತದ್ಧಿಚಕ್ಷುಃ । ಅಂಗಾನಿವಿಷ್ಣೋರಥತಜ್ಜನಾನಾಂಪಾದೋದಕಂಯಾನಿ
ಭಜಂತಿನಿತ್ಯಮ್ ॥೪॥ ಶ್ರೀಸೂತಃ॥ ವಿಷ್ಣುರಾತೇನಸಂಪೃಷ್ಟೋಭಗವಾನ್ಬಾದರಾಯಣಿಃ । ವಾಸುದೇವೇಭ
ಗವತಿನಿಮಗ್ನಹೃದಯೋಬ್ರವೀತ್ ॥೫॥ ಶ್ರೀಶುಕಃ॥ ಕೃಷ್ಣಸ್ಯಾಸೀತ್ಸಖಾಕಶ್ಚಿದ್ಬ್ರಾಹ್ಮಣೋಬ್ರಹ್ಮ

ಪವಿತ್ರ್ಯಗಳು, ಯಾನಿ-ಯಾವವಿರುವವೋ, ತಾನಿ-ಅವುಗಳನ್ನು, ಶ್ರೋತುಂ-ಕೇಳುವುದಕ್ಕೆ, ಇಚ್ಛಾಮಿ-ಬಯಸುವೆನು ॥೧॥ ಬ್ರಹ್ಮನ್-ಶುಕಮುನಿಯೇ, ಕಾಮಮಾರ್ಗಣೈಃ-ಮನ್ಮಥ ಬಾಣಗಳಿಂದ, ವಿಷಣ್ಣಃ-ವಿಷಾದಗೊಳ್ಳುವನಾದ, ವಿಶೇಷಜ್ಞಃ-ವಿಶೇಷವಂ ಬಲ್ಲವನು, ಕೋನು-ಯಾವ ಮನುಷ್ಯನುತಾನೆ, ಉತ್ತಮಶ್ಲೋಕಸತ್ಕಥಾಃ-ಸರ್ವೋತ್ತಮನೆಂದು ಕೊಂಡಾಡಲ್ಪಟ್ಟ ಕೃಷ್ಣನ ಪುಣ್ಯಚರಿತ್ರಗಳನ್ನು, ಸಕೃತ್-ಒಂದುಸಲ, ಶ್ರುತ್ವಾ-ಕೇಳಿ, ವಿರಮೇತ-ಬಿಟ್ಟಾನು ॥೨॥ ಯಾ-ಯಾವುದು, ಅನಂತಸ್ಯ-ವಿಷ್ಣುವಿನ, ಗುಣಾನ್-ಕಲ್ಯಾಣಗುಣಗಳನ್ನು, ಗೃಣೀತೇ-ಹೇಳುವುದೋ, ಸಾವಾಕ್-ಅದುನಾಲಗೆಯು, ತತ್ಕರ್ಮಕರೌ-ಆ ಭಗವಂತನ ಕೆಲಸಗಳಂಮಾಡುವವೇ, ಕರೌ-ಕೈಗಳು, ಸ್ಥಿರಜಂಗಮೇಷು-ಅಚರಚರಂಗಳಲ್ಲಿ, ವಸಂತಂ-ಅಂತರ್ಯಾಮಿಯಾಗಿರುವ ವಿಷ್ಣುವನ್ನು, ಯತ್-ಯಾವುದು, ಸ್ಮರೇತ್-ನೆನಪುಗೊಳ್ಳುವುದೋ, ತತ್-ಅದು, ಮನಃ-ಹೃದಯದ, ಯಃ-ಯಾವುದು, ತತ್ಪುಣ್ಯಕಥಾಃ-ಆ ವಿಷ್ಣುವಿನಶ್ರೇಯಸ್ಕರಗಳಾದ ಲೀಲಾವರ್ಣನಗಳನ್ನು, ಶೃಣೋತಿ-ಕೇಳುವುದೋ, ಸಃ-ಅದು, ಕರ್ಣಃ-ಕಿವಿಯು ॥೩॥ ತಸ್ಯ-ಆ ವಿಷ್ಣುವಿನ, ಉಭಯಲಿಂಗಂ-ಚರಾಚರರೂಪವನ್ನು, ಆನಮೇತ್-ಯಾವುದು ನಮಿಸುವುದೋ, ತತ್ತು-ಅದೇ, ಶಿರಃ-ತಲೆಯೆನಿಸುವುದು, ಯತ್-ಯಾವುದು, ಪಶ್ಯತಿ-ಆ ವಿಷ್ಣುರೂಪವಂ ನೋಡುವುದೋ, ತದ್ಧಿ-ಅದೇಯಪ್ಪ, ಚಕ್ಷುಃ-ಕಣ್ಣಾಗಿರುವುದು, ಯಾನಿ-ಯಾವವು, ಅಥ ಮಂಗಳಕರವಾದ, ವಿಷ್ಣೋಃ-ನಾರಾಯಣನ, ತಜ್ಜನಾನಾಂ-ಆತನ ಭಕ್ತರಾದವರ, ಪಾದೋದಕಂ-ಚರಣತೀರ್ಥವನ್ನು, ನಿತ್ಯಂ-ಯಾವಾಗಲೂ, ಭಜಂತಿ-ಸೇವಿಸುವವೋ, ತಾನ್ಯೇವ-ಅವೇ, ಅಂಗಾನಿ-ಅವಯವಂಗಳೆನಿಸುವವು ॥೪॥ ವಿಷ್ಣುರಾತೇನ-ಪರೀಕ್ಷಿತನಿಂದ ಸಂಪೃಷ್ಟಃ-ಹೀಗೆಕೇಳಲ್ಪಟ್ಟ, ಭಗವಾನ್-ಸರ್ವಜ್ಞನಾದ, ಬಾದರಾಯಣಿಃ-ವ್ಯಾಸಪುತ್ರನಾದ ಶುಕನು, ಭಗವತಿ-ಷಡ್ಗುಣೈಶ್ವರ್ಯ ಸಂಪನ್ನನಾದ, ವಾಸುದೇವೇ-ಕೃಷ್ಣನಲ್ಲಿ, ನಿಮಗ್ನಹೃದಯಃ-ಮುಳುಗಿದ ಮನಸ್ಸುಳ್ಳವನಾಗಿ, ಅಬ್ರವೀತ್-ನುಡಿದನು ॥೫॥ ಬ್ರಹ್ಮವಿತ್ತಮಃ-ವೇದವಂ ಚನ್ನಾಗಿಬಲ್ಲವನಾದ, ಕೆ

ವುತ್ರ ಶ್ರೀಕೃಷ್ಣನ ಅನ್ಯಗಳಾದ ಚರಿತ್ರಗಳನ್ನು ಶ್ರವಣಂಗೆಯ್ಯಲು ಇಚ್ಛಿಸುವೆನು ॥೧॥ ಮನ್ಮಥಬಾಣಂಗಳಿಂ ಅತ್ಯಂತ ದುಃಖವನೆಯ್ದಿ ಪಶ್ಚಾತ್ತಾಪದಿಂ ಸಾರ್ವಜ್ಞನಾಗಿರುವ ಯಾವಪುರುಷನು ಶ್ರೀಹರಿಯ ಮನೋಹರಂಗಳಾದ ವಿಷಯವೈರಾಗ್ಯಕ್ಕೆ ಸಾಧನಂಗಳಾದ ಕಥೆಗಳನ್ನು ಒಂದುಬಾರಿ ಶ್ರವಣಂಗೆಯ್ದು ಇನ್ನುಸಾಕೆಂದು ತೃಪ್ತಿಯಂ ಪಡೆಯುವನು ॥೨॥ ಮತ್ತು ಪುರುಷನು ಯಾವವಾಕ್ಯದಿಂದ ಶ್ರೀಹರಿಯ ಗುಣಂಗಳಂ ಸ್ತುತಿಸುವನೋ ಅದೇಉತ್ಕೃಷ್ಟವಾದವಾಕ್ಕು, ಯಾವಹಸ್ತಂಗಳು ಹರಿಯಪೂಜೆಯಂಗೆಯ್ವವೋ ಅವೇ ಉತ್ತಮಹಸ್ತಂಗಳು ಯಾವಮನಸ್ಸು ಸ್ಥಾವರಜಂಗಮಂಗಳಾದ ಸರ್ವಭೂತಂಗಳಲ್ಲಿಯೂ ಅಂತರ್ಯಾಮಿಯಾಗಿರುವ ಶ್ರೀಹರಿಯಂ ಸ್ಮರಿಸುವುದೋ ಅದೇಶ್ರೇಷ್ಠವಾದ ಮನಸ್ಸು. ಯಾವಶ್ರೋತ್ರವು ವಾಸುದೇವನ ಪುಣ್ಯಕರ್ಮಂಗಳಂ ಕೇಳುವುದೋ ಅದೇಧನ್ಯವಾದ ಶ್ರೋತ್ರವು ॥೩॥ ಮತ್ತು ಯಾವಶಿರಸ್ಸು ಸ್ಥಾವರಜಂಗಮಂಗಳೆಂದು ಉಭಯರೂಪವಾಗಿರುವ ಜಗತ್ತೇ ಶ್ರೀಹರಿಯ ಮೂರ್ತಿಯೆಂದು ನಮಸ್ಕರಿಸುವುದೋ ಅದೇಉತ್ತಮವಾದಶಿರಸ್ಸು. ಯಾವನೇತ್ರವು ಅಂತಾಶ್ರೀಹರಿಯ ಮೂರ್ತಿಯೆಂದು ಅದಂನೋಡುವುದೋ ಅದೇ ಉತ್ತಮವಾದ ನೇತ್ರವು. ಯಾವಅಂಗಗಳು ಶ್ರೀಹರಿಭಕ್ತರ ಪಾದೋದಕವಂ ಧರಿಸುವವೋ ಅವೇ ಉತ್ತಮಾಂಗಳಾದ ಅಂಗಂಗಳು ॥೪॥ ಈರೀತಿಯಾಗಿ ಪರೀಕ್ಷಿದ್ರಾಯನಿಂದ ಪ್ರಶ್ನೆಗೆಯ್ಯಲ್ಪಟ್ಟವನಾದ ಸರ್ವಜ್ಞನಾದ ಶ್ರೀಶುಕಮುನಿಯು ಭಗವಂತನಾದ ಶ್ರೀವಾಸುದೇವನಲ್ಲಿ ಚನ್ನಾಗಿ ಮನವಂ ಸಮರ್ಪಿಸಿ ಈರೀತಿಯಿಂದ ನಿರೂಪಿಸಿದನೆಂತೆನೆ ॥೫॥ ಎಲೈಪರೀಕ್ಷಿದ್ರಾಯನೇ!

ವಿತ್ತಮಃ । ವಿರಕ್ತ ಇಂದ್ರಿಯಾರ್ಥೇಷು ಪ್ರಶಾಂತಾತ್ಮಾ ಜಿತೇಂದ್ರಿಯಃ ॥೬॥ ಯದೃಚ್ಛಯೋಪಪನ್ನೇನ ವರ್ತಮಾನೋ ಗೃಹಾಶ್ರಮೀ । ತಸ್ಯ ಭಾರ್ಯಾ ಕುಚೇಲಸ್ಯ ಕ್ಷುತ್ಕ್ಷಾಮಾ ಚ ತಥಾವಿಧಾ ॥೭॥ ಪತಿವ್ರತಾ ಪತಿಂ ಪ್ರಾಹ ಮ್ಲಾಯತಾ ವದನೇನ ಸಾ । ದಾರಿದ್ರ್ಯಾತ್ ಸೀದಮಾನಾ ಸಾ ವೇಪಮಾನಾಭಿಗಮ್ಯ ಚ ॥೮॥ ನನು ಬ್ರಹ್ಮನ್ ಭಗವತಸ್ಸಖಾ ಸಾಕ್ಷಾಚ್ಛ್ರಿಯಃ ಪತೇಃ । ಬ್ರಹ್ಮಣ್ಯಶ್ಚ ಶರಣ್ಯಶ್ಚ ಭಗವಾನ್ ಸಾತ್ವತಾಂ ಪತಿಃ ॥೯॥ ತಮುಪೈಹಿ ಮಹಾಭಾಗ ಸಾಧೂನಾಂ ಚ ಪರಾಯಣಮ್ । ದಾಸ್ಯತಿ ದ್ರವಿಣಂ ಭೂರಿ ಸೀದತೇ ತೇ ಕುಟುಂಬಿನೇ ॥೧೦॥ ಆಸ್ತೇಧುನಾ ದ್ವಾರವತ್ಯಾಂ ಭೋಜವೃಷ್ಣ್ಯಂಧಕೇಶ್ವರಃ । ಸ್ಮರತಃ ಪಾದಕಮಲಮಾತ್ಮಾನ

---

ಶ್ಚಿದ್ಬ್ರಾಹ್ಮಣಃ-ಓರ್ವವಿಪ್ರನು, ಕೃಷ್ಣಸ್ಯ-ವಾಸುದೇವಂಗೆ, ಸಖಾ-ಗೆಳೆಯನು, ಆಸೀತ್-ಆಗಿದ್ದನು. ಅವನು, ಇಂದ್ರಿಯಾರ್ಥೇಷು-ಶಬ್ದಾದಿ ವಿಷಯಂಗಳಲ್ಲಿ, ವಿರಕ್ತಃ-ಬಯಕೆಇಲ್ಲದವನು, ಪ್ರಶಾಂತಾತ್ಮಾ-ಸಮಾಹಿತಮನಸ್ಕನು, ಜಿತೇಂದ್ರಿಯಃ-ಗೆಲ್ಲಲ್ಪಟ್ಟಕರಣಂಗಳುಳ್ಳವನು ॥೬॥ ಯದೃಚ್ಛಯಾ-ಸ್ವೇಚ್ಛೆಯಿಂದ, ತಾನಾಗಿ-ಉಪಪನ್ನೇನ-ಬಂದ ದ್ರವ್ಯದಿಂದ, ವರ್ತಮಾನಃ-ಜೀವಿಸುವವನಾದ, ಗೃಹಾಶ್ರಮೀ-ಗೃಹಸ್ಥಾಶ್ರಮವುಳ್ಳವನಾಗಿದ್ದನು, ಕುಚೇಲಸ್ಯ-ಕುತ್ಸಿತವಾದವಸ್ತ್ರವುಳ್ಳ, ತಸ್ಯ-ಆ ಬ್ರಾಹ್ಮಣನ, ಭಾರ್ಯಾ ಚ-ಪೆಂಡತಿಯೂ, ತಥಾವಿಧಾ-ಅಂಥಾ ಬಗೆಯುಳ್ಳವಳೇ, ಕ್ಷುತ್ಕ್ಷಾಮಾ ಚ-ಹಸಿವಿನಿಂದ ಕ್ಷೀಣಿಸಿದವಳು ॥೭॥ ಪತಿವ್ರತಾ-ಗಂಡನಸೇವೆಯೇ ನಿಯಮವಾಗಿಉಳ್ಳ, ಸಾ-ಆಕೆಯು, ಮ್ಲಾಯತಾ-ಬಾಡಿದ, ವದನೇನ-ಮುಖದೊಡನೆ, ಪತಿಂ-ಗಂಡನ ಸಂಕುರಿತು, ಪ್ರಾಹ-ನುಡಿದಳು, ದಾರಿದ್ರ್ಯಾತ್-ಬಡತನದ ದೆಸೆಯಿಂದ, ಸೀದಮಾನಾ-ಕಷ್ಟಪಡುತ್ತಿರುವಳಾದ, ಸಾ-ಆಕೆಯು, ವೇಪಮಾನಾ-ನಡುಗುತ್ತಿರುವಳಾಗಿ, ಅಭಿಗಮ್ಯ ಚ-ಇದಿರಿಗೆ ಬಂದು ॥೮॥ ಬ್ರಹ್ಮನ್-ಬ್ರಾಹ್ಮಣನೇ, ಭಗವತಃ-ಪೂಜ್ಯನಾದ, ಶ್ರಿಯಃಪತೇಃ-ಲಕ್ಷ್ಮಿಯೊಡೆಯನಿಗೆ, ಸಾಕ್ಷಾತ್ಸಖಾ ನನು-ಪ್ರತ್ಯಕ್ಷಸ್ನೇಹಿತನಲ್ಲವೆ, ಭಗವಾನ್-ಷಡ್ಗುಣೈಶ್ವರ್ಯಪೂರ್ಣನಾದ, ಸಾತ್ವತಾಂಪತಿಃ-ಯಾದವರಿಗೊಡೆಯನಾದ ಕೃಷ್ಣನು, ಬ್ರಹ್ಮಣ್ಯಃ-ಬ್ರಾಹ್ಮಣಪ್ರಿಯನೂ, ಶರಣ್ಯಶ್ಚ-ನಂಬಿದವರನ್ನು ರಕ್ಷಿಸುವವನೂ ಅಲ್ಲವೆ ॥೯॥ ಮಹಾಭಾಗ-ಅಧಿಕ ಪೂಜ್ಯತೆಯುಳ್ಳವನೇ, ತಂ-ಆ ಕೃಷ್ಣನನ್ನು, ಉಪೈಹಿ-ಸಮೀಪಿಸಿಹೋಗು, ಸಾಧೂನಾಂ-ಸತ್ಪುರುಷರಿಗೆ, ಪರಾಯಣಂ-ಉತ್ತಮಗತಿಯೂ ಆದ ಕೃಷ್ಣನು, ಸೀದತೇ-ದುಃಖಿಸುತಲಿರುವ, ಕುಟುಂಬಿನೇ-ಗೃಹಸ್ಥನಾದ, ತೇ-ನಿನಗೆ, ಭೂರಿದ್ರವಿಣಂ-ಬಹುಧನವನ್ನು, ದಾಸ್ಯತಿ-ಕೊಡುತ್ತಾನೆ ॥೧೦॥ ಅಧುನಾ-ಈಗ, ದ್ವಾರವತ್ಯಾಂ-ಕುಶಸ್ಥಲೀನಗರದಲ್ಲಿ, ಭೋಜವೃಷ್ಣ್ಯಂಧಕೇಶ್ವರಃ-ಯಾದವಜಾತಿಯವರಿಗೊಡೆಯನಾಗಿ, ಆಸ್ತೇ-ಇರುವನು, ಜಗದ್ಗುರುಃ-ಪ್ರಪಂಚಕ್ಕೆ ಪೂಜ್ಯನಾದ ಕೃಷ್ಣನು, ಪಾದಕಮಲಂ-ತನ್ನ ಅಡಿದಾವರೆಯನ್ನು, ಸ್ಮರತಃ-ನೆನಪುಗೊಳ್ಳುವವನಿಗೆ, ಆತ್ಮಾನಮಪಿ-ತನ್ನನ್ನೂಕೂಡ, ಯಚ್ಛತಿ-ಕೊಡುತಿರುವನು. ಭಜತಃ-ಸೇವಕಂಗೆ, ಅತ್ಯಭೀಷ್ಟಾನ್-ಅಧಿಕಮನೋರಥಂಗಳಾದ, ಅರ್ಥಕಾ

---

ಕೇಳು ಪೂರ್ವದಲ್ಲಿ ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನಾಗಿ ವಿಷಯಭೋಗಂಗಳಲ್ಲಿ ವಿರಕ್ತನಾಗಿ ಉಪಶಾಂತಿಯುಕ್ತವಾದ ಮನಸ್ಸುಳ್ಳವನಾಗಿ ಜಿತೇಂದ್ರಿಯನಾಗಿ ॥೬॥ ಗೃಹಸ್ಥಾಶ್ರಮಧರ್ಮದಲ್ಲಿರುವವನಾದರೂ ದೈವಯೋಗದಿಂ ಪ್ರಾಪ್ತವಾದ ಅರ್ಥದಿಂದಲೇ ಜೀವಿಸುವವನಾಗಿ ಶ್ರೀಕೃಷ್ಣನಿಗೆ ಮಿತ್ರನಾಗಿಯೂ ಇರುವ ಶ್ರೀದಾಮನೆಂಬ ಬ್ರಾಹ್ಮಣನೋರ್ವನಿದ್ದನು. ಕುಚೇಲನೆಂಬ ನಾಮಾಂತರವುಳ್ಳ ಅವನಿಗೆ ಅದೇರೀತಿಯಾಗಿ ವೈರಾಗ್ಯಾದಿ ಗುಣಸಂಪನ್ನಳಾದ ಪತ್ನಿಯೂ ಇದ್ದಳು ॥೭॥ ಹೀಗಿರಲು ಒಂದುಸಮಯದಲ್ಲಿ ಪತಿವ್ರತೆಯಾದ ಆ ಕುಚೇಲನ ಪತ್ನಿಯು ದೈವಯೋಗದಿಂದ ಪ್ರಾಪ್ತವಾದ ಸ್ವಲ್ಪವಾಗಿರುವ ಭೋಜನ ದ್ರವ್ಯವ ಪತಿಯೆಡೆಯಲ್ಲಿ ಬಡಿಸಿ ತಾನು ಕ್ಷುತ್ತಿನಿಂದ ಜೀರ್ಣಗಳಾಗಿರುವುದರಿಂದ ಪತಿಯಂ ಭೋಗಪಡಿಸುವುದರಲ್ಲಿ ಅಸಮರ್ಥಳಾಗಿ ಭಯದಿಂ ಕಂಪಿಸುತ್ತ ದರಿದ್ರನಾದ ಆ ಕುಚೇಲನನೆಯ್ದಿ ಒಣಗುತಲಿರುವ ಮುಖದಿಂದ ಈ ರೀತಿಯಾಗಿ ನುಡಿದಳೆಂತೆನೆ ॥೮॥ ಎಲೈ ಬ್ರಾಹ್ಮಣೋತ್ತಮನೇ, ಸಾಕ್ಷಾಲ್ಲಕ್ಷ್ಮೀಪತಿಯಾದ ಬ್ರಾಹ್ಮಣಪ್ರಿಯನಾದ ಶರಣುಹೊಂದಲ್ತಕ್ಕವನಾದ ಯಾದವರಿಗೊಡೆಯನಾದ ಶ್ರೀಕೃಷ್ಣನು ಪೂಜ್ಯನಾದ ನಿನಗೆ ಮಿತ್ರನಾಗಿರುವನಲ್ಲವೆ ॥೯॥ ಮಹಾತ್ಮನೇ, ಸಜ್ಜನರಿಗೆ ಪರಮಗತಿರೂಪನಾದ ಮಿತ್ರನಾದ ಅಂತಾ ಶ್ರೀಕೃಷ್ಣನನೆಯ್ದುವವನಾಗು. ಆ ಶ್ರೀಕೃಷ್ಣನು ಕುಟುಂಬಿಯಾಗಿಯೂ ದೀನನಾಗಿಯೂ ಇರುವ ನಿನಗೆ ಬಹು ದ್ರವ್ಯವಂ ಕೊಡುವವನಾಗುತ್ತಾನೆ ॥೧೦॥ ಭೋಜರು ವೃಷ್ಣಿಗ

ಮಪಿಯಚ್ಛತಿ । ಕಿಮ್ವರ್ಥಕಾಮಾನ್ಭಜತೋನಾತ್ಯಭೀಷ್ಟಾನ್ಜಗದ್ಗುರುಃ ॥೧೧॥ ಏವಂಸಭಾರ್ಯ
ಯಾವಿಪ್ರೋಬಹುಶಃಪ್ರಾರ್ಥಿತೋಮೃದು । ಅಯಂಹಿಪರಮೋಲಾಭಉತ್ತಮಶ್ಲೋಕದರ್ಶನಮ್॥೧೨॥
ಇತಿಸಂಚಿಂತ್ಯಮನಸಾಗಮನಾಯಮತಿಂದಧೇ।ಅಪ್ಯಸ್ತ್ಯುಪಾಯನಂಕಿಂಚಿದ್ಗೃಹೇಕಲ್ಯಾಣಿದೀಯ
ತಾಮ್ ॥೧೩॥ ಯಾಚಿತ್ವಾಚತುರೋಮುಷ್ಟೀನ್ವಿಪ್ರಾನ್ಪೃಥುಕತಂಡುಲಾನ್ । ಚೈಲಖಂಡೇನತಾನ್ಬ
ದ್ಧ್ವಾಭರ್ತ್ರೇಪ್ರಾದಾದುಪಾಯನಮ್ ॥೧೪॥ ಸತಾನಾದಾಯವಿಪ್ರಾಗ್ರ್ಯಃಪ್ರಯಯೌದ್ವಾರಕಾಂಕಿಲ।
ಕೃಷ್ಣಸಂದರ್ಶನಂಮಹ್ಯಂಕಥಂಸ್ಯಾದಿತಿಚಿಂತಯನ್ ॥೧೫॥ ತ್ರೀಣಿಗುಲ್ಮಾನ್ಯತೀಯಾಯತಿಸ್ರಃಕ

---

ಕಾಮಾನ್-ಧನಗಳನ್ನೂ ಭೋಗಗಳನ್ನೂ, ನಯಚ್ಛತಿಕಿಮು-ಕೊಡುವುದಿಲ್ಲವೇ ಏನು॥೧೧॥ ಏವಂ-ಹೀಗೆ ಭಾರ್ಯಯಾ-ಹೆಂಡತಿಯಿಂದ, ಮೃದು-ಮೆಲ್ಲಗೆ, ಬಹುಶಃ-ಹಲವು ಬಗೆಯಾಗಿ, ಪ್ರಾರ್ಥಿತಃ-ಬೇಡಿಕೊಳ್ಳಲ್ಪಟ್ಟ, ಸವಿಪ್ರಃ-ಆ ಬ್ರಾಹ್ಮಣನು, ಉತ್ತಮಶ್ಲೋಕದರ್ಶನಂ-ಕೃಷ್ಣನಂ ನೋಡುವಿಕೆಯು, ಅಯಂಪರಮೋಲಾಭೋಹಿ-ಇದು ಮೇಲಾದ ಸಂಪಾದನೆಯಲ್ಲವೆ ॥೧೨॥ ಇತಿ-ಹೀಗೆ, ಮನಸಾ-ಅಂತರಂಗದಿಂದ, ಸಂಚಿಂತ್ಯ-ಚನ್ನಾಗಿಯೋಚಿಸಿಕೊಂಡು,ಗಮನಾಯ-ಪ್ರಯಾಣಕ್ಕೆ, ಮತಿಂದಧೇ-ನಿಶ್ಚಯಮಂ ಮಾಡಿದನು, ಕಲ್ಯಾಣಿ-ಶುಭವುಳ್ಳವಳೇ, ಗೃಹೇ-ಮನೆಯಲ್ಲಿ, ಉಪಾಯನಂ-ಕಾಣಿಕೆಯಾಗಿ ಸಮರ್ಪಿಸತಕ್ಕ ದ್ರವ್ಯವು, ಕಿಂಚಿದಪ್ಯಸ್ತಿ-ಕೊಂಚವಾದರೂ ಇದ್ದರೆ, ದೀಯತಾಂ-ಕೊಡಲ್ಪಡಲಿ ॥೧೩॥ ಚತುರೋಮುಷ್ಟೀನ್-ನಾಲ್ಕು ಹಿಡಿಯಾದ, ಪೃಥುಕತಂಡುಲಾನ್-ಅವಲಕ್ಕಿಯನ್ನು, ವಿಪ್ರಾನ್ಯಾಚಿತ್ವಾ-ಬ್ರಾಹ್ಮಣರಂ ಬೇಡಿತಂದು, ತಾನ್-ಆ ಅವಲಕ್ಕಿಯನ್ನು, ಚೈಲಖಂಡೇನ-ಅರಿವೆಯ ಚಿಂದಿಯಿಂದ, ಬದ್ಧ್ವಾ-ಗಂಟುಕಟ್ಟಿ, ಭರ್ತ್ರೇ-ಗಂಡನಿಗೆ, ಉಪಾಯನಂ-ಕಾಣಿಕೆಯಂ ನೀಡತಕ್ಕ ದ್ರವ್ಯವನ್ನಾಗಿ, ಪ್ರಾದಾತ್-ಚನ್ನಾಗಿ ಕೊಟ್ಟಳು ॥೧೪॥ ವಿಪ್ರಾಗ್ರ್ಯಃ-ಬ್ರಾಹ್ಮಣಶ್ರೇಷ್ಠನಾದ, ಸಃ-ಆ ಕುಚೇಲನು, ತಾನ್-ಆ ಅವಲಕ್ಕಿಯನ್ನು, ಆದಾಯ-ತೆಗೆದುಕೊಂಡು, ದ್ವಾರಕಾಂ-ಕುಶಸ್ಥಲೀನಗರವನ್ನು, ಮಹ್ಯಂ-ನನಗೆ, ಕೃಷ್ಣಸಂದರ್ಶನಂ-ಕೃಷ್ಣನಂ ನೋಡುವಿಕೆಯು, ಕಥಂಸ್ಯಾದಿತಿ-ಹೇಗಾದೀತೆಂದು, ಚಿಂತಯನ್-ಯೋಚಿಸುವನಾಗಿ, ಪ್ರಯಯೌಕಿಲ-ಸೇರಿದವನಲ್ಲವೆ ॥೧೫॥ ವಿಪ್ರಃ-ಬ್ರಾಹ್ಮಣನು, ತ್ರೀಣಿಗುಲ್ಮಾನಿ-ಕಾವಲು ಸೈನ್ಯಗಳಿರುವ ಮೂರು ಸ್ಥಳಗಳನ್ನು, ತಿಸ್ರಃಕಕ್ಷ್ಯಾಶ್ಚ-ಮೂರು ಪೌಳಿ ಹಜಾರಗಳನ್ನೂ ಅತೀಯಾಯ-ಅತಿಕ್ರಮಿಸಿ ಹೋಗಿ, ಸದ್ವಿಜಃ-ಬ್ರಾಹ್ಮಣರಿಂದ ಸಹಿತನಾಗಿ, ಅಚ್ಯುತಧರ್ಮಿಣಾಂ-ವಿಷ್ಣು ಧರ್ಮಗಳುಳ್ಳ, ಅಗ

---

ಅಂಧಕರು ಇವರೆಲ್ಲರಿಗೂ ನಿಯಾಮಕವಾದ ಶ್ರೀ ಕೃಷ್ಣನು ಈಗ ದ್ವಾರಕಾ ಪುರದಲ್ಲಿರುವನು. ಅವನ ಬಳಿಗೆ ಹೋಗು, ಆ ಕೃಷ್ಣನು ತನ್ನ ಪಾದಾರವಿಂದವಂ ಸ್ಮರಿಸುವ ಪುರುಷರಿಗೆ ತನ್ನನ್ನೇ ಕೊಡುತಲಿರುವನು ॥೧೧॥ ಇಂತಾ ಲೋಕ ಗುರುವಾದ ಶ್ರೀ ಕೃಷ್ಣನು ತನ್ನಂ ಭಜಿಸುವ ಪುರುಷರಿಗೆ ಪರಿಣಾಮ ಕಾಲದಲ್ಲಿ ನಿಸ್ಸಾರಂಗಳಾದುವರಿಂದ ಅತ್ಯಂತೇಷ್ಟಂಗಳಲ್ಲವೆ ಅರ್ಥಕಾಮಂಗಳ ನೀವನೆಂದು ಹೇಳತಕ್ಕದ್ದೇನಿದೆ, ಎಲೈ ಅರಸೇ, ಕೇಳು, ಆ ಕುಚೇಲನು ಈರೀತಿಯಾಗಿ ಪತ್ನಿಯಿಂದ ಮೃದುವಾಗಿಯೂ ಹಲವು ಬಗೆಯಾಗಿಯೂ ಪ್ರಾರ್ಥಿಸಲ್ಪಟ್ಟವನಾಗಿ ॥೧೨॥ ಆಗ ಆ ಪುರುಷ ಶ್ರೇಷ್ಠನಾದ ಶ್ರೀ ಕೃಷ್ಣನ ದರ್ಶನಂಗೆಯ್ವುದು ತನಗೆ ಉತ್ಕೃಷ್ಟಲಾಭವೆಂದು ಮನದಲ್ಲಿ ಚಿಂತಿಸಿ ದ್ವಾರಕಾಪುರವನೆಯ್ದಲು ಸಮ್ಮತಿಸಿದವನಾಗಿ ॥೧೩॥ ಪತ್ನಿಯಂ ಕುರಿತು ಎಲೈ ಭಾಗ್ಯವತಿಯೇ, ಗೃಹದಲ್ಲಿ ಶ್ರೀ ಕೃಷ್ಣನಿಗೆ ಉಪಹಾರವಾಗುವ ವಸ್ತುವು ಯಾವುದಾದರೂ ಇದೆಯೋ, ಏನು, ಇದ್ದರೆ ಅದಂ ಕಟ್ಟಿ ಕೊಡುವಳೆಂದು ಹೇಳಿದನು. ಅನಂತರದಲ್ಲಿ ಆ ಬ್ರಾಹ್ಮಣ ಪತ್ನಿಯು ಪತಿವಚನವಂ ಕೇಳಿ ಮನೆಯೊಳಗೆ ಯಾವುದೂ ಇಲ್ಲದ್ದರಿಂದ ಮತ್ತೊಬ್ಬ ಬ್ರಾಹ್ಮಣನ ಮನೆಯಿಂದ ನಾಲ್ಕು ಹಿಡಿ ಅವಲಕ್ಕಿಯಂ ಯಾಚಿಸಿ ತಂದು ॥೧೪॥ ಒಂದು ಜೀರ್ಣವಸ್ತ್ರದಲ್ಲಿ ಕಟ್ಟಿ ಇದರನ್ನು ಶ್ರೀ ಕೃಷ್ಣನಿಗೆ ಸಮರ್ಪಿಸೆಂದು ಉಪಹಾರ ದ್ರವ್ಯವನ್ನಾಗಿ ಪತಿಯ ಕೈಗೆ ಕೊಟ್ಟಳು. ಆಗ ಕುಚೇಲನು ಅವಲಕ್ಕಿಯ ಗಂಟಂ ತೆಗೆದುಕೊಂಡು ದ್ವಾರಕಾಪುರವನೆಯ್ದಿದನು ॥೧೫॥ ಆ ಮೇಲೆ ಕುಚೇಲನು ಬ್ರಾಹ್ಮಣರೊಡಗೂಡಿ ನನಗೆ ಶ್ರೀ ಕೃಷ್ಣ ದರ್ಶನವೆಂತಾಗುವುದೆಂದು ಚಿಂತಿಸುತ ನಗರ ರಕ್ಷಣಾರ್ಥವಾಗಿರುವ ಮೂರು ಸೇನಾ ಸಮೂಹಂಗಳಂ ಮೂರು ಕೋಂಟೆಗ

ಕ್ಷ್ಯಾಶ್ಚ ಸದ್ವಿಜಃ । ವಿಪ್ರೋಗವ್ಯಾಂಧವೃಷ್ಣೀನಾಂ ಗೃಹೇಷ್ವಚ್ಯುತಧರ್ಮಿಣಾಂ ॥೧೬॥ ಗೃಹಂ ದ್ವ್ಯಷ್ಟಸಹಸ್ರಾಣಾಂ ಮಹಿಷೀಣಾಂ ಹರೇರ್ದ್ವಿಜಃ । ವಿವೇಶೈಕತಮಂ ಶ್ರೀಮತ್ ಬ್ರಹ್ಮಾನಂದಂ ಗತೋ ಯಥಾ ॥ ತಂ ವಿಲೋಕ್ಯಾಚ್ಯುತೋ ದೂರಾತ್ ಪ್ರಿಯಾಪರ್ಯಂಕಮಾಸ್ಥಿತಃ । ಸಹಸೋತ್ಥಾಯ ಚಾಭ್ಯೇತ್ಯ ದೋರ್ಭ್ಯಾಂ ಪರ್ಯಗ್ರಹೀನ್ಮುದಾ ॥೧೮॥ ಸಖ್ಯುಃ ಪ್ರಿಯಸ್ಯ ವಿಪ್ರರ್ಷೇರಂಗಸಂಗಾತಿನಿರ್ವೃತಃ । ಪ್ರೀತೋ ವ್ಯಮುಂಚದಬ್ಬಿಂದೂನ್ನೇತ್ರಾಭ್ಯಾಂ ಪುಷ್ಕರೇಕ್ಷಣಃ ॥೧೯॥ ಅಥೋಪವೇಶ್ಯ ಪರ್ಯಂಕೇ ಸ್ವಯಂ ಸಖ್ಯುಃ ಸಮರ್ಹಣಂ ಉಪಹೃತ್ಯಾವನಿಜ್ಯಾಸ್ಯ ಪಾದೌ ಪಾದಾವನೇಜನೀಃ ॥೨೦॥ ಅಗ್ರಹೀಚ್ಛಿರಸಾ ರಾಜನ್ ಭಗವಾನ್ ಲೋಕಪಾವನಃ । ವ್ಯಲಿಂಪದ್ದಿವ್ಯಗಂಧೇನ ಚಂದನಾಗರುಕುಂಕುಮೈಃ ॥೨೧॥ ಧೂಪೈಸ್ಸುರಭಿಭಿರ್ಮಿತ್ರಂ

---

ಷ್ಯಾಂಧವೃಷ್ಣೀನಾಂ-ಪ್ರವೇಶಿಸಕೂಡದ ಯಾದವಕುಲವಿಶೇಷದವರ, ಗೃಹೇಷು-ಮನೆಗಳಲ್ಲಿ, ॥೧೬॥ ಹರೇಃ-ಕೃಷ್ಣನ, ದ್ವ್ಯಷ್ಟಸಹಸ್ರಾಣಾಂ ಮಹಿಷೀಣಾಂ-ಹದಿನಾರುಸಾವಿರ ರಾಣಿಯರೊಳಗೆ, ಶ್ರೀಮತ್-ಸಂಪತ್ತುಳ್ಳ, ಏಕತಮಂ ಗೃಹಂ-ಒಂದಾನೊಂದು ಮನೆಯನ್ನು ವಿವೇಶ-ಹೊಕ್ಕನು, ಬ್ರಹ್ಮಾನಂದಂ ಗತೋ ಯಥಾ-ಮೋಕ್ಷದ ಆನಂದವನ್ನು ಹೊಂದಿದವನು ಹೇಗೋ ಹಾಗೆ ಆದನು ॥೧೭॥ ಪ್ರಿಯಾಪರ್ಯಂಕಮಾಸ್ಥಿತಃ-ಪತ್ನಿಯ ಮಂಚದಲ್ಲಿ ಕುಳಿತಿರುವ, ಅಚ್ಯುತಃ-ಕೃಷ್ಣನು, ತಂ-ಆ ಕುಚೇಲನನ್ನು ದೂರಾತ್-ದೂರದ ದೆಸೆಯಿಂದ, ವಿಲೋಕ್ಯ-ನೋಡಿ, ಸಹಸಾ-ಬೇಗನೇ, ಉತ್ಥಾಯ-ಎದ್ದು, ಅಭ್ಯೇತ್ಯ-ಇದಿರಿಗೆ ಬಂದು, ಮುದಾ-ಸಂತೋಷದಿಂದ, ದೋರ್ಭ್ಯಾಂ-ತೋಳುಗಳಿಂದ, ಪರ್ಯಗ್ರಹೀತ್-ಅಪ್ಪಿಕೊಂಡನು ॥೧೮॥ ಪುಷ್ಕರೇಕ್ಷಣಃ- ಕಮಲಲೋಚನನಾದ ಕೃಷ್ಣನು, ಪ್ರಿಯಸ್ಯ-ಇಷ್ಟನಾದ, ಸಖ್ಯುಃ-ಮಿತ್ರನಾದ, ವಿಪ್ರರ್ಷೇಃ-ಬ್ರಹ್ಮರ್ಷಿಯಾದ, ಕುಚೇಲನ, ಅಂಗಸಂಗಾತಿನಿರ್ವೃತಃ-ದೇಹಸ್ಪರ್ಶದಿಂದ ಅತ್ಯಂತಸುಖವುಂಟಾದವನಾಗಿ, ಪ್ರೀತಃ-ಪ್ರೇಮವುಂಟಾದವನಾದ್ದರಿಂದ, ನೇತ್ರಾಭ್ಯಾಂ-ಕಂಗಳಿಂದ, ಅಬ್ಬಿಂದೂನ್-ನೀರತೊಟ್ಟುಗಳನ್ನು, ವ್ಯಮುಂಚತ್-ಬಿಟ್ಟನು ॥೧೯॥ ಅಥೋ-ಆ ಮೇಲೆ, ಪರ್ಯಂಕೇ-ಮಂಚದಲ್ಲಿ, ಉಪವೇಶ್ಯ-ಕುಳ್ಳಿರಿಸಿ, ಸಖ್ಯುಃ-ಮಿತ್ರನಾದ ಕುಚೇಲನಿಗೆ, ಸಮರ್ಹಣಂ-ಕಾಣಿಕೆಯನ್ನು, [ಉಪಹಾರದ್ರವ್ಯವನ್ನು,] ಸ್ವಯಂ-ತಾನೇ, ಉಪಹೃತ್ಯ-ಸಮರ್ಪಿಸಿ, ಅಸ್ಯ- ಅವನ, ಪಾದೌ-ಕಾಲುಗಳನ್ನು, ಅವನಿಜ್ಯ-ತೊಳೆದು, ಪಾದಾವನೇಜನೀಃ-ಚರಣತೀರ್ಥಗಳನ್ನು ॥೨೦॥ ರಾಜನ್-ಪರೀಕ್ಷಿದ್ರಾಯನೇ, ಲೋಕಪಾವನಃ-ಪ್ರಪಂಚಕ್ಕೆ ಶುದ್ಧಿಕರನಾದ, ಭಗವಾನ್-ಶ್ರೀಕೃಷ್ಣನು, ಶಿರಸಾ-ತಲೆಯಿಂದ, ಅಗ್ರಹೀತ್-ಪರಿಗ್ರಹಿಸಿದನು ದಿವ್ಯಗಂಧೇನ-ಸಂತೋಷಕರವಾದ ಪರಿಮಳದಿಂದಕೂಡಿದ, ಚಂದನಾಗರುಕುಂಕುಮೈಃ-ಶ್ರೀಗಂಧ ಅಗಿಲು ಕೇಸರಗಳಿಂದ, ವ್ಯಲಿಂಪತ್-ಮೈಗೆ ಲೇಪನವಂ ಮಾಡಿದನು ॥೨೧॥ ಸುರಭಿಭಿಃ-ಮೂಗಿಗೆ ತೃಪ್ತಿಯನ್ನುಂಟುಮಾಡುತ್ತಿರುವ, ಧೂಪೈಃ-ಪರಿಮಳದ ಹೊಗೆಗಳಿಂದಲೂ, ಪ್ರದೀಪಾವಳಿಭಿಃ- ಪ್ರಕಾಶಿ

---

ಳಂ ಸಹ ಅತಿಕ್ರಮಿಸಿ ನಡೆದನು ॥೧೬॥ ಅನಂತರದಲ್ಲಿ ಆ ಬ್ರಾಹ್ಮಣನು ವಿಚ್ಛೇದವಿಲ್ಲದಂತೆ ಧರ್ಮನಿರತರಾಗಿರುವ ಯಾದವರ ಪ್ರವೇಶಿಸಲಶಕ್ಯಂಗಳಾದ ಗೃಹಂಗಳಲ್ಲಿ ಶ್ರೀ ಕೃಷ್ಣನ ೧೬ ಸಾವಿರ ಮಂದಿಯಾದ ಪತ್ನಿಯರ ಗೃಹಂಗಳಲ್ಲಿಯೂ ಕಾಂತಿಯುಕ್ತವಾದ ಒಂದು ಗೃಹವಂ ಪ್ರವೇಶಿಸಿ ಆಗ ಬ್ರಹ್ಮಾನಂದವನೆಯ್ದಿದವನಂತೆ ಆದನು ॥೧೭॥ ಆಗ ಶ್ರೀಕೃಷ್ಣನು ರುಕ್ಮಿಣೀದೇವಿಯೊಡನೆ ಮಂಚದಲ್ಲಿ ಕುಳಿತಿರುವನಾದರೂ ದೂರದಿಂದಲೇ ಆ ಕುಚೇಲನಂ ನೋಡಿ ಶೀಘ್ರದಿಂ ಪ್ರತ್ಯುತ್ಥಾನಗೆಯ್ದು ಸಂತೋಷದಿಂ ಭುಜಂಗಳಿಂದ ಆ ಬ್ರಾಹ್ಮಣನನ್ನು ಆಲಿಂಗನಂಗೆಯ್ದು ॥೧೮॥ ಮಿತ್ರನಾಗಿಯೂ ಅತಿಪ್ರಿಯನಾಗಿಯೂ ಇರುವ ಆ ಕುಚೇಲನ ಅಂಗಸ್ಪರ್ಶದಿಂದ ಪರಮಾನಂದಭರಿತನಾಗಿ, ಸಂತೋಷದಿಂ ನೇತ್ರಂಗಳಿಂದ ಆನಂದ ಬಾಷ್ಪಂಗಳಂ ಬಿಟ್ಟನು ॥೧೯॥ ಆ ಮೇಲೆ ಕುಚೇಲನಂ ತನ್ನ ಮಂಚದಲ್ಲಿ ಕುಳ್ಳಿರಿಸಿ ಮಿತ್ರನಾದ ಆ ದ್ವಿಜನಿಗೆ ತಾನು ಉಪಹಾರವಂ ಸಮರ್ಪಿಸಿ ತಾನೇ ಜಗತ್ಪಾವನನಾದರೂ ಅವನಿಗೆ ಪಾದಪ್ರಕ್ಷಾಳನಂಗೆಯ್ದು ಆ ಬ್ರಾಹ್ಮಣನ ಪಾದೋದಕವನ್ನು ॥೨೦॥ ಶಿರಸ್ಸಿನಲ್ಲಿ ಧರಿಸಿದನು. ಮತ್ತು ಭಗವಂತನಾದ ಶ್ರೀಕೃಷ್ಣನು ಚಂದನಾಗರುಕುಂಕುಮಗಳೊಡನೆ ಮಿಶ್ರವಾದ ದಿವ್ಯಗಂಧದಿಂದ ಮಿತ್ರನಾದ ಆ ಮುನಿಗೆ ಅನುಲೇಪನಂಗೆಯ್ದನು ॥೨೧॥ ಘುಮುಘುಮಿಸುತ್ತಲಿರುವ ಧೂಪಂಗಳಿಂದಲೂ ಉತ್ಕೃಷ್ಟಗಳಾದ ದೀ

ಪ್ರದೀಪಾವಳಿಭಿರ್ಮುದಾ । ಅರ್ಚಿತ್ವಾವೇದ್ಯತಾಂಬೂಲಂಗಾಂಚ ಸ್ವಾಗತಮಬ್ರವೀತ್ ॥೨೨॥ ಕುಚೇಲಂಮಲಿನಂಕ್ಷಾಮಂದ್ವಿಜಂಧಮನಿಸಂತತಂ। ದೇವೀಪರ್ಯಚರದ್ಭೈಷ್ಮೀ ಚಾಮರವ್ಯಜನೇನವೈ॥೨೩॥ ಅಂತಃಪುರಜನೋದೃಷ್ಟ್ವಾಕೃಷ್ಣೇನಾಮಲಕೀರ್ತಿನಾ । ವಿಸ್ಮಿತೋಭೂದತಿಪ್ರೀತ್ಯಾಅವಧೂತಂಸಭಾಜಿತಮ್ ॥೨೪॥ ಕಿಮನೇನಕೃತಂಪುಣ್ಯಮವಧೂತೇನಭಿಕ್ಷುಣಾ । ಶ್ರಿಯಾಹೀನೇನಲೋಕೇಸ್ಮಿನ್ಗರ್ಹಿತೇನಾಧನೇನಚ ॥೨೫॥ ಯೋಸೌತ್ರಿಲೋಕಗುರುಣಾಶ್ರೀನಿವಾಸೇನಸಂಭೃತಃ । ಪರ್ಯಂಕಸ್ಥಾಂಶ್ರಿಯಂಹಿತ್ವಾಪರಿಷ್ವಕ್ತೋಗ್ರಜೋಯಥಾ ॥೨೬॥ ಕಥಾಯಾಂಚಕ್ರತುರ್ಗಾಥಾಃಪೂರ್ವಾಗುರುಕುಲೇಸತೋಃ ।ಆತ್ಮನೋರ್ಲಲಿತಾರಾಜನ್ ಕರೌಗೃಹ್ಯಪರಸ್ಪರಮ್ ॥೨೭॥ ಶ್ರೀಭಗವಾನ್॥ಅಪಿಬ್ರಹ್ಮನ್ ಗುರುಕುಲಾದ್ಭ

---

ಸುವ, ದೀಪಗಳಸಾಲುಗಳಿಂದಲೂ, ಮಿತ್ರಂ-ಗೆಳೆಯನನ್ನು, ಮುದಾ-ಸಂತೋಷದಿಂದ, ಅರ್ಚಿತ್ವಾ-ಪೂಜಿಸಿ, ತಾಂಬೂಲಂ-ವೀಳ್ಯವನ್ನು, ಗಾಂಚ-ಆಕಳನ್ನೂ, ಆವೇದ್ಯ-ಸಮರ್ಪಿಸಿ, ಸ್ವಾಗತಂ-ಕುಶಲಪ್ರಶ್ನವನ್ನು, ಅಬ್ರವೀತ್-ನುಡಿದನು ॥೨೨॥ ಕುಚೇಲಂ-ಹಾಸಿದ ಚಿಂದಿಅರಿವೆಯುಳ್ಳ, ಮಲಿನಂ-ಹಾಸಿದಮೈಯುಳ್ಳ, ಕ್ಷಾಮಂ-ಒಣಗಿಸಣ್ಣಗಿರುವ, ಧಮನಿಸಂತತಂ-ನರಗಳುವ್ಯಾಪಿಸಿ ಕಾಣುತ್ತಿರುವ ದ್ವಿಜಂ-ಬ್ರಾಹ್ಮಣನನ್ನು, ದೇವೀ-ಪಟ್ಟದರಸಿಯಾದ, ಭೈಷ್ಮೀ-ರುಕ್ಮಿಣಿಯು, ಚಾಮರವ್ಯಜನೇನ-ಬೀಸಣಿಗೆಯಿಂದ, ವೈ-ಪ್ರಕಟವಾಗಿ, ಪರ್ಯಚರತ್-ಸೇವಿಸಿದಳು ॥೨೩॥ ಅಮಲಕೀರ್ತಿನಾ-ನಿರ್ದುಷ್ಟಯಶಸ್ಸುಳ್ಳನಾದ, ಕೃಷ್ಣೇನ-ವಾಸುದೇವನಿಂದ, ಅತಿಪ್ರೀತ್ಯಾ-ಅತ್ಯಂತಪ್ರೇಮದೊಡನೆ, ಸಭಾಜಿತಂ-ಸನ್ಮಾನಿಸಲ್ಪಟ್ಟ, ಅವಧೂತಂ- ಮಲಿನನಾದ ಬ್ರಾಹ್ಮಣನನ್ನು, ದೃಷ್ಟ್ವಾ-ನೋಡಿ, ಅಂತಃಪುರಜನಃ-ರಾಣಿವಾಸದಗುಂಪು, ವಿಸ್ಮಿತಃ-ಆಶ್ಚರ್ಯವುಂಟಾದುದ್ದು ಅಭೂತ್-ಆದುದು ॥೨೪॥ ಶ್ರಿಯಾ-ಸಂಪತ್ತಿನಿಂದ, ಹೀನೇನ-ರಹಿತನಾದ, ಅಧನೇನ-ಧನವಿಲ್ಲದವನಾದ, ಅವಧೂತೇನ-ಮಲಿನನಾದ, ಭಿಕ್ಷುಣಾ-ತಿರುಪಗಾರನಾದ, ಅನೇನ-ಈ ಬ್ರಾಹ್ಮಣನಿಂದ, ಕಿಂಪುಣ್ಯಂಕೃತಂ-ಏನುಸುಕೃತವು ಆಚರಿಸಲ್ಪಟ್ಟಿತೋ॥ ಯೋಸೌ-ಯಾವ ಬ್ರಾಹ್ಮಣನು, ತ್ರಿಲೋಕಗುರುಣಾ-ಮೂರುಲೋಕಗಳಿಗೂ ಪೂಜ್ಯನಾದ, ಶ್ರೀನಿವಾಸೇನ-ಲಕ್ಷ್ಮಿಗೆಆಶ್ರಯನಾದ ಕೃಷ್ಣನಿಂದ, ಪರ್ಯಂಕಸ್ಥಾಂ-ಮಂಚದಲ್ಲಿರುವ, ಶ್ರಿಯಂ-ಲಕ್ಷ್ಮಿಯನ್ನು, ಹಿತ್ವಾ-ಬಿಟ್ಟು, ಅಗ್ರಜೋಯಥಾ-ಅಣ್ಣನುಹೇಗೋ ಹಾಗೆ, ಪರಿಷ್ವಕ್ತಃ-ಅಪ್ಪಿಕೊಳ್ಳಲ್ಪಟ್ಟನೋ ॥೨೬॥ ರಾಜನ್-ಪರೀಕ್ಷಿದ್ರಾಯನೇ ! ಕಥಾಯಾಂ-ಸಲ್ಲಾಪದಲ್ಲಿ, ಗುರುಕುಲೇ-ಗುರುವಿನ ಮನೆಯಲ್ಲಿ, ಸತೋಃ-ಇದ್ದಂಥಾ, ಆತ್ಮನೋಃ-ತಮ್ಮ, ಲಲಿತಾಃ-ಮನೋಹರಂಗಳಾದ, ಪೂರ್ವಾಃ ಗಾಥಾಃ-ಪೂರ್ವದ ಚರಿತ್ರಗಳನ್ನು, ಪರಸ್ಪರಂಕರೌಗೃಹ್ಯ-ಅನ್ಯೋನ್ಯವಾಗಿ ಕೈಗಳನ್ನುಹಿಡಿದುಕೊಂಡು, ಚಕ್ರತುಃ-ಮಾಡಿದರು ॥೨೭॥ಧರ್ಮಜ್ಞ-ಧರ್ಮವನ್ನುಬಲ್ಲಂಥಾ, ಬ್ರಹ್ಮನ್-ಬ್ರಾಹ್ಮಣನೇ, ಲಬ್ಧದಕ್ಷಿಣಾತ್-ಗುರುವಿನಮನೆ ಯತ್ತಣಿಂದ,ಸಮಾ

---

ವಂಗಳೊಡನೆಯೂ ಸಂತೋಷದಿಂ ಪೂಜಿಸಿತಾಂಬೂಲವಂ ಒಂದುಗೋವನ್ನೂ ಸಮರ್ಪಿಸಿದನು ಮತ್ತು ಕುಶಲಪ್ರಶ್ನೆಮಂಗೆಯ್ದನು ॥೨೨॥ ಆಸಮಯದಲ್ಲಿ ಮಲಿನವಾದ ವಸ್ತ್ರವುಳ್ಳವನಾಗಿ ಕೃಶನಾಗಿ ನರಗಳಿಂ ವ್ಯಾಪಿಸಲ್ಪಟ್ಟವನಾಗಿರುವ ಕುಚೇಲನಂ ಶ್ರೀರುಕ್ಮಿಣೀದೇವಿಯು ಚಾಮರಂಗಳಿಂದಲೂ ಬೀಸಣಿಗೆಯಿಂದಲೂ ಬೀಸುತ ಉಪಚಾರಂಗೆಯ್ದಳು ॥೨೩॥ ಆಗ ಅಂತಃಪುರದಲ್ಲಿರುವ ಜನರು ನಿರ್ಮಲವಾದ ಕೀರ್ತಿಯುಳ್ಳ, ಶ್ರೀಕೃಷ್ಣನಿಂದ ಅತಿಪ್ರೀತಿಯಿಂ ಪೂಜಿಸಲ್ಪಟ್ಟವನಾಗಿ ಮಲಿನವಾಗಿಯೂ ಇರುವ ಆಬ್ರಾಹ್ಮಣನಂನೋಡಿ ಆಶ್ಚರ್ಯಪಟ್ಟರದಂತೆನೆ ॥೨೪॥ ಎತ್ತೆಯೆಯಾವಕಾರಣದಿಂದ ಈಬ್ರಾಹ್ಮಣನು ತ್ರಿಲೋಕಗುರುವಾದ ಶ್ರೀನಿವಾಸನಿಂದಲೂ ಪೂಜಿಸಲ್ಪಟ್ಟನೋ, ಮತ್ತು ಯಾವಕಾರಣದಿಂದ ಬ್ರಾಹ್ಮನು ಶ್ರೀಕೃಷ್ಣನಿಂದ ಮಂಚದಲ್ಲಿಕುಳ್ಳಿರ್ದರುಕ್ಮಿಣೀ ದೇವಿಯಂ ಬಿಟ್ಟು ಅಣ್ಣನಂತೆ ಆಲಿಂಗನಂಗೆಯ್ಯಲ್ಪಟ್ಟನೋ ॥೨೫॥ ಆಕಾರಣದಿಂದ ಮಲಿನನಾಗಿಯೂ ಭಿಕ್ಷುಕನಾಗಿಯೂ ಭಾಗ್ಯಹೀನನಾಗಿಯೂ ಲೋಕದಲ್ಲಿ ನಿಂದಿತನಾಗಿಯೂ ಅಧಮನಾಗಿಯೂ ಇರುವ ಈಬ್ರಾಹ್ಮಣನು ಏನುಪುಣ್ಯಮಂಮಾಡಿದ್ದನೋ ಎಂದು ಅಂತಃಪುರದಜನರು ಆಶ್ಚರ್ಯಪಟ್ಟರು ॥೨೬॥ ಅನಂತರದಲ್ಲಿ ಕುಚೇಲನು ಶ್ರೀಕೃಷ್ಣನೊಸಹ ಪರಸ್ಪರವಾಗಿ ಕಮಲಸದೃಶಂಗಳಾದ ಹಸ್ತಂಗಳಂ ಪಿಡಿದುಪೂರ್ವದೊಳು ಗುರುಗೃಹದಲ್ಲಿ ವಾಸಂಗೆಯ್ದಿರುವ ತನ್ನ ವೃತ್ತಾಂತಂಗಳಂ ಪ್ರಸ್ತಾಪಂಗೆಯ್ದರು ॥೨೭॥ ಆಗ ಶ್ರೀಕೃಷ್ಣನು ಕುಚೇಲನಂಕುರಿತು ಪ್ರ

ವತಾಲಬ್ಧದಕ್ಷಿಣಾತ್ | ಸಮಾವೃತ್ತೇನಧರ್ಮಜ್ಞ ಭಾರ್ಯೋಢಾಸದೃಶೀನವಾ ||೨೮||ಪ್ರಾಯೋಗೃಹೇಷು ತೇಚಿತ್ತಮಕಾಮವಿಹತಂತಥಾ | ನೈವಾತಿಪ್ರೀಯಸೇವಿದ್ವನ್ ಧನೇಷುವಿದಿತಂಹಿಮೇ ||೨೯|| ಕೇಚಿತ್ಕುರ್ವಂತಿಕರ್ಮಾಣಿಕಾಮೈರಹತಚೇತಸಃ | ತ್ಯಜಂತಃಪ್ರಕೃತೀರ್ದೈವೀರ್ಯಥಾಹಂಲೋಕಸಂಗ್ರಹಂ ||೩೦|| ಕಚ್ಚಿದ್ಗುರುಕುಲೇವಾಸಂಬ್ರಹ್ಮನ್ ಸ್ಮರಸಿನೌಯತಃ | ದ್ವಿಜೋವಿಜ್ಞಾಯವಿಜ್ಞೇಯಂತಮಸಃಪಾರಮಶ್ನುತೇ||೩೧||ಸವೈಸತ್ಕರ್ಮಣಾಂಸಾಕ್ಷಾದ್ದ್ವಿಜಾತೇರಿಹಸಂಭವಃ | ಆದ್ಯೋಂಗಯತ್ರಾಶ್ರಮಿಣಾಂಯ

---

ವೃತ್ತೇನ-ವೇದವ್ರತ ಪೂರ್ತಿಗೆಯ್ದುಬಂದ, ಭವತಾಪಿ-ನಿನ್ನಿಂದಲೂ, ಸದೃಶೀಭಾರ್ಯಾ-ತಕ್ಕ ಹೆಂಡತಿಯು,ಊಢಾನವಾ-ಮದುವೆಮಾಡಿಕೊಳ್ಳಲ್ಪಟ್ಟಳೋ ಇಲ್ಲವೋ ||೨೮|| ವಿದ್ವನ್-ಜ್ಞಾನಿಯಾದ ಬ್ರಾಹ್ಮಣನೇ, ತೇ-ನಿನ್ನ, ಚಿತ್ತಂ-ಮನಸ್ಸು, ಗೃಹೇಷು-ಗೃಹಸ್ಥಾಶ್ರಮದಲ್ಲಿ, (ಹೆಂಡಿರಲ್ಲಿ,) ಪ್ರಾಯಃ-ಬಹುಶಃ, ಕಾಮವಿಹತಂ-ಕಾಮದಿಂದ ಭಗ್ನವಾದ್ದು, ನ-ಅಲ್ಲವು, ತಥಾ-ಆಗ, ಧನೇಷು-ವಸ್ತ್ರಾದಿವಸ್ತುಗಳಲ್ಲಿ, ನಾತಿಪ್ರೀಯಸೇ-ಅತ್ಯಂತಪ್ರೀತಿಗೊಳ್ಳದೆ ಇರುವಿ. ಮೇ-ನನ್ನಿಂದ, ವಿದಿತಂಹಿ-ತಿಳಿಯಲ್ಪಟ್ಟಿರುವುದೆ ಅಲ್ಲವೆ ||೨೯|| ಅಹಂ-ನಾನು, ಲೋಕಸಂಗ್ರಹಂಯಥಾ-ಜನರನ್ನು ಪ್ರವರ್ತಿಸಗೊಳಿಸ ಲೋಸುಗವಾದ ಕರ್ಮವನ್ನು ಹೇಗೊಹಾಗೆ, ಕೇಚಿತ್-ಕೆಲವರುಜ್ಞಾನಿಗಳು, ಕಾಮೈಃ-ಭೋಗಾಪೇಕ್ಷೆಗಳಿಂದ. ಅಹತಚೇತಸೋಪಿ-ಕೊಲ್ಲಲ್ಪಡದೆ ಇರುವ ಬುದ್ಧಿಯುಳ್ಳವರಾದವರೂ, ದೈವೀಃ-ಅದೃಷ್ಟಾಯತ್ತಂಗಳಾದ, ಪ್ರಕೃತೀಃ-ಸ್ವಾಭಾವಿಕವಿಷಯಾಪೇಕ್ಷೆಗಳನ್ನು, ತ್ಯಜಂತಃ-ಬಿಡುತಿರುವರಾಗಿ, ಕರ್ಮಾಣಿ-ವಿಧ್ಯುಕ್ತಂಗಳಾದ ನಿತ್ಯಕರ್ಮಂಗಳನ್ನು, ಕುರ್ವಂತಿ-ಮಾಡುತ್ತಿರುವರು ||೩೦||ಬ್ರಹ್ಮನ್-ಬ್ರಾಹ್ಮಣನೇ ! ದ್ವಿಜಃ-ಬ್ರಾಹ್ಮಣನು, ಯತಃ-ಯಾವಗುರುವಿನಡೆಸೆಯಿಂದ, ವಿಜ್ಞೇಯಂ-ತಿಳಿಯತಕ್ಕ ಪರಮಾರ್ಥತತ್ವವನ್ನು,ವಿಜ್ಞಾಯ-ತಿಳಿದು, ತಮಸಃ-ಸಂಸಾರದ ಕತ್ತಲೆಯ, ಪಾರಮಶ್ನುತೇ-ತುದಿಗಾಣುವನೋ, ಗುರುಕುಲೇ-ಅಂಥಾ ಗುರುವಿನಮನೆಯಲ್ಲಿ, ನೌ-ನಮ್ಮಿಬ್ಬರ, ವಾಸಂ-ಸ್ಥಿತಿಯನ್ನು, ಸ್ಮರಸಿಕಚ್ಚಿತ್-ನೆನಪುಗೊಳ್ಳುವಿಯೋವಿನು ||೩೧|| ಇಹ-ಈ ಸಂಸಾರದಲ್ಲಿ,ಯತ್ರಸಂಭವಃ-ಯಾವತಂದೆಯ ದೆಸೆಯಿಂದ ಹುಟ್ಟೋಣವಾತ್ರವಾಯಿತೋ, ಸಃ-ಅವನು, ಆದ್ಯೋಗುರುಃ-ಮೊದಲನೆಯ ಪೂಜ್ಯನಾಗಿರುವನು. ಅಂಗ-ಅಯ್ಯಾ ವಿಪ್ರನೇ, ದ್ವಿಜಾತೇಃ-ಉಪನಯನವಾದವಂಗೆ, ಸತ್ಕರ್ಮಣಾಂ-ವೇದಾಧ್ಯಯನಾದಿ ಷಟ್ಕರ್ಮಂಗಳ, ಸಂಭವಃ-ಉತ್ಪತ್ತಿಯು, ಯತ್ರ-ಯಾವವನಿಂದಾಯಿತೋ ಸಃ-ಅವನು, ಯಥಾಹಂ-ನಾನುಹೇಗ ಈಶ್ವರನೋ ತಥಾಗುರುಃ-ಹಾಗೆ, ತಂದೆಗಿಂತಲೂಅಧಿಕವಾದ ಎರಡನೆಯಪೂಜ್ಯನಾಗಿರುವನು ಆಶ್ರಮಿಣಾಂ-ವರ್ಣಾಶ್ರಮಂಗಳುಳ್ಳ ಎಲ್ಲರಿಗೂ, ಜ್ಞಾನವನ್ನುಕೊಡುವ, ಸತು-ಆ ವಿದ್ಯಾಗುರುವಾದರೋ, ಸಾಕ್ಷಾತ್-ನಾನೇ ಅದ್ದರಿಂದ, ಸರ್ವಪೂಜ್ಯನಾದ ಮೂರನೆ

---

ಕ್ನಗೆಯ್ವನವೆಂತೆನೆ- ಎಲೈಧರ್ಮಜ್ಞನಾದ ಬ್ರಾಹ್ಮಣನೇ! ನೀನು ಸಾಂಗವಾಗಿ ವೇದಾಧ್ಯಯನವಾದಮೇಲೆ ಆ ಗುರುವಿಗೆ ದಕ್ಷಿಣೆಯಂಕೊಟ್ಟು ಆಗುರುಗೃಹದಿಂಬಂದು ಸಮಾವರ್ತನವೆಂಬ ಕರ್ಮವನಾಚರಿಸಿ ಅನುರೂಪಳಾದ ಕನ್ಯೆಯಂ ವಿವಾಹವಂ ಮಾಡಿಕೊಂಡೆಯೋ ಇಲ್ಲವೋ||೨೮|| ಎಲೈವಿದ್ವಾಂಸನೇ! ನೀನು ಧನವಸ್ತ್ರಾದಿಗಳಲ್ಲಿ ಅತ್ಯಂತ ವಿಶ್ವಾಸಮುಳ್ಳನಾಗದೆ ಇರುವಿಯಾದಕಾರಣದಿಂ ಗೃಹದಲ್ಲಿ ಇದೇರೀತಿಯಾಗಿನಿನ್ನಚಿತ್ತವುಕಾಮಂಗಳಿಂ ತಿರಸ್ಕರಿಸಲ್ಪಡುವುದಿಲ್ಲವೆಂದು ನಾನು ತಿಳಿಯುತಲಿರುವೆನು. ಜ್ಞಾನಿಯಾದ ನಿನಗೆ ವೈರಾಗ್ಯವು ಯುಕ್ತವೇಸರಿ||೨೯|| ಲೋಕದಲ್ಲಿ ಕೆಲವರು ಮಹಾತ್ಮರು ಕಾಮಂಗಳಿಂ ತಿರಸ್ಕರಿಸಲ್ಪಡದೇ ಇರುವ ಮನಸ್ಸುಳ್ಳವರಾದುದರಿಂ ಈಶ್ವರಮಾಯಾಕಲ್ಪಿತಂಗಳಾದ ವಿಷಯವಾಸನೆಗಳಂ ಸಹ ತ್ಯಜಿಸುತಲಿದ್ದರೂ ನನ್ನಂತೆ ಲೋಕಸಂಗ್ರಹಾರ್ಥವಾಗಿ ವಿಹಿತಕರ್ಮಂಗಳ ನಾಚರಿಸುತಲಿದ್ದಾರೆ||೩೦|| ಎಲೈಮಿತ್ರನೇ! ಬ್ರಾಹ್ಮಣನು ಯಾವಗುರುವಿನಡೆಸೆಯಿಂದ ತತ್ವಾರ್ಥವಂತಿಳಿದು ಮುಕ್ತಿಯಂ ಪಡೆಯುವನೋ ಅಂತಾ ಗುರುವಿನ ಗೃಹದಲ್ಲಿ ನಾವೀರ್ವರೂ ವಾಸಂಗೆಯ್ದ ವೃತ್ತಾಂತವನು ಸ್ಮರಿಸುತಲಿದ್ದೀಯೋ ಏನು||೩೧|| ಮತ್ತು ಲೋಕದಲ್ಲಿ ಪುರುಷನಿಗೆ ಮೂವರುಗುರುಗಳೆಂದು ನಿರೂಪಿಸುವನವೆಂತೆನೆ- ಎಲೈಮಿತ್ರನೇ! ಕೇಳು, ಈಸಂಸಾರದಲ್ಲಿ ತನಗೆ ಯಾವವನದೆಸೆಯಿಂದ ಜನ್ಮವುಂಟಾಯಿತೋ ಆತಂದೆಯೊರ್ವನು ಪ್ರಥಮನಾದ ಗುರುವು. ಅವನು ಪೂಜಿಸಲು ಯೋಗ್ಯನು. ಮತ್ತು ಬ್ರಾಹ್ಮಣನಾದ ಪುರುಷನಿಗೆ ಉಪನಯನವೇದಾಧ್ಯಯನ ಪೂರ್ವಕವಾಗಿ ಯಾವವನದೆಸೆಯಿಂದ ಸತ್ಕರ್ಮಾಧಿಕಾರವುಂಟಾಗುವುದೋ

ಥಾಹಂಜ್ಞಾನದೋಗುರುಃ ॥೩೨॥ ನನ್ವರ್ಥಕೋವಿದಾ ಬ್ರಹ್ಮನ್ವರ್ಣಾಶ್ರಮವತಾಮಿಹ । ಯೇಮಯಾ ಗುರುಣಾವಾಚಾತರಂತ್ಯಂಜೋಭವಾರ್ಣವಮ್ ॥೩೩॥ ನಾಹಮಿಜ್ಯಾಪ್ರಜಾತಿಭ್ಯಾಂತಪಸೋಪಶಮೇನವಾ। ತುಷ್ಯೇಯಂಸರ್ವಭೂತಾತ್ಮಾಗುರುಶುಶ್ರೂಷಯಾಯಥಾ ॥೩೪॥ ಅಪಿನಸ್ಸ್ಮರ್ಯತೇಬ್ರಹ್ಮನ್ವೃತ್ತಂನಿವಸತಾಂಗುರೌ । ಗುರುದಾರೈಶ್ಚೋದಿತಾನಾಮಿಂಧನಾನಯನೇಕ್ವಚಿತ್ ॥೩೫॥ ಪ್ರವಿಷ್ಟಾನಾಂಮಹಾರಣ್ಯಮಪರ್ತೌಸುಮಹದ್ದ್ವಿಜ । ವಾತವರ್ಷಮಭೂತ್ತೀವ್ರಂನಿಷ್ಠುರಾಸ್ಸ್ತನಯಿತ್ನವಃ ॥೩೬॥ ಸೂರ್ಯಶ್ಚಾಸ್ತಂಗತಸ್ತಾವತ್ತಮಸಾಚಾವೃತಾದಿಶಃ । ನಿಮ್ನಂಕೂಲಂಜಲಮಯಂನಪ್ರಾಜ್ಞಾಯತಕಿಂಚನ ॥೩೭॥

---

ಯ ಗುರುವಾಗಿರುವನು ॥೩೨॥ ಬ್ರಹ್ಮನ್-ಬ್ರಾಹ್ಮಣನೇ, ಇಹ-ಈ ಮನುಷ್ಯಜನ್ಮದಲ್ಲಿ, ವರ್ಣಾಶ್ರಮವತಾಂ- ಜಾತಿಧರ್ಮವೂ ಆಶ್ರಮಧರ್ಮವೂ ಉಳ್ಳವರೊಳಗೆ, ಅರ್ಥಕೋವಿದಾಃ-ಪ್ರಯೋಜನಗಳಂಬಲ್ಲ ನಿಪುಣರು ಯಾರೋ, ತೇ-ಅವರು, ಮಯಾ-ನನ್ನ ಸ್ವರೂಪವಾದ, ಗುರುಣಾ-ಉಪದೇಶಕನಿಂದ, ವಾಚಾ-ಉಪದೇಶವಚನದಿಂದ, ಭವಾರ್ಣವಂ-ಸಂಸಾರಸಮುದ್ರವನ್ನು, ಅಂಜಃ-ಸುಖದಿಂದಲೇ, ತರಂತಿನನು-ದಾಂಟುವರಲ್ಲವೆ ॥೩೩॥ ಅಹಂ-ಪರಮೇಶ್ವರನಾದ ನಾನು, ಗುರುಶುಶ್ರೂಷಯಾಯಥಾ-ಗುರುವಿನಸೇವೆಯಿಂದ ಹೇಗೋಹಾಗೆ, ಇಜ್ಯಾಪ್ರಜಾತಿಭ್ಯಾಂ-ಗೃಹಸ್ಥಧರ್ಮದಿಂದಲೂ, ಉಪಶಮೇನವಾ- ಯತಿಧರ್ಮದಿಂದಲಾದರೂ, ನತುಷ್ಯೇಯಂ-ಸಂತೋಷಿಸಲಾರೆನು ॥೩೪॥ ಬ್ರಹ್ಮನ್-ಬ್ರಾಹ್ಮಣನೇ, ಗುರೌ-ವಿದ್ಯಾಗುರುವಿನ ಒಳಿಯಲ್ಲಿ, ನಿವಸತಾಂ-ಇರುತಿರುವ, ನಃ-ನಮ್ಮ, ವೃತ್ತಮಪಿ-ನಡತೆಯುಕೂಡ, ಸ್ಮರ್ಯತೇ-ನೆನಪುಗೊಳ್ಳಲ್ಪಡುತಿದೆಯೇ ಏನು? ಕ್ವಚಿತ್-ಒಂದಾನೊಂದುಕಾಲದಲ್ಲಿ, ಗುರುದಾರೈಃ-ಗುರುಪತ್ನಿಯಿಂದ, ಇಂಧನಾನಯನೇ-ಸೌದೆಯನ್ನು ತರುವವಿಷಯದಲ್ಲಿ, ಚೋದಿತಾನಾಂ-ಪ್ರೇರಿಸಲ್ಪಟ್ಟವರಾದ್ದರಿಂದ ॥೩೫॥ ಮಹಾರಣ್ಯಂ-ಹೆಗ್ಗಾಡನ್ನು, ಪ್ರವಿಷ್ಟಾನಾಂಸತಾಂ-ಹೊಕ್ಕವರಾಗುತ್ತಿರಲು, ದ್ವಿಜ-ಬ್ರಾಹ್ಮಣನೇ, ಅಪರ್ತೌ-ವರ್ಷಾಕಾಲ ಕಳೆದುಹೋದಬಳಿಕಲೂ, ಸುಮಹತ್-ಬಹಳದೊಡ್ಡದಾದ, ತೀವ್ರಂ-ವೇಗವಾದ, ವಾತವರ್ಷಂ-ಗಾಳಿ ಮಳೆಯು, ಅಭೂತ್-ಉಂಟಾಯಿತು. ನಿಷ್ಠುರಾಃ-ಕಠಿನಂಗಳಾದ, ಸ್ತನಯಿತ್ನವಶ್ಚ-ಗುಡುಗುಗಳೂ, ಆದವು॥ ತಾವತ್-ಅಷ್ಟರಲ್ಲಿ, ಸೂರ್ಯಶ್ಚ-ಹೊತ್ತೂ, ಅಸ್ತಂಗತಃ-ಮುಳುಗಿತು. ದಿಶಶ್ಚ-ದಿಕ್ಕುಗಳೂ, ತಮಸಾ-ಕತ್ತಲೆಯಿಂದ, ಆವೃತಾಃ-ಮುಚ್ಚಲ್ಪಟ್ಟವು, ನಿಮ್ನಂ-ಕುಳಿಯೂ, ಕೂಲಂ-ತಡಿಯೂ, ಜಲಮಯಂ-ನೀರುತುಂಬಿದ್ದಾಯಿತು. ಕಿಂಚನ-ಕೊಂಚವಾದರೂ, ನಪ್ರಾಜ್ಞಾಯತ-ತಿಳಿಯಲ್ಪಡಲಿಲ್ಲವು ॥೩೭॥ ಅಂಬುಸಂಪ್ಲವೇ-ನೀರಿನಿಂದ ಮುಳುಗಿರುವ, ತತ್ರವನೇ-ಆ ಮಹಾರ

---

ಅಂತಾಕರ್ಮವಿದ್ಯೆಯನ್ನು ಉಪದೇಶಂ ಗೆಯ್ದವನೇ ದ್ವಿತೀಯನಾದ ಗುರುವು. ಅವನು ತಂದೆಗಿಂತಲೂ ನನ್ನಂತೆ ಪೂಜ್ಯನು. ಸಮಸ್ತಾಶ್ರಮಂಗಳಲ್ಲಿಯೂ ತನಗುಪದೇಶಂಗೆಯ್ವ ಬ್ರಹ್ಮವಿದ್ಯಾಪ್ರದನಾದ ಗುರುವು ಸಾಕ್ಷಾತ್ತಾಗಿ ನಾನೇಸರಿ. ಅವನಿಗಿಂತಲೂ ಅಧಿಕನಿಲ್ಲವು ॥೩೨॥ ಆಕಾರಣದಿಂದ ಎಲೈಮಿತ್ರನೇ! ವರ್ಣಾಶ್ರಮಧರ್ಮವಂತರಾದ ಪುರುಷರಲ್ಲಿ ಪರಮಾರ್ಥವಂ ತಿಳಿದಂತಾ ಯಾವಮಹಾತ್ಮರು ಈಮಾನುಷಜನ್ಮದಲ್ಲಿ ವರ್ಣಾಶ್ರಮಯುಕ್ತರಾಗಿ ಗುರುರೂಪದಿಂ ತತ್ವಾರ್ಥವಂ ಬೋಧಿಸುವ ನನ್ನಿಂ ಉಪದೇಶಮಾತ್ರದಿಂ ಆಯಾಸವಿಲ್ಲದೆ ಸುಖದಿಂದಲೇ ಸಂಸಾರಸಮುದ್ರವಂ ದಾಂಟುತಲಿದ್ದಾರೆಯೋ ಅವರೇ ಜ್ಞಾನಿಗಳು ॥೩೩॥ ಮತ್ತು ಪರಮೇಶ್ವರನಾದನಾನು ಸಮಸ್ತಭೂತಂಗಳಿಗೂ ಆತ್ಮರೂಪನಾಗಿದ್ದರೂ ಯಾವರೀತಿಯಿಂದ ಜ್ಞಾನಪ್ರದನಾದ ಗುರುವಿನಸೇವೆಯಿಂ ಸಂತೋಷಪಡುವೆನೋ ಆರೀತಿಯಾಗಿ ಗೃಹಸ್ಥಾಶ್ರಮಧರ್ಮದಿಂದಲೂ ಉಪನಯನದಿಂದಲೂ ಯತಿಧರ್ಮದಿಂದಲೂ ಸಂತುಷ್ಟನಾಗುವುದಿಲ್ಲ ವಾದಕಾರಣದಿಂ ಅಂತಾಗುರುವಿನ ಪಾದಸೇವೆಗಿಂತಲೂ ಅಧಿಕವಾದ ಧರ್ಮವಿಲ್ಲವು ॥೩೪॥ ಎಲೈಮಿತ್ರನೇ! ಮತ್ತು ಪೂರ್ವದಲ್ಲಿ ನಾವು ಗುರುಗೃಹದಲ್ಲಿ ವಾಸಂಗೆಯ್ವಾಗ ಒಂದುಸಮಯದೊಳು ಕಾಷ್ಠಂಗಳಂತರುವಬಗ್ಗೆ ಗುರುಪತ್ನಿಯಿಂದ ಆಜ್ಞಾಪಿಸಲ್ಪಟ್ಟು ಮಹಾರಣ್ಯವಂ ಪ್ರವೇಶಿಸಿಯಿರುವ ನಮ್ಮ ವೃತ್ತಾಂತವಂ ಸ್ಮರಿಸುತಲಿದ್ದೆಯೋ ಏನು ॥೩೫॥ ಆಗ ಮಹಾಭಯಂಕರವಾದ ವಾಯುವರ್ಷಂಗಳೂ ಅತಿಕಠಿನಂಗಳಾದ ಮೇಘಗರ್ಜನೆಗಳೂ ಉಂಟಾದವು. ಅಷ್ಟರಲ್ಲಿಯೇ ಸೂರ್ಯಾಸ್ತಮಾನವೂ ಆಯಿತು, ಅಂಧಕಾರದಿಂದ ದಿಕ್ಕುಗಳೂ ಮುಚ್ಚಲ್ಪಟ್ಟವು ॥೩೬॥ ಆಗ ಮಳೆಯಿಂದ ಸಕಲದೇಶವೂ ಜಲಮಯವಾದ್ದರಿಂದ ಇದು ಹಳ್ಳ ಇದುತಿಟ್ಟೆಯೆಂಬು

ವಯಂಭೃಶಂತತ್ರಮಹಾನಿಲಾಂಬುಭಿರ್ನಿಹನ್ಯಮಾನಾಮುಹುರಂಬುಸಂಪ್ಲವೇ। ದಿಶೋಽವಿದಂತೋಽಥಪ
ರಸ್ಪರಂವನೇಗೃಹೀತಹಸ್ತಾಃಪರಿಬಭ್ರಿಮಾತುರಾಃ॥೩೮॥ ಏತದ್ವಿದಿತ್ವಾಉದಿತೇರವೌಸಾಂದೀಪನಿರ್ಗು
ರುಃ।ಅನ್ವೇಷಮಾಣೋನಃಶಿಷ್ಯಾನಾಚಾರ್ಯೋಽಪಶ್ಯದಾತುರಾನ್॥೩೯॥ಆಚಾರ್ಯಃ।ಅಹೋಹೇಪುತ್ರಕಾಯೂ
ಯಮಸ್ಮದರ್ಥೇಽತಿದುಃಖಿತಾಃ । ಆತ್ಮಾವೈಪ್ರಾಣಿನಾಂಪ್ರೇಷ್ಠಸ್ತಮನಾದೃತ್ಯಮತ್ಪರಾಃ॥೪೦॥ಇಯ
ದೇವಹಿಸಚ್ಛಿಷ್ಯೈಃಕರ್ತವ್ಯಾಗುರುನಿಷ್ಕೃತಿಃ।ಯದ್ವೈವಿಶುದ್ಧಭಾವೇನಸರ್ವಾರ್ಥಾತ್ಮಾರ್ಪಣಂಗು
ರೌ॥೪೧॥ ತುಷ್ಟೋಹಂವೋದ್ವಿಜಶ್ರೇಷ್ಠಾಸ್ಸತ್ಯಾಸ್ಸಂತುಮನೋರಥಾಃ । ಛಂದಾಂಸ್ಯಯಾತಯಾಮಾ

---

ಣ್ಯವಲ್ಲಿ, ವಯಂ-ನಾವು, ಭೃಶಂ-ಅಧಿಕವಾಗಿ, ಮಹಾನಿಲಾಂಬುಭಿಃ-ಹೆಗ್ಗಾಳಿಯಿಂದಲೂ ನೀರ್ಗಳಿಂದಲೂ, ಮುಹುಃ- ಬಾರಿಬಾರಿಗೂ, ನಿಹನ್ಯಮಾನಾಃ-ಬಡಿಲ್ಪಡುತ್ತಿರುವವರಾಗಿ, ದಿಶಃ-ದಿಕ್ಕುಗಳನ್ನು, ಅವಿದಂತಃ-ತಿಳಿಯದೆ ಇರುವವರಾಗಿ, ಅಥ-ಆ ಬಳಿಕ, ಆತುರಾಃ-ತ್ವರೆಯುಳ್ಳವರಾದ್ದರಿಂದ, ಪರಸ್ಪರಂ-ಅನ್ಯೋನ್ಯವಾಗಿ, ಗೃಹೀತಹಸ್ತಾಃ-ಹಿಡಿಯಲ್ಪಟ್ಟ ಕೈಗಳುಳ್ಳವರಾಗಿ, ಪರಿಬಭ್ರಿಮ-ಹೊರೆಗಳನ್ನು ಹೊತ್ತೆವು ॥೩೮॥ ರವೌ-ಸೂರ್ಯನು, ಉದಿತೇಸತಿ-ಮೇಲಕ್ಕೆ ಬರುತಲೂ, ಗುರುಃ- ವಿದ್ಯೋಪದೇಶಕನಾದ, ಸಾಂದೀಪನಿಃ-ಸಾಂದೀಪನಿಯೆಂಬ ಮುನಿಯು, ಏತತ್-ಈ ನಮ್ಮಸ್ಥಿತಿಯನ್ನು, ವಿದಿತ್ವಾ-ತಿಳಿದು, ಅನ್ವೇಷಮಾಣಃ-ಹುಡುಕುತ್ತಿರುವವನಾದ, ಆಚಾರ್ಯಃ-ಉಪಾಧ್ಯಾಯನು, ಆತುರಾನ್-ವೇಗದಿಂದ ಬರುತಿರುವ, ಶಿಷ್ಯಾನ್- ವಿದ್ಯಾರ್ಥಿಗಳಾದ, ನಃ-ನಮ್ಮನ್ನು, ಅಪಶ್ಯತ್-ನೋಡಿದನು ॥೩೯॥ ಹೇಪುತ್ರಕಾಃ-ಎಲೈ ಮಕ್ಕಳಿರಾ! ಯೂಯಂ-ನೀವು,ಅಸ್ಮದರ್ಥೇ-ನಮಗೋಸುಗ, ಅತಿದುಃಖಿತಾಃ-ಬಹಳ ಖೇದವುಂಟಾದವರಾದಿರಿ. ಅಹೋ-ವಿಷಾದವು. ಪ್ರಾಣಿನಾಂ-ಜಂತುಗಳಿಗೆ, ಆತ್ಮಾವೈಪ್ರೇಷ್ಠಃ-ಪ್ರಾಣವಲ್ಲವೆ ಅತ್ಯಂತಪ್ರಿಯವಾಗಿರುವುದು, ತಂ-ಆ ಪ್ರಾಣವನ್ನೂ, ಅನಾದೃತ್ಯ-ಆದರಿಸದೆ, ಮತ್ಪರಾಃ-ನನ್ನಲ್ಲಿ ಆಸಕ್ತರಾದಿರಿ ॥೪೦॥ ವಿಶುದ್ಧಭಾವೇನ-ನಿರ್ಮಲಚಿತ್ತದೊಡನೆ,ಗುರೌ-ಗುರುವಿನವಿಷಯದಲ್ಲಿ, ಸರ್ವಾರ್ಥಾತ್ಮಾರ್ಪಣಂ-ಎಲ್ಲವನ್ನೂ ತನ್ನನ್ನೂಕೊಟ್ಟುಬಿಡೋಣವು, ಯದ್ವೈ-ಯಾವುದುಂಟೋ, ಸಚ್ಛಿಷ್ಯೈಃ-ಉತ್ತಮಶಿಷ್ಯರಿಂದ, ಕರ್ತವ್ಯಾ-ಮಾಡಲ್ಪಡತಕ್ಕ ಗುರುನಿಷ್ಕೃತಿಃ-ಗುರುವಿಗೆಮಾಡತಕ್ಕ ಪ್ರತ್ಯುಪಕಾರವು, ಇಯದೇವಹಿ-ಇಷ್ಟೇಅಲ್ಲವೆ ॥೪೧॥ ದ್ವಿಜಶ್ರೇಷ್ಠಾಃ-ಎಲೈ ಬ್ರಾಹ್ಮಣೋತ್ತಮರೇ, ಅಹಂ-ನಾನು, ವಃ-ನಿಮ್ಮವಿಷಯದಲ್ಲಿ, ತುಷ್ಟಃ-ತೃಪ್ತಿಯುಂಟಾದವನಾದೆನು, ಮನೋರಥಾಃ- ನಿಮ್ಮಬಯಕೆಗಳು, ಸತ್ಯಾಸ್ಸಂತು-ದಿಟವಾದವಾಗಲಿ, ಇಹ-ಈ ಲೋಕದಲ್ಲಿಯೂ, ಪರತ್ರಚ-ಪರಲೋಕದಲ್ಲಿಯೂ, ಛಂದಾಂಸಿ-ವೇದಂಗಳು

---

ಸಹ ನಾವು ಸ್ವಲ್ಪವಾದರೂ ತಿಳಿದವರಾಗಲಿಲ್ಲ ॥೩೭॥ ಆಗನಾವು ಮಹಾವಾಯುವಿನಿಂದಲೂ ವರ್ಷೋದಕಂಗಳಿಂದಲೂ ಬಾರಿಬಾರಿಗೂ ಬಡಿಯಲ್ಪಡುತ ದಿಕ್ಕುಗಳನರಿಯದೆ ನಾಲ್ಕುಕಡೆಯಲ್ಲಿಯೂ ಜಲಮಯವಾಗಿಯೂ ಇರುವ ಮಹಾರಣ್ಯದಲ್ಲಿ ಅತಿಪೀಡಿತರಾಗಿ ಒಬ್ಬರಹಸ್ತಂಗಳ ನೋರ್ವ್ವರು ಹಿಡಿದುಕೊಂಡು ಕಾಷ್ಠಭಾರವಂ ವಹಿಸಿದವರಾದೆವು ॥೩೮॥ ಆಗ ಆಸಾಂದೀಪನೆಂಬ ನಮ್ಮಗುರುವು ಸೂರ್ಯೋದಯವಾಗುತಲೂ ನಮ್ಮವೃತ್ತಾಂತವಂ ತಿಳಿಯಲು ನಮ್ಮಂ ಹುಡುಕುತ ಪಾಯುವರ್ಷಗಳಿಂ ಪೀಡಿತರಾದ ಶಿಷ್ಯರಾದ ನಮ್ಮಂಕಂಡುದಯೆಯಿಂದ ಈರೀತಿಯಾಗಿ ಪೇಳಿದನೆಂತೆನೆ ॥೩೯॥ ಎಲೈಪುತ್ರರೇ! ನೀವು ನನಗೋಸುಗವಾಗಿ ಬಹಳ ಶ್ರಮಪಟ್ಟವರಾದಿರಿ ಲೋಕದಲ್ಲಿ ಪ್ರಾಣಿಗಳಿಗೆ ದೇಹವೇಅತ್ಯಂತಪ್ರಿಯವಾದದ್ದು, ಅಂತಾದೇಹವಂಸಹ ಗಣಿಸೆಮಾಡದೆ ಗುರುಕಾರ್ಯದಲ್ಲಿ ನೀವು ಉದ್ಯುಕ್ತರಾದಿರೆಂಬುವುದು ಯಾವುದೋ॥೪೦॥ ಇಷ್ಟುಮಾತ್ರವೇ ಉತ್ತಮರಾದ ಶಿಷ್ಯರಿಂದ ಗುರುವಿಗೆ ಮಾಡತಕ್ಕ ಪ್ರತ್ಯುಪಕಾರವು, ಯಾವಕಾರಣದಿಂದ ಪರಿಶುದ್ಧವಾದ ಮನಸ್ಸುಳ್ಳ ನಿಮ್ಮಿಂದ ಸರ್ವಾರ್ಥಸಾಧಕವಾದ ದೇಹವು ಗುರುವಿಗೋಸುಗ ಸಮರ್ಪಿಸಲ್ಪಟ್ಟಿತೋ ಆಕಾರಣದಿಂ ॥೪೧॥ ನಾನು ಪ್ರಸನ್ನನಾದೆನು. ನಿಮ್ಮಮನೋರಥಂಗಳು ಯಥಾರ್ಥಂಗಳಾಗಲಿ, ನನ್ನದೆಸೆಯಿಂದ ಅಧ್ಯಯನಂ ಗೆಯ್ಯಲ್ಪಟ್ಟಿರುವ ವೇದಂಗಳು ಇಹಲೋಕದಲ್ಲಿಯೂ ಪರಲೋಕಂಗಳಲ್ಲಿಯೂ ಸಫಲಂಗಳಾಗಲಿ, ಎಂದು ಸಾಂದೀಪನೆಂಬ ಗುರುವು ನಮಗೆ ಅ

ನಿಭವಂತ್ವಿಹಪರತ್ರಚ ‖೪೧‖ ಇತ್ಥಂವಿಧಾನ್ಯನೇಕಾನಿವಸತಾಂಗುರುವೇಶ್ಮಸು । ಗುರೋರನುಗ್ರಹೇಣೈವಪುಮಾನ್‌ಪೂರ್ಣಃಪ್ರಜಾಯತೇ ‖೪೨‖ ಕುಚೇಲಃ–ಕಿಮಸ್ಮಾಭಿರನಿರ್ವೃತ್ತಂದೇವದೇವಜಗದ್ಗುರೋ । ಭವತಾಸತ್ಯಕಾಮೇನಯೇಷಾಂವಾಸೋಗುರಾವಭೂತ್ ‖೪೩‖ ಯಸ್ಯಚ್ಛಂದೋಮಯಂಬ್ರಹ್ಮದೇಹಆವಪನಂವಿಭೋ । ಶ್ರೇಯಸಾಂತಸ್ಯಗುರುಷುವಾಸೋತ್ಯಂತವಿಡಂಬನಮ್ ‖ ... ... ‖೪೪‖

ಇತಿಶ್ರೀಮದ್ಭಾಗವತೇ-ದಶಮಸ್ಕಂಧೇ-ಅಶೀತಿತಮೋಧ್ಯಾಯಃ-

---

ಅಯಾತಯಾಮಾನಿ-ತಂಗಳಾದ ವಲ್ಲದ್ದು, ಭವಂತು-ಆಗಲಿ, ‖೪೧‖ ಗುರುವೇಶ್ಮಸು-ಗುರುವಿನ ಮನೆಗಳಲ್ಲಿ, ನಿವಸತಾಂ-ವಾಸಮಾಡುವ ಶಿಷ್ಯರಿಗೆ, ಇತ್ಥಂವಿಧಾನಿ-ಇಂಥಾಬಗೆಯುಳ್ಳ ಕೆಲಸಗಳು, ಅನೇಕಾನಿ-ಬಹುವಾಗಿರುವವು, ಪುಮಾನ್- ಪುರುಷನು, ಗುರೋಃ-ಆ ಚಾರ್ಯನ, ಅನುಗ್ರಹೇಣೈವ-ಪ್ರಸಾದದಿಂದಲೇ, ಪೂರ್ಣಃ-ತುಂಬಿದವನು, ಪ್ರಜಾಯತೇ- ಆಗುವನು‖ ದೇವದೇವ-ಪ್ರಭುಗಳಿಗೆ ಪ್ರಭುವಾದ, ಜಗದ್ಗುರೋ-ಲೋಕೇಶ್ವರನೇ, ಏಷಾಂ-ಯಾರಿಗೆ, ಸತ್ಯಕಾಮೇನ-ದಿಟವಾದಮನೋರಥವುಳ್ಳ, ಭವತಾ-ನಿನ್ನೊಡನೆ, ಗುರೌ-ಗುರುವಿನಬಳಿಯಲ್ಲಿ, ವಾಸೋಭೂತ್-ಇರೋಣವಾಯಿತೋ, ಅಸ್ಮಾಭಿಃ-ಆನಮ್ಮಿಂದ, ಅನಿವೃತ್ತಂ-ನೆರವೇರಿಸಲ್ಪಡದೇ ಇರುವುದು, ಕಿಂ-ಏನುಂಟು ‖೪೩‖ ವಿಭೋ-ವ್ಯಾಪಕನಾದ ಕೃಷ್ಣನೇ, ಯಸ್ಯ- ಯಾವಪುರುಷನಿಗೆ, ಛಂದೋಮಯಂ-ವೇದವಿಕಾರವಾದಂಥಾ, ಬ್ರಹ್ಮ-ಶಬ್ದತತ್ವವು, ಶ್ರೇಯಸಾಂ-ಸುಖಗಳಿಗೆ, ಆವಪನಂ-ಉತ್ಪತ್ತಿಸ್ಥಾನವಾದ, ಯಜ್ಞವೂ, ದೇಹ-ಗುಣಮೂರ್ತಿಯಾಗಿರುವುದೋ, ತಸ್ಯ-ಆತನಿಗೆ, ಗುರುಷುವಾಸಃ-ಗುರುಗಳ ಬಳಿಯಲ್ಲಿರೋಣವು, ಅತ್ಯಂತವಿಡಂಬನಂ-ಕೇವಲವಾದ ಲೋಕಾನುಸರಣಲೀಲೆಯಾಗಿರುತ್ತೆ. ‖೪೪‖

ಇಂತೆಂಬಲ್ಲಿಗೆ ಭಾಗವತ ಪ್ರತಿಶಬ್ದಾರ್ಥ ಬೋಧಿನಿಯಲ್ಲಿ ದಶಮಸ್ಕಂಧದೊಳು

೮೦ ನೆಯ ಅಧ್ಯಾಯಂ ಮುಗಿದುದು.

---

ಶೀರ್ವಾದವಂಗೆಯ್ದನೆಂಬ ವೃತ್ತಾಂತವಂ ಸ್ಮರಿಸುತಲಿರುವೆಯಾಪನು ‖೪೧‖ ಎಲೈಮಿತ್ರನೇ! ಮತ್ತು ಗುರುಗೃಹಂಗಳಲ್ಲಿ ವಾಸಂಗೆಯ್ಯುತಲಿರುವ ನಮ್ಮ ಇಂತಾ ಅನೇಕ ವೃತ್ತಾಂತಂಗಳಂ ಸಹ ಸ್ಮರಿಸುತಿರುವೆಯೋ ಏನು? ಗುರುವಿನಅನುಗ್ರಹವುಳ್ಳಪುರುಷನು ಪೂರ್ಣವಾಗಿ ಉಪಶಾಂತಿಯನೆಯ್ದುವನು ‖೪೨‖ ಎಂದು ಶ್ರೀಕೃಷ್ಣನು ಪ್ರಶ್ನೆಗೆಯ್ಯಲು ಆ ಕುಚೇಲನು ಶ್ರೀಕೃಷ್ಣನಂ ಕುರಿತು ಪೇಳುವನದೆಂತೆನೆ- ಎಲೈದೇವೋತ್ತಮನಾದ ಜಗದ್ಗುರುವಾದ ಶ್ರೀಕೃಷ್ಣನೇ! ಯಾವನಮಗೆ ಸತ್ಯಸಂಕಲ್ಪನಾದ ನಿನ್ನೊಡನೆ ಗುರುಗೃಹದಲ್ಲಿ ವಾಸವುಂಟಾಯಿತೋ ಅಂತಾನಾವು ಯಾವಯಿಷ್ಟಾರ್ಥವಂ ತಾನೆ ಪಡೆದಂತವರಾಗದಿರುವೆವು- ನಾವು ಸಮಸ್ತಂಗಳಾದ ಇಷ್ಟಾರ್ಥಂಗಳಂ ಪಡೆದಂತವರೇ ಆದೆವು ‖೪೩‖ ಎಲೈಶ್ರೀಕೃಷ್ಣನೇ! ಯಾವನಿನಗೆ ಸಮಸ್ತ ಶ್ರೇಯಸ್ಸುಗಳಿಗೂ ಉತ್ಪತ್ತಿಸ್ಥಾನವಾದವೇದವೇ ದೇಹವಾಗಿರುವುದೋ ಅಂತಾ ವೇದಮೂರ್ತಿಯಾದ ನಿನಗೆ ಗುರುಗೃಹದಲ್ಲಿ ! ವಾಸವುಂಟಾಯಿತೆಂಬುವುದು ಅತ್ಯಂತ ವಿಡಂಬನವೇ ಹೊರತು ಇದೇ ಯಥಾರ್ಥವಲ್ಲವು ‖೪೪‖ ಶ್ರೀಕೃಷ್ಣನಂ ಕುರಿತು ವಿಜ್ಞಾಪಿಸಿದನು ‖%‖

ಇಂತು ಶ್ರೀಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸಿದನೆಂದು ಸೂತಪೌರಾಣಿಕನು ನೈಮಿಶಾರಣ್ಯವಾಸಿಗಳಾದ ಶೌನಕಾದಿ ಮಹರ್ಷಿಗಳಿಗೆ ಪೇಳಿದನೆಂಬಲ್ಲಿಗೆ ಶ್ರೀ ಮನ್ಮಹೀಶೂರ ಪುರವರಾಧೀಶ ಶ್ರೀ ಚಾಮರಾಜತನುಜ ಶ್ರೀಮತ್ಕೃಷ್ಣರಾಜವಿರಚಿತಮಾದ "ಶ್ರೀಕೃಷ್ಣರಾಜ ವಾಣೀವಿಲಾಸ"ವೆಂಬ ಶ್ರೀಭಾಗವತಪುರಾಣದ ಕರ್ಣಾಟಭಾಷಾವ್ಯಾಖ್ಯಾನದಲ್ಲಿ ದಶಮಸ್ಕಂಧದ ೮೦ನೇಯಧ್ಯಾಯಂ ಮುಗಿದುದು.



ಶ್ರೀಶುಕಃ ॥ ಸಇತ್ಥಂದ್ವಿಜಮುಖ್ಯೇನಸಹಸಂಕಥಯನ್ಹರಿಃ । ಸರ್ವಭೂತಮನೋಭಿಜ್ಞಃಸ್ಮಯಮಾನಉವಾಚತಮ್ ॥೧॥ ಬ್ರಹ್ಮಣ್ಯೋಬ್ರಾಹ್ಮಣಂಕೃಷ್ಣೋಭಗವಾನ್ಪ್ರಹಸನ್ಪ್ರಿಯಮ್ । ಪ್ರೇಮ್ಣಾನಿರೀಕ್ಷಣೇನೈವಪ್ರೇಕ್ಷನ್ಖಲುಸತಾಂಗತಿಃ ॥ಕೃಷ್ಣಃ॥ ಕಿಮುಪಾಯನಮಾನೀತಂಬ್ರಹ್ಮನ್ಮೇಭವತಾಗೃಹಾತ್ ॥೨॥ ಅಣ್ವಪ್ಯುಪಾಹೃತಂಭಕ್ತೈಃಪ್ರೇಮ್ಣಾಭೂರ್ಯೇವಮೇಭವೇತ್ । ಭೂರ್ಯಪ್ಯಭಕ್ತೋಪಹೃತಂನಮೇತೋಷಾಯಕಲ್ಪತೇ ॥೩॥ ಪತ್ರಂಪುಷ್ಪಂಫಲಂತೋಯಂಯೋಮೇಭಕ್ತ್ಯಾಪ್ರಯಚ್ಛತಿ । ತದಹಂಭಕ್ತ್ಯುಪಹೃತಮಶ್ನಾಮಿಪ್ರಯತಾತ್ಮನಃ ॥೪॥ ಇತ್ಯುಕ್ತೋಽಪಿದ್ವಿಜಸ್ತಸ್ಮೈವ್ರೀಡಿತಃಪತಯೇಶ್ರಿಯಃ । ಪೃಥು

---

### ೮೧ ನೆಯ ಅಧ್ಯಾಯದ ಪ್ರತಿಪದಟೀಕೆ

ಸರ್ವಭೂತಮನೋಭಿಜ್ಞಃ-ಸಕಲಪ್ರಾಣಿಗಳ ಹೃದಯವಂಬಲ್ಲವನಾದ, ಸಹರಿಃ-ಆ ಕೃಷ್ಣನು, ಇತ್ಥಂ-ಹೀಗೆ, ದ್ವಿಜಮುಖ್ಯೇನಸಹ-ಬ್ರಾಹ್ಮಣಶ್ರೇಷ್ಠರೊಡನೆ, ಸಂಕಥಯನ್-ಸಂಭಾಷಿಸುತ್ತಿರುವನಾಗಿ, ಸ್ಮಯಮಾನಃ-ಆಶ್ಚರ್ಯಪಡುವನಾಗುತ್ತ, ತಂ-ಅವನನ್ನು ಕುರಿತು, ಉವಾಚ-ನುಡಿದನು ॥೧॥ ಬ್ರಹ್ಮಣ್ಯಃ-ಬ್ರಾಹ್ಮಣಪ್ರಿಯನೂ, ಸತಾಂ-ಸತ್ಪುರುಷರಿಗೆ, ಗತಿಃ-ಪ್ರಾಪ್ಯನೂ, ಭಗವಾನ್-ಷಡ್ಗುಣೈಶ್ವರ್ಯಪೂರ್ಣನೂ, ಆದ-ಕೃಷ್ಣಃ-ವಾಸುದೇವನು, ಪ್ರಿಯಂ-ಇಷ್ಟನಾದ, ಬ್ರಾಹ್ಮಣಂ-ಕುಚೇಲನನ್ನು, ಪ್ರೇಮ್ಣಾ-ಪ್ರಿಯತ್ವದಿಂದ, ನಿರೀಕ್ಷಣೇನೈವ-ಕಟಾಕ್ಷದಿಂದಲೇ, ಪ್ರೇಕ್ಷನ್-ನೋಡುತ್ತಿರುವನಾಗಿ, ಪ್ರಹಸನ್-ಅಧಿಕವಾಗಿ ನಗುತ್ತಿರುವನಾಗಿ, ಉವಾಚಖಲು-ನುಡಿದನಲ್ಲವೆ ॥೨॥ ಬ್ರಹ್ಮನ್-ಬ್ರಾಹ್ಮಣನೇ, ಮೇ-ನನಗೆ, ಭವತಾ-ನಿನ್ನಿಂದ, ಗೃಹಾತ್-ಮನೆಯ ಕಡೆಯಿಂದ, ಕಿಮುಪಾಯನಂ-ಯಾವಉಪಹಾರದ್ರವ್ಯವು, ಆನೀತಂ-ತರಲ್ಪಟ್ಟದ್ದಾಗಿದೆ ॥೩॥ ಭಕ್ತೈಃ-ಪ್ರೀತಿಸುವವರಿಂದ, ಪ್ರೇಮ್ಣಾ-ಸ್ನೇಹದಿಂದ, ಉಪಾಹೃತಂ-ಕಾಣಿಕೆಯಾಗಿ ಸಮರ್ಪಿಸಲ್ಪಟ್ಟದ್ದು, ಮೇ-ನನಗೆ, ಭೂರ್ಯೇವ-ಬಹಳವಾದ್ದೇ, ಭವೇತ್-ಆಗುವದು. ಅಭಕ್ತೋಪಹೃತಂ-ಪ್ರೀತಿಇಲ್ಲದವರಿಂದ ಕೊಡಲ್ಪಟ್ಟದ್ದು, ಭೂರ್ಯಪಿ-ಬಹುವಾದರೂ, ಮೇ-ನನ್ನ, ತೋಷಾಯ-ಸಂತೋಷಕ್ಕೆ, ನಕಲ್ಪತೇ-ಯೋಗ್ಯವಾಗುವದಿಲ್ಲ. ॥೪॥ ಯಃ-ಯಾವಪುರುಷನು, ಮೇ-ನನಗೆ, ಭಕ್ತ್ಯಾ-ಪ್ರೀತಿಯಿಂದ, ಪತ್ರಂ-ಎಲೆಯನ್ನಾಗಲೀ, ಪುಷ್ಪಂ-ಹೂವನ್ನಾಗಲೀ, ಫಲಂ-ಹಣ್ಣನ್ನಾಗಲೀ, ತೋಯಂ-ನೀರನ್ನಾಗಲೀ, ಪ್ರಯಚ್ಛತಿ-ಚೆನ್ನಾಗಿಕೊಡುವನೋ, ಪ್ರಯತಾತ್ಮನಃ-ಜಿತಹೃದಯನಾದ ಭಕ್ತನಿಂದ ಭಕ್ತ್ಯುಪಹೃತಂ-ಪ್ರೀತಿಯಿಂದ ಸಮರ್ಪಿಸಲ್ಪಟ್ಟ, ತತ್-ಅದರನ್ನು, ಅಶ್ನಾಮಿ-ಅನುಭವಿಸುವೆನು ॥೫॥ ರಾಜನ್-ಪರೀಕ್ಷಿತನೇ ! ಇತ್ಯುಕ್ತೋಽಪಿ-ಹೀಗೆಹೇ

---

### ೮೧ನೆಯಅಧ್ಯಾಯವು !

ಶ್ರೀಧರೀಯಶ್ಲೋಕಃ ಏಕಾಶೀತಿತಮೇಸಖ್ಯುರ್ಜಗ್ಧ್ವಾಪೃಥುಕತಂಡುಲಾನ್ । ಶ್ರಿಯಂನಿರ್ಮಿತವಾನಿಂದ್ರದುರ್ಲಭಾಂತುತದಾಶ್ರಮೇ ॥ % ॥ಟೀ॥ ಎಂಭತ್ತೊಂದನೆಯ ಅಧ್ಯಾಯದಲ್ಲಿ ಶ್ರೀದಾಮನ ಅವಲಕ್ಕಿಯ ನಾಲ್ಕೋಗಣಂಗೆಯ್ದು ಆಕುಚೇಲನ ಆಶ್ರಮದಲ್ಲಿ ಅವನರಿಯದಂತೆ ಇಂದ್ರನಿಗೂ ದುರ್ಲಭವಾದ ಐಶ್ವರ್ಯವಂ ಶ್ರೀಕೃಷ್ಣನು ನಿರ್ಮಿಸಿದನೆಂಬರ್ಥವಂ ಶುಕಮುನಿಯು ಪರೀಕ್ಷಿದ್ರಾಯಂಗೆ ನಿರೂಪಿಸುವನೆಂತೆನೆ,-

ಕೇಳೈ, ಅರಸೇ! ಈಪ್ರಕಾರವಾಗಿ ಶ್ರೀದಾಮನೊಡನೆ ಸಲ್ಲಾಪಂಗೆಯ್ದು ಸರ್ವಪ್ರಾಣಿಗಳ ಮನೋಗತಾಭಿಪ್ರಾಯಂಗಳ ನರಿತಿರುವ ಶ್ರೀಹರಿಯು ತನಗೋಸುಗ ಅವಲಕ್ಕಿಯಂ ಕೊಡಲು ನಾಚುವನೆಂದರಿತು ಮುಗುಳುನಗೆಯುಳ್ಳವನಾಗಿ ॥೧॥ ಸತ್ಪುರುಷರಿಗೆ ಗತಿಯಾಗಿಯೂ ಬ್ರಹ್ಮಜ್ಞಾನಿಯಾಗಿಯೂ ಭಗವಂತನಾಗಿಯೂ ಇರುವ ಕೃಷ್ಣನು ಪ್ರಿಯನಾದ ಬ್ರಾಹ್ಮಣನನ್ನು ಪ್ರೇಮಪೂರ್ವಕ ನೋಟದಿಂದ ನೋಡುತಲಿರುವನಾಗಿ.. ನುಡಿದನದೆಂತೆನೆ ॥೨॥ ಎಲೈಸಖನೇ! ನೀನು ಮನೆಯಿಂದ ನನಗೋಸುಗ ಯಾವ ಉಪಹಾರವು ತಂದಿರುವಿ? ॥೩॥ ಭಕ್ತರಿಂದ ಪ್ರೀತಿಪೂರ್ವಕವಾಗಿ ತರಲ್ಪಟ್ಟದ್ದು ಸ್ವಲ್ಪವಾದಾಗ್ಯೂ ಅದುನನಗೆ ಬಹಳವೇ ಆದೀತು, ಅಭಕ್ತರಿಂದ ತರಲ್ಪಟ್ಟದ್ದು ಬಹಳವಾದರೂ ನನಗೆ, ಸಂತೋಷವಂ ಮಾಡಲಾರದು ॥೪॥ ಪತ್ರವನಾದರೂ ಪುಷ್ಪವನಾದರೂ ಫಲವನಾದರೂ ಜಲವನಾದರೂ ಯಾವಾತನು ದೃಢಮನಸ್ಕನಾಗಿ ನನಗೋಸುಗ ಭಕ್ತಿಯಿಂ ಸಮರ್ಪಿಸುವನೋ ಭಕ್ತಿಯಿಂದರ್ಪಿತವಾದ ಆವಸ್ತುವಂ ಪರಮಯೋಗ್ಯವನ್ನಾಗಿ ನಾನು ಅಂಗೀಕರಿಸುವೆನು ॥೫॥ ಎಂದು ಶ್ರೀಕೃಷ್ಣನಿಂದ ಪ್ರೇ

ಕಪ್ರಸೃತಿಂರಾಜನ್ನಪ್ರಾಯಚ್ಛದವಾಙ್ಮುಖಃ ॥೬॥ ಸರ್ವಭೂತಾತ್ಮದೃಕ್ಸಾಕ್ಷಾತ್ತಸ್ಯಾಗಮನಕಾರಣಮ್ ।ವಿಜ್ಞಾಯಾಚಿಂತಯನ್ನಾಯಂಶ್ರೀಕಾಮೋಮಾಭಜತ್ಪುರಾ॥೭॥ಪತ್ನ್ಯಾಃಪತಿವ್ರತಾಯಾಸ್ತುಸಖಾಪ್ರಿಯಚಿಕೀರ್ಷಯಾ।ಪ್ರಾಪ್ತೋಮಾಮಸ್ಯದಾಸ್ಯಾಮಿಸಂಪದೋಮರ್ತ್ಯದುರ್ಲಭಾಃ॥೮॥ ಇತ್ಥಂವಿಚಿಂತ್ಯವಸನಾಚ್ಚೀರಬದ್ಧಾನ್ದ್ವಿಜನ್ಮನಃ।ಸ್ವಯಂಜಹಾರಕಿಮಿದಮಿತಿಪೃಥುಕತಂಡುಲಾನ್ ॥೯॥ ನನ್ವೇತದುಪನೀತಂಮೇಪರಮಪ್ರೀಣನಂಸಖೇ ।ತರ್ಪಯಂತ್ಯಂಗಮಾಂವಿಶ್ವಮೇತೇಪೃಥುಕತಂಡುಲಾಃ॥ ೧೦॥ ಇತಿಮುಷ್ಟಿಂಸಕೃಜ್ಜಗ್ಧ್ವಾದ್ವಿತೀಯಾಂಜಗ್ಧುಮಾದದೇ ।ತಾವಚ್ಛ್ರೀರ್ಜಗೃಹೇಹಸ್ತಂತತ್ಪರಾಪರಮೇಷ್ಠಿನಃ॥೧೧॥ಏತಾವತಾಲಂವಿಶ್ವಾತ್ಮನ್ಸರ್ವಸಂಪತ್ಸಮೃದ್ಧಯೇ ।ಅಸ್ಮಿನ್ಲೋಕೇಥವಾಮುಷ್ಮಿನ್

---

ಕಿಲ್ಪಟ್ಟವನಾದರೂ, ವ್ರೀಡಿತಃ-ನಾಚಿಕೆಯುಂಟಾದವನಾದ್ದರಿಂದ, ಅವಾಙ್ಮುಖಃ-ಬಗ್ಗಿದ ಮೋರೆಯುಳ್ಳವನಾದ, ದ್ವಿಜಃ-ಕುಚೇಲನೆಂಬ ಬ್ರಾಹ್ಮಣನು, ಶ್ರಿಯಃಪತಯೇ-ಲಕ್ಷ್ಮಿಯರಸನಾದ ಕೃಷ್ಣನಿಗೆ, ಪೃಥುಕಪ್ರಸೃತಿಂ-ಸೇರೆ ಅವಲಕ್ಕಿಯನ್ನು ನಪ್ರಾಯಚ್ಛತ್-ಸಮರ್ಪಿಸಲಿಲ್ಲವು ॥೬॥ ಸಾಕ್ಷಾತ್-ಪ್ರತ್ಯಕ್ಷವಾಗಿ, ಸರ್ವಭೂತಾತ್ಮದೃಕ್-ಸಕಲಪ್ರಾಣಿಗಳ ಹೃದಯವನ್ನು ನೋಡುತ್ತಿರುವ, ಕೃಷ್ಣನು, ತಸ್ಯ-ಆ ಕುಚೇಲನ, ಆಗಮನಕಾರಣಂ-ಬರುವಿಕೆಗೆ ನಿಮಿತ್ತವನ್ನು, ವಿಜ್ಞಾಯ-ತಿಳಿದು, ಅಚಿಂತಯತ್-ಆಲೋಚಿಸಿದನು ಅಯಂ-ಇವನು, ಪುರಾ-ಪೂರ್ವಜನ್ಮದಲ್ಲಿ, ಶ್ರೀಕಾಮಃ- ಸಂಪತ್ತುಗಳಂ ಬಯಸಿದವನಾಗಿ, ಮಾ-ನನ್ನನ್ನು, ನಾಭಜತ್-ಸೇವಿಸಲಿಲ್ಲವು ॥೭॥ ಮೇ-ನನ್ನ, ಸಖಾ-ಸ್ನೇಹಿತನಾದ್ದರಿಂದ, ಪತಿವ್ರತಾಯಾಃ-ಪತಿಭಕ್ತಿಯುಳ್ಳ, ಪತ್ನ್ಯಾಃ-ಹೆಂಡತಿಗೆ, ಪ್ರಿಯಚಿಕೀರ್ಷಯಾ-ಇಷ್ಟವನ್ನು ಮಾಡುವುದಕ್ಕೆ ಅಪೇಕ್ಷೆಯಿಂದ, ಮಾಂ-ನನ್ನಂಕುರಿತು, ಪ್ರಾಪ್ತಃ-ಬಂದವನಾದನು, ಅಸ್ಯ-ಇವನಿಗೆ, ಮರ್ತ್ಯದುರ್ಲಭಾಃ-ಮನುಷ್ಯರಿಂದ ಪ್ರಯಾಸದಿಂದಲೂ ಪಡೆಯಲ್ಪಡತಕ್ಕವುಗಳಲ್ಲದ, ಸಂಪದಃ-ಧನಸಮೃದ್ಧಿಗಳನ್ನು,ದಾಸ್ಯಾಮಿ-ಕೊಡುವೆನು ॥೮॥ ಇತ್ಥಂ-ಹೀಗೆ, ವಿಚಿಂತ್ಯ-ಯೋಚಿಸಿ ದ್ವಿಜನ್ಮನಃ-ಬ್ರಾಹ್ಮಣನ, ವಸನಾತ್-ವಸ್ತ್ರದಿಂದ, ಚೀರಬದ್ಧಾನ್-ಚಿಂದಿಯಲ್ಲಿ ಕಟ್ಟಲ್ಪಟ್ಟಿರುವ, ಪೃಥುಕತಂಡುಲಾನ್- ಅವಲಕ್ಕಿಯನ್ನು, ಕಿಮಿದಮಿತಿ-ಇದೇನೆಂದು, ಸ್ವಯಂಜಹಾರ-ತಾನೆ ತೆಕ್ಕೊಂಡನು ॥೯॥ ಸಖೇ-ಸ್ನೇಹಿತನೇ ! ಏತತ್-ಇದು, ಮೇ-ನನಗಾಗಿ, ಉಪನೀತಂನನು-ತರಲ್ಪಟ್ಟಿರುವುದಲ್ಲವೆ ? ಅಂಗ-ಪ್ರಿಯನೇ । ಪರಮಪ್ರೀಣನಂ-ಉತ್ತಮವಾದ ಸಂತೋಷಕರವಾಗಿದೆ, ಏತೇಪೃಥುಕತಂಡುಲಾಃ-ಈ ಅವಲಕ್ಕಿಗಳು, ವಿಶ್ವಂ-ಪ್ರಪಂಚಸ್ವರೂಪನಾದ, ಮಾಂ-ನನ್ನನ್ನು, ತರ್ಪಯಂತಿ-ತೃಪ್ತಿಗೊಳಿಸುವವು ॥೧೦॥ ಇತಿ-ಹೀಗೆಂದು, ಮುಷ್ಟಿಂ-ಒಂದುಹಿಡಿಯನ್ನು, ಸಕೃತ್-ಒಂದುಸಲ, ಜಗ್ಧ್ವಾ-ತಿಂದು, ದ್ವಿತೀಯಾಂ-ಎರಡನೆಯ ಹಿಡಿಯನ್ನು, ಜಗ್ಧುಂ-ತಿನ್ನುವುದಕ್ಕೆ, ಆದದೇ-ತೆಗೆದುಕೊಂಡನು ತಾವತ್-ಅಷ್ಟರಲ್ಲಿ, ಶ್ರೀಃ-ರುಕ್ಮಿಣಿಯು, ಸತ್ವರಾ-ವೇಗದಿಂ ಸಹಿತಳಾಗಿ, ಪರಮೇಷ್ಠಿನಃ-ಪರಮಾತ್ಮನಾದ ಕೃಷ್ಣನ, ಹಸ್ತಂ-ಕೈಯನ್ನು, ಜಗೃಹೇ- ಹಿಡಿದ

---

ಲ್ಪಟ್ಟವನಾದರೂ ಬ್ರಾಹ್ಮಣೋತ್ತಮನಾದ ಕುಚೇಲನು ಲಜ್ಜೆಯಿಂದ ತಲೆಯಂಬಗ್ಗಿಸಿಕೊಂಡುಲಕ್ಷ್ಮೀಪತಿಯಾದ ಶ್ರೀಕೃಷ್ಣನಿಗೋಸುಗ ಒಂದುಸೇರೆಯೇಯೆಂದು ಅವಲಕ್ಕಿಯಂ ಕೊಡಲಿಲ್ಲ॥೬॥ ಸರ್ವಪ್ರಾಣಿಗಳ ಅಂತಃಕರಣಕ್ಕೆಸಾಕ್ಷಿಯಾದ ಸಾಕ್ಷಾಲ್ಲಕ್ಷ್ಮೀಪತಿಯಾದ ಶ್ರೀಕೃಷ್ಣನು ಕುಚೇಲನ ಆಗಮನಕ್ಕೆ ಕಾರಣವಂತಿಳಿದು ಆಲೋಚಿಸಿ ಈದ್ವಿಜನು ಪೂರ್ವದಲ್ಲಿ ಧನಾಭಿಲಾಷೆಯುಳ್ಳವನಾಗಿ ನನ್ನನ್ನು ಭಜಿಸಿದನು॥೭॥ಈಜನ್ಮದಲ್ಲಿ ನನಗೆ ಸಖನಾಗಿ ಪತಿವ್ರತೆಯಾದ ಪತ್ನಿಗೆ ಪ್ರಿಯವಂ ಮಾಡಲಿಚ್ಛೆಯಿಂದ ನನ್ನಸಮೀಪಕ್ಕೆ ಬಂದನು. ಆದಕಾರಣದಿಂದ ಇವನಿಗೋಸುಗ ಮನುಷ್ಯರಿಂ ಪಡೆಯಲಶಕ್ಯವಾದ ಭಾಗ್ಯವನೀವೆನು ॥೮॥ ಎಂದು ನಿಶ್ಚಯಿಸಿ ಆದ್ವಿಜನ ಜೀರ್ಣವಾದ ವಸ್ತ್ರದಲ್ಲಿ ಹೇಗೆಹೇಗೋ ಬಹಳಹೊತ್ತು ಕಟ್ಟಲ್ಪಟ್ಟ ಅವಲಕ್ಕಿ ಇದೇನೆಂದು ತಾನೇತೆಗೆದುಕೊಂಡನು ॥೯॥ ಎಲೈ, ಸಖನೇ! ನಿನ್ನಿಂದ ತರಲ್ಪಟ್ಟ ಈಉಪಹಾರದ್ರವ್ಯವು ನನಗೆ ಅತ್ಯಂತತೃಪ್ತಿಕರವು, ಮತ್ತು ಈಯವಲಕ್ಕಿಯು ವಿಶ್ವಮೂರ್ತಿಯಾದ ನನಗೆ ಎಂದಿಗೂ ಹಸಿವಿಲ್ಲದಂತೆ ಸಂತುಷ್ಟಿಯಂ ಮಾಡುವುದು ॥೧೦॥ ಇಂತೆಂದು ಶ್ರೀಕೃಷ್ಣನು ಒಂದು ಹಿಡಿಯ ಅವಲಕ್ಕಿಯಂತೆಗೆದು ತಾನು ಭಕ್ಷಣಾಗೆಯ್ದು ಎರಡನೆಯ ಮುಷ್ಟಿಯ ಅವಲಕ್ಕಿಯು

ಪುಂಸಸ್ತ್ವತ್ತೋಷಕಾರಣಮ್||೧೨||ಬ್ರಾಹ್ಮಣಸ್ತುರಜನೀಮುಷಿತ್ವಾಚ್ಯುತಮಂದಿರೆ,ಭುಕ್ತ್ವಾ
ಪೀತ್ವಾಸುಖಂಮೆನೆಹ್ಯಾತ್ಮಾನಂಸ್ವರ್ಗತಂನೃಪ ||೧೩|| ಶ್ವೋಭೂತೆವಿಶ್ವಭಾವೇನಸ್ವಸುಖೇನಾಭಿವಂದಿ
ತಃ | ಜಗಾಮಸ್ವಾಲಯಂತಾತಪಥ್ಯನುವ್ರಜ್ಯನಂದಿತಃ ||೧೪||ಸಚಾಲಬ್ಧ್ವಾಧನಂಕೃಷ್ಣಾನ್ನತುಯಾ
ಚಿತವಾನ್ಸ್ವಯಮ್ |ಸ್ವಗೃಹಾನ್ವ್ರೀಡಿತೋಗಚ್ಛನ್ಮಹದ್ದರ್ಶನನಿರ್ವೃತಃ ||೧೫|| ಅಹೋಬ್ರಹ್ಮಣ್ಯ

ಳು ||೧೧|| ವಿಶ್ವಾತ್ಮನ್-ಪ್ರಪಂಚಸ್ವರೂಪನಾದ ಕೃಷ್ಣನೇ, ಅಸ್ಮಿನ್ಲೋಕೆ-ಈ ಲೋಕದೊಳಗಾದರೂ, ಅಥವಾ-ಅಮು ಷ್ಮಿನ್-ಪರಲೋಕದಲ್ಲಿಯಾದರೂ, ಪುಂಸಃ-ಜೀವಾತ್ಮನಿಗೆ, ಸರ್ವಸಂಪತ್ಸಮೃದ್ಧಯೇ-ಸರ್ವಭಾಗ್ಯಗಳೂ ಪೂರ್ಣಗಳಾಗುವು ದಕ್ಕೆ, ತ್ವತ್ತೋಷಕಾರಣಂ-ನಿನ್ನನ್ನು ಸಂತೋಷಪಡಿಸುವುದಕ್ಕೆ ನಿಮಿತ್ತವು, ಏತಾವತಾ-ಹಿಡಿಯವಲಕ್ಕಿಯಂ ತಿಂದಮಾತ್ರ ದಿಂದಲೇ, ಅಲಂ-ಸಾಕು ||೧೨|| ನೃಪ-ಪರೀಕ್ಷಿದ್ರಾಯನೇ, ಬ್ರಾಹ್ಮಣಸ್ತು-ಕುಚೇಲನಾದರೋ, ಅಚ್ಯುತಮಂದಿರೇ-ಕೃಷ್ಣ ನಮನೆಯಲ್ಲಿ, ತಾಂರಜನೀಂ-ಆ ರಾತ್ರಿಯೊಳು, ಉಷಿತ್ವಾ-ವಾಸಮಂಮಾಡಿ; ಭುಕ್ತ್ವಾ-ಉಂಡು, ಪೀತ್ವಾ-ಕುಡಿದು, ಸುಖಂ-ಸುಖವಾಗಿರುವ, ಆತ್ಮಾನಂ-ತನ್ನನ್ನು, ಸ್ವರ್ಗತಂ-ಸ್ವರ್ಗವನ್ನು ಹೊಂದಿರುವವನನ್ನಾಗಿ, ಮೇನೇಹಿ-ತಿಳಿದವನಲ್ಲವೆ ||೧೩|| ತಾತ-ಅಯ್ಯಾ ಶ್ವೋಭೂತೇ-ಮಾರನೆಯದಿನ ಹೊತ್ತುಹುಟ್ಟುತಲೂ, ವಿಶ್ವಭಾವೇನ-ಪ್ರಪಂಚವನ್ನು ಉಂಟಾಗಿಸುವನಾದ,ಸ್ವ ಸುಖೇನ-ಆತ್ಮಾರಾಮನಾದ ಕೃಷ್ಣನಿಂದ, ಅಭಿವಂದಿತಃ-ನಮಸ್ಕರಿಸಲ್ಪಟ್ಟವನೂ, ಪಥಿ-ದಾರಿಯಲ್ಲಿ,ಅನುವ್ರಜ್ಯ-ಸಂಗಡಬಂ ದು, ನಂದಿತಃ-ಸಂತೋಷಗೊಳಿಸಲ್ಪಟ್ಟವನೂ ಆದ, ಬ್ರಾಹ್ಮಣನು, ಸ್ವಾಲಯಂ-ತನ್ನ ಮನೆಯಂ ಕುರಿತು, ಜಗಾಮ-ಹೋದ ನು ||೧೪|| ಸಚ-ಆ ಬ್ರಾಹ್ಮಣನಾದರೋ, ಸ್ವಯಂ-ತಾನಾಗಿ, ನಯಾಚಿತವಾನ್-ಬೇಡಿದವನಾಗಲಿಲ್ಲವು, ಸಖ್ಯುಃ-ಗೆಳೆಯನಾ ದ ಕೃಷ್ಣನದೆಸೆಯಿಂದ, ಧನಂ-ದ್ರವ್ಯವನ್ನು, ಅಲಬ್ಧ್ವಾ-ಪಡೆಯದೆ, ವ್ರೀಡಿತಃ-ನಾಚಿಕೆಹುಟ್ಟಿದವನಾದರೂ, ಮಹದ್ದರ್ಶ ನನಿರ್ವೃತಃ-ಮಹಾಪುರುಷನಂ ಕಂಡದ್ದರಿಂದ ಸಂತೋಷವುಳ್ಳವನಾಗಿ, ಸ್ವಗೃಹಾನ್-ತನ್ನ ಮನೆಯನ್ನು, ಅಗಚ್ಛತ್-ಸೇರಿದ ನು ||೧೫|| ಬ್ರಹ್ಮಣ್ಯದೇವಸ್ಯ-ಬ್ರಾಹ್ಮಣಪ್ರಿಯನಾದ ಪ್ರಭುವಿನ, ಬ್ರಹ್ಮಣ್ಯತಾ-ಬ್ರಾಹ್ಮಣಪ್ರಿಯತ್ವವು, ಮಯಾ-ನನ್ನಿಂ

ನ್ನು ಆರೋಗಣೆಗೆಯ್ಯಲೋಸುಗ ಯತ್ನಂಗೆಯ್ಯಲು, ಅನಿತರೊಳೆ ಸಾಕ್ಷಾಲ್ಲಕ್ಷ್ಮಿಯಾದ ರುಕ್ಮಿಣೀದೇವಿಯು ಸ ರ್ವೇಶ್ವರನಾದ ಶ್ರೀಕೃಷ್ಣನ ಹಸ್ತವಂ ಪಿಡಿದು ನುಡಿದಳೆಂತೆನೆ– ||೧೧|| ಕೇಳೈವಿಶ್ವಾತ್ಮಕನಾದ ಶ್ರೀಹರಿಯೇ! ಈಯೊಂದುಮುಷ್ಟಿಯ ಅವಲಕ್ಕಿಯು ಭಕ್ಷಣಮಾತ್ರದಿಂದಲೇ ಪುರುಷರಿಗೆ ಇಹಪರಂಗಳಲ್ಲಿ ನನ್ನ ಕಟಾಕ್ಷವಿಲಾ ಸಸ್ವರೂಪಂಗಳಾದ ಸಂಪತ್ಸಮೃದ್ಧಿಗಳನ್ನು ಉಂಟುಮಾಡಲೋಸುಗ ಸಾಕಾಗಿರ್ಪುದು. ಇನ್ನುಮೇಲೆ ಎರಡ ನೆಯಮುಷ್ಟಿಯ ಅವಲಕ್ಕಿಯು ನಾರೋಗಣೆಗೆಯ್ವುದರಿಂದ ನನ್ನನ್ನೇ ಅವನಧೀನಳಂ ಮಾಡಬೇಡ. ಯಾವಭ ಕ್ತನ ಸಂಪತ್ಸಮೃದ್ಧಿಯಂನೋಡಿ ನೀನು ಸಂತೋಷವನೆಯ್ದುವೆಯೋ ಅಂತಾಸಂಪತ್ಸಮೃದ್ಧಿಗೋಸುಗ ಇ ಷ್ಟು ಸಾಕೆಂದು ನುಡಿದಳು ||೧೨|| ಅನಂತರದಲ್ಲಿ ಆ ಬ್ರಾಹ್ಮಣನು ಶ್ರೀ ಕೃಷ್ಣನ ಮಂದಿರದಲ್ಲಿ ಆ ರಾತ್ರಿ ವಾ ಸಂಗೆಯ್ದು ಮೃಷ್ಟಾನ್ನವನುಂಡು ಶೈತ್ಯಸೌರಭ್ಯ ಸಹಿತವಾದ ಉದಕ ಮೊದಲಾದುದಂ ಪಾನಂಗೆಯ್ದು ಸುಖ ವಾಗಿ ನಿದ್ರೆಗೆಯ್ದವನಾಗಿ ತಾನು ಸ್ವರ್ಗದಲ್ಲಿ ವಾಸಂಗೆಯ್ವೆನೆಂದು ತಿಳಿದನು ||೧೩|| ಕೇಳೈ ಅರಸೇ, ಅನಂತರದ ಲ್ಲಿ ಸೂರ್ಯೋದಯವಾಗುತಲೂ ಇಂದ್ರನಿಂದಲೂ ಪಡೆಯಲಶಕ್ಯವಾದ ಐಶ್ವರ್ಯವಂ ಆ ಬ್ರಾಹ್ಮಣಂಗೆ ಕೊಡ ಬೇಕೆಂದು ಆಲೋಚಿಸುವ ಸ್ವಾನಂದಪರಿಪೂರ್ಣನಾದ ಶ್ರೀ ಕೃಷ್ಣನಿಂದ ಕಳುಹಿಸಲೋಸುಗ ಬಹುದೂರ ಬಂದು ವಿನಯೋಕ್ತಿಗಳಿಂದ ಶ್ಲಾಘಿಸಲ್ಪಟ್ಟ ದ್ವಿಜನು ತನ್ನ ಮನೆಯಂ ಕುರಿತು ತೆರಳಿದನು ||೧೪|| ಆ ಕುಚೇಲ ನು ಸಖನಾದ ಶ್ರೀ ಹರಿಯ ದೆಸೆಯಿಂದ ಸ್ವಲ್ಪಧನವನ್ನಾದರೂ ಪಡೆಯದೇ ಇದ್ದರೂ ಲಜ್ಜೆಯಿಂದ ತಾನಾಗಿ ಯಾಚಿಸದೆಯೂ ಮಹಾತ್ಮನಾದ ಶ್ರೀಕೃಷ್ಣನ ದರ್ಶನಮಾತ್ರದಿಂದಲೇ ಸಂತುಷ್ಟಹೃದಯನಾಗಿ ತನ್ನ ಮನೆ ಯಂಕುರಿತು ತೆರಳಿಬಂದನು ||೧೫|| ಯಾವಕಾರಣದಿಂದ ಲಕ್ಷ್ಮಿಯಂ ವಕ್ಷಸ್ಥಳದಲ್ಲಿ ಧರಿಸಿರುವ ಶ್ರೀಹರಿಯಿಂದ ಅತ್ಯಂತದರಿದ್ರನಾದ ನಾನು ಆಲಿಂಗಿಸಲ್ಪಟ್ಟನೋ ಆಕಾರಣದಿಂದ ಬ್ರಾಹ್ಮಣ್ಯಕ್ಕೆ ರಕ್ಷಕನಾದ ಶ್ರೀಕೃಷ್ಣನ

ದೇವಸ್ಯದೃಷ್ಟಾಬ್ರಹ್ಮಣ್ಯತಾಮಯಾ । ಯದ್ದರಿದ್ರತಮೋಲಕ್ಷ್ಮೀಮಾಶ್ಲಿಷ್ಟೋಬಿಭ್ರತೋರಸಿ ॥೧೬॥
ಕ್ವಾಹಂದರಿದ್ರಃಪಾಪೀಯಾನ್ಕ್ವಕೃಷ್ಣಃಶ್ರೀನಿಕೇತನಃ । ಬ್ರಹ್ಮಬಂಧುರಿತಿಸ್ಮಾಹಂಬಾಹುಭ್ಯಾಂಪ
ರಿರಂಭಿತಃ॥೧೭॥ನಿವಾಸಿತಃಪ್ರಿಯಾಜುಷ್ಟೇಪರ್ಯಂಕೇಭ್ರಾತರೋಯಥಾ । ಮಹಿಷ್ಯಾವೀಜಿತಃಶ್ರಾಂತೋ
ವಾಲವ್ಯಜನಹಸ್ತಯಾ ॥೧೮॥ ಶುಶ್ರೂಷಯಾಪರಮಯಾಪಾದಸಂವಾಹನಾದಿಭಿಃ । ಪೂಜಿತೋದೇವದೇವೇ
ನವಿಪ್ರದೇವೇನದೇವವತ್॥೧೯॥ಸ್ವರ್ಗಾಪವರ್ಗಯೋಃಪುಂಸಾಂರಸಾಯಾಂಭುವಿಸಂಪದಾಮ್ । ಸರ್ವಾಸಾ
ಮಪಿಸಿದ್ಧೀನಾಂಮೂಲಂತಚ್ಚರಣಾರ್ಚನಮ್ ॥೨೦॥ ಅಧನೋಯಂಧನಂಪ್ರಾಪ್ಯಮಾದ್ಯನ್ನುಚ್ಚೈ
ರ್ನಮಾಂಸ್ಮರೇತ್ । ಇತಿಕಾರುಣಿಕೋನೂನಂಧನಂಮೇಭೂರಿನಾದದಾತ್ ॥೨೧॥ ಇತಿಸಂಚಿಂತಯನ್ವಿ

---

ದ, ದೃಷ್ಟಾ-ನೋಡಲ್ಪಟ್ಟಿತ್ತು ಯತ್-ಯಾವ ಕಾರಣದಿಂದ, ಲಕ್ಷ್ಮೀಂ-ಭಾಗ್ಯದೇವತೆಯನ್ನು, ಉರಸಿ-ಎದೆಯಲ್ಲಿ, ಬಿಭ್ರತಾ-ಧರಿಸಿಇರುವ ಕೃಷ್ಣನಿಂದ, ದರಿದ್ರತಮಃ-ಕಡುಬಡವನಾದ ನಾನು. ಆಶ್ಲಿಷ್ಟಃ-ಅಪ್ಪಿಕೊಳ್ಳಲ್ಪಟ್ಟವನಾದೆನೋ ॥೧೬॥ ಪಾಪೀಯಾನ್-ಪಾಪವುಳ್ಳವನಾದ್ದರಿಂದ, ದರಿದ್ರಃ-ಬಡವನಾಗಿರುವ, ಅಹಂ-ನಾನು, ಕ್ವ-ಎಲ್ಲಿ, ಶ್ರೀನಿಕೇತನಃ-ಲಕ್ಷ್ಮಿಗೆ ಆವಾಸವಾಗಿರುವ, ಕೃಷ್ಣಃ-ನಾರಾಯಣನು, ಕ್ವ-ಎಲ್ಲಿ, ಅಹಂ-ನಾನು, ಬ್ರಹ್ಮಬಂಧುರಿತಿ-ಬ್ರಾಹ್ಮಣನ ನಂಟನೆಂದು, ಬಾಹುಭ್ಯಾಂ-ತೋಳುಗಳಿಂದ, ಪರಿರಂಭಿತಃಸ್ಮ-ಅಪ್ಪಿಕೊಳ್ಳಲ್ಪಟ್ಟವನಾದೆನಷ್ಟೆ? ॥೧೭॥ ಪ್ರಿಯಾಜುಷ್ಟೇ-ತನ್ನ ಪತ್ನಿಯಿಂದ ಸೇವಿಸಲ್ಪಟ್ಟಿರುವ, ಪರ್ಯಂಕೇ-ಮಂಚದಲ್ಲಿ, ಭ್ರಾತರೋಯಥಾ-ಸೋದರರು ಹೇಗೋಹಾಗೆ, ನಿವಾಸಿತಃ-ಕುಳ್ಳಿರಿಸಲ್ಪಟ್ಟೆನು. ಶ್ರಾಂತಃ-ಬಳಲಿದ ನಾನು, ವಾಲವ್ಯಜನಹಸ್ತಯಾ-ಬೀಸಣಿಗೆಯು ಕೈಯಲ್ಲಿಉಳ್ಳ, (ಚಾಮರ), ಮಹಿಷ್ಯಾ-ಪಟ್ಟದರಾಣಿಯಿಂದ, ವೀಜಿತಃ-ಬೀಸಲ್ಪಟ್ಟವನಾದೆನು ॥೧೮॥ ದೇವದೇವೇನ-ದೇವತೆಗಳಿಗೂ ಕೂಡ ತಾನು ದೇವನಾದರೂ, ವಿಪ್ರದೇವೇನ-ಬ್ರಾಹ್ಮಣರೆ ತನಗೆ ದೇವರಾಗಿಉಳ್ಳ, ಕೃಷ್ಣನಿಂದ, ಅಹಂ-ನಾನು, ಪರಮಯಾಶುಶ್ರೂಷಯಾ-ಉತ್ತಮವಾದ ಸೇವೆಯಿಂದ, ಪಾದಸಂವಾಹನಾದಿಭಿಃ-ಕಾಲುಗಳನ್ನು ಹಿಸುಕುವಿಕೆ ಮೊದಲಾದವುಗಳಿಂದ, ದೇವವತ್-ದೇವರಂತೆ, ಪೂಜಿತಃ-ಉಪಚರಿಸಲ್ಪಟ್ಟವನಾದೆನು॥ ತಚ್ಚರಣಾರ್ಚನಂ-ಆ ಕೃಷ್ಣನ ಪಾದಗಳನ್ನು ಪೂಜಿಸೋಣವು. ಪುಂಸಾಂ-ಪುರುಷರಿಗೆ, ಸ್ವರ್ಗಾಪವರ್ಗಯೋಃ-ಸ್ವರ್ಗಮೋಕ್ಷಗಳಿಗೂ, ರಸಾಯಾಂಭುವಿ-ಸುಖವುಳ್ಳ ಭೂಲೋಕದಲ್ಲಿ, ಸರ್ವಾಸಾಂಸಿದ್ಧೀನಾಮಪಿ-ಸಕಲಪ್ರಯೋಜನಗಳ ಲಾಭಗಳಿಗೂ, ಮೂಲಂ-ಕಾರಣವಾಗಿರುವುದು ॥೨೦॥ ಅಧನಃ-ದರಿದ್ರನಾದ, ಅಯಂ-ಈ ಬ್ರಾಹ್ಮಣನು, ಧನಂ-ದ್ರವ್ಯವನ್ನು, ಪ್ರಾಪ್ಯ-ಹೊಂದಿ, ಉಚ್ಚೈಃ-ಅಧಿಕವಾಗಿ, ಮಾದ್ಯನ್-ಗರ್ವಿಸುವನಾಗಿ, ಮಾಂ-ನನ್ನನ್ನು, ನಸ್ಮರೇತ್-ನೆನಪುಗೊಳ್ಳದೆ ಬಿಟ್ಟಾನು. ಇತಿ-ಹೀಗೆಂದು, ಕಾರುಣಿಕಃ-ನನ್ನಲ್ಲಿ ದಯೆಯುಳ್ಳ ಕೃಷ್ಣನು, ನೂನಂ-ನಿಶ್ಚಯವಾಗಿ, ಭೂರಿಧನಂ-ಬಹುಧನವನ್ನು, ಮೇ-ನನಗೆ, ನಾ

---

ಬ್ರಾಹ್ಮಣರಕ್ಷಕತ್ವವು ನನ್ನಿಂದ ನೋಡಲ್ಪಟ್ಟಿತು ॥೧೬॥ ದರಿದ್ರನಾದ ಪಾಪಿಷ್ಠನಾದ ನಾನೆತ್ತ? ಲಕ್ಷ್ಮಿಗೆ ನಿವಾಸಗೃಹವಾದ ವಿಶಾಲವಕ್ಷಸ್ಸುಳ್ಳ ಶ್ರೀಕೃಷ್ಣನೆತ್ತ? ಆದರೂ ನಾನು ಬ್ರಾಹ್ಮಣರಲ್ಲಿ ಪರಮಕೃಪಣನಾದವನೆಂದು ದಯೆಯುಳ್ಳ ಶ್ರೀಹರಿಯಿಂದ ಭುಜಗಳಿಂದಾಲಿಂಗನಗೆಯ್ಯಲ್ಪಟ್ಟು ಚಂದನಲೇಪಾದಿಗಳಿಂದ ಪೂಜಿಸಲ್ಪಟ್ಟವನೂ ಆದೆನು ॥೧೭॥ ಮತ್ತು ಬಳಲಿದ ನಾನು ಶ್ರೀಕೃಷ್ಣನಿಂದ ಪ್ರಿಯಳಾದ ಲಕ್ಷ್ಮೀದೇವಿಯಿಂದ ಸೇವಿಸಲ್ಪಟ್ಟ ಮಂಚದಲ್ಲಿ ಒಡಹುಟ್ಟಿದವನಂತೆ ಕುಳ್ಳಿರಿಸಲ್ಪಟ್ಟವನಾಗಿ ಆತನ ಪಟ್ಟಮಹಿಷಿಯಾದ ರುಕ್ಮಿಣೀದೇವಿಯಿಂದ ಬೀಸಣಿಗೆಯಿಂ ಬೀಸಲ್ಪಟ್ಟೆನು॥೧೮॥ ಇದಲ್ಲದೆ ಬ್ರಹ್ಮಾದಿಗಳಿಂದ ಸೇವ್ಯನಾಗಿ ಬ್ರಾಹ್ಮಣರಿಗೆ ಪೋಷಕನಾಗಿಯೂ ಇರುವ ಶ್ರೀಹರಿಯಿಂದ ನಾನು ದೇವತೆಯಂತೆ ಉತ್ತಮವಾದ ಶುಶ್ರೂಷೆಯಿಂ ಕಾಲೊತ್ತುವುದೇ ಮುಂತಾದ ಉಪಚಾರಂಗಳಿಂದಲೂ ಪೂಜಿಸಲ್ಪಟ್ಟೆನು॥೧೯॥ ಭೂಮಿಯಲ್ಲಿ ರಸಾತಲದಲ್ಲಿಯೂ ಉಂಟಾದೈಶ್ವರ್ಯಗಳಿಗೂ ಸಮಸ್ತಗಳಾದ ಸಿದ್ಧಿಗಳಿಗೂ ಸ್ವರ್ಗಮೋಕ್ಷಗಳಿಗೂ ಸಹ ಶ್ರೀಕೃಷ್ಣನ ಚರಣಾರಾಧನವೇ ಕಾರಣವು ॥೨೦॥ ಮತ್ತು ದರಿದ್ರನಾದ ಈ ನನ್ನ ಭಕ್ತನು ಧನವಂತನಾದರೆ ಅತ್ಯಂತ ಮದವುಳ್ಳವನಾಗಿ ನನ್ನಂ ಸ್ಮರಿಸದೇ ಹೋಗುವನೆಂದು ದಯಾನಿಧಿಯಾದ ಶ್ರೀಕೃಷ್ಣನು ನನಗೋಸುಗ ಬಹಳ ಧನವಂ ಕೊಡಲಿಲ್ಲ; ಈಯ

ಪ್ರಾಪ್ತೋ ನಿಜಗೃಹಾಂತಿಕಮ್ ॥ ಸೂರ್ಯಾನಲೇಂದುಸಂಕಾಶೈರ್ವಿಮಾನೈಸ್ಸರ್ವತೋವೃತಮ್॥೨೧॥
ವಿಚಿತ್ರೋಪವನೋದ್ಯಾನೈಃ ಕೂಜದ್ದ್ವಿಜಕುಲಾಕುಲೈಃ । ಪ್ರೋತ್ಫುಲ್ಲಕುಮುದಾಂಭೋಜಕಹ್ಲಾರೋ
ತ್ಪಲವಾರಿಭಿಃ ॥೨೨॥ ಜುಷ್ಟಂ ಸ್ವಲಂಕೃತೈಃ ಪುಂಭಿಸ್ಸ್ತ್ರೀಭಿಶ್ಚ ಹರಿಣಾಕ್ಷಿಭಿಃ । ಕಿಮಿದಂ ಕಸ್ಯ ವಾ
ಸ್ಥಾನಂ ಕಥಂ ತದಿದಮಿತ್ಯಭೂತ್ ॥೨೩॥ ಏವಂ ಮೀಮಾಂಸಮಾನಂ ತಂ ನರಾ ನಾರ್ಯೋಽಮರಪ್ರಭಾಃ ಪ್ರ
ತ್ಯಗೃಹ್ಣನ್ಮಹಾಭಾಗಂ ಗೀತವಾದ್ಯೇನ ಭೂಯಸಾ ॥೨೪॥ ಪತಿಮಾಗತಮಾಕರ್ಣ್ಯ ಪತ್ನ್ಯುದ್ಧರ್ಷಾ
ತಿಸಂಭ್ರಮಾ । ನಿಶ್ಚಕ್ರಾಮ ಗೃಹಾತ್ತೂರ್ಣಂ ರೂಪಿಣೀ ಶ್ರೀರಿವಾಲಯಾತ್ ॥೨೫॥ ಪತಿವ್ರತಾ ಪತಿಂ

---

ಪದಾತ್-ಕೊಡಲಿಲ್ಲವು ॥೨೦॥ ಇತಿ-ಹೀಗೆ, ಸಂಚಿಂತಯನ್-ಯೋಚಿಸುತ್ತಿರುವವನಾದ, ವಿಪ್ರಃ-ಬ್ರಾಹ್ಮಣನು, ನಿಜಗೃಹಾಂತಿಕಂ-ತನ್ನ ಮನೆಯ ಬಳಿಯನ್ನು, ಪ್ರಾಪ್ತಃ-ಸೇರಿದವನಾದನು ಸೂರ್ಯಾನಲೇಂದುಸಂಕಾಶೈಃ-ಸೂರ್ಯನು ಅಗ್ನಿ ಚಂದ್ರರೊಡನೆ, ಸಮಾನಂಗಳಾದ, ವಿಮಾನೈಃ-ದ್ವಾರಗೋಪುರಂಗಳಿಂದ, ಸರ್ವತಃ-ಎಲ್ಲಾ ಕಡೆಗಳಲ್ಲಿಯೂ, ವೃತಂ-ಬಳಸಲ್ಪಟ್ಟಿರುವುದು ॥೨೧॥ ವಿಚಿತ್ರೋಪವನೋದ್ಯಾನೈಃ-ಆಶ್ಚರ್ಯಕರಂಗಳಾದ, ಬಳಿಯಣ ತೋಟಗಳಿಂದಲೂ ಶೃಂಗಾರವನಗಳಿಂದಲೂ, ಕೂಜದ್ದ್ವಿಜಕುಲಾಕುಲೈಃ-ಕೂಗುತ್ತಿರುವ ಹಕ್ಕಿಗಳ ಗುಂಪುಗಳಿಂ ಸಂದಣಿಯಾಗಿರುವ, ಪ್ರೋತ್ಫುಲ್ಲಕುಮುದಾಂಭೋಜಕಹ್ಲಾರೋತ್ಪಲವಾರಿಭಿಃ-ಅರಳಿದ ಬಿಳುನೈದಿಲೆ ತಾವರೆ ಕೆನ್ನೈದಿಲೆ ಕನ್ನೈದಿಲೆಗಳುಳ್ಳ, ಜಲಗಳಿಂದಲೂ ॥೨೨॥ ಸ್ವಲಂಕೃತೈಃ-ಚೆನ್ನಾಗಿ ಸಿಂಗರಿಸಲ್ಪಟ್ಟ, ಪುಂಭಿಃ-ಪುರುಷರಿಂದಲೂ, ಹರಿಣಾಕ್ಷಿಭಿಃ-ಹುಲ್ಲೆಯ ಕಂಗಳಂತೆ ಕಂಗಳುಳ್ಳ, ಸ್ತ್ರೀಭಿಶ್ಚ-ಹೆಂಗಳಿಂದಲೂ, ಜುಷ್ಟಂ-ಸೇವಿಸಲ್ಪಟ್ಟಿರುವ, ಇದಂ ಸ್ಥಾನಂ-ಈ ಸ್ಥಲವು, ಕಿಂ ಯಾವುದು, ಕಸ್ಯ ವಾ-ಯಾರದು ? ತತ್-ಆ ಸಣ್ಣ ಬಡಮನೆಯು, ಇದಂ ಕಥಮಿತ್ಯಭೂತ್-ಇದು ಹೇಗಾಯಿತು ॥೨೩॥ ಏವಂ-ಹೀಗೆ, ಮೀಮಾಂಸಮಾನಂ-ವಿಚಾರಗೊಳ್ಳುತ್ತಿರುವ, ಮಹಾಭಾಗಂ--ಅಧಿಕಾದೃಷ್ಟವಂತನಾದ, ತಂ-ಆ ಕುಚೇಲನನ್ನು, ಅಮರಪ್ರಭಾಃ-ದೇವರ್ಕಳ ಕಾಂತಿಯುಳ್ಳ, ನರಾನಾರ್ಯಃ-ಪುರುಷರೂ ಸ್ತ್ರೀಯರೂ, ಭೂಯಸಾ ಬಹುವಾದ, ಗೀತವಾದ್ಯೇನ-ಸಂಗೀತದೊಡನೆಯೂ ಮಂಗಳವಾದ್ಯಧ್ವನಿಯೊಡನೆಯೂ, ಪ್ರತ್ಯಗೃಹ್ಣನ್-ಇದಿರ್ಗೊಂಡು ಕರೆದೊಯ್ದರು ॥೨೪॥ ಆಗತಂ-ಬಂದಂಥಾ, ಪತಿಂ-ಗಂಡನನ್ನು, ಆಕರ್ಣ್ಯ-ಕೇಳಿ, ಪತ್ನ್ಯುದ್ಧರ್ಷಾತಿಸಂಭ್ರಮಾ-ಪ್ರೀತಿಯು ಹೆಚ್ಚಿಕೆಯಿಂದ ಅಧಿಕೋಲ್ಲಾಸವುಳ್ಳವಳಾಗಿ, ರೂಪಿಣಿ-ಆಕಾರದೊಡಗೂಡಿದ, ಶ್ರೀಃ-ಲಕ್ಷ್ಮಿಯು, ಆಲಯಾದಿವ-ತನ್ನ ವಾಸಸ್ಥಾನವಾದ ಕಮಲವನದ ದೆಸೆಯಿಂದೆಂತಂತೆ, ತಸ್ಮಾದ್ಗೃಹಾತ್-ಆ ಮನೆಯೊತ್ತಣಿಂ, ತೂರ್ಣಂ-ಬೇಗನೆ, ನಿಶ್ಚಕ್ರಾಮ-ತೆರಳ್ದುಬಂದಳು ॥೨೫॥ ಪತಿವ್ರತಾ-ಪತಿಭಕ್ತಿಯುಳ್ಳ, ಆ ಹೆಂಗಸು, ಪತಿಂ-ಗಂಡನನ್ನು, ದೃಷ್ಟ್ವಾ-ನೋಡಿ, ಪ್ರೇ

---

ಥಾವೇನಿಶ್ಚಯು ॥೨೦॥ ಇಂತೆಂದು ಮನಸ್ಸಿನಲ್ಲಿ ಚಿಂತಿಸುವವನಾಗಿ ಸೂರ್ಯ ಚಂದ್ರರಂತೆ ಹೊಳೆಯುವ ವಿಮಾನಂಗಳಿಂದ ಎಲ್ಲೆಲ್ಲಿಯೂ ವ್ಯಾಪ್ತವಾಗಿ ॥೨೧॥ ಧ್ವನಿಗೆಯ್ವ ಪಕ್ಷಿಸಮೂಹಗಳುಳ್ಳ ಚೆನ್ನಾಗಿ ಅರಳಿರುವ ನೈದಿಲೆಗಳು ತಾವರೆಗಳು ಕನ್ನೈದಿಲೆಗಳು ಚೆನ್ನೈದಿಲೆಗಳೂ ಉಳ್ಳ ತಿಳಿಗೊಳಂಗಳಿಂದ ಶೋಭಿತಂಗಳಾದ ವಿಚಿತ್ರಂಗಳಾದ ವನೆ ಮಹತ್ತಿರುವ ಕೈದೋಟಂಗಳಿಂದಲೂ, ಅರಸುಗಳಿಗೆ ವಿಹಾರಯೋಗ್ಯಂಗಳಾದ ಉದ್ಯಾನಂಗಳಿಂದಲೂ ಅಲಂಕೃತವಾಗಿ ॥೨೨॥ ಅಲಂಕೃತರಾದ ನರರಿಂದಲೂ ಹೆಣ್ಣೆರಳೆಯ ಕಣ್ಗಳಂ ಪೋಲುವ ಕಣ್ಗಳುಳ್ಳ ಪೆಣ್ಗಳಿಂದಲೂ ಆಶ್ರಯಿಸಲ್ಪಟ್ಟದ್ದಾಗಿಯೂ ಇರುವ ತನ್ನ ಮಂದಿರದ ಸಮೀಪವನೆಯ್ದಿ ಆ ಸಂಪದವಂ ಕಂಡು ಬೆಚ್ಚಿಬೆರಗಾಗಿ ಚಿಂತಿಸುವನದೆಂತೆನ್ನೆ;- ಆಶ್ಚರ್ಯಕರವಾದ ತೇಜೋಮಯವಾಗಿ ಮುಂದೆ ಕಾಣುವುದೇನೋ? ಯಾವ ಮಹಾತ್ಮನ ಗೃಹವೋ? ಈಶ್ವರಾನುಗ್ರಹದಿಂ ಸಮಸ್ತ ವಿಭವಯುಕ್ತವಾಗಿಯೂ ತೇಜೋಮಯವಾಗಿಯೂ ಈ ರೀತಿಯಾಗಿ ಆಯಿತೋ?॥೨೩॥ ಎಂದು ಮನಸ್ಸಿನಲ್ಲಿ ಚಿಂತಿಸುತ್ತಿರುವ ಮಹಾತ್ಮನಾದ ಆ ಕುಚೇಲನಂ ದೇವತೆಗಳಂತೆ ಹೊಳೆಯುತಲಿರುವ ಪುರುಷರು ಸ್ತ್ರೀಯರು ಸಹ ಅಪರಿಮಿತವಾದ ವಾದ್ಯಧ್ವನಿಯೊಡನೆ ಉತ್ತಮಂಗಳಾದ ಉಪಹಾರಂಗಳೊಡನೆ ಯುಕ್ತರಾಗಿ ಇದಿರ್ಗೊಂಡರು ॥೨೪॥ ಬಂದಂತಾ ಪತಿಯ ವೃತ್ತಾಂತವ ಕೇಳಿ ಅತ್ಯಂತ ಸಂತೋಷವುಳ್ಳವಳಾಗಿ ಕಮಲ ವನದ ದೆಸೆಯಿಂದ ಬರುವ ರೂಪಧಾರಿಣಿಯಾದ ಲಕ್ಷ್ಮಿಯಂತೆ ಹರಿಯ ಕೃಪೆಯಿಂದ ದೇವತಾಕೃತಿಯನೆಯ್ದಿರುವ ವಿಪ್ರಪತ್ನಿಯು ಆದರದಿಂದ ಪತಿಯನಿದಿರ್ಗೊಂಡಳು ॥೨೫॥ ಪತಿವ್ರತೆಯಾದ ಆ ಬ್ರಾ

ದೃಷ್ಟ್ವಾ ಪ್ರೇಮೋತ್ಕಂಠಾಶ್ರುಲೋಚನಾ । ಮೀಲಿತಾಕ್ಷ್ಯನಮದ್ಬುದ್ಧ್ಯಾ ಮನಸಾ ಪರಿಷಸ್ವಜೇ ॥೨೫॥
ಪತ್ನೀಂ ವೀಕ್ಷ್ಯ ಪ್ರಸ್ಫುರಂತೀಂ ದೇವೀಂ ವೈಮಾನಿಕೀಮಿವ । ದಾಸೀನಾಂ ನಿಷ್ಕಕಂಠೀನಾಂ ಮಧ್ಯೇ ಭಾಂ
ತೀಂ ಸ ವಿಸ್ಮಿತಃ ॥ ಪ್ರೀತಸ್ಸ್ವಯಂ ತಯಾ ಯುಕ್ತಃ ಪ್ರವಿಷ್ಟೋ ನಿಜಮಂದಿರಮ್ । ಮಣಿಸ್ತಂಭಶತೋಪೇತಂ
ಮಹೇಂದ್ರಭವನಂ ಯಥಾ ॥೨೭॥ ಪಯಃಫೇನನಿಭಾಶ್ಶಯ್ಯಾ ದಾಂತಾ ರುಕ್ಮಪರಿಚ್ಛದಾಃ । ಪರ್ಯಂಕಾ ಹೇಮ
ದಂಡಾನಿ ಚಾಮರವ್ಯಜನಾನಿ ಚ ॥ ಆಸನಾನಿ ಚ ಹೈಮಾನಿ ಮೃದೂಪಸ್ತರಣಾನಿ ಚ । ಮುಕ್ತಾದಾಮವಿಲಂ
ಬೀನಿ ವಿತಾನಾನಿ ದ್ಯುಮಂತಿ ಚ ॥೨೯॥ ಸ್ವಚ್ಛಸ್ಫಟಿಕಕುಡ್ಯೇಷು ಮಹಾಮಾರಕತೇಷು ಚ । ರತ್ನದೀಪಾ ಭ್ರಾ
ಜಮಾನಾ ಲಲನಾ ರತ್ನಸಂಯುತಾಃ ॥೩೦॥ ವಿಲೋಕ್ಯ ಬ್ರಾಹ್ಮಣಸ್ತತ್ರ ಸಮೃದ್ಧೀಸ್ಸರ್ವಸಂಪದಾಮ್ ।

---

ಪ್ರೇಮೋತ್ಕಂಠಾಶ್ರುಲೋಚನಾ-ಸ್ನೇಹದಿಂದ ಅತ್ಯಾಸಕ್ತಿಯೂ ಕಣ್ಣೀರೂ ಉಳ್ಳವಳಾಗಿ, ಮೀಲಿತಾಕ್ಷೀ-ಮುಚ್ಚಿದ ಕಂಗಳ ಳ್ಳವಳಾ ದ್ದರಿಂದ, ಬುದ್ಧ್ಯಾ-ಜ್ಞಾನದಿಂದ, ಅನಮತ್-ನಮಸ್ಕರಿಸಿದಳು. ಮನಸಾ-ಸಂಕಲ್ಪದಿಂದ, ಪರಿಷಸ್ವಜೇ-ಅಪ್ಪಿಕೊಂಡಳು ॥೨೫॥ ಸಃ-ಆ ಬ್ರಾಹ್ಮಣನು, ನಿಷ್ಕಕಂಠೀನಾಂ-ವರಹಾಗಳ ಸರಂಗಳುಳ್ಳ, ದಾಸೀನಾಂ-ಸೇವಕಿಯರ, ಮಧ್ಯೇ-ನಡುವೆ, ಭಾಂತೀಂ-ಬೆಳಗುತಲಿರುವಂಥಾ ॥ ವೈಮಾನಿಕೀಂ-ವಿಮಾನದಲ್ಲಿರುವ, ದೇವೀಮಿವ-ದೇವಸ್ತ್ರೀಯಂತೆ, ಪ್ರಸ್ಫುರಂತೀಂ-ಪ್ರಕಾಶಿಸುತ್ತಿರುವಂಥಾ, ಪತ್ನೀಂ-ಹೆಂಡತಿಯನ್ನು, ವೀಕ್ಷ್ಯ-ನೋಡಿ, ವಿಸ್ಮಿತಃ-ಅಚ್ಚರಿಹುಟ್ಟಿದವನಾದನು ॥೨೬॥ ಸ್ವಯಂ-ತಾನು, ತಯಾ-ಆಕೆಯೊಡನೆ,ಯುಕ್ತಃ-ಕೂಡಿದವನಾಗಿಯೂ, ಪ್ರೀತಃ-ಪ್ರಿಯವುಂಟಾದವನಾಗಿಯೂ,ಮಣಿಸ್ತಂಭಶತೋಪೇತಂ-ರನ್ನದ ಹಲವು ಕಂಭಗಳಿಂ ಕೂಡಿದಂಥಾ, ಮಹೇಂದ್ರಭವನಂ ಯಥಾ-ದೇವರಾಜನಮನೆಯು ಹೇಗೋ ಹಾಗಿರುವಂಥಾ,ನಿಜಮಂದಿರಂ-ತನ್ನ ಮನೆಯನ್ನು, ಪ್ರವಿಷ್ಟಃ-ಹೊಕ್ಕವನಾದನು ॥೨೭॥ ಪಯಃಫೇನನಿಭಾಃ-ಹಾಲಿನನೊರೆಗೆ ಸಮಾನಂಗಳಾದ, ಶಯ್ಯಾಃ- ಹಾಸಿಗೆಗಳೂ, ರುಕ್ಮಪರಿಚ್ಛದಾಃ-ಬಂಗಾರದ ಮೇಲ್ಕೆಲಸವುಳ್ಳ, ದಾಂತಾಃಪರ್ಯಂಕಾಃ-ದಂತದಮಂಚಗಳೂ, ಹೇಮದಂಡಾನಿ-ಬಂಗಾರದಪಿಡಿಗಳುಳ್ಳ, ಚಾಮರವ್ಯಜನಾನಿಚ-ಚಾಮರಿಗಳೂ ಬೀಸಣಿಗೆಗಳೂ ॥೨೮॥ ಮೃದೂಪಸ್ತರಣಾನಿ- ಮೆತ್ತಗಿರುವ ಹಾಸಿಗೆಗಳುಳ್ಳ, ಹೈಮಾನ್ಯಾಸನಾನಿಚ-ಚಿನ್ನದ ಗದ್ದುಗೆಗಳೂ,ದ್ಯುಮಂತೀಂ-ಕಾಂತಿಯುಳ್ಳ, ಮುಕ್ತಾದಾಮವಿಲಂಬೀನಿ-ಮುತ್ತಿನಸರಂಗಳಿಂ ಕಟ್ಟಿರುವ, ವಿತಾನಾನಿಚ-ಮೇಲ್ಕಟ್ಟುಗಳೂ, ಇರುವವು ॥೨೯॥ ಸ್ವಚ್ಛಸ್ಫಟಿಕಕುಡ್ಯೇಷು ನಿರ್ಮಲವಾದ ಪಳುಕಿನಗೋಡೆಗಳಲ್ಲಿಯೂ, ಮಹಾಮರಕತೇಷುಚ-ದೊಡ್ಡಪಚ್ಚೆಕಲ್ಲುಗಳಲ್ಲಿಯೂ ಭ್ರಾಜಮಾನಾಃ-ಶೋಭಿಸುತ್ತಿರುವಂಥಾ, ಲಲನಾರತ್ನಸಂಯುತಾಃ -ಶ್ರೇಷ್ಠೆಯರಾದಸ್ತ್ರೀಯರಿಂದಕೂಡಿದಂಥಾ, ರತ್ನದೀಪಾಃ-ರನ್ನದದೀವಿಗೆಗಳೂ ಇದ್ದುವು ॥೩೦॥ ಬ್ರಾಹ್ಮಣಃ-ಸುದಾಮನು, ತತ್ರ-

---

ಹ್ಮಣ ಪತ್ನಿಯು ಪತಿಯಂ ನೋಡಿ ಅಧಿಕವಾದ ಪ್ರೇಮದಿಂದ ಆನಂದ ಬಾಷ್ಪಂಗಳುಳ್ಳವಳಾಗಿ ಈತನೇ ನಮಸ್ಕರಿಸಲು ಯೋಗ್ಯನೆಂಬ ನಿಶ್ಚಯದಿಂ ದಾನಂದದಿಂ ಕಂಗಳಂ ಮುಚ್ಚಿ ಆಲಿಂಗನಂಗೆಯ್ದಳು ॥೨೫॥ ಅನಂತರದಲ್ಲಿ ದಿವ್ಯ ರತ್ನಂಗಳಿಂ ಯುಕ್ತಂಗಳಾದ ಹಾರಕಂಕಣಾದಿ ದಿವ್ಯಾಭರಣಂಗಳಿಂ ಪೊಳೆವ ಸುರಸುಂದರಿಯರಿಗೆ ಸಮಾನವಾದ ಅನೇಕಸಹಸ್ರದಾಸಿಯರಮಧ್ಯದಲ್ಲಿ ಶಚೀದೇವಿಯಂತೆ ಪ್ರಕಾಶಿಸುವ ಪತ್ನಿಯಂ ನೋಡಿ ಆಶ್ಚರ್ಯಯುಕ್ತನಾಗಿ ॥೨೬॥ ಸಂತುಷ್ಟನಾಗಿ ಆಪತ್ನಿಯೊಡಗೂಡಿ ರತ್ನಸ್ತಂಭಂಗಳ ಸಹಸ್ರದಿಂ ಪೊಳೆವ ಇಂದ್ರ ಭವನಕ್ಕೆ ಸದೃಶವಾದ ತನ್ನ ಮನೆಯಂ ವೈಭವದಿಂ ಪೊಕ್ಕನು ॥೨೭॥ ಮನೆಯಲ್ಲಿ ಹಾಲಿನನೊರೆಯಂತೆ ಹೊಳೆವ ಸುಪ್ಪತ್ತಿಗೆ ಮೊದಲಾದ ಹಾಸಿಗೆಗಳಂ ಆನೆಯದಂತಂಗಳ ಹಲಿಗೆಗಳಿಂದ ಕುಂದಣದಿಂದಲೂ ವಿಚಿತ್ರಂಗಳಾದ ಮಂಚಂಗಳಂ ಚಿನ್ನದಪಿಡಿಗಳಿಂದ ಶೋಭಿಸುವ ಚಾಮರವ್ಯಜನಂಗಳಂ ॥೨೮॥ ಸುವರ್ಣಮಯಂಗಳಾದ ಮೆತ್ತಗಿರುವ ಮೇಲುಹಾಸಿಗೆಗಳಿಂ ಕೂಡಿರುವ ಕಾಲುಮಣಿಗಳಂ, ಜೋಲುತಲಿರುವ ಮುತ್ತುಗಳ ಕುಚ್ಚುಗಳುಳ್ಳ ಥಳಥಳಿಸುವ ಮೇಲ್ಕಟ್ಟುಗಳುಳ್ಳ ಸಭಾಮಂಟಪಂಗಳಂ ॥೨೯॥ ನಿರ್ಮಲಂಗಳಾದ ಸ್ಫಟಿಕಮಣಿಗಳಿಂದ ರಚಿಸಲ್ಪಟ್ಟ ಭಿತ್ತಿಗಳುಳ್ಳ ಮರಕತಮಯಂಗಳಾದ ಗೃಹಂಗಳಲ್ಲಿ ಶ್ರೇಷ್ಠರಾದ ಸ್ತ್ರೀಯರೊಡನೆ ಯುಕ್ತಂಗಳಾಗಿ ಪ್ರಕಾಶಿಸುತಲಿರುವ ರತ್ನದೀಪಂಗಳಂ ॥೩೦॥ ಸಹ ಆಗೃಹದಲ್ಲಿ ಆಕಸ್ಮಿಕವಾಗಿಬಂದ ಸರ್ವಸಂಪತ್ಸಮೃದ್ಧಿಗಳಂ ನೋಡಿ ಸ್ಥಿರಚಿತ್ತನಾಗಿ ಆಲೋಚಿಸಲು ತನಗೆ ಇಂತಾಸಂಪತ್ತು ಎಲ್ಲಿಂದಬಂತೆಂದು ನಿಶ್ಚಯಿಸುವನದೆಂತೆನೆ ॥೩೧॥ ಭಾಗ್ಯಹೀನನಾದ

ತರ್ಕಯಾಮಾಸನಿರ್ವ್ಯಗ್ರಸ್ಸ್ವಸಮೃದ್ಧಿಮಹೈತುಕೀಮ್॥೧೩॥ ನೂನಂಬತೈತನ್ಮಮದುರ್ಭಗಸ್ಯ
ಶಶ್ವದ್ದರಿದ್ರಸ್ಯಸಮೃದ್ಧಿಹೇತುಃ । ಮಹಾವಿಭೂತೇರವಲೋಕತೋನ್ಯೋನೈವೋಪಪದ್ಯೇತಯದೂತ್ತಮ
ಸ್ಯ॥೧೪॥ನನ್ವಬ್ರುವಾಣೋದಿಶತೇಸಮಕ್ಷಂಯಾಚಿಷ್ಣವೇಭೂರ್ಯಪಿಭೂರಿಭೋಗಃ । ಪರ್ಜನ್ಯವತ್ತತ್ಸ್ವ
ಯಮೀಕ್ಷಮಾಣೋದಾಶಾರ್ಹಕಾಣಾಂವೃಷಭಸ್ಸಖಾಮೇ॥೧೫॥ಕಿಂಚಿತ್ಕರೋತ್ಯುರ್ವಪಿಯತ್ಸ್ವದತ್ತಂ
ಸುಹೃತ್ಕೃತಂಫಲ್ಗ್ವಪಿಭೂರಿಕಾರೀ।ಮಯೋಪನೀತಂಪೃಥುಕೈಕಮುಷ್ಟಿಂಪ್ರತ್ಯಗ್ರಹೀತ್ಪ್ರೀತಿ
ಯುತೋಮಹಾತ್ಮಾ॥೧೬॥ತಸ್ಯೈವಮೇಸೌಹೃದಸಖ್ಯಮೈತ್ರೀದಾಸ್ಯಂಪುನರ್ಜನ್ಮನಿಜನ್ಮನಿಸ್ಯಾತ್।

---

ಆ ಮನೆಯಲ್ಲಿ, ಸರ್ವಸಂಪದಾಂ-ಸಮಸ್ತಭಾಗ್ಯಂಗಳ, ಸಮೃದ್ಧೀಃ-ಸಂಪೂರ್ತಿಗಳನ್ನು, ವೀಕ್ಷ್ಯ-ನೋಡಿ, ಅವ್ಯಗ್ರಃ-ಆತುರವಿಲ್ಲದವನಾಗಿ,ಅಹೈತುಕೀಂ-ನಿಮಿತ್ತವಿಲ್ಲದೆ ಉಂಟಾಗಿರುವ, ಸ್ವಸಮೃದ್ಧಿಂ- ತನ್ನ ಸಂಪತ್ಸಮೃದ್ಧಿಯನ್ನು ಕುರಿತು, ತರ್ಕಯಾಮಾಸ-ವಿಚಾರಮಾಡಿದನು ॥೧೩॥ ದುರ್ಭಗಸ್ಯ-ಪುಣ್ಯಹೀನನಾದ, ಅಥವಾ ಮಂದಭಾಗ್ಯವುಳ್ಳವನಾದ, ಶಶ್ವದ್ದರಿದ್ರಸ್ಯ-ಯಾವಾಗಲೂ ಬಡವನಾಗಿರುವ, ಏತನ್ಮಮ-ಈ ನನಗೆ, ಮಹಾವಿಭೂತೇಃ-ಮಹದೈಶ್ವರ್ಯವುಳ್ಳ, ಯದೂತ್ತಮಸ್ಯ-ಕೃಷ್ಣನ, ಅವಲೋಕತಃ-ದರ್ಶನಕ್ಕಿಂತಲೂ, ಅನ್ಯಃ-ಇತರವಾದ, ಸಮೃದ್ಧಿಹೇತುಃ-ಸಂಪತ್ತಿಗೆ ಕಾರಣವು, ನೋಪಪದ್ಯೇತ-ಯುಕ್ತವಾಗುವದಿಲ್ಲವು. ನೂನಂ-ನಿಶ್ಚಯವಾಗಿ ಹೀಗೆತೋರುತ್ತೆ. ಬತ-ಆಶ್ಚರ್ಯವು ॥೧೪॥ ಮೇ-ನನ್ನ, ಸಖಾ-ಮಿತ್ರನಾದ, ದಾಶಾರ್ಹಕಾಣಾಂವೃಷಭಃ-ಯಾದವರೊಳಗೆ ಶ್ರೇಷ್ಠನಾದ ಕೃಷ್ಣನು, ಭೂರಿಭೋಗಃ-ಅಧಿಕಸುಖಾನುಭವವುಳ್ಳವನಾದ್ದರಿಂದ, ಪರ್ಜನ್ಯವತ್-ಮೇಘದಂತೆ, (ವರ್ಷಾಭಿಮಾನಿದೇವತೆಯಂತೆ) ಸ್ವಯಂ ತಾನು, ಈಕ್ಷಮಾಣಃ-ನೋಡುತ್ತಿರುವನಾಗಿಯೇ, ಯಾಚಿಷ್ಣವೇ-ಅಪೇಕ್ಷಿಸುವ ಸ್ವಭಾವವುಳ್ಳವರಿಗೆ, ಭೂರ್ಯಪಿ-ಬಹುದ್ರವ್ಯವನ್ನಾದರೂ, ಸಮಕ್ಷಂ-ಪ್ರತ್ಯಕ್ಷದಲ್ಲಿ, ಅಬ್ರುವಾಣಃ-ಹೇಳದೆ ಇರುವನಾಗಿಯೇ, ದಿಶತೇನನು-ಕೊಡುತ್ತಿದಾನೆ ಯಲ್ಲವೆ ॥೧೫॥ ಮಹಾತ್ಮಾ-ಮಹಾನುಭಾವನಾದ ಕೃಷ್ಣನು, ಸ್ವದತ್ತಂ-ತನ್ನಿಂದ ಕೊಡಲ್ಪಟ್ಟದ್ದು, ಯತ್-ಯಾವುದೋ, ತತ್-ಅದರನ್ನು, ಉರ್ವಪಿ-ಅಧಿಕವನ್ನಾದರೂ, ಕಿಂಚಿತ್ಕರೋತಿ-ಅಲ್ಪವನ್ನಾಗಿ ಮಾಡುವನು. ಸುಹೃತ್ಕೃತಂ-ಮಿತ್ರರಿಂದ ಮಾಡಲ್ಪಟ್ಟದ್ದನ್ನು, ಫಲ್ಗ್ವಪಿ-ಅಲ್ಪವನ್ನಾದರೂ, ಭೂರಿಕಾರೀ-ಅಧಿಕವನ್ನಾಗಿ ಮಾಡುವವನೂ, ಆಗಿರುವನು. ಮಯಾ-ನನ್ನಿಂದ, ಉಪನೀತಾಂ-ಹತ್ತಿರಕ್ಕೆ ತರಲ್ಪಟ್ಟ, ಪೃಥುಕೈಕಮುಷ್ಟಿಂ-ಅವಲಕ್ಕಿಯ ಒಂದುಹಿಡಿಯನ್ನು, ಪ್ರೀತಿಯುತಃ ಪ್ರೇಮಸಹಿತನಾಗಿ, ಪ್ರತ್ಯಗ್ರಹೀತ್-ತೆಗದುಕೊಂಡನು ॥೧೬॥ ತಸ್ಯೈವ-ಆ ಕೃಷ್ಣನ, ಸೌಹೃದಸಖ್ಯಮೈತ್ರೀದಾಸ್ಯಂ-ಪ್ರೇಮವೂ ಹಿತವಂಹೇಳುವಿಕೆಯೂ ಉಪಕಾರವೂ ಸೇವೆಯೂ, ಮೇ-ನನಗೆ, ಜನ್ಮನಿಜನ್ಮನಿ-ಪ್ರತಿ

---

ಜನ್ಮಜನ್ಮದಲ್ಲಿಯೂ ದರಿದ್ರನಾದ ನನಗೆ ಇಂತಾಸಂಪತ್ಸಮೃದ್ಧಿ ಬರುವುದಕ್ಕೆ ಕಾರಣವಂ ಮಹದೈಶ್ವರ್ಯವುಳ್ಳ ವಿಚಿತ್ರಶಕ್ತಿಯುಳ್ಳ ಯದುಪತಿಯಾದ ಶ್ರೀಕೃಷ್ಣನ ಸಂದರ್ಶನವಂ ಹೊರತು ಮತ್ತೊಂದಂ ನಿಶ್ಚಯವಾಗಿ ಕಾಣೆನು॥೧೪॥ ಪರ್ಜನ್ಯ ಯಾವಪ್ರಕಾರವಾಗಿ ವರ್ಷಾಕಾಲದ ರಾತ್ರಿಗಳಲ್ಲಿ ಕರ್ಷಕನು ನಿದ್ರೆಗೆಯ್ಯುತ್ತಲಿರುವನಾದಾಗ್ಯೂ ಅವನಹೊಲವು ಮಳೆಯಿಂದ ನೆನೆಯಿಸಿ ಉತ್ತುಬಿತ್ತುವದಕ್ಕೆ ಯೋಗ್ಯವನ್ನಾಗಿ ಮಾಡುವನೋ ಆ ರೀತಿಯಿಂದಲೇತಾನು ಪೂರ್ಣಕಾಮನೂ ಲಕ್ಷ್ಮೀಪತಿಯೂ ಆದ್ದರಿಂದ ತನ್ನಭಕ್ತರಿಗೆ ಇಂದ್ರಪದವಿಯಂ ಕೊಟ್ಟಾಗ್ಯೂ ಅದುಸ್ವಲ್ಪವೆಂದುತಿಳಿದು ಭಕ್ತನಾದ ನನ್ನಿಂದ ತಂದೀಯಲ್ಪಟ್ಟ ಅವಲಕ್ಕಿಯನ್ನೇ ಅಧಿಕವನ್ನಾಗಿ ತಿಳಿದು ನಾನರಿಯದಂತೆ ಅಧಿಕವಾದ ಮಹದೈಶ್ವರ್ಯವನಿತ್ತನು ॥೧೫॥ ಮಹಾತ್ಮನಾದ ಶ್ರೀಹರಿಯು ತನ್ನಿಂದ ಕೊಡಲ್ಪಟ್ಟದ್ದು ಅತ್ಯಧಿಕವಾದರೂ ಅದರನ್ನು ಅತಿತುಚ್ಛವನ್ನಾಗಿಯೂ ತನ್ನಭಕ್ತನಿಂದ ಕೊಡಲ್ಪಟ್ಟದ್ದು ಅತ್ಯಲ್ಪವಾದಾಗ್ಯೂ ಅದಂ ಅತ್ಯಧಿಕವನ್ನಾಗಿಯೂ ತಿಳಿಯುವನಾದ್ದರಿಂದ ನನ್ನಿಂದ ತರಲ್ಪಟ್ಟ ಒಂದೇಹಿಡಿಯ ಅವಲಕ್ಕಿಯಂ ಪ್ರೀತಿಯಿಂದ ತಾನೇಗ್ರಹಿಸಿದನು ॥೧೬॥ ನನಗೆ ನಿರಂತರವೂ ಶ್ರೀಹರಿಯಲ್ಲಿಯೇ ಪ್ರೇಮವು ಹಿತವಂಪ್ರಾರ್ಥಿಸುವಿಕೆಯೂ ಉಪಕಾರವಂ ಮಾಡುವಿಕೆಯೂ ಸೇವಕತ್ವವೂಸಹ ಉಂಟಾಗಿರಲಿ. ಐಶ್ವರ್ಯವನಪೇಕ್ಷಿಸುವ ನಾಗಲೊಲ್ಲೆನು. ಮತ್ತೇನೆಂದರೆ- ಮಹಾನುಭಾವನಾದ ಸದ್ಗುಣನಿಧಿಯಾದ ಆಹರಿಯೊಡನೆ ವಿಶೇಷವಾ

ಮಹಾನುಭಾವೇನಗುಣಾಲಯೇನವಿಷಜ್ಜತಸ್ತತ್ಪುರುಷಪ್ರಸಂಗಃ ‖೩೭‖ ಭಕ್ತಾಯಚಿತ್ರಾಭಗವಾನ್ಹಿಸಂಪದೋರಾಜ್ಯಂವಿಭೂತೀರ್ನಸಮರ್ಥಯತ್ಯಜಃ । ಅದೀರ್ಘಬೋಧಾಯವಿಚಕ್ಷಣಸ್ಸ್ವಯಂಪಶ್ಯನ್ನಿಪಾತಂಧನಿನಾಂಮದೋದ್ಭವಮ್ ‖೩೮‖ ಇತ್ಥಂವ್ಯವಸಿತೋಬುದ್ಧ್ಯಾಭಕ್ತೋಽತೀವಜನಾರ್ದನೇ । ವಿಷಯಾನ್ಜಾಯಯಾತ್ಯಕ್ಷ್ಯನ್ಬುಭುಜೇನಾತಿಲಂಪಟಃ ‖೩೯‖ ತಸ್ಯವೈದೇವದೇವಸ್ಯಹರೇರ್ಯಜ್ಞಪತೇಃಪ್ರಭೋಃ । ಬ್ರಾಹ್ಮಣಾಃಪ್ರಭವೋದೈವಂನತೇಭ್ಯೋವಿದ್ಯತೇಪರಮ್ ‖೪೦‖ ಏವಂಸವಿಪ್ರೋಭಗವತ್ಸುಹೃತ್ತಮೋದೃಷ್ಟ್ವಾಸ್ವಭೃತ್ಯೈರಜಿತಂಪರಾಜಿತಮ್ । ತದ್ಧ್ಯಾನವೇಗೋದ್ಗ್ರಥಿತಾತ್ಮಬಂಧನಸ್ತದ್ಧಾಮಲೇ

---

ಜನ್ಮದಲ್ಲಿಯೂ, ಪುನಃ-ಮರಳಿಯೂ, ಸ್ಯಾತ್-ಉಂಟಾಗಲಿ, ಮಹಾನುಭಾವೇನ-ಮಹಾತ್ಮನಾದ, ಗುಣಾಲಯೇನ-ಸುಗುಣಗಳಿಗೆ ಆಶ್ರಯನಾದ ಕೃಷ್ಣನೊಡನೆ, ವಿಷಜ್ಜತಃ-ವಿಶೇಷಸಂಬಂಧವುಳ್ಳ ನನಗೆ, ತತ್ಪುರುಷಪ್ರಸಂಗಏವ-ಆತನಮನುಷ್ಯರಾದ ಭಾಗವತರಸಂಬಂಧವೇ, ಸ್ಯಾತ್-ಉಂಟಾಗಲಿ ‖೩೭‖ ಅಜಃ-ಪರಮೇಶ್ವರನಾದ, ಕೃಷ್ಣನು. ಭಗವಾನ್-ಸರ್ವಜ್ಞನಾದ್ದರಿಂದ,ಧನಿನಾಂ-ಧನವುಳ್ಳವರಿಗೆ ಉಂಟಾಗುವ, ಮದೋದ್ಭವಂ-ಗರ್ವದಿಂದಹುಟ್ಟುವ, ನಿಪಾತಂ-ಚ್ಯುತಿಯನ್ನು , ಪಶ್ಯನ್-ತಿಳಿಯುತ್ತಿರುವನಾಗಿ, ಅದೀರ್ಘಬೋಧಾಯ ದೀರ್ಘಾಲೋಚನೆಇಲ್ಲದ, ಅವಿವೇಕಿಯಾದ ಭಕ್ತಾಯ-ಸೇವಕನಿಗೆ, ಸ್ವಯಂ-ತಾನು,ವಿಚಕ್ಷಣಃ-ನಿಪುಣನಾದ್ದರಿಂದ, ಚಿತ್ರಾಃ-ಆಶ್ಚರ್ಯಕರಂಗಳಾದ, ಸಂಪದಃ-ಭಾಗ್ಯಗಳನ್ನು, ರಾಜ್ಯಂ-ಪ್ರಭುತನವನ್ನು, (ಪ್ರಾಭವವನ್ನು) ವಿಭೂತೀಃ-ಐಶ್ವರ್ಯಗಳನ್ನು, ನಸಮರ್ಥಯತಿ-ಪೂರ್ಣವನ್ನಾಗಿ ಮಾಡುವುದಿಲ್ಲ ‖೩೮‖ ಇತ್ಥಂ-ಹೀಗೆ, ಬುದ್ಧ್ಯಾ-ವಿವೇಕದಿಂದ, ವ್ಯವಸಿತಃ-ವಿಚಾರಹುಟ್ಟಿದವನಾಗಿ, ಜನಾರ್ದನೇ-ಸರ್ವಸಾಕ್ಷಕನಾದ ಭಗವಂತನಲ್ಲಿ, ಅತೀವಭಕ್ತಃ-ಅತ್ಯಂತಪ್ರೀತಿಯುಳ್ಳವನಾಗಿ, ತ್ಯಕ್ಷ್ಯನ್-ಮೆಲ್ಲಗೆಮೆಲ್ಲಗೆ ಎಲ್ಲವನ್ನೂಬಿಡಲಭ್ಯಸಿಸುವನಾಗುತ್ತ,ನಾತಿಲಂಪಟಃ-ಅಧಿಕವಾಗಿ ಆಸಕ್ತನಾಗದೆ,ಜಾಯಯಾ-ಪತ್ನಿಯೊಡನೆ, ವಿಷಯಾನ್-ಇಂದ್ರಿಯಸುಖಗಳನ್ನು, ಬುಭುಜೇ-ಅನುಭವಿಸಿದನು ‖೩೯‖ ದೇವದೇವಸ್ಯ-ದೇವತೆಗಳಿಗೂ ದೇವರಾದ, ಯಜ್ಞಪತೇಃ-ಕರ್ಮಯೋಗಕ್ಕೊಡೆಯನಾದ ಪ್ರಭೋಃ-ಸ್ವತಂತ್ರನಾದ, ತಸ್ಯಹರೇಃ-ಆ ಕೃಷ್ಣನಿಗೆ,ವೈ-ಪ್ರಸಿದ್ಧವಾಗಿ, ಬ್ರಾಹ್ಮಣಾಃ-ಜ್ಞಾನವುಳ್ಳವಿಪ್ರರೇ (ವೇದಜ್ಞರೇ) ಪ್ರಭವಃ-ಒಡೆಯರೂ, ದೈವಂ-ಉಪಾಸ್ಯದೇವತೆಯೂ, ಆಗಿರುವರು ತೇಭ್ಯಃ-ಆ ಬ್ರಾಹ್ಮಣರಿಗಿಂತಲೂ, ಪರಂ-ಉತ್ತಮವಾದ ವಸ್ತುವು, ನವಿದ್ಯತೇ-ಇರುವುದಿಲ್ಲವು ‖೪೦‖ ಏವಂ-ಹೀಗೆ, ಭಗವತ್ಸುಹೃತ್ತಮಃ-ಭಗವಂತನಿಗೆ ಅತ್ಯಂತಸ್ನೇಹಿತನಾದ, ಸವಿಪ್ರಃ-ಆ ಬ್ರಾಹ್ಮಣನು, ಅಜಿತಂ-ಯಾರಿಂದಲೂ ಗೆಲ್ಲಲ್ಪಡದೆ ಇರುವನಾದರೂ, ಸ್ವಭೃತ್ಯೈಃ-ತನ್ನ ಸೇವಕರಿಂದ, ಪರಾಜಿತಂ-ಸೋಲ್ವಿಕೆಯುಂಟಾದ ಕೃಷ್ಣನನ್ನು, ದೃಷ್ಟ್ವಾ-ನೋಡಿ, ಅಭಿರತಃ-ಆ ಕೃಷ್ಣನಲ್ಲಿದೃಢವಾಗಿ ಆಸಕ್ತನಾಗಿ, ತದ್ಧ್ಯಾನವೇಗೋದ್ಗ್ರಥಿತಾತ್ಮಬಂಧನ -ಆ ಕೃಷ್ಣನಧ್ಯಾನದವೇಗದಿಂದ ಬಿ

---

ಗಿ ಸುಂಗವನೆಯ್ದಿದನನಗೆ ಜನ್ಮಜನ್ಮದಲ್ಲಿಯೂ ಆಶ್ರೀಕೃಷ್ಣನ ಭಕ್ತರಸಂಗವಿರಲಿ ‖೩೭‖ ಲೋಕದಲ್ಲಿ ಧನವಂತರಿಗೆ ಧನದಿಂದುಂಟಾಗುವ ಅಧಃಪತನವಂ ಆಲೋಚಿಸಿ ಶ್ರೀಕೃಷ್ಣನು ತನ್ನಭಕ್ತನು ವಿವೇಕರಹಿತನಾದರೂ ಅವನಿಗೆ ವಿಚಿತ್ರಂಗಳಾದ ಬೊಕ್ಕಸಮೊದಲಾದ ಸಂಪತ್ತುಗಳಂ ರಾಜ್ಯವಂ ಪುತ್ರಕಳತ್ರಾದಿಗಳಂ ಸಹ ಕುಡುವನಾಗುವುದಿಲ್ಲ. ಮತ್ತೇನೆಂದರೆ- ದೃಢವಾದ ಭಕ್ತಿಯನ್ನೇ ಕುಡುವನು. ಆಕಾರಣದಿಂದ ಜನ್ಮರಹಿತನಾದ ಸರ್ವಜ್ಞನಾದ ಭಗವಂತನು ನನಗೆ ಭಕ್ತಿಯಿಲ್ಲದ್ದರಿಂದ ಮಹತ್ತಾದ ಈಯೈಶ್ವರ್ಯವಂ ಕೊಟ್ಟನು. ಆದ್ದರಿಂದ ನನಗೆ ಶ್ರೀಹರಿಭಕ್ತಿಯೇ ಯಾವಾಗಲೂ ಉಂಟಾಗಲಿ ‖೩೮‖ ಈಪರಿಯಾಗಿ ಹರಿಭಕ್ತನಾದ ಆದ್ವಿಜಶ್ರೇಷ್ಠನು ಬುದ್ಧಿಯಿಂದ ನಿಶ್ಚಯಿಸಿ ವಿಷಯಾಸಕ್ತನಾಗದೆ ಮೆಲ್ಲಮೆಲ್ಲನೆ ವಿಷಯಪರಿತ್ಯಾಗಂಗೆಯ್ವುತ ನಿಸ್ಪೃಹನಾಗಿ ಪತ್ನಿಯೊಡಗೂಡಿ ಭೋಗಂಗಳನನುಭವಿಸಿದನು ‖೩೯‖ಯಜ್ಞಂಗಳಿಗೆ ಸ್ವಾಮಿಯಾದ ಬ್ರಹ್ಮಾದಿಗಳಿಗೂ ನಿಯಾಮಕನಾದ ಆಶ್ರೀಕೃಷ್ಣನಿಗೆಬ್ರಾಹ್ಮಣರೇಸೇವ್ಯರು,ಬ್ರಾಹ್ಮಣರೇಭಾಗ್ಯವು, ಅವರಿಗಿಂತಲೂ ಅಧಿಕವಾದ ವಸ್ತುವು ಮತ್ತೊಂದಿಲ್ಲವು ‖೪೦‖ ಈರೀತಿಯಿಂದ ಪೂಜ್ಯನಾದ ಆಬ್ರಾಹ್ಮಣನು ಶುಭವಾದ ಮನಸ್ಸುಳ್ಳವನಾಗಿ ಅನ್ಯರಿಂದ ಜಯಿಸಲ್ಪಡದವನಾದರೂ ಭಕ್ತ್ಯಧೀನನಾದ ನಾರಾಯಣನಂ ಕಂಡು ಶ್ರೀಹರಿಯ ಧ್ಯಾನದಿಂದ ಬಿಡಲ್ಪಟ್ಟ ಅಹಂಕಾರ

ಭಿರ್ಭಿರತಸ್ಸತಾಂಗತಿಮ್ ॥೪೧॥ ಏತದ್ಬ್ರಹ್ಮಣ್ಯದೇವಸ್ಯಶ್ರುತ್ವಾಬ್ರಹ್ಮಣ್ಯತಾಂನರಃ ।ಲಬ್ಧಭಾವೋಭಗವತಿಕರ್ಮಬಂಧಾತ್ಪ್ರಮುಚ್ಯತೇ ... ... ॥೪೨॥

ಇತಿ ಶ್ರೀಮದ್ಭಾಗವತೇ-ದಶಮಸ್ಕಂಧೇ- ಏಕಾಶೀತಿತಮೋಧ್ಯಾಯಃ-

ಸೂರ್ಯೋಪರಾಗೇಕುರುಕ್ಷೇತ್ರಂಪ್ರತಿ ಶ್ರೀಕೃಷ್ಣಾದೀನಾಂಗಮನ ಕಥಾಪ್ರಾರಂಭಃ ಷಟ್ಚ-

ಶ್ರೀಶುಕಃ॥ ಅಥೈಕದಾದ್ವಾರಕಾಯಾಂವಸತೋರಾಮಕೃಷ್ಣಯೋಃ । ಸೂರ್ಯೋಪರಾಗಸ್ಸುಮಹಾ

---

ಚ್ಚಿಹಾಕಲ್ಪಿತ್ತ ಅಹಂಕಾರವುಳ್ಳವನಾಗಿ, ಸತಾಂ-ಬ್ರಹ್ಮಜ್ಞಾನಿಗಳಿಗೆ, ಗತಿಂ-ಪ್ರಾಪ್ಯವಾದ, ತದ್ಧಾಮ-ಆ ವಿಷ್ಣುಪದವನ್ನು, ಲೇಭೇ-ಪಡೆದನು ॥೪೧॥ ನರಃ-ಮನುಷ್ಯನು, ಬ್ರಹ್ಮಣ್ಯದೇವಸ್ಯ-ವೇದವೇದ್ಯನಾದ ಬ್ರಾಹ್ಮಣಪ್ರಿಯನಾದ, ಕೃಷ್ಣನ, ಬ್ರಹ್ಮಣ್ಯತಾಂ-ಬ್ರಾಹ್ಮಣಪ್ರಿಯತ್ವವನ್ನೂ, ಏತತ್-ಈ ಉಪಾಖ್ಯಾನವನ್ನು, ಶ್ರುತ್ವಾ-ಕೇಳಿ, ಭಗವತಿ-ಕೃಷ್ಣನಲ್ಲಿ, ಲಬ್ಧಭಾವಃ-ಪಡೆಯಲ್ಪಟ್ಟ ಭಕ್ತಿಭಾವವುಳ್ಳವನಾಗಿ, ಕರ್ಮಬಂಧಾತ್-ಅದೃಷ್ಟದಸೆರೆಯಾದ ಸಂಸಾರದಸೆಯಿಂದ, ಪ್ರಮುಚ್ಯತೇ-ಬಿಡಲ್ಪಡುವನು. ॥೪೨॥

ಇಂತೆಂಬಲ್ಲಿಗೆ ಭಾಗವತ ಪ್ರತಿಶಬ್ದಾರ್ಥ ಬೋಧಿನಿಯಲ್ಲಿ ದಶಮಸ್ಕಂಧದೊಳು

೮೧ನೆಯ ಅಧ್ಯಾಯ ಮುಗಿದುದು.

೮೨ ನೆಯ ಅಧ್ಯಾಯದಪ್ರತಿಪದ ಟೀಕೆ.

ಅಥ-ಬಳಿಕ, ಏಕದಾ-ಒಂದು ಸಮಯದಲ್ಲಿ, ರಾಮಕೃಷ್ಣಯೋಃ-ರಾಮನೂಕೃಷ್ಣನೂ ದ್ವಾರಕಾಯಾಂ-ಕುಶಸ್ಥಲಿಯಲ್ಲಿ, ವಸತೋಸ್ಸತೋಃ-ಇರುತಿರುವರಾಗುತ್ತಿರಲು, ಕಲ್ಪಕ್ಷಯೇಯಥಾ-ಪ್ರಳಯಕಾಲದಲ್ಲಿ ಹೇಗೋಹಾಗೆ,ಸುಮಹಾನ್-ಸಂ

---

ವುಳ್ಳವನಾಗಿ ಬ್ರಹ್ಮವೇತ್ತರುಗಳಿಂದ ಪಡೆಯಲುಯೋಗ್ಯವಾದ ಪರಮಪದವನೈದಿದನು ॥೪೧॥ ಲೋಕದಲ್ಲಿ ಬ್ರಾಹ್ಮಣ್ಯಕ್ಕೆ ಸ್ವಾಮಿಯಾದ ಶ್ರೀಕೃಷ್ಣನು ಅವಲಕ್ಕಿಯಂತಿಂದು ಭಕ್ತರಂ ರಕ್ಷಿಸಿದನೆಂಬಕಥೆಯಂ ಬ್ರಾಹ್ಮಣರಿಗೆ ಆಭಗವಂತನಲ್ಲಿರುವ ವಾತ್ಸಲ್ಯವಂಸಹ ಯಾವನುಮಜನಾದರೂ ಕೇಳುವನೋ ಅವನು ಶ್ರೀಕೃಷ್ಣನಲ್ಲಿ ಭಕ್ತಿಯುಳ್ಳವನಾಗಿ ಮುಕ್ತನಾಗುವನು. ॥೪೨॥

ಇಂತು ಶ್ರೀಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸಿದನೆಂದುಸೂತಪೌ

ರಾಣಿಕನು ನೈಮಿಶಾರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಪೇಳಿದನೆಂ

ಬಲ್ಲಿಗೆ-ಶ್ರೀಮನ್ಮಹೀಶೂರ ಪುರವರಾಧೀಶ ಶ್ರೀಚಾಮರಾಜತನುಜಶ್ರೀ

ಮತ್ಕೃಷ್ಣರಾಜವಿರಚಿತವಾದ ಶ್ರೀಕೃಷ್ಣರಾಜವಾಣೀವಿಲಾಸಮೆಂ

ಬ ಶ್ರೀಭಾಗವತ ಪುರಾಣದಕರ್ಣಾಟಭಾಷಾವ್ಯಾಖ್ಯಾನದಲ್ಲಿ

೮೧ನೆಅಧ್ಯಾಯಂಮುಗಿದುದು

---

೮೨ನೆಯಅಧ್ಯಾಯವು

ಶ್ರೀಧರೀಯಶ್ಲೋಕಃ॥ದ್ವ್ಯಶೀತಿತಮಆಗತ್ಯಕುರುಕ್ಷೇತ್ರಂರವಿಗ್ರಹೇ ।ವೃಷ್ಣೀನ್ದೃಷ್ಟ್ವಾಮುದಾಭೂಪಾಃಚಕ್ರುಃಕೃಷ್ಣಕಥಾಮಿಥಃ ॥ ‡ ॥ಟೀ॥ ಎಂಭತ್ತೆರಡನೆಯಅಧ್ಯಾಯದಲ್ಲಿ ಸೂರ್ಯೋಪರಾಗದಲ್ಲಿ ಸ್ನಾನಕ್ಕೋಸ್ಕರ ಕುರುಕ್ಷೇತ್ರವಂಕುರಿತು ಬಂದ ಸಮಸ್ತರಾದಭೂಪತಿಗಳೂ ಯಾದವರಂ ನೋಡಿ ಶುಭಂಗಳಾದ ಕೃಷ್ಣನಕಥೆಗಳಂ ಸಂತೋಷದಿಂ ಪೇಳುತ್ತಿರ್ದರೆಂಬರ್ಥವಂ ಕೃಷ್ಣನು ಮಿತ್ರನಾದಕುಚೇಲನಿಗೆ ಭೂಲೋಕದಲ್ಲಿಯೇ ಇಂದ್ರಪದವಿತ್ತು ನಂದಾದಿಗಳಂ ಸಂತೋಷಪಡಿಸುವನಾಗಿ ಕುರುಕ್ಷೇತ್ರಕ್ಕೆ ಬಂದನೆಂಬರ್ಥವನ್ನೂ, ಶ್ರೀಶುಕಮುನಿಯು ಪರೀಕ್ಷಿದ್ರಾಯನಂಕುರಿತು ನಿರೂಪಿಸುವನೆಂತೆನೆ-

ನಾಸೀತ್ಕಲ್ಪಕ್ಷಯೇಯಥಾ ॥೧॥ ತಂಜ್ಞಾತ್ವಾಪುರುಷಾರಾಜನ್ಪುರಸ್ತಾದೇವಸರ್ವತಃ । ಸ್ಯಮಂತಪಂಚಕಂಕ್ಷೇತ್ರಂಯಯುಃಶ್ರೇಯೋವಿಧಿತ್ಸಯಾ॥೨॥ನಿಃಕ್ಷತ್ರಿಯಾಂಮಹೀಂಕುರ್ವನ್ರಾಮಶ್ಶಸ್ತ್ರಭೃತಾಂವರಃ । ನೃಪಾಣಾಂರುಧಿರೌಘೇಣಯತ್ರಚಕ್ರೇಮಹಾಹ್ರದಾನ್ ॥೩॥ ಈಜೆಸಭಗವಾನ್ರಾಮೋಯತ್ರಾಸ್ಪೃಷ್ಟೋಪಿಕರ್ಮಣಾ । ಲೋಕಸ್ಯಗ್ರಾಹಯನ್ನೀಶೋಯಥಾನ್ಯೋಘಾಪನುತ್ತಯೇ॥೪॥ಮಹತ್ಯಾಂತೀರ್ಥಯಾತ್ರಾಯಾಂತತ್ರಾಗನ್ಭಾರತೀಃ ಪ್ರಜಾಃ ॥೫॥ ವೃಷ್ಣಯಶ್ಚತಥಾಕ್ರೂರವಸುದೇವಾಹುಕಾದಯಃ । ಯಯುರ್ಭಾರತತತ್ಕ್ಷೇತ್ರಂಸ್ವಮಘಂಕ್ಷಪಯಿಷ್ಣವಃ॥೬॥ ಗದಪ್ರದ್ಯುಮ್ನಸಾಂಬಾದ್ಯಾಃ

---

ಪೂರ್ಣಗ್ರಾಸವಾದ, ಸೂರ್ಯೋಪರಾಗಃ-ಸೂರ್ಯಗ್ರಹಣವು, ಆಸೀತ್-ಆದುದು ॥೧॥ ರಾಜನ್-ಪರೀಕ್ಷಿದ್ರಾಯನೇ, ಪುರುಷಾಃ-ಮನುಷ್ಯರು, ಸರ್ವತಃ-ಸರ್ವಕಾಲಕ್ಕಿಂತಲೂ, ಪುರಸ್ತಾದೇವ-ಮುಂಚೆಯೇ, ತಂ-ಜೋಯಿಸರಿಂದ ಹೇಳಲ್ಪಟ್ಟ ಗ್ರಹಣಕಾಲವನ್ನು, ಜ್ಞಾತ್ವಾ-ತಿಳಿದು, ಶ್ರೇಯೋವಿಧಿತ್ಸಯಾ-ಪುಣ್ಯಕಾರ್ಯಗಳಂ ಮಾಡಲಪೇಕ್ಷೆಯಿಂದ, ಸ್ಯಮಂತಪಂಚಕಂ-ಸ್ಯಮಂತಪಂಚಕವೆಂಬ, ಕ್ಷೇತ್ರಂ-ಪುಣ್ಯಭೂಮಿಯನ್ನು, ಯಯುಃ-ಸೇರಿದರು ॥೨॥ ಶಸ್ತ್ರಭೃತಾಂ-ಆಯುಧವಂಪಿಡಿವವರೊಳಗೆ, ವರಃ-ಶ್ರೇಷ್ಠನಾದ, ರಾಮಃ-ಪರಶುರಾಮನು, ಮಹೀಂ-ಭೂಮಿಯನ್ನು, ನಿಃಕ್ಷತ್ರಿಯಾಂ-ಅರಸುಗಳಿಲ್ಲದ್ದನ್ನಾಗಿ, ಕುರ್ವನ್-ಮಾಡುತ್ತಿರುವನಾಗಿ, ನೃಪಾಣಾಂ-ದೊರೆಗಳ, ರುಧಿರೌಘೇಣ-ರಕ್ತಗಳಸಮೂಹದಿಂದ, ಯತ್ರ-ಯಾವಕುರುಕ್ಷೇತ್ರದಲ್ಲಿ, ಮಹಾಹ್ರದಾನ್-ದೊಡ್ಡಮಡುಗಳನ್ನು, ಚಕ್ರೇ-ಮಾಡಿದನೋ ॥೩॥ ಭಗವಾನ್-ಷಡ್ಗುಣೈಶ್ವರ್ಯ ಪರಿಪೂರ್ಣನಾದ, ರಾಮಃ-ಭಾರ್ಗವರಾಮನು, ಕರ್ಮಣಾ-ಪುಣ್ಯಪಾಪಬಂಧದಿಂದ, ಅಸ್ಪೃಷ್ಟೋಪಿ-ಸೋಂಕಲ್ಪಡದೆ ಇರುವವನಾದರೂ, ಈಶಃ-ಜಗನ್ನಿಯಾಮಕನಾದ್ದರಿಂದ, ಲೋಕಸ್ಯ-ಜನಕ್ಕೆ, ಗ್ರಾಹಯನ್-ಪ್ರಾಯಶ್ಚಿತ್ತವಂ ಮಾಡಿಕೊಳ್ಳಬೇಕೆಂದು ತಿಳಿಯಪಡಿಸುವನಾಗಿ, ಅನ್ಯಃ-ಇತರ ಪುರುಷನು, ಅಘಾಪನುತ್ತಯೇ-ಪಾಪಂಗಳ ಪರಿಹಾರಕ್ಕೋಸುಗ, ಯಥಾ-ಹೇಗೋ, ತಥಾ-ಹಾಗೆ, ಈಜೇ-ಯಜ್ಞಮಾಡಿದನೋ, ಮಹತ್ಯಾಂ-ಅಧಿಕವಾದ, ತೀರ್ಥಯಾತ್ರಾಯಾಂ-ಪುಣ್ಯಸ್ಥಲ ಪ್ರಯಾಣದಲ್ಲಿ, ಭಾರತೀಃಪ್ರಜಾಃ-ಭರತವಂಶದ ಜನಂಗಳು, ತತ್ರ-ಆ ಕುರುಕ್ಷೇತ್ರದಲ್ಲಿ, ಆಗನ್-ಬಂದಿದ್ದರು ॥೫॥ ತಥಾ-ಹಾಗೆ, ಭಾರತ-ಪರೀಕ್ಷಿತನೇ, ಅಕ್ರೂರವಸುದೇವಾಹುಕಾದಯಃ-ಅಕ್ರೂರನು ವಸುದೇವನು ಆಹುಕನುಮೊದಲಾದ, ವೃಷ್ಣಯಶ್ಚ-ವೃಷ್ಣಿಕುಲದವರೂ, ಸ್ವಮಘಂ-ತಮ್ಮ ಪಾಪವನ್ನು, ಕ್ಷಪಯಿಷ್ಣವಃ-ಕ್ಷೀಣಗೊಳಿಸಲಪೇಕ್ಷಿಸುವರಾಗಿ, ತತ್ಕ್ಷೇತ್ರಂ-ಆ ಕುರುಕ್ಷೇತ್ರವನ್ನು ॥೬॥ ಗದಪ್ರದ್ಯುಮ್ನಸಾಂಬಾದ್ಯಾಃ-ಗದನು ಪ್ರದ್ಯುಮ್ನನು ಸಾಂಬನುಮೊದಲಾಗಿವುಳ್ಳ, ಸುಚಂದ್ರಶುಕಸಾರಣೈಃ-ಸುಚಂದ್ರಶುಕಸಾರಣರೊಡನೆ, ಯಯುಃ

---

ಕೇಳೈ, ಅರಸೇ! ಒಂದಾನೊಂದುವೇಳೆಯಲ್ಲಿ ರಾಮಕೃಷ್ಣರು ದ್ವಾರಕೆಯಲ್ಲಿರಲು ಪ್ರಳಯಕಾಲದಲ್ಲಿ ಯಂತುಸರ್ವಗ್ರಾಸವಹುದೋ ಆತೆರದಿಂ ಸೂರ್ಯಗ್ರಹಣವು ಪ್ರಾಪ್ತವಾಗಲು ॥೧॥ ಇದಂತಿಳಿದು ಸಮಸ್ತರಾದ ಜನರೂ ತಮಗೆಶ್ರೇಯಸ್ಸಂಪಾದಿಸಲಿಚ್ಛೆಯಿಂದ ಮುಂಚಿತವಾಗಿಯೇ ಸ್ಯಮಂತಪಂಚಕವೆಂಬ ಕ್ಷೇತ್ರವನೆಯ್ದಿದರು ॥೨॥ಅವೆಂತಿಯೆಂದೆಂದರೆ ಶಸ್ತ್ರಧಾರಿಗಳೊಳಗೆ ಶ್ರೇಷ್ಠನಾದ ಪರಶುರಾಮನು ಭೂಮಿಯಂಕ್ಷತ್ರಿಯರಿಲ್ಲದುದಂ ಮಾಡುವನಾಗಿ ಅರಸುಗಳ ಸಮೂಹಂಗಳಿಂದ ಎಲ್ಲಿಅಗಾಧಗಳ ದವಿಸ್ತಾರಗಳಾದ ಮಡುಗಳಂಮಾಡಿದನೋ ॥೩॥ ಮತ್ತು ಯಾವಕ್ಷೇತ್ರದಲ್ಲಿ ಭಾರ್ಗವರಾಮನು ತಾನುಸ್ವತಂತ್ರನಾಗಿ ಕಲುಷದಿಂದ ಲೇಪಿಸಲ್ಪಡದೆ ಇರುವವನಾದರೂ ಅನ್ಯನಾದ ಪ್ರಾಕೃತಮನುಜನಂತೆ ಲೋಕಸಂಗ್ರಹಾರ್ಥವಾಗಿಪಾಪಪರಿಹಾರಕ್ಕೋಸ್ಕರ ಯಜ್ಞವಂಮಾಡಿದನೋ ಅಂತಾಕ್ಷೇತ್ರವನೆಯ್ದಿದರು ॥೪॥ ಮಹತ್ತಾದ ಇಂತಾತೀರ್ಥ ಯಾತ್ರೆಯಲ್ಲಿ ಭರತಖಂಡದಲ್ಲಿರುವ ಪ್ರಜೆಗಳೆಲ್ಲರೂ ಯಾದವರು, ಅಕ್ರೂರನು, ವಸುದೇವನು, ಆಹುಕನೆಮೊದಲಾದವರು, ಗದಪ್ರದ್ಯುಮ್ನ ಸಾಂಬರುಸಹ ತಮ್ಮಪಾಪವಂ ಪರಿಹರಿಸಲೋಸುಗ ಬಂದರು ॥೫॥ಅನಿರುದ್ಧನು, ಯೂಥಪತಿಯಾದ ಕೃತವರ್ಮನೂ, ಸುಚಂದ್ರಶುಕಸಾರಣರೊಡನೆ ದ್ವಾರಕಾನಗರಮ ಸಂರಕ್ಷಿಸಲೋಸುಗ ಅಲ್ಲಿಯೇ ಇದ್ದರು॥೬॥ ವಿಮಾನಂಗಳಿಗೆ ಸಮಾನಂಗಳಾದ ರಥಂಗಳಿಂದ ತೆರೆಗಳಂತೆ ವೇಗವುಳ್ಳ, ಕುದುರೆಗಳಿಂದ, ನೀಲಮೇಘಂಗಳಂತೆ ಪ್ರಕಾಶಿಸುವಗ

ಸ್ಸುಚಂದ್ರಶುಕಸಾರಣೈಃ । ಆಸ್ತೇಽನಿರುದ್ಧೋ ರಕ್ಷಾಯಾಂ ಕೃತವರ್ಮಾ ಚ ಯೂಥಪಃ ॥೭॥ ತೇ ರಥೈರ್ದೇವ ಧಿಷ್ಣ್ಯಾಭೈರ್ಹಯೈಶ್ಚ ತರಳಪ್ಲವೈಃ । ಗಜೈರ್ನದದ್ಭಿರಭ್ರಾಭೈರ್ನೃಭಿರ್ವಿದ್ಯಾಧರದ್ಯುಭಿಃ ॥೮॥ ವ್ಯರೋಚಂತ ಮಹಾತೇಜಾಃ ಪೃಥುಕಾಂಚನಮಾಲಿನಃ । ದಿವ್ಯಸ್ರಗ್ವಸ್ತ್ರಸನ್ನಾಹಾಃ ಕಳತ್ರೈಃ ಖೇಚರಾ ಇವ ॥೯॥ ತತ್ರ ಸ್ನಾತ್ವಾ ಮಹಾಭಾಗಾ ಉಪೋಷ್ಯ ಸುಸಮಾಹಿತಾಃ । ಬ್ರಾಹ್ಮಣೇಭ್ಯೋ ದದುರ್ಧೇನೂರ್ವಾಸಸ್ಸ್ರಗ್ರುಕ್ಮಮಾಲಿನೀಃ ॥೧೦॥ ರಾಮಹ್ರದೇಷು ವಿಧಿವತ್ಪುನರಾಪ್ಲುತ್ಯ ವೃಷ್ಣಯಃ । ದದುಸ್ಸ್ವರ್ಣಂ ದ್ವಿಜಾಗ್ರ್ಯೇಭ್ಯಃ ಕೃಷ್ಣೇ ನೋ ಭಕ್ತಿರಸ್ತ್ವಿತಿ ॥೧೧॥ ಸ್ವಯಂ ಚ ತದನುಜ್ಞಾತಾ ವೃಷ್ಣಯಃ ಕೃಷ್ಣದೇವತಾಃ । ಭುಕ್ತ್ವೋಪವಿವಿಶುಃ ಕಾಮಂ ಸ್ನಿಗ್ಧಚ್ಛಾಯಾಂಘ್ರಿಪಾಂಘ್ರಿಷು ॥೧೨॥ ತತ್ರಾಗತಾಂಸ್ತೇ ದ

---

ಸೇರಿದರು, ರಕ್ಷಾಯಾಂ-ದ್ವಾರಕಾಪುರವಂ ಪಾಲಿಸುತ್ತಿರುವ ಕೆಲಸದಲ್ಲಿ, ಅನಿರುದ್ಧಃ-ಪ್ರದ್ಯುಮ್ನನಮಗನೂ, ಯೂಥಪಃ-ಸೇನಾಪತಿಯಾದ, ಕೃತವರ್ಮಾ ಚ-ಕೃತವರ್ಮನೂ, ಆಸ್ತೇ-ಇರುವನು ॥೭॥ ತೇ-ಆ ಯಾದವರು, ದೇವಧಿಷ್ಣ್ಯಾಭೈಃ-ದೇವತೆಗಳ ವಿಮಾನಂಗಳ ಕಾಂತಿಯುಳ್ಳ, ರಥೈಃ-ತೇರುಗಳೊಡನೆಯೂ, ತರಳಪ್ಲವೈಃ-ಚಂಚಲವಾದ ಹಾರಾಟಂಗಳುಳ್ಳ, ಹಯೈಶ್ಚ-ಕುದುರೆಗಳೊಡನೆಯೂ, ನದದ್ಭಿಃ-ಕೂಗುತ್ತಿರುವ, ಅಭ್ರಾಭೈಃ-ಮೇಘಂಗಳ ಕಾಂತಿಯುಳ್ಳ, ಗಜೈಃ-ಆನೆಗಳೊಡನೆಯೂ, ವಿದ್ಯಾಧರದ್ಯುಭಿಃ-ವಿದ್ಯಾಧರರೆಂಬ ದೇವರ್ಕಳಹೋಲುವುಳ್ಳ, ನೃಭಿಃ-ಮನುಷ್ಯರೊಡನೆಯೂ ॥೮॥ ಮಹಾತೇಜಾಃ-ಅಧಿಕಪ್ರಕಾಶವುಳ್ಳವರೂ, ಪೃಥುಕಾಂಚನಮಾಲಿನಃ-ತೋರವಾದ ಚಿನ್ನದ ಸರಂಗಳುಳ್ಳವರೂ, ದಿವ್ಯಸ್ರಗ್ವಸ್ತ್ರಸನ್ನಾಹಾಃ-ಬೆಳಗುತ್ತಿರುವ ಪುಷ್ಪಮಾಲೆಗಳೂ ಪಾವಡಗಳೂ ಉಡಿಗೆಗಳೂ ಉಳ್ಳವರೂ, ಕಳತ್ರೈಃ-ಭಾರ್ಯೆಯರಿಂ ಸಹಿತರಾದವರೂ ಆಗಿ, ಖೇಚರಾ ಇವ-ದೇವರ್ಕಳಂತೆ, ವ್ಯರೋಚನ್ತ-ವಿಶೇಷವಾಗಿ ಬೆಳಗಿದರು ॥೯॥ ಮಹಾಭಾಗಾಃ-ಮಹಾಪುಣ್ಯವಂತರಾದ ಯಾದವರು, ತತ್ರ-ಆ ಕುರುಕ್ಷೇತ್ರದಲ್ಲಿ, ಸ್ನಾತ್ವಾ-ಮಿಂದು, ಉಪೋಷ್ಯ-ಆಹಾರವಂ ಬಿಟ್ಟೆದ್ದು, ಸುಸಮಾಹಿತಾಃ-ಚೆನ್ನಾಗಿ ಶಾಂತಚಿತ್ತರಾಗಿ, ವಾಸಸ್ಸ್ರಗ್ರುಕ್ಮಮಾಲಿನೀಃ-ವಸ್ತ್ರಗಳೂ ಪುಷ್ಪಹಾರಗಳೂ ಚಿನ್ನದ ಸರಗಳೂ ವುಳ್ಳ, ಧೇನೂಃ-ಆಕಳುಗಳನ್ನು, ಬ್ರಾಹ್ಮಣೇಭ್ಯಃ-ವೇದಜ್ಞರಾದ ವಿಪ್ರರಿಗೆ, ದದುಃ-ದಾನವಿತ್ತರು ॥೧೦॥ ವೃಷ್ಣಯಃ-ಯಾದವರಲ್ಲಿ ವೃಷ್ಣಿಕುಲದವರು, ಪುನಃ-ಮರಳಿಯೂ, ರಾಮಹ್ರದೇಷು-ಸ್ಯಮಂತಪಂಚತೀರ್ಥಗಳಲ್ಲಿ, ವಿಧಿವತ್-ಶಾಸ್ತ್ರಪ್ರಕಾರವಾಗಿ, ಆಪ್ಲುತ್ಯ-ಅವಗಾಹನ ಸ್ನಾನವಂಮಾಡಿ, ನಃ-ನಮಗೆ, ಕೃಷ್ಣೇ-ಪರಮಾತ್ಮನಲ್ಲಿ, ಭಕ್ತಿಃ-ಪ್ರೀತಿಯು, ಅಸ್ತ್ವಿತಿ-ಆಗಲಿಯೆಂದು, ದ್ವಿಜಾಗ್ರ್ಯೇಭ್ಯಃ-ಬ್ರಾಹ್ಮಣಶ್ರೇಷ್ಠರಿಗೆ, ಸ್ವರ್ಣಂ-ಭಂಗಾರದ ನಾಣ್ಯವನ್ನು, ದದುಃ-ಕೊಟ್ಟರು ॥೧೧॥ ತದನುಜ್ಞಾತಾಃ-ಆ ಬ್ರಾಹ್ಮಣರಿಂದ ಅಪ್ಪಣೆಕೊಡಲ್ಪಟ್ಟವರೂ, ಕೃಷ್ಣದೇವತಾಃ-ಕೃಷ್ಣನೇ ದೇವರಾಗಿ ಉಳ್ಳವರೂ ಆದ, ವೃಷ್ಣಯಃ-ಯಾದವರು, ಸ್ವಯಂ ಚ-ತಾವೂಕೂಡ, ಕಾಮಂ-ಯಥೇಚ್ಛವಾಗಿ, ಭುಕ್ತ್ವಾ-ಉಂಡು, ಸ್ನಿಗ್ಧಚ್ಛಾಯಾಂಘ್ರಿಪಾಂಘ್ರಿಷು-ಸಾಂದ್ರವಾದ ನೆಳಲುಳ್ಳ ಮರಗಳ ಅಡಿಗಳಲ್ಲಿ, ಉಪವಿವಿಶುಃ-ಕುಳಿತುಕೊಂಡರು ॥ ತೇ-ಆ ಯಾದವರು, ತತ್ರ-ಅಲ್ಲಿಗೆ, ಆಗತಾನ್-ಬಂದವರಾದ, ಸುಹೃತ್ಸಂಬಂಧಿಬಾಂಧವಾನ್-ಮಿತ್ರರನ್ನೂ ದೇಹಾನುಬಂಧಿಗಳ

---

ರ್ಜಿಸುವ ಗಜಂಗಳಿಂದಲೂ, ಕಾಂತಿಯುಳ್ಳ ಜನರಿಂದಲೂ ಪ್ರಕಾಶಮಾನರಾಗಿ ॥೮॥ ಕಾಂಚನಮಯಂಗಳಾದ ಹಾರಾದ್ಯಾಭರಣಂಗಳೂ ಉಳ್ಳವರಾಗಿ, ದಿವ್ಯವಸ್ತ್ರಗಳಿಂದಲೂ ಪುಷ್ಪಗಳಿಂದಲೂ ಅಲಂಕೃತರಾಗಿ, ತಮ್ಮ ತಮ್ಮ ಪತ್ನಿಯರೊಡನೆ ವಿಮಾನಂಗಳಿಂದ ಸಂಚರಿಸುವ ದೇವತೆಗಳೆಂಬಂತೆ ಯಾದವರು ಮೊದಲಾದ ಅರಸುಗಳೆಲ್ಲರೂ ಮಾರ್ಗದಲ್ಲಿ ಬಂದವರಾದರು ॥೯॥ ಅನಂತರದಲ್ಲಿ ಮಹಾನುಭಾವನಾದ ಅರಸುಗಳಲ್ಲಿ ಸ್ನಾನಂಗೆಯ್ದು ಉಪವಾಸವಂ ಮಾಡಿ ಶುಚಿಗಳಾಗಿ ಸುವರ್ಣಂಗಳಿಂದಲೂ ವಸ್ತ್ರಂಗಳಿಂದಲೂ ಪುಷ್ಪಮಾಲಿಕೆಗಳಿಂದಲೂ ಅಲಂಕೃತಗಳಾದ ಎಳೆಗರುಗಳಿಂದ ಯುಕ್ತವಾದ ಗೋವುಗಳಂ ಬ್ರಾಹ್ಮಣರಿಗೋಸ್ಕರ ಕೊಟ್ಟರು ॥೧೦॥ ಯಾದವರೇ ಮುಂತಾದವರು ಆಮಡುಗಳಲ್ಲಿ ಬೇರೆಬೇರೆ ಮೋಕ್ಷಸ್ನಾನವಂಮಾಡಿ ನಮಗೆ ಯಾವಾಗಲು ಶ್ರೀಕೃಷ್ಣನಲ್ಲಿಯೇ ಭಕ್ತಿಯಿರಲಿಯೆಂದು ಬ್ರಾಹ್ಮಣರಿಗೋಸ್ಕರ ಸುವರ್ಣ ಮೊದಲಾದುದಂ ಕೊಟ್ಟರು ॥೧೧॥ ಅನಂತರದಲ್ಲಿ ಬ್ರಾಹ್ಮಣರಿಗೆ ಷಡ್ರಸೋಪೇತವಾದ ಮೃಷ್ಟಾನ್ನಮಂ ಭೋಜನಂಗೆಯ್ಸಿ ಅವರ ಅಪ್ಪಣೆಯಿಂದ ತಾವು ಭೋಜನವಂಮಾಡಿ ಸಂತೋಷದಿಂದ ಶೀತಳವಾದ ವೃಕ್ಷಂಗಳನಾಶ್ರಯಿಸಿ ವಿಶ್ರಮಿಸಿಕೊಂಡರು ॥೧೨॥ ಈ ಬಂದ ಯಾದವರು ಅಲ್ಲಿ ಸ್ನಾನಾರ್ಥ-

ದೃಶುಸ್ಸುಹೃತ್ಸಂಬಂಧಿಬಾಂಧವಾನ್ ।ಮತ್ಸ್ಯೋಶೀನರಕೌಸಲ್ಯವಿದರ್ಭಕುರುಸೃಂಜಯಾನ್॥೧೩॥ ಕಾಂಭೋಜಮದ್ರಕೈಕೇಯಾನ್ ಕುಂತೀನಾರಟ್ಟಕೇರಳಾನ್। ಅನ್ಯಾಂಶ್ಚೈವಾತ್ಮಪಕ್ಷೀಯಾನ್ ಪರಾಂಶ್ಚ ಶತಶೋನೃಪಾನ್।೧೪॥ನಂದಾದೀನ್ ಸುಹೃದೋಗೋಪಾನ್ ಗೋಪೀಶ್ಚೋತ್ಕಂಠಿತಾಶ್ಚಿರಮ್॥೧೫॥ಅನ್ಯೋನ್ಯ ಸಂವರ್ಶನಹರ್ಷರಂಹಸಾಪ್ರೋತ್ಫುಲ್ಲಹೃದ್ವಕ್ತ್ರಸರೋರುಹಶ್ರಿಯಃ ।ಆಶ್ಲಿಷ್ಯಗಾಢಂನಯನೈಸ್ಸ್ರವಜ್ಜಲಾಹೃಷ್ಯತ್ತ್ವಚೋರುದ್ಧಗಿರೋಯಯುರ್ಮುದಮ್ ॥೧೬॥ಸ್ತ್ರಿಯಶ್ಚಸಂವೀಕ್ಷ್ಯಮಿಥೋತಿಸೌಹೃದಸ್ಮಿತಾಮಲಾಪಾಂಗದೃಶೋಭಿರೇಭಿರೇ। ಸ್ತನೈಸ್ತನಾನ್ ಕುಂಕುಮಪಂಕರೂಷಿತಾನ್ ನಿಹತ್ಯದೋರ್ಭಿಃಪ್ರಣಯಾಶ್ರುಲೋಚನಾಃ॥೧೭॥ತತೋಭಿವಾದ್ಯತೇವೃದ್ಧಾನ್ ಯವಿಷ್ಠೈರಭಿವಂದಿತಾಃ। ಸ್ವಾಗತಂ

---

ನನ್ನು, ನಂಟರನ್ನೂ, ಮತ್ಸ್ಯದೇಶದವರನ್ನೂ, ಉಶೀನರರನ್ನೂ,ಕೋಸಲದೇಶದವರನ್ನೂ, ವಿದರ್ಭದೇಶದವರನ್ನೂ, ಕುರುದೇಶದವರನ್ನೂ, ಸೃಂಜಯರನ್ನೂ, ದದೃಶುಃ-ಕಂಡರು ॥೧೩॥ ಕಾಂಭೋಜಮದ್ರಕೈಕೇಯಾನ್-ಕಾಂಭೋಜಮದ್ರಕೇಕಯ ದೇಶಗಳವರನ್ನೂ, ಕುಂತೀನ್-ಕುಂತೀದೇಶದವರನ್ನೂ, ಆರಟ್ಟಕೇರಳಾನ್-ಆರಟ್ಟದೇಶದವರನ್ನೂ ಕೇರಳದೇಶದವರನ್ನೂ, ಅನ್ಯಾಂಶ್ಚೈವ-ಇತರರನ್ನೂ, ಆತ್ಮಪಕ್ಷೀಯಾನ್-ತಮ್ಮಕಡೆಯವರನ್ನೂ, ಪರಾಂಶ್ಚ-ಇತರರನ್ನೂ, ನೃಪಾನ್-ದೊರೆಗಳನ್ನೂ, ಶತಶಃ-ನೂರಾರು ಗುಂಪುಗಳನ್ನಾಗಿ, ದದೃಶುಃ-ಕಂಡರು ॥೧೪॥ ನಂದಾದೀನ್-ನಂದಗೋಪನೇಮೊದಲಾದ, ಗೋಪಾನ್-ಗೊಲ್ಲರನ್ನೂ, ಸುಹೃದಃ-ಮಿತ್ರರನ್ನೂ, ಚಿರಂ-ಬಹುಕಾಲದಿಂದ,ಉತ್ಕಂಠಿತಾಃ-ಬಹಳ ಅಪೇಕ್ಷೆಗೊಂಡಿರುವ, ಗೋಪೀಶ್ಚ-ಗೊಲ್ಲತಿಯರನ್ನೂ, ದದೃಶುಃ-ಕಂಡರು ॥೧೫॥ ಅನ್ಯೋನ್ಯಸಂವರ್ಶನಹರ್ಷರಂಹಸಾ-ಪರಸ್ಪರವಾಗಿ ನೋಡುವುದರ ಸಂತೋಷವೇಗದಿಂದ, ಪ್ರೋತ್ಫುಲ್ಲಹೃದ್ವಕ್ತ್ರಸರೋರುಹಶ್ರಿಯಃ-ಅರಳಿದ ಹೃದಯಕಮಲಂಗಳ ಮತ್ತು ಮೊಗದಾವರೆಗಳ ಕಾಂತಿಗಳುಳ್ಳವರೂ, ಗಾಢಂ-ಗಟ್ಟಿಯಾಗಿ, ಆಶ್ಲಿಷ್ಯ-ಅಪ್ಪಿಕೊಂಡು, ನಯನೈಃ-ಕಂಗಳಿಂದ, ಸ್ರವಜ್ಜಲಾಃ-ಸೋರುತ್ತಿರುವ ನೀರುಳ್ಳವರೂ, ಹೃಷ್ಯತ್ತ್ವಚಃ-ಸಂತೋಷದ ರೋಮಾಂಚಗೊಂಡ ಚರ್ಮವುಳ್ಳವರೂ, ರುದ್ಧಗಿರಃ-ಸಂತೋಷದ ಬಿಗ್ಗುತ್ತುಗೆಯಿಂದ ತಡೆಯಲ್ಪಟ್ಟವಾತುಗಳುಳ್ಳವರೂ, ಆಗಿ, ಮುದಂ-ಸಂತೋಷವನ್ನು, ಯಯುಃ-ಹೊಂದಿದರು॥೧೬॥ ಸ್ತ್ರಿಯಶ್ಚ-ಹೆಂಗಳೂ, ಮಿಥಃ-ಒಬ್ಬರನ್ನೊಬ್ಬರು, ಸಂವೀಕ್ಷ್ಯ-ಚನ್ನಾಗಿನೋಡಿ, ಅತಿಸೌಹೃದಸ್ಮಿತಾಮಲಾಪಾಂಗದೃಶಃ-ಅಧಿಕಸ್ನೇಹದಿಂದಲೂ ಕಿರುನಗೆಯಿಂದಲೂ, ನಿರ್ಮಲಂಗಳಾದ ಕಟಾಕ್ಷಂಗಳುಳ್ಳವರೂ, ಪ್ರಣಯಾಶ್ರುಲೋಚನಾಃ-ಸ್ನೇಹದಿಂದ ನೀರುಕ್ಕುವ ಕಂಗಳುಳ್ಳವರೂ, ಆಗಿ, ಸ್ತನೈಃ-ಮೊಲೆಗಳಿಂದ ಕುಂಕುಮಪಂಕರೂಷಿತಾನ್-ಕೇಸರದ ಗಂಧಬಳಿಯಲ್ಪಟ್ಟಿರುವ, ಸ್ತನಾನ್-ಕುಚಗಳನ್ನು, ನಿಹತ್ಯ-ಘಟ್ಟಿಸಿ,ದೋರ್ಭಿಃ-ಅಭಿರೇಮಿರೇ, ತೋಳುಗಳಿಂದಪ್ಪಿಕೊಂಡರು ॥೧೭॥ ತತಃ-ಆ ಬಳಿಕ, ತೇ-ಆಯಾದವರು, ವೃದ್ಧಾನ್-ಅಧಿಕವಯಸ್ಕರನ್ನು,

---

ವಾಗಿಬಂದಸ್ನೇಹಿತರಾದ ದೇಹಸಂಬಂಧಿಗಳಾದ ಮತ್ಸ್ಯದೇಶದವರಂ ಉಶೀನರಾಧಿಪತಿಗಳಂ ಕೋಸಲರಾಷ್ಟ್ರದ ಅರಸುಗಳಂ॥೧೩॥ ವಿದರ್ಭದೇಶಗಳಲ್ಲಿ ಕುರುದೇಶದಲ್ಲಿರುವವರಂ ಸೃಂಜಯರಂ ಕಾಂಭೋಜರಂ ಕೇಕಯದೇಶದವರಂ ಮದ್ರರಾಜರಂ ಕುಂತೀರಾಷ್ಟ್ರದವರಂ ಸೌರಾಷ್ಟ್ರದವರಂ ॥೧೪॥ ಕೇರಳದೇಶದಲ್ಲಿರುವವರಂ, ಇವರಲ್ಲದೆ ಯಿರುವರಾವ ಇತರರಾದ ಬಾಂಧವರಾದವರಂ, ಅನ್ಯರಾದ ನೂರಾರುಮಂದಿಯರಸುಗಳಂ, ನಂದನೆಮೊದಲಾದ ಸುಹೃತ್ತುಗಳಾದ ಗೋಪರಂ, ಬಹುಕಾಲದಿಂ ನೋಡುವ ನೋಡುವೆಂದು ಬಯಸುತಲಿರುವ ಗೋಪಸ್ತ್ರೀಯರಂ ॥೧೫॥ ಪರಸ್ಪರದರ್ಶನದಿಂದುಂಟಾದ ಸಂತೋಷಾತಿಶಯದಿಂದ ವಿಕಸಿತವಾದ ಹೃದಯಮುಖ ಪದ್ಮಗಳ ಕಾಂತಿಯುಳ್ಳವರಾಗಿ ಗಾಢಾಲಿಂಗನಂಗೆಯ್ದು ಆನಂದಬಾಷ್ಪಂಗಳುಳ್ಳ ನೇತ್ರಂಗಳಿಂ ರೋಮಾಂಚದಿಂದಲೂ ನೆಟಬಿಗಿದುಬರುವ ಕೊರಳಿಸಿಂದ ತಡೆಯಲ್ಪಟ್ಟ ವಾಕ್ಯದಿಂದ ಸಂತೋಷವನೆಯ್ದಿದರು॥೧೬॥ಸ್ತ್ರೀಯರು ಅತ್ಯಂತಸ್ನೇಹಯುಕ್ತರಾದ ಕಾರಣದಿಂದ ಪರಸ್ಪರನಗೆಯಿಂದುಂಟಾದ ಮುಗುಳುನಗೆಯಿಂದ ನಿರ್ಮಲವಾದ ಕಡೆಗಣ್ಣನೋಟವುಳ್ಳ ವರಾಗಿ ಒಬ್ಬರೊಬ್ಬರು ಕುಂಕುಮರಸಂಗಳ ಕೆಸರಿನಿಂದ ಲೆಬ್ಬಿಸಲ್ಪಟ್ಟ ಸ್ತನಂಗಳಿಂದ ಸ್ತನಂಗಳನೊತ್ತುವರಾಗಿ ಸ್ನೇಹದಿಂದುಂಟಾದ ಆನಂದಬಾಷ್ಪಂಗಳುಳ್ಳವರಾಗಿ ತಮ್ಮ ಭುಜಂಗಳಿಂದ ಆಲಿಂಗನಂಗೆಯ್ದರು॥

ಕುಶಲಂಪೃಷ್ಟ್ವಾಚಕ್ರುಃಕೃಷ್ಣಕಥಾಮಿಥಃ॥೧೮॥ಪೃಥಾಭ್ರಾತ್ರೄನ್ಸ್ವಸ್ರೂರ್ವೀಕ್ಷ್ಯತತ್ಪುತ್ರಾನ್ ಪಿತರಾವಪಿ । ಭ್ರಾತೃಪತ್ನೀರ್ಮುಕುಂದಂಚಜಹೌಸಂಕಥಯಾಶುಚಃ ॥೧೯॥ ಕುಂತ್ಯುವಾಚ॥ ಆರ್ಯ ಭ್ರಾತರಹಂಮನ್ಯೇಆತ್ಮಾನಮಕೃತಾಶಿಷಮ್ । ಯತ್ತಆಪತ್ಸುಮದ್ವಾರ್ತಾಂನಾನುಸ್ಮರಥಸತ್ತಮಾಃ॥ ಸುಹೃದೋಜ್ಞಾತಯಃಪುತ್ರಾಭ್ರಾತರಃಪಿತರಾವಪಿ । ನಾನುಸ್ಮರಂತಿಸ್ವಜನಂಯಸ್ಯದೈವಮದಕ್ಷಿಣಮ್॥೨೧॥ ವಸುದೇವ॥ಅಂಬಮಾಸ್ಮಾನಸೂಯೇಥಾದೈವಕ್ರೀಡನಕಾನ್ನರಾನ್ । ಈಶಸ್ಯಹಿವಶೇಲೋಕಃಕುರುತೇಕಾರ್ಯತೇಥವಾ॥೨೨॥ಕಂಸಪ್ರತಾಪಿತಾಸ್ಸರ್ವೇವಯಂಯಾತಾದಿಶಂದಿಶಮ್। ಏತರ್ಹ್ಯೇವಪುನಸ್ಸ್ಥಾನ

ಅಭಿವಾದ್ಯ-ನಮಸ್ಕರಿಸಿ, ಯವಿಷ್ಠೈಃ-ಚಿಕ್ಕಪ್ರಾಯದವರಿಂದ, ಅಭಿವಂದಿತಾಃ-ನಮಸ್ಕರಿಸಲ್ಪಟ್ಟವರಾಗಿ, ಸ್ವಾಗತಂ ಸುಖವಾಗಿ ಬರೋಣವಾಯಿತೆಎಂದು, ಕುಶಲಂ-ಕ್ಷೇಮವನ್ನು, ಪೃಷ್ಟ್ವಾ-ಕೇಳಿಕೊಂಡು, ಮಿಥಃ-ಪರಸ್ಪರವಾಗಿ, ಕೃಷ್ಣಕಥಾಃ-ನಾರಾಯಣನ ಗುಣವರ್ಣನೆಗಳನ್ನು, ಚಕ್ರುಃ-ಮಾಡಿದರು॥೧೮॥ ಪೃಥಾ-ಕುಂತೀದೇವಿಯು, ಭ್ರಾತೄನ್-ಅಣ್ಣತಮ್ಮಂದಿರನ್ನೂ, ಸ್ವಸ್ರೂಃ-ಅಕ್ಕತಂಗಿಯರನ್ನೂ, ತತ್ಪುತ್ರಾನ್-ಅವರಮಕ್ಕಳನ್ನೂ, ಪಿತರಾವಪಿ-ತಾಯಿತಂದೆಗಳನ್ನೂ, ಭ್ರಾತೃಪತ್ನೀಃ-ಅತ್ತಿಗೆನಾದಿನಿಯರನ್ನೂ, ಮುಕುಂದಂಚ-ಕೃಷ್ಣನನ್ನೂ, ವೀಕ್ಷ್ಯ-ನೋಡಿ, ಸಂಕಥಯಾ-ಸಲ್ಲಾಪದಿಂದ, ಶುಚಃ-ಸಂಕಟರನ್ನು ನೋಡದೆಇದ್ದದುಃಖಗಳನ್ನು, ಜಹೌ-ತೊರೆದಳು ॥೧೯॥ ಸತ್ತಮಾಃ-ಅತ್ಯಂತ ಸತ್ಪುರುಷರಾದ ಯಾದವರೇ । ಯತಃ-ಯಾವ ಕಾರಣದಿಂದ, ಆಪತ್ಸು-ಕಷ್ಟಕಾಲಂಗಳಲ್ಲಿ, ಮದ್ವಾರ್ತಾಂ-ನನ್ನ ಸುದ್ದಿಯನ್ನು, ನಾನುಸ್ಮರತ-ನೆನಪುಗೊಳ್ಳದೆ ಹೋದಿರೋ, ತತಃ-ಆ ಕಾರಣದಿಂದ,ಆರ್ಯ-ಭ್ರಾತಃ-ಹಿರಿಯಣ್ಣನಾದ ವಸುದೇವನೇ, ಅಹಂ-ನಾನು ಆತ್ಮಾನಂ-ನನ್ನನ್ನು, ಅಕೃತಾಶಿಷಂ-ತುಂಬದೆಇರುವ ಬಯಕೆಯುಳ್ಳವಳನ್ನಾಗಿ, ಮನ್ಯೇ-ಭಾವಿಸುವೆನು ॥೨೦॥ ಯಸ್ಯ-ಯಾವಪ್ರಾಣಿಗೆ, ದೈವಂ-ಅದೃಷ್ಟವು, ಅದಕ್ಷಿಣಂ-ಅಪಸವ್ಯವಾಗುವುದೋ, ತಂ-ಅವನನ್ನು, ಸ್ವಜನಂ-ನಂಟತನವನ್ನಾದರೂ, ಅಥವಾ ನನ್ನನ್ನಾದರೂ, ಸುಹೃದಃ-ಸ್ನೇಹಿತರೂ, ಜ್ಞಾತಯಃ-ದಾಯಾದರೂ, ಪುತ್ರಾಃ-ಮಕ್ಕಳೂ, ಭ್ರಾತರಃ-ಅಂಣತಮ್ಮಂದಿರೂ, ಪಿತರಾವಪಿ-ತಾಯಿತಂದೆಗಳೂ ಕೂಡ, ನಾನುಸ್ಮರಂತಿ-ನೆನಪುಗೊಳ್ಳುವುದಿಲ್ಲವು ॥೨೧॥ ಅಂಬ-ಅಮ್ಮಾ, ದೈವಕ್ರೀಡನಕಾನ್-ದೇವರಿಗೆ ಆಟದಗೊಂಬೆಗಳಾಗಿರುವ,ನರಾನ್-ಮನುಷ್ಯಮಾತ್ರರಾದ, ಅಸ್ಮಾನ್-ನಮ್ಮಂಕುರಿತು, ಮಾಸೂಯೇಥಾಃ-ಹೊಟ್ಟೆಕಿಚ್ಚುಪಡಬೇಡ, ಲೋಕಃ-ಪ್ರಾಣಿವರ್ಗವು, ಈಶಸ್ಯ-ದೇವರ, ವಶೇ-ಅಧೀನದಲ್ಲಿದ್ದು, ಕುರುತೇ-ಕೆಲಸಗಳಂಮಾಡುವುದು. ಅಥವಾ-ಹಾಗಲ್ಲದಿದ್ದರೆ, ಕಾರ್ಯತೇ-ಮಾಡಲ್ಪಡುತ್ತಿಯಲ್ಲವೆ॥೨೨॥ ಸ್ವಸಃ-ತಂಗಿಯಾದ ಕುಂತಿಯೇ, ಸರ್ವೇವಯಂ-ನಾವೆಲ್ಲರೂ, ಕಂಸಪ್ರತಾಪಿತಾಃ-ಕಂಸನಿಂ

ಅನಂತರದಲ್ಲಿ ಯಾದವಾದಿಗಳು ವೃದ್ಧರನಭಿವಾದನಂಗೆಯ್ದು ಚಿಕ್ಕವರಿಂದ ನಮಸ್ಕರಿಸಲ್ಪಟ್ಟವರಾಗಿ ಸ್ವಾಗತಪೂರ್ವಕವಾಗಿ ಕುಶಲಪ್ರಶ್ನೆಯಂಮಾಡಿ ಅನ್ಯೋನ್ಯವಾಗಿ ಸಾಕ್ಷಾತ್ ಶ್ರೀಕೃಷ್ಣನ ಲೀಲೆಗಳಂ ಪೊಗಳುತ್ತಿದ್ದರು ॥೧೮॥ ಆಗಕುಂತಿಯು ಅಂಣತಮ್ಮಂದಿರಂ ಅಕ್ಕತಂಗಿಯರಂ ಸೋದರಳಿಯಂದಿರಂ ಅಂಣತಮ್ಮಂದಿರಮಕ್ಕಳಂ ತಾಯಿತಂದೆಗಳಂ ಅತ್ತಿಗೆ ನಾದಿನಿಯರಂ ಶ್ರೀಕೃಷ್ಣನಂ ಸಹನೋಡಿ ಪರಸ್ಪರಪ್ರೇಮಸಂವಾದದಿಂದ ಮನಃಕ್ಲೇಶಂಗಳಂಬಿಟ್ಟು ॥೧೯॥ ಅಣ್ಣನಾದ ವಸುದೇವನಂಕುರಿತು ನುಡಿದಳೆಂತೆನೆ- ಎಲೈಪೂಜ್ಯನಾದ ಅಂಣನೇ! ಸಾತ್ತ್ವತರಲ್ಲಿ ಶ್ರೇಷ್ಠರಲ್ಲಿ ನೀವು ಯಾವಕಾರಣದಿಂ ವಿಪತ್ತುಗಳುಂಟಾದ ಕಾಲದಲ್ಲಿಯೂ ನನ್ನ ವೃತ್ತಾಂತವನಾದರೂ ಸ್ಮರಿಸದೆ ಯಿರುವಿರೋ ಆಕಾರಣದಿಂದ ನಾನು ಅಭಾಗ್ಯಳೆಂದು ತಿಳಿಯುವೆನು ॥೨೦॥ ಎಲೈಅಂಣನೇ! ಲೋಕದಲ್ಲಿ ಯಾವವನಿಗೆದೈವವು ಅನುಕೂಲವಾಗಿರುವುದಿಲ್ಲವೋ ಆಪುರುಷನು ಸ್ವಜನನಾದಾಗ್ಯೂ ಅವನನ್ನು ಮಿತ್ರರು ಜ್ಞಾತಿಗಳು ಪುತ್ರರು ಅಂಣತಮ್ಮಂದಿರು ತಾಯಿತಂದೆಗಳು ಸಹ ಸ್ಮರಿಸುವರಾಗುವುದಿಲ್ಲವಾದಕಾರಣದಿಂ ನನಗೆದೈವವೇ ಪ್ರತಿಕೂಲವಾಗಿದೆಯಲ್ಲದೆ ನಿಮ್ಮ ಅಪರಾಧವೇನೂಯಿಲ್ಲವೆಂದು ಕುಂತಿಯು ನುಡಿಯಲು ॥೨೧॥ ಅದಂಕೇಳಿ ಕುಂತಿಯಂಕುರಿತು ವಸುದೇವನು ನುಡಿದನದೆಂತೆನೆ- ಎಲೈತಾಯೇ! ದೈವಕ್ಕೆ ಪಗಡೆ ಚತುರಂಗಗಳ ಕಾಯ್ಗಳಂತೆ ಕ್ರೀಡಾಸಾಧನರೂಪರಾಗಿ ಮನುಷ್ಯರಾಗಿಯೂ ಇರುವ ನಮ್ಮಂಕುರಿತು ಅಸೂಯೆಯಂ ಮಾಡಬೇಡ, ಈಶ್ವರನವಶವರ್ತಿಯಾದ ಜನವು ಅವನಪ್ರೇರಣದಿಂದ ಆವುದನಾದರೂ ಮಾಡುತ್ತ ಅವನಿಂದ ಮಾಡಿಸಲ್ಪಡುತ್ತಲಿದೆಯೇಹೊರತು ತಾನು ಸ್ವತಂತ್ರವಾದುದಲ್ಲ॥೨೨॥ ಎಲೌತಂಗಿಯೇ! ಕಂಸನಿಂದ ಬಾಧಿತರಾಗಿ ನಾವೆಲ್ಲರೂ ದಿಕ್ಕು

ನರ್ದೈವೇನಾಸಾದಿತಾಸ್ಸ್ವಕಃ ॥೧೩॥ ಶ್ರೀಶುಕಃ॥ ವಸುದೇವೋಗ್ರಸೇನಾದ್ಯೈರ್ಯದುಭಿಸ್ತೇಽರ್ಚಿತಾ
ನೃಪಾಃ । ಆಸನ್ನಚ್ಯುತಸಂದರ್ಶಪರಮಾನಂದನಿರ್ವೃತಾಃ ॥೧೪॥ ಭೀಷ್ಮೋ ದ್ರೋಣೋಂಬಿಕಾಪುತ್ರೋ
ಗಾಂಧಾರೀ ಸಸುತಾ ತಥಾ । ಸದಾರಾಃ ಪಾಂಡವಾಃ ಕುಂತೀ ಸಂಜಯೋ ವಿದುರಃ ಕೃಪಃ ॥೧೫॥ ಕುಂತಿಭೋ
ಜೋ ವಿರಾಟಶ್ಚ ಭೀಷ್ಮಕೋ ನಗ್ನಜಿನ್ಮಹಾನ್ । ಪುರುಜಿದ್ದ್ರುಪದಶ್ಶೈಬ್ಯೋ ಧೃಷ್ಟಕೇತುಶ್ಚ ಕಾಶಿರಾಟ್॥
ದಮಘೋಷೋ ವಿಶಾಲಾಕ್ಷೋ ಮೈಥಿಲೋ ಮದ್ರಕೇಕಯೌ। ಯುಧಾಮನ್ಯುಸ್ಸುಶರ್ಮಾ ಚ ಸಸುತಾ ಬಾಹ್ಲಿ
ಕಾದಯಃ॥೧೭॥ ರಾಜಾನೋ ಯೇ ಚ ರಾಜೇಂದ್ರ ಯುಧಿಷ್ಠಿರಮನುವ್ರತಾಃ । ಶ್ರೀನಿಕೇತಂ ವಪುಶ್ಶೌರೇಸ್ಸ
ಸ್ತ್ರೀಕಾ ವೀಕ್ಷ್ಯ ವಿಸ್ಮಿತಾಃ ॥೧೮॥ ಅಥ ತೇ ಕೃಷ್ಣರಾಮಾಭ್ಯಾಂ ಸಮ್ಯಕ್ಪ್ರಾಪ್ತಸಮರ್ಹಣಾಃ । ಪ್ರ

---

ದೇಃ ಬಹಳ ಪೀಡಿಸಲ್ಪಟ್ಟವರಾದ್ದರಿಂದ, ದಿಶಂದಿಶಂ-ದಿಕ್ಕುದಿಕ್ಕುಗಳನ್ನು, ಯಾತಾಃ-ಸೇರಿದವರಾಗಿದ್ದೆವು. ಏತರ್ಹ್ಯೇವ-ಈ ಗಲೇ, ದೈವೇನ-ದೇವರಿಂದ, ಅಥವಾ ಪುಣ್ಯದಿಂದ, ಸ್ವಕಂ-ನಮ್ಮ ಸ್ಥಲವನ್ನು, ಪುನರಾಸಾದಿತಾಃ-ಮರಳಿಯೂ ಸೇರಿಸಲ್ಪಟ್ಟ ವರಾದೆವು ॥೧೩॥ ತೇ ನೃಪಾಃ-ಆ ದೊರೆಗಳೆಲ್ಲರೂ, ವಸುದೇವೋಗ್ರಸೇನಾದ್ಯೈಃ-ವಸುದೇವನು ಉಗ್ರಸೇನನು ಮುಂತಾದ ವರಾದ, ಯದುಭಿಃ-ಯಾದವರಿಂದ, ಅರ್ಚಿತಾಃ-ಪೂಜಿಸಲ್ಪಟ್ಟವರಾಗಿ, ಅಚ್ಯುತಸಂದರ್ಶಪರಮಾನಂದ ನಿರ್ವೃತಾಃ-ಕೃಷ್ಣ ನನ್ನು ನೋಡಿದ ಹೆಚ್ಚು ಸಂತೋಷದಿಂದ ಬೇರೆಯೇನೂ ಬೇಕಿಲ್ಲದವರು. ಆಸನ್-ಆದರು ॥೧೪॥ ಭೀಷ್ಮನೂ, ದ್ರೋಣಾಚಾರ್ಯ ನೂ, ಅಂಬಿಕಾಪುತ್ರಃ-ಧೃತರಾಷ್ಟ್ರನೂ, ಸಸುತಾ-ಮಕ್ಕಳಾದ ದುರ್ಯೋಧನಾದಿಗಳಿಂ ಸಹಿತಳಾದ, ಗಾಂಧಾರಿಯೂ, ತಥಾ-ಹಾಗೆ, ಸದಾರಾಃ-ಪತ್ನಿಯರಿಂದ ಸಹಿತರಾದ, ಪಾಂಡವಾಃ-ಪಾಂಡುರಾಯನ ಪುತ್ರರೂ, ಕುಂತಿಯೂ, ಸಂಜಯನೂ, ವಿದುರನೂ, ಕೃಪಾಚಾರ್ಯನೂ ॥೧೫॥ ಕುಂತಿಭೋಜನೂ, ವಿರಾಟರಾಯನೂ, ಭೀಷ್ಮಕರಾಯನೂ, ನಗ್ನಜಿದ್ರಾಯನೂ ಮಹಾನ್-ಹಿರಿಯನಾದ, ಪುರುಜಿದ್ರಾಯನೂ, ದ್ರುಪದರಾಯನೂ, ಶೈಬ್ಯನೂ, ಧೃಷ್ಟಕೇತುವೂ, ಕಾಶಿರಾಟ್-ಕಾಶೀರಾಯನೂ ॥೧೬॥ ದಮಘೋಷನೂ, ವಿಶಾಲಾಕ್ಷನೂ, ಮೈಥಿಲಃ-ಜನಕನೂ, ಮದ್ರಕೇಕಯೌ-ಶಲ್ಯನೂ ಕೇಕಯನೂ ಯುಧಾಮನ್ಯುವೂ, ಸುಶರ್ಮಾ ಚ-ತ್ರಿಗರ್ತರಾಯನೂ, ಸಸುತಾಃ-ಭೂರಿಶ್ರವ ಸೋಮದತ್ತಾದಿಗಳಿಂ ಕೂಡಿದ, ಬಾಹ್ಲಿಕಾದಯಃ-ಬಾಹ್ಲಿಕನು ಮೊದಲಾದವರು ॥೧೭॥ ರಾಜೇಂದ್ರ-ಪರೀಕ್ಷಿತನೇ, ಯುಧಿಷ್ಠಿರಂ-ಧರ್ಮರಾಯನನ್ನು, ಅನುವ್ರತಾಃ-ಅನುಸರಿಸಿಬಂದವರಾದ, ಅನ್ಯೇ ಚ-ಇತರರೂ ಕೂಡ, ಸಸ್ತ್ರೀಕಾಃ-ಸಭಾರ್ಯೆಯರಾಗಿ, ಶ್ರೀನಿಕೇತಂ-ಲಕ್ಷ್ಮಿಗೆ ನೆಲೆಯಾಗಿರುವ, ಶೌರೇರ್ವಪುಃ-ಕೃಷ್ಣನ ಮೂರ್ತಿಯನ್ನು, ವೀಕ್ಷ್ಯ-ನೋಡಿ, ವಿಸ್ಮಿತಾಃ-ಆಶ್ಚರ್ಯಹುಟ್ಟಿದವರಾದರು ॥೧೮॥ ಅಥ-ಆ ಬಳಿಕ ತೇ-ಆ ರಾಯರು, ಕೃಷ್ಣರಾಮಾಭ್ಯಾಂ-ಕೃಷ್ಣನಿಂದಲೂ ಬಲರಾಮನಿಂದಲೂ, ಸಮ್ಯಕ್ಪ್ರಾಪ್ತಸಮರ್ಹಣಾಃ-ಚನ್ನಾಗಿ ಹೊಂದಲ್ಪಟ್ಟ ಸಮ್ಮಾನವುಳ್ಳ

---

ದಿಕ್ಕುಗಳಿಗೆ ಓಡಿಹೋಗಿದ್ದು ಈಗ ತಾನೇ ದೈವಕೃಪೆಯಿಂದ ಬಂದು ಪುನಃ ಸ್ವಸ್ಥಾನವಂ ಸೇರಿದೆವೆಂದು ವಕುಂತಿಗೆ ಹೇಳಿದನು ॥೧೩॥ ಆಗ ವಸುದೇವ ಉಗ್ರಸೇನನೇ ಮೊದಲಾದ ಯಾದವರಿಂದ ಅನೇಕವಿಧಗಳಾದ ರಾಜೋಪಚಾರಗಳಿಂದ ಪೂಜಿಸಲ್ಪಟ್ಟವರಾಗಿ ಅರಸುಗಳೆಲ್ಲರೂ ಶ್ರೀಕೃಷ್ಣನ ದರ್ಶನದಿಂದುಂಟಾದ ಪರಮಾನಂದ ನನುಭವಿಸುತ್ತಿದ್ದರು॥೧೪॥ ಮತ್ತು ಭೀಷ್ಮನು, ದ್ರೋಣನು ಮಕ್ಕಳಿಂದ ಸಹಿತಳಾದ ಗಾಂಧಾರಿಯು, ಪತ್ನಿಗಳೊಡಗೂಡಿರುವ ಪಾಂಡವರು, ಕುಂತಿಯು, ಸಂಜಯನು, ವಿದುರನು, ಕೃಪನು॥೧೫॥ ಕುಂತಿಭೋಜನು, ವಿರಾಟನು, ಭೀಷ್ಮಕನು. ಮಹಾತ್ಮನಾದ ನಗ್ನಜಿತ್ತು, ಪುರುಜಿತ್ತು ದ್ರುಪದನು, ಶೈಬ್ಯನು, ಧೃಷ್ಟಕೇತುವು, ಕಾಶೀರಾಜನು ॥೧೬॥ ವಿಶಾಲಾಕ್ಷನು, ದಮಘೋಷನು, ಮಿಥಿಲಾಧಿಪತಿಯು, ಮದ್ರರಾಜನು, ಕೇಕಯದೇಶಾಧಿಪತಿಯು, ಯುಧಾಮನ್ಯುವು, ಸುಶರ್ಮನು, ಪುತ್ರಸಹಿತರಾದ ಬಾಹ್ಲಿಕ ಮೊದಲಾದ ಅರಸುಗಳು ॥೧೭॥ ಇನ್ನೂ ಇತರರಾದ ಧರ್ಮಪುತ್ರನ ನಾಶ್ರಯಿಸಿದವರು, ಇವರೆಲ್ಲರೂ ತಮ್ಮ ಪತ್ನೀಪುತ್ರಾದಿಗಳಿಂ ಯುಕ್ತರಾಗಿ ಲಕ್ಷ್ಮಿಗೆ ಆವಾಸಸ್ಥಾನವಾದ ಶ್ರೀಕೃಷ್ಣನ ಸೌಂದರ್ಯಯುಕ್ತವಾದ ಶರೀರವಂ ನೋಡಿ ಆಶ್ಚರ್ಯಯುಕ್ತರಾದರು॥೧೮॥ ಅನಂತರದಲ್ಲಿ ಇವರೆಲ್ಲರೂ ಶ್ರೀರಾಮಕೃಷ್ಣರಿಂ ಪೂಜಿತರಾಗಿ ಸಂತೋಷದಿಂ ಯುಕ್ತರಾಗಿ ಶ್ರೀಕೃಷ್ಣನ ಕೃಪೆಗೆ

ಶಶಂಸುರ್ಮುದಾಯುಕ್ತಾವೃಷ್ಣೀನ್ಕೃಷ್ಣಪರಿಗ್ರಹಾನ್ ॥೪೯॥ ಅಹೋಭೋಜಪತೇಯೂಯಂಜನ್ಮಭಾಜೋನೃಣಾಮಿಹ । ಯತ್ಪಶ್ಯಥಾಸಕೃತ್ಕೃಷ್ಣಂದುರ್ದರ್ಶಮಪಿಯೋಗಿನಾಮ್ ॥೫೦॥ ಯದ್ವಿಶ್ರುತಿಶ್ಶ್ರುತಿನುತೇದಮಲಂಪುನಾತಿಪಾದಾವನೇಜನಪಯಶ್ಚವಚಶ್ಚಶಾಸ್ತ್ರಮ್ । ಭೂಃಕಾಲಭರ್ಜಿತಭಗಾಪಿಯದಂಘ್ರಿಪದ್ಮಸ್ಪರ್ಶೋತ್ಥಶಕ್ತಿರಭಿವರ್ಷತಿನೋಖಿಲಾರ್ಥಾನ್ ॥೫೧॥ ತದ್ದರ್ಶನಸ್ಪರ್ಶನಾನುಪಥಪ್ರಜಲ್ಪಶಯ್ಯಾಸನಾಶನಸಯೌನಸಪಿಂಡಬಂಧಃ। ಯೇಷಾಂಗೃಹೇನಿರಯವರ್ತ್ಮನಿವರ್ತತಾಂವಸ್ಸ್ವರ್ಗಾಪವರ್ಗವಿರಮಸ್ಸ್ವಯಮಾಸವಿಷ್ಣುಃ ॥೫೨॥ ಶ್ರೀಶುಕಃ॥ ನಂದಸ್ತತ್ರಯದೂನ್ಪ್ರಾಪ್ತಾನ್

---

ವರಾಗಿ, ಕೃಷ್ಣಪರಿಗ್ರಹಾನ್-ಕೃಷ್ಣನ ಕುಟುಂಬದವರಾದ್ದರಿಂದಲೇ ಮುದಾ-ಸಂತೋಷದೊಡನೆ ಯುಕ್ತಾನ್-ಕೂಡಿದವರಾದ, ವೃಷ್ಣೀನ್-ಯಾದವರನ್ನು, ಪ್ರಶಶಂಸುಃ-ಕೊಂಡಾಡಿದರು॥೪೯॥ ಭೋಜಪತೇ-ಯದುರಾಜನಾದ ಉಗ್ರಸೇನನೇ, ಯೋಗಿನಾಮಪಿ-ಧ್ಯಾನನಿಷ್ಠರಾದ ತಪಸ್ವಿಗಳಿಗೂಕೂಡ, ದುರ್ದರ್ಶಂ-ಪ್ರಯಾಸದಿಂದಲೂ ನೋಡಲಶಕ್ಯನಾದ, ಕೃಷ್ಣಂ-ನಾರಾಯಣನನ್ನು ,ಅಸಕೃತ್-ಬಾರಿಬಾರಿಗೂ, ಯತ್ಪಶ್ಯಥ-ಯಾವಕಾರಣದಿಂದ ನೋಡುತ್ತಿರುವರೋ, ತತ್-ಆ ಕಾರಣದಿಂದ,ಯೂಯಂ-ನೀವು, ಇಹ-ಈ ಲೋಕದಲ್ಲಿ, ನೃಣಾಂ-ಮನುಷ್ಯರೊಳಗೆ, ಜನ್ಮಭಾಜಃ-ಸಫಲವಾದ ಶರೀರವನ್ನುಹೊಂದಿದವರು, ಅಹೋ-ಆಶ್ಚರ್ಯವು ॥೫೦॥ ಯತ್-ಯಾವ ಪುರುಷನ, ವಿಶ್ರುತಿಃ-ಕೀರ್ತಿಯು, ಶ್ರುತಿನುತಃ-ವೇದಂಗಳಿಂದ ಕೊಂಡಾಡಲ್ಪಟ್ಟದ್ದಾಗಿ, ಇದಂವಿಶ್ವಂ-ಈ ಪ್ರಪಂಚವನ್ನು, ಅಲಂ-ಅಧಿಕವಾಗಿ, ಪುನಾತಿ-ಶುದ್ಧಿಗೊಳಿಸುತ್ತಿದೆಯೋ, ಪಾದಾವನೇಜನಪಯಶ್ಚ-ಕಾಲುತೊಳೆದ ನೀರಾದಗಂಗೆಯೂಕೂಡ ಲೋಕವಂಶುದ್ಧಿಗೊಳಿಸುತ್ತಿದೆಯೋ, ವಚಃ-ಯಾವವನವಾಕ್ಯೂಕೂಡ, ಶಾಸ್ತ್ರಂ-ಶಿಕ್ಷಕವಾದ ವೇದವೆನಿಸಿ ಜಗವಂಶುದ್ಧಿಗೊಳಿಸುತ್ತಿದೆಯೋ, ಕಾಲಭರ್ಜಿತಭಗಾ-ಕಾಲದೋಷದಿಂದ ಬೇಯಿಸಲ್ಪಟ್ಟಮಹಾತ್ಮ್ಯವುಳ್ಳ, ಭೂರಪಿ-ಭೂಮಿಯೂಕೂಡ, ಯದಂಘ್ರಿಪದ್ಮಸ್ಪರ್ಶೋತ್ಥಶಕ್ತಿಭಿಃ-ಯಾವವನ ಅಡಿದಾವರೆಗಳ ಸೋಂಕುವಿಕೆಯಿಂದ ಹುಟ್ಟಿದಸಾಮರ್ಥ್ಯಂಗಳಿಂದ, ನಃ-ನಮಗೆ, ಅಖಿಲಾರ್ಥಾನ್-ಸಕಲಪ್ರಯೋಜನಗಳನ್ನೂ, ಅಭಿವರ್ಷತಿ-ಸುರಿಯುತ್ತಿದೆಯೋ॥೫೧॥ಯೇಷಾಂ-ಯಾವನಿಮಗೆ, ತದ್ದರ್ಶನ-ಆ ಕೃಷ್ಣನನ್ನು ನೋಡುವಿಕೆ, ಸ್ಪರ್ಶನ-ತಡುವಿಕೆ, ಅನುಪಥ-ಸಂಗಡನಡೆಯುವಿಕೆ, ಪ್ರಜಲ್ಪ-ಅಧಿಕವಾಗಿ ಮಾತಾಡುವಿಕೆ,ಶಯ್ಯಾ-ಒಡನೆ ಮಲಗುವಿಕೆ, ಆಸನ-ಗದ್ದುಗೆಯಲ್ಲಿ ಕುಳ್ಳಿರುವಿಕೆ, ಅಶನ-ಉಂಡುವಿಕೆ, ಸಯೌನ-ವಿವಾಹಸಂಬಂಧ, ಸಪಿಂಡಬಂಧಃ-ದೇಹಸಂಬಂಧವೂ, ಉಂಟಾಗಿದೆಯೋ, ನಿರಯವರ್ತ್ಮನಿ-ನರಕಕ್ಕೆದಾರಿಯಾದ, ಕರ್ಮಯೋಗದಲ್ಲಿ, ವರ್ತತಾಂ-ಇರುತಿರುವ, ವಃ-ನಿಮಗೆ, ಸ್ವರ್ಗಾಪವರ್ಗವಿರಮಃ-ಸ್ವರ್ಗವನ್ನೂ ಮೋಕ್ಷವನ್ನೂ ಬೇಡವೆನ್ನಿಸುವ, ವಿಷ್ಣುಃ-ನಾರಾಯಣನು, ಗೃಹೇ-ಮನೆಯಲ್ಲಿ, ಸ್ವಯಂ-ತಾನೇ, ಆಸ-ಆವಿರ್ಭವಿಸಿದನೋ, ತೇಯೂಯಂ-ಆ ನೀವು, ಜನ್ಮಭಾಜಃ-ಸಫಲವಾದ ದೇಹವನ್ನು ಪಡೆದವರು ॥೫೨॥ ನಂದಃ-ನಂದಗೋಪನು, ಕೃಷ್ಣಪುರೋಗಮಾನ್-ಕೃಷ್ಣ

---

ಸರ್ವದಾಪೌತ್ರರಾದ ಯಾದವರಂ ಸ್ತುತಿಸಿದರವಂತೆನೆ ॥೪೯॥ ಎಲೈಭೋಜಪತಿಯಾದ ಉಗ್ರಸೇನನೇ! ಯಾವ ಕಾರಣದಿಂದ ಯೋಗಿಗಳಿಗೂ ನೋಡಲಶಕ್ಯನಾಗಿರುವ ಶ್ರೀಕೃಷ್ಣನಂ ನೀವು ಬಾರಿಬಾರಿಗೂ ನೋಡುವಿರೋ ಆ ಕಾರಣದಿಂದ ಈಲೋಕದಲ್ಲಿ ನೀವೇ ಸಫಲವಾದ ಜನ್ಮವುಳ್ಳವರು ೫೦॥ ಯಾವಶ್ರೀಹರಿಯು ಶ್ರುತಿಗಳಿಂದ ಕೊಂಡಾಡಲ್ಪಟ್ಟಅಡಿಯು- ಈವಿಶ್ವವಂ ಅಧಿಕವಾಗಿ ಪಾವನಂಗೆಯ್ವುದೋ .ಯಾವಹರಿಯ ಪಾದಪ್ರಕ್ಷಾಳನೋದಕವಾದ ಗಂಗೆಯು-ಯಾವಾತನವೇದಶಾಸ್ತ್ರರೂಪವಾದವಾಕ್ಯ-ವಿಶ್ವವಂಪಾವನಂ ಗೆಯ್ವುದೋ,ಕಾಲದಿಂದ ದಗ್ಧವಾದ ಮಾಹಾತ್ಮ್ಯವುಳ್ಳ ಭೂಮಿಯು ಯಾವಾತನಪಾದಸ್ಪರ್ಶಮಾತ್ರದಿಂದುಂಟಾದ ಶಕ್ತಿಯುಳ್ಳವಳಾಗಿನಮಗೆ ಸಕಲ ಮನೋರಥಂಗಳಂ ವರ್ಷಿಸುವಳೋ ॥೫೧॥ ಅಂತಾಶ್ರೀಹರಿಯದರ್ಶನವೂ ಸ್ಪರ್ಶವೂ ಅವನನ್ನನುಸರಿಸಿ ನಡೆಯುವುದೂ ಸಲ್ಲಾಪವೂ ಆತನಸಂಗಡ ಶಯನವೂ ಏಕಾಸನಸ್ಥಿತಿಯೂ ಆತನೊಡನೆ ಭೋಜನವೂ ವಿವಾಹಾದಿ ಸಂಬಂಧವೂ ಯಾವನಿಮಗುಂಟಾಗಿದೆಯೋ, ಸಂಸಾರಕ್ಕೆ ಕಾರಣವಾದ ಗೃಹಸ್ಥಾಶ್ರಮದಲ್ಲಿರುವ ಯಾವನಿಮ್ಮ ಗೃಹಗಳಲ್ಲಿ ಪರಮಸುಖ ಪ್ರದೇಶದೊಳು ವಿಷ್ಣುವು ತಾನೇ ವಾಸವಾಗಿರುವನೋ ಅಂತಾ ನೀವೇಧನ್ಯರು ॥೫೨॥

ಜ್ಞಾತ್ವಾ ಕೃಷ್ಣಪುರೋಗಮಾನ್ । ತತ್ರಾಗಮದ್ವೃತೋ ಗೋಪೈರನಃಸ್ಥಾರ್ಥೈರ್ದಿದೃಕ್ಷಯಾ ॥೩೩॥ ತಂ ದೃಷ್ಟ್ವಾ ವೃಷ್ಣಯೋ ಹೃಷ್ಟಾಸ್ತನ್ವಃ ಪ್ರಾಣಮಿವೋತ್ಥಿತಾಃ । ಪರಿಷಸ್ವಜಿರೇ ಗಾಢಂ ಚಿರದರ್ಶನಕಾತರಾಃ ॥೩೪॥ ವಸುದೇವಃ ಪರಿಷ್ವಜ್ಯ ಸಂಪ್ರೀತಃ ಪ್ರೇಮವಿಹ್ವಲಃ । ಸ್ಮರನ್ ಕಂಸಕೃತಾನ್ ಕ್ಲೇಶಾನ್ ಪುತ್ರನ್ಯಾಸಂ ಚ ಗೋಕುಲೇ ॥೩೫॥ ಕೃಷ್ಣರಾಮೌ ಪರಿಷ್ವಜ್ಯ ಪಿತರಾವಭಿವಾದ್ಯ ಚ । ನ ಕಿಂಚಿದೂಚತುಃ ಪ್ರೇಮ್ಣಾ ಸಾಶ್ರುಕಂಠೌ ಕುರೂದ್ವಹ ॥೩೬॥ ತಾವಾತ್ಮಾಂಕೇ ಸಮಾರೋಪ್ಯ ಬಾಹುಭ್ಯಾಂ ಪರಿರಭ್ಯ ಚ । ಯಶೋದಾ ಚ ಮಹಾಭಾಗಾ ಸುತೌ ವಿಜಹತುಃ ಶುಚಃ ॥೩೭॥ ರೋಹಿಣೀ ದೇವಕೀ ಚಾಥ ಪರಿಷ್ವಜ್ಯ ವ್ರಜೇಶ್ವರೀಮ್ ।

---

ಕೃಷ್ಣನೇ ಮುಂದಾಳಾಗಿಉಳ್ಳ, ಯದೂನ್-ಯಾದವರನ್ನು, ತತ್ರ-ಅಲ್ಲಿಗೆ, ಪ್ರಾಪ್ತಾನ್-ಬಂದವರನ್ನಾಗಿ, ಜ್ಞಾತ್ವಾ-ತಿಳಿದು, ದಿದೃಕ್ಷಯಾ-ನೋಡಲ್ಬಯಕೆಯಿಂದ, ಅನಸ್ಸ್ಥಾರ್ಥೈಃ-ಬಂಡಿಗಳಲ್ಲಿಟ್ಟ ಪದಾರ್ಥಂಗಳುಳ್ಳ, ಗೋಪೈಃ-ಗೊಲ್ಲರಿಂದ, ವೃತಃ-ಬಳಸಲ್ಪಟ್ಟವನಾಗಿ, ತತ್ರ-ಆ ಕೃಷ್ಣಾದಿಗಳಿರುವಲ್ಲಿಗೆ, ಆಗಮತ್-ಬಂದನು॥೩೩॥ ವೃಷ್ಣಯಃ-ಯಾದವರು, ಪ್ರಾಣಂ ತನ್ವಃ ಇವ ಪ್ರಾಣಗಳನ್ನು ಕಂಡದೇಹಗಳಂತೆ, ತಂ-ಆ ನಂದನನ್ನು, ದೃಷ್ಟ್ವಾ-ಕಂಡು, ಹೃಷ್ಟಾಃ-ಸಂತೋಷವುಳ್ಳವರಾದ್ದರಿಂದ, ಉತ್ಥಿತಾಃ-ಎದ್ದವರಾಗಿ, ಚಿರದರ್ಶನಕಾತರಾಃ-ಬಹುಕಾಲಕ್ಕೆ ನೋಡಿದ್ದರಿಂದ ಆತುರವುಳ್ಳವರಾಗಿ, ಗಾಢಂ-ಗಟ್ಟಿಯಾಗಿ, ಪರಿಷಸ್ವಜಿರೇ-ಅಪ್ಪಿಕೊಂಡರು॥೩೪॥ ವಸುದೇವಃ-ಆನಕದುಂದುಭಿಯು, ಸಂಪ್ರೀತಃ-ಪ್ರೀತಿಹುಟ್ಟಿದವನಾಗಿ, ಪರಿಷ್ವಜ್ಯ-ಅಪ್ಪಿಕೊಂಡು, ಕಂಸಕೃತಾನ್-ಕಂಸನಿಂದ ಮಾಡಲ್ಪಟ್ಟ, ಕ್ಲೇಶಾನ್-ಸಂಕಟಗಳನ್ನೂ, ಗೋಕುಲೇ-ನಂದವ್ರಜದಲ್ಲಿ, ಪುತ್ರನ್ಯಾಸಂ ಚ ಪುತ್ರರನ್ನು ಇಟ್ಟದ್ದನ್ನೂ, ಸ್ಮರನ್-ನೆನಪುಗೊಂಡವನಾಗಿ, ಪ್ರೇಮವಿಹ್ವಲಃ-ಸ್ನೇಹದಿಂದ ಪರವಶಚಿತ್ತನಾದನು॥೩೫॥ ಕೃಷ್ಣರಾಮೌ-ಕೃಷ್ಣನೂ ರಾಮನೂ, ಪಿತರೌ-ತಾಯಿತಂದೆಗಳನ್ನು, ಪರಿಷ್ವಜ್ಯ-ಅಪ್ಪಿಕೊಂಡು, ಅಭಿವಾದ್ಯ ಚ ನಮಸ್ಕಾರವನ್ನೂ ಮಾಡಿ, ಪ್ರೇಮ್ಣಾ-ಪ್ರಿಯತ್ವದಿಂದ, ಸಾಶ್ರುಕಂಠೌ-ಕಣ್ಣೀರೂ ಬಿಗ್ಗುತ್ತುಗೆಯೂ ಉಳ್ಳವರಾಗಿ, ಕಿಂಚಿತ್-ಕೊಂಚವನ್ನಾದರೂ, ನೋಚತುಃ-ನುಡಿಯಲಿಲ್ಲವು), ಕುರೂದ್ವಹ-ಕುರುವಂಶೋದ್ಧಾರಕನಾದ ಪರೀಕ್ಷಿತನೇ ॥೩೬॥ ಮಹಾಭಾಗಾ-ಪುಣ್ಯವಂತಳಾದ, ಯಶೋದಾ ಚ-ಯಶೋದೆಯೂ ನಂದಗೋಪನೂ, ತೌ ಸುತೌ-ಆ ಪುತ್ರರನ್ನು, ಆತ್ಮಾಂಕೇ-ತಮ್ಮ ತೊಡೆಯಲ್ಲಿ, ಸಮಾರೋಪ್ಯ-ಕುಳ್ಳಿರಿಸಿಕೊಂಡು, ಬಾಹುಭ್ಯಾಂ-ತೋಳುಗಳಿಂದ, ಪರಿರಭ್ಯ ಚ-ಆಲಿಂಗನವನ್ನು ಮಾಡಿ, ಶುಚಃ-ಶೋಕಗಳನ್ನು, ವಿಜಹತುಃ-ಬಿಟ್ಟರು ॥೩೭॥ ಅಥ-ಆ ಮೇಲೆ, ರೋಹಿಣೀ ದೇವಕೀ ಚ-ರೋಹಿಣೀದೇವಿಯೂ ದೇವಕಿಯೂ, ವ್ರಜೇಶ್ವರೀಂ-ಗೋಕುಲ ಒಡತಿಯಾದ ಯಶೋದೆಯನ್ನು, ಪರಿಷ್ವಜ್ಯ-ಅಪ್ಪಿಕೊಂಡು, ತತ್ಕೃತಾಂ-ಆಕೆಯಿಂದ ಮಾಡಲ್ಪಟ್ಟ, ಮೈತ್ರೀಂ-ಸ್ನೇಹವೃತ್ತಿಯನ್ನು, ಸ್ಮರಂತ್ಯೌ-ನೆನಪುಗೊಳ್ಳುತ್ತಿರುವರಾದ್ದರಿಂದ, ಬಾಷ್ಪಕಂಠ್ಯೌ-ಕಣ್ಣೀರೂ ಬಿಗ್ಗುತ್ತಿಗೆಯೂ ಉಳ್ಳವರಾಗಿ,

---

ಎಂದು ತತ್ತದ್ದೇಶಸ್ಥರಾದ ಅರಸುಗಳು ಯಾದವರಂ ಸ್ತೋತ್ರಂಗೆಯ್ಯುತ್ತಿರಲಾಗಿ ಆನಂದಗೋಪನು ಸ್ನಾನಾರ್ಥವಾಗಿ ಆ ಕ್ಷೇತ್ರಕ್ಕೆ ಬಂದಿರುವ ಶ್ರೀಕೃಷ್ಣನೇ ಮೊದಲಾದ ಯಾದವರಂ ಕೇಳಿ ಬಂಡಿಗಳಲ್ಲಿ ಹೇರಿರುವ ಸಮಸ್ತವಸ್ತುಗಳುಳ್ಳ ಗೋಪಾಲರಿಂ ಪರಿವೃತನಾಗಿ ಶ್ರೀಕೃಷ್ಣಾದಿಗಳಂ ನೋಡಲಿಚ್ಛೆಯಿಂದ ತಾನೂ ಅಲ್ಲಿಗೆಯ್ದಿದನು ॥೩೩॥ ಯಾದವರು ಆನಂದಗೋಪನಂ ನೋಡಿ ತೆರಳಿಹೋಗಿದ್ದ ಪ್ರಾಣಂಗಳಂ ಮರಳಿ ಹೊಂದಿದ ಶರೀರಂಗಳಂತೆ ಎದ್ದಂತವರಾಗಿ ಬಹಳದಿವಸದಿಂದ ಕಾಣದ ಕಾರಣದಿಂ ಗಾಢಾಲಿಂಗನಂಗೆಯ್ದರು ॥೩೪॥ ಪ್ರೇಮದಿಂ ಮೈಮರೆತ ವಸುದೇವನು ಆನಂದಭರಿತನಾಗಿ ಆಲಿಂಗಿಸಿ ತಾನು ಕಂಸನಿಂದ ಪಡಿಸಲ್ಪಟ್ಟ ಕ್ಲೇಶಂಗಳನ್ನೂ ಪುತ್ರನಂ ದ ಗೋಕುಲದಲ್ಲಿ ತಂದಿಟ್ಟದ್ದನ್ನೂ ಸಹ ಸ್ಮರಿಸಿಕೊಂಡನು ॥೩೫॥ ಕೇಳೈ ಕುರುಶ್ರೇಷ್ಠನೇ! ಶ್ರೀಕೃಷ್ಣರಾಮರೀರ್ವರೂ ತಾಯಿತಂದೆಗಳಾದ ಯಶೋದಾನಂದರಂ ನಮಸ್ಕರಿಸಿ ಅಭಿವಾದನಂಗೆಯ್ದು ಪ್ರೇಮದಿಂದ ಆನಂದಭಾಷ್ಪಂಗಳಂ ಸುರಿಸುವವರಾಗಿ ಏನನ್ನೂ ಹೇಳದೆ ಸುಮ್ಮನೆಯಿದ್ದರು ॥೩೬॥ ಮಹಾನುಭಾವಳಾದ ಯಶೋದಾದೇವಿಯು ಆನಂದಸಹಿತನಾದ ಆನಂದಗೋಪನೂ ಸಹ ಪುತ್ರರಂ ತೊಡೆಯಲ್ಲಿ ಕುಳ್ಳಿರಿಸಿಕೊಂಡು ಭುಜಂಗಳಿಂದ ಬಿಗಿದಪ್ಪಿ ಸಮಸ್ತಶೋಕಂಗಳಂ ಬಿಟ್ಟರು ॥೩೭॥ ಅನಂತರದಲ್ಲಿ ರೋಹಿಣೀದೇವೀ ದೇವಕಿಯರೀರ್ವರೂ ಗೋಕುಲ

ಸ್ಮರಂತ್ಯೌತತ್ಕೃತಾಂಮೈತ್ರೀಂಬಾಷ್ಪಕಂಠ್ಯೌಸಮೂಚತುಃ ॥೩೮॥ ಕಾವಿಸ್ಮರೇತವಾಂಮೈತ್ರೀಮನಿವೃತ್ತಾಂವ್ರಜೇಶ್ವರಿ । ಅವಾಪ್ಯಾಪ್ಯೈಂದ್ರಮೈಶ್ವರ್ಯಂಯಸ್ಯಾನೇಹಪ್ರತಿಕ್ರಿಯಾ ॥೩೯॥ ಏತಾವದೃಷ್ಟಪಿತರೌಯುವಯೋಸ್ಮಪಿತ್ರೋಃಸ್ಸಂಪ್ರೀಣನಾಭ್ಯುದಯತೋಷಣಪಾಲನಾನಿ । ಪ್ರಾಪ್ಯೋಷತುರ್ಭವತಿಪಕ್ಷ್ಮಹಯೋರಿವಾಕ್ಷ್ಣೋರ್ನ್ಯಸ್ತಾವಕುತ್ರಚಭಯೌನಸತಾಂಪರಸ್ಸ್ವಃ ॥೪೦॥ ಶ್ರೀಶುಕಃ ॥ ಗೋಪ್ಯಶ್ಚಕೃಷ್ಣಮುಪಲಭ್ಯಚಿರಾದಭೀಷ್ಟಂಯತ್ಪ್ರೇಕ್ಷಣೇದೃಶಿಷುಪಕ್ಷ್ಮಕೃತಂಶಪಂತ್ಯಃ । ದೃಗ್ಭಿರ್ಹೃದೀ

---

ಸಮೂಚತುಃ-ಚನ್ನಾಗಿ ಹೇಳಿದರು ॥೩೮॥ ವ್ರಜೇಶ್ವರಿ-ಗೋಕುಲನಾಯಕಿಯಾದ ಯಶೋದೆಯೇ, ಐಂದ್ರಂ-ದೇವರಾಜಸಂಬಂಧವಾದ, ಐಶ್ವರ್ಯಂ-ಪ್ರಭುತ್ವವನ್ನು, ಅವಾಪ್ಯಾಪಿ-ಹೊಂದಿಯೂಕೂಡ, ಯಸ್ಯಾಃ-ಯಾವುದಕ್ಕೆ, ಇಹ-ಈ ಲೋಕದಲ್ಲಿ, ಪ್ರತಿಕ್ರಿಯಾ-ಪ್ರತ್ಯುಪಕಾರವು, ನ-ಇಲ್ಲವೋ, ಅನಿವೃತ್ತಾಂ-ಬಿಟ್ಟುಹೋಗದೆಇರುವ, ತಾಂ-ಅಂಥಾ, ವಾಂಮೈತ್ರೀಂ-ನಿಮ್ಮಿಬ್ಬರಸ್ನೇಹವನ್ನು, ಕಾ-ಯಾವವಳು, ವಿಸ್ಮರೇತ-ಮರೆತಾಳು ॥೩೯॥ ಹೇಭವತಿ-ಎಲೈ ಪೂಜ್ಯಳೇ, ಅದೃಷ್ಟಪಿತರೌ-ಕಾಣಲ್ಪಡದೇಯಿರುವ ತಾಯಿತಂದೆಗಳುಳ್ಳವರಾದ, ಏತೌ-ಈ ರಾಮಕೃಷ್ಣರು, ಅಕ್ಷ್ಣೋಃ-ಕಂಗಳಿಗೆ, ಪಕ್ಷ್ಮ-ರೆಪ್ಪೆಯು, ಯದ್ವತ್-ಹೇಗೋ, ತದ್ವತ್-ಹಾಗೆ, ಪಿತ್ರೋಃ-ತಾಯಿತಂದೆಗಳಾಗಿರುವ, ಯುವಯೋಃ-ನಿಮ್ಮಲ್ಲಿ, ನ್ಯಸ್ತೌ-ಇರಿಸಲ್ಪಟ್ಟವರಲ್ಲವೆ ಸಂಪ್ರೀಣನಾಭ್ಯುದಯತೋಷಣಪಾಲನಾನಿ-ಪ್ರೀತಿಸುವಿಕೆ ಶ್ರೇಯಸ್ಸನ್ನುಂಟುಮಾಡುವಿಕೆ ಸಂತೋಷಪಡಿಸುವಿಕೆ ಕಾಪಾಡುವಿಕೆಗಳನ್ನು, ಪ್ರಾಪ್ಯ-ಹೊಂದಿ, ಅಕುತ್ರಭಯೌಚ-ಎಲ್ಲಿಯೂ ಭೀತಿಇಲ್ಲದವರಾಗಿ, ಊಷತುಃ-ಇದ್ದರು. ಸತಾಂ-ಸತ್ಪುರುಷರಿಗೆ, ಪರಃಸ್ವಃ-ಹೆರವನುತನ್ನವನು ಎಂಬಭೇದವು, ನ-ಇಲ್ಲವು ॥೪೦॥ ಗೋಪ್ಯಶ್ಚ-ಗೊಲ್ಲತಿಯರೂ, ಚಿರಾತ್-ಬಹುಕಾಲದಿಂದ, ಅಭೀಷ್ಟಂ-ಬಯಸಲ್ಪಡುತ್ತಿದ್ದಪ್ರಿಯನಾದ, ಕೃಷ್ಣಂ-ನಾರಾಯಣನನ್ನು, ಉಪಲಭ್ಯ-ಪ್ರತ್ಯಕ್ಷವಾಗಿ ಕಂಡು, ಯತ್ಪ್ರೇಕ್ಷಣೇ-ಯಾವ ಕೃಷ್ಣನನ್ನು ನೋಡುವವಿಷಯದಲ್ಲಿ, ಪಕ್ಷ್ಮಕೃತಂ-ಅಭ್ಯಂತರವಾದ ರೆಪ್ಪೆಗಳನ್ನು ಸೃಷ್ಟಿಮಾಡಿದ ಬ್ರಹ್ಮನನ್ನು, ಶಪಂತ್ಯಃ-ಬಯ್ಯುತ್ತಿರುವರಾದರೋ, ತಂ-ಆ ಕೃಷ್ಣನನ್ನು, ದೃಗ್ಭಿಃ-ಕಂಗಳಿಂದ, ಹೃದೀಕೃತಂ-ಮನಸಿನಲ್ಲಿ ಪ್ರವೇಶಗೊಳಿಸಲ್ಪಟ್ಟವನನ್ನು ಮಾಡಿಕೊಂಡು, ಪರಿರಭ್ಯ-ಅಪ್ಪಿಕೊಂಡು, ಸರ್ವಾಃ-ಎಲ್ಲರೂ, ನಿತ್ಯಯುಜಾಮಪಿ-ಆ ರೂಢಯೋಗಿಗೆ

---

ಕೆ ತ್ರೈಶ್ವರ್ಯರೂಪಳಾದ ಯಶೋದೆಯನ್ನು ಆಲಿಂಗನಂಗೆಯ್ದು ಆಯಶೋದೆಯಿಂ ಮಾಡಲ್ಪಟ್ಟಮೈತ್ರಿಯಂ ಸ್ಮರಿಸುವರಾಗಿ ಆನಂದಬಾಷ್ಪದೊಡನೆ ಕೂಡಿ ನುಡಿದರದೆಂತೆನೆ ॥೩೮॥ ಎಲೈಯಶೋದೆಯೇ! ನಿಮ್ಮಿಂದಮಾಡಲ್ಪಟ್ಟ ಅತಿಶಯವಾದ ಮಿತ್ರತೆಯಂ ಯಾವವಳು ತಾನೆ ಮರೆಯುವಳು; ಇಂದ್ರಸಂಬಂಧವಾದ ಐಶ್ವರ್ಯವಂ ಪಡೆದವರಿಂದಲೂ ಯಾವ ಉಪಕಾರಕ್ಕೆ ಪ್ರತ್ಯುಪಕಾರವ ಮಾಡಲಶಕ್ಯವೋ ಅಂತಾ ಯುಪಕಾರವಂ ನೀವು ಮಾಡಿರುವಿರಿ ಎಲೈಯಶೋದಾದೇವಿಯೇ! ತಾಯಿತಂದೆಗಳ ನರಿಯದೆಯಿರುವ ರಾಮಕೃಷ್ಣರು ಮಾತಾಪಿತೃಗಳಾದ ನಿಮ್ಮಿಬ್ಬರಿಂದ ಕಾಡಲ್ಪಟ್ಟ ಇಷ್ಟವಾದ ವಸ್ತುಗಳಿಂದ ಸಂತೋಷವನ್ನೂ ಜನ್ಮೋತ್ಸವ ಮೊದಲಾದ ಅಭ್ಯುದಯಂಗಳನ್ನು ಕಾಲಕಾಲದಲ್ಲಿಯೂ ಅಭ್ಯಂಜನ ಭೋಜನಂಗಳನ್ನೂ ನೂತನಂಗಳಾದದುಕೂಲಂಗಳಂ ಸಹ ಪಡೆದು ಯಾವುದರಿಂದಲೂ ಭಯವಿಲ್ಲದೆ ಸುಖದಿಂದಿದ್ದರೋ, ಲೋಕದಲ್ಲಿ ಸುಜನರಿಗೆ ಸ್ವಕೀಯ ಪರಕೀಯರೆಂಬ ಭೇದವಿಲ್ಲವಾದಕಾರಣದಿಂ ನೀವು ಆರೀತಿಯಾಗಿ ಅವರಂ ಪೋಷಿಸಿದಿರಿ; ಎಂದು ರೋಹಿಣೀ ದೇವಕಿಯರೀರ್ವರೂ ಯಶೋದೆಯಂಕುರಿತು ಹೇಳಿದರು ॥೪೦॥ ಆಸಮಯದಲ್ಲಿ ಗೋಪಸ್ತ್ರೀಯರು ಸರ್ವಪ್ರಕಾರದಿಂದಲೂ ಇಷ್ಟನಾದ ಶ್ರೀಕೃಷ್ಣನಂ ಬಹುಕಾಲಕ್ಕೆ ಸಲುಪಳಿಯಾಗಿ ಕಂಡು ನೇತ್ರಗಳಿಗೆ ತೃಪ್ತಿಯಾಗುವಂತೆ ನೋಡುವುದಕ್ಕೆ ವಿಘ್ನರೂಪಗಳಾದ ರೆಪ್ಪೆಗಳಂ ಸೃಷ್ಟಿಸಿದ ಬ್ರಹ್ಮನಂ ನಿಂದಿಸುವರಾಗಿ ಕಂಣುಗಳೆಂಬ ಬಾಗಿಲುಗಳಿಂ ಹೃದಯಕಮಲವೆಂಬ ಮನೆಯಲ್ಲಿ ಪ್ರವೇಶಂಗೆಯ್ಸಲ್ಪಟ್ಟ ಶ್ರೀಕೃಷ್ಣನಂ ಸರ್ವಭಾವದಿಂದಲೂ ಆಲಿಂಗನಂಗೆಯ್ದು ಯೋಗಿಗಳಿಗೂ ದುರ್ಲಭವಾದ ಶ್ರೀಕೃಷ್ಣನ ಸ್ವರೂಪವನೆಯ್ದಿದರು ॥೪೧॥ ಆಗ ಶ್ರೀಕೃಷ್ಣನು ಅಧಿಕಂಗಳಾದ ಭಕ್ತಿ

ಕೃತಮಲಂಪರಿರಭ್ಯಸರ್ವಾಸ್ತದ್ಭಾವಮಾಪುರಪಿನಿತ್ಯಯುಜಾಂದುರಾಪಮ್ ॥೪೦॥ ಭಗವಾಂಸ್ತಾಸ್ತಥಾ
ಭೂತಾವಿವಿಕ್ತಉಪಸಂಗತಃ ।ಆಶ್ಲಿಷ್ಯಾನಾಮಯಂಪೃಷ್ಟ್ವಾಪ್ರಹಸನ್ನಿದಮಬ್ರವೀತ್॥೪೧॥ಅಪಿಸ್ಮ
ರಥನಸ್ಸಖ್ಯಸ್ಸ್ವಾನಾಮರ್ಥಚಿಕೀರ್ಷಯಾ। ಗತಾಂಶ್ಚಿರಾಯಿತಾನ್ ಶತ್ರುಪಕ್ಷಕ್ಷಪಣಚೇತಸಃ॥೪೨॥
ಅಪ್ಯವಧ್ಯಾಯಥಾಸ್ಮಾನ್ ಸ್ವಿದಕೃತಜ್ಞಾವಿಶಂಕಯಾ।ನೂನಂಭೂತಾನಿಭಗವಾನ್ ಯುನಕ್ತಿವಿಯುನ
ಕ್ತಿಚ ॥೪೩॥ವಾಯುರ್ಯಥಾಘನಾನೀಕಂತೃಣಂತೂಲಂರಜಾಂಸಿವಾ । ಸಂಯೋಜ್ಯಾಕ್ಷಿಪತೆಭೂಯಸ್ತ
ಥಾಭೂತಾನಿಭೂತಕೃತ್ ॥೪೪॥ ಮಯಿಭಕ್ತಿರ್ಹಿಭೂತಾನಾಮಮೃತತ್ವಾಯಕಲ್ಪತೆ । ದಿಷ್ಟ್ಯಾಯ
ದಾಸೀನ್ಮತ್ಸ್ನೇಹೊಭವತೀನಾಂಮದಾಪನಃ॥೪೫॥ಅಹಂಹಿಸರ್ವಭೂತಾನಾಮಾದಿರಂತೋಂತರಂಬಹಿಃ।

---

ಳಿಗೂ ಕೂಡ, ದುರಾಪಂ-ಪ್ರಯಾಸದಿಂದಲೂ ಪಡೆಯಲಶಕ್ಯವಾದ, ತದ್ಭಾವಂ-ಕೃಷ್ಣಾತ್ಮಕತ್ವವನ್ನು, ಆಪುಃ-ಹೊಂದಿದರು॥ ಭಗವಾನ್-ಸರ್ವಜ್ಞನಾದ ಕೃಷ್ಣನು, ತಥಾಭೂತಾಃ-ಹಾಗಾಗಿರುವಂಥಾ, ತಾಃ-ಆ ಗೋಪಸ್ತ್ರೀಯರನ್ನು, ವಿವಿಕ್ತೇ-ಏಕಾಂತಸ್ಥಲದಲ್ಲಿ, ಉಪಸಂಗತಃ-ಹತ್ತಿರಸೇರಿದವನಾಗಿ, ಆಶ್ಲಿಷ್ಯ-ಅಪ್ಪಿಕೊಂಡು,ಅನಾಮಯಂ-ಆರೋಗ್ಯಕುಶಲವನ್ನು,ಪೃಷ್ಟ್ವಾ-ಕೇಳಿಕೊಂಡು, ಪ್ರಹಸನ್-ಹೇರಳವಾಗಿನಗುತಿರುವನಾಗಿ, ಇದಂ-ಮುಂದೆಹೇಳಿದಮಾತನ್ನು, ಅಬ್ರವೀತ್-ನುಡಿದನು॥೪೧॥ಸಖ್ಯಃ-ಎಲೌಗೆಳತಿಯರಿರಾ, ಸ್ವಾನಾಂ-ನಮ್ಮಜನಗಳ, ಅರ್ಥಚಿಕೀರ್ಷಯಾ-ಪ್ರಯೋಜನವನ್ನುಮಾಡುವುದಕ್ಕಪೇಕ್ಷೆಯಿಂದ ಗತಾನ್-ನಿಮ್ಮನ್ನುಬಿಟ್ಟುಹೋದಂಥಾ,ಶತ್ರುಪಕ್ಷಕ್ಷಪಣಚೇತಸಃ-ಹಗೆಯವರಕಡೆಯವರನ್ನು ನಾಶಮಾಡುವಬುದ್ಧಿಯುಳ್ಳವರಾದ್ದರಿಂದ, ಚಿರಾಯಿತಾನಪಿ-ಬೇಗಬಾರದೆ ಬಹುಕಾಲಇದ್ದವರನ್ನಾದರೂ, ನಃ-ನಮ್ಮನ್ನು, ಸ್ಮರಥೋಪಿ-ನೆನಪುಗೊಳ್ಳುತ್ತಿರುವಿರಾ॥೪೨॥ಅಕೃತಜ್ಞವಿಶಂಕಯಾ-ಉಪಕಾರವಂ ಸ್ಮರಿಸುವನಲ್ಲವೆಂಬಸಂದೇಹದಿಂದ,ಅಸ್ಮಾನ್-ನಮ್ಮನ್ನು ಅವಧ್ಯಾಯಥಾಪಿಸ್ವಿತ್-ಹೀನವಾಗಿಯೂಭಾವಿಸುವಿರೋ(ಏನು, ನೂನಂ-ನಿಶ್ಚಯವೇಸರಿ ಭಗವಾನ್-ಕಾಲವು,ಭೂತಾನಿ-ಪ್ರಾಣಿಗಳನ್ನು, ಯುನಕ್ತಿ-ಕೂಡಿಸುತ್ತಿದೆ. ವಿಯುನಕ್ತಿಚ-ಬಿಡಿಸುತ್ತಲೂಇದೆ॥೪೩॥ವಾಯುಃ-ಗಾಳಿಯು, ಯಥಾ-ಹೇಗೆ, ಘನಾನೀಕಂ-ಮೋಡಗಳಗುಂಪನ್ನೂ, ತೃಣತೂಲರಜಾಂಸಿವಾ-ಹುಲುಕಡ್ಡಿಯರಳೆಮಣ್ಣುಪುಡಿಗಳನ್ನಾದರೂ,ಸಂಯೋಜ್ಯ-ಸೇರಿಸಿ,ಭೂಯಃ-ಮರಳಿಯೂ, ಆಕ್ಷಿಪತೇ-ಚದರಿಸಿ ಬಿಡುವುದೋ,ಭೂತಕೃತ್-ಪ್ರಾಣಿಗಳನ್ನುಸೃಷ್ಟಿಮಾಡಿದವನು,ಭೂತಾನಿ-ಪ್ರಾಣಿಗಳನ್ನು,ತಥಾ-ಹಾಗೆಮಾಡುವನು॥೪೪॥ಭೂತಾನಾಂ-ಪ್ರಾಣಿಗಳಿಗೆ,ಮಯಿ, ನನ್ನಲ್ಲಿ, ಭಕ್ತಿಃ-ಪ್ರೇಮವು,ಅಮೃತತ್ವಾಯ-ಮೋಕ್ಷಕ್ಕೆ,ಕಲ್ಪತೇ-ತಕ್ಕದ್ದಾಗಿರುತ್ತದೆ, ಯತ್-ಯಾವಕಾರಣದಿಂದ,ಭವತೀನಾಂ-ನಿಮಗೆ,ಮದಾಪನಃ-ನನ್ನನ್ನು ಹೊಂದಿಸುವಂಥಾ,ಮತ್ಸ್ನೇಹಃ-ನನ್ನಲ್ಲಿಪ್ರೇಮವೂ,ತತ್-ಅದು,ದಿಷ್ಟ್ಯಾ-ನಿಮ್ಮಪುಣ್ಯದಿಂದಾಗುವುದು॥೪೫॥ಅಂಗನಾಃ-ಹೆಂಗಳಿರಾ,ಭೌತಿಕಾನಾಂ-ಮುಚ್ಚಳಪೃಥ್ವಿಮೊದಲಾದವಿಕೃತಿದ್ರವ್ಯಗಳಿಗೆ, ಒಂ-

---

ಪ್ರೇಮಗಳಿಂ ಶ್ರೀಕೃಷ್ಣತಾದಾತ್ಮ್ಯವನೆಯ್ದಿರುವ ಆಗೋಪಸ್ತ್ರೀಯರನೆಯ್ದಿ ಏಕಾಂತದಲ್ಲಿ ಆಲಿಂಗನಗೆಯ್ದು ಮುಗುಳು ನಗೆಯುಳ್ಳ ಮುಖದಿಂದ ಕುಶಲಪ್ರಶ್ನೆ ಪೂರ್ವಕವಾಗಿ ನುಡಿದನದೆಂತೆನೆ- ॥೪೧॥ ಎಲೈ, ಸಖಿಯರಾದ ಗೋಪಸ್ತ್ರೀಯರುಗಳಿರಾ! ನಮ್ಮ ಮಾತಾಪಿತೃಗಳಾದ ದೇವಕೀವಸುದೇವರು ಮುಂತಾದ ಸ್ವಜನರ ಕ್ಲೇಶವಂ ಪರಿಹರಿಸಲೋಸುಗವೂ ನಮಗೆ ಶತ್ರುಗಳಾದ ಕಂಸಾದಿಗಳಂ ಸಂಹರಿಸಲೋಸುಗವೂ ಉದ್ಯುಕ್ತವಾದ ಮನಸ್ಸುಳ್ಳವನಾಗಿ ನಿಮ್ಮೆಲ್ಲರಂ ಬಿಟ್ಟು ಮಧುರಾಪುರವನೆಯ್ದಿ ಕಾರ್ಯಾಂತರವ್ಯಾಸಕ್ತನಾಗಿ ನಿಮ್ಮಂನೋಡುವುದಕ್ಕೆ ಬಾರದೆಯಿರುವ ನನ್ನಂ ಸ್ಮರಿಸುತಲಿರುವಿರೋ ಏನು ॥೪೨॥ ಇಲ್ಲದಿದ್ದರೆ ಈಕೃಷ್ಣನು ಕೃತಜ್ಞನಲ್ಲವೆಂದು ಸ್ವಲ್ಪ ಮನಸ್ಸಿನಲ್ಲಿ ಶಂಕಿಸಿ ನಿಂದೆಯಂ ಮಾಡುತಲಿರುವಿರೊ ಹೇಳಿರಿ॥೪೩॥ ವಾಯುವು ಆಕಾಶದಲ್ಲಿ ಮೇಘಂಗಳಂ ಯಾವ ರೀತಿಯಾಗಿ ಕೂಡಿಸುವುದೋ ಪುನಶ್ಚ ವಿಂಗಡಿಸುವುದೋ, ಭೂಮಿಯಲ್ಲಿ ತೃಣಂಗಳಂ ಹತ್ತಿಯಧೂಳಿಗಳಿಂ ಎಂತುಕೂಡಿ ಪುನಶ್ಚ ವಿಂಗಡಿಸುವುದೋ, ಅದೇರೀತಿಯಲ್ಲಿ ದೈವವು ಪ್ರಾಣಿಗಳನ್ನಗಲಿಸಿ ಕೂಡಿಸುತಲಿದೆಯೆಂದು ನಿಶ್ಚಯವು॥೪೪॥ನನ್ನಲ್ಲಿ ಭಕ್ತಿಯು ಪ್ರಾಣಿಗಳಿಗೆ ಮೋಕ್ಷಪ್ರದವಾಗುವುದು. ದೈವವಶದಿಂದ ನಿಮಗೆ ನನ್ನಲ್ಲುಂಟಾದಸ್ನೇಹವು ನನ್ನನ್ನೇ ಎಯ್ದಿಸುವುದು ॥೪೫॥ ಎಲೈ ಗೋಪಸ್ತ್ರೀಯರುಗಳಿರಾ! ಘಟಪಟಾದಿ ವಸ್ತುಗಳಿಗೆ

ಭೌತಿಕಾನಾಂ ಯಥಾಖಂ ವಾರ್ಭೂರ್ವಾಯುರ್ಜ್ಯೋತಿರಂಗನಾಃ ॥೪೭॥ ಏವಂಹ್ಯೇತಾನಿಭೂತಾನಿಭೂತೇ
ಷ್ವಾತ್ಮಾತ್ಮನಾತತಃ । ಉಭಯಂಮಯ್ಯಥಪರೇಪಶ್ಯತಾಭಾಂತಮಕ್ಷರೇ ॥೪೮॥ ಶ್ರೀಶುಕಃ॥ ಅಧ್ಯಾತ್ಮ
ವಿದ್ಯಯಾಗೋಪ್ಯಏವಂಕೃಷ್ಣೇನಶಿಕ್ಷಿತಾಃ । ತದನುಸ್ಮರಣಧ್ವಸ್ತಜೀವಕೋಶಾಸ್ತಮಧ್ಯಗನ್ ॥೪೯॥ ಆ
ಹುಶ್ಚತೇನಳಿನನಾಭಪದಾರವಿಂದಂಯೋಗೇಶ್ವರೈರ್ಹೃದಿವಿಚಿಂತ್ಯಮಗಾಧಬೋಧೈಃ । ಸಂಸಾರಕೂಪಪ
ತಿತೋತ್ತರಣಾವಲಂಬಂಗೇಹಂಜುಷಾಮಪಿಮನಸ್ಯುದಿಯಾತ್ಸದಾನಃ॥ ... ॥೫೦॥

ಇತಿಶ್ರೀಮದ್ಭಾಗವತೇ-ದಶಮಸ್ಕಂಧೇ-ದ್ವ್ಯಶೀತಿತಮೋಧ್ಯಾಯಃ-

---

ಆಕಾಶವೂ, ವಾಃ-ಜಲವೂ, ಭೂತಾಃ_ಪೃಥಿವಿಯೂ, ವಾಯುಃ-ಗಾಳಿಯೂ, ಜ್ಯೋತಿಃ-ತೇಜಸ್ಸೂ, ಎಂಬಪಂಚಭೂತಗಳ್ಳುಯ
ಥಾ-ಹೇಗೆ ಆದ್ಯಂತಗಳಾಗಿವೆಯೋ, ತಥಾ-ಹಾಗೆ,ಸರ್ವಭೂತಾನಾಂ-ಸಕಲಪ್ರಾಣಿಗಳಿಗೂ,ಆದಿಃ-ಕಾರಣವೂ, ಅಂತಃ-ಅಧ್ಯಾ
ಸೋಪಲಕ್ಷಿತಾಧಿಷ್ಠಾನವೂ, ಅಂತರಂ-ಒಳಗೂ, ಬಹಿಃ-ಹೊರಗೂ, ಅಹಂಹಿ-ನಾನೇಅಲ್ಲವೆ ॥೪೭॥ ಏವಂ-ಹೀಗೆ, ಏತಾನಿಭೂ
ತಾನಿ-ಈವಿಕೃತಪ್ರಾಣಿಗಳು, ಭೂತೇಷು-ಪ್ರಕೃತಿಭೂತಂಗಳಲ್ಲಿರುವವು. ಆತ್ಮಾತು-ಜೀವಾತ್ಮನಾದರೋ, ಆತ್ಮನಾ-ಭೋಕ್ತೃ
ರೂಪದಿಂದ ಇರುವನು. ತತಃ-ಆ ಕಾರಣದಿಂದ, ಉಭಯಂ-ಭೋಗ್ಯಪ್ರಪಂಚವನ್ನೂ, ಭೋಕ್ತನಾದ ಆತ್ಮನನ್ನೂ,ಅಕ್ಷರೇ-
ಪರಿಪೂರ್ಣನಾದ, ಪರೇಮಯಿ-ಪರಮೇಶ್ವರನಾದ ನನ್ನಲ್ಲಿ, ಆಭಾಂತಂ-ಇದ್ದಂತೆ ತೋರುತ್ತಿರುವುದನ್ನಾಗಿ, ಅಥ-ಇನ್ನು, ಪ
ಪಶ್ಯತ-ನೋಡಿರಿ ॥೪೮॥ ಏವಂ-ಹೀಗೆ, ಗೋಪ್ಯಃ-ಗೊಲ್ಲತಿಯರು, ಕೃಷ್ಣೇನ-ನಾರಾಯಣನಿಂದ, ಅಧ್ಯಾತ್ಮವಿದ್ಯಯಾ-ಆತ್ಮಜ್ಞಾ
ನದಿಂದ, ಶಿಕ್ಷಿತಾಃ-ಬೋಧಿಸಲ್ಪಟ್ಟವರಾದ್ದರಿಂದ, ತದನುಸ್ಮರಣಧ್ವಸ್ತಜೀವಕೋಶಾಃ-ಆ ಕೃಷ್ಣನ ಐಕ್ಯಾನುಸಂಧಾನದಿಂ
ದ ಧ್ವಂಸಮಾಡಲ್ಪಟ್ಟ ಲಿಂಗದೇಹವುಳ್ಳವರಾಗಿ, ತಂ-ಆ ಕೃಷ್ಣನನ್ನು, ಅಧ್ಯಗನ್-ಸೇರಿದರು ॥೪೯॥ ಹೇ ನಳಿನನಾಭ-ಎಲೈ ಪ
ದ್ಮನಾಭನೇ, ಅಗಾಧಬೋಧೈಃ-ಅಪಾರವಾದ ಜ್ಞಾನವುಳ್ಳ, ಯೋಗೇಶ್ವರೈರಪಿ-ಯೋಗಸಿದ್ಧರಿಂದಲೂ, ಹೃದಿ-ಮನಸ್ಸಿನಲ್ಲಿ, ವಿ
ಚಿಂತ್ಯಂ-ಧ್ಯಾನಿಸಲ್ಪಡತಕ್ಕದ್ದಾಗಿರುವಂಥಾ, ಸಂಸಾರಕೂಪಪತಿತೋತ್ತರಣಾವಲಂಬಂ-ಸಂಸಾರವೆಂಬ ಭಾವಿಯಲ್ಲಿಬಿದ್ದ
ವರು ಏಳುವುದಕ್ಕಾಧಾರವಾದಂಥಾ, ತೇ-ನಿನ್ನ,ಪದಾರವಿಂದಂ-ಪಾದಕಮಲವು, ಗೇಹಂ-ಮನೆಯನ್ನು, ಜುಷಾಂ-ಹೊಂದಿಯಿ
ರುವಂಥಾ, ನೋಪಿ-ನಮಗೂ, ಮನಸಿ-ಮನಸ್ಸಿನಲ್ಲಿ, ಸದಾ-ಯಾವಾಗಲೂ. ಉದಿಯಾತ್-ಕಾಣಿಸಲಿ ॥೫೦॥

ಇಂತೆಂಬಲ್ಲಿಗೆ ಭಾಗವತ ಪ್ರತಿಶಬ್ದಾರ್ಥ ಬೋಧಿನಿಯಲ್ಲಿ ದಶಮಸ್ಕಂಧವೊಳು
೮೨ ನೆಯ ಅಧ್ಯಾಯಂ ಮುಗಿದುದು.

---

ಪೃಥಿವ್ಯಪ್ತೇಜೋವಾಯ್ವಾಕಾಶಂಗಳು ಎಂತು ಮೂಲಕಾರಣಂಗಳಾಗಿ ಒಳಗೂ ಹೊರಗೂ ಇರುವುದೋ ಹಾಗೆ
ಜರಾಯುಜಾಂಡಜಸ್ವೇದಜೋದ್ಭಿಜಗಳಾದ ಚತುರ್ವಿಧ ಪ್ರಾಣಿಸಮೂಹಗಳಿಗೆ ನಾನೇ ಒಳಗೂ ಹೊರಗೂ ಕಾರ
ಣನಾಗಿರುವೆನು. ನನ್ನನ್ನೇ ನೀವು ಪಡೆಯುವಿರಿ ॥೪೭॥ ಎಂದು ಘಟ ಶರಾವಾದಿ ಭೌತಿಕ ಪದಾರ್ಥಂಗಳಿಗೆ ಪಂಚ
ಮಹಾಭೂತಂಗಳೇ ಆದ್ಯಂತರೂಪಂಗಳೋ ಅಂತು ಈ ಚತುರ್ವಿಧ ಪ್ರಾಣಿಗಳಿಗೂ ಭೂತಜನ್ಯಗಳಾದ್ದರಿಂದ ತ
ಮಗೆ ಕಾರಣಗಳಾದ ಪೃಥಿವ್ಯಾದಿಗಳಲ್ಲಿ ಇರುತಲಿವೆ. ಭೋಕ್ತೃವಾದ ಆತ್ಮನಲ್ಲಿಲ್ಲವು, ಆತ್ಮನಾದರೋ ಭೂತಂಗ
ಳಲ್ಲಿ ಭೋಕ್ತೃರೂಪದಿಂದಿರುವನಾದ್ದರಿಂದ ಅಭೂತಗಳು ಭೂತಸಂಬಂಧಿಗಳಾದ ವಸ್ತುಗಳು ಅವೆರಡೂ ಭೋ
ಕ್ತೃವಾದ ಜೀವನುಸಹ ಅಕ್ಷರನಾದ ಪರಿಪೂರ್ಣನಾದ ಪರಬ್ರಹ್ಮನಾದ ನನ್ನಲ್ಲಿಯೇ ಇರುವರು. ಈಯರ್ಥ
ವಂ ನೀವೇ ಮನಸ್ಸಿನಲ್ಲಿ ಭಾವಿಸಿಕೊಳ್ಳುವರಾಗಿರಿ ॥೪೮॥ ಎಂಬುದಾಗಿ ಶ್ರೀಕೃಷ್ಣನಿಂದ ಅಧ್ಯಾತ್ಮವಿದ್ಯೋಪದೇ
ಶಂಗೆಯ್ದು ಶಿಕ್ಷಿಸಲ್ಪಟ್ಟವರಾದ ಗೋಪಸ್ತ್ರೀಯರು ಆಕೃಷ್ಣಾನುಸ್ಮರಣದಿಂದ ನಷ್ಟವಾದ ಲಿಂಗಶರೀರವುಳ್ಳವ
ರಾಗಿ ಶ್ರೀಕೃಷ್ಣನನೆಯ್ದಿದರು॥೪೯॥ ಮತ್ತು ಆಗೋಪಸ್ತ್ರೀಯರು ಪ್ರಾರ್ಥನಂಗೆಯ್ದರಪಂತೆನೆ;- ಎಲೈಪದ್ಮ
ನಾಭನಾದ ಶ್ರೀಕೃಷ್ಣನೇ! ಅತಿಶಯವಾದ ಜ್ಞಾನವುಳ್ಳ ಹೃದಯಕಮಲದಲ್ಲಿ ಧ್ಯಾನಿಸುವುದಕ್ಕೆ ಯೋಗ್ಯವಾದ
ಸಂಸಾರಕೂಪವೆಂಬುದರಲ್ಲಿ ಬಿದ್ದಂತವರನ್ನು ಉದ್ಧರಿಸುವುದಕ್ಕೆ ಆಧಾರರೂಪವಾದ ನಿನ್ನಪಾದಪದ್ಮವು ಗೃಹ
ವ್ಯಾಪಾರಂಗಳಲ್ಲಿರುವ ನಮಗೆ ಸರ್ವದಾ ತೋರುತಲಿರಲಿ. ಎಂದು ಪ್ರಾರ್ಥನಂಗೆಯ್ದರು॥ ॥೫೦॥

ಶ್ರೀಶುಕಃ॥ ತತೋನುಗೃಹ್ಯ ಭಗವಾನ್ ಗೋಪೀನಾಂ ಸ ಗುರುರ್ಗತಿಃ । ಯುಧಿಷ್ಠಿರಮಥಾಪೃಚ್ಛತ್ಸರ್ವಾಂಶ್ಚ ಸುಹೃದೋಽವ್ಯಯಮ್ ॥೧॥ ತ ಏವಂ ಲೋಕನಾಥೇನ ಪರಿಪೃಷ್ಟಾಃ ಸುಸತ್ಕೃತಾಃ । ಪ್ರತ್ಯೂಚುಃ ಹೃಷ್ಟಮನಸಸ್ತತ್ಪಾದೇಕ್ಷಾಹತಾಂಹಸಃ ॥೨॥ ಕುತೋಽಶಿವಂ ತ್ವಚ್ಚರಣಾಂಬುಜಾಸವಂ ಮಹನ್ಮನಸ್ತೋ ಮುಖನಿಸ್ಸೃತಂ ಕ್ವಚಿತ್ । ಪಿಬಂತಿ ಯೇ ಕರ್ಣಪುಟೈರಲಂ ಪ್ರಭೋ ದೇಹಂಭೃತಾಂ ದೇಹಕೃದಸ್ಮೃ

೮೩ ನೆಯ ಅಧ್ಯಾಯ.

ತತಃ ಆ ಮೇಲೆ, ಗುರುಃ-ಅಜ್ಞಾನಪರಿಹಾರಕನಾದ, ಸಭಗವಾನ್-ಆ ಕೃಷ್ಣನು, ಗೋಪೀನಾಂ-ಗೊಲ್ಲತಿಯರಿಗೆ, ಗತೀಃ-ಶಾಶ್ವತಪುಣ್ಯ ಲೋಕಂಗಳನ್ನು, ಅನುಗೃಹ್ಯ-ದಯೆಗೆಯ್ದು, ಅಥ-ಆ ಬಳಿಕ, ಯುಧಿಷ್ಠಿರಂ-ಧರ್ಮರಾಯನನ್ನೂ, ಸರ್ವಾನ್ ಸುಹೃದಶ್ಚ-ಸಮಸ್ತಮಿತ್ರರನ್ನೂ ಕುರಿತು, ಅವ್ಯಯಂ-ಕುಶಲವನ್ನು, ಅಪೃಚ್ಛತ್-ಬೆಸಗೊಂಡನು ॥೧॥ ತೇ-ಅವರು, ಲೋಕನಾಥೇನ-ಜಗನ್ನಾಯಕನಾದಕೃಷ್ಣನಿಂದ, ಏವಂ-ಹೀಗೆ, ಪರಿಪೃಷ್ಟಾಃ-ಕುಶಲಪ್ರಶ್ನವಂಗೆಯ್ಯಲ್ಪಟ್ಟವರೂ, ಸುಸತ್ಕೃತಾಃ-ಚನ್ನಾಗಿ ಉಪಚರಿಸಲ್ಪಟ್ಟವರೂ, ತತ್ಪಾದೇಕ್ಷಾಹತಾಂಹಸಃ-ಆ ಕೃಷ್ಣನ ಚರಣದರ್ಶನದಿಂದ ಕಳೆಯಲ್ಪಟ್ಟಪಾಪವುಳ್ಳವರೂ, ಹೃಷ್ಟಮನಸಃ ಸಂತುಷ್ಟಹೃದಯರೂ ಆಗಿ, ಪ್ರತ್ಯೂಚುಃ-ಪ್ರತ್ಯುತ್ತರವಂ ನುಡಿದರು ॥೨॥ ಪ್ರಭೋ-ಒಡೆಯನಾದ ಕೃಷ್ಣನೇ ! ಮಹನ್ಮನಸ್ತಃ-ಮಹಾತ್ಮರಾದಗುರುಗಳಮನಸ್ಸಿನಿಂದ, ಮುಖನಿಸ್ಸೃತಂ-ಮುಖದ್ವಾರದಿಂ ಹೊರಗೆಬಂದ, ದೇಹಂಭೃತಾಂ-ಪ್ರಾಣಿಗಳಿಗೆ, ದೇಹಕೃದಸ್ಮೃತಿಚ್ಛಿದಂ-ಜನ್ಮಕ್ಕೆನಿಮಿತ್ತವಾದಅಜ್ಞಾನವಂಪರಿಸುವ, ಅಥವಾ ಈಶ್ವರನಂಮರೆತಿರುವುದನು ಪೋಗೊಳಿಸುವಂಥಾ, ತ್ವಚ್ಚರಣಾಂಬುಜಾಸವಂ-ನಿನ್ನಅಡಿದಾವರೆಯ ಜೇನನ್ನು, ಯೇ-ಯಾವಪುರುಷನು, ಕರ್ಣಪುಟೈಃ-ಕಿವಿ

ಇಂತು ಶ್ರೀಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸಿದನೆಂದು ಸೂತಪೌರಾಣಿಕನು ನೈಮಿಶಾರಣ್ಯವಾಸಿಗಳಾದ ಶೌನಕಾದಿ ಮಹರ್ಷಿಗಳಿಗೆ ಪೇಳಿದನೆಂಬಲ್ಲಿಗೆ ಶ್ರೀ ಮಹೀಶೂರ ಪುರವರಾಧೀಶ ಶ್ರೀ ಚಾಮರಾಜತನುಜ ಶ್ರೀಮತ್ಕೃಷ್ಣರಾಜವಿರಚಿತಮಾದ "ಶ್ರೀಕೃಷ್ಣರಾಜ ವಾಣೀವಿಲಾಸ,, ವೆಂಬ ಶ್ರೀಭಾಗವತಪುರಾಣದ ಕರ್ಣಾಟಭಾಷಾವ್ಯಾಖ್ಯಾನದಲ್ಲಿ ದಶಮಸ್ಕಂಧದ ೮೨ನೆಯಅಧ್ಯಾಯಂ ಮುಗಿದುದು.

೮೩ನೆಯಅಧ್ಯಾಯವು.

ಶ್ರೀಧರೀಯಶ್ಲೋಕಃ॥ ತ್ರ್ಯಶೀತಿತಮ ಏವಂ ಚ ಸ್ತ್ರೀಣಾಂ ಕೃಷ್ಣಕಥೋತ್ಸವೇ । ದ್ರೌಪದ್ಯೈ ಕೃಷ್ಣಭಾರ್ಯಾಭಿಃ ಉಕ್ತಾಸ್ಸ್ವಸ್ವಕರಗ್ರಹಾಃ॥ ಟೀ॥ ಎಂಭತ್ತುಮೂರನೆಯ ಅಧ್ಯಾಯದಲ್ಲಿ ಸಮಸ್ತರಾದ ಸ್ತ್ರೀಯರೂ ಶ್ರೀಕೃಷ್ಣ ಕಥೋತ್ಸವಂಗಳ ಪ್ರಸ್ತಾಪವಂ ಗೆಯ್ಯುತಿರಲು ರುಕ್ಮಿಣಿಮೊದಲಾದ ಶ್ರೀಕೃಷ್ಣಪತ್ನಿಯರು ದ್ರೌಪದಿಗೋಸುಗ ತಮ್ಮತಮ್ಮ ವಿವಾಹವೃತ್ತಾಂತಂಗಳಂ ಪೇಳಿದರೆಂದು ಶ್ರೀಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸುವನದೆಂತೆನೆ-

ಎಲೈ ಅರಸೇ! ಅನಂತರದಲ್ಲಿ ಅವ್ಯಾಹತ ಷಡ್ಗುಣೈಶ್ವರ್ಯಸಂಪನ್ನನಾದ ಜಗದ್ಗುರುವಾದ ಶ್ರೀಕೃಷ್ಣನು ಗೋಪಸ್ತ್ರೀಯರಿಗೆ ಸದ್ಗತಿಪ್ರದವಾದ ವೇದಾಂತಜ್ಞಾನವನ್ನು ಅನುಗ್ರಹಿಸಿ ಆಮೇಲೆ ಯುಧಿಷ್ಠಿರನೇ ಮೊದಲಾದ ಸರ್ವಸುಹೃತ್ತುಗಳಂ ಕುರಿತು ಕುಶಲಪ್ರಶ್ನೆಯ ಗೆಯ್ದನು॥೧॥ ಈಪ್ರಕಾರವಾಗಿ ಸರ್ವೇಶ್ವರನಾದ ಶ್ರೀಕೃಷ್ಣನಿಂದ ಕುಶಲ ಪ್ರಶ್ನಪೂರ್ವಕವಾಗಿ ಸತ್ಕರಿಸಲ್ಪಟ್ಟ ಯುಧಿಷ್ಠಿರಮೊದಲಾದ ಆ ಮಿತ್ರರುಂ ಸಂತುಷ್ಟಮನಸ್ಕರಾಗಿ ಆಭಗವಂತನ ಚರಣದರ್ಶನದಿಂದ ಪರಿಹರಿಸಲ್ಪಟ್ಟ ಪಾಪವುಳ್ಳವರಾಗಿ ಪ್ರತ್ಯುತ್ತರವಂ ವಿಜ್ಞಾಪಿಸಿದರದೆಂತೆನೆ॥೨॥ ಎಲೈ ಜಗದ್ಗುರುವಾದ ಶ್ರೀಕೃಷ್ಣನೇ! ಮಹಾತ್ಮರ ಹೃದಯದಲ್ಲಿದ್ದು ಅಲ್ಲಿಂದ ಅವರಮುಖಪದ್ಮದ ಮೂಲಕ ಹೊರಟು ಬಂದಂತಾ ಪ್ರಾಣಿಗಳಿಗೆ ಮರಳಿಮರಳಿ ದೇಹವನ್ನುಂಟುಮಾಡುವ ಅಜ್ಞಾನವಂ ಪರಿಹರಿಸುವಂತಾ ನಿನ್ನ ಪಾದಾರವಿಂದ ಕಥಾಮೃತವ ಯಾರು ಶ್ರೋತ್ರಂಗಳಿಂದ ಮನಸ್ಸಿಗೆ ತೃಪ್ತಿಯಾಗುವ ಪರ್ಯಂತವೂ ಪಾನಂಗೈ

ತಿಚ್ಛಿದಪಃ ||೩|| ಹಿತ್ವಾತ್ಮಧಾಮವಿಧುತಾತ್ಮಕೃತತ್ರ್ಯವಸ್ಥಾಮಾನಂದಸಂಪ್ಲವಮಖಂಡಮಕುಂಠಬೋಧಮ್ | ಕಾಲೋಪಸೃಷ್ಟನಿಗಮಾವನಆತ್ತಯೋಗಮಾಯಾಕೃತಿಂಪರಮಹಂಸಗತಿಂನತಾಸ್ಮಃ ||೪|| ಶ್ರೀಶುಕಃ || ಇತ್ಯುತ್ತಮಶ್ಲೋಕಶಿಖಾಮಣಿಂಜನೇಷ್ವಭಿಷ್ಟುವತ್ಸ್ವಂಧಕಕೌರವಸ್ತ್ರಿಯಃ | ಸಮೇತ್ಯ ಗೋವಿಂದಕಥಾಮಿಥೋಗೃಣಂಸ್ತ್ರಿಲೋಕಗೀತಾಃಶೃಣುವರ್ಣಯಾಮಿತೇ ||೫|| ದ್ರೌಪದೀ || ಹೇವೈದರ್ಭ್ಯಚ್ಯುತೇಭದ್ರೇಹೇಜಾಂಬವತಿಕೌಸಲೇ | ಹೇಸತ್ಯಭಾಮೇಕಾಲಿಂದಿಶೈಬ್ಯೇರೋಹಿಣಿಲಕ್ಷ್ಮಣೇ ||೬|| ಹೇಕೃಷ್ಣಪ

---

ಗಳೆಂಬ ದೊನ್ನೆಗಳಿಂದ, ಪಿಬಂತಿ-ಕುಡಿಯುತ್ತಿರುವರೋ, ತೇಷಾಂ-ಅವರಿಗೆ, ಅಶಿವಂ-ಅಕ್ಷೇಮವು, ಕುತಃ-ಎತ್ತಣದು ||೩|| ಆತ್ಮಧಾಮ-ದೇಹಗೇಹಗಳನ್ನು, ಹಿತ್ವಾ-ಬಿಟ್ಟು, ಅಥವಾ-ಆತ್ಮಧಾಮ-ತನಗೆತಾನೇ ಆಧಾರವಾಗಿಉಳ್ಳಂಥಾ, ಅಥವಾ-ಆತ್ಮಧಾಮವಿಧುತಾತ್ಮಕೃತತ್ರ್ಯವಸ್ಥಂ-ಆತ್ಮಧಾಮ-ಸ್ವರೂಪಪ್ರಕಾಶದಿಂದ, ವಿಧುತ-ಕೊಡಹಿ ಬಿಡಲ್ಪಟ್ಟ, ಆತ್ಮಕೃತ-ಬುದ್ಧಿನಿಮಿತ್ತಂಗಳಾದ, ತ್ರ್ಯವಸ್ಥಂ-ಜಾಗ್ರತ್ಸ್ವಪ್ನ ಸುಷುಪ್ತಿಗಳುಳ್ಳಂಥಾವನಾದ್ದರಿಂದ, ಆನಂದಸಂಪ್ಲವಂ-ಸರ್ವಸುಖಗಳ ಕಡಲೆಂಬರೂಪನಾದಂಥಾ, ಅಖಂಡಂ-ಅಪರಿಚ್ಛಿನ್ನನಾದಂಥಾ, ಅಕುಂಠಬೋಧಂ-ಮಂದವಲ್ಲದ ಚಿಚ್ಛಕ್ತಿಯುಳ್ಳಂಥಾ, ಕಾಲೋಪಸೃಷ್ಟನಿಗಮಾವನೇ-ಕಾಲದೋಷದಿಂದ ಶಿಥಿಲವಾದ ವೇದಂಗಳ ರಕ್ಷಣಕ್ಕೋಸುಗ, ಆತ್ತಯೋಗಮಾಯಾಕೃತಿಂ-ಹೊಂದಲ್ಪಟ್ಟಲೀಲಾವಿಗ್ರಹನಾದಂಥಾ, ಪರಮಹಂಸಗತಿಂ-ಆರೂಢಜ್ಞಾನಿಗಳಿಗೆ ಪ್ರಾಪ್ಯನಾದಂಥಾ, ತ್ವಾ-ನಿನ್ನನ್ನು, ನತಾಸ್ಮಃ-ನಮಸ್ಕರಿಸುವವರಾದೆವು ||೪|| ಜನೇಷು-ಮನುಷ್ಯರು, ಉತ್ತಮಶ್ಲೋಕಶಿಖಾಮಣಿಂ-ಉತ್ತಮರಲ್ಲಿ ಪ್ರಸಿದ್ಧರಾದವರೊಳು ಶ್ರೇಷ್ಠನಾದ ಕೃಷ್ಣನನ್ನು, ಇತಿ-ಹೀಗೆ, ಅಭಿಷ್ಟುವತ್ಸುಸತ್ಸು-ಸ್ತೋತ್ರಮಾಡುತ್ತಿರಲಾಗಿ, ಅಂಧಕಕೌರವಸ್ತ್ರಿಯಃ-ಯಾದವಕೌರವರ ಹೆಂಗಳು, ಸಮೇತ್ಯ-ಸೇರಿ, ಮಿಥಃ-ಪರಸ್ಪರವಾಗಿ, ತ್ರಿಲೋಕಗೀತಾಃ-ಮೂರು ಲೋಕಂಗಳಿಂದ ಹಾಡಲ್ಪಟ್ಟ, ಗೋವಿಂದಕಥಾಃ-ಕೃಷ್ಣನಲೀಲೆಗಳನ್ನು, ಅಗೃಣನ್-ಹೇಳಿದರು ತೇ-ನಿನಗೆ, ವರ್ಣಯಾಮಿ ಬಣ್ಣಿಸಿಹೇಳುವೆನು, ಶೃಣು-ಕೇಳು ||೫|| ಹೇವೈದರ್ಭಿ-ಎಲೌ ರುಕ್ಮಿಣಿಯೇ, ಅಚ್ಯುತೆಯೆ, ಭದ್ರೆಯೆ, ಜಾಂಬವತಿಯೇ, ಕೌಸಲೆಯೇ, ಸತ್ಯಭಾಮೆಯೇ, ಕಾಳಿಂದಿಯೇ, ಶೈಬ್ಯೆ-ಮಿತ್ರವಿಂದೆಯೇ, ರೋಹಿಣಿ-ಪಟ್ಟಮಹಿಷಿಯರೊಡನೆ ಸಮಾನಳಾದ ಕೃಷ್ಣಭಾರ್ಯೆಯೇ, ಲಕ್ಷ್ಮಣೆಯೇ ||೬|| ಹೇ ಕೃಷ್ಣಪತ್ನ್ಯಃ-ಎಲೌ ಕೃಷ್ಣನಧರ್ಮಪತ್ನಿಯರೇ! ಅಯಂಭಗವಾನ್-ಈ ನಾರಾಯಣನು, ಸ್ವಮಾಯಯಾ-ತನ್ನ ಇಚ್ಛಾವಿಲಾಸದಿಂದ, ಲೋಕಂ-ಮನುಷ್ಯರನ್ನು, ಅನುಕುರ್ವನ್-ಅನುಸರಿಸಿ ನಡೆಯುವವನಾಗಿ, ವಃ-ನಿಮ್ಮನ್ನು, ಯಥಾ-ಹೇಗೆ, ಉಪಯೇಮೇ-ಮ

---

ಯುತ್ತಲಿರುವರೋ, ಅಂತಾನಮಗೆ ಅಶುಭಪ್ರಸಕ್ತಿಯು ಹೇಗೆ ಉಂಟಾಗುವದು? ||೩|| ಸ್ವಸ್ವರೂಪಪ್ರಕಾಶದಿಂದ ಪರಿಹರಿಸಲ್ಪಟ್ಟ ಬುದ್ಧಿಕೃತವಾದ ಅವಸ್ಥಾತ್ರಯವುಳ್ಳವನಾದ ಕಾರಣದಿಂ ಆನಂದಸ್ವರೂಪನಾದ ಅಪರಿಚ್ಛಿನ್ನನಾದ ಅಕುಂಠಿತಬೋಧವಿಶಿಷ್ಟ ಶಕ್ತಿಕನಾದ ಕಾಲವಶದಿಂದ ಮಲಿನಂಗಳಾದ ವೇದಗಳ ರಕ್ಷಣೆಗೋಸುಗ ಮಾಯಾಕಲ್ಪಿತವಾದ ಮಾನುಷಾವತಾರವಂ ಧರಿಸಿರುವ ನಿನ್ನಂ ಕುರಿತು ನಮಸ್ಕರಿಸುತಲಿರುವೆವು ||೪|| ಈ ಪ್ರಕಾರವಾಗಿ ಯುಧಿಷ್ಠಿರಮುಂತಾದ ಸರ್ವಜನರೂ ಉತ್ತಮಶ್ಲೋಕ ಶಿಖಾಮಣಿಯಾದ ಭಕ್ತಜನಚಿಂತಾಮಣಿಯಾದ ಸಮಸ್ತ ಕಲ್ಯಾಣಗುಣಂಗಳಿಗೆ ಕಣಿಯಾದ ಸಮಸ್ತಲೋಕಂಗಳಿಗೂ ಧಣಿಯಾದ ಶ್ರೀಕೃಷ್ಣನಂ ಸ್ತುತಿಸುತಲಿರಲು ಯಾದವಕೌರವಸ್ತ್ರೀಯರೂ ಇನ್ನೂ ಇತರೆಯರಾದ ಸ್ತ್ರೀಯರೂ ಕೂಡಲೆಲ್ಲರೊಂದುಕಡೆಯಲ್ಲಿ ಕುಳಿತುಕೊಂಡು ತ್ರಿಲೋಕಗಳಲ್ಲಿಯೂ ಗಾನಂಗೈಯಲ್ಪಡುತಲಿರುವ ಶ್ರೀಕೃಷ್ಣಕಥಾಮೃತಂಗಳಂ ಬಾರಿಬಾರಿಗೂ ಗಾನಂಗೆಯ್ದರು | ಎಲೈ ಅರಸೇ! ಈಯರ್ಥವಂ ನಿನಗೋಸುಗ ನಿರೂಪಿಸುವೆನೆಂದು ಶುಕಮುನಿಯು ನುಡಿದನದೆಂತೆನೆ ||೫|| ಎಲೈ ಅರಸೇ! ದ್ರೌಪದಿಯು ರುಕ್ಮಿಣಿಮೊದಲಾದ ಶ್ರೀಕೃಷ್ಣಪತ್ನಿಯರಂ ಕುರಿತು ಪ್ರಶ್ನೆಗೆಯ್ದಳು- ಅದೆಂತೆನೆ- ಮಂಗಳಕರಳಾದ ವಿದರ್ಭರಾಜಪುತ್ರಿಯಾದ ರುಕ್ಮಿಣಿಯೇ! ಎಲೌ ಜಾಂಬವತಿಯೇ! ಕೋಸಲರಾಜಪುತ್ರಿಯಾದ ಸತ್ಯದೇವಿಯೇ! ಸತ್ಯಭಾಮೆಯೇ! ಕಾಳಿಂದಿಯೇ! ಮಿತ್ರವಿಂದೆಯೇ! ಲಕ್ಷ್ಮಣೆಯೇ, ಶೈಬ್ಯೆಯೇ ||೬|| ಶ್ರೀಕೃಷ್ಣಪತ್ನಿಯರುಗಳಿರಾ, ಭಗವಂತನಾದ ಶ್ರೀಕೃಷ್ಣನು ತನ್ನ ಮಾಯೆಯಿಂದ ಲೋಕವನ್ನು ಮ

ತ್ಸ್ವ್ಯಏತನ್ಮೇಬ್ರೂತವೋಭಗವಾನಯಮ್। ಉಪಯೇಮೇಯಥಾಲೋಕಮನುಕುರ್ವನ್ ಸ್ವಮಾಯಯಾ॥೭॥

ರುಕ್ಮಿಣೀ॥ ಚೈದ್ಯಾಯಮಾರ್ಪಯಿತುಮುದ್ಯತಕಾರ್ಮುಕೇಷು ರಾಜಸ್ವಜೇಯಭಟಶೇಖರಿತಾಂಘ್ರಿರೇಣುಃ।

ನಿನ್ಯೇಮೃಗೇಂದ್ರಇವಭಾಗಮಜಾವಿಯೂಥಾತ್ತಚ್ಛ್ರೀನಿಕೇತಚರಣೋಸ್ತುಮಮಾರ್ಚನಾಯ ॥೮॥

ಸತ್ಯಭಾಮಾ॥ ಯೋಮೇಸನಾಭಿವಧತಪ್ತಹೃದಾತತೇನಲಿಪ್ತಾಭಿಶಾಪಮಪಮಾರ್ಷ್ಟುಮುಪಾಜಹಾರ।

ಜಿತ್ವರ್ಕ್ಷರಾಜಮಥರತ್ನಮದಾತ್ಸತೇನಭೀತಃಪಿತಾದಿಶತಮಾಂಪ್ರಭವೇಪಿದತ್ತಾಮ್॥೯॥ ಜಾಂಬವತೀ॥

---

ದುವೆಮಾಡಿಕೊಂಡನು ? ಏತತ್-ಇದರನ್ನು, ಮೇ-ದ್ರೌಪದಿಯಾದ ನನಗೆ, ಬ್ರೂತ-ಹೇಳಿರಿ ॥೭॥ ಚೈದ್ಯಾಯ- ಶಿಶುಪಾಲಂಗೆ, ಮಾ-ನನ್ನನ್ನು, ಅರ್ಪಯಿತುಂ-ಕೊಡುವುದಕ್ಕೆ, ರಾಜಸು-ಜರಾಸಂಧಾದಿಗಳು, ಉದ್ಯತಕಾರ್ಮುಕೇಷುಸತ್ಸು- ಎತ್ತಿದಬಿಲ್ಲುಗಳುಳ್ಳವರಾಗುತ್ತಿರಲು, ಅಜೇಯಭಟಶೇಖರಿತಾಂಘ್ರಿರೇಣುಃ-ಗೆಲ್ಲುವುದಕ್ಕೆ ಯೋಗ್ಯರಲ್ಲದವೀರರಿಂದ ಶಿರೋಭೂಷಣವಾಗಿ ಮಾಡಲ್ಪಟ್ಟಕಾಲುಧೂಳುಳ್ಳ, ಅಜಾವಿ-ಪರಮಾತ್ಮನಾದ ಕೃಷ್ಣನೂಕೂಡ, ಮೃಗೇಂದ್ರಃ-ಸಿಂಗವು, ಭಾಗಮಿವ-ತನ್ನಭೋಗ್ಯಾಂಶವನ್ನು ಹೇಗೋ ಹಾಗೆ, ಯೂಥಾತ್-ಕಾಳಗದ ದೆಸೆಯಿಂದ, ನಿನ್ಯೇ-ತನ್ನಲ್ಲಿಗೊಯ್ದನು ತಚ್ಛ್ರೀನಿಕೇತಚರಣಃ-ಆ ಪಾದವನಪಾದವು, ಮಮ-ನನಗೆ, ಅರ್ಚನಾಯ-ಪೂಜಿಸುವುದಕ್ಕೆ, ಅಸ್ತು-ಆಗಲಿ. ಯೆಂದು ರುಕ್ಮಿಣಿಹೇಳಿದಳು ॥೮॥ ಸತ್ಯಭಾಮೆ-ಸನಾಭಿವಧತಪ್ತಹೃದಾ-ಸನಾಭಿ-ತಮ್ಮನಾದ ಪ್ರಸೇನನ, ವಧ-ಸಿಂಹದಿಂದಾದ ಮರಣದಿಂದ, ತಪ್ತಹೃದಾ-ಸಂತಾಪಗೊಂಡಮನಸ್ಸುಳ್ಳವನಾದ, ಮೇ-ನನ್ನ, ತತೇನ-ತಂದೆಯಾದ ಸತ್ರಾಜಿತನಿಂದ, ಲಿಪ್ತಾಭಿಶಾಪಂ-ಆರೋಪಿಸಲ್ಪಟ್ಟ ಅಪಕೀರ್ತಿಯನ್ನು, ಅಪಮಾರ್ಷ್ಟುಂ ತೆಗೆದುಕೊಳ್ಳುವುದಕ್ಕೆ, ಋಕ್ಷರಾಜಂ-ಜಾಂಬವಂತನನ್ನು, ಜಿತ್ವಾ-ಗೆದ್ದು, ರತ್ನಂ-ಸ್ಯಮಂತಕಮಣಿಯನ್ನು, ಯಃ-ಯಾವಕೃಷ್ಣನು, ಉಪಾಜಹಾರ-ತಂದನೋ, ಅಥ-ಆ ಮೇಲೆ, ಅದಾತ್-ನಮ್ಮಪ್ಪನಿಗೆ ಕೊಟ್ಟನೋ, ತೇನ-ಹಾಗೆಕೃಷ್ಣನಲ್ಲಿ ಪಳಿವನ್ನಾರೋಪಿಸಿದ್ದರಿಂದ, ಭೀತಃ-ಹೆದರಿದವನಾದ, ಸಪಿತಾ-ಆ ನನ್ನತಂದೆಯು, ದತ್ತಾಮಪಿ-ಅಕ್ರೂರಾದಿಗಳಿಗೆ ವಾಗ್ದಾನ ಮಾಡಲ್ಪಟ್ಟವಳನ್ನಾದರೂ, ಮಾಂ-ನನ್ನನ್ನು, ಪ್ರಭವೇ-ಸಮರ್ಥನಾದ ಕೃಷ್ಣಂಗೆ, ಅದಿಶತ-ಕೊಟ್ಟನು ॥೯॥ ಜಾಂಬವತಿ-ದೇಹಕೃತ್-ತಂದೆಯಾದ ಜಾಂಬವಂತನು, ಅಮುಂ-ಈ ಕೃಷ್ಣನನ್ನು, ನಿಜನಾಥದೈವಂ-ತನ್ನೊಡೆಯನೂದೇವರೂಆದ, ಸೀತಾಪತಿಂ-ರಾಮನನ್ನಾಗಿ, ಅಪ್ರಾಜ್ಞಾಯ-ಅರಿಯದೆ, ಅಮುನಾ-ಈ ಕೃಷ್ಣನೊಡನೆ, ತ್ರಿಣವಹಾನಿ-೨೭ದಿನಂಗಳು, ಅಭ್ಯಯುಧ್ಯತ್-

---

ಸರಿಸಿ ನಿಮ್ಮಂ ಎಂತುಮದುವೆಯಂ ಮಾಡಿಕೊಂಡನೋ ಆಯರ್ಥವಂ ಪೇಳುವರಾಗಿರಿ॥೭॥ಎಂದು ದ್ರೌಪದಿಯು ಪ್ರಶ್ನೆಗೆಯ್ಯಲು ರುಕ್ಮಿಣಿಯು ನುಡಿದಳೆಂತೆನೆ, ಕೇಳು ದ್ರೌಪದಿಯೇ, ಜರಾಸಂಧನು ಮೊದಲಾದ ಅರಸುಗಳು ಶಿಶುಪಾಲನಿಗೆ ನನ್ನಂಕೊಡಿಸಬೇಕೆಂದು ನಿಶ್ಚಯಿಸಿ ಧನುರ್ಧಾರಿಗಳಾಗಿ ಕಾದಿರಲು ಮೃಗಾಧಿಪತಿಯಾದ ಸಿಂಹವು ಕುರಿಗಳ ಗುಂಪಿನದೆಸೆಯಿಂದ ತನಗೆ ಸಲ್ಲತಕ್ಕವಸ್ತುವ ನೆಂತಪಹರಿಸುವುದೋ ಅಂತು ಅರಸುಗಳ ಶಿರಸ್ಸಿನಲ್ಲಿ ಪಾದವನಿಟ್ಟು ಯಾವಶ್ರೀಕೃಷ್ಣನು ನನ್ನನಪಹರಿಸಿಕೊಂಡುಬಂದು ಪಾಣಿಗ್ರಹಣವಂಮಾಡಿಕೊಂಡನೋ ಅಂಥಾ ಶ್ರೀಕೃಷ್ಣನು ನಿರಂತರವೂ ನನ್ನಿಂದ ಪೂಜಿಸಲ್ಪಡಲಿ॥೮॥ ಆಮೇಲೆ ಸತ್ಯಭಾಮೆಯು ನುಡಿದಳೆಂತೆನೆ-ಕೇಳು ಪಾಂಚಾಲಪುತ್ರಿಯಾದ ದ್ರೌಪದಿಯೇ ನನ್ನ ಸಹೋದರನಾದ ಪ್ರಸೇನನು ಮಣಿಸಮೇತನಾಗಿ ಅರಣ್ಯವಂಪ್ರವೇಶಿಸಿ ಸಿಂಹದಿಂದ ಸಂಹರಿಸಲ್ಪಡುವನಾಗುತಲೂ ಆವ್ಯಸನದಿಂದ ತಪ್ತವಾದ ಮನಸ್ಸುಳ್ಳವನಾದ ತಂದೆಯಾದ ಸತ್ರಾಜಿದ್ರಾಯನು ಶ್ರೀಕೃಷ್ಣನ ಮಿಥ್ಯಾಪವಾದವಂಪೇಳುತಿರಲಾಗಿ ಅದಂ ಪರಿಹರಿಸಿಕೊಳ್ಳಲೋಸುಗ ಶ್ರೀಕೃಷ್ಣನು ಅರಣ್ಯವನೆಯ್ದಿ ಜಾಂಬವಂತನಂ ಜಯಿಸಿ ಸ್ಯಮಂತಕಮಣಿಯಂತಂದು ಸತ್ರಾಜಿದ್ರಾಯಂಗಿತ್ತನು. ನನ್ನ ತಂದೆಯೂ ತನ್ನ ಅಪರಾಧವನ್ನೂ ಪರಿಹರಿಸಿಕೊಳ್ಳಲೋಸುಗ ಅಕ್ರೂರಾದಿಗಳಿಗೆ ವಾಗ್ದಾನಮಾಡಲ್ಪಟ್ಟವಳನ್ನಾದಾಗ್ಯೂ ನನ್ನನ್ನು ಆಮಣಿಯೊಡನೆ ಶ್ರೀಕೃಷ್ಣನಿಗೆ ಸಮರ್ಪಿಸಿದನು॥೯॥ ಬಳಿಕ ಜಾಂಬವತಿಯು ಪೇಳಿದಳೆಂತೆನೆ ಕೇಳು, ಪಾಂಡವರಿಗೆ ಪಟ್ಟಮಹಿಷಿಯಾದ ದ್ರೌಪದಿಯೇ ನನ್ನತಂದೆಯಾದ ಜಾಂಬವಂತನು ಆದಿಯಲ್ಲಿ ಭಗವಂತನ ಮಹಿಮೆಯನರಿಯದೆ ಸ್ಯಮಂತಕಮಣಿಯು ನರಸಿಕೊಂಡು ಬಂದಿರುವ ಶ್ರೀವಾಸುದೇವನೊಡನೆ ಇಪ್ಪತ್ತೇಳು

ಪ್ರಾಜ್ಞಾಯಪಿಹಕ್ಯಪದಮುಂ ನಿಜನಾಥದೈವಂ ಸೀತಾಪತಿಂ ತ್ರಿನವಹಾನ್ಯಮುನಾಭ್ಯಯುಧ್ಯತ್ । ಜ್ಞಾತ್ವಾ ಪರೀಕ್ಷಿತಮುಪಾಹರದರ್ಹಣಂ ಮಾಂ ಪಾದೌ ಪ್ರಗೃಹ್ಯ ಮಣಿನಾಹಮಮುಷ್ಯ ದಾಸೀ ॥೧೦॥ ಕಾಳಿಂದೀ॥ ತಪಶ್ಚರಂತೀಮಾಜ್ಞಾಯ ಸ್ವಪಾದಸ್ಪರ್ಶನೇಚ್ಛಯಾ । ಸಖ್ಯೋಪೇತ್ಯಾಗ್ರಹೀತ್ಪಾಣಿಂ ಸಾಹಂ ತದ್ಗೃಹಮಾರ್ಜನೀ ॥೧೧॥ ಭದ್ರಾ॥ ಯೋ ಮಾಂ ಸ್ವಯಂವರ ಉಪೇತ್ಯ ವಿಜಿತ್ಯ ಭೂಪಾನ್ನಿನ್ಯೇ ಶ್ವಯೂಥಗಮಿವಾತ್ಮಬಲಿಂ ದ್ವಿಪಾರಿಃ । ಭ್ರಾತೄಂಶ್ಚ ಮೇಽಪಕುರುತಃ ಸ್ವಪುರಂ ಶ್ರಿಯೌಕಸ್ತಸ್ಯಾಸ್ತು ಮೇಽನುಭವಮಂಘ್ರ್ಯವನೇಜನತ್ವಮ್॥೧೨॥ ಸತ್ಯಾ॥ ಸಪ್ತೋಕ್ಷಣೋಽತಿಬಲವೀರ್ಯಸುತೀಕ್ಷ್ಣಶೃಂಗಾನ್ ಪಿತ್ರಾ ಕೃತಾನ್ ಕ್ಷಿತಿಪವೀರ್ಯಪರೀಕ್ಷಣಾಯ । ತಾನ್ ವೀರದುರ್ಮದಹನಸ್ತರಸಾ ನಿಗೃಹ್ಯ ಕ್ರೀಡನ್ ಬಬಂಧ ಹ ಯಥಾ ಶಿಶವೋಽಜತೋ

---

ಕಾಳಗವಮಾಡಿದನು. ಪರೀಕ್ಷಿತಂ-ಬಲಾಧಿಕ್ಯದಿಂದ ಪರೀಕ್ಷಿಸಲ್ಪಟ್ಟ ಕೃಷ್ಣನನ್ನು, ಜ್ಞಾತ್ವಾ-ರಾಮನೆಂದು ತಿಳಿದು, ಪಾದೌ-ಕಾಲುಗಳನ್ನು, ಪ್ರಗೃಹ್ಯ-ಹಿಡಿದುಕೊಂಡು, ಮಣಿನಾ-ಸ್ಯಮಂತಕಮಣಿಯೊಡನೆ, ಮಾಂ-ನನ್ನನ್ನು, ಅರ್ಹಣಂ-ಕಾಣಿಕೆಯನ್ನಾಗಿ-ಉಪಾಹರತ್-ಅರ್ಪಿಸಿದನು. ಅಮುಷ್ಯ-ಈ ಕೃಷ್ಣಂಗೆ, ಅಹಂ-ನಾನು, ದಾಸೀ-ಸೇವಕಳು ॥೧೦॥ ಕಾಳಿಂದಿ॥ ಸ್ವಪಾದಸ್ಪರ್ಶನೇಚ್ಛಯಾ-ತನ್ನ ಚರಣಗಳನ್ನು ಸೋಂಕಲಪೇಕ್ಷೆಯಿಂದ, ತಪಶ್ಚರಂತೀಂ-ಧ್ಯಾನವನ್ನು ಮಾಡುತ್ತಿರುವಳನ್ನು, ಆಜ್ಞಾಯ-ತಿಳಿದು, ಸಖ್ಯಾ-ಗೆಳೆಯನಾದ ಅರ್ಜುನನೊಡನೆ, ಉಪೇತ್ಯ-ಬಂದು, ಪಾಣಿಂ-ನನ್ನ ಕೈಯನ್ನು, ಅಗ್ರಹೀತ್-ಹಿಡಿದನು ಸಾಹಂ-ಆ ನಾನು, ತದ್ಗೃಹಮಾರ್ಜನೀ-ಆ ಕೃಷ್ಣನ ಮನೆಯಂ ಗುಡಿಸುವವಳು ॥೧೧॥ ಭದ್ರಾದೇವಿಯು॥ ಯಃ-ಆವ ಕೃಷ್ಣನು, ಸ್ವಯಂವರೇ-ತಾನಾಗಿ ಗಂಡನನ್ನೊಪ್ಪಿಕೊಳ್ಳುವ ಕ್ಷತ್ರವಿವಾಹದಲ್ಲಿ, ಉಪೇತ್ಯ-ಬಂದು, ದ್ವಿಪಾರಿಃ-ಸಿಂಹವು, ಶ್ವಯೂಥಗಂ-ನಾಯಿಗಳ ಹಿಂಡಿನಲ್ಲಿರುವ, ಆತ್ಮಬಲಿಮಿವ-ತನ್ನ ಆಹಾರವನ್ನಂತೆ, ಭೂಪಾನ್-ಅರಸುಗಳನ್ನೂ, ಅಪಕುರುತಃ-ಅಪಕಾರಂಗೆಯ್ವ ಮೇ ಭ್ರಾತೄಂಶ್ಚ-ನನ್ನ ಸೋದರರನ್ನೂ, ವಿಜಿತ್ಯ-ಗೆದ್ದು, ಶ್ರಿಯೌಕಃ-ಲಕ್ಷ್ಮೀನಿವಾಸಸ್ಥಾನವಾದ ಕೃಷ್ಣನು, ಮಾಂ-ನನ್ನನ್ನು, ಸ್ವಪುರಂ-ತನ್ನ ನಗರವನ್ನು, ನಿನ್ಯೇ-ಹೊಂದಿಸಿದನೋ, ತಸ್ಯ-ಆ ಕೃಷ್ಣನ, ಅಂಘ್ರ್ಯವನೇಜನತ್ವಂ-ಕಾಲುಗಳನ್ನು ತೊಳೆಯುವಳಾಗುವಿಕೆ, ಮೇ-ನನಗೆ, ಅನುಭವಂ-ಪ್ರತಿಜನ್ಮದಲ್ಲಿಯೂ, ಅಸ್ತು-ಆಗಲಿ ॥೧೨॥ ಸತ್ಯಾದೇವಿ॥ ಕ್ಷಿತಿಪವೀರ್ಯಪರೀಕ್ಷಣಾಯ-ಅರಸುಗಳ ಶಕ್ತಿಯನ್ನು ಪರೀಕ್ಷಿಸಲೋಸುಗ, ಪಿತ್ರಾ-ನನ್ನ ತಂದೆಯಿಂದ, ಕೃತಾನ್-ಸಂಪಾದಿಸಲ್ಪಟ್ಟಂಥಾ, ಅತಿಬಲವೀರ್ಯಸುತೀಕ್ಷ್ಣಶೃಂಗಾನ್-ಅಧಿಕಬಲವೂ ಸಾಮರ್ಥ್ಯವೂ ಕೂರಾದ ಕೊಂಬುಗಳೂ ಉಳ್ಳಂಥಾ, ವೀರದುರ್ಮದಹನಃ-ಶೂರರ ಕೊಬ್ಬನ್ನು ಹರಿಸುವಂಥಾ, ತಾನ್ ಸಪ್ತೋಕ್ಷಣಃ-ಆ ಏಳೆತ್ತುಗಳನ್ನು, ಶಿಶವಃ-ಹುಡುಗರು, ಅಜತೋಕಾನ್ ಯಥಾ-ಮೇಕೆಮರಿಗಳ

---

ದಿವಸಂಗಳ ಪರ್ಯಂತರವೂ ಯುದ್ಧವಂಮಾಡಿ ಪರೀಕ್ಷಿಸಿ, ಅನಂತರದಲ್ಲಿ ಶ್ರೀಕೃಷ್ಣನೇ ತನ್ನ ಸ್ವಾಮಿಯಾದ ಸೀತಾಪತಿಯೆಂದು ತಿಳಿದು ಪಾದಂಗಳಿಗೆ ಪ್ರಣಾಮಂಗೆಯ್ದು ನನ್ನ ಆ ಮಣಿಯಂಸಹ ಶ್ರೀಕೃಷ್ಣಂಗೆ ಸಮರ್ಪಿಸಿದನು. ಆಗ ನಾನು ಶ್ರೀಕೃಷ್ಣಂಗೆ ದಾಸಿಯಾದೆನು॥೧೦॥ ಆಮೇಲೆ ಕಾಳಿಂದಿ ನುಡಿಯುವಳೆಂತೆನೆ-ಎಲೆ ದ್ರೌಪದಿಯೇ ನಾನು ಶ್ರೀಕೃಷ್ಣನ ಪಾದಸ್ಪರ್ಶಾಪೇಕ್ಷೆಯಿಂ ಯಮುನಾತೀರದಲ್ಲಿ ತಪಮಂಗೆಯ್ಯುತ್ತಿರಲು ಶ್ರೀಕೃಷ್ಣನು ಮಿತ್ರನಾದ ಅರ್ಜುನನೊಡಗೂಡಿಬಂದು ನನ್ನ ಪಾಣಿಗ್ರಹಣವಂಮಾಡಿದನು. ಆ ಶ್ರೀಕೃಷ್ಣನ ಮನೆಯಲ್ಲಿ ಸಮ್ಮಾರ್ಜನಂಗೆಯ್ವ ದಾಸಿಯಾದವಳು ನಾನು ॥೧೧॥ ಆಮೇಲೆ ಭದ್ರೆನುಡಿದಳು- ಎಲೌ ದ್ರೌಪದಿಯೇ ಲಕ್ಷ್ಮೀನಿವಾಸನಾದ ಕೃಷ್ಣನು ನನ್ನ ಸ್ವಯಂವರಕ್ಕೈದಿ ಅರಸುಗಳನ್ನೂ ಅಪಕಾರಿಗಳಾದ ನನ್ನ ಸಹೋದರರನ್ನೂ ಯುದ್ಧದಲ್ಲಿ ಜಯಿಸಿ ಸಿಂಹವು ಶ್ವಾನಮಧ್ಯಗತವಾದ ತನ್ನ ಬಾಗವನ್ನು ಎಂತು ಅಪಹರಿಸುವುದೋ ಹಾಗೆ ನನ್ನನ್ನಪಹರಿಸಿಕೊಂಡು ತನ್ನ ಪುರವನೆಯ್ದಿಸಿದನು. ಆ ಶ್ರೀಕೃಷ್ಣನ ಪಾದಪ್ರಕ್ಷಾಳನಾದಿ ಸೇವೆಯೇ ನನಗೆ ಜನ್ಮಜನ್ಮದಲ್ಲಿಯೂ ದೊರೆಯಲಿ ॥೧೨॥ ಅನಂತರದಲ್ಲಿ ಸತ್ಯಾದೇವಿ ನುಡಿದಳು- ಎಲೌ ದ್ರೌಪದಿಯೇ ಮಹಾಪುರುಷನಾದ ಶ್ರೀಕೃಷ್ಣನು ಅತಿಶಯವಾದ ಬಲವೂ ಪ್ರಭಾವವೂ ತೀಕ್ಷ್ಣಂಗಳಾದ ಕೊಂಬುಗಳೂ ಉಳ್ಳವಾಗಿ ಶೂರರಾದ ಕ್ಷತ್ರಿಯರ ಬಲಗರ್ವಮಂ ಪರಿಹರಿಸುವವಾಗಿ ಕ್ಷತ್ರಿಯರ ಬಲಪರೀಕ್ಷಾರ್ಥವೇ ನಮ್ಮ ತಂದೆಯಾದ ನಗ್ನಜಿದ್ರಾಜನಿಂದ

ಕಾಃ॥೧೩॥ಯ ಇತ್ಥಂವೀರ್ಯಶುಲ್ಕಾಂಮಾಂದಾಸೀಭಿಶ್ಚತುರಂಗಿಣೀಮ್ । ಪಥಿನಿರ್ಜಿತ್ಯರಾಜನ್ಯಾನ್ನಿ
ನ್ಯೇತದ್ದಾಸ್ಯಮಸ್ತುಮೇ ॥೧೪॥ ಮಿತ್ರವಿಂದಾ ॥ ಪಿತಾಮೇಮಾತುಲೇಯಾಯಸ್ವಯಮಾಹೂಯದತ್ತ
ವಾನ್ । ಕೃಷ್ಣೇಕೃಷ್ಣಾಯತಚ್ಚಿತ್ತಾಮಕ್ಷೌಹಿಣ್ಯಾಸಖೀಜನೈಃ॥೧೫॥ಅಸ್ಯಮೇಪಾದಸಂಸ್ಪರ್ಶೋಭ
ವೇಜ್ಜನ್ಮನಿಜನ್ಮನಿ । ಕರ್ಮಭಿರ್ಭ್ರಾಮ್ಯಮಾಣಾಯಾಯೇನತಚ್ಛ್ರೇಯಆತ್ಮನಃ॥೧೬॥ ಲಕ್ಷ್ಮಣಾ ॥ಮ
ಮಾಪಿರಾಜ್ಞ್ಯಚ್ಯುತಜನ್ಮಕರ್ಮಚಶ್ರುತ್ವಾಮುಹುರ್ನಾರದಗೀತಮಾಸೀತ್ । ಚಿತ್ತಂಮುಕುಂದೇಕಿ
ಲಪದ್ಮಹಸ್ತಯಾವೃತಃ ಸುಸಮ್ಮೃಶ್ಯವಿಹಾಯಲೋಕಪಾನ್ ॥೧೭॥ ಜ್ಞಾತ್ವಾಮಮಮತಂಸಾಧ್ವಿಪಿತಾ

---

ನ್ನು ಹೇಗೋಹಾಗೆ, ಕ್ರೀಡನ್-ಆಡುತಲಿರುವನಾಗಿಯೇ, ಬಬಂಧಹ-ಕಟ್ಟಿಹಾಕಿದನಲ್ಲವೆ ॥೧೩॥ ಯಃ-ಯಾವ ಕೃಷ್ಣನು, ಇತ್ಥಂ-
ಹೀಗೆ, ವೀರ್ಯಶುಲ್ಕಾಂ-ಸಾಮರ್ಥ್ಯವೇ ಬೆಲೆಯಾಗುಳ್ಳಂಥಾ, ಮಾಂ-ನನ್ನನ್ನು, ದಾಸೀಭಿಃ-ದಾಸಿಯರೊಡನೆ, ಪಥಿ-ದಾರಿಯ
ಲ್ಲಿ, ಚತುರಂಗಿಣೀಂ-ದಂಡನ್ನೂ, ರಾಜನ್ಯಾನ್-ಅರಸುಗಳನ್ನೂ, ನಿರ್ಜಿತ್ಯ-ಗೆದ್ದು, ನಿನ್ಯೇ-ದ್ವಾರಕೆಗೆ ತಂದನೋ, ತದ್ದಾಸ್ಯಂ-
ಆ ಕೃಷ್ಣನ ಸೇವೆಯು, ಮೇ-ನನಗೆ, ಅಸ್ತು-ಆಗಲಿ ॥೧೪॥ ಮಿತ್ರವಿಂದೆ॥ ಕೃಷ್ಣೇ-ದ್ರೌಪದಿಯೇ, ಮೇ ಪಿತಾ-ನನ್ನ ತಂದೆಯು,
ತಚ್ಚಿತ್ತಾಂ-ಅವನಲ್ಲಿ ಮನಸ್ಸುಳ್ಳಂಥಾ, ಸಖೀಜನೈಃ-ಗೆಳತಿಯರೊಡನೆಯೂ, ಅಕ್ಷೌಹಿಣ್ಯಾ-ಸೈನ್ಯದೊಡನೆಯೂ, ಕೂಡಿದಂಥಾ,
ಮಾಂ-ನನ್ನನ್ನು, ಮಾತುಲೇಯಾಯ-ಸೋದರಮಾವನ ಮಗನಾದ, ಕೃಷ್ಣಾಯ-ವಾಸುದೇವಂಗೆ, ಸ್ವಯಮಾಹೂಯ- ತಾನೆ ಕರೆ
ದು, ದತ್ತವಾನ್-ಕೊಟ್ಟವನಾದನು ॥೧೫॥ ಯೇನ-ಯಾವುದರಿಂದ, ಆತ್ಮನಃ-ಜೀವಂಗೆ, ತತ್-ಅದು, ಶ್ರೇಯಃ-ಸುಕೃತವಾಗಿ
ರುವುದೋ, ಕರ್ಮಭಿಃ-ಪುಣ್ಯಪಾಪಂಗಳಿಂದ, ಭ್ರಾಮ್ಯಮಾಣಾಯಾಃ-ಸಂಸಾರದಲ್ಲಿ ತಿರುಗುತಲಿರುವ, ಮೇ-ನನಗೆ, ಜನ್ಮಜ
ನ್ಮನಿ-ಪ್ರತಿಜನ್ಮದಲ್ಲಿಯೂ, ಅಸ್ಯ-ಈ ಕೃಷ್ಣನ, ಪಾದಸಂಸ್ಪರ್ಶಃ-ಆ ಕಾಲುಗಳನ್ನು ಸೋಂಕುವಿಕೆಯು, ಭವೇತ್-ಆಗಲಿ॥
ಲಕ್ಷ್ಮಣೆಯು॥ ರಾಜ್ಞಿ-ಪಾಂಡವರರಸಿಯೇ । ಯಃ-ಯಾವ ಕೃಷ್ಣನು, ಪದ್ಮಹಸ್ತಯಾ-ಕಮಲವು ಕೈಯಲ್ಲಿರುವ ಲಕ್ಷ್ಮಿಯಿಂದ, ವಿ
ಮೃಶ್ಯ-ವಿಚಾರಮಾಡಿ, ಲೋಕಪಾನ್-ಇಂದ್ರಾದಿಗಳನ್ನು, ವಿಹಾಯ-ಬಿಟ್ಟು, ವೃತಃ-ಗಂಡನೆಂದು ವರಿಸಲ್ಪಟ್ಟನೋ ಮು
ಹುಃ-ಬಾರಿಬಾರಿಗೂ, ನಾರದಗೀತಂ-ನಾರದಮುನಿಯಿಂದ ಹಾಡಲ್ಪಟ್ಟ, ಅಚ್ಯುತಜನ್ಮ-ಕೃಷ್ಣನ ಅವತಾರವನ್ನೂ, ಕರ್ಮ ಚ-
ಕಾರ್ಯವನ್ನೂ, ಶ್ರುತ್ವಾ-ಕೇಳಿ, ಮಮಾಪಿ ಚಿತ್ತಂ-ನನ್ನ ಮನಸ್ಸೂ ಕೂಡ, ತಸ್ಮಿನ್ ಮುಕುಂದೇ, ಆ ಕೃಷ್ಣನಲ್ಲಿ, ಅಸೀತ್ಕಿಲ-
ಆಯಿತಲ್ಲವೆ ॥೧೭॥ ಸಾಧ್ವೀ-ಪತಿವ್ರತೆಯಾದ ದ್ರೌಪದಿಯೇ. ದುಹಿತೃವತ್ಸಲಃ-ಮಗಳಲ್ಲಿ ದಯೆಯುಂಟಾದವನಾದ, ಬೃಹತ್ಸೇನ
ಇತಿಖ್ಯಾತಃ-ಬೃಹತ್ಸೇನನೆಂದು ಪ್ರಸಿದ್ಧನಾದ, ಮಮ ಪಿತಾ-ನನ್ನ ತಂದೆಯು, ಮಮ ಮತಂ-ನನ್ನ ಅಭಿಪ್ರಾಯವನ್ನು ಜ್ಞಾತ್ವಾ-
ತಿಳಿದು, ತತ್ರ-ಆ ವಿಷಯದಲ್ಲಿ, ಉಪಾಯಂ-ಯುಕ್ತಿಯನ್ನು, ಅಚೀಕರತ್-ಮಾಡಿದನು ॥೧೮॥ ರಾಜ್ಞಿ- ಪಾಂಡವರ ಅರಸಿಯೇ,

---

ಪ್ರೋಷಿತಂಗಳಾದ ೭ ಮಹಾವೃಷಭಂಗಳಂ ಲೀಲೆಯಿಂದ ಕಟ್ಟಿ ಕ್ಷತ್ರಿಯರಂ ಜಯಿಸಿ ॥೧೩॥ ಶೌರ್ಯಶುಲ್ಕಳಾ
ದನನ್ನಂ ಅನೇಕಗಜಾಶ್ವಪದಾತಿಗಳೊಡನೆ ಅನೇಕದಾಸಿಯರೊಡನೆಯುಂ ತನ್ನ ಪುರಕ್ಕೆ ಕರದೊಯ್ದನು. ಅಂತಾ
ಶ್ರೀ ಕೃಷ್ಣನ ದಾಸಿಯನ್ನಾಗಿ ನನ್ನಂ ತಿಳಿಯುವಳಾಗು ॥೧೪॥ ಅನಂತರದಲ್ಲಿ ಮಿತ್ರವಿಂದೆಯು ನುಡಿದಳೆಂತೆನೆ
ಕೇಳು, ದ್ರೌಪದಿಯೇ, ತನ್ನ ತಂದೆಯು ಸೋದರಮಾವನ ಮಗನಾದ ಶ್ರೀ ಕೃಷ್ಣನಂ ತಾನೇ ಕರೆಯಿಸಿ ಚ
ತುರಂಗ ಬಲದೊಡನೆಯೂ ದಾಸಿಯರೊಡನೆಯೂ ಶ್ರೀ ಕೃಷ್ಣ ಪಾದಾಬ್ಜದಿಂದ ಭಕ್ತಳಾದ ನನ್ನಂ ಶ್ರೀ ಕೃಷ್ಣಂ
ಗರ್ಪಿಸಿದನು ॥೧೫॥ ಕರ್ಮವಶದಿಂದ ನಾನಾಜನ್ಮಗಳಲ್ಲಿ ಸುತ್ತಿ ಬಳಲುವನನಗೆ ಇದೇ ಸರ್ವಾಧಿಕಶ್ರೇಯಃಪ್ರಾಪ್ತಿ
ಯು. ಅಂತಾ ಕೃಷ್ಣನ ಪಾದಸ್ಪರ್ಶವು ಪ್ರತಿಜನ್ಮದಲ್ಲಿಯೂ ನನಗುಂಟಾಗಲಿ ॥೧೬॥ ಆಮೇಲೆ ಲಕ್ಷಣಾದೇವಿನು
ಡಿದಳೆಂತೆನೆ- ಕೇಳು ದ್ರೌಪದಿಯೇ ನಾನು ಲೋಕಪಾಲಕರಂ ಬಿಟ್ಟು ನಾರದಮುನಿಯಿಂ ಗಾನಂ ಗೆಯ್ಯಲ್ಪಟ್ಟ
ಶ್ರೀ ಕೃಷ್ಣನ ಆವಿರ್ಭಾವವನೂ, ಆತನ ಲೀಲೆಗಳನ್ನೂ ಕೇಳಿ, ಸಾಕ್ಷಾಲ್ಲಕ್ಷ್ಮಿಯಿಂದ ವೀಕ್ಷಿಸಲ್ಪಟ್ಟ ಶ್ರೀ ಕೃಷ್ಣ
ಲ್ಲಿ ವಿಂದಾದೇವಿಗೆ ಹೇಗೋ ಹಾಗೆ ನನ್ನ ಮನಸ್ಸು ಆಸಕ್ತವಾಯಿತು ॥೧೭॥ ಆಮೇಲೆ ಬೃಹತ್ಸೇನನೆಂಬ ನನ್ನ ತಂದೆಯು
ನನ್ನಭಿಪ್ರಾಯವನು ತಿಳಿದು ಪುತ್ರೀವಾತ್ಸಲ್ಯದಿಂದ ನನಗೆ ಕೃಷ್ಣನ ಪಾದಸೇವೆ ದೊರೆಯುವುದಕ್ಕೆ ಉಪಾಯ

ದುಹಿತೃವತ್ಸಲಃ । ಬೃಹತ್ಸೇನ ಇತಿ ಖ್ಯಾತಸ್ತತ್ರೋಪಾಯಮಚೀಕರತ್ ॥೧೮॥ ಯಥಾ ಸ್ವಯಂವರೇ ರಾ
ಜ್ಞಿ ಮತ್ಸ್ಯಃ ಪಾರ್ಥೇಪ್ಸಯಾ ಕೃತಃ । ಅಯಂ ತು ಬಹಿರಾಚ್ಛನ್ನೋ ದೃಶ್ಯತೇ ಸ ಜಲೇ ಪರಮ್ ॥೧೯॥ ಶ್ರುತ್ವೈ
ತತ್ಸರ್ವತೋ ಭೂಪಾ ಆಯಯುರ್ಮತ್ಪಿತುಃ ಪುರಮ್ । ಸರ್ವಾಸ್ತ್ರಶಸ್ತ್ರತತ್ತ್ವಜ್ಞಾಃ ಸೋಪಾಧ್ಯಾಯಾ
ಸ್ಸಹಸ್ರಶಃ ॥೨೦॥ ಪಿತ್ರಾ ಸಂಪೂಜಿತಾಸ್ಸರ್ವೇ ಯಥಾವೀರ್ಯಂ ಯಥಾವಯಃ । ಆದದುಸ್ಸಶರಂ ಚಾಪಂ
ವೇದ್ಧುಂ* ಪರಿಷದಿ ಮದ್ಧಿಯಃ ॥೨೧॥ ಆದಾಯ ವ್ಯಸೃಜನ್ಕೇಚಿತ್ಸಜ್ಯಂ ಕರ್ತುಮನೀಶ್ವರಾಃ । ಆಕೋಟಿ
ಜ್ಯಾಂ ಸಮಾಕೃಷ್ಯ ಪೇತುರೇಕೇಽಮುನಾಹತಾಃ ॥೨೨॥ ಸಜ್ಯಂ ಧೃತ್ವಾಪರೇ ವೀರಾ ಮಾಗಧಾವಂತಿಚೇದಿಪಾಃ ।

---

ಸ್ವಯಂವರೇ-ನಿನ್ನ ಮದುವೆಯಲ್ಲಿ, ಪಾರ್ಥೇಪ್ಸಯಾ-ಅರ್ಜುನನಂ ಪಡೆಯಲಪೇಕ್ಷೆಯಿಂದ, ಯಥಾ-ಹೇಗೆ, ಮತ್ಸ್ಯಃ-ಮೀನಿನಂಥ ಯಂ
ತ್ರವು, ಕೃತಃ-ಮಾಡಲ್ಪಟ್ಟಿತೋ, ತಥಾ-ಹಾಗೆಯೇ ನನ್ನ ಮದುವೆಯಲ್ಲಿಯೂ ಮಾಡಲ್ಪಟ್ಟಿತು ಸಃ-ಆ ನಿನ್ನ ಮದುವೆಯ ಮತ್ಸ್ಯ
ಯಂತ್ರವು, ಬಹಿರಾಚ್ಛನ್ನಃ-ಹೊರಗೆ ಮಾತ್ರವೇ ಮುಚ್ಚಲ್ಪಟ್ಟದ್ದಾಗಿರುವುದು. ಅಯಂತು-ಈ ನನ್ನ ಮದುವೆಯ ಮತ್ಸ್ಯ
ಯಂತ್ರವಾದರೋ, ಜಲೇ ಪರಂ ದೃಶ್ಯತೇ-ನೀರಿನಲ್ಲಿ ಮಾತ್ರವೇ ಕಾಣಿಸುವುದು ॥೧೯॥ ಏತಚ್ಛ್ರುತ್ವಾ-ಇದನ್ನು ಕೇಳಿ, ಸರ್ವ
ತಃ-ಎಲ್ಲಾ ಕಡೆಗಳಿಂದಲೂ, ಸರ್ವಾಸ್ತ್ರಶಸ್ತ್ರತತ್ತ್ವಜ್ಞಾಃ-ಸಕಲಾಯುಧಂಗಳ ರಹಸ್ಯಗಳನ್ನರಿತವರೂ, ಸೋಪಾಧ್ಯಾಯಾಃ ಪು
ರೋಹಿತರಿಂ ಸಹಿತರೂ ಆದ, ಭೂಪಾಃ-ಅರಸುಗಳು, ಸಹಸ್ರಶಃ-ಬಹುವಾಗಿ, ಮತ್ಪಿತುಃ-ನನ್ನ ತಂದೆಯ, ಪುರಮಾಯಯುಃ-ನ
ಗರದ ಬಳಿಗೆ ಬಂದರು ॥೨೦॥ ಸರ್ವೇ-ಎಲ್ಲರೂ, ಪಿತ್ರಾ-ನನ್ನ ತಂದೆಯಿಂದ, ಸಂಪೂಜಿತಾಃ-ಉಪಚರಿಸಲ್ಪಟ್ಟವರಾಗಿ, ಮದ್ಧಿ
ಯಃ-ನನ್ನಲ್ಲಿ ಮನಸ್ಸುಳ್ಳವರಾದ್ದರಿಂದ, ಪರಿಷದಿ-ಸಭೆಯಲ್ಲಿ, ವೇದ್ಧುಂ-ಮತ್ಸ್ಯಯಂತ್ರವಂ ಭೇದಿಸಲೋಸುಗ, ಸಶರಂ-
ಬಾಣಸಹಿತವಾದ, ಚಾಪಂ-ಬಿಲ್ಲನ್ನು, ಯಥಾವೀರ್ಯಂ-ತಮ್ಮ ಶಕ್ತಿಯಿದ್ದಂತೆಯೂ, ಯಥಾವಯಃ-ಪ್ರಾಯಕ್ಕೆ ತಕ್ಕಂತೆಯೂ,
ಆದದುಃ-ಎತ್ತಿಕೊಂಡರು ॥೨೧॥ ಕೇಚಿತ್-ಕೆಲವರು, ಆದಾಯ-ಎತ್ತಿಕೊಂಡು, ಸಜ್ಯಂ ಕರ್ತುಂ-ಹೆದೆಯಿಂದ ಸಹಿತವನ್ನಾಗಿ ಮಾ
ಡುವುದಕ್ಕೆ, ಅನೀಶ್ವರಾಃ-ಅಸಮರ್ಥರಾದ್ದರಿಂದ, ವ್ಯಸೃಜನ್-ಬಿಟ್ಟುಬಿಟ್ಟರು. ಏಕೇ-ಕೆಲವರು, ಆಕೋಟಿ-ಬಿಲ್ಲಿನ ತುದಿಯವ
ರೆಗೂ, ಜ್ಯಾಂ-ಹೆದೆಯನ್ನು, ಸಮಾಕೃಷ್ಯ-ಎಳೆದು, ಅಮುನಾ-ಈ ಬಿಲ್ಲಿನಿಂದ, ಆಹತಾಃ-ಬಡಿಯಲ್ಪಟ್ಟವರಾಗಿ, ಪೇತುಃ-ಬಿದ್ದ
ರು ॥೨೨॥ ಅಪರೇ-ಇತರರಾದ, ವೀರಾಃ-ಶೂರರಾದ, ಮಾಗಧಾವಂತಿಚೇದಿಪಾಃ-ಜರಾಸಂಧನು ಅವಂತೀರಾಯನು, ಶಿಶುಪಾಲ
ನು, ಭೀಮನು ದುರ್ಯೋಧನನು ಕರ್ಣನೂ, ಸಜ್ಯಂ-ಹೆದೆಯಿಂದ ಸಹಿತವಾದ್ದನ್ನಾಗಿ ಮಾಡಿ, ಧೃತ್ವಾ-ಎತ್ತಿಕೊಂಡು, ತದವ
ಸ್ಥಿತಿಂ-ಆ ಲಕ್ಷ್ಯವಿರುವ ನೆಲೆಯನ್ನು, ನಾವಿದನ್-ಅರಿತುಕೊಳ್ಳದೆ ಹೋದರು ॥೨೩॥ ಪಾರ್ಥಃ-ಅರ್ಜುನನು, ಜಲೇ-ನೀರಿನಲ್ಲಿ, ಮ

---

ವಂ ಕಲ್ಪಿಸಿದನು ॥೧೮॥ ನಿನ್ನ ತಂದೆಯಾದ ದ್ರುಪದರಾಯನು ಅರ್ಜುನನಂ ನಿನಗೆ ಪತಿಯನ್ನಾಗಿ ಮಾಡಲಿಚ್ಛೆ
ಯಿಂದ ಮತ್ಸ್ಯಯಂತ್ರವಂ ಕಲ್ಪಿಸಿದಂತೆ ನನ್ನ ತಂದೆಯೂ ಮತ್ಸ್ಯಯಂತ್ರವಂ ಮಾಡಿಸಿದನು. ಆಯಂತ್ರಕ್ಕೂ
ಈಯಂತ್ರಕ್ಕೂ ಭೇದವೇನೆಂದರೆ- ಅಲ್ಲಿ ಮತ್ಸ್ಯವು ಹೊರಗೆ ಮುಚ್ಚಲ್ಪಟ್ಟಿರುವುದು, ಇದಾದರೋ ಹೊರಗೊ
ಳಗೆ ಸಹ ಮುಚ್ಚಲ್ಪಟ್ಟು ಕೆಳಗಿರುವ ಕುಂಭಜಲದಲ್ಲಿ ಕಾಣಲ್ಪಡುವ ಪ್ರತಿಬಿಂಬವಂ ನೋಡಿ ಮೇಲಣ ಮತ್ಸ್ಯವಂ
ಕೆಡಹಲ್ತಕ್ಕದ್ದು. ಇಷ್ಟು ಸಾಹಸವು ಶ್ರೀಕೃಷ್ಣನಂ ಹೊರತು ಅನ್ಯರಿಗೆ ಸಾಧ್ಯವಲ್ಲವು ॥೧೯॥ ಈ ಸುದ್ದಿಯಂ
ಕೇಳಿ ಸಮಸ್ತ ಶಸ್ತ್ರಾಸ್ತ್ರ ವಿದ್ಯಾಪಾರಂಗತರಾದ ಅಸಂಖ್ಯಾತರಾದ ಅರಸುಗಳು ತಮ್ಮ ತಮ್ಮ ಪುರೋಹಿತರಿಂ
ಸಹಿತರಾಗಿ ನಂಮ ತಂದೆಯ ಪಟ್ಟಣವನೈದಿದರು ॥೨೦॥ ಬಂದಂತಾ ಅರಸುಗಳು ಅವರವರ ವಯೋವಿದ್ಯಾನು
ಸಾರವಾಗಿ ನಮ್ಮ ತಂದೆಯಿಂದ ಪೂಜಿಸಲ್ಪಟ್ಟು ನನ್ನಲ್ಲಾಸಕ್ತವಾದ ಚಿತ್ತವುಳ್ಳವರಾಗಿ ಆ ಮತ್ಸ್ಯವಂ ಕೆಡಹಲೋ
ಸುಗ ಧನುರ್ಬಾಣಂಗಳಂ ಧರಿಸಿದರು ॥೨೧॥ ಕೆಲವರರಸುಗಳು ಆ ಧನುಸ್ಸಂ ಕೈಯಲ್ಲಿ ಹೆದೆಯನೇರಿಸುವುದಕ್ಕೆ
ಅಸಮರ್ಥರಾಗಿ ಬಿಟ್ಟರು. ಕೆಲವರು ಆ ಧನುಸ್ಸಂ ಬಗ್ಗಿಸಿ ಚಿಮ್ಮಲ್ಪಟ್ಟು ಬಿದ್ದರು ॥೨೨॥ ಇಂತಾ ಜರಾಸಂಧನು
ಅಂಬಷ್ಠ ಶಿಶುಪಾಲರೂ, ಬಿಲ್ಲ ಕೊಪ್ಪಿನವರೆಗೂ ಹೆದೆಯಂ ಸೆಳೆದು ಬಗ್ಗಿಸಿ ಆ ಬಿಲ್ಲಿನಿಂದ ಚಿಮ್ಮಲ್ಪಟ್ಟವರಾಗಿ ನೆಲ
ದಲ್ಲಿ ಬಿದ್ದರು. ಭೀಮನು ದುರ್ಯೋಧನನು ಕರ್ಣನೂ ಧನುಸ್ಸಿಗೆ ಹೆದೆಯನೇರಿಸಿ ಆ ಗುರಿಯಂ ಕಾಣಲಾರದೆ ಹೋ

ಭೀಮೋದುರ್ಯೋಧನಃಕರ್ಣೋನಾವಿದಂಸ್ತದವಸ್ಥಿತಿಮ್॥೨೩॥ ಮತ್ಸ್ಯಾಭಾಸಂಜಲೇವೀಕ್ಷ್ಯಜ್ಞಾತ್ವಾ
ಚತದವಸ್ಥಿತಮ್ । ಪಾರ್ಥೋಯತ್ತೋಽಸೃಜದ್ಬಾಣಂನಾಚ್ಛಿನತ್ಪಸ್ಪೃಶೇಪರಮ್ ॥೨೪॥ರಾಜನ್ಯೇಷುನಿ
ವೃತ್ತೇಷುಭಗ್ನಮಾನೇಷುಮಾನಿಷು । ಭಗವಾನ್ಧನುರಾದಾಯಸಜ್ಜಂಕೃತ್ವಾಥಲೀಲಯಾ ॥೨೫॥ತ
ಸ್ಮಿನ್ಸಂಧಾಯವಿಶಿಖಂಮತ್ಸ್ಯಂವೀಕ್ಷ್ಯಸಕೃಜ್ಜಲೇ । ಛಿತ್ತ್ವೇಷುಣಾಪಾತಯತ್ತಂಸೂರ್ಯೇಚಾಭಿಜಿತಿ
ಸ್ಥಿತೇ ॥೨೬॥ ದಿವಿದುಂದುಭಯೋನೇದುರ್ಜಯಶಬ್ದಯುತಾಭುವಿ ।ದೇವಾಶ್ಚಕುಸುಮಾಸಾರಂಮುಮು
ಚುರ್ಹರ್ಷವಿಹ್ವಲಾಃ ॥೨೭॥ ತದ್ರಂಗಮಾವಿಶಮಹಂಕಲನೂಪುರಾಭ್ಯಾಂಪದ್ಭ್ಯಾಂಪ್ರಗೃಹ್ಯಕನ
ಕೋಜ್ಜ್ವಲರತ್ನಮಾಲಾಮ್ ।ನೂತ್ನೇನಿವೀಯಪರಿಧಾಯಚಕೌಶಿಕಾಗ್ರ್ಯೇಸವ್ರೀಡಹಾಸವದನಾಕಬ
ರೀಧೃತಸ್ರಕ್॥೨೮॥ ಉನ್ನೀಯವಕ್ತ್ರಮುರುಕುಂತಲಕುಂಡಲತ್ವಿಡ್ಗಂಡಸ್ಥಲಂಶಿಶಿರಹಾಸಕಟಾ

---

ಮತ್ಸ್ಯಾಭಾಸಂ-ಮೀನಿನಂತೆ ಕಾಣುವನೆರಳನ್ನು,ವೀಕ್ಷ್ಯ-ನೋಡಿ, ತದವಸ್ಥಿತಿಂ-ಮೇಲೆ ಅದುಇರುವಸ್ಥಾನವನ್ನು, ಜ್ಞಾತ್ವಾಚ-ತಿಳಿ
ದುಕೊಂಡ, ಯತ್ತಃ-ಯತ್ನವುಳ್ಳವನಾಗಿ, ಬಾಣಂ-ಅಂಬನ್ನು, ಅಸೃಜತ್-ಎಚ್ಚನು ನಾಚ್ಛಿನತ್-ಮತ್ಸ್ಯವನ್ನು ಛೇದಿಸಲಿಲ್ಲವು,
ಪಸ್ಪೃಶೇಪರಂ-ಪರಂತುತಗುಲಿತು ॥೨೪॥ ಮಾನಿಷು-ಗರ್ವವುಳ್ಳವರಾದ, ರಾಜನ್ಯೇಷು-ಪಟ್ಟಾಭಿಷಿಕ್ತರಾದ ಅರಸರು, ಭಗ್ನ
ಮಾನೇಷು-ಮುರಿದ ಹೆಮ್ಮೆಯುಳ್ಳವರಾಗಿ, ನಿವೃತ್ತೇಷುಸತ್ಸು- ಬಿಟ್ಟುಹಿಮ್ಮೆಟ್ಟಿದವರಾಗುತಲೂ, ಅಥ-ಆ ಬಳಿಕ,ಭಗವಾನ್-
ಕೃಷ್ಣನು, ಧನುಃ-ಬಿಲ್ಲನ್ನು, ಆದಾಯ-ತೆಕೊಂಡು, ಲೀಲಯಾ-ವಿಲಾಸದಿಂದ, ಸಜ್ಯಂಕೃತ್ವಾ-ಹೆದೆಯನ್ನೇರಿಸಿ॥೨೫॥ತಸ್ಮಿನ್-
ಆ ಬಿಲ್ಲಿನಲ್ಲಿ, ವಿಶಿಖಂ-ಬಾಣವನ್ನು, ಸಂಧಾಯ-ಜೋಡಿಸಿ, ಜಲೇ-ನೀರಿನಲ್ಲಿ, ಮತ್ಸ್ಯಂ-ಮೀನನ್ನು, ಸಕೃತ್-ಒಂದುಸಲ, ವೀ
ಕ್ಷ್ಯ-ನೋಡಿ, ಇಷುಣಾ-ಬಾಣದಿಂದ, ಛಿತ್ತ್ವಾ-ಕತ್ತರಿಸಿ, ಸೂರ್ಯೇ-ಆದಿತ್ಯನು, ಅಭಿಜಿತಿಸ್ಥಿತೇ-ಮಧ್ಯಾಹ್ನದಲ್ಲಿರುವಲ್ಲಿ, ತಂ-
ಆ ಮತ್ಸ್ಯಯಂತ್ರವನ್ನು, ಅಪಾತಯತ್-ಬೀಳಿಸಿದನು ॥೨೬॥ ದಿವಿ-ಅಂತರಿಕ್ಷದಲ್ಲಿ, ದೇವದುಂದುಭಯಃ-ದೇವಪರ್ವಭೇರಿ
ಗಳೂ, ಭುವಿಪುನಃ-ನೆಲದಲ್ಲಿ ಅದರೋ, ಜಯಶಬ್ದಃ-ಸರ್ವೋತ್ತಮವಾಗಿರೆಂಬ ನುಡಿಯೂ, ನೇದುಃ-ಧ್ವನಿ ಕೇಳಿಸಿದವು. ದೇವಾ
ಶ್ಚ-ದೇವರ್ಕಳಾದರೋ. ಹರ್ಷವಿಹ್ವಲಾಃ-ಸಂತೋಷಕ್ಕೆ ವಶರಾಗಿ,ಕುಸುಮಾಸಾರಂ-ಹೂವಿನ ಜಡಿಮಳೆಯನ್ನು, ಮುಮುಚುಃ-
ಸುರಿದರು ॥೨೭॥ ಅಹಂ-ನಾನು, ಕಲನೂಪುರಾಭ್ಯಾಂ-ಮಧುರವಾಗಿ ಮೊಳಗುವಕಡಗಂಗಳುಳ್ಳ, ಪದ್ಭ್ಯಾಂ- ಕಾಲುಗಳಿಂ ನ
ಡೆದವಳಾಗಿ, ಕನಕೋಜ್ಜ್ವಲರತ್ನಮಾಲಾಂ-ಬಂಗಾರದಿಂಬೆಳಗುವ ಮಣಿಹಾರವನ್ನು,ಪ್ರಗೃಹ್ಯ-ತೆಕ್ಕೊಂಡು, ನೂತ್ನೇ-ಹೊಸತಾ
ದ, ಕೌಶಿಕಾಗ್ರ್ಯೇ-ಶ್ರೇಷ್ಠವಾದ ಪಟ್ಟೆವಾಳೆವಸ್ತ್ರಗಳನ್ನು, ನಿವೀಯಪರಿಧಾಯಚ-ಉಟ್ಟುಮೇಲ್ಮುಸುಕಿಟ್ಟು, ಸವ್ರೀಡಹಾ
ಸವದನಾ-ನಾಚಿಕೆಯಿಂದಲೂ ನಗೆಯಿಂದಲೂ ಸಹಿತವಾದಮುಖವುಳ್ಳವಳೂ, ಕಬರೀಧೃತಸ್ರಕ್-ತುರುಬಿನಲ್ಲಿ ತುಂಬಲ್ಪಟ್ಟಪು
ಷ್ಪಸರಂಗಳುಳ್ಳವಳೂ, ಆದ, ಅಹಂ-ನಾನು, ತದ್ರಂಗಂ-ಆ ಸಭಾಮಧ್ಯವನ್ನು, ಆವಿಶಂ-ಹೊಕ್ಕವಳಾದೆನು ॥೨೮॥ಉರುಕುಂ

---

ದರು ॥೨೩॥ ಅರ್ಜುನನಾದರೋ ಜಲದಲ್ಲಿ ಮತ್ಸ್ಯಪ್ರತಿಬಿಂಬವನ್ನೋಡಿ ಬಾಣಪ್ರಯೋಗವಂ ಮಾಡಿದನು. ಆ
ಬಾಣಂಗಳು ಆಲಕ್ಷ್ಯವನ್ನೂ ಸೋಂಕಿದವು.ಆದರೂ ಆಮತ್ಸ್ಯವೂ ಕೆಡಹಲಾರದೆ ಹೋದನು॥೨೪॥ಈರೀತಿಯಿಂ
ದ ಸಮಸ್ತರಾದ ಅರಸುಗಳೂ ಅವಮಾನವನೆಯ್ದಿ ಹಿಂದಕ್ಕೆ ತಿರುಗುತಲೂ ಭಗವಂತನಾದ ಶ್ರೀಕೃಷ್ಣನು ಲೀಲೆ
ಯಿಂದ ಧನುಸ್ಸಿಗೆ ಹೆದೆಯನ್ನೇರಿಸಿ ಒಂದೇ ಬಾಣವಂ ತೊಟ್ಟು ಒಂದೇಸಲದಲ್ಲಿ॥೨೫॥ ಜಲದಲ್ಲಿ ಮತ್ಸ್ಯವಂನೋಡಿ
ಅಭಿಜಿನ್ನಾಮಕವಾದ ಸರ್ವಾರ್ಥಸಾಧಕ ಮುಹೂರ್ತದಲ್ಲಿ ಸೂರ್ಯನಿರುವ ಹೊತ್ತಿನೊಳು ಲಕ್ಷ್ಯವಂ ಕತ್ತರಿ
ಸಿ ಕೆಡಹಿದನು ॥೨೬॥ ಆಶಬ್ದದೊಡನೆ ದೇವದುಂದುಭಿಗಳೂ ಮೊಳಗಿದವು. ಸಂತೋಷಭರಿತರಾದ ದೇವತೆಗಳು
ಪುಷ್ಪವರ್ಷವಂಕರೆದರು ॥೨೭॥ ಆಸಮಯದಲ್ಲಿ ನಾನಾವಿಧ ಪುಷ್ಪಮಾಲೆಗಳಿಂದಲಂಕೃತವಾದ ತುರುಬುಳ್ಳವಳಾ
ಗಿ ಲಜ್ಜೆಯಿಂ ಕೂಡಿರುವ ಮುಗುಳುನಗೆಯಿಂ ಶೋಭಿಸುವ ಮುಖಪದ್ಮವುಳ್ಳವಳಾಗಿ, ನೂತನಂಗಳಾದ ದಿವ್ಯದು
ಕೂಲಂಗಳನ್ನುಟ್ಟುಹೊದ್ದುಕೊಂಡು ಅವ್ಯಕ್ತಮಧುರವಾಗಿ ಧ್ವನಿಗೆಯ್ವ ಕಾಲಂದುಗೆಗಳಿಂದ ಮೆಲ್ಲಮೆಲ್ಲನೆ ಅಡಿ
ಗಳನಿಡುತ ಸುವರ್ಣಮಯವಾದರತ್ನಮಾಲೆಯಂ ಕೈಗಳಿಂಧರಿಸಿಆಸ್ವಯಂವರಮಂಟಪವಂ ಪ್ರವೇಶಿಸಿದನು॥೨೮॥

ಕ್ಷನೋಕ್ಷೈಃ । ರಾಜನ್ಯಾನ್ನಿರೀಕ್ಷ್ಯ ಪರಿತಶ್ಶನಕೈರ್ಮುರಾರೇರಂಸೇನುರಕ್ತಹೃದಯಾನಿದಧೇಸ್ಮಮಾಲಾ
ಮ್ ॥೨೯॥ ತಾವನ್ಮೃದಂಗಪಟಹಾಶ್ಶಂಖಭೇರ್ಯಾನಕಾದಯಃ । ನಿನೆದುರ್ನಟನರ್ತಕ್ಯೋನನೃತುರ್ಗಾ
ಯಕಾಜಗುಃ ॥೩೦॥ ಏವಂವೃತೇಭಗವತಿಮಯೇಶೇನೃಪಯೂಥಪಾಃ । ನಸೇಹಿರೇಯಾಜ್ಞಸೇನಿಸ್ಪರ್ಧಂತೋ
ಹೃಚ್ಛಯಾತುರಾಃ ॥೩೧॥ ಮಾಂತಾವದ್ರಥಮಾರೋಪ್ಯಹಯರತ್ನಚತುಷ್ಟಯಮ್ । ಶಾರ್ಙ್ಗಮುದ್ಯ
ಮ್ಯಸನ್ನದ್ಧಸ್ತಸ್ಥಾವಾಜೌಚತುರ್ಭುಜಃ ॥೩೨॥ ದಾರುಕಶ್ಚೋದಯಾಮಾಸಕಾಂಚನೋಪಸ್ಕರಂರ
ಥಮ್ । ಮಿಷತಾಂಭೂಭುಜಾಂರಾಜ್ಞಿಮೃಗಾಣಾಂಮೃಗರಾಡಿವ ॥೩೩॥ ತೇನ್ವಸಜ್ಜಂತರಾಜನ್ಯಾನಿ

---

ತಲಕುಂಡಲತ್ವಿಡ್ಗಂಡಸ್ಥಲಂ-ಅತಿಶಯವಾದ ಕುರುಳ್ಗಳ ಮತ್ತು ಓಲೆಗಳ ಹೊಳಪಿನಿಂ ಕೂಡಿದ ಕೆನ್ನೆಗಳುಳ್ಳ, ವಕ್ತ್ರಂ-ಮುಖವ
ನ್ನು, ಉನ್ನೀಯ-ಎತ್ತಿ, ಶಿಶಿರಹಾಸ ಕಟಾಕ್ಷಮೋಕ್ಷೈಃ-ತಣ್ಣನೆನಗೆಯುಳ್ಳ ಕುಡಿನೋಟಗಳ ಪ್ರಸರಣಗಳಿಂದ, ಪರಿತಃ-ಎಲ್ಲಾ
ಕಡೆಯಲ್ಲಿಯೂ, ರಾಜನ್ಯಾನ್-ಧೊರೆಗಳನ್ನು, ನಿರೀಕ್ಷ್ಯ-ನೋಡಿ, ಶನಕೈಃ-ಮೆಲ್ಲನೆ, ಮುರಾರೇಃ-ಕೃಷ್ಣನ, ಅಂಸೇ-ಭುಜದಲ್ಲಿ, ಅ
ನುರಕ್ತಹೃದಯಾ-ಆಸಕ್ತಚಿತ್ತಳಾಗಿ, ಮಾಲಾಂ-ಪೂಸರವನ್ನು, ನಿದಧೇಸ್ಮ-ಹಾಕಿದವಳಾದೆನು ॥೨೯॥ ತಾವತ್-ಅಷ್ಟರಲ್ಲಿ ಮೃ
ದಂಗಪಟಹಾಃ-ಮದ್ದಳೆಗಳೂ ತಮ್ಮಟೆಗಳೂ, ಶಂಖಭೇರ್ಯಾನಕಾದಯಃ-ಸಂಕುಗಳೂ ಬರಡೋಲುಗಳೂ ನಗಾರಿಗಳೂ, ನಿ
ನೇದುಃ-ಮೊಳಗಿದವು. ನಟನರ್ತಕ್ಯಃ-ನಟ್ಟುವರೂ ನಾಟ್ಯಗಾತಿಯರೂ, ನನೃತುಃ-ಕುಣಿದರು. ಗಾಯಕಾಃ-ಸಂಗೀತಗಾರರು,
ಜಗುಃ-ಹಾಡಿದರು ॥೩೦॥ ಏವಂ-ಹೀಗೆ, ಭಗವತಿಈಶೇ-ಈಶ್ವರನಾದ ಕೃಷ್ಣನು, ಮಯಾ-ನನ್ನಿಂದ, ವೃತೇಸತಿ- ವರಿಸಲ್ಪಟ್ಟ
ವನಾಗುತಲೂ, ನೃಪಯೂಥಪಾಃ-ರಾಜಸೇನಾಪತಿಗಳು, ಹೃಚ್ಛಯಾತುರಾಃ-ಕಾಮದಿಂದಾತುರರಾಗಿ, ಸ್ಪರ್ಧಂತಃ-ಜಗಳ
ಮಾಡುವವರಾಗುತ್ತೆ, ನಸೇಹಿರೇ-ಸೈರಿಸಲಿಲ್ಲವು ॥ ಯಾಜ್ಞಸೇನಿ-ದ್ರೌಪದಿಯೇ ॥೩೧॥ ತಾವತ್-ಅಷ್ಟರಲ್ಲಿ. ಚತುರ್ಭುಜಃ-ನಾ
ಲ್ಕುತೋಳುಗಳುಳ್ಳ ಕೃಷ್ಣನು, ಮಾಂ-ನನ್ನನ್ನು, ಹಯರತ್ನಚತುಷ್ಟಯಂ ಶ್ರೇಷ್ಠಂಗಳಾದ ನಾಲ್ಕುಕುದುರೆಗಳುಳ್ಳ, ರಥಂ-ತೇ
ರನ್ನು, ಆರೋಪ್ಯ-ಏರಿಸಿಕೊಂಡು, ಶಾರ್ಙ್ಗಂ-ಬಿಲ್ಲನ್ನು, ಉದ್ಯಮ್ಯ-ಎತ್ತಿಕೊಂಡು, ಆಜೌ-ಯುದ್ಧಕ್ಕೆ, ಸನ್ನದ್ಧಃ ಸಿದ್ಧನಾ
ಗಿ, ತಸ್ಥೌ-ನಿಂತನು ॥೩೨॥ ರಾಜ್ಞಿ-ಅರಸಿಯೇ, ಭೂಭುಜಾಂ-ಧೊರೆಗಳು, ಮಿಷತಾಂಸತಾಂ-ಚರ್ಚಿಸುವರಾಗುತ್ತಿರುವಲ್ಲಿ, ಮೃ
ಗಾಣಾಂ-ಮೃಗಂಗಳನಡುವೆ, ಮೃಗರಾಡಿವ-ಸಿಂಹದಂತೆ, ದಾರುಕಃ-ಕೃಷ್ಣನಸಾರಥಿಯು, ಕಾಂಚನೋಪಸ್ಕರಂ-ಭಂಗಾರದಸಾ
ಮಾನುಗಳುಳ್ಳ, ರಥಂ-ತೇರನ್ನು, ಚೋದಯಾಮಾಸ-ನಡೆಯಿಸಿದನು ॥೩೩॥ ಕೇಚನರಾಜನ್ಯಾಃ-ಕೆಲವರು ಧೊರೆಗಳೂ, ಪಥಿ-ದಾ

---

ಅನಂತರದಲ್ಲಿ ಮನೋಹರಂಗಳಾದಮುಂಗುರುಳುಗಳುಳ್ಳ ರತ್ನಮಯಗಳಾದ ಓಲೆಗಳಿಂ ಶೋಭಿಸುವ ಮುಖ
ವನೆತ್ತಿ, ಚಿತ್ತಸಂತಾಪವಂ ಪರಿಹರಿಸುವ ಕಡೆಗಣ್ಣನೋಟಂಗಳಿಂದ ಎಲ್ಲಕಡೆಗಳಲ್ಲಿಯೂ ಇರುವ ಅರಸುಗಳಂ
ನೋಡಿ ಮೆಲ್ಲನೆಬಂದು ಪ್ರೇಮದಿಂ ಪೂರ್ಣವಾದ ಮನಸ್ಸುಳ್ಳವಳಾಗಿ ಶ್ರೀಕೃಷ್ಣನಕಂಠದಲ್ಲಿ ಮಾಲೆಯಂ ಸಮ
ರ್ಪಿಸಿದೆನು ॥೨೯॥ ಆ ಸಮಯದಲ್ಲಿ ಮೃದಂಗ ಶಂಖಭೇರಿಗಳು ಮೊದಲಾದ ವಾದ್ಯಗಳು ಧ್ವನಿಗೆಯ್ಯುತ್ತಿರಲು
ನಟರೂ ನರ್ತಕಿಯರೂ ನರ್ತನಂಗೆಯ್ದರು ಗಾಯಕರು ಗಾನಂಗೆಯ್ದರು ॥೩೦॥ ಕೇಳು ದ್ರೌಪದಿಯೇ ಈ ರೀ
ತಿಯಲ್ಲಿ ಸರ್ವಲೋಕೇಶ್ವರನಾದ ಶ್ರೀ ಕೃಷ್ಣನಂ ವರಿಸಲು ಆ ಸಮಸ್ತರಾದ ಅರಸುಗಳೂ ಕಾಮಬಾಣ ಪೀಡಿ
ತರಾಗಿ ಸಹಿಸಲಾರದ ಕೋಪದಿಂದಿದ್ದರು ॥೩೧॥ ಆಗ ಶ್ರೀ ಕೃಷ್ಣನು ಯುದ್ಧಸನ್ನದ್ಧನಾಗಿ ಅತಿವೇಗಶಾಲಿಗಳಾ
ದ ನಾಲ್ಕು ಕುದುರೆಗಳಿಂದ ಲಂಕೃತವಾದ ರಥದಲ್ಲಿ ನನ್ನಂ ಕುಳ್ಳಿರಿಸಿ ಶಾರ್ಙ್ಗಧನುವಿಗೆ ಹೆದೆಯೇರಿಸಿ ಕೊಂಡು
ನಿಂತನು ॥೩೨॥ ಆಬಳಿಕ ಅರಣ್ಯದೊಳು ಸಮಸ್ತ ಮೃಗಂಗಳ ಮಧ್ಯದಲ್ಲಿ ಮಹಾಸಿಂಹದಂತೆ ಪರಾಕ್ರಮವಂಗೆ
ಯ್ವನಾಗಿ ಎರಡು ಭುಜಂಗಳಿಂದ ನನ್ನನಪ್ಪಿ ಕೊಂಡು ಮತ್ತೆರಡು ಭುಜಂಗಳಿಂದ ಧನುರ್ಬಾಣಂಗಳಂ ಧರಿಸಿದ
ಕೃಷ್ಣನುಯುದ್ಧಸನ್ನದ್ಧನಾದನುದಾರುಕನು ಸುವರ್ಣಮಯವಾದರಥಕ್ಕೆ ಅಶ್ವಂಗಳಂಕಟ್ಟಿನಡೆಯಿಸಿದನು. ಶ್ರೀ
ಕೃಷ್ಣನು ಸಮಸ್ತರಾದ ಅರಸುಗಳು ನೋಡುತಿರಲಾಗಿ ಸಮಸ್ತಮೃಗಂಗಳಂ ಜಯಿಸಲೋಸುಗ ಸಿಂಹದಂತೆತೆ
ರಳಿದನು ॥೩೩॥ ಆಗ ಕೆಲವರಾದ ಅರಸುಗಳು ಧನುಸ್ಸುಗಳಂಧರಿಸಿ ಯುದ್ಧಾರ್ಥವಾಗಿ ಗ್ರಾಮಸಿಂಹವನಿಟ್ಟಿ...

ಷೇದ್ಧುಂಪಥಿಕೇಚನ । ಸಂಯತ್ತಾ ಉದ್ಧೃತೇಷ್ವಾಸಾ ಗ್ರಾಮಸಿಂಹಾ ಯಥಾ ಹರಿಮ್ ॥೩೪॥ ತೇ ಶಾರ್ಙ್ಗಚ್ಯುತಬಾಣೌಘೈಃ ಕೃತ್ತಬಾಹ್ವಂಘ್ರಿಕಂಧರಾಃ । ನಿಪೇತುಃ ಪ್ರಧನೇ ಕೇಚಿದೇಕೇ ಸಂತ್ಯಜ್ಯ ದುದ್ರುವುಃ ॥೩೫॥ ತತಃ ಪುರೀಂ ಯದುಪತಿರತ್ಯಲಂಕೃತಾಂ ರವಿಚ್ಛದಧ್ವಜಪಟಚಿತ್ರತೋರಣಾಮ್ । ಕುಶಸ್ಥಲೀಂ ದಿವಿ ಭುವಿ ಚಾಭಿಸಂಸ್ತುತಾಂ ಸಮಾವಿಶತ್ತರಣಿರಿವ ಸ್ವಕೇತನಮ್ ॥೩೬॥ ಪಿತಾ ಮೇ ಪೂಜಯಾಮಾಸ ಸುಹೃತ್ಸಂಬಂಧಿಬಾಂಧವಾನ್ । ಮಹಾರ್ಹವಾಸೋಲಂಕಾರಶಯ್ಯಾಸನಪರಿಚ್ಛದೈಃ ॥೩೭॥ ದಾಸೀಭಿಸ್ಸರ್ವಸಂಪದ್ಭಿರ್ಭಟೇಭರಥವಾಜಿಭಿಃ । ಆಯುಧಾನಿ ಮಹಾರ್ಹಾಣಿ ದದೌ ಪೂರ್ಣಸ್ಯ ಭಕ್ತಿತಃ ॥೩೮॥ ಆತ್ಮಾರಾಮಸ್ಯ ತಸ್ಯೈವ ನಾವಯಂ ವೈ ಗೃಹದಾಸಿಕಾಃ । ಸರ್ವಸಂಗನಿವೃತ್ತ್ಯಾದ್ಧಾ ತಪಸಾ ಚ ಬಭೂವಿಮ ॥೩೯॥ ಷೊ

---

[illegible], ನಿಷೇದ್ಧುಂ-ತಡೆಯುವುದಕ್ಕೆ, ಸಂಯತ್ತಾಃ-ಯತ್ನಹುಟ್ಟಿದವರಾದ್ದರಿಂದ, ತೇ-ಅವರು, ಉದ್ಧೃತೇಷ್ವಾಸಾಃ-ಸ್ವಂತ-ಎತ್ತಲ್ಪಟ್ಟ ಬಿಲ್ಲುಗಳುಳ್ಳವರಾಗಿ, ಗ್ರಾಮಸಿಂಹಾಃ-ನಾಯಿಗಳು, ಹರಿಂ ಯಥಾ-ಸಿಂಹವನ್ನು ಹೇಗೋ ಹಾಗೆ, ಅಸ್ವಸಜ್ಜಿತ-ಬಂದೆತಗುಲಿದರು ॥೩೪॥ ತೇ-ಅವರು ಶಾರ್ಙ್ಗಚ್ಯುತಬಾಣೌಘೈಃ-ಕೃಷ್ಣನಬಿಲ್ಲಿನಿಂದ ಎಚ್ಚಲ್ಪಟ್ಟ ಅಂಬುಗಳ ಗುಂಪುಗಳಿಂದ, ಪ್ರಧನೇ-ಕಾಳಗದಲ್ಲಿ, ಕೃತ್ತಬಾಹ್ವಂಘ್ರಿಕಂಧರಾಃ-ಕತ್ತರಿಸಲ್ಪಟ್ಟ ತೋಳು ಕಾಲು ಕೊರಳ್ಗಳುಳ್ಳವರಾದ್ದರಿಂದ, ಕೇಚಿತ್-ಕೆಲವರು, ನಿಪೇತುಃ-ಬಿದ್ದುಹೋದರು, ಏಕೇ-ಕೆಲರು, ಸಂತ್ಯಜ್ಯ-ಬಿಟ್ಟು, ದುದ್ರುವುಃ-ಓಡಿಹೋದರು ॥೩೫॥ ತತಃ-ಆ ಮೇಲೆ, ಯದುಪತಿಃ-ಕೃಷ್ಣನು, ಅತ್ಯಲಂಕೃತಾಂ-ಅತಿಶಯವಾಗಿ ಸಿಂಗರಿಸಲ್ಪಟ್ಟಂಥಾ, ರವಿಚ್ಛದಧ್ವಜಪಟಚಿತ್ರತೋರಣಾಂ-ಸೂರ್ಯನಂ ಮುಚ್ಚುವ ಪಳವಿಗೆಯವಸ್ತ್ರವೂ ಹಲವುಬಣ್ಣಬಾಗಿಲ ಅಲಂಕಾರವೂ ಉಳ್ಳಂಥಾ, ದಿವಿ ಭುವಿ ಚಾಪಿ-ಸ್ವರ್ಗದಲ್ಲಿಯೂ ಭೂಮಿಯಲ್ಲಿಯೂ, ಸಂಸ್ತುತಾಂ-ಕೊಂಡಾಡಲ್ಪಟ್ಟಂಥಾ, ಕುಶಸ್ಥಲೀಂ ಪುರೀಂ-ದ್ವಾರಕಾನಗರವನ್ನು, ತರಣಿಃ-ಸೂರ್ಯನು, ಸ್ವಕೇತನಮಿವ-ತನ್ನ ಕೇರಿಯನ್ನಂತೆ, ಸಮಾವಿಶತ್-ಹೊಕ್ಕನು ॥೩೬॥ ಮೇ ಪಿತಾ-ತನ್ನ ತಂದೆಯು, ಸುಹೃತ್ಸಂಬಂಧಿಬಾಂಧವಾನ್-ಮಿತ್ರರನ್ನೂ ಜ್ಞಾತಿಗಳನ್ನೂ ನಂಟರನ್ನೂ, ಮಹಾರ್ಹವಾಸೋಲಂಕಾರಶಯ್ಯಾಸನಪರಿಚ್ಛದೈಃ-ದೊಡ್ಡವರಿಗೆ ತಕ್ಕ ವಸ್ತ್ರಾಭರಣ ಹಾಸಿಗೆ ಗದ್ದುಗೆ ಹೊದಿಕೆಗಳಿಂದ, ಪೂಜಯಾಮಾಸ-ಸನ್ಮಾನಿಸಿದನು ॥೩೭॥ ದಾಸೀಭಿಃ-ದಾದಿಯರೊಡನೆಯೂ, ಸರ್ವಸಂಪದ್ಭಿಃ-ಸಕಲೈಶ್ವರ್ಯಂಗಳೊಡನೆಯೂ, ಭಟೇಭರಥವಾಜಿಭಿಃ-ಚತುರಂಗಸೈನ್ಯಗಳಿಂದಲೂ, ಮಹಾರ್ಹಾಣಿ-ದೊಡ್ಡವರಿಗೆ ತಕ್ಕಂಥಾದ, ಆಯುಧಾನಿ-ಕೈದುಗಳನ್ನೂ, ಭಕ್ತಿತಃ-ಪ್ರೀತಿಯಿಂದ, ಪೂರ್ಣಸ್ಯ-ಸರ್ವಸಂಪನ್ನನಾದ ಕೃಷ್ಣಂಗೆ, ದದೌ-ಕೊಟ್ಟನು ॥೩೮॥ ಇವಾವಯಂ-ಈ ನಾವೆಂಟುಮಂದಿಯೂ, ಸರ್ವಸಂಗನಿವೃತ್ತ್ಯಾ-ಇತರಕಾಮುಗಳೆಲ್ಲವನ್ನೂ ಬಿಟ್ಟದ್ದರಿಂದಲೂ, ತಪಸಾ ಚ-ಸ್ವಧರ್ಮದಿಂದಲೂ, ಅದ್ಧಾ-ಪ್ರತ್ಯಕ್ಷವಾಗಿ, ಆತ್ಮಾರಾಮಸ್ಯ-ತನ್ನಲ್ಲಿಯೇ ತಾನು ಕ್ರೀಡಿಸುತ್ತಿರುವ, ತಸ್ಯ-ಆ ಕೃಷ್ಣಂಗೆ, ಗೃಹದಾಸಿಕಾಃ-ಮನೆಯ ಸೇವಕಿಯರು, ವೈ-ಪ್ರಸಿದ್ಧವಾಗಿ, ಬಭೂವಿಮ-ಆದೆವು ॥೩೯॥ ಹದಿನಾರುಸಾವಿರಮಂದಿ

---

ತ್ತೆ ಶ್ರೀಕೃಷ್ಣನ ನೆಟ್ಟಬಂದರು ॥೩೪॥ ಅವರಂ ನೋಡಿ ಶ್ರೀಕೃಷ್ಣನು ಶಾರ್ಙ್ಗಧನುಸ್ಸಿನ ಬಲೆಯಿಂದ ಪರಂಪರೆಯಾಗಿ ಹೊರಟುಬರುತ್ತಲಿರುವ ಬಾಣಸಮೂಹಂಗಳಿಂ ಕತ್ತರಿಸಲ್ಪಟ್ಟ ಕಂಠಗಳೂ ಭುಜಗಳೂ ತೊಡೆಗಳೂ ಪಾದಂಗಳೂ ಸಹ ಉಳ್ಳವರಾಗಿ ಭೂಮಿಯಲ್ಲಿರುವರಾದರು. ಮತ್ತೆ ಕೆಲವರು ದಿಕ್ಕುದಿಕ್ಕುಗಳಿಗೂ ಪಲಾಯನಂಗೆಯ್ದರು ॥೩೫॥ ಆನಂತರದಲ್ಲಿ ಯದುವೀರನಾದ ಶ್ರೀಕೃಷ್ಣನು ಸೂರ್ಯನಂ ಮರೆಗೆಯ್ವ ಧ್ವಜಪಟಗಳಿಂದಲೂ ನಾನಾವಿಚಿತ್ರತೋರಣಂಗಳಿಂದಲೂ ಭೂಪ್ರದೇಶದಲ್ಲಿಯೂ ಊರ್ಧ್ವಪ್ರದೇಶದಲ್ಲಿಯೂ ಸಹ ಅಲಂಕರಿಸಲ್ಪಟ್ಟ ಕುಶಸ್ಥಲಿಯೆಂಬ ಹೆಸರುಳ್ಳ ದ್ವಾರಕಾಪುರವನು ಸಾಕ್ಷಾತ್ಸೂರ್ಯನಂತೆ ಪ್ರವೇಶಿಸಿದನು ॥೩೬॥ ಅನಂತರದಲ್ಲಿ ನನ್ನ ತಂದೆಯು ಸುಹೃತ್ತುಗಳಂ ಸಂಬಂಧಿಗಳಂ ಉತ್ತಮಂಗಳಾದ ವಸ್ತ್ರಾಲಂಕಾರ ಶಯನಪೀಠರತ್ನಂಗಳಿಂದ ಪೂಜಿಸಿದನು ॥೩೭॥ ಆಮೇಲೆ ನಮ್ಮ ತಂದೆಯು ಅನೇಕರಾದ ದಾಸೀಜನರೊಡನೆಯೂ ಸಮಸ್ತ ಸಂಪತ್ತುಗಳೊಡನೆಯೂ ಚತುರಂಗಬಲದೊಡನೆಯೂ ಶ್ರೇಷ್ಠಂಗಳಾದ ಆಯುಧಂಗಳೊಡನೆಯೂ ಬಂದು ಸರ್ವಸಂಪೂರ್ಣಕಾಮನಾದ ಶ್ರೀಕೃಷ್ಣಂಗರ್ಪಿಸಿದನು ॥೩೮॥ ಎಲೈ ದ್ರೌಪದೀದೇವಿಯೇ ಈ ಪ್ರಕಾರವಾಗಿ ನಾವೆಂಟುಮಂದಿಯೂ ಸರ್ವವಿಷಯ ಭೋಗಂಗಳಲ್ಲಿಯೂ ಪರಾಙ್ಮುಖರಾಗಿ ಅನೇಕಜನ್ಮಂಗಳಲ್ಲಿ ಆಚರಿಸಿದ ತಪಸ್ಸುಗಳಿಂದಲೂ ಸ್ವಧರ್ಮಾಚರಣೆಯಿಂದಲೂ ಶ್ರೀಕೃಷ್ಣನ ಗೃಹದಾಸಿಯರಾದೆವು ॥೩೯॥ ಇಂತೆಂದು ಅಷ್ಟಮಹಿಷಿಯರು ನುಡಿದ ಬ

ಷೋಡಶಸಹಸ್ರಮಹಿಷ್ಯಃ ॥ ಭೌಮಂನಿಹತ್ಯಸಗಣಂಯುಧಿತೇನರುದ್ಧಾಜ್ಞಾತ್ವಾಥನಃಕ್ಷಿತಿಜಯೇಜಿತರಾಜಕನ್ಯಾಃ । ನಿರ್ಮುಚ್ಯಸಂಸೃತಿವಿಮೋಕ್ಷಮನುಸ್ಮರಂತೀಃಪಾದಾಂಬುಜಂಪರಿಣಿನಾಯಯಆಪ್ತಕಾಮಃ॥ ನವಯಂಸಾಧ್ವಿಸಾಮ್ರಾಜ್ಯಂಸ್ವಾರಾಜ್ಯಂಭೌಜ್ಯಮಪ್ಯುತ । ವೈರಾಜ್ಯಂಪಾರಮೇಷ್ಠ್ಯಂವಾಆನಂತ್ಯಂವಾಹರೇಃಪದಮ್ ॥೪೧॥ ಕಾಮಯಾಮಹಏತಸ್ಯಶ್ರೀಮತ್ಪಾದರಜಃಶ್ರಿಯಃ । ಕುಚಕುಂಕುಮಗಂಧಾಢ್ಯಂಮೂರ್ಧ್ನಾವೋಢುಂಗದಾಭೃತಃ ॥೪೨॥ ವ್ರಜಸ್ತ್ರಿಯೋಯದ್ವಾಂಛಂತಿಪುಳಿಂದ್ಯಸ್ತೃಣವೀರುಧಃ । ಗಾವಶ್ಚಾರಯತೋಗೋಪಾಃಪಾದಸ್ಪರ್ಶಂಮಹಾತ್ಮನಃ॥ ... ॥೪೩॥

ಶ್ರೀಮದ್ಭಾಗವತೇ ದಶಮಸ್ಕಂಧೇ-ತ್ರ್ಯಶೀತಿತಮೋಧ್ಯಾಯಃ

---

ಭಾಷ್ಯಯಾ-ಕ್ಷಿತಿಜಯೇ-ದಿಗ್ವಿಜಯದಲ್ಲಿ, ಜಿತರಾಜಕನ್ಯಾಃ-ಗೆಲ್ಲಲ್ಪಟ್ಟ ದೊರೆಗಳಮಕ್ಕಳಾದ ನಮ್ಮನ್ನು, ತೇನ-ಆನರಕಾಸುರನಿಂದ, ರುದ್ಧಾಃ-ಸೆರೆಯಲ್ಲಿ ತಡೆಯಲ್ಪಟ್ಟವರನ್ನಾಗಿ, ಜ್ಞಾತ್ವಾ-ತಿಳಿದು, ಸಗಣಂ-ದಂಡಿನಗುಂಪಿನಿಂ ಸಹಿತನಾದ, ಭೌಮಂ-ನರಕಾಸುರನನ್ನು, ನಿಹತ್ಯ-ಕೊಂದು, ಆಪ್ತಕಾಮಃ-ಪೂರ್ಣಮನೋರಥನಾದ, ಸಃ-ಆ ಕೃಷ್ಣನು, ಸಂಸೃತಿವಿಮೋಕ್ಷಂ-ಸಂಸಾರದ ಬಿಡುಗಡೆಯನ್ನು, ಅನುಸ್ಮರಂತೀಃ-ಬಯಸುತ್ತಿರುವ ನಮ್ಮನ್ನು, ನಿರ್ಮುಚ್ಯ-ಬಿಡಿಸಿ, ಪಾದಾಂಬುಜಂ-ತನ್ನ ಅಡಿದಾವರೆಯಂ ಕುರಿತು, ಪರಿಣಿನಾಯ-ಮದುವೆಯಾಗಿ ತಂದನು ॥೪೦॥ ಸಾಧ್ವಿ-ಪತಿವ್ರತೆಯಾದ ದ್ರೌಪದಿಯೇ, ವಯಂ-ನಾವು, ಸಾಮ್ರಾಜ್ಯಂ-ಸಾರ್ವಭೌಮಪದವಿಯನ್ನೂ, ಸ್ವಾರಾಜ್ಯಂ-ಇಂದ್ರಪದವಿಯನ್ನೂ, ಭೌಜ್ಯಮಪಿ-ಆ ಯೆರಡರ ಅನುಭವವನ್ನೂ, ಅಥವಾ ಇಹಪರ ಭೋಗವನ್ನೂ, ಉತ-ಮತ್ತು, ವೈರಾಜ್ಯಂ-ಹಲವುಬಗೆಯಾಗಿ ಬೆಳಗುವಅಣಿಮಾದಿಸಿದ್ಧಿಯನ್ನೂ, ಪಾರಮೇಷ್ಠ್ಯಂವಾ-ಬ್ರಹ್ಮಪದವಿಯನ್ನೂ, ಆನಂತ್ಯಂವಾ-ಮೋಕ್ಷವನ್ನಾದರೂ, ಹರೇಃ-ಕೃಷ್ಣನಿಗಿಂತಲೂ, ಪರಂ- ಇತರವನ್ನು ಅಥವಾ ಅತಿಶಯವನ್ನೂ ॥ ಪಾಠಾಂತರದಲ್ಲಿ, ಅನಂತ್ಯಂ-ಮೋಕ್ಷವಾದ, ಹರೇಃಪದಂ-ವಿಷ್ಣುಲೋಕವನ್ನಾದರೂ ॥೪೧॥ ನಕಾಮಯಾಮಹೇ-ಬಯಸುವುದಿಲ್ಲವು ಏತಸ್ಯಗದಾಭೃತಃ-ಈ ಕೃಷ್ಣನ, ಶ್ರಿಯಃ-ಲಕ್ಷ್ಮಿಯ, ಕುಚಕುಂಕುಮಗಂಧಾಢ್ಯಂ-ಸ್ತನಗಳ ಕುಂಕುಮಗಂಧದಿಂದ ಸಂಪನ್ನವಾದ, ಶ್ರೀಮತ್ಪಾದರಜಃ-ಸಂಪತ್ತುಳ್ಳ ಚರಣಧೂಳಿಯನ್ನು, ಮೂರ್ಧ್ನಾ-ತಲೆಯಿಂದ, ವೋಢುಂ-ಧರಿಸುವುದಕ್ಕೆ, ಕಾಮಯಾಮಹೇ-ಬಯಸುತ್ತಿರುವೆವು ॥೪೨॥ ಯತ್-ಯಾವಕಾರಣದಿಂದ, ವ್ರಜಸ್ತ್ರಿಯಃ-ಗೋಕುಲದ ಹೆಂಗಸೂ, ಪುಳಿಂದ್ಯಃ-ಬೇಡತಿಯರೂ, ತೃಣವೀರುಧಃ-ಹುಲ್ಲುಬಳ್ಳಿಗಳೂ, ಗೋಪಾಃ-ಗೊಲ್ಲರೂ, ಗಾವಃ-ಆಕಳನ್ನು, ಚಾರಯತಃ-ಮೇಯಿಸುತಲಿರುವ, ಮಹಾಪುರುಷನಾದಕೃಷ್ಣನ, ಪಾದಸ್ಪರ್ಶಂ-ಅಡಿಗಳಸೋಂಕುವಿಕೆಯನ್ನು, ವಾಂಛಂತಿ-ಬಯಸುತ್ತಿರುವರೋ, ತತ್-ಆ ಕಾರಣದಿಂದ, ನಾವೂ ಆಕೃಷ್ಣನಚರಣ ಸ್ಪರ್ಶವಂ ಬಯಸುವೆವು. ॥೪೩॥

ಇಂತೆಂಬಲ್ಲಿಗೆ ಭಾಗವತಪ್ರತಿ ಶಬ್ದಾರ್ಥಬೋಧಿನಿಯೊಳಗೆದಶಮಸ್ಕಂಧದಲ್ಲಿ೮೩ನೆಯ ಅಧ್ಯಾಯಂ ಮುಗಿದುದು.

---

ಲಕ್ಷ್ಮಣಾದಿಗಳಾದ ಶ್ರೀಕೃಷ್ಣಪತ್ನಿಯರು ದ್ರೌಪದಿಯಂ ಕುರಿತು ನುಡಿದರೆಂತೆನೆ- ಎಲೌದ್ರೌಪದಿಯೇ! ಪೂರ್ಣಕಾಮನಾದ ಶ್ರೀಕೃಷ್ಣನು ಯುದ್ಧದಲ್ಲಿ ನರಕಾಸುರನಂ ಸಂಹರಿಸಿ ಪೂರ್ವದೊಳಗವನಿಂದ ದಿಗ್ವಿಜಯಕಾಲದಲ್ಲಿ ಸಮಸ್ತರಾದ ಅರಸುಗಳಂಜಯಿಸಿ ಬಲಾತ್ಕಾರದಿಂದ ಪರಿಹರಿಸಲ್ಪಟ್ಟ ರಾಜಪತ್ನಿಯರಾದನಾವು ನರಕಾಸುರನ ಬಂಧನಗೃಹದಲ್ಲಿರುತ್ತ ಶ್ರೀಕೃಷ್ಣನನ್ನೇ ಸರ್ವದಾ ಧ್ಯಾನಂಗೆಯ್ಯುತ್ತಲಿದ್ದೆವು, ಅಂತಾ ನಮ್ಮ ಹೃದಯಂಗಳಂ ತಿಳಿದು ಪಾಣಿಗ್ರಹಣವಂ ಮಾಡಿದನಾದುದರಿಂದ ನಾವೆಲ್ಲರೂ ಶ್ರೀಕೃಷ್ಣನ ಗೃಹದಾಸಿಯರು ॥೪೦॥ ಎಲೌ ದ್ರೌಪದಿಯೇ! ನಾವು ಸಾರ್ವಭೌಮ ಪದವನ್ನೂ ಇಂದ್ರಪದವಿಯನ್ನೂ ಲೋಕತ್ರಯ ಭೋಗಂಗಳನ್ನೂ ಅಣಿಮಾದ್ಯಷ್ಟ ಸಿದ್ಧಿಗಳನ್ನೂ ಬ್ರಹ್ಮಪದವನ್ನೂ ಸಾಲೋಕ್ಯಾದಿಗಳನ್ನೂ ಪರಮಪುರುಷಾರ್ಥವಾದ ಮೋಕ್ಷವಂ ಕೂಡ ಅಪೇಕ್ಷಿಸುವುದಿಲ್ಲವು ॥೪೧॥ ಮತ್ತೆ ಯಾವುದನೆಂದರೆ- ಸಕಲೈಶ್ವರ್ಯಪ್ರದವಾದ ಮಹಾಲಕ್ಷ್ಮಿಯ ಕುಚಕುಂಕುಮದಿಂ ಮಿಶ್ರವಾದ ಗದೆಯಂಧರಿಸಿದ ಕೃಷ್ಣನ ಪಾದಪದ್ಮದ ಧೂಳಿಯಂ ನಿರಂತರದಲ್ಲಿಯೂ ಶಿರಸ್ಸುಗಳಿಂದ ಧರಿಸಲಪೇಕ್ಷಿಸುವೆವು ॥೪೨॥ ಗೋವುಗಳಂ ಮೇಯಿಸುತ್ತ ವನದಲ್ಲಿ ಸಂಚರಿಸುವ ಮಹಾತ್ಮನಾದ ಶ್ರೀಕೃಷ್ಣನ ಪಾದಸ್ಪರ್ಶವಂ ಗೋಪರೂ ಗೋಪಸ್ತ್ರೀಯರೂ ವೃಕ್ಷಗಳೂ ಲತೆಗಳೂ ಸಹ ಎಂತು ಅಪೇಕ್ಷಿಸುವರೋ ಅದೇರೀತಿಯಾಗಿ ನಾವೂಕೂಡ ಅಪೇಕ್ಷಿಸುತಲಿರುವೆವು. ॥೪೩॥

ಶ್ರೀಶುಕಃ॥ಶ್ರುತ್ವಾಪೃಥಾಸುಬಲಪುತ್ರ್ಯಥಯಾಜ್ಞಸೇನೀಮಾಧವ್ಯಥಕ್ಷಿತಿಪಪತ್ನ್ಯಉತಸ್ವಗೋಪ್ಯಃ।ಕೃ
ಷ್ಣೇಖಿಲಾತ್ಮನಿಹರೌಪ್ರಣಯಾನುಬಂಧಂಸರ್ವಾವಿಸಿಸ್ಮ್ಯುರಲಮಶ್ರುಕಲಾಕುಲಾಕ್ಷ್ಯಃ ॥೧॥ಇತಿ
ಸಂಭಾಷಮಾಣಾಸುಸ್ತ್ರೀಭಿಸ್ತ್ರೀಷುನೃಭಿರ್ನೃಷು । ಆಯಯುರ್ಮುನಯಸ್ತತ್ರಕೃಷ್ಣರಾಮ
ದಿದೃಕ್ಷಯಾ ॥೨॥ ದ್ವೈಪಾಯನೋನಾರದಶ್ಚಚ್ಯವನೋದೇವಲೋಽಸಿತಃ। ವಿಶ್ವಾಮಿತ್ರಶ್ಶತಾನಂದೋಭ

---

೮೩ ನೆಯ ಅಧ್ಯಾಯದ ಪ್ರತಿಪದ ಟೀಕೆ.

ಪೃಥಾ-ಕುಂತಿಯೂ, ಸುಬಲಪುತ್ರೀ-ಗಾಂಧಾರಿಯೂ, ಅಥ-ಮತ್ತು. ಯಾಜ್ಞಸೇನೀ, ದ್ರೌಪದಿಯೂ, ಮಾಧವೀ-ಸುಭದ್ರೆಯೂ, ಅಥ-ಮತ್ತು, ಕ್ಷಿತಿಪಪತ್ನ್ಯಃ-ಅರಸಿಯರೂ, ಉತ-ಮತ್ತು, ಸ್ವಗೋಪ್ಯಃ-ಸ್ವೀಯರಾದ ಗೋಪಿಯರೂ, ಅಖಿಲಾತ್ಮನಿ-ಸಕಲಜೀವರಿಗೂ ಸ್ವರೂಪವಾದ, ಹರೌ-ಕೃಷ್ಣನಲ್ಲಿ ಪ್ರಣಯಾನುಬಂಧಂ-ಸ್ನೇಹಸಂಬಂಧವನ್ನು, ಶ್ರುತ್ವಾ-ಕೇಳಿ, ಸರ್ವಾಃ-ಎಲ್ಲರೂ, ಅಶ್ರುಕಲಾಕುಲಾಕ್ಷ್ಯಃ-ಕಣ್ಣೀರು ತೊಟ್ಟುಗಳಿಂದ ವ್ಯಾಕುಲವಾದ ದೃಷ್ಟಿಯುಳ್ಳವರಾಗಿ, ಅಲಂ-ಅಧಿಕವಾಗಿ, ವಿಸಿಸ್ಮ್ಯುಃ-ಅಚ್ಚರಿಗೊಂಡರು ॥೧॥ ಇತಿ-ಹೀಗೆ, ಸ್ತ್ರೀಭಿಃ-ಹೆಂಗಳೊಡನೆ, ಸ್ತ್ರೀಷು-ಹೆಂಗಳೂ, ನೃಭಿಃ - ಪುರುಷರೊಡನೆ. ನೃಷು-ಪುರುಷರೂ, ಸಂಭಾಷಮಾಣಾಸು-ಸಂಭಾಷಮಾಣೇಷುಚ-ಮಾತಾಡುತ್ತಿರುವಲ್ಲಿ, ತತ್ರ-ಅಲ್ಲಿಗೆ, ಮುನಯಃ-ಮಹರ್ಷಿಗಳು, ಕೃಷ್ಣರಾಮದಿದೃಕ್ಷಯಾ-ಕೃಷ್ಣನನ್ನೂ ರಾಮನನ್ನೂ ನೋಡಲ್ಬಯಕೆಯಿಂದ, ಆಯಯುಃ-ಬಂದರು ॥೨॥

---

ಇಂತು ಶ್ರೀಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸಿದನೆಂದುಸೂತಪೌ
ರಾಣಿಕನು ನೈಮಿಶಾರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಪೇಳಿದನೆಂ
ಬಲ್ಲಿಗೆ-ಶ್ರೀಮನ್ಮಹೀಶೂರ ಪುರವರಾಧೀಶ ಶ್ರೀಚಾಮರಾಜತನುಜಶ್ರೀ
ಮತ್ಕೃಷ್ಣರಾಜವಿರಚಿತಮಾದ ಶ್ರೀಕೃಷ್ಣರಾಜವಾಣೀವಿಲಾಸಮೆಂ
ಬ ಶ್ರೀಭಾಗವತ ಪುರಾಣದಕರ್ಣಾಟಭಾಷಾವ್ಯಾಖ್ಯಾನದಲ್ಲಿ
೮೩ನೆಅಧ್ಯಾಯಂಮುಗಿದುದು

---

೮೪ನೆಯಅಧ್ಯಾಯವು

ಶ್ರೀಧರೀಯಶ್ಲೋಕಃ॥ ಚತುರ್ಭಿರಧಿಕೇಶೀತಿತಮೇ ಮುನಿಸಮಾಗಮೇ। ವಸುದೇವಮಖೋತ್ಸಾಹ ಬಂಧುಪ್ರಸ್ಥಾಪನಾದಿಕಂ॥%॥ಟೀ॥ ಎಂಭತ್ತ ನಾಲ್ಕನೆಯ ಅಧ್ಯಾಯದಲ್ಲಿ ಶ್ರೀ ಕೃಷ್ಣದರ್ಶನಾರ್ಥವಾಗಿ ಕುರುಕ್ಷೇತ್ರಕ್ಕೆ ವೇದವ್ಯಾಸ ಮೊದಲಾದ ಋಷಿಗಳು ಬಂದಿರುವಲ್ಲಿ ವಸುದೇವನು ಆ ಮಹಾ ಋಷಿಗಳಂ ಋತ್ವಿಕ್ಕುಗಳನ್ನಾಗಿ ಮಾಡಿ ಕೊಂಡು ಕ್ರತುಗಳಂ ಮಾಡಿ ಅನಂತರದಲ್ಲಿ ಬಂದಿರುವ ಸರ್ವ ಜನರಂ ಯಥಾಯೋಗ್ಯವಾಗಿ ಸಮ್ಮಾನಂಗೆಯ್ದು ಅವರವರ ಊರುಗಳಿಗೆ ಕಳುಹಿಸಿದನೆಂಬರ್ಥವಂ ಶ್ರೀ ಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸುವನೆಂತೆನೆ,—

ಎಲೈ, ಅರಸೇ, ಕುಂತಿಯು, ಗಾಂಧಾರಿಯು, ದ್ರೌಪದಿಯು, ಸುಭದ್ರೆಯು, ಇನ್ನೂ ಸಮಸ್ತ ಕ್ಷತ್ರಿಯರ ಪತ್ನಿಯರು, ಶ್ರೀ ಕೃಷ್ಣ ದಾಸಿಯರಾದ ಗೋಪಸ್ತ್ರೀಯರು, ಇವರೆಲ್ಲರೂ ಕೂಡ ರುಕ್ಮಿಣೀದೇವಿ ಮೊದಲಾದ ಶ್ರೀ ಕೃಷ್ಣ ಪತ್ನಿಯರಿಗೆ ಸರ್ವಾತ್ಮನಾದ ಶ್ರೀ ಕೃಷ್ಣನಲ್ಲಿರುವ ಪ್ರೇಮಾತಿಶಯವಂ ಕೇಳಿ ಆನಂದ ಬಾಷ್ಪಪೂರ್ಣನೇತ್ರರಾಗಿ ಆಶ್ಚರ್ಯಯುಕ್ತರಾದರು ॥೧॥ ಈ ಪ್ರಕಾರವಾಗಿ ಸ್ತ್ರೀಯರುಗಳು ಪುರುಷರೊಡನೆ ಪುರುಷರು ಸ್ತ್ರೀಯರೊಡನೆಯೂ ಪರಸ್ಪರವಾಗಿ ಮಾತುಗಳನಾಡುತ್ತಿರಲಾಗಿ ಶ್ರೀ ಕೃಷ್ಣ ರಾಮರಂ ನೋಡಲಿಚ್ಛೆಯಿಂದ ಸಮಸ್ತರಾದ ಋಷಿಗಳು ಆ ಕುರುಕ್ಷೇತ್ರಕ್ಕೆ ಬಂದರು ॥೨॥ ಯಾವ ಯಾವ ಋಷಿಗಳು ಬಂದರೆಂದರೆ- ವೇದವ್ಯಾಸ ಋಷಿಯು, ನಾರದರು, ಚ್ಯವನನು, ದೇವಲನು, ಅಸಿತನು, ವಿಶ್ವಾಮಿತ್ರನು, ಶತಾನಂದನು,

ಭರದ್ವಾಜೋಥಗೌತಮಃ ॥೩॥ ರಾಮಸ್ಸಶಿಷ್ಯೋಭಗವಾನ್ವಸಿಷ್ಠೋಗಾಲವೋಭೃಗುಃ । ಪುಲಸ್ತ್ಯಃ ಪುಲಹೋತ್ರಿಶ್ಚಮಾರ್ಕಂಡೇಯೋಬೃಹಸ್ಪತಿಃ ॥೪॥ ದ್ವಿತಸ್ತ್ರಿತಶ್ಚೈಕತಶ್ಚಬ್ರಹ್ಮಪುತ್ರಾಸ್ತಥಾಂಗಿರಾಃ । ಅಗಸ್ತ್ಯೋಯಾಜ್ಞವಲ್ಕ್ಯಶ್ಚವಾಮದೇವಾದಯೋಪರೇ ॥೫॥ ತಾನ್ದೃಷ್ಟ್ವಾಸಹಸೋತ್ಥಾಯಪ್ರಾಗಾಸೀನಾನೃಪಾದಯಃ । ಪಾಂಡವಾಃಕೃಷ್ಣರಾಮೌಚಪ್ರಣೇಮುರ್ವಿಶ್ವವಂದಿತಾನ್ ॥೬॥ ತಾನಾನರ್ಚುರ್ಯಥಾಸರ್ವೇಸಹರಾಮೋಚ್ಯುತೋರ್ಚಯತ್ । ಸ್ವಾಗತಾಸನಪಾದ್ಯಾರ್ಘ್ಯಮಾಲ್ಯಧೂಪಾನುಲೇಪನೈಃ ॥ ಉವಾಚಸುಖಮಾಸೀನಾನ್ಭಗವಾನ್ಧರ್ಮಗುಪ್ತನುಃ । ಸದಸಸ್ತಸ್ಯಮಹತೋಯತವಾಚೋನುಶೃಣ್ವತಃ ॥೮॥ ಶ್ರೀಕೃಷ್ಣಃ ॥ ಅಹೋವಯಂಜನ್ಮಭೃತೋಲಬ್ಧಂಕಾರ್ತ್ಸ್ನ್ಯೇನತತ್ಫಲಂ । ದೇವಾನಾಮಪಿದು

---

ಜ್ಯೋ, ಪಾರಾಶರ್ಯಃ-ವೇದವ್ಯಾಸಮುನಿ, ನಾರದನು, ಚ್ಯವನನು, ದೇವಲನು, ಅಸಿತನು, ವಿಶ್ವಾಮಿತ್ರನು, ಶತಾನಂದನು, ಭರದ್ವಾಜನು, ಗೌತಮನು ॥೩॥ ಭಗವಾನ್-ಷಡ್ಗುಣೈಶ್ವರ್ಯದಿಂದ ಪೂರ್ಣನಾದ, ಸಶಿಷ್ಯಃ-ಶಿಷ್ಯರಿಂದ ಸಹಿತನಾದ, ರಾಮಃ-ಪರಶುರಾಮನು, ವಶಿಷ್ಠನು, ಗಾಲವನು, ಭೃಗುವು, ಪುಲಸ್ತ್ಯನು, ಪುಲಹನು, ಅತ್ರಿಯು, ಮಾರ್ಕಂಡೇಯನು, ಬೃಹಸ್ಪತಿಯು ॥೪॥ ದ್ವಿತನು, ತ್ರಿತನು, ಏಕತನು, ತಥಾ-ಹಾಗೆ, ಬ್ರಹ್ಮಪುತ್ರಃ-ಬ್ರಹ್ಮಕುಮಾರನಾದ, ಅಂಗಿರಾಃ-ಅಂಗಿರಸನು, ಅಗಸ್ತ್ಯನು, ಯಾಜ್ಞವಲ್ಕ್ಯನು, ವಾಮದೇವಾದಯಃ-ವಾಮದೇವನೇ ಮೊದಲಾದ ಅಪರೇ ಇತರರೂ, ಆಯಯುಃ-ಬಂದರು ॥೫॥ ಪ್ರಾಕ್-ಮುಂಚೆಯೇ, ಆಸೀನಾಃ-ಕುಳಿತುಕೊಂಡಿದ್ದ, ನೃಪಾದಯಃ-ದೊರೆಗಳು ಮೊದಲಾದವರೂ, ಪಾಂಡವಾಃ-ಪಾಂಡುಪುತ್ರರೂ, ಕೃಷ್ಣರಾಮೌಚ-ಕೃಷ್ಣನೂ ರಾಮನೂ, ವಿಶ್ವವಂದಿತಾನ್-ಪ್ರಪಂಚದಿಂದ ನಮಸ್ಕರಿಸಲ್ಪಟ್ಟವರಾದ, ತಾನ್-ಆ ಮಹರ್ಷಿಗಳನ್ನು, ದೃಷ್ಟ್ವಾ-ನೋಡಿ, ಸಹಸಾ-ಬೇಗನೆ, ಉತ್ಥಾಯ-ಎದ್ದು ಪ್ರಣೇಮುಃ-ಸಾಷ್ಟಾಂಗವೆರಗಿದರು ॥೬॥ ಸರ್ವೇ-ಎಲ್ಲರೂ, ತಾನ್-ಅವರನ್ನು, ಯಥಾ-ಹೇಗೆ, ಆನರ್ಚುಃ-ಪೂಜಿಸಿದರೋ, ತಥಾ-ಹಾಗೆ, ಸರಾಮಃ-ಬಲದೇವನಿಂ ಸಹಿತನಾದ, ಅಚ್ಯುತಃ-ಕೃಷ್ಣನು, ಸ್ವಾಗತ...ಲೇಪನೈಃ-ಸ್ವಾಗತ-ಕುಶಲಪ್ರಶ್ನೆ, ಆಸನ-ಗದ್ದುಗೆ, ಪಾದ್ಯ-ಕಾಲ್ತೊಳೆಯತಕ್ಕ ನೀರು, ಅರ್ಘ್ಯ-ಹಸ್ತೋದಕ, ಮಾಲ್ಯ-ಪುಷ್ಪಸರ-ಧೂಪ-ಪರಿಮಳದ ಹೊಗೆ, ಅನುಲೇಪನೈಃ-ಪರಿಮಳಗಂಧಗಳಿಂದ, ಅರ್ಚಯತ್-ಪೂಜಿಸಿದನು ॥೭॥ ಧರ್ಮಗುಪ್ತನುಃ-ಧರ್ಮವನ್ನು ಪಾಲಿಸುವಮೂರ್ತಿಯುಳ್ಳ, ಭಗವಾನ್-ಸರ್ವಜ್ಞನಾದ ಕೃಷ್ಣನು, ಯತವಾಚಃ-ನಿಗ್ರಹಿಸಲ್ಪಟ್ಟ ಮಾತುಗಳುಳ್ಳ, ಮಹತಃ-ದೊಡ್ಡದಾದ, ತಸ್ಯಸದಸಃ-ಆ ಸಭೆಯು, ಅನುಶೃಣ್ವತಃ-ಕೇಳುತ್ತಿರುವುದಾಗುತ್ತಿರಲು, ಸುಖಂ-ಅನಾಯಾಸವಾಗಿ ಅಥವಾ ಸಂತೋಷವಾಗಿ, ಆಸೀನಾನ್-ಕುಳಿತಿರುವ ಮಹರ್ಷಿಗಳಂ ಕುರಿತು, ಉವಾಚ-ನುಡಿದನು ॥೮॥ ಯತ್-ಯಾವಕಾರಣದಿಂದ ದೇವಾನಾಮಪಿ-ದೇವತೆಗಳಿಗೂ ಕೂಡ, ದುಷ್ಪ್ರಾಪಂ-ಪ್ರಯಾಸದಿಂದಲೂ ಪಡೆಯಲಶಕ್ಯವಾದ, ಯೋಗೇಶ್ವರದರ್ಶನಂ-ಕರ್ಮಭಕ್ತಿಜ್ಞಾನಯೋಗಗಳಿಂದೊಡೆಯರಾದ, ಮಹರ್ಷಿಗಳಂ ನೋಡೋಣವಾಯಿತೋ, ತತ್-ಆ ಕಾರಣ

---

ಭಾರದ್ವಾಜನು, ಗೌತಮನು, ॥೩॥ ಜ್ಞಾನಸಂಪನ್ನನಾದ ಶಿಷ್ಯರೊಡನೆ ಕೂಡಿದ ಪರಶುರಾಮನು, ವಶಿಷ್ಠನು, ಗಾಲವನು, ಭೃಗುವು, ಪುಲಹನು, ಅತ್ರಿಯು, ಮಾರ್ಕಂಡೇಯನು ಬೃಹಸ್ಪತಿಯು ॥೪॥ ಏಕತನು, ದ್ವಿತನು, ತ್ರಿತನು, ಬ್ರಹ್ಮಪುತ್ರನಾದ ಅಂಗಿರಸನು, ಅಗಸ್ತ್ಯನು, ಯಾಜ್ಞವಲ್ಕ್ಯನು, ಇನ್ನೂ ಕೆಲವರಾದ ವಾಮದೇವ ಮೊದಲಾದ ಋಷಿಗಳೂ ॥೫॥ ಈ ರೀತಿಯಲ್ಲಿ ಬಂದಂಥಾ ಋಷಿಗಳಂ ನೋಡಿ ಪೂರ್ವದಲ್ಲಿ ಬಂದು ಕುಳಿತಿರುವ ಅರಸುಗಳು ಮೊದಲಾದವರು ಪಾಂಡವರು ಕೃಷ್ಣ ರಾಮರು ಸಹ ಜಗದ್ವಂದ್ಯರಾದ ಆ ಮಹರ್ಷಿಗಳಂ ಕುರಿತು ನಮಸ್ಕರಿಸಿದರು ॥೬॥ ಇತರರಾದ ಸರ್ವರೂ ಯಾವ ಪ್ರಕಾರದಿಂದವರಂ ಪೂಜಿಸಿದರೋ ಆ ಪ್ರಕಾರವಾಗಿ ಬಲಭದ್ರಸಮೇತನಾದ ಆ ಕೃಷ್ಣನು ಕುಶಲ ಪ್ರಶ್ನೆ, ಪೀಠಪ್ರದಾನ, ಪಾದ್ಯಾರ್ಘ್ಯ ಪುಷ್ಪ ಮಾಲಿಕಾರ್ಪಣ, ಧೂಪದೀಪಾನು ಲೇಪನಂಗಳು, ಇವುಗಳಿಂದ ಪೂಜಿಸಿದನು ॥೭॥ ಅನಂತರದಲ್ಲಿ ಧರ್ಮರಕ್ಷಕವಾದ ಮಾನುಷ ದೇಹ ಮುಳ್ಳ ಶ್ರೀ ಕೃಷ್ಣನು ಮಹಾತ್ಮರಾದ ಆ ಸಭೆಯು ಕೇಳುತಿರಲು ಸುಖವಾಗಿ ಕುಳಿತಿರುವ ಆ ಋಷಿಗಳಂ ಕುರಿತು ನುಡಿದನದೆಂತೆನೆ ॥೮॥ ಎಲೈ ಮಹಾಋಷಿಗಳಿರಾ, ಯಾವ ಕಾರಣದಿಂದ ದೇವತೆಗಳಿಗೂ ಅಲಭ್ಯರಾದ ಯೋಗೇಶ್ವರ

ಷ್ಪ್ರಾಪಂಯದ್ಯೋಗೇಶ್ವರದರ್ಶನಮ್ ॥೯॥ ಕಿಂಸ್ವಲ್ಪತಪಸಾಂನೃಣಾಮರ್ಚಾಯಾಂದೇವಚಕ್ಷುಷಾಮ್ ।
ದರ್ಶನಸ್ಪರ್ಶನಪ್ರಶ್ನಪ್ರಹ್ವಪಾದಾರ್ಚನಾದಿಕಮ್ ॥೧೦॥ ನಹ್ಯಮ್ಮಯಾನಿತೀರ್ಥಾನಿನದೇವಾಮೃಚ್ಛಿ
ಲಾಮಯಾಃ । ತೇಪುನಂತ್ಯುರುಕಾಲೇನದರ್ಶನಾದೇವಸಾಧವಃ ॥೧೧॥ ನಾಗ್ನಿರ್ನಸೂರ್ಯೋನಚಚಂದ್ರತಾ
ರಕಾನಭೂರ್ಜಲಂಖಂಶ್ವಸನೋಥವಾಙ್ಮನಃ । ಉಪಾಸಿತಾಭೇದಕೃತೋಹರಂತ್ಯಘಂವಿಪಶ್ಚಿತೋಘ್ನಂ
ತಿಮುಹೂರ್ತಸೇವಯಾ ॥೧೨॥ ಯಸ್ಯಾತ್ಮಬುದ್ಧಿಃಕುಣಪೇತ್ರಿಧಾತುಕೇಸ್ವಧೀಃಕಳತ್ರಾದಿಷುಭೌಮ

---

ದಿಂದ, ವಯಂ-ನಾವು, ಜನ್ಮಭೃತಃ-ಸಫಲ ಜನ್ಮವಂಧರಿಸಿದವರಾದೆವು, ತತ್ಫಲಂ-ಆ ಜನ್ಮಕ್ಕೆ ಪ್ರಯೋಜನವೂ, ಕಾರ್ತ್ಸ್ನ್ಯೇನ-ಸಂಪೂರ್ತಿಯಿಂದ, ಲಬ್ಧಂ-ಪಡೆಯಲ್ಪಟ್ಟಿತು, ಅಹೋ-ಆಶ್ಚರ್ಯವು ॥೯॥ ನೃಣಾಂ-ಮನುಷ್ಯಮಾತ್ರದವರಾಗಿ, ಅರ್ಚಾಯಾಂ-ಪ್ರತಿಮೆಗಳಲ್ಲಿ, ದೇವಚಕ್ಷುಷಾಂ-ದೇವರೆಂಬ ದೃಷ್ಟಿಯುಳ್ಳ, ಅಲ್ಪತಪಸಾಂ-ತೀರ್ಥಸ್ನಾನಾದಿ ಮಾತ್ರದಲ್ಲಿ ಇದೇತಪಸ್ಸೆಂಬ ಸ್ವಲ್ಪಬುದ್ಧಿಯುಳ್ಳ ನಮಗೆ, ಮಹರ್ಷಿಗಳಾದ ನಿಮ್ಮದರ್ಶನ... ದಿಕಂ ದರ್ಶನ-ನೋಡುವಿಕೆ, ಸ್ಪರ್ಶನ-ಸೋಂಕುವಿಕೆ, ಪ್ರಶ್ನ-ತಿಳಿಯತಕ್ಕದ್ದನ್ನು ಕೇಳುವಿಕೆ, ಪ್ರಹ್ವ-ನಮ್ರತೆ, ಪಾದಾರ್ಚನಾದಿಕಂ ಚರಣವನ್ನು ಪೂಜಿಸುವಿಕೆಮೊದಲಾದ ಮಹಾತಪಸ್ಸುದೊರೆತದ್ದು, ಕಿಂ-ಏನುಹೇಳತಕ್ಕದ್ದು ॥೧೦॥ ಅಮ್ಮಯಾನಿ-ಜಲವಿಕೃತಿಗಳಾದವೂ, ತೀರ್ಥಾನಿ-ಪುಣ್ಯಕರಂಗಳು, ಅಥವಾ ಶುದ್ಧಿಕರಂಗಳು, ನಹಿ-ಅಲ್ಲವಷ್ಟೇ? ಮೃಚ್ಛಿಲಾಮಯಾಃ-ಮಣ್ಣುಕಲ್ಲುಗಳ ವಿಕಾರಂಗಳು, ದೇವಾಃ-ದೇವರ್ಕಳು, ನಹಿ-ಅಲ್ಲವಷ್ಟೆ ಹೇಗೆಂದರೆ, ತೇ-ಅವು, ನಹಿ-ಅಲ್ಲನ್ನೋ, ಆದರೆ, ಉರುಕಾಲೇನ-ಬಹುಕಾಲದಿಂದ ಪುನಂತಿ-ಪರಿಶುದ್ಧಿಗೊಳಿಸುತ್ತಿವೆ, ಸಾಧವಸ್ತು-ಸತ್ಪುರುಷರಾದರೋ, ದರ್ಶನಾದೇವ-ನೋಡಿದಮಾತ್ರದಿಂದಲೇ, ಪುನಂತಿ-ಪರಿಶುದ್ಧಿಗೊಳಿಸುತ್ತಿದ್ದಾರೆ, ಇದೇ ಭೇದವಾದ್ದರಿಂದ ಸಾಧುಗಳೇ ಅಧಿಕತೀರ್ಥಗಳೆಂದುಭಾವವು ॥೧೧॥ ಭೇದಕೃತಃ-ಭೇದಬುದ್ಧಿಯುಂಟುಮಾಡುವ ಪುರುಷನ, ಅಘಂ-ಪಾಪವನ್ನೂ ಅದಕ್ಕೆಮೂಲವಾದ ಅಜ್ಞಾನವನ್ನೂ, ಉಪಾಸಿತಾಃ-ಅವರಿಂದ ಸೇವಿಸಲ್ಪಟ್ಟ ಚಂದ್ರತಾರಕಾಃ-ಚಂದ್ರನೂ ನಕ್ಷತ್ರಗಳೂ, ಅಥ-ಮತ್ತೂ, ಜಲಂ-ನೀರೂ, ಖಂ-ಆಕಾಶವೂ, ಶ್ವಸನಃ-ವಾಯುವೂ, ವಾಕ್-ಮಾತೂ, ಮನಶ್ಚ- ಬುದ್ಧಿಯೂಕೂಡ, ನಹರಂತಿ-ಪರಿಹರಿಸುವುದಿಲ್ಲ ನಾಗ್ನಿಃ-ಅಗ್ನಿಯೂ ಪರಿಹರಿಸುವುದಿಲ್ಲ, ನಸೂರ್ಯಃ-ಸೂರ್ಯನೂ ಪರಿಹರಿಸುವುದಿಲ್ಲ ನಭೂಃ-ಭೂಮಿಯೂ ಪರಿಹರಿಸುವುದಿಲ್ಲ, ವಿಪಶ್ಚಿತಃ-ಜ್ಞಾನಿಗಳಾದ ಆಪ್ತರ್ಷಿಗಳು, ಮುಹೂರ್ತಸೇವಯಾ- ತಾಸು ಹೊತ್ತು ಶುಶ್ರೂಷೆಮಾಡಿದ್ದರಿಂದ, ಘ್ನಂತಿ-ಶಿಷ್ಯನಅಜ್ಞಾನವಂನಾಶಗೊಳಿಸುವರು ॥ ಅಥವಾ-ಅಗ್ನ್ಯಾದಿದೇವತೆಗಳು ಭೇದದೃಷ್ಟಿಯನ್ನುಂಟುಮಾಡುವವರಾದ್ದರಿಂದ ಅಜ್ಞಾನವಂಪರಿಹರಿಸುವುದಿಲ್ಲ. ಅಭೇದದೃಷ್ಟಿಯುಳ್ಳವರು ಪರಿಹರಿಸುವರೆಂದರ್ಥವು ॥ ಅಥವಾ-ಅಗ್ನ್ಯಾದಿದೇವತೆಗಳು ಪಾಪವನ್ನು ಪರಿಹರಿಸುವುದಿಲ್ಲವೇ, ಬಹುಕಾಲಕ್ಕೆ ಪರಿಹರಿಸುವರು, ಭೇದದೃಷ್ಟಿಸಾಧ್ಯವಾದ ಸಗುಣೋಪಾಸ್ತಿಯಿಂದ ಪಾಪಪರಿಹಾರವಾಗಿ ನಿರ್ಗುಣೋಪಾಸ್ತಿ ಹುಟ್ಟಿ ಅದರಿಂದ ಮೂಲಾಜ್ಞಾನನಾಶವು ಬಹುಕಾಲಹಿಡಿಯುತ್ತೆ, ಆಪ್ತರ್ಷಿಗಳಾದರೋ ತತ್ತ್ವಮಸ್ಯಾದಿ ಮಹಾವಾಕ್ಯೋಪದೇಶದಿಂದ ಮುಹೂರ್ತಮಾತ್ರದಲ್ಲಿ ಅಜ್ಞಾನವಂ ಪರಿಹರಿಸುವರು ॥೧೨॥ ಯಸ್ಯ-ಯಾವ ಪುರುಷನಿಗೆ, ತ್ರಿಧಾತುಕೇ-ವಾತಪಿತ್ತಶ್ಲೇಷ್ಮಗಳೆಂಬಮೂರು ಪ್ರಕೃತಿಗಳುಳ್ಳ, ಕು

---

ರಾದ ನಿಮ್ಮ ದರ್ಶನವು ನಮಗೆ ದೊರೆಯಿತೋ ಆ ಕಾರಣದಿಂದ ನಮ್ಮ ಜನ್ಮವೇ ಸಫಲವಾದದ್ದು ॥೯॥ ಸ್ನಾನಮಾತ್ರದಿಂದಲೇ ತಪಸ್ವಿಗಳೆಂಬ ಬುದ್ಧಿಯುಳ್ಳವರಾಗಿ ಪ್ರತಿಮೆ ಮೊದಲಾದ ಶಿಲೆಗಳಲ್ಲಿ ದೇವತಾ ಬುದ್ಧಿಯುಳ್ಳ ಅಜ್ಞಾನಿಗಳಾದ ನಮಗೆ ನಿಮ್ಮ ದರ್ಶನವು, ಸ್ಪರ್ಶನವು, ಕುಶಲ ಪ್ರಶ್ನೆಗಳು, ಪಾದಾಭಿವಂದನವು, ಇವೆಲ್ಲವೂ ದೊರೆಯುವಿಕೆಯು ನಮ್ಮ ಭಾಗ್ಯವೇ ಸರಿ ॥೧೦॥ ಲೋಕದಲ್ಲಿ ಜಲರೂಪಗಳಾದ ತೀರ್ಥಗಳು, ಮೃಣ್ಮಯಶಿಲಾಮಯಂಗಳಾದ ದೇವತೆಗಳೂ ಬಹು ಕಾಲ ಸೇವೆಯಿಂದ ಪಾಪವಂ ಪರಿಹರಿಸುವವು. ತಮ್ಮಂತೆಯು ಸಾಧುಗಳು ದರ್ಶನ ಮಾತ್ರದಿಂದ ಆ ಪಾಪವಂ ಪರಿಹರಿಸುವರು ॥೧೧॥ ಅಗ್ನಿಯೂ ಸೂರ್ಯನೂ ಚಂದ್ರನೂ ನಕ್ಷತ್ರಗಳೂ ಭೂಮಿಯೂ ಜಲವೂ ಆಕಾಶವೂ ವಾಯುವೂ ದಿಕ್ಕೂ ಮನಸ್ಸೂ, ಭೇದಬುದ್ಧಿಯನ್ನುಂಟುಮಾಡುವುದಾದ ಕಾರಣದಿಂದ ಬಹುಕಾಲೋಪಾಸನೆಯಿಂದ ಅಜ್ಞಾನವಂ ಪರಿಹರಿಸುವವು. ಜ್ಞಾನಿಗಳಾದರೋ ಮುಹೂರ್ತಸೇವೆಯಿಂದ ಪಾಪವನಪಹರಿಸಿ ದಿವ್ಯಜ್ಞಾನವಂ ಕುಡುವರು ॥೧೨॥ ಯಾವವನಿಗೆ ವಾತಪಿತ್ತಶ್ಲೇಷ್ಮಮಯವಾದ ಶರೀರ

ಇಜ್ಯಧೀಃ| ಯತ್ತೀರ್ಥಬುದ್ಧಿಶ್ಚಜಲೇನಕರ್ಹಿಚಿಜ್ಜನೇಷ್ವಭಿಜ್ಞೇಷುಸಏವಗೋಖರಃ||೧೩||ಶ್ರೀಶುಕಃ||
ನಿಶಮ್ಯೇತ್ಥಂಭಗವತಃಕೃಷ್ಣಸ್ಯಾಕುಂಠಮೇಧಸಃ | ವಚೋದುರನ್ವಯಂವಿಪ್ರಾಸ್ತೂಷ್ಣೀಮಾಸನ್ ಭ್ರ
ಮದ್ಧಿಯಃ||೧೪||ಚಿರಂವಿಮೃಶ್ಯಮುನಯಈಶ್ವರಸ್ಯೇಶಿತವ್ಯತಾಮ್ | ಜನಸಂಗ್ರಹಇತ್ಯೂಚುಃಸ್ಮ
ಯಂತಸ್ತಂಜಗದ್ಗುರುಮ್ ||೧೫|| ಮುನಯಃ||ಯನ್ಮಾಯಯಾತತ್ತ್ವವಿದುತ್ತಮಾವಯಂವಿಮೋಹಿ
ತಾವಿಶ್ವಸೃಜಾಮಧೀಶ್ವರಾಃ | ಯದೀಶಿತವ್ಯಾಯತಿಗೂಢಈಹಯಾಅಹೋವಿಚಿತ್ರಂಭಗವದ್ವಿಚೇಷ್ಟಿತ
ಮ್ ||೧೬|| ಅನೀಹಏತದ್ಬಹುಧೈಕಆತ್ಮನಾಸೃಜತ್ಯವತ್ಯತ್ತಿನತತ್ರಬಧ್ಯತೇ| ಭೌಮೈರ್ಹಿಭೂಮಿರ್ಬ

---

ಣಪೇ-ಹೆಣವೆನಿಸುವ ದೇಹದಲ್ಲಿ, ಆತ್ಮಬುದ್ಧಿಃ-ತಾನೆಂಬಜ್ಞಾನವೂ, ಕಳತ್ರಾದಿಷು-ಹೆಂಡತಿ ಮೊದಲಾದವರಲ್ಲಿ, ಸ್ವಧೀಃ- ತನ್ನವರೆಂಬ ಜ್ಞಾನವೂ, ಭೌಮೇ-ಭೂಮಿ ವಿಕಾರವಾದ ಮಣ್ಣುಮರಕಲ್ಲುಮೊದಲಾದ ಗೊಂಬೆಗಳಲ್ಲಿ, ಇಜ್ಯಧೀಃ-ಪೂಜಿಸಲ್ಪಡತಕ್ಕ ದೇವರೆಂಬ ಬುದ್ಧಿಯೂ, ಜಲೇ-ನೀರಿನಲ್ಲಿ, ತೀರ್ಥಬುದ್ಧಿಶ್ಚ-ಶುದ್ಧಿಕರವೆಂಬ ಜ್ಞಾನವೂ, ಯತ್-ಯಾವಕಾರಣದಿಂದುಂಟಾಗಿದೆಯೋ, ಅಭಿಜ್ಞೇಷು-ಆತ್ಮಸ್ವರೂಪವಂ ಬಲ್ಲವರಾದ, ಜನೇಷು-ಪುರುಷರಲ್ಲಿ, ಕರ್ಹಿಚಿತ್-ಒಂದುಕಾಲದಲ್ಲಿಯೂ,ತೀರ್ಥಬುದ್ಧಿಃ-ಶುದ್ಧಿಕರರೆಂಬಜ್ಞಾನವು, ಯತ್-ಯಾವಕಾರಣದಿಂದ, ನ-ಇಲ್ಲವೋ,ಸಏವ-ಆ ಪುರುಷನೇ, ಗೋಖರಃ-ಆಕಳಿಸಿನುವ ಕತ್ತೆಯಾಗಿರುವನು, ಅಥವಾ ಆಕಳಿಗೆಹುಲ್ಲನ್ನು ಹೊತ್ತುತರುವ ಕತ್ತೆಯಂತೆ ನೀಚನಾಗಿರುವನು ||೧೩|| ಇತ್ಥಂ-ಹೀಗೆ, ಅಕುಂಠಮೇಧಸಃ-ಜಾಗರೂಕವಾದ ಪ್ರಜ್ಞೆಯುಳ್ಳ,ಭಗವತಃ-ಸರ್ವಜ್ಞನಾದ,ಕೃಷ್ಣಸ್ಯ-ನಾರಾಯಣನ, ದುರನ್ವಯಂ-ಪ್ರಯಾಸದಿಂದಲೂ, ಅನ್ವಯಿಸುವುದಕ್ಕೆ ಶಕ್ಯವಲ್ಲದ ವಚಃ-ಮಾತನ್ನು, ನಿಶಮ್ಯ-ಕೇಳಿ, ಭ್ರಮದ್ಧಿಯಃ-ಅನವಸ್ಥಿತವಾದ ಬುದ್ಧಿಯುಳ್ಳ, ವಿಪ್ರಾಃ-ಬ್ರಹ್ಮರ್ಷಿಗಳು, ತೂಷ್ಣೀಂ-ಮೌನವಾಗಿ, ಆಸನ್-ಇದ್ದರು ||೧೪|| ಮುನಯಃ-ವಿದ್ವಾಂಸರಾದ, ಋಷಿಗಳು, ಚಿರಂ- ಬಹಳಹೊತ್ತು, ವಿಮೃಶ್ಯ-ಕೃಷ್ಣನಮಾತಿಗೆ ಅಭಿಪ್ರಾಯವನ್ನು ವಿಚಾರಿಸಿಕೊಂಡು, ಈಶ್ವರಸ್ಯ-ಸರ್ವನಿಯಾಮಕನಾದ ನಾರಾಯಣಂಗುಂಟಾಗಿರುವ, ಈಶಿತವ್ಯತಾಂ-ನಿಯಾಮ್ಯಭಾವವನ್ನು, ಜನಸಂಗ್ರಹಇತಿ-ಸಂಸಾರಿಗಳಾದ ಜನಗಳನ್ನು ಕರ್ಮಮಾರ್ಗದಲ್ಲಿನಿಯಮಿಸಿ, ಭಕ್ತಿಜ್ಞಾನಮಾರ್ಗಗಳಿಗೆ ತೆಗೆದುಕೊಳ್ಳಲೋಸುಗವೇ ಎಂದು, ತಿಳಿದು, ಸ್ಮಯಂತಃ-ಆಶ್ಚರ್ಯದಿಂದ ನಗುತಿರುವರಾಗಿ, ಜಗದ್ಗುರುಂ-ಪ್ರಪಂಚಕ್ಕೆ ಆಚಾರ್ಯನಾದ, ತಂ-ಆ ಕೃಷ್ಣನಂಕುರಿತು, ಇತಿ-ಮುಂದೆಹೇಳುವಮಾತನ್ನು, ಊಚುಃ-ನುಡಿದರು||೧೫|| ವಯಂ ನಾವು, ಯನ್ಮಾಯಯಾ-ಯಾವವಿಷ್ಣುವಿನ ಮೋಹಕಶಕ್ತಿಯಿಂದ, ತತ್ವವಿದುತ್ತಮಾಃ-ಯಥಾರ್ಥಮಂಬಲ್ಲವರಲ್ಲಿ ಶ್ರೇಷ್ಠರೆನುತಲೂ, ವಿಶ್ವಸೃಜಾಂ-ಲೋಕವನ್ನು ಸೃಷ್ಟಿಮಾಡುವವರಲ್ಲಿ, ಅಧೀಶ್ವರಾಃ-ಒಡೆಯರಾದವರೂಕೂಡ, ವಿಮೋಹಿತಾಃ-ಮರಹುಗೊಳಿಸಲ್ಪಟ್ಟಿರುವೆವೋ ಯತ್-ಯಾವಕಾರಣದಿಂದ, ಈಹಯಾ-ನರಚೇಷ್ಟೆಯಿಂದ, ಗೂಢಃ-ಅಡಗಿರುವವನಾದ ಕೃಷ್ಣನು, ಈಶಿತವ್ಯಾಯತಿ-ನಿಯಾಮ್ಯನಂತೆ ಆಚರಿಸುತ್ತಿರುವನೋ, ಭಗವದ್ವಿಚೇಷ್ಟಿತಂ-ಅಂಥಾ ಭಗವಂತನಲೀಲೆಯು, ವಿಚಿತ್ರಂ-ತರ್ಕಿಸಲಶಕ್ಯವಾದದ್ದು, ಅಹೋ ಆಶ್ಚರ್ಯವು ||೧೬||ಏಕಃ-ಅದ್ವಿತೀಯನಾದ ಆತ್ಮನು,ಅನೀಹಃ-ಇಚ್ಛೆಇಲ್ಲದವನಾ

---

ದಲ್ಲಿ ಅಹಂಬುದ್ಧಿಯು, ಕಳತ್ರಾದಿಗಳಲ್ಲಿ ತನ್ನವರೆಂಬಬುದ್ಧಿಯು, ವಿಕಾರಗಳಾದ ಶಿಲಾದಿಗಳಲ್ಲಿ ಪೂಜ್ಯತಾಬುದ್ಧಿಯು, ಜಲಮಾತ್ರದಲ್ಲಿ ತೀರ್ಥಬುದ್ಧಿಯು, ಉಂಟಾಗಿ ಜ್ಞಾನಿಗಳಲ್ಲಿ ಯಾವಾಗ್ಯೂ ಪೂಜ್ಯತಾಬುದ್ಧಿಯೂ ಭಕ್ತಿಯೂ ಇಲ್ಲವೋ ಆಪುರುಷನು ಗೋರೂಪವುಳ್ಳ ಗಾರ್ದಭವು ಎಂದು ತಿಳಿಯಬೇಕು ||೧೩|| ಈಪ್ರಕಾರವಾಗಿ ಲೋಕವಿಲಕ್ಷಣವಾದ ಬುದ್ಧಿಯುಳ್ಳ ಶ್ರೀಕೃಷ್ಣನ ಅನುರೂಪವಲ್ಲದ ವಚನವಂಕೇಳಿ ಸ್ತಬ್ಧಚಿತ್ತರಾಗಿ ಸುಮ್ಮನಿದ್ದರು ||೧೪|| ಅನಂತರದಲ್ಲಿ ಋಷಿಗಳು ಬಹುಕಾಲ ವಾಲೋಚಿಸಿ ಆಶ್ಚರ್ಯಯುಕ್ತರಾಗಿ ಎಲೈಈಶ್ವರನಾದ ಶ್ರೀಕೃಷ್ಣನೇ! ನಿನ್ನ ಈಕಪಟ ಮಾನುಷವೇಷಕ್ಕೆ ಉಪಯುಕ್ತವಾದ ಈವಾಕ್ಯ ಲೋಕಸಂಗ್ರಹಾರ್ಥವಾಗಿಯೇಹೊರತು ಪರಮಾರ್ಥವಲ್ಲವೆಂದುಜಗದ್ಗುರುವಾದಶ್ರೀಕೃಷ್ಣನಂಕುರಿತುನುಡಿದರು||೧೫|| ಪುನಶ್ಚ ನುಡಿದರೆಂತೆನೆ-ತತ್ವವಂತಿಳಿದವರೊಳಗೆ ಉತ್ತಮರಾದನಾವು ಪ್ರಜೇಶ್ವರರಿಗೂ ಅಧಿಪತಿಗಳಾದಾಗ್ಯೂ ಯಾವ ನಿನ್ನಮಾಯೆಯಿಂದ ಮೋಹಿತರಾಗುತ್ತಲಿರುವೆವೋ ಅಂತಾ ನೀನು ಇಚ್ಛೆಯಿಂದ ಸ್ವಸ್ವರೂಪವಂ ಮರೆಮಾಡಿಕೊಂಡು ಕಪಟಮಾನುಷನಾಗಿ ಜಗದ್ರಕ್ಷಣಂ ಮಾಡುತ್ತಲಿರುವಿ, ಭಗವಂತನಾದ ನಿನ್ನಲೀಲೆಯು ಆಶ್ಚರ್ಯಕರವಾದದ್ದು ||೧೬|| ಎಂತು ಭೂಮಿಯು ಘಟಶರಾವಾದ್ಯನೇಕರೂಪಗಳಿಂದ ಅನೇಕನಾಮಗಳುಳ್ಳವಳಾಗಿ

ಹುನಾಮರೂಪಿಣೋ ಅಹೋವಿಭೂಮ್ನಶ್ಚರಿತಂ ವಿಡಂಬನಮ್ ||೩೩|| ಅಥಾಪಿ ಕಾಲೇ ಸ್ವಜನಾಭಿಗುಪ್ತಯೇ ಬಿಭರ್ಷಿ ಸತ್ತ್ವಂ ಖಲನಿಗ್ರಹಾಯ ಚ | ಸ್ವಲೀಲಯಾ ವೇದಪಥಂ ಸನಾತನಂ ವರ್ಣಾಶ್ರಮಾತ್ಮಾ ಪುರುಷಃ ಪರೋ ಭವಾನ್ ||೩೪|| ಬ್ರಹ್ಮ ತೇ ಹೃದಯಂ ಶುಕ್ಲಂ ತಪಃಸ್ವಾಧ್ಯಾಯಸಂಯಮೈಃ | ಯತ್ರೋಪಲಬ್ಧಂ ಸದ್ವ್ಯಕ್ತಮವ್ಯಕ್ತಂ ಚ ತತಃ ಪರಮ್ ||೩೫|| ತಸ್ಮಾದ್ಬ್ರಹ್ಮಕುಲಂ ಬ್ರಹ್ಮನ್ ಶಾಸ್ತ್ರಯೋನೇಸ್ತ್ವಮಾತ್ಮನಃ | ಸಭಾಜಯಸಿ ಸದ್ಧಾಮ ತದ್ಬ್ರಹ್ಮಣ್ಯಾಗ್ರಣೀರ್ಭವಾನ್ ||೩೬|| ಅದ್ಯ ನೋ ಜನ್ಮಸಾಫಲ್ಯಂ

---

ಪರೂ, ಆತ್ಮನಾ-ತನ್ನ ಪ್ರಕೃತಿಯಿಂದ, ಬಹುಧಾ-ಹಲವು ಬಗೆಯಾದ ತ್ರಿಮೂರ್ತಿಯಾಗಿ, ಏತತ್-ಈ ಪ್ರಪಂಚವನ್ನು, ಸೃಜತಿ-ಹುಟ್ಟಿಸುತ್ತಿದ್ದಾನೆ ಅವತಿ-ಪಾಲಿಸುತ್ತಿದ್ದಾನೆ, ಅತ್ತಿ-ಭಕ್ಷಿಸುತ್ತಲಿದ್ದಾನೆ, ತತ್ರ-ಗುಣಮಯವಾದ ಪ್ರಕೃತಿಯಲ್ಲಿ, ನಬಧ್ಯತೇ-ತಾನು ಸಿಕ್ಕಿಬೀಳುವುದಿಲ್ಲ ಹೇಗೆಂದರೆ, ಭೂಮಿಃ-ಭೂದೇವಿಯು, ಭೌಮ್ಯೈಃ-ಭೂಮಿಯಲ್ಲಿ ಹುಟ್ಟಿದ ವಿಕಾರಂಗಳಿಂದ ಬಹುನಾಮರೂಪಿಣೀವ-ಹಲವು ಹೆಸರುಗಳೂ ಆಕಾರಂಗಳೂ ಉಳ್ಳದ್ದಾಗಿದೆಯಲ್ಲವೇ ಹಾಗೆಯೇ, ವಿಭೂಮ್ನಃ-ಪರಿಪೂರ್ಣನಾದ ನಿನಗೆ, ಚರಿತಂ-ಜನ್ಮಾದಿಚರಿತ್ರವು, ವಿಡಂಬನಂ-ಅನುಕರಣಮಾತ್ರವಾಗಿರುವುದು ||೩೩|| ಅಥಾಪಿ-ಹಾಗಾದರೂ, ವರ್ಣಾಶ್ರಮಾತ್ಮಾ-ವರ್ಣಧರ್ಮವೂ ಆಶ್ರಮಧರ್ಮವೂ ಮೂರ್ತಿಯಾಗಿವುಳ್ಳ, ಪರಃಪುರುಷಃ-ಪರಮೇಶ್ವರನಾದ, ಭವಾನ್-ನೀನು, ಕಾಲೇ-ಧರ್ಮಕ್ಕೆ ಗ್ಲಾನಿಯುಂಟಾದ ಸಮಯದಲ್ಲಿ, ಮತ್ತು ಅಧರ್ಮ ಹುಟ್ಟಿದ ಹೊತ್ತಿನಲ್ಲಿ, ಸ್ವಜನಾಭಿಗುಪ್ತಯೇ-ತನ್ನ ಜನರಾದ ಶಿಷ್ಟರನ್ನು ರಕ್ಷಿಸಲೋಸುಗವೂ, ಖಲನಿಗ್ರಹಾಯ-ದುಷ್ಟರನ್ನು ಶಿಕ್ಷಿಸಲೋಸುಗವೂ, ಸತ್ತ್ವಂ-ಶುದ್ಧಸತ್ತ್ವಪ್ರಧಾನವಾದ ರೂಪವನ್ನೂ, ಸ್ವಲೀಲಯಾ-ತನ್ನ ಆಚಾರದಿಂದ, ಸನಾತನಂ ವೇದಪಥಂ ಚ-ಶಾಶ್ವತವಾದ ಮಾರ್ಗವನ್ನೂ, ಬಿಭರ್ಷಿ-ಧರಿಸುತ್ತಲಿದ್ದೀಯೆ ||೩೪|| ಯತ್ರ-ಯಾವ ವೇದದಲ್ಲಿ, ತಪಸ್ಸ್ವಾಧ್ಯಾಯಸಂಯಮೈಃ-ಧ್ಯಾನಾದಿಯೋಗದಿಂದಲೂ ಮಂತ್ರಜಪಾಧ್ಯಯನದಿಂದಲೂ, ಇಂದ್ರಿಯನಿಗ್ರಹವ್ರತಾಚರಣಗಳಿಂದಲೂ, ವ್ಯಕ್ತಂ-ಕಾರ್ಯವೂ, ಅವ್ಯಕ್ತಂ-ಕಾರಣವೂ, ತತಃಪರಂ-ಅವೆರಡಕ್ಕೂ ಅನ್ಯವಾದ, ಸತ್-ಸತ್ತಾಮಾತ್ರವಾದ ಬ್ರಹ್ಮವೂ, ಉಪಲಬ್ಧಂ-ಮಹಾವಾಕ್ಯೋಪದೇಶದಿಂದ ಶಾಬ್ದಾಪರೋಕ್ಷ್ಯಕ್ಕೆ ವಿಷಯವಾಗುವುದೋ, ಶುಕ್ಲಂ-ಪರಿಶುದ್ಧವಾದ, ತತ್ ಬ್ರಹ್ಮ-ಆ ವೇದವು, ತೇ-ನಿನ್ನ, ಹೃದಯಂ-ಅಂತರಂಗವಾಗಿರುವುದು ||೩೫|| ಬ್ರಹ್ಮನ್-ವೇದಸ್ವರೂಪನಾದ ಕೃಷ್ಣನೇ, ತಸ್ಮಾತ್-ನೀನು ವೇದವೇ ಹೃದಯವಾಗಿರುವಿಕೆ ಯತ್ತಣಿಂ ಬ್ರಹ್ಮಕುಲಂ-ವೇದಕ್ಕೆ ಪ್ರವರ್ತಕವಾಗಿರುವ ಬ್ರಾಹ್ಮಣಜಾತಿಯನ್ನು, ಶಾಸ್ತ್ರಯೋನೇಃ-ವೇದವೇ ಪ್ರಮಾಣವಾಗಿಯುಳ್ಳ, ಆತ್ಮನಃ-ಆತ್ಮವಸ್ತುವಾದ, ತವ-ನಿನಗೆ, ಸದ್ಧಾಮ-ಶ್ರೇಷ್ಠವಾದ ಪ್ರತ್ಯಕ್ಷವಾಗಿ ಕಾಣತಕ್ಕ ಸ್ಥಲವೆಂದು, ಸಭಾಜಯಸಿ-ಚೆನ್ನಾಗಿ ಪೂಜಿಸುತ್ತಿರುವಿ, ತತ್-ಆ ಕಾರಣದಿಂದ, ಭವಾನ್-ನೀನು, ಬ್ರಹ್ಮಣ್ಯಾಗ್ರಣೀಃ-ಬ್ರಾಹ್ಮಣರನ್ನು ಮನ್ನಿಸುವವರಲ್ಲಿ, ಮುಖ್ಯನಾಗಿರುವಿ ||೩೬|| ಯಾವ ಕಾರಣದಿಂ

---

ರುವಳೋ ಆಪ್ರಕಾರವಾಗಿ ಅದ್ವಿತೀಯನಾದ ನೀನು ಸ್ವರೂಪಮಾತ್ರದಿಂದ ಬಹುಪ್ರಕಾರವಾಗಿ ಜಗತ್ತಂ ಸೃಷ್ಟಿಸಿ ಪಾಲನಂಗೆಯ್ದು ಲಯವನಯ್ದಿಸಿದರೂ ಈ ಜಗತ್ತಿನಲ್ಲಿ ತಗುಲದವನಾದ ಕಾರಣದಿಂ ಪರಿಪೂರ್ಣನಾದ ಕಾರಣದಿಂದಲೂ ನಿನ್ನ ಚರಿತ್ರವು ಲೋಕವಿಡಂಬನಾರ್ಥವೇ ಹೊರತು ದಿಟವಲ್ಲವು ||೩೩|| ವರ್ಣಾಶ್ರಮ ಧರ್ಮಸ್ವರೂಪನಾದ ಪರಮಪುರುಷನಾದ ನೀನು ಕಾಲವಿಶೇಷದಲ್ಲಿ ಸ್ವಜನರಕ್ಷಣಾರ್ಥವಾಗಿಯೂ ದುಷ್ಟನಿಗ್ರಹಾರ್ಥವಾಗಿಯೂ ಶುದ್ಧಸತ್ತ್ವಸ್ವರೂಪವಂ ಧರಿಸಿ ಸದಾಚಾರದಿಂದ ವೇದಮಾರ್ಗವಂ ರಕ್ಷಿಸುತ್ತೀಯೆ ||೩೪|| ಪರಮಶುದ್ಧವಾದ ವೇದವೇ ನಿನ್ನ ಅಂತರಂಗರೂಪವು. ಇವು ಯಾವ ವೇದದಲ್ಲಿ ಕಾರ್ಯರೂಪವಾದ ಪ್ರಪಂಚವು ಕಾರಣರೂಪವಾದ ಪ್ರಕೃತಿಯೂ ಇವೆರಡಕ್ಕೂ ಅನ್ಯವಾದ ಬ್ರಹ್ಮವೂ, ತಪಸ್ಸಿನಿಂದಲೂ ವೇದಪಾಠದಿಂದಲೂ ಮನೋನಿಗ್ರಹದಿಂದಲೂ ತಿಳಿಯಲ್ಪಡುವುದೋ, ಅಂತಾ ವೇದವೇ ನಿನ್ನ ಹೃದಯವು ||೩೫|| ಆದಕಾರಣದಿಂದ ವೇದಪ್ರವರ್ತಕವಾದ ಬ್ರಾಹ್ಮಣಕುಲವೇ ವೇದಪ್ರಮಾಣಕನಾದ ನಿನಗೆ ಶ್ರೇಷ್ಠವಾದ ಪೂಜಾಸ್ಥಾನವಾದ್ದರಿಂದ ನೀನೂ ಬ್ರಾಹ್ಮಣಕುಲವಂ ಪೂಜಿಸುವಿ. ಬ್ರಾಹ್ಮಣಪ್ರಿಯರೊಳಗೆ ನೀನೇ ಅಗ್ರೇಸರನಾದವನು ||೩೬|| ಈಗ ನಮ್ಮ ಜನ್ಮವೂ ತಪಸ್ಸೂ ಸಹ ಸಫಲವಾಯಿತು. ನೇತ್ರಂಗಳು ಸಫಲಂಗಳಾದವು. ನೀನು ಸಮಸ್ತ ಶ್ರೇಯಸ್ಸುಗಳಿಗೂ ಅವಧಿ

ವಿದ್ಯಾತಪಸ್ತಪಸೊದೃಶಃ । ತ್ವಯಾಸಂಗವ್ಯಸದ್ಗತ್ಯಾಯತ್ತ್ವಂನಿಶ್ಶ್ರೇಯಸಾಂಪರಃ ॥೨೧॥ನಮ
ಸ್ತಸ್ಮೈಭಗವತೇಕೃಷ್ಣಾಯಾಕುಂಠಮೇಧಸೇ । ಸ್ವಯೋಗಮಾಯಯಾಚ್ಛನ್ನಮಹಿಮ್ನೇಪರಮಾತ್ಮನೇ॥
ನಯಂವಿದುಂತ್ಯಮೀಭೂಪಾಏಕಾರಾಮಾಶ್ಚವೃಷ್ಣಯಃ । ಮಾಯಾಜವನಿಕಾಚ್ಛನ್ನಮಾತ್ಮಾನಂಕಾ
ಲಮೀಶ್ವರಮ್॥೨೨॥ ಯಥಾಶಯಾನಃಪುರುಷಆತ್ಮಾನಂಗುಣತತ್ತ್ವದೃಕ್ । ನಾಮಮಾತ್ರೇಂದ್ರಿಯಾ
ಭಾತಂನವೇದರಹಿತಂಪರಮ್ ॥೨೩॥ಏವಂತ್ವಾನಾಮಮಾತ್ರೇಷುವಿಷಯೇಷ್ವಿಂದ್ರಿಯೇಹಯಾ । ಮಾ
ಯಯಾವಿಭ್ರಮಚ್ಚಿತ್ತೋನವೇದಸ್ಮೃತ್ಯುಪಪ್ಲವಾತ್ ॥೨೪॥ ತಸ್ಯಾದ್ಯತೇದದೃಶಿಮಾಂಘ್ರಿಮಘೌಘ

---

ದ, ತ್ವಂ-ನೀನು ನಿಶ್ಶ್ರೇಯಸಾಂ-ಮೋಕ್ಷಂಗಳಿಗೆ, ಪರಃ-ಅವಧಿಯಾಗಿರುವೆಯೋ, ಸದ್ಗತ್ಯಾ ಸತ್ಪುರುಷರಿಗೆ ಪ್ರಾಪ್ಯನಾಗಿ
ರುವ, ತ್ವಯಾ-ನಿನ್ನೊಡನೆ, ಸಂಗವ್ಯ-ಸೇರಿ ಅದ್ಯ-ಈಗ,ನಃ-ನಮ್ಮ,ಜನ್ಮಸಾಫಲ್ಯಂ-ಹುಟ್ಟಿದ್ದಕ್ಕೆ ಸಾರ್ಥಕ್ಯವು, ವಿದ್ಯಾ
ಯಾಃ-ಜ್ಞಾನಕ್ಕೂ, ತಪಸಃ-ಕರ್ಮ ಮೊದಲಾದಯೋಗಕ್ಕೂ, ದೃಶಃ-ಧ್ಯಾನಾನುಸಂಧಾನಕ್ಕೂ ಸಾರ್ಥಕ್ಯವುಂಟಾಯಿತು ॥೨೧॥
ಅಕುಂಠಮೇಧಸೇ-ಕುಂದವಾಗದ ಪ್ರತಿಭೆಯುಳ್ಳಂಥಾ, ಸ್ವಯೋಗಮಾಯಯಾ-ತನ್ನ ಯುಕ್ತಿಯಾದ ವಂಚಕಶಕ್ತಿಯಿಂದ, ಛನ್ನ
ಮಹಿಮ್ನೇ-ಮುಚ್ಚಲ್ಪಟ್ಟಮಹತ್ವವುಳ್ಳಂಥಾ, ಪರಮಾತ್ಮನೇ-ಪರಮೇಶ್ವರನಾದಂಥಾ, ಭಗವತೇ-ಸರ್ವಜ್ಞನಾದಂಥಾ, ತಸ್ಮೈ
ಕೃಷ್ಣಾಯ, ಆ ಕೃಷ್ಣನಿಗೆ, ನಮಃ-ಐಕ್ಯಾನುಸಂಧಾನರೂಪವಾದ ನಮಸ್ಕಾರವಾಗಲಿ ॥೨೨॥ ಅಮೀಭೂಪಾಃ-ಈ ರಾಜ
ರೂ, ಏಕಾರಾಮಾಃ-ಒಂದೇ ಸ್ಥಳದಲ್ಲಿ ವಿಹಾರವುಳ್ಳಂಥಾ, ವೃಷ್ಣಯಶ್ಚ-ಯಾದವರೂ ಕೂಡ, ಮಾಯಾಜವನಿಕಾಚ್ಛನ್ನಂ-ಮೋ
ಹಕಶಕ್ತಿಯೆಂಬ ತೆರೆಬಟ್ಟೆಯಿಂದ ಹೊದ್ದಿಸಲ್ಪಟ್ಟಂತೆ ಗೋಚರವಾಗದೇಇರುವ, ಕಾಲಂ-ಜನ್ಯಪ್ರಪಂಚಕ್ಕೆ ನಿಮಿತ್ತಕಾರ
ಣವಾದ, ಈಶ್ವರಂ-ನಿಯಾಮಕನಾದ,ಆತ್ಮಾನಂ-ತಮ್ಮ ಸ್ವರೂಪವಾದ ಯಂ-ಯಾವ ಕೃಷ್ಣನನ್ನು, ನವಿಂದಂತಿ-ತಿಳಿಯರೋ॥
ಶಯಾನಃ-ಸ್ವಪ್ನವನನುಭವಿಸುತ್ತಿರುವ, ಪುರುಷಃ-ಮನುಷ್ಯನು, ಗುಣತತ್ವದೃಕ್-ಸ್ವಪ್ನದ ಗುಣಗಳಲ್ಲಿ ಸತ್ಯಬುದ್ಧಿಯುಳ್ಳವನಾ
ದ್ದರಿಂದ, ನಾಮಮಾತ್ರೇಂದ್ರಿಯಾಭಾತಂ-ಹೆಸರಿಗೆಮಾತ್ರವೇ ಸತ್ಯವಾಗಿರುವಂತೆ ಮನಸ್ಸಿನಿಂದ ತೋರುತ್ತಿರುವ,ಆತ್ಮಾನಂ-
ಅನೇಕವಿಧರೂಪವುಳ್ಳ ತನ್ನನ್ನು, ಯಥಾ-ಹೇಗೆ, ವೇದ-ತಿಳಿಯುವನೋ, ರಹಿತಂ-ಅಂಥಾ ಭ್ರಾಂತಿರೂಪವು ಇಲ್ಲದಂಥಾ,
ಪರಂ-ಇತರನಾದಾತ್ಮನನ್ನು, ನವೇದ-ತಿಳಿಯನೋ ॥೨೩॥ ಬ್ರಹ್ಮನ್-ಪರಮೇಶ್ವರನೇ, ಅಯಂಜನಃ-ಈ ಪಾಮರಲೋಕವು,ನಾ
ಮಮಾತ್ರೇಂದ್ರಿಯೇಹಯಾ-ನಾಮಮಾತ್ರ-ಕನಸಿನಂತೆಹೆಸರಿಗೆಮಾತ್ರ ತೋರುವವಿಷಯದಲ್ಲಿ, ಇಂದ್ರಿಯೇಹಯಾ-ಇಂದ್ರಿಯಂ
ಗಳಿಂದಾಗುವ ಪ್ರವರ್ತನರೂಪವಾದ, ಮಾಯಯಾ-ಮೋಹಶಕ್ತಿಯಿಂದ, ವಿಭ್ರಮಚ್ಚಿತ್ತಃ-ಭ್ರಾಂತಚಿತ್ತನಾಗಿ, ಏವಂ-ಹೀ
ಗೆ, ಸ್ಮೃತ್ಯುಪಪ್ಲವಾತ್-ಸ್ವರೂಪಾನುಭವದ ನೆನಪು ನಾಶವಾಗಿರುವುದರಿಂದ, ತ್ವಾ-ನಿನ್ನನ್ನು, ನವೇದ-ಅರಿಯನು ॥೨೪॥ತಸ್ಯ

---

ದಾಗಿರುವುದರಿಂದ ಸಜ್ಜನರಿಗೆಗತಿಯಾದ ನಿನ್ನ ಸಂಗವಂ ಪಡೆದು ಧನ್ಯರಾದೆವು ॥೨೧॥ ಅವ್ಯಾಹತಬುದ್ಧಿಯುಳ್ಳ
ವನಾಗಿ ಸ್ವಕೀಯವಾದ ಯೋಗಮಾಯೆಯಿಂದ ಮರೆ ಮಾಡಲ್ಪಟ್ಟ ನಿಜ ಮಹಿಮೆಯುಳ್ಳವನಾಗಿರುವ ಪರಮಾ
ತ್ಮನಾದ ಭಗವಂತನಾದ ಶ್ರೀ ಕೃಷ್ಣನಿಗೋಸುಗ ನಮಸ್ಕಾರವು ॥೨೨॥ ಈ ರಾಜರುಗಳು ಒಂದೇ ಸ್ಥಾನದಲ್ಲಿ
ನಿನ್ನ ಸಹವಾಸದಲ್ಲಿ ಇದ್ದಂತಾವರಾದರೂ ಮಾಯೆಯೆಂಬ ತೆರೆಯಿಂದ ತಿರೋಹಿತನಾಗಿ ಅಂತರ್ಯಾಮಿಯಾ
ದ ಸೃಷ್ಟ್ಯಾದಿ ಕಾರಣನಾದ ಸರ್ವನಿಯಾಮಕನಾದ ನಿನ್ನನ್ನರಿಯರು ॥೨೩॥ ಎಂತು ಸ್ವಪ್ನಗಳನನುಭವಿಸು
ವ ಪುರುಷನು ಸ್ವಪ್ನದೊಳು ತೋರುವ ವಸ್ತುಗಳಲ್ಲಿ ಯಥಾರ್ಥವೆಂಬ ಬುದ್ಧಿಯುಳ್ಳವನಾಗಿ ರೂಪಮಾತ್ರ
ವಾಗಿ ಮನಸ್ಸಿನಿಂದ ನೋಡಲ್ಪಟ್ಟ ಸಿಂಹವ್ಯಾಘ್ರಾದಿ ರೂಪವಾದವನನ್ನಾಗಿ ತನ್ನಂ ತಿಳಿಯುವನೋ, ಅನ್ಯವಾ
ದ ಸ್ವಕೀಯವಾದ ದೇವತಾದಿ ರೂಪವ ತಿಳಿಯುವುದಿಲ್ಲವೋ ಹಾಗೆ ಸರ್ವಾಂತರ್ಯಾಮಿಯಾದ ನಿನ್ನನರಿಯ
ರು ॥೨೪॥ ಎಲೈ ಪರಬ್ರಹ್ಮವಾದ ಶ್ರೀ ಕೃಷ್ಣನೇ, ಈ ಮೋರೆ ಈ ಜನ್ಮವು ಸ್ವಪ್ನವಸ್ತುಗಳಂತೆ ತೋರುವಿಕೆ
ಮಾತ್ರವುಳ್ಳ ಮಿಥ್ಯಾ ವಿಷಯಗಳಲ್ಲಿ ಇಂದ್ರಿಯ ಪ್ರವರ್ತನವೆಂಬ ಮಾಯೆ ಯಿಂದ ಭ್ರಾಂತಿಯನೈದಿದ ಚಿತ್ತ
ವುಳ್ಳದ್ದಾಗಿ ವಿವೇಕವಿಲ್ಲದೆ ಮಿಥ್ಯಾನಾಮ ರೂಪಗಳಿಂದ ರಹಿತನಾದ ನಿನ್ನಂ ತಿಳಿಯುವುದಿಲ್ಲ॥೨೫॥ ಪಾಪ ಸಮೂ

ಮರ್ಷತೀರ್ಥಾಸ್ಪದಂ ಹೃದಿ ಕೃತಂ ಸುವಿಪಕ್ವಯೋಗೈಃ । ಉತ್ಸಿಕ್ತಭಕ್ತ್ಯುಪಹೃತಾಶಯಜೀವಕೋಶಾ
ಆಪುರ್ಭವದ್ಗತಿಮಥಾನುಗೃಹಾಣಭಕ್ತಾನ್ ॥೨೬॥ ಇತ್ಯನುಜ್ಞಾಪ್ಯದಾಶಾರ್ಹಂ ಧೃತರಾಷ್ಟ್ರಂ ಯುಧಿ
ಷ್ಠಿರಮ್ । ರಾಜರ್ಷೇ ಸ್ವಾಶ್ರಮಾನ್ಗಂತುಂ ಮುನಯೋ ದಧಿರೇ ಮನಃ ॥೨೭॥ ತದ್ವೀಕ್ಷ್ಯ ತಾನನುವ್ರಜ್ಯ
ವಸುದೇವೋ ಮಹಾಯಶಾಃ । ಪ್ರಣಮ್ಯ ಚೋಪಸಂಗೃಹ್ಯ ಬಭಾಷೇದಂ ಸುಯಂತ್ರಿತಃ ॥೨೮॥ ವಸುದೇವಃ ॥
ನಮೋ ವಃ ಸರ್ವದೇವೇಭ್ಯ ಋಷಯಃ ಶ್ರೋತುಮರ್ಹಥ । ಕರ್ಮಣಾ ಕರ್ಮನಿರ್ಹಾರೋ ಯಥಾ ಸ್ಯಾನ್ನಸ್ತದು
ಚ್ಯತಾಮ್ ॥೨೯॥ ನಾರದ ॥ ನಾತಿಚಿತ್ರಮಿದಂ ವಿಪ್ರಾ ವಸುದೇವೋ ಬುಭುತ್ಸಯಾ । ಕೃಷ್ಣಂ ಮತ್ವಾರ್ಭ
ಕಂ ಯನ್ನಃ ಪೃಚ್ಛತಿ ಶ್ರೇಯ ಆತ್ಮನಃ ॥೩೦॥ ಸನ್ನಿಕರ್ಷೋಽತ್ರ ಮರ್ತ್ಯಾನಾಮನಾದರಣಕಾರಣಮ್ । ಗಾಂ

---

ತೇ-ಅಂಥವನಾದ ನಿನ್ನ, ಅಘೌಘಮರ್ಷತೀರ್ಥಾಸ್ಪದಂ-ಪಾಪರಾಶಿಗಳನ್ನು ನಾಶಮಾಡುವ ಗಂಗಾತೀರ್ಥಕ್ಕೆ ನಿಮಿತ್ತವಾದಂಥಾ, ಸುವಿಪಕ್ವಯೋಗೈಃ-ಸಿದ್ಧತಪಸ್ಕರಾದವರಿಂದ, ಹೃದಿ-ಮನಸ್ಸಿನಲ್ಲಿ, ಕೃತಂ-ಧ್ಯಾನಧಾರಣಗಳಿಂದ ಸೇವಿಸಲ್ಪಟ್ಟಂಥಾ ಅಂಘ್ರಿಂ-ಚರಣವನ್ನು, ದದೃಶಿಮ-ಕಂಡೆವು. ಉತ್ಸಿಕ್ತಭಕ್ತ್ಯುಪಹೃತಾಶಯಜೀವಕೋಶಾಃ-ಅತಿಶಯವಾದ ಭಕ್ತಿಯಿಂದ, ಅಪಹರಿಸಲ್ಪಟ್ಟ ಅಹಂಕಾರವೆಂಬ ಆವರಣಾಜ್ಞಾನವುಳ್ಳವರು, ಭವದ್ಗತಿಂ-ನಿನ್ನ ಪದವನ್ನು, ಆಪುಃ-ಸೇರಿದರು. ಅತಃ-ಅದರದೆಸೆಯಿಂದ, ಭಕ್ತಾನ್-ಸೇವಕರಾದ ನಮ್ಮನ್ನು, ಅನುಗೃಹಾಣ-ಅನುಗ್ರಹಿಸು ॥೨೬॥ ರಾಜರ್ಷೇ-ಪರೀಕ್ಷಿದ್ರಾಯನೇ! ತೇ ಮುನಯಃ-ಆ ಮಹರ್ಷಿಗಳು ಇತಿ-ಹೀಗೆ ಹೇಳಿ, ದಾಶಾರ್ಹಂ-ಕೃಷ್ಣನನ್ನೂ, ಧೃತರಾಷ್ಟ್ರಂ-ಅಂಧಭೂಪತಿಯನ್ನೂ, ಯುಧಿಷ್ಠಿರಂ-ಧರ್ಮರಾಯನನ್ನೂ, ಅನುಜ್ಞಾಪ್ಯ-ಸಮ್ಮತಿಗೊಳಿಸಿ, ಸ್ವಾಶ್ರಮಾನ್-ತಮ್ಮ ತಪೋವನಂಗಳಂ ಕುರಿತು, ಗಂತುಂ-ಹೋಗುವುದಕ್ಕೆ, ಮನಃ-ಸಂಕಲ್ಪವನ್ನು, ದಧಿರೇ-ಧರಿಸಿದರು ॥೨೭॥ ಮಹಾಯಶಾಃ-ಅತಿಶಯಕೀರ್ತಿಯುಳ್ಳ, ವಸುದೇವಃ-ಕೃಷ್ಣನ ತಂದೆಯು, ತತ್-ಆ ಮಹರ್ಷಿಗಳ ಪ್ರಯಾಣವನ್ನು, ವೀಕ್ಷ್ಯ-ನೋಡಿ, ತಾನ್-ಆ ಋಷಿಗಳನ್ನು, ಅನುವ್ರಜ್ಯ-ಅನುಸರಿಸಿಹೋಗಿ, ಪ್ರಣಮ್ಯ ಚ-ನಮಸ್ಕಾರವನ್ನೂ ಮಾಡಿ, ಉಪಸಂಗೃಹ್ಯ-ಕಾಲುಹಿಡಿಕೊಂಡು, ಸುಯಂತ್ರಿತಃ-ಕರ್ಮಬದ್ಧನಾಗಿ, ಇದಂ-ಈ ಮುಂದೆ ಹೇಳುವ ವಚನವನ್ನು, ಬಭಾಷೇ-ನುಡಿದನು ॥೨೮॥ ಸರ್ವದೇವೇಭ್ಯಃ-ಸಕಲದೇವತೆಗಳೂ ಉಳ್ಳ, ವಃ-ನಿಮಗೆ, ನಮಃ-ನಮಸ್ಕಾರವು. ಋಷಯಃ-ಮಹರ್ಷಿಗಳಿರಾ! ಶ್ರೋತುಂ-ನನ್ನ ಬಿನ್ನಪವಂ ಕೇಳುವುದಕ್ಕೆ, ಅರ್ಹಥ-ತಕ್ಕವರಾಗಿರುವಿರಿ, ಕರ್ಮಣಾ-ಪುಣ್ಯಕರ್ಮದಿಂದ, ಕರ್ಮನಿರ್ಹಾರಃ-ಪಾಪಕರ್ಮಕ್ಕೆ ಪರಿಹಾರವು, ಯಥಾ-ಹೇಗೆ, ಸ್ಯಾತ್-ಆದೀತೋ, ತತ್-ಅದು, ನಃ-ನಮಗೆ, ಉಚ್ಯತಾಂ-ನಿಮ್ಮಿಂದ ಹೇಳಲ್ಪಡಲಿ ॥೨೯॥ ಎನುತಲು-ನಾರದಂ ಪೇಳಿದ ನೆಂತೆನೆ,--ವಿಪ್ರಾಃ-ಬ್ರಾಹ್ಮಣರಿರಾ! ಯತ್-ಯಾವ ಕಾರಣ

---

ಹನಂ ಪರಿಹರಿಸುವ ಗಂಗಾ ತೀರ್ಥಕ್ಕೆ ಆಶ್ರಯವಾದ ಪರಿಪೂರ್ಣವಾದ ಯೋಗಿಗಳಿಂ ಹೃದಯ ಕಮಲದಲ್ಲಿ ಧ್ಯಾನಿಸಲ್ಪಟ್ಟ ನಿನ್ನ ಪಾದ ಪದ್ಮವಂ ಬಹು ಪುಣ್ಯಾತಿಶಯದಿಂದ ನೋಡಿದೆವು. ಅಧಿಕವಾದ ಭಕ್ತಿಯಿಂದ ಪರಿಹರಿಸಲ್ಪಟ್ಟ ಜೀವ ಕೋಶಗಳುಳ್ಳವರು ನಿನ್ನನೆಯ್ದುವರು ॥೨೬॥ ಅಂತೆಂದು ಮುನಿಗಳು ಶ್ರೀಕೃಷ್ಣನಂ ಸ್ತುತಿಸಿ ಅಪ್ಪಣೆಯಂ ತೆಗೆದು ಕೊಂಡು ಧೃತರಾಷ್ಟ್ರನಂ ಧರ್ಮನಂ ಸಹ ಅಪ್ಪಣೆಯಂ ಕೇಳಿ ತಮ್ಮ ಆಶ್ರಮಂಗಳಂ ಕುರಿತು ತೆರಳುವುದಕ್ಕೆ ಯತ್ನವಂ ಮಾಡಿದರು ॥೨೭॥ ಆಗ ವಸುದೇವನು ತೆರಳಿ ತೆರಳಿ ಹೋಗುತ್ತಲಿರುವ ಆ ಮುನಿಗಳಂ ಕಳುಹಿಸುವುದಕ್ಕೆ ಸಂಗಡ ಬಂದು ನಮಸ್ಕರಿಸಿ ಎರಡು ಕೈಗಳಿಂದಲೂ ಆ ಋಷಿಗಳ ಪಾದಂಗಳಂ ಪಿಡಿದು ವಿಜ್ಞಾಪಿಸಿದನು ॥೨೮॥ ಸರ್ವ ದೇವತೆಗಳೂ ಯಾರಲ್ಲಿ ವಾಸಂಗೆಯ್ವರೋ ಅಂತಾ ನಿಮಗೋಸುಗ ನಮಸ್ಕಾರವು. ಎಲೈ ಋಷಿಗಳಿರಾ, ನನ್ನ ವಾಕ್ಯವಂ ಲಾಲಿಸಿ ಯಾವ ಕರ್ಮದಿಂ ಕರ್ಮಗಳಲ್ಲಿ ವಿರತಿ ಯುಂಟಾಗುವುದೋ ಅದು ನಿಮ್ಮಿಂದ ಪೇಳಲ್ಪಡಲಿ ॥೨೯॥ ಎಂದು ವಸುದೇವನು ಪ್ರಾರ್ಥನಂಗೆಯ್ಯುತ್ತಿರಲಾಗಿ ಶ್ರೀಕೃಷ್ಣನಂ ಬಿಟ್ಟು ನಮ್ಮಂ ಕೇಳುವುದಕ್ಕೆ ನಿಮಿತ್ತವೇನೆಂದು ಆಶ್ಚರ್ಯ ಪಡುತ್ತಲಿರುವ ಋಷಿಗಳಂ ಕುರಿತು ನಾರದಮುನಿಯು ನುಡಿದನೆಂತೆನೆ,- ಎಲೈ ಬ್ರಾಹ್ಮಣರಿರಾ! ವಸುದೇವನು ಶಾಸ್ತ್ರಾರ್ಥವಂ ತಿಳಿಯಲಿಚ್ಛೆಯಿಂದ

ಗಂಹಿತ್ವಾ ಯಥಾನ್ಯಾಂಭಸ್ತತ್ರತ್ಯೋ ಯಾತಿ ಶುದ್ಧಯೇ ॥೨೧॥ ಯಸ್ಯಾನುಭೂತಿಃ ಕಾಲೇನ ಲಯೋತ್ಪತ್ತ್ಯಾದಿನಾಸ್ಯ ವೈ । ಸ್ವತೋಽನ್ಯಸ್ಮಾಚ್ಚ ಗುಣತೋ ನ ಕುತಶ್ಚಿನ್ನ ರಿಷ್ಯತಿ ॥೨೨॥ ತಂ ಕ್ಲೇಶಕರ್ಮಪರಿಪಾಕಗುಣಪ್ರವಾಹೈರವ್ಯಾಹತಾನುಭವಮೀಶ್ವರಮದ್ವಿತೀಯಮ್ । ಪ್ರಾಣಾದಿಭಿಸ್ಸ್ವವಿಭವೈರುಪಗೂಢಮಜ್ಞೋ ಮನ್ಯೇತ ಸೂರ್ಯಮಿವ ಮೇಘಹಿಮೋಪರಾಗೈಃ ॥೨೩॥ ಶ್ರೀಶುಕಃ॥ ಅಥೋಚುರ್ಮುನಯೋ ರಾಜನ್ನಾ

---

ಹಿಂಪ್ಪ, ವಸುದೇವಃ-ಕೃಷ್ಣನ ತಂದೆಯು, ಕೃಷ್ಣಂ-ನಾರಾಯಣನನ್ನು, ಅರ್ಭಕಂಮತ್ವಾ-ಸಾಧಾರಣನಾದ ಹುಡುಗನೆಂದು ತಿಳಿದು, ಋಷೀನ್ ಪೃಚ್ಛಯಾ-ಜಿಜ್ಞಾಸೆಯಿಂದ, ಆತ್ಮನಃ-ತನಗೆ, ಶ್ರೇಯಃ-ಪುಣ್ಯಸಾಧನವನ್ನು, ನಃ-ನಮ್ಮಂಕುರಿತು, ಪೃಚ್ಛತಿ-ಕೇಳುತ್ತಿದ್ದಾನೆಯೋ, ತತ್-ಆ ಕಾರಣದಿಂದ, ಇದಂ-ಹೀಗೆಕೇಳಿದ್ದು, ನಾತಿಚಿತ್ರಂ-ಬಹಳಆಶ್ಚರ್ಯವಲ್ಲವು ॥೨೦॥ ಅತ್ರ-ಈ ವಿಷಯದಲ್ಲಿ, ಮರ್ತ್ಯಾನಾಂ-ಮನುಷ್ಯರಿಗೆ, ಸನ್ನಿಕರ್ಷಃ-ಸಮೀಪದಲ್ಲಿರೋಣವೇ, ಅನಾದರಣಕಾರಣಂ-ಅಲಕ್ಷ್ಯತೆಗೆ ನಿಮಿತ್ತವಾಗುವುದು, ತತ್ರತ್ಯಃ-ಆಗಂಗಾತೀರದಲ್ಲಿರುವವನು, ಶುದ್ಧಯೇ-ತನ್ನ ಪರಿಶುದ್ಧಿಗೋಸುಗ, ಗಂಗಾಂಹಿತ್ವಾ-ಹತ್ತಿರದಲ್ಲಿರುವ ಗಂಗೆಯಂಬಿಟ್ಟು, ಅನ್ಯಾಂಭಃ-ದೂರದಲ್ಲಿರುವ ಬೇರೆನೀರಂಕುರಿತು, ಯಥಾ-ಹೇಗೆ, ಯಾತಿ-ಹೋಗುತ್ತಿದ್ದಾನೆಯೋ, ಹಾಗೆಯೇಸರಿ, ಯಸ್ಯ-ಯಾವ ಕೃಷ್ಣನ, ಅನುಭೂತಿಃ-ಜ್ಞಾನವು, ಕಾಲೇನ-ಹಣ್ಣಾಗುವಕಾಲದಿಂದ ಸೌತೆಯಕಾಯಿಯಂತೆ, ಅಸ್ಯ-ಈ ಪ್ರಪಂಚದ, ಲಯೋತ್ಪತ್ತ್ಯಾದಿನಾ-ನಾಶಸೃಷ್ಟಿಮೊದಲಾದ ಕಾಲದಿಂದಲೂ, ಸ್ವತಃ-ತಾನಾಗಲೇ, ನಾಶವಾಗುವಮಿಂಚಿನಂತಾ ಸ್ವಭಾವದಿಂದಲೂ, ಅನ್ಯಸ್ಮಾಚ್ಚ-ದೊಣ್ಣೆಪೆಟ್ಟಿನಿಂದ ನಾಶವಾಗುವಘಟದಂತೆ ಇತರದಿಂದಲೂ, ಗುಣತಃ-ಬೇರೆಬಣ್ಣ ಹುಟ್ಟುವುದರಿಂದ ಮುಂಚಿನಬಣ್ಣ ಹೋಗುವದ್ರವ್ಯದಂತೆಯೂ, ನಕುತಶ್ಚಿತ್-ಯಾವುದರಿಂದಲೂ, ನರಿಷ್ಯತಿವೈ-ನಾಶವನ್ನು ಹೊಂದುವದಿಲ್ಲವಷ್ಟೆ ॥೨೨॥ ಅಜ್ಞಃ-ಸ್ವರೂಪವನ್ನರಿಯದವನು, ಮೇಘಹಿಮೋಪರಾಗೈಃ-ಮೋಡದಿಂದಲೂ ಮಂಜಿನಿಂದಲೂ ರಾಹುಗ್ರಹದಿಂದಲೂ, ಸೂರ್ಯಮಿವ-ನೇಸರಂಕಂಡಂತೆ, ಕ್ಲೇಶ. ಪಾಪ್ಮ,ಕ್ಲೇಶ-ರಾಗಾದಿ ಪಂಚಕ್ಲೇಶಗಳಿಂದಾದ, ಕರ್ಮ-ಪುಣ್ಯಪಾಪಗಳಿಂದಲೂ, ಪರಿಪಾಕ-ಅವುಗಳ ಫಲವಾದ ಸುಖದುಃಖಗಳಿಂದಲೂ, ಗುಣಪ್ರವಾಹೈಃ-ಸತ್ವರಜಸ್ತಮೋಗುಣಂಗಳು ಮರಳಿಮರಳಿ ಅರಳಿ ಹೊರ್ಳುತ್ತಿರುವ ಪ್ರಕೃತಿಯ ಪರಿವಾಹಂಗಳಿಂದಲೂ, ಸ್ವವಿಭವೈಃ-ತನ್ನ ಕಾರ್ಯಂಗಳಾದ, ಪ್ರಾಣಾದಿಭಿಶ್ಚ- ಪ್ರಾಣವಾಯುಮೊದಲಾದ ತತ್ವಂಗಳಿಂದಲೂ, ಅವ್ಯಾಹತಾನುಭವಂ-ಅಖಂಡಿತವಾದ ಜ್ಞಾನಮುಳ್ಳ, ಅದ್ವಿತೀಯಂ-ಎರಡನೆವಸ್ತುವಿಲ್ಲದ, ತಮೀಶ್ವರಂ-ಆ ಪರಮಾತ್ಮನಾದ ಕೃಷ್ಣನನ್ನು, ಉಪಗೂಢಂ-ಮುಚ್ಚಲ್ಪಟ್ಟಿರುವಮನುಷ್ಯನನ್ನಾಗಿ, ಮನ್ಯೇತ-ತಿಳಿದಾನು ॥೨೩॥ ರಾಜನ್_ಪರೀಕ್ಷಿದ್ರಾಜನೆ! ಅಥ-ಆ ಬಳಿಕ, ಸರ್ವೇಷಾಂರಾಜ್ಞಾಂ-ಸಕಲರಾಜರೂ, ಶೃಣ್ವತಾಂಸತಾಂ-ಕೇಳುತ್ತಿ

---

ಶ್ರೀ ಕೃಷ್ಣನಂ ಬಿಟ್ಟು ನಮ್ಮಂ ಪ್ರಶ್ನೆಗೆಯ್ದುದಕೆ ಕಾರಣವು ಅತ್ಯಾಶ್ಚರ್ಯಕರವಲ್ಲವು ॥೨೦॥ ಈ ವಿಷಯದಲ್ಲಿ ಸರ್ವದಾ ಸಮೀಪದಲ್ಲಿರುವುದೇ ಕಾರಣವು- ಅದೆಂತೆಂದರೆ-ಮನುಷ್ಯನು ಸಮೀಪದಲ್ಲಿರುವ ಸಂಜೀವಿನಿಯನ್ನಾದರೂ ಸಾಧಾರಣವಾದ ತೃಣದಂತೆ ಅನಾದರಣಂಗೆಯ್ವವನು, ಗಂಗಾತೀರದಲ್ಲಿ ವಾಸಂಗೆಯ್ವಮನುಜನು ಆ ಗಂಗಾತೀರ್ಥಮಂ ಬಿಟ್ಟು ತನ್ನ ಶುದ್ಧಿಗೋಸುಗ ಇತರ ಜಲವನಪೇಕ್ಷಿಸುವನ ಹಾಗೆ ಸಮೀಪಸ್ಥ ಪದಾರ್ಥಂಗಳಲ್ಲಿ ಜನರಿಗೆ ಆದರವಿರುವುದಿಲ್ಲ ॥೨೧॥ ಯಾವ ಪರಮಾತ್ಮ ಸ್ವರೂಪವಾದ ಜ್ಞಾನಕ್ಕೆ ಕಾಲದಿಂದಲೂ ತನ್ನಿಂದಲೂ ಅನ್ಯವಸ್ತುವಿನಿಂದಲೂ ಪ್ರಪಂಚ ಸೃಷ್ಟಿಸ್ಥಿತಿಲಯಾದಿಗಳಿಂದಲೂ ಪ್ರಕೃತಿ ಗುಣಗಳಿಂದಲೂ ಉಪಹತಿಯಿಲ್ಲವೋ ॥೨೨॥ ತನ್ನಿಂದಲೇ ಕಲ್ಪಿತಂಗಳಾದ ಮೇಘ ಹಿಮ ರಾಹು ಬಿಂಬಗಳಿಂದ ಆಚ್ಛಾದಿತನಾದ ಸೂರ್ಯನಂತೆ ಸ್ವಮಾಯಾ ಕಲ್ಪಿತಂಗಳಿಂದ ಕ್ಲೇಶಗಳಿಂದಲೂ ತಜ್ಜನ್ಯಗಳಾದ ಕರ್ಮಗಳಿಂದಲೂ ತತ್ಫಲಂಗಳಾದ ಸುಖದುಃಖಗಳಿಂದಲೂ ಸತ್ವಾದಿ ಗುಣ ಪ್ರವಾಹಂಗಳಿಂದಲೂ ಪ್ರಾಣಾದಿಗಳಿಂದಲೂ ಆಚ್ಛಾದಿತನಾಗಿರುವ ಯಾವುದರಿಂದಲೂ ಪ್ರತಿಹತವಲ್ಲದ ಅನುಭವ ಸ್ವರೂಪನಾದ ದ್ವಿತೀಯ ವಸ್ತು ರಹಿತನಾದ ಪರಮೇಶ್ವರನಾದ ಶ್ರೀ ಕೃಷ್ಣನಂ ಮೂಢ ಜನರು ಸಾಧಾರಣ ಮನುಷ್ಯನನ್ನಾಗಿ ತಿಳಿಯುವರು ॥೨೩॥ ಎಂದು ನಾರದಮುನಿಯು ಶ್ರೀ ಭಗವಂತನ ಸ್ವರೂಪವಂ ಋಷಿಗಳಂ ಕುರಿತು ಪೇಳುತಲೂ ಆ ಋಷಿಗಳು ವಸುದೇವನಂ ಕುರಿತು ಸಮಸ್ತರಾಜ

ಭಾಷ್ಯಾನಕದುಂದುಭಿಮ್ | ಸರ್ವೇಷಾಂ ಶೃಣ್ವತಾಂ ರಾಜ್ಞಾಂ ತಥೈವಾಚ್ಯುತರಾಮಯೋಃ ||೩೪|| ಕರ್ಮಣಾ ಕರ್ಮನಿರ್ಹಾರ ಏಷ ಸಾಧುನಿರೂಪಿತಃ | ಯಚ್ಛ್ರದ್ಧಯಾ ಯಜೇದ್ವಿಷ್ಣುಂ ಸರ್ವಯಜ್ಞೇಶ್ವರಂ ಮಖೈಃ || ಚಿತ್ತಸ್ಯೋಪಶಮೋಽಯಂ ವೈ ಕವಿಭಿಶ್ಶಾಸ್ತ್ರಚಕ್ಷುಷಾ | ದರ್ಶಿತಸ್ಸುಗಮೋ ಯೋಗೋ ಧರ್ಮಶ್ಚಾತ್ಮಮುದಾವಹಃ ||೩೬|| ಅಯಂ ಸ್ವಸ್ತ್ಯಯನಃ ಪಂಥಾ ದ್ವಿಜಾತೇರ್ಗೃಹಮೇಧಿನಃ | ಯಚ್ಛ್ರದ್ಧಯಾಪ್ತವಿತ್ತೇನ ಶುಕ್ಲೇನೇಜ್ಯೇತ ಪೂರುಷಃ ||೩೭|| ವಿತ್ತೈಷಣಾಂ ಯಜ್ಞದಾನೈರ್ಗೃಹೈರ್ದಾರಸುತೈಷಣಾಮ್ | ಆತ್ಮಲೋಕೈಷಣಾಂ ದೇವ ಕಾಲೇನ ವಿಸೃಜೇದ್ಬುಧಃ ||೩೮|| ಗ್ರಾಮೇ ತ್ಯಕ್ತೈಷಣಾಸ್ಸರ್ವೇ ಯಯುರ್ಧೀರಾಸ್ತಪೋ

---

ರುವ ರಾಜರು ಕೇಳುತ್ತಿರುವಲ್ಲಿ, ತಥೈವ-ಹಾಗೆಯೇ, ಅಚ್ಯುತರಾಮಯೋಃ ಶೃಣ್ವತೋಃ ಸತೋಃ-ಕೃಷ್ಣ ಬಲರಾಮರೂ ಕೇಳುವರಾಗುತ್ತಿರುವಲ್ಲಿ, ಮುನಯಃ-ಮಹರ್ಷಿಗಳು, ಆನಕದುಂದುಭಿಂ-ವಸುದೇವನನ್ನು, ಅಭಾಷ್ಯ-ಸಂಬೋಧಿಸಿ, ಊಚುಃ-ನುಡಿದರು|| ಸರ್ವಯಜ್ಞೇಶ್ವರಂ-ಸಕಲದೇವಪೂಜಾಕರ್ಮಂಗಳಿಗೂ ನಿಯಾಮಕನಾದಂಥಾ, ವಿಷ್ಣುಂ-ವ್ಯಾಪಕವಸ್ತುವಾದ ಕೃಷ್ಣನನ್ನು, ಶ್ರದ್ಧಯಾ ಆವಶ್ಯಕವಾದ ನಿಷ್ಠೆಯೊಡನೆ, ಮಖೈಃ-ಯಾಗಕರ್ಮಂಗಳಿಂದ, ಯಜೇದಿತಿ ಯತ್-ಅರ್ಚಿಸಬೇಕೆಂಬುವುದು ಯಾವುದುಂಟೋ, ಏಷಃ-ಇದು, ಕರ್ಮಣಾ-ಪುಣ್ಯಕರ್ಮದಿಂದ, ಕರ್ಮನಿರ್ಹಾರಃ-ಪಾಪಕರ್ಮಪರಿಹಾರವೆಂದು, ಸಾಧು-ಚನ್ನಾಗಿ, ನಿರೂಪಿತಃ-ಪ್ರತಿಪಾದಿಸಲ್ಪಟ್ಟಿದೆ ||೩೫|| ಅಯಂ-ಈ ಮಾರ್ಗವು, ಚಿತ್ತಸ್ಯ-ಮನಸ್ಸಿನ, ಉಪಶಮಃ-ಶಾಂತಿಗೆ ಹೇತುವಾಗಿರುವುದು, ಸುಗಮಃ-ಪ್ರವೃತ್ತಿಗೆ ಆಶ್ರಯವಾದ್ದರಿಂದ ಸುಲಭವಾಗಿರುವುದು. ಧರ್ಮಃ-ಅವಶ್ಯಕರ್ತವ್ಯವಾಗಿರುವ. ಆತ್ಮಮುದಾವಹಃ-ಆತ್ಮನಿಗೆ ಸಂತೋಷವನ್ನು ಮಾಡುವಂಥಾ, ಯೋಗಶ್ಚ-ಮೋಕ್ಷೋಪಾಯವಾಗಿಯೂ ಇರುವುದೆಂದು, ಶಾಸ್ತ್ರಚಕ್ಷುಷಾ-ಶಾಸ್ತ್ರದೃಷ್ಟಿಯಿಂದ, ಕವಿಭಿಃ-ಪಂಡಿತರಿಂದ, ದರ್ಶಿತೋ ವೈ-ತೋರಿಸಲ್ಪಟ್ಟಿರುವುದಲ್ಲವೆ ||೩೬|| ಶ್ರದ್ಧಯಾ-ಆವಶ್ಯಕ ಬುದ್ಧಿಯಿಂದಲೂ, ನಿಷ್ಕಾಮಬುದ್ಧಿಯಿಂದಲೂ, ಶುಕ್ಲೇನ-ಶುದ್ಧವಾದ, ಆಪ್ತವಿತ್ತೇನ-ಸಂಪಾದಿತದ್ರವ್ಯದಿಂದ, ಪೂರುಷಃ-ಈಶ್ವರನು, ಇಜ್ಯೇತೇತಿ ಯತ್-ಆರಾಧಿಸಲ್ಪಡುವನೆಂಬುವುದಾವುದುಂಟೋ, ಅಯಂ ಪಂಥಾಃ-ಈ ದಾರಿಯು, ಗೃಹಮೇಧಿನಃ-ಗೃಹಸ್ಥಾಶ್ರಮವುಳ್ಳ, ದ್ವಿಜಾತೇಃ-ಬ್ರಾಹ್ಮಣಂಗೆ, ಸ್ವಸ್ತ್ಯಯನಃ-ಕ್ಷೇಮವನ್ನು ಹೊಂದಿಸುವುದಾಗಿದೆ||೩೭|| ಯಜ್ಞದಾನೈಃ-ಯಾಗಗಳಿಂದಲೂ ದಾನಗಳಿಂದಲೂ, ವಿತ್ತೈಷಣಾಂ-ಧನದ ಇಚ್ಛೆಯನ್ನೂ, ಗೃಹೈಃ-ಗೃಹಸ್ಥಾಶ್ರಮಕ್ಕೆ ತಕ್ಕ ಭೋಗಗಳಿಂದ ದಾರಸುತೈಷಣಾಂ-ಹೆಂಡಿರುಮಕ್ಕಳ ಆಶೆಯನ್ನೂ, ದೇವಕಾಲೇನ-ದೇವಕ್ಲೃಪ್ತವಾದ ಮರಣಕಾಲದ ಚಿಂತೆಯಿಂದ, ಆತ್ಮಲೋಕೈಷಣಾಂ-ದೇಹದ ಆಶೆಯನ್ನೂ ಲೋಕದ ಆಶೆಯನ್ನೂ, ಬುಧಃ-ವಿದ್ವಾಂಸನು, ವಿಸೃಜೇತ್-ಬಿಡಬೇಕು ||೩೮|| ಸರ್ವೇ ಧೀರಾಃ-ಪಂಡಿತರೆಲ್ಲರೂ, ಗ್ರಾಮೇ-ಊರಿನಲ್ಲಿ, ತ್ಯಕ್ತೈಷಣಾಃ-ಬಿಡಲ್ಪಟ್ಟ ಆಶೆಗಳುಳ್ಳವರಾಗಿ, ತಪೋವನಂ-ತಪಸ್ಸಿಗೆ ಯೋಗ್ಯವಾದ ಅರಣ್ಯ

---

ಅರಸುಗಳೂ ಶ್ರೀ ರಾಮ ಕೃಷ್ಣರೂ ಸಹ ಕೇಳುತ್ತಿರಲು ನುಡಿದರದೆಂತೆನೆ ||೩೪|| ಕೇಳೈ ವಸುದೇವನೇ! ಸರ್ವಯಜ್ಞೇಶ್ವರನಾದ ವಿಷ್ಣುವಂ ಭಕ್ತಿಪೂರ್ವಕವಾಗಿ ಯಜ್ಞಗಳಿಂದ ಪೂಜಿಸುವುದು ಯಾವುದುಂಟೋ ಅದೇ ಕರ್ಮ ಪರಿಹಾರಕ್ಕೆ ಸಾಧನವಾದದ್ದು ಎಂದು ಚನ್ನಾಗಿ ಶಾಸ್ತ್ರಗಳಲ್ಲಿ ನಿರೂಪಿಸಲ್ಪಟ್ಟಿದೆ ||೩೫|| ಚಿತ್ತದ ಉಪಶಾಂತಿಗೆ ಕಾರಣವಾದ ಮೋಕ್ಷೋಪಾಯವು ಇದೇ ಸರಿ, ಆತ್ಮ ಸಂತೋಷವನ್ನುಂಟುಮಾಡುವ ಈ ಧರ್ಮವೇ ಸುಲಭೋಪಾಯವು. ||೩೬|| ಪರಿಶುದ್ಧವಾದ ಸ್ವಶಕ್ತ್ಯನುರೂಪವಾಗಿ ಸಂಪಾದಿಸಲ್ಪಟ್ಟ ದ್ರವ್ಯದಿಂದ ಭಕ್ತಿಶ್ರದ್ಧಾಪೂರ್ವಕವಾಗಿ ಪರಮಪುರುಷನು ಪೂಜಿಸುವುದೇ ಗೃಹಸ್ಥಾಶ್ರಮಿಯಾದ ಸತ್ಪುರುಷನಿಗೆ ಶ್ರೇಯಸ್ಕರವಾದ ಮಾರ್ಗವು ||೩೭|| ನ್ಯಾಯಾರ್ಜಿತ ಧನದಿಂದ ಯಜ್ಞಂಗಳಂ ದಾನಂಗಳಂ ಸಹ ಮಾಡಿ ಪುರುಷನು ಅನಂತರವಲ್ಲಿ ವಿತ್ತೇಚ್ಛೆಯಂ ಬಿಡಬೇಕು, ಭೋಗಂಗಳನನುಭವಿಸಿ ಅವರ ಸ್ವರೂಪವಂ ತಿಳಿದ ಬಳಿಕ ಪತ್ನೀ ಪುತ್ರಾದಿಗಳಲ್ಲಿ ಆಸಕ್ತಿಯಂ ಬಿಡಬೇಕು ||೩೮|| ಅಶಾಶ್ವತಂಗಳೆಂಬನುಸಂಧಾನದಿಂದ ಸ್ವರ್ಗಾದಿ ಲೋಕಂಗಳಲ್ಲಿ ಇಚ್ಛೆಯಂ ಬಿಡಬೇಕು. ಎಲೈ ಸಮರ್ಥನಾದ ವಸುದೇವನೇ! ವಿದ್ವಾಂಸರಾದವರು ಗ್ರಾಮವಾಸದೊಳಗಿಚ್ಛೆಯಂ ಬಿಟ್ಟು ವನವಸಿಯುತ್ತಾರೆ ಆದರೆ ಗೃಹಸ್ಥಾಶ್ರಮವುಳ್ಳ ಬ್ರಾಹ್ಮಣನು ದೇವರ್ಷಿ ಪಿತೃಗಳ ಮೂರು ಋಣ

ವನಿನಃ ॥೩೯॥ ಋಣೈಸ್ತ್ರಿಭಿರ್ದ್ವಿಜೋಜಾತೋದೇವರ್ಷಿಪಿತೃಣಾಂಪ್ರಭೋ । ಯಜ್ಞಾಧ್ಯಯನಪುತ್ರೈಸ್ತಾನ್ಯನಿಸ್ತೀರ್ಯತ್ಯಜನ್ಪತೇತ್ ॥೪೦॥ ತ್ವಂತ್ವದ್ಯಮುಕ್ತೋದ್ವಾಭ್ಯಾಂವೈಋಷಿಪಿತ್ರೋರ್ಮಹಾಮತೇ, ಯಜ್ಞೈರ್ದೇವರ್ಣಮುನ್ಮುಚ್ಯನಿರ್ಋಣೋಶರಣೋಭವ ॥೪೧॥ ವಸುದೇವಭವಾನ್ನೂನಂಭಕ್ತ್ಯಾಪರಮಯಾಹರಿಮ್ । ಜಗತಾಮೀಶ್ವರಂಪ್ರಾರ್ಚತ್ಸಯದ್ವಾಂಪುತ್ರತಾಂಗತಃ ॥೪೨॥ ಶ್ರೀಶುಕಃ ॥ ಇತಿ ತದ್ವಚನಂಶ್ರುತ್ವಾವಸುದೇವೋಮಹಾಮನಾಃ । ತಾನೃಷೀನೃತ್ವಿಜೋವವ್ರೇಮೂರ್ಧ್ನಾನಮ್ಯಪ್ರಸಾದ್ಯಚ ॥೪೩॥ ತಏನಮೃಷಯೋರಾಜನ್ವೃತಾಧರ್ಮೇಣಧಾರ್ಮಿಕಮ್ । ತಸ್ಮಿನ್ನಯಾಜಯನ್ಕ್ಷೇತ್ರೇಮಖೈ

---

ವಂಕುರಿತು, ಯಯುಃ-ತೆರಳುವರು ॥೩೯॥ ಪ್ರಭೋ-ವಸುದೇವರಾಯನೇ, ದ್ವಿಜಃ-ಬ್ರಾಹ್ಮಣನಾಗಲೀ-ಕ್ಷತ್ರಿಯನಾಗಲೀವೈಶ್ಯನಾಗಲೀ, ದೇವಋಷಿಪಿತೃಣಾಂ-ದೇವತೆಗಳ ಋಷಿಗಳ ಪಿತೃಗಳ, ತ್ರಿಭಿಃಋಣೈಃ-ಮೂರುಸಾಲಗಳೊಡನೆ ಕೂಡಿದವನಾಗಿ, ಜ್ಞಾತಃ-ತಿಳಿಯಲ್ಪಟ್ಟಿರುವವನು, ಯಜ್ಞಾಧ್ಯಯನಪುತ್ರೈಃ-ಯಾಗಗಳನ್ನು ಮಾಡುವಿಕೆ, ಸಾಂಗವೇದಗಳನ್ನೋದುವಿಕೆ, ಪುತ್ರರನ್ನು ಹುಟ್ಟಿಸುವಿಕೆ, ಎಂಬ ಮೂರುಕರ್ಮಗಳಿಂದ, ತಾನಿ-ಆ ಮೂರುಸಾಲಗಳನ್ನು, ಅನಿಸ್ತೀರ್ಯ-ಕ್ರಮವಾಗಿ ತೀರಿಸದೆ, ತ್ಯಜನ್-ಈ ಋಣತ್ರಯವನ್ನೂ ಕರ್ಮಗಳನ್ನೂ ಬಿಡುವಂಥಾವನು, ಪತೇತ್-ನರಕಕ್ಕೆ ಬೀಳುವನು ॥೪೦॥ ತ್ವಂತು-ನೀನಾದರೋ, ಅದ್ಯ-ಈಗ, ಋಷಿಪಿತ್ರೋಃ-ಋಷಿಗಳ ಪಿತೃದೇವತೆಗಳ, ದ್ವಾಭ್ಯಾಂ-ಎರಡು ಸಾಲಗಳಿಂದ, ಮುಕ್ತೋವೈ-ಬಿಡಲ್ಪಟ್ಟವನಾಗಿರುವಿಯಷ್ಟೆ? ಮಹಾಮತೇ-ಅತಿಶಯವಾದ ಬುದ್ಧಿಯುಳ್ಳವನೇ, ಯಜ್ಞೈಃ-ಯಾಗಂಗಳಿಂದ, ದೇವರ್ಣಂ-ದೇವತೆಗಳ ಸಾಲವನ್ನು, ಉನ್ಮುಚ್ಯ-ಬಿಡಿಸಿಕೊಂಡು, ನಿರ್ಋಣಃ-ಆಸಾಲವಿಲ್ಲದವನಾದ್ದರಿಂದ, ಅಶರಣಃ-ಮನೆಯಿಲ್ಲದವನು ಎಂದರೆ ಮನೆಯಿಂದ ವನಕ್ಕೆಹೊರಟವನು. ಭವ-ಆಗು ॥೪೧॥ ವಸುದೇವ-ವಸುದೇವರಾಯನೇ ! ಸಃ-ಆ ಪರಮೇಶ್ವರನು, ಯತ್-ಯಾವಕಾರಣದಿಂದ, ವಾಂ-ದಂಪತಿಗಳಾದ ನಿಮ್ಮಿಬ್ಬರಿಗೆ, ಪುತ್ರತಾಂ-ಮಗನಾದ ಕೃಷ್ಣಾವತಾರವನ್ನು, ಗತಃ-ಹೊಂದಿರುವನೋ ತತ್-ಆ ಕಾರಣದಿಂದ, ಭವಾನ್-ನೀನು, ಪರಮಯಾಭಕ್ತ್ಯಾ-ಅಧಿಕಪ್ರೀತಿಯಿಂದ, ಜಗತಾಮೀಶ್ವರಂ-ಲೋಕಂಗಳಿಗೊಡೆಯನಾದ ಹರಿಂ-ವಿಷ್ಣುವನ್ನು, ಪ್ರಾರ್ಚತ್-ಚೆನ್ನಾಗಿ ಪೂಜಿಸಿದವನಾಗಿರುವಿ. ನೂನಂ-ನಿಶ್ಚಯವು ॥೪೨॥ ಇತಿ-ಹೀಗೆಂದು, ತದ್ವಚನಂ-ಆ ಮಹರ್ಷಿಗಳ ಮಾತನ್ನು, ಶ್ರುತ್ವಾ-ಕೇಳಿ, ಮಹಾಮನಾಃ-ಉದಾರ ಬುದ್ಧಿಯುಳ್ಳವನಾದ, ವಸುದೇವಃ- ಕೃಷ್ಣನತಂದೆಯು, ತಾನ್ಋಷೀನ್-ಆ ಮುನಿಗಳನ್ನು, ಮೂರ್ಧ್ನಾ-ತಲೆಯಿಂದ, ಆನಮ್ಯ-ಬಗ್ಗಿನಮಸ್ಕರಿಸಿ, ಪ್ರಸಾದ್ಯಚ-ಅನುಗ್ರಹಿಸುವಂತೆಯೂ ಮಾಡಿಕೊಂಡು, ಋತ್ವಿಜಃ-ಯಜ್ಞಗಳಂಮಾಡಿಸುವರನ್ನಾಗಿ, ವವ್ರೇ-ಪ್ರಾರ್ಥಿಸಿದನು ॥೪೩॥ ರಾಜನ್-ಪರೀಕ್ಷಿದ್ರಾಯನೇ! ತೇಋಷಯಃ-ಆ ಮಹರ್ಷಿಗಳು, ವೃತಾಃ-ಪ್ರಾರ್ಥಿಸಲ್ಪಟ್ಟವರಾದ್ದರಿಂದ, ಧರ್ಮೇಣ-ಬ್ರಾಹ್ಮಣಧರ್ಮವಾದ ಯಾಜಕತ್ವದಿಂದ, ಏನಂ-ಈ ವಸುದೇವನನ್ನು, ತಸ್ಮಿನ್ಕ್ಷೇತ್ರೇ-ಆ ಪುಣ್ಯಸ್ಥಲದಲ್ಲಿ, ಉತ್ತಮಕಲ್ಪೈಃ-ಮುಖ್ಯಪಕ್ಷವಾದ ವಿಧಿಯುಳ್ಳ, ಮಖೈಃ-ಯಜ್ಞಂಗಳಿಂದ, ಅಯಾಜಯನ್-ದೇವಪೂಜೆಯಂಮಾಡಿಸಿದರು ॥೪೪॥ ರಾಜನ್-ಅರಸನೇ । ತದ್ದೀಕ್ಷಾಯಾಂ-ಆ ಯಜ್ಞದನಿ

---

ಳಿಂದಲೂ ಸರ್ವೋತ್ತಮನಾಗಿ ಹುಟ್ಟುವನು ॥೩೯॥ ಆದ್ದರಿಂದ ಯಜ್ಞಗಳಿಂದ ದೇವ ಋಣವನ್ನೂ ಪರಿಹರಿಸಿಕೊಂಡು ಋಣತ್ರಯ ಮುಕ್ತನಾದವನೇ ಧನ್ಯನು ॥೪೦॥ ಕೇಳೈ ಬುದ್ಧಿ ಶಾಲಿಯಾದ ವಸುದೇವನೇ! ನೀನು ಋಷಿಗಳ ಋಣದಿಂದಲೂ ಪಿತೃಗಳ ಋಣದಿಂದಲೂ ಮುಕ್ತನಾಗಿದ್ದೀಯೇ. ಯಜ್ಞಗಳಿಂದ ದೇವರ್ಣವಂ ತೀರಿಸಿಕೊಂಡು ವಾನಪ್ರಸ್ಥಾಶ್ರಮವಂಕೈಕೊಂಡು ಮೋಕ್ಷದಲ್ಲಿ ದೃಷ್ಟಿಯನಿಡು ॥೪೧॥ ಕೇಳೈವಸುದೇವನೇ! ಈಗನಮ್ಮಿಂದ ಹೇಳಲ್ಪಟ್ಟ ಈಕ್ರಮವು ಸಾಧಾರಣವಾದ ಬ್ರಾಹ್ಮಣಿಗೆ ಉಚಿತವಾದ ಮಾರ್ಗವು. ನೀನಾದರೋ ಪೂರ್ವಜನ್ಮದಲ್ಲಿ ಜಗದೀಶ್ವರನಾದ ಶ್ರೀಹರಿಯನ್ನು ಪರಮಭಕ್ತಿಯಿಂದ ಆರಾಧನಂ ಗೆಯ್ದವನಾದ್ದರಿಂದ ಆಭಗವಂತನೇ ನಿನಗೆ ಪುತ್ರನಾಗಿ ಅವತರಿಸಿರುವನು. ಆದ್ದರಿಂದ ನೀನು ಧನ್ಯನೇಸರಿ ॥೪೨॥ ಈಪ್ರಕಾರವಾಗಿ ಹೇಳಿದ ಆಋಷಿಗಳ ವಚನವಂಕೇಳಿ ಮಹಾಯಶೋವಂತನಾದ ವಸುದೇವನು ಆಋಷಿಗಳಂ ನಮಸ್ಕರಿಸಿ ತನ್ನಿಂದ ಮಾಡಲ್ಪಡುವಯಜ್ಞದಲ್ಲಿ ನೀವೆಲ್ಲರೂ ಋತ್ವಿಕ್ಕುಗಳಾಗಬೇಕೆಂದು ಅವರಂ ಪ್ರಾರ್ಥಿಸಿದನು ॥೪೩॥ ಆಋಷಿಗಳು ವಸುದೇವನಿಂದ ಪ್ರಾರ್ಥಿತರಾಗಿ ಆಕ್ಷೇತ್ರದಲ್ಲಿ ಉತ್ತಮವಾದ ಕಲ್ಪದಿಂದಲೇ ಆವಸುದೇವನಿಂದ ಅನೇಕಕ್ರತುಗಳಂ ಮಾಡಿಸಿದ

ರುತ್ತಮಕಲ್ಪಕೈಃ ||೪೪|| ತದ್ದೀಕ್ಷಾಯಾಂ ಪ್ರವೃತ್ತಾಯಾಂ ವೃಷ್ಣಯಃ ಪುಷ್ಕರಸ್ರಜಃ | ಸ್ನಾತ್ವಾ
ಸುವಾಸಸೋ ರಾಜನ್ ರಾಜಾನಶ್ಚ ಸ್ವಲಂಕೃತಾಃ ||೪೫|| ತನ್ಮಹಿಷ್ಯಶ್ಚ ಮುದಿತಾಃ ನಿಷ್ಕಕಂಠ್ಯಸ್ಸುವಾಸಸಃ |
ದೀಕ್ಷಾಶಾಲಾಮುಪಾಜಗ್ಮುಸ್ಸ್ವಾಲಿಪ್ತಾ ವಸ್ತುಪಾಣಯಃ ||೪೬|| ನೇದುರ್ಮೃದಂಗಪಟಹಶಂಖಭೇರ್ಯಾ
ನಕಾದಯಃ | ನನೃತುರ್ನಟನರ್ತಕ್ಯಸ್ತುಷ್ಟುವುಸ್ಸೂತಮಾಗಧಾಃ | ಜಗುಸ್ಸುಕಂಠ್ಯೋ ಗಂಧರ್ವ್ಯ
ಸ್ಸಂಗೀತಂ ಸಹಭರ್ತೃಕಾಃ ||೪೭|| ತಮಭ್ಯಷಿಂಚನ್ ವಿಧಿವದಕ್ತಮಭ್ಯಕ್ತಮೃತ್ವಿಜಃ | ಪತ್ನೀಭಿರಷ್ಟಾ
ದಶಭಿಸ್ಸೋಮರಾಜಮಿವೋಡುಭಿಃ ||೪೮|| ತಾಭಿರ್ದುಕೂಲವಲಯೈರ್ಹಾರನೂಪುರಕುಂಡಲೈಃ | ಸ್ವ
ಲಂಕೃತಾಭಿರ್ವಿಭವೈರ್ದೀಕ್ಷಿತೋ ಜನಸಂವೃತಃ ||೪೯|| ತಸ್ಯರ್ತ್ವಿಜೋ ಮಹಾರಾಜನ್ ರತ್ನಕೌಶೇಯವಾ

---

ಯುಮವು), ಪ್ರವೃತ್ತಾಯಾಂ ಸತ್ಯಾಂ-ನಡೆಯುತ್ತಿರುವಲ್ಲಿ, ವೃಷ್ಣಯಃ-ಯಾದವರೂ, ರಾಜಾನಶ್ಚ-ಅರಸುಗಳೂ, ಸ್ನಾತ್ವಾ-ಮಿಂದು, ಸುವಾಸಸಃ-ಉತ್ತಮವಸ್ತ್ರಂಗಳುಳ್ಳವರೂ, ಪುಷ್ಕರಸ್ರಜಃ-ಕಮಲಹಾರಂಗಳುಳ್ಳವರೂ, ಸ್ವಲಂಕೃತಾಶ್ಚ-ಸಿಂಗರಿಸಲ್ಪಟ್ಟವರೂ, ಆದರು ||೪೫|| ತನ್ಮಹಿಷ್ಯಶ್ಚ-ಅವರವರ ರಾಣಿಯರೂಕೂಡ, ಮುದಿತಾಃ-ಸಂತೋಷಹುಟ್ಟಿದವರಾದ್ದರಿಂದ, ನಿಷ್ಕಕಂಠ್ಯಃ-ವರಹಾಗಳ ಸರಂಗಳು ಕೊರಳಲ್ಲಿ ಉಳ್ಳವರೂ, ಸುವಾಸಸಃ-ಉತ್ತಮ ವಸ್ತ್ರಂಗಳುಳ್ಳವರೂ, ಸ್ವಾಲಿಪ್ತಾಃ-ಚೆನ್ನಾಗಿ ಗಂಧದಿಂ ಬಳಿಯಲ್ಪಟ್ಟವರೂ, ವಸ್ತುಪಾಣಯಃ-ಯಜ್ಞಯೋಗ್ಯಂಗಳಾದ ಕಾಣಿಕೆಗಳು ಕೈಯಲ್ಲಿಯುಳ್ಳವರೂ ಆಗಿ, ಎಲ್ಲರೂ, ದೀಕ್ಷಾಶಾಲಾಂ-ಯಜ್ಞದೀಕ್ಷೆಯ ಸಾಲೆಯನ್ನು ಕುರಿತು, ಉಪಾಜಗ್ಮುಃ-ಬಂದರು ||೪೬|| ಮೃದಂಗಪಟಹಶಂಖಭೇರ್ಯಾನಕಾದಯಃ-ಮದ್ದಳೆ ಡೋಲು ತಮಟೆ ಸಂಕು ಬರಡೋಲು ನಗಾರ ಮೊದಲಾದವು, ನೇದುಃ-ಮೊಳಗಿದವು, ನಟನರ್ತಕ್ಯಃ-ನಟ್ಟುವರಾದ ಸ್ತ್ರೀಪುರುಷರು, ನನೃತುಃ-ಕುಣಿದರು. ಸೂತಮಾಗಧಾಃ-ಸೂತಜಾತಿಯವರೂ ಮಾಗಧಜಾತಿಯವರೂ ಮಾಗಧಜಾತಿಯವರೂ, ತುಷ್ಟುವುಃ-ಸ್ತೋತ್ರಮಾಡಿದರು. ಸುಕಂಠ್ಯಃ-ಒಳ್ಳೆಯ ಕೊರಳುಳ್ಳ, ಗಂಧರ್ವ್ಯಃ-ಗಂಧರ್ವಸ್ತ್ರೀಯರು, ಸಹಭರ್ತೃಕಾಃ-ಗಂಡಂದಿರೊಡನೆ ಸಹಿತರಾಗಿ, ಸಂಗೀತಂ-ಹಾಡನ್ನು, ಜಗುಃ-ಹಾಡಿದರು ||೪೭|| ಋತ್ವಿಜಃ-ಯಜ್ಞವನ್ನು ಮಾಡಿಸುವ ಬ್ರಾಹ್ಮಣರು, ವಿಧಿವತ್-ಶಾಸ್ತ್ರಪ್ರಕಾರವಾಗಿ, ಅಕ್ತಂ-ಕಣ್ಣಿಗೆ ಕಾಡಿಗೆ ಬಳಿಯಲ್ಪಟ್ಟಂಥಾ, ಅಭ್ಯಕ್ತಂ-ಮೈಗೆ ಬೆಣ್ಣೆ ಬಳಿಯಲ್ಪಟ್ಟಂಥಾ, ತಂ-ಆ ವಸುದೇವನನ್ನು, ಉಡುಭಿಃ-ನಕ್ಷತ್ರಗಳೊಡನೆ, ಸೋಮರಾಜಮಿವ-ಚಂದ್ರನನ್ನು ಹೇಗೋ ಹಾಗೆ, ಅಷ್ಟಾದಶಭಿಃ ಪತ್ನೀಭಿಃ-೧೮ ಮಂದಿ ಹೆಂಡತಿಯರೊಡನೆ, ಅಭ್ಯಷಿಂಚನ್-ಸ್ನಾನಮಾಡಿಸಿದರು ||೪೮|| ದುಕೂಲವಲಯೈಃ-ವಸ್ತ್ರಗಳಿಂದಲೂ ಕಂಕಣಂಗಳಿಂದಲೂ, ಹಾರನೂಪುರಕುಂಡಲೈಃ-ಕಂಠಸರಂಗಳಿಂದಲೂ ಕಾಲಂದುಗೆಗಳಿಂದಲೂ ಕರ್ಣಾಭರಣಂಗಳಿಂದಲೂ, ವಿಭವೈಃ-ಐಶ್ವರ್ಯಗಳಿಂದ, ಸ್ವಲಂಕೃತಾಭಿಃ-ಚೆನ್ನಾಗಿ ಸಿಂಗರಿಸಲ್ಪಟ್ಟ, ತಾಭಿಃ-ಆ ಪತ್ನಿಯರೊಡನೆ, ಜನಸಂವೃ

---

ರು ||೪೪|| ಆ ಯಜ್ಞದೀಕ್ಷೆಯು ಉಪಕ್ರಾಂತವಾಗುತ್ತಿರಲಾಗಿ ಸಮಸ್ತರಾದ ಯಾದವರೂ ಇತರರಾದ ಕ್ಷತ್ರಿಯರೂ ಸಹ ಸ್ನಾನಂಗಳಂ ಮಾಡಿ ಉತ್ತಮವಸ್ತ್ರಂಗಳಂ ಧರಿಸಿ ಪದ್ಮಮಾಲಿಕೆಗಳಿಂದಲಂಕೃತರಾಗಿ ಕೈಗಾಣಿಕೆಗಳಂ ತೆಗೆದುಕೊಂಡು ಯಜ್ಞಶಾಲೆಯಂ ಪ್ರವೇಶಿಸಿದರು ||೪೫|| ಅವರ ಪತ್ನೀಪುತ್ರರೆಲ್ಲರೂ ಸರ್ವಾಭರಣಭೂಷಿತರಾಗಿ ಉತ್ತಮಂಗಳಾದ ದುಕೂಲಂಗಳನ್ನುಟ್ಟುಕೊಂಡು ದಿವ್ಯಗಂಧಗಳಿಂದ ಲೇಪಿಸಲ್ಪಟ್ಟವರಾಗಿ ಸಂತೋಷಯುಕ್ತರಾಗಿ ಫಲಪುಷ್ಪಕೈಗಾಣಿಕೆಮೊದಲಾದ ದ್ರವ್ಯಗಳಂ ತೆಗೆದುಕೊಂಡು ಯಜ್ಞಶಾಲೆಯಂ ಸೇರಿದ್ದರು ||೪೬|| ಆಗ ಅನೇಕಂಗಳಾದ ಮದ್ದಳೆಗಳೂ ತಮಟೆಗಳೂ ಭೇರಿಗಳೂ ನಗಾರಿಗಳೂ ಧ್ವನಿಗೆಯ್ದುವು. ನಟನರ್ತಕಿಯರು ನಟನಂಗೆಯ್ದರು. ಸೂತಮಾಗಧರು ಸ್ತುತಿಸಿದರು ||೪೭|| ಗಂಧರ್ವದಂಪತಿಗಳು ಸಂತೋಷದಿಂದ ಗಾನಂಗೆಯ್ಯುತ್ತಿರಲು ಋತ್ವಿಕ್ಕುಗಳಾದ ಋಷಿಗಳು ಸುಮುಹೂರ್ತದಲ್ಲಿ ವಸುದೇವನ ನೇತ್ರಗಳಿಗೆ ಕಾಡಿಗೆಯಂ ಹಚ್ಚಿ ಸರ್ವಾಂಗಗಳಿಗೂ ಬೆಣ್ಣೆಯಂ ಲೇಪಿಸಿ ಮಂಗಳಸ್ನಾನವಂ ಮಾಡಿಸಿದರು. ಆತನ ಪತ್ನಿಯರಾದ ಹದಿನೆಂಟುಮಂದಿ ಸ್ತ್ರೀಯರುಗಳಿಗೂ ಅಭ್ಯಂಜನ ಸ್ನಾನವಂ ಮಾಡಿಸಿದರು ||೪೮|| ದಿವ್ಯದುಕೂಲಂಗಳಿಂದಲೂ ಕಂಕಣಹಾರಸರ್ವಾಭರಣಮೊದಲಾದ್ದರಿಂದಲೂ ಅಲಂಕೃತೆಯರಾದ ಹದಿನೆಂಟುಮಂದಿ ಪತ್ನಿಯರೊಡಗೂಡಿ ಪರಿಜನರಿಂದಲೂ ಪರಿ

ಸಸಃ । ಸಸದಸ್ಯೈರ್ವಿರೆಜುಸ್ತೇಯಥಾವೃತ್ರಹಣೋಧ್ವರೆ ॥೫೦॥ ತಥಾರಾಮಶ್ಚಕೃಷ್ಣಶ್ಚಸ್ವೈಸ್ಸ್ವೈಸ್ಸ್ವ ಬಂಧುಭಿರನ್ವಿತೌ । ವಿರೆಜತುಸ್ಸುತೈರ್ದಾರೈರ್ಜೀವೇಶೌಸ್ವವಿಭೂತಿಭಿಃ ॥೫೧॥ ಈಜೇನುಯಜ್ಞಂ ವಿಧಿನಾಅಗ್ನಿಹೋತ್ರಾದಿಲಕ್ಷಣೈಃ । ಪ್ರಾಕೃತೈರ್ವೈಕೃತೈರ್ಯಜ್ಞೈರ್ದ್ರವ್ಯಜ್ಞಾನಕ್ರಿಯೇಶ್ವರಮ್ ॥ ಅಥರ್ತ್ವಿಗ್ಭ್ಯೋದದಾತ್ಕಾಲೆಯಥಾಮ್ನಾತಂಸದಕ್ಷಿಣಾಃ । ಸ್ವಲಂಕೃತೇಭ್ಯೋಲಂಕೃತ್ಯಗೋಭೂಕನ್ಯಾಮಹಾಧನಾಃ ॥೫೩॥ ಪತ್ನೀಸಂಯಾಜಾವಭೃಥ್ಯೈಶ್ಚರಿತ್ವಾಥಮಹರ್ಷಯಃ । ಸಸ್ನೂರಾಮಹ್ರದೇವಿಪ್ರಾಯಜಮಾನಪುರಸ್ಸರಾಃ ॥೫೪॥ ಸ್ನಾತ್ವಾಲಂಕಾರವಾಸಾಂಸಿವಂದಿಭ್ಯೋದಾತ್ತಥಾಸ್ತ್ರಿಯಃ ।

---

ತಃ-ಜನಗಳಿಂದ ಬಳಸಲ್ಪಟ್ಟವನಾಗಿ, ದೀಕ್ಷಿತಃ-ಯಜ್ಞದೀಕ್ಷೆಗೊಂಡವನಾದನು ॥೪೯॥ ಮಹಾರಾಜ-ಪರೀಕ್ಷಿತನೇ! ತಸ್ಯ-ಆವಸುದೇವನ, ಋತ್ವಿಜಃ-ಯಾಜಕರು, ನೂತ್ನಕೌಶೇಯವಾಸಸಃ-ಹೊಸತಾದ ಪಟ್ಟೆಯವಸ್ತ್ರಂಗಳುಳ್ಳವರಾಗಿ, ಸಸದಸ್ಯಾಃ-ಸಭಾನಾಯಕರಿಂ ಸಹಿತನಾಗಿ, ವೃತ್ರಹಣಃ-ದೇವೇಂದ್ರನ, ಅಧ್ವರೇ-ಯಜ್ಞದಲ್ಲಿ, ಯಥಾ-ಹೇಗೋಹಾಗೆ, ವಿರೇಜುಃ-ಪ್ರಕಾಶಿಸಿದರು ॥೫೦॥ ಜೀವೇಶೌ-ಜೀವಾತ್ಮರಿಗೀಶ್ವರರಾದ. ರಾಮಶ್ಚಕೃಷ್ಣಶ್ಚ-ರಾಮನೂ ಕೃಷ್ಣನೂ, ತಥಾ-ಹಾಗೆ, ಸುತೈಃ-ಮಕ್ಕಳೊಡನೆಯೂ, ದಾರೈಃ-ಹೆಂಡಿರೊಡನೆಯೂ, ಸ್ವೈಸ್ಸ್ವೈರ್ಬಂಧುಭಿಃ-ತಮ್ಮತಮ್ಮ ನಂಟರೊಡನೆಯೂ, ಅನ್ವಿತೌ- ಕೂಡಿದವರಾಗಿ, ಸ್ವವಿಭೂತಿಭಿಃ-ನಿಜಲೀಲೈಶ್ವರ್ಯಗಳಿಂದ, ವಿರೇಜತುಃ-ಬೆಳಗಿದರು ॥೫೧॥ ಅನುಯಜ್ಞಂ- ಪ್ರತಿಸೋಮಸಂಸ್ಥಯಾಗದಲ್ಲಿಯೂ, ವಿಧಿನಾ-ವೇದೋಕ್ತವಾದ ಕಟ್ಟಳೆಯಿಂದ, ಅಗ್ನಿಹೋತ್ರಾದಿಲಕ್ಷಣೈಃ-ಗಾರ್ಹಪತ್ಯಮೊದಲಾದ ಅಗ್ನಿಹೋತ್ರೋಪಾಸನವೇ ಮುಂತಾದಗುರುತ್ತುಗಳುಳ್ಳಂಥಾ, ಪ್ರಾಕೃತೈರ್ವೈಕೃತೈಶ್ಚಯಜ್ಞೈಃ-ಪ್ರಕೃತಿವಿಕೃತಿಯಾಗಂಗ. ಜ್ಞಾನಕ್ರಿಯೇಶ್ವರಂ- ಯಜ್ಞೋಪಕರಣಯಜ್ಞವಿದ್ಯೆಯಜ್ಞಕರ್ಮಗಳಿಗನಿಯಾಮಕನಾದಪರಮೇಶ್ವರನನ್ನು,ಈಜೇ-ಅ ಅಥ-ಅನಂತರದಲ್ಲಿ, ಕಾಲೇ-ದಕ್ಷಿಣೆಯಂ ಕೊಡಬೇಕಾದಸಮಯದಲ್ಲಿ,ಯಥಾಮ್ನಾತಂ-ವೇದಂಗಳಿಂದ ಹೇಳಲ್ಪಟ್ಟಿ ಅತಿಕ್ರಮಿಸದೆ. ಸಃ-ಆ ವಸುದೇವನು, ಸ್ವಲಂಕೃತೇಭ್ಯಃ-ಮುಂಚೆಯೇ ಚನ್ನಾಗಿಅಲಂಕರಿಸಲ್ಪಟ್ಟಿರುವ, ಋತ್ವಿಗ್ಜಕರಿಗೆ, ಅಲಂಕೃತ್ಯ-ಮರಳಿಯೂ ಅಲಂಕಾರವಂಮಾಡಿ, ಗೋಭೂಕನ್ಯಾಮಹಾಧನಾಃ-ಗೋವುಗಳು ಭೂಮಿಕನ್ಯೆಕ ಧನಂಗಳೂಉಳ್ಳ, ದಕ್ಷಿಣಾಃ-ಕರ್ಮಾಂಗವಾಗಿ ಕೊಡತಕ್ಕದ್ರವ್ಯಗಳನ್ನು, ಅದದಾತ್-ಕೊಟ್ಟನು ॥೫೩॥ ಅಲೆ, ವಿಪ್ರಾಃ-ಯಾಜಕಬ್ರಾಹ್ಮಣರಾದ, ಮಹರ್ಷಯಃ-ಮುನಿಶ್ರೇಷ್ಠರು, ಪತ್ನೀಸಂಯಾಜಾವಭೃಥ್ಯೈಃ-ಯಜ್ಞಾಂಗಕಾಪ, ಚರಿತ್ವಾ-ವಿಹರಿಸಿ, ಯಜಮಾನಪುರಸ್ಸರಾಃ-ಯಜ್ಞಕರ್ತನಾದ ವಸುದೇವನಂ ಮುಂದಿರಿಸಿಕೊಂಡವರಾಗಿ, ರಾಮಹ್ರಮಂತ ಪಂಚಕದಲ್ಲಿ, ಸಸ್ನುಃ-ಮಿಂದರು ॥೫೪॥ ಸ್ನಾತ್ವಾ-ಅವಭೃಥಸ್ನಾನವಂಮಾಡಿ, ವಂದಿಭ್ಯಃ-ಸ್ತುತಿಪಾಠಕರಿಗ

---

ವೃತನಾಗಿ ದೀಕ್ಷಿತನಾದ ವಸುದೇವನು ಸಭೆಯಲ್ಲಿ ಪ್ರಕಾಶಿಸಿದನು॥೪೯॥ಎಲೈ, ಅರಸನೇ!ಆವಸುದೇವನ ಋತ್ವಿಗಳಾದ ಮಹರ್ಷಿಗಳು ನಾನಾವಿಧಗಳಾದ ಪಟ್ಟೆಪೀತಾಂಬರಂಗಳಂಧರಿಸಿ ಸಭಾಜನರಿಂದಲೂ ಸಮೇತದೇವೇಂದ್ರನ ಯಜ್ಞದಲ್ಲಿ ಹೇಗೆಯೋಹಾಗೆಯೇ ಪ್ರಕಾಶಿಸಿದರು ॥೫೦॥ ಆಸಮಯದಲ್ಲಿ ಸಮಸ್ತಜೀವಈಶ್ವರರಾದ ಶ್ರೀರಾಮಕೃಷ್ಣರು ತಮ್ಮತಮ್ಮ ಬಂಧುಗಳಿಂ ಪರಿವೃತರಾಗಿ ತಮ್ಮಪತ್ನಿಯರಿಂದಲೂ ಪುಬಲೂ ಸಹಿತರಾಗಿ ಮಹಾವಿಭವಗಳಿಂದ ಪ್ರಕಾಶಿಸಿದರು ॥೫೧॥ ಅನಂತರದಲ್ಲಿ ವಸುದೇವನು ಯಥಾಶಾಸ್ತ್ರಗಿ ಅಗ್ನಿಹೋತ್ರಂಗಳುಳ್ಳ ಪ್ರಕೃತಿವಿಕೃತಿಯಜ್ಞಂಗಳಿಂದ ದ್ರವ್ಯಜ್ಞಾನಕ್ರಿಯೇಶ್ವರನಾದ ಯಜ್ಞರೂಪಪರಮೇಶ್ವರನಂ ಪೂಜಿಸಿದನು ॥೫೨॥ ಆಮೇಲೆ ವಸುದೇವನು ಅಲಂಕೃತರಾದ ಋತ್ವಿಜರಿಗೋಸುಗ ಯಥೋಕ್ತವಾದ ಕ್ಷಿಣಾದ್ರವ್ಯವನ್ನೂ ಗೋವುಗಳನ್ನೂ ಭೂಮಿಯನ್ನೂ ಧಾನ್ಯಗಳುಮೊದಲಾದ ವಸ್ತುಗಳನ್ನೂ ಕೊಟ್ಟನು ॥೫೩॥ ಆಗ ಯಜಮಾನನಾದ ವಸುದೇವನು ಮೊದಲಾದ ಋತ್ವಿಕ್ಕುಗಳು ಇತರರಾದ ಅರಸುಗಳು ಸತಮ್ಮತಮ್ಮ ಪತ್ನಿಯರೊಡಗೂಡಿ ಸ್ಯಮಂತಪಂಚಕದಲ್ಲಿ ಅವಭೃಥಸ್ನಾನವಂ ಮಾಡಿದರು ॥೫೪॥ ಅನಂತರದ ವಸುದೇವನು ವಂದಿಮಾಗಧಾದಿಸಮಸ್ತಪರಿವಾರಜನಗಳಿಗೆ ವಸ್ತ್ರಾಭರಣಸುವರ್ಣಾದಿಗಳಂ ಕೊಟ್ಟನು. ಸ್ನಾ

ತತಸ್ಸ್ವಲಂಕೃತಾನ್ ವರ್ಣಾನಾಶ್ವಭ್ಯೋನ್ನೇನಪೂಜಯತ್ ‖೫೫‖ ಬಂಧೂನ್ ಸದಾರಾನ್ ಸಸುತಾನ್ ಪಾ
ರಿಬರ್ಹೇಣಭೂಯಸಾ |ವಿದರ್ಭಕೋಸಲಕುರೂನ್ ಕಾಶಿಕೇಕಯಸೃಂಜಯಾನ್ ‖೫೬‖ಸದಸ್ಯರ್ತ್ವಿಕ್ಸು
ರಗಣಾನ್ ನೃಭೂತಪಿತೃಚಾರಣಾನ್ | ಶ್ರೀನಿಕೇತಮನುಜ್ಞಾಪ್ಯಶಂಸಂತಃಪ್ರಯಯುಃಕ್ರತುಂ ‖೫೭‖
ಧೃತರಾಷ್ಟ್ರೋನುಜಃಪಾರ್ಥಾ ಭೀಷ್ಮದ್ರೋಣೌ ಪೃಥಾ ಯಮೌ | ನಾರದೋ ಭಗವಾನ್ ವ್ಯಾಸಸ್ಸುಹೃ
ತ್ಸಂಬಂಧಿಬಾಂಧವಾಃ ‖೫೮‖ ಬಂಧೂನ್ಪರಿಷ್ವಜ್ಯಯದೂನ್ ಸೌಹೃದಾಕ್ಲಿನ್ನಚೇತಸಃ | ಯಯುರ್ವಿ
ರಹಕೃಚ್ಛ್ರೇಣಸ್ವದೇಶಾಂಶ್ಚಾಪರಪ್ರಭಾಃ ‖೫೯‖ ನಂದಸ್ತುಸಹಗೋಪಾಲೈರ್ಬೃಹತ್ಯಾಪೂಜಯಾರ್ಚಿ

---

ಕಾರವಾಸಾಂಸಿ-ಆಭರಣಗಳನ್ನೂ ವಸ್ತ್ರಗಳನ್ನೂ, ಅಧಾತ್-ಕೊಟ್ಟನು. ತಥಾ-ಹಾಗೆಯೇ, ಸ್ತ್ರಿಯಃ-ಷಂಗಳನ್ನೂ, ತತಃ-ಆ ಮೇಲೆ, ಸ್ವಲಂಕೃತಾನ್-ಚನ್ನಾಗಿ ಭೂಷಿಸಲ್ಪಟ್ಟ, ವರ್ಣಾನ್-ಆಯಾಜಾತಿಗಳನ್ನೂ, ಆಶ್ವಭ್ಯಃ ನಾಯಿಗಳವರೆಗೂ ಎಲ್ಲರನ್ನೂ, ಅನ್ನೇನ-ಭೋಜನದಿಂದ, ಪೂಜಯತ್-ಉಪಚರಿಸಿದನು ‖೫೫‖ ಬಂಧೂನ್-ನಂಟರಾದ, ಸದಾರಾನ್-ಹೆಂಡರಿಂದೊಡಗೂಡಿದ, ಸಸುತಾನ್-ಪುತ್ರರಿಂದ ಸಹಿತರಾದ, ವಿದರ್ಭಕೋಸಲಕುರೂನ್-ಕಾಶಿಕೇಕಯಸೃಂಜಯಾನ್-ವಿದರ್ಭ, ಕೋಸಲ, ಕುರು, ಕಾಶಿ,ಕೇಕಯ, ಸೃಂಜಯ, ದೇಶಗಳವರನ್ನು, ಪಾರಿಬರ್ಹೇಣಭೂಯಸಾ-ಅಧಿಕವಾದ ಪ್ರೀತಿದಾನಸಂಭಾವನೆಯಿಂದ, ಪೂಜಿಸಿದನು ‖೫೬‖ ಸದಸ್ಯಋತ್ವಿಕ್ಸುರಗಣಾನ್-ಸಭಾನಾಯಕರನ್ನೂ ಯಾಜಕರನ್ನೂ ದೇವಸಂಘಗಳನ್ನೂ, ನೃಭೂತಪಿತೃಚಾರಣಾನ್-ಮನುಷ್ಯರನ್ನೂ ಪ್ರಾಣಿಗಳನ್ನೂ ಪಿತೃಗಳನ್ನೂ ಚಾರಣರೆಂಬ ದೇವರ್ಕ್ಕಳನ್ನೂ, ಕ್ರತುಂ-ಯಜ್ಞವನ್ನೂ, ಶ್ರೀನಿಕೇತಂಲಕ್ಷ್ಮಿಗೆ ಆವಾಸನಾದ ಕೃಷ್ಣನನ್ನೂ, ಶಂಸಂತಃ-ಕೊಂಡಾಡುವವರಾಗಿ, ಅನುಜ್ಞಾಪ್ಯ-ಅನುಮತಿಯಂಪಡೆದು,ಪ್ರಯಯುಃ-ತೆರಳಿದರು ‖೫೭‖ ಧೃತರಾಷ್ಟ್ರಃ-ಕುರುಡರಸನೂ, ಅನುಜಃ-ಅವನತಮ್ಮನಾದ ವಿದುರನೂ, ಪಾರ್ಥಾಃ-ಕುಂತಿಯ ಪುತ್ರರಾದ ಭೀಮಾರ್ಜುನರೂ, ಭೀಷ್ಮದ್ರೋಣೌ-ಭೀಷ್ಮನೂದ್ರೋಣನೂ, ಪೃಥಾ-ಕುಂತಿಯೂ, ಯಮೌ-ಅವಳಿಯಾದ ನಕುಲ ಸಹದೇವರೂ, ನಾರದಃ-ವೀಣಾಮುನಿಯೂ, ಭಗವಾನ್-ಸರ್ವಜ್ಞನಾದ, ವ್ಯಾಸಃ-ಬಾದರಾಯಣನೂ, ಸುಹೃತ್ಸಂಬಂಧಿಬಾಂಧವಾಃ-ಮಿತ್ರರೂ ದೇಹಾನುಬಂಧಿಗಳೂ ನಂಟರೂ ‖೫೮‖ ಬಂಧೂನ್-ನಂಟರಾದ, ಯದೂನ್-ಯಾದವರನ್ನು, ಪರಿಷ್ವಜ್ಯ-ಅಪ್ಪಿಕೊಂಡು, ಅಮರಪ್ರಭಾಃ-ದೇವತೆಗಳ ಕಾಂತಿಯುಳ್ಳವರಾದರು. ಸೌಹೃದಾಕ್ಲಿನ್ನಚೇತಸಃ-ಸ್ನೇಹದಿಂದ ತೋಯಿಸಲ್ಪಟ್ಟ ಮನಸ್ಸುಳ್ಳವರಾದ್ದರಿಂದ, ವಿರಹಕೃಚ್ಛ್ರೇಣ-ಬಿಟ್ಟಿರಲಾರದ್ದಕಷ್ಟದೊಡನೆಯೂ, ಸ್ವದೇಶಾನ್-ತಮ್ಮದೇಶಗಳನ್ನು, ಯಯುಃ-ಸೇರಿದರು ‖೫೯‖ ನಂದಸ್ತು-ನಂದಗೋಪನಾದರೋ,ಗೋಪಾಲೈಸ್ಸಹ-ಗೊಲ್ಲರೊಡಗೂಡಿ, ಬೃಹತ್ಯಾ- ಅಧಿಕವಾದ, ಪೂಜಯಾ-ಉಪಚಾರದಿಂದ, ಅರ್ಚಿತಃ-ಸನ್ಮಾನಿಸಲ್ಪಟ್ಟವನಾಗಿ. ಬಂಧುವತ್ಸಲಃ-ನಂಟರಲ್ಲಿ ಪ್ರೀತಿಯುಳ್ಳವನಾದ್ದರಿಂದ,

---

ಗಳಂಮೊದಲ್ಗೊಂಡು ಸಮಸ್ತ ಪ್ರಾಣಿಗಳಿಗೂ ಯಥಾಯೋಗ್ಯವಾಗಿ ಮೃಷ್ಟಾನ್ನಂಗಳಂ ಕೊಟ್ಟನು ‖೫೫‖ ಬಂದಿರುವ ಬಂಧುಗಳಂ ಅವರಪತ್ನಿಯರಂ ಪುತ್ರರಂಸಹ ಪರಿಧಾನರೂಪಗಳಾದ ಉಡುಗರೆಗಳಿಂದ ಸಮ್ಮಾನಂಗೆಯ್ದನು ವಿದರ್ಭರು, ಕೋಸಲರು, ಕಾಶೀರಾಜರು,ಕೇಕಯರು, ಸೃಂಜಯರು, ಮೊದಲಾದ ಅರಸುಗಳನ್ನೂ ಸಮ್ಮಾನಿಸಿದನು ‖೫೬‖ ಸಭೆಯಲ್ಲಿ ಕೂಡಿರುವ ಜನರಂ ಋತ್ವಿಜರಂ ಬ್ರಾಹ್ಮಣಸಮೂಹಂಗಳಂ ಇತರರಾದ ಅರಸುಗಳಂ ಭೂತಗಣಂಗಳಂ ಪಿತೃದೇವತೆಗಳಂ ಚಾರಣರಂಸಹ ಪ್ರೀತಿದಾನರೂಪಗಳಾದ ಉಡುಗರೆಗಳಿಂದಸಂತೋಷಪಡಿಸಿದನು ಈರೀತಿಯಿಂ ಸತ್ಕರಿಸಲ್ಪಟ್ಟ ಅರಸುಗಳು ಮೊದಲಾದವರೆಲ್ಲರೂ ಯಜ್ಞಮಂ ಶ್ಲಾಘಿಸುವರಾಗಿ ಶ್ರೀಕೃಷ್ಣನಿಂದನುಜ್ಞಾತರಾಗಿ ತಮ್ಮತಮ್ಮ ದೇಶಂಗಳಿಗೆ ತೆರಳಿದರು ‖೫೭‖ ಅನಂತರದಲ್ಲಿ ಧೃತರಾಷ್ಟ್ರನೂ ವಿದುರನೂ, ಯುಧಿಷ್ಠಿರನೂ, ಭೀಮಾರ್ಜುನರು, ಭೀಷ್ಮದ್ರೋಣರು, ಕುಂತಿಯು, ನಕುಲಸಹದೇವರು, ನಾರದನು, ಪೂಜ್ಯನಾದ ವೇದವ್ಯಾಸಮುನಿಯು, ಸುಹೃತ್ತುಗಳೂ, ಬೀಗರೂ, ಬಂಧುಗಳೂ, ಇವರೆಲ್ಲರೂಸಹ ‖೫೮‖ ಯಾದವರನ್ನಾಲಿಂಗಿಸಿ ಸ್ನೇಹರಸದಿಂದಾರ್ದ್ರವಾದ ಹೃದಯವುಳ್ಳವರಾಗಿ ಶ್ರೀಕೃಷ್ಣಾದಿಗಳಂ ಬಿಟ್ಟುಹೋಗಲಾರದೆ ವ್ಯಸನಪಡುತ ತಮ್ಮತಮ್ಮ ದೇಶಂಗಳನೆಯ್ದಿದರು ‖೫೯‖ ಬಂಧುವತ್ಸಲನಾದ ನಂದನು ವಸುದೇವಾದಿಗ

ಸಃ । ಕೃಷ್ಣರಾಮೋಗ್ರಸೇನಾದ್ಯೈರ್ನ್ಯವಾತ್ಸೀದ್ಬಂಧುವತ್ಸಲಃ ॥೬೦॥ ವಸುದೇವೋಂಜಸೋತ್ತೀರ್ಯಮನೋರಥಮಹಾರ್ಣವಮ್ । ಸುಹೃದ್ವೃತಃಪ್ರೀತಮನಾನಂದಮಾಹಕರೇಸ್ಪೃಶನ್ ॥೬೧॥ ವಸುದೇವಃ ॥ ಭ್ರಾತರೀಶಕೃತಃಪಾಶೋನೃಣಾಂಯಃಸ್ನೇಹಸಂಜ್ಞಿತಃ । ತಂದುಸ್ತ್ಯಜಮಹಂಮನ್ಯೇಶೂರಾಣಾಮಪಿಯೋಗಿನಾಮ್ ॥೬೨॥ ಅಸ್ಮಾಸ್ವಪ್ರತಿಕಲ್ಪೇಯಂಯತ್ಕೃತಾಜ್ಞೇಷುಸತ್ತಮೈಃ । ಮೈತ್ರ್ಯರ್ಪಿತಾಫಲಾಚಾಪಿನನಿವರ್ತೇತಕರ್ಹಿಚಿತ್ ॥೬೩॥ ಪ್ರಾಗಕಲ್ಯಾಚ್ಚಕುಶಲಂಭ್ರಾತರ್ವೋನಾಚರಾಮಹಿ । ಅಧುನಾಶ್ರೀಮದಾಂಧಾಕ್ಷಾನಪಶ್ಯಾಮಃಪುರಸ್ಥಿತಾನ್ ॥೬೪॥ ಮಾರಾಜ್ಯಶ್ರೀರಭೂತ್ಪುಂಸಃಶ್ರೇಯಸ್ಕಾ

---

ಕೃಷ್ಣರಾಮೋಗ್ರಸೇನಾದ್ಯೈಃ-ಕೃಷ್ಣನು ಬಲರಾಮನು ಉಗ್ರಸೇನರಾಯನು ಮೊದಲಾದವರೊಡನೆ, ನ್ಯವಾತ್ಸೀತ್-ಅಲ್ಲಿಯೇ ಇದ್ದನು ॥೬೦॥ ವಸುದೇವಃ-ಕೃಷ್ಣನತಂದೆಯು, ಮನೋರಥಮಹಾರ್ಣವಂ-ಬಯಕೆಯೆಂಬ ಹೆಗ್ಗಡಲನ್ನು, ಅಂಜಸಾ-ಬೇಗನೆ, ಉತ್ತೀರ್ಯ-ದಾಂಟಿ, ಸುಹೃದ್ವೃತಃ-ಗೆಳೆಯರಿಂ ಬಳಸಲ್ಪಟ್ಟವರಾದ್ದರಿಂದ, ಪ್ರೀತಮನಾಃ-ಸಂತುಷ್ಟಹೃದಯನಾಗಿ, ನಂದಂ-ನಂದಗೋಪನನ್ನು, ಕರೇಸ್ಪೃಶನ್-ಕೈಯಲ್ಲಿಸೋಂಕಿದವನಾಗಿ, ಆಹ-ನುಡಿದನು ॥೬೧॥ ಭ್ರಾತಃ-ಸೋದರನೇ, ನೃಣಾಂ-ಮನುಷ್ಯರಿಗೆ, ಈಶಕೃತಃ-ದೇವರಿಂದ ಮಾಡಲ್ಪಟ್ಟ, ಸ್ನೇಹಸಂಜ್ಞಿತಃ-ಮೈತ್ರಿಯೆಂಬಹೆಸರುಳ್ಳ, ಪಾಶಃ-ಹಗ್ಗವು, ಯಃ-ಯಾವುದುಂಟೋ, ತಂ-ಅದನ್ನು, ಶೂರಾಣಾಂ-ಸಮರ್ಥರಾದ, ಯೋಗಿನಾಮಪಿ-ಜಿತೇಂದ್ರಿಯರಿಗೂ ಕೂಡ, ದುಸ್ತ್ಯಜಂ-ಪ್ರಯಾಸದಿಂದಲೂ ತೊರೆಯಲಶಕ್ಯವಾದ್ದನ್ನಾಗಿ, ಅಹಂ-ನಾನು, ಮನ್ಯೇ-ಭಾವಿಸುತಲಿರುವೆನು ॥೬೨॥ ಅಜ್ಞೇಷು-ಮೂಢರಾದ (ಕೃತಜ್ಞರಲ್ಲದ) ಅಸ್ಮಾಸು-ನಮ್ಮಲ್ಲಿ, ಸತ್ತಮೈಃ-ಅತ್ಯಂತಸತ್ಪುರುಷರಾದ, ನಿಮ್ಮಿಂದ, ಕೃತಾ-ಮಾಡಲ್ಪಟ್ಟ, ಅಪ್ರತಿಕಲ್ಪಾ-ಪ್ರತಿಯಾಗಿಮಾಡತಕ್ಕ ಉಪಕಾರವಿಲ್ಲದ, ಇಯಂಮೈತ್ರೀ-ಈ ಸ್ನೇಹವು, ಅರ್ಪಿತಾ-ಕೊಡಲ್ಪಟ್ಟದ್ದಾಗಿ, ಅಫಲಾಚಾಪಿ-ಪ್ರತಿಫಲವಿಲ್ಲದ್ದಾಗಿಯೂ ಇದೆಯೆಂಬುವುದು, ಯತ್-ಯಾವಕಾರಣದಿಂದ, ಕರ್ಹಿಚಿತ್-ಒಂದು ಕಾಲದಲ್ಲಿಯೂ, ಒಂದು ಸ್ಥಲದಲ್ಲಿಯೂ, ನನಿವರ್ತೇತ-ಬಿಟ್ಟುಹೋಗದೇ ಇರುವುದೋ ॥೬೩॥ ಭ್ರಾತಃ-ಸೋದರನೇ, ಪ್ರಾಕ್ತು-ಪೂರ್ವಕಾಲದಲ್ಲಾದರೋ, ಅಕಲ್ಯಾಃ-ಅಸಮರ್ಥರಾದ್ದರಿಂದ, ವಃ-ನಿಮಗೆ, ಕುಶಲಂ-ಕ್ಷೇಮಸುಖವನ್ನು, ನಾಚರಾಮಹಿ-ಮಾಡದೆಹೋದೆವು, ಅಧುನಾ-ಈಗ, ಶ್ರೀಮದಾಂಧಾಕ್ಷಾಃ-ಐಶ್ವರ್ಯದ ಹೆಮ್ಮೆಯಿಂದಕುರುಡು ಕಣ್ಣುಳ್ಳವರಾಗಿ, ಪುರಃಸ್ಥಿತಾನ್-ಮುಂದೆಇರುವರನ್ನೂ, ನಪಶ್ಯಾಮಃ-ಕಾಣದೆಇರುವೆವು ॥೬೪॥ ಮಾನದ-ಮಾನವನ್ನುಕೊಡುವಂಥಾ ನಂದನೇ, ಯಯಾ-ಯಾವರಾಜ್ಯಸಂಪತ್ತಿನಿಂದ, ಅಂಧದೃಕ್-ಕುರುಡುಕಣ್ಣುಳ್ಳಮನುಷ್ಯನು, ಸುಜನಾನ್-ಸತ್ಪುರುಷರನ್ನೂ, ಉತ-ಅಲ್ಲದಿದ್ದರೆ, ಬಂಧೂನ್-ನಂಟರನ್ನಾಗಲೀ, ನಪಶ್ಯತಿ-ನೋಡದೆಇರುವನೋ, ಸಾ-ಅಂಥಾ, ರಾಜ್ಯಶ್ರೀಃ-ದೊರೆತನದ ಸಂಪತ್ತು, ಶ್ರೇಯಸ್ಕಾಮಸ್ಯಪುಂಸಃ-ಫ

---

ಳಿಂದ ಶ್ರೇಷ್ಠವಾದ ಪೂಜೆಯಿಂದ ಉಪಚರಿಸಲ್ಪಟ್ಟವನಾಗಿ ಗೋಪಾಲರಿಂ ಸಮೇತನಾಗಿ ಶ್ರೀಕೃಷ್ಣನಿಂದಲೂ ಬಲರಾಮನಿಂದಲೂ ಉಗ್ರಸೇನನಿಂದಲೂ ಲಾಲಿತನಾಗಿ ಅಲ್ಲಿಯೇ ವಾಸಂಗೆಯ್ದನು ॥೬೦॥ ತನ್ನ ತೇಜಸ್ಸಿನಿಂದ ಮನೋರಥಗಳೆಂಬ ಮಹಾಸಮುದ್ರವಂ ದಾಂಟಿ, ಸುಹೃತ್ಪರಿವೃತನಾಗಿ ಪೂರ್ಣಕಾಮನಾದ ವಸುದೇವನು ನಂದಗೋಪನ ಕರವಂಪಿಡಿದು ನುಡಿದನದೆಂತೆನೆ ॥೬೧॥ ಎಲೈ, ಅಂಣನಾದ ನಂದಗೋಪನೇ! ಸ್ನೇಹವೆಂಬುದು ಮನುಷ್ಯರಿಗೆ ಈಶ್ವರನಿಂದ ಮಾಡಲ್ಪಟ್ಟ ಪಾಶವು, ಈಪಾಶವು ಮಹಾಶೂರರಾದವರಿಗೂ ಮಹಾಯೋಗಿಗಳಿಗೂ ಕೂಡ ಬಿಡಿಸಿಕೊಳ್ಳಲಶಕ್ಯವಾದ್ದೆಂದು ತಿಳಿಯುತ್ತೇನೆ ॥೬೨॥ ನಿಮ್ಮಿಂದ ಮಾಡಲ್ಪಟ್ಟ ಉಪಕಾರವಂ ಮರೆತಿರುವ ಅಜ್ಞರಾದ ನಮ್ಮಲ್ಲಿ ಸಾಧುಗಳಾದ ನಿಮ್ಮಿಂದ ಮಾಡಲ್ಪಟ್ಟ ಅತ್ಯುತ್ತಮವಾದ ಮೈತ್ರತೆಯು ಪ್ರತ್ಯುಪಕಾರರಹಿತವಾಗಿ ನಿಷ್ಫಲವಾದರೂ ಸರ್ವದಾಸ್ಥಿರವಾಗಿರುವ ಕಾರಣದಿಂದ ಈಪಾಶವು ತ್ಯಜಿಸಲಶಕ್ಯವೇಸರಿ ॥೬೩॥ ಪೂರ್ವದಲ್ಲಿ ನಾವು ಕಂಸನ ಉಪದ್ರವದಿಂದ ಅಸಮರ್ಥರಾಗಿ ನಿಮಗೆ ಪ್ರಿಯವಂಮಾಡದೆ ಹೋದೆವು. ಈಗಐಶ್ವರ್ಯಮದದಿಂದ ಅಂಧರಾಗಿ ಮುಂದೆ ನಿಂತಿರುವವರನ್ನೂ ಕಾಣೆವು. ॥೬೪॥ ಎಲೈನಂದಗೋಪನೇ! ಶ್ರೇಯಸ್ಸನ್ನಪೇಕ್ಷಿಸುವ ಜನರಿಗೆ ಐಶ್ವರ್ಯವಾಗಬಾರದು- ಕಾರಣವೇನೆಂದರೆ ಐಶ್ವರ್ಯದಿಂದ ಅಂಧವಾದ ನೇತ್ರವುಳ್ಳವರು

ಮುಸ್ಯಮಾನಸದ | ಸುಜನಾನುತಬಂಧೂನ್ವಾನಪಶ್ಯತಿಯಯಾಂಧದೃಕ್ ||೧೫|| ಏವಂಸೌಹೃದಶೈಥಿಲ್ಯ
ಚಿತ್ತ ಆನಕದುಂದುಭಿಃ | ರುರೋದತತ್ಕೃತಾಂಮೈತ್ರೀಂಸ್ಮರನ್ನಶ್ರುವಿಲೋಚನಃ ||೧೬|| ನಂದಸ್ತುಸ
ಖ್ಯುಃಪ್ರಿಯಕೃತ್ಪ್ರೇಮ್ಣಾಗೋವಿಂದರಾಮಯೋಃ |ಅದ್ಯಶ್ವಇತಿಮಾಸಾಂಸ್ತ್ರೀನ್ಯದುಭಿರ್ಮಾನಿತೋ
ವಸತ್ ||೧೭|| ತತಃಕಾಮೈಃಪೂರ್ಯಮಾಣಸ್ಸವ್ರಜಸ್ಸಹಬಾಂಧವಃ | ಪರಾರ್ಧ್ಯಾಭರಣಕ್ಷೌಮನಾನಾ
ನರ್ಘ್ಯಪರಿಚ್ಛದೈಃ||೧೮||ವಸುದೇವೋಗ್ರಸೇನಾಭ್ಯಾಂಕೃಷ್ಣೋದ್ಧವಬಲಾದಿಭಿಃ|ದತ್ತಮಾದಾಯಪಾ
ರಿಬರ್ಹಂಯದುಭಿರ್ಯಾಪಿತೋಯಯೌ || ನಂದೋಗೋಪ್ಯಶ್ಚಗೋಪಾಶ್ಚಗೋವಿಂದಚರಣಾಂಬುಜೇ|
ಮನಃಕ್ಷಿಪ್ತಂಪುನರ್ಹರ್ತುಮನೀಶಾಮಧುರಾಂಯಯುಃ ||೨೦|| ಬಂಧುಷುಪ್ರತಿಯಾತೇಷುವೃಷ್ಣ

---

ಕ್ಷ್ಮವಂಬಯಸುವ ಮನುಷ್ಯಂಗೆ, ಮಾಭೂತ್-ಆಗಬೇಡ ||೧೪|| ಏವಂ-ಹೀಗೆ, ಸೌಹೃದಶೈಥಿಲ್ಯಚಿತ್ತಃ-ಮೈತ್ರಿಯಿಂದ ಸಡಿಲಿದ ಮನಸ್ಸುಳ್ಳವನಾದ, ಆನಕದುಂದುಭಿಃ-ವಸುದೇವನು, ತತ್ಕೃತಾಂ-ಆನಂದಗೋಪನಿಂದ ಮಾಡಲ್ಪಟ್ಟ, ಮೈತ್ರೀಂ-ಸ್ನೇಹವನ್ನು, ಸ್ಮರನ್-ನೆನಪುಗೊಂಡವನಾದ್ದರಿಂದ, ಅಶ್ರುವಿಲೋಚನಃ-ನೀರುಕ್ಕುವ ಕಂಗಳುಳ್ಳವನಾಗಿ, ರುರೋದ-ಅತ್ತನು||೧೬|| ನಂದಸ್ತು-ನಂದಗೋಪನಾದರೋ, ಸಖ್ಯುಃ-ಮಿತ್ರನಾದ ವಸುದೇವಂಗೆ, ಪ್ರಿಯಕೃತ್-ಸಂತೋಷವಂ ಮಾಡುತಿರುವನಾಗಿ, ಗೋವಿಂದರಾಮಯೋಃ-ಕೃಷ್ಣರಾಮರಲ್ಲಿ, ಪ್ರೇಮ್ಣಾ-ಪ್ರಿಯತ್ವದಿಂದ, ಅದ್ಯಶ್ವಇತಿ-ಇಂದು ನಾಳೆಯೆಂದು ಯದುಭಿಃ-ಯಾದವರಿಂದ, ಮಾನಿತಃ-ಸಂಭಾವಿಸಲ್ಪಟ್ಟವನಾಗಿ, ತ್ರೀನ್‌ಮಾಸಾನ್-ಮೂರುತಿಂಗಳು ಅವಸತ್-ಇದ್ದನು||೧೭|| ತತಃ-ಆಮೇಲೆ, ಸವ್ರಜಃ-ಗೋಕುಲದ ಜನಗಳಿಂದಸಹಿತನಾಗಿಯೂ,ಸಹಬಾಂಧವಃ-ನಂಟರಿಂದ ಸಹಿತನಾಗಿಯೂ, ಪರಾರ್ಧ್ಯೈಃ-ಪರಾರ್ಧ್ಯ-ಉತ್ತಮಂಗಳಾದ್ದರಿಂದ ಹೆರವರಿಂಬಯಸಲ್ಪಡತಕ್ಕವಾದ, ಆಭರಣ-ಭೂಷಣ, ಕ್ಷೌಮ-ಉತ್ತಮವಸ್ತ್ರ, ನಾನಾ-ಹಲವುಬಗೆಯಾದ, ಅನರ್ಘ್ಯ-ಬೆಲೆಯಿಲ್ಲದ, ಪರಿಚ್ಛದೈಃ-ಉಡುಗೆ ಮೊದಲಾದ ಉಪಕರಣಗಳಿಂದಲೂ, ಕಾಮೈಃ-ಬೇಕಾದಮನೋರಥಂಗಳಿಂದಲೂ, ಪೂರ್ಯಮಾಣಃ-ತುಂಬಿಸಲ್ಪಡುತ್ತಿರುವನಾಗಿ ||೧೮|| ವಸುದೇವೋಗ್ರಸೇನಾಭ್ಯಾಂ-ವಸುದೇವನಿಂದಲೂ ಉಗ್ರಸೇನರಾಯನಿಂದಲೂ, ಕೃಷ್ಣೋದ್ಧವಬಲಾದಿಭಿಃ-ಕೃಷ್ಣನು ಉದ್ಧವನು ಬಲರಾಮನುಮುಂತಾದವರಿಂದಲೂ, ದತ್ತಂ-ಕೊಡಲ್ಪಟ್ಟ, ಪಾರಿಬರ್ಹಂ-ಪ್ರೀತಿದಾನದ ಉಡುಗರೆಗಳನ್ನು, ಆದಾಯ-ತೆಗದುಕೊಂಡು. ಯದುಭಿಃ-ಯಾದವರಿಂದ, ಯಾಪಿತಃ-ಸಾಗುಕಳುಹಿಸಲ್ಪಟ್ಟವನಾಗಿ, ಯಯೌ-ತೆರಳಿದನು ||೧೯|| ನಂದಃ-ನಂದಗೋಪನೂ,ಗೋಪ್ಯಶ್ಚ-ಗೋಪಸ್ತ್ರೀಯರೂ, ಗೋಪಾಶ್ಚ-ಗೊಲ್ಲರೂ, ಗೋವಿಂದಚರಣಾಂಬುಜೇ-ಶ್ರೀಕೃಷ್ಣನ ಪಾದಕಮಲದಲ್ಲಿ. ಕ್ಷಿಪ್ತಂ-ಇರಿಸಲ್ಪಟ್ಟ, ಮನಃ-ಅಂತರಂಗವನ್ನು, ಪುನಃ-ಮರಳಿಯೂ, ಹರ್ತುಂ-ತೆಕ್ಕೊಳ್ಳುವುದಕ್ಕೆ, ಅನೀಶಾಃ-ಅಸಮರ್ಥರಾಗಿಯೇ, ಮಧುರಾಂ-ಉತ್ತರ ಮಧುರಾನಗ

---

ವನು ಸ್ವಜನರನ್ನೂ ಬಂಧುಗಳನ್ನೂ ಮಿತ್ರರಂಸಹ ನೋಡುವುದಿಲ್ಲ ||೧೫|| ಎಂದು ಈಪ್ರಕಾರವಾಗಿ ವಸುದೇವನು ಸ್ನೇಹಶೈಥಿಲ್ಯವಂ ಸ್ಮರಿಸಿಕೊಂಡು ಪಶ್ಚಾತ್ತಪ್ತ ಚಿತ್ತವುಳ್ಳವನಾದಕಾರಣದಿಂ ಬಾಷ್ಪಪೂರಿತ ನೇತ್ರನಾಗಿ ನಂದಗೋಪನಿಂದ ಮಾಡಲ್ಪಟ್ಟ ಮಿತ್ರಭಾವವಂ ಸ್ಮರಿಸುವನಾಗಿ ರೋದನಂ ಗೆಯ್ದನು ||೧೬|| ಈಪ್ರಕಾರವಾಗಿ ವಸುದೇವನಿಂ ನಂದಗೋಪನುಪಚರಿಸಲ್ಪಟ್ಟವನಾಗಿ ಶ್ರೀಕೃಷ್ಣ ರಾಮರ ಪ್ರೇಮದಿಂದ ಇಂದು ನಾಳೆಯೆಂದು ಅಡ್ಡಿಮಾಡಲ್ಪಟ್ಟ ಪ್ರಯಾಣವುಳ್ಳವನಾಗಿ ಯಾದವರಿಂ ಸಮ್ಮಾನಿಸಲ್ಪಡುತ ಮೂರುತಿಂಗಳವರೆಗೂ ಅಲ್ಲಿಯೇ ವಾಸಂಗೆಯ್ದನು ||೧೭|| ಅನಂತರದಲ್ಲಿ ನಂದಗೋಪನು ಪೂರ್ಣಮನೋರಥನಾಗಿ ಗೋಪಾಲಕರೊಡನೆಯೂ ಬಂಧುಗಳೊಡನೆಯೂ ಶ್ರೇಷ್ಠಂಗಳಾದ ಆಭರಣಂಗಳಿಂದಲೂ ಉತ್ತಮಂಗಳಾದ ಪಟ್ಟವಸ್ತ್ರಂಗಳಿಂದಲೂ, ಅಮೂಲ್ಯಂಗಳಾದ ರತ್ನಾದಿವಸ್ತುಗಳಿಂದಲೂ ಸಮ್ಮಾನಿತನಾಗಿ ||೧೮|| ವಸುದೇವನಿಂದಲೂ ಉಗ್ರಸೇನನಿಂದಲೂ ಬಲಭದ್ರನಿಂದಲೂ ಶ್ರೀಕೃಷ್ಣನಿಂದಲೂ ಉದ್ಧವನಿಂದಲೂ ಕೊಡಲ್ಪಟ್ಟ ಪ್ರೀತಿದಾನಗಳಂ ಪರಿಗ್ರಹಿಸಿ ಯಾದವರಿಂದ ಕಳುಹಿಸಲ್ಪಟ್ಟವನಾಗಿ ತೆರಳಿದನು ||೧೯|| ಈಪ್ರಕಾರವಾಗಿ ನಂದಗೋಪನು ಗೋಪಸ್ತ್ರೀಯರೂ ಗೋಪಾಲಕರೂ ಸಹ ಶ್ರೀಕೃಷ್ಣನಲ್ಲಿ ಇರಿಸಲ್ಪಟ್ಟಮನವಂ ಹಿಂದಕ್ಕೆ ತಿರುಗಿಸಲು ಅಸಮರ್ಥರಾಗಿ

ಶ್ಲೋ॥ ಕೃಷ್ಣದೇವತಾಃ। ವೀಕ್ಷ್ಯ ಪ್ರಾವೃಷಮಾಸನ್ನಾಂ ಯಯುರ್ದ್ವಾರವತೀಂ ಪುರೀಮ್॥೭೧॥ ಜನೇಭ್ಯಃ ಕಥಯಾಂಚಕ್ರುರ್ಯದುದೇವಮಹೋತ್ಸವಮ್। ಯದಾಸೀತ್ತೀರ್ಥಯಾತ್ರಾಯಾಂ ಸುಹೃತ್ಸಂದರ್ಶನಾದಿಕಮ್॥೭೨॥ ಇತಿ ಶ್ರೀಮದ್ಭಾಗವತೇ- ದಶಮಸ್ಕಂಧೇ- ಚತುರಶೀತಿತಮೋಧ್ಯಾಯಃ.

ಶ್ರೀಶುಕಃ॥ ಅಥೈಕದಾತ್ಮಜೌ ಪ್ರಾಪ್ತೌ ಕೃತಪಾದಾಭಿವಂದನೌ। ವಸುದೇವೋಭಿನಂದ್ಯಾಹ ಪ್ರೀ

---

ರವನ್ನು, ಯಯುಃ-ಸೇರಿದರು ॥೭೦॥ ಬಂಧುಷು-ನಂಟರು, ಪ್ರತಿಯಾತೇಷು ಸತ್ಸು-ತಿಂತೆರಳಿಹೋದವರಾಗುತಲೂ, ಕೃಷ್ಣದೇವತಾಃ-ಕೃಷ್ಣನೇ ದೇವರಾಗುಳ್ಳ, ವೃಷ್ಣಯಃ-ಯಾದವರು, ಪ್ರಾವೃಷಂ-ವರ್ಷಾಕಾಲವನ್ನು, ಆಸನ್ನಾಂ-ಸಮೀಪಕ್ಕೆ ಬಂದದ್ದನ್ನಾಗಿ, ವೀಕ್ಷ್ಯ-ನೋಡಿ, ದ್ವಾರವತೀಂ ಪುರೀಂ-ದ್ವಾರಕಾನಗರವನ್ನು, ಯಯುಃ-ಸೇರಿದರು ॥೭೧॥ ತೀರ್ಥಯಾತ್ರಾಯಾಂ-ಪುಣ್ಯಜಲಸ್ನಾನಾರ್ಥವಾದ ಪ್ರಯಾಣದಲ್ಲಿ, ಸುಹೃತ್ಸಂದರ್ಶನಾದಿಕಂ-ನಂಟರನ್ನು ನೋಡಿದ್ದು ಮೊದಲಾದ, ಯದಾಸೀತ್-ಯಾವುದಾಯಿತೋ, ತತ್-ಅದರನ್ನೂ, ಯದುದೇವಮಹೋತ್ಸವಂ-ಕೃಷ್ಣನ ಮತ್ತು ವಸುದೇವನ ಯಜ್ಞಾದಿ ಸಂತೋಷವನ್ನು, ಜನೇಭ್ಯಃ-ನಗರದಲ್ಲಿದ್ದ ಜನಂಗಳಿಗೆ, ಕಥಯಾಂಚಕ್ರುಃ-ಹೇಳಿದರು ॥೭೨॥

ಇಂತೆಂಬಲ್ಲಿಗೆ ಭಾಗವತಪ್ರತಿಶಬ್ದಾರ್ಥ ಬೋಧಿನಿಯೊಳು ದಶಮಸ್ಕಂಧದಲ್ಲಿ

೮೪ನೆಯ ಅಧ್ಯಾಯಂ ಮುಗಿದುದು.

---

೮೫ನೆಯ ಅಧ್ಯಾಯದ ಪ್ರತಿಪದಟೀಕೆ.

ಅಥ-ಆಬಳಿಕ, ಏಕದಾ-ಒಂದು ಸಮಯದಲ್ಲಿ, ಪ್ರಾಪ್ತೌ-ಬಳಿಗೆ ಬಂದವರೂ, ಕೃತಪಾದಾಭಿವಂದನೌ-ಮಾಡಲ್ಪಟ್ಟ ನಮಸ್ಕಾರವುಳ್ಳವರೂ, ಆತ್ಮಜೌ-ಪುತ್ರರೂ ಆದ, ಸಂಕರ್ಷಣಾಚ್ಯುತೌ-ರಾಮ ಕೃಷ್ಣರಂ ಕುರಿತು, ವಸುದೇವಃ-ವಸುದೇವನು,

---

ವ್ರಜವಂ ಸೇರಿಸಿದರು ।೭೦। ಬಂಧುಗಳು ಹೋಗುತಲೂ ಶ್ರೀಕೃಷ್ಣನೇ ಇಷ್ಟದೇವತೆಯಾಗಿ ಉಳ್ಳ ವೃಷ್ಣಿಗಳು ವರ್ಷಾಕಾಲವು ಅಭ್ಯಾಗ್ರವಾಗುತ್ತಿರಲು ಅದಂನೋಡಿ ದ್ವಾರವತಿಗೆ ಬಂದರು ।೭೧। ಸ್ವಜನರಿಗೆ ವಸುದೇವನ ಮಹೋತ್ಸವವನ್ನೂ ಬಂಧುಜನರ ದರ್ಶನವಾದ್ದು ಮೊಂತಾದ ವೃತ್ತಾಂತವನ್ನೂ ತಿಳಿಸಿದರು. ।೭೨।

ಇಂತು ಶ್ರೀಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸಿದನೆಂದುಸೂತಪೌ

ರಾಣಿಕನು ನೈಮಿಶಾರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಪೇಳಿದನೆಂ

ಬಲ್ಲಿಗೆ-ಶ್ರೀಮನ್ಮಹೀಶೂರ ಪುರವರಾಧೀಶ ಶ್ರೀಚಾಮರಾಜತನುಜಶ್ರೀ

ಮತ್ಕೃಷ್ಣರಾಜವಿರಚಿತವಾದ ಶ್ರೀಕೃಷ್ಣರಾಜವಾಣೀವಿಲಾಸಮೆಂ

ಬ ಶ್ರೀಭಾಗವತ ಪುರಾಣದಕರ್ಣಾಟಭಾಷಾವ್ಯಾಖ್ಯಾನದಲ್ಲಿ

೮೪ನೆಅಧ್ಯಾಯಂಮುಗಿದುದು

---

೮೫ನೆಯಅಧ್ಯಾಯವು-

ಶ್ರೀಧರೀಯಶ್ಲೋಕ॥ ಪಂಚಾಶೀತಿತಮೇರಾಮ ಕೃಷ್ಣಾಭ್ಯಾಂ ಸಂಪ್ರಾರ್ಥಿತೌ ಸ್ತುತೌ ।ಪಿತ್ರೇ ಜ್ಞಾನಮಥೋ ಮಾತ್ರೇ ಮೃತಾನ್ಪುತ್ರಾನಮುಚ್ಛತಾಂ ॥೧॥ಟೀ॥ ಎಂಭತ್ತೈದನೆಯ ಅಧ್ಯಾಯದಲ್ಲಿ ಶ್ರೀ ರಾಮಕೃಷ್ಣರು ಮಾತಾಪಿತೃಗಳಿಂದ ಸ್ತುತಿಗೆಯ್ಯಲ್ಪಟ್ಟವರಾಗಿ ತಂದೆಯಾದ ವಸುದೇವನಿಗೆ ತತ್ವಜ್ಞಾನವನ್ನೂ ತಾಯಿಯಾದ ದೇವಕಿಗೆ ಕಂಸನಿಂದ ಹತರಾದ ಪುತ್ರರನ್ನೂ ಕೊಟ್ಟರೆಂಬರ್ಥವಂ ಶ್ರೀ ಶುಕಾಚಾರ್ಯನು ಪರೀಕ್ಷಿದ್ರಾಯನಂ ಕುರಿತು ನಿರೂಪಿಸುವನದೆಂತೆನೆ;-

ಕೇಳೈ, ಅರಸೇ, ಅನಂತರದಲ್ಲಿ ಒಂದಾನೊಂದು ಸಮಯದೊಳು ಮಾತಾಪಿತೃಗಳಿಗೆ ಅಭಿವಂದಿಸಿ ಸ

ತ್ಯಾಸಂಕರ್ಷಣಾಚ್ಯುತೌ ||೧|| ಮುನೀನಾಂ ಸವಚಶ್ಶ್ರುತ್ವಾಪುತ್ರಯೋರ್ಧಾಮಸೂಚಕಮ್ | ತದ್ವೀರ್ಯೈ
ರ್ಜಾತವಿಸ್ರಂಭಃಪರಿಭಾಷ್ಯಾಭ್ಯಭಾಷತ ||೨|| ವಸುದೇವಃ || ಕೃಷ್ಣಕೃಷ್ಣಮಹಾಯೋಗಿನ್ ಸಂಕರ್ಷಣ
ಸನಾತನ | ಜಾನೇವಾಮಸ್ಯಯತ್ಸಾಕ್ಷಾತ್ಪ್ರಧಾನಪುರುಷೌಪರೌ ||೩|| ಯತ್ರಯೇನಯತೋಯಸ್ಯ
ಯಸ್ಮೈಯದ್ಯದ್ಯಥಾಯದಾ | ಸ್ಯಾದಿದಂಭಗವಾನ್ ಸಾಕ್ಷಾತ್ಪ್ರಧಾನಪುರುಷೇಶ್ವರಃ ||೪|| ಏವಂನಾನಾವಿ
ಧಂವಿಶ್ವಮಾತ್ಮಸೃಷ್ಟಮಧೋಕ್ಷಜಃ | ಆತ್ಮನಾನುಪ್ರವಿಶ್ಯಾತ್ಮನ್ ಪ್ರಾಣೋಜೀವೋಬಿಭರ್ಷ್ಯಜಃ ||೫||
ಪ್ರಾಣಾದೀನಾಂವಿಶ್ವಸೃಜಾಂಶಕ್ತಯೋಯಾಃಪರಸ್ಯತಾಃ | ಪಾರತಂತ್ರ್ಯಾದ್ವೈಸಾದೃಶ್ಯಾದ್ದ್ವಯೋ

---

ಅಭಿನಂದ್ಯ-ಸಂತೋಷಿಸಿ, ಪ್ರೀತ್ಯಾ-ಪ್ರಿಯದಿಂದ, ಆಹ-ನುಡಿದನು ||೧|| ಸಃ-ಆ ವಸುದೇವನು, ಮುನೀನಾಂ-ಮಹರ್ಷಿಗಳ, ಪುತ್ರಯೋರ್ಧಾಮಸೂಚಕಂ-ಮಕ್ಕಳ ಪ್ರಭಾವವನ್ನು ಸೂಚಿಸುವಂಥಾ, ವಚಃ-ಮಾತನ್ನು, ಶ್ರುತ್ವಾ-ಕೇಳಿ, ತದ್ವೀರ್ಯೈಃ-ಅವರ ಸಾಮರ್ಥ್ಯಗಳಿಂದ, ಜಾತವಿಸ್ರಂಭಃ-ವಿಶ್ವಾಸ ಹುಟ್ಟಿದವನಾಗಿ, ಪರಿಭಾಷ್ಯ-ಸಂಬೋಧಿಸಿ, ಅಭ್ಯಭಾಷತ-ಹೇಳಿದನು ||೨|| ಮಹಾಯೋಗಿನ್-ಅಧಿಕ ಬುದ್ಧಿಯುಳ್ಳವನಾದ, ಕೃಷ್ಣ-ಕೃಷ್ಣನೇ ಕೃಷ್ಣನೇ, ಸನಾತನ-ಶಾಶ್ವತನಾದ, ಸಂಕರ್ಷಣ-ರಾಮನೇ, ವಾಂ-ನಿಮ್ಮನ್ನು, ಅಸ್ಯ-ಈ ಪ್ರಪಂಚಕ್ಕೆ, ಸಾಕ್ಷಾತ್ಯತ್-ಸ್ವರೂಪ ಭೂತವಾದ ಕಾರಣವು ಯಾವುದೋ, ಅದರನ್ನಾಗಿಯೂ ಪ್ರಧಾನ ಪುರುಷೌಪರೌ-ಸರ್ವೋತ್ತಮರಾದ ಪ್ರಕೃತಿ ಪುರುಷರನ್ನಾಗಿಯೂ, ಜಾನೇ-ತಿಳಿಯುವೆನು ||೩|| ಇದಂ-ಈ ಪ್ರಪಂಚವು, ಯತ್ರ-ಯಾವ ಆತ್ಮನಲ್ಲಿ ಯೇನ-ಯಾವ ಆತ್ಮನಿಂದ, ಯತಃ-ಯಾವವನ ದೆಸೆಯಿಂದ, ಯಸ್ಯ-ಯಾವವನ ಸಂಬಂಧದಿಂದ ಯಸ್ಮೈ-ಯಾವವನಿಗೋಸುಗ, ಯದ್ಯತ್-ಯಾವವನಂ ಕುರಿತು, ಯಾವ ಆತ್ಮನು ಪ್ರಯೋಜಕವಾಗಿ, ಯಥಾಯಥಾ-ಹೇಗೆ ಹೇಗೆ, ಸ್ಯಾತ್-ಆಗುವುದೋ, ಸ ಭಗವಾನ್-ಆ ಪರಮೇಶ್ವರನು. ಪ್ರಧಾನ ಪುರುಷೇಶ್ವರಃ-ಭೋಗ್ಯ ಪ್ರಕೃತಿಗೂ ಭೋಕ್ತನಾದ ಜೀವನಿಗೂ ನಿಯಾಮಕನಾಗಿ, ಸಾಕ್ಷಾತ್-ಪ್ರತ್ಯಕ್ಷವಾದ ನೀನೇ ಆಗಿರುವಿ ||೪|| ಅಧೋಕ್ಷಜ-ನಾರಾಯಣನೇ ಆತ್ಮ ಸೃಷ್ಟಂ-ನಿನ್ನಿಂದ ಹುಟ್ಟಿಸಲ್ಪಟ್ಟ, ನಾನಾ ವಿಧಂ-ಹಲವು ಬಗೆಯುಳ್ಳ, ವಿಶ್ವಂ-ಪ್ರಪಂಚವನ್ನು, ಆತ್ಮನಾ-ಜೀವ ಸ್ವರೂಪದಿಂದ, ಅನುಪ್ರವಿಶ್ಯ-ಒಳ ಹೊಕ್ಕು, ಆತ್ಮನ್-ಚೇತರಿಸ ಗೊಳಿಸುವವನೇ, ಅಜಃ-ಉತ್ಪತ್ತಿಯಿಲ್ಲದ ನೀನೇ, ಪ್ರಾಣಃ-ಕ್ರಿಯಾಶಕ್ತಿಯೂ, ಜೀವಃ-ಜ್ಞಾನಶಕ್ತಿಯೂ ಆಗಿ, ಬಿಭರ್ಷಿ-ಧರಿಸುತಲಿದ್ದೀಯೇ ||೫|| ಪ್ರಾಣಾದೀನಾಂ-ಸೂತ್ರಾತ್ಮನು ಮೊದಲಾದ, ವಿಶ್ವಸೃಜಾಂ-ಜಗತ್ಕಾರಣಂಗಳ, ಶಕ್ತಯಃ-ಸೃಷ್ಟಿಮಾಡುವಸಾಮರ್ಥ್ಯಂಗಳು, ಯಾಃ-ಯಾವವುಂಟೋ, ತಾಃ-ಅವು, ಪಾರತಂತ್ರ್ಯಾತ್-ಪರಾಧೀನತೆಯಿಂದ, ಪರಸ್ಯ-ಪರಮಕಾರಣವಾದ ಪರಮೇಶ್ವರನದೇವೇ, ದ್ವಯೋಃ-ಚೇತನಾಚೇತನಂಗಳೆರಡಕ್ಕೂ, ವೈಸಾದೃಶ್ಯಾತ್-ಸಾ

---

ಮೀಪದಲ್ಲಿ ನಿಂತಿರುವ ಶ್ರೀ ರಾಮ ಕೃಷ್ಣರಂ ನೋಡಿ ಕ್ಲಾಘನಂಗೆಯ್ದು ವಸುದೇವನು ಪ್ರೀತಿಯಿಂದ ನುಡಿದ ನೆಂತೆನೆ- ||೧|| ಅವರ ಪ್ರಭಾವವಂ ವಿಸ್ತಾರವಾಗಿ ವರ್ಣಿಸಿದ ಮುನಿಗಳ ವಚನವಂ ಕೇಳಿ ಆಪ್ರಭಾವದಿಂದುಂಟಾದ ವಿಶ್ವಾಸವುಳ್ಳವನಾಗಿ ಅವರಂ ಕುರಿತು ಮಾತನಾಡಿದನು- ||೨|| ಎಲೈ ಮಹಾ ಯೋಗಿಯಾದ ಕೃಷ್ಣನೇ, ಪುರಾಣ ಪುರುಷನಾದ ರಾಮನೇ, ನಿಮ್ಮಂ ನಾನು ಈ ಪ್ರಪಂಚಕ್ಕೆ ಕಾರಣವನ್ನಾಗಿ ತಿಳಿಯುವೆನು ||೩|| ಈ ಪ್ರಪಂಚಕ್ಕೆ ಅಧಿಕರಣ ಸ್ವರೂಪರೂ ನೀವೇ, ಕರ್ತ್ರರೂ ನೀವೇ, ಕರಣ ರೂಪರೂ ಕಾರಣ ರೂಪರೂ ಅಪಾದಾನ ರೂಪರೂ, ಉದ್ದೇಶ್ಯ ಸ್ವರೂಪರೂ ಕರ್ಮ ಸ್ವರೂಪರೂ ಸಹ ನೀವೇ, ಸರ್ವ ಕಾಲದಲ್ಲಿಯೂ ಸರ್ವ ಸ್ವರೂಪರಾಗಿ ಭೋಗ್ಯ ಭೋಕ್ತೃ ರೂಪರಾಗಿ ಅವುಗಳಿಗೆ ಈಶ್ವರರಾಗಿರುವರೂ ನೀವೇ ||೪|| ಅಧೋಕ್ಷಜನಾದ ಎಲೈ, ಶ್ರೀಕೃಷ್ಣನೇ, ಇಂತು ನಾನಾ ವಿಧ ಪ್ರಪಂಚವು ನಿನ್ನಿಂದ ಸೃಷ್ಟಿಸಲ್ಪಟ್ಟದ್ದಾಗಿ ಅದರಲ್ಲಿ ನೀನೇ ಅನುಪ್ರವೇಶಂಗೆಯ್ದು ಕ್ರಿಯಾಶಕ್ತಿ ರೂಪನಾಗಿಯೂ ಜ್ಞಾನಶಕ್ತಿ ರೂಪನಾಗಿಯೂ ಈ ಪ್ರಪಂಚವನ್ನು ಅಜನಾದ ನೀನೇ ಧರಿಸುತಲಿರುವಿ ||೫|| ಪ್ರಕೃತಿ ಭೂತನಾದ ಸೂತ್ರಾತ್ಮನೇ ಮೊದಲಾದ ಪ್ರಪಂಚ ಕಾರಣ ರೂಪರಲ್ಲಿ ಯಾವ ಯಾವ ಸಾಮರ್ಥ್ಯಗಳುಂಟೋ ಆ ಶಕ್ತಿಗಳೆಲ್ಲವೂ ಪರಮೇಶ್ವರನಾದ ನಿನ್ನದೇ ಹೊರತು ಅವುಗಳದಲ್ಲ, ಹೇಗೆಂದರೆ ವೇಧಿಸುವ ಸಾಮರ್ಥ್ಯವು ಬಾಣವಂ ಪ್ರಯೋಗಿಸುವ ಪುರುಷನದೇ ಹೊರತು ಹೇಗೆ ಬಾಣಕ್ಕೆ ಸ್ವತಂತ್ರ)

ಶ್ಚೇಷ್ಟೈವಚೇಷ್ಟತಾಮ್ ॥೬॥ ಕಾಂತಿಸ್ತೇಜಃಪ್ರಭಾಸತ್ತಾಚಂದ್ರಾಗ್ನ್ಯರ್ಕರ್ಕ್ಷವಿದ್ಯುತಾಮ್ । ಯತ್ಸ್ಥೈರ್ಯಂಭೂಭೃತಾಂಭೂಮೇರ್ವೃತ್ತಿರ್ಗಂಧೋರ್ಥತೋಭವಾನ್ ॥೭॥ ತರ್ಪಣಂಪ್ರಾಣನಮಪಾಂದೇವತ್ವಂತಾಶ್ಚತದ್ರಸಃ । ಓಜಸ್ಸಹೋಬಲಂಚೇಷ್ಟಾಗತಿರ್ವಾಯೋಸ್ತವೇಶ್ವರ ॥೮॥ ದಿಶಾಂತ್ವಮವಕಾಶೋಸಿದಿಶಃಖಂಸ್ಫೋಟಆಶ್ರಯಃ । ನಾದೋವರ್ಣಸ್ತ್ವಮೋಂಕಾರಆಕೃತೀನಾಂಪೃಥಕ್ಕೃತಿಃ ॥೯॥ ಇಂದ್ರಿಯಂತ್ವಿಂದ್ರಿಯಾಣಾಂತ್ವಂದೇವಾಶ್ಚತದನುಗ್ರಹಃ । ಅವಬೋಧೋಭವಾನ್ಬುದ್ಧೇರ್ಜೀವಸ್ಯಾನುಸ್ಮೃತಿಸ್ಸತೀ ॥೧೦॥ ಭೂತಾನಾಮಸಿಭೂತಾದಿರಿಂದ್ರಿಯಾಣಾಂಚತೈಜಸಃ । ವೈಕಾರಿಕೋವಿಕಲ್ಪಾನಾಂಪ್ರಧಾನ

---

ವ್ಯವಿಲ್ಲದ್ದರಿಂದ, ಚೇಷ್ಟತಾಂ-ಚಲಿಸುತ್ತಿರುವ ಪ್ರಾಣಾದ್ಯಚೇತನಂಗಳ,ಚೇಷ್ಟೈವ-ಚೇತನಶಕ್ತಿಪ್ರೇರಿತನಾದ,ಚಲನಕ್ರಿಯೆಯೇ ಆಗಿರುವುದು ॥೬॥ ಚಂದ್ರಾಗ್ನ್ಯರ್ಕರ್ಕ್ಷವಿದ್ಯುತಾಂ-ಚಂದ್ರನ ಅಗ್ನಿಯ ಸೂರ್ಯನ ಚುಕ್ಕೆ ಮಿಂಚುಗಳ (ಕ್ರಮವಾಗಿ) ಕಾಂತಿಃ-ಬೆಳದಿಂಗಳೂ,ತೇಜಃ-ಉಷ್ಣಪ್ರಕಾಶವೂ, ಪ್ರಭಾ-ಬಿಸಿಲೂ, ಸತ್ತಾ-ತೋರುತ್ತಿರೋಣವೂ, ಭೂಭೃತಾಂ-ಬೆಟ್ಟಗಳ,ಸ್ಥೈರ್ಯಂ-ಸ್ಥಿರತ್ವವೂ, ಭೂಮೇಃ-ಭೂಮಿಯ, ವೃತ್ತಿಃ-ಪ್ರಾಣಿಗಳಿಗಾಧಾರವಾಗಿರುವಿಕೆಯೂ, ಗಂಧಶ್ಚ-ಗುಣವಾದ ವಾಸನೆಯೂ, ಅರ್ಥತಃ-ವಸ್ತುತಃ, ಭವಾನ್-ನೀನೇಆಗಿರುವಿ ॥೭॥ ಹೇದೇವ-ಎಲೈ ದೇವರೇ, ಅಪಾಂ-ಉದಕಂಗಳ, ತರ್ಪಣಂ- ತೃಪ್ತಿಯನ್ನು ಹುಟ್ಟಿಸುವಶಕ್ತಿಯೂ, ಪ್ರಾಣನಂ-ಬದುಕುವುದಕ್ಕೆ ನಿಮಿತ್ತವಾದಶಕ್ತಿಯೂ, ತಾಶ್ಚ-ಆ ಉದಕಂಗಳೂ, ತದ್ರಸಃ ಅದರ ಮಧುರಗುಣವೂ, ತ್ವಂ-ನೀನೇಆಗಿರುವಿ. ಈಶ್ವರ-ಪರಮೇಶ್ವರನೇ ! ವಾಯೋಃ-ಗಾಳಿಯ, ಓಜಃ-ಸಾಮರ್ಥ್ಯವೂ,ಸಹಃ-ತಡೆಕೊಳ್ಳುವಶಕ್ತಿಯೂ, ಬಲಂ-ತ್ರಾಣವೂ, ಚೇಷ್ಟಾ-ಚಲನಶಕ್ತಿಯೂ, ಗತಿಃ-ಗಮನಶಕ್ತಿಯೂ, ತವ-ನಿನ್ನದೇನೇ ॥೮॥ ದಿಶಾಂ-ದೆಸೆಗಳ, ಅವಕಾಶಃ-ಎಡೆಯು, ದಿಶಶ್ಚ-ದಿಕ್ಕುಗಳೂ, ಖಂ-ಆಕಾಶವೂ,ಆಶ್ರಯಃ-ಅದಕ್ಕಾಧಾರವಾದ, ಸ್ಫೋಟಃ-ಶಬ್ದತನ್ಮಾತ್ರವೂ, ತ್ವಂ-ನೀನೇ, ಅಸಿ-ಆಗಿರುವಿ. ನಾದಃ-ಪರಾವಾಕ್ಕು,ವರ್ಣಃ-ಪಶ್ಯಂತೀವಾಕ್ಕು, ಓಂಕಾರಃ-ಮಧ್ಯಮಾವಾಕ್ಕು, ಆಕೃತೀನಾಂ-ಶಬ್ದಾರ್ಥರೂಪಂಗಳ, ಪೃಥಕ್ಕೃತಿಃ-ವ್ಯಾವರ್ತಕನಾಮವಾದ ಪದಾದಿರೂಪವೆನಿಸುವ ವೈಖರೀವಾಕ್ಕೂ, ತ್ವಂ-ನೀನ, ಅಸಿ-ಆಗಿರುವಿ ॥೯॥ ಇಂದ್ರಿಯಾಣಾಂ-ಶ್ರೋತ್ರಾದಿಕರಣಂಗಳ, ಇಂದ್ರಿಯಂ-ವಿಷಯವನ್ನು ಪ್ರಕಾಶಪಡಿಸುವಶಕ್ತಿಯೂ, ದೇವಾಶ್ಚ-ಇಂದ್ರಿಯಂಗಳ ಅಧಿಷ್ಠಾನದೇವತೆಗಳೂ, ತದನುಗ್ರಹಃ-ಅವರ ಅಧಿಷ್ಠಾನಶಕ್ತಿಯೂ, ತ್ವಂ-ನೀನೆ, ಜೀವಸ್ಯ-ಜೀವಾತ್ಮನ, ಅವಬೋಧಃ-ವ್ಯವಸಾಯಶಕ್ತಿಯೂ, ಬುದ್ಧೇಃ-ಜ್ಞಾನದ, ಸತೀ-ಸಮೀಚೀನವಾದ, ಅನುಸ್ಮೃತಿಃ ಪ್ರತಿಸಂಧಾನ ಶಕ್ತಿಯೂ, ಭವಾನ್-ನೀನೇ ॥೧೦॥ ಭೂತಾನಾಂ-ಆಕಾಶಾದಿ ಭೂತಂಗಳಿಗೆ, ಭೂತಾದಿಃ-ಕಾರಣವಾದ ತಾಮಸಾಹಂಕಾರವು,

---

ನಾಗಿಲ್ಲವೋ ಹಾಗೆ ಪರಮೇಶ್ವರನಿಗೆ ಅಧೀನರಾಗಿರುವುದರಿಂದ ಅವೆಲ್ಲವೂ ವಾಯುವಿನ ಶಕ್ತಿಯಿಂದ ತೃಣಾದಿಗಳು ಚಲಿಸುವಂತೆ ಪರಮೇಶ್ವರನ ಶಕ್ತಿಯಿಂದಲೇ ಚೇಷ್ಟಿಸುವುದು ॥೬॥ ಚಂದ್ರನು, ಅಗ್ನಿ, ಸೂರ್ಯನು ನಕ್ಷತ್ರಗಳು, ಮಿಂಚುಗಳು, ಇವುಗಳ ಕಾಂತಿಯು ತೇಜಸ್ಸು ಪ್ರಭೆಯುಸತ್ತೆಯು, ಮತ್ತು ಬೆಟ್ಟಗಳ ಸ್ಥಿರತ್ವವು, ಭೂಮಿಯಲ್ಲಿರುವ ಗಂಧವು ಇದೆಲ್ಲವೂ ವಾಸ್ತವಿಕವಾಗಿ ನಿನ್ನಶಕ್ತಿಯೇ. ॥೭॥ ನೀರಿನ ತೃಪ್ತಿಕರತ್ವವೂ ಪ್ರಾಣಾಪ್ಯಾಯಕತ್ವವೂ ಜೀವನೆಕಾರಣತ್ವವೂ ಆನೀರೂ ಅದರಲ್ಲಿರುವರಸವೂ ನೀನೇ ಆಗಿರುವಿ. ವಾಯುವಿನ ಪರಾಕ್ರಮವೂ ಸಾಮರ್ಥ್ಯವೂ ಬಲವೂ ಚೇಷ್ಟೆಯೂ ಗತಿಯೂ ಈಶ್ವರನೇ ಎಲ್ಲವೂ ನಿನ್ನದೆ ॥೮॥ ಸೋಪಾಧಿಕವಾದ ಆಕಾಶದ ಪ್ರದೇಶಂಗಳೆನಿಸುವ ದಿಕ್ಕುಗಳ ಅವಕಾಶವಾಗಿರುವ ಆಕಾಶವೂ, ದಿಕ್ಕುಗಳೂ, ಸಾಮಾನ್ಯವಾದ ಅಖಂಡಾಕಾಶವೂ, ಅದಕ್ಕಾಶ್ರಯವಾದ ಶಬ್ದತನ್ಮಾತ್ರವೆಂದರೆ ಪರಾವಾಗ್ರೂಪವೂ, ನಾದವೆಂಬ ಪಶ್ಯಂತೀವಾಗ್ರೂಪವೂ, ಓಂಕಾರವೆಂಬ ಮಧ್ಯಮಾವಾಗ್ರೂಪವೂ, ವರ್ಣಪದಾರ್ಥವಿಭಾಗವುಳ್ಳ ವೈಖರೀವಾಗ್ರೂಪವೂ ನೀನೇ ಆಗಿರುವಿ ॥೯॥ ಇಂದ್ರಿಯಂಗಳ ವಿಷಯಪ್ರಕಾಶನ ಶಕ್ತಿಯೂ ಅವುಗಳ ಅಧಿಷ್ಠಾನದೇವತೆಯರೂ ಅವುಗಳ ಅಧಿಷ್ಠಾನಶಕ್ತಿಯೂ ವ್ಯವಸಾಯಶಕ್ತಿಯೂ ಪ್ರತಿಸಂಧಾನ ಶಕ್ತಿಯೂ ನೀನೇ ಆಗಿರುವಿ ॥೧೦॥ ಭೂತಗಳಿಗೆ ಕಾರಣವಾದ ತಾಮಸಾಹಂಕಾರವೂ ನೀನೇ ಆಗಿರುವಿ. ಕಾರಣವೂನೀನೇಆಗಿರುವಿ. ಇಂದ್ರಿಯಂಗಳಿಗೆ ಕಾರಣ

ಮನುಶಾಯಿನಾಮ್ ॥೧೧॥ ನಶ್ವರೇಷ್ವಿಹಭಾವೇಷು ತದಸಿತ್ವಮನಶ್ವರಮ್ । ಯಥಾದ್ರವ್ಯವಿಕಾರೇಷು ದ್ರವ್ಯಮಾತ್ರಂನಿರೂಪಿತಮ್ ॥೧೨॥ ಸತ್ತ್ವಂರಜಸ್ತಮಇತಿಗುಣಾಸ್ತದ್ವೃತ್ತಯಶ್ಚಯಾಃ । ತ್ವಯ್ಯದ್ಧಾಬ್ರಹ್ಮಣಿಪರೇಕಲ್ಪಿತಾಯೋಗಮಾಯಯಾ ॥೧೩॥ ತಸ್ಮಾನ್ನಸಂತ್ಯಮೀಭಾವಾಯರ್ಹಿತ್ವಯಿವಿಕಲ್ಪಿತಾಃ । ತ್ವಂಚಾಮೀಷುವಿಕಾರೇಷು ಹ್ಯನ್ಯದಾವ್ಯಾವಹಾರಿಕಃ ॥೧೪॥ ಗುಣಪ್ರವಾಹಏತಸ್ಮಿನ್ನಬುಧಾ

---

ಇಂದ್ರಿಯಾಣಾಂ-ಶ್ರೋತ್ರಾದೀಂದ್ರಿಯಂಗಳಿಗೆ, ತೈಜಸಃ-ಕಾರಣವಾದ ರಾಜಸಾಹಂಕಾರವೂ, ವಿಕಲ್ಪಾನಾಂ-ಅಧಿದೈವಾಧ್ಯಾತ್ಮಭೇದದಿಂದ ವಿಕಲ್ಪಿಸಲ್ಪಡುವ ದೇವತೆಗಳಿಗೆ, ವೈಕಾರಿಕಃ-ಕಾರಣವಾದ ಸಾತ್ವಿಕಾಹಂಕಾರವೂ, ಅನುಶಾಯಿನಾಂ-ಅವಿದ್ಯೆಯಲ್ಲಿ ಅಡಗಿದಜೀವಾತ್ಮರಿಗೆ, ಪ್ರಧಾನಂ-ಸಂಸಾರಕ್ಕೆ ಕಾರಣವಾದ ಮೂಲಪ್ರಕೃತಿಯೂ, ಅಸಿ-ನೀನೇ ಆಗಿರುವಿ॥೧೧॥ದ್ರವ್ಯವಿಕಾರೇಷು-ಮಣ್ಣುಚಿನ್ನ ಮೊದಲಾದವುಗಳ ವಿಕಾರಕಾರ್ಯಂಗಳಾದ ಮಡಿಕೆಕುಂಡಲ ಮೊದಲಾದವುಗಳಲ್ಲಿ,ದ್ರವ್ಯಮಾತ್ರಂ-ಮಣ್ಣುಚಿನ್ನವಮಾತ್ರವೇ, ಅನಶ್ವರಂ-ನಾಶವಿಲ್ಲದೆ, ಯಥಾ-ಹೇಗೆನಿಲ್ಲುವುದೋ, ತಥಾ ಹಾಗೆ, ಇಹ ಈ ಪ್ರಪಂಚದಲ್ಲಿ, ನಶ್ವರೇಷು-ನಾಶಸ್ವಭಾವವುಳ್ಳ, ಭಾವೇಷು-ಭಾವಪದಾರ್ಥಂಗಳಲ್ಲಿ, ಯತ್-ಯಾವುದು, ಅನಶ್ವರಂ-ನಾಶವಿಲ್ಲದೆ ಉಳಿಯುವುದೋ ತತ್-ಆಸತ್ವವು, ತ್ವಮಸಿ-ನೀನಾಗಿರುವಿಯೆಂದು, ನಿರೂಪಿತಂ ವೇದಾಂತಗಳಿಂದ ವಿವರಿಸಲ್ಪಟ್ಟಿದೆ ॥೧೨॥ ಸತ್ವಂ ಸತ್ವಗುಣವು, ರಜಃ-ರಜೋಗುಣವು, ತಮಃಇತಿ-ತಮೋಗುಣವು, ಎಂಬ ಗುಣಾಃ-ಪ್ರಾಕೃತಗುಣಂಗಳೂ, ತದ್ವೃತ್ತಯಶ್ಚ-ಅವುಗಳಪರಿಣಾಮಂಗಳಾದ ಮಹತ್ತತ್ವ ಅಹಂಕಾರಮೊದಲಾದವೂ, ಯಾಃ-ಯಾವುವುಂಟೋ, ತಾಃ-ಅವು, ಅದ್ಧಾ-ಪ್ರತ್ಯಕ್ಷವಾದ, ಪರೇಬ್ರಹ್ಮಣಿ-ಪರಮಾತ್ಮನಾದ, ತ್ವಯಿ-ನಿನ್ನಲ್ಲಿ, ಯೋಗಮಾಯಯಾ-ಮೋಹಕವಾದ ಶಕ್ತಿಯಿಂದ, ಕಲ್ಪಿತಾಃ ಸತ್ಯವಾಗಿತೋರುವಂತೆ ಕಲ್ಪಿಸಲ್ಪಟ್ಟಿರುವವು ॥೧೩॥ ತಸ್ಮಾತ್-ಆ ಕಾರಣದ ದೆಸೆಯಿಂದ, ಅಮೀಭಾವಾಃ-ಪ್ರಾಪಂಚಿಕವಾದ ಪದಾರ್ಥಂಗಳಾದ ವಿಯದಾದಿಗಳು, ನಸಂತಿ-ಪರಮಾರ್ಥ ಸತ್ಯವಾಗಿಲ್ಲವು. ಯರ್ಹಿ-ಯಾವಾಗ, ತ್ವಯಿ-ಅಧಿಷ್ಠಾನವಾದ ನಿನ್ನಲ್ಲಿ, ವಿಕಲ್ಪಿತಾಃ- ಅಧ್ಯಸ್ತಂಗಳಾಗಿ ಭೇದದಿಂದವ್ಯವಹರಿಸಲ್ಪಡುತ್ತಿವೆಯೋ, ತ್ವಂಚ-ನೀನೂಕೂಡ, ಅಮೀಷುವಿಕಾರೇಷು-ಈ ವ್ಯಾವಹಾರಿಕಪದಾರ್ಥಂಗಳಲ್ಲಿ ಅನುಪ್ರವಿಷ್ಟನಾಗಿ ತೋರುವೆಯೋ, ತದಾ-ಆಗ, ಸನ್ತಿ-ವ್ಯಾವಹಾರಿಕಂಗಳಾಗಿರುವವು) ಅನ್ಯದಾ- ಹಾಗಿಲ್ಲದಿದ್ದರೆ, ಅವ್ಯಾವಹಾರಿಕಃ-ವ್ಯವಹಾರಕ್ಕೆ ವಿಷಯನಲ್ಲದ ನಿರ್ವಿಕಲ್ಪಬ್ರಹ್ಮವಾದನೀನುಮಾತ್ರವೇ ಮಿಕ್ಕಿರುವಿ॥೧೪॥ಏತಸ್ಮಿನ್-ಈ, ಗುಣಪ್ರವಾಹೇ-ಪ್ರಕೃತಿಕಾರ್ಯದಲ್ಲಿ, ಸೂಕ್ಷ್ಮಾಂಗತಿಂ-ನಿಷ್ಪ್ರಪಂಚಾತ್ಮವಸ್ತುವನ್ನು, ಅಬುಧಾಃ-ತಿಳಿಯದಿರುವ ಅಜ್ಞಾನಿಗಳು, ಪಾರಾಂತರವು-ಅಬುಧ್ವಾ-ತಿಳಿಯದೆ, ಅಖಿಲಾತ್ಮನಿ-ಸರ್ವಪ್ರಪಂಚಕ್ಕೂಅಧಿಷ್ಠಾನಸತ್ತಾರೂಪನಾದ ನಿನ್ನಲ್ಲಿ, ಅಬೋಧೇನ-ಸ್ವರೂಪಾಜ್ಞಾನಪ್ರಯುಕ್ತವಾದ ದೇಹಾಭಿಮಾನದಿಂದಾದ, ಕರ್ಮಭಿಃ-ಪುಣ್ಯಪಾಪಂಗಳಿಂದ, ಇಹ-ಈ ಪ್ರಪಂಚದೊಳಗೆ, ಸಂಸ

---

ಮಾದ ತೈಜಸರಾಜಸಾಹಂಕಾರಂಗಳೂ, ಅಧಿದೈವಾಧ್ಯಾತ್ಮಭೇದದಿಂ ಕಲ್ಪಿಸಲ್ಪಡುವ ದೇವತೆಗಳೂ ಅವುಗಳಿಗೆ ಕಾರಣವಾದ ವೈಕಾರಿಕಸಾತ್ವಿಕಾಹಂಕಾರವೂ, ಜೀವಾತ್ಮರ ಸಂಸಾರಕ್ಕೆ ಕಾರಣವಾದ ಪ್ರಧಾನತತ್ವವೂನೀನೇ ಆಗಿರುವಿ ॥೧೧॥ ನಾಶಶೀಲಂಗಳಾದ ಈಭಾವಪದಾರ್ಥಂಗಳಲ್ಲಿ ನಾಶವಿಲ್ಲದೆ ಮಿಗುವರೂಪವುಳ್ಳ ಪಾರಮಾರ್ಥಿಕವಸ್ತುವಾವುದೋ ಅದು ನೀನು. ದ್ರವ್ಯವಿಕಾರಂಗಳಾದ ಮೃತ್ಕಾರ್ಯವಾದ ಮಡಿಕೆ ಸುವರ್ಣಕಾರ್ಯವಾದ ಕುಂಡಲ ಮುಂತಾದ ನಶ್ವರದ್ರವ್ಯಂಗಳಲ್ಲಿ ಅನಶ್ವರವಪ್ಪ ಮೃತ್ಸುವರ್ಣಾದಿರೂಪವಾದಪ್ರಕೃತಿಯಾಗಿರುವಿ॥೧೨॥ ಸತ್ವರಜಸ್ತಮೋಗುಣಂಗಳೂ ಅವುಗಳ ಪರಿಣಾಮಂಗಳಾದ ಮಹದಾದಿಗಳೂ ಪ್ರತ್ಯಕ್ಷಪರಬ್ರಹ್ಮವಾದ ನಿನ್ನಲ್ಲಿ ಯೋಗಮಾಯೆಯಿಂದ ಕಲ್ಪಿತಂಗಳಾಗಿರುವವು ॥೧೩॥ ಯಾವಾಗ ನಿರ್ವಿಕಾರವಾದ ನಿನ್ನಲ್ಲಿ ಪ್ರಪಂಚವಿಕಾರಗಳು ವಿಕಲ್ಪಿಸಲ್ಪಡುವವೋ ಆವಾಗ ಭೂತಭೌತಿಕ ಪ್ರಪಂಚವಿಕಾರಗಳು ಆಗ ಮಾತ್ರಸತ್ಯಗಳಾಗಿರುವಂತೆ ತೋರುತ್ತಿರುವವು. ಆದ್ದರಿಂದ ನಿನ್ನಲ್ಲಿ ಅವುಪಾರಮಾರ್ಥಿಕಂಗಳಾಗಿಲ್ಲವು. ಅವುಗಳಲ್ಲಿ ಕಾರಣಸತ್ತಾರೂಪನಾಗಿನೀನು ಅನುಗತನಾಗಿರುವುದರಿಂದ ಅವು ವ್ಯಾವಹಾರಿಕ ಸತ್ಯಂಗಳಾಗಿ ತೋರುತಲಿರುವವು. ವ್ಯವಹಾರವಡಗಿದಾಗ ಜಗದ್ವ್ಯಾಪಾರವರ್ಜನಾದ ಅವ್ಯವಹಾರಿಕನೆನಿಸುವ ಪಾರಮಾರ್ಥಿಕನಿರ್ವಿಕಲ್ಪವಸ್ತುವೆನಿಸುವ ನೀನೇಸತ್ಯವಾಗಿ ಮಿಗುವಿ ॥೧೪॥ ಸೂಕ್ಷ್ಮವಾದ ಪ್ರಪಂಚವಿಲ್ಲದ ಈಚಿನ್ಮಾತ್ರವನ್ನು ಅರಿಯದಿರುವವರು ಅಖಿಲಾತ್ಮನಾದನಿನ್ನ

ಸ್ತ್ವಯ್ಯಖಿಲಾತ್ಮನಿ । ಗತಿಂಸೂಕ್ಷ್ಮಾಮಬೋಧೇನಸಂಸರಂತೀಹಕರ್ಮಭಿಃ ॥೧೫॥ ಯದೃಚ್ಛಯಾನೃತಾಂ ಪ್ರಾಪ್ಯಸುಕಲ್ಪಾಮಿಹದುರ್ಲಭಾಮ್ । ಸ್ವಾರ್ಥೇಪ್ರಮತ್ತಸ್ಯವಯೋಗತಂತ್ವನ್ಮಾಯಯೇಶ್ವರ ॥೧೬॥ ಅಸಾವಹಂಮಮೈವೈತೇದೇಹೇಚಾಸ್ಯಾನ್ವಯಾದಿಷು । ಸ್ನೇಹಪಾಶೈರ್ನಿಬಧ್ನಾತಿಭವಾನ್ಸರ್ವಮಿದಂಜಗತ್ ॥೧೭॥ ಯುವಾಂನನಸ್ಸುತೌಸಾಕ್ಷಾತ್ಪ್ರಧಾನಪುರುಷೇಶ್ವರೌ । ಭೂಭಾರಕ್ಷತ್ರಕ್ಷಪಣಅವತೀರ್ಣೌತಥಾತ್ಥಹ ॥೧೮॥ ತತ್ತೇಗತೋಸ್ಮ್ಯರಣಮದ್ಯಪದಾರವಿಂದಮಾಪನ್ನಸಂಸೃತಿಭಯಾಪಹಮಾರ್ತಬಂಧೋ । ಏತಾವತಾಲಮಲಮಿಂದ್ರಿಯಲಾಲಸೇನಮರ್ತ್ಯಾತ್ಮದೃಕ್ತ್ವಯಿಪರೇಯದಪತ್ಯಬುದ್ಧಿಃ ।

---

ಗಂತಿ-ಜನನಮರಣಾದಿ ದುಃಖಗಳನ್ನು ಹೊಂದುತ್ತಿರುವರು ॥೧೫॥ ಇಹ-ಈ ಲೋಕದಲ್ಲಿ, ದುರ್ಲಭಾಂ-ಪ್ರಯಾಸದಿಂದಲೂ ದೊರೆಯಲಶಕ್ಯವಾದ, ಸುಕಲ್ಪಾಂ-ಪಟುಕರಣಂಗಳುಳ್ಳ, ನೃತಾಂ-ಮನುಷ್ಯತ್ವವನ್ನು, ಪ್ರಾಪ್ಯ-ಹೊಂದಿ, ಈಶ್ವರ- ನಿಯಾಮಕನಾದ ಕೃಷ್ಣನೇ, ತ್ವನ್ಮಾಯಯಾ-ನಿನ್ನ ಮೋಹಶಕ್ತಿಯಿಂದ, ಸ್ವಾರ್ಥೇ-ಸ್ವಪ್ರಯೋಜನವಾದ ಸ್ವರೂಪಜ್ಞಾನವಿಷಯದಲ್ಲಿ,ಯದೃಚ್ಛಯಾ-ಮನಸ್ಸಿಗೆ ತೋರಿದಂತೆಪ್ರವರ್ತಿಸುವುದರಿಂದ, ಪ್ರಮತ್ತಸ್ಯ-ಬಹಳ ಗರ್ವಿಸಿದಂಥಾನನ್ನ, ವಯಃ-ವ್ರಾಯವು, ಗತಂ-ಕಳೆದುಹೋದದ್ದಾಯಿತು ॥೧೬॥ ಅಸೌ-ಇದು, ಅಹಂ-ನಾನು, ಮಮೈವ-ನನ್ನದೆ, ಇತಿ-ಹೀಗೆಂದು, ಅಸ್ಯದೇಹಸ್ಯ-ಈ ಶರೀರದ, ಅನ್ವಯಾದಿಷು-ಸಂತಾನವಾದ ಪುತ್ರಾದಿಗಳಲ್ಲಿ, ಸ್ನೇಹಪಾಶೈಃ-ಅಭಿಮಾನವೆಂಬ ಹಗ್ಗಗಳಿಂದ,ಭವಾನ್-ನೀನು, ಇದಂಜಗತ್ಸರ್ವಂ-ಈ ಪ್ರಪಂಚವೆಲ್ಲವನ್ನೂ, ನಿಬಧ್ನಾತಿ-ಕಟ್ಟಿಹಾಕುತಲಿರುವಿ ॥೧೭॥ ಯುವಾಂ-ನೀವೀರ್ವರೂ, ನಃ-ನಮಗೆ, ಸುತೌ -ಪುತ್ರರು, ನ-ಅಲ್ಲವು, ಸಾಕ್ಷಾತ್-ಪ್ರತ್ಯಕ್ಷವಾದ, ಪ್ರಧಾನಪುರುಷೇಶ್ವರೌ-ಪ್ರಕೃತಿಪುರುಷರೆಂಬ ಕಾರಣಮೂರ್ತಿಗಳಾದವರೂ, ಭೂಭಾರಕ್ಷತ್ರಕ್ಷಪಣಾಯ-ಭೂಮಿಗೆ ಹೊರೆಯಾಗಿರುವ ಅರಸುಗಳಂ ನಾಶಗೊಳಿಸಲೋಸುಗ, ಅವತೀರ್ಣೌ- ಅವತರಿಸಿದವರಾಗಿರುವಿರಿ, ತಥಾ-ಹಾಗೆ, ಆತ್ಥಹಿ-ನೀನೇ ಹೇಳುತ್ತಿರುವಿಯಲ್ಲವೆ ॥೧೮॥ ಆರ್ತಬಂಧೋ-ಆಪತ್ತುಂಟಾದವರಿಗೆ ನಂಟನಾದವನೇ! ತತ್-ಆ ಕಾರಣದಿಂದ, ತೇ-ನಿನ್ನ, ಆಪನ್ನಸಂಸೃತಿಭಯಾಪಹಂ-ನಂಬಿದವರ ಸಂಸಾರಭಯವಂ ಕಳೆಯುವಂಥಾ,ಪದಾರವಿಂದಂ-ಅಡಿದಾವರೆಯನ್ನು, ಅದ್ಯ-ಈಗ, ಅರಣಂಗತೋಸ್ಮಿ-ಶರಣನನ್ನಾಗಿ ಹೊಂದಿದವನಾದೆನು ಯತ್-ಯಾವಕಾರಣದಿಂದ, ಮರ್ತ್ಯಾತ್ಮದೃಕ್-ಸತ್ತುಹೋಗುವದೇಹದಲ್ಲಿ ನಾನೆಂಬಬುದ್ಧಿಯುಳ್ಳವನೂ, ಆಗಿರುವೆನೋ, ಏತಾವತಾ-ಎಷ್ಟುಮಾತ್ರವಾದ, ಇಂದ್ರಿಯಲಾಲಸೇನ-ಇಂದ್ರಿಯಂಗಳ ಅಪೇಕ್ಷೆಯಿಂದ,ಅಲಮಲಂ-ಸಾಕುಸಾಕು ॥೧೯॥ ಅನುಯುಗಂ-ಪ್ರತಿಯುಗಕಾಲದಲ್ಲಿಯೂ, ನೌ-ಸುತನನ್ನು ಪೃಶ್ನಿಯು ಎಂಬ, ಕಶ್ಯಪನು ಅದಿತಿಯೆಂಬ, ವಸುದೇವನು ದೇವಕಿಯೆಂಬ, ನಮ್ಮೀರ್ವರಿಗೆ,

---

ಯೋಗವಾಯಿಯು ಈಗುಣಪ್ರವಾಹದಲ್ಲಿ ಅಜ್ಞಾನದ ದೇಹಾಭಿಮಾನದಿಂದ ಮಾಡಲ್ಪಡುವ ಕರ್ಮಗಳಿಂದ ಜನ್ಮಮರಣದುಃಖಪ್ರವಾಹರೂಪವಾಗಿ ಸಂಸಾರಗೊಳ್ಳುತ್ತಿರುವರು ॥೧೫॥ ಎಲೈಪರಮೇಶ್ವರನೇ! ಸ್ವೇಚ್ಛೆಯಿಂದ ಕರ್ಮಪ್ರವಾಹದೊಳಗೆ ದುರ್ಲಭವಾಗಿಯೂ ಪುರುಷಾರ್ಥ ಸಂಪಾದನಸಮರ್ಥವಾಗಿಯೂ ಇರುವ ಮನುಷ್ಯಜನ್ಮವನ್ನು ಹೊಂದಿಯೂಕೂಡ ಯಾವಪುರುಷನು ನಿನ್ನಮಾಯೆಯಿಂದ ಸ್ವಪ್ರಯೋಜನದಲ್ಲಿ ಮತ್ತನಾಗಿರುವನೋ ಆಪುರುಷನ ವಯಸ್ಸು ವ್ಯರ್ಥವಾಗಿ ಹೋಗುವುದು ॥೧೬॥ ಮಾಯಿಯಾದ ಆನೀನು ಈಸರ್ವಪ್ರಪಂಚವನ್ನೂ ಈದೇಹವೇನಾನು ಇವರು ನನ್ನವರು ಇವುನನ್ನವು ಎಂದು ಸಂಬಂಧಿಗಳಲ್ಲಿ ಸ್ನೇಹಪಾಶಗಳಿಂದ ಕಟ್ಟುಗೊಳಿಸುತಲಿರುವಿ ॥೧೭॥ ನೀವೀರ್ವರೂ ನಮ್ಮ ಪುತ್ರರಲ್ಲ ಸಾಕ್ಷಾತ್ಪ್ರಧಾನಪುರುಷರೂ, ಈಭೂಮಿಗೆ ಭಾರರೂಪರಾದ ಕ್ಷತ್ರಿಯರಂ ಸಂಹರಿಸಲೋಸುಗ ಕಪಟವೇಷವಂಧರಿಸಿರುವಿರಿ ॥೧೮॥ ಎಲೈ ಆರ್ತರಾದ ಭಕ್ತಜನರಿಗೆ ಬಂಧುವಾದ ಶ್ರೀಕೃಷ್ಣನೇ! ನಾನು ಶರಣಾಗತರ ಸಂಸಾರಭಯವಂ ಪರಿಹರಿಸುವ ನಿನ್ನ ಪಾದಪದ್ಮವಂ ಶರಣುಹೊಂದಿರುತ್ತೇನೆ. ನನಗೆ ಈಯಿಂದ್ರಿಯಾರ್ಥಂಗಳಲ್ಲಿ ಭೋಗಾಪೇಕ್ಷೆಯಂ ಸಾಕುಮಾಡು, ನಶ್ವರವಾದ ಈಶರೀರದಲ್ಲಿ ನಾನೆಂಬಬುದ್ಧಿಯುಳ್ಳ ನಾನು ಸರ್ವೇಶ್ವರನಾದ ನಿನ್ನಲ್ಲಿ ಪುತ್ರನೆಂಬ ಬುದ್ಧಿಯಂ ಮಾಡುತ್ತಿರುತ್ತೇನೆಯಲ್ಲವೆ ॥೧೯॥ ನೀನು ಆದಿಯಲ್ಲಿ ದೇವಕೀ ಗರ್ಭದಿಂದ ಆವಿರ್ಭವಿಸುವ ಕಾಲದೊಳು ನಿಜರೂಪದಿಂದ ನಮಗೆಪ್ರ

ಸೂತೀಗೃಹೇನನುಜಗಾದಭವಾನಜೋನೌಸಂಜಜ್ಞಇತ್ಯನುಯುಗಂನಿಜಧರ್ಮಗುಪ್ತ್ಯೈ । ನಾನಾತನೂರ್ಗಗನವದ್ವಿದಧಜ್ಜಹಾಸಿಕೋವೇದಭೂಮ್ನಉರುಗಾಯವಿಭೂತಿಮಾಯಾಃ ॥೨೦॥ ಶ್ರೀಶುಕಃ ॥ ಆಕರ್ಣ್ಯೇದಂಪಿತುರ್ವಾಕ್ಯಂಭಗವಾನ್ ಸಾತ್ವತರ್ಷಭಃ । ಪ್ರತ್ಯಾಹಪ್ರಶ್ರಯಾನಮ್ರಃಪ್ರಹಸನ್ ಶ್ಲಕ್ಷ್ಣಯಾಗಿರಾ ॥೨೧॥ ಶ್ರೀಭಗವಾನ್ ॥ ವಚೋವಸ್ಸಮವೇತಾರ್ಥಂತಾತೈತದುಪಮನ್ಮಹೇ ಯನ್ನಃ ಪುತ್ರಾನ್ ಸಮುದ್ದಿಶ್ಯತತ್ತ್ವಗ್ರಾಮಉದಾಹೃತಃ ॥೨೨॥ ಅಹಂಯೂಯಮಸಾವಾರ್ಯಇಮೇಚದ್ವಾರಕೌಕಸಃ । ಸರ್ವೇಪ್ಯೇವಂಯದುಶ್ರೇಷ್ಠವಿಮೃಶ್ಯಾಸ್ಸಚರಾಚರಮ್ ॥೨೩॥ ಆತ್ಮಾಹ್ಯೇಕಸ್ಸ್ವಯಂಜ್ಯೋತಿರ್ನಿತ್ಯೋ

---

ಅಜಃ-ಉತ್ಪತ್ತಿ ಇಲ್ಲದವನಾದ, ಭವಾನ್-ನೀನು, ನಿಜಧರ್ಮಗುಪ್ತ್ಯೈ- ಸ್ವಧರ್ಮ ಪೋಷಣಾರ್ಥವಾಗಿ, ಸಂಜಜ್ಞೇ-ಹುಟ್ಟಿ ಹುಟ್ಟಿದೆನೆಂದು, ಸೂತೀಗೃಹೇ-ಪುರುಡುವ ಮನೆಯಲ್ಲಿ, ಜಗಾದ ನನು-ಹೇಳಿದಿಯಲ್ಲವೆ ಗಗನವತ್-ಆಕಾಶದಂತೆ, ಅಸಂಗನಾಗಿಯೇ, ನಾನಾತನೂಃ-ಹಲವು ರೂಪಂಗಳನ್ನು, ವಿದಧತ್-ಧರಿಸಿದವನಾಗಿ, ಜಹಾಸಿ-ಬಿಡುತಲಿರುವಿ ಹೇ ಉರುಗಾಯ-ಎಲೈ ವಿಷ್ಣುವೇ. ಭೂಮ್ನಃ-ಸರ್ವವ್ಯಾಪಕನಾದ ನಿನ್ನ, ವಿಭೂತಿಮಾಯಾಃ-ಲೀಲೈಶ್ವರ್ಯರೂಪಂಗಳಾದ ಮೋಹಶಕ್ತಿಗಳನ್ನು, ಕೋವೇದ- ಯಾವನು ಬಲ್ಲನು ॥೨೦॥ ಭಗವಾನ್-ಸರ್ವಜ್ಞನಾದ, ಸಾತ್ವತರ್ಷಭಃ-ಯಾದವಶ್ರೇಷ್ಠನಾದ ಕೃಷ್ಣನು, ಪಿತುಃ- ತಂದೆಯಾದ ವಸುದೇವನ, ಇದಂವಾಕ್ಯಂ-ಹೀಗೆ ಹೇಳಿದ ಈ ಮಾತನ್ನು, ಆಕರ್ಣ್ಯ-ಕೇಳಿ, ಪ್ರಹಸನ್-ನಗುತಿರುವನಾಗಿ, ಪ್ರಶ್ರಯಾನಮ್ರಃ-ವಿನಯದಿಂ ಬಗ್ಗಿದವನಾಗಿ, ಶ್ಲಕ್ಷ್ಣಯಾಗಿರಾ-ನಯಸರದ ನುಡಿಯಿಂದ, ಪ್ರತ್ಯಾಹ-ಪ್ರತ್ಯುತ್ತರವನ್ನು ಇತ್ತನು ॥೨೧॥ ತಾತ-ತಂದೆಯೇ ! ವಃ-ನಿಮ್ಮ, ಸಮವೇತಾರ್ಥಂ-ತಿಳಿಯಲ್ಪಟ್ಟ ಪ್ರಯೋಜನವುಳ್ಳ, ಏತದ್ವಚಃ-ಈ ಮಾತನ್ನು, ಯತ್-ಯಾವ ಕಾರಣದಿಂದ, ಪುತ್ರಾನ್ ನಃಸಮುದ್ದಿಶ್ಯ-ಮಕ್ಕಳಾದ ನಮ್ಮಂ ಕುರಿತು, ತತ್ವಗ್ರಾಮಃ-ತತ್ವಗಳ ಸಮೂಹವು, ಉದಾಹೃತಃ- ಚನ್ನಾಗಿ ನಿರೂಪಿಸಲ್ಪಟ್ಟಿತೋ, ತತ್-ಆ ಕಾರಣದಿಂದ, ಉಪಮನ್ಮಹೇ-ಉಪಪನ್ನವೆಂದು ತಿಳಿಯುವೆವು ॥೨೨॥ ಆರ್ಯ- ಪೂಜ್ಯನಾದ ವಸುದೇವನೇ, ಅಹಂ-ನಾನು, ಯೂಯಂ-ನೀವು, ಅಸೌ-ಇವನು, ಇಮೇದ್ವಾರಕೌಕಸಶ್ಚ-ಈ ದ್ವಾರಕೆಯೇ ಮನೆಯಾದವರೂ, ಸರ್ವೇಪಿ-ಎಲ್ಲರೂ, ಸಚರಾಚರಂ-ಜಂಗಮಸ್ಥಾವರಾತ್ಮಕವಾದ ಜಗತ್ತು, ಯದುಶ್ರೇಷ್ಠ-ಯಾದವರಲ್ಲಿ ಉತ್ತಮನೇ, ಏವಂವಿಮೃಶ್ಯಾಃ-ಹೀಗೆ ಬ್ರಹ್ಮಾತ್ಮಕವೆಂದು ವಿಚಾರಿಸಲ್ಪಡತಕ್ಕವಾಗಿವೆ ॥೨೩॥ ಆತ್ಮಾ-ಪರಮಾತ್ಮನು, ಏಕಃ-ಒಬ್ಬನಾದರೂ ಅನೇಕವಿಧವಾಗಿಯೂ, ಸ್ವಯಂಜ್ಯೋತಿಃ-ಸ್ವಪ್ರಕಾಶನಾದರೂ ದೃಶ್ಯನೆನುತಲೂ, ನಿತ್ಯಃ-ಶಾಶ್ವತನಾದರೂ ಅನಿತ್ಯನೆನುತಲೂ, ಅನ್ಯಃ-ವಿಲಕ್ಷಣನಾದರೂ ಬೇರೆಯಲ್ಲವೆನುತಲೂ, ನಿರ್ಗುಣಃ-ಗುಣಂಗಳಿಲ್ಲದವನಾದರೂ ಸಗುಣನೆನುತಲೂ, ಆತ್ಮಸೃಷ್ಟೈಃ- ಪ್ರಕೃತಿಕೃತಂಗಳಾದ, ಗುಣೈಃ-ಸತ್ವಾದಿಗುಣಂಗಳಿಂದ, ತತ್ಕೃತೇಷು-ಆ ಗುಣಂಗಳಿಂದ ಮಾಡಲ್ಪಟ್ಟ, ದೇಹೇಷು-ಶರೀರಗಳ

---

ತ್ಯಕ್ಷನಾಗಿ ನಮ್ಮಂಕುರಿತು ನೀವು ಪೂರ್ವದೊಳು ಪೃಶ್ನಿ ಸುತಪಸ್ಕರೆಂಬವರು ನಾನು ಆಗ ನಿಮ್ಮಲ್ಲಿ ಅವತರಿಸಿದೆನು ಬಳಿಕ ನೀವು ಅದಿತಿಕಶ್ಯಪರಾದಿರಿ, ನಿಮ್ಮಲ್ಲಿ ವಾಮನನಾಗಿ ಅವತರಿಸಿದೆನು, ಈಗ ದೇವಕೀವಸುದೇವರಾಗಿರುವಿರಿ, ನಾನು ಜಗದ್ರಕ್ಷಣಾರ್ಥವಾಗಿ ಉತ್ಪತ್ತಿರಹಿತನಾದರೂ ನಿಮ್ಮಲ್ಲಿ ಆವಿರ್ಭವಿಸಿದೆನು. ಎಂದು ಸೂತಿಕಾಗೃಹದಲ್ಲಿಯೇ ಹೇಳಿದವನಾಗಿ, ಬಳಿಕ ಯೋಗಮಾಯಾಬಲದಿಂದ ನಾನಾವತಾರರೂಪಂಗಳನ್ನು ಧರಿಸುತ್ತೀಯೆ. ಲೋಕಪಾವನವಾದ ಕೀರ್ತಿಯುಳ್ಳ ಶ್ರೀಹರಿಯೇ! ನಿನ್ನ ಮಾಯೆಯನ್ನು ಯಾರು ಬಲ್ಲವರು? ॥೨೦॥ ಈ ಪ್ರಕಾರವಾಗಿ ವಿಜ್ಞಾಪನಂಗೆಯ್ಯುತಲಿರುವ ವಸುದೇವನ ವಚನವ ಕೇಳಿ ಯಾದವಶ್ರೇಷ್ಠನಾದ ಕೃಷ್ಣಭಗವಂತನು ಭಕ್ತಿಯಿಂದ ನಮ್ರನಾಗಿ ನಗುತ ಪ್ರತ್ಯುತ್ತರವಂ ಪೇಳಿದನೆಂತೆನೆ- ॥೨೧॥ ಎಲೈ ತಂದೆಯಾದ ವಸುದೇವನೇ-ನೀನು ಪುತ್ರರಾದ ನಮ್ಮಂ ಕುರಿತು ಈ ತತ್ವಸ್ವರೂಪ ವಿಚಾರವನ್ನು ವಿವರಿಸಿ ಪೇಳಿದವನಾದೆಯಲ್ಲವೆ? ಅದು ಯುಕ್ತವೇ ಸರಿ ॥೨೨॥ ಎಲೈ ತಂದೆಯೇ ನಾನೂ, ಅಗ್ರಜನಾದ ಈ ಬಲರಾಮನೂ ದ್ವಾರಕಾವಾಸಿಗಳಾದ ಸರ್ವರೂ ಯಾದವಶ್ರೇಷ್ಠರೂ, ಇನ್ನೂ ಚರಾಚರಪ್ರಪಂಚವೆಲ್ಲವೂ, ಬ್ರಹ್ಮವ್ಯತಿರಿಕ್ತವಲ್ಲವೆಂದು ತಿಳಿಯಬೇಕು ॥೨೩॥ ಒಬ್ಬನೇ ಆದಂತಾ ಸ್ವಯಂಪ್ರಕಾಶವಾದ ನಿರ್ಗುಣನಾದ ಜಗದ್ವಿಲಕ್ಷಣನಾದ ಆತ್ಮನು ತನ್ನಿಂದ ರಚಿಸಲ್ಪಟ್ಟ ಗುಣಗಳಿಂದ ಗುಣ

ಸ್ವ್ಯನಿರ್ಗುಣೋಗುಣೈಃ | ಆತ್ಮಸೃಷ್ಟೈಸ್ತತ್ಕೃತೇಷು ಭೂತೇಷು ಬಹುಧೇಯತೇ ||೧೪|| ಖಂವಾಯುರ್ಜ್ಯೋ
ತಿರಾಪೋಭೂಸ್ತತ್ಕೃತೇಷು ಯಥಾಶಯಮ್ | ಆವಿಸ್ತಿರೋಽಲ್ಪಭೂರ್ಯೇಕನಾನಾತ್ವಂಯಾತ್ಯಸಾವಪಿ ||೧೫||
ಶ್ರೀಶುಕಃ || ಏವಂಭಗವತಾರಾಜನ್ವಸುದೇವಉದಾಹೃತಮ್ | ಶ್ರುತ್ವಾವಿನಷ್ಟನಾನಾಧೀಸ್ತೂಷ್ಣೀಂಪ್ರೀ
ಸ್ಮೃತಿರೋದ್ಗೀಧಾದಿನಾಮಕಷತ್ಸಭರ್ಗನಯನಾದಕಥಾಪ್ರಾರಂಭಘಟ್ಟಃ-
ತಮನಾಅಭೂತ್ ||೧೬|| ಅಥತತ್ರಕುರುಶ್ರೇಷ್ಠದೇವಕೀಸರ್ವದೇವತಾ | ಶ್ರುತ್ವಾನೀತಂಗುರೋಃಪುತ್ರಮಾ
ತ್ಮಜಾಭ್ಯಾಂಸುವಿಸ್ಮಿತಾ ||೧೭|| ಕೃಷ್ಣರಾಮೌಸಮಾಶ್ರಾವ್ಯಪುತ್ರಾನ್ಕಂಸವಿಹಿಂಸಿತಾನ್ | ಸ್ಮರಂ
ತೀಕೃಪಣಂಪ್ರಾಹವೈಕ್ಲಬ್ಯಾದಶ್ರುಲೋಚನಾ ||೧೮|| ದೇವಕೀ || ರಾಮರಾಮಾಪ್ರಮೇಯಾತ್ಮನ್ಕೃಷ್ಣ

---

ಳ್ಳಿ, ಬಹುಧಾ-ಹಲವುಬಗೆಯಾಗಿ, ಈಯತೇ-ತಿಳಿಯಲ್ಪಡುವನಲ್ಲವೆ ||೧೪|| ಹೇಗೆಂದರೆ,-ಖಂ-ಆಕಾಶವೂ, ವಾಯುಃ-ಗಾಳಿಯೂ, ಜ್ಯೋತಿಃ-ಅಗ್ನಿಯೂ, ಆಪಃ-ನೀರೂ, ಭೂಃ-ಭೂಮಿಯೂ, ತತ್ಕೃತೇಷು-ಅವುಗಳಿಂದಮಾಡಲ್ಪಟ್ಟ ಮಡಿಕಮೊದಲಾದವುಗಳಲ್ಲಿ, ಯಥಾಶಯಂ-ಉಪಾಧಿಯನ್ನತಿಕ್ರಮಿಸದೆ, ಆವಿಸ್ತಿರೋಽಲ್ಪಭೂರ್ಯೇಕನಾನಾತ್ವಂ-ಆವಿಃ-ಕಾಣಿಸುವಿಕೆ, ತಿರಃ-ಅಡಗುವಿಕೆ, ಅಲ್ಪ-ಕೊಂಚವಾಗುವಿಕೆ, ಭೂರಿ-ದೊಡ್ಡದಾಗುವಿಕೆ, ಏಕ-ಒಂದಾಗುವಿಕ, ನಾನಾತ್ವಂ-ಹಲವು ಬಗೆಯಾಗಿರುವಿಕಗಳನ್ನು, ಯಾತಿ-ಹೊಂದುತ್ತಿದೆಯೋ, ಅಸಾವಪಿ-ಈ ಜೀವಸ್ವರೂಪನಾದ ಪರಮಾತ್ಮನೂಕೂಡ, ತಥಾ-ಹಾಗೆ, ಬಹುಧಾ-ಹಲವು ಬಗೆಯಾಗಿ ತೋರುವಿಕೆಯನ್ನು, ಯಾತಿ-ಹೊಂದುವನು ||೧೫|| ರಾಜನ್-ಪರೀಕ್ಷಿತನೇ, ಭಗವತಾ-ಕೃಷ್ಣನಿಂದ, ಏವಂಉದಾಹೃತಂ-ಹೀಗೆಹೇಳಲ್ಪಟ್ಟುದನ್ನು ಶ್ರುತ್ವಾ-ಕೇಳಿ, ವಿನಷ್ಟನಾನಾಧೀಃ-ನಾಶವಾದ ದ್ವೈತಬುದ್ಧಿಯುಳ್ಳವನಾದ್ದರಿಂದ, ಪ್ರೀತಮನಾಃ-ಸಂತುಷ್ಟಹೃದಯನಾಗಿ, ತೂಷ್ಣೀಮಭೂತ್-ಸುಮ್ಮನಾದನು ||೧೬|| ಅಥ-ಆ ಮೇಲೆ ಕುರುಶ್ರೇಷ್ಠ-ಪರೀಕ್ಷಿತನೇ! ತತ್ರ-ಅಲ್ಲಿ, ಸರ್ವದೇವತಾ-ಸಕಲದೇವತೆಗಳೂ ಉಳ್ಳವಳಾದ, ದೇವಕೀ-ಕೃಷ್ಣನತಾಯಿ, ಆತ್ಮಜಾಭ್ಯಾಂ-ತನ್ನಮಕ್ಕಳಾದ ರಾಮಕೃಷ್ಣರಿಂದ, ನೀತಂ-ಸತ್ತುಹೋದಮೇಲೆಯೂ ಒದಗಿಸಿತರಲ್ಪಟ್ಟ, ಗುರೋಃಪುತ್ರಂ-ಸಾಂದೀಪನ ಮಗನನ್ನು, ಶ್ರುತ್ವಾ-ಕೇಳಿ, ಸುವಿಸ್ಮಿತಾ-ಆಶ್ಚರ್ಯವುಳ್ಳವಳಾಗಿ ||೧೭|| ಕೃಷ್ಣರಾಮೌ-ಕೃಷ್ಣನನ್ನೂ ರಾಮನನ್ನೂ, ಆಶ್ರಾವ್ಯ-ಕರೆದು, ಕಂಸವಿಹಿಂಸಿತಾನ್-ಕಂಸನಿಂದ ಕೊಲ್ಲಲ್ಪಟ್ಟ, ಸ್ವಪುತ್ರಾನ್-ತನ್ನಮಕ್ಕಳನ್ನು, ಸ್ಮರಂತೀ-ನೆನಪುಗೊಳ್ಳುವಳಾಗಿ, ಕೃಪಣಂ-ದೈನ್ಯವಾಗಿ, ಅಶ್ರುಲೋಚನಾ-ನೀರುಸೋರುವ ಕಂಗಳುಳ್ಳವಳಾಗಿ, ವೈಕ್ಲಬ್ಯಾತ್-ವ್ಯಸನದಿಂದ, ಪ್ರಾಹ-ನುಡಿದಳು ||೧೮|| ಅಪ್ರಮೇಯಾತ್ಮನ್-ನಿಶ್ಚಯಿಸಲಳವಲ್ಲದ ಸ್ವರೂಪವುಳ್ಳವನಾದ, ರಾಮರಾಮ-ಬಲಭದ್ರನೇ ಬಲಭದ್ರನೇ! ಯೋಗೇಶ್ವರೇಶ್ವರ-ಯೋಗವಿದ್ಯೆಗೊಡೆಯರಾದವರಿಗೆ ನಿಯಾಮಕನಾದ, ಕೃಷ್ಣ-ಅಚ್ಯುತನೇ, ಅಹಂ-ನಾನು, ವಾಂ-ನಿಮ್ಮಿಬ್ಬರನ್ನೂ, ವಿಶ್ವಸೃಜಾಂ-ಜಗತ್ಕಾರ

---

ಕ್ಕಾತಂಗಳಾದ ಭೂತಂಗಳಲ್ಲಿ ಅನೇಕ ಪ್ರಕಾರವಾಗಿ ತೋರುವನು ||೧೪|| ಆಕಾಶವು, ವಾಯುವು, ಜ್ಯೋತಿಸ್ಸು, ಜಲವು, ಭೂಮಿಯು, ಎಂಬ ಪಂಚಭೂತಗಳು ತಮ್ಮಿಂದ ಜನಿಸಿದ ಘಟಪಟಾದಿ ವಸ್ತುಗಳಲ್ಲಿ ಆವಿರ್ಭಾವತಿರೋಭಾವಂಗಳನೆಯ್ದಿ ಎಂತಿರುವವೋ ಹಾಗೆ ಪರಮಾತ್ಮನೂ ಕೂಡ ಸ್ವಮಾಯಾಜನ್ಯಗಳಲ್ಲಿ ಆವಿರ್ಭಾವತಿರೋಭಾವಂಗಳನೆಯ್ದುವನೆಂದು ತಿಳಿಯಬೇಕು ||೧೫|| ಕೇಳೈ ಅರಸೇ, ಈ ಪ್ರಕಾರವಾಗಿ ಭಗವಂತನಿಂದ ಪೇಳಲ್ಪಟ್ಟ ತತ್ವರಹಸ್ಯಮಂ ಕೇಳಿದ ವಸುದೇವನು ನಷ್ಟವಾದ ನಾನಾ ವಿಧಮನಃಕ್ಲೇಶಂಗಳುಳ್ಳವನಾಗಿ ಸಂತುಷ್ಟಚಿತ್ತನಾಗಿ ಸುಮ್ಮನೆಯಿದ್ದನು ||೧೬|| ಕೇಳೈ ಅರಸೇ, ಅನಂತರದಲ್ಲಿ ಸರ್ವದೇವಪ್ರಿಯಳಾದ ದೇವಕಿಯು ಪೂರ್ವದೊಳು ತನ್ನ ಪುತ್ರರಾದ ರಾಮಕೃಷ್ಣರಿಂದ ವಿದ್ಯಾಗುರುವಾದ ಸಾಂದೀಪನ ಮೃತಪುತ್ರನು ಗುರುವಾಕ್ಯದಿಂದ ಯಮಲೋಕವನೆಯ್ದಿ ತಂದು ಕೊಡಲ್ಪಟ್ಟನೆಂಬ ಸುದ್ದಿಯಂ ಕೇಳಿ ಅಚ್ಚರಿಗೊಂಡವಳಾಗಿ ||೧೭|| ಕಂಸನಿಂದ ಕೊಲ್ಲಲ್ಪಟ್ಟ ತನ್ನ ಮಕ್ಕಳನ್ನು ನೆನಪು ಮಾಡಿಕೊಂಡವಳಾಗಿ ಕಣ್ಣೀರಂ ಸುರಿಸುತ ದೀನಳಾಗಿ, ಆ ಕೃಷ್ಣರಾಮರಂ ಕುರಿತು ನುಡಿದಳೆಂತೆನೆ ||೧೮|| ಎಲೈ, ತಿಳಿಯಲಶಕ್ಯವಾದ ಮಹಿಮೆಯುಳ್ಳರಾಮನೇ, ಯೋಗೀಶ್ವರರಿಗೂ ಈಶ್ವರನಾದ ಕೃಷ್ಣನೇ, ನಾನು ನಿಮ್ಮೀರ್ವರನ್ನೂ ಬ್ರಹ್ಮಾದಿಗಳಿಗೂ ಈಶ್ವರರನ್ನಾಗಿಯೂ ಪು

ಯೋಗೇಶ್ವರೇಶ್ವರ । ವೇದಾಹಂ ವಾಂ ವಿಶ್ವಸೃಜಾಮೀಶ್ವರಾವಾದಿಪೂರುಷೌ ‖೪೯‖ ಕಾಲವಿಧ್ವಸ್ತಸತ್ತ್ವಾನಾಂ ರಾಜ್ಞಾಮುಚ್ಛಾಸ್ತ್ರವರ್ತಿನಾಮ್ । ಭೂಮೇರ್ಭಾರಾಯಮಾಣಾನಾಮವತೀರ್ಣೌ ಕಿಲಾದ್ಯ ಮೇ ‖೫೦‖ ಯಸ್ಯಾಂಶಾಂಶಾಂಶಭಾಗೇನ ವಿಶ್ವೋತ್ಪತ್ತಿಲಯೋದಯಾಃ । ಭವಂತಿ ಕಿಲ ವಿಶ್ವಾತ್ಮಂಸ್ತಂ ತ್ವಾದ್ಯಾಹಂ ಗತಿಂ ಗತಾ ‖೫೧‖ ಚಿರಾನ್ಮೃತಸುತಾದಾನೇ ಗುರುಣಾ ಕಿಲ ಚೋದಿತೌ । ಆನಿನ್ಯಥುಃ ಪಿತೃಸ್ಥಾನಾದ್ಗುರವೇ ಗುರುದಕ್ಷಿಣಾಮ್ ‖೫೨‖ ತಥಾ ಮೇ ಕುರುತಂ ಕಾಮಂ ಯುವಾಂ ಯೋಗೇಶ್ವರೇಶ್ವರೌ । ಭೋಜರಾಜಹತಾನ್ ಪುತ್ರಾನ್ ಕಾಮಯೇ ದ್ರಷ್ಟುಮಾಹೃತಾನ್ ‖೫೩‖ ಶ್ರೀಶುಕಃ ‖ ಏವಂ ಸಂಚೋದಿತೌ ಮಾತ್ರಾ ರಾಮಃ ಕೃಷ್ಣಶ್ಚ ಭಾರತ । ಸುತಲಂ ಸಂವಿವಿಶತುರ್ಯೋಗಮಾಯಾಮುಪಾಶ್ರಿತೌ ‖೫೪‖ ತಸ್ಮಿನ್ ಪ್ರವಿಷ್ಟಾವುಪಲಭ್ಯ

---

ಣಾಂಗೆ ೪ನೆ, ಈಶ್ವರೌ-ನಿಯಾಮಕರಾದ ಆದಿಪೂರುಷೌ-ಪ್ರಕೃತಿಪುರುಷರನ್ನಾಗಿ, ವೇದ-ಬಲ್ಲೆನು ‖೪೯‖ ಕಾಲವಿಧ್ವಸ್ತ, ಸತ್ತ್ವಾನಾಂ-ಕಲಿಸತವಿನಾಪ್ಯದಿಂದ ನಾಶಮಾಡಲ್ಪಟ್ಟ ಸತ್ವಗುಣವುಳ್ಳಂಥಾ, ಉಚ್ಛಾಸ್ತ್ರವರ್ತಿನಾಂ-ಶಾಸ್ತ್ರದಾಟ್ಟಿಯನ್ನು ಮೀರಿ ಯಿರುವಂಥಾ, ಭೂಮೇಃ-ಭೂದೇವಿಗೆ, ಭಾರಾಯಮಾಣಾನಾಂ-ಹೊರೆಯಾಗಿರುವಂಥಾ, ರಾಜ್ಞಾಂ ಅರ್ಥೇ-ದುಷ್ಟಕ್ಷತ್ರಿಯರಿಗೋಸ್ಕರ, ಅದ್ಯ-ಈಗ, ಮೇ-ನನ್ನ ಬಸುರಲ್ಲಿ, ಅವತೀರ್ಣೌ ಕಿಲ-ಹುಟ್ಟಿದವರಾಗಿರುವಿರಲ್ಲವೆ ‖೫೦‖ ವಿಶ್ವಾತ್ಮನ್-ಪ್ರಪಂಚಸ್ವರೂಪನಾದ ಕೃಷ್ಣನೇ! ಯಸ್ಯ-ಯಾವವನ, ಅಂಶಾಂಶಾಂಶಭಾಗೇನ-ಕಲೆಯಲೇಶದಲವದ ಚೂರಿನಿಂದ, ವಿಶ್ವೋತ್ಪತ್ತಿಲಯೋದಯಾಃ-ಪ್ರಪಂಚದ ಸೃಷ್ಟಿಸ್ಥಿತಿ ಸಂಹಾರಮೊದಲಾದವು, ಭವಂತಿ-ಆಗುತ್ತಿವೆಯೋ, ತಂ ತ್ವಾ-ಆ ನಿನ್ನನ್ನು, ಅದ್ಯ-ಈಗ, ಅಹಂ-ನಾನು, ಗತಿಂ-ಪ್ರಾಪ್ಯವನ್ನಾಗಿ, ಗತಾ-ಹೊಂದಿದವಳಾಗಿರುವೆನು ‖೫೧‖ ಚಿರಾತ್-ಬಹುಕಾಲಕ್ಕೆ ಪೂರ್ವದೇ, ಮೃತಸುತಾದಾನೇ-ಸತ್ತಮಗನಂ ತರುವವಿಷಯದಲ್ಲಿ, ಗುರುಣಾ-ಸಾಂದೀಪನಿಂದ, ಚೋದಿತೌ-ಪ್ರೇರಿಸಲ್ಪಟ್ಟವರಾದ ನೀವು, ಪಿತೃಸ್ಥಾನಾತ್-ಪಿತೃದೇವತೆಗಳಿರುವ ಸ್ಥಲದಿಂದ, ಗುರವೇ-ವಿದ್ಯೆಯಂಪೇಳಿದಸಾಂದೀಪನಿಗೆ, ಗುರುದಕ್ಷಿಣಾಂ-ಸಮರ್ಪಿಸಬೇಕಾದ ದಕ್ಷಿಣಾದ್ರವ್ಯವನ್ನಾಗಿ, ಆನಿನ್ಯಥುಃ ಕಿಲ-ತಂದಿತ್ತಿರಿಯಲ್ಲವೆ ‖೫೨‖ ಯೋಗೇಶ್ವರೇಶ್ವರೌ-ಉಪಾಯಗಳಿಂ ಸಮರ್ಥರಾದವರಿಗೆ ನಿಯಾಮಕರಾದ, ಯುವಾಂ-ನೀವು, ತಥಾ-ಹಾಗೆ, ಮೇ-ನನ್ನ, ಕಾಮಂ-ಬಯಕೆಯನ್ನು, ಕುರುತಂ-ಮಾಡಿರಿ. ಭೋಜರಾಜಹತಾನ್-ಕಂಸನಿಂದ ಕೊಲ್ಲಲ್ಪಟ್ಟಂಥಾ, ಪುತ್ರಾನ್-ಮಕ್ಕಳನ್ನು, ಆಹೃತಾನ್-ತರಲ್ಪಟ್ಟವರನ್ನು, ದ್ರಷ್ಟುಂ-ನೋಡುವುದಕ್ಕೆ, ಕಾಮಯೇ-ಬಯಸುವೆನು ‖೫೩‖ ಭಾರತ-ಪರೀಕ್ಷಿತನೇ, ಏವಂ-ಹೀಗೆ, ಮಾತ್ರಾ-ತಾಯಿಯಿಂದ, ಸಂಚೋದಿತೌ-ಪ್ರೇರಿಸಲ್ಪಟ್ಟವರಾದ, ರಾಮಃ ಕೃಷ್ಣಶ್ಚ-ರಾಮನೂ ಕೃಷ್ಣನೂ, ಯೋಗಮಾಯಾಂ-ಧ್ಯಾನಕಲ್ಪಿತ ಮೋಹಶಕ್ತಿಯನ್ನು, ಉಪಾಶ್ರಿತೌ-ಅವಲಂಬಿಸಿದವರಾಗಿ, ಸುತಲಂ-ಮೂರನೆಯ ಪಾತಾಳವನ್ನು, ಸಂವಿವಿಶತುಃ-ಹೊಕ್ಕರು ‖೫೪‖ ದೈತ್ಯರಾಟ್-ಬಲಿಚಕ್ರವರ್ತಿಯು,

---

ರಾಣ ಪುರುಷರನ್ನಾಗಿಯೂ ತಿಳಿಯುವೆನು ‖೪೯‖ ಕಾಲ ಸ್ವಭಾವದಿಂದ ನಷ್ಟವಾದ ಸತ್ವಗುಣವುಳ್ಳವರಾಗಿ ಶಾಸ್ತ್ರಮಾರ್ಗವನತಿಕ್ರಮಿಸಿ ದುರ್ಮಾರ್ಗ ಪ್ರವೃತ್ತರಾದ ಭೂಭಾರವಾಗಿರುವ ದುಷ್ಟಕ್ಷತ್ರಿಯರಂ ಸಂಹರಿಸಲೋಸುಗ ನನ್ನಲ್ಲಿ ಅವತಾರಂಗೆಯ್ದಿರಿ ‖೫೦‖ ಯಾವ ಪರಮಾತ್ಮನ ಅಂಶವೇ ಪುರುಷನೋ, ಆ ಪುರುಷನ ಅಂಶವೇ ಮಾಯೆಯೋ, ಆ ಮಾಯೆಯ ಅಂಶಗಳೇ ಗುಣಗಳೋ, ಆ ಗುಣಗಳ ಅಂಶಗಳೇ ಸೃಷ್ಟ್ಯಾದಿಗಳಿಗುವವೋ, ಅಂತ ವಿಶ್ವಾತ್ಮಕನೇ! ನಾನು ನಿನ್ನಂ ಮರೆಹೊಕ್ಕೆನು ‖೫೧‖ ಬಹು ಕಾಲದಲ್ಲಿ ಮೃತನಾದ ಪುತ್ರನಂ ತಂದು ಕೊಡಲೋಸುಗ ಗುರುವಾದ ಸಾಂದೀಪನ ಋಷಿಯಿಂ ಪ್ರೇರಿತರಾಗಿ ನೀವಿರ್ವರೂ ಯಮಲೋಕಸ್ಥಾನಾದ ಆ ಪುತ್ರನಂ ಕರೆ ತಂದು ಗುರುವಿಗೋಸುಗ ಗುರು ದಕ್ಷಿಣೆಯನ್ನಾಗಿ ಒಪ್ಪಿಸಿದಿರಿ ‖೫೨‖ ಅದೇರೀತಿಯಾಗಿ ನೀವಿರ್ವರೂ ಯೋಗೇಶ್ವರೇಶ್ವರರಾದ್ದರಿಂದ ನನ್ನ ಯಿಷ್ಟಾರ್ಥವಂ ಸಲ್ಲಿಸಿ ಕೊಡಿರಿ ಕಂಸನಿಂದ ಹತರಾದ ಪುತ್ರರಂ ನನಗೆ ತಂದು ತೋರಿಸಿದರೆ ಅವರಂ ನೋಡುವೇನೆಂದು ಇಚ್ಛೈಸುತಲಿರುವೆನು ‖೫೩‖ ಎಂದು ದೇವಕೀದೇವಿಯಿಂದ ಪ್ರಾರ್ಥಿಸಲ್ಪಟ್ಟ ಶ್ರೀ ಕೃಷ್ಣ ರಾಮ ರೀರ್ವರೂ ಯೋಗ ಮಾಯೆಯನಾಶ್ರಯಿಸಿ ಸುತಲವಂ ಪ್ರವೇಶಿಸಿದರು ‖೫೪‖ ರಸಾಂತರಂಗಳಂ ಪ್ರವೇಶಂಗೆಯ್ದ ವಿಶ್ವಾಂತರ್ಯಾಮಿಗಳಾದ ವಿಶೇಷವಾಗಿ ತನ್ನ ಯಿಷ್ಟ

ದೈತ್ಯರಾಡ್ವಿಶ್ವಾತ್ಮದೈವಂ ಸುತರಾಂ ತಥಾತ್ಮನಃ | ತದ್ದರ್ಶನಾಹ್ಲಾದಪರಿಪ್ಲುತಾಶಯಸ್ಸದ್ಯಸ್ಸಮು
ತ್ಥಾಯನನಾಮ ಸಾನ್ವಯಃ ||೩೫|| ತಯೋಸ್ಸಮಾನೀಯವರಾಸನಂ ಮುದಾ ನಿವಿಷ್ಟಯೋಸ್ತತ್ರ ಮಹಾ
ತ್ಮನೋಸ್ತಯೋಃ | ದಧಾರ ಪಾದಾವವನಿಜ್ಯ ತಜ್ಜಲಂ ಸವೃಂದ ಆಬ್ರಹ್ಮ ಪುನದ್ಯದಂಬುಹ ||೩೬|| ಸಮ
ರ್ಹಯಾಮಾಸ ಮಹಾವಿಭೂತಿಭಿರ್ಮಹಾರ್ಹವಸ್ತ್ರಾಭರಣಾನುಲೇಪನೈಃ | ಸ್ರಗ್ಧೂಪದೀಪಾಮೃ
ತಭಕ್ಷಣಾದಿಭಿಸ್ಸ್ವಗೋತ್ರವಿತ್ತಾತ್ಮಸಮರ್ಪಣೇನ ಚ ||೩೭|| ಸ ಇಂದ್ರಸೇನೋ ಭಗವತ್ಪದಾಂಬುಜಂ ಬಿ
ಭ್ರನ್ಮುಹುಃ ಪ್ರೇಮವಿಭಿನ್ನಯಾ ಧಿಯಾ | ಉವಾಚ ಹಾನಂದಜಲಾಕುಲೇಕ್ಷಣಃ ಪ್ರಹೃಷ್ಟರೋಮಾ ನೃ
ಪ ಗದ್ಗದಾಕ್ಷರಮ್ ೩೮ ||ಬಲಿಃ|| ನಮೋನಂತಾಯ ಬೃಹತೇ ನಮಃ ಕೃಷ್ಣಾಯ ವೇಧಸೇ | ಸಾಂಖ್ಯಯೋಗ

---

ತಸ್ಮಿನ್-ಆ ಲೋಕದಲ್ಲಿ, ಪ್ರವಿಷ್ಟೌ-ಹೊಕ್ಕ ರಾಮಕೃಷ್ಣರನ್ನು, ವಿಶ್ವಾತ್ಮದೈವಂ-ಸಕಲಾತ್ಮಪೂಜ್ಯವನ್ನಾಗಿಯೂ, ಆತ್ಮನಃ-ತನಗೆ, ತಥಾ-ಹಾಗೆ, ಸುತರಾಂ ದೈವಂ-ಅತಿಶಯವಾಗಿ ದೈವವನ್ನಾಗಿ, ಉಪಲಭ್ಯ-ತಿಳಿದು, ತದ್ದರ್ಶನಾಹ್ಲಾದಪರಿಪ್ಲುತಾಶಯಃ-ಅವರನ್ನು ನೋಡಿದ ಸಂತೋಷದಲ್ಲಿ ಮುಳುಗಿದ ಮನಸ್ಸುಳ್ಳವನಾಗಿ, ಸದ್ಯಃ-ಆಗಲೇ, ಸಮುತ್ಥಾಯ-ಎದ್ದು, ಸಾನ್ವಯಃ-ಸಕುಲನಾಗಿ, ನನಾಮ-ನಮಸ್ಕರಿಸಿದನು ||೩೫|| ತಯೋಃ-ಆ ರಾಮಕೃಷ್ಣರಿಗೆ, ಮುದಾ-ಸಂತೋಷದಿಂದ, ವರಾಸನಂ-ಶ್ರೇಷ್ಠವಾದ ಗದ್ದುಗೆಯನ್ನು, ಸಮಾನೀಯ-ತಂದಿಟ್ಟು, ತತ್ರ-ಅದರಲ್ಲಿ, ನಿವಿಷ್ಟಯೋಃ-ಕುಳಿತವರಾದ, ಮಹಾತ್ಮನೋಃ-ಮಹಾನುಭಾವರಾದ, ತಯೋಃ-ಆ ರಾಮಕೃಷ್ಣರ, ಯದಂಬು-ಯಾವವುಗಳ ನೀರು, ಆಬ್ರಹ್ಮ-ಬ್ರಹ್ಮಪರ್ಯಂತವೂ ಪ್ರಪಂಚವೆಲ್ಲವನ್ನೂ ಪುನಾತಿ-ಪವಿತ್ರಗೊಳಿಸುವದೋ, ತೌ-ಅಂಘ್ರೀ, ಪಾದೌ-ಕಾಲುಗಳನ್ನು, ಅವನಿಜ್ಯ-ತೊಳೆದು, ತಜ್ಜಲಂ-ಆ ತೀರ್ಥವನ್ನು, ಸವೃಂದಃ-ಸ್ವಜನಸಂಘಸಹಿತನಾಗಿ, ದಧಾರಹ-ಧರಿಸಿದನಲ್ಲವೆ ||೩೬|| ಮಹಾವಿಭೂತಿಭಿಃ-ಮಹದೈಶ್ವರ್ಯಂಗಳಿಂದಲೂ, ಮಹಾರ್ಹವಸ್ತ್ರಾಭರಣಾನುಲೇಪನೈಃ-ದೊಡ್ಡ ಬೆಲೆಗೆತಕ್ಕ ಪಾವುಡೆ ತೊಡವು ಗಂಧಗಳಿಂದಲೂ, ಸ್ರಗ್ಧೂಪದೀಪಾಮೃತಭಕ್ಷಣಾದಿಭಿಃ-ಪುಷ್ಪಸರ ಪರಿಮಳಹೊಗೆ ದೀವಿಗೆ ಅತಿರುಚ್ಯವಾದ ಆಹಾರ ಮೊದಲಾದವುಗಳಿಂದಲೂ, ಸ್ವಗೋತ್ರವಿತ್ತಾತ್ಮಸಮರ್ಪಣೇನಚ-ತನ್ನ ಕುಲಧನ ಪ್ರಾಣಗಳನ್ನು ಕೊಡುವುದರಿಂದಲೂ, ಸಮರ್ಹಯಾಮಾಸ-ಪೂಜಿಸಿದನು ||೩೭|| ನೃಪ-ಪರೀಕ್ಷಿದ್ರಾಯನೇ, ಸ ಇಂದ್ರಸೇನಃ-ಆ ಬಲಿಚಕ್ರವರ್ತಿಯು, ಭಗವತ್ಪದಾಂಬುಜಂ-ಕೃಷ್ಣನ ಅಡಿದಾವರೆಯನ್ನು, ಮುಹುಃ-ಬಾರಿಬಾರಿಗೂ, ಬಿಭ್ರನ್-ತಲೆಯಮೇಲೆ ಇರಿಸಿಕೊಳ್ಳುವನಾಗುತ್ತ, ಪ್ರೇಮವಿಭಿನ್ನಯಾ-ಪ್ರಿಯತ್ವದಿಂ ಕೂಡಿದ, ಧಿಯಾ-ಬುದ್ಧಿಯೊಡನೆ, ಆನಂದಜಲಾಕುಲೇಕ್ಷಣಃ-ಸಂತಸದ ನೀರಿಂ ಕದಡಿದ ಕಂಗಳುಳ್ಳವನೂ, ಪ್ರಹೃಷ್ಟರೋಮಾ-ನಿಗುಡಿದ ಕೂದಲುಳ್ಳವನೂ ಆಗಿ, ಗದ್ಗದಾಕ್ಷರಂ-ಬಿಗುತ್ತುಗೆಯಿಂದ ಹೊರಡುವ ಅಕ್ಷರಂಗಳುಳ್ಳ ಮಾತನ್ನು, ಉವಾಚಹ-ನುಡಿದನಲ್ಲವೆ ||೩೮|| ಅನಂತಾಯ-ಶೇಷನಾದ, ಬೃಹತೇ-ಭೂಗೋಳವೆಲ್ಲವನ್ನೂ ಒಂದು ಹೆಡೆಯಲ್ಲಿಯೇ ಧರಿಸಿಕೊಳ್ಳುವಷ್ಟು ದೊಡ್ಡವನಾದ ರಾಮಂಗೆ, ನಮಃ-ನಮಸ್ಕಾರವು. ವೇಧಸೇ-ಜಗ

---

ದೇವತೆಗಳೂ ಆದ ಆ ರಾಮಕೃಷ್ಣರಂ ಕೇಳಿ ದೈತ್ಯೇಂದ್ರನಾದ ಬಲಿಯು ಅವರವರ ದರ್ಶನದಿಂದುಂಟಾದ ಸಂತೋಷದಿಂದ ಪರವಶಚಿತ್ತನಾಗಿ ಆ ಕ್ಷಣದಲ್ಲಿಯೇ ಎದ್ದು ಪತ್ನೀಪುತ್ರಾದಿಗಳಿಂ ದೊಡಗೂಡಿ ಅವರ ಪಾದದಲ್ಲಿ ನಮಸ್ಕರಿಸಿದನು ||೩೫|| ಅನಂತರದಲ್ಲಿ ದಿವ್ಯಗಳಾದ ಪೀಠಂಗಳಂ ಸಮರ್ಪಿಸಿ, ಸಂತೋಷದಿಂ ಕುಳಿತಿರುವ ಮಹಾತ್ಮರಾದ ಆ ರಾಮಕೃಷ್ಣರ ಪಾದಂಗಳಂ ತೊಳೆದು ಬ್ರಹ್ಮಾದಿಗಳಿಗೂ ವಂದ್ಯವಾದ ಆ ಜಲವನ್ನು ಸಪರಿವಾರನಾಗಿ ತಾನು ಶಿರಸ್ಸಿನಿಂದ ಧರಿಸಿದನು ||೩೬|| ಆಗ ಬಲಿಯು ಮಹ ವಿಭವಂಗಳಿಂ ಯುಕ್ತನಾಗಿ ಅಮೂಲ್ಯಂಗಳಾದ ವಸ್ತ್ರಾಭರಣಾನುಲೇಪನ ದಿವ್ಯಮಾಲ್ಯಗಳಿಂದಲೂ ಮೃದುವಚನಗಳಿಂದಲೂ ಧೂಪದೀಪಂಗಳಿಂದಲೂ ಪೂಜಿಸಿ ತನ್ನ ಪುತ್ರಮಿತ್ರಾದಿ ಪರಿಜನಂಗಳನ್ನೂ ಅವರಿಗೆ ನಮಸ್ಕಾರಂಗೆಯ್ಸಿ ಸರ್ವಸ್ವವನ್ನೂ ಅರ್ಪಿಸಿದನು ||೩೭|| ಬಳಿಕ ಇಂದ್ರಸೇನನೆಂಬ ಹೆಸರುಳ್ಳ ಬಲಿಯು ಆನಂದಬಾಷ್ಪಪೂರ್ಣನೇತ್ರನಾಗಿ ರೋಮಾಂಚಿತಗಾತ್ರನಾಗಿ ಗದ್ಗದಸ್ವರದಿಂ ಮಾತನಾಡುತ್ತ ಪರಮಭಕ್ತಿಯುಳ್ಳ ಬುದ್ಧಿಯಿಂ ಬಾರಿಬಾರಿಗೂ ಭಗವತ್ಪಾದಾರವಿಂದವಂ ಸ್ಮರಿಸುವನಾಗಿ ವಿಜ್ಞಾಪನಂಗೆಯ್ದನು ||೩೮|| ಮಹಾಶೇಷನಾದ ಅನಂತರೂಪನಾದ ಹೆಡೆಗಳ ಏಕದೇಶದಿಂ ಭೂಮಿ

ವಿತಾನಾಯ ಬ್ರಹ್ಮಣೇ ಪರಮಾತ್ಮನೇ ||೪೭|| ದರ್ಶನಂ ವಾಂ ಹಿ ಭೂತಾನಾಂ ದುಷ್ಪ್ರಾಪಂ ಚಾಪ್ಯದುರ್ಲ
ಭಮ್ | ರಜಸ್ತಮಸ್ಸ್ವಭಾವಾನಾಂ ಯನ್ನಃ ಪ್ರಾಪ್ತೌ ಯದೃಚ್ಛಯಾ ||೪೮|| ದೈತ್ಯದಾನವಗಂಧರ್ವ
ಸಿದ್ಧವಿದ್ಯಾಧರೋರಗಾಃ | ಯಕ್ಷರಕ್ಷಃಪಿಶಾಚಾಶ್ಚ ಭೂತಪ್ರಮಥನಾಯಕಾಃ ||೪೯|| ವಿಶುದ್ಧಸತ್ತ್ವ
ಧಾಮ್ನ್ಯದ್ಧಾ ತ್ವಯಿ ಶಾಸ್ತ್ರಶರೀರಿಣಿ | ನಿತ್ಯಂ ನಿಬದ್ಧವೈರಾಸ್ತೇ ವಯಂ ಚಾನ್ಯೇ ಚ ತಾದೃಶಾಃ ||೫೦||
ಸಾಲೋಕ್ಯಂ ಚಾಪಿ ಸಾರೂಪ್ಯಂ ಸಾಮೀಪ್ಯಮಥ ಸಾತ್ಮತಾಮ್ | ಪ್ರಾಪ್ತಾಸ್ತೇ ಪುಂಡರೀಕಾಕ್ಷ ಭಾವೋ ಹಿ
ಭವಕಾರಣಮ್ ||೫೧|| ಕೇಚಿದುದ್ಬದ್ಧವೈರೇಣ ಭಕ್ತ್ಯಾ ಕೇಚನ ಕಾಮತಃ | ನ ತಥಾ ಸತ್ತ್ವಸಂರಬ್ಧಾಸ್ಸ

---

ಜನ್ಮಾದಿ ಕಾರಣನಾದ, ಸಾಂಖ್ಯಯೋಗವಿತಾನಾಯ-ಸಾಂಖ್ಯಶಾಸ್ತ್ರಕ್ಕೂ ಯೋಗಶಾಸ್ತ್ರಕ್ಕೂ ವಿಕಾರ್ಥರೂಪನಾದಂಥಾ, ಬ್ರಹ್ಮಣೇ-ವ್ಯಾಪಕನಾದಂಥಾ, ಪರಮಾತ್ಮನೇ-ಪರಮೇಶ್ವರನಾದಂಥಾ, ಕೃಷ್ಣಾಯ-ಸದಾನಂದರೂಪನಾದ ಕೃಷ್ಣನಿಗೆ, ನಮಃ-ನಮಸ್ಕಾರವು ||೪೭|| ವಾಂ-ನಿಮ್ಮನ್ನು, ದರ್ಶನಂ-ನೋಡುವುದು, ಭೂತಾನಾಂ-ಪ್ರಾಣಿಗಳಿಗೆ, ದುಷ್ಪ್ರಾಪಮಪಿ-ಪ್ರಯಾಸದಿಂದಲೂ ದೊರೆಯಲಶಕ್ಯವಾದರೂ, ಯ -ಯಾವಕಾರಣದಿಂದ ರಜಸ್ತಮಸ್ಸ್ವಭಾವಾನಾಂ-ರಾಜಸತಾಮಸಶೀಲರಾದ, ನಃ-ನಮ್ಮಬಳಿಗೆ, ಯದೃಚ್ಛಯಾ-ಸ್ವೇಚ್ಛೆಯಿಂದ, ಪ್ರಾಪ್ತೌ-ಬಂದವರಾದಿರೋ, ತ -ಆ ಕಾರಣದಿಂದ, ಅದುರ್ಲಭಂಚ-ಸುಲಭವೂ ಆಗಿರುವುದು ||೪೮|| ದೈತ್ಯದಾನವಗಂಧರ್ವಸಿದ್ಧವಿದ್ಯಾಧರೋರಗಾಃ-ದಿತಿಯಮಕ್ಕಳೂ ದನುವಿನಮಕ್ಕಳೂ ಗಂಧರ್ವರೂ ಸಿದ್ಧರೂ ವಿದ್ಯಾಧರರೂ ನಾಗರೂ, ಯಕ್ಷರಕ್ಷಃಪಿಶಾಚಾಶ್ಚ-ನಿಧಿರಕ್ಷಕದೇವತೆಯರೂ ರಾಕ್ಷಸರೂ ಪಿಶಾಚಂಗಳೂ, ಭೂತಪ್ರಮಥನಾಯಕಾಃ-ಭೂತಂಗಳೂ ರುದ್ರಗಣಾಧಿಪತಿಗಳೂ ||೪೯|| ವಿಶುದ್ಧಸತ್ತ್ವಧಾಮ್ನಿ-ನಿರ್ಮಲವಾದ ಸತ್ತ್ವಗುಣಕ್ಕೆ ನೆಲೆಯಾದ, ಶಾಸ್ತ್ರಶರೀರಿಣಿ ವೇದಮೂರ್ತಿಯಾದ, ಅಥವಾ ಉಪನಿಷತ್ಪ್ರಮಾಣಗಮ್ಯನಾದ, ತ್ವಯಿ-ನಿನ್ನಲ್ಲಿ, ತೇ-ಅವರು, ಅದ್ಧಾ-ಪ್ರತ್ಯಕ್ಷವಾಗಿ, ನಿತ್ಯಂ-ಸರ್ವಕಾಲದಲ್ಲಿಯೂ ನಿಬದ್ಧವೈರಾಃ-ನಿರೂಢವಾದ ವಿರೋಧವುಳ್ಳವರೂ, ಆಗಿದ್ದಾರೆ ವಯಂಚ - ನಾವೂ, ಅನ್ಯೇಚ-ಇನ್ನೂ ಕೆಲವರಿತರರೂ ಕೂಡ, ತಾದೃಶಾಃ-ಅಂಥಾ, ದ್ವೈಷದ್ವೇಷಿಗಳೇ ಆಗಿರುವೆವು ||೫೦|| ಪುಂಡರೀಕಾಕ್ಷ-ಕಮಲಲೋಚನನೇ, ತೇ-ನಿನ್ನಲ್ಲಿದ್ವೇಷಿಗಳಾದ ಅವರೂ ಕೂಡ, ಸಾಲೋಕ್ಯಂ-ಸಮಾನಲೋಕತೆಯೆಂಬ ಮೋಕ್ಷವನ್ನೂ, ಸಾರೂಪ್ಯಂ-ಸಮಾನರೂಪತೆಯೆಂಬ ಮೋಕ್ಷವನ್ನೂ, ಸಾಮೀಪ್ಯಂ-ಹತ್ತಿರ ಸೇರೋಣವೆಂಬ ಮುಕ್ತಿಯನ್ನೂ, ಅಥ-ಆ ಮೇಲೆ, ಸಾತ್ಮತಾಂ-ಕೂಡಿಯಿರುವಿಕೆಯೆಂಬ ಮುಕ್ತಿಯನ್ನೂ, ಪ್ರಾಪ್ತಾಃ-ಪಡೆದವರಾದರು. ಭಾವಃ-ಚಿತ್ತವೃತ್ತಿಯೇ, ಭವಕಾರಣಂಹಿ-ಜನ್ಮಕ್ಕೆ ನಿಮಿತ್ತವಲ್ಲವೆ ||೫೧|| ಕೇಚಿತ್-ಕೆಲವರಾದ ಶಿಶುಪಾಲಾದಿಗಳು, ಉದ್ಬದ್ಧವೈರೇಣ-ದೃಢವಾದ ಹಗೆಯಿಂದಾದಭಕ್ತಿಯಿಂದಲೂ, ಕೇಚನ-ಗೋಪಿಯರು ಮೊದಲಾದವರು, ಭಕ್ತ್ಯಾ ಕಾಮತಶ್ಚ- ಪ್ರೀತಿಯಿಂದಲೂ ಸುಖಾಭಿಲಾಷದಿಂದಲೂ, ಯಥಾ-ಹೇಗೋ, ತಥಾ-ಹಾಗೆ, ಸತ್ತ್ವಸಂರಬ್ಧಾಃ-ಸತ್ತ್ವಗುಣಾವೇಶಹುಟ್ಟಿದವರಾದ, ಸುರಾದಯೋಪಿ-ದೇವರ್ಕಳು ಮೊದಲಾದವರೂಕೂಡ, ನಸ

---

ಯೆಂಥರಿಸಿದ ಸರ್ವೋತ್ತಮನಾದ ಜಗದ್ಧಾರಕನಾದ ಸಾಂಖ್ಯಯೋಗವಿತಾನ ಸ್ವರೂಪನಾದ ಪರಮಾತ್ಮನಾದ ಪರಬ್ರಹ್ಮನಿಗೋಸುಗ ನಮಸ್ಕಾರಂ ಗೆಯ್ದನು ||೪೭|| ಯೋಗೀಶ್ವರರಿಂದಲೂ ಪಡೆಯಲಶಕ್ಯರಾದ ನೀವು ಬಂದುದರಿಂದ ನಾವೇ ಭಾಗ್ಯವಂತರು, ನಿಮ್ಮ ದರ್ಶನವು ಮಹಾಯೋಗೀಶ್ವರರಿಗೂ ದುರ್ಲಭವು ರಜಸ್ತಮಸ್ಸ್ವಭಾವವುಳ್ಳ ನಮಗೆ ಅಂತಾ ನಿಮ್ಮ ದರ್ಶನವು ಲಬ್ಧವಾದುದರಿಂದ ನಮಗಿಂತಲೂ ಭಾಗ್ಯವಂತರಿಲ್ಲ ||೪೮|| ದೈತ್ಯರು ದಾನವರು ಸಿದ್ಧರು ವಿದ್ಯಾಧರರು ಚಾರಣರು ಯಕ್ಷರು ರಾಕ್ಷಸರು ಪಿಶಾಚಗಳು ಭೂತಗಳು ಪ್ರಮಥರು ಇವರಲ್ಲಿ ನಾನೇ ಭಾಗ್ಯವಂತನು ||೪೯|| ಶುದ್ಧವಾದ ಸತ್ವಸ್ವರೂಪನಾದ ಶಾಸ್ತ್ರಮಯವಾದ ಶರೀರವುಳ್ಳ ನಿನ್ನಲ್ಲಿ ಮಾಡಲ್ಪಟ್ಟ ವೈರವುಳ್ಳವರಾಗಿ ಕೆಲವರು ಅನುಗ್ರಹಕ್ಕೆ ಪಾತ್ರರಾದರು. ನಾವೂ ಇತರರೂ ಅಂತಿಯಾದವರೇ ||೫೦|| ಎಲೈ ಪುಂಡರೀಕಾಕ್ಷನೇ | ನಿನ್ನಲ್ಲಿ ಮನೋಭಾವವುಳ್ಳವರು ಸಾಲೋಕ್ಯ, ಸಾರೂಪ್ಯ, ಸಾಮೀಪ್ಯ, ಸಾಯುಜ್ಯಗಳೆಂಬ ಮುಕ್ತಿಗಳು ಪಡೆದರು. ಜನ್ಮಮೋಕ್ಷಗಳಿಗೆ ಮನೋಭಾವವೇ ಕಾರಣವಲ್ಲವೆ ||೫೧|| ಎಲೈ ಭಗವಂತನೇ, ಶಿಶುಪಾಲ ಮುಂತಾದ ಕೆಲವರು ನಿನ್ನಲ್ಲಿ ವೈರದಿಂದಲೂ, ಗೋಪಸ್ತ್ರೀಯರು ಮುಂತಾದವರು ನಿನ್ನಲ್ಲಿ

ನ್ನಿಕೃಷ್ಣಾಟ್ಸ್ವುರಾದಯಃ ॥೪೪॥ ಇದಮಿತ್ಥಮಿತಿಪ್ರಾಯಸ್ತವಯೋಗೇಶ್ವರೇಶ್ವರ । ನವಿದಂತ್ಯಪಿಯೋಗೇಶಾಯೋಗಮಾಯಾಂಕುತೋವಯಮ್ ॥೪೫॥ ತನ್ನಃಪ್ರಸೀದನಿರಪೇಕ್ಷವಿಮೃಗ್ಯಯುಷ್ಮತ್ಪಾದಾರವಿಂದಧಿಷಣಾನ್ಯಗೃಹಾಂಧಕೂಪಾತ್ । ನಿಷ್ಕ್ರಮ್ಯವಿಶ್ವಶರಣಾಂಘ್ರ್ಯುಪಲಬ್ಧವೃತ್ತಿಶ್ಶಾಂತೋಯಥೈಕಉತಸರ್ವಸಖೈಶ್ಚರಾಮಿ ॥೪೬॥ ಶಾಧ್ಯಸ್ಮಾನೀಶಿತವ್ಯೇಶನಿಷ್ಪಾಪಾನ್ಕುರುನಃಪ್ರಭೋ । ಪುಮಾನ್ಯಚ್ಛ್ರದ್ಧಯಾತಿಷ್ಠಂಚೋದನಾಯಾವಿಮುಚ್ಯತೇ ॥೪೭॥ ಶ್ರೀಭಗವಾನ್ ॥ ಆಸನ್ಮರೀಚೇಷ್ಷಟ್ಪುತ್ರಾಊ

---

ನ್ನಿಕೃಷ್ಣಾಟಿಃ-ಸನ್ನಿಧಿಯಂ ಸೇರಿದವರಲ್ಲವು ॥೪೪॥ ಯೋಗೇಶ್ವರೇಶ್ವರ-ಧ್ಯಾನಾದ್ಯುಪಾಯಂಗಳಿಂಗೊಡೆಯರಾದ ಸಿದ್ಧರಿಗೆ, ನಿಯಾಮಕನಾದ ಕೃಷ್ಣನೇ, ಯೋಗೇಶಾಅಪಿ-ಯೋಗೀಶ್ವರರಾದವರೂಕೂಡ, ತವ-ನಿನ್ನ ಯೋಗಮಾಯಾಂ-ಯುಕ್ತಿಯಾದ ಅಪಾರ ಮೋಹಶಕ್ತಿಯನ್ನು, ಇದಮಿತ್ಥಮಿತಿ-ಇದುಹೀಗೆಂಬು, ಪ್ರಾಯಃ-ಬಹುಶಃ ನ ವಿದಂತಿ-ಅರಿಯರು. ವಯಂ-ನಾವು, ಕುತಃ-ಎತ್ತಣಿಂದ ತಿಳಿದೇವು ॥೪೫॥ ತತ್-ಹಾಗೆ, ತಾಮಸರಾದ ನಿನ್ನ ವೈರಿಗಳೂಕೂಡ ನಿನ್ನಂ ಪೊಂದುವರಾದಕಾರಣ, ಸತ್ವಭಾವಭಕ್ತಿಯೋಳ್ ನನಗೆ ಪ್ರಿಯವಾದ್ದರಿಂದ, ನಿರಪೇಕ್ಷೈಃ-ನಿರಪೇಕ್ಷ-ನಿಷ್ಕಾಮರಿಂದಲೂ, ವಿಮೃಗ್ಯ-ಚಿಂತ್ಯವಾದ, ಯುಷ್ಮತ್-ನಿನ್ನ ಪಾದಾರವಿಂದ-ಅಡಿದಾವರೆಯೆಂಬ, ಧಿಷಣ-ಮನೆಗಿಂತಲೂ, ಅನ್ಯಗೃಹ-ಬೇರೆ ಮನೆಯೆಂಬ,ಅಂಧಕೂಪಾತ್-ಕುರುಡುಕತ್ತಲೆಯ ಹುಳಿಯಡೆಸೆಯಿಂದ, ನಿಷ್ಕ್ರಮ್ಯ-ಹೊರಗೆಬಂದು, ವಿಶ್ವ...ವೃತ್ತಿಃ-ವಿಶ್ವಶರಣ ಲೋಕಕ್ಕೆರಕ್ಷಕಂಗಳಾದ, ಅಂಘ್ರಿ- ಬುಡಗಳಲ್ಲಿ, ಉಪಲಬ್ಧ-ತಾನಾಗಿಬಿದ್ದು ದೊರೆತಹಣ್ಣುಗಳಿಂದ, ವೃತ್ತಿಃ-ಜೀವನ ಉಳ್ಳವನೂ, ಶಾಂತಃ-ಶುದ್ಧಹೃದಯನೂ, ಏಕಃ-ಒರ್ವನೆ, ಉತ-ಅಥವಾ, ಸರ್ವಸಖೈಃ-ಸಕಲ ಭೂತಂಗಳಿಗೂ ಮಿತ್ರರಾದ ಜ್ಞಾನಿಗಳಿಂದೊಡಗೂಡಿದವನೂ ಆಗಿ, ಯಥಾ-ಹೇಗೆ, ಚರಾಮಿ-ತಿರುಗುವೆನೋ, ತಥಾ-ಹಾಗೆ, ನಃ-ನಮಗೆ, ಪ್ರಸೀದ-ಪ್ರಸನ್ನನಾಗು ॥೪೬॥ ಈಶಿತವ್ಯೇಶ-ನಿಯಾಮ್ಯರಾದ ಜೀವಕೋಟಿಗಳಿಗೆ ನಿಯಾಮಕನಾದ, ಪ್ರಭೋ-ಸ್ವತಂತ್ರನಾದ ಕೃಷ್ಣನೇ ! ಪುಮಾನ್-ಪುರುಷನು, ಯತ್-ಯಾವನಿನ್ನ ಅನುಶಾಸನವಾದ ಶ್ರುತಿಸ್ಮೃತಿಶಾಸ್ತ್ರವನ್ನು, ಶ್ರದ್ಧಯಾ-ನೆಚ್ಚಿಕೆಯಿಂದ. ಅತಿಷ್ಠನ್-ಆಶ್ರಯಿಸಿದ ಭಕ್ತನಾಗಿ ಚೋದನಾಯಾಃ-ವಿಧಿನಿಷೇಧಂಗಳೇ ಗುರುತ್ತಗಳಾಗಿಉಳ್ಳ ಕರ್ಮಪ್ರವೃತ್ತಿಯ ದೆಸೆಯಿಂದ, ವಿಮುಚ್ಯತೇ-ಬಿಡಲ್ಪಡುವನೋ,ಆಯನುಶಾಸನದಿಂದ, ಅಸ್ಮಾನ್-ನಮ್ಮನ್ನು, ಶಾಧಿ-ಶಿಕ್ಷಿಸು, ನಃ-ನಮ್ಮನ್ನು, ನಿಷ್ಪಾಪಾನ್-ಅನಘರನ್ನಾಗಿ. ಕುರು-ಮಾಡು ॥೪೭॥ ಇಂತೆಂಬಬಲಿಗೆಕೃಷ್ಣಂಪೇಳ್ವನು--ಪ್ರಥಮೇಅಂತರೇ-ಸ್ವಾಯಂಭುವಮನ್ವಂತರದಲ್ಲಿ, ಮರೀಚೇಃ-ಮರೀಚಿಮುನಿಯ, ಊರ್ಣಾಯಾಂ-ಭಾರ್ಯೆಯಲ್ಲಿ, ಷಟ್ಪುತ್ರಾಃ-೬ ಮಂದಿಮಕ್ಕಳು, ಆಸನ್-ಹುಟ್ಟಿದವರಾಗಿದ್ದರು. ತೇದೇವಾಃ-ಆ ಯಾರ್ವರು ದೇವರ್ಕಳೂ, ಸುತಾಂ-ಮಗಳಾದ ಸರಸ್ವತಿಯನ್ನು, ಯಭಿತುಂ-ರಮಿಸುವುದಕ್ಕೆ, ಉದ್ಯತಂ-ಪ್ರಯತ್ನಗೊಂಡ, ಕಂ-ಬ್ರಹ್ಮನನ್ನು, ವೀಕ್ಷ್ಯ-ನೋಡಿ, ಹಹ

---

ಕಾಮದಿಂದಲೂ, ಕೃತಾರ್ಥರಾದರು, ಶುದ್ಧ ಭಕ್ತಿಯಿಂದ ಒಯಸುವ ದೇವತೆಗಳೂ ಕೂಡ ಹಾಗೆ ಕೃತಾರ್ಥರಾಗಲಿಲ್ಲವು ॥೪೪॥ ಯೋಗೇಶ್ವರನಾದ ಭಗವಂತನೇ, ಯೋಗಿಗಳಾದ ಮಹಾತ್ಮರೂ ಕೂಡ ನಿನ್ನ ಮಾಯೆಯಂ ಇಂತಾದ್ದೆಂದು ಹೀಗೆಂದರಿಯರ್ಕು, ಮೂಢರಾದ ನಾವು ಎಂತು ತಿಳಿಯುವೆವು ॥೪೫॥ ಆದ್ದರಿಂದ ಪೂರ್ಣಕಾಮರಾದ ಮಹಾಯೋಗಿಗಳಿಂದಲೂ ಹುಡುಕಲ್ಪಡುತಲಿರುವ ನಿನ್ನ ಪಾದಪದ್ಮಂಗಳಲ್ಲಿ ಭಕ್ತಿಯೆಂಬಾಶ್ರಯವ ನಪೇಕ್ಷಿಸಿ ಅನ್ಯವಾದ ಗೃಹಾದಿಗಳೆಂಬ ಅಂಧಕೂಪಮಂ ತಪ್ಪಿಸಿಕೊಂಡು ಹೊರಟುಬಂದು ವನವನೆಯ್ದಿ ವೃಕ್ಷಮೂಲದಲ್ಲಿ ತಾನಾಗಿ ಕಳಿದುಬಿದ್ದ ಫಲಾದಿಗಳಿಂ ಜೀವಿಸುವನಾಗಿ ನಾನೊರ್ವನೇ ಯಾವಾಗ ಸಂಚರಿಸುವೆನೋ, ಅಥವಾ ಸರ್ವಸುಹೃತ್ತುಗಳಾದ ನಿನ್ನ ಭಕ್ತರೊಡನೆಯೂ ವಾಸವ ಮಾಡಿಕೊಂಡು ಹೇಗೆ ಸಂಚರಿಸುವೆನೋ ಆಪ್ರಕಾರವಾಗಿ ನನ್ನಲ್ಲಿ ಪ್ರಸನ್ನನಾಗು ॥೪೬॥ ಸಮಸ್ತ ಜೀವರಿಗೂ ಸ್ವಾಮಿಯಾದ ಸಮರ್ಥನಾದ ಶ್ರೀಕೃಷ್ಣನೇ! ನಿನ್ನಲ್ಲಿ ದೃಢಭಕ್ತಿಯಂಮಾಡಿ ಅದರ ಪಾರವಶ್ಯದಿಂದ ವಿಧಿನಿಷೇಧಮಾರ್ಗಗಳಿಗೆ ದೂರನಾಗಿ ಅವಧೂತಾಶ್ರಮಿಯಾಗಿ ನಾನು ಹೇಗೆ ಸಂಚರಿಸುವೆನೋ ಹಾಗೆ ನನ್ನಪಾಪಮಂ ಪರಿಹರಿಸಿ ನನ್ನಂ ರಕ್ಷಿಸು ॥೪೭॥ ಈಪ್ರಕಾರವಾಗಿ ಬಲೀಂದ್ರನಿಂ ಪ್ರಾರ್ಥಿತನಾದ ಭಗವಂತನು, ಆವಾಕ್ಯಂಗಳ ನನುಮೋದನಂಗೆಯ್ದು ನುಡಿದನು. ಎಲೈಬಲಿಯೇ! ಸ್ವಾಯಂಭುವ ಮನ್ವಂತರದಲ್ಲಿ ಮರೀಚಿ ಬ್ರಹ್ಮನಿಗೆ ಊರ್ಣನಾಮಕಳಾದ ಪತ್ನಿಯಲ್ಲಿ ಆರುಮಂದಿ ಪು

ರ್ಣಾಯಾಂಪ್ರಥಮೇಂತರೇ । ದೇವಾಃಕಂಜಹಸುರ್ವೀಕ್ಷ್ಯಸುತಂಯಭಿತುಮುದ್ಯತಮ್ ॥೪೮॥ ತೇನಾ
ಸುರೀಮಗನ್ಯೋನಿಮಧುನಾವದ್ಯಕರ್ಮಣಾ । ಹಿರಣ್ಯಕಶಿಪೋರ್ಜಾತಾಃಪುತ್ರಾಸ್ತೇಯೋಗಮಾಯ
ಯಾ ॥೪೯॥ ದೇವಕ್ಯಾಉದರೇಜಾತಾರಾಜನ್ಕಂಸವಿಹಿಂಸಿತಾಃ । ಸಾತಾನ್ಶೋಚತ್ಯಾತ್ಮಜಾಂಸ್ಸ್ವಾಂಸ್ತಇ
ಮೇಧ್ಯಾಸತೇಂತಿಕೇ ॥೫೦॥ ಇತಏತಾನ್ಪ್ರಣೇಷ್ಯಾವೋಮಾತೃಶೋಕಾಪನುತ್ತಯೇ । ತತಶ್ಶಾಪವಿನಿರ್ಮು
ಕ್ತಾಲೋಕಂಯಾಸ್ಯಂತಿವಿಜ್ವರಾಃ ॥೫೧॥ ಸ್ಮರೋದ್ಗೀಥಃಪರಿಷ್ವಂಗಃಪತಂಗಃಕ್ಷುದ್ರಭೃದ್ಘೃಣೀ ।
ಷಡೇತೇಮತ್ಪ್ರಸಾದೇನಪುನರ್ಯಾಸ್ಯಂತಿಸದ್ಗತಿಮ್ ॥೫೨॥ ಇತ್ಯುಕ್ತ್ವಾತಾನ್ಸಮಾದಾಯಇಂದ್ರಸೇನೇ
ನಪೂಜಿತೌ । ಪುನರ್ದ್ವಾರವತೀಮೇತ್ಯಮಾತುಃಪುತ್ರಾನಯಚ್ಛತಾಮ್ ॥೫೩॥ ತಾನ್ದೃಷ್ಟ್ವಾಬಾಲ
ಕಾನ್ದೇವೀಪುತ್ರಸ್ನೇಹಸ್ನುತಸ್ತನೀ । ಪರಿಷ್ವಜ್ಯಾಂಕಮಾರೋಪ್ಯಮೂರ್ಧ್ನ್ಯಜಿಘ್ರದಭೀಕ್ಷ್ಣಶಃ ॥

---

ಷಟ್-ನಕ್ಕರು ॥೪೮॥ ತೇನಅವದ್ಯಕರ್ಮಣಾ-ಆ ಪಾಪದಿಂದ, ಅಧುನಾ-ಈಗಲೇ, ಆಸುರೀಂಯೋನಿಂ-ಅಸುರಜನ್ಮವನ್ನು, ಅಗನ್-
ಹೊಂದಿದವರಾದ, ಹಿರಣ್ಯಕಶಿಪೋಃ-ಹಿರಣ್ಯಕಶಿಪುವೆಂಬ ಅಸುರನಿಗೆ, ಪುತ್ರಾಃ-ಕುಮಾರರಾಗಿ, ಜಾತಾಃ ಹುಟ್ಟಿದವರು. ತೇ-ಅ
ವರು, ಯೋಗಮಾಯಯಾ-ನನ್ನ ಮಹಾಮೋಹಶಕ್ತಿಯಿಂದ, ॥೪೯॥ ಎಳೆತರಲ್ಪಟ್ಟವರಾಗಿ, ದೇವಕೀದೇವಿಯ ಉದರೇ- ಬಸು
ರಲ್ಲಿ, ಜಾತಾಃ-ಹುಟ್ಟಿದವರಾಗಿ, ಕಂಸವಿಹಿಂಸಿತಾಃ-ಕಂಸನಿಂದಕೊಲ್ಲಲ್ಪಟ್ಟವರಾದರು. ಸಾ-ಆ ದೇವಕಿಯು, ತಾನ್ಆತ್ಮಜಾನ್-
ಆ ಮಕ್ಕಳಂ ಕುರಿತು, ಶೋಚತಿ-ಶೋಕಿಸುತ್ತಿದ್ದಾಳೆ. ರಾಜನ್-ಬಲಿರಾಯನೇ, ತಇಮೇ-ಅವರೇಆದ ಇವರು, ಅಂತಿಕೇ-ನಿನ್ನ ಬಳಿ
ಯಲ್ಲಿ, ಅಧ್ಯಾಸತೇ-ಕುಳಿತಿದ್ದಾರೆ ॥೫೦॥ ಇತಿ-ಹೀಗಿರುವುದರಿಂದ, ಮಾತೃಶೋಕಾಪನುತ್ತಯೇ-ನಮ್ಮತಾಯಿಯ ದುಃಖ
ವನ್ನು, ಪರಿಹರಿಸಲೋಸುಗ, ಏತಾನ್-ಇವರನ್ನು, ಪ್ರಣೇಷ್ಯಾವಃ-ಒಯ್ಯುವೆವು. ತತಃ-ಆ ಬಳಿಕ, ಶಾಪವಿನಿರ್ಮುಕ್ತಾಃ-ಬ್ರಹ್ಮ
ಶಾಪದಿಂದ ಬಿಡಲ್ಪಟ್ಟವರಾದ್ದರಿಂದ, ವಿಜ್ವರಾಃ-ಸಂತಾಪವಿಲ್ಲದವರಾಗಿ ಲೋಕಂ-ದೇವಲೋಕವನ್ನು, ಯಾಸ್ಯಂತಿ - ಸೇರುವ
ರು ॥೫೧॥ ಸ್ಮರೋದ್ಗೀಥಃ-ಕೀರ್ತಿಮಂತನೆಂಬವನು, ಉದ್ಗೀಥನು-ಪರೀಷ್ವಂಗಃ, ಪತಂಗನು, ಕ್ಷುದ್ರಭೃದ್ಯೆಂಬವನು, ಘೃಣಿ
ಯೆಂಬವನೂ, ಏತೇಷಟ್-ಇವರಾರುಮಂದಿಯೂ, ಮತ್ಪ್ರಸಾದೇನ-ನನ್ನ ಅನುಗ್ರಹದಿಂದ, ಪುನಃ-ಮರಳಿಯೂ, ಸದ್ಗತಿಂ-
ಮೋಕ್ಷವನ್ನು, ಯಾಸ್ಯಂತಿ-ಹೊಂದುವರು ॥೫೨॥ ಇತ್ಯುಕ್ತ್ವಾ-ಹೀಗೆಹೇಳಿ, ತಾನ್-ಅವರನ್ನು, ಆದಾಯ-ತೆಗದುಕೊಂಡು,
ಇಂದ್ರಸೇನೇನ-ಬಲಿರಾಯನಿಂದ, ಪೂಜಿತೌ-ಉಪಚರಿಸಲ್ಪಟ್ಟವರಾಗಿ, ಪುನಃ-ಮರಳಿ, ದ್ವಾರವತೀಂ-ಕುಶಸ್ಥಲೀ ನಗರವನ್ನು
ಏತ್ಯ-ಸೇರಿ, ಮಾತುಃ-ತಾಯಿಗೆ, ಪುತ್ರಾನ್-ಮಕ್ಕಳನ್ನು, ಅಯಚ್ಛತಾಂ-ಕೊಟ್ಟರು ॥೫೩॥ ದೇವೀ-ದೇವಕೀದೇವಿಯು, ತಾನ್
ಬಾಲಕಾನ್-ಆ ಶಿಶುಗಳನ್ನು, ದೃಷ್ಟ್ವಾ-ನೋಡಿ, ಪುತ್ರಸ್ನೇಹಸ್ನುತಸ್ತನೀ-ಮಕ್ಕಳಲ್ಲಿ ಪ್ರೇಮದಿಂದಹಾಲು ಸೋರುವ ಮೊಲೆಗ
ಳುಳ್ಳವಳಾಗಿ, ಪರಿಷ್ವಜ್ಯ-ಅಪ್ಪಿಕೊಂಡು, ಅಂಕಂ-ತೊಡೆಯನ್ನು, ಆರೋಪ್ಯ-ಏರಿಸಿಕೊಂಡು, ಅಭೀಕ್ಷ್ಣಶಃ-ಅಧಿಕವಾಗಿ, ಮೂ
ರ್ಧ್ನಿ-ತಲೆಯಲ್ಲಿ, ಅಜಿಘ್ರತ್-ಮೂಸಿನೋಡಿದಳು ॥೫೪॥ ಯಯಾ-ಯಾವಮಾಯೆಯಿಂದ, ಸೃಷ್ಟಿಃ-ಪ್ರಪಂಚದ ಉತ್ಪತ್ತಿಯು,

---

ತ್ರರುಜನಿಸಿದರು. ಅವರು ತನ್ನ ಪುತ್ರಿಯಾದ ಸರಸ್ವತಿಯಲ್ಲಿ ಕಾಮುಕನಾದ ಬ್ರಹ್ಮನಂನೋಡಿ ನಕ್ಕರು ॥೪೮॥
ಆಪಾಪಕರ್ಮದಿಂದ ಆರುಜನರೂ ಅಸುರಯೋನಿಯಲ್ಲಿ ಹಿರಣ್ಯಕಶಿಪುವಿನ ದೆಸೆಯಿಂದ ಉತ್ಪನ್ನರಾಗಿ ॥೪೯॥ ಬಳಿಕ
ಯೋಗಮಾಯೆಯಿಂದ ದೇವಕೀಗರ್ಭದಲ್ಲಿ ಜನಿಸಿ ಕಂಸನಿಂದ ಸಂಹರಿಸಲ್ಪಟ್ಟರು. ಆದೇವಕಿಯು ಅವರನ್ನು ತ
ನ್ನಮಕ್ಕಳೆಂದು ಶೋಕಪಡುತಲಿರುವಳು. ಅವರು ನಿನ್ನ ಬಳಿಯಲ್ಲಿರುವರು ॥೫೦॥ ಮಾತೃವಾದ ದೇವಕಿಯ ಶೋಕ
ಪರಿಹಾರಾರ್ಥವಾಗಿ ಇಲ್ಲಿಂದ ಅವರಂ ಕರೆದುಕೊಂಡು ಹೋಗುವೆವು. ಕಳುಹಿಸು, ಬಳಿಕವರು ಶಾಪಮುಕ್ತರಾ
ಗಿ ನಿಶ್ಚಿಂತೆಯಿಂದ ತಮ್ಮಲೋಕಕ್ಕೆ ಹೋಗಲಿ ॥೫೧॥ ಸ್ಮರನು ಉದ್ಗೀಥನು, ಪರಿಷ್ವಂಗನು, ಪತಂಗನು, ಕ್ಷು
ದ್ರಭೃ, ಘೃಣಿ, ಎಂಬ ಆರುಮಂದಿಯೊಳಗೆ ಸ್ಮರನೆಂಬ ಪ್ರಥಮನೇ ಕೀರ್ತಿಮಂತನೆಂಬ ಹೆಸರಿನಿಂದ ವಸುದೇ
ವನ ಪುತ್ರನಾದನು. ಈಯಾರುಮಂದಿಯೂ ನನ್ನಪ್ರಸಾದದಿಂದ ಸದ್ಗತಿಯ ನೈಯ್ದುವರು ॥೫೨॥ ಇಂತೆಂದು
ನುಡಿದು ಅವರಂ ಕರೆದುಕೊಂಡು ಬಲಿಯಿಂ ಪೂಜಿತರಾಗಿ ಬಂದು ತಾಯಿಗೋಸುಗ ಪುತ್ರರಂ ಕೊಟ್ಟರು ॥೫೩॥
ಆದೇವಕಿಯು ಆಬಾಲಕರಂನೋಡಿ ಪುತ್ರಸ್ನೇಹದಿಂದ ಕ್ಷೀರವು ಸ್ರವಿಸುತ ಅವರನಾಲಿಂಗನಂ ಗೆಯ್ದು ಕಾಲ್ಮೇರಿ
ಸಿಕೊಂಡು ಶಿರಸ್ಸಿನಲ್ಲಿ ಆಘ್ರಾಣಿಸಿದಳು ॥೫೪॥ ಸರ್ವಜಗತ್ಕರ್ತನಾದ ಭಗವಂತನ ಮಾಯೆಯಿಂದ ಮೋಹಿತಳಾ

ಅಪಾಯಯತ್ಸ್ತನಂ ಪ್ರೀತಾ ಪುತ್ರಸ್ಪರ್ಶಪರಿಸ್ನುತಮ್ । ಮೋಹಿತಾ ಮಾಯಯಾ ವಿಷ್ಣೋರ್ಯಯಾ ಸೃಷ್ಟಿಃ ಪ್ರವರ್ತತೇ ॥೫೫॥ ಪೀತ್ವಾಮೃತಂ ಪಯಸ್ತಸ್ಯಾಃ ಪೀತಶೇಷಂ ಗದಾಭೃತಃ । ನಾರಾಯಣಾಂಗಸಂಸ್ಪರ್ಶಪ್ರತಿಲಬ್ಧಾತ್ಮದರ್ಶನಾಃ ॥೫೬॥ ತೇ ನಮಸ್ಕೃತ್ಯ ಗೋವಿಂದಂ ದೇವಕೀಂ ಪಿತರಂ ಬಲಮ್ । ಮಿಷತಾಂ ಸರ್ವಭೂತಾನಾಂ ಯಯುರ್ಧಾಮ ವಿಹಾಯಸಾ ॥೫೭॥ ತಂ ದೃಷ್ಟ್ವಾ ದೇವಕೀ ದೇವೀ ಮೃತಾಗಮನನಿರ್ಗಮಮ್ । ಮೇನೇ ಸುವಿಸ್ಮಿತಾ ಮಾಯಾಂ ಕೃಷ್ಣಸ್ಯ ರಚಿತಾಂ ನೃಪ ॥೫೮॥ ಏವಂವಿಧಾನ್ಯದ್ಭುತಾನಿ ಕೃಷ್ಣಸ್ಯ ಪರಮಾತ್ಮನಃ । ವೀರ್ಯಾಣ್ಯನಂತವೀರ್ಯಸ್ಯ ಸಂತ್ಯನಂತಾನಿ ಭಾರತ ॥೫೯॥ ಶ್ರೀಸೂತಃ ॥ ಯ ಇದಮನುಶೃಣೋತಿ ಶ್ರಾವಯೇದ್ವಾ ಮುರಾರೇಶ್ಚರಿತಮಮೃತಕೀರ್ತೇರ್ವರ್ಣಿತಂ ವ್ಯಾಸಪುತ್ರೈಃ । ಜಗ

---

ಪ್ರವರ್ತತೇ-ನಡೆಯುತಲಿದೆಯೋ, ತಯಾ-ಅಂಥಾ, ವಿಷ್ಣೋಃ ಮಾಯಯಾ-ನಾರಾಯಣನ ಮೋಹಕಶಕ್ತಿಯಿಂದ. ಮೋಹಿತಾ-ಮರಹುಗೊಳಿಸಲ್ಪಟ್ಟವಳಾದ, ದೇವಕಿಯು, ಪ್ರೀತಾ-ಪ್ರೇಮಹುಟ್ಟಿದವಳಾಗಿ, ಪುತ್ರಸ್ಪರ್ಶಪರಿಸ್ನುತಂ-ಮಕ್ಕಳಂ ಸೋಂಕಿದ್ದರಿಂದ ಹಾಲುಹೊಮ್ಮುತ್ತಿರುವ, ಸ್ತನಂ-ಮೊಲೆಯನ್ನು, ಅಪಾಯಯತ್-ಊಡಿಸಿದಳು ॥೫೫॥ ತಸ್ಯಾಃ-ಆ ದೇವಕಿಯ, ಗದಾಭೃತಃ-ನಾರಾಯಣನಿಂದ, ಪೀತಶೇಷಂ-ಕುಡಿಯಲ್ಪಟ್ಟು ಮಿಕ್ಕಂಥಾ, ಅಮೃತಂ-ದೇವತೆಗಳ ಆಹಾರಕ್ಕೆ ಸಮಾನವಾದ, ಪಯಃ-ಮೊಲೆಹಾಲನ್ನು, ಪೀತ್ವಾ-ಕುಡಿದು, ನಾರಾಯಣಾಂಗಸಂಸ್ಪರ್ಶಪ್ರತಿಲಬ್ಧಾತ್ಮದರ್ಶನಾಃ- ಕೃಷ್ಣಮೂರ್ತಿಯಂ ಸೋಂಕಿದ್ದರಿಂದ ಮರಳಿಯೂ ಪಡೆಯಲ್ಪಟ್ಟ ಸ್ವರೂಪಜ್ಞಾನವುಳ್ಳವರಾದ ॥೫೬॥ ತೇ-ಆ ಶಿಶುಗಳು ಗೋವಿಂದಂ-ಕೃಷ್ಣನನ್ನೂ, ದೇವಕೀಂ-ತಾಯಿಯನ್ನೂ, ಪಿತರಂ-ವಸುದೇವನನ್ನೂ, ಬಲಂ-ರಾಮನನ್ನೂ, ನಮಸ್ಕೃತ್ಯ-ಪೊಡಮಟ್ಟು, ಸರ್ವಭೂತಾನಾಂ ಸಕಲಪ್ರಾಣಿಗಳಿಗೂ, ಮಿಷತಾಂ ಸತಾಂ-ನೋಡುತ್ತಿರುವ ರಾಗುತ್ತಿರುವಲ್ಲಿ, ವಿಹಾಯಸಾ-ಅಂತರಿಕ್ಷಮಾರ್ಗದಿಂದ, ಧಾಮ-ದೇವಲೋಕವನ್ನು, ಯಯುಃ-ಸೇರಿದರು ॥೫೭॥ ನೃಪ-ಪರೀಕ್ಷಿದ್ರಾಯನೇ, ದೇವಕೀದೇವೀ-ದೇವಕಿಯು, ತಂ-ಅಂಥಾ, ಮೃತಾಗಮನನಿರ್ಗಮಂ-ಸತ್ತವರ ಬರುವಿಕೆಯನ್ನೂ ಹೋಗುವಿಕೆಯನ್ನೂ, ದೃಷ್ಟ್ವಾ-ನೋಡಿ. ಸುವಿಸ್ಮಿತಾ-ಚೆನ್ನಾಗಿ ಆಶ್ಚರಿಗೊಂಡವಳಾಗಿ, ಕೃಷ್ಣಸ್ಯ-ಕೃಷ್ಣನಿಂದ, ರಚಿತಾಂ-ಮಾಡಲ್ಪಟ್ಟ, ಮಾಯಾಂ- ಮೋಹಕವಿದ್ಯೆಯನ್ನಾಗಿ, ಮೇನೇ-ತಿಳಿದಳು॥ ಭಾರತ-ಭರತಕುಲದೀಪಕನಾದ ಪರೀಕ್ಷಿತನೇ, ಅನಂತವೀರ್ಯಸ್ಯ-ಅಪರಿಮಿತ ಸಾಮರ್ಥ್ಯಂಗಳುಳ್ಳ, ಪರಮಾತ್ಮನಃ-ಪರಮೇಶ್ವರನಾದ, ಕೃಷ್ಣಸ್ಯ-ವಾಸುದೇವನ, ಅದ್ಭುತಾನಿ-ಆಶ್ಚರ್ಯಕರಂಗಳಾದ, ಏವಂವಿಧಾನಿ-ಇಂಥಾ ಬಗೆಯುಳ್ಳವಾದ, ವೀರ್ಯಾಣಿ-ಸಾಮರ್ಥ್ಯಂಗಳು, ಅನಂತಾನಿ-ತುದಿಯಿಲ್ಲದವುಗಳು, ಸಂತಿ-ಇರುವವು ॥೫೯॥ (ಸೂತವಚನವು) ಯಃ-ಯಾವಪುರುಷನು ವ್ಯಾಸಪುತ್ರೈಃ-ಶುಕಾಚಾರ್ಯರಿಂದ, ವರ್ಣಿತಂ-ಬಣ್ಣಿಸಲ್ಪಟ್ಟಂಥಾ, ಜಗದಘಭಿತ್-ಪ್ರಪಂಚದ ಪಾಪವಂ ಭೇದಿಸುವಂಥಾ, ತದ್ಭಕ್ತಸತ್ಕರ್ಣಪೂರಂ-ಆ ಕೃಷ್ಣಭಕ್ತರ ಕಿವಿಗಳಿಗಾಭರಣವಾದಂಥಾ, ಅಮೃತಕೀರ್ತೇಃ-ಅಮೃತದಂತೆ ನಿರ್ಮಲವೂ ಮಧು

---

ಗಿ ಪುತ್ರಸ್ಪರ್ಶನದಿಂ ಕ್ಷೀರಪೂರ್ಣಸ್ತನಗಳುಳ್ಳವಳಾಗಿ ಸಂತುಷ್ಟಿಯಿಂ ಪುತ್ರರಿಗೆ ಪಾನಂಗೆಯ್ಸಿದಳು ॥೫೫॥ ಆಗ ಶ್ರೀಕೃಷ್ಣನಿಂ ಪಾನಂಗೆಯ್ಯಲ್ಪಟ್ಟು ಮಿಕ್ಕ ಸ್ತನ್ಯವಂ ಪಾನಂಗೆಯ್ದವರಾದ್ದರಿಂದ ಭಗವಂತನ ಶರೀರಸ್ಪರ್ಶದಿಂದಾದ ಮಹಿಮೆಯಿಂದ ತಾವು ದೇವತೆಗಳೆಂಬ ಪೂರ್ವಜ್ಞಾನವುಳ್ಳವರಾಗಿ ॥೫೬॥ ಆ ಬಾಲಕರು ತಂದೆಯಾದ ವಸುದೇವನು ತಾಯಿಯಾದ ದೇವಕಿಯುಂ ಬಲರಾಮನುಂ ಸಹ ನಮಸ್ಕರಿಸಿ ಸರ್ವರೂ ನೋಡುತಲಿರುವಾಗಲೇ ಆಕಾಶಮಾರ್ಗದಿಂ ದೇವಲೋಕವ ನೆಯ್ದಿದರು ॥೫೭॥ ಎಲೈ ಅರಸನೇ! ದೇವಕೀದೇವಿಯು ಮೃತಪುತ್ರರ ಆಗಮನವನ್ನೂ ಪುನರ್ನಿರ್ಗಮನವನ್ನೂ ನೋಡಿ ಅತ್ಯಂತಾಶ್ಚರ್ಯವುಳ್ಳವಳಾಗಿ ಇದು ಭಗವಂತನ ಮಾಯಾವಿಲಾಸವೆಂದರಿತಳು ॥೫೮॥ ಅಪರಿಮಿತ ಸಾಮರ್ಥ್ಯವುಳ್ಳ ಪರಮಾತ್ಮನಾದ ಶ್ರೀಕೃಷ್ಣನ ಅನಂತಾದ್ಭುತಮಾಹಾತ್ಮ್ಯಗಳು ಎಷ್ಟೋ ಇವೆ, ॥೫೯॥ ಅವ್ಯಾಹತಷಡ್ಗುಣೈಶ್ವರ್ಯಸಂಪನ್ನನಾದ ಶ್ರೀಕೃಷ್ಣನಲ್ಲಿಡಲ್ಪಟ್ಟ ಚಿತ್ತವುಳ್ಳ ಯಾವಪುರುಷನು ವ್ಯಾಸಪುತ್ರರಾದ ಶುಕಾಚಾರ್ಯರಿಂ ಪೇಳಲ್ಪಟ್ಟ ಜಗತ್ತಿನ ಅಶೇಷಪಾಪವ ಪರಿಹರಿಸಲುಳ್ಳ ಭಕ್ತರಿಗೆ ಅಮೂಲ್ಯ ರತ್ನಕುಂಡಲವಾಗಿರುವ ಅಮೃತ ಸದೃಶವಾದ ಕೀರ್ತಿಯುಳ್ಳ ಮುರವೈರಿಯ

ದಸಭಿದಲಂತಪ್ಭಕ್ತಸತ್ಕರ್ಣಪೂರಂಭಗವತಿಕೃತಚಿತ್ತೋಯಾತಿತತ್ಕ್ಷೇಮಧಾಮ ... ||೬೦||

-*ಇತಿಶ್ರೀಮದ್ಭಾಗವತೇ-ದಶಮಸ್ಕಂಧೇ-ಪಂಚಾಶೀತಿತಮೋಽಧ್ಯಾಯಃ.*-

ರಾಜಾ|| ಬ್ರಹ್ಮನ್ವೇದಿತುಮಿಚ್ಛಾಮಿಸ್ವಸಾರಂಕೃಷ್ಣರಾಮಯೋಃ | ಯಥೋಪಯೇಮೇವಿಜಯೋ ಯೋಮಮಾಸೀತ್ಪಿತಾಮಹಃ ||೧|| ಶ್ರೀಶುಕಃ||ಅರ್ಜುನಸ್ತೀರ್ಥಯಾತ್ರಾಯಾಂಪರ್ಯಟನ್ನವನೀಂ

---

ರವ್ವೂ ಆದ, ಯಶಮುಳ್ಳ, ಮುರಾರೇಃ-ಕೃಷ್ಣನ, ಇದಂಚರಿತಂ-ಈ ಕಥೆಯನ್ನು, ಅನುಶೃಣೋತಿ-ಕೇಳುವನೋ, ಶ್ರಾವಯೇದ್ವಾ-ಇತರರಂ ಕೇಳುವಂತೆಮಾಡುವನೋ, ಸಃ-ಆ ಪುರುಷನು, ಭಗವತಿ ಕೃಷ್ಣನಲ್ಲಿ, ಕೃತಚಿತ್ತಃ-ಮಾಡಲ್ಪಟ್ಟಮನಸ್ಸುಳ್ಳವನಾಗಿ, ತತ್ಕ್ಷೇಮಧಾಮ ಅವಿಚ್ಛಿನ್ನವಿನ ಕಾಲಾದಿಭಯರಹಿತವಾದ ಪರಮಪದವನ್ನು, ಯಾತಿ-ಸೇರುತಲಿದಾನೆ ||೬೦||

ಇಂತೆಂಬಲ್ಲಿಗೆ ಭಾಗವತಪ್ರತಿಶಬ್ದಾರ್ಥ ಬೋಧಿನಿಯೊಳು ದಶಮಸ್ಕಂಧದಲ್ಲಿ
೮೬ನೆಯಅಧ್ಯಾಯಂ ಮುಗಿದುದು.

---

೮೭ನೆಯ ಅಧ್ಯಾಯದ ಪ್ರತಿಪದಟೀಕೆ.

ಬ್ರಹ್ಮನ್-ಬ್ರಾಹ್ಮಣನಾದ ಶುಕಮುನಿಯೇ, ಯಃ-ಯಾವಾತನು, ಮಮ-ನನ್ನ, ಪಿತಾಮಹಃ-ತಂದೆಯತಾಯಿಯು, ಆಸೀತ್-ಆಗಿದ್ದನೋ, ಕೃಷ್ಣರಾಮಯೋಃ-ಕೃಷ್ಣನಿಗೂ ರಾಮನಿಗೂ, ಸ್ವಸಾರಂ-ತಂಗಿಯಾದ, ತಾಂ-ಆ ಸುಭದ್ರೆಯನ್ನು ವಿಜಯಃ-ಅರ್ಜುನನು, ಯಥಾ-ಹೇಗೆ, ಉಪಯೇಮೇ-ವಿವಾಹಯಾದನು ತತ್-ಅದರನ್ನು, ವೇದಿತುಂ-ತಿಳಿಯುವುದಕ್ಕೆ ಇಚ್ಛಾಮಿ-ಬಯಸುತ್ತಿದೇನೆ ||೧|| (ಶುಕವಚನವು) ಪ್ರಭುಃ-ಸಮರ್ಥನಾದ, ಅರ್ಜುನಃ-ವಿಜಯನು, ತೀರ್ಥಯಾತ್ರಾಯಾಂ -ತೀ

---

ಚರಿತ್ರಂಗಳಂ ಕೇಳುವನೋ, ಮತ್ತೋರ್ವರಿಗೆ ಕೇಳಿಸುವನೋ, ಅವನುಆನಾರಾಯಣನ ನಿತ್ಯಸುಖವುಳ್ಳ ಶಾಶ್ವತಸ್ಥಾನವ ನೆಯ್ದುವನು.| ||೬೦||

ಇಂತು ಶ್ರೀಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸಿದನೆಂದುಸೂತಪೌ
ರಾಣಿಕನು ನೈಮಿಶಾರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಪೇಳಿದನೆಂ
ಬಲ್ಲಿಗೆ-ಶ್ರೀಮನ್ಮಹೀಶೂರ ಪುರವರಾಧೀಶ ಶ್ರೀಚಾಮರಾಜತನುಜಶ್ರೀ
ಮತ್ಕೃಷ್ಣರಾಜವಿರಚಿತವಾದ ಶ್ರೀಕೃಷ್ಣರಾಜವಾಣೀವಿಲಾಸಮೆಂ
ಬ ಶ್ರೀಭಾಗವತ ಪುರಾಣದಕರ್ಣಾಟಭಾಷಾವ್ಯಾಖ್ಯಾನದಲ್ಲಿ
೮೬ನೆಅಧ್ಯಾಯಂಮುಗಿದುದು

೮೭ನೆಯಅಧ್ಯಾಯವು.

ಶ್ರೀಧರೀಯಶ್ಲೋಕಃ || ಷಡಶೀತಿತಮೇಽಂಭಾತ್ಸುಭದ್ರಾಮರ್ಜುನೋಽಹರತ್ | ಗತ್ವಾಚಮಿಥಿಲಾಂಕೃಷ್ಣೋಽನ್ವಪವಿಪ್ರಾವನಂದಯತ್||✝||ಟೀ|| ಎಂಭತ್ತಾರನೆಯ ಅಧ್ಯಾಯದಲ್ಲಿ ಅರ್ಜುನನು ಕೃಷ್ಣನಸಹೋದರಿಯಾದ ಸುಭದ್ರೆಯಂ ಕಪಟದಿಂದ ಅಪಹರಿಸಿದನೆಂಬರ್ಥವಂ, ಶ್ರೀಕೃಷ್ಣನು ಮಿಥಿಲಾ ಪುರವನೆಯ್ದಿ ಅಲ್ಲಿವಾಸಂಗೆಯ್ವ ಶ್ರುತದೇವನೆಂಬ ತನ್ನಭಕ್ತನಾದ ಬ್ರಾಹ್ಮಣನಂ ಮಿಥಿಲಾಧಿಪತಿಯಾದ ಬಹುಳನೆಂಬರಸನಂ ಅನುಗ್ರಹಿಸಿದನೆಂಬರ್ಥವಂ ಸಹ, ಶ್ರೀಶುಕಾಚಾರ್ಯನು ಪರೀಕ್ಷಿದ್ರಾಯನು ಕುರಿತು ನಿರೂಪಿಸುವನೆಂತೆನೆ:-

ಎಲೈ, ಬ್ರಾಹ್ಮಣೋತ್ತಮನಾದ ಶುಕಾಚಾರ್ಯನೇ! ರಾಮಕೃಷ್ಣರ ತಂಗಿಯಾದ ನನಗೆಪಿತಾಮಹಿಯಾದ ಸುಭದ್ರಾದೇವಿಯಂ ಅರ್ಜುನನು ಯಾವಪ್ರಕಾರದಿಂ ವಿವಾಹವ ಮಾಡಿಕೊಂಡನೊ, ಆಯರ್ಥವಂ ತಿಳಿಯಲಿಚ್ಛೈಸುತ್ತೇನೆ- ||೧|| ಎಂದು ಪ್ರಶ್ನೆಗೆಯ್ದ ಪರೀಕ್ಷಿದ್ರಾಯನಂಕುರಿತು ಶುಕಮುನಿಯು ನಿರೂಪಿಸುವನನೆಂತೆನೆ

ಪ್ರಭುಃ । ಗತಃಪ್ರಭಾಸಮಶೃಣೋನ್ಮಾತುಲೇಯೀಂಸಆತ್ಮನಃ॥೨॥ ದುರ್ಯೋಧನಾಯರಾಮಸ್ತಾಂದಾಸ್ಯತೀತಿನಚಾಪರೇ । ತಲ್ಲಿಪ್ಸುಸ್ಸಯತಿರ್ಭೂತ್ವಾತ್ರಿದಂಡೀದ್ವಾರಕಾಮಗಾತ್ ॥೩॥ ತತ್ರವೈವಾರ್ಷಿಕಾನ್ಮಾಸಾನವಾತ್ಸೀತ್ಸ್ವಾರ್ಥಸಾಧನಃ । ಪೌರೈಸ್ಸಭಾಜಿತೋಭೀಕ್ಷ್ಣಂರಾಮೇಣಾಜಾನತಾಚಸಃ॥ ಏಕದಾಗೃಹಮಾನೀಯಆತಿಥ್ಯೇನನಿಮಂತ್ರ್ಯತಮ್ । ಶ್ರದ್ಧಯೋಪಹೃತಂಭೈಕ್ಷಂಬಲೇನಬುಭುಜೇಕಿಲ॥೫॥ ಸೋಪಶ್ಯತ್ತತ್ರತಾಂತನ್ವೀಂಯತಿಃಕನ್ಯಾಂಮನೋಹರಾಮ್ । ಪ್ರೀತ್ಯುತ್ಫುಲ್ಲೇಕ್ಷಣಸ್ತಸ್ಯಾಂಭಾವಕ್ಷುಬ್ಧಂಮನೋದಧೇ ॥೬॥ ಸಾಪಿತಂಚಕಮೇವೀಕ್ಷ್ಯನಾರೀಣಾಂಹೃದಯಂಗಮಮ್ । ಹಸಂತೀವ್ರೀ

---

ರ್ಥಪ್ರಯಾಣದಲ್ಲಿ, ಮೇದಿನೀಂ-ಭೂಮಿಯಲ್ಲಿ, ಪರ್ಯಟನ್-ತಿರುಗುವನಾಗಿ, ಪ್ರಭಾಸಂ-ಪ್ರಭಾಸಕ್ಷೇತ್ರವನ್ನು, ಗತಃ-ಸೇರಿದವನಾಗಿ, ಸಃ-ಆತನು, ಆತ್ಮನಃ-ತನ್ನ, ಮಾತುಲೇಯೀಂ-ಸೋದರಮಾವನಮಗಳಾದ ॥೨॥ ತಾಂ-ಆ ಸುಭದ್ರೆಯನ್ನು, ರಾಮಃ-ಬಲಭದ್ರನು, ದುರ್ಯೋಧನಾಯ-ಸುಯೋಧನಂಗೆ, ದಾಸ್ಯತೀತಿ-ಕೊಡುತ್ತಾನೆಂದು, ಅಶೃಣೋತ್-ಕೇಳಿದನು, ಅಪರೇಚ-ಇತರರೂ, ನ-ಕೇಳಲಿಲ್ಲ, ಸಃ-ಆ ಅರ್ಜುನನು, ತಲ್ಲಿಪ್ಸುಃ-ಆಕೆಯಂ ಬಯಸಿದವನಾಗಿ, ತ್ರಿದಂಡೀ-ಜುಟ್ಟುಜನಿವಾರಗಳನ್ನುಳಿಸಿ ಕೊಂಡು ಮೂರುದಂಡಗಳುಳ್ಳ, ಯತಿಃ-ಸನ್ಯಾಸಿಯು, ಭೂತ್ವಾ-ಆಗಿ, ದ್ವಾರಕಾಂ-ಕುಶಸ್ಥಲೀ ನಗರವನ್ನು ಕುರಿತು, ಅಗಾತ್-ಹೋದನು ॥೩॥ ತತ್ರ-ಅಲ್ಲಿ, ಪೌರೈಃ-ನಾಗರಿಕರಿಂದಲೂ, ಅಜಾನತಾ-ವೇಷಧಾರಿಯಾದ ಅರ್ಜುನನೆಂದರಿಯದ, ರಾಮೇಣಚ- ಬಲದೇವನಿಂದಲೂ, ಅಭೀಕ್ಷ್ಣಂ-ಅಧಿಕವಾಗಿ, ಸಭಾಜಿತಃ-ಸಮ್ಮಾನಿಸಲ್ಪಟ್ಟವನಾದ, ಸಃ-ಅವನು, ಸ್ವಾರ್ಥಸಾಧನಃ-ತನ್ನ ಪ್ರಯೋಜನವಾದ ಕನ್ಯೆಯನ್ನು ಸಂಪಾದಿಸಿಕೊಳ್ಳುವನಾಗಿ, ವಾರ್ಷಿಕಾನ್ಮಾಸಾನ್-ಮಳೆಗಾಲದ ನಾಲ್ಕುತಿಂಗಳಲ್ಲಿ, ವೈ-ಪ್ರಕಟವಾಗಿ ಅವಾತ್ಸೀತ್-ವಾಸವಾಗಿದ್ದನು ॥೪॥ ಏಕದಾ-ಒಂದು ಕಾಲದಲ್ಲಿ, ಗೃಹಂ-ಮನೆಯಂ ಕುರಿತು, ಆನೀಯ-ಕರೆತಂದು, ತಂ-ಅವನನ್ನು, ಆತಿಥ್ಯೇನ-ಅತಿಥಿಯು ಮಾಡತಕ್ಕ ಸತ್ಕಾರದಿಂದ, ನಿಮಂತ್ರ್ಯ-ಸತ್ಕರಿಸಿ, ಬಲೇನ-ಬಲರಾಮನಿಂದ, ಶ್ರದ್ಧಯಾ-ಆವಶ್ಯಕಬುದ್ಧಿಯಿಂದ, ಉಪಹೃತಂ-ಸಮರ್ಪಿಸಲ್ಪಟ್ಟ, ಭೈಕ್ಷಂ-ಭಿಕ್ಷಾಹಾರವನ್ನು, ಬುಭುಜೇಕಿಲ-ಉಂಡನಲ್ಲವೆ ॥೫॥ ಸಯತಿಃ-ಆ ಸನ್ಯಾಸಿಯು, ತತ್ರ-ಆ ಮನೆಯಲ್ಲಿ, ಮನೋಹರಾಂ-ರಮಣೀಯಳಾದ, ತನ್ವೀಂ-ಕೃಶಸುಂದರಗಾತ್ರಿಯಾದ, ಕನ್ಯಾಂ-ಮದುವೆಯಿಲ್ಲದ ಹುಡುಗಿಯಾದ, ತಾಂ-ಆ ಸುಭದ್ರೆಯನ್ನು, ಅಪಶ್ಯತ್-ಕಂಡನು, ಪ್ರೀತ್ಯುತ್ಫುಲ್ಲೇಕ್ಷಣಾತ್-ಪ್ರೇಮದಿಂದ ಅರಳಿದ ದೃಷ್ಟಿಯುಳ್ಳದೆಸೆಯಿಂದ, ಭಾವಕ್ಷುಬ್ಧಂ-ರತ್ಯಭಿಪ್ರಾಯದಿಂದ, ಆತುರವಾದ, ಮನಃ-ಚಿತ್ತವನ್ನು, ತಸ್ಯಾಂ-ಆಕೆಯಲ್ಲಿ, ದಧೇ-ಇಟ್ಟನು ॥೬॥ ನಾರೀಣಾಂ-ಹೆಂಗಳಲ್ಲಿ, ಸಾಪಿ-ಆಕೆಯೂ, ಹೃದಯಂಗಮಂ-ಮನೋಹರನಾದ, ತಂ-ಅವನನ್ನು, ವೀಕ್ಷ್ಯ-ನೋಡಿ, ತನ್ನ ಸ್ವಸ್ಯ ಹೃದಯೇಕ್ಷಣಾ-ಅವನಲ್ಲಿರಿಸಲ್ಪಟ್ಟ ಮನವೂ ಕಣ್ಣೂ ಉಳ್ಳವಳಾದ್ದರಿಂದ, ವ್ರೀಡಿತಾಪಾಂಗಾ-ನಾಚಿದದೃಷ್ಟಿಯುಳ್ಳವಳೂ, ಹ

---

ಎಲೈ ಅರಸನೇ! ಅರ್ಜುನನು ಒಂದುನಿಮಿತ್ತದಿಂದ ತೀರ್ಥಯಾತ್ರಾರ್ಥವಾಗಿ ಭೂಮಿಯಲ್ಲಿ ಸಂಚರಿಸುವನಾಗಿ ಸ್ನಾನಾರ್ಥವಾಗಿ ಪ್ರಭಾಸಕ್ಷೇತ್ರಕ್ಕೆಬಂದನು. ಅಲ್ಲಿ ಸೋದರಮಾವನಾದ ವಸುದೇವನ ಪುತ್ರಿಯಾದ ಸುಭದ್ರೆಯಂ ಸ್ಮರಿಸುವನಾಗಿ ॥೨॥ ಆಸುಭದ್ರೆಯಂ ಬಲಭದ್ರನು ದುರ್ಯೋಧನನಿಗೆ ಕುಡಬೇಕೆಂದಿರುವುದಂ ಇತರರಾದವಸುದೇವಾದಿಗಳು ಅದಂ ಸಮ್ಮತಿಸದೆ ಯಿರುವುದಂ ಸಹ ತಿಳಿದು, ಆಸುಭದ್ರೆಯಂ ವಿವಾಹಂಗೆಯ್ದು ಕೊಳ್ಳಲಿಚ್ಛೆಯುಳ್ಳವನಾಗಿ ತ್ರಿದಂಡಿ ಸೆನ್ಯಾಸಿ ವೇಷವಂಧರಿಸಿ ದ್ವಾರಕಾಪುರವನೆಯ್ದಿ ॥೩॥ ಸ್ವಮನೋರಥಪೂರಣಾರ್ಥವಾಗಿ ಚಾತುರ್ಮಾಸ್ಯಾ ವ್ರತಸಾಧನವೆಂಬ ವ್ಯಾಜದಿಂದಲೇ ಅಲ್ಲಿಯೇ ತಿಳಿಯದೇಇರುವರಾಮನಿಂದಲೂ ಪುರಜನಗಳಿಂದಲೂ ಸಮ್ಮಾನಿಸಲ್ಪಟ್ಟವನಾಗಿ ವಾಸಂಗೆಯ್ದನು ॥೪॥ ಹೀಗಿರುವಲ್ಲಿ ಒಂದಾನೊಂದುದಿವಸದೊಳಗೆ ಬಲರಾಮನು ಆಕಪಟಯತಿಯಂ ಬಿಕ್ಷಕ್ಕೋಸ್ಕರ ಪ್ರಾರ್ಥಿಸಿ ಮನೆಗೆ ಕರೆದುಕೊಂಡುಬಂದು ಭಕ್ತಿಯಿಂದ ಭೋಜನವಂ ಮಾಡಿಸಿದನು ॥೫॥ ಅನಂತರದಲ್ಲಿ ಅರ್ಜುನನು ಆರಾಜಮಂದಿರದಲ್ಲಿ ಶೂರರಮನವನಪಹರಿಸುವ ಅತ್ಯಂತ ಸುಂದರಿಯಾದ ಆಸುಭದ್ರಾದೇವಿಯಂನೋಡಿ ಆಕನ್ಯೆಯಲ್ಲಿ ಅಭಿಪ್ರಾಯ ಯುಕ್ತವಾದ ಮನಸ್ಸನ್ನಿಟ್ಟನು ॥೬॥ ಆಸುಭದ್ರೆಯು ಪೂರ್ವದಲ್ಲಿ ತನ್ನಿಂ ಕೇಳಲ್ಪಟ್ಟ ಗುರುತ್ತಗಳಿಂದಲೂ ಸ್ತ್ರೀಯರುಗಳಂ ಮೋಹಿಸುವಂತೆ ಮಾಡುವ

ಡಿತಾಪಾಂಗಾ ತನ್ನ್ಯಸ್ತಹೃದಯೇಕ್ಷಣಾ ॥೭॥ ತಾಂ ಪರಂ ಸಮಭಿಧ್ಯಾಯನ್ನಂತರಂ ಪ್ರೇಪ್ಸುರರ್ಜುನಃ ।
ನ ಲೇಭೇ ಶಂ ಭ್ರಮಚ್ಚಿತ್ತಃ ಕಾಮೇನಾತಿಬಲೀಯಸಾ ॥೮॥ ಮಹತ್ಯಾಂ ದೇವಯಾತ್ರಾಯಾಂ ರಥಸ್ಥಾಂ ದುರ್ಗ
ನಿರ್ಗತಾಮ್ । ಜಹಾರಾನುಮತಃ ಪಿತ್ರೋಃ ಕೃಷ್ಣಸ್ಯ ಚ ಮಹಾರಥಃ ॥೯॥ ರಥಸ್ಥೋ ಧನುರಾದಾಯ
ಶರಾಂಶ್ಚಾರುಂಧತೋ ಭಟಾನ್ । ವಿದ್ರಾವ್ಯ ಕ್ರೋಶತಾಂ ಸ್ವಾನಾಂ ಸ್ವಭಾಗಂ ಮೃಗರಾಡಿವ ॥೧೦॥ ತಚ್ಛ್ರು
ತ್ವಾ ಕ್ಷುಭಿತೋ ರಾಮಃ ಪರ್ವಣೀವ ಮಹಾರ್ಣವಃ । ಗೃಹೀತಪಾದಃ ಕೃಷ್ಣೇನ ಸುಹೃದ್ಭಿಶ್ಚಾನ್ವಶಾಮ್ಯ
ತ ॥೧೧॥ ಪ್ರಾಹಿಣೋತ್ಪಾರಿಬರ್ಹಾಣಿ ವರವಧ್ವೋರ್ಮುದಾ ಬಲಃ । ಮಹಾಧನೋಪಸ್ಕರೇಭರಥಾಶ್ವವರಯೋ
ಷಿತಃ ॥೧೨॥ ಅಭಿವರ್ಷಪ್ರೀತಿಸಂಹೃಷ್ಟಾ ಬಾಂಧವಾ ಯದುಪಾಂಡವಾಃ । ಅಥಾನ್ಯದಪಿ ಕೃಷ್ಣಸ್ಯ ವಾ

---

ಸಂತೀ-ನಗುತಿರುವಳೂ ಆಗಿ, ಚಕಮೇ-ಬಯಸಿದಳು ॥೭॥ ತಾಂ-ಆಕೆಯನ್ನು, ಪರಂ-ಅಧಿಕವಾಗಿ, ಸಮಭಿಧ್ಯಾಯನ್-ಚಿಂತಿಸುವ ನಾದ್ದರಿಂದ, ಅಂತರಂ-ಅವಕಾಶವನ್ನು, ಪ್ರೇಪ್ಸುಃ-ಅಧಿಕವಾಗಿ ಬಯಸುತ್ತಿರುವನಾದ, ಅರ್ಜುನಃ-ವಿಜಯನು, ಅತಿಬಲೀಯಸಾ-ಅತ್ಯಂತಬಲಿಷ್ಠವಾದ, ಕಾಮೇನ-ಬಯಕೆಯಿಂದ, ಭ್ರಮಚ್ಚಿತ್ತಃ-ಚಂಚಲ ಹೃದಯನಾಗಿ, ಶಂ-ಸುಖವನ್ನು, ನಲೇಭೇ-ಪಡೆಯಲಿಲ್ಲವು ॥೮॥ ಮಹತ್ಯಾಂ-ಅಧಿಕವಾದ, ದೇವಯಾತ್ರಾಯಾಂ-ದೇವರದರ್ಶನಕ್ಕೆ ಹೋಗುವಉತ್ಸವದಲ್ಲಿ, ರಥಸ್ಥಾಂ-ತೇರಿನಲ್ಲಿ ಕುಳಿತವಳೂ, ದುರ್ಗನಿರ್ಗತಾಂ-ಕೋಟೆಯಿಂದ ಹೊರಗೆಬಂದವಳೂ ಆದ ಸುಭದ್ರೆಯನ್ನು, ಮಹಾರಥಃ-ರಥಿಕರಲ್ಲಿ ಶೂರನಾದ ಅರ್ಜುನನು, ಪಿತ್ರೋಃ-ದೇವಕೀವಸುದೇವರ, ಕೃಷ್ಣಸ್ಯಚ-ಕೃಷ್ಣನ, ಅನುಮತಃ-ಒಪ್ಪಿಗೆಯುಂಟಾದವನಾಗಿ, ಜಹಾರ-ಅಪಹರಿಸಿದನು ॥೯॥ ರಥಸ್ಥಃ-ತೇರಿನಲ್ಲಿ ಕುಳಿತವನಾದ ಅರ್ಜುನನು, ಧನುಃ-ಬಿಲ್ಲನ್ನೂ ಶರಾಂಶ್ಚ-ಅಂಬುಗಳನ್ನೂ, ಆದಾಯ-ತೆಗೆದುಕೊಂಡು, ಆರುಂಧತಃ-ಸುತ್ತಲೂ ತಡೆಗಟ್ಟಿದ, ಭಟಾನ್-ದಂಡಿನಆಳುಗಳನ್ನು, ವಿದ್ರಾವ್ಯ-ಓಡಿಸಿ, ಸ್ವಾನಾಂ-ತನ್ನವರು, ಕ್ರೋಶತಾಂಸತಾಂ-ಕೂಗಿಕೊಳ್ಳುವರಾಗುತ್ತಿರುವಲ್ಲಿ, ಮೃಗರಾಟ್-ಸಿಂಹವು, ಸ್ವಭಾಗಮಿವ-ತನ್ನ ಆಹಾರವನ್ನೊಯ್ಯುವಂತೆ, ಸುಭದ್ರೆಯನ್ನೊಯ್ದನು ॥೧೦॥ ತತ್-ಅದರನ್ನು, ಶ್ರುತ್ವಾ-ಕೇಳಿ, ಪರ್ವಣಿ ಪೂರ್ಣಿಮಾಕಾಲದಲ್ಲಿ, ಮಹಾರ್ಣವಇವ-ಸಮುದ್ರದಂತೆ, ಕ್ಷುಭಿತಃ-ಉಕ್ಕಿದವನಾದ, ರಾಮಃ-ಬಲದೇವನು, ಕೃಷ್ಣೇನ-ಕೃಷ್ಣನಿಂದಲೂ, ಸುಹೃದ್ಭಿಶ್ಚ-ಸ್ನೇಹಿತರಿಂದಲೂ, ಗೃಹೀತಪಾದಃ-ಹಿಡಿಯಲ್ಪಟ್ಟ ಕಾಲುಗಳುಳ್ಳವನಾಗಿ, ಅನ್ವಶಾಮ್ಯತ-ಕೂಡಲೇಸಮಾಧಾನ ಗೊಂಡನು ॥೧೧॥ ಬಲಃ-ರಾಮನು, ಮುದಾ-ಸಂತೋಷದಿಂದ, ವರವಧ್ವೋಃ-ಗಂಡಿಗೂಹೆಣ್ಣಿಗೂ, ಮಹಾಧನೋಪಸ್ಕರ-ಹೆಚ್ಚುಬೆಲೆಯುಳ್ಳಸಾಮಗ್ರಿಗಳೂ, ಇಭರಥಾಶ್ವವರಯೋಷಿತಃ-ಆನೆಗಳು ತೇರುಗಳು ಕುದುರೆಗಳು ಮೇಲಾದಹೆಂಗಳುಗಳನ್ನು, ಪಾರಿಬರ್ಹಾಣಿ-ಬಳವಳ್ಳಿಯವಸ್ತುಗ

---

ಳುಅರ್ಜುನನ ಸೌಂದರ್ಯದಿಂದಲೂ ಮರುಳಾಗಿ ಅವನಲ್ಲಿ ಮನಸ್ಸನ್ನಿರಿಸಿ ಲಜ್ಜಾಯುಕ್ತವಾದ ಮುಗುಳುನಗೆಯುಳ್ಳ ಕಡೆಗಣ್ಣನೋಟಂಗಳುಳ್ಳವಳಾಗಿ ಆತನನಪೇಕ್ಷಿಸಿದಳು ॥೭॥ ಅನಂತರದಲ್ಲಿ ಆಯರ್ಜುನನು ಆಸುಭದ್ರೆಯನ್ನೇ ನಿರಂತರದಲಿಯೂ ಧ್ಯಾನಿಸುತ್ತ ಅಪಹರಿಸಿಕೊಂಡು ಹೋಗುವುದಕ್ಕೆ ಸಮಯವನ್ನೇ ನಿರೀಕ್ಷಿಸುವನಾಗಿ ಅತ್ಯಂತ ಕಠಿನಂಗಳಾದ ಕಾಮಬಾಣಂಗಳಿಂದ ವ್ಯಥೆಪಡಿಸಲ್ಪಟ್ಟ ಮನಸ್ಸುಳ್ಳವನಾಗಿ ಚಿತ್ತಸ್ವಾಸ್ಥ್ಯವನೈದಲಿಲ್ಲ ॥೮॥ ಮಹಾರಥನಾದ ಅರ್ಜುನನು ಮಹತ್ತಾದ ದೇವಯಾತ್ರೆಯಲ್ಲಿ ರಥದಲ್ಲಿ ಕುಳಿತು ಹೊರಕ್ಕೆಹೊರಟಂತಹ ಸುಭದ್ರೆಯಂ ದೇವಕೀ ವಸುದೇವ ಕೃಷ್ಣರ ಸಮ್ಮತಿಯಿಂದಪಹರಿಸಿದನು ॥೯॥ ರಥದಲ್ಲಿ ಕುಳಿತುಕೊಂಡು ಅರ್ಜುನನು ಮಾರ್ಗದಲ್ಲಿ ತಡೆಯಲೋಸುಗ ಬಂದ ಭಟರಂ ಮಹಾಧನುಸ್ಸಿನಿಂದ ಬಿಡಲ್ಪಟ್ಟ ಬಾಣಂಗಳಿಂದ ಪ್ರಹರಿಸಿ ಪಲಾಯನಂಗೈಸಿ ಇನ್ನುಳಿದಿತರರಾದ ಯಾದವರು ಓಡುತ್ತಿರಲು ಸಿಂಹವು ತನ್ನ ವಸ್ತುವನಪಹರಿಸಿದಂತೆ ಸುಭದ್ರೆಯನಪಹರಿಸಿದನು ॥೧೦॥ ಅನಂತರದಲ್ಲಿ ಅರ್ಜುನನಿಂದ ಅಪಹರಿಸಲ್ಪಟ್ಟ ಸುಭದ್ರೆಯಂ ಕೇಳಿ ಬಲಭದ್ರನು ಕೋಪದಿಂದ ಕಲುಷಚಿತ್ತನಾಗಿ ಪರ್ವಕಾಲದಲ್ಲಿ ಮಹಾಸಮುದ್ರದಂತೆ ಮೊರೆದೇಳಲು, ಶ್ರೀಕೃಷ್ಣನು ಬಲರಾಮನ ಪಾದಂಗಳಂಪಿಡಿದು ಸಮಾಧಾನಂಗೆಯ್ಯುತ್ತಿರಲು, ಬಂಧುಗಳು ಸಹ ಪ್ರೊಡಂಬಡಿಸುತ್ತಿರಲಾಗಿ ಕೋಪವಂಬಿಟ್ಟು ಶಾಂತನಾದನು ॥೧೧॥ ಆಗ ಬಲಭದ್ರನು ಸಂತೋಷದಿಂದ ವಧೂವರರಿಗೆ ಉಡುಗೊರೆಗಳಂ ಅ

ತ್ಸಲ್ಯಂ ಭಕ್ತಯೋಶ್ಶೃಣು ॥೧೩॥ ಕೃಷ್ಣಸ್ಯಾಸೀತ್ಸಖಾಕಶ್ಚಿಚ್ಛ್ರುತದೇವ ಇತಿ ಶ್ರುತಃ। ಕೃಷ್ಣೈಕಭ
ಕ್ತ್ಯಾ ಪೂರ್ಣಾರ್ಥಶ್ಶಾಂತಃ ಕವಿರಲಂಪಟಃ ॥೧೪॥ ಸ ಉವಾಸ ವಿದೇಹೇಷು ಮಿಥಿಲಾಯಾಂ ಗೃಹಾಶ್ರಮೀ।
ಅನೀಹಯಾಗತಾಹಾರ್ಯನಿರ್ವರ್ತಿತನಿಜಕ್ರಿಯಃ ॥೧೫॥ ಯಾತ್ರಾಮಾತ್ರಂ ತ್ವಹರಹರ್ದೈವಾದುಪನ
ತಂ ಚ ಯತ್। ನಾಧಿಕಂ ತಾವತಾ ತುಷ್ಟಃ ಕ್ರಿಯಾಶ್ಚಕ್ರೇ ಯಥೋದಿತಾಃ ॥೧೬॥ ತಥಾ ತದ್ರಾಷ್ಟ್ರಪಾಲೋಂ
ಗ ಬಹುಲಾಶ್ವ ಇತಿ ಶ್ರುತಃ। ಮೈಥಿಲೋ ನಿರಹಂಮಾನ ಉಭಾವಪ್ಯಚ್ಯುತಪ್ರಿಯೌ ॥೧೭॥ ತಯೋಃ ಪ್ರ
ಸನ್ನೋ ಭಗವಾನ್ ದಾರುಕೇಣಾಹೃತಂ ರಥಂ। ಆರುಹ್ಯ ಸಾಕಂ ಮುನಿಭಿರ್ವಿದೇಹಾನ್ ಪ್ರಯಯೌ ಪ್ರ
ಭುಃ ॥೧೮॥ ನಾರದೋ ವಾಮದೇವೋಽತ್ರಿಃ ಕೃಷ್ಣೋ ರಾಮೋಽಸಿತೋಽರುಣಿಃ। ಅಹಂ ಬೃಹಸ್ಪತಿಃ ಕಣ್ವೋ ಮೈ

---

ಳನ್ನಾಗಿ, ಪ್ರಾಹಿಣೋತ್-ಕಳುಹಿದನು ॥೧೨॥ ಬಾಂಧವಾಃ ನಂಟರಾದ, ಯದುಪಾಂಡವಾಃ-ಯಾದವರೂ ಪಾಂಡವರೂ. ಪ್ರೀ
ತಿಸಂಹೃಷ್ಟಾಃ-ಪ್ರೇಮವೂ ಸಂತೋಷವೂ ಹುಟ್ಟಿದವರು, ಅಭವನ್-ಆದರು. ಅಥ-ಅನಂತರದಲ್ಲಿ, ಭಕ್ತಯೋಃ-ಸೇವಕರೀ
ರ್ವರಲ್ಲುಂಟಾದ, ಕೃಷ್ಣಸ್ಯ ವಾತ್ಸಲ್ಯಂ ಅನ್ಯದಪಿ-ಕೃಷ್ಣನ ಮತ್ತೊಂದು ದಯಾಕಾರ್ಯವನ್ನೂ, ಶೃಣು-ಕೇಳು ॥೧೩॥ ಶ್ರುತಃ-
ಶ್ರುತದೇವನೆಂದು ಪ್ರಸಿದ್ಧನು, ಕೃಷ್ಣೈಕಭಕ್ತ್ಯಾ-ಕೃಷ್ಣನಲ್ಲಿ ಮುಖ್ಯಪ್ರೀತಿಯಿಂದ, ಪೂರ್ಣಾರ್ಥಃ-ತುಂಬಿದ ಮನೋರಥವು
ಳ್ಳವನೂ, ಶಾಂತಃ-ನಿರ್ಮಲಹೃದಯನೂ, ಕವಿಃ-ಪಂಡಿತನು, ಅಲಂಪಟಃ-ಆಶೆಇಲ್ಲದವನು, ಆದ, ಕೃಷ್ಣಸ್ಯ-ಕೃಷ್ಣನ, ಸಖಾ-ಸ್ನೇಹಿ
ತನು, ಆಸೀತ್-ಆಗಿದ್ದನು ॥೧೪॥ ಸಃ-ಅವನು, ವಿದೇಹೇಷು-ವಿದೇಹದೇಶಂಗಳಲ್ಲಿ, ಮಿಥಿಲಾಯಾಂ-ಮಿಥಿಲಾಪುರದಲ್ಲಿ, ಗೃಹಾಶ್ರಮೀ-ಗೃ
ಹಸ್ಥಾಶ್ರಮವುಳ್ಳವನು, ಅನೀಹಯಾ-ಅನಪೇಕ್ಷೆಯಿಂದ, ಆಗತಾಹಾರ್ಯನಿರ್ವರ್ತಿತನಿಜಕ್ರಿಯಃ-ಬಂದ ಆಹಾರದಿಂದ ನೆರವೇರಿಸಲ್ಪ
ಟ್ಟ ತನ್ನ ಕೆಲಸಗಳುಳ್ಳವನೂ ಆಗಿ, ಉವಾಸ-ಇರುತಿದ್ದನು ॥೧೫॥ ಅಹರಹಃ-ಪ್ರತಿಹಗಲಿನಲ್ಲಿಯೂ, ದೈವಾತ್-ಅದೃಷ್ಟದವಶೆಯಿಂದ,
ಯಾತ್-ಯಾವುದು, ಉಪನತಂ-ತನ್ನ ಬಳಿಗೆ ಬರುವುದೋ, ಯಾತ್ರಾಮಾತ್ರಂ-ದೇಹರಕ್ಷಣದ ಕಾಲಕ್ಷೇಪಕ್ಕೆ ತಕ್ಕಷ್ಟೇ ಗ್ರಹಿಸು
ವನಾಗಿ, ನಾಧಿಕಂ-ಹೆಚ್ಚು ಗ್ರಹಿಸದೆ, ತಾವತಾ-ಅಷ್ಟರಿಂದಲೇ, ತುಷ್ಟಃ-ತೃಪ್ತಿಹುಟ್ಟಿದವನಾಗಿ, ಯಥೋದಿತಾಃ-ವೇದೋಕ್ತ
ವನ್ನತಿಕ್ರಮಿಸದೆ, ಕ್ರಿಯಾಃ-ನಿತ್ಯಕರ್ಮಗಳನ್ನು, ಚಕ್ರೇ-ಮಾಡಿದನು ॥೧೬॥ ಅಂಗ-ಅಯ್ಯಾ ಪರೀಕ್ಷಿತನೇ, ತಥಾ-ಹಾಗೆ, ತದ್ರಾ
ಷ್ಟ್ರಪಾಲಃ-ಆ ರಾಜ್ಯವಂ ಪಾಲಿಸುವನಾದ, ಬಹುಲಾಶ್ವ ಇತಿ ಶ್ರುತಃ-ಬಹುಲಾಶ್ವನೆಂದು ಪ್ರಸಿದ್ಧನಾದ ಮೈಥಿಲಃ-ಮಿಥಿಲರಾಯ
ನು, ನಿರಹಂಮಾನಃ-ಅಹಂಕಾರವಿಲ್ಲದವನಾಗಿದ್ದನು. ಉಭಾವಪಿ-ಆ ಬ್ರಾಹ್ಮಣನೂ ರಾಜನೂ, ಅಚ್ಯುತಪ್ರಿಯೌ-ಕೃಷ್ಣಂಗೆ
ಯಿಷ್ಟರಾದವರು ॥೧೭॥ ತಯೋಃ-ಅವರೀರ್ವರಲ್ಲಿ, ಪ್ರಸನ್ನಃ-ಪ್ರಸಾದಹುಟ್ಟಿದ, ಭಗವಾನ್-ಕೃಷ್ಣನು, ಪ್ರಭುಃ- ಸ್ವತಂತ್ರ
ನಾದ್ದರಿಂದ, ದಾರುಕೇಣ-ಸಾರಥಿಯಿಂದ, ಆಹೃತಂ-ತರಲ್ಪಟ್ಟ, ರಥಂ-ತೇರನ್ನು, ಆರುಹ್ಯ-ಏರಿ, ಮುನಿಭಿಸ್ಸಾಕಂ- ಮಹರ್ಷಿ
ಗಳೊಡನೆ, ವಿದೇಹಾನ್-ವಿದೇಹದೇಶಗಳನ್ನು ಕುರಿತು, ಪ್ರಯಯೌ-ತೆರಳಿದನು ॥೧೮॥ ನಾರದನು, ವಾಸುದೇವನು, ಅತ್ರಿಯು,

---

ಮೂಲ್ಯಂಗಳಾದ ಭೋಗೋಪಕರಣಂಗಳಂ ಗಜಾಶ್ವರಥಗಳಿಂದ ದಾಸಿಯರಂ ಸಹ ಕಳುಹಿಸಿದನು ॥೧೨॥ ಅನಂ
ತರದಲ್ಲಿ ಬಾಂಧವರಾದ ಯದುಶ್ರೇಷ್ಠರು ಸಂತೋಷಪಟ್ಟರು. ಎಲೈ ಅರಸೇ! ಕೃಷ್ಣನಿಗೆ ಭಕ್ತರಲ್ಲಿಯಿರುವ
ವಾತ್ಸಲ್ಯವ ಕೇಳು ॥೧೩॥ ಶ್ರೀಕೃಷ್ಣನಲ್ಲಿ ಭಕ್ತಿಮಾತ್ರದಿಂದಲೇ ಪೂರ್ಣವಾದ ಮನೋರಥವುಳ್ಳವನಾದ, ಶಾಂ
ತನಾದ, ಜ್ಞಾನಿಯಾದ, ವಿಷಯಲಂಪಟನಲ್ಲದ, ಶ್ರುತದೇವನೆಂಬ ಶ್ರೀಕೃಷ್ಣನ ಭಕ್ತನಾದ ಬ್ರಾಹ್ಮಣನೋರ್ವ
ನಿರುವನು ॥೧೪॥ ಗೃಹಸ್ಥಾಶ್ರಮಿಯಾಗಿ ಯತ್ನದಿಂದಲೇ ಪ್ರಾಪ್ತವಾದ ದೇಹಧಾರಣಮಾತ್ರೋಪಯುಕ್ತವಾದ ವ
ಸ್ತುವಿನಿಂದ ಜೀವನವಂ ಮಾಡಿಕೊಂಡು ಸತ್ಕರ್ಮಂಗಳಂ ನಿರ್ವಹಿಸಿಕೊಂಡಿರುವ ಆ ಬ್ರಾಹ್ಮಣನು ವಿದೇಹದೇ
ಶಗಳಲ್ಲಿ ಮಿಥಿಲಾಪುರದಲ್ಲಿ ವಾಸಂಗೆಯ್ದನು ॥೧೫॥ ಶರೀರಧಾರಣಮಾತ್ರಕ್ಕೆ ಸಾಧನವಾಗಿ ದೈವವಶದಿಂದ ಅಯ
ತ್ನಲಬ್ಧವಾಗಿ ಬಂದ ವಸ್ತುವನಪೇಕ್ಷಿಸಿ ಅದಕ್ಕಿಂತಲಧಿಕವನಪೇಕ್ಷಿಸದೆ ಅಷ್ಟುಮಾತ್ರದಿಂದಲೇ ಸಂತುಷ್ಟನಾ
ಗಿ ಪುರುಷೋತ್ತಮನಿಗೆ ಸಂತೋಷಕರಂಗಳಾದ ಸತ್ಕರ್ಮಂಗಳಂ ಮಾಡಿದನು ॥೧೬॥ ಎಲೈ, ಪರೀಕ್ಷಿದ್ರಾಯ
ನೇ! ಕೇಳು, ಅದೇಪ್ರಕಾರವಾಗಿ ಆದೇಶಕ್ಕೆ ಅಧಿಪತಿಯಾದ ಬಹುಳಾಶ್ವನೆಂಬ ಪ್ರಸಿದ್ಧನಾದ ಅಹಂಕಾರರಹಿತ
ನಾದ ಭಗವದ್ಭಕ್ತನಾದ ಅರಸನೊಬ್ಬನಿರುವನು. ಆ ಯಿಬ್ಬರೂ ಅಚ್ಯುತನಿಗೆ ಪ್ರಿಯರಾದವರು ॥೧೭॥ ಅವರೀ
ರ್ವರಿಗೂ ಪ್ರಸನ್ನನಾದ ಭಗವಂತನಾದ ಶ್ರೀಕೃಷ್ಣನು ದಾರುಕನಿಂದ ತರಲ್ಪಟ್ಟ ರಥವ ನಾರೋಹಣಂಗೆಯ್ದು
ಮುನಿಜನರೊಡನೆ ವಿದೇಹದೇಶಂಗಳಂ ಕುರಿತು ಹೊರಟನು ॥೧೮॥ ನಾರದನು, ವಾಮದೇವನು, ಅತ್ರಿಯು, ವ್ಯಾ

ತ್ರ್ಯಾರುಣ್ಯಶ್ಚ್ಯವನಾದಯಃ ॥೧೯॥ ತತ್ರ ತತ್ರ ತಮಾಯಾಂತಂ ಪೌರಜಾನಪದಾ ನೃಪಾಃ । ಉತ್ತಸ್ಥುಸ್ತೇ ಸ್ವಾರ್ಘ್ಯಹಸ್ತಾಸ್ತೇ ಲೋಕಾಃ ಸೂರ್ಯಮಿವೋದಿತಮ್ ॥೨೦॥ ಆನರ್ತಧನ್ವಕುರುಜಾಂಗಲವಂಗಮತ್ಸ್ಯಪಾಂಚಾಲಕುಂತಿಮಧುಕೇಕಯಕೋಸಲಾರ್ಣಾಃ । ಅನ್ಯೇ ಚ ತನ್ಮುಖಸರೋಜಮುದಾರಹಾಸಸ್ನಿಗ್ಧೇಕ್ಷಣಂ ನೃಪ ಪಪುರ್ದೃಶಿಭಿರ್ನೃನಾರ್ಯಃ ॥೨೧॥ ತೇಭ್ಯಸ್ಸ್ವವೀಕ್ಷಣವಿನಷ್ಟತಮಿಸ್ರದೃಗ್ಭ್ಯಃ ಕ್ಷೇಮಂ ತ್ರಿಲೋಕಗುರುರರ್ಥದೃಶಂ ಚ ಯಚ್ಛನ್ । ಶೃಣ್ವನ್ ದಿಗಂತಧವಳಂ ಸ್ವಯಶೋಽಶುಭಘ್ನಂ ಗೀತಂ ಸುರೈರ್ನೃಭಿರಗಾಚ್ಛನಕೈರ್ವಿದೇಹಾನ್ ॥೨೨॥ ತೇಽಚ್ಯುತಂ ಪ್ರಾಪ್ತಮಾಕರ್ಣ್ಯ ಪೌರಜಾನಪದಾ ನೃಪಾಃ ।

ಕೃಷ್ಣಃ-ವ್ಯಾಸನು, ರಾಮಃ-ಪರಶುರಾಮನು, ಅಸಿತನು, ಆರುಣನು ಅಹಂ-ನಾನು, (ಶುಕನು) ಬೃಹಸ್ಪತಿಯು, ಕಣ್ವನು, ಮೈತ್ರೇಯನು, ಚ್ಯವನನು, ಮೊದಲಾದವರು-ಹೋಗಿದ್ದೆವು ॥೧೯॥ ತತ್ರ ತತ್ರ-ಅಲ್ಲಲ್ಲಿ, ಆಯಾಂತಂ-ಬರುತ್ತಿರುವ, ತಂ-ಆ ಕೃಷ್ಣನನ್ನು, ಉದಿತಂ ಸೂರ್ಯಮಿವ-ಮೂಡಿದ ಸೂರ್ಯನಂತೆ, ನೋಡಿ, ಪೌರಜಾನಪದಾಃ-ನಾಗರಿಕರೂ ನಾಡಿಗರೂ, ನೃಪಾಃ- ಅರಸರೂ, ತೇ ಲೋಕಾಃ ಆ ಜನಂಗಳೂ, ಸಾರ್ಘ್ಯಹಸ್ತಾಃ-ಪೂಜಾದ್ರವ್ಯಂಗಳು ಕೈಗಳಲ್ಲಿ ಉಳ್ಳವರಾಗಿ, ಉತ್ತಸ್ಥುಃ-ಎದ್ದು ನಿಂತರು ॥೨೦॥ ನೃಪ-ಪರೀಕ್ಷಿದ್ರಾಜನೇ, ಆನರ್ತ-ಧನ್ವ-ಕುರು-ಜಾಂಗಲ-ವಂಗ-ಮತ್ಸ್ಯ-ಪಾಂಚಾಲ-ಕುಂತಿ-ಮಧು-ಕೇಕಯ-ಕೋಸಲ-ಆರ್ಣಾಃ ಎಂಬ ದೇಶಗಳವರೂ, ಅನ್ಯೇ ಚ-ಇತರರೂ ಆದ, ನೃನಾರ್ಯಃ-ಪುರುಷರೂ ಸ್ತ್ರೀಯರೂ, ಉದಾರಹಾಸಸ್ನಿಗ್ಧೇಕ್ಷಣಂ- ಉದಾರವಾದ ನಗೆಯೂ ಸ್ನೇಹವೂ ನೋಟವೂ ಉಳ್ಳ, ತನ್ಮುಖಸರೋಜಂ-ಆ ಕೃಷ್ಣನ ಮುಖವನ್ನು, ದೃಶಿಭಿಃ-ದೃಷ್ಟಿಗಳಿಂದ, ಪಪುಃ-ಕುಡಿದರು ॥೨೧॥ ತ್ರಿಲೋಕಗುರುಃ-ಮೂರು ಲೋಕಕ್ಕೊಡೆಯನಾದ ಕೃಷ್ಣನು, ಸ್ವವೀಕ್ಷಣವಿನಷ್ಟತಮಿಸ್ರದೃಗ್ಭ್ಯಃ-ಸ್ವ-ತನ್ನ, ಈಕ್ಷಣ-ದೃಷ್ಟಿಯಿಂದ, ವಿನಷ್ಟ-ಬಿಟ್ಟುಹೋದ, ತಮಿಸ್ರ-ಕತ್ತಲುಳ್ಳ, ದೃಗ್ಭ್ಯಃ-ದೃಷ್ಟಿಯುಳ್ಳ, ತೇಭ್ಯಃ-ಆ ಜನಂಗಳಿಗೆ, ಕ್ಷೇಮಂ-ಅಭಯವನ್ನೂ, ಅರ್ಥದೃಶಂ ಚ-ತತ್ವಜ್ಞಾನವನ್ನೂ, ಯಚ್ಛನ್-ಕೊಡುತ್ತಲಿರುವನೂ, ಅಶುಭಘ್ನಂ-ಅಮಂಗಳವನ್ನು ನಾಶಮಾಡುವುದಾದ್ದರಿಂದ, ಸುರೈಃ-ದೇವರ್ಕಳಿಂದಲೂ, ನೃಭಿಃ-ಮನುಷ್ಯರಿಂದಲೂ, ಗೀತಂ-ಹಾಡಲ್ಪಟ್ಟಂಥಾ, ದಿಗಂತಧವಳಂ-ದಿಕ್ಕುಗಳ ಕೊನೆಗಳಲ್ಲಿ ಬೆಳಗುತ್ತಿರುವಂಥಾ, ಸ್ವಯಶಃ-ತನ್ನ ಕೀರ್ತಿಯನ್ನು, ಶೃಣ್ವನ್-ಕೇಳುತಲಿರುವವನಾಗಿ, ಶನಕೈಃ-ಮೆಲ್ಲಗೆ ವಿದೇಹಾನ್-ವಿದೇಹದೇಶಗಳನ್ನು, ಅಗಾತ್ ಸೇರಿದನು ॥೨೨॥ ತೇ-ಅಲ್ಲಿರುವಂಥಾ, ಪೌರಜಾನಪದಾಃ-ನಾಗರಿಕರೂ ದೇಶದ ಪ್ರಜೆಗಳೂ, ನೃಪಾಃ-ಅರಸುಗಳೂ, ಅಚ್ಯುತಂ-ಕೃಷ್ಣನನ್ನು, ಪ್ರಾಪ್ತಂ-ಬಂದವನನ್ನಾಗಿ, ಆಕರ್ಣ್ಯ-ಕೇಳಿ, ಮುದಿತಾಃ-ಸಂತೋಷಹುಟ್ಟಿದವರಾದ್ದರಿಂದ, ತಸ್ಮೈ-ಆ ಕೃಷ್ಣನಿಗೋಸುಗ, ಗೃಹೀತಾರ್ಹಣಪಾಣಯಃ-ಹಿಡಿಕೊಳ್ಳಲ್ಪಟ್ಟ ಕಾಣಿಕೆಗಳುಳ್ಳ ಕೈಗಳುಳ್ಳವರಾಗಿ, ಅಭೀಯುಃ-ಇದಿರ್ಗೊಂಡರು ॥೨೩॥ ಉತ್ತಮಶ್ಲೋಕಂ-ಸರ್ವೋತ್ತಮನೆಂದು ಕೊಂಡಾಡಲ್ಪಟ್ಟವನಾದ, ತಂ-ಆ

ಸನು, ಭಾರ್ಗವರಾಮನು, ಅಸಿತನು, ಅರಣಿಯು, ಬೃಹಸ್ಪತಿಯು, ನಾನು, ಕಣ್ವನು, ಮೈತ್ರೇಯನು, ಚ್ಯವನನು, ಮೊದಲಾದ ಋಷಿಗಳು ॥೧೯॥ ಈ ಮಹರ್ಷಿಗಳಿಂದ ಸಹಿತನಾಗಿ ಶ್ರೀಕೃಷ್ಣನು ಮಾರ್ಗದಲ್ಲಿ ಹೋಗುತ್ತಿರಲಾಗಿ ಆಯಾ ದೇಶದಲ್ಲಿರುವ ಜನರು ಆಯಾ ದೊರೆಗಳು ಸಹ ಕಾಣಿಕೆಗಳಂ ತೆಗೆದುಕೊಂಡು ಮಹಾತ್ಮನಾದ ಸೂರ್ಯನ ನಿದಿರ್ಗೊಂಡಂತೆ ಶ್ರೀಕೃಷ್ಣನ ನಿದಿರ್ಗೊಂಡು ಪೂಜಿಸಿದರು ॥೨೦॥ ಆನರ್ತ ಧನ್ವ ಕುರು ಜಾಂಗಲ ಟಂಕ ಮತ್ಸ್ಯ ಪಾಂಚಾಲ ಕುಂತಿ ಮಧು ಕೇಕಯ ಕುಂತಲ ಮೊದಲಾದ ದೇಶಂಗಳಲ್ಲಿರುವ ಜನರೂ, ಇನ್ನೂ ಇತರರಾದ ಸ್ತ್ರೀಯರೂ ಪುರುಷರೂ ಸಹ ಗಂಭೀರವಾದ ನೇತ್ರವುಳ್ಳ ಮುಗುಳುನಗೆಯಿಂದ ಮನೋಹರವಾದ ಶ್ರೀಕೃಷ್ಣನ ಮುಖಪದ್ಮವಂ ನೇತ್ರಗಳಿಂದ ಪಾನಂ ಗೆಯ್ವರಂತೆ ನೋಡಿದರು ॥೨೧॥ ತನ್ನ ದರ್ಶನಮಾತ್ರದಿಂದಲೇ ನಷ್ಟವಾದ ಅಜ್ಞಾನವೆಂಬ ಅಂಧಕಾರದೃಷ್ಟಿಯುಳ್ಳ ಅವರಿಗೋಸುಗ ಅಭಯವಂ ತತ್ವಜ್ಞಾನವಂ ಸಹ ಕೊಡುವನಾಗಿ ಸುರನರರಿಂದ ಗಾನಂಗೆಯ್ಯಲ್ಪಡುತಲಿರುವ ದಿನಂತವ್ಯಾಪ್ತವಾದ ಶುದ್ಧವಾದ ಅಶುಭಪರಿಹಾರಕವಾದ ತನ್ನ ಕೀರ್ತಿಯಂ ಕೇಳುವನಾಗಿ ಮೆಲ್ಲಮೆಲ್ಲನೆ ವಿದೇಹದೇಶಂಗಳ ನೆಯ್ದಿದನು ॥೨೨॥ ಅಲ್ಲಿರುವ ಪುರಜನರೂ ದೇಶವಾಸಿಗಳೂ ಅರಸುಗಳೂ ಸಹ ಶ್ರೀಕೃಷ್ಣನು ಬಂದನೆಂದು ಕೇಳಿ ಪೂಜಾದ್ರವ್ಯಂಗಳಂ ಕೈಗಳಲ್ಲಿ ತೆಗೆದುಕೊಂ

ಅಭೀಯುರ್ಮುದಿತಾಸ್ತಸ್ಮೈ ಗೃಹೀತಾರ್ಹಣಪಾಣಯಃ ‖೨೩‖ ದೃಷ್ಟ್ವಾ ತಮುತ್ತಮಶ್ಲೋಕಂ ಪ್ರೀತ್ಯುತ್ಫುಲ್ಲಾನನಾಶಯಾಃ । ಕೈರ್ಧೃತಾಂಜಲಿಭಿರ್ನೇಮುಶ್ಶ್ರುತಪೂರ್ವಾಂಸ್ತಥಾ ಮುನೀನ್ ‖೨೪‖ ಸ್ವಾನುಗ್ರಹಾಯ ಸಂಪ್ರಾಪ್ತಂ ಮನ್ವಾನೌ ತಂ ಜಗದ್ಗುರುಂ । ಮೈಥಿಲಶ್ಶ್ರುತದೇವಶ್ಚ ಪಾದಯೋಃ ಪೇತತುಃ ಪ್ರಭೋಃ ‖೨೫‖ ನ್ಯಮಂತ್ರಯೇತಾಂ ದಾಶಾರ್ಹಮಾತಿಥ್ಯೇನ ಸಹ ದ್ವಿಜೈಃ । ಮೈಥಿಲಶ್ಶ್ರುತದೇವಶ್ಚ ಯುಗಪತ್ಸಂಹತಾಂಜಲೀ ‖೨೬‖ ಭಗವಾಂಸ್ತದಭಿಪ್ರೇತ್ಯ ದ್ವಯೋಃ ಪ್ರಿಯಚಿಕೀರ್ಷಯಾ । ಉಭಯೋರಾವಿಶದ್ಗೇಹಮುಭಾಭ್ಯಾಂ ತದಲಕ್ಷಿತಃ ‖೨೭‖ ಶ್ರೋತುಮಪ್ಯಸತಾಂ ದೂರಾನ್ ಜನಕಸ್ಸ್ವಗೃಹಾ

---

ಕೃಷ್ಣನನ್ನು, ದೃಷ್ಟ್ವಾ-ಕಂಡು, ಪ್ರೀತ್ಯುತ್ಫುಲ್ಲಾನನಾಶಯಾಃ-ಪ್ರೇಮದಿಂದ ಅರಳಿದ ಮುಖವೂ ಮನಸ್ಸೂ ಉಳ್ಳವರಾಗಿ, ಧೃತಾಂಜಲಿಭಿಃ-ಧರಿಸಲ್ಪಟ್ಟ ಬಗಸೆಗಳುಳ್ಳ, ಕೈಃ-ಶಿರಸ್ಸುಗಳಿಂದ, ನೇಮುಃ-ನಮಸ್ಕರಿಸಿದರು ‖ ತಥಾ-ಹಾಗೆ, ಶ್ರುತಪೂರ್ವಾನ್-ಪೂರ್ವದಲ್ಲಿ ಕೇಳಲ್ಪಟ್ಟ ಪ್ರಸಿದ್ಧರಾದ, ಮುನೀನ್ ಚ-ಋಷಿಗಳನ್ನೂ ನಮಸ್ಕರಿಸಿದರು ‖೨೪‖ ಸ್ವಾನುಗ್ರಹಾಯ-ತಮ್ಮನ್ನನ್ನುಗ್ರಹಿಸಲೋಸುಗ, ತಂ ಜಗದ್ಗುರುಂ-ಆ ಕೃಷ್ಣನನ್ನು, ಸಂಪ್ರಾಪ್ತಂ-ಬಂದವನನ್ನಾಗಿ, ಮನ್ವಾನೌ-ತಿಳಿದಿರುವರಾದ, ಮೈಥಿಲಃ-ಶ್ರುತದೇವಶ್ಚ-ಮೈಥಿಲರಾಯನೂ, ಶ್ರುತದೇವನೆಂಬ ಬ್ರಾಹ್ಮಣನೂ, ಪ್ರಭೋಃ-ಪರಮೇಶ್ವರನಾದ ಕೃಷ್ಣನ, ಪಾದಯೋಃ-ಅಡಿಗಳಲ್ಲಿ, ಪೇತತುಃ-ಬಿದ್ದರು ‖೨೫‖ ಮೈಥಿಲಸ್ಸೂ ಶ್ರುತದೇವನೂ, ಯುಗಪತ್-ಒಂದೇ ಹೊತ್ತಿನಲ್ಲಿ, ಸಂಹತಾಂಜಲೀ- ಜೋಡಿಸಲ್ಪಟ್ಟ ಕೈಗಳುಳ್ಳವರಾಗಿ, ದ್ವಿಜೈಸ್ಸಹ-ಬ್ರಾಹ್ಮಣರಿಂ ಕೂಡಿದ, ದಾಶಾರ್ಹಂ-ಕೃಷ್ಣನನ್ನು, ಆತಿಥ್ಯೇನ- ಅತಿಥಿಸತ್ಕಾರ ಧರ್ಮದಿಂದ, ನ್ಯಮಂತ್ರಯೇತಾಂ-ಊಟಕ್ಕೆ ಕರೆದರು ‖೨೬‖ ಭಗವಾನ್-ಷಡ್ಗುಣೈಶ್ವರ್ಯಪೂರ್ಣನಾದ ಕೃಷ್ಣನು, ತತ್-ಆ ಯಿಬ್ಬರು ಕರೆದದ್ದನ್ನೂ, ಅಭಿಪ್ರೇತ್ಯ-ಅಂಗೀಕರಿಸಿ, ತಯೋಃ-ಆ, ಮೈಥಿಲಶ್ರುತದೇವರಿರ್ವರಿಗೂ, ಪ್ರಿಯಚಿಕೀರ್ಷಯಾ-ಇಷ್ಟವನ್ನು ಮಾಡಲಪೇಕ್ಷೆಯಿಂದ, ತದಲಕ್ಷಿತಃ-ಅವರಿಂದ ತಿಳಿಯಲ್ಪಡದವನಾಗಿ, ಉಭಾಭ್ಯಾಂ-ಎರಡುರೂಪಗಳೊಡನೆ, ಉಭಯೋಃ ಗೇಹಂ-ಇಬ್ಬರ ಮನೆಯನ್ನೂ, ಆವಿಶತ್-ಪ್ರವೇಶಿಸಿದನು ‖೨೭‖ ಮಹಾಮನಾಃ-ಉದಾರಬುದ್ಧಿಯುಳ್ಳ, ಜನಕಃ-ಮೈಥಿಲರಾಯನು, ಸ್ವಗೃಹಾಗತಾನ್-ತನ್ನ ಮನೆಗೆ ಬಂದಂಥಾ, ಅಸತಾಂ ಶ್ರೋತುಮಪಿ ದೂರಾನ್-ದುಷ್ಟರಿಗೆ ಕೇಳುವುದಕ್ಕೂ ದೂರವಾದಂಥಾ, ಆನೀತೇಷು-ತರಲ್ಪಟ್ಟ ಆಸನಾಗ್ರ್ಯೇಷು-ಶ್ರೇಷ್ಠವಾದ ಗದ್ದುಗೆಗಳಲ್ಲಿ, ಸುಖಾಸೀನಾನ್-ಸಂತೋಷವಾಗಿ ಕುಳಿತಂಥಾ ‖೨೮‖ ಕೃಷ್ಣನನ್ನೂ ಮಹರ್ಷಿಗಳನ್ನೂ, ನತ್ವಾ-ನಮಸ್ಕರಿಸಿ, ಪ್ರವೃದ್ಧಭಕ್ತಿಃ-ಹೆಚ್ಚಿದ ಪ್ರೀತಿಯುಳ್ಳವನೂ, ಉದ್ಧರ್ಷಹೃದಯಃ-ಹೆಚ್ಚು ಸಂತೋಷವುಳ್ಳ ಮನಸ್ಸುಳ್ಳವನೂ, ಅಸ್ರಾವಿಲೇಕ್ಷಣಃ-ಆನಂದಬಾಷ್ಪಗಳಿಂ ಕವಿದಿದ ಕಂಗಳುಳ್ಳವನಾಗಿ, ತದಂಘ್ರೀನ್- ಅ

---

ಡು ಸಂತೋಷದಿಂದ ಆತನ ಇದಿರ್ಗೊಂಡರು ‖೨೩‖ ಉತ್ತಮಪ್ರಿಯನಾದ ಅಚ್ಯುತನಂ ಕಂಡು ಭಕ್ತಿಪ್ರೀತಿಗಳಿಂದ ವಿಕಸಿತಂಗಳಾದ ಮುಖ ಚಿತ್ತಗಳುಳ್ಳವರಾಗಿ ಅಂಜಲೀ ಬಂಧಗಳಂ ಮಾಡಿಕೊಂಡು ಆ ಸಮಸ್ತ ಜನರೂ ಪೂರ್ವದಲ್ಲಿ ಕೇಳಲ್ಪಟ್ಟಿರುವ ಆ ಶ್ರೀ ಹರಿಯುಂ ಮಹಾ ಮುನಿಗಳಂ ಸಹ ಶಿರಸ್ಸಿನಿಂ ನಮಸ್ಕರಿಸಿದರು ‖೨೪‖ ತಮ್ಮನ್ನನುಗ್ರಹಿಸಲೋಸುಗ ದಯ ಮಾಡಿ ಬಂದಂಥಾ ಸರ್ವ ಭೂತಾತ್ಮಕನಾದ ಜಗದ್ಗುರುವಾದ ಶ್ರೀ ಕೃಷ್ಣನಂ ಮಿಥಿಲಾಧಿ ಪತಿಯಾದ ಬಹುಳಾಶ್ವನು ಬ್ರಾಹ್ಮಣೋತ್ತಮನಾದ ಶ್ರುತದೇವನುಸಹ ನಮಸ್ಕರಿಸಿದರು ‖೨೫‖ ಬಳಿಕ ಅವರೀರ್ವರೂ ಕೂಡ ಅಂಜಲಿ ಬಂಧವಂಗೆಯ್ದು ಕೃಷ್ಣನನ್ನೂ ಮಹಾ ಮುನಿಗಳನ್ನೂ ಆತಿಥ್ಯವನಂಗೀ ಕರಿಸ ಬೇಕೆಂದು ಪ್ರಾರ್ಥಿಸಿದರು ‖೨೬‖ ಭಗವಂತನಾದ ಕೃಷ್ಣನು ಅವರ ಪ್ರಾರ್ಥನೆಯನಂಗೀಕರಿಸಿ ಪ್ರಿಯವನಾಚರಿಸ ಬೇಕೆಂದು ಅವರೀರ್ವರಿಗೂ ತಿಳಿಯದಂತೆ ಎರಡು ರೂಪಂಗಳಂ ಧರಿಸಿ ಈರ್ವರ ಮನೆಗೆ ಬಂದನು ‖೨೭‖ ಶ್ರೇಷ್ಠವಾದ ಮನಸ್ಸುಳ್ಳ ಬಹುಳಾಶ್ವನು ಆ ಸಜ್ಜನರ ಶ್ರೋತ್ರ ಮಾರ್ಗಕ್ಕೆ ದೂರವಾದ ತನ್ನ ಮನೆಗೆ ದಯ ಮಾಡಿ ಬಂದ ಶ್ರೀ ಕೃಷ್ಣನೇ ಮುಂತಾದ ಮಹರ್ಷಿಗಳಂ ಇದಿರ್ಗೊಂಡು ಕರೆತಂದು ದಿವ್ಯ ಪೀಠಂಗಳಲ್ಲಿ ಕುಳ್ಳಿರಿಸಿ ‖೨೮‖ ಅಧಿಕವಾದ ಭಕ್ತಿಯಿಂದ ಹರ್ಷವುಳ್ಳವನಾಗಿ ಆನಂದ ಬಾಷ್ಪ ಪೂರ್ಣನೇತ್ರನಾಗಿ ನಮಸ್ಕರಿಸಿ ಅವರ ಪಾದಂಗಳಂ ತೊಳೆದು ಲೋಕ ಪಾವನವಾದ ಆ ಜಲವಂ ‖೨೯‖ ಸಕುಟುಂಬನಾಗಿ ಶಿರ

ಗತಾನ್ । ಆನೀತೇಷ್ವಾಸನಾಗ್ರ್ಯೇಷು ಸುಖಾಸೀನಾನ್ಮಹಾಮನಾಃ॥೨೮॥ ಪ್ರವೃದ್ಧಭಕ್ತ್ಯಾಉದ್ಧರ್ಷ
ಹೃದಯಾಸ್ರಾವಿಲೇಕ್ಷಣಃ । ನತ್ವಾ ತದಂಘ್ರೀನ್ ಪ್ರಕ್ಷಾಲ್ಯ ತದಪೋ ಲೋಕಪಾವನೀಃ ॥೨೯॥ ಸಕುಟುಂ
ಬೋ ವಹನ್ ಮೂರ್ಧ್ನಾ ಪೂಜಯಾಂಚಕ್ರ ಈಶ್ವರಾನ್ । ಗಂಧಮಾಲ್ಯಾಂಬರಾಕಲ್ಪಧೂಪದೀಪಾರ್ಘ್ಯ
ಗೋವೃಷೈಃ ॥೩೦॥ ವಾಚಾ ಮಧುರಯಾ ಪ್ರೀಣನ್ನಿದಮಾಹಾನ್ನತರ್ಪಿತಾನ್ । ಪಾದಾವಂಕಗತೌ ವಿ
ಷ್ಣೋಃ ಸಂಸ್ಪೃಶಂಛನಕೈರ್ಮುದಾ ॥೩೧॥ ಬಹುಲಾಶ್ವಃ ॥ ಭವಾನ್ ಹಿ ಸರ್ವಭೂತಾನಾಮಾತ್ಮಾ ಸಾ
ಕ್ಷೀ ಸ್ವದೃಗ್ವಿಭೋ । ಅಥ ನಸ್ತ್ವತ್ಪದಾಂಭೋಜಂ ಸ್ಮರತಾಂ ದರ್ಶನಂ ಗತಃ ॥೩೨॥ ಸ್ವವಚಸ್ತದೃತಂ
ಕರ್ತುಮಸ್ಮದ್ದೃಗ್ಗೋಚರೋ ಭವಾನ್ । ಯದಾತ್ಥೈಕಾಂತಭಕ್ತಾನ್ಮೇ ನಾನಂತಃ ಶ್ರೀರಜಃ ಪ್ರಿಯಃ ॥೩೩॥
ಕೋ ನು ತ್ವಚ್ಚರಣಾಂಭೋಜಮೇವಂವಿದ್ವಿಸೃಜೇತ್ಪುಮಾನ್ । ನಿಷ್ಕಿಂಚನಾನಾಂ ಶಾಂತಾನಾಂ ಮುನೀನಾಂ

---

ಚರ ಪಾದಗಳನ್ನು, ಪ್ರಕ್ಷಾಲ್ಯ-ತೊಳೆದು, ಲೋಕಪಾವನೀಃ-ಲೋಕಂಗಳಂ ಪರಿಶುದ್ಧಿಗೊಳಿಸುವ, ತದಪಃ-ಆ ತೀರ್ಥಗಳನ್ನು ॥೨೯॥ ಸಕುಟುಂಬಃ-ತನ್ನ ಪೋಷ್ಯವರ್ಗದಿಂ ಸಹಿತನಾಗಿ, ಮೂರ್ಧ್ನಾ-ತಲೆಯಿಂದ, ವಹನ್-ಧರಿಸಿದವನಾಗಿ, ಗಂಧಮಾಲ್ಯಾಂಬರಾಕಲ್ಪಧೂಪದೀಪಾರ್ಘ್ಯಗೋವೃಷೈಃ-ಪರಿಮಳಗಂಧ ಪುಷ್ಪಮಾಲಿಕೆ ಸುವಸ್ತ್ರಾಭರಣ ಪರಿಮಳದ ಹೊಗೆ ದೀವಿಗೆ ಹಸ್ತೋದಕ ಗೋವು ಎತ್ತುಗಳಿಂದ, ಈಶ್ವರಾನ್-ನಿಯಾಮಕರಾದ ಋಷಿಗಳನ್ನು, ಪೂಜಯಾಂಚಕ್ರೇ-ಅರ್ಚಿಸಿದನು ॥೩೦॥ ಅನ್ನತರ್ಪಿತಾನ್-ಭೋಜನದಿಂದ ತೃಪ್ತಿಗೊಳಿಸಲ್ಪಟ್ಟವರನ್ನು, ಮಧುರಯಾ ವಾಚಾ-ಪ್ರಿಯವಚನದಿಂದ, ಪ್ರೀಣನ್-ಸಂತೋಷಪಡಿಸುವವನೂ, ಅಂಕಗತೌ-ತನ್ನ ತೊಡೆಯಲ್ಲಿರುವ, ವಿಷ್ಣೋಃ ಪಾದೌ-ಕೃಷ್ಣನ ಚರಣವನ್ನು, ಶನಕೈಃ-ಮೆಲ್ಲನೆ ಮುದಾ-ಸಂತೋಷದಿಂದ, ಸಂಸ್ಪೃಶನ್-ಹಿಸುಕುತಲಿರುವನೂ ಆಗಿ, ಇದಂ-ಇನ್ನು ಹೇಳುವ ಮಾತನ್ನು ಆಹ-ನುಡಿದನು ॥೩೧॥ ಪ್ರಭೋ-ಸ್ವತಂತ್ರನಾದ ಕೃಷ್ಣನೇ ಭವಾನ್-ನೀನು, ಸರ್ವಭೂತಾನಾಂ-ಸಕಲಪ್ರಾಣಿಗಳಿಗೂ, ಆತ್ಮಾ-ಸ್ವರೂಪವೂ, ಸಾಕ್ಷೀ-ದ್ರಷ್ಟಾರನೂ, ಸ್ವದೃಕ್-ತನ್ನನ್ನು ತಾನೇ-ನೋಡುವವನೂ, ಹಿ-ಆಗಿರುವಿಯಲ್ಲವೆ ಅಥ-ಆ ಕಾರಣದಿಂದ, ತ್ವತ್ಪದಾಂಭೋಜಂ-ನಿನ್ನ ಅಡಿದಾವರೆಯನ್ನು, ಸ್ಮರತಾಂ-ನೆನಸುತ್ತಿರುವ, ನಃ-ನಮ್ಮ, ದರ್ಶನಂ-ದೃಗ್ಗೋಚರವನ್ನು, ಗತಃ-ಹೊಂದಿದವನಾದಿ ॥೩೨॥ ಏಕಾಂತಭಕ್ತಾತ್-ಅಂತರಂಗ ಭಕ್ತನಿಗಿಂತಲೂ, ಅನಂತಃ-ಬಂಧುವಾದ ಶೇಷನೂ, ಶ್ರೀಃ-ಪತ್ನಿಯಾದ ಲಕ್ಷ್ಮಿಯೂ, ಅಜಃ-ಪುತ್ರನಾದ ಬ್ರಹ್ಮನೂ ಕೂಡ, ಮೇ-ನನಗೆ, ನ ಪ್ರಿಯಃ-ಇಷ್ಟನಲ್ಲವೆಂದು, ಯತ್-ಯಾವುದರನ್ನು, ಆತ್ಥ-ಹೇಳಿದೆಯೋ, ತತ್ ಸ್ವವಚಃ-ಆ ನಿನ್ನ ಮಾತನ್ನು, ಋತಂ ಕರ್ತುಂ-ಸತ್ಯವನ್ನಾಗಿ ಮಾಡಲು, ಭವಾನ್-ನೀನು, ಅಸ್ಮದ್ದೃಗ್ಗೋಚರಃ-ನಮ್ಮ ಕಂಗಳಿಗೆ ಕಾಣಿಸುವನಾಗಿ ॥೩೩॥ ನಿಷ್ಕಿಂಚನಾನಾಂ-ಕೊಂಚವಾದರೂ ಸ್ವತ್ವಾಭಿಮಾನವಿಲ್ಲದಂಥಾ, ಶಾಂತಾನಾಂ-ಶುದ್ಧಹೃದಯರಾದಂಥಾ, ಮುನೀನಾಂ-ಜ್ಞಾನಿಗಳಿಗೆ, ತ್ವಂ-ನೀನು, ಆತ್ಮಪ್ರದಃ ಇತಿ ಯತ್-ಸ್ವರೂಪಾತ್ಮವ ದೊರೆಯಿಸುವನೆಂಬುದಾವುದುಂಟೋ, ತತ್-ಅದನ್ನು, ಏವಂವಿತ್-ಹೀಗೆ ತಿಳಿದವನಾ

---

ಸ್ಸಿನಲ್ಲಿ ಧರಿಸಿ ದಿವ್ಯ ಗಂಧದಿಂದಲೂ ನೂತನ ಪುಷ್ಪ ಮಾಲೆಗಳಿಂದಲೂ ಧೂಪ ದೀಪಗಳಿಂದಲೂ ಮಧುಪರ್ಕಾರ್ಘ್ಯವಾದ ಗೋವೃಷಭಂಗಳಿಂದಲೂ ದಿವ್ಯಾನ್ನಾದಿಗಳಿಂದಲೂ ಈಶ್ವರರಾದ ಶ್ರೀ ಕೃಷ್ಣಾದಿಗಳಂ ಪೂಜಿಸಿದನು. ॥೩೦॥ ಮೃದುವಾದ ಹಾಸಿಗೆಯುಳ್ಳ ಮಂಚದಲ್ಲಿ ವಿಶ್ರಮಿಸಿ ಕೊಂಡಿರುವ ಶ್ರೀ ಕೃಷ್ಣನ ಪಾದಂಗಳಂ ತನ್ನ ತೊಡೆಯ ಮೇಲಿಟ್ಟು ಕೊಂಡು ಸಂತೋಷದಿಂದ ಮೆಲ್ಲ ಮೆಲ್ಲನೆ ಒತ್ತುವನಾಗಿ ನುಡಿದನು ॥೩೧॥ ಸಮಸ್ತ ಚೈತನ್ಯವನ್ನುಂಟು ಮಾಡುವನೂ ಪ್ರಕಾಶವನ್ನುಂಟು ಮಾಡುವನೂ ನೀನೇ, ಸರ್ವಾತ್ಮಕನಾದ ಸರ್ವ ಸಾಕ್ಷಿಯಾದ ಕಾರಣದಿಂದಲೇ ನಿನ್ನ ಪಾದ ಪದ್ಮವ ಸ್ಮರಿಸುವ ನಮಗೆ ನೀನು ಪ್ರತ್ಯಕ್ಷನಾದೆ ॥೩೨॥ ನಿನ್ನ ಆ ವಾಕ್ಯವ ಸತ್ಯವ ಮಾಡತಕ್ಕೋಸುಗ ನೀನು ನಮ್ಮ ದೃಷ್ಟಿಗೆ ಗೋಚರನಾದ, ನಿನ್ನ ವಾಕ್ಯವಾವುದೆಂದರೆ ನನ್ನ ಭಕ್ತನಿಗಿಂತಲೂ ನನ್ನ ಹಿತ ಬಂಧುವಾದ ಅನಂತನೂ ಪ್ರಿಯನಲ್ಲ, ಪತ್ನಿಯಾದ ಲಕ್ಷ್ಮಿಯೂ ಪ್ರಿಯಳಲ್ಲ ॥೩೩॥ ಎಂಬುದಾವ ವಾಕ್ಯಂ ನೀನು ಹೇಳಿದೆಯೋ ಅದಂ ತಿಳಿದವನಾದ ಯಾವ ಮನುಷ್ಯನು ನಿನ್ನ ಪಾದವನ್ನು ಬಿಡುವನು? ಯಾವ ನೀನು ಯದು ವಂಶದಲ್ಲವತರಿಸಿ ದರಿದ್ರರಾದ ಶಾಂತರಾದ ಸಂಸಾರಿಗಳಿಗೆ ಸ್ವಸ್ವರೂಪವ ಕೊಡುವಿ

ಯತ್ತ್ವಪಾತ್ಮದಃ ||೩೧|| ಯೋಽವತೀರ್ಯ ಯದೋರ್ವಂಶೇ ನೃಣಾಂ ಸಂಸರತಾಮಿಹ | ಯಶೋ ವಿತೇನೇ ತ
ಚ್ಛಾಂತ್ಯೈ ತ್ರೈಲೋಕ್ಯವೃಜಿನಾಪಹಮ್ ||೩೨|| ನಮಸ್ತುಭ್ಯಂ ಭಗವತೇ ಕೃಷ್ಣಾಯಾಕುಂಠಮೇಧಸೇ |
ನಾರಾಯಣಾಯ ಋಷಯೇ ಸುಶಾಂತಂ ತಪ ಈಯುಷೇ ||೩೩|| ದಿನಾನಿ ಕತಿಚಿದ್ಭೂಮನ್ ಗೃಹಾನ್ನೋ ನಿವ
ಸ ದ್ವಿಜೈಃ | ಸಮೇತಃ ಪಾದರಜಸಾ ಪುನೀಹೀದಂ ನಿಮೇಃ ಕುಲಮ್ ||೩೪|| ಇತ್ಯುಪಾಮಂತ್ರಿತೋ ರಾಜ್ಞಾ
ಭಗವಾನ್ ಲೋಕಭಾವನಃ | ಉವಾಸ ಕುರ್ವನ್ ಕಲ್ಯಾಣಂ ಮಿಥಿಲಾನರಯೋಷಿತಾಮ್ ||೩೫|| ಶ್ರುತದೇವೋ
ಽಚ್ಯುತಂ ಪ್ರಾಪ್ತಂ ಸ್ವಗೃಹಾನ್ ಜನಕೋ ಯಥಾ | ನತ್ವಾ ಮುನೀನ್ ಸುಸಂಹೃಷ್ಟೋ ಧುನ್ವನ್ ವಾಸೋ ನನ
ರ್ತ ಹ ||೩೬|| ತೃಣಪೀಠಬೃಸೀಷ್ವೇತಾನಾನೀತೇಷೂಪವೇಶ್ಯ ಸಃ | ಸ್ವಾಗತೇನಾಭಿನಂದ್ಯಾಂಘ್ರೀನ್ ಸಭಾ

---

ದ, ಕೋನುಪುಮಾನ್-ಯಾವಪುರುಷನು, ತ್ವಚ್ಚರಣಾಂಭೋಜಂ-ನಿನ್ನ ಅಡಿದಾವರೆಯನ್ನು, ವಿಸೃಜೇತ್-ಬಿಟ್ಟಾನು ||೩೧|| ಯಃ-
ಯಾವಪುರುಷನು, ಯದೋರ್ವಂಶೇ-ಯದುರಾಯನಕುಲದಲ್ಲಿ, ಅವತೀರ್ಯ-ಆವಿರ್ಭವಿಸಿ, ಇಹ ಈ ಭೂಮಿಯಲ್ಲಿ ಸಂಸರತಾಂ-
ಹುಟ್ಟಿಸಾಯುತಲಿರುವ, ನೃಣಾಂ-ಮನುಷ್ಯರಿಗೆ, ತಚ್ಛಾಂತ್ಯೈ-ಆಜನನಮರಣ ದುಃಖವನ್ನು ಹಿಂಗಿಸಲೋಸುಗ, ತ್ರೈಲೋಕ್ಯವೃ
ಜಿನಾಪಹಂ-ಮೂರುಲೋಕಂಗಳ ಪಾಪಂಗಳಂ ಪೋಗಳಿಸುವಂಥಾ, ಯಶಃ-ಕೀರ್ತಿಯನ್ನು, ವಿತೇನೇ-ಮಾಡಿದನೋ ||೩೨|| ತ
ಸ್ಮೈ-ಅವನಾದ, ಭಗವತೇ-ಷಡ್ಗುಣಪೂರ್ಣನಾದ, ಕೃಷ್ಣಾಯ-ಸದಾನಂದನಾದ, ಅಕುಂಠಮೇಧಸೇ - ಅಧಿಕಪ್ರತಿಭೆಯುಳ್ಳವ
ನಾದ, ನಾರಾಯಣಾಯ ಋಷಯೇ-ಧರ್ಮಪುತ್ರನೆನಿಸಿದ ನಾರಾಯಣಋಷಿಯಾದ, ಶಾಂತಂ ತಪಃ- ಸಮಾಧಿಯೋಗವನ್ನು, ಈ
ಯುಷೇ-ಹೊಂದಿದವನಾದ, ತುಭ್ಯಂ-ನಿನಗೆ, ನಮಃ-ಐಕ್ಯಲಕ್ಷಣವಾದ ನಮಸ್ಕಾರವು ||೩೩|| ಭೂಮನ್-ಮಹಾಮಹಿಮನೇ, ಕ
ತಿಚಿದ್ದಿನಾನಿ-ಕೆಲವುದಿವಸಗಳು, ನೋಗೃಹಾನ್-ನಮ್ಮಮನೆಯಲ್ಲಿ, ದ್ವಿಜೈಸ್ಸಮೇತಃ-ಬ್ರಾಹ್ಮಣರೊಡನೆ ಕೂಡಿದವನಾಗಿ, ನಿವ
ಸ-ಇರುವನಾಗುತ್ತ, ಪಾದರಜಸಾ-ನಿನ್ನ ಚರಣಧೂಳಿಯಿಂದ, ಇದಂ-ಈ, ನಿಮೇಃಕುಲಂ-ನಿಮಿರಾಯನ ವಂಶವನ್ನು, ಪುನೀ
ಹಿ-ಪವಿತ್ರಗೊಳಿಸು ||೩೪|| ರಾಜ್ಞಾ-ಬಹುಳಾಶ್ವಜನಕರಾಯನಿಂದ, ಇತಿ-ಹೀಗೆ, ಉಪಾಮಂತ್ರಿತಃ-ಪ್ರಾರ್ಥಿಸಲ್ಪಟ್ಟವನಾದ,
ಲೋಕಭಾವನಃ-ಲೋಕಸಂತೋಷಕನಾದ, ಭಗವಾನ್-ಕೃಷ್ಣನು, ಮಿಥಿಲಾನರಯೋಷಿತಾಂ-ಮಿಥಿಲಾಪುರದ ಗಂಡಸರಿಗೂ
ಹೆಂಗುಸರಿಗೂ, ಕಲ್ಯಾಣಂ-ಶುಭವನ್ನು, ಕುರ್ವನ್-ಮಾಡುವನಾಗಿ, ಉವಾಸ-ತಂಗಿದ್ದನು ||೩೫|| ಶ್ರುತದೇವಃ- ಶ್ರುತದೇವನೆಂ
ಬ ಬ್ರಾಹ್ಮಣನು, ಸ್ವಗೃಹಾನ್-ತನ್ನ ಮನೆಗೆ, ಪ್ರಾಪ್ತಂ-ಬಂದಂಥಾ, ಅಚ್ಯುತಂ-ಕೃಷ್ಣನನ್ನು, ಮುನೀಂಶ್ಚ-ಋಷಿಗಳನ್ನೂ,
ಜನಕೋಯಥಾ-ಬಹುಳಾಶ್ವನಂತೆ, ನತ್ವಾ-ನಮಸ್ಕರಿಸಿ, ಸಂಹೃಷ್ಟಃ-ಸಂತೋಷಹುಟ್ಟಿದವನಾಗಿ, ವಾಸಃ-ಅಂಗವಸ್ತ್ರವನ್ನು,
ಧುನ್ವನ್-ಕೊಡಹುವನಾಗುತ್ತ, ನನರ್ತಹ-ಕುಣಿದಾಡಿದನು ||೩೬|| ಸಃ-ಆ ಬ್ರಾಹ್ಮಣನು, ಏತಾನ್-ಈ ಕೃಷ್ಣಾದಿಗಳನ್ನು, ತೃ
ಣಪೀಠಬೃಸೀಷು-ಹುಲ್ಲುಚಾಪೆ, ಗದ್ದುಗೆ, ದರ್ಭಾಸನಂಗಳಲ್ಲಿ, ಉಪವೇಶ್ಯ-ಕುಳ್ಳಿರಿಸಿ, ಸ್ವಾಗತೇನ-ಕುಶಲಪ್ರಶ್ನೆಯಿಂದ, ಅಭಿನಂ

---

ಯೋ ||೩೧|| ಭಕ್ತರ ಪಾಪ ಪರಿಹಾರಕ್ಕೋಸುಗ ಮೂರು ಲೋಕಂಗಳ ಪಾಪಂಗಳಂ ಪರಿಹರಿಸಿ ಕೀರ್ತಿಯಂ ವಿ
ಸ್ತರಿಸಿದಯೋ ||೩೨|| ಅಪ್ರತಿಹತವಾದ ಜ್ಞಾನವುಳ್ಳ ನಾರಾಯಣ ಋಷಿಯಾಗಿ ಅತ್ಯಂತ ಶಾಂತನಾಗಿ ತಪಸ್ಸಂ
ಗೆಯ್ಯುತ್ತಲಿರುವ ಭಗವಂತನಾದ ಶ್ರೀ ಕೃಷ್ಣನಾದ ಅಂತಾ ನಿನಗೆ ನಮಸ್ಕಾರವಾಗಲಿ ||೩೩|| ಎಲೈ ಮಹಾಮ
ಹಿಮೆಯುಳ್ಳ ಭಗವಂತನೇ, ಈ ಮಹಾ ಜನಂಗಳೊಡನೆ ಕೆಲವು ದಿವಸಂಗಳಲ್ಲಿ ನೀನು ನಮ್ಮ ಮನೆಗಳಲ್ಲಿ ವಾಸಂಗೆ
ಯ್ದು ನಮ್ಮ ಕುಲವಂ ಪಾವನವಂ ಮಾಡು ||೩೪|| ಸರ್ವ ಲೋಕೇಶ್ವರನಾದ ಶ್ರೀ ಕೃಷ್ಣನು ಅರಸಾದ ಬಹು
ಳಾಶ್ವನಿಂದ ಈರೀತಿಯಾಗಿ ಪ್ರಾರ್ಥಿಸಲ್ಪಟ್ಟವನಾಗಿ ಮಿಥಿಲಾ ಪುರದಲ್ಲಿರುವ ನರನಾರೀಜನರಿಗೆ ಕಲ್ಯಾಣವನ್ನುಂ
ಟು ಮಾಡುವನಾಗಿ ಅಲ್ಲಿ ವಾಸಂಗೆಯ್ದನು ||೩೫|| ಅನಂತರದಲ್ಲಿ ಬ್ರಾಹ್ಮಣೋತ್ತಮನಾದ ಶ್ರುತ ದೇವನು ಬ
ಹುಳಾಶ್ವನ ಮನೆಗೆ ಬಂದ ಅರ್ಜುನನಂ ಮುನಿಗಳಂ ಸಹ ಸರ್ವ ಸ್ವದಿಂದಲೂ ಪೂಜಿಸಿ ಸಂತುಷ್ಟನಾಗಿ ಉತ್ತ
ರೀಯ ವಸ್ತ್ರವು ಕೊಡಹಿ ಕೊಂಡು ನರ್ತನಂಗೆಯ್ದನು ||೩೬|| ದರ್ಭಾಸನಂಗಳಲ್ಲಿಯೂ ಪೀಠಂಗಳಲ್ಲಿಯೂ ಅ
ವರು ಕುಳ್ಳಿರಿಸಿ ಕುಶಲ ಪ್ರಶ್ನಮಂ ಮಾಡಿ ಪಾದಂಗಳಲ್ಲಿ ನಮಸ್ಕರಿಸಿ ಪತ್ನೀ ಸಮೇತನಾಗಿ ಅವರ ಪಾದಂಗಳಂ

ಕ್ಯಾವನಿಜೇಮುದಾ ||೪೦|| ತದಂಭಸಾಮಹಾಭಾಗ ಆತ್ಮಾನಂಸಗೃಹಾನ್ವಯಮ್ | ಸ್ನಾಪಯಾಂಚಕ್ರ ಉದ್ಧರ್ಷೋಲಬ್ಧಸರ್ವಮನೋರಥಃ ||೪೧|| ಫಲಾರ್ಹಣೋಶೀರಶಿವಾಮೃತಾಂಬುಭಿರ್ಮೃದಾಸುರಭ್ಯಾ ತುಲಸೀಕುಶಾಂಬುಜೈಃ | ಆರಾಧಯಾಮಾಸಯಥೋಪಪನ್ನಯಾಸಪರ್ಯಯಾಸತ್ತ್ವವಿವರ್ಧನಾಂಧಸಾ ||೪೨|| ಸತರ್ಕಯಾಮಾಸಕುತೋಮಮಾನ್ವಭೂದ್ಗೃಹಾಂಧಕೂಪೇಪತಿತಸ್ಯಸಂಗಮಃ | ಯಸ್ಸರ್ವತೀರ್ಥಾಸ್ಪದಪಾದರೇಣುಭಿಃಕೃಷ್ಣೇನಚಾಸ್ಯಾತ್ಮನಿಕೇತಭೂಸುರೈಃ ||೪೩|| ಸೂಪವಿಷ್ಟಾನ್ಕೃತಾತಿಥ್ಯಾನ್ಶ್ರುತದೇವಉಪಸ್ಥಿತಃ | ಸಭಾರ್ಯಸ್ವಜನಾಪತ್ಯಉವಾಚಾಂಘ್ರ್ಯಭಿಮರ್ಶನಃ ||೪೪|| ಶ್ರುತದೇವಃ ||

---

ದ್ಯ-ಸಂತೋಷಪಡಿಸಿ, ಸಭಾರ್ಯಃ-ಪತ್ನೀಸಹಿತನಾಗಿ, ಮುದಾ-ಸಂತೋಷದಿಂದ, ಅಂಘ್ರೀನ್-ಪಾದಗಳನ್ನು ಅವನಿಜ್ಯ-ತೊಳೆದನು ||೪೦|| ಮಹಾಭಾಗಃ-ಅಧಿಕಪುಣ್ಯವುಳ್ಳವನಾದ ಶ್ರುತದೇವನು, ಸಗೃಹಾನ್ವಯಂ-ಮನೆಯು ಕುಟುಂಬದೀ ಸಹಿತವಾದ, ಆತ್ಮಾನಂ-ತನ್ನ ದೇಹವನ್ನು, ಸ್ನಾಪಯಾಂಚಕ್ರೇ-ಸ್ನಾನಮಾಡಿಸಿದನು, ಉದ್ಧರ್ಷಃ-ಅಧಿಕಸಂತೋಷವುಳ್ಳವನೂ, ಲಬ್ಧಸರ್ವಮನೋರಥಃ-ಪಡೆಯಲ್ಪಟ್ಟ ಸಕಲಾಪೇಕ್ಷೆಯುಳ್ಳವನೂ, ಆದನು ||೪೧|| ಫಲಾರ್ಹಣೋಶೀರಶಿವಾಮೃತಾಂಬುಭಿಃ- ಫಲಾರ್ಹಣ-ನೆಲ್ಲಿಕಾಯಿಮೊದಲಾದವುಗಳಿಂ ಸಮರ್ಪಿಸುವಿಕೆ, ಉಶೀರ-ಲಾಮಂಚದಿಂದ, ಶಿವ-ಶುಭವಾದ, ಅಮೃತ-ಅಮೃತದಂತೆರುಚ್ಯವಾದ, ಅಂಬುಭಿಃ-ನೀರುಗಳಿಂದಲೂ, ಸುರಭ್ಯಾ-ಪರಿಮಳಿಸುವ, ಮೃದ-ಕಸ್ತೂರಿಮೊದಲಾದಮಣ್ಣಿನಿಂದ, ತುಲಸೀಕುಶಾಂಬುಜೈಃ- ತುಲಸೀ ದರ್ಭೆ ಕಮಲಗಳಿಂದಲೂ, ಯಥೋಪಪನ್ನಯಾ-ಅನಾಯಾಸದಿಂದ ದೊರೆತಂಥಾ, ಸತ್ವವಿವೃದ್ಧನಾಂಧಸಾ- ಸತ್ವಗುಣವನ್ನು ಬೆಳೆಯಿಸುವ ಅನ್ನವುಳ್ಳಂಥಾ, ಸಪರ್ಯಯಾ-ಪೂಜೆಯಿಂದ, ಆರಾಧಯಾಮಾಸ-ಅರ್ಚಿಸಿದನು ||೪೨|| ಗೃಹಾಂಧಕೂಪೇ-ಮನೆಯೆಂಬ ಕುರುಡುಕಾಳಿಯಲ್ಲಿ, ಪತಿತಸ್ಯ-ಬಿದ್ದಿರುವನಾದ, ಮಮ-ನನಗೆ, ಸರ್ವತೀರ್ಥಾಸ್ಪದ ಪಾದರೇಣುಭಿಃ-ಸಕಲಪುಣ್ಯಜಲಗಳಿಗೂ ಕಾರಣವಾದ ಚರಣಧೂಳಿಗಳುಳ್ಳಂಥಾ, ಕೃಷ್ಣೇನಚ-ಕೃಷ್ಣನೊಡನೆಯೂ, ಅಸ್ಯ-ಈ ಕೃಷ್ಣನಿಗೆ, ಆತ್ಮನಿಕೇತಭೂಸುರೈಶ್ಚ-ಧರ್ಮರೂಪಕ್ಕೆ ನೆಲೆಮನೆಯಾದ ಬ್ರಾಹ್ಮಣರೊಡನೆಯೂ, ಸಂಗಮಃ-ಸೇರುವಿಕೆಯಾವುದೋ, ಸಃ-ಅದು, ಕುತಃ-ಎತ್ತಣಿಂದ, ಅಭೂತ್-ಆಯಿತು. ಎಂದು, ಅ-ಚಿಂತಿಸುವೆನು. ನು-ಆಶ್ಚರ್ಯವು ||೪೩|| ಕೃತಾತಿಥ್ಯಾನ್-ಮಾಡಲ್ಪಟ್ಟಭೋಜನಾದಿಸತ್ಕಾರವುಳ್ಳವರಾದ್ದರಿಂದ, ಸೂಪವಿಷ್ಟಾನ್-ಚನ್ನಾಗಿ ಕುಳಿತಿರುವ ಕೃಷ್ಣಾದಿಗಳನ್ನು, ಉಪಸ್ಥಿತಃ-ಬಳಿಸೇರಿಕುಳಿತಿರುವ, ಬ್ರಾಹ್ಮಣನು, ಸಭಾರ್ಯಸ್ವಜನಾಪತ್ಯಃ-ಹೆಂಡತಿನಂಟರು ಮಕ್ಕಳುಗಳಿಂಸಹಿತನಾಗಿ, ಅಂಘ್ರ್ಯಭಿಮರ್ಶನಃ- ಕಾಲುಗಳಿಂ ಹಿಸುಕುವನಾಗುತ್ತ, ಉವಾಚ-ನುಡಿವನು ||೪೪|| ಯರ್ಹಿ-ಯಾವಾಗ, ಶಕ್ತಿಭಿಃ-ಸತ್ವಾದಿಸಾಮರ್ಥ್ಯಂಗಳಿಂದ, ಇದಂವಿಶ್ವಂ-ಈ ಪ್ರಪಂಚವನ್ನು, ಸೃಷ್ಟ್ವಾ-ಹುಟ್ಟಿಸಿ, ಸ್ವಾತ್ಮಸತ್ತಯಾ-ತನ್ನ ಜೀವಸ್ವರೂಪದಿಂದ, ಅನುಪ್ರವಿಷ್ಟಃ-ಚೈತನ್ಯವಾಗಿ ಸೇ

---

ತೊಳೆದು ||೪೦|| ಆ ಜಲದಿಂದ ತನ್ನನ್ನೂ ತನ್ನ ಮನೆಯನ್ನೂ ತನ್ನ ಕುಟುಂಬವನ್ನೂ ಬಂಧುಗಳನ್ನೂ ಅಧಿಕ ಹರುಷದಿಂದ ಸ್ನಾನವಂ ಮಾಡಿಸಿದನು ||೪೧|| ಆಮಲಕಾದಿ ಫಲಗಳಿಂದಲೂ ಉತ್ತಮಂಗಳಾದ ಲಾಮಂಚ, ಮುಡಿವಾಳ, ಕಸ್ತೂರಿ ಮೊದಲಾದ ಪರಿಮಳ ದ್ರವ್ಯಂಗಳಿಂದಲೂ ಸುಗಂಧಿಯಾದ ಅಮೃತದಂತೆ ಸ್ವಾದುವಾದ ಜಲದಿಂದಲೂ ಪ್ರಾಣಂಗಳಿಗೆ ಬಲಕರವಾದ ಅನಾಯಾಸದಿಂ ಲಬ್ಧಗಳಾದ ವಸ್ತುಗಳಿಂದಲೂ ಸತ್ವಗುಣ ವೃದ್ಧಿಯನೆಯ್ದಿಸುವ ಅನ್ನಾದಿಗಳಿಂದಲೂ ಆ ರಾಧನಂಗೆಯ್ದನು ||೪೨|| ಅನಂತರದಲ್ಲಿ ಆ ಶ್ರುತದೇವನು ಆಲೋಚಿಸಿದನೆಂತೆನೆ-ಗೃಹಾಶ್ರಮವೆಂಬ ಅಂಧ ಕೂಪದಲ್ಲಿ ಬಿದ್ದಿರುವ ನನಗೆ ಸಮಸ್ತ ತೀರ್ಥಗಳಿಗೂ ಆ ಶ್ರಯಂಗಳಾದ ಪಾದಧೂಳಿಗಳುಳ್ಳ ಶ್ರೀ ಕೃಷ್ಣನ ಸಂಗವು ಭಗವತ್ಸಾಂಗತ್ಯಕ್ಕೆ ಅಧಿಷ್ಠಾನ ಭೂತವಾದ ಮಹರ್ಷಿಗಳ ಸಂಗವೂ ಸಹ ಹೇಗೆ ಘಟಿಸುವುದೆಂದು ಚಿಂತಿಸಿದನು ||೪೩|| ಬಳಿಕ ಮಾಡಲ್ಪಟ್ಟ ಅತಿಥಿ ಸತ್ಕಾರವುಳ್ಳವರಾಗಿ ಸುಖದಿಂ ವಿಶ್ರಮಿಸಿ ಕೊಳ್ಳುತಲಿರುವ ಶ್ರೀ ಕೃಷ್ಣನು ಮೊದಲಾದ ಮಹರ್ಷಿಗಳನು ಪಚರಿಸಿ ಸಮೀಪದಲ್ಲಿ ಕುಳಿತಿರುವ ಶ್ರುತ ದೇವನು ಪತ್ನೀ ಪುತ್ರ ಸ್ವಜನರೊಡನೆ ಶ್ರೀ ಕೃಷ್ಣನ ಪಾದಂಗಳ ನೊತ್ತುವನಾಗಿ ವಿಜ್ಞಾಪನಂಗೆಯ್ದನು ||೪೪|| ಎಲೈಪರಮಪುರುಷನಾದ ಶ್ರೀಕೃಷ್ಣನೇ! ನೀನು ಅಧಿಕವಾಗಿ ಈಗ ನಮ್ಮ ದರ್ಶನ ಮಾರ್ಗವನೆಯ್ದಿ

ಸೋಽದ್ಯನೋ ವಶ್ಯಮನುಪ್ರಾಪ್ತಃ ಪರಂ ಪರಮಪೂರುಷಃ | ಯರ್ಹೀದಂ ಶಕ್ತಿಭಿಸ್ಸೃಷ್ಟ್ವಾ ಪ್ರವಿಷ್ಟೋಹ್ಯಾ
ತ್ಮಸತ್ತಯಾ ||೪೫|| ಯಥಾಶಯಾನಃ ಪುರುಷೋ ಮನಸೈವಾತ್ಮಮಾಯಯಾ | ಸೃಷ್ಟ್ವಾ ಲೋಕಂ ಪರಂ
ಸ್ವಾಪ್ನಮನುವಿಶ್ಯಾವಭಾಸತೇ ||೪೬|| ಶೃಣ್ವತಾಂ ಗದತಾಂ ಶಶ್ವದರ್ಚತಾಂ ತ್ವಾಭಿವಂದತಾಮ್ | ನೃಣಾಂ
ಸಂವದತಾಮಂತರ್ಹೃದಿ ಭಾಸ್ಯಮಲಾತ್ಮನಾಮ್ ||೪೭|| ಹೃದಿಸ್ಥೋಽಪ್ಯತಿದೂರಸ್ಥಃ ಕರ್ಮವಿಕ್ಷಿಪ್ತಚೇತ
ಸಾಮ್ | ಆತ್ಮಶಕ್ತಿಭಿರಗ್ರಾಹ್ಯೋಽಪ್ಯಂತ್ಯುಪೇತಗುಣಾತ್ಮನಾಮ್ ||೪೮|| ನಮೋಽಸ್ತು ತೇಽಧ್ಯಾತ್ಮವಿದಾಂ ಪ
ರಾತ್ಮನೇ ಹ್ಯನಾತ್ಮನೇ ಸ್ವಾತ್ಮವಿಭಕ್ತಮೃತ್ಯವೇ | ಸಕಾರಣಾಕಾರಣಲಿಂಗಮೀಯುಷೇ ಸ್ವಮಾಯಯಾಸಂ

---

ಬದಿಯೋ, ತರ್ಹಿ-ಆಗಲೇ ಬಂದವನಾದಿ, ಪರಮಪೂರುಷಃ-ಪರಮಾತ್ಮನೇ, ಸಃ-ಆ ನೀನು, ಅದ್ಯ ಪರಂ-ಈಗಲಾದರೋ, ನಃ-ನ
ಮ್ಮ, ದರ್ಶನಂ-ದೃಷ್ಟಿಗೋಚರವನ್ನು, ಪ್ರಾಪ್ತಃ-ಹೊಂದಿದವನಾದಿ ||೪೫|| ಶಯಾನಃ ಪುರುಷಃ-ನಿದ್ರಿಸುವ ಮನುಷ್ಯನು, ಮನ
ಸಾ-ಮನೋವೃತ್ತ್ಯಾಭಾಸವಾಗಿ ತೋರುವ, ಆತ್ಮಮಾಯಯಾ-ಅವಿದ್ಯೆಯೆಂಬ ಅಜ್ಞಾನದಿಂದ, ಅಥವಾ ನಿನ್ನ ಮಾಯೆಯಿಂದ,
ಸ್ವಾಪ್ನಂ ಲೋಕಂ-ಕನಸಿನ ಪ್ರಪಂಚವನ್ನು, ಸೃಷ್ಟ್ವಾ-ಹುಟ್ಟಿಸಿ, ಅನುವಿಶ್ಯ-ಅದರೊಳಗನುಪ್ರವೇಶವಂ ಗೆಯ್ದು, ಯಥಾ-ಹೇ
ಗೆ, ಅವಭಾಸತೇ ಪರಂ-ತೋರುತಮಾತ್ರಲಿರುವನೋ (ಹಾಗೆಯೇ ನೀನು ಮಾಯಾಕಲ್ಪಿತಮಿಥ್ಯಾಪ್ರಪಂಚದಲ್ಲಿ ಜೀವರೂಪದಿಂ
ದನುಪ್ರವೇಶಂಗೆಯ್ದು ಚೇತರಿಸುತಲಿದ್ದೆ(ಯೆ)] ||೪೬|| ಶೃಣ್ವತಾಂ-ನಿನ್ನ ರೂಪಗುಣಾದಿಗಳನ್ನು, ಕೇಳುವಂಥಾ, ಗದತಾಂ-ವ
ರ್ಣಿಸುವಂಥಾ, ಶಶ್ವತ್-ಮರಳಿಮರಳಿಯೂ, ತ್ವಾ-ನಿನ್ನನ್ನು, ಅರ್ಚತಾಂ-ಪೂಜಿಸುವಂಥಾ, ಅಭಿವಂದತಾಂ-ನಮಸ್ಕರಿಸುವಂಥಾ,
ಸಂವದತಾಂ-ಸಮಸ್ತಾಯೆಗೊಳಿಸಿ ಹೇಳುವಂಥಾ, ಅಮಲಾತ್ಮನಾಂ-ಶುದ್ಧಹೃದಯರಾದ, ನೃಣಾಂ-ಮನುಷ್ಯರ, ಅಂತರ್ಹೃ
ದಿ-ಅಂತರಂಗದಲ್ಲಿ, ಭಾಸಿ-ಬೆಳಗುತಲಿರುವಿ (ಅಂಥವನು ನನಗೆ ಕಾಣಿಸಿದ್ದು ನನ್ನ ಭಾಗ್ಯವು,) ||೪೭|| ಕರ್ಮವಿಕ್ಷಿಪ್ತಚೇತಸಾಂ-
ಪುಣ್ಯಪಾಪಗಳಿಂದ ವಿಷಯಾಂತರಕ್ಕೆ ಹಾರಿಸಲ್ಪಟ್ಟ ಬುದ್ಧಿಯುಳ್ಳವರ, ಹೃದಿಸ್ಥೋಽಪಿ-ಮನಸ್ಸಿನಲ್ಲಿಯೂ ನೀನಿರುವನಾದರೂ,
ಆತ್ಮಶಕ್ತಿಭಿಃ-ಅಹಂಕಾರಾದಿ ಪ್ರತಿಬಂಧಕಗಳಿಂದ, ದೂರಸ್ಥಃ-ದೂರದಲ್ಲಿರುವನಾದ್ದರಿಂದ, ಅಗ್ರಾಹ್ಯ-ತಿಳಿಯಲ್ಪಡುವವನಲ್ಲವನಾ
ಗುವಿ. ಉಪೇತಗುಣಾತ್ಮನಾಂ-ಹೊಂದಲ್ಪಟ್ಟ ಭಕ್ತ್ಯಾದಿಗುಣಂಗಳುಳ್ಳ ಮನಸ್ಸುಳ್ಳವರಿಗಾದರೋ, ಅಂತಿ-ಸಮೀಪದಲ್ಲಿರುವುದ
ರಿಂದ ತಿಳಿಯಲ್ಪಡತಕ್ಕವನಾಗುವಿ ||೪೮|| ಅಧ್ಯಾತ್ಮವಿದಾಂ-ಅಹಂಕಾರವಂ ಬಿಟ್ಟು ಸ್ವರೂಪವಂ ಬಲ್ಲವರಿಗೆ, ಪರಾತ್ಮನೇ, ಪರ
ಮಾತ್ಮನೆಂದು ತಿಳಿಯಬರುವಂಥಾ, ಅನಾತ್ಮನೇ-ದೇಹಾಭಿಮಾನಿಯಾದ ಜೀವಂಗೆ, ಸ್ವಾತ್ಮವಿಭಕ್ತಮೃತ್ಯವೇ-ತನ್ನ ದೆಸೆಯಿಂದ,
ಬೇರ್ಪಡಿಸಲ್ಪಟ್ಟವನೆಂಬ ಪ್ರಮಾದವನ್ನುಂಟುಮಾಡುವಂಥಾ, ಸಕಾರಣಾಕಾರಣಲಿಂಗಂ-ಮಹದಾದಿಕಾರ್ಯವೂ ಪ್ರಕೃತಿಯೆಂ
ಬ ಕಾರಣವೂ ಎಂಬ ಉಪಾಧಿಯನ್ನು, ಈಯುಷೇ-ಹೊಂದಿದವನಾದಂಥಾ, ಸ್ವಮಾಯಯಾ-ತನ್ನ ಯೋಗಶಕ್ತಿಯಿಂದ, ಅಸಂ

---

ದವನೆಂಬುದಿಲ್ಲ. ಮತ್ತೇನೆಂದರೆ- ಯಾವಾಗ ನೀನು ಪ್ರಪಂಚವ ಸ್ವಶಕ್ತಿಗಳಿಂದ ಸೃಷ್ಟಿಸಿ ಸ್ವಕೀಯವಾದ ಸ
ತ್ವದಿಂ ಅದರಲ್ಲಿ ಪ್ರವೇಶಂಗೆಯ್ದಿಯೋ ಆಗಲೇ ನಮಗೆ ದರ್ಶನವಂ ಕೊಟ್ಟೆ ||೪೫|| ಯಾವರೀತಿಯಿಂದ ಮಲಗಿರು
ವ ಪುರುಷನು ಮನಸ್ಸಿನಿಂದಲೇ ಅವಿದ್ಯಾಕೃತಂಗಳಾದ ಸ್ವಪ್ನಕೃತಂಗಳಾದ ಮಿಥ್ಯಾವಸ್ತುಗಳಲ್ಲಿ ಪ್ರವೇಶವೆ
ಯ್ದಿರುವನೋ ಅದೇರೀತಿಯಾಗಿ ಮಾಯಾಕಲ್ಪಿತಂಗಳಾದ ಪ್ರಪಂಚ ವಸ್ತುಗಳಲ್ಲಿ ಪ್ರವೇಶಂಗೆಯ್ದಿರುವಿ ||೪೬||
ಎಲೈ ಭಗವಂತನೇ! ನಿನ್ನ ಚರಿತ್ರವಂ ಶ್ರವಣಂಗೆಯ್ವರಾಗಿ ನಿನ್ನ ಲೀಲೆಗಳಂ ಬಣ್ಣಿಸುವರಾಗಿ ಬಾರಿಬಾರಿಗೂ ನಿ
ನ್ನಂ ಪೂಜಿಸುವರಾಗಿ ನಮಸ್ಕರಿಸುವರಾಗಿ ನಿನ್ನ ಲೀಲೆಯಂ ಸಲ್ಲಾಪಂಗೆಯ್ವರಾಗಿ ನಿರ್ಮಲವಾದ ಮನಸ್ಸಿನಿಂದ
ಶುದ್ಧರಾದ ಭಕ್ತರ ಹೃದಯದಲ್ಲಿ ಪ್ರಕಾಶಿಸುವಿ ||೪೭|| ಕರ್ಮವಾಸನೆಗಳಿಂದ ಕಲುಷವಾದ ಮನಸ್ಸುಳ್ಳ ಜನರುಳ್ಳ
ಅಹಂಕಾರಾದಿಗಳಿಂದ ಮರೆಯಾದವನಾದರೂ ಸತ್ವಗುಣದಿಂದ ವ್ಯಾಪ್ತವಾದ ಶ್ರವಣಕೀರ್ತನಾದಿ ಸಂಸ್ಕಾರ
ವುಳ್ಳ ಅಂತಃಕರಣವುಳ್ಳವರಿಗೆ ಅತಿ ಸಮೀಪದಲ್ಲಿಯೇ ಇರುತ್ತೀಯೆ ||೪೮|| ದೇಹಾದ್ಯಹಂಕಾರರಹಿತರಾದ ಮ
ಹಾತ್ಮರಿಗೆ ಪರಮಾತ್ಮನಾಗಿ ಪ್ರಕಾಶಿಸುತ್ತ ಮೋಕ್ಷಪ್ರದನಾಗಿಯೂ ದೇಹಾಭಿಮಾನಿಯಾದ ಜೀವ ಸಮೂಹಕ್ಕೆ
ನಿಂಗಡಿಸಿ ಕೊಡಲ್ಪಟ್ಟ ಸಂಸಾರವುಳ್ಳವನಾಗಿಯೂ ಮಹದಹಂಕಾರವುಳ್ಳವನಾಗಿ ಅವುಗಳಿಗೆ ಕಾರಣವಾದವ

ವೃತರುದ್ಧದೃಷ್ಟಯೆ ॥೪೯॥ ಸತ್ವಂ ಶಾಧಿ ಸ್ವಭೃತ್ಯಾನ್ನಃ ಕಿಂ ದೇವ ಕರವಾಮ ತೇ । ಏತದಂತೋ ನೃಣಾಂ ಕ್ಲೇಶೋ ಯದ್ಭವಾನಕ್ಷಿಗೋಚರಃ ॥೫೦॥ ಶ್ರೀಶುಕಃ॥ ತದುಕ್ತಮಿತ್ಯುಪಾಕರ್ಣ್ಯ ಭಗವಾನ್ ಪ್ರಣತಾರ್ತಿಹಾ । ಗೃಹೀತ್ವಾ ಪಾಣಿನಾ ಪಾಣಿಂ ಪ್ರಹಸಂಸ್ತಮುವಾಚ ಹ ॥೫೧॥ ಶ್ರೀಭಗವಾನ್॥ ಬ್ರಹ್ಮಂಸ್ತೇನುಗ್ರಹಾರ್ಥಾಯ ಸಂಪ್ರಾಪ್ತಾನ್ ವಿದ್ಧ್ಯಮೂನ್ ದ್ವಿಜಾನ್ । ಸಂಚರಂತಿ ಮಯಾ ಲೋಕಾನ್ ಪುನಂತಃ ಪಾದರೇಣುಭಿಃ ॥೫೨॥ ದೇವಾಃ ಕ್ಷೇತ್ರಾಣಿ ತೀರ್ಥಾನಿ ದರ್ಶನಸ್ಪರ್ಶನಾರ್ಚನೈಃ । ಶನೈಃ ಪುನಂತಿ ಕಾಲೇನ ತದಪ್ಯರ್ಹತ್ತಮೇಕ್ಷಯಾ ॥೫೩॥ ಬ್ರಾಹ್ಮಣೋ ಜನ್ಮನಾ ಶ್ರೇಯಾನ್ ಸರ್ವೇಷಾಂ ಪ್ರಾಣಿನಾಮಿಹ । ತಪಸಾ

---

ವೃತರುದ್ಧದೃಷ್ಟಯೇ-ಆವರಿಸಲ್ಪಡದೆ ಇರುವ ನಿರೋಧಿಸಲ್ಪಡದೆ ಇರುವ ಜ್ಞಾನೈಶ್ವರ್ಯವುಳ್ಳ, ತೇ-ನಿನಗೆ, ನಮಃ-ಐಕ್ಯಾನುಸಂಧಾನ ಮುಂದೆ ಪ್ರಸಾದನಮಸ್ಕಾರವು, ಅಸ್ತು-ಆಗಲಿ॥೪೯॥ ಸತ್ವಂ-ಆನೀನು, ಸ್ವಭೃತ್ಯಾನ್-ನಿನ್ನ ಕಿಂಕರರಾದ, ನಃ-ನಮ್ಮನ್ನು, ಶಾಧಿ-ಶಿಕ್ಷಿಸು, ಈಶ-ಸರ್ವನಿಯಾಮಕಪ್ರಭುವೇ, ತೇ-ನಿನಗೆ, ಕಿಂ-ಕರವಾಮ-ಏನುಮಾಡೇವು, ಯತ್-ಯಾವಕಾರಣದಿಂದ, ಭವಾನ್-ನೀನು, ಅಕ್ಷಿಗೋಚರಃ-ಕಣ್ಣಿಗೆ ಕಾಣಿಸಿದವನಾದೆಯೋ, ನೃಣಾಂ-ಮನುಷ್ಯರ, ಕ್ಲೇಶಃ-ಅವಿದ್ಯೆ ಅಸ್ಮಿತೆ ರಾಗ ದ್ವೇಷ ಮೋಹಂಗಳೆಂಬ ಪಂಚವಿಧವಾದ ದುಃಖವು, ಏತದಂತಃ-ಇದೇ ತುದಿಯಾಗಿ ಉಳ್ಳದ್ದು ॥೫೦॥ ಪ್ರಣತಾರ್ತಿಹಾ-ಭಕ್ತರ ದುಃಖವ ಪರಿಹರಿಸುವ, ಭಗವಾನ್-ಕೃಷ್ಣನು, ಇತಿ-ಪೂರ್ವೋಕ್ತವಾದ, ತದುಕ್ತಂ-ಅವನ ಮಾತನ್ನು, ಉಪಾಕರ್ಣ್ಯ-ಕೇಳಿ, ಪಾಣಿನಾ-ತನ್ನ ಕೈಯಿಂದ, ಪಾಣಿಂ-ಅವನ ಕೈಯನ್ನು, ಗೃಹೀತ್ವಾ-ಹಿಡಿದುಕೊಂಡು, ಪ್ರಹಸನ್-ನಗುತಿರುವನಾಗಿ, ತಂ-ಅವನಂ ಕುರಿತು, ಉವಾಚಹ-ಹೇಳಿದನು ॥೫೧॥ ಬ್ರಹ್ಮನ್-ಬ್ರಾಹ್ಮಣನೇ, ಅಮೂನ್ ದ್ವಿಜಾನ್ ಈ ಬ್ರಾಹ್ಮಣರನ್ನು ತೇ-ನಿನ್ನ, ಅನುಗ್ರಹಾರ್ಥಾಯ-ಶ್ರೇಯಸ್ಸಿಗೋಸುಗ, ಸಂಪ್ರಾಪ್ತಾನ್-ಬಂದವರನ್ನಾಗಿ, ವಿದ್ಧಿ-ತಿಳಿದುಕೋ, ಇವರು, ಪಾದರೇಣುಭಿಃ-ತಮ್ಮ ಚರಣಧೂಳಿಗಳಿಂದ, ಲೋಕಾನ್-ಜನರನ್ನು, ಪುನಂತಃ-ಶುದ್ಧಿಗೊಳಿಸುವರಾಗುತ್ತ, ಮಯಾ-ನನ್ನೊಡನೆ, ಸಂಚರಂತಿ-ತಿರುಗುತಲಿದ್ದಾರೆ॥೫೨॥ ದೇವಾಃ-ದೇವತೆಗಳೂ, (ಅರ್ಚಾಪ್ರತಿಮೆಗಳೂ) ಕ್ಷೇತ್ರಾಣಿ-ಪುಣ್ಯಸ್ಥಲಗಳೂ, ತೀರ್ಥಾನಿ-ಪುಣ್ಯಜಲಗಳೂ, ದರ್ಶನಸ್ಪರ್ಶನಾರ್ಚನೈಃ-ನೋಡುವುದರಿಂದಲೂ ಸೋಂಕುವುದರಿಂದಲೂ ಪೂಜಿಸುವುದರಿಂದಲೂ, ಶನೈಃ-ಮೆಲ್ಲಗೆ, ಕಾಲೇನ-ತಕ್ಕಷ್ಟು ಸಮಯದಿಂದ, ಪುನಂತಿ-ಶುದ್ಧಿಗೊಳಿಸುತಲಿವೆ, ತದಪಿ-ಅದೂಕೂಡ, ಅರ್ಹತಮೇಕ್ಷಯಾ-ಅತ್ಯಂತಪೂಜ್ಯರಾದ ಮಹಾತ್ಮರ ದರ್ಶನಮಾತ್ರದಿಂದಲೇ ಆಗುತಲಿದೆ ॥೫೩॥ ಇಹ-ಈ ಲೋಕದಲ್ಲಿ, ಸರ್ವೇಷಾಂ ಪ್ರಾಣಿನಾಂ ಸಕಲಶರೀರಗಳಲ್ಲಿಯೂ ಬ್ರಾಹ್ಮಣಃ-ವೇದಜ್ಞನಾದ ವಿಪ್ರನು, ಜನ್ಮನಾ-ಜಾತಿಯಿಂದಲೇ, ಶ್ರೇಯಾನ್-ಉತ್ತಮನಾಗಿರುವನು, ಮತ್ಕಲಯಾ-ನನ್ನ ಅಂಶವಾದ, ತಪಸಾ-ಯೋಗದಿಂದಲೂ, ವಿದ್ಯಯಾ-ಜ್ಞಾನದಿಂದಲೂ, ತುಷ್ಟ್ಯಾ-ತೃಪ್ತಿಯಿಂದಲೂ, ಯುತಃ-ಕೂಡಿದ ಬ್ರಾಹ್ಮಣನು, ಕಿಮು-ಉತ್ತಮನೆಂದು

---

ಕೃತಿಗೂ ನಿಯಾಮಕನಾಗಿ ಮಾಯಾಸಂವೃತನಾದ್ದರಿಂದ ಭಕ್ತರಲ್ಲದವರಿಗೆ ಅಗೋಚರನಾಗಿಯೂ ಇರುವ ನಿನಗೆ ನಮಸ್ಕಾರವು ॥೪೯॥ ಎಲೈ ಸ್ವಾಮಿಯೇ, ಆ ನೀನು ದಾಸರಾದ ನಮ್ಮಂ ಶಿಕ್ಷಿಸು, ನಿನಗೋಸುಗ ನಾನು ಯಾವ ಸೇವೆಯಂ ಮಾಡಬೇಕೋ ಅದನುಪದೇಶಂಗೆಯ್ವನಾಗು. ಯಾವವರೆಗೂ ನಿನ್ನ ದರ್ಶನವುಂಟಾಗುವುದಿಲ್ಲವೋ ಅಷ್ಟು ಪರ್ಯಂತವೂ ಪ್ರಾಣಿಗಳಿಗೆ ಸಂಸಾರ ಕ್ಲೇಶವಿರುವುದು. ನಿನ್ನ ದರ್ಶನವಾದ ಮೇಲೆ ಸರ್ವಕ್ಲೇಶಗಳೂ ನಾಶವಾಗುವುದು ॥೫೦॥ ನಮಸ್ಕರಿಸುವ ಭಕ್ತರ ಸಮಸ್ತ ಕಷ್ಟಂಗಳಂ ಪರಿಹರಿಸುವ ಭಗವಂತನು ಈಪ್ರಕಾರವಾಗಿ ಅವರೀರ್ವರಿಂದಲೂ ವಿಜ್ಞಾಪಿಸಲ್ಪಟ್ಟ ಅರ್ಥಮಂ ಕೇಳಿ ತನ್ನ ಹಸ್ತದಿಂದ ಆ ಬ್ರಾಹ್ಮಣನ ಹಸ್ತಮಂ ಹಿಡಿದು ಮುಗುಳನಗೆಯುಳ್ಳವನಾಗಿ ನುಡಿದನದೆಂತೆನೆ ॥೫೧॥ ಎಲೈ ಬ್ರಾಹ್ಮಣನೇ, ಈ ಮುನಿಗಳು ನಿನ್ನಂ ಅನುಗ್ರಹಿಸಲೋಸುಗ ಬಂದವರೆಂದು ತಿಳಿದವನಾಗು, ಇವರು ಜನರಂ ಪಾವನಂಗೆಯ್ವರಾಗಿ ನನ್ನೊಡನೆ ಸಂಚರಿಸುವರು ॥೫೨॥ ದೇವತೆಗಳು, ಕ್ಷೇತ್ರಗಳು, ತೀರ್ಥಗಳು, ದರ್ಶನಸ್ಪರ್ಶನಾರ್ಚನಂಗಳಿಂದ ಮೆಲ್ಲಮೆಲ್ಲನೆ ಕಾಲಾಂತರದಲ್ಲಿ ಪಾವನಂಗೆಯ್ವವು, ಸಾಧುಗಳಾದ ಋಷಿಗಳು ದರ್ಶನಮಾತ್ರದಿಂದಲೇ ತತ್ಕಾಲದಲ್ಲಿಯೇ ಪಾವನಗೆಯ್ವರು ॥೫೩॥ ಬ್ರಾಹ್ಮಣನು ಸರ್ವಪ್ರಾಣಿಗಳಲ್ಲಿಯೂ ಶ್ರೇಷ್ಠನು, ತಪೋಜ್ಞಾನ ಸಂತುಷ್ಟಿಗಳಿಂ ಕೂಡಿ ನನ್ನ ಧ್ಯಾನವನ್ನು ಮಾಡುವನಾದರೆ ಅವನು ಜಗತ್ತನ್ನೇ ಪಾವನಂಗೆಯ್ವನೆಂದು ಹೇಳತಕ್ಕದ್ದೇ

ವಿದ್ಯಯಾತುಷ್ಟ್ಯಾಕಿಮುಮತ್ಕಲಯಾಯುತಃ ॥೫೪॥ ನಬ್ರಾಹ್ಮಣಾನ್ಮೇದಯಿತಂರೂಪಮೇತಚ್ಚತು
ರ್ಭುಜಮ್ । ಸರ್ವವೇದಮಯೋವಿಪ್ರಸ್ಸರ್ವದೇವಮಯೋಹ್ಯಹಮ್ ॥೫೫॥ ದುಷ್ಪ್ರಜ್ಞಾಅವಿದಿತ್ವೈವಮ
ವಜಾನಂತ್ಯಸೂಯವಃ । ಗುರುಂಮಾಂವಿಪ್ರಮಾತ್ಮಾನಮರ್ಚಾದಾವಿಜ್ಯದೃಷ್ಟಯಃ ॥೫೬॥ ಚರಾ
ಚರಮಿದಂವಿಶ್ವಂಭಾವಾಯೇಚಾಸ್ಯಹೇತವಃ । ಮದ್ರೂಪಾಣೀತಿಚೇತಸ್ಯಾಧತ್ತೇವಿಪ್ರೋಮದೀಕ್ಷಯಾ ॥
ತಸ್ಮಾದ್ಬ್ರಹ್ಮಋಷೀನೇತಾನ್ ಶ್ರದ್ಧಯಾರ್ಚಯನಿತ್ಯಶಃ । ಏವಂಚೇದರ್ಚಿತೋಸ್ಮ್ಯದ್ಧಾನಾನ್ಯಥಾ
ಭೂರಿಭೂತಿಭಿಃ ॥೫೮॥ ಶ್ರೀಶುಕಃ ॥ ಸಇತ್ಥಂಪ್ರಭುಣಾದಿಷ್ಟಸ್ಸಹಕೃಷ್ಣಾನ್ ದ್ವಿಜೋತ್ತಮಾನ್ । ಆ
ರಾಧ್ಯೈಕಾತ್ಮಭಾವೇನಮೈಥಿಲಶ್ಚಾಪಸದ್ಗತಿಮ್ ॥೫೯॥ ಏವಂಸ್ವಭಕ್ತಯೋರಾಜನ್ ಭಗವಾನ್ ಭಕ್ತಭ

---

ಹೇಳತಕ್ಕದ್ದೇನಿದೆ ॥೫೪॥ ಚತುರ್ಭುಜಂ-ನಾಲ್ಕುತೋಳುಗಳುಳ್ಳ, ಏತದ್ರೂಪಮಪಿ-ಈಕೃಷ್ಣಾಕಾರವೂ ಕೂಡ, ಬ್ರಾಹ್ಮಣಾತ್-ವೇದಜ್ಞನಾದ ವಿಪ್ರನಿಗಿಂತಲೂ, ಮೇ-ನನಗೆ, ದಯಿತಂ-ಪ್ರಿಯವಾದ್ದು, ನ-ಅಲ್ಲವು, ವಿಪ್ರಃ-ಬ್ರಾಹ್ಮಣನು, ಸರ್ವವೇದಮಯಃ-ಸಕಲವೇದಂಗಳಿಂ ದಧಿಕನಾದವನು, ಅಹಂ-ನಾನು, ಸರ್ವದೇವಮಯೋಹಿ-ಸಕಲದೇವತೆಗಳಿಂದಧಿಕನಲ್ಲವೆ? (ವೇದಸ್ವರೂಪನುವಿಪ್ರ, ವೇದಸ್ವರೂಪನು ನಾನು) ॥೫೫॥ ದುಷ್ಪ್ರಜ್ಞಾಃ-ದೋಷದೃಷ್ಟಿಯುಳ್ಳಂಥಾ, ಅಸೂಯವಃ-ಹೊಟ್ಟೆಕಿಚ್ಚು ಪಡುವಂಥಾ, ಅರ್ಚಾದಾವಿಜ್ಯದೃಷ್ಟಯಃ-ಪ್ರತಿಮೆಗಳುಮೊದಲಾದ್ದರಲ್ಲಿದೇವರೆಂಬಬುದ್ಧಿಯುಳ್ಳವರು, ಗುರುಂ-ಅಜ್ಞಾನಪರಿಹಾರಕನಾದ್ದರಿಂದ, ದೊಡ್ಡವನಾದ, ಆತ್ಮಾನಂ-ಪರಮಾತ್ಮಸ್ವರೂಪನಾದ, ವಿಪ್ರಂ-ಬ್ರಾಹ್ಮಣರೂಪನಾಗಿರುವ, ಮಾಂ-ನನ್ನನ್ನು, ಏವಂ-ಹೀಗೆ, ಅವಿದಿತ್ವಾ-ತಿಳಿಯದೆ, ಅವಜಾನಂತಿ-ಅಲಕ್ಷ್ಯವಾಗಿ ತಿಳಿಯುವರು ॥೫೬॥ ವಿಪ್ರಃ-ಬ್ರಾಹ್ಮಣನು, ಮದೀಕ್ಷಯಾ-ನನ್ನಲ್ಲಿದೃಷ್ಟಿಯಿಂದ, ಚರಾಚರಂ-ಚೇತನಾಚೇತನವಾದ, ಇದಂವಿಶ್ವಂ-ಈ ಪ್ರಪಂಚವನ್ನೂ, ಅಸ್ಯ-ಈ ಪ್ರಪಂಚಕ್ಕೆ, ಹೇತವಃ-ಕಾರಣಂಗಳಾದ, ಭಾವಾಃ-ಮಹದಹಂಕಾರಾದಿ ಭಾವಪದಾರ್ಥಂಗಳೂ, ಯೇಚ-ಯಾವವುಂಟೋ, ತಾಂಶ್ಚ-ಅವುಗಳನ್ನೂ, ಮದ್ರೂಪಾಣೀತಿ-ನನ್ನಮೂರ್ತಿಗಳಿಂದು [ನನ್ನಲ್ಲಿ ಅಧ್ಯಸ್ತಗಳಾದ್ದರಿಂದ ನಾನೆಂದು] ಚೇತಸಿ-ನಿಶ್ಚಯವೃತ್ತಿಯಲ್ಲಿ, ಆಧತ್ತೇ-ನಿರ್ಧರಿಸುವನು ॥೫೭॥ ತಸ್ಮಾತ್-ಆ ಕಾರಣದಿಂದ, ಏತಾನ್ ಬ್ರಹ್ಮರ್ಷೀನ್-ಈಜ್ಞಾನಿಗಳಾದ, ಮುನಿಗಳನ್ನು, ನಿತ್ಯಶಃ-ಸರ್ವಕಾಲಗಳಲ್ಲಿಯೂ, ಶ್ರದ್ಧಯಾ-ಆವಶ್ಯಕಬುದ್ಧಿಯಿಂದ, ಅರ್ಚಯ-ಪೂಜಿಸು, ಏವಂಚೇತ್-ಹೀಗಾದರೆ, ಭೂರಿಭೂತಿಭಿಃ-ಅಧಿಕೈಶ್ವರ್ಯಗಳಿಂದ, ಅದ್ಧಾ-ಪ್ರತ್ಯಕ್ಷವಾಗಿ, ಅರ್ಚಿತಃ-ಪೂಜಿಸಲ್ಪಟ್ಟವನು, ಅಸ್ಮಿ-ಆಗುವೆನು ಅನ್ಯಥಾ-ಬೇರೆಬಗೆಯಾಗಿ, ನ-ಅಲ್ಲವು ॥೫೮॥ ಸಃ-ಆ ಬ್ರಾಹ್ಮಣನು, ಇತ್ಥಂ-ಹೀಗೆ, ಪ್ರಭುಣಾ-ಕೃಷ್ಣನಿಂದ, ಆದಿಷ್ಟಃ-ಆಜ್ಞಾಪಿಸಲ್ಪಟ್ಟವನಾಗಿ, ಸಕೃಷ್ಣಾನ್-ಕೃಷ್ಣನಿಂಸಹಿತರಾದ, ದ್ವಿಜೋತ್ತಮಾನ್-ಬ್ರಾಹ್ಮಣಶ್ರೇಷ್ಠರನ್ನು, ಆರಾಧ್ಯ-ಪೂಜಿಸಿ, ಏಕಾತ್ಮಭಾವೇನ-ಅಪ್ರೈಲತಾನು ಸಂಧಾನದಿಂದ, ಸದ್ಗತೀಂ-ಮೋಕ್ಷವನ್ನು, ಆಪ-ಪಡೆದನು, ಮೈಥಿಲಶ್ಚ-ಬಹುಳಾಶ್ವನೂ ಪಡೆದನು ॥೫೯॥ ರಾಜನ್-ಅರಸನೇ, ಭಕ್ತಭಕ್ತಿಮಾನ್-ಸೇವಕರಲ್ಲಿ ಪ್ರೀತಿಯುಳ್ಳವನಾದ, ಭಗವಾನ್-ಕೃಷ್ಣನು, ಸ್ವಭಕ್ತಯೋಃ-ತನ್ನಸೇವಕರಾದ, ಶ್ರುತದೇವಬಹುಳಾಶ್ವರ ಬಳಿಯ

---

ನು ॥೫೪॥ ಎಲೈ ಬ್ರಾಹ್ಮಣನೇ, ನನಗೆ ಚತುರ್ಭುಜಗಳಿಂ ಯುಕ್ತವಾದ ಈ ರೂಪವು ಬ್ರಾಹ್ಮಣನಿಗಿಂತಲೂ ಪ್ರಿಯವಲ್ಲವು, ಬ್ರಾಹ್ಮಣನು ಸರ್ವ ವೇದ ಸ್ವರೂಪನು, ನಾನೂ ಸರ್ವ ವೇದ ಸ್ವರೂಪನು, ವೇದಂಗಳು ನನ್ನ ಸ್ವರೂಪ ಪ್ರಕಾಶಕಂಗಳಾದ್ದರಿಂದ ಅಂತಾ ವೇದಂಗಳಂ ಧರಿಸುವ ಬ್ರಾಹ್ಮಣರು ನನಗತ್ಯಂತ ಪ್ರಿಯರು ॥೫೫॥ ಪ್ರಜ್ಞಾ ಹೀನರಾದವರು ಈ ಯರ್ಥವಂ ತಿಳಿಯದೆ ಅಸೂಯಪಡುವರಾಗಿ ಪ್ರತಿಮೆ ಮೊದಲಾದ ಶಿಲಾದಿಗಳಲ್ಲಿ ಪೂಜ್ಯ ದೃಷ್ಟಿಯುಳ್ಳವರಾಗಿ ಪೂಜ್ಯನಾದ ಬ್ರಾಹ್ಮಣನಂ ಪೂಜ್ಯನೆಂದು ತಿಳಿಯಲಾರರು ॥೫೬॥ ಚರಾ ಚರಾತ್ಮಕವಾದ ಪ್ರಪಂಚವೂ ಇದಕ್ಕೆ ಕಾರಣವಾದ ಭಾವಗಳೂ ಸಹ ಜ್ಞಾನಿಗಳಿಗೆ ತಿಳಿದಿರುವವು ॥೫೭॥ ಎಲೈ, ಬ್ರಾಹ್ಮಣನೇ, ಬ್ರಹ್ಮರ್ಷಿಗಳಂ ಭಕ್ತಿಯಿಂದ ಪೂಜಿಸಿದರೆ ನಾನು ಪೂಜಿಸಲ್ಪಟ್ಟವನೇ ಸರಿ- ಹಾಗಲ್ಲದೆ ಮಹಾ ವಿಭವದಿಂದ ವಿಗ್ರಹಾದಿಗಳಲ್ಲಿ ನನ್ನಂ ಪೂಜಿಸಿದರೆ ಈ ಸಂತೋಷವಿಲ್ಲ ॥೫೮॥ ಈ ಪ್ರಕಾರವಾಗಿ ಶ್ರೀ ಹರಿಯಿಂದ ಆಜ್ಞಾಪ್ತರಾದ ಆವರೀರ್ವರೂ ಶ್ರೀ ಕೃಷ್ಣ ಸಹಿತರಾದ ಆಬ್ರಹ್ಮರ್ಷಿಗಳಂ ಅತಿಶಯ ಭಕ್ತಿಯಿಂದ ಅರ್ಚಿಸಿ ಸದ್ಗತಿಯನೈದಿದರು ॥೫೯॥ ಎಲೈ ಅರಸೇ, ಈ ಪ್ರಕಾರವಾಗಿ ಶ್ರೀ ಹರಿಯು ತನ್ನಭಕ್ತರಿಗೆ ಭಕ್ತನಾದ ಕಾರಣದಿಂ ಅವ

ಶ್ವಿರ್ಷಾ | ಉಷಿತ್ವಾದಿಶ್ಯ ಸನ್ಮಾರ್ಗಂಪುನರ್ದ್ವಾರವತೀಮಗಾತ್॥ ... ॥೬೦॥

ಇತಿಶ್ರೀಮದ್ಭಾಗವತೇ-ದಶಮಸ್ಕಂಧೇ-ಷಡಶೀತಿತಮೋಧ್ಯಾಯಃ.

ನಾರಾಯಣಮಹರ್ಷಿಣಾನಾರದಾಯೋಪದಿಷ್ಟಶ್ರುತಿಗೀತೋಪಾಖ್ಯಾನಪ್ರಾರಂಭಃಸ್ಸೋಕ್ತಿ-

ರಾಜಾ॥ಬ್ರಹ್ಮನ್ಬ್ರಹ್ಮಣ್ಯನಿರ್ದೇಶ್ಯೇನಿರ್ಗುಣೇಗುಣವೃತ್ತಯಃ॥ ಕಥಂಚರಂತಿಶ್ರುತಯಸ್ಸಾಕ್ಷಾ

---

ಲ್ಲಿ, ಉಷಿತ್ವಾ-ಆವಾಸವಾಗಿದ್ದು, ಏವಂ-ಹೀಗೆ, ಸನ್ಮಾರ್ಗಂ-ಒಳ್ಳೆಯದಾರಿಯನ್ನು,ಆದಿಶ್ಯ-ಆಜ್ಞಾಪಿಸಿ, ಪುನಃ- ಮರಳಿಯೂ. ದ್ವಾರವತೀಂ-ಕುಶಸ್ಥಲಿಯೆನ್ನ,ಅಗಾತ್-ಸೇರಿದನು. ॥೬೦॥

ಇಂತೆಂಬಲ್ಲಿಗೆ ಭಾಗವತಪ್ರತಿಶಬ್ದಾರ್ಥ ಬೋಧಿನಿಯೊಳು ದಶಮಸ್ಕಂಧದಲ್ಲಿ

೮೬ನೆಯಅಧ್ಯಾಯಂ ಮುಗಿದುದು.

---

೮೭ನೆಯ ಅಧ್ಯಾಯದ ಪ್ರತಿಪದಟೀಕೆ.

(ಪರೀಕ್ಷಿತನಪ್ರಶ್ನವು) ಬ್ರಹ್ಮನ್-ಬ್ರಾಹ್ಮಣನಾದ ಶುಕಮುನಿಯೇ, ನಿರ್ಗುಣೇ- ವಸ್ತುತಃಗುಣವಿಶೇಷಂಗಳಿಲ್ಲದ್ದಾದ್ದರಿಂದ, ಅನಿರ್ದೇಶ್ಯೇ-ಇದು ಇಂಥಾದ್ದೆಂದು ತೋರಿಸಿಟ್ಟುಹೇಳಲಶಕ್ಯವಾದಂಥಾ, ಸದಸತಃಪರೇ-ಕಾರ್ಯಕಾರಣಗಳಿಗಿಂತಲೂ ವಿಲಕ್ಷಣವಾದ, ಬ್ರಹ್ಮಣಿ-ನಿರ್ವಿಶೇಷಚಿನ್ಮಾತ್ರಸದ್ವಸ್ತುವಿನಲ್ಲಿ, ಗುಣವೃತ್ತಯಃ-ಗುಣಗಳಿಂದ ಬೋಧಕಂಗಳಾಗಲುಳ್ಳ, ಶ್ರುತಯಃ-ವೇದಂಗಳು, ಸಾಕ್ಷಾತ್-ಪ್ರತ್ಯಕ್ಷವಾಗಿ, ಕಥಂ-ಹೇಗೆ, ಚರಂತಿ-ವಾಚಕಂಗಳಾಗುವವು? (ಗುಣಗಳುಳ್ಳವಸ್ತುವನ್ನು ಇದು ಇಂಥಾದ್ದೆಂದು ವಾಕ್ಯಗಳು ತಿಳಿಸಲಾಪುವವೇ ಹೊರತು ನಿರ್ಗುಣವಸ್ತುವನ್ನು ಹೇಳಲಾರವು. ಆದ್ದರಿಂದ ವೇದಂಗಳು ಅವಿದ್ಯಾಶಬಳಿತಾ

---

ಶೀವರ್ಗರಿಗೂ ಜ್ಞಾನೋಪದೇಶಂಗೆಯ್ದು ಕೆಲವು ದಿವಸಗಳು ಅಲ್ಲಿಯೇವಾಸಂಗೆಯ್ದು ಪುನಶ್ಚ ದ್ವಾರಕಾಪುರವ ನೆಯ್ದಿದನು ॥೬೦

ಇಂತು ಶ್ರೀಶುಕಮುನಿಯು ಪರೀಕ್ಷಿದ್ರಾಯನಂ ಕುರಿತು ನಿರೂಪಿಸಿದನೆಂದುಸೂತಪೌ

ರಾಣಿಕನು ನೈಮಿಶಾರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಪೇಳಿದನೆಂ

ಬಲ್ಲಿಗೆ-ಶ್ರೀಮನ್ಮಹೀಶೂರ ಪುರವರಾಧೀಶ ಶ್ರೀಚಾಮರಾಜತನುಜಶ್ರೀ

ಮತ್ಕೃಷ್ಣರಾಜವಿರಚಿತವಾದ ಶ್ರೀಕೃಷ್ಣರಾಜವಾಣೀವಿಲಾಸಮಂ

ಬ ಶ್ರೀಭಾಗವತ ಪುರಾಣದಕರ್ಣಾಟಭಾಷಾವ್ಯಾಖ್ಯಾನದಲ್ಲಿ

೮೬ನೆಅಧ್ಯಾಯಂಮುಗಿದುದು

೮೭ನೆಯ ಅಧ್ಯಾಯವು.

ಶ್ರೀಧರೀಯಶ್ಲೋಕ.॥ ಸಪ್ತಾಶೀತಿತಮೇನಾರಾಯಣನಾರದಸಂವಾದತಃ। ವೇದೈಸ್ಸ್ತುತಿರ್ಗುಣಾಲಂಬಾನಿರ್ಗುಣಾಂಚೇತಥೋಚ್ಯತೇ॥ ✝ ॥ಟೀ॥ ಎಂಭತ್ತೇಳನೆಯ ಅಧ್ಯಾಯದಲ್ಲಿ ನಾರಾಯಣ ನಾರದ ಸಂವಾದದಿಂದ ಭಗವಂತನ ಸಗುಣಸ್ವರೂಪವಂ ನಿರ್ಗುಣ ಸ್ವರೂಪವಂಸಹ ಶ್ರುತ್ಯಭಿಮಾನದೇವತೆಗಳು ಸ್ತುತಿಸಿದರುಬರ್ಥವಂ ಶ್ರೀಶುಕಾಚಾರ್ಯನು ಪರೀಕ್ಷಿದ್ರಾಯನಂಕುರಿತು ನಿರೂಪಿಸುವನದೆಂತೆನೆ-

ಪೂರ್ವಾಧ್ಯಾಯಾಂತದಲ್ಲಿ ಶ್ರೀಕೃಷ್ಣನು ಸ್ವತಃಪ್ರಮಾಣ ಭೂತಂಗಳಾದ ವೇದಗಳಿಗೆ ಪರಮತಾತ್ಪರ್ಯವು ಪರಬ್ರಹ್ಮನಲ್ಲಿಯೇ ಮತ್ತೊಂದರೊಳಗಿಲ್ಲವೆಂಬರ್ಥವಂ ಭಕ್ತರಾದ ಶ್ರುತದೇವ ಬಹುಳಾಶ್ವರಿಗೆ ನಿರೂಪಿಸಿ ಪುನಃ ದ್ವಾರಕಾಪುರವ ನೆಯ್ದಿದನೆಂದು ಶುಕಮುನಿಯಿಂದ ನಿರೂಪಿಸಲ್ಪಟ್ಟ ಅರ್ಥವಂಕೇಳಿ ಪರೀಕ್ಷಿದ್ರಾಯನು ಮೊದಲು ಶುಕಮುನಿಯಂ ಪ್ರಶ್ನೆಗೆಯ್ದನದೆಂತೆನೆ- ಎಲೈ ಬ್ರಾಹ್ಮಣೋತ್ತಮನೇ। ಶ್ರುತಿಗಳು ಗುಣಂಗಳನ್ನು ಅವಲಂಬಿಸಿರುವ ವಾದರೂ ಇದುಎಂದು ನಿರ್ದೇಶಂಗೆಯ್ಯಲಶಕ್ಯವಾಗಿ ಗುಣಗಳಿಲ್ಲದುದಾಗಿ ಕಾರ್ಯಕಾರಣ

ತ್ಸದಸತಃಪರೇ॥೧॥ ಶ್ರೀಶುಕಃ॥ ಬುದ್ಧೀಂದ್ರಿಯಮನಃಪ್ರಾಣಾನ್ ಜನಾನಾಮಸೃಜತ್ಪ್ರಭುಃ । ಮಾತ್ರಾರ್ಥಂಚಭವಾರ್ಥಂಚಆತ್ಮನೇಕಲ್ಪನಾಯಚ ॥೨॥ ಸೈಷಾಹ್ಯುಪನಿಷದ್ಬ್ರಾಹ್ಮೀಪೂರ್ವೇಷಾಂಪೂರ್ವಜೈರ್ಧೃತಾ । ಶ್ರದ್ಧಯಾಧಾರಯೇದ್ಯಸ್ತಾಂಕ್ಷೇಮಂಗಚ್ಛೇದಕಿಂಚನಃ ॥೩॥ ಅತ್ರತೇವರ್ಣಯಿಷ್ಯಾಮಿಗಾಥಾಂನಾರಾಯಣಾನ್ವಿತಾಮ್ । ನಾರದಸ್ಯಚಸಂವಾದಮೃಷೇರ್ನಾರಾಯಣಸ್ಯಚ ॥೪॥ ಏಕದಾ

ದೆ ಸಗುಣಬ್ರಹ್ಮವಂ ಅಭಿಧಾವೃತ್ತಿಯಿಂದ ಬೋಧಿಸುವವೇ ಹೊರತು ನಿರ್ಗುಣಬ್ರಹ್ಮವನ್ನು ಹೇಗೆ ಬೋಧಿಸಲಾಪುವವು,ಎಂದರೆ- ಶ್ರು॥ ಯತೋವಾಚೋನಿವರ್ತಂತೇ, ಅಪ್ರಾಪ್ಯಮನಸಾಸಹ॥ ಎಂದುವಾಗಾದ್ಯವಿಷಯವಾದ ನಿರ್ಗುಣವಸ್ತುವು॥ ಶ್ರು॥ ತಂತ್ವೌಪನಿಷದಂಪುರುಷಂಪೃಚ್ಛಾಮಿ॥ ಸ್ಮೃ॥ ವೇದೈಶ್ಚಸರ್ವೈರಹಮೇವವೇದ್ಯಃ-ಎಂಬಶ್ರುತಿಸ್ಮೃತಿಗಳ ಪ್ರಕಾರವಾಕ್ಕುಗಳಿಗೆವಿಷಯವೆಂದು ಹೇಗೆಹೇಳಲ್ಪಟ್ಟಿತು] ಎಂದು ಪ್ರಶ್ನಾಭಿಪ್ರಾಯವು ॥೧॥ (ಶುಕವಚನವು)ಪ್ರಭುಃ-ಸ್ವತಂತ್ರನಾದ ಪರಮೇಶ್ವರನು, ಜನಾನಾಂ-ಜೀವಾತ್ಮರಿಗೆ, ಮಾತ್ರಾರ್ಥಂ-ವಿಷಯಾನುಭವಕ್ಕೋಸುಗವೂ, ಭವಾರ್ಥಂಚ-ಜನ್ಮಾದಿಕ್ರಿಯೆಗೋಸುಗವೂ, ಆತ್ಮನೇ-ಲೋಕಾಂತರಭೋಗಕ್ಕೋಸ್ಕರವೂ, ಅಕಲ್ಪನಾಯಚ ಮೋಕ್ಷಕ್ಕೋಸ್ಕರವೂ, (ಧರ್ಮ-ಅರ್ಥ-ಕಾಮ ಮೋಕ್ಷಂಗಳಿಗೋಸುಗ) ಬುದ್ಧೀಂದ್ರಿಯಮನಃಪ್ರಾಣಾನ್-ಬುದ್ಧಿ-ಜ್ಞಾನ, ಇಂದ್ರಿಯ-ಶ್ರೋತ್ರಾದಿಕರಣಂಗಳು, ಮನಃ-ಸಂಕಲ್ಪವು, ಪ್ರಾಣಾನ್-ಪ್ರಾಣಾಪಾನಾದಿಗಳು, ಇವುಗಳನ್ನು, ಅಸೃಜತ್-ಸೃಷ್ಟಿಮಾಡಿದನು (ಜಗಜ್ಜನ್ಮಾದಿಕಾರಣವಾದ ಸಗುಣಬ್ರಹ್ಮಕ್ಕೆ ವಾಚಕಂಗಳಾದ ಶ್ರುತಿಗಳಿಗೆ ನಿರ್ಗುಣಬ್ರಹ್ಮಸ್ವರೂಪದಲ್ಲಿ ಯೋಗ್ಯವೃತ್ತಿಯನ್ನು ಕಲ್ಪಿಸಬೇಕೆಂಬ ಭಾವದಿಂದ, ಸಗುಣಬ್ರಹ್ಮವಿಚಾರವನ್ನು ಹೇಳತೊಡಗಿದರು ॥೨॥ ಸೈಷಾ-ನಿರ್ಗುಣ ಬೋಧಕವಾಗಿಯೂ ಸಗುಣಬೋಧಕವಾಗಿಯೂ ಇರುವ, ಉಪನಿಷತ್-ವೇದಾಂತ ಶ್ರುತಿಯು, ಪೂರ್ವೇಷಾಂ ನಮ್ಮ ಪೂರ್ವಿಕರಾದ ಹಿರಿಯರಿಗೆ, ಪೂರ್ವಜೈಃ-ಹಿಂದೆಹುಟ್ಟಿದವರಾದ ಮಹರ್ಷಿಗಳಿಂದ, ಬ್ರಾಹ್ಮೀ-ವಾಚಕವಾಗಿ ಸಗುಣಬ್ರಹ್ಮಪರವೆನಿಸುತಲೂ, ಲಕ್ಷಕವಾಗಿಯೂ ವ್ಯಂಜಕವಾಗಿಯೂ ಸಗುಣಬ್ರಹ್ಮಕ್ಕೆ ಸ್ವರೂಪವಾದ ನಿರ್ಗುಣಬ್ರಹ್ಮಪರವೆನಿಸುತಲೂ, ಧೃತಾ-ನಿರ್ಧರಿಸಲ್ಪಟ್ಟಿದೆ, ತಾಂ-ಅನಾದಿವಿಶಿಷ್ಟಪರಂಪರಾಗತವಾದ ಆಶ್ರುತಿಯನ್ನು, ಯಃ-ಯಾವಪುರುಷನು, ಶ್ರದ್ಧಯಾ-ವೈತಂಡಿಕತರ್ಕದಲ್ಲಿ ಅಭಿನಿವೇಶವಿಲ್ಲದ ಆದರದಿಂದ, ಧಾರಯೇತ್-ಶ್ರವಣಮನನಾದಿಗಳಿಂದ ಧರಿಸುವನೋ, ಸಃ-ಆ ಪುರುಷನು, ಅಕಿಂಚನಃ- ದೇಹಾಭಿಮಾನಾದ್ಯುಪಾಧಿ ಇಲ್ಲದವನಾಗಿ. ಕ್ಷೇಮಂ-ಅಭಯಸ್ವರೂಪವಾದ ಬ್ರಹ್ಮವನ್ನು, ಗಚ್ಛೇತ್-ಹೊಂದುವನು ॥೩॥ಅತ್ರ-ಈ ವಿಷಯದಲ್ಲಿ, ನಾರಾಯಣಾನ್ವಿತಾಂ-ಹೇಳಿದವನಾದ ನಾರಾಯಣನಿಂಕೂಡಿದ, ಗಾಥಾಂ-ಇತಿಹಾಸವನ್ನು,ಎಂದರೆ, ನಾರಾಯಣಸ್ಯ ಋಷೇಶ್ಚ-ಬದರಿಕಾಶ್ರಮದಲ್ಲಿ ತಪವಂಗೆಯ್ಯುತ್ತಿರುವ ನಾರಾಯಣಋಷಿಗೂ,ನಾರದಸ್ಯಚ-ನಾರದಮುನಿಗೂ,ಸಂವಾದಂ-ನಡೆದಪ್ರಶ್ನೋತ್ತರರೂಪವಾದ ಕಥೆಯನ್ನು, ತೇ-ನಿನಗೆ, ವರ್ಣಯಿಷ್ಯಾಮಿ-ಬಣ್ಣಿಸಿ ಹೇಳುವೆನು ॥೪॥ ಏಕದಾ-ಒಂದು ಸಮಯದಲ್ಲಿ, ಭಗ

ಳಿಗಿಂತಲೂ ಪರವಾಗಿರುವ ಶುದ್ಧಬ್ರಹ್ಮಸ್ವರೂಪವು ಪ್ರತ್ಯಕ್ಷವಾಗಿ ಯಾವ ಮತ್ತೊಂದು ಸಂಬಂಧದಿಂದಲಾದರೂ ಎಂತುಪೇಳಲಾಪುವವು? ॥೧॥ ಎಂಬ ಪ್ರಶ್ನವಾಕ್ಯವಂಕೇಳಿ, ಶುಕಮುನಿಯು ನಿರೂಪಿಸುವನದೆಂತೆನೆ-ಎಲೈ ಅರಸೇ! ಕೇಳು ಪೂರ್ವದಲ್ಲಿ ಈಶ್ವರನು ತನ್ನಲ್ಲಿರುದ ಜೀವಾತ್ಮರಿಗೆ ವಿಷಯಾನುಭವಾರ್ಥವಾಗಿ ಜನ್ಮವಂ ಮೊದಲುಗೊಂಡು ಕರ್ಮಾಚರಣಾರ್ಥವಾಗಿಯೂ ಆಯಾಲೋಕಂಗಳನೆಯ್ದಿ ಆಯಾಫಲಂಗಳ ನನುಭವಿಸಲೋಸುಗವೂ ಮುಕ್ತಿಯಂ ಪಡೆಯಲೋಸುಗವೂ ಬುದ್ಧೀಂದ್ರಿಯಮನಃಪ್ರಾಣಂಗಳೆಂಬ ಉಪಾಧಿಗಳಂ ಸೃಜಿಸಿದನು॥೨॥ ಎಂಬ ಶ್ರುತ್ಯರ್ಥವಂ ಪೂರ್ವಿಕರಾದ ಸನಕಾದಿಗಳಿಗೂ ಮೂಲ ಪುರುಷರಾದ ಬ್ರಹ್ಮಾದಿಗಳುಕೂಡ ಅನುಸಂಧಾನಂಗೆಯ್ಯುತಲಿರುವರು. ಆದುದರಿಂದ ಯಾವಪುರುಷನು ಬ್ರಹ್ಮಪ್ರತಿಪಾದಕವಾದ ಈ ಶ್ರುತ್ಯರ್ಥವಂ ಶ್ರದ್ಧೆಯಿಂದ ಶ್ರವಣಾದಿಗಳಿಂ ಅಂತಃಕರಣದಲ್ಲಿ ಧರಿಸುವನೋ ಆಪುರುಷನು ನಿರಾಕರಿಸಲ್ಪಟ್ಟ ದೇಹಾದ್ಯುಪಾಧಿಗಳುಳ್ಳವನಾಗಿ ಮುಕ್ತಿಯಂ ಪಡೆಯುವನು ॥೩॥ಎಂದು ನಿರೂಪಿಸಿ ಈಯರ್ಥವನ್ನೇ ವಿಸ್ತಾರದಿಂ ಪೇಳಲೋಸುಗ ಶುಕಾಚಾರ್ಯನೊಂದು ಇತಿಹಾಸವಂ ಪೇಳ್ವನದೆಂತೆನೆ ಎಲೈ ಅರಸೇ! ಕೇಳು, ಈಯರ್ಥದಲ್ಲಿಯೇ, ಆದಿಋಷಿಯೆನಿಪ ನಾರಾಯಣನಿಗೂ ನಾರದನಿಗೂ ಸಹಪೂರ್ವದಲ್ಲಿ ಸಂವಾದವುಂಟಾಗಲು ನಾರಾಯಣನಿಂದ ಪೇಳಲ್ಪಟ್ಟ ಒಂದಿತಿಹಾಸವಂ ನಿನಗೆ ಪೇಳುವನಾಗುವೆನು ॥೪॥ಕೇಳೈ ಅರಸೇ! ಭಗವಂತನಿಗೆ ಪ್ರಿಯನಾದ ನಾರದಮುನಿ

ನಾರದೋ ಲೋಕಾನ್ ಪರ್ಯಟನ್ ಭಗವತ್ಪ್ರಿಯಃ । ಸನಾತನಮೃಷಿಂ ದ್ರಷ್ಟುಂ ಯಯೌ ನಾರಾಯಣಾಶ್ರಮಮ್ ‖೫‖ ಯೋ ವೈ ಭಾರತವರ್ಷೇಽಸ್ಮಿನ್ ಕ್ಷೇಮಾಯ ಸ್ವಸ್ತಯೇ ನೃಣಾಮ್ । ಧರ್ಮಜ್ಞಾನಶಮೋಪೇತಮಾಕಲ್ಪಾದಾಸ್ಥಿತಸ್ತಪಃ ‖೬‖ ತತ್ರೋಪವಿಷ್ಟಮೃಷಿಭಿಃ ಕಲಾಪಗ್ರಾಮವಾಸಿಭಿಃ । ಪರೀತಂ ಪ್ರಣತೋಽಪೃಚ್ಛದಿದಮೇವ ಕುರೂದ್ವಹ ‖೭‖ ತಸ್ಮಾ ಅವೋಚದ್ಭಗವಾನೃಷೀಣಾಂ ಶೃಣ್ವತಾಮಿಮಮ್ । ಯೋ ಬ್ರಹ್ಮವಾದಃ ಪೂರ್ವೇಷಾಂ ಜನಲೋಕನಿವಾಸಿನಾಮ್ ‖೮‖ ಶ್ರೀಭಗವಾನ್ ‖ ಸ್ವಾಯಂಭುವ ಬ್ರಹ್ಮಸತ್ರಂ ಜನಲೋಕೇಽಭವತ್ಪುರಾ । ತತ್ರಸ್ಥಾನಾಂ ಮಾನಸಾನಾಂ ಮುನೀನಾಮೂರ್ಧ್ವರೇತಸಾಮ್ ‖೯‖ ಶ್ವೇತದ್ವೀಪಂ ಗತವತಿ

---

ಭಗವತ್ಪ್ರಿಯಃ-ಪರಮಾತ್ಮನೇ ಪ್ರಿಯನಾಗಿಉಳ್ಳ, ಅಥವಾ ಪರಮೇಶ್ವರಂಗೆ ಪ್ರಿಯನಾದ (ಆತ್ಮಾರಾಮನಾದ) ನಾರದಃ-ನಾರದನೆಂಬ ದೇವರ್ಷಿಯು, ಲೋಕಾನ್-ಲೋಕಂಗಳಲ್ಲಿ, ಪರ್ಯಟನ್-ಸಾಧುಗಳನ್ನು ಅನುಗ್ರಹಿಸಲೋಸುಗ ತಿರುಗುವವನಾಗಿ, ಸನಾತನಂ ಋಷಿಂ-ಪುರಾಣಪುರುಷನಾದ ನಾರಾಯಣಋಷಿಯನ್ನು, ದ್ರಷ್ಟುಂ-ನೋಡಲೋಸುಗ, ನಾರಾಯಣಾಶ್ರಮಂ-ಬದರಿಕಾವನವಂ ಕುರಿತು, ಯಯೌ-ತೆರಳಿದನು ‖೫‖ ಯಃ-ಯಾವ ಧರ್ಮಪುತ್ರನಾದ ನಾರಾಯಣಋಷಿಯು, ನೃಣಾಂ-ಮನುಷ್ಯರ, ಕ್ಷೇಮಾಯ-ಅಭಯಕೋಸುಗವೂ, ಸ್ವಸ್ತಯೇ-ಜ್ಞಾನಕ್ಕೋಸುಗವೂ, ಧರ್ಮಜ್ಞಾನಶಮೋಪೇತಃ-ವರ್ಣಾಶ್ರಮ ಧರ್ಮದಿಂದಲೂ ಸ್ವರೂಪಜ್ಞಾನದಿಂದಲೂ ಶಾಸ್ತ್ರಜ್ಞಾನದಿಂದಲೂ ಶಾಂತಿಯಿಂದಲೂ ಕೂಡಿದವನಾಗಿ, ಅಸ್ಮಿನ್ ಭಾರತವರ್ಷೇ-ಈ ಭರತಖಂಡದ ಬದರಿಕಾಶ್ರಮದಲ್ಲಿ, ಆಕಲ್ಪಾತ್-ಪ್ರಳಯಕಾಲಪರ್ಯಂತರವೂ, ತಪಃ ಆಸ್ಥಿತಃ-ಸ್ವರೂಪಾನುಸಂಧಾನಯೋಗದಲ್ಲಿರುವನು ‖೬‖ ತತ್ರ-ಆ ಬದರಿಕಾಶ್ರಮದಲ್ಲಿ, ಕಲಾಪಗ್ರಾಮವಾಸಿಭಿಃ-ಕಲಾಪಗ್ರಾಮವೆಂಬ ಆಶ್ರಮದಲ್ಲಿವಾಸಂ ಗೆಯ್ಯುತಲಿರುವ, ಋಷಿಭಿಃ-ಮಹರ್ಷಿಗಳಿಂದ, ಪರೀತಂ-ಸುತ್ತುಬಳಸಲ್ಪಟ್ಟ, ನಾರಾಯಣಋಷಿಯಂ ಕುರಿತು, ನಾರದಮುನಿಯು, ಕುರೂದ್ವಹ-ಪರೀಕ್ಷಿತನೇ, ಇದಮೇವ-ಈ ಪ್ರಶ್ನವನ್ನೇ, ಅಪೃಚ್ಛತ್-ಕೇಳಿದನು ‖೭‖ ಭಗವಾನ್-ನಾರಾಯಣಋಷಿಯು, ತಸ್ಮೈ-ಆ ನಾರದಂಗೆ, ಜನಲೋಕನಿವಾಸಿನಾಂ-ಜನಲೋಕದಲ್ಲಿರುವ, ಪೂರ್ವೇಷಾಂ-ಸನಕಾದಿಮುನಿಗಳಿಗೆ, ಯಃ-ಯಾವ, ಬ್ರಹ್ಮವಾದಃ-ಬ್ರಹ್ಮವಿಚಾರನಾಯಿತೋ, ತಮಿಮಂ-ಅದಿದರನ್ನು, ಋಷೀಣಾಂ-ಋಷಿಗಳು, ಶೃಣ್ವತಾಂ ಸತಾಂ-ಕೇಳುತ್ತಿರುವರಾಗುತ್ತಿರುವಲ್ಲಿ, ಅವೋಚತ್-ಹೇಳಿದನು ‖೮‖ [ನಾರಾಯಣವಚನವು] ಸ್ವಾಯಂಭುವ-ನಾರದನೇ, ಪುರಾ-ಪೂರ್ವಕಾಲದಲ್ಲಿ, ಜನಲೋಕೇ-ಜನೋಲೋಕದಲ್ಲಿ, ತತ್ರತ್ಯಾನಾಂ-ಅಲ್ಲಿಯಿರುವಂಥಾ, ಊರ್ಧ್ವರೇತಸಾಂ-ಜಿತೇಂದ್ರಿಯರಾದಂಥಾ, ಮಾನಸಾನಾಂ-ಬ್ರಹ್ಮಮಾನಸಪುತ್ರರಾದ, ಮುನೀನಾಂ-ಋಷಿಗಳ, ಬ್ರಹ್ಮಸತ್ರಂ-ಬ್ರಹ್ಮವಿಚಾರರೂಪವಾದ ಸತ್ರಯಾಗವು, ಅಭವತ್-ಆಯಿತು ‖೯‖ ತ್ವಯಿ-ನಾರದನಾದ ನೀ

---

ಯು ಲೋಕಂಗಳಂ ಸಂಚರಿಸುವವನಾಗಿ ಒಂದು ಸಮಯದಲ್ಲಿ ಆದಿಋಷಿಯಾದ ಶ್ರೀನಾರಾಯಣನಂ ದರ್ಶನಂಗೆಯ್ಯಲೋಸುಗ ಬದರಿಕಾಶ್ರಮವನೆಯ್ದಿದನು ‖೫‖ ಯಾವ ನಾರಾಯಣಋಷಿಯು ಈ ಭಾರತವರ್ಷದಲ್ಲಿ ಸಮಸ್ತಜನರ ಕ್ಷೇಮಕ್ಕೋಸುಗವೂ ಶುಭಕ್ಕೋಸುಗವೂ ಧರ್ಮ ಜ್ಞಾನ ಶಾಂತಿಗಳೊಡನೆಯುಕ್ತವಾದ ತಪವಂ ಕಲ್ಪಪರ್ಯಂತವೂ ಮಾಡುತಲಿರುವನೋ ಅಂತಾ ಶ್ರೀನಾರಾಯಣನಂ ದರ್ಶನಂ ಗೆಯ್ಯಲೋಸುಗ ಅಲ್ಲಿಗೆ ಪೋದನು ‖೬‖ ಅಲ್ಲಿ ಕಲಾಪವೆಂಬ ಗ್ರಾಮವನೆಯ್ದಿ ಅಲ್ಲಿ ವಾಸಂಗೆಯ್ವ ಋಷಿಗಳಿಂದ ಪರಿವೃತನಾಗಿ ಕುಳಿತಿರುವ ಶ್ರೀನಾರಾಯಣನಂ ಕಂಡು ನಮಸ್ಕರಿಸಿ ಆಗ ನಿರ್ಗುಣವಾದ ಬ್ರಹ್ಮಸ್ವರೂಪವಂ ಗುಣಂಗಳ ನವಲಂಬಿಸಿಕೊಂಡಿರುವ ಶ್ರುತಿಗಳು ಎಂತು ನಿರೂಪಿಸುವವೆಂಬರ್ಥವನ್ನೇ ಶ್ರೀನಾರಾಯಣನಂ ಕುರಿತು ಪ್ರಶ್ನೆಗೆಯ್ದನು ‖೭‖ ಭಗವಂತನಾದ ಶ್ರೀನಾರಾಯಣನು ಋಷಿಗಳು ಶ್ರವಣಂಗೆಯ್ಯುತ್ತಿರಲು ಪೂರ್ವದಲ್ಲಿ ಜನೋಲೋಕದೊಳಗೆ ವಾಸಂಗೆಯ್ವ ಪೂರ್ವಿಕರಾದ ಋಷಿಗಳಿಗೆ ಪರಸ್ಪರವಾಗಿ ಬ್ರಹ್ಮಸ್ವರೂಪ ವಿಚಾರಾರ್ಥವಾದ ಯಾವಸಂವಾದ ವುಂಟಾಯಿತೋ ಅದನ್ನೇ ನಾರದಮುನಿಗೋಸುಗ ನಿರೂಪಿಸಿದನು. ಅದೆಂತೆನೆ- ‖೮‖ ಎಲೈ ನಾರದಮುನಿಯೇ! ಕೇಳು, ಆವುದರಲ್ಲಿ ಸಮಾನರಾದ ಋಷಿಗಳೇ ಪರಸ್ಪರ ಗುರುಶಿಷ್ಯ ಭಾವವನೆಯ್ದಿ ಬ್ರಹ್ಮವಿಚಾರವಂ ಮಾಡುವರೋ ಅದನ್ನೇ ಬ್ರಹ್ಮಸತ್ರವೆಂದು ಜ್ಞಾನಿಗಳು ಪೇಳುವರು. ಪೂರ್ವದಲ್ಲಿ ಜನೋಲೋಕದೊಳಗೆ ಅಂತಾ ಬ್ರಹ್ಮಸತ್ರವೆಂಬ ಜ್ಞಾನಯಾಗ ವುಂಟಾದಾಗೆ ನೀನು ಶ್ವೇತದ್ವೀಪದಲ್ಲಿರುವ ಅನಿರುದ್ಧನೆಂಬ ನನ್ನಂ ನೋಡಲೋಸುಗ ಶ್ವೇತದ್ವೀಪವನೆಯ್ದಿದವನಾಗುತ್ತಿರಲು ‖೯‖ ಆ ಜನೋಲೋಕದಲ್ಲಿ ನಡೆದ ಬ್ರಹ್ಮಸತ್ರವೆಂಬ ಜ್ಞಾನಯಾಗದಲ್ಲಿ ದೀಕ್ಷಿತರಾಗಿ

ತ್ವಯಿದ್ರಷ್ಟುಂತದೀಶ್ವರಮ್ । ಬ್ರಹ್ಮವಾದಸ್ಸುಸಂವೃತ್ತಃಶ್ರುತಯೋಯತ್ರಶೇರತೇ ॥೧೦॥ ತತ್ರಹಾ ಯಮಭೂತ್ಪ್ರಶ್ನಸ್ತ್ವಂಮಾಂಯಮನುಪೃಚ್ಛಸಿ । ಪರಿಹಾರಾಂಶ್ಚತಾನ್ಸರ್ವಾನ್ವಕ್ಷ್ಯೇಹಂಶೃಣು ತೇನಘ ॥೧೧॥ ತುಲ್ಯಶ್ರುತತಪಶ್ಶೀಲಾಸ್ತುಲ್ಯಸ್ವೀಯಾರಿಮಧ್ಯಮಾಃ । ಅಪಿಚಕ್ರುಃಪ್ರವಚನಮೇಕಂಶು ಶ್ರೂಷವೋಽಪರೇ ॥೧೨॥ ಸನಂದನಃ॥ಸ್ವಸೃಷ್ಟಮಿದಮಾಪೀಯಶಯಾನಂಸಹಶಕ್ತಿಭಿಃ । ತದಂತೇಬೋಧ ಯಾಂಚಕ್ರುಸ್ತಲ್ಲಿಂಗೈಶ್ಶ್ರುತಯಃಪರಮ್ ॥೧೩॥ಯಥಾಶಯಾನಂಸಂರಾಜಂವಂದಿನಸ್ತತ್ಪರಾಕ್ರ

---

ಮು, ಶ್ವೇತದ್ವೀಪಂ-ಶ್ವೇತದ್ವೀಪವನ್ನು ಕುರಿತು, ತದೀಶ್ವರಂ-ಅಲ್ಲಿಗೊಡೆಯನಾದ ವಿಷ್ಣುವನ್ನು, ದ್ರಷ್ಟುಂ-ನೋಡುವುದಕ್ಕಾಗಿ ಗತವತಿಸತಿ-ಹೋದವನಾಗುತ್ತಿರಲಾಗಿ, ಯತ್ರ-ಯಾವವಿಚಾರದಲ್ಲಿ, ಸಗುಣನಿರ್ಗುಣ ವೇದವಾಕ್ಯಂಗಳೆಲ್ಲವೂ, ಶೇರತೇ-ಐಕಕಂಠ್ಯ ದಿಂದವಿಶ್ರಾಂತಿಯನ್ನು ಹೊಂದುವವೋ, ಸಬ್ರಹ್ಮವಾದಃ-ಆ ಬ್ರಹ್ಮವಿಚಾರವು, ಸಂವೃತ್ತಃ-ನಡೆಯಿತು ॥೧೦॥ ತ್ವಂ-ನೀನು ಮಾಂ-ನನ್ನಂಕುರಿತು, ಯಂ-ಯಾವಅರ್ಥವನ್ನು, ಅನುಪೃಚ್ಛಸಿ-ಬೆಸಗೊಳ್ಳುತಲಿರುವಯೋ, ಸೋಯಂ-ಅದೇಅರ್ಥವನ್ನು ಕುರಿತ, ಪ್ರಶ್ನಃ-ಈ ಪ್ರಶ್ನವು, ತತ್ರ-ಅಲ್ಲಿ, ಅಭೂತ್-ಆಯಿತು. ಹಾ-ಆಶ್ಚರ್ಯವು, ಅನಘ-ಪಾಪರಹಿತನಾದ ನಾರದನೇ ತಾನ್ ಸರ್ವಾನ್ಪರಿಹಾರಾಂಶ್ಚ-ಆಸಮಾಧಾನಂಗಳ ನೆಲ್ಲವನ್ನೂ, ತೇ-ನಿನಗೆ, ಅಹಂ-ನಾನು, ವಕ್ಷ್ಯೇ-ಹೇಳುವೆನು, ಶೃಣು ಕೇಳು॥೧೧॥ ತುಲ್ಯಶ್ರುತತಪಶ್ಶೀಲಾಃ-ಸಮಾನವಾದ ವಿದ್ಯಾಧ್ಯಯನವೂ ತಪಸ್ಸೂ ಸ್ವಭಾವವೂ ಉಳ್ಳವರೂ, ತುಲ್ಯಸ್ವೀಯಾರಿಮಧ್ಯಮಾಃ-ಸಮಾನರಾದ ಮಿತ್ರಶತ್ರೂದಾಸೀನರುಳ್ಳವರೂ, ಅಪಿ-ಆದರೂಕೂಡ, ಏಕಂ-ಒಬ್ಬನನ್ನು ಪ್ರವಚನೇ-ಉತ್ತರಹೇಳುವನಿಷಯದ ಲ್ಲಿ ಮಾಡಿಕೊಂಡು, ಅಪರೇ-ಇತರರು, ಶುಶ್ರೂಷವಃ-ಕೇಳಲಪೇಕ್ಷೆಯುಳ್ಳವರಾಗಿ, ಚಕ್ರುಃ-ವಿಚಾರಪ್ರಶ್ನವಂಮಾಡಿದರು॥೧೨॥ (ಸನಂದನವಚನವು.)ಸ್ವಸೃಷ್ಟಂ-ತನ್ನಿಂದ ಹುಟ್ಟಿಸಲ್ಪಟ್ಟ, ಇದಂ-ಈ ಪ್ರಪಂಚವನ್ನು, ಆಪೀಯ-ಪ್ರಳಯಸಮಯದಲ್ಲಿ ಕುಡಿದಂತೆ ಉಪಸಂಹರಿಸಿಕೊಂಡು, ಶಕ್ತಿಭಿಸ್ಸಹ-ಸೂಕ್ಷ್ಮರೂಪವಾದ ಕಾಲಾದಿಶಕ್ತಿಗಳೊಡನೆ, ಶಯಾನಂ-ಯೋಗದಿಂದ ಮಲಗಿ ರುವನಂತಿರುವ,ಪರಂ-ಪರಮೇಶ್ವರನನ್ನು, ಶ್ರುತಯಃ-ವೇದಂಗಳು, ತದಂತೇ-ಆಪ್ರಳಯಕಾಲದ ತುದಿಯಾದಸೃಷ್ಟ್ಯಾದಿಸಮ ಯದಲ್ಲಿ, ತಲ್ಲಿಂಗೈಃ-ಬ್ರಹ್ಮಪ್ರತಿಪಾದಕವಾಕ್ಯಂಗಳಿಂದ, ಬೋಧಯಾಂಚಕ್ರುಃ-ಎಬ್ಬಿಸಿದವು ॥೧೩॥ ಅನುಜೀವಿನಃ-ಅನುಸರಿಸಿ ಜೀವನಮಾಡುವಂಥಾ, ವಂದಿನಃ-ಸ್ತುತಿಪಾಠಕರು, ಪ್ರತ್ಯೂಷೇ-ಪ್ರಾತಃಕಾಲದಲ್ಲಿ, ಅಭ್ಯೇತ್ಯ-ಬಂದು, ಶಯಾನಂ-ಮಲಗಿರುವ

---

ಕುಳಿತಿರುವ ಆಜನ್ಮಬ್ರಹ್ಮಚಾರಿಗಳಾಗಿ ಇಂದ್ರಿಯನಿಗ್ರಹಯುಕ್ತರಾದ ಬ್ರಹ್ಮದೇವನಿಗೆ ಮಾನಸಪುತ್ರರಾದ ಮ ಹಾತ್ಮರಾದ ಸನಕಾದಿ ಮಹಾಮುನಿಗಳಿಗೆ ಯಾವಬ್ರಹ್ಮವಿಚಾರದಲ್ಲಿ ಶ್ರುತಿಗಳೂ ಕೂಡ ಮೋಹಪಡುವವೋ, ಅಂತಾ ಬ್ರಹ್ಮವಿಚಾರವು ಪರಸ್ಪರವಾಗಿ ಉಂಟಾಯಿತು ॥೧೦॥ ಆಗ ಆಸಭೆಯಲ್ಲಿ ಈಗ ನನ್ನಂಕುರಿತು ನೀನುಯಾ ವ ಅರ್ಥವಂ ಪ್ರಶ್ನೆಗೆಯ್ದೆಯೋ ಅದೇಯರ್ಥವಂಕುರಿತು ಪ್ರಶ್ನೆಯುಂಟಾಯಿತು. ಪಾಪರಹಿತನಾದ ನಾರದನೇ! ಕೇಳು, ಅವುಗಳಿಗೆ ಸಮಾಧಾನಗಳಾಗಿ ಹೇಳಲ್ಪಟ್ಟ ಉತ್ತರಗಳೆಲ್ಲವನ್ನೂ ನಿನಗೆನಾನು ಹೇಳುವೆನು ॥೧೧॥ ಅಲ್ಲಿ ಪರಸ್ಪರ ಸಮಾನವಾದ ಶಾಸ್ತ್ರಜ್ಞಾನವೂ, ತಪಸ್ಸೂ, ಸದಾಚಾರವೂ, ಉಳ್ಳವರಾಗಿ ಶತ್ರುಮಿತ್ರೋದಾಸೀನ ರಲ್ಲಿ ಸಮಾನವಾದ ಬುದ್ಧಿಯುಳ್ಳವ ರಾದುದರಿಂದ ಅತ್ಯಂತದಯಾಯುಕ್ತರಾಗಿರುವ ಋಷಿಗಳೆಲ್ಲರೂ ತಾವೇ ಬ್ರಹ್ಮಸ್ವರೂಪವಂ ಉಪದೇಶಂಗೆಯ್ಯಲು ಯೋಗ್ಯರಾಗಿದ್ದರೂ ಒಂದುಕುತೂಹಲದಿಂದ ತಮ್ಮೊಳಗೊಬ್ಬನನ್ನು ಗುರುವನ್ನಾಗಿ ಕಲ್ಪಿಸಿಕೊಂಡು ಆಋಷಿಯಂ ಕುರಿತು ಮಿಕ್ಕವರೆಲ್ಲರೂ ಶಿಷ್ಯರಾಗಿ ಬೆಸಗೊಳ್ಳುತ ಶ್ರವಣಂಗೆ ಯ್ಯಲಿಚ್ಛೆಯುಳ್ಳವರಾಗಿ ಇದೇರೀತಿಯಿಂದ ಪ್ರಶ್ನೆಗೆಯ್ದರು ॥೧೨॥ ಆಗ ಗುರುವಾಗಿರುವಸನಂದನನೆಂಬ ಮಹಾ ಮುನಿಯು ಮಿಕ್ಕಋಷಿಗಳಂ ಕುರಿತು ಒಂದು ವ್ಯಾಖ್ಯಾನವಿಶೇಷವಂ ನಿರೂಪಿಸಿದನದೆಂತೆನೆ- ಎಲೈಋಷಿಗಳಿರಾ! ಕೇಳಿರಿ; ಪೂರ್ವದಲ್ಲಿ ತನ್ನಿಂದ ನಿರ್ಮಿಸಲ್ಪಟ್ಟ ಈಸಮಸ್ತಪ್ರಪಂಚವಂ ಪ್ರಳಯಕಾಲದಲ್ಲಿ ಸಂಹರಿಸಿ ಯೋಗಶ ಕ್ತಿಗಳಿಂದ ತನ್ನಶಕ್ತಿಗಳೊಡಗೂಡಿ ನಿದ್ರೆಗೆಯ್ವನಂತಿರುವ ಪರಮೇಶ್ವರನಂ ಪ್ರಳಯಾನಂತರದಲ್ಲಿ ಪುನಃಪ್ರಪಂ ಚಸೃಷ್ಟಿಕಾಲದೊಳು ಪ್ರಥಮ ನಿಶ್ವಾಸದಿಂದ ಜನಿಸಿರುವ ಶ್ರುತ್ಯಭಿಮಾನಿದೇವತೆಗಳು ॥೧೩॥ ಆಶ್ರಯಿಸಿಕೊಂಡ

ಮೈಃ । ಪ್ರತ್ಯುಪಹೈತ್ಯ ಸುಶ್ಲೋಕ್ಯೈರ್ಬೋಧಯಂತ್ಯನುಜೀವಿನಃ ॥೧೩॥ ಶ್ರುತಯಃ॥ ಜಯಜಯಜ
ಹ್ಯಜಾಮಜಿತದೋಷಗೃಭೀತಗುಣಾಂತ್ವಮಸಿಯದಾತ್ಮನಾಸಮವರುದ್ಧಸಮಸ್ತಭಗಃ । ಅಗಜಗದೋ
ಕಸಾಮಖಿಲಶಕ್ತ್ಯವಬೋಧಕತೇಕ್ವಚಿದಜಯಾತ್ಮನಾಚಚರತೋಽನುಚರೇನ್ನಿಗಮಃ ॥೧೪॥ ಬೃಹದುಪಲ
ಬ್ಧಮೇತದವಯಂತ್ಯವಶೇಷತಯಾಯತಉದಯಾಸ್ತಮಯೌವಿಕೃತೇರ್ಮೃದಿವಾವಿಕೃತಾತ್। ಅತಋ

---

ಸಂರಾಜಂ-ಮಹಾರಾಜನನ್ನು ಸುಶ್ಲೋಕ್ಯೈಃ-ಚೆನ್ನಾಗಿಕೊಂಡಾಡಲ್ಪಟ್ಟ, ತತ್ಪರಾಕ್ರಮೈಃ-ಆತನಶೌರ್ಯಾದಿಗುಣಗಳಿಂದ, ಯ
ಥಾ-ಹೇಗೆ. ಬೋಧಯಂತಿ-ಎಬ್ಬಿಸುವರೋ ॥೧೩॥ (ಶ್ರುತಿವಚನವು) ಹೇ ಅಜಿತ-ಎಲ್ಲೈ ಸೋಲಿಸಲ್ಪಡದೆಇರುವ, ಅಖಿಲಶಕ್ತ್ಯ
ವಬೋಧಕ-ಸರ್ವಾಂತರ್ಯಾಮಿಯಾದ್ದರಿಂದ ಸಕಲ ಸಾಮರ್ಥ್ಯಗಳಿಗೂ ಉದ್ಬೋಧಕನಾಗಿರುವ ಪರಮಾತ್ಮನೇ! ಅಗಜಗ
ದೋಕಸಾಂ-ಅಗ-ಸ್ಥಾವರಗಳೂ, ಜಗತ್-ಜಂಗಮಂಗಳೂ, ಓಕಸಾಂ-ಶರೀರಂಗಳಾಗಿಉಳ್ಳ ಜೀವಾತ್ಮರ, ದೋಷಗೃಭೀತಗು
ಣಾಂ-ದೋಷ-ಸ್ವರೂಪವನ್ನು ತಿಳಿಯದಂತೆಮುಚ್ಚಿಕೊಳ್ಳಲೋಸುಗ, ಗೃಭೀತ-ಗ್ರಹಿಸಲ್ಪಟ್ಟ ಗುಣಾಂ-ಸತ್ವರಜಸ್ತಮಸ್ಸು
ಗಳುಳ್ಳ, ಅಜಾಂ-ಅನಾದಿಭಾವಾಜ್ಞಾನರೂಪವಾದ ಮಾಯೆಯನ್ನು, ಯತ್-ಯಾವಕಾರಣದಿಂದ, ತ್ವಂ-ನೀನು, ಆತ್ಮನಾ-ಸ್ವರೂ
ಪದಿಂದಲೇ, ಸಮವರುದ್ಧಸಮಸ್ತಭಗಃ-ಸಮವರುದ್ಧ-ಸಂಪ್ರಾಪ್ತವಾದ, ಸಮಸ್ತಭಗಃ-ಸಕಲೈಶ್ವರ್ಯವುಳ್ಳವನು, ಅಸಿ-ಆ
ಗಿರುವೆಯೋ. ತತ್-ವಶೀಕೃತಮಾಯನಾದ ಆಪಕಾರಣದಿಂದ, ಜಹಿ-ಜಯಿಸುವನಾಗು. ಜಯಜಯ-ಉತ್ಕರ್ಷವನ್ನು ಪ್ರಕಾಶಗೊ
ಳಿಸು, (ಮಾಯೆಗೆವಶವಾಗದ ಸರ್ವಾಂತರ್ಯಾಮಿಯೇ ನೀನು ಸ್ವಾಭಾವಿಕೈಶ್ವರ್ಯವುಳ್ಳ ಸ್ವತಂತ್ರನಾದ್ದರಿಂದ, ಜೀವಾತ್ಮರಸ್ವ
ರೂಪಕ್ಕೆ ಆವರಕವಾದ ಅನಾದಿಮಾಯೆಯನ್ನು, ನಿಗ್ರಹಿಸಿ ನಿನ್ನಸ್ವರೂಪಾತಿಶಯವನ್ನು ಪ್ರಕಾಶಗೊಳಿಸು] ಕ್ವಚಿತ್-ಸೃಷ್ಟ್ಯಾ
ದಿಸಮಯದಲ್ಲಿ, ಅಜಯಾ-ಮಾಯೆಯೊಡನೆ, ಚರತಃ-ಕ್ರೀಡಿಸುತ್ತಿರುವ, ಆತ್ಮನಾಚ-ಸಚ್ಚಿದಾನಂದೈಕರಸವಾದ ಸ್ವರೂಪದಿಂದ
ಲೂ ಕ್ರೀಡಿಸುತ್ತಿರುವ, ತೇ-ನಿನ್ನನ್ನು, ನಿಗಮಃ-ವೇದವು, ಅನುಚರೇತ್-ಪ್ರತಿಪಾದಿಸುವುದು. (ಸೃಷ್ಟ್ಯಾದಿಸಮಯದಲ್ಲಿ ಮಾ
ಯೆಯೊಡನೆ ಕ್ರೀಡಿಸುತ ಅವಿದ್ಯಾಶಬಳನಾದ ಜಗಜ್ಜನ್ಮಾದಿ ಕಾರಣನಾದರೂ ಆತ್ಮಕ್ರೀಡನಾಗಿರುವ ನಿನ್ನನ್ನು, ವೇದವು ಪ್ರತಿ
ಪಾದಿಸುತ್ತಿದೆ. ಎಂದರೆ ಶುದ್ಧಬ್ರಹ್ಮವು ವೇದಾಂತಲಕ್ಷ್ಯವಲ್ಲದೆ ವೇದಗಳಿಗೆ ವಾಚ್ಯವಾಗಲಾರದು. ಸೃಷ್ಟ್ಯಾದಿಯಲ್ಲಿಮಾ
ಯಾಶಬಳವಾಗಿ ಪರಮೇಶ್ವರನೆನಿಸಿದಾಗ ವೇದಂಗಳು ಸ್ತುತಿಸಲಾಪುವವು ॥೧೪॥ ಅವಿಕೃತಾತ್-ಪರಿಣಾಮಾದಿ ವಿಕಾರಂಗಳಿಲ್ಲದ,
ಯತಃ-ವಿವರ್ತಾಧಿಷ್ಠಾನವಾದ ಯಾವಬ್ರಹ್ಮದದೆಸೆಯಿಂದ, ಉದಯಾಸ್ತಮಯೌ-ಸರ್ವಪ್ರಪಂಚದ ಉತ್ಪತ್ತಿಲಯಂಗಳು, ವಿ

---

ರುವ ಸ್ತುತಿಪಾಠಕರು ಉಷಃಕಾಲದಲ್ಲಿ ಬಂದು ನಿದ್ರೆಗೆಯ್ಯುತಲಿರುವ ಚಕ್ರವರ್ತಿಯಾದ ಅರಸನಂ ಸಂತುಷ್ಟಂ
ಗಳಾದ ಕೀರ್ತನಗಳೊಡಗೂಡಿ ಅವನಯಶಃಪರಾಕ್ರಮಂಗಳಂ ವಿವರಿಸಿ ವರ್ಣಿಸುವುದರಿಂದ ಯಾವರೀತಿಯಾಗಿ
ಎಚ್ಚರಂಗೊಳಿಸುವರೋ, ಆರೀತಿಯಿಂದ ಭಗವಂತನ ಸರ್ವಜ್ಞತ್ವಾದಿಗುಣಂಗಳಂ ವರ್ಣಿಸುವ ವಾಕ್ಯಂಗಳಿಂದ
ಎಚ್ಚರಂಗೊಳಿಸುವವಾಗಿ ವೇದಂಗಳು ಸ್ತುತಿಸಿದವದೆಂತೆನೆ?-॥೧೩॥ [ಶ್ರುತಿಗೀತಾರಂಭವು.] ಎಲೈ, ಯಾರಿಂದಲೂ
ಜಯಿಸಲ್ಪಡದೇಯಿರುವ ಭಗವಂತನೇ! ಸ್ಥಾವರಂಗಳೂ ಜಂಗಮಂಗಳೂಸಹ ಶರೀರಂಗಳಾಗಿವುಳ್ಳ ಜೀವಾತ್ಮರಿಗೆ
ಉಪಾಧಿರೂಪವಾಗಿ ಆಜೀವರ ಆನಂದಾದಿಗಳನ್ನು ಆಚ್ಛಾದನಂಗೆಯ್ಯಲೋಸುಗ ಗುಣಂಗಳಿಂದ ಆವರಿಸಿಕೊಂ
ಡಿರುವ ಅವಿದ್ಯೆಯು ವ್ಯಭಿಚಾರಿಣಿಯಾದ ಸ್ತ್ರೀಯಂತೆ ಅನ್ಯರಂವಂಚಿಸಲೋಸುಗ ಗುಣಂಗಳಂ ಗ್ರಹಿಸುತಲಿದೆ
ಯಾದಕಾರಣದಿಂ ನಿಗ್ರಹಂಗೆಯ್ಯಲು ಯೋಗ್ಯವಾದ ಈಯವಿದ್ಯೆಯಂ ಸ್ವರೂಪದಿಂದಲೇ ಸಮಸ್ತ ಸಾಮರ್ಥ್ಯ
ಪಡೆದವನಾಗಿರುವ ನೀನುಜಯಿಸಿ, ನಿನ್ನ ಸರ್ವೋತ್ಕೃಷ್ಟತ್ವವಂ ಪ್ರಕಟಂಗೆಯ್ವನಾಗು. ಆಜೀವಾತ್ಮರು
ತಾವೇ ಜ್ಞಾನವೈರಾಗ್ಯಗಳಿಂದ ಅವಿದ್ಯೆಯನ್ನು ಏಕೆಜಯಿಸಿ ಕೊಳ್ಳಬಾರದೆಂದರೆ ಆಜೀವಾತ್ಮರಿಗೆ ನೀನೇ ಅಂತ
ರ್ಯಾಮಿಯಾಗಿ ಸಮಸ್ತಶಕ್ತಿಗಳನ್ನೂ ವೃದ್ಧಿಹೊಂದಿಸುವನಾದುದರಿಂದ ಅವರ ಅವಿದ್ಯೆಯನ್ನೂ ಪರಿಹರಿಸುವಿ
ಯೆಂಬರ್ಥದಲ್ಲಿ ಏನುಪ್ರಮಾಣವೆಂದರೆ, ವೇದವು ನೀನೇ ಸೃಷ್ಟ್ಯಾದಿಸಮಯದಲ್ಲಿ ಮಾಯೆಯೊಡನೆ ಕ್ರೀಡಿಸುವನಾ
ಗಿಯೂ ನಿರಂತರದಲ್ಲಿಯೂ ನ್ಯೂನತೆಯಿಲ್ಲದೆಯಿರುವ ಐಶ್ವರ್ಯವುಳ್ಳವನಾಗಿಯೂ ಇರುವುದರಿಂದ ಸತ್ಯಜ್ಞಾನಾ

ಷಯೊದಧುಸ್ತ್ವಯಿಮನೋವಚನಾಚರಿತಂಕಥಮಯಥಾಭವಂತಿಭುವಿದತ್ತಪದಾನಿನೃಣಾಮ್ ॥೧೬॥ಇ

---

ವಿಕೃತ್ಯೇಃ-ಘಟವಿಕಾರಂಗಳ ಉತ್ಪತ್ತಿಲಯಂಗಳು,ಮೃದಿವಾ-ಮಣ್ಣಿನಲ್ಲಿ ಹೇಗೋಹಾಗೆ, ಉಂಟಾಗುವವೋ ಅವಶೇಷತಯಾ-ಬ್ರಹ್ಮಮಾತ್ರವೇ ಸತ್ಯವಾಗಿ ಉಳಿಯುವುದರಿಂದ, ಏತದುಪಲಬ್ಧಂ-ಈದೃಶಪ್ರಪಂಚವೆಲ್ಲವನ್ನೂ,ಬೃಹತ್-ಇದಕ್ಕಧಿಷ್ಠಾನವಾದ ಬ್ರಹ್ಮವೆನುತಲೇ, ಅವಯಂತಿ-ತಿಳಿಯುತಲಿವಾರೆ, ಅತಃ-ಆ ಕಾರಣದಿಂದ, ಋಷಯಃ-ಮಂತ್ರಂಗಳೂ ಅವುಗಳನ್ನು ಕಂಡ ಮಹರ್ಷಿಗಳೂ, ಮನೋವಚನಾಚರಿತಂ-ಮನಸ್ಸಿನಿಂದ ಆಚರಿಸಲ್ಪಟ್ಟ ತಾತ್ಪರ್ಯವನ್ನೂ, ವಚನದಿಂದ ಆಚರಿಸಲ್ಪಟ್ಟ ಹೆಸರನ್ನೂ, ತ್ವಯಿ-ನಿನ್ನಲ್ಲಿಯೇ, ದಧುಃ-ಧರಿಸುವವರಾಗುವರು, ನೃಣಾಂ-ಮನುಷ್ಯರಿಂದ, ದತ್ತಪದಾನಿ-ಎಲ್ಲಿಯಾದರೂ ಇರಿಸಲ್ಪಟ್ಟ ಅಡಿಗಳು, ಭುವಿ-ನೆಲದಲ್ಲಿ, ಕಥಂ-ಹೇಗೆ, ಅಯಥಾಭವಂತಿ-ಇರಿಸಲ್ಪಡದೇ ಇರುವವಾಗುತ್ತಿವೆ. (ಪರಮೇಶ್ವರನ ದೆಸೆಯಿಂದ ಪ್ರಪಂಚಸೃಷ್ಟಿಪ್ರಳಯಂಗಳು, ಜಾಲವಿದ್ಯೆಮಾಡುವವನ ದೆಸೆಯಿಂದ, ಐಂದ್ರಜಾಲಿಕ ಪ್ರಪಂಚವಾಗಿ ಅಡಗುವಂತೆ ಆಗುತ್ತಿರುವವು. ಪ್ರಪಂಚದ ವಿಕಾರಂಗಳು ಪರಮೇಶ್ವರಂಗಿಲ್ಲವು,ಆತನುವಿವರ್ತೋಪಾದಾನವಾಗಿರಲು ಅಧಿಷ್ಠಾನವಾದ ಆತನಲ್ಲಿಪ್ರಕೃತಿ ಪರಿಣಾಮವಾಗಿ ಅಧ್ಯಸ್ತವಾದ ಪ್ರಪಂಚವು ತೋರಿಯಡಗುವುದು, ಎಂದರೆ ಈಶ್ವರನು ಸ್ವಪ್ರಾಧಾನ್ಯದಿಂದ ಜಗಜ್ಜನ್ಮಾದಿಗಳಿಗೆ ವಿವರ್ತೋಪಾದಾನವೂ ಪ್ರಕೃತಿಪ್ರಾಧಾನ್ಯದಿಂದ ಪರಿಣಾಮ್ಯುಪಾದಾನವೂ ಆಗಿರುವನು,ಮಣ್ಣಿನಲ್ಲಿ ನಾಮರೂಪವಿಕಾರಂಗಳಾದ ಮಡಿಕೆ ಕುಡಿಕೆ ಮುಚ್ಚಳ ಮೊದಲಾದವು ವಾಚಾರಂಭಣವಿಕಾರವಾಗಿ ತೋರಿಯಡಗಿದರೂ ಮಣ್ಣುಮಾತ್ರವೇ ಸತ್ಯವಾಗಿ ನಿಲ್ಲುವುದು. ಆದ್ದರಿಂದ ಮಡಿಕೆಮೊದಲಾದವು ಮಣ್ಣಿಗಿಂತಲೂ ಅನ್ಯಗಳಲ್ಲವಷ್ಟೆ, ಹಾಗೆಯೇ ಪ್ರಕೃತಿಬಳನಾದ ಪರಮೇಶ್ವರನ ದೆಸೆಯಿಂದಾಗಿ ಪರಮೇಶ್ವರನಲ್ಲಿಯೇ ದಿಟವಾಗಿರುವಂತೆ ತೋರಿಯಡಗುವದಾಗಿ ಪ್ರಪಂಚವು ಪರಮೇಶ್ವರನಿಗಿಂತಲೂ ಅನ್ಯವಲ್ಲವಾದ್ದರಿಂದ ಜ್ಞಾನಿಗಳು ಅಗ್ನೀಂದ್ರಾದಿ ಬಹುಭೇದವಾಗಿ ತೋರುವ ಪ್ರಪಂಚವನ್ನು ಅದಕ್ಕೆ ಸತ್ತೆಯಾಗಿರುವ ಬ್ರಹ್ಮವೆನುತಲೇ ತಿಳಿಯುತ್ತಿರುವರು, ನೆಲದಮೇಲೆ ನಡೆಯುವ ಪ್ರಾಣಿಗಳು ಯಾವುದರಮೇಲೆ ಕಾಲಿಟ್ಟರೂ ಅದಕ್ಕೆ ನೆಲವೆ

---

ನಂದಗಳಿಂ ಪರಿಪೂರ್ಣನಾದ ಸ್ವಸ್ವರೂಪದಿಂ ಪ್ರಕಾಶಿಸುವನಾಗಿಯೂ ಇರುವ ನಿನ್ನಂ ಪ್ರಪಂಚದ ಸೃಷ್ಟ್ಯಾದಿಗಳಿಗೆ ಮೂಲಕಾರಣನೆನುತಲೂ ಸರ್ವಜ್ಞನೆನುತಲೂ ಸರ್ವೇಶ್ವರನೆನುತಲೂ ಅನಂತಶಕ್ತಿಯುಕ್ತನೆನುತಲೂ ಸಹ ಬಹುಪ್ರಕಾರವಾಗಿ ಪೇಳುತಲಿವೆ॥೧೫॥(ಇಂದ್ರನೇ ಚರಾಚರ ಭೂತಂಗಳಿಗೆ ಅಧಿಪತಿಯೆನುತಲೂ ಅಗ್ನಿಯೇ ಸ್ವರ್ಗಕ್ಕೆ ಮುಖ್ಯನಾದವನೆನುತಲೂ ಭೂಮಿಯೇ ಗೋಪತಿಯೆನುತಲೂ ಸಹ ಅನೇಕವಾಕ್ಯಂಗಳಿಂದ ವೇದಂಗಳು ಇಂದ್ರಾಗ್ನಿ ಮೊದಲಾದ ದೇವತೆಗಳಂ ಸ್ತುತಿಸುತಲಿವೆಯಾದ್ದರಿಂದ ಆವೇದಂಗಳು ನಿನ್ನನ್ನೇ ಸರ್ವಜಗತ್ಕಾರಣನೆಂದು ಎಂತುಸ್ತುತಿಸುವವು ಎಂದೊಡೆ ಉತ್ತರವನಿತ್ತ) ನದೆಂತೆನೆ- ಎಲೈಪರಮೇಶ್ವರನೇ! ಯಾವರೀತಿಯಾಗಿ ಕಾರಣವಾದ ಮೃತ್ತಿಕೆಯಿಂದ ಘಟಮೊದಲಾದ ವಿಕಾರಂಗಳಿಗೆ ಉತ್ಪತ್ತಿಲಯಂಗಳುಂಟಾಗುತಲಿವೆಯಾದ್ದರಿಂದ ಮೃತ್ತಿಕೆಯೊಂದೇ ಸತ್ಯವಾಗುವುದೇ ಹೊರತು ವಾಚಾಮಾತ್ರದಿಂದವ್ಯವಹರಿಸಲು ಯೋಗ್ಯಂಗಳಾದ ಘಟಾದಿ ವಿಕಾರಂಗಳು ಸತ್ಯಂಗಳಾಗಲಾರವೋ, ಆರೀತಿಯಾಗಿ ಕಾರ್ಯಗಳಾದ ಆಕಾಶಾದಿ ಸಮಸ್ತ ಭೂತಂಗಳಿಗೂ ಅಧಿಷ್ಠಾನರೂಪನಾದ್ದರಿಂದ ವಿಕಾರರಹಿತನಾಗಿ ಸರ್ವಕ್ಕೂ ಮೂಲಕಾರಣನಾಗಿಯೂ ಇರುವ ಪರಿಪೂರ್ಣನಾದ ನಿನ್ನದೆಸೆಯಿಂದ ಸಮಸ್ತ ಪ್ರಪಂಚಕ್ಕೂ ಉತ್ಪತ್ತಿಲಯಂಗಳುಂಟಾಗುತಲಿವೆ. ಆಕಾರಣದಿಂ ಯಾವರೀತಿಯಾಗಿ ಘಟಾದಿಗಳು ಲಯವನೆಯ್ದಿದಾಗ್ಯೂ ಸತ್ಯವಾದ ಮೃತ್ತಿಕೆಮಾತ್ರ ಉಳಿಯುವುದೋ ಆರೀತಿಯಾಗಿ ಸಮಸ್ತ ಪ್ರಪಂಚಕ್ಕೂ ಲಯವುಂಟಾದಾಗ್ಯೂ ಪರಿಪೂರ್ಣನಾಗಿರುವ ನೀನೊರ್ವನೇ ಅವಶಿಷ್ಟನಾಗಿ ಉಳಿಯುವಿ. ಆದ್ದರಿಂದ ಋಷಿಗಳು ಇಂದ್ರಾಗ್ನಿಮೊದಲಾದ ಈದೃಶ್ಯಪ್ರಪಂಚವೂಸಹ ಬ್ರಹ್ಮವಾದ ನೀನೇಹೊರತು ನಿನಗಿಂತಲೂ ಬೇರೆಯಿಲ್ಲವೆಂದು ಹೇಳುತಲಿರುವರು.ಆದ್ದರಿಂದಲೇ ಸಮಸ್ತಮಂತ್ರಗಳೂ ನಿನ್ನಲ್ಲಿಯೇ ವಾಗ್ವ್ಯಾಪಾರದ ತಾತ್ಪರ್ಯವನ್ನು ಧರಿಸಿದೆಯೇಹೊರತು ಇತರ ವಿಕಾರಂಗಳಲ್ಲಿ ಆಮಂತ್ರಗಳಿಗೆ ತಾತ್ಪರ್ಯವೂ ವ್ಯಾಪಾರವೂ ಸಹಯಿಲ್ಲ॥ ಅದುಹೇಗೆಂದರೆ- ಭೂಮಿಯಲ್ಲಿ ಸಂಚರಿಸುತಲಿರುವ ಸಮಸ್ತಪ್ರಾಣಿಗಳ ಪಾದಂಗಳು ಮೃ

ತಿತವಸೂರಯಸ್ತ್ರ್ಯಧಿಪತೇಖಿಲಲೋಕಮಲಕ್ಷಪಣಕಥಾಮೃತಾಬ್ಧಿಮವಗಾಹ್ಯತಪಾಂಸಿಜಹುಃ । ಕಿ
ಮುತಪುನಸ್ಸ್ವಧಾಮವಿಧುತಾಶಯಕಾಲಗುಣಾಃಪರಮಭಜಂತಿಯೇಪದಮಜಸ್ರಸುಖಾನುಭವಮ್ ॥

---

ಆಧಾರವಾಗಿರುವುದಲ್ಲದೆ ಅದ್ದರಿಂದ ಯಾವಪದಾರ್ಥವನ್ನು ಭಾವಿಸಿದರೂ ಹೇಳಿದರೂ ಅದಕ್ಕೆ ಸರ್ವಾಧಾರವಾದ ಬ್ರಹ್ಮವೇ ಲಕ್ಷ್ಯವಾಗುವುದರಿಂದ ಮಹರ್ಷಿಗಳೂ ವೇದಮಂತ್ರಗಳೂ ಪರಮೇಶ್ವರನಾದ ನಿನ್ನನ್ನೇ ಭಾವಿಸುಗುಂ. ನಿನ್ನನ್ನೇ ಕೀರ್ತಿಸುಸುಗುಂ. ॥೧೬॥ ತ್ರ್ಯಧಿಪತೇ-ತ್ರಿಗುಣಾತ್ಮಕವಾದ ಮಾಯೆಯನ್ನು ಕುಣಿಸುವ ಪ್ರಭುವಾದ, ಪರಮ-ಪರಮೇಶ್ವರನೇ, ಸೂರಯಃ-ವಿವೇಕಿಗಳು ಇತಿ-ಸರ್ವಕ್ಕೂ ಕಾರಣವಾದ ನೀನೇ ಪರಮಾರ್ಥವೆಂದರತು, ಅಖಿಲ..ಅಬ್ಧಿಂ-ಅಖಿಲಲೋಕ-ಸಕಲಜನಂಗಳ, ಮಲ-ಅಜ್ಞಾನಪಾಪಂಗಳನ್ನು, ಕ್ಷಪಣ-ಹೋಗೋಳಿಸುವಂಥಾ, ಕಥಾಮೃತಾಬ್ಧಿಂ-ನಿನ್ನ ಕೀರ್ತಿಯೆಂಬ ಹಾಲ್ಗಡಲಿನಲ್ಲಿ, ಅವಗಾಹ್ಯ-ಮುಳುಗಿ, ಮಿಂದು, ತಪಾಂಸಿ-ಆಧ್ಯಾತ್ಮಿಕಾದಿ ದುಃಖಂಗಳನ್ನು, ಜಹುಃ-ಬಿಡುವರು, ಸ್ವಧಾಮ-ಗುಣಾಃ-ಸ್ವಧಾಮ-ಸ್ವರೂಪಸ್ಫುರಣದಿಂದ, ವಿಧುತ-ಕೊಡಹಿಬಿಡಲ್ಪಟ್ಟ, ಆಶಯಕಾಲಗುಣಾಃ-ಅಂತಃಕರಣ ಧರ್ಮಂಗಳಾದರಾಗಾದಿಗಳೂ, ಕಾಲಧರ್ಮಂಗಳಾದ ಮುದಿತನ ಮೊದಲಾದವೂ ಉಳ್ಳವರಾದ, ಯೇ-ಯಾರು! ಅಜಸ್ರಸುಖಾನುಭವಂ-ಅಖಂಡಾನುಭವವಾದ, ಪದಂ-ಸ್ವರೂಪವನ್ನು, ಭಜಂತಿ-ಸೇವಿಸುತಲಿರುವರೋ, ತೇಪುನಃ-ಅವರಾದರೋ, ಕಿಮುತ-ಏನುಹೇಳತಕ್ಕವರು? [ಪರಮೇಶ್ವರನೇ, ನಿನ್ನಂಸ್ತುತಿಸುವವರಿಗೆ ಅಜ್ಞಾನಪಾಪದುಃಖಂಗಳು ಕ್ಷೀಣಿಸಿಹೋಗುತ್ತಿರುವಲ್ಲಿ ನೀನೇ ಆದ ಸ್ವರೂಪವನ್ನು ಧ್ಯಾನಿಸುತ್ತ ಮನೋದೋಷಂಗಳೂ ಕಾಲದೋಷಂಗಳೂ, ಲೇಪಿಸದೆ ಇರುವ ಜೀವನ್ಮುಕ್ತರಾದ ಜ್ಞಾನಿಗಳು ಅಜ್ಞಾನಪಾಪದುಃಖಂಗಳಂ ಬಿಡುವರೆಂದು ಹೇಳಬೇಕಾದ್ದೇನಿದೆ] ॥೧೭॥ ಅಸುತೃಪಃ-ಪ್ರಾಣದಲ್ಲಿ ತೃಪ್ತಿಗೊಳ್ಳುವವರರು, ತೇ-ನಿನಗೆ, ಅನುವಿಧಾಯಿದಿ-ಅನುಸರಿಸಿಮಾಡುವ ಭಕ್ತರಾದರೆ, ಶ್ವಸಂತಿ-ಸಫಲರಾಗಿ ಬದುಕುವರು, (ನಿನ್ನ ಭಕ್ತರಲ್ಲದವರು) ದೃತಯಇವ-ಕುಲಿಮಿತಿದಿಗಳಂತೆ, (ವ್ಯರ್ಥಶ್ವಾಸವುಳ್ಳವರಾಗುವರು) ಮಹದಹಮಾದಯಃ-ಮಹತ್ತತ್ವವು ಅಹಂಕಾರವು ಮೊದಲಾದ, ಯದನುಗ್ರಹತಃ-ಯಾವ ಆತ್ಮನ ಅನುಪ್ರವೇಶದ ಸಾಮರ್ಥ್ಯದ ಸಹಾಯದಿಂದ ಅಂಡಂ-ಬ್ರಹ್ಮಾಂಡ ಪಿಂಡಾಂಡಗಳನ್ನು, ಅಸೃಜನ್-ಹುಟ್ಟಿಸಿದವೋ, ಅತ್ರ-ಈ ಪಿಂಡಾಂಡದಲ್ಲಿ, ಅನ್ವಯಃ-ಕೋಶಗಳಲ್ಲಿ ಅಭಿಮಾನಸಂಬಂಧವುಳ್ಳವನಾದ್ದರಿಂದ, ಪುರುಷವಿಧಃ-ಅನ್ನಮಯಾದಿಕೋಶಗಳ ಬಗೆಯಂತೆಬಗೆಯುಳ್ಳ ತದಾತ್ಮಕನೂ,

---

ತ್ವಾಪಾಣಲೋಷ್ಟಕಾಷ್ಠಾದಿಗಳಲ್ಲಿ ಇರಿಸಲ್ಪಟ್ಟವಾದರೂ ಎಂತು ಭೂಮಿಯಂಬಿಟ್ಟು ನಿಲ್ಲಲಾರವೋ ಅಂತು ವೇದಂಗಳು ಯಾವ ವಿಕಾರಸಂದರ್ಭಂಗಳಂ ಹೇಳುತಲಿದ್ದಾಗ್ಯೂ ಸರ್ವಕಾರಣನಾದ ಪರಮಾರ್ಥರೂಪನಾದ ನಿನ್ನನ್ನೇ ಹೇಳುತಲಿವೆ ॥೧೬॥ ಎಲೈ, ತ್ರಿಗುಣಾತ್ಮಕವಾದ ಮಾಯೆಯೆಂಬ ಸ್ತ್ರೀಮೃಗವಂ ನರ್ತನಂಗೆಯಿಸುವ ಪರಮೇಶ್ವರನೇ! ಈರೀತಿಯಾಗಿ ವಿವೇಕಿಗಳಂ ಪುರುಷರು ಸಮಸ್ತಜನರ ಪಾಪವಂ ಪರಿಹರಿಸುವುದರಲ್ಲಿ ಕಾರಣವಾದ ನಿನ್ನ ಕಥಾರೂಪವಾದ ಅಮೃತಸಮುದ್ರವಂ ಸೇವಿಸುವರಾಗಿ ಅಷ್ಟುಮಾತ್ರದಿಂದಲೇ ಸಮಸ್ತ ದುಃಖಂಗಳಂಬಿಟ್ಟರು. ಹೀಗಿರುವಲ್ಲಿ ಯಾರು ಬ್ರಹ್ಮ ಸ್ವರೂಪಸ್ಫುರಣದಿಂ ನಷ್ಟಂಗಳಾದ ರಾಗದ್ವೇಷಾದಿಗಳೂ ಜರಾಮರಣಾದಿಗಳೂ ಸಹ ವುಳ್ಳವರಾಗಿ ನಿನ್ನ ಅಖಂಡಾನಂದಾನುಭವವುಳ್ಳ ಸ್ವರೂಪವಂ ಸೇವಿಸುತಲಿರುವರೋ, ಅಂತಾ ಮಹಾತ್ಮರು ಸಮಸ್ತಪಾಪಂಗಳಂ ದುಃಖಂಗಳಂಸಹ ಬಿಡುವರೆಂದು ಏನುಹೇಳತಕ್ಕದ್ದು? ಯಾವರೀತಿಯಾಗಿ ಪದ್ಮಪತ್ರದಲ್ಲಿರುವ ಜಲಬಿಂದುಗಳು ಅದಂತಗಲದೆ ಇರುವವೋ, ಆರೀತಿಯಾಗಿ ನೀನೇ ಪರತತ್ವರೂಪವೆಂದು ತಿಳಿಯುವ ಪುರುಷರಲ್ಲಿ ಪಾಪಕರ್ಮಸಂಬಂಧವು ಉಂಟಾಗಲಾರದು ॥೧೭॥ ಎಲೈಪರಮಪುರುಷನೇ! ಲೋಕದಲ್ಲಿ ಪುರುಷರು ನಿನ್ನ ಭಕ್ತರಾದರೆ ಆಗ ಸಫಲವಾದ ಜೀವನವುಳ್ಳವರಾಗುವರು. ನಿನ್ನಲ್ಲಿ ಭಕ್ತಿಯುಕ್ತರಾಗದೆಯಿದ್ದರೆ ಅವರು ಕುಲುಮೆಯ ತಿದಿಗಳಂತೆ ನಿಷ್ಫಲವಾದ ನಿಶ್ವಾಸವುಳ್ಳವರಾಗುವರು. ಮಹತ್ತತ್ವವು ಅಹಂಕಾರವು ಮೊದಲಾದ ತತ್ವಗಳು ತಾವು ಜಡಗಳಾದರೂ ಯಾವ ನಿನ್ನ ಅನುಪ್ರವೇಶದಿಂದ ಸಾಮರ್ಥ್ಯವಂ ಪಡೆದು ಸಮಷ್ಟಿವ್ಯಷ್ಟಿರೂಪಂಗಳಾದ ದೇಹಂಗಳಂ ನಿರ್ಮಿಸಿದಂತಿಯುವಾದವೋ, ಮತ್ತು ಆಸಮಷ್ಟಿವ್ಯಷ್ಟಿದೇಹಂಗಳಲ್ಲಿರುವ ಅನ್ನಮಯಾದಿ ಪಂಚಕೋಶಂಗಳಂ ಪ್ರವೇಶಿಸಿ ಅವುಗಳಲ್ಲಿ ಅನುವರ್ತಿಸಿ ಕೊಂಡಿರುವನಾದುದರಿಂದ ಆಯಾಕೋಶದ

ಧೃತಯಇವಶ್ವಸಂತ್ಯಸುಭೃತೋಯದಿತೇನುವಿಧಾಮಹದಹಮಾದಯೋಂಡಮಸೃಜನ್ ಯದನುಗ್ರಹತಃ। ಪುರುಷವಿಧೋನ್ವಯೋತ್ರ ಚರಮೋನ್ನಮಯಾದಿಷುಯಸ್ಸದಸತಃಪರಂತ್ವಮಥಯದೇಷ್ವವಶೇಷಮೃತಮ್ ॥೧೮॥ ಉದರಮುಪಾಸತೇಯಋಷಿವರ್ತ್ಮಸುಕೂರ್ಪದೃಶಃಪರಿಸರಪದ್ಧತಿಂಹೃದಯಮಾರುಣಯೋದಹರಮ್ । ತತಉದಗಾದನಂತತವಧಾಮಶಿರಃಪರಮಂಪುನರಿಹಯತ್ಸಮೇತ್ಯನಪತಂತಿಕೃತಾಂತಮುಖೇ ॥೧೯॥ ಸ್ವಕೃತವಿಚಿತ್ರಯೋನಿಷುವಿಶನ್ನಿವಹೇತುತಯಾತರತಮತಶ್ಚಕಾಸ್ಯನಲವತ್ಸ್ವಕೃತಾ

---

ಅನ್ನಮಯಾದಿಷು ಅನ್ನಮಯಮೊದಲಾದ ಪಂಚಕೋಶಗಳಲ್ಲಿ, ಚರಮಃ-ತುದಿಯಾದ ಆನಂದಮಯಕೋಶವೂ, ಯಃ- ಯಾವುದೋ, ಅದೂ, ಸದಸತಃ-ಸ್ಥೂಲಸೂಕ್ಷ್ಮಂಗಳಾದ ಕಾರ್ಯಕಾರಣಂಗಳೆರಡಕ್ಕಿಂತಲೂ, ಪರಂ-ವಿಲಕ್ಷಣವಾದ, ಏಷು-ಇವುಗಳಲ್ಲಿ, ಅವಶೇಷಂ-ಅಬಾಧ್ಯವಾಗಿಉಳಿದದ್ದೂ, ಋತ್-ಯಾವುದೋ, ತತ್-ಅದೂ, ಸತ್ವಂ-ನೀನೇಆಗಿರುವಿ ॥೧೮॥ ಹೇಅನಂತ-ಎಲೈ ನಿತ್ಯಾತ್ಮನೇ, ಋಷಿವರ್ತ್ಮಸು-ಋಷಿಗಳಸಂಪ್ರದಾಯ ಮಾರ್ಗಂಗಳಲ್ಲಿ, ಯೇ-ಯಾರು,ಕೂರ್ಪದೃಶಃ-ಸ್ಥೂಲದೃಷ್ಟಿಯುಳ್ಳವರೋ, ತೇ-ಅವರು, ಉದರಂ-ಹೊಟ್ಟೆಯಲ್ಲಿರುವ ಮಣಿಪೂರಕಚಕ್ರಾಲಂಬಕವಾದ ಬ್ರಹ್ಮಜ್ಯೋತಿಯನ್ನು, ಉಪಾಸತೇ-ಧ್ಯಾನಿಸುತಲಿರುವರು, ಆರುಣಯಸ್ತು-ಆರುಣಿಗಳೆಂಬ ರಾದರೋ, ಪರಿಸರಪದ್ಧತಿಂ-ನಾಡಿಗಳಪ್ರಸರಣಕ್ಕೆ ದಾರಿಯಾದಂಥಾ, ಹೃದಯಂ-ಅನಾಹತಚಕ್ರದಲ್ಲಿರುವ, ದಹರಂ-ಸೂಕ್ಷ್ಮವಾದ ಚಿದಂಬರಜ್ಯೋತಿಯನ್ನು ಉಪಾಸತೇ, ಧ್ಯಾನಿಸುತಲಿರುವರು,॥ ಯತ್-ಯಾವುದರನ್ನು, ಸಮೇತ್ಯ-ಚೆನ್ನಾಗಿಸೇರಿ, ಕೃತಾಂತಮುಖೇ-ಮೃತ್ಯುವಿನ ಬಾಯಿಯಾದಸಂಸಾರದಲ್ಲಿ, ನಪತಂತಿ-ಬೀಳುವುದಿಲ್ಲವೋ, ತತ್-ಅಂಥಾ, ತವ-ನಿನ್ನ, ಧಾಮ-ಮುಕ್ತಿಜ್ಯೋತಿಸ್ಥಾನವಾದ, ಪರಮಂ-ಉತ್ಕೃಷ್ಟವಾದ, ಶಿರಃ-ಸಹಸ್ರಾರ ಬ್ರಹ್ಮರಂಧ್ರಸ್ಥಾನವು, ತತಃ-ಆದಹರೋಪಾಸನಾಸ್ಥಾನದದೆಸೆಯಿಂದ, ಉದಗಾತ್-ಎದ್ದಿರುವುದು [ಮೇಲ್ಪಟ್ಟದ್ದು] ॥೧೯॥ ಸ್ವಕೃತವಿಚಿತ್ರಯೋನಿಷು-ತಾನಾಗಿಮಾಡಲ್ಪಟ್ಟ ಉಚ್ಚನೀಚಮಧ್ಯಮಭೇದಂಗಳಿಂ ವಿಚಿತ್ರಂಗಳಾದ ಅಭಿವ್ಯಕ್ತಿ ಸ್ಥಾನಂಗಳ

---

ಆಕಾರದಂತೆ ಆಕಾರವುಳ್ಳವನಾಗಿ ಯಾವವನು ಚೈತನ್ಯವನುಂಟುಮಾಡುವನೋ, ಮತ್ತು ಅನ್ನಮಯ ಪ್ರಾಣಮಯ ಮನೋಮಯ ವಿಜ್ಞಾನಮಯ ಆನಂದಮಯಂಗಳೆಂಬ ಪಂಚಕೋಶಂಗಳು ಉಪದೇಶಂಗೆಯ್ಯಲ್ಪಡುವಲ್ಲಿ ಯಾವವನು ಪುಚ್ಛರೂಪದಿಂದ ಉಪದೇಶಂಗೆಯ್ಯಲ್ಪಟ್ಟನೋ ಅಂತಾಪರಬ್ರಹ್ಮನೇನೀನು. ಮತ್ತು ಸ್ಥೂಲಸೂಕ್ಷ್ಮಗಳಾದ ಅನ್ನಮಯಾದಿ ಪಂಚಕೋಶಂಗಳಿಗಿಂತಲೂ ವ್ಯತಿರಿಕ್ತನಾದ್ದರಿಂದಅವಕ್ಕೆ ಸಾಕ್ಷಿರೂಪನಾಗಿ ಅಬಾಧ್ಯನಾಗಿ ಸತ್ಯಸ್ವರೂಪನಾಗಿಯೂ ಇರುವ ಆಪರಬ್ರಹ್ಮನೇ ನೀನು. ಆದಕಾರಣದಿಂ ಸಮಸ್ತ ಪ್ರಾಣಿಗಳ ಜೀವನಕ್ಕೆ ಕಾರಣನಾದ ನಿನ್ನಂ ಯಾವತೆರದಿಂದಲೂ ಸೇವಿಸದೆ, ಯಿರುವ ಕೃತಘ್ನರಾದ ಪುರುಷರಿಗೆ ಕಾಮಾದಿಫಲವೂಸಹ ಸಿದ್ಧಿಸಲಾರದು ॥೧೮॥ (ಈರೀತಿಯಾಗಿ ಸರ್ವಾತ್ಮಕನಾದ ಶ್ರೀಪರಮೇಶ್ವರನಲ್ಲಿ ಸಮಸ್ತ ಶ್ರುತಿಗಳಿಗೂ ಸಮನ್ವಯನಿರೂಪಣದಿಂದ ಆಭಗವಂತನೇ ಸತ್ಪುರುಷರಿಂದ ಸೇವಿಸಲ್ಪಡತಕ್ಕವನೆಂಬ ಅರ್ಥಮಂ ಪೇಳಿ ಆಭಕ್ತರಂ ನಿಂದಿಸುವುದರಿಂದಲೂ ಆಯರ್ಥವನ್ನೇ ದೃಢೀಕರಿಸಿ ಅಂತಾ ಪರಮೇಶ್ವರನನ್ನು ಉಪಾಸನೆಯಂಗೆಯ್ಯಲೋಸುಗ ಸ್ಥಾನಂಗಳಂ ನಿರೂಪಿಸುವ) ನದಂತೆನೆ- ಎಲೈಅನಂತನೇ! ಋಷಿಗಳ ಸಂಪ್ರದಾಯಮಾರ್ಗಗಳಲ್ಲಿ ಯಾರು ಸ್ಥೂಲದೃಷ್ಟಿಯುಳವರೋ ಆಪುರುಷರು ಉದರಸ್ಥಾನದಲ್ಲಿರುವ ಮಣಿಪೂರವೆಂಬಚಕ್ರದಲ್ಲಿ ಪ್ರಕಾಶಿಸುವ ಪರಬ್ರಹ್ಮಮಂ ಧ್ಯಾನಂಗೆಯ್ಯುತಲಿದಾರೆ. ಆರುಣಿಗಳೆಂಬ ಋಷಿಗಳಾದರೋ ಸೂಕ್ಷ್ಮದೃಷ್ಟಿಯುಳ್ಳವರಾದ್ದರಿಂದ ಇಳಾಪಿಂಗಳಾ ಸುಷುಮ್ನಾದಿ ಸಮಸ್ತನಾಡಿಗಳಿಗೂ ಪ್ರಸರಣ ಸ್ಥಾನವಾದ ಅನಾಹತಚಕ್ರದಲ್ಲಿರುವ ದಹರಾಕಾಶರೂಪನಾದ ಸೂಕ್ಷ್ಮರೂಪ ಪರಬ್ರಹ್ಮಮಂ ಉಪಾಸನಂ ಗೆಯ್ಯುಲಿದಾರೆ. ಅನಂತರದಲ್ಲಿ ಹೃದಯಸ್ಥಾನದ ದೆಸೆಯಿಂದ ನಿನಗೆ ಪ್ರಕಾಶಸ್ಥಾನವಾದ ಸುಷುಮ್ನಾ ನಾಮಕವಾದ ಶ್ರೇಷ್ಠವಾದ ಜ್ಯೋತಿರ್ಮಯವಾದ ಬ್ರಹ್ಮರಂಧ್ರ ಸ್ಥಾನವನೆಯ್ದಿಸಿ ಆಸಹಸ್ರಾರಚಕ್ರದಲ್ಲಿ ಪರಬ್ರಹ್ಮವಾದ ನಿನ್ನಂ ಭಾವಿಸುವ ಪುರುಷರು ಪುನಃ ಈ ಲೋಕದಲ್ಲಿ ಸಂಸಾರಕೂಪದೊಳಗೆ ಬೀಳುವರಾಗುವುದಿಲ್ಲ ॥೧೯॥ (ಪರಮೇಶ್ವರನಿಗೆ ಕೂಡ ಜೀವಾತ್ಮನ ತೆರ

ನುಕೃತಿಃ । ಅಥವಿತಥಾಸ್ವಮೂಷ್ವವಿತಥಂತವಧಾಮಸಮಂವಿರಜಧಿಯೋನ್ವಯಂತ್ಯಭಿವಿಪನ್ಯವಏ
ಕರಸಮ್ ॥೨೦॥ ಸ್ವಕೃತಪುರೇಷ್ವಮೀಷ್ವಬಹಿರಂತರಸಂಚರಣಂತವಪುರುಷಂವದಂತ್ಯಖಿಲಶಕ್ತಿಧೃ
ತೋಂಶಕೃತಮ್ ।ಇತಿನೃಗತಿಂವಿವಿಚ್ಯಕವಯೋನಿಗಮಾವಪನಂಭವತಉಪಾಸತೇಂಘ್ರಿಮಭವಂಭುವಿ

---

ಸಿಸುವ ಕಾರ್ಯಂಗಳಾದ ದೇಹಾದಿಗಳಲ್ಲಿ, ಹೇತುತಯಾ-ಉಪಾದಾನಕಾರಣವಾದ್ದರಿಂದ, ವಿಶನ್ನಿವ-ಮುಂಚೆಯೇ ಇರುವನಾದ್ದರಿಂದ ಪ್ರವೇಶಿಸುವಂತಿರುವನಾಗಿ, ಅನಲವತ್-ಕಾಷ್ಠಾದಿಗಳಲ್ಲಿ ಅಭಿವ್ಯಕ್ತವಾಗುವ ಅಗ್ನಿಯಂತೆ, ತರತಮತಃ-ಹೆಚ್ಚು ಕಡಿಮೆಯಾಗಿ ತೋರುವಭಾವದಿಂದ. ಸ್ವಕೃತಾನುಕೃತಿಃ-ತನ್ನಿಂದ ಸೃಷ್ಟಿಸಲ್ಪಟ್ಟ ಉಪಾಧಿಗಳನ್ನನುಸರಿಸುವನಂತೆ, ಚಕಾಸಿ-ಪ್ರಕಾಶಿಸುತಲಿರುವಿ, ಅಥ-ಆದ್ದರಿಂದ, ವಿತಥಾಸು ಮಿಥ್ಯಾಭೂತಂಗಳಾದ, ಅಮೂಷು-ಈ ಅಭಿವ್ಯಕ್ತಿಸ್ಥಾನಂಗಳಾದ ದೇಹಾದಿಗಳಲ್ಲಿ, ಅವಿತಥಂ-ಸತ್ಯವಾದ, ಸಮಂ-ತಾರತಮ್ಯವಿಲ್ಲದೆಯಿರುವ, ಏಕರಸಂ-ಸನ್ಮಾತ್ರವಾದ, ತವಧಾಮ-ನಿನ್ನ ಸ್ವರೂಪವನ್ನು, ವಿರಜಧಿಯಃ-ನಿರ್ಮಲಮತಿಗಳಾದ, ಅಭಿವಿಪನ್ಯವಃ-ಕರ್ಮಫಲವಿರಕ್ತರಾದ ಸನ್ಯಾಸಿಗಳು, ಅನ್ವಯಂತಿ-ತಿಳಿಯುತಲಿರುವರು॥೨೦॥ ಅಮೀಷು-ಈ ಮನುಷ್ಯಾದಿರೂಪವಾದ, ಸ್ವಕೃತಪುರೇಷು-ತನ್ನ ಕರ್ಮದಿಂದ ಮಾಡಲ್ಪಟ್ಟಿರುವ ದೇಹಂಗಳಲ್ಲಿ, ಪುರುಷಂ-ಭೋಕ್ತನಾಗಿರುವ ಜೀವಾತ್ಮನನ್ನು, ಅಬಹಿರಂತರ ಸಂವರಣಂ-ಹೊರಗೆ ಸ್ಥೂಲದೇಹದಲ್ಲಿಯೂ, ಒಳಗೆ ಲಿಂಗದೇಹದಲ್ಲಿಯೂ, ವಸ್ತುಗತ್ಯಾ ಮಾಯಾವರಣವಿಲ್ಲದಂಥಾ, ತವ-ನಿನ್ನ, ಅಂಶಕೃತಂ-ಅಂಶದಂತೆಯೂ ಕಾರ್ಯದಂತೆಯೂ ತೋರುತ್ತಿರುವ ಅನುಪ್ರವಿ

---

ಪ ಉದರ ಹೃದಯಾದಿಸ್ಥಾನ ಸಂಬಂಧವು ಉಂಟಾದರೆ ಆ ಹೃದಯೋದರಾದಿಗಳಲ್ಲಿ ಅನುಪ್ರವೇಶಂಗೆಯ್ದಿರುವ ಆ ಬ್ರಹ್ಮತೇಜಸ್ಸಿಗೆ ಸಹ ತಾರತಮ್ಯವುಂಟಾದೀತು. ಹಾಗಾದರೆ ಮತ್ತೆ ಯಾವಪಯದಿಂದ ಆ ಪರಮಾತ್ಮನು ಉಪಾಸನಂಗೆಯ್ಯಲು ಯೋಗ್ಯನಾಗುವನು? ಎಂಬ ಈ ಶಂಕೆಯಂ ಪರಿಹರಿಸಲೋಸುಗ ಒಬ್ಬ ಪರಮಾತ್ಮನೇ ಸಮಸ್ತ ಭೂತಂಗಳಲ್ಲಿಯೂ ವ್ಯಾಪಿಸಿಕೊಂಡು ಸರ್ವಸಾಕ್ಷಿಯಾಗಿರುವನೆಂದು ಅನೇಕ ಶ್ರುತಿಗಳೇ ನಿನ್ನಂ ಸ್ತುತಿಸುತಲಿವೆಯೆಂದು ಪೇಳುವ) ರದೆಂತೆನೆ- ಎಲೈ ಪರಮಾತ್ಮನೇ! ಯಾವರೀತಿಯಿಂದ ಅಗ್ನಿಯು ಸ್ವತಃ ತಾರತಮ್ಯವಿಲ್ಲದೆಯಿದ್ದರೂ ಆಯಾ ಕಾಷ್ಠಂಗಳ ನನುಸರಿಸಿಕೊಂಡು ಆಯಾ ಪ್ರಕಾರವಾಗಿ ಪ್ರಕಾಶಿಸುವುದೋ ಆ ರೀತಿಯಿಂದ ಸರ್ವಾತ್ಮನಾದ ನೀನು ಸ್ವಕಲ್ಪಿತಂಗಳಾಗಿ ವಿಚಿತ್ರಂಗಳಾಗಿ ಉತ್ತಮ ಮಧ್ಯಮಾಧಮಂಗಳಾಗಿ ನಿನ್ನ ಅಭಿವ್ಯಕ್ತಿಗೆ ಸ್ಥಾನಂಗಳಾಗಿ ಕಾರ್ಯಂಗಳಾಗಿಯೂ ಇರುವ ದೇಹಾದಿಗಳಲ್ಲಿ ಮೂಲಕಾರಣನಾದ್ದರಿಂದ ಕಾರ್ಯೋತ್ಪತ್ತಿಗಿಂತಲೂ ಪೂರ್ವದಲ್ಲಿಯೇ ಸಿದ್ಧವಾಗಿರುವ ನಾದಕಾರಣದಿಂ ಆ ದೇಹಾದಿಗಳಲ್ಲಿ ಮುಖ್ಯವಾಗಿ ನಿನಗೆ ಪ್ರವೇಶವಿಲ್ಲದಿದ್ದರೂ ಪ್ರವೇಶಂಗೆಯ್ದವನಂತೆ ಯಿರುವನಾಗಿ ಆ ದೇಹಾದಿಗಳು ಇದ್ದಂತೆ ಅವುಗಳನ್ನೇ ಅನುಸರಿಸಿ ನೀನು ನ್ಯೂನಾಧಿಕಭಾವದಿಂದ ತೋರುತಲಿರುವಿಯೇ ಹೊರತು ಮತ್ತೊಂದಿಲ್ಲವು. ಆ ಕಾರಣದಿಂ ನಿರ್ಮಲವಾದ ಬುದ್ಧಿಯುಳ್ಳ ಮಹಾತ್ಮರು ಇಹ ಪರಲೋಕಂಗಳಲ್ಲಿ ಪಡೆಯತಕ್ಕ ಕರ್ಮಫಲಂಗಳಂ ತ್ಯಾಗಂಗೆಯ್ದಿರುವ ರಾದಕಾರಣದಿಂ ಅನಿತ್ಯಂಗಳಾದ ಆ ದೇಹಾದಿಗಳಲ್ಲಿ ವಿಶೇಷರಹಿತವಾದುದರಿಂದ ಸತ್ಯಸ್ವರೂಪವಾಗಿಯೂ ಸತ್ತಾಮಾತ್ರವಾಗಿಯೂ ಇರುವ ನಿನ್ನ ಸ್ವರೂಪವಂ ತಿಳಿಯುತಲಿರುವರು. ಆದುದರಿಂದ ನಿನಗೆ ಉಪಾಧಿಕಲ್ಪಿತವಾದ ತಾರತಮ್ಯವಿಲ್ಲವಾದಕಾರಣದಿಂ ಚ್ಯುತಿಯಿಲ್ಲದೆಯಿರುವ ಐಶ್ವರ್ಯವುಳ್ಳ ನೀನು ಉಪಾಸನಂಗೆಯ್ಯಲು ಯೋಗ್ಯನಾದವನೇ ಸರಿ॥೨೦॥ (ಲೋಕಾನುಗ್ರಹಾರ್ಥವಾಗಿ ಅವತರಿಸುವ ನಿನ್ನ ಪಾದಸೇವೆಯು ಮುಕ್ತಿಗೆ ಸಾಧನವಾದುದೆಂದು ದೇವತೆಗಳು ಪೇಳುವರು ಎಂದು ಸ್ತುತಿಸುವರು-) ಅದೆಂತೆನೆ-ಎಲೈ ಈಶ್ವರನೇ! ತಮ್ಮ ತಮ್ಮ ಕರ್ಮಗಳಿಂ ಸಂಪಾದಿಸಲ್ಪಟ್ಟ ಮನುಷ್ಯಾದಿ ಶರೀರಂಗಳಲ್ಲಿ ಭೋಕ್ತೃರೂಪದಿಂದಿರುವ ಜೀವಾತ್ಮನನ್ನು ವಸ್ತುತಃ ಕಾರ್ಯಕಾರಣಂಗಳಾದ ಅಸತ್ಯಂಗಳಾದ ದೇಹಾದಿಗಳನ್ನೂ ಆವರಿಸುವ ಅವಿದ್ಯೆಗಳಿಂದ ಆವರಣವಿಲ್ಲದವನನ್ನಾಗಿಯೂ ಆ ಜೀವಾತ್ಮನನ್ನು ಸರ್ವಶಕ್ತಿಗಳಿಗೂ ಆಶ್ರಯನಾಗಿಯೂ ಪೂರ್ಣನಾಗಿಯೂ ಇರುವ ನಿನ್ನ ಸ್ವರೂಪವನ್ನಾಗಿ ವೇದಂಗಳು ಪೇಳ್ವು

ಶ್ವಸಿತಾಃ ॥೨೧॥ ದುರವಗಮಾತ್ಮತತ್ತ್ವನಿಗಮಾಯತವಾತ್ತತನೋಶ್ಚರಿತಮಹಾಮೃತಾಬ್ಧಿಪರಿವರ್ತಪರಿಶ್ರಮಣಾಃ । ನಪರಿಲಷಂತಿಕೇಚಿದಪವರ್ಗಮಪೀಶ್ವರತೇಚರಣಸರೋಜಹಂಸಕುಲಸಂಗವಿಸೃಷ್ಟಗೃಹಾಃ ॥೨೨॥ ತ್ವದನುಪಥಂಕುಲಾಯಮಿದಮಾತ್ಮಸುಹೃತ್ಪ್ರಿಯವಚ್ಚರತಿತಥೋನ್ಮುಖೇತ್ವಯಿಹಿತೇ ಪ್ರಿಯಆತ್ಮನಿಚ । ನಬತರಮಂತ್ಯಹೋಅಸದುಪಾಸನಯಾತ್ಮಹನೋಯದನುಶಯಾಭ್ರಮಂತ್ಯುರು

---

ಸ್ವರೂಪವೆನಿಸುವ ಬ್ರಹ್ಮಜ್ಞಾನನನ್ನಾಗಿ, ವದಂತಿ-ಹೇಳುತಲಿರುವರು. ಕವಯಃ-ವಸ್ತುವಿಚಾರಪಂಡಿತರಾದವರು, ಇತಿ-ಹೀಗೆ, ನರಗತಂ-ಜೀವಾತ್ಮತತ್ವವನ್ನು, ವಿವಿಚ್ಯ-ಶೋಧಿಸಿತಿಳಿದು, ನಿಗಮಾವಪನಂ-ನಿಗಮ-ವೇದೋಕ್ತಕರ್ಮಂಗಳಿಗೆ, ಆವಪನಂ-ಬೀಜಬಿಟ್ಟುಫಲವಂ ಪಡೆಯಲ್ತಕ್ಕಭೂಮಿಯಂತಿರುವ, ಅಭವಂ-ಪುನರ್ಜನ್ಮವಿಲ್ಲದ, ಭವತಃಅಂಘ್ರಿಂ-ನಿನ್ನಪಾದವನ್ನು, ಭುವಿ-ನರಲೋಕದಲ್ಲಿ, ವಿಶ್ವಸಿತಾಃ-ವಿಶ್ವಾಸಹುಟ್ಟಿದವರಾಗಿ, ಉಪಾಸತೇ-ಸೇವಿಸುತಲಿರುವರು॥೨೧॥ ಈಶ್ವರ-ನಿಯಾಮಕನಾದಪ್ರಭುವೇ, ದುರವಗಮಾತ್ಮತತ್ವನಿಗಮಾಯ-ದುರವಗಮ-ಪ್ರಯಾಸದಿಂದಲೂ ತಿಳಿಯಲಶಕ್ಯವಾದ, ಆತ್ಮತತ್ವ-ಆತ್ಮಸ್ವರೂಪಯಾಥಾರ್ಥ್ಯವನ್ನು, ನಿಗಮಾಯ-ತಿಳಿಸಲೋಸುಗ, ಆತ್ತತನೋಃ-ಆವಿರ್ಭಾವಗೊಳಿಸಲ್ಪಟ್ಟ ಲೀಲಾಮೂರ್ತಿಯುಳ್ಳ, ತವ-ನಿನ್ನ, ಚರಿತಮಹಾಮೃತಾಬ್ಧಿಪರಿವರ್ತಪರಿಶ್ರಮಣಾಃ-ಚರಿತ-ಕಥೆಯೆಂಬ, ಮಹಾಮೃತಾಬ್ಧಿ-ದೊಡ್ಡಹಾಲ್ಗಡಲಿನಲ್ಲಿ, ಪರಿವರ್ತ-ಮುಳುಗುವುದರಿಂದ ಪರಿಶ್ರಮಣಾಃ-ಗತಶ್ರಮರಾದಂಥಾ, ಕೇಚಿತ್-ಕೆಲವರು, ತೇ-ನಿನ್ನ, ಚರಣಸರೋಜಹಂಸಕುಲಸಂಗವಿಸೃಷ್ಟಗೃಹಾಃ-ಚರಣಸರೋಜ-ಅಡಿದಾವರೆಗಳಲ್ಲಿ, ಹಂಸ-ಅಂಚೆಯಂತಿರುವಭಾಗವತರ, ಕುಲ-ಸಮೂಹದ, ಸಂಗ-ಸಂಬಂಧದಿಂದ, ವಿಸೃಷ್ಟ-ಬಿಡಲ್ಪಟ್ಟ, ಗೃಹಾಃ-ಮನೆಮೊದಲಾದವುಗಳಭಿಮಾನವುಳ್ಳವರಾಗಿ, ಅಪವರ್ಗಮಪಿ-ಮೋಕ್ಷವನ್ನೂ ಕೂಡ. ನಪರಿಲಷಂತಿ-ಅಪೇಕ್ಷಿಸುವುದಿಲ್ಲ॥೨೨॥ ತ್ವದನುಪಥಂ-ನಿನ್ನ ದಾರಿಗನುಕೂಲವಾದ, ಇದಂಕುಲಾಯಂ-ಈಶರೀರವು, ಆತ್ಮಸುಹೃತ್ಪ್ರಿಯವತ್-ತನ್ನಂತೆಯೂ ಮಿತ್ರನಂತೆಯೂ ಇಷ್ಟನಂತೆಯೂ, ಚರತಿ-ಸ್ವಾಧೀನವಾಗಿರುತ್ತಿದೆ, ತಥಾ-ಹಾಗೆಇದರೊಡನೆಕೂಡ, ಉನ್ಮುಖೇ-ಪ್ರಸನ್ನನಾದ, ಪ್ರಿಯೇ-ಆನಂದರೂಪನಾದ, ಆತ್ಮನಿಚ-ಸ್ವರೂಪವೂಆದ, ಹಿತೇ-ಉಪಕಾರಿಯೂ ಅಪ್ಪುದರಿಂದಸೇವ್ಯನಾದ, ತ್ವಯಿ-ನಿನ್ನಲ್ಲಿ, ನರಮಂತಿ-ಕ್ರೀಡಿಸುವುದಿಲ್ಲ, ಅಹೋ-ಆಶ್ಚರ್ಯವು, ಯದನುಶಯಾಃ-ಯತ್-ಯಾವಅಸದುಪಾಸನೆಯಲ್ಲಿ, ಅನುಶಯಾಃ-ವಾಸನೆಯುಳ್ಳವರಾದವರು, ಕುಶರೀರಭೃತಃ-ಕುತ್ಸಿತದೇಹಂಗಳಂಧರಿಸಿದವರಾಗಿ, ಉರುಭಯೇ-ಅಧಿಕಭೀತಿಯುಳ್ಳಸಂಸಾರವಲ್ಲಿ

---

ತ್ತಿವೆಯೆಂದು ಜೀವಾತ್ಮನ ವಿಚಾರದಿಂ ತತ್ವವಂ ಚನ್ನಾಗಿಶೋಧಿಸಿ ಮತ್ತೊಂದುಪ್ರಕಾರದಿಂದಲೂ ತತ್ವಜ್ಞಾನವು ಪಡೆಯಲು ಶಕ್ಯವೆಂದು ತಿಳಿಯುತಲಿರುವರಾಗಿ ಋಷಿಗಳು ಭೂಲೋಕದಲ್ಲಿ ವೇದೋಕ್ತಂಗಳಾದ ಸಮಸ್ತ ಕರ್ಮಂಗಳೂ ಎಲ್ಲಿಸಮರ್ಪಿಸಲ್ಪಟ್ಟವಾಗಿ ಮುಕ್ತಿಯೆಂಬ ಮಹಾಫಲವನ್ನುಂಟುಮಾಡುವವೋ ಅಂತಾ ಸಂಸಾರನಿವರ್ತಕನಾದ ನಿನ್ನಪಾದಾರವಿಂದವಂ ಅತಿವಿಶ್ವಾಸಯುಕ್ತರಾಗಿ ಪೂಜಾನಮಸ್ಕಾರಾದಿಗಳಿಂದ ಸೇವಿಸುತಲಿರುವರು ॥೨೧॥ ಮತ್ತು ಮುಕ್ತಿಗೆ ಭಕ್ತಿಯೇ ಸಾಧನವೆಂಬಂತೆ, ಸ್ತುತಿಸುತಲಿರುವರದಂತೆನೆ- ಎಲೈಪರಮೇಶ್ವರನೇ! ಲೋಕದಲ್ಲಿ ಪುಣ್ಯಾತ್ಮರಾದ ಕೆಲವರುಪುರುಷರು ತಿಳಿಯಲಶಕ್ಯವಾದಆತ್ಮತತ್ವವಂ ಭಕ್ತರಿಗೆತಿಳಿಯಲೋಸುಗ ಸ್ವೀಕರಿಸಲ್ಪಟ್ಟ ಶರೀರವುಳ್ಳ ನಿನ್ನಕಥೆಯೆಂಬ ಮಹತ್ತಾದ ಅಮೃತ ಸಮುದ್ರದಲ್ಲಿ ಮಜ್ಜನಮಾಡುವುದರಿಂದ ಪರಿಹರಿಸಲ್ಪಟ್ಟ ಸಂಸಾರವುಳ್ಳವರಾಗಿ,ಮತ್ತು ನಿನ್ನ ಚರಣವೆಂಬ ಪದ್ಮದಲ್ಲಿ ಹಂಸಗಳಂತಿರುವ ನಿನ್ನಭಕ್ತರ ಸಮೂಹವೊಡನೆ ಸಂಗವಂಮಾಡುವುದರಿಂ ತ್ಯಜಿಸಲ್ಪಟ್ಟ ಗೃಹವುಳ್ಳವರಾಗಿಯೂ ಸರ್ವೋತ್ಕೃಷ್ಟವಾದಲೋಕವಾಸಹಅಪೇಕ್ಷಿಸುವರಾಗುವುದಿಲ್ಲ. ಹೀಗಿರುವಲ್ಲಿತುಚ್ಛವಾದ ಅನ್ಯಫಲಮಂಅವರೆಂತಪೇಕ್ಷಿಸುವರಾಗುವರು॥೨೨॥ ಎಲೈಪರಮಾತ್ಮನೇ! ಶರೀರಾದಿಗಳಂ ಪೋಷಿಸುವುದರಲ್ಲಿಯೇ ವಾಸನೆಯುಳ್ಳಮೂಢರು ನಿನ್ನ ಸೇವೆಗುಪಯುಕ್ತವಾದ ಶರೀರವನ್ನು ಆತ್ಮನಂತೆಯೂ ಬಂಧುವಂತೆಯೂ ಪ್ರಿಯನಂತೆಯೂಸ್ವಾಧೀನವಾಗಿದ್ದರೂ ಅದೇರೀತಿಯಿಂ ಅಭಿಮುಖನಾಗಿ ಪ್ರಿಯನಾಗಿಯೂ ಹಿತನಾಗಿಯೂ ಆತ್ಮನಾಗಿಯೂ ಇರುವ ನೀನೊಕೂಡ ಸುಖದಿಂ ಸೇವಿಸಲ್ಪಡತಕ್ಕವನಾಗಿದ್ದಾಗ್ಯೂ, ಕಟಕಟಾ ನಿನ್ನಂ ಸ್ನೇಹಾದಿಗಳಿಂದ ಪೂಜಿಸುವರಾಗದೆ ತುಚ್ಛಂಗಳಾದ ದೇಹಾದಿ

ಭ್ರಮಕುಶರೀರಭೃತಃ ‖೨೨‖ ನಿಭೃತಮರುನ್ಮನೋಕ್ಷದೃಢಯೋಗಯುಜೋ ಹೃದಿ ಯನ್ಮುನಯ ಉಪಾಸತೇ ತದರಯೋಽಪಿ ಯಯುಃ ಸ್ಮರಣಾತ್ । ಸ್ತ್ರಿಯ ಉರಗೇಂದ್ರಭೋಗಭುಜದಂಡವಿಷಕ್ತಧಿಯೋ ವಯಮಪಿ ತೇ ಸಮಾಃ ಸಮದೃಶೋಂಘ್ರಿಸರೋಜಸುಧಾಃ ‖೨೩‖ ಕ ಇಹ ನು ವೇದ ಬತಾವರಜನ್ಮಲಯೋಗ್ರಸರಂ ಯತ ಉದಗಾದೃಷಿರ್ಯಮನು ದೇವಗಣಾ ಉಭಯೇ । ತರ್ಹಿ ನ ಸನ್ನ ಚಾಸದುಭಯಂ ನ ಚ ಕಾಲಜವಃ ಕಿಮಪಿ ನ ತತ್ರ

---

ಭ್ರಮಂತಿ-ತಿರುಗುತಲಿರುವರು, ಅದ್ದರಿಂದ, ಅಸದುಪಾಸನಯಾ-ದೇಹಾದಿಗಳನ್ನು ಪರಿತಿಳಿಸುವುದರಿಂದ, ಆತ್ಮಹನಃ-ಸ್ವರೂಪವಂಚಿತರಾದ ಅಜ್ಞಾನಿಗಳಾಗಿರುವರು ‖೨೨‖ ನಿಭೃತಮರುನ್ಮನೋಕ್ಷದೃಢಯೋಗಯುಜಃ- ನಿಭೃತ-ನಿಗ್ರಹಿಸಲ್ಪಟ್ಟ, ಮರುತ್-ಪ್ರಾಣವು, ಮನಃ- ಚಿತ್ತವು, ಅಕ್ಷ-ಇಂದ್ರಿಯಂಗಳೂ ಉಳ್ಳವರಾಗಿ, ದೃಢಯೋಗ-ಸ್ಥಿರವಾದಧ್ಯಾನವನ್ನು, ಯುಜಃ-ಹೊಂದಿದವರಾದ, ಮುನಯಃ-ಜ್ಞಾನಿಗಳು, ಹೃದಿ-ಹೃದಯಸ್ಥಾನದಲ್ಲಿ, ಯತ್-ಯಾವತತ್ವವನ್ನು, ಉಪಾಸತೇ-ಧ್ಯಾನಿಸುತಲಿರುವರೋ, ತತ್-ಅದನ್ನೇ, ಅರಯೋಽಪಿ-ನಿನ್ನ ವೈರಿಗಳೂ ಕೂಡ, ತವ-ನಿನ್ನ, ಸ್ಮರಣಾತ್-ಅವಿಚ್ಛಿನ್ನವಾದ ನೆನಪಿನದೆಸೆಯಿಂದ, ಯಯುಃ-ಹೊಂದುವರು, ಉರಗೇಂದ್ರಭೋಗಭುಜದಂಡವಿಷಕ್ತಧಿಯಃ-ಉರಗೇಂದ್ರಭೋಗ-ಸರ್ಪರಾಜನಶರೀರದಂತಿರುವ, ಭುಜದಂಡ-ದಂಡಾಕಾರವಾದ ನಿನ್ನ ತೋಳುಗಳಲ್ಲಿ, ವಿಷಕ್ತಧಿಯಃ-ಸಂಬಂಧಿಸಿದಬುದ್ಧಿಯುಳ್ಳ, ಸ್ತ್ರಿಯಃ-ಹೆಂಗಳೂ (ಪರಿಚ್ಛಿನ್ನವಂ ಧ್ಯಾನಿಸಿದವರಾದರೂ) ಅದೇ ನಿನ್ನ ತತ್ವವನ್ನು ಹೊಂದುವರು, ಸಮದೃಶಃ-ಅಖಂಡವಾಗಿ ನಿನ್ನಂ ತಿಳಿಯುತ್ತಿರುವ, ವಯಮಪಿ-ನಾವೂ ಕೂಡ, ಅದೇ ತತ್ವವನ್ನು ಹೊಂದುತ್ತಿರುವೆವು, ಅಂಘ್ರಿಸರೋಜಸುಧಾಃ-ನಿನ್ನ ಅಡಿದಾವರೆಯ ಅಮೃತಪಾನವಂ ಮಾಡುವರಾದ್ದರಿಂದ, ನಿನ್ನ ನೆನಪುಳ್ಳವರೆಲ್ಲರೂ, ತೇ-ನಿನಗೆ, ಸಮಾಃ-ಸಮಾನರಾಗಿರುವರು ‖೨೩‖ ಹೇಭಗವನ್-ಎಲೈ ಪರಮೇಶ್ವರನೇ, ಇಹ-ಈ ಜಗತ್ತಿನಲ್ಲಿ, ಅಗ್ರಸರಂ-ಪೂರ್ವದಲ್ಲಿಯೇ ಸಿದ್ಧನಾದ ನಿನ್ನನ್ನು, ಅವರಜನ್ಮಲಯಃ-ಬಳಿಕ ಜನನಮರಣಂಗಳುಳ್ಳವನಾದ, ಕೋನುವೇದ-ಯಾವ ಪುರುಷನು ತಾನೇ ಬಲ್ಲನು? ಯತಃ-ಯಾವ ನಿನ್ನ ದೆಸೆಯಿಂದ, ಋಷಿಃ-ಬ್ರಹ್ಮದೇವನು, ಉದಗಾತ್-ಹುಟ್ಟಿದನೋ, ಯಂ-ಯಾವ ಬ್ರಹ್ಮದೇವನನ್ನು, ಅನು-ಅನುಸರಿಸಿ, ಉಭಯೇ-ಆಧ್ಯಾತ್ಮಿಕಂಗಳೂ ಆಧಿದೈವಿಕಂಗಳೂ ಆದ, ದೇವಗಣಾಃ-ದೇವತೆಗಳ ಸಮೂಹಗಳು, ಹುಟ್ಟಿದವೋ, ಯದಾ-ಯಾವಾಗ, ಅಪಕೃಷ್ಯ-ಸೃಷ್ಟಿಯನ್ನು ಉಪಸಂಹರಿಸಿಕೊಂಡು, ಶಯಿತ-ನೀನು ಯೋಗನಿದ್ರೆಯಂ ಗೆಯ್ವ

---

ಗಳಲ್ಲಿರುವ ಆಸಕ್ತಿಯಿಂದಲೇ ಪ್ರಮತ್ತರಾಗಿ ನಿಕೃಷ್ಟವಾದ ಶರೀರವನ್ನೇ ಪೋಷಿಸುತ್ತ ಸಂಸಾರಕೂಪದಲ್ಲಿ ಬಿದ್ದು ಹೊರಳುವರಾದುದರಿಂದ ಅವರೇ ಆತ್ಮದ್ರೋಹಿಗಳು ‖೨೨‖ ಎಲೈ ಸರ್ವೇಶ್ವರನೇ ಪ್ರಾಣಾದಿವಾಯುಗಳು ಮನಸ್ಸುಂ ಪ್ರಾಣಾದಿವಾಯುಗಳಂ ಇಂದ್ರಿಯಂಗಳಂ ಸಹ ನಿಗ್ರಹಿಸಿ ದೃಢವಾದ ಯೋಗಾಭ್ಯಾಸದಲ್ಲಿ ಆಸಕ್ತರಾದ ಮುನಿಗಳ ಹೃದಯದಲ್ಲಿ ಯಾವ ನಿನ್ನ ಪರತತ್ವರೂಪವು ಉಪಾಸನಂ ಗೆಯ್ಯಲ್ಪಡುವುದೋ ಅದರನ್ನೇ ನಿನ್ನ ಶತ್ರುಗಳೂ ಕೂಡ ಸ್ಮರಣೆಯಿಂದಲೇ ಎಯ್ದಿದರು. ಮತ್ತು ಕಾಮದಿಂದ ಮಹಾಸರ್ಪಶರೀರಕ್ಕೆ ಸಮಾನಂಗಳಾದ ನಿನ್ನ ಭುಜದಂಡಗಳಲ್ಲಿ ಆಸಕ್ತವಾದ ಬುದ್ಧಿಯುಳ್ಳ ಸ್ತ್ರೀಯರು ಅಪರಿಚ್ಛಿನ್ನನಾದ ನಿನ್ನಂ ನೋಡುತಲಿರುವರಾಗಿ ನಿನ್ನ ಆಕಾರವಿಂಬವಂ ಚೆನ್ನಾಗಿ ಭಾವಿಸುವರಾಗಿಯೂ ಇರುವ ಶ್ರುತ್ಯಭಿಮಾನಿದೇವತೆಗಳಾದ ನಾವೂ ಕೂಡ ನಿನ್ನ ಕೃಪೆಗೆ ಸಮವಾದ ಪಾತ್ರರಾಗುತಲಿರುವೆವು. ನಿನ್ನ ಚರಣಪ್ರಭಾವವು ಇಂತಿಯದಲ್ಲವೆ ಅದೇನೆಂದರೆ ಯೋಗಿಗಳು ನಿನ್ನಂ ಹೃದಯಕಮಲದಲ್ಲಿ ಉಪಾಸನಂ ಗೆಯ್ವರೋ ಅಪರಿಚ್ಛಿನ್ನನಾಗದ ಆ ನಿನ್ನಂ ನಾವೂ ಭಾವಿಸುತಲಿರುವೆವೋ ಆ ನೀನು ಕಾಮದಿಂದಲೂ ವೈರದಿಂದಲೂ ನಿನ್ನ ಸ್ಮರಿಸುವರೆಲ್ಲರಂ ನಿನ್ನ ಸ್ವರೂಪವನೆಯ್ದಿಸುವಿ ‖೨೩‖ ಮತ್ತು ಅನೇಕಶ್ರುತಿಗಳು ಪರಮಾತ್ಮಸ್ವರೂಪವು ತಿಳಿಯಲಶಕ್ಯವೆಂದು ಹೇಳುತ್ತ ಭಕ್ತಿಯನ್ನೇ ಮುಕ್ತಿಸಾಧನವೆಂದು ಅಂಗೀಕರಿಸುತಲಿವೆಯೆಂದು ಸ್ತುತಿಸುವರದೆಂತೆನೆ- ಎಲೈ ಭಗವಂತನೇ ಸೃಷ್ಟ್ಯಾದಿಯಲ್ಲಿ ನಿನ್ನಿಂದ ಬ್ರಹ್ಮದೇವನು ಜನಿಸಿದನು. ಬಳಿಕ ಆಧ್ಯಾತ್ಮಿಕಾಧಿದೈವಿಕವೆಂಬ ದೇವತೆಗಳ ಸಮೂಹವು ಜನಿಸಿದವು ಈಚೆಗೆ ಸಮಸ್ತ ಪ್ರಾಣಿಗಳೂ ಹುಟ್ಟಿದವು. ಆದುದರಿಂದ ಬ್ರಹ್ಮಾದಿಸರ್ವಪ್ರಾಣಿಗಳಿಗಿಂತಲೂ ಮುಂಚೆಯೇ ಸಿದ್ಧನಾಗಿದ್ದ ನಿನ್ನಂ ಈಚೆಗೆ ಜನಿಸಿ ಲಯವನೆಯ್ದುವ ಯಾವ ಪುರುಷನು ತಿಳಿದಪನು? ಯಾವಾಗ ನೀನು ಪ್ರಪಂಚ

ತೇ ಶಾಸ್ತ್ರಮುಪೇಕ್ಷ್ಯ ಶಯೀತ ಯದಾ ‖೨೪‖ ಜನಿಮಸತಸ್ಸತೋ ಮೃತಿಮುತಾತ್ಮನಿ ಯೇ ಚ ಭಿದಾಂ ವಿ
ಪಣಮೃತಂ ಸ್ಮರಂತ್ಯುಪದಿಶಂತಿ ತ ಆರುಪಿತೈಃ । ತ್ರಿಗುಣಮಯಃ ಪುಮಾನಿತಿ ಭಿದಾ ಯದಬೋಧಕೃತಾ ತ್ವ

---

ವಾಗುವೆಯೋ, ತರ್ಹಿ-ಆಗ, ನಸತ್-ಆಕಾಶಾದಿಸ್ಥೂಲಜಗತ್ತೂಯಿಲ್ಲವು, ನಾಸತ್-ಮಹದಾದಿಸೂಕ್ಷ್ಮಜಗತ್ತೂಯಿಲ್ಲವು. ನೋ
ಭಯಂ ಚ-ಸ್ಥೂಲಸೂಕ್ಷ್ಮಗಳಿಂ-ದಾರಬ್ಧವಾದ ಶರೀರವೂಯಿಲ್ಲವು. ಕಾಲಜವಃ ನ-ಕಾಲವೈಷಮ್ಯವೂಯಿಲ್ಲವು, ತತ್ರ-ಆಗ,
ಕಿಮಪಿ ನ-ಇಂದ್ರಿಯಪ್ರಾಣಾದಿಕವೇನೂ ಇಲ್ಲವು, ಶಾಸ್ತ್ರಮಪಿ ನ-ನಿನ್ನನ್ನು ತಿಳಿಸುವ ಶಾಸ್ತ್ರವೂ ಇಲ್ಲವು (ಪ್ರಳಯಕಾಲದಲ್ಲಿಯೂ
ಸೃಷ್ಟಿಕಾಲದಲ್ಲಿಯೂ ನಿನ್ನ ಯಾಥಾರ್ಥ್ಯವನ್ನು ತಿಳಿಯುವುದಕ್ಕೆ ಸಾಧ್ಯವಲ್ಲದ್ದರಿಂದ ನಿನ್ನ ಭಕ್ತಿಯೇ ಪ್ರಯೋಜಕವೆಂಬ ಭಾ
ವವು ‖೨೪‖ ಯೇ-ಯಾವ ವೈಶೇಷಿಕಾದಿತಾರ್ಕಿಕರು, ಅಸತಃ-ಇಲ್ಲದ ಪ್ರಪಂಚಕ್ಕೆ, ಜನಿಂ-ಉತ್ಪತ್ತಿಯನ್ನು ಹೇಳುವರೋ, ಯೇ
ಚ-ಯಾವ ಪಾತಂಜಲಾದಿವಾದಿಗಳು, ಸತಃ-ಇರುವ ಬ್ರಹ್ಮತತ್ವಕ್ಕೇನೇ, ಜನಿಂ-ಉತ್ಪತ್ತಿಯನ್ನು ಹೇಳುವರೋ, ಯೇ ಚ-ಯಾವ ನ್ಯಾ
ಯಿಕರು, ಸತಃ-ಸತ್ಯವಾದ ಏಕವಿಂಶತಿ ದುಃಖಕ್ಕೆ, ಮೃತಿಂ-ಧ್ವಂಸವನ್ನೇ ಮೋಕ್ಷವನ್ನಾಗಿ ಹೇಳುವರೋ, ಉತ-ಮತ್ತು,
ಯೇ ಚ-ಯಾವ ಸಾಂಖ್ಯಾದಿವಾದಿಗಳು, ಆತ್ಮನಿ-ಆತ್ಮನಲ್ಲಿ, ಭಿದಾಂ-ಭೇದವನ್ನು, ಸ್ಮರಂತಿ-ಹೇಳುವರೋ, ಯೇ ಚ-ಯಾವ ಮೀಮಾಂ
ಸಕರು, ವಿಪಣಂ-ಕರ್ಮಫಲ ವ್ಯವಹಾರವನ್ನು, ಋತಂ-ಸತ್ಯವನ್ನಾಗಿ, ಸ್ಮರಂತಿ-ಸ್ಮೃತಿವಚನಂಗಳಿಂ ಹೇಳುವರೋ, ತೇ-ಅ
ವರೆಲ್ಲರೂ, ಆರುಪಿತೈಃ-ಆರೋಪಿಸಲ್ಪಟ್ಟ ಭ್ರಮಗಳಿಂದಲೇ, ಉಪದಿಶಂತಿ-ತಮ್ಮತಮ್ಮ ಶಿಷ್ಯರಿಗೆ ಹೇಳುವರಲ್ಲದೆ, ತತ್ವದೃಷ್ಟಿ
ಯಿಂದಲ್ಲವು, ಪುಮಾನ್-ಆತ್ಮನು, ತ್ರಿಗುಣಮಯಃ-ಸತ್ವರಜಸ್ತಮಗಳೆಂಬ ಪ್ರಕೃತಿಗುಣಪ್ರಚುರನು, ಅಥವಾ ಪ್ರಕೃತಿಗು
ಣವಿಕಾರನು, ಇತಿ-ಇಂತೆಂಬ ಹೇತುವಿನಿಂದ, ಭಿದಾ-ಭೇದಬುದ್ಧಿಯಾವುದುಂಟೋ, ಸಾ-ಅದು, ಯತ್-ಯಾವ ಕಾರಣದಿಂದ,
ತ್ವಯಿ-ನಿನ್ನಲ್ಲಿ, ಅಬೋಧಕೃತಾ-ನಿನ್ನ ಸ್ವರೂಪದ ನರಿಯದ್ದರಿಂದ ಮಾಡಲ್ಪಟ್ಟಿತೋ, ತತಃ-ಆ ಕಾರಣದಿಂದ, ಪರತ್ರ-

---

ವಂ ನಿನ್ನೊಳಗೆ ಲಯವನೆಯ್ದಿಸಿಕೊಂಡು ಯೋಗನಿದ್ರೆಯಂ ಗೆಯ್ವೆಯೋ ಆಗ ಆಕಾಶಾದಿ ಸ್ಥೂಲಭೂತಂಗಳೂ
ಸೂಕ್ಷ್ಮಂಗಳಾದ ಮಹದಹಂಕಾರಾದಿಗಳೂ ಅವುಗಳಿಂ ಕಲ್ಪಿಸಲ್ಪಟ್ಟ ಶರೀರಗಳೂ ಇವೆಲ್ಲಕ್ಕೂ ನಿಮಿತ್ತವಾದ
ಕಾಲವೈಷಮ್ಯವೂ ಇಂದ್ರಿಯಪ್ರಾಣಾದಿಗಳೂ ಜ್ಞಾನಾನಂದಕರವಾದ ಶಾಸ್ತ್ರವೂ ಯಾವುದೂಯಿರುವುದಿಲ್ಲ
ಪ್ರಳಯದಲ್ಲಿ ವಾಸನಾಮಾತ್ರವಾಗಿ ನಿನ್ನೊಳಗಡಗಿರುವ ಜೀವಾತ್ಮರುಗಳಿಗೆ ಜ್ಞಾನಸಾಧನವೊಂದೂಯಿಲ್ಲದುದ
ರಿಂದ ಸೃಷ್ಟಿಗೆಮುಂಚೆ ಸಿದ್ಧನಾಗಿರುವ ನಿನ್ನಂ ಈಚೆಗೆ ಜನಿಸಿದವರು ತಿಳಿಯಲಾರರಾದ ಕಾರಣದಿಂ ಜ್ಞಾನಮಾ
ರ್ಗವು ಅಸಾಧ್ಯವೆಂದು ಭಕ್ತಿಮಾರ್ಗದಿಂದ ನಿನ್ನಂ ಶರಣುಹೊಂದಿ ಶ್ರವಣಕೀರ್ತನಾದಿಗಳಿಂದ ನಿನ್ನಲ್ಲಿ ಚಿತ್ತವ
ನಿರಿಸಿ ತತ್ವವಂ ತಿಳಿಯುವುದಕ್ಕೆ ಸೌಲಭ್ಯವಂ ಪಡೆಯುವರೇ ಹೊರತು ಬೇರೆಯಿಲ್ಲವು ‖೨೪‖ ಇಂತಾ ಭಕ್ತಿಗಿಂತ
ಲೂ ಜ್ಞಾನವು ಸುಲಭೋಪಾಯವೆಂದು ಉಪದೇಶಂಗೆಯ್ವ ಪುರುಷರು ಭ್ರಾಂತರೇ ಸರಿಯೆಂದು ಸ್ತುತಿಸುವರೆಂತೆನೆ.
ಎಲೈ ಸರ್ವಾತ್ಮಕನೇ ವೈಶೇಷಿಕಾದಿಗಳು ಸೃಷ್ಟಿಗಿಂತಲೂ ಪೂರ್ವದಲ್ಲಿ ಜಗತ್ತಿಲ್ಲವೆಂದು ಹೇಳುವರಾಗಿ ಅಸತ್ಯ
ವಾದ ಜಗತ್ತಿಗೆ ಉತ್ಪತ್ತಿಯಂ ಪೇಳುವರು, ಯೋಗಶಾಸ್ತ್ರಪ್ರವರ್ತಕರಾದರೋ ಜೀವಂಗೆ ಪೂರ್ವದಲ್ಲಿ ಬ್ರಹ್ಮ
ತ್ವವಿಲ್ಲವೆಂದು ಹೇಳುವರು. ಹಾಗಾದರೆ ಅಸತ್ಯವಾದ ಬ್ರಹ್ಮತ್ವಕ್ಕೆ ಉತ್ಪತ್ತಿಯಂ ಹೇಗೆ ಪೇಳುವರು? ನ್ಯಾಯ
ಶಾಸ್ತ್ರಪ್ರವರ್ತಕರಾದರೋ ದುಃಖವು ಸತ್ಯವೆನ್ನುವರು. ಆದರೆ ೨೧ ದುಃಖಂಗಳ ಧ್ವಂಸವೇ ಮೋಕ್ಷವೆಂದು
ಪೇಳುವರು. ಹಾಗಾದರೆ ದುಃಖವು ಸತ್ಯವೆಂತಾಗುವುದು? ಸಾಂಖ್ಯಾದಿಗಳಾದರೋ ಆತ್ಮನಲ್ಲಿ ಭೇದವ ನಂಗೀಕ
ರಿಸುವರು. ಮೀಮಾಂಸಕರಾದರೋ ಕರ್ಮಫಲವ್ಯವಹಾರವಂ ಸತ್ಯವೆನ್ನುವರು. ಅವರೆಲ್ಲರೂ ಈ ಪ್ರಪಂಚವಂ ಸೃ
ಷ್ಟಿಗಿಂತಲೂ ಪೂರ್ವದಲ್ಲಿ ಸಮೂಲವಾಗಿಯೇ ಇತ್ತು-ಪುರುಷನು ಬ್ರಹ್ಮಸ್ವರೂಪನಾಗೆ ಇದೂ ಬ್ರಹ್ಮಸ್ವರೂ
ಪವನೆಯ್ದುವದೆಂದು ಏಕಸತ್ಯವಸ್ತುವಂ ಪೇಳುವ ಅನೇಕಶ್ರುತಿಗಳಿಗೆ ವಿರುದ್ಧಾರ್ಥಂಗಳಂ ಪೇಳುವರು. ಅದ್ದರಿಂ
ದ ಅವರು ಭ್ರಾಂತರೇ ಹೊರತು ತತ್ವದೃಷ್ಟಿಯುಳ್ಳವರಲ್ಲವು. ಪುರುಷನು ತ್ರಿಗುಣಮಯನಾದುದರಿಂದ ಆತ್ಮನಲ್ಲಿ
ತೋರುವ ಭೇದಾದಿಗಳಂ ಅಜ್ಞಾನದಿಂದ ನಿನ್ನೊಳಗೆಯ್ದಿಸಿ ಅಜ್ಞಾನಾತೀತನಾಗಿಯೂ ಸಂಗರಹಿತನಾಗಿಯೂ ಜ್ಞಾ

ಮಿನತತ್ತ್ವಪರತ್ರಸಭವೇದವಬೋಧರಸೇ ||೨೬||ಸದಿವಮನಸ್ತ್ರಿವೃತ್ತ್ವಯಿವಿಭಾತ್ಯಸದಾಮನುಜಾತ್ಸ
ದಭಿಮೃಶಂತ್ಯಶೇಷಮಿದಮಾತ್ಮತಯಾತ್ಮವಿದಃ | ನಹಿವಿಕೃತಿಂತ್ಯಜಂತಿಕನಕಸ್ಯತದಾತ್ಮತಯಾಸ್ವ
ಕೃತಮನುಪ್ರವಿಷ್ಟಮಿದಮಾತ್ಮತಯಾವಸಿತಮ್ ||೨೭||ತವಪರಿತೋಽಭಿಚರಂತ್ಯಖಿಲಸತ್ತ್ವನಿಕೇತತಯಾ
ತಉತಪದಾಕ್ರಮಂತ್ಯವಿಗಣಯ್ಯಶಿರೋನಿರ್ಋತೇಃ ಪರಿವಯಸೇಪಶೂನಿವಗಿರಾವಿಬುಧಾನಪಿತಾಂಸ್ತ್ವ

---

ಪರಮಾತ್ಮನಾದ, ಅವಬೋಧರಸೇತ್ವಯಿ-ಅಸಂಗಜ್ಞಾನ ಘನನಾದ ನಿನ್ನಲ್ಲಿ, ಸಃ-ಆಯಜ್ಞಾನವು, ಸಭವೇತ್ - ಸಂಭವಿಸಲಾರ
ದು ||೨೬|| ಮನಃ-ಮನೋಮಾತ್ರವಿಲಸಿತವಾದ, ಇಮಂತ್ರಿವೃತ್-ಈ ತ್ರಿಗುಣಾತ್ಮಕ ಪ್ರಪಂಚವು, ಅಸತ್-ಸತ್ಯವಲ್ಲವು, ತ್ವ
ಯಿ-ನಿನ್ನಲ್ಲಿ, ಸದಿವ-ಸತ್ಯವಾಗಿರುವಂತೆ, ವಿಭಾತಿ-ಅಧ್ಯಸ್ತವಾಗಿ ತೋರುತಲಿದೆ, ಆತ್ಮವಿದಃ-ಬ್ರಹ್ಮಸ್ವರೂಪವಂ ಬಲ್ಲವರು,ಆ
ಮನುಜಾತ್-ಮನುಷ್ಯನಂ ಮೊದಲ್ಗೊಂಡು, ಅಶೇಷಮಿದಂ-ಈ ಪ್ರಪಂಚವೆಲ್ಲವನ್ನೂ, ಆತ್ಮತಯಾ-ಆತ್ಮ ಸತ್ತೆಯೋ ಸತ್ತೆಯಾಗಿ
ಉಳ್ಳತನದಿಂದ, ಸತ್-ಸತ್ಯಾಧಿಷ್ಠಾನವುಳ್ಳದ್ದನ್ನಾಗಿ, ಅಭಿಮೃಶಂತಿ-ತಿಳಿಯುತಲಿರುವರು, ಕನಕಸ್ಯ-ಬಂಗಾರದ, ವಿಕೃತಿಂ-
ವಿಕಾರವಾದ ಕುಂಡಲಾದಿಕವನ್ನು, ತದಾತ್ಮತಯಾ-ಸುವರ್ಣಸ್ವರೂಪವೇ ಆದ್ದರಿಂದ, ನತ್ಯಜಂತಿಹಿ-ಬಂಗಾರವಂ ಬಯಸುವ
ವರು ಬಿಡುವುದಿಲ್ಲವಷ್ಟೆ, ಸ್ವಕೃತಂ-ಆತ್ಮನಿಂದ ಸೃಷ್ಟಿಸಲ್ಪಟ್ಟಂಥಾ, ಅನುಪ್ರವಿಷ್ಟಂ-ಜೀವರೂಪದಿಂದನುಪ್ರವೇಶಗೊಳ್ಳ
ಲ್ಪಟ್ಟಂಥಾ, ಇದಂ-ಈ ಜಗತ್ತು, ಆತ್ಮತಯಾ-ಬ್ರಹ್ಮಸ್ವರೂಪತ್ವದಿಂದ, ಅವಸಿತಂ-ನಿಶ್ಚಯಿಸಲ್ಪಟ್ಟಿರುವದು ||೨೭||ಯೇ-
ಯಾವ ಪುರುಷರು, ಅಖಿಲಸತ್ವನಿಕೇತತಯಾ-ಸಕಲಪ್ರಾಣಿಗಳಿಗೂ ಆವಾಸನಾದ್ದರಿಂದ, ತವ-ನಿನ್ನನ್ನು, ಪರಿಚರಂತಿ-ಸೇವಿಸು
ತಲಿರುವರೋ, ಉತ-ಆ ಕಾರಣದಿಂದಲೇ, ತೇ-ಅವರು, ಅವಿಗಣಯ್ಯ-ತಿರಸ್ಕರಿಸಿ, ನಿರ್ಋತೇಃ-ಮೃತ್ಯುವಿನ, ಶಿರಃ-ತಲೆಯನ್ನು,
ಪದಾ-ಅಡಿಯಿಂದ, ಆಕ್ರಮಂತಿ-ಮೆಟ್ಟುತಲಿರುವರು, ಯೇ-ಯಾವಪುರುಷರು, ವಿಮುಖಾಃ-ನಿನ್ನಲ್ಲಿ ಭಕ್ತಿಇಲ್ಲದವರೋ, ತಾನ್-
ಅವರನ್ನು, ವಿಬುಧಾನಪಿ-ವಿದ್ವಾಂಸರನ್ನಾದರೂ, ಗಿರಾ-ಮಾತಿನಿಂದ, ಪಶೂನಿವ-ಪಶುಗಳನ್ನು ಹೇಗೋಹಾಗೆ, ಪರಿವಯಸೇ-

---

ನಸನವಾಗಿಯೂ ಇರುವ ನಿನ್ನನ್ನರಿಯರು. ವಸ್ತುತಃ ನಿನ್ನೊಳಗಜ್ಞಾನವೂ ಇಲ್ಲ. ಪುರುಷನು ಗುಣಮಯನೂ
ಅಲ್ಲ. ಅದ್ದರಿಂದ ಇತರಶಾಸ್ತ್ರಗಳು ಅಸಂಗತಂಗಳೇಸರಿ||೨೬|| (ಅಸದ್ರೂಪವಾದ ವಸ್ತುವಿಗೆ ಉತ್ಪತ್ತಿಯೂ
ಇಲ್ಲ ಪುರುಷನು ತ್ರಿಗುಣಮಯನೂಅಲ್ಲವೆಂಬ ಉಭಯಾರ್ಥವೇ ಸತ್ಯವಾದರೆ ಈಪ್ರಪಂಚಸಮೂಹವೂ ಪುರುಷ
ನೊಸಹ ಪ್ರತ್ಯಕ್ಷವಾಗಿಲ್ಲವೆಂದು ಹೇಳಲ್ಪಟ್ಟಂತಾಗುವುದು. ಹಾಗಾದರೆ ಆಪ್ರಪಂಚಪುರುಷರು ಸದ್ರೂಪವೆಂದು
ಜ್ಞಾನಕ್ಕೆ ಎಂತುವಿಷಯರಾಗುವರು? ಇಂತೆಂಬಶಂಕೆಯಂ ಪರಿಹರಿಸಲೋಸುಗ ಹೇಳುವರೆಂತೆನೆ- ಎಲೈಪರಮಾ
ತ್ಮನೇ ನಿನ್ನಲ್ಲಿ ಮನೋಮಾತ್ರದಿಂ ಕಲ್ಪಿತವಾಗಿ ತೋರುತಲಿರುವ ತ್ರಿಗುಣಾತ್ಮಕವಾದ ಪ್ರಪಂಚಸಮೂಹವು
ಪುರುಷನಂ ವ್ಯಾಪಿಸಿಕೊಂಡು ತಾನು ಅಸತ್ಯವಾದಾಗ್ಯೂ ಅಧಿಷ್ಠಾನರೂಪನಾದ ನಿನ್ನಸತ್ವದಿಂದಲೇ ತಾನೂಸ
ದ್ರೂಪವಂತೆ ತೋರುತಲಿದೆ. ಪರಮಪುರುಷನೂ ಕೂಡ ಅಧಿಷ್ಠಾನರೂಪನಾದ ನಿನ್ನ ಸದ್ರೂಪದಿಂದಲೇ ತೋ
ರುವನು. ತೋರಿದ್ದೆಲ್ಲವೂ ಮಾಯಾಕಲ್ಪಿತವೇಹೊರತು. ಸತ್ಯವಲ್ಲವೆಂದು ಅನೇಕಶ್ರುತಿಗಳು ಹೇಳುತಲಿವೆ. ಆತ್ಮ
ಜ್ಞಾನಿಗಳಾದ ಪುರುಷರಿಗೆ ಈ ಪ್ರಪಂಚವೂಕೂಡ ಸದ್ರೂಪದಿಂದಲೇ ತೋರುತಲಿರುವುದರಿಂದ ಪ್ರಪಂಚವು ಹೇ
ಗೆ ಅಸತ್ಯವಾಗುವುದೆಂದರೆ ಆತ್ಮಜ್ಞಾನಿಗಳಾದರೋ ಕಾರಣವ್ಯತಿರಿಕ್ತವಾಗಿ ಕಾರ್ಯವಿಲ್ಲದುದರಿಂದ ಕಾರಣವಾ
ದ ಬ್ರಹ್ಮಕ್ಕೆ ಭೋಕ್ತೃಭೋಗ್ಯಾತ್ಮಕವಾದ ಕಾರ್ಯಪ್ರಪಂಚವು ಅನನ್ಯವಾದುದರಿಂದ ಕಾರಣಸತ್ತಾತ್ಮಕವಾ
ಗಿ ಸತ್ಯವೆಂದು ತೋರುತಲಿದೆಯೇಹೊರತು ವಾಸ್ತವಿಕವಾಗಿ ಸತ್ಯವಲ್ಲವು. ಹೇಗೆಂದರೆ ಲೋಕದಲ್ಲಿ ಸುವರ್ಣಾ
ರ್ಥಿಗಳಾದ ಪುರುಷರು ಸುವರ್ಣವಿಕಾರಂಗಳಾದ ಕಟಕ ಕುಂಡಲಾದಿಗಳಂ ಸುವರ್ಣರೂಪ ವಪ್ಪುದರಿಂ ತ್ಯಜಿ
ಸುವದಿಲ್ಲವು- ಕಾರಣಬ್ರಹ್ಮವೂ ಕಾರ್ಯಪ್ರಪಂಚದಲ್ಲಿ ಅನುಪ್ರವೇಶಗೆಯ್ದಿರುವ ಪುರುಷನೂ ಸಹ ಆತ್ಮ
ವೇ ಆಗಿರುವುದರಿಂದ ಆತ್ಮಜ್ಞರು ಸರ್ವವನ್ನೂ ಆತ್ಮಸ್ವರೂಪವೆಂದು ತಿಳಿಯುತಲಿರುವರು ||೨೭|| ಆದರೆ ಪ
ರಬ್ರಹ್ಮವು ಸತ್ಯಸ್ವರೂಪವಾಗಿಯೂ ಜ್ಞಾನಸ್ವರೂಪವಾಗಿಯೂ ಅಪರಿಚ್ಛಿನ್ನವಾಗಿಯೂ ಇರುವುದು. ಈ ಬ್ರ

ಯಿ ಕೃತಸೌಹೃದಾಃ ಖಲು ಪುನಂತಿ ನ ಯೇ ವಿಮುಖಾಃ॥೨೮॥ ತ್ವಮಕರಣಸ್ಸ್ವರಾಡಖಿಲಕಾರಕಶಕ್ತಿಧರ
ಸ್ತವ ಬಲಿಮುದ್ವಹಂತಿ ಸಮದಂತ್ಯಜಯಾನಿಮಿಷಾಃ। ವರ್ಷಭುಜೋಽಖಿಲಕ್ಷಿತಿಪತೇರಿವ ವಿಶ್ವಸೃಜೋ ವಿದ

---

ಕಟ್ಟುತಲಿರುವಿ, ತ್ವಯಿ-ನಿನ್ನಲ್ಲಿ, ಕೃತಸೌಹೃದಾಃ-ಮಾಡಲ್ಪಟ್ಟ ಪ್ರೇಮವುಳ್ಳ, ನವಿಮುಖಾಃ-ಭಕ್ತರು, ಪುನಂತಿಖಲು-ಲೋಕವನ್ನು ನಿಶ್ಚಯವಾಗಿ ಪವಿತ್ರಗೊಳಿಸುವರಲ್ಲವೆ ॥೨೮॥ ತ್ವಂ-ನೀನು, ಅಕರಣಃ-ಇಂದ್ರಿಯಸಂಬಂಧವಿಲ್ಲದವನಾದ್ದರಿಂದಲೇ,ಅಖಿಲಕಾರಕಶಕ್ತಿಧರಃ-ಸಕಲೇಂದ್ರಿಯಶಕ್ತಿಗಳನ್ನೂ ಪ್ರವರ್ತಿಸಗೊಳಿಸುವನೂ, ಸ್ವರಾಟ್-ಸ್ವಯಂಪ್ರಕಾಶನೂ ಆಗಿರುವಿ, ಅಜಯ-ಅವಿದ್ಯೆಯಿಂದೊಡಗೂಡಿದ, ಅನಿಮಿಷಾಃ-ದೇವರ್ಕಳು, ತವ-ನಿನಗೆ, ಬಲಿಂ-ಕಾಣಿಕೆಯನ್ನು, ವರ್ಷಭುಜಃ-ಖಂಡದೇಶವನ್ನನುಭವಿಸುವ ಪಾಳ್ಯಪಟ್ಟದರಸುಗಳು, ಅಖಿಲಕ್ಷಿತಿಪತೇರಿವ-ಸಾರ್ವಭೌಮರಾಯಂಗೆ ಹೇಗೋ ಹಾಗೆ, ಉದ್ವಹಂತಿ-ಅರ್ಪಿಸುತಲಿರುವರು, ಸಮದಂತಿಚ-ತಾವೂ ಅನುಭವಿಸುತಲಿರುವರು, ವಿಶ್ವಸೃಜಃ-ಪ್ರಪಂಚಕ್ಕೆ ಸೃಷ್ಟಿಕರ್ತರಾದ ಬ್ರಹ್ಮಾದಿಗಳು, ಯತ್ರ-ಯಾವಕಾರ್ಯದಲ್ಲಿ, ಯೇ-ಯಾರು, ಅಧಿಕೃತಾಃ-ಅಧಿಕಾರಿಗಳಾಗಿ ನಿಯಮಿಸಲ್ಪಟ್ಟಿರುವರೋ, ತೇತು-ಅವರಾದರೋ, ಭ

---

ಹ್ಮವಸ್ತುವಿನಲ್ಲಿ ಯಾವ ಭೇದವೂ ಇಲ್ಲ, ಇಂತಾ ಬ್ರಹ್ಮವಸ್ತುವಿನಲ್ಲಿ ಯಾವವನು ಭೇದ ಬುದ್ಧಿಯಂ ಮಾಡುವನೋ ಅವನಿಗೆ ಮೃತ್ಯುರೂಪವಾದ ಸಂಸಾರವು ತಪ್ಪುವದಿಲ್ಲವೆಂದು ಶ್ರುತಿಗಳು ಹೇಳುತಲಿವೆ ಯಾದುದರಿಂದ ಬ್ರಹ್ಮವಿಷಯಕವಾದ ಜ್ಞಾನವು ಸುಲಭವೇ ಸರಿ-ಅದರಿಂದ ಭಕ್ತಿಯಿಂ ಪ್ರಯೋಜನವೇನೆಂದು ನುಡಿಯುವರು.] ಅಹೆಂತೆನ್ನೆ- ಎಲೈ ಪರಮಾತ್ಮನೇ! ಯಾರು ನಿನ್ನನ್ನು ಸರ್ವಭೂತಾಂತರ್ಯಾಮಿಯನ್ನಾಗಿ ಉಪಾಸಿಸುವರೋ ಅವರು ಸಂಸಾರವೆಂಬ ಮೃತ್ಯುವಂ ಗಣನೆ ಮಾಡದೆ ಅದರ ಶಿರಸ್ಸಿನಲ್ಲಿ ಪಾದವನ್ನಿಟ್ಟು ಮುಕ್ತರಾಗುತ್ತಾರೆ-ಯಾವ ಪುರುಷನು ನಿನ್ನಲ್ಲಿ ವಿಮುಖನಾಗಿ ಭಕ್ತನಲ್ಲದೆ ಯಿರುವನೋ ಅವನು ಜ್ಞಾನಿಯಾದರೂ ಹಗ್ಗದಿಂದ ಬಂಧಿಸಲ್ಪಟ್ಟಂತೆ ಶ್ರುತಿವಾಕ್ಯದಿಂ ಅವನಂ ಬಂಧಿಸುತ್ತೀಯೆ- ನಿನ್ನಲ್ಲಿ ಮಾಡಲ್ಪಟ್ಟ ಪ್ರೇಮ ಭಕ್ತಿಯುಳ್ಳವರು ತಮ್ಮನ್ನೂ ಇತರರನ್ನೂ ನಿಶ್ಚಯವಾಗಿ ಶುದ್ಧಗೊಳಿಸಿ ಕೊಳ್ಳುವರು. ಇದರ ಭಾವವೇನೆಂದರೆ, ಪರಬ್ರಹ್ಮ ಸ್ವರೂಪವಂ ಹೇಳುವ ಶ್ರುತಿಗಳು ಬ್ರಹ್ಮ ಜ್ಞಾನವೇ ಸುಲಭ ಮಾರ್ಗವೆಂದು ತೋರಿಸಿದಾಗ್ಯೂ ಬ್ರಹ್ಮವಸ್ತುವು ಅಪರೋಕ್ಷವಾದುದರಿಂದ ಅಪರೋಕ್ಷ ಜ್ಞಾನವೇ ಹುಟ್ಟುವದಾದರೂ ಅಸಂಭಾವನೆಯಿಂದಲೂ ವಿಪರೀತ ಭಾವನೆಯಿಂದಲೂ ತಿರಸ್ಕರಿಸಲ್ಪಡುತ್ತೆಯಾಗಿ ಮನನಾದಿ ಬಲವಿಲ್ಲದ ಮಲಿನ ಚಿತ್ತರಾದ ಪುರುಷರಲ್ಲಿ ಆಜ್ಞಾನವು ಪರೋಕ್ಷದಂತೆಯೇ ಆಗುವುದು. ಅಂತಾ ಸಂದಿಗ್ಧ ಜ್ಞಾನವು ಸಂಸಾರ ಭ್ರಾಂತಿಯನ್ನು ನಿವೃತ್ತಿ ಮಾಡಲಾರದು. ಭಗವತ್ಸೇವೆಯಿಂದಲಾದರೋ ನಿರ್ಮಲವಾದ ಚಿತ್ತವುಳ್ಳವರಾಗಿ ಭಗವದನುಗ್ರಹದಿಂದ ಅಪರೋಕ್ಷಜ್ಞಾನವಂ ಪಡೆದು ಹಸ್ತಗತವಾದಂತೆ ಮೋಕ್ಷವಂ ಪಡೆಯುವರು-ಈ ಯರ್ಥವನ್ನೇ ಅನೇಕ ಶ್ರುತಿಗಳು ಹೇಳುವವು॥೨೮॥ ಆದರೆ [ಸರ್ವಭೂತಾಂತರ್ಯಾಮಿಯಾದ ಭಗವಂತನಂ ಸೇವಿಸಬೇಕು, ಎಂಬರ್ಥವು ಹೇಳಲ್ಪಟ್ಟಿರೆ ಇಂದ್ರಿಯ ಸಂಬಂಧವುಂಟಾಗುವುದರಿಂದ ಕರ್ತೃತ್ವ ಭೋಕ್ತೃತ್ವಗಳು ಭಗವಂತನಿಗೆ ಪ್ರಸಕ್ತಗಳಾಗುವವು, ಆದಾಗ್ಯೂ ಅವು ಆರೋಪಿತಗಳೇ ಹೊರತು ಪರಮಾರ್ಥಂಗಳಲ್ಲ. ಭಗವಂತನಲ್ಲಿ ಪರಮಾರ್ಥಂಗಳಾದರೆ ಜೀವನಿಗೂ ಸಮಾನವಾದುದರಿಂದ ಭಗವಂತನ ಹಾಗೆ ಜೀವನಿಗೂ ಸೇವ್ಯತ್ವ ಬರಲಿ, ಸೇವಕತ್ವವೇ ಉಂಟಾಗುವದೆಂಬ ಶಂಕೆಯನ್ನು ಪರಿಹರಿಸುವುದಾಗಿ ಶ್ರುತಿಗಳು ಹೇಳುವವು-) ಎಂತೆನ್ನೆ,---ಎಲೈ ಭಗವಂತನೇ, ಸ್ವತಃ ಪ್ರಕಾಶ ರೂಪನಾದ ನೀನು ಇಂದ್ರಿಯಂಗಳಿಂದ ರಹಿತನಾದರೂ ಜೀವರಿಗೆ ಇಂದ್ರಿಯ ಶಕ್ತಿಗಳನ್ನುಂಟು ಮಾಡುವಿ, ಸ್ವತಸ್ಸಿದ್ಧ ಜ್ಞಾನಶಕ್ತಿಯುಳ್ಳ ನಿನಗೆ ಇಂದ್ರಿಯಾಪೇಕ್ಷೆಯಿಲ್ಲವಾದುದರಿಂದ ಅವಿದ್ಯಾವೃತರಾದ ಇಂದ್ರಾದಿಗಳು ಅವರಿಗೂ ಪೂಜ್ಯರಾದ ಬ್ರಹ್ಮಾದಿಗಳೂ ಸಹ ಮನುಷ್ಯರಿಂ ಕುಡಲ್ಪಟ್ಟ ಹವ್ಯಕವ್ಯಗಳಂ ಭಕ್ಷಿಸುವರು. ಆದರೂ ಭಯಪಡುವರಾಗಿ ನಿನ್ನಂ ಪೂಜಿಸುತ್ತಾರೆ. ದೃಷ್ಟಾಂತವೇನೆಂದರೆ-ಖಂಡಮಂಡಲಾಧಿಪತಿಗಳು ಸ್ವಲ್ಪ ಐಶ್ವರ್ಯವುಳ್ಳವರಾಗಿ ತ

ಧರಿಯತ್ರಯೇತ್ವಧಿಕೃತಾ ಭವತಶ್ಚಕಿತಾಃ॥೨೭॥ ಸ್ಥಿರಚರಜಾತಯಸ್ಸ್ಯುರಜಯೋತ್ಥನಿಮಿತ್ತಯು
ಜೋವಿಹರಉದೀಕ್ಷಯಾಯದಿಪರಸ್ಯವಿಮುಕ್ತ ತತಃ । ನಹಿಪರಮಸ್ಯಕಶ್ಚಿದಪರೋನಪರಶ್ಚಭವೇದ್ವಿ
ಯತಇವಾಪದಸ್ಯತವಶೂನ್ಯತುಲಾಂದಧತಃ॥೨೮॥ ಅಪರಿಮಿತಾಧ್ರುವಾಸ್ತನುಭೃತೋಯದಿಸರ್ವಗತಾ
ಸ್ತರ್ಹಿನಶಾಸ್ಯತೇತಿನಿಯಮೋಧ್ರುವನೇತರಥಾ । ಅಜನಿಚಯನ್ಮಯಂತದವಿಮುಚ್ಯನಿಯಂತೃಭವೇತ್ಸ

---

ವತಃ-ನಿನ್ನ ದೆಸೆಯಿಂದ, ಚಕಿತಾಃ-ಹೆದರಿದವರಾಗಿ, ತತ್-ಆ ಕಲಿಸವನ್ನು ವಿದಧತಿ-ಮಾಡುತಲಿರುವರು॥೨೭॥ ಹೇವಿಮುಕ್ತ-ಎಲೈ ನಿತ್ಯಮುಕ್ತನಾದ ಪರಮೇಶ್ವರನೇ, ನಿನಗೆ, ಅಜಯಾ-ಮಾಯೆಯೊಡನೆ, ವಿಹರಃ-ಯದಿ-ವಿಹಾರವು ಉಂಟಾದಲ್ಲಿ, ತತಃ-ಆ ಮಾಯೆಗಿಂತಲೂ, ಪರಸ್ಯ-ದೂರದಲ್ಲಿರುವನಾದ (ಅಸಂಗನಾದನಿನ್ನ) ಉದೀಕ್ಷಯಾ-ಸಂಕಲ್ಪಮಾತ್ರದಿಂದ, ಅಜಯೋತ್ಥನಿಮಿತ್ತಯುಜಃ-ಅ ಉತ್ಥ-ಹುಟ್ಟಿದ, ನಿಮಿತ್ತ-ಸೂಕ್ಷ್ಮದೇಹಗಳನ್ನು, ಯುಜಃ-ಹೊಂದಿದವರಾದ, ಸ್ಥಿರಚರಜಾತಯಃ-ಸ್ಥಾವರಜಂಗಮಜಾತೀಯರುಗಳಾದ ದೇಹಂಗಳುಳ್ಳಪ್ರಾಣಿಗಳು, ಸ್ಯುಃ-ಆಗುವರು, ವಿಯತ ಇವ-ಆಕಾಶದಂತೆ, ಅಪದಸ್ಯ-ಅಗೋಚರನಾದಂಥಾ, ಶೂನ್ಯತುಲಾಂ-ಸಾಮ್ಯಾಭಾವವನ್ನು, ದಧತಃ-ಧರಿಸಿದವನಾದ, ಪರಮಸ್ಯ-ಪರಮೇಶ್ವರನಾದ, ತವ-ನಿನಗೆ, ಪರಃ-ಹೆರವನು, ಕಶ್ಚಿತ್-ಓರ್ವನಾದವರೂ, ನಹಿ-ಇಲ್ಲವಷ್ಟೆ, ಅಪರಶ್ಚ-ತನ್ನವನೂ, ನಭವೇದ್ಧಿ-ಆಗುವುದಿಲ್ಲವಷ್ಟೆ !॥೨೮॥ ಹೇಧ್ರುವ-ಎಲೈ ಪರಮೇಶ್ವರನೇ? ತನುಭೃತಃ-ದೇಹಧಾರಿಗಳಾದ ಜೀವಾತ್ಮರು, ಅಪರಿಮಿತಾಃ-ಅಸಂಖ್ಯಾತರೂ, ಸರ್ವಗತಾಃ-ಸರ್ವವ್ಯಾಪಕರಾದ ವಿಭುಗಳೂ, ಧ್ರುವಾಃ-ನಿತ್ಯರೂ ಆದ ಪಕ್ಷದಲ್ಲಿ, ತರ್ಹಿ-ಅವರೆಲ್ಲರೂ ಸಮರಾದ್ದರಿಂದ, ಶಾಸ್ಯತಾ-ನಿನ್ನಿಂದ ನಿಯಮಿಸಲ್ಪಡತಕ್ಕವರಾಗಿರುವಿಕೆ, ನ-ಅವರಿಗ ಘಟಿಸುವುದಿಲ್ಲವು, ಇತಿ-ಇಂತೆಂಬ ನಿಮಿತ್ತದಿಂದ, ನಿಯಮಃ-ನಿನಗೆಯುಕ್ತವಾದ ನಿಯಾಮಕತ್ವವು, ನ-ಸಲ್ಲವಾದೀತು, ಇತರಥಾ-ಬೇರೆಬಗೆಯಾಗಿ ಆದರೋ, ನಿನಗ ನಿಯಾಮಕತ್ವವು ಘಟಿಸೀತು, ಹೇಗೆಂದರೆ-ಯನ್ಮಯಂ-ಉಪಾಧಿಯಿಂದ ಯಾವ ಆತ್ಮಾಭಾಸವಾದ ಜೀವಚೈತನ್ಯವು, ಅಜನಿಚ-ಹುಟ್ಟಿದಂತೆ ತೋರುತ್ತಿದೆಯೋ, ತದವಿಮುಚ್ಯ-ಅದನ್ನುಬಿಡದೆ, ಕಾರಣ

---

ಮ್ಮಸ್ಥಲಂಗಳಲ್ಲಿಸ್ವಾಧೀನ ಪ್ರಜೆಗಳಿಂ ಕೊಂಡಾಡಲ್ಪಟ್ಟುಕಾಣಿಕೆಗಳಂ ತಾವೇ ಗ್ರಹಿಸುವರಾದರೂ ಅಖಂಡಮಂಡಲಾಧಿಪತಿಯಾದ ಚಕ್ರವರ್ತಿಗೆ ಭಯಪಡುವರಾಗಿ ತಾವುಕಾಣಿಕೆಗಳಂಕೊಡುವರು. ಹಾಗೆಯೇ ಬ್ರಹ್ಮಾದಿಗಳು ಸರ್ವಜೀವರಿಗೂ ಪೂಜ್ಯರು.ಆದಾಗ್ಯೂ ಭಯದಿಂದ ನಿನ್ನನುಸರಿಸುವರು.ನಿನ್ನಿಂದಯಾರು ಯಾರು ಯಾವಯಾವ ಅಧಿಕಾರಂಗಳಲ್ಲಿ ನಿಯಮಿಸಲ್ಪಟ್ಟಿರುವರೋ ಅವರವರು ಆಯಾಯಧಿಕಾರಂಗಳಂ ನಿರ್ವಹಿಸಿ ಕೊಂಡುನಿನ್ನಯಾಜ್ಞೆಯಂ ಪಾಲಿಸುವರು,ಅದೇ ನಿನ್ನಪೂಜೆಯು, ಈ ಯರ್ಥವನ್ನೇ ಶ್ರುತಿಗಳು ಹೇಳುವವು)॥೨೭॥ (ಹಾಗಾದರೆ ಇಂದ್ರಿಯ ಪ್ರೇರಕನಾದ ಈಶ್ವರನನ್ನು ಇಂದ್ರಿಯಾಧೀನರಾದ ನರರು ಭಜಿಸುತ್ತಾರೆ ಈಶ್ವರನಂ ಭಜಿಸುವುದರಲ್ಲಿ ಇಷ್ಟು ಮಾತ್ರವೇ ಕಾರಣವಲ್ಲ, ಆನರರು ಈಶ್ವರನಿಂದ ಜನಿಸಿದವರಾಗಿ ಋಣವೂ ಕಾರಣವು ಎಂದು ಅನೇಕ ಶ್ರುತಿಗಳುಹೇಳುವುದಾಗಿ ಸ್ತುತಿಸುವ]ರೆಂತೆನ್ನೆ--ಎಲೈ ನಿತ್ಯ ಮುಕ್ತನಾದ ಭಗವಂತನೇ,ನೀನು ಮಾಯೆಗಿಂತಲೂ ವ್ಯತಿರಿಕ್ತನು, ಈ ಕ್ಷುಲ್ಲಕರದಿ ಮಾಯೆಯೊಡನೆ ಕ್ರೀಡಿಸುವಿ, ಆಗ ನಿನ್ನಿಂದ ಆ ವಿರ್ಭವಿಸಿ ಯಿರುವ ನಿಮಿತ್ತಕರ್ಮಂಗಳೊಡನೆ ಕೂಡಿದ ಚರಾ ಚರರೂಪಂಗಳಾದ ದೇಹಂಗಳುಳ್ಳ ಜೀವರುಜನಿಸಿದಂತಾಗುವರು, ನಿಮಿತ್ತಕರ್ಮಗಳ ಆ ವಿಧಾನದಿಂದ ವಿಹಾರ ತನ್ನ ಸ್ವಂಪರೆ ಉತ್ತಮನಾದ ಗಯಾ ಶೀಲನಾದ ಆಕಾಶಕ್ಕೆಸಮಾನನಾದ ಮನೋವಾಕ್ಕುಗಳಿಗ ಅಗೋಚರನಾದ ಶೂನ್ಯದಂತೆ ತೋರುವ ನಿನಗೆ ಸ್ವೀಯನೂ ಇಲ್ಲ, ಪರನೂಇಲ್ಲವಾಗಿವೈಷಮ್ಯ ವಿಲ್ಲದ್ದರಿಂದ ನಿನ್ನಯಿಚ್ಛೆಯಿಂದ ಅವರ ಸೃಷ್ಟಿಯುಂಟಾಗುವುದಿಲ್ಲ ಕರ್ಮಂಗಳ ದೆಸೆಯಿಂದಸುಖದುಃಖಾದ ಚ್ಛೇದರೂಪಂಗಳಾದ ದೇಹಂಗಳು ಹುಟ್ಟಿ ಅದರಿಂದ ಜೀವರು ಜನಿಸಿದಂತಾಗುವರು॥೨೮॥ ಹೀಗೆ ಹೇಳಲ್ಪಟ್ಟದ್ದರಿಂದ ಪರಮಾತ್ಮನ ದೆಸೆಯಿಂದ ಅವಿದ್ಯಾ ಕಲ್ಪಿತಂಗಳಾದ ಕಾರ್ಯೋಪಾಧಿಗಳುಳ್ಳವರಾಗಿ ಪರಮಾತ್ಮನ ಅಂಶ ಭೂತರಾದ ಜೀವರು ಜನಿಸಿದವರಂತೆ ಸಂಸಾರವಂ ಮಾಡುತ್ತಿದ್ದಾರೆ__ಎಂದು ಹೇಳಲ್ಪಟ್ಟಂತಾಯಿತು. ಅದರಲ್ಲಿ ಅನಾದ್ಯವಿದ್ಯೆಯೇ ಪ್ರಧಾನವಾಗಿದೆ. ಅದರೆ ಜೀವನೂ ಸಹ ಓರ್ವನೇಆದುದರಿಂದ ಅದನು ಉಪಾಧಿಗಳಿಂದ ನಾನಾವಿಧವಾಗಿ ತೋರುತ್ತಿರುವನಲ್ಲವೆ. ಮೂಲೋಪಾಧಿಯಾದ ಅವಿದ್ಯಾನಿವೃತ್ತಿಯಿಂದ ಒಬ್ಬ ಜೀವ

ಸಮಮನುಜಾನತಾಂ ಯದಮತಂ ಮತದುಷ್ಟತಯಾ ॥೩೦॥ ನ ಘಟತ ಉದ್ಭವಃ ಪ್ರಕೃತಿಪೂರುಷಯೋರ
ಜಯೋರುಭಯಯುಜಾ ಭವಂತ್ಯಸುಭೃತೋ ಜಲಬುದ್ಬುದವತ್ । ತ್ವಯಿ ತ ಇಮೇ ತತೋ ವಿವಿಧನಾಮಗು

---

ಸ್ವರೂಪವಾಗಿದ್ದು, ನಿಯಂತೃ-ಈಶ್ವರ ಪ್ರತಿತ್ವವೇ ನಿಯಾಮಕನಾದವನ್ನು, ಸಮಂ-[illegible], [illegible], ಅಮತಂ-ಅಮಿತವು, ಅನುಜಾನತಾಂ-ಅಂಗೀಕರಿಸುವವರ, ಸಂಪ್ರದಾಯವು [illegible] ಸೇರಿಸುವುದರ, [illegible]ವುದು, [illegible], ಮತದುಷ್ಟತಯಾ [illegible] ಮಿಥ್ಯಾ[illegible] ಟ್ಟದ್ದಲ್ಲದೆ ಇರದು ॥೩೦॥ ಅಜಯೋಃ-ಉತ್ಪತ್ತಿಯಿಲ್ಲದ ಪ್ರಕೃತಿಪುರುಷಯೋಃ-[illegible] ಆತ್ಮನಿಗೂ [illegible]-ಜೀವರೂಪವೆಂಬ ವಿಚಿತ್ರವಿಕಾರವು, ನ ಘಟತೇ-ಕೂಡುವುದಿಲ್ಲ, ಉಭಯಯುಜಾ-ಪ್ರಕೃತಿ [illegible] ಸಂಬಂಧದಿಂದ, ಜಲಬುದ್ಬುದವತ್-ನೀರಿನಲ್ಲಿ ಬುಗ್ಗೆಗಳಂತೆ, ತ್ವಯಿ-ನಿನ್ನಲ್ಲಿ, ಅಸುಭೃತಃ-ಪ್ರಾಣಿಗಳು, [illegible], ತತಃ-

---

ನಿಗೆ ಮುಕ್ತಿಯುಂಟಾದರೆ ಸಮಸ್ತಜೀವರಿಗೂ ಮುಕ್ತಿಯುಂಟಾಗಬೇಕಾದೀತು. [illegible] ಅವಿದ್ಯೆಗಳೂ ಅನೇಕಂಗಳೆಂಬ ಪಕ್ಷದಲ್ಲಿ ಒಂದುಶರೀರದಲ್ಲಿ ಜೀವನಿಗೆ ಅವಿದ್ಯೆಯು ನಷ್ಟವಾದಾಗ್ಯೂ ಮತ್ತೊಂದು ದೇಹದಲ್ಲಿರುವ ಆ ಜೀವನಿಗೆ ಆದೇಹಸಂಬಂಧಿಯಾದ ಅವಿದ್ಯೆಯು ನಷ್ಟವಾಗಿಲ್ಲವಾಗಿ ಮುಕ್ತಿಯೇ ಇಲ್ಲವಾಕಾದೀತೆಂಬ ತರ್ಕಬಲದಿಂದ ವಸ್ತುತಃ ಜೀವರು ಅನೇಕರೆಂದು ಒಪ್ಪಬೇಕಲ್ಲದೆ ಆಜೀವರಿಗೆ ಅಣುಪರಿಮಾಣವನ್ನು ಅಂಗೀಕರಿಸಿದರೆ ಆಗ ಚೈತನ್ಯಕ್ಕೆ ಸಮಸ್ತಶರೀರವ್ಯಾಪ್ತಿಯು ಇಲ್ಲದೆ ಹೋಗಬೇಕಾಗುತ್ತೆ. [illegible] ಎಷ್ಟು ಪರಿಮಾಣವುಳ್ಳದ್ದೋ ಚೈತನ್ಯವೂ ಅಷ್ಟು ಪರಿಮಾಣವುಳ್ಳದ್ದಾಗಿ ಇರುವುದೆಂಬ ಪಕ್ಷದಲ್ಲಿ ಮಧ್ಯಮಪರಿಮಾಣವುಳ್ಳ ಘಟಾದಿಗಳಂತೆ ಅವಯವಯುಕ್ತರಾದ ಜೀವರಿಗೆ ಅನಿತ್ಯತ್ವವುಂಟಾಗಬೇಕಾದೀತು. ಸರ್ವವ್ಯಾಪ್ತರಾಗಿ ನಿತ್ಯರಾಗಿರುವ ಜೀವರಿಗೆ ಉತ್ಪತ್ತಿ ನಾಶಗಳಿಲ್ಲವೆಂದು ಶಾಸ್ತ್ರಪ್ರವರ್ತಕರು ತಿಳಿಯುತಲಿರುವರು. ಹೀಗೆ ಪೂರ್ವೋಕ್ತಂಗಳಾದ ದೋಷಂಗಳು ಶಂಕಿಸಲ್ಪಟ್ಟಲ್ಲಿ ಅವು ಸಂಭವಿಸುವುದಿಲ್ಲ. ಅದಂತೆನ್ನೆ- ಅವಿದ್ಯೆಗಳು ಅನೇಕಗಳಾದುದರಿಂದ ಅವಿದ್ಯಾನಾಶವುಳ್ಳ ಜೀವರಿಗ ಮುಕ್ತಿಯೂ ಅವಿದ್ಯಾನಾಶವಿಲ್ಲದ ಜೀವರಿಗ ಬಂಧವೂ ಉಂಟಾಗಬಹುದು. ಈಶ್ವರನಿಗಾದರೋ ಯಾವ ಅಂಶದಿಂದಲೂ ಸಂಸಾರದ ಶಂಕೆಯೇ ಇಲ್ಲ. ಆತ್ಮೈಕ್ಯವಾದರೋ ಸಮಸ್ತಶ್ರುತಿಗಳಲ್ಲಿಯೂ ಪ್ರಸಿದ್ಧವಾಗಿಯೇ ಇದೆ, ಈ ಪಕ್ಷವನ್ನು ಅಂತರ್ಯಾಮಿಬ್ರಾಹ್ಮಣವಂಬುಪನಿಷತ್ತು ಸಮ್ಮತಿಸುವುದಿಲ್ಲವೆಂದು ಪೇಳುವದರದೆಂತೆನ್ನೆ-ಎಲೈ ಭಗವಂತನೇ! ವಸ್ತುತಃ ಜೀವರು ಅನೇಕರಾಗಿ ನಿತ್ಯರಾಗಿ ಸರ್ವವ್ಯಾಪಿಗಳಾಗಿರುವರೆಂದು ಪೇಳಿದಲ್ಲಿ ಆಗ ಸಮಸ್ತಜೀವರೂ ನಿನಗೆ ಸಮಾನರಾದುದರಿಂದ ಅವರಿಗೆ ನಿಯಾಮ್ಯತ್ವವು ಘಟಿಸಲಾರದು. ಆಕಾರಣದಿಂದ ಅವರಿಗೆ ನಿನ್ನಿಂದ ನಿಯಾಮನವು ಎಂತುಸಂಭವಿಸೀತು, ಮತ್ತೊಂದು ಪ್ರಕಾರದಿಂದಲಾದರೋ ನಿನ್ನಿಂದ ಅವರಿಗೆ ನಿಯಮನವು ಸಂಭವಿಸಬಹುದು. ಅದುಹೇಗೆಂದರೆ ಯಾವ ಈಶ್ವರ ಮಯವಾದ ಪ್ರಾಣಿಸಮೂಹವು ಉಪಾಧಿಯಿಂದ ಜೀವಸಮೂಹವೆನಿಸಿಕೊಂಡು ಜನಿಸುವುದೋ ಆ ಈಶ್ವರನು ತನ್ನ ವಿಕೃತಿಗಳಾಗಿರುವ ಜೀವರಿಗೆ ನಿಯಾಮಕನಾಗಬಹುದು. ಯಾವಪರಮಾತ್ಮರೂಪವಾದ ವಸ್ತುವು ಮೂಲಕಾರಣವಾದುದರಿಂದ ಕಾರ್ಯಸಮೂಹವಂ ಬಿಡದೆ ಅನುಸ್ಯೂತವಾಗಿರುವುದೋ ಅಂಥಾ ನಿನ್ನಸ್ವರೂಪವನ್ನು ಯಾರು ತಿಳಿಯುತ್ತೇವೆಯೆಂಬರೋ, ಅವರು ಬ್ರಹ್ಮಸ್ವರೂಪವನ್ನು ಅರಿಯರು, ಅವರಿಂದ ತಿಳಿಯಲ್ಪಟ್ಟ ಅರ್ಥವು ದೋಷಯುಕ್ತವಾದುದರಿಂದ ಆವರು ಅಜ್ಞರೇಸರಿ ಈ ಯರ್ಥವನ್ನೇ ಅನೇಕಶ್ರುತಿಗಳು ಪೇಳುತ್ತಿವೆ ॥೩೦॥ (ಹಾಗಾದರೆ ಜೀವರು ಪರಮಾತ್ಮನ [illegible]ದಿಂದಲೂ ಉತ್ಪನ್ನರಾಗುವರೆನ್ನುತಲೂ ನಿಯಾಮ್ಯ ನಿಯಾಮಕಭಾವವು ಹೇಳಲ್ಪಡುವಪಕ್ಷದಲ್ಲಿ ಜೀವರು ಅನಿತ್ಯರಾದ ಕಾರಣದಿಂದ ಆಜೀವನಿಗೆ ಪ್ರತಿದಿವಸದಲ್ಲಿಯೂ ಮಾಡಲ್ಪಡುವ ಸುಕೃತದುಷ್ಕೃತಗಳಿಗೆ ನಾಶವೂ, ಮಾಡಲ್ಪಡದ ಪುಣ್ಯಪಾಪಗಳೂ ಉಂಟಾಗಬೇಕಾದೀತು, ಅ

ಕ್ಷ್ಯೈಃ ಪರಮೇ ಸರಿತ ಇವಾರ್ಣವೇ ಮಧುನಿ ಲಿಲ್ಯುರಶೇಷರಸಾಃ ॥೩೧॥ ನೃಷು ತವ ಮಾಯಯಾ ಭ್ರಮಮಮೀ
ಷ್ವವಗತ್ಯ ಭೃಶಂ ತ್ವಯಿ ಸುಧಿಯೋಽಭವೇ ದಧತಿ ಭಾವಮನುಪ್ರಭವಮ್ । ಕಥಮನುವರ್ತತಾಂ ಭವಭಯಂ

---

ಆ ಕಾರಣದಿಂದ, ತಇವೇ-ಆದಿಯಾ ಜೀವಾತ್ಮರು, ವಿವಿಧನಾಮಗುಣೈಃ-ಹಲವುರೂಪ ನಾಮಗುಣಗಳೊಡನೆ, ಮಧುನಿ-ಜೇನಿನಲ್ಲಿ, ಅಶೇಷರಸಾಃ ಇವ-ಋುಚಿಗಳೆಲ್ಲವೂ ಹೇಗೋ ಹಾಗೆಯೂ, ಅರ್ಣವೇ-ಸಮುದ್ರದಲ್ಲಿ, ಸರಿತ ಇವ-ಹೊಳೆಗಳಂತೆಯೂ, ಪರಮೇ-ಪರಮಾತ್ಮನಾದ ನಿನ್ನಲ್ಲಿ, ಲಿಲ್ಯುಃ-ಲಯವನ್ನು ಹೊಂದಿ ಮುಕ್ತರಾಗುವರು ॥೩೧॥ ಅಮೀಷು ನೃಷು-ಈ ಜೀವಾತ್ಮರಲ್ಲಿ, ತವ-ನಿನ್ನ, ಮಾಯಯಾ-ಮೋಹಕಾವರಣ ಶಕ್ತಿಯಿಂದ, ಭ್ರಮಂ-ಸಂಸಾರಚಕ್ರದಲ್ಲಿ ತಿರುಗುವಿಕೆಯನ್ನು, ಅವಗತ್ಯ-ತಪ್ಪದೆ ಇರುವುದಂ ತಿಳಿದು, ಸುಧಿಯಃ-ಜ್ಞಾನಿಗಳು, ಅಭವೇ-ಸಂಸಾರನಿವರ್ತಕನಾದ, ತ್ವಯಿ-ನಿನ್ನಲ್ಲಿ, ಅನುಪ್ರಭವಂ-ಅನುವೃತ್ತಿರೂಪವಾದ, ಭಾವಂ-ಸ್ವಭಾವವನ್ನು, ದಧತಿ-ಮಾಡುತಲಿರುವರು, ತ್ರಿಣೇಮಿಃ-ಶೀತೋಷ್ಣವರ್ಷಾಕಾಲಗಳೆಂಬ ಮೂರು ಅಂಚುಗಳುಳ್ಳ, ತವ ಭ್ರುಕುಟಿಃ-ನಿನ್ನ ಕೋಪಲಕ್ಷಣವಾದ ಸಂವತ್ಸರಃ ಎಂಬ ಹುಬ್ಬಿನಗಂಟು, ಯತ್-ಯಾವ ಕಾರಣದಿಂದ, ಅಭವಚ್ಛರಣೇಷು-ನಿನ್ನಂ ನಂಬದೇ ಬಿಟ್ಟವರಲ್ಲಿ, ಭಯಂ-ಸಂಸಾರಭಯವನ್ನು, ಮುಹುಃ-ಮರಳಿಮರಳಿಯೂ, ಸೃಜತಿ- -ಹುಟ್ಟಿಸುತಲಿದೆಯೋ ತತಃ-ಆ ಕಾರಣದಿಂದ, ಅನುವರ್ತತಾಂ-ನಿನ್ನನ್ನೇ ಅನುಸರಿಸಿ ಇರುವ ಭಕ್ತರಿಗೆ, ಭವಭಯಂ-ಸಂಸಾರದ ಹೆದರಿಕೆಯು, ಕಥಂ-ಹೇಗಾ

---

ಜೀವರಿಗೆ ಸ್ವರೂಪನಾಶವೇ ಮೋಕ್ಷವಾಗಬೇಕಾದೀತು. ಆದುದರಿಂದ ಈ ಯರ್ಥವಂ ಹೇಳಕೂಡದು. ಸ್ವಪ್ರಕಾಶಾನಂದಸ್ವರೂಪನಾದ ಆತ್ಮನಿಗೆ ಅವಿದ್ಯಾಕೃತವಾದ ಬಂಧದನಿವೃತ್ತಿಯೇ ಮೋಕ್ಷವೆಂದು ಸಿದ್ಧಾಂತವಾಗಿರುವುದರಿಂದ ಜೀವರಿಗೆ ಉತ್ಪತ್ತಿಯು ಹೇಗೆ ಸಂಗತವಾಗುತ್ತೆ. ಎಂಬ ಶಂಕೆಬಂದಲ್ಲಿ ಉಪಾಧಿಗಳ ಉತ್ಪತ್ತಿಯಿಂದಲೇ ಜೀವರಿಗೆ ಉತ್ಪತ್ತಿಯು ತೋರುವುದೇ ಹೊರತು ಸ್ವತಃ ಇಲ್ಲವೆಂಬರ್ಥವಂ ವೇದಾಭಿಮಾನಿದೇವತೆಗಳು ನುಡಿಯುವರಸೆಂತೆನ್ನೆ-ಅನಾದಿಗಳಾನ ಪ್ರಕೃತಿಪುರುಷರಿಗೆ ಉತ್ಪತ್ತಿಯು ಘಟಿಸುವುದಿಲ್ಲ. ವಾಯುಜಲಮೇಳನದಿಂದ ಜಲದಲ್ಲಿ ಗುಳ್ಳೆಗಳು ಜನಿಸಿದಂತೆ ಪ್ರಕೃತಿಪುರುಷರ ಸಂಬಂಧದಿಂದ ಪ್ರಾಣಾದ್ಯುಪಾಧಿಗಳುಳ್ಳ ಜೀವರು ಹುಟ್ಟಿದರು. ಅನೇಕ ಶ್ರುತಿಗಳು ಈ ಯರ್ಥವಂ ಪೇಳುವವು. ಉಪಾಧಿಲಯಾನಂತರದಲ್ಲಿ ಪರಮಾತ್ಮನಾದ ನಿನ್ನಲ್ಲಿ ಸರ್ವಜೀವರೂ ಜೇನುತುಪ್ಪದೊಳಗೆ ಸಕಲಪುಷ್ಪರಸಗಳೂ ಲೀನಂಗಳಾದಂತೆಯೂ ಸಮುದ್ರದಲ್ಲಿ ನದಿಗಳು ಲೀನವಾದಂತೆಯೂ ಅನೇಕರೂಪಗಳಾದ ನಾಮರೂಪಗಳೊಡನೆ ಲಯವನೆಯ್ದುವರು. ಸುಷುಪ್ತಿ ಪ್ರಳಯಂಗಳಲ್ಲಿ ಜೇನುತುಪ್ಪದೊಳಗಿನ ಪುಷ್ಪರಸಂಗಳಿಗೆ ಪರಸ್ಪರ ಭೇದಗಳು ತೋರದೆ ಸಾಮಾನ್ಯಾಕಾರವಾಗಿ ಲೀನಂಗಳಾಗಿರುವಂತೆ ಜೀವಾತ್ಮರಿಗೆ ಪರಮಾತ್ಮನಲ್ಲಿ ವಿಶೇಷಗಳು ತೋರದೆ ಇರುವವಾದ ಕಾರಣದಿಂದ ಅವಿದ್ಯೆಯೊಡನೆ ಲೀನರಾಗಿರುವರು. ಮುಕ್ತಿಯೊಳಗಾದರೋ ಮೂಲಾವಿದ್ಯೆಯು ನಾಶವಾದುದರಿಂದ ಸಮುದ್ರದಲ್ಲಿ ನದಿಗಳ ಹಾಗೆ ಉಪಾಧಿರಹಿತನಾದ ಪರಮಾತ್ಮನಾದ ನಿನ್ನಲ್ಲಿ ಲಯವನೆಯ್ದುವರು. ಈ ಯರ್ಥವಂ ಅನೇಕಶ್ರುತಿಗಳು ಪೇಳುವವು ॥೩೧॥ ಈ ಪ್ರಕಾರದಲ್ಲಿ ಪರಮೇಶ್ವರನ ದೆಸೆಯಿಂದ ಜೀವರು ಉತ್ಪನ್ನರಾಗುವರು. ಆ ಜೀವರು ಕರ್ಮಂಗಳಂ ಮಾಡುವರು. ಪುನಶ್ಚ ಆ ಪರಮಾತ್ಮನಲ್ಲಿ ಲೀನರಾಗುತ್ತಾರೆ. ಎಂದು ಈ ಪ್ರಕಾರವಾಗಿ ಸಂಸಾರಚಕ್ರಭ್ರಮಣವು ಪೇಳಲ್ಪಟ್ಟಿತು. ಈಗ ಆ ಸಂಸಾರ ಚಕ್ರಭ್ರಮಣ ಕ್ಲೇಶನಿವೃತ್ತಿಗೋಸುಗ ಮಹಾಪುರುಷರು ಭಗವಂತನಾದ ನಿನ್ನನ್ನು ಅನುವರ್ತಿಸುತ್ತಿದಾರೆಯೆಂದು ನುಡಿಯುವರದೆಂತೆನ್ನೆ-ಎಲೈ ಪರಮಾತ್ಮನೇ! ಬುದ್ಧಿಶಾಲಿಗಳಾದವರು ನಿನ್ನ ಮಾಯೆಯಿಂದ ಕಲ್ಪಿತವಾದ ಸಂಸಾರ ಚಕ್ರಭ್ರಮಣವಂ ಪ್ರಾಣಿಗಳಿಗೆ ತಪ್ಪದಿರುವುದಂ ನೋಡಿ ತಿಳಿದು ಸಂಸಾರನಿವರ್ತಕವಾದ ನಿನ್ನಲ್ಲಿ ಅವಿಚ್ಛಿನ್ನವಾದ ಅನುವೃತ್ತಿಯಂ ಮಾಡುತ್ತಾರೆ. ಆ ರೀತಿಯಲ್ಲಿ ನಿನ್ನನ್ನೇ ಅನುವರ್ತಿಸಿಕೊಂಡಿರುವ ಭಕ್ತರಿಗೆ ಸಂಸಾರಭಯವು ಎಂತುಂಟಾದೀತು. ನಿನ್ನ ಭ್ರೂವಿಕ್ಷೇಪರೂಪವಾದ ಶೀತೋಷ್ಣವರ್ಷಾಕಾಲಗಳೆಂಬ ಮೂರು ನೇಮಿಗಳುಳ್ಳ ಸಂವತ್ಸರಾತ್ಮಕವಾದ ಕಾಲಚಕ್ರ

ತವೆಯುಮಬ್ಭ್ರುಕುಟಿಸ್ಸೃಜತಿಮುಹುಸ್ತ್ರಿಣೇಮಿರಭವಚ್ಛರಣೇಷುಭಯಂನ್ ॥೩೩॥ ವಿಜಿತಹೃಷೀಕವಾ
ಯುಭಿರದಾಂತಮನಸ್ತುರಗಂಯಇಹಯತಂತಿಯಂತುಮತಿಲೋಲಮುಪಾಯಖಿದಃ । ವ್ಯಸನಶತಾ
ನ್ವಿತಾಸ್ಸಮುಪಹಾಯಗುರೋಶ್ಚರಣಂವಣಿಜಇವಾವಿಶಂತ್ಯಕೃತಕರ್ಣಧರಾಜಲಧೌ ॥೩೪॥ ಸ್ವಜನಸು
ತಾತ್ಮ ದಾರಧನಧಾಮಧರಾಸುರಥೈಸ್ತ್ವಯಿಸತಿಕಿಂನೃಣಾಂಶ್ರಯತಆತ್ಮನಿಸರ್ವರಸೇ । ಇತಿಸದಜಾನ

---

ದೀತು?॥ ೩॥ ಯೇ-ಯಾವಪುರುಷರು, ಗುರೋಃ-ಅಜ್ಞಾನನಿವರ್ತಕನಾದ ಆಚಾರ್ಯನ, ಚರಣಂ-ಪಾದಸೇವೆಯನ್ನು, ಸಮುಪಹಾ
ಯ-ಬಿಟ್ಟುಬಿಟ್ಟು, ಅತಿಲೋಲಂ-ಅತ್ಯಂತ ಚಂಚಲವಾದ್ದರಿಂದಲೇ, ವಿಜಿತಹೃಷೀಕವಾಯುಭಿಃ-ನಿಗ್ರಹಿಸಲ್ಪಟ್ಟ ಇಂದ್ರಿಯಂ
ಗಳಿಂದಲೂ ಪ್ರಾಣಂಗಳಿಂದಲೂ, ಅದಾಂತಮನಸ್ತುರಗಂ-ನಿಗ್ರಹಿಸಲ್ಪಡದೇಇರುವ ಮನಸ್ಸೆಂಬ ಕುದುರೆಯನ್ನು, ಯಂತುಂ-
ನಿಗ್ರಹಿಸುವುದಕ್ಕೆ, ಯತಂತಿ-ಯತ್ನಮಾಡುವರೋ, ತೇ-ಅವರು, ಉಪಾಯಖಿದಃ-ಉಪಾಯಂಗಳಲ್ಲಿ ಕ್ಲೇಶಪಡುವವರೂ, ವ್ಯ
ಸನಶತಾನ್ವಿತಾಃ-ಬಹುಕಷ್ಟಗಳಿಂ ಕೂಡಿದವರೂ. ಆಗಿ, ಜಲಧೌ-ಕಡಲಿನಲ್ಲಿ, ಅಕೃತಕರ್ಣಧರಾಃ-ನಾವಿಕರ ಸಹಾಯವಿಲ್ಲದವ
ರಾದ, ವಣಿಜಇವ-ಹಡಗಿನ ವರ್ತಕರಂತೆ, ಇಹ-ಈ ಸಂಸಾರದಲ್ಲಿ, ಆವಿಶಂತಿ-ಮುಳುಗುತಲಿರುವರು ॥೩ ॥ ಸ್ವಜನ. . ಧರಾಸು-
ಸ್ವಜನ-ದೇಹಾನುಬಂಧಿಜನಗಳು, ಸುತ-ಮಕ್ಕಳು, ಆತ್ಮ-ಶರೀರ, ದಾರ-ಹೆಂಡಿರು, ಧನ-ಹೊನ್ನುಮೊದಲಾದಸ್ವತ್ತುಗಳು, ಧಾ
ಮ-ಮನೆ, ಧರಾಸು-ಭೂಮಿಗಳಲ್ಲಿ, ರತೈಃ ಆಸಕ್ತಂಗಳಾದ, ವೃತ್ತಿವಿಷಯಂಗಳಿಂದ, ಸರ್ವರಸೇ-ಸಕಲಸುಖಂಗಳೂ ಇರುವಂ
ಥಾ, ತ್ವಯಿ-ನೀನು, ಶ್ರಯತಃ-ನಿನ್ನಂಆಶ್ರಯಿಸಿದ ಪುರುಷಂಗೆ, ಆತ್ಮನಿಸತಿ-ಸ್ವರೂಪಾತ್ಮವೇ ಆಗಿರುವಲ್ಲಿ, ಕಿಂ-ಏನುಉಪಯೋ
ಗವು, ಇತಿ-ಹೀಗೆಂದು, ತತ್-ಸತ್ಯವಾದ ಪರಮಾರ್ಥಸುಖವನ್ನು, ಅಜಾನತಾಂ-ಅರಿಯದೇ ಇರುವರಾದ್ದರಿಂದಲೇ, ಮಿಥುನ
ತಃ-ಸ್ತ್ರೀಸಂಯೋಗದ ಆಸೆಯಿಂದ, ರತಯೇ-ವಿಷಯಸುಖಕ್ಕೆ, ಚರತಾಂ-ಪ್ರವರ್ತಿಸುತಲಿರುವ, ನೃಣಾಂ-ಮನುಷ್ಯರನ್ನು,
ಸ್ವವಿಹತೇ-ತಾನಾಗಿ ನಷ್ಟವಾಗುವಂಥಾ, ಸ್ವನಿರಸ್ತಭಗೇ-ತಾನಾಗಿಯೇ ಸಾರಹೀನವಾಗುವಂಥಾ, ಇಹ-ಈ ಸಂಸಾರದಲ್ಲಿ

---

ವು ಪ್ರಮತ್ತರಾಗಿ ನಿನ್ನನ್ನನುವರ್ತಿಸದೇಇರುವ ಅಜ್ಞರಿಗೆ ಜನನಮರಣರೂಪವಾದಸಂಸಾರ ಭಯವನ್ನುಂಟು
ಮಾಡುತಲಿದೆ ॥೩೩॥ [ಈ ಪ್ರಕಾರವಾದ ಭಗವಂತನಲ್ಲಿ ಚಿತ್ತವನಿರಿಸಿ ಅನುಸಂಧಾನಂಗೆಯ್ವರಿಗೆ ಸಂಸಾರಭ
ಯವಿಲ್ಲವೆಂದು ಪೇಳಲ್ಪಟ್ಟಿತು. ಅಂತಾ ಆತ್ಮಾನುಸಂಧಾನವು ಮನೋನಿಗ್ರಹದಿಂದ ಆಗಬೇಕು. ಅಂತಪ್ಪಮ
ನೋನಿಗ್ರಹವು ಗುರೂಪಸರ್ಪಣದಿಂದಲೇ ಆಗಬೇಕೆಂದು ನುಡಿಯುವರದೆಂತೆನೆ,- ಎಲೈ ನಿತ್ಯಸ್ವರೂಪನಾದಪರ
ಮೇಶ್ವರನೇ, ಜಯಿಸಲ್ಪಟ್ಟ ಯಿಂದ್ರಿಯಂಗಳೂ ಪ್ರಾಣಾದಿವಾಯುಗಳೂ ಸಹ ವುಳ್ಳ ಯೋಗಿಗಳೂ ಸಹಸ್ಥಿ
ರೀಕರಿಸಲ್ಪಡದೆ ಯಿರುವ ಅತಿಚಂಚಲವಾದ ಮನಸ್ಸೆಂಬ ಕುದುರೆಯನ್ನು ಯಾವಪುರುಷರು ಗುರುಚರಣಾನು
ಗ್ರಹದಿಂ ಹೊರತು ನಿಗ್ರಹಿಸಲೋಸುಗ ಯತ್ನವಂಗೆಯ್ಯುತ್ತಾರೆಯೋ, ಆ ಪುರುಷರು ಉಪಾಯಂಗಳನರಿಯ
ದೇಖೇದ ಪಡುವರಾಗಿ ವ್ಯಸನ ಶಂಕುಗಳಿಂದ ಪೀಡಿತರಾಗಿ ಈ ಸಂಸಾರ ಸಮುದ್ರದಲ್ಲಿ ಹಡಗಿನ ವ್ಯಾಪಾರವ್ರು
ತ್ತಿ ವರ್ತಕರು ನಾವೆಗಳನ್ನಡೆಯಿಸುವ ಅಂಬಿಗರಂ ಬಿಟ್ಟು ಸಮುದ್ರ ಮಧ್ಯದಲ್ಲಿ ತಗುಲಿಕೊಂಡು ತಡಿಯನೈ
ಯ್ದುವ ಉಪಾಯವಂ ಕಾಣದೆ ಎಂತು ಶ್ರಮ ಪಡುವರೋ, ಅಂತು ಶ್ರಮ ಪಡುವರು. ಆದುದರಿಂದ ಭಕ್ತಿಯಿಂ
ಗುರೂಪದಿಷ್ಟವಾದ ಅರ್ಥವಂ ತಿಳಿದು ಕೃತಾರ್ಥನಾಗ ಬೇಕು ॥೩೪॥ (ಆದಕಾರಣದಿಂ ಪ್ರಾಜ್ಞರಾದವರು ಕ
ರ್ಮಜನ್ಯಗಳಾದ ಪುಣ್ಯ ಲೋಕಗಳು ಅನಿತ್ಯಗಳೆಂದು ಪರೀಕ್ಷಿಸಿ ಇಹಲೋಕಸುಖಂಗಳು ಅನಿತ್ಯಗಳೆಂದು ಚೆ
ನ್ನಾಗಿ ತಿಳಿಯುವುದರಿಂದ ಈತುಚ್ಛಸುಖಂಗಳಲ್ಲಿ ಅಪೇಕ್ಷೆಯಂಬಿಟ್ಟು ವೈರಾಗ್ಯಸಂಪನ್ನರಾಗಿ ಪರಮಾತ್ಮಲಾ
ಭವನ್ನೇ ಸಂಪಾದಿಸಬೇಕೆಂದು ನುಡಿಯುವರದೆಂತೆನೆ- ಎಲೈಪರಮೇಶ್ವರನೇ! ಸಮಸ್ತ ಸುಖಸಮೂಹರೂಪನಾದ
ಪರಮಾತ್ಮನಾದ ನೀನು ಸಿದ್ಧವಾಗಿರುತ್ತಿರಲಾಗಿ ಅಂತಾ ನಿನ್ನಂ ಭಜಿಸುವ ಮಹಾಪುರುಷನಿಗೆ ಸ್ವಜನರೂ ಪು
ತ್ರರೂ ಶರೀರವೂ ಪತ್ನಿಯೂ ಧನವೂ ಗೃಹವೂ ಪ್ರಾಣಗಳೂ ಎಂಬ ವಿಷಯಗಳಿಂದ ಉಂಟಾಗುವ ತುಚ್ಛ
ಸುಖಂಗಳಿಂದ ಫಲವೇನು? ಎಂಬ ಪರಮಾರ್ಥವಂ ತಿಳಿಯದೆ ನಶ್ವರವಾದ ಅಸಾರವಾದ ಸಂಸಾರದಲ್ಲಿ ಮಗ್ನರಾ

ತ್ವಾಂವಿಧುನೋತ್ಯರತಿಯೇಚರತಾಂಸುಖಯತಿಕೋನ್ವಿಹಸ್ವವಿಹತೇಸ್ವನಿರಸ್ತಭಗೇ ॥೩೫॥ ಭುವಿಪುರುಪುಣ್ಯತೀರ್ಥಸದನಾನ್ಯೃಷಯೋವಿಮದಾಸ್ತಉತಭವತ್ಪದಾಂಬುಜಹೃದೋಘಭಿದಂಘ್ರಿಜಲಾಃ । ದಧತಿ ಸಕೃನ್ಮನಸ್ತ್ವಯಿಯಆತ್ಮನಿನಿತ್ಯಸುಖೇನಪುನರುಪಾಸತೇಪುರುಷಸಾರಹರಾವಸಥಾನ್ ॥೩೬॥ ಸತಇದಮುತ್ಥಿತಂಸದಿತಿಚೇನ್ನನುತರ್ಕಹತಂವ್ಯಭಿಚರತಿಕ್ವಚಕ್ವಚಮೃಷಾನತಥೋಭಯಯುಕ್ । ವ್ಯವಹೃ

---

ಕೋನು-ಯಾವಅರ್ಥವು ತಾನ್ ಸುಖಯತಿ-ಸಂತೋಷಗೊಳಿಸುತಲಿದೆ (ಯಾವುದೂ ಇಲ್ಲವು) ॥೩೫॥ ಯೇಋಷಯಃ-ಯಾವ ಮುನಿಗಳು, ವಿಮದಾಃ-ಅಹಂಕಾರ ವಿಲ್ಲದವರಾದ್ದರಿಂದ, ಭವತ್ಪದಾಂಬುಜಹೃದಃ-ನಿನ್ನ ಅಡಿದಾವರೆಯಲ್ಲಿ ಮನಸ್ಸುಳ್ಳವರಾದ್ದರಿಂದಲೇ, ಅಘಭಿದಂಘ್ರಿಜಲಾಃ-ಪಾಪವನ್ನು ಛೇದಿಸುವ ಚರಣತೀರ್ಥವುಳ್ಳವರೋ, ತಉತ-ಅವರೂಕೂಡ ಭುವಿ-ಭೂಮಿಯಲ್ಲಿ, ಪುರುಪುಣ್ಯತೀರ್ಥಸದನಾನಿ-ಬಹುವಾದ ಪುಣ್ಯತೀರ್ಥಕ್ಷೇತ್ರಗಳನ್ನು, ಉಪಾಸತೇ-ಸೇವಿಸುತಲಿರುವರು. ಯೇ-ಯಾವಪುರುಷರು, ನಿತ್ಯಸುಖೇ-ಯಥಾರ್ಥಾನಂದವಾದ, ಆತ್ಮನಿ-ಸ್ವರೂಪಚೈತನ್ಯವಾದ, ತ್ವಯಿ-ನಿನ್ನಲ್ಲಿ, ಮನ -ಹೃದಯವನ್ನು, ಸಕೃತ್-ಒಂದುಸಲ ದಧತಿ-ಧ್ಯಾನಧಾರಣಸಮಾಧಿಗೊಳಿಸುವರೋ, ತೇ-ಅವರು, ಪುರುಷಸಾರಹರಾವಸಥಾನ್-ಪುರುಷರಜ್ಞಾನಾದಿ ಸಾರಗಳನ್ನು ಹರಿಸುವರಿಥಾ, ಮನೆ ಮೊದಲಾದವುಗಳನ್ನು, ಪುನಃ-ಮರಳಿಯೂ, ನೋಪಾಸತೇ-ಸೇವಿಸುವುದಿಲ್ಲವು॥ (ಸತ್ಯಜ್ಞಾನಾತ್ಮಾನುಸಂಧಾನದಿಂದಲೇ ವಿರಕ್ತಿಹುಟ್ಟಿ ಮುಕ್ತಿಸಾಧನವಾಗುತ್ತಿರುವಲ್ಲಿ ನಿರಂತರಾನುಸಂಧಾನವುಳ್ಳ ಭಾಗವತರು ಸ್ವರೂಪಾನುಭವಾರ್ಥ್ಯಕ್ಕಾಗಿ ಮನನವಾಡಲೋಸುಗ ಸತ್ಸಂಗವಂಬಯಸಿ ಪುಣ್ಯತೀರ್ಥಯಾತ್ರೆಗಳಂ ಮಾಡುತ್ತಿರುವಲ್ಲಿ ಅಂಥವರು ವಿರಕ್ತಿಯುಂಟಾಗಿ ಮುಕ್ತರಾಗುವರೆಂದು ಹೇಳತಕ್ಕದ್ದೇನಿದೆ? ಆದ್ದರಿಂದ ಭಗವದ್ಭಕ್ತಿಯೇ ಪ್ರಯೋಜಕವೆಂದು ಭಾವವು)॥೩೬॥ ಇದಂ-ಈ ಜಗತ್ತು, ಸತಃ-ಸತ್ಯವಸ್ತುವಾದ ಆತ್ಮನದೆಸೆಯಿಂದ, ಉತ್ಥಿತಂ-ಹುಟ್ಟಿದ್ದಾದ್ದರಿಂದಲೇ, ಸದಿತಿಚೇತ್-ಸತ್ಯವೆಂದರೆ ನನು-ಹಾಗಲ್ಲವಷ್ಟೇ? (ಏಕೆಂದರೆ) ತರ್ಕಹತಂ-ಇಂಥಾ ಅನುಮಾನ ನ್ಯಾಯವು ಪ್ರತಿಕೂಲತರ್ಕವಿಚಾರದಿಂದ ಭಗ್ನವಾಗುತ್ತೆ. ಮತ್ತು, ಕ್ವಚ-ಒಂದುಸ್ಥಲದಲ್ಲಿ, ವ್ಯಭಿಚರತಿ-ಸಾಧ್ಯವಿಲ್ಲದ ಕಡೆಯಲ್ಲಿ ಸಾಧನತೋರುವುದರಿಂದ ಹೇತ್ವಾಭಾಸವೆನಿಸುವುದು. ಕ್ವ

---

ಗಿ ಸ್ತ್ರೀಯರಿಂಕೂಡಿ ಮಾಯಾಸುಖಾನುಭವಾರ್ಥವಾಗಿ ಚರಿಸುತಲಿರುವ ಪ್ರಾಣಿಗಳನ್ನು ಯಾವಅರ್ಥವು ಸುಖಪಡಿಸುವುದು॥೩೫॥ (ಈರೀತಿಯಲ್ಲಿ ಗುರೂಪದೇಶದಿಂದ ತತ್ವವಂತಿಳಿದು ಸಾರಾಸಾರವಿಚಾರದಿಂದ ಪ್ರಾಪಂಚಿಕಸುಖದಲ್ಲಿ ಜುಗುಪ್ಸೆಯನೆಯ್ದಿ ಆತತ್ವಸ್ವರೂಪವನ್ನೇ ಮಹತ್ಸಂಗದಿಂದಲೂ ಊಹಾಪೋಹಂಗಳಿಂದಲೂ ಚೆನ್ನಾಗಿನಿಶ್ಚಯಿಸಲೋಸುಗ ಮಹಾತೀರ್ಥಸ್ನಾನಂಗಳಂ ಕುರಿತು ಮಹರ್ಷಿಗಳು ಸಂಚರಿಸುತಲಿರುವರೆಂಬ ಶ್ರುತ್ಯರ್ಥವಂ ಪೇಳುವರದೆಂತೆನೆ,-ಪೂರ್ವದಲ್ಲಿ ನಿರೂಪಿತರಾದ ಆಮಹರ್ಷಿಗಳು ಅಹಂಕಾರರಹಿತರಾಗಿ ಯಾವಕಾರಣದಿಂದ ಭಗವಂತನಾದ ನಿನ್ನ ಪಾದಪದ್ಮಂಗಳಲ್ಲಿ ನಿಲ್ಲಿಸಲ್ಪಟ್ಟ ಚಿತ್ತವುಳ್ಳವರೋ ಆಕಾರಣದಿಂದ ತಾವೇ ಸಕಲ ಪಾಪಪರಿಹಾರಕವಾದ ಪಾದೋದಕವುಳ್ಳವರಾದಾಗ್ಯೂ ಭೂಮಿಯಲ್ಲಿ ಬಹುಪುಣ್ಯಕರಂಗಳಾದ ತೀರ್ಥಂಗಳುಳ್ಳ ಮಹಾಕ್ಷೇತ್ರಂಗಳಂ ಸೇವಿಸುವರು. ಆದುದರಿಂದ ಯಾರು ನಿತ್ಯಸುಖಸ್ವರೂಪನಾದ ಪರಮಾತ್ಮನಾದ ನಿನ್ನಲ್ಲಿ ಒಂದುಸಲವಾದರೂ ಚಿತ್ತವ ನಿಲ್ಲಿಸುವರೋ ಆಪುರುಷರು ಜನರುಗಳ ವಿವೇಕಧೈರ್ಯಕ್ಷಮಾಶಾಂತಿ ಮೊದಲಾದವುಗಳ ನಪಹರಿಸುವ ಗೃಹಾದಿಗಳಲ್ಲಿ ವಾಸಂಗೆಯ್ವುದಿಲ್ಲ ॥೩೬॥ (ತತ್ವನಿಶ್ಚಯಾರ್ಥವಾಗಿ ಮುನಿಗಳು ಉತ್ತಮಕ್ಷೇತ್ರಾದಿಗಳಲ್ಲಿ ಸಂಚರಿಸುವರೆಂದು ಪೇಳಲ್ಪಟ್ಟಿತು. ಆತತ್ವನಿಶ್ಚಯವು ಮಾಡುವಪ್ರಕಾರ ವೆಂತೆಂದಡೆ ವಾದಿ ಪ್ರತಿವಾದಿಗಳ ಪ್ರಶ್ನೋತ್ತರಮುಖದಿಂ ತತ್ವವ ನಿಶ್ಚಯಿಸುವ ಪ್ರಕಾರವಂ ಪೇಳುವರದೆಂತೆನೆ- ಈಜಗತ್ತು ಸದ್ರೂಪನಾದ ಪರಮಾತ್ಮನದೆಸೆಯಿಂದ ಜನಿಸಿದಕಾರಣದಿಂ ಸದ್ರೂಪವಾದುದು. ಸುವರ್ಣದಿಂದ ಜನಿಸಿದ ಕುಂಡಲಾದಿಗಳು ಸುವರ್ಣವೇಯೆಂದು ಹೇಗೋ ಹಾಗೆ ಪೇಳಿದಲ್ಲಿ ಆಯರ್ಥವು ತರ್ಕವಿರುದ್ಧವಾದ ಕಾರಣದಿಂದ ಗ್ರಾಹ್ಯವಲ್ಲವು. ಅದೆಂತೆಂದಡೆ,-ಮುದ್ಗರಪ್ರಹಾರದಿಂ ಹುಟ್ಟಿದ ಘಟಾದಿಧ್ವಂಸವು ತದ್ರೂಪವಾಗಲಾರದು. ಸಮವಾಯಿಕಾರಣಜನ್ಯವಾದ ಕಾರ್ಯವು ತದ್ರೂಪವಾಗ ಬಹುದೆಂಬ ಪಕ್ಷದಲ್ಲಿ ರಜ್ಜುವಿನಲ್ಲಿ ಪುಟ್ಟಿದಸರ್ಪವು ರಜ್ಜು